ಎಂ. ವಿ. ರಾಜಶೇಖರನ್ - 75

# ಗ್ರಾಮಚೇತನ




## ಕರ್ನಾಟಕದಲ್ಲಿ ಗ್ರಾಮೀಣಾಭಿವೃದ್ಧಿ

ಎಂ.ವಿ. ರಾಜಶೇಖರನ್-೭೫ : ಅಭಿನಂದನ ಗ್ರಂಥ

# ಗ್ರಾಮ ಚೇತನ

## ಕರ್ನಾಟಕದ ಗ್ರಾಮೀಣ ಅಭಿವೃದ್ಧಿ ಕುರಿತಾದ ಅಧ್ಯಯನ




*ಪ್ರಧಾನ ಸಂಪಾದಕರು*

**ಡಾ. ದೇ. ಜವರೇಗೌಡ**

*ಕಾರ್ಯನಿರ್ವಾಹಕ ಸಂಪಾದಕ*

**ಗೊ.ರು. ಚನ್ನಬಸಪ್ಪ**

*ಸಂಪಾದಕ*

**ಕೆ. ಆರ್. ಕಮಲೇಶ್**




**ಎಂ. ವಿ. ರಾಜಶೇಖರನ್ ಅಭಿನಂದನ ಸಮಿತಿ**

ನಂ. ೪, ೧೨ನೇ ಮುಖ್ಯರಸ್ತೆ, ವಸಂತನಗರ, ಬೆಂಗಳೂರು - ೫೬೦ ೦೫೨

ದೂರವಾಣಿ : ೨೨೨೮ ೦೮೧೪

**GRAMA CHETANA :** Sri M.V. Rajashekharan Felicitation Volume, Edited by K.R. Kamalesh Published by M.V. Rajashekharan Felicitation Committee, # 4, 12th Main Road, Vasanth Nagar, Bangalore - 560 052

K080.883521
RAJ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
ಗ್ರಂಥ ಭಂಡಾರ
ಕ್ರಮ ಸಂಖ್ಯೆ 12090
ವರ್ಗ ಕೆ.ಆರ್. ಕಮಲೇಶ್ ರವರ ಗ್ರಂಥದಾನ
ವರ್ಗ ಸಂಖ್ಯೆ
ಬಂದ ತಾ|| 15-7-2005
ಬೆಲೆ 750/-

eg-2469

Frist Impression : April 2005

Copy Right : Reserved

Cover Page Design : Kamalesh

Cover Page Photo : Prof. M. Shridharamurthy

Total Pages : xx + 12 + 872

Price : **Rs. 750-00**

ಗ್ರಂಥದಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳು ಆಯಾ ಲೇಖಕರದ್ದೇ ಆಗಿರುತ್ತವೆ - ಸಂ.

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨



“ನಮ್ಮ ದೇಶದಲ್ಲಿ ಸಮೃದ್ಧ ನೈಸರ್ಗಿಕ ಸಂಪನ್ಮೂಲಗಳಿವೆ. ಇವನ್ನು ಸಮರ್ಥವಾಗಿ ಬಳಸಿಕೊಳ್ಳುವ ದೃಢಸಂಕಲ್ಪದ ಅಗತ್ಯವಿದೆ. ನಮ್ಮ ರಾಷ್ಟ್ರದ ಜನ ಉತ್ತಮ ನಾಗರಿಕರು; ಉನ್ನತ ಸಾಂಸ್ಕೃತಿಕ ಪ್ರಜ್ಞೆಯುಳ್ಳವರು. ಆದರೆ ರಾಷ್ಟ್ರ ನಿರ್ಮಾಣಕ್ಕೆ ಬೇಕಾದ ಶಿಸ್ತು ಮತ್ತು ಅರ್ಪಣಾಭಾವದ ಅಭಾವ ಕಂಡುಬರುತ್ತಿದೆ. ವೈಯಕ್ತಿಕ ಪ್ರತಿಷ್ಠೆ, ದ್ವೇಷ ಅಥವಾ ಸ್ವಾರ್ಥದೃಷ್ಟಿಯಿದ್ದರೆ ನಾವು ಏನನ್ನೂ ಸಾಧಿಸಲು ಸಾಧ್ಯವಾಗದು. ವ್ಯಕ್ತಿಗಿಂತ ರಾಷ್ಟ್ರ ದೊಡ್ಡದು. ನಮ್ಮ ರಾಷ್ಟ್ರದ ಭವ್ಯ ಪರಂಪರೆಗೆ ಮತ್ತು ಘನತೆಗೆ ತಕ್ಕಂತೆ ನಾವು ಬಾಳಬೇಕು. ನೀತಿ-ನಿಯಮಗಳು ನಮ್ಮ ರಾಷ್ಟ್ರಜೀವನದ ಸೂತ್ರಗಳಾಗಬೇಕು. ಅಂತಾದರೆ ನಮ್ಮ ಭಾರತ ಇಡೀ ಜಗತ್ತಿನ ಶ್ರೇಷ್ಠ ರಾಷ್ಟ್ರವಾದೀತು”

– ಎಂ.ವಿ. ರಾಜಶೇಖರನ್

# ಹಿರಿಯ ಗಾಂಧಿವಾದಿ
# ಶ್ರೀ ಎಂ. ವಿ. ರಾಜಶೇಖರನ್-೭೫ : ಅಭಿನಂದನ ಸಮಿತಿ

***ಗೌರವಾಧ್ಯಕ್ಷರು***

ಹಾರನಹಳ್ಳಿ ರಾಮಸ್ವಾಮಿ, ಮಾಜಿ ಸಚಿವರು

***ಗ್ರಂಥ ಸಮಿತಿ***

ಡಾ। ದೇಜಗೌ, ಪ್ರಧಾನ ಸಂಪಾದಕರು

ಗೊ.ರು. ಚನ್ನಬಸಪ್ಪ, ಕಾರ್ಯನಿರ್ವಾಹಕ ಸಂಪಾದಕರು

ಕೆ. ಆರ್. ಕಮಲೇಶ್, ಸಂಪಾದಕರು

***ಉಪಾಧ್ಯಕ್ಷರು***

ಎಂ.ಪಿ. ಪ್ರಕಾಶ್, ಮಾನ್ಯ ಕಂದಾಯ ಸಚಿವರು

ಪಿ.ಜಿ.ಆರ್. ಸಿಂಧ್ಯಾ, ಮಾನ್ಯ ಕೈಗಾರಿಕಾ ಸಚಿವರು

ಬಿ.ಎಲ್. ಶಂಕರ್, ಮಾಜಿ ಅಧ್ಯಕ್ಷರು, ಕರ್ನಾಟಕ ವಿಧಾನಪರಿಷತ್

ಎಚ್. ಹನುಮಂತಪ್ಪ, ಮಾಜಿ ರಾಜ್ಯಸಭಾ ಸದಸ್ಯರು, ಚಿತ್ರದುರ್ಗ

ಎಚ್.ಡಿ. ತುಳಸೀದಾಸಪ್ಪ, ಮಾಜಿ ಕೇಂದ್ರ ಸಚಿವರು, ಮೈಸೂರು

ಡಿ.ಕೆ. ಶಿವಕುಮಾರ್, ಮಾಜಿ ನಗರಾಭಿವೃದ್ಧಿ ಸಚಿವರು, ಬೆಂಗಳೂರು

ಎ. ಕೃಷ್ಣಪ್ಪ, ಮಾಜಿ ಸಮಾಜ ಕಲ್ಯಾಣ ಸಚಿವರು, ಬೆಂಗಳೂರು

ವೈ. ರಾಮಚಂದ್ರ, ಮಾಜಿ ಸಚಿವರು, ಬೆಂಗಳೂರು

ಭೀಮಣ್ಣ ಖಂಡ್ರೆ, ಅಧ್ಯಕ್ಷರು, ವೀರಶೈವ ಮಹಾಸಭಾ

ವಿ.ಎಸ್. ಕೃಷ್ಣಯ್ಯರ್, ಮಾಜಿ ಸಚಿವರು

ವಿ. ಸೋಮಣ್ಣ, ಮಾಜಿ ಸಚಿವರು ಹಾಗೂ ವಿಧಾನಸಭಾ ಸದಸ್ಯರು

ಟಿ.ವಿ. ಮಾರುತಿ, ಶಾಂತಲಾ ಸಿಲ್ಕ್ಸ್ ಅಂಡ್ ಸ್ಯಾರೀಸ್

ಎಂ. ಕೃಷ್ಣಪ್ಪ, ವಿಧಾಪರಿಷತ್ ಸದಸ್ಯರು

***ಖಜಾಂಚಿ***

ಎ.ಎಸ್. ಜಯಸಿಂಹ

**ಪ್ರಧಾನ ಕಾರ್ಯದರ್ಶಿಗಳು**

ಎಸ್.ಜಿ. ಮಂಜುನಾಥ್, ಚಿತ್ರದುರ್ಗ

ಎಂ.ಕೆ. ಜಯಶಂಕರ್, ಮರಳವಾಡಿ

ಮಹದೇವ್ ಹೊರಟ್ಟಿ, ಧಾರವಾಡ

ಎಚ್.ಎನ್. ಹಿರಿಯಣ್ಣಸ್ವಾಮಿ, ಬೆಂಗಳೂರು

ಜೇರಿಗೆ ಲೋಕೇಶ್, ಬೆಂಗಳೂರು

ಷಣ್ಮುಖಪ್ಪ ಕೊಂಡಜ್ಜಿ, ಬೆಂಗಳೂರು

**ಕಾರ್ಯದರ್ಶಿಗಳು**

ಎಚ್. ಸದಾಶಿವಯ್ಯ

ಪಿ. ಪಿಳ್ಳಪ್ಪ

ಅಬ್ದುಲ್ ಅಜೀಜ್

ಟಿ. ಅಮರನಾಥ್

ಎಸ್. ಗೋಪಿನಾಥ್

ಸತೀಶ್‌ಗೌಡ

**ಕಾರ್ಯಕಾರಿ ಸಮಿತಿ ಸದಸ್ಯರುಗಳು**

ಸಿ. ಸೋಮಶೇಖರ್, ಹಿರಿಯ ಕೆ.ಎ.ಎಸ್. ಅಧಿಕಾರಿ

ಸಿ. ನಾಗರಾಜಪ್ಪ

ಖದೀರ್

ಎಸ್.ಎನ್. ಸಾರಂಗಮಠ

ಚಿದಾನಂದ್ ಎಸ್. ಮಠ

ಎಮ್.ಎನ್. ಅರುಣಕುಮಾರ್

ಎಲ್ಲಪ್ಪ

ಎಂ.ಕೆ. ಶಿವಶಂಕರ್

ಎಚ್.ವಿ. ನಾರಾಯಣಸ್ವಾಮಿ

ರಾಮಕೃಷ್ಣ, ಓಬಿ ಚೂಡನಹಳ್ಳಿ

# ಅಧ್ಯಕ್ಷರ ಮಾತು

ಪ್ರಿಯಮಿತ್ರರೂ, ಹಿರಿಯ ಗಾಂಧೀವಾದಿಗಳೂ, ಕೇಂದ್ರ ಯೋಜನಾ ರಾಜ್ಯಸಚಿವರೂ ಆದ ಶ್ರೀ ಎಂ.ವಿ. ರಾಜಶೇಖರನ್ ಅವರಿಗೆ ಕಳೆದ ವರ್ಷ, ಅಂದರೆ ಅವರ ೭೫ನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಕರ್ನಾಟಕದ ಸಾಂಸ್ಕೃತಿಕ ಪರಂಪರೆಗೆ ಅನುಗುಣವಾಗಿ ನಾಲ್ಕು ಅಭಿನಂದನ ಗ್ರಂಥಗಳನ್ನು ತಂದು ಸನ್ಮಾನಿಸಲಾಯಿತು. 'ನಿಜಬಿಂಬ', 'ಶಿವಚೈತನ್ಯ', 'ಸೋಲ್ ಆಫ್ ದಿ ಸಾಯಿಲ್' ಮತ್ತು 'ರೂರಲ್ ಇಂಡಿಯಾ' ಎಂಬುವೇ ಆ ಗ್ರಂಥಗಳು.

ಎಂ.ವಿ. ರಾಜಶೇಖರನ್ ಸನ್ಮಾನ ಸಮಿತಿಯು ಶ್ರೀ ರಾಜಶೇಖರನ್ ಅವರಿಗೆ ಪ್ರಿಯವಾದ ಗ್ರಾಮೀಣ ಅಭಿವೃದ್ಧಿ ಕುರಿತಂತೆ ಆಕರ ಗ್ರಂಥ ತಂದುಕೊಡಲು ಸಂಪಾದಕ ಮಂಡಳಿಯನ್ನು ಕೋರಿತು. ಡಾ. ದೇ. ಜವರೇಗೌಡ, ಶ್ರೀ ಗೊ.ರು. ಚನ್ನಬಸಪ್ಪ ಹಾಗೂ ಶ್ರೀ ಕೆ.ಆರ್. ಕಮಲೇಶ್ ಅವರುಗಳು ಸನ್ಮಾನ ಸಮಿತಿಯ ಕೋರಿಕೆಯಂತೆ ಈ ಬೃಹತ್ ಗ್ರಂಥವನ್ನು ತಮ್ಮೆದುರು ಇಟ್ಟಿದ್ದಾರೆ. ಒಂದು ನೂರ ಆರು ಲೇಖನಗಳ ಈ ಬೃಹತ್ ಗ್ರಂಥ "ಕರ್ನಾಟಕದ ಗ್ರಾಮೀಣಾಭಿವೃದ್ಧಿ" ಕುರಿತಂತೆ ವ್ಯಾಪಕ ಅಧ್ಯಯನ ನಡೆಸಿದೆ. ಗ್ರಾಮೀಣಾಭಿವೃದ್ಧಿ ಕುರಿತಂತೆ ಎಲ್ಲ ವಿಷಯಗಳ ಮೇಲೂ ತಜ್ಞರು ಪ್ರಬುದ್ಧ ಲೇಖನಗಳನ್ನು ಬರೆದಿದ್ದಾರೆ. ಅವರ ವಿಚಾರಧಾರೆ ಕರ್ನಾಟಕದ ಮೂಲೆ ಮೂಲೆಗೂ ತಲುಪುವ ಅಗತ್ಯವಿದೆ. ಈ ಗ್ರಂಥಕ್ಕೆ ಅಮೂಲ್ಯ ಲೇಖನ ಕೊಟ್ಟ ಎಲ್ಲ ಲೇಖಕರಿಗೂ ಎಂ.ವಿ. ರಾಜಶೇಖರನ್ ಸನ್ಮಾನ ಸಮಿತಿ ಪರವಾಗಿ ಅನೇಕಾನೇಕ ಧನ್ಯವಾದಗಳು. ಇಂಥ ಮಹತ್ವದ ಗ್ರಂಥವನ್ನು ಅಚ್ಚುಕಟ್ಟಾಗಿ ಸಂಪಾದನೆ ಮಾಡಿಕೊಟ್ಟ ಸಂಪಾದಕ ಮಂಡಳಿಗೂ, ಈ ಗ್ರಂಥ ಹೊರಬರುವಲ್ಲಿ ಹಗಲಿರುಳೂ ಶ್ರಮಿಸಿರುವ ಸನ್ಮಾನ ಸಮಿತಿಯ ಸದಸ್ಯರಿಗೂ, ಇದನ್ನು ಅಂದವಾಗಿ ಮುದ್ರಣ ಮಾಡಿಕೊಟ್ಟ ಲಕ್ಷ್ಮೀ ಮುದ್ರಣಾಲಯದ ಮಾಲೀಕರಿಗೂ ನಮ್ಮ ಕೃತಜ್ಞತೆಗಳು.

ಸದಾ ಮಹಾತ್ಮ ಗಾಂಧೀಜಿ ಬೋಧಿಸಿದ ಸರಳ ತತ್ವಗಳನ್ನು ಚಿಂತಿಸುತ್ತಾ, ರಾಷ್ಟ್ರಕ್ಕೆ ಅಮೂಲ್ಯವಾದ ಸೇವೆ ಸಲ್ಲಿಸುತ್ತಿರುವ ಶ್ರೀ ಎಂ.ವಿ. ರಾಜಶೇಖರನ್ ಅವರನ್ನು ಪ್ರೀತಿಯಿಂದ ಈ ಗ್ರಂಥವನ್ನು ಒಪ್ಪಿಸಿಕೊಳ್ಳಬೇಕೆಂದು ಸನ್ಮಾನ ಸಮಿತಿಯ ಪರವಾಗಿ ಪ್ರಾರ್ಥಿಸುತ್ತೇನೆ.

ಮಹಾತ್ಮ ಗಾಂಧೀಜಿ ಹೇಳಿದಂತೆ ಭಾರತದ ಜೀವಾಳವೇ ಗ್ರಾಮಗಳು. ಅದರ ಏಳಿಗೆಯಾದರೆ ರಾಷ್ಟ್ರದ ಸಮಗ್ರ ಏಳಿಗೆ ಆಗುವುದರಲ್ಲಿ ಯಾವುದೇ ಸಂಶಯವಿಲ್ಲ. ನಮ್ಮನ್ನು ಆಳುವವರು ಗ್ರಾಮಗಳ ಅಭ್ಯುದಯದ ಕಡೆಗೆ ಗಮನ ಕೊಡಬೇಕೆಂಬ ಹಂಬಲ ಈ ಗ್ರಂಥದಲ್ಲಿರುವ ಎಲ್ಲ ಲೇಖಕರ ಆಶಯ. ಹಾಗಾಗಿ ಆಡಳಿತಗಾರರು ಹಿಂದಿಗಿಂತ ಇಂದು ಗ್ರಾಮೀಣಾಭಿವೃದ್ಧಿ ಬಗ್ಗೆ ಹೆಚ್ಚು ಒಲವು ತೋರಿಸುವ ಅಗತ್ಯವಿದೆ. ಅವರು ಆ ರೀತಿ ಮಾಡುತ್ತಾರೆ ಎಂಬುದೇ ನಮ್ಮ ನಿಮ್ಮೆಲ್ಲರ ನಿರೀಕ್ಷೆ. ಮತ್ತೊಮ್ಮೆ ಎಂ.ವಿ. ರಾಜಶೇಖರನ್ ಅವರಿಗೆ ದೇವರು ಸಕಲ ಸೌಭಾಗ್ಯಗಳನ್ನು ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

೫-೧೧-೨೦೦೪
ಬೆಂಗಳೂರು

**ಹಾರನಹಳ್ಳಿ ರಾಮಸ್ವಾಮಿ**
ಅಧ್ಯಕ್ಷರು
ಎಂ.ವಿ. ರಾಜಶೇಖರನ್ ಸನ್ಮಾನ ಸಮಿತಿ

# ಗ್ರಾಮಚೇತನಕ್ಕೆ ನಮನ

ಶ್ರೀ ಎಂ.ವಿ. ರಾಜಶೇಖರನ್ ಅವರ ಎಪ್ಪತ್ತೈದನೆಯ ಜನ್ಮಮಹೋತ್ಸವವನ್ನು ಅವರ ಯೋಗ್ಯತೆಗೆ ತಗುವಂತೆ ವೈಶಿಷ್ಟ್ಯಪೂರ್ಣವಾಗಿ, ಅರ್ಥವತ್ತಾಗಿ ಆಚರಿಸುವುದೆಂದು ಶ್ರೀ ಹಾರ್‍ನಹಳ್ಳಿ ರಾಮಸ್ವಾಮಿಯವರ ಆಧ್ಯಕ್ಷತೆಯಲ್ಲಿ ರಚನೆಗೊಂಡಿದ್ದ ಸಮಿತಿ ನಿರ್ಧರಿಸಿದ್ದಲ್ಲದೆ, ಶ್ರೀ ಆರ್.ವಿ. ದೇಶಪಾಂಡೆ, ಎಂ.ಆರ್. ಸೀತಾರಾಂ, ಪಿ.ಜಿ.ಆರ್. ಸಿಂಧ್ಯ, ಎ.ಎಸ್. ಜಯಸಿಂಹರಂತಹ ಉದಾರಚರಿತರ ನೆರವಿನಿಂದ ೨೧-೧೨-೨೦೦೩ರಂದು ವಿಜೃಂಭಣೆಯಿಂದ ನೆರವೇರಿಸಲಾಯಿತು. ಕನ್ನಡನಾಡಿನ ಪಾರಂಪರಿಕ ಸಂಸ್ಕೃತಿಗನುಗುಣವಾಗಿ, ರಾಜಶೇಖರನ್ ಅವರ ಸಾಧನೆ ಸಿದ್ಧಿ ರಾಜಕೀಯ ಹೋರಾಟ ಸೋಲು-ಗೆಲವು ಸಮಾಜಸೇವೆ ಮೊದಲಾದ ಅವರ ಬಹುಮುಖೀ ವ್ಯಕ್ತಿತ್ವವನ್ನು ಕುರಿತ ಅಭಿನಂದನ ಗ್ರಂಥವನ್ನು ಆ ಸಂದರ್ಭದಲ್ಲಿ ಅವರಿಗರ್ಪಿಸಲಾಯಿತು. ಆ ಗ್ರಂಥದಲ್ಲಿ ರಾಜ್ಯದ ಮಾತ್ರವಲ್ಲ ರಾಷ್ಟ್ರೀಯ ಅಂತರರಾಷ್ಟ್ರೀಯ ವಿದ್ವಾಂಸರು ವಿಜ್ಞಾನಿಗಳು ಮತ್ತು ಸಮಾಜಸೇವಾ ಧುರೀಣರು ರಾಜಶೇಖರನ್‌ರವರ ವಿಶಿಷ್ಟ ಸಾಮರ್ಥ್ಯವನ್ನು, ವಿದ್ವತ್ತನ್ನು, ಗ್ರಾಮೀಣಾಭಿವೃದ್ಧಿ ಸಂಬಂಧವಾದ ಅವರ ಉತ್ಸುಕತೆ ಹಾಗೂ ಕಾರ್ಯವೈಖರಿಯನ್ನು ಕುರಿತು ಬರೆದಿರುವ ಲೇಖಗಳನ್ನೋದಿದಾಗ ಕನ್ನಡಿಗರಿಗೆ ಹೆಮ್ಮೆಯಾಗದಿರದು.

ರಾಜಶೇಖರನ್ ಅವರ ಕೀರ್ತಿಯ ಹಬ್ಬುಗೆಗೆ ಪ್ರಮುಖವಾದ ಕಾರಣವೆಂದರೆ ಕೃಷಿ ಸಂಸ್ಕೃತಿಯಲ್ಲಿ ಅವರಿಗಿರುವ ಆಸಕ್ತಿ ; ಅಂತೆಯೇ ಗ್ರಾಮೀಣಾಭಿವೃದ್ಧಿಯ ಬಗ್ಗೆ ಅವರಿಗಿರುವ ಅಚಲ ವಿಶ್ವಾಸ ಹಾಗೂ ಉತ್ಸಾಹ. ಅವರ ಉತ್ಸಾಹ ಮತ್ತು ಆಸಕ್ತಿ ಅಮೂರ್ತವಾಗುಳಿಯದೆ ಅನೇಕ ಸಂಸ್ಥೆಗಳ ರೂಪದಲ್ಲಿ ಕಾರ್ಯಗತಗೊಂಡದ್ದು ರಾಜಶೇಖರನ್ ಅವರ ಸಾಹಸಪೂರ್ಣ ಕ್ರಿಯಾಶೀಲ ದಕ್ಷತೆಗೆ ಸಾಕ್ಷಿಯಾಗಿದೆ. ಗ್ರಾಮಗಳ ಏಳ್ಗೆಯಿಂದಲ್ಲದೆ ದೇಶಕ್ಕೆ ಭವಿಷ್ಯವಿಲ್ಲವೆಂಬ ಗಾಂಧೀಜಿಯ ಕನಸನ್ನು ನನಸು ಮಾಡಿದ ಭಾರತೀಯರಲ್ಲಿ ಇವರೂ ಒಬ್ಬರು. ಅವರ ನಾಡಿಯ ಮಿಡಿತದಲ್ಲಿ ಕೇಳಿಸುವ ಜಯಕಾರವೆಂದರೆ 'ಗ್ರಾಮೀಣ ಜೀವನ ಸುಖಮಯವಾಗಲಿ, ಗ್ರಾಮೀಣ ಚೈತನ್ಯಕ್ಕೆ ಜಯವಾಗಲಿ' ಎಂಬುದು.

ರಾಜಶೇಖರನ್ ಅವರ ಹೆಸರಿನಲ್ಲಿ ನಡೆಸುವ ಯಾವ ಸಮಾರಂಭವಾದರೂ ಸರಿಯೆ, ಅಲ್ಲಿ ಗ್ರಾಮಚೇತನದ ಬಾವುಟ ಮೆರೆಯಬೇಕು; ಗ್ರಾಮಾಭಿವೃದ್ಧಿಗೆ ಸಂಬಂಧಿಸಿದ ವಿಚಾರಗಳ ಮಂಡನೆಗೆ ಪೂರ್ಣಾವಕಾಶವಿರಬೇಕು. ಆಗ ಮಾತ್ರ ಅವರಿಗೆ ಪೂರ್ಣ ತೃಪ್ತಿ. ಈ ದೃಷ್ಟಿಯಿಂದ ಗ್ರಾಮೀಣ ಜೀವನದ ವಿವಿಧ ಮುಖಗಳನ್ನು, ಸವಾಲು ಸಮಸ್ಯೆಗಳನ್ನು, ಅದರ ಸರ್ವತೋಮುಖವಾದ ಏಳ್ಗೆಗೆ ಅತ್ಯವಶ್ಯವಾದ ಸಾಧನ ಸಂಪತ್ತುಗಳನ್ನು ಕುರಿತಂತೆ ಒಂದು ಬೃಹದ್ ಗ್ರಂಥವನ್ನು ಪ್ರಕಟಿಸುವುದೆಂದು ಸಮಿತಿ ತೀರ್ಮಾನಿಸಲಾಗಿ, ಸರ್ವಸಂಪನ್ನವಾದ ಈ ಹೆಬ್ಬೊತ್ತಗೆ ಸಿದ್ಧವಾಗಿದೆ.

ಸಾಮಾನ್ಯ ಚೇತನಕ್ಕೆ ಬೆಕ್ಕಸ ಹುಟ್ಟಿಸುವ ನೂರ ಆರು ಪ್ರಬುದ್ಧ ಪರಿಪಕ್ವಾನುಭವದ ಲೇಖನಗಳ ಹೂಮಾಲೆಯನ್ನು ಹೃತ್ಪೂರ್ವಕವಾಗಿ ಅತ್ಯಂತ ಹೆಮ್ಮೆಯಿಂದ ರಾಜಶೇಖರನ್ ಅವರ ಕೊರಳಿಗೆ ತೊಡಿಸಲಾಗಿದೆ. ಗಾಂಧೀಜಿ ದೃಷ್ಟಿಯಲ್ಲಿ ವಿಕೇಂದ್ರೀಕರಣ, ಸ್ಥಳೀಯ ಸಂಸ್ಥೆಗಳು ನಡೆದುಬಂದ ದಾರಿ, ಪಂಚಾಯತ್ ರಾಜ್ ವ್ಯವಸ್ಥೆ, ; ಸಂವಿಧಾನದ ತಿದ್ದುಪಡಿ, ಯೋಜನಾ ಪ್ರಕ್ರಿಯೆಯಲ್ಲಿ ಶ್ರೀಸಾಮಾನ್ಯನ ಪಾತ್ರ, ಸ್ಥಳೀಯ ಸಂಸ್ಥೆಗಳ ಸದಸ್ಯರುಗಳಿಗೆ ತರಬೇತಿ, ಗ್ರಾಮ-ನಗರ ಅಸಮಾನತೆ ನಿವಾರಣೆ, ಗ್ರಾಮೀಣ ಅಭಿವೃದ್ಧಿಯಲ್ಲಿ ಬ್ಯಾಂಕುಗಳು, ಸಮಗ್ರ ಕೃಷಿ ಪದ್ಧತಿ, ಕೆರೆಗಳ ಸಂರಕ್ಷಣೆ, ರೈತರ ಸಾಲ, ಕುರಿಸಾಕಾಣಿಕೆ ಮಹತ್ವ, ರೇಷ್ಮೆ ಉದ್ಯಮ, ನಿರ್ಮಲ ಕರ್ನಾಟಕ, ಯಶಸ್ವಿನಿ ಯೋಜನೆ, ಯುವಶಕ್ತಿ, ಪರಿಶಿಷ್ಟ ಜಾತಿ ಜನರ ಕಲ್ಯಾಣ, ಕಾನೂನು ನೆರವು, ಶಿಕ್ಷಣ, ಜನಪದ ಕ್ರೀಡೆಗಳು, ಜಾಗತೀಕರಣದ ಪ್ರಭಾವ, ಗ್ರಾಮೀಣ ಸಂಸ್ಕೃತಿ-ಈ ಲೇಖನ ಸಮುದಾಯದಲ್ಲಿ ಇವು ಕೆಲವು ಮಾತ್ರ. ಇವುಗಳಿಂದ ಇಲ್ಲಿಯ ಎಲ್ಲ ಲೇಖನಗಳ ಸ್ವರೂಪವನ್ನು ಊಹಿಸಿಕೊಳ್ಳಬಹುದು.

ಇದೊಂದು ಗ್ರಾಮಜೀವನದ ವಿಶ್ವಕೋಶ. ಇದು ಆಡಳಿತಗಾರರ ಕೈಪಿಡಿ; ರಾಜಕಾರಣಿಗಳ ಭಗವದ್ಗೀತೆ; ರೈತರ ಮತ್ತು ಗ್ರಾಮನಿವಾಸಿಗಳ ಪಾರಾಯಣ ಗ್ರಂಥ; ಗ್ರಂಥಾಲಯಗಳ ಅಮೂಲ್ಯ ಆಸ್ತಿ. ಗ್ರಾಮ ಹಾಗೂ ನಗರಗಳ ಬದುಕು ಪರಸ್ಪರಾವಲಂಬಿಗಳಾದ್ದರಿಂದ ಎಲ್ಲರೂ ಇದನ್ನೋದಿ, ಸಮಸ್ಯೆಗಳ ಪರಿಹಾರದಲ್ಲಿ ಎಲ್ಲರೂ ಪರಸ್ಪರ ಸಹಕರಿಸಬೇಕು. ಜಾಗತೀಕರಣ ವ್ಯವಸ್ಥೆ ನಗರಗಳಿಗಿಂತ ಹಳ್ಳಿಗಳ ಮೇಲೆ ಅಪಾಯಕಾರೀ ದುಷ್ಪರಿಣಾಮವನ್ನು ಬೀರುವುದರಿಂದ, ಅವನ್ನೆದುರಿಸುವ ಉಪಾಯದ ಬಗ್ಗೆ ಸರ್ವರೂ ಆಲೋಚನೆ ನಡೆಸಬೇಕಾಗಿದೆ. ಹಳ್ಳಿ ಮುಳುಗಿದರೆ ನಗರವೂ ಮುಳುಗುತ್ತದೆಂಬುದನ್ನು ನಗರವಾಸಿಗಳು ಅರಿಯಬೇಕಾಗಿದೆ.

ಇಂಥದೊಂದು ಬೃಹದ್ ಗಾತ್ರದ ಗ್ರಂಥ ತಯಾರಿಕೆ ಸುಲಭವಾದದ್ದಲ್ಲ. ವಿಷಯಗಳ ಆಯ್ಕೆ ಮತ್ತು ಆಯೋಜನೆ ಸರಾಗದ ಕಾರ್ಯವಲ್ಲ. ಆಮೇಲೆ ಯೋಗ್ಯ ಲೇಖಕರ ಹುಡುಕಾಟ ಪ್ರಾರಂಭವಾಗುತ್ತದೆ. ವಿಷಯ ಬಲ್ಲವರಿಗೆ ಲೇಖನ ಪರಿಶ್ರಮವಿಲ್ಲ; ಬರೆಯಬಲ್ಲವರಿಗೆ ವಿಷಯ ಜ್ಞಾನವಿಲ್ಲ. ಅಂತು ಇಂತು ಅದೊಂದು ಕಸರತ್ತು. ಎರಡರಲ್ಲಿಯೂ ಪರಿಶ್ರಮವುಳ್ಳವರ ವಿಳಾಸ ದೊರೆತಾಗ, ಅವರನ್ನೊಪ್ಪಿಸಲು ಕಲಿತ ಪಟ್ಟುಗಳನ್ನೆಲ್ಲ ಬಳಸಬೇಕಾಗುತ್ತದೆ. ನಿಯತ ಕಾಲದಲ್ಲಿ ಲೇಖನ ಸಂಪಾದಕರ ಕೈಸೇರಿದರೆ ಪುಣ್ಯ. ಇಂದು ನಾಳೆ ನಾಡಿದ್ದು ವಾರ ತಿಂಗಳೆಂದು ಕಾಲದ ಹೊಳೆ ದೂರ, ಬಹುದೂರ ಹರಿಯುತ್ತದೆ. ಲೇಖನಗಳು ಕೈ ಸೇರಿದ ನಂತರ ಸಂಸ್ಕರಣ ಕಾರ್ಯ ಅನಿವಾರ್ಯವಾಗುತ್ತದೆ. ಅಚ್ಚಾದ ಗ್ರಂಥ ದೊರೆತಾಗ, ಅದರ ಅಂದ ಚೆಂದಗಳನ್ನು ಮಿತ್ರರು ಪ್ರಶಂಸಿಸಬಹುದು. ಆದರೆ ಆ ಗ್ರಂಥ ನಿರ್ಮಾಣದ ಹಿನ್ನೆಲೆಯಲ್ಲಿ ಎಷ್ಟು ಬೆವರು ಹರಿದಿರಬಹುದೆಂದು ಸಾಮಾನ್ಯವಾಗಿ ಯಾರೂ ಯೋಚಿಸುವುದಿಲ್ಲ.

ರಾಜಶೇಖರನ್ ಅವರ ಮೇಲಣ ಪ್ರೀತಿ ಗೌರವಗಳಿಂದ ಶ್ರೀ ಕೆ.ಆರ್. ಕಮಲೇಶ್ ಈ ಎಲ್ಲ ಶ್ರಮವನ್ನು ವಹಿಸಿಕೊಂಡು ಉತ್ಕೃಷ್ಟ ರೀತಿಯಲ್ಲಿ ಗ್ರಂಥ ಹೊರತಂದಿದ್ದಾರೆ. ರಾಜಶೇಖರನ್ ದೇಶದ ಅಮೂಲ್ಯ ಆಸ್ತಿಯೆಂಬ ಅಭಿಮಾನ ಅವರಿಗಿದೆ. ತಾವು ನಂಬಿದ ಯಾರನ್ನಾದರೂ ಇಷ್ಟೇ ಆಸ್ಥೆಯಿಂದ ಪ್ರೀತಿಸುತ್ತಾರೆ; ಅವರಿಗಾಗಿ ಯಾವ ತ್ಯಾಗಕ್ಕೂ ಕಮಲೇಶ್ ಸಿದ್ಧ. ಆಡಳಿತವೆ, ಬರವಣಿಗೆಯೆ, ಸಂಪಾದನೆಯೆ, ಸ್ನೇಹಿತರ ಕಾರ್ಯವೆ ಎಲ್ಲದರಲ್ಲಿಯೂ ಅವರು ಸಿದ್ಧಹಸ್ತರು. ಎಂಥ ಮಹತ್ತರವಾದ ಕಾರ್ಯವನ್ನಾದರೂ ನಿರ್ವಹಿಸಲಗತ್ಯವಾದ ಚಿಂತನ ಸಾಮರ್ಥ್ಯ, ಪ್ರತಿಭೆ, ಕಾರ್ಯ ನೈಪುಣ್ಯ, ವಾಕ್ಕೌಶಲ್ಯ ಅವರಲ್ಲಿವೆ. ಇಂಥವರ ಶಕ್ತಿಯನ್ನು ಸರಿಯಾಗಿ ಬಳಸಿಕೊಳ್ಳಬೇಕಾದ್ದು ದೇಶ ಕಟ್ಟುವವರ ಕರ್ತವ್ಯ. ಈ ಗ್ರಂಥದ ರೂವಾರಿ ಮಾತ್ರವಲ್ಲ, ನಿರ್ಮಾತೃಗಳೂ ಅವರೇ. ನಾನು ಬರಿಯ ನೆಪ. ಈ ಮಹಾಕಾರ್ಯದ ಯಶಸ್ಸಿಗಾಗಿ ಅವರನ್ನು ವಂದಿಸುತ್ತ, ಅವರಿಗೆ ಸರ್ವ ಶುಭಗಳನ್ನು ಹಾರೈಸುತ್ತೇನೆ.

ಈ ಗ್ರಂಥಕ್ಕೆ ಲೇಖನಗಳನ್ನೊದಗಿಸಿದ ಎಲ್ಲ ಮಿತ್ರರನ್ನು ಹೃತ್ಪೂರ್ವಕವಾಗಿ ವಂದಿಸುತ್ತೇನೆ. ಈ ಗ್ರಂಥ ಹೊರಬರುವಲ್ಲಿ ಅಪಾರವಾಗಿ ಶ್ರಮಿಸಿರುವ ಬಿ.ಎಸ್. ಸತ್ಯನಾರಾಯಣ್, ಡಾ। ಬೈರಮಂಗಲ ರಾಮೇಗೌಡ, ಕಲಾವಿದ ಕಮಲೇಶ್, ಲಕ್ಷ್ಮೀ ಮುದ್ರಣಾಲಯದ ಅಶೋಕ್‌ಕುಮಾರ್ ಹಾಗೂ ಸನ್ಮಾನ ಸಮಿತಿಯ ಎಲ್ಲಾ ಸದಸ್ಯರಿಗೆ ಹೃತ್ಪೂರ್ವಕ ಧನ್ಯವಾದಗಳು. ಶ್ರೀ ರಾಜಶೇಖರನ್ ಕ್ಯಾಬಿನೆಟ್ ದರ್ಜೆಯ ಸಚಿವರಾಗಬೇಕೆಂಬುದೇ ಕನ್ನಡಿಗರ ಅಭೀಪ್ಸವಾಗಿದೆಯೆಂಬುದನ್ನು ನೆನೆಯುತ್ತ, ಈ ಎರಡು ಮಾತು ಮುಗಿಸುತ್ತೇನೆ.

೨-೧೨-೨೦೦೩ — **ದೇಜಗೌ**

ವಿಶ್ವಚೇತನ ಕುಟೀರ

ಜಯಲಕ್ಷ್ಮೀಪುರಂ, ಮೈಸೂರು

# ಕೆಲವು ಮಾತು

೧೯೯೯ರಲ್ಲಿ ಹೊಸ ಸರ್ಕಾರ ರಾಜ್ಯದಲ್ಲಿ ಆಳ್ವಿಕೆಗೆ ಬಂದ ನಂತರ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಸಾರ್ವಜನಿಕ ಸಂಪರ್ಕಾಧಿಕಾರಿಯಾಗಿದ್ದ ನಾನು ಬೃಹತ್ ಹಾಗೂ ಮಧ್ಯಮ ಕೈಗಾರಿಕಾ ಸಚಿವರ ಆಪ್ತ ಶಾಖೆಯಲ್ಲಿ ವಿಶೇಷಾಧಿಕಾರಿಯಾಗಿ ನೇಮಕವಾದೆ. ೨೦೦೧ರಲ್ಲಿ ಬೆಂಗಳೂರಿನಲ್ಲಿ ೮೧ನೆಯ ಅಖಿಲ ಭಾರತ ಕಾಂಗ್ರೆಸ್ ಸಮಾವೇಶ ಜರುಗಿತಷ್ಟೆ. ಆ ಸಮಾವೇಶಕ್ಕೆ ಸಾಂಪ್ರದಾಯಿಕವಾಗಿ 'ಸ್ಮರಣ ಸಂಚಿಕೆ' ತರುವ ಆಲೋಚನೆಯಿತ್ತು. ಕಾಂಗ್ರೆಸ್ ಪಕ್ಷ ಈ ಕಾರ್ಯವನ್ನು ವಿಧಾನ ಪರಿಷತ್ ಸದಸ್ಯರೂ, ಹಿರಿಯ ಗಾಂಧಿವಾದಿಗಳೂ ಆದ ಎಂ.ವಿ. ರಾಜಶೇಖರನ್ ಹಾಗೂ ಕೈಗಾರಿಕಾ ಸಚಿವರಾದ ಆರ್.ವಿ. ದೇಶಪಾಂಡೆ ಅವರಿಗೆ ವಹಿಸಿತು. ಕೈಗಾರಿಕಾ ಸಚಿವರ ಆಪ್ತಶಾಖೆಯಲ್ಲಿ ಕೆಲಸ ಮಾಡುತ್ತಿದ್ದ, ಸಾಹಿತ್ಯ-ಸಾಂಸ್ಕೃತಿಕ ವಿಚಾರಗಳಲ್ಲಿ ಆಸಕ್ತಿಯಿದ್ದ ನನ್ನನ್ನು ಅಸಗೋಡು ಜಯಸಿಂಹ ರಾಜಶೇಖರನ್ ಅವರಿಗೆ ಪರಿಚಯಿಸುತ್ತಾ "ಇವರು ದೊಡ್ಡ ದೊಡ್ಡ ಗ್ರಂಥ ತಂದಿದ್ದಾರೆ" ಎಂದರು. ಪೂಜ್ಯ ಡಾ. ದೇಜಗೌ ಅವರ ಮಾರ್ಗದರ್ಶನದಲ್ಲಿ ಆಗ ತಾನೇ ತಂದಿದ್ದ 'ಮಲೆನಾಡ ಗಾಂಧಿ ಹೆಚ್.ಜಿ. ಗೋವಿಂದಗೌಡ ಸುವರ್ಣಪಥ' ಅಭಿನಂದನ ಗ್ರಂಥವನ್ನು ಶ್ರೀಯುತರು ನೋಡಿದರು. ಆ ಗ್ರಂಥ ನೋಡಿ ಎಂ.ವಿ.ರಾಜಶೇಖರನ್ ಅವರಿಗೆ ಎಷ್ಟು ಆನಂದವಾಯಿತೆಂಬುದನ್ನು ಮಾತಿನಲ್ಲಿ ವರ್ಣಿಸುವುದಕ್ಕೆ ಸಾಧ್ಯವಿಲ್ಲ. 'ಗಾಂಧಿ ವಿಚಾರಧಾರೆಯ ಸರಳ ಪ್ರಾಮಾಣಿಕ ವ್ಯಕ್ತಿಯನ್ನು ಪರಿಚಯ ಮಾಡಿಕೊಟ್ಟಿರುವ ನಿಮ್ಮ ಗ್ರಂಥ ಅದ್ಭುತ' ಎನ್ನತೊಡಗಿದರು. ಅಲ್ಲಿಂದ ನನ್ನ ಮತ್ತು ರಾಜಶೇಖರನ್ ಅವರ ಬಾಂಧವ್ಯ ಪ್ರಾರಂಭವಾಯಿತು. ಸದ್ಗುಣಗಳನ್ನು ಮೆಚ್ಚುವ, ಯುವಕರನ್ನು ಪ್ರೋತ್ಸಾಹಿಸುವ, ಸದಾ ದುಡಿಮೆಯನ್ನು ನೆಚ್ಚಿಕೊಂಡಿರುವ ರಾಜಶೇಖರನ್ ಬಹುಬೇಗ ನನಗೆ ಪ್ರಿಯರಾದರು.

೮೧ನೆಯ ಅಖಿಲ ಭಾರತ ಕಾಂಗ್ರೆಸ್ ಸಮಾವೇಶದಲ್ಲಿ ಹೊರಬಂದ 'ಸ್ಮರಣ ಸಂಚಿಕೆ' ಹತ್ತರಲ್ಲಿ ಹನ್ನೊಂದು ಎಂಬಂತೆ ಮಾಮೂಲಿ ಸ್ಮರಣ ಸಂಚಿಕೆಯಾಗಿಲ್ಲ. ಸಾಮಾನ್ಯವಾಗಿ ರಾಜಕೀಯ ಪಕ್ಷಗಳ ಸಮಾವೇಶದ ಸಂದರ್ಭದಲ್ಲಿ ಹೊರಬರುವ ಸ್ಮರಣ ಸಂಚಿಕೆಗಳ ಉದ್ದೇಶವೇ ಸಂಪನ್ಮೂಲದ ಕ್ರೋಢೀಕರಣವಾಗಿರುತ್ತದೆ. 'ಅಕಾಡೆಮಿಕ್' ವಿಚಾರಕ್ಕೆ ಯಾವಾಗಲೂ ಎರಡನೆಯ ಆದ್ಯತೆ. ಆದರೆ ಎಂ.ವಿ. ರಾಜಶೇಖರನ್ ಅವರ ನಿಲುವು ಬೇರೆಯಾಗಿತ್ತು. ಈ ಸ್ಮರಣ ಸಂಚಿಕೆ ಆಧುನಿಕ ಭಾರತದ ಪ್ರಗತಿಯ ಮುನ್ನೋಟವಾಗಿರಬೇಕು, ಕಾಂಗ್ರೆಸ್ ಪಕ್ಷದ ಬೆಳವಣಿಗೆ ಕುರಿತ ಅಧಿಕೃತ ದಾಖಲೆಯಾಗಿರಬೇಕು, ಕರ್ನಾಟಕ ಕಾಂಗ್ರೆಸ್ ಸರ್ಕಾರದ ಸಾಧನೆಯ ವ್ಯಾಖ್ಯಾನವಾಗಿರಬೇಕು ಎಂಬ ದೂರದೃಷ್ಟಿ ಅವರಲ್ಲಿತ್ತು. ಈ ಎಲ್ಲಾ ಚಿಂತನೆಗಳಿಗೂ ಕೈಗಾರಿಕಾ ಸಚಿವರಾದ ಆರ್.ವಿ. ದೇಶಪಾಂಡೆ ಮುಕ್ತ ಮನಸ್ಸಿನಿಂದ ಬೆಂಬಲ ಸೂಚಿಸಿದ್ದರು. ಹಿರಿಯ ಪತ್ರಕರ್ತರಾದ ವಿ.ಎನ್. ಸುಬ್ಬರಾವ್, ಇನ್ನೊಬ್ಬ ಪತ್ರಕರ್ತರಾದ ಎಂ.ಕೆ. ವಿದ್ಯಾರಣ್ಯ, ದೂರದರ್ಶನದ ನಿವೃತ್ತ ಸುದ್ದಿ ಸಂಪಾದಕರಾದ ಎಸ್.ಕೆ. ಶೇಷಚಂದ್ರಿಕಾ ಅವರ ಸೇವೆಯನ್ನು ಬಳಸಿಕೊಳ್ಳಲಾಯಿತು. ಆ ಸಂದರ್ಭದಲ್ಲಿ ಸಂಪಾದಕ ಮಂಡಳಿಯ ಸಂಚಾಲಕನಾಗಿ ಕೆಲಸ ಮಾಡುವ ಸುಯೋಗ ನನ್ನದಾಗಿತ್ತು. ಆ ದಿನಗಳಲ್ಲಿ ದಿನಕ್ಕೆ ಹದಿನೆಂಟು ಘಂಟೆ ರಾಜಶೇಖರನ್ ಅವರ ಅನುಭವಾಮೃತ ಸವಿಯುವುದೇ ಒಂದು ರೀತಿಯ ಸೊಗಸು. ಡಾ. ಬಾಬು ರಾಜೇಂದ್ರ ಪ್ರಸಾದ್, ಜವಹರಲಾಲ್ ನೆಹರು, ಹೆಚ್.ಸಿ. ದಾಸಪ್ಪ, ಯಶೋಧರಮ್ಮ ದಾಸಪ್ಪ, ಎಸ್. ನಿಜಲಿಂಗಪ್ಪ, ಮೊರಾರ್ಜಿ ದೇಸಾಯಿ, ನೀಲಂ ಸಂಜೀವರೆಡ್ಡಿ, ಶ್ರೀಮತಿ ಇಂದಿರಾ ಗಾಂಧಿ, ದಿನೇಶ್ ಸಿಂಗ್, ಕಾಮರಾಜ್, ಶಂಕರದಯಾಳ್ ಶರ್ಮಾ, ಎಸ್.ಕೆ. ಡೇ, ಗೋಯಂಕಾ, ವೀರೇಂದ್ರ ಪಾಟೀಲ್, ರಾಮಕೃಷ್ಣ ಹೆಗಡೆ, ಸಾದಿಕ್ ಅಲಿ, ಜಾಫರ್ ಷರೀಫ್, ಡಿ ದೇವರಾಜ ಅರಸು ಅವರುಗಳನ್ನು ಕುರಿತು ಹೇಳಿದ ಮಹತ್ವದ ಘಟನೆಗಳನ್ನು ಹೇಳಹೊರಟರೆ ಅದೊಂದು ಗ್ರಂಥವೇ ಆದೀತು.

೧೯೫೦ರಿಂದ ಎಡೆಬಿಡದೆ ದೇಶ ವಿದೇಶಗಳನ್ನು ಸುತ್ತಿರುವ ದಾಖಲೆ ರಾಜಶೇಖರನ್ ಅವರದು. 'ದೇಶ ಸುತ್ತು ಕೋಶ ಓದು' ಎಂಬ ನಾಣ್ಣುಡಿ ರಾಜಶೇಖರನ್ ಅಂತಹವರನ್ನು ನೋಡಿಯೇ ಚಾಲ್ತಿಗೆ ಬಂದಿರಬೇಕು. ಶ್ರೀಲಂಕಾ, ಅಮೆರಿಕಾ, ಆಫ್ರಿಕಾ, ಕೆನಡಾ, ಜಪಾನ್, ಇಸ್ರೇಲ್, ಫಿಲಿಪೈನ್ಸ್, ಚೀನಾ, ಪಾಕಿಸ್ತಾನ್, ಬಾಂಗ್ಲಾದೇಶ, ಜರ್ಮನಿ

ಮೊದಲಾದ ದೇಶಗಳಿಂದ ನೂರಾರು ಪ್ರಸಂಗಗಳನ್ನು ಅವರು ಉದ್ಧರಿಸುತ್ತಲೇ ಇರುತ್ತಾರೆ. ಅವರ ಜೊತೆ ಒಡಾಡುತ್ತಾ ಅವರ ಮಾತುಗಳನ್ನು ಸಮರ್ಪಕವಾಗಿ ಗ್ರಹಿಸಿಕೊಂಡರೆ ಅವನೊಬ್ಬ ಸಹಜ ಜ್ಞಾನಿಯಾಗುವುದರಲ್ಲಿ ಸಂದೇಹವೇ ಇಲ್ಲ.

ಗ್ರಾಮೀಣ ಭಾರತದ ಪರಿಚಯವಿರುವ ಕೆಲವೇ ರಾಜಕಾರಣಿಗಳಲ್ಲಿ ಎಂ.ವಿ. ರಾಜಶೇಖರನ್ ಅವರಿಗೆ ಅಗ್ರಸ್ಥಾನ. ಗಾಂಧೀಜಿ ಅವರ ವಿಚಾರಧಾರೆಯಲ್ಲಿ ಅಪಾರ ನಂಬಿಕೆಯುಳ್ಳ ರಾಜಶೇಖರನ್ ಹಗಲಿರುಳು ಗ್ರಾಮಗಳ ಅಭ್ಯುದಯವನ್ನೇ ಬಯಸುತ್ತಾರೆ. ವಿದ್ಯಾರ್ಥಿ ದೆಸೆಯಿಂದಲೂ ಜೆ.ಪಿ. ವಿಚಾರಧಾರೆಯಿಂದ ಪ್ರಭಾವಿತರಾದ ನನಗೆ ಸಹಜವಾಗಿ ರಾಜಶೇಖರನ್ ಬಹುಬೇಗ ಪ್ರಿಯರೆನಿಸಿದರು. ಆಗಲೇ ಅವರ ಈ ಎಲ್ಲಾ ಅನುಭವಗಳನ್ನು ದಾಖಲು ಮಾಡುವ ಆಶಯ ನನ್ನಲ್ಲಿ ಸ್ಫುರಿಸಿತು.

ಕಾಂಗ್ರೆಸ್ ಸ್ಮರಣ ಸಂಚಿಕೆಗೆ ಲೇಖನ ಕೊಟ್ಟ ಖ್ಯಾತ ಮಹಾಮಹಿಮರ ಹೆಸರನ್ನು ಕೇಳಿದರೆ ರಾಜಶೇಖರನ್ ಅವರಿಗೆ 'ವಿದ್ವತ್ ವಲಯ'ದಲ್ಲಿ ಎಂತಹ ಮನ್ನಣೆಯಿದೆ ಎಂಬುದು ಗೊತ್ತಾಗುತ್ತದೆ. ಡಾ. ಎಂ.ಎಸ್. ಸ್ವಾಮಿನಾಥನ್, ಡಾ. ರಾಜಾರಾಮಣ್ಣ, ಡಾ. ಯು. ಆರ್. ರಾವ್, ಪ್ರೊ. ಸಿ.ಎನ್.ಆರ್. ರಾವ್, ಡಾ. ದೇಜಗೌ, ಡಾ. ಬಿ. ಷೇಕ್ ಅಲಿ, ಡಾ. ಆರ್. ದ್ವಾರಕೀನಾಥ್, ಟಿ.ಆರ್. ಸತೀಶ್‌ಚಂದ್ರ, ಪ್ರೊ. ಎಲ್.ಎಸ್. ಶೇಷಗಿರಿರಾವ್ ಮೊದಲಾದ ವಿದ್ವಾಂಸರು ಕಾಂಗ್ರೆಸ್ ಸಂಚಿಕೆಗೆ ತಮ್ಮ ಲೇಖನ ಕೊಡುವುದು ಸಾಮಾನ್ಯವೆ ? ಇಲ್ಲೆಲ್ಲಾ ರಾಜಶೇಖರನ್ ಅವರು ತಮ್ಮ ವೈಯಕ್ತಿಕ ವರ್ಚಸ್ಸು ಬಳಸಿಕೊಂಡು ಉತ್ತಮ ಲೇಖನ ತರಿಸಿಕೊಟ್ಟರು. ಜೊತೆಗೆ ಅರ್ಜುನ್‌ಸಿಂಗ್, ಎನ್.ಡಿ. ತಿವಾರಿ ಮೊದಲಾದ ಹಿರಿಯ ಕಾಂಗ್ರೆಸ್ಸಿಗರ ಲೇಖನ ಬರುವಂತೆ ನೋಡಿಕೊಂಡರು. ಅವರ ಶೈಕ್ಷಣಿಕ ಆಸಕ್ತಿಯಿಂದಾಗಿ ಎಲ್ಲೋ ಮೂಲೆಗೆ ಬೀಳುತ್ತಿದ್ದ ಕಾಂಗ್ರೆಸ್ ಸ್ಮರಣ ಸಂಚಿಕೆ 'ಆಕರ ಗ್ರಂಥ' ವಾಗಿ ರೂಪುಗೊಂಡಿತು. ಈ ಕಾರ್ಯ ಮುಗಿಯುವ ಹೊತ್ತಿಗೆ ನಾನು ಅವರ ಶಾಶ್ವತ ಅಭಿಮಾನಿಯಾಗಿದ್ದೆ.

ಡಾ. ದೇಜಗೌ ಅವರಿಗೆ ನಿಜಲಿಂಗಪ್ಪ ಅವರನ್ನು ಕಂಡರೆ ರಾಷ್ಟ್ರಕವಿ ಕುವೆಂಪು ಕಂಡಷ್ಟೇ ಶ್ರದ್ಧಾಭಕ್ತಿ. ೨೦೦೨ರಲ್ಲಿ ಎಸ್. ನಿಜಲಿಂಗಪ್ಪ ಅವರ ಶತಮಾನೋತ್ಸವವನ್ನು ಎಸ್.ಎನ್. ಬದುಕು ಹಾಗೂ ಸಾಧನೆಯ ಜೊತೆ ಕರ್ನಾಟಕದ ರಾಜಕಾರಣ ಕುರಿತಂತೆ ಮೌಲ್ಯಯುತ ಗ್ರಂಥಗಳನ್ನು ಪ್ರಕಟಿಸುವ ಹಂಬಲ ಅವರದು. ಅವರಿಗೆ ಚಿತ್ರದುರ್ಗದ ಮಂಜಣ್ಣ (ಎನ್.ಜಿ. ಮಂಜುನಾಥ) ಅವರ ಒತ್ತಾಸೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವರ ಆಪ್ತ ಕಾರ್ಯದರ್ಶಿಯಾಗಿದ್ದ ಡಾ. ಎ.ಆರ್. ಮಂಜುನಾಥ ಇದನ್ನು 'ನಮ್ಮ ಇಲಾಖೆಯಿಂದಲೇ ಇದನ್ನು ಮಾಡೋಣ' ಎಂದರು. ಆಗ ಮತ್ತೆ ನಾನು ಈ ಕೆಲಸಕ್ಕೆ ಹೊಂದಿಕೊಂಡೆ. ನಿಜಲಿಂಗಪ್ಪ ಅವರ ಶತಮಾನೋತ್ಸವವನ್ನು ನೆಪ ಮಾಡಿಕೊಂಡು ಆರು ಉತ್ತಮ ಗ್ರಂಥಗಳು ಈ ಸಂದರ್ಭದಲ್ಲಿ ಹೊರಬಂದವು. ರಾಜಶೇಖರನ್ ಅವರು 'ನಿಜಲಿಂಗಪ್ಪ ನಮ್ಮ ಮಾವನವರು' ಎಂದು ಅಳುಕುತ್ತಾ ದೂರ ನಿಂತಿದ್ದರು. ನಾವೇ ಅವರನ್ನು ಕೈ ಹಿಡಿದು ಎಳೆದು ತಂದೆವು. ಅಲ್ಲಿಂದ ಎಸ್.ಎನ್. ಶತಮಾನೋತ್ಸವದ ಕೆಲಸಕ್ಕ ವೇಗದ ಚಾಲನೆ ದೊರೆಯಿತು. ವಿಧಾನಸೌಧದ ಬಳಿ ಆಳೆತ್ತರದ ನಿಜಲಿಂಗಪ್ಪ ಅವರ ಪ್ರತಿಮೆಯನ್ನು ಉಪರಾಷ್ಟ್ರಪತಿ ಭೈರೋನ್ ಸಿಂಗ್ ಶೆಖಾವತ್ ಉದ್ಘಾಟಿಸಿದರು. ಅಚ್ಚುಕಟ್ಟಾದ ಸಮಾರಂಭ ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಜರುಗಿತು. ರವೀಂದ್ರ ಕಲಾಕ್ಷೇತ್ರದಲ್ಲಿ 'ಕರ್ನಾಟಕದ ರಾಜಕೀಯ ಚಿಂತನೆ' ಎಂಬ ಆಕರ ಗ್ರಂಥ ಬಿಡುಗಡೆಯಾಯಿತು. ಈ ಎಲ್ಲಾ ಸತ್ಕಾರ್ಯಗಳ ಪ್ರೇರಕ ಶಕ್ತಿ ಎಂ.ವಿ. ರಾಜಶೇಖರನ್ ಅವರಾಗಿದ್ದರು. 'ಸರ್ಕಾರದ ಯಾವುದೇ ಇಲಾಖೆಯಲ್ಲಿ ಎಸ್.ಎನ್. ಶತಮಾನೋತ್ಸವ ಫೈಲು ಮಲಗಿದ್ದರೆ ಒಂದು ಮಾತು ರಾಜಶೇಖರನ್ ಅವರಿಗೆ ಹೇಳಬೇಕು. ಅವರು ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ಜೊತೆ ಮಾತನಾಡುತ್ತಾರೆ' ಎಂದು ಡಾ. ಎ.ಆರ್. ಮಂಜುನಾಥ ಹೇಳತೊಡಗಿದರು. ಯಾವುದೇ ಹಿರಿಯ ನಾಯಕರ ಲೇಖನ ಬರದಿದ್ದಾಗ ನನಗೆ ರಾಜಶೇಖರನ್ ಜ್ಞಾಪಕಕ್ಕೆ ಬರುತ್ತಿದ್ದರು. ಸೋನಿಯಾ ಗಾಂಧಿ, ಬನ್ಸಿಲಾಲ್ ಅಥವಾ ಬೇರೆ ಯಾವುದೇ ನಾಯಕರನ್ನಾಗಲಿ ದೂರವಾಣಿಯಲ್ಲಿ ಮಾತನಾಡಿ ಲೇಖನ ತರಿಸುವ ವ್ಯಕ್ತಿತ್ವ ರಾಜಶೇಖರನ್ ಅವರದು. ಒಮ್ಮೆ ಒಂದು ಕೆಲಸ ತೆಗೆದುಕೊಂಡು ಬಿಟ್ಟರೆ ಮುಗಿದೇ ಹೋಯ್ತು. ಅದರಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಳ್ಳುವ ವಿಶಿಷ್ಟ ವ್ಯಕ್ತಿತ್ವ ಅವರದು.

ರಾಜಶೇಖರನ್ ಈ ಮಧ್ಯೆ ರಾಜ್ಯಸಭಾ ಸದಸ್ಯರಾದರು. ಅವರ ರಾಜ್ಯಸಭಾ ಕಛೇರಿಯಲ್ಲಿ ಸದಾಕಾಲ ಯುವ ಪಡೆಗಳಿಂದ ತುಂಬಿ ಹೋಗಿರುತ್ತದೆ. ಇಂತಹ ಸಂದರ್ಭದಲ್ಲಿ ಯುವ ಮಿತ್ರರು 'ನಮ್ಮ ಸಾಹೇಬ್ರಿಗೆ ಎಪ್ಪತ್ತೈದು ವರ್ಷ ಆಯಿತು. ಒಂದು ಸನ್ಮಾನ ಮಾಡೋಣ' ಎಂದುಕೊಂಡು ಬೆಂಗಳೂರಿನ ಡಾ. ಅಂಬೇಡ್ಕರ್ ಭವನ ಬುಕ್ ಮಾಡಿದರು. ಮತ್ತೊಬ್ಬ ಹಿರಿಯ ಗಾಂಧಿವಾದಿ ಹಾರ್ನಹಳ್ಳಿ ರಾಮಸ್ವಾಮಿ ಅವರನ್ನು ಸನ್ಮಾನ ಸಮಿತಿಯ ಅಧ್ಯಕ್ಷರಾಗಿರಲು ಒಪ್ಪಿಸಿಕೊಂಡರು. ಆನಂತರ ಚಿತ್ರದುರ್ಗದ ಮಂಜಣ್ಣ ಕೇವಲ 'ಸನ್ಮಾನ ಮಾಡಿಬಿಟ್ಟರೆ ಏನು ಬಂತು, ಅಭಿನಂದನ ಗ್ರಂಥ ತರೋಣ, ಡಾ. ದೇಜಗೌ ಹಾಗೂ ಕಮಲೇಶ್ ಅವರನ್ನು ಕೇಳೋಣ' ಎಂದರು. ಅಲ್ಲಿಂದ ಗ್ರಂಥ ಸಿದ್ಧತೆ ಪ್ರಾರಂಭವಾಯಿತು. ಕೇವಲ ಮೂವತ್ತು ದಿನಗಳಲ್ಲಿ ಎಂ.ವಿ. ರಾಜಶೇಖರನ್ ಅವರನ್ನು ಕುರಿತಾದ ನಾಲ್ಕು ಮಹತ್ವದ ಗ್ರಂಥಗಳು ಹೊರಬಂದವು. ರಾಷ್ಟ್ರದ ಹಿರಿಯ ನಾಯಕರಾಗಿರುವ ಅರ್ಜುನ್ ಸಿಂಗ್ ಅಭಿನಂದನ ಸಮಾರಂಭಕ್ಕೆ ಬಂದು ಹರಸಿದರು. ಚಿತ್ರದುರ್ಗದ ಮಂಜಣ್ಣ, ಅಸಗೋಡು ಜಯಸಿಂಹ, ಜೀರಿಗೆ ಲೋಕೇಶ್, ಸದಾಶಿವಯ್ಯ, ಜಯಶಂಕರ್, ಗೋಪಿನಾಥ್, ಸತೀಶ್‌ಗೌಡ, ಅಮರನಾಥ್, ಚಿದಾನಂದ ಮಠ, ಪಿಳ್ಳಪ್ಪ, ಶಿವಶಂಕರ ಮೊದಲಾದವರು ಅತ್ಯಲ್ಪ ಕಾಲದಲ್ಲಿ ಸುಂದರವಾಗಿ ಆ ಗ್ರಂಥಗಳು ಹೊರಬರಲು ಕಾರಣರಾಗಿದ್ದಾರೆ. ಇವರಿಗೆಲ್ಲಾ ರಾಜಶೇಖರನ್ ಮೇಲೆ ಇರುವ ಗೌರವ ಅಪಾರ. ನಿಜ ಹೇಳಬೇಕಾದರೆ ಪ್ರಸ್ತುತ ಗ್ರಂಥ ಹೊರಬರಲು ಅವರುಗಳ ಉತ್ಸಾಹವೇ ಮುಖ್ಯ ಕಾರಣ.

ರಾಜಶೇಖರನ್ ಅವರ ಆಸಕ್ತಿ ವಿಷಯವಾದ 'ಗ್ರಾಮೀಣಾಭಿವೃದ್ಧಿ' ಕುರಿತು ಆಕರ ಗ್ರಂಥ ತರಲು ಆಗಲೇ ತೀರ್ಮಾನವಾಗಿತ್ತು. ಇದೇ ಸಂದರ್ಭದಲ್ಲಿ ಅವರನ್ನು ಕುರಿತಾದ ಪುಟ್ಟ ಜೀವನ ಚರಿತ್ರೆಯೊಂದು ಪ್ರಕಟವಾಗುತ್ತಿದೆ. ಈ ಗ್ರಂಥಗಳಿಗೆ ಬೇಕಾದ ಸಂಪನ್ಮೂಲಗಳನ್ನು ಸನ್ಮಾನ ಸಮಿತಿ ಒದಗಿಸಿಕೊಟ್ಟಿತು. ಸುಮಾರು ಒಂದು ವರ್ಷದ ಅಂತರದ ನಡುವೆ ಈ ಗ್ರಂಥ ಹೊರಬರುತ್ತಿದೆ.

ರಾಜಶೇಖರನ್ ಅವರ ಅಪಾರ ತಾಳ್ಮೆಯ ಫಲ ಅವರಿಗೆ ಕೇಂದ್ರ ಸಚಿವ ಸಂಪುಟದಲ್ಲಿ ಸ್ಥಾನ ದೊರಕಿದೆ. ಅದರಿಂದ ಅವರ ಅಭಿಮಾನಿಗಳಿಗೆ ಆಗಿರುವ ಸಂತೋಷ ದೊಡ್ಡದು. ಕೊನೆಗೂ ಅವರ ದುಡಿಮೆಗೆ ಫಲ ದೊರೆಯಿತಲ್ಲ ಎಂಬ ಸಮಾಧಾನ ಅಭಿಮಾನಿಗಳದು.

ಗ್ರಾಮೀಣಾಭಿವೃದ್ಧಿ ಕುರಿತಂತೆ ಇದೊಂದು ವಿಶ್ವಕೋಶವಾಗಿ ಕಾಣಬಂದರೆ ಆಶ್ಚರ್ಯವಿಲ್ಲ. ಗ್ರಾಮದ ಅಭ್ಯುದಯಕ್ಕೆ ಬೇಕಾದ ಎಲ್ಲಾ ಮಗ್ಗಲುಗಳನ್ನು ಕುರಿತು ಇಲ್ಲಿ ಚಿಂತಿಸಲಾಗಿದೆ. ಈ ಬೃಹತ್ ಗ್ರಂಥ ಸಿದ್ಧತೆಯಲ್ಲಿ ಸಹಾಯ ಮಾಡಿದ ಅನೇಕ ವ್ಯಕ್ತಿಗಳನ್ನು ಕೃತಜ್ಞತೆಯಿಂದ ಸ್ಮರಿಸುವುದು ನನ್ನ ಆದ್ಯ ಕರ್ತವ್ಯ. ಮೊದಲಿಗೆ ಎಂ.ವಿ. ರಾಜಶೇಖರನ್ ನನ್ನ ಕಿರುಕುಳ ಸಹಿಸಿಕೊಂಡು ಸಹಾಯ ಮಾಡಿದ್ದಾರೆ. ಸನ್ಮಾನ ಸಮಿತಿಯ ಅಧ್ಯಕ್ಷರಾದ ಹಾರ್ನಹಳ್ಳಿ ರಾಮಸ್ವಾಮಿ ಹಾಗೂ ಇತರರು ಸೂಕ್ತ ಮಾರ್ಗದರ್ಶನ ಕೊಟ್ಟಿದ್ದಾರೆ.

ಈ ಗ್ರಂಥದ ಪೂರ್ಣ ಕಲ್ಪನೆ ಮಾಡಿಕೊಂಡು ಪ್ರತಿನಿತ್ಯ ನನಗೆ ಸೂಕ್ತ ಸಲಹೆ ಕೊಟ್ಟು ಈ ಗ್ರಂಥ ಹೊರತಂದಿರುವವರು ಪೂಜ್ಯ ಡಾ. ದೇಜಗೌ. ಅವರ ಸಹೃದಯತೆ ಹಾಗೂ ಕಿರಿಯರನ್ನು ಪ್ರೋತ್ಸಾಹಿಸುವ ವಿಶಿಷ್ಟ ಗುಣವನ್ನು ಎಷ್ಟು ಪ್ರಶಂಸಿಸಿದರೂ ಸಾಲದು.

ಮತ್ತೊಬ್ಬ ಹಿರಿಯರಾದ ಗೊ.ರು. ಚನ್ನಬಸಪ್ಪ ಅವರ ಸಹಕಾರ ಸಹ ಅಮೂಲ್ಯವಾದದು.

ಈ ಬೃಹತ್ ಗ್ರಂಥದಲ್ಲಿ ಒಂದು ನೂರಾ ಆರು ಲೇಖನಗಳಿದ್ದು, ಒಂದು ನೂರ ಹನ್ನೆರಡು ಜನ ಲೇಖಕರಿದ್ದಾರೆ. ಅವರೆಲ್ಲಾ ರಾಜಶೇಖರನ್ ಅವರ ಅಭಿಮಾನಿಗಳು, ಜೊತೆಗೆ ಕರ್ನಾಟಕದ ಗ್ರಾಮಗಳ ಬದುಕು ಸುಧಾರಿಸಬೇಕೆಂಬ ಹಂಬಲವಿರುವ ಸಜ್ಜನರು. ಅವರುಗಳ ಅಮೂಲ್ಯ ಬರಹದಿಂದಲೇ ಈ ಬೃಹತ್ ಗ್ರಂಥಕ್ಕೆ ಮಹತ್ವ ಬಂದಿರವುದು ಎಂಬ ವಿಚಾರದ ಅರಿವಿದೆ. ಈ ಎಲ್ಲಾ ಮಹನೀಯರು ಸ್ಮರಣೆಗೆ ಅರ್ಹರು.

ಈ ಗ್ರಂಥದ ಸಿದ್ಧತೆ ಮಾಡುವಲ್ಲಿ ವಿವಿಧ ಲೇಖಕರಿಂದ ಹಿಡಿದು ಅನೇಕರು ಸಹಾಯ ಮಾಡಿದ್ದಾರೆ. ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯದ ಉಪಕುಲಪತಿ ಎಂ.ಎಸ್. ಶೀಲವಂತರ್ ಹಾಗೂ ಅಲ್ಲೇ ಪ್ರಾಧ್ಯಾಪಕರಾಗಿರುವ ಡಾ. ಟಿ.ಎಸ್. ಪ್ರಕಾಶ್ ಹಾಗೂ ಡಾ. ಎಂ.ಜಿ. ಚಂದ್ರಕಾಂತ್ ಅಪೂರ್ವ ರೀತಿಯ ಸಹಕಾರ ನೀಡಿದ್ದಾರೆ. ಇಲ್ಲಿನ ಅನೇಕ ಇಂಗ್ಲಿಷ್ ಲೇಖನಗಳನ್ನು ಬಿ.ಎಸ್. ಸತ್ಯನಾರಾಯಣ ಕನ್ನಡಿಸಿದ್ದಾರೆ. ಖ್ಯಾತ ಕಲಾವಿದರಾದ ಕಮಲೇಶ್ ಮುಖಪುಟ ವಿನ್ಯಾಸಿಸಿದ್ದಾರೆ. ಎ.ಎಸ್. ಜಯಸಿಂಹ ಸದಾ ಕಾಲ ಗ್ರಂಥದ ಪ್ರಗತಿ ಕುರಿತು ವಿಚಾರಿಸಿಕೊಂಡಿದ್ದಾರೆ.

ಕೆ. ಪ್ರಕಾಶ್, ಎನ್. ಭಾರತಿ, ನರಸಿಂಹಮೂರ್ತಿ ಅವರು ಹಸ್ತಪ್ರತಿ ಸಿದ್ಧ ಮಾಡುವಲ್ಲಿ ದುಡಿದಿದ್ದಾರೆ. ಡಾ. ಬೈರಮಂಗಲ ರಾಮೇಗೌಡ ಹಾಗೂ ಬಿ.ಎಸ್. ಸತ್ಯನಾರಾಯಣ ಹಗಲಿರುಳು ಕರಡು ತಿದ್ದಿದ್ದಾರೆ. ಇಂತಹ ಗ್ರಂಥಗಳ ಸುಂದರ ಮುದ್ರಣಕ್ಕೆ ಕಾರಣರಾದ ಲಕ್ಷ್ಮಿ ಮುದ್ರಣಾಲಯದ ಅಶೋಕ್‌ಕುಮಾರ್ ಹಾಗೂ ಅಲ್ಲಿನ ನೌಕರ ವರ್ಗದವರು ಪ್ರಾಮಾಣಿಕವಾಗಿ ಕೆಲಸ ಮಾಡಿದ್ದಾರೆ.

ಮೇಲಿನ ಎಲ್ಲ ಮಹನೀಯರ ಅಪಾರ ಶ್ರಮ ಈ ಗ್ರಂಥದ ಅಚ್ಚುಕಟ್ಟಿಗೆ ಕಾರಣವಾಗಿದೆ. ವಿವಿಧ ಪುಷ್ಪಗಳಿಂದ ಹೂಮಾಲೆ ಸುಂದರವಾಗಿ ಕಾಣುವಂತೆ ಇವರೆಲ್ಲರ ನಿಸ್ವಾರ್ಥ ದುಡಿಮೆಯಿಂದ ಈ ಗ್ರಂಥಕ್ಕೆ ಅಚ್ಚುಕಟ್ಟುತನ ಬಂದಿದೆ. ಮತ್ತೊಮ್ಮೆ ಇವರಿಗೆಲ್ಲಾ ವಂದನೆ ಹೇಳಿ, ನನಗೆ ಇಂತಹ ಅವಕಾಶ ಕೊಟ್ಟ ಎಂ.ವಿ. ರಾಜಶೇಖರನ್ ಸನ್ಮಾನ ಸಮಿತಿಗೆ ಧನ್ಯವಾದ ಅರ್ಪಿಸುತ್ತೇನೆ.

೧೭-೧೧-೨೦೦೪

**ಕೆ. ಆರ್. ಕಮಲೇಶ್**
**ಸಂಪಾದಕ**

# ಪರಿವಿಡಿ

ಎಂ.ವಿ. ರಾಜಶೇಖರನ್-೭೫ : ಅಭಿನಂದನ ಗ್ರಂಥ

# ಗ್ರಾಮ ಚೇತನ

ಕರ್ನಾಟಕದ ಗ್ರಾಮೀಣ ಅಭಿವೃದ್ಧಿ ಕುರಿತಾದ ಅಧ್ಯಯನ



ನಿತ್ಯ ಹಸನ್ಮುಖಿ ಎಂ. ವಿ. ರಾಜಶೇಖರನ್



ಆದರ್ಶ ದಂಪತಿಗಳು - ಎಂ. ವಿ. ರಾಜಶೇಖರನ್ - ಗಿರಿಜಾ ರಾಜಶೇಖರನ್

ಸೀತಲವಾಡಿಯಲ್ಲಿನ ತಮ್ಮ ತೋಟದಲ್ಲಿ



ಸನ್ಮಾನ ಸಮಿತಿ ಅಧ್ಯಕ್ಷರಾದ ಹಾರನಹಳ್ಳಿ ರಾಮಸ್ವಾಮಿ ಹಾಗೂ ಎಂ. ವಿ. ರಾಜಶೇಖರನ್



'ಸಂತೃಪ್ತ ಕುಟುಂಬ' - ನಿಂತಿರುವವರು : ಉಮಾ ರವಿಶಂಕರ್ (ಸೊಸೆ), ಆರ್. ರವಿಶಂಕರ್ (ಮಗ), ವರುಣ್ ರವಿಶಂಕರ್ (ಮೊಮ್ಮಗ), ಸಂಧ್ಯಾ ಪ್ರದೀಪ್‌ಕುಮಾರ್ (ಮಗಳು), ಪ್ರದೀಪ್‌ಕುಮಾರ್ (ಅಳಿಯ), ಸಿ. ಯಶೋಧ (ಮೊಮ್ಮಗಳು) ಸಿ. ಸುಜಾತ (ಮಗಳು), ಆರ್. ಮಧುಶಂಕರ್ (ಮಗ), ಶಿಲ್ಪ ಮಧುಶಂಕರ್ (ಸೊಸೆ )ಮಾಸ್ಟರ್ ಮಧುಶಂಕರ್ (ಮೊಮ್ಮಗ) ಕುಳಿತಿರುವವರು : ಸಿ. ರಾಜೇಶ್ವರಿ (ಮೊಮ್ಮಗಳು), ಎಂ. ವಿ. ರಾಜಶೇಖರನ್, ಸ್ಫೂರ್ತಿ ಮಧುಶಂಕರ್ (ಮೊಮ್ಮಗಳು) ಶ್ರೀಮತಿ ಗಿರಿಜಾ ರಾಜಶೇಖರನ್, ಮಲ್ಲಿಕಾ ಪ್ರದೀಪ್‌ಕುಮಾರ್ (ಮೊಮ್ಮಗಳು)



ಮೊಮ್ಮಕ್ಕಳೊಡನೆ ಎಂ. ವಿ. ರಾಜಶೇಖರನ್ ದಂಪತಿಗಳು - (ಎಡಗಡೆಯಿಂದ) ಸಿ. ಯಶೋಧ ಸ್ಫೂರ್ತಿ ಮಧುಶಂಕರ್, ಮಾಸ್ಟರ್ ಮಧುಶಂಕರ್ ಮಲ್ಲಿಕಾ ಪ್ರದೀಪ್‌ಕುಮಾರ್, ವರುಣ್ ರವಿಶಂಕರ ಹಾಗೂ ಸಿ. ರಾಜೇಶ್ವರಿ



ಎಡಗಡೆಯಿಂದ : ಉಮಾ ರವಿಶಂಕರ್(ಸೊಸೆ), ಆರ್. ರವಿಶಂಕರ್ (ಮಗ), ಪ್ರದೀಪ್‌ಕುಮಾರ್ (ಅಳಿಯ)
ಸಂಧ್ಯಾ ಪ್ರದೀಪ್‌ಕುಮಾರ್ (ಮಗಳು), ಸಿ. ಸುಜಾತ (ಮಗಳು), ಆರ್. ಮಧುಶಂಕರ್ (ಮಗ)
ಶಿಲ್ಪ ಮಧುಶಂಕರ್ (ಸೊಸೆ) ಅವರೊಂದಿಗೆ ಎಂ. ವಿ. ರಾಜಶೇಖರನ್ ಹಾಗೂ ಗಿರಿಜಾ ರಾಜಶೇಖರನ್

'ನಿತ್ಯ ಯಾತ್ರಿಕರು' - ಬೆಂಗಳೂರಿನ ಕಛೇರಿಗೆ ನಿತ್ಯ ಭೇಟಿಕೊಡುವ ಯುವ ಬಂಧುಗಳು
ಎಡಗಡೆಯಿಂದ- ಖದೀರ್ ಅಹ್ಮದ್ ಷರೀಫ್, ಜೀರಿಗೆ ಲೋಕೇಶ್, ಎಂ. ಕೆ. ಜಯಶಂಕರ್, ವೀರಣ್ಣ ಮತ್ತಿಕಟ್ಟಿ ಎಂ.ಎಲ್.ಸಿ.,
ಸಿ. ನಾಗರಾಜಪ್ಪ , ಟಿ. ಅಮರ್‌ನಾಥ್, ಅಸಗೋಡು ಜಯಸಿಂಹ, ನರಸಿಂಹಮೂರ್ತಿ, **ಎಂ. ವಿ. ರಾಜಶೇಖರನ್**, ಎಸ್.ಜಿ. ಮಂಜುನಾಥ್
ಕೆ. ಆರ್. ಕಮಲೇಶ್, ಅಬ್ದುಲ್ ಅಜೀಜ್, ಕೆ. ಗೋಪಿನಾಥ್, ಎಚ್. ಸದಾಶಿವಯ್ಯ, ಕೆ. ಎನ್. ಸಾರಂಗಮಠ ಹಾಗೂ ಪಿ. ಪಿಳ್ಳಪ್ಪ



ಬೆಂಗಳೂರಿನ ಕಛೇರಿಗೆ ನಿತ್ಯ ಭೇಟಿ ನೀಡುವ ಯುವ ಬಂಧುಗಳು
ಎಡಗಡೆಯಿಂದ : ಸಿ. ನರಸಿಂಹಮೂರ್ತಿ (ಕಛೇರಿ ಗುಮಾಸ್ತರು) ಕೆ. ಗೋಪಿನಾಥ್, ಎಂ. ಕೆ. ಜಯಶಂಕರ್, ನಾರಾಯಣಸ್ವಾಮಿ
ಖದೀರ್ ಅಹಮದ್ ಷರೀಫ್, ಜೀರಿಗೆ ಲೋಕೇಶ್, ಪಿಳ್ಳಪ್ಪ ಎಮ್. ಎನ್. ಅರುಣ್‌ಕುಮಾರ್, ಎಸ್. ಜಿ. ಮಂಜುನಾಥ್
ಟಿ. ಅಮರನಾಥ್, ನರಸಿಂಹಮೂರ್ತಿ, ಅಬ್ದುಲ್ ಅಜೀಜ್, ಎ. ಎಸ್. ಜಯಸಿಂಹ, ರಾಜಣ್ಣ, ನಾಗಭೂಷಣಮಠ
ಸಿ. ನಾಗರಾಜಪ್ಪ ಸತೀಶಗೌಡ, ಶಾಂತಕುಮಾರ್, ಗುರುಮಠ್
ಕುಳಿತಿರುವರು ಎಡಗಡೆಯಿಂದ : ಶ್ರೀಯುತ ಹಾರನಹಳ್ಳಿ ರಾಮಸ್ವಾಮಿ, ಎಂ. ವಿ. ರಾಜಶೇಖರನ್ ಹಾಗೂ ಚಂದ್ರಶೇಖರ್ (ಕಛೇರಿ ಸಿಬ್ಬಂದಿ)



ಸಮಾರಂಭವೊಂದರಲ್ಲಿ : ಕೇಂದ್ರ ಸಚಿವರಾದ
ಎಂ. ವಿ. ರಾಜಶೇಖರನ್, ಮುಖ್ಯಮಂತ್ರಿ ಧರ್ಮಸಿಂಗ್
ಮಾಜಿ ಪ್ರಧಾನಿ ಎಚ್.ಡಿ. ದೇವೇಗೌಡ
ಹಾಗೂ ಮಾಜಿ ಶಾಸಕ ಸುಬ್ಬಾರೆಡ್ಡಿ



ಸುತ್ತೂರು ಸಂಸ್ಥಾನದಲ್ಲಿ ಎಂ. ವಿ. ರಾಜಶೇಖರನ್, ಎಸ್. ಎಂ. ಕೃಷ್ಣ, ಶ್ರೀಮತಿ ಸೋನಿಯಾಗಾಂಧಿ, ಅಧ್ಯಕ್ಷರು ಅಖಿಲಭಾರತ ಕಾಂಗ್ರೆಸ್ ಸಮಿತಿ, ಶ್ರೀಮತಿ ಪ್ರೇಮಾ ಕೃಷ್ಣ ಹಾಗೂ ಪೂಜ್ಯ ಡಾ। ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು



ಪತ್ರಕರ್ತರು, ಉದ್ಯಮಿಗಳು ಹಾಗೂ ಮೈಸೂರಿನ ಮಾಜಿ ಮೇಯರ್ ವಾಸು ಅವರಿಂದ ಎಂ. ವಿ. ರಾಜಶೇಖರನ್ ಅವರಿಗೆ ಸನ್ಮಾನ

ಸುತ್ತೂರು ಜಗದ್ಗುರುಗಳಾದ ಡಾ। ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳಿಂದ ಎಂ. ವಿ. ರಾಜಶೇಖರನ್ ಅವರಿಗೆ ಸನ್ಮಾನ. ಜೊತೆಯಲ್ಲಿ ಮಾನ್ಯ ಸಂಸದೀಯ ಹಾಗೂ ಕಂದಾಯ ಸಚಿವರಾದ ಎಂ. ಪಿ. ಪ್ರಕಾಶ್



ಸನ್ಮಾನ್ಯ ರಾಷ್ಟ್ರಪತಿ ಡಾ। ಎ. ಪಿ. ಜೆ. ಅಬ್ದುಲ್ ಕಲಾಂ ಅವರೊಡನೆ ಕರ್ನಾಟಕದ ಸಂಸದರೊಂದಿಗೆ
ಎಂ. ವಿ. ರಾಜಶೇಖರನ್ ಉಪಾಹಾರ ಸೇವನೆ

ಯು.ಪಿ.ಎ. ಸರ್ಕಾರದ ಪ್ರಧಾನಿ ಡಾ। ಮನಮೋಹನ್‌ಸಿಂಗ್ ಅವರ ಸಚಿವ ಸಂಪುಟದಲ್ಲಿ ಸಚಿವರಾಗಿ
ಸನ್ಮಾನ್ಯ ರಾಷ್ಟ್ರಪತಿಗಳಿಂದ ಪ್ರಮಾಣ ವಚನ ಸ್ವೀಕಾರ



ಪ್ರಧಾನಿ ಡಾ। ಮನಮೋಹನ್‌ಸಿಂಗ್
ಅವರಿಂದ ಅಭಿನಂದನೆ ಸ್ವೀಕಾರ



प्रधान मंत्री

Prime Minister

New Delhi
September 12, 2004

Dear Shri Rajasekharan ji,

Please accept my heartiest congratulations on your birthday. I wish you many more years in the service of the nation.

With warm regards,

Yours sincerely,

Manmohan Singh
(Manmohan Singh)

Shri M.V. Rajasekharan
Minister of State for Planning
New Delhi

ಪ್ರಧಾನಮಂತ್ರಿ ಡಾ। ಮನಮೋಹನ್‌ಸಿಂಗ್ ಅವರಿಂದ ಹುಟ್ಟುಹಬ್ಬದ ಸಂದೇಶ

# ANGOC

Asian NGO Coalition for Agrarian Reform and Rural Development

The Asian NGO Coalition for Agrarian Reform and Rural Development (ANGOC) Network confers this plaque to

## M.V. Rajasekharan

as an Individual Member of the ANGOC Network

for his exemplary service and extraordinary commitment in the pursuit of ANGOC to create, promote and sustain vibrant rural communities in Asia.

This Resolution has been approved by the 24th ANGOC Board of Directors on the 10th of May 2002 and ratified by the 11th General Assembly this 22nd day of July 2004.

Sgd.

Fr. Francis Lucas
Chairperson

Nathaniel Don E Marquez
Executive Director

Board of Directors:

Aminul Islam
ADAB

Dwi Astuti
Bina Desa

Yosef Arihadi
bina Swadaya

Dr. M. Mathur
CARTE

Sil Vineth
CNAC

P. V. Rajagopal
GPF

Michio Ito
JANIC

Shanta Lall Mulmi
NFN

Saman Amarasinghe
NNGOC

Dr. G.N. Reddi
SARRA

Khurram Riaz
RDF

Rachel Polestico
SEARSOLIN

Antonio Quizon
Individual Member

ಏಷ್ಯಾ ಖಂಡದ ಪ್ರತಿಷ್ಠಿತ ಆ್ಯನ್‌ಗಾಕ್ (ANGOC) ಸರ್ಕಾರೇತರ ಸಂಸ್ಥೆಯು ಎಂ. ವಿ. ರಾಜಶೇಖರನ್‌ರವರ ಗ್ರಾಮೀಣ ಅಭಿವೃದ್ಧಿಯ ಸೇವೆಯನ್ನು ಪರಿಗಣಿಸಿ ಮೊಟ್ಟಮೊದಲ ಬಾರಿಗೆ ಅವರಿಗೆ ವೈಯಕ್ತಿಕ ಸದಸ್ಯತ್ವವನ್ನು ನೀಡಿದೆ. ಈ ಸದಸ್ಯತ್ವವು ನಿರ್ದೇಶಕ ಮಂಡಳಿ ಹಾಗೂ ಸಾಮಾನ್ಯ ಸಭೆಯಲ್ಲಿ ಅನುಮೋದಿತವಾಗಿದೆ ಶ್ರೀಯುತರು ಈ ಸಂಸ್ಥೆಯ ಸಂಸ್ಥಾಪಕರಲ್ಲಿ ಒಬ್ಬರು.

ಛಾಯ ಚಿತ್ರಗಳ ಕೃಪೆ : ಆರಾಧ್ಯ ಫೋಟೋ ನ್ಯೂಸ್




# ಗ್ರಾಮದೀಪ್ತಿ

ಶ್ರೀವತ್ಸ

## ಪರಿಮಳವಿಲ್ಲದ ಹೂವೇಕೆ?!

ಪ್ರಸಿದ್ಧ ಚಿಂತಕ ರೂಸ್‌ವೆಲ್ಟ್ ಭಾಷಣವೊಂದರಲ್ಲಿ ಹೇಳಿದ ಮಾತಿದು. "ಹೂವಿಗೆ ಸುವಾಸನೆ ಇದ್ದಂತೆ ಮನುಷ್ಯನಿಗೆ ವ್ಯಕ್ತಿತ್ವ". ಹೂವಿಗೆ ಸುವಾಸನೆ ಇಲ್ಲದಿದ್ದರೆ ಅದು ಹೇಗೆ ಜನರ ವಿಶ್ವಾಸವನ್ನು ಗಳಿಸುವುದಿಲ್ಲವೋ ಹಾಗೆ ವ್ಯಕ್ತಿಗೆ ತನ್ನದೇ ಆದ ವ್ಯಕ್ತಿತ್ವ ಇಲ್ಲದಿದ್ದರೆ ಆತ ಜನಮನ್ನಣೆ ಗಳಿಸುವುದಿಲ್ಲ. ನಿತ್ಯ ಹುಟ್ಟಿ ಸಾಯುವವರ ಸಂಖ್ಯೆ ಈ ಜಗತ್ತಿನಲ್ಲಿ ಲೆಕ್ಕಕ್ಕೆ ಇಲ್ಲದಷ್ಟು. ಆದರೆ ಕೆಲವೊಂದು ವ್ಯಕ್ತಿಗಳು ಮಾತ್ರ ತಮ್ಮ ಹುಟ್ಟಿನಿಂದಾಗಿ ಮಾನವಲೋಕಕ್ಕೆ ಮಹದುಪಕಾರ ಮಾಡುತ್ತಾರೆ. ಭಗವಾನ್ ಬುದ್ಧ, ಬಸವಣ್ಣ, ಮಹಾತ್ಮ ಗಾಂಧೀಜಿ, ಅಬ್ರಹಾಂ ಲಿಂಕನ್ ಇತ್ಯಾದಿ. ಆದರೆ, ಆ ಎತ್ತರಕ್ಕೆ ಏರಲಾಗದಿದ್ದರೂ ಅನೇಕರು ಈ ಮಹಾತ್ಮರ ಆಶಯಗಳನ್ನು ಇಟ್ಟುಕೊಂಡು ದೊಡ್ಡ ಬಾಳು ಬಾಳುತ್ತಾ, ನಮಗೆ ಮಾರ್ಗದರ್ಶಿಗಳಾಗಿದ್ದಾರೆ. ಅಂಥವರಲ್ಲಿ ಎಂ.ವಿ. ರಾಜಶೇಖರನ್ ಒಬ್ಬರು. ಅವರ ನೆನಪನ್ನು ಕುರಿತು ಹಿರಿಯ ಗಾಂಧೀವಾದಿ ಹಾರನಹಳ್ಳಿ ರಾಮಸ್ವಾಮಿಯವರು ಹೇಳುವ ಒಂದು ಮಾತೇ ಅವರ ಇಡೀ ವ್ಯಕ್ತಿತ್ವವನ್ನು ಚಿತ್ರಿಸುತ್ತದೆ. "ಶ್ರೀ ಎಂ.ವಿ. ರಾಜಶೇಖರನ್ ಅವರ ಹೆಸರು ನೆನಪಿಗೆ ಬಂದ ತಕ್ಷಣ ಮನಸ್ಸಿಗೆ ಮತ್ತು ಹೃದಯಕ್ಕೆ ತಂಪಾದ ಭಾವನೆ ಉಂಟಾಗುತ್ತದೆ". ಇಂಥ ವ್ಯಕ್ತಿತ್ವದ ವಿಶೇಷಣ ಇದ್ದುದರಿಂದಲೇ ಡಾ. ದೇ. ಜವರೇಗೌಡ ಅವರು ಎಲ್ಲ ವಿಶೇಷಣಗಳನ್ನು ಬಳಸಿ ಅವರನ್ನು "ಸಜ್ಜನ ನಿರ್ಮತ್ಸರದ ಸೌಜನ್ಯದ ಸಂಕೇತ ಅವರು. ಸಮಾಜದಲ್ಲಿ ಪ್ರೇಮದ ಪರಿಸರದ ಆಶಯ ಅವರದು. ರಾಜಶೇಖರನ್ ಅವರ ಮುಖದಲ್ಲಿ ಯಾವಾಗಲೂ ನಗುವಿರುತ್ತದೆ ಎನ್ನುತ್ತಾರೆ". ಎಪ್ಪತ್ತಾರನೆಯ ವಯಸ್ಸಿನ ರಾಜಶೇಖರನ್ ಅವರು ಅನೇಕ ಏಳುಬೀಳುಗಳನ್ನು ಕಂಡವರು. ಜೀವನದ ಪರಿಪಕ್ವತೆ ಏನೆಂಬುದನ್ನು ಕಾಣಬೇಕೆನ್ನುವವರು ಅವರೊಡನೆ ಸ್ವಲ್ಪ ಹೊತ್ತು ಸಂಭಾಷಿಸಬೇಕು.

**ರಾಜಶೇಖರನ್ ಅವರು ಬೆಳೆದಿರುವ ಎತ್ತರ ನಿಜಕ್ಕೂ ಅಭಿಮಾನ ಹುಟ್ಟಿಸುವಂತಹುದು. ಆದರೆ, ಅವರು ಈ ಎತ್ತರ ಪಡೆಯಲು ಯಾವುದೇ ರಾಜಕೀಯ ಅಧಿಕಾರ ಅಥವಾ ಐಶ್ವರ್ಯ ಪ್ರೇರಿತವಾದ ಪ್ರಭಾವ ಹೊಂದಿರಲಿಲ್ಲ.**

ರಾಜಶೇಖರನ್ ಅವರು ಬೆಳೆದಿರುವ ಎತ್ತರ ನಿಜಕ್ಕೂ ಅಭಿಮಾನ ಹುಟ್ಟಿಸುವಂತಹುದು. ಆದರೆ, ಅವರು ಈ ಎತ್ತರ ಪಡೆಯಲು ಯಾವುದೇ ರಾಜಕೀಯ ಅಧಿಕಾರ ಅಥವಾ ಐಶ್ವರ್ಯ ಪ್ರೇರಿತವಾದ ಪ್ರಭಾವ ಹೊಂದಿರಲಿಲ್ಲ. ಜೀವನದಲ್ಲಿ ನೋವು ಸೋಲುಗಳನ್ನು ಉಂಡು ಸಮಸ್ಯೆಗಳ ನಡುವೆ ಸಿಲುಕಿಕೊಂಡು ಎಲ್ಲ ಹಂತಗಳಲ್ಲೂ ಮಾನಸಿಕ ಕ್ಷೋಭೆಗೆ ಒಳಗಾದರೂ

ಸಮಚಿತ್ತತೆ ಕಳೆದುಕೊಳ್ಳದೆ, ತಾವು ನಂಬಿದ ಮೌಲ್ಯಗಳಿಗಾಗಿ ಏಕಾಂಗಿಯಾಗಿ ಹೋರಾಡುತ್ತಿರುವ ಮಹಾನ್ ವ್ಯಕ್ತಿ ರಾಜಶೇಖರನ್. ಇಂಥ ಸಮಚಿತ್ತ-ಸಮಭಾವ ಅವರಲ್ಲಿ ಅವಿರ್ಭವಿಸಿರುವುದರಿಂದಲೇ ಅವರ ವ್ಯಕ್ತಿತ್ವದ ಎತ್ತರ ಕಣ್ಣಿಗೆ ಗೋಚರಿಸುತ್ತದೆ. ಮಾರ್ಷಾ ಸೆನಿಟಾರ್ ಹೇಳುವಂತೆ "ಬೆಳೆಯುವುದು ಎಂದರೆ ಕಷ್ಟಗಳನ್ನು ಧೈರ್ಯದಿಂದ ಎದುರಿಸುವುದು". ಮಹಾತ್ಮ ಗಾಂಧೀಜಿಯವರು ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ಪ್ರತಿರೋಧದ ನಡುವೆಯೂ ಕೂಡ ಪ್ರದರ್ಶಿಸಿದ ಆತ್ಮವಿಶ್ವಾಸ ಸದಾಕಾಲ ನೆನೆಯುವಂಥದ್ದು. ಲೋಕನಾಯಕ ಜಯಪ್ರಕಾಶ್ ನಾರಾಯಣ ಅವರು ಭಾರತಕ್ಕೆ ಭವಿಷ್ಯವೇ ಇಲ್ಲ ಎಂಬ ಸ್ಥಿತಿ ಇದ್ದಾಗಲೂ ಸೆರೆಮನೆಯಲ್ಲಿ ಕುಳಿತು ತಮ್ಮ ದಿನಚರಿಯಲ್ಲಿ ಮಹತ್ವದ ವಿಚಾರಗಳನ್ನು ದಾಖಲಿಸಿದ್ದನ್ನು ಮರೆಯುವಂತಿಲ್ಲ. ಮಹಾತ್ಮ ಗಾಂಧೀಜಿ ಹಾಗೂ ಜಯಪ್ರಕಾಶ್ ನಾರಾಯಣ ಅವರಲ್ಲಿದ್ದ ಆತ್ಮವಿಶ್ವಾಸ, ಈ ದೇಶದ ಶ್ರೀಸಾಮಾನ್ಯರ ಬಗೆಗಿನ ಅಪಾರ ತಿಳುವಳಿಕೆಯಿಂದಲೇ ಅವರು ಮಹಾನ್ ನಾಯಕರಾಗಿದ್ದರು. ಯಾರು ಶ್ರೀಸಾಮಾನ್ಯರೊಡನೆ ಸದಾಕಾಲ ಸಂಪರ್ಕವನ್ನಿಟ್ಟುಕೊಂಡು, ಅವರ ಕಷ್ಟ-ಸುಖಗಳಿಗೆ ಸ್ಪಂದಿಸುತ್ತಾರೋ ಅಂಥವರು ಮಾತ್ರ ಈ ದೇಶವನ್ನು ಮುನ್ನಡೆಸಬಹುದು. ರಾಜಶೇಖರನ್ ಅವರು ಕಳೆದ ಐವತ್ತು ವರ್ಷಗಳಿಂದ ಕರ್ನಾಟಕದ ವಿವಿಧ ರಂಗಗಳಲ್ಲಿ ದುಡಿಯುತ್ತಾ ಬಂದಿದ್ದಾರೆ. ವಿದ್ಯಾರ್ಥಿ ದೆಸೆಯಿಂದಲೂ ರಾಜಕೀಯದಲ್ಲಿ ಆಸಕ್ತರಾಗಿದ್ದವರು. ಪತ್ರಿಕೋದ್ಯಮ, ಸಾಹಿತ್ಯ, ಸಂಸ್ಕೃತಿ, ಗ್ರಾಮೀಣಾಭಿವೃದ್ಧಿ, ಕೃಷಿ, ರೇಷ್ಮೆ, ತೋಟಗಾರಿಕೆ, ಕೃಷಿ ಕಾರ್ಮಿಕರು, ಶಿಕ್ಷಣ, ಧಾರ್ಮಿಕ ಮಠಗಳು - ಮೊದಲಾದ ಹತ್ತು-ಹಲವು ಕ್ಷೇತ್ರಗಳಲ್ಲಿ ಕ್ರಿಯಾಶೀಲ ಆಸಕ್ತಿ ಉಳಿಸಿಕೊಂಡು, ಅದನ್ನು ಚಿಂತಿಸುತ್ತಾ ಬಂದವರು. ರಾಜಕೀಯ ಕ್ಷೇತ್ರದಲ್ಲಿ ಸೋಲುಂಡಾಗ ಅಥವಾ ಆ ಪಥ ಅಸ್ಪಷ್ಟವಾದಾಗ ಈ ಗಾಂಧೀವಾದಿ ತಮ್ಮದೇ ಆದ ಹಾದಿಯನ್ನು ಕಂಡುಕೊಂಡವರು. ಇಂಥ ಕಾಯಕ ತತ್ವವನ್ನು ನಂಬಿರುವ ರಾಜಶೇಖರನ್ ಅವರ ಬದುಕು ಅಧ್ಯಯನಶೀಲವಾಗಿದೆ. ಯುವ ಜನಾಂಗಕ್ಕೆ ಪ್ರೇರಣೆ ಕೊಡಬಲ್ಲದೆಂಬುದು ನಮ್ಮ ನಂಬಿಕೆ. ರಾಜಶೇಖರನ್ ಅವರು ಕನಕಪುರ ತಾಲ್ಲೂಕು ಮರಳವಾಡಿಯಲ್ಲಿ ಜನಿಸಿದರು (ಜನನ : ೧೨, ಸೆಪ್ಟೆಂಬರ್ ೧೯೨೮). ಆ ಮರಳವಾಡಿ ಎಲ್ಲಿದೆ?

**ತಾಯ್ನೆಲ :**

ಪ್ರಾದೇಶಿಕ ಅಸಮತೋಲನ ಸಮಿತಿ ಅಧ್ಯಕ್ಷರಾದ ಪ್ರೊ। ಡಿ.ಎಂ. ನಂಜುಂಡಪ್ಪ ಹೇಳುವಂತೆ, ಕರ್ನಾಟಕದ ಅತ್ಯಂತ ಹಿಂದುಳಿದ ತಾಲ್ಲೂಕುಗಳಲ್ಲಿ ಬೆಂಗಳೂರು ಗ್ರಾಮೀಣ ಜಿಲ್ಲೆಯಲ್ಲಿ ಬರುವ ಕನಕಪುರ ತಾಲ್ಲೂಕು ಸಹ ಒಂದಾಗಿದೆ. ಬೆಂಗಳೂರಿನಿಂದ ೫೫ ಕಿ.ಮೀ ದೂರದಲ್ಲಿರುವ ಕನಕಪುರ ಅರ್ಕಾವತಿ ನದಿಯ ಬಲದಂಡೆಯ ಮೇಲಿದೆ. ಹಿಂದೆ ಅದನ್ನು 'ಕಾನಕಾನಹಳ್ಳಿ'ಯೆಂದು ಕರೆಯುತ್ತಿದ್ದರು. ಇದಕ್ಕೂ ಪೂರ್ವದಲ್ಲಿ ಅಂದರೆ ಕ್ರಿ.ಶ. ೧೫೧೯ರ ಅಚ್ಚಲು ಶಾಸನದಲ್ಲಿ ಇದನ್ನು 'ಕಾಣಿಕಾರನಹಳ್ಳಿ' ಎಂದು ಉಲ್ಲೇಖಿಸಲಾಗಿದೆ. ಕಾಣಿಕಾರನಹಳ್ಳಿ ಸೀಮೆ ಪ್ರಧಾನನ ಅಧಿಪತ್ಯಕ್ಕೆ ಸೇರಿತ್ತು. 'ಕಾಣಿ' ಎಂದರೆ ಗದ್ದೆ. 'ಕಾಣಿಕಾರಕ' ಎಂದರೆ 'ಭೂಮಾಲೀಕ' ಎಂದರ್ಥ. ಇತಿಹಾಸದ ಕಾಲಚಕ್ರಕ್ಕೆ ಸಿಲುಕಿ, ಇದುವೇ ಕಾನಕಾನಹಳ್ಳಿ ಆಗಿ, ೧೯೪೯ರಲ್ಲಿ ಕನಕಪುರವಾಯಿತು. ಈ ಪ್ರದೇಶವು ಕರ್ನಾಟಕವನ್ನಾಳಿದ ಮೊದಲ ರಾಜ ಮನೆತನವಾದ ತಲಕಾಡಿನ ಗಂಗರ ವಂಶಕ್ಕೆ ಸೇರಿತ್ತೆಂದು ಹೇಳಲಾಗಿದೆ. ಗಂಗ ದೊರೆ ೨ನೇ ರಾಚಮಲ್ಲನ ಕಾಲಕ್ಕೆ ಸಂಬಂಧಪಟ್ಟ ಐತಿಹಾತಿಕ ಆಧಾರಗಳು ಎಳಚಗೆರೆ ಹಾಗೂ ಸಾತನೂರುಗಳಲ್ಲಿ ದೊರಕಿವೆ. ಗಂಗರ ಉತ್ತರಾಧಿಕಾರಿಗಳಾದ ಹೊಯ್ಸಳರು ಈ ಪ್ರದೇಶದ ಒಡೆಯರಾಗಿದ್ದರು. ಇಲ್ಲಿನ ಅಚ್ಚಲು ಹೊಯ್ಸಳರ ಕಾಲದಲ್ಲಿ ಅಚ್ಚಲುನಾಡು ಆಗಿತ್ತು. ವಿಜಯನಗರದ ೨ನೆಯ ಹರಿಹರನ ಕಾಲದಲ್ಲಿ ಅಲ್ಲಗೌಡ ಎಂಬುವವನು ಇಲ್ಲಿನ ಮಾರಸಮುದ್ರ ಕೆರೆಯನ್ನು ಕಟ್ಟಿಸಿದ ಎಂದು ಶಾಸನವೊಂದು ಹೇಳುತ್ತದೆ. ಮೈಸೂರು ಒಡೆಯರು ಕೂಡ ಈ ಪ್ರದೇಶದಲ್ಲಿ ತಮ್ಮ ಮಹತ್ವದ ಕುರುಹುಗಳನ್ನು ಬಿಟ್ಟಿದ್ದಾರೆ. ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಕಾಣಿಕಾರನಹಳ್ಳಿ ಪ್ರಮುಖ ಸೈನಿಕ ನೆಲೆಯಾಗಿತ್ತು. ಕ್ರಿ.ಶ ೧೭೯೧ರ ಮಹತ್ವದ ಟಿಪ್ಪು- ಬ್ರಿಟಿಷ್ ಯುದ್ಧದ ಸಮಯದಲ್ಲಿ ಬ್ರಿಟಿಷ್ ಸೈನ್ಯವು ಈ ಕಾಣಿಕಾರನಹಳ್ಳಿ ಮೂಲಕವೇ ಶ್ರೀರಂಗಪಟ್ಟಣವನ್ನು ತಲುಪಿತು. ಕನಕಪುರ ಲೋಕಸಭೆ ಕ್ಷೇತ್ರವು ಇಡೀ ಭಾರತದಲ್ಲಿಯೇ ಅತ್ಯಂತ ದೊಡ್ಡ ಲೋಕಸಭೆ ಕ್ಷೇತ್ರವೆಂಬ ಹೆಗ್ಗಳಿಕೆ ಪಡೆದಿದೆ. ಕನಕಪುರ ತಾಲ್ಲೂಕು ಕೂಡ ರಾಜ್ಯದಲ್ಲಿಯೇ ಅತಿ ದೊಡ್ಡದಾದ ೨ನೆಯ ತಾಲ್ಲೂಕು ಎಂದು ಖ್ಯಾತಿ ಪಡೆದಿದೆ. ಅರ್ಕಾವತಿ ನದಿ ಕಾವೇರಿಯಲ್ಲಿ ಸಂಗಮವಾಗಿ ಹೋಗುವ ಸ್ಥಳ 'ಮೇಕೆದಾಟು' ಪ್ರವಾಸಿಗರ ಆಕರ್ಷಣೀಯ ತಾಣವಾಗಿದೆ.

ಈ ತಾಲ್ಲೂಕಿನ ವಿಸ್ತೀರ್ಣ ೧೫೯೦ ಚದರ ಕಿ.ಮೀಟರುಗಳು. ಈ ತಾಲ್ಲೂಕಿನಲ್ಲಿ ಸರಾಸರಿ ೮೦೫.೨ ಮಿ.ಮೀ. ಮಳೆಯಾಗುತ್ತದೆ. ಮಾವತ್ತೂರು ಮತ್ತು ದೊಡ್ಡಾಲಹಳ್ಳಿ ಕೆರೆಗಳು ದೊಡ್ಡವು. ಬಹುತೇಕ ಅರಣ್ಯ ನಾಶಗೊಂಡರೂ, ಸಾಕಷ್ಟು ಅರಣ್ಯ ಸಂಪತ್ತು ಈ ತಾಲ್ಲೂಕಿನಲ್ಲಿದೆ. ಶ್ರೀಗಂಧ, ಹೊನ್ನೆ, ಬೀಟೆ, ಮತ್ತಿತರ ಬೆಲೆಬಾಳುವ ಮರಗಳು ಚಿಂದವಾಡಿ, ಮೂಗೂರು, ಕಬ್ಬಾಳು, ತಲ್ಲೂರು ಬಾಣಂತಮಾರಿ, ಬಿಳಿಕಲ್ಲು, ಬಿಳಿಕೆರೆ ಮತ್ತು ರಾಗಳ್ಳಿ ಕಾಡುಗಳಲ್ಲಿವೆ. ಈ ತಾಲ್ಲೂಕಿನ ಪ್ರಮುಖ ಆಕರ್ಷಣೆಯೆಂದರೆ ಇಲ್ಲಿನ ಬೆಟ್ಟಗಳು. ಈ ಬೆಟ್ಟಗಳು ಪ್ರಾಚೀನ ಕಾಲದಲ್ಲಿ ಜಿಲ್ಲೆಗೆ ವರದಾನವಾಗಿದ್ದವು. ಈಗ ಇವು ಗ್ರಾನೈಟ್ ಉದ್ಯಮದ ಲಾಬಿಯ ಹಿಡಿತದಲ್ಲಿವೆ. ಇಲ್ಲಿನ ಅತ್ಯುತ್ತಮ ಗ್ರಾನೈಟ್ ವಿಶ್ವದ ಇತರೆಡೆಗೆ ರಫ್ತಾಗುತ್ತಿದೆ. ಬಾಣಂತಮಾರಿ ಬೆಟ್ಟ, ಮುದವಾಡಿ ಬೆಟ್ಟ, ಬಿಳಿಕಲ್ಲು ಬೆಟ್ಟ, ಗುಲ್ಕಲ್ ಬೆಟ್ಟ, ಪಾತ್ರಧಾರಿ ಬೆಟ್ಟ ಮತ್ತು ಗಂಗಾಧರ ಬೆಟ್ಟಗಳು ಇಲ್ಲಿ ಪ್ರಮುಖವಾಗಿವೆ.

ಕನಕಪುರ ತಾಲ್ಲೂಕು ಕಸಬಾ, ಹಾರೋಹಳ್ಳಿ, ಮರಳವಾಡಿ, ಕೋಡಿಹಳ್ಳಿ, ಉಯ್ಯಂಬಳ್ಳಿ ಹಾಗೂ ಸಾತನೂರು ಹೋಬಳಿಗಳನ್ನು ಹೊಂದಿದ್ದು, ೪೩ ಗ್ರಾಮ ಪಂಚಾಯತಿಗಳನ್ನು ಒಳಗೊಂಡಿದೆ. ೭೪೦ ಕಂದಾಯ ಗ್ರಾಮಗಳು, ೩೨೧ ಉಪ ಗ್ರಾಮಗಳಿವೆ. ಕನಕಪುರ ಪಟ್ಟಣದಲ್ಲಿ ೨೮ ವಾರ್ಡ್‌ಗಳ ಪುರಸಭೆ ಆಡಳಿತ ಮಾಡುತ್ತಿದೆ.

ಕನಕಪುರದಲ್ಲಿ ಕರ್ಮಯೋಗಿ ಎಂದೇ ಖ್ಯಾತವಾಗಿರುವ ಎಸ್.ಕರಿಯಪ್ಪನವರು ಹಿರಿಯ ಗಾಂಧೀವಾದಿಗಳು. ಸುಬ್ಬರಾಯರು. ವೆಂಕಟಾಚಲಪತಿಶೆಟ್ಟರು, ಗುರಿಕಾರ್ ರಂಗೇಗೌಡರು ಮತ್ತು ಸರ್ವೋದಯ ಕಾರ್ಯಕರ್ತ ಜಿ.ವಿ. ನಾರಾಯಣಮೂರ್ತಿ ಮೊದಲಾದವರೊಡನೆ ಸ್ಥಾಪಿಸಿರುವ ಕನಕಪುರ ಗ್ರಾಮೀಣ ಶಿಕ್ಷಣ ಸಂಸ್ಥೆ ಈ ತಾಲ್ಲೂಕಿನಲ್ಲಿ ಶೈಕ್ಷಣಿಕ ಚಟುವಟಿಕೆಯಲ್ಲಿ ಪ್ರಮುಖ ಪಾತ್ರವಹಿಸಿದೆ. ಹಿರಿಯ ಗಾಂಧಿವಾದಿ ಹಾಗೂ ಸರ್ವೋದಯ ಕಾರ್ಯಕರ್ತರಾಗಿದ್ದ ಸರ್ದಾರ್ ವೆಂಕಟರಾಮಯ್ಯ. ಮಳಗಾಳ ಲಿಂಗೇಗೌಡರ, ಕೆ.ಜಿ.ತಿಮ್ಮೇಗೌಡ, ಕೆ.ಜಿ. ಶ್ರೀನಿವಾಸಮೂರ್ತಿ, ಮರಿಲಿಂಗೇಗೌಡ, ಶಿವಲಿಂಗೇಗೌಡ, ಸಿ. ಅಪ್ಪಾಜಿಗೌಡ, ಡಿ.ಕೆ. ಶಿವಕುಮಾರ್ ಮೊದಲಾವದರು ಈ ತಾಲ್ಲೂಕಿನ ಬಹುಮುಖ್ಯ ಜನನಾಯಕರು. ಕಳೆದ ಎರಡು ದಶಕಗಳಿಂದ ರಾಜ್ಯದ ರಾಜಕಾರಣದಲ್ಲಿರುವ, ೧೯೮೩ರಿಂದ ಸತತವಾಗಿ ಈ ಕ್ಷೇತ್ರವನ್ನು ಪ್ರತಿನಿಧಿಸುತ್ತಿರುವ ಪಿ.ಜಿ.ಆರ್. ಸಿಂಧ್ಯ ಈ ತಾಲ್ಲೂಕಿನ ಮರಳವಾಡಿಯವರು.

ಅರ್ಕಾವತಿ ನದಿಯ ದಂಡೆಯಲ್ಲಿ ಕನಕಪುರಕ್ಕೆ ಹೊಂದಿಕೊಂಡಂತಿರುವ ದೇಗುಲಮಠ ವಿರಕ್ತ ಸಂಪ್ರದಾಯದ ಮಠ. ಇಮ್ಮಡಿ ನಿರ್ವಾಣ ಸ್ವಾಮಿಗಳು ಹಾಗೂ ಇಮ್ಮಡಿ ಮಹಾಲಿಂಗಸ್ವಾಮಿಗಳ ಈ ಮಠದಲ್ಲಿ ನೂರಾರು ಮಕ್ಕಳಿಗೆ ಅನ್ನ ದಾಸೋಹ ನೀಡಿ ಅವರ ಶೈಕ್ಷಣಿಕ ಪ್ರಗತಿಗೆ ಕಾರಣರಾಗಿದ್ದಾರೆ. ೧೯೪೪ ರಿಂದ ೪೮ರವರೆಗೆ ದೇಗುಲಮಠದಲ್ಲಿ ಇಮ್ಮಡಿ ನಿರ್ವಾಣ ಸ್ವಾಮಿಗಳು ಹಾಗೂ ಇಮ್ಮಡಿ ಮಹಾಲಿಂಗಸ್ವಾಮಿಗಳ ಆಶ್ರಯದಲ್ಲಿ ತಮ್ಮ ಪ್ರೌಢಶಾಲಾ ವಿದ್ಯಾಭ್ಯಾಸ ಮುಗಿಸಿದ ರಾಜಶೇಖರನ್ ಅವರಿಗೆ ಈ ಮಠದ ಬಗ್ಗೆ ಅಪಾರವಾದ ಗೌರವ. ಕನಕಪುರ ತಾಲ್ಲೂಕಿನ ಪ್ರಮುಖ ಧಾರ್ಮಿಕ ಕೇಂದ್ರಗಳಲ್ಲಿ ಇದೂ ಒಂದು.

ಕನಕಪುರ ತಾಲ್ಲೂಕು ಸಾಹಿತ್ಯ ಸಂಸ್ಕೃತಿಗಳ ನೆಲೆವೀಡು. ಹಿರಿಯ ಶಿಕ್ಷಣ ತಜ್ಞ ಎಚ್.ವಿ.ಶ್ರೀರಂಗರಾಜು ಹಾರೋಹಳ್ಳಿ ಗ್ರಾಮದವರು. ಸಂಗೀತ ತಜ್ಞರಾದ ಕೆ.ವಾಸುದೇವಾಚಾರ್ ಕನಕಪುರದವರು. ಪ್ರಸಿದ್ಧ ವ್ಯಾಕರಣ ತಜ್ಞರಾದ ಕಾಸಕಾನಹಳ್ಳಿ ವರದಾಚಾರ್, ಖ್ಯಾತ ಸಂಶೋಧಕರಾದ ಡಾ। ಟಿ.ವಿ.ವೆಂಕಟಾಚಲಶಾಸ್ತ್ರಿ, ರಾಮಾಯಣ ಮತ್ತು ಮಹಾಭಾರತಗಳನ್ನು ಜನಸಾಮಾನ್ಯರಿಗೆ ಆತ್ಮೀಯವಾಗಿ ಪರಿಚಯಿಸಿರುವ ಪ್ರೊ। ಕೆ.ಎಸ್. ನಾರಾಯಣಾಚಾರ್, ಚಲನಚಿತ್ರ ಕ್ಷೇತ್ರದಲ್ಲಿ ಹೆಸರು ಗಳಿಸಿರುವ ಕಾನಕಾನಹಳ್ಳಿ ಗೋಪಿ, ಲೇಖಕ ಮ.ಮಲ್ಲಪ್ಪ, ಪ್ರಸಿದ್ಧ ಶಿಕ್ಷಣ ತಜ್ಞರಾದ ಪ್ರೊ. ಜಿ. ಅಬ್ದುಲ್ ಬಷೀರ್, 'ಸ್ಪರ್ಧಾ ಪ್ರಪಂಚ' ಪತ್ರಿಕೆಯ ಗೌರವ ಸಂಪಾದಕರಾದ ಎಲ್.ನರಸಿಂಹಯ್ಯ ಮೊದಲಾದವರು ಈ ತಾಲ್ಲೂಕಿನವರು ಎಂದು ಗುರುತಿಸಲಾಗಿದೆ. ಕೃಷಿ ಕನಕಪುರದ ಮುಖ್ಯ ಜೀವನಾಧಾರ ಕ್ಷೇತ್ರವಾಗಿದೆ. ಅರ್ಕಾವತಿ ದಂಡೆಯುದ್ದಕ್ಕೂ ತೆಂಗು ಹಾಗೂ ಹಿಪ್ಪುನೇರಳೆ ಬೆಳೆಗಳಿವೆ. ಮೀನುಗಾರಿಕೆ, ಗಣಿ, ತೋಟಗಾರಿಕೆ, ಪುಷ್ಪೋದ್ಯಮ, ರೇಷ್ಮೆ ಮೊದಲಾದವುಗಳು ಮತ್ತಷ್ಟು ಕ್ರಿಯಾಶೀಲವಾದರೆ ಈ ತಾಲ್ಲೂಕಿನ ಜನರ ಆರ್ಥಿಕ ಮಟ್ಟ ಸುಧಾರಿಸಬಹುದು. ಕನಕಪುರ ತಾಲ್ಲೂಕು ಎಲ್ಲ ದೇವಾನುದೇವತೆಗಳಿಗೆ ಆಶ್ರಯತಾಣವಾಗಿದೆ. ಗ್ರಾಮದೇವತೆ, ಪಿತೃಪಕ್ಷ, ಶಿವರಾತ್ರಿ, ದಸರಾ, ದೀಪಾವಳಿ, ನಾಗಪೂಜೆ ಇಲ್ಲಿನ ಮುಖ್ಯ ಹಬ್ಬಗಳು. ಗೌರಿ-ಗಣೇಶ, ಮೊಹರಂ, ಬಕ್ರೀದ್, ರಂಜಾನ್, ಕಾಮನಹಬ್ಬ ಗ್ರಾಮಗಳ ಜನರ ಭಾವನೆಗಳನ್ನು ಬೆಸೆಯುತ್ತವೆ. ರಾಗಿ ಮುದ್ದೆ, ರೊಟ್ಟಿ, ಅನ್ನ ಜನಸಾಮಾನ್ಯರ ಮುಖ್ಯ ಆಹಾರ. ಹಬ್ಬಹರಿದಿನಗಳಲ್ಲಿ ಸಾಕಷ್ಟು ಸಂಖ್ಯೆಗಳಲ್ಲಿ ಜನರು ಒಂದಾಗಿ ಜೀವಿಸುವ ಪದ್ಧತಿ ಇದೆ. ವಿವಿಧ ಜಾತಿ, ಭಾಷೆ, ಪಂಥಗಳ ಜನ ಒಂದೆಡೆ ಇದ್ದಾರೆ, ವಿವಿಧತೆಯಲ್ಲಿ

ಏಕತೆ ಆಶಯದನ್ವಯ ಎಲ್ಲರೂ ಹೊಂದಿಕೊಂಡು ಬಾಳುತ್ತಿದ್ದಾರೆ. ಈ ನೆಲದ ಸತ್ವಪೂರ್ಣತೆ ರಾಜಶೇಖರನ್ ಅವರ ವ್ಯಕ್ತಿತ್ವದಲ್ಲಿ ಮೇಳೈಸಿದೆ.

ಎಂ.ವಿ. ರಾಜಶೇಖರನ್ ಅವರಿಗೆ ಜನ್ಮ ಕೊಟ್ಟ ಊರು ಮರಳವಾಡಿ ಕನಕಪುರ ತಾಲ್ಲೂಕಿನಲ್ಲಿದೆ. ಕರ್ನಾಟಕದ ದಕ್ಷಿಣದ ತುದಿ ಹಾಗೂ ತಮಿಳುನಾಡಿನ ಉತ್ತರದಲ್ಲಿ ಈ ಊರಿದೆ. ಮರಳವಾಡಿಯನ್ನು ಕುರಿತಂತೆ ಅದೇ ಊರಿನವರಾದ ಪಿ.ಜಿ.ಆರ್.ಸಿಂಧ್ಯ ಹೀಗೆ ವರ್ಣಿಸುತ್ತಾರೆ. "ನಮ್ಮ ಊರು ಸಾಧಾರಣ ದೊಡ್ಡ ಊರು. ಎಲ್ಲ ಜಾತಿ, ಧರ್ಮದವರು ಇರುವ ಊರು. ಗ್ರಾಮದ ಹಬ್ಬವನ್ನು ಒಟ್ಟಿಗೆ ಆಚರಿಸುತ್ತೇವೆ. ನಮ್ಮೂರಿನ ಬಸವೇಶ್ವರ ಕೊಂಡ, ಗ್ರಾಮದೇವತೆ ದೇವರಹಳ್ಳಿ ಅಮ್ಮನವರ ಕೊಂಡ, ತೇರು, ಜಾತ್ರೆ ಸಡಗರ, ಶಾಲೆಯ ಆವರಣ, ಶಾಲೆಯ ಪಕ್ಕ ಹರಿಯುವ ಸಣ್ಣ ಹಳ್ಳ ಇವೆಲ್ಲ ಮಾಸದ ನೆನಪುಗಳು. ನಮ್ಮೂರಿನ ಮೇಲಿರುವ ಪ್ರೀತಿ ಈಗಲೂ ಯಾರಿಗೂ ಕಡಿಮೆಯಾಗಿಲ್ಲ. ಇಂತಹ ಊರಹಬ್ಬಗಳ ಸಂದರ್ಭದಲ್ಲಿ ಕೆಲವು ಕುಟುಂಬಗಳಿಗೆ ವಿಶೇಷ ಗೌರವ. ಅಂತಹ ಒಂದು ಕುಟುಂಬ ರಾಜಶೇಖರನ್ ಅವರದು".

ತಮ್ಮ ಊರನ್ನು ಕುರಿತು ಎಂ.ವಿ.ರಾಜಶೇಖರನ್ ಅವರು ಹೇಳುವ ಮಾತು ಆ ಊರಿನ ವೈವಿಧ್ಯಮಯ ಬದುಕನ್ನು ಸೆರೆಹಿಡಿಯುತ್ತದೆ. "ನಿರ್ಮಲ ಪರಿಸರ ಹಾಗೂ ಮುಗ್ಧ ಜನಸಮುದಾಯವಿರುವ ಮರಳವಾಡಿ ನನಗೆ ಪ್ರಿಯವಾದ ಸ್ಥಳ. ಅದನ್ನು ಪುಟ್ಟ ಭಾರತ ಎಂದು ಕರೆದರೆ ತಪ್ಪಾಗಲಾರದು. ಅಲ್ಲಿ ಎಲ್ಲ ಜಾತಿಯ ಜನರಿದ್ದಾರೆ. ಕಾಳುಗಳಿಂದ ಎಣ್ಣೆ ತೆಗೆಯುವ ಗಾಣಿಗರು ನಮ್ಮ ಮನೆ ಎಡಭಾಗದಲ್ಲಿದ್ದರೆ. ಹಿಂಭಾಗದಲ್ಲಿ ಮಹಮ್ಮದೀಯರು, ಮನೆಯಿಂದ ಮುಂದೆ ಒಕ್ಕಲಿಗರು, ಇನ್ನೊಂದೆಡೆ ವಿಶ್ವಕರ್ಮರು, ತಿಗಳರು, ಅಗಸರು, ಮೇದರು, ಕುಂಬಾರರು, ಮರಾಠರು, ದಲಿತರು-ಹೀಗೆ ಎಲ್ಲರೂ ವಾಸ ಮಾಡುತ್ತಿದ್ದರು. ನಾನು ವಿದ್ಯಾರ್ಥಿಯಾಗಿದ್ದಾಗ ಎಲ್ಲ ಸಮುದಾಯದವರು ನನ್ನ ಸ್ನೇಹಿತರಾಗಿದ್ದರು. ನಮ್ಮೂರಿನ ಗ್ರಾಮ ಪಂಚಾಯತಿ ಅಧ್ಯಕ್ಷರಾಗಿ ಯಜಮಾನ ಯಾಕುಬ್ ಸಾಹೇಬರಿದ್ದರು. ಸಿಂಧ್ಯ ಅವರ ತಾತ ಸ್ವಾಮಿರಾವ್ ಚಿಕ್ಕಮರಳವಾಡಿಯವರು. ಅವರ ತಂದೆ ಪಾಂಡುರಾಯರು ಪ್ರಗತಿಪರ ರೈತರು ಹಾಗೂ ಮರಳವಾಡಿಯ ಗ್ರಾಮ ಪಂಚಾಯತಿಯ ಅಧ್ಯಕ್ಷರಾಗಿದ್ದರು." ಇಂತಹ ಸಾಂಸ್ಕೃತಿಕ ಹಾಗೂ ಸಾಮಾಜಿಕ ವೈವಿಧ್ಯತೆಯುಳ್ಳ ಮಣ್ಣಿನಿಂದ ಬಂದ ರಾಜಶೇಖರನ್ ಜೀವನದುದ್ದಕ್ಕೂ ಜಾತ್ಯತೀತ ಮನೋಭಾವದವರೆ ಆಗಿದ್ದಾರೆ.

## ಪಥ ತೋರಿದವರು :

ರಾಜಶೇಖರನ್ ಅವರ ತಾತ ಮುದ್ದುಮಲ್ಲಯ್ಯ ಶೆಟ್ಟರು. ಅವರ ಮಡದಿ ಮಲ್ಲಮ್ಮ. ನಲವತ್ತನಾಲ್ಕು ಹಳ್ಳಿಗಳ ಯಜಮಾನರಾಗಿ ಅವರು ಊರಿನ ನ್ಯಾಯ ಪಂಚಾಯತಿಯನ್ನು ನೆರವೇರಿಸಿದ್ದರು. ದರಖಾಸ್ತಿನಲ್ಲಿ ಹಾಗೂ ಇತರ ಕಡೆ ಜಮೀನನ್ನು ಕೊಂಡು ಈ ಮನೆತನಕ್ಕೆ ೩೬೦ ಎಕರೆ ಜಮೀನಿನ ಭರ್ಜರಿ ಆಸ್ತಿಯನ್ನು ಮಾಡಿದ್ದರು. ರಾಜಶೇಖರನ್ ಅವರ ಮೇಲೆ ಅವರ ತಾತನ ಪ್ರಭಾವ ಅಪರಿಮಿತವಾದುದು. ಅದನ್ನು ಅವರೇ ಹೀಗೆ ಹೇಳುತ್ತಾರೆ. "ಇಂದು ನನ್ನಲ್ಲಿ ಜೀವನದಲ್ಲಿರಬೇಕಾದ ಶಿಸ್ತಿನ ಪ್ರಜ್ಞೆ ಮೂಡಿದ್ದರೆ ನಮ್ಮ ತಾತ ಅವರೇ ಕಾರಣಕರ್ತರು".

ಮುದ್ದುಮಲ್ಲಯ್ಯ ಶೆಟ್ಟರು ಆ ಕಾಲದಲ್ಲಿ ಸಾಹಿತ್ಯದ ಪ್ರಜ್ಞೆಯುಳ್ಳ ವ್ಯಕ್ತಿಯಾಗಿದ್ದರು. ಪ್ರತಿನಿತ್ಯ 'ಶಬರಶಂಕರವಿಲಾಸಂ', 'ಹರಿಹರನ ರಗಳೆ', 'ರಾಜಶೇಖರವಿಲಾಸಂ' ಮೊದಲಾದ ಗ್ರಂಥಗಳನ್ನು ವಾಚನ ಮಾಡುತ್ತಿದ್ದರು. ಧನುರ್ಮಾಸದ ಕಾಲದಲ್ಲಂತೂ ಅವರ ಧಾರ್ಮಿಕ ಪ್ರಜ್ಞೆ ಮತ್ತಷ್ಟು ಸ್ಫುಟಗೊಳ್ಳುತ್ತಿತ್ತು. ಬಾಲ್ಯದಲ್ಲೇ ಇಂತಹ ವಾತಾರಣದಲ್ಲಿ ಬೆಳೆದ ರಾಜಶೇಖರನ್ ತಮ್ಮ ಜೀವನದುದ್ದಕ್ಕೂ ದೈವಶ್ರದ್ಧೆಯನ್ನು ಕಾಪಾಡಿಕೊಂಡು ಬಂದಿದ್ದಾರೆ. ತಮ್ಮ ಕೆಲಸವನ್ನು ತಾವು ಮಾಡುತ್ತಾ ಪ್ರತಿಫಲಾಪೇಕ್ಷೆಯನ್ನು ದೇವರಿಗೆ ಬಿಡಬೇಕೆಂಬುದೇ ಅವರ ವಾದ. ಗಿರಿಜಾ ರಾಜಶೇಖರನ್ ಅವರು ಹೇಳುವ ನುಡಿಯಿದು. "ನನ್ನವರಿಗೆ ದೇವರ ಮೇಲೆ ಅಚಲಶ್ರದ್ಧೆ, ಭಕ್ತಿಯಿದೆ. ಇಂದಿಗೂ ದೇವರ ಪೂಜೆ ಮಾಡಿಯೇ ದಿನದ ಕೆಲಸ ಪ್ರಾರಂಭ ಮಾಡುವರು".

ತಾತನ ನಂತರ ಅವರ ಮೇಲೆ ಪ್ರಭಾವ ಬೀರಿದ ಮತ್ತೊಂದು ಮಹಾಚೇತನ ಅವರ ತಂದೆ ವೀರಶೆಟ್ಟರು. ಕನಕಪುರ ತಾಲ್ಲೂಕಿನಲ್ಲಿ ಕೆಲಸ ಮಾಡಿಕೊಂಡು ಮುಖ್ಯೋಪಾಧ್ಯಾಯರಾಗುವ ಹೊತ್ತಿಗೆ ಬೆಂಗಳೂರಿನ ಅರಳೇಪೇಟೆ ಶಾಲೆಗೆ ವರ್ಗಾವಣೆಯಾದರು. ಅವರ ವ್ಯಕ್ತಿತ್ವ ಕುರಿತು ರಾಜಶೇಖರನ್ ಅವರ ಮಾತು ಹೀಗಿದೆ. "ನಮ್ಮ ತಂದೆಗೆ ಗುರು ಹಿರಿಯರೆಂದರೆ ಅಪಾರ ಗೌರವ. ತಾತ ಕುಳಿತುಕೊಂಡಿದ್ದರೆ, ನಮ್ಮ ತಂದೆ ಅವರೆದುರಿಗೆ ಕುಳಿತುಕೊಳ್ಳುತ್ತಿರಲಿಲ್ಲ. ಬೆಂಗಳೂರಿನಲ್ಲಿದ್ದಾಗಲೂ ಕೂಡ ವಾರಕ್ಕೊಮ್ಮೆ ಬೈಸಿಕಲ್ಲಿನಲ್ಲಿ

ಊರಿಗೆ ಬರುತ್ತಿದ್ದರು. ತಾವು ಖರ್ಚು ಮಾಡಿದ ಒಂದಾಣೆಯ ಲೆಕ್ಕವನ್ನು ನಮ್ಮ ತಾತನಿಗೆ ಒಪ್ಪಿಸುತ್ತಿದ್ದರು". ಗುರುಹಿರಿಯರ ಬಗ್ಗೆ ಅವರಿಗಿದ್ದ ಶ್ರದ್ಧೆಯಿಂದಾಗಿ ಅವರ ಬದುಕಿನಲ್ಲಿ ವಿನಯ ಹಾಸುಕೊಕ್ಕಾಗಿತ್ತು. ರಾಜಶೇಖರನ್ ಅವರನ್ನು ಹತ್ತಿರದಿಂದ ಕಂಡ ಪ್ರತಿಯೊಬ್ಬರೂ ಅವರು ಗುರುಹಿರಿಯರಿಗೆ ಕೊಡುವ ಗೌರವವನ್ನು ಬಲ್ಲವರಾಗಿದ್ದಾರೆ. ವಿಶೇಷವಾಗಿ ನಿಜಲಿಂಗಪ್ಪನವರ ಬಗ್ಗೆ ಅವರಿಗಿದ್ದ ಪ್ರೀತಿ ಗೌರವ ಎಂತಹದು? ಜೊತೆಗೆ ರಾಜಶೇಖರನ್ ತಾವು ಖರ್ಚು ಮಾಡಿದ ಪ್ರತಿಯೊಂದು ಕಾಸಿಗೂ ಲೆಕ್ಕ ಬರೆಯುವ ಸ್ವಭಾವದವರು. ಅವರ ಈ ಮನೋಭಾವ ಅವರ ತಂದೆಯಿಂದ ಬಂದಿದ್ದು. ಸತ್ಯ, ನಿಷ್ಠೆ ಹಾಗೂ ಕಾಯಕ ತತ್ವಕ್ಕೆ ನಿಷ್ಠರಾಗಿದ್ದ ಮಾರುಹೋಗಿದ್ದ ವೀರಶೆಟ್ಟರು ರಾಜಶೇಖರನ್ ದೆಹಲಿಯಲ್ಲಿ ಕಾನೂನು ವ್ಯಾಸಂಗ ಮಾಡುವಾಗ ನಿಧನರಾದರು.

ರಾಜಶೇಖರನ್ ಅವರ ತಾಯಿ ಬಸಮ್ಮ. ತಾಯಿಯನ್ನು ರಾಜಶೇಖರನ್ ನೆನಪಿಸಿಕೊಳ್ಳುವ ರೀತಿಯನ್ನು ಕುರಿತು ಮಗಳು ಸುಜಾತ ದಾಖಲಿಸುತ್ತಾರೆ. "ನನ್ನ ತಂದೆ ಅವರ ತಾಯಿಯ ಪ್ರೀತಿಯ ಮಗ. ಇವತ್ತಿಗೂ ತಮ್ಮ ತಾಯಿ ಬೆಳೆಸಿದ ರೀತಿಯನ್ನು ನೆನೆಯುತ್ತಾರೆ. 'ನನ್ನ ಅವ್ವ ನನಗೆ ಬಿಸಿಬಿಸಿ ನೊರೆ ಹಾಲು ಕರೆದು ಕುಡಿಸುತ್ತಿದ್ದಳು. ತುಪ್ಪವನ್ನು ಬೆಲ್ಲದ ಜೊತೆ ಉಂಡೆ ಮಾಡಿ ತಿನ್ನಿಸುತ್ತಿದ್ದಳು.' ಅವರ ತಾಯಿ ಬಸಮ್ಮ ಶರಣರು ಹೇಳುವ ಶ್ರೇಷ್ಠ ಮೌಲ್ಯಗಳ ಪ್ರತಿನಿಧಿಯಾಗಿದ್ದರು. ಅಸಹಾಯಕರನ್ನು ಕಂಡಾಗ ಅವರು ಕರಗಿ ನೀರಾಗುತ್ತಿದ್ದರು. ಅವರ ಕೊಡುಗೈ ದಾನದ ಬಗ್ಗೆ ಮರಳವಾಡಿಯಲ್ಲಿ ದಂತಕಥೆಗಳಿವೆ. ಅದನ್ನು ರಾಜಶೇಖರನ್ ಕೂಡ ಒಮ್ಮೆ ಪ್ರಸ್ತಾಪಿಸಿದ್ದಾರೆ. "ನಮ್ಮ ಮನೆಯಿಂದ ಹೊಳೆಗೆ ಬಟ್ಟೆ ಒಗೆಯಲು ನಮ್ಮ ತಾಯಿ ಹೊರಟರೆ ಬಟ್ಟೆಯ ಮಂಕರಿಯಲ್ಲಿ ಮುದ್ದೆ, ಅನ್ನ, ಸಾರು ಇವೆಲ್ಲ ಅರ್ಧದಷ್ಟು ಜಾಗವನ್ನು ಆಕ್ರಮಿಸಿಕೊಳ್ಳುತ್ತಿದ್ದವು. ಹೊಳೆಯ ದಂಡೆಯಲ್ಲಿದ್ದ ಬಡವರಿಗೆ ಊಟ ಹಾಕುವುದರಲ್ಲಿ ಅವರು ಸಂತೃಪ್ತಿ ಕಾಣುತ್ತಿದ್ದರು. ಎಷ್ಟೋ ಸಂದರ್ಭದಲ್ಲಿ ಹೀಗೆ ಬಿಸಿ ಮುದ್ದೆಯನ್ನು ಮುಚ್ಚಿಟ್ಟುಕೊಂಡು ಹೋಗಿ ಮೈ ಕೈ ಸುಟ್ಟುಕೊಂಡದ್ದುಂಟು". ಇಂತಹ ದಾಸೋಹದ ವಿಚಾರವನ್ನು ಗಿರಿಜಾ ರಾಜಶೇಖರನ್ ಅವರ ಅಕ್ಕ ಪಾರ್ವತಮ್ಮ ಮಹಾಲಿಂಗ ಶೆಟ್ಟರು ಕೂಡ ಉಲ್ಲೇಖಿಸುತ್ತಾರೆ. ರಾಜಶೇಖರನ್ ಮದುವೆಯಾಗಿ ನವದಂಪತಿಗಳು ಮರಳವಾಡಿಗೆ ಹೋದ ದಿನದ ಸಂಭ್ರಮ ಹೀಗಿತ್ತು. "ಮಾರನೆಯ ದಿನ ರಾಜಶೇಖರನ್ ಅವರ ಮನೆಯಲ್ಲಿ ಊರಿಗೆ ಊಟ ಇಟ್ಟುಕೊಂಡಿದ್ದರು. ಅವರು ಊರಿನವರಿಗೆ ಕೊಟ್ಟ ಊಟವನ್ನು ನೆನಪಿಸಿಕೊಂಡರೆ ರಾಜಶೇಖರನ್ ಅವರ ಕುಟುಂಬದ ಬಗ್ಗೆ ಸುತ್ತಲಿನ ಗ್ರಾಮದವರ ಬಗ್ಗೆಯಿದ್ದ ಪ್ರೀತಿ ವಿಶ್ವಾಸಗಳು ವೇದ್ಯವಾಗುತ್ತವೆ. ನಾಲ್ಕು ಕೊಪ್ಪರಿಗೆಯಲ್ಲಿ ಮುದ್ದೆಯನ್ನು ತೊಳೆಸುತ್ತಿದ್ದ ಆ ದೃಶ್ಯ ಇನ್ನೂ ನನ್ನ ಕಣ್ಮುಂದೆಯಿದೆ. ರಸ್ತೆಯಲ್ಲಿ ಎಲೆ ಹಾಕಿ ಊಟ ಬಡಿಸಿದ್ದರು. ಎಷ್ಟು ಜನ ಊಟ ಮಾಡಿದರೋ ಏನೋ ಎಂಬುದು ನೆನಪಿಲ್ಲ. ಬಹುಮಟ್ಟಿಗೆ ಆ ಭಾಗದ ಎಲ್ಲ ರೈತಾಪಿ ಜನರು ಊಟ ಮಾಡಿ ವಧುವರರನ್ನು ಹರಸಿದ್ದರು".

ರಾಜಶೇಖರನ್ ಅವರ ಮೇಲೆ ಅನನ್ಯ ಪ್ರಭಾವ ಬೀರಿದ ಸಾತ್ವಿಕ ಶಕ್ತಿ ಎಂದರೆ ಯಶೋಧರಮ್ಮ ದಾಸಪ್ಪ ಮತ್ತು ದಾಸಪ್ಪನವರು. ಗಾಂಧೀ ಮೌಲ್ಯದ ಪ್ರತಿನಿಧಿಯಾಗಿದ್ದ ಯಶೋಧರಮ್ಮ ದಾಸಪ್ಪ ಅವರು ತಮ್ಮ ಮಗ ತುಳಸೀದಾಸಪ್ಪನವರನ್ನು ನೋಡಿಕೊಂಡಂತೆ ರಾಜಶೇಖರನ್ ಅವರನ್ನೂ ಮಗನಂತೆ ನೋಡಿಕೊಂಡಿದ್ದಾರೆ. ಅವರ ಏಳಿಗೆಗೆ ಯಶೋಧರಮ್ಮ ದಾಸಪ್ಪ ಸಾಕಷ್ಟು ಕಾರಣಕರ್ತರಾಗಿದ್ದಾರೆ. ಮೈಸೂರಿನಲ್ಲಿ ಮಹಾರಾಜ ಕಾಲೇಜಿನಲ್ಲಿ ಪದವಿ ಓದುತ್ತಿದ್ದಾಗ ರಾಜಶೇಖರನ್ ಅವರು ಯಶೋಧರಮ್ಮ ದಾಸಪ್ಪ ಮತ್ತು ಅವರ ಮಗ ತುಳಸೀದಾಸಪ್ಪನವರ ನಿಕಟ ಸಂಪರ್ಕವಾಯಿತು. ಆನಂತರ ದೆಹಲಿಯಲ್ಲಿ ಕಾನೂನು ವ್ಯಾಸಂಗಕ್ಕೆ ಹೋದಾಗ ಆ ಸಂಬಂಧವನ್ನು ಮುಂದುವರೆಸಿದ್ದರು. ಯಶೋಧಮ್ಮನವರು ನೇತೃತ್ವವಹಿಸಿ ನಿಜಲಿಂಗಪ್ಪನವರು ತಮ್ಮ ನಾಲ್ಕನೆಯ ಮಗಳು ಗಿರಿಜಾಳನ್ನು ರಾಜಶೇಖರನ್ ಅವರಿಗೆ ಕೊಡುವಂತೆ ಮಾಡಿದರು. ಈ ವಿವಾಹ ಸಂದರ್ಭದ ಸಡಗರವನ್ನು ಹಿರಿಯ ಗಾಂಧೀವಾದಿ ಕೆ.ಎಂ.ರುದ್ರಪ್ಪ ಹೀಗೆ ವರ್ಣಿಸುತ್ತಾರೆ. "ನಾನು ಹಾರನಹಳ್ಳಿ ರಾಮಸ್ವಾಮಿ ಹಾಗೂ ಇತರ ಸ್ನೇಹಿತರೊಡನೆ ಮದುವೆ ಮನೆಗೆ ಹೋದಾಗ (ರಾಜಶೇಖರನ್-ಗಿರಿಜಾ ವಿವಾಹಕ್ಕೆ) ನಮ್ಮನ್ನು ಸ್ವಾಗತಿಸಿದವರು ಕಾಂಗ್ರೆಸ್ ನಾಯಕರಾದ ಎಚ್.ಸಿ. ದಾಸಪ್ಪ ಹಾಗೂ ಅವರ ಪತ್ನಿ ಯಶೋಧರಮ್ಮ ದಾಸಪ್ಪ ಮತ್ತು ಪುತ್ರ ತುಳಸೀದಾಸಪ್ಪ. 'ನಾವು ಗಂಡಿನ ಕಡೆಯವರು ನಿಜಲಿಂಗಪ್ಪನವರ ಬೀಗರು' ಎಂದು ನಗುಮೊಗದಿಂದ ಸ್ವಾಗತಿಸಿದ ದಾಸಪ್ಪ ದಂಪತಿಗಳ ಮುಖದಲ್ಲಿ ಇದೊಂದು ತಮ್ಮ ಮಗನ ಮದುವೆ ಎಂಬ ಸಂಭ್ರಮ ಕಾಣುತ್ತಿತ್ತು". ದಾಸಪ್ಪನವರ ಕುರಿತು ಹಿರಿಯ ರಾಜಕಾರಣಿ ಸಿ.ಕೆ.ಜಾಫರ್ ಷರೀಫ್ ಅವರ ಮಾತುಗಳಿವು. "೧೯೫೭ರ ಲೋಕಸಭಾ ಉಪಚುನಾವಣೆ ಸಂದರ್ಭದಲ್ಲಿ ಕನಕಪುರದಿಂದ ಸ್ಪರ್ಧಿಸಿದ್ದ ಎಚ್.ಸಿ. ದಾಸಪ್ಪನವರ ಪರವಾಗಿ ರಾಜಶೇಖರನ್ ತುಂಬಾ ಓಡಾಡಿದ್ದರು. ರಾಜಶೇಖರನ್ ಅವರ ಊರಾದ ಮರಳವಾಡಿಯಲ್ಲಿ ದಾಸಪ್ಪನವರು ತಂಗಿದ್ದರು. ಆ ಸಂದರ್ಭದಲ್ಲಿ ನನಗೆ ರಾಜಶೇಖರನ್ ಅವರ ಪರಿಚಯವಾಯಿತು.

ಯಶೋಧರಮ್ಮ ದಾಸಪ್ಪ ಅವರು ರಾಜಶೇಖರನ್ ಅವರನ್ನು ಈತ ನನ್ನ ಮಗ ಎಂದು ಪರಿಚಯ ಮಾಡಿಕೊಟ್ಟ ನೆನಪು." ಅವುಗಳನ್ನು ಮೀರಿ ನಿಂತ ರಾಜಶೇಖರನ್ ಹಾಗೂ ಯಶೋಧರಮ್ಮ ದಾಸಪ್ಪ ಅವರ ಆ ದಿನಗಳ ತಾಯಿ ಮಗನ ಬಾಂಧವ್ಯವನ್ನು ನೆನೆದಾಗ ಈ ದಿನದ ನಮ್ಮ ಸಾಮಾಜಿಕ ವ್ಯವಸ್ಥೆಯ ಬಗ್ಗೆ ಅಸಹ್ಯ ಮೂಡುವುದರಲ್ಲಿ ಯಾವುದೇ ಸಂಶಯವಿಲ್ಲ. ಜಾತಿಯ ಕೂಪದಲ್ಲಿ ಕೊಳೆತು ನಾರುತ್ತಿರುವ ಇಂದಿನ ರಾಜಕೀಯ ಹಾಗೂ ಸಾಮಾಜಿಕ ವ್ಯವಸ್ಥೆಯನ್ನು ಕಂಡಾಗ ಯಶೋಧರಮ್ಮ ದಾಸಪ್ಪ ಹಾಗೂ ರಾಜಶೇಖರನ್ ಅವರು ಸದಾ ಸ್ಮರಣೆಗೆ ಅರ್ಹರಾಗುತ್ತಾರೆ.

ರಾಜಶೇಖರನ್ ಅವರ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳಲ್ಲಿ ನಿಜಲಿಂಗಪ್ಪನವರಿಗೆ ಪ್ರಮುಖ ಸ್ಥಾನವಿದೆ. ನಿಜಲಿಂಗಪ್ಪನವರಿಂದ ಉಪಕೃತರಾದ ಎಷ್ಟೋ ವ್ಯಕ್ತಿಗಳು ಅವರ ವಿರುದ್ಧ ಮಾತನಾಡಿದ್ದುಂಟು, ದ್ವೇಷ ಸಾಧಿಸಿದ್ದುಂಟು. ಆದರೆ, ನಿಜಲಿಂಗಪ್ಪನವರ ಅಳಿಯ ರಾಜಶೇಖರನ್ ಎಂಬ ಏಕೈಕ ಕಾರಣಕ್ಕಾಗಿ ಅನೇಕ ಅವಕಾಶಗಳಿಂದ ವಂಚಿತರಾದಾಗ್ಯೂ ರಾಜಶೇಖರನ್ ಅವರಿಗೆ ನಿಜಲಿಂಗಪ್ಪನವರ ಮೇಲೆ ಒಂದಿಷ್ಟೂ ಅಭಿಮಾನ ಕಡಿಮೆಯಾಗಿರಲಿಲ್ಲ, ಕಾರಣ "ಏಕೀಕರಣ ಶಿಲ್ಪಿ ನಿಜಲಿಂಗಪ್ಪನವರ ನೀರಾವರಿ, ಗ್ರಾಮೀಣ ಅಭಿವೃದ್ಧಿ ಹಾಗೂ ತಾತ್ವಿಕ ಸಿದ್ಧಾಂತದ ಮೇಲೆ ರೂಪಿತವಾದ ಅವರ ರಾಜಕೀಯ ಜೀವನ ಗಾಂಧಿತತ್ವದಲ್ಲಿ ಅವರಿಗಿದ್ದ ನಿಷ್ಠೆ ನನಗೆ ಪ್ರಿಯವಾದ ವಿಚಾರವಾಗಿದೆ" ಎಂದ ರಾಜಶೇಖರನ್ ಅವರ ಮಾತುಗಳೇ ಸಾಕ್ಷಿಯಾಗಿವೆ.

ಕುವೆಂಪು ಅವರು ಹೇಳುವಂತೆ ಮನುಷ್ಯನಿಗೆ 'ಗುರು-ಗುರಿ' ಎರಡಿದ್ದರೆ ಅವನು ಏನನ್ನು ಬೇಕಾದರೂ ಸಾಧಿಸಬಹುದು. ರಾಜಶೇಖರನ್ ಅವರಿಗೆ ಗುರಿ ನಿಚ್ಚಳವಾಗಿತ್ತು. ಸಾರ್ವಜನಿಕ ಕ್ಷೇತ್ರದ ಮೂಲಕ ಸಮಾಜದ ಕಡುಬಡವರ ಉನ್ನತಿಗೆ ದುಡಿಯುವುದು ಅವರ ಜೀವಿತದ ಗುರಿ. ಅದಕ್ಕೆ ಮಾರ್ಗದರ್ಶಕರಾದ, ಗುರುಸ್ಥಾನ ಪಡೆದವರ ಸಂಖ್ಯೆ ಕಡಿಮೆಯೇನೂ ಇಲ್ಲ. ತಾತ ಮುದ್ದುಮಲ್ಲಯ್ಯಶೆಟ್ಟರು, ತಂದೆ ವೀರಶೆಟ್ಟರು, ತಾಯಿ ಬಸಮ್ಮ, ಯಶೋಧರಮ್ಮ ದಾಸಪ್ಪ, ಮಗಳನ್ನು ಕೊಟ್ಟ ಎಸ್. ನಿಜಲಿಂಗಪ್ಪ - ಇವರೆಲ್ಲರ ಆಶೀರ್ವಾದಗಳೊಡನೆ ವಿಕಸಿತಗೊಂಡ ರಾಜಶೇಖರನ್ ವ್ಯಕ್ತಿತ್ವದಲ್ಲಿ ಒಂದಿನಿತೂ ಅಹಂಕಾರದ ಲೇಪವಿಲ್ಲ. ಈ ಎಲ್ಲಾ ಮಹನೀಯರ ಬದುಕು ಅವರಿಗೆ ಸದಾ ಪ್ರೇರಣೆ ನೀಡುತ್ತಿದೆ.

## ಸ್ವಾತಂತ್ರ್ಯ ಹೋರಾಟದ ದೀಕ್ಷೆ :

ರಾಜಶೇಖರನ್ ಅವರ ಪ್ರಾಥಮಿಕ ಶಿಕ್ಷಣ ಮರಳವಾಡಿಯಲ್ಲಿ ಜರುಗಿತು. ಹಾರೋಹಳ್ಳಿ ಹಾಗೂ ರಾಮನಗರ ತಾಲ್ಲೂಕಿನ ಬಿಡದಿಯಲ್ಲಿ ಹಿರಿಯ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿದರು. ಕನಕಪುರದ ದೇಗುಲಮಠ ಅವರ ಪ್ರೌಢಶಾಲಾ ಶಿಕ್ಷಣಕ್ಕೆ ಆಶ್ರಯ ನೀಡಿದ್ದುಂಟು. ಸಿದ್ಧಗಂಗೆಯ ಮಠದ ಪರಂಪರೆಯಲ್ಲಿ ಬೆಳೆದುಬಂದ ಈ ಮಠ ಅಕ್ಷರ ದಾಸೋಹವನ್ನೇ ಪ್ರಮುಖ ಕಾರ್ಯಕ್ರಮವನ್ನಾಗಿ ಹೊಂದಿದೆ. ಪೂಜ್ಯ ಇಮ್ಮಡಿ ನಿರ್ವಾಣಸ್ವಾಮಿಗಳು ಹಾಗೂ ಇಮ್ಮಡಿ ಮಹಾಲಿಂಗಸ್ವಾಮಿಗಳು ಮಠಕ್ಕೆ ಸೇರಿದ ಐದಾರು ಎಕರೆ ಜಮೀನಿನಲ್ಲಿ ತಾವೇ ವ್ಯವಸಾಯ ಮಾಡಿ ಸುಗ್ಗಿಕಾಲದಲ್ಲಿ ಜೋಳಿಗೆ ಹಿಡಿದು ರೈತಾಪಿ ಜನರಿಂದ ದವಸ ಧಾನ್ಯಗಳನ್ನು ಸಂಗ್ರಹಿಸಿ ವಿದ್ಯಾರ್ಥಿನಿಲಯವನ್ನು ನಡೆಸುತ್ತಿದ್ದರು. ಆ ವಿದ್ಯಾರ್ಥಿನಿಲಯುದಲ್ಲೇ ರಾಜಶೇಖರನ್ ವ್ಯಾಸಂಗ ಮಾಡಿದ್ದು. ಕನಕಪುರ ತಾಲ್ಲೂಕಿನ ಸಮಗ್ರ ಶೈಕ್ಷಣಿಕ ಪ್ರಗತಿಗೆ ಕಾರಣವಾದ ಎಸ್. ಕರಿಯಪ್ಪ ಅವರ ಶಿಕ್ಷಣ ಸಂಸ್ಥೆಯಲ್ಲಿ ಪ್ರೌಢಶಾಲಾ ಶಿಕ್ಷಣವನ್ನು ಮುಗಿಸಿದರು. ವಿದ್ಯಾರ್ಥಿ ದೆಸೆಯಲ್ಲಿ ರಾಷ್ಟ್ರಪ್ರೇಮವನ್ನು ಬೆಳೆಸಿಕೊಂಡ ರಾಜಶೇಖರನ್ ಕುರಿತು ಅವರ ಸಹಪಾಠಿ ಖ್ಯಾತ ಸಂಶೋಧಕರಾದ ಡಾ। ಟಿ.ವಿ. ವೆಂಕಟಾಚಲಶಾಸ್ತ್ರಿ ಒಂದು ದೃಶ್ಯವನ್ನು ಚಿತ್ರಿಸುತ್ತಾರೆ. ಇವರ ಪ್ರಾಥಮಿಕ ಶಿಕ್ಷಣದ ಅವಧಿ ೧೯೪೫ರಿಂದ ೧೯೪೮. ಎಲ್ಲೆಲ್ಲೂ ಸ್ವಾತಂತ್ರ್ಯ ಚಳವಳಿಯ ಬಿರುಗಾಳಿ. ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಹೋರಾಟ. ಆ ಸಂದರ್ಭವನ್ನು ಅವರ ಮಾತಿನಲ್ಲೇ ಕೇಳೋಣ: "ಸ್ವಾತಂತ್ರ್ಯ ಚಳವಳಿ ತೀವ್ರಗೊಂಡು ನಮ್ಮ ಶಾಲೆಯ ವಿದ್ಯಾರ್ಥಿಗಳು ಈ ಚಳವಳಿಯ ಸುಳಿಗೆ ಸಿಲುಕಿದ್ದರು. ನಮ್ಮ ಮಿತ್ರ ರಾಜಶೇಖರನ್ ನಮ್ಮ ಸ್ಕೂಲಿನಲ್ಲಿ ಮುಂದಾಳಾಗಿ ನಿಂತಿದ್ದರೆಂದು ನನ್ನ ನೆನಪು. ನಮ್ಮ ತರಗತಿಯಲ್ಲಿ ಯಾವುದೋ ಪಾಠ ನಡೆಯುತ್ತಿದೆ ಅಥವಾ ಆರಂಭವಾಗಬೇಕಾಗಿದೆ. ಇದ್ದಕ್ಕಿದ್ದಂತೆ ಒಂದು ಪಕ್ಕದಿಂದ ಜೈಕಾರ, ಕೊಂಬು ಕಹಳೆ ಮೊಳಗಿತು. ನಾನು ಅತ್ತ ಕಣ್ಣು ತಿರುಗಿಸಿ ನೋಡಿದೆ, ಇತರರೂ ನೋಡುತ್ತಿದ್ದರು. ನನ್ನ ಕಣ್ಣಿಗೆ ರಾಜಶೇಖರನ್‌ರವರ ವ್ಯಗ್ರಗೊಂಡ ಮುಖ ಕಂಡಿತು. ಆತ ನನ್ನ ಕಾಣುತ್ತಲೇ 'ಲೇ ಶಾಸ್ತ್ರಿ ಎದ್ದು ಬಾರೋ ಈಚೆಗೆ' ಎಂದು ಕೂಗು ಹಾಕಿದ. ನಾನು ದಿಗ್ಭ್ರಾಂತನಾದೆ."

ಇಂತಹುದೇ ಮತ್ತೊಂದು ಸನ್ನಿವೇಶವನ್ನು ಅವರ ಮತ್ತೊಬ್ಬ ಸಹಪಾಠಿ ಹಿರಿಯ ವಕೀಲರಾದ ಕೆ.ಟಿ.ಚನ್ನಬಸವೇಗೌಡರು ಚಿತ್ರಿಸಿದ್ದಾರೆ. "ನಿಗದಿತ ದಿನದಂದು ಅಂದರೆ ೧೯೪೭ರ ಸೆಪ್ಟಂಬರ್ ೭ರಂದು ಮೈಸೂರು ಅರಮನೆಗೆ ಮುತ್ತಿಗೆ ಹಾಕಲು ಸಿದ್ಧತೆ ನಡೆದಿತ್ತು. ಇಂತಹ ಸಂದರ್ಭದಲ್ಲಿ ಕನಕಪುರದಿಂದ ಹಿರಿಯರಾದ ಬ್ಯಾಟಪ್ಪನವರ ನೇತೃತ್ವದಲ್ಲಿ ಯುವಕ ತಂಡವೊಂದು ಮೈಸೂರಿನತ್ತ ಪ್ರಯಾಣ ಬೆಳೆಸಿತ್ತು. ನಮ್ಮ ಯುವಕರ ತಂಡಕ್ಕೆ ರಾಜಶೇಖರನ್ ಅವರೇ ನಾಯಕರು. ರಾಜಶೇಖರನ್ ಅವರ ನಾಯಕತ್ವದಲ್ಲಿ ಹೊರಟ ಸಾವಿರಾರು ಯುವಕರು ಮಳವಳ್ಳಿ ಮಾರ್ಗವಾಗಿ ಮೈಸೂರು ತಲುಪಿದರು. ಇವರನ್ನು ಪೊಲೀಸರು ರಾತ್ರೋರಾತ್ರಿ ಕೆ.ಆರ್. ನಗರದ ಚುಂಚನಕಟ್ಟೆ ಬಳಿ ಬಿಟ್ಟು ಬಂದರು. ಸಾಲಿಗ್ರಾಮದ ಪುರಸಭಾಧ್ಯಕ್ಷರಾದ ಎಸ್.ಎಸ್. ತಮ್ಮಯ್ಯ ಅವರು ಇವರಿಗೆ ಸಕಲ ರೀತಿಯ ಸತ್ಕಾರವನ್ನು ನೀಡಿದರು. ಮೈಸೂರು ಅರಮನೆಯ ಮುಂಬಾಗಿಲಿಗೆ ಬಂದು ಮೈಸೂರು ಸಂಸ್ಥಾನವನ್ನು ಭಾರತದ ಒಕ್ಕೂಟಕ್ಕೆ ಸೇರಿಸಲು ಘೋಷಣೆಯನ್ನು ಕೂಗತೊಡಗಿದರು. ಇವೆಲ್ಲದರ ಫಲವಾಗಿ ಮೈಸೂರು ಸಂಸ್ಥಾನ ಭಾರತದ ಒಕ್ಕೂಟಕ್ಕೆ ಸೇರ್ಪಡೆಯಾಯಿತು".

ರಾಜಶೇಖರನ್ ಅವರ ಈ ಸ್ವಾತಂತ್ರ್ಯ ಹೋರಾಟದ ವಿಚಾರ ಅಧ್ಯಯನಕ್ಕೆ ಅರ್ಹವಾದುದು. ಮಹಾತ್ಮ ಗಾಂಧೀಜಿ ಅವರ ಸ್ವಾತಂತ್ರ್ಯ ಹೋರಾಟದ ವಿವರಗಳನ್ನು ಕಣ್ಣಾರೆ ಕಂಡ ಕಾರಣದಿಂದ ರಾಜಶೇಖರನ್ ಅವರಿಗೆ ಇಂದಿಗೂ ಮಹಾತ್ಮ ಗಾಂಧೀಜಿ ಒಬ್ಬರೇ ಭಾರತದ ಜನಸಮೂಹದ ಸರ್ವೋಚ್ಚ ನಾಯಕರು.

ರಾಜಶೇಖರನ್ ಅವರಿಗೆ ಸಾರ್ವಜನಿಕ ಕ್ಷೇತ್ರದಲ್ಲಿದ್ದ ಆಸಕ್ತಿಯನ್ನು ಕುರಿತು ಡಾ। ಟಿ.ವಿ. ವೆಂಕಟಾಚಲಶಾಸ್ತ್ರಿಗಳೇ ಕಾಲೇಜು ದಿನವನ್ನು ನೆನಪಿಸಿಕೊಳ್ಳುತ್ತಾರೆ. "ರಾಜಶೇಖರನ್ ಅವರು ವಿಶೇಷವಾಗಿ ತುಳಸೀದಾಸಪ್ಪ ಅವರ ಒಡನಾಟದಲ್ಲಿ ಕಾಣುತ್ತಿದ್ದುದು ನೆನಪು. ತುಳಸೀದಾಸಪ್ಪ ಅವರ ಬೈಕಿನ ಹಿಂದೆ ಅವರನ್ನು ನಾನು ಕಾಣುತ್ತಿದ್ದೆ. ಆಗ ಅವರಿಬ್ಬರೂ ಹುರುಪಿನ ಯುವಕರು. ಖಾದಿಧಾರಿಗಳು, ಬಿರುಗಾಳಿಯಂತೆ ಸುತ್ತಾಡುವವರು. ಒಂದಲ್ಲಾ ಒಂದು ವಿದ್ಯಾರ್ಥಿ ಸಂಘದ ಚುನಾವಣೆಗೆ ಸ್ಪರ್ಧಿಸಿ ಇವರೆಲ್ಲ ಮಾಡುತ್ತಿದ್ದ ಕೋಲಾಹಲ, ನಡೆಸುತ್ತಿದ್ದ ಹೋರಾಟ, ನನ್ನ ಕಣ್ಣಿಗೆ ಕಟ್ಟಿದಂತಿದೆ. ಕಾಲೇಜು ಲೈಬ್ರರಿಯ ಹಿಂಬದಿಯ ಇಕ್ಕೆಡೆಯಲ್ಲಿ ನಿಂತು ದೇಸೀಯ ಧ್ವನಿವರ್ಧಕ ಬಳಸಿ ಮತಯಾಚನೆ ಮಾಡುವುದು, ಹ್ಯಾಂಡ್‌ಬಿಲ್ ಹಂಚುವುದು" ಹೀಗೆಲ್ಲ ಸಾಗರ ಕ್ಷೋಭೆ ನಡೆಸುತ್ತಿದ್ದ ಇವರು ಅನಂತರದ ದಶಕಗಳಲ್ಲಿ ಸಕ್ರಿಯ ರಾಜಕಾರಣದಲ್ಲಿ ಮುಂಚೂಣಿಯ ಯೋಧರಾದರು. 'ಬೆಳೆಯುವ ಪೈರು ಮೊಳಕೆಯಲ್ಲೇ' ಎಂಬಂತೆ ರಾಜಶೇಖರನ್ ಅವರು ವಿದ್ಯಾರ್ಥಿ ದೆಸೆಯಲ್ಲೇ ಸಾರ್ವಜನಿಕ ಕ್ಷೇತ್ರಕ್ಕೆ ಬೇಕಾದ ಅರ್ಹತೆಗಳನ್ನು ಅಚ್ಚುಕಟ್ಟಾಗಿ ರೂಢಿಸಿಕೊಂಡವರು. ಶ್ರೇಷ್ಠ ಮೌಲ್ಯಪರಿಪಾಲನೆ ಹಾಗೂ ಜನರ ಆಶಯಗಳ ಅನುಷ್ಠಾನ ರಾಜಕೀಯ ನಾಯಕರ ಆದ್ಯ ಕರ್ತವ್ಯ ಎಂಬುದು ಅವರ ಅಭಿಮತ.

## ಮೈಸೂರು ಯೂತ್ ಕಾಂಗ್ರೆಸ್ :

ಹಾರೋಹಳ್ಳಿಯಲ್ಲಿ ಮಾಧ್ಯಮಿಕಶಾಲೆ ಅಧ್ಯಾಪಕರಾದ ಪ್ರಹ್ಲಾದ್‌ರಾವ್, ರಾಮಾನುಜ ಐಯ್ಯಂಗಾರ್, ಕನಕಪುರ ರೂರಲ್ ಎಜುಕೇಶನ್ ಸಂಸ್ಥೆಯ ಹಿರಿಯ ಗಾಂಧೀವಾದಿ ಕರಿಯಪ್ಪನವರು, ಮೈಸೂರಿನಲ್ಲಿ ಪದವಿ ವ್ಯಾಸಂಗದಲ್ಲಿ ಮಾರ್ಗದರ್ಶನ ಮಾಡಿದ ಮಹಾರಾಜಾ ಕಾಲೇಜಿನ ಇಂಗ್ಲೀಷ್ ಪ್ರೊಫೆಸರ್ ಸಿ.ಡಿ.ನರಸಿಂಹಯ್ಯ. ಪ್ರೊ। ಎಸ್.ವಿ. ರಂಗಣ್ಣ, ಪ್ರೊ। ಪುರಷೋತ್ತಮ್, ಪ್ರೊ। ಡಿಸೋಜ, ಹಾಸ್ಟೆಲ್‌ನ ಪ್ರೊ। ನಂಬಿಯಾರ್ ಹಾಗೂ ಪ್ರಾಂಶುಪಾಲರಾದ ಗೋಪಾಲಸ್ವಾಮಿ ಅವರುಗಳನ್ನು ರಾಜಶೇಖರನ್ ಸದಾ ನೆನಪಿಸಿಕೊಳ್ಳುತ್ತಾರೆ. ಪದವಿ ತರಗತಿಯಲ್ಲಿ ಪತ್ರಿಕೋದ್ಯಮ, ರಾಜ್ಯಶಾಸ್ತ್ರ ಹಾಗೂ ಅರ್ಥಶಾಸ್ತ್ರ ಅವರ ಅಧ್ಯಯನ ವಿಷಯವಾಗಿತ್ತು. ರಾಜಶೇಖರನ್ ಐವತ್ತಾರರ ದಶಕದಲ್ಲೇ 'ಮೈಸೂರು ಯೂತ್ ಕಾಂಗ್ರೆಸ್'ನ ಸಂಚಾಲಕರಾಗಿದ್ದರು.

ದಿನೇಶ್‌ಸಿಂಗ್ ರಾಜಶೇಖರನ್ ಅವರು ಈ ಹುದ್ದೆ ಪಡೆಯಲು ಕಾರಣಕರ್ತರು. ಯೂತ್ ಕಾಂಗ್ರೆಸ್ ಮೂಲಕ ರಚನಾತ್ಮಕ ಕೆಲಸಗಳನ್ನು ಹಮ್ಮಿಕೊಂಡ ರಾಜಶೇಖರನ್ ರಾಷ್ಟ್ರದ ಪ್ರಮುಖ ನಾಯಕರ ಗಮನ ಸೆಳೆದಿದ್ದರು. ಅರ್ಜುನಸಿಂಗ್, ಶರದ್ ಪವಾರ್, ಎನ್.ಡಿ.ತಿವಾರಿ, ವಸಂತ ಸಾಠೆ, ವಯಲಾರ್ ರವಿ, ಎ.ಸಿ. ಜಾರ್ಜ್, ಬನ್ಸಿಲಾಲ್, ಜಗನ್ನಾಥ ಪಹಾಡಿಯಾ, ಕುಮರಿ ಆನಂದನ್-ಮೊದಲಾದ ಹತ್ತಾರು ಅಂದಿನ ಯುವನಾಯಕರು ರಾಜಶೇಖರನ್ ಅವರ ಮಿತ್ರರಾದರು, ಹಿತಚಿಂತಕರಾದರು. ವಿವಿಧ ದೇಶಗಳೊಡನೆ ಸಂಪರ್ಕ ಸಾಧಿಸಲು ಅಂದಿನ ಯೂತ್ ಕಾಂಗ್ರೆಸ್ ಪ್ರಯತ್ನಪಟ್ಟಿತ್ತು. ಅಂದು ಇವರ ಜೊತೆ ಯೂತ್

ಕಾಂಗ್ರೆಸ್‌ನಲ್ಲಿ ಕೆಲಸ ಮಾಡಿದ ಸೈಯದ್ ಇಬ್ರಾಹಿಂ ತಮ್ಮ ನೆನಪಿನ ಸುರಳಿಯನ್ನು ಬಿಚ್ಚುತ್ತಾರೆ. "ಈ ಸಂದರ್ಭದಲ್ಲಿ ನಾವೆಲ್ಲರೂ ಸೇರಿಕೊಂಡು ಮೈಸೂರು ರಾಜ್ಯ ಯುವ ಕಾಂಗ್ರೆಸ್‌ಗೆ ಹೊಸ ರೂಪ ಕೊಡಲು ಉತ್ಸುಕರಾದೆವು. ಪ್ರತಿ ಶನಿವಾರ ಕಛೇರಿಯಲ್ಲಿ ಬುದ್ಧಿಜೀವಿಗಳಿಂದ ಉಪನ್ಯಾಸ ಚಿಂತನ-ಮಂಥನ ಗೋಷ್ಠಿಗಳನ್ನು ಆಯೋಜಿಸಿದ್ದರು. ನಂಬಿಯಾರ್, ಆರ್.ಆರ್. ದಿವಾಕರ್ ಮುಂತಾದವರು ಇದರಲ್ಲಿ ಭಾಗವಹಿಸಿದ್ದರು. ರಾಜ್ಯದ ಕೇಂದ್ರ ಸ್ಥಾನವಾದ ಬೆಂಗಳೂರಿನಲ್ಲಿ ಮಾತ್ರವಿದ್ದ ಯುವ ಕಾಂಗ್ರೆಸ್‌ನ ಚಟುವಟಿಕೆ ರಾಜ್ಯದ ಎಲ್ಲಾ ಕೇಂದ್ರಗಳಲ್ಲೂ ವಿಸ್ತರಿಸುವಂತೆ ಮಾಡಿದರು. ಈ ಎಲ್ಲಾ ಕಮಿಟಿಗಳಿಗಿಂತ ಯುವ ಕಾಂಗ್ರೆಸ್ ಕಮಿಟಿಯೆ ಹೆಚ್ಚು ಸ್ಫೂರ್ತಿದಾಯಕವಾಗಿ ಕಾರ್ಯನಿರ್ವಹಿಸುತ್ತಿತ್ತು. ಕರ್ನಾಟಕದಲ್ಲಿ ಯುವ ಕಾಂಗ್ರೆಸ್ ಹೆಚ್ಚು ಸಶಕ್ತವಾದ ಕಾಲಘಟ್ಟವೆಂದರೆ ಎಂ.ವಿ. ರಾಜಶೇಖರನ್ ಅವರು ಸಂಚಾಲಕರಾಗಿ ಸೇವೆ ಸಲ್ಲಿಸಿದ ಹದಿಮೂರು ವರುಷಗಳ ಅವಧಿ." ಸೈಯದ್ ಇಬ್ರಾಹಿಂ ಅವರ ಮಾತು ಅಕ್ಷರಶಃ ಸತ್ಯ. ಅಂದಿನ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿ ಅವರು ಯುವ ಕಾಂಗ್ರೆಸ್‌ಗೆ ಹೆಚ್ಚಿನ ಆದ್ಯತೆ ಕೊಟ್ಟಿದ್ದರು. 'ಯಂಗ್ ಟರ್ಕ್' ಎಂಬ ಯುವಶಕ್ತಿ ಪಡೆ ಆಗ ರೂಪುಗೊಂಡಿತ್ತು. ೧೯೬೭ರಲ್ಲಿ ಕನಕಪುರ ಲೋಕಸಭಾ ಕ್ಷೇತ್ರದಿಂದ ಆಯ್ಕೆಯಾಗುವ ತನಕ ರಾಜಶೇಖರನ್ ಯುವ ಕಾಂಗ್ರೆಸ್‌ನೊಡನೆ ತಮ್ಮನ್ನು ಗುರುತಿಸಿಕೊಂಡಿದ್ದರು. ಶ್ರೀಮತಿ ಇಂದಿರಾ ಗಾಂಧಿ ಅವರೂ ಸಹ ರಾಜಶೇಖರನ್ ವಿಚಾರದಲ್ಲಿ ಮೃದುಧೋರಣೆ ಹೊಂದಿದ್ದರ ಬಗ್ಗೆ ರಾಜಶೇಖರನ್ ಕೂಡ ಒಂದೆಡೆ ಉಲ್ಲೇಖಿಸಿರುತ್ತಾರೆ. "೧೯೬೭ರ ಸಾರ್ವತ್ರಿಕ ಚುನಾವಣಾ ಸಂದರ್ಭದಲ್ಲಿ ಸ್ಥಳೀಯರ ಬೆಂಬಲವಿದ್ದಾಗ್ಯೂ ನನ್ನ ಹೆಸರು ಕೈಬಿಟ್ಟು ಪಟ್ಟಿಯೊಂದು ಸಿದ್ಧವಾಗಿತ್ತು. ಇದನ್ನು ತಿಳಿದ ಶ್ರೀಮತಿ ಇಂದಿರಾ ಗಾಂಧಿ ಅವರು ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಮಹಮದಾಲಿ ಅವರಿಗೆ ದೂರವಾಣಿ ಮಾಡಿ ರಾಜಶೇಖರನ್ ಅವರ ಹೆಸರು ಸೇರಿಸಿ ಪಟ್ಟಿ ಮಾಡಿ ಕಳುಹಿಸಿಕೊಡಿ ಎಂದರು. ಆಗ ನನ್ನ ಹೆಸರು ಪಟ್ಟಿಯಲ್ಲಿ ಕೊನೆಯದಾಗಿ ಸೇರ್ಪಟ್ಟಿತು." ಯೂತ್ ಕಾಂಗ್ರೆಸ್‌ನ ಹಿನ್ನೆಲೆಯಿಂದ ಬಂದ ರಾಜಶೇಖರನ್ ಅವರಿಗೆ ಇಂದಿರಾ ಗಾಂಧಿ ಅವರ ಜೊತೆ ನಿಕಟ ಬಾಂಧವ್ಯವಿತ್ತು. ರಾಜಶೇಖರನ್ ಅವರಿಗೆ ಕಾಂಗ್ರೆಸ್ ವಿಭಜನೆ ಸಂದರ್ಭದಲ್ಲಿ ಆಡಳಿತ ಕಾಂಗ್ರೆಸ್‌ಗೆ ಸೇರ್ಪಡೆಯಾಗುವ ಸದವಕಾಶ ಸಾಕಷ್ಟು ಇತ್ತು. ಮಾವನಿಗೆ ದ್ರೋಹ ಬಗೆವ ಅಳಿಯ ನಾನಾಗಲಾರೆ ಎಂಬ ನಿಲುವು ತಾಳಿದ ರಾಜಶೇಖರನ್ ಅಧಿಕಾರದ ವಲಯದಿಂದ ದೂರ ಉಳಿದರು. ಇದರಿಂದಾಗಿ ಅವರ ಎಲ್ಲ ಮಿತ್ರರು ಇಂದು ರಾಷ್ಟ್ರದ ರಾಜಕಾರಣದಲ್ಲಿ ಎಲ್ಲಿದ್ದಾರೆ ಎಂಬುದನ್ನು ನೆನೆದಾಗ ರಾಜಶೇಖರನ್ ಅವರು ಮಾಡಿದ ತ್ಯಾಗ ಊಹಿಸಲೂ ಅಸಾಧ್ಯ.

## ರಾಜ್ಯ ಯುವ ರೈತಸಂಘ :

ಅರವತ್ತರ ದಶಕದಲ್ಲಿ ಚೀನಾ, ಜಪಾನ್ ಮೊದಲಾದ ದೇಶಗಳಿಗೆ ರಾಜಶೇಖರನ್ ಭೇಟಿಕೊಟ್ಟಾಗ ಅಲ್ಲಿನ ಸರ್ಕಾರ ಯುವಶಕ್ತಿಯನ್ನು ಸದುಪಯೋಗಪಡಿಸಿಕೊಳ್ಳುತ್ತಿದ್ದುದನ್ನು ಕಣ್ಣಾರೆ ಕಾಣುತ್ತಿದ್ದರು. ಅದಕ್ಕೆ ವಿರುದ್ಧವಾಗಿ ನಮ್ಮ ರಾಷ್ಟ್ರದಲ್ಲಿ ಯುವಶಕ್ತಿ ನಾಶವಾಗುತ್ತಿರುವುದರ ಬಗ್ಗೆ ಅವರಲ್ಲಿ ಅಪಾರವಾದ ವ್ಯಥೆ ಇತ್ತು. ಗ್ರಾಮೀಣ ಪ್ರದೇಶದ ಯುವಕ-ಯುವತಿಯರಿಗೆ ಹೊರಪ್ರಪಂಚದ ಅರಿವು ಸಮರ್ಪಕವಾಗಿ ದೊರೆಯುತ್ತಿಲ್ಲವೆಂದು ಚಿಂತಿಸಿ, ಅದನ್ನು ದೊರಕಿಸಿಕೊಡಲು ರಾಜ್ಯ ಯುವ ರೈತಸಂಘವನ್ನು ಪ್ರಾರಂಭಿಸಿದ್ದರೆಂದು ಜಾನಪದ ಸಾಹಿತಿ ಗೊ.ರು.ಚ. ಅವರು ನೆನಪಿಸಿಕೊಳ್ಳುತ್ತಾರೆ. ಗ್ರಾಮೀಣ ಪ್ರದೇಶದಲ್ಲಿನ ಯುವಕ ಯುವತಿಯರಲ್ಲಿ ಹುದುಗಿರುವ ಸುಪ್ತ ಪ್ರತಿಭೆಯನ್ನು ಹೊರಗೆಡಹುವುದು, ಅವರಲ್ಲಿ ಸೃಜನಶೀಲತೆಯನ್ನು ಬೆಳೆಸುವುದು, ವೈಜ್ಞಾನಿಕ ಪ್ರಗತಿಯನ್ನು ತಿಳಿಸುವುದು ಹಾಗೂ ನಾಯಕತ್ವದ ಗುಣ ಬೆಳೆಸುವುದು ಯುವ ರೈತ ಸಂಘದ ಉದ್ದೇಶವಾಗಿತ್ತು. ಬೆಂಗಳೂರು, ಚಿಕ್ಕಮಗಳೂರು, ಮೈಸೂರು, ತುಮಕೂರು ಮೊದಲಾದ ಜಿಲ್ಲೆಗಳಲ್ಲಿ ಯುವ ರೈತ ಸಮ್ಮೇಳನಗಳು ಜರುಗಿದವು. ರಾಜಶೇಖರನ್ ಲೋಕಸಭಾ ಸದಸ್ಯರಾಗುವ ತನಕ ಈ ಸಂಘದ ಶಕ್ತಿ ಕೇಂದ್ರವಾಗಿದ್ದರು. ಅನಂತರ ರಾಜ್ಯ ಮಟ್ಟದಲ್ಲಿ ಸಮರ್ಥ ನಾಯಕತ್ವವಿಲ್ಲದೆ ಈ ಸಂಘಗಳು ಸೊರಗಿದವು. ಈ ಯುವ ರೈತ ಸಂಘದ ಆದರ್ಶಗಳನ್ನು ಮುಂದೆ ಪ್ರಾರಂಭವಾದ ರಾಜ್ಯ ಯುವಜನಸೇವಾ ಇಲಾಖೆ ಒಪ್ಪಿಕೊಂಡಿತು. ಇದರ ಆಶ್ರಯದಲ್ಲಿ ಯುವಕ ಯುವತಿ ಮಂಡಲಗಳು ಪ್ರಾರಂಭವಾದವು. ಇಂದು ರಾಜ್ಯಾದ್ಯಂತ ಇರುವ ಸಾವಿರಾರು ಯುವಕ ಯುವತಿ ಮಂಡಲಗಳ ಕಾರ್ಯಾಚರಣೆ ಹಿಂದೆ ರಾಜಶೇಖರನ್ ಅವರ ದೂರದೃಷ್ಟಿಯ ಚಿಂತನೆ ಇರುವುದನ್ನು ಬಹುಮಟ್ಟಿನ ಜನ ಗುರುತಿಸಿಲ್ಲ.

## ಯುವ ಸಂಘಟನೆ :

ರಾಜಶೇಖರನ್ ಅವರಿಗೆ ಯೂತ್ ಕಾಂಗ್ರೆಸ್‌ನಿಂದ ದೊರೆತ ಪ್ರೇರಣೆ ಎಂದರೆ ಯುವ ಸಂಘಟನೆ, ಜಪಾನ್ ಮತ್ತು ಇತರ ಯುರೋಪ್ ರಾಷ್ಟ್ರಗಳಲ್ಲಿ ಅಲ್ಲಿನ ಸರ್ಕಾರಗಳು ಯುವಜನ ಸೇವೆಗೆ ಸಾಕಷ್ಟು ಅವಕಾಶ ಕೊಟ್ಟಿತ್ತು. ಮಹಾತ್ಮಾ ಗಾಂಧೀಜಿಯ ನಂತರ ಕಾಂಗ್ರೆಸ್ ತನ್ನ ಪರಂಪರೆಯನ್ನು ನೆನೆದು ಬೀಗಿತೇ ಹೊರತು ಯುವ ಜನರ ಸಮಸ್ಯೆಗಳತ್ತ ಅದು ಅಲಸ್ಯ ನೀತಿಯನ್ನು ಅನುಸರಿಸಿತು. ಅರವತ್ತರ ದಶಕದಲ್ಲಿ ಯುರೋಪ್ ರಾಜ್ಯಗಳಿಗೆ ಭೇಟಿ ಕೊಟ್ಟು ರಾಜಶೇಖರನ್ ಅಲ್ಲಿನ ಸರ್ಕಾರ ಗ್ರಾಮೀಣ ಪ್ರದೇಶದಲ್ಲಿರುವ ಯುವಕರನ್ನು ಹೇಗೆ ಅಭಿವೃದ್ಧಿ ಕಾರ್ಯಗಳಲ್ಲಿ ಬಳಸಿಕೊಳ್ಳುತ್ತಿದೆ ಎಂಬುದನ್ನು ಅಧ್ಯಯನ ಮಾಡಿ, ಆಗಿನ ಮುಖ್ಯಮಂತ್ರಿಗಳಾದ ನಿಜಲಿಂಗಪ್ಪನವರಿಗೆ ಹಾಗೂ ಸಚಿವರಾದ ರಾಮಕೃಷ್ಣ ಹೆಗಡೆಯವರಿಗೆ ಈ ಸಂಬಂಧವಾಗಿ ಸರ್ಕಾರಕ್ಕೆ ವರದಿಯನ್ನು ಕೊಟ್ಟು, ಇಲ್ಲೂ ಕೂಡ ಅಂಥ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವಂತೆ ಒತ್ತಡ ತಂದರು. ಅದರ ಫಲವಾಗಿ ಮೈಸೂರು ಸರ್ಕಾರ ಯುವ ಜನಸೇವಾ ಇಲಾಖೆಯನ್ನು ಪ್ರಾರಂಭಿಸಿತು. ಇದು ರಾಷ್ಟ್ರದಲ್ಲೇ ಮೊದಲ ಪ್ರಯತ್ನವಾಗಿದೆ. ಮೊದಲ ಯುವಜನ ಸೇವಾ ಮಂತ್ರಿಯಾದ ಅಂದಿನ ಹಣಕಾಸು ಸಚಿವರಾದ ರಾಮಕೃಷ್ಣ ಹೆಗಡೆ ಅವರು ಅದನ್ನು ಹೀಗೆ ದಾಖಲಿಸುತ್ತಾರೆ. "ಯುವಜನ ಸೇವಾ ಇಲಾಖೆ ಇಡೀ ರಾಷ್ಟ್ರದಲ್ಲಿ ಮೊಟ್ಟಮೊದಲು ಮೈಸೂರು ರಾಜ್ಯದಲ್ಲಿ ಪ್ರಾರಂಭವಾಯಿತು. ನಾನೇ ಮೊದಲ ಯುವಜನಸೇವೆಯ ಮಂತ್ರಿ. ಯುವಜನ ಸೇವೆ ಪ್ರಾರಂಭವಾಗಲು ರಾಜಶೇಖರನ್ ಅವರ ಒತ್ತಾಯ ಸಹಾಯಕವಾಗಿತ್ತು" ಯುವಜನ ಸೇವಾ ಇಲಾಖೆಯ ಮೊದಲ ವಿಶೇಷ ಅಧಿಕಾರಿಯಾಗಿದ್ದ ರಾಜ್ಯದ ಹಿರಿಯ ಐ.ಎ.ಎಸ್. ಅಧಿಕಾರಿ ಎಸ್.ಆರ್.ವಿಜಯ್ ಅವರು ಹೇಳುವ ನುಡಿಯಿದು: "ರಾಜಶೇಖರನ್ ತಮ್ಮ ಪ್ರಭಾವವನ್ನು ಬಳಸಿಕೊಂಡು ರಾಜ್ಯದ ಯುವ ಜನತೆಗೆ ಧ್ವನಿ ತಂದುಕೊಟ್ಟರು."

ಅಂದು ಕಾಂಗ್ರೆಸ್ ಕಛೇರಿಗೆ ಶಿಸ್ತುಬದ್ಧವಾಗಿ ಬರುತ್ತಿದ್ದ ಯುವಕ ರಾಜಶೇಖರನ್ ಅವರನ್ನು ಹಿರಿಯ ರಾಜಕಾರಣಿ ವಿ.ಎಸ್. ಕೃಷ್ಣಯ್ಯರ್ ಜ್ಞಾಪಿಸಿಕೊಳ್ಳುತ್ತಾರೆ. "ಸ್ವಂತ ಕಾರನ್ನು ಹೊಂದಿದ್ದ ರಾಜಶೇಖರನ್ ನೀಟಾಗಿ ಇಸ್ತ್ರಿ ಮಾಡಿದ ಸಿಲ್ಕು ಸೂಟನ್ನು ಹಾಕಿಕೊಂಡು ಪಕ್ಷದ ಕಛೇರಿಗೆ ಬರುತ್ತಿದ್ದರು. ಶ್ರೀಮಂತಿಕೆಯ ಕಳೆಯಿದ್ದರೂ ಸ್ವಲ್ಪವೂ ಗರ್ವ, ಧಾರ್ಷ್ಟ್ಯತನವಿಲ್ಲದ ಅವರ ನಡವಳಿಕೆ ನನಗೆ ಆಶ್ಚರ್ಯ ತಂದಿತು. ಇಂದು ಕೂಡ ಅವರು ಹಾಗೆಯೇ ಇದ್ದಾರೆ. ರಾಜಕೀಯವನ್ನು ಬಿಸಿನೆಸ್ ಮಾಡಿಕೊಂಡು ದಿಢೀರ್ ಕೋಟ್ಯಾಧಿಪತಿಗಳಾದ ದೃಷ್ಟಾಂತಗಳಿಗೇನೂ ಕೊರತೆಯಿಲ್ಲದ ಸಂದರ್ಭದಲ್ಲಿ ಅವರು ಅದಕ್ಕೊಂದು ಅಪವಾದವಾಗಿದ್ದಾರೆ. ರಾಜಕೀಯವನ್ನು ಜನಸೇವೆಗಾಗಿಟ್ಟ ಮಹಾನ್ ಮಾನವತಾವಾದಿಯಾಗಿದ್ದಾರೆ. ಪಕ್ಷದ ಶಿಸ್ತು, ಬದ್ಧತೆ ಹಾಗೂ ತಾತ್ವಿಕತೆಯುಳ್ಳ ಅಪರೂಪದ ರಾಜಕಾರಣಿಯಾಗಿದ್ದಾರೆ".

## ವಿವಾಹ ಬಂಧನ :

೧೯೫೫ರಲ್ಲಿ ರಾಜಶೇಖರನ್ ಅವರಿಗೆ ನಿಜಲಿಂಗಪ್ಪನವರ ನಾಲ್ಕನೆಯ ಮಗಳು ಗಿರಿಜಾ ಅವರೊಡನೆ ವಿವಾಹವಾಯಿತು. ಗಿರಿಜಾ ಅವರನ್ನು ಬಾಲ್ಯದಿಂದಲೂ ನೋಡಿದ್ದ ನಿಜಲಿಂಗಪ್ಪನವರ ಸಹಪಾಠಿ ನಿಟ್ಟೂರು ಶ್ರೀನಿವಾಸರಾವ್ ಹೇಳುವ ಒಂದು ಮಾತಿದು: "ನಿಜಲಿಂಗಪ್ಪ ಅವರ ಪತ್ನಿ ಮುರಿಗೆಮ್ಮ ಅವರ ಎಲ್ಲ ಸದ್ಗುಣಗಳು ರಾಜಶೇಖರನ್ ಅವರ ಪತ್ನಿ ಗಿರಿಜಾ ಅವರಲ್ಲಿ ಸಂಗಮಿಸಿದೆ". ಗಿರಿಜಾ ಅವರ ಸ್ವಭಾವವನ್ನು ಕುರಿತು ಅವರ ಅಣ್ಣ ಪ್ರೊ। ಉಮಾಕಾಂತ ಅವರು ಹೇಳುವ ಮಾತಿದು: "ನಮ್ಮ ಕುಟುಂಬದಲ್ಲೇ ಗಿರಿಜಾ ತುಂಬಾ ಸೌಮ್ಯ ಸ್ವಭಾವದ ಹುಡುಗಿ. ನಮ್ಮ ತಂದೆ ಯಾವಾಗಲೂ ಆಕೆಯನ್ನು 'ನಿರಾಭರಣ ಸುಂದರಿ' ಎಂದು ಕರೆಯುತ್ತಿದ್ದರು. ಆಕೆಯ ಪ್ರೇರಣೆಯಿಂದ ಒಂದು ರೇಖಾಚಿತ್ರವನ್ನೂ ರಚಿಸಿದ್ದರು. ನಮ್ಮ ಕುಟುಂಬದಲ್ಲಿ ಹಣ ಹಾಗೂ ಒಡವೆಗೆ ಅಷ್ಟು ಮಹತ್ವವಿರಲಿಲ್ಲ. ಗಾಂಧೀಜಿ ಬೋಧಿಸಿದ ಸರಳತೆ ನಮ್ಮ ಕುಟುಂಬದಲ್ಲಿ ಹಾಸುಹೊಕ್ಕಾಗಿತ್ತು."

ರಾಜಶೇಖರನ್ ಅವರ ಸರಳತೆಯ ಮನೋಭಾವಕ್ಕೆ ಗಿರಿಜಕ್ಕ ಹೊಂದಿಕೊಂಡಂತಿದ್ದರು. ಮದುವೆಯಾದ ತರುಣದಲ್ಲಿ ಅಮೆರಿಕಾದ ವಿವಿಧ ರಾಜ್ಯಗಳಿಗೆ ಹಾಗೂ ಕೃಷಿ ವಿಶ್ವವಿದ್ಯಾನಿಲಯಗಳಿಗೆ ಭೇಟಿ ಕೊಡಲು ಅಲ್ಲಿಗೆ ಹೊರಟ ರಾಜಶೇಖರನ್ ಅಂದಿನ ಕೇಂದ್ರ ಸಚಿವರಾದ ಎಂ.ವಿ.ಕೃಷ್ಣಪ್ಪ ಅವರ ಮನೆಗೆ ತಮ್ಮ ಮಡದಿಯನ್ನು ಕರೆದುಕೊಂಡು ಹೋಗಿದ್ದರು. ಆ ಸಂದರ್ಭವನ್ನು ಪ್ರಮೀಳಾದೇವಿ ಕೃಷ್ಣಪ್ಪ ಮೆಲುಕು ಹಾಕುತ್ತಾರೆ: "ರಾಜಶೇಖರನ್ ತಮ್ಮ ಮಡದಿ ಗಿರಿಜಾ ಅವರನ್ನು ನಮ್ಮ ಮನೆಗೆ ಕರೆದುಕೊಂಡು

ಬಂದು ಅಮೆರಿಕಾಕ್ಕೆ ಹೊರಟರು. ಆಕೆ ಕೂಡ ಅಷ್ಟೆ. ರಾಜಶೇಖರನ್ ಅವರಿಗೆ ಅನುರೂಪಳಾದ ಪತ್ನಿ. ತಾನು ಮುಖ್ಯಮಂತ್ರಿ ಅವರ ಮಗಳು ಎಂಬ ಅಹಂಕಾರ ಆಕೆಗೆ ಎಂದೂ ಇರಲಿಲ್ಲ. ರಾಜಶೇಖರನ್ ಅವರಲ್ಲಿರುವ ಮುಗ್ಧತೆ, ಸ್ನೇಹಶೀಲತೆ ಗಿರಿಜಾ ಅವರಲ್ಲೂ ಇದೆ. ಆಗಿನಿಂದಲೂ ಅವರು ನಮ್ಮ ಮನೆಗೆ ಬರುತ್ತಿದ್ದಾರೆ. ನಡೆ-ನುಡಿಯಲ್ಲಿ ಒಂದಿಷ್ಟೂ ವ್ಯತ್ಯಾಸವಿಲ್ಲ."

ರಾಜಶೇಖರನ್ ಅವರ ಮನೆಯ ಆಧಾರಸ್ತಂಭವೇ ಗಿರಿಜಾ ರಾಜಶೇಖರನ್ ಅವರು. ಅವರ ಸಹೃದಯತೆಯನ್ನು ಕುರಿತು ಅವರ ಸೊಸೆ ಉಮಾ ರವಿಶಂಕರ್ ಹೇಳುವ ನುಡಿಯಿದು: "ನಮ್ಮ ಅತ್ತೆಯವರ ಕಣ್ಗಾವಲಿನಲ್ಲಿ ನಾನು ಎಲ್ಲ ವಿಧದ ಅಡುಗೆ ಮಾಡುವುದನ್ನು ಕಲಿತಿದ್ದೇನೆ."

**ಕೃಷಿಕ ಸಮಾಜ :**

ರಾಜಶೇಖರನ್ ಅವರಿಗೆ ಅತ್ಯಂತ ಪ್ರಿಯವಾದ ವಿಷಯ ಕೃಷಿ. ಜಪಾನ್ ದೇಶವನ್ನು ಅವರು ಉಲ್ಲೇಖಿಸುವುದು ಈ ಕಾರಣಕ್ಕಾಗಿಯೇ. ಜಪಾನ್ ದೇಶಕ್ಕೆ ಭೇಟಿ ಕೊಟ್ಟಾಗ ಅವರು ಹೇಳಿದ ಮಾತಿದು: "ಜಪಾನ್ ದೇಶಕ್ಕೆ ನಾನು ಆರೇಳು ಸಲ ಭೇಟಿ ಕೊಟ್ಟಿರಬಹುದು. ಅಲ್ಲಿನ ರೈತರು ಕ್ಯಾಲೆಂಡರ್ ಇಟ್ಟುಕೊಂಡು ಕೃಷಿ ಚಟುವಟಿಕೆ ಮಾಡುತ್ತಾರೆ. ನಾವು ಬ್ರಹ್ಮಾಂಡ ಅಂದುಕೊಂಡು ಆಕಾಶ ನೋಡುತ್ತೇವೆ, ಅವರು ಭೂಮಿ ನೋಡುತ್ತಾರೆ. ವಾಸ್ತವಿಕ ಪ್ರಜ್ಞೆಯಿಂದ ಕೃಷಿ ಚಟುವಟಿಕೆಗಳನ್ನು ಕೈಗೊಂಡು ಅಲ್ಲಿ ಕೃಷಿಯನ್ನು ಲಾಭದಾಯಕ ಕ್ಷೇತ್ರವನ್ನಾಗಿ ಮಾಡಿಕೊಂಡಿದ್ದಾರೆ".

ರೈತನಿಗೆ ಸಮಸ್ತ ಮಾಹಿತಿಯನ್ನೊದಗಿಸುವ ಕೇಂದ್ರ ರಾಜಧಾನಿಯಲ್ಲಿ ತಲೆಯೆತ್ತಬೇಕೆಂಬುದು ರಾಜಶೇಖರನ್ ಅವರ ಬಹುದಿನದ ಬಯಕೆ. ಬೆಂಗಳೂರಿನ ಹಡ್ಸನ್ ಸರ್ಕಲ್‌ನಲ್ಲಿ ಕೋಟ್ಯಾಂತರ ರೂಪಾಯಿಗಳ ಬೆಲೆಬಾಳುವ ಜಾಗದಲ್ಲಿ ಇಂದು ಕೃಷಿಭವನ ಕಾರ್ಯಾಚರಣೆ ಮಾಡುತ್ತಿದ್ದರೆ ಅದಕ್ಕೆ ಮೂಲ ಕಾರಣಕರ್ತರು ರಾಜಶೇಖರನ್ ಅವರು. ಈ ಬಗ್ಗೆ ತಮ್ಮ ಕನಸನ್ನು ಹೀಗೆ ಬಿಚ್ಚಿಕೊಳ್ಳುತ್ತಾರೆ. "ಬೆಂಗಳೂರಿನ ಹಡ್ಸನ್ ಸರ್ಕಲ್‌ನಲ್ಲಿರುವ ಕೃಷಿ ಭವನ ತಲೆ ಎತ್ತಲು ನನ್ನ ಅಳಿಲು ಸೇವೆಯಿದೆ. ರೈತರು ಬೆಳೆದ ಹಣ್ಣು ಹಂಪಲನ್ನು ಸಂಗ್ರಹಿಸಲು ಭಾರತದಲ್ಲಿ ಮೊಟ್ಟ ಮೊದಲಬಾರಿಗೆ ೧೨೦೦ ಟನ್‌ನ ಶೈತ್ಯಾಗಾರವನ್ನು ಕೃಷಿಕ ಸಮಾಜದಲ್ಲಿ ಸ್ಥಾಪಿಸಲಾಗಿದೆ. ಕೃಷಿಯ ಜೊತೆ ನಮ್ಮ ರೈತರು ಹೈನುಗಾರಿಕೆ, ರೇಷ್ಮೆ, ಪುಷ್ಪೋದ್ಯಮ ಮೊದಲಾದುವನ್ನು ಕೈಗೊಳ್ಳಬೇಕು ಎಂಬ ಆಶಯ ನನ್ನದು."

ಈ ಕೃಷಿ ಭವನಕ್ಕೆ ಈ ಅಪೂರ್ವ ಜಾಗವನ್ನು ದೊರಕಿಸಿಕೊಡಲು ರಾಜಶೇಖರನ್ ಪಟ್ಟ ಪ್ರಯತ್ನವನ್ನು ರಾಜ್ಯ ಸರ್ಕಾರದ ನಿವೃತ್ತ ಮುಖ್ಯ ಕಾರ್ಯದರ್ಶಿ ಜೆ.ವಿ.ಕೆ. ರಾವ್ ಈ ರೀತಿ ದಾಖಲಿಸಿದ್ದಾರೆ: "ಬೆಂಗಳೂರು ನಗರದ ಹಡ್ಸನ್ ವೃತ್ತದಲ್ಲಿರುವ ಕೃಷಿಕ ಸಮಾಜದ ಕಟ್ಟಡ ನಿರ್ಮಾಣದ ಹಿಂದೆ ಯಾರಿದ್ದಾರೆ ಎಂಬುದು ಬಹುಮಟ್ಟಿನ ಜನಕ್ಕೆ ಗೊತ್ತಿಲ್ಲ. ಮೂಲತಃ ಆ ಜಾಗ ಪೊಲೀಸ್ ಇಲಾಖೆಗೆ ಸೇರಿತ್ತು. ಎಂ.ವಿ. ರಾಜಶೇಖರನ್ ಅಂದಿನ ಪ್ರಭಾವಶಾಲಿ ಸಚಿವರುಗಳ ವಿರುದ್ಧ ಹೋರಾಟ ಮಾಡಿ ಕೃಷಿಕರ ಏಳಿಗೆಗಾಗಿ ಆ ಜಾಗ ಪಡೆದುಕೊಂಡರು. ಇಂದು ಆ ಜಾಗಕ್ಕೆ ಕೋಟ್ಯಂತರ ರೂಪಾಯಿ ಬೆಲೆಯಿದೆ. ರಾಜಶೇಖರನ್ ಅವರು ಅಲ್ಲಿ ಕಂಡ ಕನಸು ತುಂಬಾ ದೊಡ್ಡದು. ಬೃಹತ್ ಕೃಷಿಕ ಭವನ ನಿರ್ಮಿಸಿ ಕೃಷಿಕರೆಲ್ಲರಿಗೂ ಬೇಕಾದ ಸಂಶೋಧನಾ ಕೇಂದ್ರವನ್ನು ನಿರ್ಮಿಸುವ ಹಿರಿದಾಸೆ ಅವರಲ್ಲಿತ್ತು. ಈಗ ಕೇವಲ ಕೃಷಿ ಸಮಾಜ ಎಂಬ ಕಟ್ಟಡ ನಿರ್ಮಾಣವಾಗಿದೆ. ೧೯೬೭ರಲ್ಲಿ ರಾಜಶೇಖರನ್ ಲೋಕಸಭಾ ಸದಸ್ಯರಾದ ಮೇಲೆ ಕೃಷಿಕ ಸಮಾಜದ ಪ್ರಧಾನ ಕಾರ್ಯದರ್ಶಿ ಸ್ಥಾನಕ್ಕೆ ರಾಜೀನಾಮೆ ಕೊಟ್ಟರು. ಅನಂತರ ಅದರ ಪ್ರಗತಿ ಸ್ಥಗಿತಗೊಂಡಿರಬಹುದು". ದಕ್ಷ ಅಧಿಕಾರಿಗಳಾದ ಜೆ.ವಿ.ಕೆ. ರಾವ್ ಅವರು ರಾಜಶೇಖರನ್ ಅವರ ಕನಸು ಹಾಗೂ ಇಂದಿನ ವಾಸ್ತವಿಕತೆಯನ್ನು ಮಾರ್ಮಿಕವಾಗಿ ಸೆರೆಹಿಡಿದಿದ್ದಾರೆ. ಕೃಷಿಕ ಸಮಾಜದೊಡನೆ ರಾಜಶೇಖರನ್ ಒಡನಾಟ ಕುರಿತಂತೆ ಹಿರಿಯ ರಾಜಕೀಯ ಮುತ್ಸದ್ದಿ ಕೊಲೂರು ಮಲ್ಲಪ್ಪ

*ರಾಜಶೇಖರನ್ ಅವರಿಗೆ ಅನುರೂಪಳಾದ ಪತ್ನಿ ಗಿರಿಜಾ. ತಾನು ಮುಖ್ಯಮಂತ್ರಿ ಅವರ ಮಗಳು ಎಂಬ ಅಹಂಕಾರ ಆಕೆಗೆ ಎಂದೂ ಇರಲಿಲ್ಲ. ರಾಜಶೇಖರನ್ ಅವರಲ್ಲಿರುವ ಮುಗ್ಧತೆ ಸ್ನೇಹಶೀಲತೆ ಗಿರಿಜಾ ಅವರಲ್ಲಿ ಇದೆ.*

ಹೇಳುವ ಮಾತಿದು: "ಇಂದು ಬೆಂಗಳೂರಿನಲ್ಲಿರುವ ಕೃಷಿಕ ಸಮಾಜದ ಕಟ್ಟಡವನ್ನು ರಾಜಶೇಖರನ್ ಅವರು ಸರ್ಕಾರದಿಂದ ಮಾಡಿಸಿದ್ದಾರೆ. ಅನೇಕ ದೇಶಗಳನ್ನು ಸುತ್ತಿ ಬಂದಿರುವ ರಾಜಶೇಖರನ್ ಗ್ರಾಮಾಂತರ ಪ್ರದೇಶದಲ್ಲಿ ಯಾವ ಯಾವ ಕೆಲಸ ಮಾಡಬೇಕೆಂಬುದನ್ನು ಆಗಲೇ ನಿರ್ಧರಿಸಿಕೊಂಡು ಬರುತ್ತಿದ್ದರು." ಜಪಾನ್ ಮತ್ತು ಅಮೆರಿಕಾ ದೇಶಕ್ಕೆ ಹೋಗಿ ಬಂದ ನಂತರ ಕೃಷಿಕ ಸಮಾಜ ಯೋಜನೆ ಅವರ ತಲೆಗೆ ಹೊಕ್ಕಿತು.

ಯಾವುದೇ ಸಂಸ್ಥೆ ಉತ್ತರೋತ್ತರವಾಗಿ ಪ್ರಗತಿ ಸಾಧಿಸಬೇಕಾದರೆ ಅದರ ನಿರ್ಮಾತೃವಿಗೆ ಪ್ರಾಮಾಣಿಕತೆ ಹಾಗೂ ಬದ್ಧತೆಯ ಜೊತೆಗೆ ಭವಿಷ್ಯದ ಬಗ್ಗೆ ಕನಸುಗಳಿರಬೇಕು. ರಾಷ್ಟ್ರದ ಬಗ್ಗೆ ಅಪಾರವಾದ ಪ್ರೀತಿಯುಳ್ಳ ರಾಜಶೇಖರನ್ ಅವರಂತಹ ಕನಸುಗಾರ ರಾಜಕಾರಣಿಗಳು ಎಷ್ಟು ಮಂದಿ ದೊರೆತಾರು?

## ಅಪೂರ್ವ ಪತ್ರವ್ಯವಹಾರಿ :

೧೯೬೭ರ ಸಾರ್ವತ್ರಿಕ ಚುನಾವಣೆಯಲ್ಲಿ ಕನಕಪುರ ಲೋಕಸಭಾ ಕ್ಷೇತ್ರದಿಂದ ಆಯ್ಕೆಯಾದ ರಾಜಶೇಖರನ್ ಹಾಕಿಕೊಟ್ಟ ಹಾದಿ ನಿಜಕ್ಕೂ ಶ್ಲಾಘನೀಯವಾದುದು. ಪತ್ರದ ಮೂಲಕ ತಮ್ಮ ಮತದಾರರೊಡನೆ ಉತ್ತಮ ಸಂಬಂಧವಿಟ್ಟುಕೊಂಡ ಅಪರೂಪದ ವ್ಯಕ್ತಿ ಅವರು. ಸೈಯದ್ ಇಬ್ರಾಹಿಂ ಹೇಳುವಂತೆ "ರಾಜಶೇಖರನ್ ಅವರಿಗೆ ಪತ್ರ ಬರೆಯುವ ಗುಣ ದೈವದತ್ತವಾಗಿ ಬಂದದ್ದು. ಒಮ್ಮೊಮ್ಮೆ ಹತ್ತು ಸಾವಿರಕ್ಕೂ ಹೆಚ್ಚು ಪತ್ರಗಳನ್ನು ಬರೆದದ್ದುಂಟು". ಇದೇನೂ ಸಾಮಾನ್ಯವಾದ ಸಾಧನೆಯಲ್ಲ. ಇವರ ಮಾತನ್ನೇ ವಯೋವೃದ್ಧರಾದ ಎಸ್.ಸಿ.ರೇವಣ್ಣ ಅವರು ನೆನಪಿಸಿಕೊಳ್ಳುವ ರೀತಿಯಿದು: "ರಾಜಶೇಖರನ್ ಅವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹೊಸ ಪರಂಪರೆಯನ್ನು ಹುಟ್ಟುಹಾಕಿದ್ದಾರೆ. ಅವರು ಆ ಕಾಲದಲ್ಲಿ ಕ್ಷೇತ್ರದ ಅಭಿವೃದ್ದಿಯ ಬಗ್ಗೆ ಬರೆದ ಪತ್ರಗಳನ್ನು ಅನೇಕ ಮಹನೀಯರು ಇಂದಿಗೂ ಜೋಪಾನವಾಗಿಟ್ಟುಕೊಂಡಿದ್ದಾರೆ."

ಬಿ.ಜೆ.ಪಿ.ಹಿರಿಯ ನಾಯಕ ರಾಮಚಂದ್ರೇಗೌಡ ಅವರ ಮಾತಿದು: "ರಾಜಶೇಖರನ್ ಅವರು ಲೋಕಸಭಾ ಅಧಿವೇಶನಕ್ಕೆ ತೆರಳುವ ಮುನ್ನ ತಮ್ಮ ಕ್ಷೇತ್ರದಲ್ಲಿ ದೇಶದ ಮತ್ತು ಅಭಿವೃದ್ಧಿಯ ಬಗ್ಗೆ ಚಿಂತಿಸುವ ಸುಮಾರು ಐನೂರು ಆರುನೂರು ಜನರಿಗೆ ಪತ್ರ ಬರೆದು ಲೋಕಸಭೆಯಲ್ಲಿ ಚರ್ಚಿಸಬೇಕಾದ ವಿಚಾರಗಳ ಬಗ್ಗೆ ತಿಳಿಸಲು ಕೋರುತ್ತಿದ್ದರು. ಈ ರೀತಿ ಪತ್ರ ಸ್ವೀಕರಿಸಿದವರಲ್ಲಿ ನಾನೂ ಕೂಡ ಒಬ್ಬನಾಗಿದ್ದೇನೆ".

ಜನರ ನಡುವಿನ ರಾಜಕಾರಣಿಗೆ ಜನರೇ ಮಾರ್ಗದರ್ಶನ ನೀಡಬೇಕು. ಆತ ಲೋಕಸಭೆಯಲ್ಲಿ ಅಥವಾ ವಿಧಾನಸಭೆಯಲ್ಲಿ ಯಾವ ರೀತಿ ಮಾತನಾಡಬೇಕೆಂಬುದನ್ನು ಅವರೇ ನಿರ್ಧರಿಸಬೇಕು ಎಂಬುದು ರಾಜಶೇಖರನ್ ಅವರ ನಿಲುವಾಗಿದೆ.

ಮಹಮ್ಮದ್ ಜಿಯಾವುಲ್ಲಾ ಅವರು ರಾಜಶೇಖರನ್ ಅವರನ್ನು ಕುರಿತು ರಾಮನಗರ ವಿಧಾನಸಭಾ ಕ್ಷೇತ್ರದಲ್ಲಿ ಜನ ಮಾತನಾಡಿಕೊಳ್ಳುತ್ತಿದ್ದುದನ್ನು ದಾಖಲಿಸುತ್ತಾರೆ: "ಹಿಂದಿನ ನಮ್ಮ ಎಂ.ಪಿ. (ರಾಜಶೇಖರನ್) ಈಗಿನವರಿಗಿಂತ ಎಷ್ಟೋ ಉತ್ತಮ. ಅವರು ಲೋಕಸಭೆಯಲ್ಲಿ ಮಾತನಾಡಿದ್ದೆಲ್ಲ ಕಿರುಹೊತ್ತಿಗೆ ಮಾಡಿ ಕಳುಹಿಸುತ್ತಿದ್ದರು. ಯಾವುದೇ ಹಬ್ಬ ಅಥವಾ ಇನ್ನಾವುದೇ ಘಟನೆ ನಡೆದರೆ ಅದನ್ನು ಪತ್ರ ರೂಪದಲ್ಲಿ ಬರೆದು ತಿಳಿಸುತ್ತಿದ್ದರು".

ರಾಜಶೇಖರನ್ ಅವರು ಲೋಕಸಭೆಯಲ್ಲಿ ವ್ಯವಹರಿಸುತ್ತಿದ್ದುದನ್ನು ಕುರಿತು ಗೊ.ರು.ಚನ್ನಬಸಪ್ಪ ಅವರು ಹೇಳುವ ಮಾತುಗಳು ತುಂಬಾ ಪ್ರಮುಖವೆನಿಸಿವೆ: "ರಾಜಶೇಖರನ್ ಲೋಕಸಭಾ ಸದಸ್ಯರಾಗಿದ್ದಾಗ ಸಂಸತ್ತಿನಲ್ಲಿ ಅವರು ಮಾಡಿದ ಭಾಷಣದ ಪ್ರತಿಗಳನ್ನು ಆಗಿಂದಾಗ್ಗೆ ನನಗೆ ಕಳುಹಿಸುತ್ತಿದ್ದರು. ನಾನು ಆ ಭಾಷಣಗಳನ್ನು ಕನ್ನಡಕ್ಕೆ ಅನುವಾದಿಸಿ ಅವರ ಕನಕಪುರ ಲೋಕಸಭಾ ಕ್ಷೇತ್ರದ ಎಲ್ಲ ಗ್ರಾಮ ಪಂಚಾಯತಿ, ತಾಲ್ಲೂಕು ಅಭಿವೃದ್ಧಿ ಮಂಡಳಿ ಹಾಗೂ ಜಿಲ್ಲಾ ಮಂಡಳಿಗಳ ಸದಸ್ಯರಿಗೆ ಕಳುಹಿಸುತ್ತಿದ್ದ. ತಮ್ಮನ್ನು ಆಯ್ಕೆ ಮಾಡಿದ ಮತದಾರರೊಡನೆ ರಾಜಶೇಖರನ್ ಅವರಂತೆ ಜಾಗೃತ ಸಂಪರ್ಕವಿಟ್ಟುಕೊಳ್ಳುವ ಜನಪ್ರತಿನಿಧಿಗಳು ವಿರಳ".

## ಲಾಬಿ-ಪ್ರವೀಣರು :

ಅನೇಕ ನಾಯಕರು ತಮ್ಮ ಸ್ವಾರ್ಥ ಸಾಧನೆಗಾಗಿ ಲಾಬಿ ಮಾಡುವುದು ರಾಜಕೀಯ ಕ್ಷೇತ್ರದಲ್ಲಿ ಅತಿಸಾಮಾನ್ಯ. ಆದರೆ ರಾಜಶೇಖರನ್ ಮಾಡುವ ಲಾಬಿ ಎಂತಹದು. ವಿ.ಎಸ್.ಕೃಷ್ಣಯ್ಯರ್ ಅವರ ಮಾತುಗಳಲ್ಲಿ ಇದನ್ನು ಕೇಳಿ: "ನನಗೆ ತಿಳಿದ ಮಟ್ಟಿಗೆ

ಎಂ.ವಿ.ರಾಜಶೇಖರನ್ ರಾಜ್ಯದ ಪರವಾಗಿ ಪ್ರಬಲ ಲಾಬಿ ಮಾಡುತ್ತಿದ್ದರು. ತಮ್ಮ ವೈಯಕ್ತಿಕ ಪರಿಚಯಗಳನ್ನು ಬಳಸಿಕೊಂಡು ರಾಜ್ಯದ ಪರವಾಗಿ ಪರಿಣಾಮಕಾರಿಯಾಗಿ ಲಾಬಿ ಮಾಡಿ, ಎಲ್ಲ ಯೋಜನೆಗಳನ್ನು ರಾಜ್ಯಕ್ಕೆ ತರಬೇಕೆಂಬುದು ಅವರ ಉದ್ದೇಶವಾಗಿತ್ತು. ತಮ್ಮ ಗೆಳೆಯರ, ಸಂಸತ್ತಿನ ಅಧಿಕಾರಿಗಳ ಜೊತೆಗೆ ನಿಕಟ ಸಂಬಂಧವಿಟ್ಟುಕೊಂಡ ಅವರು ಅನೇಕ ಯೋಜನೆಗಳನ್ನು ರಾಜ್ಯಕ್ಕೆ ತಂದರು. ಇಂತಹ ಎರಡು ನಾಯಕತ್ವಗಳನ್ನು ನಾನು ಈವರೆಗೆ ಕಂಡಿದ್ದೇನೆ. ಅವರುಗಳೆಂದರೆ ದಕ್ಷಿಣ ಕನ್ನಡ ಜಿಲ್ಲೆಯ ಶ್ರೀನಿವಾಸ ಮಲ್ಯ ಹಾಗೂ ಎಂ.ವಿ. ರಾಜಶೇಖರನ್."

## ಲೋಕಸಭೆಯಲ್ಲಿ ಮೊಳಗಿದ ಧ್ವನಿ :

ರಾಜಶೇಖರನ್ ಅವರು ಆ ಕಾಲದಲ್ಲಿ ಲೋಕಸಭೆಯಲ್ಲಿ ಮಾಡಿದ ಭಾಷಣಗಳ ಕಿರುಹೊತ್ತಿಗೆಗಳನ್ನು ನೋಡಿದಾಗ ಅವರ ರಾಷ್ಟ್ರಾಭಿಮಾನವನ್ನು ಮೆಚ್ಚದೆಯಿರಲು ಸಾಧ್ಯವಿಲ್ಲ. ೧೯೬೭ ಏಪ್ರಿಲ್ ೪ರಂದು ಅವರು ಲೋಕಸಭೆಯಲ್ಲಿ ಹೀಗೆ ಹೇಳುತ್ತಾರೆ: "ಈ ರಾಷ್ಟ್ರವನ್ನು ಕಟ್ಟಬೇಕಾದವರು ನಾವು. ರಷ್ಯಾದವರಾಗಲಿ ಅಥವಾ ಅಮೆರಿಕಾದವರಾಗಲಿ ಅಲ್ಲ. ಭಾರತೀಯರಾದ ನಾವು ಆ ಕಾರ್ಯ ಮಾಡಬೇಕು." ೧೯೬೭ರ ಜುಲೈ ಒಂದರಂದು ರೈತರ ಭವಿಷ್ಯ ಕುರಿತು ಹೇಳುವ ನುಡಿಯಿದು: "ವ್ಯವಸಾಯ ಶಿಕ್ಷಣದ ಬಗ್ಗೆ ನಾವು ಅಷ್ಟಾಗಿ ಗಮನ ಕೊಟ್ಟಿಲ್ಲ. ರೈತರ ಮಕ್ಕಳು ಕೃಷಿಯಲ್ಲಿ ಹೊಸ ತಂತ್ರಗಳನ್ನು ಕಲಿಯಬೇಕು." ರಾಜಶೇಖರನ್ ಅವರಿಗೆ ಪ್ರಿಯವಾದ ಯುವ ಜನಾಂಗ ಕುರಿತು ೧೯೬೭ ಜುಲೈ ೨೫ರಂದು ಹೀಗೆ ನುಡಿಯುತ್ತಾರೆ: "ನಮ್ಮ ಯುವ ಜನಾಂಗದತ್ತ ಸರ್ಕಾರ ಹೆಚ್ಚು ಗಮನ ಕೊಟ್ಟಿಲ್ಲ. ಅವರಲ್ಲಿ ರಾಷ್ಟ್ರೀಯತೆ ಹೆಚ್ಚಿಸಲು ನಾವು ಪ್ರಯತ್ನಿಸಬೇಕು. ಅವರಲ್ಲಿ ಸಾಮಾಜಿಕ ನ್ಯಾಯದ ಮನೋಭಾವ ಮೂಡಿಸಬೇಕು."

ಶ್ರೀಮತಿ ಇಂದಿರಾ ಗಾಂಧಿ ಅವರು ಬ್ಯಾಂಕ್ ರಾಷ್ಟ್ರೀಕರಣವನ್ನೇ ಆಧಾರವನ್ನಾಗಿ ಮಾಡಿಕೊಂಡು ೧೯೭೧ರ ಮಧ್ಯಂತರ ಲೋಕಸಭಾ ಚುನಾವಣೆಯಲ್ಲಿ ಅದ್ಭುತ ಜಯ ಗಳಿಸಿದ್ದನ್ನು ಇತಿಹಾಸ ಹೇಳುತ್ತದೆ. ಇದೇ ವಿಷಯ ಕುರಿತಂತೆ ೧೯೬೮ ಜನವರಿ ೩೦ರಂದು ರಾಜಶೇಖರನ್ ಲೋಕಸಭೆಯಲ್ಲಿ ಆಡಿರುವ ಮಾತಿದು: "ಈಗ ಬ್ಯಾಂಕುಗಳಲ್ಲಿ ಸುಮಾರು ೩,೫೦೦ ಕೋಟಿ ಠೇವಣಿ ಹಣವಿದೆ. ಇದರಲ್ಲಿ ಬ್ಯಾಂಕುಗಳ ಷೇರು ಬಂಡವಾಳ ಕೇವಲ ೧೦೦ ಕೋಟಿ. ಇನ್ನುಳಿದ ೩,೪೦೦ ಕೋಟಿ ಸಾಮಾನ್ಯ ಜನತೆಯಿಂದ ಬಂದದ್ದು. ಅದರಲ್ಲಿ ಗ್ರಾಮಾಂತರ ಜನರೂ ಸೇರಿದ್ದಾರೆ. ಹೀಗಾಗಿ ಎಲ್ಲ ಬ್ಯಾಂಕುಗಳು ರೈತರ ನೆರವಿಗೆ ಬರುವುದು ಇಂದಿನ ತುರ್ತು ಅಗತ್ಯ."

## ಅಂತರ್ಜಲ ಬಳಕೆಯ ಸಲಹೆಗಾರರು :

ಎಂಬತ್ತರ ದಶಕದಲ್ಲಿ ಭೂಮಿಯಲ್ಲಿ ಅಡಗಿದ್ದ ಅಂತರ್ಜಲವನ್ನು ಬಳಸಿ ವ್ಯವಸಾಯ ಮಾಡಬೇಕೆಂಬ ಯೋಜನೆಗೆ ಸರ್ಕಾರ ನಾಂದಿ ಹಾಡಿತು. ಅದಕ್ಕಾಗಿಯೇ ಬೋರ್ ರಿಗ್ ಯಂತ್ರಗಳನ್ನು ವಿದೇಶಗಳಿಂದ ಆಮದು ಮಾಡಿಕೊಂಡಿತು. ನಜೀರ್‌ಸಾಬ್ ಅಂಥವರು ಇದನ್ನು ಸಮರ್ಪಕವಾಗಿ ಬಳಸಿಕೊಂಡು ಜನರಿಗೆ ಕುಡಿಯುವ ನೀರು ಕೊಟ್ಟರು. ಇದನ್ನು ಕುರಿತು ರಾಜಶೇಖರನ್ ಅವರು ೧೯೬೮ ಡಿಸೆಂಬರ್ ೪ರಂದು ಲೋಕಸಭೆಯಲ್ಲಿ ಮಾತನಾಡಿರುವ ವಿಚಾರ ಹೀಗಿದೆ: "ನಮ್ಮ ರೈತರಿಗೆ ಆಳವಾದ ಬಾವಿ ತೋಡಲು ರಿಗ್ ಯಂತ್ರಗಳ ನೆರವು ಬೇಕಾಗಿದೆ. ಇದರಿಂದ ಭೂ ಅಂತರ್ಗತ ಜಲಸಂಪತ್ತಿನ ಪ್ರಯೋಜನ ಪಡೆದುಕೊಳ್ಳಲು ಅನುಕೂಲವಾಗುತ್ತದೆ. ಈ ಯಂತ್ರಗಳನ್ನು ಹೆಚ್ಚು ಸಂಖ್ಯೆಯಲ್ಲಿ ಪಡೆದುಕೊಳ್ಳಲು ಭಾರತ ಸರ್ಕಾರವು ಒಂದು ಸಂಘಟಿತ ಪ್ರಯತ್ನ ಮಾಡುವುದು ಅಗತ್ಯವಿದೆ ಎಂಬುದು ನನ್ನ ಖಚಿತ ಅಭಿಪ್ರಾಯ".

## ಇಗ್ಗಲೂರು ಏತ ನೀರಾವರಿ ಯೋಜನೆ :

ಎಂ.ವಿ.ರಾಜಶೇಖರನ್ ಅವರು ಲೋಕಸಭಾ ಸದಸ್ಯರಾಗಿದ್ದ ಅವಧಿಯಲ್ಲಿ ಮಾಡಿದ ಮತ್ತೊಂದು ಅಪರೂಪದ ಕೆಲಸ ಇಗ್ಗಲೂರು ಏತ ನೀರಾವರಿ ಯೋಜನೆಯ ಅನುಷ್ಠಾನ. ಇದರಿಂದಾಗಿ ಕನಕಪುರ ಹಾಗೂ ಸಾತನೂರು ಹೋಬಳಿಯ ಏಳು ಸಾವಿರ ಹೆಕ್ಟೇರ್ ಭೂಪ್ರದೇಶಕ್ಕೆ ನೀರಾವರಿ ಒದಗಿತು. ಅದನ್ನು ಕುರಿತಂತೆ ಚನ್ನಪಟ್ಟಣ ತಾಲ್ಲೂಕು ಅಭಿವೃದ್ಧಿ ಸಮಿತಿಯ ಮಾಜಿ ಅಧ್ಯಕ್ಷರಾದ

ಎ.ಗುಂಡಣ್ಣ ಹೀಗೆ ಹೇಳುತ್ತಾರೆ: "ಈ ಭಾಗದ ಪ್ರಮುಖ ನೀರಾವರಿ ಯೋಜನೆಯಾದ ಇಗ್ಗಲೂರು ಏತ ನೀರಾವರಿ ಯೋಜನೆಗೆ ಇವರೇ ಕಾರಣ ಪುರುಷರು".

## ಮಂಚನಬೆಲೆ :

ಎಂ.ವಿ. ರಾಜಶೇಖರನ್ ಅವರು ಲೋಕಸಭಾ ಸದಸ್ಯರಾಗಿದ್ದಾಗ ಮಾಡಿದ ಮಹತ್ವದ ಯೋಜನೆಗಳಲ್ಲಿ ಮಂಚನಬೆಲೆ ನೀರಾವರಿ ಯೋಜನೆ ತುಂಬಾ ಪ್ರಮುಖವಾದುದು. ೧೯೬೭ ಜುಲೈ ೨೫ ರಂದು ಇದನ್ನು ಕುರಿತು ಲೋಕಸಭೆಯಲ್ಲಿ ಹೀಗೆ ಪ್ರಸ್ತಾಪಿಸುತ್ತಾರೆ: "ಗ್ರಾಮಾಂತರ ಪ್ರದೇಶದಿಂದ ಬಂದಿರುವ ನಾನು ಮಂಚನಬೆಲೆ ನೀರಾವರಿ ಯೋಜನೆಯ ಬಗ್ಗೆ ಪ್ರಸ್ತಾಪಿಸದಿದ್ದರೆ ನನ್ನ ಕರ್ತವ್ಯದಲ್ಲಿ ವಿಫಲನಾದಂತೆಯೇ ಸರಿ. ಮಂಚನಬೆಲೆ ಯೋಜನೆಯಿಂದ ಪ್ರವಾಹ ನಿಯಂತ್ರಣಕ್ಕೆ ಅನುಕೂಲವಾಗುತ್ತದೆ, ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕೇಂದ್ರ ಸರ್ಕಾರ ಉದಾರವಾಗಿ ಧನಸಹಾಯ ಮಾಡಬೇಕೆಂದು ಮಾನ್ಯ ಅರ್ಥಸಚಿವರನ್ನು ಪ್ರಾರ್ಥಿಸುತ್ತೇನೆ." ಈ ಯೋಜನೆ ಅನುಷ್ಠಾನಗೊಳ್ಳದಿದ್ದರೆ ಮಾಗಡಿ ನಗರಕ್ಕೆ ಇಂದು ಕುಡಿಯುವ ನೀರನ್ನೇ ಕೊಡಲಾಗುತ್ತಿರಲಿಲ್ಲ. ೧೯೫೭ರಲ್ಲಿ ಬಿ.ಡಿ.ಜತ್ತಿ ಸರ್ಕಾರ ಹಳ್ಳಿಮಾಳ ನೀರಾವರಿ ಯೋಜನೆಯನ್ನು ಘೋಷಿಸಿತ್ತು. ಅದರಿಂದಾಗಿ ಮೂವತ್ತು ಹಳ್ಳಿಗಳು ಮುಳುಗಡೆಯಾಗುತ್ತಿದ್ದವು. ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಕನಕಪುರದಿಂದ ಬಂದ ರಾಜಶೇಖರನ್ ಅವರಿಗೆ ಆ ಪರಿಸರದ ನೀರಾವರಿ ಬಗ್ಗೆ ಅಪಾರ ತಿಳುವಳಿಕೆಯಿತ್ತು. ಆ ಭಾಗದ ಲೋಕಸಭಾ ಸದಸ್ಯರಾದ ಕೆಂಗಲ್ ಹನುಮಂತಯ್ಯ ಹಾಗೂ ಮುಖ್ಯಮಂತ್ರಿ ನಿಜಲಿಂಗಪ್ಪ ಅವರನ್ನು ರಾಜಕೀಯ ಭಿನ್ನಾಭಿಪ್ರಾಯ ತೊರೆದು ಮಂಚನಬೆಲೆ ನೀರಾವರಿ ಯೋಜನೆಗೆ ಒಂದುಗೂಡುವಂತೆ ಮಾಡಿದ ಕೀರ್ತಿ ರಾಜಶೇಖರನ್ ಅವರಿಗೆ ಸಲ್ಲುತ್ತದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲದಿಂದ ಆಯ್ಕೆಯಾಗಿ ಸಚಿವರಾಗಿದ್ದ ಕೆ.ಪ್ರಭಾಕರ ಅವರು ಈ ಯೋಜನೆಯನ್ನು ಕುರಿತು ಹೀಗೆ ಹೇಳುತ್ತಾರೆ: "ಬೆಂಗಳೂರು ನಗರಕ್ಕೆ ಕುಡಿಯುವ ನೀರಿನ ತೊಂದರೆಯಾಗುತ್ತದೆ ಎಂಬ ಕಾರಣ ನೀಡಿ ಮಂಚನಬೆಲೆ ಯೋಜನೆಯನ್ನು ತಜ್ಞರು ಬೇಡ ಎಂದಿದ್ದರು. ರಾಜಶೇಖರನ್ ಇದನ್ನು ಒಪ್ಪಿಕೊಳ್ಳದೆ, ಈ ಯೋಜನೆಯನ್ನು ಕೈಗೆತ್ತಿಕೊಂಡರು. ಕೇಂದ್ರ ಸರ್ಕಾರದ ನೀರಾವರಿ ಸಚಿವರಾದ ಕೆ.ಎಲ್. ರಾವ್ ಅವರನ್ನು ಯೋಜನಾ ಸ್ಥಳಕ್ಕೆ ಕರೆದುಕೊಂಡು ಬಂದರು. ಅವರ ದೂರದೃಷ್ಟಿಯ ಫಲವಾಗಿ ಇಂದು ಬೆಂಗಳೂರು ಗ್ರಾಮಾಂತರ ಜಿಲ್ಲೆ ಆರ್ಥಿಕವಾಗಿ ಸಂಪದ್ಭರಿತವಾದ ಜಿಲ್ಲೆಯಾಗಿದೆ. ಮೂವತ್ತು ಕೋಟಿ ರೂಪಾಯಿಗಳ ವೆಚ್ಚದಲ್ಲಿ ಪೂರ್ಣವಾಗಿರುವ ಈ ಯೋಜನೆಯಿಂದ ಏಳು ಸಾವಿರ ಎಕರೆ ನೀರಾವರಿ ಸೌಲಭ್ಯ ದೊರೆಯುತ್ತದೆ. ರಾಜಶೇಖರನ್ ಅವರ ಅಮೋಘ ಸಾಧನೆಯಲ್ಲಿ ಇದಕ್ಕೆ ಅಗ್ರಸ್ಥಾನ. ಏಕಾಂಗಿಯಾಗಿ ಮಂಚಿನಬೆಲೆ ನೀರಾವರಿಯನ್ನು ಅನುಷ್ಠಾನ ಮಾಡಿದ ಅವರಿಗೆ ದೊರೆಯಬೇಕಾದ ಮನ್ನಣೆ ದೊರೆಯದಿರಬಹುದು. ಆದರೆ, ಅವರ ಪ್ರಯತ್ನವನ್ನು ಪ್ರಶಂಸಿಸದೇ ಇರುವವರು ಅಪರೂಪ. ಕನ್ನಡದ ಶ್ರೇಷ್ಠ ಕಥೆಗಾರ ಶೇಷನಾರಾಯಣ ಅವರು ರಾಜಶೇಖರನ್ ಅವರನ್ನು "ಮಂಚನಬೆಲೆಯ ಕನಸುಗಾರ" ಎಂದು ವರ್ಣಿಸುತ್ತಾ ಅವರ ಸಾಧನೆಯನ್ನು ಹೀಗೆ ಹಿಡಿದಿಡುತ್ತಾರೆ: "ವಿಧಾನಸೌಧ ಎಂದಾಗ ಕೆಂಗಲ್ ಹನುಮಂತಯ್ಯ ನಮ್ಮ ಕಣ್ಮುಂದೆ ತೇಲಿಬರುತ್ತಾರೆ. ಕನ್ನಂಬಾಡಿ ಎಂದಾಗ ಕಾವೇರಿ ನೀರಿನೊಂದಿಗೆ ಸರ್. ಎಂ. ವಿಶ್ವೇಶ್ವರಯ್ಯನವರು ಮಿಂಚುತ್ತಾರೆ, ನಲಿಯುತ್ತಾರೆ. ಹಾಗೆಯೇ ಮಂಚನಬಲೆ ಎಂದಾಗ ರಾಜಶೇಖರನ್ ಅವರ ಚಿತ್ರ ಮೂಡಲೇಬೇಕು".

## ಸಹಕಾರಿ ಪ್ರಕಾಶನ :

ರಾಜಶೇಖರನ್ ಅವರಿಗೆ ಪ್ರಿಯವಾದ ವಿಚಾರ ಸಹಕಾರಿ ತತ್ವ. ಸಾಹಿತ್ಯ ಮತ್ತು ಪತ್ರಿಕೋದ್ಯಮದಲ್ಲಿ ಆಸಕ್ತಿಯಿದ್ದ ರಾಜಶೇಖರನ್ 'ಸಹಕಾರಿ ಪ್ರಕಾಶನ' ಎಂಬ ಸಂಸ್ಥೆ ಪ್ರಾರಂಭವಾಗಲು ಕಾರಣೀಭೂತರಾಗಿದ್ದಾರೆ. ಕೇರಳದಲ್ಲಿ ಸಹಕಾರಿ ತತ್ವದ ಹಿನ್ನಲೆಯಲ್ಲಿ ಲೇಖಕರ ಹಿತವನ್ನು ರಕ್ಷಿಸಿದ್ದನ್ನು ಅವರು ಬಲ್ಲವರಾಗಿದ್ದರು. ಈ ಸಂಸ್ಥೆಯ ಬಗ್ಗೆ ರಾಜಶೇಖರನ್ ಹೇಳುವ ಮಾತುಗಳು ಹೀಗಿವೆ: "ಈ ಯೋಜನೆಯ ಮೂಲ ರೂವಾರಿಗಳು ಅಂದಿನ ಅರ್ಥಸಚಿವರಾಗಿದ್ದ ರಾಮಕೃಷ್ಣ ಹೆಗಡೆ ಹಾಗೂ ಶಿಕ್ಷಣ ಸಚಿವರಾಗಿದ್ದ ಕೆ.ವಿ. ಶಂಕರಗೌಡ ಅವರು. ಸಹಕಾರಿ ಪ್ರಕಾಶನಕ್ಕೆ ವ್ಯಾಪಕ ಅರ್ಥ ತಂದು ಕೊಟ್ಟವರು ಅಂದಿನ ಟ್ರಸ್ಟಿಗಳಲ್ಲೊಬ್ಬರಾಗಿದ್ದ ಡಾ. ದೇ. ಜವರೇಗೌಡ ಅವರು. 'ನಾನು ಕೂಡ ಅದಕ್ಕೆ ಒಬ್ಬ ಟ್ರಸ್ಟಿ' ಎಂದಿರುವವರು. ಖ್ಯಾತ ಕಾದಂಬರಿಕಾರ ನಿರಂಜನ, ಪತ್ರಕರ್ತ ಪ.ಸು.ಭಟ್ಟ ಮೊದಲಾದವರು ಆ ಟ್ರಸ್ಟಿನಲ್ಲಿದ್ದರು. ಆ ಸಹಕಾರ ಪ್ರಕಾಶನದ ಮೂಲಕವೇ ಮಕ್ಕಳ ವಿಶ್ವಕೋಶ 'ಜ್ಞಾನಗಂಗೋತ್ರಿ'ಯ

ಏಳು ಸಂಪುಟಗಳು ಪ್ರಕಟವಾಗಿವೆ. ರಾಜ್ಯದ ಎಲ್ಲ ಲೇಖಕರಿಗೂ ಇದು ಒಂದು ಆಪ್ತ ಸಂಸ್ಥೆಯಾಗಬೇಕು ಎಂಬುದು ಇದರ ಉದ್ದೇಶವಾಗಿತ್ತು. ಮುದ್ರಣ ಯಂತ್ರಗಳನ್ನು ಕೂಡ ಆಮದು ಮಾಡಿಕೊಂಡಿದ್ದೆವು". ೧೯೭೨ರ ರಾಜಕೀಯ ಬೆಳವಣಿಗೆ ಬದಲಾವಣೆಯಿಂದ ಈ ಸಂಸ್ಥೆ ತನಗೆ ತಾನೇ ಹಿಂದೆ ಸರಿದು ಸಹಕಾರ ಇಲಾಖೆಯ ಭಾಗವಾಯಿತು.

## ಅಭಿವೃದ್ಧಿ ಕೆಲಸಗಳಿಗೆ ಸಮರ್ಪಣೆ :

ಲೋಕಸಭೆಗೆ ನಡೆದ ಮಧ್ಯಂತರ ಚುನಾವಣೆಯಲ್ಲಿ ಎಂ.ವಿ. ರಾಜಶೇಖರನ್ ಅವರು ಕನಕಪುರ ಲೋಕಸಭಾ ಕ್ಷೇತ್ರದಿಂದ ಪರಾಭವಗೊಂಡರು. ಭಾರತದ ಚುನಾವಣೆಗಳೆಂದೂ ಅಭಿವೃದ್ಧಿ ಕೆಲಸವನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ ಎಂಬುದನ್ನು ಆ ಚುನಾವಣೆ ಸ್ಪಷ್ಟಪಡಿಸಿತು. ಇಷ್ಟರ ಮಧ್ಯೆ ರಾಜಕೀಯ ಧೃವೀಕರಣ ನಡೆದು ಇಂದಿರಾ ಗಾಂಧಿ ಅವರ ಜೊತೆಗಿದ್ದವರನ್ನು ಹೊರತುಪಡಿಸಿ ಮಿಕ್ಕೆಲ್ಲ ಹಿರಿಯ ಕಾಂಗ್ರೆಸ್ಸಿಗರನ್ನು ಭಾರತದ ಮತದಾರರು ತಿರಸ್ಕರಿಸಿದ್ದರು. ಎಂ.ವಿ.ರಾಜಶೇಖರನ್ ಸುಧಾರಣಾ ಪ್ರಕ್ರಿಯೆಯ ಪರವಾಗಿದ್ದರು. ಆ ತನಕದ ಅವರ ಕೆಲಸಗಳನ್ನು ಗಮನಿಸಿ ಹೇಳುವುದಾದರೆ ಮಿಕ್ಕೆಲ್ಲಾ ರಾಜ್ಯದ ಕಾಂಗ್ರೆಸ್ ನಾಯಕರಿಗಿಂತ ರಾಜಶೇಖರನ್ ಅವರು ಬೇರೆ ರೀತಿ ಯೋಚಿಸುತ್ತಿದ್ದರು. ಚೀನಾ, ರಷ್ಯಾ, ಜಪಾನ್, ನೆದರ್‌ಲ್ಯಾಂಡ್ ಮುಂತಾದ ದೇಶಗಳನ್ನು ಮೆಚ್ಚಿಕೊಂಡಿದ್ದ ರಾಜಶೇಖರನ್ ಅವರಲ್ಲಿ ಹೊಸ ಆಲೋಚನೆ ಸ್ಫುರಿಸಿತ್ತು. ಆದರೆ ಮತದಾರ ಸಾಮೂಹಿಕವಾಗಿ ಚಿಂತಿಸುತ್ತಾನೆಯೇ ಹೊರತು ನಿರ್ದಿಷ್ಟ ವ್ಯಕ್ತಿಯನ್ನು ಆತ ಗಮನಿಸುವುದಿಲ್ಲ. ರಾಷ್ಟ್ರಮಟ್ಟದಲ್ಲಿ ರಾಜಶೇಖರನ್ ಅವರ ಸ್ನೇಹಿತರಾದ ಅರ್ಜುನ ಸಿಂಗ್, ದಿನೇಶ್ ಸಿಂಗ್, ಬನ್ಸಿಲಾಲ್, ಜಗನ್ನಾಥ್ ಪಹಾಡಿಯಾ, ತಿವಾರಿ, ಶರದ್ ಪವಾರ್ ಮೊದಲಾದವರು ಇಂದಿರಾ ಗಾಂಧಿ ಅವರ ಆಡಳಿತ ಕಾಂಗ್ರೆಸ್ ಸೇರಿ ಅಧಿಕಾರ ಪಡೆದರು. ರಾಜ್ಯದಲ್ಲಿ ಆ ತನಕ ಅಂತಹ ಮಹತ್ವದ ಪಾತ್ರವನ್ನೇನೂ ನಿರ್ವಹಿಸದ ಡಿ.ದೇವರಾಜ ಅರಸ್ ಅವರು ೧೯೭೨ರ ವಿಧಾನಸಭಾ ಚುನಾವಣೆಯ ನಂತರ ರಾಜ್ಯದ ಮುಖ್ಯಮಂತ್ರಿಗಳಾದರು. ಸುಮಾರು ಎಂಟು ವರ್ಷಗಳ ಕಾಲ ರಾಜಶೇಖರನ್ ಯಾವುದೇ ಸ್ಥಾನಮಾನ ಪಡೆಯದೆ ತಮ್ಮನ್ನು ಅಭಿವೃದ್ಧಿ ಕೆಲಸಗಳಿಗೆ ಸಮರ್ಪಿಸಿಕೊಂಡರು. ರಾಜಶೇಖರನ್ ಅವರ ರಾಷ್ಟ್ರಮಟ್ಟದ ಸ್ನೇಹಿತರು ಆಡಳಿತ ಕಾಂಗ್ರೆಸ್‌ಗೆ ಬರುವಂತೆ ಆಗಲೂ ಒತ್ತಾಯ ಮಾಡುತ್ತಿದ್ದರು. ಬಹಳ ಜನರಿಗೆ ಗೊತ್ತಿಲ್ಲದ ಸಂಗತಿ ಒಂದಿದೆ. ೧೯೬೭ರ ಸಾರ್ವತ್ರಿಕ ಚುನಾವಣೆಯಲ್ಲಿ ಅಂದಿನ ಕಾಂಗ್ರೆಸ್‌ನ ಒಳಜಗಳದಿಂದಾಗಿ ಹುಣಸೂರು ಕ್ಷೇತ್ರದಿಂದ ಡಿ.ದೇವರಾಜ್ ಅರಸ್ ಅವರಿಗೆ ಟಿಕೇಟ್ ತಪ್ಪುವ ಸನ್ನಿವೇಶ ಎದುರಾಗಿತ್ತು. ಆ ಸಂದರ್ಭದಲ್ಲಿ ದೇವರಾಜ ಅರಸ್ ಅವರು ರಾಜಶೇಖರನ್ ಅವರನ್ನು ಪ್ರಾರ್ಥಿಸಿದರು. ರಾಜಶೇಖರನ್ ಅವರು ಅಂದಿನ ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾದ ನಿಜಲಿಂಗಪ್ಪನವರೊಡನೆ ಅರಸು ಅವರ ಭೇಟಿಗೆ ವೇದಿಕೆಯ ಸಿದ್ಧತೆ ಮಾಡಿ, ಆ ಭೇಟಿಯನ್ನು ನಡೆಸಿದರು. ಕೊನೆಗೆ ಕಾಮರಾಜ್ ಅವರ ಕೃಪೆಯಿಂದ ಅರಸು ಅವರಿಗೆ ಟಿಕೇಟ್ ಏನೋ ದೊರೆಯಿತು. ಹಾಗೆಯೇ ಕೊನೆಯ ತನಕ ಅರಸು ಅವರು ರಾಜಶೇಖರನ್ ತಮಗೆ ಮಾಡಿದ ಉಪಕಾರಕ್ಕಾಗಿ ಅವರ ವಿಚಾರದಲ್ಲಿ ಸದಭಿಪ್ರಾಯ ಹೊಂದಿದ್ದರು. ಒಂದು ಪಕ್ಷ ರಾಜಶೇಖರನ್ ಆಡಳಿತ ಪಕ್ಷಕ್ಕೆ ಬಂದಿದ್ದರೆ ರಾಜ್ಯದ ಆಡಳಿತ ಪಕ್ಷದ ಹಿರಿಯ ನಾಯಕರಲ್ಲಿ ಒಬ್ಬರಾಗಿರುತ್ತಿದ್ದರು. ಅಧಿಕಾರಕ್ಕೆಂದೂ ಲಾಬಿ ಮಾಡದ ರಾಜಶೇಖರನ್ ಕನಸು ಮನಸ್ಸಿನಲ್ಲಿಯೂ ಸಂಸ್ಥಾ ಕಾಂಗ್ರೆಸ್ ಬಿಟ್ಟು ಹೋಗುವ ಬಗ್ಗೆ ಚಿಂತಿಸಿದವರಲ್ಲ.

## ಸ್ನೇಹ ಸೇತುವೆ :

೧೯೭೧ರ ಮಧ್ಯಂತರ ಚುನಾವಣೆಯ ನಂತರ ನಿಜಲಿಂಗಪ್ಪನವರು ದೆಹಲಿಯಿಂದ ನೇರವಾಗಿ ಚಿತ್ರದುರ್ಗಕ್ಕೆ ತಮ್ಮ ವಾಸ್ತವ್ಯವನ್ನು ಬದಲಾಯಿಸಿದರು. ಆದರೂ ನಿಜಲಿಂಗಪ್ಪನವರನ್ನು ಹಾಗೂ ಹಿರಿಯ ನಾಯಕರನ್ನು ಒಂದುಗೂಡಿಸುವ, ಪರಸ್ಪರ ಸಂವಾದ ನಡೆಸುವ ಜವಾಬ್ದಾರಿಯನ್ನು ರಾಜಶೇಖರನ್ ಹೊತ್ತಿದ್ದರು. ಜಯಪ್ರಕಾಶ್ ನಾರಾಯಣ, ಕಾಮರಾಜ್, ಜೆ.ಬಿ. ಕೃಪಲಾನಿ, ಮೊರಾರ್ಜಿ ದೇಸಾಯಿ, ಚರಣಸಿಂಗ್, ವಾಜಪೇಯಿ, ಪಿಲೂಮೋದಿ ಮೊದಲಾದ ಅನೇಕ ನಾಯಕರುಗಳು ನಿಜಲಿಂಗಪ್ಪನವರನ್ನು ಭೇಟಿ ಮಾಡುವ ಮುಂಚೆ ರಾಜಶೇಖರನ್ ಅವರನ್ನು ಸಂಪರ್ಕಿಸುತ್ತಿದ್ದರು. ಇಂತಹ ಸ್ನೇಹ ಸಂಬಂಧ ಸೇತುವೆಯಾಗಿ ರಾಜಶೇಖರನ್ ತಮ್ಮ ಬದುಕಿನುದ್ದಕ್ಕೂ ಕೆಲಸ ಮಾಡುತ್ತಾ ಬಂದಿದ್ದಾರೆ.

## ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ :

ಇದೇ ಸಂದರ್ಭದಲ್ಲಿ ರಾಜಶೇಖರನ್ ಅವರು ತಮ್ಮ ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಬೆಳವಣಿಗೆಗೆ ಕಟಿಬದ್ಧರಾದರು. ಶ್ರೀಲಂಕಾದ ಡಾ. ಎ.ಟಿ. ಅರಿಯರತ್ನೆ, ಕೃಷಿ ವಿಶ್ವವಿದ್ಯಾನಿಲಯದ ನಿವೃತ್ತ ಉಪಕುಲಪತಿ ಕೆ.ಸಿ.ನಾಯಕ್, ಉದ್ಯಮಿ ಎಂ.ಎಸ್.ರಾಮಯ್ಯ ಅವರೊಡಗೂಡಿ ಈ ಸಂಸ್ಥೆಯನ್ನು ಸ್ಥಾಪಿಸಿ, ಅದರ ಕಾರ್ಯನಿರ್ವಾಹಕ ಟ್ರಸ್ಟಿಯಾದರು. ಬಾಂಗ್ಲಾದೇಶ, ಭಾರತ, ನೇಪಾಳ, ಫಿಲಿಫೈನ್ಸ್, ಶ್ರೀಲಂಕಾ ಮೊದಲಾದ ದೇಶಗಳ ಪ್ರತಿನಿಧಿಗಳು ಈ ಟ್ರಸ್ಟಿನಲ್ಲಿದ್ದಾರೆ. ಈ ಟ್ರಸ್ಟಿನ ಉದ್ದೇಶ ಹೀಗಿದೆ : **ಅಭಿವೃದ್ಧಿಶೀಲ ದೇಶಗಳ ನಡುವೆ ತಾಂತ್ರಿಕ ಮತ್ತು ಆರ್ಥಿಕ ಚಟುವಟಿಕೆಗಳ ಸಹಕಾರಕ್ಕೆ ಒತ್ತು. ಗ್ರಾಮೀಣ ಪ್ರದೇಶದ ಅಭಿವೃದ್ಧಿಗೆ ಪೂರಕವಾದ ಕೌಶಲ್ಯಗಳನ್ನು ರೂಪಿಸುವುದು. ವೈಜ್ಞಾನಿಕ ಸಂಶೋಧನೆಯನ್ನು ಸಮಗ್ರ ಗ್ರಾಮೀಣ ಅಭಿವೃದ್ಧಿ ಕ್ಷೇತ್ರಕ್ಕೆ ಹರಿದು ಬರುವಂತೆ ಮಾಡುವುದು. ಸರಳವಾದ ಮತ್ತು ಸೂಕ್ತವಾದ ತಂತ್ರಜ್ಞಾನವನ್ನು ರೈತರಿಗೆ ಮತ್ತು ಕುಶಲಕರ್ಮಿಗಳಿಗೆ ಪರಿಚಯಿಸುವುದು. ಗ್ರಾಮೀಣ ಪ್ರದೇಶದಲ್ಲಿ ಅಭಿವೃದ್ಧಿಗೆ ದುಡಿಯುತ್ತಿರುವ ಸಂಸ್ಥೆಗಳನ್ನು ಪ್ರೋತ್ಸಾಹಿಸುವುದು. ಏಷ್ಯಾ ಮತ್ತು ಆಫ್ರಿಕಾದಂತಹ ಅಭಿವೃದ್ಧಿಶೀಲ ರಾಷ್ಟ್ರಗಳ ನಡುವೆ ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳು ಕ್ರಿಯಾಶೀಲವಾಗಿ ಕೆಲಸ ಮಾಡುವಂತೆ ಮಾಡುವುದು. ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಪ್ರೋತ್ಸಾಹ ಕೊಡುವುದು. ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮಹಿಳೆಯರು, ನಿರುದ್ಯೋಗಿ ಯುವಕರು ಹಾಗೂ ಎಲ್ಲಾ ಕುಶಲಕರ್ಮಿಗಳು ಪಾಲ್ಗೊಳ್ಳುವಂತೆ ಮಾಡುವುದು.** ಹೀಗೆ ಆದರ್ಶಪ್ರಾಯವಾದ ಆಶಯವನ್ನಿಟ್ಟುಕೊಂಡ ಈ ಸಂಸ್ಥೆ ಕಳೆದ ನಲವತ್ತು ವರ್ಷಗಳಿಂದ ಗ್ರಾಮೀಣ ಅಭಿವೃದ್ಧಿಯಲ್ಲಿ ಮಹತ್ವದ ಕೆಲಸ ಮಾಡಿದೆ ಎಂದು ತಜ್ಞರು ಹೇಳುತ್ತಾರೆ. ಮಾಜಿ ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ಅವರು "ಎಂ.ವಿ.ರಾಜಶೇಖರನ್ ಅವರಿಗೆ ಗ್ರಾಮೀಣ ಭಾರತ ಚಿರಪರಿಚಿತವಾದುದು. ಅವರು ಕಟ್ಟಿ ಬೆಳೆಸಿರುವ ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ನನಗೆ ತಿಳಿದಂತೆ ಕರ್ನಾಟಕದ ಮೊದಲ ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಯಿರಬಹುದು". ಹಿರಿಯ ಗಾಂಧೀವಾದಿ ಶತಾಯುಷಿ ನಿಟ್ಟೂರು ಶ್ರೀನಿವಾಸರಾವ್ ಈ ಸಂಸ್ಥೆಯನ್ನು ಕುರಿತು ಹೀಗೆ ಹೇಳುತ್ತಾರೆ: "ಬೆಂಗಳೂರಿನಲ್ಲಿ ರಾಜಶೇಖರನ್ ನಿರ್ಮಿಸಿರುವ ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಇಡೀ ರಾಷ್ಟ್ರದಲ್ಲಿನ ಉತ್ತಮ ಸಂಸ್ಥೆಗಳಲ್ಲಿ ಒಂದಾಗಿದೆ".

ಹಿರಿಯ ಸಮಾಜಶಾಸ್ತ್ರಜ್ಞರಾದ ಡಾ. ಎಚ್.ಎಂ. ಮರುಳಸಿದ್ದಯ್ಯ ಅವರು ಏಷ್ಯಾ ಅಭಿವೃದ್ದಿ ಸಂಸ್ಥೆಯ ಬಗ್ಗೆ ಹೇಳುವ ಮಾತು ಹೀಗಿದೆ. "ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯನ್ನು ಸ್ಥಾಪಿಸಿ ಏಷ್ಯಾ ರಾಷ್ಟ್ರಗಳ ಉನ್ನತ ಮಟ್ಟದ, ಅನುಭವಪೂರ್ಣ ತಜ್ಞರನ್ನು ಈ ಸಂಸ್ಥೆಯ ದೃಢತೆಗೆ ಪಾಲುದಾರರನ್ನಾಗಿ ಮಾಡಿದ್ದಾರೆ, ಈ ಸಂಸ್ಥೆಯ ಮೂಲಕ ಸಾಮಾಜಿಕ ಸಂಶೋಧನೆ, ರಚನಾತ್ಮಕ ಕಾರ್ಯಕ್ರಮಗಳಿಂದ ಜನರ ಪ್ರಜ್ಞೆಯನ್ನು ಕುದುರಿಸುವ ಮೂಲಕ ಸಾಹಿತ್ಯ ಪ್ರಕಟಣೆ, ನವಸಮಾಜ ನಿರ್ಮಾಣಕ್ಕೆ ಸಮರ್ಥ ವ್ಯಕ್ತಿ ಶಕ್ತಿಗಳನ್ನು ರೂಪಿಸಲು ಸೂಕ್ತ ತರಬೇತಿ ಕಮ್ಮಟಗಳ ವ್ಯವಸ್ಥೆ, ಪ್ರಪಂಚದ ರಾಷ್ಟ್ರಗಳನ್ನು ಅದರಲ್ಲೂ ಅಭಿವೃದ್ಧಿಶೀಲ ರಾಷ್ಟ್ರಗಳನ್ನು ಒಂದುಗೂಡಿಸಿ ಅವುಗಳ ಅನುಭವಗಳನ್ನು ಪರಸ್ಪರವಾಗಿ ಹಂಚಿಕೊಂಡು ಬೆಳೆಯಲು ತಕ್ಕ ಪರಿಸರ ನಿರ್ಮಾಣ, ಪ್ರಪಂಚದ ಯಾವ ಮೂಲೆಯಲ್ಲೇ ಇರಲಿ ಅಲ್ಲಿನ ಪ್ರತಿಭಾವಂತರನ್ನು ಗುರುತಿಸಿ, ಅವರ ಸಾಮರ್ಥ್ಯವನ್ನು ಸದುಪಯೋಗಪಡಿಸಿಕೊಳ್ಳುವ ದೂರಾಲೋಚನೆ ಮುಂತಾದವುಗಳಿಂದ ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ರಾಷ್ಟ್ರದಲ್ಲೇ ವಿನೂತನವಾದ ಸಂಸ್ಥೆಯಾಗಿದೆ." ರೇಷ್ಮೆ ಉದ್ಯಮದ ತಜ್ಞರಾದ ಡಾ. ಶಂಕರ ಬಿ. ದಂಡಿನ್ ಅವರು ಈ ಸಂಸ್ಥೆಯ ಕಾರ್ಯಚಟುವಟಿಕೆಯನ್ನು ಬಹುಮಟ್ಟಿಗೆ ಮೆಚ್ಚಿಕೊಂಡು ಮುಕ್ತವಾಗಿ ಪ್ರಶಂಸಿಸಿರುತ್ತಾರೆ. "ರಾಜಶೇಖರನ್ ಅವರು ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ಪಾರಂಪರಿಕ ಕೃಷಿಯ ವಿಷಯವನ್ನಲ್ಲದೆ ರೇಷ್ಮೆ ಕೃಷಿಯಲ್ಲಿ ಆಸಕ್ತಿ ತಳೆದು ಅದರ ಅಭಿವೃದ್ಧಿಗೆ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ರೇಷ್ಮೆ ಉದ್ಯಮದಲ್ಲಿರುವ ಎಲ್ಲರಿಗೂ ಸಂತಸದ ವಿಚಾರ. ರೇಷ್ಮೆ ಬೆಳೆಗಾರರು, ನೇಕಾರರು ಹಾಗೂ ಸರ್ಕಾರದ ನಡುವೆ ಅವರು ನಿರ್ವಹಿಸುತ್ತಿರುವ ಪಾತ್ರ ಶ್ಲಾಘನೀಯವಾದುದು."

## ೧೯೭೭ರ ಲೋಕಸಭೆ :

ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಘೋಷಿತವಾದ ೧೯೭೭ರ ಲೋಕಸಭಾ ಚುನಾವಣೆ ಭಾರತೀಯ ಇತಿಹಾಸದಲ್ಲಿನ ಒಂದು ಘಟ್ಟವಾಗಿದೆ. ಬೆಂಗಳೂರಿನ ದಕ್ಷಿಣ ಲೋಕಸಭಾ ಕ್ಷೇತ್ರದಿಂದ ಜನತಾ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದ ನ್ಯಾಯಮೂರ್ತಿ

ಕೆ.ಎಸ್. ಹೆಗಡೆ ಅವರು ಕಾಂಗ್ರೆಸ್‌ನ ಹಿರಿಯ ರಾಜಕಾರಣಿ ಕೆಂಗಲ್ ಹನುಮಂತಯ್ಯ ಅವರನ್ನು ಸೋಲಿಸಿ ಇತಿಹಾಸ ಸ್ಥಾಪಿಸಿದ್ದರು. ಈ ಕ್ಷೇತ್ರಕ್ಕೆ ಹೊಂದಿಕೊಂಡಂತೆ ಕನಕಪುರ ಲೋಕಸಭಾ ಕ್ಷೇತ್ರವಿದೆ. ರಾಜಶೇಖರನ್ ಇಲ್ಲಿ ಜನತಾ ಪಕ್ಷದ ಅಭ್ಯರ್ಥಿಯಾಗಿದ್ದರು. ಈ ಚುನಾವಣಾ ಸಂದರ್ಭದಲ್ಲಿ ನಡೆದ ಒಂದು ಘಟನೆ ಅತ್ಯಂತ ಸ್ಮರಣೀಯವಾದುದು. ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಭಾರತದ ಮತದಾರರಿಗೆ ಆಪದ್ಭಾಂಧವರೆನಿಸಿದ್ದ ಮೊರಾರ್ಜಿ ದೇಸಾಯಿ ಅವರು ಜನತಾ ಪಕ್ಷದ ಪರವಾಗಿ ಅರ್ಥಾತ್ ರಾಜಶೇಖರನ್ ಅವರ ಪರವಾಗಿ ಚುನಾವಣಾ ಪ್ರಚಾರ ಮಾಡಲು ಕನಕಪುರಕ್ಕೆ ಬಂದಿದ್ದರು. ಪ್ರಚಾರ ಮುಗಿಸಿ ಮೈಸೂರಿಗೆ ಹೊರಟ ಮೊರಾರ್ಜಿ ದೇಸಾಯಿ ಅವರ ಕಾರನ್ನು ಸಾತನೂರು ಬಳಿ ಸಾವಿರಾರು ಜನತಾ ಪಕ್ಷದ ಕಾರ್ಯಕರ್ತರು ತಡೆದು, ಒಂದು ನಿಮಿಷ ಕಾರಿನಿಂದ ಇಳಿದು ಜನತಾ ಪಕ್ಷಕ್ಕೆ ಮತ ಕೊಡುವಂತೆ ಮನವಿ ಮಾಡುವಂತೆ ಪರಿಪರಿಯಾಗಿ ಬೇಡಿದರು. ಈ ಮೊದಲೇ ಕಾರ್ಯಕ್ರಮ ಸಾತನೂರಿನಲ್ಲಿ ಸ್ಥಳ ನಿಗದಿ ಮಾಡಿಲ್ಲವೆಂದು ಮೊರಾರ್ಜಿ ಅವರು ಕಾರಿನಿಂದ ಇಳಿಯಲು ಒಪ್ಪಲೇ ಇಲ್ಲ. ಅವರ ಕಾರಿನಲ್ಲೇ ಇದ್ದ ರಾಜಶೇಖರನ್ ಅವರೂ ಸಹ ಮೊರಾರ್ಜಿ ಅವರ ಶಿಸ್ತನ್ನು ಬಲ್ಲವರಾದ್ದರಿಂದ ಅವರನ್ನು ಒತ್ತಾಯಿಸಲೇ ಇಲ್ಲ. ಇನ್ನೂ ಅಧಿಕಾರಕ್ಕೆ ಬರದ ಜನತಾ ಪಕ್ಷದವರು ಹೇಗೆ ಜನಕ್ಕೆ ಸ್ಪಂದಿಸುತ್ತಾರೆ ಎಂಬುದು ಕೂಡ ಆ ಕ್ಷೇತ್ರದಲ್ಲಿ ಚರ್ಚಿತವಾಗಿತ್ತು. ಈ ಒಂದು ಘಟನೆ ರಾಜಶೇಖರನ್ ಅವರ ಜೀವನಕ್ಕೆ ಮುಳ್ಳಾಗಿತ್ತು. ಇದನ್ನು ಕುರಿತು ರಾಜಶೇಖರನ್ ಅವರ ಅನುಯಾಯಿ ಸದಾಶಿವಯ್ಯ ಹೇಳುವ ಮಾತುಗಳಿವು: "೧೯೭೭ರ ತುರ್ತು ಪರಿಸ್ಥಿತಿಯಲ್ಲಿ ನಡೆದ ಚುನಾವಣೆಯಲ್ಲಿ ಜನತಾ ಪಕ್ಷದ ಪರವಾಗಿ ಕನಕಪುರದಿಂದ ಸ್ಪರ್ಧಿಸಿದ್ದ ರಾಜಶೇಖರನ್ ಅವರ ಜೊತೆ ಹಗಲಿರುಳು ಕೆಲಸ ಮಾಡಿದ್ದೇನೆ. ಆ ಚುನಾವಣೆಯಲ್ಲಿ ಅವರು ಕೇವಲ ಮೂರು ಸಾವಿರದ ಎಂಟುನೂರು ಮತಗಳ ಅಂತರದಿಂದ ಸೋತಿದ್ದರು. ಸಾತನೂರಿನಲ್ಲಿ ಮೊರಾರ್ಜಿ ದೇಸಾಯಿ ಅವರಿಂದುಂಟಾದ ಅನಾಹುತದ ಬಗ್ಗೆ ನಾನು ನೊಂದುಕೊಂಡು 'ಏನ್ಸಾರ್ ಅವರು ಅಷ್ಟು ದೂರದಿಂದ ಚುನಾವಣಾ ಪ್ರಚಾರಕ್ಕಾಗಿಯೇ ಬಂದಿದ್ದರು. ಒಂದು ನಿಮಿಷ ಕಾರಿನಿಂದ ಇಳಿದು ಜನರಿಗೆ ಮನವಿ ಮಾಡಿದ್ದರೆ ಅವರ ಗಂಟೇನೂ ಹೋಗುತ್ತಿತ್ತು'. ಎಂದೆ. ಅದಕ್ಕವರು 'ಹಾಗಲ್ಲ, ಸದಾಶಿವಯ್ಯ ಮೊರಾರ್ಜಿ ಅವರ ಶಿಸ್ತೇ ಅಂತಹುದು. ಪ್ರೋಗ್ರಾಂಗಳಲ್ಲಿಲ್ಲದ ಸ್ಥಳದಲ್ಲಿ ಅವರು ಇಳಿಯೋಲ್ಲ. ಅಂತಹ ಘಟನೆಯಿಂದ ನಮ್ಮಂಥವರಿಗೆ ತೊಂದರೆಯಾಗಬಹುದು. ಆದರೆ ನಾವು ಈ ಬಗ್ಗೆ ಜನರನ್ನು ಸಿದ್ಧಮಾಡಬೇಕು. ಮೊರಾರ್ಜಿ ದೇಸಾಯಿ ಅವರ ಶಿಸ್ತನ್ನು ಗೌರವಿಸಬೇಕು' ಎಂದು ಸೌಮ್ಯವಾಗಿ ನುಡಿದರು. ಬೆಂಗಳೂರು ದಕ್ಷಿಣ ಲೋಕಸಭಾ ಕ್ಷೇತ್ರದಿಂದ ಆಡಳಿತ ಕಾಂಗ್ರೆಸ್ ಪರವಾಗಿ ಸ್ಪರ್ಧಿಸಿದ್ದ ಅಭ್ಯರ್ಥಿಯೊಬ್ಬರು (?) ಚನ್ನಪಟ್ಟಣ ರಾಮನಗರಗಳಿಗೆ ಹೋಗಿ, "ನಿಜಲಿಂಗಪ್ಪನವರ ಅಳಿಯ ರಾಜಶೇಖರನ್ ಗೆದ್ದರೆ ಕೇಂದ್ರದಲ್ಲಿ ಮಂತ್ರಿಯಾಗುತ್ತಾರೆ. ಆಮೇಲೆ ನಿಮಗೆಲ್ಲ ಯಾವ ಗತಿಯೋ ಯೋಚಿಸಿ" ಎಂದು ತಮ್ಮ ಕುಲಬಾಂಧವರನ್ನು ಕೆರಳಿಸುತ್ತಾರೆ. "ಇದಕ್ಕೆ ಪ್ರತಿಯಾಗಿ ನಾವು ಮತ್ತೊಂದು ಅಸ್ತ್ರವನ್ನು ಹೂಡೋಣ" ಎಂದು ರಾಜಶೇಖರನ್ ಅವರನ್ನು ಕೇಳಿದರೆ 'ಅವರ ಧರ್ಮ ಅವರಿಗೆ, ನಮ್ಮ ಧರ್ಮ ನಮಗೆ' ಎಂದು ಉತ್ತರಿಸುತ್ತಾರೆ. ಸದಾಶಿವಯ್ಯ ಅವರ ಮೇಲಿನ ಮಾತುಗಳಿಂದ ೧೯೭೭ರ ಚುನಾವಣೆಯ ಸಮಗ್ರ ಕಲ್ಪನೆ ಬರುತ್ತದೆ. ರಾಜಶೇಖರನ್ ಅವರು ಮತದಾರರೊಡನೆ ಈ ಹಿಂದೆ ನಡೆಸಿದ ಪತ್ರವ್ಯವಹಾರ ಮಂಚನಬೆಲೆ ನೀರಾವರಿ ಯೋಜನೆ, ಇಗ್ಗಲೂರು ಏತ ನೀರಾವರಿ ಯೋಜನೆ, ಕೃಷಿ ಭವನ, ರೇಷ್ಮೆ ಕೃಷಿ ಅಭಿವೃದ್ಧಿ ಮೊದಲಾದ ಯಾವ ವಿಚಾರವೂ ಚುನಾವಣೆಗಳಲ್ಲಿ ಗಣನೆಗೆ ಬರುವುದಿಲ್ಲ. ಕೇವಲ ಅವರು ನಿಜಲಿಂಗಪ್ಪನವರ ಅಳಿಯ, ಕೇಂದ್ರದ ಮಂತ್ರಿಗಳಾಗಿ ಬಿಡುತ್ತಾರೆ ಎಂಬ ವಿಚಾರವೇ ಪ್ರಾಮುಖ್ಯತೆ ಪಡೆಯುತ್ತದೆ. ಇಷ್ಟಾದರೂ ರಾಜಶೇಖರನ್ ಅವರು ಅತ್ಯಲ್ಪ ಮತಗಳಿಂದ ಪರಾಭವಗೊಂಡರೆಂಬುದನ್ನು ಗಮನಿಸಬೇಕು. ೧೯೭೭ರ ನಂತರ ನಿರೀಕ್ಷೆಯಂತೆ ಕೇಂದ್ರದಲ್ಲಿ ಜನತಾ ಪಕ್ಷ ಸರ್ಕಾರ ಅಸ್ತಿತ್ವಕ್ಕೆ ಬರುತ್ತದೆ. ಹುಟ್ಟಿದ ದಿನದಿಂದಲೇ ಆಂತರಿಕ ಭಿನ್ನಾಭಿಪ್ರಾಯದೊಡನೆ ಬಳಲಿದ ಆ ಸರ್ಕಾರ ಜನ ಬೆಂಬಲವನ್ನು ಅಷ್ಟೇ ಬೇಗ ಕಳೆದುಕೊಳ್ಳುತ್ತದೆ. ರಾಜ್ಯದಲ್ಲಿನ ಜನತಾ ಪಕ್ಷದ ನಾಯಕರು ಮುಂದಿನ ಸರ್ಕಾರ ತಮ್ಮದೇ ಎಂಬ ಭ್ರಮೆಯಲ್ಲಿ ಓಲಾಡುತ್ತಾರೆ. ಜಗಜೀವನರಾಂ ಅವರನ್ನು ದೇಶದ ಮುಂದಿನ ಪ್ರಧಾನಿಯನ್ನಾಗಿ ಮಾಡಬೇಕೆಂತೆಂದು ದೂರದ ಚಿತ್ರದುರ್ಗದಲ್ಲಿ ಕುಳಿತು ವಯೋವೃದ್ಧ ನಿಜಲಿಂಗಪ್ಪನವರು ಕನವರಿಸುತ್ತಾರೆ. ಇವೆಲ್ಲದರ ಸಂಬಂಧ ಸೂತ್ರಧಾರರಾಗಿ ಬೆಂಗಳೂರು, ಕನಕಪುರ, ದೆಹಲಿ, ತಮಿಳುನಾಡು, ಬೊಂಬಾಯಿಗಳ ನಡುವೆ ಸಂಪರ್ಕ ಸೇತುವೆಯಾಗಿ ರಾಜಶೇಖರನ್ ಓಡಾಟ ನಡೆಸುತ್ತಿರುತ್ತಾರೆ.

**ಉತ್ತರಹಳ್ಳಿ ಶಾಸಕರು :**

೧೯೭೮ರಲ್ಲಿ ರಾಜ್ಯ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ರಾಜಶೇಖರನ್ ಅವರು ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಿಂದ ಜನತಾ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. "ಕನಕಪುರ ನಿಮ್ಮ ಸ್ವಂತ ತಾಲ್ಲೂಕಾದರೂ ಉತ್ತರಹಳ್ಳಿಗೆ ಏಕೆ ವಲಸೆ ಬಂದಿರಿ"ಎಂದರೆ ಅವರ ಅನುಯಾಯಿ ಸದಾಶಿವಯ್ಯ ಹೀಗೆ ಉತ್ತರಿಸುತ್ತಾರೆ: "ಕನಕಪುರ ಲೋಕಸಭಾ ವ್ಯಾಪ್ತಿಗೆ ಬರುವ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ಈ ಹಿಂದಿನ ಲೋಕಸಭಾ ಚುನಾವಣಾ ಸಂದರ್ಭದಲ್ಲಿ ಅವರಿಗೆ ಎಂಟುನೂರಕ್ಕೂ ಹೆಚ್ಚಿನ ಮತದ ಲೀಡು ದೊರಕಿತ್ತು. ಇಡೀ ರಾಷ್ಟ್ರದಲ್ಲೇ ಉತ್ತರಹಳ್ಳಿ ಅತಿ ದೊಡ್ಡ ವಿಧಾನಸಭಾ ಕ್ಷೇತ್ರ. ಲೀಡನ್ನೇ ನೆಚ್ಚಿಕೊಂಡು ಉತ್ತರಹಳ್ಳಿ ಕ್ಷೇತ್ರದಲ್ಲಿ ನಾವು ಕೆಲಸ ಪ್ರಾರಂಭಿಸಿದೆವು". ರಾಜಶೇಖರನ್ ಅವರು ಅಂತಿಮವಾಗಿ ಈ ಕ್ಷೇತ್ರದಿಂದ ನಾಲ್ಕು ಸಾವಿರ ಮತಗಳ ಅಂತರದಿಂದ ಚುನಾಯಿತರಾದರು.

ಶಾಸಕರಾಗಿ ರಾಜಶೇಖರನ್ ಅವರು ವಿವಿಧ ವಿಚಾರಗಳನ್ನು ಅಂದು ಪ್ರಸ್ತಾಪಿಸಿದ್ದಾರೆ. ಈ ಕಾಲದ ಅವರ ಭಾಷಣಗಳನ್ನು ಅಧ್ಯಯನ ಮಾಡಿ ಲೇಖನ ಬರೆದಿರುವ ಎಸ್.ಕೆ. ಶೇಷಚಂದ್ರಿಕ ಅವರು ರಾಜಶೇಖರನ್ ಅವರ ದೃಷ್ಟಿಕೋನವನ್ನು ಹೀಗೆ ಸೆರೆಹಿಡಿದಿದ್ದಾರೆ: "ವಿಶೇಷವಾಗಿ ರೈತರ ಕೃಷಿ ಉತ್ಪನ್ನಗಳಿಗೆ ಬೆಂಬಲ ಬೆಲೆಯಿರಲಿ ಎಂಬುದು, ರೈತನು ಬೆಳೆದ ಪದಾರ್ಥಗಳಿಗೆ ಸೂಕ್ತ ಬೆಲೆ ಸಿಗಲಿ ಎಂಬುದು ಶ್ರೀ ರಾಜಶೇಖರನ್ ಸದನದಲ್ಲಿ ನಡೆಸಿದ ಪ್ರಮುಖ ಹೋರಾಟ. ಬೆಂಬಲ ಬೆಲೆಗಾಗಿ ರಾಜಶೇಖರನ್ ಸರ್ಕಾರವನ್ನು ನಿರಂತರವಾಗಿ ಒತ್ತಾಯ ಮಾಡುತ್ತಾ ಬಂದಿದ್ದಾರೆ. ಭತ್ತ, ಆಲೂಗಡ್ಡೆ, ಗೋಧಿ, ಹತ್ತಿ ಮೊದಲಾದ ಪದಾರ್ಥಗಳಿಗೆ ಬೆಂಬಲ ಬೆಲೆ ಕೊಡಿಸುವುದು ಅವರ ಉದ್ದೇಶ".

ಅಂದು ಅವರು ಮಾತನಾಡಿದ ಎರಡು ಪ್ರಸಂಗವನ್ನು ಶೇಷಚಂದ್ರಿಕ ಅವರು ಉದ್ದರಿಸುತ್ತಾರೆ. ಈ ಎರಡು ಭಾಗದಿಂದ ರಾಜಶೇಖರನ್ ಅವರ ರೈತರ ಪರವಾದ ನಿಲುವನ್ನು ಅರ್ಥ ಮಾಡಿಕೊಳ್ಳಬಹುದೆಂದು ಅವರ ಅಭಿಮತ.

ನವೆಂಬರ ೨೫, ೨೦೦೦-"ರಾಗಿ ಭತ್ತ ಮರದಲ್ಲಿ ಬೆಳೆಯುತ್ತದೆಯೇ ?" "ಬೇರೆ ದೇಶಗಳಗೆ ಹೋಲಿಸಿ ನೋಡಿದರೆ ನಮ್ಮ ರೈತನ ದಾರುಣ ಸ್ಥಿತಿಯ ಚಿತ್ರ ಸಿಗುತ್ತದೆ. ಉದಾ: ಚೈನಾದಲ್ಲಿ ರೈತನ ವಾರ್ಷಿಕ ವರಮಾನ ಒಂಬತ್ತು ಸಾವಿರದಿಂದ ಹತ್ತು ಸಾವಿರದಷ್ಟಿದೆ. ಭಾರತದಲ್ಲಿನ ರೈತನ ವರಮಾನ ನಾನೂರರಿಂದ ಐನೂರರಷ್ಟಿದೆ. ಈ ದೇಶಗಳಲ್ಲಿ ರೈತನ ಉತ್ಪನ್ನಕ್ಕೆ ಸರಿಯಾದ ಬೆಲೆ ಸಿಗುವ ಕಾರಣ ಆತನ ಉತ್ಪಾದನಾ ಸಾಮರ್ಥ್ಯ ಹೆಚ್ಚಿದೆ. ಉತ್ಪಾದನಾ ಸ್ಥಿತಿಯೊಂದಿಗೆ ಜೀವನ ಸ್ಥಿತಿಯೂ ಸುಧಾರಿಸಿದೆ."

ಜುಲೈ ೨೪, ೧೯೮೨-ನಾಯಿಯ ಬೆಲೆಯೂ ಸೇರಿದ ಮಾರುಕಟ್ಟೆ! "ತಯಾರಿಕೆ ವೆಚ್ಚ, ಬಾಡಿಗೆ ವೆಚ್ಚ, ಜಾಹೀರಾತು ವೆಚ್ಚ, ಸಾರಿಗೆಗೆ ತಗಲುವ ಖರ್ಚು, ನೌಕರರ ಸಂಬಳ, ಅವನ ಹೆಂಡತಿ ಮಕ್ಕಳೊಂದಿಗೆ ವಿಹಾರಕ್ಕೆ ಹೋಗಿ ಬಂದರೆ ಆಗುವ ವೆಚ್ಚ, ಕೊನೆಗೆ ನಾಯಿ ಸಾಕಿದ್ದರೆ ಅದರ ಬ್ರೆಡ್ಡಿನ ಬಾಬ್ತು ಎಲ್ಲವೂ ಸೇರಿ ಉದ್ಯಮಿಗಳ ಮಾರಾಟದ ವಸ್ತುವಿನ ಬೆಲೆ ನಿರ್ಧಾರವಾಗುತ್ತದೆ."

"ವರ್ಷವೆಲ್ಲ ಉತ್ತು ಬಿತ್ತು ಬಿತ್ತನೆ ಬೀಜಕ್ಕೆ, ಕ್ರಿಮಿನಾಶಕಕ್ಕೆ ಎರಡರಷ್ಟು ಹಣ ತೆತ್ತು, ತಾನೇ ಬೆಳೆದ ಉತ್ಪನ್ನವನ್ನು ಮಾರುಕಟ್ಟೆಗೆ ಮಾರಲು ಬಂದರೆ ರೈತನಿಗೆ ಸಿಗುವ ಬೆಲೆ ಎಷ್ಟು ? ಬಿಡಿಗಾಸು"! ದೇಶದ ಬೆನ್ನೆಲುಬಾಗಿರುವ ರೈತನು ಮಾಡಿದ ಉತ್ಪಾದನೆಗೆ ಸರಿಯಾದ ಬೆಲೆ ಸಿಗುತ್ತಿಲ್ಲವೆಂಬುದು ಸದಾಕಾಲ ರಾಜಶೇಖರನ್ ಅವರ ಚಿಂತೆ.

ರಾಜಶೇಖರನ್ ಅವರ ನಿಸ್ಪೃಹ ವ್ಯಕ್ತಿತ್ವ ಆ ಕಾಲದ ಎಲ್ಲ ರಾಜಕಾರಣಿಗಳಿಗೂ ಚಿರಪರಿಚಿತವಾಗಿತ್ತು. ಅಂದು ಕಂದಾಯ ಸಚಿವರಾಗಿದ್ದ ಬಿ. ಬಸವಲಿಂಗಪ್ಪನವರು ಹೇಳುತ್ತಿದ್ದ ಮಾತೆಂದರೆ "ಯಾರಾದರೂ ಯಾವುದಾದರೂ ಸಮಿತಿಗೆ ಯೋಗ್ಯರನ್ನು ನಾಮಕರಣ ಮಾಡಬೇಕೆಂದಿದ್ದರೆ ರಾಜಶೇಖರನ್ ಅವರನ್ನು ಕೇಳಬೇಕು. ಅವರು ಸೂಕ್ತ ವ್ಯಕ್ತಿಯನ್ನು ಆಯ್ಕೆ ಮಾಡಿ ಹೇಳುತ್ತಾರೆ. ಅವರ ಆಯ್ಕೆಯಲ್ಲಿ ಪ್ರಾಮಾಣಿಕತೆ ಮತ್ತು ನಿಸ್ಪೃಹತೆಯಿರುತ್ತದೆ".

ರಾಜಶೇಖರನ್ ಅವರು ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿಕೊಡಲು ಪ್ರಯತ್ನಿಸಿದರು. ಅನೇಕ ಹಳ್ಳಿಗಳಿಗೆ ರಸ್ತೆ ಸೌಲಭ್ಯ ದೊರಕಿಸಿಕೊಡಲು ಅವರು ಪ್ರಾಮಾಣಿಕವಾಗಿ ಪ್ರಯತ್ನಿಸಿದ್ದರು. ತಮ್ಮ ಕ್ಷೇತ್ರದ ವಿಶ್ವನೀಡಂ ಕ್ಷೇತ್ರದಲ್ಲಿ ಸಭೆ ಸೇರಿಸಿ ವಾಣಿಜ್ಯ ಬ್ಯಾಂಕುಗಳ ಉನ್ನತಾಧಿಕಾರಿಗಳನ್ನು ಕರೆಸಿ ಅಲ್ಲಿಗೆ ತಮ್ಮ ಕ್ಷೇತ್ರದ ನಿರುದ್ಯೋಗ ಯುವಕ / ಯುವತಿಯರನ್ನ ಬರಮಾಡಿಕೊಂಡು ಅವರಿಬ್ಬರ ಸಂವಾದ ಏರ್ಪಡಿಸಿದ್ದರು. ಇದರಿಂದ ಎಷ್ಟೋ ನಿರುದ್ಯೋಗಿಗಳಿಗೆ ಅನುಕೂಲವಾಯಿತು.

೧೯೮೦ರಲ್ಲಿ ಲೋಕಸಭೆಗೆ ಮಧ್ಯಂತರ ಚುನಾವಣೆ ನಡೆದಾಗ ಜಗಜೀವನರಾಂ ನೇತೃತ್ವದ ಜನತಾ ಪಕ್ಷದ ಪರವಾಗಿ ಕನಕಪುರ ಕ್ಷೇತ್ರದಿಂದ ಸ್ಪರ್ಧಿಸಿ ಸೋಲುಂಡರು. ಅವರಿಗೆ ಈ ಚುನಾವಣೆಯಲ್ಲಿ ಸೋತದ್ದು ನಿರಾಶೆ ತರಲಿಲ್ಲ.

ಆಗ ಉತ್ತರಹಳ್ಳಿ ಕ್ಷೇತ್ರದ ಎಲ್ಲೆಡೆ ಹೊಸ ಬಡಾವಣೆಗಳ ಭರಾಟೆ. ಶಾಸಕರಾಗಿದ್ದ ರಾಜಶೇಖರನ್ ಮನಸ್ಸು ಮಾಡಿದ್ದರೆ, ಇಂದು ಪ್ರಮುಖ ಜಾಗದಲ್ಲಿ ಹತ್ತಾರು ನಿವೇಶನಗಳ ಒಡೆಯರಾಗಬಹುದಾಗಿತ್ತು. ಆದರೆ ರಾಜಶೇಖರನ್ ಎಂದೂ ಆ ರೀತಿ ಯೋಚಿಸಿದವರಲ್ಲ. ಈ ಕ್ಷೇತ್ರದ ವ್ಯಾಪ್ತಿಯಲ್ಲಿ ಅವರಿಗೆ ತುಂಡು ನೆಲವೂ ಇಲ್ಲ.

**ಆತ್ಮಶೋಧ :**

ಕನಕಪುರ ಲೋಕಸಭಾ ಮತದಾರರು ಮಾತ್ರವಲ್ಲ, ಇಡೀ ದೇಶದ ಮತದಾರರು ಜನತಾ ಪಕ್ಷದ ಆಂತರಿಕ ಕಿತ್ತಾಟದ ಬಗ್ಗೆ ಆಕ್ರೋಶಗೊಂಡು ತೀರ್ಪು ಕೊಟ್ಟಿದ್ದರು. ಅದರ ಅರಿವು ಕೂಡ ರಾಜಶೇಖರನ್ ಅವರಿಗಿತ್ತು. ಆದರೆ ಉತ್ತರಹಳ್ಳಿ ಲೋಕಸಭಾ ಕ್ಷೇತ್ರದ ಮತದಾರರು ತಮ್ಮ ಕಾರ್ಯವೈಖರಿಯನ್ನು ಮೆಚ್ಚಿಕೊಂಡಿಲ್ಲವೆಂಬ ಆತ್ಮಶೋಧನೆಯನ್ನು ಮಾಡಿಕೊಂಡರು. ಅದನ್ನು ಸದಾಶಿವಯ್ಯ ಅವರು ಇಲ್ಲಿ ದಾಖಲಿಸಿದ್ದಾರೆ. "ಅವರ ಮನಸ್ಸಿಗೆ ಘಾಸಿ ತಂದ ವಿಚಾರವೆಂದರೆ ಉತ್ತರಹಳ್ಳಿ ವಿಧಾನಸಭಾ ಕ್ಷೇತ್ರದಲ್ಲಿ ತಮಗೆ ಲೀಡ್ ದೊರೆಯಲಿಲ್ಲ ಎಂಬುದಾಗಿತ್ತು. ಅಂದರೆ ನನ್ನ ಕೆಲಸ ಮತದಾರರಿಗೆ ತೃಪ್ತಿ ಕೊಟ್ಟಿಲ್ಲ ಎಂಬ ಕೊರಗು ಅವರ ಮನಸ್ಸಿನಲ್ಲಿ ಹೊಕ್ಕಿತ್ತು. ಎಷ್ಟೋ ಸಂದರ್ಭದಲ್ಲಿ ಎಂ.ಎಲ್.ಎ. ಸ್ಥಾನಕ್ಕೆ ರಾಜೀನಾಮೆ ಕೊಡಲು ಮುಂದಾಗಿದ್ದರು. ವಿಧಾನಸಭಾ ಅಧಿವೇಶನಕ್ಕೆ ಹೋಗುತ್ತಿದ್ದರೆ ಹೊರತು, ಅವರಲ್ಲಿ ಮೊದಲಿನ ಉತ್ಸಾಹ ಉಳಿದಿರಲಿಲ್ಲ." ಮತದಾರರ ತೀರ್ಪನ್ನು ಇಷ್ಟೊಂದು ತೀವ್ರವಾಗಿ ಹಚ್ಚಿಕೊಂಡು ಆತ್ಮಶೋಧನೆ ಮಾಡಿಕೊಳ್ಳುವ ರಾಜಕಾರಣಿಗಳು ಈಗ ನಮ್ಮಲ್ಲಿ ಎಷ್ಟು ಸಂಖ್ಯೆಯಲ್ಲಿದ್ದಾರೆ ?

**ಸಕ್ರಿಯ ರಾಜಕೀಯದಿಂದ ಹಿಂದೆ ಸರಿಯುವ ಆಲೋಚನೆ :**

೧೯೮೦ರ ಲೋಕಸಭೆಯ ಪೂರ್ವದಲ್ಲೇ ಜನತಾ ಪಕ್ಷದಿಂದ ವೀರೇಂದ್ರ ಪಾಟೀಲ್ ಅವರು ಕಾಂಗೈಗೆ ಪಕ್ಷಾಂತರ ಮಾಡಿ ಅನಂತರ ಸಚಿವರಾದರು. ಅವರ ಜೊತೆ ಅನೇಕ ನಾಯಕರು ಜನತಾ ಪಕ್ಷದಿಂದ ಕಾಂಗೈಗೆ ಹೋದರು. ಕೆಲವರು ಗುಂಡೂರಾವ್ ಸಚಿವ ಸಂಪುಟದಲ್ಲಿ ಮಂತ್ರಿಗಳೂ ಆಗಿದ್ದುಂಟು. ರಾಜ್ಯದಲ್ಲಿ ವಿರೋಧ ಪಕ್ಷಗಳು ನಾಶವಾಗುತ್ತಿದ್ದುದನ್ನು ಕಂಡು ನೊಂದ ರಾಜಶೇಖರನ್ ಸಕ್ರಿಯ ರಾಜಕೀಯದಿಂದ ದೂರ ಸರಿದು ಅಭಿವೃದ್ಧಿಯತ್ತ ತಮ್ಮ ಗಮನವನ್ನು ಕೇಂದ್ರೀಕರಿಸಿದರು. ರಾಜಶೇಖರನ್ ಅವರ ಈ ವಿಶೇಷ ಗುಣವನ್ನು ಮಾಜಿ ಸಭಾಪತಿ ಬಿ.ಎಲ್. ಶಂಕರ್ ಪ್ರಶಂಸಿಸಿರುವುದುಂಟು. "ಸಕ್ರಿಯ ರಾಜಕಾರಣಿಯೊಬ್ಬ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕನಂತೆ ಅಥವಾ ನಿಷ್ಠಾವಂತ ಅಧಿಕಾರಿಯಂತೆ ಅಭಿವೃದ್ಧಿ ಕೆಲಸಗಳ ಬಗ್ಗೆ ಚಿಂತಿಸುವುದು ಸಮಕಾಲೀನ ರಾಜಕೀಯದಲ್ಲಿ ಅಚ್ಚರಿಯ ಸಂಗತಿಯಾಗಿದೆ. ಅಧಿಕಾರಕ್ಕೂ ಅಭಿವೃದ್ಧಿಗೂ ಯಾವುದೇ ಸಂಬಂಧವಿಲ್ಲವೆಂಬುವಷ್ಟು ಅದು ವಿಭಿನ್ನ ಕ್ಷೇತ್ರವಾಗಿದೆ. ಅಧಿಕಾರವನ್ನು ಉಳಿಸಿಕೊಳ್ಳಲು, ಮತ್ತಷ್ಟು ಅಧಿಕಾರ ಪಡೆಯಲು ಅಭಿವೃದ್ಧಿ ಕಾರ್ಯಗಳನ್ನು ಅಪ್ಪಿಕೊಳ್ಳುವ ಮುಂದಿನ ಚುನಾವಣೆಗೆ ಸಹಾಯಕವಾಗಲೆಂಬ ದೂರಾಲೋಚನೆಯಿರುತ್ತದೆಯೇ ಹೊರತು ಜನಸಮುದಾಯದ ಹಿತ ಅದರಲ್ಲಿ ಅತ್ಯಲ್ಪ."

ರಾಜಶೇಖರನ್ ಅಭಿವೃದ್ಧಿಯನ್ನು ತಮ್ಮ ಜೀವನ ಧ್ಯೇಯವನ್ನಾಗಿಟ್ಟುಕೊಂಡಿದ್ದಾರೆ. ಎಸ್.ಕೆ.ಡೇ, ಅಶೋಕ್ ಮೆಹತಾ, ಜಯಪ್ರಕಾಶ್ ನಾರಾಯಣ ಮೊದಲಾದ ಚಿಂತಕರಂತೆ ದೇಶದ ಅಭಿವೃದ್ಧಿ ಕ್ಷೇತ್ರಕ್ಕೆ ಹೊಸ ದಿಕ್ಸೂಚಿ ತೋರಿಸುವ ಕಾರ್ಯದಲ್ಲಿ ನಿರತರಾಗಿದ್ದಾರೆ.

**ರಾಜಕಾರಣ ಉಸಿರಾಟವಂತೆ !**

೧೯೮೪ರ ಅಕ್ಟೋಬರ್ ೩೦ ರಂದು ಶ್ರೀಮತಿ ಇಂದಿರಾ ಗಾಂಧಿ ಅವರ ಬರ್ಬರ ಹತ್ಯೆಯಾದ ಮೇಲೆ ದೇಶದ ರಾಜಕೀಯದ ಧೃವೀಕರಣ ನಡೆಯಿತು. ಯುವ ಪ್ರಧಾನಿ ರಾಜೀವ್ ಗಾಂಧಿ ಅವರು ಎಲ್ಲ ಹಿರಿಯ ಕಾಂಗ್ರೆಸ್ಸಿಗರನ್ನು ಮತ್ತೆ ಪಕ್ಷಕ್ಕೆ ಬರುವಂತೆ ಕರೆ ನೀಡಿದರು. ಈ ಸಂದರ್ಭದಲ್ಲಿ ಪುನಃ ಸಕ್ರಿಯ ರಾಜಕೀಯಕ್ಕೆ ಮರಳಿದ ರಾಜಶೇಖರನ್ ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳುವ ರೀತಿಯಿದು: "ಯುವ ಪ್ರಧಾನಿ ರಾಜೀವ್ ಗಾಂಧಿ ಅವರು ಎಲ್ಲ ಕಾಂಗ್ರೆಸ್ಸಿಗರೂ ಒಂದುಗೂಡಬೇಕೆಂದು ಮುಂಬೈನ ಕಾಂಗ್ರೆಸ್

ಸಮಾವೇಶದಲ್ಲಿ ಹೇಳಿದ್ದರು. ರಾಜೀವ ಗಾಂಧಿ ಅವರು ಯುವಕರಾದ ಕಾರಣ ರಾಜಕಾರಣದಲ್ಲಿ ಗುಣಾತ್ಮಕ ಬದಲಾವಣೆ ತರಲು ಉತ್ಸುಕರಾಗಿದ್ದರು. ಅವರ ಅನೇಕ ಯೋಜನೆಗಳು ವಿಶೇಷವಾಗಿ ತಾಂತ್ರಿಕ ಕ್ಷೇತ್ರಕ್ಕೆ ಸಂಬಂಧಪಟ್ಟ ಯೋಜನೆಗಳು ಮತ್ತು ಭವ್ಯ ಭಾರತವನ್ನು ಕಟ್ಟಬೇಕು ಎಂಬ ಕನಸು ನನಗೆ ಹಿಡಿಸಿದ್ದವು. ಆಗ ಕರ್ನಾಟಕ ವಿಧಾನಸಭೆಯಲ್ಲಿ ವಿರೋಧಪಕ್ಷದ ನಾಯಕರಾಗಿದ್ದ ವೀರಪ್ಪ ಮೊಯಿಲಿ, ವೈ.ರಾಮಕೃಷ್ಣ ಅವರ ಜೊತೆಗೆ ನಮ್ಮ ಮನೆಗೆ ಬಂದು ನಾನು ಕಾಂಗ್ರೆಸ್ ಸೇರುವಂತೆ ಬಲವಂತ ಮಾಡಿದರು. ಹಳೆಯ ಬಾಂಧವ್ಯವಿದ್ದ ಅನೇಕ ಕೇಂದ್ರ ನಾಯಕರು ದಿನೇಶ್ ಸಿಂಗ್ ಆದಿಯಾಗಿ ನಾನು ಕಾಂಗ್ರೆಸ್‌ಗೆ ಬರುವಂತೆ ಒತ್ತಾಯಿಸಿದರು. ಈ ಹಿನ್ನೆಲೆಯಲ್ಲಿ ನಾನು ಕಾಂಗ್ರೆಸ್ ಪಕ್ಷ ಸೇರಿದೆ."

ಕಾಂಗ್ರೆಸ್ ಪಕ್ಷದಲ್ಲಿ ಬಹು ಬೇಗ ರಾಜಶೇಖರನ್ ಅವರು ಮೂಲ ನೆಲೆ ಕಂಡುಕೊಳ್ಳಲು ಅವರ ಸ್ವಭಾವ ಹೇಗೆ ಸಹಾಯಕವಾಯಿತೆಂಬುದನ್ನು ಜೀರಿಗೆ ಲೋಕೇಶ್ ವಿವರಿಸುತ್ತಾರೆ: "ಮೂಲತಃ ಕಾಂಗ್ರೆಸ್‌ನವರಾದ ರಾಜಶೇಖರನ್‌ಗೆ ಈ ಪಕ್ಷದಲ್ಲಿ ಅನೇಕ ಸಂಬಂಧಗಳಿದ್ದವು. ಪ್ರಾರಂಭದಿಂದಲೂ ವೈಯಕ್ತಿಕ ಸಂಬಂಧಗಳನ್ನು ಚೆನ್ನಾಗಿಟ್ಟುಕೊಳ್ಳುವ ರಾಜಶೇಖರನ್ ಬಹು ಬೇಗನೆ ಕಾಂಗ್ರೆಸ್ ಪಕ್ಷದಲ್ಲಿ ತಮ್ಮ ನೆಲೆಯನ್ನು ಕಂಡುಕೊಂಡರು. ಅಧಿಕಾರದಲ್ಲಿರಲಿ ಬಿಡಲಿ ತಮ್ಮ ಮಿತ್ರರೊಡನೆ ಪತ್ರವ್ಯವಹಾರಗಳನ್ನು ಇಟ್ಟುಕೊಂಡಿರುತ್ತಾರೆ. ಇದೇ ರಾಜಶೇಖರನ್ ಅವರ ಹೆಗ್ಗಳಿಕೆ"

೧೯೮೫ರ ವಿಧಾನಸಭೆಗೆ ನಡೆದ ಚುನಾವಣೆಯಲ್ಲಿ ರಾಜಶೇಖರನ್ ಕಾಂಗ್ರೆ ಪಕ್ಷದಿಂದ ಕನಕಪುರ ಕ್ಷೇತ್ರದಿಂದ ಸ್ಪರ್ಧಿಸಿದ್ದರು. ಅವರ ಎದುರಾಳಿ ಜನತಾ ಪಕ್ಷದ ಪಿ.ಜಿ.ಆರ್. ಸಿಂಧ್ಯ. ಇದು ಗುರು-ಶಿಷ್ಯರ ನಡುವೆ ನಡೆದ ಕಾಳಗವೆಂದೇ ಕರ್ನಾಟಕದ ರಾಜಕೀಯ ಇತಿಹಾಸದಲ್ಲಿ ಪ್ರಸಿದ್ಧವಾಗಿದೆ.

ನಿಜಲಿಂಗಪ್ಪನವರು ಜನತಾ ಪಕ್ಷದ ಪರವಾಗಿ ಸಹಾನುಭೂತಿ ಉಳ್ಳವರಾಗಿದ್ದರು. ಚುನಾವಣೆಯ (ಮತದಾನಕ್ಕೆ ಹತ್ತಿರವಾಗುತ್ತಿರುವ) ಸಂದರ್ಭದಲ್ಲಿ ಅವರು ಪತ್ರಿಕಾ ಹೇಳಿಕೆಯನ್ನು ನೀಡಿ "ರಾಜಶೇಖರನ್‌ಗಿಂತ ಯುವ ನಾಯಕ ಪಿ.ಜಿ.ಆರ್. ಸಿಂಧ್ಯರವರೇ ಈ ಕ್ಷೇತ್ರಕ್ಕೆ ಹೆಚ್ಚು ಉಪಯುಕ್ತರಾಗುತ್ತಾರೆ"ಂದು ಹೇಳಿದರು. ಅವರ ಹೇಳಿಕೆಯನ್ನು ಕ್ಷಣ ಮಾತ್ರದಲ್ಲಿ ಮನೆಮನೆಗೆ ತಲುಪಿಸುವ ವ್ಯವಸ್ಥೆ ಆಸಕ್ತರಿಂದ ನಡೆದದ್ದುಂಟು. ಕಾಂಗ್ರೆಸ್ ಪಕ್ಷಕ್ಕೆ ರಾಜಶೇಖರನ್ ಕರೆದುಕೊಂಡು ಬಂದು ಕನಕಪುರ ವಿಧಾನಸಭೆ ಕ್ಷೇತ್ರದಿಂದ ಅಭ್ಯರ್ಥಿಯನ್ನಾಗಿಸಿದ ಎಂ.ವೀರಪ್ಪ ಮೊಯಲಿ ಹೇಳುವ ಮಾತುಗಳಿವು. "೧೯೮೪ರಲ್ಲಿ ರಾಜಶೇಖರನ್ ಅವರು ಕಾಂಗ್ರೆಗೆ ಬಂದರು. ನನ್ನ ಒತ್ತಾಯದ ಮೇರೆಗೆ ಅವರು ೧೯೮೫ರಲ್ಲಿ ಕನಕಪುರ ವಿಧಾನಸಭಾ ಕ್ಷೇತ್ರದಿಂದ ಸ್ಪರ್ಧಿಸಿದ್ದರು. ರಾಜಶೇಖರನ್ ಅಂತಹ ದುಡಿಮೆಗಾರರನ್ನು ಜನ ನೇರ ಚುನಾವಣೆಯಲ್ಲಿ ಗೆಲ್ಲಿಸಬೇಕಾಗಿತ್ತು. ಇಡೀ ರಾಷ್ಟ್ರದ ಸಮಗ್ರ ಕಲ್ಪನೆಯಿರುವ ರಾಜಶೇಖರನ್ ಅವರಿಗೆ ಉನ್ನತ ಅಧಿಕಾರ ದೊರೆತರೆ ಅದರ ಪ್ರಯೋಜನ ಗ್ರಾಮೀಣ ಪ್ರದೇಶದ ಜನರಿಗೆ ದೊರೆಯುವುದರಲ್ಲಿ ಸಂಶಯವಿಲ್ಲ."

## ಸದಾ ಅವಕಾಶ ವಂಚಿತರು :

೧೯೮೬ರಲ್ಲಿ ರಾಜಶೇಖರನ್ ಅವರನ್ನು ಪ್ರಧಾನಿ ರಾಜೀವ ಗಾಂಧಿಯವರು ರಾಜ್ಯಸಭಾ ಸದಸ್ಯರನ್ನಾಗಿ ಮಾಡಲು ನಿರ್ಧಾರ ಕೈಗೊಂಡಿದ್ದರು. ಸೀತಾರಾಮ ಕೇಸರಿಯವರು 'ಈತ ನಿಜಲಿಂಗಪ್ಪನವರ ಅಳಿಯ' ಎಂದು ವಿರೋಧಿಸಿದ ಏಕೈಕ ಕಾರಣಕ್ಕಾಗಿ ಅವಕಾಶ ತಪ್ಪಿಹೋಯಿತು.ಇದರ ಲಾಭ ಬೆಳಗಾಂವ್‌ನ ಕೆ.ಎಲ್. ಇ. ಸೊಸೈಟಿಯ ಪ್ರಭಾಕರ ಕೋರೆಯವರಿಗೆ ಅನಾಯಾಸವಾಗಿ ದೊರೆಯಿತು. ರಾಜಕಾರಣದಲ್ಲಿ ಎಂ.ವಿ.ರಾಜಶೇಖರನ್‌ರಷ್ಟು ಅವಕಾಶದಿಂದ ವಂಚಿತರಾದ ವ್ಯಕ್ತಿ ಮತ್ತೊಬ್ಬರಿಲ್ಲ. ೧೯೬೨, ೧೯೭೭,೧೯೮೦, ೧೯೮೫,೧೯೮೯, ೧೯೯೯ - ಹೀಗೆ ಪ್ರತಿಯೊಂದು ಚುನಾವಣೆಯಲ್ಲೂ ಇವರಿಗೆ ದೊರೆಯಬೇಕಾದ ಅವಕಾಶಗಳು ಮತ್ತೊಬ್ಬರಿಗೆ ದೊರೆತಿವೆ. ಆದರೆ ಬೇಸರ ಪಟ್ಟುಕೊಳ್ಳದೆ ನಗುನಗುತ್ತಲೇ ಜೀವನಪಥ ನಡೆಸಿಕೊಂಡು ಬಂದಿದ್ದಾರೆ. ಕಾಂಗ್ರೆಸ್ ಪಕ್ಷ ಅವರನ್ನು ಸರಿಯಾಗಿ ಉಪಯೋಗಿಸಿಕೊಳ್ಳಲಿಲ್ಲ ಎಂಬುದು ಎಲ್ಲ ಹಿರಿಯ ನಾಯಕರ ಅಭಿಮತ. ಅದನ್ನು ಸಿ.ಕೆ. ಜಾಫರ್ ಷರೀಫ್ ಕೂಡ ಹೇಳುತ್ತಾರೆ: "ರಾಜಶೇಖರನ್ ಅವರ ಸ್ನೇಹಶೀಲತೆ ಹಾಗೂ ಔದಾರ್ಯಗಳು ಮೆಚ್ಚುವಂಥವು. ಸಿಡಿಮದ್ದಿನಂತಹ ಒತ್ತಡದ ಸಂದರ್ಭದಲ್ಲೂ ಮಂದಸ್ಮಿತರಾಗಿ ಸ್ನೇಹಹಸ್ತ ಚಾಚುತ್ತಾರೆ. ಮಾನವೀಯ ಗುಣಗಳ ಗಣಿ ಅವರು. ಎಂ.ವಿ. ರಾಜಶೇಖರನ್ ಅವರನ್ನು ನಮ್ಮ ಕಾಂಗ್ರೆಸ್ ಪಕ್ಷ ಸಮರ್ಥವಾಗಿ ಬಳಸಿಕೊಂಡಿಲ್ಲವೆಂಬುದು ನನಗೆ ನೋವು ತಂದಿರುವ ವಿಚಾರ".

## ಕುಡಿಯುವ ನೀರಿನ ಆಂದೋಲನ :

ಅಧಿಕಾರ ದೊರೆಯಲಿ, ಬಿಡಲಿ, ಸದಾ ಅಭಿವೃದ್ಧಿ ಕೆಲಸಗಳನ್ನು ಕೈಗೊಳ್ಳುವ ರಾಜಶೇಖರನ್ ಅವರು ೧೯೮೩-೮೫ರ ಅವಧಿಯಲ್ಲಿ ಜನತಾ ಪಕ್ಷದ ಕುಡಿಯುವ ನೀರಿನ ಆಂದೋಲನದ ಕಾರಣೀಶಕ್ತಿಯಾಗಿದ್ದರು. 'ನೀರ್ ಸಾಬ್' ಎಂದು ಖ್ಯಾತರಾಗಿದ್ದ ನಜೀರ್‌ಸಾಬ್ ಇವರಿಂದ ಪ್ರೇರಿತರಾಗಿದ್ದರು. ಇದನ್ನು ಆಗಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆ ಅವರೇ ಹೇಳಿದ್ದಾರೆ. "ಜನತಾ ಪಕ್ಷ ಸರ್ಕಾರ ಜನಾಂದೋಲನವಾಗಿ ಕುಡಿಯುವ ನೀರಿನ ಯೋಜನೆಯನ್ನು ಕೈಗೆತ್ತಿಕೊಳ್ಳುವ ದೆಸೆಯಲ್ಲಿ ರಾಜಶೇಖರನ್ ಅವರು ಪ್ರೇರಕಶಕ್ತಿಯಾಗಿದ್ದರು." ಇದೇ ಅಭಿಪ್ರಾಯವನ್ನು ಜನತಾ ಪಕ್ಷದ ಹಿರಿಯ ನಾಯಕರೂ ಮಾಜಿ ಮುಖ್ಯಮಂತ್ರಿಗಳೂ ಆದ ಎಸ್.ಆರ್. ಬೊಮ್ಮಾಯಿ ಹೇಳುವ ರೀತಿಯಿದು: "ನೀರ್‌ಸಾಬ್ ಎಂದು ಖ್ಯಾತರಾಗಿರುವ ನಜೀರ್‌ಸಾಬ್ ಒಡನಾಡಿಗಳಾಗಿದ್ದ ರಾಜಶೇಖರನ್ ರೂಪಿಸಿದ ಕುಡಿಯುವ ನೀರಿನ ಆಂದೋಲನ ಯಶಸ್ಸು ಸಾಧಿಸಿದ್ದು ಈಗ ಇತಿಹಾಸ. ಅವರ ಎಐಆರ್‌ಡಿ ಸಂಸ್ಥೆಯಿಂದ ಇಂತಹ ವರದಿಗಳನ್ನು ತರಿಸಿಕೊಂಡು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಅದನ್ನು ಅನುಷ್ಠಾನಗೊಳಿಸಬೇಕು.

## ವೀರೇಂದ್ರ ಪಾಟೀಲರ ಹಿತೈಷಿ :

೧೯೮೯ರ ಚುನಾವಣೆಯ ನಂತರ ವೀರೇಂದ್ರ ಪಾಟೀಲ್ ಮುಖ್ಯಮಂತ್ರಿಯಾಗಲು ಎಂ.ವಿ.ರಾಜಶೇಖರನ್ ಕಾರಣ ಎಂಬುದು ಅನೇಕರಿಗೆ ಗೊತ್ತಿಲ್ಲ. ಈ ಬಗ್ಗೆ ಇಲ್ಲಿ ಅವರೇ ವಿವರಣೆ ನೀಡುತ್ತಾರೆ: " ಸಹಜವಾಗಿ ಕೆಪಿಸಿಸಿ ಅಧ್ಯಕ್ಷರು, ಸಾರ್ವತ್ರಿಕ ಚುನಾವಣೆಯ ನಾಯಕತ್ವ ವಹಿಸಿ ಕಾಂಗ್ರೆಸ್ ಪಕ್ಷದ ಗೆಲುವಿಗೆ ಕಾರಣರಾದವರನ್ನು ಕಾಂಗ್ರೆಸ್ ಹೈ ಕಮಾಂಡ್ ಶಾಸಕಾಂಗ ಪಕ್ಷದ ನಾಯಕನನ್ನಾಗಿ ಆರಿಸುತ್ತದೆಂದೂ, ಅವರನ್ನು ರಾಜ್ಯಪಾಲರು ಮುಖ್ಯಮಂತ್ರಿಯಾಗಿ ಪ್ರಮಾಣವಚನ ಸ್ವೀಕರಿಸಲು ಆಹ್ವಾನಿಸುತ್ತಾರೆಂಬುದೂ ಎಲ್ಲರ ನಿರೀಕ್ಷೆಯಾಗಿತ್ತು. ವೀರೇಂದ್ರ ಪಾಟೀಲ್ ಶಾಸಕಾಂಗ ಪಕ್ಷದ ನಾಯಕರಾಗಿ ಆಯ್ಕೆಗೊಂಡಿದ್ದರೂ, ಅವರು ಮುಖ್ಯಮಂತ್ರಿಯಾಗಿ ಪ್ರಮಾಣವಚನ ಸ್ವೀಕರಿಸದಂತೆ ಕೆಲವು ಕಾಣದ ಕೈಗಳು ಅಡಚಣೆ ಮಾಡುತ್ತಿದ್ದಾವೆಂದು ಅವರ ಅಭಿಮಾನಿಗಳಿಗೆ ಸಂಶಯ ಬಂತು. ರಾಜ್ಯಪಾಲ ವೆಂಕಟಸುಬ್ಬಯ್ಯ ಅವರ ಜೊತೆ ಉತ್ತಮ ಸಂಬಂಧ ಇದ್ದ ನನಗೆ ಅವರ ಅಭಿಮಾನಿಗಳು "ರಾಜ್ಯಪಾಲರಿಗೆ ಒಂದು ಮಾತು ಹೇಳಿ" ಎಂದರು. ಇಷ್ಟು ಹೊತ್ತಿಗೆ ಕಾಂಗ್ರೆಸ್ ಹೈಕಮಾಂಡ್ ಬಂಗಾರಪ್ಪನವರನ್ನು ಸೇರಿಸಿಕೊಂಡು ಮಂತ್ರಿಮಂಡಲ ರಚಿಸುವಂತೆ ಸೂಚನೆ ನೀಡಿತು. ಸ್ವಭಾವತಃ ಹಠಮಾರಿಗಳಾದ ವೀರೇಂದ್ರ ಪಾಟೀಲ ಯಾವ ಒತ್ತಡಕ್ಕೂ ಮಣಿಯಲಿಲ್ಲ. ಆದರೆ, ರಾಜ್ಯಪಾಲರಾದ ವೆಂಕಟಸುಬ್ಬಯ್ಯನವರ ಮಧ್ಯಪ್ರವೇಶದಿಂದ ಮತ್ತು ಕೇಂದ್ರದ ವೀಕ್ಷಕರಾಗಿ ಆಗಮಿಸಿದ್ದ ಮೊಹಿಸಿನಾ ಕಿದ್ವಾಯಿ, ಗುಲಾಮ್ ನಬಿ ಆಜಾದ್ ಅವರ ಸಹಕಾರದಿಂದ ವೀರೇಂದ್ರ ಪಾಟೀಲ್ ಅವರು ಮುಖ್ಯಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸಿದರು. "ನಾನು ಸಹ ರಾಜ್ಯಪಾಲರನ್ನು ಭೇಟಿಯಾಗಿ ವಸ್ತುಸ್ಥಿತಿ ತಿಳಿಸಿದ್ದೆ ಎಂಬುದು ರಾಜಶೇಖರನ್ ಅಂಬೋಣ" ಇದಕ್ಕೆ ಪ್ರತಿಯಾಗಿ ರಾಜಶೇಖರನ್ ಯಾವುದೇ ರೀತಿಯ ಪ್ರತಿಫಲವನ್ನು ವೀರೇಂದ್ರ ಪಾಟೀಲ್ ಅವರಿಂದ ಪಡೆದಿಲ್ಲವೆನ್ನುವುದು ಸ್ಮರಣೀಯ ವಿಚಾರ.

## ಸೋನಿಯಾ ನಾಯಕತ್ವದ ಅಗತ್ಯ ಕಂಡರು :

ಪ್ರಧಾನಿ ಪಿ.ವಿ. ನರಸಿಂಹರಾವ್ ಅವರೊಡನೆ ತಾತ್ವಿಕ ಭಿನ್ನಾಭಿಪ್ರಾಯ ಹೊಂದಿದ್ದು, ಕಾಂಗ್ರೆಸ್ ಉಳಿಸಲು ಸೋನಿಯಾ ಗಾಂಧಿ ಅವರು ಕಾಂಗ್ರೆಸ್ ನಾಯಕತ್ವ ವಹಿಸುವುದು ಅಗತ್ಯವೆಂದು ಕೆಲವು ಹಿರಿಯರು ಭಾವಿಸಿದ್ದರು. ಈ ಹಿನ್ನೆಲೆಯಲ್ಲಿ ಅರ್ಜುನ ಸಿಂಗ್, ಎನ್.ಡಿ.ತಿವಾರಿ, ಎಂ.ಎಲ್. ಫೋತೆದಾರ್, ರಾಜಸ್ಥಾನದ ಮಾಜಿ ಮುಖ್ಯಮಂತ್ರಿ ಎಸ್. ಸಿ.ಮಾಥೂರ್, ಶೀಲಾ ದೀಕ್ಷಿತ್ ಮುಂತಾದವರು 'ತಿವಾರಿ ಕಾಂಗ್ರೆಸ್' ಸ್ಥಾಪಿಸಿದರು.

ಕರ್ನಾಟಕದಲ್ಲಿ ತಿವಾರಿ ಕಾಂಗ್ರೆಸ್ಸಿನ ಉಸ್ತುವಾರಿ ಹೊತ್ತವರು ದೇವರಾಯ ನಾಯಕ್, ಉಮೇಶ್‌ಬಾಬು ಪಟೇಲ್, ನಾಗನೂರು, ಮಲ್ಲಿಕಾರ್ಜುನ ಲೆಕ್ಕದ್ ಹಾಗೂ ಅಜೀಜ್ ಸೇಠ್. ಇವರೆಲ್ಲರಿಗೂ ಮಾರ್ಗದರ್ಶಕರಾಗಿದ್ದವರು ಎಂ.ವಿ. ರಾಜಶೇಖರನ್ ಅವರು. ತಿವಾರಿ ಕಾಂಗ್ರೆಸ್‌ನ ಬೃಹತ್ ಸಮಾವೇಶ ೨೫.೦೧.೧೯೯೫ ರಲ್ಲಿ ಬೆಂಗಳೂರಿನಲ್ಲಿ ಜರುಗಿತು. ಈ ಬೃಹತ್ ಸಮಾವೇಶದಲ್ಲಿ

ಹಾರನಹಳ್ಳಿ ರಾಮಸ್ವಾಮಿ, ಎಸ್.ಎಂ. ಯಾಹ್ಯಾ, ಎಂ.ವಿ.ರಾಜಶೇಖರನ್ ಮೊದಲಾದ ಹಿರಿಯರು ಭಾಗವಹಿಸಿದ್ದನ್ನು ಉಮೇಶ್‌ಬಾಬು ಪಟೇಲ್ ಜ್ಞಾಪಿಸಿಕೊಳ್ಳುತ್ತಾರೆ. ಮಿತ್ರರ ಹಿತಕ್ಕಾಗಿ ಎಂತಹ ವೈಯಕ್ತಿಕ ತ್ಯಾಗಕ್ಕಾದರೂ ರಾಜಶೇಖರನ್ ಸಿದ್ಧ ಎಂಬುದು ಉಮೇಶ್‌ಬಾಬು ಪಟೇಲ್ ಅವರ ಅಭಿಪ್ರಾಯ.

## ಸ್ನೇಹಿತರ ಬಂಧು :

೧೯೯೯ರಲ್ಲಿ ಎಸ್.ಎಂ. ಕೃಷ್ಣ ಅವರು ರಾಜ್ಯದಲ್ಲಿ ಕಾಂಗ್ರೆಸ್‌ನ ಸಾರಥ್ಯ ವಹಿಸಲು ಪರೋಕ್ಷವಾಗಿ ರಾಜಶೇಖರನ್ ಕಾರಣಕರ್ತರಾಗಿದ್ದಾರೆ. ಎಸ್.ಎಂ.ಕೃಷ್ಣ ಅವರನ್ನು ಕಾಂಗ್ರೆಸ್ ಪಕ್ಷದ ಅಧ್ಯಕ್ಷರನ್ನಾಗಿ ಸೋನಿಯಾ ಗಾಂಧಿ ಅವರು ನೇಮಕ ಮಾಡಿದ ಕೂಡಲೇ ಮುನಿಸಿಕೊಂಡು ಎಂ. ರಾಜಶೇಖರಮೂರ್ತಿ ಕಾಂಗ್ರೆಸ್ ಪಕ್ಷ ತೊರೆದರು. ಈ ಷಾಕ್‌ನಿಂದ ಕಾಂಗ್ರೆಸ್ ಹೈ ಕಮಾಂಡ್ ಹೊರಬರಲು ತಡವರಿಸುವಂತಿತ್ತು. ಅಂತಹ ಸಂದರ್ಭದಲ್ಲಿ ರಾಜ್ಯದ ವೀರಶೈವ ಮುಖಂಡರು ಎಂ.ವಿ. ರಾಜಶೇಖರನ್ ಮುಖಂಡತ್ವದಲ್ಲಿ ಪಕ್ಷದ ಅಧ್ಯಕ್ಷೆ ಸೋನಿಯಾ ಗಾಂಧಿ ಅವರನ್ನು ಭೇಟಿ ಮಾಡಿ ತಮ್ಮ ಪಕ್ಷಕ್ಕೆ ಮತ್ತಷ್ಟು ಅವಕಾಶ ಕೊಡುವಂತೆ ಕೋರಲು ನಿರ್ಧರಿಸಿದರು. ಇಂತಹ ಸನ್ನವೇಶವನ್ನು ಕುರಿತು ರಾಜ್ಯದ ಹಿರಿಯ ನಾಯಕರಾದ ಶಾಮನೂರು ಶಿವಶಂಕರಪ್ಪ ಹೀಗೆ ಬರೆಯುತ್ತಾರೆ: "ಇಂತಹ ಗುಂಪಿನಲ್ಲಿ ನಮ್ಮೊಡನೆ ಬರಲು ಮೊದಲು ರಾಜಶೇಖರನ್ ಒಪ್ಪಲಿಲ್ಲ. ಅನಂತರ ನಾನು ಬಲವಂತ ಮಾಡಿದೆ. ಹೀಗಾಗಿ ಜೊತೆಗೆ ಬಂದರು. ಅಧ್ಯಕ್ಷರಾದ ಸೋನಿಯಾ ಅವರು 'ರಾಜಶೇಖರನ್ ಏನು ಹೇಳುತ್ತಾರೆ?' ಎಂದು ಪ್ರಶ್ನಿಸಿದರು. ಆಗ ರಾಜಶೇಖರನ್ "Madam, The community under the leadership of Basavanna which was fought for social justice, is now seeking social justice from us" ಆಗ ಸೋನಿಯಾ ಅವರು ತಕ್ಷಣ ಆಸ್ಕರ್ ಅವರತ್ತ ತಿರುಗಿ ಬಸವಣ್ಣನವರ ಬಗ್ಗೆ ಪ್ರಶ್ನಿಸಿದರು. ಎಂ.ವಿ. ರಾಜಶೇಖರನ್ 'ಮೇಡಂ ನಾಳೆ ಬೆಳಗ್ಗೆ ಬಸವಣ್ಣನವರನ್ನು ಕುರಿತಾದ ಗ್ರಂಥಗಳನ್ನು ತಮಗೆ ತಲುಪಿಸುತ್ತೇನೆ' ಎಂದರು. ಹೀಗೆ ಮುಕ್ತವಾಗಿ ಮಾತನಾಡಬಲ್ಲ ನಮ್ಮ ಅಪರೂಪದ ನಾಯಕರಾದ ರಾಜಶೇಖರನ್ ಅವರನ್ನು ಹೈ ಕಮಾಂಡ್ ಕರ್ನಾಟಕದ ರಾಜಕಾರಣದ ಬಗ್ಗೆ ಆಪ್ತ ಸಲಹೆಗಾರರಂತೆ ಭಾವಿಸಿದೆ. ಅಷ್ಟೇ ಅಲ್ಲ, ವೀರಶೈವ ಸಮುದಾಯದ ಬಗ್ಗೆ ನಿರ್ಧಾರ ತೆಗೆದುಕೊಳ್ಳುವಾಗ ಇವರ ಅಭಿಪ್ರಾಯವನ್ನು ಕೇಳಲೇಬೇಕೆಂಬ ಅಲಿಖಿತ ನಡವಳಿಕೆ ಹೈಕಮಾಂಡ್‌ನಲ್ಲಿ ಇರುವಂತೆ ಕಾಣುತ್ತದೆ.

೧೯೯೯ರ ಸಾರ್ವತ್ರಿಕ ಚುನಾವಣೆಯಲ್ಲಿ ಎಸ್.ಎಂ. ಕೃಷ್ಣ ಅವರ ಬೆಂಗಾವಲಿಗೆ ನಿಂತ ರಾಜಶೇಖರನ್, ಸೋನಿಯಾ ಗಾಂಧಿ ಅವರು ಕರ್ನಾಟಕ ಪ್ರವಾಸ ಕೈಗೊಂಡಾಗ ಅವರನ್ನು ಚಿತ್ರದುರ್ಗಕ್ಕೆ ಕರೆದುಕೊಂಡು ಹೋಗಿ ಅವರಿಗೆ ನಿಜಲಿಂಗಪ್ಪ ಅವರ ಆಶೀರ್ವಾದ ಕೊಡಿಸಿದರು. ಆ ಸಂದರ್ಭದಲ್ಲಿ ನಿಜಲಿಂಗಪ್ಪನವರು ಕೃಷ್ಣ ಅವರ ಬಗ್ಗೆ ಹೇಳಿದ ಮಾತುಗಳು ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ ಅವರು ಮುಂದೆ ಕರ್ನಾಟಕ ರಾಜಕಾರಣವನ್ನು ಕೃಷ್ಣ ಅವರಿಗೆ ಒಪ್ಪಿಸುವಲ್ಲಿ ವಿಶೇಷವಾದ ಪ್ರಭಾವ ಬೀರಿತು. ಎಂ.ವಿ. ರಾಜಶೇಖರನ್ ಹಾಗೂ ಕೃಷ್ಣ ಅವರು ಪದವಿ ವ್ಯಾಸಂಗ ಕಾಲದಿಂದಲೂ ಸ್ನೇಹಿತರು. ೧೯೬೨ರಲ್ಲಿ ಪ್ರಜಾ ಸೋಷಲಿಸ್ಟ್ ಪಾರ್ಟಿಯಿಂದ ಕೃಷ್ಣ ಅವರು ವಿಧಾನಸಭೆಗೆ ಆಯ್ಕೆಯಾಗಿದ್ದರು. ಆ ಸಂದರ್ಭದಲ್ಲಿ ಎಂ.ವಿ. ರಾಜಶೇಖರನ್ ಮುಖ್ಯಮಂತ್ರಿಯ ಅಳಿಯನೆಂಬ ಖ್ಯಾತಿ ಹೊಂದಿದ್ದರು. ಎಂ.ವಿ.ರಾಜಶೇಖರನ್ ಅವರು ತಮಗೆ ಮಾಡಿದ ಅಪರೂಪದ ಸಹಾಯವನ್ನು ಎಸ್.ಎಂ. ಕೃಷ್ಣ ಅವರು ಜ್ಞಾಪಿಸಿಕೊಳ್ಳುವುದು ಹೀಗೆ : "ಆ ಕಾಲದಲ್ಲಿ ಮೈಸೂರು ರಾಜ್ಯದಿಂದ ಕಾಮನ್‌ವೆಲ್ತ್ ಸಂಸ್ಥೆಯ ಒಕ್ಕೂಟಕ್ಕೆ ರಾಜ್ಯದ ಪ್ರತಿನಿಧಿ ಒಬ್ಬರನ್ನು ಆಯ್ಕೆ ಮಾಡಬೇಕಾಗಿತ್ತು. ಇಂತಹ ಸಂಸ್ಥೆಯ ಒಕ್ಕೂಟದಲ್ಲಿ ಯುವ ಶಾಸಕರು ಭಾಗವಹಿಸಿದರೆ ರಾಜ್ಯಕ್ಕೆ ಹೆಚ್ಚು ಅನುಕೂಲವೆಂದು ಮುಖ್ಯಮಂತ್ರಿ ನಿಜಲಿಂಗಪ್ಪ ಅವರು ಭಾವಿಸಿದ್ದರು. ಅವರು ಹೀಗೆ ಭಾವಿಸಲು ರಾಜಶೇಖರನ್ ಪ್ರೇರಣೆ ನೀಡಿದ್ದರು ಎಂದು ನನಗೆ ಆಮೇಲೆ ಗೊತ್ತಾಯಿತು. ಆ ಕಾಮನ್‌ವೆಲ್ತ್ ಒಕ್ಕೂಟಕ್ಕೆ ಮೈಸೂರು ರಾಜ್ಯದ ಪರವಾಗಿ ನಾನು ಆಸ್ಟ್ರೇಲಿಯಾಕ್ಕೆ ಹೋಗಿದ್ದೆ. ಗುಣವನ್ನು ಗುರುತಿಸಿ ಅದಕ್ಕೆ ಮನ್ನಣೆ ಕೊಡುವ ಅಪರೂಪದ ನಡೆನುಡಿ ನಿಜಲಿಂಗಪ್ಪ ಅವರದು. ಅಂತಹದೇ ಸ್ವಭಾವ ರಾಜಶೇಖರನ್ ಅವರದು". ಆ ಕಾಲದಲ್ಲಿ ವಿರೋಧ ಪಕ್ಷದ ಯುವ ಶಾಸಕರು ಸರ್ಕಾರದ ಪರವಾಗಿ ವಿದೇಶಕ್ಕೆ ಹೋಗುವುದೆಂದರೆ ಸಾಮಾನ್ಯವೇ?

೧೯೯೯ರ ನಂತರ ರಾಜ್ಯದಲ್ಲಿ ಕೃಷ್ಣ ನೇತೃತ್ವದ ಕಾಂಗ್ರೆಸ್ ಸರ್ಕಾರ ಅಧಿಕಾರಕ್ಕೆ ಬಂದಾಗ್ಯೂ ರಾಜಶೇಖರನ್ ೨೦೦೦ದ ತನಕ ಕಾಯಬೇಕಾಯಿತು. ಕಾಂಗ್ರೆಸ್ ಹೈ ಕಮಾಂಡ್ ಅವರನ್ನು ವಿಧಾನಪರಿಷತ್ತಿನ ಸದಸ್ಯರನ್ನಾಗಿ ನೇಮಿಸಿತು. ಕೃಷ್ಣ ಮತ್ತು

ರಾಜಶೇಖರನ್ ಅವರ ಆತ್ಮೀಯ ಸಂಬಂಧವನ್ನು ಬಲ್ಲ ಅನೇಕರು ರಾಜಶೇಖರನ್ ಕುರಿತು ಏನೇನೋ ಆಸೆಗಳನ್ನು ಕಟ್ಟಿಕೊಂಡರು. ಕೃಷಿ ಸಚಿವರಾಗಿ, ಗ್ರಾಮೀಣ ಅಭಿವೃದ್ಧಿ ಸಚಿವರಾಗಿ ಕೊನೆಗೆ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾಗಿ ರಾಜಶೇಖರನ್ ಕಂಗೊಳಿಸುತ್ತಾರೆಂದು ಅವರೆಲ್ಲಾ ಭಾವಿಸಿದ್ದರು. ಈ ಭಾವನೆ ಕೇವಲ ರಾಜಶೇಖರನ್ ಅಭಿಮಾನಿಗಳಲ್ಲಿ ಮಾತ್ರವಲ್ಲ, ದೂರದ ಮೈಸೂರಿನಲ್ಲಿ ಕುಳಿತು ಸಂಶೋಧನೆಗೆ ತಮ್ಮನ್ನು ಅರ್ಪಿಸಿಕೊಂಡ ಕನ್ನಡದ ಮಹಾನ್ ವಿದ್ವಾಂಸ ಡಾ. ಟಿ.ವಿ. ವೆಂಕಟಾಚಲಶಾಸ್ತ್ರಿ ಕೂಡ ಹೀಗೆ ಕನಸುಗಳನ್ನು ಕಟ್ಟಿಕೊಂಡಿದ್ದರಂತೆ! ಅದನ್ನು ಅವರ ಮಾತುಗಳಲ್ಲೇ ಕೇಳಿ: "ಮಾನ್ಯ ಎಸ್.ಎಂ. ಕೃಷ್ಣ ಸರ್ಕಾರ ಅಸ್ತಿತ್ವಕ್ಕೆ ಬಂದ ಮೇಲೆ ರಾಜಶೇಖರನ್ ಅವರ ಮಂತ್ರಿಮಂಡಲದಲ್ಲಿರುತ್ತಾರೆ ಎಂಬುದಾಗಿ ನಾನು ನಿರೀಕ್ಷಿಸಿದ್ದೆ. ರಾಜಕೀಯ ನನಗೆ ಅರ್ಥವಾಗುವ ವಿಷಯವಲ್ಲ. ಅವರೂ ನನ್ನ ನಿರೀಕ್ಷೆ ಅಸ್ವಾಭಾವಿಕವಾದುದೆಂದು ನಾನು ಭಾವಿಸುವುದಿಲ್ಲ."

## ಕಾಂಗ್ರೆಸ್ ಸಮಾವೇಶದ ಸ್ಮರಣ ಸಂಚಿಕೆ :

ರಾಜಶೇಖರನ್ ಅವರು ಮಂತ್ರಿಯಾಗುವ ಉಸಾಬರಿ ಮಾಡದೆ, ೨೦೦೦ದಲ್ಲಿ ಬೆಂಗಳೂರಿನಲ್ಲಿ ಜರುಗಿದ ೮೧ನೆಯ ಅಖಿಲ ಭಾರತ ಕಾಂಗ್ರೆಸ್ ಸಮಾವೇಶದ ಸ್ಮರಣ ಸಂಚಿಕೆ ತರುವ ಕಾರ್ಯಕ್ಕೆ ತಮ್ಮನ್ನು ಅರ್ಪಿಸಿಕೊಂಡರು. ಆ ಸ್ಮರಣ ಸಂಚಿಕೆಯ ಮಹತ್ವ ಕುರಿತಂತೆ ಕೆಪಿಸಿಸಿ ಸದಸ್ಯರಾದ ಅಸಗೋಡು ಜಯಸಿಂಹ ಹೇಳುವ ಮಾತಿದು: "ಎಐಸಿಸಿ ಬೆಂಗಳೂರಿನಲ್ಲಿ ನಡೆಸಿದ ಅಖಿಲ ಭಾರತ ಕಾಂಗ್ರೆಸ್ ಸಮಾವೇಶದ ಅಂಗವಾಗಿ ತಂದ ಸ್ಮರಣ ಸಂಚಿಕೆ ಅಚ್ಚುಕಟ್ಟಾಗಿ ಹೊರಬಂದಿದೆ. ಕಾಂಗ್ರೆಸ್ ಸಮಾವೇಶ ಮುಗಿದು ಆ ಸ್ಮರಣೀಯ ಸನ್ನಿವೇಶ ಹಳೆಯದಾದರೂ ಸ್ಮರಣ ಸಂಚಿಕೆ ಮಾತ್ರ ವಿದ್ವತ್ ಕ್ಷೇತ್ರದಲ್ಲಿ ಇಂದಿಗೂ ಹೊಚ್ಚ ಹೊಸತಾಗಿದೆ." ವಿಶೇಷವಾಗಿ ಈ ಸಂಚಿಕೆ ಇಷ್ಟೊಂದು ಸುಂದರವಾಗಿ ಹೊರಬರಲು ರಾಜಶೇಖರನ್ ಕಾರಣಕರ್ತರು. ನಾಡಿನ ಎಲ್ಲ ವಿದ್ವಾಂಸರ ಹಾಗೂ ಕಾಂಗ್ರೆಸ್ ನಾಯಕರ ಲೇಖನಗಳು ಈ ಸಂಚಿಕೆಯಲ್ಲಿ ಪ್ರಕಟವಾಗುವಂತೆ ರಾಜಶೇಖರನ್ ನೋಡಿಕೊಂಡಿದ್ದಾರೆ. ಯಾವುದೇ ರಾಜಕೀಯ ಪಕ್ಷದ ಸಮಾವೇಶಕ್ಕೆ ಹೊರಬರುವ ಸಂಚಿಕೆಗೆ ಇದೊಂದು ಮಾದರಿಯಾಗಿದೆ. ಯಾವುದೇ ಕೆಲಸವನ್ನು ಕೈಗೆತ್ತಿಕೊಂಡರೂ ರಾಜಶೇಖರನ್ ತಮ್ಮೆಲ್ಲ ಶಕ್ತಿಯನ್ನು ಅದಕ್ಕೆ ವಿನಿಯೋಗಿಸುತ್ತಾರೆ ಎಂಬುದಕ್ಕೆ ಈ ಸ್ಮರಣ ಸಂಚಿಕೆ ಸಾಕ್ಷ್ಯ ಒದಗಿಸುತ್ತದೆ.

## ದೆಹಲಿಗೆ ಬುಲಾವ್ !

೨೦೦೨ರಲ್ಲಿ ರಾಜಶೇಖರನ್ ಅವರ ಕ್ರಿಯಾಶೀಲತೆ ಹಾಗೂ ಅನುಭವವನ್ನು ಗಮನಿಸಿದ ಕಾಂಗ್ರೆಸ್ ಹೈ ಕಮಾಂಡ್ ಅವರನ್ನು ರಾಜ್ಯಸಭಾ ಸದಸ್ಯರನ್ನಾಗಿ ಆಯ್ಕೆ ಮಾಡಿತು. ೧೯೫೬ರಿಂದ ೨೦೦೦ದ ತನಕ ಅವರು ವಿವಿಧ ದೇಶಗಳನ್ನು ಸುತ್ತಿದ್ದಾರೆ. ಅಂತರರಾಷ್ಟ್ರೀಯ ವೇದಿಕೆಯಲ್ಲಿ ೧೨೦ಕ್ಕೂ ಹೆಚ್ಚಿನ ಪ್ರಬಂಧಗಳನ್ನು ಮಂಡಿಸಿದ್ದಾರೆ. ರಾಜಶೇಖರನ್ ಅವರು ಸಕ್ರಿಯ ರಾಜಕಾರಣದಲ್ಲಿದ್ದರೂ ಇಷ್ಟೊಂದು ಆಳವಾದ ವಿದ್ವತ್ ಪಡೆದವರೆಂಬುದು ಅನೇಕರಿಗೆ ಗೊತ್ತಿಲ್ಲ. ಅದನ್ನು ಡಾ। ಎಚ್. ನರಸಿಂಹಯ್ಯ ಅವರು ಹೆಮ್ಮೆಯಿಂದ ಗುರುತಿಸಿದ್ದಾರೆ: "ಯಾವುದೇ ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಿಗಿಂತ ಮಿಗಿಲಾಗಿ ರಾಜಶೇಖರನ್ ಅವರು ಶೈಕ್ಷಣಿಕ ಕ್ಷೇತ್ರದಲ್ಲಿ ಅಪಾರ ವಿದ್ವತ್ ಪಡೆದಿದ್ದಾರೆ. ಕೃಷಿಯಲ್ಲಿ ತಾಂತ್ರಿಕತೆ, ಬೆಳೆ, ಗೊಬ್ಬರ, ರೈತರ ಕಷ್ಟ ಸುಖ, ಕೃಷಿ ಮಾರುಕಟ್ಟೆ, ಭೂಸುಧಾರಣೆ, ಜಲಸಂರಕ್ಷಣೆ, ಗ್ರಾಮೀಣ ಯುವಕ-ಯುವತಿಯರು, ವ್ಯವಸಾಯಕ್ಕೆ ಪೂರಕವಾದ ವೃತ್ತಿಗಳು, ಕುಡಿಯುವ ನೀರು, ಪೌಷ್ಟಿಕ ಆಹಾರ, ಕುಟುಂಬ ಯೋಜನೆ, ಸಾರ್ವಜನಿಕ ಆರೋಗ್ಯ, ಗ್ರಾಮೀಣ ಆರ್ಥಿಕ ಸ್ಥಿತಿ, ಪರಿಸರ, ಪಶು ಸಂಗೋಪನೆ ಮೊದಲಾದ ವಿವಿಧ ವಿಚಾರಗಳನ್ನು ಕುರಿತಂತೆ ಅವರು ನಾನಾ ದೇಶಗಳಲ್ಲಿನ ವೇದಿಕೆಗಳಲ್ಲಿ ಅನೇಕ ಪ್ರಬಂಧಗಳನ್ನು ಮಂಡಿಸಿದ್ದಾರೆ. ಅವರ ಈ ವಿದ್ವತ್ ಕರ್ನಾಟಕದ ಜನತೆಗೆ ಇನ್ನೂ ಅಪರಿಚಿತವಾಗಿರುವುದು ದುರ್ದೈವದ ವಿಚಾರ." ಇಂತಹ ವಿದ್ವತ್ತು ಹಾಗೂ ಅಪಾರವಾದ ರಾಜಕೀಯ ಅನುಭವವೇ ಅವರಿಗೆ

**ರಾಜಶೇಖರನ್ ಅವರು ಸಕ್ರಿಯ ರಾಜಕಾರಣದಲ್ಲಿದ್ದರೂ ಇಷ್ಟೊಂದು ಆಳವಾದ ವಿದ್ವತ್ ಪಡೆದವರೆಂಬುದು ಅನೇಕರಿಗೆ ಗೊತ್ತಿಲ್ಲ. ಯಾವುದೇ ವಿಶ್ವ ವಿದ್ಯಾನಿಲಯದ ಪ್ರಾಧ್ಯಾಪಕರಿಗಿಂತ ಮಿಗಿಲಾಗಿ ರಾಜಶೇಖರನ್ ಅವರು ಶೈಕ್ಷಣಿಕ ಕ್ಷೇತ್ರದಲ್ಲಿ ಅಪಾರ ವಿದ್ವತ್ ಪಡೆದಿದ್ದಾರೆ.**

ದೆಹಲಿ ಯಾತ್ರೆಯ ಸುಯೋಗ ಕಲ್ಪಿಸಿತು. ರಾಜ್ಯದಲ್ಲಿ ಕೃಷಿ ಹಾಗೂ ಗ್ರಾಮೀಣಾಭಿವೃದ್ಧಿ ಕ್ಷೇತ್ರಕ್ಕೆ ಅವರು ಈ ಖಾತೆಗಳ ಸಚಿವರಾಗಿದ್ದಕ್ಕೆ ತೊಂದರೆಯಾದುದು ಸ್ವಲ್ಪ ಮಟ್ಟಿಗೆ ನಿಜ. ಆದರೆ ಅವರ ಪೂರ್ಣ ಜ್ಞಾನ ರಾಷ್ಟ್ರಕ್ಕೆ ಉಪಯುಕ್ತವಾಗಿರುವುದು ನಂತರದ ವಿಚಾರ.

**ಉಂಡು ಉಪವಾಸಿ :**

೧೯೫೯ರಲ್ಲಿ ವಿವಾಹವಾದ ಎಂ.ವಿ. ರಾಜಶೇಖರನ್ ಅವರ ದಾಂಪತ್ಯ ಜೀವನವು ನಲವತ್ತೈದು ವಸಂತಗಳನ್ನು ಕಂಡಿದೆ. ರಾಜಶೇಖರನ್ ದಂಪತಿಗಳಿಗೆ ಎರಡು ಹೆಣ್ಣು, ಎರಡು ಗಂಡು ಮಕ್ಕಳಿದ್ದಾರೆ. ಆರು ಜನ ಮೊಮ್ಮಕ್ಕಳಿದ್ದಾರೆ.

ಯಶೋಧರಮ್ಮ ದಾಸಪ್ಪ ಅವರ ಮನೆಯಲ್ಲಿ ಬೆಳೆದ ರಾಜಶೇಖರನ್ ಅವರಿಗೆ ಲೋಕವೆಲ್ಲ ತಮ್ಮದೆಂಬ ಭಾವನೆ. ಅದನ್ನು ಗಿರಿಜಾ ರಾಜಶೇಖರನ್ ಅವರು ವಿವರಿಸುವ ರೀತಿ: "ಮರಳವಾಡಿಯಿಂದ ಆಸ್ಪತ್ರೆಗೆ ಬರುವವರು ಆಗ ನಮ್ಮ ಮನೆಯಲ್ಲಿಯೇ ತಂಗುತ್ತಿದ್ದರು. ಅವರಿಗೆಲ್ಲರೂ ಊಟ ಉಪಚಾರ ಮಾಡದೆ ಕಳಿಸುವಂತಿರಲಿಲ್ಲ. ಇಂದಿಗೂ ಯಾರಾದರೂ ಫೋನ್ ಮಾಡಿದರೆ 'ಮನೆಗೆ ಬಂದು ಊಟ ಮಾಡಿಕೊಂಡು ಹೋಗಿ' ಎನ್ನುವುದು ಅವರ ಹವ್ಯಾಸ. ಮೊದಲಿನಿದಂಲೂ ನಮ್ಮಮನೆಗೆ ಅತಿಥಿ ಅಭ್ಯಾಗತರ ಆಗಮನ ಹೆಚ್ಚು. ಎಲ್ಲ ಜಾತಿಯ ಜನರೂ ನಮ್ಮ ಮನೆಗೆ ಬರುತ್ತಾರೆ."

ಹೊರಜಗತ್ತಿಗೆ ಅಗತ್ಯಕ್ಕಿಂತ ಹೆಚ್ಚು ಸ್ನೇಹಶೀಲರಾಗಿ ಕಾಣುವ, ಅಪಾರ ಸಹನೆಯನ್ನು ಹೊಂದಿದಂತಿರುವ ರಾಜಶೇಖರನ್ ಮನೆಯಲ್ಲಿ ಹಾಗಿರುವುದಿಲ್ಲ. ಮನೆಯಲ್ಲಿ ಅವರು ಹೇಗಿರುತ್ತಾರೆಂಬುದನ್ನು ಮಗಳು ಸುಜಾತಳ ಬಾಯಿಯಲ್ಲಿ ಕೇಳಿ: "ಅವರಿಗೆ ಮನೆ ತುಂಬಾ ಅಚ್ಚುಕಟ್ಟಾಗಿರಬೇಕು. ತಿನ್ನುವ ಪದಾರ್ಥಗಳ ಪಾತ್ರೆಗಳ ಮುಚ್ಚಳವನ್ನು ತೆಗೆದಿಡಬಾರದು. ಅಡುಗೆ ಮನೆ ಸ್ವಚ್ಛವಾಗಿರಬೇಕು. ಹಾಗೇನಾದರೂ ತುಸು ಹೆಚ್ಚು ಕಡಿಮೆಯಾದರೆ ಸಿಟ್ಟಿನಿಂದ ಸಿಕ್ಕಾಪಟ್ಟೆ ಕಿರುಚಾಡುತ್ತಾರೆ."

ಗಿರಿಜಾ ರಾಜಶೇಖರನ್ ಸಹ ರಾಜಶೇಖರನ್ ಅವರ ಸಿಟ್ಟನ್ನು ಕುರಿತು ಹೇಳುವುದು ಹೀಗೆ: "ನಮ್ಮವರಿಗೆ ಭಯಂಕರ ಸಿಟ್ಟು. ಆ ಸಿಟ್ಟು ಬಂದಾಗ ನಾವ್ಯಾರೂ ಅವರ ಎದುರು ಇರುವುದಿಲ್ಲ. ಆ ಸಂದರ್ಭದಲ್ಲಿ ತೋಚಿದ್ದನ್ನು ಮಾಡುವ ಸ್ವಭಾವ ಅವರದು. ಆದರೆ, ಆ ಸಿಟ್ಟು ಕ್ಷಣ ಮಾತ್ರದಲ್ಲಿ ಬೆಣ್ಣೆಯಂತೆ ಕರಗಿಬಿಡುತ್ತದೆ."

ಸೊಸೆ ಉಮಾ ರವಿಶಂಕರ್ ಸಹ ಅತ್ತೆಯ ಮಾತಿಗೆ ದನಿಗೂಡಿಸುತ್ತಾರೆ. "ನಮ್ಮಮಾವನವರಿಗೆ ತುಸು ಕೋಪ ಜಾಸ್ತಿ. ಅವರಿಗೆ ಸಿಟ್ಟು ಬಂದಾಗ ನಾವ್ಯಾರೂ ಅಲ್ಲಿರುವುದಿಲ್ಲ. ಪರಿಸ್ಥಿತಿ ಶಾಂತವಾದ ಮೇಲೆಯೇ ನಾವೆಲ್ಲರೂ ಒಟ್ಟಿಗೆ ಕುಳಿತು ಊಟ ಮಾಡುವುದು."

ತಮ್ಮ ಅಜ್ಜನಿಗೆ ಹೀಗೆ ಯಾಕೆ ಸಿಟ್ಟು ಬರುತ್ತದೆಂಬುದನ್ನು ಮೊಮ್ಮಗ ವರುಣ್ ರವಿಶಂಕರ್ ಸ್ವಾರಸ್ಯಕರವಾಗಿ ಹೇಳುತ್ತಾನೆ: "ನಮ್ಮ ಅಜ್ಜನಿಗೆ ಯಾವುದೇ ಕೆಲಸವಾದರೂ ಶ್ರದ್ಧೆಯಿಂದ ಮಾಡಬೇಕು. ಸಣ್ಣ ಕೆಲಸ ಅಂತ ಅಸಡ್ಡೆ ಮಾಡುವಂತಿಲ್ಲ. ಪೆನ್ನಿಗೆ ಇಂಕು ಹಾಕಬೇಕಾದರೂ ಎಷ್ಟು ಆಸಕ್ತಿ ವಹಿಸಬೇಕೋ ಅಷ್ಟೇ ಆಸಕ್ತಿಯನ್ನು ಬೇರೆಯವರಿಗೆ ಕಾಗದ ಬರೆಯುವಾಗಲೂ ವಹಿಸಬೇಕು. ಜಪಾನೀಯರು ಸಣ್ಣ ಕೆಲಸವನ್ನಾದರೂ ಹೇಗೆ ಆಸಕ್ತಿಯಿಂದ ಮಾಡುತ್ತಾರೆಂಬುದನ್ನು ಅವರು ಯಾವಾಗಲೂ ಹೇಳುತ್ತಿರುತ್ತಾರೆ,"

ರಾಜಶೇಖರನ್ ಅವರು ವೈಯಕ್ತಿಕ ಶಿಸ್ತಿಗೆ ಎಂತಹ ಮಹತ್ವ ಕೊಟ್ಟಿದ್ದಾರೆಂಬುದನ್ನು ಮಗಳು ಸುಜಾತ ದಾಖಲಿಸುತ್ತಾರೆ: "ಮೊಮ್ಮಕ್ಕಳು ಭಾನುವಾರ ತಡವಾಗಿ ಎದ್ದರೆ ಎಲ್ಲರಿಗೂ ಬೈಯುತ್ತಾರೆ. ಹಕ್ಕಿಗಳು ಕೂಡ ಬೆಳಗ್ಗೆ ಆರಕ್ಕೆ ಗೂಡು ಬಿಟ್ಟು ಸಂಜೆ ಆರಕ್ಕೆ ಗೂಡು ಸೇರುತ್ತವೆ. ನೀವು ಪ್ರಾಣಿಗಳೂ ಅಲ್ಲ. ಈಡಿಯಟ್ಸ್".

ರಾಜಶೇಖರನ್ ಅವರ ಮತ್ತೊಂದು ವೈಶಿಷ್ಟ್ಯ-ಹಣಕಾಸಿನ ನಿರ್ವಹಣೆ. ಮಹಾತ್ಮಗಾಂಧೀಜಿಯವರಂತೆ ಒಂದು ಪೈಸೆಯನ್ನೂ ವ್ಯರ್ಥವಾಗಿ ಖರ್ಚು ಮಾಡುವ ಸ್ವಭಾವ ಅವರದಲ್ಲ. ಯಾರದೋ ದುಡ್ಡು ಎಂದು ಧಾರಾಳಿಯಾದವರಲ್ಲ. ತಮ್ಮ ಜೇಬಿನ ದುಡ್ಡೆಂದು ಜಿಪುಣರಾದವರಲ್ಲ. ಪ್ರತಿಯೊಂದು ಅಗತ್ಯವನ್ನೂ ಗಮನಿಸಿ ಖರ್ಚು ಮಾಡುವವರು. ಖರ್ಚು ಮಾಡಿದ ಹಣಕ್ಕೆ ಸರಿಯಾದ ಲೆಕ್ಕ ಇಟ್ಟವರು. ಕೃಷಿಯಿಂದ ಎಂದೂ ವಿಶೇಷ ಆದಾಯ ಗಳಿಸದ, ಎಪ್ಪತ್ತೊಂದರಿಂದ ಈತನಕ ಯಾವುದೇ ಅಧಿಕಾರ ಸ್ಥಾನ ಪಡೆಯದ, ತಲತಲಾಂತರದಿಂದ ಬಂದ ಆಸ್ತಿಯನ್ನು ಮಾರಾಟ ಮಾಡದ, ಬಹುಮಟ್ಟಿನ ರಾಜಕಾರಣಿಗಳಂತೆ 'ಕಮೀಷನ್ ಏಜೆಂಟ್' ಆಗದ ರಾಜಶೇಖರನ್, ಈ ತನಕ ಹೇಗೆ ಸ್ವಾಭಿಮಾನಿ ಬದುಕನ್ನು ನಡೆಸಿದ್ದಾರೆಂಬುದು ಅನೇಕರಿಗೆ ಆಶ್ಚರ್ಯದ ವಿಚಾರ.

ಆ ಬಗ್ಗೆ ಅವರ ಮಗ ಮಧುಶಂಕರ್ ಹೇಳುವ ಮಾತುಗಳಿವು: "ಈಗಲೂ ಅವರಷ್ಟು ಅಚ್ಚುಕಟ್ಟಾಗಿ ಲೆಕ್ಕವನ್ನು ಬರೆದಿಡುವವರು ನಮ್ಮ ಮನೆಯಲ್ಲಿ ಯಾರೂ ಇಲ್ಲ. ಅವರು ವಿದೇಶಗಳಿಗೆ ಹೋದ ಸಂದರ್ಭದಲ್ಲೂ ಅಷ್ಟೇ. ತುಂಬಾ ಅಚ್ಚುಕಟ್ಟಾಗಿ ಪ್ರವಾಸದ ಲೆಕ್ಕದ ವಿವರಗಳನ್ನು ತಮ್ಮನ್ನು ಕರೆಸಿಕೊಂಡ ಸಂಸ್ಥೆಗೆ ಒದಗಿಸುತ್ತಾರೆ. ಅವರು ಹೇಳುತ್ತಿದ್ದುದು ಇಷ್ಟೇ. 'ನೀವು ಯಾವುದಕ್ಕಾದರೂ ಖರ್ಚು ಮಾಡಿ, ಸಿನಿಮಾ ನೋಡಿ, ಹೋಟೆಲ್‌ನಲ್ಲಿ ತಿಂಡಿ ತಿನ್ನಿ, ಬೇಕಾದ ಬಟ್ಟೆ ಕೊಂಡುಕೊಳ್ಳಿ, ಆದರೆ ಅದನ್ನು ಬರೆದಿಡಿ'. ಅಂದರೆ ವ್ಯಕ್ತಿಗೆ ತನ್ನ ಉತ್ಪನ್ನ ಹಾಗೂ ಖರ್ಚು ಹೇಗಿರುತ್ತದೆಂಬುದು ತಿಳಿಯಬೇಕೆಂಬುದು ಅವರ ಮೂಲ ಉದ್ದೇಶ." ರಾಜಶೇಖರನ್ ಅವರ ತಮ್ಮ ಕೀರ್ತಿಹಾಸನ್ ಅವರು "ಕಳೆದ ಐವತ್ತು ವರ್ಷಗಳಿಂದ ನಮ್ಮಣ್ಣ ರಾಜಕಾರಣದಲ್ಲಿದ್ದಾನೆ. ಎಲ್ಲರೂ ಹೇಳುವಂತೆ ಆತ ಲೆಕ್ಕಾಚಾರದ ಮನುಷ್ಯ ಹೌದು. ಯಾರಿಂದಲೂ ದುಡ್ಡು ತೆಗೆದುಕೊಂಡಿಲ್ಲ. ಇದೆಲ್ಲ ನಿಜ. ಆದರೆ, ಆತ ಹಾಗೂ ಅವನ ಕುಟುಂಬ ಇದಕ್ಕಾಗಿ ಎಷ್ಟು ಯಾತನೆ ಅನುಭವಿಸಿದೆ ಎಂಬುದು ಯಾರಿಗಾದರೂ ಗೊತ್ತಾಗಿದೆಯೇ? ನಾನೊಬ್ಬ ಬಿಜಿನೆಸ್ ಮ್ಯಾನ್ ಆಗಿ ಈ ಪ್ರಶ್ನೆ ಎತ್ತುತ್ತಿದ್ದೇನೆಯೇ ಹೊರತು. ಆತನ ತಮ್ಮನಾಗಿ ಅಲ್ಲ" ಎಂದು ಅವರು ವ್ಯಕ್ತಪಡಿಸುವ ಆಕ್ರೋಶ ಹೀಗಿದೆ: "ರಾಜಕೀಯದಲ್ಲಿ ಆತ ಅನುಭವಿಸಿದ್ದಾದರೂ ಏನು? ಈಗಿರುವ ಮನೆ ಕಟ್ಟಲಿಕ್ಕೆ ಹದಿನಾಲ್ಕು ವರ್ಷಗಳು ಬೇಕಾದವು. ಈ ಸಂದರ್ಭದಲ್ಲಿ ಬೆಂಗಳೂರಿನ ಮಲ್ಲೇಶ್ವರಂನಲ್ಲಿದ್ದ ಎರಡು ಮನೆಗಳು ಇಲ್ಲವಾದವು. ತನ್ನ ನಿತ್ಯ ಜೀವನಕ್ಕೆ ಆತ ಎಂದೂ ಕೃಷಿಯನ್ನು ಅವಲಂಬಿಸಿಲ್ಲ. ವಿದೇಶಗಳಲ್ಲಿ ವಿಚಾರಸಂಕೀರ್ಣದಲ್ಲಿ ಭಾಗವಹಿಸಿ ಬಂದ ಗೌರವಧನದಿಂದಲೇ ಆತ ಜೀವನ ನಿರ್ವಹಿಸುತ್ತಿದ್ದಾನೆ. ತನ್ನ ಮಕ್ಕಳಿಗಾಗಿ ಆತ ಏನನ್ನು ಸಂಪಾದಿಸಿದ್ದಾನೆಂದು ಈ ಸಂದರ್ಭದಲ್ಲಿ ನಾನು ಕೇಳುವ ಪ್ರಶ್ನೆ. ಮನೆತನಕ್ಕೆ ಆರ್ಥಿಕ ಸುಭದ್ರತೆಯಿದ್ದ ಕಾರಣ ಎಲ್ಲವೂ ಹೇಗೋ ನಡೆದುಹೋಯಿತು. ಇಲ್ಲದೆ ಹೋಗಿದ್ದರೆ ಎಂತಹ ಫಜೀತಿಯಾಗುತ್ತಿತ್ತು." ಆದರೆ, ರಾಜಶೇಖರನ್ ಅವರ ದೃಷ್ಟಿಕೋನವೇ ಬೇರೆ. ಸಾರ್ವಜನಿಕ ಜೀವನವನ್ನು ಆರಿಸಿಕೊಂಡವರು ಕಷ್ಟಗಳನ್ನು ಅನುಭವಿಸಲೇಬೇಕು. ಅವರ ಕುಟುಂಬ ಕೂಡ ಇದಕ್ಕೆ ಹೊರತಾದುದಲ್ಲ.

ರಾಜಶೇಖರನ್ ಅವರ ಸ್ವಭಾವವನ್ನು ವಿಶ್ಲೇಷಿಸುವಾಗ ಕನ್ನಡದ ಪ್ರಸಿದ್ಧ ಸಾಂಗತ್ಯಕವಿ ರತ್ನಾಕರವರ್ಣಿ ಹೇಳುವ ಮಾತೊಂದು ನೆನಪಿಗೆ ಬರುತ್ತದೆ - 'ಉಂಡುಪವಾಸಿ, ಬಳಸಿ ಬ್ರಹ್ಮಚಾರಿ'. ಸಂಸಾರದ ವಿಚಾರಗಳನ್ನು ರಾಜಶೇಖರನ್ ಅಷ್ಟಾಗಿ ತಲೆಗೆ ಹಚ್ಚಿಕೊಂಡವರಲ್ಲ. ಅದನ್ನು ಅವರೇ ಒಮ್ಮೆ ಹೇಳಿದ್ದಾರೆ: "ನನ್ನ ಗಂಡು ಮಕ್ಕಳಾಗಲಿ, ಹೆಣ್ಣು ಮಕ್ಕಳಾಗಲಿ, ನನ್ನಿಂದ ಏನನ್ನೂ ಅಪೇಕ್ಷಿಸಿಲ್ಲ. ನಾನು ಹೇಗೆ ನಮ್ಮ ತಂದೆಗೆ ವಿಧೇಯನೋ ಅದೇ ರೀತಿ ನನ್ನ ಮಕ್ಕಳು ನನ್ನೊಡನಿದ್ದಾರೆ. ಇಷ್ಟಾದಾರೂ ನಮ್ಮ ಕುಟುಂಬಕ್ಕೆ ಕೊಡಬೇಕಾದ ಗಮನವನ್ನು ನಾನು ಕೊಟ್ಟಿಲ್ಲವೆಂಬ ಕೊರಗು ನನ್ನಲ್ಲಿದೆ."

ಅವರ ಕುಟುಂಬದ ಬಗೆಗಿನ ನಿರಾಸಕ್ತಿ ಕುರಿತು ಅನೇಕ ಸಾರಿ ಗಿರಿಜಾ ರಾಜಶೇಖರನ್ ಕೆರಳಿ ಹೀಗೆ ಹೇಳುವುದುಂಟು: 'ನೀವು ಸಂಸಾರಸ್ಥರಾಗುವ ಬದಲು ಮಠದ ಸನ್ಯಾಸಿಯಾಗಿದ್ದರೆ, ಎಷ್ಟೋ ಚೆನ್ನಾಗಿತ್ತು.' ಆದರೂ ರಾಜಶೇಖರನ್ ಅವರ ಬಗ್ಗೆ ಕುಟುಂಬದ ಸದಸ್ಯರಿಗೆ ಅಪಾರ ಗೌರವ. ಅವರ ವ್ಯಕ್ತಿತ್ವದಿಂದಾಗಿ ನಮಗೆ ಸಮಾಜದಲ್ಲಿ ಪ್ರತಿಷ್ಠಿತ ಗೌರವ ದೊರಕಿದೆ ಎಂಬ ಧನ್ಯತಾ ಭಾವ. ರಾಜಶೇಖರನ್ ಅವರ ಮಾನವೀಯ ಸ್ವಭಾವವನ್ನು ಮಗಳು ಸುಜಾತ ದಾಖಲು ಮಾಡುವ ಪ್ರಸಂಗವಿದು: 'ನಮ್ಮ ಮನೆಗೆ ಭಾಗ್ಯ ಎಂಬ ಕೆಲಸದವಳು ಬರುತ್ತಿದ್ದಳು. ಜೊತೆಯಲ್ಲಿ ಅಂಬೆಗಾಲಿಡುವ ಅವಳ ಮಗುವೂ ಬರುತಿತ್ತು. ನಮ್ಮ ತಂದೆಯವರು ಆ ಮಗುವನ್ನು ನೋಡಿದರೆ ಅಡುಗೆ ಮನೆಗೆ ಹೋಗಿ ಎರಡು ಬಾಳೆ ಹಣ್ಣು ತೆಗೆದುಕೊಂಡು ಬಂದು ಅದಕ್ಕೆ ಕೊಡುತ್ತಿದ್ದರು. ಮತ್ತೊಂದು ದಿನ ಅವರು ಮನೆಯಲ್ಲಿದ್ದಾಗ, ತಾಯಿಯ ಜೊತೆ ಮಗು ನಮ್ಮ ಮನೆಗೆ ಬಂತು. ಊಟದ ಮನೆಗೆ ಹೋಗಿ ನೋಡಿದರೆ ಅಲ್ಲಿ ಹಣ್ಣು ಇರಲಿಲ್ಲ. ತಮ್ಮ ಕೋಣೆಗೆ ಹೋಗಿ, ಬೀರುವಿನ ಬಾಗಿಲು ತೆಗೆದು ಗೋಡಂಬಿ, ದ್ರಾಕ್ಷಿ ಮೊದಲಾದವುಗಳನ್ನು ತಂದುಕೊಟ್ಟರು. ಈ ದೃಶ್ಯ ನೋಡಿ ನನಗೆ ತುಂಬಾ ಸಂತೋಷವಾಯಿತು'

ಕುಟುಂಬದ ಸದಸ್ಯರಿಗೆ ರಾಜಶೇಖರನ್ ಆಗಾಗ್ಗೆ ಹೇಳುತ್ತಿದ್ದ ಮಾತುಗಳನ್ನು ಮಗ ಮಧುಶಂಕರ್ ಮರೆಯದೆ ನೆನಪಿಸಿಕೊಳ್ಳುತ್ತಾರೆ. ಇದು ರಾಜಶೇಖರನ್ ಮನೆಯವರಿಗೆ ಮಾತ್ರ ಹೇಳಿದ ಮಾತಲ್ಲ. ಎಲ್ಲ ಸಂಸಾರಸ್ಥರಿಗೂ ಹೇಳಿದ ಕಿವಿಮಾತು: "ಅವರು ಭಾನುವಾರ ಮನೆಯಲ್ಲಿದ್ದರೆ ಮಕ್ಕಳು, ಸೊಸೆಯಂದಿರು, ಅಳಿಯಂದಿರು ಎಲ್ಲ ಸೇರಿ ಜೊತೆಯಲ್ಲಿ ಊಟ ಮಾಡಬೇಕು. ಇಂಥ ಅವಕಾಶವನ್ನು ಕಳೆದುಕೊಳ್ಳಬಾರದೆನ್ನುವುದೇ ಅವರ ಕಾಳಜಿ. ನೀವು ಎಷ್ಟು ಚೆನ್ನಾಗಿ ಮನೆಯವರ ಜೊತೆ ಇರುತ್ತೀರೋ ಅಷ್ಟೇ ಬೇರೆಯವರ ಜೊತೆ ಚೆನ್ನಾಗಿರಲು ಸಾಧ್ಯ. ನೀವು ನಗುನಗುತ್ತಾ ನಿಮ್ಮ ಮನೆಯವರ ಜೊತೆ ಇದ್ದರೆ ಅದೇ ಅಭ್ಯಾಸ ರೂಢಿಯಾಗಿ ಎಲ್ಲರಲ್ಲೂ ನೀವು ಹಾಗೆಯೇ ಇರುತ್ತೀರಿ."

ಅಮೆರಿಕಾದ ಜಾನ್ ಕೆನಡಿಯ ವಂಶಸ್ಥರ ಕಥೆಯನ್ನು ಅವರು ಯಾವಾಗಲೂ ಹೇಳುತ್ತಿರುತ್ತಾರೆ: "ಕೆನಡಿ ವಂಶಸ್ಥರು ಅಮೆರಿಕಾದ ವಿವಿಧ ಕಡೆ ಹರಿದು ಹಂಚಿಹೋಗಿದ್ದಾರೆ. ಆದರೆ ಯಾವುದಾದರೊಂದು ಸಂದರ್ಭದಲ್ಲಿ ವರ್ಷಕ್ಕೊಮ್ಮೆ ಅವರೆಲ್ಲರೂ ಒಂಡೆದೆ ಸೇರಿ ತಮ್ಮ ಕಷ್ಟ ಸುಖಗಳನ್ನು ಹಂಚಿಕೊಳ್ಳುತ್ತಾರೆ. ಕುಟುಂಬದ ಭಾವೈಕ್ಯತೆಯನ್ನು ಪ್ರದರ್ಶಿಸುತ್ತಾರೆ."

ರಾಜಶೇಖರನ್ ಅವರಿಗೆ ತಮ್ಮ ಕುಟುಂಬದ ಸದಸ್ಯರು ಜವಾಬ್ದಾರಿ ಅರಿತವರಾಗಿರಬೇಕು. ಹಾಸಿಗೆ ಇದ್ದಷ್ಟು ಕಾಲು ಚಾಚುವ ಮನೋಧರ್ಮದವರಾಗಿರಬೇಕು. ಜೀವನದಲ್ಲಿ ಸಿಗದಿರುವುದಕ್ಕೆ ಕೊರಗುತ್ತಾ ಬದುಕನ್ನು ದುಃಖಮಯ ಮಾಡಿಕೊಳ್ಳುವ ಬದಲು, ಸಿಕ್ಕಿದ್ದರಲ್ಲಿ ಸಂತೃಪ್ತಿ ಪಡೆಯುವ ಗುಣ ಬೆಳೆಸಿಕೊಳ್ಳಬೇಕು. ಸದಸ್ಯರಲ್ಲಿ ಪರಸ್ಪರ ಪ್ರೀತಿ ವಿಶ್ವಾಸಗಳು ಇರಬೇಕು. ಯಾವುದಾದರೂ ರೀತಿಯಲ್ಲಿ ಸಮಯ ಹೊಂದಿಸಿಕೊಂಡು ಬಂಧು ಮಿತ್ರರು ಹಾಗೂ ಹಿರಿಯರೊಡನೆ ತಮ್ಮ ಕಷ್ಟ ಸುಖಗಳನ್ನು ಹಂಚಿಕೊಳ್ಳಬೇಕು.

ಬಹುಮಟ್ಟಿಗೆ ರಾಜಶೇಖರನ್ ಅವರದು ಸುಖೀ ಕುಟುಂಬ. ಮುಖ್ಯಮಂತ್ರಿಯ ಮಗಳಾಗಿದ್ದರೂ ಗಿರಿಜಾ ರಾಜಶೇಖರನ್ ಅವರು ಎಂದೂ ಅಹಂಕಾರವನ್ನು ತಲೆಗೇರಿಸಿಕೊಂಡವರಲ್ಲ. ತಾವೇ ಗಾಂಧಿಬಜಾರಿಗೆ ನಡೆದುಹೋಗಿ ತರಕಾರಿ ತಂದು ಅಡುಗೆ ಮಾಡಿಡುವರು. ರಾಜಶೇಖರನ್ ಅವರ ಮನಸ್ಸು ಅರಿತು ಸಂಸಾರದ ರಥ ಸಾಗಿಸುತ್ತಿದ್ದಾರೆ. ಮಕ್ಕಳು ಸಹ ಅವರ ಧ್ಯೇಯಾದರ್ಶಗಳಿಗೆ ತಕ್ಕಂತೆ ಬದುಕುತ್ತಿದ್ದಾರೆ. ಅವರ ಕುಟುಂಬದ ಘನತೆಗೆ ತಕ್ಕದಲ್ಲದ ರೀತಿಯ ದೊಡ್ಡ ಅಳಿಯನಿಂದಾಗಿ ಇಡೀ ಕುಟುಂಬ ಸಾಕಷ್ಟು ಮಾನಸಿಕ ಹಿಂಸೆಯನ್ನು ಅನುಭವಿಸಿದೆ.

ರಾಜಶೇಖರನ್ ಅವರ ವಿದ್ವತ್ತು ಹಾಗೂ ಸಾಮಾಜಿಕ ಸ್ಥಾನಮಾನ ಕುರಿತು ಕೆನಡಾದಲ್ಲಿ ವಾಸಿಸುವ ನಿಜಲಿಂಗಪ್ಪನವರ ಕೊನೆಯ ಮಗಳು ಪೂರ್ಣಿಮಾ ಹೇಳಿದ ವಿಚಾರವನ್ನು ಅವರ ಹಿರಿಯ ಮಗ ಚಿತ್ರದುರ್ಗದಲ್ಲಿರುವ ರಾಜಣ್ಣ ಒಂದೆಡೆ ದಾಖಲಿಸಿದ್ದಾರೆ: "ನನ್ನ ತಂಗಿ ಪೂರ್ಣಿಮಾ ತನ್ನ ಡಾಕ್ಟರ್ ಪತಿಯೊಡನೆ ಮೂವತ್ತೈದು ವರ್ಷಗಳಿಂದ ಕೆನಡಾದಲ್ಲಿ ವಾಸಿಸುತ್ತಿದ್ದಾಳೆ. ರಾಜಶೇಖರನ್ ಅವರ ಮನೆಗೆ ಆಗಾಗ್ಗೆ ಹೋಗುತ್ತಿರುತ್ತಾರೆ. ಅಲ್ಲಿ ಪೂರ್ಣಿಮ ಹಾಗೂ ಅವಳ ಪತಿ ಡಾ. ಮೃತ್ಯುಂಜಯ ಅವರ ಅತಿಥಿಯಾಗಿರುತ್ತಾರೆ. ಆಗ ಹಲವಾರು ಸೆನೆಟ್ ಸದಸ್ಯರು, ರಾಯಭಾರಿ ಕಛೇರಿಯವರು, ರಾಜಕಾರಣೀಗಳು ರಾಜಶೇಖರನ್ ಅವರನ್ನು ಫೋನ್‌ನಲ್ಲಿ ವಿಚಾರಿಸುವುದು ನಮಗೆ ಆಶ್ಚರ್ಯ ತರುತ್ತಿತ್ತು ಎಂದು ಅವಳು ಹೇಳುತ್ತಾಳೆ".

ನಿಜಲಿಂಗಪ್ಪನವರಿಗಿಂತ ರಾಜಶೇಖರನ್ ಅವರೇ ವಿದೇಶಗಳಲ್ಲಿ ಭಾರತದ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಕ್ಷೇತ್ರದಲ್ಲಿನ ವಿದ್ವತ್ತಿಗಾಗಿ ಪ್ರಸಿದ್ಧಿಯಾಗಿರುವರು. ಈ ವಿಚಾರ ಅವರ ಕುಟುಂಬದ ಸದಸ್ಯರಿಗೆ ಹಾಗೂ ಬಂಧು ಮಿತ್ರರಿಗೆ ಹೆಮ್ಮೆಎನಿಸಿದೆ. ಈ ಕಾರಣಕ್ಕಾಗಿ ಯಾವುದೇ ಸಮಾರಂಭ ಅಥವಾ ಮುಖ್ಯ ಘಟನೆ ನಡೆದರೆ ರಾಜಶೇಖರನ್ ಸಹಜವಾಗಿ ಅಲ್ಲಿನ ಕೇಂದ್ರ ವ್ಯಕ್ತಿಯಾಗುತ್ತಾರೆ. ಆಗ ಅಲ್ಲಿ ನೆರೆದಿರುವವರು ರಾಜಶೇಖರನ್ ಅವರ ಸರಳತೆ ಹಾಗೂ ಬಿಚ್ಚು ಮಾತನ್ನು ನೋಡಿ ಅವರ ಅಭಿಮಾನಿಗಳಾಗುತ್ತಾರೆ.

## ಸ್ನೇಹಿತರನ್ನು ಮಾಡಿಕೊಳ್ಳುವ ಕಲೆ ಕರಗತ :

ಎಂ.ವಿ. ರಾಜಶೇಖರನ್ ಅವರ ಸಂಪತ್ತೇ ಅವರ ಮಿತ್ರವರ್ಗ. ಭಾರತದಾದ್ಯಂತ ಅವರಿಗೆ ಸ್ನೇಹಿತರಿದ್ದಾರೆ. ವಿದೇಶದಲ್ಲೂ ಅವರನ್ನು ಗೌರವಿಸುವ ವ್ಯಕ್ತಿಗಳಿದ್ದಾರೆ. ಸ್ನೇಹಿತರನ್ನು ಮಾಡಿಕೊಳ್ಳುವುದು ಮತ್ತು ಅದನ್ನು ಉಳಿಸಿಕೊಳ್ಳುವುದು ಒಂದು ಕಲೆ ಎನ್ನುವುದಾದರೆ ರಾಜಶೇಖರನ್ ಅವರಿಗೆ ಮೊದಲ ಪ್ರಶಸ್ತಿ ಸಿಗುತ್ತದೆ. ಡಾ. ಹಾ.ಮಾ. ನಾಯಕ್ ಹೇಳುವಂತೆ "ಸ್ನೇಹ ಬದುಕಿನ ಅಮೂಲ್ಯ ನಿಧಿ. ಒಳ್ಳೆಯ ಸ್ನೇಹಿತರು ವರವಾಗುತ್ತಾರೆ. ಅಂಥ ಸ್ನೇಹಿತರಿಂದ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಅದೇ ಸ್ನೇಹಿತರಿಂದ ಬದುಕಿನಲ್ಲಿ ಯಶಸ್ಸು ದೊರೆಯುತ್ತದೆ" ಎಂಬ ಮಾತು ಇವರ ವಿಚಾರದಲ್ಲಿ ಅಕ್ಷರಶಃ ಸತ್ಯವಾಗಿದೆ. ಇವರೆಲ್ಲ ಸ್ನೇಹಿತರು ರಾಜಶೇಖರನ್ ಅವರ ಗುಣಸ್ವಭಾವಗಳನ್ನು ಮೆಚ್ಚಿಕೊಂಡಿದ್ದಾರೆ. ಅವರ ವಿಚಾರದಲ್ಲಿ ಸದಾಕಾಲ ಒಳಿತನ್ನೇ ಬಯಸಿದ್ದಾರೆ.

ರಾಜಶೇಖರನ್ ಅವರ ವಿಭಿನ್ನ ವ್ಯಕ್ತಿತ್ವ ಕುರಿತಂತೆ ಉಪರಾಷ್ಟ್ರಪತಿ ಭೈರೋನ್ ಸಿಂಗ್ ಶೇಖಾವತ್ ಸುದೀರ್ಘ ಪಯಣದಲ್ಲಿ ಗ್ರಾಮೀಣ ಭಾರತದ ಅಭಿವೃದ್ಧಿಗೆ ರಾಜಶೇಖರನ್ ಮಹತ್ವದ ಕೊಡುಗೆ ಕೊಟ್ಟಿದ್ದಾರೆಂದು ಹೇಳುತ್ತಾರೆ. ಮಾಜಿ ರಾಷ್ಟ್ರಪತಿ ಆರ್. ವೆಂಕಟರಾಮನ್ ಅವರು ರಾಜಶೇಖರನ್ ಅವರು ತಳಹಂತದಿಂದ ಲೋಕಸಭೆಯೇರಿದ ಅಪರೂಪದ ನಾಯಕರಾಗಿ, ಮಹಾತ್ಮ ಗಾಂಧೀಜಿಯಂತೆ ಗ್ರಾಮೀಣ ಭಾರತದ ಅಭಿವೃದ್ಧಿ ವ್ಯವಸಾಯ ಮತ್ತು ಅದಕ್ಕೆ ಹೊಂದಿಕೊಂಡಂತೆ ಉಪಕಸುಬುಗಳನ್ನು ಅವಲಂಬಿಸಿದೆ ಎಂದು ನಂಬಿದ್ದು, ಅದರಂತೆ ನಡೆಯುತ್ತಿದ್ದಾರೆ ಎಂದು ಭಾವಿಸಿದ್ದಾರೆ.

ಮಾಜಿ ಪ್ರಧಾನಿ ಚಂದ್ರಶೇಖರ್ ಅವರು ರಾಜಶೇಖರನ್ ಈ ದೇಶದ ನೈಜ ಮಣ್ಣಿನ ಮಗನೆಂದು ಶ್ಲಾಘಿಸುತ್ತಾರೆ.

ಕರ್ನಾಟಕದ ರಾಜ್ಯಪಾಲರಾದ ಚತುರ್ವೇದಿಯವರು ರಾಜಶೇಖರನ್ ಅವರು ಗ್ರಾಮೀಣ ಜನರ ಸಮಸ್ಯೆಗಳಿಗೆ ಸ್ಪಂದಿಸಿ ಅವರ ಹಿತ ಕಾಯುವ ನಾಯಕರೆಂದು ಭಾವಿಸುತ್ತಾರೆ. ಕೇಂದ್ರದ ಕೃಷಿ ಸಚಿವರಾದ ಶರದ್ ಪವಾರ್ ಅವರು ರಾಜ್ಯದ ಶಾಸನಸಭೆಯಿಂದ ಕೇಂದ್ರ ಲೋಕಸಭೆ ಅಥವಾ ರಾಜ್ಯಸಭೆಗಳಿಗೆ ಬಂದಿರುವ ಅವರಿಗೆ ರೈತರ ಕಲ್ಯಾಣ, ಗ್ರಾಮೀಣಾಭಿವೃದ್ಧಿ, ಬಡತನ ನಿರ್ಮೂಲನೆ, ಹಸಿವಿಗೆ ಪರಿಹಾರವೇ ಆಗಿದೆ. ಹೀಗಾಗಿ ಅವರೊಬ್ಬ ಮಾನವೀಯ ನಾಯಕರೆಂದು ಹೇಳುತ್ತಾರೆ. ಸ್ನೇಹಿತರಾದ ಬನ್ಸಿಲಾಲ್ ರಾಷ್ಟ್ರೀಯ ನಾಯಕರೆಂದು ಹೇಳುತ್ತಾ ಸರ್ವೋದಯ ತತ್ವಗಳನ್ನು ಪಾಲಿಸಿದವರೆಂದು ಹೇಳುತ್ತಾರೆ. ಕರ್ನಾಟಕದ ಮುಖ್ಯಮಂತ್ರಿಗಳಾದ ಧರ್ಮಸಿಂಗ್ ಅವರು 'ರೈತರ ಸಂಘಟನೆ, ಕೃಷಿಕ ಸಮಾಜದ ಸ್ಥಾಪನೆ, ಯುವಜನ ಸೇವಾ ಇಲಾಖೆಯ ಪ್ರಾರಂಭ ಇವುಗಳಲ್ಲಿ ರಾಜಶೇಖರನ್ ಅವರ ವ್ಯಕ್ತಿತ್ವವಿರುವುದನ್ನು' ಗುರುತಿಸುತ್ತಾರೆ.

ವಿದೇಶದ ಅನೇಕ ಮಿತ್ರರು ರಾಜಶೇಖರನ್ ಅವರ ಹಿರಿದಾದ ವ್ಯಕ್ತಿತ್ವವನ್ನು ಮನದುಂಬಿ ಬಣ್ಣಿಸುತ್ತಾರೆ. ಶ್ರೀಲಂಕಾದ ಸರ್ವೋದಯ ನಾಯಕರೆಂದು ಖ್ಯಾತರಾಗಿರುವ ಡಾ. ಎ.ಟಿ.ಅರಿಯರತ್ನೆ (A.T. Ariyaratne) "ರಾಜಶೇಖರನ್ ಅವರು ನನ್ನ ಹಿರಿಯ ಸೋದರ ಹಾಗೂ ನನ್ನ ಮಾರ್ಗದರ್ಶಕ"ರೆಂದು ಒಪ್ಪಿಕೊಳ್ಳುತ್ತಾರೆ. ಅವರ ಪತ್ನಿ ನೀತಾ ಅವರು "ರಾಜಶೇಖರನ್ ಅವರು ಭಾರತದಲ್ಲಿ ಮಾತ್ರವಲ್ಲದೆ ವಿದೇಶದ ಪ್ರಜ್ಞಾವಂತರಲ್ಲೂ ಜನಪ್ರಿಯರೆನ್ನುತ್ತಾರೆ."

ಅಮೆರಿಕಾದ ಜೋನ್ ಹೋಮ್ಸ್ (Joan Holmes) ಅವರು ರಾಜಶೇಖರನ್ ಅವರನ್ನು ಅಭಿನಂದಿಸುತ್ತಾ, "ನಿಮ್ಮ ಬದ್ಧತೆ, ಸಹೃದಯತೆ, ಸ್ಫೂರ್ತಿ, ಮಾನವೀಯತೆ, ಎಲ್ಲ ನಾಗರಿಕರ ಕುರಿತಾದ ಗೌರವ ಶ್ಲಾಘನೀಯ" ಎನ್ನುತ್ತಾರೆ.

ಅಮೆರಿಕಾದ ಜಾನ್ ಕೂನಾಡ್ರೋ (John coonrod) ಅವರು, ರಾಜಶೇಖರನ್ ಅವರನ್ನು 'ವಿಶ್ವ ನಾಗರಿಕ ' ಎಂದು ಬಣ್ಣಿಸುತ್ತಾ ಅವರು ಕರ್ನಾಟಕದ ಭಾರತದ ಚಾಂಪಿಯನ್ ಮಾತ್ರವಲ್ಲ, ವಿಶ್ವದ ನಾಗರಿಕರೆಂದು ಹೇಳುತ್ತಾರೆ.

ಸ್ವಿಟ್ಜರ್‌ಲ್ಯಾಂಡ್‌ನ ಫರ್ನಾಂಡ್ ವಿನ್ಸಂಟ್ (Fernand Vincent) ಅವರು ರಾಜಶೇಖರನ್ ಅವರ ಜೊತೆಗೆ ಆಫ್ರಿಕಾದಲ್ಲಿ ಕೆಲಸ ಮಾಡಿದ ಅವಧಿಯನ್ನು ನೆನಪಿಸಿಕೊಂಡು, ಸ್ಥಳೀಯರ ಆಹಾರ ಪದ್ಧತಿ, ವಿದ್ಯಾಭ್ಯಾಸ, ಕೃಷಿ, ಗೃಹ ಕೈಗಾರಿಕೆಗಳನ್ನು ತಿಳಿದುಕೊಳ್ಳಲು ರಾಜಶೇಖರನ್ ಅವರು ವಹಿಸುವ ಆಸಕ್ತಿಯನ್ನು ದಾಖಲುಮಾಡುತ್ತಾರೆ. ಅವರು ಯಾವುದೇ ಆಫ್ರಿಕಾದ ಗ್ರಾಮಾಂತರ ಪ್ರದೇಶಕ್ಕೆ ಹೋದರೆ ಅವರ ಪ್ರಾದೇಶಿಕ ತಿಳುವಳಿಕೆಯಿಂದಾಗಿ ಅವರು ಆ ಪ್ರದೇಶದವರೇ ಆಗಬಹುದೆಂದು ಅವರು ಹೇಳಿದ್ದುಂಟು. ಇದು ಯಾವುದೇ ವಿಶ್ವವಿದ್ಯಾನಿಲಯದ ಜಾನಪದ ವಿದ್ವಾಂಸನೊಬ್ಬನ ಲಕ್ಷಣವಲ್ಲವೇ ? ಥೈಲ್ಯಾಂಡಿನ ಶಿವಖಾರೆ (Shiv Khare) ಅವರು ರಾಜಶೇಖರನ್ ಅವರ ಮೃದು ಹಾಗೂ ಅಪರೂಪದ ಮಾನವೀಯತೆ ಗುಣವುಳ್ಳ ವ್ಯಕ್ತಿ ಎಂದು ಬಣ್ಣಿಸುತ್ತಾರೆ. ನೆದರ್‌ಲ್ಯಾಂಡ್‌ನ ಪೀಟ್ ಡಿ. ಜೆಕ್‌ಸ್ಟ್ರಾ (Piet D. JKstra) ಅವರು ರಾಜಶೇಖರನ್ ಅವರು ತಮ್ಮೆಲ್ಲ ಪ್ರೀತಿ ಹಾಗೂ ಆಸಕ್ತಿಯನ್ನು ಗ್ರಾಮೀಣ ಸಮುದಾಯಕ್ಕೆ ಅರ್ಪಿಸಿ ದುಡಿಯುತ್ತಿರುವ ಮಹಾನ್ ವ್ಯಕ್ತಿ ಎಂದು ವರ್ಣಿಸುತ್ತಾರೆ. ಫಿಲಿಪ್ಪೈನ್ಸ್‌ನ ಲಿಲಿಯಾ ಒ ರಾಮೋಸ್ (Lilia O. Ramos) ಅವರು ರಾಜಶೇಖರನ್ ಅವರನ್ನು ಆಫ್ರಿಕಾದ ಸರ್ಕಾರೇತರ ಸಂಸ್ಥೆಗಳ ಮಹಾನ್ ನಾಯಕರೆಂದು ಬಣ್ಣಿಸುತ್ತಾ ಗ್ರಾಮೀಣಾಭಿವೃದ್ಧಿ ಬಗೆಗೆ ಅವರಿಗಿರುವ ದೃಷ್ಟಿಕೋನವನ್ನು ಪ್ರಶಂಸಿಸುತ್ತಾರೆ. ಶ್ರೀಲಂಕಾದ ಎಲ್.ಎಂ. ಸಮರಸಿಂಗೆ (L.M.Samarasinghe) ಅವರು ರಾಜಶೇಖರನ್ ಅವರು ಅಂತಾರಾಷ್ಟ್ರೀಯ ವಿಚಾರಗೋಷ್ಠಿಗಳಲ್ಲಿ ಭಾಗವಹಿಸುವ ಸಂದರ್ಭವನ್ನು ಜ್ಞಾಪಿಸಿಕೊಳ್ಳುತ್ತಾ ಎಲ್ಲ ಗೋಷ್ಠಿಗಳಲ್ಲೂ ರಾಜಶೇಖರನ್ ಅವರು ಅಮೂಲ್ಯ ಕೊಡುಗೆ ಕೊಟ್ಟಿದ್ದಾರೆ. ಅವರು ಒಬ್ಬ ಅತಿ ಮೇಧಾವಿ ಎಂದು ದಾಖಲಿಸುತ್ತಾರೆ. ರಾಜಶೇಖರನ್ ಅವರದು ಮೃದು ಸ್ವಭಾವವೆಂದು ಹೇಳುವ ಫಿಲಿಫೈನ್ಸ್‌ನ ನೆಥಾನೀಲ್ ಡೋನ್ ಇ ಮಾರ್ಕಿಜ್ (Nathaniel Zone Marquez) ಅವರು ಸಮುದಾಯದ ಬಗ್ಗೆ ಕ್ಷೇತ್ರದಲ್ಲಿ ಬೆಳಗುವ ಸಾಂಸ್ಕೃತಿಕ ವೈವಿಧ್ಯತೆ ಹಾಗೂ ಆಧ್ಯಾತ್ಮಿಕತೆಯ ಜೊತೆಗೆ ಹೆಚ್ಚು ಒತ್ತು ಕೊಟ್ಟಿದ್ದಾರೆ. ರಾಜಶೇಖರನ್ ಅವರದು ಅಪರೂಪದ ವ್ಯಕ್ತಿತ್ವ ಎನ್ನುತ್ತಾ 'ಮ್ಯಾನ್ ಆಫ್ ಏಷಿಯಾ' ಎಂದು ಸಂಬೋಧಿಸುವ ಅವರು ರಾಜಶೇಖರನ್ ಅವರ ನಗುವನ್ನು ಮೆಚ್ಚಿಕೊಳ್ಳುತ್ತಾರೆ. ಅವರ ಮಂದಸ್ಮಿತಕ್ಕೆ ತಕ್ಷಣ ನಮ್ಮ ಹೃದಯ ತೆರೆದುಕೊಳ್ಳುತ್ತದೆ. ಆ ನಗುವಿನಲ್ಲಿ ನಿಷ್ಕಳಂಕ ಹಾಗೂ ಸೇವಾ ತತ್ಪರತೆ ಅಡಗಿದೆ. ಬಾಂಗ್ಲದೇಶದ ಶೇಖ ಎ ಹಲೀಮ್ (Shaik A Halim) ಅವರು ರಾಜಶೇಖರನ್ ಅವರನ್ನು 'ರಾಜುಭಾಯಿ' ಎಂದು ಭಾವಿಸಿ ೧೯೮೭ರಲ್ಲಿ ಬೆಂಗಳೂರಿಗೆ

ಭೇಟಿ ಕೊಟ್ಟಾಗ ಅವರ ಮನೆಗೆ ಭೇಟಿ ಇತ್ತ ನೆನಪನ್ನು ಸ್ಮರಿಸಿಕೊಂಡು ಅವರ ಮನೆಯ ಸಾಂಸ್ಕೃತಿಕ ಪರಿಸರದ ಬಗ್ಗೆ ಹೇಳುತ್ತಾರೆ. 'ಆನ್ ಇನ್‌ಸ್ಪೈರಿಂಗ್ ಎನ್‌ಜಿಒ ಲೀಡರ್' ಎನ್ನುವ ರವನೇರಾ ಅವರು "ರಾಜಶೇಖರನ್ ಸಾಂಸ್ಕೃತಿಕ ರಾಯಭಾರಿಯಂತೆ, ಸರ್ಕಾರೇತರ ಸಂಸ್ಥೆಯ ಅಧ್ಯಕ್ಷರಾಗಿ ಅವರ ಕಾರ್ಯ ಸ್ಮರಣೀಯವಾದುದು. ಒಮ್ಮೆ ೧೦ ದೇಶಗಳ ೩೦೦೦ ಸರ್ಕಾರೇತರ ಸಂಸ್ಥೆಗಳ ಪದಾಧಿಕಾರಿಗಳನ್ನು ಅವರು ನಿರ್ವಹಿಸಿದ ರೀತಿ ಸದಾ ನನ್ನ ನೆನಪಿನಲ್ಲಿ ಇರುತ್ತದೆ. ಅವರ ಸ್ಫೂರ್ತಿದಾಯಕ ವ್ಯಕ್ತಿತ್ವದಿಂದ ಆ ಪ್ರತಿನಿಧಿಗಳೆಲ್ಲ ಅವರವರ ಕಾರ್ಯಕ್ಕೆ ತಮ್ಮನ್ನು ಅರ್ಪಿಸಿಕೊಳ್ಳುವಂತೆ ಮಾಡಿದ ರೀತಿಯನ್ನು ಯಾರು ತಾನೆ ಮರೆಯುತ್ತಾರೆ?"ಎನ್ನುತ್ತಾರೆ.

ಭಾರತದ ಹಸಿವು, ಅಜ್ಞಾನ, ರೈತರ ಸಂಕಷ್ಟ ಹಾಗೂ ಪ್ರಾಕೃತಿಕ ವೈಫಲ್ಯಗಳ ನಿವಾರಣೆಗೆ ರಾಜಶೇಖರನ್ ಅವರಂಥ ಸದೃಢ ಸೇವಾಕರ್ತರು ಬೇಕೆಂದು ಢಾಕಾದ ಹರಿಪಾದ ಭೌಮಿಕ್ (Hari Pada Bhowmik) ಬರೆಯುತ್ತಾರೆ.

ಭಾರತದ ಹಿರಿಯ ರಾಜಕಾರಣಿಗಳಲ್ಲಿ ಒಬ್ಬರಾದ ಎನ್.ಡಿ. ತಿವಾರಿ ಅವರು 'ರಾಜಶೇಖರನ್ ನೈಜ ಗಾಂಧೀವಾದಿ. ಗಾಂಧೀಜಿಯವರ ದೃಷ್ಟಿಯಲ್ಲಿ ಅಭಿವೃದ್ಧಿ ಎಂದರೆ ಸಮಸ್ತ ಗ್ರಾಮೀಣ ಭಾರತದ ಅಭಿವೃದ್ಧಿಯಾಗಿದೆ. ಅದಕ್ಕಾಗಿ ದುಡಿಯುವ ರಾಜಶೇಖರನ್ ಒಬ್ಬ ನಿಷ್ಕಾಮ ಯೋಗಿ" ಎಂದು ಖಚಿತವಾಗಿ ನುಡಿಯುತ್ತಾರೆ.

ಕರ್ನಾಟಕದ ಹಿರಿಯ ರಾಜಕಾರಣಿಗಳಲ್ಲಿ ಒಬ್ಬರಾದ ರಾಜಶೇಖರನ್ ಅವರು ಅತ್ಯಂತ ಸಭ್ಯರು, ಸ್ನೇಹಿತರ ಹಿತವನ್ನು ಕಾಯುವ ಉದಾರಿಗಳೆಂದು ಎಂ.ಎಸ್.ಗುರುಪಾದಸ್ವಾಮಿ ಅವರು ಹೇಳುತ್ತಾರೆ. ಐವತ್ತು ವರ್ಷಗಳ ಸ್ನೇಹವನ್ನು ಮೆಲಕು ಹಾಕುವ ತುಳಸೀದಾಸಪ್ಪ ಅವರು 'ರಾಜಶೇಖರನ್ ಅವರಂತಹ ಸ್ನೇಹಿತರನ್ನು ಪಡೆಯುವುದು ಪುಣ್ಯ' ಎಂದು ಉದ್ಗರಿಸುತ್ತಾರೆ. ಪ್ರೊ. ಎಂ.ಸಿ. ಶಾಂತಮೂರ್ತಿ ಪ್ರಕಾರ 'ರಾಜಶೇಖರನ್ ಅವರು ರೈತರ ಹಿತವನ್ನು ಕಾಯ್ದುಕೊಂಡು ಶಾಸನಸಭೆಯಲ್ಲಿ ಅವರ ವಿಚಾರವನ್ನು ಪ್ರತಿನಿಧಿಸುವ ಅಪರೂಪದ ಸಂಸದೀಯ ಪಟು' ಎಂದಿದ್ದಾರೆ. ನ್ಯಾಯಮೂರ್ತಿ ವಿ.ಎಸ್. ಮಳೀಮಠ 'ಆದರ್ಶವಾದಿ' ಎಂದು ಬಣ್ಣಿಸುತ್ತಾ, ಭೂದಾನ ಚಳವಳಿ ಹಾಗೂ ಗಾಂಧಿ ಮಾರ್ಗದಲ್ಲಿ ಗ್ರಾಮೀಣಾಭಿವೃದ್ಧಿ ಸಾಧಿಸಿದವರೆಂದು ಶ್ಲಾಘಿಸಿದ್ದಾರೆ. ಹಿರಿಯ ಐ.ಎ.ಎಸ್. ಅಧಿಕಾರಿಯಾಗಿದ್ದ ಬಿ.ಎಸ್. ಹನುಮಾನ್ ಅವರು 'ನಾನು ರಾಜಶೇಖರನ್ ಅವರನ್ನು ಕಳೆದ ೫೦ ವರ್ಷಗಳಿಂದ ಗಮನಿಸುತ್ತಾ ಬಂದಿದ್ದೇನೆ. ಅವರ ಚಿಂತನೆ ಮೇಲ್ಮಟ್ಟದ್ದು. ಆದರೆ ಬದುಕು ಅತ್ಯಂತ ಸರಳವಾದುದು. ಅದು ರಾಜಕಾರಣಿಗಳಲ್ಲಿ ಅಪರೂಪ ಎನ್ನಿಸುವಂತಹದ್ದು' ಎನ್ನುತ್ತಾರೆ. ಕೃಷಿ ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿ ಡಾ. ಆರ್. ದ್ವಾರಕೀನಾಥ್ ಅವರು 'ರಾಜಶೇಖರನ್ ಕೃಷಿ ವಿಶ್ವವಿದ್ಯಾನಿಲಯದ ಸಂಶೋಧನೆಯನ್ನು ರೈತರ ಹೊಲಗಳಿಗೆ ತಂದವರು' ಎನ್ನುತ್ತಾರೆ. ಕೃಷಿ ವಿಶ್ವವಿದ್ಯಾನಿಲಯದ ಮಾಜಿ ಕುಲಪತಿ ಡಾ. ಎಂ. ಮಹದೇವಪ್ಪ ಅವರು 'ರೈತರ ನೈಜ ಮಿತ್ರ'ನೆಂದು ವರ್ಣಿಸುತ್ತಾರೆ. ಹಿರಿಯ ಪತ್ರಕರ್ತರಾದ ಎಂ.ಕೆ. ವಿದ್ಯಾರಣ್ಯ ಅವರು ರಾಜಶೇಖರನ್ ಅವರನ್ನು "ಅಜಾತ ಶತ್ರು" ಎಂದು ಬಣ್ಣಿಸುತ್ತಾರೆ.

## ಬಯಸದೇ ಬಂದ ಭಾಗ್ಯ :

ಧರ್ಮಕರ್ಮ ಸಂಯೋಗದಿಂದ ರಾಜಶೇಖರನ್ ಅವರು ೨೦೦೪ರ ಮೇನಲ್ಲಿ ಡಾ. ಮನಮೋಹನ ಸಿಂಗ್ ಅವರ ಸಚಿವ ಸಂಪುಟದಲ್ಲಿ ಕೇಂದ್ರ ಯೋಜನಾ ಖಾತೆಯ ರಾಜ್ಯ ಸಚಿವರಾದರು. ಅವರ ಸೇವೆಯನ್ನು ಕೇಂದ್ರ ಕೃಷಿಸಚಿವ ಶರದ್ ಪವಾರ್ ಅವರು ಬಯಸಿದ್ದರು. ಪ್ರಧಾನಿ ಮನಮೋಹನ್ ಸಿಂಗ್ ಅವರಿಗೆ ಎಂ.ವಿ.ರಾಜಶೇಖರನ್ ಅವರ ಶಕ್ತಿ ಸಾಮರ್ಥ್ಯಗಳು ಅರಿವು ಚೆನ್ನಾಗಿ ಇತ್ತು. ಅವರ ಜೊತೆಗೆ ಎಂ.ವಿ.ರಾಜಶೇಖರನ್ ಕಳೆದ ಎರಡು ವರ್ಷಗಳಿಂದ ರಾಜ್ಯಸಭೆಯ ಕಲಾಪಗಳಲ್ಲಿ ಸಕ್ರಿಯರಾಗಿ ಭಾಗವಹಿಸಿದ್ದರು. ಗ್ರಾಮೀಣಾಭಿವೃದ್ಧಿ ಬಗ್ಗೆ ಅವರ ತುಡಿತಗಳನ್ನು ಅರಿತುಕೊಂಡ ಪ್ರಧಾನಿಯವರು ಗ್ರಾಮೀಣ ಜನರ ಬದುಕಿಗೆ ಒಳಿತಾಗಬೇಕಾದರೆ ಯೋಜನೆ ಖಾತೆಯಲ್ಲಿ ಇವರು ಕೆಲಸ ಮಾಡಬೇಕೆಂದು ನಿರ್ಣಯಿಸಿ ಅದನ್ನು ಕೊಟ್ಟರು. ಜೊತೆಗೆ ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷರಾದ ಶ್ರೀಮತಿ ಸೋನಿಯಾ ಗಾಂಧಿ ಅವರು ಎಂ.ವಿ. ರಾಜಶೇಖರನ್ ಅವರನ್ನು ಕಳೆದ ೪-೫ ವರ್ಷಗಳಿಂದ ಚೆನ್ನಾಗಿ ಬಲ್ಲವರು. ಅವರ ಬದ್ಧತೆ, ದಕ್ಷತೆ ಹಾಗೂ ಗ್ರಾಮೀಣ ಅಭಿವೃದ್ಧಿಯ ಬಗೆಗಿರುವ ಜ್ಞಾನದ ಬಗ್ಗೆ ಅವರಲ್ಲಿ ಅಭಿಮಾನವಿತ್ತು.ಈ ಇಬ್ಬರು ನಾಯಕರಿಂದಾಗಿ ಎಂ.ವಿ. ರಾಜಶೇಖರನ್ ಅವರಿಗೆ ಮೂವತ್ತನಾಲ್ಕು ವರ್ಷಗಳ ನಂತರ ಅಧಿಕಾರ ದೊರಕಿದೆ. ಅದು ಅವರಿಗೆ ಪ್ರಿಯವಾದ ದೇಶದ ಯೋಜನೆಗೆ ರೂಪು ಕೊಡುವ ಯೋಜನಾ ಖಾತೆ.

**ದೂರದೃಷ್ಟಿಯುಳ್ಳ ಚಿಂತಕ :**

ಎಂ.ವಿ. ರಾಜಶೇಖರನ್ ಜೊತೆ ಬಾಂಧವ್ಯವಿರುವ ಪ್ರತಿಯೊಬ್ಬರೂ ಅವರ ಸೇವಾ ಭಾವನೆಯನ್ನು ಬಹು ಬೇಗನೆ ಅರಿತುಕೊಳ್ಳುತ್ತಾರೆ. ಅವರ ಪ್ರಗತಿಯ ಚಿಂತನೆ ಕೂಡ ಸಂಕುಚಿತ ಅರ್ಥದಲ್ಲಿ ಇರುವುದಿಲ್ಲ. ಅದಕ್ಕೆ ಒಂದು ವಿಶೇಷವಾದ ವ್ಯಾಪಕತೆ ಇರುತ್ತದೆ. ಗ್ರಾಮೀಣಾಭಿವೃದ್ಧಿ, ಕೃಷಿ, ಶಿಕ್ಷಣ, ಐತಿಹಾಸಿಕ ಪರಂಪರೆ, ರಾಜಕೀಯ, ಭಾಷೆ, ಸಾಹಿತ್ಯ, ಆಧ್ಯಾತ್ಮ, ಧಾರ್ಮಿಕ ಕ್ಷೇತ್ರ ಮೊದಲಾದ ಸಾಗರದಷ್ಟು ವಿಶಾಲವಾದ ಕ್ಷೇತ್ರಗಳನ್ನು ಆರಿಸಿಕೊಂಡು ಕೆಲಸ ಮಾಡಲು ಅವರು ಮುಂದಾಗುತ್ತಾರೆ. ಅವರು ಹಾಕಿದ ಬೀಜ ಕಾಲಾನಂತರದಲ್ಲಿ ಮರವಾಗಿ ಸಾವಿರಾರು ಜನರಿಗೆ ಸ್ಪೂರ್ತಿ ಕೊಡುವುದರಲ್ಲಿ ಯಾವ ಸಂಶಯವಿಲ್ಲ. ಅವರು ರಾಜ್ಯದ ಮುಖ್ಯಮಂತ್ರಿಗಳಿಗೆ ಬರೆದಿರುವ ಪತ್ರಗಳಲ್ಲಿ ವ್ಯಕ್ತವಾಗಿರುವ ಅವರ ನಾಡು ನುಡಿಗಳ ಅಭಿಮಾನ ನಿಜಕ್ಕೂ ಹೃದಯಸ್ಪರ್ಶಿ. ತಮಿಳು ಭಾಷೆಯನ್ನು ಕೇಂದ್ರ ಸರ್ಕಾರ ಕ್ಲಾಸಿಕ್ ಭಾಷೆಯೆಂದು ಘೋಷಿಸಿ ಅದರ ಅಭಿವೃದ್ಧಿಗೆ ಬೆಂಬಲ ನೀಡಿರುವುದನ್ನು ಗಮನಿಸಿದ ಎಂ.ವಿ. ರಾಜಶೇಖರನ್ ಅವರು ೩೦-೦೭-೨೦೦೪ ರಂದು ಪತ್ರ ಬರೆದು ಕನ್ನಡ ಭಾಷೆಯನ್ನು ಕೂಡ ಕ್ಲಾಸಿಕ್ ಭಾಷೆಯೆಂದು ಘೋಷಿಸಲು ಕೇಂದ್ರ ಸರ್ಕಾರದ ಮೇಲೆ ಒತ್ತಡ ತರಲು ಸಾಹಿತಿಗಳು, ಕಲಾವಿದರುಗಳ ನಿಯೋಗವೊಂದನ್ನು ಕರೆದುಕೊಂಡು ಬನ್ನಿ. ದೆಹಲಿಯಲ್ಲಿ ಪ್ರಧಾನಿ ಹಾಗೂ ಕೇಂದ್ರ ಮಾನವ ಸಂಪನ್ಮೂಲ ಸಚಿವರ ಭೇಟಿಗೆ ನಾನು ವ್ಯವಸ್ಥೆ ಮಾಡುತ್ತೇನೆ. ಕನ್ನಡ ಭಾಷೆಯನ್ನು ಕ್ಲಾಸಿಕ್ ಭಾಷೆಯೆಂದು ಘೋಷಿಸಲು ಎಲ್ಲ ರೀತಿಯ ಪ್ರಯತ್ನವನ್ನು ಮಾಡುವ ತಮ್ಮ ಪ್ರಯತ್ನಗಳಿಗೆ ನನ್ನ ಬೆಂಬಲವಿದೆಯೆಂದು ಮುಖ್ಯಮಂತ್ರಿಗಳಿಗೆ ಪತ್ರ ಮುಖೇನ ಹೇಳಿದರು. ತಮ್ಮ ಈ ಅಭಿಪ್ರಾಯವನ್ನು ಕರ್ನಾಟಕದ ಸಾಹಿತಿಗಳಿಗೆ ಪತ್ರದ ಮೂಲಕ ತಿಳಿಸಿದ್ದಾರೆ. ಡಾ. ಜಿ.ಎಸ್. ಶಿವರುದ್ರಪ್ಪ, ಪ್ರೊ. ಎಲ್.ಎಸ್. ಶೇಷಗಿರಿರಾವ್, ಡಾ. ದೇ. ಜವರೇಗೌಡ, ಡಾ. ಪಾಟೀಲ ಪುಟ್ಟಪ್ಪ, ಡಾ. ಕೆ.ಎಸ್. ನಿಸಾರ್ ಅಹಮದ್-ಮೊದಲಾದವರು ಈ ಪ್ರಯತ್ನವನ್ನು ಕುರಿತು ಶ್ಲಾಘಿಸಿ ಅವರನ್ನು ಅಭಿನಂದಿಸಿದ್ದಾರೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಕಾರ್ಯದರ್ಶಿಗಳಾದ ಅಗ್ರಹಾರ ಕೃಷ್ಣಮೂರ್ತಿಯವರು ಉದಯವಾಣಿ ದಿನಪತ್ರಿಕೆಯಲ್ಲಿ ವಿಶೇಷ ಲೇಖನವನ್ನು ಬರೆದು ಯಾವ ಒಬ್ಬ ರಾಜಕಾರಣಿಯೂ ಯೋಚಿಸಲಾರದ ಕನ್ನಡ ಕ್ಲಾಸಿಕ್ ಭಾಷೆ ವಿಷಯವನ್ನು ಎಂ.ವಿ. ರಾಜಶೇಖರನ್ ಅವರು ಚಿಂತಿಸುತ್ತಿದ್ದಾರೆ ಎಂಬುದು ಸಂತೋಷದ ವಿಚಾರ. ಅವರಿಂದಾಗಿ ಕರ್ನಾಟಕದಲ್ಲಿ ಹೊಸ ಜಾಗೃತಿ ಮೂಡುತ್ತದೆಂದು ಆಶಿಸಿದ್ದಾರೆ. 'ದಿ ವೀಕ್ ', 'ಲಂಕೇಶ್ ಪತ್ರಿಕೆ', 'ಕನ್ನಡಪ್ರಭ', ಮೊದಲಾದ ಎಲ್ಲ ಪತ್ರಿಕೆಗಳು ರಾಜಶೇಖರನ್ ಅವರ ಈ ಸಾಹಿತ್ಯಿಕ ಕೆಲಸವನ್ನು ಅಭಿನಂದಿಸಿವೆ. ಕನ್ನಡ ಭಾಷೆಯನ್ನು ಕೇಂದ್ರ ಸರ್ಕಾರ ಕ್ಲಾಸಿಕ್ ಭಾಷೆಯೆಂದು ಪರಿಗಣಿಸಿದರೆ ಎಂ.ವಿ.ರಾಜಶೇಖರನ್ ಅವರಿಗೆ ಕರ್ನಾಟಕದ ಇತಿಹಾಸದಲ್ಲಿ ಶಾಶ್ವತ ಸ್ಥಾನ ದೊರೆಯುವುದರಲ್ಲಿ ಯಾವುದೇ ಸಂದೇಹವಿಲ್ಲ.

**ಕನ್ನಡ ಭಾಷೆಯನ್ನು ಕೇಂದ್ರ ಸರ್ಕಾರ ಕ್ಲಾಸಿಕ್ ಭಾಷೆ ಯೆಂದು ಪರಿಗಣಿಸಿದರೆ ಎಂ.ವಿ. ರಾಜಶೇಖರನ್ ಅವರಿಗೆ ಕರ್ನಾಟಕದ ಇತಿಹಾಸದಲ್ಲಿ ಶಾಶ್ವತ ಸ್ಥಾನ ದೊರೆಯುವು ದರಲ್ಲಿ ಯಾವುದೇ ಸಂದೇಹವಿಲ್ಲ.**

೧೧ನೆಯ ಶತಮಾನದಲ್ಲಿ ಅಲ್ಬೆರೂನಿ ಎಂಬ ಇತಿಹಾಸ ತಜ್ಞ "ಭಾರತೀಯರಲ್ಲಿ ಐತಿಹಾಸಿಕ ಪ್ರಜ್ಞೆಯೇ ಇಲ್ಲ. ಐತಿಹಾಸಿಕ ವಿಚಾರಗಳನ್ನು ಕೇಳಿದರೆ ಅವರು ದಂತಕಥೆಗಳನ್ನು ಹೇಳುತ್ತಾರೆ" ಎನ್ನುತ್ತಾರೆ. ಈ ಮಾತು ಹೆಚ್ಚು ಕಡಿಮೆ ಸರಿ ಎಂದು ಎಲ್ಲ ಇತಿಹಾಸಜ್ಞರು ಅಭಿಪ್ರಾಯ ಪಡುತ್ತಾರೆ. ಭಾರತದ ಪ್ರಾಚೀನ ಸ್ಮಾರಕಗಳನ್ನು ರಕ್ಷಿಸಬೇಕೆಂಬ ವಿಷಯವನ್ನು ಮೊದಲು ಮನಗಂಡವರು ದೇಶದ ಮೊದಲ ಪ್ರಧಾನಿಯಾಗಿದ್ದ ಜವಹರಲಾಲ್ ನೆಹರು ಅವರು. ರಾಜಕಾರಣಿಗಳು ಸಾಮಾನ್ಯವಾಗಿ ಓಟು ಬರುವ ವಿಷಯಕ್ಕೆ ಮಹತ್ವ ಕೊಡುತ್ತಾರೆಯೇ ಹೊರತು ತಮ್ಮ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿ ರಕ್ಷಿಸಿಕೊಂಡು ಬರುವ ಪ್ರಯತ್ನಕ್ಕೆ ಎಂದೂ ಚಿಂತನೆ ಮಾಡುವವರು ಸಕ್ರಿಯ ರಾಜಕಾರಣಿಯಾಗಿರದೆ, ರಾಷ್ಟ್ರನಿರ್ಮಾಪಕ ರಾಗಿರುತ್ತಾರೆ. ಎಂ.ವಿ. ರಾಜಶೇಖರನ್ ಅವರು ಕರ್ನಾಟಕದ ಪ್ರಾಚೀನ ದೇವಾಲಯಗಳ ರಕ್ಷಣೆ ಮಾಡಬೇಕೆಂಬ ಅಪರೂಪದ ವಿಚಾರವನ್ನು ತಲೆಗೆ ಹೊಕ್ಕಿಸಿಕೊಂಡರು. ಕುಳಿತರೆ ನಿಂತರೆ ಅದರ ಬಗ್ಗೆ ಚಿಂತಿಸಿ ಈ ಮಹತ್ವದ ಯೋಜನೆಯನ್ನು ಅನುಷ್ಠಾನ ಮಾಡಬೇಕೆಂದು ರಾಜ್ಯದ ಮುಖ್ಯಮಂತ್ರಿಗಳಿಗೆ ಪತ್ರ ಬರೆದರು. ೩೧-೦೭-೨೦೦೪ರ ಅವರ ಪತ್ರದ ಪಾಠ ಹೀಗಿದೆ:

"ಭಾರತದ ಐದು ಸಾವಿರ ವರ್ಷಗಳ ಪ್ರಾಚೀನತೆಯ್ಲಲಿ 'ದೇವಸ್ಥಾನ'ಗಳಿಗೆ ಮಹತ್ವದ ಸ್ಥಾನವಿದೆ. ಪ್ರಸಿದ್ಧ ಸಮಾಜಶಾಸ್ತ್ರಜ್ಞರಾದ ಡಾ. ಎಂ. ಎನ್. ಶ್ರೀನಿವಾಸ್ ಅಭಿಪ್ರಾಯಪಡುವಂತೆ "ನಮ್ಮ ಸಂಸ್ಕೃತಿಯಲ್ಲಿ ದೇವಾಲಯಗಳು ಕೇಂದ್ರ ಸ್ಥಾನದಲ್ಲಿದ್ದು, ಅವುಗಳ ಸುತ್ತ ನಮ್ಮ ಪ್ರಾಚೀನ ಸಮಾಜದ ಚಟುವಟಿಕೆ ನಡೆಯುತ್ತಿದ್ದವು"

ಇಂತಹ ಐತಿಹಾಸಿಕತೆಯುಳ್ಳ ಈ ದೇವಾಲಯಗಳು ಅನೇಕ ಕಾರಣಗಳಿಂದಾಗಿ ವಿನಾಶದ ಅಂಚಿನಲ್ಲಿವೆ. ಅವು ಸಂಪತ್ತಾಗಿದ್ದರೂ ಅವುಗಳ ವಿಚಾರದಲ್ಲಿ ನಾವು ಉದಾಸೀನರಾಗಿದ್ದೇವೆ. ಇವುಗಳ ರಕ್ಷಣೆಗೆ ಯುನೆಸ್ಕೋದಂತಹ ಅಂತರರಾಷ್ಟ್ರೀಯ ಸಂಸ್ಥೆಗಳು ಧನಸಹಾಯ ಮಾಡಿದರೂ ಅವುಗಳನ್ನು ಉಪಯೋಗಿಸಿಕೊಳ್ಳುತ್ತಿಲ್ಲ.

ರಾಜ್ಯದಲ್ಲಿ ಧರ್ಮಸ್ಥಳದ ಧರ್ಮಾಧಿಕಾರಿ ಡಾ. ಡಿ. ವೀರೇಂದ್ರ ಹೆಗ್ಗಡೆಯವರು ಸ್ವಯಂ ಪ್ರೇರಿತರಾಗಿ ಕೆಲವು ಪ್ರಾಚೀನ ದೇವಾಲಯಗಳ ಜೀರ್ಣೋದ್ಧಾರ ಮಾಡಿದ್ದಾರೆ. ಉದಾ: ಮೈಸೂರು ತಾಲ್ಲೂಕಿನ ವರುಣಾದ ಮಹಾಲಿಂಗೇಶ್ವರ ದೇವಾಲಯದ ಜೀರ್ಣೋದ್ಧಾರ ಕಾರ್ಯ ಅವರಿಂದ ನಡೆದಿದೆ.

ಧರ್ಮಸ್ಥಳದ ಧರ್ಮೋತ್ಥಾನ ಪ್ರತಿಷ್ಠಾನ ಹಾಗೂ ರಾಜ್ಯ ಪ್ರಾಚ್ಯವಸ್ತು ಸಂಗ್ರಹಾಲಯಗಳ ಇಲಾಖೆಯ ಜಂಟಿ ಆಶ್ರಯದಲ್ಲಿ ಸುಮಾರು ೧೮ ದೇವಸ್ಥಾನಗಳ ಜೀರ್ಣೋದ್ಧಾರ ಕಾರ್ಯದ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ.

ನಮ್ಮ ರಾಜ್ಯದಲ್ಲಿರುವ ಪ್ರಾಚೀನ ಐತಿಹಾಸಿಕ ದೇವಾಲಯಗಳ ಪಟ್ಟಿ ತುಂಬಾ ದೊಡ್ಡದು. ಈ ಪತ್ರದೊಡನೆ ಗುಲಬರ್ಗಾ ಜಿಲ್ಲೆಯ ಪ್ರಾಚೀನ ದೇವಾಲಯಗಳ ಪಟ್ಟಿಯನ್ನು ಲಗತ್ತಿಸಿದ್ದೇನೆ. ಕ್ರಿ.ಶ. ೧೦ನೆಯ ಶತಮಾನದಿಂದ ೧೬ನೆಯ ಶತಮಾನದವರೆಗಿನ ದೇವಾಲಯಗಳನ್ನು ಲೆಕ್ಕಕ್ಕೆ ತೆಗೆದುಕೊಂಡರೆ ೧೩೬ ದೇವಾಲಯಗಳು ಇದರ ವ್ಯಾಪ್ತಿಗೆ ಬರುತ್ತವೆ. ಈ ಎಲ್ಲ ದೇವಾಲಯಗಳ ಜೀರ್ಣೋದ್ಧಾರ ಅತ್ಯಂತ ಅಗತ್ಯವಾದುದು. ಉಳಿದ ೨೬ ಜಿಲ್ಲೆಗಳಲ್ಲಿ ಕೊನೆಯ ಪಕ್ಷ ಈ ಕಾಲಕ್ಕೆ ಸೇರಿದ ತಲಾ ೧೦೦ ದೇವಾಲಯಗಳು ಇರಬಹುದು. ಒಟ್ಟು ೨೭೫೦ ಕ್ಕೂ ಹೆಚ್ಚು ಪ್ರಾಚೀನ ದೇವಾಲಯಗಳ ಸಂರಕ್ಷಣೆಗೆ ನಾವೀಗ ಮುಂದಾಗಬೇಕಾಗಿದೆ.

ಇದೊಂದು ಅಪೂರ್ವ ಕೆಲಸವಾಗಿದ್ದು, ಸಾಕಷ್ಟು ಸಂಪನ್ಮೂಲ ಇದಕ್ಕೆ ಬೇಕಾಗುತ್ತದೆ. ಸರ್ಕಾರವೊಂದೇ ಇದನ್ನು ಮಾಡುವ ಹಾಗಿಲ್ಲ. ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಕೆಲಸ ಮಾಡುತ್ತಿರುವ ಅನೇಕ ಸ್ವಯಂ ಸೇವಾ ಸಂಸ್ಥೆಗಳು ನಮ್ಮ ನೆರವಿಗೆ ಬರುತ್ತವೆ. ಯುನೆಸ್ಕೋದಿಂದ ಸಹಾಯ ಪಡೆಯಬಹುದು. ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಹಾಗೂ ಪ್ರವಾಸೋದ್ಯಮ ಇಲಾಖೆಗಳಲ್ಲಿ ಇರುವ ಯೋಜನೆಗಳ ಪ್ರಯೋಜನ ಪಡೆಯಬಹುದು. ಉದಾ : ಕೇಂದ್ರ ಪ್ರವಾಸೋದ್ಯಮ ಇಲಾಖೆಯಲ್ಲಿರುವ 'ಸಾಂಸ್ಕೃತಿಕ ಪ್ರವಾಸೋದ್ಯಮ ಯೋಜನೆ'ಯಲ್ಲಿ ಹಣಕಾಸು ನೆರವನ್ನು ಪಡೆಯಬಹುದು.

ಇವೆಲ್ಲದರ ಜೊತೆ ಆಯಾ ದೇವಸ್ಥಾನವಿರುವ ಸ್ಥಳದಲ್ಲಿನ ಸ್ಥಳೀಯರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು. ಈ ದೇವಾಲಯದ ಕಾರ್ಯಕ್ಕೆ ಅನೇಕ ದಾನಿಗಳು ಸಹಾಯ ಮಾಡುವುದರಲ್ಲಿ ಸಂಶಯವಿಲ್ಲ.

ಈ ಎಲ್ಲ ನೆರವು ದೊರೆಯಬೇಕಾದರೆ ತಮ್ಮ ಅಧ್ಯಕ್ಷತೆಯಲ್ಲಿ 'ಐತಿಹಾಸಿಕ ದೇವಾಲಯ ಜೀರ್ಣೋದ್ಧಾರ ಪ್ರಾಧಿಕಾರ' ರಚನೆಯಾಗಬೇಕು. ಈ ಸಂಸ್ಥೆಗೆ ಕೆಲಸ ಮಾಡಲು ಸಾಕಷ್ಟು ಅವಕಾಶವಿರಬೇಕು. ಈ ಪ್ರಾಧಿಕಾರ ರಚನೆಯಾಗುವುದರ ಪೂರ್ವಭಾವಿಯಾಗಿ ತಜ್ಞರ ಸಮಿತಿ ರಚಿಸಿ ಅವರಿಂದ ಸಲಹೆಯನ್ನು ಪಡೆಯಬೇಕು."

ಬೆಂಗಳೂರು ನಗರಕ್ಕೆ ೧೯೦೫ ಆಗಸ್ಟ್ ೫ರಂದು ವಿದ್ಯುತ್ ಸರಬರಾಜಾಯಿತು. ಮೊದಲನೆಯದಾಗಿ ಬೆಂಗಳೂರಿನ ೨೫೦ ಬೀದಿ ಕಂಬಗಳಿಗೆ ವಿದ್ಯುತ್ ದೊರಕಿತು. ಇಂಥ ಅಪರೂಪದ ಘಟನೆಯನ್ನು ಕೆ.ಪಿ.ಟಿ.ಸಿ.ಎಲ್ ಅರ್ಥಪೂರ್ಣವಾಗಿ ನೆನಪಿಸಿಕೊಳ್ಳಬೇಕೆಂದು ರಾಜಶೇಖರನ್ ಒತ್ತಾಯ ಮಾಡುತ್ತಾರೆ. ಈ ಬಗ್ಗೆ ವಿದ್ಯುತ್ ಸಚಿವರಿಗೂ-ಮುಖ್ಯಮಂತ್ರಿಗಳಿಗೂ ೦೬-೦೮-೨೦೦೪ರಂದು ಪತ್ರವನ್ನು ಬರೆದು ೨೦೦೫ನ್ನು ವಿದ್ಯುತ್ ಜಾಗೃತಿ ವರ್ಷವನ್ನಾಗಿ ಆಚರಿಸಲು ಸಲಹೆ ಮಾಡುತ್ತಾರೆ.

ಹತ್ತೊಂಬತ್ತು ಭಾಗಗಳಾಗಿ ಹರಿದು ಹಂಚಿಹೋಗಿದ್ದ ಕರ್ನಾಟಕದ ಭಾಗಗಳು ಎಸ್. ನಿಜಲಿಂಗಪ್ಪನವರ ನೇತೃತ್ವದಲ್ಲಿ ೧೯೫೬ರಲ್ಲಿ ಏಕೀಕರಣವಾಯಿತು. ಮುಂದಿನ ವರ್ಷ ಕರ್ನಾಟಕದ ಏಕೀಕರಣವಾಗಿ ೫೦ ವರ್ಷಗಳು ಕಳೆಯುತ್ತವೆ. ಈ ೫೦ ವರ್ಷಗಳಲ್ಲಿ ರಾಜ್ಯದ ರಾಜಕೀಯ, ಆರ್ಥಿಕ ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಇತರೆ ಕ್ಷೇತ್ರಗಳಲ್ಲಿ ಆದ ಪ್ರಗತಿಯ ಸಿಂಹಾವಲೋಕನ

ನಡೆಯಬೇಕು. ಎಂಬುದು ರಾಜಶೇಖರನ್ ಅವರ ಆಶಯ. 'ಸುವರ್ಣ ಕರ್ನಾಟಕ ಯೋಜನೆ'ಯನ್ನು ಸರ್ಕಾರ ಈಗಲೇ ಕಾರ್ಯಗತ ಮಾಡಬೇಕು. ಈಗಿನಿಂದಲೇ ಚಿಂತನ ಮಂಥನ ನಡೆಸಿ, ಕ್ರಿಯಾಶೀಲ ಯೋಜನೆಗಳನ್ನು ರೂಪಿಸಿ ಅದನ್ನು ಅನುಷ್ಠಾನ ಮಾಡಬೇಕು ಎಂಬುದು ರಾಜಶೇಖರನ್ ಅವರ ಮಹದಾಸೆ. ಆ ಬಗ್ಗೆ ಅವರು ಮುಖ್ಯಮಂತ್ರಿಗಳಿಗೆ, ಉಪಮುಖ್ಯಮಂತ್ರಿಗಳಿಗೆ ಪತ್ರವನ್ನು ಬರೆದು ತಮ್ಮ ಸಲಹೆಯನ್ನು ಕೊಟ್ಟಿದ್ದಾರೆ.

ಕರ್ನಾಟಕದ ಅನೇಕ ವಿಶ್ವವಿದ್ಯಾನಿಲಯಗಳು ಪ್ರತಿವರ್ಷ ಹೊರತರುವ ಪಿಎಚ್.ಡಿ.ಗಳ ಪ್ರಬಂಧಗಳು ಗ್ರಂಥಾಲಯಗಳಲ್ಲಿ ಕೊಳೆಯುತ್ತಿವೆ. ತಾಂತ್ರಿಕ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳು ಪ್ರತಿವರ್ಷ ನೂರಾರು 'ಪ್ರೊಜೆಕ್ಟ್ ವರ್ಕ್'ಗಳನ್ನು ಮಾಡುತ್ತಾರೆ. ಈ ಎಲ್ಲ ಜ್ಞಾನವು ಪೆಟ್ಟಿಗೆಯಲ್ಲಿ ಹಾಕಿದ ನಿಧಿಯಾಗಿದೆ. ಆಧುನಿಕ ಕಾಲದಲ್ಲಿ ಅದನ್ನು ಸಮರ್ಪಕವಾಗಿ ಬಳಸಿಕೊಳ್ಳಬೇಕೆಂಬುದು ರಾಜಶೇಖರನ್ ಅವರ ನಿಲುವು. ಪ್ರತಿಯೊಂದು ವಿಶ್ವವಿದ್ಯಾನಿಲಯವೂ ತನ್ನಲ್ಲಿರುವ ಪಿಎಚ್.ಡಿ ಪ್ರಬಂಧಗಳನ್ನು ವೆಬ್‌ಸೈಟ್‌ನಲ್ಲಿ ಹಾಕಿದರೆ ಇಡೀ ರಾಜ್ಯದ ಜನತೆ ಅಲ್ಲ ದೇಶದ ಜನತೆ ಅದನ್ನು ಬಳಸಿಕೊಳ್ಳಬಹುದಾಗಿದೆ ಎನ್ನುವ ರಾಜಶೇಖರನ್ ಅವರು ಉನ್ನತ ಶಿಕ್ಷಣ ಸಚಿವರಿಗೆ ಹಾಗೂ ಎಲ್ಲ ವಿಶ್ವವಿದ್ಯಾನಿಲಯದ ಉಪಕುಲಪತಿಗಳಿಗೆ ಈ ಬಗ್ಗೆ ಪತ್ರ ಬರೆದು 'ನಿಮ್ಮ ವಿಶ್ವವಿದ್ಯಾನಿಲಯದ ವೆಬ್‌ಸೈಟ್‌ಗಳಲ್ಲಿ ಇದನ್ನು ಹಾಕಿ' ಎನ್ನುತ್ತಾರೆ. ಕರ್ನಾಟಕದ ಜ್ಞಾನದ ನಿಧಿ ವಿಶ್ವದ ಎಲ್ಲೆಡೆ ಹೋಗಬೇಕು ಎಂಬ ಹಿರಿದಾಸೆ ಅವರದು.

## ಬತ್ತದ ಜೀವನೋತ್ಸಾಹ :

ಎಪ್ಪತ್ತೈದು ವರ್ಷದ ತುಂಬು ಜೀವನವನ್ನು ಮುಗಿಸಿ ಎಪ್ಪತ್ತಾರಕ್ಕೆ ಕಾಲಿಡುತ್ತಿರುವ ರಾಜಶೇಖರನ್ ಅವರನ್ನು ಅಧ್ಯಯನ ಮಾಡುವುದು ಸಾಹಸದ ಕೆಲಸ. ರಾಜಶೇಖರನ್ ಅವರು ಒಮ್ಮೊಮ್ಮೆ ಸನ್ಯಾಸಿಯಂತೆ ಗೋಚರಿಸುತ್ತಾರೆ. ಹೆಂಗರುಳಿನ ಅವರು ಮಾನವೀಯ ಗುಣಗಳ ಗಣಿಯಾಗಿದ್ದಾರೆ. ಆತ್ಮೀಯರ ಬಗ್ಗೆ ತುಂಬಾ ಪ್ರೇಮವುಳ್ಳ ಅವರಿಗೆ ಯಾವುದಾದರೊಂದು ರೀತಿಯಲ್ಲಿ ಅವರಿಗೆ ಸಹಾಯ ಮಾಡಬೇಕೆನ್ನುವ ಹಂಬಲವುಳ್ಳವರಾಗಿದ್ದಾರೆ. ತಮ್ಮ ಹಿತಾಸಕ್ತಿಯನ್ನು ಲೆಕ್ಕಿಸದೆ ಎಲ್ಲರಿಗೂ ಸಹಾಯ ಮಾಡುವ ಒಬ್ಬ ಅಪರೂಪದ ಚೇತನ. ದೇಹಕ್ಕೆ ವಯಸ್ಸಾಗಿದ್ದರೂ ಅವರ ಮನಸ್ಸು ಯೌವನೋತ್ಸಾಹಗಳಿಂದ ಕೂಡಿದೆ. ಆ ಕಾರಣ ಯುವಕರನ್ನು ಕಂಡರೆ ಅವರಿಗೆ ತುಂಬಾ ಪ್ರೀತಿ. ಅವರ ಬೆಂಗಳೂರು ರಾಜ್ಯಸಭಾ ಕಛೇರಿಯಂತೂ ಯುವನಾಯಕರಿಂದ ತುಂಬಿಹೋಗಿದೆ. ಯುವಜನಾಂಗವನ್ನು ಕಂಡರೆ ಹೆದರುವ ಅಧಿಕಾರಸ್ಥ ರಾಜಕಾರಣಿಗಳ ಎದುರು ಎಂ.ವಿ. ರಾಜಶೇಖರನ್ ಅಪವಾದವೆನಿಸಿದ್ದಾರೆ. ಸದಾ ಯುವಕರು ಅವರನ್ನು ಸುತ್ತುವರಿಯಬೇಕೆಂದು ಬಯಸುತ್ತಾರೆ. ಅವರಿಗೆ ಸಲಹೆ ಸೂಚನೆಗಳನ್ನು ಕೊಡುತ್ತಾ ನಾಯಕತ್ವ ಬೆಳೆಸುವ ಹಿರಿದಾಸೆ ಅವರದು. ಅಧಿಕಾರ ಲಾಲಸೆಯಿಂದಾಗಿ ಆ ಪಕ್ಷದಿಂದ ಈ ಪಕ್ಷಕ್ಕೆ ಜಿಗಿದಾಡದೆ, ತತ್ವಬದ್ಧ ಬದುಕು ನಡೆಸಿದವರು. ರಾಜಶೇಖರನ್ ಈ ರಾಜ್ಯದ ಮುಖ್ಯಮಂತ್ರಿಯಾಗಿಲ್ಲ ಅಥವಾ ಕೇಂದ್ರದ ಸಚಿವ ಸಂಪುಟದಲ್ಲಿ ದೊಡ್ಡ ಮಂತ್ರಿಯಾಗಿಲ್ಲ. ಆದರೆ ಅವರ ಬದುಕು ಒಂದು ತೆರೆದ ಪುಸ್ತಕವಿದ್ದಂತೆ. ಅಲ್ಲಿ ಪ್ರೀತಿ, ವಿಶ್ವಾಸ, ಸಹೃದಯತೆ, ಕಾಯಕನಿಷ್ಠೆ, ಗ್ರಾಮೀಣ ಜನರ ಬಗ್ಗೆ ಪ್ರೀತಿ, ಕೃಷಿಯ ಬಗ್ಗೆ ಅಪಾರ ಜ್ಞಾನವಿದೆ. ಸೇವಾ ತತ್ಪರತೆಯ ಅವರ ಬದುಕು ಎಲ್ಲರಿಗೂ ಪ್ರೇರಣೆ ಒದಗಿಸುವುದರಲ್ಲಿ ಯಾವುದೇ ಸಂಶಯವಿಲ್ಲ. ಸಂತೃಪ್ತಿ ಹಾಗೂ ಸೇವಾನಿಷ್ಠ ಬದುಕನ್ನು ಬಾಳುತ್ತಿರುವ ಆಶಯ ಎಂತಹುದು? ತಾವೇ ಅದನ್ನು ಗಮನಿಸಿ, ಪ್ರತಿಯೊಂದು ಪುಟದಲ್ಲೂ ಕಾಣಿಸುತ್ತವೆ. "ಕರ್ನಾಟಕದಲ್ಲಿ ದೇವರ ಕೃಪೆಯಿಂದ ಎಲ್ಲ ನೈಸರ್ಗಿಕ ಸಂಪನ್ಮೂಲವಿದೆ. ಇದನ್ನು ಸಮರ್ಥವಾಗಿ ಬಳಸಿಕೊಳ್ಳುವ ದೃಢಸಂಕಲ್ಪ ನಮಗೆ ಬೇಕಾಗಿದೆ. ಇಲ್ಲಿರುವ ಜನ ಉತ್ತಮ ನಾಗರಿಕರು ಸಾಂಸ್ಕೃತಿಕ ವಿಚಾರಗಳಲ್ಲಿ ಮೇಲ್ಮಟ್ಟದ ಪ್ರಜ್ಞೆಯುಳ್ಳವರು. ವೈಯಕ್ತಿಕ ಪ್ರತಿಷ್ಠೆ, ದ್ವೇಷ ಅಥವಾ ಸ್ವಾರ್ಥದಿಂದ ನಾವು ಏನನ್ನೂ ಸಾಧಿಸಲಾಗುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಅಭಿಮಾನಶೂನ್ಯರಾಗಿ ಬಾಳುತ್ತಿದ್ದೇವೆ. ವ್ಯಕ್ತಿಗಿಂತ ರಾಷ್ಟ್ರ ದೊಡ್ಡದು. ಸಮುದಾಯ ಹಿತದ ಪ್ರಜ್ಞೆ ನಮ್ಮೆಲ್ಲ ವ್ಯಕ್ತಿಗಳಲ್ಲಿ ಜಾಗೃತವಾಗಬೇಕು. ಇದೇ ನನ್ನ ಆಸೆ" ಎನ್ನುವ ಅವರ ಮಾತುಗಳು ಅವರ ಹಿರಿದಾದ ವ್ಯಕ್ತಿತ್ವವನ್ನು ಪರಿಚಯಿಸುತ್ತದೆ.

●

(ಲೇಖನ ಸಿದ್ಧತೆಯಲ್ಲಿ ಎಂ.ವಿ. ರಾಜಶೇಖರನ್ ಅವರ ಅಭಿನಂದನ ಗ್ರಂಥ 'ನಿಜಬಿಂಬ' ಹಾಗೂ 'ಸೋಲ್ ಆಫ್ ದಿ ಸಾಯಿಲ್', ರಾಜಶೇಖರನ್ ಅವರ ಸಂದರ್ಶನ ಹಾಗೂ ಅವರ ಪತ್ರಗಳನ್ನು ಬಳಸಿಕೊಳ್ಳಲಾಗಿದೆ. ಈ ಗ್ರಂಥ ಸಂಪಾದಕರು ಹಾಗೂ ಎಲ್ಲಾ ಲೇಖಕರಿಗೂ ಕೃತಜ್ಞತೆಗಳು-ಲೇಖಕ)

# ಗಾಂಧೀಜಿ ದೃಷ್ಟಿಯಲ್ಲಿ ವಿಕೇಂದ್ರೀಕರಣ




**ಎಚ್. ಎಸ್. ದೊರೆಸ್ವಾಮಿ**

ವಿಕೇಂದ್ರೀಕರಣ ಎಂಬುದು ಸೃಷ್ಟಿ ನಿಯಮ. ಭಗವಂತ ಅಥವಾ ಯಾವುದೋ ಒಂದು ಅದ್ಭುತಶಕ್ತಿ ಈ ಬ್ರಹ್ಮಾಂಡವನ್ನು ನಿಯಂತ್ರಿಸುತ್ತದೆ. ಈ ಅದ್ಭುತ ಶಕ್ತಿ ವಿಕೇಂದ್ರಿತ ವ್ಯವಸ್ಥೆಯನ್ನು ತನ್ನದಾಗಿಸಿಕೊಂಡಿದೆ. ಈ ಅದ್ಭುತಶಕ್ತಿ ತಾನೇ ತಾನಾಗಿ ಎಲ್ಲವನ್ನೂ ಆಗುಮಾಡಲು ಹೋಗುವುದಿಲ್ಲ. ವಿಕೇಂದ್ರಿತ ಪದ್ಧತಿಯಲ್ಲಿ ಎಲ್ಲವೂ ನಿಯಮಾನುಸಾರ ಕೈಗೂಡುವಂತೆ ಒಂದು ವ್ಯವಸ್ಥೆ ಕೆಲಸ ಮಾಡುತ್ತದೆ. ಉದಾಹರಣೆಗೆ ಸೂರ್ಯ ಬೆಳಕನ್ನು ಕೊಡುತ್ತಾನೆ. ಜಗಚ್ಚಕ್ರವಾಗಿ ಕೆಲಸ ಮಾಡುತ್ತಾನೆ. ನೀರನ್ನು ಮೋಡವಾಗಿ ಪರಿವರ್ತಿಸುತ್ತಾನೆ. ಋತುಮಾನಗಳು, ಆಯಾ ಋತುವಿನಲ್ಲಿ ಗಾಳಿ ಬೀಸುವಂತೆಯೋ, ಮಳೆ ಬರುವಂತೆಯೋ, ಚಳಿ ಹೆಚ್ಚುವಂತೆಯೋ, ಉಷ್ಣತೆ ಹೆಚ್ಚುವಂತೆಯೋ ಮಾಡುತ್ತದೆ.

ಹಾಗೆಯೇ ಮಾನವ ಸೃಷ್ಟಿಯೂ ಆಗಿದೆ. ಪ್ರತಿ ಮಾನವನಿಗೂ ಒಂದು ತಲೆಯನ್ನು, ಒಂದು ಹೃದಯವನ್ನು ಜೋಡಿಸಲಾಗಿದೆ. ತಲೆ ಇರುವುದು ಕೆಟ್ಟದು ಯಾವುದು, ಒಳ್ಳೆಯದು ಯಾವುದು ಎಂದು ನೀವೇ ಯೋಚನೆ ಮಾಡಿ, ಕೆಟ್ಟುದನ್ನು ಚರ್ಚಿಸಿ, ಒಳ್ಳೆಯದನ್ನು ಮಾಡುವುದಕ್ಕಾಗಿ ಹೃದಯವಿರುವುದು ಪ್ರೀತಿ, ಕರುಣೆ ತೋರಲಿಕ್ಕಾಗಿ. ಮನುಷ್ಯ ತಲೆ, ಹೃದಯಗಳನ್ನು ದುರುಪಯೋಗ ಮಾಡಿಕೊಂಡರೆ, ಅದರ ದುಷ್ಫಲ ಅನುಭವಿಸುವವನೂ ಅವನೇ. ದೇವರನ್ನು ಅಥವಾ ಆ ಪರಾತ್ಪರ ವಸ್ತುವನ್ನು ಅದಕ್ಕಾಗಿ ದೂಷಿಸಲಾಗದು. ಎಲ್ಲವನ್ನೂ ವಿಕೇಂದ್ರೀಕರಣಗೊಳಿಸಿರುವುದಾಗಿ ಆ ಪರಾತ್ಪರ ವಸ್ತು ಮಾನವನ ಎಲ್ಲ ಒಳ್ಳೆಯ ಕೆಲಸವನ್ನೂ, ದುರ್ಮಾರ್ಗದ ಕೆಲಸಗಳನ್ನೂ ಸಾಕ್ಷೀಭೂತವಾಗಿ ನೋಡುತ್ತಿರುತ್ತಾನೆ. ಒಳ್ಳೆಯದನ್ನೋ, ಕೆಟ್ಟದ್ದನ್ನೋ ಮಾಡಿದ ಮನುಷ್ಯ ತನ್ನ ಕರ್ಮಕ್ಕನುಸಾರ ಉತ್ತಮ ಫಲವನ್ನೋ, ಕೆಟ್ಟ ಫಲವನ್ನೋ ಅನುಭವಿಸುತ್ತಾನೆ. ಇದು ಸೃಷ್ಟಿ ನಿಯಮ.

ಮಾನವ ಸಮಾಜವೂ ಇದೇ ರೀತಿ ಅಧಿಕಾರ ವಿಕೇಂದ್ರೀಕರಣ ಮಾಡಿಕೊಂಡು ಬಾಳಿದರೆ, ಇಡೀ ಸಮಾಜಕ್ಕೆ ಒಂದು ಬದ್ಧತೆ ಬರುತ್ತದೆ.

**ನಿಜಬಿಂಬ :**

ಸ್ವರಾಜ್ಯ ಎಂಬುದರ ಅರ್ಥವೂ ಇದೇ. ಪ್ರತಿಯೊಬ್ಬರೂ ತಮ್ಮ ಜವಾಬ್ದಾರಿಯನ್ನು ಅರಿತು ನಡೆಯುವುದೇ ಸ್ವರಾಜ್ಯ. ಸ್ವರಾಜ್ಯದಲ್ಲಿ ದುಡಿಯುವವನು-ದುಡಿಸಿಕೊಳ್ಳುವವನು, ಆಳುವವನು-ಆಳಿಸಿಕೊಳ್ಳುವವನು, ಉಳ್ಳವನು-ಬಡವ, ಜ್ಞಾನಿ-ಅಜ್ಞಾನಿ ಎಂಬ ಭೇದಾಸುರರ ಸುಳಿವೇ ಇರಬಾರದು.

**ಸ್ವರಾಜ್ಯ ಎಂಬುದರ ಅರ್ಥವೂ ಇದೇ. ಪ್ರತಿಯೊಬ್ಬರೂ ತಮ್ಮ ಜವಾಬ್ದಾರಿಯನ್ನು ಅರಿತು ನಡೆಯುವುದೇ ಸ್ವರಾಜ್ಯ. ಸ್ವರಾಜ್ಯದಲ್ಲಿ ದುಡಿಯುವವನು-ದುಡಿಸಿಕೊಳ್ಳುವವನು, ಆಳುವವನು-ಆಳಿಸಿಕೊಳ್ಳುವವನು, ಉಳ್ಳವನು-ಬಡವ, ಜ್ಞಾನಿ-ಅಜ್ಞಾನಿ ಎಂಬ ಭೇದಾಸುರರ ಸುಳಿವೇ ಇರಬಾರದು.**

ಇಂದು ಭಾರತದಲ್ಲಿ ಜಾರಿಯಲ್ಲಿರುವುದು ಪ್ರಜಾಪ್ರತಿನಿಧಿ ಪ್ರಭುತ್ವ, ಪ್ರಜಾಪ್ರಭುತ್ವ ಅಲ್ಲ. ಪ್ರಜಾಪ್ರಭುತ್ವದಲ್ಲಿ ದೇಶದ ಆಗು-ಹೋಗುಗಳ ಎಲ್ಲಾ ಜವಾಬ್ದಾರಿ ಪ್ರಜೆಯದೇ ಆಗಿರಬೇಕು. ಅದಾಗಬೇಕಾದರೆ ಹೆಚ್ಚು ಹೆಚ್ಚು ಜನ ಈ ದೇಶದ ಆಗು-ಹೋಗುಗಳಲ್ಲಿ ಭಾಗವಹಿಸುವ ಹಾಗೆ ಆಗಬೇಕು. ಅದು ಅಧಿಕಾರ ವಿಕೇಂದ್ರೀಕರಣದಿಂದ ಮಾತ್ರ ಸಾಧ್ಯ.

ಗಾಂಧೀಜಿ ಗ್ರಾಮಸ್ವರಾಜ್ಯದ ರೂಪು-ರೇಷೆಗಳನ್ನು ಕುರಿತು ಚಿಂತನೆ ಮಾಡಿದ್ದಾರೆ. ಗ್ರಾಮ ಸ್ವರಾಜ್ಯ ಅಧಿಕಾರ ವಿಕೇಂದ್ರೀಕರಣದ ಪ್ರಕಟ ರೂಪ. ಅಧಿಕಾರ ಕೇಂದ್ರ ಸರ್ಕಾರದಲ್ಲಿ, ರಾಜ್ಯ ಸರ್ಕಾರಗಳಲ್ಲಿ ಹೆಪ್ಪುಗಟ್ಟಿ ಕೂರಬಾರದು. ಹಿಡಿಮಂದಿ ಈ ದೇಶದ ಭವಿಷ್ಯವನ್ನು ರೂಪಿಸುವ ಗುತ್ತಿಗೆ ಪದ್ಧತಿ ಸರಿಯಲ್ಲ. Participatory Democracy ನಮ್ಮ ಗುರಿಯಾದರೆ, ಗ್ರಾಮ ಪ್ರಧಾನವಾದ ದೇಶ ಭಾರತವಾದ್ದರಿಂದ ಆಡಳಿತಾಧಿಕಾರ ಎಲ್ಲ ಗ್ರಾಮಗಳಿಗೂ ಹಂಚಿಹೋಗಬೇಕು. ಆಯಾ ಗ್ರಾಮದ ಆಗು-ಹೋಗುಗಳಿಗೆಲ್ಲ ಆಯಾ ಗ್ರಾಮದವರೇ ಹೊಣೆಗಾರರಾಗಬೇಕು. ಈ ದೃಷ್ಟಿಯಿಂದ ಪ್ರತಿಯೊಂದು ಗ್ರಾಮವೂ ಒಂದೊಂದು ಗಣರಾಜ್ಯ ಆಗಬೇಕು ಎಂದರು ಗಾಂಧೀಜಿ.

ಕೇಂದ್ರೀಕೃತ ವ್ಯವಸ್ಥೆಯಲ್ಲಿರುವ ದೋಷವನ್ನು ಕುರಿತು ಅವರು ಹಾಗೆ ಹೇಳುತ್ತಾರೆ. ದೆಹಲಿಯಿಂದ ಭಾರತಾದ್ಯಂತ ಕೊಳಾಯಿ ಮೂಲಕ ನೀರನ್ನು ಸರಬರಾಜು ಮಾಡುವ ಒಂದು ವ್ಯವಸ್ಥೆಯನ್ನು ಕೇಂದ್ರ ಸರ್ಕಾರ ಜಾರಿಗೆ ಕೊಡುವುದೆಂದು ಭಾವಿಸೋಣ. ಆಕಸ್ಮಾತ್ ದೆಹಲಿಯ ರಿಸರ್ವಾಯರ್‌ನಲ್ಲಿ ಕಾಲಾರಾ ರೋಗಾಣುಗಳು ಕಾಣಿಸಿಕೊಂಡಿತು ಎಂದರೆ ಆಗ ಕಾಲರಾ ರೋಗಕ್ಕೆ ದೆಹಲಿಯ ಜನ ಮಾತ್ರವಲ್ಲದೆ ಆ ನೀರನ್ನು ಕುಡಿದ ಇಡೀ ದೇಶದ ಜನ ತುತ್ತಾಗಬೇಕಾಗುತ್ತದೆ. ಅದರಂತೆಯೇ ದೆಹಲಿಯಲ್ಲಿ ಮಾಡಿದ ಒಂದು ಕೆಟ್ಟ ಕಾನೂನಿನಿಂದ ಇಡೀ ದೇಶದ ಜನ ತೊಂದರೆ ಅನುಭವಿಸಬೇಕಾಗುತ್ತದೆ. ರಿಜರ್ವಾಯರ್ ಆಯಾ ಊರಿನಲ್ಲಿ ಮಾಡಿಕೊಂಡರೆ ಏನಾದರೂ ಅನಾಹುತ ಸಂಭವಿಸಿದರೆ ಅದು ಆ ಊರಿಗೆ ಮಾತ್ರ ಸೀಮಿತವಾಗುವುದು. ಈ ದೃಷ್ಟಿಯಿಂದ ವಿಕೇಂದ್ರಿತ ಆಡಳಿತ ಪದ್ಧತಿಯ ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡು ನಮ್ಮ ದೇಶದಲ್ಲಿ ಅನಿವಾರ್ಯವಾಗಿ ಜಾರಿಗೆ ಕೊಡಬೇಕಾದೀತು ಎಂದಿದ್ದಾರೆ.

ಗ್ರಾಮ ಸ್ವರಾಜ್ಯವನ್ನು ನಾವು ಜಾರಿಗೆ ಕೊಡುವುದೇ ಆದರೆ ಅಧಿಕಾರ ವಿಕೇಂದ್ರೀಕರಣ, ಆರ್ಥಿಕ ವಿಕೇಂದ್ರೀಕರಣ ಆಗಲೇಬೇಕು. ಪ್ರತಿಯೊಂದು ಗ್ರಾಮವೂ ಸ್ವಪರಿಪೂರ್ಣವಾಗಬೇಕು. ಆಹಾರ, ಶಿಕ್ಷಣ, ಆರೋಗ್ಯ, ಕೈಗಾರಿಕೆ ಮತ್ತು ಅಭಿವೃದ್ಧಿ, ನ್ಯಾಯ ವಿತರಣೆ, ಊರಿನ ರಕ್ಷಣೆ, ಇವೆಲ್ಲ ಬಾಬುಗಳ ಪೂರ್ಣ ಜವಾಬ್ದಾರಿ ಆಯಾ ಗ್ರಾಮದ್ದೇ ಆಗಬೇಕು. ಗ್ರಾಮ ತಾನು ಬಿಟ್ಟುಕೊಟ್ಟ ಜವಾಬ್ದಾರಿಗಳನ್ನು (Residuary Power) ಮಾತ್ರ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹಂಚಿಕೊಳ್ಳಬೇಕು. ಟಂಕಸಾಲೆ ನಡೆಸುವುದು, ಸಮಗ್ರ ದೇಶದ ಭದ್ರತೆಗಾಗಿ ಸೈನ್ಯ ಇಟ್ಟುಕೊಳ್ಳುವುದು, ಅಂತರರಾಷ್ಟ್ರೀಯ ವ್ಯವಹಾರಗಳನ್ನು ನಡೆಸುವುದು, ಇಡೀ ದೇಶಕ್ಕೆ ಸಂಬಂಧಪಟ್ಟಂತೆ ರಾಷ್ಟ್ರನೀತಿ ನಿರೂಪಣೆ ಮಾಡುವುದು, ರಾಜ್ಯಾಂಗದಲ್ಲಿ ಬರೆದಿರುವಂತೆ ಕಾನೂನು ಕಟ್ಟಳೆಗಳು ಜಾರಿಗೊಳಿಸಲಾಗುತ್ತಿದೆಯೋ ಎಂಬುದನ್ನು ನೋಡಿಕೊಳ್ಳುವುದು, State Policy ಯ ನಿರ್ದೇಶನದ ನೀತಿಯನ್ನು ಅನುಷ್ಠಾನಗೊಳಿಸುವುದು, ಅಂತರರಾಜ್ಯ ರಸ್ತೆ, ರೈಲು ಮಾರ್ಗ ನಿರ್ಮಾಣ ಮಾಡುವುದು ಮುಂತಾದ ಹೊಣೆಗಾರಿಕೆ ಕೇಂದ್ರ ಸರ್ಕಾರದ್ದು.

ರಾಜ್ಯದ ನೀರಾವರಿ ಯೋಜನೆಗಳನ್ನು ರೂಪಿಸಿ ಕಾರ್ಯಗತಗೊಳಿಸುವುದು, ಗೃಹೋದ್ಯೋಗ, ಗ್ರಾಮೋದ್ಯೋಗಗಳಿಗೆ ಧಕ್ಕೆ ಬರದಂತೆ ಕೈಗಾರಿಕಾ ನೀತಿಯನ್ನು ರೂಪಿಸುವುದು ಹಾಗೂ ಕಾರ್ಖಾನೆಗಳನ್ನು ಸ್ಥಾಪಿಸುವುದು, ಅಂತರರಾಜ್ಯ ರಸ್ತೆ ನಿರ್ಮಾಣ, ರೈಲು ಮಾರ್ಗ ನಿರ್ಮಾಣ ಮಾಡುವುದು, ಅಂತರರಾಜ್ಯ ನದಿ ನೀರಿನ ಹಂಚಿಕೆಯ ಬಗೆಗೆ ಒಪ್ಪಂದ ಮಾಡಿಕೊಳ್ಳುವುದು ಮುಂತಾದ ಜವಾಬ್ದಾರಿ ರಾಜ್ಯ ಸರ್ಕಾರಗಳದು.

ಅಧಿಕಾರ ವಿಕೇಂದ್ರೀಕರಣ ಆದಲ್ಲಿ ಭ್ರಷ್ಟಾಚಾರ ಕೇಂದ್ರ ಸರ್ಕಾರದಲ್ಲಿ, ರಾಜ್ಯ ಸರ್ಕಾರಗಳಲ್ಲಿ ಬಹುಮಟ್ಟಿಗೆ ಕಡಿಮೆಯಾಗುವುದರಲ್ಲಿ ಸಂದೇಹವಿಲ್ಲ. ಅದಕ್ಕೆ ಕಾರಣವೆಂದರೆ ಭ್ರಷ್ಟಾಚಾರಕ್ಕೆ ಎಡೆ ಮಾಡುವ ಎಲ್ಲ ಜೀವನಾವಶ್ಯಕ ಬಾಬುಗಳೂ ವಿಕೇಂದ್ರಿತಗೊಂಡಿರುವುದು-ಹಳ್ಳಿ ಹಳ್ಳಿಗೆ ಹಂಚಿಹೋಗಿರುವುದು. ಹಳ್ಳಿಹಳ್ಳಿಗೂ ಮೂಲಭೂತ ಅವಶ್ಯಕತೆಗಳನ್ನು ಪೂರೈಸುವ ಅಧಿಕಾರ ದೊರೆತ ಮೇಲೆ, ಹಳ್ಳಿಯ ಸಮಗ್ರ ಅಭಿವೃದ್ಧಿ ಮಾಡುವ ಕರ್ತವ್ಯ ಹಳ್ಳಿಯವರದೇ ಆಗುತ್ತದೆ. ಸಮಗ್ರ ಅಭಿವೃದ್ಧಿ ಎಂದರೆ ಸರ್ವತೋಮುಖ ಅಭಿವೃದ್ಧಿ, ಸಮತೋಲನದ ಅಭಿವೃದ್ಧಿ, ಹಳ್ಳಿಯ ಕೊನೆಯ ವ್ಯಕ್ತಿಗೂ ನ್ಯಾಯ ದೊರಕಿಸುವುದು, ಊಟ ಉದ್ಯೋಗದ ಹಕ್ಕನ್ನು ದೊರಕಿಸಿಕೊಡುವುದು, ಹಳ್ಳಿಯಲ್ಲಿ ಮನೆಮಾಡಿರುವ ಎಲ್ಲ ದುರ್ವ್ಯಸನಗಳನ್ನೂ - ಜೂಜು, ಲಾಟರಿ, ಕುಡಿತ, ವ್ಯಭಿಚಾರ, ಬೀಡಿ ಸಿಗರೇಟು ಸೇವನೆ ಎಲ್ಲವನ್ನೂ ನಿರ್ಮೂಲನಗೊಳಿಸುವುದು ವಿಕೇಂದ್ರೀಕೃತ ವ್ಯವಸ್ಥೆಯ ಮುಖ್ಯಗುರಿ.

ಹಳ್ಳಿಯ ಆಡಳಿತವನ್ನು ಹಳ್ಳಿಯವರೇ ನಿಭಾಯಿಸುವುದಾದರೆ, ನಮ್ಮ ಹಳ್ಳಿಗಳು ಸಾಮಾಜಿಕವಾಗಿ ಬದಲಾವಣೆ ಹೊಂದಲೇಬೇಕು. ಇಂದಿನ ಸಮಾಜದಲ್ಲಿ ಅಸಮಾನತೆ ತಾಂಡವವಾಡುತ್ತಿದೆ. ನಮ್ಮ ಸಮಾಜ ಒಂದು Human Jungle ಎನ್ನುತ್ತಾರೆ ನಾಯಕ ಜಯಪ್ರಕಾಶ್ ನಾರಾಯಣ - ಹುಲಿ ಹುಲ್ಲೆ ಕಾಡಿನಲ್ಲಿ ಒಟ್ಟಿಗೇ ಇರುವಂತೆ ಸಮಾಜದಲ್ಲಿ ಬಲಿಷ್ಠ -ದುರ್ಬಲ, ಶ್ರೀಮಂತ - ಬಡವ, ಶೋಷಕ - ಶೋಷಿತ, ಆಳುವವನು - ಆಳಿಸಿಕೊಳ್ಳುವವನು ಬಾಳ್ವೆ ಮಾಡುತ್ತಿದ್ದಾರೆ. ಇಂತಹ ಸಮಾಜ ಹೋಗಿ, ನಾನು ಎಲ್ಲರಿಗಾಗಿ, ಎಲ್ಲರೂ ನನಗಾಗಿ ಎನ್ನುವ ಸಮಾಜ ಸೃಷ್ಟಿಯಾಗಬೇಕಾಗಿದೆ. ಇಂದಿನ ಸಮಾಜ ಮರಳುದಿಬ್ಬ ಇದ್ದಂತೆ. ಒಂದು ಬಿರುಗಾಳಿ ಬಂದರೆ ಮರಳಿನ ಕಣಗಳು ಬಿಡಿಬಿಡಿಯಾಗಿ ಬೇರೆಬೇರೆ ದಿಕ್ಕಿಗೆ ಚದರಿ ಹೋಗುತ್ತವೆ. ಅಂದರೆ ಸಮಾಜದಲ್ಲಿ ಐಕ್ಯತೆ ಇಲ್ಲ, ನಾವೆಲ್ಲ ಒಂದು ಎನ್ನುವ ಭಾವನೆ ಇಲ್ಲ. ಒಬ್ಬರ ಹಿತ ಇನ್ನೊಬ್ಬರ ಹಿತಕ್ಕೆ ಮಾರಕ. ಈ ಪರಿಸ್ಥಿತಿ ತೊಲಗಿ ಸಮಾಜ ಜೇಡಿಮಣ್ಣಿನಂತೆ ಜಿಗುಟಾಗಬೇಕೆಂಬುದು ವಿಕೇಂದ್ರೀಕರಣದ ಉದ್ದೇಶ. ಜೇಡಿಮಣ್ಣಿನ ಕಣಕಣವೂ ಒಂದನ್ನು ಬಿಟ್ಟು ಒಂದು ಇರದು. ಎಂಥ ಜಂಝಾವಾತ ಬೀಸಿದರೂ ಹೇಗೆ ಜೇಡಿಮಣ್ಣಿನ ಮುದ್ದೆ ಒಂದುಗೂಡಿಯೇ ಇರುತ್ತದೆಯೋ ಹಾಗಿರಬೇಕು ನಮ್ಮ ಸಮಾಜ. ಸಮಾನತೆ, ಅನ್ಯೋನ್ಯತೆ. ಹಂಚಿಕೊಂಡು ಬಾಳುವ ಮನೋಭಾವ, ಸಮಾಜಕ್ಕಾಗಿ ದುಡಿಯುವ ಸರ್ವಸಮರ್ಪಣ ಭಾವನೆ ಇವು ಜನತೆಯಲ್ಲಿ ಮೂಡಿದರೆ ಮಾತ್ರ ಸಮಾಜದ ಎಲ್ಲರಿಗೂ ಸುಖ -ಸಂತೋಷ ಲಭಿಸುವುದು. ಒಟ್ಟಿನಲ್ಲಿ ಶೋಷಣರಹಿತ, ಶಾಸನಮುಕ್ತ, ದಂಡನಿರಪೇಕ್ಷ, ಅಹಿಂಸಾತ್ಮಕ ಸಮಾಜ ರಚನೆಯೇ ಅಧಿಕಾರ ವಿಕೇಂದ್ರೀಕರಣದ -ಅರ್ಥಾತ್ ಗ್ರಾಮ ಸ್ವರಾಜ್ಯ ಸ್ಥಾಪನೆಯೇ ಮಹಾತ್ಮ ಅವರ ಅಂತಿಮ ಗುರಿ.

●




# ಜೆ.ಪಿ. ದೃಷ್ಟಿಯಲ್ಲಿ ವಿಕೇಂದ್ರೀಕರಣ

ಸತ್ಯವ್ರತ

## ಪರಿಕಲ್ಪನೆಯ ಹುಟ್ಟು :

ಗಾಂಧೀ ವಿಚಾರಕ್ಕೊಂದು ವ್ಯವಸ್ಥಿತ ರೂಪ ಕೊಡುವ ಉದ್ದೇಶ್ಯದಿಂದ ಕಿಶೋರಲಾಲ್ ಮಶ್ರೂವಾಲಾ ವಿಶ್ವಸ್ತವೃತ್ತಿ, ವಿಕೇಂದ್ರೀಕರಣ, ಸಮಾನ ಕೂಲಿ, ಸ್ಪರ್ಧೆಯ ಅಭಾವ ಮತ್ತು ಆನುವಂಶಿಕ ಸಂಸ್ಕಾರಗಳ ಲಾಭ ಪಡೆವ ಶಿಕ್ಷಣ ಯೋಜನೆ ಇವಿಷ್ಟನ್ನು ಕೂಡಿಸಿ ಅದನ್ನು ರೂಪಿಸಿದ್ದಾರೆ. ಗಾಂಧೀ ವಿಚಾರ ಈ ಸ್ತಂಭಗಳ ಭದ್ರ ಬುನಾದಿಯ ಮೇಲೆ ನಿಲ್ಲುವಂತೆ ಮಾಡಿದ್ದಾರೆ. ಹೀಗೆ ವಿಕೇಂದ್ರೀಕರಣ ಗಾಂಧೀ ವಿಚಾರದ ಆಧಾರಸ್ತಂಭಗಳಲ್ಲೊಂದು ಎನ್ನುವುದು ದೃಢಪಡುತ್ತದೆ. ವಿನೋಬಾ ಹೇಳುವಂತೆ ವಿಕೇಂದ್ರೀಕರಣದ ಶಬ್ದವೂ ಹೊಸತು, ಇದರ ಹಿನ್ನೆಲೆಯ ಕಲ್ಪನೆಯೂ ಹೊಸತು. ಆದುದರಿಂದ ಶಬ್ದಾರ್ಥ ಮತ್ತು ಹಿನ್ನೆಲೆಯ ಇಡೀ ವಿವರಣೆಯನ್ನು ಅವರ ಮಾತುಗಳಲ್ಲೇ ತಿಳಿಯುವುದು ಒಳ್ಳೆಯದು.

ಯಂತ್ರಯುಗ ಬರುವ ಮುಂಚೆ ಎಲ್ಲವೂ ಕೇಂದ್ರೀಕೃತವಾಗಿಯೇ ಇತ್ತು. ಆದರೂ ವಿಕೇಂದ್ರೀಕರಣವಿರಲಿಲ್ಲ. ಗ್ರಾಮಗಳಲ್ಲಿ ವಿಕೇಂದ್ರಿತ ರೀತಿಯಲ್ಲಿ ಕೈಗಾರಿಕೆಯೇನೋ ನಡೆಯುತ್ತಿತ್ತು. ಅಷ್ಟು ಮಾತ್ರದಿಂದಲೆ ಅದನ್ನು ವಿಕೇಂದ್ರೀಕರಣವೆನ್ನಲು ಬಾರದು. ವಿಕೇಂದ್ರಿತ ಉದ್ಯೋಗಗಳ ಜೊತೆಯಲ್ಲಿ ಒಂದು ಸಮಗ್ರ ದೃಷ್ಟಿಯ ವ್ಯಾಪಕ ಯೋಜನೆ ಇದೆ. ವಿಕೇಂದ್ರೀಕರಣದಲ್ಲಿ ಅಂಥ ಯೋಜನೆ ಇರದಿದ್ದರೆ ವಿಕೇಂದ್ರಿತ ಉದ್ಯೋಗಗಳೆಲ್ಲ ಕೇವಲ ಹರಿದು ಹಂಚಿದ ಕೈಗಾರಿಕೆ (Dispersed Industries). ಇಂಥ ಹರಿದು ಹಂಚಿದ ಕೈಗಾರಿಕೆ ಯಂತ್ರ ಯುಗಕ್ಕೆ ಮೊದಲು ಬೇಕಾದಷ್ಟಿದ್ದವು. ಯಂತ್ರಯುಗದ ಮೊದಲ ಹೊಡೆತಕ್ಕೇ ಅವೆಲ್ಲವೂ ಕೊಚ್ಚಿಹೋಗಿ ಮೂಲೆಗುಂಪಾದವು. ಆದರೆ ವಿಕೇಂದ್ರೀಕರಣ (ಬುದ್ಧಿಪೂರ್ವಕ, ಯೋಜನಾಪೂರ್ವಕ ಮಾಡಿದ್ದು) ಹಾಗೆ ಮುರಿದು ಬೀಳುವಂಥದ್ದಲ್ಲ. ಯಂತ್ರಯುಗವನ್ನೇ ಮುರಿದು ಬೀಳಿಸುವಂಥದು. ಈಗಿನ ಯಂತ್ರಯುಗ ಹೆಸರಿಗೆ ಮಾತ್ರ ಯಂತ್ರಯುಗ. ನಿಜವಾಗಿ ಅದು ಬಹಳ ಅತಂತ್ರ, ಅ-ಯಂತ್ರಿತ. ಇದಕ್ಕೆ ಬದಲು ಸುವ್ಯವಸ್ಥಿತವಾದ ಯಂತ್ರಯುಗ ಬೇಕೆನ್ನುತ್ತಾರೆ ಸಾಮ್ಯವಾದಿಗಳು. ಆದರೆ ಎಲ್ಲ ಶಸ್ತ್ರಗಳಂತೆ ಯಂತ್ರವೂ ಮಾನವ ನಿರ್ಮಿತವೇ; ಆದರೂ ಅಮಾನುಷ. ಅದನ್ನು ಮಾನುಷವಾಗಿ ಮಾಡಲು ಒಂದು ಮಿತಿ ಇದೆ. ಆ ಮಿತಿ ದಾಟಿದ ಮೇಲೆ ಯಂತ್ರದ ಮಾನವೀಕರಣ ಸಾಧ್ಯವಿಲ್ಲ. ಆಗ ಅದಕ್ಕೆ ವಿರುದ್ಧವಾಗಿ, ಯಂತ್ರವೇ ಮಾನವನನ್ನು ತನ್ನ ಕೈಗೊಂಬೆ ಮಾಡಿಕೊಳ್ಳುತ್ತದೆ.

***ಜಯಪ್ರಕಾಶರು ಗಾಂಧೀಜಿ ಮತ್ತು ಬುನಾದಿ ವಿಚಾರಗಳ ಕಡೆ ಆಕರ್ಷಿತರಾಗಿ ಬಂದದ್ದು, ತಮ್ಮ ಜೀವನದಲ್ಲಿ ಆಮೂಲಾಗ್ರ ಪರಿವರ್ತನೆ ತಂದುಕೊಂಡದ್ದು ಒಂದು ರೋಮಾಂಚನಕಾರಿ ಕಥೆಯೇ ಆದೀತು.***

ಶಸ್ತ್ರವೆಂದರೆ ಕೊಲ್ಲುವ ಆಯುಧ. ವೈದ್ಯನ ಕೈಯ ಚಾಕುವಲ್ಲ. ಯಂತ್ರವೆಂದರೆ ಮನುಷ್ಯನನ್ನು ನಿರುದ್ಯೋಗಿ, ಸೋಮಾರಿ, ಮಂದಬುದ್ಧಿ ಆಗಿಸುವ, ಲೂಟಿ ಹೊಡೆಯುವ ಸಾಧನವೆಂದು ಅರ್ಥ. ಮನುಷ್ಯನ ಕರಣ(ಕೈ)ಕ್ಕೆ ಉಪಕರಣವಾಗಿ ಶೋಭಿಸುತ್ತಾ ಅವನ ನೆರವಿಗೆ ಓಡಿ ಬರುವ ಮಾನವ ಸ್ಪರ್ಶ ಪಡೆದ ಉಪಕಾರಿ ಆಯುಧವಲ್ಲ. ಇಲ್ಲಿ ವೀಲ್ ಬ್ಯಾರೋ(ನೂಕುವ ಕೈಗಾಡಿ) ಇದೆ. ಈ ಕೈಗಾಡಿಯೂ ಯಂತ್ರಯುಗದ ಕಾಣಿಕೆಯೆ, ಇದೊಂದು ಉದಾಹರಣೆಯಷ್ಟೆ. ವಿಕೇಂದ್ರೀಕರಣ ಯಂತ್ರಯುಗವನ್ನು ಅಳಿಸಿ ಹಾಕುತ್ತದೆ. ಎಂದರೆ ಅದರಲ್ಲಿದ್ದಷ್ಟು ರಸ ಹಿಂಡಿಕೊಂಡು ಆಮೇಲೆ ಅದನ್ನು ಅಳಿಸಿ ಹಾಕುತ್ತೇವೆ ಎನ್ನುವ ಭಾವ. ಅಲ್ಲಿಯವರೆಗೆ ಅದು ಅಳಿಯುವುದೂ ಇಲ್ಲ. ಹೀಗೆ ಯಂತ್ರವನ್ನು ಜೀರ್ಣಿಸಿಕೊಳ್ಳುವ ಶಕ್ತಿ ಹಳೆಯ ವಿಕೇಂದ್ರಿತ ಕೈಗಾರಿಕೆಗಳಲ್ಲಿರಲಿಲ್ಲ. ವಿಕೇಂದ್ರಿತ ಉದ್ಯೋಗಕ್ಕೂ ವಿಕೇಂದ್ರೀಕೃತ ಉದ್ಯೋಗಕ್ಕೂ ಇರುವ ಮೂಲಭೂತ ಶಕ್ತಿ ಭೇದ ಇದು. ಆದ್ದರಿಂದ ವಿಕೇಂದ್ರೀಕರಣ ಎಂಬ ಶಬ್ದ, ಅದರಿಂದ ನಾವು ಹೊರಡಿಸುವ ಅರ್ಥ ಎಂದರೆ ಕಲ್ಪನೆ ಎರಡೂ ಹೊಸದು. ಈ ವಿಶ್ಲೇಷಣೆಯನ್ನು ನೆನಪಿಟ್ಟರೆ ವಿಕೇಂದ್ರೀಕರಣಕ್ಕೆ ಮಾಡುವ ಅನೇಕ ಟೀಕೆ ಟಿಪ್ಪಣಿಗಳೆಲ್ಲ ಬಂಡೆಗಪ್ಪಳಿಸಿದ ಕತ್ತಿಯಂತೆ ಮೊಂಡು ಆದಾವು.

ವಿಕೇಂದ್ರೀಕರಣ ಬರೀ ಕೈಗಾರಿಕೆಯದೇ ಅಲ್ಲ; ರಾಜ್ಯದ ಅಧಿಕಾರಕ್ಕೂ ಈ ಸೂತ್ರ ಅನ್ವಯಿಸುತ್ತದೆ. ಅಹಿಂಸಕ ಸಮಾಜವನ್ನು ರಚಿಸಬೇಕು ಎನ್ನುವವರು ಕೂಡ ಈ ಮಾತನ್ನು ಆಗಾಗ ಮರೆಯುತ್ತಾರೆ. ಔದ್ಯೋಗಿಕ ವಿಕೇಂದ್ರೀಕರಣವನ್ನು ಅವರು ಒಪ್ಪುತ್ತಾರೆ. ಆದರೆ ಅದೇ ಉಸುರಿನಲ್ಲಿಯೇ ವಿಕೇಂದ್ರೀಕೃತ ಉದ್ಯೋಗಗಳ ರಕ್ಷಣೆಗಾಗಿ ಕೇಂದ್ರೀಕೃತವಾದ ಬಲಿಷ್ಠ ಸರ್ಕಾರ ಇರಬೇಕೆನ್ನುತ್ತಾರೆ. ಸಾಮ್ಯವಾದಿಗಳಿಗೂ ರಾಜ್ಯಾಧಿಕಾರ ಕಟ್ಟಕಡೆತನಕ ಇರಬೇಕೆಂದಿಲ್ಲ. ಅಂತತೋಗತ್ವಾ ಅದು ಕರಗಿಹೋಗುತ್ತದೆ ಎನ್ನುತ್ತಾರೆ. ಆದರೆ ಆ ಕಾಲ ಬರುವವರೆಗೆ ಬಲಿಷ್ಠ ಸರ್ಕಾರ ಬೇಕೆನ್ನುತ್ತಾರೆ. 'ನಡುಗಾಲ'ದಲ್ಲಿ ಭದ್ರವಾದ ಸರ್ಕಾರ ಇರಬೇಕೆಂದು ಹಿಂದಿನಿಂದಲೂ ಎಲ್ಲ ರಾಜಕೀಯ ಪಕ್ಷಗಳ ಜವಾಬುದಾರ ಜನರೂ ತಲೆಕೆಳಗು ಮಾತನ್ನೇ ಆಡುತ್ತಾ ಬಂದಿದ್ದಾರೆ. ಗಾಂಧೀಜಿಯೊಬ್ಬರೇ ರಾಜ್ಯಾಧಿಕಾರ ಸರ್ವಕಾಲದಲ್ಲೂ, ಆದಿ-ಮಧ್ಯ-ಅಂತ್ಯ, ಯಾವಾಗಲೂ ವಿಕೇಂದ್ರಿತವಾಗಿಯೇ ಇರಬೇಕು ಎಂದವರು. ಆದರೆ ಉಳಿದ ಗೆಳೆಯರು 'ಇದೆಲ್ಲವೂ ಬರಿಯ ಕನಸು. ಬೇಕಾದರೆ ರಾಮರಾಜ್ಯ ಎಂದು ಅದನ್ನು ತ್ರೇತಾಯುಗಕ್ಕೆ ಸೇರಿಸಿಬಿಡಿ. ಮುಂದಿನ ಸರ್ವೋದಯದ ಯೋಜನೆ ಎಂದು ಭವಿಷ್ಯತ್ಕಾಲಕ್ಕೆ ತಳ್ಳಿಬಿಡಿ. ಸಧ್ಯಕ್ಕೆ ನಮಗದು ಬೇಡ' ಎನ್ನುತ್ತಾರೆ.

ಇದು ವಿನೋಬಾಜಿ ವಿಕೇಂದ್ರೀಕರಣ ಕುರಿತು ಬರೆದ ದೀರ್ಘ ಲೇಖನದ ಮುಖ್ಯಾಂಶ. ಕಿಶೋರಲಾಲ್ ಮಶ್ರೂವಾಲಾ ಅವರ 'ಗಾಂಧಿ-ಮಾರ್ಕ್ಸ್' ಕಿರುಗ್ರಂಥದ ಪೀಠಿಕಾ ಪ್ರಕರಣದಿಂದ ತೆಗೆದು ಉದ್ದೇಶ ಪೂರ್ವಕ ಇಲ್ಲಿ ಕೊಟ್ಟಿದೆ. ಶಾಸ್ತ್ರಾರ್ಥಕ್ಕಾಗಿಯೇ ರಚಿತವಾದ ಶಾಸ್ತ್ರ ಗ್ರಂಥವೊಂದರ ಪೀಠಿಕೆಯ ರೂಪದಲ್ಲಿ ಈ ದೀರ್ಘ ಲೇಖನ ವೈಚಾರಿಕ ಬಲ ಮತ್ತು ತರ್ಕ ಶಕ್ತಿ ಎರಡನ್ನೂ ಹೊಂದಿ ಅಧಿಕಾರಿಕ ವ್ಯಕ್ತಿಯ ಮೂಲಕ ಬರೆಯಲ್ಪಟ್ಟಿರುವುದರಿಂದ ಅಧಿಕೃತವೂ ತೂಕದ್ದೂ ಮತ್ತು ಉದಾಹರಣ ಯುಕ್ತವೂ ಆಗಿದೆಯೆಂದು ಬೇರೆ ಹೇಳಬೇಕಾಗಿಲ್ಲ.

ಭಾರತದಂಥ ವಿಶಾಲ, ಅತಿವೈವಿಧ್ಯಮಯ ಬೃಹದ್ದೇಶಕ್ಕೆ ರಾಜಕೀಯ,ಆರ್ಥಿಕ ವಿಕೇಂದ್ರೀಕರಣ ಅನಿವಾರ್ಯ ಮತ್ತು ಅದನ್ನು ಸಾಧಿಸದೆ ಗತ್ಯಂತರವಿಲ್ಲವೆಂದು ಗಾಂಧೀಜಿಗೆ ಅರಿವಾದಂತೆ ಬೇರೆ ಯಾರಿಗೂ ಮನವರಿಕೆಯಾದಂತೆ ಕಾಣಲಿಲ್ಲ; ಹೀಗೆ ಈ ಗಾಢ ತಿಳುವಳಿಕೆಯ ಮೇಲೆ ಗಾಂಧೀ ವಿಚಾರದ ಆಧಾರಸ್ತಂಭಗಳಲ್ಲೊಂದಾಗಿ ವಿಕೇಂದ್ರೀಕರಣದ ಪರಿಕಲ್ಪನೆಯ ವಿಕಾಸವಾಯಿತು.

೨

## ವಿಕೇಂದ್ರೀಕರಣದ ಅರ್ಥ ಮತ್ತು ವ್ಯಾಪ್ತಿ

ಇನ್ನು ವಿಕೇಂದ್ರೀಕರಣದ ಅರ್ಥದ ಕಡೆ ಗಮನ ಹರಿಸುವುದಾದರೆ ಅದರ ಹಿಂಬದಿಯ ವಿಚಾರ ಗಹನ. ಜೀವನವನ್ನೂ ಜಗತ್ತನ್ನೂ ಕಾಣುವದೃಷ್ಟಿ, ಮಾರ್ಗ-ಗಮ್ಯ (Destination)ಗಳ ದೃಷ್ಟಿ, ರಾಜಕೀಯ-ಆರ್ಥಿಕ-ಸಾಮಾಜಿಕ ದೃಷ್ಟಿ, ಯಂತ್ರೋದ್ಯೋಗ ವಾದ-ಬಂಡವಾಳಗಳ ದೃಷ್ಟಿ, ಕೇಂದ್ರೀಕೃತ ನಿಯಂತ್ರಣದ ದೃಷ್ಟಿ, ಧನದ ಮೇಲೇ ನಿಂತ ಅರ್ಥ ವ್ಯವಸ್ಥೆಯ ದೃಷ್ಟಿ ಮುಂತಾದ ಎಲ್ಲ ಮೂಲಭೂತ ದೃಷ್ಟಿಕೋನಗಳಿಂದ ವಿಚಾರಮಾಡಿದ ಪರಿಣಾಮವಾಗಿ ಹೊರಚಿಮ್ಮಿಬಂದ ಪರಿಕಲ್ಪನೆಗಳಲ್ಲಿ ವಿಕೇಂದ್ರೀಕರಣವೂ ಒಂದು. ಅದು ಉತ್ಪಾದಕ ಪರಿಶ್ರಮ, ಚಿಕ್ಕ ಚಿಕ್ಕ ಸ್ವಾವಲಂಬಿ ಸಮಾಜಗಳು, ಸರಳ ಜೀವನ ಮತ್ತು ಅವಕ್ಕೆ ಹೊಂದಿಕೊಂಡು ರಾಜಕೀಯ-ಆರ್ಥಿಕ ವಿಕೇಂದ್ರೀಕರಣ ಬಂದಿದೆ. ಗಾಂಧೀಜಿ ಈ ವಿಚಾರವನ್ನೂ ಮತ್ತು ಮೇಲಿನ ದೃಷ್ಟಿಕೋನಗಳನ್ನೂ ಅಷ್ಟೇಕೆ ಒತ್ತಿ

ಹೇಳುತ್ತಾರೋ ಅದನ್ನು ತಿಳಿಯಬೇಕು. ಅವರ ಸಮಸ್ತ ರಾಜಕೀಯ ಆರ್ಥಿಕ ಸಿದ್ದಾಂತಗಳೂ, ಕಾರ್ಯಕ್ರಮಗಳೂ ಅಹಿಂಸೆಯಿಂದ ಹುಟ್ಟಿವೆ. ಪ್ರಾಣಿ ಮಾತ್ರದ ಮೇಲೆ ಪ್ರೇಮಾದರಗಳನ್ನು ಇಟ್ಟುಕೊಂಡೇ ಅವರು ಬಾಳಿನ ಎಲ್ಲಾ ಕ್ಲೇಶ-ಕಲಹ ಮತ್ತು ಭೇದಜನಕ ಸಂಗತಿಗಳನ್ನು ನಿರಾಕರಿಸಿ ಪರಿಹರಿಸಲು ಯತ್ನಿಸುತ್ತಾರಾದ್ದರಿಂದ ಭೂತದಯೆಯನ್ನು ಅದಕ್ಕಾಗಿ ಜೀವನದ ಸಮಸ್ತ ಕ್ಷೇತ್ರ-ಸರ್ವವಿಭಾಗಗಳಿಗೆ ಅಹಿಂಸೆಯನ್ನು ವಿಸ್ತರಿಸಬೇಕಾದ್ದು ಅನಿವಾರ್ಯವೆಂದು ಕಂಡುಕೊಂಡರು. ವರ್ಗಭೇದಗಳ ನಿರಾಕರಣೆ; ಕಸುಬು-ವೃತ್ತಿಗಳಿಗೆ ಅಂಟಿಕೊಂಡು ಬೆಳೆದಿರುವ ಉಚ್ಚ-ನೀಚ ಶ್ರೇಣಿಯ ಕಲ್ಪನೆಯ ತಿರಸ್ಕಾರ; ಅಧಿಕಾಧಿಕ ಲಾಭಗಳಿಕೆಯಂಥ ಪ್ರೇರಣೆಯ ಸಂಸ್ಕಾರದ ಖಂಡನೆ ಮತ್ತು ಅದರ ತಳಹದಿಯಲ್ಲಿ ಅಡಗಿರುವ ಸ್ಪರ್ಧೆ, ಖಾಸಗಿ ಸ್ವತ್ತಿನ ರೂಢಿ ಮುಂತಾದ ವಿಕೃತ ವಿಚಾರಗಳ ನಿರಾಕರಣೆಯೂ ಆಗಬೇಕು. ಇಂಥ ಸಮಸ್ತ ನಿಷೇಧ ನಿರಾಕರಣೆಗಳಿಗಾಗಿ ಅಹಿಂಸಕ ಮಾರ್ಗೋಪಾಯಗಳನ್ನು ಹುಡುಕಬೇಕಾಗುವುದು. ಎಲ್ಲ ವ್ಯಕ್ತಿ-ವರ್ಗ ಮತ್ತು ಸಮಾಜದ ಸಮಸ್ತರ ಹಿತಕ್ಕಾಗಿ ರೂಪಿಸಿದ ಶಿಕ್ಷಣ ಮತ್ತು ಜೀವನ ಪದ್ಧತಿಯ ವಿಕಾಸ ಮಾಡಿಕೊಳ್ಳಬೇಕಾದ್ದು ಬಹು ಅಗತ್ಯ. ಆದ್ದರಿಂದ ಅವೆಲ್ಲಕ್ಕೂ ಆಧಾರ ಭೂತ ತತ್ವ ಭದ್ರ ನೆಲಗಟ್ಟು ಸತ್ಯ-ಅಹಿಂಸೆಗಳೇ. ಹೀಗೆ ಸತ್ಯ ಅಹಿಂಸೆಯ ತಿರುಗಣೆಗಳ ಮೇಲೆ ನಿಂತು, ಅವುಗಳ ಸುತ್ತ ಸುತ್ತುವ ಜೀವನ ವ್ಯವಹಾರದಲ್ಲಿ ಹಿಂಸಾವೃತ್ತಿಯು ಉತ್ಪತ್ತಿಯಾಗದಂತೆ, ಅಷ್ಟಿಷ್ಟು ಆದರೂ ಅದನ್ನು ಅಹಿಂಸಾತ್ಮಕ ಶಕ್ತಿಯಿಂದ ಪ್ರತಿರೋಧಿಸಿ ಉಪಶಮನ ಮಾಡಲು ಅನುಕೂಲಕರ ಪೋಷಕ ಸಂರಚನೆಗಳು ಅಗತ್ಯವಾದವು-ಅರ್ಥಾತ್ ಚಿಕ್ಕ ಚಿಕ್ಕ ಸ್ವಾವಲಂಬಿ ಜನ ಸಮೂಹಗಳು, ರಾಜಕೀಯ ಆರ್ಥಿಕ ವಿಕೇಂದ್ರೀಕರಣ, ಸರಳ ಜೀವನ ಇವು. ಅಹಿಂಸೆಯ ವಿಸ್ತಾರಕ್ಕೆ ಇವೂ, ಇವುಗಳ ವಿಕಾಸಕ್ಕೆ ಅಹಿಂಸೆಯೂ ಒಂದು ಇನ್ನೊಂದಕ್ಕೆ ಬಲ-ಬೆಂಬಲ ನೀಡುವ, ಪಾರಸ್ಪರಿಕ ಬೆಳವಣಿಗೆಗೆ ನೆರವಾಗುವ ಪೋಷಕ ತತ್ವಗಳಾಗಿ ಹೆಣೆದುಕೊಂಡಿರುವ ಸ್ಥಿತಿಯನ್ನು ಸೂಕ್ಷ್ಮ ಚಿಂತಕರೂ-ಸೂಕ್ಷ್ಮಮತಿಗಳೂ ಗಮನಿಸಬೇಕಾದ್ದೇ ಸರಿ. ಕೇಂದ್ರೀಕರಣ, ಬಹುಕ್ಲಿಷ್ಟ ಜೀವನ ಪದ್ಧತಿ, ಮಿತಿಯರಿಯದ ಆಸೆ ಅಪೇಕ್ಷೆಗಳು. ಅವುಗಳ ಪೂರೈಕೆಗಾಗಿ ಮತ್ತಷ್ಟು ಕೇಂದ್ರೀಕರಣ, ಸ್ಪರ್ಧೆ, ಅದರ ಹಿಂದೆಯೇ ಘರ್ಷಣೆ-ತಿಕ್ಕಾಟ, ಹಿಂಸೆಯೂ ಉತ್ಪತ್ತಿಯಾದವೆಂದೇ ಅರ್ಥ. ಹಿಂಸೆ ಇದ್ದಲ್ಲಿ ಪ್ರತಿ ಹಿಂಸೆ, ಅತಿ ಹಿಂಸೆ, ಕೊನೆಗೆ ಯುದ್ಧ ಇವು ಅನಿವಾರ್ಯ. ಹಿಂಸೆ ಯುದ್ದದ ಬೀಜ. ಸ್ಪರ್ಧೆ-ಅತ್ಯಾಸೆ, ಖಾಸಗಿ ಸ್ವತ್ತು ಇವು ಹಿಂಸೆಗೆ ಬೀಜ. ಹೀಗೆ ಬೀಜಾರೋಪಣೆಯ ವಿಷವೃತ್ತ ಸುತ್ತಿಕೊಂಡಿದೆ. ಇಂಥ ವಿಷವೃತ್ತಗಳೊಳಗೇ ಎಡಬಿಡದೇ ಸುತ್ತಾಡುತ್ತಾ, ಅದನ್ನು ಭೇದಿಸಲಾಗದ, ಅದರಿಂದ ಹೊರಬರಲಾರದ ತೊಳಲಾಟದಲ್ಲಿ ಸಿಲುಕಿರುವುದನ್ನು, ಕೊಟ್ಟ ಕೊನೆಯಲ್ಲಿ ತನ್ನ ಸಂರಚನೆಗಳೇ ತನ್ನ ಅಸ್ತಿತ್ವಕ್ಕೇ ಗಂಡಾಂತರಕಾರಿಯಾಗಿ ಬೆದರಿಸುತ್ತಿರುವುದನ್ನೂ, ಸವಾಲಾಗಿ ನಿಂತಿರುವುದನ್ನೂ, ವ್ಯಕ್ತಿ, ಸಮಾಜ ಸರಕಾರಗಳೂ ಅವುಗಳ ಮುಂದೆ ಬಲಹೀನ ಅಸಹಾಯಕರಾಗಿ ವರ್ತಿಸುವ ಸ್ಥಿತಿಯನ್ನು ನೋಡುತ್ತಿದ್ದೇವೆ. ಇದೇನು ವಿವೇಕಿಯ ಲಕ್ಷಣವೂ ಅಲ್ಲ, ಪ್ರಬುದ್ಧನ ಸ್ಥಿತಿಯೂ ಅಲ್ಲ. ಅವಿವೇಕದ-ಅಪ್ರಬುದ್ಧತೆಯ ಸ್ಥಿತಿ ಇದು ಎಂದಮೇಲೆ ಮನುಷ್ಯ ಸಮಾಜದ ವಿಕಾಸದ ದಿಶೆ ನಿಶ್ಚಿತವೇ, ಆದುದರಿಂದ ಇಷ್ಟು ತಾತ್ಪರ್ಯ: ಅಹಿಂಸೆಯ ವಿಸ್ತಾರಕ್ಕಾಗಿ ಸರಳ ಜೀವನ ಮತ್ತು ಸರಳ ಜೀವನ ವಿಧಾನದ ಆಧಾರತತ್ವ ಅಹಿಂಸೆ ಹೀಗೆ ಎರಡೂ ಹೆಣೆದುಕೊಂಡು ಬಂದಿರುವುದನ್ನು ಸೂಕ್ಷ್ಮಗ್ರಾಹಿಯಾದ ಗಾಂಧೀಜಿ ಅರಿತರು.

ಅಹಿಂಸೆ ಮತ್ತು ಸರಳ ಜೀವನಗಳೆರಡರ ಅನ್ಯೋನ್ಯ ಸಂಬಂಧದ ಅರಿವು ಒಬ್ಬ ದ್ರಷ್ಟಾರನಿಗೆ ಆದ ಹಾಗೆ ಅನ್ಯರಿಗೆ ಆಗಲಾರದು. ಭವಿಷ್ಯದರ್ಶನವೂ ಇರಬೇಕಾಗುತ್ತದೆ. ಹಾಗೆಯೇ ಭೂತ ಮತ್ತು ವರ್ತಮಾನಗಳು ಸಾಗಿಬಂದ ರೀತಿ, ಇವುಗಳಲ್ಲಡಗಿರುವ ಒಳನೋಟ ಹಾಗೂ ಅದರ ಸಂಕೇತ ಮತ್ತು ಅನುಭವ ಇವೆಲ್ಲ ಸೇರಿಯೇ ಒಂದು ತತ್ವದರ್ಶನ ಮತ್ತು ಅದರ ನಿರೂಪಣೆ ಅಂಥ ದ್ರಷ್ಟಾರನಿಂದ ಸಾಧ್ಯವಾದೀತು. ಅಂಥವನನ್ನು ಋಷಿ ಎಂದು ಕರೆದರು. “ಋಷಯೋರ್ ಮಂತ್ರದ್ರಷ್ಟಾರಃ” ಎಂಬ ಸೂತ್ರ ಪ್ರಸಿದ್ಧವೇ ಇದೆ. ಗಾಂಧೀಜಿ ಹೀಗೆ ಪಡೆದ ಅರಿವಿನಿಂದ ಅಹಿಂಸೆಯ ತತ್ವ ಜ್ಞಾನಕ್ಕೆ ಅಂಟಿಕೊಂಡರು. ವಿನೋಬಾ ಅವರ ಮಾನಸ ಪುತ್ರರಿದ್ದಂತೆ. ಅವರ ಪದಚಿಹ್ನೆಗಳನ್ನು ಗುರುತಿಸಿ ಅವುಗಳ ಮೇಲೆ ನಡೆದ ವಿನೋಬಾಗೂ ಅದೇ ದರ್ಶನವಾಯಿತು.

೩

## ಜಯಪ್ರಕಾಶರ ವಿಚಾರ ಯಾತ್ರೆ

ಜಯಪ್ರಕಾಶರು ಗಾಂಧೀಜಿ ಮತ್ತು ಬುನಾದಿ ವಿಚಾರಗಳ ಕಡೆ ಆಕರ್ಷಿತರಾಗಿ ಬಂದದ್ದು, ತಮ್ಮ ಜೀವನದಲ್ಲಿ ಆಮೂಲಾಗ್ರ ಪರಿವರ್ತನೆ ತಂದುಕೊಂಡದ್ದು ಒಂದು ರೋಮಾಂಚನಕಾರಿ ಕಥೆಯೇ ಆದೀತು. ಅವರು ತಮ್ಮ ವಿಚಾರಯಾತ್ರೆಯ ವಿವಿಧ ಮಜಲುಗಳನ್ನು ಕ್ರಮಿಸಿ ತಮ್ಮ ಗಂತವ್ಯ ತಲುಪಿದ್ದೂ ಅಷ್ಟೇ ರೋಮಾಂಚನಕಾರಿ ಇತಿಹಾಸ.

ಅವರು ಅಮೆರಿಕಾದಲ್ಲಿ ಶಿಕ್ಷಣಾರ್ಥಿಯಾಗಿದ್ದಾಗಲೇ ನಿರೀಶ್ವರವಾದೀ ಸಂಸ್ಥೆಯ (ಸೊಸೈಟಿ ಆಫ್ ದಿ ಗಾಡ್‌ಲೆಸ್) ಸದಸ್ಯರಾಗಿ, ಅಪ್ಪಟ ಸಾಮ್ಯವಾದಿಯಾಗಿ, ವೈಜ್ಞಾನಿಕ ಸಮಾಜವಾದದ ಅನುಯಾಯಿಯಾಗಿ ಸ್ವದೇಶಕ್ಕೆ ಮರಳಿದ್ದರು. ಮಾರ್ಕ್ಸ್‌ವಾದದ ಮೂಲಕ ತಮಗೆ ಅತಿಪ್ರಿಯವೆನಿಸಿದ ಸ್ವಾತಂತ್ರ್ಯ, ಸಮಾನತೆ, ಸೋದರತೆಯ ತ್ರಿವಿಧ ಆದರ್ಶಗಳನ್ನು ಚರಿತಾರ್ಥಗೊಳಿಸುವುದು ಸಾಧ್ಯವೆಂಬ ದೃಢ ವಿಶ್ವಾಸದಿಂದ ಭಾರತದಲ್ಲಿ ಕಾರ್ಯರಂಗಕ್ಕಿಳಿದಿದ್ದರು. ಅವರು ಜೀವನದುದ್ದಕ್ಕೂ ಸೆಣಸಿದ್ದು ತಮ್ಮ ವೈಚಾರಿಕ ನೆಲಗಟ್ಟನ್ನು ಬದಲು ಮಾಡಿದ್ದೆಲ್ಲ ಈ ಒಂದು ಉದ್ದೇಶಪೂರ್ತಿಗಾಗಿ ಎನ್ನಬೇಕು. ಹೀಗೆ ಪದೇಪದೇ ತಮ್ಮ ನೆಲಗಟ್ಟನ್ನು ಬದಲಿಸಿಕೊಳ್ಳುತ್ತಿದ್ದುದನ್ನು ನೋಡಿ ಜೆ.ಪಿ.ಎಷ್ಟು ಅಸ್ಥಿರರು, ಎಷ್ಟು ಅಸಾಂಗತ್ಯ ಅವರ ವಿಚಾರದಲ್ಲಿ ಎಂದವರುಂಟು. ಅವರೇ ಹೆಚ್ಚು. ಆದರೆ ಅದು ಮೂಲತಃ ಅವರ ವೈಚಾರಿಕ ಯಾತ್ರೆಯ ವಿವಿಧ ತಿರುವು-ಮಜಲುಗಳಾಗಿದ್ದವೇ ಹೊರತು, ಅವರ ವಿಕಾಸಶೀಲತೆಯ ಲಕ್ಷಣಗಳಾಗಿದ್ದವೇ ಹೊರತು ಅಸಾಮಂಜಸ್ಯದ ಲಕ್ಷಣಗಳಲ್ಲ. ಅವರ ಗುರುಸ್ಥಾನದಲ್ಲಿದ್ದ ವಿನೋಬಾ ಅವರ ವಿಕಾಸಶೀಲ ಗುಣವನ್ನು ಗುರುತಿಸಿ ಅದು ವಿಕಾಸಶೀಲನ ಲಕ್ಷಣ ಎಂದಿದ್ದರು.

ಯಾವ ರಾಜಕೀಯ ಆರ್ಥಿಕ ವ್ಯವಸ್ಥೆ ತ್ರಿವಿಧ ಆದರ್ಶಗಳನ್ನು ಉತ್ತಮವಾಗಿ ಪ್ರಕಟಿಸಬಲ್ಲದು? ಅವನ್ನು ಸುನಿಶ್ಚಿತಗೊಳಿಸಬಲ್ಲದು? ವ್ಯಕ್ತಿಯ ಆತ್ಮವಿಶ್ವಾಸಕ್ಕೂ ಸಾಮಾಜಿಕ ವಿಕಾಸ ಮತ್ತು ಸಂಪನ್ನತೆಗೂ ಸಮಾನಾವಕಾಶವಿತ್ತು ವ್ಯಷ್ಟಿ ಮತ್ತು ಸಮಷ್ಟಿಯ ದ್ವಿವಿಧ ಪರಿವರ್ತನೆಯನ್ನು ಜೊತೆಜೊತೆಗೆ ಸಾಧಿಸುತ್ತಾ ಯಾವುದೇ ಬಗೆಯ ಅಹಿತಕರ ಪಶ್ಚಾತ್ ಪರಿಣಾಮಗಳನ್ನಾಗಲೀ ಪಾರ್ಶ್ವ ಪರಿಣಾಮಗಳನ್ನಾಗಲಿ ಸಶೇಷವಾಗಿ ಬಿಡದ ತ್ರಿವಿಧ ಆದರ್ಶಗಳ ಹ್ರಾಸಕ್ಕೆ ಇಂಬುಗೊಡದೇ ಅವನ್ನು ಅರಳಿಸುವ ರಾಜಕೀಯ-ಆರ್ಥಿಕ ವ್ಯವಸ್ಥೆ ಯಾವುದು? ಯಾವ ವೈಚಾರಿಕ ಪರಂಪರೆಯಿಂದ ಇದು ಸಾಧ್ಯವಾದೀತು? ಜೆ. ಪಿ. ಯವರ ಅರಸುವಿಕೆಯ ಮೂಲ ಬಿಂದು ಮತ್ತು ಅದರ ಯಾತ್ರೆಯ ದಿಶೆ ಇದೇ ಆಗಿತ್ತು. ಈ ಮೂಲಭೂತ ವಿಷಯದಲ್ಲಿ ಯಾವುದೇ ಹೊಂದಾಣಿಕೆ ಮಾಡಿಕೊಳ್ಳದಿದ್ದುದನ್ನು ಕಾಣಬಹುದು. ೧೯೫೪ರಲ್ಲಿ ಅವರು ಸಮರ್ಪಿಸಿದ ಜೀವನದಾನವೂ ಇದಕ್ಕಾಗಿಯೇ, ಕೇವಲ ಭೂದಾನ ಕಾರ್ಯಕ್ರಮಕ್ಕಲ್ಲ. ಜೆ. ಪಿ. ಯವರ ಟೀಕಾಕಾರರು, ವಿಮರ್ಶಕರು ಅವರ ಈ ಅಂತಃಶೋಧನೆಯ ವಿಷಯವನ್ನರಿಯರು. ಇಲ್ಲವೇ, ಉದ್ದೇಶಪೂರ್ವಕ ಟೀಕೆ ಮಾಡುತ್ತಿದ್ದರೆನ್ನಬೇಕು.

ಜೆ.ಪಿ. ಯವರ ವೈಚಾರಿಕ ಯಾತ್ರೆಯು ಕ್ರಮಿಸಿದ ದೀರ್ಘ ಹಾದಿಯನ್ನೂ ದಾಟಿದ ಮೈಲುಗಲ್ಲುಗಳನ್ನೂ ಹಾಗೂ ವಿಹಂಗಮ ನೋಟಕ್ಕೆ ಸಿಕ್ಕುವ ಹೆಜ್ಜೆ ಗುರುತುಗಳನ್ನೂ ಸಂಕ್ಷಿಪ್ತವಾಗಿ ಇಲ್ಲಿ ಪಟ್ಟಿ ಮಾಡಬಹುದು.

| | | | |
|---|---|---|---|
| ೧. | ಮಾರ್ಚ್ ೧೯೪೮ | : | ಮಾರ್ಕ್ಸ್‌ನ ಕ್ರಾಂತಿಕಾರಿ ನೀತಿಶಾಸ್ತ್ರವನ್ನು ತ್ಯಜಿಸಿ ಗಾಂಧಿಯವರ ಸಾಧನಶುದ್ಧಿಯ ಆಗ್ರಹದ ದೀಕ್ಷೆ ತೊಟ್ಟರು. |
| ೨. | ಆಗಸ್ಟ್ ೧೯೫೦ | : | ಪವನಾರ್ ಆಶ್ರಮಕ್ಕೆ ತೆರಳಿ ವಿನೋಬಾ ಅವರೊಡನೆ ಗಹನ-ತಾತ್ವಿಕ ಚರ್ಚೆ ಶಾಸ್ತ್ರಾರ್ಥ ನಡೆಸಿದರು. ಹಿಂಸೆ-ಅಹಿಂಸೆಯ ಚರ್ಚೆಯೂ ಅದರಲ್ಲಿ ಬಂದಿತ್ತು. |
| ೩. | ೩೦ ಮಾರ್ಚ್ ೧೯೫೨ | : | ಬಾಂದಾಜಿಲ್ಲೆ (ಯು.ಪಿ.)ಯ ವಿನೋಬಾ ಪಾದಯಾತ್ರೆಯಲ್ಲಿ ಜೆ.ಪಿ. ಸೇರಿಕೊಂಡರು. ವಿನೋಬಾ ಕಾರ್ಯನಿರತರಾಗಿದ್ದ ಪರಿ,ಭೂದಾನ ಚಳವಳಿಯ ವಿಧಿ ವಿಧಾನಗಳ ಪ್ರತ್ಯಕ್ಷ ಪರಿಚಯ ಪಡೆದರು. ಅರ್ಥಾತ್ ಹೃದಯ ಪರಿವರ್ತನೆಗಳ ಮೂಲಕ ಭೂಮಿ ದಾನ ಪಡೆಯುವ ರೀತಿ, ಇವು ಎಷ್ಟು ಗತಿಶೀಲ ಎಂಬೆಲ್ಲ ವಿಷಯಗಳ ಪರಿಶೀಲನೆ ಮಾಡಿದರು. |
| ೪. | ೨೩ ಜೂನ್ ೧೯೫೨ | : | ಪುಣೆಯಲ್ಲಿ ಆತ್ಮಶುದ್ಧಿಗಾಗಿ ೨೧ ದಿನಗಳ ದೀರ್ಘ ಉಪವಾಸ.<br>ಒಳ್ಳೆಯತನಕ್ಕೆ ಪ್ರೇರಣೆಯ ಶ್ರೋತ ಯಾವುದು? ಮಾರ್ಕ್ಸ್‌ವಾದದಲ್ಲಿ ಈ ಬಗೆಯ ಪ್ರೇರಣೆಗಳಿಲ್ಲವಲ್ಲ ಎಂದು ಚಿಂತಿಸಿದರು. ತತ್ಫಲವಾಗಿ ಮಾರ್ಕ್ಸ್ ಸಿದ್ಧಾಂತದ ಅಡಿಗಲ್ಲಾದ ದ್ವಂದ್ವಾತ್ಮಕ ಭೌತವಾದವನ್ನು ಪೂರ್ಣತಃ ತೊರೆದರು. ಒಳ್ಳೆಯತನಕ್ಕೆ ಪ್ರೇರಣೆಗಳು (Incentives to Goodness) ಎಂಬ ಐತಿಹಾಸಿಕ ಹೇಳಿಕೆ ನೀಡಿದರು. |

| | | | |
|---|---|---|---|
| ೫. | ಸೆಪ್ಟೆಂಬರ್ ೧೯೫೨ | : | ಗಯಾ ಜಿಲ್ಲೆಯಲ್ಲಿ ತಾವು ಸ್ವತಃ ಭೂದಾನಯಾತ್ರೆ ಮಾಡಿ ಸ್ವಾನುಭವ ಪಡೆದರು. |
| ೬. | ಏಪ್ರಿಲ್ ೧೯೫೩ | : | ಚಾಂಡಿಲ್ ಸರ್ವೋದಯ ಸಮ್ಮೇಳನದಲ್ಲಿ ಭಾಗವಹಿಸಿ ವಿನೋಬಾ ಅವರ ಬಹುಮುಖ್ಯ ಪ್ರವಚನ ಕೇಳಿದ ನಂತರ ತಾವು ಅವರ ಶಿಷ್ಯನಾಗಿ ಕಾರ್ಯ ಮಾಡಲು ಸಿದ್ಧವೆಂದು ಪ್ರಕಟಿಸಿದರು. |
| ೭. | ೧೯ ಏಪ್ರಿಲ್ ೧೯೫೪ | : | ಬುದ್ಧಗಯೆಯ ಸರ್ವೋದಯ ಸಮ್ಮೇಳನದಲ್ಲಿ ಜೀವನ ದಾನಕ್ಕೆ ಕರೆ ನೀಡಿ ತಾವೇ ಸ್ವತಃ ಮೊದಲ ಜೀವನ ದಾನಿಯಾದರು.<br>'ಭೂದಾನ ಮೂಲಕ ಗ್ರಾಮೋದ್ಯೋಗ ಪ್ರಧಾನ ಅಹಿಂಸಾತ್ಮಕ ಕ್ರಾಂತಿಗೆ ತಮ್ಮ ಜೀವನ ಸಮರ್ಪಣೆ' ಎಂದು ಸಾವಿರಾರು ಕಾರ್ಯಕರ್ತರ ಜೀವನದಾನಕ್ಕೆ ಪ್ರೇರಣೆ ನೀಡಿದರು. |
| ೮. | ೫ ಮೇ ೧೯೫೪ | : | ಗಯಾ ಜಿಲ್ಲೆ ಸೋಖೋ ದೇವರಾ ಗ್ರಾಮದಲ್ಲಿ ತಮ್ಮ ಆಶ್ರಮ ಸ್ಥಾಪಿಸಿದರು. |
| ೯. | ೧೯೫೭ | : | ಪ್ರಜಾ ಸಮಾಜವಾದಿ ಪಕ್ಷಕ್ಕೆ ರಾಜೀನಾಮೆ-ಪಕ್ಷಾತೀತರು. |

ವಿವಿಧ ಹೆಜ್ಜೆ ಗುರುತುಗಳ ಮೇಲೆ ಕಣ್ಣು ಹಾಯಿಸಿ ನೋಡಿದಾಗ ಕಂಡುಬರುವ ಸಂಗತಿಯೆಂದರೆ ಜೆ.ಪಿ.ಮಾರ್ಕ್ಸ್‌ವಾದ ಮತ್ತು ಸಮಾಜವಾದಿ ಸಿದ್ಧಾಂತಗಳ ಪ್ರಭಾವದಲ್ಲಿದ್ದುದು ಕೇವಲ ಹದಿನಾಲ್ಕು ವರ್ಷಗಳ ಕಾಲ ಮಾತ್ರ. ಯಾವಾಗ ಸಾಧನ ಶುದ್ಧಿಯ ಕಡೆ ಹೊರಳಿದರೋ ಆಗಲೇ ಅವರು ಗಾಂಧಿ ಮಾರ್ಗ ತುಳಿದರು ಎನ್ನಬೇಕು. ಏಕೆಂದರೆ ಸಾಧನ-ಸಾಧ್ಯಗಳ ಪಾವಿತ್ರ್ಯ ವಿವೇಚನೆ ಗಾಂಧಿ ವಿಚಾರದ ಕೂಡುಗಲ್ಲು, ತಳ ಸ್ಪರ್ಶಿ ವಿಚಾರವಿದ್ದಂತೆ. ಆ ವಿಚಾರವನ್ನೊಪ್ಪಿದವರು ಬಹುಮಟ್ಟಿಗೆ ಅವರ ತತ್ವಜ್ಞಾನ ಒಪ್ಪಿದಂತೆಯೇ ಎಂದು ಪರಿಗಣಿಸಲಾಗುತ್ತದೆ.

ಆಗಸ್ಟ್ ೧೯೫೦ ರಲ್ಲಿ ಪವನಾರ್ ಆಶ್ರಮಕ್ಕೆ ಭೇಟಿ ಮತ್ತು ವಿನೋಬಾಜಿಯೊಡನೆ ಆದ ಮಾತುಕತೆಯ ಪರಿಣಾಮವಾಗಿ ಅಹಿಂಸಾಮಾರ್ಗಕ್ಕೆ ಪೂರ್ಣವಾಗಿ ಹೊರಳುವಂತಾಯಿತು. ಮಾನವಕುಲ ತನ್ನ ಕ್ರಮಿಕ ವಿಕಾಸ ಸಾಧಿಸುತ್ತಾ ಅಹಿಂಸೆಯತ್ತ ಸಾಗಿರುವುದೂ ಮತ್ತು ಆ ತತ್ವವನ್ನು ತನ್ನೆಲ್ಲ ಜೀವನ ವ್ಯವಹಾರಗಳಲ್ಲಿ ವಿಕಸಿಸುತ್ತಾ ಬಂದಿರುವುದೂ ನಿರಾಕರಿಸಲಾಗದ ಸಂಗತಿಯೆಂದೊಪ್ಪಿದರು. ಮತ್ತೊಂದೆಡೆ, ಹಿಂಸಾಶಾಸ್ತ್ರವನ್ನೂ ವಿಕಸಿಸಿ ವಿಸ್ತರಿಸುತ್ತಾ ಅತಿಹಿಂಸೆಯತ್ತ, ಮಾನವ ಸಂಹಾರಕ ಶಸ್ತ್ರಾಸ್ತ್ರಗಳ ಭಂಡಾರವನ್ನೇ ಶೇಖರಿಸಿಕೊಂಡಿರುವ ದುರಂತಕರ -ದ್ವಂದ್ವಾತ್ಮಕ ಸ್ಥಿತಿ-ಗತಿಯಲ್ಲಿ ತೊಳಲಾಡುತ್ತಿದ್ದರೂ ಒಟ್ಟಿನಲ್ಲಿ ಸಮಾಜ ಪ್ರವಾಹವಂತೂ ಅಹಿಂಸಾ ತತ್ವದ ಆಧಾರ ಹಿಡಿದೇ ಮಾನವ ಕುಲ ಉಳಿದೀತು, ಇಲ್ಲವೇ ಅಳಿದೀತು ಎಂಬ ಎಚ್ಚರಿಕೆ ಗಂಟೆಯ ನಿನಾದಕ್ಕೆ ಕಿವಿಗೊಡಬೇಕಾಗಿ ಬಂದಿದೆ. ಎಂದರೆ ತನ್ನ ಅಸ್ತಿತ್ವ ಮತ್ತು ಭವಿಷ್ಯ ಅಹಿಂಸೆಯೊಂದಿಗೆ ಅಂಟಿದೆ ಎಂಬ ಸ್ಪಷ್ಟ ಸತ್ಯದರ್ಶನವೂ ಆಗುತ್ತಿದೆಯೆಂದೊಪ್ಪಿದರು. ಬೇರೊಂದು ಮಾತಿನಲ್ಲಿ ಶಾಸ್ತ್ರೀಯ ಪರಿಭಾಷೆಯಲ್ಲಿ ಆತ್ಮಜ್ಞಾನ-ವಿಜ್ಞಾನಗಳ ಸಮನ್ವಯದ ಆವಶ್ಯಕತೆಯನ್ನೊಪ್ಪಿಕೊಂಡರು. ಸಾರಾಂಶ, ಸಾಧನ ಶುದ್ಧಿಯ ಆಗ್ರಹ ಮತ್ತು ಅಹಿಂಸಾ ತತ್ವದ ಸ್ವೀಕಾರದೊಡನೆ ಜೆ.ಪಿ.ಯ ಗಾಂಧೀ ವಿಚಾರದ ದೀಕ್ಷೆ ಸುಗಮವಾಯಿತು.

ಜೆ.ಪಿ.ಯವರ ಈ ವೈಚಾರಿಕ ದೀಕ್ಷಾ ಸ್ವೀಕಾರದ ಪರಿಣಾಮ ಮತ್ತು ಛಾಯೆ ೧೯೫೨-೫೩ ರ ನಂತರ ಎಲ್ಲೆಲ್ಲೂ ತೋರಿಬಂತು. ೧೯೫೩ರ ಡಿಸೆಂಬರ್ ೨೭ ನೇ ದಿನ ಪ್ರಜಾಸಮಾಜವಾದಿ ಪಕ್ಷದ ಪ್ರಥಮ ವಾರ್ಷಿಕ ಸಮ್ಮೇಳನದ ಉದ್ಘಾಟನಾ ಭಾಷಣ ಮಾಡುತ್ತಾ,"Since the organisational merger of these three parties (ಸಮಾಜವಾದಿ ಪಕ್ಷ + ಕೆ.ಎಂ.ಪಿ.ಪಿ.+ಫಾರ್ವರ್ಡ್ ಬ್ಲಾಕ್) there has been a process of interchange of ideas. But a complete synthesis is yet to come. I belive this synthesis which is very essential, is possible only on the basis of Gandhism"-(Towards Total Revolution:Vol.1:Search for an Ideology:18-A Plea for Gandhism: Page 159) ಮುಂದುವರಿಯುತ್ತಾ,"The old Socialist Party had started under a strong influence of Leninist Marxism. But it had slowly travelled towards Gandhism. It did so when it gave up its faith in Dictatorship (even as a transitional

phase) when it asserted that Socialism could not exist without Democracy; When it came to believe that Decentralization of economic and political power was essential for democracy; when it decided that good ends could'not be achieved through evil means; when it accepted at least in words, Satyagraha as a revolutionary weapon.......

Gandhism offers the third alternative of revolution by non-violent mass action.

Gandhism does not concentrate on capture of power nor depend upon the power of the State. It goes direct to the people and help them effect the revolution in their lives and in the life of the community. Support from the State power would be assured once the power of the people has been created.

The Gandhian technique goes beyond the confine of party and class,it aims at converting or revolutionising members of all parties and classess....Gandhism wishes to abolish classes by so bringing the classes together that there are no class distinctions left"- (ಮೇಲಿನ ಸಂಪುಟ ೧೬೦-೧೬೧)

ಮೇಲಿನ ವಿಸ್ತೃತ ಉದ್ಧರಣದಲ್ಲಿ ಜಯಪ್ರಕಾಶರು ಸಮಾಜವಾದಿ ಪಕ್ಷದಲ್ಲಿದ್ದಾಗಲೇ ಗಾಂಧಿ ವಿಚಾರದ ಮೌಲ್ಯಗಳತ್ತ ಒಲಿದು ಬಂದಿರುವುದು, ಆಚಾರ್ಯ ಕೃಪಲಾನಿ, ಪಿ.ಸಿ.ಘೋಷ್ ಮುಂತಾದ ಪ್ರಸಿದ್ಧ ಗಾಂಧೀ ವಿಚಾರವಾದಿಗಳ ಪ್ರಭಾವದಿಂದಾಗಿ ಅಹಿಂಸೆ, ಪ್ರಜಾತಂತ್ರ, ರಾಜಕೀಯ ಆರ್ಥಿಕ ವಿಕೇಂದ್ರೀಕರಣ, ಸಾಧನ ಶುದ್ಧಿಯ ಆಗ್ರಹ ಇದನ್ನು ಸ್ವೀಕರಿಸಿ ಸರ್ವಾಧಿಕಾರಿ ಪ್ರವೃತ್ತಿ ಮತ್ತು ವರ್ಗ ಕಲಹ ಮತ್ತು ರಾಜ್ಯಾಧಿಕಾರವನ್ನು ಆಕ್ರಮಿಸಿಕೊಳ್ಳುವ ಕಡೆ ಮೊದಲ ಗಮನ ಕೊಡುವ ಸಮಾಜವಾದಿ ವಿಚಾರಧಾರೆಯು ನಿರಾಕರಿಸುವ ಪ್ರಕ್ರಿಯೆ ನಡೆದಾಗಿತ್ತೆಂಬುದು ಸ್ಪಷ್ಟಪಡುತ್ತದೆ. ಅವರ ಭಾಷಣದ ಮುಂದಿನ ಅಂಶ ಗಾಂಧಿ ವಿಚಾರದಲ್ಲಿ ಅವರು ಇರಿಸಿರುವ ಪೂರ್ಣನಿಷ್ಠೆಯನ್ನು ಸಾರುತ್ತದೆ.....``I am a whole-hearted believer in Sarvodaya and desire to create non...violent strength in the People..."the world Socialist movement is increasingly becoming aware of the value of Sarvodaya. There is a new ferment in World Socialist thought. I hope they will realise that Sarvodaya represents the highest Socialist Values"-(Towards Total Revolution: Vol.2:Politics in India:-Sarvodaya and Party Politics-Chapter 43: page 243.)

ಮೇಲಿನ ಹೇಳಿಕೆಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿಗಳೆಂದರೆ ಕ್ರಾಂತಿಕಾರಿ ಅಹಿಂಸಕ ಶಸ್ತ್ರವಾಗಿ ಸತ್ಯಾಗ್ರಹದ ಬಳಕೆಯಲ್ಲಿ ಶ್ರದ್ಧೆ,ರಾಜ್ಯಶಕ್ತಿಯ ಅವಲಂಬನವಿಲ್ಲದ ಜನಶಕ್ತಿಯನ್ನು ಕಟ್ಟಿ ತನ್ಮೂಲಕ ಸಮಾಜ ಪರಿವರ್ತನೆಯ ಕಾರ್ಯದಲ್ಲಿ ಶ್ರದ್ಧೆ, ವರ್ಗಕಲಹಕ್ಕೆ ಪ್ರತಿಯಾಗಿ ವರ್ಗವಿಲಯನದಲ್ಲಿ ಶ್ರದ್ಧೆಯಂಥ ಮೂಲಭೂತ ತಾತ್ವಿಕ ವಿಚಾರಗಳು ಸಮಾಜವಾದಿ ಮತ್ತು ಗಾಂಧಿ ವಿಚಾರಗಳೆರಡಕ್ಕೂ ಇರುವ ಸಾಮಾನ್ಯ ನಂಬಿಕೆಗಳೆಂದು ದೃಢವಾಯಿತು. ಹೀಗೆ ಜೆ. ಪಿ. ರಾಜಕೀಯ ಆರ್ಥಿಕ ವಿಕೇಂದ್ರೀಕರಣದ ಪ್ರತಿಪಾದಕರಾಗಿ ಕೊನೆಯವರೆಗೂ ಈ ನಿಷ್ಠೆಯನ್ನು ಉಳಿಸಿಕೊಂಡರು.

ಇನ್ನು ಮುಂಬರುವ ಹೇಳಿಕೆಗಳು ಜಯಪ್ರಕಾಶರ ಈ ನಿಷ್ಠೆಯ ವಿವರಣೆ ಮತ್ತು ದೃಢೀಕರಣ ನೀಡುವಂಥವು, ಜೆ.ಪಿ.ವಿಚಾರದ ದಿಶೆಯನ್ನೂ ವಿಚಾರ ಸಾಮ್ಯವನ್ನೂ ತೋರಿಸುವಂಥವು: "ಏಷ್ಯಾ ರಾಷ್ಟ್ರಗಳು ಕುರುಡು ಅನುಕರಣೆಯಲ್ಲಿ ತೊಡಗದೆ ಸಮಾಜವಾದ ತರಲು ತಮ್ಮದೇ ವಿಶಿಷ್ಟ ಮಾರ್ಗಗಳನ್ನು ಕಂಡುಕೊಳ್ಳಬೇಕು. ಕೈಗಾರಿಕೋದ್ಯಮಗಳನ್ನು ಬೆಳೆಸಲು ತಮ್ಮ ಪರಿಸ್ಥಿತಿಗನುಗುಣವಾದ ಪದ್ಧತಿಗಳನ್ನು ಅನುಸರಿಸಬೇಕು. ಪ್ರಜಾತಂತ್ರವನ್ನುಳಿಸಿಕೊಂಡು ನಾಗಾಲೋಟದ ಔದ್ಯೋಗೀಕರಣಕ್ಕೆ ತೊಡಗಿದರೆ ಏನೂ ಅಪಾಯವಿಲ್ಲ ಎನ್ನುವುದು ಭ್ರಮೆಯಾದೀತು. ಒಂದು ಮಿತಿ ಮೀರಿದಾಗ ಈ ಅತೀವ ಓಟವೇ ಪದ್ಧತಿಯನ್ನು ಪಲ್ಲಟಗೊಳಿಸಿ ನಿರಂಕುಶಾಧಿಕಾರಕ್ಕೆ ಎಡೆ ಮಾಡಿಕೊಡುತ್ತದೆ.

'.....ಈ ವಿಚಾರ ಪಥದಲ್ಲಿ ಮಗ್ನನಾಗಿ ಚಿಂತಿಸುತ್ತಿದ್ದಾಗ ನನ್ನ ಮನಸ್ಸು ಸಹಜವಾಗಿಯೇ ವಿಕೇಂದ್ರೀಕೃತ ಅರ್ಥ ವ್ಯವಸ್ಥೆಯ ಕಡೆ ಹರಿಯಿತು. ಕ್ರಮೇಣ ಅದಕ್ಕನುಗುಣವಾದ ಒಂದು ರಾಜ್ಯವ್ಯವಸ್ಥೆ, ಹೊಸ ಜೀವನಕ್ಕೆ ಹೊಂದುವಂಥ ಸಾಮಾಜಿಕ ನಡವಳಿಕೆಗಳು ಮತ್ತು ಎಲ್ಲದರ ಮೇಲೂ ಒಂದು ಕ್ರಮಬದ್ಧ ಸಾಮಾಜಿಕ ನಿಯಂತ್ರಣ ಇವನ್ನು ಕುರಿತು ಯೋಚಿಸತೊಡಗಿದೆ'.

'....ಇವು ನಮ್ಮ ಸಾಮೂಹಿಕ ಚಿಂತನೆ ಮತ್ತು ಅನುಭವದಿಂದ ಗಳಿಸಿದ ಪಾಠಗಳು. ಈ ಮಾರ್ಗದಲ್ಲಿ ನಡೆದುಬಂದ ಮಾರ್ಕ್ಸ್ ಲೆನಿನ್ ತತ್ವಾಧಾರಿತ ಕಾಂಗ್ರೆಸ್ ಸೋಷಿಯಲಿಸ್ಟ್ ಪಕ್ಷ ಅನೇಕ ಅವಕಾಶಗಳನ್ನು ದಾಟಿ ಕೊನೆಗೆ ಪ್ರಜಾತಾಂತ್ರಿಕ ಸಮಾಜವಾದ ಪ್ರತಿಪಾದಿಸುವ ಪ್ರಜಾ ಸೋಷಿಯಲಿಸ್ಟ್ ಪಕ್ಷವಾಗಿ ಬೆಳೆದು ನಿಂತಿತು.'

ಪಕ್ಷಪದ್ಧತಿಯನ್ನು ನಿರಾಕರಿಸುತ್ತಾ ಜೆ.ಪಿ. 'ಪ್ರಜಾ ಸಮಾಜವಾದಿಗಳು ಅಸ್ಪಷ್ಟವಾಗಿ ವಿಕೇಂದ್ರೀಕರಣದ ಮಾತಾಡಿದ್ದುಂಟು. ಚತುಸ್ತಂಭಗಳ ರಾಜ್ಯ ಮತ್ತಿತರ ಸಮೀಪವರ್ತಿ ವಿಚಾರಗಳನ್ನು ಮುಂದಿಟ್ಟಿದ್ದಾರೆ. ಆದರೆ ವಾಸ್ತವವಾಗಿ ಅವರ ಗಮ್ಯ ಸ್ಥಾನ ಅಧಿಕಾರಾಕ್ರಮಣವೇ. ಈಗಿನ ಅಧಿಕಾರ ಕೇಂದ್ರಗಳನ್ನು ತಾವು ಗೆದ್ದುಕೊಂಡು ಸಂಪೂರ್ಣ ಅಧಿಕಾರ ಸ್ಥಾಪಿಸಿ ಅನಂತರ ಶಾಸನಗಳ ಮೂಲಕ ವಿಕೇಂದ್ರೀಕರಣ, ಸಂಸ್ಥಾ ವಿಸರ್ಜನೆಗಳನ್ನು ಸಾಧಿಸಬಹುದೆಂದು ಅವರ ನಂಬಿಕೆ. ಈ ವಿಚಾರಾಭಾಸದ ಅರಿವೇ ಅವರಿಗಾಗುವುದಿಲ್ಲ. ಪಕ್ಷ ಪದ್ಧತಿ ಮತ್ತು ಅತ್ಯುನ್ನತ ಮಟ್ಟದಲ್ಲಿ ಅಧಿಕಾರ ಕೇಂದ್ರೀಕರಣದಿಂದ ರಾಜಕೀಯವಾಗಿ ಜನ ಸಾಮರ್ಥ್ಯಹೀನರಾಗಿದ್ದಾರೆ. ಅವರ ಸ್ವಶಾಸನ ಶಕ್ತಿ ಪೂರ್ಣವಾಗಿ ನಾಶವಾಗದಿದ್ದರೂ ವಿಪರೀತ ಕುಂಠಿತವಾಗಿಬಿಟ್ಟಿದೆ. ಇಂಥ ಜನಕ್ಕೆ ಮೇಲಿನಿಂದ ಅಧಿಕಾರ ದಾನ ಮಾಡಿ ವಿಕೇಂದ್ರೀಕೃತ ಆಡಳಿತ ವ್ಯವಸ್ಥೆ ತರುವುದು ಸಾಧ್ಯವಾಗದು. ಮೇಲಿನ ವಿಧಾನಸೌಧಗಳಲ್ಲಿ ಇಂದು ಗ್ರಾಮ ಪಂಚಾಯತಿಗಳ ರಚನೆಯಾಗುತ್ತಿವೆ. ಇವು ನಿಜವಾದ ಪಂಚಾಯತಿಗಳಾಗಲಾರವು. ಗಾಂಧೀಜಿ ಯಾವುದನ್ನು ಗ್ರಾಮ ರಾಜ್ಯ ಎಂದರೋ ಅದರ ಸ್ವರೂಪ ಇದಲ್ಲ. ಅವರ ಅರ್ಥಗರ್ಭಿತ ಮಾತಿನಲ್ಲಿ " ತನ್ನದೇ ಆದ ಶಾಸನಗಳ ಮೂಲಕವೇ ಗ್ರಾಮ ಪಂಚಾಯತಿ ಕ್ರಿಯಾಶೀಲವಾದೀತು, ಅನ್ಯಥಾ ಅಲ್ಲ". ವಿಕೇಂದ್ರೀಕರಣದ ಹೆಸರಿನಲ್ಲಿ ಮೇಲಿನಿಂದ ಇಳಿದುಬರುವ ಅಧಿಕಾರದ ಭಾರದಿಂದ ಸಾಮುದಾಯಿಕ ಸ್ವಯಂ ನಿಯಂತ್ರಣದ ಸಾಮರ್ಥ್ಯ ಬರಲಾರದು. ಅದು ಆಯಾ ಕ್ಷೇತ್ರದಿಂದಲೇ ಉದ್ಭವಿಸಬೇಕು. ತಳಹದಿಯಿಂದಲೇ ಈ ಕಾರ್ಯ ಮೊದಲಿಡಬೇಕು. ತಾವೇ ಶಾಸನಮಾಡಿ ತಾವೇ ವ್ಯವಸ್ಥೆಯ ಜವಾಬ್ದಾರಿ ವಹಿಸುವ ಕಾರ್ಯಕ್ರಮವನ್ನು ಅವರ ಮುಂದಿಟ್ಟು ಅದನ್ನವರು ಅನುಷ್ಠಾನಕ್ಕೆ ತರಲು ರಚನಾತ್ಮಕ ಪಕ್ಷಾತೀತ ರೀತಿಯ ಸಹಾಯ ಸಹಕಾರಗಳನ್ನೊದಗಿಸಬೇಕು'.

'ಗಾಂಧಿಯಂತೆ ನನಗೂ 'ಅತ್ಯಂತ ಕನಿಷ್ಠಾಂಶದ ಅಧಿಕಾರ ಚಲಾಯಿಸುವ ಸರ್ಕಾರವೇ ಅತ್ಯುತ್ತಮ ರಾಜ್ಯ' ಎಂಬ ಸಿದ್ಧಾಂತದಲ್ಲಿ ನಂಬಿಕೆ ಪೂರ್ಣವಾಗಿ ಉಂಟಾಯಿತು. ಯಾವ ಬಾಹ್ಯ ಶಾಸನದ ಆವಶ್ಯಕತೆಯೂ ಇಲ್ಲದೆ ತನ್ನ ಸಹಜೀವಿಗಳೊಡನೆ ಸೌಹಾರ್ದ ನ್ಯಾಯ ಮತ್ತು ಸಹಕಾರಗಳೊಡನೆ ಬಾಳುವ ಸಾಮರ್ಥ್ಯವನ್ನು ಮಾನವ ಗಳಿಸಿಕೊಳ್ಳುವುದೇ ಅವನ ವಿಕಾಸದ ಒರೆಗಲ್ಲು. ಆದ್ದರಿಂದ ಮಾನವೀಯ ಹಾಗೂ ಸಾಮಾಜಿಕ ಸಮಸ್ಯೆಗಳು ಮೂಲತಃ ನೈತಿಕವಾದವು ಎಂದೇ ನನ್ನ ಭಾವನೆ.'

'ಬಂಡವಾಳ ವರ್ಗದಲ್ಲಿ ರಾಜಕೀಯ ಅಧಿಕಾರದ ಸರ್ವಸ್ವಾಮ್ಯವಿತ್ತು. ಸಮಾಜವಾದಿ ಸರ್ಕಾರದಲ್ಲಿ ಅದರ ಜೊತೆಗೆ ಆರ್ಥಿಕ ಸ್ವಾಮ್ಯದ ಅಧಿಕಾರವೂ ಸೇರಿಹೋಗುವ ಭಯ ಇದೆ. ಇಂಥ ಕೇಂದ್ರೀಕೃತ ರಾಜ್ಯಶಕ್ತಿಯನ್ನು ನಿಯಂತ್ರಿಸಲು ಅಷ್ಟೇ ಬಲವಾದ ಅದಕ್ಕಿಂತ ಪ್ರಬಲವಾದ ಶಕ್ತಿಯ ಅವಶ್ಯಕತೆ ಉಂಟಾಗುತ್ತದೆ. ಸಮಾಜವಾದಿ ಸಮಾಜದ ಕಲ್ಪನೆಯಲ್ಲಿ ಅಂಥ ನಿಯಂತ್ರಣ ಶಕ್ತಿಗೆ ಅವಕಾಶವೇ ಇಲ್ಲ.---ಇತ್ತೀಚೆಗೆ ನಾನಾ ಬಗೆಯ ಕಾರ್ಯಪದ್ಧತಿಗಳು ಬೆಳೆದು ಅಧಿಕಾರಶಾಹಿಯನ್ನು ಸಮತೋಲನೆಯಲ್ಲಿಡುವ ಕಾರ್ಯಕ್ಷೇತ್ರಗಳಾಗಿ ರೂಪುಗೊಂಡಿರುವುದು ನಿಜ. ವಿಕೇಂದ್ರಿತ ಅಧಿಕಾರ ಮತ್ತು ಕಾರ್ಯ ವಿಂಗಡಣೆಯಂಥ ವ್ಯವಸ್ಥೆ ಅವುಗಳ ಜೊತೆ ಸೇರಿ ನಿಯಂತ್ರಕಗಳ ಕಾರ್ಯ ನಿರ್ವಹಿಸುತ್ತವೆಯೆಂಬ ಮಾತಿದೆ. ಇಷ್ಟೆಲ್ಲ ಆದರೂ ಸಮಾಜವಾದೀ ಪ್ರಭುತ್ವ ಜನತೆಯ ಸ್ವಾತಂತ್ರ್ಯವನ್ನು ನಿರ್ಲಕ್ಷಿಸಿ ನಡೆಯುವ ದೈತ್ಯಾಕಾರದ ಯಂತ್ರವಾಗಿ ಉಳಿಯುವುದು ಅನುಭವ ವೇದ್ಯ.'

'ವಿಜ್ಞಾನ-ತಂತ್ರಜ್ಞಾನಗಳೂ ಪ್ರಬಲ ವರ್ಗಗಳ ಕೈಗೊಂಬೆಯಾಗಿ ಅಗಾಧ ಆರ್ಥಿಕ ರಾಜಕೀಯ ಶಕ್ತಿ ಸರ್ಕಾರಗಳ ಕೈಯಲ್ಲಿ ಕೇಂದ್ರೀಕೃತವಾಗಲು ನೆರವಾಗಿದೆ. ಹೀಗೆ ಸರ್ಕಾರವೂ ಲಾಭಕೋರರೂ ಒಂದಾಗಿ ಆಧುನಿಕ ಸಮಾಜವೆಂಬ ಭೂತವೇ ಸೃಷ್ಟಿಯಾಗಿದೆ. ವಿಜ್ಞಾನಿಗಳ ಮಾತನ್ನೇ ಯಾರೂ ಕೇಳಲೇ ಇಲ್ಲ.'

---'ಸಣ್ಣಸಣ್ಣ ಸ್ವಾವಲಂಬಿ ಸ್ವಯಂ ಆಡಳಿತ ಘಟಕಗಳನ್ನು ಒಟ್ಟಿಗೆ ಹೆಣೆಯುವುದು ಹೇಗೆ ಎಂಬ ಪ್ರಶ್ನೆ ಕಠಿಣವಾದುದು. ಇಲ್ಲಿ ಗಾಂಧಿಯವರ ಅಮೋಘ ದರ್ಶನ ನಮ್ಮ ಮುಂದಿದೆ. ಅವರ ಮಾತಿನಲ್ಲಿ 'ಅಸಂಖ್ಯ ಗ್ರಾಮ ಸಮುದಾಯಗಳು ಸಂತತವಾಗಿ ವಿಸ್ತೃತ, ಎಂದಿಗೂ ಒಂದರ ಮೇಲೊಂದೇರದ ವೃತ್ತಗಳಾಗಿ ರೂಪಿತವಾಗುತ್ತಾ ಹೋಗುತ್ತವೆ. ವಿಶಾಲ ಬುನಾದಿಯ ಮೇಲೆ ಶಿಖರ ರೂಪವಲ್ಲಿ ನಿಂತ ಪಿರಮಿಡ್ಡಿನಂತೆ ರಚನೆಯಾಗುವುದಿಲ್ಲ. ವ್ಯಕ್ತಿ ಇಲ್ಲಿ ಕೇಂದ್ರಬಿಂದು. ಸಾಗರದಲ್ಲಿ ಅಲೆಅಲೆಯಾಗಿ ವಿಸ್ತೃತಗೊಳ್ಳುವ ಮಹಾವೃತ್ತಗಳಂತೆ ಅವನ ಸುತ್ತಲೂ ನಿಲ್ಲುವ ಪ್ರಾಕಾರಗಳಾಗುತ್ತವೆ. ಗ್ರಾಮಕ್ಕಾಗಿ ವ್ಯಕ್ತಿ, ಗ್ರಾಮ ಸಮುದಾಯಗಳಿಗಾಗಿ ಗ್ರಾಮ, ಇತ್ಯಾದಿಯಾಗಿ ತಮ್ಮನ್ನು ಬಲಿ ಕೊಡಲು ಸದಾ ಸಿದ್ಧ. ಅಹಂಕಾರದಿಂದೊಡಗೂಡಿದ ಆಕ್ರಮಿಕ ವೃತ್ತಿ ನಾಶವಾಗಿ ವಿನಮ್ರ ವ್ಯಕ್ತಿಗಳ ಮಹಾ ಸಮುದಾಯ ಒಟ್ಟುಗೂಡಿ ಒಂದೇ ಸಮಸ್ತ ಬಾಳಿನ ಭವ್ಯತೆಯಲ್ಲಿ ಲೀನಗೊಳ್ಳುತ್ತವೆ. ವ್ಯಕ್ತಿವ್ಯಕ್ತಿಯೂ ತಾನೇ ಬಿಂದು ರೂಪದಲ್ಲಿ ಸೇರಿ ಉಂಟಾದ ಮಹಾ ಸಾಗರ ವೃತ್ತದ ವಿಜೃಂಭಿತ ವೈಭವದಲ್ಲಿ ಪೂರ್ಣವಾಗಿ ಪಾಲ್ಗೊಳ್ಳುತ್ತಾನೆ.'

"ಗಾಂಧೀಯವರ ಈ ಕಲ್ಪನೆ ನಮಗೆ ದಿಕ್ಸೂಚಿ. ಸರ್ವೊದಯ ದೃಷ್ಟಿ ಎಂದರೆ ವಿಶ್ವ ದೃಷ್ಟಿ. ಗಾಂಧಿ ಚಿತ್ರಿಸಿದ ಸಾಗರೀಯ ವೃತ್ತಗಳ ಕೇಂದ್ರ ಬಿಂದುವಾದ ಮಾನವ ವ್ಯಕ್ತಿ, ವಿಶ್ವಪ್ರಜೆ. ಸಧ್ಯಕ್ಕೆ ನಾವು ಈ ವಿಶ್ವ ಸ್ವರೂಪಿ ಸರ್ವೋದಯವನ್ನು ಬದಿಗಿಟ್ಟರೂ ಸ್ವಯಂ ಆಡಳಿತ ನಡೆಸುವ ಸಣ್ಣ ಸಣ್ಣ ಸಮುದಾಯಗಳು ಪರಸ್ಪರ ವಿರೋಧಿಗಳಾಗುತ್ತವೆ ಎಂದು ಹೆದರುವ ಕಾರಣವಿಲ್ಲ. ಅಥವಾ ಅವು ಪ್ರತ್ಯೇಕತೆಯನ್ನು ಪ್ರತಿಪಾದಿಸಲಾರವು. ಪರಸ್ಪರ ಸಂಬಂಧವೇರ್ಪಡಿಸಿಕೊಂಡಾಗ ಅವು ಕೇವಲ ಸ್ವಾರ್ಥಪರವಾಗುತ್ತವೆ ಎಂದು ಭಾವಿಸಬೇಕಾಗಿಲ್ಲ."

ಜಯಪ್ರಕಾಶರು ಏಕಪ್ರಕಾರವಾಗಿ ಪ್ರಜಾತಂತ್ರದ ಸಧ್ಯದ ಪಾರ್ಲಿಮೆಂಟರಿ ಪದ್ಧತಿಗಿಂತ ಹೆಚ್ಚು ವಿಕಸಿತ, ಹೆಚ್ಚು ಉತ್ಕೃಷ್ಟ ಮತ್ತು ಭಾರತೀಯ ಸ್ವಭಾವಕ್ಕೆ ಹೆಚ್ಚಾಗಿ ಹೊಂದುವಂಥ ಸ್ವರೂಪವನ್ನು ಜಾರಿಗೊಳಿಸುವ ನೀತಿಯ ಪ್ರತಿಪಾದಕರಷ್ಟೇ ಅಲ್ಲದೆ ಅದಕ್ಕಾಗಿ ವ್ಯಾಪಕ ಜನಾಭಿಪ್ರಾಯವನ್ನು ರೂಪಿಸಿ ಸಂಘಟಿಸುವ ಪ್ರತ್ಯಕ್ಷ ಚಳುವಳಿಯಲ್ಲಿ ತೊಡಗಿದ್ದರು. ಅವರು ತಮ್ಮ ಈ ನೆಲೆಯಿಂದ ಎಂದೂ ಕದಲಲಿಲ್ಲ, ಎಂದೂ ವಿಚಲಿತರಾಗಲಿಲ್ಲ.

ಅವರು ತಮ್ಮ 'ಪ್ರಜಾತಂತ್ರಕ್ಕಾಗಿ ಯುವಕರು' ಎಂಬ ಐತಿಹಾಸಿಕ ಬಿಹಾರ ಆಂದೋಳನಕ್ಕೆ ಅಂಕುರಾರ್ಪಣ ಮಾಡಿದ ಡಿಸೆಂಬರ್ ೯,೧೯೭೪ರ ಹೇಳಿಕೆಯಲ್ಲಿ ಸಹ ರಾಜ್ಯ ವಿಕೇಂದ್ರೀಕರಣದ ಪ್ರಸ್ತಾಪ ಮಾಡದೇ ಇರಲಿಲ್ಲ. ಆ ಹೇಳಿಕೆಯಲ್ಲಿ "ಮೂಲಭೂತವಾದ ಗಂಭೀರ ಪ್ರಶ್ನೆಯೊಂದರ ಕಡೆಗೆ ರಾಷ್ಟ್ರದ ಗಮನ ಸೆಳೆಯಲು ಮನವಿ ಮಾಡುತ್ತಿದ್ದೇನೆ. ಅದು ಪ್ರಜಾತಂತ್ರದ ಉಳಿವಿನ ಪ್ರಶ್ನೆ. ಜನತೆಯ ಭವಿಷ್ಯದ ದೃಷ್ಟಿಯಿಂದ ಈ ಪ್ರಶ್ನೆ ಮೂಲಭೂತ ಮತ್ತು ಅತಿಮುಖ್ಯವಾದುದು. ಕಾರಣ ಪ್ರಜಾತಂತ್ರವಿದ್ದರೆ ಜನತೆಯಾಗಲಿ, ಯುವಕರಾಗಲಿ ಸರ್ವಸ್ವಾತಂತ್ರ್ಯದಿಂದ ತಮ್ಮ ಪಾತ್ರಗಳನ್ನು ನೆರವೇರಿಸಿಯಾರು. ಇನ್ನು ಮುಂದೆ ಹೋಗಿ ಈಗಿರುವುದಕ್ಕಿಂತಲೂ ನೇರವಾಗಿ ವ್ಯಾಪಕವಾಗಿ ಜನತೆ ಭಾಗವಹಿಸುವ ಅವಕಾಶಗಳಿರಬೇಕು ಪ್ರಜಾಪ್ರಭುತ್ವದಲ್ಲಿ ಎಂದಿದ್ದರು. ಇಪ್ಪತ್ತು ದಿನಗಳ ನಂತರ, ಡಿಸೆಂಬರ್ ೨೯, ೧೯೭೪ ರಂದು ರ್‍ಯಾಡಿಕಲ್ ಹ್ಯೂಮನಿಸ್ಟ್ ಸಂಘದ ಅ.ಭಾ. ಸಮ್ಮೇಳನವನ್ನು ಉದ್ಘಾಟಿಸುತ್ತಾ "ಎಷ್ಟೇ ದೋಷಗಳಿಂದ ಕೂಡಿದ್ದರೂ ಶಾಸಕಾಂಗದ ಪಾರ್ಲಿಮೆಂಟರಿ ಪ್ರಜಾಪ್ರಭುತ್ವ ಪದ್ಧತಿ ಶ್ರೇಷ್ಠ ರೀತಿಯದು" ಎನ್ನುತ್ತಿದ್ದರು ವಿನ್‌ಸ್ಟನ್ ಚರ್ಚಿಲರು. ಆದರೆ ಇದಕ್ಕೆ ಬದಲಾಗಿ ಹೊಸ ರಾಜ್ಯಪದ್ಧತಿ ಜನತೆಯ ಮುಂದಿದೆ. ಈಗಿರುವುದಕ್ಕಿಂತ ಹೆಚ್ಚು ಸಮರ್ಪಕ ಪ್ರಜಾತಂತ್ರ ರಚನೆ ಸಾಧ್ಯ. ಅದು ನಿಜವಾದ ಜನತಾರಾಜ್ಯ ಎನಿಸಿಕೊಂಡೀತು.

'ಇಂಥದೊಂದು ವಿಶಿಷ್ಟ ರಾಜ್ಯ ರಚನೆಯ ರೂಪರೇಷೆಗಳನ್ನು ಈ ದೇಶದಲ್ಲಿ ಗಾಂಧೀಜಿ ಮತ್ತು ಎಂ.ಎನ್.ರಾಯ್ ಚಿತ್ರಿಸಿಕೊಟ್ಟಿದ್ದಾರೆ. ಅದರ ಸಿದ್ಧಾಂತಗಳನ್ನೂ ಕಾರ್ಯವಿಧಾನಗಳನ್ನೂ ನಿರೂಪಿಸಿದ್ದಾರೆ. ಅದಕ್ಕೂ ಹಿಂದೆ ಶ್ರೀಮತಿ ಆನಿಬೆಸಂಟರು ಇಂಥ ಭಾರತೀಯ ಪ್ರಜಾಪ್ರಭುತ್ವದ ಚಿತ್ರವನ್ನಿಟ್ಟಿದ್ದರು. ದೇಶಬಂಧು ಚಿತ್ತರಂಜನ್ ದಾಸ್, ಬಾಬೂ ಭಗವಾನ್ ದಾಸರೂ ಸೇರಿ ಒಂದು ಕರಡು ರಾಜ್ಯಾಂಗವನ್ನೇ ತಯಾರಿಸಿದ್ದರು. ಅದು ದಾಸ್-ದಾಸ್ ಕರಡು ರಾಜ್ಯಾಂಗವೆಂದೇ ಹೆಸರಾಗಿತ್ತು.

'ಗಾಂಧಿ ಮತ್ತು ರಾಯ್ ಅವರಿಗೆ ತಾವು ರಚಿಸಬೇಕೆಂದಿದ್ದ ರಾಜ್ಯ ರಚನೆಯ ಚಿತ್ರ ಸ್ಪಷ್ಟವಾಗಿ ಮೂಡಿಬಂದಿತ್ತು. ಈ ಎರಡು ಮಾದರಿಗಳಲ್ಲಿ ಅನೇಕ ಸಮಾನಾಂಶಗಳಿದ್ದವು. ವಿವರಿಸುವ ಭಾಷೆ ಮಾತ್ರ ಬೇರೆ ಬೇರೆ. ಎರಡು ಪ್ರಧಾನ ಬುನಾದಿಗಳನ್ನಿರ್ವರೂ

ಅಂಗೀಕರಿಸಿದ್ದರು. ಪಕ್ಷರಹಿತ ಪ್ರಜಾರಾಜ್ಯದ ಕಲ್ಪನೆ ಮತ್ತು ಅಂಥ ರಾಜ್ಯ ರಚನೆ ತಳಹದಿಯಿಂದ ಮೇಲಕ್ಕೇರುವ ಕಟ್ಟಡವಾಗಬೇಕೆಂಬ ತತ್ವ ಇಬ್ಬರಿಗೂ ಸಮಾನ. ಗಾಂಧೀಜಿಯ ರಾಮರಾಜ್ಯ ಮತ್ತು ರಾಯ್ ಹೇಳಿದ ಜನತಾ ಸಮಿತಿ (ಪೀಪಲ್ಸ್ ಕಮಿಟಿ) ಎರಡೂ ಒಂದೇ ರೀತಿಯವು... ಕ್ರಿಯಾತ್ಮಕ ಸಾಮಾಜಿಕ ಕಾರ್ಯಕರ್ತನಾದ ನಾನು ನಮ್ಮ ಮಹಾಜನತೆಗೆ, ವಿಶೇಷವಾಗಿ, ಯುವಕರಿಗೆ ನನ್ನ ಘೋಷಣೆ ಕೊಡುತ್ತಿದ್ದೇನೆ. 'ಜನತಾ ಸ್ವರಾಜ್ಯದ ಕಡೆಗೆ ಮುನ್ನಡೆಯಿರಿ.'

'ಜನತಾ ಸ್ವರಾಜ್ಯದೆಡೆಗೆ ಮೊದಲ ಹೆಜ್ಜೆ ಗ್ರಾಮ ಸಭೆಗಳ ರಚನೆ. ಅದೇ ಅದರ ಬುನಾದಿ, ಪ್ರಾಥಮಿಕ ಸಂಸ್ಥೆ. ಪ್ರತಿಯೊಂದು ಹಳ್ಳಿಯೂ ಒಂದು ಘಟಕ. ಎಲ್ಲಿ ನಿಕಟ ಪರಿಚಯದ ಸೀಮಿತ ಸಮಾಜ ಸುಪ್ರತಿಷ್ಠಿತವಾಗಿದೆಯೋ (Face to face community) ಅಂಥ ಮೂಲ ಘಟಕದಲ್ಲಿ ನೇರ ಪ್ರಜಾಡಳಿತ ಸುಲಭ ಸಾಧ್ಯ....ಕಾರ್ಖಾನೆ, ಕಚೇರಿ, ವಿದ್ಯಾಸಂಸ್ಥೆಗಳು ಇಂಥ ಕಾರ್ಯಕ್ಷೇತ್ರಗಳಲ್ಲಿ ಉದ್ಯೋಗಿಗಳ ಬಂಧುವರ್ಗ (Communities of work) ರಚಿಸಿಕೊಳ್ಳಬಹುದು. ವಿಚಾರ ವಿನಿಮಯ, ಚರ್ಚೆ, ನಿರ್ಣಯಗಳ ಅಂಗೀಕಾರ ಮತ್ತು ಕಾರ್ಯಾಚರಣೆ ಎಲ್ಲದರಲ್ಲೂ ಭಾಗವಹಿಸುವಂತಿರಬೇಕು.... ಈ ಪ್ರಾಥಮಿಕ ಜನತಾ ಸ್ವರಾಜ್ಯದ ಘಟಕಗಳ ನಂತರ ಒಕ್ಕೂಟಗಳನ್ನು ಸಂಘಟಿಸುವ ಕಾರ್ಯ ಎರಡನೇ ಹಂತದ ಪ್ರಜಾಪ್ರಭುತ್ವದ ಸಂಸ್ಥೆಗಳನ್ನು ಉದ್ದ ಸರಣಿಯಲ್ಲೂ ಅಡ್ಡಡ್ಡ ಗುಂಪುಗಳಲ್ಲಿಯೂ ರಚಿಸಿಕೊಳ್ಳಬಹುದು. (ಇದನ್ನು ಉದಾಹರಣೆಯಿಂದ ವಿವರಿಸುತ್ತಾರೆ)...ವ್ಯಾವಹಾರಿಕವಾಗಿ ಕಾರ್ಯಾಚರಣೆ ಯಶಸ್ವಿಯಾಗಬೇಕಾದರೆ ಮೊದಲನೆಯದು ಗ್ರಾಮಸಭೆ ಮತ್ತು ಕಾರ್ಯಕಾರಿಣಿಯ ಎಲ್ಲ ನಿರ್ಣಯಗಳಿಗೂ ಸರ್ವಸಮ್ಮತಿ ಇರಬೇಕು, ಸಾಮಾನ್ಯ ಸರ್ವಾನುಮತಿಯಾದರೂ ಇರಬೇಕು. ಎರಡನೆಯದು, ಈ ಗ್ರಾಮಸಭೆಗಳ ಜವಾಬ್ದಾರಿ ಸ್ಥಾನಗಳಿಗೆ ರಾಜಕೀಯ ಪಕ್ಷಗಳ ಸದಸ್ಯರನ್ನು ಚುನಾಯಿಸಬಾರದು....ಒಂದು ಕ್ಷೇತ್ರದಲ್ಲಿ ಉಮೇದುವಾರರನ್ನು ಆರಿಸಿಕೊಂಡ ಗ್ರಾಮಸಭಾ ಪ್ರತಿನಿಧಿ ಮಂಡಲ ಅನಂತರ ವಿಸರ್ಜಿತವಾಗದೆ ಮುಂದಿನ ಚುನಾವಣೆಯವರೆಗೂ ಕೆಲಸ ನಿರ್ವಹಿಸುತ್ತದೆ. ಅದರ ಮುಖ್ಯ ಕಾರ್ಯ ಗ್ರಾಮಸಭೆಗಳಿಗೂ ಶಾಸಕರಿಗೂ ಮಧ್ಯೆ ಜವಾಬ್ದಾರಿಯುತ ಕ್ರಿಯಾ ಮಂಡಲಿಯಾಗಿ ಸಲಹಾ ಮಂಡಲಿಯೂ ಕಾರ್ಯನಿರ್ವಹಿಸುತ್ತದೆ....ಗ್ರಾಮಾಂತರ ಪ್ರದೇಶಗಳಲ್ಲಿ ಈಗಾಗಲೇ ವಿನೋಬಾಜಿ ಹಲವು ವರ್ಷಗಳಿಂದ ನಡೆಸುತ್ತಾ ಬಂದಿರುವ ಭೂದಾನ-ಗ್ರಾಮದಾನ-ಗ್ರಾಮಸ್ವರಾಜ್ಯ ಚಳವಳಿಯ ಮುಖಾಂತರ ಸುಭದ್ರ ಬುನಾದಿಯನ್ನೇ ಸೃಷ್ಟಿಸಿಕೊಟ್ಟಿದ್ದಾರೆ....ಗ್ರಾಮಗಳ ತಳಹದಿಯ ಮೇಲೆ ಗ್ರಾಮ ಸ್ವರಾಜ್ಯ ರಚನೆಯ ಕಲ್ಪನೆಯೂ ಸರ್ವೋದಯ ಚಳವಳಿಯ ಅನುಭವದಿಂದಾಗಿ ಕೇವಲ ಕಲ್ಪನೆಯಾಗುಳಿಯದೆ ಅನುಷ್ಠಾನಕ್ಕೆ ತರಬಹುದಾದ ವಿಚಾರವೆನಿಸಿದೆ.

ತಮ್ಮ ಸಂಪೂರ್ಣ ಕ್ರಾಂತಿಯ ವಿಚಾರವನ್ನು ತೀವ್ರಗತಿಯಿಂದ ಹರಡುತ್ತಿದ್ದ, ಪ್ರಚಾರ ಮಾಡುತ್ತಿದ್ದ ಸಂಧರ್ಭಗಳಲ್ಲಿ ಸಹ ಜಯಪ್ರಕಾಶರು ವಿಕೇಂದ್ರಿತ ರಾಜ್ಯ ರಚನೆಯ ತಮ್ಮ ಪ್ರಿಯ ವಿಷಯವನ್ನು ಮಾತ್ರ ಮರೆಯಲಿಲ್ಲ. "ಅನ್ಯದೇಶಗಳ ಪ್ರಜಾತಂತ್ರದಲ್ಲಿ ಮೇಲಿನಿಂದ ಕೆಳಗಣ ಸ್ತರದವರೆಗೆ ಜನತೆ ಮತ್ತು ಅಧಿಕಾರ ಪೀಠದ ನಡುವೆ ಅನೇಕ ಬಗೆಯ ಆಧಾರ ರಚನೆಗಳು (Infra-structure), ಪ್ರತಿ ಪ್ರಭಾವಿ ಅಂಶಗಳು ಸಕ್ರಿಯವಾಗಿ ಕೆಲಸ ಮಾಡುತ್ತವೆ. ಪ್ರಬಲ ಪ್ರತಿಪಕ್ಷ, ಪ್ರಬಲ ಜನಮತ, ಸ್ವತಂತ್ರ ಸಾಹಸಿಕ ಪ್ರೆಸ್, ಶಿಕ್ಷಿತ ಜನಸಮುದಾಯ (ಅಕೆಡೆಮಿಕ್ ಕಮ್ಯುನಿಟಿ) ಶ್ರಮಜೀವಿ ಯೂನಿಯನ್ನುಗಳು, ಕ್ರಿಯಾಶೀಲ ಸಾಮಾಜಿಕ ಸಂಸ್ಥೆಗಳು ಹೀಗೆ ಹಲವು ಹತ್ತು ಪ್ರತಿ ಭಾರ ಹಾಕಬಲ್ಲ ಪ್ರತಿ ಪ್ರಭಾವಿ ಸಮರ್ಥ ಗುಂಪುಗಳು ಇರುತ್ತವೆ. ನಮ್ಮ ದೇಶದಲ್ಲಿ ಇವುಗಳ ನಿತಾಂತ ಅಭಾವವಿದೆ. ಇಂಥ ಸ್ಥಿತಿಯಲ್ಲಿ ನಮ್ಮ ಲೋಕತಂತ್ರ ಎನ್ನುವುದು ಕೇವಲ ನಾಮಮಾತ್ರಕ್ಕಷ್ಟೆ ಉಳಿಯುವ ಔಪಚಾರಿಕ ಚೌಕಟ್ಟು. ಇದು ಪ್ರತಿನಿಧಿಗಳ ಲೋಕತಂತ್ರ. ಇಂದಿನ ವಾಸ್ತವಿಕ ಸ್ಥಿತಿಯೆಂದರೆ ಸರ್ವಶಕ್ತಿ ಸಂಪನ್ನ ಅತ್ಯುನ್ನತ ಶಿಖರಪ್ರಾಯದ ಅಧಿಕಾರ ಸ್ಥಾನದಿಂದ, ಅಧಿಕಾರ ರಹಿತ ಶಕ್ತಿಹೀನ ಬುನಾದಿಯ ಕಡೆಗೆ ಅಧಿಕಾರ ಪ್ರವಹಿಸಿ ಬರುತ್ತದೆ. ಇಂದಿನ ಸಮಾಜವನ್ನು ಮತದಾರ ಜನತೆಯನ್ನು ಮರಳಿನ ರಾಶಿಗೆ ಹೋಲಿಸಿ ಅದು ಯಾವುದೇ ಸಂರಚನೆಯ ಬುನಾದಿಯಾಗಲಾರದು. ನಮ್ಮ ಲೋಕತಾಂತ್ರಿಕ ಪದ್ಧತಿ ಎನ್ನುವುದು ಪ್ರತಿವಯಸ್ಕನಿಗೂ ಒಂದು ಓಟಿನ ಸಿದ್ಧಾಂತದ ಮೇಲೆ ನಡೆಯುವ ಕೋಟ್ಯಾನುಕೋಟಿ ಮತದಾರರ ಆಧಾರವನ್ನೇ ಅವಲಂಬಿಸಿದೆ. ಅಂದಮಾತ್ರಕ್ಕೆ ಅದು ವಾಸ್ತವಿಕ ಲೋಕತಂತ್ರವೆನಿಸಲಾರದು. ಸಹಜವಾಗಿ ಎಲ್ಲಿ ಸಣ್ಣ ಜನ ಸಮುದಾಯಗಳು ಒಂದೆಡೆ ವಾಸಿಸುತ್ತವೋ ಅವರ ಜೀವನ ವ್ಯವಹಾರ ಒಂದೆಡೆ ನಡೆಯುತ್ತದೋ ಅಂಥ ಜೀವಂತ ಘಟಕಗಳ ಆಧಾರವೇ ಭದ್ರ ಬುನಾದಿ ಎನಿಸಬಲ್ಲದು ಮತ್ತು ಅದರ ಆಧಾರದ ಮೇಲೆ ವಿಕೇಂದ್ರಿತ ರಾಜ್ಯವ್ಯವಸ್ಥೆ ನಿಲ್ಲಬಲ್ಲದು.

ಜೆ. ಪಿ. ಪದೇ ಪದೇ ಜ್ಞಾಪಿಸುತ್ತಿದ್ದ ಮತ್ತು ಅವರಿಗೆ ಬಹುವಾಗಿ ಹಿಡಿಸಿದ ಹೇಳಿಕೆಯೆಂದರೆ 'ಎಲ್ಲಕ್ಕಿಂತ ಅತಿಕಡಿಮೆ ಪ್ರಭುತ್ವ ನಡೆಸುವ ಪದ್ಧತಿಯೇ ಶ್ರೇಷ್ಠ ಎಂದು ಗಾಂಧಿಯವರನ್ನು ಎಡಬಿಡದೇ ನೆನೆಸಿಕೊಳ್ಳುತ್ತಿದ್ದರು. ಎರಡನೆಯದಾಗಿ,ಪಕ್ಷಮುಕ್ತ ಲೋಕತಾಂತ್ರಿಕ

ಪದ್ಧತಿಯ ವಿಕಾಸವೇ ಮಾರ್ಕ್ಸ್‌ವಾದ-ಲೆನಿನ್‌ವಾದದ ಮೂಲ ಉದ್ದೇಶಗಳಲ್ಲೊಂದಾಗಿತ್ತೆಂದು ಸಹ ಜ್ಞಾಪಿಸಿಕೊಳ್ಳುತ್ತಿದ್ದರು. ತಮಗೆ ಅಧಿಕಾರ ಸೂತ್ರ ಹಿಡಿಯುವ ರಾಜನೀತಿಗಿಂತ ಜನತೆಯ ಮೂಲಕ ಅಧಿಕಾರವನ್ನು ನಿಯಂತ್ರಿಸುವ ತಂತ್ರದಲ್ಲಿ ರುಚಿ ಇದೆಯೆಂದು ಹೇಳಿ ಇದೇ ಕಾರಣಕ್ಕಾಗಿ ತಾವು ರಾಜನೀತಿಯನ್ನು ತೊರೆದು ಲೋಕನೀತಿಯ ಕಡೆ ಹೊರಳಿದುದಾಗಿ ಅದರಲ್ಲಿ ತಮಗಿರುವ ನಿಷ್ಠೆಯನ್ನು ಪುನರುಚ್ಚರಿಸುತ್ತಿದ್ದರು.

ಸಾರಾಂಶ, ಜೆ.ಪಿ ವಿಕಸಿಸಬೇಕೆಂದಿದ್ದ ಜನತಂತ್ರದಲ್ಲಿ ತಂತ್ರವಷ್ಟೇ ಅಲ್ಲ, ಅದರಲ್ಲಿ ಜನರ ನೇರ ಪಾತ್ರವೂ ಇರುತ್ತದೆಯೆಂದು ಜ್ಞಾಪಿಸಿ ಕೊನೆಗೆ ಗಾಂಧೀ ೧೯೩೦ರಲ್ಲೇ 'ಸ್ವರಾಜ್ಯ ಬಂದ ನಂತರ ನಾನು ಜೀವಂತವಾಗಿದ್ದರೆ ನನ್ನ ದೇಶವಾಸಿಗಳೊಡನೆ ಸ್ವರಾಜ್ಯಕ್ಕಾಗಿ ಹೋರಾಡಿದಂಥ ಹೋರಾಟವನ್ನೇ ಮಾಡಬೇಕಾಗುವುದು' ಎಂದು ಹೇಳಿದ್ದರು. ಎಂದರೆ 'ಗಾಂಧಿ ವಿಚಾರ ಮತ್ತು ಕಾರ್ಯ ಎರಡೂ ಮುಗಿದಿಲ್ಲ. ಗಾಂಧೀ ಪಾದಧೂಳಿಯ ಕಣದಷ್ಟಾದರೂ ನಾನು ಯೋಗ್ಯನಿದ್ದುದೇ ಆದರೆ ಇಪ್ಪತ್ತನೆ ಶತಮಾನದ ಅತ್ಯಂತ ಶ್ರೇಷ್ಠ ಮಾರ್ಗಶೋಧಕನ ದಾರಿಯಲ್ಲಿ ನಡೆಯುವ ಅನುಜ್ಞೆಯನ್ನು ನನಗೆ ಆಲೋಚಕರು ಕೊಡಲಿ.'

"ಇಂದಿನ ರಾಜನೀತಿಯಂತೂ ಪತಿತವಾಗುತ್ತಿದೆ. ಇನ್ನು ಮುಂದೆ ಮತ್ತಷ್ಟು ಅವನತಿಯ ಹಾದಿ ಹಿಡಿಯುವುದರಲ್ಲಿ ಸಂಶಯವಿಲ್ಲ. ಆಗ ಅದರ ಅವಶೇಷದ ಮೇಲೆ ಒಂದು ಹೊಸ ಬುನಾದಿಯ ಹೊಸ ರಾಜನೀತಿ ಜನ್ಮ ತಳೆಯುವುದು. ಅದು ಎಲ್ಲ ರೀತಿಯಲ್ಲೂ ತೀರ ಭಿನ್ನವಾದ ರಾಜನೀತಿ. ಅದು ರಾಜನೀತಿಯಲ್ಲ, ಲೋಕನೀತಿಯೆನಿಸುವುದು. ಆಲೋಕ ನೀತಿಯ ಬೀಜ ಭಾರತದ ಮಣ್ಣಿನಲ್ಲಿ ಘೋರ ತಪಸ್ಸಿನಲ್ಲಿ ತಲ್ಲೀನವಾಗಿದೆ. ಆ ಬೀಜಗಳನ್ನು ಹುಟ್ಟಿ ಹಾಕಿದವರು ಗಾಂಧಿ ಮತ್ತು ಭಾರತೀಯ ಮಣ್ಣನ್ನು ತಮ್ಮ ಸುದೀರ್ಘ ಪಾದಯಾತ್ರೆಯ ಮೂಲಕ ಮೇಲಿಂದ ಮೇಲೆ ಉತ್ತು ಕೃಷಿಮಾಡಿ ಹಸನುಗೊಳಿಸಿ ಆ ಬೀಜಗಳನ್ನು ಬಿತ್ತಿದವರು ವಿನೋಬಾ. ಸಹಸ್ರಾರು ಅಜ್ಞಾತ ಸೇವಕರು ಸೇವೆಯಿಂದ ಅದಕ್ಕೆ ನೀರೆರೆಯುತ್ತಿದ್ದಾರೆ. ಲೋಕನೀತಿ ಜನಶಕ್ತಿಯ ಗರ್ಭದಿಂದಲೇ ಹುಟ್ಟುವುದು."

ಎಂಥ ದಿವ್ಯ ಭವ್ಯಶ್ರದ್ಧೆ! ಎಂಥ ಅದಮ್ಯ ಆಶಾವಾದ!

೪

## ನಿಷ್ಕರ್ಷೆಗಳು ಮತ್ತು ಅನ್ಯವಿಶಿಷ್ಟಾಂಶಗಳು

ಪ್ರಜಾ ಸಮಾಜವಾದಿ ಪಕ್ಷಕ್ಕೆ ೧೯೫೦ರಲ್ಲಿ ರಾಜೀನಾಮೆ ಕೊಟ್ಟ ಸಂದರ್ಭದಲ್ಲಿ ಬರೆದ ದೀರ್ಘಪತ್ರ, ಸಂಪೂರ್ಣ ಕ್ರಾಂತಿ, ಜನತಾ ಆಂದೋಳನ ಏಕೆ? ಹೇಗೆ? ಟುವರ್ಡ್ಸ್ ಟೋಟಲ್ ರೆವೆಲ್ಯೂಷನ್ ಇತ್ಯಾದಿ ಹಲವಾರು ಮೂಲಗಳಿಂದ ಆಯ್ದ ಅಂಶಗಳನ್ನು ಭಾಗ ೩ ರಲ್ಲಿ ವಿಸ್ತಾರವಾಗಿ ಕೊಟ್ಟಿದೆ. ಇವೆಲ್ಲವೂ ಪ್ರತ್ಯಕ್ಷವಾಗಿಯೋ, ಪರೋಕ್ಷವಾಗಿಯೋ ಮತ್ತು ನೇರವಾಗಿಯೋ ವಿಕೇಂದ್ರೀಕರಣಕ್ಕೆ ಸಂಬಂಧಿಸಿದ ಅಂಶಗಳನ್ನು ಅವರ ಮಾತಿನಲ್ಲಿಯೇ ಕೊಟ್ಟಿದೆ. ಈ ಅಂಶಗಳು ಸ್ವಯಂ ಸ್ಪಷ್ಟ. ಇದರಿಂದ ಕೆಲವು ನಿಷ್ಕರ್ಷೆಗಳು ತಾವಾಗಿಯೇ ಹೊರಬೀಳುತ್ತವೆ. ಅವನ್ನು ಈ ಕೆಳಗಿನಂತೆ ಪಟ್ಟಿ ಮಾಡಬಹುದು.

೧. ಜಯಪ್ರಕಾಶರು ಗಾಂಧಿಯವರ ವಿಕೇಂದ್ರೀಕರಣ ಸಿದ್ಧಾಂತವನ್ನು ಪೂರ್ಣವಾಗಿ, ಯಾವ ಸಂಕೋಚ,ಶಂಕೆ,ಅಪವಾದ ಅಥವಾ ಕರಾರನ್ನು ಜೋಡಿಸದೆ ಒಪ್ಪಿಕೊಂಡಿದ್ದರು.

ಇಬ್ಬರ ಮೂಲಭೂತ ನಿಲುವುಗಳಲ್ಲಿ ವಿಚಾರ ಭೇದವಾಗಲಿ, ದೃಷ್ಟಿಭೇದವಾಗಲಿ ಇರಲಿಲ್ಲ. ಒಂದೆರಡು ಸಣ್ಣ ಸಣ್ಣ ವಿವರಗಳನ್ನು ಅವುಗಳ ಮಹತ್ವ ಮತ್ತು ಪ್ರಾಶಸ್ತ್ಯವನ್ನು ತಿಳಿಸುವುದಕ್ಕಾಗಿ ಒತ್ತಿ ಒತ್ತಿ ಹೇಳುತ್ತಿದ್ದರು. ಆದಕಾರಣ ಅಂಶಗಳಲ್ಲಿ ದೃಷ್ಟಿಭೇದ ಅಥವಾ ಅಂತರ ಕಂಡುಬರುವಂತೆ ಅನಿಸಬಹುದು. ಆದರೆ ಅದು ತೋರಿಕೆಯದು ಅಥವಾ ಆಭಾಸ ಮಾತ್ರ. ಅಂಥದೊಂದು ಅಂಶವನ್ನು ಇಲ್ಲಿ ಪ್ರಸ್ತಾಪಿಸಬಹುದು. ಜಯಪ್ರಕಾಶರು ವಿಕೇಂದ್ರೀಕೃತ ರಾಜ್ಯ ವ್ಯವಸ್ಥೆಯನ್ನು ಒಂದು ಉತ್ಕೃಷ್ಟ ಪಕ್ಷಾತೀತ ವ್ಯವಸ್ಥೆಯೆಂದು ಒತ್ತಿ ಒತ್ತಿ ಹೇಳೀದ್ದಾರೆ. ಎಂದರೆ ಅದನ್ನು ಪಕ್ಷಾತೀತ ದೃಷ್ಟಿಯಿಂದ ನೋಡಿದರಲ್ಲದೆ ಅದು ಹಾಗೆಯೇ ಇರಬೇಕೆಂದು ಅಷ್ಟೇ ಒತ್ತು ಕೊಟ್ಟು ಹೇಳುತ್ತಾರೆ. ಇದು ಸ್ವರಭಾರದ ವಿಷಯವಾಯಿತೇ ವಿನಃ ದೃಷ್ಟಿಭೇದದ ವಿಷಯವಲ್ಲ. ಗಾಂಧೀಜಿಯ ವಿವೇಚನೆಯಲ್ಲಿ ಅಷ್ಟೇ ಸ್ವರಭಾರ ಮತ್ತು ಒತ್ತಿನಿಂದ ಅದು ಬಂದಿಲ್ಲದೆ ಹೋಗಿರಬಹುದು. ಗಾಂಧೀಜಿಯವರಿಗೆ ಪಕ್ಷ ವ್ಯವಸ್ಥೆ ಮತ್ತು ಅದು ಒಂದು ಪಿಡುಗಾಗಿ ಅಥವಾ ಅಡ್ಡಿ-ತಡೆ ಒಡ್ಡುವ ಅಂಶವಾಗಿ ತೋರಿಬಂದ ಅನುಭವ ಅಥವಾ ಹಿನ್ನೆಲೆ ಇರಲಿಲ್ಲ. ಸ್ವತಂತ್ರ ಭಾರತದಲ್ಲಿ ಜೆ.ಪಿ. ಸಮಾಜವಾದಿ ಪಕ್ಷದ ಪ್ರಮುಖ ಸಂಸ್ಥಾಪಕರಾಗಿ ಆ ಪಕ್ಷದಲ್ಲಿ ತೀವ್ರ ಮತಭೇದ, ಮನಭೇದ ಮತ್ತು ಅಸೂಯೆ-ಮತ್ಸರ-ಸ್ಪರ್ಧೆ

ದೆಶೆಯಿಂದ ಉಂಟಾದ ಒಮ್ಮೆ ಒಡಕು, ಒಮ್ಮೆ ಒಗ್ಗಟ್ಟು, ಒಮ್ಮೆ ವಿಭಜನೆ, ಒಮ್ಮೆ ಸಂಯೋಜನೆ, ಒಮ್ಮೆ ವಿಸರ್ಜನೆ, ಒಮ್ಮೆ ಸಂಘಟನೆ ಇತ್ಯಾದಿ ಕಟು ಅನುಭವಗಳ ಸರಮಾಲಿಕೆಯ ಮೂಲಕ ೧೯೩೪ ರಿಂದ ೧೯೪೭ ರವರೆಗೆ, ವಿಶೇಷತಃ ೧೯೪೧ ರಿಂದ ೧೯೫೭ ರವರೆಗೆ ದೀರ್ಘಕಾಲ ಹಾದುಬಂದವರಾಗಿ ಪಕ್ಷಪದ್ಧತಿಯಿಂದ ಪೂರ್ಣವಾಗಿ ಬೇಸತ್ತು, ಅದರ ಮೇಲೆ ಅರುಚಿ ಬೆಳೆಸಿಕೊಂಡಿದ್ದರು. ಅವು ಎಲ್ಲೆಲ್ಲೋ ತೋರಿಬರುತ್ತಿತ್ತು. ಈ ಕಹಿ ಹಿನ್ನೆಲೆ ಮತ್ತು ಅನುಭವವೇ ಅವರು ಪಕ್ಷಾತೀತ ವ್ಯವಸ್ಥೆಯ ಕಡೆ ಹೊರಳುವಂತೆ ಮಾಡಿತು. ವಿಕೇಂದ್ರಿತ ರಾಜ್ಯ ವ್ಯವಸ್ಥೆಯೆಂದರೆ ಅದು ಸ್ವತೇವ ಪಕ್ಷಾತೀತ ವ್ಯವಸ್ಥೆ ಎಂದು ಗೃಹೀತವಾಗಿ ಒತ್ತಿ ಹೇಳಲಾರಂಭಿಸಿದರು. ಅವೆರಡೂ ಪರ್ಯಾಯವಾಚಿ ಶಬ್ದಗಳಂತೆ ಇವೆ ಎಂಬ ಮನವರಿಕೆಯಿಂದ ಬಳಸಿದರು. ಅದು ಪೂರ್ಣತಃ ಸರಿ ಮತ್ತು ಯೋಗ್ಯವೇ ಇತ್ತು.

ಇನ್ನೊಂದು ಹೊಸ ಅನುಭವ ಈಗಿನ ಪೀಳಿಗೆಗೆ ಬರುತ್ತಿದೆ. ಇಂದಿನ ಪಂಚಾಯತ್ ರಾಜ್ಯ ಸಂಸ್ಥೆಗಳು ಪಕ್ಷಾತೀತವಾಗಿ ನಡೆಯುವಂತೆ ನಿಯೋಜಿಸಲ್ಪಟ್ಟಿವೆ. ರಾಜಕೀಯ ಪಕ್ಷಗಳು ತಮ್ಮ ಉಮೇದುವಾರರನ್ನು ನಿಲ್ಲಿಸದಂತೆ ನಿಷೇಧಿಸಿ ಪಕ್ಷಾತೀತತೆಯನ್ನು ಕಾನೂನುಬದ್ಧಗೊಳಿಸಲಾಗಿದೆ. ಆದರೆ ಯಾವ ಪಕ್ಷವೂ ಇದನ್ನು ಪರಿಪಾಲಿಸಿಲ್ಲ. ಪ್ರತಿಯಾಗಿ ಅದನ್ನು ಉಲ್ಲಂಘಿಸಿ, ಅದಕ್ಕೆ ಒಳಗೇ ಸುರಂಗ ಕೊರೆದು ಆ ಸಂಸ್ಥೆಗಳನ್ನು ಆಕ್ರಮಿಸುವ ಎಲ್ಲ ಸಂಚನ್ನೂ ಹೂಡುತ್ತಿರುವುದನ್ನು ಪ್ರತ್ಯಕ್ಷ ನೋಡುತ್ತಿದ್ದೇವೆ. ಅರ್ಥಾತ್ ಪಂಚಾಯತ್ ರಾಜ್ ಸಂಸ್ಥೆಗಳು ಪಕ್ಷ ಮುಕ್ತ ಸಂಸ್ಥೆಗಳಾಗಿರಲು, ಹಾಗೆ ಉಳಿಯಲು ಪಕ್ಷಗಳು ಬಿಡುತ್ತಿಲ್ಲ. ಇದರ ಕಿಂಚಿತ್ ದರ್ಶನ ಜಯಪ್ರಕಾಶರಿಗಾಯಿತು, ೧೯೭೪-೭೭ ರ ಅವಧಿಯಲ್ಲಿ. ಜೆ.ಪಿ. ಈಗಿದ್ದಿದ್ದರೆ ಏನು ಹೇಳುತ್ತಿದ್ದರೋ, ಏನು ಕ್ರಮ ತೆಗೆದುಕೊಳ್ಳುತ್ತಿದ್ದರೋ ತಿಳಿಯದು. ಅಥವಾ ಗಾಂಧೀಜಿಯೇ ಇದ್ದಿದ್ದರೆ ಏನು ಪ್ರತಿಕ್ರಮ ತೆಗೆದುಕೊಳ್ಳುತ್ತಿದ್ದರೋ ಗೊತ್ತಿಲ್ಲ. ಇವು ಈಗ ಚರ್ಚೆಗೆ, ಊಹೆಗೆ ಬಿಟ್ಟ ವಿಷಯಗಳು.

೨. ವಿನೋಬಾ ಅವರ ಚಳವಳಿ ರಾಜಕೀಯ-ಆರ್ಥಿಕ ವಿಕೇಂದ್ರೀಕರಣ ಸಾಧಿಸಲು ಆವಶ್ಯಕ, ಅಷ್ಟೇಕೆ ಒಂದು ಅನಿವಾರ್ಯ ಹೆಜ್ಜೆ ಎಂದೊಪ್ಪಿಯೇ ಅದರಲ್ಲಿ ಎರಡು ದಶಕಗಳಿಗೂ ಮೀರಿ ಶ್ರದ್ಧಾಪೂರ್ವಕ ದುಡಿದರು. ಅವರು ಆ ಚಳವಳಿಯ ಪಂಚ ಮಹಾ ನಾಯಕರಲ್ಲೊಬ್ಬರೆನಿಸಿದ್ದರು.

೩. ೧೯೫೩ರಲ್ಲಿ ದೇಶವನ್ನು ಸಮಾಜವಾದೀ ವ್ಯವಸ್ಥೆಯೆಡೆಗೆ ಒಯ್ಯಬಹುದಾಗಿದ್ದ, ನೆಹ್ರೂ ಅವರ ಮುಂದಿಟ್ಟಿದ್ದ ೧೪ ಅಂಶಗಳ ವ್ಯಾಪಕ ಕಾರ್ಯಕ್ರಮವನ್ನು ಪರಿಶೀಲಿಸಿದಾಗ ಅದರಲ್ಲಿ ರಾಜಕೀಯ-ಆರ್ಥಿಕ ವಿಕೇಂದ್ರೀಕರಣ ಸಾಧಿಸಬೇಕೆಂಬ ಜೆ. ಪಿ. ಸಲಹೆ ಎರಡನೇ ಅಂಶವಾಗಿ ಬಂದಿರುವುದು ಗಮನಾರ್ಹ. ೧೯೬೧-೬೩-೬೫ ರ ಎರಡು ಅವಧಿಗಳಲ್ಲಿ ಅ.ಭಾ. ಪಂಚಾಯತ್ ರಾಜ್ ಪರಿಷತ್ತಿನ ಅಧ್ಯಕ್ಷರಾಗಿ ವಿಕೇಂದ್ರೀಕರಣದ ಪರಿಕಲ್ಪನೆಗೆ ಸಾಕಾರ ರೂಪಕೊಡಲು, ಜನಾದರಣೀಯ ಮತ್ತು ಸರ್ಕಾರಗಳು ಅದನ್ನು ಅನುಷ್ಠಾನಕ್ಕೆ ತರಬಹುದಾದ ವ್ಯಾವಹಾರಿಕ ಸಲಹೆಯನ್ನಾಗಿ ಮಾಡಲು ಬಹುವಾಗಿ ಶ್ರಮಿಸಿದರು. ಅದೇ ಕಾರ್ಯದಿಶೆಯನ್ನು ಮುಂದುವರೆಸಿ ೧೯೬೨ರಲ್ಲಿ ಅವರು ಒಂದು ಪ್ರೌಢ ಪ್ರಬಂಧವನ್ನು ತಯಾರಿಸಿ 'Aplea for the Reconstruction of Indian Polity ' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಜಗತ್ತಿನ ೨೨ ಪ್ರಮುಖ ವಿಶ್ವವಿದ್ಯಾಲಯಗಳಲ್ಲಿ, ವಿದ್ವತ್ಸಮೂಹಗಳಲ್ಲಿ ಅದರ ಮೇಲೆ ಚರ್ಚೆ, ವಿಮರ್ಶೆ ಮತ್ತು ಪರಿಶೀಲನೆ ನಡೆಯುವಂತೆ ಮಾಡಿದರು. ಅದರಲ್ಲಿ ವಿಕೇಂದ್ರೀಕೃತ ಗ್ರಾಮ ಸ್ವರಾಜ್ಯದ ಕರಡು ವಿಧಾನ ರಚಿತವಾಗಿತ್ತು.

ಇವೆಲ್ಲ ವಿಶಿಷ್ಟಾಂಶಗಳು ನಿಸ್ಸಂದೇಹವಾಗಿ ಮತ್ತು ಪೂರ್ಣತಃ ವಿಕೇಂದ್ರೀಕರಣವನ್ನು ತ್ರಿಕರಣ ಪೂರ್ವಕ ಸ್ವೀಕರಿಸಿದ ನಂತರ ಆ ಸಿದ್ಧಾಂತದ ಸಮರ್ಥ ಪ್ರತಿಪಾದಕರಷ್ಟೇ ಅಲ್ಲದೆ ಅದನ್ನು ಸ್ವೀಕಾರಾರ್ಹವಾಗುವಂತೆ, ಅನುಷ್ಠಾನಕ್ಕೆ ಯೋಗ್ಯವಾಗುವಂತೆ ವ್ಯಾವಹಾರಿಕರೂಪಿ ಸಲಹೆಯನ್ನಾಗಿ ಪರಿವರ್ತಿಸಲು ಶ್ರಮಿಸಿದರೆಂಬುದಕ್ಕೆ ಪ್ರತ್ಯಕ್ಷ ಪ್ರಮಾಣಗಳು.

೪. ಜೆ. ಪಿ. ಇಷ್ಟೆಲ್ಲ ಶ್ರದ್ಧೆ ಮತ್ತು ಪೂರ್ವಸಿದ್ಧತೆಯೊಡನೆ ತಮ್ಮ ಸಂಪೂರ್ಣ ಕ್ರಾಂತಿಯ ಆಂದೋಲನವನ್ನು ನಡೆಸಿದರು. ಲೇಖನದ ಪ್ರಾರಂಭದಲ್ಲಿಯೇ ತಿಳಿಸಿರುವಂತೆ ಸರ್ವೋದಯ ಸಮಾಜವಾದದ ಸರ್ವೋಚ್ಚ ಮೌಲ್ಯಗಳನ್ನು ಪ್ರತಿಪಾದಿಸುತ್ತದೆ ಎಂಬ ಅವರ ಮಹತ್ವಪೂರ್ಣ ಹೇಳಿಕೆಯನ್ನು ಇಲ್ಲಿ ಪುನಃ ಪ್ರಸ್ತಾಪಿಸಬೇಕಾದ್ದು ಸೂಕ್ತ. ತಮ್ಮ ಆಂದೋಳನ ಬಿರುಸಾಗಿ ನಡೆಯುತ್ತಿದ್ದ ಎಲ್ಲ ಉತ್ಕಟ ಪ್ರಸಂಗಗಳಲ್ಲೂ ಪದೇಪದೇ ಪುನರುಚ್ಚರಿಸುತ್ತಿದ್ದ ಹೇಳಿಕೆ ಯಾವುದಾದರೂ ಇದ್ದರೆ ಅದು ಇದೇ. ಸರ್ವೋದಯ ನಮ್ಮ ಆದರ್ಶ ಮತ್ತು ನಮ್ಮ ಮುಂದಿರುವ ಅಂತಿಮ ಗುರಿ. ಸಂಪೂರ್ಣ ಕ್ರಾಂತಿ ಅದನ್ನು ಚರಿತಾರ್ಥಗೊಳಿಸುವ ಸಾಧನವೆಂದು ಸಾರಿಸಾರಿ

ಹೇಳಿದ್ದರು. ವಿನೋಬಾಗೂ ತಮಗೂ ತೀವ್ರ ಮತ ಬೇಧವಿದೆ ಎನ್ನುವ ಪ್ರಚಾರದ ಭರಾಟೆಯ ಮಧ್ಯೆಯೇ ಅವರ ಹೆಸರು ಹೇಳಿ ಹೇಳಿ ಇದು ಮತ್ತಿತರ ವಿಕೇಂದ್ರಿತ ರಾಜ್ಯ ಮತ್ತು ಅರ್ಥ ವ್ಯವಸ್ಥೆಯ ಪರಿಕಲ್ಪನೆಯ ಪ್ರಚಾರ ಮತ್ತು ಅದನ್ನು ಜಾರಿಗೆ ತರುವ ರೂಪ-ರೇಷೆಯನ್ನು ಬೃಹತ್ ಸಾರ್ವಜನಿಕ ಸಭೆಗಳಲ್ಲಿ ಜನ ಸಾಗರದ ಮುಂದೆ ನಿರೂಪಿಸುತ್ತಿದ್ದರು. ವಿನೋಬಾ ಜೆ.ಪಿ.ಆಂದೋಳನದ ವಿರೋಧಿ ಎಂದು ತೋರಿಸುವ ಕುತಂತ್ರ-ಕುಪ್ರಚಾರದ ನಡುವೆ ನಮ್ರತಾಪೂರ್ವಕವಾಗಿ ವಿನೋಬಾರ ಸ್ಮರಣೆ ಮಾಡುತ್ತಿದ್ದರು.

ಜೆ. ಪಿ. ಪ್ರಕಾರವೇ ಸರ್ವೋದಯ ವಿಚಾರಕ್ಕೂ-ತಮ್ಮ ಸಂಪೂರ್ಣ ಕ್ರಾಂತಿಗೂ ಸಾಧ್ಯ ಮತ್ತು ಸಾಧನಗಳ ಸಂಬಂಧ ಇರುವುದೆಂದಾಗ ವಿಕೇಂದ್ರೀಕರಣವನ್ನು ಒಂದು ಭದ್ರ ಬುನಾದಿಯ ಅಡಿಗಲ್ಲಾಗುಳ್ಳ ಸರ್ವೋದಯಕ್ಕೂ-ಸಂಪೂರ್ಣ ಕ್ರಾಂತಿಗೂ ವಿರೋಧವೆಲ್ಲಿಂದ ಬಂತು?

12090

೫. ವಿಕೇಂದ್ರೀಕರಣ ಮತ್ತು ಅನೇಕ ವಿಚಾರಗಳ ಮೂಲಚಿಂತಕರು ಮತ್ತು ಆದ್ಯ ಪ್ರವರ್ತಕರು ಗಾಂಧೀಜಿಯೇ. ಜೆ. ಪಿ. ಅವರ ಅನುಯಾಯಿ ಮಾತ್ರ. ಕಾರ್ಯಕರ್ತರು, ಅವರು ವಿನಮ್ರರು. ತಮ್ಮ ಈ ಪಾತ್ರತೆಯನ್ನು ಅಷ್ಟೇ ನಮ್ರತೆಯಿಂದ ಒಪ್ಪಿಕೊಳ್ಳುತ್ತಾರೆ. ಈ ಒಂದು ಪರಿಮಿತಿಯಲ್ಲಿ ಈ ಇಬ್ಬರ ಸಂಬಂಧವನ್ನು ವಿವೇಚಿಸಿ ಅರ್ಥಮಾಡಿಕೊಳ್ಳಬೇಕಾಗುತ್ತದೆ.

080·883521
RAJ




# ಗಾಂಧೀಜಿ ದೃಷ್ಟಿಯಲ್ಲಿ ಗ್ರಾಮೀಣಾಭಿವೃದ್ಧಿ

ಡಾ. ಎಂ.ಜಿ. ಬಸವರಾಜು

ಭಾರತದ ಕೋಟ್ಯಂತರ ಗ್ರಾಮೀಣ ಜನರ ಬದುಕು ಹಸನಾಗದೆ, ಆರ್ಥಿಕವಾಗಿ ಸಬಲವಾಗದೆ ಭಾರತದ ನಿಜವಾದ ಆರ್ಥಿಕ ಅಭಿವೃದ್ಧಿ ಖಂಡಿತ ಆಗಲಾರದು. ಭಾರತದ ಆತ್ಮ ಹಳ್ಳಿಗಳಲ್ಲಿದೆ. ನಿಜವಾದ ಭಾರತ ಹಳ್ಳಿಗಳಲ್ಲಿದೆಯೇ ಹೊರತು ಕೆಲವೇ ಪಟ್ಟಣಗಳಲ್ಲಿ ಅಲ್ಲ. ಹಳ್ಳಿಗಳು ನಾಶವಾದರೆ ಭಾರತವೂ ನಾಶವಾದಂತೆ, ಭಾರತ ಇದ್ದೂ ಇಲ್ಲವಾದಂತಾಗುತ್ತದೆ. ಆದ್ದರಿಂದ ಗ್ರಾಮೀಣ ಅಭಿವೃದ್ಧಿಗೆ ಸರಕಾರದ ಆರ್ಥಿಕ ನೀತಿಗಳಲ್ಲಿ ಅಗತ್ಯ ಪ್ರಮಾಣದ ಗಮನ ನೀಡಬೇಕು ಮತ್ತು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಶ್ರದ್ಧಾನಿಷ್ಠೆಯಿಂದ ಅನುಷ್ಠಾನಗೊಳಿಸಬೇಕು ಎಂದು ಗಾಂಧೀಜಿ ಒತ್ತಿ ಹೇಳುತ್ತಿದ್ದರು.

ಗಾಂಧೀಜಿ ದೃಷ್ಟಿಯ ಗ್ರಾಮ ಸ್ವರಾಜ್ಯವೆಂದರೆ ಪ್ರತಿಯೊಂದು ಗ್ರಾಮವೂ ಸರ್ವಸ್ವತಂತ್ರ ಗಣರಾಜ್ಯವಾಗಬೇಕು. ತನ್ನ ಅಗತ್ಯಗಳನ್ನು ತಾನು ಪೂರೈಸಿಕೊಳ್ಳುವ ಸಾಮರ್ಥ್ಯ ಹೊಂದಿರಬೇಕು. ಯಾವ ವಸ್ತುಗಳನ್ನು ಉತ್ಪಾದಿಸಲು ಸಾಧ್ಯವಿಲ್ಲವೋ ಅವುಗಳನ್ನು ಅತ್ಯಂತ ಸಮೀಪದ ಹಳ್ಳಿಗಳಿಂದ ತರಿಸಿಕೊಳ್ಳಬೇಕು. ಗ್ರಾಮದ ಹೆಚ್ಚುವರಿ ಉತ್ಪನ್ನವನ್ನು ಸಮೀಪದ ಅವಶ್ಯಕ ಗ್ರಾಮಗಳಿಗೆ ಪೂರೈಸಬೇಕು. ಅಕ್ಕಪಕ್ಕದ ಗ್ರಾಮಗಳು ಪರಸ್ಪರ ಸಹಕಾರ ಮನೋಭಾವದಿಂದ ಬಾಳಬೇಕು. ಪ್ರತಿಯೊಬ್ಬರೂ ಸಹ ತಾವು ಅಖಂಡ ಭಾರತದ ಅವಿಭಾಜ್ಯ ಅಂಗವೆಂದು ಭಾವಿಸಿ ಬಾಳಬೇಕು. ಪ್ರೀತಿ, ವಿಶ್ವಾಸ, ಸಹನೆ, ಸೌಹಾರ್ದ, ಸತ್ಯ, ಅಹಿಂಸೆ, ಪರೋಪಕಾರ ಮುಂತಾದ ಸದ್ಗುಣಗಳು ಗ್ರಾಮಗಳಲ್ಲಿ ಎದ್ದು ಕಾಣುವಂತಿರಬೇಕು. ಗ್ರಾಮದ ಜನರು ಅಖಂಡ ಭಾರತದ ನಿಜವಾದ ಅರ್ಥದ ಸತ್ಪ್ರಜೆಗಳಾಗಬೇಕು.

*ಗಾಂಧೀಜಿಯ ದೃಷ್ಟಿಯಲ್ಲಿ ಪ್ರತಿಯೊಂದು ಗ್ರಾಮವೂ ಸರ್ವ ಸ್ವತಂತ್ರ ಗಣರಾಜ್ಯ. ಅಲ್ಲಿನ ಅವರು ಪರಸ್ಪರ ಸಹಕಾರ ಮನೋಭಾವದಿಂದ ಬಾಳ ಬೇಕು. ತಾವು ಅಖಂಡ ಭಾರತದ ಅವಿಭಾಜ್ಯ ಅಂಗವೆಂದು ಭಾವಿಸಬೇಕು.*

ಪ್ರತಿಯೊಂದು ಗ್ರಾಮದ ಆದ್ಯ ಕರ್ತವ್ಯವೆಂದರೆ ತನ್ನ ಗ್ರಾಮಕ್ಕೆ ಬೇಕಾದ ಪ್ರಮಾಣದ ದವಸ ಧಾನ್ಯಗಳು, ತರಕಾರಿ, ಹಣ್ಣು ಹಂಪಲು ಮತ್ತು ಬಟ್ಟೆ ಅಲ್ಲಿಯೇ ಉತ್ಪಾದಿತವಾಗಬೇಕು. ಪ್ರತಿಯೊಂದು ಗ್ರಾಮವೂ ಸಹ ಆರ್ಥಿಕ ಸ್ವಾವಲಂಬನೆ ಗಳಿಸಬೇಕು. ಪ್ರತಿಯೊಂದು ಗ್ರಾಮದ ದನಕರುಗಳಿಗೆ ಮೇಯಲು ಅಗತ್ಯ ಪ್ರಮಾಣದ ಗೋಮಾಳಗಳು ಇರಬೇಕು. ಅವುಗಳ ವಸತಿ ಅಗತ್ಯ ಪ್ರಮಾಣದಲ್ಲಿರಬೇಕು ಮತ್ತು ಯೋಗ್ಯ ರೀತಿಯ ವ್ಯವಸ್ಥೆ ಅವುಗಳ ವಾಸಕ್ಕೆ ಮಾಡಿರಬೇಕು. ಪಶು ಸಂಗೋಪನೆಯಿಂದ ದೊರಕುವ ಪ್ರಯೋಜನಗಳ ಅರಿವು ಜನರಿಗಿರಬೇಕು. ವಯಸ್ಕರಿಗೆ ಮತ್ತು ಮಕ್ಕಳಿಗೆ ಉತ್ತಮ ಅಭಿರುಚಿಯ ಮನರಂಜನಾ

ಸೌಲಭ್ಯಗಳು, ಆಟದ ಮೈದಾನಗಳು ಇರಬೇಕು. ಗ್ರಾಮದಲ್ಲಿ ದೊರೆಯುವ ಹೆಚ್ಚುವರಿ ಭೂಮಿಯಲ್ಲಿ ಯೋಗ್ಯ ರೀತಿಯ ವಾಣಿಜ್ಯ ಬೆಳೆಗಳನ್ನು ಬೆಳೆಯಬಹುದು. ಈ ವಾಣಿಜ್ಯ ಬೆಳೆಗಳಲ್ಲಿ ಗಾಂಜಾ, ತಂಬಾಕು ಮತ್ತು ಇನ್ನಿತರ ಅಫೀಮು ಅಮಲು ಬೆಳೆಗಳಿಗೆ ಅವಕಾಶವಿರುವುದಿಲ್ಲ. ಪ್ರತಿಯೊಂದು ಗ್ರಾಮವೂ ಒಂದು ಥಿಯೇಟರನ್ನು ಹೊಂದಿರಬೇಕು. ಇಲ್ಲಿ ಕೀಳು ಅಭಿರುಚಿ ಮನರಂಜನೆಗೆ ಅವಕಾಶವಿಲ್ಲ, ಜನಮನವನ್ನು ಹರ್ಷಗೊಳಿಸುವ, ಸದ್ಗುಣಗಳನ್ನು ಬಿತ್ತುವ ಕಾರ್ಯಕ್ರಮಗಳು ಇಲ್ಲಿ ನಡೆಯಬೇಕು. ಅಭಿವೃದ್ಧಿ ಸಾಧನೆಗೆ ಪ್ರೇರಣೆ ನೀಡುವ ಸಂದೇಶಗಳು ಇಲ್ಲಿ ಪ್ರಚಾರವಾಗಬೇಕು. ಮಕ್ಕಳಿಗೆ ವಿದ್ಯಾಭ್ಯಾಸ ನೀಡುವ ಶಾಲೆ, ಸಮುದಾಯ ಭವನಗಳು ಇಲ್ಲಿರಬೇಕು. ಜನಗಳಿಗೆ ಕುಡಿಯಲು ಶುದ್ಧವಾದ ನೀರು ಸರಬರಾಜು ಮಾಡುವ ವ್ಯವಸ್ಥೆಯಿರಬೇಕು. ಪ್ರಾಥಮಿಕ ಶಿಕ್ಷಣ ಗ್ರಾಮದಲ್ಲಿ ಕಡ್ಡಾಯವಿರಬೇಕು. ಸಾಧ್ಯವಾದ ಮಟ್ಟಿಗೆ ಗ್ರಾಮದಲ್ಲಿ ಎಲ್ಲಾ ಚಟುವಟಿಕೆಗಳೂ ಸಹಕಾರ ತತ್ವದ ಆಧಾರದ ಮೇಲೆ ನಡೆಯಬೇಕು. ಜಾತಿ ಪದ್ಧತಿಗೆ ಗ್ರಾಮದಲ್ಲಿ ಅವಕಾಶವಿರಬಾರದು. ನಾವೆಲ್ಲರೂ ಒಂದೇ ಎಂಬ ಪರಸ್ಪರ ಭ್ರಾತೃತ್ವದ ಸೌಹಾರ್ದಯುತ ವಾತಾವರಣ ಗ್ರಾಮದಲ್ಲಿರಬೇಕು. ಗ್ರಾಮದ ಆಡಳಿತವು ಐದು ಸದಸ್ಯರನ್ನು ಒಳಗೊಂಡ ಪಂಚಾಯತಿಗೆ ಸೇರಿರಬೇಕು. ಸದಸ್ಯರನ್ನು ಆಯ್ಕೆ ಮಾಡಬೇಕಾದರೆ ಗಂಡು ಹೆಣ್ಣು ಎಂಬ ತಾರತಮ್ಯ ಇಲ್ಲದೆ ಈ ಐದು ಸದಸ್ಯರನ್ನು ಆಯ್ಕೆ ಮಾಡಬೇಕು. ವಯಸ್ಕರು ಈ ಸದಸ್ಯರನ್ನು ಆಯ್ಕೆ ಮಾಡಬೇಕು. ಪಂಚಾಯತಿ ಸದಸ್ಯರಾಗುವವರು ಯೋಗ್ಯ ಅರ್ಹತೆಗಳನ್ನು ಹೊಂದಿರಬೇಕು.

## ಸರ್ವಾಂಗೀಣ ಗ್ರಾಮೀಣ ಅಭಿವೃದ್ಧಿ :

ಗ್ರಾಮೀಣಾಭವೃದ್ಧಿ ಕಾರ್ಯಕ್ರಮವೆಂದರೆ ಬರೀ ಅಭಿವೃದ್ಧಿ ಕಾರ್ಯಕ್ರಮಗಳು ಮಾತ್ರವಲ್ಲ. ಗ್ರಾಮದ ಜನರ ಬೌದ್ಧಿಕ, ನೈತಿಕ, ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗಳೂ ಇದರಲ್ಲಿ ಸೇರಿರುತ್ತವೆ. ಕಲೆಗಳು, ಕರಕುಶಲತೆಗಳು, ಆರೋಗ್ಯ, ಶಿಕ್ಷಣಗಳೆಲ್ಲವೂ ಸಂಘಟಿತವಾದ ಕಾರ್ಯಕ್ರಮದಡಿ ಬರುತ್ತವೆ. ಆಹಾರ ಮತ್ತು ಪಾನೀಯಗಳು, ಬಟ್ಟೆಗಳು ಮತ್ತು ಇತರ ಜೀವನ ಅವಶ್ಯಕತೆಗಳ ಮಟ್ಟದಲ್ಲಿ ನಗರವಾಸಿಗಳು ಮತ್ತು ಗ್ರಾಮದ ಜನತೆಯ ಮಧ್ಯ ಸಮಾನತೆಯಿರಬೇಕು.

ಗಾಂಧೀಜಿಯವರ ಪ್ರಕಾರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮವು ಸರ್ವೋದಯ ಸಿದ್ಧಾಂತದ ತಳಹದಿಯ ಆಧಾರದ ಮೇಲೆ ಅಭಿವೃದ್ಧಿಯಾದುದಾಗಿದೆ. ಸರ್ವೋದಯ ಸಿದ್ಧಾಂತವು ಎಲ್ಲರ ಒಳಿತನ್ನೂ ಬಯಸುವ ಆದರ್ಶ ಸಿದ್ಧಾಂತವಾಗಿದ್ದು ಇದು ಇಂದಿನ ಸಂಘಟಿತ ಅಭಿವೃದ್ಧಿ ಕಾರ್ಯಕ್ರಮವನ್ನು ಹೋಲುತ್ತದೆ. ಸಂಘಟಿತ ಅಭಿವೃದ್ಧಿ ಕಾರ್ಯಕ್ರಮ ಬರೀ ಆರ್ಥಿಕ ಅಭಿವೃದ್ಧಿಯನ್ನು ಮಾತ್ರ ಒಳಗೊಂಡಿರುವುದಿಲ್ಲ; ಜೀವನದ ಎಲ್ಲಾ ಚಟುವಟಿಕೆಗಳು ಅಭಿವೃದ್ಧಿಯಡಿಯಲ್ಲಿ ಬರುತ್ತವೆ. ಕೃಷಿ ಮತ್ತು ಇತರ ಪ್ರಾಥಮಿಕ ಕ್ಷೇತ್ರದ ಚಟುಟಿಕೆಗಳು ದ್ವಿತೀಯ ಮತ್ತು ತೃತೀಯ ಕ್ಷೇತ್ರದ ಚಟುವಟಿಕೆಗಳೂ ಇದರಡಿಯಲ್ಲಿ ಬರುತ್ತವೆ.

ಗಾಂಧೀಜಿಯವರು ರೂಪಿಸಿದ ಗ್ರಾಮಗಳ ಪುನರ್ ನಿರ್ಮಾಣ ಯೋಜನೆಯನ್ನು ಸಮಗ್ರ ಗ್ರಾಮಸೇವೆಯ ಯೋಜನೆ ಎಂದು ಕರೆಯಬಹುದು. ಈ ಯೋಜನೆಯು ವ್ಯವಸಾಯ, ಪಶುಸಂಗೋಪನೆ, ಅರಣ್ಯಾಭಿವೃದ್ಧಿ, ಮೀನುಗಾರಿಕೆ, ಖಾದೀ ಉತ್ಪಾದನೆ ಮತ್ತು ಬಳಕೆ, ಗ್ರಾಮೀಣ ಕೈಗಾರಿಕೆಗಳಿಗೆ ಪ್ರೋತ್ಸಾಹ, ಪ್ರಾಥಮಿಕ ಮತ್ತು ವಯಸ್ಕರ ಶಿಕ್ಷಣ, ಗ್ರಾಮ ನೈರ್ಮಲ್ಯ, ಹಿಂದುಳಿದ ಜನಾಂಗಗಳ ಏಳಿಗೆ, ಕೋಮು ಸೌಹಾರ್ದ, ಪಾನ ನಿರೋಧ, ಪ್ರಕೃತಿ ಚಿಕಿತ್ಸೆ ಮತ್ತು ಮೂಲ ಸೌಲಭ್ಯಗಳ ಅಭಿವೃದ್ಧಿ ಮುಂತಾದವುಗಳನ್ನು ಒಳಗೊಂಡಿರಬೇಕು.

## ಭೂ ಸುಧಾರಣೆ :

ಗಾಂಧೀಜಿ ಸಾಮಾಜಿಕ-ಆರ್ಥಿಕ ಸಮಾನತೆಯನ್ನು ಪ್ರತಿಪಾದನೆ ಮಾಡುತ್ತಾ ಬಂದವರು. ಸಮಾಜದಲ್ಲಿ ಎಲ್ಲಾ ಹಂತಗಳಲ್ಲಿಯೂ ಶಾಂತಿ ನೆಲೆಸಬೇಕಾದರೆ ಗಣನೀಯ ಪ್ರಮಾಣದಲ್ಲಿ ಸಮಾನತೆ ನಿರ್ಮಾಣವಾಗಬೇಕು. ಸಮಾಜದಲ್ಲಿ ಸಮಾನತೆ ನಿರ್ಮಾಣವಾಗಬೇಕಾದರೆ ಭೂ ಸುಧಾರಣೆ ನ್ಯಾಯಯುತವಾಗಿ ಅನುಷ್ಠಾನಗೊಳ್ಳಬೇಕು ಎಂದು ಗಾಂಧೀಜಿ ಬಯಸಿದರು. ಉಳುವವನಿಗೆ ಭೂಮಿ ದೊರೆಯಬೇಕು. ಇದರಿಂದ ಭೂಮಿ ತನ್ನದೆಂಬ ಭಾವನೆ ಮೂಡಿ ಶ್ರದ್ಧೆಯಿಂದ ವ್ಯವಸಾಯ ಮಾಡಿ ಕೃಷಿ ಉತ್ಪನ್ನ ಹೆಚ್ಚಿಸಲು ಸಹಾಯಕವಾಗುತ್ತದೆ. ಬಡವರು ಶ್ರೀಮಂತರ ಮಧ್ಯೆ ಇರುವ ಕಂದಕ ಕಡಿಮೆಯಾಗುತ್ತಾ ಹೋಗುತ್ತದೆ.

ಶ್ರೀಮಂತರು ಮತ್ತು ಅಸಂಖ್ಯಾತ ಹಸಿದ ಹೊಟ್ಟೆಯ ಜನರ ಮಧ್ಯೆ ಇರುವ ಕಂದಕವು ಇಲ್ಲದಂತಾಗಲು ವ್ಯವಸಾಯದಲ್ಲಿನ ಉತ್ಪಾದನೆಯು ಹೆಚ್ಚುವಂತಾಗಲು, ಧರ್ಮದರ್ಶಿತ್ವ, ರೈತರಿಗೆ ಭೂಮಾಲೀಕತ್ವ ಮತ್ತು ಸಹಕಾರೀ ಬೇಸಾಯ ಪದ್ಧತಿಯನ್ನು ಜಾರಿಗೆ ತರಬೇಕೆಂದು ಗಾಂಧೀಜಿ ಸಲಹೆಯಿತ್ತರು.

ಗಾಂಧೀಜಿಯವರ ಜೀವಿತ ಕಾಲದಲ್ಲಿ ಜಮೀನ್ದಾರಿ ಪದ್ಧತಿ ಬಲವಾಗಿ ಬೇರೂರಿತ್ತು. ಜಮೀನ್ದಾರರು ಭೂಮಿಯ ಒಡೆತನ ಹೊಂದಿ ಅನೇಕ ಹಿಡುವಳಿದಾರರನ್ನು ಶೋಷಿಸುವುದನ್ನು ತಪ್ಪಿಸಲು ಜಮೀನ್ದಾರರು ಬಡ ಹಿಡುವಳಿದಾರರ ಧರ್ಮದರ್ಶಿಗಳೂ ಹಾಗೂ ನಂಬಿಕಸ್ಥ ಸ್ನೇಹಿತರಾಗಬೇಕೆಂದು ಕರೆಯಿತ್ತರು. ಜಮೀನ್ದಾರರು ಬಡ ಹಿಡುವಳಿದಾರರಿಂದ ದೇಣಿಗೆ ವಸೂಲಿ ನಿಲ್ಲಿಸಿ ಅವರ ಜೀವನೋಪಾಯಕ್ಕಾಗಿ ಕನಿಷ್ಠ ವೇತನ ನೀಡಬೇಕು. ಕನಿಷ್ಠ ವೇತನವು ಈ ಬಡವರಿಗೆ ಉತ್ತಮ ಜೀವನ ನಡೆಸಲು ಅನುಕೂಲವಾಗಿರುವಷ್ಟು ಇರಬೇಕು. ಈ ವೇತನವು ಬಡ ಹಿಡುವಳಿದಾರರಿಗೆ ಬೇಕಾಗುವಷ್ಟು ಪೌಷ್ಟಿಕಾಂಶಗಳಿಂದ ಕೂಡಿದ ಸಮತೂಕ ಆಹಾರ ಕೊಳ್ಳಲು, ಯೋಗ್ಯ ಉಡುಪುಗಳನ್ನು ಕೊಳ್ಳಲು, ವಾಸಿಸಲು ಯೋಗ್ಯ ಮನೆ ಹೊಂದಲು ಹಾಗೂ ಇತರ ಕನಿಷ್ಠ ಅನುಕೂಲಗಳನ್ನು ಮಾಡಿಕೊಳ್ಳಲು ನೆರವಾಗುವಂತಿರಬೇಕು.

ಗಾಂಧೀಜಿಯವರ ನಂತರ ಆಚಾರ್ಯ ವಿನೋಬಾ ಭಾವೆ ಅವರು ಗಾಂಧೀಜಿಯವರ ಆದರ್ಶದ ಭೂ ಸುಧಾರಣೆಯನ್ನು ತಮ್ಮ ಭೂದಾನ ಚಳವಳಿಯ ಮೂಲಕ ಕೈಗೊಂಡರು. ಭೂದಾನವೆಂದರೆ ಭೂಮಾಲೀಕರು ಭೂಮಿಯನ್ನು ಭೂಮಿ ಇಲ್ಲದವರಿಗೆ ದಾನವಾಗಿ ನೀಡುವುದು. ಭೂಮಿಯು ಪ್ರಕೃತಿಯ ಉಚಿತ ಕೊಡುಗೆಯಾಗಿರುವುದರಿಂದ ಇದು ಎಲ್ಲರಿಗೂ ದೊರಕಬೇಕು. ಭೂಮಿಯು ಎಲ್ಲರಿಗೂ ದೊರೆತಾಗ ಬೇಕಾದ ಪದಾರ್ಥಗಳನ್ನು ಬೆಳೆದುಕೊಂಡು ಬಡವರು ಅಭಿವೃದ್ಧಿಯಾಗುತ್ತಾರೆ. ಆದ್ದರಿಂದ ಭೂದಾನ ಚಳವಳಿಯು ಗ್ರಾಮೀಣ ಸರ್ವೋದಯ ಸಾಧನೆಯಲ್ಲಿ ಮಹತ್ವದ ಸ್ಥಾನ ಪಡೆಯಬೇಕು ಎಂದು ಆಚಾರ್ಯ ವಿನೋಬಾ ಭಾವೆ ಆಶಿಸಿದರು.

ಸರಕಾರವು ಸಾಮಾಜಿಕ ಮತ್ತು ವ್ಯವಹಾರ ಸಂಘಟನೆಯ ಸ್ವರೂಪವಾಗಬೇಕು. ಬಡ ರೈತರು ವೈಯಕ್ತಿಕ ಮಟ್ಟದಲ್ಲಿ ವ್ಯವಸಾಯದಲ್ಲಿ ನಿರೀಕ್ಷಿತ ಪ್ರಗತಿ ಸಾಧಿಸಲು ಕಷ್ಟವಾಗಬಹುದು ಎಂಬ ಅಂಶವನ್ನು ಗಾಂಧೀಜಿಯವರು ತಮ್ಮ ವ್ಯಾಪಕ ಪ್ರವಾಸ ಕಾಲದಲ್ಲಿ ಹಾಗೂ ತಜ್ಞರೊಡನೆ ಚರ್ಚೆಯ ಮೂಲಕ ಅರಿತುಕೊಂಡರು ಮತ್ತು ಬಡರೈತರ ಆರ್ಥಿಕ ಸ್ಥಿತಿಗತಿಗಳು ಮತ್ತು ಅವರ ದೈಹಿಕ ಸಾಮರ್ಥ್ಯವನ್ನು ಸ್ವತಃ ನೋಡಿ ಅರಿತ ಗಾಂಧೀಜಿ ಸಹಕಾರಿ ಬೇಸಾಯ ಪದ್ಧತಿಯನ್ನು ಅನುಸರಿಸಲು ಸಲಹೆ ನೀಡಿದರು. ಸಾಮೂಹಿಕವಾಗಿ ವ್ಯವಸಾಯ ಮತ್ತು ಪಶುಸಂಗೋಪನೆ ಮಾಡುವುದರಿಂದ ನಾನಾ ರೀತಿಯ ಆರ್ಥಿಕ, ಸಾಮಾಜಿಕ, ಅನುಕೂಲತೆಗಳು ಬಡರೈತರಿಗೆ ದೊರೆಯುತ್ತವೆ. ಈ ಸಹಕಾರೀ ಬೇಸಾಯ ಪದ್ಧತಿಯಿಂದ ಭೂಮಿಯು ತುಂಡುತುಂಡಾಗಿ ಹಂಚಿ ಹೋಗಿ ಆರ್ಥಿಕವಾಗಿ ಲಾಭದಾಯಕವಲ್ಲದ ಹಿಡುವಳಿಯಾಗಿ ಪರಿಣಮಿಸುವುದನ್ನು ತಪ್ಪಿಸಲು ಸಾಧ್ಯವಾಗುತ್ತದೆ. ಬಡರೈತರು ಅನವಶ್ಯಕವಾಗಿ ಅಪಾರ ಶ್ರಮವಹಿಸುವುದು ತಪ್ಪುತ್ತದೆ. ನಾನಾ ರೀತಿಯ ಆರ್ಥಿಕ ಲಾಭಗಳು ಬಡರೈತರಿಗೆ ದೊರೆತು ಅವರ ಜೀವನಮಟ್ಟ ಸುಧಾರಣೆಯಾಗಲು ನೆರವಾಗುತ್ತದೆ ಎಂದು ಗಾಂಧೀಜಿ ತಿಳಿಸಿ ಸಹಕಾರೀ ಬೇಸಾಯ ಪದ್ಧತಿಯನ್ನು ಬಲವಾಗಿ ಸಮರ್ಥಿಸಿದರು.

ಭೂಮಿಯು ಎಲ್ಲರಿಗೂ ಸೇರಿದ ಪ್ರಕೃತಿಯ ವರದಾನವೆಂದು ಜನರಲ್ಲಿ ಪ್ರಚಲಿತವಿದ್ದ ಉಕ್ತಿಯನ್ನು ಈ ಸಂದರ್ಭದಲ್ಲಿ ಗಾಂಧೀಜಿ ಹೇಳುತ್ತಿದ್ದರು. ಅದೇನೆಂದರೆ ಎಲ್ಲಾ ಭೂಮಿಯು ಗೋಪಾಲನಿಗೆ ಸೇರಿದ್ದು, ಆದ್ದರಿಂದ ಭೂಮಿಯ ಒಡೆತನಕ್ಕೆ ಗಡಿ ರೇಖೆ ಎಲ್ಲಿದೆ ? ಈ ಗಡಿ ರೇಖೆಯನ್ನು ಎಳೆಯುವವರು ಮನುಷ್ಯರು. ಆದ್ದರಿಂದ ಮನುಷ್ಯರು ಭೂಮಿಯ ಗಡಿ ರೇಖೆಯನ್ನು ಎಳೆಯಬಾರದು. ಭೂಮಿ ಎಲ್ಲರಿಗೂ ಸಮಾನವಾಗಿ ಸೇರಿದ್ದು, ಗೋಪಾಲ ಎಂದರೆ ದೇವರು, ಇದರ ಅರ್ಥ ಮನುಷ್ಯರು ಎಂದು ಆಗುತ್ತದೆ. ಆದ್ದರಿಂದ ಭೂಮಿ ಎಲ್ಲ ಜನರಿಗೂ ಸಮಾನವಾಗಿ ಸೇರಿದ್ದು ಈ ಭೂಮಿಯನ್ನು ಎಲ್ಲ ಜನರ ಒಳ್ಳೆಯದಕ್ಕಾಗಿ ಅವರ ಅಭ್ಯುದಯಕ್ಕಾಗಿ ಉಪಯೋಗಿಸಬೇಕು.

ಸಹಕಾರೀ ಪದ್ಧತಿಯು ಜನರ ಯೋಗಕ್ಷೇಮವನ್ನು ಸಾಧಿಸುವ ಸಾಧನ. ಇದು ಸಮಾಜದಲ್ಲಿ ಎಲ್ಲಾ ವರ್ಗದ ಜನರ ಮಧ್ಯೆ ಸಾಮರಸ್ಯವನ್ನು ಸಾಧಿಸಲು ನೆರವಾಗುತ್ತದೆ. ಸಾಮಾಜಿಕ, ರಾಜಕೀಯ, ಆರ್ಥಿಕ ಸ್ವಾತಂತ್ರ್ಯ ಸಹಕಾರ ತತ್ವದ ಮೂಲಕ ಎಲ್ಲ

ಜನರಿಗೂ ಎಲ್ಲ ದೊರೆಯುತ್ತದೆ. ಆದ್ದರಿಂದ ಸಹಕಾರಿ ತತ್ವವನ್ನು ವ್ಯಾಪಕವಾಗಿ ಎಲ್ಲ ಉತ್ಪಾದನಾ ಚಟುವಟಿಕೆಗಳಲ್ಲಿ ಅಳವಡಿಸಬೇಕು ಎಂದು ಗಾಂಧೀಜಿ ಸಲಹೆ ನೀಡಿದ್ದಾರೆ.

**ವ್ಯವಸಾಯ :**

ವ್ಯವಸಾಯವು ಒಂದು ಆದರ್ಶ ಉದ್ಯೋಗ ಎಂಬುದು ಗಾಂಧೀಜಿಯವರ ಅಭಿಪ್ರಾಯವಾಗಿದೆ. ಕೋಟಿ ವಿದ್ಯೆಗಳಿಗಿಂತ ಮೇಟಿ ವಿದ್ಯೆಯೇ ಮೇಲು ಎಂದು ಸರ್ವಜ್ಞಕವಿ ಹೇಳಿರುವುದನ್ನು ಇಲ್ಲಿ ನೆನೆಯಬಹುದು. ವ್ಯವಸಾಯದಲ್ಲಿ ದೇಹ ಶ್ರಮವುಂಟಾಗಿ ಮೈ ಬೆವರುತ್ತದೆ. ದೈಹಿಕ ಆರೋಗ್ಯವನ್ನು ಕಾಪಾಡಿಕೊಳ್ಳಬೇಕಾದರೆ ಮೈಗೆ ಸಾಕಷ್ಟು ವ್ಯಾಯಾಮವಾಗಬೇಕು. ಇದು ವ್ಯವಸಾಯದಲ್ಲಿ ಸಾಧ್ಯ. ಜೊತೆಗೆ ನಿಸರ್ಗದ ಬಯಲಲ್ಲಿ ಕೆಲಸಗಳನ್ನು ಮಾಡಬೇಕಾಗುವುದರಿಂದ ವ್ಯವಸಾಯವು ಎಲ್ಲಾ ಉದ್ಯೋಗಗಳಿಗಿಂತ ಅತ್ಯಂತ ಶ್ರೇಷ್ಠವಾದುದು. ಆಹಾರ ಕಾಯಕವು ವ್ಯವಸಾಯದಲ್ಲಿ ಹೆಚ್ಚು ಸಮರ್ಪಕವಾಗಿ ಬಳಕೆಗೆ ಬರುತ್ತದೆ. ರಾಷ್ಟ್ರಕ್ಕೆ ಬೇಕಾದ ದವಸ ಧಾನ್ಯಗಳನ್ನು, ಹಣ್ಣು, ತರಕಾರಿ, ಸೊಪ್ಪುಗಳನ್ನು, ಕೈಗಾರಿಕೆಗಳಿಗೆ ಬೇಕಾಗುವ ಆದಾನಗಳನ್ನು ವ್ಯವಸಾಯದಲ್ಲಿ ಉತ್ಪಾದಿಸುವುದರಿಂದ ವ್ಯವಸಾಯ ಅತ್ಯಂತ ಮಹತ್ವದ ಸ್ಥಾನ ಪಡೆದಿದೆ. ಗ್ರಾಮೀಣಾಭಿವೃದ್ಧಿಯ ದೃಷ್ಟಿಯಿಂದಲಂತೂ ವ್ಯವಸಾಯ ಚೆನ್ನಾಗಿ ಅಭಿವೃದ್ಧಿಯಾಗಬೇಕು. ಅನೇಕ ಗ್ರಾಮೀಣ ರೈತರು ವ್ಯವಸಾಯದಲ್ಲಿ ಸೂಕ್ತ ಪ್ರಾವೀಣ್ಯತೆ ಸಾಧಿಸಿಲ್ಲದಿರುವುದು ಗ್ರಾಮೀಣ ಭಾರತ ಹಿಂದೆ ಬೀಳುತ್ತಿರುವುದಕ್ಕೆ ಕಾರಣವಾಗಿದೆ ಎಂದು ಗಾಂಧೀಜಿ ಹೇಳಿದ್ದು ಇಂದಿಗೂ ಸರಿಯೆನಿಸುತ್ತದೆ.

ಎಲ್ಲರೂ ವ್ಯವಸಾಯ ಮಾಡುವುದು ಸಾಧ್ಯವಿಲ್ಲ ಎಂಬುದನ್ನು ಒಪ್ಪಿದ ಗಾಂಧೀಜಿ ಯಾರು ವ್ಯವಸಾಯ ಮಾಡಲು ಸಾಧ್ಯವಾಗುವುದಿಲ್ಲವೋ ಅವರು ನೂಲಲಿ ಅಥವಾ ಇನ್ನಿತರರು ಗ್ರಾಮೀಣ ಕೈಗಾರಿಕೆಗಳಲ್ಲಿ ತಮಗೆ ಸೂಕ್ತವೆನಿಸುವಂಥವುಗಳಲ್ಲಿ ತೊಡಗಬಹುದು. ದೇಹ ಶ್ರಮಕ್ಕೆ ಹಾಗೂ ಶುದ್ಧ ಪರಿಸರದಲ್ಲಿ ಕೆಲಸ ಮಾಡಲು ವ್ಯವಸಾಯದಲ್ಲಿ ಅವಕಾಶವಿರುವುದರಿಂದ ಗಾಂಧೀಜಿ ವ್ಯವಸಾಯವನ್ನು ಅತ್ಯಂತ ಆದರ್ಶ ಉದ್ಯೋಗವೆನ್ನುತ್ತಿದ್ದರು. ಪ್ರತಿಯೊಬ್ಬ ರೈತರು ವ್ಯವಸಾಯದಲ್ಲಿ ಸೂಕ್ತ ಪ್ರಾವೀಣ್ಯತೆ ಪಡೆದು ತಮಗೆ ಬೇಕಾದ ದವಸಧಾನ್ಯಗಳು, ಹಣ್ಣು ಹಂಪಲು, ತರಕಾರಿಗಳು, ಸೊಪ್ಪುಗಳನ್ನು ಬೆಳೆದುಕೊಂಡರೆ ಎಲ್ಲರೂ ಸುಖ ಶಾಂತಿ ನೆಮ್ಮದಿಯಿಂದ ಇರಲು ಸಾಧ್ಯವಾಗುತ್ತದೆ ಎಂದು ಗಾಂಧೀಜಿ ಹೇಳುತ್ತಿದ್ದರು.

**ಆಹಾರ ಸಮಸ್ಯೆ :**

ಆಹಾರ ಸಮಸ್ಯೆಯ ಬಗ್ಗೆ ಆಗ ಹೆಚ್ಚಿನ ಚರ್ಚೆಗಳು ನಡೆಯುತ್ತಿದ್ದವು. ಈಗ ನಾವು ಆಹಾರದ ಉತ್ಪಾದನೆಯಲ್ಲಿ ಸ್ವಾವಲಂಬನೆ ಸಾಧಿಸಿದ್ದೇವೆ. ವಿತರಣೆಯಲ್ಲಿ ಕೆಲವು ನ್ಯೂನತೆಗಳಿರಬಹುದು. ಆಹಾರ ಸಮಸ್ಯೆಯನ್ನು ನಿವಾರಿಸಲು ಗಾಂಧೀಜಿ ವ್ಯವಸಾಯದ ಉತ್ಪಾದನೆ ಹೆಚ್ಚಬೇಕು ಎಂದು ತಿಳಿಸಿ ವ್ಯವಸಾಯದ ಉತ್ಪಾದನೆಗೆ ಈ ಕೆಳಗೆ ತಿಳಿಸಿದ ಸಲಹೆಗಳನ್ನು ನೀಡಿದ್ದಾರೆ.

೧. ನೀರಾವರಿ ಸೌಲಭ್ಯವಿಲ್ಲದಿದ್ದಾಗ ಗೊಬ್ಬರ ಬಳಕೆ ಸೂಕ್ತವಾದ ರೀತಿಯಲ್ಲಿ ಸಾಧ್ಯವಾಗುವುದಿಲ್ಲ, ಗೊಬ್ಬರದ ಬಳಕೆಯಿಲ್ಲದೆ ಕೃಷಿ ಉತ್ಪಾದನೆ ಹೆಚ್ಚಿಸಲು ಕಷ್ಟವಾಗುತ್ತದೆ. ರೈತರಿಗೆ ನೀರಾವರಿ ಸೌಲಭ್ಯವನ್ನು ಮೊದಲು ದೊರಕಿಸಕೊಡಬೇಕು. ಇದರಿಂದ ರೈತರು ವಿವಿಧ ರೀತಿಯ ಬೆಳೆಗಳನ್ನು ಬೆಳೆದು ತನ್ನ ಸಮಸ್ಯೆಗಳನ್ನು ನಿವಾರಣೆ ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ನೀರಾವರಿ ಸೌಲಭ್ಯಗಳನ್ನು ದೊರಕಿಸಕೊಡಲು ಕೆರೆಕಟ್ಟೆಗಳನ್ನು ಕಟ್ಟುವುದು, ಭೂಮಿಯ ಕೆಳಗಿನ ಜಲಸಂಪನ್ಮೂಲವನ್ನು ಬಳಸುವುದು, ಕಾರ್ಮಿಕರನ್ನು ಬಳಸಿ ನೀರಿನ ಅನುಕೂಲವಿರುವ ಕಡೆ ಬಾವಿಗಳನ್ನು ತೋಡಿಸಿ ರೈತರಿಗೆ ನೀರಾವರಿ ಸೌಲಭ್ಯ ಒದಗಿಸಬೇಕು. ಗಾಂಧೀಜಿ ಈಗ ಇದ್ದಿದ್ದರೆ ಮಳೆನೀರಿನ ಕೊಯ್ಲನ್ನು ಪ್ರಚಾರಪಡಿಸುತ್ತಿದ್ದರು.

೨. ಸೋಯಾ ಅವರೆಯು ಯಥೇಚ್ಛ ಪೌಷ್ಠಿಕಾಂಶ ಹೊಂದಿರುವುದರಿಂದ ಇದನ್ನು ಅಗತ್ಯ ಪ್ರಮಾಣದಲ್ಲಿ ಬೆಳೆಯುವುದು ಅವಶ್ಯಕವಾಗಿದೆ.

೩. ವ್ಯರ್ಥ ಭೂಮಿಯನ್ನು ವ್ಯವಸಾಯದ ಉದ್ದೇಶಗಳಿಗೆ ಬಳಸುವುದು.

೪. ಕೃಷಿಯ ತ್ಯಾಜ್ಯ ವಸ್ತುಗಳನ್ನು, ದನಕರುಗಳ ಸಗಣಿಯನ್ನು ಬಳಸಿ ಸಾವಯವ ಗೊಬ್ಬರವನ್ನು ರೈತರು ಉತ್ಪಾದಿಸಿ ಅಭಿವೃದ್ಧಿಪಡಿಸಿಕೊಂಡು ಅಗತ್ಯ ಪ್ರಮಾಣದಲ್ಲಿ ಜಮೀನುಗಳಲ್ಲಿ ಬಳಸಬೇಕು. ಸಾವಯವ ಕೃಷಿ ಎಲ್ಲಾ ದೃಷ್ಟಿಯಿಂದಲೂ ಸೂಕ್ತವಾದುದು.

೫. ಸಹಕಾರೀ ಬೇಸಾಯ ಪದ್ಧತಿ ಅನೇಕ ಅನುಕೂಲತೆಗಳನ್ನು ಹೊಂದಿರುವುದರಿಂದ ಈ ವಿಧಾನ ಬಳಸಿ ವ್ಯವಸಾಯ ಮಾಡಬೇಕು.

೬. ಸುಧಾರಿತ ಬೀಜಗಳನ್ನು ವ್ಯವಸಾಯದಲ್ಲಿ ಬಳಸಬೇಕು. ಇಳುವರಿ ಹೆಚ್ಚಿಸಿಕೊಳ್ಳಬೇಕು.

೭. ಶ್ರಮವಹಿಸಿ ಬೆಳೆ ಬೆಳೆಯುವುದು ಎಷ್ಟು ಮುಖ್ಯವೋ ಅಷ್ಟೇ ಶ್ರದ್ಧೆಯಿಂದ ಬೆಳೆಯನ್ನು ದನಕರು, ಹಂದಿಗಳು, ಮೊಲಗಳು, ಮಂಗಗಳು ಮತ್ತು ಇತರ ಪ್ರಾಣಿಗಳಿಂದ, ಕಳ್ಳಕಾಕರಿಂದ ರಕ್ಷಿಸುವುದರ ಕಡೆಗೆ ಗಮನ ನೀಡಲೇಬೇಕು. ರೋಗ ರುಜಿನಗಳಿಂದಲೂ ಬೆಳೆ ರಕ್ಷಿಸಬೇಕು.

೮. ಮೀನು ಆರೋಗ್ಯಪೂರ್ಣ ಔಷಧಿಯುಕ್ತ ಆಹಾರವಾಗಿರುವುದರಿಂದ ಮೀನುಗಾರಿಕೆ ಅಭಿವೃದ್ಧಿಯ ಕಡೆ ಗಮನಹರಿಸಬಹುದು. ಮೀನುಗಾರಿಕೆ ಅಭಿವೃದ್ಧಿಯಿಂದ, ಬೆಳವಣಿಗೆಯಿಂದ ಆಹಾರ ಸಮಸ್ಯೆ ತಕ್ಕ ಮಟ್ಟಿಗೆ ಕಡಿಮೆಯಾಗುತ್ತದೆ.

೯. ರೈತರು ಮೊದಲು ತಮ್ಮ ಸೋಮಾರಿತನದಿಂದ ಹೊರಬರಬೇಕು. ವ್ಯವಸಾಯದಲ್ಲಿ ಎಲ್ಲಾ ಹಂತಗಳಲ್ಲಿಯೂ ಎಚ್ಚರ ವಹಿಸಬೇಕಾಗುತ್ತದೆ. ಎಲ್ಲೋ ಒಂದು ಕಡೆ ಎಚ್ಚರ ತಪ್ಪಿದರೂ ಅವರ ಶ್ರಮಕ್ಕೆ ತಕ್ಕಂತೆ ಉತ್ಪತ್ತಿ ದೊರೆಯುವುದಿಲ್ಲ.

೧೦. ಸರಾಸರಿ ಕಛೇರಿಗಳು, ಹಾಗೆಯೇ ಹೆದ್ದಾರಿಗಳ ಇಕ್ಕೆಲಗಳಲ್ಲಿಯೂ ಜನರಿಗೆ ಉಪಯೋಗವಾಗುವ ಗಿಡಮರಗಳನ್ನು ಬೆಳೆಯಬೇಕು. ಶಾಲಾಕಾಲೇಜುಗಳು, ಕೈಗಾರಿಕೆಗಳ ಆವರಣದಲ್ಲಿ ಜನರಿಗೆ ಉಪಯೋಗವಾಗುವ ಗಿಡಮರಗಳನ್ನು ಬೆಳೆಯಬೇಕು.

೧೧. ಮನೆಗಳ ಸುತ್ತಲೂ ಸಾಕಷ್ಟು ಪ್ರಮಾಣದಲ್ಲಿ ಹಣ್ಣು, ತರಕಾರಿ, ಸೊಪ್ಪುಗಳನ್ನು ಬೆಳೆಯಬೇಕು. ಇದರಿಂದ ಆಹಾರ ಸಮಸ್ಯೆಯೂ ನೀಗಿ ಜನರಿಗೆ ಪೌಷ್ಠಿಕ ಆಹಾರ ದೊರೆತಂತೆ ಆಗುತ್ತದೆ. ಆರೋಗ್ಯ ವೃದ್ಧಿಸುತ್ತದೆ.

೧೨. ಕೃಷಿಯ ಜೊತೆಗೆ ಪಶುಸಂಗೋಪನೆ, ಮೀನು ಸಾಕಾಣಿಕೆ, ಕೋಳಿ ಸಾಕಾಣಿಕೆ, ಮೊಲ ಸಾಕಾಣಿಕೆ, ಜೇನು ಸಾಕಾಣಿಕೆ ಇತ್ಯಾದಿ ಸಹ ಬಹಳ ಮುಖ್ಯ. ಇವು ರೈತರಿಗೆ ಹೆಚ್ಚುವರಿ ಆದಾಯ ನೀಡುತ್ತವೆ. ಹಾಗೆಯೇ ಕೃಷಿಗೆ ಬೇಕಾಗುವ ಸಾವಯವ ಗೊಬ್ಬರ ದೊರಕಿಸಿಕೊಡುತ್ತವೆ. ಹಾಗೆಯೇ ಕೃಷಿಯ ವ್ಯರ್ಥ ಪದಾರ್ಥಗಳನ್ನು ಬಳಕೆ ಮಾಡಿ ಆರ್ಥಿಕ ಲಾಭ ದೊರಕಿಸಿಕೊಡುತ್ತವೆ. ಹಾಲು ಮತ್ತು ಹಾಲಿನ ಉತ್ಪನ್ನಗಳು, ಮೊಟ್ಟೆ, ಮಾಂಸ ದೊರೆತು ಜನರು ಪೌಷ್ಠಿಕಾಂಶಗಳ ಕೊರತೆಯಿಂದ ಬಳಲುವುದು ತಪ್ಪುತ್ತವೆ. ಆಹಾರ ಕೊರತೆಯೂ ನೀಗುತ್ತವೆ.

## ಗ್ರಾಮೀಣ ಸಾರಿಗೆ :

ಗ್ರಾಮಾಂತರ ಪ್ರದೇಶಗಳಲ್ಲಿರುವ ಅವಿದ್ಯಾವಂತರಲ್ಲಿನ ನಿರುದ್ಯೋಗ, ಭೀಕರ ಬಡತನ ಮುಂತಾದ ಸಮಸ್ಯೆಗಳನ್ನು ನಿವಾರಿಸಲು ವ್ಯವಸಾಯ, ಗ್ರಾಮೀಣ ಕೈಗಾರಿಕೆಗಳ ಅಭಿವೃದ್ಧಿಯನ್ನು ಸಾಧಿಸಲು ರಸ್ತೆಗಳು ಮತ್ತು ರಸ್ತೆ ಸಾರಿಗೆ ವ್ಯವಸ್ಥೆ ಅಭಿವೃದ್ಧಿಯಾಗಬೇಕು. ತುಂಬಾ ಹಿಂದುಳಿದ ಹಾಗೂ ತೀರಾ ಒಳಗಿನ ಗ್ರಾಮಾಂತರ ಪ್ರದೇಶಗಳಿಗೆ ರಸ್ತೆ ಸಾರಿಗೆ ಅತ್ಯಂತ ಪ್ರಶಸ್ತವಾದುದು. ಏಕೆಂದರೆ ಎಲ್ಲಾ ಗ್ರಾಮಾಂತರ ಪ್ರದೇಶಗಳಿಗೂ ರೈಲ್ವೆ ಸಾರಿಗೆಯ ಮೂಲಕ ಅನೇಕ ಅತಿ ಸಣ್ಣ ರೈತರ ಸಣ್ಣ ಪ್ರಮಾಣದ ವ್ಯವಸಾಯೋತ್ಪನ್ನಗಳನ್ನು ಸಂಗ್ರಹಿಸಿ ವಿವಿಧ ಪ್ರದೇಶಗಳಿಗೆ, ಮಾರುಕಟ್ಟೆಗಳಿಗೆ ಮತ್ತು ಇನ್ನಿತರ ಅವಶ್ಯಕ ಸ್ಥಳಗಳಿಗೆ ಸಲೀಸಾಗಿ ಕಡಿಮೆ ಖರ್ಚಿನಲ್ಲಿ ಸಾಗಾಣಿಕೆ ಮಾಡಲು ಸುಲಭ ಸಾಧ್ಯವಾಗುತ್ತದೆ. ಅಷ್ಟೇ ಅಲ್ಲ, ಸಣ್ಣ ಪ್ರಮಾಣದ, ಗ್ರಾಮಾಂತರ ಮತ್ತು ಕುಟೀರ ಕೈಗಾರಿಕೆಗಳ ಉತ್ಪನ್ನಗಳನ್ನು ಪ್ರಶಸ್ತವಾಗಿ ಮಾರುಕಟ್ಟೆ ಇನ್ನಿತರ ಅಗತ್ಯ ಸ್ಥಳಗಳಿಗೆ ಸಾಗಾಣಿಕೆ ಮಾಡಲು ರಸ್ತೆ ಸಾರಿಗೆ ಅಗತ್ಯವಾದುದಾಗಿದೆ. ಇದೇ ರೀತಿ ಜನರು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಪ್ರಯಾಣ ಮಾಡಲು ಬಸ್ಸುಗಳು, ಸಣ್ಣ ಪ್ರಮಾಣದ ಸಾರಿಗೆ ವಾಹನಗಳು ಎತ್ತಿನ ಗಾಡಿಗಳು ಸಹಕಾರಿಯಾಗಿವೆ. ಪಟ್ಟಣಗಳನ್ನು ಹಳ್ಳಿಗಳಿಗೆ ಜೊತೆಗೂಡಿಸಲು, ಹಳ್ಳಿಗಳನ್ನು ಪರಸ್ಪರ ಜೊತೆಗೂಡಿಸಲು ರಸ್ತೆ ಸಾರಿಗೆಗಿಂತ ಬೇರೆ ಯಾವ ಸಾರಿಗೆಯೂ ಅಷ್ಟು ಸಮರ್ಪಕವಾಗಿರುವುದಿಲ್ಲ.

ಸಾವಿರಾರು ವರ್ಷಗಳಿಂದ ಭಾರತ ದೇಶದಲ್ಲಿ ವ್ಯವಸಾಯ ಮತ್ತು ಸಾರಿಗೆಗಾಗಿ ಎತ್ತು ಮತ್ತು ಕೋಣಗಳನ್ನು ಬಳಸಲಾಗುತ್ತಿದೆ. ಗಾಂಧೀಜಿ ಜನರಿಗೆ ಯಾವುದು ಹೆಚ್ಚು ಹೊರೆಯಿಲ್ಲದೆ ಅನೇಕ ಉಪಯೋಗಗಳನ್ನು ನೀಡುತ್ತದೆಯೋ ಅಂತಹವುಗಳಿಗೆ ಬೆಂಬಲ ನೀಡುತ್ತಿದ್ದರು. ಸ್ವಾಭಾವಿಕವಾಗಿ ಎತ್ತಿನ ಗಾಡಿಗಳ ಉಪಯೋಗಗಳ ಬಗ್ಗೆ ಅವರು ಬೆಂಬಲಿಸುತ್ತಿದ್ದರು. ವ್ಯವಸಾಯದಲ್ಲಿ ದೊರಕುವ ಹುಲ್ಲನ್ನು ತಿನ್ನುವ ಎತ್ತುಗಳು ರೈತರಿಗೆ ಅತೀ ಕಡಿಮೆ ವೆಚ್ಚದಲ್ಲಿ ಸೂಕ್ತವಾದ ಸಾರಿಗೆ ಸೌಕರ್ಯಗಳನ್ನು ನೀಡುತ್ತವೆ. ಎಲ್ಲಾ ರೈತರೂ ಟ್ರ್ಯಾಕ್ಟರ್ ಇತ್ಯಾದಿ ವಾಹನಗಳನ್ನು ಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಬಹುಸಂಖ್ಯಾತ ರೈತರಿಗೆ ಎತ್ತಿನ ಗಾಡಿಗಳು ಇಂದಿಗೂ ಸೂಕ್ತವಾದ ಸಾರಿಗೆ ಸಾಧನಗಳಾಗಿವೆ. ಶೇ. ೨೫ರಷ್ಟು ಭಾರತದ ವ್ಯಾಪಾರದ ವಸ್ತುಗಳು ಮತ್ತು ಕೃಷಿ ಉತ್ಪನ್ನಗಳು ಎತ್ತಿನ ಗಾಡಿಗಳ ಮೂಲಕವೇ ಸಾಗಾಣಿಕೆಯಾಗುತ್ತಿವೆ. ಅಷ್ಟೇ ಅಲ್ಲ, ಇನ್ನೂ ಮುಂದಿನ ೨೫ ವರ್ಷಗಳವರೆಗೂ ತೀರಾ ಹಿಂದುಳಿದ ಪ್ರದೇಶಗಳಲ್ಲಿ ಎತ್ತಿನ ಗಾಡಿಗಳ ಅವಶ್ಯಕತೆ ಮುಂದುವರಿಯುತ್ತದೆ. ಗ್ರಾಮಾಂತರ ಪ್ರದೇಶಗಳಲ್ಲಿ ಸಾಮಾಜಿಕ, ಧಾರ್ಮಿಕ ಕೆಲಸ ಕಾರ್ಯಗಳಲ್ಲಿ ಜನರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗಲು ಎತ್ತಿನ ಗಾಡಿಗಳನ್ನು ಬಳಸುತ್ತಿದ್ದಾರೆ.

ರಸ್ತೆ ಸಾರಿಗೆ ಹಾಗೂ ಎತ್ತಿನ ಗಾಡಿಗಳು ಗ್ರಾಮಾಂತರ ಪ್ರದೇಶದಲ್ಲಿ ಅನೇಕ ರೀತಿಯಲ್ಲಿ ಪ್ರಯೋಜನಕಾರಿಯಾಗಿರುವುದರಿಂದ ಅವುಗಳನ್ನು ಅಭಿವೃದ್ಧಿಪಡಿಸಬೇಕು ಮತ್ತು ಪ್ರೋತ್ಸಾಹಿಸಬೇಕು. ಎತ್ತಿನ ಗಾಡಿಗಳ ಸುಧಾರಣೆಗಾಗಿ ಈ ಕೆಳಗೆ ತಿಳಿಸಿದ ಸುಧಾರಣಾ ಕ್ರಮಗಳನ್ನು ಕೈಗೊಳ್ಳಬಹುದು.

೧. ಎತ್ತಿನ ಗಾಡಿಗಳು ಹಗುರವಾಗಿರಬೇಕು ಮತ್ತು ಎತ್ತುಗಳಿಗೆ ನೋವುಂಟುಮಾಡುವ ರೀತಿಯಲ್ಲಿರಬಾರದು. ಚಕ್ರಗಳಿಗೆ ರಬ್ಬರ್ ಬಾಲ್ ಬೇರಿಂಗ್ ಬಳಸಿ ವೈಜ್ಞಾನಿಕವಾಗಿ ಗಾಡಿಗಳನ್ನು ತಯಾರಿಸಬೇಕು. ಎತ್ತುಗಳ ಹೆಗಲುಗಳಿಗೆ ಗಾಯವಾಗದ ರೀತಿಯಲ್ಲಿ ನೊಗಗಳನ್ನು ತಯಾರಿಸಬೇಕು.

೨. ಗಾಡಿಗಳು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಸರಕುಗಳನ್ನು ಸುಲಭವಾಗಿ ಸಾಗಿಸಲು ನೆರವಾಗುವಂತೆ ಗಾಡಿಯನ್ನು ತಯಾರಿಸಬೇಕು. ಆದರೆ ಎತ್ತುಗಳಿಗೆ ಹೊರೆಯಾಗಬಾರದು.

೩. ರಸ್ತೆಗಳನ್ನು ಬೆಣಚುಕಲ್ಲುಗಳಿಂದ, ತಗ್ಗು ದಿನ್ನೆಗಳಿಲ್ಲದಂತೆ ಸಮತಟ್ಟುಗೊಳಿಸಿ ಎಲ್ಲಾ ಕಾಲದಲ್ಲಿಯೂ ಸುಸೂತ್ರವಾಗಿ ಸಾಗಾಣಿಕೆಗೆ ನೆರವಾಗುವಂತೆ ಸಿದ್ಧಪಡಿಸಬೇಕು.

## ಪಶು ಸಂಗೋಪನೆ :

ಭಾರತದ ರೈತರ ಆರ್ಥಿಕಾಭಿವೃದ್ಧಿಯಲ್ಲಿ, ಒಟ್ಟಾರೆ ಗ್ರಾಮೀಣಾಭಿವೃದ್ಧಿಯಲ್ಲಿ ಪಶು ಸಂಗೋಪನೆಯ ಪ್ರಾಮುಖ್ಯತೆಯನ್ನು ಗಾಂಧೀಜಿ ಬಹಳ ಚೆನ್ನಾಗಿಯೇ ಗುರುತಿಸಿದ್ದಾರೆ. ಗ್ರಾಮೀಣ ಭಾಗದ ಬಹುಸಂಖ್ಯೆಯ ಜನರು ವ್ಯವಸಾಯದಲ್ಲಿ ನಿರತರಾಗಿದ್ದಾರೆ. ಉಳಲು ದನಕರುಗಳನ್ನು ಉಪಯೋಗಿಸುತ್ತಾರೆ. ವ್ಯವಸಾಯ ಎಷ್ಟು ಮುಖ್ಯವೋ ಪಶುಸಂಗೋಪನೆಯೂ ಅಷ್ಟೇ ಮುಖ್ಯ. ಪಶುಸಂಪತ್ತನ್ನು ಯುಕ್ತವಾಗಿ ರಕ್ಷಿಸದೆ ಮತ್ತು ಅದರ ಪ್ರಯೋಜನವನ್ನು ಪಡೆಯದೇ ಇದ್ದರೆ ಗ್ರಾಮೀಣರ ಬದುಕು ಅಧೋಗತಿಗೆ ಇಳಿಯುತ್ತದೆ. ಮತ್ತು ಅವರ ಸ್ಥಿತಿಗತಿಗಳನ್ನು ಸುಧಾರಿಸಲು ಕಷ್ಟವಾಗುತ್ತದೆ. ಇದನ್ನು ಆಡಳಿತಗಾರರು ಅರಿಯಬೇಕು ಎಂದು ಗಾಂಧೀಜಿ ಆಶಿಸಿದರು.

ದನಕರುಗಳ ಅಭಿವೃದ್ಧಿಗೆ ಸೂಕ್ತ ಗಮನ ನೀಡಬೇಕು, ಉತ್ತಮ ತಳಿಯ ದನಕರುಗಳನ್ನು ಬೆಳೆಸಬೇಕು, ಅವುಗಳಿಗೆ ಒಳ್ಳೆಯ ಮೇವು ಪೂರೈಸಬೇಕು, ಮೇವು ಸಕಾಲದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಅವುಗಳಿಗೆ ಕೊಡಬೇಕು, ಅದೇ ರೀತಿ ಉತ್ತಮ ಪರಿಸರದಲ್ಲಿ ದನಕರುಗಳು ವಾಸಿಸಲು ಏರ್ಪಾಡು ಮಾಡಬೇಕು. ಗೋ ರಕ್ಷಣಾ ಸಂಘಗಳು ಬಡ ಹಸುಗಳಿಗೆ ಆಶ್ರಯ ನೀಡುವ ವ್ಯವಸ್ಥೆ ಮಾಡಬೇಕು. ಅವುಗಳಿಗೆ ಮೇವು, ನೀರು, ವಾಸಿಸಲು ಸೂಕ್ತ ಕಟ್ಟಡದ ವ್ಯವಸ್ಥೆ ಮಾಡಬೇಕು. ದನಕರುಗಳನ್ನು ಕ್ರೂರ ಉದ್ದೇಶಗಳಿಗೆ ಬಳಸಬಾರದು. ಗೋಮಾಳಗಳು ಬಹಳ ಬೇಗನೆ ಇಲ್ಲವಾಗುತ್ತಿದ್ದು, ಗೋಮಾಳಗಳು ಉಳಿಯುವಂತಾಗಬೇಕು. ಪಿಂಜರಾಪೋಲುಗಳು, ಬಡರೈತರಿಂದ ಬಡದನಗಳನ್ನು ಕೊಳ್ಳಬೇಕು. ಪಿಂಜರಾಪೋಲುಗಳು ಧನಸಹಾಯಕ್ಕಾಗಿ ಬೇರೆಯವರನ್ನು ಆಶ್ರಯಿಸದೆ ತಾವೇ ಮಾದರಿಯಾಗಿ ಪಶುಸಂಗೋಪನೆಯನ್ನು ಅಭಿವೃದ್ಧಿಪಡಿಸಿ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿಡಲು ಎಲ್ಲಾ ರೀತಿಯ ಎಚ್ಚರಿಕೆ ವಹಿಸಬೇಕು. ಅವು ಹಾಲು ಉತ್ಪಾದನೆಯನ್ನು ಹೆಚ್ಚಿಸಿಕೊಂಡು ಆರ್ಥಿಕ ಸಬಲತೆಯನ್ನು ಸಾಧಿಸಿಕೊಳ್ಳಬೇಕು. ಸ್ವಂತ ಕಾಲಮೇಲೆ ನಿಲ್ಲುವಂತಾಗಬೇಕು.

ಗೋಶಾಲೆಗಳು/ಪಿಂಜರಾಪೋಲುಗಳು ಸತ್ತ ದನಗಳ ಚರ್ಮವನ್ನು ಸಂಸ್ಕರಿಸುವ ಘಟಕಗಳನ್ನು ಸ್ಥಾಪಿಸಿಕೊಂಡು ಅದರ ಮೂಲಕವೂ ಆದಾಯ ಗಳಿಸಬಹುದು.

ಹೆಚ್ಚಿನ ಸಂಖ್ಯೆಯ ದನಕರುಗಳ ಮಾಲೀಕ ಎಂಬ ಹೆಗ್ಗಳಿಕೆಯನ್ನು ಹೊಂದುವ ಬಯಕೆ ಜನರಲ್ಲಿದ್ದುದನ್ನು ನೋಡಿದ ಗಾಂಧೀಜಿ ಆ ಮನೋಭಾವ ಹೋಗಬೇಕು. ಹೆಚ್ಚಿನ ಸಂಖ್ಯೆಯಲ್ಲಿ ದನಗಳನ್ನು ಸಾಕುವುದರಲ್ಲಿ ತಪ್ಪಿಲ್ಲ, ಆದರೆ ಸಾಕಿದ ದನಕರುಗಳನ್ನು ಚೆನ್ನಾಗಿ ನೋಡಿಕೊಳ್ಳಬೇಕು. ಅವುಗಳನ್ನು ಅಮಾನುಷವಾಗಿ ಕಾಣಬಾರದು. ದನಕರುಗಳಿಗೆ ಸೂಕ್ತ ಪ್ರಮಾಣದಲ್ಲಿ ಮೇವು ಮತ್ತು ಇತರ ಆರೈಕೆಗಳು ಇಲ್ಲವಾದಾಗ ಸರಾಸರಿ ಹಾಲು ಮತ್ತು ಹಾಲಿನ ಉತ್ಪನ್ನಗಳು ಕಡಿಮೆಯಾಗುತ್ತವೆ. ದನಕರುಗಳನ್ನು ಸಾಕಿಕೊಂಡವರು ಅವುಗಳ ಪೋಷಣೆಯಲ್ಲಿ ಉದಾಸೀನತೆ ತೋರುವುದು ಒಂದು ಅಪರಾಧ ಎಂದು ಗಾಂಧೀಜಿಯವರು ಹೇಳುತ್ತಿದ್ದರು.

ಗೋಹತ್ಯೆಯನ್ನು ಗಾಂಧೀಜಿ ಸ್ಪಷ್ಟವಾಗಿ ವಿರೋಧಿಸಿದರು. ಅದು ಎಷ್ಟೇ ಅಮೂಲ್ಯವಾಗಿರಲಿ, ಒಂದು ಹಸುವನ್ನು ರಕ್ಷಿಸಲು ಒಬ್ಬ ಮನುಷ್ಯನನ್ನು ಕೊಲ್ಲಲಾರೆ, ಅದೇ ರೀತಿ ಒಬ್ಬ ಮನುಷ್ಯನನ್ನು ರಕ್ಷಿಸಲು ಒಂದು ಹಸುವನ್ನು ಕೊಲ್ಲಲಾರೆ ಎಂದು ಗಾಂಧೀಜಿ ಹೇಳಿದ್ದಾರೆ. ಗೋರಕ್ಷಣೆಯು ರಾಷ್ಟ್ರದ ಗ್ರಾಮೀಣ ಪ್ರದೇಶದ ಅಭಿವೃದ್ಧಿಯಲ್ಲಿ ಬಹಳ ಮುಖ್ಯ ಪಾತ್ರವನ್ನು ವಹಿಸುವುದರಿಂದ ಜನರು ಇದರ ಮಹತ್ವವನ್ನು ಅರಿಯಬೇಕೆಂದು ಗಾಂಧೀಜಿ ಬಯಸಿದರು. ಭಾರತದ ಪುಣ್ಯ ಪುರಾಣ ಗ್ರಂಥಗಳಲ್ಲಿ ಗೋವಿಗೆ ನೀಡಿರುವ ಮಹತ್ವವನ್ನು ಗಾಂಧೀಜಿ ಚೆನ್ನಾಗಿ ಓದಿಕೊಂಡಿದ್ದರು. ಆ ಬಗ್ಗೆ ಅಲ್ಲಲ್ಲಿ ಸಮಯ ಬಂದಾಗ ಉದಾಹರಿಸುತ್ತಿದ್ದರು. ಶ್ರೀ ಕೃಷ್ಣ ಪರಮಾತ್ಮ ಗೋವುಗಳೊಂದಿಗೆ ಹೆಚ್ಚಿನ ಒಡನಾಟ ಹೊಂದಿದ್ದು, ಶಿವನ ವಾಹನ ನಂದಿಯಾಗಿರುವುದು ಇಂದ್ರನ ಬಳಿ ಕಾಮಧೇನು ಇದ್ದುದು ಗೋವುಗಳಿಗೆ ಪವಿತ್ರ ಗ್ರಂಥಗಳಲ್ಲಿ ಪ್ರಾಮುಖ್ಯತೆ ನೀಡಿರುವುದನ್ನು ತೋರಿಸುತ್ತದೆ. ದನಕರುಗಳು ಮಾನವ ಜನಾಂಗಕ್ಕೆ ಪೌಷ್ಠಿಕ ಪದಾರ್ಥವಾದ ಹಾಲು ಮತ್ತು ಕೃಷಿಗೆ ಬೇಕಾದ ಗೊಬ್ಬರ ಮುಂತಾದ ಪದಾರ್ಥಗಳನ್ನು ನೀಡುವಲ್ಲಿ ಉಪಯೋಗಕಾರಿ ಎಂಬುದನ್ನು ತೋರಿಸುತ್ತದೆ. ಆದುದರಿಂದ ಗೋರಕ್ಷಣೆಗೆ ಎಲ್ಲರೂ ಮುಂದಾಗಬೇಕು ಎಂದು ತಿಳಿಸಿ ಗೋರಕ್ಷಣೆಯು ಹಿಂದೂ ಧರ್ಮವು ಜಗತ್ತಿಗೆ ನೀಡಿರುವ ಶ್ರೇಷ್ಠವಾದ ಕೊಡುಗೆ ಎಂದು ಬಣ್ಣಿಸಿದ್ದಾರೆ.

ಗೋಮಾತೆಯು ಹೆತ್ತ ತಾಯಿಗಿಂತಲೂ ಅನೇಕ ದೃಷ್ಟಿಯಿಂದ ಹೆಚ್ಚು ಎಂದೂ ಗಾಂಧೀಜಿ ಪ್ರತಿಪಾದನೆ ಮಾಡಿದ್ದಾರೆ. ಏಕೆಂದರೆ ಹೆತ್ತ ತಾಯಿಯು ನಮಗೆ ಕೆಲವು ವರ್ಷ ಎದೆ ಹಾಲು ನೀಡುತ್ತಾಳೆ. ನಾವು ಬೆಳೆದ ಮೇಲೆ ನಮ್ಮಿಂದ ಸೇವೆಯನ್ನು ಬಯಸುತ್ತಾಳೆ. ಆದರೆ ಗೋಮಾತೆ ನಮ್ಮಿಂದ ಏನು ನಿರೀಕ್ಷಿಸುತ್ತಾಳೆ ಎಂದರೆ ಹುಲ್ಲು ಮತ್ತು ಬೂಸಾವನ್ನು. ಇಲ್ಲಿ ಗಾಂಧೀಜಿ ಗೋಮಾತೆಯನ್ನು ಹೆತ್ತ ತಾಯಿಯಷ್ಟೇ ಪೂಜ್ಯ ಭಾವನೆಯಿಂದ ನೋಡುತ್ತಾರೆ ಎಂಬುದನ್ನು ನಾವು ಅರಿಯಬೇಕು.

ದೇಶದಲ್ಲಿ ತಾಂತ್ರಿಕವಾಗಿ ಎಷ್ಟೇ ಪ್ರಗತಿ ಸಾಧಿಸಿದರೂ ದನಕರುಗಳು ತಮ್ಮದೇ ಪಾತ್ರವನ್ನು ರಾಷ್ಟ್ರದ ಜನತೆಯ ಅಭಿವೃದ್ಧಿಯಲ್ಲಿ ವಹಿಸುತ್ತವೆ. ಎಲ್ಲರೂ ಟ್ರಾಕ್ಟರ್‌ಗಳನ್ನು ಕೊಳ್ಳಲು ಭಾರತದಂತಹ ರಾಷ್ಟ್ರದಲ್ಲಿ ಇನ್ನೂ ಎಷ್ಟು ವರ್ಷಗಳು ಬೇಕೋ, ಜಮೀನನ್ನು ಉಳಲು, ಬೀಜ ಗೊಬ್ಬರಗಳನ್ನು, ಕೃಷಿ ಉತ್ಪನ್ನಗಳನ್ನು ಸಾಗಾಣಿಕೆ ಮಾಡುವಲ್ಲಿ ದನಕರುಗಳು ನಮಗೆ ಬಹಳ ಪ್ರಯೋಜನಕಾರಿ. ಉತ್ಕೃಷ್ಟವಾದ ಕೊಟ್ಟಿಗೆ ಗೊಬ್ಬರ ಒದಗಿಸಿ ಸಮೃದ್ಧ ಬೆಳೆ ಬೆಳೆಯಲು ದನಕರುಗಳು ಸಹಾಯ ಮಾಡುತ್ತವೆ. ಅವು ಗ್ರಾಮೀಣ ಜನರ ಅಪೌಷ್ಠಿಕತೆಯ ಸಮಸ್ಯೆ ನಿವಾರಣೆ ಮಾಡಿ ಹಾಲು, ಮೊಸರು, ಬೆಣ್ಣೆ, ತುಪ್ಪದಂತಹ ಪೌಷ್ಠಿಕ ಹಾಗೂ ರುಚಿಕರ ಪದಾರ್ಥಗಳನ್ನು ತಮ್ಮನ್ನು ಸಾಕುವ ರೈತರಿಗೆ ಕೊಡುತ್ತವೆ. ಇಂದು ಜನರ ಸ್ಥಿತಿಗತಿಗಳನ್ನು ಸುಧಾರಿಸಲು ಸಾಕಷ್ಟು ಪ್ರಮಾಣದಲ್ಲಿ ಹಾಲು ನೀಡುವ ಉತ್ಪಾದನಕಾರೀ ದನಕರುಗಳು ಬೇಕೇ ಹೊರತು ಹೆಚ್ಚಿನ ಸಂಖ್ಯೆಯಲ್ಲಿರುವ ಅನುತ್ಪಾದಕ ದನಕರುಗಳಲ್ಲ. ಉತ್ಪಾದಕ ದನಕರುಗಳನ್ನು ಹೊಂದಿದ್ದರೆ ಭೀಕರ ಕ್ಷಾಮವನ್ನು ಎದುರಿಸಲು ಸಾಧ್ಯವಾಗುತ್ತದೆ ಎಂದು ಗಾಂಧೀಜಿ ಭಾವಿಸಿದ್ದರು.

## ಸಹಕಾರ ಪದ್ಧತಿ :

ಸಹಕಾರೀ ತತ್ವದಲ್ಲಿ ಗಾಂಧೀಜಿಯವರಿಗೆ ಅಪಾರವಾದ ನಂಬಿಕೆಯಿತ್ತು. ಕೃಷಿ, ಗ್ರಾಮೀಣಾಭಿವೃದ್ಧಿ, ಪಶುಸಂಗೋಪನೆ ಮುಂತಾದ ಕ್ಷೇತ್ರಗಳಲ್ಲಿ ಸಹಕಾರ ತತ್ವವನ್ನು ಅಳವಡಿಸಲು ಅವರು ಕರೆ ನೀಡಿದರು. ಜನರು ಪರಸ್ಪರ ಸಹಕಾರ ಮನೋಭಾವದಿಂದ ಬಾಳಬೇಕು ಮತ್ತು ಸಹಕಾರ ತತ್ವದ ಮೂಲಕ ಎಲ್ಲರ ಅಭ್ಯುದಯಕ್ಕಾಗಿ ಕಾರ್ಯನಿರ್ವಹಿಸಬೇಕು ಎನ್ನುತ್ತಿದ್ದರು. ಆರ್ಥಿಕ ಸಮಾನತೆಯನ್ನು

ಹಾಗೂ ಎಲ್ಲರ ಒಳಿತನ್ನು ಸಾಧಿಸಲು ಸಹಕಾರ ತತ್ವ ಬಹಳ ಒಳ್ಳೆಯ ಸಾಧನ ಎಂದು ಗಾಂಧೀಜಿ ಭಾವಿಸಿದ್ದರು. ಯಾವುದು ಒಳ್ಳೆಯದು ಎಂದು ಗಾಂಧೀಜಿ ಭಾವಿಸಿದ್ದರೋ ಅದಕ್ಕೆ ತಮ್ಮ ಸಂಪೂರ್ಣ ಸಹಕಾರ ನೀಡುತ್ತಾ ಬಂದರು. ಯಾವುದು ಕೆಟ್ಟದೆಂದು ಭಾವಿಸಿದರೋ ಅದಕ್ಕೆ ತಮ್ಮ ಸಾತ್ವಿಕ ವಿರೋಧ ವ್ಯಕ್ತಪಡಿಸಿದರು.

ಕೃಷಿ ಮತ್ತು ಪಶು ಸಂಗೋಪನೆ ಕ್ಷೇತ್ರದಲ್ಲಿ ಸಹಕಾರ ತತ್ವವನ್ನು ಅಗತ್ಯವಾಗಿ ಅನುಸರಿಸಬೇಕು. ಇದು ರಾಷ್ಟ್ರದ ಹಿತವನ್ನು ಕಾಪಾಡುತ್ತದೆ ಎಂದು ತಿಳಿಸಿವರು. ರೈತರು ಭೂಮಿಯನ್ನು ಸಹಕಾರ ತತ್ವದ ಆಧಾರದ ಮೇಲೆ ಹೊಂದಿರಬೇಕು. ಸಹಕಾರ ತತ್ವದ ಆಧಾರದ ಮೇಲೆ ವ್ಯವಸಾಯ ಮಾಡಬೇಕು. ಸಹಕಾರ ತತ್ವದ ಆಧಾರದ ಮೇಲೆ ವ್ಯವಸಾಯ ಮಾಡುವುದರಿಂದ ಶ್ರಮ, ಬಂಡವಾಳ, ಸಲಕರಣೆ ವೆಚ್ಚಗಳು ಮತ್ತು ಇತರ ಮೇಲಿನ ವೆಚ್ಚಗಳ ಉಳಿತಾಯವನ್ನು ಸಾಧಿಸಬಹುದು. ಭೂಮಿಯ ಮಾಲೀಕರು ಸಹಕಾರದಿಂದ ಕೆಲಸ ಮಾಡಬೇಕು ಮತ್ತು ಬಂಡವಾಳ, ಕೃಷಿಸಲಕರಣೆಗಳು, ಬೀಜಗಳು ಮತ್ತು ದನಕರುಗಳ ಸಹಕಾರದ ತತ್ವದ ಆಧಾರದ ಮೇಲೆ ಮಾಲೀಕತ್ವವನ್ನು ಹೊಂದಿರಬೇಕು. ಪ್ರಾಮಾಣಿಕತೆ ಮತ್ತು ನಿಷ್ಠೆಯಿಂದ ವ್ಯವಸಾಯವನ್ನು ರೈತರು ಸಹಕಾರಿ ತತ್ವದ ಆಧಾರದ ಮೇಲೆ ಮಾಡಿದರೆ ಬಡತನವನ್ನು ದೇಶದಿಂದ ಓಡಿಸಬಹುದು ಮತ್ತು ಜನರಲ್ಲಿ ಮೈಗೂಡಿರುವ ಜಡತ್ವವನ್ನು ಇಲ್ಲವಾಗಿಸಬಹುದು ಎಂದು ಗಾಂಧೀಜಿ ಹೇಳುತ್ತಿದ್ದರು. ಸಹಕಾರಿ ಕೃಷಿ ಯಶಸ್ವಿಯಾಗಬೇಕಾದರೆ ಜನರು ಪರಸ್ಪರ ಪ್ರೀತಿ ವಿಶ್ವಾಸದಿಂದ ಪ್ರಾಮಾಣಿಕತೆಯಿಂದ ಕೆಲಸ ಮಾಡಬೇಕು. ಸಹಕಾರೀ ವ್ಯವಸಾಯವೆಂದರೆ ಸಹಕಾರೀ ಜಂಟೀ ವ್ಯವಸಾಯವೆಂದು ಅದನ್ನು ಕರೆಯಬಹುದು.

ರೈತರು ಶ್ರೀಮಂತರಿಂದ ಸಾಲ ಪಡೆಯಲು ಪಡುತ್ತಿದ್ದ ಕಷ್ಟವನ್ನು, ಸಾಲದಿಂದ ಅನೇಕ ರೈತ ಕುಟುಂಬಗಳು ನಾಶವಾಗಿದ್ದನ್ನು ಗಾಂಧೀಜಿ ಕಣ್ಣಾರೆ ಕಂಡರು. ಈ ಸಾಲ ಪದ್ಧತಿಯನ್ನು ಸುಂದರ ಪ್ರಪಂಚವನ್ನು ಸರ್ಪವು ಸುತ್ತಿ ಹಿಡಿದು ಉಸಿರು ಕಟ್ಟಿ ಸಾಯುವಂತೆ ಮಾಡುವ ದಾರುಣ ಸ್ಥಿತಿಗೆ ಹೋಲಿಸಿದ್ದಾರೆ ಗಾಂಧೀಜಿ. ರೈತರ ಸಾಲದ ಈ ಸಮಸ್ಯೆ ನಿವಾರಿಸಲು ರೈತರಿಗೆ ಸಹಕಾರಿ ಮಾದರಿ ಸಂಸ್ಥೆಗಳ ಮೂಲಕ ಸುಲಭ ಸಾಲ ಸೌಲಭ್ಯ ಒದಗಿಸಿಕೊಡುವ ಬಗ್ಗೆ ಗಾಂಧೀಜಿ ಸಲಹೆ ನೀಡಿದರು. ಸಹಕಾರಿ ಸಂಸ್ಥೆಗಳ ಮೂಲಕ ಸಾಲ ಪಡೆದ ರೈತರು ಅದನ್ನು ಸದ್ಬಳಕೆ ಮಾಡಬೇಕು. ಅತ್ಯಂತ ಪ್ರಾಮಾಣಿಕತೆಯಿಂದ ಸಾಲವನ್ನು ಸಹಕಾರಿ ಸಂಸ್ಥೆಗಳಿಗೆ ವಾಪಸ್ಸು ನೀಡಬೇಕು. ಇದರಿಂದ ರಾಷ್ಟ್ರದಲ್ಲಿ ನೈತಿಕತೆ ಬೆಳೆಯುತ್ತದೆ. ಸಹಕಾರೀ ಸಂಸ್ಥೆಗಳು ಯಶಸ್ಸು ಕಾಣುತ್ತವೆ. ಪಡೆದ ಸಾಲವನ್ನು ರೈತರು ಸದ್ಬಳಕೆ ಮಾಡಿಕೊಳ್ಳುತ್ತಿದ್ದಾರೋ ಅಥವಾ ಜೂಜು ಆಡುವುದಕ್ಕೆ, ಕುಡಿಯುವುದಕ್ಕೆ ಉಪಯೋಗಿಸುತ್ತಿದ್ದಾರೋ ಎಂಬುದನ್ನು ಸಹಕಾರೀ ಸಂಸ್ಥೆಗಳ ನಿರ್ವಾಹಕರು ನಿಗಾ ಇಟ್ಟು ಗಮನಿಸಬೇಕು ಮತ್ತು ಸಾಲ ಸದ್ಬಳಕೆ ಆಗುವಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕು. ಆಗ ಮಾತ್ರ ಸಹಕಾರೀ ಸಂಸ್ಥೆಗಳು ಯಶಸ್ಸು ಕಾಣುತ್ತವೆ, ರೈತರ ಯೋಗಕ್ಷೇಮವೂ ವೃದ್ಧಿಯಾಗುತ್ತದೆ ಎಂದು ಗಾಂಧೀಜಿ ತಿಳಿಸಿದರು. ವ್ಯವಸಾಯ ಮತ್ತು ಪಶುಸಂಗೋಪನೆ ರೈತರ ಆರ್ಥಿಕ ಶಕ್ತಿಯನ್ನು ಹೆಚ್ಚಿಸಲು ಪರಸ್ಪರ ಸಹಕಾರಿಯಾಗಿವೆ. ಪಶುಸಂಗೋಪನೆಯನ್ನು ಸಹ ಸಹಕಾರೀ ತತ್ವದ ಆಧಾರದ ಮೇಲೆ ಅನುಸರಿಸಿದರೆ ರೈತರಿಗೆ ಬಹಳ ಸಹಾಯವಾಗುತ್ತದೆ. ಪಶು ಸಂಗೋಪನೆಯಿಂದ ರೈತರಿಗೆ ಪೌಷ್ಟಿಕವಾದ ಹಾಲು ಮತ್ತು ಹಾಲಿನ ಉತ್ಪನ್ನಗಳು ದೊರೆಯುತ್ತವೆ. ಬೆಳೆಗಳಿಗೆ ಬೇಕಾದ ಗೊಬ್ಬರ ದೊರೆಯುತ್ತದೆ. ಉಳಲು ಎತ್ತುಗಳು ದೊರೆಯುತ್ತವೆ ಹೈನುಗಾರಿಕೆಯನ್ನು ಕುಟುಂಬಕ್ಕೆ ಆದಾಯ ತರುವ ಸಹ ಕಸುಬನ್ನಾಗಿ ಮಾಡಿಕೊಳ್ಳಬಹುದು ಎಂದು ತಿಳಿಸಿದ್ದಾರೆ. ಪಶುಸಂಗೋಪನೆ ಅಭಿವೃದ್ಧಿ ಪಡಿಸಲು ಸಾಕಷ್ಟು ಗಮನ ನೀಡಬೇಕು. ಉತ್ತಮ ತಳಿಯ ದನಕರುಗಳನ್ನು ಸಾಕಿ ಬೆಳೆಸಿಕೊಳ್ಳಬೇಕು. ಅವುಗಳಿಗೆ ಸೂಕ್ತವಾದ ಕೊಟ್ಟಿಗೆಗಳನ್ನು ಕಟ್ಟಬೇಕು, ಶುದ್ಧವಾದ ಪರಿಸರದಲ್ಲಿ ಓಡಾಡಲು ಅವಕಾಶವಿರಬೇಕು, ವಿಸ್ತಾರವಾದ ಗೋಮಾಳಗಳಿರಬೇಕು. ಬರೀ ಹೆಚ್ಚು ಸಂಖ್ಯೆಯಲ್ಲಿ ದನಕರುಗಳನ್ನು ಕಟ್ಟಿಕೊಳ್ಳುವುದರಿಂದ ಪ್ರಯೋಜನವಿಲ್ಲ. ಅವುಗಳನ್ನು ಸರಿಯಾಗಿ ಪೋಷಣೆ ಮಾಡಬೇಕು. ಅವುಗಳಿಗೆ ಸಕಾಲದಲ್ಲಿ ಅವಶ್ಯಕವಾದ ಪ್ರಮಾಣದಲ್ಲಿ ಮೇವು ನೀರು ಕೊಡಬೇಕು. ದನ ಕರುಗಳನ್ನು ಅಮಾನುಷವಾದ ರೀತಿಯಲ್ಲಿ ಹಿಂಸಿಸುವುದು, ದನಕರುಗಳನ್ನು ಕಟುಕರಿಗೆ ಮಾರುವುದನ್ನು ನೋಡಿ ಗಾಂಧೀಜಿ ವ್ಯಸನಪಟ್ಟರು. ಕೃಷಿಯಲ್ಲಿ ಏನೇ ಅಭಿವೃದ್ಧಿಯಾಗಲೀ, ಯಾವುದೇ ಆಧುನಿಕ ತಂತ್ರಜ್ಞಾನ ಅನುಸರಿಸಲಿ, ದನಕರುಗಳು ರೈತರಿಗೆ ಯಾವಾಗಲೂ ಅತ್ಯಂತ ಪ್ರಯೋಜನಕಾರಿ ಎಂದು ಜನ ಅರಿಯಬೇಕು ಎಂದು ಗಾಂಧೀಜಿ ಆಶಿಸಿದರು. ದನ ಕರುಗಳನ್ನು ಕುಟುಂಬ ಮಟ್ಟದಲ್ಲಿ ಸಾಕುವುದು ನಾನಾ ರೀತಿಯ ಅನಾನುಕೂಲಗಳನ್ನು ಉಂಟುಮಾಡುತ್ತದೆ. ದನಕರುಗಳನ್ನು ನಾವು ವಾಸಿಸುವ ಸ್ಥಳದಲ್ಲಿ ಕಟ್ಟಿಕೊಳ್ಳುವುದನ್ನು ಗಾಂಧೀಜಿ ಸರಿಯಲ್ಲವೆಂದರು. ಜನಗಳಿಗೂ, ದನಗಳಿಗೂ ಶುದ್ಧವಾದ ಗಾಳಿ ಬೇಕು.

ದನಕರುಗಳನ್ನು ಮನೆಯಲ್ಲಿಯೇ ಕಟ್ಟಿಕೊಳ್ಳುವುದರಿಂದ ಸ್ಥಳದ ಅಭಾವ ಉಂಟಾಗುತ್ತದೆ. ಗಂಜಲ ಸಗಣಿಯಿಂದ ಮನೆಯ ಸುತ್ತ ಮಲಿನ ಗಾಳಿ ನಿರ್ಮಾಣವಾಗುತ್ತದೆ. ಸ್ಥಳ ಅಶುದ್ದವಾಗುತ್ತದೆ. ದನಕರುಗಳ ನಿರ್ವಹಣೆಯೂ ವೈಯಕ್ತಿಕ ಮಟ್ಟದಲ್ಲಿ ನೋಡಿಕೊಳ್ಳುವುದಾದರೆ ಆರ್ಥಿಕವಾಗಿ ದುಬಾರಿಯಾಗಿ ಸಿಗುವ ಪ್ರಯೋಜನ ಕಡಿಮೆಯಾಗುತ್ತದೆ. ಎಲ್ಲಾ ದೃಷ್ಟಿಯಿಂದಲೂ ದನಕರುಗಳ ಸಾಕಾಣಿಕೆಯನ್ನು ಸಹಕಾರಿ ಪದ್ಧತಿಗೆ ಒಳಪಡಿಸುವುದರ ಬಗ್ಗೆ ಗಾಂಧೀಜಿ ದೃಢ ನಿಲುವು ಹೊಂದಿದ್ದರು.

ಪಶು ಸಂಗೋಪನೆಯನ್ನು ಸಹಕಾರೀ ತತ್ವದ ಮೇಲೆ ಕೈಗೊಳ್ಳುವುದರಿಂದ ದೊರೆಯುವ ಪ್ರಯೋಜನಗಳನ್ನು ಈ ರೀತಿ ಪಟ್ಟಿ ಮಾಡಬಹುದು.

೧. ಸಹಕಾರೀ ಪಶು ಸಂಗೋಪನಾ ವಿಧಾನದಲ್ಲಿ ರೈತರು ದನಕರುಗಳನ್ನು ತಮ್ಮ ಮನೆಯ ಮುಂದೆ ಅಥವಾ ಹಿಂದೆ ಕಟ್ಟಿಕೊಳ್ಳುವಂತಿಲ್ಲ. ಕಟ್ಟಿಕೊಂಡರೆ ಮನೆಯ ಬಳಿ ವಾಯು ಮಾಲಿನ್ಯ ಸಮಸ್ಯೆ ಉದ್ಭವವಾಗುತ್ತದೆ. ಸುತ್ತಮುತ್ತಲ ವಾತಾವರಣ ಅಶುದ್ಧವಾಗುತ್ತದೆ. ದನಕರುಗಳನ್ನು ಸಹಕಾರೀ ತತ್ವದ ಆಧಾರದ ಮೇಲೆ ಸಾಕುವಂತಾದರೆ ಅವುಗಳಿಗೆ ವಿಶೇಷವಾದ ಸ್ಥಳದಲ್ಲಿ ಕಟ್ಟಲು ವ್ಯವಸ್ಥೆ ಮಾಡಲಾಗುತ್ತದೆ. ಇದರಿಂದ ರೈತರ ಮನೆಯಲ್ಲಿ ಸಾಕಷ್ಟು ಸ್ಥಳ ಮತ್ತು ಶ್ರಮದ ಉಳಿತಾಯವಾಗುತ್ತದೆ.

೨. ವೈಯಕ್ತಿಕ ಮಟ್ಟದಲ್ಲಿ ದನಕರುಗಳನ್ನು ಸಾಕುವಾಗ ಅವುಗಳ ಸಂಖ್ಯೆ ಹೆಚ್ಚುತ್ತಾ ಹೋಗುತ್ತದೆ. ಇವುಗಳ ನಿರ್ವಹಣೆ ಕಷ್ಟವಾಗುತ್ತದೆ, ಮನೆಯಲ್ಲಿ ಇವುಗಳನ್ನು ಕಟ್ಟಲು ಸ್ಥಳದ ಅಭಾವ ಉಂಟಾಗತ್ತದೆ. ಇದರಿಂದ ಅನೇಕ ಕರುಗಳನ್ನು ಮಾರಬೇಕಾಗುತ್ತದೆ. ಗಂಡು ಕರುಗಳನ್ನು ಕೆಲವರು ಅಮಾನುಷವಾಗಿ ಕೊಲ್ಲಿಸುವ ವ್ಯವಸ್ಥೆ ಕಣ್ಣಾರೆ ನೋಡಿ ಗಾಂಧೀಜಿ ನೊಂದರು. ಈ ರೀತಿಯ ಅಮಾನುಷ ಸಮಸ್ಯೆಯನ್ನು ಸಹಕಾರಿ ಸಂಗೋಪನಾ ಪದ್ಧತಿಯಲ್ಲಿ ನಿವಾರಿಸಬಹುದು.

೩. ಸಹಕಾರೀ ಪದ್ಧತಿಯಲ್ಲಿ ದನಕರುಗಳಿಗೆ ವೈದ್ಯಕೀಯ ಚಿಕಿತ್ಸೆಯನ್ನು ಸೂಕ್ತ ರೀತಿಯಲ್ಲಿ ಒದಗಿಸುವ ವ್ಯವಸ್ಥೆ ಮಾಡುವುದು ಸುಲಭ ಸಾಧ್ಯವಾಗುತ್ತದೆ. ವೈಯಕ್ತಿಕ ಮಟ್ಟದಲ್ಲಿ ಸೂಕ್ತ ವೈದ್ಯಕೀಯ ಚಿಕಿತ್ಸೆ ಕಷ್ಟವಾಗುತ್ತದೆ ಮತ್ತು ದುಬಾರಿಯಾಗುತ್ತದೆ.

೪. ಸಹಕಾರೀ ಪದ್ದತಿಯಲ್ಲಿ ದನಗಳನ್ನು ಮೇಯಿಸಲು ಒಂದು ದೊಡ್ಡ ಪ್ರಮಾಣದ ಗೋಮಾಳವನ್ನು ಹೊಂದಲು ಸುಲಭವಾಗುತ್ತದೆ.

೫. ಸಹಕಾರೀ ಪದ್ಧತಿಯಲ್ಲಿ ಮೇವಿನ ವೆಚ್ಚವನ್ನು ಗಣನೀಯ ಪ್ರಮಾಣದಲ್ಲಿ ಕಡಿಮೆ ಮಾಡಬಹುದು.

೬. ಈ ಪದ್ಧತಿಯಲ್ಲಿ ಹಾಲು ಮತ್ತು ಹಾಲಿನ ಉತ್ಪನ್ನಗಳನ್ನು ಲಾಭದಾಯಕ ಬೆಲೆಯಲ್ಲಿ ಮಾರಾಟ ಮಾಡಲು ಅನುಕೂಲವಾಗುತ್ತದೆ. ಹಾಲಿಗೆ ನೀರು ಬೆರೆಸುವ ಮೋಸದ ಪದ್ದತಿಗೆ ಇಲ್ಲಿ ಅವಕಾಶವಿಲ್ಲ.

೭. ಮಾರಾಟ ಮಾಡುವ ಸನ್ನಿವೇಶದಲ್ಲಿ ಪ್ರತಿಯೊಂದು ಪ್ರಾಣಿಯನ್ನೂ ಪರೀಕ್ಷೆ ಮಾಡುವ ಅವಶ್ಯಕತೆ ಇಲ್ಲಿರುವುದಿಲ್ಲ. ಇಲ್ಲಿ ಸಾಮೂಹಿಕವಾಗಿ ಒಳ್ಳೆಯ ತಳಿಯನ್ನು ಅಭಿವೃದ್ಧಿಪಡಿಸಲಾಗುತ್ತದೆ.

೮. ವೈಯಕ್ತಿಕ ಮಟ್ಟದಲ್ಲಿ ವಂಶಾಭಿವೃದ್ಧಿಗಾಗಿ ಗೂಳಿ ಮತ್ತು ಕೋಣಗಳನ್ನು ಸಾಕಬೇಕಾಗುತ್ತದೆ. ಸಾಕಷ್ಟು ಆದಾಯ ತರದ ಇವುಗಳಿಗೆ ಹೆಚ್ಚು ವೆಚ್ಚವನ್ನು ಮಾಡಬೇಕಾಗುತ್ತದೆ. ಆದರೆ ಸಹಕಾರ ಪದ್ದತಿಯಲ್ಲಿ ಒಂದು ಗೂಳಿ/ಕೋಣವನ್ನು ಸಾಕಿದರೆ ಸಾಮೂಹಿಕವಾಗಿ ವಂಶಾಭಿವೃದ್ಧಿಗೆ ಸಾಕಾಗುತ್ತದೆ.

ಗಾಂಧೀಜಿ ದೃಷ್ಟಿಯಲ್ಲಿ ಸಹಕಾರೀ ತತ್ವ ಯಶಸ್ವಿಯಾಗಬೇಕಾದರೆ ಈ ಕೆಳಗಿನ ಅಂಶಗಳನ್ನು ಪ್ರತಿಯೊಬ್ಬರೂ ನಿಷ್ಠೆಯಿಂದ ಅನುಸರಿಸಬೇಕಾಗುತ್ತದೆ.

೧. ಸಹಕಾರೀ ಪದ್ಧತಿಯು ಪರಸ್ಪರ ಪ್ರೀತಿ, ವಿಶ್ವಾಸ, ಸತ್ಯ, ಅಹಿಂಸೆ, ಪ್ರಾಮಾಣಿಕತೆ, ಶ್ರದ್ಧೆ ಮತ್ತು ಕಷ್ಟ ಸಹಿಷ್ಣುತೆಗಳ ಆಧಾರದ ಮೇಲೆ ರೂಪಿತವಾಗಿಬೇಕು.

೨. ಸಹಕಾರೀ ಪದ್ಧತಿಯು ಸ್ವಯಂ ಸ್ಫೂರ್ತಿಯಿಂದ ಬರಬೇಕು. ಸಹಕಾರಿ ಪದ್ಧತಿಗೆ ಸೇರುವಂತೆ ಯಾರನ್ನೂ ಒತ್ತಾಯಿಸಬಾರದು. ಸಹಕಾರೀ ವಿಧಾನದ ಪ್ರಯೋಜನಗಳನ್ನು ಜನರಿಗೆ ಮನಮುಟ್ಟುವಂತೆ ತಿಳಿಸಿ ಸಾರ್ವಜನಿಕ ಅಭಿಪ್ರಾಯವನ್ನು ಈ ಪದ್ಧತಿಯ ಪರವಾಗಿ ರೂಪಿಸಬೇಕು.

೩. "ತನಗಾಗಿ ಎಲ್ಲರೂ, ಎಲ್ಲರಿಗಾಗಿ ತಾನು" ಎಂಬ ತತ್ವದ ತಳಹದಿಯ ಮೇಲೆ ಸಹಕಾರೀ ಸಂಸ್ಥೆ ರೂಪಿತವಾಗಬೇಕು. ಈ ಪದ್ಧತಿಯಲ್ಲಿ ಎಲ್ಲರೂ ಸಮಾನರು, ಎಲ್ಲರಿಗೂ ಸಾಕಷ್ಟು ಸ್ವಾತಂತ್ರ್ಯವಿರಬೇಕು, ಇಲ್ಲಿ ಯಾರೂ ಯಜಮಾನರಲ್ಲ ಮತ್ತು ಯಾರೂ ಸೇವಕರಲ್ಲ. ಇಲ್ಲಿ ತಮ್ಮ ಅಭಿಪ್ರಾಯಗಳನ್ನು ಯಾರ ಮೇಲೂ ಹೇರುವಂತಿಲ್ಲ. ವೈಯಕ್ತಿಕ ಅಭಿಪ್ರಾಯಗಳು ಎಲ್ಲರಿಗೂ ಅನುಕೂಲವಾಗಿರುವಂತಿರಬೇಕು.

೪. ಸಹಕಾರೀ ವಿಧಾನವು ಪಾಶ್ಚಾತ್ಯ ಅಥವಾ ಬೇರೆ ದೇಶಗಳ ವಿಧಿ ವಿಧಾನಗಳ ಪಡಿಯಚ್ಚು ಆಗಬಾರದು. ಏಕೆಂದರೆ ಅಲ್ಲಿನ ಸ್ಥಿತಿಗತಿಗಳ ಆಧಾರದ ಮೇಲೆ ಸಹಕಾರಿ ವಿಧಾನ ಅಲ್ಲಿನವರಿಗೆ ಅನುಕೂಲವಾಗುವ ರೀತಿಯಲ್ಲಿ ರೂಪಿತವಾಗಿರುತ್ತದೆ. ಸ್ಥಳೀಯ ಜನರ ಅನುಕೂಲಗಳಿಗೆ ತಕ್ಕ ರೀತಿಯಲ್ಲಿ ಸಹಕಾರಿ ಸಂಸ್ಥೆಗಳು ರೂಪಿತವಾಗಬೇಕು ; ಇಲ್ಲದೆ ಹೋದಲ್ಲಿ ಸಹಕಾರೀ ಸಂಸ್ಥೆಗಳು ಯಶಸ್ವಿಯಾಗಲು ಕಷ್ಟವಾಗುತ್ತದೆ.

೫. ಸಹಕಾರೀ ಸಂಸ್ಥೆಯಲ್ಲಿ ಪ್ರತಿಯೊಬ್ಬರೂ ಪ್ರಾಮಾಣಿಕರಾಗಿರಬೇಕು, ಈ ತತ್ವದಲ್ಲಿ ಅಚಲ ನಿಷ್ಠೆ ಹೊಂದಿರಬೇಕು.

೬. ಸಹಕಾರೀ ಸಂಸ್ಥೆಯು ಪ್ರಗತಿಪರ ಗುರಿಯನ್ನು ಹೊಂದಿರಬೇಕು.

೭. ಸಹಕಾರೀ ಸಂಸ್ಥೆಯಲ್ಲಿ ಕೆಲಸ ಮಾಡುವ ಅಧಿಕಾರಿಗಳು ಪ್ರಾಮಾಣಿಕರಾಗಿರಬೇಕು, ಸೇವಾ ಮನೋಭಾವ ಹೊಂದಿರಬೇಕು, ತಮ್ಮ ಕರ್ತವ್ಯಗಳ ಬಗ್ಗೆ ಸಾಕಷ್ಟು ಪ್ರಮಾಣದ ಪರಿಣಿತಿಯಿರಬೇಕು. ಜನರಿಗೆ ಸಹಕಾರ ತತ್ವದ ಬಗ್ಗೆ ಮಾರ್ಗದರ್ಶನ ನೀಡುವ ಸಾಮರ್ಥ್ಯ ಹೊಂದಿರಬೇಕು.

ಗಾಂಧೀಜಿ ಅಹಿಂಸಾ ತತ್ವದಲ್ಲಿ ಅಚಲ ನಂಬಿಕೆ ಇಟ್ಟುಕೊಂಡವರಾಗಿದ್ದರು ಆದರೆ ಅಹಿಂಸೆಯನ್ನು ಪೂರ್ಣ ಪ್ರಮಾಣದಲ್ಲಿ ಅನುಸರಿಸಲು ಎಲ್ಲರಿಗೂ ಸಾಧ್ಯವಿಲ್ಲ ಎಂಬ ಅರಿವು ಅವರಿಗಿತ್ತು. ಮಾಂಸ, ಮೊಟ್ಟೆಗಳನ್ನು ಪೂರೈಸುವ ದೃಷ್ಟಿಯಿಂದ ಕೋಳಿ ಸಾಕಾಣಿಕೆ, ಕುರಿ ಸಾಕಾಣಿಕೆ, ಮೀನುಗಾರಿಕೆಯನ್ನು ಗಾಂಧೀಜಿ ವಿರೋಧಿಸಲಿಲ್ಲ. ಇವು ರೈತರಿಗೆ, ಜನರಿಗೆ ಉದ್ಯೋಗಾವಕಾಶಗಳನ್ನು ದೊರಕಿಸಿಕೊಡುವ ಕೆಲಸಗಳಾಗಿವೆ. ಆದುದರಿಂದ ಇವುಗಳನ್ನೂ ಸಹ ಕೃಷಿ ಮತ್ತು ಪಶುಸಂಗೋಪನೆಯಂತೆ ಸಹಕಾರ ಪದ್ಧತಿಯಲ್ಲಿ ಕೈಗೊಳ್ಳಲು ಗಾಂಧೀ ವಿಚಾರಧಾರೆಯಲ್ಲಿ ಅವಕಾಶವಿದೆ.

ಇತರ ರಾಷ್ಟ್ರಗಳ ಸಹಕಾರ ಪದ್ಧತಿಯು ಜನರ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಲು, ಅವರ ಯೋಗಕ್ಷೇಮವನ್ನು ವೃದ್ಧಿಸಲು ಬಹಳ ಸಹಕಾರಿಯಾಗಿದೆ. ಹೊಸ ಆರ್ಥಿಕ ನೀತಿಯು ಅಪಾಯಗಳಿಂದ ಜನರನ್ನು ರಕ್ಷಿಸುವಲ್ಲಿ ಸಹಕಾರ ವಿಧಾನವು ತನ್ನದೇ ಆದ ಅನುಕೂಲತೆಗಳನ್ನು ಹೊಂದಿದ್ದು, ಜನರು ಈ ಅನುಕೂಲಗಳನ್ನು ಬಳಸಿಕೊಳ್ಳಬೇಕಾಗಿದೆ. ಸಹಕಾರ ಪದ್ಧತಿ ಯಶಸ್ವಿಯಾಗಬೇಕಾದರೆ ಈ ಮೊದಲೇ ತಿಳಿಸಿದಂತೆ ಇದರಲ್ಲಿ ಪಾಲುಗೊಂಡ ಎಲ್ಲರೂ ಜವಾಬ್ದಾರಿಯಿಂದ, ಪ್ರಾಮಾಣಿಕತೆಯಿಂದ, ಶ್ರದ್ಧೆಯಿಂದ, ಶ್ರಮವಹಿಸಿ ಕೆಲಸ ಮಾಡಬೇಕಾಗುತ್ತದೆ. ಗಾಂಧೀಜಿ ಪ್ರತಿಪಾದಿಸಿದ ವಿಧಿ ವಿಧಾನಗಳನ್ನು ಪಾಲಿಸಿದರೆ ಸಹಕಾರ ವಿಧಾನವು ಯಶಸ್ವಿಯಾಗುವುದರಲ್ಲಿ ಸಂದೇಹವಿಲ್ಲ.

## ಮೀನುಗಾರಿಕೆ :

ಗ್ರಾಮೀಣ ಜನರ ಸ್ಥಿತಿಗತಿಗಳು ಸುಧಾರಣೆಯಾಗಬೇಕಾದರೆ, ಅವರಿಗೆ ಕೈತುಂಬಾ ಕೆಲಸ ದೊರೆತು ಸಾಕಷ್ಟು ಆದಾಯ ದೊರಕಬೇಕಾದರೆ ಕೃಷಿ, ಪಶುಸಂಗೋಪನೆ ಜೊತೆ ಮೀನುಗಾರಿಕೆಯ ಉದ್ಯೋಗಗಳನ್ನು ಕೈಗೊಂಡರೆ ಗ್ರಾಮೀಣ ಜನರಿಗೆ ಸಾಕಷ್ಟು ಆದಾಯ ದೊರೆತಂತೆ ಆಗುತ್ತದೆ. ಅಹಿಂಸಾವಾದಿಯಾದ ಗಾಂಧೀಜಿ ಮೀನುಗಾರಿಕೆಗೆ ಹೇಗೆ ಅನುಮೋದನೆ ನೀಡಿದರು ? ಹೇಗೆ ಗ್ರಾಮೀಣಾಭಿವೃದ್ಧಿಯಲ್ಲಿ ಇದರ ಪಾತ್ರದ ಪ್ರತಿಪಾದನೆ ಮಾಡಿದರು ? ಎಂದು ಅನೇಕರು ಆಶ್ಚರ್ಯ ವ್ಯಕ್ತಪಡಿಸಿದ್ದೂ ಉಂಟು. ಆದರೆ ಗಾಂಧೀಜಿ ಬೆಸ್ತರು ಮೀನು ಹಿಡಿದು ಜೀವನ ಮಾಡುವ ಉದ್ಯೋಗವನ್ನು ಹಿಂಸೆ ಎಂದು ಪರಿಗಣಿಸಲಿಲ್ಲ. ಏಕೆಂದರೆ ಅದು ಅವರಿಗೆ ಲಾಗಾಯ್ತಿನಿಂದ ಆದಾಯವನ್ನು ದೊರಕಿಸಿಕೊಟ್ಟು ಜೀವನಕ್ಕೆ ದಾರಿ ಮಾಡಿಕೊಟ್ಟ ಉದ್ಯೋಗ. ಮೀನಿನಲ್ಲಿರುವ ಔಷಧೀಯ, ಆರೋಗ್ಯವರ್ಧಕ ಹಾಗೂ ಪೌಷ್ಠಿಕ ಗುಣಗಳ ಬಗ್ಗೆ ಅರಿತಿದ್ದ ಗಾಂಧೀಜಿ ಮೀನು ತಿನ್ನುವವರು ತಿನ್ನಲಿ ಎಂದು ತಮ್ಮ ಸಹಮತ

ವ್ಯಕ್ತಪಡಿಸಿದರು. ತಲ ತಲಾಂತರಗಳಿಂದ ರೂಢಿಗೆ ಬಂದ ಆಹಾರ ಪದ್ಧತಿಯನ್ನು ಗಾಂಧೀಜಿ ವಿರೋಧಿಸಲಿಲ್ಲ. ಒಬ್ಬ ವ್ಯಕ್ತಿಯು ಇನ್ನೊಬ್ಬ ವ್ಯಕ್ತಿ ಮೀನು ತಿನ್ನುವುದನ್ನು ನಿಲ್ಲಿಸು ಎಂದು ಒತ್ತಾಯ ಹೇರುವುದು ಮೀನು ತಿನ್ನುವುದಕ್ಕಿಂತ ಹೆಚ್ಚಿನ ಹಿಂಸೆಯಾಗುತ್ತದೆ ಎಂದು ಗಾಂಧೀಜಿ ತಿಳಿಸಿದರು. ಮೀನು ಹಿಡಿಯುವವರು, ಮೀನು ಮಾರುವವರು ಮತ್ತು ಮೀನು ತಿನ್ನುವವರು ತಮ್ಮ ಕ್ರಿಯೆಯಲ್ಲಿ ಹಿಂಸೆ ಅಡಗಿದೆ ಎಂದು ಅವರ ಅರಿವಿಗೆ ಬಂದರೂ ಅನಿವಾರ್ಯವಾಗಿ ಅವರು ಅದನ್ನು ಮುಂದುವರಿಸಿಕೊಂಡು ಹೋಗಬೇಕಾಗುತ್ತದೆ. ಏಕೆಂದರೆ ಅವರಿಗೆ ಬೇರೆ ದಾರಿ ಇಲ್ಲ. ಯುದ್ಧಕಾಲದಲ್ಲಿ ಗಸ್ತು ತಿರುಗಲು ಉಪಯೋಗಿಸುತ್ತಿದ್ದ ಸಣ್ಣ ಮತ್ತು ಮಧ್ಯಮ ಗಾತ್ರದ ಹಡಗುಗಳನ್ನು ಮೀನು ಹಿಡಿಯಲು ಉಪಯೋಗವಾಗುವಂತೆ ನೋಡಿಕೊಳ್ಳಲು ಮೀನುಗಾರಿಕೆ ಇಲಾಖೆಗೆ ಗಾಂಧೀಜಿ ಸಲಹೆ ನೀಡುತ್ತಾರೆ.

ಮೀನು ಆಹಾರ ಸಮಸ್ಯೆ ನೀಗುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಇದು ಪೌಷ್ಟಿಕ ಆಹಾರವೂ ಹೌದು, ನಾನಾ ರೀತಿಯ ಔಷಧಗಳನ್ನೂ ತಯಾರಿಸಬಹುದು. ಮೀನು ಗೊಬ್ಬರವಂತೂ ಹಣ್ಣಿನ ತೋಟಗಳಿಗೆ ಅತ್ಯಂತ ಉತ್ಕೃಷ್ಟವಾದ ಗೊಬ್ಬರವಾಗಿದೆ. ಅನೇಕ ಮೀನುಗಾರರಿಗೆ, ಮೀನು ಮಾರುವವರಿಗೆ ಉದ್ಯೋಗಾವಕಾಶ ದೊರಕಿಸಿಕೊಡುವ ಜನಹಿತಕಾರಿ ಮೀನುಗಾರಿಕೆಯನ್ನು ಗಾಂಧೀಜಿ ವಿರೋಧಿಸಲಿಲ್ಲ. ಗಾಂಧೀಜಿಯವರ ಅಹಿಂಸೆಯ ಪರಿಭಾಷೆ ಅತ್ಯಂತ ವಿಶಾಲವಾದ ಅರ್ಥವನ್ನು ಹೊಂದಿದೆ. ಅವರು ಮೀನುಗಾರಿಕೆಯ ಪ್ರಯೋಜನಗಳನ್ನು ಅರಿತು ಅದರ ಅಗತ್ಯತೆಯ ಪ್ರತಿಪಾದನೆ ಮಾಡಿರುವುದರಲ್ಲಿ ಕಾಣಬಹುದು.

## ವೃಕ್ಷ ಸಂವರ್ಧನೆ :

ಗಾಂಧೀಜಿ ಅಪ್ರತಿಮವಾದ ಪರಿಸರ ಪ್ರೇಮವನ್ನು ಹೊಂದಿದ್ದರು. ಹುಟ್ಟಿನಿಂದ ಅವರು ರೈತರಾಗಿರದಿದ್ದರೂ ಗಿಡ ಮರಗಳೆಂದರೆ ಅವರಿಗೆ ಎಲ್ಲಿಲ್ಲದ ಪ್ರೀತಿ. ಚಿಕ್ಕ ವಯಸ್ಸಿನಿಂದಲೂ ಅವರಿಗೆ ಹಣ್ಣಿನ ಗಿಡಗಳನ್ನು ಬೆಳೆಸುವುದರಲ್ಲಿ ಆಸಕ್ತಿ. ಪ್ರತಿ ಸಂಜೆಯೂ ಶಾಲೆಯಿಂದ ಮನೆಗೆ ಬಂದ ಬಳಿಕ ಗಿಡಗಳಿಗೆ ನೀರು ಹಾಕುತ್ತಿದ್ದರು. ಅವುಗಳ ಬೆಳವಣಿಗೆಯಲ್ಲಿ ಸಂತೋಷವನ್ನು ಕಾಣುತ್ತಿದ್ದರು. ತಮಗೆ ೩೬ ವರ್ಷವಾಗಿದ್ದಾಗ ಆಶ್ರಮದ ತೋಟದಲ್ಲಿ ರೈತನ ಬದುಕನ್ನು ಪ್ರಾರಂಭಿಸಿದರು. ಆಶ್ರಮವನ್ನು ಸ್ಥಾಪಿಸಲು ತೀರ್ಮಾನಿಸಿ ಜಮೀನನ್ನು ಹುಡುಕುತ್ತಿದ್ದಾಗ ಕೆಲವು ಹಣ್ಣಿನ ಗಿಡಗಳಿದ್ದ ಒಂದು ಎಕರೆ ಭೂಮಿ ಅವರಿಗೆ ಆಕರ್ಷಿತವಾಯಿತು. ಅದನ್ನು ಕೊಂಡು ತಮ್ಮ ಕುಟುಂಬ ಮತ್ತು ಮಿತ್ರರೊಡನೆ ಅದರಲ್ಲಿ ನೆಲೆಸಿದರು. ಹಂತಹಂತವಾಗಿ ಆ ಜಮೀನಿನಲ್ಲಿ ತರಹೇವಾರಿ ಹಣ್ಣಿನ ಗಿಡಗಳನ್ನೂ, ತರಕಾರಿ ಸೊಪ್ಪುಗಳನ್ನೂ ಹಾಕುತ್ತಾ ಬಂದರು. ಕಾಲಕ್ರಮೇಣ ಆ ಜಮೀನು ಒಂದು ಸುಂದರ ಹಣ್ಣಿನ ತೋಟವಾಗಿ ಅಭಿವೃದ್ಧಿಗೊಂಡಿತು. ದಕ್ಷಿಣ ಆಫ್ರಿಕಾದ ಅವರ ಹತ್ತು ವರ್ಷಗಳ ಆಶ್ರಮ ಜೀವನ ಅವರಿಗೆ ಗಿಡ ಮರಗಳ ಬಗ್ಗೆ, ತೋಟಗಾರಿಕೆಯ ಬಗ್ಗೆ ಬಹಳ ಒಳ್ಳೆಯ ಅನುಭವ/ತಿಳಿವಳಿಕೆಗಳನ್ನು ನೀಡಿತ್ತು. ಜೇನು ತುಪ್ಪದ ಪೌಷ್ಟಿಕತೆ, ಔಷಧೀಯ ಗುಣಗಳ ಬಗ್ಗೆ ಅಧ್ಯಯನ ನಡೆಸಿದ್ದ ಗಾಂಧೀಜಿ ತಮ್ಮ ಆಶ್ರಮದಲ್ಲಿ ಜೇನು ಸಾಕಾಣಿಕೆಯ ಬಗೆಗೂ ಯತ್ನ ನಡೆಸಿದರು. ಜೇನು ಹುಟ್ಟುಗಳಿಗಾಗಲೀ, ನೊಣಗಳಿಗಾಗಲೀ, ಅಪಾಯವಾಗದಂತಹ ವೈಜ್ಞಾನಿಕ ಜೇನುನೊಣಗಳಿಂದಾಗಿ ಹೊಲ ಗದ್ದೆಗಳು, ಹಣ್ಣಿನ ತೋಟಗಳು ಹೇಗೆ ಸಮೃದ್ಧಿಯ ಕೃಷಿ ಉತ್ಪನ್ನಗಳನ್ನು ನೀಡುತ್ತವೆ ಎಂದೂ ತಲ್ಲೀನರಾಗಿ ಆಸಕ್ತರಿಗೆ ವಿವರಿಸುತ್ತಿದ್ದರು. ಜೇನುನೊಣಗಳು ಮಧುವನ್ನು ಹೀರಿ ಸಂಗ್ರಹಿಸುವುದರ ಜೊತೆಗೆ ಪರಾಗಸ್ಪರ್ಶ ಕ್ರಿಯೆಯನ್ನು ಚುರುಕುಗೊಳಿಸಿ ತರಕಾರಿಗಳ, ಹಣ್ಣು ಹಂಪಲುಗಳ ಗಿಡ ಗೆಡ್ಡೆಗಳಲ್ಲಿ ಹೆಚ್ಚಿನ ಫಲೀಕರಣಕ್ಕೆ ಹೇಗೆ ಕಾರಣವಾಗುತ್ತದೆ ಎಂದವರು ವಿವರಿಸುತ್ತಿದ್ದರು.

***ಖಾದಿ ಮತ್ತು ಗ್ರಾಮೀಣ ಕೈಗಾರಿಕೆ ಪರಸ್ಪರ ಪೂರಕವಾಗಿವೆ. ಗ್ರಾಮೀಣ ಕೈಗಾರಿಕೆಗಳನ್ನು ಸೌರಮಂಡಲಕ್ಕೆ ಹೋಲಿಸಿದಲ್ಲಿ ಕೈಚಳಕ ಸೂರ್ಯನಿದ್ದಂತೆ. ಕೈತುಂಬಾ ಕೆಲಸವಿಲ್ಲದ ಜನ ಸತತವಾಗಿ ನೂಲಲಿ.***

ದೇಶದ ಜನತೆ ಗಿಡ ಮರಗಳನ್ನು ಬೆಳೆಸುವುದರ ಮೂಲಕ ರಾಷ್ಟ್ರದ ಸಂಪತ್ತನ್ನು ಹೆಚ್ಚಿಸಲು ಸಾಧ್ಯ ; ಗಿಡಮರಗಳನ್ನು ನೆಡುವುದರ ಮೂಲಕ ವನ್ಯ ಸಂಪತ್ತು ವೃದ್ದಿಯಾಗಿ ಯಥೇಚ್ಛವಾಗಿ ಮಳೆ ಬರುತ್ತದೆ. ಗಿಡ ಮರಗಳಿಲ್ಲದೆ ಭೂಮಿ ಬೋಳಾದರೆ

ಕ್ಷಾಮ ಡಾಮರಗಳಿಗೆ ಕಾರಣವಾಗುತ್ತದೆ. ಈ ಜಗತ್ತು ಬರೀ ವಿಸ್ಮಯಕಾರಿಯಾದುದಷ್ಟೇ ಅಲ್ಲ ; ಅತ್ಯಂತ ಸುಂದರವಾದುದು, ರಮಣೀಯವಾದುದು. ವನ್ಯ ಜೀವಿ ಮತ್ತು ಮೃಗ ಸಂಪತ್ತು ಈ ಸುಂದರ ಜಗತ್ತಿಗೆ ಮೆರುಗನ್ನು ನೀಡಿವೆ. ಅದರ ನಿರಂತರ ಅಭಿವೃದ್ಧಿಗೆ ಮತ್ತು ಅದು ಶಾಶ್ವತವಾಗಿರಲು ಅದರ ರಕ್ಷಣೆಯ ಹೊಣೆ ಎಲ್ಲರದಾಗಬೇಕು. ಗಿಡಮರಗಳು ಅರಣ್ಯ ಸಂಪತ್ತು ಮತ್ತು ಅಲ್ಲಿ ವಾಸಿಸುವ ಮೃಗಸಂಪತ್ತು, ವನ್ಯಜೀವಿಗಳ ಬಲಿ ನಿಲ್ಲಬೇಕು. ಜನರು ಮೌಢ್ಯ ತೊರೆದು ಅರಣ್ಯಾಭಿವೃದ್ಧಿಯ ಮಹತ್ವ ಮತ್ತು ಸಾಮೂಹಿಕ ಹೊಣೆಗಾರಿಕೆ ಅರಿಯಬೇಕು. ಜನರ ಅರಣ್ಯ ದಾಳಿ ನಿಲ್ಲಬೇಕು, ಸಾಮಾಜಿಕ ಅರಣ್ಯ ಯೋಜನೆಗೆ ಹೆಚ್ಚು ಒತ್ತು ನೀಡಬೇಕು. ಅವು ಜನರ ಬೇಡಿಕೆಯನ್ನು ಈಡೇರಿಸುವಂತಾಗಬೇಕು. ಇದರಿಂದ ಅರಣ್ಯಗಳ ಮೇಲೆ ಒತ್ತಡ ಕಡಿಮೆಯಾಗುತ್ತದೆ.

ಅರಣ್ಯಗಳು ಹವಾಮಾನದ ಮೇಲೆ ಪ್ರಭಾವ ಬೀರುತ್ತವೆ. ಅರಣ್ಯಗಳ ಸಮೃದ್ಧ ಅಭಿವೃದ್ಧಿಯಿಂದ ನಾನಾ ರೀತಿಯ ಲಾಭಗಳು, ಅನುಕೂಲತೆಗಳು ಮಾನವ ಜಗತ್ತಿಗೆ ದೊರೆಯುತ್ತವೆ. ಅತೀವ ಉಷ್ಣತೆಯನ್ನು ತಗ್ಗಿಸಿ ಹಿತಕರ ಹವಾಮಾನ ಉಂಟಾಗಲು ಅರಣ್ಯಗಳು ಪ್ರಭಾವ ಬೀರುತ್ತವೆ. ಭೂಮಿಯ ಫಲವತ್ತತೆಯನ್ನು ಹೆಚ್ಚಿಸುತ್ತವೆ, ಮಳೆ ಪ್ರವಾಹಗಳಿಂದ ಉಂಟಾಗುವ ಭೂ ಸವಕಳಿಯಿಂದ ರಕ್ಷಣೆಯನ್ನು ನೀಡುತ್ತವೆ. ಭೂಮಿಯಲ್ಲಿ ಆರ್ದ್ರತೆಯನ್ನು ಕಾಪಾಡುತ್ತವೆ. ದನಕರುಗಳಿಗೆ ಮೇವನ್ನು ಒದಗಿಸುತ್ತವೆ. ಜನರಿಗೆ, ಪ್ರಾಣಿ ಪಕ್ಷಿಗಳಿಗೆ ನಾನಾ ರೀತಿಯ ಪೌಷ್ಠಿಕ ರುಚಿಕರ ಔಷಧೀಯ ಗುಣ ವಿಶೇಷಗಳ ಹಣ್ಣು ಹಂಪಲುಗಳನ್ನು ಒದಗಿಸುತ್ತವೆ. ಕೈಗಾರಿಕೆಗಳಿಗೆ ಬೇಕಾಗುವ ಕಚ್ಚಾ ವಸ್ತುಗಳನ್ನು ಒದಗಿಸುತ್ತವೆ. ಮನೆಗಳನ್ನು ಕಟ್ಟುವ ಪೀಠೋಪಕರಣಗಳನ್ನು ತಯಾರಿಸಲು ಬೇಕಾದ ಮರ ಮುಟ್ಟುಗಳನ್ನು ಅರಣ್ಯಗಳು ಒದಗಿಸುತ್ತವೆ. ನಿಸರ್ಗ ಚಿಕಿತ್ಸೆ ಆಯುರ್ವೇದ ಪದ್ಧತಿಗಳ ಆಧಾರದ ವಿಶೇಷ ಗಿಡಮೂಲಿಕೆಗಳನ್ನು ಅರಣ್ಯಗಳು ನೀಡುತ್ತವೆ. ಮೃಗ ಪಕ್ಷಿಗಳಿಂದಲೂ ವಿಶೇಷ ಔಷಧೀಯ ಪದಾರ್ಥಗಳು ದೊರೆಯುತ್ತವೆ. ಸುಂದರ ಅರಣ್ಯ ತಾಣಗಳಿಂದ ಮತ್ತು ಅಲ್ಲಿ ವಾಸಿಸುವ ಮನಮೋಹಕ ಮೃಗ ಪಕ್ಷಿಗಳ ಕಾರಣವಾಗಿ ಆ ಪ್ರದೇಶಗಳನ್ನು ವಿಶೇಷ ಪ್ರವಾಸಿ ತಾಣಗಳಾಗಿ ಅಭಿವೃದ್ಧಿಪಡಿಸಬಹುದು. ಇವೆಲ್ಲಕ್ಕಿಂತ ಮರಮುಟ್ಟುಗಳು ಅರಣ್ಯಗಳಿಂದ ದೊರೆಯುತ್ತವೆ. ಜಮೀನುಗಳಿಗೆ ಬೇಕಾದ ಹಸಿರೆಲೆ ಗೊಬ್ಬರವೂ ಅರಣ್ಯಾಭಿವೃದ್ಧಿಯಿಂದ ದೊರೆಯುತ್ತದೆ. ಈ ಎಲ್ಲ ಕಾರಣಗಳಿಂದ ಅರಣ್ಯಾಭಿವೃದ್ಧಿಗೆ ದೇಶದ ಸಮಸ್ತ ಜನತೆ ಅರಿವು ಮೂಡಿಸಿಕೊಂಡು ಗಿಡ ಮರಗಳು ಎಲ್ಲೆಲ್ಲಿ ಬೆಳೆಯಲು ಸಾಧ್ಯವೋ ಅಲ್ಲೆಲ್ಲ ಬೆಳೆಸಬೇಕು ಎಂಬುದು ಗಾಂಧೀಜಿಯವರ ಇಂಗಿತವಾಗಿತ್ತು. ಅರಣ್ಯೀಕರಣದ ಗಾಂಧೀ ವಿಚಾರದ ಅನುಷ್ಠಾನತೆಯನ್ನು ಇಂದು ನಾವೆಲ್ಲಾ ಹೀಗೆ ಕೈಗೊಳ್ಳಬಹುದು :

೧. ದೇಶದಲ್ಲಿ ಲಕ್ಷಾಂತರ ಕಿಲೋಮೀಟರ್ ಉದ್ದಕ್ಕೆ ಮೈಚೆಲ್ಲಿ ಮಲಗಿರುವ ನೀರಾವರಿ ಕಾಲುವೆಗಳು ಮತ್ತು ರಸ್ತೆಗಳ ಎಡಬಲಗಳೆಲ್ಲಾ ಬೆಂಗಾಡಾಗಿ ಭಣಗುಡುತ್ತಿವೆ. ಇಲ್ಲೆಲ್ಲ ಜನರಿಗೆ ಉಪಯೋಗವಾಗುವ, ಜೀವಜಾಲ ಸಂವರ್ಧನೆ ಮಾಡಬಲ್ಲ ನಾನಾ ರೀತಿಯ ಗಿಡಮರಗಳು. ಉದಾಹರಣೆಗೆ ನೆಲ್ಲಿ, ನೇರಳೆ, ಬೇಲ, ಎಲಚಿ, ಮಾವು, ಹಲಸು, ತೇಗ, ಬೀಟೆ, ಹೊನ್ನೆ, ರಾಮಫಲ, ಸೀತಾಫಲ, ಗೇರು, ಬಾದಾಮಿ, ಸೀಗೆ, ಹೊಂಗೆ, ಬೇವು, ಹಿಪ್ಪೆ, ಬಿದಿರು, ಅಳಲೆ, ಬಿಲ್ವ, ಪನ್ನೇರಳೆ ಮುಂತಾದ ಫಲ, ಪುಷ್ಪ, ಮೇವು, ಔಷಧ, ಮರಮುಟ್ಟು ನೀಡುವ ಗಿಡಮರ ಬಳ್ಳಿಗಳನ್ನು ಹಾಕಿ ಬೆಳೆಸಬೇಕು. ಈ ಗಿಡಮರಗಳ ಅಡಿಯಲ್ಲಿ ಬಜೆ, ಅರಿಶಿಣ, ಒಂದೆಲಗ, ಭೃಂಗ, ನೆಲಹಿಪ್ಪಲು ಮುಂತಾದ ಜನೋಪಯೋಗಿ ಔಷಧೀಯ ಸಸಿಗಳನ್ನು ಬೆಳೆಸಬೇಕು.

೨. ಪ್ರಪಂಚದಲ್ಲಿ ಅತಿವೇಗವಾಗಿ ಜನಸಂಖ್ಯೆ ಹೆಚ್ಚಳವಾಗುತ್ತಿರುವ ರಾಷ್ಟ್ರಗಳಲ್ಲಿ ಚೀನಾಕ್ಕೆ ಪ್ರಥಮ ಸ್ಥಾನವಾದರೆ, ಭಾರತಕ್ಕೆ ಎರಡನೆಯ ಸ್ಥಾನ. ಜಗತ್ತಿನ ಅತಿ ಹೆಚ್ಚು ಜನಸಂಖ್ಯೆಯನ್ನು ಚೀನಾ ಹೊಂದಿದ್ದರೆ ಭಾರತಕ್ಕೆ ಎರಡನೆಯ ಸ್ಥಾನ. ಆದ್ದರಿಂದ ಇಂದು ಭಾರತದಲ್ಲಿ ಹುಟ್ಟುವ ಪ್ರತಿಯೊಂದು ಶಿಶು. ಸಮಾಜಕ್ಕೆ ಹೊರೆಯೇ, ಇಲ್ಲಾ ಕೊಡುಗೆಯೇ ? ಎಂಬುದನ್ನು ನಾವು ಗಾಢವಾಗಿ ಯೋಚಿಸಬೇಕು. ಅರಣ್ಯ ಸಂಪತ್ತಿನ ಬೆಳವಣಿಗೆಯಂತೂ ಅಮೂಲ್ಯ ಕೊಡುಗೆ ಎಂಬುದರಲ್ಲಿ ಎರಡು ಮಾತಿಲ್ಲ. ಇದನ್ನು ಯಾರೂ ಅಲ್ಲಗಳೆಯಲಾರರು ಮತ್ತು ಎಲ್ಲರೂ ಒಪ್ಪಲೇಬೇಕಾದ ಪರಿಸ್ಥಿತಿ ಬಂದೊದಗಿದೆ. ಅಪಾರ ವರ್ಷಗಳಿಂದ ಬೆಳೆದು ನಿಂತಿರುವ ನಿತ್ಯಹರಿದ್ವರ್ಣದ ಮಳೆಯ ಕಾಡುಗಳಲ್ಲಿ ಗಣಿಗಾರಿಕೆ, ಮರಕಡಿಯುವಿಕೆ ನಿಷೇಧಿಸಬೇಕು. ಅಂತಹ ಪ್ರದೇಶಗಳಲ್ಲಿ ಜಲಾಶಯ ನಿರ್ಮಾಣದ ಅಗತ್ಯ ಕಂಡುಬಂದರೆ ಅಲ್ಲಿನ ಸುತ್ತಮುತ್ತಲ ಪ್ರದೇಶದಲ್ಲಿ ಅರಣ್ಯ ಸಂಪತ್ತು ಅಭಿವೃದ್ಧಿಪಡಿಸಬೇಕು. ಬೇರೆ ರೀತಿಯಲ್ಲಿ ಹೇಳಬೇಕೆಂದರೆ ಯಾವ ಪ್ರಮಾಣದಲ್ಲಿ ಅರಣ್ಯ ನಾಶವಾಗಿದೆಯೋ ಆ ಪ್ರಮಾಣವಲ್ಲಿ ಅಮೂಲ್ಯ ಗಿಡ ಮರಗಳಿಂದ ಕೂಡಿದ ಅರಣ್ಯಾಭಿವೃದ್ಧಿಯಾಗಬೇಕು. ಕಾಡಿನಲ್ಲಿ ಒಂದು ವೃಕ್ಷ ಮುರಿದು ಬಿದ್ದರೆ ಅಲ್ಲಿ ಬದಲೀ ಗಿಡಮರಗಳನ್ನು ತಕ್ಷಣ ನೆಟ್ಟು ಪೋಷಿಸಬೇಕು.

ಪರಿಸರ ಉಳಿಸಿ ; ಜಗತ್ತನ್ನು ಸ್ವಚ್ಛವಾಗಿಡಿ ಎಂಬ ಆಂದೋಲನ ಇಂದು ಮುಂದುವರಿದ, ಹಿಂದುಳಿದ ರಾಷ್ಟ್ರಗಳಲ್ಲಿ ನಡೆಯುತ್ತಿರುವುದು ನಮಗೆಲ್ಲಾ ಗೊತ್ತಿರುವ ವಿಷಯವೇ. ಪರಿಸರವಾದಿಗಳ ಕಾಳಜಿ ನಮಗೆಲ್ಲ ಅರ್ಥವಾಗಬೇಕು. ಅವರ ಸಲಹೆ ಸೂಚನೆಗಳನ್ನು ಅನುಷ್ಠಾನಗೊಳಿಸಲು ನಾವೆಲ್ಲ ಕಾರ್ಯಪ್ರವೃತ್ತರಾಗಬೇಕು.

೩. ಪಟ್ಟಣದ ಪ್ರದೇಶಗಳಂತೂ ಇಂದು ವಿಪರೀತವಾಗಿ ಕಲುಷಿತಗೊಳ್ಳುತ್ತಿವೆ. ವಾಯುಮಾಲಿನ್ಯ, ಜಲಮಾಲಿನ್ಯ, ಶಬ್ದಮಾಲಿನ್ಯ ಮಾಲಿನ್ಯಗಳಿಂದ ಕೂಡಿವೆ. ಮಾಲಿನ್ಯಗಳಿಂದ ಬಿಡುಗಡೆ ಹೊಂದಬೇಕಾದರೆ ಜನರು ತಮ್ಮ ಮನೆಯ ಸುತ್ತಮುತ್ತಲ ಜಾಗದಲ್ಲಿ, ರಸ್ತೆಯ ಇಕ್ಕೆಲಗಳಲ್ಲಿ ಉದ್ಯಾನವನಗಳ ಸುತ್ತಮುತ್ತ ರಾಷ್ಟ್ರಕ್ಕೆ ಕಾಲಾನಂತರ ಸಿರಿಸಂಪತ್ತಾಗಬಲ್ಲ ಗಿಡಮರಗಳನ್ನು ಬೆಳೆಸಿ, ಅವು ಬೆಳೆಯುವುದನ್ನು ನೋಡುತ್ತಾ ಆನಂದಿಸುವುದರಿಂದ ಎಲ್ಲಾ ರೀತಿಯ ಮಾಲಿನ್ಯಗಳೂ ತಹಬಂದಿಗೆ ಬರುತ್ತವೆ. ಇಂದು ನಗರ ಸಭೆಗಳು ಅಭಿವೃದ್ಧಿಪಡಿಸುತ್ತಿರುವ ಉದ್ಯಾನಗಳಲ್ಲಿ ಬರೀ ಆಲಂಕಾರಿಕ ಗಿಡಗಳನ್ನು, ಬಳ್ಳಿಗಳನ್ನು, ಹುಲ್ಲನ್ನು ಬೆಳೆಸುತ್ತಿದ್ದಾರೆ. ಇವುಗಳ ಅಭಿವೃದ್ಧಿಗೆ ವಿದೇಶೀ ಸಾಲವನ್ನೂ ತರಲಾಗಿದೆ. ಇದಕ್ಕೆ ಲಕ್ಷಾಂತರ ರೂ. ಖರ್ಚು ಮಾಡಲಾಗುತ್ತಿದೆ. ಆಲಂಕಾರಿಕ ಗಿಡ ಮರಗಳು ಬೇಕು ; ಬೇಡವೆಂದಲ್ಲ. ಜೊತೆಜೊತೆಗೆ ಬೆಲೆ ಬಾಳುವ ದೀರ್ಘಾವಧಿಯ ವೃಕ್ಷಗಳನ್ನು ಬೆಳೆಸಿ ರಾಷ್ಟ್ರದ ಮುಂದಿನ ತಲೆಮಾರಿಗೆ ನಾವು ಸಂಪತ್ತನ್ನು ನೀಡುವ ಕಾರ್ಯಕ್ರಮ ಹಾಕಿಕೊಳ್ಳಬೇಕಾಗಿರುವುದು ಅತ್ಯಂತ ಅವಶ್ಯಕವಾಗಿದೆ. ಉದ್ಯಾನವನಗಳ ಬೇಲಿಯಲ್ಲಿ, ನಗರ ಪಟ್ಟಣಗಳ ಎಡಬಲಗಳಲ್ಲಿ, ರಾಷ್ಟ್ರೀಯ ಹೆದ್ದಾರಿಗಳ ಎಡ ಬಲಗಳಲ್ಲಿ ಬೆಲೆಬಾಳುವ ಗಿಡಮರಗಳನ್ನು ಬೆಳೆಸಬೇಕು. ಇದರಿಂದ ಕಾಡು ನಾಶವಾದ ನಷ್ಟವನ್ನು ನಾಡು ತುಂಬಿಕೊಟ್ಟಂತೆ ಆಗುತ್ತದೆ. ಇದರಿಂದ ಪಟ್ಟಣಗಳು, ನಗರಗಳು ಸಹ್ಯವಾಗುತ್ತವೆ. ವಾತಾವರಣ ತಂಪಾದ ಹವೆಯಿಂದ ಕೂಡಿರುವಂತಾಗುತ್ತದೆ. ಶಬ್ದಮಾಲಿನ್ಯ, ಜಲಮಾಲಿನ್ಯ ಮತ್ತು ವಾಯುಮಾಲಿನ್ಯಗಳು ಇಲ್ಲದಂತಾಗುತ್ತವೆ. ನಗರ/ಪಟ್ಟಣಗಳು ಸುಂದರವಾಗುತ್ತವೆ. ಈ ಕಾರ್ಯಕ್ರಮಗಳು ಈಗ ಇಲ್ಲವೆಂದಲ್ಲ, ಸಾಮಾಜಿಕ ಅರಣ್ಯ ಯೋಜನೆಯಡಿಯಲ್ಲಿ ಜಪಾನ್ ಮತ್ತು ಏಷಿಯಾ ಅಭಿವೃದ್ಧಿ ಬ್ಯಾಂಕಿನಿಂದ ಕೋಟ್ಯಂತರ ಸಾಲ ತಂದು ಪುಸ್ತಕಗಳಲ್ಲಿ, ವರದಿಗಳಲ್ಲಿ ಗಿಡ ಮರಗಳನ್ನು ಬೆಳೆಸಿದ್ದಾರೆ ! ವಾಸ್ತವವಾಗಿ ಭ್ರಷ್ಟಾಚಾರದಿಂದ, ಜನರ ಅನಾಸಕ್ತಿಯಿಂದ, ಸಂಬಂಧಪಟ್ಟ ಸಾಮಾಜಿಕ ಅರಣ್ಯ ಅಧಿಕಾರಿಗಳ ಅಸಡ್ಡೆಯಿಂದ ನಗರ ಪಟ್ಟಣಗಳಲ್ಲಿ, ರಸ್ತೆಗಳ ಇಕ್ಕೆಲಗಳಲ್ಲಿ ಗಿಡಮರಗಳು ಅಭಿವೃದ್ಧಿಯಾಗುತ್ತಿಲ್ಲ. ಜನ ಎಚ್ಚೆತ್ತುಕೊಳ್ಳಬೇಕು, ಪರಿಸರಪ್ರೇಮ ಅಭಿವೃದ್ಧಿ ಪಡಿಸಿಕೊಂಡು ರಚನಾತ್ಮಕವಾಗಿ ಕಾರ್ಯೋನ್ಮುಖವಾಗಬೇಕು.

## ನೈರ್ಮಲ್ಯ :

ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯಲ್ಲಿ ಗ್ರಾಮಗಳ ನೈರ್ಮಲ್ಯಕ್ಕೆ, ಅಗತ್ಯವಾದ ಪ್ರಮಾಣದಲ್ಲಿ ಗಮನ ನೀಡಬೇಕು. ಪ್ರತಿಯೊಬ್ಬ ಗ್ರಾಮೀಣ ಪ್ರಜೆಯೂ ಗ್ರಾಮ ನೈರ್ಮಲ್ಯ ಮತ್ತು ಆರೋಗ್ಯ ನಿಯಮಗಳನ್ನು ಶ್ರದ್ಧೆಯಿಂದ ಪಾಲಿಸಬೇಕು ಎಂದು ಗಾಂಧೀಜಿ ಆಶಿಸಿದರು. ಎಲ್ಲೆಂದರಲ್ಲಿ ಉಗುಳುವುದು, ಕಸ ಕಡ್ಡಿಗಳನ್ನು ಎಸೆಯುವುದು, ತಮ್ಮ ಮನೆಯಲ್ಲಿ ಸತ್ತು ಬಿದ್ದ ಪ್ರಾಣಿಗಳನ್ನು ತಂದು ಬೀದಿಯಲ್ಲಿ ಹಾಕುವುದು, ತಮ್ಮ ದನ ಕರುಗಳ ಸಗಣಿ ಗಂಜಲಗಳನ್ನು ಹಾಕುತ್ತಾ ಬಂದು ತಿಪ್ಪೆಗಳನ್ನು ನಿರ್ಮಿಸುವುದರಿಂದ, ಮೂತ್ರಗಳನ್ನು ಮಾಡುವುದರಿಂದ ಗ್ರಾಮಗಳು ಅಶುದ್ಧವಾಗುತ್ತವೆ. ಈ ರೀತಿ ಮಾಡುವುದರಿಂದ ಜನರಿಗೆ ಮತ್ತು ಪ್ರಕೃತಿಗೆ ಅಪಚಾರವೆಸಗಿದಂತೆ ಮತ್ತು ಮಹಾಪಾಪವೆಸಗಿದಂತೆ ಎಂದು ಗಾಂಧೀಜಿ ತಿಳಿಸುತ್ತಾರೆ.

ಗ್ರಾಮದ ಪ್ರತಿಯೊಬ್ಬ ಪ್ರಜೆಯೂ ಗ್ರಾಮದ ಸ್ವಚ್ಛತೆಗೆ ಗಮನ ನೀಡಬೇಕು. ಊರಿನ ಕೆರೆಗಳನ್ನು, ಹರಿಯುವ ನದಿಗಳನ್ನು, ಜಮೀನಿಗೆ ನೀರುಣಿಸುವ ಕಾಲುವೆಗಳನ್ನು, ಗ್ರಾಮದ ಚರಂಡಿಗಳನ್ನು, ರಸ್ತೆಗಳನ್ನು, ಶಾಲೆಯ ಆವರಣಗಳನ್ನು ಶುಚಿಗೊಳಿಸಲು ದೈಹಿಕವಾಗಿ ಕಾರ್ಯೋನ್ಮುಖವಾಗಬೇಕು. ಇದರಲ್ಲಿ ಯಾರು ಮೇಲು ಯಾರು ಕೀಳು ಎಂಬುದಿಲ್ಲ. ಗ್ರಾಮಗಳ ಎಲ್ಲ ಪ್ರದೇಶಗಳನ್ನು ಶುಚಿಯಾಗಿಡುವುದರ ಜೊತೆಗೆ ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ಗಿಡಮರಗಳನ್ನು ನೆಟ್ಟು ಪೋಷಿಸಬೇಕು. ಗ್ರಾಮ ಪಂಚಾಯತಿಗಳ ಪದಾಧಿಕಾರಿಗಳು ಈ ಬಗ್ಗೆ ಜನರ ಮನಸ್ಸನ್ನು ಅಣಿಗೊಳಿಸಿ ಕಾರ್ಯೋನ್ಮುಖರಾಗಬೇಕು.

ಗ್ರಾಮ, ನಗರ, ಪಟ್ಟಣಗಳಲ್ಲಿ ಸದಾ ಉತ್ಪತ್ತಿಯಾಗುವ ಕಸಕಡ್ಡಿಗಳು, ಕಶ್ಮಲಗಳನ್ನು ಸಾವಯವ ಗೊಬ್ಬರವನ್ನಾಗಿ ಪರಿವರ್ತಿಸುವ ಕೆಲಸ ಕಾರ್ಯಗಳಾಗಬೇಕು. ಕಸವು ಸಾವಯವ ಗೊಬ್ಬರವಾದಾಗ ಚಿನ್ನಕ್ಕೆ ಸಮನಾಗುತ್ತದೆ. ಇದರಿಂದ ಗ್ರಾಮಗಳು, ನಗರ,

ಪಟ್ಟಣಗಳು ಶುಚಿಯಾದಂತೆಯೂ ಆಗುತ್ತದೆ. ಸಾವಯವ ಗೊಬ್ಬರದ ಕೊರತೆಯನ್ನು ಎದುರಿಸುತ್ತಿರುವ ಅಸಂಖ್ಯಾತ ಬಡ ಸಣ್ಣ ಅತಿ ಸಣ್ಣ ರೈತರಿಗೆ ಅನುಕೂಲತೆಯನ್ನು ಒದಗಿಸಿದಂತೆಯೂ ಆಗುತ್ತದೆ. ಇದರಿಂದ ರೈತರು ತಮ್ಮ ತೋಟ, ಹೊಲ, ಗದ್ದೆಗಳಲ್ಲಿ ಸಮೃದ್ಧ ಬೆಳೆ ಪಡೆಯಲು ಸಹಾಯಕವಾಗುತ್ತದೆ ಎಂದು ಗಾಂಧೀಜಿ ತಿಳಿಸಿದರು.

ಗ್ರಾಮ, ನಗರ, ಪಟ್ಟಣಗಳಲ್ಲಿ ಸದಾ ಉತ್ಪತ್ತಿಯಾಗುವ ಕಸ ಕಡ್ಡಿ, ಕಶ್ಮಲಗಳನ್ನು ಸಾವಯವ ಗೊಬ್ಬರವನ್ನಾಗಿ ಪರಿವರ್ತಿಸುವ ಕ್ರಿಯೆಯಲ್ಲಿ ಅನೇಕರಿಗೆ ಉದ್ಯೋಗಾವಕಾಶಗಳು ದೊರೆಯುವುದಲ್ಲದೆ ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ, ಪುರಸಭೆ, ನಗರಸಭೆಗಳಿಗೆ ಸಾವಯವ ಗೊಬ್ಬರ ಮಾರಾಟದಿಂದ ಸಾಕಷ್ಟು ವರಮಾನವೂ ಬರುತ್ತದೆ. ತಾವು ಅಭಿವೃದ್ಧಿ ಪಡಿಸುವ ಉದ್ಯಾನಗಳಿಗೆ ಸಾವಯವ ಗೊಬ್ಬರವೂ ದೊರೆಯುತ್ತದೆ. ಗ್ರಾಮ, ನಗರ, ಪಟ್ಟಣಗಳು ಇದರಿಂದ ಶುಚಿಗೊಂಡು ಸುಂದರ, ಗಿಡ, ಮರ, ಬಳ್ಳಿ ಸಂಕುಲಗಳಿಂದ ಆಹ್ಲಾದಕರ ವಾತಾವರಣ ನಿರ್ಮಾಣವಾಗುತ್ತದೆ.

ಗಾಳಿ, ನೀರು, ಆಹಾರ ಗ್ರಾಮಗಳಲ್ಲಿಯೇ ಆಗಲೀ ನಗರ ಪ್ರದೇಶಗಳಲ್ಲಿಯೇ ಆಗಲೀ ಶುದ್ಧವಾಗಿರಬೇಕು, ಗಾಂಧೀಜಿಯವರ ಪ್ರಕಾರ ಶೇಕಡ ೯೯ರಷ್ಟು ಕಾಯಿಲೆಗಳು ಅನೈರ್ಮಲ್ಯದಿಂದ ಉಂಟಾಗುತ್ತದೆ. ಆದ್ದರಿಂದ ಎಲ್ಲರೂ ನೈರ್ಮಲ್ಯವನ್ನು ಅಲಕ್ಷಿಸಬಾರದು ಎಂದು ಅವರು ತಿಳಿಸಿದ್ದಾರೆ.

## ಆರೋಗ್ಯ :

ಗಾಂಧೀಜಿ ಗ್ರಾಮೀಣ ಜನರ ಸರ್ವತೋಮುಖ ಅಭಿವೃದ್ಧಿಗೆ ಗಮನ ನೀಡಿದ್ದಾರೆ. ಅಂತೆಯೇ ಮಾನವನ ಆರೋಗ್ಯಕ್ಕೆ ಹೆಚ್ಚು ಗಮನವನ್ನು ಅವರು ನೀಡುತ್ತಾರೆ. ಆರೋಗ್ಯದ ಬಗೆಗೂ ಚಿಂತನೆ ನಡೆಸಿದ್ದಾರೆ. ಆರೋಗ್ಯಪೂರ್ಣ ಆತ್ಮವು ಆರೋಗ್ಯಪೂರ್ಣ ದೇಹದಲ್ಲಿ ನೆಲೆಗೊಳ್ಳಬೇಕು. ಮನುಷ್ಯನು ಆರೋಗ್ಯಪೂರ್ಣವಾಗಿರಬೇಕಾದರೆ ಮತ್ತು ದೈಹಿಕವಾಗಿ ಸದೃಢವಾಗಿರಬೇಕಾದರೆ ಈ ಕೆಳಗೆ ತಿಳಿಸಿದ ಏಳು ಅಂಶಗಳು ಅಗತ್ಯವಾಗಿರಬೇಕು,. ಅವುಗಳೆಂದರೆ ಗಾಳಿ, ಬೆಳಕು, ಆಹಾರ, ನೀರು, ಶುದ್ಧ ಪರಿಸರ, ಭೂಮಿ ಮತ್ತು ಬ್ರಹ್ಮಚರ್ಯ.

ಗಾಂಧೀಜಿ ನಿಸರ್ಗ ಚಿಕಿತ್ಸೆಯಲ್ಲಿ, ಗಿಡಮೂಲಿಕೆಗಳಿಂದ ತಯಾರಾದ ಔಷಧಗಳಲ್ಲಿ ಹೆಚ್ಚು ನಂಬಿಕೆ ಇಟ್ಟುಕೊಂಡಿದ್ದರು. ಆರೋಗ್ಯದ ವಿಷಯದಲ್ಲಿ ಮುಂಜಾಗರೂಕತೆ ತೆಗೆದುಕೊಳ್ಳಬೇಕು. ಖಾಯಿಲೆ ಬರದಂತೆ ಎಚ್ಚರಿಕೆ ವಹಿಸಬೇಕು. ಶುದ್ಧವಾದ ಮನಸ್ಸು ಇರಬೇಕು, ಆರೋಗ್ಯಕ್ಕೆ ಅಗತ್ಯ ರೀತಿಯಲ್ಲಿ ಆಹಾರ ಸೇವಿಸಬೇಕು ಎಂದು ತಿಳಿಸುತ್ತಿದ್ದರು. ಆಧುನಿಕ ಅಂದರೆ ಅಲೋಪತಿ ವೈದ್ಯ ಪದ್ಧತಿಯಲ್ಲಿ ಗಾಂಧೀಜಿ ಬಹಳ ಬೇಗನೆ ಅಂದರೆ ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಅಷ್ಟೇನೂ ಒಲವು ತೋರದೆ ಅದರ ದೋಷಗಳ ಬಗ್ಗೆ ಅರಿವು ಪಡೆದುಕೊಂಡರು. ಅಲೋಪತಿ ವೈದ್ಯರು ಸೂಕ್ತ ಆಹಾರ, ಜೀವನ ಕ್ರಮದ ಬಗ್ಗೆ ಜನರಲ್ಲಿ ಅರಿವು ಮೂಡಿಸದೆ, ಜನರಲ್ಲಿ ಖಾಯಿಲೆಯ ಬಗ್ಗೆ ಭೀತಿ ಮೂಡಿಸಿ, ಅನಗತ್ಯವಾಗಿ ಔಷಧಿಗಳನ್ನು ಮಾರಾಟ ಮಾಡಿ ಚಿಕಿತ್ಸೆ ನೀಡಿ ಬಡ ಜನರನ್ನು, ಮುಗ್ಧ ಜನರನ್ನು ಮರುಳು ಮಾಡಿ ಹಣ ಸಂಪಾದನೆ ಮಾಡುತ್ತಿದ್ದುದು ವೈದ್ಯರ ಬಗ್ಗೆ ಇವರಿಗೆ ಜಿಗುಪ್ಸೆ ಮೂಡುವಂತಾಯಿತು ಎಂದು ಕಾಣುತ್ತದೆ. ಇದರ ಬಗ್ಗೆ ತಮ್ಮ "ಹಿಂದ್ ಸ್ವರಾಜ್" ಪುಸ್ತಕದಲ್ಲಿ ವಿಶ್ಲೇಷಣೆ ಮಾಡಿದ್ದಾರೆ.

ಆಂಗ್ಲ ವೈದ್ಯಕೀಯ ಚಿಕಿತ್ಸೆ ಔಷಧಗಳು ಅವೆಲ್ಲ ಯುರೋಪ್ ರಾಷ್ಟ್ರಗಳ ವಾತಾವರಣಕ್ಕೆ ಸರಿ ಹೊಂದಬಹುದೇನೋ, ಆದರೆ ಭಾರತದಲ್ಲಿ ನಿಸರ್ಗ ಚಿಕಿತ್ಸೆ ಅತ್ಯಂತ ಸಮಂಜಸವಾದುದು. ಮಾತ್ರವಲ್ಲ ನಿಸರ್ಗ ಚಿಕಿತ್ಸೆ ಎಲ್ಲ ಜನರಿಗೂ ಎಲ್ಲ ರಾಷ್ಟ್ರಗಳಲ್ಲಿಯೂ ಅನ್ವಯವಾಗುವಂತಹ ಅತ್ಯಂತ ಸರಳ, ಕಡಿಮೆ ವೆಚ್ಚದ ಚಿಕಿತ್ಸೆ ಎಂದು ಗಾಂಧೀಜಿ ಬಣ್ಣಿಸುತ್ತಿದ್ದರು. ಭಾರತೀಯ ವೈದ್ಯ ಪದ್ಧತಿಯಲ್ಲಿ ಸೂಕ್ತ ಸುಧಾರಣೆಯ ಅಗತ್ಯದ ಅರಿವು ಅವರಿಗಿತ್ತು.

ಆರೋಗ್ಯಕರವಾಗಿ ಬಾಳಲು ಮನುಷ್ಯ ನಿಸರ್ಗದ ವಿರುದ್ಧ ಹೋಗದೆ, ನಿಸರ್ಗ ನಿಯಮವನ್ನು ಅನುಸರಿಸಬೇಕು. ಶುದ್ಧವಾದ ಆಹಾರ, ನೀರು, ಗಾಳಿ ಸೇವಿಸುವ ವಾತಾವರಣ ಸೃಷ್ಟಿ ಮಾಡಿಕೊಳ್ಳಬೇಕು. ಯುಕ್ತವಾದ ರೀತಿಯಲ್ಲಿ ವ್ಯಾಯಾಮ ಮಾಡಬೇಕು. ಅಷ್ಟೇ ಮುಖ್ಯವಾಗಿ ಶುದ್ಧವಾದ ಹೃದಯ, ಮನಸ್ಸನ್ನು ಹೊಂದಿರಬೇಕು. ಇದರ ಬದಲು ಅಶುದ್ಧವಾದ ಆಹಾರ ಸೇವಿಸುವುದು, ಅನಾರೋಗ್ಯವನ್ನುಂಟುಮಾಡುವ ಪಾನೀಯಗಳನ್ನು ಕುಡಿಯುವುದು, ಕೆಟ್ಟ ಚಟಗಳಾದ ಧೂಮಪಾನ, ಗಾಂಜಾಸೇವನೆ ಇವುಗಳನ್ನೆಲ್ಲಾ

ತ್ಯಜಿಸಬೇಕು. ಮಾಡಬಾರದ್ದನ್ನು ಮಾಡುವುದು, ತಿನ್ನಬಾರದ್ದನ್ನು ತಿನ್ನುವುದು, ಕುಡಿಯಬಾರದನ್ನು ಕುಡಿಯುವುದು, ಇವುಗಳನ್ನು ಮಾಡುವುದರಿಂದ ರೋಗನಿರೋಧಕ ಶಕ್ತಿ ಕುಂದಿ ಒಂದಲ್ಲ ಒಂದು ದಿನ ಖಾಯಿಲೆಗೆ ಒಳಗಾಗಬೇಕಾಗುತ್ತದೆ. ನಂತರ ದುಬಾರಿ ನೋವಿನ ವೈದ್ಯಕೀಯ ಚಿಕಿತ್ಸೆಗೆ ಒಳಗಾಗುವುದು ಏಕೆ ಬೇಕು ? ಎಲ್ಲದರಲ್ಲೂ ಎಚ್ಚರಿಕೆ ವಹಿಸಿ ಆರೋಗ್ಯ ಕಾಪಾಡಿಕೊಳ್ಳಿ ಎಂದು ಗಾಂಧೀಜಿ ಎಚ್ಚರಿಸುತ್ತಿದ್ದರು.

ಗಾಂಧೀಜಿ ಪ್ರತಿಪಾದಿಸಿದ ವೈದ್ಯಕೀಯ ಪದ್ಧತಿಯ ಗುಣ ಲಕ್ಷಣಗಳನ್ನು ಈ ರೀತಿ ಸಾರಾಂಶಗೊಳಿಸಬಹುದು.

೧. ಶುದ್ಧವಾದ ಒಳ್ಳೆಯ ಆಲೋಚನೆಗಳನ್ನು ಮಾಡಬೇಕು; ಸೋಮಾರಿತನದ ಅಶುದ್ಧ ಕೆಟ್ಟ ಯೋಚನೆಗಳನ್ನು ಹೊಡೆದೋಡಿಸಬೇಕು.

೨. ಹಗಲು ರಾತ್ರಿ ಶುದ್ಧವಾದ ಗಾಳಿಯನ್ನು ಸೇವಿಸುವುದು ಅವಶ್ಯಕ.

೩. ದೈಹಿಕ ಶ್ರಮ ಮತ್ತು ಮಾನಸಿಕ ಶ್ರಮಗಳ ಮಧ್ಯೆ ಸಮತೋಲನ ಕಾಪಾಡಿಕೊಳ್ಳಬೇಕು.

೪. ನೆಟ್ಟಗೆ ನಿಲ್ಲುವುದು, ನೆಟ್ಟಗೆ ಕುಳಿತುಕೊಳ್ಳುವುದು, ನಡೆ ನುಡಿಯಲ್ಲಿ ಒಪ್ಪ ಓರಣವಾಗಿರುವುದು ಮತ್ತು ಶುಚಿಯಾಗಿರುವುದು, ಮಾತಿನಲ್ಲಿ ಒಂದು ಮನಸ್ಸಿನಲ್ಲಿ ಇನ್ನೊಂದು ಇರಬಾರದು.

೫. ಜನರ ಸೇವೆಗಾಗಿ ಬದುಕಲು ಊಟ ಮಾಡಬೇಕು, ನಮಗಾಗಿ ಅಥವಾ ಬರೀ ಸ್ವಾರ್ಥಕ್ಕಾಗಿ ಬದುಕಬಾರದು. ನಾವು ಊಟ ಮಾಡುವ ಆಹಾರ ನಮ್ಮ ಮನಸ್ಸನ್ನೂ ದೇಹವನ್ನೂ ಸುವ್ಯವಸ್ಥೆಯಲ್ಲಿಡುವಂತಿರಬೇಕು.

೬. ನಾವು ಊಟ ಮಾಡುವ ಆಹಾರ, ಕುಡಿಯುವ ನೀರು ಮತ್ತು ಸೇವಿಸುವ ಗಾಳಿ ಶುದ್ಧವಾಗಿರಬೇಕು.

ಪ್ರಕೃತಿ ಚಿಕಿತ್ಸೆಯು ಗ್ರಾಮೀಣ ಪ್ರದೇಶಗಳಿಗೆ ಮತ್ತು ಗ್ರಾಮೀಣ ಜನತೆಗೆ ಹೇಳಿ ಮಾಡಿಸಿದಂತಿದೆ. ಗ್ರಾಮೀಣ ಜನತೆ ಶುಚಿತ್ವಕ್ಕೆ ಮಹತ್ವ ನೀಡಬೇಕು. ಆರೋಗ್ಯವನ್ನು ಕಡೆಗಣಿಸಬಾರದು. ಕೆಟ್ಟ ಅಭ್ಯಾಸಗಳನ್ನು ಕೈ ಬಿಡಬೇಕು ಎಂದು ತಿಳಿಸಿದ ಗಾಂಧೀಜಿ, ಮಣ್ಣು, ನೀರು, ಶುದ್ಧ ಪರಿಸರ, ಒಳ್ಳೆಯ ಗಾಳಿ, ಬೆಳಕು, ಸೂರ್ಯ ಶಾಖಗಳ ಮೂಲಕ ಹೇಗೆ ಖಾಯಿಲೆಗಳಿಂದ ಗುಣಮುಖವಾಗಬಹುದು ಎಂದು ತಿಳಿಯಹೇಳಿದರು. ಸ್ಥಳೀಯವಾಗಿ ದೊರೆಯುವ ಗಿಡಮೂಲಿಕೆಗಳ ಉಪಯೋಗಗಳ ಬಗ್ಗೆ ಜನರಿಗೆ ಮನದಟ್ಟು ಮಾಡಿಕೊಳ್ಳಲು ಪ್ರಯತ್ನಪಟ್ಟರು. ಖಾಯಿಲೆ ಬರದಂತೆ ನೋಡಿಕೊಳ್ಳುವುದು ಬಹಳ ಮುಖ್ಯವಾದುದು. ಇದು ನಿಸರ್ಗ ಚಿಕಿತ್ಸೆಯ ಅವಿಭಾಜ್ಯ ಅಂಗವೆಂದರು. ಪರಿಪೂರ್ಣ ಆರೋಗ್ಯ ಕಾಪಾಡಿಕೊಳ್ಳಬೇಕಾದರೆ ಬ್ರಹ್ಮಚರ್ಯದ ಪಾತ್ರವೂ ಬಹಳ ಮುಖ್ಯ. ನೀವು ಏನೇ ಊಟ ಮಾಡಿದರೂ ಎಷ್ಟೇ ಪೌಷ್ಠಿಕವಾದರೂ ಎಷ್ಟೇ ಎಚ್ಚರಿಕೆ ವಹಿಸಿದರೂ ಯುಕ್ತವಾಗಿ ಬ್ರಹ್ಮಚರ್ಯ ಪಾಲನೆ ಮಾಡದೇ ಹೋದಾಗ ಒಂದು ಹಂತದಲ್ಲಿ ಆರೋಗ್ಯ ಸ್ಥಿಮಿತತೆ ಕಾಯ್ದುಕೊಳ್ಳಲು ಕಷ್ಟವಾಗಬಹುದು ಎಂದು ತಿಳಿಸಿದರು. ಸತತ ವೀರ್ಯನಷ್ಟದಿಂದ ದೇಹವು ಕ್ಷೀಣಿಸುತ್ತಾ ಹೋಗಿ ನಿಶ್ಶಕ್ತಿ, ರೋಗ ರುಜಿನಗಳಿಗೆ ಕಾರಣವಾಗುತ್ತದೆ. ಆದ್ದರಿಂದ ಅತಿ ಮಹತ್ವದ ವೀರ್ಯಶಕ್ತಿಯನ್ನು ದೇಹದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಾಯ್ದುಕೊಳ್ಳಬೇಕು.

ವೈದ್ಯಕೀಯ ಲಕ್ಷ್ಯವು ಎರಡು ಆಯಾಮಗಳನ್ನು ಒಳಗೊಂಡಿವೆ. ಅವುಗಳೆಂದರೆ : ಮೊದಲನೆಯದು ಚಿಕಿತ್ಸೆ. ಎರಡನೆಯದು ವ್ಯಾಧಿ ನಿರೋಧಕತೆ. ತಾವು ಪ್ರಾರಂಭಿಸಿದ ಆಶ್ರಮದಲ್ಲಿ ಗಾಂಧೀಜಿ ಚಿಕಿತ್ಸೆಗೆ ಸೌಲಭ್ಯಗಳನ್ನು ಒದಗಿಸಿದರಲ್ಲದೆ ರೋಗ ಬಾರದಂತೆ ಹೇಗೆ ಎಚ್ಚರಿಕೆ ತೆಗೆದುಕೊಳ್ಳಬೇಕು ಎಂಬುದರ ಬಗ್ಗೆ ತಿಳಿಯಹೇಳುತ್ತಿದ್ದರು.

## ಜನರ ಆಹಾರ :

ಗ್ರಾಮೀಣ ಜನರ ಆಹಾರ ಕ್ರಮದ ಬಗೆಗೂ ಗಾಂಧೀಜಿ ಚಿಂತನೆ ನಡೆಸಿದ್ದಾರೆ. ಗಾಂಧೀಜಿ ಅಪ್ಪಟ ಶಾಖಾಹಾರಿಗಳಾಗಿದ್ದರು. ಆಹಾರವು ಜನರ ಆರೋಗ್ಯ ಕಾಪಾಡುವಲ್ಲಿ ಮಹತ್ವದ ಪಾತ್ರವಹಿಸುವುದರಿಂದ ಸಾಕಷ್ಟು ಎಚ್ಚರಿಕೆ ಆಹಾರ ತಯಾರಿಕೆಯಲ್ಲಿ ಮತ್ತು ಊಟ ಮಾಡುವುದರಲ್ಲಿ ತೆಗೆದುಕೊಳ್ಳಬೇಕು ಎಂದು ತಿಳಿಸಿದರು. ಯುಕ್ತ ಆಹಾರ ಮತ್ತು ಸಮತೂಕ ಆಹಾರ ತೆಗೆದುಕೊಳ್ಳುವುದರಿಂದ ದೇಹದ ಆರೋಗ್ಯ ಕಾಯ್ದುಕೊಳ್ಳಲು ಸಹಾಯಕವಾಗುವುದಲ್ಲದೆ ಯಾವುದೇ ರೋಗಗಳು ಬಾರದಿರಲು ಸಹಾಯಕವಾಗುತ್ತದೆ. ಆಹಾರದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಪೋಷಕಾಂಶಗಳಿರಬೇಕು ಎಂದು ಹೇಳುತ್ತಿದ್ದರು. ಗ್ರಾಮೀಣ ಜನರು ಸ್ಥಳೀಯವಾಗಿ ದೊರೆಯುವ

ಸೌಲಭ್ಯಗಳನ್ನು ತರಕಾರಿ, ಸೊಪ್ಪುಗಳನ್ನು ಬೆಳೆದುಕೊಂಡು ಪೌಷ್ಟಿಕ ಹಾಗೂ ಆರೋಗ್ಯಪೂರ್ಣ ಆಹಾರ ಸೇವಿಸಬೇಕು ಎಂದು ಸಲಹೆ ನೀಡಿದ್ದಾರೆ. ಮೊದಮೊದಲು ಗಾಂಧೀಜಿ ಮೂರು ಹೊತ್ತೂ ಗುಜರಾತೀ ಮಾದರಿಯ ರುಚಿರುಚಿಯ ಪುಷ್ಕಳ ಊಟ ತಿಂಡಿಗಳಿಗೆ ಒಗ್ಗಿಹೋಗಿದ್ದರು. ಪತ್ನಿ ಕಸ್ತೂರ್‌ಬಾರವರೂ ರುಚಿಕರವಾಗಿಯೇ ಗುಜರಾತಿ ಅಡಿಗೆಗಳನ್ನು ಮಾಡುತ್ತಿದ್ದರು.

ಗಾಂಧೀಜಿ ಬ್ರಹ್ಮಚರ್ಯದ ಮಹತ್ವ ಅರಿತ ನಂತರ ತಮ್ಮ ಊಟ ತಿಂಡಿಗಳಲ್ಲಿ ಅನೇಕ ಮಾರ್ಪಾಟುಗಳನ್ನು ಮಾಡಿಕೊಂಡರು. ತಾವು ಅಭಿವೃದ್ಧಿ ಪಡಿಸಿದ್ದ ಆಶ್ರಮಗಳ ಅಡಿಗೆ ಕೋಣೆಯಲ್ಲಿ ಓರಣಕ್ಕೆ ಮತ್ತು ಸ್ವಚ್ಛತೆಗೆ ಎಲ್ಲಿಲ್ಲದ ಮಹತ್ವ ಕೊಡುತ್ತಿದ್ದರು. ಆಶ್ರಮದ ಬೇರೆ ಬೇರೆ ಜನರ ಬೇರ ಬೇರ ರುಚಿಗಳಿಗೆ ತಕ್ಕಂತೆ ಆಹಾರ ನೀಡಲು ಕಷ್ಟವಾಗುತ್ತಿತ್ತು. ಎಲ್ಲರಿಗೂ ಯೋಗ್ಯವಾದ ಸರಳ ಆಹಾರ ಪದ್ಧತಿಯನ್ನು ಅವರು ಸಿದ್ಧಗೊಳಿಸಿದರು. ತುಂಬ ಕಷ್ಟಕರವಾದ, ಹೆಚ್ಚು ಸಮಯ ಬೇಡುವ ಅಡಿಗೆ ವಿಧಾನವನ್ನು ಸರಳಗೊಳಿಸಿದರು. ಆಶ್ರಮದಲ್ಲಿ ಅಕ್ಕಿಯ ಗಂಜಿ, ಬ್ರೆಡ್ಡು, ಹಸಿ ತರಕಾರಿಗಳ ಸಲಾಡ್, ಬೇಯಿಸಿದ ತರಕಾರಿ, ಹಣ್ಣು, ಹಾಲು, ಮೊಸರುಗಳನ್ನು ಬಡಿಸಲಾಗುತ್ತಿತ್ತು. ಸಿಹಿತಿಂಡಿಗಳು ಮತ್ತು ಹಾಲಿನ ಪದಾರ್ಥಗಳ ಬಳಕೆ ಕಡಿಮೆಯಾಗಿ ಹೊಸ ಬೆಲ್ಲ ಮತ್ತು ಜೇನನ್ನು ಬಳಸಲಾಗುತ್ತಿತ್ತು.

ನಾಲಿಗೆಯ ಚಪಲಕ್ಕಾಗಿ ಊಟವನ್ನು ಮಾಡದೆ ದೇಹವನ್ನು ಆರೋಗ್ಯವಾಗಿಡಲು ಊಟ ಮಾಡಬೇಕೆಂಬ ಅಂಶ ಗಾಂಧೀಜಿಗೆ ಜಸ್ಟ್ ಅವರ 'ಮರಳಿ ನಿಸರ್ಗಕ್ಕೆ' ಎಂಬ ಪುಸ್ತಕವನ್ನು ಓದಿದ ಮೇಲೆ ತಿಳಿಯಿತು. ನಂತರ ಅವರು ಆಹಾರ ಕ್ರಮದಲ್ಲಿ ನಾನಾ ರೀತಿಯ ಪ್ರಯೋಗಗಳನ್ನು ಪ್ರಾರಂಭಿಸಿದರು. ಅದು ಅವರ ಜೀವಮಾನದ ಕ್ರಮವಾಯಿತು. ಕೆಲವು ಪ್ರಯೋಗಗಳಿಗೆ ಅಡುಗೆಯ ಅವಶ್ಯಕತೆಯೇ ಇರಲಿಲ್ಲ. ಇನ್ನೂ ಕೆಲವು ಗಾಂಧೀಜಿಯವರನ್ನು ತೊಂದರೆಗೆ ಒಳಗಾಗುವಂತೆ ಮಾಡಿದವು. ಒಮ್ಮೆ ಐದು ವರ್ಷಗಳವರೆಗ ಹಣ್ಣು ಹಂಪಲುಗಳನ್ನು ತಿನ್ನುತ್ತಾ ಜೀವಿಸಿದರು. ನಾಲ್ಕು ತಿಂಗಳು ಹಸಿ ಆಹಾರ ಮತ್ತು ಮೊಳಕೆ ಕಾಳುಗಳನ್ನು ತಿನ್ನುತ್ತಾ ಬಂದರು. ಅದರ ಫಲವಾಗಿ ಆಮಶಂಕೆಗೆ ಒಳಗಾದರು.

ಫೀನಿಕ್ಸ್ ಆಶ್ರಮದಲ್ಲಿ ಪ್ರಥಮ ಸತ್ಯಾಗ್ರಹಿಗಳ ತಂಡ ಬಂದಾಗ ಅವರಿಗೆ ರುಚಿಕರವಾದ ಪ್ರೀತಿಯ ಆಹಾರಗಳನ್ನೇ ಬಡಿಸಿದರು. ಒಂದು ರಾಶಿ ಚಪಾತಿ, ಟೊಮ್ಯಾಟೊ ಚಟ್ನಿ, ಅನ್ನ, ಪಲ್ಯ, ಖರ್ಜೂರದ ಸಿಹಿತಿಂಡಿ ತಯಾರಿಸುವುದನ್ನು ಗಾಂಧೀಜಿ ಕಲಿತಿದ್ದರು. ಅವರ ಅಡುಗೆ, ಆಹಾರ ಕ್ರಮ ನಾನಾ ರೀತಿಯ ಪ್ರಯೋಗ ಬದಲಾವಣೆಗಳಿಗೆ ಒಳಗಾಗುತ್ತಿತ್ತು.

ಕೆಲವು ಬಾರಿ ಬೇವಿನ ಚಟ್ನಿ, ಕೈಗಾಣದಲ್ಲಿ ದೊರೆಯುವ ಎಣ್ಣೆಯ ಹಿಂಡಿ ಮತ್ತು ಮೊಸರು, ಹುಣಿಸೇಹಣ್ಣು ಮತ್ತು ಬೆಲ್ಲ ಸೇರಿಸಿ ತಯಾರುಮಾಡಿದ ಶರಬತ್ತು, ಮಸಾಲೆ ಹಾಕದೇ ಬೇಯಿಸಿದ ಸೋಯಾಬೀನ್ಸ್, ಹಸಿರು ಸೊಪ್ಪುಗಳಿಂದ ತಯಾರಿಸಿದ ಸಲಾಡ್, ಹುರಿದ ಗೋಧಿಯ ತರಿಯ ಉಪ್ಪಿಟ್ಟು, ಹುರಿದ ಗೋಧಿ ಹಿಟ್ಟಿನ ಕಾಫಿ ಮುಂತಾದವುಗಳು ಸೇರಿದ್ದವು. ಅವರ ದೇಹ ಪ್ರಕೃತಿಯಲ್ಲಿ ಬದಲಾವಣೆಯಾಗದಂತೆ ಅದಕ್ಕೆ ಹೊಂದಾಣಿಕೆಯಾಗುವ ಆಹಾರಗಳನ್ನು ಸೇವಿಸುವ ಪ್ರಯೋಗ ಮಾಡುತ್ತಿದ್ದರು.

ಹಸಿರು ಸೊಪ್ಪುಗಳನ್ನು ನಾನಾ ರೀತಿಯಲ್ಲಿ ಯಥೇಚ್ಛವಾಗಿ ಬಳಸಿ ಎಂದು ಹೇಳುತ್ತಿದ್ದರು. ಗ್ರಾಮೀಣ ಜನರು ಅಪೌಷ್ಟಿಕತೆ, ನಿಶ್ಶಕ್ತಿ, ಮುಂತಾದ ಆರೋಗ್ಯದ ಸಮಸ್ಯೆಗಳಿಂದ ಬಿಡುಗಡೆಗೊಳ್ಳಲು ಸೊಪ್ಪನ್ನು ಉಪಯೋಗಿಸಿ ಎಂದು ತಿಳಿಸುತ್ತಿದ್ದರು. ಅನೇಕ ಗ್ರಾಮೀಣ ಜನರ ಆಹಾರದಲ್ಲಿ ಸಾಕಷ್ಟು ಜೀವಸತ್ವಗಳಿರುವುದಿಲ್ಲ. ಇದಕ್ಕೆ ಕಾರಣ ಬಡತನವೊಂದೇ ಅಲ್ಲ, ಸೂಕ್ತ ಆಹಾರದ ಬಗೆಗೆ ಸಾಕಷ್ಟು ಅರಿವು ಇಲ್ಲದಿರುವುದು, ಸಾಕಷ್ಟು ಪ್ರಮಾಣದಲ್ಲಿ ಸುಲಭವಾಗಿ ಸ್ಥಳೀಯವಾಗಿ ದೊರೆಯುವ ಸೊಪ್ಪು ತರಕಾರಿಗಳನ್ನು ಉಪಯೋಗಿಸುವ ಅವಶ್ಯಕತೆಯ ಬಗೆಗೆ ಗಾಂಧೀಜಿ ತಿಳಿಸುತ್ತಿದ್ದರು.

ಕಟ್ಟಾ ಅಹಿಂಸಾವಾದಿಗಳಾದ ಗಾಂಧೀಜಿ ಮಾಂಸಾಹಾರಿಗಳು ಮಾಂಸ ಸೇವನೆ ಮಾಡುವುದನ್ನು ವಿರೋಧಿಸಲಿಲ್ಲ. ಮೊಟ್ಟೆ, ಮೀನುಗಳಲ್ಲಿನ, ಮಾಂಸದ ಸೂಪಿನಲ್ಲಿನ ಜೀವಸತ್ವಗಳ ಬಗ್ಗೆ ಅವರು ತಿಳಿದುಕೊಂಡಿದ್ದರು. ಅಹಿಂಸೆಯನ್ನು ಸಂಪೂರ್ಣವಾಗಿ ಅನುಸರಿಸಲು ಸಾಧ್ಯವಿಲ್ಲ. ಲಾಗಾಯ್ತಿನಿಂದ ಮಾಂಸ ಸೇವನೆ ಮಾಡುತ್ತಿದ್ದವರನ್ನು ಅದು ತಪ್ಪು ಎಂದು ಗಾಂಧೀಜಿ ಎಂದೂ ಹೇಳಲಿಲ್ಲ. ಬೆಸ್ತರು ಮೀನು ಹಿಡಿಯುವ ಕೆಲಸ ಮಾಡುವವರು, ಅವರು ಮೀನು ತಿನ್ನುವುದರಲ್ಲಿ ಏನೂ ತಪ್ಪಿಲ್ಲ ಎಂದು ಹೇಳುತ್ತಿದ್ದರು.

ಆರೋಗ್ಯ ರಕ್ಷಣೆಯಲ್ಲಿ ಉಪವಾಸದ ಮಹತ್ವ ಗಾಂಧೀಜಿ ಮನಗಂಡಿದ್ದರು. ಸಾಂಸಾರಿಕ ಜೀವನದಲ್ಲಿ ಆತ್ಮಸಂಯಮದ ಅಗತ್ಯದ ಬಗ್ಗೆ ಗಾಂಧೀಜಿ ತಿಳಿಸಿ ಜನಸಂಖ್ಯಾ ನಿಯಂತ್ರಣಕ್ಕೆ ಆತ್ಮಸಂಯಮ ಅತ್ಯಂತ ಮಹತ್ವದ ಪಾತ್ರ ವಹಿಸುತ್ತದೆ. ಒಳ್ಳೆಯ

ಆರೋಗ್ಯ ರಕ್ಷಣೆಯಲ್ಲಿಯೂ ಉಪವಾಸ ಅಗತ್ಯವಾದುದು. ದೇಹದ ತೂಕ ಮಿತಿಮೀರಿ ಬೆಳೆಯದಂತೆ ನೋಡಿಕೊಳ್ಳಲು ಮತ್ತು ವ್ಯಕ್ತಿ ಲವಲವಿಕೆಯಿಂದ ಇರಲು ಉಪವಾಸ ಅತಿ ಅಗತ್ಯವೆಂದರು. ಜೀವನ ನಿರ್ವಹಣೆಯಲ್ಲಿ ಸಾಕಷ್ಟು ಆರ್ಥಿಕತೆ ಸಾಧಿಸಿ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳಬಹುದು ಎಂದು ತಿಳಿಸಿದ್ದಾರೆ.

## ಕೈಗಾರಿಕೆಗಳು :

ಗ್ರಾಮೀಣ ಪ್ರದೇಶದ ಸಮಸ್ಯೆಗಳಾದ ಕಠೋರ ಬಡತನ, ಅವಿದ್ಯಾವಂತ ಯುವಕರ ನಿರುದ್ಯೋಗ ಸಮಸ್ಯೆ, ಗ್ರಾಮೀಣ ಪ್ರದೇಶಗಳ ಹಿಂದುಳಿದಿರುವಿಕೆ, ಗ್ರಾಮೀಣ ಪ್ರದೇಶಗಳ ಸಂಪನ್ಮೂಲಗಳಿಗೆ ಆರ್ಥಿಕ ಬೆಲೆ ದೊರೆಯದೇ ಇರುವುದು ಮುಂತಾದ ಸಮಸ್ಯೆಗಳ ಪರಿಹಾರದಲ್ಲಿ ಗ್ರಾಮೀಣ ಕೈಗಾರಿಕೆಗಳು ಅತ್ಯಂತ ಮಹತ್ವದ ಪಾತ್ರ ವಹಿಸುತ್ತವೆ ಎಂದು ಗಾಂಧೀಜಿ ತಿಳಿಸಿದ್ದಾರೆ. ಅನೇಕ ಬಡ, ಸಣ್ಣ ಮತ್ತು ಅತಿ ಸಣ್ಣ ರೈತರ ದೃಷ್ಟಿಯಿಂದ ಹೇಳುವುದಾದರೆ ಅನೇಕ ಕಾರಣಗಳಿಂದ ಬರೀ ಕೃಷಿ ಅವರಿಗೆ ಲಾಭದಾಯಕ ವೃತ್ತಿಯಾಗಲು ಸಾಧ್ಯವಾಗುವುದಿಲ್ಲ. ದೈಹಿಕ ಶ್ರಮ ಬಯಸುವ ಕೃಷಿ ಅತ್ಯಂತ ಶ್ರೇಷ್ಠವಾದ ಕೆಲಸವೆಂದು ಗಾಂಧೀಜಿ ತಿಳಿಸಿದ್ದಾರೆ. ಆದರೆ ಅನೇಕ ರೈತರು ಕೃಷಿಯನ್ನು ಸಾಕಷ್ಟು ವರಮಾನವನ್ನು ನೀಡುವ ಕೆಲಸವಾಗಿ ಅಭಿವೃದ್ಧಿಪಡಿಸಿಕೊಂಡಿಲ್ಲ. ಮಳೆ ಮತ್ತು ನೀರಾವರಿ ಸೌಲಭ್ಯಗಳ ಕೊರತೆಯೂ ವ್ಯವಸಾಯ ಹಿಂದೆ ಬೀಳಲು ದೊಡ್ಡ ಕಾರಣವಾಗಿದೆ. ಒಂದು ರೀತಿಯಲ್ಲಿ ಹೇಳುವುದಾದರೆ ಅನೇಕ ಬಡ ರೈತರು, ಗ್ರಾಮೀಣರು, ಅರೆ ಹೊಟ್ಟೆಯ ಜೀವನ ಸಾಗಿಸುತ್ತಿದ್ದಾರೆ. ಇದರ ಜೊತೆಗೆ ಸಾಲದ ಬಲೆಯಲ್ಲಿ ಅನೇಕರು ಸಿಕ್ಕಿ ಒದ್ದಾಡುತ್ತಾರೆ. ಗ್ರಾಮೀಣ ಬದುಕು ಉತ್ತಮಗೊಳ್ಳಬೇಕಾದರೆ ಅವರಿಗೆ ಆದಾಯ ತರುವ ಕೃಷಿಯ ಜೊತೆಗೆ ಇತರ ಉದ್ಯೋಗಗಳು ಬೇಕು. ಇದರಿಂದ ಅನೇಕರು ಕೆಲಸ ಕಾರ್ಯವಿಲ್ಲದೆ ವ್ಯರ್ಥವಾಗಿ ಕಾಲ ಕಳೆಯುತ್ತಾರೆ. ಮಾನವ ಸಂಪನ್ಮೂಲ ಬಳಕೆಯಾಗದೆ ವ್ಯರ್ಥವಾಗಿ ಹೋಗುತ್ತದೆ. ಕೆಲಸವಿಲ್ಲದ ಅನೇಕರು ನಾನಾ ರೀತಿಯ ಚಿಂತೆ, ಜಗಳಗಳಲ್ಲಿ ತೊಡಗಿ ಸಮಾಜದ ಸೌಹಾರ್ದತೆಗೆ ಧಕ್ಕೆಯುಂಟಾಗಲು ಕಾರಣವಾಗುತ್ತದೆ. ಗ್ರಾಮೀಣರ ಬದುಕು ಉತ್ತಮವಾಗಬೇಕಾದರೆ ವ್ಯರ್ಥವಾಗಿ ಕಳೆದುಹೋಗುತ್ತಿರುವ ಮಾನವ ಶ್ರಮ ಸದ್ಬಳಕೆಯಾಗಬೇಕು. ತಾಂತ್ರಿಕವಾಗಿ ಯಾವುದೇ ಪ್ರಾವೀಣ್ಯತೆ ಪಡೆಯದೇ ಇರುವ ಗ್ರಾಮೀಣರಿಗೆ ಕುಶಲ ಕೈಗಾರಿಕೆಗಳು ಉದ್ಯೋಗಾವಕಾಶ ಕೊಡಲು ಸಾಧ್ಯ. ಖಾದೀ, ಗ್ರಾಮೀಣ ಕೈಗಾರಿಕೆಗಳು ಯುಕ್ತವಲ್ಲ ಎಂದು ಹೇಳುವವರಿಗೆ ಗಾಂಧೀಜಿ ಹೀಗೆ ಹೇಳಿದ್ದಾರೆ: ಅದೇನೆಂದರೆ ಯಾವ ಉದ್ಯೋಗಗಳು ಗ್ರಾಮೀಣ ಜೀವನವನ್ನು ಸುಧಾರಿಸುತ್ತವೆಯೋ, ಅವರ ಮಾನವ ಶಕ್ತಿಯನ್ನು ಸದ್ಬಳಕೆ ಮಾಡುತ್ತವೆಯೋ ಅವುಗಳನ್ನು ತಿಳಿಸಿಕೊಡಿ. ಅವುಗಳ ಸ್ಥಾಪನೆಗೆ ಕಾರ್ಯೋನ್ಮುಖವಾಗಿ ಜನರಿಗೆ ಉದ್ಯೋಗಾವಕಾಶಗಳನ್ನು ಒದಗಿಸಿಕೊಡೋಣ ಎಂಬ ವಾಸ್ತವಾಂಶದ ಪ್ರತಿಕ್ರಿಯೆ ನೀಡಿದ್ದಾರೆ.

ಖಾದಿ ಮತ್ತು ಗ್ರಾಮೀಣ ಕೈಗಾರಿಕೆಗಳು ಗ್ರಾಮೀಣಾಭಿವೃದ್ಧಿಯಲ್ಲಿ ಪರಸ್ಪರ ಪೂರಕವಾಗಿವೆ. ಒಟ್ಟಾಗಿಯೇ ಅವು ಅಭಿವೃದ್ಧಿಯಾಗಬೇಕು. ಗ್ರಾಮೀಣ ಕೈಗಾರಿಕೆಗಳನ್ನು ಸೌರಮಂಡಲಕ್ಕೆ ಹೋಲಿಸಿದಲ್ಲಿ ಕೈಚರಕ ಆ ಸೌರಮಂಡಲದ ಸೂರ್ಯನಿದ್ದಂತೆ. ಕೈ ತುಂಬ ಕೆಲಸವಿಲ್ಲದ ಜನರು ಸತತವಾಗಿ ನೂಲಲಿ. ಇದರಿಂದ ಅವರು ಒಂದು ಕೆಲಸದಲ್ಲಿ ಮಗ್ನರಾಗಲು ಸಾಧ್ಯವಾಗುತ್ತದೆ. ಮನಸ್ಸಿಗೆ ಹಿತವೆನಿಸುತ್ತದೆ. ದೈಹಿಕ ಭಾರ ಹೋಗಿ ದೇಹಕ್ಕೆ ಒಳ್ಳೆಯ ವ್ಯಾಯಾಮವಾಗುತ್ತದೆ. ಅಷ್ಟೋ ಇಷ್ಟೋ ವರಮಾನ ದೊರೆಯುತ್ತದೆ. ಕೈ ಚರಕಗಳ ಮೂಲಕ ನೂಲು ತೆಗೆಯುವುದರಿಂದ ನೇಯ್ಗೆ, ಬಣ್ಣ ತಯಾರಿಕೆ, ಇನ್ನಿತರ ಗ್ರಾಮೀಣ ಕೈಗಾರಿಕೆಗಳೂ ಬೆಳೆಯುತ್ತವೆ. ಇದರ ಜೊತೆಗೆ ಗ್ರಾಮೀಣ ಪ್ರದೇಶದಲ್ಲಿ ಶ್ರಮಾಧಾರಿತ ಎಣ್ಣೆಗಾಣಗಳು, ಬೆಲ್ಲ ಮತ್ತು ಬೆಲ್ಲದ ಉತ್ಪನ್ನದ ತಿನಿಸುಗಳು, ನಾರು ಕೈಗಾರಿಕೆ, ಬಿದಿರು ಮತ್ತು ಬಿದಿರಿನ ಉತ್ಪನ್ನದ ಕುಶಲ ಕೈಗಾರಿಕೆಗಳು, ಜೇನುಸಾಕಾಣಿಕೆ, ಸಾಬೂನು ತಯಾರಿಕೆ, ಸಾವಯವ ಗೊಬ್ಬರ ತಯಾರಿಕೆ, ಹಣ್ಣು ಮತ್ತು ಇತರ ಕೃಷಿ ಉತ್ಪನ್ನಗಳ ಸಂಸ್ಕರಣ, ಚರ್ಮ ಹದಗೊಳಿಸುವುದು, ಚಪ್ಪಲಿ ಮತ್ತು ಇತರ ಚರ್ಮಾಧಾರಿತ ಉತ್ಪನ್ನಗಳ ತಯಾರಿಕೆ, ಸೀಗೇಕಾಯಿಪುಡಿ, ಹಿಟ್ಟು ತಯಾರಿಸುವುದು, ಹಾಲಿನ ಉತ್ಪನ್ನಗಳ ತಯಾರಿಕೆ, ಕೊಟ್ಟಣದ ಅಕ್ಕಿ ತಯಾರಿಕೆ ಹೀಗೆ ನಾನಾ ರೀತಿಯ ಕುಶಲ ಕೈಗಾರಿಕೆಗಳು ಗ್ರಾಮೀಣ ಪ್ರದೇಶದಲ್ಲಿ ಸ್ಥಾಪನೆಯಾಗಬೇಕು. ಇದರಿಂದ ಕೃಷಿಯ ಕೆಲಸ ಮುಗಿದ ನಂತರ ಉಳಿದ ಸಮಯದಲ್ಲಿ ರೈತರು ಇತರೇ ಕೆಲಸ ಕಾರ್ಯಗಳಲ್ಲಿ ತೊಡಗಲು ಅನುಕೂಲವಾಗುತ್ತದೆ. ಇದರಿಂದ ಅವರಿಗೆ ಸಾಕಷ್ಟು ವರಮಾನವೂ ದೊರೆಯುತ್ತದೆ. ಬಡತನ, ನಿರುದ್ಯೋಗ ಸಮಸ್ಯೆಗಳು ನಿವಾರಣೆಯಾಗುತ್ತವೆ. ಅವರು ಆರ್ಥಿಕ ಸ್ವಾವಲಂಬನೆ ಸಾಧಿಸಲು ನೆರವಾಗುತ್ತದೆ.

## ಉಪಸಂಹಾರ :

ಗ್ರಾಮೀಣಾಭಿವೃದ್ಧಿಗೆ ಗಾಂಧೀಜಿ ಪ್ರತಿಪಾದಿಸಿರುವ ಬಹುಪಾಲು ವಿಚಾರಗಳು ೧೯೨೦ ರಿಂದ ೧೯೪೦ರ ಕಾಲಾವಧಿಯ ಗ್ರಾಮೀಣ ಸ್ಥಿತಿಗತಿಗಳ ಆಧಾರದಿಂದ ರೂಪಿತವಾಗಿವೆ. ಇಂದು ಎಲ್ಲಾ ಕ್ಷೇತ್ರಗಳಲ್ಲಿಯೂ ಸಾಕಷ್ಟು ಬದಲಾವಣೆಗಳಾಗಿವೆ. ತಂತ್ರಜ್ಞಾನ ದೃಶ್ಯಾವಳಿಯಂತೂ ಕಂಡು ಕೇಳರಿಯದ ರೀತಿಯಲ್ಲಿ ಬದಲಾವಣೆಯಾಗಿದೆ. ಸ್ವಾಭಾವಿಕವಾಗಿ, ಗಾಂಧೀ ವಿಚಾರ ಇಂದಿಗೆ ಎಷ್ಟು ಪ್ರಸ್ತುತ? ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಗಾಂಧೀಜಿ ತಮ್ಮ ವಿಚಾರವೇ ಅತ್ಯುತ್ತಮವೆಂದು ಎಂದೂ ವಾದ ಮಾಡಲಿಲ್ಲ. ಗ್ರಾಮೀಣರ ಬದುಕು ಹಸನಾಗಬೇಕು. ಅದರ ಸಾಧನೆಗಾಗಿ ಯಾವುದು ಒಳ್ಳೆಯದಿದೆಯೋ ಅದನ್ನು ಅನುಸರಿಸಿ. ಆದರೆ ಮಾರ್ಗ ಮತ್ತು ಗುರಿ ಒಳ್ಳೆಯವುಗಳಾಗಿರಬೇಕು ಎಂದು ಒತ್ತಿ ಹೇಳಿದರು. ಕೆಲವು ಯುಕ್ತ ಮಾರ್ಪಾಟುಗಳನ್ನು ಗಾಂಧೀ ವಿಚಾರದ ಚೌಕಟ್ಟಿನಲ್ಲಿ ಮಾಡಿಕೊಂಡರೆ, ಈ ವಿಚಾರವು ಎಂದೆಂದಿಗೂ ಪ್ರಸ್ತುತವೇ.




# ಪ್ರಾಚೀನ ಕರ್ನಾಟಕದಲ್ಲಿ ಸ್ಥಳೀಯ ಸಂಸ್ಥೆ

ಡಾ. ಎಂ.ಬಿ. ಪದ್ಮ

ಕರ್ನಾಟಕದ ಇತಿಹಾಸವು ಬದುಕಿನ ಎಲ್ಲಾ ವಿಭಾಗಗಳಲ್ಲಿ ಈ ನಾಡಿನ ಸ್ತ್ರೀ-ಪುರುಷರು ಗಳಿಸಿದ ಸಾಧನೆಗಳ ಸ್ತುತ್ಯರ್ಹವಾದ ಚಿತ್ರಣವನ್ನು ಎತ್ತಿತೋರುತ್ತದೆ. ಎಲ್ಲಾ ಶತಮಾನಗಳಲ್ಲೂ ಈ ನಾಡು ರಾಜಕೀಯ, ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಮತ್ತು ಕಲಾ ರಂಗಗಳಲ್ಲಿ ಜೀವಂತವಾದ ಹಾಗೂ ಚರಿತ್ರಾರ್ಹವಾದ ಸಂಪ್ರದಾಯಗಳನ್ನು ಮತ್ತು ಜೀವನೋತ್ಕರ್ಷಕವಾದ ಸಾಂಸ್ಕೃತಿಕ ಪರಂಪರೆಗಳನ್ನು ಸೃಷ್ಟಿಸಿ, ಬೆಳೆಸುವುದರ ಮೂಲಕ ಮನುಕುಲದ ಇತಿಹಾಸದಲ್ಲಿ ತನಗೆ ಸರ್ವವಿಧದಲ್ಲಿ ಅರ್ಹವಾದ ಮತ್ತು ಅಸೂಯೆ ಹುಟ್ಟಿಸುವಂತಹ ಒಂದು ಸ್ಥಾನವನ್ನು ಪಡೆದುಕೊಂಡಿದೆ. ನಿಜಕ್ಕೂ ಈ ನಾಡಿನ ಸಾಂಸ್ಕೃತಿಕ ಪರಂಪರೆ ಅದೆಷ್ಟು ವೈಭವೋಪೇತವಾದುದು!

ಕರ್ನಾಟಕದಲ್ಲಿ ಸ್ವಾತಂತ್ರ್ಯದ ಸವಿಯನ್ನು ಅನುಭವಿಸುವುದಕ್ಕೆ ತಕ್ಕ ಸದವಕಾಶವನ್ನು ಜನಸಾಮಾನ್ಯರಿಗೆ ಒದಗಿಸಿಕೊಟ್ಟಿದ್ದರಿಂದ ಮತ್ತು ಸ್ಥಳೀಯ ಜನಸಭೆಗಳಿಗೆ ಹೆಚ್ಚಿನ ಅಧಿಕಾರ, ಹಕ್ಕು-ಬಾಧ್ಯತೆಗಳನ್ನು ವಹಿಸಿಕೊಟ್ಟಿದ್ದರಿಂದ ಈ ರೀತಿಯಲ್ಲಿ ಪ್ರಶಂಸಾರ್ಹವಾದ ಸಾಧನೆಗಳನ್ನು ಸಾಧಿಸುವುದು ಈ ಜನರಿಗೆ ಸುಲಭಸಾಧ್ಯವಾಯಿತು ಎನ್ನಬಹುದು. ಮೊದಲಿನಿಂದಲೂ ಈ ನಾಡಿನಲ್ಲಿ ಕಟ್ಟಿ ಬೆಳೆಸಲಾಗಿದ್ದ ಸ್ಥಳೀಯ ಸಂಸ್ಥೆಗಳಲ್ಲಿ ಬಹುದೊಡ್ಡ ಪ್ರಮಾಣದಲ್ಲಿ ಅಧಿಕಾರ ವಿಕೇಂದ್ರೀಕರಣ ಮತ್ತು ಸ್ಥಳೀಯ ಆಡಳಿತದಲ್ಲಿ ಜನಸಾಮಾನ್ಯರು ಸಕ್ರಿಯವಾಗಿ ಪಾಲ್ಗೊಳ್ಳುವುದು ಎಂಬ ಲಕ್ಷಣಗಳು ಅತಿ ಮುಖ್ಯವಾಗಿದ್ದುವು. ತಮಗೆ ಸಂಬಂಧಿಸಿದ್ದ ಬಹು ಅವಶ್ಯಕವಾಗಿದ್ದ ಹಂತಗಳಲ್ಲಿ ಜನಸಾಮಾನ್ಯರೇ ನೇರವಾಗಿ ಆಡಳಿತವನ್ನು ನಡೆಸಿಕೊಂಡು ಹೋಗಲು ಮುಕ್ತ ಅವಕಾಶವಿದ್ದಿದ್ದರಿಂದ ಬಹುಮಟ್ಟಿಗೆ ರಾಜಪ್ರಭುತ್ವದ ಸ್ವೇಚ್ಛಾಡಳಿತದಿಂದುಂಟಾಗುತ್ತಿದ್ದ ಅನಿಷ್ಟ ಹಾಗೂ ಕೆಡುಕುಗಳ ಕಾವು, ಇಕ್ಕಟ್ಟು ಹಾಗೂ ತೊಂದರೆಗಳ ತಾಪ ಶಮನವಾಗಿದ್ದಿತು.

***ಪ್ರಾಚೀನ ಕರ್ನಾಟಕದಲ್ಲಿ ಆಡಳಿತದ ವಿಷಯದಲ್ಲಿ ಸ್ಥಳೀಯ ಸಂಸ್ಥೆಗಳ ದಕ್ಷತೆ, ಕಾರ್ಯಸಮರ್ಥತೆ, ಅನ್ಯೂನತೆ ಹಾಗೂ ಅಚ್ಚುಕಟ್ಟುತನವನ್ನು ಸುಸ್ಪಷ್ಟವಾಗಿ ಹಾಗೂ ಸಮಗ್ರವಾಗಿ ಪ್ರತಿಬಿಂಬಿಸುತ್ತಿದ್ದ ಶುದ್ಧ ದರ್ಪಣವೆಂದರೆ ಗ್ರಾಮಾಡಳಿತ ವ್ಯವಸ್ಥೆ.***

ಪ್ರಾಚೀನ ಕರ್ನಾಟಕದಲ್ಲಿ ಸ್ಥಳೀಯ ಸಂಸ್ಥೆಗಳು ಪಟ್ಟಣ, ಅಗ್ರಹಾರ ಹಾಗೂ ಗ್ರಾಮಗಳ ಆಡಳಿತವನ್ನು ನಡೆಸುವುದರಲ್ಲಿ ಮತ್ತು ಅವುಗಳ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಬಹು ಜವಾಬ್ದಾರಿಯುತವಾಗಿದ್ದ ಹಾಗೂ ಪರಿಣಾಮಕಾರಿಯಾಗಿದ್ದ ಪಾತ್ರಗಳನ್ನು ಬಹುದಕ್ಷತೆಯಿಂದ ನಿರ್ವಹಿಸುತ್ತಿದ್ದವು ಎಂಬ ವಿಷಯವು ಶಾಸನಾಧಾರಗಳಿಂದ ಸುಸ್ಪಷ್ಟವಾಗುತ್ತದೆ.

ಪಿ.ಕೆ. ಆಚಾರ್ಯ ಭಾಷಾಂತರಿಸಿರುವ ಮಾನಸಾರ ಕೃತಿಯ ಅನ್ವಯ, ಸುತ್ತಮುತ್ತ ಆರಾಮ ಹಾಗೂ ತೋಟಗಳಿಂದ ಸುತ್ತುವರಿದಿರುವ, ವಿವಿಧವಾಗಿರುವ ಜನರಿಗೆ ವಾಸಸ್ಥಳವಾಗಿರುವ, ಕೊಡುಕೊಳ್ಳುವ ಹಾಗೂ ಮಾರಾಟ ಮಾಡುವ ಚಟುವಟಿಕೆಗಳಲ್ಲಿ ತೊಡಗಿರುವ ಜನಸಂದಣಿಯಿಂದ ಕಿಕ್ಕಿರಿದು ಗಡಿಬಿಡಿ ಹಾಗೂ ಕೋಲಾಹಲದ ತಾಣವಾಗಿರುವ ಮತ್ತು ವಿಳು ದೇವತೆಗಳ ದೇಗುಲಗಳನ್ನು ಹೊಂದಿರುವ ಸ್ಥಾನವನ್ನು ಪುರ ಎನ್ನಲಾಗುತ್ತದೆ. ಪ್ರಾಚೀನ ಕರ್ನಾಟಕದಲ್ಲಿ ಹಲವಾರು ಪ್ರಮುಖ ಪಟ್ಟಣಗಳು ಇದ್ದವು ಎಂಬುದನ್ನು ಶಾಸನಗಳು ಖಚಿತಪಡಿಸುತ್ತವೆ. ಬಹುದೊಡ್ಡ ವ್ಯಾಪಾರ ಕೇಂದ್ರವಾಗಿದ್ದ ಮತ್ತು ಶ್ರೀಮದನಾದಿ ಪಟ್ಟಣವೆಂಬ ಹೊಗಳಿಕೆಗೆ ಪಾತ್ರವಾಗಿದ್ದ ಮುಳುಗುಂದ, ಮಹಾಪಟ್ಟಣ ಎಂಬುದಾಗಿ ಶಾಸನವೊಂದರಲ್ಲಿ ವರ್ಣಿತವಾಗಿರುವ ಪುಲಿಗೆರೆ, ಇಂದ್ರನ ಅಮರಾವತಿಗೆ ಸರಿಸಮವಾಗಿ ಸಂಪತ್ಸಮೃದ್ಧವಾಗಿದ್ದ ಲೊಕ್ಕಿಗುಂಡಿ ಮತ್ತು ಅನೇಕ ಧರ್ಮ, ಶಿಕ್ಷಣ ಕೇಂದ್ರ, ಸಾಮಾಜಿಕ ಚಟುವಟಿಕೆ ಹಾಗೂ ವ್ಯಾಪಾರ ವಹಿವಾಟುಗಳಿಗೆ ಮೂಲ ಕೇಂದ್ರವಂತಿದ್ದ ಮತ್ತು "ಪಟ್ಟಣಗಳ ತವರ್ಮನೆ' ಎಂಬ ಸ್ತುತಿಗೆ ಸರ್ವವಿಧದಲ್ಲೂ ಅರ್ಹವಾಗಿದ್ದ ಬಳ್ಳಿಗಾವೆ ಮುಂತಾದವು ಬಹುಮುಖ್ಯವಾಗಿದ್ದ ಪಟ್ಟಣಗಳಾಗಿದ್ದವು.

ಯುವರಾಜ ವಿಕ್ರಮಾದಿತ್ಯನು ಪುಲಿಗೆರೆಯ ಮಹಾಜನರಿಗೂ, ನಗರ ಅಥವಾ ವರ್ತಕ ಶ್ರೇಣಿಗೂ, ಹದಿನೆಂಟು ಪ್ರಕೃತಿ ಅಥವಾ ಜಾತಿಗಳಿಗೂ ಕೊಟ್ಟ ಆಚಾರ ವ್ಯವಸ್ಥೆ, ಅಂದರೆ ಹಕ್ಕು-ಬಾಧ್ಯತೆಗಳ ಅನುಮತಿ ಪತ್ರವನ್ನು ನೀಡಿದನು ಎಂಬ ವಿಷಯವನ್ನು ಒಳಗೊಂಡಿರುವ ಕ್ರಿ.ಶ. ೭೨೫ರ ಒಂದು ಶಾಸನವು ಪಟ್ಟಣದ ಸ್ಥಳೀಯ ಆಡಳಿತ ವಿಷಯಗಳ ಬಗ್ಗೆ ಬೆಳಕನ್ನು ಬೀರುತ್ತದೆ. ಈ ಶಿಲಾ ದಾಖಲೆಯಿಂದ ಪಟ್ಟಣಗಳಲ್ಲಿ ವಾಸಿಸುತ್ತಿದ್ದ ಬ್ರಾಹ್ಮಣರು, ವಿವಿಧ ಜಾತಿಯವರು ಹಾಗೂ ವರ್ತಕರೂ ತಮ್ಮದೇ ಆಗಿದ್ದ ಪ್ರತ್ಯೇಕ ಸಂಘಗಳನ್ನು ಬೆಳೆಸಿಕೊಂಡು ರಾಜಶಾಸನಗಳನ್ನು ತಮ್ಮ ವರ್ಗಗಳಿಗೆ ಸೇರಿದ್ದವರೆಲ್ಲರೂ ಸರಿಯಾಗಿ ಅನುಸರಿಸುವಂತೆ ನೋಡಿಕೊಳ್ಳುತ್ತಿದ್ದರು ಎಂಬುದು ವಿಶದವಾಗುತ್ತದೆ. ಪಾರಿಭಾಷಿಕವಾಗಿ ಈ ಬಗೆಯ ಸ್ಥಳೀಯ ಸಂಘಗಳನ್ನು ಶ್ರೇಣಿಗಳೆಂಬುದಾಗಿ ಗುರುತಿಸಲಾಗುತ್ತದೆ. ರಾಜಕೀಯ, ಸಾಮಾಜಿಕ, ಶೈಕ್ಷಣಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಅತ್ಯಂತ ಪ್ರಭಾವಶಾಲಿಗಳಾಗಿದ್ದ, ಘನಪಂಡಿತರಾಗಿದ್ದ ಹಾಗೂ ಅಗ್ರಸ್ಥಾನ ಪಡೆದಿದ್ದ ಬ್ರಾಹ್ಮಣರನ್ನು ಸ್ತುತಿಸಿರುವ ಅನೇಕ ಶಾಸನಗಳಿವೆ. ಹಾಗೆಯೇ ಶಿಲ್ಪಿ, ಕಮ್ಮಾರ, ಅಕ್ಕಸಾಲಿ, ಬಡಗಿ, ಕಂಚುಗಾರ, ಅಗಸ, ನಾವಿಂದ, ನೇಕಾರ ಅಥವಾ ಜೇಡ, ರೇಷ್ಮೆಯಂತಹ ನಯವಾಗಿದ್ದ ವಸ್ತ್ರಗಳನ್ನು ನೇಯುತ್ತಿದ್ದ ಪಟ್ಟಗಾರ, ಚಿಪ್ಪಿಗ, ತೆಲ್ಲಿಗ, ಕುಂಭಕಾರ, ಬಳೆಗಾರ, ಮೇದ, ತಂಬುಲಿಗ ಹಾಗೂ ಉಗುರ ಮೊದಲಾದ ವಿಭಿನ್ನ ವೃತ್ತಿಗಳನ್ನು ಕೈಗೊಂಡಿದ್ದವರ ಶ್ರೇಣಿಗಳ ಹೆಸರುಗಳನ್ನು ಹಲವಾರು ಶಾಸನಗಳು ಉಲ್ಲೇಖಿಸಿವೆ. ಈ ಶ್ರೇಣಿಗಳು ತಮ್ಮ-ತಮ್ಮ ಜಾತಿಗಳಿಗೆ ಸಂಬಂಧಿಸಿದ ಎಲ್ಲಾ ವ್ಯವಹಾರಗಳನ್ನು ನೋಡಿಕೊಳ್ಳುತ್ತಿದ್ದವು, ವ್ಯಾಜ್ಯಗಳನ್ನು ಪರಿಹರಿಸಿಕೊಳ್ಳುತ್ತಿದ್ದವು. ದೇಗುಲ ಹಾಗೂ ಇನ್ನಿತರ ಸಾರ್ವಜನಿಕ ಕಲ್ಯಾಣ ಕಾರ್ಯಗಳಿಗೆ ಸಲ್ಲಿಸಬಹುದಾದ ದತ್ತಿ ಹಾಗೂ ಸೇವೆಗಳ ಬಗ್ಗೆ ಚರ್ಚಿಸಿ ತೀರ್ಮಾನಕ್ಕೆ ಬರುತ್ತಿದ್ದುವು ಮತ್ತು ಸಭೆಗಳ ಈ ತೀರ್ಮಾನಗಳಿಗೆ ಎಲ್ಲರೂ ಬದ್ಧರಾಗಿರುತ್ತಿದ್ದರು. ಈ ತೀರ್ಮಾನಗಳನ್ನು ನಿರ್ಲಕ್ಷಿಸಿದ ಹಾಗೂ ಜಾತಿಯ ನಿಯಮಗಳನ್ನು ಉಲ್ಲಂಘಿಸಿದ ಸದಸ್ಯರಿಗೆ ಬಹಿಷ್ಕಾರ ಹಾಕಲಾಗುತ್ತಿದ್ದಿತು. ತಮ್ಮ ಜಾತಿಗಳಿಗೆ ಆಳುತ್ತಿದ್ದ ಪ್ರಭುಗಳಿಂದ ಅನ್ಯಾಯವಾದಾಗ ಸದಸ್ಯರೆಲ್ಲಾ ಸಾಮೂಹಿಕವಾಗಿ ಪ್ರತಿಭಟನೆ ನಡೆಸಿ, ದೊರೆಗಳು ನ್ಯಾಯ ನೀಡುವಂತೆ ಮಾಡುತ್ತಿದ್ದರು. ಉದಾಹರಣೆಗೆ ಕ್ರಿ.ಶ. ೯೯೧ರ ಶಾಸನವು ವೀಳೆಯದೆಲೆಗಳನ್ನು ಮಾರುತ್ತಿದ್ದ ಬಾಳ್ಗುಳಿಯ ತಂಬುಲಿಗರಿಗೆ ರಾಷ್ಟ್ರಕೂಟ ಚಕ್ರವರ್ತಿ ಕೃಷ್ಣ ವಿಧಿಸಿದ್ದ ತೆರಿಗೆಯನ್ನು ಮುಂದೆ ಆಳಲು ಬಂದ ಚಾಳುಕ್ಯರು ಹೆಚ್ಚಿಸಿದಾಗ, ಆ ತಂಬುಲಿಗರು ಇತರರೊಡನೆ ಸೇರಿ ನೇರವಾಗಿ ಚಾಳುಕ್ಯ ಚಕ್ರವರ್ತಿ ಆಹವಮಲ್ಲನನ್ನು ಕಂಡು ಅಹವಾಲು ಮಾಡಿ, ಅವನು ಹಿಂದಿನ ತೆರಿಗೆಯನ್ನು ಮತ್ತೆ ಜಾರಿಗೆ ತರುವಂತೆ ಮಾಡಿದನು ಎಂಬುದು ಸಾಮಾಜಿಕವಾಗಿ ಸ್ವಾರಸ್ಯಕರವಾದ ವಿಷಯವನ್ನು ಒಳಗೊಂಡಿದೆ.

ಸಮಸ್ಯಾ ವಿಷಯಗಳು ಎಲ್ಲರಿಗೂ ಅನ್ವಯವಾದಾಗ ಪಟ್ಟಣಗಳ ಸ್ಥಳೀಯ ಸಂಘ-ಸಂಸ್ಥೆಗಳ ಸದಸ್ಯರೆಲ್ಲಾ ಒಟ್ಟಾಗಿ ಸೇರಿ, ಚರ್ಚಿಸಿ, ನಿರ್ಧಾರ ಕೈಗೊಳ್ಳುತ್ತಿದ್ದರು. ಪಟ್ಟಣಗಳ ಸ್ಥಳೀಯ ಆಡಳಿತ, ಸಾಮಾಜಿಕ-ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಬ್ರಾಹ್ಮಣರಷ್ಟೇ ವರ್ತಕರೂ ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತಿದ್ದರು. ಪ್ರಾಚೀನ ಕರ್ನಾಟಕದ ವರ್ತಕರಲ್ಲಿ ಮುಮ್ಮುರಿದಂಡ (ಅಥವಾ ಮುಮ್ಮುರಿ ತಂಡ), ಸೆಟ್ಟಿ, ಸೆಟ್ಟಿಗುತ್ತ, ಬೀರ, ಬೀರವಣಿಗ, ಗವರೆ, ಗಾತ್ರಿಕ, ವೇಳೆಕಾರ ಮುಂತಾದ ಅನೇಕ ಪಂಗಡಗಳಿದ್ದವು. ಇವರುಗಳು ತಮ್ಮದೇ ಆಗಿದ್ದ ಸಂಘಗಳನ್ನು ಕಟ್ಟಿಕೊಂಡಿರುತ್ತಿದ್ದರು. ಈ ಬಗೆಯ ಸಂಘಗಳನ್ನು ಸ್ಥೂಲವಾಗಿ ಶ್ರೇಣಿಗಳೆಂಬುದಾಗಿ

ಕರೆಯಬಹುದು. ಈ ಶ್ರೇಣಿಗಳಲ್ಲಿ ಬಹುಮುಖ್ಯವೂ ಪ್ರಸಿದ್ಧವೂ ಆಗಿದ್ದ ಶ್ರೇಣಿ ಎಂದರೆ ಅಯ್ಯಾವೊಳೆ ಐನೂರ್ವರ್ ಎಂಬ ಹೆಸರಿನ ಶ್ರೇಣಿ. ಹಿಂದೆ ಐಹೊಳೆ ಅತ್ಯಂತ ಪ್ರಮುಖವಾಗಿದ್ದ ವ್ಯಾಪಾರ ಕೇಂದ್ರವಾಗಿದ್ದ, ಅಲ್ಲಿದ್ದ ಪ್ರಧಾನ ಐನೂರ್ವ ವರ್ತಕರು ದೇಶ-ವಿದೇಶಗಳಲ್ಲಿ ವ್ಯಾಪಾರ ಚಟುವಟಿಕೆಗಳನ್ನು ನಡೆಸುತ್ತಿದ್ದಿರಬೇಕು. ಅನಂತರ ಬಂದ ವರ್ತಕರು ಅವರನ್ನೇ ತಮ್ಮ ಮೂಲಪುರುಷರು ಎಂಬುದಾಗಿ ಎಣಿಸಿದ್ದರಿಂದ ಆ ಸಂಘಕ್ಕೆ ಅಯ್ಯವೊಳೆ ಐನೂರ್ವರ್ ಶ್ರೇಣಿ ಎಂಬ ಹೆಸರು ಉಂಟಾಗಿರಬೇಕು. ವರ್ತಕರು ದಾನವನ್ನು ನೀಡುವಾಗಲೆಲ್ಲಾ ಈ ಮೂಲಪುರುಷರಿಗೆ ಮೊದಲು ಗೌರವವನ್ನು ಸಲ್ಲಿಸುತ್ತಿದ್ದಿರಬೇಕು ಎಂಬುದು ಕ್ರಿ.ಶ. ೧೦೫೪ ಹಾಗೂ ಇತರ ಶಾಸನಗಳಲ್ಲಿ ಸೂಚಿತವಾಗಿದೆ.

ಶಾಸನಾಧಾರಗಳ ಅನ್ವಯ ಐನೂರು ಶಾಸನಗಳು ಈ ಐನೂರ್ವರ ಸಾಧನೆ ಹಾಗೂ ಪ್ರಶಸ್ತಿಗಳನ್ನು ಪ್ರಶಂಸಿಸಿವೆ. ಅವರು ತಮ್ಮನ್ನು 'ಭಗವತೀಲಬ್ಧ ವರಪ್ರಸಾದರು' ಮತ್ತು 'ವಾಸುದೇವ ಖಂಡಳಿ ಮೂಲಭದ್ರ ವಂಶೋದ್ಭವ'ರೆಂಬುದಾಗಿ ವರ್ಣಿಸಿಕೊಳ್ಳುತ್ತಿದ್ದರು. ಮೂವತ್ತೆರಡು ವೇಳಾಪುರಗಳಲ್ಲಿ, ಹದಿನೆಂಟು ಪಟ್ಟಣಗಳಲ್ಲಿ, ಅರವತ್ತನಾಲ್ಕು ಯೋಗಪೀಠಗಳಲ್ಲಿ ಹಾಗೂ ಘಟಿಕಾಸ್ಥಾನಗಳಲ್ಲಿ ಬಹು ಪ್ರಭಾವಶಾಲಿಗಳಾಗಿದ್ದರು. ಇವರು ಸಾಮಾನುಗಳನ್ನು ವಾಹನಗಳ ಮೇಲೆ ಹೇರಿಕೊಂಡು ಅಥವಾ ತಲೆಗಳ ಮೇಲೆ ಹೊತ್ತುಕೊಂಡು ಹೋಗಿ ದೇಶ-ವಿದೇಶಗಳಲ್ಲಿ ಮಾರಾಟ ಮಾಡುತ್ತಿದ್ದರು. ಇವರ ದಾನಶೀಲತೆ ಸಾಗೂ ಧರ್ಮಸಹಿಷ್ಣುತೆ ಅನುಕರಣವಾಗಿದ್ದಿತು. ಇವರದು ಗುಡ್ಡಶಾಸ್ತ್ರ, ಗುಡ್ಡಧ್ವಜ ಮತ್ತು ವೀರಬಣಂಜು ಧರ್ಮ. ಇವರು ಮಹಾಶೂರರಾಗಿದ್ದರು.

ಇವರಂತೆಯೇ ಮುಂದೆ ಬಂದ ಎಷ್ಟೋ ವರ್ತಕರು ಬಹು ಧೈರ್ಯಶಾಲಿಗಳೂ, ಅಪ್ರತಿಮ ಶೂರರೂ ಆಗಿದ್ದರು ಎಂಬುದನ್ನು ಶಾಸನಗಳು ವಿವರಿಸಿವೆ. ಮತ್ತು ಇಂಥವರನ್ನು ವೀರಬಣಂಜುಗಳೆಂಬುದಾಗಿ ಕರೆದು, ಅವರು ತಕ್ಕಡಿ ಹಿಡಿದು ವ್ಯಾಪಾರ ಮಾಡುವುದರಲ್ಲಿ ಮಾತ್ರ ಕುಶಲಿಗಳಾಗಿರಲಿಲ್ಲ, ಜೊತೆಗೆ ದೈಹಿಕ ಹಾಗೂ ಮಾನಸಿಕ ಸ್ಥೈರ್ಯ-ಪರಾಕ್ರಮಗಳಿಂದ ಕತ್ತಿ ಹಿಡಿದು ಕಾದಾಡುವುದರಲ್ಲೂ ನಿಷ್ಣಾತರಾಗಿದ್ದರು ಎಂಬುದಾಗಿ ಕೊಂಡಾಡಿವೆ. ಕಳ್ಳ-ಕಾಕರ ತಂಡಗಳಿದ್ದ ಕಾಲದಲ್ಲಿ ವರ್ತಕರ ಸಂಗಡ ಸೈನಿಕರೂ ಹೋಗುತ್ತಿರಬೇಕು. ಸಂಬಂಧಪಟ್ಟ ವರ್ತಕ ಶ್ರೇಣಿಗಳು ತಮ್ಮದೇ ಆಗಿದ್ದ ಪ್ರತ್ಯೇಕ ಸೇನೆಗಳನ್ನು ಇಟ್ಟುಕೊಂಡಿದ್ದಿರಬೇಕು. ಕಳ್ಳರು ಸುಲಿಗೆ ಮಾಡುವ ಉದ್ದೇಶದಿಂದ ಮೇಲೇರಿ ಬಂದಾಗ ವರ್ತಕರ ಸೈನ್ಯವು ಅವರೊಡನೆ ಹೋರಾಟವನ್ನು ನಡೆಸಿದ ಕಥೆ ಹೇಳುವ ನಯಸೇನನ ಧರ್ಮಾಮೃತ ಕೃತಿ ಹಾಗೂ ೯-೧೦ನೇ ಶತಮಾನಗಳ ಹಲವಾರು ದಾಖಲೆಗಳು ಸ್ಪಷ್ಟವಾಗಿ ಸೂಚಿಸುತ್ತವೆ. ಇಷ್ಟು ಮಾತ್ರವಲ್ಲದೆ, ಯುದ್ಧಗಳು ಸಂಭವಿಸಿದಾಗ ವರ್ತಕ ಶ್ರೇಣಿಗಳು ತಮ್ಮ ವ್ಯಾಪಾರ ಚಟುವಟಿಕೆಗಳ ರಕ್ಷಣೆಗಾಗಿ ನೇಮಿಸಿಕೊಂಡಿರುತ್ತಿದ್ದ ರಕ್ಷಕ ಭಟರ ಸೇನೆಯನ್ನು ತಮ್ಮತಮ್ಮ ದೊರೆಗಳ ನೆರವಿಗಾಗಿ ಕಳುಹಿಸಿಕೊಡುತ್ತಿದ್ದುವು. ಇಂತಹ ಸೈನ್ಯವನ್ನೇ ಶ್ರೇಣಿಬಲ ಎಂಬುದಾಗಿ ಕರೆಯಲಾಗುತ್ತಿದ್ದಿತು.

ಈ ವೀರಬಣಂಜುಗಳು ಬಹು ಪ್ರಭಾವಶಾಲಿಗಳಾಗಿದ್ದರು. ಇವರನ್ನು ಆಳುತ್ತಿದ್ದ ಪ್ರಭುಗಳು ತಮ್ಮ ಅಧಿಕಾರದ ಮೂಲಸ್ತಂಭವಾಗಿ ಭಾವಿಸಿ ಬಹು ಗೌರವಿಸುತ್ತಿದ್ದರು. ಆಯಾಯ ಪ್ರದೇಶಗಳ ಸಮಸ್ತ ವ್ಯಾಪಾರ, ವಹಿವಾಟುಗಳೆಲ್ಲಾ ಇವರ ಅಧೀನದಲ್ಲಿದ್ದುದರಿಂದ ಇವರು ಬಹು ಸಿರಿವಂತರಾಗಿರುತ್ತಿದ್ದರಲ್ಲದೆ, ದೊರೆಗಳ ಮೇಲೆ ತಮ್ಮ ಪ್ರಭಾವವನ್ನು ಬೀರಲು ಶಕ್ತರಾಗಿದ್ದರು. ಇವರು ರಾಜ್ಯಾಡಳಿತಕ್ಕೆ, ನೇರವಾಗಿ ತಮ್ಮ ದೇಶದ ಅಭಿವೃದ್ಧಿಗೆ ಕಾರಣರಾಗಿರುತ್ತಿದ್ದರಲ್ಲದೆ, ಅನೇಕಾನೇಕ ಸಾರ್ವಜನಿಕ ಕಲ್ಯಾಣ ಕಾರ್ಯಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡು ದೇಗುಲ, ಕೆರೆ-ಕುಂಟೆ-ಕಾಲುವೆ, ಶಿಕ್ಷಣ ಕೇಂದ್ರ ಇತ್ಯಾದಿಗಳನ್ನು ನಿರ್ಮಿಸಿ ಉದಾರವಾಗಿ ದಾನದತ್ತಿಗಳನ್ನು ನೀಡುತ್ತಿದ್ದರೆಂಬುದಾಗಿ ಶಾಸನಗಳು ಮುಕ್ತಕಂಠದಿಂದ ಇವರನ್ನು ಕೊಂಡಾಡಿವೆ.

೮ನೆಯ ಶತಮಾನದ ಹಲವು ಶಿಲಾದಾಖಲೆಗಳು ದೇಗುಲಗಳ ನಿರ್ಮಾಣ, ದಾನ ನೀಡುವುದು, ಕೆರೆ-ತಟಾಕ-ತೋಪುಗಳನ್ನು ಕಟ್ಟಿ ಬೆಳೆಸುವುದೇ ಮುಂತಾದ ಸಾರ್ವಜನಿಕ ಚಟುವಟಿಕೆಗಳು ವರ್ತಕ ಶ್ರೇಣಿಗಳ ಸಮ್ಮುಖದಲ್ಲಿ ನಡೆಯುತ್ತಿದ್ದವು. ಅವುಗಳಲ್ಲಿ ನಗರ ಅಥವಾ ನಖರ ಎಂಬ ಶ್ರೇಣಿ ಪ್ರಮುಖವಾಗಿದ್ದಿತು. ಅದು ಸಾಮೂಹಿಕ ಪಟ್ಟಣ ಸಭೆಗಳ ಕಾರ್ಯಕಲಾಪಗಳಲ್ಲಿ ಬಹು ಪ್ರಭಾವಶಾಲಿಯಾಗಿರುತ್ತಿದ್ದಿತು. ರಾಜರು ದತ್ತಿಗಳನ್ನು ಕೊಡುವಾಗ ಮಹಾರಾಜರಲ್ಲದೆ ಕರಗಳನ್ನು ಸಾಕ್ಷಿಯಾಗಿ ಇಟ್ಟುಕೊಂಡೇ ಅರ್ಪಣೆಗಳನ್ನು ಮಾಡುತ್ತಿದ್ದರು. ಗಂಗರ ದೊರೆ ೩ನೆಯ ಮಾಧವನಿಂದ ಹಳ್ಳಿಗಳನ್ನು ದಾನವಾಗಿ ಸ್ವೀಕರಿಸಿದ್ದ ಈರ್ವರು ಬ್ರಾಹ್ಮಣರಿಗೆ ನಖರರ ಆದಾಯದ ಒಂದು ಭಾಗವನ್ನು ನೀಡಲಾಯಿತು ಎಂಬುದಾಗಿ ಹಾಸನದ ಶಾಸನವೊಂದರಲ್ಲಿ ನಮೂದಿಸಲಾಗಿದೆ. ಬಳ್ಳಿಗಾವೆಯ ದೇವಾಲಯವೊಂದು ಜೀರ್ಣವಾಗಿ ಹೋಗಿದ್ದಾಗ ಆ ಪಟ್ಟಣದ ವರ್ತಕರು ಹಾಗೂ ಬೇರೆ ಬೇರೆ ಸ್ಥಾನಾಧಿಪತಿಗಳು ಸಭೆ ಸೇರಿ,

ಅವರಲ್ಲಿ ಅಲ್ಲಿಯ ಪಟ್ಟಣಸ್ವಾಮಿ ಮೇಟಿಸೆಟ್ಟಿ ಹಾಗೂ ಇತರ ನಗರಗಳು ಚರ್ಚಿಸಿ ಕೈಗೊಂಡ ತೀರ್ಮಾನವನ್ನು ಊರಿನವರಲ್ಲದೆ, ಹೊರಗಿನ ವ್ಯಾಪಾರಿಗಳು ಒಪ್ಪಿಕೊಂಡರು ಎಂಬ ವಿಷಯವನ್ನು ಎತ್ತಿ ತೋರಿ ನಖರ ಹಾಗೂ ಇತರ ವರ್ತಕ ಶ್ರೇಣಿಗಳು ಎಷ್ಟು ಪ್ರಬಲವಾಗಿದ್ದುವು ಎಂಬುದನ್ನು ಸುವಿದಿತಗೊಳಿಸುತ್ತವೆ.

ಈ ವರ್ತಕ ಶ್ರೇಣಿಗಳ ಮುಖ್ಯಸ್ಥನನ್ನು ಪಟ್ಟಣಸ್ವಾಮಿ, ವಡ್ಡವ್ಯವಹಾರಿ ಎಂಬುದಾಗಿ ಶಾಸನಗಳಲ್ಲಿ ಗುರುತಿಸಲಾಗಿದೆ. ಪೃಥ್ವಿಸೆಟ್ಟಿ ಎಂಬುದು ಎಲ್ಲಕ್ಕಿಂತ ದೊಡ್ಡ ಪದವಿಯಾಗಿದ್ದಿರಬೇಕು. ವರ್ತಕರಲ್ಲಿ ಶ್ರೀಮಂತನೂ, ವೃದ್ಧನೂ ಹಾಗೂ ವಿವೇಕಿಯೂ ಆಗಿದ್ದ ವ್ಯಕ್ತಿಗೆ ಆಯಾಯ ಪಟ್ಟಣಗಳ ಪ್ರಭುಗಳು ಈ ಪಟ್ಟಣಸ್ವಾಮಿ ಪಟ್ಟವನ್ನು ಕೊಡುತ್ತಿದ್ದರು. ಯಾವುದಾದರೂ ವಿಷಯದ ಬಗ್ಗೆ ತೀರ್ಮಾನ ತಗೆದುಕೊಳ್ಳಬೇಕಾದಾಗ ಎಲ್ಲಾ ವರ್ತಕರೂ ಸೇರಿ ಪಟ್ಟಣಸ್ವಾಮಿಯ ಅಧ್ಯಕ್ಷತೆಯಲ್ಲಿ ಸಭೆ ನಡೆಸಿ, ಚರ್ಚಿಸಿ ಒಂದು ನಿರ್ಧಾರಕ್ಕೆ ಬರುತ್ತಿದ್ದರು ಎಂಬುದನ್ನು ಶಾಸನಗಳು 'ಅಶೇಷ ನಗರಮಿರ್ದ್ದು', 'ಐನೂರ್ವರು ನರಕಮುಮಿರ್ದ್ದು', 'ಮಹಾನಾಡಾಗಿ ಕುಳ್ಳಿರ್ದ್ದು' ಎಂಬುದಾಗಿ ತಿಳಿಸುವುದರ ಮೂಲಕ ಸ್ಪಷ್ಟಪಡಿಸುತ್ತವೆ. ಈ ಸಾಮುದಾಯಿಕ ನಿರ್ಧಾರಗಳನ್ನು ಮತ್ತು ಸಮಯಧರ್ಮ ಎಂಬುದಾಗಿ ಕರೆಯಲಾದ ಶ್ರೇಣಿಗಳ ಕಟ್ಟಳೆಗಳನ್ನು ಮೀರುವ ಸದಸ್ಯನಿಗೆ ಬಹಿಷ್ಕಾರದ ಶಿಕ್ಷೆಗೆ ಗುರಿಪಡಿಸಲಾಗುತ್ತಿದ್ದಿತು. ಈ ಸಂಘಗಳ ಅಧಿಕಾರ ಸೂಚಕ ಆಯುಧವಾಗಿದ್ದ ವಜ್ರದ ಬಯಸನಿಕೆ ಎಂಬ ಸಂಕೇತದ ಸಾಕ್ಷಿಯಾಗಿ ಕಾರ್ಯಕಲಾಪಗಳನ್ನು ನಡೆಸಲಾಗುತ್ತಿದ್ದಿತು ಎಂಬುದಾಗಿ ದೇಸಾಯಿ ಪಾಂಡುರಂಗರಾಯರು ಅಭಿಪ್ರಾಯಪಟ್ಟಿದ್ದಾರೆ.

ಈ ವರ್ತಕ ಶ್ರೇಣಿಗಳು ಖರ್ಚುಗಳಿಗಾಗಿ ತಮ್ಮತಮ್ಮ ಸದಸ್ಯರುಗಳಿಂದ ಸುಂಕ ಅಥವಾ ತೆರಿಗೆ ರೂಪವಾಗಿ ಹಣವನ್ನು ಸಂಗ್ರಹಿಸುವುದು; ಅದನ್ನು ದೇಗುಲ, ಕೆರೆ-ತಟಾಕ, ಆರಾಮ ನಿರ್ಮಾಣ, ಅವುಗಳಿಗೆ ದತ್ತಿ ನೀಡುವುದು ಮತ್ತು ಕೆರೆಗಳ ದುರಸ್ತಿ ಹಾಗೂ ಇನ್ನಿತರ ಕಾರ್ಯಗಳಿಗಾಗಿ 'ಬಿತ್ತುವಾಟ' ಎಂಬುದಾಗಿ ವಿವರಿಸಲಾದ ಭೂಮಿದಾನ ಮಾಡುವುದು ಮುಂತಾದ ಸಾರ್ವಜನಿಕ ಯೋಗಕ್ಷೇಮಕ್ಕಾಗಿ ವಿನಿಯೋಗಿಸುವುದು; ಪರಸ್ಥಳಗಳಿಂದ ಬಂದ ವ್ಯಾಪಾರಿಗಳಿಗೆ ಎಲ್ಲಾ ವಿಧವಾದ ಸೌಕರ್ಯ-ಸೌಲಭ್ಯಗಳನ್ನು ಏರ್ಪಡಿಸಿ ಕೊಡುವುದು, ಅಪುತ್ರಕರಾಗಿ ಮೃತ್ಯುವಶರಾದವರ ಆಸ್ತಿಯ ಸದ್ವಿನಿಯೋಗ ಮಾಡುವುದು, ತಮ್ಮ ಸದಸ್ಯರು ಸತ್ತುಹೋದಾಗ ನಿರ್ಗತಿಕರಾದ ಅವರ ಕುಟುಂಬದವರ ಜವಾಬ್ದಾರಿಯನ್ನು ಒಪ್ಪಿಕೊಂಡು ನಿರ್ವಹಿಸಿವುದು, ದತ್ತಿಗಳ ಹಣಕ್ಕೆ ಧರ್ಮದರ್ಶಿಗಳಾಗಿ ಬ್ಯಾಂಕುಗಳಂತೆ ಹಣವನ್ನು ಬಡ್ಡಿಗೆ ಸಾಲವಾಗಿ ನೀಡಿ ವಸೂಲು ಮಾಡುವುದು, ಎಲ್ಲಕ್ಕಿಂತ ಆಳುವ ಪ್ರಭು ತಮ್ಮ ಮೇಲೆ ಹೆಚ್ಚಿನ ಕರ ಹೇರದಂತೆ ನೋಡಿಕೊಳ್ಳುವುದು; ಹಾಗೇನಾದರೂ ಅನ್ಯಾಯವಾದಾಗ ಒಟ್ಟಾಗಿ ರಾಜನ ಬಳಿಗೆ ಹೋಗಿ ವಾದಿಸಿ, ಅವನಿಗೆ ಮನದಟ್ಟಾಗುವಂತೆ ಮಾಡಿ, ಹೆಚ್ಚಾಗಿ ವಿಧಿಸಲಾಗಿದ್ದ ತೆರಿಗೆಯನ್ನು ರದ್ದುಪಡಿಸುವಂತೆ ಮಾಡುವುದು; ವ್ಯಾಪಾರ ವ್ಯವಹಾರಗಳನ್ನು ಕ್ರಮಪಡಿಸುವುದು; ಕಿರಿಯರಿಗೆ ಸೂಕ್ತ ತರಬೇತನ್ನು ನೀಡಿ ಯೋಗ್ಯರನ್ನಾಗಿಸುವುದು; ಸಂತೆ-ಪೇಟೆ ಜಾತ್ರೆಗಳನ್ನು ನಿಯೋಜಿಸಿ ನಡೆಸುವುದು; ಸರಕುಗಳ ಬೆಲೆ, ಕೆಲಸಗಾರರ ವೇತನ ಇತ್ಯಾದಿಗಳನ್ನು ನಿರ್ಧರಿಸುವುದು; ನ್ಯಾಯಪತಿಗಳ ಕೆಲಸಗಳನ್ನು ಮಾಡುವುದೇ ಮುಂತಾದ ಹಲವಾರು ಜವಾಬ್ದಾರಿಯುತವಾಗಿದ್ದ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದುವು. ರಾಷ್ಟ್ರಕೂಟರ ಆಳ್ವಿಕೆಯ ಸಮಯದಲ್ಲಿ ಪಟ್ಟಣಗಳ ಆಡಳಿತವನ್ನು ಪುರಪತಿ ಅಥವಾ ನಗರಪತಿಗಳು ಅನಧಿಕೃತ ಸಹಿಗಳ ಸಹಾಯದಿಂದ ನಡೆಸುತ್ತಿದ್ದರು ಎಂಬುದಾಗಿ ತಿಳಿಸಲಾಗಿದೆ.

ಹೀಗೆ ಪ್ರಾಚೀನ ಕರ್ನಾಟಕದಲ್ಲಿ ಪಟ್ಟಣಗಳ ಆಡಳಿತದಲ್ಲಿ ನಾಗರಿಕರು ತಮ್ಮತಮ್ಮ ಜಾತಿ ಸಂಘ ಹಾಗೂ ಶ್ರೇಣಿ ಮುಂತಾದ ಸ್ಥಳೀಯ ಸಂಘ-ಸಂಸ್ಥೆಗಳ ಮೂಲಕ ಸ್ವತಂತ್ರವಾಗಿ, ಸಕ್ರಿಯವಾಗಿ ಪಾಲ್ಗೊಂಡು ತಮಗೆ ಸಂಬಂಧಪಟ್ಟಿದ್ದ ಎಲ್ಲಾ ವಿಷಯಗಳ ಬಗ್ಗೆ ಮುಕ್ತವಾಗಿ ಚರ್ಚಿಸಿ ಸಾಮೂಹಿಕವಾಗಿ ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿದ್ದರು ಎಂಬುದನ್ನು ಶಿಲಾಶಾಸನಗಳು ಸಮರ್ಥಿಸುತ್ತವೆ.

ಪ್ರಾಚೀನ ಕರ್ನಾಟಕದಲ್ಲಿ ಅಗ್ರಹಾರಗಳೂ ಸಹ ಸ್ಥಳೀಯ ಸಂಸ್ಥಾಡಳಿತಕ್ಕೆ ಬಹು ಒಳ್ಳೆಯ ನಿದರ್ಶನಗಳಾಗಿದ್ದವು. ಅಗ್ರಹಾರ ಎಂದರೆ ಶ್ರೇಷ್ಠರಿಗೆ ಕೊಡಲಾದ ಸ್ಥಳ ಅಥವಾ ಒಂದು ಶಿಕ್ಷಣ ಕೇಂದ್ರ ಸ್ಥಾನ ಅಥವಾ ಬದುಕಿನಲ್ಲಿ ವ್ಯಕ್ತಿಗಳನ್ನು ಸಾಧನೆಯ ಅತ್ಯುನ್ನತ ಶೃಂಗಕ್ಕೆ ಕರೆದೊಯ್ಯಲು ಅನುಕೂಲಕರವಾದ ಸ್ಥಾನ ಅಥವಾ ಬ್ರಾಹ್ಮಣರಿಗೆ ದಾನವಾಗಿ ನೀಡಲಾದ ಭೂಮಿ ಅಥವಾ ಗ್ರಾಮ ಎಂಬುದಾಗಿ ವಿವರಿಸಲಾಗಿದೆ. ಒಂದು ಗ್ರಾಮವನ್ನೋ ಅಥವಾ ಊರನ್ನೋ ಅಗ್ರಹಾರವನ್ನಾಗಿ ಮಾರ್ಪಡಿಸಿ ಬೌದ್ಧಿಕ-ನೈತಿಕ-ಆಧ್ಯಾತ್ಮಿಕವಾಗಿ ಅತಿ ಶ್ರೇಷ್ಠರಾಗಿದ್ದ ಬ್ರಾಹ್ಮಣರಿಗೆ ದಾನವಾಗಿ ನೀಡಿದರೆ ಬಹುಪುಣ್ಯ ಬರುತ್ತದೆ ಎಂಬುದಾಗಿ ದೊರೆಗಳು ಹಾಗೂ ಇತರ ಉನ್ನತ ವರ್ಗಗಳ ಸದಸ್ಯರು ನಂಬಿದ್ದರು. ಆದ್ದರಿಂದ ಶಾಸನಗಳಲ್ಲಿ ಅಗ್ರಹಾರಗಳ ನಿರ್ಮಾಣ ಹಾಗೂ ಬ್ರಹ್ಮದೇಯ ದಾನಗಳ

ಬಗ್ಗೆ ವಿಪುಲವಾದ ಮಾಹಿತಿಗಳು ಲಭ್ಯವಿವೆ. ಆದ್ದರಿಂದ ಅಗ್ರಹಾರಗಳು ಬ್ರಾಹ್ಮಣರ ವಸತಿಗಳಾಗಿದ್ದವು ಮತ್ತು ಈ ಬಗೆಯಲ್ಲಿ ಅಗ್ರಹಾರಗಳನ್ನು ದಾನವಾಗಿ ಪಡೆಯುತ್ತಿದ್ದ ಬ್ರಾಹ್ಮಣರು ಮಹಾಜನರು. ಅಗ್ರಹಾರಗಳಲ್ಲಿ ಬ್ರಾಹ್ಮಣರಲ್ಲದೆ ಇತರ ಜಾತಿಯವರೂ ಇರುತ್ತಿದ್ದರು. ಅವರಲ್ಲಿಯೂ ಕೆಲವರು ಮಹಾಜನರಲ್ಲಿ ಸೇರಿದ್ದಿರಬೇಕು. ಅಗ್ರಹಾರದ ಒಡೆಯರು ಈ ಮಹಾಜನರು. ಅವರು ಸಾಮೂಹಿಕವಾಗಿ ಅಗ್ರಹಾರಗಳ ಆಡಳಿತವನ್ನು ನಡೆಸುತ್ತಿದ್ದರು ಎಂಬುದು 'ಮಹಾಜನರಿನ್ನೂರ್ವರು ಧರ್ಮಂಗಳಂ ಸ್ವಧರ್ಮದಿಂ ಸುರಕ್ಷಿತಮಾಗೆ' ಕಾಪಾಡುತ್ತಿದ್ದರು ಎಂದು ಶಿಲಾಶಾಸನದ ಮಾಹಿತಿಯಿಂದ ಸ್ಪಷ್ಟವಾಗುತ್ತದೆ. ಅಗ್ರಹಾರದ ಎಲ್ಲಾ ಆಡಳಿತಾತ್ಮಕ ಹಾಗೂ ಸಾರ್ವಜನಿಕ ಕಾರ್ಯಗಳು ಅವರ ಸಮ್ಮುಖದಲ್ಲೇ ನಡೆಯುತ್ತಿದ್ದವು. ಎಲ್ಲಾ ಚಟುವಟಿಕೆಗಳನ್ನು ನಿಯಂತ್ರಿಸಿ, ನಡೆಸುತ್ತಿದ್ದರು. ಮಹಾಜನರು, ತಮ್ಮ ಸಮಾಜದ ಹಿತಕ್ಕಾಗಿ ಹೋರಾಡಿ ಸತ್ತ ವೀರರ ಸ್ಮಾರಕವಾಗಿ ವೀರಗಲ್ಲುಗಳನ್ನು ಹಾಗೂ ಸತ್ತ ಪತಿಯೊಡನೆ ಸಜೀವವಾಗಿ ಚಿತೆ ಏರಿ ಸತಿಯಾದವರ ಗೌರವಾರ್ಥ ಮಾಸ್ತಿಕಲ್ಲುಗಳನ್ನು ನೆಡಸುವುದು, ಅವರ ಕುಟುಂಬಗಳ ಯೋಗಕ್ಷೇಮವನ್ನು ನೋಡಿಕೊಳ್ಳುವುದು; ಭೂಮಿ, ಹಣ, ಮತ್ತಾವುದೇ ದಾನಗಳನ್ನು ಯಾರೇ ನೀಡಿದರೂ ಸ್ವೀಕರಿಸಿ, ರಕ್ಷಿಸಿ, ಸಾರ್ವಜನಿಕ ಕಲ್ಯಾಣಕ್ಕಾಗಿ ಸದ್ವಿನಿಯೋಗ ಮಾಡುವುದು; ಹಣವನ್ನು ಬಡ್ಡಿಗೆ ಸಾಲವಾಗಿ ನೀಡುವುದು; ಬರುತ್ತಿದ್ದ ಹೆಚ್ಚಿನ ಹಣವನ್ನು ಧರ್ಮಕಾರ್ಯಗಳಿಗಾಗಿ ಮತ್ತು ಜನೋಪಯೋಗಿ ಕೆಲಸಗಳಿಗಾಗಿ ಬಳಸುವುದು; ದತ್ತಿಯಾಗಿ ಬಂದಿದ್ದ ಭೂಮಿಯನ್ನು ಉಳುಮೆ ಮಾಡುವುದಕ್ಕೆ ತಕ್ಕ ವ್ಯಕ್ತಿಗಳಿಗೆ ನೀಡಿ, ಅದರಿಂದ ಬರುತ್ತಿದ್ದ ಆದಾಯವನ್ನು ನಿರ್ದಿಷ್ಟವಾದ ಧಾರ್ಮಿಕ ಹಾಗೂ ಸಾಮಾಜಿಕ ಕಾರ್ಯಗಳಿಗಾಗಿ ಉಪಯೋಗಿಸುವುದು; ನ್ಯಾಯಪರಿಪಾಲನೆ, ದೇಗುಲಗಳನ್ನು ಕಟ್ಟಿಸುವುದು; ಶಿಕ್ಷಣ ನೀಡುವುದು; ವಿದ್ಯಾಭ್ಯಾಸಕ್ಕೆ ತಕ್ಕ ಏರ್ಪಾಡುಗಳನ್ನು ಮಾಡುವುದು; ಕೆರೆಗಳನ್ನು ನಿರ್ಮಿಸುವುದು, ಆರಾಮ ತೋಟಗಳನ್ನು ಬೆಳೆಸುವುದು; ಅಗ್ಗಿಷ್ಟಿಗೆ, ಅರವಟ್ಟಿಗೆ ಮುಂತಾಗಿ ಜನರ ಉಪಯೋಗಕ್ಕಾಗಿ ಅಗತ್ಯ ಸೌಲಭ್ಯಗಳನ್ನು ಒದಗಿಸಿಕೊಡುವುದು; ಕಟ್ಟಿಸಿದ್ದ ಕೆರೆ-ತಟಾಕಗಳ ಯೋಗಕ್ಷೇಮದ ಹೊಣೆಯನ್ನು ಹೊತ್ತು ನಿರ್ವಹಿಸುವುದು ಮುಂತಾದವು ಮಹಾಜನರ ಕರ್ತವ್ಯಗಳಾಗಿದ್ದುವು. ಮಹಾಜನರು ಶಸ್ತ್ರಗಳಲ್ಲೂ ಪರಿಣತರಾಗಿದ್ದು, ತಮ್ಮತಮ್ಮ ಅಗ್ರಹಾರಗಳನ್ನು ರಕ್ಷಿಸುವುದಕ್ಕೆ ಸಮರ್ಥರಾಗಿದ್ದರು ಎಂಬುದು ಹಲವಾರು ಶಾಸನಗಳಲ್ಲಿ ಸೂಚಿತವಾಗಿದೆ. ಪೊಸವಡಂಗಿಲೆ ಮುಂತಾದ ಕೆಲವು ಅಗ್ರಹಾರಗಳಲ್ಲಿ ಮಹಾಜನರು ಒಟ್ಟಾಗಿ ಸೇರಿ ಚರ್ಚೆಗಳನ್ನು ನಡೆಸಲು ಪ್ರತ್ಯೇಕವಾದ ಸಭೆಗಳೂ ಇದ್ದವು ಎಂಬುದು ಶಾಸನಾಧಾರಗಳಿಂದ ತಿಳಿದುಬರುತ್ತದೆ.

ಈ ರೀತಿಯಲ್ಲಿ ಅಗ್ರಹಾರಗಳಲ್ಲಿ ಸ್ಥಳೀಯ ಸಂಸ್ಥಾಡಳಿತವು ಅಚ್ಚುಕಟ್ಟಾಗಿದ್ದಿತು, ಪ್ರಗತಿಪರವಾಗಿದ್ದಿತು. ಇದರ ಫಲವಾಗಿ ಅಗ್ರಹಾರಗಳ ನಿವಾಸಿಗಳು ಒಂದು ಕುಟುಂಬದವರಂತೆ ಪರಸ್ಪರ ಪ್ರೀತಿ-ಗೌರವಗಳಿಂದ ಸಹಕರಿಸಿ ಸಹಜೀವನವನ್ನು ನಡೆಸುತ್ತಿದ್ದರು.

ಪ್ರಾಚೀನ ಕರ್ನಾಟಕದಲ್ಲಿ ಆಡಳಿತದ ವಿಷಯದಲ್ಲಿ ಸ್ಥಳೀಯ ಸಂಸ್ಥೆಗಳ ದಕ್ಷತೆ, ಕಾರ್ಯಸಮರ್ಥತೆ, ಅನ್ಯೂನತೆ ಹಾಗೂ ಅಚ್ಚುಕಟ್ಟುತನವನ್ನು ಸುಸ್ಪಷ್ಟವಾಗಿ ಹಾಗೂ ಸಮಗ್ರವಾಗಿ ಪ್ರತಿಬಿಂಬಿಸುತ್ತಿದ್ದ ಶುದ್ಧ ದರ್ಪಣವೆಂದರೆ ಗ್ರಾಮಾಡಳಿತ ವ್ಯವಸ್ಥೆ. ಪ್ರಾಚೀನ ಕರ್ನಾಟಕ ರಾಜ್ಯದ ಉದ್ದಗಲಕ್ಕೂ ಹರಡಿಕೊಂಡಿದ್ದು ಸಂಶೋಧಕನಿಗೆ ಬೇಕಾಗಿರುವ ಅತ್ಯಮೂಲ್ಯವಾದ ಮಾಹಿತಿ ನಿಧಿಗಳನ್ನು ಸಂರಕ್ಷಿಸಿ ಸಂಗ್ರಹಿಸಿಟ್ಟಿರುವ ಶಾಸನಗಳು ಗ್ರಾಮಾಡಳಿತ, ಗ್ರಾಮವಾಸಿಗಳ ಆಸೆ-ಆಕಾಂಕ್ಷೆ, ಸುಖ-ಸಂತಸ, ಕಷ್ಟ-ನಷ್ಟ-ಸಂಕಟ, ದೈವಭಕ್ತಿ-ಶ್ರದ್ಧೆ, ರಾಜನಿಷ್ಠೆ, ಶೌರ್ಯ ಮುಂತಾಗಿ ಬದುಕಿನ ಎಲ್ಲಾ ಮಜಲು, ಅಂಶಗಳ ಬಗ್ಗೆ ನಂಬಲರ್ಹವಾದ ವಿವರಗಳನ್ನು ತುಂಬಿಟ್ಟುಕೊಂಡಿವೆ. ಗಂಗ, ಚೋಳ, ರಾಷ್ಟ್ರಕೂಟ ಹಾಗೂ ಚಾಲುಕ್ಯರ ಕಾಲಗಳ ಶಾಸನಗಳು ಗ್ರಾಮಗಳಲ್ಲಿ ಬಹುಮಟ್ಟಿನ ಸ್ವಾಯತ್ತತೆ, ಪ್ರಜಾಸತ್ತಾತ್ಮಕ ಆಡಳಿತ ವ್ಯವಸ್ಥೆ ಇದ್ದಿತೆಂಬುದನ್ನು ದೃಢಪಡಿಸುತ್ತವೆ. ರಾಜ್ಯಕ್ಕೆ ಪ್ರಭು ರಾಜನಾಗಿದ್ದರೂ, ಅವನಿಗೆ ಸಲ್ಲಿಸಬೇಕಾದ ತೆರಿಗೆಗಳನ್ನು ಕೊಟ್ಟುಬಿಟ್ಟರೆ ಸಾಕಾಗಿದ್ದಿತು. ಪ್ರತಿಗ್ರಾಮವೂ ಪ್ರತ್ಯೇಕ ರಾಜ್ಯದಂತೆ ಸ್ವತಂತ್ರವಾಗಿ ತನ್ನ ಆಡಳಿತವನ್ನು ನಡೆಸಿಕೊಂಡು ಹೋಗುವ ಸ್ವಾತಂತ್ರ್ಯವನ್ನು ಹೊಂದಿದ್ದಿತು. ಗ್ರಾಮವು ಆಡಳಿತ-ಸಾಮಾಜಿಕ ಆರ್ಥಿಕ ವ್ಯವಸ್ಥೆಯ ಮೂಲ ಘಟಕವಾಗಿದ್ದಿತು. ಆಡಳಿತ ವರ್ಗವು ಹಳ್ಳಿಗಳ ಗಡಿಗಳನ್ನು ನಿರ್ಧರಿಸಿ, ಗಡಿಗಳಲ್ಲಿ ಪ್ರಮುಖವಾಗಿದ್ದ ಕೆರೆ, ದಿಣ್ಣೆ, ಬಂಡೆ, ಗುಡ್ಡ, ಬೆಟ್ಟ ಇತ್ಯಾದಿಗಳನ್ನು ಹೆಸರಿಸಿ ಪ್ರತಿ ಗ್ರಾಮದ ಪ್ರತ್ಯೇಕತೆಯನ್ನು ಗುರುತಿಸುತ್ತಿದ್ದಿತು.

ಕೇಂದ್ರಾಡಳಿತದ ಬಹುಮುಖ್ಯವಾಗಿದ್ದ ಅಂಗವಾಗಿದ್ದರೂ, ಬೇರೆ ನಿಯಂತ್ರಣಗಳಿಗೆ ಒಳಗಾಗದೆ ಸ್ವತಂತ್ರವಾಗಿ ಆಳ್ವಿಕೆ ನಡೆಸುತ್ತಾ ಕೇಂದ್ರಾಡಳಿತಕ್ಕೆ ಬಹುಭದ್ರವಾಗಿದ್ದ ಅಸ್ತಿಭಾರವನ್ನು ಒದಗಿಸಿ ನಿರೂಪಿಸಿದ್ದ ಸ್ಥಳೀಯ ಸಂಸ್ಥೆಗಳಲ್ಲಿ ಪ್ರಧಾನವಾಗಿದ್ದುದು ಗ್ರಾಮಗಳ

ಗಾವುಂಡುಗಳ ಸಮೂಹ. ಗ್ರಾಮಗಳ ಒಡೆಯರೇ ಗಾವುಂಡುಗಳು ಅಥವ ಪ್ರಭು ಗಾವುಂಡರು ಅಥವ ಗ್ರಾಮಾಧಿಪರು ಅಥವ ಗೌಂಡರು. ಹಳ್ಳಿಗಳಲ್ಲಿ ಈ ಗಾವುಂಡರ ಸಂಖ್ಯೆ ಒಂದೇ ಸಮವಾಗಿರಲಿಲ್ಲ. ಸಿರಿಪುರದಲ್ಲಿ ಎಂಟು ಗಾವುಂಡುಗಳು, ಬೆಳ್ಳಿಟ್ಟಗೆಯಲ್ಲಿ ಹನ್ನೆರಡು ಗೌಡರು, ಬೆಳ್ತುರಿನಲ್ಲಿ ಮೂವರು ಗ್ರಾಮಾಧಿಪರು, ಪಸುಂಡಿಯಲ್ಲಿ ಒಬ್ಬನೇ ಗಾವುಂಡ ಇದ್ದರು ಎಂಬುದಾಗಿ ಶಾಸನಗಳು ತಿಳಿಸುತ್ತವೆ. ಗ್ರಾಮವನ್ನು ಆಳುತ್ತಿದ್ದ ಗಾವುಂಡಗಳನ್ನು ಶಾಸನಗಳು ಬಹುವಾಗಿ ಕೊಂಡಾಡಿವೆ. ಗಾವುಂಡ ಕೇಂದ್ರಾಡಳಿತಕ್ಕೂ ಗ್ರಾಮವಾಸಿಗಳಿಗೂ ಮಧ್ಯವರ್ತಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರೂ, ಅವನು ಜನರ ನಿಜವಾದ ಪ್ರತಿನಿಧಿಯೇ ಆಗಿರುತ್ತಿದ್ದನು. ಗ್ರಾಮದ ಎಲ್ಲಾ ಚಟುವಟಿಕೆಗಳನ್ನು ಅವನ ಮುನ್ನೆಲೆಯಲ್ಲೇ ನಡೆಸಬೇಕಾಗಿದ್ದಿತು. ಅವನ ಸಮಕ್ಷಮದಲ್ಲೇ ಯಾರೇ ಆದರೂ ದಾನ, ದತ್ತಿಗಳನ್ನು ನೀಡಬೇಕಾಗಿರುತ್ತಿದ್ದಿತು. ಅವನು ದತ್ತಿಗಳಿಗೆ ಧರ್ಮದರ್ಶಿಯಾಗಿದ್ದುಕೊಂಡು ಅವುಗಳನ್ನು ಗ್ರಾಮದ ಒಳಿತಿಗಾಗಿ ಬಳಸುತ್ತಿದ್ದನು ಎಂಬುದು ಶಾಸನಗಳಿಂದ ವಿದಿತವಾಗುತ್ತದೆ. ಗ್ರಾಮಕ್ಕೆ ಒಳ್ಳೆಯದಾಗಬೇಕು ಎಂಬ ಸದುದ್ದೇಶದಿಂದ ಯಾವುದೇ ದತ್ತಿ, ತಳವೃತ್ತಿ ನಿಂತುಹೋದಾಗಲೂ ಅವನು ರಾಜನ ಬಳಿ ಸಾರಿ ಅವುಗಳನ್ನು ಪುನಃ ಪಡೆದು ಗ್ರಾಮದ ಅಭಿವೃದ್ಧಿಗಾಗಿ ಶ್ರಮಿಸುತ್ತಿದ್ದನು. ರಾಜ, ಅಧಿಕಾರಿಗಳು ಮತ್ತು ಇನ್ನಿತರರು ಯಾರೇ ಆಗಲಿ ದೇಗುಲ, ಕೆರೆ, ತಟಾಕ ಇತ್ಯಾದಿಗಳಿಗಾಗಿ ದಾನ ದತ್ತಿಗಳನ್ನು ಕೊಡುವಾಗಲೆಲ್ಲಾ ಗಾವುಂಡ ಹಾಜರಿರುತ್ತಿದ್ದನು. ಮತ್ತು ಒಂದು ಗ್ತಾಮದಲ್ಲಿ ಒಂದು ದೇವಸ್ಥಾನವನ್ನು ನಿರ್ಮಿಸಿದಾಗ, ಅದಕ್ಕೆ ಅಕ್ಕ-ಪಕ್ಕದ ಹಳ್ಳಿಯವರು ದಾನಗಳನ್ನು ನೀಡುವಾಗ ಆಯಾಯ ಹಳ್ಳಿಗಳ ಗಾವುಂಡಗಳು ಇರುತ್ತಿದ್ದರು. ಅಥವಾ ಅವರ ಹೆಸರುಗಳನ್ನು ಉಲ್ಲೇಖಿಸಿ ದಾನ ಮಾಡುತ್ತಿದ್ದರು ಎಂಬ ಶಾಸನ ಪ್ರಮಾಣಗಳಿಂದ ಅವನು ಗ್ರಾಮವಾಸಿಗಳ ಪ್ರತಿನಿಧಿ ಮಾತ್ರವಾಗಿರಲಿಲ್ಲ ಅವನು ಅವರೆಲ್ಲರ ಪ್ರೀತ್ಯಾದರಗಳಿಗೆ ಪಾತ್ರವಾಗಿದ್ದನು, ಅವನಲ್ಲಿ ಅವರಿಗೆ ಬಹು ದೃಢವಾದ ನಂಬಿಕೆ ಇರುತ್ತಿದ್ದಿತು ಎಂಬುದು ಸ್ಪಷ್ಟವಾಗುತ್ತದೆ.

ಪ್ರತಿ ಗ್ರಾಮದಲ್ಲೂ ಒಂದು ಗ್ರಾಮಸಭೆ ಇರುತ್ತಿದ್ದಿತು. ಸುತ್ತೂರಿನ ಶಾಸನವೊಂದು ಸಭೆಯ ಸದಸ್ಯರು ಮಾಡಿದ ಭೂಮಿಯ ಮಾರಾಟದ ಬಗ್ಗೆ ವಿವರಿಸುತ್ತದೆ ಮತ್ತು ಗಟ್ಟವಾಡಿಯ ಶಿಲಾಶಾಸನದಲ್ಲಿ ಎಳೆ ಮಕ್ಕಳಿಗೆ ಅಂದರೆ ಗ್ರಾಮಸಭೆಯ ಸುಪರ್ದಿಗೆ ಒಂದು ಭೂ ಪ್ರದೇಶವನ್ನು ಫಲವಂತವಾಗುವಂತೆ ಮಾಡಿ ವಹಿಸಿಕೊಂಡ ವಿವರವಿದೆ. ಈ ಬಗೆಯ ಶಾಸನಗಳ ಮಾಹಿತಿಗಳು ಗ್ರಾಮಸಭೆಯ ಪ್ರಾಮುಖ್ಯತೆಯನ್ನು ಸಮರ್ಥಿಸುತ್ತವೆ. ಸಾಮಾನ್ಯವಾಗಿ ಗ್ರಾಮದ ಸಹಜ ನಾಯಕರಾಗಿದ್ದ, ಗ್ರಾಮದ ಜನರ ವಿಶ್ವಾಸಕ್ಕೆ ಪಾತ್ರರಾಗಿದ್ದ ಹಿರಿಯರು ಅದರಲ್ಲಿರುತ್ತಿದ್ದರು. ಕೆಲವು ವೇಳೆ ಗ್ರಾಮದ ಕುಟುಂಬಗಳ ಯಜಮಾನರು, ಜಾತಿಗಳ ಮುಖ್ಯಸ್ಥರು, ಧರ್ಮಕರ್ತರು, ವಿಭಿನ್ನ ವೃತ್ತಿಗಳ ಮುಖಂಡರು ಸೆಟ್ಟಿ, ಒಕ್ಕಲು, ಹಲವಾರು ಜಾತಿಯವರು, ಹಿಟ್ಟುಗಳು ಮೊದಲಾದವರು ಗಾವುಂಡರ ಅಧ್ಯಕ್ಷತೆಯಲ್ಲಿ ಸಭೆ ಸೇರಿ ವಿಷಯಗಳನ್ನು ಚರ್ಚಿಸಿ ಇತ್ಯರ್ಥ ಮಾಡಿಕೊಳ್ಳುತ್ತಿದ್ದರು. ಗ್ರಾಮ ಸಭೆ ದಾನ-ದತ್ತಿಗಳನ್ನು ಸ್ವೀಕರಿಸುವುದು ಹಾಗೂ ಅವುಗಳ ದಾನಿಗಳ ಉದ್ದೇಶಕ್ಕೆ ಅನುಗುಣವಾಗಿ ಸದ್ವಿನಿಯೋಗವಾಗುವಂತೆ ಯೋಜಿಸುವುದು; ಗೋಷ್ಠಿಗಳನ್ನು ಏರ್ಪಡಿಸುವುದು; ಸಾರ್ವಜನಿಕ ನಿಧಿಗಳನ್ನು ಸಂರಕ್ಷಿಸುವುದು, ದೇಗುಲ, ಕೆರೆ, ಕಾಲುವೆ, ತಟಾಕ, ಧರ್ಮಶಾಲೆ, ಅನ್ನಸತ್ರ, ಅಗ್ಗಿಷ್ಟಿಕೆ, ಅರವಟ್ಟಿಗೆ, ಆರಾಮ ಅಥವ ಸಾರ್ವಜನಿಕ ಉದ್ಯಾನ, ತೋಟ, ತುಡಿಕೆ ಇತ್ಯಾದಿಗಳನ್ನು ನಿರ್ಮಿಸಿ ನೋಡಿಕೊಳ್ಳುವುದು; ದೇವಸ್ಥಾನದ ಆಡಳಿತದಲ್ಲಿ ಸಹಕರಿಸುವುದು; ಗ್ರಾಮದ ಕೆರೆ ತಟಾಕುಗಳನ್ನು ನೋಡಿಕೊಳ್ಳುವುದಕ್ಕೆ, ಉತ್ಸವಾದಿಗಳನ್ನು ಏರ್ಪಡಿಸಿ ನಡೆಸುವುದಕ್ಕೆ ತಾತ್ಕಾಲಿಕವಾದ ಸಮಿತಿಗಳನ್ನು ರಚಿಸಿ, ಜವಾಬ್ದಾರಿಗಳನ್ನು ನಿರ್ಮಿಸುವುದು; ಸಾರ್ವಜನಿಕ ಸಮಾರಂಭಗಳನ್ನು ನೆರವೇರಿಸುವುದು; ಗ್ರಾಮದ ರೈತರಿಗೆ ಕೃಷಿಗೆ ಬೇಕಾದ ಎಲ್ಲಾ ಅಗತ್ಯಗಳನ್ನು ಒದಗಿಸಿಕೊಡುವುದು; ಕಮ್ಮಾರನ ಕುಲುಮೆಯನ್ನು ನಡೆಸುವುದು; ದನಗಳಿಗೆ ಹುಲ್ಲುಗಾವಲುಗಳನ್ನು ನಿರ್ಮಿಸುವುದು; ಅವುಗಳ ಗೊಬ್ಬರವನ್ನು ಹರಾಜು ಹಾಕಿ, ಹರಾಜಿನಲ್ಲಿ ಬಂದ ಹಣವನ್ನು ಗ್ರಾಮದ ಹಿತಕ್ಕಾಗಿ ಬಳಸುವುದು; ಕಂದಾಯ ವಸೂಲಿ ಮಾಡುವುದು; ಅದನ್ನು ರಾಜನ ಬೊಕ್ಕಸಕ್ಕೆ ಕಳುಹಿಸುವುದು; ಶಾಂತಿ ಸುವ್ಯವಸ್ಥೆಯನ್ನು ನೋಡಿಕೊಳ್ಳುವುದು; ಅನಾಥರಿಗೆ, ಸಂಕಟಕ್ಕೆ ಒಳಗಾಗಿದ್ದವರಿಗೆ, ಅಸಹಾಯಕರಿಗೆ ನೆರವನ್ನು ನೀಡುವುದು; ಗ್ರಾಮದ ರಕ್ಷಣೆಗಾಗಿ ಹೋರಾಡಿ ಮೃತ್ಯುವಶರಾದ ವೀರರ ಸ್ಮಾರಕವಾಗಿ ವೀರಗಲ್ಲುಗಳನ್ನು ನೆಡಸುವುದು; ಸತ್ತ ಗಂಡನೊಡನೆ ಜೀವಂತವಾಗಿ ಅಗ್ನಿಗೆ ಆಹುತಿ ಮಾಡಿಕೊಂಡ ಧೀರಸತಿಯರ ಸ್ಮರಣಾರ್ಥ ಮಾಸ್ತಿ ಕಲ್ಲುಗಳನ್ನು ಹಾಕಿಸುವುದು ಮುಂತಾಗಿ ಗ್ರಾಮದ ಎಲ್ಲಾ ಕಾರ್ಯ ಕಲಾಪಗಳನ್ನು ನಡೆಸುತ್ತಿದ್ದಿತು. ಸತ್ತ ವೀರನಿಗಾಗಿ ದೊರೆ ಎರಡು ಹಳ್ಳಿಗಳನ್ನು ಕಲ್ನಾಡಾಗಿ ಒಕ್ಕಲಿಗರು ಮತ್ತಿತರ ಪ್ರಮುಖರ ಸಮಕ್ಷಮದಲ್ಲಿ ನೀಡಿದನು ಮತ್ತು ಪ್ಲಿಂಗೆಯ ಗಾವುಂಡಗಳೇ ನಾಗವಂಗಲಂ ಎಂಬ ಸ್ಥಳವನ್ನು ಕಲ್ನಾಡಾಗಿ ಸ್ವೀಕರಿಸಿದರು

ಎಂಬುದಾಗಿ ಕ್ರಮವಾಗಿ ಇಗ್ಗಲಿ ಹಾಗೂ ಅಂಕನಾಥಪುರದ ಶಾಸನಗಳು ನೀಡಿರುವ ವಿವರಣೆಗಳಿಂದ ಗಾವುಂಡಗಳ ಸಭೆ ಎಷ್ಟು ಪ್ರಾಮುಖ್ಯತೆಯನ್ನು ಪಡೆದಿದ್ದಿತು ಎಂಬುದು ಸ್ಪಷ್ಟವಾಗುತ್ತದೆ. ಇದರೊಂದಿಗೆ ರಾಜ್ಯಕ್ಕೆ ಗ್ರಾಮ ಕೊಡಬೇಕಾಗಿದ್ದ ತೆರಿಗೆಗಳನ್ನು ವಸೂಲಿ ಮಾಡಿ ರಾಜ್ಯಭಂಡಾರಕ್ಕೆ ಒಪ್ಪಿಸುವುದು ಮತ್ತು ಯುದ್ಧವಾದಾಗ ಪ್ರಭುವಿಗೆ ಸೈನ್ಯವನ್ನು ಮತ್ತಿತರ ನೆರವನ್ನು ಒದಗಿಸುವುದು ಮುಂತಾದ ಕರ್ತವ್ಯಗಳನ್ನು ನಿರ್ವಹಿಸುವುದರ ಮೂಲಕ ಗ್ರಾಮಸಭೆಯು ರಾಜ್ಯಾಡಳಿತಕ್ಕೂ ಬಹು ಸಹಾಯವನ್ನು ಮಾಡುತ್ತಿದ್ದಿತು.

ನ್ಯಾಯ ಪರಿಪಾಲನೆ ಗ್ರಾಮಸಭೆಯ ಬಹು ಮುಖ್ಯವಾಗಿದ್ದ ಕರ್ತವ್ಯವಾಗಿದ್ದಿತು. ಶಾಸನವೊಂದರಲ್ಲಿ ಕಂಡುಬರುವ ಸಭೆ ಎಂಬ ಉಲ್ಲೇಖದಿಂದ ಅದು ಗ್ರಾಮವಾಸಿಗಳ ಕುಂದುಕೊರತೆಗಳನ್ನು ಪರಿಹರಿಸುವುದಕ್ಕಾಗಿ, ಅವರ ವಿವಾದಗಳನ್ನು ಇತ್ಯರ್ಥ ಮಾಡುವುದಕ್ಕಾಗಿ ಸೇರುತ್ತಿದ್ದ ಹಳ್ಳಿಯ ಹಿರಿಯರ ಸಭೆ ಆಗಿದ್ದಿರಬೇಕು ಎಂಬುದಾಗಿ ಹೇಳಬಹುದು. ರಾಜ್ಯದಲ್ಲಿದ್ದ ದಂಡವಿಧಿಗಳನ್ನೇ ಬಹುಶಃ ಗ್ರಾಮಸಭೆ ಅನುಸರಿಸುತ್ತಿದ್ದಿರಬೇಕು . ಅಪರಾಧಗಳ ಸ್ವರೂಪ ಹಾಗೂ ಪ್ರಮಾಣ ಮತ್ತು ದೋಷಾರೋಪಣೆಗೆ ಒಳಗಾದವನ ಉದ್ದೇಶ ಇತ್ಯಾದಿಗಳನ್ನು ಪರಿಗಣಿಸಿ, ಲೌಕಿಕ ಅನುಭವ ಹಾಗೂ ವ್ಯಾವಹಾರಿಕ ಪ್ರಜ್ಞೆಯ ಆಧಾರದ ಮೇಲೆ ತೀರ್ಪನ್ನು ನೀಡಲಾಗುತ್ತಿದ್ದಿತು. ಹೆಚ್ಚಾಗಿ ಪಂಚರ ನಿರ್ಣಯದ ಆಧಾರದ ಮೇಲೆ ಅಥವಾ ಅಪರಾಧ ನಿರ್ಣಯಕ್ಕೆ ಮಾನುಷ ಸಾಕ್ಷಿಯಿಲ್ಲದೆ ಹೋದಾಗ ದೈವವನ್ನು ಆಶ್ರಯಿಸುವ ಕ್ರಮವಾಗಿದ್ದ ದಿವ್ಯಗಳನ್ನು ಏರ್ಪಡಿಸಿ ಅಪರಾಧಿಯೆಂಬುದಾಗಿ ನಿರ್ಧರಿಸಿ ತೀರ್ಪನ್ನು ಕೊಡಲಾಗುತ್ತಿದ್ದಿತು. ಈ ತೀರ್ಪನ್ನು ಉಲ್ಲಂಘಿಸಿದವನಿಗೆ ಗ್ರಾಮದಿಂದ ಬಹಿಷ್ಕಾರ ಹಾಕಿ ಅವನಿಗೆ ಅನ್ನ, ನೀರು ಸಿಗದಂತೆ ಮಾಡಲಾಗುತ್ತಿದ್ದಿತು.

ತುಳುವ ರಾಜ್ಯದಲ್ಲಿ ಗ್ರಾಮಪದ್ಧತಿ ಹಾಗೂ ಶಾಸನಗಳು ಭೂ ಪ್ರದೇಶವನ್ನು ೧೬ ಪಶ್ಚಿಮ ಹಾಗೂ ೧೬ ಪೂರ್ವ ಗ್ರಾಮಗಳಾಗಿ ಮಾಡಿದ ವಿಭಜನೆ, ಈ ಎರಡು ವಿಭಾಗಗಳ ಮಧ್ಯೆ ಇದ್ದ ಹಾಗೂ ಅವಾಂತರಭೇದ ಎಂಬುದಾಗಿ ಕರೆಯಲಾದ ೨೧ ಗ್ರಾಮಗಳ ವರ್ಗೀಕರಣ, ವಾಡಿಕೆಗಳಿಗೆ ಕೊಡಲಾಗುತ್ತಿದ್ದ ಪ್ರಾಮುಖ್ಯತೆ ಮತ್ತು ಸರ್ವಸಾಮಾನ್ಯ ಸಭೆಯಲ್ಲಿ ಆಡಳಿತ ವ್ಯವಹಾರಗಳ ನಿರ್ವಹಣೆ ಗ್ರಾಮಾಡಳಿತದ ಬಹು ಮುಖ್ಯವಾಗಿದ್ದ ಲಕ್ಷಣಗಳಾಗಿದ್ದುವು. ನಿರ್ದಿಷ್ಟ ಮರ್ಯಾದೆಗಳು ಅಥವ ಕಟ್ಟಳೆಗಳು ಇರುತ್ತಿದ್ದವು; ೩೨ ಗ್ರಾಮಗಳಲ್ಲಿ ಎಲ್ಲಾ ವ್ಯಾಜ್ಯಗಳನ್ನು ಇತ್ಯರ್ಥಮಾಡುವುದಕ್ಕಾಗಿ ೭ ಜನ ನ್ಯಾಯಪತಿಗಳನ್ನು ನೇಮಿಸಲಾಗುತ್ತಿದ್ದಿತು. ಮತ್ತು ಅವರುಗಳು ಅನ್ಯಾಯಕರವಾದ ತೀರ್ಪನ್ನು ನೀಡಿದಾಗ ಹೇಗೆ ಅದಕ್ಕೆ ವಿರುದ್ಧವಾಗಿ ಮಾಡಲಾಗಿದ್ದ ಮನವಿಯನ್ನು ವಿಚಾರಿಸುವುದಕ್ಕಾಗಿ ಸರ್ವಸಾಮಾನ್ಯ ಸಭೆಯನ್ನು ಕರೆಯಲಾಯಿತು ಎಂಬ ಕುತೂಹಲಕರವಾಗಿರುವ ವಿವರಗಳನ್ನು ನೀಡುತ್ತವೆ.

ಗ್ರಾಮವಾಸಿಗಳ ಪ್ರತಿನಿಧಿಯಾಗಿದ್ದ ಮತ್ತು ಅವರಿಗೂ, ಆಳುವ ಪ್ರಭುವಿಗೂ ಮಧ್ಯೆ ಸಂಪರ್ಕ ಸೇತುವೆಯಾಗಿದ್ದ ಹಾಗೂ ಗಾಮುಂಡ, ಗಾವುಂಡ, ಗೌಡ ಮುಂತಾಗಿ ಹೆಸರಿಲಾಗಿದ್ದ ಮುಖಂಡನು ಗ್ರಾಮಾಡಳಿತದ ಮೂಲ ಆಧಾರಸ್ತಂಭವಾಗಿದ್ದರೆ, ಸೇನಬೋವ, ತಳವಾರ ಮೊದಲಾದ ಇತರ ಅಧಿಕಾರಿಗಳು ಈ ಆಡಳಿತ ವ್ಯವಸ್ಥೆಗೆ ಬೇಕಾಗಿದ್ದ ಮೂಲೆ ಬೆಂಬಲ ಕಂಬಗಳಾಗಿದ್ದರು. ವಿದ್ಯಾವಂತನಾಗಿದ್ದ ಮತ್ತು ಸೇನಬೋವ-ಕರಣಿಕ, ಗಣಕ, ಲೇಖಕ, ಕುಲಕರ್ಣಿ ಎಂಬುದಾಗಿ ಕರೆಯಲಾಗುತ್ತಿದ್ದ ಅಧಿಕಾರಿಯು ಜಮೀನುಗಳನ್ನು ಅಳೆಯುವುದು, ಭೂದಾಖಲೆಗಳನ್ನು ತಯಾರಿಸಿ ಸಂರಕ್ಷಿಸಿಡುವುದು, ಗ್ರಾಮಸಭೆಯ ಲೆಕ್ಕಪತ್ರಗಳನ್ನು ನೋಡಿಕೊಳ್ಳುವುದೇ ಮುಂತಾದ ಕರ್ತವ್ಯಗಳನ್ನು ನಿರ್ವಹಿಸುತ್ತಿದ್ದನು. ಗ್ರಾಮದ ಗಡಿಗಳ ರಕ್ಷಣೆ, ಶಾಂತಿ ಸುವ್ಯವಸ್ಥೆಯನ್ನು ಕಾಪಾಡುವುದು ಮತ್ತು ಇಡೀ ಗ್ರಾಮದ ರಕ್ಷಣೆಯ ಹೊಣೆಯನ್ನು ಹೊರುವುದು, ತಳವಾರ ಅಥವ ತೋಟಿಯ ಕರ್ತವ್ಯಗಳಾಗಿದ್ದವು. ಗೌಡಿಕೆಗಾಗಿ ಗೌಡನಿಗೆ ಮತ್ತು ಸೇನಬೋವ, ತಳವಾರ ಮತ್ತಿತರ ಅಧಿಕಾರಿಗಳಿಗೆ ಜಮೀನುಗಳನ್ನು ಹಾಗೂ ಹಣವನ್ನು ನೀಡಲಾಗಿದ್ದಿತು. ಈ ಎಲ್ಲಾ ಹುದ್ದೆಗಳೂ ವಂಶಪಾರಂಪರ್ಯವಾಗಿದ್ದವು. ಮತ್ತು ಅನೇಕ ವೇಳೆ ಆಳುತ್ತಿದ್ದ ಪ್ರಭುಗಳೇ ದಕ್ಷ ವ್ಯಕ್ತಿಗಳಿಗೆ ಗ್ರಾಮದ ಗಾವುಂಡ ಪಟ್ಟವನ್ನು ಕಟ್ಟಿ ಅವರಿಗೆ ತಮ್ಮ ಹೆಸರುಗಳನ್ನು ಇಟ್ಟು ಗೌರವಿಸುತ್ತಿದ್ದರು ಎಂಬುದರ ಸ್ಪಷ್ಟ ಸೂಚನೆಗಳು ಹಲವಾರು ಶಾಸನಗಳಲ್ಲಿ ಕಂಡುಬಂದಿವೆ. ಗಟ್ಟವಾಡಿಯ ಶಾಸನವೊಂದು ಸೆಲಾಂಬ್ಯೆ ಹಾಗೂ ಆನೆಯರಿಗೆ ಗಟ್ಟವಾಡಿಯ ಗಾವುಂಡ ಹುದ್ದೆಯನ್ನು ದೊರೆ ನೀಡಿದುದಾಗಿ ತಿಳಿಸುತ್ತದೆ.

ತುಳುವ ರಾಜ್ಯದಲ್ಲಿ ಸರ್ವ ಸಾಮಾನ್ಯ ಸಭೆಗಳಲ್ಲಿ ವಿವಿಧ ಕಾರ್ಯಗಳನ್ನು ನಿರ್ವಹಿಸುತ್ತಿದ್ದ ಅಧಿಕಾರಿಗಳಿದ್ದರು ಎಂಬುದಾಗಿ ಶಾಸನಗಳು ಹಾಗೂ ಗ್ರಾಮಪದ್ಧತಿ ಸ್ಪಷ್ಟಪಡಿಸುತ್ತದೆ. ಉದಾಹರಣೆಗೆ ಸುದ್ದಿ ಸಮಾಚಾರಗಳನ್ನು ತಿಳಿಸುವುದು ಆದಿವಾಸಿಗಳ; ಅಭಿಪ್ರಾಯಗಳನ್ನು ಸಂಗ್ರಹಿಸಿ ತಿಳಿಯಪಡಿಸುವುದು ಜನ್ನಿಗಳ; ತನಿಖೆ ನಡೆಸುವುದು ಗ್ರಾಮಣಿಗಳ; ಆಡಳಿತ ವ್ಯವಸ್ಥೆಯನ್ನು ನೋಡಿಕೊಳ್ಳುವುದು

ಬಲ್ಲಾಳರ; ಪಂಚಾಯತಿ ಮಾಡುವುದು ಭಟ್ಟರ; ನಿರ್ಣಯಿಸುವುದು ಪಂಡಿತರ; ಆ ನಿರ್ಣಯವನ್ನು ಸರಿಪಡಿಸುವುದು ಅಥವಾ ಉತ್ತಮಪಡಿಸುವುದು ಸಭಾಪತಿಯ; ಶಿಕ್ಷೆ ಮತ್ತು ರಕ್ಷೆ ಪಕ್ಷನಾಥರ; ಧರ್ಮಶಾಸ್ತ್ರಗಳ ನಿಯಮಗಳನ್ನು ತಿಳಿಸುವುದು ವೇದಪಂಡಿತರಾಗಿದ್ದ ಸ್ಮಾರ್ತರ ಮತ್ತು ಅವರು ನೀಡಿದ್ದ ಉದ್ಧರಣಗಳು ಸಮರ್ಥನೀಯವಾದುವೇ ಎಂಬುದನ್ನು ನಿರ್ಧರಿಸುವುದು ತಂತ್ರಿಗಳ ಕರ್ತವ್ಯಗಳಾಗಿದ್ದವು. ಶಾಸನಗಳು ಒದಗಿಸಿರುವ ಪ್ರಮಾಣಗಳಿಂದ ತುಳುವ ರಾಜ್ಯದಲ್ಲಿ ಮೂರು ದೊಡ್ಡ ಸರ್ವಸಾಮಾನ್ಯ ಸಭೆಗಳಿದ್ದುವು ಮತ್ತು ಅವುಗಳ ಮೂಲಕ ಆಯಾಮ ಗ್ರಾಮಗಳ ನಿವಾಸಿಗಳು ಆಡಳಿತ ಹಾಗೂ ನ್ಯಾಯ ಪರಿಪಾಲನೆಯ ಕರ್ತವ್ಯಗಳನ್ನು ತಾವುಗಳೇ ಸ್ವತಂತ್ರವಾಗಿ ಅಥವ ಆಳುತ್ತಿದ್ದ ರಾಜ ಹಾಗೂ ಅವನ ಅಧಿಕಾರಿಗಳೊಂದಿಗೆ ಸಹಕರಿಸಿ ದಕ್ಷತೆಯಿಂದ ನಿರ್ವಹಿಸುತ್ತಿದ್ದರು. ಮತ್ತು ಇದೇ ಗ್ರಾಮಾಡಳಿತ ವ್ಯವಸ್ಥೆಯು ಮುಂದೆ ಹಾದುಬಂದ ಕಾಲಗಳಲ್ಲಿಯೂ ಮುಂದುವರಿದುಕೊಂಡು ಬಂದಿತು ಎಂಬುದು ಸ್ಪಷ್ಟವಾಗುತ್ತದೆ. ಇದರೊಂದಿಗೆ ಗ್ರಾಮಗಳಲ್ಲಿ ನೇಕಾರ, ಕಮ್ಮಾರ, ಮೊದಲಾದ ವಿಭಿನ್ನ ವೃತ್ತಿಗಳವರ ಪ್ರಾತಿನಿಧಿಕ ಸಂಘ ಸಂಸ್ಥೆಗಳು ತಮ್ಮ ತಮ್ಮ ಜಾತಿ ಹಾಗೂ ವೃತ್ತಿಗಳಿಗೆ ಸಂಬಂಧಿಸಿದ್ದ ಎಲ್ಲಾ ಚಟುವಟಿಕೆಗಳನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಹೋಗುತ್ತಿದ್ದವು. ಈ ಬಗೆಯಲ್ಲಿ ಗ್ರಾಮಣೆಗೆ ಗ್ರಾಮಾಡಳಿತದಲ್ಲಿ ನೆರವಾಗುತ್ತಿದ್ದವು.

ಒಟ್ಟಿನಲ್ಲಿ ಸಂಪೂರ್ಣವಾಗಿ ಜನತೆಗೆ ಸೇರಿದ್ದ ಹಾಗೂ ಜನಪರವಾಗಿದ್ದ ಗ್ರಾಮಸಭೆಯು ಸ್ವರೂಪದಲ್ಲಿ ಸಮಾಜವಾದಿ ಸಂಸ್ಥೆಗಳಿಗೆ ಸರಿಸಮವಾಗಿ ಇದ್ದಿತು. ಗ್ರಾಮದಲ್ಲಿ ಪರಮಾಧಿಕಾರವನ್ನು ಗ್ರಾಮಸಭೆ ಹೊಂದಿದ್ದರೂ, ಶುದ್ಧವಾದ ಪ್ರಜಾಪ್ರಭುತ್ವ ತತ್ವಗಳ ಮೇಲೆ ಆಧಾರಿತವಾಗಿದ್ದು, ಆ ತತ್ವಗಳನ್ನು ಪೂರ್ಣವಾಗಿ ಅಳವಡಿಸಿಕೊಂಡು ಅನುಸರಿಸುತ್ತಾ ಬಂದ ಗ್ರಾಮಸಭೆಯು ಆಧುನಿಕ ಕಲೆಕ್ಟರ್, ಮ್ಯಾಜಿಸ್ಟ್ರೇಟ್, ಮುನಿಸಿಪಾಲಿಟಿ ಹಾಗೂ ನಗರಪಾಲಿಕೆ ನಿಗಮಗಳನ್ನು ಹೋಲುತ್ತಿದ್ದಿತು.

ಸಂಕ್ಷೇಪದಲ್ಲಿ, ಪ್ರಾಚೀನ ಕರ್ನಾಟಕದಲ್ಲಿ ರಾಜಪ್ರಭುತ್ವವಿದ್ದರೂ ಹಾಗೂ ಆಳುತ್ತಿದ್ದ ಪ್ರಭುವಿಗೆ ಪರಮಾಧಿಪತ್ಯವಿದ್ದರೂ, ರಾಜ್ಯಾಡಳಿತದಲ್ಲಿ ಭಾಗಿಯಾಗುವುದಕ್ಕೆ ಪ್ರಜೆಗಳಿಗೆ ಹೆಚ್ಚಿನ ಅವಕಾಶವನ್ನು ತಮಗೆ ಸಂಬಂಧಿಸಿದ್ದ ಆಡಳಿತಾತ್ಮಕ ವಿಷಯದಲ್ಲಿ ಸ್ವತಂತ್ರವಾಗಿ ನಿರ್ಧಾರ ತೆಗೆದುಕೊಳ್ಳಲು ಮುಕ್ತ ಪರಿಸರವನ್ನು ಕಲ್ಪಿಸಿದ್ದರಿಂದ ಮತ್ತು ಪ್ರಾತಿನಿಧಿಕ ಸಂಘ-ಸಂಸ್ಥೆಗಳಿಗೆ ಮತ್ತು ಪಟ್ಟಣ, ಅಗ್ರಹಾರ, ಗ್ರಾಮ ಮುಂತಾದ ಘಟಕಗಳಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಹೆಚ್ಚಿನ ಅಧಿಕಾರವನ್ನು ವರ್ಗಾಯಿಸಿದ್ದರಿಂದ ಸರ್ಕಾರದ ವ್ಯವಸ್ಥೆಯಲ್ಲಿ ಪ್ರಜಾಪ್ರಭುತ್ವ ಸಂಯೋಜಿತವಾಗಿದ್ದಿತು. ರಾಜಪ್ರಭುತ್ವ ಹಾಗೂ ಪ್ರಜಾಪ್ರಭುತ್ವ ಸಮನ್ವಯವಾಗಿದ್ದಿತು. ರಾಜ್ಯದ ಹಾಗೂ ಜನಸಾಮಾನ್ಯರ ಸಂಕಲ್ಪ ಶಕ್ತಿಗಳ ಪ್ರಗತಿಪರ ಸಂಯೋಜನೆ ಉಂಟಾಗಿದ್ದಿತು.

●




# ಮೈಸೂರು ಸಂಸ್ಥಾನದಲ್ಲಿ ಸ್ಥಳೀಯ ಆಡಳಿತ

ಬಿ. ಎಸ್. ಶಾಂತ

## ಹಸ್ತಾಂತರ ಪೂರ್ವದ ಕಾಲ :

ಕಚಡಾ ತೆರಿಗೆ ಅಥವಾ ಶೌಚಾಲಯ ತೆರಿಗೆಯನ್ನು ಮೈಸೂರು ನಗರದಲ್ಲಿ, ನೈರ್ಮಲ್ಯ ಉದ್ದೇಶಕ್ಕಾಗಿ ವಿಧಿಸಲಾಗುತ್ತಿತ್ತು. ಮತ್ತು ನೇಗಿಲು ತೆರಿಗೆಯನ್ನು ಅಡ್ಡರಸ್ತೆಗಳ ಅಭಿವೃದ್ಧಿಗಾಗಿ, ರಾಜ್ಯದಲ್ಲಿನ ಮುನಿಸಿಪಲ್ ಮತ್ತು ಸ್ಥಳೀಯ ನಿಧಿಗಳ ಆಧಾರವಾದ ಮೊಹತರ್ಫಾದ ಪರಿಷ್ಕರಣೆಯ ಸಂದರ್ಭದಲ್ಲಿ ವಿಧಿಸಲಾಗಿತ್ತು. ಪ್ರಾರಂಭದಲ್ಲಿ ಈ ತೆರಿಗೆಗಳ ಉತ್ಪನ್ನ ಸಾಮಾನ್ಯ ಕಂದಾಯಗಳಿಂದ ಬೇರೆಯಾಗಿ ಇರುತ್ತಿರಲಿಲ್ಲ. ಈ ಪದಗಳ ತೀಕ್ಷ್ಣವಾದ ಅರ್ಥದಲ್ಲಿ, ಮುನಿಸಿಪಲ್ ಮತ್ತು ಸ್ಥಳೀಯ ನಿಧಿಗಳನ್ನು ೧೮೬೨ರವರೆಗೆ ರಚಿಸಿರಲಿಲ್ಲ. ಈ ನಿಧಿಗಳ ಸ್ಥಾಪನೆಯು ೧೮೬೦ರಿಂದ ಆಯುಕ್ತರ ಗಮನವನ್ನು ಸೆಳೆಯಿತು ಮತ್ತು ವಿಭಾಗಗಳ ಅಧೀಕ್ಷಕರನ್ನು ಭಾರತ ಸರ್ಕಾರದ ವತಿಯ ಮೇರೆಗೆ, ರಾಜ್ಯದಲ್ಲಿ ಈ ನಿಧಿಗಳ ಸ್ಥಾಪನೆಯ ಸಾಧ್ಯಾಸಾಧ್ಯತೆಯ ಬಗ್ಗೆ ಮತ್ತು ಅವುಗಳನ್ನು ಉಪಯೋಗಿಸುವ ಉತ್ತಮ ವಿಧಾನದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಲು ಕೇಳಿಕೊಳ್ಳಲಾಗಿತ್ತು. ಈ ವಿಚಾರಣೆಯ ಫಲವಾಗಿ ಬೆಂಗಳೂರಿನ ಪ್ರಮುಖ ನಿವಾಸಿಗಳು ಒಂದು ಘೋಷಣೆಗೆ ಸಹಿ ಮಾಡಿ ಭಾರತ ಸರ್ಕಾರದ ಮುನಿಸಿಪಲ್ ಕಾಯಿದೆ XXVI, ೧೮೫೦ ರಂತೆ ಬದ್ಧರಾಗಿರುತ್ತೇವೆಂದು ಒಪ್ಪಿಕೊಂಡರು ಮತ್ತು ಈ ಘೋಷಣೆಯನ್ನು ೧೮೬೧ರ ಅಕ್ಟೋಬರ್‌ನಲ್ಲಿ ಮುಖ್ಯ ಇಂಜಿನಿಯರ್‌ರು, ಆಯುಕ್ತರಿಗೆ ಕಳುಹಿಸಿಕೊಟ್ಟರು.

> *ಬೆಂಗಳೂರಿನಲ್ಲಿ, ದೊಡ್ಡ ಪ್ರಮಾಣದಲ್ಲಿ ಮುನಿಸಿಪಲ್ ಕಾರ್ಯಗಳು ನಡೆಯುತ್ತಿತ್ತು. ಅವುಗಳ ನಿಯಂತ್ರಣ ಮತ್ತು ನಿರ್ದೇಶನಕ್ಕೆ ವಿಶೇಷ ಗಮನ ಬೇಕಾಗಿದ್ದು, ಹೆಚ್ಚಿನ ಶ್ರಮ ವಹಿಸಬೇಕಾಗಿತ್ತು. ಅದಕ್ಕೆ ಅಧ್ಯಕ್ಷರಿಗೆ ಮಾಸಿಕವಾಗಿ ೨೦೦ ರೂ.ಗಳನ್ನು ಕೊಡಲಾಗುತ್ತಿತ್ತು.*

೧೮೬೨ನೇ ಮಾರ್ಚಿಯಲ್ಲಿ ಪ್ರಾಯೋಗಿಕವಾಗಿ ೯ ಸದಸ್ಯರುಗಳುಳ್ಳ ಒಂದು ಮುನಿಸಿಪಲ್ ಸಮಿತಿಯನ್ನು ರಚಿಸಲಾಗಿದ್ದು, ಆ ಸದಸ್ಯರು ತಮ್ಮಲ್ಲಿಯೇ ಅಧ್ಯಕ್ಷರು ಮತ್ತು ಉಪಾಧ್ಯಕ್ಷರನ್ನು ಚುನಾಯಿಸಿಕೊಂಡರು. ಒಂಬತ್ತು ಸದಸ್ಯರ ಈ ಸಮಿತಿಯು ಒಬ್ಬ ಕಾರ್ಯನಿರ್ವಾಹಕ ಇಂಜಿನಿಯರ್, ಒಬ್ಬ ಯುರೋಪಿಯನ್ ಸಹಾಯಕ, ಒಬ್ಬ ಸ್ಥಳೀಯ ಜ್ಞಾನ ಮತ್ತು ಪ್ರಭಾವವಿರುವ ಯುರೋಪಿಯನ್ ಮಹನೀಯ, ಅಧಿಕಾರಯುತ ಮತ್ತು ಅಧಿಕಾರೇತರ ೬ ಭಾರತೀಯ ಸದಸ್ಯರಿದ್ದು, ಮುನಿಸಿಪಲ್ ವಿಷಯಗಳಲ್ಲಿ ಸಕ್ರಿಯ ಆಸಕ್ತಿಯನ್ನು ತಾಳುತ್ತಾರೆಂದು ಭಾವಿಸಲಾಗಿದ್ದು ಈ ಸಮಿತಿಗೆ ಹಣಕಾಸು ಒದಗಿಸಲು ಆಯುಕ್ತರು, ಒಂದು ಅಂಕಣಕ್ಕೆ ೪ ಆಣೆಯ ದರದಂತೆ ಕಚಡಾ ತೆರಿಗೆ ವಿಧಿಸುವುದನ್ನು ಮಂಜೂರು

ಮಾಡಿದರು. ಕೈಗೊಳ್ಳಬೇಕಾಗಿರುವ ಎಲ್ಲ ಯೋಜನೆಗಳಿಗೆ ಆಯುಕ್ತರ ಮಂಜೂರಾತಿ ಮತ್ತು ಮುಖ್ಯ ಇಂಜಿನಿಯರ್‌ರವರ ಅಧಿಸೂಚನೆ ಬೇಕಾಗಿತ್ತು.

ಎಲ್ಲ ಲೆಕ್ಕಗಳನ್ನೂ ಆಯುಕ್ತರ ಕಛೇರಿಗೆ ೩ ತಿಂಗಳಿಗೊಮ್ಮೆ ಕಳುಹಿಸಬೇಕಾಗುತ್ತಿತ್ತು. ೧೮೬೨ರಲ್ಲಿ ಇಂತಹುದೇ ಒಂದು ಸಮಿತಿಯನ್ನು ಮೈಸೂರಿನಲ್ಲಿ ಕೂಡ ರಚಿಸಲಾಯಿತು. ಬೆಂಗಳೂರಿನಲ್ಲಿ ಜನರು ಒಳ್ಳೆಯ ರಸ್ತೆಗಳ ಅನುಕೂಲಗಳು, ಸ್ವಚ್ಛವಾಗಿಟ್ಟಿರುವ ಒಳಚರಂಡಿಗಳು ಮತ್ತು ಶುದ್ಧ ನೀರನ್ನು ಶ್ಲಾಘಿಸಲು ತೊಡಗಿದರು. ಸಾಮಾನ್ಯ ಉಪಯುಕ್ತತೆಯ ಯೋಜನೆಗಳನ್ನು ಕೈಗೊಂಡಾಗ ವಿರೋಧವಿರಲಿಲ್ಲ. ಮೈಸೂರಿನಲ್ಲಿ ರಸ್ತೆಗಳು, ಕಕ್ಕಸು ಮತ್ತು ಒಳಚರಂಡಿಗಳ ಅಭಿವೃದ್ಧಿಯು ಅಗತ್ಯವಾಗಿದ್ದು ತಕ್ಷಣ ಕೈಗೊಳ್ಳಲಾಯಿತು.

೧೮೬೪-೬೫ರ ಹೊತ್ತಿಗೆ ಎಲ್ಲಾ ೮ ಜಿಲ್ಲಾ ಮುಖ್ಯಸ್ಥಳಗಳಲ್ಲಿ, ಒಂದು ಮುನಿಸಿಪಲ್ ಸಮಿತಿ ಇತ್ತು. ಇದನ್ನು ತಾಲ್ಲೂಕು ಕಸಬಾಗಳಿಗೆ ವಿಸ್ತರಿಸಲಾಗಿದ್ದು, ಅಂತಿಮವಾಗಿ ಇತರ ದೊಡ್ಡ ವ್ಯಾಪಾರೀ ಪಟ್ಟಣಗಳು ಮತ್ತು ಹಳ್ಳಿಗಳಿಗೆ ವಿಸ್ತರಿಸಲಾಯಿತು. ಜಿಲ್ಲಾ ಮುಖ್ಯಸ್ಥಳದ ಮುನಿಸಿಪಾಲಿಟಿಗಳು ಬಹುಮುಖ್ಯವಾಗಿದ್ದವು. ಸಣ್ಣಪಟ್ಟಣಗಳ ಮುನಿಸಿಪಲ್ ನಡವಳಿಕೆಯು ಮೊದಲಿಗೆ ಶೌಚಾಲಯದ ಅಭಿವೃದ್ಧಿಗೆ ಮೀಸಲಾಗಿದ್ದು, ಅವು ಗೋಚರವಾಗುವಂತೆ ಇದ್ದವು. ಈ ಎಲ್ಲ ಮುನಿಸಿಪಾಲಿಟಿಗಳಲ್ಲಿ ೧೮೭೧ರಲ್ಲಿ ಕ್ರಮವಾಗಿ ವ್ಯವಸ್ಥೆಗೊಳಿಸಿದ ಮಂಡಲಿಗಳು ರಚಿತವಾಗಿದ್ದು, ಅವುಗಳ ಸದಸ್ಯರುಗಳಲ್ಲಿ ಅಲ್ಲಿಯ ಅತ್ಯಂತ ಪ್ರಭಾವೀ ಯುರೋಪಿಯನ್ ಮತ್ತು ಭಾರತೀಯ ಸದಸ್ಯರಿದ್ದರು. ವಿಭಾಗೀಯ ಆಯುಕ್ತರೊಂದಿಗೆ ಮಂಡಲಿಯಲ್ಲಿ ೬ ಮಂದಿ ಪದನಿಮಿತ್ತ ಸದಸ್ಯರಿದ್ದು, ಅಧಿಕೃತ ಸಮುದಾಯದ ಎಲ್ಲ ಶಾಖೆಗಳನ್ನು ಪ್ರತಿನಿಧಿಸುವುದಕ್ಕೆ ವಿಶೇಷವಾಗಿ ಆಯ್ಕೆ ಮಾಡಲಾಗಿತ್ತು. ಇದರ ಸದಸ್ಯರ ಸಂಖ್ಯೆಯು ಒಟ್ಟು ಸದಸ್ಯರ ೧/೩ ಭಾಗವಾಗಿತ್ತು. ಸಣ್ಣ ಪಟ್ಟಣಗಳಲ್ಲಿ ಕ್ರಮವಾದ ಮಂಡಲಿಗಳನ್ನು ರಚಿಸಲು ಕಷ್ಟವಾದಾಗ ಹೆಚ್ಚು ಅನುಕೂಲವಾಗಿದ್ದ ಮುನಿಸಿಪಲ್ ನಿಬಂಧನೆಗಳನ್ನು ಕಂದಾಯ ಅಧಿಕಾರಿಗಳ ಮೂಲಕ ಜಾರಿಗೊಳಿಸಲಾಯಿತು. ೧೮೬೯ರಲ್ಲಿ ಅಮಲ್ದಾರರು ಶಿಕ್ಷಿಸಬಹುದಾಗಿದ್ದ ಅಪರಾಧಗಳನ್ನು ನಮೂದಿಸಿ ಒಂದು ಅಧಿಸೂಚನೆಯನ್ನು ಹೊರಡಿಸಲಾಯಿತು. ಇದನ್ನು ತಾಲ್ಲೂಕು ಮುಖ್ಯಸ್ಥಳಗಳಿಗೆ ಮತ್ತು ಮುಖ್ಯಪಟ್ಟಣಗಳಿಗೆ ಅನ್ವಯಿಸಲಾಯಿತು.

೧೮೭೨-೭೩ರ ಸಾಮಾನ್ಯ ಆಡಳಿತ ವರದಿಯಲ್ಲಿ ಈ ಕೆಳಗಿನ ಪ್ಯಾರಾ ಕಂಡುಬಂದಿದೆ.

"ಬೆಂಗಳೂರಿನಲ್ಲಿ, ದೊಡ್ಡ ಪ್ರಮಾಣದಲ್ಲಿ ಮುನಿಸಿಪಲ್ ಕಾರ್ಯಗಳು ನಡೆಯುತ್ತಿತ್ತು ಮತ್ತು ಅವುಗಳ ನಿಯಂತ್ರಣ ನಿರ್ದೇಶನಕ್ಕೆ ವಿಶೇಷ ಗಮನ ಬೇಕಾಗಿದ್ದು, ಹೆಚ್ಚಿನ ಶ್ರಮ ವಹಿಸಬೇಕಾಗಿತ್ತು. ಅದಕ್ಕೆ ಅಧ್ಯಕ್ಷರಿಗೆ ಮಾಸಿಕವಾಗಿ ೭೦೦ ರೂಗಳನ್ನು ಕೊಡಲಾಗುತ್ತಿತ್ತು. ಈ ವೆಚ್ಚವನ್ನು ಬೆಂಗಳೂರಿನ ಕಂಟೋನ್ಮೆಂಟ್ ಮತ್ತು ಪಟ್ಟಣದ ಮುನಿಸಿಪಾಲಿಟಿಗಳಲ್ಲಿ ೨/೩ ಮತ್ತು ೧/೩ ಪ್ರಮಾಣದಲ್ಲಿ ಉಪಯೋಗಿಸಿಕೊಳ್ಳಲಾಗುತ್ತಿತ್ತು. ಇತರ ಜಿಲ್ಲಾ ಮುಖ್ಯಸ್ಥಳದ ಮುನಿಸಿಪಾಲಿಟಿಗಳಲ್ಲಿ ಯಾವುದೇ ಅಧ್ಯಕ್ಷರಿಗೆ ಸಂಬಳವಿರಲಿಲ್ಲ. ಆ ಸ್ಥಳದ ಆಯ್ದ ಸರಕಾರಿ ಅಧಿಕಾರಿಗಳನ್ನು ತನ್ನ ಇತರ ಕರ್ತವ್ಯಗಳೊಂದಿಗೆ ಇದರ ಪ್ರಭಾರವನ್ನು ವಹಿಸಬೇಕಾಗಿತ್ತು.

## ಮುನಿಸಿಪಲ್ ಫಂಡ್‌ಗಳು :

೧೮೬೨ರ ಮೇ ೧೨ರಂದು ನೈರ್ಮಲ್ಯ ಅಭಿವೃದ್ಧಿಗಳಿಗೆ ಮತ್ತು ಪಟ್ಟಣಗಳ ಎಚ್ಚರಿಕೆಯ ಅಗತ್ಯಗಳಿಗೆ ಮುನಿಸಿಪಲ್ ಫಂಡ್‌ಗಳ ಸ್ಥಾಪನೆ ಮಾಡುವುದಕ್ಕೆ ಆದೇಶಗಳನ್ನು ಹೊರಡಿಸಲಾಯಿತು. ಹೊಗೆಸೊಪ್ಪು ಸುಂಕಗಳು, ಆಕ್ಬಾಯಿ ಮತ್ತು ನುಸೂಲ್ ಅಂದರೆ ಹಕ್ಕೊತ್ತಾಯವಿಲ್ಲದ ಅಥವಾ ವಶಪಡಿಸಿಕೊಂಡ ಪಟ್ಟಣದ ಜಮೀನುಗಳು ಅಥವಾ ಮನೆಗಳು ಮತ್ತು ಕಟ್ಟಡ ನಿವೇಶನಗಳ ಮಾರಾಟ ಉತ್ಪನ್ನಗಳೂ ಸೇರಿದಂತೆ ಪಟ್ಟಣದ ಹಣದ ಬಾಕಿಗಳು ತಾತ್ಕಾಲಿಕವಾಗಿ ಮುನಿಸಿಪಲ್ ಫಂಡ್‌ಗಳಾಗುತ್ತವೆ. ಮತ್ತು ಇವುಗಳನ್ನು ಮುನಿಸಿಪಲ್ ಅಗತ್ಯಗಳಿಗೆ ಮಾತ್ರ ವೆಚ್ಚ ಮಾಡಬೇಕು. ಪ್ರತಿಯೊಂದು ಪಟ್ಟಣದಿಂದ ವಸೂಲು ಮಾಡಿದ ಹಣವನ್ನು ಆ ಪಟ್ಟಣದ ಅಭಿವೃದ್ಧಿಗೇ ಒಂದು ಸಮಿತಿಯಿಂದ ಸಹಾಯ ಪಡೆದ ಅಧೀಕ್ಷಕರ ಮೇಲ್ವಿಚಾರಣೆಯಲ್ಲಿ ವೆಚ್ಚ ಮಾಡಬೇಕು. ಮೇಲೆ ನಮೂದಿಸಿದ ಅಂಶಗಳ ಜೊತೆಗೆ ಮಾರುಕಟ್ಟೆಯಿಂದ ಬಾಡಿಗೆಗಳು ಮತ್ತು ಗೊಬ್ಬರದ ಮಾರಾಟ ಉತ್ಪನ್ನ ಅಥವಾ ಜಾಡಮಾಲಿಗಳು ಸಂಗ್ರಹಿಸಿದ ನಿರುಪಯೋಗಿ ವಸ್ತುಗಳ ಮಾರಾಟದಿಂದ ಬಂದ ಹಣವು ಮುನಿಸಿಪಲ್ ಫಂಡ್‌ಗೆ ಸೇರುತ್ತದೆ. ಈ ಮೂಲಗಳಿಂದ ಬಂದ ವರಮಾನವು ಸಾಕಾಗುವುದಿಲ್ಲವೆಂದು ಕಂಡುಬಂದುದರಿಂದ ಕೆಲವು ಮುನಿಸಿಪಾಲಿಟಿಗಳು ಮನೆಗಳ ಮೇಲೆ ತೆರಿಗೆ ವಿಧಿಸಿದವು.

೧೮೬೩ರಲ್ಲಿ ಮೈಸೂರು ನಗರದಲ್ಲಿ ಸಂಚಾರ ಶುಲ್ಕಗಳನ್ನು ಮುನಿಸಿಪಾಲಿಟಿಗಳಿಗೆ ವರ್ಗಾಯಿಸಲಾಯಿತು. ಜಿಲ್ಲಾ ಮುಖ್ಯ ಕೇಂದ್ರದಲ್ಲಿ ಮತ್ತು ಶ್ರೀರಂಗಪಟ್ಟಣದಲ್ಲಿ ಮೊಹತರ್ಫಾದಿಂದ ಬಂದ ವರಮಾನವನ್ನು ಕಾಲಕಾಲಕ್ಕೆ ಮುನಿಸಿಪಲ್ ಬೋರ್ಡ್‌ಗಳಿಗೆ ಕೊಡಲಾಗುತ್ತಿತ್ತು. ಈ ಹಣವನ್ನು ಪೊಲೀಸ್ ಕಾರ್ಯಗಳಿಗೆ ಉಪಯೋಗಿಸಿದ ವೆಚ್ಚಗಳನ್ನು ಭರ್ತಿ ಮಾಡಿಕೊಳ್ಳುವುದಕ್ಕಾಗಿತ್ತು. ಮುನಿಸಿಪಲ್ ಬೋರ್ಡ್‌ಗಳ ಸಂಪನ್ಮೂಲಗಳನ್ನು ಹೆಚ್ಚಿಸಿಕೊಳ್ಳಲು ವ್ಯಕ್ತಿಗಳ ಮನೆಗಳ ಮೇಲೆ ವಿಧಿಸಲಾದ ತೆರಿಗೆಯನ್ನು ಮೊಹತರ್ಫಾಕ್ಕೆ ಬದಲಾಗಿ (ಎಲ್ಲ ಬಗೆಯ ಸುಂಕಗಳು) ಮನೆಯ ಮೇಲೆಯೇ ತೆರಿಗೆಯನ್ನು ವಿಧಿಸಲಾಯಿತು. ೧೮೭೧ರಲ್ಲಿ ಬೆಂಗಳೂರು ಪಟ್ಟಣ ಮತ್ತು ಕಂಟೋನ್ಮೆಂಟ್ ಮುನಿಸಿಪಾಲಿಟಿಗಳಲ್ಲಿ ಹೊಗೆಸೊಪ್ಪು ಮತ್ತು ವೀಳೆಯದೆಲೆ, ಅಡಿಕೆಯ ಮೇಲಿನ ಸುಂಕದ ಆಡಳಿತ ಮತ್ತು ಸಂಗ್ರಹಣೆಯನ್ನು ಸಂಬಂಧಪಟ್ಟ ಮುನಿಸಿಪಲ್ ಬೋರ್ಡ್‌ಗಳಿಗೆ ವಹಿಸಿಕೊಡಲಾಗಿತ್ತು ಮತ್ತು ಈ ಮುನಿಸಿಪಾಲಿಟಿಗಳಲ್ಲಿ ಆಕ್ಟ್ರಾಯ್ ವಸೂಲಿಗೆ ನಿಯಮಗಳನ್ನು ರಚಿಸಲಾಯಿತು. ೧೮೭೧-೭೨ರಲ್ಲಿ ನಂದಿದುರ್ಗ ವಿಭಾಗದ ಮುನಿಸಿಪಾಲಿಟಿಗಳಲ್ಲಿ ಆಕ್ಟ್ರಾಯ್ ಅನ್ನು ಮನೆ ತೆರಿಗೆಯಿಂದ ಬದಲಾಯಿಸಲಾಯಿತು. ೧೮೭೨-೭೩ರಲ್ಲಿ ಬೆಂಗಳೂರು ಪೇಟೆ ಮತ್ತು ಕಂಟೋನ್ಮೆಂಟ್ ಬೋರ್ಡ್‌ಗಳಿಗೆ ಹೆಂಡದ ಬಿಡಿ ಮಾರಾಟಕ್ಕೆ ಲೈಸೆನ್ಸ್‌ಗಳ ಶುಲ್ಕದಿಂದ ಬಂದ ವರಮಾನವನ್ನು ಕೊಡಲಾಗುತ್ತಿತ್ತು. ೧೮೭೬ರ ಜೂನ್‌ನಲ್ಲಿ ಬೆಂಗಳೂರಿನ ವ್ಯಾಪ್ತಿಯೊಳಗೆ ಇರುವ ನಿರ್ದಿಷ್ಟ ಗ್ರಾಮಗಳ ಕೃಷಿ ಜಮೀನಿನ ಮೇಲಿನ ಭೂಕಂದಾಯವನ್ನೂ ಕೂಡ ಈ ಬೋರ್ಡ್‌ಗಳಿಗೆ ವಹಿಸಲಾಗಿತ್ತು.

## ಮುನಿಸಿಪಲ್ ನಿಬಂಧನೆಗಳು :

ಕಂಟೋನ್ಮೆಂಟ್ ಮತ್ತು ಭಾರತ ಸರ್ಕಾರದ ಅಧಿಕಾರದ ಅಡಿಯಲ್ಲಿ ಬರುವ ಪಟ್ಟಣಗಳಿಗೆ ೧೮೭೧ರ ಏಪ್ರಿಲ್ ೧ರಿಂದ ಹೊಸ ಮುನಿಸಿಪಲ್ ನಿಬಂಧನೆಗಳ ಸಂಹಿತೆಯನ್ನು ಜಾರಿಗೊಳಿಸಿದ ಮೇಲೆ ಬೆಂಗಳೂರು ಕಂಟೋನ್ಮೆಂಟ್‌ನಲ್ಲಿ ೧೮೫೬ರ ಕಾಯಿದೆ XIV ಮತ್ತು ೧೮೬೪ರ XVIIIರ ನಿಬಂಧನೆಗಳು ಜಾರಿಯಲ್ಲಿರಲಿಲ್ಲ. ಪೊಲೀಸ್‌ಗೆ ಉತ್ತಮ ಅವಕಾಶ, ಶೌಚಾಲಯ ಮತ್ತು ಕಂಟೋನ್ಮೆಂಟ್‌ನ ಅಭಿವೃದ್ಧಿಗೆ ಮತ್ತು ತೆರಿಗೆಗಳನ್ನು ವಿಧಿಸಲು ಪಟ್ಟಣದ ಬಾಕಿಗಳು ಮುಂತಾದವುಗಳನ್ನು ವಸೂಲು ಮಾಡಲು ಕಮಿಷನರ ನೇಮಕಾತಿಗೆ ಈ ಹೊಸ ನಿಬಂಧನೆಯು ಅವಕಾಶವಿತ್ತಿದೆ. ಈ ನಿಬಂಧನೆಗಳ ಕಾರ್ಯವ್ಯಾಪ್ತಿಯ ಅಡಿಯಲ್ಲಿ ಮಂಡಲಿಯ ರಚನೆಯಲ್ಲಿ ಮಹತ್ತರವಾದ ಬದಲಾವಣೆಯನ್ನು ಮಾಡಲಾಯಿತು. ಸದಸ್ಯರ ಆಯ್ಕೆಗಾಗಿ ಹಿಂದಿನ ವ್ಯವಸ್ಥೆಗಳನ್ನು ಬದಲಾಯಿಸಿ, ಕಂಟೋನ್ಮೆಂಟ್ ಅನ್ನು ೬ ವಿಭಾಗಗಳು ಅಥವ ವಾರ್ಡ್‌ಗಳಾಗಿ ವಿಂಗಡಿಸಿ, ಪ್ರತಿಯೊಂದರಿಂದಲೂ ಅಲ್ಲಿಯೇ ವಾಸಿಸುವ ಇಬ್ಬರು ವ್ಯಕ್ತಿಗಳು ಕಮಿಷನರ್‌ಗಳಾಗಿ ಇರಲು ಸರಕಾರವು ನಾಮಕರಣ ಮಾಡುತ್ತಿತ್ತು.

## ಮುನಿಸಿಪಲ್ ತೆರಿಗೆಯ ಕ್ರಮಗೊಳಿಸುವಿಕೆ ಮತ್ತು ಪರಿಷ್ಕರಣ :

ಆಕ್ಟ್ರಾಯ್ ಅನ್ನು ವಿಧಿಸುವುದರ ಬಗ್ಗೆ ಭಾರತ ಸರಕಾರವು ಸಾಮಾನ್ಯ ತತ್ವಗಳನ್ನು ರೂಪಿಸಿತು ಮತ್ತು ಇವುಗಳನ್ನು ೧೮೭೭ರ ಅಕ್ಟೋಬರ್‌ನಲ್ಲಿ ಮುನಿಸಿಪಲ್ ಬೋರ್ಡ್‌ಗಳ ಮಾರ್ಗದರ್ಶನಕ್ಕಾಗಿ ಕಳುಹಿಸಲಾಯಿತು. ಜಾಗರೂಕವಾದ ಪರಿಶೀಲನೆಯ ನಂತರ ರಾಜ್ಯದ ಮುನಿಸಿಪಲ್ ತೆರಿಗೆಯ ಪದ್ಧತಿಯನ್ನು ೧೮೭೯ರಲ್ಲಿ ಸಂಪೂರ್ಣವಾಗಿ ಪರಿಷ್ಕರಿಸಲಾಯಿತು. ಮನೆಗಳ ಮೇಲೆ ಎರಡು ಬಗೆಯ ತೆರಿಗೆಯ ಪದ್ಧತಿಯನ್ನು, ಅಂದರೆ ಸರಕಾರದ ಪರವಾಗಿ ಮೊಹತರ್ಫಾ ನಿಯಮಗಳ ಅಡಿಯಲ್ಲಿ ಮತ್ತು ಇನ್ನೊಂದು ಮುನಿಸಿಪಲ್ ಉದ್ದೇಶಗಳಿಗೆ ಮೊಹತರ್ಫಾ ಪಾವತಿಯನ್ನು ವಿನಾಯಿತಿಗೊಳಿಸುವುದನ್ನು ರದ್ದುಮಾಡಿ ಯಾವುದೇ ವಿನಾಯಿತಿ ಇಲ್ಲದೆ ಎಲ್ಲ ಮನೆಗಳಿಗೂ ಏಕರೂಪದ ತೆರಿಗೆಯನ್ನು ವಿಧಿಸಲು ಆದೇಶಿಸಲಾಯಿತು. ಆದರೆ ಧಾರ್ಮಿಕ ಮತ್ತು ದತ್ತಿಗಳ ಉದ್ದೇಶಗಳಿಗೆ ಪ್ರತ್ಯೇಕವಾಗಿ ಮೀಸಲಾಗಿ ಇರುವವು ಮತ್ತು ಸರಕಾರಕ್ಕೆ ಸೇರಿದವುಗಳಿಗೆ ವಿನಾಯಿತಿ ಇತ್ತು. ಅರ್ಧ ಭಾಗವನ್ನು ಸರಕಾರಕ್ಕೆ ಕೊಟ್ಟು ಉಳಿದರ್ಧವನ್ನು ತಮ್ಮಲ್ಲೇ ಉಳಿಸಿಕೊಳ್ಳುವ ನಿರ್ಬಂಧಕ್ಕೆ ಒಳಗಾಗಿ, ಎಲ್ಲ ಮುನಿಸಿಪಲ್ ಸಂಸ್ಥೆಗಳು ಏಕರೂಪ ದರದಲ್ಲಿ ಮನೆ ತೆರಿಗೆಯನ್ನು ವಿಧಿಸಲು ಅಧಿಕಾರ ನೀಡಲಾಗಿತ್ತು ಮತ್ತು ಇದರೊಡನೆ ಅಂಗಡಿಗಳು, ಗಿರಣಿಗಳು, ಎಣ್ಣೆಮಿಲ್‌ಗಳು ಮತ್ತು ಬಂಡಿಗಳ ಮೇಲೆ ಮೊಹತರ್ಫಾವನ್ನು ವಿಧಿಸಬಹುದಾಗಿತ್ತು. ಪಟ್ಟಣದ ಪೊಲೀಸರ ಸೇವೆಗಳ ವೆಚ್ಚವನ್ನು ಭರಿಸುವ ಮುನಿಸಿಪಲ್ ಬೋರ್ಡ್‌ಗಳಿಗೆ ಮೊಹತರ್ಫಾವನ್ನು ಸಂಪೂರ್ಣವಾಗಿ ವಹಿಸಲಾಗಿದ್ದು, ಜಂಟಿ ಮನೆ ತೆರಿಗೆ, ಮೊಹತರ್ಫಾದ ವಸ್ತುಗಳ ಮೇಲಿನ ತೆರಿಗೆಯ

ಪ್ರಾರ್ಥನಾ ಪರಮಾನವನ್ನೂ ಕೂಡ ವಹಿಸಲಾಗಿತ್ತು. ಅನೇಕ ಸಂಘಗಳ ಮೇಲಿನ ಅಬ್ಕಾರಿ ವಿಧಿಸುವುದನ್ನು ರದ್ದುಪಡಿಸಲಾಯಿತು. ಮತ್ತು ಲಾಭ ತರುವಂತಹ ಮತ್ತು ಹಾನಿಕರವಲ್ಲದ ಸರಕುಗಳ ಮೇಲೆ ಈ ತೆರಿಗೆಯನ್ನು ಮಿತಗೊಳಿಸಲಾಗಿದೆ. ಸಂಪರ್ಕಸಾರಿಗೆ ಶುಲ್ಕಗಳು, ಮತ್ತು ಪಟ್ಟಣಗಳ ಸುಂಕಗಳನ್ನು ಪರಿಷ್ಕರಿಸಿ ಮತ್ತು ಸುಪಾರಿ ಮೇಲಿನ ಮುನಿಸಿಪಲ್ ಅಬ್ಕಾರಿ ವಿಧಿಸುವುದನ್ನು ರದ್ದುಪಡಿಸಲಾಯಿತು. ಸಂಪರ್ಕ ಸಾರಿಗೆ ಶುಲ್ಕಗಳ ಸಂಗ್ರಹಣೆಯನ್ನು ತೆಂಗಿನಕಾಯಿ, ವೀಳ್ಯದೆಲೆ ಮತ್ತು ಹೊಗೆಸೊಪ್ಪಿನ ಮೇಲಿನ ಸುಂಕವನ್ನು ಉತ್ಪಾದನೆ ಸ್ಥಳದಲ್ಲೇ ವಸೂಲು ಮಾಡುವುದನ್ನು ರದ್ದುಪಡಿಸಲಾಯಿತು. ಎಲ್ಲ ಮುನಿಸಿಪಲ್ ಸಂಸ್ಥೆಗಳೂ ಈ ವಸ್ತುಗಳ ಮೇಲೆ ಪಟ್ಟಣ ಸುಂಕವನ್ನು ಜಂಟಿಯಾಗಿ ವಿಧಿಸಬೇಕು ಮತ್ತು ಅದರ ಒಂದು ಭಾಗವನ್ನು ಸರಕಾರಕ್ಕೆ ನೀಡಬೇಕೆಂದು ನಿರ್ದೇಶಿಸಲಾಯಿತು. ಉಳಿದ ಸರಕುಗಳ ಮೇಲೆ ಅಬ್ಕಾರಿ ವಿಧಿಸುವುದನ್ನು ಸಂಬಂಧಪಟ್ಟ ಮುನಿಸಿಪಲ್ ಸಂಸ್ಥೆಗಳ ವಿವೇಚನೆಗೆ ಬಿಡಲಾಗಿದ್ದು, ಅದಕ್ಕೆ ಸರಕಾರದ ಮಂಜೂರಾತಿಯನ್ನು ಪಡೆಯಬೇಕಾಗಿತ್ತು.

## ಲೋಕಲ್ ಫಂಡುಗಳು :

ಲೋಕಲ್ ಫಂಡ್‌ಗಳನ್ನು ೧೮೬೨ರಲ್ಲಿ ಸ್ಥಾಪಿಸಲಾಗಿದ್ದು, ಅದರಲ್ಲಿ ನೇಗಿಲು ತೆರಿಗೆ, ದೋಣಿ ತೆರಿಗೆ, ಬೀದಿ ದನಗಳ ಮಾರಾಟ ಉತ್ಪನ್ನಗಳು ಮತ್ತು ಜಾನುವಾರು ಅತಿಕ್ರಮಣಕ್ಕೆ ಹಾಕಿದ ದಂಡಗಳೂ ಸೇರಿತ್ತು. ಹೀಗೆ ಪಡೆಯಲಾದ ಮೊಬಲಗನ್ನು ಸಾಮಾನ್ಯ ಕಂದಾಯದಿಂದ ಬೇರ್ಪಡಿಸಿ, ಸಿವಿಲ್ ಅಧಿಕಾರಿಗಳ ಅಧೀನದಲ್ಲಿ ಇಡಲಾಗಿತ್ತು. ಲೋಕೋಪಯೋಗಿ ಇಲಾಖೆಯ ಅಡಿಯಲ್ಲಿ ಬರುವ ಸಂಪರ್ಕಗಳ ಉಪವಿಭಾಗವಾಗಿರುವ ೪ನೇ ದರ್ಜೆಯ ಗ್ರಾಮರಸ್ತೆಗಳ ನಿರ್ಮಾಣಕ್ಕೆ ಈ ಹಣವನ್ನು ಉಪಯೋಗಿಸಬೇಕಾಗಿತ್ತು. ಸರ್ವೆ ಇಲಾಖೆಯನ್ನು ಸ್ಥಾಪಿಸಿದ ಮೇಲೆ ೧೮೬೪ರಲ್ಲಿ ಸರ್ವೆ ಮಾಡಿದ ತಾಲ್ಲೂಕುಗಳಲ್ಲಿ ಪ್ರತ್ಯೇಕವಾಗಿ ಕಂದಾಯವಾಗಿದ್ದ ನೇಗಿಲು ತೆರಿಗೆ ರದ್ದುಪಡಿಸಿ, ಅದು ಸರ್ವೆಯ ಮೌಲ್ಯಮಾಪನದಲ್ಲಿ ವಿಲೀನವಾಯಿತು. ೧೮೭೧-೭೨ರ ಹೊತ್ತಿಗೆ ರಸ್ತೆಗಳ ರಿಪೇರಿ, ಶಿಕ್ಷಣ ಮತ್ತು ಇತರ ಉದ್ದೇಶಗಳಿಗೆ ಅಂದರೆ ಸ್ಥಳೀಯ ಉದ್ದೇಶಕ್ಕೆ ಸರ್ವೆ ಮಾಡಿದ ತಾಲ್ಲೂಕುಗಳಲ್ಲಿ ರೂಪಾಯಿಗೆ ೧ ಆಣೆಯಂತೆ, ಸ್ಥಳೀಯ ಶುಲ್ಕವನ್ನು ವಿಧಿಸಬೇಕೆಂದು ನಿರ್ಧರಿಸಲಾಯಿತು ಸರ್ವೆ ಮಾಡದ ತಾಲ್ಲೂಕುಗಳಲ್ಲಿ ಬೇರೀಜಿನ ಒಂದು ರೂಪಾಯಿಗೆ ½ ಆಣೆಯಂತೆ ಸಾಮಾನ್ಯ ಸ್ಥಳೀಯ ಸುಂಕವನ್ನು ವಿಧಿಸಲಾಯಿತು. ಮತ್ತು ಈ ದರವನ್ನು ೧೮೭೪ರ ನವೆಂಬರ್‌ನಲ್ಲಿ ೧ ಆಣೆಗೆ ಏರಿಸಲಾಯಿತು. ಸ್ಥಳೀಯ ಸೆಸ್‌ಗಳನ್ನು ಸಂಚಾರ ಶುಲ್ಕಗಳಿಗೆ ಅರಣ್ಯ ಮತ್ತು ಅಬಕಾರಿ ಕಂಟ್ರಾಕ್ಟ್‌ಗಳಿಗೆ ಮತ್ತು ಇತರ ಅಂಶಗಳಿಗೆ ವಿಸ್ತರಿಸಲಾಯಿತು. ಮುನಿಸಿಪಾಲಿಟಿಗಳಿಲ್ಲದಿರುವ ಪಟ್ಟಣಗಳಲ್ಲಿ ಜಾನುವಾರು ಅತಿಕ್ರಮಣ ಕಾಯಿದೆ ಅಡಿಯಲ್ಲಿ ಬಂದ ವರಮಾನ, ದೋಣಿ ಒಪ್ಪಂದಗಳ ಬಾಡಿಗೆ ಮತ್ತು ಇನ್ನೂ ಕೆಲ ಅಂಶಗಳನ್ನು ಲೋಕಲ್ ಫಂಡ್‌ಗಳ ಅಡಿಯಲ್ಲಿ ತರಲಾಯಿತು.

## ನೀರಾವರಿ ಶುಲ್ಕ :

ಒಂದು ರೂಪಾಯಿಗೆ ಒಂದು ಆಣೆಯಂತೆ ನೀರಾವರಿ ಶುಲ್ಕವಾಗಿ ತರಿ ಜಮೀನುಗಳಿಗೆ ವಿಧಿಸಲಾಗಿದ್ದು, ಪ್ರತ್ಯೇಕವಾಗಿದ್ದ ಈ ಶುಲ್ಕವನ್ನು ಕೆಲವು ಸಂದರ್ಭಗಳಲ್ಲಿ ಕಂದಾಯದೊಂದಿಗೆ ಸೇರಿಸಲಾಗಿದ್ದು, ಉಳಿದವನ್ನು ಹಾಗೆಯೇ ಇಡಲಾಯಿತು. ಈ ಸುಂಕದಿಂದ ಬಂದ ಹಣ ಮತ್ತು ಕಂದಾಯದಲ್ಲಿ ಸೇರಿಹೋಗಿರುವ ಸಂದರ್ಭಗಳಲ್ಲಿ ಒಂದು ಮೊತ್ತದ ಹಣವನ್ನು ಸೇರಿಸಿ ನೀರಾವರಿ ಕೆಲಸಗಳಿಗೆ ಅಂದರೆ ಸುಸ್ಥಿತಿಯಲ್ಲಿ ಇಡುವುದಕ್ಕೆ ಒಂದು ನೀರಾವರಿ ಫಂಡ್ ಅನ್ನು ಪ್ರತಿಯೊಂದು ಜಿಲ್ಲೆಯಲ್ಲಿ ರಚಿಸಲಾಯಿತು.

## ಲೋಕಲ್ ಫಂಡ್‌ಗಳ ಧನ ವಿನಿಯೋಗ :

೧೮೭೨-೭೩ರ ವರ್ಷಾಂತ್ಯದಲ್ಲಿ ಈ ಫಂಡ್‌ಗಳ ಆಡಳಿತಕ್ಕೆ ಅಧಿಕಾರಿಗಳಿಗೆ ಮಾರ್ಗಸೂಚಿಯಾಗಿ ಸಾಮಾನ್ಯ ನಿಯಮಗಳನ್ನು ರಚಿಸಲಾಯಿತು. ಸ್ಥಳೀಯ ಸುಂಕದ ವಸೂಲಾತಿಯಿಂದ ಅನೇಕ ಉದ್ದೇಶಗಳಿಗೆ ಧನ ವಿನಿಯೋಗದ ಬಗ್ಗೆ ೧೮೭೧ರಲ್ಲಿ ಆದೇಶಗಳನ್ನು ಹೊರಡಿಸಲಾಯಿತು. ಅದರ ಪ್ರಕಾರ ತಾತ್ಕಾಲಿಕವಾಗಿ ಈ ಕೆಳಗಿನಂತೆ ಮಾಡಬೇಕಾಗಿತ್ತು.

೧. ಅಡಕೆ ಮೇಲಿನ ಹಾಲಾತ್ ಸುಂಕ ಮತ್ತು ಅಬಕಾರಿ ವಸೂಲಾತಿಗಳಿಂದ ಬಂದ ಹಣವನ್ನು 'ಲೋಕಲ್ ಫಂಡ್ ಜನರಲ್' ಎಂಬ ಒಂದು ಸಾಮಾನ್ಯ ನಿಧಿಯನ್ನು ಸ್ಥಾಪಿಸಿ ರಾಜ್ಯದಲ್ಲಿ ಯಾವುದೇ ಭಾಗದಲ್ಲಿ ವಿಶೇಷ ಸಹಾಯ ಅಗತ್ಯ ಎಂದು ಕಂಡುಬಂದರೆ ಚೀಫ್ ಕಮೀಷನರ್ ಅವರ ಮಂಜೂರಾತಿಯಿಂದ ಹಣವನ್ನು ವೆಚ್ಚ ಮಾಡಬಹುದು.

೨. ಇತರ ವಸ್ತುಗಳ ಮೇಲಿನ ಸ್ಥಳೀಯ ಸುಂಕದ ೨೪% ಅನ್ನು ಹಳ್ಳಿಯ ಶಾಲೆಗಳಿಗೆ ಉಪಯೋಗಿಸಬೇಕು ಮತ್ತು ಇದನ್ನು ಗ್ರಾಮ ಶಾಲಾ ಫಂಡ್ ಎಂದು ಕರೆಯಲಾಗುವ ಪ್ರತ್ಯೇಕ ಶಿರೋನಾಮೆಯಡಿಯಲ್ಲಿ ಲೆಕ್ಕ ತೋರಿಸಬೇಕು.

೩. ಉಳಿದ ಹಣವನ್ನು ಲೋಕೋಪಯೋಗಿ ಕೆಲಸಗಳು, ರಸ್ತೆಗಳು, ಔಷಧಾಲಯಗಳು, ಆಸ್ಪತ್ರೆಗಳು, ಬಂಗಲೆಗಳು ಮುಂತಾದವುಗಳ ಮೇಲೆ ವೆಚ್ಚ ಮಾಡಿ, ಸಂಬಂಧಪಟ್ಟ ಜಿಲ್ಲೆಯ ಲೋಕಲ್ ಫಂಡ್ ಲೆಕ್ಕದಲ್ಲಿ ತೋರಿಸಬೇಕು.

## ಲೋಕಲ್ ಫಂಡ್ ಸಮಿತಿಗಳ ರಚನೆ :

೧೮೭೪ರ ಜುಲೈನಲ್ಲಿ ಲೋಕಲ್ ಫಂಡ್‌ಗಳ ಆಡಳಿತಕ್ಕೆ ಸ್ಥಳೀಯ ಕಮಿಟಿಗಳ ಸ್ಥಾಪನೆಗೆ ನಿಯಮಗಳನ್ನು ಭಾರತ ಸರಕಾರವು ಮಂಜೂರು ಮಾಡಿತು ಮತ್ತು ಉಪನಿಯಮಗಳನ್ನು ಈ ಸಮಿತಿಗಳ ಮಾರ್ಗದರ್ಶನಕ್ಕೆ ಚೀಫ್ ಕಮಿಷನರು ನಿಗದಿಪಡಿಸಿದರು. ಪ್ರತಿ ಜಿಲ್ಲೆಯಲ್ಲಿ ಒಂದು ಸಮಿತಿ ಇದ್ದು, ಜಿಲ್ಲಾಧಿಕಾರಿಗಳು ಅದರ ಅಧ್ಯಕ್ಷರಾಗಿದ್ದು, ಮತ್ತು ಸಹಾಯಕ ಕಮಿಷನರುಗಳು, ಜಿಲ್ಲಾ ಕೇಂದ್ರ ಸ್ಥಳಗಳಲ್ಲಿ ಮತ್ತು ಉಪವಿಭಾಗಗಳ ಪ್ರಭಾರರಾಗಿರುವ ಎಕ್ಸಿಕ್ಯೂಟಿವ್ ಇಂಜಿನಿಯರ್ ಮತ್ತು ಎಲ್ಲ ಅಮಲ್‌ದಾರರುಗಳು ಪದನಿಮಿತ್ತ ಸದಸ್ಯರಾಗಿದ್ದರು ಮತ್ತು ಒಬ್ಬ ಚುನಾಯಿತ ಇನಾಮ್‌ದಾರ ಮತ್ತು ಆರು ಜನ ನಾಮಕರಣ ಮಾಡಿದ ಭೂಒಡೆಯರು ಅಧಿಕಾರೇತರ ಸದಸ್ಯರಿದ್ದರು. ಜಿಲ್ಲಾ ಕಮಿಟಿಗಳ ಏಳು ಅಧಿಕಾರೇತರ ಸದಸ್ಯರುಗಳಲ್ಲಿ ಮೂರು ಜನವಾದರೂ ಜಿಲ್ಲೆಯಲ್ಲಿ ತರಿ ಜಮೀನನ್ನು ಹೊಂದಿದವರಾಗಿರಬೇಕಾಗಿತ್ತು. ಸಮಿತಿಗಳ ಕರ್ತವ್ಯಗಳು, ಆರೋಗ್ಯ, ನಿವಾಸಿಗಳ ಅನುಕೂಲವನ್ನು ಹೆಚ್ಚಿಸಲು ಸಮಿತಿಯು ಎಲ್ಲವನ್ನೂ ತಿಳಿದು ಕೆಲಸ ಒದಗಿಸಬೇಕಾಗಿತ್ತು. ೫೦೦ ರೂಪಾಯಿಗಳಿಗಿಂತ ಕಡಿಮೆ ವೆಚ್ಚಗಳಿಗೆ ಮಂಜೂರಾತಿ ನೀಡುವ ಅಧಿಕಾರ ಸಮಿತಿಗೆ ಇತ್ತು. ೧೦೦೦ ರೂ.ವರೆಗಿನ ಅಂದಾಜನ್ನು ಚೀಫ್ ಕಮಿಷನರ್ ಮಂಜೂರು ಮಾಡಬಹುದಾಗಿತ್ತು. ಕೆಲಸದ ಆಯ್ಕೆಯು ಜಿಲ್ಲಾ ಕಮಿಟಿಗಳ ಕಾರ್ಯವಾಗಿತ್ತು. ಅವನ್ನು ಕಾರ್ಯಗತಗೊಳಿಸಲು ಅಧ್ಯಕ್ಷರು ಜವಾಬ್ದಾರರು. ಲೆಕ್ಕಗಳನ್ನು ಉಪಮಹಾಲೇಖಪಾಲರು (ಡೆಪ್ಯುಟಿ ಅಕೌಂಟೆಂಟ್ ಜನರಲ್) ಲೆಕ್ಕಪರಿಶೋಧನೆ ಮಾಡುತ್ತಿದ್ದರು. ಜಿಲ್ಲಾ ನೀರಾವರಿ ಫಂಡು, ಲೋಕಲ್ ಫಂಡುಗಳ ಪ್ರತ್ಯೇಕವಾದ ಒಂದು ಶಾಖೆಯಾಗಿತ್ತು. ೧೮೭೫ರ ಫೆಬ್ರವರಿಯಲ್ಲಿ ಅವುಗಳ ಆಡಳಿತವನ್ನು ಜಿಲ್ಲಾ ಸಮಿತಿಗಳಿಗೆ ವಹಿಸಲಾಯಿತು. ಆದರೆ ಈ ಹಣವನ್ನು ನೀರಾವರಿ ಕೆಲಸಗಳಿಗೆ ಮಾತ್ರ ಉಪಯೋಗಿಸಬೇಕಾಗಿತ್ತು.

## ಲೋಕೋಪಯೋಗಿ ಕಾರ್ಯಗಳಿಗೆ ಏಜೆನ್ಸಿ :

ಅಡ್ಡರಸ್ತೆಗಳ ಕಾರ್ಯಕ್ಕೆ ಮತ್ತು ಚಿಕ್ಕಪುಟ್ಟ ನೀರಾವರಿ ದುರಸ್ತಿಗಳಿಗೆ, ಮತ್ತಿತರ ಸಣ್ಣ ಕೆಲಸಗಳಿಗೆ ರೆವಿನ್ಯೂ ಅಧಿಕಾರಿಗಳು ಮೇಲ್ವಿಚಾರಣೆ ನಡೆಸುತ್ತಿದ್ದು, ಪ್ರಾರಂಭದಲ್ಲಿ ಒಂದೇ ಸಿಬ್ಬಂದಿಯನ್ನು ಇಡಲಾಗಿತ್ತು. ವೆಚ್ಚಗಳನ್ನು ಲೋಕಲ್ ಫಂಡುಗಳು ಮತ್ತು ಸಾಮಾನ್ಯ ಕಂದಾಯದ ನಡುವೆ ಸಮನಾಗಿ ಹಂಚಲಾಗುತ್ತಿತ್ತು. ನಂತರ ಜಿಲ್ಲಾ ಸಮಿತಿಗಳು ಈ ಕಾರ್ಯಗಳನ್ನು ಮಾಡುವುದಕ್ಕೆ ಪ್ರತ್ಯೇಕವಾದ ಸಿಬ್ಬಂದಿಯನ್ನು ಹೊಂದಿದ್ದವು ಮತ್ತು ಕೆಲವು ಜಿಲ್ಲೆಗಳಲ್ಲಿ ಲೋಕಲ್ ಫಂಡ್ ಇಂಜಿನಿಯರ್‌ಗಳು ಕೂಡಾ ಇದ್ದರು. ಈ ವ್ಯವಸ್ಥೆಯು ಹೆಚ್ಚು ವೆಚ್ಚವಾದುದರಿಂದ ಲೋಕಲ್ ಫಂಡ್ ಸಿಬ್ಬಂದಿಯನ್ನು ೧೮೭೯ರಲ್ಲಿ ಲೋಕೋಪಯೋಗಿ ಸಿಬ್ಬಂದಿಯೊಡನೆ ವಿಲೀನಗೊಳಿಸಲಾಯಿತು. ಅಲ್ಲಿಂದೀಚೆಗೆ ಎಲ್ಲ ಕೆಲಸಗಳನ್ನೂ ಲೋಕೋಪಯೋಗಿ ಇಲಾಖೆ ಮಾಡಬೇಕಾಗಿತ್ತು.

## ಹಸ್ತಾಂತರದ ನಂತರದ ಕಾಲ :

**ಮುನಿಸಿಪಾಲಿಟಿಗಳ ಸಂಖ್ಯೆ:** ಬೆಂಗಳೂರಿನ ಕಂಟೋನ್ಮೆಂಟಿನ ಮುನಿಸಿಪಾಲಿಟಿಯ ಹಸ್ತಾಂತರದ ನಂತರ ರೆಸಿಡೆಂಟ್‌ರವರ ವ್ಯಾಪ್ತಿಗೆ ವರ್ಗಾಯಿಸಲಾಯಿತು ಮತ್ತು ೧೮೮೧ರಲ್ಲಿ ರಾಜ್ಯದಲ್ಲಿ ೮೩ ಮುನಿಸಿಪಾಲಿಟಿಗಳಿದ್ದವು. ೧೮೮೫-೮೬ರ ವರ್ಷದಲ್ಲಿ, ೯೩ ಮುನಿಸಿಪಾಲಿಟಿಗಳಿದ್ದವು. ಅವುಗಳಲ್ಲಿ ೪೮ ಬೋರ್ಡ್‌ಗಳು. ಅದರಲ್ಲಿ ಸರಕಾರದ ಆದೇಶದ ಅಡಿಯಲ್ಲಿ ನಾಮಕರಣ

ಮಾಡಲಾದ ಪದನಿಮಿತ್ತ ಮತ್ತು ಸರಕಾರೇತರ ಸದಸ್ಯರಿದ್ದರು. ೧೮೮೯ರಲ್ಲಿ ಮುನಿಸಿಪಾಲಿಟಿಗಳ ಸಂಖ್ಯೆ ೯೮ಕ್ಕೆ ಏರಿತು. ಮತ್ತು ಬೋರ್ಡ್‌ಗಳನ್ನು ಉಳಿದ ೫೦ ಮುನಿಸಿಪಾಲಿಟಿಗಳಾಗಿ ರಚಿಸಲಾಯಿತು. ೧೯೦೪ರ ಜೂನ್ ಕೊನೆಗೆ, ಈ ಸಂಖ್ಯೆಯು ೧೨೫ಕ್ಕೆ ಏರಿತು. ಇವುಗಳಲ್ಲಿ ೩೮ನ್ನು ಮುನಿಸಿಪಾಲಿಟಿಗಳಾಗಿ ಮುಂದುವರಿಸುವಷ್ಟು ದೊಡ್ಡದಾಗಿಲ್ಲ ಎಂದು ಪರಿಗಣಿಸಲಾಯಿತು ಮತ್ತು ಅವುಗಳನ್ನು ೧೯೦೩-೧೯೦೪ರಲ್ಲಿ, ೧೯೦೨ರ ಲೋಕಲ್‌ಬೋರ್ಡ್ ನಿಬಂಧನೆಯ ಅಡಿಯಲ್ಲಿ ಒಕ್ಕೂಟಗಳಾಗಿ ಪರಿವರ್ತಿಸಲಾಯಿತು. ಹಾಗಾಗಿ ೧೯೦೩-೧೯೦೪ರ ವರ್ಷಾಂತ್ಯದಲ್ಲಿ ರಾಜ್ಯದಲ್ಲಿ ೮೭ ಮುನಿಸಿಪಾಲಿಟಿಗಳಿದ್ದವು. ೧೯೧೯-೧೯೨೦ರಲ್ಲಿ ಹರಿಹರ ಉಪ ತಾಲೂಕಿನಲ್ಲಿ ನಿಯತಕಾಲಿಕ ಮುನಿಸಿಪಾಲಿಟಿಯನ್ನು ಮೂರು ತಿಂಗಳವರೆಗೆ ಅಂದರೆ ಜಾನುವಾರು ಪ್ರದರ್ಶನ ನಡೆಸುವ ಉದ್ದೇಶಕ್ಕಾಗಿ ಪ್ರತಿವರ್ಷ ಫೆಬ್ರವರಿ, ಮಾರ್ಚ್ ಮತ್ತು ಏಪ್ರಿಲ್‌ನಲ್ಲಿ ರಚಿಸಲಾಗುತ್ತಿತ್ತು.

**ಬೆಂಗಳೂರು ಮತ್ತು ಮೈಸೂರು ನಗರ ಮುನಿಸಿಪಾಲಿಟಿಗಳು :**

ಸರಕಾರದ ಅಧಿಸೂಚನೆ ಸಂ. ೧೦೮, ೧೮೮೩ರ ಏಪ್ರಿಲ್ ೬ರಲ್ಲಿ ತಿದ್ದುಪಡಿ ಮಾಡಿದಂತೆ ಬೆಂಗಳೂರು ನಗರ ಮುನಿಸಿಪಾಲಿಟಿಯನ್ನು ೧೮೭೧ರ ಮುನಿಸಿಪಲ್ ನಿಬಂಧನೆಗಳಂತೆ ಆಳಲಾಗುತ್ತಿತ್ತು. ಇದರ ಕಾರ್ಯನಿರ್ವಾಹಕ ಪ್ರಭಾರವನ್ನು ಉಪಾಧ್ಯಕ್ಷರಿಗೆ ವಹಿಸಲಾಯಿತು. ಇವರನ್ನು ಸರಕಾರವು ನಾಮಕರಣ ಮಾಡುತ್ತಿತ್ತು. ಈ ಮೇಲಿನ ೧೮೭೧ರ ನಿಬಂಧನೆಯನ್ನು ೧೮೮೮ರ ವರ್ಷಾಂತ್ಯದಲ್ಲಿ ಮೈಸೂರು ನಗರಕ್ಕೆ ವಿಸ್ತರಿಸಲಾಯಿತು.

೧೮೯೬ರ ಏಪ್ರಿಲ್‌ವರೆಗೆ ಬೆಂಗಳೂರು ಜಿಲ್ಲೆಯ ಜಿಲ್ಲಾಧಿಕಾರಿಯು ಬೆಂಗಳೂರು ನಗರ ಮುನಿಸಿಪಾಲಿಟಿಯ ಪದನಿಮಿತ್ತ ಅಧ್ಯಕ್ಷರಾಗಿದ್ದರು. ಬೆಂಗಳೂರು ಮತ್ತು ಮೈಸೂರುಗಳಲ್ಲಿ ಪದನಿಮಿತ್ತ ಸದಸ್ಯರುಗಳ ಸಂಖ್ಯೆಯು ಒಟ್ಟಾರೆ ಸದಸ್ಯರ ಸಂಖ್ಯೆಯ ೧/೩ ಭಾಗವನ್ನು ಮೀರುತ್ತಿರಲಿಲ್ಲ. ೧೮೯೨ರ ಏಪ್ರಿಲ್‌ನಲ್ಲಿ ಚುನಾವಣಾ ಪದ್ಧತಿಯನ್ನು ಈ ನಗರಗಳಲ್ಲಿ ಜಾರಿಗೊಳಿಸಲಾಯಿತು ಮತ್ತು ಅರ್ಹದಷ್ಟು ಮುನಿಸಿಪಲ್ ಕೌನ್ಸಿಲರುಗಳ ಚುನಾವಣೆಯ ಹಕ್ಕು ತೆರಿಗೆ ಪಾವತಿದಾರರಿಗೆ ನೀಡಲಾಗಿತ್ತು. ಬೆಂಗಳೂರಿಗೆ ಕೌನ್ಸಿಲರ್‌ಗಳ ಸಂಖ್ಯೆಯು ಅಧ್ಯಕ್ಷ-ಉಪಾಧ್ಯಕ್ಷ ಮತ್ತು ಪದನಿಮಿತ್ತ ಸದಸ್ಯರೂ ಸೇರಿದಂತೆ ೨೨ ಇದ್ದು, ಮೈಸೂರಿನಲ್ಲಿ ಇದು ೨೪ ಇದ್ದಿತು. ಬೆಂಗಳೂರಿಗೆ ೧೯೧೮ರ ನವೆಂಬರ್‌ನಿಂದ ಪರಿಣಾಮಕಾರಿಯಾಗುವಂತೆ ಒಟ್ಟು ಕೌನ್ಸಿಲರ್‌ಗಳ ಸಂಖ್ಯೆಯು ೨೮ ಎಂದು ಮತ್ತು ೧೯೧೯ರ ಜುಲೈನಿಂದ ಪರಿಣಾಮಕಾರಿಯಾಗುವಂತೆ ಸಂಖ್ಯೆ ೩೦ ಎಂದು ನಿಗದಿಪಡಿಸಲಾಯಿತು. ೧೯೨೧ರಲ್ಲಿ ಬೆಂಗಳೂರಿಗೆ ಕೌನ್ಸಿಲರ್‌ರ ಸಂಖ್ಯೆಯನ್ನು ೨೮ ರಿಂದ ೩೦ಕ್ಕೆ ಏರಿಸಲಾಯಿತು. ಈ ೩೦ರಲ್ಲಿ ೨೦ ಜನರು ಚುನಾಯಿತರು.

೧೮೯೬ರ ಏಪ್ರಿಲ್‌ನಲ್ಲಿ ಬೆಂಗಳೂರು ನಗರ ಮುನಿಸಿಪಾಲಿಟಿಗೆ ಒಬ್ಬ ಪೂರ್ಣಾವಧಿ ಅಧ್ಯಕ್ಷನನ್ನು ನೇಮಿಸಲಾಯಿತು. ಉಪಾಧ್ಯಕ್ಷರ ಹುದ್ದೆಯನ್ನು ರದ್ದುಮಾಡಲಾಯಿತು. ೧೮೯೮ರಲ್ಲಿ ಪ್ಲೇಗ್ ಬಂದಾಗ ಈ ವ್ಯವಸ್ಥೆಯು ಅನುಕೂಲವಲ್ಲ ಎಂದು ತಿಳಿದು ಜಿಲ್ಲಾಧಿಕಾರಿಯನ್ನು ಪುನಃ ಪದನಿಮಿತ್ತ ಅಧ್ಯಕ್ಷನನ್ನಾಗಿ ಮಾಡಲಾಯಿತು ಮತ್ತು ೧೮೯೮ರ ಅಕ್ಟೋಬರ್‌ನಲ್ಲಿ ಉಪಾಧ್ಯಕ್ಷನನ್ನು ನೇಮಿಸಲಾಯಿತು. ಈ ವ್ಯವಸ್ಥೆಯು ತೃಪ್ತಿಕರವಾಗಿ ಕೆಲಸ ಮಾಡದಿದ್ದರಿಂದ ೧೯೦೪ರ ಮೇ ೯ರಿಂದ ಒಬ್ಬ ಪೂರ್ಣಾವಧಿ ಅಧ್ಯಕ್ಷರನ್ನು ಬೆಂಗಳೂರು ನಗರ ಮುನಿಸಿಪಾಲಿಟಿಗೆ ನೇಮಿಸಲಾಯಿತು ಮತ್ತು ಅದೇ ಕಾಲದಲ್ಲಿ ಉಪಾಧ್ಯಕ್ಷರನ್ನು ರದ್ದುಪಡಿಸಲಾಯಿತು. ಆದರೆ ೧೯೦೬ರ ಜುಲೈಯಿಂದ ಪೂರ್ಣಾವಧಿ ಅಧ್ಯಕ್ಷ ಸ್ಥಾನವನ್ನು ತೆಗೆದುಹಾಕಲಾಯಿತು. ಬೆಂಗಳೂರಿನ ಜಿಲ್ಲಾಧಿಕಾರಿಯು ಪದನಿಮಿತ್ತ ಅಧ್ಯಕ್ಷರಾಗಿ ಇರುವ ಪದ್ಧತಿಯು ಪುನಃ ಜಾರಿಗೆ ಬಂತು. ಅವರಿಗೆ ಸಹಾಯ ಮಾಡಲು ಉಪಾಧ್ಯಕ್ಷರಿಗೂ ಸ್ಥಾನ ದೊರೆಯಿತು. ೧೯೧೨-೧೩ರಲ್ಲಿ ಜಿಲ್ಲಾಧಿಕಾರಿಗಳು, ಸಿಟಿ ಮುನಿಸಿಪಾಲಿಟಿಯ ವಿಷಯದಲ್ಲಿ ಬೇಕಾದಷ್ಟು ಗಮನವನ್ನು ಕೊಡಲಾಗುತ್ತಿಲ್ಲ ಎಂಬುದನ್ನು ಸರಕಾರವು ಗಮನಿಸಿ ಬೆಂಗಳೂರು ನಗರ ಮುನಿಸಿಪಾಲಿಟಿಗೆ ೧೯೧೩ರಿಂದ ಪೂರ್ಣಾವಧಿ ಗೌರವಯುತ ಅಧ್ಯಕ್ಷರನ್ನು ನೇಮಿಸಿತು. ಈ ವ್ಯವಸ್ಥೆಯು ೧೯೨೦ರ ಫೆಬ್ರವರಿವರೆಗೆ ಮುಂದುವರೆಯಿತು. ಆಗ ಅಧಿಕಾರೇತರ ಅಧ್ಯಕ್ಷನನ್ನು ಮುನಿಸಿಪಲ್ ಕೌನ್ಸಿಲರ್‌ಗಳಿಂದ ಚುನಾಯಿಸಬೇಕು ಎಂಬ ನಿಯಮವನ್ನು ಪಾಲಿಸಲಾಯಿತು. ೧೯೨೩ರ ನಿಬಂಧನೆ IVರ ಅಡಿಯಲ್ಲಿ ೧೯೦೬ರ ಮೈಸೂರು ಮುನಿಸಿಪಲ್ ನಿಬಂಧನೆಯನ್ನು ತಿದ್ದುಪಡಿ ಮಾಡಿ ಚೀಫ್ ಆಫೀಸರ್‌ಗೆ ಬದಲಾಗಿ ಬೆಂಗಳೂರು ಮತ್ತು ಮೈಸೂರಿನ ನಗರ ಕೌನ್ಸಿಲ್‌ಗಳಿಗೆ, ಮುನಿಸಿಪಲ್ ಕಮೀಷನರ್ ಅನ್ನು ನೇಮಕ ಮಾಡುವ ಅಧಿಕಾರವನ್ನು ಪಡೆದರು. ಒಬ್ಬ ಮುನಿಸಿಪಲ್ ಕಮೀಷನರ್ ಅನ್ನು ಬೆಂಗಳೂರು ಸಿಟಿ ಮುನಿಸಿಪಾಲಿಟಿಗೆ, ೧೯೨೩ರ ಡಿಸೆಂಬರ್ ೧ ರಿಂದ ನೇಮಕ ಮಾಡಲಾಯಿತು.

ಮೈಸೂರು ನಗರದಲ್ಲಿ ೧೯೧೩ರ ಮಾರ್ಚ್‌ವರೆಗೆ ಮುನಿಸಿಪಾಲಿಟಿಯ ಪದನಿಮಿತ್ತ ಅಧ್ಯಕ್ಷರು ಜಿಲ್ಲಾಧಿಕಾರಿಗಳಾಗಿದ್ದರು. ಆಗ ಪದನಿಮಿತ್ತ ಅಧ್ಯಕ್ಷರು ಮತ್ತು ಟ್ರಸ್ಟಿಗಳ ಮಂಡಲಿಯ ಅಧ್ಯಕ್ಷರಾಗಿ ಅಗತ್ಯವಾದ ಗಮನವನ್ನು ಪದನಿಮಿತ್ತ ಅಧ್ಯಕ್ಷರು ಕೊಡಲಾಗುತ್ತಿಲ್ಲ ಎಂಬುದನ್ನು ಸರಕಾರವು ಗಮನಿಸಿತು. ಒಬ್ಬ ಪೂರ್ಣಾವಧಿ ಸರಕಾರಿ ಅಧಿಕಾರಿಯನ್ನು ೧೯೧೩ರ ಮಾರ್ಚಿಯಿಂದ ಮೈಸೂರು ಮುನಿಸಿಪಲ್ ಸಮಿತಿಗೆ ನೇಮಕ ಮಾಡಲಾಯಿತು. ಮತ್ತು ೧೯೧೭-೧೮ರಿಂದ ಮೈಸೂರು ನಗರಾಭಿವೃದ್ಧಿ ಟ್ರಸ್ಟ್ ಬೋರ್ಡ್‌ನ ಅಧಿಕಾರೇತರ ಅಧ್ಯಕ್ಷರಾಗಿದ್ದವರು, ಮೈಸೂರು ಮುನಿಸಿಪಲ್ ಕೌನ್ಸಿಲ್‌ನ ಅಧ್ಯಕ್ಷತೆ ವಹಿಸುತ್ತಿದ್ದರು. ನೈರ್ಮಲ್ಯ ಕಾರ್ಯಗಳನ್ನು ಹೆಚ್ಚು ದಕ್ಷವಾಗಿ ನಿರ್ವಹಿಸಲು, ಬೆಂಗಳೂರು ಮತ್ತು ಮೈಸೂರಿನ ಆರೋಗ್ಯಾಧಿಕಾರಿಗಳನ್ನು ಉಪಾಧ್ಯಕ್ಷರಾಗಿ ನೇಮಕ ಮಾಡಲಾಯಿತು.

## ಮುನಿಸಿಪಲ್ ಆಡಳಿತದಲ್ಲಿ ಅಭಿವೃದ್ಧಿ :

೧೯೧೪ರ ಫೆಬ್ರವರಿಯಲ್ಲಿ ಸ್ಥಳೀಯ ಸಂಸ್ಥೆಗಳ ಸಂವಿಧಾನ ಮತ್ತು ಕಾರ್ಯಗಳಲ್ಲಿ ಅಗತ್ಯವಾದ ಅಭಿವೃದ್ಧಿಯನ್ನು ಪರಿಗಣಿಸಲು ಒಂದು ಸಮಿತಿಯನ್ನು ನೇಮಕ ಮಾಡಲಾಯಿತು ಮತ್ತು ೧೯೧೪ರ ಮೇನಲ್ಲಿ ಲೋಕಲ್ ಫಂಡ್‌ಗಳ ಕಾರ್ಯ ಮತ್ತು ಹಣಕಾಸು ವ್ಯವಸ್ಥೆಯ ವ್ಯಾಪ್ತಿಯನ್ನು ವಿಚಾರಣೆ ಮಾಡಲು ಮತ್ತು ಅವುಗಳ ಪರಿಷ್ಕರಣಕ್ಕೆ ಕ್ರಮಗಳನ್ನು ಸಲಹೆ ಮಾಡುವುದು ಮತ್ತು ತೃಪ್ತಿಕರವಾದ ರೀತಿಯಲ್ಲಿ ಸ್ಥಳೀಯ ಹಣಕಾಸುಗಳನ್ನು ಇಡುವುದಕ್ಕೆ ಕ್ರಮಗಳನ್ನು ಸೂಚಿಸಲು ಇನ್ನೊಂದು ಸಮಿತಿಯನ್ನು ರಚಿಸಲಾಯಿತು. ಈ ಎರಡೂ ಸಮಿತಿಗಳ ವರದಿಗಳನ್ನು ಕ್ರಮವಾಗಿ ೧೯೧೫ರ ಮೇ ಮತ್ತು ಜೂನ್‌ನಲ್ಲಿ ಪ್ರಕಟಿಸಲಾಯಿತು. ೧೯೧೫ರ ಜೂನ್‌ನಲ್ಲಿ ಕೆಲವು ಪ್ರಸಿದ್ಧ ಅಧಿಕಾರೇತರ ಮಹನೀಯರ ಮುಂದಾಳುತನದಲ್ಲಿ ಒಂದು ಲೋಕಲ್ ಬೋರ್ಡ್ ಸಮ್ಮೇಳನವನ್ನು ಕರೆದು ಸ್ಥಳೀಯ ಸ್ವಯಂ ಸರಕಾರದಲ್ಲಿ ಸುಧಾರಣೆಗಳನ್ನು ಚರ್ಚಿಸಿತು. ಈ ಸಮ್ಮೇಳನದಲ್ಲಿ ಹಾಜರಿದ್ದ ರಾಜ್ಯದ ಎಲ್ಲ ಸ್ಥಳೀಯ ಸಂಸ್ಥೆಗಳು ಸರಕಾರಕ್ಕೆ ಮನವಿ ಸಲ್ಲಿಸಿತು. ಸರಕಾರವು ೧೯೧೬ರ ನವೆಂಬರ್ ೧೬ರ ಆದೇಶ ಸಂ. ೩೦೦೫-೫೫-ML-೧೩೨-೧೬-೧ರಲ್ಲಿ ಸಮ್ಮೇಳನವು ಮಾಡಿದ ನಿರ್ದಿಷ್ಟ ಶಿಫಾರಸ್ಸುಗಳನ್ನು ಚರ್ಚಿಸಿತು ಮತ್ತು ಪ್ರತಿಯೊಂದರ ಮೇಲೂ ತೆಗೆದುಕೊಳ್ಳಬಹುದಾದ ಸರಕಾರದ ನಿರ್ಧಾರವನ್ನು ಸೂಚಿಸಿತು.

ಮುನಿಸಿಪಲ್ ಆಡಳಿತದಲ್ಲಿ ಆದ ಮುಖ್ಯ ಬದಲಾವಣೆಗಳೆಂದರೆ, ನಿಬಂಧನೇತರ ಮುನಿಸಿಪಾಲಿಟಿಗಳು ರಚಿತವಾಗಿದ್ದು, ಅವುಗಳನ್ನು ರದ್ದುಪಡಿಸಿ ನಿಬಂಧನೆಗಳ ಮುನಿಸಿಪಾಲಿಟಿಗಳಾಗಿ ಬದಲಾಯಿಸಿತು ಮತ್ತು ಎಲ್ಲ ಮುನಿಸಿಪಾಲಿಟಿಗಳನ್ನೂ ನಗರ, ಪಟ್ಟಣ ಮತ್ತು ಸಣ್ಣ ಮುನಿಸಿಪಾಲಿಟಿಗಳೆಂದು ಅವುಗಳ ಪ್ರಾಮುಖ್ಯತೆಗೆ ಅನುಸಾರವಾಗಿ ವರ್ಗೀಕರಿಸಲಾಯಿತು. ನಗರ ಕೌನ್ಸಿಲ್‌ಗಳಲ್ಲಿ ಚುನಾಯಿತ ಬಹುಮತವನ್ನು ಮತ್ತು ಇತರ ಮುನಿಸಿಪಾಲಿಟಿಗಳಲ್ಲಿ ಹೆಚ್ಚುವರಿ ಚುನಾವಣಾ ಅಂಶವನ್ನು ಜಾರಿಗೆ ತಂದುದು. ಪ್ರಾಥಮಿಕ ಶಿಕ್ಷಣದ ನಿಯಂತ್ರಣವನ್ನು ಕ್ರಮವಾಗಿ ಹಸ್ತಾಂತರಿಸುವುದು, ಸರಕಾರ ಮತ್ತು ಜಿಲ್ಲಾಧಿಕಾರಿಯ ಹಸ್ತಕ್ಷೇಪವನ್ನು ಸಾಕಷ್ಟು ಕಡಿಮೆ ಮಾಡುವುದು ಮುಖ್ಯ ಅಂಶಗಳಾಗಿದ್ದವು. ಪಟ್ಟಣ ಮುನಿಸಿಪಲ್ ಕೌನ್ಸಿಲ್‌ಗಳಲ್ಲಿ ಚುನಾಯಿತ ಸ್ಥಾನಗಳ ಸಂಖ್ಯೆಯನ್ನು ೧೯೧೮ರ ಏಪ್ರಿಲ್ ೧ ರಿಂದ ⁰/₄ ರಿಂದ ಅರ್ಧಕ್ಕೆ ಏರಿಸಲಾಯಿತು ಮತ್ತು ಮೈಸೂರು ನಗರ ಮುನಿಸಿಪಲ್ ಕೌನ್ಸಿಲ್‌ನಲ್ಲಿ ೧೯೧೭ರ ಜುಲೈ ೧ ರಿಂದ ³/₄ ಭಾಗಕ್ಕೆ ಏರಿಸಲಾಯಿತು. ಬೆಂಗಳೂರು ಮತ್ತು ಮೈಸೂರು ನಗರ ಮುನಿಸಿಪಾಲಿಟಿಗಳಲ್ಲಿ ಉಪಾಧ್ಯಕ್ಷರನ್ನು ಕೌನ್ಸಿಲರ್‌ಗಳಿಂದಲೇ ಚುನಾಯಿಸಲು ಅನುಮತಿ ನೀಡಲಾಯಿತು. ಬೆಂಗಳೂರು ನಗರ ಮುನಿಸಿಪಾಲಿಟಿಗೆ ಅಧ್ಯಕ್ಷರನ್ನು ಚುನಾಯಿಸುವ ಹಕ್ಕನ್ನು ಒಪ್ಪಿಕೊಳ್ಳಲಾಯಿತು. ಕೋಲಾರ, ತುಮಕೂರು, ಹಾಸನ ಮತ್ತು ಚಿಕ್ಕಮಗಳೂರುಗಳ ಮುನಿಸಿಪಾಲಿಟಿಗಳಲ್ಲಿ ಕೂಡಾ ಚುನಾವಣೆಗೆ ಅವಕಾಶ ನೀಡಿತು. ಮೈಸೂರು ನಗರ ಮುನಿಸಿಪಾಲಿಟಿಯಲ್ಲಿ ಸರಕಾರದಿಂದ ನೇಮಕವಾದ ಅಧ್ಯಕ್ಷರು ಇದ್ದರು. ಅವರನ್ನು ಅಧಿಕಾರೇತರರಿಂದ ಅಥವಾ ರಾಜ್ಯದಲ್ಲಿ ಸಾರ್ವಜನಿಕ ಸೇವೆ ಸಲ್ಲಿಸಿರುವವರು ನೇಮಕ ಮಾಡಲ್ಪಡುತ್ತಿದ್ದರು. ೧೯೧೮-೧೯ರಲ್ಲಿ ಬೆಂಗಳೂರು ಮತ್ತು ಮೈಸೂರು ಮುನಿಸಿಪಾಲಿಟಿಗಳಲ್ಲಿ ಮೊದಲ ಬಾರಿಗೆ ಚೀಫ್ ಆಫೀಸರ್‌ಗಳನ್ನು ನೇಮಕ ಮಾಡಲಾಯಿತು. ಮೊದಲೇ ಹೇಳಿದಂತೆ ೧೯೨೩ರಲ್ಲಿ ಬೆಂಗಳೂರಿನಲ್ಲಿ ಅವರ ಸ್ಥಾನವನ್ನು ೧೯೨೩ರ ನಿಬಂಧನೆ IV ಅನ್ನು ತಿದ್ದುಪಡಿ ಮಾಡಿ ಕಮೀಷನರ್ ಎಂದು ಬದಲಾಯಿಸಿತು. ೧೯೨೩-೨೪ರ ವರ್ಷಾಂತ್ಯದ ಹೊತ್ತಿಗೆ ರಾಜ್ಯದಲ್ಲಿ ಎರಡು ನಗರ, ೩೫ ಪಟ್ಟಣ ಮತ್ತು ೬೬ ಸಣ್ಣ ಮುನಿಸಿಪಾಲಿಟಿಗಳು ಇದ್ದವು.

ಪದನಿಮಿತ್ತ ಕೌನ್ಸಿಲರ್‌ಗಳ ಸಂಖ್ಯೆಯನ್ನು ಪಟ್ಟಣದ ಮುನಿಸಿಪಾಲಿಟಿಗಳಲ್ಲಿ ಕಡಿಮೆ ಮಾಡಲಾಯಿತು. ಈ ಮೇಲಿನ ಸುಧಾರಣೆಗಳನ್ನು ೧೯೧೮-೧೯ ರಿಂದ ಜಾರಿಗೆ ತರಲಾಯಿತು. ನಂತರ ೧೯೧೮ರ ನಿಬಂಧನೆ V ಪ್ರಕಾರ ಮುನಿಸಿಪಾಲಿಟಿಗಳನ್ನು ನಗರ, ಪಟ್ಟಣ ಮತ್ತು ಸಣ್ಣ ಮುನಿಸಿಪಾಲಿಟಿಗಳೆಂದು ತಿದ್ದುಪಡಿ ತರಲಾಯಿತು. ಜಿಲ್ಲಾಧಿಕಾರಿಗಳು ಸಾಮಾನ್ಯವಾಗಿ ಮುನಿಸಿಪಾಲಿಟಿಯ ಸದಸ್ಯರಾಗಿರುವುದು ತಪ್ಪಿತು. ಆದರೆ ಕೆಲವು ನಿರ್ದಿಷ್ಟ ಪಟ್ಟಣದ ಮುನಿಸಿಪಾಲಿಟಿಗಳಲ್ಲಿ ಮಾತ್ರ ಮುಂದುವರಿಯಿತು. ಅಸಿಸ್ಟೆಂಟ್ ಕಮೀಷನರ್‌ಗಳು ತಾಲೂಕು ಮುಖ್ಯಸ್ಥಳದ ಮುನಿಸಿಪಾಲಿಟಿಯ ಸದಸ್ಯರಾಗಿರುವುದನ್ನು ಬಿಟ್ಟು, ಅಮಲ್ದಾರರನ್ನು ಅಧ್ಯಕ್ಷರಾಗಿ ನೇಮಿಸಲಾಯಿತು. ಹಾಗೆಯೇ ಕೆಲವು ಬಾರಿ ಅಧಿಕಾರೇತರ ಮಹನೀಯರನ್ನು ನೇಮಕ ಮಾಡಲಾಗುತ್ತಿತ್ತು. ಅನೇಕ ಪಟ್ಟಣ ಮತ್ತು ಮುನಿಸಿಪಾಲಿಟಿಗಳು ತಮ್ಮವರೇ ಆದ ಉಪಾಧ್ಯಕ್ಷರನ್ನು ಚುನಾಯಿಸಿಕೊಳ್ಳುವ ಹಕ್ಕನ್ನು ಪಡೆದವು. ೧೯೨೧ರಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಒಂದು ಬಹುಮುಖ್ಯವಾದ ಕಾರ್ಯವನ್ನು ಸೇರಿಸಲಾಯಿತು. ಅದು ತಮ್ಮ ಕ್ಷೇತ್ರದಲ್ಲಿ ಆರ್ಥಿಕ ಕಾರ್ಯಗಳನ್ನು ಕೈಗೊಳ್ಳುವುದು. ಸುಧಾರಣೆಯ ಅಡಿಯಲ್ಲಿ ಇಲ್ಲಿಯವರೆಗೆ ಪ್ರಜಾಪ್ರತಿನಿಧಿಯ ಸಭೆಯ ಮುಂದೆ ತರುತ್ತಿದ್ದ ಸ್ಥಳೀಯ ವಿಷಯಗಳ ಬಗೆಗೆ ವ್ಯವಹರಿಸಲು ಸ್ಥಳೀಯ ಸಂಸ್ಥೆಗಳಿಗೆ ಅಧಿಕಾರ ನೀಡಲಾಯಿತು.

ಸ್ಥಳೀಯ ಸ್ವಯಂ ಸರಕಾರದ ಪ್ರಗತಿ ಮತ್ತು ಅಭಿವೃದ್ಧಿಯ ಮೇಲೆ ಪ್ರಭಾವ ಬೀರುವ ಅನೇಕ ವಿಷಯಗಳ ಬಗೆಗೆ ಮತ್ತು ಉದ್ದೇಶಿತ ಸ್ಥಳೀಯ ಸ್ವಯಂ ಸರಕಾರದ ಯೋಜನೆಯನ್ನು ಸಂಪೂರ್ಣವಾಗಿ ಪರೀಕ್ಷಿಸುವುದು, ಇತ್ತೀಚೆಗೆ ಜಾರಿಗೊಳಿಸಲಾದ ಸಂವಿಧಾನದ ಸುಧಾರಣೆಗಳನ್ನು ಗಮನದಲ್ಲಿಟ್ಟುಕೊಂಡು, ಸಲಹೆಗಳನ್ನು ರೂಪಿಸುವುದಕ್ಕೆ ಸರಕಾರವು ಒಂದು ಸ್ಥಳೀಯ ಸ್ವಯಂ ಸರಕಾರದ ಸಮ್ಮೇಳನವನ್ನು ೧೯೨೩ರ ಏಪ್ರಿಲ್ ಕೊನೆಯ ವಾರದಲ್ಲಿ ಕರೆಯಿತು. ಈ ಸಮ್ಮೇಳನವು ೪೩ ಠರಾವುಗಳನ್ನು ಅಂಗೀಕರಿಸಿತು. ಒಂದು, ಮುನಿಸಿಪಾಲಿಟಿಗಳಿಗೆ ಸಂಬಂಧಿಸಿದ್ದು, ಇನ್ನೊಂದು, ಲೋಕಲ್ ಬೋರ್ಡ್‌ಗಳಿಗೆ ಸಂಬಂಧಿಸಿದ ಎರಡು ಆದೇಶಗಳನ್ನು ೧೯೨೩ರ ಡಿಸೆಂಬರ್ ೨೩ ರಂದು ಸರಕಾರವು ಹೊರಡಿಸಿತ್ತು. ಅದರಲ್ಲಿ ಈ ಸಂಸ್ಥೆಗಳ ಸಾಮಾನ್ಯ ನೀತಿಯ ವಿಷಯಗಳ ಬಗ್ಗೆ ಸರಕಾರದ ನಿರ್ಧಾರವನ್ನು ಸೂಚಿಸಿತ್ತು. ಸಂಕ್ಷಿಪ್ತವಾಗಿ ಮುನಿಸಿಪಾಲಿಟಿಗಳಿಗೆ ಸಂಬಂಧಿಸಿದಂತೆ ಈ ಕೆಳಗಿನವುಗಳನ್ನು ಆದೇಶದಲ್ಲಿ ಕೊಡಲಾಗಿದೆ.

೧. ಸಣ್ಣ ಮುನಿಸಿಪಲ್ ಸಮಿತಿಗಳಲ್ಲಿ ಚುನಾಯಿತ ಸದಸ್ಯರ ಸಂಖ್ಯೆಯನ್ನು ೧/೩ ರಿಂದ ೧/೨ಕ್ಕೆ ಏರಿಸುವುದು.

೨. ಸಾಧ್ಯವಾದಷ್ಟುಮಟ್ಟಿಗೆ ಮಹಿಳೆಯರಿಗೆ ಸಂಬಂಧಿಸಿದಂತೆ ಮತದಾನವನ್ನು ವಿಸ್ತರಿಸುವುದು.

೩. ಮುನಿಸಿಪಲ್ ಸಮಿತಿಯಲ್ಲಿ ಶಿಕ್ಷಣವು ಬಹು ಮುಖ್ಯ ಕಾರ್ಯವಾದುದರಿಂದಲೇ ಆ ಕೌನ್ಸಿಲ್‌ನಲ್ಲಿ ಶಿಕ್ಷಣ ಅಧಿಕಾರಿಯೊಬ್ಬರನ್ನು ಪದನಿಮಿತ್ತ ಸದಸ್ಯರಾಗಿ ನೇಮಕ ಮಾಡಲು ಅವಕಾಶ ಒದಗಿಸುವುದು.

೪. ಮುನಿಸಿಪಲ್ ಸಮಿತಿಗಳ ಅಧ್ಯಕ್ಷರನ್ನು ಸಮಿತಿಯ ಸದಸ್ಯರೇ ಚುನಾಯಿಸುವುದರ ಬದಲು ಮತದಾರರ ಸಾಮಾನ್ಯ ಸಭೆಯಲ್ಲಿ ಚುನಾಯಿಸುವುದು. ಈ ಹಕ್ಕನ್ನು ಯಾವ ಪ್ರದೇಶವಲ್ಲಿ ಚಲಾಯಿಸಬೇಕೋ ಅದನ್ನು ಸರಕಾರವೇ ನಿಗದಿಪಡಿಸಿದೆ.

೫. ಸಮಿತಿಯ ಸದಸ್ಯರ ಅವಧಿಗೆ ಸರಿಸಮನಾಗಿ ಮುನಿಸಿಪಲ್ ಸಮಿತಿಯ ಅಧ್ಯಕ್ಷರ ಅವಧಿಯೂ ಇರುವಂತೆ ನೋಡಿಕೊಳ್ಳುವುದು.

೬. ಮುನಿಸಿಪಲ್ ಸಮಿತಿಗಳು ತಮ್ಮ ಆಯ್ಕೆಯಂತೆ ಉದ್ಯೋಗಗಳು, ವ್ಯಾಪಾರಗಳು ಮತ್ತು ಕಸುಬುಗಳ ಮೇಲಿನ ತೆರಿಗೆಗೆ ಬದಲಾಗಿ ಅಂಗಡಿ ತೆರಿಗೆಯನ್ನು ವಿಧಿಸುವುದಕ್ಕೆ ಅಧಿಕಾರ ನೀಡುವುದು.

೭. ಜಿಲ್ಲಾಧಿಕಾರಿಗಳಿಗೆ ಮುನಿಸಿಪಲ್ ಸಮಿತಿಗಳ ಕಛೇರಿಗಳನ್ನು ತನಿಖೆ ಮಾಡಲು ಪ್ರಕರಣಗಳ ದಾಖಲೆಗಳನ್ನು ತರಿಸಿಕೊಳ್ಳುವುದು ಮುಂತಾದವುಗಳಿಗೆ ಅಧಿಕಾರ ನೀಡುವುದು. ಈ ಅಧಿಕಾರಗಳನ್ನು ಪಟ್ಟಣ ಮತ್ತು ಸಣ್ಣ ಮುನಿಸಿಪಲ್ ಸಮಿತಿಗಳಲ್ಲಿ ಮಾತ್ರ ಚಲಾಯಿಸಬೇಕು.

ಈ ದಿಸೆಯಲ್ಲಿ ಶಾಸನ ಮಾಡಲು ಪರಿಗಣಿಸಲಾಯಿತು. ಅದಕ್ಕಾಗಿ ರಾಜ್ಯ ವಿಧಾನಪರಿಷತ್ತಿನಲ್ಲಿ ಮಸೂದೆಗಳನ್ನು ಮಂಡಿಸಲಾಯಿತು. ಮೇಲೆ ವಿವರಿಸಲಾದ ಯೋಜನೆಯ ಮುಖ್ಯ ಗುರಿ ಏನೆಂದರೆ ಸ್ಥಳೀಯ ಸ್ವಯಂ ಸರಕಾರದ ಸಂಸ್ಥೆಗಳಲ್ಲಿ ಜನರ ಆಸಕ್ತಿ ಹೆಚ್ಚಾಗುವಂತೆ ಮಾಡುವುದು. ಇದರಿಂದ ರಾಜ್ಯದಲ್ಲಿ ಸಾರ್ವಜನಿಕ ಚಟುವಟಿಕೆಗಳಿಗೆ ತರಬೇತಿ ದೊರಕಿದಂತಾಗುತ್ತದೆ.

## ಮುನಿಸಿಪಲ್ ತೆರಿಗೆ ಮತ್ತು ಹಣಕಾಸು :

ಮುನಿಸಿಪಲ್ ನಿಧಿಗಳಡಿಯಲ್ಲಿ ವರಮಾನವನ್ನು ಮುಖ್ಯವಾಗಿ ಆಕ್ಟ್ರಾಯ್ ಮತ್ತು ಮನೆಗಳು, ಅಂಗಡಿಗಳು ಮತ್ತು ಬಂಡಿಗಳ ಮೇಲಿನ ಸುಂಕದಿಂದ ಪಡೆಯಲಾಗುತ್ತದೆ. ದೊಡ್ಡಿಗಳಿಂದ, ಜಮೀನಿನ ಮಾರಾಟ, ಗೊಬ್ಬರದ ಮಾರಾಟ, ಶುಲ್ಕಗಳು ಮತ್ತು ಮಾರುಕಟ್ಟೆಗಳಿಂದ ಬಾಡಿಗೆಗಳು ಲೈಸೆನ್ಸ್ ಶುಲ್ಕಗಳು ಮತ್ತು ಸರಕಾರದಿಂದ ಆಗಾಗಿನ ವಂತಿಗೆಗಳು ಮುಂತಾದವುಗಳಿಂದ ವರಮಾನವು ಸಾಧಾರಣ ವರಮಾನದ ಮೂಲಗಳಾಗಿವೆ. ಬೆಂಗಳೂರು ಮತ್ತು ಮೈಸೂರು ವಿನಹ ಮುನಿಸಿಪಾಲಿಟಿಗಳಲ್ಲಿ ಮನೆ ತೆರಿಗೆಯನ್ನು ಅವುಗಳ ಮಾರುಕಟ್ಟೆ ಬೆಲೆಗೆ ಸಂಬಂಧಿಸಿದಂತೆ ನಿಗದಿಪಡಿಸಿದ ದರಗಳ ಪ್ರಕಾರ ವಿಧಿಸಲಾಗುತ್ತದೆ. ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ಮನೆ ತೆರಿಗೆಯನ್ನು ಬಾಡಿಗೆ ಮೌಲ್ಯದ ಶೇ. ೫ರಂತೆ ವಿಧಿಸಲಾಗುತ್ತದೆ. ಮತ್ತು ನೀರಿನ ತೆರಿಗೆಯನ್ನು ಒಟ್ಟು ಬಾಡಿಗೆ ಮೌಲ್ಯದ ಶೇ. ೩ರಂತೆ ಬೆಂಗಳೂರಿನಲ್ಲಿ ೧೯೦೦-೦೧ ರಿಂದ ಮತ್ತು ಮೈಸೂರಿನಲ್ಲಿ ೧೯೦೯-೧೦ ರಿಂದ ವಿಧಿಸಲಾಯಿತು. ದೀಪದ ತೆರಿಗೆಯನ್ನು ಬೆಂಗಳೂರು ಮತ್ತು ಮೈಸೂರು ನಗರ ಮುನಿಸಿಪಾಲಿಟಿಗಳಲ್ಲಿ ಕ್ರಮವಾಗಿ ೧೮೯೭-೯೮ ಮತ್ತು ೧೯೧೨-೧೩ ರಿಂದ ವಿಧಿಸಲಾಯಿತು. ೧೩ ಮುನಿಸಿಪಾಲಿಟಿಗಳಲ್ಲಿ ಅಂದರೆ ಬೆಂಗಳೂರು, ಮೈಸೂರು, ತುಮಕೂರು, ತಿಪಟೂರು, ನಂಜನಗೂಡು ಶಿವಮೊಗ್ಗ, ಶಿಕಾರಿಪುರ, ದಾವಣಗೆರೆ, ಕೋಲಾರ, ಹಾಸನ, ಚಿತ್ರದುರ್ಗ, ಚಿಕ್ಕಬಳ್ಳಾಪುರ ಮತ್ತು ಹರಿಹರದಲ್ಲಿ ಸುಂಕಗಳನ್ನು ವಿಧಿಸಲಾಯಿತು. ವಿಶೇಷ ನೈರ್ಮಲ್ಯ ಸುಂಕವನ್ನು ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ವಿಧಿಸಲಾಯಿತು. ಮುನಿಸಿಪಲ್ ಹಣಗಳನ್ನು ಮುಖ್ಯವಾಗಿ ಶೌಚಾಲಯ, ದೀಪ, ರಸ್ತೆ, ಚರಂಡಿಗಳ ರಿಪೇರಿ, ನೀರು ಸರಬರಾಜು ಮತ್ತು ವೈದ್ಯಕೀಯ ಪರಿಹಾರಕ್ಕೆ ಖರ್ಚು ಮಾಡಲಾಗುತ್ತದೆ.

೧೯೨೩-೨೪ರಲ್ಲಿ ರಾಜ್ಯದಲ್ಲಿನ ಎಲ್ಲಾ ಮುನಿಸಿಪಾಲಿಟಿಗಳ ವರಮಾನ ಮತ್ತು ವೆಚ್ಚವು ಕ್ರಮವಾಗಿ ರೂ. ೨೧,೫೫,೫೧೩ ಮತ್ತು ರೂ. ೨೨,೭೬,೮೯೫ ಆಗಿದ್ದಿತು. ಮತ್ತು ವರ್ಷದ ಪ್ರಾರಂಭದಲ್ಲಿ ರೂ. ೯,೦೫,೧೬೮ ಶಿಲ್ಕು ಇದ್ದಿತು. ವರಮಾನದ ಸುಮಾರು ಶೇ. ೬೧ರಷ್ಟು ಮುನಿಸಿಪಲ್ ದರಗಳು ಮತ್ತು ತೆರಿಗೆಗಳಿಂದ ಪಡೆಯಲಾಗುತ್ತಿತ್ತು. ಅತಿದೊಡ್ಡ ವೆಚ್ಚದ ಅಂಶವು ಸಾರ್ವಜನಿಕರ ಆರೋಗ್ಯ ಮತ್ತು ಅನುಕೂಲಗಳು. ಬೆಂಗಳೂರಿನಲ್ಲಿ ತೆರಿಗೆಯ ಆಕಾರವು ರೂ. ೩-೧೧-೮ ಮತ್ತು ಮೈಸೂರಿನಲ್ಲಿ ರೂ. ೨-೮-೧ ಆಗಿದ್ದಿತು. ಇತರ ಮುನಿಸಿಪಾಲಿಟಿಗಳಲ್ಲಿ ಅದು ಮೂಗೂರು ಮುನಿಸಿಪಾಲಿಟಿಯಲ್ಲಿ ರೂ. ೦-೧-೯ ರಿಂದ, ಕೊಪ್ಪ ಮುನಿಸಿಪಾಲಿಟಿಯಲ್ಲಿ ರೂ. ೪-೭-೦ರವರೆಗೆ ವ್ಯತ್ಯಾಸವಾಗುತ್ತಿತ್ತು. ಹೆಚ್ಚಿನ ಸಣ್ಣ ಮುನಿಸಿಪಾಲಿಟಿಗಳಲ್ಲಿ ವರಮಾನವು ಬಹಳ ಕಡಿಮೆಯಾಗಿದ್ದು, ಸ್ಥಳೀಯ ಪ್ರದೇಶಗಳನ್ನು ಸ್ವಚ್ಛವಾಗಿಡುವುದು ಮತ್ತು ರಸ್ತೆಗಳ ರಿಪೇರಿಗೆ ಮಾತ್ರ ಸಾಕಾಗುತ್ತಿತ್ತು. ಉಪಯುಕ್ತವಾದ ಲೋಕೋಪಯೋಗಿ ಕೆಲಸಗಳನ್ನು ಮಾಡುವುದಕ್ಕೆ ಅಂದರೆ ನೀರು ಸರಬರಾಜು, ಒಳಚರಂಡಿ ಮುಂತಾದವುಗಳಿಗೆ ನಿಯಮದ ಪ್ರಕಾರ ಅರ್ಧಭಾಗದಷ್ಟನ್ನು ಸರಕಾರವು ವಂತಿಗೆಯಾಗಿ ಕೊಡುತ್ತಿತ್ತು ಮತ್ತು ವಿಶೇಷ ಸಂದರ್ಭಗಳಲ್ಲಿ ಹೆಚ್ಚಿನ ಅನುದಾನಗಳನ್ನು ಮಂಜೂರು ಮಾಡಲಾಗುತ್ತಿತ್ತು. ಎರಡು ಪ್ರಮುಖ ನಗರಗಳಾದ ಬೆಂಗಳೂರು ಮತ್ತು ಮೈಸೂರು ನಗರಗಳ ನೀರು ಸರಬರಾಜು ಯೋಜನೆಗಳು ಮತ್ತು ಕೆಲವು ಇತರ ಮುಖ್ಯಸ್ಥಳಗಳ ಮುನಿಸಿಪಾಲಿಟಿಗಳ ನೀರು ಸರಬರಾಜು ಯೋಜನೆಯನ್ನು ಸರಕಾರದ ವಂತಿಗೆಯ ಸಹಾಯದಿಂದ ಕಾರ್ಯಗತಗೊಳಿಸಲಾಯಿತು. ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ಬಡಾವಣೆಗಳನ್ನು ಮಾಡಲು ಮತ್ತು ದೊಡ್ಡ ಅಭಿವೃದ್ಧಿಗಳನ್ನು ಮಾಡಲು ಬೇಕಾಗಿರುವ ದೊಡ್ಡ ಅನುದಾನಗಳನ್ನು ಮಾಡಲಾಗುತ್ತದೆ.

೧೯೨೨ರ ಏಪ್ರಿಲ್ ೧೯ರ ಆದೇಶದಂತೆ ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ನೀರು ಸರಬರಾಜು ವ್ಯವಸ್ಥೆ ಮತ್ತು ನಿರ್ವಹಣೆಯ ವಿಷಯದಲ್ಲಿ ಭವಿಷ್ಯದ ನೀತಿ ಹೀಗಿದೆ :

೧. ಬೆಂಗಳೂರು ನಗರಕ್ಕೆ ನೀರು ಸರಬರಾಜಿನ ಇಡೀ ವೆಚ್ಚವನ್ನು ೧೯೨೪ರ ಜುಲೈ ೧ರಿಂದ ನಗರ ಮುನಿಸಿಪಲ್ ಸಮಿತಿಯು ಭರಿಸತಕ್ಕದ್ದು. ೧೯೨೨-೨೩ನೇ ವರ್ಷಕ್ಕೆ ನೀರಿನ ದರಲ್ಲಿ ಮತ್ತು ಹೆಚ್ಚುವರಿ ನೀರಿನ ವೆಚ್ಚದಡಿಯಲ್ಲಿ ಮಾಡಲಾದ ಇಡೀ ಸಂಗ್ರಹಣೆಯನ್ನು ಪಾವತಿಸಬೇಕು. ಅರ್ಧದಷ್ಟು ಏನಾದರೂ (೧೯೨೩-೨೪ರಲ್ಲಿ) ಕೊರತೆಯಾದರೆ ಅದನ್ನು ಆ ವರ್ಷದಲ್ಲಿ ಮುನಿಸಿಪಲ್ ಸಮಿತಿಯು ಭರಿಸಬೇಕು ಮತ್ತು ೧೯೨೪-೨೫ ರಿಂದ ಪೂರ್ಣವಾಗಿ ನೀರಿನ ಮೊಬಲಗನ್ನು ವರ್ಗಾಯಿಸಬೇಕು.

೨. ಮೈಸೂರು ನಗರದ ಬಗ್ಗೆ ಕೊರತೆ ಏನಾದರೂ ಇದ್ದರೆ ಅದನ್ನು ಭರಿಸುವುದಕ್ಕೆ ೧೯೨೨-೨೩ರಿಂದ ಎರಡು ವರ್ಷಗಳವರೆಗೆ ವಿಶೇಷ ಸಂದರ್ಭವಾಗಿ ಸರಕಾರವು ವಂತಿಗೆಯನ್ನು ಮಂಜೂರು ಮಾಡುತ್ತದೆ. ಆದರೆ ೧೯೨೪-೨೫ರಿಂದ ನೀರು ಸರಬರಾಜು ವ್ಯವಸ್ಥೆಯ ಇಡೀ ವೆಚ್ಚವನ್ನು ನಗರ ಮುನಿಸಿಪಲ್ ಸಮಿತಿಯು ಭರಿಸಬೇಕು.

೩. ಈ ನಡುವೆ ವರಮಾನ ಮತ್ತು ವೆಚ್ಚವನ್ನು ಸರಿದೂಗಿಸಲು ಎರಡೂ ಮುನಿಸಿಪಲ್ ಸಮಿತಿಗಳು ನೀರಿನ ತೆರಿಗೆಯ ದರವನ್ನು ಹೆಚ್ಚಿಸಲು ಕ್ರಮ ಕೈಗೊಳ್ಳಬೇಕು.

೪. ಇನ್ನು ಸಂಗ್ರಹಿಸಬೇಕಾದ ಮತ್ತು ಸರಕಾರಕ್ಕೆ ಪಾವತಿಸಬೇಕಾದ ಯಾವುದಾದರೂ ಬಾಕಿ ಇದ್ದರೆ ಎರಡು ಮುನಿಸಿಪಲ್ ಸಮಿತಿಗಳು ಸರಿಯಾದ ಗಮನವನ್ನು ನೀಡಿ ೧೯೨೨ರ ಜುಲೈ ೧ರಂದು ಬೇಡಿಕೆ, ಸಂಗ್ರಹ ಮತ್ತು ಶಿಲ್ಕನ್ನು ತೋರಿಸುವ ಒಂದು ವರದಿಯನ್ನು ಸರಕಾರಕ್ಕೆ ಕಳುಹಿಸಬೇಕು.

೧೯೨೪-೨೫ರಲ್ಲಿ ಸುಮಾರು ೧೦ ಲಕ್ಷ ರೂ. ವೆಚ್ಚದಲ್ಲಿ ಬೆಂಗಳೂರು ನೀರು ಸರಬರಾಜು ಉತ್ತಮಪಡಿಸುವ ಯೋಜನೆಯನ್ನು ಮಂಜೂರು ಮಾಡಿದ್ದು, ವೆಚ್ಚದ ಮೂರನೇ ಒಂದು ಭಾಗ ವೆಚ್ಚದ ಉಳಿಕೆಯಾಗಿ ಸರಕಾರವು ಅನುದಾನವಾಗಿ ನೀಡುತ್ತದೆ ಮತ್ತು ಉಳಿಕೆಯನ್ನು ಮುನಿಸಿಪಾಲಿಟಿಯು ಭರಿಸಬೇಕು. ನೀರಿನ ದರಗಳು ಮತ್ತು ಸುಂಕಗಳ ಬಗ್ಗೆ ಮುನಿಸಿಪಲ್ ಸಮಿತಿಯು ಸಲಹೆ ಮಾಡಿದ ತೆರಿಗೆಯ ಹೆಚ್ಚಳವನ್ನು ೧೯೨೫ರ ಜುಲೈ ೧ರಂದು ಮಂಜೂರು ಮಾಡಲಾಯಿತು. ಹೆಚ್ಚಾದ ವೆಚ್ಚವನ್ನು ಭರಿಸುವ ಉದ್ದೇಶದಿಂದ ಋಣಪರಿಹಾರ ನಿಧಿ ಮುಂತಾದವುಗಳನ್ನು ಒದಗಿಸುವುದಕ್ಕೋಸ್ಕರ ಮೈಸೂರು ನಗರ ನೀರು ಸರಬರಾಜಿನ ಅಭಿವೃದ್ಧಿಗೆ ರೂ. ೪,೮೪,೦೦೦ದ ಎಸ್ಟಿಮೇಟನ್ನು ೧೯೨೪-೨೫ರಲ್ಲಿ ಮಂಜೂರು ಮಾಡಿತು. ಸರಕಾರವು ೧೯೨೩-೨೪ರಲ್ಲಿ ಮಂಜೂರಾದ ತುಮಕೂರು ನೀರು ಸರಬರಾಜಿನ ಯೋಜನೆಗೆ ಹಣಕಾಸು ಒದಗಿಸುವುದಕ್ಕೆ ಒಂದು ಸಾಲವನ್ನು ಎತ್ತಲು ರಚಿಸಿರುವ ವಿವರಣ ಪತ್ರವನ್ನು ಸರಕಾರವು ಅನುಮೋದಿಸಿತು.

## ಮುನಿಸಿಪಲ್ ವರಮಾನದ ಅಭಿವೃದ್ಧಿ :

೧೮೭೯-೮೦ರಲ್ಲಿ ರವಾನೆ ವಸ್ತುಗಳಿಗೆ ಅಂದರೆ ವೀಳ್ಯದೆಲೆ, ತೆಂಗಿನಕಾಯಿ ಮತ್ತು ಹೊಗೆಸೊಪ್ಪಿಗೆ ಆಕ್ಟ್ರಾಯ್‌ಅನ್ನು ವಿಧಿಸಬೇಕು. ದರವು ಎಲ್ಲಾ ಮುನಿಸಿಪಲ್ ಪಟ್ಟಣಗಳಲ್ಲಿ ಅಧೀಕರಿಸಿದ ಜಂಟಿ ದರಗಳಲ್ಲಿ ವಿಧಿಸಬೇಕು. ಕೆಲವು ಅನುಭವಗಳಿಂದ ತಿಳಿದು ಬಂದುದೇನೆಂದರೆ ಬಹಳ ತೊಡಕಿನಿಂದ ಕೂಡಿದ್ದ ಆಕ್ಟ್ರಾಯ್ ಸುಂಕವು ಸಣ್ಣ ಮುನಿಸಿಪಾಲಿಟಿಗಳಿಗೆ ಸಾಕಷ್ಟು ಉತ್ಪಾದಕವಾಗಿರಲಿಲ್ಲ. ಆದ್ದರಿಂದ ೧೮೮೨ರಲ್ಲಿ ಪ್ರಾಂತೀಯ ಮುಖ್ಯಸ್ಥಳಗಳನ್ನು ಹೊರತುಪಡಿಸಿ ಎಲ್ಲಾ ಮುನಿಸಿಪಾಲಿಟಿಗಳು ಆಕ್ಟ್ರಾಯ್ ಅನ್ನು ಬಿಟ್ಟುಬಿಟ್ಟು ಮನೆ ತೆರಿಗೆ ಕಡೆ ನೋಡಬೇಕು ಮತ್ತು ಶೌಚಾಲಯ ಮತ್ತು ಇತರ ಪಟ್ಟಣ ಅಭಿವೃದ್ಧಿಗಳಿಗೆ ಸರಿಯಾದ ಪೌರಭಾವನೆಯನ್ನು ಬೆಳೆಸುವುದರ ಕಡೆಗೆ ಗಮನ ಕೊಡುವುದು ಒಳ್ಳೆಯದೆಂದು ಸರಕಾರವು ಅವಲೋಕಿಸಿತು. ಬಟ್ಟೆಯ ವಿನಃ ಬಾಕಿಯದಕ್ಕೆಲ್ಲಾ ಆಕ್ಟ್ರಾಯ್ ಹಾಕುವುದನ್ನು ಶಿವಮೊಗ್ಗ ಜಿಲ್ಲೆಯ ಎಲ್ಲ ಮುನಿಸಿಪಾಲಿಟಿಗಳಲ್ಲಿ (ಶಿವಮೊಗ್ಗ ಹೊರತುಪಡಿಸಿ) ೧೮೮೩-೮೪ರ ಪ್ರಾರಂಭದಿಂದ ನಿಲ್ಲಿಸಲಾಯಿತು. ೧೮೮೫-೮೬ರಲ್ಲಿ ಸಣ್ಣ ಮುನಿಸಿಪಾಲಿಟಿಗಳಲ್ಲಿ ಆಕ್ಟ್ರಾಯ್ ಅನ್ನು ರದ್ದು ಮಾಡುವುದಕ್ಕೆ ಮತ್ತು ದೊಡ್ಡ ಪಟ್ಟಣಗಳಲ್ಲಿ ಕೆಲವು ಉತ್ಪಾದಕ ವಸ್ತುಗಳಿಗೆ ತೆರಿಗೆ ಉಳಿಸಿಕೊಳ್ಳುವುದಕ್ಕೆ ಮಂಜೂರಾತಿಯನ್ನು ನೀಡಲಾಯಿತು. ೧೮೯೦-೯೧ರ ಅಂತ್ಯದ ಹೊತ್ತಿಗೆ ೯೮ ಮುನಿಸಿಪಾಲಿಟಿಗಳಲ್ಲಿ ಈ ಮೂಲದಿಂದ ವರಮಾನ ಪಡೆಯದ ೪೩ ಮುನಿಸಿಪಾಲಿಟಿಗಳಿದ್ದವು. ೧೮೮೩-೮೪ರಲ್ಲಿ ತೆಂಗಿನಕಾಯಿ, ವೀಳ್ಯದೆಲೆ ಮತ್ತು ಹೊಗೆಸೊಪ್ಪಿನ ಮೇಲೆ ವಿಧಿಸಲಾದ ಆಕ್ಟ್ರಾಯ್

> ***ಕೈಗಾರಿಕಾ ಶಾಲೆಗಳು, ಇಂಜಿನಿಯರಿಂಗ್ ಶಾಲೆ ಮತ್ತು ಸ್ವದೇಶಿ ಆಸ್ಪತ್ರೆ ಸಿಬ್ಬಂದಿ ಮತ್ತು ದಸರಾ ವಸ್ತುಪ್ರದರ್ಶನ ಒಂದು ಭಾಗವನ್ನು ಕೂಡ ಲೋಕಲ್ ಫಂಡುಗಳು ಸಾಮಾನ್ಯದಿಂದ ಪಾವತಿಸಲಾಗುತ್ತಿತ್ತು.***

ಸುಂಕಗಳಿಂದ ಸರಕಾರಕ್ಕೆ ಸೇರಬೇಕಾದ ಅರ್ಧ ಪಾಲನ್ನು ಅವುಗಳನ್ನು ವಿಧಿಸುವ ಮುನಿಸಿಪಾಲಿಟಿಗಳಿಗೇ ಬಿಟ್ಟುಬಿಡಲಾಯಿತು. ೧೮೯೪ರ ಆಕ್ಟೋಬರ್‌ನಲ್ಲಿ ಸರಕಾರವು ಮುನಿಸಿಪಲ್ ಪಟ್ಟಣಗಳಲ್ಲಿ ವಿಧಿಸಲಾದ ಮನೆ ಮತ್ತು ಮೊಹತರ್ಫ ತೆರಿಗೆಗಳ ಅರ್ಧ ಪಾಲನ್ನು ವರ್ಗಾವಣೆಗೆ ಆದೇಶ ನೀಡಿತು. ಆದರೆ ಅಲ್ಲಿ ನಿರ್ವಹಿಸಲಾಗುತ್ತಿರುವ ಪ್ರಾಥಮಿಕ ಮತ್ತು ಸೆಕೆಂಡರಿ ಆಡುಭಾಷೆಯ ಶಾಲೆಗಳಿಗೆ ಒಂದು ಭಾಗದ ವೆಚ್ಚವನ್ನು ಭರಿಸುವಂತೆ ಷರತ್ತು ಹಾಕಿತು. ೧೮೯೬ರಲ್ಲಿ ನಿಬಂಧನೆರಹಿತ ಮುನಿಸಿಪಾಲಿಟಿಗಳಲ್ಲಿ ಖಾಲಿ ಇರುವ ಕಟ್ಟಡ ನಿವೇಶನದ ಮೇಲಿನ ತೆರಿಗೆಯಿಂದ ಬಂದ ವರಮಾನವನ್ನು ಮುನಿಸಿಪಲ್ ನಿಧಿಗಳಿಗೆ ಜಮಾ ಮಾಡಬೇಕು ಎಂದು ಸರಕಾರವು ಆದೇಶಿಸಿತು. ೧೮೯೭ರ ಜುಲೈ ೧ರಿಂದ ಪರಿಣಾಮಕಾರಿಯಾಗಿ ರಾಜ್ಯದಾದ್ಯಂತ ಮಗ್ಗದ ತೆರಿಗೆ ರದ್ದು ಮಾಡಲಾಯಿತು. ಆದರೆ, ನಿರ್ದಿಷ್ಟ ಮುನಿಸಿಪಾಲಿಟಿಗಳಿಗೆ ತಮ್ಮ ವರಮಾನವನ್ನು ಹೆಚ್ಚಿಸಿಕೊಳ್ಳುವುದು ಅಗತ್ಯವೆಂದೆನಿಸಿದರೆ ಅವು ಬಟ್ಟೆಯ ಮೇಲೆ ಆಕ್ಟ್ರಾಯ್ ವಿಧಿಸಬೇಕೆಂದಾಗ ಉತ್ಪಾದನೆಯ ಸ್ಥಳದ ಪರಿವೆ ಇಲ್ಲದೆ ಏಕರೂಪದ ದರವನ್ನು ಅನ್ವಯಿಸಬೇಕೆಂದು ಆಜ್ಞೆ ಮಾಡಲಾಯಿತು. ೧೮೯೮ರ ಗ್ರಾಮ ನೈರ್ಮಲ್ಯ ನಿಬಂಧನೆ I ರ ಅಡಿಯಲ್ಲಿ ಮುನಿಸಿಪಲ್ ಪ್ರದೇಶಗಳಲ್ಲಿ ಮಾಡಲಾದ ಅಪರಾಧಗಳಿಗೆ ಗ್ರಾಮ ನೈರ್ಮಲ್ಯದಡಿಯಲ್ಲಿ ವಿಧಿಸಿದ ದಂಡವು ಮುನಿಸಿಪಲ್ ನಿಧಿಗಳಿಗೆ ಜಮಾ ಆಯಿತು. ೧೯೧೯ರಲ್ಲಿ ಸರಕಾರವು ಅಧಿಕೃತ ಆಧಾರದ ಮೇಲೆ ಕೆಲವು ತೆರಿಗೆಗಳನ್ನು ವಿಧಿಸುವುದು ಶಾಸನಬದ್ಧಗೊಳಿಸುವ ಅಪೇಕ್ಷೆಯನ್ನು ಮುನಿಸಿಪಾಲಿಟಿಗಳಿಗೆ ಮನವರಿಕೆ ಮಾಡಿಕೊಟ್ಟು ಅಂತ್ಯದ ತೆರಿಗೆಗಳನ್ನು ವಿಧಿಸುವುದರಿಂದ ಸ್ಥಳೀಯ ಸಂಸ್ಥೆಗಳು ತಮ್ಮ ಸಂಪತ್ತುಗಳನ್ನು ಅಭಿವೃದ್ಧಿಪಡಿಸಿಕೊಳ್ಳಬಹುದಾಗಿದೆ ಮತ್ತು ಹಾಲಿ ಇರುವುದನ್ನು ಕ್ರಮ ಪ್ರಕಾರವಾಗಿ ಮತ್ತು ಕಾಲಕಾಲದ ಪರಿಷ್ಕರಣೆ ಮಾಡುವುದರಿಂದಲೂ ಸಂಪನ್ಮೂಲವನ್ನು ಹೆಚ್ಚಿಸಿಕೊಳ್ಳಬಹುದೆಂದು ಸೂಚಿಸಿತು.

೧೯೨೦-೨೧ರಲ್ಲಿ ಹಾಲಿ ಇರುವ ಮೊಹತರ್ಫ ತೆರಿಗೆಗಳ ಜಾಗದಲ್ಲಿ ಸಣ್ಣ ಮುನಿಸಿಪಾಲಿಟಿಗಳು ಈ ಕೆಳಗಿನ ತೆರಿಗೆಗಳನ್ನು ವಿಧಿಸಲು ಸರಕಾರವು ನಿಯಮಗಳನ್ನು ಹೊರಡಿಸಿತು.

೧) ಪ್ರಾಣಿಗಳ ಮೇಲೆ ಮತ್ತು ಮುನಿಸಿಪಲ್ ವ್ಯಾಪ್ತಿಯಲ್ಲಿ ಕೊಂಡುಕೊಂಡ ಸರಕುಗಳ ಮೇಲೆ ಆಕ್ಟ್ರಾಯ್ ಸುಂಕ ಮತ್ತು ೨) ಕಟ್ಟಡಗಳು, ಜಮೀನು, ವಾಹನಗಳು, ಪ್ರಾಣಿಗಳು, ಕಲೆ, ವೃತ್ತಿಗಳು ಮತ್ತು ವ್ಯಾಪಾರ ಮತ್ತು ಉದ್ಯೋಗಗಳ ಮೇಲೆ ತೆರಿಗೆ.

೧೯೨೧-೨೨ರಲ್ಲಿ ಸಣ್ಣ ಮುನಿಸಿಪಲ್ ಸಮಿತಿಗಳಿಗೆ ಇನ್ನೂ ಹೆಚ್ಚಾಗಿ ವಿಧಿಸುವ ಅಧಿಕಾರ ನೀಡಲಾಯಿತು.

೧) ಮಾರುಕಟ್ಟೆ ಶುಲ್ಕ ಮತ್ತು ೨) ಕಲಂ ೫೯ರಡಿಯಲ್ಲಿ ವಾಹನಗಳು ಮತ್ತು ಪ್ರಾಣಿಗಳ ಮೇಲೆ ಸುಂಕ, ೩) ಮುನಿಸಿಪಲ್ ನಿಬಂಧನೆಯ ಕಲಂ ೭೦(೧)ರ ಅಡಿಯಲ್ಲಿ ಮಂಜೂರು ಮಾಡಿದ ಲೈಸೆನ್ಸ್‌ಗಳಿಗೆ ಶುಲ್ಕ.

೧೯೨೨-೨೩ರಲ್ಲಿ ಮುನಿಸಿಪಲ್ ನಿಬಂಧನೆಯನ್ನು ತಿದ್ದುಪಡಿ ಮಾಡಿ ಪಟ್ಟಣ ಮತ್ತು ಸಣ್ಣ ಮುನಿಸಿಪಾಲಿಟಿಗಳು ರಾಜ್ಯದಲ್ಲಿ ವಿದ್ಯಾಶುಲ್ಕ ವಿಧಿಸಿ ಪ್ರಾಥಮಿಕ ಶಿಕ್ಷಣವನ್ನು ಉತ್ತೇಜಿಸಬೇಕಾಗಿದ್ದಿತು. ಮುನಿಸಿಪಲ್ ಸುಂಕ ಮತ್ತು ಮಾರುಕಟ್ಟೆ ಶುಲ್ಕ ವಿಷಯದಲ್ಲಿ ಹರಾಜು ಮಾರಾಟವನ್ನು ಸರಿಯಾಗಿ ಮಾಡಬೇಕೆಂದು ಸೂಚನೆಗಳನ್ನು ನೀಡಲಾಯಿತು. ಮುನಿಸಿಪಲ್ ನಿಬಂಧನೆಗಳ ಕಲಂ ೭೫ ರಿಂದ ೭೯ರವರೆಗೆ ಒಳಗೊಂಡಿರುವ ಉಪನಿಬಂಧಗಳನ್ನು ೧೯೨೩-೨೪ ವರ್ಷದಲ್ಲಿ ಎಲ್ಲ ಸಣ್ಣ ಮುನಿಸಿಪಲ್ ಕೌನ್ಸಿಲ್‌ಗಳಿಗೆ ಅನ್ವಯವಾಗುವಂತೆ ಮಾಡಲಾಯಿತು.

## ಬೆಂಗಳೂರು ಸಿಟಿ ಇಂಪ್ರೂವ್‌ಮೆಂಟ್ :

ಬೆಂಗಳೂರು ಸಿಟಿ ಇಂಪ್ರೂವ್‌ಮೆಂಟ್ ಕೆಲಸವು ೧೮೯೯ರಿಂದ ಕಾರ್ಯಗತವಾಗಿತ್ತು. ಆಗ ದಿವಂಗತ ಸರ್ ಕೆ. ಶೇಷಾದ್ರಿ ಐಯ್ಯರ್ ಒಂದು ಸಮಿತಿಯನ್ನು ರಚಿಸಿ 'ಅದು ಒಂದು ವರದಿಯನ್ನು ಸಲ್ಲಿಸಿ ಅಂತಹ ವರದಿಗಳ ಮೇಲೆ ಸರಕಾರವು ಮಂಜೂರು ಮಾಡುವ ಎಲ್ಲ ಅಭಿವೃದ್ಧಿಗಳನ್ನು ನಡೆಸುವುದು'. ಅಲ್ಲಿಂದೀಚೆಗೆ ಬಡಾವಣೆಗಳು ಮತ್ತು ಅಭಿವೃದ್ಧಿಗಳು ಹಳೆಯ ನಗರಕ್ಕೆ ಮಾಡಲಾಗುತ್ತಿದ್ದು, ಅದರ ವೆಚ್ಚವು ೧೯೨೪-೨೫ರವರೆಗೆ ರೂ. ೩೧,೪೯,೨೧೧ ಆಗಿದ್ದಿತು. ರೂ. ೨೭,೨೩,೪೭೯ ವೆಚ್ಚದಲ್ಲಿ ಚಾಮರಾಜೇಂದ್ರ ಜಲಾಶಯದಿಂದ ಶುದ್ಧ ಕುಡಿಯುವ ನೀರನ್ನು ಒದಗಿಸಲಾಗಿದ್ದು ಮತ್ತು ಶಿವನಸಮುದ್ರದಲ್ಲಿ ಉತ್ಪಾದಿಸಲಾದ ವಿದ್ಯುಚ್ಛಕ್ತಿಯಿಂದ ನಗರದ ದೀಪಕ್ಕೆ ರೂ. ೭,೦೬,೧೬೨ ಮತ್ತು ಒಳಚರಂಡಿಗೆ ೨,೯೦,೮೫೫ ರೂ.ಗಳನ್ನು ಖರ್ಚು ಮಾಡಲಾಯಿತು. ೧೮೯೫ರಲ್ಲಿ

ಬೆಂಗಳೂರು ಸಿಟಿ ಇಂಪ್ರೂವ್‌ಮೆಂಟ್ ಸಮಿತಿಯನ್ನು ರದ್ದುಪಡಿಸಿ ಹೊಸ ಬಡಾವಣೆಗಳನ್ನು ಮುನಿಸಿಪಲ್ ಬೋರ್ಡಿಗೆ ವಹಿಸಿಕೊಡುವಂತೆ ಒಂದು ಠರಾವನ್ನು ಅಂಗೀಕರಿಸಲಾಯಿತು. ಈ ಸಮಿತಿಯನ್ನು ೧೯೦೮ರಲ್ಲಿ ಪುನರುಜ್ಜೀವನಗೊಳಿಸಿ ಹಳೆಯ ನಗರಕ್ಕೆ ಒಂದು ವ್ಯಾಪಕವಾದ ಅಭಿವೃದ್ಧಿ ಯೋಜನೆಯನ್ನು ರೂಪಿಸಬೇಕೆಂದಿತು.

ಆದರೆ ಪಟ್ಟಣ ಯೋಜನೆಯಲ್ಲಿ ಸರಿಯಾದ ಸರ್ವೇಕ್ಷಣೆಯನ್ನಾಧರಿಸಿ ಒಂದು ನಗರ ನಕ್ಷೆಯ ಕೊರತೆಯಿಂದ ಈ ಕಾರ್ಯವನ್ನು ತೆಗೆದುಕೊಳ್ಳಲಿಲ್ಲ ಮತ್ತು ನಂತರ ೧೯೧೫ರ ಡಿಸೆಂಬರಿನಲ್ಲಿ ಸಮಿತಿಯನ್ನು ಪುನರ್ರಚಿಸಲಾಯಿತು. ಅದರ ಕೆಲಸವೇನೆಂದರೆ ನಗರದ ಸರಿಯಾದ ನಕ್ಷೆಯ ತಯಾರಿಕೆ ಮತ್ತು ಹೆಚ್ಚು ಮುಖ್ಯವಾದ ಅಭಿವೃದ್ಧಿಗಳಿಗೆ ಒಂದು ಕಚ್ಚಾ ಯೋಜನೆಯನ್ನು ತಯಾರಿಸುವುದಾಗಿದ್ದಿತು. ನಗರದ ಒಳಚರಂಡಿ ಯೋಜನೆಯನ್ನು ರಚಿಸುವುದಕ್ಕೆ ಮತ್ತು ನಗರ ಅಭಿವೃದ್ಧಿಗೆ ಆಸ್ತಿಗಳನ್ನು ವಶಪಡಿಸಿಕೊಳ್ಳುವುದಕ್ಕೆ ಕೂಡ ವಿಶೇಷ ಅಧಿಕಾರಿಗಳನ್ನು ನೇಮಿಸಲಾಯಿತು.

ಈ ಸಮಿತಿಯಲ್ಲಿ ನಾಲ್ಕು ಸರಕಾರಿ ಅಧಿಕಾರಿಗಳು, ಮೂರು ಮುನಿಸಿಪಲ್ ಕೌನ್ಸಿಲರ್‌ಗಳು ಮತ್ತು ಇಬ್ಬರು ಪ್ರಸಿದ್ಧ ನಾಗರಿಕರಿದ್ದು, ನಗರ ಮುನಿಸಿಪಲ್ ಕೌನ್ಸಿಲ್‌ನ ಪ್ರೆಸಿಡೆಂಟರು ಅಧ್ಯಕ್ಷರಾಗಿಯೂ ಮತ್ತು ವೈಸ್ ಪ್ರೆಸಿಡೆಂಟರು ಕಾರ್ಯದರ್ಶಿಯಾಗಿದ್ದರು. ಸಿಬ್ಬಂದಿಯಲ್ಲಿ ಕೆಲವು ಸೇರ್ಪಡೆಗಳು, ಬದಲಾವಣೆಗಳಿಂದ ಸಮಿತಿಯಲ್ಲಿ ಮುನಿಸಿಪಲ್ ಇಂಜಿನಿಯರಿಂಗ್ ಸೇರಿದಂತೆ ೮ ಸರಕಾರಿ ಅಧಿಕಾರಿಗಳು, ೪ ಮುನಿಸಿಪಲ್ ಕೌನ್ಸಿಲರ್‌ಗಳು ಮತ್ತು ೨ ಪ್ರಸಿದ್ಧ ನಾಗರಿಕರು, ನಗರ ಮುನಿಸಿಪಲ್ ಕೌನ್ಸಿಲ್‌ನ ಪ್ರೆಸಿಡೆಂಟರು ಮತ್ತು ಹಿರಿಯ ವೈಸ್ ಪ್ರೆಸಿಡೆಂಟರು ೧೯೨೦ರ ಜನವರಿ ಅಂತ್ಯದವರೆಗೆ ಕ್ರಮವಾಗಿ ಅಧ್ಯಕ್ಷರು ಹಾಗೂ ಕಾರ್ಯದರ್ಶಿಯಾಗಿದ್ದರು. ಸಮಿತಿಯು ಕಾಲಕಾಲಕ್ಕೆ ತಯಾರಿಸಿ ಕಳುಹಿಸಿದ ಅಭಿವೃದ್ಧಿ ಯೋಜನೆಗಳನ್ನು ಮಂಜೂರು ಮಾಡಲಾಗಿದೆ ಮತ್ತು ೧೯೧೮ರ ಮೇ ಆದೇಶವು ಕಾರ್ಯದ ಕಾರ್ಯಕ್ರಮಗಳನ್ನು ಮುಂದಿನ ಮೂರು ವರ್ಷಗಳಿಗೆ ನಿಗದಿಪಡಿಸಿದ್ದು, ಅವುಗಳಿಗೆ ಹಣ ಒದಗಿಸುವ ವ್ಯವಸ್ಥೆಗಳನ್ನು ಕೂಡ ನಮೂದಿಸಲಾಗಿದೆ. ಈ ಕಾರ್ಯಕ್ರಮದಲ್ಲಿ ಸೇರಿಸಲಾದ ಅಭಿವೃದ್ಧಿ ಕಾರ್ಯಗಳ ಒಟ್ಟು ವೆಚ್ಚವು ರೂ. ೧೩ ಲಕ್ಷಗಳಾಗಿದ್ದು, ಅದರಲ್ಲಿ ಸ್ವಬೆಂಬಲಿಸುವ ಯೋಜನೆಗಳು ಮತ್ತು ಒಳಚರಂಡಿ ಕೆಲಸಗಳನ್ನು ಹೊರತುಪಡಿಸಿದೆ. ಒಳಚರಂಡಿ ಕೆಲಸದ ವೆಚ್ಚದ ಅರ್ಧಭಾಗವನ್ನು ಮತ್ತು ಇತರ ಅಭಿವೃದ್ಧಿ ಕೆಲಸಗಳ ಮೂರನೇ ಎರಡನೇ ಭಾಗವನ್ನು ಸರಕಾರವು ಕೊಡುವುದಾಗಿ ವಾಗ್ದಾನ ಮಾಡಿತು. ಈ ಉದ್ದೇಶಕ್ಕಾಗಿ ರಾಜ್ಯದ ಹಣಕಾಸಿನಿಂದ ೩ ಲಕ್ಷ ರೂ.ಗಳನ್ನು ವಾರ್ಷಿಕ ಅನುದಾನ ಕೊಡುವುದಾಗಿ ವಾಗ್ದಾನ ಮಾಡಿತು.

ಕಾರ್ಯಗತ ಮಾಡಬೇಕಾದ ಕೆಲಸಗಳ ಗಾತ್ರ ಮತ್ತು ಪ್ರಾಮುಖ್ಯತೆಯ ದೃಷ್ಟಿಯಿಂದ ಮತ್ತು ಅದರಿಂದ ಭರಿಸಲಾದ ದೊಡ್ಡ ಪಾಲಿನ ವೆಚ್ಚದಿಂದ ಸರಕಾರವು ೧೯೨೦ರ ಫೆಬ್ರವರಿ ೧ ರಿಂದ ನಗರ ಅಭಿವೃದ್ಧಿ ಸಮಿತಿಯನ್ನು ಪುನರ್ರಚಿಸಿತು. ಪುನರ್ರಚಿಸಿದ ಸಮಿತಿಯಲ್ಲಿ ಈ ಕೆಳಗಿನವರು ಇದ್ದರು.

೧) ಸರಕಾರವು ನೇಮಕ ಮಾಡುವ ಚೇರ್ಮನ್ ಮತ್ತು ಆರು ಜನ ಸದಸ್ಯರು

೨) ಮುನಿಸಿಪಲ್ ಕೌನ್ಸಿಲ್‌ನಿಂದ ನಾಮಕರಣ ಮಾಡಲ್ಪಟ್ಟ ಒಬ್ಬ ವೈಸ್‌ಚೇರ್ಮನ್ ಮತ್ತು ನಾಲ್ಕು ಮುನಿಸಿಪಲ್ ಕೌನ್ಸಿಲರುಗಳು.

೧೯೨೧-೨೨ರ ವರ್ಷದಲ್ಲಿ ವರ್ಗ ಅಭಿವೃದ್ಧಿ ಸಮಿತಿಯನ್ನು ರದ್ದುಪಡಿಸಲಾಯಿತು. ಸರಕಾರದಿಂದ ನೇಮಕವಾದ ಪೂರ್ಣಕಾಲದ ಮುನಿಸಿಪಲ್ ಸಮಿತಿಯ ಅ ಕ್ಷರಿಂದ ೧೯೨೨ರ ಮಾರ್ಚಿ ಪ್ರಾರಂಭದಿಂದ ನಗರ ಅಭಿವೃದ್ಧಿ ಕೆಲಸಗಳ ಪ್ರಭಾರವನ್ನು ವಹಿಸಿಕೊಳ್ಳಲಾಯಿತು. ಅಲ್ಲಿಂದೀಚೆಗೆ ನಗರ ಅಭಿವೃದ್ಧಿ ಕೆಲಸಗಳನ್ನು ಈ ಉದ್ದೇಶಕ್ಕೇ ನೇಮಕವಾದ ಸಿಟಿ ಮುನಿಸಿಪಲ್ ಕೌನ್ಸಿಲ್‌ನ ವಿಶೇಷ ಇಂಜಿನಿಯರ್‌ರ ಮಾರ್ಗದರ್ಶನದಲ್ಲಿ ನಡೆಯುತ್ತಿದೆ.

## ಮೈಸೂರು ಸಿಟಿ ಇಂಪ್ರೂವ್‌ಮೆಂಟ್ :

೧೯೧೯ರ ಮಾರ್ಚಿ ೧೧ರವರೆಗೆ ಸಂಪೂರ್ಣವಾಗಿ ಒಬ್ಬ ಅಧಿಕಾರೇತರ ಚೇರ್ಮನ್ ಅಧ್ಯಕ್ಷತೆ ವಹಿಸುತ್ತಿದ್ದು, ಮೈಸೂರು ಸಿಟಿ ಇಂಪ್ರೂವ್‌ಮೆಂಟ್ ಬೋರ್ಡ್‌ಗೆ ಈಗ ಸಿಟಿ ಮುನಿಸಿಪಲ್ ಕೌನ್ಸಿಲ್ ಪ್ರೆಸಿಡೆಂಟರು ಅಧ್ಯಕ್ಷರಾಗಿರುತ್ತಾರೆ. ಮೈಸೂರು ನಗರದಲ್ಲಿ ಸಾಂಕ್ರಾಮಿಕ ರೋಗಗಳನ್ನು ತಡೆಯಲು ಹೆಚ್ಚಿನ ಮೊತ್ತದ ಹಣವನ್ನು ಖರ್ಚು ಮಾಡಲಾಯಿತು. ೧೯೦೩ರ ಸೆಪ್ಟೆಂಬರ್‌ನಲ್ಲಿ

ಮುನಿಸಿಪಾಲಿಟಿಯ ಸಂಪನ್ಮೂಲಗಳು ಬೇಕಾಗಿರುವ ವೆಚ್ಚ, ಆಕಾರದ ವಿಧಾನ, ಯಾಂತ್ರಿಕತೆ ಮತ್ತು ಸರಿಯಾದ ವಸೂಲಿಯ ಪ್ರಶ್ನೆಯನ್ನು ಪೂರ್ಣವಾಗಿ ಪರೀಕ್ಷಿಸುವುದಕ್ಕೆ ಸರಕಾರವು ಒಂದು ಅಭಿವೃದ್ಧಿ ಸಮಿತಿಯನ್ನು ನೇಮಕ ಮಾಡಿತು. ಸಮಿತಿಯ ಅನೇಕ ಯೋಜನೆಗಳನ್ನು ಸಲ್ಲಿಸಿತು. ಅವುಗಳಲ್ಲಿ ಸರಿಯಾದ ಒಳಚರಂಡಿ ವ್ಯವಸ್ಥೆಗೆ ಅವಕಾಶ, ಶುಚಿಯಿಲ್ಲದ ಮನೆಗಳನ್ನು ತೆಗೆದುಹಾಕುವುದು ಮತ್ತು ಬಡಾವಣೆಗಳನ್ನು ರಚಿಸುವುದು ಸೇರಿದ್ದಿತು. ಯೋಜನೆಗಳನ್ನು ಸರಕಾರವು ಮಂಜೂರು ಮಾಡಿತು. ಒಡೆದು ಹಾಕಬೇಕಾದ ಆಸ್ತಿಗಳನ್ನು ವಶಪಡಿಸಿಕೊಳ್ಳಲು ಮತ್ತು ಆಡಳಿತ ನಡೆಸಲು ಟ್ರಸ್ಟಿಗಳ ಒಂದು ಮಂಡಲಿಯನ್ನು ೧೯೦೩ ರ ಡಿಸೆಂಬರ್ ೧ ರಿಂದ ೧೯೦೩ರ ನಿಬಂಧನೆ IIIರ ಅಡಿಯಲ್ಲಿ ನೇಮಕ ಮಾಡಲಾಯಿತು. ಮಂಡಲಿಯ ಸಂಖ್ಯೆಯನ್ನು ಮೂಲತಃ ೮ಕ್ಕೆ ನಿಗದಿಪಡಿಸಲಾಗಿತ್ತು. ಆದರೆ ನಂತರ ೯ಕ್ಕೆ ಏರಿಸಲಾಗಿದ್ದು, ಅದರಲ್ಲಿ ಇಬ್ಬರು ಮುನಿಸಿಪಲ್ ಕೌನ್ಸಿಲ್‌ನಿಂದ ಚುನಾಯಿತರಾದವರಾಗಿರುತ್ತಿದ್ದರು. ಮಂಡಳಿಗೆ ಸಾಲ ಪಡೆಯುವ ಅಧಿಕಾರವಿಲ್ಲ ಮತ್ತು ಕಾಲಕಾಲಕ್ಕೆ ಸರಕಾರವು ಅದರ ಅಧೀನದಲ್ಲಿ ಇಡಲಾದ ಹಣವನ್ನು ಅದು ವ್ಯಯ ಮಾಡುತ್ತಿತ್ತು. ಮಂಡಳಿಯು ಸಾಲವನ್ನು ನೀಡಬಹುದು. ಆದರೆ ಇದರ ಬಗ್ಗೆ ಸರಕಾರವು ಮಂಜೂರು ಮಾಡಿದ ನಿಯಮಗಳ ಪ್ರಕಾರವಿರಬೇಕು ಮತ್ತು ಇದು ಸೂಕ್ತವಾದ ಕಟ್ಟಡ ನಿಬಂಧನೆಗಳನ್ನು ನಿಗದಿಪಡಿಸಬಹುದು. ಆಸ್ತಿಗಳನ್ನು ವಶಪಡಿಸಿಕೊಳ್ಳುವ ವಿಷಯದಲ್ಲಿ ಹಕ್ಕೊತ್ತಾಯಗಳ ಸರಿಯಾದ ಮತ್ತು ಪರಿಣಾಮಕಾರಿಯಾದ ವಿವರಣೆಗೆ ಮಂಡಲಿಯ ಚೇರ್ಮನ್ ಒಬ್ಬ ಜಿಲ್ಲಾಧಿಕಾರಿಯು ಅಧಿಕಾರಗಳನ್ನು ಚಲಾಯಿಸುವ ಅಧಿಕಾರ ನೀಡಲಾಗಿದೆ.

ಮಂಡಲಿಯ ಕಾರ್ಯಗಳ ಪರಿಣಾಮವಾಗಿ, ಅನೇಕ ಬಡಾವಣೆಗಳನ್ನು ರಚಿಸಲಾಗಿದೆ. ಮತ್ತು ಅನಾರೋಗ್ಯಕರವಾದ ಆಸ್ತಿಗಳನ್ನು ವಶಪಡಿಸಿಕೊಂಡು ಕೆಡವಲಾಗಿದೆ. ಮೈಸೂರು ಕೋಟೆಯನ್ನು ಅಭಿವೃದ್ಧಿಪಡಿಸಲಾಗಿದೆ ಮತ್ತು ಅಭಿವೃದ್ದಿಯಾದ ಮೈಸೂರು ನಗರದ ಪ್ರದೇಶಗಳಿಗೆ ಒಳಚರಂಡಿಯನ್ನು ಒದಗಿಸಲಾಗಿದೆ.

ಇನ್ನೂ ಕಾರ್ಯಗತ ಮಾಡಬೇಕಾಗಿರುವ ಕೆಲಸಗಳ ತೀವ್ರ ಪ್ರಗತಿಯುಂಟಾಗಲು ಟ್ರಸ್ಟ್ ಬೋರ್ಡ್‌ನ ಉತ್ಪಾದನಾ ಕೆಲಸಗಳನ್ನು ಬಡವರಿಗೆ ಮತ್ತು ನಿರಾಶ್ರಿತರಿಗೆ ಗೃಹ ಯೋಜನೆಗಳು ಮತ್ತು ಸಾಲಗಳನ್ನು ಪಡೆದು ಬಡಾವಣೆಗಳನ್ನು ರಚಿಸುವ ಬಗ್ಗೆ ಸಾಧ್ಯಾಸಾಧ್ಯತೆಯನ್ನು ಪರಿಶೀಲಿಸಲು ಕೇಳಲಾಗಿದೆ.

೧೮೯೮ರ ಜುಲೈನಲ್ಲಿ ಮುನಿಸಿಪಾಲಿಟಿಗಳ ಖಾಯಂ ಸಿಬ್ಬಂದಿಯಾಗಿರುವ ಎಲ್ಲಾ ನೌಕರರು (ಕೆಲವು ನಿರ್ದಿಷ್ಟ ಹುದ್ದೆಗಳ ವಿನಃ) ಮುನಿಸಿಪಲ್ ನಿಧಿಯಿಂದ ನಿವೃತ್ತಿ ವೇತನ ಮತ್ತು ಗ್ರಾಚುಯಿಟಿಗಳಿಗೆ ಅರ್ಹರಾಗಿರುತ್ತಾರೆ.

## ಲೋಕಲ್ ಫಂಡುಗಳು: ಹಸ್ತಾಂತರದ ನಂತರದ ಕಾಲ :

**ಲೋಕಲ್ ಫಂಡ್ ಸಮಿತಿಗಳು ಮತ್ತು ಲೋಕಲ್ ಬೋರ್ಡುಗಳು:** ಹಸ್ತಾಂತರ ಪೂರ್ವದ ಕಾಲದಲ್ಲಿ ಈ ಸಮಿತಿಗಳ ಸ್ಥಾಪನೆಯನ್ನು ಆಗಲೇ ವಿವರಿಸಲಾಗಿದೆ. ಜಿಲ್ಲಾ ಸಮಿತಿಗಳ ಕಾರ್ಯತಃ ಕೆಲಸದಲ್ಲಿ, ೧೮೭೭ರ ನಿಯಮಗಳು ಅನೇಕ ವಿಷಯಗಳಲ್ಲಿ ದೋಷಯುತವಾಗಿದ್ದವು. ಅಧಿಕಾರಿ ಸದಸ್ಯರ ಮೇಲುಗೈ ಅವುಗಳ ನಿಧಿಗಳ ವಿಲೇವಾರಿಗೆ ಸಕಾರಣವಾದ ಅಧಿಕಾರಗಳ ಕೊರತೆ ಮತ್ತು ನಿಧಿಗಳ ಆಡಳಿತದಲ್ಲಿ ಸರಕಾರಿ ಅಧಿಕಾರಿಗಳಿಗೆ ಕಮಿಟಿಯ ಮಿತಿಯಿಲ್ಲದ ಅಧೀನತೆ ಇವುಗಳಿಂದ ಸರಕಾರದ ಅಧಿಕಾರಿಗಳ ಸುತ್ತ ಆಡಳಿತವು ಸುತ್ತುತ್ತಿರುವ ಪರಿಣಾಮ ಉಂಟಾಗಿದೆ. ಈ ದೋಷಗಳನ್ನು ಸರಿಪಡಿಸುವ ಪ್ರಶ್ನೆಗೆ ಉತ್ತರವಾಗಿ ಪ್ರತಿ ಜಿಲ್ಲೆಗೆ ಒಂದು ಬೋರ್ಡಿನ ಜೊತೆಗೆ ಪ್ರತಿ ತಾಲ್ಲೂಕಿಗೂ ಒಂದು ಬೋರ್ಡನ್ನು ರಚಿಸುವುದು, ಲೋಕಲ್ ಬೋರ್ಡುಗಳ ಉಪಯುಕ್ತತೆಯನ್ನು ಹೆಚ್ಚಿಸುವ ವಿಷಯ ೧೮೮೧ರಿಂದ ಸರಕಾರದ ಗಮನವನ್ನು ಸೆಳೆಯಿತು.

## ಲೋಕಲ್ ಫಂಡ್ ಬೋರ್ಡುಗಳ ರಚನೆ :

ಹಸ್ತಾಂತರದ ಸಮಯದಲ್ಲಿ ಒಂಬತ್ತು ಡಿಸ್ಟ್ರಿಕ್ ಫಂಡ್ ವೃತ್ತಗಳಿದ್ದು, ಅವು ಎಂಟು ಜಿಲ್ಲೆಗಳಲ್ಲಿ ಒಂದೊಂದು ಮತ್ತು ಮೈಸೂರು ಜಿಲ್ಲೆಯ ಫ್ರೆಂಚ್‌ರಾಕ್ಸ್ (ಪಾಂಡವಪುರ)ನಲ್ಲಿ ಇನ್ನೊಂದು ಇದ್ದವು. ಪ್ರತಿವೃತ್ತವು ಒಂದು ಬೋರ್ಡಿನಿಂದ ಆಳಲ್ಪಟ್ಟಿದ್ದು, ಅರಉನ್ನತ ಕಂದಾಯ ಅಧಿಕಾರಿಯು ಅದರ ಅಧ್ಯಕ್ಷರಾಗಿರುತ್ತಿದ್ದರು. ಮತ್ತು ಏಳು ಜನ ಅಧಿಕಾರೇತರ ಸದಸ್ಯರಿದ್ದರು. ಪದನಿಮಿತ್ತ

ಸದಸ್ಯರಲ್ಲಿ ಹಿರಿಯ ಸಹಾಯಕ ಆಯುಕ್ತರು, ಎಕ್ಸಿಕ್ಯೂಟಿವ್ ಇಂಜಿನಿಯರ್, ಸಿವಿಲ್ ಸರ್ಜನ್ ಮತ್ತು ವೃತ್ತದಲ್ಲಿರುವ ಎಲ್ಲಾ ಅಮಲ್ದಾರರು ಇರುತ್ತಿದ್ದರು. ೧೮೯೯-೧೯೦೦ರ ವರ್ಷದಲ್ಲಿ ಒಂದು ಲೋಕಲ್ ಫಂಡ್ ವೃತ್ತವನ್ನು ಹೆಚ್ಚಿಸಲಾಯಿತು ಮತ್ತು ೧೮೯೯ರ ನವೆಂಬರ್‌ನಲ್ಲಿ 'ಕೋಲಾರ ಚಿನ್ನದ ಗಣಿ ಸ್ಯಾನಿಟರಿ ಬೋರ್ಡ್' ಎಂಬ ವಿಶೇಷ ಲೋಕಲ್ ಬೋರ್ಡನ್ನು ಸ್ಥಾಪಿಸಲಾಯಿತು. ಈ ಹೊಸ ವೃತ್ತದ ಕಾರ್ಯಭಾರವನ್ನು ಒಂದು ಬೋರ್ಡು ನಿರ್ವಹಿಸುತ್ತಿದ್ದು, ಅದರಲ್ಲಿ ಏಳು ಸದಸ್ಯರಿದ್ದು, ಅವರಲ್ಲಿ ಮೂವರು ಅಧಿಕಾರಿಗಳು ಮತ್ತು ನಾಲ್ವರು ಸರಕಾರೇತರರು ಇದ್ದರು.

## ೧೯೦೨ರ ಲೋಕಲ್ ಬೋರ್ಡುಗಳ ನಿಬಂಧನೆ II :

ಮೈಸೂರಿನಲ್ಲಿ ಜಿಲ್ಲಾ ಫಂಡುಗಳ ವೆಚ್ಚದ ಆಡಳಿತ ನಡೆಸಲು ಲೋಕಲ್ ಬೋರ್ಡುಗಳ ರಚನೆಗೆ ಮತ್ತು ಈ ಬೋರ್ಡುಗಳು ಚಲಾಯಿಸಬಹುದಾದ ಅಧಿಕಾರಗಳನ್ನು ಕ್ರಮಗೊಳಿಸುವುದಕ್ಕೆ ೧೯೦೨ರ ಮೈಸೂರು ಲೋಕಲ್ ಬೋರ್ಡುಗಳ ನಿಬಂಧನೆ IIಅನ್ನು ಕ್ರಮಗೊಳಿಸುವುದಕ್ಕೆ ೧೯೦೨ರ ಜೂನ್ ೧೫ ರಂದು ಅಂಗೀಕರಿಸಲಾಯಿತು. ಮುಖ್ಯ ಆಯುಕ್ತರ ಅಧಿಸೂಚನೆ ನಂ. ೧೧೦ (೧೮೭೪ರ ಜುಲೈ ೪) ಮೇಲೆ ಹೇಳಿದಂತೆ ಅನೇಕ ವಿಷಯಗಳಲ್ಲಿ ದೋಷಯುಕ್ತವಾಗಿದ್ದವು. ಮತ್ತು ಹಾಲಿ ಪರಿಸ್ಥಿತಿಗಳಿಗೆ ಹೊಂದಿಕೆಯಾಗುತ್ತಿರಲಿಲ್ಲವಾದ್ದರಿಂದ ಈ ನಿಬಂಧನೆಯ ನಿಯಮಗಳನ್ನು ರದ್ದುಪಡಿಸಿತು.

ಈ ನಿಬಂಧನೆಯ ಉಪಬಂಧಗಳು ಕೋಲಾರ ಚಿನ್ನದ ಗಣಿ ನೈರ್ಮಲ್ಯ ವೃತ್ತಕ್ಕೆ ಅನ್ವಯಿಸುತ್ತಿರಲಿಲ್ಲ. ಏಕೆಂದರೆ ಅದು ಮೈಸೂರು ಖನಿಜಗಳ ನಿಬಂಧನೆಯಡಿಯಲ್ಲಿನ ನಿಯಮಗಳಿಂದ ಆಳಲ್ಪಡುತ್ತಿದ್ದಿತು.

೧೯೦೨ರ ಮೈಸೂರು ಲೋಕಲ್ ಬೋರ್ಡುಗಳ ನಿಬಂಧನೆಯ ಅಡಿಯಲ್ಲಿನ ನಿಯಮಗಳನ್ನು ೧೯೦೩ರ ಸೆಪ್ಟೆಂಬರ್ ೯ರಂದು ಪ್ರಕಟಿಸಲಾಯಿತು. ಅವುಗಳಡಿಯಲ್ಲಿ ಈ ಕೆಳಗಿನವುಗಳು ಸ್ಥಾಪಿಸಲ್ಪಟ್ಟವು.

೧) ಕೆಲವು ಸಣ್ಣ ಮುನಿಸಿಪಾಲಿಟಿಗಳ ಜಾಗದಲ್ಲಿ ಒಕ್ಕೂಟಗಳು.

೨) ೭೭ ತಾಲ್ಲೂಕುಗಳು ಮತ್ತು ಉಪ ತಾಲ್ಲೂಕುಗಳಲ್ಲಿ ಒಂದೊಂದರಲ್ಲಿ ಒಂದು ತಾಲ್ಲೂಕು ಬೋರ್ಡಿನಂತೆ ೭೭ ತಾಲ್ಲೂಕುಗಳಲ್ಲಿ ೧೯೦೩ರ ನವೆಂಬರ್ ೧ರಿಂದ ಜಾರಿಗೆ ಬಂದವು.

೩) ಅದೇ ತಾರೀಕಿನಿಂದ ಪರಿಣಾಮಕಾರಿಯಾಗುವಂತೆ ರಾಜ್ಯದಲ್ಲಿರುವ ೮ ಜಿಲ್ಲೆಗಳಿಗೆ ಜಿಲ್ಲೆಗೆ ಒಂದರಂತೆ ೧೦ ಲೋಕಲ್ ಫಂಡ್ ಬೋರ್ಡ್‌ಗಳಿಗೆ ಬದಲಾಗಿ ಸ್ಥಾಪಿಸಲ್ಪಟ್ಟವು. ಕೋಲಾರ ಜಿಲ್ಲೆಯನ್ನು ಹೊರತುಪಡಿಸಲಾಯಿತು. ಅದು ಕೋಲಾರ ಚಿನ್ನದ ಗಣಗಳ ಸ್ಯಾನಿಟರಿ ವೃತ್ತದೊಳಗೆ ಒಳಗೊಂಡಿತ್ತು. ಮೈಸೂರು ಜಿಲ್ಲೆಯ ಫ್ರೆಂಚ್‌ರಾಕ್ಸ್ ಉಪವಿಭಾಗವು ಪ್ರತ್ಯೇಕವಾದ ಜಿಲ್ಲಾ ಬೋರ್ಡನ್ನು ಹೊಂದಿರುವುದನ್ನು ತೆಗೆದುಹಾಕಲಾಯಿತು.

ಈ ಹೊಸ ಲೋಕಲ್ ಬೋರ್ಡುಗಳ ರಚನೆಗಳು ಈ ಕೆಳಗಿನ ಮುಖ್ಯ ತತ್ವಗಳಂತೆ ಆಗಿದ್ದಿತು. ಅವು ಯಾವುವೆಂದರೆ,

೧) ಒಕ್ಕೂಟಗಳಿಗೆ ಪಂಚಾಯತಿಗಳ ಸಂಖ್ಯಾಬಲವನ್ನು ಪ್ರತಿಯೊಂದು ವಿಷಯದಲ್ಲೂ ಸರಕಾರದಿಂದ ನಿಗದಿಪಡಿಸಲಾಗುತ್ತಿತ್ತು. ಅದರ ಸದಸ್ಯರು ಮತ್ತು ಚೇರ್‌ಮನ್‌ಅನ್ನು ಜಿಲ್ಲಾಧಿಕಾರಿಗಳ ಶಿಫಾರಸ್ಸಿನ ಮೇಲೆ ಸರಕಾರವು ನೇಮಿಸಬೇಕಾಗಿದ್ದಿತು.

೨) ಪ್ರತಿ ತಾಲ್ಲೂಕೂ ಬೋರ್ಡು ಈ ಕೆಳಗಿನಂತೆ ಜಿಲ್ಲಾಧಿಕಾರಿಗಳ ಶಿಫಾರಸಿನಂತೆ ಸರಕಾರದಿಂದ ನೇಮಕವಾಗಬೇಕು. ೪ ಪದನಿಮಿತ್ತ ತಾಲ್ಲೂಕಿನ ಕಂದಾಯ ಪ್ರಭಾರ ಹೊಂದಿರುವ ಸಹಾಯಕ ಕಮೀಷನರುಗಳು ಅಧ್ಯಕ್ಷರಾಗಿಯೂ, ಅಮಲ್ದಾರುಗಳು ಉಪಾಧ್ಯಕ್ಷರಾಗಿ, ತಾಲ್ಲೂಕು ಕೇಂದ್ರಗಳಲ್ಲಿರುವ ಆಸ್ಪತ್ರೆಯ ಪ್ರಭಾರವಿರುವ ವೈದ್ಯಾಧಿಕಾರಿ ಮತ್ತು ಲೋಕೋಪಯೋಗಿ ಇಲಾಖೆಯ ತಾಲ್ಲೂಕಿನ ಹಿರಿಯ ಅಧಿಕಾರಿ, ೪ ಚುನಾಯಿತರು ೨೧ ವರ್ಷಗಳ ಪೂರ್ಣ ವಯಸ್ಸಾಗಿರುವ ಗಂಡಸರಾಗಿದ್ದು, ಓದಲು ಮತ್ತು ಬರೆಯಲು ಬರಬೇಕು, ವಾರ್ಷಿಕವಾಗಿ ೫೦ ರೂ.ಗಳಿಗೆ ಕಡಿಮೆ ಇಲ್ಲದೆ ಕಂದಾಯ ಕೊಡುವವರು ತಾಲ್ಲೂಕಿನಲ್ಲಿ ಜಮೀನನ್ನು ಹೊಂದಿರಬೇಕು. ಅಥವಾ ತಾಲ್ಲೂಕಿನ ಯಾವುದೇ ಹಳ್ಳಿಯಲ್ಲಿ ಪಟೇಲನಾಗಿ ಅಧಿಕಾರ ಹೊಂದಿರುವವರು ಅಥವಾ ಈ ನಿಯಮದಡಿಯಲ್ಲಿ ವಾರ್ಷಿಕವಾಗಿ ಐದು ರೂ.ಗೆ ಕಡಿಮೆ ಇಲ್ಲದೆ ಮನೆತೆರಿಗೆ ಕೊಡುತ್ತಿರಬೇಕು. ಮತದಾರರು ಅದೇ ಅರ್ಹತೆಯಿರುವ ಗಂಡಸರು,

ಆದರೆ ಇವರ ವಿಷಯದಲ್ಲಿ ವಿದ್ಯಾರ್ಹತೆಗಳು ಅನಿವಾರ್ಯವಲ್ಲ. ತಾಲ್ಲೂಕು ಮುಖ್ಯಸ್ಥಳದ ಮುನಿಸಿಪಲ್ ಬೋರ್ಡಿನ ಮುನಿಸಿಪಲ್ ಸದಸ್ಯರುಗಳಿಂದ ಚುನಾಯಿತನಾದ ಒಬ್ಬ ಸದಸ್ಯ ಮತ್ತು ಮೂವರು ಸರಕಾರದಿಂದ ನಾಮನಿರ್ದೇಶನ ಮಾಡಲ್ಪಡುವವರು.

೩) ಡಿಸ್ಟ್ರಿಕ್ಟ್ ಬೋರ್ಡು ಈ ಕೆಳಗಿನವರನ್ನು ಹೊಂದಿರಬೇಕು.

ಎ) ಪದನಿಮಿತ್ತ ಸದಸ್ಯರು, ಜಿಲ್ಲಾಧಿಕಾರಿಗಳು ಅಧ್ಯಕ್ಷರಾಗಿ, ತಾಲ್ಲೂಕಿನ ಕಂದಾಯ ಪ್ರಭಾರವಿರುವ ಸಹಾಯಕ ಆಯುಕ್ತರು ಹಾಗೂ ಇದ್ದರೆ ಜಿಲ್ಲಾ ಮುಖ್ಯಸ್ಥಳಗಳಲ್ಲಿನ ಸಹಾಯಕ ಆಯುಕ್ತರು, ವೈದ್ಯಕೀಯ ಪರಿಹಾರ, ಇಂಜಿನಿಯರಿಂಗ್ ಮತ್ತು ಶಿಕ್ಷಣ ಇಲಾಖೆಗಳಿಂದ ಜಿಲ್ಲೆಯ ಹಿರಿಯ ಅಧಿಕಾರಿಗಳು.

ಬಿ) ಒಬ್ಬ ಅಧಿಕಾರೇತರ ಪ್ರತಿನಿಧಿಯು ಜಿಲ್ಲೆಯ ತಾಲ್ಲೂಕುಗಳಿಗೆ ಒಬ್ಬರು. ಅವರನ್ನು ತಾಲ್ಲೂಕು ಬೋರ್ಡಿನಿಂದ ಒಬ್ಬರಂತೆ, ಆದರೆ ಮೊದಲನೇ ಸಲ ಜಿಲ್ಲಾಧಿಕಾರಿಗಳ ಶಿಫಾರಸ್ಸಿನ ಮೇಲೆ ಸರಕಾರದಿಂದ ನೇಮಕವಾಗಬೇಕು.

ಸಿ) ಮಂಡಳಿಯ ಸಂಖ್ಯೆಯನ್ನು ಸರಿಪಡಿಸುವಂತಹ ಸದಸ್ಯ. ಈ ಸಂಖ್ಯೆಯು ಮೈಸೂರು ಜಿಲ್ಲೆಯ ವಿಷಯದಲ್ಲಿ ೩೦ ಇದ್ದು, ಇತರ ಜಿಲ್ಲೆಯ ವಿಷಯಗಳಲ್ಲಿ ೨೫ ಇದ್ದು, ಇವರನ್ನು ಜಿಲ್ಲಾಧಿಕಾರಿಯ ಶಿಫಾರಸಿನ ಮೇಲೆ ಸರಕಾರವು ನೇಮಕ ಮಾಡುತ್ತದೆ. ಜಿಲ್ಲಾ ಬೋರ್ಡಿನ ಉಪಾಧ್ಯಕ್ಷನನ್ನು ಸರಕಾರವು ನೇಮಿಸಬೇಕು ಅಥವಾ ಸರಕಾರವು ತಿಳಿಸಿದ ಅಧಿಕಾರದಿಂದ ಸದಸ್ಯರಿಂದ ಚುನಾಯಿತರಾಗಬೇಕು.

೪) ಪದನಿಮಿತ್ತ ಸದಸ್ಯರುಗಳನ್ನು ಬಿಟ್ಟು ಲೋಕಲ್ ಬೋರ್ಡ್ ಸದಸ್ಯರು ಸಾಮಾನ್ಯವಾಗಿ ತಮ್ಮ ಹುದ್ದೆಯನ್ನು ಮೂರು ವರ್ಷಗಳವರೆಗೆ ಹೊಂದಿದ್ದು ಮತ್ತು ಅರ್ಹರಾಗಿದ್ದರೆ ಮರು ಚುನಾವಣೆ ಅಥವಾ ಮರುನೇಮಕ ಹೊಂದಬಹುದು.

೫) ಜಿಲ್ಲಾ ಬೋರ್ಡು ವರ್ಷದಲ್ಲಿ ನಾಲ್ಕು ಸಲಕ್ಕೆ ಕಡಿಮೆ ಇಲ್ಲದಂತೆ ಸಭೆ ಸೇರಬೇಕು ಮತ್ತು ತಾಲ್ಲೂಕು ಬೋರ್ಡುಗಳು ವರ್ಷಕ್ಕೆ ಆರು ಸಲಕ್ಕೆ ಕಡಿಮೆ ಇಲ್ಲದಂತೆ ಸಭೆ ಸೇರಬೇಕು. ಮತ್ತು ಪಂಚಾಯಿತಿ ಒಕ್ಕೂಟಗಳು ತಿಂಗಳಿಗೆ ಒಂದು ಸಲಕ್ಕೆ ಕಡಿಮೆ ಇಲ್ಲದೆ ಸಭೆ ಸೇರಬೇಕು.

೬) ಲೋಕಲ್ ಬೋರ್ಡ್‌ಗಳ ಮುಂದೆ ಬರುವ ಪ್ರಶ್ನೆಗಳ ಬಗ್ಗೆ ತೀರ್ಮಾನವು ಬಹುಮತದ್ದಾಗಿರಬೇಕು.

## ಲೋಕಲ್ ಫಂಡುಗಳು – ಸಾಮಾನ್ಯ :

ಅಬಕಾರಿ, ಅರಣ್ಯ ಮತ್ತು ಭೂಕಂದಾಯ ಹೊರತುಪಡಿಸಿ ಇತರ ಅಂಶಗಳ ಮೇಲೆ ಸ್ಥಳೀಯ ಸುಂಕದ ಶೇ. ೭೬ಭಾಗದ ವಂತಿಗೆಯು ಮುಖ್ಯವಾಗಿ ಈ ಫಂಡಿಗೆ ಸೇರುತ್ತದೆ. ಮತ್ತು ಈ ಹಂಚಿಕೆಯನ್ನು ೧೯೦೩ರಲ್ಲಿ ಶೇ. ೭೬ ರಿಂದ ಶೇ. ೬೭ಕ್ಕೆ ಇಳಿಸಲಾಯಿತು. ಏಕೆಂದರೆ ಗ್ರಾಮಶಾಲೆ ನಿಧಿಯ ಸಂಪನ್ಮೂಲಗಳನ್ನು ಉತ್ತಮಪಡಿಸುವುದಾಗಿದೆ. ಈ ನಿಧಿಯು ಸ್ಥಳೀಯ ಉದ್ದೇಶಗಳಿಗಾಗಿ ಕಾಲದಿಂದ ಕಾಲಕ್ಕೆ ವಿಶೇಷ ಅನುದಾನವನ್ನು ಭರಿಸಲು ಮೀಸಲಾಗಿರುತ್ತದೆ. ಈ ಫಂಡಿನಿಂದ ಅನುದಾನಗಳನ್ನು ಬಾವಿಗಳ ನಿರ್ಮಾಣ ಮತ್ತು ಇತರ ಸ್ಥಳೀಯ ಉಪಯುಕ್ತ ಕೆಲಸಗಳು ಆದರೆ ಅವುಗಳ ಕಾರ್ಯಕ್ಕೆ ಯಾವುದೇ ಗುರುತರವಾದ ತತ್ವಗಳಿರಲಿಲ್ಲ. ೧೮೯೮ರಲ್ಲಿ ಈ ಫಂಡನ್ನು ದೊಡ್ಡ ಸೇತುವೆಗಳ ನಿರ್ಮಾಣಕ್ಕೆ ಮೀಸಲಾಗಿಡಬೇಕೆಂದು ಸರಕಾರವು ನಿರ್ದೇಶಿಸಿತು. ಕೈಗಾರಿಕಾ ಶಾಲೆಗಳು, ಇಂಜಿನಿಯರಿಂಗ್ ಶಾಲೆ ಮತ್ತು ಸ್ವದೇಶಿ ಆಸ್ಪತ್ರೆ ಸಿಬ್ಬಂದಿ ಮತ್ತು ದಸರಾ ವಸ್ತುಪ್ರದರ್ಶನ ಒಂದು ಭಾಗವನ್ನು ಕೂಡ ಲೋಕಲ್ ಫಂಡುಗಳು ಸಾಮಾನ್ಯ ನಿಧಿಯಿಂದ ಪಾವತಿಸಲಾಗುತ್ತಿತ್ತು. ೧೯೦೮ರಲ್ಲಿ ಈ ನಿಧಿಯಿಂದ ಅನುದಾನದ ಕ್ರಮಗೊಳಿಸುವಿಕೆಗೆ ನಿಯಮಗಳನ್ನು ಹೊರಡಿಸಲಾಯಿತು ಮತ್ತು ಅದರಿಂದ ಬಡ್ಜೆಟ್‌ಗಳ ತಯಾರಿಕೆಗೆ ನಿಯಮಗಳನ್ನು ಮಾಡಲಾಯಿತು. ಲೋಕೋಪಯೋಗಿ ಇಲಾಖೆಯಿಂದ ಕಾರ್ಯಗತಗೊಳಿಸುವ ಕೆಲಸಗಳಿಗೆ ಅನುದಾನವನ್ನು ೨೦,೦೦೦ ರೂ.ಗಳಿಗೆ ಮಿತಗೊಳಿಸಲಾಯಿತು. ಮತ್ತು ತುರ್ತು ಕೆಲಸಗಳನ್ನು ಕಾರ್ಯಗತಗೊಳಿಸಲು ಒಂದು ವಾರ್ಷಿಕ ಅವಕಾಶವನ್ನು ಅನೇಕ ಡಿಸ್ಟ್ರಿಕ್ಟ್ ಬೋರ್ಡ್‌ಗಳಿಗೆ ಅನುದಾನಗಳನ್ನು ೧೨,೦೦೦ ರೂ.ಗಳಿಗೆ ಮಿತಗೊಳಿಸಲಾಯಿತು. ರಾಜ್ಯದಲ್ಲಿನ ಕೈಗಾರಿಕಾ ಶಾಲೆಗಳ ಅಭಿವೃದ್ಧಿ ವಿಷಯದಲ್ಲಿ ಮತ್ತು ಮೈಸೂರಿನ ಇಂಜಿನಿಯರಿಂಗ್ ಶಾಲೆಯ ವಿಷಯದಲ್ಲಿ ಲೋಕಲ್ ಫಂಡ್ಸ್ ಜನರಲ್ ಲೆಕ್ಕದಲ್ಲಿ ವರ್ಷಕ್ಕೆ ೬೦,೦೦೦ ರೂ.ಗಳಿಗೆ

ನಿರ್ಬಂಧಿಸಲಾಯಿತು. ಸ್ಥಳೀಯ ಸ್ವಯಂ ಸರಕಾರದ ಅಭಿವೃದ್ಧಿಗೆ ಸಂಬಂಧಿಸಿದಂತೆ ೧೯೧೭ರ ಜುಲೈ ೧ ರಿಂದ ಲೋಕಲ್ ಫಂಡ್ಸ್ ಜನರಲ್ ಒಂದು ಪ್ರತ್ಯೇಕ ನಿಧಿಯಾಗಿರುವುದನ್ನು ರದ್ದುಪಡಿಸಲಾಯಿತು. ಮತ್ತು ಇಲ್ಲಿಂದೀಚೆಗೆ ಅಬಕಾರಿ ಮತ್ತು ಇತರ ಅಂಶಗಳ ಮೇಲಿನ ಸುಂಕದ ಶೇ. ೬೭ನ್ನು ಅದಕ್ಕೆ ಜಮಾ ಮಾಡಿದ್ದನ್ನು ಸಂಬಂಧಿತ ಡಿಸ್ಟ್ರಿಕ್ಟ್ ಫಂಡುಗಳಿಗೆ ಮತ್ತು ಕೋಲಾರದ ಚಿನ್ನದ ಗಣಿಗಳ ಸ್ಯಾನಿಟರಿ ಬೋರ್ಡು ನಿಧಿಗೆ ನಿಗದಿಪಡಿಸಲಾಯಿತು. ಕೈಗಾರಿಕಾ ಮತ್ತು ಇತರ ಶಾಲೆಗಳು, ಸ್ವದೇಶಿ ಆಸ್ಪತ್ರೆ ಮತ್ತು ಪಶುವೈದ್ಯ ಶಾಲೆಗಳು ಮತ್ತು ದಸರಾ ವಸ್ತುಪ್ರದರ್ಶನಗಳಿಗೆ ಇಲ್ಲಿಯವರೆಗೆ ವೆಚ್ಚವನ್ನು ಲೋಕಲ್ ಫಂಡ್ಸ್ ಜನರಲ್ ಖರ್ಚು ಹಾಕುತ್ತಿದ್ದು, ಈಗ ಅವನ್ನು ರಾಜ್ಯ ಫಂಡುಗಳಿಂದ ಭರಿಸಬೇಕು ಎಂದು ಆದೇಶಿಸಲಾಯಿತು. ೧೯೧೬-೧೭ನೇ ವರ್ಷದ ಅಂತ್ಯದಲ್ಲಿ ಲೋಕಲ್ ಫಂಡ್ಸ್ ಜನರಲ್ ಪರವಾಗಿದ್ದ ಎಲ್ಲವನ್ನೂ ಡಿಸ್ಟ್ರಿಕ್ ಫಂಡ್‌ಗಳು ಮತ್ತು ಕೋಲಾರ ಚಿನ್ನದ ಗಣಿ ಸ್ಯಾನಿಟರಿ ಬೋರ್ಡಿಗೆ ಜಮಾ ಮಾಡಲಾಯಿತು.

## ಡಿಸ್ಟ್ರಿಕ್ಟ್ ಫಂಡುಗಳ ಅಭಿವೃದ್ಧಿ :

ಅಲ್ಲದೆ ಭೂಕಂದಾಯದ ಸ್ಥಳೀಯ ಸುಂಕದ ಶೇ. ೭೬ ಭಾಗ, ಮತ್ತು ದೋಣಿಗಳಿಂದ ಬಂದ ಹಣ, ಬಿಡಿ ದನಗಳ ಮಾರಾಟ ಮತ್ತು ಜಾನುವಾರು ಅತಿಕ್ರಮಣಕ್ಕೆ ದಂಡ, ಮರಗಳ ಉತ್ಪನ್ನದ ಮಾರಾಟ, ಕಟ್ಟಡಗಳು, ಮಾರುಕಟ್ಟೆ ಮುಂತಾದವುಗಳ ಬಾಡಿಗೆಗಳು ಇವುಗಳನ್ನು ಡಿಸ್ಟ್ರಿಕ್ಟ್ ಫಂಡಿಗೆ ಜಮಾ ಮಾಡಲಾಗುತ್ತಿತ್ತು. ಪ್ರವಾಸಿಗರ ಬಂಗಲೆಗಳು ಮತ್ತು ಮುಸಾಫರ್‌ಖಾನಾಗಳಿಗೆ, ಗಡಿ ನಿಲುಗಡೆ ಸ್ಥಳ ಮತ್ತು ಮಾರುಕಟ್ಟೆಗಳಿಗೆ ಅನುಕೂಲ ಒದಗಿಸಲು ಮಾಡಲಾದ ವೆಚ್ಚದ ಭಾಗಶಃವನ್ನು ಭರ್ತಿ ಮಾಡಲು ಶುಲ್ಕಗಳನ್ನು ವಿಧಿಸಿ ಡಿಸ್ಟ್ರಿಕ್ಟ್ ಫಂಡುಗಳಿಗೆ ಜಮಾ ಮಾಡಲಾಗುತ್ತಿತ್ತು. ಡಿಸ್ಟ್ರಿಕ್ಟ್ ಫಂಡುಗಳಿಂದ ನಿರ್ವಹಿಸಲಾದ ರಸ್ತೆಗಳಿಂದ ಬಂದ ವರಮಾನವನ್ನು ೧೮೯೩-೯೪ರಲ್ಲಿ ಡಿಸ್ಟ್ರಿಕ್ಟ್ ಫಂಡುಗಳಿಗೆ ವಹಿಸಲಾಗುತ್ತಿತ್ತು. ಮತ್ತು ೧೮೮೫ ರಿಂದ ಇಡೀ ಸ್ಥಳೀಯ ಸುಂಕವನ್ನು ಕೂಡ ಅದಕ್ಕೆ ವಹಿಸಲಾಗುತ್ತಿತ್ತು. ೧೮೯೮ರ ಗ್ರಾಮ ನೈರ್ಮಲ್ಯ ನಿಬಂಧನೆಯಡಿಯಲ್ಲಿ ವಿಧಿಸಲಾದ ದಂಡಗಳು ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಮಾಡಲಾದ ಅಪರಾಧಗಳಿಗೆ ಮಾಡಲಾದ ನಿಯಮಗಳಿಂದ ಬಂದ ದಂಡವನ್ನು ಡಿಸ್ಟ್ರಿಕ್ಟ್ ಫಂಡುಗಳಿಗೆ ಜಮಾ ಮಾಡಲಾಗುತ್ತಿತ್ತು. ಲೈಸೆನ್ಸ್ ಶುಲ್ಕಗಳಿಂದ ಮತ್ತು ಒಕ್ಕೂಟಗಳ ಮನೆ ತೆರಿಗೆಯಿಂದಾದ ಸಂಗ್ರಹವು ಸ್ವಲ್ಪಮಟ್ಟಿಗೆ ಡಿಸ್ಟ್ರಿಕ್ಟ್ ಫಂಡಿನ ವರಮಾನವನ್ನು ಉತ್ತಮಪಡಿಸಿತು. ಒಕ್ಕೂಟಗಳಲ್ಲಿ ಖಾಲಿ ನಿವೇಶನಗಳು ಮತ್ತು ಹಿತ್ತಲುಗಳ ಮೇಲಿನ ತೆರಿಗೆಯನ್ನು ಡಿಸ್ಟ್ರಿಕ್ಟ್ ಫಂಡ್‌ಗಳಿಗೆ ವಹಿಸಿಕೊಡಲಾಗುತ್ತಿತ್ತು. ೧೯೦೯ಕ್ಕೆ ಮುಂಚೆ ಸ್ಥಳೀಯ ಸೆಸ್‌ನ ಮಾಫಿ ಮಾಡುವುದನ್ನು ತನ್ನಷ್ಟಕ್ಕೆ ತಾನೇ ಭೂಕಂದಾಯ ಮತ್ತು ಸೆಸ್ಸು ವಿಧಿಸಬಹುದಾದ ಇತರ ಅಂಶಗಳ ಜೊತೆಯಲ್ಲಿ ಮಂಜೂರು ಮಾಡಲಾಗುತ್ತಿತ್ತು. ಈ ಕಾರ್ಯ ವಿಧಾನವು ಸ್ಥಳೀಯ ಸಂಸ್ಥೆಗಳ ಸಂಪನ್ಮೂಲಗಳನ್ನು ಕಡಿಮೆಗೊಳಿಸುತ್ತಿದ್ದು, ಆಪತ್ಕಾಲದಲ್ಲಿ ಪರಿಹಾರ ಒದಗಿಸಬೇಕಾದಾಗ ತೊಂದರೆಯಾಗುತ್ತಿದ್ದುದರಿಂದ ಈ ಪದ್ಧತಿಯನ್ನು ಬದಲಾಯಿಸಲಾಯಿತು ಮತ್ತು ಸ್ಥಳೀಯ ಸುಂಕವನ್ನು ರವಾನಿಸಕೂಡದು, ಆದರೆ ವಿಶೇಷ ಸಂದರ್ಭಗಳಲ್ಲಿ ಮುಂದಕ್ಕೆ ಹಾಕಬಹುದೆಂದು ನಿಯಮ ಮಾಡಲಾಯಿತು. ೧೯೧೧-೧೨ರಲ್ಲಿ ಲೋಕಲ್ ಬೋರ್ಡುಗಳ ನಿಬಂಧನೆಯನ್ನು ತಿದ್ದುಪಡಿ ಮಾಡಲು ಕ್ರಮ ಕೈಗೊಳ್ಳಲಾಯಿತು. ಇದರಿಂದ ಜಿಲ್ಲಾ ಬೋರ್ಡುಗಳಿಗೆ ರೈಲ್ವೆ ಸುಂಕವನ್ನು ವಿಧಿಸಲು ಅಧಿಕಾರ ನೀಡಬಹುದಾಗಿದ್ದಿತು. ಪ್ರಸ್ತಾವಗಳು ಡಿಸ್ಟ್ರಿಕ್ಟ್ ಬೋರ್ಡುಗಳು ಡಿಬೆಂಚರ್ ಸಾಲಗಳನ್ನು ಎತ್ತಿದ ನಿಧಿಯಿಂದ ಶಾಖಾ ರೈಲ್ವೆಗಳನ್ನು ನಿರ್ಮಿಸುವುದಾಗಿದ್ದಿತು. ಬೋರ್ಡುಗಳು ತಮ್ಮ ಹಾಲಿ ಇರುವ ವರಮಾನಗಳಿಂದ ಬಡ್ಡಿಯ ಭರವಸೆ ಕೊಡುವ ಸ್ಥಿತಿಯಲ್ಲಿಲ್ಲದುದರಿಂದ ಸಾಲವನ್ನು ಎತ್ತುವುದಕ್ಕೆ ತುಂಬಾ ತೊಂದರೆಯನ್ನು ಎದುರಿಸಿದವು. ಸಾಮಾನ್ಯವಾದ ಸ್ಥಳೀಯ ಸುಂಕದ ಜೊತೆಗೆ ಬೋರ್ಡುಗಳು ಒಂದು ವಿಶೇಷ ಸುಂಕವನ್ನು ರೂಪಾಯಿಗೆ ಆರು ಪೈಸಾಗಳನ್ನು ಮೀರದಂತೆ ವಿಧಿಸಿ ಟ್ರಾಂವೇಗಳು ಮತ್ತು ರೈಲು ರಸ್ತೆ ನಿರ್ಮಾಣಕ್ಕೆ ಸಂಪೂರ್ಣವಾಗಿ ಉಪಯೋಗಿಸಬೇಕೆಂದು ೧೯೧೪ರ ನಿಬಂಧನೆಯನ್ನು ಕಾಯ್ದೆ ಮಾಡಲಾಯಿತು. ಮೇಲಿನ ನಿಬಂಧನೆಯಿಂದ ದತ್ತವಾದ ಅಧಿಕಾರಗಳನ್ನು ಚಲಾಯಿಸಲು ಮೊದಲನೆ ಸಲಕ್ಕೆ ರೈಲು ಸುಂಕವನ್ನು ೧೯೧೪-೧೫ರಲ್ಲಿ ಕೋಲಾರ ಜಿಲ್ಲೆಯಲ್ಲಿ ಜಾರಿ ಮಾಡಲಾಯಿತು ಮತ್ತು ಆ ವರ್ಷದಲ್ಲಿ ೪೭,೬೬೧ ರೂ. ವರಮಾನ ತಂದಿತು.

ಬೆಂಗಳೂರು ಮತ್ತು ಹಾಸನ ಜಿಲ್ಲಾ ಬೋರ್ಡುಗಳ ವಿನಹ ಎಲ್ಲಾ ಜಿಲ್ಲಾ ಬೋರ್ಡುಗಳು ರೈಲ್ವೆ ಸುಂಕವನ್ನು ವಿಧಿಸಿದವು. ಸ್ಥಳೀಯ ಬೋರ್ಡುಗಳ ನಿಬಂಧನೆ ಇನ್ನೂ ತಿದ್ದುಪಡಿ ಮಾಡಿ ಪಂಚಾಯಿತಿಗಳಿಗೆ ಮನೆಯ ಮೇಲಿನ ತೆರಿಗೆ ಜೊತೆಗೆ ಅಂಗಡಿ ತೆರಿಗೆಯನ್ನು ವಿಧಿಸಲು ಅಧಿಕಾರ ನೀಡಲಾಯಿತು. ಗ್ರಾಮೀಣ ಪ್ರದೇಶಗಳಲ್ಲಿ ಲೋಕಲ್ ಫಂಡ್‌ಗಳು ಸಾಮಾನ್ಯ ಮತ್ತು ಮೊಹತರ್ಫವಾಗುವ ಅಂಶಗಳನ್ನು ಡಿಸ್ಟ್ರಿಕ್ಟ್ ಫಂಡುಗಳಿಗೆ ನಿಗದಿಪಡಿಸಲಾಗಿದ್ದು, ೧೯೧೭ರ ಜುಲೈ ೧ ರಿಂದ ಸ್ಥಳೀಯ ಸ್ವಯಂ ಸರಕಾರದ ಅಭಿವೃದ್ಧಿಗಾಗಿದ್ದಿತು. ೧೯೧೮ರ ಲೋಕಲ್ ಬೋರ್ಡುಗಳು ಮತ್ತು ಗ್ರಾಮ ಪಂಚಾಯಿತಿಗಳ ನಿಬಂಧನೆ VI ಮೇಲೆ ನಮೂದಿಸಲಾಗಿರುವ ಎಲ್ಲಾ ತೆರಿಗೆಗಳು ಮತ್ತು ಶುಲ್ಕಗಳನ್ನು ವಿಧಿಸಲು ಅಧಿಕಾರ ನೀಡಿತು ಮತ್ತು ನಿರ್ದಿಷ್ಟಪಡಿಸಿದ ಉದ್ದೇಶಗಳಿಗೆ ಪಡೆಯಲಾದ ಸಾಲಗಳ ಮರುಪಾವತಿಗೆ ಭರವಸೆ ನೀಡಲು ಇವುಗಳ ಜೊತೆಗೆ ಒಂದು ವಿಶೇಷ ಸುಂಕವನ್ನು ಹಾಕಲು ಲೋಕಲ್ ಬೋರ್ಡುಗಳಿಗೆ ಅಧಿಕಾರ ನೀಡುತ್ತದೆ.

೧೯೧೯ರ ಜುಲೈ ೧ರಿಂದ ಎಲ್ಲಾ ಎಣ್ಣೆ ಗಿರಣಿಗಳ ತೆರಿಗೆಯನ್ನು ರದ್ದು ಮಾಡಲಾಯಿತು. ಮತ್ತು ಜಿಲ್ಲಾ ಬೋರ್ಡುಗಳ ಸಂಪನ್ಮೂಲಗಳನ್ನು ಉತ್ತಮಪಡಿಸುವುದಕ್ಕೆ ಮೊಹತರ್ಫ ನಿಯಮಗಳಡಿಯಲ್ಲಿ ಮಂಜೂರು ಮಾಡಿದ ವಿನಾಯಿತಿಗಳನ್ನು ನಿರ್ಬಂಧಪಡಿಸುವ ಸಾಧ್ಯತೆಯ ಬಗ್ಗೆ ಅವುಗಳಿಗೆ ಸಲಹೆ ಮಾಡಲಾಯಿತು. ೧೯೨೧ರ ನಿಬಂಧನೆಯಿಂದ ೧೯೧೮ರ ಮೈಸೂರು ಸ್ಥಳೀಯ ಬೋರ್ಡುಗಳು ಮತ್ತು ಗ್ರಾಮ ಪಂಚಾಯಿತಿಗಳ ನಿಬಂಧನೆಯನ್ನು ಇನ್ನೂ ತಿದ್ದುಪಡಿ ಮಾಡುವುದರಿಂದ ಶಿಕ್ಷಣಕ್ಕೆ ವಿಶೇಷವಾಗಿ ಉಲ್ಲೇಖಿಸಿದಂತೆ ಕೃಷಿ ಮತ್ತು ಕೈಗಾರಿಕೆ ಮತ್ತು ವಾಣಿಜ್ಯವನ್ನು ಜಿಲ್ಲಾ ಬೋರ್ಡುಗಳು ನಿಯಂತ್ರಿಸುವ ಅಥವಾ ಆಡಳಿತ ನಡೆಸುವ ಎಲ್ಲಾ ವಿಷಯಗಳೊಡನೆ ಜಿಲ್ಲೆಯ ಆರ್ಥಿಕ ಸ್ಥಿತಿಯ ಅಭಿವೃದ್ಧಿಗೆ ಸೇರಿಸಲಾಯಿತು. ಮತ್ತು ಶಿಕ್ಷಣದ ಉದ್ದೇಶಗಳಿಗೆ ಸಂಪೂರ್ಣವಾಗಿ ಉಪಯೋಗಿಸುವುದಕ್ಕೆ ಎಲ್ಲಾ ವರಮಾನದ ಅಂಶಗಳಿಗೆ ರೂಪಾಯಿಯಲ್ಲಿ ಒಂದಾಣೆಗೆ ಮೀರದಂತೆ ಶಿಕ್ಷಣದ ಸುಂಕವನ್ನು ವಿಧಿಸುವುದಕ್ಕೆ ಕೂಡ ಜಿಲ್ಲಾ ಬೋರ್ಡುಗಳಿಗೆ ಅಧಿಕಾರ ನೀಡಲಾಯಿತು. ಕೋಲಾರ, ಮೈಸೂರು ಮತ್ತು ಕಡೂರು ವಿನಃ ಎಲ್ಲಾ ಜಿಲ್ಲೆಗಳಲ್ಲಿ ಶಿಕ್ಷಣ ಸುಂಕವನ್ನು ವಿಧಿಸಲಾಯಿತು.

## ಪ್ರಸ್ತಾವಿಕ ಬದಲಾವಣೆಗಳು :

ಮೇಲೆ ಉಲ್ಲೇಖಿಸಿದ ಲೋಕಲ್ ಬೋರ್ಡ್‌ಗಳಿಗೆ ಸಂಬಂಧಿಸಿದಂತೆ ಸ್ಥಳೀಯ ಸ್ವಯಂ ಸರಕಾರದ ಠರಾವುಗಳಿಗೆ ಮಾಡಿದ ಸಾಮಾನ್ಯ ಆದೇಶವನ್ನು ಈ ಕೆಳಗಿನಂತೆ ಸಂಕ್ಷಿಪ್ತವಾಗಿ ಸಾರಾಂಶಗೊಳಿಸಬಹುದು.

**ಗ್ರಾಮ ಪಂಚಾಯತಿಗಳು** : ಗ್ರಾಮ ಅಭಿವೃದ್ಧಿ ಸಮಿತಿಗಳು ಈಗ ಹೆಚ್ಚಾಗಿ ಸತ್ತು ಹೋಗುವ ಸ್ಥಿತಿಯಲ್ಲಿದ್ದು, ಅದನ್ನು ರದ್ದುಪಡಿಸಲಾಗುತ್ತದೆ ಮತ್ತು ಪ್ರತಿಹಳ್ಳಿ ಅಥವಾ ಹಳ್ಳಿಗಳ ಗುಂಪಿಗೆ ಒಂದು ಪಂಚಾಯತಿಯನ್ನು ಶಾಸನ ರೀತ್ಯಾ ರಚಿಸಲಾಗುತ್ತದೆ. ಪ್ರತಿ ಪಂಚಾಯತಿಯು ಐಕ್ಕಿಂತ ಕಡಿಮೆ ಇಲ್ಲದೆ, ೧೨ ಜನರಿಗಿಂತ ಹೆಚ್ಚಿಲ್ಲದಂತೆ ಸದಸ್ಯರನ್ನೊಳಗೊಂಡಿರಬೇಕು. ಅದರಲ್ಲಿ ಅರ್ಧದಷ್ಟಾದರೂ ಚುನಾಯಿತರಾಗಿರಬೇಕು. ಪಂಚಾಯತಿಯ ರಚನೆಯನ್ನು ಹೀಗೆ ಸುವ್ಯವಸ್ಥೆಗೊಳಿಸಬೇಕೆಂದರೆ ಅನುಕೂಲವಾಗಿರುವೆಡೆಯಲ್ಲಿ ಅಥವಾ ಅಗತ್ಯವಾದೆಡೆಯಲ್ಲಿ ನಾಮಕರಣದಿಂದಲಾದರೂ ಹಳ್ಳಿಯ ಹಿರಿಯರು ಅದರಲ್ಲಿರುವಂತೆ ನೋಡಿಕೊಳ್ಳಬೇಕು. ಪಂಚಾಯತಿಯ ಅಧ್ಯಕ್ಷರನ್ನು ಪ್ರಾರಂಭದಲ್ಲಿ ಸರಕಾರವು ನಾಮಕರಣ ಮಾಡುತ್ತದೆ ಮತ್ತು ಪಂಚಾಯತಿಗಳು ಚೆನ್ನಾಗಿ ಸ್ಥಾಪಿತವಾಗಿ ತೃಪ್ತಿಕರವಾದ ಕೆಲಸವನ್ನು ತೋರಿಸಿದಾಗ ಚುನಾವಣೆಯ ಹಕ್ಕನ್ನು ಪರಿಗಣಿಸಲಾಗುತ್ತದೆ. ಮೊದಲನೆಯದರಲ್ಲಿ ಗ್ರಾಮ ನೈರ್ಮಲ್ಯ ಮತ್ತು ಸಂಪರ್ಕಗಳು ಮತ್ತು ಎರಡನೆಯದರಲ್ಲಿ ನಿವಾಸಿಗಳ ಆರೋಗ್ಯ, ಅನುಕೂಲ ಅಥವಾ ಸುಖಗಳನ್ನು ಉತ್ತಮಪಡಿಸುವ ಎಲ್ಲಾ ಇತರ ಕೆಲಸಗಳು ಗ್ರಾಮ ಕೋರ್ಟುಗಳು ಮತ್ತು ಕೆರೆ ಪಂಚಾಯಿತಿಗಳ ನಿಬಂಧನೆಗಳು ಮತ್ತು ಅರಣ್ಯ ಪಂಚಾಯಿತಿ ನಿಯಮಗಳನ್ನು ಆಯ್ದ ಪಂಚಾಯತಿಗಳಿಗೆ ಹೆಚ್ಚಿನ ಅಧಿಕಾರಗಳನ್ನು ಕೊಡುವುದಕ್ಕೆ ಅವಕಾಶವನ್ನು ಒದಗಿಸಲಾಗುತ್ತದೆ ಮತ್ತು ಪಂಚಾಯತಿಗಳಿಗೆ ಸರಕಾರದ ವಿವೇಚನೆಯ ಪ್ರಕಾರ ಮುಜರಾಯಿ ಸಂಸ್ಥೆಗಳ ನಿಯಂತ್ರಣ ಮತ್ತು ಗ್ರಾಮದ ಎಲಿಮೆಂಟರಿ ಶಾಲೆಗಳ ಮೇಲ್ವಿಚಾರಣೆಗೆ ಕೊಡುವುದಕ್ಕೂ ಕೂಡ ಅವಕಾಶ ಒದಗಿಸಲಾಗುತ್ತದೆ. ಪಂಚಾಯತಿಗಳು ದಕ್ಷವಾಗಿ ಕೆಲಸ ಮಾಡುವುದಕ್ಕೆ ಸಹಾಯಕವಾಗಿ ಮನೆಗಳು, ಅಂಗಡಿಗಳು, ಖಾಲಿ ನಿವೇಶನಗಳು ಮತ್ತು ಹಿತ್ತಲುಗಳು ತೆರಿಗೆಗಳನ್ನು ವಿಧಿಸಲು ಅಧಿಕಾರ ನೀಡಲಾಯಿತು.

ಆಗಿರುವ ಮೊಹತರ್ಫ ತೆರಿಗಗಳನ್ನು ರದ್ದುಪಡಿಸುವುದಾಗಿದ್ದಿತು. ಅವರ ಅಯ್ಕೆಯ ಪ್ರಕಾರ ಇತರ ತೆರಿಗೆಗಳು, ಸುಂಕಗಳು ಮತ್ತು ಶುಲ್ಕಗಳನ್ನು ತಮ್ಮ ಕಾರ್ಯಗಳನ್ನು ಸರಿಯಾಗಿ ನಡೆಸುವುದಕ್ಕೆ ವಿಧಿಸಬಹುದಾಗಿದ್ದಿತು. ಕೆಲಸ ಮಾಡುವುದರ ಬಗ್ಗೆ ನಿಕಟವಾದ ಮತ್ತು ದಕ್ಷ ಮೇಲ್ವಿಚಾರಣೆಯನ್ನು ಒದಗಿಸುವುದಕ್ಕೋಸ್ಕರ ಪಂಚಾಯತಿಗಳ ನಿಯಂತ್ರಣ, ತಪಾಸಣೆ ಮತ್ತು ಮೇಲ್ವಿಚಾರಣೆಯ ಅಧಿಕಾರಗಳನ್ನು ಅಮಲ್ದಾರರಿಗೆ ವಹಿಸಲಾಗಿದೆ. ಅವರು ಜಿಲ್ಲಾಧಿಕಾರಿಯ ಸಾಮಾನ್ಯ ಆದೇಶಗಳಿಗೆ ಒಳಪಟ್ಟಿರುತ್ತಾರೆ.

ಪಂಚಾಯತಿಯ ಆಡಳಿತವನ್ನು ದಕ್ಷವಾಗಿ ನಡೆಸಲು ಅಮಲ್ದಾರರಿಗೆ ಸಹಾಯಕವಾಗಿ ಪಂಚಾಯತಿಗಳ ಇನ್ಸ್‌ಪೆಕ್ಟರ್ ಒಬ್ಬರನ್ನು ತಾಲ್ಲೂಕಿಗೊಬ್ಬರಂತೆ ನೇಮಿಸಬಹುದು. ಮತ್ತು ಅವರ ಸಂಬಳ ಸಾರಿಗೆಗಳಿಗೆ ಪಂಚಾಯತಿಗಳು ವಂತಿಗೆ ನೀಡುವುದು ಅಗತ್ಯವಾಗುತ್ತದೆ. ಇನ್ಸ್‌ಪೆಕ್ಟರ್‌ರ ಒಂದು ಮುಖ್ಯವಾದ ಕಾರ್ಯವೆಂದರೆ ನೈರ್ಮಲ್ಯ ಮತ್ತು ಕಂದಾಯಗಳ ವಸೂಲಾತಿಯ ವಿಷಯಗಳಲ್ಲಿ ಪಂಚಾಯತಿಗೆ ಸಹಾಯ ಮಾಡುವುದು.

**ತಾಲ್ಲೂಕು ಬೋರ್ಡುಗಳು** : ಈ ಸಂಸ್ಥೆಗಳ ಬಗ್ಗೆ ಹೇಳುವುದಾದರೆ ಇವುಗಳನ್ನು ರದ್ದುಪಡಿಸುವುದು. ಏಕೆಂದರೆ ಎಲ್ಲಾ ಗ್ರಾಮೀಣ ಪ್ರದೇಶಗಳಲ್ಲಿ ಪಂಚಾಯತಿಗಳನ್ನು ರಚಿಸುವುದಾಗಿದ್ದು, ಅವುಗಳಿಗೆ ಅಗತ್ಯ ಅಂಶಗಳಾದ ನೈರ್ಮಲ್ಯ ಮತ್ತು ಸಂಪರ್ಕಗಳ ಮೇಲೆ ನಿಯಂತ್ರಣವಿರುವುದರಿಂದ ಈ ಬೋರ್ಡುಗಳ ನಿರ್ಬಂಧಿತ ವ್ಯಾಪ್ತಿಯು ಇನ್ನೂ ಕಡಿಮೆಯಾಗುವುದು ಮತ್ತು ಡಿಸ್ಟ್ರಿಕ್ಟ್ ಬೋರ್ಡುಗಳ ಕಡಿಮೆ ಹಣಕಾಸಿನಿಂದ ತಾಲ್ಲೂಕು ಬೋರ್ಡುಗಳನ್ನು ಸ್ವತಂತ್ರ ಸಂಸ್ಥೆಯಾಗಿ ಮುಂದುವರಿಸಲಾಗದುದರಿಂದ ಅವುಗಳನ್ನು ರದ್ದುಪಡಿಸಲಾಯಿತು.

**ಜಿಲ್ಲಾ ಬೋರ್ಡುಗಳು** : ಮಧ್ಯವರ್ತಿ ಏಜೆನ್ಸಿಯಾದ ತಾಲ್ಲೂಕು ಬೋರ್ಡುಗಳನ್ನು ತೆಗೆದುದರಿಂದ ಜಿಲ್ಲೆಗಳಲ್ಲಿ ಹೆಚ್ಚಿನ ಸ್ಥಳೀಯ ಹಿತಾಸಕ್ತಿಗಳನ್ನು ಅಭಿವೃದ್ಧಿಪಡಿಸಲು ಜಿಲ್ಲಾ ಬೋರ್ಡುಗಳಿಗೆ ಮುಕ್ತ ಅವಕಾಶ ದೊರೆಯಿತು. ಇದರಿಂದ ಅವುಗಳ ಹಣಕಾಸಿನ ಮೇಲೆ ಹೆಚ್ಚಿನ ನಿಯಂತ್ರಣವನ್ನು ಹೊಂದಬಹುದು ಮತ್ತು ಅವುಗಳ ಕೈಯಲ್ಲಿ ಹಣಕಾಸಿನ ಕೇಂದ್ರೀಕೃತವಾಗುವುದಾಗುತ್ತದೆ. ಜಿಲ್ಲಾ ಬೋರ್ಡುಗಳ ರಚನೆ ಮತ್ತು ಕಾರ್ಯಗಳ ಬಗ್ಗೆ ಸರಕಾರದ ತೀರ್ಮಾನಗಳು ಜಿಲ್ಲಾ, ತಾಲ್ಲೂಕು, ಅಂತರ-ತಾಲ್ಲೂಕು ಮತ್ತು ಅಂತರ-ಗ್ರಾಮ ಸೇವೆಗಳಾದ ಸಂಪರ್ಕ, ವೈದ್ಯಕೀಯ ಪರಿಹಾರ ಮತ್ತು ನೈರ್ಮಲ್ಯದ ಕಡೆಗೆ ಗಮನಕೊಡಲು ಅವುಗಳಿಗೆ ಹೆಚ್ಚಿನ ಅವಕಾಶ ಕೊಡುತ್ತದೆ. ಬೋರ್ಡುಗಳ ಕಾರ್ಯಗಳನ್ನು ದಕ್ಷವಾಗಿ ನಡೆಸಲು ಅಧ್ಯಕ್ಷರಿಗೆ ಸಹಾಯ ಮಾಡಲು ಚೀಫ್ ಆಫೀಸರ್‌ಗಳನ್ನು ನೇಮಿಸಲು ಅನುಮತಿಸುವುದು; ಅವುಗಳು ಸರಿಯಾದ ಕೆಲಸವನ್ನು ಮಾಡುತ್ತಿವೆಯೇ ಎಂದು ತಪಾಸಣೆ ಮಾಡಲು, ಬೋರ್ಡುಗಳ ಕಚೇರಿಗಳನ್ನು ತಪಾಸಣೆ ಮಾಡಲು ಮುಂತಾದವುಗಳಿಗೆ ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡುವುದು; ಜಿಲ್ಲಾ ಬೋರ್ಡುಗಳಲ್ಲಿ ಮುನಿಸಿಪಲ್ ಕೌನ್ಸಿಲ್‌ಗಳ ಪ್ರಾತಿನಿಧ್ಯವನ್ನು ತೆಗೆದುಹಾಕುವುದು ಮತ್ತು ಜಿಲ್ಲಾ ಬೋರ್ಡುಗಳ ಚುನಾವಣೆಯಲ್ಲಿ ಮತದಾನ ಮಾಡಲು ಮಹಿಳೆಯರಿಗೆ ಮತ ಚಲಾಯಿಸುವ ಹಕ್ಕನ್ನು ನೀಡುವುದು.

## ಜಿಲ್ಲಾ ಫಂಡುಗಳಿಂದ ವೆಚ್ಚದ ಅಂಶಗಳು :

ಜಿಲ್ಲಾ ನಿಧಿಗಳ ಸಂಪನ್ಮೂಲಗಳು ಸ್ಥಳೀಯ ಸುಂಕ ಮತ್ತು ಪಂಚಾಯಿತೇತರ ಪ್ರದೇಶಗಳಲ್ಲಿ ವಸೂಲು ಮಾಡಿದ ಮೊಹತರ್ಫವನ್ನು ಇವುಗಳಿಗೆ ಕೊಡುವುದು, ಸಾಮಾನ್ಯ ವರಮಾನದಿಂದ ಮೂಲತಃ ನಿರ್ಮಿಸಲಾದ ಜಿಲ್ಲಾ ರಸ್ತೆಗಳನ್ನು ಕಾಪಾಡುವುದಕ್ಕೆ ಅವುಗಳಿಗೆ ವರ್ಗಾಯಿಸಲಾಯಿತು.

ಪ್ರವಾಸಿಗರ ಬಂಗಲೆಗಳು, ಮುಸಾಫಿರ್‌ಖಾನೆಗಳು, ಆಸ್ಪತ್ರೆಗಳು ಮತ್ತು ಚಿಕಿತ್ಸಾಲಯಗಳ ನಿರ್ವಹಣೆಯೂ ಕೂಡ ಜಿಲ್ಲಾ ಫಂಡುಗಳ ಮೇಲೆ ಬಿದ್ದಿತು ಮತ್ತು ಸಾರ್ವಜನಿಕರ ಆರೋಗ್ಯ ಮತ್ತು ಅನುಕೂಲವನ್ನು ಹೆಚ್ಚಿಸಲು ಯೋಜಿಸಲಾದ ಎಲ್ಲಾ ಕಾರ್ಯಗಳನ್ನು ಡಿಸ್ಟ್ರಿಕ್ಟ್ ಫಂಡುಗಳು ನಡೆಸುತ್ತಿದ್ದವು. ಅಂದರೆ ಹಾಜರಿರುವ ವೈದ್ಯಾಧಿಕಾರಿಗಳ ಸಂಬಳ ಮತ್ತು ಯುರೋಪಿಯನ್ನರ ಔಷಧಿಗಳ ವೆಚ್ಚ ಇವುಗಳನ್ನು ಬಿಟ್ಟು ಸ್ಥಳೀಯ ಫಂಡಿನ ಚಿಕಿತ್ಸಾಲಯಗಳ ವಿಷಯದಲ್ಲಿ ವೆಚ್ಚವನ್ನು ಜಿಲ್ಲಾ ಫಂಡುಗಳಿಂದ ಪಾವತಿಸಲಾಗುತ್ತಿತ್ತು. ಆದರೆ ಮುನಿಸಿಪಲ್ ಸರಹದ್ದಿನೊಳಗಿರುವ ಆಸ್ಪತ್ರೆಗಳ ವಿಷಯದಲ್ಲಿ ಮುನಿಸಿಪಲ್ ನಿಧಿಗಳು ವೆಚ್ಚದ ಮೂರನೇ ಒಂದು ಭಾಗವನ್ನು

ಭರಿಸುತ್ತಿತ್ತು ಮತ್ತು ಉಳಿದವನ್ನು ಜಿಲ್ಲಾ ಫಂಡು ಪಾವತಿಸುತ್ತಿತ್ತು. ಮೆಡಿಕಲ್ ಸ್ಕೂಲುಗಳಲ್ಲಿದ್ದ ಸೂಲಗಿತ್ತಿಯರು ಮತ್ತು ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮತ್ತು ಕೇಂದ್ರ ಲೆಕ್ಕ ಪರಿಶೋಧನೆ ಮತ್ತು ಆಡಳಿತ ಕಚೇರಿಗಳಲ್ಲಿ ಇರುವ ಸಿಬ್ಬಂದಿಗಳ ವೆಚ್ಚವನ್ನು ಜಿಲ್ಲಾ ಫಂಡುಗಳಿಗೆ ಖರ್ಚು ಹಾಕಲಾಗುತ್ತಿತ್ತು. ಆದರೆ ಈ ವೆಚ್ಚಗಳನ್ನು ನಂತರ ಸಾಮಾನ್ಯ ವರಮಾನದಿಂದ ಭರಿಸುವಂತೆ ಆದೇಶವಾಯಿತು. ಸೂಲಗಿತ್ತಿಯರಿಗೆ ಸಾಮಾನ್ಯವಾಗಿ ಸಾಮಾನ್ಯ ಫಂಡಿನಿಂದ ಪಾವತಿಸಲಾಗುತ್ತಿತ್ತು. ಮುನಿಸಿಪಲ್ ಫಂಡುಗಳು ಅರ್ಧಭಾಗ, ಕೆಲವು ಸಂದರ್ಭಗಳಲ್ಲಿ ಮೂರನೇ ಒಂದು ಭಾಗವನ್ನು ಕೊಡುತ್ತಿತ್ತು. ೧೯೧೮ರ ನಿಬಂಧನೆ VI ರಂತೆ ಸ್ಥಳೀಯ ಬೋರ್ಡುಗಳು ತಮ್ಮ ವಿವೇಚನೆಯಿಂದ ಕೆಳಗಿನ ವೆಚ್ಚವನ್ನು ಭರಿಸಬಹುದು.

೧) ನೀರಾವರಿ ಮತ್ತು ಒಳಚರಂಡಿ ಕೆಲಸಗಳು.

೨) ಪ್ರದರ್ಶನ ಘಾರಂಗಳು.

೩) ಕೈಗಾರಿಕೆಗಳಿಗೆ ಪ್ರೋತ್ಸಾಹ.

೪) ಸಂಬಂಧಪಟ್ಟ ಜಿಲ್ಲೆಗಳಿಗೆ ಕೃಷಿ ಅಥವಾ ಆರ್ಥಿಕ ಅಭಿವೃದ್ಧಿಗೆ ಪ್ರಚೋದಿಸುವುದು.

ಇಲ್ಲಿಯವರೆಗೆ ರಾಜ್ಯದ ಬೊಕ್ಕಸದಿಂದ ಭರಿಸುತ್ತಿದ್ದ ಆರ್ಥಿಕ ಅಭಿವೃದ್ದಿಗೆ ಪ್ರಚೋದಿಸುವುದು, ದೇವಿ ಹಾಕಿಸುವ ವೆಚ್ಚವನ್ನು ೧೯೧೫ರ ಜುಲೈ ೧ರಿಂದ ಜಿಲ್ಲಾ ಫಂಡುಗಳಿಗೆ ಖರ್ಚು ಮಾಡಲಾಗುತ್ತಿದ್ದಿತು. ೧೯೨೩-೨೪ರ ವರ್ಷದಲ್ಲಿ ಡಿಸ್ಟ್ರಿಕ್ಟ್ ಫಂಡುಗಳ ವರಮಾನ ಮತ್ತು ವೆಚ್ಚವು ಕ್ರಮವಾಗಿ ರೂ. ೨೬,೮೦,೪೮೫ ಮತ್ತು ರೂ. ೨೪,೨೮,೬೩೪ ಆಗಿದ್ದಿತು.

## ಶೌಚಾಲಯ ಮತ್ತು ನೈರ್ಮಲ್ಯ :

ಮೊದಲಿಗೆ ಹಳ್ಳಿಗಳ ಶೌಚಾಲಯ ಮತ್ತು ನೈರ್ಮಲ್ಯಕ್ಕೆ ಡಿಸ್ಟ್ರಿಕ್ಟ್ ಫಂಡುಗಳಿಂದ ಬಹಳ ಕಡಿಮೆ ವೆಚ್ಚ ಮಾಡಲಾಗುತ್ತಿತ್ತು. ೧೮೯೧-೯೨ರಲ್ಲಿ ಸಣ್ಣ ಪ್ರಮಾಣದಲ್ಲಿ ಪ್ರಾರಂಭ ಮಾಡಲಾಯಿತು. ಆಗ ಕೆಲವು ಜಾಡಮಾಲಿಗಳನ್ನು ಕೆಲವು ದೊಡ್ಡ ಗ್ರಾಮಗಳಿಗೆ ನೇಮಕ ಮಾಡಲಾಯಿತು.

ಮುಂದಿನ ಕೆಲವು ವರ್ಷಗಳಲ್ಲಿ ಈ ಕ್ರಮವನ್ನು ಗಣನೀಯವಾಗಿ ಅಭಿವೃದ್ಧಿಪಡಿಸಲಾಯಿತು. ೧೮೯೮ರಲ್ಲಿ ಗ್ರಾಮ ನೈರ್ಮಲ್ಯ ನಿಬಂಧನೆ ಮತ್ತು ಅದರಡಿಯಲ್ಲಿನ ನಿಯಮಗಳನ್ನು ಘೋಷಿಸಿದುದು ಮತ್ತು ೧೯೦೪-೦೫ ರಿಂದ ಪಂಚಾಯಿತಿಗಳ ರಚನೆ ಈ ಶಿರೋನಾಮೆಯಡಿಯಲ್ಲಿನ ವೆಚ್ಚವು ಗಣನೀಯವಾಗಿ ಹೆಚ್ಚಿತು. ಸ್ಯಾನಿಟರಿ ಮತ್ತು ಸಹಾಯಕ ಸ್ಯಾನಿಟರಿ ನಿರೀಕ್ಷಕರನ್ನು ಕೂಡ ಹಳ್ಳಿಗಳ ನೈರ್ಮಲ್ಯ ನೋಡಿಕೊಳ್ಳಲು ನೇಮಿಸಲಾಯಿತು. ೨೫ ಮನೆಗಳಿಗಿಂತ ಜಾಸ್ತಿ ಇರುವ ಎಲ್ಲಾ ಹಳ್ಳಿಗಳು ಮತ್ತು ವಿಶೇಷವಾಗಿ ಮಲೆನಾಡು ಅಭಿವೃದ್ಧಿ ಯೋಜನೆಯಡಿಯಲ್ಲಿ ಬರುವ ಎಲ್ಲಾ ಹಳ್ಳಿಗಳು ಮತ್ತು ಜನಸಂದಣಿ ಇರುವ ಪಟ್ಟಣಗಳು ಮತ್ತು ಮುಖ್ಯವಾದ ರೈಲ್ವೆ ನಿಲ್ದಾಣಗಳಿಗೆ ಸಮೀಪವಿರುವ ಎಲ್ಲಾ ಹಳ್ಳಿಗಳಿಗೆ ಗ್ರಾಮ ನೈರ್ಮಲ್ಯ ನಿಯಮಗಳನ್ನು ಜಾರಿಗೊಳಿಸಲಾಯಿತು.

## ವರ್ಕ್ ಇನ್ಸ್‌ಪೆಕ್ಟರ್ ಮತ್ತು ಸ್ಯಾನಿಟರಿ ಇನ್ಸ್‌ಪೆಕ್ಟರ್‌ಗಳು :

೧೮೭೯ ರಿಂದ ಎಲ್ಲಾ ಡಿಸ್ಟ್ರಿಕ್ಟ್ ಫಂಡುಗಳ ಕಾರ್ಯಗಳನ್ನು ಲೋಕೋಪಯೋಗಿ ಇಲಾಖೆಯು ಮಾಡುತ್ತಿತ್ತು. ೧೮೯೧ರಲ್ಲಿ ಸಣ್ಣ ಕೆಲಸಗಳನ್ನು ತೃಪ್ತಿಕರವಾಗಿ ಮಾಡುತ್ತಿದ್ದ ಸಾಮಾನ್ಯ ಮೇಸ್ತ್ರಿ ಅಥವಾ ಕುಶಲಕರ್ಮಿಯನ್ನು ಕಂದಾಯ ಅಧಿಕಾರಿಗಳ ಪ್ರಭಾರಕ್ಕೆ ವರ್ಗಾಯಿಸಲಾಗುತ್ತಿತ್ತು; ಮಾಡಬೇಕಾದ ಸಣ್ಣ ಕೆಲಸಗಳ ಸಂಖ್ಯೆಯು ಕ್ರಮವಾಗಿ ಹೆಚ್ಚುತ್ತಾ ಹೋದಹಾಗೆ ಪ್ರತ್ಯೇಕ ವರ್ಕ್ ಇನ್ಸ್‌ಪೆಕ್ಟರ್‌ರ ನೇಮಕಾತಿಗೆ ಮಂಜೂರಾತಿ ಅಗತ್ಯವೆಂದು ಸರಕಾರಕ್ಕೆ ಕಂಡುಬಂದಿತು. ಈ ವರ್ಕ್ ಇನ್ಸ್‌ಪೆಕ್ಟರ್‌ಗಳನ್ನು ತರಬೇತಿ ಪಡೆದ ಸ್ಯಾನಿಟರಿ ಇನ್ಸ್‌ಪೆಕ್ಟರ್‌ಗಳ ಮತ್ತು ಸಹಾಯಕ ಸ್ಯಾನಿಟರಿ ಇನ್ಸ್‌ಪೆಕ್ಟರ್‌ಗಳಿಂದ ಬದಲಾಯಿಸಲಾಯಿತು. ಅವರಿಗೆ ಹಳ್ಳಿಗನ ಲೋಕೋಪಯೋಗಿ ಮತ್ತು ನೈರ್ಮಲ್ಯ ಕೆಲಸಗಳ ಮೇಲ್ವಿಚಾರಣೆಯನ್ನು ವಹಿಸಲಾಯಿತು. ಡಿಸ್ಟ್ರಿಕ್ಟ್ ಫಂಡುಗಳ ಹೆಚ್ಚಿನ ಭಾಗವನ್ನು ರಸ್ತೆಗಳ ರಿಪೇರಿ ಮತ್ತು ಇತರ ಮುಖ್ಯವಾದ ಲೋಕೋಪಯೋಗಿ ಕೆಲಸಗಳಿಗೆ ಲೋಕೋಪಯೋಗಿ ಇಲಾಖೆಯು ವೆಚ್ಚ ಮಾಡುತ್ತಿತ್ತು.

## ಡಿಸ್ಟ್ರಿಕ್ಟ್ ಫಂಡ್ ರೈಲ್ವೆಗಳು :

ಸರಕಾರದ ಗ್ಯಾರಂಟಿ ಮೇಲೆ ಕೋಲಾರ ಜಿಲ್ಲಾ ಬೋರ್ಡು ಸಾಲವನ್ನು ಎತ್ತಿತು. ಮತ್ತು ಬೌರಿಂಗ್‌ಪೇಟೆಯಿಂದ ಚಿಕ್ಕಬಳ್ಳಾಪುರದವರೆಗೆ ರೈಲ್ವೆ ಮಾರ್ಗ ನಿರ್ಮಾಣಕ್ಕೆ ಭಾಗಶಃ ಹಣ ಒದಗಿಸಿತು. ಜಿಲ್ಲಾ ಬೋರ್ಡು ಮತ್ತು ಸರಕಾರವು ಸಮಪಾಲುದಾರಿಕೆಯಲ್ಲಿ ಇದನ್ನು ಸ್ವಂತಗೊಳಿಸಿಕೊಂಡಿವೆ. ಮಾರ್ಗವನ್ನು ರಾಜ್ಯದ ರೈಲ್ವೆ ಇಲಾಖೆಯು ನಡೆಸುತ್ತಿದೆ. ಶಿವಮೊಗ್ಗ ಮತ್ತು ಚಿತ್ರದುರ್ಗ ರೈಲ್ವೆ ಬೋರ್ಡುಗಳು ಉಪ ರೈಲ್ವೆ ನಿರ್ಮಾಣಕ್ಕೆ ಸಾಲಗಳನ್ನು ಮಾಡಿದವು. ನಂಜನಗೂಡು, ಚಾಮರಾಜನಗರ ರೈಲ್ವೆಯ ನಿರ್ಮಾಣಕ್ಕೆ ಹಣ ಒದಗಿಸಲು ಡಿಬೆಂಚರುಗಳನ್ನು ಹೊರಡಿಸಿ ಈ ಸಾಲವನ್ನು ಜಯಪ್ರದವಾಗಿ ಪಡೆಯಲಾಯಿತು ಮತ್ತು ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಯಿತು.

## ಕೋಲಾರ ಚಿನ್ನದ ಗಣಿ ಸ್ಯಾನಿಟರಿ ಬೋರ್ಡು :

ಕೋಲಾರ ಚಿನ್ನದ ಗಣಿಯ ವಿಶೇಷ ನೈರ್ಮಲ್ಯಕ್ಕೆ ೧೮೯೯ರ ಸೆಪ್ಟೆಂಬರ್‌ನಲ್ಲಿ ನಿಯಮಗಳನ್ನು ಮಾಡಲಾಯಿತು. ಮತ್ತು ೧೮೯೯ರ ನವೆಂಬರ್ ೧೬ ರಂದು ಒಂದು ವಿಶೇಷ ಸ್ಥಳೀಯ ಬೋರ್ಡನ್ನು ರಚಿಸಲಾಯಿತು. ಈ ಬೋರ್ಡು ಕೋಲಾರ ಜಿಲ್ಲೆಯ ಲೋಕಲ್ ಫಂಡ್ ಬೋರ್ಡಿನಿಂದ ಬೇರೆಯಾಗಿ ಸ್ವತಂತ್ರವಾಗಿದ್ದಿತು. ಮತ್ತು ಈ ಬೋರ್ಡು ಆಡಳಿತ ನಡೆಸುತ್ತಿದ್ದ ಪ್ರದೇಶವನ್ನು ಕೋಲಾರದ ಲೋಕಲ್ ಫಂಡ್ ಬೋರ್ಡಿನಿಂದ ಪ್ರತ್ಯೇಕಿಸಲಾಯಿತು. ಈ ಸ್ಯಾನಿಟರಿ ಬೋರ್ಡು ಪ್ರಾರಂಭದಲ್ಲಿ ಏಳು ಸದಸ್ಯರನ್ನು ಹೊಂದಿತ್ತು ಮತ್ತು ಚಿನ್ನದ ಗಣಿಯ ವಿಶೇಷ ಮ್ಯಾಜಿಸ್ಟ್ರೇಟ್‌ರು ಅದರ ಅಧ್ಯಕ್ಷರಾಗಿದ್ದರು. ನಂತರ ೧೯೦೦ರಲ್ಲಿ ಜಿಲ್ಲಾಧಿಕಾರಿಯನ್ನು ಬೋರ್ಡಿನ ಸದಸ್ಯ ಮತ್ತು ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ವಿಶೇಷ ಮ್ಯಾಜಿಸ್ಟ್ರೇಟರನ್ನು ಉಪಾಧ್ಯಕ್ಷರನ್ನಾಗಿ ನೇಮಕ ಮಾಡಲಾಯಿತು. ಬೋರ್ಡಿನ ಸದಸ್ಯರ ಸಂಖ್ಯೆಯನ್ನು ಕ್ರಮವಾಗಿ ಏರಿಸಲಾಗಿದ್ದು, ೧೮ಕ್ಕೆ ಬಂದಿತು. ಅದರಲ್ಲಿ ಏಳು ಜನರು ಪದನಿಮಿತ್ತರು ಮತ್ತು ಹನ್ನೊಂದು ಅಧಿಕಾರೇತರ ಸದಸ್ಯರಾಗಿದ್ದು, ಅದರಲ್ಲಿ ಏಳು ಜನರನ್ನು ಮೈನಿಂಗ್ ಬೊರ್ಡು ನಾಮಕರಣ ಮಾಡಿ ಸರಕಾರವು ಅನುಮೋದಿಸುತ್ತಿತ್ತು. ಉಳಿದ ನಾಲ್ವರನ್ನು ತೆರಿಗೆ ಪಾವತಿದಾರರಿಂದ ಸರಕಾರವು ನೇಮಿಸುತ್ತಿತ್ತು.

ಈ ಬೋರ್ಡಿನ ಸ್ಥಾನವು ವಿಶಿಷ್ಟವಾದುದು. ಇದು ಕಾರ್ಪೊರೇಟ್ ಸಂಸ್ಥೆಯಲ್ಲ. ಆದರೆ ಸರಕಾರದಿಂದ ನೇಮಕವಾದ ಶಾಸನಬದ್ಧ ಸಮಿತಿ. ಆಡಳಿತ ಮತ್ತು ಪತ್ರವ್ಯವಹಾರದ ವಿಷಯದಲ್ಲಿ ಅದನ್ನು ಡಿಸ್ಟ್ರಿಕ್ಟ್ ಬೋರ್ಡಿನಂತೆ ಪರಿಗಣಿಸಲಾಗುತ್ತಿತ್ತು. ಇದರ ಅಧಿಕಾರಿಗಳನ್ನು ೧೯೦೬ರ ಗಣಿಗಳ ನಿಬಂಧನೆಯ ಉಪಬಂಧಗಳಿಂದ ಕ್ರಮಗೊಳಿಸಲಾಗುತ್ತಿತ್ತು. ಗಣಿಗಳಲ್ಲಿ ಕೆಲಸ ಮಾಡುತ್ತಿದ್ದ ಮೈನಿಂಗ್ ಕಂಪನಿಗಳ ಫೆಡರಲ್ ಸಮಿತಿಯಾದ ಮೈನಿಂಗ್ ಬೋರ್ಡು ಸ್ಯಾನಿಟರಿ ಬೋರ್ಡಿನ ಪ್ರಾತಿನಿಧ್ಯದಿಂದ ಪ್ರಬಲವಾಗಿದ್ದಿತು. ಕೋಲಾರ ಜಿಲ್ಲೆಯ ಜಿಲ್ಲಾಧಿಕಾರಿಯು ಬೋರ್ಡಿನ ಅಧ್ಯಕ್ಷರು ಮತ್ತು ಕೋಲಾರ ಚಿನ್ನದ ಗಣಿಯ ವಿಶೇಷ ಮ್ಯಾಜಿಸ್ಟ್ರೇಟ್ ಅನ್ನು ಉಪಾಧ್ಯಕ್ಷರನ್ನಾಗಿ ಸರಕಾರವು ನೇಮಿಸುತ್ತಿತ್ತು.

ಸ್ಯಾನಿಟರಿ ಬೋರ್ಡು, ತೆರಿಗೆಗಳು, ಶುಲ್ಕಗಳು ಅಥವಾ ಸುಂಕಗಳನ್ನು ಮುನಿಸಿಪಲ್ ನಿಬಂಧನೆಯಿಂದ ಅಧಿಕಾರ ಪಡೆದಿರುವಂತೆ ಅನೇಕ ರೀತಿಯಲ್ಲಿನ ವೆಚ್ಚಗಳನ್ನು ಭರಿಸುವುದಕ್ಕೆ ವಿಧಿಸಬಹುದು. ಪ್ರಾರಂಭದಲ್ಲಿ ಭೂಕಂದಾಯದ ಅಂಶಗಳ ಮೇಲೆ ಸ್ಥಳೀಯ ಸುಂಕ ಮತ್ತು ಮಂಡಳಿಯ ಅಧೀನದಲ್ಲಿರುವ ಸ್ಥಳೀಯ ಪ್ರದೇಶದ ಬಿಡಿ ದನ, ದೊಡ್ಡಿಗಳು, ಕಸಾಯಿ ಖಾನೆಗಳು ಮತ್ತು ಮಾರುಕಟ್ಟೆಗಳ ವರಮಾನವನ್ನು ಕೋಲಾರ ಜಿಲ್ಲಾ ಫಂಡ್ ಬೋರ್ಡಿನಿಂದ ಹಿಂತೆಗೆದು ಸ್ಯಾನಿಟರಿ ಬೋರ್ಡಿಗೆ ವಹಿಸಲಾಯಿತು. ಸ್ಯಾನಿಟರಿ ಬೋರ್ಡ್ ಪ್ರದೇಶದಲ್ಲಿ ವಿಧಿಸಲಾದ ಇಡೀ ಮೊಹತರ್ಫಾವನ್ನು ವಿಶೇಷವಾಗಿ ಸ್ಯಾನಿಟರಿ ಬೋರ್ಡಿಗೆ ವಹಿಸಲಾಯಿತು. ಬೋರ್ಡು ಒಂದು ಹೊರ ಮಾರುಕಟ್ಟೆಯನ್ನು ನಿರ್ಮಿಸಿತು. ಹಳ್ಳಿಗಳಲ್ಲಿ ಮಿತಿಮೀರಿ ಜನಸಂದಣಿಯಾಗುವುದನ್ನು ತಪ್ಪಿಸಲು ಕೂಲಿ ಕಾಲೋನಿಗಳನ್ನು ರಚಿಸಲಾಯಿತು. ಬೋರ್ಡಿನ ವರಮಾನವನ್ನು ಪ್ರಧಾನವಾಗಿ ಮನೆ ಮತ್ತು ಮೊಹತರ್ಫಾ ತೆರಿಗೆಗಳಿಂದ, ಮಾರುಕಟ್ಟೆಗಳು ಮತ್ತು ಕಸಾಯಿಖಾನೆಗಳ ಮೇಲೆ ಶುಲ್ಕಗಳು ಮತ್ತು ಕೂಲಿ ಕಾಲೋನಿಗಳಿಂದ ಬಾಡಿಗೆಗಳಿಂದ ಪಡೆಯಲಾಗುತ್ತಿತ್ತು.



## ೧೯೧೧ರ ನಿಬಂಧನೆ IX ಮತ್ತು ೧೯೮೧ರ ನಿಬಂಧನೆ VI :

೧೯೦೨ರ ಲೋಕಲ್ ಬೋರ್ಡುಗಳ ನಿಬಂಧನೆಯನ್ನು ೧೯೧೧ ನಿಬಂಧನೆ IX ರಂತೆ ತಿದ್ದುಪಡಿ ಮಾಡಲಾಯಿತು. ಇದರಿಂದ ಮಾರುಕಟ್ಟೆಗಳು, ಕಸಾಯಿಖಾನೆಗಳು, ಬಂಡಿ ನಿಲ್ದಾಣಗಳು, ಹೋಟೆಲುಗಳು, ಸ್ಮಶಾನಗಳು ಮುಂತಾದವುಗಳನ್ನು ಕ್ರಮಗೊಳಿಸುವುದಕ್ಕೆ ಮತ್ತು ರಸ್ತೆಗಳ ಮೇಲೆ ನಿರ್ವಹಿಸಲಾಗದ ಸಂಚಾರಗಳನ್ನು ನಿಯಂತ್ರಿಸಲು ಉಪನಿಯಮಗಳನ್ನು ರಚಿಸಲು ಜಿಲ್ಲಾ ಬೋರ್ಡುಗಳಿಗೆ ಅಧಿಕಾರ ನೀಡಲಾಯಿತು.

೧೯೧೬-೧೭ರಲ್ಲಿ ಜಿಲ್ಲಾ ಬೋರ್ಡುಗಳಿಗೆ ಉಪಾಧ್ಯಕರನ್ನು ಚುನಾಯಿಸುವುದಕ್ಕೆ ನಿಯಮಗಳನ್ನು ಮಾಡಲಾಯಿತು. ಸ್ಥಳೀಯ ಬೋರ್ಡುಗಳ ಬಗ್ಗೆ ಸ್ಥಳೀಯ ಸ್ವಯಂ ಸರಕಾರದ ಯೋಜನೆಯ ಮೇಲೆ ೧೯೧೬ರ ನವೆಂಬರಿನ ಸರಕಾರಿ ಆದೇಶವನ್ನು ಪರಿಣಾಮಕಾರಿಯಾಗಿ ಮಾಡಲು ಮತ್ತು ಹಾಲಿ ಇರುವ ಕಾನೂನನ್ನು ಕ್ರೋಢೀಕರಿಸಲು ೧೯೧೮ರ ಮೈಸೂರು ಸ್ಥಳೀಯ ಬೋರ್ಡುಗಳು ಮತ್ತು ಗ್ರಾಮ ಪಂಚಾಯತಿಗಳ ನಿಬಂಧನೆಯನ್ನು ೧೯೧೮ರ ಜೂನ್ ೨೫ ರಂದು ಅಂಗೀಕರಿಸಲಾಯಿತು.

ಎಲ್ಲಾ ಜಿಲ್ಲಾ ಮತ್ತು ತಾಲ್ಲೂಕು ಬೋರ್ಡುಗಳಲ್ಲಿ ಚುನಾಯಿತರ ಬಹುಮತವನ್ನು ಒದಗಿಸುವುದಕ್ಕೆ ಮತ್ತು ಜಿಲ್ಲಾ ಬೋರ್ಡಿನ ಸಾಮಾನ್ಯ ನಿಯಂತ್ರಣಕ್ಕೆ ಒಳಪಟ್ಟು ತಾಲ್ಲೂಕು ಬೋರ್ಡುಗಳಿಗೆ ಸ್ವತಂತ್ರ ಅಧಿಕಾರಗಳನ್ನು ಕೊಡುವುದಕ್ಕೆ ಮತ್ತು ತಾಲ್ಲೂಕು ಬೋರ್ಡುಗಳಿಗೆ ಇದು ಗ್ರಾಮ ಪಂಚಾಯತಿಗಳ ಸ್ಥಾಪನೆಗೆ ಕೂಡ ಅವಕಾಶ ಒದಗಿಸಿದ್ದು ಈ ಕೆಳಗಿನವುಗಳನ್ನು ಕೈಗೊಳ್ಳಲು ಅಧಿಕಾರ ನೀಡಲಾಯಿತು.

ಎ) ರಸ್ತೆಗಳು, ನೈರ್ಮಲ್ಯ, ನೀರು ಸರಬರಾಜು, ಒಳಚರಂಡಿಯ ಸಾಮಾನ್ಯವಾದ ನಿರ್ವಹಣೆ.

ಬಿ) ಗ್ರಾಮ ಅಭಿವೃದ್ಧಿ ಯೋಜನೆಯಲ್ಲಿ ನಮೂದಿಸಲಾದ ಅಭಿವೃದ್ಧಿ ಕಾರ್ಯಗಳು.

ಬಿ) ಶಿಕ್ಷಣ ಮತ್ತು ನೀರಾವರಿಗೆ ಸಂಬಂಧಿಸಿದ ಎಲ್ಲಾ ಇತರ ಸಾಮೂಹಿಕ ಕೆಲಸ. ಇಲ್ಲಿಯವರೆಗೆ ಜಿಲ್ಲಾ ಮತ್ತು ತಾಲ್ಲೂಕು ಪ್ರಗತಿ ಸಮಿತಿಗಳು ನೋಡಿಕೊಳ್ಳುತ್ತಿದ್ದ ಆರ್ಥಿಕ ಅಭಿವೃದ್ಧಿಗೆ ಸಂಬಂಧಿಸಿದ ಕಾರ್ಯವನ್ನು ೧೯೧೯-೨೦ರಲ್ಲಿ ಜಿಲ್ಲಾ ಮತ್ತು ತಾಲ್ಲೂಕು ಬೋರ್ಡುಗಳಿಗೆ ವರ್ಗಾಯಿಸಲಾಯಿತು ಮತ್ತು ೧೯೧೮ರ ಸ್ಥಳೀಯ ಬೋರ್ಡು ಮತ್ತು ಗ್ರಾಮ ಪಂಚಾಯತಿ ನಿಬಂಧನೆಯನ್ನು ಈ ಉದ್ದೇಶವನ್ನು ದೃಷ್ಟಿಯಲ್ಲಿಟ್ಟುಕೊಂಡು ಸೂಕ್ತವಾಗಿ ತಿದ್ದುಪಡಿ ಮಾಡಲಾಯಿತು.

ಮೈಸೂರು ಗಣಿಗಳ ನಿಬಂಧನೆಯಡಿಯಲ್ಲಿ ಗಣಿ ಪ್ರದೇಶದಲ್ಲಿ ವಿಶೇಷ ನೈರ್ಮಲ್ಯಕ್ಕೆ ರಚಿಸಲಾದ ಕೋಲಾರ ಚಿನ್ನದ ಗಣಿ ಸ್ಯಾನಿಟರಿ ಬೋರ್ಡು ಅಲ್ಲದೆ ೧೯೨೪-೨೫ರಲ್ಲಿ ೮ ಜಿಲ್ಲಾ ಬೋರ್ಡುಗಳು ಮತ್ತು ೭೬ ತಾಲ್ಲೂಕು ಬೋರ್ಡುಗಳು ಇದ್ದವು. ಸ್ಥಳೀಯ ಬೋರ್ಡುಗಳು ಮತ್ತು ಗ್ರಾಮ ಪಂಚಾಯತಿಗಳ ನಿಬಂಧನೆಯಡಿಯಲ್ಲಿ ರಚಿಸಲಾದ ಗ್ರಾಮ ಪಂಚಾಯತಿಗಳ ಸಂಖ್ಯೆ ೮೧೭ ಆಗಿದ್ದವು.

೧೯೨೩-೨೪ರ ಅಂತ್ಯದ ಹೊತ್ತಿಗೆ ೧೯೦೨ರ ಸ್ಥಳೀಯ ಬೋರ್ಡುಗಳ ನಿಬಂಧನೆ IIರಡಿಯಲ್ಲಿ ಸ್ಥಾಪಿಸಲಾದ ಒಕ್ಕೂಟದ ಪಂಚಾಯತಿಗಳ ಬದಲಾಗಿ ೮೧೬ ಗ್ರಾಮ ಪಂಚಾಯತಿಗಳಿದ್ದವು. ಅದು ನಿರ್ದಿಷ್ಟ ಶಾಸನಬದ್ಧ ಸಂಸ್ಥೆಗಳಾಗಿದ್ದು, ತೆರಿಗೆ ಹಾಕುವುದಕ್ಕೆ ಸ್ವತಂತ್ರ ಅಧಿಕಾರಗಳು ಮತ್ತು ತಮ್ಮದೇ ಆದ ಆಯವ್ಯಯವನ್ನು ಮಾಡಲು ಅಧಿಕಾರವಿದ್ದಿತು. ಜಿಲ್ಲಾ ಮತ್ತು ತಾಲ್ಲೂಕು ಬೋರ್ಡುಗಳ ಉಪಾಧ್ಯಕ್ಷರು ಸಾಧ್ಯವಾದಷ್ಟುಮಟ್ಟಿಗೆ ಚುನಾಯಿತರಾಗಿದ್ದರು. ಮತ್ತು ಅವರ ಕರ್ತವ್ಯಗಳನ್ನು ನಿಗದಿಪಡಿಸುವ ನಿಯಮಗಳನ್ನು ರಚಿಸಲಾಯಿತು.

ಮೇಲಿನ ಯಾವುದೇ ಉದ್ದೇಶಗಳಿಗೆ ಸುಂಕವನ್ನು ವಿಧಿಸಲು ಮತ್ತು ಸಂಬಂಧಪಟ್ಟ ವ್ಯಕ್ತಿಯ ಒಪ್ಪಿಗೆಯಿಂದ ಬದಲಿಸಲು ಅಂತಹ ಶುಲ್ಕವನ್ನು ಒಂದು ವರ್ಷಕ್ಕೆ ೧೫ ದಿನಗಳ ಕ್ರಮಕ್ಕೆ ಮೀರದಂತೆ ಶ್ರಮದ ವಂತಿಗೆಯಾಗಿ ಅಂತಹ ಶುಲ್ಕದ ಪಾವತಿಗೆ ಗ್ರಾಮ ಪಂಚಾಯತಿಗೆ ಅಧಿಕಾರ ನೀಡಲಾಗಿದೆ.

## ಗ್ರಾಮೀಣ ನೀರು ಸರಬರಾಜು :

ಕುಡಿಯುವ ನೀರಿನ ಬಾವಿಗಳನ್ನು ಅಗೆಯುವುದಕ್ಕೆ ಹಳ್ಳಿಗಳಲ್ಲಿ ಸೌಕರ್ಯವನ್ನು ಒದಗಿಸಲು ದೊಡ್ಡ ಅನುದಾನಗಳನ್ನು ೧೯೧೪-೧೫ರಿಂದ ಸರಕಾರವು ವಿಶೇಷವಾಗಿ ಮಾಡಿತು. ಗ್ರಾಮಸ್ಥರು ಸಾಮಾನ್ಯವಾಗಿ ವೆಚ್ಚದ ೧/೩ ಭಾಗವನ್ನು ನೀಡುತ್ತಾರೆ. ಆದರೆ ವಿಶೇಷ ಸಂದರ್ಭಗಳಲ್ಲಿ ಜನರ ಬಡತನದಿಂದಾಗಿ ಅಥವಾ ಇತರ ಸಾಕಷ್ಟು ಕಾರಣಕ್ಕಾಗಿ ಅಂದರೆ ಶೋಷಿತ ವರ್ಗಗಳ ಪ್ರಯೋಜನಕ್ಕಾಗಿ, ಇಡೀ ವಂತಿಗೆಯ ಹಣವನ್ನು ಪಡೆಯುವುದಕ್ಕಾಗದಿದ್ದಾಗ ಈ ನಿಯಮವನ್ನು ಸಡಿಲಿಸಲು ಜಿಲ್ಲಾ ಬೋರ್ಡುಗಳ ಅಧ್ಯಕ್ಷರುಗಳ ವಿವೇಚನೆಗೆ ಬಿಡಲಾಗಿದೆ. ಒಟ್ಟಾರೆ ನಿರ್ಮಿಸಲಾದ ಬಾವಿಗಳ ಸಂಖ್ಯೆಯು ೧೯೨೪-೨೫ರ ಅಂತ್ಯದವರೆಗೆ ೨೫೩೭ ಆಗಿದ್ದವು. ಈ ಅವಧಿಯವರೆಗೆ ಬಾವಿಗಳಿಗೆ ವೆಚ್ಚ ಮಾಡಲಾದ ಮೊಬಲಗು ೭,೪೪,೧೦೫ ರೂ.ಗಳಾಗಿದ್ದವು.




# ಸ್ಥಳೀಯ ಸಂಸ್ಥೆಗಳು ನಡೆದು ಬಂದ ದಾರಿ

ಬಿ. ಎಸ್. ಸತ್ಯನಾರಾಯಣ

ಸರಕಾರ ಮತ್ತು ಅದರ ಕಾರ್ಯಗಳನ್ನು ರಾಷ್ಟ್ರೀಯ, ಪ್ರಾಂತೀಯ ಅಥವಾ ರಾಜ್ಯ ಮತ್ತು ಸ್ಥಳೀಯ ಎಂದು ವರ್ಗೀಕರಿಸಬಹುದು. ಹಳ್ಳಿ, ಪಟ್ಟಣ ಅಥವಾ ನಗರದಂತಹ ಒಂದು ಸಮುದಾಯದ ಆಡಳಿತವು "ಸ್ಥಳೀಯ ನಿವಾಸಿಗಳಿಂದ ಪ್ರತಿನಿಧಿಸಲ್ಪಟ್ಟ ಒಂದು ಸಂಸ್ಥೆಯಾಗಿದ್ದು ಸಾಕಷ್ಟು ಸ್ವಾಯತ್ತತೆಯನ್ನು ಹೊಂದಿದ್ದು ಸ್ಥಳೀಯ ತೆರಿಗೆಗಳ ಮೂಲಕ ತನ್ನ ವರಮಾನದ ಒಂದು ಭಾಗವನ್ನಾದರೂ ಪಡೆದಿದ್ದು ಹಾಗೆ ಬಂದ ಉತ್ಪನ್ನವನ್ನು ಸ್ಥಳೀಯವೆಂದು ಕರೆಯಲ್ಪಡುವ ಸೇವೆಗಳಿಗೆ ಖರ್ಚುಮಾಡಲಾಗಿದ್ದು ಅದನ್ನು ಸ್ಥಳೀಯ ಸ್ವಯಂ ಸರಕಾರವೆಂದು ಕರೆಯಲಾಗುತ್ತಿತ್ತು. ಅಧಿಕಾರಗಳ ಕಾರ್ಯಗಳ ಮತ್ತು ಜವಾಬ್ದಾರಿಗಳ ವಿಕೇಂದ್ರೀಕರಣವು ಪ್ರಜಾಪ್ರಭುತ್ವದ ಒತ್ತಾಯ. ಈ ದೃಷ್ಟಿಯಿಂದ ಸ್ಥಳೀಯ ಸಂಸ್ಥೆಗಳು ಪ್ರಜಾಪ್ರಭುತ್ವದ ಅಗತ್ಯತೆಗಳನ್ನು ಸಾಕಷ್ಟು ಪೂರೈಸುತ್ತವೆ. ಅವುಗಳು ಸ್ವಯಂ ಸರಕಾರದ ಕಲೆಯಲ್ಲಿ ತರಬೇತಿಯನ್ನು ಕೂಡ ಒದಗಿಸುತ್ತವೆ. ಅವುಗಳನ್ನು ಇತರ ಮಟ್ಟಗಳಲ್ಲಿ ಸರಕಾರದ ವಿಸ್ತಾರವಾದ ವಿಷಯಗಳಲ್ಲಿ ಉಪಯೋಗಿಸಿಕೊಳ್ಳಲು ಪ್ರಯೋಜನವಾಗುತ್ತದೆ ಮತ್ತು ಅನುಕೂಲವಾಗುತ್ತದೆ." ಅಲ್ಲದೆ ಇವುಗಳನ್ನು "ಹಳ್ಳಿಗಳಲ್ಲಿ ವಾಸಮಾಡುತ್ತಿರುವ ಸಾಮಾನ್ಯ ಜನರಿಗೆ ರಾಜಕೀಯ ಅತ್ಯುತ್ತಮ ತರಬೇತಿ ಶಾಲೆಯಾಗುತ್ತವೆ ಮತ್ತು ಇವನ್ನು ಸಾಮಾಜಿಕ ಸೇವೆಯ ಶಾಲೆಯಾಗಿ ಪೋಷಿಸಬಹುದು ಹಾಗೂ ಸಾಮಾಜಿಕ ಪ್ರಗತಿಯ ಅತ್ಯಂತ ದಕ್ಷ ಅಂಶ"ವಾಗಿ ಪರಿಗಣಿಸಬಹುದು.

> *ಪುರಾತನ ಭಾರತದಲ್ಲಿ ಸರಕಾರವು ಕೇಂದ್ರೀಕೃತ ಚಕ್ರಾಧಿಪತ್ಯವಾಗಿದ್ದರೂ ಸ್ಥಳೀಯ ಸರಕಾರವು ಬಹಳವುಟ್ಟಿಗೆ ಚಾಲ್ತಿಯಲ್ಲಿದ್ದು ಭಾರತದಲ್ಲಿನ ಹಳ್ಳಿಗಳು ಸಣ್ಣ ಗಣರಾಜ್ಯಗಳಾಗಿದ್ದವು. ಎಲ್ಲ ಮುಖ್ಯವಾದ ಸ್ಥಳೀಯ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳನ್ನು ಚರ್ಚಿಸಲಾಗಿತ್ತು.*

ಭಾರತದಲ್ಲಿ ಬಹಳ ದೀರ್ಘವಾದ ಸ್ಥಳೀಯ ಸರಕಾರದ ಸಂಪ್ರದಾಯವಿದೆ. ಪುರಾತನ ಹಿಂದೂ ನಾಗರಕತೆಯ ಗಣನೀಯವಾದ ಅಂಶವೆಂದರೆ ಧರ್ಮ, ವಿದ್ಯೆ, ರಾಜನೀತಿ, ಪೌರನೀತಿ ಮತ್ತು ಅರ್ಥಶಾಸ್ತ್ರ ಮುಂತಾದಂತಹ ಜೀವನಕ್ಕೆ ಅನೇಕ ವಿಧವಾಗಿ ಸಂಬಂಧಪಟ್ಟಿರುವ ಗಣನೀಯ ಅಭಿವೃದ್ಧಿಯಾಗಿದೆ. ಇದರ ಒಂದು ಭಾಗವಾಗಿ, ರಾಷ್ಟ್ರಜೀವನದ ಗುರಿಗಳನ್ನು ಮುಟ್ಟಲು ಜನಾದರಣೀಯ ಆಧಾರದ ಮೇಲೆ ಅನೇಕ ಸಂಸ್ಥೆಗಳು ಅಭಿವೃದ್ಧಿಯಾದುವು. ಇವುಗಳಲ್ಲಿ ಸ್ಥಳೀಯ ಸರಕಾರವೂ ಒಂದಾಗಿದ್ದು, ಅದಕ್ಕೆ ನಮ್ಮ ದೇಶದಲ್ಲಿ ೪೦೦ ವರ್ಷಗಳ ಇತಿಹಾಸವಿದ್ದು ಬ್ರಿಟಿಷರು ಬರುವವರೆಗೆ ಪುರಾತನ ಮತ್ತು ಮಧ್ಯಯುಗದವರೆಗೆ ಎಲ್ಲಾ ರಾಜಕೀಯ ಬದಲಾವಣೆಗಳು ಮತ್ತು ಕ್ರಾಂತಿಗಳಿದ್ದರೂ ಬದುಕುಳಿದಿದ್ದು ನಿರಂತರತೆಯನ್ನು ಉಳಿಸಿಕೊಂಡಿವೆ. ಅಲ್ಲಿಂದೀಚೆಗೆ ಈ ಸಂಸ್ಥೆಗಳ ಮಾದರಿ

ಮತ್ತು ಕಾರ್ಯರೂಪದಲ್ಲಿ ಗಣನೀಯವಾದ ಬದಲಾವಣೆಗಳಾಗಿವೆ. ಹಾಗಾಗಿ ಮುಂಚಿನ ಅವಧಿಯ ಸಂಸ್ಥೆಗಳೊಂದಿಗೆ ಯಾವುದೇ ರೀತಿಯ ಹೋಲಿಕೆಯನ್ನು ಪಡೆದಿಲ್ಲ. ಮೊದಲಿನ ಮಾದರಿಯು ಬ್ರಿಟಿಷರ ಆಳ್ವಿಕೆಗಿಂತ ಹೆಚ್ಚು ಸೈಜ, ವ್ಯಾಪಕ ಮತ್ತು ಹೆಚ್ಚು ಜಯಪ್ರದವಾಗಿದ್ದವು. ಹರಪ್ಪ ಕಾಲದಿಂದ ಮಾಹಿತಿ ದೊರಕಿದ್ದು, ಆಗ ಸುವ್ಯಸ್ಥಿತವಾದ ಸಂಸ್ಥೆಗಳಿದ್ದವು.

ಪುರಾತನ ಭಾರತದಲ್ಲಿ ಸರಕಾರವು ಕೇಂದ್ರೀಕೃತ ಚಕ್ರಾಧಿಪತ್ಯವಾಗಿದ್ದರೂ ಸ್ಥಳೀಯ ಸರಕಾರವು ಬಹಳ ಮಟ್ಟಿಗೆ ಚಾಲ್ತಿಯಲ್ಲಿದ್ದು ಭಾರತದಲ್ಲಿನ ಹಳ್ಳಿಗಳು ಸಣ್ಣ ಗಣರಾಜ್ಯಗಳಾಗಿದ್ದವು. ಎಲ್ಲ ಮುಖ್ಯವಾದ ಸ್ಥಳೀಯ ಸಾಮಾಜಿಕ ಮತ್ತು ಆರ್ಥಿಕ ವಿಷಯಗಳನ್ನು ಪ್ರತಿಯೊಂದು ಹಳ್ಳಿ ಅಥವಾ ಪಟ್ಟಣದಲ್ಲಿನ ಕುಟುಂಬಗಳ ಮುಖ್ಯಸ್ಥರ ಸಭೆಯಲ್ಲಿ ಚರ್ಚಿಸಲಾಗುತ್ತಿದ್ದಿತು ಮತ್ತು ರಾಜ್ಯ ಸರಕಾರವೂ ಕೂಡ ಅಂತಹ ಕೂಟಗಳ ಅಥವಾ ಸಭೆಗಳ ಹಕ್ಕುಗಳು ಮತ್ತು ಗೌರವಗಳನ್ನು ರಕ್ಷಿಸುತ್ತಿತ್ತು. ಈ ಗ್ರಾಮಸಭೆಗಳ ಸಂಪ್ರದಾಯವು ಕರ್ನಾಟಕದಲ್ಲಿ ತುಂಬಾ ಪ್ರಬಲವಾಗಿದ್ದಿತು. ಈ ವಿಷಯದ ಮೇಲೆ ಕರ್ನಾಟಕದಲ್ಲಿನ ಶಾಸನಗಳು ಸಾಕಷ್ಟು ಮಾಹಿತಿಯನ್ನು ಒದಗಿಸುತ್ತವೆ. ಈ ಸ್ಥಳೀಯ ಸಭೆಗಳನ್ನು ಊರು, ಒಕ್ಕಲು, ಪ್ರಜೆ, ಸಮುದಾಯ, ಹಲರು ಅಥವಾ ಊರ ಹಲರು, ಸಮುದಾಯ, ಸಮಸ್ತರು, ಊರ ಹದಿನೆಂಟು ಜಾತಿ ಮುಂತಾಗಿ ಕರೆಯಲಾಗುತ್ತಿತ್ತು. ಪಟ್ಟಣಗಳು ಮತ್ತು ನಗರಗಳಲ್ಲಿ ವಿವಿಧ ಜಾತಿಗಳ ಗಿಲ್ಡುಗಳ ಮತ್ತು ಬೀದಿಗಳ ಪ್ರತಿನಿಧಿಗಳ ಸಭೆಗಳಿದ್ದವು.

ದೇವಸ್ಥಾನಗಳನ್ನು ನಿರ್ಮಿಸುವುದು ಮತ್ತು ಕಾಪಾಡುವುದು, ಹಬ್ಬಗಳನ್ನು, ಜಾತ್ರೆಗಳನ್ನು ವ್ಯವಸ್ಥೆಗೊಳಿಸುವುದು ಮತ್ತು ಛತ್ರಗಳು ಮತ್ತು ಅರವಟ್ಟಿಗೆಗಳನ್ನು ನಡೆಸುವುದು, ಸುಂಕಗಳನ್ನು ವಸೂಲು ಮಾಡುವುದು, ಸ್ತುತ್ಯರ್ಹವಾದ ಸೇವೆಗಳಿಗೆ ಪ್ರಶಸ್ತಿ ಪ್ರದಾನ ಮಾಡುವುದು, ದಾಳಿಗಳ ಸಮಯದಲ್ಲಿ ಗ್ರಾಮದ ರಕ್ಷಣೆಯಲ್ಲಿ ಮಡಿದವರಿಗಾಗಿ ವೀರಗಲ್ಲುಗಳನ್ನು ಸ್ಥಾಪಿಸುವುದು. ಜಮೀನುಗಳನ್ನು ದತ್ತಿ ಬಿಟ್ಟು ಅಂತಹ ಮರಣಹೊಂದಿದ ವೀರರ ಕುಟುಂಬಗಳನ್ನು ಕಾಪಾಡುವುದು ಮತ್ತು ವಿವಾದಗಳನ್ನು ಪರಿಹರಿಸುವುದು ಮುಂತಾದ ಕೆಲಸಗಳನ್ನು ಗ್ರಾಮಾಭಿವೃದ್ಧಿಯು ಸೇರಿದಂತೆ ಮಾಡುತ್ತಿದ್ದರು.

"ಭಾರತ ಜೀವಿಸಿರುವುದು ಅದರ ಹಳ್ಳಿಗಳಲ್ಲಿ" ಎಂದರು ಗಾಂಧೀಜಿ. ಹಳ್ಳಿಗಳು ಸುಧಾರಿಸಿದರೆ ರಾಷ್ಟ್ರದ ಪ್ರಗತಿಯಾದಂತೆ, ಇದಕ್ಕಾಗಿಯೇ ರಾಜ್ಯಾಡಳಿತದಲ್ಲಿ ಗ್ರಾಮಗಳ ಪ್ರತ್ಯೇಕ ಘಟಕಗಳಾಗಿ ಗ್ರಾಮಪಂಚಾಯತಿಗಳಾಗಿವೆ.

ಪಂಚಾಯತಿ ಬಹು ಪುರಾತನವಾದದ್ದು. ಪಂಚಾಯತಿ ಎಂದರೆ ಚುನಾಯಿತರಾದ ಐದು ಜನ ಹಳ್ಳಿಗರ ಸಭೆ ಎಂದರ್ಥ. ಆರ್ಯರು ತಾವು ನೆಲೆಸಿದ ಕಡೆಗಳಲ್ಲೆಲ್ಲ ದ್ರಾವಿಡರು ಅವರಿಗಿಂತಲೂ ಮೊದಲೇ ವಾಸಿಸಿದ್ದರೆ ಅವರ ರೀತಿಗಳೊಡನೆ ತಮ್ಮ ಹೊಸ ವಿಚಾರಗಳನ್ನು ಸೇರಿಸಿ ಕೆಲಸ ಮಾಡುತ್ತಿದ್ದರು. ಹಳ್ಳಿಯನ್ನು ಕಟ್ಟುವಗಾಲೇ ರಕ್ಷಣೋಪಾಯವನ್ನು ಸೇರಿಸಿ ಕಟ್ಟುತ್ತಿದ್ದರು. ಆಯಾಕಾರದಲ್ಲಿ ಆಯಾ ಕಾಲದಲ್ಲಿರುತ್ತಿದ್ದ ಹಳ್ಳಿಗೆ ಸುತ್ತ ಬಲವಾದ ಕೋಟೆ, ಇದಕ್ಕೆ ನಾಲ್ಕು ದೊಡ್ಡ ಬಾಗಿಲುಗಳೂ, ನಾಲ್ಕು ಸಣ್ಣ ಬಾಗಿಲುಗಳೂ ಇರುತ್ತಿದ್ದವು. ಬೀದಿ ಮತ್ತು ಮನೆಗಳು ವ್ಯವಸ್ಥಿತವಾಗಿದ್ದು ಹಳ್ಳಿಯ ಮಧ್ಯದಲ್ಲಿ ಪಂಚಾಯತಿ ಮನೆ ಇರುತ್ತಿತ್ತು. ಚಿಕ್ಕ ಹಳ್ಳಿಯಾದರೆ ದೊಡ್ಡ ಮರವೊಂದರ ಕೆಳಗೆ ಪಂಚಾಯತಿ ಸೇರುತ್ತಿತ್ತು. ಪಂಚಾಯತಿಯ ಅವಧಿ ಒಂದು ವರ್ಷ. ಹಳ್ಳಿಯ ವಯಸ್ಕರೆಲ್ಲ ಮತ ನೀಡುತ್ತಿದ್ದರು. ಇಂತಹ ಹಲವಾರು ಹಳ್ಳಿಗಳು ಸೇರಿ ಒಂದು ರಾಜ್ಯವಾಗಿ ಅದಕ್ಕೆ ರಾಜನೊಬ್ಬ ಇರುತ್ತಿದ್ದನು. ಪಂಚಾಯತಿಗೆ ಹಳ್ಳಿಯ ಸಮಸ್ತ ಜವಾಬ್ದಾರಿಯೂ ಸೇರಿತ್ತು. ಪಂಚಾಯತಿಯ ವ್ಯವಹಾರದಲ್ಲಿ ರಾಜ ಕೈಹಾಕುತ್ತಿರಲಿಲ್ಲ. ಹೀಗಾಗಿ ಪಂಚಾಯತಿಗೆ ಅಪರಿಮಿತ ಅಧಿಕಾರವಿತ್ತು. ಗ್ರಾಮ ಪಂಚಾಯತಿಯ ಮುಖ್ಯಸ್ಥ ಸರಪಂಚ, ಅವನೇ ಸಭೆಗೆ ಅಧ್ಯಕ್ಷ. ನ್ಯಾಯ ನಿರ್ಣಯ ಮಾಡುವ ಅಧಿಕಾರವೂ ಗ್ರಾಮ ಪಂಚಾಯತಿಗೆ ಇತ್ತು. ಪಾಟಲೀಪುತ್ರದಲ್ಲಿ ನ್ಯಾಯ ನಿರ್ಣಯ ಮಾಡುವಂತೆ ದೂರು ಸಲ್ಲಿಸಲು ಪಂಚಾಯತಿಗಳಿದ್ದುವು.

ಚೋಳರ ಕಾಲದಲ್ಲಿ ಹಳ್ಳಿಯಲ್ಲಿ ಸಂಘವಿರುತ್ತಿತ್ತು. ಒಂದೊಂದು ವಿಷಯಕ್ಕೂ ಬೇರೆಬೇರೆ ಸಮಿತಿಗಳಿರುತ್ತಿದ್ದುವು. ರೈತವರ್ಗದ ಅಭಿಪ್ರಾಯವನ್ನು ತಳ್ಳಿಹಾಕುವುದು ಸಾಧ್ಯವಿಲ್ಲದಿದ್ದರೂ ಕುಶಲರಾದ ಕೆಲವರ ಕೈಯಲ್ಲಿ ಅಧಿಕಾರ ಇರುತ್ತಿತ್ತು. ಪಂಚಾಯತಿಗಳು ಭೂಮಿ ಹಂಚುವುದು, ತೆರಿಗೆ ವಸೂಲು ಮಾಡುವುದು ಮತ್ತು ಹಳ್ಳಿಯ ಪರವಾಗಿ ರಾಜನಿಗೆ ಕರಕೊಡುವುದು ಮೊದಲಾದ ಕೆಲಸಗಳನ್ನು ನಿರ್ವಹಿಸುತ್ತಿದ್ದುವು. ಈ ಪಂಚಾಯತಿಯ ಮೇಲೆ ಹಳ್ಳಿಯಲ್ಲಿ ಮಹಾಸಭೆಯೊಂದಿದ್ದು ಇವರ ಕಾರ್ಯಗಳನ್ನು ಪರಿಶೀಲಿಸಿ ಅಗತ್ಯ ಬಿದ್ದಾಗ ಅದು ಪಂಚಾಯತಿಗೆ ಸಲಹೆ ಮಾಡುತ್ತಿದ್ದಿತು.

ದಕ್ಷಿಣ ಭಾರತದಲ್ಲಿ ದೊರೆತ ಹಳೆಯ ಶಾಸನಗಳಲ್ಲಿ ಪಂಚಾಯತಿಯ ಸದಸ್ಯರು ಹೇಗೆ ಚುನಾಯಿಸಲ್ಪಡುತ್ತಿದ್ದರು, ಅವರಿಗಿರಬೇಕಾದ ಗುಣಗಳೇನು ಎಂಬುದನ್ನೆಲ್ಲ ವಿವರಿಸಿದೆ. ಯಾರಾದರೊಬ್ಬ ಸದಸ್ಯ ಸಾರ್ವಜನಿಕ ನಿಧಿಯ ಲೆಕ್ಕವನ್ನು ಸರಿಯಾಗಿ ಕೊಡದಿದ್ದರೆ ಅಂಥವನನ್ನು ತೆಗೆದುಹಾಕುತ್ತಿದ್ದರು. ಸದಸ್ಯರ ಸಮೀಪದ ಬಂಧುಗಳು ಕಚೇರಿ ಕೆಲಸಕ್ಕೆ ಸೇರುವುದು ನಿಷೇಧಿಸಲ್ಪಟ್ಟಿತ್ತು. ಸದಸ್ಯರ ಪೈಕಿ ಹೆಂಗಸೊಬ್ಬಳ ಉಲ್ಲೇಖವೂ ಇವೆ. ಇಲ್ಲಿ ಪ್ರಜೆಗಳು ಯಾರಾದರೂ ಸದಸ್ಯರ ಬಗ್ಗೆ ದೂರಿತ್ತರೆ ರಾಜ ಪ್ರಜೆಯ ಪಕ್ಷ ವಹಿಸಬೇಕಲ್ಲದೆ, ಸದಸ್ಯನ ಪಕ್ಷವನ್ನಲ್ಲ. ಅನೇಕ ಜನರಿಂದ ದೂರು ಬಂದಾಗ ಅಂಥಾ ಅಧಿಕಾರಿಯನ್ನು ವಜಾಮಾಡುತ್ತಿದ್ದರು. ಬ್ರಿಟಿಷರ ಆಳ್ವಿಕೆಯಲ್ಲಿ ಪಂಚಾಯತಿಗಳು ಅಳಿದವು. ತೆರಿಗೆ ವಸೂಲು ಮಾಡುವ ಹಕ್ಕನ್ನು ಸರಕಾರವು ವಹಿಸಿಕೊಂಡಿತು.

ಗಾಂಧೀಜಿ ಸ್ವತಂತ್ರ ಭಾರತದಲ್ಲಿ ಪ್ರತಿ ಹಳ್ಳಿಗೂ ಪೂರ್ಣಾಧಿಕಾರವುಳ್ಳ ಪಂಚಾಯತಿ ಇರುಬೇಕೆನ್ನುತ್ತಿದ್ದರು. ಭಾರತದ ಸಂವಿಧಾನದ ಪ್ರಕಾರ ಎಲ್ಲ ರಾಜ್ಯಗಳಲ್ಲೂ ಹಳ್ಳಿಗಳಲ್ಲಿ ಪಂಚಾಯತಿ ಇರಬೇಕು. ಸಮರ್ಪಕವಾಗಿ ಆಡಳಿತ ನಡೆಯುವಂತೆ ಅಧಿಕಾರ ಕೊಡಬೇಕು.

ಹಳ್ಳಿಯ ಎಲ್ಲ ವಯಸ್ಕರೂ ಪಂಚಾಯತಿ ಚುನಾವಣೆಯಲ್ಲಿ ಮತ ಕೊಡಬಹುದು. ಗ್ರಾಮೀಣ ಕೈಗಾರಿಕೆಗಳು, ವ್ಯವಸಾಯ ಉತ್ಪನ್ನಗಳು, ವೈದ್ಯಕೀಯ ನೆರವು, ಹಳ್ಳಿಯ ರಸ್ತೆಗಳನ್ನು ಸಮರ್ಪಕವಾಗಿಡುವುದು, ಗ್ರಾಮ ನೈರ್ಮಲ್ಯ ಮತ್ತು ಗೋಮಾಳದ ನಿರ್ವಹಣೆ ಇವುಗಳಿಗೆ ಪಂಚಾಯತಿಯೇ ಹೊಣೆ.

ಸರಕಾರಗಳು ಪಂಚಾಯತಿ ಸದಸ್ಯರಿಗೆ ಶಿಕ್ಷಣ ಕೊಡಲು ಯೋಜನೆ ರೂಪಿಸಿದೆ. ಅಖಿಲ ಭಾರತ ಪಂಚಾಯತಿ ಪರಿಷತ್ತಿನ ಆಶ್ರಯದಲ್ಲಿ ಶಿಕ್ಷಣ ನಡೆಯುತ್ತದೆ. ಶಿಕ್ಷಣದ ಅವಧಿ ಮೂರು ತಿಂಗಳು. ಗ್ರಾಮ ಪಂಚಾಯತಿಗಳು ಜನತಾ ಸಂಸ್ಥೆಗಳು. ಗ್ರಾಮದ ಶಿಸ್ತು, ಶಾಂತಿ, ಸಾಮೂಹಿಕ ಅವಶ್ಯಕತೆಗಳ ಪೂರೈಕೆ ಅವುಗಳ ಕೆಲಸ. ಜನತೆಯ ಸಹಕಾರದಿಂದ ಗ್ರಾಮ ಪಂಚಾಯತಿಗಳ ಆಡಳಿತ ನಡೆಯುತ್ತದೆ.

ಪ್ರಜಾಪ್ರಭುತ್ವ ಭಾರತೀಯರಿಗೆ ಹೊಸದೇನೂ ಅಲ್ಲ. ಗ್ರಾಮವು ರಾಷ್ಟ್ರದ ಮೂಲ ಘಟಕವಾಗಿರುವಂತೆಯೇ ಗ್ರಾಮಪಂಚಾಯತಿ ಪ್ರಜಾಪ್ರಭುತ್ವದ ತಳಹದಿ. ಹಿಂದಿನಿಂದಲೂ ಗ್ರಾಮಗಳಲ್ಲಿ ಪಂಚಾಯತಿಯ ಸ್ಥಾನ ಪ್ರಮುಖವಾದದ್ದು. ಜನತೆಯ ನಾನಾ ವರ್ಗಗಳವರಿಗೆ ಇದರಲ್ಲಿ ಪ್ರಾತಿನಿಧ್ಯ ಇರುತ್ತಿತ್ತು. ಅನೇಕ ವೃತ್ತಿಯ ಜನರು ಪಂಚಾಯತಿಯಲ್ಲಿರುತ್ತಿದ್ದರು. ಇಡೀ ಗ್ರಾಮದ ಜನರು ಇವರನ್ನು ಆರಿಸುತ್ತಿದ್ದರು. ಕಂದಾಯ ವಸೂಲಿ, ವ್ಯಾಜ್ಯಗಳ ತೀರ್ಮಾನ, ತಪ್ಪಿತಸ್ಥರಿಗೆ ದಂಡ ವಿಧಿಸುವುದು, ಹಳ್ಳಿಯ ಕೆರೆ ಕಾಲುವೆ, ಹುಲ್ಲುಗಾವಲು, ದೇವಾಲಯ, ಗೋಪುರಗಳು ಇವುಗಳ ಮೇಲ್ವಿಚಾರಣೆ ಪಂಚಾಯತಿಗೆ ಸೇರಿತ್ತು.

ಈಗ್ಗೆ ಒಂದು ಸಾವಿರ ವರ್ಷಗಳ ಹಿಂದೆ ಗ್ರಾಮ ಪಂಚಾಯತಿಗಳಿಗೆ ಚುನಾವಣೆ ಹೇಗೆ ನಡೆಯುತ್ತಿತ್ತು? ಪಂಚಾಯತಿಯ ಸದಸ್ಯರಾಗಬಯಸುವವರಿಗೆ ಇರಬೇಕಾದ ಅರ್ಹತೆಗಳೇನು? ಎಂಥವರು ಪಂಚಾಯತಿಗಳ ಸದಸ್ಯರಾಗಲು ಅನರ್ಹರು? ಮುಂತಾದ ವಿವರಗಳು ಶಾಸನಗಳಲ್ಲಿ ನಮಗೆ ದೊರಕಿದೆ. ಪ್ರಜಾಪ್ರಭುತ್ವ ತತ್ವಕ್ಕೆ ಅನುಗುಣವಾಗಿ ಸ್ಥಾನಿಕ ಆಡಳಿತ ಪದ್ಧತಿ ದಕ್ಷಿಣ ದೇಶದಲ್ಲೂ ಪರಿಷ್ಕಾರಗೊಂಡಿತ್ತು. ಕ್ರಿ.ಶ. ೧೦ನೆಯ ಶತಮಾನದಲ್ಲಿ ಪರಾಂತಕನ ಆಳ್ವಿಕೆ, ಆಗ ಉತ್ತರ ಮೇರೂರು ಅಗ್ರಹಾರದ ಸ್ಥಾನಿಕ ಆಡಳಿತ ವೈಖರಿ ಈ ರೀತಿಯಾಗಿತ್ತು.

ಉಮೇದುವಾರರು ತಮ್ಮ ಚೇರಿಗಳಲ್ಲಿ ಪ್ರಚಾರ ನಡೆಸಿ ಮತ ಕೋರುತ್ತಿದ್ದರು. ಚುನಾವಣೆಯ ದಿನ ದೇವಸ್ಥಾನದ ಮಂಟಪದಲ್ಲಿ ಜನರೆಲ್ಲ ನೆರೆಯುತ್ತಿದ್ದರು. ಪ್ರತಿಯೊಂದು ಚೇರಿಗಾಗಿ ಪ್ರತ್ಯೇಕ ಪ್ರತ್ಯೇಕವಾಗಿ ಮುದ್ರೆ ಹಾಕಿ ಮುಚ್ಚಿದ್ದು "ಕುಡು ವೋಲೈ" ಎಂಬ ಕೊಡಗಳಿರುತ್ತಿದ್ದವು. ಮತದಾರರು ಓಲೆಯಲ್ಲಿ ತಮಗಿಷ್ಟವಾದ ಹೆಸರುಗಳನ್ನು ಬರೆದು ತಮ್ಮ ಚೇರಿಯ ಕುಡು ವೋಲೈಯಲ್ಲಿ ಹಾಕುತ್ತಿದ್ದರು. ಮತದಾನ ಆದ ಮೇಲೆ ಮಧ್ಯಸ್ಥನು ಒಂದೊಂದಾಗಿ ಕೊಡಗಳನ್ನು ಎತ್ತಿ ಒಬ್ಬ ವೃದ್ಧನ ಕೈಗೆ ಕೊಡುತ್ತಿದ್ದನು. ಆ ವೃದ್ಧನು ಕೊಡದ ಮುದ್ರೆಯನ್ನು ಎಲ್ಲರಿಗೂ ತೋರಿಸಿ ಕೊಡವನ್ನು ಚೆನ್ನಾಗಿ ಕುಲುಕುತ್ತಿದ್ದ. ಅನಂತರ ಮುಚ್ಚಳವನ್ನು ತೆರೆದು ಒಂದು ಮಗುವಿನ ಕೈಯಿಂದ ಒಂದು ಓಲೆಯನ್ನು ತೆಗೆಸುತ್ತಿದ್ದ. ಮಧ್ಯಸ್ಥನು ಆ ಓಲೆಯನ್ನೆತ್ತಿಕೊಂಡು ಅದರಲ್ಲಿರುವ ಹೆಸರನ್ನು ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಓದುತ್ತಿದ್ದ. ಅವನ ಸುತ್ತಮುತ್ತಲಿನ ಜನರೂ ಅದನ್ನು ಓದುತ್ತಿದ್ದರು. ಹೀಗೆ ೩೦ ಚೇರಿಗಳಿಗೆ ೩೦ ಜನರ ಆಯ್ಕೆ ನಡೆಯುತ್ತಿತ್ತು. ಅದರಲ್ಲಿ ಹನ್ನೆರಡು ಜನರನ್ನು ಸಂವತ್ಸರವಾರಿಯಕ್ಕೂ (ವಾರ್ಷಿಕ ಸಮಿತಿ), ಹನ್ನೆರಡು ಜನರನ್ನು ತೋಟಕ್ಕೆ (ತೋಟಗಾರಿಕೆ

ಸಮಿತಿ), ಆದು ಜನರನ್ನು ಏರುವಾರಿಯಮ್ಮ (ಕೆರೆಸಮಿತಿ) ನೇಮಿಸುತ್ತಿದ್ದರು. ಮಿಕ್ಕ ಹೆಸರುಗಳಿಂದ ಭಂಡಾರಿಗ, ಕರಣಿಕ ಮತ್ತಿತರ ಅಧಿಕಾರಿಗಳನ್ನು ಚುನಾಯಿಸುತ್ತಿದ್ದರು. ವರ್ಷದಲ್ಲಿ ಈ ಸಮಿತಿಗಳ ಅಧಿಕಾರಾವಧಿ ೩೬೦ ದಿನ. ಉಳಿದ ೫ ದಿನ ಲೆಕ್ಕಗಳ ತಪಾಸಣೆ.

ಈ ಬಗೆಯ ಸ್ಥಾನಿಕ ಆಡಳಿತ ಪದ್ಧತಿ ಆಂಗ್ಲರು ಈ ದೇಶದಲ್ಲಿ ನೆಲೆಯೂರುವವರೆಗೆ ೧೯ನೆಯ ಶತಮಾನದವರೆಗೆ ರೂಢಿಯಲ್ಲಿತ್ತು.

ಕರ್ನಾಟಕದ ಇತಿಹಾಸದ ಆಧುನಿಕ ಕಾಲವು ಬ್ರಿಟಿಷರು ತಮ್ಮ ಎದುರಾಳಿಯಾದ ಟಿಪ್ಪುವನ್ನು ಸೋಲಿಸಿ ಮೈಸೂರನ್ನು ಗೆದ್ದ ಗಳಿಗೆಯಿಂದ ಮೊದಲಾಗುತ್ತದೆ ಎನ್ನಬೇಕು. ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಹೈದರಾಲಿಯೂ ಟಿಪ್ಪು ಸುಲ್ತಾನನೂ ದಕ್ಷಿಣ ಭಾರತದಲ್ಲಿ ಬ್ರಿಟಿಷರ ಪ್ರಭಾವವನ್ನು ತಡೆಯಲು ಪ್ರತಿಭಟನೆ ತೋರಿದ ಗಂಡುಗಲಿಗಳು. ಆದರೆ ಬ್ರಿಟಿಷರು ಯುದ್ಧ ತಂತ್ರದಲ್ಲಿ ಅಜೇಯರಾಗಿ ಇದ್ದುದರಿಂದ ಹೈದರನನ್ನು ಅವರು ಕಾಳಗದಲ್ಲಿ ಸೋಲಿಸಿ ಅವರ ವಿರೋಧವನ್ನು ಅಡಗಿಸಿದರು. ಹೈದರನ ಮಗ ಅತಿಶಯ ಸ್ವಾತಂತ್ರ್ಯ ಪ್ರೇಮಿ. ಆದರೂ ತಂದೆ ವಿಫಲವಾದ ಕಡೆ ಮಗನು ಯಶಸ್ಸನ್ನು ಕಾಣಲಾರದೆ ಹೋದನು. ರಾಯಭಾರ ತಂತ್ರದಲ್ಲಿ ಪರಿಣತನಾಗದೆ ಇದ್ದುದು ಟಿಪ್ಪುವಿನ ಸೋಲಿಗೆ ಮುಖ್ಯ ಕಾರಣವಾಯಿತು. ಟಿಪ್ಪು ಸುಲ್ತಾನನ ಅಂತ್ಯದ ಬಳಿಕ ಮೈಸೂರು ಸೈನ್ಯವು ಒಳಗೆ ಮತ್ತು ಹೊರಗೆ ಹಲವಾರು ಯುದ್ಧಗಳಲ್ಲಿ ವ್ಯಸ್ತವಾಗಬೇಕಾಯಿತು. ಹಾಗಾಗಿ ರಾಜ್ಯಾಡಳಿತ ಸುಸೂತ್ರವಾಗಿ ಆಗಲಿಲ್ಲ ಮತ್ತು ಆಗಾಗ ಬ್ರಿಟಿಷರ ಹಸ್ತಕ್ಷೇಪವೂ ಇತ್ತು. ಅಲ್ಲದೆ ಚಾಮರಾಜೇಂದ್ರ ಒಡೆಯರ್ ಅವರ ಆಡಳಿತಾವಧಿಯು ಮೈಸೂರು ಸಂಸ್ಥಾನದಲ್ಲಿ ಒಂದು ಬಹುಮುಖ್ಯ ಸಂಧಿ ಘಟ್ಟ. ಸಾಮಾಜಿಕವಾಗಿ ಹೊಸಕಾಲಕ್ಕೆ ಪರಿವರ್ತನೆಯಾಗುತ್ತಿದ್ದರೆ, ರಾಜಕೀಯವಾಗಿ ಪ್ರಜಾಪ್ರತಿನಿಧಿ ಸಭೆ ಭಾರತದ ಉಪಖಂಡದಲ್ಲೇ ಮೊಟ್ಟಮೊದಲ ಬಾರಿಗೆಂಬಂತೆ ಮೈಸೂರಿನಲ್ಲಿ ರಚನೆಯಾಯಿತು.

## ಹಳೆಯ ಮೈಸೂರು ರಾಜ್ಯ :

ಭಾರತದಲ್ಲಿನ ರಾಜರುಗಳ ಸಂಸ್ಥಾನಗಳಲ್ಲಿ ಮೈಸೂರು ಮತ್ತು ತಿರುವಾಂಕೂರು ಕೊಚ್ಚಿಗಳಲ್ಲಿ ಮಾತ್ರ ಮುನಿಸಿಪಲ್ ಸರಕಾರಗಳು ಉದಾರವಾದ ಮುನಿಸಿಪಲ್ ಕಾಯ್ದೆಗಳಿಂದ ತುಂಬಾ ಪ್ರಗತಿಯನ್ನು ಸಾಧಿಸಿದ್ದವು. ೧೮೬೨ರಷ್ಟು ಮುಂಚೆಯೇ ಬೆಂಗಳೂರು ಮತ್ತು ಮೈಸೂರುಗಳಲ್ಲಿ ೧೮೫೦ರ ಭಾರತ ಸರಕಾರದ ಕಾಯ್ದೆ XXVI ರ ಮಾದರಿಯಲ್ಲಿ ಮುನಿಸಿಪಲ್ ಸಮಿತಿಗಳನ್ನು ಪ್ರಯೋಗಿಸಲಾಯಿತು. ಈ ಪ್ರಯೋಗದಿಂದ ಉತ್ತೇಜನಗೊಂಡು ೧೮೬೪-೬೫ರ ಹೊತ್ತಿಗೆ ಪ್ರತಿಯೊಂದು ಜಿಲ್ಲಾ ಕೇಂದ್ರಗಳಲ್ಲಿ ಮುನಿಸಿಪಲ್ ಸಮಿತಿಗಳು ಅಸ್ತಿತ್ವಕ್ಕೆ ಬಂದವು. ಇವರ ಮುಖ್ಯ ಉದ್ದೇಶವೆಂದರೆ ಸ್ಥಳೀಯ ವಿಷಯಗಳಲ್ಲಿ ಸ್ಥಳೀಯ ನಿವಾಸಿಗಳ ಸಹಕಾರವನ್ನು ಪಡೆಯುವುದಾಗಿತ್ತು. ಪ್ರಭಾವಿತ ನಿವಾಸಿಗಳನ್ನೊಳಗೊಂಡ, ಕ್ರಮವಾಗಿ ವ್ಯವಸ್ಥೆಗೊಳಿಸಿದ ಮಂಡಲಗಳಿದ್ದವು. ಇನ್ನೂ ಸಣ್ಣ ಪಟ್ಟಣಗಳಲ್ಲಿ ಅವುಗಳನ್ನು ಕಂದಾಯ ಅಧಿಕಾರಿಗಳು ನಿರ್ವಹಿಸುತ್ತಿದ್ದರು. ೧೮೭೨ -೭೩ರ ಹೊತ್ತಿಗೆ ಹಳೆ ಮೈಸೂರು ರಾಜ್ಯದಲ್ಲಿ ಮುನಿಸಿಪಾಲಿಟಿಗಳ ಸಂಖ್ಯೆ ೫೮ ಆಗಿದ್ದಿತು.

ದಿವಾನ್ ರಂಗಾಚಾರ್ಲು ಮತ್ತು ಶೇಷಾದ್ರಿ ಅಯ್ಯರ್ ಅವರುಗಳು ೧೮೮೨ -೮೩ರಷ್ಟು ಮುಂಚೆಯೇ ಸ್ಥಳೀಯ ವಿಷಯಗಳಲ್ಲಿ ಸ್ವಯಂ ಸರಕಾರವನ್ನು ವಿಸ್ತರಿಸುವುದರ ಅಗತ್ಯವನ್ನು ಅರಿತುಕೊಂಡಿದ್ದರು. ಅದೇ ಪ್ರಕಾರ ಕರಡು ಸ್ಥಳೀಯ ಮಂಡಳಿಗಳ ಬೋರ್ಡುಗಳ ನಿಬಂಧನೆಗಳು- ಅಂದರೆ ಮೈಸೂರು ಸ್ಥಳೀಯ ಮಂಡಳಿಗಳ ನಿಬಂಧನೆ ೧೯೦೨ ಅನ್ನು ೧೮೮೩ರಲ್ಲಿ ತಯಾರಿಸಿ ೧೮೮೫ರಲ್ಲಿ ಭಾರತ ಸರಕಾರಕ್ಕೆ ಮಂಜೂರಾತಿಗೆ ಕಳುಹಿಸಲಾಯಿತು. ಅದು ೧೯೦೨ರಲ್ಲಿ ಮಾತ್ರವೇ ಅಂಗೀಕಾರವಾಯಿತು ಮತ್ತು ಅಗತ್ಯವಾದ ನಿಯಮಗಳನ್ನು ೧೯೦೩ರಲ್ಲಿ ಹೊರಡಿಸಲಾಯಿತು. ಈ ನಿಯಮದ ಪ್ರಕಾರ ಜಿಲ್ಲೆಗೆ ಒಂದರಂತೆ ಎಂಟು ಜಿಲ್ಲೆಗಳಲ್ಲಿ ೮ ಜಿಲ್ಲಾ ಮಂಡಳಿಗಳು (ಆಗ ಮಂಡ್ಯ ಜಿಲ್ಲೆ ರೂಪಿತವಾಗಿರಲಿಲ್ಲ) ೭೭ತಾಲ್ಲೂಕು ಬೋರ್ಡುಗಳು ಮತ್ತು ೩೮ ಸಂಘಗಳನ್ನು ರಚಿಸಲಾಯಿತು. ೩,೦೦೦ಕ್ಕಿಂತ ಕಡಿಮೆಯಿರುವ ಜನಸಂಖ್ಯೆಯ ಮೊದಲಿನ ಚಿಕ್ಕ ಮುನಿಸಿಪಾಲಿಟಿಗಳನ್ನು ಸಂಘಗಳಾಗಿ ಬದಲಾಯಿಸಲಾಯಿತು. ಈ ಸಂಘದ ಅಧ್ಯಕ್ಷರನ್ನು ಜಿಲ್ಲಾಧಿಕಾರಿಗಳ ಶಿಫಾರಸಿನ ಮೇಲೆ ಸರಕಾರವು ನೇಮಿಸುತ್ತಿತ್ತು. ತಾಲ್ಲೂಕು ಬೋರ್ಡಿನಲ್ಲಿ ಸರಕಾರವು ನಾಮಕರಣ ಮಾಡಿದ ೧೨ ಸದಸ್ಯರಿರುತ್ತಿದ್ದರು ಮತ್ತು ತಾಲ್ಲೂಕು ಮುಖ್ಯಸ್ಥಳದ ಮುನಿಸಿಪಲ್ ಬೋರ್ಡಿನಿಂದ ಒಬ್ಬ ಸದಸ್ಯನನ್ನು ಇದರ ಸದಸ್ಯನನ್ನಾಗಿ ಆಯ್ಕೆ ಮಾಡಲಾಗುತ್ತಿತ್ತು. ೧೯೦೬ರ ಮುನಿಸಿಪಲ್ ಕಾಯ್ದೆ VII ಅನೇಕ ಮುನಿಸಿಪಾಲಿಟಿಗಳನ್ನು ಅಸ್ತಿತ್ವಕ್ಕೆ ತಂದಿತು. ಆದರೆ ಚುನಾಯಿತರಾದ ಜನಪ್ರಿಯ ಅಂಶಗಳ ಕೊರತೆ ಮತ್ತು ಅವರ ಹಣಕಾಸಿನ ಬಗ್ಗೆ ನ್ಯಾಯಯುತವಾದ ನಿಯಂತ್ರಣದ ಕೊರತೆಯು ನ್ಯಾಯಯುತ ಪಾತ್ರನಿರ್ವಹಿಸುವುದರಲ್ಲಿ ವಿಫಲತೆಗೆ ಕಾರಣವಾದವು.

ಈ ಕೊರತೆಗಳನ್ನು ಸರಿಪಡಿಸಲು ಮೈಸೂರು ಸರಕಾರವು ೧೯೧೪ರಲ್ಲಿ ಎರಡು ಸಮಿತಿಗಳನ್ನು ರಚಿಸಿತು. ೧) ಸ್ಥಳೀಯ ಸ್ವಯಂ ಸರಕಾರ ಸಮಿತಿ-ಅದರ ಅಧ್ಯಕ್ಷರು ಎಂ. ಕಾಂತರಾಜ ಅರಸು ಆಗಿದ್ದರು. ೨) ಸ್ಥಳೀಯ ಹಣಕಾಸು ಸಮಿತಿ-ಇದರ ಅಧ್ಯಕ್ಷರು ದಿವಾನ್ ಬಹದ್ದೂರ್ ಸಿ. ಶ್ರೀನಿವಾಸ ಐಯ್ಯಂಗಾರರು ಆಗಿದ್ದರು. ಇವುಗಳನ್ನು ರಚಿಸಿದುದೇಕೆಂದರೆ ಸ್ಥಳೀಯ ಸಂಸ್ಥೆಗಳು ಪರಿಣಾಮಕಾರಿ ಪಾತ್ರವಹಿಸಲು ಸಹಾಯವಾಗುವಂತೆ ಅವುಗಳ ಸಂವಿಧಾನ ಮತ್ತು ಅಧಿಕಾರವನ್ನು ಉದಾರೀಕರಣಗೊಳಿಸುವ ಬಗೆಯನ್ನು ನೋಡಬೇಕಾಗಿದ್ದಿತು. ಸಮಿತಿಗಳು ಎಲ್ಲಾ ಮಂಡಳಿಗಳಲ್ಲಿ ಚುನಾಯಿತ ಬಹುಮತವಿರಬೇಕು ಮತ್ತು ತಾಲ್ಲೂಕು ಬೋರ್ಡುಗಳಿಗೆ ಸ್ವತಂತ್ರ ಅಧಿಕಾರಗಳನ್ನು ನೀಡಬೇಕು ಎಂದು ಶಿಫಾರಸು ಮಾಡಿದವು. ಈ ಎರಡು ವರದಿಗಳ ಆಧಾರದ ಮೇಲೆ ೧೯೧೬ರಲ್ಲಿ ಆದೇಶಗಳನ್ನು ಹೊರಡಿಸಲಾಯಿತು. ೧೯೦೬ರ ಮುನಿಸಿಪಲ್ ನಿಬಂಧನೆಗಳನ್ನು ತಿದ್ದುಪಡಿಗೊಳಿಸಲು ಒಂದು ಹೊಸ ಮಸೂದೆಯನ್ನು ೧೯೧೭ರ ಜೂನ್ ೨೯ರಂದು ರಾಜ್ಯದ ವಿಧಾನ ಪರಿಷತ್ತಿನಲ್ಲಿ ಮಂಡಿಸಲಾಯಿತು. ೧೯೧೮ರ ಸ್ಥಳೀಯ ಬೋರ್ಡುಗಳು ಮತ್ತು ಗ್ರಾಮ ಪಂಚಾಯಿತಿಗಳ ಕಾಯ್ದೆ VI ಮತ್ತು ಅದರ ಜೊತೆಯಲ್ಲಿ ಒಟ್ಟಾರೆ ಸ್ಥಳೀಯ ಬೋರ್ಡುಗಳಿಗೆ ಸಂಬಂಧಿಸಿದಂತೆ ಕಾನೂನನ್ನು ಪುನರ್ ರಚಿಸಲಾಗಿದ್ದು, ಹೆಚ್ಚಿನ ಅಧಿಕಾರಗಳೊಂದಿಗೆ ಗ್ರಾಮ ಪಂಚಾಯತಿಗಳ ಸ್ಥಾಪನೆಗೆ ಒದಗಿಸಿದೆ. ಹಾಗಾಗಿ ಗ್ರಾಮೀಣ ಪ್ರದೇಶಗಳಿಗೆ ಪ್ರತ್ಯೇಕವಾಗಿ ಮೊದಲನೆ ಸಲ ಸ್ವಯಂ ಆಳುವ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಅದು ಒಂದು ಗಣನೀಯವಾದ ಹೆಜ್ಜೆ. ೧೯೧೮ರ ಕಾಯ್ದೆಗೆ ಸಂಬಂಧಿಸಿದಂತೆ ತಾಲ್ಲೂಕು ಮತ್ತು ಜಿಲ್ಲಾ ಬೋರ್ಡುಗಳಲ್ಲಿ ಮುಖ್ಯವಾದ ಹಿತಾಸಕ್ತಿಗಳು ಮತ್ತು ಸಮುದಾಯಗಳಿಗೆ ಪ್ರಾತಿನಿಧ್ಯ ಒದಗಿಸಲು ನಿಯಮಗಳನ್ನು ಮಾಡಲಾಯಿತು. ಪಟ್ಟಣ ಮತ್ತು ಸಣ್ಣ ಮುನಿಸಿಪಲ್ ಕೌನ್ಸಿಲ್‌ಗಳು ತಮ್ಮದೇ ಆದ ಉಪಾಧ್ಯಕ್ಷರನ್ನು ಚುನಾಯಿಸಲು ಅವಕಾಶ ನೀಡಲಾಯಿತು. ತಾಲ್ಲೂಕು ಮತ್ತು ಜಿಲ್ಲಾ ಸಮಿತಿಗಳು ನಿರ್ವಹಿಸುತ್ತಿದ್ದ ಅಭಿವೃದ್ಧಿ ಕಾರ್ಯಗಳನ್ನು ೧೯೨೦ರಲ್ಲಿ ತಾಲ್ಲೂಕು ಮತ್ತು ಜಿಲ್ಲಾ ಬೋರ್ಡುಗಳಿಗೆ ವರ್ಗಾಯಿಸಲಾಯಿತು. ಈ ಮಂಡಳಿಗಳ ಒತ್ತಾಯಪೂರ್ವಕ ಕಾರ್ಯವಾಗಿರುವಂತೆ ಅಭಿವೃದ್ಧಿ ಕಾರ್ಯವನ್ನು ಮಾಡಲು ನಿಯಮಗಳನ್ನು ಸೂಕ್ತವಾಗಿ ತಿದ್ದುಪಡಿ ಮಾಡಲಾಯಿತು. ಬೆಂಗಳೂರು ಜಿಲ್ಲಾ ಬೋರ್ಡಿಗೆ ಅಧ್ಯಕ್ಷರನ್ನು ಚುನಾಯಿಸುವ ಹಕ್ಕು ಮತ್ತು ಕೋಲಾರ ಮತ್ತು ಹಾಸನದ ಜಿಲ್ಲಾ ಬೋರ್ಡುಗಳ ಅಧ್ಯಕ್ಷರಾಗಿ ಅಧಿಕಾರೇತರರನ್ನು ನೇಮಕ ಮಾಡುವುದನ್ನು ಮಂಜೂರು ಮಾಡಲಾಯಿತು. ನಗರ ಮತ್ತು ಪಟ್ಟಣ ಮುನಿಸಿಪಾಲಿಟಿಗಳಿಗೆ ಚುನಾಯಿತ ಅಧ್ಯಕ್ಷರುಗಳನ್ನು ಹೊಂದಿರುವ ತತ್ವವನ್ನು ಒಪ್ಪಿಕೊಳ್ಳಲಾಯಿತು ಮತ್ತು ಜಿಲ್ಲಾಧಿಕಾರಿಗಳು ಅವುಗಳ ಅಧ್ಯಕ್ಷರಾಗಿರುವುದು ನಿಂತು ಹೋಯಿತು. ಕ್ರಮೇಣವಾಗಿ ಅಧಿಕಾರವನ್ನು ವಿಕೇಂದ್ರೀಕರಣಗೊಳಿಸುವ ಬ್ರಿಟಿಷರ ಅಖಿಲ ಭಾರತ ನೀತಿಯಿಂದ ಮತ್ತು ೧೯೧೯ರ ಭಾರತ ಸರಕಾರದ ಕಾಯ್ದೆಯ ಉಪಬಂಧಗಳ ಪ್ರಕಾರ ಸರಕಾರದ ನಿಯಂತ್ರಣವನ್ನು ಇನ್ನೂ ಸಡಿಲಗೊಳಿಸಲಾಯಿತು ಮತ್ತು ಕೆಲವು ಆಯ್ದ ಸಮಿತಿಗಳಿಗೆ ಪ್ರಾಥಮಿಕ ಶಿಕ್ಷಣವನ್ನು ನಿಯಂತ್ರಿಸುವ ಅಧಿಕಾರ ನೀಡಲಾಯಿತು.

ಎರಡನೇ ಸ್ಥಳೀಯ ಸ್ವಯಂ ಸರಕಾರದ ಸಮ್ಮೇಳನವನ್ನು ೧೯೨೩ರಲ್ಲಿ ನಡೆಸಲಾಯಿತು. (ಮೊದಲನೆಯದು ೧೯೧೫ರಲ್ಲಿ ನಡೆಯಿತು.) ಅದು ಕೆಲವು ಮುಖ್ಯವಾದ ಶಿಫಾರಸುಗಳನ್ನು ಮಾಡಿದ್ದು ಅದನ್ನು ಸರಕಾರವು ಒಪ್ಪಿಕೊಂಡಿತು. ಅದೇ ಪ್ರಕಾರ ತಾಲ್ಲೂಕು ಬೋರ್ಡುಗಳನ್ನು ೧೯೨೭ರಲ್ಲಿ ರದ್ದುಪಡಿಸಲಾಯಿತು.

## ಪ್ರಜಾಪ್ರತಿನಿಧಿ ಸಭೆ :

ಭಾರತದಲ್ಲೇ ಪ್ರಪ್ರಥಮ ಬಾರಿಗೆ ಮೈಸೂರಿನಲ್ಲಿ "ಪ್ರಜಾಪ್ರತಿನಿಧಿ ಸಭೆ"ಯನ್ನು ೧೮೮೯ರಲ್ಲಿ ಸ್ಥಾಪಿಸಿದ್ದು ಚಾಮರಾಜೇಂದ್ರ ಒಡೆಯರ್ ಅವರ ಮಹಾಸಾಧನೆಗಳಲ್ಲಿ ಒಂದಾಗಿದೆ. ರಾಜ್ಯಾಡಳಿತದಲ್ಲಿ ಪ್ರಜೆಗಳನ್ನು ಒಳಗೊಳಿಸಿಕೊಳ್ಳಬೇಕೆಂಬ ಈ ಮಹತ್ವಪೂರ್ಣವಾದ ಪರಿಕಲ್ಪನೆ ಮುಂದೊಂದು ದಿನ ಭಾರತದಲ್ಲಿ ಪ್ರಜಾಪ್ರಭುತ್ವ ಮಾದರಿಯ ರಾಷ್ಟ್ರ ಸ್ಥಾಪನೆಗೆ ಕಾರಣವಾಗುತ್ತದೆಂಬ ಆಲೋಚನೆ ಆಗ ಇದ್ದಿರಲಾರದು. ಇದರಿಂದಾಗಿ ಭಾರತದಲ್ಲಿ ಪ್ರಜಾಪ್ರಭುತ್ವದ ಬೀಜಾಂಕುರವಾಯಿತೆಂದು ಹೇಳಬಹುದು.

ಆಗ ಸಿ. ರಂಗಾಚಾರ್ಲುರವರು ದಿವಾನರಾಗಿದ್ದರು. ಅವರು ಹೊಂದಿದ್ದ ಹಣಕಾಸಿನ ವ್ಯವಹಾರ ಜ್ಞಾನ, ಆಡಳಿತ ಸಾಮರ್ಥ್ಯ, ಉದಾರ ದೃಷ್ಟಿ ಇವುಗಳು ರಾಜ್ಯಕ್ಕೆ ಒಳ್ಳೆಯ ನಿಧಿಯಾದವು. ಅವರು ರಾಜ್ಯದಲ್ಲಿ ಜಿಲ್ಲಾಧಿಕಾರಿಗಳಿಂದ ಆರಿಸಲ್ಪಟ್ಟ ಭಾರಿ ಜಮೀನುದಾರರು ಮತ್ತು ವರ್ತಕರು, ಅನುಭವಿಗಳು, ಜನರ ಗೌರವಕ್ಕೆ ಪಾತ್ರರು ಮುಂತಾದವರನ್ನು ಒಳಗೊಂಡ ಪ್ರಜಾಪ್ರತಿನಿಧಿ ಸಭೆಯೊಂದನ್ನು ಆಹ್ವಾನಿಸಲು ಯೋಚಿಸಿದರು. ಆ ಸಭೆಯ ಪ್ರಥಮ ಅಧಿವೇಶನ ೧೮೮೧ರಲ್ಲಿ ದಸರಾ ಮಹೋತ್ಸವದ ತರುವಾಯ ಮೈಸೂರು

ನಗರದಲ್ಲಿ ಸಮಾವೇಶಗೊಂಡು ಅದರಲ್ಲಿ ೧೪೪ ಮಂದಿ ಆಹ್ವಾನಿತರಿದ್ದರು. ಈ ಸಭೆಯಲ್ಲಿ ಚುನಾಯಿತ ಪ್ರತಿನಿಧಿಗಳು ಇರಲಿಲ್ಲ. ಇದೊಂದು ಶಾಸನ ಬದ್ಧ ಸಂಸ್ಥೆಯಲ್ಲದಿದ್ದರೂ ಪ್ರಜಾಪ್ರಭುತ್ವ ಸಾಧನೆಯ ಮಾರ್ಗದಲ್ಲಿ ಇದು ಪ್ರಥಮ ಹೆಜ್ಜೆಯಾಗಿತ್ತು. ಮೈಸೂರಿನಲ್ಲಿ ಈ ಸಭೆ ಸ್ಥಾಪಿತವಾದಾಗ ಭಾರತದ ಇನ್ನಾವ ಭಾಗದಲ್ಲೂ ಈ ವ್ಯವಸ್ಥೆ ಇರಲಿಲ್ಲ. ಹಿಂದಿನ ವರ್ಷದ ಆಯವ್ಯಯ, ಆಡಳಿತದ ಸಾಧನೆಗಳು, ಮುಂದಿನ ವರ್ಷದ ಆದಾಯ ವೆಚ್ಚಗಳ ಅಂದಾಜು ಪಟ್ಟಿ ಮುಂತಾದುವನ್ನು ದಿವಾನರು ಸದಸ್ಯರಿಗೆ ವಿವರಿಸುತ್ತಿದ್ದರು. ಆರಂಭಕಾಲದಲ್ಲಿ ಸಭೆ ವರ್ಷಕ್ಕೆ ಒಂದು ಸಲ ಮಾತ್ರ ಸೇರುತ್ತಿತ್ತು. ಈ ಸಭೆಯ ಕಾರ್ಯಕಲಾಪಗಳಿಂದ ಸಂಸ್ಥಾನದ ಜನರಿಗೆ ಸರಕಾರದ ಆಡಳಿತ ನೀತಿಯ ಪರಿಚಯವಾಗುತ್ತಿತ್ತು ಮತ್ತು ಸದಸ್ಯರು ಜನರ ಪರವಾಗಿ ಅವರ ಕುಂದುಕೊರತೆಗಳನ್ನು, ಬೇಡಿಕೆಗಳನ್ನು ಸರಕಾರದ ಮುಂದಿಡಲು ಸಾಧ್ಯವಾಗುತ್ತಿತ್ತು. ಈ ಸಭೆಯ ಅಹವಾಲುಗಳನ್ನು ತಿಳಿದುಕೊಂಡು ರಾಜ್ಯಾಡಳಿತ ನಡೆಯುತ್ತಿತ್ತು. ಇದು ಲಾರ್ಡ್ ರಿಪ್ಪನ್ನನ ವೈಸರಾಯತ್ವದ ಕಾಲದಲ್ಲಿ ಬ್ರಿಟಿಷ್ ಭಾರತದಲ್ಲಿ ಕೈಗೊಳ್ಳಲಾದ ಸ್ಥಾನೀಯ ಸ್ವಯಂ ಆಡಳಿತ ನಿಬಂಧನೆಗಳಿಗೆ ಮಾರ್ಗದರ್ಶನವಾಯಿತೆಂದು ಹೇಳಲಾಗಿದೆ.

ಈ ಸಭೆಯನ್ನು ಸ್ಥಾಪಿಸಿದಾಗ ಕೆಲವು ಆಂಗ್ಲೋ-ಇಂಡಿಯನ್ ಪತ್ರಕರ್ತರು ಪರಿಹಾಸ್ಯಮಾಡಿದರಂತೆ. ಏನೂ ತಿಳಿಯದ ಅವಿದ್ಯಾವಂತರಾದ ಹಳ್ಳಿಯ ಗೌಡರನ್ನು ಕಟ್ಟಿಕೊಂಡು ರಾಜ್ಯಭಾರದ ವಿಷಯಗಳನ್ನು ಹರಟುವ ರಾಜರ ಮತ್ತು ಮಂತ್ರಿಗಳ ರಾಜ್ಯಭಾರ ಕ್ರಮವನ್ನೇ ಪರಿಹಾಸ ಮಾಡಿ ಟೀಕಿಸಿದರಂತೆ. ವರ್ತಕ ಪ್ರಮುಖರು, ಗಣ್ಯ ನಾಗರಿಕರು ಮೊದಲಾದ ಸಮಾಜದ ಬೇರೆಬೇರೆ ಅಂಗಗಳಿಗೆ ಸೇರಿದ ಸದಸ್ಯರಿದ್ದರು. ಆರಂಭದಲ್ಲಿ ಈ ಸಭೆ ಹೆಸರಿಗೆ ಮಾತ್ರ 'ಪ್ರತಿನಿಧಿ ಸಭೆ' ಆಗಿತ್ತು. ನಿಜವಾದ ಅರ್ಥದಲ್ಲಿ ಅದು ಅರಿಕೆದಾರರ ಕೂಟವಾಗಿತ್ತು. ಜನರ ಕುಂದು ಕೊರತೆಗಳನ್ನು ಸರ್ಕಾರಕ್ಕೆ ತಿಳಿಸುವುದು ಮತ್ತು ಆದಷ್ಟು ಪರಿಹಾರ ಪಡೆಯುವುದು, ಆಗಬೇಕಾದ ಕಾರ್ಯಗಳನ್ನು ಸೂಚಿಸುವುದು, ಈ ಬಗ್ಗೆ ಆಳರಸರ ಸಹಾನುಭೂತಿಯನ್ನು ಪಡೆಯುವುದು ಇಷ್ಟು ಮಾತ್ರ ನಡೆಯುತ್ತಿತ್ತು.

ಈ ಪ್ರಜಾಪ್ರತಿನಿಧಿ ಸಭೆಯೇ ವಿಕಾಸ ಹೊಂದಿ ಮುಂದೆ ಸ್ವತಂತ್ರ ಭಾರತದಲ್ಲಿ ವಿಧಾನ ಸಭೆ ಮತ್ತು ವಿಧಾನ ಪರಿಷತ್ತುಗಳಾಗಿ ರೂಪುಗೊಂಡವು. ಆರಂಭದಲ್ಲಿ ಪ್ರತಿ ಜಿಲ್ಲೆಯಿಂದ ಆಯ್ದ ಕೆಲವು ಪ್ರಮುಖರ ಹೆಸರುಗಳನ್ನು (ಒಂದಿಬ್ಬರು ಗಣ್ಯ ಮಾಲೀಕರು, ಇಬ್ಬರೋ ಮೂವರೋ ಪ್ರಭಾವಿ ವರ್ತಕರು) ಆಯಾ ಜಿಲ್ಲಾಧಿಕಾರಿಯು ಸರಕಾರಕ್ಕೆ ಸೂಚಿಸುತ್ತಿದ್ದರು. ಸರ್ಕಾರ ಅವರನ್ನು ನಾಮಕರಣ ಮಾಡುತ್ತಿತ್ತು. ಚುನಾವಣಾ ನೀತಿ ರೂಪಿಸುವವರೆಗೆ, ಅಂದರೆ ೧೮೭೧ರವರೆಗೆ ನಾಮಕರಣ ಪದ್ಧತಿ ಮುಂದುವರಿಯಿತು. ಸರ್ಕಾರದ ನೀತಿ ನಿರ್ಧಾರಗಳಲ್ಲಿ ಈ ನಾಮಕರಣ ಸದಸ್ಯರ ಪಾತ್ರ ಬಹಳ ಮುಖ್ಯವಾಗಿತ್ತು. ೧೮೮೩ರ ಬರಗಾಲದ ಸಂದರ್ಭದಲ್ಲಿ ಆಪದ್ಧನ ಎತ್ತುವಲ್ಲಿ, ೧೮೮೫ರಲ್ಲಿ ಸ್ಥಳೀಯ ಅಂಚೆ ವ್ಯವಸ್ಥೆಯನ್ನು ಭಾರತ ಸರ್ಕಾರದ ಅಂಚೆ ವ್ಯವಸ್ಥೆಯೊಂದಿಗೆ ವಿಲೀನಗೊಳಿಸುವುದರಲ್ಲಿ ಮತ್ತು ೧೯೧ರಲ್ಲಿ ಸರ್ಕಾರಿ ನೌಕರರಿಗೆ ವಿಮಾ ಸೌಲಭ್ಯ ಜಾರಿಗೆ ತರುವಲ್ಲಿ ಈ ನಾಮಕರಣ ಸದಸ್ಯರ ಪಾತ್ರ ಮಹತ್ವದ್ದಾಗಿತ್ತು. ಆರಂಭದಲ್ಲಿ ದಸರಾ ಸಮಯದಲ್ಲಿ ಈ ಸಭೆಯ ಒಂದೇ ಅಧಿವೇಶನವಿರುತ್ತಿದ್ದು, ಸುಮಾರು ೧೯೧೭ರ ವೇಳೆಗೆ ಎರಡು ಅಧಿವೇಶನಗಳು ನಡೆಯುವಂತಾದವು. ಈ ಇನ್ನೊಂದು ಅಧಿವೇಶನವನ್ನು ಬಜೆಟ್ ಅಧಿವೇಶನ ಎಂದು ಕರೆದರು.

ಪ್ರಜಾಪ್ರತಿನಿಧಿ ಸಭೆಯನ್ನು ದಿವಾನ್ ಸರ್.ಕೆ. ಶೇಷಾದ್ರಿ ಐಯ್ಯರ್ ಕಾಲದಲ್ಲಿ ಅಭಿವೃದ್ಧಿಪಡಿಸಲಾಯಿತು. ೧೯೧ರಿಂದ ಮತದಾರರಿಗೆ ಹೆಚ್ಚು ಆಸ್ತಿಯ ಅರ್ಹತೆಯಾಧಾರದ ಮೇಲೆ ಚುನಾವಣೆಯಿಂದ ಆರಿಸಲಾಗುತ್ತಿತ್ತು. ಪದವೀಧರರೂ ಮತದಾನದ ಹಕ್ಕನ್ನು ಪಡೆದರು. ೧೯೪ರಲ್ಲಿ ಸದಸ್ಯರಿಗೆ ಮೂರು ವರ್ಷಗಳ ಅವಧಿಯನ್ನು ನಿಗದಿಪಡಿಸಲಾಯಿತು. ಇದರಿಂದ ಪ್ರತಿನಿಧಿಗಳು ತಮ್ಮ ಕಾರ್ಯವನ್ನು ಹೆಚ್ಚು ಶ್ರದ್ಧೆಯಿಂದ ಪರಿಗಣಿಸಲು ಕಾರಣವಾಯಿತು. ೧೯೪ರಿಂದ ಪ್ರಜಾಪ್ರತಿನಿಧಿ ಸಭೆಯು ಹೆಚ್ಚು ಅಂಗ ಸೌಷ್ಠವಗೂಡಿಸಿಕೊಂಡು ಉಪಯುಕ್ತ ಪಾತ್ರವನ್ನು ವಹಿಸುತ್ತಿತ್ತು. ಆರಂಭದ ವರ್ಷಗಳಲ್ಲಿ ಅದು ಗೌರವಾನ್ವಿತ ಮನವಿದಾರರ ಕೂಟವಲ್ಲದೆ ಮತ್ತೇನೂ ಆಗಿರಲಿಲ್ಲ. ೧೯೭ರ ಹೊತ್ತಿಗೆ ಸದಸ್ಯರುಗಳ ಹೆಸರುಗಳ ಸರಕಾರಿ ದಾಖಲೆಗಳಲ್ಲಿ ಅಂಕಿತವಾಗಿ ಅವರ ಸ್ಥಾನಮಾನಗಳು ಮನ್ನಣೆಗೆ ಪಾತ್ರವಾಗಿದ್ದವು. ೧೯೧ರಲ್ಲಿ ಚುನಾವಣೆಯ ಪದ್ಧತಿ ರೂಢಿಗೆ ಬಂದಿತು. ಸಾಕಷ್ಟು ಹೆಚ್ಚು ಆಸ್ತಿಯೇ ಮತದಾರರಿಗೆ ಅರ್ಹತೆಯಾಗಿತ್ತು. ಇದು ಬ್ರಿಟಿಷ್ ಪ್ರಾಂತಗಳಲ್ಲಿ ನ್ಯಾಯವಿಧಾಯಕ ಸಭೆಗಳು ಸ್ಥಾಪನೆಯಾಗುವುದಕ್ಕೆ ಒಂದು ವರ್ಷ ಮುಂಚೆಯೇ ಆಗಿತ್ತು.

೧೯೦೨ರ ಆಗಸ್ಟ್ ತಿಂಗಳಲ್ಲಿ ಕೃಷ್ಣರಾಜ ಒಡೆಯರಿಗೆ ಅಧಿಕಾರ ವಹಿಸಲಾಯಿತು. ಈಗ ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಗಳು ಹೆಚ್ಚು ವಿಸ್ತೃತವಾದವು. ೮ ಜಿಲ್ಲಾ ಬೋರ್ಡುಗಳು, ೨೨ ತಾಲ್ಲೂಕು ಮಂಡಲಿಗಳು ಮತ್ತು ೩೮ ಸಂಘಗಳು ೧೯೦೩ರ ಸೆಪ್ಟಂಬರ್‌ನಲ್ಲಿ ಹೊರಡಿಸಿದ ಆಜ್ಞೆ ಪ್ರಕಾರ ರಚನೆಯಾದವು. ಅದೇ ವರ್ಷದ ಮೈಸೂರು ನಗರಾಭಿವೃದ್ಧಿ ಮಂಡಲಿ ರಚಿತವಾಗಿ, ಅದರ ಕ್ರಿಯೆಯ ಫಲವಾಗಿ ಮೈಸೂರು ನಗರ ಭಾರತದಲ್ಲೆಲ್ಲ ಅತ್ಯಂತ ಸುಂದರ ನಗರವೆಂದು ಪ್ರಸಿದ್ಧಿ ಪಡೆಯುವಂತಾಯಿತು. ೧೯೦೬ರಲ್ಲಿ ಪಿ.ಎಸ್. ಕೃಷ್ಣಮೂರ್ತಿಯವರ ವಿಶ್ರಾಂತಿ ನಂತರ ವಿ.ಪಿ. ಮಾಧವರಾಯರು ದಿವಾನರಾಗಿ ನೇಮಕಗೊಂಡರು. ಅವರ ಕಾಲದಲ್ಲಿ ಅಂದರೆ ೧೯೦೭ರಲ್ಲಿ ಮೈಸೂರು ನ್ಯಾಯವಿಧಾಯಕ ಸಭೆ ಸ್ಥಾಪನೆಯಾಯಿತು. ೧೦ಕ್ಕೆ ಕಡಿಮೆಯಿಲ್ಲದಂತೆ ೧೫ಕ್ಕೆ ಮೀರದಂತೆ ⅖ ಕ್ಕೆ ಕಡಿಮೆಯಿಲ್ಲದಂತೆ ಖಾಸಗಿ ಸದಸ್ಯರು ಸರಕಾರದಿಂದ ನಾಮಕರಣ ಹೊಂದುವಂತಾಯಿತು. ಪ್ರಜಾಪ್ರತಿನಿಧಿ ಸಭೆಯಿಂದ ಇಬ್ಬರು ಸದಸ್ಯರನ್ನು ನ್ಯಾಯ ವಿಧಾಯಕ ಸಭೆಗೆ ಚುನಾಯಿಸುವಂತಾಯಿತು. ಪ್ರಜಾಪ್ರತಿನಿಧಿ ಸಭೆಯಲ್ಲಿ ಪ್ರಥಮಬಾರಿಗೆ ವಿಧೇಯಕಗಳ ಬಗೆಗೆ ಮತನೀಡುವ ಪದ್ಧತಿಗೆ ಅನುಮತಿ ದೊರಕಿತು. ಆವರೆಗಿನ ಪದ್ಧತಿಯ ಪ್ರಕಾರ ಸಭೆಯು ಒಟ್ಟಾರೆ ಅಭಿಮತವನ್ನು ಮಾತ್ರ ಸೂಚಿಸಲಾಗುತ್ತಿತ್ತು. ವಿ.ಪಿ. ಮಾಧವರಾಯರು ಪ್ರಚಂಡ ವ್ಯಕ್ತಿಯಾಗಿದ್ದರೂ ಪ್ರಜಾಪ್ರತಿನಿಧಿ ಸಭೆಯಿಂದ ನ್ಯಾಯ ವಿಧಾಯಕ ಸಭೆಗೆ ಚುನಾಯಿತರಾಗಿದ್ದ ಎಂ. ವೆಂಕಟಕೃಷ್ಣಯ್ಯ ಮತ್ತು ಡಿ. ವೆಂಕಟರಾಮಯ್ಯ ಅವರ ಆಯ್ಕೆಯನ್ನು ರದ್ದುಮಾಡಿ ಬಹಳ ಅವಿಶ್ವಾಸಕ್ಕೆ ಗುರಿಯಾದರು. ವಿ.ಪಿ. ಮಾಧವರಾಯರು ನಂತರ ಟಿ. ಆನಂದರಾವ್ ದಿವಾನರಾದರು. ೧೯೧೨ರ ಕೊನೆಯ ಕಾಲಕ್ಕೆ ಟಿ. ಆನಂದರಾಯರ ನಂತರ ಸರ್. ಎಂ. ವಿಶ್ವೇಶ್ವರಯ್ಯನವರು ದಿವಾನರಾದರು. ಇವರ ಕಾಲದಲ್ಲಿ ರಾಜ್ಯದ ಸರ್ವತೋಮುಖ ಬೆಳವಣಿಗೆಯ ಯುಗ ಆರಂಭವಾಯಿತು. ಇವರು ಉದಾರಭಾವದ ರಾಜಕಾರಣಪಟುವಾಗಿದ್ದರು. ಅವರು ಪ್ರಜಾಪ್ರಭುತ್ವದಲ್ಲಿ ತುಂಬ ನಂಬಿಕೆ ಹೊಂದಿದ್ದರು. ಪ್ರಜಾಪ್ರತಿನಿಧಿಗಳಿಗೆ ದೇಶದ ಆಡಳಿತದಲ್ಲಿ ಹೆಚ್ಚು ಸಂಪರ್ಕವನ್ನು ಕಲ್ಪಿಸುವುದು ಅವರ ಉದ್ದೇಶವಾಗಿತ್ತು. ಖಾಸಗೀ ಜನರಿಂದ ಕೂಡಿದ ಮೈಸೂರು ಆರ್ಥಿಕ ಸಮ್ಮೇಳನಗಳೂ ಅದರ ಸಮಿತಿಗಳೂ ಈ ಭಾಗದ ಬೆಳವಣಿಗೆಗೆ ನೆರವನ್ನು ನೀಡಿದವು. ಅವರು ಸ್ವಯಂ ಆಡಳಿತ ಹೊಂದಿದ ಜಿಲ್ಲಾ ಮತ್ತು ತಾಲ್ಲೂಕು ಮಂಡಲಿಗಳು, ಪುರಸಭೆಗಳು ಮತ್ತು ಗ್ರಾಮ ಪಂಚಾಯತಿಗಳು-ಇವುಗಳ ಕರ್ತವ್ಯಗಳನ್ನು ಹೆಚ್ಚಿಸಲು ತೀವ್ರ ಆಸಕ್ತಿ ಹೊಂದಿದ್ದರು, ಈ ಸಂಸ್ಥೆಗಳನ್ನು ಅಧಿಕಾರಿಗಳಿಂದ ಆದಷ್ಟು ದೂರವಿಡಬೇಕೆಂಬುದು ಅವರ ಆಶಯವಾಗಿತ್ತು. ೧೯೧೮ರಲ್ಲಿ ಅಂಗೀಕೃತವಾದ ಮೈಸೂರು ಸ್ಥಳೀಯ ಸಂಸ್ಥೆಗಳ ಮತ್ತು ಗ್ರಾಮ ಪಂಚಾಯತಿಗಳ ನಿಬಂಧನೆ ಪ್ರಕಾರ ಜಿಲ್ಲಾ ಮತ್ತು ತಾಲ್ಲೂಕು ಮಂಡಲಿಗಳಲ್ಲಿ ಚುನಾಯಿತ ಸದಸ್ಯರ ಬಹುಮತವಿರುವಂತೆಯೂ, ಮೈಸೂರ್ ಟೌನ್ ಮತ್ತು ನಗರಸಭೆಗಳಿಗೆ ಚುನಾಯಿತ ಉಪಾಧ್ಯಕ್ಷರಿರುವಂತೆಯೂ, ಗ್ರಾಮ ಪಂಚಾಯತಿಗಳಿಗೆ ಕೆಲವು ಕ್ಲುಪ್ತ ಕರ್ತವ್ಯಗಳಿಂದ ಕೂಡಿದ ಚುನಾಯಿತ ಅಧ್ಯಕ್ಷರಿರುವಂತೆಯೂ ಆಯಿತು. ಸರ್.ಎಂ. ವಿಶ್ವೇಶ್ವರಯ್ಯವರು ೧೯೧೮ರ ಕೊನೆಗೆ ವಿಶ್ರಾಂತರಾದರು.

ನಂತರ ಸರ್ದಾರ್ ಎಂ. ಕಾಂತರಾಜೇ ಅರಸ್ ಅವರು ೧೯೧೯ರಲ್ಲಿ ದಿವಾನರಾದರು. ೧೯೨೨ರಲ್ಲಿ ಸರ್ ಆಲ್ಬಿಯನ್ ಬ್ಯಾನರ್ಜಿಯವರು ದಿವಾನರಾಗಿ ನೇಮಕವಾದರು. ಅವರ ಆಡಳಿತ ಕಾಲದಲ್ಲಿ ೧೯೨೩ರಲ್ಲಿ ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಗಳ ಸಮ್ಮೇಳನವೊಂದು ನಡೆಯಿತು. ಆ ಸಮ್ಮೇಳನ ಮಾಡಿದ ಸಲಹೆಗಳಲ್ಲಿ ತಾಲ್ಲೂಕು ಮಂಡಲಿಗಳನ್ನು ರದ್ದುಪಡಿಸುವುದು, ಗ್ರಾಮ ಪಂಚಾಯತಿಗಳನ್ನು ಶಾಸನಬದ್ಧ ಸಂಸ್ಥೆಗಳನ್ನಾಗಿ ಮಾರ್ಪಡಿಸಿ ಸ್ಥಳೀಯ ತೆರಿಗೆಗಳನ್ನು ವಿಧಿಸುವುದು, ನೈರ್ಮಲ್ಯಕ್ಕೆ ಸಂಬಂಧಿಸಿದಂತೆ ಕರ್ತವ್ಯಗಳನ್ನು ವಿಧಿಸುವುದಕ್ಕೆ ಸ್ಪಷ್ಟವಾದ ಅಧಿಕಾರ ನೀಡುವುದು, ಸ್ತ್ರೀಯರಿಗೆ ಮತದಾನದ ಹಕ್ಕನ್ನು ವಿಸ್ತರಿಸುವುದು ಇತ್ಯಾದಿ ಆಗಿದ್ದವು. ಅವರ ಆಡಳಿತ ಕಾಲದಲ್ಲಿ ನಡೆದ ಎಲ್ಲಕ್ಕಿಂತ ಮುಖ್ಯವಾದ ಕಾರ್ಯ ರಾಜ್ಯದ ಭವಿಷ್ಯ ರಾಜಕೀಯ ಸುಧಾರಣೆಗಳನ್ನು ಕುರಿತು ಪರಿಶೀಲಿಸಿ ಸಲಹೆ ಮಾಡಲು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದ ಸರ್ ಬ್ರಜೇಂದ್ರಲಥ್ ಸೀಲ್ ಅವರ ಅಧ್ಯಕ್ಷತೆಯಲ್ಲಿ ಸಮಿತಿ ರಚನೆಯಾಯಿತು. ಈ ಸೀಲ್ ಸಮಿತಿಯು ೧೯೨೩ರಲ್ಲಿ ಮಾರ್ಚಿ ೨೩ರಂದು ತನ್ನ ವರದಿಯನ್ನು ಸರಕಾರಕ್ಕೆ ಒಪ್ಪಿಸಿತು. ಇದನ್ನು ಪ್ರಕಟಿಸಿ ಸಾರ್ವಜನಿಕ ಅಭಿಪ್ರಾಯವನ್ನು ತಿಳಿದುಕೊಂಡು ೧೯೨೩ರ ಅಕ್ಟೋಬರ್ ೧೭ರಂದು ಒಂದು ಘೋಷಣೆ ಪ್ರಕಟವಾಯಿತು. ಪ್ರಜಾಪ್ರತಿನಿಧಿ ಸಭೆಯು ಪ್ರಥಮ ಬಾರಿಗೆ ಶಾಸನಬದ್ಧ ಸಂಸ್ಥೆಯಾಯಿತು. ಎಲ್ಲ ರೀತಿಯ ಹೊಸ ತೆರಿಗೆಗಳನ್ನು ವಿಧಿಸುವ ಸಲಹೆಗಳನ್ನು ಅವರೊಡನೆ ಸಮಾಲೋಚಿಸಬೇಕಾಯಿತು. ನ್ಯಾಯ ವಿಧಾಯಕ ಸಭೆಯು ಎಲ್ಲ ಮಸೂದೆಗಳ ಸಾಮಾನ್ಯ ನೀತಿಯನ್ನು ಚರ್ಚಿಸುವ ಅಧಿಕಾರ ಪಡೆಯಿತು. ಪ್ರಜಾಪ್ರತಿನಿಧಿ ಸಭೆಯು ಸಾರ್ವಜನಿಕ ಆಡಳಿತದ ಎಲ್ಲ ವಿಷಯಗಳ ಬಗೆಗೂ ನಿರ್ಣಯ ಮಾಡುವ ಮತ್ತು ಆಯವ್ಯಯ ನೀತಿ ಧೋರಣೆಗಳನ್ನು ಕುರಿತು ಚರ್ಚಿಸುವ ಅಧಿಕಾರವನ್ನು ಪಡೆಯಿತು. ಅದರ

ಸದಸ್ಯರ ಸಂಖ್ಯೆ ೨೫೦-೨೭೫ ಎಂದು ನಿರ್ಧಾರವಾಯಿತು. ಮತದಾನದ ಅಧಿಕಾರವೂ ಬಹಳವಾಗಿ ವಿಸ್ತೃತವಾಯಿತು. ೨೫ ರೂ. ಭೂ ಕಂದಾಯ ನೀಡುವವರಿಗೂ, ಪೌರಸಭೆಗಳಿಗೆ ೫ ರೂ. ತೆರಿಗೆ ಕೊಡುವವರಿಗೂ, ಸ್ತ್ರೀಯರಿಗೂ ಅದು ದೊರಕಿತು. ಸರಕಾರಕ್ಕೆ ಸಲಹೆ ನೀಡಲು ಪ್ರಜಾಪ್ರತಿನಿಧಿಸಭೆಯ ಮತ್ತು ನ್ಯಾಯ ವಿಧಾಯಕ ಸಭೆಯ ಸದಸ್ಯರನ್ನುಳ್ಳ ಸ್ಥಾಯಿ ಸಮಿತಿಗಳು ರೂಪುಗೊಂಡವು. ಉಭಯ ಸಭೆಗಳಲ್ಲೂ ಕಾರ್ಮಿಕ ವರ್ಗಕ್ಕೆ ಒಂದೊಂದು ಸ್ಥಾನವೂ ಶಿಕ್ಷಣ, ಯೋಜನೆ, ಗಣಿಗಳು, ವಾಣಿಜ್ಯ ಮತ್ತು ವ್ಯಾಪಾರಗಳಿಗೆ ವಿಶೇಷ ಪ್ರಾತಿನಿಧ್ಯವನ್ನೂ ನೀಡಲಾಯಿತು. ಅಲ್ಪಸಂಖ್ಯಾತ ವರ್ಗಗಳಾದ ಮುಸ್ಲಿಮರು, ಭಾರತೀಯ ಕ್ರೈಸ್ತರು ಮತ್ತು ಹಿಂದುಳಿದ ವರ್ಗಗಳಿಗೆ ೩೫ ಸ್ಥಾನಗಳು ಮೀಸಲಾದವು. ಕಡೇಪಕ್ಷ ೧೫೦ ಮಂದಿ ಸದಸ್ಯರು ಗ್ರಾಮಾಂತರ ಪ್ರದೇಶಗಳಿಂದ ಚುನಾಯಿತರಾಗಬೇಕಾಯಿತು.

ಹೀಗೆ ಸುಧಾರಿಸಲ್ಪಟ್ಟ ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯ ವಿಧಾಯಕ ಸಭೆಗಳ ಸಂಯುಕ್ತ ಅಧಿವೇಶನವನ್ನು ೧೯೨೪ ರ ಮಾರ್ಚಿ ೧೭ರಂದು ಮಹಾರಾಜರು ವಿಧ್ಯುಕ್ತವಾಗಿ ಉದ್ಘಾಟನೆ ಮಾಡಿದರು. ಹೊಸ ಚುನಾಯಿತ ಪ್ರಜಾಪ್ರತಿನಿಧಿ ಸಭೆಯಲ್ಲಿ ಧುರೀಣರೆನಿಸಿದ ಎಂ. ವೆಂಕಟಕೃಷ್ಣಯ್ಯ, ಸಿ. ಶ್ರೀನಿವಾಸರಾವ್, ಕರಣಿಕ ಕೃಷ್ಣಮೂರ್ತಿ ಮತ್ತು ಬಿ. ನರಸಿಂಗರಾವ್ ಇವರುಗಳೂ ಇವರಿಗೆ ನೆರವಾಗಿ ಹೊಸಕೊಪ್ಪ ಕೃಷ್ಣರಾವ್. ಜಿ. ಪರಮಶಿವಯ್ಯ ಮತ್ತು ಡಿ. ಎಸ್. ಮಲ್ಲಪ್ಪ ಮೊದಲಾದ ಯುವಕರೂ ಇದ್ದರು.

೧೯೨೬ರಲ್ಲಿ ಸರ್ ಆಲ್ಬಿಯನ್ ಬ್ಯಾನರ್ಜಿಯವರು ವಿಶ್ರಾಂತರಾದ ಮೇಲೆ ಸರ್ ಮಿರ್ಜಾ ಇಸ್ಮಾಯಿಲ್ ದಿವಾನರಾದರು. ಅವರು ದಿವಾನರಾಗಿದ್ದ ೧೫ ವರ್ಷಗಳ ಕಾಲವು ಮಹತ್ವದ ಘಟನೆಗಳಿಂದ ಕೂಡಿದ್ದಿತು. ಇಲ್ಲಿಯವರೆಗೆ ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯ ವಿಧಾಯಕ ಸಭೆಗಳಲ್ಲಿ ನಡೆಯುತ್ತಿದ್ದ ಚಳವಳಿಗಳೆಲ್ಲ ಹಿಂದುಳಿದ ಜನಾಂಗಗಳಿಗೆ ಸರಕಾರಿ ಕೆಲಸ ನೀಡುವ ಬಗೆಗೆ ನ್ಯಾಯವನ್ನು ದೊರಕಿಸಿಕೊಳ್ಳಬೇಕೆಂಬುದೇ ಆಗಿದ್ದಿತು. ಆದರೆ ಮೈಸೂರಿನ ವೃತ್ತ ಪತ್ರಿಕಾ ಲೇಖಕರು ಬೇಗನೆ ರಾಜ್ಯ ಘಟನೆಯ ದೊಡ್ಡ ಸಮಸ್ಯೆಗಳಿಗೆ ಗಮನ ಹರಿಸಿದರು. ಇದುವರಗೆ ಬ್ರಾಹ್ಮಣೇತರ ಮುಖಂಡರು ಸಾಮಾನ್ಯವಾಗಿ ಸರಕಾರದ ವಿಷಯದಲ್ಲಿ ವಿಧೇಯತೆಯಿಂದಲೂ ಸೌಮ್ಯತೆಯಿಂದಲೂ ನಡೆದುಕೊಳ್ಳುತ್ತಿದ್ದರು. ಆದರೆ ೧೯೨೭ರ ಚುನಾವಣೆಗಳಲ್ಲಿ ಪ್ರಜಾಪ್ರತಿನಿಧಿ ಸಭೆಗೆ ಆರಿಸಿ ಬಂದಿದ್ದ ಯುವ ಮುಖಂಡರಾದ ಟಿ. ಸಿದ್ದಲಿಂಗಯ್ಯ, ಎಚ್.ಸಿ. ದಾಸಪ್ಪ , ಕೆ.ಸಿ. ರೆಡ್ಡಿ ಮತ್ತು ಡಿ.ಎಚ್. ಚಂದ್ರಶೇಖರಯ್ಯ ಮೊದಲಾದವರು ಪ್ರಭಾವಯುತ ರೀತಿಯಲ್ಲಿ ಸರಕಾರವನ್ನು ಟೀಕೆಗೆ ಗುರಿಮಾಡಿದರು. ೧೯೨೮ರಲ್ಲಿ ಸರಕಾರವು ಸಲಹಾ ಸಮಿತಿಯ ವಿಶ್ರಾಂತ ಸದಸ್ಯರಾಗಿದ್ದ ಕೆ.ಆರ್. ಶ್ರೀನಿವಾಸ ಅಯ್ಯಂಗಾರ್ಯರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಕಮಾಡಿ, ರಾಜಕೀಯ ಸುಧಾರಣೆಗಳನ್ನು ಸಲಹೆ ಮಾಡಲು ಅಜ್ಞಾಪಿಸಿತು.

ಸರ್. ಮಿರ್ಜಾರವರು ೧೯೪೧ರ ಮೇ ತಿಂಗಳಿನವರೆಗೂ ಅಧಿಕಾರದಲ್ಲಿದ್ದು ತರುವಾಯ ವಿಶ್ರಾಂತಿ ಪಡೆದರು. ನಂತರ ಸಲಹಾ ಸಮಿತಿ ಸದಸ್ಯರಾಗಿದ್ದು ಅಗಾಧ ಆಡಳಿತ ಅನುಭವ ಪಡೆದಿದ್ದ ನ್ಯಾಪತಿ ಮಾಧವರಾಯರು ದಿವಾನರಾದರು. ದ್ವಿತೀಯ ವಿಶ್ವ ಯುದ್ಧವು ಆಗಲೇ ಪ್ರಾರಂಭವಾಗಿತ್ತು. ಅದು ರಾಜ್ಯದ ಆರ್ಥಿಕ ವ್ಯವಸ್ಥೆಯನ್ನು ಬಹಳವಾಗಿ ಅಲ್ಲೋಲಕಲ್ಲೋಲ ಮಾಡಿತ್ತು. ಇತರ ಕಡೆಗಳಂತೆಯೇ ಮೈಸೂರಿನಲ್ಲಿಯೂ ಆಹಾರದ ಅಭಾವ ತಲೆದೋರಿತ್ತು. ಹೊಸ ದಿವಾನರು ರಾಜ್ಯದ ಸಂಪನ್ಮೂಲಗಳನ್ನು ಬಹಳ ಎಚ್ಚರಿಕೆಯಿಂದಲೂ ದೃಢತೆಯಿಂದಲೂ ಸರಿತೂಗಿಸಿದರು. ಅವರು ಕೆ.ಆರ್. ಶ್ರೀನಿವಾಸ ಅಯ್ಯಂಗಾರ್ಯರ ಶಿಫಾರಸುಗಳನ್ನು ಕಾರ್ಯರೂಪಕ್ಕೆ ತಂದರು. ಅವರ ಮುಖ್ಯಾಂಶಗಳು ಹೀಗಿವೆ: ಪ್ರಜಾಪ್ರತಿನಿಧಿ ಸಭೆಯ ಸಂಖ್ಯೆ ೩೧೫ಕ್ಕೆ ಏರಿತು. ಅದರಲ್ಲಿ ಮುಸ್ಲಿಮರಿಗೆ ೨೬ ಸ್ಥಾನಗಳು, ಭಾರತೀಯ ಕ್ರೈಸ್ತರಿಗೆ ೫ ಸ್ಥಾನಗಳು, ಐರೋಪ್ಯರಿಗೆ ೧, ವಿಶೇಷಹಿತ ಪ್ರಾತಿನಿಧ್ಯಕ್ಕೆ ೨೮, ಸ್ತ್ರೀಯರಿಗೆ ೧೧ (ಸ್ತ್ರೀಯರ ಮತದಾನದಿಂದಲೇ ಚುನಾಯಿತರಾಗಬೇಕು), ಸರ್ಕಾರದಿಂದ ನಾಮಕರಣ ಹೊಂದಿದ ಸದಸ್ಯರು ೧೦. ದಿವಾನರೇ ಪ್ರಜಾಪ್ರತಿನಿಧಿ ಸಭೆಯ ಅಧಿವೇಶನದ ಅಧ್ಯಕ್ಷರಾಗಿ ಮುಂದುವರಿದರು. ದಿವಾನರನ್ನು ಬಿಟ್ಟು ೩ಮಂದಿ ಅಧಿಕಾರಿ ಸಲಹೆಗಾರರ ಜೊತೆಗೆ ಇಬ್ಬರಿಗೆ ಕಡಿಮೆಯಿಲ್ಲದಂತ ಖಾಸಗಿಯವರನ್ನು ಸದಸ್ಯರನ್ನಾಗಿ ನಾಮಕರಣ ಮಾಡುವ ಅವಕಾಶವಾಯಿತು. ಈ ಮಂತ್ರಿಗಳು ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಗಳ ಚುನಾಯಿತ ಖಾಸಗಿ ಸದಸ್ಯರಾಗಿರಬೇಕು. ಈ ಖಾಸಗಿ ಸಲಹೆಗಾರರು ಅಥವಾ ಮಂತ್ರಿಗಳ ಮೇಲೆ ಅವಿಶ್ವಾಸ ನಿರ್ಣಯ ತರುವುದಕ್ಕೆ ಅವಕಾಶವಿರಲಿಲ್ಲ. ಪ್ರಜಾಪ್ರತಿನಿಧಿ ಸಭೆ ಮತ್ತು ನ್ಯಾಯವಿಧಾಯಕ ಸಭೆಯ ನಾಲ್ಕು ವರ್ಷಗಳ ಅವಧಿ ೧೯೪೫ ರಲ್ಲಿ ಮುಗಿಯಿತು. ಆಗ ಹೊಸ ಚುನಾವಣೆಗಳು ನಡೆದವು. ಎರಡು ಸಭೆಗಳಲ್ಲಿಯೂ ಕಾಂಗ್ರೆಸ್

ಸದಸ್ಯರೇ ಬಹುಮತದಿಂದ ಆರಿಸಿ ಬಂದರು. ಕೆ. ಹನುಮಂತಯ್ಯನವರು ಪ್ರಜಾಪ್ರತಿನಿಧಿ ಸಭೆಯ ಕಾಂಗ್ರೆಸ್ ಪಕ್ಷದ ನಾಯಕರಾಗಿಯೂ, ಕೆ.ಸಿ. ರೆಡ್ಡಿಯವರು ನ್ಯಾಯವಿಧಾಯಕ ಸಭೆಯ ಕಾಂಗ್ರೆಸ್ ಪಕ್ಷದ ನಾಯಕರಾಗಿಯೂ ಆಯ್ಕೆಯಾದರು.

ಲಾರ್ಡ್ ಮೌಂಟ್ ಬೇಟನ್ ಆಗಸ್ಟ್ ೧೫ ರಂದು ಭಾರತದ ಸ್ವಾತಂತ್ರ್ಯ, ಭಾರತದ ವಿಭಜನೆ ಮತ್ತು ರಾಜ್ಯಾಂಗ ರಚನೆ ಸಭೆಯ ರಚನೆ-ಇವುಗಳ ಬಗೆಗೆ ಘೋಷಣೆ ಹೊರಡಿಸಿದರು. ಮೈಸೂರು ರಾಜ್ಯ ಭಾರತ ಒಕ್ಕೂಟಕ್ಕೆ ಸೇರಿದುದರಿಂದ ಭಾರತ ರಾಜ್ಯಾಂಗ ರಚನೆ ಸಭೆಯಲ್ಲಿ ಮೈಸೂರಿನ ೭ ಮಂದಿ ಪ್ರತಿನಿಧಿಗಳು ಭಾಗವಹಿಸುವುದೆಂದು ದಿವಾನರು ಘೋಷಿಸಿದುದಲ್ಲದೆ, ಆ ಏಳರಲ್ಲಿ ಇಬ್ಬರು ಪ್ರಜಾಪ್ರತಿನಿಧಿ ಸಭೆಯಿಂದಲೂ, ಮತ್ತಿಬ್ಬರು ನ್ಯಾಯವಿಧಾಯಕ ಸಭೆಯಿಂದಲೂ ಚುನಾಯಿತರಾಗುವುದೆಂದೂ ದಿವಾನರನ್ನೊಳಗೊಂಡ ಉಳಿದ ೩ ಮಂದಿಯನ್ನು ಸರಕಾರ ನಾಮಕರಣ ಮಾಡುವುದೆಂದೂ ತಿಳಿಸಿದರು. ಈ ವಿಧಾನಕ್ಕೆ ಉಗ್ರವಾದ ಪ್ರತಿಭಟನೆ ವ್ಯಕ್ತವಾದುದಲ್ಲದೆ ಜುಲೈ ೫ ರಂದು ಪ್ರಜಾಪ್ರತಿನಿಧಿ ಸಭೆಯಲ್ಲಿ ಸದಸ್ಯರು ಸಭಾತ್ಯಾಗವನ್ನು ಮಾಡಿದರು. ಆದರೆ ದಿವಾನರು ಇದನ್ನು ಲೆಕ್ಕಿಸದೆ ತಮ್ಮ ದಾರಿಯಲ್ಲೇ ನಡೆದರು.

ಮೈಸೂರು ರಾಜ್ಯದಲ್ಲಿ ಜವಾಬ್ದಾರಿ ಸರಕಾರ ಸ್ಥಾಪನೆ ಮಾಡುವುದಕ್ಕೂ ರಾಜ್ಯಕ್ಕೆ ಪ್ರತ್ಯೇಕ ನ್ಯಾಯಾಂಗ ನಿರ್ಮಾಣ ಮಾಡುವುದಕ್ಕೂ ಮೈಸೂರು ರಾಜ್ಯಾಂಗ ನಿರ್ಮಾಣದ ಸಭೆಯೊಂದನ್ನು ರಚನೆ ಮಾಡಬೇಕೆಂದು ಕಾಂಗ್ರೆಸ್ ಒತ್ತಾಯ ಮಾಡಿತು. ಕಡೆಗೆ ಮಹಾರಾಜರು ಸೆಪ್ಟೆಂಬರ್ ೭ರಂದು ಒಂದು ಸಂದೇಶ ಹೊರಡಿಸಿ ರಾಜ್ಯದಲ್ಲಿ ಜವಾಬ್ದಾರಿ ಸರಕಾರವನ್ನು ಸ್ಥಾಪಿಸುವುದಾಗಿ ಘೋಷಿಸಿದರು. ಅಕ್ಟೋಬರ್ ೧೧ರಂದು ದಿವಾನರಿಗೂ ಮೈಸೂರು ಕಾಂಗ್ರೆಸ್ ಅಧ್ಯಕ್ಷ ಕೆ.ಸಿ. ರೆಡ್ಡಿಯವರಿಗೂ ಮುಂದಿನ ವ್ಯವಸ್ಥೆಯ ಬಗೆಗೆ ಒಪ್ಪಂದವಾಯಿತು. ಅಕ್ಟೋಬರ್ ೨೪ರಂದು ಹೊರಟ ವಿಶೇಷ ನಿರೂಪದ ಪ್ರಕಾರ ಹೊಸ ಸರಕಾರದ ಮಂತ್ರಿ ಸಂಪುಟದ ಸ್ವರೂಪ ಪ್ರಕಟವಾಯಿತು. ಅದರಲ್ಲಿ ದಿವಾನರನ್ನು ಬಿಟ್ಟು ಆರು ಮಂದಿ ಕಾಂಗ್ರೆಸ್ಸಿಗರು, ಮೂರು ಮಂದಿ ಕಾಂಗ್ರೆಸ್ಸೇತರರು ಇರುವಂತಾಯಿತು. ಮಂತ್ರಿ ಸಂಪುಟದಲ್ಲಿ ದಿವಾನರ ಮುಂದುವರಿಕೆ ಒಂದು ಅಕ್ರಮವೆಂದು ಭಾವಿಸಲ್ಪಟ್ಟು ಅದರ ರದ್ದತಿಗಾಗಿ ನಿಲುವಿಲ್ಲದ ಚಳವಳಿ ನಡೆಯಿತು. ಕೊನೆಗೆ ೧೯೪೯ನೆಯ ಆಗಸ್ಟ್ ತಿಂಗಳಲ್ಲಿ ದಿವಾನರ ಸ್ಥಾನ ರದ್ದಾಯಿತು. ಈ ವೇಳೆಗೆ ಹಿಂದಿನ ನ್ಯಾಯ ವಿಧಾಯಕ ಸಭೆಯ, ಪ್ರಜಾಪ್ರತಿನಿಧಿಸಭೆಯ ನಾಲ್ಕು ವರ್ಷಗಳ ಕಾಲಾವಧಿ ಕೊನೆಗೊಂಡುದರಿಂದ ಹಿಂದಿನ ಮತದಾನದ ಪದ್ಧತಿಯಂತೆಯೇ ಚುನಾವಣೆ ನಡೆದು, ಮೈಸೂರಿನ ರಾಜ್ಯಾಂಗ ರಚನೆ ಸಭೆಯೊಂದು ರೂಪುಗೊಂಡಿತು. ಆದರೆ ಭಾರತದ ರಾಜ್ಯಾಂಗ ರಚನಾ ಸಭೆ ಆಗಲೇ ಕೆಲಸ ಮಾಡುತ್ತಿದ್ದುದರಿಂದ ಮೈಸೂರಿನ ಸಭೆಯು ಸ್ವಲ್ಪ ಕಾಲದಲ್ಲಿ ತನ್ನ ಕಾರ್ಯಕಲಾಪಗಳನ್ನು ನಿಲ್ಲಿಸಿತು.

**ಪಂಚಾಯತಿಗಳು :**

ಪ್ರತಿಯೊಂದು ಹಳ್ಳಿಗೆ ಅಥವಾ ಹಳ್ಳಿಗಳ ಒಂದು ಗುಂಪಿಗೆ ಪ್ರತ್ಯೇಕವಾದ ಸಂಪನ್ಮೂಲಗಳೊಂದಿಗೆ ಒಂದು ಗ್ರಾಮ ಪಂಚಾಯತಿಯನ್ನು ಸ್ಥಾಪಿಸಲಾಯಿತು ಮತ್ತು ೧೯೧೯ರಲ್ಲಿ ಪ್ರಾರಂಭವಾಗಿ ನಾಮ ನಿರ್ದೇಶಿತ ಅಧ್ಯಕ್ಷರಿರುತ್ತಿದ್ದರು. ಚುನಾವಣೆಯ ಹಕ್ಕನ್ನು ತೃಪ್ತಿಕರವಾದ ಪ್ರಗತಿಯಾದಾಗ ನೀಡಲಾಗುತ್ತಿತ್ತು. ಕೆಲವು ಆಯ್ದ ಪಂಚಾಯತಿಗಳಿಗೆ ಗ್ರಾಮ ಕೋರ್ಟುಗಳು ಮತ್ತು ತಾಲ್ಲೂಕು ಪಂಚಾಯತಿ ನಿಬಂಧನೆಗಳು ಮತ್ತು ಅರಣ್ಯ ಪಂಚಾಯತಿ ನಿಯಮಗಳಡಿಯಲ್ಲಿ ಅಧಿಕಾರ ನೀಡಲಾಯಿತು. ಹಳ್ಳಿಯ ಪ್ರಾಥಮಿಕ ಶಾಲೆಗಳ ಮೇಲ್ವಿಚಾರಣೆ ನೀಡಲಾಯಿತು. ಅಮಲ್ದಾರ್ ಅಥವಾ ತಹಸೀಲ್ದಾರ್‌ರಿಗೆ ಪಂಚಾಯತಿಗಳ ನಿಯಂತ್ರಣ, ತಪಾಸಣೆ ಮತ್ತು ಮೇಲ್ವಿಚಾರಣೆಯ ಅಧಿಕಾರವನ್ನು ನೀಡಲಾಯಿತು. ಈ ಕ್ರಮದಿಂದ ಜಿಲ್ಲಾ ಬೋರ್ಡುಗಳಿಗೆ ಎಲ್ಲಾ ಜಿಲ್ಲಾ, ತಾಲ್ಲೂಕು, ಅಂತರ-ತಾಲ್ಲೂಕು ಮತ್ತು ಅಂತರ-ಹಳ್ಳಿಗಳಲ್ಲಿ ನೈರ್ಮಲ್ಯ, ಸಂಪರ್ಕ, ವೈದ್ಯಕೀಯ ಪರಿಹಾರ ಮತ್ತು ಇತರ ಸೇವೆಗಳಿಗೆ ಮುಕ್ತವಾದ ಅವಕಾಶವಿದ್ದಿತು. ತಾಲ್ಲೂಕು ಬೋರ್ಡುಗಳ ರದ್ದತಿಯಾದ ಮೇಲೆ, ೧೯೨೭ರ ಫೆಬ್ರವರಿ ೧ರಿಂದ ಜಿಲ್ಲಾ ಬೋರ್ಡುಗಳ ನಿಬಂಧನೆಯಡಿಯಲ್ಲಿ ಜಿಲ್ಲಾ ಬೋರ್ಡುಗಳನ್ನು ಪುನರ್ರಚಿಸಲಾಯಿತು. ೧೯೨೮-೨೯ರಲ್ಲಿ ಮುನಿಸಿಪಲ್ ಸಮಿತಿಗಳ ಸದಸ್ಯರಾಗಿ ಮಹಿಳೆಯರಿಗಿದ್ದ ಅನರ್ಹತೆಯನ್ನು ಮುನಿಸಿಪಲ್ ನಿಬಂಧನೆಯಿಂದ ತೆಗೆದುಹಾಕಲಾಯಿತು. ೧೯೩೦ರಲ್ಲಿ ಪ್ರಾಥಮಿಕ ಶಿಕ್ಷಣ ಕಾಯ್ದೆಯನ್ನು ಅಂಗೀಕರಿಸಿತು. ಇದರ ಮುಖ್ಯ ಉದ್ದೇಶವೆಂದರೆ ಸ್ಥಳೀಯ ಸಂಸ್ಥೆಗಳಿಗೆ ಪ್ರಾಥಮಿಕ ಶಿಕ್ಷಣದ ನಿರ್ವಹಣೆ, ನಿಯಂತ್ರಣ ಮತ್ತು ಹಣಕಾಸಿನ ಅಧಿಕಾರವನ್ನು ಕೊಡುವುದಾಗಿದ್ದು, ಇದು ೧೯೩೧ರ ಜುಲೈ ೧ರಂದು ಜಾರಿಗೆ ಬಂದಿತು.

## ಮೈಸೂರು ಪಟ್ಟಣ ಮುನಿಸಿಪಾಲಿಟಿಗಳ ಕಾಯ್ದೆ :

೧೯೩೩ರ ಮೈಸೂರು ಪಟ್ಟಣ ಮುನಿಸಿಪಾಲಿಟಿಗಳ ಕಾಯ್ದೆ ಮತ್ತು ೧೯೩೩ರ ಮೈಸೂರು ಸಣ್ಣ ಮುನಿಸಿಪಾಲಿಟಿಗಳ ಕಾಯ್ದೆ (೧೯೫೧ರ ಮೈಸೂರು ಪಟ್ಟಣ ಮುನಿಸಿಪಾಲಿಟಿಗಳ ಕಾಯ್ದೆಯಿಂದ ರದ್ದುಪಡಿಸಲಾಯಿತು) ಮತ್ತು ೧೯೩೩ರ ಪಟ್ಟಣ ಮುನಿಸಿಪಾಲಿಟಿಗಳ ಕಾಯ್ದೆಗಳು ನಗರ ಸಂಸ್ಥೆಗಳನ್ನು ಆಳುವ ಮುಖ್ಯ ಕಾಯ್ದೆಗಳಾಗಿದ್ದವು. ಅದು ವಯಸ್ಕ ಮತದಾನವನ್ನು ಜಾರಿಗೊಳಿಸಿತು ಮತ್ತು ಮುನಿಸಿಪಲ್ ಸಮಿತಿಗಳಲ್ಲಿ ಚುನಾವಣೆಯ ಅಂಶವನ್ನು ಹೆಚ್ಚಿಸಿತು. ೧೯೩೯ರಿಂದ ರಾಜ್ಯದ ಪ್ರತಿಯೊಂದು ಜಿಲ್ಲಾ ಬೋರ್ಡಿಗೆ ಚುನಾಯಿತ ಅಧ್ಯಕ್ಷ ಮತ್ತು ಉಪಾಧ್ಯಕ್ಷರಿದ್ದರು. ಇದರಿಂದ ಅಧಿಕೃತ ಮತ್ತು ನಾಮಕರಣದ ಅಂಶವನ್ನು ಗಣನೀಯವಾಗಿ ಕಡಿಮೆ ಮಾಡಿತು. ಹಾಗಾಗಿ ರಾಜ್ಯದಲ್ಲಿ ಎಂಟು ಜಿಲ್ಲಾ ಬೋರ್ಡುಗಳ ೨೯೫ ಸದಸ್ಯರ ಪೈಕಿ ೧೯೯ ಜನರು ಚುನಾಯಿತರು ಮತ್ತು ಸರಕಾರದಿಂದ ೬೦ ಜನ ಅಧಿಕಾರೇತರರು ನಾಮಕರಣ ಮಾಡಲ್ಪಡುವವರಾಗಿದ್ದರು. ಉಳಿದ ೩೬ ಜನರು ಪದನಿಮಿತ್ತ ಸದಸ್ಯರಾಗಿದ್ದರು. ಗ್ರಾಮೀಣ ಸಂಸ್ಥೆಗಳು ಅಭಿವೃದ್ಧಿ ಕಾರ್ಯಗಳಲ್ಲಿ ಪರಿಣಾಮಕಾರಿಯಾಗಿ ಸೇರಿಕೊಳ್ಳುವುದಕ್ಕಾಗಿ ದೃಢ ಅಸ್ತಿಭಾರದಲ್ಲಿಡಲು ಇವುಗಳಿಗೆ ಹೆಚ್ಚಿನ ಅಭಿವೃದ್ಧಿಯನ್ನು ಮಾಡಲಾಯಿತು. ಇವುಗಳಲ್ಲದೆ ಇನ್ನೂ ಅನೇಕ ಸುಧಾರಣೆಗಳನ್ನು ಮಾಡಲಾಯಿತು. ೧೯೪೮ರ ಗ್ರಾಮೀಣಾಭಿವೃದ್ಧಿ ಯೋಜನೆಯು ಸರಕಾರದ ಅಧಿಕಾರಗಳನ್ನು ವಿಕೇಂದ್ರೀಕರಣಗೊಳಿಸಿ ಅದನ್ನು ಅಧಿಕಾರೇತರ ಸಂಸ್ಥೆಗಳಿಗೆ ವಹಿಸಲು ಸಹಾಯ ಮಾಡಿದವು. ಆದರೆ ಈ ಯೋಜನೆಗಳು ಒಂದಕ್ಕೊಂದು ಒಂದರೊಡನೊಂದು ಸೇರಿಕೊಂಡುದರಿಂದ ಘರ್ಷಣೆಗಳಿಗೆ ಅವಕಾಶವಾಯಿತು.

## ವೆಂಕಟಪ್ಪ ಸಮಿತಿ :

ಈ ಸಮಸ್ಯೆಗಳ ಬಗ್ಗೆ ಗಮನಕೊಡಲು ಸ್ಥಳೀಯ ಸಂಸ್ಥೆಗಳಿಗೆ ತನಿಖೆ ಮತ್ತು ಸಮನ್ವಯ ಸಮಿತಿಗಳನ್ನು ೧೯೪೯ರಂದು ವೆಂಕಟಪ್ಪನವರ ಅಧ್ಯಕ್ಷತೆಯಲ್ಲಿ ರಚಿಸಲಾಯಿತು. ಇದರ ಕಾರ್ಯವೇನಾಗಿತ್ತೆಂದರೆ ೧೯೪೭-೪೮ರ ಅಭಿವೃದ್ಧಿ ಯೋಜನೆಗಳು ಮತ್ತು ಸ್ಥಳೀಯ ಸಂಸ್ಥೆಗಳು ಎಷ್ಟರಮಟ್ಟಿಗೆ ನಿರೀಕ್ಷೆಗಳನ್ನು ಪೂರೈಸಿದೆ ಮತ್ತು ಅವುಗಳ ವ್ಯವಸ್ಥೆ ಮತ್ತು ಕಾರ್ಯ ಮಾಡುವಿಕೆಯಲ್ಲಿ ಗ್ರಾಮೀಣ ಅಭಿವೃದ್ಧಿಗೆ ಉತ್ತಮಪಡಿಸುವ ಬಗ್ಗೆ ಸಲಹೆಗಳನ್ನು ನೀಡಲು ಕೇಳಲಾಯಿತು. ಇದರ ಶಿಫಾರಸುಗಳನ್ನು ೧೯೫೨ರ ಮೈಸೂರು ಗ್ರಾಮ ಪಂಚಾಯತಿಗಳು ಮತ್ತು ಜಿಲ್ಲಾ ಬೋರ್ಡುಗಳ ಕಾಯ್ದೆಯಲ್ಲಿ ಅಳವಡಿಸಲಾಗಿದ್ದು, ಅದರ ಪ್ರಕಾರ ಎರಡು ಹಂತದ ಸ್ಥಳೀಯ ಸ್ವಯಂ ಸರಕಾರವನ್ನು ಅಂದರೆ ಡಿಸ್ಟ್ರಿಕ್ಟ್ ಬೋರ್ಡುಗಳು, ಪಂಚಾಯತಿಗಳಿಂದ ಪರೋಕ್ಷವಾಗಿ ಚುನಾಯಿತರಾದವರಿರುತ್ತಿದ್ದರು. ಆದರೆ ಚುನಾವಣೆ ನಡೆಸಲು ಯಾವುದೇ ಕ್ರಮವನ್ನು ಕೈಗೊಳ್ಳಲಿಲ್ಲ ಮತ್ತು ಜಿಲ್ಲಾ ಬೋರ್ಡುಗಳನ್ನು ೧೯೫೪ರ ಮಾರ್ಚಿ ೧ರಿಂದ ರದ್ದುಪಡಿಸಲಾಯಿತು. ಸ್ಥಳೀಯ ಬೋರ್ಡುಗಳ ವಿಚಾರಣಾ ಸಮಿತಿ ಎಂಬ ಇನ್ನೊಂದು ಸಮಿತಿಯನ್ನು ಡಿ.ಎಚ್. ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ನೇಮಿಸಲಾಯಿತು. ಇದರ ಕೆಲಸವೇನೆಂದರೆ ಜಿಲ್ಲಾ ಬೋರ್ಡುಗಳನ್ನು ಮುಂದುವರಿಸಬೇಕೇ ಅಥವಾ ರದ್ದುಪಡಿಸಬೇಕೇ ಎಂಬುದನ್ನು ಮತ್ತು ರಾಜ್ಯದಲ್ಲಿ ತಾಲ್ಲೂಕು ಬೋರ್ಡುಗಳನ್ನು ರಚಿಸುವ ಸಾಧ್ಯತೆಯನ್ನು ಪರೀಕ್ಷಿಸುವುದಾಗಿತ್ತು ಮತ್ತು ಈ ಸಂಸ್ಥೆಗಳಿಗೆ ಚುನಾವಣೆಯ ವಿಧಾನ, ಅವುಗಳ ಕಾರ್ಯಗಳು, ಹಣಕಾಸು ಮತ್ತು ಅಧಿಕಾರಗಳು ಹಾಗೂ ಗ್ರಾಮ ಪಂಚಾಯತಿಗಳು ಮುಂತಾದ ಸಂಬಂಧಿತ ವಿಷಯಗಳಲ್ಲಿ ಸಂಬಂಧವನ್ನು ಪರೀಕ್ಷಿಸುವುದಾಗಿದ್ದಿತು. ಸಮಿತಿಯು ಶಿಫಾರಸು ಮಾಡಿದುದೇನೆಂದರೆ (i) ಜಿಲ್ಲೆಯೊಳಗಿರುವ ತಾಲ್ಲೂಕು ಬೋರ್ಡುಗಳ ಸದಸ್ಯರಿಂದ ಚುನಾಯಿತರಾದ ಸದಸ್ಯರನ್ನು ಜಿಲ್ಲಾ ಬೋರ್ಡುಗಳಲ್ಲಿ ಮುಂದುವರಿಸುವುದು (ii) ತಾಲ್ಲೂಕು ಬೋರ್ಡುಗಳ ಪುನರುಜ್ಜೀವನ (iii) ತಾಲ್ಲೂಕು ಬೋರ್ಡಿನ ಮೂರನೇ ಒಂದು ಭಾಗದಷ್ಟು ಸದಸ್ಯರನ್ನು ಗ್ರಾಮ ಪಂಚಾಯತಿಗಳು ಮತ್ತು ಪಟ್ಟಣ ಮುನಿಸಿಪಲ್ ಸಮಿತಿಗಳಿಗೆ ಮೀಸಲಿಡಬೇಕು ಮತ್ತು ಉಳಿದ ಮೂರನೇ ಎರಡನ್ನು ತಾಲ್ಲೂಕಿನಲ್ಲಿ ನೇರ ಚುನಾವಣೆಯಿಂದ ಆರಿಸತಕ್ಕದ್ದು. ಸಮಿತಿಯು ಮೂರು ಹಂತದ ಮಾದರಿಯನ್ನು ಶಿಫಾರಸು ಮಾಡಿತು. ಕುತೂಹಲಕರವಾಗಿ ನಗರ ಸಂಸ್ಥೆಯಾದ ಪಟ್ಟಣ ಮುನಿಸಿಪಾಲಿಟಿಯನ್ನು ಗ್ರಾಮ ಸಂಸ್ಥೆಗಳ ಜೊತೆ ಸೇರಿಸಿತು. ಇದನ್ನು ಈಗಿನ ಪಂಚಾಯತಿ ರಾಜ್ಯ ವ್ಯವಸ್ಥೆಯಲ್ಲಿ ಮಾಡಲಾಗಿಲ್ಲ. ಆದರೆ ಈ ಶಿಫಾರಸುಗಳನ್ನು ರಾಜ್ಯಗಳ ಪುನರ್ವಿಂಗಡಣೆಯಾದುದರಿಂದ ಜಾರಿಗೊಳಿಸಲಾಗಿಲ್ಲ. ರಾಜ್ಯ ಪುನರ್ವಿಂಗಡಣೆಯಾದ ಮೇಲೆ ಮತ್ತು ವ್ಯಾಪಕವಾದ ಹೊಸ ಶಾಸನ ಮಾಡಿದುದರಿಂದ ಸ್ಥಳೀಯ

ಸಂಸ್ಥೆಗಳ ಬಗ್ಗೆ ಎಲ್ಲಾ ಹಿಂದಿನ ಶಾಸನಗಳನ್ನು ೧೯೫೯ರ ಕರ್ನಾಟಕ ಗ್ರಾಮ ಪಂಚಾಯತಿ ಮತ್ತು ಸ್ಥಳೀಯ ಬೋರ್ಡುಗಳ ಕಾಯ್ದೆಯು ರದ್ದುಪಡಿಸಿತು.

## ಮುಂಬೈ ಕರ್ನಾಟಕ ಪ್ರದೇಶ :

**ಮುನಿಸಿಪಾಲಿಟಿಗಳು:** ಮೊದಲನೇ ಸಲಕ್ಕೆ ಹಳೆಯ ಮುಂಬೈ ಪ್ರಾಂತ್ಯದಲ್ಲಿ ಈಸ್ಟ್ ಇಂಡಿಯಾ ಕಂಪನಿಯಡಿಯಲ್ಲಿ ಸ್ಥಳೀಯ ಸಂಸ್ಥೆಗಳನ್ನು ಸೃಷ್ಟಿಸಲಾಯಿತು. ನಂತರ, ಬಾಂಬೆ ಜಿಲ್ಲಾ ಮುನಿಸಿಪಾಲಿಟಿಗಳ ಕಾಯ್ದೆ (೧೯೦೧ರ III)ಯಡಿಯಲ್ಲಿ ಮುನಿಸಿಪಾಲಿಟಿಗಳನ್ನು ರಚಿಸಲಾಯಿತು. ಈ ಕಾಯ್ದೆಯಡಿಯಲ್ಲಿ ಮುನಿಸಿಪಾಲಿಟಿಯನ್ನು ರಚಿಸಬೇಕೆಂದಿರುವ ಮುನಿಸಿಪಲ್ ಜಿಲ್ಲೆಯಾಗಿ ಯಾವುದೇ ಸ್ಥಳೀಯ ಪ್ರದೇಶವನ್ನು ಒಂದು ಅಧಿಸೂಚನೆಯಿಂದ ಘೋಷಿಸಲು ರಾಜ್ಯ ಸರಕಾರಕ್ಕೆ ಅಧಿಕಾರ ದೊರೆಯಿತು. ಒಂದು ಮುನಿಸಿಪಾಲಿಟಿಯ ಅಧಿಕಾರಾವಧಿಯು ಮೂರು ವರ್ಷಗಳಾಗಿದ್ದು, ಹೆಚ್ಚಿಗೆ ಒಂದು ವರ್ಷ ವಿಸ್ತರಿಸಲು ಅವಕಾಶವಿದ್ದಿತು. ಕಡ್ಡಾಯವಾದ ಕಾರ್ಯಗಳಲ್ಲಿ ಆರೋಗ್ಯ, ರಕ್ಷಣೆ, ಜನರ ಅನುಕೂಲ ಮತ್ತು ಒಳಿತಿನ ಎಲ್ಲ ವಿಷಯಗಳೂ ಸೇರಿತ್ತು. ಕಾಯ್ದೆಯು ಒದಗಿಸಿರುವುದೇನೆಂದರೆ ಎಲ್ಲಾ ಮುನಿಸಿಪಾಲಿಟಿಗಳಲ್ಲಿ ಒಂದು ನಿರ್ವಹಣಾ ಸಮಿತಿಯ ರಚನೆಯ ಕಡ್ಡಾಯ ಮತ್ತು ಸರಕಾರವು ವಿಶೇಷವಾಗಿ ಪ್ರಕಟಿಸಿದ ಮುನಿಸಿಪಾಲಿಟಿಗಳ ವಿಷಯದಲ್ಲಿ ಯಾತ್ರಿಗಳ ಸಮಿತಿಗೆ ಅವಕಾಶ ಮಾಡಿದೆ. ಇದರಿಂದ ಯಾತ್ರಾರ್ಥಿಗಳಿಗೆ ಉತ್ತಮ ಸೌಕರ್ಯಗಳನ್ನು ಒದಗಿಸುವುದಾಗಿದೆ. ಮುನಿಸಿಪಲ್ ಸಂಸ್ಥೆಗಳ ಮೇಲಿನ ನಿಯಂತ್ರಣವನ್ನು ವಿಷಯಗಳಿಗೆ ಸಂಬಂಧಿಸಿದಂತೆ ಜಿಲ್ಲಾ ಕಲೆಕ್ಟರ್, ಸ್ಥಳೀಯ ಪ್ರಾಧಿಕಾರಗಳ ನಿರ್ದೇಶಕ ಮತ್ತು ರಾಜ್ಯ ಸರಕಾರವು ಹೊಂದಿರುತ್ತವೆ. ಮುನಿಸಿಪಾಲಿಟಿಯ ಶಿಫಾರಸ್ಸಿನ ಮೇಲೆ ಸ್ಥಳೀಯ ಪ್ರಾಧಿಕಾರದ ನಿರ್ದೇಶಕರಿಗೆ ಕರ್ತವ್ಯ ಮಾಡುವಾಗ ಅಸಭ್ಯ ರೀತಿಯಲ್ಲಿ ವರ್ತಿಸುವ ಯಾವುದೇ ಕೌನ್ಸಿಲರ್ ಅನ್ನು ತೆಗೆದುಹಾಕುವ ಅಧಿಕಾರವಿದೆ ಮತ್ತು ಅಧ್ಯಕ್ಷ ಮತ್ತು ಉಪಾಧ್ಯಕ್ಷರು ತಮ್ಮ ಕರ್ತವ್ಯಗಳನ್ನು ಮಾಡುವಾಗ ನಿರ್ಲಕ್ಷ್ಯ ಅಥವಾ ದುರ್ನಡತೆ ತೋರಿದರೆ ಅಥವಾ ಅಸಾಮರ್ಥ್ಯಕ್ಕಾಗಿ ರಾಜ್ಯ ಸರಕಾರವು ಅಂತಹವರನ್ನು ತೆಗೆದುಹಾಕಬಹುದು.

**ಬರೋ ಮುನಿಸಿಪಾಲಿಟಿಗಳು** : ೧೯೨೫ರಲ್ಲಿ ಪಾಸು ಮಾಡಿದ ಕಾಯ್ದೆಯು ೧೯೦೧ರ ಬೊಂಬಾಯಿ ಜಿಲ್ಲಾ ಮುನಿಸಿಪಲ್ ಕಾಯ್ದೆಯಡಿಯಲ್ಲಿರುವ ಮುನಿಸಿಪಾಲಿಟಿಗಳಿಗೆ ನೀಡಲಾದ ಅಧಿಕಾರಕ್ಕಿಂತ ಹೆಚ್ಚಿನ ಅಧಿಕಾರವನ್ನು ನೀಡಿದೆ. ಅದೇ ಪ್ರಕಾರ ಕೆಲವು ಮುನಿಸಿಪಾಲಿಟಿಗಳನ್ನು ಬರೋ ಮುನಿಸಿಪಾಲಿಟಿಗಳಾಗಿ ಮೇಲ್ದರ್ಜೆಗೆ ಏರಿಸಲಾಯಿತು. ಬರೋ ಮುನಿಸಿಪಾಲಿಟಿಗಳ ವಿಷಯದಲ್ಲಿ ಹೆಚ್ಚು ವಿಸ್ತಾರವಾದ ಅಧಿಕಾರವುಳ್ಳ ಸ್ಥಾಯಿ ಸಮಿತಿಗಳನ್ನು ರಚಿಸಲಾಯಿತು. ಮೇಲಿನ ಕಾಯ್ದೆಯಡಿಯಲ್ಲಿ ವಿದ್ಯಾರ್ಹತೆಯುಳ್ಳ ಚೀಫ್ ಆಫೀಸರ್‌ರ ನೇಮಕ ಕಡ್ಡಾಯವಾಗಿತ್ತು ಮತ್ತು ಅಧೀನ ಸಿಬ್ಬಂದಿಯನ್ನು ನಿಯಂತ್ರಿಸಲು ಅವರಿಗೆ ಅಧಿಕಾರ ನೀಡಲಾಗಿತ್ತು. ಬೊಂಬಾಯಿ ಪ್ರಾಥಮಿಕ ಶಿಕ್ಷಣ ಕಾಯ್ದೆಯಡಿಯಲ್ಲಿ (೧೯೪೭ರ LXI) ಬರೋ ಮುನಿಸಿಪಾಲಿಟಿಗಳಿಗೆ ತಮ್ಮ ಕ್ಷೇತ್ರದೊಳಗಿರುವ ಎಲ್ಲಾ ಮಾನ್ಯ ಮಾಡಲಾದ ಶಾಲೆಗಳನ್ನು ನಿಯಂತ್ರಿಸುವ ಅಧಿಕಾರ ನೀಡಲಾಗಿತ್ತು ಮತ್ತು ಅವು ಪ್ರಾಥಮಿಕ ಶಿಕ್ಷಣವನ್ನು ನಿರ್ವಹಿಸುತ್ತಿದ್ದವು.

> *ಅಲ್ಪಸಂಖ್ಯಾತ ವರ್ಗಗಳಾದ ಮುಸ್ಲಿಮರು, ಭಾರತೀಯ ಕ್ರೈಸ್ತರು ಮತ್ತು ಹಿಂದುಳಿದ ವರ್ಗಗಳಿಗೆ ೩೫ ಸ್ಥಾನಗಳು ಮೀಸಲಾದವು, ಕಡೇಪಕ್ಷ ೧೫೦ ಮಂದಿ ಸದಸ್ಯರು ಗ್ರಾಮಾಂತರ ಪ್ರದೇಶಗಳಿಂದ ಚುನಾಯಿತ ರಾಗಬೇಕಾಯಿತು.*

**ಜಿಲ್ಲಾ ಸ್ಥಳೀಯ ಬೋರ್ಡುಗಳು:** ಬೊಂಬಾಯಿ ಸ್ಥಳೀಯ ಬೋರ್ಡುಗಳ ಕಾಯ್ದೆ (೧೯೨೩ರ VI)ಯಡಿಯಲ್ಲಿ ಮುನಿಸಿಪಾಲಿಟಿ ಪ್ರದೇಶವನ್ನು ಹೊರತುಪಡಿಸಿ ಉಳಿದ ಪ್ರತಿ ಕಂದಾಯ ಜಿಲ್ಲೆಯ ಪ್ರದೇಶವನ್ನೊಳಗೊಂಡ ಜಿಲ್ಲಾ ಬೋರ್ಡುಗಳನ್ನು ರಚಿಸಲಾಯಿತು. ಬೋರ್ಡು ಪೂರ್ಣವಾಗಿ ಚುನಾಯಿತವಾಗಿದ್ದು, ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಮಹಿಳೆಯರಿಗೆ ಮೀಸಲಾತಿ ಇರುತ್ತಿತ್ತು. ಅಧಿಕಾರದ ಅವಧಿ ಮೂರು ವರ್ಷವಾಗಿದ್ದು, ಅದನ್ನು ಇನ್ನೂ ಒಂದು ವರ್ಷ ವಿಸ್ತರಿಸಬಹುದಾಗಿತ್ತು. ಮಂಡಳಿಯ ಅಧ್ಯಕ್ಷನನ್ನು ತನ್ನ ಸದಸ್ಯರೊಳಗೆ ಚುನಾಯಿಸಲಾಗುತ್ತಿತ್ತು ಮತ್ತು ಅವರ ಅಧಿಕಾರಾವಧಿಯೂ ಮಂಡಳಿಯ ಅವಧಿಯಷ್ಟೇ ಇರುತ್ತಿತ್ತು. ಕಾಯ್ದೆಯಡಿಯಲ್ಲಿ ಒಂದು

ಸ್ಥಾಯೀ ಸಮಿತಿ ಮತ್ತು ಒಂದು ಆಯವ್ಯಯ ಸಮಿತಿಯನ್ನು ನೇಮಿಸುವುದು ಕಡ್ಡಾಯವಾಗಿತ್ತು. ಬೋರ್ಡಿನ ಮುಖ್ಯ ಕಡ್ಡಾಯ ಕಾರ್ಯವೆಂದರೆ: ೧) ರಸ್ತೆಗಳ ಮತ್ತು ಇತರ ಸಂಪರ್ಕ ಮಾಧ್ಯಮಗಳ ರಚನೆ, ನಿರ್ವಹಣೆ ಮತ್ತು ರಿಪೇರಿ. ೨) ಆಸ್ಪತ್ರೆಗಳು, ಡಿಸ್ಪೆನ್ಸರಿಗಳು, ಧರ್ಮಶಾಲೆಗಳು ಮತ್ತು ಇತರ ಸಾರ್ವಜನಿಕ ಕಟ್ಟಡಗಳ ನಿರ್ಮಾಣ ಮತ್ತು ನಿರ್ವಹಣೆ. ೩) ಸಾರ್ವಜನಿಕ ಕೆರೆಗಳು, ಬಾವಿಗಳು ಮತ್ತು ನೀರಿನ ಕೆಲಸಗಳು ಮುಂತಾದವುಗಳ ನಿರ್ಮಾಣ ಮತ್ತು ದುರಸ್ತಿ. ೪) ಸಾರ್ವಜನಿಕ ದಾಕು ಹಾಕುವುದು ಮತ್ತು ಸಾರ್ವಜನಿಕರ ಆರೋಗ್ಯಕ್ಕೆ ಅಗತ್ಯವಾದ ಕ್ರಮಗಳು. ೫) ರಸ್ತೆಗಳ ಬದಿಯಲ್ಲಿ ಮರಗಳನ್ನು ನೆಡುವುದು ಮತ್ತು ಕಾಪಾಡುವುದು. ಕಲೆಕ್ಟರು, ಸ್ಥಳೀಯ ಪ್ರಾಧಿಕಾರಗಳ ನಿರ್ದೇಶಕರು ಮತ್ತು ರಾಜ್ಯ ಸರಕಾರವು ಜಿಲ್ಲಾ ಬೋರ್ಡುಗಳ ನಿಯಂತ್ರಣ ಪ್ರಾಧಿಕಾರ. ೧೯೨೩ರ ಬೊಂಬಾಯಿ ಪ್ರಾಥಮಿಕ ಶಿಕ್ಷಣ ಕಾಯ್ದೆ IVರಂತೆ ಸ್ಥಳೀಯ ಸಂಸ್ಥೆಗಳಿಗೆ ಕಡ್ಡಾಯ ಪ್ರಾಥಮಿಕ ಶಿಕ್ಷಣ ಜಾರಿಗೊಳಿಸುವ ಅಧಿಕಾರ ನೀಡಲಾಗಿತ್ತು ಮತ್ತು ಅದರಂತೆಯೇ ಜಿಲ್ಲಾ ಶಾಲಾ ಬೋರ್ಡುಗಳು ಮತ್ತು ಮುನಿಸಿಪಲ್ ಸ್ಕೂಲು ಬೋರ್ಡುಗಳನ್ನು ಪ್ರತಿಯೊಂದು ಸ್ಥಳಿಯ ಸಂಸ್ಥೆಗೆ ಆ ಸಂಸ್ಥೆಯಿಂದಲೇ ಚುನಾಯಿತರಾದ ಸದಸ್ಯರನ್ನೊಳಗೊಂಡಿರುವಂತೆ ರಚಿಸಲಾಯಿತು. ಆದರೂ ಈ ಶಾಲಾ ಬೋರ್ಡುಗಳು ರಾಜ್ಯಗಳ ಪುನರ್ವಿಂಗಡಣೆಯ ನಂತರವೂ ಕೆಲಸ ಮಾಡುತ್ತಿದ್ದು, ೧೯೬೯ರಲ್ಲಿ ಸರಕಾರವು ಅವನ್ನು ವಹಿಸಿಕೊಂಡಿತು ಮತ್ತು ಈ ಸಂಸ್ಥೆಗಳ ನೌಕರರು ಸರಕಾರಿ ನೌಕರರಾದರು.

**ಗ್ರಾಮ ಪಂಚಾಯತಿಗಳು** : ಗ್ರಾಮ ಪಂಚಾಯತಿಗಳು ಬೊಂಬಾಯಿ ಗ್ರಾಮ ಪಂಚಾಯತಿಗಳ ಕಾಯ್ದೆ (೧೯೩೩ರ VI) ಅಡಿಯಲ್ಲಿ ಆಳಲ್ಪಡುತ್ತಿದ್ದವು. ಈ ಕಾಯ್ದೆಯನ್ನು ೧೯೪೯ರ ಜುಲೈನಲ್ಲಿ ತಿದ್ದುಪಡಿ ಮಾಡಲಾಯಿತು. ಕಾಯ್ದೆಯ ಪ್ರಕಾರ ೨೦೦೦ ಜನಸಂಖ್ಯೆಗಿಂತ ಕಡಿಮೆ ಇರದ ಪ್ರತಿಯೊಂದು ಹಳ್ಳಿಗೆ ಒಂದು ಪಂಚಾಯತಿಯನ್ನು ರಚಿಸಲಾಯಿತು. ೧೦೦೦ ಜನಸಂಖ್ಯೆ ಇರುವ ಹಳ್ಳಿಗೆ ಕೂಡ ಪಂಚಾಯತಿಯನ್ನು ಸ್ಥಾಪಿಸುವ ಅವಕಾಶ ಒದಗಿಸಲಾಗಿದೆ. ಆದರೆ ಅದಕ್ಕೆ ಹಳ್ಳಿಯವರಿಂದ ಬೇಡಿಕೆ ಇರಬೇಕು. ಪಂಚಾಯತಿಗೆ ಸದಸ್ಯರ ಗರಿಷ್ಠ ಸಂಖ್ಯೆ ಹದಿನೈದು, ಕನಿಷ್ಠ ಸಂಖ್ಯೆ ಏಳು. ಪಂಚಾಯತಿಗಳು ಪೂರ್ಣವಾಗಿ ಚುನಾಯಿತವಾಗಿದ್ದು, ಮಹಿಳೆಯರು, ಪರಿಶಿಷ್ಟ ಜಾತಿ ಮತ್ತು ವರ್ಗಗಳಿಗೆ ಸ್ಥಾನವನ್ನು ಮೀಸಲಿಡಬೇಕಾದ ಅವಕಾಶವಿತ್ತು. ವಯಸ್ಕ ಮತದಾನದ ಆಧಾರದ ಮೇಲೆ ಚುನಾವಣೆಯನ್ನು ನಡೆಸಲಾಗುತ್ತಿತ್ತು. ೧೯೩೩ರ ಕಾಯ್ದೆಯ ಒಂದು ಮುಖ್ಯವಾದ ಅಂಶವೆಂದರೆ ನ್ಯಾಯ ಪಂಚಾಯತಿಗಳಿಗೆ ಅವಕಾಶವಿದ್ದು, ಪಂಚಾಯತಿಯ ಸದಸ್ಯರಿಂದ ಐವರು ಚುನಾಯಿತ ಸದಸ್ಯರಿಗೆ ಇದರಲ್ಲಿ ಅವಕಾಶವಿದ್ದು, ಅದರ ಅವಧಿ ಪಂಚಾಯತಿಯ ಅವಧಿಯಷ್ಟೇ ಇತ್ತು. ಅವುಗಳಿಗೆ ಸಣ್ಣ ಅಪರಾಧಗಳನ್ನು ವಿಚಾರಿಸುವ ಅಧಿಕಾರ ಮತ್ತು ಸಾಮಾನ್ಯ ವಿವಾದಗಳನ್ನು ಪರಿಹರಿಸುವ ಅಧಿಕಾರವಿತ್ತು. ಇದು ಪಂಚಾಯತಿಯ ಸಾಂಪ್ರದಾಯಿಕ ಕಾರ್ಯವಾಗಿದ್ದಿತು.

**ಕಾಳೆ ಸಮಿತಿ** : ಸ್ಥಳೀಯ ಸ್ವಯಂ ಸರಕಾರದ ಸಮಿತಿಯೊಂದನ್ನು ೧೯೩೯ರಲ್ಲಿ ನೇಮಕ ಮಾಡಲಾಗಿದ್ದು, ಅದನ್ನು ಕಾಳೆ ಸಮಿತಿ ಎಂದು ಕರೆಯಲಾಗಿತ್ತು. ಸರಕಾರ ಮತ್ತು ಸ್ಥಳೀಯ ಸಂಸ್ಥೆಗಳ ನಡುವೆ ಹಣಕಾಸು ಸಂಬಂಧಗಳನ್ನು ಪರೀಕ್ಷಿಸುವುದು, ಅವುಗಳ ಆಡಳಿತದ ಮಟ್ಟ ಮತ್ತು ಅವುಗಳ ಕಾರ್ಯಗಳ ವಿಸ್ತರಣೆಯ ಅಪೇಕ್ಷತೆಯನ್ನು ಪರೀಕ್ಷಿಸುವುದಾಗಿದ್ದಿತು. ಅದರ ಶಿಫಾರಸುಗಳನ್ನು ಹೆಚ್ಚು ಕಡಿಮೆ ಅನುಷ್ಠಾನಗೊಳಿಸಲಾಯಿತು. ಎರಡನೇ ವಿಶ್ವಯುದ್ಧ ಪ್ರಾರಂಭವಾದುದರಿಂದ ಹೆಚ್ಚಿಗೆ ಏನೂ ಮಾಡಲಾಗಲಿಲ್ಲ. ಸ್ವಾತಂತ್ರ್ಯೋತ್ತರದ ಅವಧಿಯಲ್ಲಿ ಮಾತ್ರ ಸ್ಥಳೀಯ ಸಂಸ್ಥೆಗಳು ಸರಿಯಾದ ಗಮನವನ್ನು ಪಡೆಯಲು ಸಾಧ್ಯವಾಯಿತು. ಹಳೆಯ ಮುಂಬೈ ರಾಜ್ಯದಲ್ಲಿ ನಗರ ಸಂಸ್ಥೆಗಳು ರಾಜ್ಯಗಳ ಪುನರ್ವಿಂಗಡಣೆಯ ಸಮಯದಲ್ಲಿ ೧೯೨೫ರ ಬೊಂಬಾಯಿ ಮುನಿಸಿಪಲ್ ಬರೋಗಳ ಕಾಯ್ದೆಯಡಿಯಲ್ಲಿ ಕಾರ್ಯ ನಡೆಸುತ್ತಿತ್ತು.

## ಮದರಾಸು ಪ್ರದೇಶ :

ದಕ್ಷಿಣ ಕನ್ನಡ, ಬಳ್ಳಾರಿ ಜಿಲ್ಲೆಗಳು ಮತ್ತು ಕೊಳ್ಳೇಗಾಲ ತಾಲ್ಲೂಕುಗಳು ಮೊದಲಿನ ಮದರಾಸು ಪ್ರಾಂತ್ಯದಲ್ಲಿದ್ದು, ಸ್ಥಳೀಯ ಆಡಳಿತವು ೧೮೬೫ರ ನಗರಾಭಿವೃದ್ಧಿ ಕಾಯ್ದೆ ಮತ್ತು ೧೮೭೧ರ ಸ್ಥಳೀಯ ನಿಧಿಗಳ ಕಾಯ್ದೆಯನ್ನು ಜಾರಿಗೆ ತಂದಾಗ ಪ್ರಾರಂಭವಾಯಿತು. ಮೊದಲನೆಯ ಕಾಯ್ದೆಯು ಮುನಿಸಿಪಾಲಿಟಿಗಳನ್ನು ಸೃಷ್ಟಿಸಿದರೆ, ಎರಡನೆಯದರಿಂದ ಸ್ಥಳೀಯ ನಿಧಿ ಬೋರ್ಡುಗಳನ್ನು ರಚಿಸಲಾಯಿತು.

**ಲೋಕಲ್ ಬೋರ್ಡುಗಳು:** ೧೮೭೧ರ ಸ್ಥಳೀಯ ನಿಧಿಗಳ ಕಾಯ್ದೆಯ ಇಡೀ ಪ್ರಾಂತ್ಯವನ್ನು ಅನೇಕ ವೃತ್ತಗಳಾಗಿ ಮತ್ತು ಪ್ರತಿಯೊಂದು ವೃತ್ತದಲ್ಲಿ ಆರು ಸದಸ್ಯರುಳ್ಳ ಬೋರ್ಡುಗಳನ್ನು ರಚಿಸಲಾಯಿತು. ಅವುಗಳಲ್ಲಿ ಮೂವರನ್ನು ಮೂರು ವರ್ಷಗಳ ಅವಧಿಗೆ ಅಧಿಕಾರೇತರ ಸದಸ್ಯರನ್ನು ನಾಮಕರಣ ಮಾಡಲಾಗುತ್ತಿತ್ತು. ಜಿಲ್ಲೆಯ ಕಲೆಕ್ಟರ್ ಪ್ರತಿ ಬೋರ್ಡಿನ ಪದನಿಮಿತ್ತ ಅಧ್ಯಕ್ಷರನ್ನಾಗಿ ಮಾಡಲಾಗಿತ್ತು. ೧೮೭೧ರ ಈ ಕಾಯ್ದೆಯು ೧೮೬೩ರ ಶಿಕ್ಷಣ ಸೆಸ್ ಕಾಯ್ದೆ ಮತ್ತು ೧೮೬೮ರ ಜಿಲ್ಲಾ ರಸ್ತೆ ಸೆಸ್ ಕಾಯ್ದೆಯನ್ನು ರದ್ದುಪಡಿಸಿತು. ಸ್ಥಳೀಯ ನಿಧಿಗಳು ರಸ್ತೆಗಳು ಮತ್ತು ಸಂಪರ್ಕಗಳ ಕಾಪಾಡುವಿಕೆ, ಆಸ್ಪತ್ರೆಗಳು, ಮಾರುಕಟ್ಟೆಗಳು, ಧರ್ಮಛತ್ರಗಳು, ಕೆರೆಗಳು ಮತ್ತು ಬಾವಿಗಳ ನಿರ್ಮಾಣ ಮತ್ತು ಕಾಪಾಡುವಿಕೆಗೆ ಜವಾಬ್ದಾರವಾಗಿದ್ದವು. ಈ ಕಾಯ್ದೆಯಡಿಯಲ್ಲಿ ಬೋರ್ಡಿಗೆ ತೆರಿಗೆ ವಿಧಿಸುವ ಅಧಿಕಾರವಿರಲಿಲ್ಲ ಮತ್ತು ಸರಕಾರದ ಪರವಾಗಿ ನಿಧಿಗಳ ನಿರ್ವಹಣೆ ಮಾಡಬಹುದು. ೧೩ ವರ್ಷಗಳ ನಂತರ, ಸ್ಥಳೀಯ ನಿಧಿಗಳ ಕಾಯ್ದೆಯನ್ನು ೧೮೮೪ರಲ್ಲಿ ರದ್ದುಪಡಿಸಲಾಯಿತು. ಅದೇ ರೀತಿಯಲ್ಲಿ ಸ್ಥಳೀಯ ಬೋರ್ಡುಗಳ ಮೇಲೆ ನಿಯಂತ್ರಣವನ್ನು ರೆವಿನ್ಯೂ ಬೋರ್ಡಿನಿಂದ ಚಲಾಯಿಸಲಾಗುತ್ತಿತ್ತು. ನಂತರ ಅದನ್ನು ಸರಕಾರವು ವಹಿಸಿಕೊಂಡಿತು. ಸ್ಥಳೀಯ ವಿಷಯಗಳ ಆಡಳಿತವನ್ನು ೨೪ ಸದಸ್ಯರಿಗಿಂತ ಕಡಿಮೆ ಇರದ ಪ್ರತಿಯೊಂದು ಕಂದಾಯ ಜಿಲ್ಲೆಗಳಿಗೆ ರಚಿಸಲಾದ ಏಕ ಜಿಲ್ಲಾ ಬೋರ್ಡುಗಳಿಗೆ ವಹಿಸಲಾಗಿತ್ತು. ಹೊಸ ಕಾಯ್ದೆಯು ಸರಕಾರದ ಮಂಜೂರಾತಿಯೊಂದಿಗೆ ಕಾಯ್ದೆಯಲ್ಲಿ ಅಧೀಕರಿಸಿದ ಯಾವುದೇ ತೆರಿಗೆಯನ್ನು ಬೋರ್ಡುಗಳು ವಿಧಿಸುವ ಅಧಿಕಾರ ನೀಡಲಾಗಿತ್ತು. ಈ ಹೊಸ ಕಾಯ್ದೆಯು ಉಪಬಂಧಗಳ ಪ್ರಕಾರ ಪ್ರತಿಯೊಂದು ತಾಲ್ಲೂಕಿಗೆ ಅಥವಾ ತಾಲ್ಲೂಕುಗಳ ಗುಂಪೊಂದಕ್ಕೆ ೧೨ ಸದಸ್ಯರಿಗಿಂತ ಕಡಿಮೆಯಿಲ್ಲದಂತೆ ತಾಲ್ಲೂಕು ಬೋರ್ಡುಗಳನ್ನು ರಚಿಸಲಾಯಿತು. ತಾಲ್ಲೂಕು ಬೋರ್ಡಿನ ಸಂಪನ್ಮೂಲಗಳು ಯಾವುವೆಂದರೆ ತಾಲ್ಲೂಕು ಬೋರ್ಡಿನ ಪ್ರದೇಶದಲ್ಲಿ ಜಿಲ್ಲಾ ಬೋರ್ಡುಗಳು ವಿಧಿಸಿದ ತೆರಿಗೆಯ ಸಂಗ್ರಹಣೆಯ ಅರ್ಧಭಾಗದಷ್ಟು ಮತ್ತು ಮಾರುಕಟ್ಟೆಗೆ ಲೈಸೆನ್ಸ್ ಶುಲ್ಕ ಮುಂತಾದ ಇತರ ಶುಲ್ಕಗಳು ಸೇರಿದ್ದವು. ೧೮೮೪ರ ಕಾಯ್ದೆಯಡಿಯಲ್ಲಿ ಪಂಚಾಯತಿ ಬೋರ್ಡುಗಳನ್ನು ಒಂದು ಹಳ್ಳಿಗೆ ಅಥವಾ ಹಳ್ಳಿಗಳ ಒಂದು ಗುಂಪಿಗೆ ಪ್ರತಿ ಪಂಚಾಯತಿ ಬೋರ್ಡಿನಲ್ಲಿ ಐದು ಸದಸ್ಯರಿಗಿಂತ ಕಡಿಮೆ ಇಲ್ಲದಿರುವಂತೆ ರಚಿಸಲಾಗುತ್ತಿತ್ತು. ಪಂಚಾಯತಿ ಸಂಘವನ್ನುಂಟುಮಾಡುವ ಹಳ್ಳಿಗರ ಮುಖ್ಯಸ್ಥರು ಪದನಿಮಿತ್ತ ಸದಸ್ಯರಾಗಿರುತ್ತಿದ್ದರು. ಈ ಮುಖ್ಯಸ್ಥರಲ್ಲಿ ಒಬ್ಬರನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗುತ್ತಿತ್ತು. ಹಳ್ಳಿಯ ಮುಖ್ಯಸ್ಥರಲ್ಲದೆ ಬೇರೆ ಸದಸ್ಯರನ್ನೆಲ್ಲ ಸರಕಾರವು ನೇಮಕ ಮಾಡುತ್ತಿತ್ತು ಅಥವಾ ಭಾಗವನ್ನು ಸರಕಾರವು ನೇಮಕ ಮಾಡುತ್ತಿತ್ತು ಮತ್ತು ಉಳಿದವರು ತೆರಿಗೆ ಪಾವತಿಸುವುದರಿಂದ ಚುನಾಯಿತರಾಗುತ್ತಿದ್ದರು. ಪಂಚಾಯತಿ ಬೋರ್ಡುಗಳ ಸಂಪನ್ಮೂಲಗಳು ಯಾವುವೆಂದರೆ ೪ ಅಣೆಗಳಿಂದ ಹಿಡಿದು ೫ ರೂ.ವರೆಗೂ ಮನೆಗಳ ವರ್ಗೀಕರಣವಾದಂತೆ ಬದಲಾಯಿಸುತ್ತಿದ್ದ ಮನೆ ತೆರಿಗೆ ಮತ್ತು ತಾಲ್ಲೂಕು ಬೋರ್ಡಿನ ಸಹಾಯದಿಂದ ಕೂಡಿರುತ್ತಿದ್ದಿತು.

೧೮೮೪ರ ಕಾಯ್ದೆಯನ್ನು ೧೯೨೦ರ ಸ್ಥಳೀಯ ಬೋರ್ಡುಗಳ ಕಾಯ್ದೆಯು ಬದಲಾಯಿಸಿತು. ಇದು ಸ್ಥಳೀಯ ಆಡಳಿತದಲ್ಲಿ ಒಂದು ಮೈಲಿಗಲ್ಲಾಗಿದ್ದಿತು. ಈ ಕಾಯ್ದೆಯ ಪ್ರತಿಯೊಂದು ಲೋಕಲ್ ಬೋರ್ಡಿಗೂ ಸ್ವತಂತ್ರ ಸ್ಥಾನವನ್ನು ನೀಡಿತು ಮತ್ತು ಅವುಗಳ ಬಲವನ್ನು ಹೆಚ್ಚಿಸಿರುವುದು ಮಾತ್ರವಲ್ಲದೆ ಚುನಾಯಿತ ಸದಸ್ಯರು, ಸಂಪನ್ಮೂಲಗಳ ಅಧಿಕಾರಗಳ ಪ್ರಮಾಣವನ್ನು ಹೆಚ್ಚಿಸಿದವು. ೧೯೨೦ರಲ್ಲಿ ಮದರಾಸು ಪ್ರಾಥಮಿಕ ಶಿಕ್ಷಣ ಕಾಯ್ದೆ VIII ಪ್ರಾಥಮಿಕ ಶಿಕ್ಷಣವನ್ನು ವಿಸ್ತರಿಸಲು ವಿದ್ಯಾ ಸುಂಕ ವಿಧಿಸುವುದಕ್ಕೆ ತಾಲ್ಲೂಕು ಬೋರ್ಡುಗಳಿಗೆ ಮತ್ತು ಮುನಿಸಿಪಾಲಿಟಿಗಳಿಗೆ ಕಡ್ಡಾಯ ಮಾಡಿತ್ತು. ಮತ್ತು ಸರಕಾರವು ಸುಂಕದಿಂದ ಬಂದ ಮೊಬಲಗಿಗೆ ಸಮನಾಗಿ ವಂತಿಗೆ ನೀಡಬೇಕಾಗಿತ್ತು. ೧೯೩೪ರಲ್ಲಿ ತಾಲ್ಲೂಕು ಬೋರ್ಡುಗಳನ್ನು ರದ್ದುಪಡಿಸಿದುದರ ಕಾರಣವಾಗಿ ಸುಂಕವನ್ನು ವಿಧಿಸುವ ಕರ್ತವ್ಯ ಮತ್ತು ಶಾಲೆಗಳನ್ನು ನಡೆಸುವ ಜವಾಬ್ದಾರಿಯು ಜಿಲ್ಲಾ ಬೋರ್ಡುಗಳ ಮೇಲೆ ಬಿದ್ದಿತು.

**ಗ್ರಾಮ ಪಂಚಾಯತಿಗಳು:** ೧೯೨೦ರಲ್ಲಿ ಹೊರಡಿಸಲಾದ ಇನ್ನೊಂದು ಮುಖ್ಯವಾದ ಶಾಸನವೆಂದರೆ ಗ್ರಾಮ ಪಂಚಾಯತಿ ಕಾಯ್ದೆ XV ಆಗಿದ್ದು, ಅದರ ಗುರಿ ಏನೆಂದರೆ ಮೊದಲಿನ ತೊಂದರೆಗಳನ್ನು ನಿವಾರಿಸಿ ಅವುಗಳನ್ನು ಹಣಕಾಸಿನಲ್ಲಿ ಬಲಪಡಿಸುವುದು. ಕಾಯ್ದೆಯ ಪ್ರಕಾರ ಪಂಚಾಯತಿಯು ಸಂಪೂರ್ಣವಾಗಿ ಚುನಾಯಿತ ಸಂಸ್ಥೆಯಾಗಿದ್ದು, ಸದಸ್ಯರ ಸಂಖ್ಯೆ ೭ಕ್ಕೆ ಕಡಿಮೆ ಇಲ್ಲದೆ ೧೫ಕ್ಕೆ ಮೀರಿರಕೂಡದು. ಪಂಚಾಯತಿಯ ಅವಧಿಯು ಮೂರು ವರ್ಷವಾಗಿದ್ದಿತು. ಮತದಾನಕ್ಕೆ ಮೊದಲಿನ ಆಸ್ತಿ ನಿರ್ಬಂಧವನ್ನು

ತೆಗೆದುಹಾಕಲಾಯಿತು. ೨೫ ವರ್ಷಗಳಿಗಿಂತ ಜಾಸ್ತಿ ವಯಸ್ಸಾಗಿರುವ ಹಳ್ಳಿಯ ನಿವಾಸಿಗಳಿಗೆ ಮತದಾನದ ಹಕ್ಕನ್ನು ಕೊಡಲಾಯಿತು. ಈ ಸಡಿಲಗೊಳಿಸಿದ ಅರ್ಹತೆಯು ಶೋಷಿತ ವರ್ಗದ ಸದಸ್ಯರಿಗೆ ಮತ ಚಲಾಯಿಸಲು ಅವಕಾಶ ನೀಡಿತು. ಅಲ್ಲದೆ ೧೯೩೦ರ ಸ್ಥಳೀಯ ಬೋರ್ಡುಗಳ ತಿದ್ದುಪಡಿ ಮಾಡಿದ ಕಾಯ್ದೆಯು ಪಂಚಾಯತಿಯ ವಿಷಯದಲ್ಲಿ ನಿಯಂತ್ರಣ ಹೊಂದಿರಲು ಮತ್ತು ಗ್ರಾಮ ಅಭಿವೃದ್ಧಿ ನಿಧಿಯನ್ನು ರೂಪಿಸಲು ಜಿಲ್ಲಾ ಮತ್ತು ತಾಲ್ಲೂಕು ಬೋರ್ಡುಗಳಿಗೆ ವಿಸ್ತಾರವಾದ ಅಧಿಕಾರವನ್ನು ನೀಡಿತು.

೧೮೬೫ರಲ್ಲಿ ಸರಕಾರವು ಮದರಾಸು ಪಟ್ಟಣಗಳ ಅಭಿವೃದ್ಧಿ ಒಯ್ದೆ ಹಕ್ಕನ್ನು ಜಾರಿಗೊಳಿಸಿ ಪಟ್ಟಣಗಳಲ್ಲಿ ಸ್ಥಳೀಯ ಪೋಲೀಸ್ ಬಲವನ್ನು ಕಾಪಾಡುವ ವೆಚ್ಚಕ್ಕೆ ಸಾಧ್ಯವಾದಷ್ಟು ಭರಿಸಬೇಕು ಮತ್ತು ಸಾರ್ವಜನಿಕ ಆರೋಗ್ಯ ಕಾಪಾಡುವುದಕ್ಕೆ ಇತರೆ ಕೆಲವು ಕೆಲಸಗಳನ್ನು ಮಾಡಬೇಕಾಗಿದ್ದಿತು. ಈ ಅಭಿವೃದ್ಧಿ ಸಂಸ್ಥೆಯಲ್ಲಿ ಒಂದು ವರ್ಷಕ್ಕೆ ಸರಕಾರದಿಂದ ನೇಮಕಗೊಂಡ ಐವರಿಗಿಂತ ಕಡಿಮೆ ಇಲ್ಲದ ಕೌನ್ಸಿಲರುಗಳನ್ನು ಒಳಗೊಂಡಿತ್ತು ಮತ್ತು ಅದರ ಮುಖ್ಯಸ್ಥ ಜಿಲ್ಲಾ ಮ್ಯಾಜಿಸ್ಟ್ರೇಟ್ ಆಗಿದ್ದರು. ೧೮೭೧ರ ಪಟ್ಟಣ ಅಭಿವೃದ್ಧಿ ಕಾಯ್ದೆಯಡಿಯಲ್ಲಿ ಮೂಲಭೂತವಾದ ನಾಗರಿಕ ಸೌಲಭ್ಯಗಳ ಅವಕಾಶಕ್ಕೆ ಸೂಕ್ತವಾದ ವ್ಯವಸ್ಥೆ ಮಾಡುವುದು ನಾಗರಿಕ ಸಂಸ್ಥೆಗಳ ಕಡ್ಡಾಯ ಕರ್ತವ್ಯವಾಗಿತ್ತು. ಸದಸ್ಯರ ಅವಧಿಯನ್ನು ಒಂದು ವರ್ಷದಿಂದ ಮೂರು ವರ್ಷಗಳವರೆಗೆ ಏರಿಸಲಾಯಿತು. ಅದರ ಮುಖ್ಯಸ್ಥರು ಜಿಲ್ಲಾ ಕಲೆಕ್ಟರಾಗಿದ್ದರು. ತೆರಿಗೆ ಪಾವತಿದಾರರಿಂದ ಕೌನ್ಸಿಲರುಗಳು ಮತ್ತು ಉಪಾಧ್ಯಕ್ಷರ ಚುನಾವಣೆಗೆ ಅವಕಾಶ ಒದಗಿಸಲಾಯಿತು.

**ಮುನಿಸಿಪಾಲಿಟಿಗಳು :** ೧೮೮೨ರಲ್ಲಿ ಸ್ಥಳೀಯ ಆಡಳಿತದ ಪೂರ್ಣ ಪ್ರಶ್ನೆಯನ್ನು ಪರಿಶೀಲಿಸಲು ಸರಕಾರವು ನೇಮಕ ಮಾಡಿದ್ದ ಸಮಿತಿಯು ೧೮೮೪ರ ಮದರಾಸು ಜಿಲ್ಲಾ ಮುನಿಸಿಪಾಲಿಟಿಗಳ ಕಾಯ್ದೆ IV ಎಂಬ ಹೊಸ ಕಾಯ್ದೆಯನ್ನು ಶಿಫಾರಸು ಮಾಡಿತು. ಇದು ೧೮೭೧ರ ಪಟ್ಟಣಗಳ ಅಭಿವೃದ್ಧಿ ಕಾಯ್ದೆಯನ್ನು ತೆಗೆದುಹಾಕಿತು ಮತ್ತು ಮೊದಲನೆಯ ಸಲಕ್ಕೆ ಮುನಿಸಿಪಾಲಿಟಿ ಎಂಬ ಪದವನ್ನು ಜಾರಿಗೊಳಿಸಿತು. ಕಾಯ್ದೆಯ ಉಪಬಂಧಗಳ ಪ್ರಕಾರ ಮುನಿಸಿಪಲ್ ಸಮಿತಿಯು ೧೨ಕ್ಕಿಂತ ಕಡಿಮೆಯಿಲ್ಲದ ವ್ಯಕ್ತಿಗಳನ್ನು ಹೊಂದಿದ್ದು, ಅವಧಿಯು ಮೂರು ವರ್ಷಗಳಾಗಿದ್ದವು. ಮುನಿಸಿಪಾಲಿಟಿ ಸ್ಥಾಪಿತರಾಗಿರುವ ಜಿಲ್ಲೆಯ ವಿಭಾಗದ ಪ್ರಭಾರದಲ್ಲಿರುವ ಕಂದಾಯ ಅಧಿಕಾರಿಯು ಪದನಿಮಿತ್ತ ಕೌನ್ಸಿಲರ್ ಆಗಿರಬೇಕು ಮತ್ತು ತೆರಿಗೆ ಪಾವತಿದಾರರು ಒಟ್ಟು ಸಂಖ್ಯೆಯ ಕೌನ್ಸಿಲರ್‌ಗಳ ನಾಲ್ಕನೇ ಮೂರು ಭಾಗದಲ್ಲಿ ಕೌನ್ಸಿಲರುಗಳನ್ನು ಚುನಾಯಿಸಲು ಅವಕಾಶ ಮಾಡಲಾಯಿತು ಮತ್ತು ಉಳಿದವರನ್ನು ಸರಕಾರವು ನೇಮಿಸಬೇಕಾಗಿದ್ದಿತು. ಆ ಕಾಲದಲ್ಲಿ ವರಮಾನದ ಮುಖ್ಯ ಮೂಲವು ವೃತ್ತಿ ತೆರಿಗೆ, ಭೂಮಿ ಮತ್ತು ಕಟ್ಟಡದ ಮೇಲಿನ ತೆರಿಗೆಯಾಗಿದ್ದು, ಇದು ವಾರ್ಷಿಕ ಬಾಡಿಗೆ ಮೌಲ್ಯದ ಶೇ. ೭½ ಗಿಂತ ಮೀರಿರಬಾರದಾಗಿದ್ದು, ವಾಹನಗಳ ಮೇಲೆ ತೆರಿಗೆ, ಸುಂಕ ಮುಂತಾದವಾಗಿದ್ದವು.

೧೯೨೦ರಲ್ಲಿ ಈ ಮೇಲಿನ ಕಾಯ್ದೆಯನ್ನು ಬದಲಾಯಿಸಿ, ರಾಯಲ್ ಆಯೋಗದ ಶಿಫಾರಸಿನಂತೆ ಮದರಾಸು ಜಿಲ್ಲಾ ಮುನಿಸಿಪಾಲಿಟಿಗಳ ಕಾಯ್ದೆ, ೧೯೨೦ನ್ನು ಜಾರಿಗೊಳಿಸಲಾಯಿತು. ಈ ಕಾಯ್ದೆಯು ಮುನಿಸಿಪಾಲಿಟಿಯ ಚುನಾಯಿತ ಸದಸ್ಯರ ಪ್ರಮಾಣ ಮತ್ತು ಸಂಪನ್ಮೂಲಗಳು ಮತ್ತು ಅಧಿಕಾರವನ್ನು ಹೆಚ್ಚಿಸಲಾಯಿತು. ೧೦ ವರ್ಷಗಳ ನಂತರ ಅಂದರೆ ೧೯೩೦ರಲ್ಲಿ ಒಂದು ಸುಧಾರಿತ ಕಾಯ್ದೆಯನ್ನು ಜಾರಿಗೊಳಿಸಲಾಯಿತು. ಅದರಂತೆ ಎಲ್ಲಾ ಕೌನ್ಸಿಲರುಗಳನ್ನು ಚುನಾಯಿಸಬೇಕಾಗಿದ್ದಿತು. ಆದರೂ ಮುಸ್ಲಿಮರು, ಭಾರತೀಯ ಕ್ರಿಶ್ಚಿಯನ್ನರು, ಯುರೋಪಿಯನ್ನರು, ಆಂಗ್ಲೋ ಇಂಡಿಯನ್ನರು, ಹರಿಜನರು ಮತ್ತು ಮಹಿಳೆಯರ ಮೀಸಲಾತಿಗೆ ಅವಕಾಶ ಮಾಡಲಾಯಿತು. ಮಹಿಳೆಯರು ಚುನಾವಣೆಗೆ ನಿಲ್ಲಕೂಡದೆಂಬ ಅನರ್ಹತೆಯನ್ನು ತೆಗೆದುಹಾಕಿತು ಮತ್ತು ಸರಕಾರಕ್ಕೆ ಅಥವಾ ಯಾವುದೇ ಇತರ ಸ್ಥಳೀಯ ಪ್ರಾಧಿಕಾರಕ್ಕೆ ತೆರಿಗೆ ಸಲ್ಲಿಸುವ ಪ್ರತಿಯೊಬ್ಬ ವ್ಯಕ್ತಿಗೂ ಮತದಾನದ ಹಕ್ಕನ್ನು ವಿಸ್ತರಿಸಲಾಯಿತು.

## ಹೈದರಾಬಾದ್ ಪ್ರದೇಶ :

೧೮೮೭-೮೮ರಲ್ಲಿ ಸ್ಥಳೀಯ ಸುಂಕದ ಜಾರಿಯು ಮೊದಲಿನ ಹೈದರಾಬಾದ್ ರಾಜ್ಯದಲ್ಲಿದ್ದ ಬೀದರ್, ರಾಯಚೂರು ಮತ್ತು ಗುಲ್ಬರ್ಗ ಜಿಲ್ಲೆಗಳಲ್ಲಿ ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಗಳ ಪ್ರಾರಂಭವಾಗಿದ್ದಿತು. ಸ್ಥಳೀಯ ಸುಂಕವನ್ನು ಭೂಕಂದಾಯದ ಒಂದು ರೂಪಾಯಿಗೆ ಒಂದು ಆಣೆ ದರದಂತೆ ಹಾಕಲಾಗಿದ್ದು, ಅದರ ಉದ್ದೇಶವೇನೆಂದರೆ ರಸ್ತೆಗಳು, ಶಾಲೆಗಳು ಮುಂತಾದುವುಗಳ ನಿರ್ಮಾಣ ಮತ್ತು ಕಾಪಾಡುವಿಕೆಯಂತಹ ಅಭಿವೃದ್ಧಿ ಕಾರ್ಯಗಳಿಗೆ ಒದಗಿಸುವುದಾಗಿದ್ದಿತು. ಅದೇ ವರ್ಷದಲ್ಲಿ ಸ್ಥಳೀಯ ನಿಧಿ ಇಲಾಖೆಯನ್ನು ರಚಿಸಲಾಯಿತು. ಮುಂದಿನ ವರ್ಷ ೧೮೮೮-೮೯ರಲ್ಲಿ ಸ್ಥಳೀಯ ದಸ್ತೂರ್-ಉಲ್-ಅಮಲ್ (ನಿಬಂಧನೆ) ಅನ್ನು

ಸ್ಥಳೀಯ ನಿಧಿಗಳ ನಿಯಂತ್ರಣ ಮತ್ತು ಆಡಳಿತಕ್ಕೆ ಜಾರಿ ಮಾಡಲಾಯಿತು. ಜಿಲ್ಲಾ ಬೋರ್ಡುಗಳ ಮುಖ್ಯ ಅಧಿಕಾರಿಯೂ ತಾಲ್ಲೂಕ್ ದಾರ್ (ಜಿಲ್ಲಾ ಕಲೆಕ್ಟರ್) ಅವರು ಪದನಿಮಿತ್ತ ಅಧ್ಯಕ್ಷರಾಗಿದ್ದರು. ತಹಶೀಲ್ದಾರರುಗಳು ತಾಲ್ಲೂಕು ಬೋರ್ಡುಗಳ ಅಧ್ಯಕ್ಷರಾಗಿರುತ್ತಿದ್ದರು. ಪ್ರತಿ ಜಿಲ್ಲಾ ಬೋರ್ಡಿಗೂ ೧೩ ಸದಸ್ಯರಿದ್ದು ಅವರಲ್ಲಿ ಆರು ಜನರು ಅಧಿಕಾರಿಗಳು ಮತ್ತು ಉಳಿದವರು ಅಧಿಕಾರೇತರರಾದ ಜಮೀನುದಾರರು, ನ್ಯಾಯವಾದಿಗಳು, ವ್ಯಾಪಾರಗಾರರು ಮುಂತಾದವರಾಗಿದ್ದು ಅವರನ್ನು ತಹಸೀಲ್ದಾರರು ನಾಮಕರಣ ಮಾಡುತ್ತಿದ್ದರು. ತಾಲ್ಲೂಕು ಬೋರ್ಡುಗಳು ಜಿಲ್ಲಾ ಬೋರ್ಡುಗಳಿಗೆ ಅಧೀನವಾಗಿದ್ದು, ಅದರಲ್ಲಿ ಐದು ಜನ ಸದಸ್ಯರಿದ್ದು, ಅವರಲ್ಲಿ ಮೂವರು ಅಧಿಕಾರೇತರರು. ಈ ಸಂಸ್ಥೆಗಳ ಅಧಿಕಾರಾವಧಿಯು ಮೂರು ವರ್ಷಗಳು. ೧೯೪೧-೪೨ರ ಹೈದರಾಬಾದ್ ಜಿಲ್ಲಾ ಬೋರ್ಡುಗಳ ಕಾಯ್ದೆ ಮತ್ತು ಹೈದರಾಬಾದ್ ಗ್ರಾಮಪಂಚಾಯತಿಗಳ ಕಾಯ್ದೆಯ ಘೋಷಣೆಯಾದ ಮೇಲೆ ಸ್ಥಳೀಯ ಸಂಸ್ಥೆಗಳು ಅಭಿವೃದ್ಧಿಯ ಒಂದು ಹೊಸ ಹಂತವನ್ನು ಪ್ರವೇಶಿಸಿದವು. ಏಕೆಂದರೆ ಕಾಯ್ದೆಯು ಮೂರು ನಾಮಕರಣ ಸದಸ್ಯರಿದ್ದರೆ ಐದು ಚುನಾಯಿತ ಸ್ಥಾನಗಳಿಗೆ ಅವಕಾಶ ಒದಗಿಸಿತು.

ಮುನಿಸಿಪಾಲಿಟಿಗಳ ಬಗ್ಗೆ ೧೯೦೦ರಲ್ಲಿ ಶಾಸನಗೊಳಿಸಿದ ಸ್ಥಳೀಯ ಸುಂಕ ಮತ್ತು ವಿಶೇಷ ತೆರಿಗೆಗಳನ್ನು ವಿಧಿಸಲು ಅಧಿಕಾರ ನೀಡಿತು. ಸರಕಾರವು ಜಿಲ್ಲಾ ಕೇಂದ್ರ ಪಟ್ಟಣಗಳೂ ಸೇರಿದಂತೆ ೫೦೦೦ಕ್ಕೂ ಹೆಚ್ಚು ಜನಸಂಖ್ಯೆಯಿರುವ ಪಟ್ಟಣಗಳಲ್ಲಿ ನೈರ್ಮಲ್ಯ ಸಮಿತಿಗಳನ್ನು ರಚಿಸಲು ಕಾಯ್ದೆಯು ಸರಕಾರಕ್ಕೆ ಅವಕಾಶ ನೀಡಿತು. ಈ ಕಾಯ್ದೆಯನ್ನು ೧೯೦೮, ೧೯೧೦ ಮತ್ತು ೧೯೩೩-೩೪ರಲ್ಲಿ ತಿದ್ದುಪಡಿ ಮಾಡಿ ಬೆಳೆಯುತ್ತಿರುವ ಪಟ್ಟಣಗಳ ಬದಲಾಗುತ್ತಿರುವ ಸ್ಥಿತಿಗತಿಗಳಿಗೆ ಹೊಂದಿಕೆಯಾಗುವಂತಾಯಿತು. ೧೯೩೪ರಲ್ಲಿ ಮಾತ್ರ ಎಲ್ಲಾ ಜಿಲ್ಲಾ ಮುಖ್ಯ ಪಟ್ಟಣಗಳು ಮತ್ತು ಇತರೆ ದೊಡ್ಡ ಪಟ್ಟಣಗಳಿಗೆ ನೈರ್ಮಲ್ಯ ಸಮಿತಿಗಳನ್ನು ಬದಲಾಯಿಸಲು ಅಧಿಕಾರೇತರ ಬಹುಮತದೊಂದಿಗೆ ಮುನಿಸಿಪಲ್ ಸಮಿತಿಗಳನ್ನು ರಚಿಸುವುದನ್ನು ಸರಕಾರವು ಮಂಜೂರು ಮಾಡಿತು. ಸಣ್ಣ ಪಟ್ಟಣಗಳಿಗೆ ಪಟ್ಟಣ ಸಮಿತಿಗಳನ್ನು ರಚಿಸುವುದಕ್ಕೆ ನಿಯಮಗಳನ್ನು ಕೂಡ ರಚಿಸಲಾಯಿತು. ಮುನಿಸಿಪಲ್ ಸಮಿತಿಯು ೧೬ ಸದಸ್ಯರನ್ನೊಳಗೊಂಡಿದ್ದು ಅದರಲ್ಲಿ ೧೨ ಜನರು ಅಧಿಕಾರೇತರರೂ ಮತ್ತು ಪಟ್ಟಣ ಸಮಿತಿಗಳು ಐದು ಸದಸ್ಯರನ್ನು ಹೊಂದಿದ್ದು ಅವರಲ್ಲಿ ಮೂವರು ಅಧಿಕಾರಿಗಳು ಮತ್ತು ಇಬ್ಬರು ಅಧಿಕಾರೇತರರು. ೧೯೨೯ ರವರೆಗೆ ಹೈದರಾಬಾದ್ ರಾಜ್ಯದಲ್ಲಿ ಸ್ಥಳೀಯ ನಿಧಿ ಆಡಳಿತದ ಗಮನಾರ್ಹ ಲಕ್ಷಣವೆಂದರೆ ಜಿಲ್ಲಾ ಮತ್ತು ಪಟ್ಟಣ ಹಣಕಾಸುಗಳ ಜೋಡಣೆಯಾಗಿದ್ದಿತು. ಇದರ ಪರಿಣಾಮವಾಗಿ, ಸಂಬಂಧಿತ ಗ್ರಾಮೀಣ ಪ್ರದೇಶವು ಸಾಕಷ್ಟು ಗಮನವನ್ನು ಪಡೆಯಲಿಲ್ಲ.

ಹಳ್ಳಿಗಳ ಆಡಳಿತದ ಬಗ್ಗೆ ೧೯೪೦ರ ಹೈದರಾಬಾದ್ ಗ್ರಾಮ ಪಂಚಾಯತಿಗಳ ಕಾಯ್ದೆಯ ಜಾರಿಯು ಕೆಳಮಟ್ಟದಲ್ಲಿ ಸ್ಥಳೀಯ ಆಡಳಿತದ ಪ್ರಾರಂಭಕ್ಕೆ ದಾರಿ ಮಾಡಿಕೊಟ್ಟಿತು. ಮೇಲಿನ ಕಾಯ್ದೆಯಡಿಯಲ್ಲಿ ಪಂಚಾಯತಿಗಳ ಕಾರ್ಯಗಳು ಮತ್ತು ವ್ಯಾಪ್ತಿಯು ಮಿತವಾಗಿದ್ದಿತು ಮತ್ತು ಅವುಗಳು ನಾಮಕರಣ ಮಾಡಿದ ಸಂಸ್ಥೆಗಳು. ಇದಕ್ಕೆ ಮುಂಚೆ ಗ್ರಾಮೀಣ ಪುನರ್ನಿರ್ಮಾಣ ಸಂಘಗಳು ಸಹಕಾರ ಸಂಘಗಳ ಕಾಯ್ದೆಯಡಿಯಲ್ಲಿ ನೋಂದಾಯಿಸಲ್ಪಟ್ಟಿದ್ದು, ಕೆಲವು ಹಳ್ಳಿಗಳಲ್ಲಿ ಕೆಲಸ ಮಾಡುತ್ತಿದ್ದವು. ೧೯೫೧ರಲ್ಲಿ, ೧೯೪೦ರ ಗ್ರಾಮ ಪಂಚಾಯತಿಗಳ ಕಾಯ್ದೆಯನ್ನು ಇನ್ನೊಂದು ಕಾಯ್ದೆಯಿಂದ ಬದಲಾಯಿಸಿತು. ಇದರಿಂದ ಸರಕಾರಕ್ಕೆ ವಯಸ್ಕ ಮತದಾನದ ಆಧಾರದ ಮೇಲೆ ಪಂಚಾಯತಿಗಳನ್ನು ಗುರುತಿಸಿ ಸ್ಥಾಪಿಸಲು ಸಹಾಯವಾಯಿತು. ಈ ಹೊಸ ಕಾಯ್ದೆಯು ೧೦೦೦ ದಿಂದ ೫೦೦೦ ದವರೆಗೆ ಜನಸಂಖ್ಯೆಯಿರುವ ಹಳ್ಳಿಗಳಿಗೆ ಪಂಚಾಯತಿಗಳ ರಚನೆಗೆ ಅವಕಾಶ ನೀಡಿತು ಮತ್ತು ಭೂಕಂದಾಯದ ಶೇ. ೧೫ರಷ್ಟು ಮತ್ತು ಸ್ಥಳೀಯ ಸುಂಕಗಳ ಮೂರನೇ ಒಂದರಷ್ಟನ್ನು ಮಂಜೂರು ಮಾಡುವುದರ ಮೂಲಕ ಅವುಗಳ ಹಣಕಾಸು ಸ್ಥಿತಿಯನ್ನು ಬಲಪಡಿಸಿತು.

## ಕೊಡಗು ಪ್ರದೇಶ :

ರಾಜರ ಆಳ್ವಿಕೆಯಾದ ಮೇಲೆ ಈ ಪ್ರದೇಶದಲ್ಲಿ ೧೧೩ ವರ್ಷಗಳವರೆಗೆ (೧೮೩೪-೧೯೪೭) ಕಮೀಷನರುಗಳ ಆಡಳಿತವಿದ್ದಿತು. ಜಿಲ್ಲೆಯಲ್ಲಿ ಸ್ಥಳೀಯ ಸ್ವಯಂ ಸರಕಾರದ ಇತಿಹಾಸವನ್ನು ೧೮೭೦ರಲ್ಲಿ ಪ್ರಾರಂಭಿಸಲಾಯಿತು. ಮೊದಲ ಸಲಕ್ಕೆ ಮುಖ್ಯಪಟ್ಟಣಗಳಾದ ಮಡಿಕೇರಿ ಮತ್ತು ವಿರಾಜಪೇಟೆಯಂತಹವುಗಳನ್ನು ಆಳುವುದಕ್ಕೆ ಮುನಿಸಿಪಲ್ ಸಮಿತಿಗಳನ್ನು ಸ್ಥಾಪಿಸಲಾಯಿತು. ನಂತರ ಇತರ ಸಣ್ಣ ಪಟ್ಟಣಗಳನ್ನು ಮುನಿಸಿಪಲ್ ಕಾಯ್ದೆ ವ್ಯಾಪ್ತಿಯಡಿಯಲ್ಲಿ ತರಲಾಯಿತು. ಮಡಿಕೇರಿ ಮತ್ತು ವೀರಾಜಪೇಟೆಯಲ್ಲಿನ ಮುನಿಸಿಪಲ್ ಸಮಿತಿಗಳಲ್ಲದೆ ೧೯೬೪ರ ಸಾಮಾನ್ಯ ಮುನಿಸಿಪಾಲಿಟಿಗಳ ಕಾಯ್ದೆ ಜಾರಿಗೆ ಬರುವವರೆಗೆ ಸಣ್ಣಪಟ್ಟಣಗಳಲ್ಲಿ ನೋಟಿಫೈಡ್

ಏರಿಯಾ ಸಮಿತಿಗಳಿದ್ದವು. ಈ ಸಮಿತಿಗಳು ಅಧಿಕಾರಿ ಮತ್ತು ಅಧಿಕಾರೇತರ ಸದಸ್ಯರನ್ನು ಒಳಗೊಂಡಿದ್ದವು. ಅದರ ಮುಖ್ಯಸ್ಥರು ಕಂದಾಯದ ಅಧಿಕಾರಿಗಳಾಗಿದ್ದರು. ಆಕ್ಟ್ರಾಯ್, ಮೀನು, ಮನೆ ತೆರಿಗೆ ಮತ್ತು ವೃತ್ತಿ ತೆರಿಗೆಗಳು ಇವುಗಳ ವರಮಾನದ ಮೂಲಗಳಾಗಿದ್ದವು. ೧೯೦೦ರ ಕೊಡಗು ಕಾಯ್ದೆ XIರ ಉಪಪ್ರಬಂಧಗಳ ಪ್ರಕಾರ ೧೯೦೧ರಲ್ಲಿ ಮೊಟ್ಟಮೊದಲಿಗೆ ಕೊಡಗು ಜಿಲ್ಲಾ ಬೋರ್ಡನ್ನು ರಚಿಸಲಾಯಿತು. ಅದರಲ್ಲಿ ೧೪ ಜನ ಸದಸ್ಯರಿದ್ದು, ಅದರಲ್ಲಿ ೯ ಜನರು ನಾಮಕರಣವಾದವರು. ಈ ಮಂಡಳಿಯ ಮುಖ್ಯಸ್ಥರು ಕೊಡಗಿನ ಕಮೀಷನರ್.

ಇತರೆ ವಿಷಯಗಳಲ್ಲಿ ಬೋರ್ಡಿನ ಮುಖ್ಯ ಕಾರ್ಯಗಳೆಂದರೆ ಟೋಲ್‌ಗೇಟುಗಳು, ಮಾರುಕಟ್ಟೆಗಳು, ದೋಣಿಗಳು, ಪ್ರಾಥಮಿಕ ಮತ್ತು ಉನ್ನತ ಪ್ರಾಥಮಿಕ ಶಿಕ್ಷಣ ಮತ್ತು ಗ್ರಾಮ ಆಸ್ಪತ್ರೆಗಳು ಮುಂತಾದವುಗಳನ್ನು ನಿರ್ವಹಿಸುವುದು ಸೇರಿದ್ದಿತು. ೧೯೨೨ ರಿಂದ ಅಧಿಕಾರೇತರ ಸದಸ್ಯರನ್ನು ಅಧ್ಯಕ್ಷರನ್ನಾಗಿ ಚುನಾಯಿಸುವ ಪದ್ಧತಿಯು ಜಾರಿಗೆ ಬಂದಿತು. ಇದು ೧೯೫೨ರವರೆಗೆ ಮುಂದುವರಿಯಿತು. ಬೋರ್ಡಿನ ಕಂದಾಯದ ಮುಖ್ಯ ಮೂಲಗಳಲ್ಲಿ ಭೂಸುಂಕ, ಮಾರುಕಟ್ಟೆ ಶುಲ್ಕ, ಮನೆ-ತೆರಿಗೆ, ವೃತ್ತಿ ತೆರಿಗೆ ಮತ್ತು ಶಾಲಾ ಶುಲ್ಕಗಳ ಜೊತೆಗೆ ಸರಕಾರದ ಅನುದಾನಗಳೂ ಸೇರಿವೆ. ಕೊಡಗಿನ ಜಿಲ್ಲಾ ಬೋರ್ಡನ್ನು ೧೯೫೬ರ ಏಪ್ರಿಲ್‌ನಲ್ಲಿ ರಾಜ್ಯ ಸರಕಾರದ ಒಂದು ತೀರ್ಮಾನದಿಂದ ರದ್ದುಪಡಿಸಲಾಯಿತು ಮತ್ತು ಬೋರ್ಡಿನ ನಿಯಂತ್ರಣದಲ್ಲಿದ್ದ ಅನೇಕ ಸಂಸ್ಥೆಗಳನ್ನು ಸರಕಾರವು ವಹಿಸಿಕೊಂಡಿತು.

## ಏಕೀಕರಣದ ನಂತರ ಬದಲಾವಣೆಗಳು :

ದೇಶದ ಇತರ ಭಾಗಗಳಲ್ಲಿಯಂತೆ, ಕರ್ನಾಟಕದಲ್ಲಿಯೂ ಕೂಡ ೧೯೫೭ರ ಬಲವಂತರಾಯ್ ಮೆಹ್ತಾ ಸಮಿತಿ ವರದಿಯ ಪ್ರಕಾರ ತೀವ್ರ ಆಸಕ್ತಿಯಿಂದ ಪಂಚಾಯತಿ ರಾಜ್ಯ ವ್ಯವಸ್ಥೆಯನ್ನು ಜಾರಿಗೊಳಿಸಲಾಯಿತು. ೧೯೫೯ರ ಕರ್ನಾಟಕ ಗ್ರಾಮ ಪಂಚಾಯತಿಗಳು ಮತ್ತು ಸ್ಥಳೀಯ ಬೋರ್ಡುಗಳ ಕಾಯ್ದೆ ಮೂರು ಹಂತದ ವ್ಯವಸ್ಥೆಯನ್ನು ಹೊಂದಿದ್ದು, ಅವು ಯಾವುವೆಂದರೆ ಗ್ರಾಮ ಪಂಚಾಯತಿಗಳು, ತಾಲ್ಲೂಕು ಬೋರ್ಡುಗಳು ಮತ್ತು ಜಿಲ್ಲಾ ಅಭಿವೃದ್ಧಿ ಸಮಿತಿಗಳು. ಇದರ ಉದ್ದೇಶವೇನೆಂದರೆ ಜನರ ಸಂಸ್ಥೆಗಳಿಗೆ ಅಧಿಕಾರ ಮತ್ತು ಜವಾಬ್ದಾರಿಯನ್ನು ವರ್ಗಾಯಿಸುವುದು ಮತ್ತು ಕೆಲವು ಚೆನ್ನಾಗಿ ವ್ಯಾಖ್ಯೆ ಮಾಡಲಾಗಿರುವ ಯೋಜಿತ ಕಾರ್ಯಕ್ರಮಗಳನ್ನು ಸಾಧಿಸುವುದಾಗಿದೆ. ೧೯೫೦ರ ಕಾಯ್ದೆಯನ್ನು ನಂತರ ೧೯೬೧ರ ೨೬, ೧೯೬೪ರ ೨೨, ೧೯೬೫ರ ೫, ೧೯೭೦ರ ೪ ಮತ್ತು ೧೯೭೪ರ ೨೧ ರಂತೆ ತಿದ್ದುಪಡಿ ಮಾಡಲಾಗಿದೆ. ಈ ಕಾಯ್ದೆಯು ಏಕೀಕರಣದ ಸಮಯದಲ್ಲಿ ವಿವಿಧ ಪ್ರಾಂತ್ಯಗಳಲ್ಲಿದ್ದ ಎಲ್ಲಾ ಯೋಜನೆಗಳನ್ನು ರದ್ದುಪಡಿಸಿತು. ೧೯೭೬ರ ಮಾರ್ಚಿ ಅಂತ್ಯದ ಹೊತ್ತಿಗೆ ರಾಜ್ಯದಲ್ಲಿ ೮೪೧೧ ಪಂಚಾಯತಿಗಳಿದ್ದು, ಅದರಲ್ಲಿ ೯೬ ಪಟ್ಟಣ ಪಂಚಾಯಿತಿಗಳಿದ್ದವು. ಇದು ರಾಜ್ಯದಲ್ಲಿನ ೨೬,೮೨೬ ಹಳ್ಳಿಗಳನ್ನು ಒಳಗೊಂಡಿದ್ದವು. ಅಲ್ಲದೆ ೧೭೪ ತಾಲ್ಲೂಕು ಅಭಿವೃದ್ಧಿ ಬೋರ್ಡುಗಳು ಮತ್ತು ೧೯ ಜಿಲ್ಲಾ ಅಭಿವೃದ್ಧಿ ಸಮಿತಿಗಳಿದ್ದವು. ೧೯೭೯ರ ಹೊತ್ತಿಗೆ ೪೮,೨೨೪ರ ಗ್ರಾಮ ಪಂಚಾಯತಿಗಳು, ೧೨೯ ಪಟ್ಟಣ ಪಂಚಾಯತಿಗಳು ಮತ್ತು ೧೯ ಜಿಲ್ಲಾ ಅಭಿವೃದ್ಧಿ ಸಮಿತಿಗಳು ರಾಜ್ಯದಲ್ಲಿದ್ದವು.

## ಗ್ರಾಮ ಪಂಚಾಯತಿಗಳು :

೧೯೫೯ರ ಕರ್ನಾಟಕ ಗ್ರಾಮ ಪಂಚಾಯತಿಗಳು ಮತ್ತು ಸ್ಥಳೀಯ ಬೋರ್ಡುಗಳ ಕಾಯ್ದೆ ಪ್ರಕಾರ ಒಂದು ಕಂದಾಯ ಹಳ್ಳಿ ೧,೫೦೦ಕ್ಕೆ ಕಡಿಮೆ ಇಲ್ಲದ ಮತ್ತು ೧೦,೦೦೦ಕ್ಕಿಂತ ಜಾಸ್ತಿ ಇಲ್ಲದ ಕಂದಾಯ ಹಳ್ಳಿಗಳ ಗುಂಪೊಂದಕ್ಕೆ ಒಂದು ಗ್ರಾಮ ಪಂಚಾಯತಿಯನ್ನು ರಚಿಸಲಾಯಿತು. ೫,೦೦೦ ಜನಸಂಖ್ಯೆ ಕಡಿಮೆ ಇಲ್ಲದೆ ಮತ್ತು ವಾರ್ಷಿಕ ವರಮಾನವು ೧೦,೦೦೦ ರೂ.ಗಳಿಗೆ ಕಡಿಮೆ ಇಲ್ಲದ ಒಂದು ಹಳ್ಳಿಗೆ ಒಂದು ಪಟ್ಟಣ ಪಂಚಾಯತಿಯನ್ನು ಕಾಯ್ದೆ ಒದಗಿಸಿದೆ. ಗ್ರಾಮ ಸ್ಥಳೀಯ ಸ್ವಯಂ ಸರಕಾರದ ಒಂದು ಭಾಗವಾಗಿ ಪಟ್ಟಣ ಪಂಚಾಯತಿಯ ರಚನೆಯು ಈ ಕಾಯ್ದೆಯ ಮುಖ್ಯವಾದ ಅಂಶ. ಪ್ರತಿಯೊಂದು ಪಂಚಾಯತಿಯಲ್ಲಿ ೧೧ ಸದಸ್ಯರಿಗೆ ಕಡಿಮೆ ಇರದೆ ೧೯ ಸದಸ್ಯರಿಗಿಂತ ಹೆಚ್ಚಿದ್ದು ಚುನಾಯಿತರಾಗಿರಬೇಕು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಅವರ ಜಾತಿಯ ಸಂಖ್ಯೆಯ ಪ್ರಕಾರ ಮತ್ತು ಇಬ್ಬರು ಮಹಿಳೆಯರಿಗಾದರೂ ಸ್ಥಾನವಿರಬೇಕು. ಪಂಚಾಯತಿಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರನ್ನು ಸದಸ್ಯರಲ್ಲಿಯೇ ಚುನಾಯಿಸಬೇಕು. ಪ್ರತಿ ಪಂಚಾಯತಿಯು ಮೂರು ಸಮಿತಿಗಳನ್ನು ಚುನಾಯಿಸಬೇಕು. ೧) ಕೃಷಿ ಸಮಿತಿ ೨) ಆರೋಗ್ಯ ಸಮಿತಿ ೩) ಗ್ರಾಮ ಕೈಗಾರಿಕಾ ಸಮಿತಿ. ಇತ್ತೀಚೆಗೆ ಸಾಮಾಜಿಕ ನ್ಯಾಯ ಸಮಿತಿಯನ್ನೂ ಒಳಗೊಂಡಿರುತ್ತದೆ.

**ಕಾರ್ಯಗಳು:** ೧೯೫೯ರ ಕಾಯ್ದೆಯಲ್ಲಿ ಎರಡು ವಿಧವಾದ ಕಾರ್ಯಗಳನ್ನು ಒದಗಿಸಿದ್ದು, ಅವು ಯಾವುವೆಂದರೆ ಕಡ್ಡಾಯವಾದುದು ಮತ್ತು ವಿವೇಚನಾಧೀನವಾದುದು. ಇವುಗಳನ್ನು ನಾಗರಿಕ, ಕ್ರಮಗೊಳಿಸುವಿಕೆ ಮತ್ತು ಅಭಿವೃದ್ಧಿ ಎಂದು ಇನ್ನೂ ವರ್ಗೀಕರಿಸಿರಬಹುದು. ಕಡ್ಡಾಯವಾದ ಕಾರ್ಯಗಳು ಯಾವುವೆಂದರೆ ರಸ್ತೆಗಳು, ಕೆರೆಗಳು, ಬೀದಿ ದೀಪ, ನೈರ್ಮಲ್ಯ, ಸಾಂಕ್ರಾಮಿಕ ರೋಗಗಳ ನಿಯಂತ್ರಣ, ಆರ್ಥಿಕ ಸ್ಥಿತಿಗತಿಗಳ ಅಭಿವೃದ್ಧಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಕಲ್ಯಾಣವನ್ನು ಕಾಯ್ದೆಯು ಕಲಂ ೪೨ಕ್ಕೆ ತಿದ್ದುಪಡಿಯಿಂದ ಕಡ್ಡಾಯವಾದ ಕಾರ್ಯವನ್ನಾಗಿ ಮಾಡಲಾಗಿದೆ. ವಿವೇಚನಾಧೀನ ಕಾರ್ಯಗಳಲ್ಲಿ ವೈದ್ಯಕೀಯ ಪರಿಹಾರ, ಮಾರುಕಟ್ಟೆಗಳು, ಅಂಕಿಅಂಶಗಳು ಒಳಗೊಂಡಿದ್ದು, ಅಭಿವೃದ್ಧಿ ಕಾರ್ಯಗಳಲ್ಲಿ ಸಹಕಾರ, ಪಶುವೈದ್ಯ ಪರಿಹಾರ ಮುಂತಾದವು ಸೇರಿವೆ. ಕ್ರಮಗೊಳಿಸುವ ಕಾರ್ಯಗಳು ಬಹಳ ವಿಸ್ತಾರವಾದುವು. ತಾಲ್ಲೂಕು ಅಭಿವೃದ್ಧಿ ಮಂಡಳಿ ಅಥವಾ ರಾಜ್ಯ ಸರಕಾರವು ಕಾಲಕಾಲಕ್ಕೆ ಕೆಲವು ಕಾರ್ಯಗಳನ್ನು ನಿಯೋಜಿಸಬಹುದು. ಇವುಗಳಿಗೆ ಏಜೆನ್ಸಿ ಕಾರ್ಯಗಳೆಂದು ಹೆಸರು.

ಕೆಳಮಟ್ಟದಲ್ಲಿ ಒಬ್ಬ ಕಾರ್ಯದರ್ಶಿ/ಗ್ರಾಮಲೆಕ್ಕಿಗನು ಕಾರ್ಯನಿರ್ವಹಿಸುತ್ತಾನೆ. ೧೨,೦೦೦ ರೂ.ಗಳಿಗಿಂತ ಹೆಚ್ಚು ವಾರ್ಷಿಕ ವರಮಾನ ಇರುವ ಪಂಚಾಯತಿಗಳಿಗೆ ಒಬ್ಬ ಪ್ರತ್ಯೇಕ ಪಂಚಾಯತಿ ಕಾರ್ಯದರ್ಶಿಯನ್ನು ನೇಮಿಸಬಹುದು.

ಪ್ರತಿ ಗ್ರಾಮ ಪಂಚಾಯತಿಗೆ ಶೇ. ೩೦ರಷ್ಟು ಹಳ್ಳಿಯ ಭೂ ಕಂದಾಯದ ಸಂಗ್ರಹಣೆ ಮತ್ತು ಶೇ. ೧೦ರಷ್ಟನ್ನು ವಿವೇಚನಾಧೀನ ಅನುದಾನಗಳಾಗಿ ಕೊಡಲಾಗುತ್ತದೆ. ಇನ್ನೂ ಇತರೆ ತೆರಿಗೆಗಳನ್ನೂ ವಿಧಿಸಬಹುದು.

## ತಾಲ್ಲೂಕು ಅಭಿವೃದ್ಧಿ ಮಂಡಲಿಗಳು :

ಪ್ರತಿಯೊಂದು ಕಂದಾಯ ತಾಲ್ಲೂಕಿಗೆ ಒಂದು ತಾಲ್ಲೂಕು ಅಭಿವೃದ್ಧಿ ಮಂಡಲಿಯಿದ್ದು, ಅದರಲ್ಲಿ ಮುನಿಸಿಪಾಲಿಟಿ, ಸ್ಯಾನಿಟರಿ ಮಂಡಳ ಅಥವಾ ನೋಟಿಫೈಡ್ ಏರಿಯಾ ಸಮಿತಿ ಪ್ರದೇಶಗಳನ್ನು ಹೊರತುಪಡಿಸಿದೆ. ಪ್ರತಿಯೊಂದು ತಾಲ್ಲೂಕು ಅಭಿವೃದ್ಧಿ ಮಂಡಲಿಯು ಒಂದು ಲಕ್ಷ ಜನಸಂಖ್ಯೆಗಿಂತ ಕಡಿಮೆ ಇದ್ದರೆ ೧೫ ಸದಸ್ಯರು ಮತ್ತು ಅದಕ್ಕಿಂತ ಹೆಚ್ಚಾಗಿದ್ದರೆ ೧೯ ಜನ ಸದಸ್ಯರನ್ನು ನೇರವಾಗಿ ಚುನಾಯಿಸಲಾಗುತ್ತದೆ. ರಾಜ್ಯ ವಿಧಾನಸಭೆಯ ಸದಸ್ಯರು ಮತ್ತು ವಿಧಾನ ಪರಿಷತ್ತಿನ ಸದಸ್ಯರು ಆ ತಾಲ್ಲೂಕಿನವರಾಗಿದ್ದರೆ ಅವರು ಸಭೆಗೆ ಹಾಜರಾಗುವ ಮತ್ತು ಮತ ನೀಡುವ ಅಧಿಕಾರವುಳ್ಳವರಾಗಿರುತ್ತಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರಿಗೆ ಅವರ ಜನಸಂಖ್ಯೆಯ ಪ್ರಕಾರ ಸ್ಥಾನ ಮೀಸಲಾತಿ ಇದೆ. ಮತ್ತು ಮಹಿಳೆಯರಿಗೂ ಕೂಡ ಎರಡು ಸ್ಥಾನಗಳಿಗಿಂತ ಹೆಚ್ಚಿಲ್ಲದೆ ಮೀಸಲಾತಿ ಇದೆ. ಸದಸ್ಯರ ಕಾಲಾವಧಿಯನ್ನು ಐದು ವರ್ಷಗಳಿಗೆ ಮಿತಿಗೊಳಿಸಲಾಗಿದೆ. ಮೂರು ಚುನಾಯಿತ ಸಮಿತಿಗಳು ಅಂದರೆ ಸ್ಥಾಯಿ ಸಮಿತಿ, ಲೆಕ್ಕ ಪರಿಶೋಧನೆ ಸಮಿತಿ ಮತ್ತು ಸಾರ್ವಜನಿಕ ಆರೋಗ್ಯ ಸಮಿತಿ ಇವೆ. ಸಾಮಾಜಿಕ ನ್ಯಾಯ ಸಮಿತಿಯನ್ನು ರಚಿಸಲು ಒಂದು ತಿದ್ದುಪಡಿಯ ಮೂಲಕ ಅವಕಾಶ ಮಾಡಲಾಗಿದೆ.

ಕಾರ್ಯಗಳನ್ನು ಕಡ್ಡಾಯ ಮತ್ತು ವಿವೇಚನಾಧೀನ ಎಂದು ವರ್ಗೀಕರಿಸಲಾಗಿದೆ. ಕಡ್ಡಾಯ ಕಾರ್ಯಗಳು ಯಾವುವೆಂದರೆ ಸಾರ್ವಜನಿಕ ರಸ್ತೆಗಳ ನಿರ್ಮಾಣ ಮತ್ತು ಕಾಪಾಡುವಿಕೆ, ಪ್ರಾಥಮಿಕ ಶಾಲಾಕಟ್ಟಡಗಳು, ಪಶುವೈದ್ಯ ಸೇರಿದಂತೆ ಆಸ್ಪತ್ರೆಗಳು, ಮಾರುಕಟ್ಟೆಗಳು, ವಿಶ್ರಾಂತಿ ಗೃಹಗಳು, ಸಾರ್ವಜನಿಕ ಆರೋಗ್ಯ, ಕೃಷಿ ಮತ್ತು ಕೈಗಾರಿಕಾ ಪ್ರದರ್ಶನಗಳ ವ್ಯವಸ್ಥೆ, ಗ್ರಾಮೀಣ ಪ್ರಚಾರ, ಸಾಮಾಜಿಕ ಶಿಕ್ಷಣ, ಕೃಷಿಗೆ ಸಂಬಂಧಿಸಿದಂತೆ ಆರ್ಥಿಕ ಸ್ಥಿತಿಗಳ ಪ್ರೋತ್ಸಾಹ ಮತ್ತು ಅಭಿವೃದ್ಧಿ, ಪರಿಶಿಷ್ಟ ಜಾತಿ ಮತ್ತು ವರ್ಗದ ಕಲ್ಯಾಣ ವಿವೇಚನಾಧೀನ ಕಾರ್ಯಗಳೆಂದರೆ ಪ್ರಾಥಮಿಕ ಮತ್ತು ಸೆಕೆಂಡರಿ ಶಿಕ್ಷಣ, ಸಹಕಾರಿ ಸಂಘಗಳು, ಕೈಗಾರಿಕೆ ಮತ್ತು ವಾಣಿಜ್ಯ, ಜಾನುವಾರು, ಮೀನು ಕೋಳಿಗಳು ಮುಂತಾದವುಗಳ ಅಭಿವೃದ್ಧಿ, ಅವು ಬರ ಪರಿಹಾರ ಕಾರ್ಯಗಳು, ಸಾರ್ವಜನಿಕ ಸಂಚಾರ ಸೌಕರ್ಯಗಳು, ವ್ಯಾಪಾರ ಅಥವಾ ವೃತ್ತಿಪರ ಸಂಸ್ಥೆಗಳು ಮುಂತಾದವನ್ನು ರಾಜ್ಯ ಸರಕಾರದ ಮಂಜೂರಾತಿಯಿಂದ ವ್ಯವಸ್ಥೆಗೊಳಿಸಬಹುದು. ಸಮುದಾಯ ಅಭಿವೃದ್ಧಿಯಡಿಯಲ್ಲಿ ಕಾರ್ಯಕ್ರಮಗಳು ಮತ್ತು ಪಂಚವಾರ್ಷಿಕ ಯೋಜನೆ ಕಾರ್ಯಕ್ರಮಗಳನ್ನು ಕೂಡ ತಾಲ್ಲೂಕು ಅಭಿವೃದ್ಧಿ ಮಂಡಳಿಗಳಿಗೆ ವಹಿಸಲಾಗಿದೆ.

**ಹಣಕಾಸು ಸಂಪನ್ಮೂಲ:** ಒಂದು ತಾಲ್ಲೂಕು ಬೋರ್ಡು ನಿಧಿಯಿದ್ದು, ಅದಕ್ಕೆ ಟಿಡಿಬಿಯ ಎಲ್ಲ ಹಣವನ್ನು ಪಾವತಿ ಮಾಡಲಾಗುತ್ತದೆ. ತಾಲ್ಲೂಕು ಬೋರ್ಡು ಮಂಡಳಿಗಳಿಗೆ ಎರಡು ವಿಧವಾದ ತೆರಿಗೆಗಳನ್ನು ಮಾತ್ರ ವಿಧಿಸಲು ಅವಕಾಶ ನೀಡಲಾಗಿದೆ: ೧) ಸ್ಥಿರ ಆಸ್ತಿಗಳ ವರ್ಗಾವಣೆ ಮೇಲೆ ತೆರಿಗೆ ೨) ಪ್ರತಿ ಪ್ರಾಣಿಗೆ ೨೫ ಪೈಸೆಗೆ ಮೀರದಂತೆ ಮಾರುಕಟ್ಟೆಗಳಲ್ಲಿ ಮಾರಾಟಕ್ಕೆ ಬಂದ

ಪ್ರಾಣಗಳ ಮೇಲೆ ತೆರಿಗೆ. ತಾಲ್ಲೂಕು ಅಭಿವೃದ್ಧಿ ಮಂಡಳಿಗಳು ಹೆಚ್ಚಾಗಿ ಸರಕಾರದ ಅನುದಾನಗಳ ಮೇಲೆ ಅವಲಂಬಿಸಿರುತ್ತವೆ. ಆ ಭಾಗದ ಭೂಕಂದಾಯದ ಸಂಗ್ರಹಣೆಯಲ್ಲಿ ೬೦:೪೦ರ ಅನುಪಾತದಲ್ಲಿ ತಾಲ್ಲೂಕು ಬೋರ್ಡು ಮತ್ತು ಇಡೀ ಭೂಕಂದಾಯವನ್ನು ಪಂಚಾಯಿತಿಗಳ ನಡುವೆ ಹಂಚಲಾಗುತ್ತದೆ. ಕರ್ನಾಟಕದಲ್ಲಿ ಮಾತ್ರ ಇಡೀ ಭೂ ಕಂದಾಯ ಪಂಚಾಯಿತಿ ರಾಜ್ಯ ಸಂಸ್ಥೆಗಳಿಗೆ ವರ್ಗಾಯಿಸಲ್ಪಡುತ್ತದೆ.

## ಜಿಲ್ಲಾ ಅಭಿವೃದ್ಧಿ ಸಮಿತಿಗಳು :

ಜಿಲ್ಲಾ ಅಭಿವೃದ್ಧಿ ಸಮಿತಿಯು ಅಧಿಕಾರಿ, ನಾಮನಿರ್ದೇಶಿತ ಮತ್ತು ಪರೋಕ್ಷವಾಗಿ ಚುನಾಯಿತ ಸದಸ್ಯರಿರುತ್ತಾರೆ. ಕರ್ನಾಟಕದಲ್ಲಿ ಪ್ರತಿಯೊಂದು ಜಿಲ್ಲೆಗೆ ಒಂದು ಜಿಲ್ಲಾ ಅಭಿವೃದ್ಧಿ ಸಮಿತಿ ಇದೆ. ಇದರಲ್ಲಿ ೧) ಜಿಲ್ಲೆಯ ಜಿಲ್ಲಾಧಿಕಾರಿ ೨) ಲೋಕಸಭೆ, ಆ ಜಿಲ್ಲೆಯ ರಾಜ್ಯ ವಿಧಾನಸಭೆಯ ಮತ್ತು ಪರಿಷತ್ತಿನ ಸದಸ್ಯರು ೩) ರಾಜ್ಯಸಭೆ ಸದಸ್ಯರು ಮತ್ತು ಆ ಜಿಲ್ಲೆಯಲ್ಲಿ ಸಾಮಾನ್ಯವಾಗಿ ವಾಸಮಾಡುವ ರಾಜ್ಯ ವಿಧಾನ ಪರಿಷತ್ತಿನ ಸದಸ್ಯರು ೪) ಜಿಲ್ಲೆಯಲ್ಲಿನ ತಾಲ್ಲೂಕು ಅಭಿವೃದ್ಧಿ ಮಂಡಳಿಗಳ ಅಧ್ಯಕ್ಷರು ೫) ಜಿಲ್ಲೆಯಲ್ಲಿ ಕೆಲಸ ಮಾಡುತ್ತಿರುವ ಸರಕಾರಿ ಅಧಿಕಾರಿಗಳು (ಸರಕಾರದಿಂದ ನಾಮನಿರ್ದೇಶಿತರಾದ ಸದಸ್ಯರು ೧೫ಕ್ಕಿಂತ ಹೆಚ್ಚಿರಕೂಡದು) ೬) ಪರಿಶಿಷ್ಟ ಜಾತಿಗಳ ಒಬ್ಬ ಸದಸ್ಯ ೭) ಒಬ್ಬ ಮಹಿಳಾ ಸದಸ್ಯೆ. ಇವರಿಬ್ಬರನ್ನು ಸರಕಾರವು ನಾಮಕರಣ ಮಾಡುತ್ತದೆ. ಜಿಲ್ಲೆಯ ಜಿಲ್ಲಾಧಿಕಾರಿಯೂ ಅದರ ಪದನಿಮಿತ್ತ ಅಧ್ಯಕ್ಷರು ಮತ್ತು ಜಿಲ್ಲಾ ಅಭಿವೃದ್ಧಿ ಸಹಾಯಕರು ಅದರ ಕಾರ್ಯದರ್ಶಿ. ಅದು ಜನರಾದರಣೀಯ ಸಂಸ್ಥೆಯಾಗಿರುವ ಬದಲು ಹೆಚ್ಚಾಗಿ ಅಧಿಕಾರಯುತ ಮತ್ತು ಸಲಹಾ ಸಂಸ್ಥೆಯಾಗಿದೆ. ಜಿಲ್ಲಾ ಅಭಿವೃದ್ಧಿ ಸಮಿತಿಯು ಸಮನ್ವಯ ಮತ್ತು ಮೇಲ್ವಿಚಾರಕ ಏಜೆನ್ಸಿ ಮಾತ್ರವಾಗಿದ್ದು, ಕಾರ್ಯನಿರ್ವಾಹಕ ಕೆಲಸಗಳನ್ನೇನೂ ಮಾಡುವುದಿಲ್ಲ. ಜಿಲ್ಲಾ ಅಭಿವೃದ್ಧಿ ಸಮಿತಿಗಳಿಗೆ ಸ್ವಂತವಾದ ಪರಮಾನದ ಮೂಲಗಳಿಲ್ಲ. ಅದರವೇ ಆದ ನಿಧಿಯನ್ನು ಮಾಡಿಕೊಳ್ಳಲು ಅವಕಾಶವಿಲ್ಲ. ತಮ್ಮ ವೆಚ್ಚ ಭರಿಸಲು ಸಂಪೂರ್ಣವಾಗಿ ಸರಕಾರವನ್ನು ಅವಲಂಬಿಸಿವೆ.

## ನಗರ ಸ್ವಯಂ ಆಡಳಿತ ಸಮುಸ್ಥೆಗಳು :

ಕರ್ನಾಟಕದಲ್ಲಿ ನಗರ ಸ್ವಯಂ ಆಡಳಿತ ಸಂಸ್ಥೆಗಳ ಐದು ವರ್ಗಗಳಿವೆ. ೧) ನಗರ ಮುನಿಸಿಪಲ್ ಕಾರ್ಪೊರೇಷನ್‌ಗಳು ೨) ನಗರ ಮುನಿಸಿಪಲ್ ಕೌನ್ಸಿಲ್‌ಗಳು ೩) ಪಟ್ಟಣ ಮುನಿಸಿಪಲ್ ಕೌನ್ಸಿಲ್‌ಗಳು ೪) ನೋಟಿಫೈಡ್ ಏರಿಯಾ ಕಮಿಟಿಗಳು ೫) ಸ್ಯಾನಿಟರಿ ಬೋರ್ಡುಗಳು. ಇವುಗಳು ೧) ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ ಕಾಯ್ದೆ ೧೯೭೬-ಇದು ಬೆಂಗಳೂರು ನಗರ ಕಾರ್ಪೊರೇಷನ್ ಕಾಯ್ದೆ ೧೯೪೯ನ್ನು ಮತ್ತು ಬೊಂಬಾಯಿ ಪ್ರಾಂತ್ಯ ಮುನಿಸಿಪಲ್ ಕಾರ್ಪೊರೇಷನ್ ಕಾಯ್ದೆ ೧೯೫೯ನ್ನು ಬದಲಾಯಿಸಿತು. ೨) ೧೯೬೪ರ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್‌ಗಳ ಕಾಯ್ದೆ ೧೯೮೧-೮೨ರಲ್ಲಿ ರಾಜ್ಯದಲ್ಲಿ ೬ ಸಿಟಿ ಮುನಿಸಿಪಲ್ ಕಾರ್ಪೊರೇಷನ್‌ಗಳು, ೧೨ ನಗರ ಮುನಿಸಿಪಲ್ ಕೌನ್ಸಿಲ್‌ಗಳು, ೨೧೬ ಪಟ್ಟಣ ಮುನಿಸಿಪಲ್ ಕೌನ್ಸಿಲ್‌ಗಳು, ಒಂಬತ್ತು ನೋಟಿಫೈಡ್ ಏರಿಯಾ ಸಮಿತಿಗಳು ಮತ್ತು ಎರಡು ಸ್ಯಾನಿಟರಿ ಬೋರ್ಡುಗಳು, ಇವುಗಳ ಜೊತೆಗೆ ೧೭೯ ಪಟ್ಟಣ ಪಂಚಾಯತಿಗಳಿದ್ದವು.

## ಮುನಿಸಿಪಲ್ ಕಾರ್ಪೊರೇಷನ್‌ಗಳು :

ಒಂದು ನಗರ ಮುನಿಸಿಪಲ್ ಕಾರ್ಪೊರೇಷನ್ ಎರಡು ಲಕ್ಷಕ್ಕಿಂತ ಜನಸಂಖ್ಯೆ ಕಡಿಮೆ ಇಲ್ಲದ ಪ್ರದೇಶಕ್ಕೆ ಇರಬಹುದು. ೧೯೮೩ರಲ್ಲಿ ರಾಜ್ಯದ ಆರು ಮುನಿಸಿಪಲ್ ಕಾರ್ಪೊರೇಷನ್‌ಗಳು ಇದ್ದವು. ಅವು ಯಾವುವೆಂದರೆ: ೧) ಬೆಂಗಳೂರು ೨) ಹುಬ್ಬಳ್ಳಿ-ಧಾರವಾಡ ೩) ಮೈಸೂರು ೪) ಬೆಳಗಾವಿ ೫) ಮಂಗಳೂರು ೬) ಗುಲಬರ್ಗಾ. ೧೯೮೨ರಲ್ಲಿ ಕರ್ನಾಟಕ ಮುನಿಸಿಪಲ್ ಕಾರ್ಪೊರೇಷನ್ (ತಿದ್ದುಪಡಿ) ಮಸೂದೆ ೧೯೮೨ ಅನ್ನು ಅಂಗೀಕರಿಸಿ ಅದರಲ್ಲಿ ಹೊಸದಾಗಿ ರಚಿತವಾದ ಕಾರ್ಪೊರೇಷನ್‌ಗೆ ಮೇಯರ್, ಡೆಪ್ಯುಟಿ ಮೇಯರ್ ಮತ್ತು ಸದಸ್ಯರನ್ನು ನಾಮಕರಣ ಮಾಡಲು ಸರಕಾರಕ್ಕೆ ಅಧಿಕಾರ ನೀಡಲಾಗಿದೆ. ರಾಜ್ಯದಲ್ಲಿ ಈಗ (೧೯೯೩) ಏಳು ಮಹಾನಗರಪಾಲಿಕೆಗಳಿವೆ. ಹೊಸದಾಗಿ ಶಿವಮೊಗ್ಗ, ಭದ್ರಾವತಿ ಮಹಾನಗರಪಾಲಿಕೆಯನ್ನು ರಚಿಸಲಾಗಿದೆ. ಮಹಾನಗರಪಾಲಿಕೆಗಳು ವಸತಿ ಮತ್ತು ನಗರಾಭಿವೃದ್ಧಿ ಇಲಾಖೆಯ ಆಡಳಿತಕ್ಕೊಳಪಟ್ಟಿವೆ. ಪ್ರತಿ ಕಾರ್ಪೊರೇಷನ್‌ಗೆ ಒಂದು ಸಮಿತಿ

ಇದ್ದು, ೫೦ ಸದಸ್ಯರಿಗೆ ಕಡಿಮೆ ಇಲ್ಲದೆ ಗರಿಷ್ಠ ಒಂದುನೂರು ಸದಸ್ಯರಿದ್ದು, ಮೂರು ಇಲ್ಲ ಐದು ವರ್ಷಗಳಿಗೆ ಚುನಾಯಿಸಬೇಕು. ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಮಹಿಳೆಯರು ಮತ್ತು ಕೈಗಾರಿಕಾ ಕಾರ್ಮಿಕರಿಗೆ ಸ್ಥಾನಗಳನ್ನು ಮೀಸಲಿಡಲಾಗಿದೆ. ಆ ಭಾಗದ ವಿಧಾನಸಭೆ ಸದಸ್ಯರು ಸಭೆಯಲ್ಲಿ ಭಾಗವಹಿಸಬಹುದು. ಅವರಿಗೆ ಮತ ಹಾಕುವ ಹಕ್ಕಿದೆ. ಮೇಯರ್ ಮತ್ತು ಉಪಮೇಯರ್ ಅನ್ನು ಸದಸ್ಯರೊಳಗೆ ಒಂದು ವರ್ಷದ ಅವಧಿಗೆ ಚುನಾಯಿಸಬೇಕು. ಪ್ರತಿಯೊಂದು ಕಾರ್ಪೊರೇಷನ್‌ನಲ್ಲಿ ಮೂರು ಸ್ಥಾಯಿ ಸಮಿತಿಗಳಿವೆ. ೧) ತೆರಿಗೆ ಮತ್ತು ಹಣಕಾಸಿನ ಸಮಿತಿ ೨) ಸಾರ್ವಜನಿಕ ಸಮಿತಿ ೩) ಸಾರ್ವಜನಿಕ ಕಾರ್ಯಗಳು. ಪ್ರತಿ ಸಮಿತಿಯಲ್ಲಿ ಏಳು ಜನ ಸದಸ್ಯರಿದ್ದು, ಒಂದು ವರ್ಷ ಅವಧಿಗೆ ಚುನಾಯಿತರಾಗಿದ್ದು, ತಮ್ಮ ಅಧ್ಯಕ್ಷರನ್ನು ಆ ಸಮಿತಿ ಸದಸ್ಯರೇ ಚುನಾಯಿಸಿಕೊಳ್ಳಬೇಕು. ಮೇಯರ್ ಮತ್ತು ಉಪಮೇಯರ್ ಪದನಿಮಿತ್ತ ಸದಸ್ಯರು, ಕಮೀಷನರ್‌ರವರು ಆಡಳಿತಾಧಿಕಾರಿ.

## ಬೆಳಗಾವಿ ದಂಡು ಪ್ರದೇಶ (ಕಂಟೋನ್ಮೆಂಟ್ ಬೋರ್ಡ್) ಮಂಡಲಿ :

ಬೆಳಗಾವಿ ನಗರದ ದಂಡುಪ್ರದೇಶ ವ್ಯಾಪ್ತಿಯನ್ನೊಳಗೊಂಡ ಬೆಳಗಾವಿ ದಂಡುಪ್ರದೇಶ ಮಂಡಲಿಯನ್ನು ೧೮೩೨ ರಲ್ಲಿ ರಚಿಸಲಾಯಿತು. ಸದ್ಯಕ್ಕೆ ರಾಜ್ಯದಲ್ಲಿ ೧೯೨೪ರ ದಂಡುಪ್ರದೇಶ ಕಾಯಿದೆಯನ್ವಯ ಕೇಂದ್ರಾಡಳಿತಕ್ಕೊಳಪಟ್ಟ ಪ್ರಥಮವರ್ಗದ ದಂಡುಪ್ರದೇಶವೆಂದರ ಬೆಳಗಾವಿ ದಂಡುಪ್ರದೇಶ ಒಂದೇ. ಇದು ೧೭೭೭ ಎಕರೆ ಪ್ರದೇಶ ವ್ಯಾಪ್ತಿಯನ್ನೊಳಗೊಂಡಿದೆ.

## ಮುನಿಸಿಪಲ್ ಕೌನ್ಸಿಲ್‌ಗಳು :

ಜನಸಂಖ್ಯೆ ೧೦,೦೦೦ಕ್ಕಿಂತ ಹೆಚ್ಚಿದ್ದು ೫೦,೦೦೦ಕ್ಕಿಂತ ಕಡಿಮೆ ಇರುವ ಪ್ರದೇಶಕ್ಕೆ ಪಟ್ಟಣ ಮುನಿಸಿಪಲ್ ಕೌನ್ಸಿಲ್‌ಗಳನ್ನು ರಚಿಸಲಾಗಿದೆ. ನಗರ ಮುನಿಸಿಪಲ್ ಕೌನ್ಸಿಲ್‌ಗಳನ್ನು ೫೦,೦೦೦ಕ್ಕಿಂತ ಹೆಚ್ಚು ಜನಸಂಖ್ಯೆಯಿರುವಲ್ಲಿ ಸ್ಥಾಪಿಸಲಾಗಿದೆ. ೧೯೮೧-೮೨ರಲ್ಲಿ ೨೧೬ ಪಟ್ಟಣ ಮುನಿಸಿಪಲ್ ಕೌನ್ಸಿಲ್‌ಗಳು ಮತ್ತು ೧೨ ನಗರ ಮುನಿಸಿಪಲ್ ಕೌನ್ಸಿಲ್‌ಗಳಿದ್ದವು.

ನಗರ ಮುನಿಸಿಪಲ್ ಕೌನ್ಸಿಲ್‌ನಲ್ಲಿ ಒಂದು ಲಕ್ಷ ಜನಸಂಖ್ಯೆ ಹೆಚ್ಚಾಗಿರುವಲ್ಲಿ ೩೫ ಸದಸ್ಯರು ಮತ್ತು ಪಟ್ಟಣ ಮುನಿಸಿಪಲ್ ಕೌನ್ಸಿಲ್‌ಗೆ ೧೫ರಿಂದ ೨೭ ಸದಸ್ಯರಿದ್ದು, ಅವರೆಲ್ಲ ವಯಸ್ಕ ಮತದಾನ ಪದ್ಧತಿಯಂತೆ ಚುನಾಯಿತರಾಗುತ್ತಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗ ಮತ್ತು ಮಹಿಳೆಯರಿಗೆ ಸ್ಥಾನ ಮೀಸಲಾತಿ ಇದೆ. ಅಸಾಮಾನ್ಯ ಸಂದರ್ಭದಲ್ಲಿ ಎರಡು ಅಥವಾ ಹೆಚ್ಚು ಅಕ್ಕಪಕ್ಕದ ಪ್ರದೇಶಗಳು ಮತ್ತು ಕಡಿಮೆ ಜನಸಂಖ್ಯೆ ಇರುವ ಪ್ರದೇಶಗಳು ಸೇರಿ ಪಟ್ಟಣ ಅಥವಾ ನಗರ ಮುನಿಸಿಪಾಲಿಟಿಗಳಾಗಿರಬಹುದು. ಇವುಗಳಲ್ಲಿ ಅಧ್ಯಕ್ಷರು ಮತ್ತು ಉಪಾಧ್ಯಕ್ಷರಿದ್ದು, ಅವರು ಒಂದು ವರ್ಷ ಅವಧಿಗೆ ಚುನಾಯಿತರಾಗುತ್ತಾರೆ. ಪ್ರತಿ ಕೌನ್ಸಿಲ್‌ಗೆ ಒಂದು ಸ್ಥಾಯೀ ಸಮಿತಿಯಿದ್ದು, ೬-೧೨ ಸದಸ್ಯರನ್ನೊಳಗೊಂಡಿರುತ್ತದೆ. ಅಧ್ಯಕ್ಷ ಅಥವಾ ಉಪಾಧ್ಯಕ್ಷರು ಕಮಿಟಿಯ ಸದಸ್ಯರಾಗಿದ್ದರೆ ಅವರು ಸ್ಥಾಯೀಸಮಿತಿ ಅಧ್ಯಕ್ಷರಾಗುತ್ತಾರೆ. ತಾತ್ಪೂರ್ತಿಕ ರೀತಿಯಲ್ಲಿ ಕೌನ್ಸಿಲ್ ಯಾವುದೇ ಸಮಿತಿಯನ್ನು ರಚಿಸಬಹುದು. ಆಯುಕ್ತರು ಅಥವಾ ಚೀಫ್ ಆಫೀಸರ್ ಇದರ ಆಡಳಿತಾಧಿಕಾರಿಯಾಗಿರುತ್ತಾರೆ.

## ನೋಟಿಫೈಡ್ ಏರಿಯಾಗಳು ಮತ್ತು ಸ್ಯಾನಿಟರಿ ಬೋರ್ಡುಗಳು :

೧೯೬೪ರ ಕರ್ನಾಟಕ ಮುನಿಸಿಪಾಲಿಟಿ ನಗರ ಕಾಯ್ದೆಯು ಸರಕಾರದ ಅಧಿಸೂಚನೆಯಂತೆ ನೋಟಿಫೈಡ್ ಏರಿಯಾ ಕಮಿಟಿಗಳನ್ನು ರಚಿಸಲು ಅವಕಾಶ ನೀಡಿದೆ. ಆದರೆ ಅಲ್ಲಿ ಮುನಿಸಿಪಾಲಿಟಿಗಳನ್ನು ರಚಿಸಲು ಸಾಧ್ಯವಿಲ್ಲದ ಪ್ರದೇಶವಾಗಿರಬೇಕು. ಈಗ ರಾಜ್ಯದಲ್ಲಿ ಒಂಬತ್ತು ನೋಟಿಫೈಡ್ ಏರಿಯಾ ಸಮಿತಿಗಳಿವೆ. ಸ್ಯಾನಿಟರಿ ಬೋರ್ಡುಗಳೂ ಕೂಡ ಅಂತಹವೇ ಆಗಿದ್ದು, ದೊಡ್ಡ ಕೈಗಾರಿಕಾ ಪ್ರದೇಶಗಳಿಗೆ ರಚಿತವಾಗಿರುತ್ತವೆ. ಉದಾ: ಹಿಂದೂಸ್ಥಾನ್ ಏರೋನಾಟಿಕ್ಸ್ ಲಿಮಿಟೆಡ್, ಕೋಲಾರ ಚಿನ್ನದ ಗಣಿ ಪ್ರದೇಶ. ಇವುಗಳಲ್ಲಿ ನೋಟಿಫೈಡ್ ಏರಿಯಾಗಳಿಗಿಂತ ಹೆಚ್ಚಿನ ಜನಸಂಖ್ಯೆ ಇರುತ್ತದೆ. ಈ ಸಂಸ್ಥೆಗಳ ಆಡಳಿತಕ್ಕೆ ಒಬ್ಬ ವ್ಯಕ್ತಿಯನ್ನು ನೇಮಿಸಬಹುದು ಅಥವಾ ೩ ರಿಂದ ೫ ಸದಸ್ಯರುಳ್ಳ ಸಮಿತಿಯನ್ನು ರಚಿಸಬಹುದು.




# ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತ್

ಡಾ. ಎಸ್. ಎಂ. ಗಂಗಾಧರಯ್ಯ

೧

'ಮೌಲ್ಯಾಧಾರಿತ ರಾಜಕಾರಣ'ದ ಅನುಷ್ಠಾನದ ಹಂತದಲ್ಲಿ ಸಾಕ್ಷಾತ್ಕಾರವಾಗುವ ಮತ್ತೊಂದು ಪರಿಕಲ್ಪನೆ 'ಅಧಿಕಾರ ವಿಕೇಂದ್ರೀಕರಣ'. ಪ್ರಜಾಪ್ರಭುತ್ವ ನಿಜವಾದ ನಿಟ್ಟಿನಲ್ಲಿ ಯಶಸ್ವಿಯಾಗಬೇಕಾದರೆ 'ಮೌಲ್ಯಾಧಾರಿತ ರಾಜಕಾರಣದ' ಬದ್ಧತೆ ಅಗತ್ಯ. 'ತತ್ವ ರಹಿತ ರಾಜಕೀಯ' ಸಪ್ತ ಪಾತಕಗಳಲ್ಲಿ ಒಂದೆಂದು ಮಹಾತ್ಮ ಗಾಂಧೀಜಿಯವರು ಹೇಳಿದ ಮಾರ್ದನಿಯೇ ಮೌಲ್ಯಾಧಾರಿತ ರಾಜಕಾರಣ. ಅಧಿಕಾರ ವಿಕೇಂದ್ರೀಕರಣ ಮೌಲ್ಯಾಧಾರಿತ ರಾಜಕಾರಣದ ಬಹುಮುಖ್ಯ ಅಂಗ ಮಾತ್ರವಲ್ಲ, ಸಾವಯವ ಸಂಬಂಧಿಯಾದದ್ದು. ಅದು ಪ್ರಜಾಪ್ರಭುತ್ವದ ಮೂಲ ಪ್ರಾಣ. ಇಂತಹ ಅಧಿಕಾರ ವಿಕೇಂದ್ರೀಕರಣ ನೀತಿ ಪ್ರಜಾಪ್ರಭುತ್ವದ ಮೂಲ ಪ್ರಾಣ. ಇಂತಹ ಅಧಿಕಾರ ವಿಕೇಂದ್ರೀಕರಣ ನೀತಿ ಪ್ರಜಾಪ್ರಭುತ್ವ ಪದ್ಧತಿಯ ಸರ್ಕಾರದಲ್ಲಿ ಯಶಸ್ವಿಯಾಗಿ ಅನುಷ್ಠಾನಕ್ಕೆ ತಂದವರೆಂದರೆ ರಾಮಕೃಷ್ಣ ಹೆಗಡೆಯವರು.

> ***೧೯೮೩ರಲ್ಲಿ ರಾಮಕೃಷ್ಣ ಹೆಗಡೆಯವರು ತಂದ ಸ್ಥಳೀಯ ಸಂಸ್ಥೆಗಳ ಶಾಸನ ಇಡೀ ರಾಷ್ಟ್ರದಲ್ಲೇ ಅತ್ಯಂತ ಗಮನ ಸೆಳೆದ ಮುಸೂದೆಯಾಗಿತ್ತು. ಇದರ ಪ್ರಗತಿಪರ ವಿಚಾರಗಳು ಅಂದಿನ ಪ್ರಧಾನಿ ರಾಜೀವ್ ಗಾಂಧಿ ಅವರ ಗಮನ ಸೆಳೆದಿದ್ದವು.***

ರಾಮಕೃಷ್ಣ ಹೆಗಡೆಯವರ ಸಂಕಲ್ಪ ಶಕ್ತಿ ಹಿರಿದು. ಪ್ರಜಾಪ್ರಭುತ್ವವೇ ವ್ಯಕ್ತಿಯಾಗಿ ಮೈವೆತ್ತಂತೆ ಅವರ ಕಾರ್ಯವೈಖರಿ. ಗಾಂಧೀಜಿಯವರ 'ಗ್ರಾಮ ಸ್ವರಾಜ್' ಪರಿಕಲ್ಪನೆಯ ಸುಧಾರಿತ ವ್ಯವಸ್ಥೆ ಅವರ ಕಲ್ಪನೆಯಲ್ಲಿ ಬಂದಿತು. ಭಾರತದಂತಹ ಮೂರನೆಯ ಜಾಗತಿಕ ರಾಷ್ಟ್ರದ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಜಕೀಯ ಆರ್ಥಿಕ ಬದುಕಿನ ಹಿನ್ನೆಲೆಯಲ್ಲಿ ಸ್ಥಳೀಯ ಸಂಸ್ಥೆಗಳ ಮೂಲಕ ಅಧಿಕಾರ ವಿಕೇಂದ್ರೀಕರಣಗೊಳಿಸಿ ಜನತೆಯ ಕೈಗೆ ನೈಜ ಅಧಿಕಾರವಿಡುವ ಮಹದುದ್ದೇಶವನ್ನು ಹೊಂದಿದ್ದ ಅವರು ೧೯೮೩ರಲ್ಲಿ ತಮ್ಮ ಸರ್ಕಾರ ಬಂದ ತಕ್ಷಣವೇ ಕಾರ್ಯಪ್ರವೃತ್ತರಾದರು.

ಗ್ರಾಮೀಣ ಪ್ರದೇಶಗಳ ಸರ್ವಾಂಗೀಣ ಅಭಿವೃದ್ಧಿ ಆಗಬೇಕಾದರೆ ಅಧಿಕಾರ ವಿಕೇಂದ್ರೀಕರಣ ಅರ್ಥಪೂರ್ಣವಾಗಿ ಅನುಷ್ಠಾನವಾಗಬೇಕಾಗಿತ್ತು. ಈವರೆಗೆ ಆದ ಪ್ರಯೋಗಗಳ ವೈಫಲ್ಯಗಳನ್ನು ಹೆಗಡೆಯವರು ಸಮರ್ಥವಾಗಿ ಗುರುತಿಸಿದ್ದರು. ಈ ನಿಟ್ಟಿನಲ್ಲಿ ಸಮಕಾಲೀನ ಸಾಮಾಜಿಕ ಪರಿಸ್ಥಿತಿ ಹಾಗೂ ಪ್ರಜಾಪ್ರಭುತ್ವ ತಳಹದಿಯ ಮೇಲೆ ಸ್ಥಳೀಯ ಸರ್ಕಾರದ ಹೊಸ ವ್ಯವಸ್ಥೆಯ ಅನುಷ್ಠಾನಕ್ಕೆ ಚಾಲನೆ ನೀಡಲು ಈ ಹಿಂದಿನ ಪ್ರಯೋಗಗಳು ಭೂಮಿಕೆಯನ್ನು

ಮಾತ್ರ ಸಿದ್ಧಪಡಿಸಿದ್ದವು. ರಾಮಕೃಷ್ಣ ಹೆಗಡೆಯವರು ಅಧಿಕಾರ ವಿಕೇಂದ್ರೀಕರಣ ನೀತಿಯ ಅನುಷ್ಠಾನದಿಂದಾಗಿ ಕರ್ನಾಟಕ ರಾಜಕೀಯದಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಹೊಸ ಶಕೆಯನ್ನು ಆರಂಭಿಸಿದರು.

ಗಾಂಧೀಜಿಯವರು ದಕ್ಷಿಣ ಆಫ್ರಿಕಾದಿಂದ ಭಾರತಕ್ಕೆ ವಾಪಸಾಗುತ್ತಿದ್ದಾಗ 'ಗ್ರಾಮ ಸ್ವರಾಜ್' ಎಂಬ ಕಿರು ಹೊತ್ತಗೆಯನ್ನು ರಚಿಸಿದ್ದರು. ಅದರಲ್ಲಿ ಭವಿಷ್ಯದ ಸ್ವತಂತ್ರ ಭಾರತದ ಗ್ರಾಮಗಳು ಹೇಗಿರಬೇಕೆಂಬುದನ್ನು ನಿಖರವಾಗಿ ಬರೆದಿಟ್ಟಿದ್ದರು. "ಪ್ರತಿಯೊಂದು ಗ್ರಾಮವು ಒಂದು ಗಣರಾಜ್ಯ ಅಥವಾ ಪಂಚಾಯತಿಯನ್ನು ಹೊಂದಿರಬೇಕು. ಪ್ರತಿಯೊಂದು ಗ್ರಾಮವೂ ಸ್ವತಂತ್ರ ಸಾರ್ವಭೌಮ ಗಣರಾಜ್ಯದಂತಿರಬೇಕು. ಸ್ಥಳೀಯ ಸಂಸ್ಥೆಗಳಿಗೆ ಪರಮಾಧಿಕಾರವಿದ್ದರೆ ಜನರಿಗೆ ಹೆಚ್ಚಿನ ಅಧಿಕಾರವಿದ್ದಂತೆ ಎಂಬ ಗಾಂಧೀ ಕನಸನ್ನು ನನಸಾಗಿಸಿದವರೆಂದರೆ ರಾಮಕೃಷ್ಣ ಹೆಗಡೆಯವರು. ಅಲ್ಲಿಯವರೆಗೂ ಇದ್ದ ಸ್ಥಳೀಯ ಸಂಸ್ಥೆಗಳು ಗಾಂಧೀಜಿಯವರ ಕನಸನ್ನು ನನಸಾಗಿಸುವ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಪ್ರಪ್ರಥಮ ಬಾರಿಗೆ ಕರ್ನಾಟಕದಲ್ಲಿ ಕಾಂಗ್ರೆಸ್ಸೇತರ ಸರ್ಕಾರ ೧೯೮೩ರಲ್ಲಿ ಅಸ್ತಿತ್ವಕ್ಕೆ ಬಂದಾಗ ಈ ಸಂಬಂಧದಲ್ಲಿ ಒಂದು ಮೈಲಿಗಲ್ಲನ್ನು ನೆಟ್ಟಿತು. ನಜೀರ್‌ಸಾಬ್ ಅಂದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಮಂತ್ರಿಗಳಾಗಿದ್ದರು. ಅವರ ಅನುಭವಿ ನಿಸ್ವಾರ್ಥ ಆಲೋಚನೆಗಳು ಹೆಗಡೆಯವರ ಧೀಮಂತಿಕೆಯ ಮತ್ತು ಉದಾತ್ತ ಆಲೋಚನೆಗಳಲ್ಲಿ ಮೇಳೈಸಿದವು. ಈ ನಿಟ್ಟಿನಲ್ಲಿ ರಾಜ್ಯದಲ್ಲಿ ಬೆಳವಣಿಗೆಯೊಂದರ ಹೊಸ ಆಯಾಮ ಆವಿರ್ಭವಿಸಿತು. ಕಾಂಗ್ರೆಸ್ ಆಡಳಿತದ ಕಾಲಘಟ್ಟದಲ್ಲಿ ಅಧಿಕಾರದ ಕೇಂದ್ರೀಕರಣಗೊಳ್ಳುತ್ತಿದ್ದುದನ್ನು ಕಂಡು ಬೇಸತ್ತು ಜನತೆಗಾಗಿ ಇಂತಹ ಮಹತ್ವದ ನಿರ್ಧಾರಕ್ಕೆ ಹೆಗಡೆಯವರು ಬಂದರು.

ಇಂತಹ ಒಂದು ನಿರ್ಧಾರ ಸ್ವತಂತ್ರ ಭಾರತದಲ್ಲಿ ಆದರ್ಶಪ್ರಾಯವಾಯಿತು. ಉಳಿದೆಲ್ಲ ರಾಜ್ಯಗಳು ಮಾತ್ರವಲ್ಲ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಕೂಡಾ ಕರ್ನಾಟಕದ ಅಧಿಕಾರ ವಿಕೇಂದ್ರೀಕರಣ ನೀತಿಯನ್ನು ಸ್ವಾಗತಿಸಿ ಅಚ್ಚರಿಗೊಂಡವು. ವಿಶ್ವದಾದ್ಯಂತ ಮಾಧ್ಯಮಗಳಿಂದ ಪ್ರಶಂಸೆಯ ಮಹಾಪೂರವೇ ಅಂದು ಹರಿದುಬಂದಿತು. ನಿಜಕ್ಕೂ ಇಂತಹ ವ್ಯವಸ್ಥೆಯೊಂದರ ಕೊಡುಗೆ ಕರ್ನಾಟಕದ್ದು ಎಂದರೆ ಹೆಮ್ಮೆಯೆನಿಸುತ್ತದೆ, ಇನ್ನೂ ನಿರ್ದಿಷ್ಟವಾಗಿ ಹೇಳಬೇಕೆಂದರೆ ಹೆಗಡೆಯವರದ್ದು ಎಂದಾಗ ಆ ಹೆಮ್ಮೆ ದ್ವಿಗುಣಗೊಳ್ಳುತ್ತದೆ.

ಪಂಚಾಯತ್ ರಾಜ್ ವ್ಯವಸ್ಥೆಯ ಪರಿಕಲ್ಪನೆ ವಾಸ್ತವವಾಗಿ ಇಂದು ನಿನ್ನೆಯದಲ್ಲ. ಸಂಸ್ಕೃತಿ ಮೈದಾಳುವ ಕಾಲಘಟ್ಟದಿಂದಲೇ ಇದರ ಮೂಲವನ್ನು ಹುಡುಕಿಕೊಂಡು ಹೋಗಬಹುದು. ಭಾರತದ ಚಾರಿತ್ರಿಕ ಸಂದರ್ಭದಲ್ಲಿ ಪ್ರಜಾಸತ್ತಾತ್ಮಕವಲ್ಲದಿದ್ದರೂ ಗ್ರಾಮೀಣ ಬದುಕನ್ನು ಕುರಿತು ಚಿಂತಿಸುವ ಗ್ರಾಮಸಭೆ-ಸಮಿತಿಗಳಿಗೆ ಹತ್ತು ಹಲವು ಉದಾಹರಣೆಗಳಿವೆ. ಅದರಲ್ಲೂ ದಕ್ಷಿಣ ಭಾರತದ ಆಳರಸರಲ್ಲಿ ಈ ಪ್ರಜ್ಞೆ ಸ್ಫುಟವಾಗಿ ಮೈವೆತ್ತಿದೆ. ಚೋಳರ ದೊರೆ ರಾಜರಾಜ ಚೋಳನಿಗೆ ಸಂಬಂಧಿಸಿದ ಕ್ರಿ.ಶ. ೧೦೩೭ರ ಉತ್ತರ ಮೇರೂರು ಶಿಲಾಶಾಸನ ಈ ತೆರನಾದ ಸ್ಥಳೀಯ ಸರ್ಕಾರಗಳ ಇರುವಿಕೆಯ ಬಗೆಗೆ ನಿಖರವಾದ ಮಾಹಿತಿಯನ್ನು ನೀಡುತ್ತದೆ. ಇದರಿಂದಾಗಿ ಈ ವ್ಯವಸ್ಥೆ ಪಶ್ಚಿಮ ರಾಷ್ಟ್ರಗಳಿಂದ ಎರವಲಾಗಿ ಬಂದದ್ದಲ್ಲವೆಂಬ ಅಂಶ ಸ್ಪಷ್ಟವಾಗುತ್ತದೆ.

ವೇದಗಳ ಕಾಲದಿಂದಲೂ ಈ ವ್ಯವಸ್ಥೆ ಕಂಡುಬರುತ್ತದೆ. 'ಗ್ರಾಮೀಣ' ಗ್ರಾಮದ ಒಡೆಯನಾದರೆ, ಐದು ಜನರ ಸಮಿತಿ (ಪಂಚಾಯತ್) ಅವನ ನೆರವಿಗಿರುತ್ತಿತ್ತು. ಅಂದಿನಿಂದ ಇಂದಿನ ಸಾಮಾಜಿಕ ಸಂದರ್ಭದವರೆಗೂ 'ಪಂಚಾಯತಿ' ವಿಶೇಷ ಸ್ಥಾನಮಾನವನ್ನು ಹೊಂದಿದೆ. ಗ್ರಾಮಸಭೆ-ಸಮಿತಿಗಳು ಅಶೋಕ, ಚಂದ್ರಗುಪ್ತ ಮೌರ್ಯ ಅಲ್ಲದೆ ಮೊಘಲರ ಕಾಲಘಟ್ಟದಲ್ಲೂ ಕೃಷ್ಣದೇವರಾಯ, ಶಿವಾಜಿ ಮುಂತಾದ ರಾಜರ ಆಡಳಿತದಲ್ಲೂ ಕಂಡುಬರುತ್ತವೆ. ಮೈಸೂರು ಅರಸರ ಕಾಲಘಟ್ಟದಿಂದ ಸ್ಥಳೀಯ ಸಂಸ್ಥೆಗಳ ಅಧಿಕೃತ ಆರಂಭವನ್ನು ಕಾಣಬಹುದು. ರಾಜಸತ್ತೆಯಿಂದ ಸ್ಥಳೀಯ ಸಂಸ್ಥೆಗಳು ಪ್ರಜಾಸತ್ತೆಯತ್ತ ತಿರುಗುತ್ತಿದ್ದ ಸಂಕ್ರಮಣ ಕಾಲಘಟ್ಟವದು. ಅದಕ್ಕೆ ಬ್ರಿಟಿಷ್ ಆಡಳಿತಗಾರರ ಕೊಡುಗೆ ಇತ್ತೆಂಬುದನ್ನು ನಾವು ಒಪ್ಪಿಕೊಳ್ಳಬೇಕು.

ದಿವಾನ್ ರಂಗಾಚಾರ್ಲು ೧೮೮೨ರಲ್ಲಿ ಸ್ಥಳೀಯ ಸಂಸ್ಥೆಗಳನ್ನು ಸಶಕ್ತಗೊಳಿಸಲು ಮಹತ್ತರ ಹೆಜ್ಜೆಯನ್ನಿಟ್ಟರು. ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ವಿಧ್ಯುಕ್ತ ಆರಂಭವನ್ನು ಅವರು ತಂದುಕೊಟ್ಟರು. ಬ್ರಿಟಿಷರು ರಾಜಸತ್ತೆಯನ್ನು ತಗ್ಗಿಸಲು ಪ್ರಜಾಪ್ರತಿನಿಧಿ ಸಭೆಗಳನ್ನು ಜಾರಿಗೆ ತರುವ ಪ್ರಯತ್ನಗಳಲ್ಲಿ ಪಂಚಾಯತ್ ವ್ಯವಸ್ಥೆಯಲ್ಲಿ ಹತ್ತು ಹಲವು ಮಾರ್ಪಾಡಾಗತೊಡಗಿದವು. ೧೯೦೨ರಲ್ಲಿ "ಮೈಸೂರು ಲೋಕಲ್ ಬೋರ್ಡ್ ರೆಗ್ಯುಲೇಷನ್ಸ್" ಮೂಲಕ ಗ್ರಾಮಾಭಿವೃದ್ಧಿ ಸಭೆಗಳು ಜಾರಿಗೆ ಬಂದವು. ಅವು ೧೯೧೮ರವರೆಗೆ ತುಂಬಾ ಯಶಸ್ವಿಯಾಗಿ ಕಾರ್ಯನಿರ್ವಹಿಸಿದವು. ೧೯೧೮ರಲ್ಲಿ ಮೈಸೂರು ಸ್ಥಳೀಯ ಮಂಡಳಿಗಳು ಮತ್ತು ಗ್ರಾಮ ಪಂಚಾಯಿತಿಗಳ

ನಿಬಂಧನೆಗಳನ್ನು ಪಾಸು ಮಾಡಲಾಯಿತು. ಇದನ್ನು ಕಾಂತರಾಜ ಅರಸ್ ಅವರ ವರದಿಯ ಮೇರೆಗೆ ರೂಪಿಸಲಾಯಿತು. ಎಂಟು ಜಿಲ್ಲಾ ಬೋರ್ಡುಗಳು, ೨೨·ತಾಲ್ಲೂಕು ಬೋರ್ಡ್‌ಗಳು ಮತ್ತು ೮೧೯ ಗ್ರಾಮ ಪಂಚಾಯತಿಗಳನ್ನು ನಿಯುಕ್ತಿಗೊಳಿಸಲಾಯಿತು. ಅದಾದ ನಂತರ "ಮೈಸೂರು ಗ್ರಾಮ ಪಂಚಾಯತ್‌ಗಳು ೧೯೨೬ (ನಿಬಂಧನೆ ೧)" ಮತ್ತು "ಮೈಸೂರು ಜಿಲ್ಲಾ ಮಂಡಳಿಗಳು ೧೯೨೬ (ನಿಬಂಧನೆ ೧೧)"ನ್ನು ಜಾರಿಗೆ ತರಲಾಯಿತು. ೧೯೪೨ರಲ್ಲಿ "ಹೋಬಳಿ ಅಭಿವೃದ್ಧಿ ಯೋಜನೆ" ಎಂಬ ಸಮಿತಿಗಳನ್ನು ರಚಿಸಲಾಯಿತು.

ಸ್ವಾತಂತ್ರ್ಯಪೂರ್ವ ಭಾರತದಲ್ಲಿ ರಾಜಸ್ಥೈರ್ಯ ಮತ್ತು ಬ್ರಿಟಿಷರ ಕರಿನೆರಳಲ್ಲಿ ಬೆಳವಣಿಗೆ ಕಾಣಬೇಕಾಗಿದ್ದ ಸ್ಥಳೀಯ ಸರ್ಕಾರಗಳು ಸ್ವಾತಂತ್ರ್ಯೋತ್ತರ ಭಾರತದಲ್ಲಿ ಪ್ರಜಾಸತ್ತಾತ್ಮಕವಾದವು. ನಾಮಕಾವಸ್ಥೆಯಿದ್ದ ಸ್ಥಳೀಯ ಸರ್ಕಾರಗಳು ತಮ್ಮ ಅಂತ್ಯ ಕಂಡುಕೊಳ್ಳ ತೊಡಗಿದವು.

೧೯೪೮ರಲ್ಲಿ ಭಾರತ ಸರ್ಕಾರವು ಗ್ರಾಮೀಣಾಭಿವೃದ್ಧಿ ಯೋಜನೆಗಳನ್ನು ಜಾರಿಗೆ ತರುವ ನಿಟ್ಟಿನಲ್ಲಿ ಹಲವು ಕ್ರಮಗಳನ್ನು ಕೈಗೊಂಡಿತು. ತಾಲ್ಲೂಕು ಹಾಗೂ ಜಿಲ್ಲಾ ಅಭಿವೃದ್ಧಿ ಸಂಸ್ಥೆಗಳು ಜಾರಿಗೆ ಬಂದವು. ರಾಜ್ಯಮಟ್ಟದಲ್ಲಿ "ಡೆವಲಪ್‌ಮೆಂಟಲ್ ಕಮಿಷನರ್" ಇವುಗಳ ಉಸ್ತುವಾರಿಯನ್ನು ವಹಿಸಿಕೊಂಡು ಮೊದಲ ಅಧಿಕಾರೇತರ ಅಧ್ಯಕ್ಷರುಗಳನ್ನು ಈ ಸಮಿತಿಗಳಿಗೆ ನೇಮಿಸಲಾಯಿತು. ಮೈಸೂರು ಸರಕಾರವು ೧೯೪೯ರಲ್ಲಿ ವಿ. ವೆಂಕಟಪ್ಪ ಅವರ ನೇತೃತ್ವದ ಸಮಿತಿಯೊಂದನ್ನು ಮಾಡಿ ಸ್ಥಳೀಯ ಸರ್ಕಾರದ ರೂಪುರೇಷೆಯ ಬಗೆಗೆ ಒಂದು ವರದಿ ಸಲ್ಲಿಸಲು ಆದೇಶಿಸಿತು. ಇವರ ವರದಿಯನ್ವಯ ೧೯೫೨ರಲ್ಲಿ "ಮೈಸೂರು ವಿಲೇಜ್ ಪಂಚಾಯತ್ ಮತ್ತು ಡಿಸ್ಟ್ರಿಕ್ಟ್ ಬೋರ್ಡ್ ಆ್ಯಕ್ಟ್, ೧೯೫೨"ನ್ನು ಜಾರಿಗೊಳಸಲಾಯಿತು. ಇದರಲ್ಲಿ ೧೨ ಅಂಶಗಳು ಮುಖ್ಯವಾಗಿ ಅಡಕಗೊಂಡಿದ್ದವು. ಗ್ರೂಪ್ ಪಂಚಾಯ್ತಿಗಳನ್ನು ಸ್ಥಾಪಿಸುವುದು. ಅವು ಹತ್ತರಿಂದ ಇಪ್ಪತ್ತು ಇರುವಂತೆ ಶಿಫಾರಸು ಮಾಡಲಾಯಿತು. ಚುನಾವಣೆ ನಡೆಯತಕ್ಕದ್ದು. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳಿಗೆ ಮೀಸಲಾತಿ ಕಲ್ಪಿಸಲಾಯಿತು. ಇವುಗಳ ಜೊತೆಗೆ ಸರ್ಕಾರೇತರ ಸಂಘ-ಸಂಸ್ಥೆಗಳೂ ಸ್ಥಳೀಯ ಸಂಸ್ಥೆಗಳ ಸೇವಾ ಮನೋಭಾವವನ್ನು ಬೆಳೆಸಿಕೊಳ್ಳತೊಡಗಿದವು. ೧೯೫೨ರಲ್ಲಿ ಜಾರಿಗೆ ಬಂದ ಈ ಸಂಸ್ಥೆಗಳ ಪರಿಶೀಲನಾ ವರದಿಯನ್ನು ತರಿಸಿಕೊಳ್ಳಲು ಮೈಸೂರು ಸರ್ಕಾರ ಡಿ.ಎಚ್. ಚಂದ್ರಶೇಖರಯ್ಯನವರ ನೇತೃತ್ವದಲ್ಲಿ ಸಮಿತಿಯನ್ನು ರಚಿಸಿತು. ಚಂದ್ರಶೇಖರಯ್ಯನವರು ವಿಶೇಷವಾಗಿ ಅಧ್ಯಯನ ಮಾಡಿ ಹೊಸ ಪದ್ಧತಿಯ ಸ್ಥಳೀಯ ಸರ್ಕಾರಗಳನ್ನು ಶಿಫಾರಸು ಮಾಡಿದರು. ಅದರಲ್ಲಿ ಬಹುಮುಖ್ಯವಾಗಿ

೧) ತಾಲ್ಲೂಕು ಮಟ್ಟದಲ್ಲಿ ಬೋರ್ಡ್‌ಗಳ ಸ್ಥಾಪನೆ.

೨) ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಬೋರ್ಡ್‌ಗಳ ಸ್ಥಾಪನೆ.

೩) ಗ್ರಾಮ ಮಟ್ಟದಲ್ಲಿ ಪಂಚಾಯತ್ ಸಂಸ್ಥೆಗಳನ್ನು ಮುಂದುವರಿಸಲಾಯಿತು.

೧೯೫೬ರ ನಂತರ ವಿಶಾಲ ಕರ್ನಾಟಕ ರಾಜ್ಯ ಆಸ್ತಿತ್ವಕ್ಕೆ ಬಂದ ನಂತರ ಏಕರೂಪದ ಪಂಚಾಯತ್ ರಾಜ್ ಕಾಯಿದೆ ಅಸ್ತಿತ್ವಕ್ಕೆ ಬಂದಿತು. ಹರಿದು ಹಂಚಿದ್ದ ಕನ್ನಡನಾಡು ಎಸ್. ನಿಜಲಿಂಗಪ್ಪನವರ ಅವಿರತ ಶ್ರಮದಿಂದ ಒಂದಾಯಿತು. ವೆಂಕಟಪ್ಪ ಸಮಿತಿ, ಚಂದ್ರಶೇಖರಯ್ಯ ಸಮಿತಿ ಮತ್ತು ಬಲವಂತರಾವ್ ಮೆಹತಾ ಸಮಿತಿಗಳನ್ನು ಸಮಗ್ರವಾಗಿ ಅಧ್ಯಯನ ಮಾಡಿ ಅದರ ಹಿನ್ನೆಲೆಯಲ್ಲಿ ೧೯೫೯ರಲ್ಲಿ "ಮೈಸೂರು ವಿಲೇಜ್ ಪಂಚಾಯತ್ ಮತ್ತು ಡಿಸ್ಟ್ರಿಕ್ಟ್ ಬೋರ್ಡ್ ಆ್ಯಕ್ಟ್, ೧೯೫೯" ಜಾರಿಗೆ ತರಲಾಯಿತು. ಇದರ ಪ್ರಕಾರ ಗ್ರಾಮ ಮಟ್ಟದಲ್ಲಿ "ಗ್ರಾಮ ಪಂಚಾಯತಿ", ತಾಲ್ಲೂಕು ಮಟ್ಟದಲ್ಲಿ "ತಾಲ್ಲೂಕು ಡೆವಲಪ್‌ಮೆಂಟ್ ಬೋರ್ಡ್" ಮತ್ತು ಜಿಲ್ಲಾ ಮಟ್ಟದಲ್ಲಿ "ಡಿಸ್ಟ್ರಿಕ್ಟ್ ಡೆವಲಪ್‌ಮೆಂಟ್ ಕೌನ್ಸಿಲ್‌ಗಳು ರಚಿತವಾದವು."

ಈ ಎಲ್ಲಾ ಸಮಿತಿಗಳು ಸರ್ಕಾರದ ಉಸ್ತುವಾರಿಯಲ್ಲೇ ಕಾರ್ಯನಿರ್ವಹಿಸಬೇಕಾಗಿದ್ದುದು ತೀರಾ ವಿಚಿತ್ರದ ಸಂಗತಿಯಾಗಿತ್ತು. ಗಾಂಧೀಜಿಯವರು ಕಂಡಿದ್ದ ಗ್ರಾಮ ಸ್ವರಾಜ್ಯದ ಕನಸು ಕನಸಾಗಿಯೇ ಉಳಿಯಿತು. ಪ್ರಪಂಚ ತೀವ್ರಗತಿಯಲ್ಲಿ ಮುನ್ನಡೆಯುತ್ತಿದ್ದರೆ ಅದಕ್ಕೆ ಸಂವಾದಿಯಾಗಿ ಗ್ರಾಮೀಣ ರಾಜಕೀಯ ಬದುಕು ಮತ್ತು ಅವರ ರಾಜಕೀಯ ಹಿತಾಸಕ್ತಿಗಳಲ್ಲಿ ಯಾವುದೇ ಬೆಳಕು ಕಾಣದಾದವು. ಬರೀ ಚುನಾವಣೆ ಮತ್ತು ಅದಕ್ಕೆ ಸಂಬಂಧಿಸಿದ ರಾಜಕೀಯ ವೈಷಮ್ಯಗಳೇ ಮುಖ್ಯವಾದವು. 'ಗಾಂಧೀಜಿಯವರ ಗ್ರಾಮ ಗಣರಾಜ್ಯ' ಪರಿಕಲ್ಪನೆ ಕೇವಲ ಭಾಷಣಗಳಲ್ಲಿ ಮಾತ್ರವೇ ಉಳಿದುಕೊಂಡಿತ್ತು. ಆದರೆ ವಿನೋಬಾಜೀಯವರ ಸರ್ವೋದಯ ಚಳುವಳಿ ದಿನದಿನಕ್ಕೂ

ಹೆಚ್ಚು ವ್ಯಾಪಕವಾಗತೊಡಗಿತು. ಜಯಪ್ರಕಾಶ್ ನಾರಾಯಣರಂಥ ಮಹನೀಯರು ರಾಜಕೀಯ ತೊರೆದು ಗ್ರಾಮಗಳ ಅಭಿವೃದ್ಧಿಗೆ ಕಟಿಬದ್ಧರಾಗಿ ನಿಂತರು. ಇವರ ಹಿಂದೆ 'ಸೋಷಿಯಲಿಸ್ಟ್ ಐಡಿಯಾಲಜಿ' ಭಾರತದ ತುಂಬಾ ವ್ಯಾಪಕವಾಗಿ ಸೋಂಕಿತು. ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲೊಂದು ಪ್ರಚಂಡ ಪರಿವರ್ತನೆಯ ಗಾಳಿ ಬೀಸಿತು. ಕರ್ನಾಟಕದ ಚರಿತ್ರೆಯಲ್ಲಿ ಹೊಸ ಮನ್ವಂತರವೆನ್ನುವಂತೆ ಹೊಸ ಶಕೆಯೊಂದು ಆರಂಭವಾಯಿತು. ಜಯಪ್ರಕಾಶ ನಾರಾಯಣ್ ಹಾಗೂ ವಿನೋಬಾ ಅವರ ತತ್ವಗಳ ಅನುಷ್ಠಾನಕ್ಕೆ ಯುವ ರಾಜಕಾರಣಿಗಳ ಒಂದು ವರ್ಗ ಸೃಷ್ಟಿಯಾಯಿತು. ಇಂತಹ ಒಂದು ವರ್ಗದ ನೇತೃತ್ವವನ್ನು ರಾಮಕೃಷ್ಣ ಹೆಗಡೆಯವರು ವಹಿಸಿದ್ದರು. ರಾಜಕೀಯ ರಂಗ ಮಾತ್ರವಲ್ಲ, ಎಲ್ಲಾ ರಂಗಗಳಲ್ಲೂ ಬದಲಾವಣೆಯ ಬಿರುಗಾಳಿ ಬೀಸತೊಡಗಿತು.

೧೯೮೩ರ ಸಾರ್ವತ್ರಿಕ ಚುನಾವಣೆ ಇಂತಹ ಪರಿವರ್ತನೆಗೆ ನಿಮಿತ್ತ ಮಾತ್ರಕ್ಕೆ ಕಾರಣವಾಯಿತು. ಜನತಾಪಕ್ಷ ಅಧಿಕಾರಕ್ಕೆ ಬಂದು, ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಗಳಾದರು. 'ನೀರ್‌ಸಾಬ್' ಎಂದು ಖ್ಯಾತರಾಗಿದ್ದ ನಜೀರ್‌ಸಾಬ್‌ರವರು ಗ್ರಾಮೀಣ ಮತ್ತು ಪಂಚಾಯತ್‌ರಾಜ್ ಸಚಿವರಾದರು. ಎಂ.ಪಿ. ಪ್ರಕಾಶ್, ಪಿ.ಜಿ.ಆರ್. ಸಿಂಧ್ಯ ಮುಂತಾದ ಯುವ ನಾಯಕರು 'ಸರ್ವೋದಯ' ಚಳವಳಿಯ ಹಿನ್ನೆಲೆಯಿಂದ ಬಂದು ಈಗ ಸಕ್ರಿಯ ರಾಜಕಾರಣಿಗಳಾಗಿರುವರು. ಅಂದಿನಿಂದ ಕರ್ನಾಟಕದ ಪಂಚಾಯತ್ ರಾಜ್ ವ್ಯವಸ್ಥೆಯ ಹೊಸ ಶಕೆ ಆರಂಭವಾಯಿತು. ಅದು ರಾಮಕೃಷ್ಣ ಹೆಗಡೆಯವರ 'ದೂರದೃಷ್ಟಿ' 'ಮೌಲ್ಯಾಧಾರಿತ ರಾಜಕಾರಣದ ಪರಿಕಲ್ಪನೆ' ಹಾಗೂ 'ಅಧಿಕಾರ ವಿಕೇಂದ್ರೀಕರಣದ ಸೂತ್ರದಿಂದ' ಪಂಚಾಯತ್ ರಾಜ್ ವ್ಯವಸ್ಥೆ ವ್ಯಾಖ್ಯಾನವನ್ನು ಕಂಡುಕೊಂಡಿತು. ಮಾತ್ರವಲ್ಲ ಇಡೀ ದೇಶದಲ್ಲೇ ಮಾದರಿಯೆನ್ನುವಂತೆ ಅನುಷ್ಠಾನಕ್ಕೆ ಬಂದಿತು. ರಾಮಕೃಷ್ಣ ಹೆಗಡೆಯವರ 'ಅಧಿಕಾರ ವಿಕೇಂದ್ರೀಕರಣ' ಪರಿಕಲ್ಪನೆ ಅದ್ವಿತೀಯವಾದದ್ದು. ಕೇವಲ ನೆಪಮಾತ್ರಕ್ಕಿದ್ದ ಅಲ್ಲಿಯವರೆಗಿನ ಸ್ಥಳೀಯ ಸಂಸ್ಥೆಗಳು, ನಿಜ ಅರ್ಥದಲ್ಲಿ ಅಧಿಕಾರ ವಿಕೇಂದ್ರೀಕರಣ ನೀತಿಯನ್ನು ಅರ್ಥೈಸತೊಡಗಿದವು. ಅವು ಜಾರಿಗೆ ತಂದ ಮಂಡಳ ಪಂಚಾಯತ್ ಮತ್ತು ಜಿಲ್ಲಾ ಪರಿಷತ್‌ಗಳು ಭಾರತದ ಒಕ್ಕೂಟಕ್ಕೆ ಈ ನಿಟ್ಟಿನಲ್ಲಿ ಮಹತ್ವದ ಮಾದರಿಗಳಾಗಿ ಹೆಬ್ಬಂಡೆಯಂತೆ ಗಟ್ಟಿ ಮೈಲಿಗಲ್ಲುಗಳಾಗಿವೆ.

೨

ಪಂಚಾಯತಿರಾಜ್ಯ ಸಂಸ್ಥೆಗಳಲ್ಲಿ ಜನತೆಯ ಸಹಭಾಗಿತ್ವವನ್ನು ಅಧಿಕಗೊಳಿಸಿ ಅಧಿಕಾರ ವಿಕೇಂದ್ರೀಕರಣವನ್ನು ವಿಸ್ತರಿಸಿ ಸ್ವಯಂ ಆಡಳಿತ ಸಂಸ್ಥೆಗಳ ಕಾರ್ಯ ವಿಧಾನವನ್ನು ಹೆಚ್ಚು ಅರ್ಥಪೂರ್ಣಗೊಳಿಸುವ ಸಲುವಾಗಿ ೧೯೫೯ರ ಕರ್ನಾಟಕ ಗ್ರಾಮ ಪಂಚಾಯತಿ ಮತ್ತು ಸ್ಥಳೀಯ ಸಂಸ್ಥೆಗಳ ಕಾಯಿದೆಗೆ ಬದಲಾಗಿ ಒಂದು ನೂತನ ಪಂಚಾಯತಿ ರಾಜ್ಯ ವ್ಯವಸ್ಥೆಯನ್ನು ತರಲಾಯಿತು. ಹಿಂದಿನ ಪಂಚಾಯತಿ "ರಾಜ್ಯ ಸಂಸ್ಥೆಗಳನ್ನು ೧೯೮೩ರ ಕರ್ನಾಟಕ ಜಿಲ್ಲಾ ಪರಿಷತ್ತು, ತಾಲ್ಲೂಕು ಪಂಚಾಯತಿ ಸಮಿತಿಗಳು ಮಂಡಳ ಪಂಚಾಯತಿ ಮತ್ತು ನ್ಯಾಯ ಪಂಚಾಯತಿ ಕಾಯಿದೆಯನ್ವಯ ಪುನರ್‌ರಚಿಸಲಾಯಿತು. ೧೯೮೫ ರ ಕರ್ನಾಟಕ ಕಾಯಿದೆ (ನಂ. ೨೦) ಎಂಬ ಹೊಸ ಕಾಯಿದೆಯನ್ನು ೧೯೮೫ರ ಆಗಸ್ಟ್ ೧೪ ರಿಂದ ಜಾರಿಯಲ್ಲಿ ತರಲಾಯಿತು. ನ್ಯಾಯ ಪಂಚಾಯತಿಗಳ ರಚನೆಯ ವಿಷಯವನ್ನು ಪ್ರಾರಂಭದಲ್ಲಿ ಐದು ವರ್ಷಗಳ ಕಾಲ ಮಾಡಿದ್ದರಿಂದ ಮತ್ತು ನ್ಯಾಯ ಪಂಚಾಯತಿಗಳ ರಚನೆಯಾಗದುದರಿಂದ ಈ ನೂತನ ಕಾಯಿದೆಯನ್ನು ಸಂಪೂರ್ಣವಾಗಿ ಜಾರಿಗೊಳಿಸಲಾಗಲಿಲ್ಲ. ಬದಲಾದ ಪರಿಕಲ್ಪನೆಯೊಂದಿಗೆ ಆರಂಭವಾದ ಈ ಸಂಸ್ಥೆಗಳು ಜನತೆಯ ಹೆಚ್ಚಿನ ಸಹಭಾಗಿತ್ವದೊಂದಿಗೆ ಕೆಳಹಂತದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನೆಯನ್ನು ತರುವ ಮೂಲ ಸಂಸ್ಥೆಗಳಾಗಿ ಗ್ರಾಮ ಸ್ವರಾಜ್ಯದ ಗುರಿ ಸಾಧಿಸಲು ನೆರವಾಗುತ್ತವೆಂದು ಅಂದಿನ ಸರ್ಕಾರ ಆಶಿಸಿತ್ತು. ಈ ಉದ್ದೇಶದಿಂದಲೇ ವ್ಯಾಪಕವಾದ ಮಹತ್ವಪೂರ್ಣ ಅಭಿವೃದ್ಧಿ ಕಾರ್ಯ ಯೋಜನೆಗಳನ್ನು ಆಡಳಿತಾತ್ಮಕವಾಗಿ ಜಿಲ್ಲಾ ಮಟ್ಟದಲ್ಲಿ ಸಮಗ್ರ ರಾಜ್ಯ ವ್ಯವಸ್ಥೆಯು (೧) ಜಿಲ್ಲಾ ಪರಿಷತ್ತುಗಳು (೨) ತಾಲ್ಲೂಕು ಪಂಚಾಯತಿಗಳು ಮತ್ತು ಗ್ರಾಮಸಭೆಗಳು (೩) ಮಂಡಳ ಪಂಚಾಯತಿಗಳು ಮತ್ತು ಗ್ರಾಮ ಸಭೆಗಳೆಂಬ ಹಂತಗಳನ್ನು ಹೊಂದಿದೆ. ಇವುಗಳಲ್ಲಿ ಮಂಡಳ ಪಂಚಾಯಿತಿಗಳು ಮತ್ತು ಜಿಲ್ಲಾ ಪರಿಷತ್ತುಗಳು ಮಾತ್ರ ಚುನಾಯಿತ ಸಂಸ್ಥೆಗಳಾಗಿದ್ದವು. ಈ ಸಂಸ್ಥೆಗಳು ಶಾಶ್ವತವಾದ ಸಾಮಾಜಿಕ ಸಂಸ್ಥೆಗಳಾಗಿದ್ದು, ಇವುಗಳ ಚುನಾಯಿತ ಪ್ರತಿನಿಧಿಗಳ ಅಧಿಕಾರಾವಧಿಯು ೫ ವರ್ಷಗಳಾಗಿದ್ದು, ಅದರಲ್ಲಿ ಶೇ. ೨೫ರಷ್ಟು ಸ್ಥಾನಗಳು ಮಹಿಳೆಯರಿಗೂ, ಶೇ. ೧೮ರಷ್ಟು ಸ್ಥಾನಗಳು ಪರಿಶಿಷ್ಟ ವರ್ಗ ಮತ್ತು ಪಂಗಡಗಳವರಿಗೂ ಮೀಸಲಾಗಿರುತ್ತದೆ. ೧೯೮೭ರ ಪಕ್ಷಾಂತರ ನಿಷೇಧ ಕಾಯಿದೆಯೂ ಈ ಸಂಸ್ಥೆಗಳ ಸದಸ್ಯರಿಗೆ ಅನ್ವಯಿಸುತ್ತದೆ.

**ಜಿಲ್ಲಾ ಪರಿಷತ್ತುಗಳು ಮತ್ತು ಮಂಡಳ ಪಂಚಾಯತಿಗಳಿಗೆ ಚುನಾವಣೆಗಳು** : ಈ ಕಾಯಿದೆಯು ಅನುಷ್ಠಾನಕ್ಕೆ ಬಂದ ಮೇಲೆ ೨-೧-೧೯೮೭ರಂದು ಜಿಲ್ಲಾ ಪರಿಷತ್ತುಗಳಿಗೆ ಹಾಗೂ ೨೦-೧-೧೯೮೭ ರಂದು ೨೪೯೯ ಮಂಡಳ ಪಂಚಾಯತಿಗಳಿಗೆ ಚುನಾವಣೆಗಳನ್ನು ನಡೆಸಲಾಯಿತು. ರಾಜ್ಯದ ೧೯ ಜಿಲ್ಲಾ ಪರಿಷತ್ತುಗಳಿಗೆ ಪಕ್ಷದ ಆಧಾರದ ಮೇಲೆ ೮೮೭ ಸದಸ್ಯರನ್ನು ಆಯ್ಕೆ ಮಾಡಲಾಯಿತು. (ಬೆಂಗಳೂರು ನಗರ ಜಿಲ್ಲೆಯಲ್ಲಿ ಜಿಲ್ಲಾ ಪರಿಷತ್ತು ಇಲ್ಲದ್ದರಿಂದ ಈ ಜಿಲ್ಲೆಯಲ್ಲಿ ಚುನಾವಣೆಯಾಗಲಿಲ್ಲ). ಪ್ರಥಮ ಬಾರಿಗೆ ಈ ಚುನಾವಣೆ ನಡೆದ ಸಂದರ್ಭದಲ್ಲಿ ರಾಜ್ಯದ ಮಂಡಳಿಗಳಲ್ಲಿ ಒಟ್ಟು ೫೪೩೯೭ ಸ್ಥಾನಗಳಿದ್ದವು.

೧೯೮೩ರ ಜಿಲ್ಲಾ ಪರಿಷತ್ತುಗಳು ಮತ್ತು ಮಂಡಳ ಪಂಚಾಯತಿಗಳ ಕಾಯಿದೆಯು ಅನುಷ್ಠಾನಕ್ಕೆ ಬಂದ ಮೇಲೆ ೧೯೬೪ರ ಕರ್ನಾಟಕ ಪುರಸಭೆಗಳ ಕಾಯಿದೆಯನ್ವಯ ರಚಿತಗೊಂಡಿದ್ದ ಕೆಲವು ಚಿಕ್ಕ ಪುರಸಭೆಗಳನ್ನು ಮಂಡಳ ಪಂಚಾಯತಿಗಳ ಹಂತಕ್ಕೆ ಇಳಿಸಲಾಯಿತು. ಅಂತಹ ೬೭ ಪುರಸಭೆಗಳಿದ್ದವು. ಈ ಪುರಸಭೆಗಳು ೧೯೮೮ರವರೆಗೆ ಅಸ್ತಿತ್ವದಲ್ಲಿದ್ದ ಆ ಪುರಸಭೆಗಳ ಅವಧಿಯು ಮುಗಿಯುವವರೆಗೆ ಮಧ್ಯಂತರ ಮಂಡಳಿಗಳಾಗಿ ಕಾರ್ಯವನ್ನು ಮುಂದುವರಿಸಿದವು. ೧೯೮೭ ರಿಂದ ೧೯೯೧ರವರೆಗಿನ ಐದು ವರ್ಷಗಳಲ್ಲಿ ಈ ಸಂಸ್ಥೆಗಳಲ್ಲಿ ಜನತೆಯ ಸಹಭಾಗಿತ್ವ ಮತ್ತು ಅಧಿಕಾರ ವಿಕೇಂದ್ರೀಕರಣದ ಉದ್ದೇಶ ಸಾರ್ಥಕವಾಗುವಂತೆ ಜಿಲ್ಲಾ ಪರಿಷತ್ತು ಮತ್ತು ಮಂಡಳ ಪಂಚಾಯತಿಗಳ ಕಾಯಿದೆಗೆ ಹಲವಾರು ಸೂಕ್ತ ತಿದ್ದುಪಡಿಗಳನ್ನು ತರಲಾಯಿತು. ಈ ಸಂಸ್ಥೆಗಳ ರಚನೆ ಮತ್ತು ಕಾರ್ಯವಿಧಾನವನ್ನು ವಿವರಿಸಲಾಗಿದೆ.

೩

## ಜಿಲ್ಲಾ ಪರಿಷತ್ತುಗಳು

ಜಿಲ್ಲಾ ಮಟ್ಟದಲ್ಲಿರುವ ಉನ್ನತ ಸ್ಥಳೀಯ ಸಂಸ್ಥೆಗಳೆಂದರೆ, ಜಿಲ್ಲಾ ಪರಿಷತ್ತುಗಳು. ನಗರ ಪ್ರದೇಶದ ಸ್ಥಾನಿಕ ಸಂಸ್ಥೆಗಳಾದ ನಗರಸಭೆ, ಪುರಸಭೆಗಳನ್ನು ಹೊರತುಪಡಿಸಿ ಇಡೀ ಜಿಲ್ಲೆಯ ವ್ಯಾಪ್ತಿಯನ್ನುಳ್ಳ ಜಿಲ್ಲಾ ಪರಿಷತ್ತುಗಳು ಜಿಲ್ಲಾ ಮಟ್ಟದ ಸರ್ಕಾರಗಳಂತೆ ಕಾರ್ಯನಿರ್ವಹಿಸುತ್ತಿದ್ದವು. ಪ್ರತಿ ೨೫,೦೦೦ ಮತ್ತು ಅದರ ಭಾಗ ಜನಸಂಖ್ಯೆಗೆ ಒಬ್ಬನಂತೆ ಜಿಲ್ಲಾ ಪರಿಷತ್ತಿಗೆ ಸದಸ್ಯರನ್ನು ಆಯ್ಕೆ ಮಾಡಲಾಗುತ್ತದೆ. ಮಲೆನಾಡು ಮತ್ತು ಗುಡ್ಡಗಾಡು ಪ್ರದೇಶಗಳಿಗೆ ಪ್ರತಿ ೧೨,೦೦೦ಮತ್ತು ಅದರ ಭಾಗಶಃ ಜನಸಂಖ್ಯೆಗೆ ಒಬ್ಬರಂತೆ ೧೯೭೧ರ ಗಣತಿಯಂತೆ ಸದಸ್ಯರನ್ನು ಆಯ್ಕೆ ಮಾಡಲಾಗುತ್ತದೆ. ಆಯಾ ಜಿಲ್ಲೆಯ ಭಾಗಶಃ ಅಥವಾ ಜಿಲ್ಲೆಯ ಶಾಸನಾಸಭಾ ಸದಸ್ಯರು ಮತ್ತು ಲೋಕಸಭಾ ಸದಸ್ಯರು ಪರಿಷತ್ತಿನ ಸದಸ್ಯರಾಗಿರುತ್ತಾರೆ. ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕಿನ ಅಧ್ಯಕ್ಷರನ್ನು ಜಿಲ್ಲಾ ಪರಿಷತ್ತಿನ ಸಹಸದಸ್ಯರನ್ನಾಗಿ ನೇಮಕ ಮಾಡಿಕೊಳ್ಳಲು ಅವಕಾಶವಿತ್ತು. ಪರಿಣಾಮಕಾರಿ ಆಡಳಿತ ಮತ್ತು ಸಂಯೋಜನೆಯ ಸಲುವಾಗಿ ಜಿಲ್ಲಾ ಪರಿಷತ್ತಿನಲ್ಲಿ ಒಂಬತ್ತರಷ್ಟು ಸ್ಥಾಯೀ ಸಮಿತಿಗಳನ್ನು ರಚಿಸಿಕೊಳ್ಳಲು ಅವಕಾಶ ಒದಗಿಸಲಾಗಿತ್ತು. ಜಿಲ್ಲಾ ಪರಿಷತ್ತಿನ ಅಧ್ಯಕ್ಷರು ಮತ್ತು ಉಪಾಧ್ಯಕ್ಷರುಗಳಿಗೆ ಕ್ರಮವಾಗಿ ರಾಜ್ಯ ಮಂತ್ರಿ ಮತ್ತು ಉಪಮಂತ್ರಿಗಳ ಸ್ಥಾನಮಾನಗಳನ್ನು ನೀಡಲಾಗಿತ್ತು. ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯನ್ನು ಮುಖ್ಯ ಕಾರ್ಯದರ್ಶಿಯೆಂದು ಕರೆಯಲಾಗಿತ್ತು. ಐ.ಎ.ಎಸ್. ದರ್ಜೆಯ ಅಧಿಕಾರಿಯಾದ ಇವರಿಗೆ ಉಪಕಾರ್ಯದರ್ಶಿ, ಪ್ರಧಾನ ಲೆಕ್ಕಪತ್ರಾಧಿಕಾರಿ ಮತ್ತು ಇತರ ಅಗತ್ಯ ಸಿಬ್ಬಂದಿ ಸಹಾಯಕರಾಗಿರುತ್ತಾರೆ. 'ಎ' ಮತ್ತು 'ಬಿ' ದರ್ಜೆಯ ಅಧಿಕಾರಿಗಳು ಹಾಗೂ ಐ.ಎ.ಎಸ್. ದರ್ಜೆಯ ಅಧಿಕಾರಿಗಳು ನಿಯೋಜನೆ ಮೇರೆಗೆ ಜಿಲ್ಲಾಪರಿಷತ್ತಿನ ಅಧಿಕಾರಿಗಳಾಗಿ ಕೆಲಸ ಮಾಡುತ್ತಾರೆ. ಜಿಲ್ಲಾ ಪರಿಷತ್ತಿನ ಕಾಯ್ದೆ ೧೮೨,೧೮೪ ಮತ್ತು ೧೮೫ ನೆಯ ಅನುಚ್ಛೇದಗಳಲ್ಲಿ ಹೇಳಿರುವಂತೆ ವ್ಯಾಪಕವಾದ ಅಭಿವೃದ್ಧಿಪರ ಕಾರ್ಯಗಳ ಅನುಷ್ಠಾನ ಜಿಲ್ಲಾ ಪರಿಷತ್ತಿಗೆ ಸೇರಿದೆ. ದೊಡ್ಡ ಮತ್ತು ಮಧ್ಯಮ ನೀರಾವರಿ ಕೆಲಸಗಳು ಹಾಗೂ ಹೊರಗಿನ ನೆರವು ಪಡೆದ ಯೋಜನೆಗಳನ್ನುಳಿದು ಅಂತರ ಗ್ರಾಮೀಣ ಯೋಜನೆಗಳು ಹಾಗೂ ಜಿಲ್ಲಾ ಗ್ರಾಮೀಣ ಯೋಜನೆಗಳು ಸೇರಿದಂತೆ ಜಿಲ್ಲೆಯ ಎಲ್ಲಾ ಅಭಿವೃದ್ಧಿ ಕೆಲಸಗಳು ಜಿಲ್ಲಾ ಪರಿಷತ್ತಿನ ಕಾರ್ಯವ್ಯಾಪ್ತಿಗೆ ಬರುತ್ತವೆ. ಪ್ರಾರಂಭದಲ್ಲಿ ಕೃಷಿ, ತೋಟಗಾರಿಕೆ, ಪಶು ಸಂಗೋಪನೆ, ಸಣ್ಣ ನೀರಾವರಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ, ಗ್ರಾಮೀಣ ಆರೋಗ್ಯ ಮತ್ತು ನೈರ್ಮಲ್ಯ, ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಕ್ಷೇಮಾಭ್ಯುದಯ, ಸಾರ್ವಜನಿಕ ವಿತರಣಾ ವ್ಯವಸ್ಥೆ ಇತ್ಯಾದಿ ಸುಮಾರು ೪೪ ಅಭಿವೃದ್ಧಿ ಯೋಜನೆಗಳನ್ನು ಜಿಲ್ಲಾ ಪರಿಷತ್ತಿಗೆ ವಹಿಸಿಕೊಡಲಾಗಿತ್ತು, ಕಾಯಿದೆಯ ೧೮೩(೨) ನೇ ಅನುಚ್ಛೇದದನ್ವಯ ಜಿಲ್ಲಾಪರಿಷತ್ತಿನ ಕಾರ್ಯ ಮತ್ತು ಯೋಜನೆಗಳನ್ನು ಪರಿಶೀಲಿಸುವ ಅಧಿಕಾರವನ್ನು ರಾಜ್ಯ ಸರಕಾರವು ಹೊಂದಿತ್ತು.

ಜಿಲ್ಲಾ ಪರಿಷತ್ತುಗಳ ರಚನೆಯಾದ ಮೇಲೆ ಹಿಂದಿನ ಗ್ರಾಮೀಣ ಅಭಿವೃದ್ಧಿ ಸಂಸ್ಥೆಗಳನ್ನು (ಡಿ.ಆರ್.ಡಿ.ಎಸ್.) ರದ್ದುಗೊಳಿಸಿ ಅವುಗಳ ಆಸ್ತಿ ಮತ್ತು ಋಣಭಾರವನ್ನು ಜಿಲ್ಲಾ ಪರಿಷತ್ತುಗಳಿಗೆ ವಹಿಸಲಾಯಿತು. ಅಲ್ಲದೆ ಈ ಮೊದಲು ಜಿಲ್ಲಾಧಿಕಾರಿಗಳು ನಿರ್ವಹಿಸುತ್ತಿದ್ದ ಅಭಿವೃದ್ಧಿ ಮತ್ತು ಸಾಮಾಜಿಕ ಭದ್ರತೆಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ಜಿಲ್ಲಾ ಪರಿಷತ್ತುಗಳಿಗೆ ವರ್ಗಾಯಿಸಲಾಯಿತು.

ಜಿಲ್ಲಾ ಪರಿಷತ್ತುಗಳು ರಾಜ್ಯ ಸರಕಾರದಿಂದ ವರ್ಗಾಯಿಸಲಾದ ಕ್ರೋಢೀಕೃತ ನಿಧಿ, ಅನುದಾನಗಳು,ಸಾಲಗಳು, ಸರ್ಕಾರದ ವಂತಿಗೆ ಹಾಗೂ ತೆರಿಗೆಗಳು, ದಂಡಗಳು, ಭೂಮಿ ಮತ್ತು ಆಸ್ತಿಗಳ ಮೇಲಿನ ಬಾಡಿಗೆ ಮುಂತಾದ ಆರ್ಥಿಕ ಮೂಲಗಳನ್ನು ಒಳಗೊಂಡಿದೆ. ಈ ಹೊಸ ಸಂಸ್ಥೆಗಳ ಹಣಕಾಸಿಗೆ ಸಂಬಂಧಿಸಿದ ರಾಜ್ಯ ಸಮಿತಿಯು ೧೯೮೬ರ ಫೆಬ್ರವರಿಯಲ್ಲಿ ರಚನೆಗೊಂಡು ೧೯೮೯ರ ಮಾರ್ಚಿಯಲ್ಲಿ ತನ್ನ ವರದಿಯನ್ನು ಸಲ್ಲಿಸಿತು. ಒಂದಕ್ಕಿಂತ ಹೆಚ್ಚು ಮಂಡಳ ಪಂಚಾಯತಿಗಳ ವ್ಯಾಪ್ತಿಯಲ್ಲಿ ಕೆಲವು ಅಭಿವೃದ್ಧಿ ಕಾರ್ಯಗಳನ್ನು ಸ್ವತಂತ್ರವಾಗಿ ನಿರ್ವಹಿಸುವ ಜವಾಬ್ದಾರಿಯನ್ನು ಜಿಲ್ಲಾ ಪರಿಷತ್ತುಗಳಿಗೆ ವಹಿಸಲಾಯಿತು. ತಮ್ಮ ತಮ್ಮ ಕ್ಷೇತ್ರದ ವ್ಯಾಪ್ತಿಗೆ ಅಗತ್ಯವಾದ ಅಭಿವೃದ್ಧಿ ಯೋಜನೆಗಳನ್ನು ಆದ್ಯತೆಯ ಮೇರೆಗೆ ರೂಪಿಸುವ ಅಧಿಕಾರವನ್ನು ಜಿಲ್ಲಾ ಪರಿಷತ್ತುಗಳು ಮತ್ತು ಮಂಡಲ ಪಂಚಾಯತಿಗಳಿಗೆ ನೀಡಲಾಗಿದೆ. ಜಿಲ್ಲಾ ಪರಿಷತ್ತುಗಳು ಮತ್ತು ಮಂಡಳ ಪಂಚಾಯತಿಗಳ ರಚನೆಯೊಂದಿಗೆ ಯೋಜನೆಯ ವಿಕೇಂದ್ರೀಕರಣದ ಹೊಸ ಅಧ್ಯಾಯ ಪ್ರಾರಂಭವಾಯಿತು. ಪ್ರಾರಂಭದಲ್ಲಿ (೧೯೮೭) ಜಿಲ್ಲಾ ಪರಿಷತ್ತುಗಳು ಮತ್ತು ಮಂಡಲ ಪಂಚಾಯತಿಗಳು ಅಭಿವೃದ್ಧಿ ಯೋಜನೆಗಳನ್ನು ರೂಪಿಸಿ ವೆಚ್ಚ ಮಾಡಲು ಒಟ್ಟು ಅನುದಾನವನ್ನು ಒದಗಿಸುವ ವ್ಯವಸ್ಥೆ ಮಾಡಲಾಯಿತು.

## ಕಾರ್ಯನಿರ್ವಹಣೆಯ ಸಮೀಕ್ಷೆ :

ಜಿಲ್ಲಾ ಪರಿಷತ್ತುಗಳು ಮತ್ತು ಮಂಡಳ ಪಂಚಾಯತಿಗಳ ಕಾರ್ಯ ನಿರ್ವಹಣೆಯ ಸಮೀಕ್ಷೆ ನಡೆಸಿ ಅವುಗಳ ರಚನೆ ಅಥವಾ ಕಾರ್ಯ ನಿರ್ವಹಿಸುವ ಪರಿಸರಕ್ಕೆ ಸಂಬಂಧಿಸಿದಂತೆ ಸುಧಾರಣೆ ಅಳವಡಿಸಿಕೊಂಡು ಭದ್ರವಾದ ನೆಲೆಗಟ್ಟಿನಲ್ಲಿ ನಿಲ್ಲಲು ಅಗತ್ಯವಾದ ಸಲಹೆಗಳನ್ನು ನೀಡಲು ೧೯೮೮ರಲ್ಲಿ ಡಾ. ಕೃಷ್ಣಸ್ವಾಮಿರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿತು. ಈ ಸಮಿತಿಗೆ ರಾಜ್ಯದ ಜಿಲ್ಲಾ ಪರಿಷತ್ತುಗಳು ಮತ್ತು ಮಂಡಳ ಪಂಚಾಯತಿಗಳ ಕಾರ್ಯವ್ಯಾಪ್ತಿಯನ್ನು ಸಮಗ್ರವಾಗಿ ಪರಿಶೀಲಿಸಲು ಸರ್ಕಾರ ಸೂಚಿಸಿತು. ಸಮಿತಿಯು ೧೯೮೯ರಲ್ಲಿ ತನ್ನ ವರದಿಯನ್ನು ಸಲ್ಲಿಸಿತು. ನಂತರ ಪಂಚಾಯತಿ ರಾಜ್ಯ ಸಂಸ್ಥೆಗಳ ಕಾರ್ಯ ಚಟುವಟಿಕೆಗಳು ಸಮಗ್ರ ಮತ್ತು ಸಾರ್ಥಕ ರೀತಿಯಲ್ಲಿ ಆಗುವಂತಹ ಕೆಲವು ಸಲಹೆ ಮತ್ತು ಮಾರ್ಪಾಟುಗಳನ್ನು ಸೂಚಿಸಿತು. ಪಂಚಾಯತಿ ರಾಜ್ಯ ಸಂಸ್ಥೆಗಳ ಕಾರ್ಯದ ಬಗ್ಗೆ ಒಟ್ಟಾರೆ ತನ್ನ ಮೆಚ್ಚುಗೆ ವ್ಯಕ್ತಪಡಿಸಿದ ಈ ಸಮಿತಿಯು 'ಶಿಕ್ಷಣ ಮತ್ತು ಆರೋಗ್ಯ ಸೌಲಭ್ಯಗಳು, ವಿವಿಧ ಯೋಜನೆಗಳನ್ವಯ ನಿವೇಶನ ಮತ್ತು ಮನೆಗಳ ಹಂಚಿಕೆ, ಒಳನಾಡಿನ ಮೀನು ಕೃಷಿ, ತೋಟಗಾರಿಕೆ ಮತ್ತು ಅರಣ್ಯ ಚಟುವಟಿಕೆಗೆ ಸಂಬಂಧಿಸಿದ ಕಾರ್ಯಕ್ರಮಗಳ ಅನುಷ್ಠಾನ ತೀವ್ರವಾಗಿ ನಡೆಯುತ್ತಿದೆ' ಎಂಬ ಅಭಿಪ್ರಾಯವನ್ನು ನೀಡಿದೆ.

ಈಗ ಜಿಲ್ಲಾ ಪರಿಷತ್ತಿನ ವ್ಯಾಪ್ತಿಯಲ್ಲಿರುವ ಹಲವಾರು ಯೋಜನೆಗಳನ್ನು ಸದ್ಯದ ಸಿಬ್ಬಂದಿ ಮತ್ತು ಅಗತ್ಯವಾದ ಹಣಕಾಸಿನ ನೆರವಿನೊಂದಿಗೆ ಮಂಡಳ ಪಂಚಾಯತಿಗಳಿಗೆ ವರ್ಗಾಯಿಸುವಂತೆಯೂ ಸಹ ಸಮಿತಿಯು ಶಿಫಾರಸು ಮಾಡಿತು.

ಸಮಿತಿಯ ಪ್ರಮುಖ ಶಿಫಾರಸ್ಸೆಂದರೆ ರಾಜ್ಯದ ಮಂತ್ರಿಗಳು ಮತ್ತು ಶಾಸಕರು ಜಿಲ್ಲಾ ಪರಿಷತ್ತುಗಳ ಅನುದಿನದ ವ್ಯವಹಾರದಲ್ಲಿ ಕೈ ಹಾಕಬಾರದು. ಬದಲಾಗಿ ಜಿಲ್ಲಾ ಪರಿಷತ್ತುಗಳು ಮತ್ತು ಮಂಡಳ ಪಂಚಾಯತಿಗಳು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಲು ಅಗತ್ಯವಾದ ವಾತಾವರಣವನ್ನು ನಿರ್ಮಿಸಿ ನೆರವಾಗಬೇಕು ಎಂಬ ಪ್ರಮುಖವಾದ ಶಿಫಾರಸ್ಸನ್ನು ಮಾಡಿದೆ. ಪಂಚಾಯತಿ ಕಾರ್ಯ ಚಟುವಟಿಕೆಗಳ ನಿರ್ವಹಣೆಯನ್ನು (ಪ್ರಸ್ತುತ ಇರುವ ಪಂಚಾಯತಿ ರಾಜ್ಯ ಮತ್ತು ಯೋಜನಾ ಇಲಾಖೆ ಬದಲಾಗಿ) ರಾಜ್ಯ ಮಟ್ಟದಲ್ಲಿ ಅಪರ ಮುಖ್ಯ ಕಾರ್ಯದರ್ಶಿ ದರ್ಜೆಯ ಅಧಿಕಾರಿ ಮುಖ್ಯಸ್ಥನನಾಗಿರುವ ಒಂದು ಇಲಾಖೆಗೆ ವಹಿಸಬೇಕು. ಈ ಇಲಾಖೆಯು ಜಿಲ್ಲಾ ಪರಿಷತ್ತುಗಳು ಮತ್ತು ಮಂಡಳ ಪಂಚಾಯತಿಗಳ ಕಾರ್ಯನಿರ್ವಹಣೆಯ ಕೇಂದ್ರ ಬಿಂದುವಾಗಿರಬೇಕು ಎಂದು ಸಮಿತಿಯು ವರದಿ ಮಾಡಿದೆ. ಸರ್ಕಾರವು ಸಮಿತಿಯ ಶಿಫಾರಸ್ಸುಗಳ ಬಗ್ಗೆ ಯಾವುದೇ ತೀರ್ಮಾನವನ್ನು ತೆಗೆದುಕೊಂಡಿಲ್ಲವೆಂದು ವರದಿ ಮಾಡಿದೆ (ಆಧಾರ ಎಂಟನೇ ಪಂಚವಾರ್ಷಿಕ ಯೋಜನೆಯ ಕರಡು ೧೯೯೨-೯೭, ಭಾಗ-೧, ಯೋಜನಾ ಇಲಾಖೆ, ಕರ್ನಾಟಕ ಸರ್ಕಾರ).

## ತಾಲ್ಲೂಕು ಪಂಚಾಯತಿ ಸಮಿತಿಗಳು :

೧೯೮೩ರ ಜಿಲ್ಲಾ ಪರಿಷತ್ತು ಮತ್ತು ಮಂಡಳ ಪಂಚಾಯತಿಗಳ ಕಾಯಿದೆಯು ಜಿಲ್ಲಾ ಪರಿಷತ್ತುಗಳು ಮತ್ತು ಮಂಡಳ ಪಂಚಾಯತಿಗಳ ನಡುವೆ ಪ್ರತಿ ಕಂದಾಯ ತಾಲ್ಲೂಕಿಗೆ ಒಂದರಂತೆ ಸಲಹೆ ಮತ್ತು ಸಮನ್ವಯಗೊಳಿಸಲು ಜಿ.ಪ. ಮತ್ತು ಮಂ.ಪ. ಕಾರ್ಯಚಟುವಟಿಕೆಗಳನ್ನು ಚುರುಕುಗೊಳಿಸುವ ತಾಲ್ಲೂಕು ಪಂಚಾಯತಿಗಳ ರಚನೆಗೂ ಅವಕಾಶ ಮಾಡಿದೆ. ಈ ಸಮಿತಿಗಳಲ್ಲಿ ತಾಲ್ಲೂಕಿನಿಂದ ಆಯ್ಕೆಯಾದ ಜಿಲ್ಲಾ ಪರಿಷತ್ ಸದಸ್ಯರು, ತಾಲ್ಲೂಕಿನ ಯಾವುದೇ ಭಾಗದ (ನಗರ ಕೇಂದ್ರಗಳನ್ನು ಬಿಟ್ಟು) ವಿಧಾನ ಸಭಾ ಸದಸ್ಯರು ಮತ್ತು ವಿಧಾನ ಪರಿಷತ್ ಸದಸ್ಯರು ಹಾಗೂ ಸಂಬಂಧಪಟ್ಟ ತಾಲ್ಲೂಕಿನ ಮಂಡಳದ ಪ್ರಧಾನರು ಸದಸ್ಯರಾಗಿರುತ್ತಾರೆ. ಜೊತೆಗೆ ತಾಲ್ಲೂಕು ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿ, ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳ ಅಧ್ಯಕ್ಷರು, ಪರಿಶಿಷ್ಟ ವರ್ಗ ಮತ್ತು ಪಂಗಡಗಳು, ಮಹಿಳೆಯರು ಮತ್ತು ಹಿಂದುಳಿದ ವರ್ಗಗಳ ಒಟ್ಟು ಐದು ಜನ ಸಹ ಸದಸ್ಯರನ್ನು ಮಾಡಿಕೊಳ್ಳಲೂ ಸಹ ಅವಕಾಶವಿದೆ. ತಾಲ್ಲೂಕಿನ ಅಧಿಕ ಭಾಗವನ್ನು ಪ್ರತಿನಿಧಿಸುವ ವಿಧಾನಸಭಾ ಸದಸ್ಯರು ಈ ಸಮಿತಿಯ ಅಧ್ಯಕ್ಷರಾಗಿರುವರು. ತಾಲ್ಲೂಕಿನಲ್ಲಿ ಅಂತಹ ವಿಧಾನಸಭಾ ಸದಸ್ಯರಿಲ್ಲದಿದ್ದಲ್ಲಿ ಸಮಿತಿಯ ಒಬ್ಬ ಸದಸ್ಯರನ್ನು ಸಮಿತಿಯ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಗುವುದು. ಕ್ಷೇತ್ರಾಭಿವೃದ್ಧಿ ಅಧಿಕಾರಿಯು ಈ ಸಮಿತಿಯ ಕಾರ್ಯದರ್ಶಿ ಮತ್ತು ಮುಖ್ಯ ಕಾರ್ಯನಿರ್ವಹಣಾಧಿಕಾರಿಯಾಗಿರುವರು.

ಜಿಲ್ಲಾ ಪರಿಷತ್ತುಗಳು ವಹಿಸಿದ ವಿವಿಧ ಅಭಿವೃದ್ಧಿ ಕಾರ್ಯಗಳ ಅನುಷ್ಠಾನದ ಮೇಲ್ವಿಚಾರಣೆ, ತಾಲ್ಲೂಕಿನಲ್ಲಿರುವ ಜಿಲ್ಲಾ ಪರಿಷತ್ತಿನ ಆಸ್ತಿಗಳ ರಕ್ಷಣೆ, ಮಂಡಳ ಪಂಚಾಯತಿಗಳ ಕಾರ್ಯ ನಿರ್ವಹಣೆಯಲ್ಲಿ ಸಹಕಾರ ಹಾಗೂ ಮಂಡಳ ಪಂಚಾಯತಿಗಳಿಗೆ ಅಗತ್ಯವಾದ ಸಲಹೆ ಮತ್ತು ನಿರ್ದೇಶನ ಮುಂತಾದ ವಿಷಯಗಳು ಪ್ರಮುಖವಾಗಿ ತಾಲೂಕು ಪಂಚಾಯತಿ ಕಾರ್ಯವ್ಯಾಪ್ತಿಯಲ್ಲಿ ಸೇರಿವೆ. ಈ ಸಮಿತಿಗಳಿಗೆ ಹಿಂದಿನ ತಾಲ್ಲೂಕು ಅಭಿವೃದ್ಧಿ ಮಂಡಳಿಗಳಿಗೆ ನೀಡಿದ್ದಂತೆ ತಮ್ಮ ವ್ಯಾಪ್ತಿಯಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಯಾವುದೇ ರೀತಿಯ ಅಧಿಕಾರ ಅಥವಾ ಅನುದಾನವನ್ನು ಒದಗಿಸಿರಲಿಲ್ಲ. ತಾಲ್ಲೂಕು ಪಂಚಾಯತಿ ಸಮಿತಿಗಳ ವೆಚ್ಚವನ್ನು ಜಿಲ್ಲಾ ಪರಿಷತ್ತುಗಳೇ ಭರಿಸಬೇಕಾಗಿತ್ತು.

೪

## ಮಂಡಳ ಪಂಚಾಯತಿಗಳು

ಪ್ರತಿಬಿಂಬಿತ ಪಂಚಾಯತಿ ರಾಜ್ಯ ವ್ಯವಸ್ಥೆಯಲ್ಲಿ ಗ್ರಾಮೀಣ ಮಟ್ಟದಲ್ಲಿ ಅಧಿಕಾರ ವಿಕೇಂದ್ರೀಕರಣದ ಮೂಲಕ ಅಭಿವೃದ್ಧಿ ಕಾರ್ಯಗಳು ಪ್ರವಹಿಸುವ ಕೆಳಹಂತದ ಮೂಲ ಘಟಕಗಳೆಂದರೆ ಮಂಡಳ ಪಂಚಾಯತಿಗಳು. ಪ್ರತಿ ೪,೦೦೦ ಜನಸಂಖ್ಯೆಗೆ ಒಂದು ಮಂಡಳ ಪಂಚಾಯತಿ ಇರುವ ಮಲೆನಾಡು ಜಿಲ್ಲೆಗಳನ್ನುಳಿದು ಇತರೇ ಪ್ರದೇಶಗಳಲ್ಲಿ ೮ ರಿಂದ ೧೨ ಸಾವಿರ ಜನಸಂಖ್ಯೆಯನ್ನೊಳಗೊಂಡ ಹಳ್ಳಿಗಳ ಗುಂಪಿಗೆ ಒಂದರಂತೆ ಮಂಡಳ ಪಂಚಾಯಿತಿಗಳನ್ನು ರಚಿಸಲು ಕಾಯಿದೆಯು ಅವಕಾಶ ಮಾಡಿದೆ. ಮುಂದೆ ಈ ಜನಸಂಖ್ಯಾ ಪ್ರಮಾಣವನ್ನು ೧೨ ರಿಂದ ೧೫ ಸಾವಿರಕ್ಕೆ ವಿಸ್ತರಿಸಲಾಯಿತು. ಅನೇಕ ಸಂದರ್ಭಗಳಲ್ಲಿ ಮಂಡಳ ಪಂಚಾಯತಿಯ ವ್ಯಾಪ್ತಿಯು ಹಲವಾರು ಗ್ರಾಮಗಳನ್ನು ಒಳಗೊಂಡಿದ್ದು ಕಾರ್ಯವ್ಯಾಪ್ತಿ ಕ್ಷೇತ್ರವು ಆಡಳಿತಾತ್ಮಕವಾಗಿ ಅನುಕೂಲಕರವಾಗಿರುವುದಿಲ್ಲ ಅಥವಾ ಗ್ರಾಮಗಳು ಪರಸ್ಪರ ಸಂಯೋಗ ಹೊಂದಿರುವುದಿಲ್ಲ. ಪ್ರತಿ ೪೦೦ ಜನರಿಗೆ ಒಬ್ಬ ಚುನಾಯಿತ ಪ್ರತಿನಿಧಿಯುಳ್ಳ ಮಂಡಳ ಪಂಚಾಯತಿಗಳಲ್ಲಿ ಶೇ. ೧೮ ರಷ್ಟು ಪರಿಶಿಷ್ಟ ವರ್ಗ ಮತ್ತು ಪಂಗಡದ ಪ್ರತಿನಿಧಿಗಳು,ಶೇ.೨೫ ರಷ್ಟು ಮಹಿಳಾ ಪ್ರತಿನಿಧಿಗಳಿದ್ದು, ಹಿಂದುಳಿದ ವರ್ಗಗಳಿಂದ ಒಬ್ಬರನ್ನು ನಾಮಕರಣ ಮಾಡಲು ಅವಕಾಶ ಕಲ್ಪಿಸಲಾಗಿತ್ತು. ಮಂಡಳ ಯೋಜನೆ ಒಂದರ ಅನ್ವಯ ನಿಗದಿಪಡಿಸಿದ ಅಬಿವೃದ್ಧಿ ಯೋಜನೆಗಳನ್ನು ತನ್ನ ಸಂಪನ್ಮೂಲದಿಂದ ಕೈಗೊಳ್ಳುವ ಸ್ವತಂತ್ರ ಅಧಿಕಾರದತ್ತ ಅವಕಾಶವನ್ನು ಮಂಡಳ ಪಂಚಾಯತಿಗಳಿಗೆ ಒದಗಿಸಲಾಗಿತ್ತು. ಮಂಡಳ ಪಂಚಾಯತಿಗಳು ಪರಿಣಾಮಕಾರಿ ಆಡಳಿತ ಮತ್ತು ಕಾರ್ಯಾಚರಣೆಯ ಸಮನ್ವಯ ದೃಷ್ಟಿಯಿಂದ ಸಾಮಾಜಿಕ ನ್ಯಾಯ, ಉತ್ಪಾದನೆ ಮತ್ತು ಸಮಾಜ ಕಲ್ಯಾಣ ಎಂಬ ಮೂರು ಉಪಸಮಿತಿಗಳನ್ನು ರಚಿಸಿಕೊಳ್ಳಲು ಮಂಡಳ ಪಂಚಾಯತಿಗಳಿಗೆ ಅವಕಾಶವಿತ್ತು. ಈ ಉಪಸಮಿತಿಗಳು ಚುನಾಯಿತ ಪ್ರತಿನಿಧಿಗಳನ್ನು ಒಳಗೊಂಡಿರುತ್ತಿದ್ದವು.

ಮಂಡಳ ಪಂಚಾಯತಿಗಳು ಕಡೆಯ ಪಕ್ಷ ತಿಂಗಳಿಗೊಮ್ಮೆ ಸಭೆ ಸೇರಿ ಕಾರ್ಯಕ್ರಮ ಕುರಿತು ಚರ್ಚಿಸಬೇಕಾಗಿತ್ತು. ಮಂಡಳ ಪಂಚಾಯತಿಯ ಮುಖ್ಯಕಾರ್ಯ ನಿರ್ವಹಣೆ ಮಾಡುವ ಕಾರ್ಯದರ್ಶಿಯನ್ನು ಜಿಲ್ಲಾ ಪರಿಷತ್ತು ನೇಮಕ ಮಾಡುತ್ತಿತ್ತು. ಮಂಡಳ

ಪಂಚಾಯತಿಯ ಪ್ರಧಾನ ಮತ್ತು ಉಪ ಪ್ರಧಾನರಿಗೆ ಕ್ರಮವಾಗಿ ೩೦೦ ರೂಪಾಯಿ ಹಾಗೂ ೧೫೦ ರೂಪಾಯಿ ಮಾಸಿಕ ಗೌರವ ಧನವನ್ನು ನೀಡಲಾಗಿತ್ತು.

ಜಿಲ್ಲಾ ಪರಿಷತ್ತು ಅಥವಾ ಸರ್ಕಾರದಿಂದ ಬರುವ ಹಣಕಾಸಿನ ನೆರವು, ಅನುದಾನ,ಸಾಲ,ಕಟ್ಟಡ ಮತ್ತು ಜಮೀನುಗಳ ಮೇಲಿನ ತೆರಿಗೆ, ಮಾರುಕಟ್ಟೆ ಶುಲ್ಕ, ವಾಹನ ತೆರಿಗೆ ಮುಂತಾದುವು ಮಂಡಳ ಪಂಚಾಯತಿಗಳ ಆದಾಯ ಮೂಲಗಳಾಗಿದ್ದವು. ೧೯೭೧ ರ ಜನಗಣತಿಯ ಆಧಾರದ ಮೇಲೆ ೧೧೪(೩)ನೆಯ ಅನುಚ್ಛೇದದಲ್ಲಿ ಸೂಚಿಸಿರುವಂತೆ ಸರ್ಕಾರ ಒಂದು ಮಂಡಳ ವ್ಯಾಪ್ತಿಯಲ್ಲಿ ವಾಸಿಸುವ ಪ್ರತಿಯೊಬ್ಬ ವ್ಯಕ್ತಿಗೆ ೧೦ ರೂಪಾಯಿಯಂತೆ ತಲಾವಾರು ವಂತಿಗೆಯನ್ನು ನೀಡುತ್ತಿತ್ತು. ಈ ವಂತಿಗೆಯ ಶೇ.೨೫ ರಷ್ಟು ಪಾಲು ಜಿಲ್ಲಾ ಪರಿಷತ್ತಿನದು. ಮಂಡಳ ಪಂಚಾಯತಿಯ ಪ್ರಮುಖ ಕಾರ್ಯಚಟುವಟಿಕೆಗಳನ್ನು ಕಾಯಿದೆಯ ೫೬,೫೭ ಮತ್ತು ೫೮ನೆಯ ಭಾಗದಲ್ಲಿ ವಿವರಿಸಿದೆ.

ಮಂಡಳ ಪಂಚಾಯತಿಗಳಿಗೆ ಸಂಪೂರ್ಣವಾಗಿ ವರ್ಗಾವಣೆ ಮಾಡಿದ್ದ ೨೭ ಅಭಿವೃದ್ಧಿ ಯೋಜನೆಗಳ ಅನುಷ್ಠಾನದ ಜವಾಬ್ದಾರಿ ಮಂಡಳ ಪಂಚಾಯಿತಿಗಳಿಗೆ ಸೇರಿತ್ತು. ಜವಾಹರ್ ರೋಜ್ಗಾರ್ ಯೋಜನೆಯ ಹಣವನ್ನು ಕೇಂದ್ರ ಸರ್ಕಾರದ ಮಾರ್ಗಸೂಚಿಯಂತೆ ಉಪಯೋಗಿಸುವ ಸ್ವಾತಂತ್ರ್ಯ ಮಂಡಳ ಪಂಚಾಯತಿಗಳಿಗಿತ್ತು. ಪ್ರತಿ ಮಂಡಳ ಪಂಚಾಯತಿಯು ತನ್ನ ವ್ಯಾಪ್ತಿಯಲ್ಲಿ ಬರುವ ಅಬಿವೃದ್ಧಿ ಕಾರ್ಯಕ್ರಮಗಳಿಗೆ ಸರಾಸರಿ ಐದು ಲಕ್ಷ ರೂಪಾಯಿ (೭.೫೦ ರೂ. ತಲಾವಾರು ವಂತಿಗೆಯೂ ಸೇರಿ) ವೆಚ್ಚ ಮಾಡಲು ಅವಕಾಶ ಮಾಡಲಾಗಿತ್ತು. ಇದರ ಜೊತೆಗೆ ರಾಜ್ಯ ಸರ್ಕಾರವು ನೀರು ಪೂರೈಕೆ, ವಸತಿ, ಸಂಪರ್ಕ, ಸಮಗ್ರ ಗ್ರಾಮೀಣಾಭಿವೃದ್ದಿ ಮುಂತಾದ ವಿವಿಧ ಅಭಿವೃದ್ಧಿ ಶೀರ್ಷಿಕೆಗಳಲ್ಲಿ ಹಣವನ್ನು ಬಿಡುಗಡೆ ಮಾಡುತ್ತಿತ್ತು.

### ಗ್ರಾಮ ಸಭೆಗಳು :

ಜಿಲ್ಲಾ ಪರಿಷತ್ತಿನ ಮತದಾರರ ಪಟ್ಟಿಯಲ್ಲಿರುವ ಎಲ್ಲ ವ್ಯಕ್ತಿಗಳನ್ನು ಒಳಗೊಂಡ ಒಂದು ಗ್ರಾಮಸಭೆಯ ರಚನೆಗೂ ಕಾಯಿದೆಯಲ್ಲಿ ಅವಕಾಶ ಮಾಡಲಾಗಿತ್ತು. ಈ ಗ್ರಾಮಸಭೆಯು ವರ್ಷದಲ್ಲಿ ಎರಡು ಸಲ ಸೇರಿ ತಮ್ಮ ಗ್ರಾಮದ ಅಭಿವೃದ್ಧಿ ಕಾರ್ಯಗಳ ಬಗ್ಗೆ ಚರ್ಚಿಸುವುದರ ಜೊತೆಗೆ ಫಲಾನುಭವಿಗಳ ಆಯ್ಕೆಯೂ ಸೇರಿದಂತೆ ಗ್ರಾಮದ ಅಭಿವೃದ್ಧಿ ಯೋಜನೆಗಳನ್ನು ಅನುಮೋದಿಸಬೇಕಾಗಿತ್ತು. ಗ್ರಾಮಸಭೆಗಳು ಗ್ರಾಮದ ಒಗ್ಗಟ್ಟು ಮತ್ತು ಸೌಹಾರ್ದತೆಯನ್ನು ಕಾಪಾಡಬೇಕಾಗಿತ್ತು. ಗ್ರಾಮಸಭೆಗಳು ಮಾಡುವ ಶಿಫಾರಸುಗಳು ಮತ್ತು ಸಲಹೆಗಳನ್ನು ಜಿಲ್ಲಾ ಪರಿಷತ್ತುಗಳು ಮತ್ತು ಮಂಡಳ ಪಂಚಾಯತಿಗಳು ಪರಿಗಣಿಸಬೇಕಾಗಿತ್ತು. ಪ್ರಧಾನರ ಅಧ್ಯಕ್ಷತೆಯಲ್ಲಿ ನಡೆಯುವ ಸಭೆಯ ವ್ಯವಸ್ಥೆಯನ್ನು ಮಂಡಳ ಪಂಚಾಯತಿಯು ವ್ಯವಸ್ಥೆ ಮಾಡುತ್ತಿತ್ತು.

### ಜಿಲ್ಲಾ ಪರಿಷತ್ತು ಮತ್ತು ಮಂಡಳ ಪಂಚಾಯತಿಗಳ ಪುನರ್‌ರಚನೆ :

೧೯೮೭ರಿಂದ ಐದು ವರ್ಷಗಳ ಕಾಲ ಜಿಲ್ಲಾ ಪರಿಷತ್ತುಗಳು ಮತ್ತು ಮಂಡಳ ಪಂಚಾಯತಿಗಳು ಕಾರ್ಯ ನಿರ್ವಹಿಸಿದವು. ಐದು ವರ್ಷದ ಕಡೆಯಲ್ಲಿ ೧೯೯೧ರ ಜನವರಿಯಲ್ಲಿ ಈ ಸಂಸ್ಥೆಗಳಿಗೆ ಸರ್ಕಾರ ಚುನಾಯಿತ ಪ್ರತಿನಿಧಿಗಳ ಸ್ಥಾನದಲ್ಲಿ ಆಡಳಿತಾಧಿಕಾರಿಗಳನ್ನು ನೇಮಕ ಮಾಡಿತು. ೧೯೮೩ರಲ್ಲಿ ಜಿಲ್ಲಾ ಪರಿಷತ್ತು ಮತ್ತು ಮಂಡಳ ಪಂಚಾಯತಿಗಳ ಕಾಯಿದೆಗೆ ಬದಲಾಗಿ ೧೯೯೩ರ ಕರ್ನಾಟಕ ಪಂಚಾಯತಿ ರಾಜ್ಯ ಕಾಯಿದೆ ಯನ್ನು ರಚಿಸಲಾಯಿತು. ೧೯೯೩ರ ಡಿಸೆಂಬರ್‌ನಲ್ಲಿ ಗ್ರಾಮ ಪಂಚಾಯತಿಗಳಿಗೆ ಚುನಾವಣೆಗಳು ನಡೆದವು.

೫

## ೧೯೯೩ರ ಪಂಚಾಯತಿ ರಾಜ್ ಕಾಯಿದೆ

೧೯೮೩ರ ಜಿಲ್ಲಾ ಪರಿಷತ್ತು ಮತ್ತು ಮಂಡಳ ಪಂಚಾಯತಿ ಕಾಯಿದೆಗೆ ಬದಲಾಗಿ ೧೯೯೩ರ ಕರ್ನಾಟಕ ಪಂಚಾಯತಿ ರಾಜ್ ಕಾಯಿದೆಯನ್ನು (ಕರ್ನಾಟಕ ಕಾಯಿದೆ ನಂ. ೧೪-೧೯೯೩) ೧೯೯೩ರ ಮೇ ೧೦ ರಿಂದ ಜಾರಿಗೊಳಿಸಲಾಯಿತು. ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಗಳನ್ನು ಹೆಚ್ಚು ಬಲಪಡಿಸಿ ಅವುಗಳ ಕಾರ್ಯವಿಧಾನವನ್ನು ಉತ್ತಮಪಡಿಸುವ ಸಲುವಾಗಿ ಲೋಕಸಭೆಯಲ್ಲಿ

ಕೈಗೊಂಡ ರಾಜ್ಯಾಂಗದ ೭೩ನೆಯ ತಿದ್ದುಪಡಿಯ ಎಲ್ಲ ಪ್ರಮುಖ ಅಂಶಗಳನ್ನು ಒಳಗೊಂಡಿರುವ ಈ ಕಾಯಿದೆಯು ಒಂದು ಸಮಗ್ರ ಮತ್ತು ಏಕೀಕೃತ ಕಾನೂನಾಗಿದೆ. ಈ ಹೊಸ ಕಾಯಿದೆಯಂತೆ ರಾಜ್ಯದಲ್ಲಿ ಗ್ರಾಮ, ತಾಲ್ಲೂಕು, ಮತ್ತು ಜಿಲ್ಲಾ ಮಟ್ಟದ ಪರಸ್ಪರ ಸಂಬಂಧವುಳ್ಳ ಮೂರು ಹಂತದ ಪಂಚಾಯತಿ ರಾಜ್ಯ ವ್ಯವಸ್ಥೆ ಜಾರಿಯಲ್ಲಿ ಇರುತ್ತದೆ. ಈ ಮೂರು ಹಂತದ ಸಂಸ್ಥೆಗಳಿಗೂ ಚುನಾಯಿತ ಪ್ರತಿನಿಧಿಗಳಿದ್ದು ಅಧಿಕಾರ ವಿಕೇಂದ್ರೀಕರಣದೊಂದಿಗೆ ಎಲ್ಲ ಹಂತಗಳಲ್ಲಿಯೂ ಸ್ಥಳೀಯ ಅಭಿವೃದ್ಧಿ ಕಾರ್ಯಗಳ ಅನುಷ್ಠಾನದಲ್ಲಿ ಜನತೆಯ ಸಹಭಾಗಿತ್ವಕ್ಕೆ ಹೆಚ್ಚಿನ ಅವಕಾಶವನ್ನು ಕಲ್ಪಿಸಲಾಗಿದೆ. ಕಾಯಿದೆಯ ವಿವಿಧ ಅಂಶಗಳನ್ನು ರಾಜ್ಯದಲ್ಲಿ ಅನುಷ್ಠಾನಕ್ಕೆ ತರಬೇಕಾಗಿದ್ದು ರಾಜ್ಯ ಮತ್ತು ಜಿಲ್ಲಾ ಮಟ್ಟದ ಆಡಳಿತ ಈ ದಿಶೆಯಲ್ಲಿ ಕಾರ್ಯಪ್ರವೃತ್ತವಾಗಿದೆ.

ಗ್ರಾಮೀಣ ಜನತೆಯನ್ನು ಪ್ರಜ್ಞಾವಂತರನ್ನಾಗಿ ಮಾಡುವುದಲ್ಲದೆ ಜವಾಬ್ದಾರಿಯುತವಾದ ಸ್ವಚ್ಛ ಆಡಳಿತವನ್ನು ನೀಡುವ ಹೊಣೆಯನ್ನು ಮತ್ತು ಕರ್ತವ್ಯ ಬದ್ಧತೆಯನ್ನು ಈ ಹೊಸ ಕಾನೂನಿನ ಅನ್ವಯ ಗ್ರಾಮ ಸಭೆಯ ಕಾರ್ಯವಿಧಾನದಲ್ಲಿ ಸೂಚಿಸಲಾಗಿದೆ. ಗ್ರಾಮದ ಎಲ್ಲ ವರ್ಗದ ಜನರಲ್ಲಿ ಪರಸ್ಪರ ಒಗ್ಗಟ್ಟು ಮತ್ತು ಸೌಹಾರ್ದವನ್ನು ರೂಢಿಸಲು ಗ್ರಾಮಸಭೆಯು ಪ್ರಯತ್ನಿಸಬೇಕು. ಸರ್ಕಾರವು ಕಾಲಕಾಲಕ್ಕೆ ರೂಪಿಸಿ ನಿರ್ದೇಶಿಸುವ ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಎಲ್ಲ ಭೂ ಕಂದಾಯ ಮತ್ತು ಅದಕ್ಕೆ ಸಮಾನವಾದ ಸ್ಥಳೀಯ ಉಪತೆರಿಗೆಯನ್ನು ಸಂಬಂಧಪಟ್ಟ ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪರಿಷತ್ತಿಗೂ ಪ್ರತ್ಯೇಕ ನಿಧಿಯನ್ನು (ಫಂಡ್) ರೂಪಿಸಲು ಕಾಯಿದೆಯಲ್ಲಿ ಅವಕಾಶವಿದೆ.

ಪ್ರತಿಯೊಂದು ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಯ ಸಿಬ್ಬಂದಿ ವೆಚ್ಚಕ್ಕಾಗಿ ನಿಗದಿಪಡಿಸಿದ ದರದಲ್ಲಿ ಸರ್ಕಾರದ ಅನುದಾನವನ್ನು ನೀಡಲಾಗುವುದು. ಇದಲ್ಲದೆ ಸರ್ಕಾರವು ತೀರ್ಮಾನಿಸಿದ ಕೆಲವು ಉದ್ದೇಶಗಳಿಗೆ ನಿಬಂಧನೆಗಳಿಗೊಳಪಟ್ಟು ಸರ್ಕಾರವು ಈ ಸಂಸ್ಥೆಗಳಿಗೆ ವಿವೇಚನಾ ಅನುದಾನವನ್ನು ಬಿಡುಗಡೆ ಮಾಡಲು ಕಾಯಿದೆಯಲ್ಲಿ ೨೩,೪೫೪ ಮಹಿಳಾ ಸದಸ್ಯರಿರುತ್ತಾರೆ. ಐದರಿಂದ ಏಳು ಸಾವಿರ ಜನಸಂಖ್ಯೆಗೆ ಒಂದರಂತೆ ಗ್ರಾಮ ಪಂಚಾಯತಿಗಳಿದ್ದು, ಪ್ರತಿ ४೦೦ ಜನರಿಗೆ ಒಬ್ಬ ಪ್ರತಿನಿಧಿ ಮತ್ತು ಜಿಲ್ಲಾ ಪರಿಷತ್ತುಗಳಲ್ಲಿ ४೦,೦೦೦ ಜನರಿಗೆ ಒಬ್ಬರಂತೆ ಗ್ರಾಮ ಪಂಚಾಯತಿಗಳಿಗೆ ಪಕ್ಷಾತೀತ ಚುನಾವಣೆ ನಡೆಸಲಾಗುವುದು. ಮಲೆನಾಡು ಜಿಲ್ಲೆಗಳಾದ ಬೆಳಗಾವಿ, ಚಿಕ್ಕಮಗಳೂರು, ದಕ್ಷಿಣ ಕನ್ನಡ, ಧಾರವಾಡ, ಹಾಸನ, ಕೊಡಗು, ಶಿವಮೊಗ್ಗ ಮತ್ತು ಉತ್ತರ ಕನ್ನಡ ಜಿಲ್ಲೆಗಳ ೫೩ ತಾಲ್ಲೂಕುಗಳಲ್ಲಿ ೨,೫೦೦ ಜನರಿರುವ ಒಂದೇ ಗ್ರಾಮ ಅಥವಾ ಗ್ರಾಮಗಳ ಗುಂಪಿಗೂ ಒಂದು ಗ್ರಾಮ ಪಂಚಾಯತಿ ರಚಿಸಲು ವಿಶೇಷ ಅವಕಾಶವನ್ನು ಕಾನೂನಿನಲ್ಲಿ ಒದಗಿಸಲಾಗಿದೆ. ಗ್ರಾಮ ಪಂಚಾಯತಿಗಳಲ್ಲಿ ಕನಿಷ್ಟ ೧೧ ಜನ ಚುನಾಯಿತ ಪ್ರತಿನಿಧಿಗಳಿರುತ್ತಾರೆ.

ನೂತನ ಪಂಚಾಯಿತಿ ರಾಜ್ಯ ಕಾಯಿದೆಯ ಕೆಲವು ಪ್ರಮುಖ ಅಂಶಗಳನ್ನು ಮುಂದೆ ವಿವರಿಸಿದೆ.

ಈ ಹೊಸ ಕಾಯಿದೆಯನ್ವಯ ಮೂಲ ಮತ್ತು ಪ್ರಮುಖ ಸಂಸ್ಥೆಯಾದ ಗ್ರಾಮಸಭೆಯು (ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಎಲ್ಲ ನೊಂದಾಯಿತ ಮತದಾರರನ್ನು ಹೊಂದಿರುವ ಸಂಸ್ಥೆ) ಕಡೆಯ ಪಕ್ಷ ಆರು ತಿಂಗಳಿಗೊಮ್ಮೆ ಸೇರಿ ಲೆಕ್ಕಪತ್ರ ಹಾಗೂ ಆಡಳಿತ ವರದಿಯನ್ನು ಪರಿಶೀಲಿಸುವುದರ ಜೊತೆಗೆ ಫಲಾನುಭವಿಗಳನ್ನು ಗುರುತಿಸುವುದು ಸೇರಿದಂತೆ ಎಲ್ಲ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ಪರ್ಯಾಲೋಚಿಸಬೇಕು. ಇದು ಗ್ರಾಮಸಭೆಯ ಕಡ್ಡಾಯದ ಕರ್ತವ್ಯ. ಮೂಲ ಹಂತದಲ್ಲಿ ವಯಸ್ಕರ ಶಿಕ್ಷಣ ಮುಂತಾದ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಬೇಕು. ನೀರು ಪೂರೈಕೆ, ವಿದ್ಯುಚ್ಛಕ್ತಿ ವೆಚ್ಚ, ನೈರ್ಮಲ್ಯ ಮತ್ತಿತರ ಕ್ಷೇಮಾಭಿವೃದ್ಧಿ ಕಾರ್ಯಗಳ ವೆಚ್ಚಕ್ಕಾಗಿ ಸರ್ಕಾರದಿಂದ ಪ್ರತಿ ಗ್ರಾಮ ಪಂಚಾಯತಿ ಅಥವಾ ಗ್ರಾಮದ ಚುನಾಯಿತ ಸಮಿತಿಗೆ ವಾರ್ಷಿಕ ಒಂದು ಲಕ್ಷ ರೂಪಾಯಿ ಅನುದಾನವನ್ನು ಒದಗಿಸಲಾಗುವುದು. ಈ ಹಣವನ್ನು ಪಂಚಾಯತಿಯ ಸಿಬ್ಬಂದಿ ವೆಚ್ಚಕ್ಕೆ ಖರ್ಚು ಮಾಡುವಂತಿಲ್ಲ. ಮೂರು ಹಂತಗಳ ಈ ಪಂಚಾಯತಿ ರಾಜ್ಯ ಕಾಯಿದೆಯು ಅಧಿಕಾರ ವಿಕೇಂದ್ರೀಕರಣವನ್ನು ಸೂಕ್ತ ರೀತಿಯಲ್ಲಿ ಆಯಾ ಹಂತಗಳಲ್ಲಿ ಅನುಗುಣವಾಗಿ, ಪರಿಣಾಮಕಾರಿಯಾಗಿ ಅನುಷ್ಠಾಗೊಳಿಸುವ ಒಂದು ಪ್ರಗತಿದಾಯಕ ಅಡಿಪಾಯವಾಗಿದೆ. ಬಹುಶಃ ರಾಜ್ಯಾಂಗದ ೭೩ ನೆಯ ತಿದ್ದುಪಡಿಯಾದ ಮೇಲೆ ದೇಶದಲ್ಲಿ ಅನುಷ್ಠಾನಗೊಂಡ ಪ್ರಥಮ ಪಂಚಾಯತಿ ರಾಜ್ ಕಾಯಿದೆಯೆಂದರೆ ಕರ್ನಾಟಕ ಪಂಚಾಯತಿ ರಾಜ್ಯ ಕಾಯಿದೆ ಎಂದು ತಿಳಿದುಬರುವುದು.

೧೯೯೧ ರ ಜನಗಣತಿಯಂತೆ ಹಿಂದಿನ ೨,೪೭೯ ಮಂಡಳ ಪಂಚಾಯತಿಗಳಿಗೆ ಬದಲಾಗಿ ರಾಜ್ಯದಲ್ಲಿ ೫,೬೪೫ ಗ್ರಾಮ ಪಂಚಾಯತಿಗಳನ್ನು ರಚಿಸಲಾಗಿದೆ. ಗ್ರಾಮ ಪಂಚಾಯತಿಗಳ ಚುನಾಯಿತ ಸದಸ್ಯರ ಸಂಖ್ಯೆ ಸುಮಾರು ೭೯,೮೬೫ ಇದ್ದು ಅವರಲ್ಲಿ ಕೇವಲ ಸಲಹಾ ಸಮಿತಿಯಂತೆ ಕಾರ್ಯನಿರ್ವಹಿಸುತ್ತಿದ್ದ ಹಿಂದಿನ ತಾಲ್ಲೂಕು ಪಂಚಾಯತಿ ಸಮಿತಿಗಳ ಬದಲಾಗಿ ಪುನರ್‌ರಚಿತಗೊಂಡ ತಾಲ್ಲೂಕು ಪಂಚಾಯತಿಗಳು, ೧೯೫೯ರ ಕರ್ನಾಟಕ ಗ್ರಾಮ ಪಂಚಾಯತಿ ಮತ್ತು ಸ್ಥಳೀಯ ಸಂಸ್ಥೆಗಳ ಕಾಯಿದೆಯನ್ವಯ ರಚನೆಗೊಂಡಿದ್ದ ಹಿಂದಿನ (೧೯೫೯) ತಾಲೂಕು ಅಭಿವೃದ್ಧಿ ಮಂಡಳಿಗಳಂತೆಯೇ ಅಧಿಕಾರ ವಿಕೇಂದ್ರೀಕರಣದ ಪ್ರಕ್ರಿಯೆಯನ್ನು ಬಲಪಡಿಸಬೇಕೆಂದು ನಿರೀಕ್ಷಿಸಲಾಗಿದೆ. ಹೊಸ ಕಾಯಿದೆಯನ್ವಯ ಸುಮಾರು ಅರ್ಧದಷ್ಟು ಅಭಿವೃದ್ಧಿ ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ತಾಲ್ಲೂಕು ಮಟ್ಟದಲ್ಲಿ ಅನುಷ್ಠಾನಗೊಳಿಸಲಾಗುವುದು. ಪರಿಶಿಷ್ಟ ವರ್ಗ ಮತ್ತು ಪಂಗಡಗಳ ಹಾಗೂ ಮಹಿಳೆ ಮತ್ತು ಇತರ ಹಿಂದುಳಿದ ವರ್ಗಗಳಿಗೆ ಸ್ಥಾನಗಳನ್ನು ಕಾಯ್ದಿರಿಸಲು ಕಾಯಿದೆಯಲ್ಲಿ ಅವಕಾಶವಿದೆ. ಪಂಚಾಯತಿ ರಾಜ್ ವ್ಯವಸ್ಥೆಯ ಮೂರು ಹಂತಗಳ ಸಂಸ್ಥೆಗಳಲ್ಲಿ ಸಂಬಂಧಿಸಿದ ಪ್ರದೇಶದ ಪರಿಶಿಷ್ಟ ವರ್ಗ ಮತ್ತು ಪಂಗಡಗಳಲ್ಲಿನ ಸಂಖ್ಯೆಗನುಗುಣವಾಗಿ ಕನಿಷ್ಟ ಶೇ.೧೮ ರಷ್ಟು ಮತ್ತು ಗರಿಷ್ಠ ೨೩ ರಷ್ಟು (ರಾಜ್ಯ ಸರಾಸರಿ) ಸ್ಥಾನಗಳನ್ನು ಹಾಗೂ ಮೂರನೆಯ ಒಂದು ಭಾಗದಷ್ಟು ಸ್ಥಾನಗಳನ್ನು ಇತರ ಹಿಂದುಳಿದ ವರ್ಗಗಳಿಗೂ ಮೀಸಲಾತಿ ಒದಗಿಸಲಾಗಿದೆ. ಪರಿಶಿಷ್ಟ ವರ್ಗ ಮತ್ತು ಪಂಗಡಗಳು ಮತ್ತು ಇತರೆ ಹಿಂದುಳಿದ ವರ್ಗಗಳಿಗೆ ಮೀಸಲಿರಿಸಿದ ಒಟ್ಟು ಸ್ಥಾನ ಗರಿಷ್ಠ ಶೇ. ೫೬ ರಷ್ಟಿರುತ್ತದೆ. (೨೩+೩೩). ಪ್ರತಿಯೊಂದು ಮೀಸಲು ಮತ್ತು ಸಾರ್ವತ್ರಿಕ ಕ್ಷೇತ್ರದಲ್ಲೂ ಒಟ್ಟು ಸ್ಥಾನಗಳ ಮೂರನೆಯ ಒಂದು ಭಾಗ ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಲಾಗುತ್ತದೆ. ಪ್ರಸ್ತುತ ವ್ಯವಸ್ಥೆಯಂತೆ ಇತರ ಹಿಂದುಳಿದ ವರ್ಗಗಳಿಗೆ ನಾಮಕರಣದ ಮೂಲಕ ಸದಸ್ಯರನ್ನು ಆಯ್ಕೆ ಮಾಡಿಕೊಳ್ಳುವ ಪರಿಪಾಠವನ್ನು ಕೈಬಿಡಲಾಗಿದೆ.

ಅದೇ ರೀತಿ ಈ ಸಂಸ್ಥೆಗಳ ಪದಾಧಿಕಾರಿಗಳನ್ನು (ಅಧ್ಯಕ್ಷ ಮತ್ತು ಉಪಾಧ್ಯಕ್ಷರು) ಆಯ್ಕೆ ಮಾಡುವಾಗಲು ಪರಿಶಿಷ್ಟ ವರ್ಗ ಮತ್ತು ಪಂಗಡ, ಹಿಂದುಳಿದ ವರ್ಗಗಳು ಹಾಗೂ ಮಹಿಳೆಯರಿಗೆ ಸ್ಥಾನವನ್ನು ಮೀಸಲಿಡಲಾಗುತ್ತದೆ. ವಿಧಾನಸಭಾ ಸದಸ್ಯರು, ವಿಧಾನ ಪರಿಷತ್ ಸದಸ್ಯರು ಹಾಗೂ ಲೋಕಸಭಾ ಸದಸ್ಯರು ಜಿಲ್ಲಾ ಪರಿಷತ್ತು ಮತ್ತು ತಾಲ್ಲೂಕು ಪಂಚಾಯತಿ ಸಂಸ್ಥೆಗಳ ಪದನಿಮಿತ್ತ ಸದಸ್ಯರಾಗಿದ್ದು, ಅಧ್ಯಕ್ಷರ ಆಯ್ಕೆಯನ್ನುಳಿದು ಮಿಕ್ಕಂತೆ ಮತ ಚಲಾಯಿಸುವ ಹಕ್ಕು ಪಡೆದಿರುತ್ತಾರೆ. ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷರುಗಳು ಜಿಲ್ಲಾ ಪರಿಷತ್ತುಗಳ ಪದನಿಮಿತ್ತ ಸದಸ್ಯರಾಗಿರುತ್ತಾರೆ. ಹಾಗೆಯೇ ಗ್ರಾಮ ಪಂಚಾಯತಿಗಳ ಶೇ. ೨೦ರಷ್ಟು ಅಧ್ಯಕ್ಷರುಗಳನ್ನು ಚೀಟಿ ಎತ್ತುವ ಮೂಲಕ ಸರದಿಯ ಮೇಲೆ ಒಂದು ವರ್ಷಕಾಲ ತಾಲ್ಲೂಕು ಪಂಚಾಯತಿಗಳ ಪದನಿಮಿತ್ತ ಸದಸ್ಯರನ್ನಾಗಿ ಮಾಡಲಾಗುವುದು.

ರಾಜ್ಯಾಂಗದ ೭೪ ನೆಯ ತಿದ್ದುಪಡಿಯಲ್ಲಿ ಮಾಡಿರುವ ಅವಕಾಶಗಳನ್ವಯ ಇಡೀ ಜಿಲ್ಲೆಗೆ ಒಂದು ಜಿಲ್ಲಾ ಯೋಜನಾ ಸಮಿತಿಯನ್ನು ರಚಿಸಲು ಹೊಸ ಕಾಯಿದೆಯಲ್ಲಿ ಅವಕಾಶ ಕಲ್ಪಿಸಲಾಗಿದೆ. ಜಿಲ್ಲೆಯಲ್ಲಿರುವ ಗ್ರಾಮಾಂತರ ಹಾಗೂ ನಗರದ ಜನಸಂಖ್ಯೆಯನ್ನು ಆಧರಿಸಿ ಜಿಲ್ಲಾ ಯೋಜನಾ ಸಮಿತಿಯ ಸದಸ್ಯರ ಸಂಖ್ಯೆಯನ್ನು ನಿರ್ಧರಿಸಲಾಗುತ್ತದೆ. ಈ ಸಮಿತಿಯ ಪದನಿಮಿತ್ತ ಸದಸ್ಯರ ಪ್ರಮಾಣ ಶೇ.೩೦ಕ್ಕಿಂತ ಮೀರಬಾರದು. ಜಿಲ್ಲಾ ಕೇಂದ್ರದ ನಗರ ಸಭಾಧ್ಯಕ್ಷರು, ಜಿಲ್ಲೆಯ ಲೋಕಸಭಾ ಸದಸ್ಯರು ಹಾಗೂ ಜಿಲ್ಲಾ ಪರಿಷತ್ತಿನ ಅಧ್ಯಕ್ಷರು ಸಮಿತಿಯ ಪದನಿಮಿತ್ತ ಸದಸ್ಯರಾಗಿದ್ದರೆ, ಜಿಲ್ಲೆಯ ವಿಧಾನಸಭಾ ಮತ್ತು ವಿಧಾನ ಪರಿಷತ್ ಸದಸ್ಯರು ಸಮಿತಿಯ ಖಾಯಂ ಆಹ್ವಾನಿತ ಸದಸ್ಯರಾಗಿರುವರು. ಯೋಜನೆಗಳ ಗುಣಮಟ್ಟವನ್ನು ಹೆಚ್ಚಿಸಿ ಅವುಗಳ ಅನುಷ್ಠಾನವನ್ನು ತೀವ್ರಗೊಳಿಸುವುದೇ ಈ ಸಮಿತಿಗಳ ರಚನೆಯ ಉದ್ದೇಶ. ಸಮಿತಿಯ ಅಧ್ಯಕ್ಷರನ್ನು ನಿಗದಿತ ಕ್ರಮದಲ್ಲಿ ಆಯ್ಕೆ ಮಾಡಲಾಗುವುದು. ಅದೇ ರೀತಿ ಜಿಲ್ಲಾ ಪರಿಷತ್ತಿನ ಐದು ಸ್ಥಾಯೀ ಸಮಿತಿಗಳು ಪರಸ್ಪರ ಸಮನ್ವಯ ಮತ್ತು ಸಮರ್ಥ ಆಡಳಿತ ನಿರ್ವಹಣೆಗೆ ನೆರವಾಗುತ್ತವೆ. ಪಂಚಾಯತಿ ರಾಜ್ಯ ಸಂಸ್ಥೆಗಳ ಹಣಕಾಸು ವ್ಯವಸ್ಥೆಯನ್ನು ಐದು ವರ್ಷಗಳಿಗೊಮ್ಮೆ ಪರಿಶೀಲಿಸಲು ಹಣಕಾಸು ಆಯೋಗವನ್ನು ನೇಮಿಸಲು ಸಹ ಕಾಯಿದೆಯಲ್ಲಿ ಅವಕಾಶ ಮಾಡಿದೆ. ಹಾಗೆಯೇ ಒಂದು ಖಾಯಂ ಚುನಾವಣಾ ಆಯೋಗವನ್ನು ರಚಿಸಲೂ ಅವಕಾಶ ಮಾಡಿದೆ. ಈ ಸಂಸ್ಥೆಗಳಿಗೆ ಪ್ರತಿ ಐದು ವರ್ಷಗಳಿಗೊಮ್ಮೆ ತಪ್ಪದೆ ಚುನಾವಣೆ ನಡೆಸುವುದನ್ನು ಕಡ್ಡಾಯಗೊಳಿಸಿದೆ. ಪಂಚಾಯತಿ ರಾಜ್ಯ ಸಂಸ್ಥೆಗಳ ಪ್ರತಿಯೊಂದು ಹಂತದಲ್ಲೂ ಚುನಾಯಿತ ಪ್ರತಿನಿಧಿಗಳು ಹಾಗೂ ಕಾರ್ಯನಿರ್ವಾಹಕರಿಗೆ ಅಧಿಕಾರ ಹಂಚಿಕೆಯ ಬಗ್ಗೆ ಕಾಯಿದೆಯು ಸೂಕ್ತ ಗಮನ ನೀಡಿದೆ. ಜಿಲ್ಲಾ ಪಂಚಾಯತಿಯ ಅಧಿಕಾರಿಯನ್ನು ಮುಖ್ಯ ಕಾರ್ಯದರ್ಶಿ ಎಂಬ ಹೆಸರಿಗೆ ಬದಲಾಗಿ

ಇನ್ನು ಮುಂದೆ ಮುಖ್ಯ ನಿರ್ವಹಣಾಧಿಕಾರಿ ಎಂದು ಕರೆಯಲಾಗುವುದು. ಪಂಚಾಯತಿ ರಾಜ್ಯ ಸಂಸ್ಥೆಗಳ ಪ್ರತಿ ಹಂತದ ಮುಖ್ಯಸ್ಥರನ್ನು ಅಧ್ಯಕ್ಷರೆಂದು ಕರೆಯಲಾಗುವುದು. ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿಗಳ ಅಧ್ಯಕ್ಷರುಗಳನ್ನು ಬಹುಮತದ ಆಧಾರದ ಮೇಲೆ ಹಾಗೂ ಗ್ರಾಮಪಂಚಾಯತಿ ಮಟ್ಟದಲ್ಲಿ ಮೂರನೇ ಎರಡು ಬಹುಮತದ ಆಧಾರದ ಮೇಲೆ ಮಾತ್ರ ತೆಗೆಯಬಹುದು.

ಜಿಲ್ಲಾ ಪರಿಷತ್ತಿನ ಕೆಲಸ ಕಾರ್ಯಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ ರಾಜ್ಯ ಇಲಾಖೆಯ ಕಾರ್ಯದರ್ಶಿ ಅಥವಾ ವಿಭಾಗಾಧಿಕಾರಿ, ತಾಲ್ಲೂಕು ಪಂಚಾಯತಿಯ ಕೆಲಸ ಕಾರ್ಯಗಳನ್ನು ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಗ್ರಾಮ ಪಂಚಾಯತಿಯ ಕೆಲಸ ಕಾರ್ಯಗಳನ್ನು ತಾಲ್ಲೂಕು ಪಂಚಾಯತಿ ಕಾರ್ಯನಿರ್ವಹಣಾಧಿಕಾರಿ ಪರಿಶೀಲಿಸಬಹುದು.

ಯಾವುದೇ ಜಿಲ್ಲಾ ಪರಿಷತ್ತು ಅಥವಾ ತಾಲ್ಲೂಕು ಪಂಚಾಯತಿಯು ಈ ಕಾಯಿದೆಯಲ್ಲಿರುವ ಅಥವಾ ಚಾಲ್ತಿಯಲ್ಲಿರುವ ಅಂತಹ ಯಾವುದೇ ಕಾಯಿದೆಯಲ್ಲಿ ಅವಕಾಶ ಮಾಡಿರುವ ತಮ್ಮ ಅಧಿಕಾರ ವ್ಯಾಪ್ತಿಯನ್ನು ಮೀರಿದಲ್ಲಿ ಅಥವಾ ಕಾರ್ಯ ನಿರ್ವಹಣೆಯಲ್ಲಿ ಅಸಮರ್ಥವಾದಲ್ಲಿ ಅಥವಾ ಕಾರ್ಯ ನಿರ್ವಹಣೆಯಲ್ಲಿ ಉದ್ದೇಶಪೂರ್ವಕ ಲೋಪವೆಸಗಿದೆಯೆಂದು ಸರ್ಕಾರ ಅಭಿಪ್ರಾಯ ಪಟ್ಟರೆ, ಸರ್ಕಾರ ಒಂದು ಆದೇಶವನ್ನು ಹೊರಡಿಸಿ, ಸದರಿ ಆದೇಶವನ್ನು ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಿಸಿ, ಅಂತಹ ಜಿಲ್ಲಾ ಪರಿಷತ್ತು ಅಥವಾ ತಾಲ್ಲೂಕು ಪಂಚಾಯತಿಯನ್ನು ರದ್ದುಗೊಳಿಸಬಹುದು. ಗ್ರಾಮ ಪಂಚಾಯತಿಗಳಿಗೆ ಸಂಬಂಧಿಸಿದಂತೆ ಈ ಅಧಿಕಾರವು ಜಿಲ್ಲಾಧಿಕಾರಿಗೆ ಉಂಟು. ಪಂಚಾಯತಿ ರಾಜ್ ವ್ಯವಸ್ಥೆಯ ಒಟ್ಟು ಸಿಬ್ಬಂದಿಯ ವರ್ಗಾವಣೆಯ ಅಧಿಕಾರವನ್ನು ಸರ್ಕಾರ ಹೊಂದಿದೆ. ಹಾಗೆಯೇ ಪಂಚಾಯತಿಗಳ ಯಾವುದೇ ಬಗೆಯ ನ್ಯಾಯಬಾಹಿರ ಕೆಲಸ ಅಥವಾ ತೀರ್ಮಾನಗಳನ್ನು ರದ್ದು ಮಾಡುವ ಹಕ್ಕೂ ಸಹ ಸರ್ಕಾರಕ್ಕಿದೆ.

ಹೊಸ ವ್ಯವಸ್ಥೆಯಂತೆ ಜಿಲ್ಲಾವಾರು ಗ್ರಾಮ ಪಂಚಾಯತಿಗಳ ಸಂಖ್ಯೆ ಈ ರೀತಿಯಿದೆ : ಬೆಂಗಳೂರು ಗ್ರಾಮಾಂತರ ೨೨೬, ಬೆಂಗಳೂರು ೧೧೬, ಬೆಳಗಾವಿ ೪೭೨, ಬಿಜಾಪುರ ೩೬೩, ಬಳ್ಳಾರಿ ೨೨೬, ಬೀದರ್ ೧೭೬, ಚಿತ್ರದುರ್ಗ ೨೭೫, ಚಿಕ್ಕಮಗಳೂರು ೨೨೫, ದಕ್ಷಿಣ ಕನ್ನಡ ೩೫೪, ಧಾರವಾಡ ೪೩೯, ಗುಲಬರ್ಗಾ ೩೩೬, ಕೊಡಗು ೯೬, ಕೋಲಾರ ೩೦೪, ಹಾಸನ ೨೫೬, ಮಂಡ್ಯ ೨೨೮, ಮೈಸೂರು ೩೬೧, ರಾಯಚೂರು ೨೯೯, ಶಿವಮೊಗ್ಗ ೨೯೪, ತುಮಕೂರು ೩೨೦, ಉತ್ತರಕನ್ನಡ ೨೦೯, ಒಟ್ಟು ೫೬೪೫.

●




# ಪಂಚಾಯತ್ ರಾಜ್ ವ್ಯವಸ್ಥೆ : ಸಂವಿಧಾನ ತಿದ್ದುಪಡಿ

ಪ್ರೊ. ಹೆಚ್. ಆರ್. ದಾಸೇಗೌಡ

ಪಂಚಾಯತಿ ರಾಜ್ಯ ಸಂಸ್ಥೆಗಳು ಬಹಳ ಕಾಲದಿಂದ ಭಾರತದಲ್ಲಿ ಅಸ್ತಿತ್ವದಲ್ಲಿದ್ದರೂ ಕಾರ್ಯಸಾಧ್ಯವಾದ ಮತ್ತು ಪ್ರತಿಸ್ಪಂದಿಸುವ ಜನರ ಸಂಸ್ಥೆಗಳ ಸ್ಥಾನ ಮತ್ತು ಗೌರವವನ್ನು ಪಡೆದುಕೊಳ್ಳಲು ಸಾಧ್ಯವಾಗಿಲ್ಲ. ಇದಕ್ಕೆ ಅನೇಕ ಕಾರಣಗಳಿವೆ. ಕ್ರಮವಾದ ಚುನಾವಣೆಗಳಿಲ್ಲದಿರುವುದು, ದೀರ್ಘಕಾಲದವರೆಗೆ ಅಧಿಕ್ರಮಿಸುವುದು, ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಮಹಿಳೆಯರಂತಹ ದುರ್ಬಲ ವರ್ಗಗಳಿಗೆ ಸಾಕಷ್ಟು ಪ್ರಾತಿನಿಧ್ಯವಿಲ್ಲದಿರುವುದು ಮತ್ತು ಸಾಕಷ್ಟು ವಿಧಿವತ್ತಾದ ಅಧಿಕಾರಗಳನ್ನು ವಹಿಸಿಕೊಡದಿರುವುದು ಮತ್ತು ಹಣಕಾಸಿನ ಕೊರತೆಗಳು ಅವರ ಹಿನ್ನಡೆಗೆ ಕಾರಣಗಳು.

ಭಾರತ ಸಂವಿಧಾನದ ರಾಜ್ಯನೀತಿ ನಿರ್ದೇಶಕ ತತ್ವಗಳ ೪೦ನೇ ವಿಧಿಯು ನಮೂದಿಸಿರುವುದೇನೆಂದರೆ ಸರಕಾರವು ಗ್ರಾಮ ಪಂಚಾಯತಿಗಳನ್ನು ರಚಿಸಿ ಮತ್ತು ಸ್ವ ಸರಕಾರದ ಘಟಕಗಳಾಗಿ ಕೆಲಸ ಮಾಡುವುದಕ್ಕೆ ಅಗತ್ಯವಾದ ಅಧಿಕಾರಗಳನ್ನು ವಹಿಸಿಕೊಡಬೇಕೆಂದು ವಿಧಿಸಿದೆ. ಕಳೆದ ಐವತ್ತು ವರ್ಷದ ಅನುಭವದಿಂದ ತಿಳಿದು ಬರುವುದೇನೆಂದರೆ ಈ ಸಂಸ್ಥೆಗಳಿಗೆ ಖಚಿತತೆ, ನಿರಂತರತೆ ಮತ್ತು ಬಲವನ್ನು ಅವುಗಳಿಗೆ ಕೊಡುವುದಕ್ಕೆ ಕೆಲವು ಮೂಲಭೂತವಾದ ಮತ್ತು ಕಾನೂನಿನ ಅಗತ್ಯವಾದ ಅಂಶಗಳನ್ನು ಪಂಚಾಯತಿ ರಾಜ್ಯ ಸಂಸ್ಥೆಗಳ ಬಗ್ಗೆ ಸಂವಿಧಾನದಲ್ಲಿ ಒದಗಿಸಬೇಕಾಗಿದೆ ಎಂಬುದು.

> ***ಕಳೆದ ಐವತ್ತು ವರ್ಷದ ಅನುಭವದಿಂದ ಮತ್ತು ನೋಡಲಾಗಿರುವ ಕೊರತೆಗಳ ದೃಷ್ಟಿಯಿಂದ ಖಚಿತತೆ, ನಿರಂತರತೆ ಮತ್ತು ಬಲವನ್ನು ಸ್ಥಳೀಯ ಸಂಸ್ಥೆಗಳಿಗೆ ಕೊಡುವುದಕ್ಕೆ ಹಾಗೂ ಕೆಲವು ಮೂಲಭೂತವಾದ ಮತ್ತು ಅಗತ್ಯವಾದ ಅಂಶಗಳನ್ನು ಪಂಚಾಯತ್ ರಾಜ್ ಸಂಸ್ಥೆಗಳಿಗೆ ಸಂವಿಧಾನದಲ್ಲಿ ಒದಗಿಸಬೇಕು.***

ಅದೇ ಪ್ರಕಾರ, ಸಂವಿಧಾನದಲ್ಲಿ ಪಂಚಾಯತಿಗಳಿಗೆ ಸಂಬಂಧಿಸಿದಂತೆ ಒಂದು ಹೊಸ ವಿಭಾಗವನ್ನು ತಿದ್ದುಪಡಿ ಮೂಲಕ ಸೇರಿಸಬೇಕು ಎಂದು ದಿವಂಗತ ರಾಜೀವ್ ಗಾಂಧಿಯವರು ಪ್ರಧಾನಮಂತ್ರಿಗಳಾಗಿದ್ದಾಗ ಆಲೋಚಿಸಲಾಗಿ ಅವುಗಳೇನೆಂದರೆ ಪ್ರತಿ ಹಳ್ಳಿ ಅಥವಾ ಹಳ್ಳಿಗಳ ಒಂದು ಗುಂಪಿಗೆ ಒಂದು ಗ್ರಾಮಸಭೆ, ಗ್ರಾಮ ಹಂತದಲ್ಲಿ ಪಂಚಾಯತಿ ಮತ್ತು ಇತರ ಹಂತ ಅಥವಾ ಹಂತಗಳ ರಚನೆ. ಮಧ್ಯಂತರ ಹಂತದ ಪಂಚಾಯತಿಗಳ ಎಲ್ಲಾ ಸ್ಥಾನಕ್ಕೆ ನೇರವಾದ ಚುನಾವಣೆ ಮತ್ತು ಅಂತಹ ಹಂತಗಳಲ್ಲಿ ಪಂಚಾಯತಿಯ ಅಧ್ಯಕ್ಷರ ಹುದ್ದೆಗಳಿಗೆ ಚುನಾವಣೆ ಪಂಚಾಯತಿಯ ಸದಸ್ಯತ್ವಕ್ಕೆ ಜನಸಂಖ್ಯೆಯ ಪ್ರಕಾರ ಪರಿಶಿಷ್ಟ ಜಾತಿಗಳು ಮತ್ತು ಪರಿಶಿಷ್ಟ ವರ್ಗಗಳ ಸ್ಥಾನಕ್ಕೆ ಮೀಸಲಾತಿ ಮತ್ತು ಪ್ರತಿಯೊಂದು ಹಂತದ ಪಂಚಾಯತ್‌ಗಳಲ್ಲಿ ಅಧ್ಯಕ್ಷರ ಹುದ್ದೆಗಳಿಗೆ ಮೇಲಿನಂತೆ ಮೀಸಲಾತಿ, ಒಟ್ಟು ಸ್ಥಾನಗಳಲ್ಲಿ ಮೂರನೇ ಒಂದು ಭಾಗಕ್ಕೆ ಕಡಿಮೆ ಇಲ್ಲದೆ ಮಹಿಳೆಯರಿಗೆ ಮೀಸಲಾತಿ, ಪಂಚಾಯತಿಗಳಿಗೆ ಐದು ವರ್ಷಗಳ ಅವಧಿಯನ್ನು ನಿಗದಿಪಡಿಸುವುದು; ಯಾವುದೇ

ಪಂಚಾಯತಿಯ ಅಧಿಕ್ರಮಣದ ಸಂದರ್ಭದಲ್ಲಿ ಆರು ತಿಂಗಳೊಳಗೆ ಚುನಾವಣೆಗಳನ್ನು ನಡೆಸುವುದು; ಪಂಚಾಯತಿ ಸದಸ್ಯರ ಅನರ್ಹತೆ; ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯಕ್ಕೆ ಯೋಜನೆಗಳ ತಯಾರಿಕೆ ವಿಷಯದಲ್ಲಿ ಪಂಚಾಯತಿಗಳಿಗೆ ಅಧಿಕಾರಿ ಮತ್ತು ಜವಾಬ್ದಾರಿಗಳನ್ನು ರಾಜ್ಯ ಶಾಸಕಾಂಗದಿಂದ ನೀಡುವುದು; ರಾಜ್ಯದ ಸಂಚಯಿತ ನಿಧಿಯಿಂದ ಪಂಚಾಯತಿಗಳಿಗೆ ಅನುದಾನ ನೀಡುವುದಕ್ಕೆ ರಾಜ್ಯ ಶಾಸಕಾಂಗದಿಂದ ಪಂಚಾಯತಿಗಳಿಗೆ ಸ್ಥಿರವಾದ ಹಣಕಾಸು ಒದಗಿಸುವುದು; ವಿಧಿಸಲಾದ ತೆರಿಗೆಗಳು, ಸುಂಕಗಳು ಮತ್ತು ಶುಲ್ಕಗಳನ್ನು ಪಂಚಾಯಿತಿಗಳಿಗೆ ಒದಗಿಸುವುದು-ಈ ತಿದ್ದುಪಡಿ ಮಾಡಿದ ಒಂದು ವರ್ಷದೊಳಗೆ ಒಂದು ಹಣಕಾಸು ಆಯೋಗವನ್ನು ರಚಿಸುವುದು, ಅಲ್ಲಿಂದಾಚೆಗೆ ಪ್ರತಿ ಐದು ವರ್ಷಗಳಿಗೊಮ್ಮೆ ಪಂಚಾಯತಿಗಳ ಹಣಕಾಸು ಸ್ಥಿತಿಗಳನ್ನು ಪರಾಮರ್ಶಿಸುವುದು, ಪಂಚಾಯತಿಗಳ ಲೆಕ್ಕಗಳನ್ನು ಲೆಕ್ಕಪರಿಶೋಧನೆ ಮಾಡುವುದು, ರಾಜ್ಯದ ಮುಖ್ಯ ಚುನಾವಣಾಧಿಕಾರಿಯ ಮೇಲ್ವಿಚಾರಣೆ, ನಿರ್ದೇಶನ ಮತ್ತು ನಿಯಂತ್ರಣವಡಿಯಲ್ಲಿ ಪಂಚಾಯತಿಗಳಿಗೆ ರಾಜ್ಯ ಶಾಸಕಾಂಗವು ಅಧಿಕಾರವನ್ನು ವಹಿಸಿಕೊಡಬೇಕು; ಇದರ ಉಪಬಂಧಗಳನ್ನು ಯೂನಿಯನ್ ಪ್ರದೇಶಗಳಿಗೂ ಅನ್ವಯಿಸುವುದು. ಈ ಮೇಲಿನ ಉಪಬಂಧಗಳ ಅನ್ವಯವನ್ನು ಕೆಲವು ಪ್ರದೇಶಗಳು ಮತ್ತು ರಾಜ್ಯಗಳಿಗೆ ಅನ್ವಯಿಸುವುದನ್ನು ಹೊರತುಪಡಿಸುವುದು. ಈ ಉದ್ದೇಶಿತ ತಿದ್ದುಪಡಿಯು ಪ್ರಾರಂಭವಾದಂದಿನಿಂದ ಒಂದು ವರ್ಷದವರೆಗೆ ಹಾಲಿ ಇರುವ ನಿಯಮಗಳು ಮತ್ತು ಪಂಚಾಯತಿಗಳನ್ನು ಮುಂದುವರಿಸುವುದು, ಪಂಚಾಯತಿಗಳಿಗೆ ಸಂಬಂಧಿಸಿದಂತೆ ಚುನಾವಣಾ ವಿಷಯದಲ್ಲಿ ಹಸ್ತಕ್ಷೇಪವನ್ನು ನಿಷೇಧಿಸುವುದು.

ಕಾನೂನಿನ ಪ್ರಕಾರ ರಾಜ್ಯದ ಶಾಸಕಾಂಗವು ಒದಗಿಸಿರುವಂತೆ ಗ್ರಾಮ ಮಟ್ಟದಲ್ಲಿ ಚಲಾಯಿಸುವ ಅಧಿಕಾರಗಳು ಮತ್ತು ಮಾಡುವ ಕೆಲಸಗಳಿಗೆ ಗ್ರಾಮಸಭೆಗೆ ಅಧಿಕಾರ ನೀಡಲಾಗಿದೆ. (ವಿಧಿ ೨೪೩ ಎ).

ವಿಧಿ ೨೪೩ ಬಿ.ಯು ಗ್ರಾಮ, ಮಧ್ಯಂತರ ಮತ್ತು ಜಿಲ್ಲಾಮಟ್ಟಗಳಲ್ಲಿ ಪಂಚಾಯತಿಗಳ ರಚನೆಗೆ ಅವಕಾಶ ಒದಗಿಸಿದೆ. ಆದರೆ ಮಧ್ಯಂತರ ಹಂತದಲ್ಲಿ ಪಂಚಾಯತಿಗಳನ್ನು ೨೦ ಲಕ್ಷ ಜನಸಂಖ್ಯೆಗೆ ಮೀರಿಲ್ಲದಂತಹ ರಾಜ್ಯಗಳಲ್ಲಿ ರಚಿಸದಿರಬಹುದು.

ಪಂಚಾಯತಿಗಳ ರಚನೆಯ ಬಗ್ಗೆ ಒಂದು ರಾಜ್ಯದ ಶಾಸಕಾಂಗವು ಉಪಬಂಧಗಳನ್ನು ಒದಗಿಸುವುದಕ್ಕೆ ಅಧಿಕಾರ ಪಡೆದಿದೆ. ಆದರೆ ಒಂದು ಪಂಚಾಯತಿಯ ಭೌಗೋಳಿಕ ಪ್ರದೇಶದ ಜನಸಂಖ್ಯೆ ಮತ್ತು ಭರ್ತಿ ಮಾಡಬೇಕಾದ ಸ್ಥಾನಗಳನ್ನು ಇರುವ ಪ್ರಮಾಣವು ರಾಜ್ಯವಾದ್ಯಂತ ಒಂದೇ ರೀತಿಯಾಗಿರಬೇಕು. ಪಂಚಾಯತಿ ಪ್ರದೇಶವನ್ನು ಭೌಗೋಳಿಕ ಮತಕ್ಷೇತ್ರಗಳಾಗಿ ವಿಂಗಡಿಸಬೇಕು ಮತ್ತು ಎಲ್ಲಾ ಸ್ಥಾನಗಳನ್ನು ನೇರ ಚುನಾವಣೆಯಿಂದ ಆರಿಸಲಾದ ವ್ಯಕ್ತಿಗಳಿಂದ ಭರ್ತಿ ಮಾಡಬೇಕು. ಮಧ್ಯಂತರ ಹಂತದಲ್ಲಿ ಪಂಚಾಯತಿಗಳ ಅಧ್ಯಕ್ಷ ಸ್ಥಾನಕ್ಕೆ ಪ್ರಾತಿನಿಧ್ಯವನ್ನು ಮತ್ತು ಜಿಲ್ಲಾ ಮಟ್ಟದಲ್ಲಿ ಪಂಚಾಯತಿಗಳಿಗೆ ಅಧ್ಯಕ್ಷರನ್ನು ಒದಗಿಸುವ ಅಧಿಕಾರವನ್ನು ರಾಜ್ಯದ ಶಾಸಕಾಂಗವು ಪಡೆದಿದೆ. ಪಂಚಾಯತಿಯ ಅಧ್ಯಕ್ಷರನ್ನು ಗ್ರಾಮಹಂತದಲ್ಲಿ ಶಾಸಕಾಂಗವು ಕಾನೂನಿನಿಂದ ಒದಗಿಸಿರುವಂತೆ ಚುನಾಯಿಸಲಾಗುವುದು ಮತ್ತು ಮಧ್ಯಂತರ ಹಂತದಲ್ಲಿ ಅಥವಾ ಜಿಲ್ಲಾ ಹಂತದಲ್ಲಿ ಪಂಚಾಯತಿಯ ಅಧ್ಯಕ್ಷರನ್ನು ಅದಕ್ಕೆ ಚುನಾಯಿತರಾಗುವ ಸದಸ್ಯರಿಂದ ಚುನಾಯಿಸಲಾಗುತ್ತದೆ.

೨೪೩ಡಿ. ವಿಧಿಯು ಅವಕಾಶವಿತ್ತಿರುವುದೇನೆಂದರೆ ಸದಸ್ಯರು ಮತ್ತು ಅಧ್ಯಕ್ಷರುಗಳ ಸ್ಥಾನಕ್ಕೆ ಮಹಿಳೆಯರು ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಜನರಿಗೆ ಮೀಸಲಾತಿ ಇರಬೇಕು. ಪ್ರತಿಯೊಂದು ಪಂಚಾಯತಿಯ ಅವಧಿಯು ಐದು ವರ್ಷಗಳು (೨೪೩ಇ).

ವಿಧಿ ೨೪೩ ಎಫ್. ಒದಗಿಸುವುದೇನೆಂದರೆ -ಸಂಬಂಧಪಟ್ಟ ರಾಜ್ಯದ ಶಾಸಕಾಂಗಕ್ಕೆ ಚುನಾವಣೆಯಲ್ಲಿ ಸ್ಪರ್ಧಿಸಲು ಅನರ್ಹನಾದರೆ ಪಾರ್ಲಿಮೆಂಟಿನ ಸದಸ್ಯನಾಗಿ ಆಯ್ಕೆಯಾಗಲೂ ಕೂಡ ಅನರ್ಹನಾಗಿರುತ್ತಾನೆ. ೨೫ ವರ್ಷಗಳಿಗಿಂತ ಕಡಿಮೆ ವಯಸ್ಕನು ೨೧ ವರ್ಷ ವಯಸ್ಸು ಪೂರ್ಣಗೊಂಡಿದ್ದರೆ ಚುನಾವಣೆಯಲ್ಲಿ ಸ್ಪರ್ಧಿಸಲು ಅರ್ಹನು. ಹಾಗೆ ಅವರ ಬಗ್ಗೆ ರಾಜ್ಯದ ಶಾಸಕಾಂಗವು ಯಾವುದಾದರೂ ಇತರೆ ಕಾನೂನು ಮೂಲಕ ಅನರ್ಹಗೊಳಿಸಲ್ಪಟ್ಟಿದ್ದರೆ ಆಗ ಅವನು ಅನರ್ಹನು. ಯಾವುದೇ ಸದಸ್ಯನ ಅನರ್ಹತೆಯ ಪ್ರಶ್ನೆಯನ್ನು ತೀರ್ಮಾನಿಸುವುದಕ್ಕೆ ಅಂತಹ ಅಧಿಕಾರವನ್ನು ರಾಜ್ಯದ ಶಾಸಕಾಂಗಕ್ಕೆ ಕಾನೂನಿನಿಂದ ಅಧಿಕಾರ ಲಭ್ಯವಿದೆ.

ಒಂದು ರಾಜ್ಯದ ಶಾಸಕಾಂಗವು ಕಾನೂನಿನಿಂದ ಪಂಚಾಯತಿಗಳು ಸ್ವಯಂ ಸರಕಾರದ ಸಂಸ್ಥೆಗಳಾಗಿ ಕೆಲಸ ಮಾಡಲು ಬೇಕಾದ ಅಧಿಕಾರವನ್ನು ವಹಿಸಬಹುದು. ಸೂಕ್ತವಾದ ರೀತಿಯಲ್ಲಿ ಪಂಚಾಯತಿಗಳಿಗೆ ಅಧಿಕಾರಗಳನ್ನು ಮತ್ತು ಜವಾಬ್ದಾರಿಗಳನ್ನು ವಹಿಸುವುದಕ್ಕೆ ಉಪಬಂಧಗಳನ್ನು ಕಾನೂನು ಒಳಗೊಂಡಿರಬಹುದು. ಅಲ್ಲದೆ ಆರ್ಥಿಕ ಅಭಿವೃದ್ಧಿ ಯೋಜನೆಗಳ ತಯಾರಿಕೆ ಮತ್ತು ಅನುಷ್ಠಾನಕ್ಕೆ

ಮತ್ತು ಸಾಮಾಜಿಕ ನ್ಯಾಯಕ್ಕೆ ಹನ್ನೊಂದನೇ ಷೆಡ್ಯೂಲಿನಲ್ಲಿ ನಮೂದಿಸಲಾದ ಯೋಜನೆಗಳ ಅನುಷ್ಠಾನಗಳಿಗೆ ಅಧಿಕಾರ ನೀಡಬಹುದು (೨೪೩ ಜಿ).

ರಾಜ್ಯದ ಶಾಸಕಾಂಗವು ಪಂಚಾಯತಿಗಳಿಗೆ ತೆರಿಗೆ ಮತ್ತು ಸುಂಕ ಮುಂತಾದವುಗಳನ್ನು ವಿಧಿಸಲು, ಸಂಗ್ರಹಿಸಲು ಮತ್ತು ಉಪಯೋಗಿಸಿಕೊಳ್ಳಲು ಸೂಕ್ತ ಕಾರ್ಯವಿಧಾನದಿಂದ ಮತ್ತು ಕೆಲವು ಮಿತಿಗಳಿಗೆ ಒಳಪಟ್ಟು ಅಧಿಕಾರ ನೀಡಿರುತ್ತದೆ.

ರಾಜ್ಯದ ಶಾಸಕಾಂಗವು ಪಂಚಾಯತಿಗಳಿಗೆ ಸರಕಾರವು ಸಂಗ್ರಹಿಸಿದ ತೆರಿಗೆಗಳು, ಸುಂಕಗಳು ಮುಂತಾದವುಗಳನ್ನು ಕೆಲವು ಉದ್ದೇಶಗಳಿಗೆ ವಿಧಿಸಿ ಸಂಗ್ರಹಿಸಬಹುದು ಮತ್ತು ರಾಜ್ಯದ ಸಂಚಿತ ನಿಧಿಯಿಂದ ಪಂಚಾಯತಿಗಳಿಗೆ ಅನುದಾನ ಸಹಾಯವನ್ನು ಒದಗಿಸಬಹುದು ಮತ್ತು ಹಾಗೆ ಪಡೆದ ಎಲ್ಲಾ ಹಣಗಳನ್ನು ಒಂದು ನಿಧಿಯನ್ನು ರಚಿಸುವುದಕ್ಕೆ ಅವಕಾಶ ಒದಗಿಸಬಹುದು ಮತ್ತು ಅದರಿಂದ ಹಣವನ್ನು ಹಿಂದಕ್ಕೆ ಪಡೆಯಲು ಅವಕಾಶ ನೀಡಬಹುದು (೨೪೩ ಎಚ್) ಕಾಯ್ದೆಯ ಕಲಂ ೨೪೩ (ಐ)..... ರಾಜ್ಯಪಾಲರಿಗೆ ಒಂದು ಹಣಕಾಸು ಆಯೋಗವನ್ನು ರಚಿಸಲು ಅಧಿಕಾರ ನೀಡಿದೆ ಮತ್ತು ಅದರಿಂದ ಪಂಚಾಯತಿಗಳ ಹಣಕಾಸು ಪರಿಸ್ಥಿತಿಯನ್ನು ಪರಾಮರ್ಶಿಸಬಹುದು ಮತ್ತು ರಾಜ್ಯವು ವಿಧಿಸಿದ ತೆರಿಗೆಗಳು, ಸುಂಕಗಳು ಮುಂತಾದವುಗಳ ಹಂಚಿಕೆಯ ಬಗ್ಗೆ ರಾಜ್ಯಪಾಲರಿಗೆ ರಾಜ್ಯ ಮತ್ತು ಪಂಚಾಯತಿಗಳ ನಡುವೆ ವಿಧಿಸಬಹುದಾದ ತೆರಿಗೆ, ಸುಂಕಗಳು ಮುಂತಾದವುಗಳನ್ನು ಶಿಫಾರಸು ಮಾಡಬೇಕು. ತೆರಿಗೆಗಳು, ಸುಂಕಗಳನ್ನು ಪಂಚಾಯತಿಗಳಿಗೆ ನೀಡುವುದರ ನಿರ್ಧಾರ; ರಾಜ್ಯದ ಸಂಚಿತ ನಿಧಿಯಿಂದ ಪಂಚಾಯತಿಗಳಿಗೆ ಅನುದಾನ ನೀಡಿಕೆ; ಪಂಚಾಯತಿಯ ಹಣಕಾಸು ಪರಿಸ್ಥಿತಿಯನ್ನು ಉತ್ತಮಪಡಿಸಲು ಕ್ರಮಗಳು; ಪಂಚಾಯತಿಗಳ ದೃಢವಾದ ಹಣಕಾಸಿನ ಹಿತಾಸಕ್ತಿಯಿಂದ ಹಣಕಾಸು ಆಯೋಗಕ್ಕೆ ಉಲ್ಲೇಖಿಸಲಾದ ಯಾವುದೇ ಇತರ ವಿಷಯ ಅಲ್ಲಿದೆ. ಶಾಸಕಾಂಗವು ಆಯೋಗದ ರಚನೆ, ಸದಸ್ಯರ ಅರ್ಹತೆ ಮತ್ತು ಅವರ ಆಯ್ಕೆಯ ಬಗ್ಗೆ ಶಾಸನವನ್ನು ಒದಗಿಸಬಹುದು. ಆಯೋಗವು ಅವರ ಕಾರ್ಯವಿಧಾನವನ್ನು ನಿರ್ಧರಿಸಬಹುದು ಮತ್ತು ಶಾಸಕಾಂಗವು ಕಾನೂನಿನಿಂದ ಒದಗಿಸಲಾಗುವ ರೀತಿಯಲ್ಲಿ ಕಾರ್ಯವನ್ನು ನಡೆಸಬೇಕು. ಅಲ್ಲಿಂದಾಚೆಗೆ ಆಯೋಗವು ಮಾಡಿದ ಪ್ರತಿಯೊಂದು ಶಿಫಾರಸನ್ನು ರಾಜ್ಯಪಾಲರು ರಾಜ್ಯದ ಶಾಸಕಾಂಗದ ಮುಂದೆ ಮಂಡಿಸುವುದಕ್ಕೆ ಕಳುಹಿಸುತ್ತಾರೆ. ಪಂಚಾಯತಿಗಳ ಲೆಕ್ಕಗಳ ನಿರ್ವಹಣೆ ಮತ್ತು ಲೆಕ್ಕ ಪರಿಶೋಧನೆಯ ವಿಷಯದಲ್ಲಿ ಉಪಬಂಧಗಳನ್ನು ಮಾಡಲು ರಾಜ್ಯದ ಶಾಸಕಾಂಗಕ್ಕೆ ಅಧಿಕಾರ ನೀಡಲಾಗಿದೆ (೨೩೪ ಜೆ).

ಪಂಚಾಯತಿಗಳ ಚುನಾವಣೆಗೆ ಮತದಾರರ ಪಟ್ಟಿಯ ತಯಾರಿಕೆ ಮೇಲ್ವಿಚಾರಣೆ, ನಿರ್ದೇಶನ ಮತ್ತು ತಯಾರಿಕೆಯ ನಿಯಂತ್ರಣ ಮತ್ತು ಎಲ್ಲಾ ಚುನಾವಣೆಗಳನ್ನು ನಡೆಸುವುದನ್ನು ರಾಜ್ಯ ಚುನಾವಣಾ ಆಯೋಗಕ್ಕೆ ವಹಿಸಲಾಗಿದೆ. ಈ ಆಯೋಗದಲ್ಲಿ ಚುನಾವಣಾ ಆಯುಕ್ತರು ಇದ್ದು, ಅವರನ್ನು ರಾಜ್ಯಪಾಲರು ನೇಮಿಸುವರು. ಅವರ ಸೇವೆ ಮತ್ತು ಅವಧಿಯ ಷರತ್ತುಗಳನ್ನು ರಾಜ್ಯಪಾಲರಿಂದ ನಿರ್ಧರಿಸಲ್ಪಡುತ್ತದೆ. ೧೯೯೩ರ ಸಂವಿಧಾನ (ಎಪ್ಪತ್ತಮೂರನೇ ತಿದ್ದುಪಡಿ) ಕಾಯ್ದೆಯು ಹೊಸದಾಗಿ ಸೇರಿಸಿದ ಭಾಗ IXರ ಉಪಬಂಧಗಳು ಕೇಂದ್ರಾಡಳಿತ ಪ್ರದೇಶಗಳಿಗೂ ಅನ್ವಯಿಸಿದ್ದು, ಅದಕ್ಕಾಗಿ ಈ ಭಾಗವು ಯಾವುದೇ ಕೇಂದ್ರಾಡಳಿತ ಪ್ರದೇಶ ಅಥವಾ ಭಾಗಕ್ಕೆ ಅನ್ವಯವಾಗುತ್ತದೆ ಎಂದು ನಿರ್ದೇಶಿಸಲು ರಾಷ್ಟ್ರಾಧ್ಯಕ್ಷರಿಗೆ ಅಧಿಕಾರ ನೀಡಲಾಗಿದೆ. ಆದರ ಪ್ರಕಟಣೆಯಲ್ಲಿ ನಿರ್ದಿಷ್ಟಪಡಿಸಿದ ವಿನಾಯಿತಿಗಳು ಮತ್ತು ಮಾರ್ಪಾಡುಗಳಿಗೆ ಒಳಪಟ್ಟಿರುತ್ತದೆ. ೨೪೨ಕೆ. ವಿಧಿಯಡಿಯಲ್ಲಿ ಮತಕ್ಷೇತ್ರದ ಗಡಿ ನಿರ್ಮಿಸುವುದು ಅಥವಾ ಅಂತಹ ಮತಕ್ಷೇತ್ರಗಳಿಗೆ ಸ್ಥಾನಗಳ ಹಂಚಿಕೆಗೆ ಸಂಬಂಧಿಸಿದಂತೆ ಯಾವುದೇ ಕಾನೂನಿನ ಸಿಂಧುತ್ವದಂತ ಚುನಾವಣಾ ವಿಷಯಗಳಲ್ಲಿ ಕೋರ್ಟುಗಳ ಹಸ್ತಕ್ಷೇಪವನ್ನು ನಿಷೇಧಿಸಲಾಗಿದೆ. ಯಾವುದೇ ಪಂಚಾಯತಿಯ ಚುನಾವಣೆಯನ್ನು ಚುನಾವಣಾ ಅರ್ಜಿಯಿಂದಲ್ಲದೆ ಬೇರೆ ರೀತಿಯಲ್ಲಿ ಪ್ರಶ್ನಿಸುವಂತಿಲ್ಲ. ಇದಕ್ಕೆ ರಾಜ್ಯದ ಶಾಸಕಾಂಗವು ಮಾಡಿರುವ ಕಾನೂನಿನಲ್ಲಿ ನಮೂದಿಸಿರುವ ರೀತಿಯಲ್ಲಿ ಮಾತ್ರ ಮಾಡಬೇಕು.

ಸಂವಿಧಾನಕ್ಕೆ ಹನ್ನೊಂದನೇ ಷೆಡ್ಯೂಲ್ ಅನ್ನು ಸೇರಿಸಲು ವಿಧಿ ೨೪೩ಜಿ.ಯಲ್ಲಿ ನಮೂದಿಸಲಾಗಿದೆ.

ಅನೇಕ ರಾಜ್ಯಗಳಲ್ಲಿ ಸ್ಥಳೀಯ ಸಂಸ್ಥೆಗಳು ಅನೇಕ ಕಾರಣಗಳಿಗೆ ದುರ್ಬಲ ಮತ್ತು ಪರಿಣಾಮಕಾರಿಯಾಗಿಲ್ಲವಾಗಿವೆ. ಆ ಕಾರಣಗಳು ಯಾವುವೆಂದರೆ-ಕ್ರಮವಾಗಿ ಚುನಾವಣೆಗಳನ್ನು ನಡೆಸದಿರುವುದು, ದೀರ್ಘಕಾಲದವರೆಗೆ ಅಧಿಕ್ರಮಿಸಿರುವುದು, ಅಧಿಕಾರಗಳು ಮತ್ತು ಕಾರ್ಯಗಳನ್ನು ಸರಿಯಾದ ರೀತಿಯಲ್ಲಿ ವಿತರಿಸಿಲ್ಲದಿರುವುದು. ಇದರ ಪರಿಣಾಮವಾಗಿ, ಸ್ವಯಂ ಸರಕಾರದ ಸಕ್ರಿಯ ಪ್ರಜಾಪ್ರಭುತ್ವ ಘಟಕಗಳಾಗಿ ನಗರ ಮತ್ತು ಸ್ಥಳೀಯ ಸಂಸ್ಥೆಗಳು ಪರಿಣಾಕಾರಿಯಾಗಿ ಕೆಲಸ ಮಾಡಲಾಗುತ್ತಿಲ್ಲ.

ಈ ಕೊರತೆಗಳನ್ನು ಗಮನದಲ್ಲಿಟ್ಟುಕೊಂಡು ನಗರ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಅಗತ್ಯವಾದ ಉಪಬಂಧಗಳನ್ನು ಸಂವಿಧಾನದಲ್ಲಿ ಸೇರಿಸಲಾಗಿದೆ. ಅದರಲ್ಲಿಯೂ ವಿಶೇಷವಾಗಿ ಈ ಕೆಳಗಿನವುಗಳನ್ನು ಸೇರಿಸಲಾಗಿದೆ.

೧. ರಾಜ್ಯ ಸರಕಾರ ಮತ್ತು ನಗರ ಸ್ಥಳೀಯ ಸಂಸ್ಥೆಗಳ ನಡುವೆ ಸಂಬಂಧವನ್ನು ಸ್ಥಿರವಾದ ನೆಲೆಯಲ್ಲಿ ನಿಲ್ಲಿಸುವುದು. ಅವು ಯಾವುವೆಂದರೆ-

ಎ) ಕಾರ್ಯಗಳು ಮತ್ತು ತೆರಿಗೆಯ ಅಧಿಕಾರಗಳು .

ಬಿ) ವರಮಾನ ಹಂಚಿಕೆಯ ವ್ಯವಸ್ಥೆಗಳು

೨) ಕ್ರಮವಾದ ಚುನಾವಣೆಯನ್ನು ನಡೆಸಲು ಖಚಿತಪಡಿಸುವುದು.

೩) ಅಧಿಕ್ರಮದ ಸಂದರ್ಭದಲ್ಲಿ ಸಕಾಲದಲ್ಲಿ ಚುನಾವಣೆಗಳನ್ನು ಖಚಿತಪಡಿಸುವುದು

೪) ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಮಹಿಳೆಯರು ಮತ್ತು ದುರ್ಬಲ ವರ್ಗಗಳಿಗೆ ಸಾಕಷ್ಟು ಪ್ರಾತಿನಿಧ್ಯವನ್ನು ಒದಗಿಸುವುದು.

ಅದರಂತೆ ಸಂವಿಧಾನದಲ್ಲಿ ನಗರ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಒಂದು ಹೊಸ ಭಾಗವನ್ನು ಸೇರಿಸುವುದಕ್ಕೆ ಈ ಕೆಳಗಿನವುಗಳನ್ನು ಸೂಚಿಸಲಾಗಿದೆ.

ಎ) ಮೂರು ವರ್ಗಗಳ ಮುನಿಸಿಪಾಟಿಲಿಗಳ ರಚನೆ.

ಬಿ) ರಾಜ್ಯದ ಶಾಸಕಾಂಗವು ನಿರ್ಧರಿಸಿದಂತೆ ಮುನಿಸಿಪಾಲಿಟಿಗಳ ರಚನೆ (i) ಮುನಿಸಿಪಾಲಿಟಿಗಳಲ್ಲಿ, ವಾರ್ಡುಗಳಲ್ಲಿ ಅಥವಾ ಇತರ ಮಟ್ಟಗಳಲ್ಲಿ ಹಾಗೇನಾದರೂ ಇದ್ದರೆ ಸಮಿತಿಗಳ ಅಧ್ಯಕ್ಷರುಗಳ ಪ್ರಾತಿನಿಧ್ಯ.

ಸಿ) ರಾಜ್ಯದ ಕಾನೂನಿನಲ್ಲಿ ನಮೂದಿಸಿರುವ ರೀತಿಯಲ್ಲಿ ಮುನಿಸಿಪಾಲಿಟಿ ಅಧ್ಯಕ್ಷರ ಚುನಾವಣೆ.

ಡಿ) ರಾಜ್ಯದ ಕಾನೂನಿನಲ್ಲಿ ಒದಗಿಸಿರುವಂತೆ ಮುನಿಸಿಪಾಲಿಟಿಯ ಭೌಗೋಳಿಕ ಪ್ರದೇಶದೊಳಗೆ ವಾರ್ಡ್ ಮಟ್ಟ ಅಥವಾ ಇತರ ಮಟ್ಟ ಅಥವಾ ಮಟ್ಟಗಳಲ್ಲಿ ಸಮಿತಿಗಳ ರಚನೆ.

ಇ) ಪ್ರತಿಯೊಂದು ಮುನಿಸಿಪಾಲಿಟಿಗಳಲ್ಲಿ ಸ್ಥಾನಗಳ ಮೀಸಲಾತಿ.

೧) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಜನಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ಮೀಸಲಾತಿ, ಅದರಲ್ಲಿ ಮೂರನೆಯ ಒಂದಕ್ಕೆ ಕಡಿಮೆ ಇಲ್ಲದೆ ಮಹಿಳೆಯರಿಗೆ ಮೀಸಲಾತಿ.

೨) ಒಟ್ಟು ಸ್ಥಾನಗಳ ಸಂಖ್ಯೆಯಲ್ಲಿ ಮೂರನೇ ಒಂದು ಭಾಗಕ್ಕೆ ಕಡಿಮೆಯಿಲ್ಲದೆ ಮಹಿಳೆಯರಿಗೆ ಮೀಸಲಾತಿ.

೩) ರಾಜ್ಯದ ಶಾಸಕಾಂಗದಲ್ಲಿ ಒದಗಿಸಿದ್ದರೆ ಹಿಂದುಳಿದ ವರ್ಗಗಳ ನಾಗರಿಕರ ಪರವಾಗಿ ಮೀಸಲಾತಿ.

೪) ರಾಜ್ಯದ ಕಾನೂನಿನಲ್ಲಿ ನಮೂದಿಸಿರುವಂತೆ ಅಧ್ಯಕ್ಷರ ಹುದ್ದೆಗೆ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಮಹಿಳೆಯರಿಗೆ ಮೀಸಲಾತಿ.

ಎಫ್) ಮುನಿಸಿಪಾಲಿಟಿಗಳಿಗೆ ಐದು ವರ್ಷಗಳ ನಿಶ್ಚಿತ ಅವಧಿ ಮತ್ತು ಅದರ ವಿಸರ್ಜನೆಯ ಆರು ತಿಂಗಳ ಅವಧಿಯೊಳಗೆ ಮರು ಚುನಾವಣೆ.

ಜಿ) ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯಕ್ಕೆ ಯೋಜನೆಗಳ ತಯಾರಿಕೆ ಮತ್ತು ಸ್ವಯಂ ಸರಕಾರದ ಸಂಸ್ಥೆಗಳಾಗಿ ಕೆಲಸ ಮಾಡಲು ಸಹಾಯಕವಾಗುವಂತೆ ಅಗತ್ಯವಾದ ಅಭಿವೃದ್ಧಿ ಯೋಜನೆಗಳ ಅನುಷ್ಠಾನಕ್ಕೆ ಮುನಿಸಿಪಾಲಿಟಿಗಳಿಗೆ ಅಧಿಕಾರ ಮತ್ತು ಜವಾಬ್ದಾರಿಗಳನ್ನು ರಾಜ್ಯ ಶಾಸಕಾಂಗವು ನೀಡುವುದು.

ಎಚ್) ರಾಜ್ಯ ಕಾನೂನಿನಲ್ಲಿ ಒದಗಿಸಿರುವಂತೆ ರಾಜ್ಯ ಸರಕಾರಗಳಿಂದ ಮುನಿಸಿಪಾಲಿಟಿಗಳಿಗೆ ನಿಗದಿಪಡಿಸಿದಂತಹ ತೆರಿಗೆಗಳು ಮತ್ತು ಸುಂಕಗಳನ್ನು ನಮೂದಿಸಿದಂತೆ ವಿಧಿಸುವುದು ಮತ್ತು ಮುನಿಸಿಪಾಲಿಟಿಗಳಿಗೆ ನಿಗದಿಪಡಿಸಿದ ಅನುದಾನಗಳು.

ಐ) ಮುನಿಸಿಪಾಲಿಟಿಗಳ ಹಣಕಾಸನ್ನು ಪರಾಮರ್ಶಿಸಲು ಹಣಕಾಸಿನ ಆಯೋಗ ಮತ್ತು ಈ ಕೆಳಗಿನವುಗಳಿಗೆ ತತ್ವಗಳನ್ನು ಶಿಫಾರಸು ಮಾಡುವುದು.

೧) ಮುನಿಸಿಪಾಲಿಟಿಗಳಿಗೆ ನಿಗದಿಪಡಿಸಬಹುದಾದ ತೆರಿಗೆಗಳನ್ನು ನಿರ್ಧರಿಸುವುದು.

೨) ರಾಜ್ಯ ಮತ್ತು ಮುನಿಸಿಪಾಲಿಟಿಗಳ ನಡುವೆ ತೆರಿಗೆ ಹಂಚಿಕೆ.

೩) ರಾಜ್ಯದ ಸಂಚಿತ ನಿಧಿಯಿಂದ ಮುನಿಸಿಪಾಲಿಟಿಗಳಿಗೆ ಅನುದಾನ.

ಜೆ) ಮುನಿಸಿಪಲ್ ಕಾರ್ಪೊರೇಷನ್‌ಗಳ ಲೆಕ್ಕವನ್ನು ಭಾರತದ ನಿಯಂತ್ರಕ ಮತ್ತು ಮಹಾಲೆಕ್ಕಪರಿಶೋಧಕರಿಂದ ಲೆಕ್ಕ ಪರಿಶೋಧಿಸುವುದು ಮತ್ತು ರಾಜ್ಯದ ಮತ್ತು ಕಾರ್ಪೊರೇಷನ್‌ಗಳ ಮುಂದೆ ವರದಿಯನ್ನು ಮಂಡಿಸುವುದು.

ಕೆ) ಮುನಿಸಿಪಾಲಿಟಿಗಳಿಗೆ ಚುನಾವಣೆಗಳ ವಿಷಯದಲ್ಲಿ ರಾಜ್ಯ ಶಾಸಕಾಂಗವು ಕಾನೂನು ರಚಿಸುವುದು ಮತ್ತು ಅವುಗಳನ್ನು ರಾಜ್ಯದ ಮುಖ್ಯ ಚುನಾವಣಾಧಿಕಾರಿಯ ಮೇಲ್ವಿಚಾರಣೆ, ನಿರ್ದೇಶನ ಮತ್ತು ನಿಯಂತ್ರಣದಡಿಯಲ್ಲಿ ಚುನಾವಣೆಗಳನ್ನು ನಡೆಸುವುದು.

ಎಲ್) ರಾಷ್ಟ್ರಾಧ್ಯಕ್ಷರು ನಿರ್ದಿಷ್ಟಪಡಿಸಿದಂತಹ ಸೂಕ್ತ ಬದಲಾವಣೆಗಳೊಂದಿಗೆ ಕೇಂದ್ರಾಡಳಿತ ಪ್ರದೇಶಗಳಿಗೆ ಮಸೂದೆಯ ಉಪಬಂಧಗಳನ್ನು ಅನ್ವಯಿಸುವುದು.

ಎಂ) ಮುನಿಸಿಪಾಲಿಟಿಯ ಸದಸ್ಯತ್ವಕ್ಕೆ ಅನರ್ಹತೆಗಳು.

ಎನ್) ಮುನಿಸಿಪಾಲಿಟಿಗಳಿಗೆ ಚುನಾವಣೆಗೆ ಸಂಬಂಧಿಸಿದ ವಿಷಯಗಳಲ್ಲಿ ಕೋರ್ಟು ವ್ಯಾಪ್ತಿಯ ನಿಷೇಧ.

ಕಾಯ್ದೆಯು ಮೇಲೆ ಹೇಳಿದ ಉದ್ದೇಶಗಳನ್ನು ಸಾಧಿಸಲು ಉದ್ದೇಶಿಸಿದೆ.

## ಮುಖ್ಯವಾದ ಉಪಬಂಧಗಳು :

ಕೇಂದ್ರ ಸರಕಾರವು ಅಧಿಕೃತ ರಾಜ್ಯಪತ್ರದಲ್ಲಿ ಅಧಿಸೂಚನೆಯಿಂದ ನಿಗದಿಪಡಿಸಿದ ದಿನದಿಂದ ಕಾಯ್ದೆಯು ಜಾರಿಗೆ ಬರುತ್ತದೆ.

ಸಂವಿಧಾನಕ್ಕೆ ಮುನಿಸಿಪಾಲಿಟಿಗಳ ಬಗ್ಗೆ ಭಾಗ IXA ಎಂಬ ಒಂದು ಹೊಸ ಭಾಗವನ್ನು ಸೇರಿಸಲಾಗಿದೆ (ಕಲಂ ೨)

'ಸಮಿತಿ' ಎಂದರೆ ವಿಧಿ ೨೪೩ಇ ಅಡಿಯಲ್ಲಿ ರಚಿಸಲಾದ ಸಮಿತಿ ಎಂದರ್ಥ. 'ಜಿಲ್ಲೆ' ಎಂದರೆ ರಾಜ್ಯದಲ್ಲಿನ ಜಿಲ್ಲೆ. 'ಮಹಾನಗರಪ್ರದೇಶ' ಎಂದರೆ ಹತ್ತು ಲಕ್ಷ ಅಥವಾ ಅದಕ್ಕೂ ಹೆಚ್ಚು ಜನಸಂಖ್ಯೆಯಿರುವ ಪ್ರದೇಶ. ಅದರಲ್ಲಿ ಒಂದು ಅಥವಾ ಹೆಚ್ಚು ಜಿಲ್ಲೆಗಳು ಸೇರಿರಬಹುದು ಮತ್ತು ಭಾಗ IXA ಯ ಉದ್ದೇಶಗಳಿಗೆ ಮಹಾನಗರ ಪ್ರದೇಶವೆಂದು ಸಾರ್ವಜನಿಕ ಅಧಿಸೂಚನೆಯಿಂದ ರಾಜ್ಯಪಾಲರು ನಿರ್ದಿಷ್ಟಪಡಿಸಿದ ಎರಡು ಅಥವಾ ಹೆಚ್ಚು ಮುನಿಸಿಪಾಲಿಟಿಗಳು, ಪಂಚಾಯತಿಗಳು ಅಥವಾ ಇತರ ನೆರೆ ಪ್ರದೇಶಗಳಿಗೆ 'ಮಹಾನಗರ' ಎಂದು ಕರೆಯಲಾಗಿರುವುದು. ಮುನಿಸಿಪಲ್ ಪ್ರದೇಶವೆಂದರೆ ರಾಜ್ಯಪಾಲರಿಂದ ಅಧಿಸೂಚಿಸಲ್ಪಟ್ಟ ಮುನಿಸಿಪಾಲಿಟಿಗಳ ಭೌಗೋಳಿಕ ಪ್ರದೇಶ; 'ಮುನಿಸಿಪಾಲಿಟಿ' ಎಂದರೆ ವಿಧಿ ೨೪೩ಇ ಅಡಿಯಲ್ಲಿ ರಚಿಸಲಾದ ಸ್ವಯಂ ಸರಕಾರದ ಸಂಸ್ಥೆ; 'ಪಂಚಾಯತಿ' ಎಂದರೆ ವಿಧಿ ೨೪೩ಬ್ಯೂ ಅಡಿಯಲ್ಲಿ ರಚಿಸಲಾದ ಒಂದು ಪಂಚಾಯತಿ, 'ಜನಸಂಖ್ಯೆ' ಎಂದರೆ ಹಿಂದಿನ ಜನಗಣತಿಯಲ್ಲಿ ಪ್ರಕಟವಾಗಿರುವ ಸಂಬಂಧಿತ ಜನಸಂಖ್ಯೆ (ವಿಧಿ ೨೪೩ಪಿ).

ಮಧ್ಯಂತರ ಪ್ರದೇಶ ಅಂದರೆ ಗ್ರಾಮೀಣ ಪ್ರದೇಶ ಮತ್ತು ನಗರ ಪ್ರದೇಶದ ನಡುವೆ ಇರುವ ಮಧ್ಯಂತರ ಪ್ರದೇಶಕ್ಕೆ ನಗರ ಪಂಚಾಯತಿಯ ರಚನೆಯನ್ನು ಕಾಯ್ದೆಯು ಒದಗಿಸುತ್ತದೆ; ಅಲ್ಲದೆ ಚಿಕ್ಕ ನಗರ ಪ್ರದೇಶಕ್ಕೆ ಒಂದು ಮುನಿಸಿಪಲ್ ಸಮಿತಿ ಮತ್ತು ದೊಡ್ಡ ನಗರ ಪ್ರದೇಶಕ್ಕೆ ಒಂದು ಮುನಿಸಿಪಲ್ ಕಾರ್ಪೊರೇಷನ್. ಒಂದು ನಗರ ಪ್ರದೇಶ ಅಥವಾ ಭಾಗಶಃ ಪ್ರದೇಶದಲ್ಲಿ ಆ ಪ್ರದೇಶದ ಗಾತ್ರವನ್ನು ಗಮನದಲ್ಲಿಟ್ಟುಕೊಂಡು ಮತ್ತು ಮುನಿಸಿಪಲ್ ಸೇವೆಗಳನ್ನು ಒದಗಿಸುವ ಪ್ರದೇಶದಲ್ಲಿ ಮುನಿಸಿಪಾಲಿಟಿಗಳನ್ನು ರಚಿಸದೆ ಅಲ್ಲಿ ಕೈಗಾರಿಕಾ ಸಂಸ್ಥೆಯೊಂದರಿಂದ ಒದಗಿಸಲಾಗಿರುವ ಮತ್ತು ಇತರ ಅಂಶಗಳಿಗಾಗಿ ಸಾರ್ವಜನಿಕ ಅಧಿಸೂಚನೆಯಿಂದ ಅಂತಹ ಪ್ರದೇಶವನ್ನು ಕೈಗಾರಿಕಾ ನಗರ ಪ್ರದೇಶವೆಂದು ನಿರ್ದಿಷ್ಟಪಡಿಸಬಹುದು.

ರಾಜ್ಯಪಾಲರು ಜನಸಂಖ್ಯೆ, ಜನಸಂಖ್ಯೆಯ ಸಾಂದ್ರತೆ, ಸ್ಥಳೀಯ ಆಡಳಿತಕ್ಕೆ ಉತ್ಪಾದಿಸಲಾಗುವ ವರಮಾನ, ಕೃಷಿಯೇತರ ಚಟುವಟಿಕೆಗಳಲ್ಲಿ ಉದ್ಯೋಗದ ಶೇಕಡಾ, ಆ ಪ್ರದೇಶದ ಆರ್ಥಿಕ ಪ್ರಾಮುಖ್ಯತೆಯಂತಹ ಅಂಶಗಳನ್ನು ಪರಿಗಣಿಸಿ ರಾಜ್ಯಪಾಲರು

"ಮಧ್ಯಂತರ ಪ್ರದೇಶ" "ಸಣ್ಣನಗರ ಪ್ರದೇಶ" ಅಥವಾ "ದೊಡ್ಡ ನಗರ ಪ್ರದೇಶ" ಎಂದು ಕರೆಯಲು ಒಂದು ಸಾರ್ವಜನಿಕ ಅಧಿಸೂಚನೆಯಿಂದ ನಿರ್ದಿಷ್ಟಪಡಿಸಬಹುದು. (ವಿಧಿ ೨೪೩ಕ್ಯೂ).

ಮುನಿಸಿಪಾಲಿಟಿಯಲ್ಲಿನ ಎಲ್ಲಾ ಸ್ಥಾನಗಳನ್ನು ನೇರ ಚುನಾವಣೆಯಿಂದ ತುಂಬಬೇಕು ಮತ್ತು ಈ ಉದ್ದೇಶಕ್ಕೆ ಮುನಿಸಿಪಲ್ ಪ್ರದೇಶವನ್ನು ವಾರ್ಡುಗಳು ಎಂದು ಕರೆಯುವ ಭೌಗೋಳಿಕ ಮತಕ್ಷೇತ್ರಗಳಾಗಿ ವಿಂಗಡಿಸಲಾಗುತ್ತದೆ.

ಕಾನೂನಿನಿಂದ ರಾಜ್ಯದ ಶಾಸಕಾಂಗವು ಮುನಿಸಿಪಾಲಿಟಿಯುಲ್ಲಿ ಈ ಕೆಳಗಿನಂತೆ ಪ್ರಾತಿನಿಧ್ಯ ಒದಗಿಸಬಹುದು.

೧) ಮುನಿಸಿಪಲ್ ಆಡಳಿತದಲ್ಲಿ ವಿಶೇಷ ಜ್ಞಾನ ಅಥವಾ ಅನುಭವವನ್ನು ಹೊಂದಿರುವ ವ್ಯಕ್ತಿಗಳು (ಆದರೆ ಅಂತಪ ವ್ಯಕ್ತಿಗಳು ಮುನಿಸಿಪಾಲಿಟಿಯ ಸಭೆಗಳಲ್ಲಿ ಮತ ಹಾಕಲು ಹಕ್ಕುಳ್ಳವರಾಗಿರುವುದಿಲ್ಲ).

೨) ಮುನಿಸಿಪಲ್ ಪ್ರದೇಶವನ್ನು ಪೂರ್ಣವಾಗಿ ಅಥವಾ ಭಾಗಶಃ ಒಳಗೊಂಡಿರುವ ಮತಕ್ಷೇತ್ರಗಳಲ್ಲಿನ ಪಾರ್ಲಿಮೆಂಟು ಸದಸ್ಯರು ಮತ್ತು ರಾಜ್ಯದ ವಿಧಾನಸಭೆಯ ಸದಸ್ಯರು.

೩) ಮುನಿಸಿಪಲ್ ಪ್ರದೇಶದೊಳಗೆ ಮತದಾರರೆಂದು ನೋಂದಾಯಿತವಾಗಿರುವ ರಾಜ್ಯದ ವಿಧಾನ ಪರಿಷತ್ತಿನ ಸದಸ್ಯರು ಮತ್ತು ರಾಜ್ಯಗಳ ಪರಿಷತ್ತುಗಳ ಸದಸ್ಯರುಗಳು.

೪) ವಿಧಿ ೨೪೩ಎಸ್‌ನ ಖಂಡ ೫ರಡಿಯಲ್ಲಿ ರಚಿಸಲಾದ ಸಮಿತಿಗಳ ಅಧ್ಯಕ್ಷರುಗಳು ರಾಜ್ಯ ಶಾಸಕಾಂಗಕ್ಕೆ ಮುನಿಸಿಪಾಲಿಟಿಯ ಅಧ್ಯಕ್ಷರ ಚುನಾವಣೆಯ ರೀತಿಯನ್ನು ನಮೂದಿಸುವುದಕ್ಕೆ ಅಧಿಕಾರ ನೀಡಲಾಗಿದೆ.

ಮೂರು ಲಕ್ಷ ಅಥವಾ ಅದಕ್ಕೂ ಹೆಚ್ಚು ಜನಸಂಖ್ಯೆಯ ಮುನಿಸಿಪಾಲಿಟಿಯ ಭೌಗೋಳಿಕ ಪ್ರದೇಶದೊಳಗೆ ಒಂದು ಅಥವಾ ಹೆಚ್ಚು ವಾರ್ಡುಗಳನ್ನೊಳಗೊಂಡಿರುವ ವಾರ್ಡು ಸಮಿತಿಗಳ ರಚನೆಗೆ ಕಾಯ್ದೆಯು ಅವಕಾಶವಿತ್ತಿದೆ. ವಾರ್ಡು ಸಮಿತಿಯ ರಚನೆ ಮತ್ತು ಭೌಗೋಳಿಕ ಪ್ರದೇಶದ ವಿಷಯದಲ್ಲಿ ಅವಕಾಶ ಒದಗಿಸಲು ವಾರ್ಡು ಸಮಿತಿಯಲ್ಲಿ ಸ್ಥಾನಮಾನಗಳನ್ನು ಭರ್ತಿ ಮಾಡುವ ರೀತಿಯನ್ನು ನಮೂದಿಸಲು ಶಾಸಕಾಂಗಕ್ಕೆ ಅಧಿಕಾರವಿದೆ; ಅಲ್ಲದೆ ವಾರ್ಡು ಸಮಿತಿಯ ಭೌಗೋಳಿಕ ಪ್ರದೇಶದೊಳಗೆ ವಾರ್ಡನ್ನು ಪ್ರತಿನಿಧಿಸುವ ಮುನಿಸಿಪಾಲಿಟಿ ಸದಸ್ಯರು ಆ ಸಮಿತಿಯ ಸದಸ್ಯನಾಗಿರುತ್ತಾನೆ. ಒಂದು ವಾರ್ಡು ಕಮಿಟಿಯಲ್ಲಿ ಒಂದು ವಾರ್ಡು, ಎರಡು ಅಥವಾ ಹೆಚ್ಚು ವಾರ್ಡುಗಳನ್ನು ಒಳಗೊಂಡಿದ್ದರೆ ವಾರ್ಡು ಸಮಿತಿಯ ಸದಸ್ಯರಿಂದ ಚುನಾಯಿಸಲ್ಪಟ್ಟ ಮುನಿಸಿಪಾಲಿಟಿಗಳಲ್ಲಿ ಅಂತಹ ವಾರ್ಡುಗಳನ್ನು ಪ್ರತಿನಿಧಿಸುವ ಸದಸ್ಯನೊಬ್ಬನು ಆ ಸಮಿತಿಯ ಅಧ್ಯಕ್ಷನಾಗುತ್ತಾನೆ. ವಾರ್ಡು ಸಮಿತಿಗಳ ಜೊತೆಗೆ ಸಮಿತಿಗಳ ರಚನೆಗೆ ಅವಕಾಶ ಒದಗಿಸುವುದಕ್ಕೆ ಶಾಸಕಾಂಗಕ್ಕೆ ಅಧಿಕಾರವಿದೆ (ವಿಧಿ ೨೪೩ ಎಸ್).

ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದ ಜನಸಂಖ್ಯೆಗೆ ಅನುಸಾರವಾಗಿ ಪ್ರತಿ ಮುನಿಸಿಪಾಲಿಟಿಯಲ್ಲಿ ಅವರಿಗೆ ಸ್ಥಾನಗಳ ಮೀಸಲಾತಿಗೆ ಕಾಯ್ದೆಯು ಅವಕಾಶವಿತ್ತಿದೆ. ಅದರಲ್ಲಿ ಒಟ್ಟು ಸ್ಥಾನಗಳ ಮೂರನೇ ಒಂದು ಭಾಗದ ಸ್ಥಾನಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಮಹಿಳೆಯರಿಗೆ ಮೀಸಲಿಡಬೇಕು. ಇನ್ನೂ ಹೆಚ್ಚಾಗಿ, ಒಟ್ಟು ಸ್ಥಾನಗಳ ಮೂರನೇ ಒಂದು ಭಾಗವನ್ನು ಮಹಿಳೆಯರಿಗೆ ಮೀಸಲಿಡಬೇಕು ಮತ್ತು ಅಂತಹ ಸ್ಥಾನಗಳನ್ನು ಪರ್ಯಾಯದಿಂದ ಹಂಚಬೇಕು. ರಾಜ್ಯದ ಶಾಸಕಾಂಗವು ಹಿಂದುಳಿದ ವರ್ಗಗಳ ನಾಗರಿಕರಿಗೆ ಕೂಡ ಮೀಸಲಾತಿಯನ್ನು ಒದಗಿಸಬಹುದು (೨೪೩ ಟಿ).

ಬೇಗನೆ ವಿಸರ್ಜನೆಯಾಗದಿದ್ದರೆ ಪ್ರತಿ ಮುನಿಸಿಪಾಲಿಟಿಯ ಅವಧಿಯು ಐದು ವರ್ಷಗಳು. ಆದರೆ ಮುನಿಸಿಪಾಲಿಟಿಯ ವಿಸರ್ಜನೆಗೆ ಮುಂಚೆ ಅವುಗಳ ಅಹವಾಲನ್ನು ಕೇಳಲು ಸಕಾರಣವಾದ ಅವಕಾಶವನ್ನು ಒದಗಿಸಬೇಕು. ಆದರೂ ಮುನಿಸಿಪಾಲಿಟಿಗೆ ಚುನಾವಣೆಯನ್ನು ಅದರ ಅವಧಿಯ ಅಂತ್ಯದೊಳಗೆ ಪೂರೈಸಬೇಕು ಅಥವಾ ವಿಸರ್ಜನೆಯ ತಾರೀಕಿನಿಂದ ಆರು ತಿಂಗಳು ಅಂತ್ಯವಾಗುವುದಕ್ಕೆ ಮುಂಚೆ ಪೂರೈಸಬೇಕು (೨೪೩ ಯು).

ಸಂಬಂಧಪಟ್ಟ ರಾಜ್ಯ ಶಾಸಕಾಂಗದಿಂದ ಚುನಾವಣೆಯಲ್ಲಿ ಸ್ಪರ್ಧಿಸಲು ವ್ಯಕ್ತಿಯನ್ನು ಅನರ್ಹಗೊಳಿಸಿದ್ದರೆ ಮುನಿಸಿಪಾಲಿಟಿ ಸದಸ್ಯನಾಗಿ ಆರಿಸಲ್ಪಡಲು ಆ ವ್ಯಕ್ತಿಯು ಅನರ್ಹವಾಗಿರುತ್ತಾನೆ. ಆದರೆ ಇಪ್ಪತ್ತೊಂದು ವರ್ಷದ ವಯಸ್ಸಿನವನಾಗಿದ್ದರೆ ಅವನನ್ನು ಅನರ್ಹಗೊಳಿಸಲಾಗುವುದಿಲ್ಲ ಅಥವಾ ರಾಜ್ಯದ ಕಾನೂನಿನಿಂದ ಅವನನ್ನು ಅನರ್ಹಗೊಳಿಸಿದ್ದರೆ ಅವನು ಅರ್ಹನಲ್ಲ. ಒಬ್ಬ ಸದಸ್ಯನ ಅನರ್ಹತೆಯ ಬಗ್ಗೆ ಪ್ರಶ್ನೆ ಉದ್ಭವಿಸಿದರೆ ಅದರ ತೀರ್ಮಾನಕ್ಕೆ ರಾಜ್ಯ ಶಾಸಕಾಂಗವು ಒದಗಿಸುವ ರೀತಿಯಲ್ಲಿ ಉಲ್ಲೇಖಿಸಬೇಕು (೨೪೩ ವಿ).

ಸ್ವಯಂ ಸರಕಾರದ ಸಂಸ್ಥೆಯಾಗಿ ಕಾರ್ಯ ನಡೆಸಲು ಸಹಾಯವಾಗುವುದಕ್ಕೆ ಅಂತಹ ಅಧಿಕಾರಗಳು ಮತ್ತು ಜವಾಬ್ದಾರಿಗಳನ್ನು ಕೊಡುವುದಕ್ಕೆ ಶಾಸನದಿಂದ ರಾಜ್ಯ ಶಾಸಕಾಂಗವು ಅಧಿಕಾರ ನೀಡಬಹುದು; ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯಕ್ಕೆ ಯೋಜನೆಗಳನ್ನು ತಯಾರಿಸುವುದು; ಹನ್ನೆರಡನೆಯ ಷೆಡ್ಯೂಲಿನಲ್ಲಿ ನಮೂದಿಸಿರುವವೂ ಸೇರಿದಂತೆ ಅವುಗಳಿಗೆ ವಹಿಸಲಾಗುವ ಕಾರ್ಯಗಳನ್ನು ನಡೆಸುವುದು ಮತ್ತು ಯೋಜನೆಗಳನ್ನು ಅನುಷ್ಠಾನಗೊಳಿಸುವುದು (೨೪೩ ಡಬ್ಲ್ಯು).

ರಾಜ್ಯ ಶಾಸಕಾಂಗವು ಮುನಿಸಿಪಾಲಿಟಿಗೆ ತೆರಿಗೆ, ಸುಂಕ ಮುಂತಾದವುಗಳನ್ನು ವಿಧಿಸಲು ಅಧಿಕಾರ ನೀಡುತ್ತದೆ. ಅಂತಹ ತೆರಿಗೆಗಳು, ಸುಂಕಗಳು ಮುಂತಾದವುಗಳನ್ನು ಖರ್ಚು ಮಾಡುವುದಕ್ಕೂ ಅಧಿಕಾರ ನೀಡುತ್ತದೆ. ರಾಜ್ಯ ಸರಕಾರವು ವಿಧಿಸಿದ ಮತ್ತು ವಸೂಲಿ ಮಾಡಿದ ತೆರಿಗೆಗಳು, ಸುಂಕಗಳು ಮುಂತಾದವುಗಳನ್ನು ಕೆಲವು ನಿಬಂಧನೆಗಳು ಮತ್ತು ಮಿತಿಗಳಿಗೆ ಒಳಪಟ್ಟು ಖರ್ಚು ಮಾಡಬಹುದು. ರಾಜ್ಯದ ಸಂಚಯಿತ ನಿಧಿಯಿಂದ ಒದಗಿಸಲಾದ ಅನುದಾನಗಳು ಮತ್ತು ಹಣವನ್ನು ಜಮಾ ಮಾಡುವುದಕ್ಕೆ ಮತ್ತು ಹಿಂದಕ್ಕೆ ಪಡೆಯುವುದಕ್ಕೆ ವಿಧಿಗಳನ್ನು ರಚಿಸುವುದಕ್ಕೆ ಅವಕಾಶ ಒದಗಿಸಲಾಗಿದೆ (೨೪೩ ಎಕ್ಸ್).

ವಿಧಿ ೨೪೩-I ಅಡಿಯಲ್ಲಿ ರಚಿಸಲಾದ ಹಣಕಾಸು ಆಯೋಗವು ಮುನಿಸಿಪಾಲಿಟಿಗಳ ಹಣಕಾಸು ಪರಿಸ್ಥಿತಿಯನ್ನು ಪರಾಮರ್ಶಿಸಬೇಕು ಮತ್ತು ರಾಜ್ಯಗಳ ಮತ್ತು ಮುನಿಸಿಪಾಲಿಟಿಗಳ ನಡುವೆ ಹಣಕಾಸಿನ ಸಂಬಂಧಗಳ ಬಗ್ಗೆ ರಾಜ್ಯಪಾಲರಿಗೆ ಶಿಫಾರಸುಗಳನ್ನು ಮಾಡುವುದು, ಮುನಿಸಿಪಾಲಿಟಿಗಳ ಹಣಕಾಸು ಸ್ಥಿತಿಯನ್ನು ಉತ್ತಮಪಡಿಸಲು ಕ್ರಮಗಳನ್ನು ಶಿಫಾರಸು ಮಾಡುವುದು, ಪ್ರತಿಯೊಂದು ಶಿಫಾರಸನ್ನು ವಿವರಿಸುವ ಜ್ಞಾಪನಪತ್ರದೊಂದಿಗೆ ಕೈಗೊಂಡ ಕ್ರಮವನ್ನು ವಿವರಿಸಿ ರಾಜ್ಯಪಾಲರು ರಾಜ್ಯದ ಶಾಸಕಾಂಗದ ಮುಂದೆ ಮಂಡಿಸಬೇಕು (೨೪೩ ಎಕ್ಸ್).

ಮುನಿಸಿಪಾಲಿಟಿಗಳ ಲೆಕ್ಕಗಳನ್ನು ಇಡುವುದು ಮತ್ತು ಲೆಕ್ಕ ಪರಿಶೋಧನೆಗೆ ಉಪಬಂಧಗಳನ್ನು ರಾಜ್ಯ ಶಾಸಕಾಂಗವು ಮಾಡುವುದು (೨೪೩ ಜೆಡ್).

ವಿಧಿ ೨೪೩ ಜೆಡ್ಎ ಒದಗಿಸುವುದೇನೆಂದರೆ ಮುನಿಸಿಪಾಲಿಟಿಗಳಿಗೆ ಎಲ್ಲಾ ಚುನಾವಣೆಗಳಿಗೆ ಮತದಾರ ಪಟ್ಟಿಗಳ ಮೇಲ್ವಿಚಾರಣೆ, ನಿರ್ದೇಶನ ಮತ್ತು ನಿಯಂತ್ರಣವನ್ನು ರಾಜ್ಯ ಚುನಾವಣಾ ಆಯೋಗಕ್ಕೆ ವಹಿಸಲಾಗಿದೆ. ಅದಕ್ಕಾಗಿ ಉಪಬಂಧಗಳನ್ನು ಮಾಡಲು ರಾಜ್ಯದ ಶಾಸಕಾಂಗಕ್ಕೆ ಅಧಿಕಾರ ನೀಡಲಾಗಿದೆ.

ಭಾಗ IXAಯ ಉಪಬಂಧಗಳು ಕೇಂದ್ರಾಡಳಿತ ಪ್ರದೇಶಗಳಿಗೂ ಅನ್ವಯಿಸಲಾಗುತ್ತಿದ್ದು, ಅವನ್ನು ರಾಷ್ಟ್ರಾಧ್ಯಕ್ಷರ ಅಧಿಸೂಚನೆಯಿಂದ ನಿರ್ದೇಶಿಸಿದ್ದಾರೆ. ಆದರೂ ವಿಧಿ ೨೪೪ರ ಭಾಗ ಭಾಗ IXAಯ ಅನುಬಂಧಗಳನ್ನು ಖಂಡ(೧)ರಲ್ಲಿ ಉಲ್ಲೇಖಿಸಲಾದ ಷೆಡ್ಯೂಲ್ಡ್ ಪ್ರದೇಶಗಳಿಗೆ ಮತ್ತು ಖಂಡ (೨)ರಲ್ಲಿ ಉಲ್ಲೇಖಿಸಲಾದ ಗುಡ್ಡಗಾಡು ಪ್ರದೇಶಗಳಿಗೆ ಅನ್ವಯಿಸಲಾಗುವುದಿಲ್ಲವಾದರೂ ಅದರ ಬಗ್ಗೆ ಪಾರ್ಲಿಮೆಂಟು ಶಾಸನ ಮಾಡಿದ್ದರೆ ಅನ್ವಯಿಸಬಹುದು ಮತ್ತು ಡಾರ್ಜಿಲಿಂಗ್ ಗೂರ್ಖಾ ಬೆಟ್ಟ ಸಮಿತಿಯ ಕಾರ್ಯಗಳು ಮತ್ತು ಅಧಿಕಾರಗಳ ಮೇಲೆ ಪರಿಣಾಮ ಬೀರುವುದಿಲ್ಲ. (ವಿಧಿಗಳು ೨೪೩ ಜೆಡ್‌ಬಿ, ೨೪೩ ಜೆಡ್‌ಸಿ).

ಪಂಚಾಯತಿಗಳು ಮತ್ತು ಮುನಿಸಿಪಾಲಿಟಿಗಳು ತಯಾರಿಸಿದ ಯೋಜನೆಗಳನ್ನು ಕ್ರೋಢೀಕರಿಸಲು ಜಿಲ್ಲಾಮಟ್ಟದಲ್ಲಿ ಜಿಲ್ಲಾ ಯೋಜನಾ ಸಮಿತಿಯನ್ನು ರಚಿಸಲು ಮತ್ತು ಇಡೀ ಜಿಲ್ಲೆಗೆ ಕರಡು ಅಭಿವೃದ್ಧಿ ಯೋಜನೆ ರಚಿಸಲು ಕಾಯ್ದೆಯು ಅವಕಾಶವಿತ್ತಿದೆ. ರಾಜ್ಯದ ಶಾಸಕಾಂಗಕ್ಕೆ ಸಮಿತಿ ಮುಂತಾದವುಗಳ ರಚನೆ ಮತ್ತು ಕಾರ್ಯಗಳಿಗೆ ಉಪಬಂಧಗಳನ್ನು ಮಾಡಲು ಅಧಿಕಾರ ನೀಡಲಾಗಿದೆ. ಹಾಗೆಯೇ ಪ್ರತಿಯೊಂದು ಮಹಾನಗರ ಪ್ರದೇಶದಲ್ಲಿ ಇಡೀ ಮಹಾನಗರ ಪ್ರದೇಶಕ್ಕೆ ಕರಡು ಅಭಿವೃದ್ಧಿ ಯೋಜನೆ ತಯಾರಿಸಲು ಮಹಾನಗರ ಯೋಜನಾ ಸಮಿತಿಯನ್ನು ರಚಿಸಬೇಕು. ಸಮಿತಿ ಮುಂತಾದವುಗಳ ರಚನೆ ಮುಂತಾದವುಗಳ ಬಗ್ಗೆ ಉಪಬಂಧವನ್ನು ಮಾಡುವುದಕ್ಕೆ ರಾಜ್ಯ ಶಾಸಕಾಂಗಕ್ಕೆ ಅಧಿಕಾರ ನೀಡಲಾಗಿದೆ. (ವಿಧಿಗಳು ೨೪೩ ಜೆಡ್‌ಡಿ ಮತ್ತು ೨೪೩ ಜೆಡ್‌ಇ))

ವಿಧಿ ೨೪೩ ಜೆಡ್‌ಜಿ ಚುನಾವಣಾ ವಿಷಯಗಳಲ್ಲಿ ಕೋರ್ಟುಗಳ ಹಸ್ತಕ್ಷೇಪವನ್ನು ನಿಷೇಧಿಸಲಾಗಿದೆ.

ಒಂದು ಮುನಿಸಿಪಾಲಿಟಿಯು ನಡೆಸಬಹುದಾದ ಅನೇಕ ಕಾರ್ಯಗಳನ್ನು ಮತ್ತು ಯೋಜನೆಗಳನ್ನೊಳಗೊಂಡ ಒಂದು ಹೊಸ ಹನ್ನೆರಡನೆಯ ಷೆಡ್ಯೂಲನ್ನು ಸಂವಿಧಾನಕ್ಕೆ ಸೇರಿಸಲಾಗಿದೆ (ಕಲಮು ೪).

ಈ ವಿಧಿಗಳಿಗನುಸಾರವಾಗಿ, ಕರ್ನಾಟಕ ರಾಜ್ಯದಲ್ಲೂ ಸೂಕ್ತ ಕಾನೂನುಗಳನ್ನು ರಚಿಸುವುದರ ಮೂಲಕ ಗ್ರಾಮಪಂಚಾಯ್ತಿಗಳು, ಪಟ್ಟಣ ಪಂಚಾಯ್ತಿಗಳು, ಜಿಲ್ಲಾ ಪಂಚಾಯತಿಗಳ ರಚನೆಯನ್ನು ದಶಕದ ಹಿಂದೆಯೆ ಮಾಡಲಾಗಿ, ಆ ಸಂಸ್ಥೆಗಳಿಗೆ ಶಾಸನದತ್ತ ಅಧಿಕಾರಗಳನ್ನು ನೀಡಿರುವುದರ ಜೊತೆಗೆ ಆರ್ಥಿಕ ಸೌಲಭ್ಯಗಳನ್ನು ಒದಗಿಸಲಾಗಿ ಪ್ರಸ್ತುತದಲ್ಲಿ ಈ ವಿಕೇಂದ್ರಿಕೃತ ಸಂಸ್ಥೆಗಳು ಆಯಾ ಪ್ರದೇಶಗಳ ಅಭಿವೃದ್ಧಿಗೆ ಗಮನಹರಿಸುತ್ತಿವೆ. ರಾಜ್ಯ ಸರಕಾರದ ಮೇಲ್ವಿಚಾರಣೆಗೆ ಒಳಪಟ್ಟು ಈ ಸಂಸ್ಥೆಗಳು ಅಭಿವೃದ್ಧಿ ಕಾರ್ಯಗಳನ್ನು, ಕೆಲವು ಹಂತದವರೆಗೆ ಶಿಕ್ಷಣ, ಆರೋಗ್ಯ ಮುಂತಾದ ವಿಚಾರಗಳಲ್ಲಿ ಅಧಿಕಾರವನ್ನು ಹೊಂದಿ ಜನಹಿತ ಕಾರ್ಯಗಳಲ್ಲಿ ತೊಡಗಿಕೊಂಡಿರುವುದನ್ನು ನಾವು ಕಾಣಬಹುದಾಗಿದೆ.

ಉದ್ದೇಶಿತ ವಿಕೇಂದ್ರಿಕರಣ ತತ್ವ ರಾಷ್ಟ್ರಪಿತ ಗಾಂಧೀಜೀಯುವರ ಕಲ್ಪನೆಯ ಗ್ರಾಮ ಸ್ವಾರಾಜ್ಯದ ದಿಕ್ಕಿನಲ್ಲಿ ಹೆಜ್ಜೆ ಹಾಕುತ್ತಿರುವುದು ಗಮನಾರ್ಹ ವಿಚಾರವಾಗಿದೆ. ಸಂಪೂರ್ಣ ಗ್ರಾಮಸ್ವರಾಜ್ಯ ಕಲ್ಪನೆ ಇನ್ನೂ ಕೈಗೂಡಲು ಕಾಲಪಕ್ವವಾಗಿಲ್ಲವೆನಿಸುತ್ತೆ. ನಿರಕ್ಷರತೆ, ಬಡತನ, ವಿವೇಕರಹಿತಜೀವನ ವಿಧಾನ ಮುಂತಾದ ಕೊರತೆಗಳು ಸಂಪೂರ್ಣವಾಗಿ ಪರಿಹಾರವಾಗಿ, ಸರ್ವೋದಯ ಸಮಾಜವನ್ನು ಸ್ಥಾಪನೆ ಮಾಡಿದಾಗ ಸಂಪೂರ್ಣ ಗ್ರಾಮಸ್ವಾರಾಜ್ಯದ ಸಾಧ್ಯತೆಯನ್ನು ನಿರೀಕ್ಷಿಸಬಹುದಾಗಿದೆ. ಆದಾಗ್ಯೂ ಪ್ರಸ್ತುತದ ತಿದ್ದುಪಡಿಗಳು ಜನತೆಯ ಸಮೀಪಕ್ಕೆ ಅಧಿಕಾರವನ್ನು ಕೊಂಡೊಯ್ಯುವಲ್ಲಿ ಯಶಸ್ವಿಯಾಗುತ್ತಿವೆ ಎಂದು ಹೇಳಬಹುದು.

ಮಹಾತ್ಮಗಾಂಧೀಜಿಯವರ ಆಶಯದಂತೆ ಅಧಿಕಾರ ವಿಕೇಂದ್ರೀಕರಣ ಅನುಷ್ಠಾನಕ್ಕೆ ಪ್ರಧಾನಿ ದಿ. ರಾಜೀವಗಾಂಧಿಯವರು ತಂದ ಸಂವಿಧಾನ ತಿದ್ದುಪಡಿ ಪೂರಕವಾಗಿತ್ತು. ಆ ಕಾರಣದಿಂದ ಇಂದು ರಾಷ್ಟ್ರಾದ್ಯಂತ ಜನರ ಕೈಗೆ ಇಂದು ಅಧಿಕಾರ ದೊರಕಿದೆ.

●






# ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಮೀಸಲಾತಿ

ಎಂ. ವೀರಪ್ಪ ಮೊಯಿಲಿ

**ಪೀಠಿಕೆ :**

ಭಾರತದಲ್ಲಿ ಪಂಚಾಯತ್ ರಾಜ್ ವ್ಯವಸ್ಥೆಗೆ (ಸ್ಥಳೀಯ ಸಂಸ್ಥೆ) ತನ್ನದೇ ಆದ ಸುದೀರ್ಘ ಇತಿಹಾಸವಿದೆ. ಸುಮಾರು ನಾಲ್ಕು ಸಾವಿರ ವರ್ಷಗಳಿಂದ ಕಾಲಕಾಲಕ್ಕೆ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳಿಗೆ ಸ್ಪಂದಿಸುತ್ತಾ ಬಂದಿದೆ. ಸ್ಥಳೀಯ ಸರ್ಕಾರದ ಒಂದು ವ್ಯವಸ್ಥೆಯಾದ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಸ್ಥಳೀಯ ಜನರಿಗೆ ತಮ್ಮದೇ ಆದ ಜವಾಬ್ದಾರಿ ಮತ್ತು ಹೊಣೆಗಾರಿಕೆಗಳನ್ನು ಹೊರುವ ಅವಕಾಶ ಕಲ್ಪಿಸಿದೆ. ಇದು ಆಧುನಿಕ ಸಂಯುಕ್ತ ಸರ್ಕಾರ ಪದ್ಧತಿಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದು ಪ್ರಜೆಗಳ ಸ್ವಾತಂತ್ರ್ಯದ ಸಂಕೇತವಾಗಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳಂತೆ ಸ್ಥಳೀಯ ಸಂಸ್ಥೆಗಳ ಸರ್ಕಾರಗಳು ಹಿಂದೆಂದಿಗಿಂತಲೂ ಇಂದು ಹೆಚ್ಚು ವಾಸ್ತವಿಕ ಮತ್ತು ಪ್ರಜಾಸತ್ತಾತ್ಮಕ ಸಮುದಾಯಕ್ಕೆ ಹೆಚ್ಚುಹೆಚ್ಚು ಹತ್ತಿರವಾಗುತ್ತಾ ಮಹತ್ವಪೂರ್ಣವಾದ ಪಾತ್ರವನ್ನು ವಹಿಸುತ್ತಿವೆ.

> ***ಪಂಚಾಯತ್ ರಾಜ್ ವ್ಯವಸ್ಥೆಯನ್ನು ಕಾರ್ಯಗತಗೊಳಿಸುವ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವ ಪರಿಶಿಷ್ಟ ಜಾತಿ ಮತ್ತು ವರ್ಗಗಳು, ಹಿಂದುಳಿದ ವರ್ಗಗಳು ಮತ್ತು ಮಹಿಳೆಯರು ಹಾಗೂ ಇನ್ನಿತರರಿಗೆ ಮೀಸಲಾತಿಯ ಅವಕಾಶ ಕಲ್ಪಿಸಿ ಕೊಟ್ಟಾಗ ಮಾತ್ರ ಅದು ನಿಜವಾದ ವಿಕೇಂದ್ರೀಕರಣವಾಗಲು ಸಾಧ್ಯವಾಗುತ್ತದೆ.***

**ಗಾಂಧೀ ಕನಸಿನ ಗ್ರಾಮ ಸ್ವರಾಜ್ ಕಲ್ಪನೆ :**

ಸ್ವಾತಂತ್ರ್ಯಾನಂತರ ರಾಷ್ಟ್ರಮಟ್ಟದಲ್ಲಿ ಗ್ರಾಮಗಳ ಸರ್ವತೋಮುಖ ಉದ್ಧಾರಕ್ಕಾಗಿ ಪಂಚಾಯತ್ ರಾಜ್ ಆಡಳಿತ ವ್ಯವಸ್ಥೆಯ ಮೂಲಕ ಹಲವಾರು ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ಜಾರಿಗೆ ತಂದು ಅನುಷ್ಠಾನಗೊಳಿಸಲಾಗುತ್ತಿದೆ. ಇದನ್ನು ಗ್ರಾಮಗಳ ಹಂತದಲ್ಲಿ ಅಧಿಕಾರ ವಿಕೇಂದ್ರೀಕರಣ ಮಾಡುವ ಮತ್ತು ಮಹಾತ್ಮ ಗಾಂಧೀಜಿಯವರ 'ರಾಮರಾಜ್ಯ', 'ಗ್ರಾಮಸ್ವರಾಜ್'ದ ಕಲ್ಪನೆಯನ್ನು ಕಾರ್ಯರೂಪಕ್ಕೆ ತರುವ ಉದ್ದೇಶದಿಂದ ಅನೇಕ ಅಭಿವೃದ್ಧಿ ಮತ್ತು ಸುಧಾರಣೆಗಳನ್ನು ಮಾಡಲಾಗುತ್ತಿದೆ. ದೇಶದ ಇತರೆಡೆಯಂತೆ ಕರ್ನಾಟಕದಲ್ಲಿಯೂ ಸಹ ಕಳೆದ ನಾಲ್ಕು ದಶಕಗಳ ಅವಧಿಯಲ್ಲಿ ಪಂಚಾಯತ್ ರಾಜ್ ಆಡಳಿತ ವ್ಯವಸ್ಥೆಯಲ್ಲಿ ವ್ಯಾಪಕ ಹಾಗೂ ವಿಶಿಷ್ಟ ಬದಲಾವಣೆಯನ್ನು ತರುವ ಮೂಲಕ ಜಾರಿಗೆ ತರಲಾಗುತ್ತಿದೆ. ಇದು ಕೇಂದ್ರ ಸರ್ಕಾರವು ಅಳವಡಿಸಿದ ಸ್ಥಳೀಯ ಸರ್ಕಾರದಡಿಯಲ್ಲಿ ವಿವಿಧ ಕಾಯಿದೆಗಳಿಗನುಗುಣವಾಗಿ ಅಸ್ತಿತ್ವಕ್ಕೆ ಬಂದ ಪಂಚಾಯತ್ ರಾಜ್ ಆಡಳಿತ ವ್ಯವಸ್ಥೆಯ ಅಂಗರಚನೆ, ಕಾರ್ಯವಿಧಾನ, ಆಡಳಿತದಲ್ಲಿ ವಿಕೇಂದ್ರೀಕರಣ, ಸ್ವಾಯತ್ತತೆ

ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯ ಜಾಗೃತಿ, ಸಾಮಾಜಿಕ ನ್ಯಾಯ, ಇತ್ಯಾದಿಗಳನ್ನು ಹೆಚ್ಚು ಅರ್ಥಪೂರ್ಣವಾಗಿಸುವಲ್ಲಿ ಬಹಳ ಪ್ರಾಮುಖ್ಯತೆಯನ್ನು ಪಡೆಯುತ್ತಿದೆ.

## ಅಧಿಕಾರ ವಿಕೇಂದ್ರೀಕರಣ :

ಪ್ರಜಾಪ್ರಭುತ್ವದಲ್ಲಿ ಅಧಿಕಾರ ವಾಸ್ತವಿಕವಾಗಿ ಜನರಿಂದಲೇ ಜನರಿಗಾಗಿ ಬಳಸುವ ಸಾಧನವಾಗಬೇಕಾದರೆ ಅಧಿಕಾರ ಮತ್ತು ಸಂಪನ್ಮೂಲಗಳನ್ನು ವಿಕೇಂದ್ರೀಕರಣಗೊಳಿಸುವುದು ಅತ್ಯಗತ್ಯ. ಇದರಿಂದ ಪ್ರಜೆಗಳು ಆಡಳಿತದಲ್ಲಿ ಪಾಲ್ಗೊಳ್ಳಲು ಸಾಧ್ಯವಾಗುತ್ತದೆ. ಇಂತಹ ಒಂದು ವ್ಯವಸ್ಥೆಯನ್ನು ನಿರ್ಮಿಸಿ ಆಡಳಿತ ವಿಕೇಂದ್ರೀಕರಣ ಮಾಡಿದಾಗಲೇ ಅಭಿವೃದ್ಧಿ ಸುಲಭ ಸಾಧ್ಯ. ಇದನ್ನು ಅಧಿಕಾರ ವಿಕೇಂದ್ರೀಕರಣದಡಿಯಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಮೂಲಕ ಅಸ್ತಿತ್ವಕ್ಕೆ ತಂದು ಅನುಷ್ಠಾನಗೊಳಿಸುವಲ್ಲಿ ಕರ್ನಾಟಕ ರಾಜ್ಯವೂ ಒಂದಾಗಿದೆ. ಈ ಪಂಚಾಯತ್ ರಾಜ್‌ಗಳಲ್ಲಿ ಜನರನ್ನು ಸಕ್ರಿಯವಾಗಿ ಭಾಗವಹಿಸುವಂತೆ ಮಾಡುವುದು, ಸ್ಥಳೀಯ ಅಭಿವೃದ್ಧಿ ಪ್ರಕ್ರಿಯೆಗಳಿಗೆ ಚಾಲನೆ ನೀಡುವುದು, ಆಡಳಿತದಲ್ಲಿ ದಕ್ಷತೆ ಹೆಚ್ಚಿಸುವುದು, ಪಂಚಾಯತಿಯಲ್ಲಿ ಮೀಸಲಾತಿಯನ್ನು ಕಲ್ಪಿಸುವುದು. ಮತ್ತು ರಾಷ್ಟ್ರವನ್ನು ಅಭಿವೃದ್ಧಿ ಪಥದತ್ತ ಕೊಂಡೊಯ್ಯುವಂತೆ ಮಾಡುವಲ್ಲಿ ಪ್ರಮುಖವಾದ ಹೆಜ್ಜೆ ಇಟ್ಟಿದೆ. ಹೀಗಾಗಿ ಪಂಚಾಯತ್ ರಾಜ್ ಸಂಸ್ಥೆಗಳು ಪ್ರಜಾಸತ್ತಾತ್ಮಕ ವ್ಯವಸ್ಥೆಯ ಮೂಲ ಬೇರುಗಳಾಗಿರುವುದರಿಂದ ತಳಪಾಯದಿಂದಲೇ ಸರ್ವರಿಗೂ ಸಮಾನಾವಕಾಶಕ್ಕೆ ದಾರಿ ಮಾಡಿಕೊಡಬೇಕಾದದ್ದು ಸೂಕ್ತವಾಗಿದೆ. ಈ ಹಿನ್ನೆಲೆಯಲ್ಲಿ ಪಂಚಾಯತಿಯ ಕಾರ್ಯವೈಖರಿಯಲ್ಲಿ ಪಾಲ್ಗೊಂಡು, ಗ್ರಾಮೀಣಾಭಿವೃದ್ಧಿಗೆ ಸ್ಪಂದಿಸುವಂತೆ ಮಾಡುವ ಉದ್ದೇಶದಿಂದ ಸ್ಥಳೀಯ ಜನರಿಗೆ ಮೀಸಲಾತಿ ಮೂಲಕ ಅವಕಾಶ ನೀಡಲಾಗಿದೆ. ಇವನ್ನು ಸ್ಥಳೀಯ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳು, ಹಿಂದುಳಿದ ವರ್ಗಗಳು ಮತ್ತು ಮಹಿಳೆಯರು ಸೇರಿದಂತೆ ಶೋಷಣೆಗೆ ಒಳಗಾದ ಎಲ್ಲಾ ವರ್ಗದವರಿಗೆ ಮೀಸಲಾತಿಗೆ ಅವಕಾಶ ಕಲ್ಪಿಸಿದೆ.

## ಮೀಸಲಾತಿ ನೀತಿ :

ಮೀಸಲಾತಿ ಎಂದರೆ 'ಸಮಾನತೆಗಾಗಿ, ಸಮಾನ ಅವಕಾಶಗಳಿಗಾಗಿ ನಡೆಯುತ್ತಿರುವ ಮಾನವೀಯ ಹೋರಾಟ'ವಾಗಿದೆ. ಮೀಸಲಾತಿ ಎಂಬುದು ನಮ್ಮ ಸಂವಿಧಾನವು ರೂಪಿಸಿರುವ ಸೂತ್ರ ಮತ್ತು ತತ್ವ. ಸಮಾಜದಲ್ಲಿ ಅಸಮಾನತೆ, ಶೋಷಣೆಗಳು ಹೆಚ್ಚಾಗಿದ್ದಾಗ ಸ್ವಾತಂತ್ರ್ಯ ಎಂಬ ಪದಕ್ಕೆ ಅರ್ಥ ಸಿಗಬೇಕಾದರೆ ಮೀಸಲಾತಿ ಅತ್ಯಗತ್ಯ. ಮೀಸಲಾತಿ ಮೂಲಕವೇ ಸಮಾನತೆ ಮತ್ತು ಸಮಾನ ಅವಕಾಶ ಸಿಗಲು ಸಾಧ್ಯ. ಇದನ್ನೇ ಸ್ವಾತಂತ್ರ್ಯಾ ನಂತರ ಪ್ರಜಾಪ್ರಭುತ್ವವನ್ನು ಅಂಗೀಕರಿಸಿದ ಭಾರತ ಜಾತ್ಯತೀತ ರಾಷ್ಟ್ರವನ್ನು ರೂಪಿಸುವ ಗುರುತರವಾದ ಧ್ಯೇಯವಾಗಿ ಸಂವಿಧಾನದಲ್ಲಿ ಮೀಸಲಾತಿ ನೀತಿಯನ್ನು ಅಳವಡಿಸಿಲಾಯಿತು. ಸಾಮಾಜಿಕ ನ್ಯಾಯ ಹಾಗೂ ಸಮಾನತೆಗೆ ಎಲ್ಲ ಕ್ಷೇತ್ರಗಳಲ್ಲಿಯೂ ಎಲ್ಲಾ ಜಾತಿಗಳು ಪಾಲ್ಗೊಳ್ಳುವಿಕೆಯೇ ಮೀಸಲಾತಿ ನೀತಿ. ಸಮಾಜದಲ್ಲಿ ಸಮಾನತೆ ಸಾಧಿಸಿದಾಗ ಎಲ್ಲರ ಅಭಿವೃದ್ಧಿ ಸಾಧ್ಯ. ಸಮಾನತೆ ಸಾಧಿಸುವ ಮೂಲ ಗುರಿಯೇ ಮೀಸಲಾತಿ. ಇದರಿಂದ ಸರ್ವತೋಮುಖ ಅಭಿವೃದ್ದಿ ಹೊಂದಲು ಸಾಧ್ಯವಾಗುತ್ತದೆ.

ಏಕೆಂದರೆ, ನಮ್ಮ ಸಮಾಜವು ವೈವಿಧ್ಯಮಯಪೂರ್ಣವಾದದ್ದು. ಇಲ್ಲಿ ವಿವಿಧ ಜಾತಿ, ವಿವಿಧ ಧರ್ಮ, ವಿವಿಧ ವರ್ಗದ ಜನಾಂಗದವರಿದ್ದಾರೆ. ಈ ಎಲ್ಲಾ ವರ್ಗಗಳ ಹಿತಾಸಕ್ತಿಯನ್ನು ಕಾಪಾಡುವಂತಹ ಜವಾಬ್ದಾರಿಯನ್ನು ಪಂಚಾಯತ್ ರಾಜ್ ಸಂಸ್ಥೆಗಳ ಮೂಲಕ ಮಾಡಲು ಉದ್ದೇಶಿಸಿದೆ. ನಮ್ಮ ಸಮಾಜದಲ್ಲಿ ಕೇವಲ ಕೆಲವೇ ವರ್ಗದ ವ್ಯಕ್ತಿಗಳಿಗೆ ಅಧಿಕಾರವನ್ನು ನೀಡುವುದು ಪಂಚಾಯತ್ ರಾಜ್ ವ್ಯವಸ್ಥೆಯ ಉದ್ದೇಶವಲ್ಲ. ಬದಲಾಗಿ ಸಮಗ್ರ ಸಮಾಜದ ಎಲ್ಲಾ ಶ್ರೇಣಿಗಳ ಜನರಿಗೆ ಅಧಿಕಾರವನ್ನು ನೀಡುವುದೇ ಇವರ ಪ್ರಮುಖ ದಾರಿಯಾಗಿದೆ. ಇದನ್ನು ಪಂಚಾಯತ್ ರಾಜ್ ವ್ಯವಸ್ಥೆಯನ್ನು ಕಾರ್ಯಗತಗೊಳಿಸುವ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವ ಪರಿಶಿಷ್ಟ ಜಾತಿ ಮತ್ತು ವರ್ಗಗಳು, ಹಿಂದುಳಿದ ವರ್ಗಗಳು ಮತ್ತು ಮಹಿಳೆಯರು ಹಾಗೂ ಇನ್ನಿತರ ವರ್ಗಗಳಿಗೆ ಮೀಸಲಾತಿಯ ಅವಕಾಶ ಕಲ್ಪಿಸಿಕೊಟ್ಟಾಗ ಮಾತ್ರ ಅದು ನಿಜವಾದ ವಿಕೇಂದ್ರೀಕರಣವಾಗಲು ಸಾಧ್ಯವಾಗುತ್ತದೆ. ಸಮುದಾಯ ಒಂದು ಪಿರಮಿಡ್ ಇದ್ದಂತೆ. ಆ ರೀತಿಯ ವ್ಯವಸ್ಥೆಯಿದ್ದರೆ ಮಾತ್ರ ಸಮಾಜ ಸುಸ್ಥಿರವಾಗುತ್ತದೆ.

ಪಂಚಾಯತ್ ರಾಜ್ ವ್ಯವಸ್ಥೆಯ ಮೂಲಕ ನೀಡುವ ಮೀಸಲಾತಿಯಿಂದ ಹಲವಾರು ಪರಿಣಾಮಗಳು ಉಂಟಾಗುತ್ತವೆ. ಇದರಿಂದ ಸಮಾಜದಲ್ಲಿ ಸಾಮಾಜಿಕ ನ್ಯಾಯ ಒದಗಿಸಲು ಅವಕಾಶ ಮಾಡಿಕೊಡುತ್ತದೆ. ಮೀಸಲಾತಿಯಿಂದ ಸಮಾನತೆ ಉಂಟಾಗುತ್ತದೆ. ಸಮಾನತೆಯಿಂದ ಸಮಾಜ ಸರ್ವತೋಮುಖ ಅಭಿವೃದ್ಧಿ ಹೊಂದುತ್ತದೆ. ಸಮಾನತೆ ಆಧಾರದ ಮೇಲೆ ಹಕ್ಕುಗಳು ನ್ಯಾಯಸಮ್ಮತವಾಗಿ ವಿತರಣೆಯಾಗುತ್ತವೆ. ಸೌಲಭ್ಯಗಳಲ್ಲಿ ಹೆಚ್ಚು ಕಡಿಮೆಯಾದಾಗ ಘರ್ಷಣೆಗೆ ತುತ್ತಾಗಬಹುದು. ಇದನ್ನು ಮೀಸಲಾತಿಯಿಂದ ತಪ್ಪಿಸಬಹುದು ಹಾಗೂ ರಾಜಕೀಯ, ಶೈಕ್ಷಣಿಕ, ಆರ್ಥಿಕ ಕ್ಷೇತ್ರದಲ್ಲಿ ಎಲ್ಲಾ ವರ್ಗಗಳು ಪಾಲ್ಗೊಳ್ಳಲು ಅವಕಾಶಗಳು ದೊರೆಯುತ್ತದೆ.

## ಸಾಮಾಜಿಕ ನ್ಯಾಯ :

ಹಲವಾರು ವರ್ಷಗಳಿಂದ ಪಂಚಾಯತ್ ರಾಜ್ ವ್ಯವಸ್ಥೆಯ ಚೌಕಟ್ಟಿನೊಳಗೆ ಸಮಾಜದಿಂದ ದೂರೀಕರಿಸಲ್ಪಟ್ಟು ಶೋಷಣೆ ಹಾಗೂ ತುಳಿತಕ್ಕೊಳಪಟ್ಟಂತಹ ಮಹಿಳೆಯರು, ದುರ್ಬಲ ವರ್ಗಗಳು ಸಾಮಾಜಿಕ ನ್ಯಾಯದಿಂದ ವಂಚಿತರಾಗಿದ್ದರು. ಇವರನ್ನು ಪಂಚಾಯತ್ ರಾಜ್ ಆಡಳಿತ ವ್ಯವಸ್ಥೆಯ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವಂತೆ ಮಾಡುವ ಮೂಲಕ ಸಾಮಾಜಿಕ ನ್ಯಾಯವನ್ನು ಎತ್ತಿ ಹಿಡಿಯುವಂತಾಯಿತು. ಇಂತಹ ಕಾರ್ಯವನ್ನು ರಾಜಕೀಯ ಪ್ರಕ್ರಿಯೆಯ ಪ್ರತಿನಿಧಿತ್ವದಲ್ಲಿ ಅಂತಹ ವರ್ಗಗಳಿಗೆ ಮೀಸಲಾತಿ ನೀಡುವುದರಿಂದ ಸಮಾಜದಲ್ಲಿ ಸ್ಪಂದಿಸುವಂತಹ ಅಗತ್ಯತೆಯನ್ನು ನೆರವೇರಿಸಲಾಯಿತು. ಹೀಗಾಗಿ ಮೀಸಲಾತಿಯ ಮುಖಾಂತರ ಸಾಮಾಜಿಕ ನ್ಯಾಯ ನೀಡಿದ್ದರಿಂದ ಕಾಲಾಂತರದಲ್ಲಿ ಸರ್ವರಿಗೂ ಸದಾವಕಾಶಗಳು ಲಭ್ಯವಾಗಿ ಸಮಾನತೆ ಭಾವನೆ ಮೂಡುವಂತಾಯಿತು. ಅದಕ್ಕಾಗಿ ನಿಗದಿತ ವರಮಾನ ಇಲ್ಲದಿದ್ದಾಗ ಎಲ್ಲಾ ಜಾತಿಗಳಿಗೂ ಅವರವರ ಜನಸಂಖ್ಯೆಗೆ ಅನುಗುಣವಾಗಿ ಮೀಸಲಾತಿ ಕಲ್ಪಿಸುವುದರಿಂದ ಸಾಮಾಜಿಕ ನ್ಯಾಯ ಒದಗಿಸಿದಂತಾಗುತ್ತದೆ.

## ದೃಢ ನಿರ್ಧಾರ ಮತ್ತು ಅಭಿವೃದ್ಧಿ :

ಕರ್ನಾಟಕವು ಈ ನಿಟ್ಟಿನಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ ದುರ್ಬಲ ವರ್ಗಗಳಾದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳು, ಹಿಂದುಳಿದ ವರ್ಗಗಳು ಮತ್ತು ಮಹಿಳೆಯರಿಗೆ (ಲಿಂಗ ಮತ್ತು ಜಾತಿ ಆಧಾರದ ಮೇಲೆ) ಮೀಸಲಾತಿ ಕಲ್ಪಿಸಿ ಅವರಿಗೆ ಉತ್ತಮವಾದ ಪ್ರೇರಣೆ ಮತ್ತು ಉತ್ತೇಜನ ನೀಡುವುದರ ಮೂಲಕ ಅವರ ಸಾಮಾಜಿಕ ಮತ್ತು ರಾಜಕೀಯ ಘನತೆ ಗೌರವಗಳನ್ನು ಸಮಾಜದಲ್ಲಿ ಹೆಚ್ಚಿಸಿದೆ. ಸರ್ಕಾರದ ಈ ದೃಢ ನಿರ್ಧಾರದಿಂದ ಎಲ್ಲಾ ವರ್ಗಗಳು ಸಮಾಜದಲ್ಲಿ ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಅಭಿವೃದ್ದಿ ಹೊಂದಲು ಸಾಧ್ಯವಾಗಿದೆ. ಈ ಹಿಂದೆ ಸಮಾಜದಲ್ಲಿ ರಾಜಕೀಯವಾಗಿ ಕೆಲವೇ ಕೆಲವು ಮುಂದುವರೆದ ಜಾತಿ-ಜನಾಂಗಗಳು ಪ್ರಬಲವಾಗಿದ್ದು ಹಿಂದುಳಿದ ಮತ್ತು ದುರ್ಬಲ ವರ್ಗಗಳಿಗೆ ಯಾವುದೇ ಸ್ಥಾನಮಾನಗಳನ್ನು ಬಿಟ್ಟುಕೊಡದೇ ಒಂದು ರೀತಿಯ ದಬ್ಬಾಳಿಕೆ ನೀತಿಯನ್ನು ಅನುಸರಿಸುತ್ತಿದ್ದವು. ಆದರೆ ಸರ್ಕಾರ ತೆಗೆದುಕೊಂಡಿರುವ ಮೀಸಲಾತಿ ನೀತಿಯಿಂದ ರಾಜಕೀಯವಾಗಿ ವಂಚಿತರಾಗಿದ್ದ ಹಿಂದುಳಿದ ಮತ್ತು ದುರ್ಬಲ ವರ್ಗದವರು ಸ್ಥಾನಮಾನಗಳನ್ನು ಪಡೆದು ತಮ್ಮ ಜನರಲ್ಲಿ ಪ್ರಜ್ಞೆ ಮೂಡಿಸುವುದರ ಜೊತೆಗೆ ಅಭಿವೃದ್ಧಿಗಾಗಿ ಉತ್ತಮವಾದ ಕೆಲಸ ಕಾರ್ಯಗಳನ್ನು ರೂಪಿಸಿ ನಿರ್ಣಯ ತೆಗೆದುಕೊಳ್ಳುವ ಅವಕಾಶ ಸಿಕ್ಕಿದೆ. ಜೊತೆಗೆ ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರೂ ಸಹ ಈ ಅವಕಾಶಗಳಿಂದ ವಂಚಿತರಾಗಿದ್ದರೂ ಈ ಮೀಸಲಾತಿ ನೀತಿಯಿಂದ ಗ್ರಾಮೀಣ ಮಟ್ಟದಿಂದ ರಾಷ್ಟ್ರಮಟ್ಟದವರೆಗೂ ಅವರಿಗೆ ಉತ್ತಮ ಅವಕಾಶಗಳು ದೊರೆಯುವುದು ಸಾಧ್ಯವಾಗುತ್ತಿದೆ.

## ಕರ್ನಾಟಕದ ದಿಟ್ಟ ಪ್ರಯೋಗ :

ಕರ್ನಾಟಕದಲ್ಲಿ ರಾಜ್ಯ ಪುನರ್ವಿಂಗಡಣೆಯ ನಂತರ ಕಳೆದ ೪೦ ವರ್ಷಗಳಿಗೂ ಹೆಚ್ಚು ಕಾಲದಿಂದಲೂ ಮೂರು ಪಂಚಾಯತ್ ರಾಜ್ ಕಾಯಿದೆಗಳನ್ನು ಆಳವಡಿಸಿಕೊಳ್ಳುವ ಮೂಲಕ ವಿವಿಧ ಹಂತಗಳಲ್ಲಿ ಮೀಸಲಾತಿಯನ್ನು ನೀಡುತ್ತಾ ಬಂದಿರುವಲ್ಲಿ ದಿಟ್ಟ ಪ್ರಯೋಗದತ್ತ ಹೆಜ್ಜೆ ಇಟ್ಟಿದೆ. ಸ್ವಾತಂತ್ರ್ಯಪೂರ್ವದಲ್ಲಿನ ಕರ್ನಾಟಕ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಅಲ್ಪ ಪ್ರಮಾಣದ ಮೀಸಲಾತಿಯನ್ನು ನೀಡಲಾಗಿತ್ತು. ಇದನ್ನು ೧೯೨೬ರ ಜಿಲ್ಲಾ ಸ್ಥಳೀಯ ಮಂಡಳಿಗಳ ಅಧಿನಿಯಮದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳು ಮತ್ತು ಸ್ತ್ರೀಯರಿಗಾಗಿ ಸದಸ್ಯತ್ವವನ್ನು ಮೀಸಲಿಡಲಾಗಿತ್ತು. ನಂತರ ೧೯೬೬ರ ಗ್ರಾಮ ಪಂಚಾಯತ್ ಅಧಿನಿಯಮದಲ್ಲಿಯೂ

ಸ್ತ್ರೀಯರು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ ಸದಸ್ಯತ್ವವನ್ನು ಮೀಸಲಿಡಲಾಗಿತ್ತು. ರಾಯಲ್ ಕಮೀಷನ್ ಶಿಫಾರಸ್ಸುಗಳ ಆಧಾರದ ಮೇಲೆ ೧೯೩೧ರಲ್ಲಿ ಜಾರಿಗೆ ಬಂದ ನಿಯಮದಲ್ಲೂ ಆಂಗ್ಲೋ ಇಂಡಿಯನ್ನರು, ಹರಿಜನರು ಮತ್ತು ಮಹಿಳೆಯರಿಗಾಗಿ ಸ್ಥಾನಗಳನ್ನು ಮೀಸಲಿಡಲಾಗಿತ್ತು.

## ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೫೯ :

ಕರ್ನಾಟಕ ಏಕೀಕರಣದ ನಂತರ ನವಕರ್ನಾಟಕದ ರಾಜ್ಯ ನಿರ್ಮಾಣವಾದ ಹೊಸದರಲ್ಲಿ ಅಂದರೆ ಪೂರ್ಣಸ್ವರೂಪ ಹಾಗೂ ಏಕರೂಪದ ಪಂಚಾಯತ್ ರಾಜ್ ಅಧಿನಿಯಮ "ಕರ್ನಾಟಕ ಸ್ಥಳೀಯ ಮಂಡಳಿಗಳ ಮತ್ತು ಗ್ರಾಮ ಪಂಚಾಯತಿಗಳ ಕಾಯ್ದೆ ೧೯೫೯"ರ ಕಾಯಿದೆಯು ೧೯೬೦ ರಿಂದ ಜಾರಿಗೆ ಬಂದಿತು. ಈ ಕಾಯ್ದೆಯ ಪ್ರಕಾರ ಗ್ರಾಮಮಟ್ಟದಲ್ಲಿ ಗ್ರಾಮ ಪಂಚಾಯತಿಗಳು, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಲಿಗಳು ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಅಭಿವೃದ್ಧಿ ಸಮಿತಿಗಳು ರೂಪಗೊಂಡವು. ಈ ಮೂರು ಶ್ರೇಣಿಯ ಆಡಳಿತ ವ್ಯವಸ್ಥೆಯಲ್ಲಿ ಕೇವಲ ಗ್ರಾಮ ಪಂಚಾಯತಿಗಳು ಮತ್ತು ತಾಲ್ಲೂಕು ಅಭಿವೃದ್ಧಿ ಮಂಡಲಿಗಳು ಚುನಾಯಿತ ಪ್ರತಿನಿಧಿಗಳನ್ನು ಹೊಂದಿದ್ದವು. ಜಿಲ್ಲಾ ಅಭಿವೃದ್ಧಿ ಸಮಿತಿಗಳು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಲಹಾ ಸಂಸ್ಥೆಗಳಾಗಿದ್ದವು. ಈ ಅಧಿನಿಯಮದ ಪ್ರಕಾರ ೧೯೭೯ರ ಮಾರ್ಚ್ ಅಂತ್ಯದ ವೇಳೆಗೆ ೨೬,೮೨೬ ಗ್ರಾಮಗಳಿಗೆ ೧೯೨ ಪಟ್ಟಣ ಪಂಚಾಯತಿಗಳೂ ಸೇರಿದಂತೆ ೮,೨೨೪ ಗ್ರಾಮಪಂಚಾಯತಿಗಳು, ೧೭೫ ತಾಲ್ಲೂಕು ಅಭಿವೃದ್ಧಿ ಮಂಡಲಿಗಳು, ೧೯ ಜಿಲ್ಲಾ ಅಭಿವೃದ್ಧಿ ಸಮಿತಿಗಳು ಕಾರ್ಯನಿರ್ವಹಿಸುತ್ತಿದ್ದವು. ಗ್ರಾಮ ಮತ್ತು ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಅವರ ಜನಸಂಖ್ಯೆಯ ಆಧಾರದ ಮೇಲೆ ಸ್ಥಾನಗಳನ್ನು ಹಾಗೂ ಎರಡು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಲಾಗಿತ್ತು. ಜಿಲ್ಲಾ ಅಭಿವೃದ್ಧಿ ಸಮಿತಿಗೆ ಒಬ್ಬ ಪರಿಶಿಷ್ಟ ಜಾತಿ, ಒಬ್ಬ ಪರಿಶಿಷ್ಟ ಪಂಗಡ ಮತ್ತು ಒಬ್ಬ ಮಹಿಳೆಯನ್ನು ನೇಮಿಸಲಾಗಿತ್ತು. ಪ್ರಾರಂಭದಲ್ಲಿ ನಾಲ್ಕು ವರ್ಷ ಇದ್ದ ಪಂಚಾಯತ್ ಸದಸ್ಯರ ಅಧಿಕಾರವನ್ನು ೫ ವರ್ಷಕ್ಕೆ ಹೆಚ್ಚಿಸಲಾಯಿತು. ಈ ಪ್ರಾರಂಭದ ಪಂಚಾಯತ್ ರಾಜ್ ವ್ಯವಸ್ಥೆಯನ್ನು ಸುಮಾರು ೨೫ ವರ್ಷಗಳ ಸುದೀರ್ಘ ಕಾಲ (೧೯೬೦-೧೯೮೫) ಅಂದರೆ ೧೯೮೩ರ ವರೆಗೂ ಮುಂದುವರೆಯಿತು.

## ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ ೧೯೮೩

## ವಿಕೇಂದ್ರೀಕರಣ ವ್ಯವಸ್ಥೆಯಲ್ಲಿ ಹೊಸ ಶಕೆಯ ಆರಂಭ :

ಪ್ರಥಮ ಪಂಚಾಯತ್ ರಾಜ್ ವ್ಯವಸ್ಥೆಯ ಪರಿಕಲ್ಪನೆಗಿಂತ ತೀರ ಭಿನ್ನವಲ್ಲದಿದ್ದರೂ ಮೊದಲಿಗಿಂತಲೂ ಹೆಚ್ಚು ಸಕ್ರಿಯವಾದ, ಜನತೆಯ ಸಹಭಾಗಿತ್ವವನ್ನು ಹೆಚ್ಚಿಸಿ, ಅಧಿಕಾರ ವಿಕೇಂದ್ರೀಕರಣವನ್ನು ವಿಸ್ತರಿಸಿ, ಗ್ರಾಮೀಣ ಪ್ರದೇಶಗಳ ಸರ್ವಾಂಗೀಣ ಪ್ರಗತಿಗೆ ಹೊಸ ದಿಕ್ಕನ್ನು ತೋರಿಸಿ, ಪ್ರಜಾಪ್ರಭುತ್ವದ ತಳಹದಿಯ ಮೇಲೆ ಹೊಸ ವ್ಯವಸ್ಥೆಯ ಹುಟ್ಟಿಗೆ ಚಾಲನೆ ನೀಡುವ ಸಲುವಾಗಿ ಅಸ್ತಿತ್ವಕ್ಕೆ ಬಂದ ವ್ಯವಸ್ಥೆಯೇ "ಕರ್ನಾಟಕ ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯತ್ ಸಮಿತಿ, ಮಂಡಲ್ ಪಂಚಾಯತ್ ಮತ್ತು ನ್ಯಾಯ ಪಂಚಾಯತ್ ಅಧಿನಿಯಮ ೧೯೮೩". ಈ ಕಾಯ್ದೆಯು ೧೦ ಜುಲೈ ೧೯೮೫ರಂದು ರಾಷ್ಟ್ರಪತಿ ಸಮ್ಮತಿಯೊಂದಿಗೆ ೧೪ ಆಗಸ್ಟ್ ೧೯೮೫ರಂದು ಜಾರಿಗೆ ಬಂದಿತು. ಈ ಅಧಿನಿಯಮವನ್ನು ಕೊಂಡಜ್ಜಿ ಬಸಪ್ಪ ಸಮಿತಿ ಮತ್ತು ಅಶೋಕ್ ಮೆಹ್ತಾ ಸಮಿತಿಗಳ ಶಿಫಾರಸ್ಸುಗಳನ್ನು ಗಮನದಲ್ಲಿಟ್ಟುಕೊಂಡು ಆಗಿನ ರಾಮಕೃಷ್ಣ ಹೆಗಡೆ ನೇತೃತ್ವದ ಜನತಾ ಸರ್ಕಾರ (೧೯೮೩-೮೮) ಕಾರ್ಯಗತ ಮಾಡಿತ್ತು.

ಈ ಕಾಯಿದೆಗನುಸಾರವಾಗಿ ೨, ಜನವರಿ ೧೯೮೭ರಲ್ಲಿ ಪಂಚಾಯತ್ ಸಂಸ್ಥೆಗಳಿಗೆ ಚುನಾವಣೆ ನಡೆದು ಮೂರು ಶ್ರೇಣಿಯ ಅಭಿವೃದ್ಧಿ ಪರ ಸಂಸ್ಥೆಗಳಾದ ಮಂಡಲ ಪಂಚಾಯತಿಗಳು ಗ್ರಾಮಮಟ್ಟದಲ್ಲಿ, ತಾಲ್ಲೂಕು ಪಂಚಾಯತಿ ಸಮಿತಿಗಳು ತಾಲ್ಲೂಕು ಮಟ್ಟದಲ್ಲಿ ಮತ್ತು ಜಿಲ್ಲಾ ಪರಿಷತ್‌ಗಳು ಜಿಲ್ಲಾ ಮಟ್ಟದಲ್ಲಿ ಸ್ಥಾಪನೆಗೊಂಡವು. ಈ ಹೊಸ ವ್ಯವಸ್ಥೆಯಲ್ಲಿ ಮಂಡಲ ಪಂಚಾಯತಿ ಮತ್ತು ಜಿಲ್ಲಾ ಪರಿಷತ್‌ಗಳಿಗೆ ಮಾತ್ರ ಚುನಾಯಿತ ಪ್ರತಿನಿಧಿಗಳಿದ್ದರು. ತಾಲ್ಲೂಕು ಪಂಚಾಯತಿ ಸಮಿತಿಯು ಇವೆರಡೂ ಪರಿಷತ್‌ಗಳ

ನಡುವೆ ಸಮನ್ವಯ ಸಮಿತಿಯಾಗಿತ್ತು. ರಾಜ್ಯದ ಅಭಿವೃದ್ಧಿ ಕಾರ್ಯಗಳನ್ನು ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯತಿಗಳ ಮೂಲಕವೇ ಕಾರ್ಯಗತ ಮಾಡಲಾಗುತ್ತಿತ್ತು. ಒಟ್ಟು ಅಭಿವೃದ್ಧಿಯ ವೆಚ್ಚದ ಶೇ.೮೦ ರಷ್ಟನ್ನು ಜಿಲ್ಲಾ ಪರಿಷತ್‌ಗಳಿಗೆ ಮೀಸಲಿಡಲಾಗಿತ್ತು.

ಹಿಂದಿನ ಗ್ರಾಮಪಂಚಾಯತಿಗೆ (೧೯೫೯) ಹೋಲಿಸಿದರೆ ಮಂಡಲ ಪಂಚಾಯತಿಯ ಕಾರ್ಯವ್ಯಾಪ್ತಿ ಹೆಚ್ಚು ವಿಸ್ತೃತವಾಗಿತ್ತು. ಸಾಮಾನ್ಯವಾಗಿ ೮ ರಿಂದ ೧೨ ಸಾವಿರ ಜನಸಂಖ್ಯೆ ಒಳಗೊಂಡ, ನಿಕಟ ಸಂಪರ್ಕ ಹೊಂದಿದ ಒಂದು ಗ್ರಾಮ ಸಮುದಾಯ ಆಗಿತ್ತು. ಅವುಗಳನ್ನು ೧೯೯೨ ರಲ್ಲಿ ರದ್ದು ಮಾಡುವ ಮೊದಲು ರಾಜ್ಯದಲ್ಲಿ ಸುಮಾರು ೨,೫೦೦ ಇಂಥ ಸಂಸ್ಥೆಗಳಿದ್ದವು.

## ೧೯೯೩ರ ಭಾರತ ಸಂವಿಧಾನದ ೭೩ನೇ ತಿದ್ದುಪಡಿ :

ಭಾರತದಲ್ಲಿ ಸ್ವಾತಂತ್ರ್ಯಾನಂತರ ಸಾಮುದಾಯಿಕ ಅಭಿವೃದ್ಧಿ ಕಾರ್ಯಕ್ರಮಗಳ ವೈಫಲ್ಯಗಳೊಂದಿಗೆ, ಬಲವಂತರಾಯ್ ಮೆಹ್ತಾ ಸಮಿತಿಯ ಶಿಫಾರಸ್ಸಿನ ಮೇರೆಗೆ ೧೯೫೯ರಲ್ಲಿ ಜಾರಿಗೆ ಬಂದಿದ್ದ ಪಂಚಾಯತ್ ರಾಜ್ ವ್ಯವಸ್ಥೆಯು ಸುಮಾರು ವರ್ಷಗಳ ಕಾಲ ಅನೇಕ ಏಳು-ಬೀಳುಗಳನ್ನು ಕಾಣುವುದರ ಜೊತೆಗೆ, ಅಶೋಕ್ ಮೆಹ್ತಾ ಸಮಿತಿಯ ಶಿಫಾರಸ್ಸಿನ ಅಂಶಗಳ ಆಧಾರದ ಮೇಲೆ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ವ್ಯಾಪಕವಾದ ಬದಲಾವಣೆಯನ್ನು ಕಾಣದೇ ಹಲವಾರು ಲೋಪದೋಷಗಳು ಕಂಡುಬಂದ ಪ್ರಯುಕ್ತವಾಗಿ ೧೯೯೩ರಲ್ಲಿ ಭಾರತ ಸಂವಿಧಾನದ ೭೩ನೇ ತಿದ್ದುಪಡಿಯನ್ನು ದಿವಂಗತ ಪ್ರಧಾನಿ ರಾಜೀವಗಾಂಧಿಯವರ ಆಶಯಗಳೊಂದಿಗೆ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಪುನಃಶ್ಚೇತನ ನೀಡಲಾಯಿತು. ಇದು ರಾಷ್ಟ್ರದಲ್ಲಿ ಸಾಂವಿಧಾನಿಕ ರೂಪವನ್ನು ನೀಡಿದ ಕ್ರಾಂತಿಕಾರಿ ಹೆಜ್ಜೆಯಾಗಿದೆ. ಈ ನೂತನ ಕಾಯಿದೆಯನುಸಾರವಾಗಿ ಜಾರಿಗೆ ಬಂದ ರಾಜ್ಯಗಳ ಪೈಕಿ ಕರ್ನಾಟಕವು ಇಡೀ ದೇಶದಲ್ಲೇ ಪ್ರಥಮ ರಾಜ್ಯವಾಗಿದೆ.

## ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩ :

ಕರ್ನಾಟಕದಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳನ್ನು ಬಲಪಡಿಸಲು, ಸೂಕ್ತ ಮಟ್ಟದಲ್ಲಿ ಆಡಳಿತ ವಿಕೇಂದ್ರೀಕರಣದ ಮೂಲಕ ಸಂಸ್ಥೆಗಳ ಕಾರ್ಯವಿಧಾನ ಉತ್ತಮ ಪಡಿಸುವ ಕಾರಣಕ್ಕಾಗಿ, ಮೀಸಲಾತಿಯ ಮೂಲ ಉದ್ದೇಶವನ್ನು ಇನ್ನೂ ಅರ್ಥಪೂರ್ಣವಾಗಿಸುವ ಸದುದ್ದೇಶದಿಂದ ಹಾಗೂ ಗ್ರಾಮೀಣಾಭಿವೃದ್ಧಿಯಲ್ಲಿ ಜನರು ಹೆಚ್ಚಾಗಿ ಪಾಲ್ಗೊಳ್ಳುವಂತೆ ಮಾಡುವ ಉದ್ದೇಶದಿಂದ ಈ ಹೊಸ ಪಂಚಾಯತಿ ಕಾಯ್ದೆಯನ್ನು ೧೦ಮೇ ೧೯೯೩ರಲ್ಲಿ ಜಾರಿಗೆ ತರಲಾಯಿತು. ಈ ನೂತನ ಪಂಚಾಯತಿಯ ಕಾಯಿದೆಗನುಸಾರವಾಗಿ ಗ್ರಾಮಮಟ್ಟದಲ್ಲಿ ಗ್ರಾಮ ಪಂಚಾಯತಿಗಳು, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯತಿಗಳು ಮತ್ತು ಜಿಲ್ಲಾ ಹಂತದಲ್ಲಿ ಜಿಲ್ಲಾ ಪಂಚಾಯತಿಗಳನ್ನು ರಚಿಸಲಾಯಿತು. ೭೩ನೇ ತಿದ್ದುಪಡಿ ಪ್ರಕಾರ ಮೂರು ಶ್ರೇಣಿಗಳಲ್ಲಿ ಬರುವ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಶೇ.೨೩, ಹಿಂದುಳಿದ ವರ್ಗ ಮತ್ತು ಮಹಿಳೆಯರಿಗೆ ಶೇ.೩೩ರಷ್ಟು ಮೀಸಲಾತಿಯನ್ನು ನೀಡುವ ಮೂಲಕ ಕ್ರಾಂತಿಕಾರೀ ಸಾಮಾಜಿಕ ನ್ಯಾಯ ಒದಗಿಸಲಾಯಿತು. ಅಲ್ಲದೇ ಈ ವರ್ಗಗಳ ಸದಸ್ಯತ್ವ ಸ್ಥಾನಗಳ ಜೊತೆಗೆ ಅಧ್ಯಕ್ಷ-ಉಪಾಧ್ಯಕ್ಷರ ಸ್ಥಾನಗಳಿಗೂ ಮೀಸಲಾತಿಯನ್ನು ನೀಡಲಾಯಿತು.

ಈ ವೇಳೆಗೆ ೧೯೯೪ರಲ್ಲಿ ಹಿಂದುಳಿದ ವರ್ಗದವರ ಪೈಕಿ ಹಿಂದಳಿದ 'ಎ' ಮತ್ತು ಹಿಂದುಳಿದ 'ಬಿ' ವರ್ಗದ ಸಮುದಾಯಗಳಿಗೆ ಮೀಸಲಾತಿ ಸೌಲಭ್ಯವನ್ನು ಕಲ್ಪಿಸಿದರು. ಇದರಿಂದ, ಮೂರು ಹಂತದ ಸಂಸ್ಥೆಗಳಲ್ಲಿ ಸಮಾಜದ ಎಲ್ಲಾ ಜನರು, ಹಿಂದುಳಿದವರು, ಆರ್ಥಿಕವಾಗಿ ದುರ್ಬಲರು, ಮಹಿಳೆಯರು ಅವಕಾಶದಿಂದ ವಂಚಿತರಾಗದೇ ಮೀಸಲಾತಿ ಸೌಲಭ್ಯವನ್ನು ಬಳಸಿಕೊಂಡು ಅಧಿಕಾರಕ್ಕೆ ಬರಲು ಅವಕಾಶ ಮಾಡಿಕೊಡಲಾಗಿತ್ತು. ಪಂಚಾಯತಿಯ ಅಧಿಕಾರಾವಧಿ ೫ ವರ್ಷಗಳಾಗಿದ್ದರೂ ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಸ್ಥಾನಗಳ ಅವಧಿಯನ್ನು ೧೯೯೫ರಲ್ಲಿ ೨೦ ತಿಂಗಳುಗಳಿಗೆ ನಿಗದಿಪಡಿಸಿದ್ದರಿಂದ ಮೀಸಲಾತಿ ಪ್ರಕ್ರಿಯೆಯು ಶಿಥಿಲವಾಯಿತು. ಯಾವ ವರ್ಗದ ಜನರಿಗೆ ಸಾಮಾಜಿಕ ನ್ಯಾಯದ ಸ್ಥಿರತೆ ಸಿಗಬೇಕೋ ಅದು ಸಿಗದಂತಾಗಲು ಈ ರೀತಿ ಅವಧಿಯನ್ನು ಮೊಟಕುಗೊಳಿಸಿದ ಕಾರಣ. ಇದರಿಂದಾಗಿ ಮೂಲ ಉದ್ದೇಶ ಈಡೇರಲಿಲ್ಲ.

೧೯೯೧ರ ಜನಗಣತಿಯಂತೆ ಹಿಂದಿನ ೨೪೬೯ ಮಂಡಲ ಪಂಚಾಯತಿಗಳ ಬದಲಾಗಿ ೧೯೯೩ರ ಡಿಸೆಂಬರ್‌ನ ಕೊನೆಯಲ್ಲಿ ೫೬೪೫ ಗ್ರಾಮ ಪಂಚಾಯತಿಗಳಿಗೆ ಚುನಾವಣೆ ನಡೆಸಲಾಯಿತು. ಒಟ್ಟು ೭೯,೮೬೫ ಸ್ಥಾನಗಳ ಪೈಕಿ ೨೩,೪೫೪ ಮಹಿಳೆಯರಿಗೆ

ಮೀಸಲಿಡಲಾಗಿತ್ತು. ಇವುಗಳ ಚುನಾಯಿತರ ಸಂಖ್ಯೆ ಸುಮಾರು ೮೦,೦೦೦. ಅದರಲ್ಲಿ ಸುಮಾರು ೨೩,೪೫೪ ಮಹಿಳೆಯರು ಇದ್ದರು. ತಾಲ್ಲೂಕು ಪಂಚಾಯತಿಗಳಿಗೆ ೩,೩೪೦ ಅಭ್ಯರ್ಥಿಗಳು, ಜಿಲ್ಲಾ ಪರಿಷತ್‌ಗಳಿಗೆ ೯೧೯ ಅಭ್ಯರ್ಥಿಗಳು ಆಯ್ಕೆಯಾದರು.

೧೯೯೩ರ ಹೊಸ ಕಾಯಿದೆಯಲ್ಲಿ ಜಿಲ್ಲಾ ಯೋಜನಾ ಸಮಿತಿ, ಹಣಕಾಸು ಆಯೋಗ ಮತ್ತು ಶಾಶ್ವತ ಚುನಾವಣಾ ಆಯೋಗಗಳ ರಚನೆಗೆ ಅವಕಾಶ ಮತ್ತು ಗ್ರಾಮಸಭೆಯನ್ನು ಹೆಚ್ಚು ಬಲಪಡಿಸುವುದು, ಆಡಳಿತದಲ್ಲಿ ಪಾರದರ್ಶಕತೆ ಮತ್ತು ಹೊಣೆಗಾರಿಕೆಯನ್ನು ತರುವುದು, ಪ್ರತಿ ಐದು ವರ್ಷಕ್ಕೊಮ್ಮೆ ಚುನಾವಣೆ ನಡೆಸುವುದು, ನಾಮಕರಣ ವ್ಯವಸ್ಥೆಯನ್ನು ಕೈಬಿಡುವುದು, ಗ್ರಾಮ ಪಂಚಾಯತಿಗೆ ವಾರ್ಷಿಕ ಒಂದು ಲಕ್ಷ ಅನುದಾನ ನೀಡುವುದು, ಪ್ರತಿ ಹಂತಗಳಲ್ಲಿಯೂ ಗರಿಷ್ಠ ಮೀಸಲಾತಿ ಪ್ರಮಾಣವನ್ನು ಸದಸ್ಯ ಸ್ಥಾನಗಳ ಜೊತೆಗೆ ಪದಾಧಿಕಾರಿಗಳ ಹುದ್ದೆಗಳಿಗೆ ಮೀಸಲಿಡುವುದು. ಇತ್ಯಾದಿ ಮಹತ್ವದ ಅಂಶಗಳನ್ನು ನಿರೂಪಿಸಲಾಗಿದೆ. ಈ ನಿಟ್ಟಿನಲ್ಲಿ ಪ್ರಸ್ತುತ ಕರ್ನಾಟಕವು ವಿಕೇಂದ್ರೀಕರಣ ವ್ಯವಸ್ಥೆಗೆ ಇನ್ನೂ ಹೆಚ್ಚಿನ ಪ್ರಾಶಸ್ತ್ಯ ನೀಡಿ ದಿವಂಗತ ರಾಜೀವ್ ಗಾಂಧಿ ಅವರ ಕನಸಿನ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಹೊಸ ಪದ್ಧತಿಯನ್ನು ಜಾರಿಗೆ ತಂದು ಅನುಷ್ಠಾನಗೊಳಿಸುವಲ್ಲಿ ಇಡೀ ರಾಷ್ಟ್ರಕ್ಕೆ ಮಾದರಿ ಎನಿಸಿಕೊಂಡಿದೆ. ಅವುಗಳಲ್ಲಿ ಗ್ರಾಮ ಪಂಚಾಯತಿಗಳಿಗೆ ನೇರ ಹಣ ಬಿಡುಗಡೆಗೆ ಕ್ರಮ ಮತ್ತು ಪಂಚಾಯತಿಯನ್ನು ಆರ್ಥಿಕವಾಗಿ ಸದೃಢಗೊಳಿಸುವಿಕೆ, ಜನಪ್ರತಿನಿಧಿಗಳ ಸಾಮರ್ಥ್ಯ ನಿರ್ವಹಣೆ, ಚಟುವಟಿಕೆ ನಕ್ಷೆ, ಯೋಜನೆಗಳ ಸರಳೀಕರಣ ಮತ್ತು ತರ್ಕಬದ್ಧಗೊಳಿಸುವಿಕೆ, ಮೂರು ಹಂತಗಳಿಗೂ ಮೀಸಲಾತಿ ನಿರ್ವಹಣೆ, ಮಹಿಳೆಯರ ಸಶಕ್ತೀಕರಣ, ಗ್ರಾಮ ಪಂಚಾಯತಿಗಳಿಗೆ ೫ ಲಕ್ಷ ವಾರ್ಷಿಕ ಅನುದಾನ ನೀಡಿಕೆ ಮತ್ತು ಬೇಲೂರು ಘೋಷಣೆ (ಜನವರಿ ೨೩, ೨೦೦೪ರಂದು ಧಾರವಾಡ ಜಿಲ್ಲೆಯ ಬೇಲೂರಿನಲ್ಲಿ ನಡೆದ ರಾಜ್ಯಮಟ್ಟದ ಪಂಚಾಯತ್ ರಾಜ್ ಸಮಾವೇಶ) ಯ ಕಾರ್ಯಾನುಷ್ಠಾನಗೊಳಿಸುವಿಕೆ ಇನ್ನಿತರ ಮಹತ್ತರವಾದ ವಿಷಯಗಳನ್ನು ಆರ್ಥಿಕ ಮತ್ತು ಆಡಳಿತಾತ್ಮಕ ವಿಕೇಂದ್ರೀಕರಣದ ಮುಖಾಂತರ ಪಂಚಾಯತ್ ರಾಜ್ ಸಂಸ್ಥೆಗಳನ್ನು ಪ್ರಗತಿಪರವಾಗಿ ಸಶಕ್ತಗೊಳಿಸಲಾಗುತ್ತಿದೆ.

## ಸಮಾರೋಪ :

ಪಂಚಾಯತ್ ರಾಜ್ ಆಡಳಿತ ಸಂಸ್ಥೆಗಳಲ್ಲಿ ಒದಗಿಸುವ ಮೀಸಲಾತಿಯನ್ನು ಅನುಷ್ಠಾನಗೊಳಿಸುವ ಕಾರ್ಯ ವೈಖರಿಯಲ್ಲಿ ಕರ್ನಾಟಕವು ದಿಟ್ಟ ಹೆಜ್ಜೆ ಇಟ್ಟಿದೆ. ಇದರಿಂದಾಗಿ ಮೂರು ಹಂತಗಳ ಪಂಚಾಯತಿಯ ಸದಸ್ಯರುಗಳಲ್ಲಿ ನಾಯಕತ್ವ ರೂಪಿಸುವ ಪ್ರಯತ್ನ ಬೇರು ಮಟ್ಟದಿಂದ ಆರಂಭಗೊಳ್ಳಲು ಸಾಧ್ಯವಾಗುತ್ತಿದೆ. ಇದು ವಿಧಾನಸಭೆ ಮತ್ತು ಲೋಕಸಭೆಯವರೆಗೂ ಸಂಪರ್ಕ ಸೇತುವೆಯಾಗಿ ಕಾರ್ಯ ನಿರ್ವಹಿಸುವುದರ ಜೊತೆಗೆ ಸದಸ್ಯರುಗಳಲ್ಲಿ ನಿರ್ಧಾರ ಕೈಗೊಳ್ಳುವ ಸ್ವರೂಪದಲ್ಲಿ ಬದಲಾವಣೆಗಳು ಕಂಡುಬರುತ್ತಿದೆ. ಪಂಚಾಯತಿಯ ಮೀಸಲಾತಿ ಸೌಲಭ್ಯದಿಂದ ಉತ್ತೇಜಿತರಾದ ಮಹಿಳೆಯರಿಂದ ಈಗ ವಿಧಾನಸಭೆ ಮತ್ತು ಲೋಕಸಭೆಗಳಲ್ಲೂ ಸೂಕ್ತ ಪ್ರಾತಿನಿಧ್ಯ ನೀಡಬೇಕೆಂಬ ಕೂಗು ಹೆಚ್ಚುತ್ತಿದೆ. ಅಲ್ಲದೇ ಮಹಿಳೆಯರು ಸೇರಿದಂತೆ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಹಾಗೂ ಹಿಂದುಳಿದ ವರ್ಗಗಳಲ್ಲಿನ ಪರಿಸ್ಥಿತಿಗಳು ಸುಧಾರಣೆಗೊಳ್ಳಲು ಸಾಧ್ಯವಾಗುತ್ತಿದೆ.

ಪಂಚಾಯತಿಯಲ್ಲಿ ನೀಡಿರುವ ಮೀಸಲಾತಿಯಿಂದ ಇಷ್ಟೆಲ್ಲಾ ಪರಿವರ್ತಿತನೆಯಾಗುತ್ತಿದ್ದರೂ ರಾಜಕೀಯ ಅನುಭವದ ಕೊರತೆ, ಅವಿದ್ಯಾವಂತ ಸದಸ್ಯರಿಂದ ದಕ್ಷ ಆಡಳಿತ ನಡೆಸಲು ಸಾಧ್ಯವಿಲ್ಲ. ಎಂಬ ಮಾತು ಕೇಳಿ ಬರುತ್ತಿದೆ. ಆದರೆ ಸದಸ್ಯರು ಹೆಚ್ಚಿನ ಕಾಳಜಿವಹಿಸಿ ಉತ್ತಮ ರೀತಿಯಲ್ಲಿ ತರಬೇತಿಗಳನ್ನು ಪಡೆದು ಪಂಚಾಯತಿ ಆಡಳಿತ ವ್ಯವಸ್ಥೆಯ ಅರಿವನ್ನು ಪಡೆದು ಅವಕಾಶವನ್ನು ಸದುಪಯೋಗಪಡಿಸಿಕೊಳ್ಳಬೇಕು. ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರು ಪಂಚಾಯತಿಯಲ್ಲಿ ಪ್ರವೇಶಿಸಲು ಹಿಂಜರಿಯುತ್ತಾರೆ. ಈ ಮನಃಸ್ಥಿತಿ ಬದಲಾಗಬೇಕು. ಎಲ್ಲರೂ ತಮ್ಮ ಹಕ್ಕು ಮತ್ತು ಜವಾಬ್ದಾರಿಗಳನ್ನು ಅರಿತು ವಿಕೇಂದ್ರೀಕೃತ ಆಡಳಿತ ವ್ಯವಸ್ಥೆಯಲ್ಲಿ ಪಾಲ್ಗೊಳ್ಳಬೇಕು. ಈಗ ನೀಡಿರುವ ಮೀಸಲಾತಿಯನ್ನು ಸದುಪಯೋಗಪಡಿಸಿಕೊಳ್ಳಲು ಚುನಾವಣೆಯಲ್ಲಿ ಸ್ಪರ್ಧಿಸಿ, ಆಯ್ಕೆಯಾಗಿ ಉತ್ತಮ ಕೆಲಸ ಕಾರ್ಯಗಳನ್ನು ನಿರ್ವಹಿಸಬೇಕು. ಪಂಚಾಯತಿಯ ಸದಸ್ಯರುಗಳಿಗೆ ಕೇವಲ ಮೀಸಲಾತಿ ನೀಡುತ್ತಿರುವುದರಿಂದ ಅವರ ಸಮಸ್ಯೆಗಳು ಇತ್ಯರ್ಥವಾಗುವುದಿಲ್ಲ. ಬದಲಿಗೆ ಮೀಸಲಾತಿ ಸೌಕರ್ಯಗಳನ್ನು ಬಳಸಿಕೊಳ್ಳುವ ಅರಿವು ಸದಸ್ಯರಲ್ಲಿ ಬರಬೇಕು. ಇಲ್ಲದಿದ್ದರೆ ಇಂತಹ ಎಷ್ಟು ಮೀಸಲಾತಿ ನೀಡಿದರೂ ಸಹ ಪ್ರಯೋಜನವಾಗುವುದಿಲ್ಲ. ಆದ್ದರಿಂದ ನೀಡಿರುವ ಮೀಸಲಾತಿಯಿಂದ ಗ್ರಾಮ ಜೀವನದ, ಜನಸಾಮಾನ್ಯರ, ದುರ್ಬಲರ, ಹಿಂದುಳಿದವರ, ಮಹಿಳೆಯರ ಮತ್ತು ಅಸಂಘಟಿತರ ಬಾಳಿನ ದಾರಿದೀಪವಾಗಬೇಕು.

ಅವರಲ್ಲಿ ಜೀವನೋತ್ಸಾಹವನ್ನು ತುಂಬುವುದರ ಜೊತೆಗೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಮಾನತೆಯಲ್ಲಿ ಸುಧಾರಣೆ ತರಬೇಕು. ಈ ನಿಟ್ಟಿನಲ್ಲಿ ಸರ್ಕಾರ ಕಾರ್ಯಪ್ರವೃತ್ತವಾಗಬೇಕು.

ಒಟ್ಟಾರೆ ಪ್ರಜಾಪ್ರಭುತ್ವದ ನೆಲೆಗಟ್ಟಿನ ಅಧಿಕಾರ ವಿಕೇಂದ್ರೀಕರಣದ ವ್ಯಾಪ್ತಿಯಲ್ಲಿ ಮೂರು ಹಂತಗಳ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಎಲ್ಲಾ ಜಾತಿ, ಜನಾಂಗಗಳಿಗೂ ಲಿಂಗ ಮತ್ತು ಜಾತಿ ಆಧಾರದ ಮೇಲೆ ಮೀಸಲಾತಿ ಕಲ್ಪಿಸಿರುವುದರಿಂದ ಎಲ್ಲಾ ವರ್ಗಗಳು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಮುಂದುವರಿಯಲು ಸಾಧ್ಯವಾಗುತ್ತದೆ. ಈ ವ್ಯವಸ್ಥೆಗೆ ಪೂರಕವಾದ ಆರ್ಥಿಕ ಮತ್ತು ಆಡಳಿತಾತ್ಮಕ ಅಧಿಕಾರ ವಿಕೇಂದ್ರೀಕರಣವಾಗದಿದ್ದರೆ ಬರೀ ರಾಜಕೀಯ ವಿಕೇಂದ್ರೀಕರಣದಿಂದ ಉದ್ದೇಶ ಸಫಲವಾಗುವುದಿಲ್ಲ. ಸ್ವಾಯತ್ತತೆಯ ಜೊತೆಯಲ್ಲಿ ಆಡಳಿತ ಪರಿಶ್ರಮದಲ್ಲಿ ಪಾರದರ್ಶಕತೆ, ದಕ್ಷತೆ ಮತ್ತು ಜವಾಬ್ದಾರಿ ಕೂಡಾ ಹೆಚ್ಚಾಗುವಂತೆ ಸೂಕ್ತವೂ ಸಮಗ್ರವೂ ಆದ ತಿದ್ದುಪಡಿ ಅಗತ್ಯ.

**ಪ್ರಸ್ತುತ ಪಂಚಾಯತ್ ರಾಜ್ ಸಂಸ್ಥೆಗಳ ಚುನಾಯಿತ ಸದಸ್ಯರ ಅಂಕಿ-ಅಂಶಗಳ ವಿವರಗಳು**

| ಪಂಚಾಯತ್ ರಾಜ್ ವ್ಯವಸ್ಥೆ | ಚುನಾಯಿತ ಪ್ರತಿನಿಧಿಗಳ ಒಟ್ಟುಸಂಖ್ಯೆ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಹಿಂದುಳಿದ ವರ್ಗ(ಎ ಮತ್ತು ಬಿ) | | | |
|---|---|---|---|---|---|---|---|
| | | | | ಎ | ಬಿ | ಒಟ್ಟು | ಸಾಮಾನ್ಯ |
| ಜಿಲ್ಲಾ ಪಂಚಾಯತ್ | ೮೯೦ (೩೩೯) | ೧೫೮ (೬೩) | ೫೪ (೩೧) | ೨೩೯ (೪೮) | ೬೦ (೨೫) | ೨೯೯ (೧೦೯) | ೩೭೯ (೧೩೬) |
| ತಾಲ್ಲೂಕು ಪಂಚಾಯತ್ | ೩೨೫೫ (೧೩೭೫) | ೫೮೩ (೨೫೨) | ೨೪೪ (೧೮೨) | ೮೭೬ (೩೬೧) | ೨೧೭ (೭೧) | ೧೦೯೩ (೪೩೨) | ೧೩೩೫ (೫೦೯) |
| ಗ್ರಾಮ ಪಂಚಾಯತ್ | ೮೦೦೭೩ (೩೫೯೨೨) | ೧೪೮೭೧ (೭೨೧೮) | ೭೪೯೯ (೫೮೭೩) | ೨೧೦೭೯ (೧೦೨೮೧) | ೫೫೭೩ (೪೩೫) | ೨೬೬೫೨ (೧೦೭೧೬) | ೩೧೦೫೧ (೧೨೧೧೫) |

**ಸೂಚನೆ** : ೧. ೫೬೪೮ ಗ್ರಾಮ ಪಂಚಾಯತ್‌ಗಳಿಗೆ ಮಾತ್ರ ಚುನಾವಣೆ ನಡೆದಿರುತ್ತದೆ.
೨. ಆವರಣದಲ್ಲಿ ತೋರಿಸಿರುವುದು ಮಹಿಳೆಯರ ಸಂಖ್ಯೆ

**ಆಧಾರ** : ಕರ್ನಾಟಕ ವಿಕಾಸ : ಅಕ್ಟೋಬರ್ ೨೦೦೧, ಪು. ೯






# ಹೈದರಾಬಾದ್ ಕರ್ನಾಟಕ ಪ್ರದೇಶದ ಸ್ಥಳೀಯ ಸಂಸ್ಥೆಗಳು

ಪ್ರೊ. ವಸಂತ ಕುಷ್ಟಗಿ

ಕರ್ನಾಟಕ ರಾಜ್ಯದ ಬೀದರ, ಕಲಬುರಗಿ ಮತ್ತು ರಾಯಚೂರ ಜಿಲ್ಲೆಗಳನ್ನು ಹೈದರಾಬಾದ್ ಕರ್ನಾಟಕ ಪ್ರದೇಶವೆಂದು ಗುರುತಿಸಲಾಗುತ್ತದೆ. ಕೊಪ್ಪಳವು ತಾನು ಪ್ರತ್ಯೇಕ ಜಿಲ್ಲೆಯಾಗುವವರೆಗೆ ರಾಯಚೂರ ಜಿಲ್ಲೆಯ ಭಾಗವಾಗಿತ್ತು. ಭಾರತದ ಸ್ವಾತಂತ್ರ್ಯದ ಅನಂತರ ೧೭-೯-೧೯೪೮ರಂದು ಈ ಪ್ರದೇಶವು ಭಾರತದಲ್ಲಿ ಸೇರ್ಪಡೆಯಾಗುವವರೆಗೆ ಸುಮಾರು ೨೨೫ ವರ್ಷಗಳ ಕಾಲ, ಅಸಫಜಾಹಿ ಮನೆತನದ ನಿಜಾಂ ಸುಲ್ತಾನರು ಈ ಪ್ರದೇಶವನ್ನು ಆಳುತ್ತಿದ್ದರು. ಈ ಪ್ರದೇಶದ ಮೂರು ಜಿಲ್ಲೆಗಳ ಜೊತೆಗೆ ಈ ಮನೆತನದ ಸುಲ್ತಾನರು ಮರಾಠವಾಡಾದ ಐದು ಜಿಲ್ಲೆಗಳನ್ನು ಹಾಗೂ ತೆಲಂಗಾಣಾದ ಎಂಟು ಜಿಲ್ಲೆಗಳನ್ನು ಸೇರಿಸಿಕೊಂಡು ಒಟ್ಟು ಹದಿನಾರು ಜಿಲ್ಲೆಗಳನ್ನೊಳಗೊಂಡ ಸಂಸ್ಥಾನಕ್ಕೆಲ್ಲ ಒಡೆಯರಾಗಿದ್ದರು. ಇಂಥ ಈ ಸಂಸ್ಥಾನವನ್ನು ಹೈದರಾಬಾದ ಸಂಸ್ಥಾನವೆಂದೂ ನಿಜಾಂ ಸಂಸ್ಥಾನವೆಂದೂ ಕರೆಯಲಾಗುತ್ತಿತ್ತು. ಈ ಸಂಸ್ಥಾನವು ಭಾರತ ದೇಶದ ಒಕ್ಕೂಟದಲ್ಲಿ ಸೇರ್ಪಡೆಯಾದ ಅನಂತರ ಈ ಸಂಸ್ಥಾನಕ್ಕೆಲ್ಲ ಹೈದರಾಬಾದ ರಾಜ್ಯವೆಂದು ಹೆಸರಾಯಿತು. ಭಾಷಾವಾರು ತಳಹದಿಯ ಮೇಲೆ ೧೯೫೬ರಲ್ಲಿ ರಾಜ್ಯಗಳ ಪುನರ್ ಘಟನೆಯಾದ ಅನಂತರ ಹೈದರಾಬಾದ ರಾಜ್ಯದ ಕನ್ನಡ ಜಿಲ್ಲೆಗಳಾಗಿದ್ದ ಬೀದರ, ಕಲಬುರಗಿ ಹಾಗೂ ರಾಯಚೂರು ಜಿಲ್ಲೆಗಳು ಕರ್ನಾಟಕ ರಾಜ್ಯಕ್ಕೆ, ಸೇರ್ಪಡೆಯಾದುವು. ಹೀಗಾಗಿ ಈ ಪ್ರದೇಶವನ್ನು ಹೈದರಾಬಾದ ಕರ್ನಾಟಕ ಪ್ರದೇಶವೆಂದು ಗುರುತಿಸಲಾಗುತ್ತದೆ.

ಈ ಹೈದರಾಬಾದ ಕರ್ನಾಟಕ ಪ್ರದೇಶವು ೩೫೬೪೯ ಚದರ ಕಿಲೋಮೀಟರ ವಿಸ್ತೀರ್ಣವನ್ನು ಹೊಂದಿದೆ. ಈ ವಿಸ್ತೀರ್ಣದಲ್ಲಿ ಸುಮಾರು ೩೨೭೮ ಜನವಸತಿ ಇರುವ ಗ್ರಾಮಗಳಿದ್ದು ಸುಮಾರು ೨೧೫ ಜನವಸತಿಯಿಲ್ಲದ ಗ್ರಾಮಗಳಿವೆ. ಸುಮಾರು ೬೫ ಲಕ್ಷ ಜನಸಂಖ್ಯೆಯನ್ನು ಹೊಂದಿದೆ. ಈ ಪ್ರದೇಶದ ಗ್ರಾಮಗಳಲ್ಲಿ ಆಗಿರುವ ಸುಧಾರಣೆಯನ್ನು ಕುರಿತು ಒಂದು ಹಕ್ಕಿನೋಟ ಈ ಲೇಖನದ ಉದ್ದೇಶವಾಗಿದೆ.

*ಗ್ರಾಮದ ನೈರ್ಮಲ್ಯ ಮತ್ತು ಆರೋಗ್ಯ, ವ್ಯವಸಾಯಾಭಿವೃದ್ಧಿ ಹಾಗೂ ಪುಷ್ಟಿಕರ ಆಹಾರ, ಶಿಕ್ಷಣ ಕ್ಕೊಂದು ಹೊಸ ಮಾರ್ಗ, ಕೇವಲ ಬೌದ್ಧಿಕ ಚತುರತೆಯಿಲ್ಲದೆ ಜೀವನ ಮೌಲ್ಯಾಧಾರಿತವಾದ ಮೂಲ ಶಿಕ್ಷಣದ ಪ್ರಗತಿ, ಸಮಾನತೆಯ ಸಾಧನೆಗಾಗಿ ಭೂಮಿ ಮತ್ತು ಸಂಪತ್ತುಗಳ ಹಂಚಿಕೆ ಇವು ಮೂಲ ಅಂಶಗಳಾಗಿವೆ.*

ಗ್ರಾಮವೇ ನಮ್ಮ ದೇಶದ ಮೂಲ ಘಟಕ. ಏಕೆಂದರೆ ನಮ್ಮ ದೇಶವು ಸುಮಾರು ಐದೂವರೆ ಲಕ್ಷ ಗ್ರಾಮಗಳಿಂದ ತುಂಬಿ ತುಳುಕುತ್ತಿರುವ ನೆಲ. ವ್ಯವಸಾಯವೇ ಅಲ್ಲಿ ವಾಸಿಸುವವರ ಜೀವನಾಧಾರಿತ ಚಕ್ರ. ಅದಕ್ಕನುಗುಣವಾಗಿ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಪ್ರಗತಿ ಸಾಧಿಸಿದಂತೆಲ್ಲ ದೇಶದ ಸಮೃದ್ಧಿ. ಆದ್ದರಿಂದ ಹಳ್ಳಿಗಳ ವಿಕಾಸವೇ ದೇಶದ ವಿಕಾಸ. ಕೃತಕ ನಗರ ಸಂಸ್ಕೃತಿಯಿಂದ ಭಾರತದ ಜೀವ ಜೀವಾಳವಾದ ಹಳ್ಳಿಯ ಜೀವನ ಸಂಸ್ಕೃತಿಯು ಉಳಿಯಲಾರದು.

ಅದಕ್ಕಾಗಿ ವಿಕೇಂದ್ರಿತ ವಿಜ್ಞಾನಾಧಾರಿತ ವಿಶ್ವಾಸವರ್ಧಕ ಗ್ರಾಮ ಸ್ವರಾಜ್ಯ ಸ್ಥಾಪನೆಯಿಂದಲೇ ದೇಶದ ಸರ್ವೋದಯವೆಂದು ಸಾರಿದ ಗಾಂಧೀವಾಣಿಯನ್ನೇ ಸದಾ ನೆನಪಿನಲ್ಲಿಟ್ಟುಕೊಂಡು ಕ್ರಿಯಾತ್ಮಕವಾಗಿ ನಡೆಯಬೇಕಾದುದು ದೇಶದ ಕರ್ತವ್ಯ. ಏಕೆಂದರೆ ಮಹಾತ್ಮಗಾಂಧೀಜಿ ಅವರು ಶ್ರೇಷ್ಠ ಚಿಂತನಶೀಲ, ವಿಚಾರಬದ್ಧ, ಯೋಜನಾ ಚತುರರು. ಹೀಗಾಗಿ ಅವರ ಯೋಜನೆ ಸಮಗ್ರದೃಷ್ಟಿಯದು. ಆ ದೃಷ್ಟಿಯಲ್ಲಿ ವ್ಯಕ್ತಿಯೇ ಕೇಂದ್ರಬಿಂದು. ಬಹುಸಂಖ್ಯಾತರು ಭಾರತದಲ್ಲಿ ಗ್ರಾಮ ಜೀವಿಗಳಾಗಿರುವುದರಿಂದ ಅವರೆಲ್ಲ ವಿವೇಕಿಗಳೂ ಕ್ರಿಯಾಶೀಲರೂ ಆಗಿ ತಮ್ಮ ಸಮಾಜವನ್ನು ಪರಿವರ್ತಿಸಿಕೊಳ್ಳುವ ಸಾಮರ್ಥ್ಯವುಳ್ಳವರಾಗುವುದರಿಂದ ಮಾನವನ ಜೀವನದ ಸರ್ವ ಸಮೃದ್ಧಿ ಸಾಧ್ಯವೆಂಬುದು ಅವರಲ್ಲಿರುವ ನಂಬಿಗೆ. ಆ ನಂಬಿಕೆಯಲ್ಲಿ ಗ್ರಾಮದ ನೈರ್ಮಲ್ಯ ಮತ್ತು ಆರೋಗ್ಯ, ವ್ಯವಸಾಯಾಭಿವೃದ್ಧಿ ಹಾಗೂ ಪುಷ್ಟಿಕರ ಆಹಾರ, ಶಿಕ್ಷಣಕ್ಕೊಂದು ಹೊಸ ಮಾರ್ಗ, ಕೇವಲ ಬೌದ್ಧಿಕ ಚತುರತೆಯಿಲ್ಲದೆ ಜೀವನ ಮೌಲ್ಯಾಧಾರಿತವಾದ ಮೂಲ ಶಿಕ್ಷಣದ ಪ್ರಗತಿ, ಸಮಾನತೆಯ ಸಾಧನೆಗಾಗಿ ಭೂಮಿ ಮತ್ತು ಸಂಪತ್ತುಗಳ ಹಂಚಿಕೆ-ಇವು ಮೂಲ ಅಂಶಗಳಾಗಿ ಹೊಳೆದಿವೆ. ಇವುಗಳನ್ನೆಲ್ಲ ಸಾರ್ಥಕಗೊಳಿಸಲು ಬಡತನದ ರೇಖೆಯಿಂದ ಕೆಳಗಿರುವ ಅಪಾರ ಜನ ಸಂಖ್ಯೆಯನ್ನು ಮೇಲೆತ್ತಲು ಅನಕ್ಷರತೆಯನ್ನು ಹೊಡೆದೋಡಿಸಬೇಕೆಂದು ಅಪೇಕ್ಷಿಸಿದರು. ಈ ನೆಲೆಯಲ್ಲಿ ಗ್ರಾಮ ಪುನರ್ರಚನೆಯನ್ನು ಬಯಸಿದರು.

ಗ್ರಾಮ ಪುನರ್ರಚನೆಯೆಂದರೆ ಭಾರತದ ಸಮಗ್ರ ಪುನರ್ರಚನೆ. ಇದರಲ್ಲಿ ಜೀವನಕ್ಕೂ ಮಾನವನಿಗೂ ನಡುವೆ ಕೃತಕ ದಳ್ಳಾಳಿಗಳ ಕೇಂದ್ರಿತ ಜಡವ್ಯವಸ್ಥೆಯಿರಬಾರದೆಂದು ಮಹಾತ್ಮಗಾಂಧೀಜಿ ಅವರು ಪ್ರತಿಪಾದಿಸಿದರು. ಸ್ವಯಂ ಪೂರ್ಣತೆಯ ಸಮಾಜದಲ್ಲಿರುವ ವ್ಯಕ್ತಿಗೌರವವು ಹೃದಯ ವಿದ್ರಾವಕ ದಾರಿದ್ರ್ಯಕ್ಕೆ ಕಾರಣವಾದ, ದುಡಿಮೆಯ ಅಪಮೌಲ್ಯವನ್ನು ಹೊಡೆದುಹಾಕುವುದರಿಂದ ಸಾಧ್ಯವೆಂಬುದನ್ನು ಸಾರಿದರು. ಈ ನೆಲೆಯನ್ನು ಇಟ್ಟುಕೊಂಡೇ ನಮ್ಮ ದೇಶದ ಪಂಚವಾರ್ಷಿಕ ಯೋಜನೆಗಳು ಗ್ರಾಮಾಭಿವೃದ್ಧಿಯ ಕಡೆಗೆ ಒತ್ತು ನೀಡುತ್ತ ಬಂದಿವೆ. ಹಾಗಾಗಿ ಗಾಂಧೀ ಕನಸಿನ ಗ್ರಾಮರಾಜ್ಯವು, ಗ್ರಾಮ ಪಂಚಾಯತಿಗಳು ಅಸ್ತಿತ್ವಕ್ಕೆ ಬರುವುದರಿಂದ ತನ್ನ ನಿಜ ಸ್ವರೂಪವನ್ನು ತಾಳುತ್ತಿದ್ದುದು ಗ್ರಾಮವಾಸಿಗಳಲ್ಲಿ ಆತ್ಮವಿಶ್ವಾಸವನ್ನು ಮೂಡಿಸತೊಡಗಿದೆ.

ಮಹಾತ್ಮ ಗಾಂಧೀಜಿ ಅವರು ಪ್ರಜಾಪ್ರಭುತ್ವದ ಸ್ವರೂಪವನ್ನು ಬಹು ವಿಶಿಷ್ಟರೂಪದಿಂದ ವ್ಯಾಖ್ಯಾನಿಸಿದ್ದರು. ಅದು ಇಂದಿಗೂ ಅರ್ಥಪೂರ್ಣವಾಗಿದೆ. ಅವರ ದೃಷ್ಟಿಯಲ್ಲಿ ಪ್ರಜಾಪ್ರಭುತ್ತ್ವವು ಗ್ರಾಮಮಟ್ಟದಲ್ಲಿಯೇ ವಿಕಾಸವಾಗಬೇಕು ಎನ್ನುವುದು ಆಗಿದೆ. ಎಂದರೆ ಪ್ರತಿಯೊಂದು ಗ್ರಾಮವೂ ಗ್ರಾಮ ಪ್ರಜಾಪ್ರಭುತ್ವವಾದರೆ ಮಾತ್ರ ಭಾರತವು ಪ್ರಜಾಪ್ರಭುತ್ವ ದೇಶವೆಂಬ ಮಾತನ್ನು ಪೂರ್ಣ ಒಪ್ಪಿಕೊಳ್ಳುವಂತಾಗುವುದು. ಆಗ ಗ್ರಾಮ ಪಂಚಾಯತ್ ಸರ್ವಾಧಿಕಾರವನ್ನು ಹೊಂದಿದ್ದು ಪ್ರತಿಯೊಂದು ಗ್ರಾಮವೂ ಸ್ವಾವಲಂಬಿತವಾಗಿದ್ದು ಸೋಮಾರಿತನದ ಜಾಡ್ಯದಿಂದ ಕಿತ್ತು ಹೊರಗೆ ಬಂದು ದುಡಿತವನ್ನು ಗೌರವಿಸಿ ಸುಸಂಸ್ಕೃತವಾಗಿ ಪೂರ್ಣ ತೃಪ್ತಿಯಿಂದ ಮೆರೆಯಲು ಸಾಧ್ಯ.

ಈ ಬಗ್ಗೆ ಚಿಂತನೆಗಳು ನಡೆದು ಯೋಜನೆಗಳು ರೂಪುಗೊಂಡುದು ಸ್ವಾತಂತ್ರ್ಯಪೂರ್ವದ ದಿನಗಳಿಂದಲೇ ಭಾರತದಾದ್ಯಂತ ನಡೆದು ಬಂದಿರುವ ವಿಷಯ. ಏಕೆಂದರೆ ಸ್ಥಳೀಯ ಸ್ವಯಂ ಆಡಳಿತವು ಧರ್ಮ, ಶಿಕ್ಷಣ, ರಾಜಕೀಯ, ಪೌರನೀತಿ, ಅರ್ಥಶಾಸ್ತ್ರಗಳಂತಹ ಜೀವನದ ವಿವಿಧ ರಂಗಗಳಲ್ಲಿ ಪ್ರಗತಿಯನ್ನು ಸಾಧಿಸಿ, ಮಾರ್ಗದರ್ಶಿಯಾಗಿರುವುದಕ್ಕೆ ಇತಿಹಾಸ ಸಾಕ್ಷಿ. ಈ ಮಾತಿಗೆ ನಾಲ್ಕು ಸಾವಿರ ವರ್ಷಗಳ ಪರಂಪರೆ ಇದೆ. ಈ ಪರಂಪರೆಗೆ ಹೈದರಾಬಾದ ಸಂಸ್ಥಾನವಾಗಲೀ ಹೈದರಾಬಾದ ರಾಜ್ಯವಾಗಲೀ ಅಪವಾದವಾಗಿಲ್ಲ. ಕ್ರಿ.ಶ. ೧೮೮೭-೮೮ ರಲ್ಲಿ ಸ್ಥಳೀಯ ಉಪಕರವನ್ನು ಹೇರಿದಾಗ ಸ್ವಯಂ ಆಡಳಿತ ಸಂಸ್ಥೆಯು ಉಗಮವಾಗಿ ಹೈದರಾಬಾದ ಪ್ರದೇಶದಲ್ಲಿ ಗ್ರಾಮಾಭಿವೃದ್ಧಿಗೆ ನಾಂದಿಹೇಳಿತು. ಅಂದೂ ಈ ಪ್ರದೇಶದಲ್ಲಿ ಕರ್ನಾಟಕದ ಭಾಗವಾಗಿದ್ದ ಬೀದರ, ಕಲಬುರಗಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ ರಸ್ತೆಗಳು, ಶಾಲೆಗಳು ಸ್ಥಳೀಯ ಕರದಿಂದ ನಿರ್ಮಾಣವಾಗತೊಡಗಿದ್ದುವು. ಮುಂದೆ ೧೯೪೦ರಲ್ಲಿ ಹೈದರಾಬಾದ ಗ್ರಾಮ ಪಂಚಾಯತಿಗಳ ಅಧಿನಿಯಮ ಜಾರಿಗೆ ಬಂದಿತು. ಆಗ ಗ್ರಾಮೀಣ ಪುನರ್ನಿರ್ಮಾಣ ಸಂಘಗಳು ಗ್ರಾಮಾಭಿವೃದ್ಧಿಯ ಕಾರ್ಯಕ್ಕೆ ಬೆಳಕು ತರತೊಡಗಿದವು. ಸ್ವಾತಂತ್ರ್ಯದ ಅನಂತರ ೧೯೫೧ರಲ್ಲಿ ವಯಸ್ಕ ಮತದಾನದ ಆಧಾರದ ಮೇಲೆ, ೧೦೦೦ದಿಂದ ೫೦೦೦ದವರೆಗೆ ಜನಸಂಖ್ಯೆ ಇರುವ ಹಳ್ಳಿಗಳಲ್ಲಿ ಪಂಚಾಯತ ರಚನೆಗೆ ಅವಕಾಶ ಬಂದಿತು.

ವಸ್ತು ಸ್ಥಿತಿಯು ಹೀಗಿರುವಾಗ, ಹೈದರಾಬಾದ ಸಂಸ್ಥಾನದಲ್ಲಿದ್ದ ಕರ್ನಾಟಕ ಪ್ರದೇಶದಲ್ಲಿಯೂ ಗ್ರಾಮವಿಕಾಸ ಕಾರ್ಯಕ್ರಮಗಳು ನಡೆದು ಬಂದಿವೆಯೆಂಬುದು ಒಪ್ಪಿಕೊಂಡ ಮಾತೇ ಸರಿ. ಆ ಕಾಲದಲ್ಲಿ ಗ್ರಾಮ ಗ್ರಾಮಗಳಲ್ಲಿ ಕುಡಿಯುವ ನೀರಿನ ಸೌಕರ್ಯಕ್ಕಾಗಿ ಬಾವಿಗಳನ್ನು ತೋಡಿಸಲಾಗಿದೆ. ಎಲ್ಲ ಸಂಪ್ರದಾಯದ ಜನರ ರೀತಿ ರಿವಾಜುಗಳಿಗೆ ತೊಂದರೆಯಾಗಬಾರದೆಂಬ ದೃಷ್ಟಿಯಿಂದ ಪ್ರತ್ಯೇಕವಾದ ಬಾವಿಗಳನ್ನು ಹಳ್ಳಿಹಳ್ಳಿಗಳಲ್ಲಿ ತೋಡಿಸಿದ್ದು ಐತಿಹಾಸಿಕ ದಾಖಲೆ. ಗ್ರಾಮೋದ್ಯೋಗಗಳನ್ನು ಸಮೃದ್ಧಗೊಳಿಸಲು ಸಹಕಾರಿ

ಸಾಲಗಳನ್ನು ನೀಡುವ ಪದ್ಧತಿ ಕೂಡಾ ಜಾರಿಯಲ್ಲಿದ್ದಿತು. 'ಅಂಜುಮನೆ' ಬ್ಯಾಂಕುಗಳನ್ನು ಈ ಕಾರಣಕ್ಕಾಗಿಯೇ ಆರಂಭಿಸಲಾಗಿತ್ತು. ಕೃಷಿ ಸುಧಾರಣೆಗಾಗಿ ಒಳ್ಳೆಯ ತಳಿಯ ಬೀಜಗಳನ್ನು ವಿತರಿಸಲಾಗುತ್ತಿತ್ತು. ಸುಧಾರಿತ ಕೃಷಿ ರಿವಾಜುಗಳನ್ನು ತಿಳಿಹೇಳಲಾಗುತ್ತಿತ್ತು. ಹೊಲಗಳನ್ನು ಉಳಿಸಿ ಒಡ್ಡುಗಳನ್ನು ಹಾಕಿಸಿ ಜಲಸಂಪನ್ಮೂಲವನ್ನು ಹೆಚ್ಚಿಸಿಕೊಳ್ಳಲಾಗುತ್ತಿತ್ತು. ಊರೂರಿಗೆ ಕೆರೆ ಕುಂಟೆ ಕಾಲುವೆಗಳನ್ನು ಅಭಿವೃದ್ಧಿಗೊಳಿಸಲಾಗುತ್ತಿತ್ತು. ಪಶುಸಂಗೋಪನೆ ಹಾಗೂ ಪಶು ಆರೋಗ್ಯ ಕುರಿತು ತಿಳಿವಳಿಕೆಯನ್ನು ನೀಡಲಾಗುತ್ತಿತ್ತು. ಗುಡಿಗುಂಡಾರ ಮಸೀದಿಗಳಲ್ಲಿ ಸೌಹಾರ್ದತೆ ಕಂಡು ಬರುತ್ತಿತ್ತು. ಇಡೀ ಗ್ರಾಮ ಒಂದು ಕುಟುಂಬವಾಗಿ ಸಹಿಷ್ಣುತೆಗೆ ಮಾದರಿಯಾಗಿತ್ತು. ಚಾವಡಿಗಳಲ್ಲಿ, ಊರ ಹನುಮಂತದೇವರ ಗುಡಿ ಮೊದಲಾದ ಸ್ಥಳಗಳಲ್ಲಿ ಶಾಲೆಗಳಿರುತ್ತಿದ್ದುವು. ಪಾಠ ಹೇಳಿಕೊಡುವವರನ್ನು 'ಅಯ್ಯನವರು' ಎಂದು ಕರೆಯಲಾಗುತ್ತಿತ್ತು. ಅವರು ಸಾಯಂಕಾಲ ಪುರೋಜಿ ಹೇಳಿಸಿ ಮನೆಗೆ ಮಕ್ಕಳನ್ನು ಕಳಿಸುತ್ತಿದ್ದರು. ಪ್ರಾಥಮಿಕ ಮಟ್ಟದಲ್ಲಿ ಮಾತೃಭಾಷೆಯಾದ ಕನ್ನಡದಲ್ಲಿಯೇ ಶಿಕ್ಷಣವನ್ನು ನೀಡಲಾಗುತ್ತಿತ್ತು. ವಯಸ್ಕರಿಗಾಗಿ ರಾತ್ರಿಶಾಲೆಗಳೂ ಇದ್ದುವು. ಆರೋಗ್ಯವನ್ನು ಕಾಯ್ದುಕೊಳ್ಳಲು ತಿಬ್ಬಿ ಮಾಯನಾ (ಆರೋಗ್ಯ ಪರೀಕ್ಷೆ) ಮಾಡಿಸಲಾಗುತ್ತಿತ್ತು. ಅಂಚೆಯ ವ್ಯವಸ್ಥೆಯಿತ್ತು. ಅಂಚೆಯಣ್ಣ ಗಂಟೆ ಕೋಲು ಹಿಡಿದು ವಾರಕ್ಕೊಮ್ಮೆ ಹಳ್ಳಿಹಳ್ಳಿಗೆ ಬಂದು ಪತ್ರಗಳನ್ನು ಮುಟ್ಟಿಸಿ ಉತ್ತರಗಳನ್ನು ಪಡೆದುಕೊಂಡು ತಿರುಗಿ ಅಂಚೆಯ ಮನೆಗೆ ಹೋಗಿ ಮುಂದಿನ ವಿತರಣೆಗಾಗಿ ಮುಟ್ಟಿಸುತ್ತಿದ್ದ. ಹೇಳಿಕೊಳ್ಳುವಷ್ಟಲ್ಲದಿದ್ದರೂ ಸಾರಿಗೆ ಸಂಪರ್ಕದ ಅರುಣೋದಯವಾಗಿತ್ತು. ಜಾತ್ರೆ ಮೊದಲಾದುವುಗಳಲ್ಲಿ ಕೃಷಿ, ಕಲೆ ಮೊದಲಾದ ನುಮಾಯಿಷ್ (ಪ್ರದರ್ಶನ-ಮೇಳ)ಗಳು ನಡೆಯುತ್ತಿದ್ದುವು. ಹೀಗೆ ಹೈದರಾಬಾದ ಕರ್ನಾಟಕ ಪ್ರದೇಶದ ಹಳ್ಳಿಗಳಲ್ಲಿ ಮೂಲಭೂತವಾದ ಬೆಳವಣಿಗೆಗೆ ಅಂದಿನ ಪರಿಸ್ಥಿತಿಯ ಮಧ್ಯದಲ್ಲಿಯೂ ಅವಕಾಶ ಅಂಕುರವಾಗಿ ಬಳ್ಳಿ ದಾಂಗುಡಿಯಿಟ್ಟಿತ್ತೆಂದು ಹೇಳಿದರೆ ಸರಿಯಾದದ್ದೇ ಹೌದು. ಆದರೆ ಅಂದಿನ ಆಡಳಿತದಲ್ಲಿ ಕನ್ನಡ ಪ್ರದೇಶವು ಉರ್ದು, ಮರಾಠಿ, ತೆಲಗು, ಇಂಗ್ಲಿಷ್ ಭಾಷೆಗಳ ಒತ್ತಡದಲ್ಲಿ ಕನ್ನಡ ಸಂಸ್ಕೃತಿಯನ್ನು ಉಳಿಸಿಕೊಂಡು ಬರಬೇಕಾದುದರಿಂದ ಕಷ್ಟಸಾಧ್ಯವಾಗಿ ಅಸಮಾನತೆಗೆ ತುತ್ತಾದುದು ಅಷ್ಟೇ ಸತ್ಯವಾದದ್ದು. ಇದರ ಜೊತೆಗೆ ೧೯೪೫ರಿಂದ ೧೯೪೮ರ ವರೆಗೆ ನಡೆದ ರಜಾಕಾರರ ಹಾವಳಿಯಿಂದಾಗಿ ಇಡೀ ಸಂಸ್ಥಾನವು ತತ್ತರಿಸಿದಾಗ, ಈ ಪ್ರದೇಶಕ್ಕೂ ಆ ಪಿಡುಗು ತಗುಲಿ, ಅಸಮಾನತೆಯ ಕಂದಕವನ್ನು ಇನ್ನಷ್ಟು ಆಳವಾಗಿ ತೋಡಿ ವಿಸ್ತೃತಗೊಳಿಸಿದಂತಾಯಿತು. ಮುಂದೆ ಹೈದರಾಬಾದ ಸಂಸ್ಥಾನವು ಭಾರತದಲ್ಲಿ ವಿಲೀನವಾದ ಅನಂತರ ಮಾರ್ಪಟ್ಟ ಹೈದರಾಬಾದ ರಾಜ್ಯದ ಸ್ಥಿತಿಗತಿಯಲ್ಲಿಯೂ ಈ ಪ್ರದೇಶಕ್ಕೆ ಅಂತಹ ವಿಶೇಷ ಕೊಡುಗೆಯೇನೂ ಬರಲಿಲ್ಲ. ಆದರೆ ಸ್ವತಂತ್ರ ಭಾರತದ ಪ್ರಜೆಗಳಾದುದು ಹೈದರಾಬಾದ ಪ್ರದೇಶದ ಜನರಿಗೆ ಮಾತ್ರ ಹೆಮ್ಮೆಯ ಮಾತು. ಮುಂದೆ ೧೯೫೬ರಲ್ಲಿ ರಾಜ್ಯ ಪುನರ್ವಿಂಗಡಣೆಯನಂತರ ಇಡೀ ರಾಜ್ಯಕ್ಕೆ ಏಕೀಕೃತ ೧೯೫೮ರ ಕರ್ನಾಟಕ ಗ್ರಾಮ ಪಂಚಾಯತಿ ಕಾಯ್ದೆ ಜಾರಿಗೆ ಬಂದಾಗ, ಹೆಚ್ಚಿನ ವೇಗದಲ್ಲಿ ಜಾಗೃತಿ ಮೂಡತೊಡಗಿತು. ೧೯೯೩ರಲ್ಲಿ ಕರ್ನಾಟಕ ಪಂಚಾಯತಿ ರಾಜ್ ಕಾಯ್ದೆ ಒಂದು ಸಮಗ್ರ ಮತ್ತು ಏಕೀಕೃತ ಕಾನೂನಾಗಿ ಬಂದಾಗ ರಾಜ್ಯದಲ್ಲಿ ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಮಟ್ಟದ ಪರಸ್ಪರ ಸಂಬಂಧವುಳ್ಳ ಮೂರು ಹಂತದ ಪಂಚಾಯತಿ ರಾಜ್ಯ ವ್ಯವಸ್ಥೆ ಜಾರಿಯಾಗಿ, ಅಧಿಕಾರದ ವಿಕೇಂದ್ರೀಕರಣದಿಂದಾಗಿ ಗ್ರಾಮದಲ್ಲಿ ಹೊಸ ಸೊಬಗು ಹರಿದಾಡತೊಡಗಿತು. ಹೀಗಾಗಿ ಸ್ಥಳೀಯ ಅಭಿವೃದ್ಧಿ ಕಾರ್ಯಗಳ ಅನುಷ್ಠಾನದಲ್ಲಿ ಜನತೆಯ ಸಹಭಾಗಿತ್ವವು ದಿನದಿನಕ್ಕೆ ಚುರುಕುಗೊಂಡಿದೆ. ಈ ಹೊಸ ಕಾಯಿದೆಯ ಅನ್ವಯ ಮೂಲ ಮತ್ತು ಪ್ರಮುಖ ಸಂಸ್ಥೆಯಾದ ಗ್ರಾಮಸಭೆಯು ಅಭಿವೃದ್ಧಿ ಕಾರ್ಯಕ್ರಮಗಳಿಗೆ ಕ್ರಿಯಾತ್ಮಕವಾದ ಪ್ರಜ್ಞಾವಂತಿಕೆಯನ್ನು ದಿನದಿನಕ್ಕೆ ಹೆಚ್ಚು ಹೆಚ್ಚು ತರತೊಡಗಿತು. ಹೀಗಾಗಿ ಸ್ವಚ್ಛ ಆಡಳಿತದ ಹೊಣೆ ಮೂಲದಲ್ಲಿಯೇ ಸೆಲೆಯೊಡೆಯುವುದರಿಂದ, ಜನತೆಯ ಕರ್ತವ್ಯ ಬದ್ಧತೆಗೆ ದತ್ತಸ್ವಾತಂತ್ರ್ಯದ ಬಳಕೆಯು ಹೆಚ್ಚು ಹೆಚ್ಚು ವಿವೇಕಪೂರ್ಣವಾಗುತ್ತ ಎಲ್ಲರೂ ಪ್ರಯತ್ನಿಸುವಂತಾಗಿದೆ.

ಗ್ರಾಮಸಭೆಯ ಕಾರ್ಯವಿಧಾನದಿಂದಾಗಿ ಎಲ್ಲ ವರ್ಗದ ಜನರಲ್ಲಿ ಪರಸ್ಪರ ಒಗ್ಗಟ್ಟು, ಸಹಬಾಳ್ವೆ, ಸಹಭಾಗಿತ್ವಗಳು ರೂಢವಾಗತೊಡಗಿವೆ. ವಯಸ್ಕರ ಶಿಕ್ಷಣ, ನೀರು ಪೂರೈಕೆ, ವಿದ್ಯುಚ್ಛಕ್ತಿ ವೆಚ್ಚ, ನೈರ್ಮಲ್ಯ ಮತ್ತಿತರ ಕ್ಷೇಮಾಭಿವೃದ್ಧಿ ಕಾರ್ಯಗಳಿಗಾಗಿ ಪ್ರತಿವರ್ಷವೂ ಸರಕಾರದಿಂದ ಪ್ರತಿಯೊಂದು ಗ್ರಾಮ ಪಂಚಾಯತಿಗೆ ಒಂದು ಲಕ್ಷ ರೂಪಾಯಿಯ ಅನುದಾನ ಬರುತ್ತಿರುವಂತಾಗಿದೆ. ಹೀಗಾಗಿ ಪಟ್ಟಣಕ್ಕೆ ಪಲಾಯನವಾಗುತ್ತಿದ್ದ ಜನ ಮತ್ತೆ ಮರಳಿ ಗ್ರಾಮಗಳ ಕಡೆಗೆ ಮನಸ್ಸು ಹಾಕತೊಡಗಿರುವುದು ಗಾಂಧೀಜಿ ಕನಸಿನ ಗ್ರಾಮರಾಜ್ಯಕ್ಕೆ ಮಹತ್ವ ಬಂದಂತಾಗಿದೆ. ಆದರೆ ಮತದಾರರಲ್ಲಿ ಹಾಗೂ ಚುನಾಯಿತ ಪ್ರತಿನಿಧಿಗಳಲ್ಲಿ ಸಾಕಷ್ಟು ತಿಳಿವಳಿಕೆ ಮೂಡಿದಾಗ ಗ್ರಾಮಸ್ವರಾಜ್ಯವು ಅರ್ಥಾತ್ ಗ್ರಾಮಗಣರಾಜ್ಯವು ಸ್ವಯಂಭದ್ರಿತ ನೆಮ್ಮದಿಯ ತಾಣವಾಗಿ, ಸ್ವರ್ಗವೆಲ್ಲ ಸುಳ್ಳಾಗಿ, ಭಾರತದ ಹಳ್ಳಿಗಳೇ ಸ್ವರ್ಗದ ಸೌರವ್ಯೂಹವಾಗುತ್ತವೆ. ಆ ದಿನಗಳು ಬಹಳ ದೂರ ಉಳಿದಿಲ್ಲ.

ಈ ಹೊಸ ವ್ಯವಸ್ಥೆಯಿಂದ ಈಗ ಬೀದರ ಜಿಲ್ಲೆಯಲ್ಲಿ ೧೭೬, ಕಲುಬುರಗಿ ಜಿಲ್ಲೆಯಲ್ಲಿ ೩೩೬ ಮತ್ತು ರಾಯಚೂರು ಜಿಲ್ಲೆಯಲ್ಲಿ ೨೯೯, ಹೀಗೆ ಹೈದರಾಬಾದ ಕರ್ನಾಟಕ ಪ್ರದೇಶದಲ್ಲಿ ಸುಮಾರು ೮೧೧ಕ್ಕೂ ಮಿಕ್ಕ ಗ್ರಾಮ ಪಂಚಾಯತಿಗಳು ಕಾರ್ಯ ನಿರ್ವಹಿಸುತ್ತಿವೆ. ಗ್ರಾಮ ಪಂಚಾಯತಿಯ ಮುಂದಿನ ಎರಡು ಹಂತಗಳಾದ ತಾಲ್ಲೂಕು ಪಂಚಾಯತಿ ಹಾಗೂ ಜಿಲ್ಲಾ ಪಂಚಾಯತಿಗಳೂ ಕೂಡ ಗ್ರಾಮಗಳನ್ನು ಅಭಿವೃದ್ಧಿಯ ಸರ್ವತೋಮುಖದ ವಿಕಾಸದ ಮಟ್ಟಕ್ಕೆ ಮುಟ್ಟಿಸಲು ಪೂರಕವಾಗಿ ಕಾರ್ಯನಿರತವಾಗಿರುತ್ತವೆ. ಈ ರೀತಿ ವ್ಯವಸ್ಥೆಯು ಕಾರ್ಯನಿರತವಾಗಿರುವುದರಿಂದ ಹೈದರಾಬಾದ ಕರ್ನಾಟಕ ಭಾಗದಲ್ಲಿಯೂ ಇತ್ತೀಚೆಗೆ ಅಭಿವೃದ್ಧಿ ಕಾರ್ಯಗಳು ಪ್ರಗತಿಪರ ಧಾಟಿಯಲ್ಲಿ ಸಾಗಿವೆ. ಆದರೆ ಜನತೆಯಲ್ಲಿ, ಅಧಿಕಾರಿಗಳಲ್ಲಿ, ಜನಪ್ರತಿನಿಧಿಗಳಲ್ಲಿ ಇನ್ನಷ್ಟು ಇಚ್ಛಾಶಕ್ತಿ ವಿಕಾಸವಾದರೆ ಮಾತ್ರ ಕರ್ನಾಟಕ ರಾಜ್ಯದ ಉಳಿದ ಭಾಗಗಳ ಜೊತೆ ಒಂದಾಗಿ ಸರಿಜೋಡಿಯಾಗಿ ಬೆಳೆಯಲು ಸಾಧ್ಯವಾಗುತ್ತದೆ. ಹೈದರಾಬಾದ ಕರ್ನಾಟಕ ಏಕೀಕರಣಕ್ಕೆ ಮುನ್ನ ನಿರ್ಲಕ್ಷಿತ ಪ್ರದೇಶವಾಗಿಯೇ ಉಳಿದು ಬಂದಿತು. ಇದಕ್ಕೆ ಕಾರಣ ಆಡಳಿತದಲ್ಲಿ ಕನ್ನಡ ಭಾಷಿಗರ ಪ್ರದೇಶವು ಕೊನೆಯ ಲಕ್ಷ್ಯಕ್ಕೆ ಒಳಪಟ್ಟುದರಿಂದ ಆಡಳಿತಭಾಷೆ ಉರ್ದುವಿನ ಜೊತೆ ಬಹುಭಾಷಿಗರ ಸಹವರ್ತನೆಯಲ್ಲಿ ಮೂಗು ಮುರಿದುಕೊಳ್ಳುವ ಮಂತ್ರದ ಕೂಸಿನ ಸ್ಥಿತಿಯನ್ನು ಹೈದರಾಬಾದ ಕರ್ನಾಟಕ ಭಾಗವು ಅನುಭವಿಸಬೇಕಾಯಿತು. ಬೇರೆ ಭಾಷಿಕರು ಅಧಿಕಾರಿಗಳು ಬರುತ್ತಿದ್ದುದರಿಂದ ಕನ್ನಡ ಬದುಕು ಯಥಾಸ್ಥಿತಿಯನ್ನು ಉಳಿಸಿಕೊಳ್ಳಲು ಶತಾಯ ಗತಾಯವಾಗಿ ನರಳಾಡಬೇಕಾಯಿತು. ಮುಂದೆ ಭಾಷಾನುಗುಣವಾಗಿ ರಾಜ್ಯ ಪುನರ್‌ರಚನೆಯಾದಾಗ ಆ ನಿರ್ಲಕ್ಷ್ಯತನವನ್ನು ದೂರಮಾಡಿ, ಈ ಭಾಗದವರನ್ನು ತಮ್ಮೊಡನೆ ಸಬಲಗೊಳಿಸಲು ಆಡಳಿತದಲ್ಲಿರುವವರು ಚುರುಕುಗೊಳ್ಳಲಿಲ್ಲವೇನೋ? ಆ ನಿರ್ಲಕ್ಷ್ಯತನವು ಹಾಗೆ ಮುಂದುವರೆದುದಕ್ಕಾಗಿ ಹಿಂದುಳಿಯುವಿಕೆಯ ಪಟ್ಟಿಯನ್ನು ಈ ಭಾಗವು ತನಗೆ ಅಂಟಿಸಿಕೊಂಡೇ ಸಾಗಬೇಕಾಯಿತು.

ಹೀಗೆ ಈ ಹಿಂದುಳಿಯುವಿಕೆಯ ಮುಂದುವರೆಯುವಿಕೆಗೆ ಶಾಶ್ವತ ಬರಗಾಲ, ಅಂತರ್ಜಲ ಸಂಪನ್ಮೂಲಗಳನ್ನು ಉಪಯೋಗಿಸದೆ ಇರುವುದು ಹಾಗೂ ಸಾರ್ವಜನಿಕ ಶಿಕ್ಷಣ ಸೌಲಭ್ಯಗಳ ಕೊರತೆಗಳೂ ಬಹುಮಟ್ಟಿಗೆ ಕಾರಣವಾದುವು. ಇದರಿಂದಾಗಿ ಈ ಭಾಗದ ಜನತೆಯ ಸರಾಸರಿ ವಾರ್ಷಿಕ ಆದಾಯ ರೂ. ೮೮೦-೦೦. ಕೇವಲ ಈ ಘನಘೋರ ಚಿತ್ರವನ್ನು ಅನುಲಕ್ಷಿಸಿ, ೧೯೮೦ರಲ್ಲಿ ಅಂದಿನ ನಗರಾಭಿವೃದ್ಧಿ ಸಚಿವರಾಗಿದ್ದ, ಇಂದಿನ ಮುಖ್ಯಮಂತ್ರಿಗಳಾಗಿರುವ ಧರ್ಮಸಿಂಗ್ ಅವರ ನೇತೃತ್ವದಲ್ಲಿ ಸಮಿತಿಯೊಂದು ರಚನೆಯಾಯಿತು. ಆ ಸಮಿತಿಯ ರಚನೆಯ ಶಿಫಾರಸ್ಸಿನಂತೆ ಹೈದರಾಬಾದ ಕರ್ನಾಟಕ ಪ್ರದೇಶದ ಸರ್ವತೋಮುಖ ಅಭಿವೃದ್ಧಿಗಾಗಿ "ಹೈದರಾಬಾದ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿ"ಯ ರಚನೆಯಾಯಿತು. ಈ ಬಗ್ಗೆ ೧೯೯೧ರಲ್ಲಿ ಕಾಯ್ದೆ ಮಂಜೂರಾಗಿ ೧೦-೩-೧೯೯೨ರಿಂದ ಈ ಮಂಡಳಿ ಕಾರ್ಯನಿರತವಾಗಿದೆ. ಅಂದಿನಿಂದ ಇಂದಿನವರೆಗೆ ಎಂದರೆ ೨೦೦೩-೨೦೦೪ರ ವರೆಗೆ ೬೬೮.೫೭ ಕೋಟಿ ಅನುದಾನ ಬಿಡುಗಡೆಯಾಗಿದ್ದು, ಮಾಡಿದ ಖರ್ಚು ಸುಮಾರು ೬೬೮.೦೦ ಕೋಟಿಯಾಗಿದೆ. ಇದರಿಂದ ಹೈದರಾಬಾದ ಕರ್ನಾಟಕ ಪ್ರದೇಶದ ಹಳ್ಳಿಗಳು ಸಮತೋಲಕ್ಕೆ ಬರಲು ಹಾಕುತ್ತಿರುವ ದಾಪುಕಾಲಿನಲ್ಲಿ ಗಟ್ಟಿ ಹೆಜ್ಜೆಗಳು ಮೂಡತೊಡಗಿರುವುದು, ನೆಮ್ಮದಿಯ ಕಡೆಗೆ ಗ್ರಾಮದ ರೈತ ವಿಚಾರ ಮಾಡುವಂತಾಗಿರುವುದು ಸಾಧನೆಯ ಮೊದಲ ಮಜಲು ಎನ್ನಬೇಕು. ಹೀಗೆ ಅಭಿವೃದ್ಧಿಯತ್ತ ದಾಪುಕಾಲು ಹಾಕುತ್ತ ಮುಟ್ಟಿದ ೨೦೦೨-೨೦೦೩ರ ಮಜಲಿನ ಲೆಕ್ಕಾಚಾರದಲ್ಲಿ ಯಾವ ಯಾವ ಕ್ಷೇತ್ರದಲ್ಲಿ ಈ ಭಾಗದ ಗ್ರಾಮೀಣ ಪ್ರದೇಶಗಳು ಎಷ್ಟು ಮೊತ್ತದ ಪ್ರಗತಿಯನ್ನು ಸಾಧಿಸಿವೆಯೆಂಬುದಕ್ಕೆ, ಆ ಒಂದು ವರ್ಷದ ಲೆಕ್ಕ ಒಂದು ವೈಜ್ಞಾನಿಕ ಸಮೀಕ್ಷೆಗೆ ಅನುವು ಮಾಡಿಕೊಡುತ್ತದೆ.

12090

ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಈ ವರೆಗಿನ ಪ್ರಗತಿಯನ್ನು ಅನುಲಕ್ಷಿಸಿದರೆ ಈ ಭಾಗದ ಗ್ರಾಮೀಣ ಅಭಿವೃದ್ಧಿಯಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿರುವುದು ಕಂಡು ಬರುತ್ತದೆ. ಏಕೆಂದರೆ ಹೈದರಾಬಾದ ಕರ್ನಾಟಕ ಅಭಿವೃದ್ಧಿ ಮಂಡಳಿಯ ಭೌತಿಕ ಸಾಧನೆಯ ವಿವರಗಳನ್ನು ಎಂದರೆ ಅದು ಈವರೆಗೆ ೧೯೯೦-೨೦೦೪ ರವರೆಗಿನ ಅವಧಿಯಲ್ಲಿ ವಿವಿಧ ವಲಯಗಳಲ್ಲಿ ಪೂರ್ಣಮಾಡಿದ ಕಾಮಗಾರಿಯ ವಿವರಗಳನ್ನು ಪಕ್ಷಿನೋಟದಲ್ಲಿ ನೋಡಿದಾಗ ಮನದಟ್ಟಾಗುತ್ತದೆ:

| ಕ್ರ.ಸಂ. | ವಲಯ | ಒಟ್ಟು ಸಾಧನೆ (ಪೂರ್ಣವಾದ ಕಾಮಗಾರಿ) |
|---|---|---|
| ೧. | ರಸ್ತೆ ಮತ್ತು ಸೇತುವೆ (ಮಂಡಳಿ) | ೭೫೪೭ |
| ೨. | ರಸ್ತೆ ಮತ್ತು ಸೇತುವೆ (ನಬಾರ್ಡ್) | ೧೨೧ |
| ೩. | ಆರೋಗ್ಯ | ೧೮೪ |
| ೪. | ಶಿಕ್ಷಣ | ೨೧೬೫ |

## ೨೦೦೨-೦೩ನೇ ಸಾಲಿನ ಹೈದರಾಬಾದ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯ ಜಿಲ್ಲಾವಾರು ಹಾಗೂ ವಲಯವಾರು ಹಂಚಿಕೆ ಮತ್ತು ಖರ್ಚಿನ ಮೊತ್ತ (ರೂಪಾಯಿ ಲಕ್ಷಗಳಲ್ಲಿ)

| ಕ್ರ.ಸಂ. | ವಲಯ | ಗುಲಬರ್ಗಾ | | ಬೀದರ | | ರಾಯಚೂರು | | ಕೊಪ್ಪಳ | | ಒಟ್ಟು | |
|---|---|---|---|---|---|---|---|---|---|---|---|
| ಸಂ. | | ಹಂಚಿಕೆ | ಖರ್ಚು | ಹಂಚಿಕೆ | ಖರ್ಚು | ಹಂಚಿಕೆ | ಖರ್ಚು | ಹಂಚಿಕೆ | ಖರ್ಚು | ಹಂಚಿಕೆ | ಖರ್ಚು |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ |
| ೧ | ರಸ್ತೆ ಮತ್ತು ಸೇತುವೆ | ೬೯೬.೪೧ | ೨೦೫.೬೭ | ೨೯೯.೪೯ | ೧೪೫.೩೪ | ೨೬೪.೩೨ | ೬೫.೩೭ | ೨೭೫.೫೯ | ೪೨.೪೪ | ೧೫೩೫.೮೧ | ೪೫೮.೮೨ |
| ೨ | ರಸ್ತೆ ಮತ್ತು ಸೇವೆ ನಬಾರ್ಡ | ೭೩೪.೦೩ | ೪೮೭.೧೧ | ೨೫೪.೧೩ | ೧೨೨.೩೧ | ೫೬೯.೨೪ | ೩೨೭.೨೫ | ೪೩೮.೨೨ | ೫೮೪.೦೪ | ೧೯೯೫.೮೨ | ೧೫೨೧.೭೧ |
| ೩ | ಸಣ್ಣ ನೀರಾವರಿ | ೦೮.೫೭ | ೦೪.೮೩ | ೦೪.೬೫ | ೦೨.೪೯ | ೦೪.೩೯ | ೦.೦೦ | ೩೨.೨೩ | ೨೮.೩೨ | ೪೯.೮೪ | ೫೭.೩೦ |
| ೪ | ಶಿಕ್ಷಣ | ೭೩.೯೧ | ೫೭.೦೪ | ೧೪.೨೦ | ೦೪.೭೬ | ೩೯.೮೧ | ೧೯.೮೫ | ೧೨.೧೯ | ೦೦.೦೦ | ೧೦೪.೧೧ | ೮೧.೬೫ |
| ೫ | ಕುಡಿಯುವ ನೀರು ಸರಬರಾಜು ಯೋಜನೆ | ೨೬.೪೧ | ೦.೦೦ | ೦೫.೪೩ | ೦೦.೦೦ | ೦೨.೦೦ | ೦೦.೦೦ | ೦೧.೦೮ | ೦೦.೦೦ | ೩೪.೯೨ | ೦೦.೦೦ |
| ೬ | ಆರೋಗ್ಯ | ೩೦.೨೯ | ೧೮.೫೯ | ೧೦.೪೪ | ೦೦.೦೦ | ೨೦.೪೨ | ೦೦.೦೦ | ೦೯.೦೮ | ೦೦.೦೦ | ೭೦.೩೩ | ೧೮.೫೯ |
| ೭ | ವಿದ್ಯುದೀಕರಣ | ೨೫.೫೨ | ೦.೦೦ | ೧೧.೦೧ | ೦೪.೯೧ | ೧೮.೦೫ | ೦೩.೯೩ | ೧೦.೮೭ | ೦೦.೯೯ | ೬೫.೪೫ | ೦೯.೬೩ |
| ೮ | ನಗರಪಾಲಿಕೆ ಕಾಮಗಾರಿ | ೭೦.೦೦ | ೫೧.೩೮ | ೬೧.೮೧ | ೨೧.೬೨ | ೪೧.೩೯ | ೦೨.೪೩ | ೩೫.೪೬ | ೦೦.೦೦ | ೨೦೮.೬೬ | ೭೫.೪೩ |
| ೯ | ಇತರೆ | ೩೬೫.೬೫ | ೧೦೯.೯೭೫ | ೮೦.೦೦ | ೫೩.೬೩ | ೮೫.೦೦ | ೬೫.೨೦ | ೧೦.೦೦ | ೦೫.೬೨೭ | ೫೦೪.೬೫ | ೨೩೪.೪೩೨ |
| ೧೦ | ಸಿಬ್ಬಂದಿ | ೧೨೦.೦೦ | ೧೧೬.೧೧ | ೦೦.೦೦ | ೦೦.೦೦ | ೦೦.೦೦ | ೦೦.೦೦ | ೦೦.೦೦ | ೦೦.೦೦ | ೧೨೦.೦೦ | ೧೧೬.೧೧ |
| ೧೧ | (ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ಯ) | ೧೧೨೬.೪೧ | ೮೪೮.೪೧ | ೧೮೦.೪೩ | ೧೦೦.೦೦ | ೫೭೭.೦೦ | ೪೦೦.೦೦ | ೬೭೬.೦೮ | ೪೧೧.೦೦ | ೨೫೫೯.೯೨ | ೧೭೫೯.೪೧ |
| ೧೨ | ಸಮಾಜಕಲ್ಯಾಣ | ೦೦.೦೦ | ೦೬.೭೫ | ೦೪.೭೭ | ೦೪.೦೦ | ೦೦.೦೦ | ೧೮.೬೫ | ೦೦.೬೭ | ೦೦.೦೦ | ೦೫.೪೪ | ೨೯.೪೦ |
| ೧೩ | ಅರಣ್ಯ | ೨೭.೦೦ | ೦೦.೦೦ | ೧೮.೦೦ | ೦೦.೦೦ | ೧೭.೦೦ | ೦೦.೦೦ | ೧೩.೭೫ | ೦೬.೭೫ | ೭೫.೭೫ | ೦೬.೭೫ |
| | ಒಟ್ಟು | ೩೩೦೪.೨೦ | ೧೯೦೫.೮೬೫ | ೯೪೪.೩೬ | ೪೫೯.೦೬ | ೧೬೩೮.೬೨ | ೯೦೨.೬೮ | ೧೫೧೫.೩೨ | ೧೦೭೭.೧೬೭ | ೭೪೦೨.೫೦ | ೪೩೪೪.೭೭೨ |
| | ಬಳ್ಳಾರಿ ಲೆಕ್ಕ ಇಳುವರಿ | - | - | - | - | - | - | - | - | ೧೪೬೪.೬೬ | ೮೪೨.೩೬೦ |
| | ನಿವ್ವಳ | | | | | | | | | ೮೮೬೭.೧೬ | ೫೧೮೭.೧೩೨ |

| | | |
|---|---|---|
| ೫. | ಸಣ್ಣ ನೀರಾವರಿ | ೫೪೬ |
| ೬. | ಕುಡಿಯುವ ನೀರಿನ ಸರಬರಾಜು ಯೋಜನೆ | ೭೧೯ |
| ೭. | ವಿದ್ಯುದೀಕರಣ | ೮೩೨ |
| ೮. | ಸಮಾಜ ಕಲ್ಯಾಣ | ೯೫ |
| ೯. | ಇತರ ಕಟ್ಟಡಗಳು ಕಾಮಗಾರಿ | ೨೬೩೧ |
| ೧೦. | ಅರಣ್ಯ | ೩೦ |

ಒಟ್ಟು ೧೪೮೭, ಒಟ್ಟು ವೆಚ್ಚ ಸುಮಾರು ೬೬೮ ಕೋಟಿ ರೂ.ಗಳು

ಇವುಗಳಲ್ಲದೆ ಮುಂದುವರೆದ ಕಾಮಗಾರಿಗಳನ್ನು ಪೂರ್ಣಗೊಳಿಸಲು ಹಾಗೂ ಹೊಸ ಕಾಮಗಾರಿಗಳನ್ನು ಹಮ್ಮಿಕೊಂಡು ಸರ್ವತೋಮುಖ ಪ್ರಗತಿಯ ಚೆಲುವನ್ನು ಒಂದು ನೆಮ್ಮದಿಯ ಹಂತದಲ್ಲಿ ಪಡೆಯಲು, ಸುಮಾರು ೬೩ ಕೋಟಿ ಹೆಚ್ಚುವರಿ ಅನುದಾನದ ಅವಶ್ಯಕತೆಯಿದೆಯೆಂದು ತಿಳಿದುಬಂದಿದೆ.

ಹೈದರಾಬಾದ ಕರ್ನಾಟಕ ಪ್ರದೇಶದ ಗ್ರಾಮೀಣ ಅಭಿವೃದ್ಧಿಯ ಪಕ್ಷಿನೋಟದ ಹಿನ್ನೆಲೆಯಲ್ಲಿ ಈ ಕೆಳಗಿನ ಕ್ಷೇತ್ರಗಳಲ್ಲಿಯ ಅಂಕಿಸಂಖ್ಯೆಗಳ ಇಣಕುನೋಟದ ಅವಶ್ಯಕತೆಯಿದೆ ಎನ್ನಿಸುವುದು ಸಹಜ. ಏಕೆಂದರೆ ಅದರಿಂದಾಗಿ ಪೂರ್ಣ ನೋಟದ ಅನುಸಂಧಾನಕ್ಕೆ ತೀವ್ರವಾಗಿ ತೊಡಗಲು ಸಾಧ್ಯ:

**ಅಂತರಜಲ ಸಾಮರ್ಥ್ಯ ಮತ್ತು ಬಳಕೆ :**

| ಜಿಲ್ಲೆ | ಒಟ್ಟು ವಾರ್ಷಿಕ ನೀರು ಇಂಗುವಿಕೆ ಹೆ.ಮೀ. | ನಿವ್ವಳ ವಾರ್ಷಿಕ ಇಂಗುವಿಕೆ ಹೆ.ಮೀ | ೧೯೯೧ರಲ್ಲಿ ಬಳಸುತ್ತಿದ್ದ ಅಂತರ್ಜಲ | ಬಳಸುವ ಶೇಕಡಾ ಪ್ರಮಾಣ |
|---|---|---|---|---|
| ೧. ಬೀದರ | ೫೧,೦೨೧ | ೪೩,೩೬೮ | ೨೦,೦೨೦ | ೪೬ |
| ೨. ಕಲಬುರಗಿ | ೧,೦೫,೪೮೫ | ೯೮,೦೯೬ | ೧೯,೧೭೨ | ೨೧ |
| ೩. ರಾಯಚೂರು | ೧,೦೪,೬೮೨ | ೮೮,೯೮೧ | ೨೦,೨೯೨ | ೨೩ |
| ಒಟ್ಟು | ೨,೬೧,೧೮೮ | ೨,೩೦,೪೪೫ | ೫೯,೯೬೯ | ೯೦ |

**ಸಾಕ್ಷರತೆ (೧೯೯೧) :**

| | ಪುರುಷರು | ಸ್ತ್ರೀಯರು | ಒಟ್ಟು |
|---|---|---|---|
| ೧. ಬೀದರ | ೪೭.೬೦ | ೨೪.೭೪ | ೩೬.೪೪ |
| ೨. ಕಲಬುರಗಿ | ೪೧.೭೫ | ೧೯.೮೭ | ೩೧.೦೨ |
| ೩. ರಾಯಚೂರು | ೩೯.೫೪ | ೧೭.೮೧ | ೨೮.೭೮ |
| ಒಟ್ಟು | ೧೨೮.೮೯ | ೬೨.೪೨ | ೯೬.೨೪ |

**ಗ್ರಾಮೀಣ ವಾಸದ ಮನೆಗಳು, ಕುಟುಂಬಗಳು (೧೯೯೧) :**

| | ಮನೆಗಳು | ಕುಟುಂಬಗಳು |
|---|---|---|
| ೧. ಬೀದರ | ೧,೬೫,೧೮೪ | ೧,೬೭,೪೪೭ |
| ೨. ಕಲಬುರಗಿ | ೩,೩೬,೫೮೯ | ೩,೩೮,೧೯೮ |
| ೩. ರಾಯಚೂರು | ೩,೧೪,೮೩೮ | ೩,೧೮,೦೮೧ |
| ಒಟ್ಟು | ೮,೧೬,೬೦೯ | ೮,೨೩,೭೨೬ |

**ಗ್ರಾಮ ಪಂಚಾಯತಿಗಳು (೧೯೯೪-೯೫)**

ಬೀದರ ೧೧೨ + ಕಲಬುರಗಿ ೩೩೯ + ರಾಯಚೂರು ೩೦೨ = ೭೫೮

**ಉಪಗ್ರಾಮಗಳು (೧೯೯೪-೯೫)**

ಬೀದರ ೯೮ + ಕಲಬುರಗಿ ೧೪೫ + ರಾಯಚೂರು ೧೭೭ = ೪೨೦

**ಪಂಪುಸೆಟ್ಟುಗಳು (೧೯೯೪-೯೫)**

ಬೀದರ ೩೬೦೧೮ + ಕಲಬುರಗಿ ೩೦೦೮೧ + ರಾಯಚೂರು ೪೦೩೯೪ = ೧೦೬೪೯೩

**ನ್ಯಾಯಬೆಲೆ ಅಂಗಡಿಗಳು (ಗ್ರಾಮೀಣ : ೧೯೯೪-೯೫)**

ಬೀದರ ೫೦೮ + ಕಲಬುರಗಿ ೮೦೩ + ರಾಯಚೂರು ೯೪೪ = ೨೨೫೫

**ಸಾಗುವಳಿ ಲಭ್ಯವಿರುವ ಭೂಮಿ : (ಗ್ರಾಮೀಣ : ೧೯೯೪-೯೫) :**

| | ವ್ಯವಸಾಯೇತರ | ಬಂಜರು | ಒಟ್ಟು | |
|---|---|---|---|---|
| ಬೀದರ | ೨೧,೯೧೫ | ೨೧,೫೩೪ | ೪೩,೪೪೯ | ಹೆಕ್ಟೇರು |
| ಕಲಬುರಗಿ | ೫೫,೨೧೭ | ೬೩,೩೨೪ | ೧,೧೮,೫೪೧ | ಹೆಕ್ಟೇರು |
| ರಾಯಚೂರು | ೫೯,೪೨೭ | ೩೬,೭೦೯ | ೯೬,೧೩೬ | ಹೆಕ್ಟೇರು |
| ಒಟ್ಟು | ೧,೩೬,೫೫೯ | ೧,೨೧,೫೬೭ | ೨,೫೮,೧೨೬ | |

**ಭೂಮಿಯ ಬಳಕೆ ಸಾಗುವಳಿ ಮಾಡದಿರುವ ಭೂಮಿ (ಗ್ರಾಮೀಣ ೧೯೯೪-೯೫) :**

| | ಸಾಗುವಳಿಗೆ ಯೋಗ್ಯವಾದ ಬಂಜರು | ಖಾಯಂ ಗೋಮಾಳ | ಕೃಷಿ ಮತ್ತು ತೋಪುಗಳು | ಒಟ್ಟು ಹೆಕ್ಟೇರು |
|---|---|---|---|---|
| ಬೀದರ | ೧೯,೩೮೫ | ೧೪,೨೭೬ | ೧೧,೫೯೩ | ೪೫,೨೫೪ |
| ಕಲಬುರಗಿ | ೧೧,೮೪೯ | ೩೨,೮೮೫ | ೧೭೫೪ | ೫೧,೪೮೮ |
| ರಾಯಚೂರು | ೧೩,೮೭೬ | ೩೫,೫೦೪ | ೧೩,೮೯೦ | ೬೩,೨೭೦ |
| ಒಟ್ಟು | ೪೫,೧೧೦ | ೨,೧೭,೬೬೫ | ೨೭,೨೩೭ | ೧,೯೦,೦೧೨ |

**ನೀರಾವರಿ ನಿವ್ವಳ ಪ್ರದೇಶ (೧೯೯೪-೯೫) :**

| | ಕಾಲುವೆಗಳಿಂದ | ಕೆರೆಗಳಿಂದ | ಬಾವಿಗಳಿಂದ |
|---|---|---|---|
| ಬೀದರ | ೧೩೮ ಹೆಕ್ಟೇರು | ೯೩೨ ಹೆಕ್ಟೇರು | ೨೬,೮೯೪ ಹೆಕ್ಟೇರು |
| ಕಲಬುರಗಿ | ೮೪,೧೯೭ ಹೆಕ್ಟೇರು | ೬೯೪೧ ಹೆಕ್ಟೇರು | ೨೯,೪೦೪ ಹೆಕ್ಟೇರು |
| ರಾಯಚೂರು | ೧,೮೬,೭೫೫ ಹೆಕ್ಟೇರು | ೫,೦೯೨ ಹೆಕ್ಟೇರು | ೩೫,೨೩೫ ಹೆಕ್ಟೇರು |
| ಒಟ್ಟು | ೨,೭೧,೦೯೦ಹೆಕ್ಟೇರು | ೧೨೯೬೫ ಹೆಕ್ಟೇರು | ೯೧,೫೩೩ ಹೆಕ್ಟೇರು |

**ಪಶುವೈದ್ಯ ಶಾಲೆಗಳು (೧೯೯೪-೯೫) :**

| ಕೇಂದ್ರಗಳು | ಆಸ್ಪತ್ರೆಗಳು | ಚಿಕಿತ್ಸಾಲಯಗಳು | ಪ್ರಾಥಮಿಕ ಪಶುವೈದ್ಯ ಕೇಂದ್ರಗಳು | ಸಂಚಾರಿ ಚಿಕಿತ್ಸಾಲಯಗಳು | ಕೃತಕ ಗರ್ಭಧಾರಣಾ ಕೇಂದ್ರ |
|---|---|---|---|---|---|
| ಬೀದರ | ೫ | ೨೫ | ೪೦ | ೫ | ೯ |
| ಕಲಬುರಗಿ | ೧೧ | ೩೬ | ೧೧೨ | ೧೦ | ೨೨ |
| ರಾಯಚೂರು | ೧೦ | ೧೮ | ೬೮ | ೯ | ೧೨ |
| ಒಟ್ಟು | ೨೬ | ೨೯ | ೨೨೦ | ೨೪ | ೪೮ |

**ಭಾಗ್ಯಮಂದಿರ ಇತ್ಯಾದಿಗಳು (೧೯೯೪-೯೫) :**

| | | ಭಾಗ್ಯಮಂದಿರ | ನೆಟ್ಟ ಸಸಿಗಳು | ಸ್ಥಾಪಿಸಲ್ಪಟ್ಟ ಜೈವಿಕ ಅನಿಲಗಳು | ಅಂಗನವಾಡಿ ಕೇಂದ್ರಗಳು. |
|---|---|---|---|---|---|
| ೧) | ಬೀದರ | - | ೩೪ | ೪೫೫ | ೮೮೮ |
| ೨) | ಕಲಬುರಗಿ | ೫ | ೪೯ | ೭೫ | ೧೮೫೫ |
| ೩) | ರಾಯಚೂರು | ೧೪ | ೪೬ | ೧೨೫೫ | ೨೦೦೩ |
| | ಒಟ್ಟು | ೧೯ | ೧೨೯ | ೧೭೮೫ | ೪೭೪೬ |

ಈ ಗ್ರಾಮಾಭಿವೃದ್ಧಿಯ ವಿವಿಧ ಕ್ಷೇತ್ರಗಳಲ್ಲಿಯ ಸಾಧನೆಗಳ ಅಂಕಿ ಸಂಖ್ಯೆಗಳ ಆಧಾರದಿಂದ ಆಳಕ್ಕೆ ಇಳಿದು ನೋಡಲಪೇಕ್ಷಿಸಿದಾಗ ಈವರೆಗೆ ನಡೆದುಬಂದ ದಾರಿಯಲ್ಲಿ ಅನೇಕ ಎಡರು ತೊಡರುಗಳನ್ನು ಅನುಭವಿಸಿದ್ದರೂ, ಗುರಿ ಸಾಧನೆಯಲ್ಲಿ ನಮ್ಮ ನಡೆ ಸಕ್ರಮದತ್ತವೇ ಇದೆ. ಅವುಗಳನ್ನು ಈ ಕೆಳಗಿನಂತೆ ಮಾದರಿಗಾಗಿ ಉದಾಹರಿಸುತ್ತ ನಮ್ಮ ಗ್ರಾಮಗಳ ಅಭಿವೃದ್ಧಿಯ ಯೋಜನೆಗಳ ಅನುಷ್ಠಾನದಲ್ಲಿಯ ಸ್ಪಷ್ಟ ಚಿತ್ರಣವನ್ನು ಪಡೆಯಬಹುದು.

೧. ಪ್ರಖರವಾದ ಬಿಸಿಲು ಹಾಗೂ ಮಳೆಯ ಅಭಾವದಿಂದ ಕಲಬುರಗಿ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಸದಾ ತತ್ತರವಿರುತ್ತವೆ. ಬೀದರದಲ್ಲಿ ಸ್ವಲ್ಪ ಮಳೆಯ ಪ್ರಮಾಣವು ಹೆಚ್ಚಿದ್ದರೂ ಅಲ್ಲಿಯೂ ಅನೇಕ ಸಲ ಕೃಷಿಗೆ ಬೇಕಾಗುವಷ್ಟು ನೀರು ಸಿಗಲಾರದೆ ಹೋಗುತ್ತದೆ. ಇದನ್ನು ಗಮನಿಸಿ ಈ ಪ್ರದೇಶದಲ್ಲಿ ಜಲಸಂಪನ್ಮೂಲವನ್ನು ಬಳಸಿಕೊಳ್ಳುವುದು, ಅಂತರ್ಜಲ ಮಟ್ಟದ ವೃದ್ಧಿಗೆ ಗಮನ ಕೊಡುವುದು ಗ್ರಾಮೀಣ ಶುದ್ಧ ಕುಡಿಯುವ ನೀರಿನ ಪೂರೈಕೆ ಕುರಿತು ಗಮನ ಹರಿಸುವುದು, ಸಂಪರ್ಕ ರಸ್ತೆಗಳನ್ನು ನಿರ್ಮಿಸುವುದು, ವಸತಿ ಸೌಕರ್ಯಗಳನ್ನು ಒದಗಿಸುವುದು, ನೈರ್ಮಲ್ಯ ಕಾಪಾಡಿ ವಾತಾವರಣವನ್ನು ಆಪ್ಯಾಯಮಾನಗೊಳಿಸಿ ಆರೋಗ್ಯ ಸೇವೆಯನ್ನು ಪೂರ್ಣ ಪ್ರಮಾಣದಲ್ಲಿ ನೀಡುವುದು, ಶೈಕ್ಷಣಿಕ ಕ್ಷೇತ್ರವನ್ನು ಅಭಿವೃದ್ಧಿಗೊಳಿಸುವುದು - ಇತ್ಯಾದಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡಲಾಗಿದೆ. ಅವುಗಳು ತಕ್ಕಮಟ್ಟಿಗೆ ಪ್ರಭಾವ ಬೀರಿವೆ.

೨. ಬರುವಷ್ಟು ಮಳೆಯ ನೀರನ್ನು ವ್ಯರ್ಥ ಹರಿದು ಹೋಗದಂತೆ ತಡೆಯಲು ಜಲಾನಯನ ಅಭಿವೃದ್ಧಿ ಯೋಜನೆಯಲ್ಲಿ ಕೃಷಿ ಹೊಂಡಗಳನ್ನು ನಿರ್ಮಿಸಲಾಗಿದೆ. ಇದರಿಂದಾಗಿ ಭೂಮಿಯಲ್ಲೆ ನೀರು ಇಂಗಿ ಅಂತರ್ಜಲದ ಮಟ್ಟ ಹೆಚ್ಚಿದೆ. ಅಂತೆಯೇ ಗ್ರಾಮ ಗ್ರಾಮಗಳಲ್ಲಿ ಕೊಳವೆ ಬಾವಿಗಳು ಪುನಶ್ಚೇತನ ಪಡೆದು ಸಾಕಷ್ಟು ಕೆಲಸ ಮಾಡುತ್ತಿವೆ. ಜೊತೆಗೆ ಸಮೃದ್ಧಿಯಾಗಿ ನೀರನ್ನು ಕೊಡುವ ನವ ಕೊಳವೆ ಬಾವಿಗಳು ಬಂದಿವೆ. ಕಲಬುರಗಿ ಜಿಲ್ಲೆಯೊಂದರಲ್ಲೆ ೨೦೦೩-೨೦೦೪ರಲ್ಲಿ ೨೫೩ ಕೃಷಿ ಹೊಂಡಗಳನ್ನು ನಿರ್ಮಿಸಲಾಗಿದ್ದು ಕೃಷಿ ಉತ್ಪಾದನೆಯಲ್ಲಿ ಪ್ರಗತಿ ಇದೆ. ದನಕರುಗಳಿಗೆ, ಹಕ್ಕಿ ಪಕ್ಷಿಗಳಿಗೆ, ಕುಡಿಯುವ ನೀರಿನ ಕೊರತೆ ಕಮ್ಮಿಯಾಗಿದೆ. ಸಸ್ಯಗಳ ಸಂರಕ್ಷಣೆ, ಅರಣ್ಯಾಭಿವೃದ್ಧಿ ಚೇತನಗೊಂಡಿವೆ. ಹಣ್ಣು ಹಂಪಲ ಕಾಯಿಪಲ್ಲೆಗಳನ್ನು ಬೆಳೆದುಕೊಳ್ಳಲು ಅವಕಾಶ ಹೆಚ್ಚಾಗಿದೆ.

೩. ಕೃಷಿ ಅಭಿವೃದ್ಧಿ ಸಂಬಂಧಿ ಮಾಹಿತಿ ಕೇಂದ್ರಗಳು ಪರಿಣಾಮಕಾರಿಯಾಗಿ ಕೆಲಸ ಮಾಡುತ್ತಿವೆ.

೪. ಚೆಕ್ ಡ್ಯಾಮ್ ಸಾಫಲ್ಯದಿಂದಾಗಿ ಬಂಜರು ಭೂಮಿ ಸಾಗುವಳಿಗೆ ಬರುವಂತೆ ಕ್ರಮ ಪ್ರಗತಿ ಮಟ್ಟದಲ್ಲಿದೆ ಎಸ್. ಜೆ. ಆರ್.ವೈ. ಡಿಪಿಎಪಿ, ರಾಷ್ಟ್ರೀಯ ಸಮ್ಯ ವಿಕಾಸ, ಪ್ರಧಾನಮಂತ್ರಿ ರೋಜಗಾರ, ಬರಪರಿಹಾರ, ನದಿ ಕಣಿವೆ ಯೋಜನೆ ಹಾಗೂ ರಾಷ್ಟ್ರೀಯ ಜಲಾನಯನ ಯೋಜನೆಗಳ ಅಡಿಯಲ್ಲಿ ಅಂತರ್ಜಲ ಮಟ್ಟ ಹೆಚ್ಚಾಗಿದೆ. ತತ್‌ಫಲವಾಗಿ ಗ್ರಾಮ ಗ್ರಾಮಗಳಲ್ಲಿಯ ಪರಿಸರ ಹಚ್ಚ ಹಸುರಾಗಿ ಕಂಗೊಳಿಸಲು ಸಾಧ್ಯ ಮಾಡಿಕೊಡತೊಡಗಿದೆ.

೫. ಜನರಿಗೆ ಕುಡಿಯುವ ನೀರಿನ ಸರಬರಾಜು ಗ್ರಾಮ ಗ್ರಾಮಗಳಲ್ಲಿ ಸಾಧ್ಯವಾದ ನೆಲೆಯಲ್ಲಿ ಕಂಡುಬರುತ್ತಿದೆ.

೬. ಗ್ರಾಮೋದ್ಯೋಗಗಳಿಗೆ ಪ್ರೋತ್ಸಾಹ ನೀಡುತ್ತಿದ್ದ ಸ್ವಾವಲಂಬನೆಯ ಬಗ್ಗೆ ಇರುವ ಅವಕಾಶಗಳನ್ನು ಜನ ಮನದೆರೆದು ಬಳಸಿಕೊಳ್ಳುವುದಕ್ಕೆ ಮುಂದೆ ಬರುತ್ತಿದ್ದಾರೆ.

೭. ಗ್ರಾಮ ಗ್ರಾಮಗಳಿಂದ ತನ್ಮೂಲಕ ತಾಲ್ಲೂಕು, ಜಿಲ್ಲೆಗಳಿಗೆ ಸಂಪರ್ಕ ಸುಧಾರಿಸಿದೆ. ರಸ್ತೆಗಳ ನಿರ್ಮಾಣವು ಭರದಲ್ಲಿ ನಡೆದಿದೆ. ಆದರೆ ರಸ್ತೆ ಕಾಮಗಾರಿಯಲ್ಲಿ ಇನ್ನೂ ಗಟ್ಟಿತನ ಬೇಕು. ಸಾರಿಗೆ ಸೌಲಭ್ಯವು ಕುದುರಿ ಬಂದಿದೆ. ಆದರೆ ಪ್ರಮಾಣದ ಮಟ್ಟ ಹೆಚ್ಚಬೇಕಿದೆ.

೮. ವಿಶೇಷ ಉದ್ಯೋಗ ಅವಕಾಶಗಳನ್ನು ಸೃಷ್ಟಿಸಲು ಕೈಮಗ್ಗಗಳಿಗೆ ಪ್ರೋತ್ಸಾಹ ನೀಡಲಾಗುತ್ತಿದೆ. ಕೃಷಿ ಉತ್ಪಾದನೆಗಳಿಗಾಗಿ ಆದ್ಯತೆ ಬರತೊಡಗಿದೆ.

೯. ವಿದ್ಯುತ್ ಸರಬರಾಜು ಅಭಿವೃದ್ಧಿಯ ಕಾರ್ಯದಲ್ಲಿ ತನ್ನ ಮಹತ್ವದ ಪಾಲನ್ನು ನೀಡತೊಡಗಿದೆ. ವಿದ್ಯುತ್ ಬೆಲೆ ಸಂದಾಯ ಮಾಡುವದರಲ್ಲಿಯ ತೊಡಕುಗಳನ್ನು ಸಡಿಲುಗೊಳಿಸಲಾಗಿದೆ.

೧೦. ಪ್ರಾಥಮಿಕ ಆರೋಗ್ಯ ಕೇಂದ್ರಗಳಿದ್ದು ಅವುಗಳಿಗೆ ಸ್ವಯಂ ಕಟ್ಟಡಗಳನ್ನು ಒದಗಿಸಲಾಗಿದೆ. ಆದರೆ ಸಿಬ್ಬಂದಿಗಳು ಮನಃಪೂರ್ವಕವಾಗಿ ಅಲ್ಲಿಯೇ ನಿಲ್ಲಲು ಮೂಲಭೂತ ಸೌಕರ್ಯಗಳು ಕಾರ್ಯಾನುಷ್ಠಾನಕ್ಕೆ ಬರಬೇಕಿದೆ.

೧೧. ಹಳ್ಳಿ ಹಳ್ಳಿಗೆ ಶಾಲೆಗಳಿದ್ದು ಪ್ರಾಥಮಿಕ ಶಿಕ್ಷಣದ ಸೌಲಭ್ಯ ದೊರಕುವಂತಾಗಿದೆ. ಆದರೆ ಶಾಲಾ ಪರಿಸರ ಇನ್ನೂ ಉತ್ತಮಗೊಳ್ಳಬೇಕಿದೆ. ಶಿಕ್ಷಕರ ಖಾಯಂ ವಸತಿಗಾಗಿ ಅವರಿಗೆ ವಸತಿ ಸೌಕರ್ಯಗಳನ್ನು ಇನ್ನೂ ತೀವ್ರಗೊಳಿಸಬೇಕಿದೆ. ಸಾಕ್ಷರತೆಯ ಪ್ರಮಾಣ ಹೆಚ್ಚತೊಡಗಿದ್ದು ಗ್ರಾಮೀಣ ಪ್ರತಿಭೆಗಳು ಅರಳುವುದಕ್ಕೆ ಸಾಧನೆಗಳು ಪ್ರೇರಣೆ ನೀಡತೊಡಗಿವೆ. ಸರಕಾರಕ್ಕೂ ಗ್ರಾಮದ ಪ್ರಜೆಗೂ ನೇರ ಸಂಪರ್ಕ ಬರತೊಡಗಿದ್ದು ಕೃತಕ ದಲ್ಲಾಳಿತನ ದೂರ ಸರಿಯುತ್ತಿದೆ.

೧೨. ಐತಿಹಾಸಿಕ ಸ್ಥಳಗಳ ಸಂರಕ್ಷಣೆ ಹಾಗೂ ಸಾಂಸ್ಕೃತಿಕ ನೆಲೆಗಳ ವಿಕಾಸಗಳೂ ಲಕ್ಷ್ಯ ಪಡೆಯುತ್ತಿವೆ.

೧೩. ಸಾಮಾನ್ಯ ಆರ್ಥಿಕ ಮಟ್ಟದಿಂದ ಕೆಳಗೆ ಇರುವವರಿಗೆ ಮನೆಗಳನ್ನು ಒದಗಿಸುವ ಕಾರ್ಯವೂ ಅನುಷ್ಠಾನದಲ್ಲಿದೆ.

ಈ ರೀತಿ ಸಮೀಕ್ಷಿಸಿದ ಹೈದರಾಬಾದ ಕರ್ನಾಟಕ ಪ್ರದೇಶದ ಗ್ರಾಮಗಳಲ್ಲಿ ಮೂಲಭೂತ ಸೌಕರ್ಯಗಳು ಕಾಲಘಟ್ಟದಲ್ಲಿ ದೊರೆಯುವಂತೆ ಆಗಿದ್ದರೂ, ಜನತೆಯಲ್ಲಿ ಇನ್ನಷ್ಟು ಇನ್ನಷ್ಟು ಸ್ವಯಂ ಕಾರ್ಯನಿರತವಾಗುವಂತಹ ಇಚ್ಛಾಶಕ್ತಿಯು ಅರಳಿದಂತೆಲ್ಲ ಸರ್ವೋದಯದ ಗ್ರಾಮ ಸ್ವರಾಜ್ಯವು ಪೂರ್ಣ ನನಸನ್ನು ಕಾಣುತ್ತದೆ. ಈ ಪ್ರದೇಶದ ಗ್ರಾಮ ಗ್ರಾಮಗಳಲ್ಲಿ ಸಂಪನ್ಮೂಲಗಳಿಗೆ ಕೊರತೆಯಿಲ್ಲ. ಆದರೆ ಗ್ರಾಮ ಪ್ರಜೆ ಇಚ್ಛಾಶಕ್ತಿಯನ್ನು ಬೆಳೆಸಿಕೊಂಡು ಅವುಗಳ ಸದ್ಬಳಕೆಯನ್ನು ಇನ್ನೂ ಇನ್ನೂ ಮಾಡಿಕೊಳ್ಳಬೇಕಿದೆ. ಅಧಿಕಾರ ಪ್ರಾಪ್ತಿಯ ಜೊತೆಗೆ ವಿನಯ ಸಂಪನ್ನತೆಯನ್ನು ಧಾರಾಳವಾಗಿ ಮೈಗೂಡಿಸಿಕೊಳ್ಳುವ ಕಾರ್ಯ ತೀವ್ರಗತಿಯಲ್ಲಿ ಬೆಳೆಯಬೇಕಿದೆ. ಅದೇ ರೀತಿ ನ್ಯಾಯ ಸಂಪಾದನೆಯಲ್ಲಿ ವಿನಯ ತುಂಬಿದ ಜಿಗುಟುತನ ಬೆಳೆದಷ್ಟು ಇಲ್ಲಿ ಆಗುತ್ತಿರುವ ಶೋಷಣೆ ನಿಲ್ಲುತ್ತದೆ. ಧ್ವನ್ಯಾರ್ಥದಲ್ಲಿ ಬಳಸುತ್ತಿರುವ, "ಮೊಗಲಾಯಿತನ" ಎಂಬುವ ಹಣೆಬರಹ ಈ ಪ್ರದೇಶದಿಂದ ಕಳಚಿ ಬೀಳುತ್ತದೆ. ಇದರಿಂದ ನಿರ್ಲಕ್ಷ್ಯವು ಬಾನಿಂದ ಅತ್ತತ್ತ, ಜಲದ ತಳದಿಂದ ಅತ್ತತ್ತ ನೆಲದಿಂದ ಅತ್ತತ್ತ , ದೂರ ಸರಿಯುವುದರಲ್ಲಿ ಸಂಶಯವಿಲ್ಲ. ಹೀಗಾಗುವುದರಿಂದ ಗ್ರಾಮ ಪ್ರತಿನಿಧಿ, ತಾಲ್ಲೂಕು ಪ್ರತಿನಿಧಿ, ಜಿಲ್ಲಾ ಪ್ರತಿನಿಧಿ, ರಾಜ್ಯ ಪ್ರತಿನಿಧಿ, ದೇಶ ಪ್ರತಿನಿಧಿ, ಲೋಕ ಪ್ರತಿನಿಧಿಗಳು ಅರ್ಥಪೂರ್ಣವಾಗಿ ಕ್ರಿಯಾಶೀಲರಾಗಿ ಬೆಳೆಯಲು ಸಾಧ್ಯ. ಅದರಿಂದ ಕಾರ್ಯಾಂಗವು ಮೈ ಝಾಡಿಸಿಕೊಂಡು ಚಟುವಟಿಕೆಗೊಳ್ಳುತ್ತದೆ. ಈ ದೃಷ್ಟಿಯಿಂದ ಹೈದರಾಬಾದ ಕರ್ನಾಟಕ ಪ್ರದೇಶಕ್ಕೆ ಹೆಚ್ಚಿನ ಅವಕಾಶಗಳು ಸೃಷ್ಟಿಯಾಗಬೇಕೆಂದು ಎನ್ನಿಸುವುದು ಇನ್ನೂ ಸಹಜವಾಗಿಯೇ ತೋರುತ್ತಿದೆ.

ವಸ್ತು ಸ್ಥಿತಿ ಹೀಗಿದ್ದರೂ ಹೈದರಾಬಾದ ಕರ್ನಾಟಕ ಪ್ರದೇಶದ ಗ್ರಾಮ ಸುಧಾರಣೆಯಲ್ಲಿ ನೆಮ್ಮದಿಯ ಪೂರ್ಣ ಉಸಿರನ್ನು ತೆಗೆದುಕೊಳ್ಳಲು ಈ ಮಟ್ಟದಲ್ಲಿ ಸಾಧ್ಯವೆನಿಸದಿದ್ದರೂ ಗ್ರಾಮೀಣ ಬದುಕಿನ ವಿಕಾಸದ ಕಡೆಗೆ ಕುತ್ತಸರಿಲ್ಲ. ಉಸಿರಾಟದಲ್ಲಿ ಸರಾಗತೆ ಬಂದಿರುವುದು ಶುಭ ಲಕ್ಷಣ. ಈ ಲಕ್ಷಣಕ್ಕೆ ಲಕ್ಷಣವಾಗಿ "ನೂಲಲ್ಯಾಕ ಚೆನ್ನಿ, ನೂಲಲ್ಯಾಕ ಚೆನ್ನ" ಎಂದು ಕೇಳಿದರೆ. "ನೂಲುತ್ತಿದ್ದೇನೆ ಜಾಣ, ನೂಲುತ್ತಿದ್ದೇನೆ ಜಾಣೆವೆ" ಎಂಬ ಸೊಲ್ಲು ಓಂಕಾರದ ಪಾಪಿತ್ರ್ಯವನ್ನು ಹೊಂದಿ ಕಾಯಕ ಧರ್ಮ ವಿಕಾಸಕ್ಕೆ ಮತ್ತೊಮ್ಮೆ ಶಾಶ್ವತವಾದ ಸ್ಥಾನವನ್ನು ಒದಗಿಸಿಕೊಡಲು ಟೊಂಕ ಕಟ್ಟಿ ನಿಂತಿದೆ.

●






# ಮುಂಬಯಿ ಕರ್ನಾಟಕದ ಸ್ಥಳೀಯ ಸಂಸ್ಥೆಗಳು

ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ

ಸ್ವಾತಂತ್ರ್ಯಾನಂತರ, ವಿಶೇಷವಾಗಿ ಕರ್ನಾಟಕದ ಕುರಿತು ಹೇಳುವುದಾದರೆ ೧೯೫೬ರಲ್ಲಿ ವಿಶಾಲ ಕರ್ನಾಟಕ ರಾಜ್ಯ ನಿರ್ಮಾಣವಾದ ಮೇಲೆ ಗ್ರಾಮೀಣ ಅಭಿವೃದ್ಧಿಯ ಕುರಿತು ಕರ್ನಾಟಕ ರಾಜ್ಯವು ಕಾಲ-ಕಾಲಕ್ಕೆ ಅನೇಕ ಅಪರೂಪದ ಕ್ರಮಗಳನ್ನು ಕೈಕೊಂಡಿದೆ. ಆಡಳಿತದಲ್ಲಿ ವಿಕೇಂದ್ರೀಕರಣ, ಸ್ಥಳಿಯರಿಗೆ ಹೆಚ್ಚಿನ ಅಧಿಕಾರ ಇತ್ಯಾದಿಗಳನ್ನು ಓದುವಾಗ ಮನಸ್ಸಿಗೆ ಮುದವಾಗುತ್ತದೆ. ರಾಜ್ಯ ಪುನರ್ ನಿರ್ಮಾಣದ ಅನಂತರ ೧೯೬೦ರಲ್ಲಿ ಸಮಗ್ರವಾದ ಏಕರೂಪದ ಪಂಚಾಯತ್ ರಾಜ್ಯ ಕಾನೂನನ್ನು ಕರ್ನಾಟಕ ರಾಜ್ಯವು ಜಾರಿಗೊಳಿಸಿತು. ಅದರ ಅಂಗವಾಗಿ ಬಂದ ಗ್ರಾಮಪಂಚಾಯತಿ ಮತ್ತು ತಾಲ್ಲೂಕು ಅಭಿವೃದ್ಧಿ ಮಂಡಲಗಳು ಚುನಾಯಿತ ಪ್ರತಿನಿಧಿಗಳನ್ನು ಒಳಗೊಂಡಿತ್ತಾದರೆ, ಜಿಲ್ಲಾ ಅಭಿವೃದ್ಧಿ ಸಮಿತಿಯು ಜಿಲ್ಲೆಯ ಸಂಸತ್ ಸದಸ್ಯರು, ರಾಜ್ಯ ಶಾಸಕಾಂಗ ಸದಸ್ಯರು, ತಾಲ್ಲೂಕು ಮಂಡಲಿ ಅಧ್ಯಕ್ಷರು ಮತ್ತು ಅಧಿಕಾರಿಗಳನ್ನು ಹೊಂದಿತ್ತು. ಸರಿಸುಮಾರು ಕಾಲು ಶತಮಾನದ ಕಾಲ ಈ ವ್ಯವಸ್ಥೆ ಜಾರಿಯಲ್ಲಿದ್ದದ್ದು ೧೯೮೫ ಆಗಸ್ಟ್ ೧೫ರಿಂದ 'ಹೊಸ ಪಂಚಾಯತ್ ರಾಜ್' ಕಾನೂನನ್ನು ತರಲಾಯಿತು. ಮಂಡಲ ಪಂಚಾಯತಿ, ತಾಲ್ಲೂಕು ಪಂಚಾಯತಿ, ಜಿಲ್ಲಾಪರಿಷತ್ತು ಮತ್ತು ನ್ಯಾಯ ಪಂಚಾಯತಿಯನ್ನೊಳಗೊಂಡಿದ್ದ ವ್ಯವಸ್ಥೆಯಲ್ಲಿ ನ್ಯಾಯ ಪಂಚಾಯತಿ ಕಾರ್ಯರೂಪಕ್ಕೆ ಬರಲಿಲ್ಲ!

> **ಹಿರಿಯರು ತಮ್ಮ ಅನುಭವ ಮತ್ತು ಬುದ್ಧಿ ಸಾಮರ್ಥ್ಯದಿಂದ ಗ್ರಾಮಗಳ ಅಭಿವೃದ್ಧಿ ಕುರಿತು ಸುಂದರ ಕನಸುಗಳನ್ನು ಕಟ್ಟಿದ್ದಾರೆ. ಅವುಗಳನ್ನು ನನಸಾಗಿಸುವ ಪ್ರಯತ್ನವನ್ನು ಇಂದಿನವರು ಮಾಡಬೇಕು. ಗ್ರಾಮಗಳು ಸುಧಾರಿಸಿದರೆ - ಅಭಿವೃದ್ಧಿ ಹೊಂದಿದರೆ ಇಡೀ ರಾಜ್ಯ, ರಾಷ್ಟ್ರವೇ ಅಭಿವೃದ್ಧಿಯ ಪಥದಲ್ಲಿ ನಡೆಯಲು ಸಾಧ್ಯವಾಗುತ್ತದೆ.**

ಜಿಲ್ಲಾ ಪರಿಷತ್ತುಗಳು ಜಿಲ್ಲಾ ಮಟ್ಟದಲ್ಲಿ ಸಮಾನಾಂತರದ ಸರಕಾರದಂತೆ ವ್ಯಾಪಕ ಅಧಿಕಾರವನ್ನು ಹೊಂದಿದ್ದವು. ಬಹುಪಾಲು ಅಭಿವೃದ್ಧಿ ಕಾರ್ಯಗಳು ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯತ್‌ಗಳ ಮೂಲಕ ಕಾರ್ಯರೂಪಕ್ಕೆ ಬರುತ್ತಿದ್ದವು. ಈ ಸಂಸ್ಥೆಗಳನ್ನು ಇನ್ನಷ್ಟು ಅಧಿಕ ಪ್ರಭಾವಯುತವನ್ನಾಗಿ ಮಾಡುವ ಉದ್ದೇಶದಿಂದ ವ್ಯವಸ್ಥೆಯಲ್ಲಿ ಮತ್ತೆ ಬದಲಾವಣೆಗಳನ್ನು ತರಲಾಯಿತು. ಈ ಹೊಸ ಕಾನೂನು ೧೯೯೩ರ ಮೇ ೧೦ರಿಂದ ಜಾರಿಯಲ್ಲಿ ಬಂದಿದೆ.

ಅಧಿಕಾರ ವಿಕೇಂದ್ರೀಕರಣ, ದಕ್ಷತೆ, ಹಿಂದುಳಿದವರಿಗೆ ಮತ್ತು ಮಹಿಳೆಯರಿಗೆ ಮೀಸಲಾತಿ ಸೌಲಭ್ಯ, ಮೂರೂ ಹಂತಗಳಲ್ಲಿ ಚುನಾಯಿತ ಮಂಡಳಿಗಳ ರಚನೆಯಾಗಿ ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿ ಎಂದು ಮರುನಾಮಕರಣ ಮಾಡಲಾಯಿತು. 'ಪಂಚಾಯಿತ್ ರಾಜ್ಯ' ಸಂಸ್ಥೆಗಳಿಗೆ ಅನ್ವಯಿಸುವಂತೆ ಸಂವಿಧಾನದ ೭೩ನೆಯ ವಿಧಿಯ ಎಲ್ಲ ತಿದ್ದುಪಡಿಗಳನ್ನು

ಆಳವಡಿಸಿಕೊಂಡು ಸಮಗ್ರ ಕಾನೂನನ್ನು ಜಾರಿಗೆ ತಂದ ಕರ್ನಾಟಕ ರಾಜ್ಯವು ರಾಷ್ಟ್ರದಲ್ಲಿಯೇ ಪ್ರಥಮ ರಾಜ್ಯವೆಂಬ ಹೆಗ್ಗಳಿಕೆಗೂ ಪಾತ್ರವಾಯಿತು.

**ಗ್ರಾಮ ಪಂಚಾಯತಿ :**

ಗ್ರಾಮ ಪಂಚಾಯತಿಯು ಸ್ಥಳೀಯ ಸಂಸ್ಥೆಗಳ ಬುನಾದಿ ಎನಿಸಿದೆ. ಬಹಳ ಹಿಂದಿನ ಕಾಲದಿಂದಲೂ ರೂಢಿಯಲ್ಲಿದ್ದ ಪ್ರಜಾಪ್ರಭುತ್ವದ ಅಂಶಗಳನ್ನೊಳಗೊಂಡ ಸ್ವರಾಜ್ಯವೇ ಅದಾಗಿದೆ. ೧೯೯೩ರ ಕಾನೂನಿನನ್ವಯ ಐದರಿಂದ ಏಳು ಸಾವಿರ ಪ್ರಜೆಗಳುಳ್ಳ ಒಂದು ಗ್ರಾಮ ಅಥವಾ ಗ್ರಾಮಗಳ ಗುಚ್ಛವು ಪಂಚಾಯತಿ ರಚನೆಗೆ ಒಳಪಡುತ್ತದೆ. ಮಲೆನಾಡು ಅಥವಾ ಬೆಟ್ಟ ಪ್ರದೇಶಗಳಂಥಲ್ಲಿ ೨೫೦೦ ಜನಸಂಖ್ಯೆಗೆ ಒಂದರಂತೆ ಪಂಚಾಯತಿಯನ್ನು ರಚಿಸಿಕೊಳ್ಳಬಹುದಾಗಿದೆ.

ಈ ರೀತಿಯಾಗಿ ಕರ್ನಾಟಕ ರಾಜ್ಯದಲ್ಲಿ ಸುಮಾರು ೫೬೪೫ ಗ್ರಾಮ ಪಂಚಾಯತಿಗಳು ರಚನೆಗೊಂಡಿವೆ. ಈ ಗ್ರಾಮ ಪಂಚಾಯತಿಗೆ ಪ್ರತಿ ೪೦೦ ಜನ ಸಂಖ್ಯೆಗೆ ಒಬ್ಬರಂತೆ ಪ್ರತಿನಿಧಿಗಳನ್ನು ಆಯ್ಕೆ ಮಾಡಲಾಗುತ್ತಿದೆ. ಯಾವುದೇ ರಾಜಕೀಯ ಪಕ್ಷಕ್ಕೆ ಒಳಪಡೆದಂತೆ ನಡೆಸಲಾಗುವ ಗ್ರಾಮ ಪಂಚಾಯತಿ ಚುನಾವಣೆಗಳು ವಿಶಿಷ್ಟವೆನಿಸಿವೆ. ಒಟ್ಟು ಆಯ್ಕೆಯಾಗುವ ಸದಸ್ಯರಲ್ಲಿ ಮೂರನೆಯ ಒಂದು ಭಾಗದಷ್ಟು ಸ್ಥಳಗಳನ್ನು ಹಿಂದುಳಿದ ವರ್ಗಗಳಿಗೆ ಕಾಯ್ದಿರಿಸಲಾಗುತ್ತದೆ. ಈ ಹೊಸ ವ್ಯವಸ್ಥೆಯಲ್ಲಿ ಅಧ್ಯಕ್ಷ, ಉಪಾಧ್ಯಕ್ಷ ಹುದ್ದೆಗಳಿಗೂ ಮೀಸಲಾತಿ ಸೌಲಭ್ಯವನ್ನು ಕಲ್ಪಿಸಲಾಗಿದೆ.

**ಅವಕಾಶಗಳು :**

ಕಳೆದ ಒಂದು ದಶಕದಿಂದ ನಡೆದುಕೊಂಡು ಬಂದ ಈ ವ್ಯವಸ್ಥೆಯಲ್ಲಿ ಗ್ರಾಮಾಭಿವೃದ್ಧಿಗೆ ವ್ಯಾಪಕ ಅವಕಾಶವಿದೆ. ಗ್ರಾಮ ಪಂಚಾಯತಿ ಆಡಳಿತ ವ್ಯವಸ್ಥೆಯಲ್ಲಿ ಗ್ರಾಮಸಭೆಗಳ ಪಾತ್ರ ಬಹು ಮಹತ್ವದ್ದಾಗಿದೆ. ಇದು ಗ್ರಾಮದ ಎಲ್ಲ ಮತದಾರರನ್ನು ಒಳಗೊಂಡಿದ್ದು, ನಿಯಮದಂತೆ ಕನಿಷ್ಠ ಆರು ತಿಂಗಳಿಗೊಮ್ಮೆಯಾದರೂ ಸಭೆ ಸೇರಲೇಬೇಕು. ಪಂಚಾಯಿತಿಯ ಅಧ್ಯಕ್ಷರು ಈ ಸಭೆಯ ಅಧ್ಯಕ್ಷತೆಯನ್ನು ವಹಿಸುವರು. ಪಂಚಾಯತಿ ಆಡಳಿತ ವರದಿ, ಅಭಿವೃದ್ಧಿ ಕಾರ್ಯಗಳ ಯೋಜನಾ ವರಿದಿ, ಗ್ರಾಮಸ್ಥರಿಗೆ ದೊರಕಿಸಿಕೊಡಬಹುದಾದ ಸೌಲಭ್ಯಗಳು ಮೊದಲಾದ ವಿಷಯಗಳನ್ನು ಚರ್ಚಿಸಿ ನಿರ್ಣಯಿಸುವ ಅಧಿಕಾರ ಈ ಸಭೆಗೆ ಇದೆ. ಸರಕಾರ ಆಗಾಗ ನೀಡುವಂತಹ ಎಲ್ಲ ಸವಲತ್ತುಗಳನ್ನು ಪಡೆಯಲು ಹಾಗೂ ಫಲಾನುಭವಿಗಳನ್ನು ಆಯ್ಕೆ ಮಾಡುವುದು ಈ ಸಭೆಯ ಕರ್ತವ್ಯವಾಗಿದೆ. ಗ್ರಾಮದಲ್ಲಿ ಶಾಂತಿ, ಸಹಬಾಳ್ವೆ, ಸುವ್ಯವಸ್ಥೆ ನೋಡಿಕೊಳ್ಳುವುದು, ಜನರ ಯೋಗಕ್ಷೇಮ, ವಯಸ್ಕರ ಶಿಕ್ಷಣ ಯೋಜನೆಗಳನ್ನು ಜಾರಿಗೊಳಿಸುವುದು ಇತ್ಯಾದಿಗಳು ಗ್ರಾಮ ಸಭೆಯ ಹೊಣೆಗಾರಿಕೆಯಾಗಿದೆ. ಗ್ರಾಮಸಭೆಯ ಎಲ್ಲ ತೀರ್ಮಾನಗಳನ್ನು ಅನುಷ್ಠಾನಗೊಳಿಸುವುದು ಪಂಚಾಯತಿಯ ಕರ್ತವ್ಯವಾಗಿದೆ. ಒಂದು ಅರ್ಥದಲ್ಲಿ ಜನರು ಪ್ರತ್ಯಕ್ಷವಾಗಿ ವ್ಯವಸ್ಥೆಯಲ್ಲಿ ಪಾಲುಗೊಳ್ಳುವ ಒಂದು ಸುಂದರ ಅವಕಾಶ ಇಲ್ಲಿದೆ.

ವ್ಯಾಪಕವಾದ ಕಾರ್ಯ ಜವಾಬ್ದಾರಿಯನ್ನೂ ಗ್ರಾಮ ಪಂಚಾಯತಿಯು ಹೊಂದಿದೆ. ೩೦ ವಿವಿಧ ಅಭಿವೃದ್ಧಿ ಕಾರ್ಯಗಳನ್ನು ಪಂಚಾಯತಿಯು ಕೈಗೊಳ್ಳಬಹುದಾಗಿದೆ. ಅವುಗಳಲ್ಲಿ ಗ್ರಾಮ ನೈರ್ಮಲ್ಯ, ಚರಂಡಿ ವ್ಯವಸ್ಥೆ, ವ್ಯವಸಾಯ ಅಭಿವೃದ್ಧಿ, ಪಶುಸಂಗೋಪನೆ, ಸಾಮೂಹಿಕ ಅರಣ್ಯ, ಗ್ರಾಮ ವ‾ತಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳು ಹಾಗೂ ಹಿಂದುಳಿದ ವರ್ಗಗಳ ಅಭಿವೃದ್ಧಿ, ಪ್ರಾಥಮಿಕ ಶಿಕ್ಷಣ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇವೇ ಮೊದಲಾದ ಕಾರ್ಯಗಳನ್ನು ಪಂಚಾಯತಿಯು ನಿರ್ವಹಿಸಬೇಕು .

ಕಾನೂನಿನಲ್ಲಿ ಅಡಕವಾದ ಈ ಕಾರ್ಯಗಳನ್ನು ಚಾಚೂ ತಪ್ಪದೆ ನಿರ್ವಹಿಸಿದ್ದರೆ ಈ ಹೊತ್ತಿಗೆ ಮಹಾತ್ಮಗಾಂಧೀಜಿ ಅವರ ಕನಸಿನ 'ರಾಮರಾಜ್ಯ' ಸಾಕಾರಗೊಳ್ಳಬೇಕಾಗಿತ್ತು. ಆದರೆ ಆದದ್ದೇನು ?

**ಸ್ಥಿತಿಗತಿ :**

ಅಭಿವೃದ್ಧಿಯನ್ನು ಕಂಡುಕೊಳ್ಳಲು ಸರಕಾರದಲ್ಲಿಯೇ ಒಂದು ಇಲಾಖೆ ಇದೆ. ಅದರ ಕೆಲಸವೇ ಅಭಿವೃದ್ಧಿಯ ಅಂಕಿ - ಸಂಖ್ಯೆಗಳನ್ನು ಕೊಡುವುದು. ಪ್ರತಿಯೊಂದು ಇಲಾಖೆಯಿಂದ ಪ್ರತಿ ತಿಂಗಳೂ ತಮ್ಮ ಮೇಲಧಿಕಾರಿಗಳಿಗೆ ಪ್ರಗತಿಯ ವರದಿಯನ್ನು

ಸಲ್ಲಿಸಲಾಗುತ್ತದೆ. ಅದನ್ನು ನೋಡಿದರೆ ಈಗ ಎಲ್ಲ ಹಳ್ಳಿಗಳೂ ಸುಧಾರಣೆಗೊಂಡಿವೆ. ಅವುಗಳ ವರದಿಯಂತೆ ಪ್ರತಿಯೊಂದು ಹಳ್ಳಿಯಲ್ಲೂ ಹೆಂಗಳೆಯರಿಗಾಗಿ ಪ್ರತ್ಯೇಕ ಶೌಚಾಲಯಗಳಾಗಿವೆ. ನಗರ-ನೈರ್ಮಲ್ಯ ಮತ್ತು ಒಳ ಚರಂಡಿಗಾಗಿ ಕೋಟಿ-ಕೋಟಿ ಹಣ ಖರ್ಚಾಗಿದೆ. ಕುಡಿಯುವ ನೀರಿಗಾಗಿ ಬೋರುಗಳನ್ನು ಹಾಕಲಾಗಿದೆ. ಅನೇಕ ಸಲ ಅವುಗಳು ಫೇಲಾಗಿ ಮತ್ತೆ-ಮತ್ತೆ ಬೋರುಗಳನ್ನು ಹಾಕಿದ ಉಲ್ಲೇಖವೂ ಉಂಟು. ಶಿಕ್ಷಣದ ಹೆಸರಿನಲ್ಲಿ ಶಾಲಾ ಸುಧಾರಣೆಗಾಗಿಯೂ ಅಪಾರ ಹಣ ಖರ್ಚಾಗಿದೆ. ವಯಸ್ಕರ ಶಿಕ್ಷಣಕ್ಕಾಗಿಯಂತೂ ಬೇಕಾದಷ್ಟು ಹಣ ಖರ್ಚಾಗಿದ್ದನ್ನು ವೃತ್ತಪತ್ರಿಕೆಗಳು ಕಾಲ-ಕಾಲಕ್ಕೆ ಚಿತ್ರಗಳನ್ನು ಬಿಡಿಸಿವೆ. ಅದನೆಲ್ಲ ಗಮನಿಸಿದಾಗ ಇಂದು ಇಡೀ ರಾಜ್ಯ ಅದರಲ್ಲಿಯೂ ಮುಂಬಯಿ ಕರ್ನಾಟಕ ಸಂಪೂರ್ಣ ಸಾಕ್ಷರನಾಡು ಆಗಿ ಪರಿವರ್ತಿತ ಆಗಬೇಕಿತ್ತು. ಪ್ರತಿಯೊಂದು ಗ್ರಾಮ-ಹಳ್ಳಿಗಳ ಒಳರಸ್ತೆಗಳು, ಕೂಡುರಸ್ತೆಗಳು ಕಾಗದಗಳಲ್ಲಿ ಡಾಂಬರೀಕರಣ ಆಗಿಬಿಟ್ಟಿವೆ! ಆದರೆ ಪ್ರತ್ಯಕ್ಷ ಹೋಗಿ ನೋಡಿದರೆ ಕಟು-ಸತ್ಯದ ದರ್ಶನವಾಗುತ್ತದೆ. ಯಾಕೆ ಹೀಗೆ ?

ನಿಜ. ರಾಜ್ಯ ಪುನರ್ ನಿರ್ಮಾಣವಾಗಿ ಅರ್ಧ ಶತಮಾನಕ್ಕೆ ಸಮೀಪಿಸುತ್ತಿದೆ. ಕಾಲಕಾಲಕ್ಕೆ ಕಾನೂನುಗಳನ್ನು ನಿರ್ಮಿಸಿ ಕಾರ್ಯ ಪ್ರವೃತ್ತರಾದುದನ್ನು ಕಾಗದಗಳಲ್ಲಿ ಕಂಡಿದ್ದೇವೆ. ಅದರಲ್ಲಿ ಎಳ್ಳಿನಷ್ಟೂ ಸಂಶಯವಿಲ್ಲ. ಆದರೆ ವ್ಯಾವಹಾರಿಕವಾಗಿ ಬರಲಿಲ್ಲ ಎಂಬುದು ನಾಡಿನ ದುರ್ದೈವ ! ಇತ್ತೀಚಿನ ದಿನಗಳಲ್ಲಿ ಪ್ರತಿಯೊಂದು ಗ್ರಾಮ ಪಂಚಾಯತಿಗೆ ಪ್ರತಿ ವರುಷ ಒಂದಿಲ್ಲೊಂದು ಹೆಸರಿನಲ್ಲಿ ಐದರಿಂದ ಎಂಟು ಲಕ್ಷ ರೂಪಾಯಿಗಳ ಅನುದಾನ ಬರುತ್ತದೆ. ಅದರಲ್ಲಿಯ ಪ್ರತಿ ಶತ ೧೦ ರಿಂದ ೨೦ ರಷ್ಟು ಹಣ ಆಡಳಿತಕ್ಕೆ ಹೋದರೆ ಕನಿಷ್ಟ ಪಕ್ಷ ೭೫ ರಿಂದ ೮೦ ಪ್ರತಿಶತ ಹಣ ಅಭಿವೃದ್ಧಿಗೆ ಉಪಯೋಗವಾಗಿ ಅದು ಕಣ್ಣಿಗೆ ಕಾಣುವಂತಿರಬೇಕು. ಆ ದೃಷ್ಟಿಯಿಂದ ಒಂದು ಗ್ರಾಮ ಪಂಚಾಯತಿಗೆ (ಹೆಸರು ಬೇಡ) ಭೇಟಿ ಕೊಟ್ಟು ಸರಕಾರದ ಅನುದಾನ ಮತ್ತು ಸವಲತ್ತುಗಳನ್ನು ವಿಚಾರಿಸಿದಾಗ ವ್ಯಥೆ ತರುವ ಉತ್ತರಗಳೆ ದೊರೆತುವು. ಅಧ್ಯಕ್ಷ, ಕಾರ್ಯದರ್ಶಿ ಮತ್ತು ಇಂಜಿನಿಯರುಗಳು ಒಂದು ಗುಂಪಾಗಿ, ಕಾನೂನಿನ್ವಯ ಬಂದ ಹಣವನ್ನು ವ್ಯವಸ್ಥಿತವಾಗಿ ಉಪಯೋಗಿಸಿ ಬಿಡುತ್ತಾರೆ. ಅದರಲ್ಲಿ ಕಿಂಚಿತ್ ಪಾಲನ್ನು ಚುನಾಯಿತ ಸದಸ್ಯರಿಗೂ ನೀಡಿ ಅವರ ಬಾಯಿ ಮುಚ್ಚಿಸಿಬಿಡುತ್ತಾರೆ. ಸುಶಿಕ್ಷತ ನಿರುದ್ಯೋಗಿ ಯುವಕರು ಉತ್ಸಾಹದಿಂದ ಚುನಾಯಿತ ಸದಸ್ಯರಾಗಿ ಒಳ್ಳೆಯದನ್ನು ಮಾಡಬೇಕೆಂದರೂ ಅವರಿಗೆ ಅವಕಾಶ ಇಲ್ಲದಂತಾಗುತ್ತದೆ. ಕ್ರಮೇಣ ಆತನು ವ್ಯವಸ್ಥೆಯೊಂದಿಗೆ ಹೊಂದಿಕೊಳ್ಳಬೇಕು, ಇಲ್ಲವೆ ಅದರಲ್ಲಿಯ ಆಸ್ಥೆಯನ್ನು ಕಳೆದುಕೊಳ್ಳಬೇಕು.

ಕಾಗದಗಳಲ್ಲಿ ಹಳ್ಳಿಯ ಹೆಂಗಳೆಯರಿಗೆ ಶೌಚಾಲಯದ ವ್ಯವಸ್ಥೆ ಇದೆ. ಆದರೆ ಬಹುತೇಕ ಹಳ್ಳಿಗಳಲ್ಲಿ ಶೌಚಾಲಯಗಳ ವ್ಯವಸ್ಥೆಯೇ ಇಲ್ಲ. ಇನ್ನು ಕೆಲವು ಕಡೆಗೆ ಶೌಚಾಲಯಗಳ ಹೆಸರಿನಲ್ಲಿ ಕಟ್ಟಿಗೆ -ಕುಳ್ಳುಗಳ ಸಂಗ್ರಹಕ್ಕೆ ಉಪಯೋಗವಾಗುತ್ತವೆ. ವ್ಯಕ್ತಿಗತವಾಗಿ ಶೌಚಾಲಯಕ್ಕೆಂದು ಪ್ರತಿ ಶತ ೭೫ರಷ್ಟು ಖರ್ಚನ್ನು ಸರಕಾರ ವಹಿಸಿದಾಗಲೂ ಅವುಗಳು ಶೌಚಾಲಯಗಳಾಗಿ ನಿರ್ಮಾಣವಾಗಲೇ ಇಲ್ಲ !

ರೋಜಗಾರ ಯೋಜನೆಯ ಅಡಿಯಲ್ಲಿ ದೊಡ್ಡ ಪ್ರಮಾಣದ ಹಣ ಬರುವುದು ಹಳ್ಳಿಯ ನಿರುದ್ಯೋಗಿ ಕೂಲಿಯ ಜನರಿಗೆ. ಅದರಲ್ಲಿಯ ಹಣ ಬಹುತೇಕವಾಗಿ ಕೂಲಿಗಳಿಗೆ ವಿನಿಯೋಗವಾಗಬೇಕು. ಆದರೆ ಆಗುವುದು ಪ್ರತಿಶತ ೭೫ ವಸ್ತುಗಳಿಗೆ, ೨೫ ಕೂಲಿಗಳಿಗೆ. ಹೀಗಾಗಿ ಯೋಜನೆಯ ಮೂಲ ಸ್ವರೂಪವೇ ಕಳೆದುಕೊಂಡಂತಾಗಿದೆ.

ಇನ್ನೊಂದೆಡೆ ಪ್ರಮಾಣಿಕ ಸಂಸ್ಥೆಯೊಂದು ಕೆಲಸ ಮಾಡಲು ಹೋದಾಗ ಪ್ರತಿಶತ ೪೦ ರಷ್ಟು ಸಫಲವಾಗಲು ಸಾಧ್ಯವಾಯಿತು. ೬೦ ಪ್ರತಿಶತ ವಿಫಲವಾಯಿತು. ಅದೊಂದು ವಿಷ ವರ್ತುಲ, ಆದರಿಂದ ಪಾರಾಗಿ ಬರುವುದು ಪ್ರಾಮಾಣಿಕರಿಗೆ ಕಠಿಣವಾಗುತ್ತದೆ ಎಂದು ಕೈ - ಚೆಲ್ಲಿ ಕೂಡಬೇಕಾಯಿತು ಎಂದು ಹೇಳಿತು.

ಇಏಎಸ್ ಫಂಡ್ ಎಂಬುದೊಂದಿದೆ. ಎಂಪ್ಲಾಯ್‌ಮೆಂಟ್ ಅಶ್ಯೂರೆನ್ಸ್ ಸ್ಕೀಮ್ ಫಂಡ್ ಎಂಬುದು ಅದರ ಪೂರ್ತಿ ಹೆಸರು. ಅದರ ಅಡಿಯಲ್ಲಿ ಕೋಟಿಗಟ್ಟಳೆ ಹಣ ಬರುತ್ತದೆ. ಅದನ್ನು ಜಿಲ್ಲಾ ಪಂಚಾಯತಿ ನಿರ್ವಹಿಸಬೇಕು. ಅದರಲ್ಲಿಯ ಪ್ರತಿಶತ ೨೫ ಜಿಲ್ಲಾ ಪಂಚಾಯತಿ, ಇನ್ನು ೨೫ ಪ್ರತಿಶತ ಗುತ್ತಿಗೆದಾರ, ಮತ್ತೆ ೨೦ ಪ್ರತಿಶತ ಸ್ಟೋರ ಮತ್ತು ಸ್ಥಳೀಯರಿಗೆ. ಹೀಗೆ ೭೦ ಪ್ರತಿಶತ ಹಣ ಹೋಗಿ ಉಳಿದ ೩೦ ಪ್ರತಿಶತದಲ್ಲಿ ಇಏಎಸ್ ಯೋಜನೆಯ ಅಡಿಯಲ್ಲಿ ಖರ್ಚಾಗುತ್ತದೆ. ಅವ್ಯವಹಾರಗಳು

ಬಯಲಿಗೆ ಬಂದಾಗ ಇಲಾಖೆಯೇ ಆ ಕೆಲಸವನ್ನು ಮಾಡಬೇಕು ಎಂದಾಯಿತು. ಅದು ಇನ್ನಷ್ಟು ದುರುಪಯೋಗಕ್ಕೆ ದಾರಿ ಮಾಡಿಕೊಟ್ಟಿತು. ವಸ್ತುಗಳನ್ನು ಖರೀದಿಸುವಾಗ ಪ್ರತಿ ವಸ್ತುವಿನ ಮಾರ್ಕೆಟ್ ಬೆಲೆಗಿಂತ ನಾಲ್ಕರಿಂದ ಐದು ಪಟ್ಟು ದುಬಾರಿಯಲ್ಲಿ ಸರಕಾರ ಖರೀದಿಸಹತ್ತಿತು!

ಆಶ್ರಯ ಮತ್ತಿತರ ಯೋಜನೆಗಳಲ್ಲಿ ದುರ್ಬಲರಿಗೆ, ಹಿಂದುಳಿದವರಿಗೆ ಮನೆಗಳನ್ನು ಒದಗಿಸುವ ಉದಾತ್ತ ವಿಚಾರ ಸರಕಾರದ್ದು. ಪ್ರತಿಶತ ಹತ್ತರಷ್ಟು ಕೂಡ ಅದರಲ್ಲಿ ಸಫಲವಾಗಲು ಸಾಧ್ಯವಾಗಿಲ್ಲ ಎಂದು ಗ್ರಾಮ ಪಂಚಾಯತಿ ಒಂದರ ಪ್ರಾಮಾಣಿಕ ಸರಪಂಚನೇ ಹೇಳುತ್ತಾನೆ. ವಾಸ್ತವದಲ್ಲಿ ವರುಷದಲ್ಲಿ ಎರಡು ಸಲವಾದರೂ ಗ್ರಾಮಸಭೆಗಳು ನಡೆಯಬೇಕು. ಆ ಸಭೆಗಳಲ್ಲಿ ನಿರ್ಣೀತವಾದ ಕಾರ್ಯಗಳನ್ನು ಕೈಗೆತ್ತಿಗೊಳ್ಳಬೇಕು ಎಂಬುದರ ಉದ್ದೇಶ ಪ್ರತಿಯೊಂದು ಕೆಲಸ ಪಾರದರ್ಶಕವಾಗಿರಬೇಕು ಎಂಬುದಾಗಿದೆ. ಗ್ರಾಮ ಸಭೆಗಳಲ್ಲಿ ಚರ್ಚಿಸಿ ಯಾರಿಗೆ ಮನೆ ಇಲ್ಲ, ಯಾರಿಗೆ ಅವಶ್ಯಕತೆ ಇದೆ, ಅವನ ಸ್ಥಿತಿಗತಿ ಏನು ಎಂದು ವಿಚಾರಿಸಿ ಅರ್ಹ ಫಲಾನುಭವಿಯನ್ನು ಗುರುತಿಸಬೇಕು. ಆದರೆ ನಡೆಯುವುದೇ ಬೇರೆ. ಅದರ ವಿವರಗಳು ಇಲ್ಲಿ ಅಪ್ರಸ್ತುತ.

**ಪರಿಹಾರ :**

ಹಾಗಾದರೆ ಅಭಿವೃದ್ಧಿಗೆ ಅವಕಾಶವೇ ಇಲ್ಲವೆ? ಎಂಬ ಪ್ರಶ್ನೆ ಹುಟ್ಟುವುದು ಸಹಜ. ಅದಕ್ಕಾಗಿ ಹತ್ತೆಂಟು ಗ್ರಾಮ ಪಂಚಾಯತಿಗಳ ಸರಪಂಚರನ್ನು, ಹಲವಾರು ಸದಸ್ಯರನ್ನು ಕಂಡು ಕೇಳಿದಾಗ ಈ ಕೆಲವು ಸಲಹೆಗಳು ಬಂದುವು.

೧. ಮುಖ್ಯವಾಗಿ ಚುನಾಯಿತ ಸದಸ್ಯರು ಪ್ರಾಮಾಣಿಕವಾಗಿರಬೇಕು. ಲಂಚ -ರುಷುವತ್ತುಗಳಿಗೆ ವಿಮುಖರಾಗಬೇಕು ಎಂಬುದು ಸಾರ್ವತ್ರಿಕ ವಿಚಾರವೇ ಆಗಿದೆ.

೨. ಚುನಾಯಿತ ಸದಸ್ಯರ ತಿಳುವಳಿಕೆಗಾಗಿ, ಸರಕಾರವು ಸಾಕಷ್ಟು ಹಣವನ್ನು ಖರ್ಚುಮಾಡುತ್ತದೆ. ಆದರೆ ಅದು ನಿಗದಿತ ಅವಧಿಯಲ್ಲಿ ನಡೆಯುವುದಿಲ್ಲ. ಒಂದೊಂದು ಸಲ ಪಂಚಾಯತಿ ಅವಧಿಯ ಕೊನೆಕೊನೆಯಲ್ಲಿ ನಡೆಯುತ್ತದೆ. ವಾಸ್ತವದಲ್ಲಿ ಅದು ಚುನಾಯಿತರಾದ ಒಂದೆರಡು ತಿಂಗಳುಗಳಲ್ಲಿ ನಡೆದರೆ ಪರಿಸ್ಥಿತಿ ಎಷ್ಟೋ ಸುಧಾರಿಸಬಹುದು. ಚುನಾಯಿತ ಸದಸ್ಯನ ಕರ್ತವ್ಯಗಳು ಸರಕಾರದ ಸವಲತ್ತುಗಳು ಅವುಗಳು ಕಾರ್ಯರೂಪಕ್ಕೆ ಬರುವ ಬಗ್ಗೆ ಇತ್ಯಾದಿಯಾಗಿ ಸದಸ್ಯನಿಗೆ ಅರಿವಿದ್ದರೆ, ಒಂದಿಷ್ಟಾದರೂ ಸುಧಾರಣೆಯಾಗಲು ಅವಕಾಶವಿದೆ.

೩. ಕ್ಷೇತ್ರದ ಮತದಾರರಲ್ಲೂ ಜಾಗೃತಿಯನ್ನು ಮೂಡಿಸುವ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವ ಅಗತ್ಯ ಇದೆ.

೪. ಸರಕಾರ ತನ್ನ ಸಾಧನೆಗಳನ್ನು ತಿಳಿಸಲು ಕೋಟಿಗಟ್ಟಲೆ ಹಣ ಖರ್ಚುಮಾಡಿ ಜಾಹೀರಾತುಗಳನ್ನು ಕೊಡುತ್ತದೆ. ಅದಕ್ಕಿಂತ ಮತದಾರರಿಗೆ ಪ್ರಜೆಗಳಿಗೆ ದೊರೆಯುವ ಸೌಲಭ್ಯಗಳೇನು ? ಅವುಗಳನ್ನು ಅವರು ತಮ್ಮ ಚುನಾಯಿತ ಪ್ರತಿನಿಧಿಯ ಮೂಲಕ ಹೇಗೆ ಪಡೆಯಬಹುದು ಎಂಬುದನ್ನು ಆಗಾಗ ಪತ್ರಿಕೆಗಳ ಮೂಲಕ, ಆಕಾಶವಾಣಿ - ದೂರದರ್ಶನಗಳ ಮೂಲಕ ತಿಳುವಳಿಕೆ ನೀಡಬೇಕು.

೫. ಪ್ರತಿಯೊಂದು ಗ್ರಾಮ ಪಂಚಾಯತಿಯಲ್ಲಿ ಚುನಾಯಿತ ಸದಸ್ಯ ಸಮಿತಿಯಲ್ಲದೆ ಪ್ರಜ್ಞಾವಂತರ ಸಮಿತಿಯೊಂದು ಇರಬೇಕು ಎಂದು ಕಾಗದಗಳಲ್ಲಿ ಇದೆ. ಅದು ಕಾರ್ಯರೂಪಕ್ಕೆ ಬರಬೇಕು. ತಾಲ್ಲೂಕು, ಜಿಲ್ಲೆ, ರಾಜ್ಯಮಟ್ಟದಲ್ಲೂ ಅಂಥ ಸಮಿತಿಗಳು ಇರಬೇಕು. ಪ್ರಜ್ಞಾವಂತರ ಸ..ತಿಯ ಸದಸ್ಯರ ಮಾತಿಗೆ ಬೆಲೆ ಇರಬೇಕು. ಈ ಸಮಿತಿಯ ಸದಸ್ಯರಲ್ಲಿದ್ದ ಪ್ರಜ್ಞೆಯನ್ನು ಉಪಯೋಗಿಸಿಕೊಳ್ಳಬೇಕು.

ಹೀಗೆ ಇವು ಕೆಲವು ಸಲಹೆಗಳನ್ನು ಕಾರ್ಯರೂಪಕ್ಕೆ ತಂದರೆ ಪರಿಸ್ಥಿ ಕಿಂಚಿತ್ ಸುಧಾರಿಸಬಹುದು ಎಂಬ ಆಸೆಯನ್ನು ತಾಳಬಹುದು. ಹಿರಿಯರು ತಮ್ಮ ಅನುಭವ ಮತ್ತು ಬುದ್ಧಿ ಸಾಮರ್ಥ್ಯದಿಂದ ಗ್ರಾಮಗಳ ಅಭಿವೃದ್ಧಿ ಕುರಿತು ಸುಂದರ ಕನಸುಗಳನ್ನು ಕಟ್ಟಿದ್ದಾರೆ. ಅವುಗಳನ್ನು ನನಸಾಗಿಸುವ ಪ್ರಯತ್ನವನ್ನು ಇಂದಿನವರು ಮಾಡಬೇಕು. ಗ್ರಾಮಗಳು ಸುಧಾರಿಸಿದರೆ - ಅಭಿವೃದ್ಧಿ ಹೊಂದಿದರೆ ಇಡೀ ರಾಜ್ಯ, ರಾಷ್ಟ್ರವೇ ಅಭಿವೃದ್ಧಿಯ ಪಥದಲ್ಲಿ ನಡೆಯಲು ಸಾಧ್ಯವಾಗುತ್ತದೆ.




# ಯೋಜನಾ ಪ್ರಕ್ರಿಯೆಯಲ್ಲಿ ಶ್ರೀಸಾಮಾನ್ಯನ ಪಾತ್ರ

ಎಂ. ವಿ. ರಾಜಶೇಖರನ್

೨೦೦೪, ಮೇ ತಿಂಗಳಿನಲ್ಲಿ ಕೇಂದ್ರ ಸಚಿವ ಸಂಪುಟದ ಯೋಜನಾ ಇಲಾಖೆಯ ರಾಜ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡೆ. ಅಧಿಕಾರ ವಹಿಸಿದ ಮೊದಲ ದಿನದಿಂದ ಯೋಚಿಸುತ್ತಿದ್ದೇನೆ: "ಕಳೆದ ೫೦ ವರ್ಷಗಳಲ್ಲಿ ನಮ್ಮ ಯೋಜನೆಗಳು ದೇಶದ ಗ್ರಾಮೀಣ ಬಡಜನತೆಗೆ ಹೇಗೆ ಸಹಕಾರಿಯಾಗಿವೆ" ಎಂದು. ಇದಕ್ಕೆ ಮುಖ್ಯ ಕಾರಣವೇನೆಂದರೆ, ಗಾಂಧೀಜಿಯವರ ಪ್ರಸಿದ್ಧ ತಾರಕ ಮಂತ್ರವೊಂದು ನನ್ನ ಅಂತರಾಳದಲ್ಲಿ ಸದಾಕಾಲ ಅನುರಣಿಸುತ್ತಿರುವುದು. (ನವದೆಹಲಿಯ ರಾಜ್‌ಘಾಟ್‌ನ ಗಾಂಧೀ ಸ್ಮಾರಕ ಕೇಂದ್ರದ ಪ್ರವೇಶದ್ವಾರದಲ್ಲಿ ಇದನ್ನು ಕೆತ್ತಲಾಗಿದೆ.)

"ನಾನು ನಿಮಗೊಂದು ತಾರಕ ಮಂತ್ರವನ್ನು ನೀಡುತ್ತೇನೆ. ಯಾವಾಗಲಾದರೂ ನಿಮಗೆ ಸಂದಿಗ್ಧತೆಯುಂಟಾದಾಗ ಅಥವಾ ಸ್ವಹಿತಾಸಕ್ತಿ ಅತಿಯಾದಾಗ, ಕಡುಬಡವನ ಮುಖವನ್ನು, ಅಸಹಾಯಕತೆಯ ಪರಮಾವಧಿಯಲ್ಲಿರುವ ವ್ಯಕ್ತಿಯನ್ನು ಸ್ಮರಿಸಿಕೊಳ್ಳಿ. ನೀವು ಆಲೋಚಿಸಿರುವ ಕ್ರಮದಿಂದ ಯಾವ ರೀತಿಯಲ್ಲಿ ಆತನಿಗೆ ಉಪಯೋಗವಾಗುತ್ತದೆ, ಅದರಿಂದ ಆತ ಏನನ್ನಾದರೂ ಪಡೆಯಲು ಸಾಧ್ಯವೇ ಎಂದು ನಿಮ್ಮಲ್ಲೇ ಪ್ರಶ್ನಿಸಿಕೊಳ್ಳಿ. ನಿಮ್ಮ ಆಲೋಚನೆಯಿಂದ ಅವನ ಜೀವನ ಮತ್ತು ಧ್ಯೇಯಗಳ ಮೇಲಿನ ಹಿಡಿತವನ್ನು ಹಿಂದಕ್ಕೆ ತಂದುಕೊಡುವುದು ಸಾಧ್ಯವೇ? ಹಸಿದಿರುವ ಮತ್ತು ಆಧ್ಯಾತ್ಮಿಕ ಹಂಬಲಿಕೆಯಿರುವ ಮಿಲಿಯಗಟ್ಟಲೆ ಜನರಿಗೆ ಸ್ವರಾಜ್ಯ ಮತ್ತು ಸ್ವಯಂ-ಆಡಳಿತವು ದಾರಿ ತೋರಿಸುವುದೆ? ಈ ರೀತಿ ಯೋಚಿಸತೊಡಗಿದಾಗ ನಿಮ್ಮ ಸಂದಿಗ್ಧತೆ, ಸ್ವಹಿತಗಳು ತನ್ನಷ್ಟಕ್ಕೆ ತಾವೇ ಕರಗಿ ಹೋಗುವುದನ್ನು ಕಾಣುವಿರಿ."

> ನಾನು ನಿಮಗೊಂದು ತಾರಕ ಮಂತ್ರವನ್ನು ನೀಡುತ್ತೇನೆ. ಯಾವಾಗಲಾದರೂ ನಿಮಗೆ ಸಂದಿಗ್ಧತೆಯುಂಟಾದಾಗ ಅಥವಾ ಸ್ವಹಿತಾಸಕ್ತಿ ಅತಿಯಾದಾಗ, ಕಡುಬಡವನ ಮುಖವನ್ನು, ಅಸಹಾಯಕತೆಯ ಪರಮಾವಧಿಯಲ್ಲಿರುವ ವ್ಯಕ್ತಿಯನ್ನು ಸ್ಮರಿಸಿಕೊಳ್ಳಿ.

ಈ ಪ್ರಬಂಧದಲ್ಲಿ ಯೋಜನಾ ಆಯೋಗದ ಐತಿಹಾಸಿಕ ಹಿನ್ನೆಲೆ, ಕಾರ್ಯವಿಧಾನದ ಪ್ರಮುಖ ಬೆಳವಣಿಗೆಗಳು, ಹೊಸ ಪ್ರಯೋಗಗಳು ಮುಂತಾದುವುಗಳ ಬಗ್ಗೆ ನನ್ನ ಅನಿಸಿಕೆಗಳಿವೆ. ಗಾಂಧೀಜಿಯವರ ದರ್ಶನದಂತೆ ಬಡ ಗ್ರಾಮ ಗಣರಾಜ್ಯಗಳ ಅಭಿವೃದ್ಧಿಯನ್ನು ಎಷ್ಟರ ಮಟ್ಟಿಗೆ ಸಾಧಿಸಿದ್ದೇವೆ, ಅವರ ಕನಸಿನ ಭಾರತವನ್ನು ಸಾಕಾರಗೊಳಿಸಲು ಪ್ರಗತಿಪರ, ಸಮೃದ್ಧ, ಶಾಂತಿಯುತ ಭಾರತದ ನಿರ್ಮಾಣಕ್ಕಾಗಿ ನಾವು ಅಗತ್ಯವಾಗಿ ಮಾಡಬೇಕಾದುದೇನು ಮುಂತಾದ ನನ್ನ ವಿಚಾರಗಳನ್ನು ಇಲ್ಲಿ ಹಂಚಿಕೊಂಡಿದ್ದೇನೆ.

## ಗಾಂಧೀಜಿಯವರ ದರ್ಶನದಂತೆ ಸರ್ವತೋಮುಖ ಅಭಿವೃದ್ಧಿ :

ಭಾರತವನ್ನು ನಿಜವಾಗಲೂ ಅಭಿವೃದ್ಧಿ ಹೊಂದಿದ ರಾಷ್ಟ್ರವನ್ನಾಗಿ ಮಾಡಬೇಕಾದರೆ ಗಾಂಧೀಜಿಯವರ ಶ್ರೇಷ್ಠ ಜ್ಞಾನದ ನುಡಿಗಳನ್ನು ಸದಾ ಸ್ಮರಿಸುತ್ತಿರಬೇಕು. ಆದ್ದರಿಂದ ಅವರ ಚಿಂತನೆಗಳಲ್ಲಿ ಕೆಲವನ್ನು ನಿಮ್ಮ ಮುಂದಿಡುತ್ತಿದ್ದೇನೆ:

"ನನ್ನ ಆಲೋಚನೆಯ ಗ್ರಾಮ ಸ್ವರಾಜ್ಯವು ಒಂದು ಪರಿಪೂರ್ಣವಾದ ಗಣರಾಜ್ಯವಾಗಿದೆ. ಅದು ಜೀವನಾಗತ್ಯಗಳಿಗಾಗಿ ಪರಾವಲಂಬಿಯಾಗದೆ ಸ್ವತಂತ್ರವಾಗಿರುತ್ತದೆ. ಅವಲಂಬನೆಯ ಅನಿವಾರ್ಯವಾಗಿರುವ ಸಂದರ್ಭಗಳಲ್ಲಿ ಅಂತರಾವಲಂಬಿತವಾಗಿರುತ್ತದೆ. ಹೀಗೆ ಪ್ರತಿಯೊಂದು ಹಳ್ಳಿಯ ಮೊದಲ ಆಸಕ್ತಿ ತನ್ನ ಆಹಾರ ಬೆಳೆಗಳು ಮತ್ತು ವಸ್ತ್ರಗಳಿಗಾಗಿ ಅಗತ್ಯವಾದ ಹತ್ತಿಯನ್ನು ಬೆಳೆಯುವುದಾಗಿದೆ. ತನ್ನ ಜಾನುವಾರುಗಳಿಗೆ ಅಗತ್ಯವಾದಷ್ಟು ಮೇವು ದಾಸ್ತಾನು ಹೊಂದಿರಬೇಕಾಗುತ್ತದೆ. ಮಕ್ಕಳಿಗೆ, ವಯಸ್ಕರಿಗೆ ಆಟದ ಮೈದಾನ ಮತ್ತು ಮನರಂಜನೆಗೆ ಅವಕಾಶವಿರಬೇಕು. ಇವಲ್ಲದೆ ಹೆಚ್ಚಿನ ಭೂಮಿಯಿದ್ದಲ್ಲಿ ಗಾಂಜಾ, ಹೊಗೆಸೊಪ್ಪು, ಅಫೀಮು ಮುಂತಾದುವುಗಳನ್ನು ಬಿಟ್ಟು ಉಪಯುಕ್ತ ವಾಣಿಜ್ಯ ಬೆಳೆಗಳನ್ನು ಬೆಳೆಯಬೇಕು. ಗ್ರಾಮದಲ್ಲಿ ಶಾಲೆ, ಸಾರ್ವಜನಿಕ ಸಭಾಂಗಣ ಮತ್ತು ಒಂದು ರಂಗಮಂದಿರವಿರಬೇಕು. ಸುರಕ್ಷಿತ ಶುದ್ಧ ನೀರು ಸರಬರಾಜಿನ ವ್ಯವಸ್ಥೆಯನ್ನು ನಿಯಂತ್ರಿತ ಬಾವಿ ಮತ್ತು ಕೆರೆಗಳಿಂದ ಮಾಡಬಹುದು. ಮೂಲ ಶಿಕ್ಷಣದ ಅಂತಿಮ ಹಂತದವರೆಗೆ ಶಿಕ್ಷಣ ಕಡ್ಡಾಯವಾಗಿರಬೇಕು. ಸಾಧ್ಯವಾದಷ್ಟೂ ಪರಸ್ಪರ ಸಹಕಾರದಿಂದ ಎಲ್ಲ ಚಟುವಟಿಕೆಗಳನ್ನು ನಡೆಸಬೇಕು. ಅಸ್ಪೃಶ್ಯತೆಯನ್ನೂ ಒಳಗೊಂಡಂತೆ ಯಾವುದೇ ಜಾತಿಗಳಿರಬಾರದು."

"ಅತ್ಯಂತ ಬಡವನೂ ಸಹ ಇದು ನನ್ನ ದೇಶವೆಂಬ ಭಾವನೆಯಿಂದ ಅದನ್ನು ಕಟ್ಟುವಲ್ಲಿ ತನ್ನ ದನಿಯನ್ನು ಸೇರಿಸಬೇಕಾದುದು ಬಹಳ ಮುಖ್ಯವಾಗಿದೆ. ಅಂತಹ ದೇಶಕ್ಕಾಗಿ ನಾನು ಹೋರಾಡುತ್ತೇನೆ."

"ಎಲ್ಲ ಜಾತಿಯ ಜನರೂ ಮೇಲು ಕೀಳುಗಳಿಲ್ಲದ ಸಾಮರಸ್ಯದಿಂದ ಬದುಕಬೇಕು. ಅದಕ್ಕಾಗಿ ನಾನು ಹೋರಾಡಲು ಸಿದ್ಧನಿದ್ದೇನೆ. ಅಂತಹ ದೇಶದಲ್ಲಿ ಅಸ್ಪೃಶ್ಯರನ್ನು ನಿಂದಿಸುವವರಿಗೆ ಮದ್ಯ, ಮಾದಕ ದ್ರವ್ಯಗಳನ್ನು ಉಪಯೋಗಿಸುವವರಿಗೆ ಸ್ಥಳವಿಲ್ಲ. ಮಹಿಳೆಯರಿಗೆ ಮತ್ತು ಪುರುಷರಿಗೆ ಸಮಾನ ಹಕ್ಕುಗಳಿರುತ್ತವೆ. ನಾವು ವಿಶ್ವದಲ್ಲಿ ಶಾಂತಿಯುತ ಸಂಬಂಧ ಮತ್ತು ವಿಶ್ವಭ್ರಾತೃತ್ವವನ್ನು ಹೊಂದಿರಬೇಕು. ಇದು ನನ್ನ ಕನಸುಗಳ ಭಾರತವಾಗಿದೆ."

ಪಂಚಾಯತ್ ರಾಜ್ಯ (ಐದು ಜನರು ಕೂಡಿ ನಡೆಸುವ ಆಡಳಿತ)ವನ್ನು ಪುನರುಜ್ಜೀವಿತಗೊಳಿಸಬೇಕು ಎನ್ನುವುದು ಗಾಂಧೀಜಿಯವರ ಅಭಿಪ್ರಾಯವಾಗಿತ್ತು. ಅವರು ತಮ್ಮ ಮನಸ್ಸಿನಲ್ಲಿ ರೂಪಿಸಿಕೊಂಡಂತೆ ಎಲ್ಲ ಪಂಚಾಯತ್‌ನವರೂ ಲಕ್ಷ್ಯ ಕೊಡಬೇಕೆಂದು ನಿರೀಕ್ಷಿಸಿದ್ದ ಕೆಲವು ಅಂಶಗಳು ಹೀಗಿವೆ:

ಅ) ಗ್ರಾಮದ ಬಾಲಕ-ಬಾಲಕಿಯರಿಗೆ ಶಿಕ್ಷಣ.

ಆ) ಗ್ರಾಮದ ನೈರ್ಮಲ್ಯ.

ಇ) ಗ್ರಾಮದ ವೈದ್ಯಕೀಯ ಸೌಲಭ್ಯಗಳು.

ಈ) ಗ್ರಾಮದ ಬಾವಿ ಮತ್ತು ಕೊಳಗಳ ದುರಸ್ತಿ ಮತ್ತು ಸ್ವಚ್ಛತೆ.

ಉ) ಅಸ್ಪೃಶ್ಯರೆನಿಸಿಕೊಂಡವರ ಉದ್ಧಾರ ಮತ್ತು ದಿನನಿತ್ಯದ ಅಗತ್ಯಗಳನ್ನು ಪೂರೈಸುವುದು.

ಪಂಚಾಯತ್‌ಗಳು ಸ್ಥಳೀಯ ವಾದ-ವಿವಾದಗಳನ್ನು ಇತ್ಯರ್ಥಗೊಳಿಸುವ ಸೇವೆಯನ್ನು ಮಾಡಬೇಕೆಂಬುದು ಗಾಂಧೀಜಿಯವರ ಉದ್ದೇಶವಾಗಿತ್ತು. "ಆಗ ಯಾವ ರೀತಿಯ ಖರ್ಚಿನ ಹೊರೆಯಿಲ್ಲದೆ ಶೀಘ್ರವಾಗಿ ನ್ಯಾಯ ದೂರಕುವ ಭರವಸೆಯಿರುತ್ತದೆ. ಪೊಲೀಸರ ಅಥವಾ ಮಿಲಿಟರಿಯವರ ಅಗತ್ಯವಿರುವುದಿಲ್ಲ." ಗಾಂಧೀಜಿಯವರ ಕಲ್ಪನೆಯ ಪಂಚಾಯತ್ ರಾಜ್ಯದ ಬಗ್ಗೆ ಆಲೋಚಿಸಿ ನೋಡಿದಾಗ, ಭಾರತವು "ಗ್ರಾಮ ಗಣರಾಜ್ಯಗಳ ಒಕ್ಕೂಟ" ಎಂಬ ಭಾವನೆ ಉಂಟಾಗುತ್ತದೆ.

ಗಾಂಧೀಜಿಯವರ ಚಿಂತನೆಯಂತೆ ಪ್ರತಿಯೊಂದು ಹಳ್ಳಿಯೂ ಸ್ವಯಂಪೂರ್ಣ ಗಣರಾಜ್ಯವಾಗಿರಬೇಕು. ಇದಕ್ಕೆ ಭಾರಿಯಾದ ಠರಾವುಗಳ ಅಗತ್ಯವಿಲ್ಲ. ಇದಕ್ಕೆ ಬೇಕಾದುದು ಕೆಚ್ಚೆದೆಯ, ಸಂಸ್ಕಾರರೂಪದ, ಬುದ್ಧಿಶಕ್ತಿಯ ಕೆಲಸ..." ಮುಂದುವರಿದು ಹೇಳುತ್ತಾರೆ "ಬಡತನದಿಂದ ಜರ್ಜರಿತವಾದ ಮಿಲಿಯಗಟ್ಟಲೆ ಮುಗ್ಧಜನರಿಂದ ತುಂಬಿದ ಭಾರತವನ್ನು ನಾನು ಚಿತ್ರಿಸಿಲ್ಲ. ಪಾಶ್ಚಿಮಾತ್ಯ ದೇಶಗಳ

ಸಾಯುತ್ತಿರುವ ನಾಗರಿಕತೆಗಳ ಮೊದಲ ಅಥವಾ ಮೂರನೆಯ ದರ್ಜೆಯ ಪ್ರತಿಕೃತಿಯನ್ನೂ ಇಲ್ಲಿ ಚಿತ್ರಿಸಿಲ್ಲ. ನನ್ನಲ್ಲಿ ನಾನೇ ಚಿತ್ರಿಸಿಕೊಂಡಿರುವ ಭಾರತ ತನ್ನ ಶ್ರೇಷ್ಠ ಪ್ರತಿಭೆಗಳಿಂದ ನಿರಂತರವಾಗಿ ಮುನ್ನಡೆಯುತ್ತದೆ. ನನ್ನ ಕನಸು ನನಸಾದರೆ ಏಳು ಲಕ್ಷ ಹಳ್ಳಿಗಳಲ್ಲಿರುವ ಪ್ರತಿಯೊಬ್ಬರೂ ಸಮಾನ ಹಕ್ಕುಬಾಧ್ಯತೆಗಳುಳ್ಳವರಾಗುತ್ತಾರೆ. ಅನಕ್ಷರಸ್ಥರಿರುವುದಿಲ್ಲ, ಕೆಲಸವಿಲ್ಲದ ಸೋಮಾರಿಗಳೂ ಇರುವುದಿಲ್ಲ. ಬದಲಾಗಿ ಉಪಯುಕ್ತ ಕೆಲಸ ಕಾರ್ಯಗಳಲ್ಲಿ ತೊಡಗಿರುತ್ತಾರೆ. ಪೌಷ್ಟಿಕ ಆಹಾರ, ಗಾಳಿ, ಬೆಳಕಿರುವ ಮನೆಗಳು, ಮೈ ಮುಚ್ಚಲು ಸಾಕಾಗುವಷ್ಟು ಖಾದಿ ವಸ್ತ್ರಗಳಿರುತ್ತವೆ. ಹಳ್ಳಿಯ ಎಲ್ಲ ಜನರೂ ನೈರ್ಮಲ್ಯ ಮತ್ತು ಆರೋಗ್ಯದ ನಿಯಮಗಳ ಕಡೆ ಗಮನವಿರಿಸಿ ಅದರಂತೆ ನಡೆಯುತ್ತಾರೆ. ಅಸಾಧ್ಯವಾದ, ಅಸಹಜವಾದ ಯಾವ ವಿಚಾರವೂ ಇಲ್ಲಿಲ್ಲ. ಅಂತಹ ಮಾದರಿ ಹಳ್ಳಿಯನ್ನು ನಿರ್ಮಿಸಲು ಇಡೀ ಜೀವಮಾನವೇ ಬೇಕಾಗಬಹುದು. ನಿಜವಾಗಿ ಪ್ರಜಾಪ್ರಭುತ್ವವನ್ನು ಮತ್ತು ಹಳ್ಳಿಯ ಜೀವನವನ್ನು ಪ್ರೀತಿಸುವವನು ಒಂದು ಹಳ್ಳಿಯನ್ನು ದತ್ತು ತೆಗೆದುಕೊಂಡು ಅದೇ ತನ್ನ ಪ್ರಪಂಚ, ಅದರ ಪ್ರಗತಿಯೇ ತನ್ನ ಪ್ರಗತಿ ಎಂದು ಭಾವಿಸಿ ದುಡಿದರೆ ಅವನಿಗೆ ಉತ್ತಮ ಫಲ ದೊರಕುತ್ತದೆ."

ಹಾಗೆಯೇ ಮೂಲಭೂತವಾಗಿ ಹಳ್ಳಿಯ ಒಡೆತನವುಳ್ಳ ನಿರ್ಮಾಣಗಳು ಮತ್ತು ಉತ್ಪಾದನಾ ಸಂಬಂಧಗಳನ್ನು ಅತಿಕ್ರಮಿಸುವ ಇಚ್ಛೆ ಅವರಿಗಿರಲಿಲ್ಲ. ಅವರ ಕಲ್ಪನೆಯಲ್ಲಿ ಭೂಮಾಲೀಕತ್ವವೆಂದರೆ ನ್ಯಾಸಾಧಿಕಾರವಿದ್ದಂತೆ ಅಷ್ಟೆ. 'ಶ್ರೀಮಂತನು ತನ್ನ ಸಂಪತ್ತಿನ ಮಾಲೀಕತ್ವದಲ್ಲಿ ಸ್ವಂತ ಅಗತ್ಯಗಳನ್ನು ಪೂರೈಸಿಕೊಂಡು ಉಳಿದುದಕ್ಕೆ ನ್ಯಾಸಧಾರಿಯಾಗಿದ್ದು, ಆ ಸಂಪತ್ತನ್ನು ಸಮಾಜದ ಒಳಿತಿಗಾಗಿ ಉಪಯೋಗಿಸಬೇಕು.' 'ನೈತಿಕ ಮೌಲ್ಯಗಳನ್ನರಿಯದ ಆರ್ಥಿಕತೆ ಅಥವಾ ಅದರ ನಿರ್ಲಕ್ಷ್ಯ ಎರಡೂ ಸರಿಯಲ್ಲ' ಎನ್ನುವುದೇ ಗಾಂಧೀಜಿಯವರ ಆರ್ಥಿಕ ಮಾರ್ಗದರ್ಶಕ ತತ್ತ್ವ. ಗಾಂಧೀಜಿಯವರ ಅಭಿಪ್ರಾಯಗಳ ಸಾರಾಂಶವೆಂದರೆ ಹಳ್ಳಿಗಳ ಪುನರ್‌ನಿರ್ಮಾಣ. ಆದ್ದರಿಂದ ಹಳ್ಳಿಗಳ ಬಗ್ಗೆ ಯೋಜನೆ ಹಾಕುವಾಗ ಕೇವಲ ಜನರ ಆರ್ಥಿಕ ಉನ್ನತಿಗೆ ಮಾತ್ರ ಗಮನವಿರಿಸದೆ ಶಾಂತಿ, ನ್ಯಾಯ, ಸ್ವಾತಂತ್ರ್ಯ ಇವೆಲ್ಲವನ್ನೂ ಒಳಗೊಂಡಿರಬೇಕು ಎನ್ನುತ್ತಾರೆ.

ಗಾಂಧೀಜಿಯವರು ಏಳು ಸಾಮಾಜಿಕ ಪಾತಕಗಳ ಬಗ್ಗೆ ಹೇಳಿದ್ದಾರೆ. ಅಕ್ಟೋಬರ್ ೨, ೨೦೦೨ ರಂದು ನಾನು ಆಕಾಶವಾಣಿಯಲ್ಲಿ ನೀಡಿದ ಭಾಷಣದಲ್ಲಿ ಇವನ್ನು ಪ್ರಸ್ತಾಪಿಸಿದ್ದರೂ ಇಲ್ಲಿ ಪುನರುಚ್ಚರಿಸಬಯಸುತ್ತೇನೆ.

೧. ತತ್ತ್ವಗಳಿಲ್ಲದ ರಾಜಕಾರಣ.

೨. ಶ್ರಮವಿಲ್ಲದ ಸಂಪತ್ತು.

೩. ನೀತಿಯಿಲ್ಲದ ವ್ಯವಹಾರ.

೪. ಚಾರಿತ್ರ್ಯವಿಲ್ಲದ ಶಿಕ್ಷಣ.

೫. ಅರಿವಿಲ್ಲದ ಸಂತೋಷ.

೬. ಮಾನವೀಯತೆಯಿಲ್ಲದ ವಿಜ್ಞಾನ.

೭. ತ್ಯಾಗವಿಲ್ಲದ ಪೂಜೆ.

ಜಾಗತೀಕರಣ ಮತ್ತು ಆರ್ಥಿಕ ಸುಧಾರಣೆಗಳ ವಿಚಾರದಲ್ಲಿ ಗಾಂಧೀಜಿಯವರ ವಿವೇಚನಾ ದೃಷ್ಟಿ ಇಂದಿಗೂ ಪ್ರಸ್ತುತವಾಗಿದೆ. "ನನ್ನ ಪ್ರಕಾರ ರಾಜಕೀಯ ಅಧಿಕಾರವೇ ಕೊನೆಯಲ್ಲ, ಅದು ಜೀವನದ ಪ್ರತಿಯೊಂದು ಹಂತದಲ್ಲೂ ಜನಜೀವನವನ್ನು ಉತ್ತಮ ಸ್ಥಿತಿಯಲ್ಲಿಡಲು ಅವಕಾಶ ಕಲ್ಪಿಸುವ ಮಾರ್ಗಗಳಲ್ಲಿ ಒಂದಾಗಿದೆ" ಎಂದು ಗಾಂಧೀಜಿ ಹೇಳಿದ್ದಾರೆ.

## ಯೋಜನಾ ಆಯೋಗ :

ನಮ್ಮ ದೇಶದಲ್ಲಿ ವಾಸ್ತವವಾಗಿ ಯೋಜನಾ ಪ್ರಕ್ರಿಯೆ ಆರಂಭವಾದುದು ೧೯೫೦ರಲ್ಲಿ ಯೋಜನಾ ಆಯೋಗವನ್ನು ರಚಿಸಿದಾಗ. ಆಗ ಪ್ರಧಾನಿಗಳಾಗಿದ್ದ ಪಂಡಿತ ಜವಾಹರಲಾಲ್ ನೆಹರೂ ಅವರೇ ಕೇಂದ್ರ ಸಚಿವ ಸಂಪುಟದಲ್ಲಿ ಆ ಬಗೆಗೆ ನಿರ್ಣಯ ಮಂಡಿಸಿದ್ದರು. ಪ್ರಥಮ ಯೋಜನಾ ಆಯೋಗದ ಪ್ರಥಮ ಅಧ್ಯಕ್ಷರಾಗಿ ಪ್ರಧಾನಿ ನೆಹರೂ ಅವರೇ ಇದ್ದರು. ರಾಷ್ಟ್ರದ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗಾಗಿ ಸಂಯೋಜಿತ ಪಂಚವಾರ್ಷಿಕ ಯೋಜನೆಗಳನ್ನು ರೂಪಿಸುವುದು ಈ ಯೋಜನಾ ಆಯೋಗದ ಕಾರ್ಯವಾಗಿತ್ತು.

ಯೋಜನಾ ಆಯೋಗವು ಕೇಂದ್ರ ಸರಕಾರದ ಸಚಿವಾಲಯಗಳು ಮತ್ತು ರಾಜ್ಯ ಸರ್ಕಾರಗಳ ಜೊತೆ ನಿಕಟವಾಗಿ ಸಮಾಲೋಚಿಸಿ ಕಾರ್ಯನಿರ್ವಹಣೆ ಮಾಡುತ್ತದೆ. ೧೫ ಮಾರ್ಚ್ ೧೯೫೦ರ ಠರಾವಿನ ಉದ್ದೇಶ ಹೀಗಿದೆ: ದೇಶದ ಸಂಪನ್ಮೂಲಗಳನ್ನು ಸಮರ್ಥವಾಗಿ ಉಪಯೋಗಿಸುವಂತೆ ಮಾಡುವುದು, ಉತ್ಪಾದನೆಯ ಹೆಚ್ಚಳ, ಸಮುದಾಯ ಸೇವೆಯಲ್ಲಿ ಉದ್ಯೋಗಕ್ಕಾಗಿ ಹೊಸ ಅವಕಾಶಗಳನ್ನು ಕಲ್ಪಿಸುವುದು. ಇವುಗಳ ಮೂಲಕ ಜನರ ಜೀವನ ಮಟ್ಟವು ಕ್ಷಿಪ್ರಗತಿಯಲ್ಲಿ ಉತ್ತಮಗೊಳ್ಳಲು ಉತ್ತೇಜನ ನೀಡುವುದು. ೧೯೫೦ ರಿಂದ ಇದುವರೆಗೆ ಒಂಬತ್ತು ಪಂಚವಾರ್ಷಿಕ ಯೋಜನೆಗಳನ್ನು ನಡೆಸಲಾಗಿದೆ. ಪ್ರಸ್ತುತ ೨೦೦೨-೨೦೦೭ ರವರೆಗೆ ಹತ್ತನೆಯ ಯೋಜನೆಯು ಜಾರಿಯಲ್ಲಿರುತ್ತದೆ.

ಮೊದಲ ಪಂಚವಾರ್ಷಿಕ ಯೋಜನೆಯು ೧೯೫೧ರಲ್ಲಿ ಪ್ರಾರಂಭವಾಯಿತು. ನಂತರ ೧೯೬೫ರವರೆಗೆ ಎರಡು ಪಂಚವಾರ್ಷಿಕ ಯೋಜನೆಗಳನ್ನು ಸೂತ್ರರೂಪದಲ್ಲಿ ನಡೆಸಲಾಯಿತು. ಮಧ್ಯೆ ಭಾರತ ಮತ್ತು ಪಾಕಿಸ್ತಾನದ ಘರ್ಷಣೆಯಿಂದಾಗಿ ತಡೆ ಉಂಟಾಗಿತ್ತು. ಸತತವಾಗಿ ಎರಡು ವರ್ಷ ಬರಗಾಲವಿದ್ದುದರಿಂದ ಹಣದ ಅಪಮೌಲ್ಯ, ಸಾಮಾನ್ಯ ಬೆಲೆಗಳಲ್ಲಿ ಏರಿಕೆ, ಸಂಪನ್ಮೂಲಗಳ ಸವೆತ ಇವುಗಳಿಂದಾಗಿ ಯೋಜನಾ ಮುನ್ನಡೆಗೆ ತಡೆಯಾಯಿತು. ನಂತರ ಮೂರು ವಾರ್ಷಿಕ ಯೋಜನೆಗಳು ೧೯೬೬ ರಿಂದ ೧೯೬೯ ರವರೆಗೆ ನಡೆದವು. ನಾಲ್ಕನೆಯ ಪಂಚವಾರ್ಷಿಕ ಯೋಜನೆಯು ೧೯೬೯ ರಿಂದ ಪ್ರಾರಂಭವಾಯಿತು. ಎಂಟನೆಯ ಯೋಜನೆಯು ೧೯೯೦ರಲ್ಲಿ ಪ್ರಾರಂಭವಾಗಲಿಲ್ಲ. ಆಗ ಕೇಂದ್ರದಲ್ಲಿ ಉಂಟಾದ ಕ್ಷಿಪ್ರಗತಿಯ ರಾಜಕೀಯ ಬದಲಾವಣೆ ಇದಕ್ಕೆ ಕಾರಣವಾಗಿತ್ತು. ೧೯೯೦-೯೧ ಮತ್ತು ೧೯೯೧-೯೨ರ ಯೋಜನೆಗಳನ್ನು ವಾರ್ಷಿಕ ಯೋಜನೆಗಳೆಂದು ಪರಿಗಣಿಸಲಾಯಿತು. ರಚನಾತ್ಮಕ ಹೊಂದಾಣಿಕೆಗಳ ನೀತಿಯು ಪ್ರಾರಂಭವಾದ ನಂತರ ಕೊನೆಗೆ ಎಂಟನೆಯ ಯೋಜನೆಯು ೧೯೯೨ರಲ್ಲಿ ಪ್ರಾರಂಭವಾಯಿತು.

ಮೊದಲ ಎಂಟು ಯೋಜನೆಗಳಲ್ಲಿ ಭಾರೀ ಬಂಡವಾಳ ವಿನಿಯೋಗದಿಂದ ಬೆಳೆಯುತ್ತಿದ್ದ ಮೂಲ ಕೈಗಾರಿಕೆಗಳು ಮತ್ತು ಬೃಹತ್ ಕೈಗಾರಿಕೆಗಳ ಸಾರ್ವಜನಿಕ ಕ್ಷೇತ್ರಕ್ಕೆ ಒತ್ತುಕೊಡಲಾಗಿತ್ತು. ಆದರೆ ೧೯೯೭ರಲ್ಲಿ ಒಂಬತ್ತನೆಯ ಪಂಚವಾರ್ಷಿಕ ಯೋಜನೆಯು ಜಾರಿಗೆ ಬಂದಾಗಿನಿಂದ ಸಾರ್ವಜನಿಕ ಕ್ಷೇತ್ರದ ಮೇಲಿನ ಒತ್ತು ಕಡಿಮೆಯಾಯಿತು. ಸಾಮಾನ್ಯವಾಗಿ ದೇಶದ ಯೋಜನೆಗಳನ್ನು ಕುರಿತ ಪ್ರಸಕ್ತ ಚಿಂತನೆಯೆಂದರೆ ಅದು ಹೆಚ್ಚುಹೆಚ್ಚಾಗಿ ನಿರ್ದೇಶಕ ರೂಪದ್ದಾಗಿರಬೇಕೆಂಬುದು. ಏನೇ ಇದ್ದರೂ ಹಿಂದಿನ ಎಂಟು ಯೋಜನೆಗಳ ಅವಧಿಯಲ್ಲಿ ಕೈಗಾರಿಕೆ ಮತ್ತು ಇತರ ಪೂರಕ ಅಂತರ ಸೌಲಭ್ಯಗಳನ್ನು ನಿರ್ಮಿಸುವ ಮೂಲಕ ಹಾಕಿದ ಅಸ್ತಿಭಾರದಿಂದಾಗಿ ಭಾರತವು ಈಗ ಅನೇಕ ಕ್ಷೇತ್ರಗಳಲ್ಲಿ ಸ್ವಯಂಪೂರ್ಣತೆಯ ಮಟ್ಟವನ್ನು ಮುಟ್ಟಿದೆಯೆಂದು ಹೇಳಬಹುದು. ೧೯೯೦ರ ಆರಂಭದಲ್ಲಿ ಸರ್ಕಾರವು ಆರಂಭಿಸಿದ ಆರ್ಥಿಕ ಸುಧಾರಣಾ ಪ್ರಕ್ರಿಯೆಯು ಅನೇಕ ರೂಪಗಳಲ್ಲಿ ಗಣನೀಯ ಪ್ರಮಾಣದ ಪ್ರಯೋಜನವನ್ನು ತಂದುಕೊಟ್ಟಿರುವುದಂತೂ ನಿಜ.

೧೯೯೧ರ ಭಾರತ ಸರ್ಕಾರದ ಕಾರ್ಯಭಾರ ಹಂಚಿಕೆ ನಿಯಮಗಳ ಪ್ರಕಾರ ಯೋಜನಾ ಆಯೋಗಕ್ಕೆ ಕೆಳಗಿನ ಕರ್ತವ್ಯಗಳನ್ನು ವಹಿಸಲಾಗಿದೆ.

ಅ. ತಾಂತ್ರಿಕ ಸಿಬ್ಬಂದಿಯೂ ಸೇರಿದಂತೆ ದೇಶದ ಮೂಲ ಸಾಮಗ್ರಿಗಳು, ಬಂಡವಾಳ ಮತ್ತು ಮಾನವ ಸಂಪನ್ಮೂಲಗಳ ಮೌಲ್ಯಮಾಪನ ಮಾಡಿ ಕೊರತೆಯುಳ್ಳ ಸಂಪನ್ಮೂಲಗಳ ಸಂವರ್ಧನೆಗೆ ಪ್ರಸ್ತಾಪಗಳನ್ನು ರೂಪಿಸುವುದು.

ಆ. ದೇಶದ ಸಂಪನ್ಮೂಲಗಳನ್ನು ಅತ್ಯಂತ ಸಮರ್ಥವಾಗಿ ಮತ್ತು ಸಮತೋಲನವಿರುವಂತೆ ಉಪಯೋಗಿಸಲು ಅಗತ್ಯವಾದ ಯೋಜನೆಯನ್ನು ರೂಪಿಸುವುದು.

ಇ. ಯೋಜನೆಯು ಹಂತಹಂತವಾಗಿ ಪೂರ್ಣಗೊಳ್ಳುವುದಕ್ಕೆ ಆದ್ಯತೆಗಳನ್ನು ನಿರ್ಧರಿಸಿ ಪ್ರತಿಹಂತದ ಪೂರೈಕೆಗೂ ಸಂಪನ್ಮೂಲಗಳ ಅವಕಾಶವನ್ನು ಕಲ್ಪಿಸುವುದು.

ಈ. ಯೋಜನೆಯನ್ನು ಎಲ್ಲ ರೀತಿಯಲ್ಲೂ ಕಾರ್ಯರೂಪಕ್ಕೆ ತರಲು ಅಗತ್ಯವಾದ ವಿಧಾನಗಳ ಸ್ವರೂಪವನ್ನು ನಿರ್ಧರಿಸುವುದು.

ಉ. ಆರ್ಥಿಕ ಬೆಳವಣಿಗೆಯ ವಿಳಂಬಕ್ಕೆ ಕಾರಣವಾಗುವ ಅಂಶಗಳನ್ನು ಗುರುತಿಸಿ ಪ್ರಸ್ತುತ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿಗಳ ದೃಷ್ಟಿಯಿಂದ ಯೋಜನೆಯ ಯಶಸ್ವೀ ನಿರ್ವಹಣೆಗೆ ಪೂರಕವಾಗುವಂತಹ ವಾತಾವರಣವನ್ನು ಮೂಡಿಸುವುದು.

ಊ. ಯೋಜನೆಯ ಪ್ರತಿಯೊಂದು ಹಂತದಲ್ಲಿ ಸಾಧಿಸಿದ ಪ್ರಗತಿಯನ್ನು ಕಾಲಕಾಲಕ್ಕೆ ಪರಿಶೀಲಿಸಿ, ಅಂತಹ ಪರಿಶೀಲನೆಗಳಿಂದ ಅಗತ್ಯವೆನಿಸಿದ ನೀತಿ ಮತ್ತು ಕ್ರಮಗಳನ್ನು ಶಿಫಾರಸು ಮಾಡುವುದು.

ಋ. ರಾಷ್ಟ್ರದ ಅಭಿವೃದ್ಧಿಯಲ್ಲಿ ಸಾರ್ವಜನಿಕ ಸಹಕಾರ ಪಡೆಯುವುದು.

ೠ. ಕಾಲಕಾಲಕ್ಕೆ ಘೋಷಿಸಲ್ಪಟ್ಟ ಕ್ಷೇತ್ರಾಭಿವೃದ್ಧಿಗೆ ನಿರ್ದಿಷ್ಟ ಕಾರ್ಯಕ್ರಮಗಳನ್ನು ರೂಪಿಸುವುದು.

ಎ. ಮುನ್ನೋಟದ ಯೋಜನೆಯನ್ನು ರೂಪಿಸುವುದು.

ಏ. ಅನ್ವಯಿತ ಮಾನವಶಕ್ತಿಯ ಸಂಶೋಧನಾ ಸಂಸ್ಥೆಯನ್ನು ಸ್ಥಾಪಿಸುವುದು.

ಐ. ರಾಷ್ಟ್ರೀಯ ಜನಸಂಖ್ಯಾ ಆಯೋಗದ ಸೇವೆಯನ್ನು ಕ್ರಿಯಾಶೀಲಗೊಳಿಸುವುದು.

ಪ್ರಧಾನ ಮಂತ್ರಿಯವರು ಯೋಜನಾ ಆಯೋಗದ ಅಧ್ಯಕ್ಷರಾಗಿ ಯೋಜನಾ ನೀತಿಯ ಎಲ್ಲ ಮುಖ್ಯ ವಿಚಾರಗಳಲ್ಲೂ ಅಗತ್ಯ ನಿರ್ದೇಶನ ನೀಡುತ್ತಾರೆ. ಯೋಜನಾ ಆಯೋಗದ ಉಪಾಧ್ಯಕ್ಷರು ಮತ್ತು ಪೂರ್ಣಕಾಲಿಕ ಸದಸ್ಯರುಗಳು ಒಂದು ಸಂಯುಕ್ತ ಸಂಸ್ಥೆಯಂತೆ ಕಾರ್ಯನಿರ್ವಹಿಸಿ ವಿವರವಾದ ಯೋಜನೆಯನ್ನು ರೂಪಿಸುತ್ತಾರೆ. ವಾರ್ಷಿಕ ಮತ್ತು ಪಂಚವಾರ್ಷಿಕ ಯೋಜನೆಗಳಿಗೆ ಅಗತ್ಯವಾದ ವಿವಿಧ ವಿಷಯ ವಿಭಾಗಗಳಿಗೆ ಮಾರ್ಗಕ್ರಮ ಕಾಗದ ಪತ್ರಗಳು ಮತ್ತು ಪಂಚವಾರ್ಷಿಕ ಹಾಗೂ ವಾರ್ಷಿಕ ಯೋಜನೆಗಳಿಗೆ ಅಗತ್ಯವಾದ ದಾಖಲೆಗಳನ್ನು ಸಿದ್ಧಪಡಿಸುವಲ್ಲಿ ನಿರ್ದೇಶನ, ಮಾರ್ಗದರ್ಶನ ಮತ್ತು ಸಲಹೆಗಳನ್ನು ನೀಡುತ್ತಾರೆ. ಯೋಜನಾ ಕಾರ್ಯಕ್ರಮಗಳು, ಯೋಜನೆಗಳ ನಿರ್ವಹಣೆ, ಮೇಲ್ವಿಚಾರಣೆ ಮತ್ತು ಮೌಲ್ಯಮಾಪನದಲ್ಲಿ ಅವರ ತಜ್ಞ ಮಾರ್ಗದರ್ಶನವೂ ಲಭ್ಯವಿರುತ್ತದೆ.

ಹಲವಾರು ವಿಷಯ ವಿಭಾಗಗಳು ಮತ್ತು ಕೆಲವು ವಿಶೇಷ ಪರಿಣತ ವಿಭಾಗಗಳ ಮೂಲಕ ಯೋಜನಾ ಆಯೋಗವು ಕಾರ್ಯ ನಿರ್ವಹಿಸುತ್ತದೆ. ಪ್ರತಿಯೊಂದು ವಿಭಾಗಕ್ಕೂ ಜಂಟಿ ಕಾರ್ಯದರ್ಶಿ ಅಥವಾ ಅಪರ ಕಾರ್ಯದರ್ಶಿ ಮಟ್ಟದ ಒಬ್ಬ ಹಿರಿಯ ಅಧಿಕಾರಿ ಮುಖ್ಯಸ್ಥರಾಗಿರುತ್ತಾರೆ. ಅವರನ್ನು ಸಲಹೆಗಾರರೆಂದು ಕರೆಯಲಾಗುತ್ತದೆ. ಕಾರ್ಯದರ್ಶಿ ಮಟ್ಟದ ಅಧಿಕಾರಿಯನ್ನು ನೇಮಿಸಿದರೆ ಅವರನ್ನು ಪ್ರಧಾನ ಸಲಹೆಗಾರರು ಎಂದು ಕರೆಯುತ್ತಾರೆ.

ಯೋಜನಾ ಆಯೋಗದ ಈ ಎರಡು ವಿಭಾಗಗಳು ಸಾಮಾನ್ಯವಾಗಿ ಎರಡು ವರ್ಗಗಳ ಅಡಿಯಲ್ಲಿರುತ್ತವೆ :

೧. **ತಜ್ಞ ವಿಭಾಗ** : ಇಡೀ ಆರ್ಥಿಕ ವ್ಯವಸ್ಥೆಗೆ ಸಂಬಂಧಿಸಿದ್ದು. ಪರಸ್ಪರ ಸಂಬಂಧಿತ ಯೋಜನೆಗಳು, ಆರ್ಥಿಕ ಸಂಪನ್ಮೂಲಗಳು, ಅಭಿವೃದ್ಧಿ ನೀತಿ ವಿಭಾಗ, ಇತ್ಯಾದಿ.

೨. **ವಿಷಯ ವಿಭಾಗ** : ಕೃಷಿ, ಶಿಕ್ಷಣ, ಆರೋಗ್ಯ, ವಸತಿ ವಿಭಾಗಗಳು ಮುಂತಾದ ನಿರ್ದಿಷ್ಟ ಅಭಿವೃದ್ಧಿ ಕ್ಷೇತ್ರಗಳಿಗೆ ಸಂಬಂಧಿಸಿದ್ದು.

ಯೋಜನಾ ಆಯೋಗದಲ್ಲಿ ಕಾರ್ಯ ನಿರ್ವಹಿಸುತ್ತಿರುವ ತಜ್ಞ ವಿಭಾಗಗಳೆಂದರೆ-

೧. ಅಭಿವೃದ್ಧಿ ನೀತಿ ವಿಭಾಗ.

೨. ರಾಜ್ಯ ಮತ್ತು ಕೇಂದ್ರ ಹಣಕಾಸು ಸಂಬಂಧಗಳೂ ಸೇರಿದಂತೆ ಆರ್ಥಿಕ ಸಂಪನ್ಮೂಲ ವಿಭಾಗ.

೩. ಅಂತಾರಾಷ್ಟ್ರೀಯ ಹಣಕಾಸು ವಿಭಾಗ.

೪. ಕಾರ್ಮಿಕ, ಉದ್ಯೋಗ ಮತ್ತು ಮಾನವಶಕ್ತಿ ವಿಭಾಗ.

೫. ಅಂಕಿಸಂಖ್ಯೆಗಳು ಮತ್ತು ಸರ್ವೇಕ್ಷಣೆಯೂ ಸೇರಿದಂತೆ ಯಥಾದೃಷ್ಟಿಯ ಯೋಜನಾ ವಿಭಾಗ.

೬. ಯೋಜನಾ ಸಮನ್ವಯ ವಿಭಾಗ.

೭. ಯೋಜನೆಯ ಮೌಲ್ಯಮಾಪನ ಮತ್ತು ಆಡಳಿತ ವಿಭಾಗ.

೮. ಸಾಮಾಜಿಕ-ಆರ್ಥಿಕ ಸಂಶೋಧನಾ ಘಟಕ.

೯. ರಾಜ್ಯ ಯೋಜನಾ ವಿಭಾಗ.

೧೦. ಬಹು ಹಂತದ ಯೋಜನಾ ವಿಭಾಗ- ಇದರಲ್ಲಿ ಗಡಿಪ್ರದೇಶ ಅಭಿವೃದ್ಧಿ, ಗುಡ್ಡಗಾಡು ಪ್ರದೇಶದ ಅಭಿವೃದ್ಧಿ, ಪಶ್ಚಿಮ ಘಟ್ಟಗಳ ಅಭಿವೃದ್ಧಿ ಮತ್ತು ಸುಧಾರಣಾ ಸೌಲಭ್ಯ, ವಿಕೇಂದ್ರೀಕೃತ ಯೋಜನೆ ಇತ್ಯಾದಿಗಳು ಸೇರಿವೆ.

**ವಿಷಯ ವಿಭಾಗಗಳು :**

೧. ಕೃಷಿ ವಿಭಾಗ.
೨. ಹಿಂದುಳಿದ ವರ್ಗ ಮತ್ತು ಬುಡಕಟ್ಟು ಅಭಿವೃದ್ಧಿ ವಿಭಾಗ.
೩. ಸಂಪರ್ಕ ಮತ್ತು ಮಾಹಿತಿ ವಿಭಾಗ.
೪. ಶಿಕ್ಷಣ ವಿಭಾಗ.
೫. ಪರಿಸರ ಮತ್ತು ಅರಣ್ಯ ವಿಭಾಗ.
೬. ಆರೋಗ್ಯ, ಪೌಷ್ಠಿಕಾಂಶ ಮತ್ತು ಕುಟುಂಬ ಕಲ್ಯಾಣ ವಿಭಾಗ.
೭. ವಸತಿ ಮತ್ತು ನಗರಾಭಿವೃದ್ಧಿ ವಿಭಾಗ.
೮. ಕೈಗಾರಿಕೆ ಮತ್ತು ಖನಿಜಗಳ ವಿಭಾಗ.
೯. ವಿದ್ಯುತ್ ಮತ್ತು ಶಕ್ತಿ ವಿಭಾಗ.
೧೦. ಗ್ರಾಮೀಣಾಭಿವೃದ್ಧಿ ವಿಭಾಗ.
೧೧. ವಿಜ್ಞಾನ ಮತ್ತು ತಂತ್ರಜ್ಞಾನ ವಿಭಾಗ.
೧೨. ಮಹಿಳಾ ಕಾರ್ಯಕ್ರಮ ಮತ್ತು ಸಮಾಜ ಕಲ್ಯಾಣ ವಿಭಾಗ.
೧೩. ಸಾರಿಗೆ ವಿಭಾಗ
೧೪. ಗ್ರಾಮ ಮತ್ತು ಸಣ್ಣ ಕೈಗಾರಿಕೆಗಳ ವಿಭಾಗ
೧೫. ಸ್ವಯಂ ಸೇವಾ ಕಾರ್ಯ ಘಟಕ ವಿಭಾಗ.
೧೬. ಜಲಸಂಪನ್ಮೂಲಗಳ (ನೀರು ಸರಬರಾಜೂ ಸೇರಿದಂತೆ) ವಿಭಾಗ.
೧೭. ಪ್ರವಾಸೋದ್ಯಮ ವಿಭಾಗ.

ಕಾರ್ಯಕ್ರಮ ಮೌಲ್ಯಮಾಪನ ಸಂಸ್ಥೆಯು, ಯೋಜನಕಾರರಿಗೆ ಮತ್ತು ಅದನ್ನು ಅನುಷ್ಠಾನಗೊಳಿಸುವ ಸಂಸ್ಥೆಗಳಿಗೆ ಉಪಯುಕ್ತ ಪ್ರತಿ ಮಾಹಿತಿಯನ್ನೊದಗಿಸುವ ಸಲುವಾಗಿ ಆಯ್ದ ಯೋಜನಾ ಕಾರ್ಯಕ್ರಮಗಳ ಪರಿಣಾಮವನ್ನು ಅಳೆಯಲು ಮೌಲ್ಯಮಾಪನ, ಅಧ್ಯಯನಗಳನ್ನು ಕೈಗೊಳ್ಳುತ್ತದೆ.

## ರಾಷ್ಟ್ರೀಯ ಅಭಿವೃದ್ಧಿ ಸಮಿತಿ (NDC) :

ಈ ಸಮಿತಿಯು ಪಂಚವಾರ್ಷಿಕ ಯೋಜನೆಗಳಿಗೆ ಅನುಮತಿ ಮತ್ತು ಅಂಗೀಕಾರ ನೀಡುತ್ತದೆ. ೧೯೫೨ರ ಆಗಸ್ಟ್ ತಿಂಗಳಲ್ಲಿ ಯೋಜನಾ ಆಯೋಗದ ಮಾದರಿಯಲ್ಲೇ ಇದನ್ನು ಸ್ಥಾಪಿಸಲಾಯಿತು. ಇದರಲ್ಲಿ ಭಾರತದ ಪ್ರಧಾನಮಂತ್ರಿ, ಎಲ್ಲ ರಾಜ್ಯಗಳ ಮುಖ್ಯಮಂತ್ರಿಗಳು, ಯೋಜನಾ ಆಯೋಗದ ಸದಸ್ಯರು ಇರುತ್ತಾರೆ. ಯೋಜನೆ ಮತ್ತು ಸಾಮಾಜಿಕ-ಆರ್ಥಿಕ ಅಭಿವೃದ್ಧಿಗೆ ಸಂಬಂಧಿಸಿದ ಅನೇಕ ವಿಷಯಗಳ ಬಗ್ಗೆ ಕೇಂದ್ರ ಮತ್ತು ರಾಜ್ಯಗಳಲ್ಲಿ ಒಟ್ಟಾಭಿಪ್ರಾಯ ಮೂಡಿಸಲು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯು ಒಂದು ಶೃಂಗ ಸಂಸ್ಥೆಯಂತೆ ಕಾರ್ಯನಿರ್ವಹಿಸುತ್ತದೆ. ಇದರ ಒಟ್ಟಾಭಿಪ್ರಾಯದ ಮೇಲೆ ನಿರ್ಧಾರಗಳನ್ನು ಕೈಗೊಳ್ಳುತ್ತದೆ. ಕೇಂದ್ರ ಯೋಜನೆಯು ರಾಜ್ಯಮಟ್ಟದಲ್ಲಿ ಏಕರೂಪತಾ ನೀತಿಗಳಿಗೆ ಸಾಕಷ್ಟು ಅವಕಾಶ ಮಾಡಿಕೊಟ್ಟಿದೆ. ಪರಿಣಾಮವಾಗಿ ರಾಷ್ಟ್ರೀಯ ಭಾವೈಕ್ಯತೆಗೆ ಅವಕಾಶವಾಗಿದೆ. ಜನರನ್ನು ಬಡತನದಿಂದ ಮೇಲೆತ್ತುವುದು ಯೋಜನೆಯ ಕೇಂದ್ರ ಗುರಿಗಳಲ್ಲಿ ಒಂದಾಗಿದೆ. ಬಡತನವನ್ನು ಸುಧಾರಿಸಲು ಕೈಗೊಂಡಿರುವ ಕೆಲವು ಕಾರ್ಯಕ್ರಮಗಳನ್ನು ಮುಂದೆ ನೀಡಲಾಗಿದೆ.

## ಬಡತನ ಸುಧಾರಣಾ ಕಾರ್ಯಕ್ರಮಗಳು :

ಬಹುಮುಖ ರೂಪದ ಬಡತನವನ್ನು ತ್ರಿಮುಖ ವ್ಯವಸ್ಥೆಯಲ್ಲಿ ನಿವಾರಿಸಲು ಸರ್ಕಾರವು ಪ್ರಯತ್ನಿಸಿದೆ. ಆರ್ಥಿಕ ಬೆಳವಣಿಗೆ, ಮಾನವ ಸಂಪನ್ಮೂಲ ಅಭಿವೃದ್ಧಿ ಮತ್ತು ಬಡತನ ಸುಧಾರಣೆಯ ಕಾರ್ಯಕ್ರಮಗಳ ಮೂಲಕ ನೇರ ಪ್ರವೇಶ- ಇವು ಈ ವ್ಯವಸ್ಥೆಯ ತಿರುಳು. ೧೯೯೩-೯೪ ಮತ್ತು ೧೯೯೯-೨೦೦೦ದ ನಡುವೆ ಗ್ರಾಮೀಣ ಬಡತನವು ಶೇಕಡಾ ೩೭ ರಿಂದ ಶೇಕಡಾ ೨೭ಕ್ಕೆ ಇಳಿದಿದೆ. ಹೊಸ ಸಹಸ್ರಮಾನದ ಪ್ರಾರಂಭದಲ್ಲಿ ಈ ಇಳಿಕೆಯು ಉತ್ತೇಜನಕಾರಿಯಾಗಿದ್ದರೂ, ಹೊಸ ಸಹಸ್ರಮಾನದ ಆರಂಭದಲ್ಲಿ ಇನ್ನೂ ೧೯೩ ದಶಲಕ್ಷ ಜನರು ಬಡತನದಲ್ಲೇ ಇದ್ದಾರೆ ಎಂಬುದನ್ನು ಗಮನಿಸಿ ಈ ಇಳಿಕೆಯನ್ನು ವಸ್ತುನಿಷ್ಠವಾಗಿ ನೋಡಬೇಕಾಗಿದೆ.

ಇಷ್ಟಲ್ಲದೆ ಬಡತನವು ಹೆಚ್ಚಾಗಿ ಪೂರ್ವ ಮತ್ತು ಮಧ್ಯ ಪ್ರಾಂತಗಳಲ್ಲಿ ದಟ್ಟವಾಗುತ್ತಿದೆ. ಆಡಳಿತ ಮತ್ತು ಕಾರ್ಯಕ್ರಮ ನಿರ್ವಹಣೆಯ ವಿಷಯಗಳು ದೇಶದ ಪ್ರಗತಿಯಲ್ಲಿ ಮುಖ್ಯವಾಗುತ್ತವೆ. ಒಟ್ಟಾರೆ ಬಡತನ ನಿವಾರಣೆಯ ನಿಟ್ಟಿನಲ್ಲಿ ಈ ಸಂಗತಿಗಳು ಹೆಚ್ಚಿನ ಮಹತ್ವ ಪಡೆಯುತ್ತವೆ.

## ಸ್ವರ್ಣಜಯಂತಿ ಗ್ರಾಮ-ಸ್ವರೋಜ್‌ಗಾರ್ ಯೋಜನೆ (SGSY) :

ಈ ಯೋಜನೆಯಡಿಯಲ್ಲಿ ಬಡ ಕುಟುಂಬಗಳಿಗೆ, ಗ್ರಾಮೀಣ ಪ್ರದೇಶದಲ್ಲಿ ಬಡತನದ ರೇಖೆಯಿಂದ ಕೆಳಗಿನ ಮಟ್ಟದಲ್ಲಿ ಬದುಕುತ್ತಿರುವವರಿಗೆ ಸ್ವಯಂ ಉದ್ಯೋಗವನ್ನು ಕೈಗೊಳ್ಳಲು ಸಹಾಯ ಮಾಡಲಾಗುತ್ತದೆ. ಹಾಗೆ ಸಹಾಯ ಪಡೆದವರನ್ನು ಸ್ವರೋಜ್‌ಗಾರಿಗಳು ಎಂದು ಕರೆಯಲಾಗುತ್ತದೆ. ಅವರು ವೈಯಕ್ತಿವಾಗಿ ಅಥವಾ ಗುಂಪಿನಲ್ಲಿ ಕೂಡ ಈ ಸಹಾಯವನ್ನು ಪಡೆಯಬಹುದು. ಇಂತಹ ಗುಂಪುಗಳನ್ನು ಸ್ವ-ಸಹಾಯ ಗುಂಪುಗಳು (SHGS) ಎಂದು ಕರೆಯಲಾಗುತ್ತದೆ. ಯಶಸ್ವೀ ಸ್ವಯಂ ಉದ್ಯೋಗದ ಪ್ರತಿಯೊಂದು ಗುಂಪಿನಲ್ಲೂ ೪-೫ ಚಟುವಟಿಕೆಗಳನ್ನು ಅಧಿಕಾರಿಗಳು, ಅಧಿಕಾರೇತರರು ಮತ್ತು ಬ್ಯಾಂಕುಗಳ ಸಹಾಯದಿಂದ ಆಯ್ದುಕೊಳ್ಳಲಾಗುವುದು. ಇಂತಹ ಚಟುವಟಿಕೆಗಳನ್ನು 'ಮೂಲ ಚಟುವಟಿಕೆಗಳು' ಎಂದು ಕರೆಯಲಾಗಿದೆ. ಸ್ವರೋಜ್‌ಗಾರಿಗಳಿಗೆ ಬ್ಯಾಂಕ್ ಸಾಲ ಮರುಪಾವತಿಸಿದ ಮೇಲೂ ತಿಂಗಳಿಗೆ ನಿವ್ವಳ ೨೦೦೦/- ರೂಪಾಯಿಗಳ ವರಮಾನ ದೊರಕುವಂತಾಗಬೇಕು. ಬ್ಯಾಂಕುಗಳು ಕೃಷಿ, ಸಣ್ಣ ಕೈಗಾರಿಕೆ ಮೊದಲಾದ ಪ್ರಾಥಮಿಕ ವಿಭಾಗಗಳಿಗೆ ಶೇಕಡ ೪೦ರಷ್ಟು ಸಾಲವನ್ನು ಕೊಡಬೇಕಾಗಿದೆ. ವಾಸ್ತವವಾಗಿ ಈ ಯೋಜನೆ ಪ್ರಾಥಮಿಕ ವಿಭಾಗದ ಭಾಗವಾಗಿದೆ. ಸ್ವರೋಜಗಾರ್ ಯೋಜನೆಯು ಸಾಲ ಮತ್ತು ಸರ್ಕಾರ ನೀಡುವ ಸಹಾಯಧನದ ಕಾರ್ಯಕ್ರಮವಾಗಿದೆ.

## ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (SGRY) :

ಇದು ಕಾರ್ಯಗತಗೊಳ್ಳುತ್ತಿರುವ ಮಜೂರಿ-ಉದ್ಯೋಗದ ಏಕಮಾತ್ರ ಕಾರ್ಯಕ್ರಮ, ಮೂರು ಮಾರ್ಗಗಳಲ್ಲಿ ನಡೆಸುತ್ತಿದೆ. ಮೊದಲನೆಯದು, ಸ್ಥಳೀಯರಿಗೆ ಪೂರಕ ಸೌಲಭ್ಯವೊದಗಿಸಲು ಇಡೀ ರಾಜ್ಯದಾದ್ಯಂತ ಇರುವ ಸಾರ್ವತ್ರಿಕ ಮಾರ್ಗ. ಎರಡನೆಯದು, ಆಯ್ದ ಜಿಲ್ಲೆಗಳಲ್ಲಿ ನೂರು ದಿನಗಳ ಉದ್ಯೋಗ ಭರವಸೆಯ ಅವಕಾಶವಿರುವ ಮಾರ್ಗ. ಮೂರನೆಯದು, ಪ್ರಾಕೃತಿಕ ಆಪತ್ತುಗಳ ಸಂದರ್ಭಗಳಲ್ಲಿ ಲೋಕೋಪಯೋಗಿ ಕಾಮಗಾರಿಗಳನ್ನು ಕೈಗೊಳ್ಳಲು ಮತ್ತು ಬಾಳಿಕೆಯ ಆಸ್ತಿಗಳನ್ನು ನಿರ್ಮಿಸಲು ಸರ್ಕಾರಕ್ಕೆ ಸಹಾಯವಾಗುವಂತಹ ವ್ಯವಸ್ಥೆಯ ಮಾರ್ಗ- ಇವು ಈ ಕಾರ್ಯಕ್ರಮ ಘಟಕಗಳಾಗಿರುತ್ತವೆ.

## ರಾಷ್ಟ್ರೀಯ ಸಮಾಜ ಸಹಾಯಕ ಕಾರ್ಯಕ್ರಮ (NSAP) :

ವೃದ್ಧಾಪ್ಯವೇತನ ಮತ್ತು ದುಡಿಯುವ ವ್ಯಕ್ತಿಯ ಮರಣದಿಂದ ತೊಂದರೆಗೊಳಗಾದ ಬಡ ಕುಟುಂಬಕ್ಕೆ ದೊರಕುವ ಪರಿಹಾರ ನೀಡಲಾಗುವ ಈ ಕಾರ್ಯಕ್ರಮವನ್ನು ರಾಜ್ಯಗಳಿಗೆ ವರ್ಗಾಯಿಸಲಾಗಿದೆ. ಈ ಕಾರ್ಯಕ್ರಮದಲ್ಲಿ ಒಬ್ಬ ಗ್ರಾಮೀಣ ಬಡವನಿಗೆ (ಬಡತನದ ರೇಖೆಯ ಕೆಳಗಿನ ಪಟ್ಟಿಯಲ್ಲಿರುವ ವ್ಯಕ್ತಿ) ೬೫ ವರ್ಷಗಳ ಮೇಲಾಗಿದ್ದು, ಅವನಿಗೆ ನಿಶ್ಚಿತ ಆದಾಯವಿಲ್ಲದಿದ್ದರೆ ಅಥವಾ ಕುಟುಂಬದ ಸದಸ್ಯರಿಂದ ಹಣಕಾಸಿನ ಬೆಂಬಲವಿಲ್ಲದಿದ್ದರೆ, ಅಂತಹವರಿಗೆ ಸರ್ಕಾರವು ಪಿಂಚಣಿಯನ್ನು ಕೊಡುತ್ತದೆ. ಈ ಕಾರ್ಯಕ್ರಮದಲ್ಲಿ ಗ್ರಾಮ ಪಂಚಾಯತಿಯು, ಗ್ರಾಮಸಭೆಯು ಅಂತಹ ಫಲಾನುಭವಿಗಳನ್ನು ಗುರುತಿಸುತ್ತವೆ.

## ಜಲಾನಯನ ಅಭಿವೃದ್ಧಿ ಕಾರ್ಯಕ್ರಮಗಳು :

ಬರಪೀಡಿತ ಪ್ರದೇಶ ಕಾರ್ಯಕ್ರಮ (DPAP), ಮರುಭೂಮಿ ಅಭಿವೃದ್ಧಿ ಕಾರ್ಯಕ್ರಮ (DDP), ಸಂಯೋಜಿತ ಬಂಜರುಭೂಮಿ ಅಭಿವೃದ್ಧಿ ಕಾರ್ಯಕ್ರಮ (IWDP). ಮಳೆ ಆಧಾರಿತ ಪ್ರದೇಶಗಳಿಗೆ ರಾಷ್ಟ್ರೀಯ ಅಭಿವೃದ್ಧಿ ಯೋಜನೆ (NWDPRA), ಪರಿವರ್ತನ ಕೃಷಿ ಪ್ರದೇಶಗಳಲ್ಲಿ ಜಲಾನಯನ ಭೂಮಿ ಅಭಿವೃದ್ಧಿ (WDSCA) ಮತ್ತಿತರ ಕಾರ್ಯಕ್ರಮಗಳನ್ನು ನದಿಕಣಿವೆ ಮತ್ತು ಪ್ರವಾಹಪೀಡಿತ ಪ್ರದೇಶಗಳಲ್ಲಿ ಕಾರ್ಯಗತಗೊಳ್ಳಬೇಕಾದ ಈ ಕಾರ್ಯಕ್ರಮಗಳು ಈಗ ಸಾಮಾನ್ಯ ಮಾರ್ಗಕ್ರಮದ ವ್ಯಾಪ್ತಿಗೆ ಬರುತ್ತವೆ.

ಹತ್ತನೆಯ ಯೋಜನೆಯ ಅವಧಿಯಲ್ಲಿ ಭೂ ಸಂಪನ್ಮೂಲಗಳ ಗರಿಷ್ಠ ಬಳಕೆ, ಭೂಮಿ ನಾಶದ ತೀವ್ರ ಸ್ಥಳಗಳನ್ನು ಗುರುತಿಸಿ, ಪರಿಣಾಮಕಾರಿಯಾಗಿ ಯೋಜಿಸಲು ಭೂಮಾಹಿತಿ ದಾಖಲೆ, ಇವುಗಳ ಬಗ್ಗೆ ತೀವ್ರ ಪರಿಶೀಲನೆಗಾಗಿ ಭೂ ಸಂಪನ್ಮೂಲ ನಿರ್ವಹಣೆಯ ಒಂದು ರಾಷ್ಟ್ರೀಯ ನೀತಿಯನ್ನು ಕೈಗೆತ್ತಿಕೊಳ್ಳಲಾಗುವುದು. ಈ ಜಲಾನಯನ ಕಾರ್ಯಕ್ರಮಗಳನ್ನು ಸರ್ಕಾರಿ ಸಂಸ್ಥೆಗಳು, ಸಂಶೋಧನಾ ಸಂಸ್ಥೆಗಳು ಹಾಗೂ ಸಮುದಾಯ ಮೂಲದ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕವಿರುವ ಜನತಾ ಚಳುವಳಿಗಳಾಗಿ ಉತ್ತೇಜಿಸಲಾಗುವುದು.

## ಗ್ರಾಮೀಣ ಭಾರತ ಮತ್ತು ಯೋಜನೆ :

ಭಾರತವು ಜ್ಞಾನದ ಒಂದು ಮಹಾಶಕ್ತಿ ರಾಷ್ಟ್ರವಾಗಿ ರೂಪುಗೊಳ್ಳುತ್ತಿರುವಾಗ ಜ್ಞಾನಾಧಾರಿತ ಕೈಗಾರಿಕಾ ಕ್ಷೇತ್ರದಲ್ಲಿ ನಮ್ಮ ಬೆಳವಣಿಗೆಯು ಗಣನೀಯವಾಗಿರಬೇಕಾದಾಗ ಈ ಬೆಳವಣಿಗೆಯು ಬಡಜನರ ಮತ್ತು ಹಳ್ಳಿಗಳಲ್ಲಿ ವಾಸಿಸುವ ಸಾಮಾನ್ಯ ಜನರ ಜೀವನ ಮಟ್ಟವನ್ನು ಸುಧಾರಿಸುವಲ್ಲಿ ಎಷ್ಟರಮಟ್ಟಿಗೆ ಪ್ರಭಾವ ಬೀರುತ್ತದೆ ಎನ್ನುವುದರ ಬಗ್ಗೆ ಗಮನಹರಿಸಬೇಕಾಗಿದೆ. ತಂತ್ರ ಜ್ಞಾನ ಹಾಗೂ ಆಧುನೀಕರಣ- ಅದು ಮಾಹಿತಿ ತಂತ್ರಜ್ಞಾನವಾಗಲಿ, ಜೈವಿಕ ತಂತ್ರಜ್ಞಾನವಾಗಲಿ, ಸಂವಹನ ತಂತ್ರಜ್ಞಾನವಾಗಲಿ ಅಥವಾ ಬಾಹ್ಯಾಕಾಶ ತಂತ್ರಜ್ಞಾನವಾಗಲಿ ನಿಜವಾಗಿ ಫಲದಾಯಕವಾಗುವುದು ಈ ಮಾಹಿತಿಗಳು ಗ್ರಾಮೀಣ ಮಟ್ಟವನ್ನು ತಲುಪಿದಾಗಲೇ. ಬಡತನ ನಿವಾರಣೆಗೆ ಪ್ರತಿಯೊಬ್ಬ ನಾಗರೀಕನ ಅದರಲ್ಲೂ ಗ್ರಾಮೀಣ ಬಡವರ ಜೀವನ ಗುಣಮಟ್ಟವನ್ನು ಸುಧಾರಿಸಲು ಅವು ಸಾಧನಗಳಾದಾಗಲೇ. ಈ ವಿಷಯದ ಬಗ್ಗೆ ಗಾಂಧೀಜಿಯವರ ಮಾತುಗಳನ್ನು ಮತ್ತೆ ಉಲ್ಲೇಖಿಸಲಿಚ್ಛಿಸುತ್ತೇನೆ.

"ಹಳ್ಳಿ ಹಾಳಾದರೆ ಭಾರತವೂ ಹಾಳಾಗುತ್ತದೆಂದು ನಾನು ಹೇಳುತ್ತೇನೆ. ಆಗ ಭಾರತ ಎಂದಿಗೂ ಭಾರತವಾಗಿರುವುದಿಲ್ಲ. ಈ ಜಗತ್ತಿನಲ್ಲಿ ಅದರ ಗುರಿ ಅಗಣ್ಯವಾಗುತ್ತದೆ. ಹಳ್ಳಿಗಳ ಶೋಷಣೆ ನಿಂತಾಗಲೇ ಅವುಗಳ ಪುನಶ್ಚೇತನ ಸಾಧ್ಯ. ಸ್ಪರ್ಧೆ ಹಾಗೂ ಮಾರುಕಟ್ಟೆ ಸಮಸ್ಯೆಗಳು ತಲೆದೋರುವ ಕಾರಣ ಭಾರೀ ಪ್ರಮಾಣದ ಕೈಗಾರಿಕೀಕರಣದಿಂದ ಗ್ರಾಮೀಣ ಜನರು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಶೋಷಣೆಗೆ ಒಳಗಾಗುತ್ತಾರೆ. ಆದ್ದರಿಂದ ಹಳ್ಳಿಗಳು ಮುಖ್ಯವಾಗಿ ತಮ್ಮ ಬಳಕೆಗೆ ಅಗತ್ಯವಾದುದನ್ನು ತಯಾರಿಸುವ ಸ್ವಾವಲಂಬಿಗಳಾಗುವತ್ತ ನಾವು ನಮ್ಮ ಗಮನವನ್ನು ಕೇಂದ್ರೀಕರಿಸಬೇಕು. ಈ ರೀತಿಯ ಗ್ರಾಮೀಣ ಕೈಗಾರಿಕೆಯ ಸ್ವರೂಪವನ್ನು ಉಳಿಸಿಕೊಂಡುಹೋದಲ್ಲಿ, ಗ್ರಾಮೀಣ ಜನರು ಆಧುನಿಕ ಯಂತ್ರಗಳು ಮತ್ತು ಸಾಧನಗಳನ್ನು, ತಯಾರಿಸಲು ಮತ್ತು ಬಳಸಲು ಯಾವುದೇ ಆಕ್ಷೇಪಣೆಯಿಲ್ಲ. ಆದರೆ ಗ್ರಾಮೀಣ ಜನರನ್ನು ಮಾತ್ರ ಇತರರು ಶೋಷಣೆಯ ಸಾಧನಗಳನ್ನಾಗಿ ಬಳಸುವಂತಾಗಬಾರದು."

ಭಾರತದ ನೂರು ಕೋಟಿ ಜನರಲ್ಲಿ ³/₄ ಭಾಗ ಹಳ್ಳಿಗಳಲ್ಲಿ ವಾಸಿಸುತ್ತಾರೆ ಮತ್ತು ಇವರಲ್ಲಿ ಶೇಕಡ ೭೦ರಷ್ಟು ಬಡವರಿದ್ದಾರೆ. ಭಾರತದ ಬೇರುಗಳು ಇರುವುದು ಹಳ್ಳಿಗಳಲ್ಲಿ. ಆದ್ದರಿಂದ ಅದರ ಬೇರುಗಳನ್ನು ಸರಿಯಾಗಿ ಪೋಷಿಸದಿದ್ದರೆ ಮರ ಬೆಳೆಯಲಾರದು. ಮಹಾತ್ಮಗಾಂಧಿಯವರ "ಭಾರತವು ಹಳ್ಳಿಗಳಲ್ಲಿ ಜೀವಂತವಾಗಿದೆ" ಎನ್ನುವ ನುಡಿಗಳು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ದೃಷ್ಟಿಕೋನಗಳಿಂದ ಬಹಳ ಪ್ರಾಮುಖ್ಯತೆ ಪಡೆಯುತ್ತವೆ. ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಜನರ ಜೀವನದ ಗುಣಮಟ್ಟವು ನಗರ, ಉಪನಗರ ಪ್ರದೇಶಗಳಲ್ಲಿ ವಾಸಿಸುವ ಜನರ ಗುಣಮಟ್ಟದಂತೆಯೇ ಇರಬೇಕು. ಹಳ್ಳಿಗಳಲ್ಲಿರುವ ಬಡತನ, ನಿರುದ್ಯೋಗ ಬಹಳ ದುರ್ಬಲ ಮೂಲಭೂತ ಸೌಲಭ್ಯಗಳು ನಗರ ಕೇಂದ್ರಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತವೆ. ಅಭಿವೃದ್ಧಿ ಮತ್ತು ಬೆಳವಣಿಗೆಯೆಂದರೆ ನಗರ ಪ್ರದೇಶಗಳ ಅಭಿವೃದ್ಧಿ ಹಾಗೂ ಆಧುನೀಕರಣ ಎಂದಾಗಲಿ ಅಥವಾ ತ್ವರಿತಗತಿಯ ನಗರೀಕರಣವೆಂದಾಗಲೀ ಅರ್ಥವಲ್ಲ. ಇಂತಹ ತ್ವರಿತಗತಿಯ ನಗರೀಕರಣದಿಂದಾಗಿ ಉದ್ಯೋಗ ಮತ್ತು ಉತ್ತಮ ಸೌಲಭ್ಯಗಳನ್ನು ಅರಸುತ್ತ ನಗರ ಪ್ರದೇಶಗಳಲ್ಲಿಗೆ

ಬರುವ ವಲಸಿಗರ ಸಂಖ್ಯೆ ಹೆಚ್ಚುತ್ತದೆ ಮತ್ತು ಕೊಳೆಗೇರಿಗಳು ಹೆಚ್ಚುತ್ತವೆ. ಇದರಿಂದಾಗಿ ಸಾಮಾಜಿಕ ಹಾಗೂ ಆರ್ಥಿಕ ಒತ್ತಡಗಳು ಉದ್ಭವಿಸುತ್ತವೆ ಮತ್ತು ನಗರಗಳಲ್ಲೂ ಬಡತನ ಹೆಚ್ಚುತ್ತದೆ. ವಲಸೆಯನ್ನು ತಪ್ಪಿಸಿ ನಗರದ ಅಸ್ಥಿರತೆಯನ್ನು ನಿವಾರಿಸಲು ಇರುವ ಒಂದು ಮಾರ್ಗವೆಂದರೆ ಹಳ್ಳಿಗಳನ್ನು ಅಭಿವೃದ್ಧಿಪಡಿಸುವುದು. ಬಡತನ, ಉದ್ಯೋಗ ಅವಕಾಶಗಳಿಲ್ಲದಿರುವುದು, ನೀರಿನ ಕೊರತೆ ಮತ್ತು ತಮ್ಮ ಜೀವನ ಗುಣಮಟ್ಟವನ್ನು ಸುಧಾರಿಸುವ ಕನಸುಗಳನ್ನು ಹೊತ್ತು ಹಳ್ಳಿಗರು ವಲಸೆ ಹೋಗುತ್ತಾರೆ. ಆದರೆ ಎಷ್ಟೋ ಸಲ ನಗರ ಪ್ರದೇಶಗಳಲ್ಲಿ ಅವರ ನಿರೀಕ್ಷೆಗಳೆಲ್ಲ ಹುಸಿಯಾಗಿಬಿಡುತ್ತವೆ.

ಜಲಸಂಪನ್ಮೂಲದ ಅಭಿವೃದ್ಧಿ, ಮಣ್ಣಿನ ಸಂರಕ್ಷಣೆ, ಪಶುಸಂಗೋಪನೆ, ಹೈನುಗಾರಿಕೆ, ಸಹಕಾರೀ ಮಾರುಕಟ್ಟೆ, ಸ್ವಸಹಾಯ ಗುಂಪುಗಳು, ಸೂಕ್ಷ್ಮ ಸಾಲಗಳು, ತೋಟಗಾರಿಕೆ, ರೇಷ್ಮೆ ಅಭಿವೃದ್ಧಿ, ವ್ಯವಸಾಯ ಮತ್ತು ವ್ಯವಸಾಯೇತರ ಚಟುವಟಿಕೆಗಳು, ಜೈವಿಕ ಇಂಧನ, ಜನಜಾಗೃತಿ ಮೂಡಿಸುವುದು ಮತ್ತು ಪರಿಸರ ನೈರ್ಮಲ್ಯ ಹಾಗೂ ಕುಟುಂಬ ಯೋಜನೆಗಳಲ್ಲಿ ಜನರನ್ನು ತೊಡಗಿಸುವ ಪ್ರಯತ್ನಗಳು ಹಾಗೂ ಸ್ವ-ಇಚ್ಛೆಯ ದುಡಿಮೆ-ಇವುಗಳಿಂದ ಖಂಡಿತವಾಗಿಯೂ ಉತ್ತಮ ಪರಿಣಾಮಗಳೇ ದೊರಕುತ್ತವೆ.

## ಭಾರತ ದರ್ಶನ-೨೦೨೦ :

ಯೋಜನಾ ಆಯೋಗದವರು ಅಭಿವೃದ್ಧಿಪಡಿಸಿದ 'ಭಾರತದರ್ಶನ-೨೦೨೦'ರ ಪ್ರಕಾರ ೨೦೨೦ರ ವೇಳೆಗೆ ಭಾರತದ ಜನಸಂಖ್ಯೆ ಹೆಚ್ಚಿರುತ್ತದೆ. ಶಿಕ್ಷಣಮಟ್ಟ ಉತ್ತಮಗೊಂಡಿರುತ್ತದೆ. ಜನರು ಹೆಚ್ಚು ಆರೋಗ್ಯಪೂರ್ಣರಾಗಿರುತ್ತಾರೆ ಮತ್ತು ಹೆಚ್ಚು ಸಮೃದ್ಧಿ ಇರುತ್ತದೆ. ನಮ್ಮ ದೀರ್ಘ ಚರಿತ್ರೆಯ ಪುಟಗಳಲ್ಲಿ ಹಿಂದೆಂದೂ ಕಾಣದ ಏಳಿಗೆಯನ್ನು ಕಾಣಬಹುದು. ೨೦೨೦ರ ಹೊತ್ತಿಗೆ ಭಾರತದ ಪ್ರತಿಯೊಬ್ಬ ವ್ಯಕ್ತಿಯ ಆದಾಯ ನಾಲ್ಕುಪಟ್ಟು ಹೆಚ್ಚುತ್ತದೆ ಮತ್ತು ವರ್ಷಕ್ಕೆ ಶೇಕಡ ೯ರಂತೆ ಜಿ.ಡಿ.ಪಿ. ಪ್ರಮಾಣ ಬೆಳೆಯುತ್ತದೆ. ಜನಸಂಖ್ಯೆಯ ಬೆಳವಣಿಗೆ ವರ್ಷಕ್ಕೆ ಶೇಕಡ ೧.೬ರಷ್ಟು ಕಡಿಮೆಯಾಗುತ್ತ ಹೋಗುತ್ತದೆ. ಆಗ, ಪ್ರಸ್ತುತವಿರುವ ಅಸಮಾನತೆಗಳನ್ನು ಹೋಗಲಾಡಿಸಿ ಎಲ್ಲರಿಗೂ ಸಮಾನ ಅವಕಾಶಗಳನ್ನು ಒದಗಿಸುವಂತಹ ಜನಕೇಂದ್ರಿತ ಅಭಿವೃದ್ಧಿಯನ್ನು ಕಾಣಬಹುದು. ನಿರುದ್ಯೋಗ ಎನ್ನುವುದು ಬಹುಮಟ್ಟಿಗೆ ಇಲ್ಲವಾಗಿರುತ್ತದೆ. ಬಡಜನರಿರುವುದಿಲ್ಲ ಮತ್ತು ಶೇಕಡ ೧೦೦ರಷ್ಟು ಸಾಕ್ಷರತೆ ಉಂಟಾಗಿರುತ್ತದೆ. 'ಏಷ್ಯಾದ ಸಿಲಿಕಾನ್ ವ್ಯಾಲಿ' ಎಂಬ ಬಿರುದಿಗೆ ಅರ್ಹವಾಗಿರುವ ಭಾರತ ಇನ್ನು ಮುಂದೆ ಮಾಹಿತಿ ತಂತ್ರಜ್ಞಾನದಿಂದ ಜೈವಿಕ ತಂತ್ರಜ್ಞಾನ, ವೈದ್ಯಕೀಯ ವಿಜ್ಞಾನ ಹಾಗೂ ತಂತ್ರಜ್ಞಾನದ ಇತರ ಹೊಸ ಕ್ಷೇತ್ರಗಳನ್ನು ಪ್ರವೇಶಿಸಿ ಅಂತಾರಾಷ್ಟ್ರೀಯ ಸ್ಪರ್ಧಾ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುತ್ತದೆ. ಶಿಕ್ಷಣ ಪಡೆದ ಯುವಜನತೆಗೆ ಭಾರೀ ಪ್ರಮಾಣದ ಉದ್ಯೋಗಾವಕಾಶಗಳನ್ನು ಕಲ್ಪಿಸುತ್ತದೆ. ಈ ಅಭಿವೃದ್ಧಿಗಳ ಜೊತೆಗೆ ಗಣನೀಯ ಪ್ರಮಾಣದಲ್ಲಿ ಔದ್ಯೋಗಿಕ ತರಬೇತಿ ಕಾರ್ಯಕ್ರಮಗಳು ವಿಸ್ತರಣೆಗೊಂಡು, ೨೦೨೦ರ ಹೊತ್ತಿಗೆ ಎಲ್ಲರಿಗೂ ಕೆಲಸ ಸಿಗುವುದು ಖಚಿತವಾಗಿದೆ. ವಿವಿಧ ವಯೋವರ್ಗ ಲಿಂಗಗಳು, ಆದಾಯ ವರ್ಗಗಳು, ಸಮುದಾಯಗಳು ಮತ್ತು ಪ್ರದೇಶಗಳ ನಡುವಿನ ಅಸಮಾನತೆ ಗಣನೀಯವಾಗಿ ಕಡಿಮೆಯಾಗುತ್ತದೆ. ೨೦೨೦ರಲ್ಲಿ ಭಾರತ ಹೇಗಿರುತ್ತದೆಂದರೆ ಸಮುದಾಯದ ಎಲ್ಲ ಮಟ್ಟ ಹಾಗೂ ವರ್ಗಗಳಲ್ಲಿ ಮತ್ತು ದೇಶದ ಎಲ್ಲ ಭಾಗಗಳೂ ಹೆಚ್ಚು ಸುಭದ್ರ ಮತ್ತು ಸಮೃದ್ಧ ಭವಿಷ್ಯದತ್ತ ಮುನ್ನಡೆದಿರುತ್ತವೆ. ೨೦೨೦ರ ಹೊತ್ತಿಗೆ ಜಾಗತಿಕ, ಆರ್ಥಿಕ ಸಮುದಾಯದೊಂದಿಗೆ ಭಾರತವು ಹೆಚ್ಚು ಬೆಸುಗೆಗೊಂಡು ವಾಣಿಜ್ಯ, ತಂತ್ರಜ್ಞಾನ ಹಾಗೂ ಬಂಡವಾಳ ಹೂಡಿಕೆ ವಿಷಯಗಳಲ್ಲಿ ಒಂದು ಪ್ರಮುಖ ದೇಶವಾಗಿ ಹೊರಹೊಮ್ಮಿರುತ್ತದೆ. ಶಿಕ್ಷಣ, ಉದ್ಯೋಗ ಮತ್ತು ಆದಾಯ ಮಟ್ಟಗಳಲ್ಲಿ ಆಗುವ ಹೆಚ್ಚಳದಿಂದ ಭಾರತದ ಆಂತರಿಕ ಭದ್ರತೆ ಹಾಗೂ ಸಾಮಾಜಿಕ ವಾತಾವರಣ ದೃಢಗೊಳ್ಳಲು ನೆರವಾಗುತ್ತದೆ. ಸಂಘಟಿತ ಮತ್ತು ಸಮೃದ್ಧ ಭಾರತದ ಸುರಕ್ಷತೆಗೆ ಹೊರಗಿನ ಬೆದರಿಕೆಗಳ ಸಂಭವ ಕಡಿಮೆಯಾಗುತ್ತದೆ. ಉತ್ತಮ ಸುಶಿಕ್ಷಿತ ಮತದಾರರು ಮತ್ತು ಹೆಚ್ಚು ಪಾರದರ್ಶಕ, ಜವಾಬ್ದಾರಿಯುತ, ಕಾರ್ಯಶೀಲ ಹಾಗೂ ವಿಕೇಂದ್ರೀಕೃತ ಸರ್ಕಾರ ವ್ಯವಸ್ಥೆ ೨೦೨೦ರ ಸಮೃದ್ಧ ಅಭಿವೃದ್ಧಿ ಭಾರತ ಸ್ವರೂಪವಾಗುತ್ತದೆ.

## ಪಂಚಾಯತ್ ರಾಜ್ ಸಂಸ್ಥೆಗಳ ಪಾತ್ರ :

೭೩ ಹಾಗೂ ೭೪ನೇ ಸಂವಿಧಾನ ತಿದ್ದುಪಡಿ ಅಧಿನಿಯಮ (CAA) ಹಾಗೂ ಪಂಚಾಯತ್ (ಪರಿಶಿಷ್ಟ ಪ್ರದೇಶಗಳಿಗೆ ವಿಸ್ತರಿಸಿದ್ದು) ಅಧಿನಿಯಮಗಳ (PESA) ಉಪಬಂಧಗಳು ಪ್ರಜಾಸತ್ತಾತ್ಮಕ ವಿಕೇಂದ್ರಿತ ಸರ್ಕಾರದ ಸ್ವರೂಪವನ್ನು ತಿಳಿಸುತ್ತವೆ.

೭೩ನೇ CAA ಹಾಗೂ PESA ಗಳು ಗ್ರಾಮೀಣ ಹಾಗೂ ಬುಡಕಟ್ಟು ಪ್ರದೇಶಗಳಿಗೆ ಅನ್ವಯವಾಗುತ್ತವೆ. ಅವು ದೇಶದ ಶೇಕಡ ೮೦ರಷ್ಟು ಜನಸಂಖ್ಯೆ ಮತ್ತು ಬಡಜನರನ್ನು ಒಳಗೊಂಡಿರುತ್ತದೆ. ಈ ಅಧಿನಿಯಮಗಳ ಮುಖ್ಯಾಂಶಗಳೆಂದರೆ :

೧. ಹಳ್ಳಿ, ಕ್ಷೇತ್ರ (ಬ್ಲಾಕು) ಹಾಗೂ ಜಿಲ್ಲಾ ಮಟ್ಟಗಳಲ್ಲಿ ಪಂಚಾಯತ್‌ಗಳ ರಚನೆ.
೨. ಪಂಚಾಯತ್‌ಗಳಿಗೆ ನಿಯಮಿತ ಚುನಾವಣೆ.
೩. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಅವರ ಜನಸಂಖ್ಯೆಗೆ ಅನುಗುಣವಾಗಿ ಸ್ಥಾನ ಮೀಸಲಾತಿ.
೪. ಮಹಿಳೆಯರಿಗಾಗಿ ಎಲ್ಲ ಹಂತಗಳಲ್ಲಿ ಕನಿಷ್ಠ ಶೇಕಡ ೩೩ರಷ್ಟು ಸ್ಥಾನಗಳು ಹಾಗೂ ಅಧ್ಯಕ್ಷ ಪದವಿ ಸ್ಥಾನಗಳಿಗೆ ಮೀಸಲಾತಿ.
೫. ಎಲ್ಲ ಹಂತಗಳಲ್ಲೂ ಸ್ಥಳೀಯ ಸಂಸ್ಥೆಗಳ ಆರ್ಥಿಕ ಸ್ಥಿತಿಯನ್ನು ಬಲಪಡಿಸಲು ಒಂದು ಸ್ವತಂತ್ರ ರಾಜ್ಯ ಆರ್ಥಿಕ ಆಯೋಗದ ಸ್ಥಾಪನೆ.
೬. ಪಂಚಾಯತ್ ರಾಜ್ ಸಂಸ್ಥೆಗಳಿಗೆ ಚುನಾವಣೆ ನಡೆಸಲು ಒಂದು ಸ್ವತಂತ್ರ ರಾಜ್ಯ ಚುನಾವಣಾ ಆಯೋಗದ ರಚನೆ.
೭. ಗ್ರಾಮಸಭೆಗಳಿಗೆ ಕಾನೂನು ಸಮ್ಮತ ಸ್ಥಾನಮಾನ.
೮. ಪಂಚಾಯತ್ ರಾಜ್ ಸಂಸ್ಥೆಗಳ ಅಧಿಕಾರ ವ್ಯಾಪ್ತಿಯೊಳಗೆ ಬರುವ ೨೯ ವಿಷಯಗಳ ಪಟ್ಟಿಯಿರುವಂತೆ ೧೧ನೆಯ ಶೆಡ್ಯೂಲ್ ಸೇರಿಸುವುದು.

ಸೂಕ್ತ ಹಂತದಲ್ಲಿ ಪಂಚಾಯತ್ ರಾಜ್‌ಗಳ ಮೇಲೆ ಅಧಿಕಾರ ಹಾಗೂ ಜವಾಬ್ದಾರಿಗಳನ್ನು ವಹಿಸಲು ೭೩ನೇ CAA ಈ ಕೆಳಕಂಡವುಗಳಿಗೆ ಸಂಬಂಧಿಸಿದಂತೆ ಉಪಬಂಧಗಳನ್ನು ಒಳಗೊಂಡಿದೆ.

ಅ) ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯಗಳಿಗೆ ಯೋಜನೆಗಳನ್ನು ಸಿದ್ಧಪಡಿಸುವುದು.
ಆ) ಪಂಚಾಯತ್ ರಾಜ್‌ಗಳಿಗೆ ವಹಿಸಲ್ಪಟ್ಟ ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯದ ಅಂತಹ ಯೋಜನೆಗಳ ಅನುಷ್ಠಾನ ಪಂಚಾಯತ್ (ಪರಿಶಿಷ್ಟ ಪ್ರದೇಶಗಳಿಗೆ ವಿಸ್ತರಿಸಿದ್ದು) ಅಧಿನಿಯಮ ೧೯೯೬ (PESA) ಒಂಬತ್ತು ರಾಜ್ಯಗಳಲ್ಲಿನ ಬುಡಕಟ್ಟು ಪ್ರದೇಶಗಳಿಗೆ ವಿಸ್ತರಿಸುತ್ತದೆ. ಇದರಿಂದಾಗಿ ಬುಡಕಟ್ಟು ಸಮುದಾಯವು ತನ್ನ ಅಭಿವೃದ್ಧಿಯನ್ನು ತಾನೇ ರೂಪಿಸಿಕೊಳ್ಳಲು ಮತ್ತು ನೈಸರ್ಗಿಕ ಸಂಪನ್ಮೂಲಗಳ ಮೇಲೆ ತಮ್ಮ ಸಾಂಪ್ರದಾಯಿಕ ಹಕ್ಕುಗಳನ್ನು ಉಳಿಸಿಕೊಳ್ಳಲು ಮತ್ತು ರಕ್ಷಿಸಿಕೊಳ್ಳಲು ನೆರವಾಗುತ್ತದೆ.

ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಹಳ್ಳಿಗರ ಸಾಮಾನ್ಯ ಸಭೆಯಾದ ಗ್ರಾಮಸಭೆಗೆ ಪಂಚಾಯತ್‌ಗಳ ಕಾರ್ಯಕ್ಷಮತೆಯಲ್ಲಿ ಪ್ರಮುಖ ಪಾತ್ರವಿರುತ್ತದೆ. ಈ ಅಧಿನಿಯಮವು ಗ್ರಾಮಸಭಾ ಸಭೆಗಳಲ್ಲಿ, ಗ್ರಾಮೀಣ ಬಡಜನರು, ಮಹಿಳೆಯರು ಮತ್ತು ಉಪೇಕ್ಷೆಗೊಳಗಾದವರು ತಮ್ಮ ಜೀವನದ ಮೇಲೆ ಪರಿಣಾಮ ಬೀರುವ ವಿಷಯಗಳ ಬಗ್ಗೆ ನಿರ್ಧಾರ ತೆಗೆದುಕೊಳ್ಳಲು ಒಂದು ಅವಕಾಶ ಒದಗಿಸುತ್ತದೆ. ಗ್ರಾಮಸಭೆಯ ಕ್ರಿಯಾಶೀಲ ಕಾರ್ಯನಿರ್ವಹಣೆಯು ಪಾರದರ್ಶಕತೆಯುಳ್ಳ ಜವಾಬ್ದಾರಿಯುತ ಮತ್ತು ಸಾಧನೆಯತ್ತ ನಡೆಯುವ ಸಹಭಾಗಿತ್ವದ ಪ್ರಜಾಪ್ರಭುತ್ವದ ಭರವಸೆ ನೀಡುತ್ತದೆ.

ಪಂಚಾಯತ್‌ರಾಜ್ ಸಂಸ್ಥೆಗಳು ಜೀವನಾಧಾರ ಪ್ರಗತಿಗೆ ಪೂರಕವಾಗಿ ಗ್ರಾಮೀಣ ಅಭಿವೃದ್ಧಿಗೆ ಶಕ್ತಿಯುತ ಸಾಧನಗಳಾಗಿವೆ. ಜನರನ್ನು ಸಕ್ರಿಯವಾಗಿ ತೊಡಗಿಸಿಕೊಳ್ಳದ ಅಥವಾ ಪಂಚಾಯತ್‌ರಾಜ್ ಸಂಸ್ಥೆ ಹಾಗೂ ಗ್ರಾಮಸಭೆಗಳಂತಹ ಬುಡಮಟ್ಟದ ವ್ಯವಸ್ಥೆಗಳನ್ನು ವಿಶ್ವಾಸಕ್ಕೆ ತೆಗೆದುಕೊಳ್ಳದ ಹೊರತು ನಿಜವಾದ ಅಭಿವೃದ್ಧಿ ಸಾಧ್ಯವಿಲ್ಲ. ಫಲಾನುಭವಿಗಳೇ ಸ್ವತಃ ಸಮಸ್ಯೆಗಳಿಗೆ ಪ್ರತಿಕ್ರಿಯಿಸದ ಹೊರತು ಎಲ್ಲ ಪ್ರಯತ್ನಗಳೂ ಅರ್ಥಹೀನವಾಗುತ್ತವೆ. ಆದ್ದರಿಂದ ಕಾರ್ಯಗಳ, ಕಾರ್ಯನಿರ್ವಾಹಕರ ಮತ್ತು ಆರ್ಥಿಕ ಅಧಿಕಾರ ವಹಿಸುವಿಕೆ ಮತ್ತು ವಿಕೇಂದ್ರೀಕರಣಗಳನ್ನು ಇನ್ನೂ ಹೆಚ್ಚು ವಿಳಂಬ ಮಾಡುವ ಹಾಗಿಲ್ಲ.

ಅನೇಕ ರಾಜ್ಯಗಳಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳ ಅಧಿಕಾರ ವರ್ಗಾವಣೆ ಬಹಳ ನಿಧಾನವಾಗಿರುವ ಕಾರಣ ಈ ಕೆಳಕಂಡ ವಿಷಯಗಳ ಬಗೆಗೂ ಹೆಚ್ಚು ಗಮನ ಹರಿಸಬೇಕಾದ ಅಗತ್ಯವಿದೆ.

೧. ಪಂಚಾಯತ್ ರಾಜ್ ಸಂಸ್ಥೆಗಳ ಕಾರ್ಯಕರ್ತರ ತರಬೇತಿ; ಪಂಚಾಯತ್ ರಾಜ್ ಸಂಸ್ಥೆಗಳ ಪರ್ಯಾಲೋಚನೆಗಳಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಮಹಿಳೆಯರ ಪಾಲ್ಗೊಳ್ಳುವಿಕೆ.

೨. ಪಂಚಾಯತ್‌ರಾಜ್ ಸಂಸ್ಥೆಗಳ ವಿವಿಧ ಘಟ್ಟಗಳಲ್ಲಿನ ಆಡಳಿತ ಪಾರದರ್ಶಕತೆ, ಸಾಮಾಜಿಕ ಹೊಣೆಗಾರಿಕೆ ಮತ್ತು ಲೆಕ್ಕಪರಿಶೋಧನೆಯ ಪದ್ಧತಿ.

೩. ಪಂಚಾಯತ್ ರಾಜ್ ಸಂಸ್ಥೆಗಳ ಮೂಲಕ ಪಂಚಾಯತ್ ಪ್ರಾಯೋಜಿತ ಯೋಜನೆಗಳ ಅನುಷ್ಠಾನ.

೪. ಜಂಟಿ ಅರಣ್ಯ ನಿರ್ವಹಣೆ ಸಮಿತಿಗಳು, ಗ್ರಾಮ ಶಿಕ್ಷಣ ಸಮಿತಿಗಳು ಹಾಗೂ ಜಲಾನಯನ ಪ್ರದೇಶದ ಬಳಕೆದಾರರ ಸಂಘಗಳಂತಹ ಇತರ ಸಂಸ್ಥೆಗಳೊಂದಿಗೆ ಪಂಚಾಯತ್ ರಾಜ್ ಸಂಸ್ಥೆಗಳ ಅಂತರ ಸಹಕಾರ.

೫. ಪಂಚಾಯತ್ ರಾಜ್ ಸಂಸ್ಥೆಗಳು ಹಾಗೂ ಸರ್ಕಾರೇತರ ಸಂಸ್ಥೆಗಳ ನಡುವೆ ಸೌಹಾರ್ದಯುತ ಸಂಬಂಧ ಕಲ್ಪಿಸುವುದು.

೬. ಜಿಲ್ಲಾ ಯೋಜನಾ ಸಮಿತಿಗಳನ್ನು ಕಾರ್ಯಶೀಲಗೊಳಿಸುವ ಅಗತ್ಯತೆ.

## ಜಿಲ್ಲಾ ಯೋಜನೆಗಳು :

ಸಂವಿಧಾನದ ೭೪ನೇ ತಿದ್ದುಪಡಿ ಅಧಿನಿಯಮದ ಅಂಗೀಕಾರದಿಂದಾಗಿ ವಿಕೇಂದ್ರೀಕೃತ ಯೋಜನೆ ಪ್ರಕ್ರಿಯೆಗೆ ಹೆಚ್ಚಿನ ಒತ್ತು ದೊರೆಯಿತು. ಈ ಅಧಿನಿಯಮದಲ್ಲಿ ಜಿಲ್ಲೆಯ ಪಂಚಾಯತ್‌ಗಳು ಹಾಗೂ ಪುರಸಭೆಗಳು ಸಿದ್ಧಪಡಿಸಿದ ಯೋಜನೆಗಳನ್ನು ಕ್ರೋಢೀಕರಿಸಲು ಮತ್ತು ಇಡೀ ಜಿಲ್ಲಾ ಯೋಜನೆಯ ಕರಡು ರಚನೆಗೆ ಅವಕಾಶ ಒದಗಿಸಲಾಗಿದೆ. ಆದರೆ ಇದುವರೆಗೆ ಜಿಲ್ಲಾ ಯೋಜನಾ ಸಮಿತಿಗಳಿಂದ ಬಂದಿರುವ ಸಂಯೋಜಿತ ಜಿಲ್ಲಾ ಯೋಜನೆಗಳು ಪ್ರೋತ್ಸಾಹದಾಯಕವಾಗಿಲ್ಲ. ಕೇರಳ, ಮಧ್ಯಪ್ರದೇಶ, ರಾಜಾಸ್ಥಾನ, ಸಿಕ್ಕಿಂ, ತಮಿಳುನಾಡು, ತ್ರಿಪುರ ಹಾಗೂ ಪಶ್ಚಿಮ ಬಂಗಾಳಗಳಲ್ಲಿ ಮಾತ್ರ ಜಿಲ್ಲಾ ಯೋಜನಾ ಸಮಿತಿಗಳನ್ನು ರಚಿಸಲಾಗಿದೆ. ಹರ್ಯಾಣ ಹಾಗೂ ಕರ್ನಾಟಕ ರಾಜ್ಯಗಳು ಕೆಲವೇ ಜಿಲ್ಲೆಗಳಲ್ಲಿ ಮಾತ್ರ ಜಿಲ್ಲಾ ಯೋಜನಾ ಸಮಿತಿಗಳನ್ನು ರಚಿಸಿವೆ. ಗ್ರಾಮಸಭೆ/ವಾರ್ಡ್ ಸಭೆಗಳೊಡನೆ ಸಮಾಲೋಚನೆಯೊಂದಿಗೆ ಪಂಚಾಯತ್‌ಗಳು ಹಾಗೂ ಪುರಸಭೆಗಳು ತಾವೇ ಸ್ವತಃ ತಮ್ಮ ಯೋಜನೆಗಳನ್ನು ರೂಪಿಸಿಕೊಳ್ಳಲು ಅಧಿಕಾರ ನೀಡುವುದು ಬಹಳ ಮುಖ್ಯವಾಗಿರುತ್ತದೆ.

ಜಿಲ್ಲಾ ಹಾಗೂ ಪಂಚಾಯತ್ ಯೋಜನೆಗಳ ಶಾಸನಬದ್ಧ ಅಧ್ಯಾದೇಶಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಪ್ರಸ್ತುತ ಸಂರಚನೆ, ಸಾಂಸ್ಥಿಕ ವ್ಯವಸ್ಥೆಗಳು, ಒಲವುಗಳು ಹಾಗೂ ಕಾರ್ಯತಂತ್ರಗಳನ್ನು ಮರುಪರಿಶೀಲಿಸಲು ಮತ್ತು ಜಿಲ್ಲಾ ಹಾಗೂ ಪಂಚಾಯತ್ ಮಟ್ಟದ ಯೋಜನೆಗಳ ಅನುಷ್ಠಾನಕ್ಕೆ ಸಂಬಂಧಿಸಿದಂತೆ ನೀತಿ ನಿರ್ದೇಶನ ನೀಡಲು ಸೆಪ್ಟೆಂಬರ್ ೨೦೦೪ರಲ್ಲಿ ಯೋಜನಾ ಆಯೋಗವು ಜಿಲ್ಲಾ ಯೋಜನಾ ಸಲಹಾ ತಂಡವೊಂದನ್ನು ರಚಿಸಿದೆ. ಪ್ರಭಾವಶಾಲಿ ಜಿಲ್ಲಾಮಟ್ಟದ ಯೋಜನೆಗಳ ಮೂಲಕ ಅಭಿವೃದ್ಧಿ ಹೊಂದಿದ ಮತ್ತು ಕಡಿಮೆ ಅಭಿವೃದ್ಧಿಗೊಂಡಿರುವ ಜಿಲ್ಲೆಗಳ ನಡುವಿನ ಅಸಮಾನತೆಯನ್ನು ಹೋಗಲಾಡಿಸಲು ಯೋಜನಾ ಆಯೋಗವು ತೆಗೆದುಕೊಂಡಿರುವ ಮತ್ತೊಂದು ಕ್ರಮವೆಂದರೆ ರಾಷ್ಟ್ರೀಯ ಸಮವಿಕಾಸ ಯೋಜನೆ. ಈ ಯೋಜನೆಯ ವಿವರ ಕೆಳಕಂಡಂತಿದೆ :

## ರಾಷ್ಟ್ರೀಯ ಸಮವಿಕಾಸ ಯೋಜನಾ (RSVY) :

ಹತ್ತನೇ ಯೋಜನೆಯಲ್ಲಿ ಆರಂಭಿಸಲಾಗಿರುವ ಈ RSVY ಯೋಜನೆಯಡಿಯಲ್ಲಿ ಪ್ರತಿಯೊಂದು ಜಿಲ್ಲೆಯನ್ನು ಅಭಿವೃದ್ಧಿ ಹೊಂದಿದ ಜಿಲ್ಲೆಗೆ ಸಮಾನವಾಗುವಂತೆ ಆಯ್ಕೆಗೊಂಡ ಜಿಲ್ಲೆಗಳು ತಮ್ಮದೇ ಆದ ಒಂದು ಜಿಲ್ಲಾ ಯೋಜನೆಯನ್ನು ಸಿದ್ಧಪಡಿಸಬೇಕು. ಈ ಯೋನೆಯ ಮಾರ್ಗದರ್ಶಕ ಸೂತ್ರಗಳ ಪ್ರಕಾರ, ಕಡಿಮೆ ಕೃಷಿ ಉತ್ಪಾದನೆ, ನಿರುದ್ಯೋಗ ಸಮಸ್ಯೆಗಳನ್ನು ಪರಿಹರಿಸುವ ಯೋಜನೆಗಳನ್ನು ರೂಪಿಸಬೇಕು ಮತ್ತು ಭೌತಿಕ ಹಾಗೂ ಸಾಮಾಜಿಕ ಅಂತರ ವ್ಯವಸ್ಥೆಗಳ ನಡುವಿನ ಅಂತರವನ್ನು ಕಡಿಮೆ ಮಾಡಲು ಪ್ರಯತ್ನಿಸಬೇಕು. ಮೂರು ವರ್ಷಗಳ ಕಾಲ ಪ್ರತಿ ವರ್ಷವೂ ಪ್ರತಿಯೊಂದು ಜಿಲ್ಲೆಗೆ ೧೫ ಕೋಟಿ ರೂ.ಗಳಂತೆ ಒಟ್ಟು ೪೫ ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗುತ್ತದೆ.

ಜಿಲ್ಲಾ ಯೋಜನೆಗಳು ಜಿಲ್ಲಾಧಿಕಾರಿಗಳಿಂದ ಸಿದ್ಧಪಡಿಸಲಾಗುವ ಜಿಲ್ಲಾ ಯೋಜನೆಗಳಿಗೆ ರಾಜ್ಯಮಟ್ಟದ ಕ್ರಿಯಾ ಸಮಿತಿ ಅನಂತರ ಅದಕ್ಕೆ ಅನುಮೋದನೆ ನೀಡುತ್ತದೆ. ನಂತರ ಅಧಿಕೃತ ಸಮಿತಿಯ ಅನುಮೋದನೆಗಾಗಿ ಯೋಜನಾ ಆಯೋಗಕ್ಕೆ ಕಳಿಸಲಾಗುತ್ತದೆ.

ಈ ಯೋಜನೆಯಡಿಯಲ್ಲಿ ರಾಜ್ಯ ಸರ್ಕಾರಗಳಿಗೆ ಶೇಕಡ ೧೦೦ರಷ್ಟು ಅನುದಾನ ಆಧಾರದ ಮೇಲೆ ಹಣವನ್ನು ಬಿಡುಗಡೆಗೊಳಿಸಲಾಗುವುದು. ಈ ಅನುದಾನದ ಹಣ ಸ್ವೀಕರಿಸಿದ ೧೫ ದಿನಗಳೊಳಗೆ ರಾಜ್ಯ ಸರ್ಕಾರಗಳು ಆ ಹಣವನ್ನು ಜಿಲ್ಲೆಗಳಿಗೆ ಬಿಡುಗಡೆ ಮಾಡಬೇಕು. ಈ ಯೋಜನೆಗೆ ಈಗ ಕರ್ನಾಟಕದ ನಾಲ್ಕು ಜಿಲ್ಲೆಗಳು ಸೇರಿವೆ. ಅವುಗಳೆಂದರ : ಗುಲ್ಬರ್ಗಾ, ಬೀದರ್, ಚಿತ್ರದುರ್ಗ ಮತ್ತು ದಾವಣಗೆರೆ. ಗುಲ್ಬರ್ಗ ಹಾಗೂ ಬೀದರ್ ಜಿಲ್ಲೆಗಳು ೨೦೦೩-೨೦೦೪ರಲ್ಲಿ ಯೋಜನೆಗೆ ಒಳಗೊಂಡಿದ್ದರೆ, ಚಿತ್ರದುರ್ಗ ಹಾಗೂ ದಾವಣಗೆರೆ ಜಿಲ್ಲೆಗಳು ೨೦೦೪-೦೫ರ ಸಾಲಿನಲ್ಲಿ ಒಳಗೊಳ್ಳುತ್ತವೆ. ಗುಲ್ಬರ್ಗದಲ್ಲಿ ಯೋಜನೆಯನ್ನು ಅನುಷ್ಠಾನಕ್ಕೆ ತರಲಾಗಿದ್ದು ಈಗಾಗಲೇ ೭.೫ ಕೋಟಿಗಳ ಮೊದಲ ಕಂತಿನ ಹಣವನ್ನು ವೆಚ್ಚ ಮಾಡಲಾಗಿದೆ. ಚಿತ್ರದುರ್ಗ ಹಾಗೂ ದಾವಣಗೆರೆಗಳ ಜಿಲ್ಲಾ ಯೋಜನೆಗಳನ್ನು ಕಳುಹಿಸುವಂತೆ ರಾಜ್ಯ ಸರ್ಕಾರವನ್ನು ಕೇಳಲಾಗಿದೆ. ಆ ಯೋಜನೆಗಳು ಈಗ ರಾಜ್ಯಮಟ್ಟದ ಮಾರ್ಗದರ್ಶಕ ಸಮಿತಿಯ ಪರಿಶೀಲನೆಯಲ್ಲಿವೆ.

ಸರ್ಕಾರೇತರ ಸಂಸ್ಥೆಗಳು ಸ್ವಯಂಸೇವಾ ಸಂಸ್ಥೆಗಳು ಪ್ರಮುಖ ನಿರ್ವಹಣಾ ಸಾಧನ ಸಂಸ್ಥೆಗಳಾಗಿ ಬಳಸುವುದರ ಬಗ್ಗೆ ಸ್ವಯಂ ಸೇವಾ ಸಂಸ್ಥೆಗಳತ್ತ ಕೇಂದ್ರೀಕೃತ ಗಮನ ಹರಿಸಬೇಕಾಗುವುದನ್ನು ಅಲ್ಲಗಳೆಯುವಂತಿಲ್ಲ. ಸರ್ಕಾರೇತರ ಸಂಸ್ಥೆಗಳು ತಮ್ಮ ಕಾರ್ಯಬದ್ಧತೆಗೆ ಮತ್ತು ಸಾಮಾನ್ಯ ಜನರ ಸಂಪರ್ಕಕ್ಕಾಗಿ ಪ್ರಶಂಶನೀಯವಾಗಿದೆ. ಆದ್ದರಿಂದ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಅವರ ಕ್ರಿಯಾಶೀಲ ಪಾಲ್ಗೊಳ್ಳುವಿಕೆ ಅತ್ಯಗತ್ಯ. ಪಂಚಾಯತ್ ರಾಜ್ ಸಂಸ್ಥೆಗಳ ಚುನಾಯಿತ ಪ್ರತಿನಿಧಿಗಳ ಸಾಮರ್ಥ್ಯವನ್ನು ಹೆಚ್ಚಿಸುವಲ್ಲಿ ಸರ್ಕಾರೇತರ ಸಂಸ್ಥೆಗಳು ಪ್ರಮುಖ ಪಾತ್ರವಹಿಸಬೇಕಾಗುತ್ತದೆ.

ತಮ್ಮ ಹಳ್ಳಿಗಳನ್ನು ಮರು ರೂಪಿಸಿಕೊಳ್ಳಲು ಮತ್ತು ಸ್ವಾವಲಂಬನೆ, ತಾಳಿಕೆಯ ಅಭಿವೃದ್ಧಿ ಹಾಗೂ ಬೆಳವಣಿಗೆಗಳಿಗಾಗಿ ಅವರ ಸಾಮರ್ಥ್ಯವನ್ನು ಅರ್ಥ ಮಾಡಿಕೊಳ್ಳಲು ಸರ್ಕಾರದ ಯೋಜನೆಗಳ ಬಗ್ಗೆ ಹಳ್ಳಿಗಳಲ್ಲಿ ಜನಜಾಗೃತಿ ಮೂಡಿಸುವುದು ಇಂದಿನ ಅಗತ್ಯವಾಗಿದೆ. ಗ್ರಾಮಸಭೆಗಳು, ಪಂಚಾಯತ್ ರಾಜ್ ಸಂಸ್ಥೆಗಳು, ಸರ್ಕಾರೇತರ ಸ್ವಯಂಸೇವಾ ಸಂಸ್ಥೆಗಳು ಮತ್ತು ನಾಗರಿಕ ಸಮಾಜ ಸಂಘಟನೆಗಳು ಮಹತ್ವದ ಪಾತ್ರ ವಹಿಸಬೇಕಾಗಿರುವುದು ಇಲ್ಲಿಯೇ.

## ಮುಕ್ತಾಯದ ಅನಿಸಿಕೆಗಳು :

ಜನರ, ಜನರಿಂದ ಮತ್ತು ಜನರಿಗಾಗಿ ಎನ್ನುವ ಪ್ರಜಾಪ್ರಭುತ್ವದ ಧ್ಯೇಯಾದರ್ಶವನ್ನು ನಿಜಗೊಳಿಸಲು, ಯೋಜನೆಯ ಇಡೀ ವ್ಯವಸ್ಥೆಯು ಸರಿಯಾಗಿ ಕಾರ್ಯನಿರ್ವಹಿಸುತ್ತಿದೆಯೆ ಇಲ್ಲವೆ ಎಂದು ನಿರ್ಧರಿಸಲು ಗ್ರಾಮಸಭೆ ನಿರ್ಣಾಯಕ ಪಾತ್ರ ವಹಿಸಬೇಕೆಂಬುದು ನನ್ನ ಅಭಿಪ್ರಾಯ. ಯೋಜನೆಯ ರಚನೆ, ಅನುಷ್ಠಾನ ಮತ್ತು ಅವುಗಳ ಮೇಲ್ವಿಚಾರಣೆಗಳಲ್ಲಿ ಜನರೇ ಕೇಂದ್ರಬಿಂದುವಾಗಿರಬೇಕು. ಬುಡಮಟ್ಟದಿಂದ ಹೊರಹೊಮ್ಮುವ ಯೋಜನೆಗಳಲ್ಲಿ ಪ್ರತಿಫಲಿಸುವ ಅಗತ್ಯಗಳನ್ನು ಜಿಲ್ಲಾ ಯೋಜನೆಗಳಲ್ಲಿ ಪ್ರತಿಬಿಂಬಿಸಬೇಕಾದ ಕಾಲವಿದು. ಮಂಡಲ್ ಪಂಚಾಯತ್ ಹಾಗೂ ಗ್ರಾಮ ಪಂಚಾಯತ್‌ಗಳು ಅನುಕ್ರಮವಾಗಿ ಮಧ್ಯಮ ಹಾಗೂ ಕಿರಿಯ ಯೋಜನಾ ಆಯೋಗಗಳಿಗಾಗಿ ಕಾರ್ಯನಿರ್ವಹಿಸಲು ಪ್ರಾರಂಭಿಸಿದಾಗ ರಾಜ್ಯ ಹಾಗೂ ರಾಷ್ಟ್ರೀಯ ಯೋಜನೆಗಳು ಇವುಗಳ ಸಮಷ್ಟಿರೂಪವಾಗುತ್ತವೆ. ಆಗ ಗಾಂಧೀಜಿಯವರ ಕನಸು ನನಸಾಗುತ್ತದೆ.

ಸರ್ಕಾರದ ರಾಷ್ಟ್ರೀಯ ಸಾಮಾನ್ಯ ಕನಿಷ್ಟ ಕಾರ್ಯಕ್ರಮದ (National Common Minimum Programme) ಪ್ರಕಾರ ಖಾದಿ ಹಾಗೂ ಗ್ರಾಮೀಣ ಕೈಗಾರಿಕಾ ಆಯೋಗದ ಕಾರ್ಯಾಚರಣೆಯನ್ನು ಪುನಶ್ಚೇತನಗೊಳಿಸಲಾಗುತ್ತದೆ ಮತ್ತು ನಾರು, ಕೈಮಗ್ಗ, ವಿದ್ಯುತ್ ಮಗ್ಗಗಳು, ವಸ್ತ್ರಗಳು, ರಬ್ಬರ್, ಗೋಡಂಬಿ, ಗುಡಿಕೈಗಾರಿಕೆ,

***ಗ್ರಾಮೀಣ ಕೈಗಾರೀಕರಣವನ್ನು ಉತ್ತೇಜಿಸುವಲ್ಲಿ ಪಂಚಾಯತ್ ರಾಜ್ಯ ಸಂಸ್ಥೆಗಳಿಗೆ ಅಧಿಕಾರ ನೀಡಿ ಬಲಪಡಿಸುವಲ್ಲಿ ಮತ್ತು ಮಾಹಿತಿ ತಂತ್ರಜ್ಞಾನ ಹಾಗೂ ಜೈವಿಕ ತಂತ್ರಜ್ಞಾನ ಇತ್ಯಾದಿ ಕ್ಷೇತ್ರಗಳ ವಿಸ್ತರಣೆಯಲ್ಲಿ ಮುಂಚೂಣಿಯಲ್ಲಿರುವ ಕರ್ನಾಟಕ ರಾಜ್ಯದವನಾಗಿ, ನಿಧಾನವಾಗಿ ಆದರೆ ಖಚಿತವಾಗಿ ಹೊರಹೊಮ್ಮುತ್ತಿರುವ ಜನಶಕ್ತಿಯ ಲಾಭಗಳನ್ನು ಇಡೀ ದೇಶ ಪಡೆದುಕೊಳ್ಳುತ್ತದೆ ಎಂಬ ವಿಶ್ವಾಸ ನನಗಿದೆ.***

ಆಹಾರ ಸಂರಕ್ಷಣೆ, ರೇಷ್ಮೆ ಕೈಗಾರಿಕೆ, ಉಣ್ಣೆ ಅಭಿವೃದ್ಧಿ, ಚರ್ಮ ಕೈಗಾರಿಕೆ, ಕುಂಬಾರಿಕೆ ಹಾಗೂ ಇತರ ಗೃಹಕೈಗಾರಿಕೆಗಳ ಆಧುನೀಕರಣಕ್ಕೆ ಹೊಸ ಕಾರ್ಯಕ್ರಮಗಳನ್ನು ಪ್ರಾರಂಭಿಸಲಾಗುವುದು. ವ್ಯವಸಾಯ, ತೋಟಗಾರಿಕೆ, ಮೀನುಗಾರಿಕೆ, ಪುಷ್ಪಕೃಷಿ, ಅರಣ್ಯಾಭಿವೃದ್ಧಿ, ಹೈನುಗಾರಿಕೆ, ಕೃಷಿ ಸಂಸ್ಕರಣೆ ಇವುಗಳ ನಿರಂತರ ಬೆಳವಣಿಗೆಗೆ ನೀಡುತ್ತಿರುವ ಆದ್ಯತೆಯನ್ನು ಮುಂದುವರಿಸಿಕೊಂಡು ಹೋಗುವ ಮೂಲಕ ಹೊಸ ಉದ್ಯೋಗಗಳ ಸೃಷ್ಟಿಗೆ ಗಣನೀಯವಾಗಿ ಅವಕಾಶ ಕಲ್ಪಿಸಲಾಗುತ್ತದೆ. ಈ ಸಂದರ್ಭದಲ್ಲಿ ೧೯೫೦ನೇ ಇಸವಿಯಲ್ಲೇ ಹಿಂದಿನ ಮೈಸೂರು ರಾಜ್ಯದಲ್ಲಿ ಗ್ರಾಮೀಣ ಕೈಗಾರೀಕರಣ ಯೋಜನೆ ಪ್ರಾರಂಭಿಸುವ ಮೂಲಕ ಉದ್ಯೋಗಾವಕಾಶಗಳನ್ನು ಕಲ್ಪಿಸಿದ ಗೌರವಾನ್ವಿತ ಇಂಜಿನಿಯರ್ ಮತ್ತು ದಾರ್ಶನಿಕ, ಸರ್. ಎಂ. ವಿಶ್ವೇಶ್ವರಯ್ಯನವರನ್ನು ಸ್ಮರಿಸಿಕೊಳ್ಳಲು ಇಚ್ಛಿಸುತ್ತೇನೆ. ಆ ಯೋಜನೆಯ ಮುಖ್ಯ ಉದ್ದೇಶಗಳೆಂದರೆ :

೧. ಕೈಗಾರಿಕೆಗಳಿಂದ ಉತ್ಪಾದನೆ ಹಾಗೂ ಆದಾಯವನ್ನು ಹೆಚ್ಚಿಸುವುದು.

೨. ಸ್ವಸಹಾಯ ಮತ್ತು ಈಚಿನ ವಾಣಿಜ್ಯ ಹಾಗೂ ಉದ್ಯಮ ಪದ್ಧತಿಗಳಲ್ಲಿ ಗ್ರಾಮೀಣರಿಗೆ ಸಾಧ್ಯವಾದಷ್ಟು ತರಬೇತಿ ನೀಡುವುದು.

ಅಂದಿನ ಪ್ರಧಾನಮಂತ್ರಿಗಳಾಗಿದ್ದ ಪಂಡಿತ್ ನೆಹರೂ ಅವರು ಮೈಸೂರು ರಾಜ್ಯದ ಗ್ರಾಮೀಣ ಕೈಗಾರೀಕರಣ ಯೋಜನೆಯ ಯಶಸ್ಸನ್ನು ಮನಗಂಡು ದೇಶದ ಇತರ ರಾಜ್ಯಗಳಲ್ಲೂ ಅದನ್ನು ಅನುಸರಿಸುವಂತೆ ಶಿಫಾರಸು ಮಾಡಿದರು. ಈ ದೇಶವು ಅಂತಹ ಅನೇಕ ವಿನೂತನ ಹಾಗೂ ಯಶಸ್ವೀ ಯೋಜನೆಗಳಿಂದ ಸಂಪದ್ಭರಿತವಾಗಿದೆ. ಇವುಗಳನ್ನು ಪುನಃ ಅಧ್ಯಯನ ಮಾಡಿ ಪ್ರಸ್ತುತ ಸಂದರ್ಭಕ್ಕೆ ಅವುಗಳನ್ನು ಅಳವಡಿಸಿಕೊಂಡು ಉದ್ಯೋಗಾವಕಾಶಗಳನ್ನು ಕಲ್ಪಿಸುವತ್ತ ಮತ್ತು ದೇಶದ ಅಭಿವೃದ್ಧಿಯನ್ನು ತ್ವರಿತಗೊಳಿಸುವತ್ತ ಚಿಂತಿಸಬೇಕು. ಗಂಭೀರವಾಗಿ ಚಿಂತಿಸಬೇಕು.

ಗ್ರಾಮೀಣ ಕೈಗಾರೀಕರಣವನ್ನು ಉತ್ತೇಜಿಸುವಲ್ಲಿ ಪಂಚಾಯತ್ ರಾಜ್ಯ ಸಂಸ್ಥೆಗಳಿಗೆ ಅಧಿಕಾರ ನೀಡಿ ಬಲಪಡಿಸುವಲ್ಲಿ ಮತ್ತು ಮಾಹಿತಿ ತಂತ್ರಜ್ಞಾನ ಹಾಗೂ ಜೈವಿಕ ತಂತ್ರಜ್ಞಾನ ಇತ್ಯಾದಿ ಕ್ಷೇತ್ರಗಳ ವಿಸ್ತರಣೆಯಲ್ಲಿ ಮುಂಚೂಣಿಯಲ್ಲಿರುವ ಕರ್ನಾಟಕ ರಾಜ್ಯದವನಾಗಿ, ನಿಧಾನವಾಗಿ ಆದರೆ ಖಚಿತವಾಗಿ ಹೊರಹೊಮ್ಮುತ್ತಿರುವ ಜನಶಕ್ತಿಯ ಲಾಭಗಳನ್ನು ಇಡೀ ದೇಶ ಪಡೆದುಕೊಳ್ಳುತ್ತದೆ ಎಂಬ ವಿಶ್ವಾಸ ನನಗಿದೆ.

●




# ಸ್ಥಳೀಯ ಸಂಸ್ಥೆಯ ಸದಸ್ಯರುಗಳಿಗೆ ತರಬೇತಿ

ಎಸ್. ಎನ್. ನರಸಿಂಹಮೂರ್ತಿ

**ಪೀಠಿಕೆ :**

ಭಾರತದ ಪ್ರಜಾಪ್ರಭುತ್ವ ವ್ಯವಸ್ಥೆಯು ಹಳ್ಳಿಗಳ ತಳಹದಿಯ ಮೇಲೆ ನಿಂತಿದೆ. ಇಲ್ಲಿನ ಅಭಿವೃದ್ಧಿಯು ಗ್ರಾಮಗಳ ಸರ್ವಾಂಗೀಣ ಪ್ರಗತಿಯನ್ನು ಅವಲಂಬಿಸಿರುವುದರಿಂದ ಇಂತಹ ಅಭಿವೃದ್ಧಿಯು ಪಂಚಾಯತ್ ರಾಜ್ ಸಂಸ್ಥೆಗಳ (ಸ್ಥಳಿಯ ಸಂಸ್ಥೆ) ಆಡಳಿತದಿಂದ ಮಾತ್ರ ಸಾಧ್ಯವಿದೆ. ಪಂಚಾಯತ್ ರಾಜ್ ಸಂಸ್ಥೆಗಳು ಪ್ರಜಾಪ್ರಭುತ್ವದ ಮೂಲ ಬೇರುಗಳು ಹಾಗೂ ಅವಿಭಾಜ್ಯ ಅಂಗಗಳಾಗಿದ್ದು, ಇದರಲ್ಲಿ ಪಾಲ್ಗೊಳ್ಳುವ ಎಲ್ಲಾ ಜನರು ತಮ್ಮ ರಾಜಕೀಯ ಪ್ರಜ್ಞೆ, ದೇಶದ ಆಗು-ಹೋಗುಗಳು, ಆಡಳಿತದ ರೀತಿ-ನೀತಿಗಳು, ಸರ್ಕಾರದ ರೀತಿ-ನೀತಿಗಳನ್ನು ಸುಲಭವಾಗಿ ಗ್ರಹಿಸಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತದೆ.

ಮಹಾತ್ಮಗಾಂಧೀಜಿಯವರ 'ಗ್ರಾಮ ಸ್ವರಾಜ್' ದ ಕನಸನ್ನು ನನಸನ್ನಾಗಿಸುವ ಸದುದ್ದೇಶದಿಂದ ರೂಪಿತವಾಗಿರುವ ಪಂಚಾಯತ್ ರಾಜ್ ಸಂಸ್ಥೆಗಳು ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವಲ್ಲಿ ತುಂಬಾ ಉಪಯುಕ್ತವೂ ಹಾಗೂ ಅನಿವಾರ್ಯವೂ ಆಗಿವೆ. ಇಂತಹ ಅಭಿವೃದ್ಧಿಯನ್ನು ಪ್ರಜಾಸತ್ತಾತ್ಮಕ ಅಧಿಕಾರ ವಿಕೇಂದ್ರೀಕರಣದಡಿಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅಂಗೀಕರಿಸುವ ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿ ಮತ್ತು ಹೊಣೆಗಾರಿಕೆಯನ್ನು ಪಂಚಾಯತ್ ರಾಜ್ ಸಂಸ್ಥೆಗಳು ನಿರ್ವಹಿಸುತ್ತವೆ. ಈ ಪಂಚಾಯತ್ ರಾಜ್ ಸಂಸ್ಥೆಗಳ ಪ್ರಮುಖ ಉದ್ದೇಶ ಜನರನ್ನು ಸ್ಥಳೀಯ ಆಡಳಿತದಲ್ಲಿ ಭಾಗವಹಿಸುವಂತೆ ಮಾಡುವುದಾಗಿದೆ. ಜನರಿಂದಲೇ ಆಡಳಿತ ನಿರ್ವಹಣೆಯಾದಾಗ ಕಡಿಮೆ ವೆಚ್ಚ ಮತ್ತು ದಕ್ಷತೆ ಹೆಚ್ಚಿ ದೇಶವು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತದೆ.

> ***ಹೊಸದಾಗಿ ಆಯ್ಕೆಯಾಗಿರುವ ಸದಸ್ಯರುಗಳಿಗೆ ಪಂಚಾಯತಿಯ ಅಧಿಕಾರ, ಕಾರ್ಯಗಳ ಬಗ್ಗೆ, ಗ್ರಾಮದ ಸಮಸ್ಯೆಗಳ ಬಗ್ಗೆ, ಜನರ ಸಮಸ್ಯೆಗಳ ಬಗ್ಗೆ ಯೋಜನೆ ಮತ್ತು ಕಾರ್ಯಕ್ರಮಗಳನ್ನು ರೂಪಿಸುವ ಬಗ್ಗೆ ಅಷ್ಟಾಗಿ ತಿಳುವಳಿಕೆ ಇರುವುದಿಲ್ಲ.***

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸ್ಥಳೀಯರ ಅಗತ್ಯತೆಗಳು ಮತ್ತು ಸಮಸ್ಯೆಗಳ ಕಡೆ ಗಮನಹರಿಸಿ ಶೀಘ್ರವಾಗಿ ಬಗೆಹರಿಸಲು ಸಾಧ್ಯವಿಲ್ಲ. ಆದ್ದರಿಂದ ಸ್ಥಳೀಯರ ಅವಶ್ಯಕತೆಗಳನ್ನು ಶೀಘ್ರವಾಗಿ ಒದಗಿಸಿ ಅನುಕೂಲ ಮಾಡುವ ದೃಷ್ಟಿಯಿಂದ ಸ್ಥಳೀಯ ಸಂಸ್ಥೆಗಳನ್ನು ರಚಿಸಲಾಗಿದೆ. ಈ ಸ್ಥಳೀಯ ಸಂಸ್ಥೆಗಳು ಸ್ಥಳೀಯ ಜನರಿಂದಲೇ ಆಯ್ಕೆಯಾಗಿ ಬಂದ ಪ್ರತಿನಿಧಿಗಳು ನಡೆಸುವ ಆಡಳಿತವಾಗಿರುವುದರಿಂದ ಅವರಿಗೆ ತಮ್ಮ ಸುತ್ತಮುತ್ತಲಿನ ಜನರ ಕುಂದುಕೊರತೆಗಳ ಬಗ್ಗೆ ತಿಳಿವಳಿಕೆ ಇರುತ್ತದೆ.

ಭಾರತ ಸ್ವಾತಂತ್ರ್ಯಾನಂತರ ಗ್ರಾಮೀಣ ಸಮುದಾಯದಲ್ಲಿ ಹೊಸ ಹೊಸ ಯೋಜನೆ ಮತ್ತು ಕಾರ್ಯಕ್ರಮಗಳನ್ನು ಪಂಚವಾರ್ಷಿಕ ಯೋಜನೆಗಳ ಮೂಲಕ ಹಾಕಿಕೊಂಡು ಅನುಷ್ಠಾನಕ್ಕೆ ತರಲಾಯಿತು. ಇದರಿಂದ ಗ್ರಾಮೀಣ ಪ್ರದೇಶದ ಬದಲಾವಣೆ ಮತ್ತು ಗ್ರಾಮೀಣರ ಬದುಕಿನಲ್ಲಿ ಹೊಸ ಪರಿವರ್ತನೆ ಕಂಡುಬಂದಿತು. ಸಮುದಾಯಿಕ ಅಭಿವೃದ್ಧಿ ಯೋಜನೆ, ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ, ಸ್ವಯಂ ಉದ್ಯೋಗ ತರಬೇತಿ ಯೋಜನೆ, ಸಹಕಾರಿ ಆಂದೋಲನ, ವಯಸ್ಕರ ಶಿಕ್ಷಣ, ಕನಿಷ್ಠ ಅವಶ್ಯಕತೆಗಳ ಪೂರೈಕೆ ಯೋಜನೆ, ಗ್ರಾಮೀಣ ಕುಡಿಯುವ ನೀರಿನ ಯೋಜನೆ, ಜನಸಂಖ್ಯಾ ಶಿಕ್ಷಣ, ಸಾರ್ವತ್ರಿಕ ಶಿಕ್ಷಣ,ಪಶುಪಾಲನೆ, ವಸತಿ ಯೋಜನೆ, ಉದ್ಯೋಗ ಭರವಸೆ ಯೋಜನೆ, ಮಾಹಿತಿ ಮತ್ತು ತಂತ್ರಜ್ಞಾನ ಯೋಜನೆ, ಬಡತನ ನಿರ್ಮೂಲನಾ ಯೋಜನೆ, ಕೂಲಿಗಾಗಿ ಕಾಳು ಯೋಜನೆ ಇತ್ಯಾದಿ ಹಲವಾರು ಯೋಜನೆಗಳನ್ನು ಹಮ್ಮಿಕೊಳ್ಳುವ ಮೂಲಕ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವಲ್ಲಿ ಪ್ರಾಮುಖ್ಯತೆಯನ್ನು ನೀಡಲಾಯಿತು. ಈ ಎಲ್ಲಾ ಯೋಜನೆಗಳನ್ನು ನಿರ್ವಹಿಸಿಕೊಂಡು ಹೋಗಲು ಸರ್ಕಾರಗಳು ವಿಕೇಂದ್ರೀಕೃತ ಆಡಳಿತ ವ್ಯವಸ್ಥೆಯಾದ ಪಂಚಾಯತ್ ರಾಜ್ ಸಂಸ್ಥೆಗಳಿಗೆ ವಹಿಸಲಾಯಿತು. ಪಂಚಾಯತ್ ರಾಜ್ ಸಂಸ್ಥೆಗಳು ಸ್ಥಳೀಯ ಆಡಳಿತದ ಮೂಲಕ ಗ್ರಾಮೀಣ ಅಭಿವೃದ್ಧಿ ಸಾಧಿಸುವಲ್ಲಿ ಮಹತ್ತರ ಪಾತ್ರವಹಿಸುತ್ತಿವೆ.

ಸಾಮಾನ್ಯ ಅರ್ಥದಲ್ಲಿ ಅಭಿವೃದ್ಧಿ ಎಂದರೆ ಪ್ರಗತಿ, ಬೆಳವಣಿಗೆ, ಅಭ್ಯುದಯ, ಬದಲಾವಣೆ ಎಂದರ್ಥ. ಗ್ರಾಮೀಣ ಅಭಿವೃದ್ಧಿ ಎಂದರೆ ಗ್ರಾಮದ ಮತ್ತು ಗ್ರಾಮದ ಜನರ ಅಭ್ಯುದಯ, ಸರ್ವಾಂಗೀಣ ಪ್ರಗತಿ ಎನ್ನಬಹುದು.

ಗ್ರಾಮೀಣ ಅಭಿವೃದ್ಧಿಯ ಅರ್ಥ, ವ್ಯಾಪ್ತಿ ಮತ್ತು ಪ್ರಾಮುಖ್ಯತೆಯು ವಿಸ್ತೃತಗೊಳ್ಳುತ್ತಿರುವ ಈ ಸನ್ನಿವೇಶದಲ್ಲಿ ಮಾನವನ ಜೀವನವನ್ನು ಎತ್ತರಿಸುವ ಮತ್ತು ನಾಗರೀಕತೆಯ ಎಲ್ಲಾ ಸವಲತ್ತುಗಳನ್ನು ದೊರಕುವಂತಹ ಗ್ರಾಮೀಣರ ಬದುಕನ್ನು ಸಜ್ಜುಗೊಳಿಸುವುದು ಹಾಗೂ ಆಧುನಿಕ ಯುಗದ ಎಲ್ಲಾ ಗುರಿ ಮತ್ತು ಉದ್ದೇಶಗಳನ್ನು ಮುಂದಿನ ಪೀಳಿಗೆಗೆ ಸಮೃದ್ಧಿಗೊಳಿಸುವುದು, ಶಾಂತಿಯುತ ಸಹಬಾಳ್ವೆಗೆ ಗ್ರಾಮಗಳನ್ನು ಪರಿವರ್ತಿಸುವುದು ಅಭಿವೃದ್ಧಿಯ ಪ್ರಮುಖ ಕಾರ್ಯವಾಗಿದೆ. ಅಭಿವೃದ್ಧಿಯನ್ನು ಸಾಧಿಸುವ ಯೋಜನೆಗಳು, ಕಾರ್ಯಕ್ರಮಗಳನ್ನು ಗ್ರಾಮಮಟ್ಟದಲ್ಲಿ ತಯಾರಿಸುವುದೇ ಇಂದಿನ ಅಭಿವೃದ್ಧಿಯ ಪರಿಕಲ್ಪನೆಯಾಗಿದೆ. ಇಂತಹ ಅಭಿವೃದ್ಧಿಗಳು ಗ್ರಾಮದ ಜನರ ಜೀವನ ಮಟ್ಟವನ್ನು ಸುಧಾರಿಸುವುದು, ಉದ್ಯೋಗಾವಕಾಶಗಳನ್ನು ಒದಗಿಸುವುದು, ಶಿಕ್ಷಣ ನೀಡುವುದು, ಆರೋಗ್ಯ ಕಾಪಾಡುವುದು, ವಸತಿ, ಆಹಾರ, ನೀರು ವಿದ್ಯುತ್ ಇತ್ಯಾದಿಗಳನ್ನು ದೊರಕಿಸಿಕೊಡುವುದಾಗಿದೆ. ಇವುಗಳನ್ನು ಸಂವಿಧಾನಾತ್ಮಕವಾಗಿ ಪ್ರಜಾಸತ್ತಾತ್ಮಕ ವಿಕೇಂದ್ರೀಕೃತ ಆಡಳಿತ ವ್ಯವಸ್ಥೆಯಾದ ಪಂಚಾಯತ್ ರಾಜ್ ಸಂಸ್ಥೆಗಳ ಮೂಲಕ ಸರ್ಕಾರಗಳು ಕಾರ್ಯಾನುಷ್ಠಾನಗೊಳಿಸುವುದಾಗಿದೆ.

## ಸ್ಥಳೀಯ ಸಂಸ್ಥೆಗಳ ಸದಸ್ಯರಿಗೆ ತರಬೇತಿ ಅಗತ್ಯವೇ !

ಆಧುನಿಕ ರಾಜ್ಯಗಳಲ್ಲಿ ಸರ್ಕಾರದ ಆಡಳಿತ ಕಾರ್ಯಭಾರವು ಬೃಹದಾಕಾರವಾಗಿ ಬೆಳೆಯುತ್ತಿರುವುದರಿಂದ ಸ್ಥಳೀಯ ಸರ್ಕಾರದ ಪ್ರಾಮುಖ್ಯತೆ ಹೆಚ್ಚುತ್ತಿದೆ. ಪ್ರಸ್ತುತ ಆಡಳಿತದ ಅನುಕೂಲಕ್ಕಾಗಿ ಸ್ಥಳೀಯ ಸಂಸ್ಥೆಗಳನ್ನು ಪಂಚಾಯತ್ ರಾಜ್ ಸಂಸ್ಥೆಗಳೆಂದು ಪರಿಗಣಿಸಿ ಅವುಗಳು ಮೂರು ಹಂತದಲ್ಲಿ ಕಾರ್ಯನಿರ್ವಹಿಸುವಂತೆ ಮಾಡಲಾಗಿದೆ. ಅವುಗಳಲ್ಲಿ ಗ್ರಾಮ ಮಟ್ಟದಲ್ಲಿ ಗ್ರಾಮ ಪಂಚಾಯತಿ, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯತಿ ವ್ಯವಸ್ಥೆ ಇದೆ. ಈ ಶ್ರೇಣಿಯ ವ್ಯವಸ್ಥೆಗಳು ಭಾರತ ಸಂವಿಧಾನದ ೭೩ನೇ ತಿದ್ದುಪಡಿಯಿಂದ ಬಂದ ೧೯೯೩ರ ಪಂಚಾಯತ್ ರಾಜ್ ಕಾಯ್ದೆಗನುಗುಣವಾಗಿ ಕಾರ್ಯ ನಿರ್ವಹಿಸುತ್ತಿವೆ. ಇದರ ಉದ್ದೇಶ ಜನರ ಕೈಗೆ ಅಧಿಕಾರ ನೀಡಿ, ಅವರ ಬದುಕನ್ನು ಹಸನುಗೊಳಿಸುವುದೇ ಆಗಿದೆ. ಹೀಗಾಗಿ ಪಂಚಾಯತ್ ರಾಜ್ ಆಡಳಿತದಲ್ಲಿ ಭಾಗವಹಿಸುವವರ, ಸ್ಪರ್ಧಿಸುವವರ ಸಂಖ್ಯೆ ಎಲ್ಲಾ ವರ್ಗದವರಿಂದಲೂ ಹೆಚ್ಚುತ್ತಿದೆ. ಹೊಸದಾಗಿ ಆಯ್ಕೆಯಾಗಿರುವ ಸದಸ್ಯರುಗಳಿಗೆ ಪಂಚಾಯತಿಯ ಅಧಿಕಾರ, ಕಾರ್ಯಗಳ ಬಗ್ಗೆ, ಗ್ರಾಮದ ಸಮಸ್ಯೆಗಳ ಬಗ್ಗೆ, ಜನರ ಸಮಸ್ಯೆಗಳ ಬಗ್ಗೆ, ಯೋಜನೆ ಮತ್ತು ಕಾರ್ಯಕ್ರಮಗಳನ್ನು ರೂಪಿಸುವ ಬಗ್ಗೆ ಅಷ್ಟಾಗಿ ತಿಳಿವಳಿಕೆ ಇರುವುದಿಲ್ಲ. ಇವರುಗಳಲ್ಲಿ ಬಹುತೇಕ ಅನೌಪಚಾರಿಕ ಶಿಕ್ಷಣ ಪಡೆದ ಸದಸ್ಯರು ಅನುಭವವಿಲ್ಲದವರು, ಹೊಸಬರು ಇದ್ದಾರೆ. ಆದುದರಿಂದ ಚುನಾಯತ ಪಂಚಾಯತಿ ಸದಸ್ಯರಿಗೆ (ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿ) ಸರ್ಕಾರವು, ಸರ್ಕಾರೇತರ ಸಂಸ್ಥೆಗಳು ವಿವಿಧ ರೀತಿಯ ಸೂಕ್ತ ಮಾರ್ಗದರ್ಶನ ಮತ್ತು ತರಬೇತಿಗಳನ್ನು ನೀಡಬೇಕು. ಇದರಿಂದಾಗಿ ಗ್ರಾಮೀಣ ಅಭಿವೃದ್ಧಿಗೆ ಸರ್ಕಾರ ಹಮ್ಮಿಕೊಳ್ಳುವ ಯೋಜನೆಗಳು, ಕಾರ್ಯಕ್ರಮಗಳನ್ನು ಸಮರ್ಪಕವಾಗಿ ವ್ಯವಸ್ಥಿತವಾಗಿ ನಿರೀಕ್ಷಿತ ಮಟ್ಟದಲ್ಲಿ ತಲುಪಲು ಸಾಧ್ಯವಾಗುತ್ತದೆ.

ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಸ್ಥಳೀಯ ಸಂಸ್ಥೆಗಳ ಚುನಾಯಿತ ಸದಸ್ಯರಿಗೆ ಒಂದು ನಿರ್ದಿಷ್ಟ ಕಾರ್ಯ ನಿರ್ವಹಿಸಲು ಅಗತ್ಯವಿರುವ ಜ್ಞಾನ ಹಾಗೂ ಪರಿಣತಿಯನ್ನು ಅಭಿವೃದ್ಧಿ ಪಡಿಸಿಕೊಳ್ಳುವುದೇ ತರಬೇತಿ. ಈ ತರಬೇತಿಗಳಿಂದ ಸದಸ್ಯರುಗಳಿಗೆ ವ್ಯಕ್ತಿ ಪ್ರಾವೀಣ್ಯತೆ, ಅಭ್ಯಾಸಗಳು, ವಿಶೇಷ ಜ್ಞಾನ, ನೀತಿ ನಿರ್ಧಾರ ತೆಗೆದುಕೊಳ್ಳುವಿಕೆ ಮತ್ತು ಸ್ವಯಂ ಪ್ರೇರಿತರಾಗಿ ಭಾಗವಹಿಸಬೇಕೆನ್ನುವ ಮನೋಭಾವನೆ ವೃದ್ಧಿಗೊಳ್ಳುತ್ತದೆ. ಪ್ರತಿನಿತ್ಯ ನಾನಾ ಕ್ಷೇತ್ರಗಳಲ್ಲಿ ಪ್ರಗತಿ ಹೊಂದುತ್ತಿರುವ ಇಂದಿನ ಸನ್ನಿವೇಶದಲ್ಲಿ ಸ್ಥಳೀಯ ಸಂಸ್ಥೆಗಳ ಪಾತ್ರ ಅದರ ಕಾರ್ಯವ್ಯಾಪ್ತಿ ದಿನೇದಿನೇ ಹೆಚ್ಚುತ್ತಲಿದೆ. ಇದರಿಂದ ಸ್ಥಳೀಯ ಸಂಸ್ಥೆಗಳ ಆಡಳಿತ, ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಅಭಿವೃದ್ಧಿಯ ಕಾರ್ಯಗಳು, ಬಹಳ ವಿಶಾಲವೂ, ಕ್ಲಿಷ್ಟವೂ ಆಗಿರುತ್ತವೆ. ಇಂತಹ ಪರಿಸ್ಥಿತಿಯಲ್ಲಿ ಚುನಾಯಿತ ಪ್ರತಿನಿಧಿಗಳಿಗೆ ಅವರು ನಿರ್ವಹಿಸುತ್ತಿರುವ ಕೆಲಸ ಕಾರ್ಯಗಳ ಬಗ್ಗೆ ಅಪಾರವಾದ ಅರಿವು, ವಿಶೇಷವಾದ ಪರಿಣತಿ ಇಲ್ಲದಿದ್ದರೆ ಅಭಿವೃದ್ಧಿಯು ಕುಂಠಿತಗೊಳ್ಳುತ್ತದೆ. ಜೊತೆಗೆ ಇಂತಹ ಲೋಪದೋಷಗಳನ್ನು ಹೋಗಲಾಡಿಸಲು ಪಂಚಾಯತ್ ಸದಸ್ಯರುಗಳಿಗೆ ಸೂಕ್ತವಾದ ತರಬೇತಿ ಮತ್ತು ಮಾರ್ಗದರ್ಶನ ಅತ್ಯಗತ್ಯವಾಗಿದೆ.

### ಸ್ಥಳೀಯ ಸಂಸ್ಥೆಗಳ ಸದಸ್ಯರಿಗೆ ತರಬೇತಿ :

ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಸ್ಥಳೀಯ ಸಂಸ್ಥೆಗಳ ಸದಸ್ಯರಿಗೆ ಕೆಳಕಂಡ ೫ ರೀತಿಯಲ್ಲಿ ತರಬೇತಿ ನೀಡುವುದು ಒಳ್ಳೆಯದು. ಅವುಗಳೆಂದರೆ -

### ೧. ಆಡಳಿತ ಕ್ಷೇತ್ರದ ತರಬೇತಿ :

ಇದರಲ್ಲಿ ಪಂಚಾಯತ್ ರಾಜ್ ಸದಸ್ಯರುಗಳಿಗೆ ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿಯ ರಚನೆ, ಅಧಿಕಾರ, ಕಾರ್ಯಗಳು, ಕಾಯ್ದೆಗಳು, ನೀತಿ-ನಿಯಮಗಳು, ಸರ್ಕಾರದ ಆಜ್ಞೆ, ಸುತ್ತೋಲೆ, ಪ್ರಕಟಣೆ ಮತ್ತು ಅಧ್ಯಕ್ಷರು, ಉಪಾಧ್ಯಕ್ಷರು ಹಾಗೂ ಕಾರ್ಯದರ್ಶಿಗಳ ಹಕ್ಕುಗಳು, ಕರ್ತವ್ಯಗಳು, ಪಂಚಾಯತಿಯ ಯೋಜನೆಗಳು, ಕಾರ್ಯಕ್ರಮಗಳು, ಸಭೆಗಳು, ಸಾಮಾನ್ಯ ಸಭೆಗಳು, ಗ್ರಾಮ ಸಭೆಯ ಕಾರ್ಯ ವೈಖರಿ, ಲೆಕ್ಕ ನಿರ್ವಹಣೆ, ಹಣಕಾಸು, ಅನುದಾನ, ಖರ್ಚು-ವೆಚ್ಚ, ಕಡತಗಳ ನಿರ್ವಹಣೆ, ಗಣಕಯಂತ್ರ, ಅಧಿಕಾರಿಗಳು - ಸಂಬಂಧಗಳು, ಇತರೇ ಇಲಾಖೆಗಳ ಅಧಿಕಾರಿಗಳೊಂದಿಗಿನ ಸಂಬಂಧ-ಸಹಕಾರ, ಪುರುಷ-ಮಹಿಳೆ ಸದಸ್ಯರ ನಡುವೆ ಅನ್ಯೋನ್ಯತೆ, ಸ್ವಯಂ ನಿರ್ಧಾರ ಕೈಗೊಳ್ಳುವಿಕೆ, ಪರಿಣಾಮಕಾರಿ ಭಾಗವಹಿಸುವಿಕೆ, ಸಂಪನ್ಮೂಲಗಳ ಕ್ರೋಢೀಕರಣ, ತೆರಿಗೆಗಳ ಸಂಗ್ರಹಣೆಯ ವಿಧಾನಗಳು, ಸವಲತ್ತುಗಳ ಉಪಯೋಗ, ಆಡಳಿತದಲ್ಲಿ ಪಾರದರ್ಶಕತೆ, ದಕ್ಷತೆ, ಶೀಘ್ರತೆ, ಸ್ವಚ್ಛತೆ, ಸಹಭಾಗಿತ್ವ ಇತ್ಯಾದಿಗಳ ಬಗ್ಗೆ ಸ್ಪಷ್ಟವಾದ ಅರಿವು ಮೂಡಿಸುವಂತಹ ತರಬೇತಿ ಕೂಡ ಬೇಕು.

### ೨. ರಾಜಕೀಯ ಕ್ಷೇತ್ರದ ತರಬೇತಿ :

ಪಂಚಾಯತಿಯ ಮೂರು ಹಂತಗಳ ಸದಸ್ಯರಿಗೂ ರಾಜಕೀಯ ಶಿಕ್ಷಣ ಮತ್ತು ಪ್ರಜ್ಞೆ, ಪರಿಣಾಮಕಾರಿಯಾದ ರಾಜಕೀಯ ನಾಯಕತ್ವ ಭಾವನೆ, ನ್ಯಾಯಸಮ್ಮತ ಮತ್ತು ಸ್ವಚ್ಛವಾದ ಚುನಾವಣೆ, ರಾಜಕೀಯ ಮೀಸಲಾತಿಯ ಸಮರ್ಪಕ ಬಳಕೆ, ಸದಸ್ಯರು, ಶಾಸಕರು, ಲೋಕಸಭಾ ಸದಸ್ಯರು-ಪಂಚಾಯತ್ ಇಲಾಖೆಗೆ ಸಂಬಂಧಿಸಿದ ಮಂತ್ರಿಯರೊಂದಿಗಿನ ಸಂಬಂಧಗಳು, ಗ್ರಾಮದ ಅಭಿವೃದ್ಧಿಗೆ ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ಗುರುತಿಸುವಿಕೆ, ಫಲಾನುಭವಿಗಳ ಪಾರದರ್ಶಕ ಆಯ್ಕೆ, ಪಂಚಾಯತ್ ಸುಧಾರಣೆಗೆ ನೇಮಕಗೊಂಡ ವಿವಿಧ ಸಮಿತಿಗಳ ವರದಿ-ಶಿಫಾರಸ್ಸುಗಳ ಅನುಷ್ಠಾನದ ಬಗ್ಗೆ ತರಬೇತಿ ನೀಡುವುದು ಸೂಕ್ತ.

### ೩. ಸಾಮಾಜಿಕ ಕ್ಷೇತ್ರದ ತರಬೇತಿ :

ಪಂಚಾಯತಿ ವ್ಯಾಪ್ತಿಗಳಲ್ಲಿ ನಡೆಯುವ ಸಮಸ್ಯೆಗಳನ್ನು ಗುರುತಿಸಿ, ಅವುಗಳನ್ನು ನಿವಾರಿಸಲು ಇಂತಹ ತರಬೇತಿ ಅಗತ್ಯವಿದೆ. ಇದರಿಂದ ಸಮಾಜದ ಅಭಿವೃದ್ಧಿ ಸಾಧ್ಯವಾಗುತ್ತದೆ. ಇದು ಪಂಚಾಯತಿ ಸದಸ್ಯರುಗಳಲ್ಲಿ ಅಜ್ಞಾನ, ಮೂಢನಂಬಿಕೆ, ಸಂಪ್ರದಾಯಗಳನ್ನು ಹೋಗಲಾಡಿಸುವ, ಸಾಮಾಜಿಕ ಪಿಡುಗುಗಳಾದ ಶೋಷಣೆ, ದೌರ್ಜನ್ಯ, ದಬ್ಬಾಳಿಕೆ, ಕಿರುಕುಳ, ಅನುಮಾನ, ಹಿಂಸೆ, ಜಾತೀಯತೆ ವಿರುದ್ಧ ಹೋರಾಡುವ ಗ್ರಾಮದ ಜನರ ಬಡತನ, ನಿರುದ್ಯೋಗ, ಅನಕ್ಷರತೆಯನ್ನು ನಿವಾರಣೆ ಮಾಡುವ ಮತ್ತು ಪುರುಷ ಹಾಗೂ

ಮಹಿಳೆಯರ ನಡುವಣ ಲಿಂಗ ಸಮಾನತೆ, ಆರೋಗ್ಯ ಕುಟುಂಬ ಕಲ್ಯಾಣ ಯೋಜನೆ, ಜನಸಂಖ್ಯೆ ಇನ್ನಿತರ ಕ್ಷೇತ್ರಗಳ ಬಗ್ಗೆ ಪಂಚಾಯಿತಿ ಸದಸ್ಯರಿಗೆ ತರಬೇತಿ ನೀಡಬೇಕು.

### ೪. ಆರ್ಥಿಕ ಕ್ಷೇತ್ರದ ತರಬೇತಿ :

ಆಯಾಯ ಪಂಚಾಯತಿ ವ್ಯಾಪ್ತಿಗಳಲ್ಲಿ ದೊರೆಯಬಹುದಾದ ಸಂಪನ್ಮೂಲಗಳನ್ನು ಕ್ರೋಢೀಕರಿಸುವ, ಬಳಸುವ, ಕೇಂದ್ರ-ರಾಜ್ಯಗಳಿಂದ ಬರುವ ಅನುದಾನಗಳನ್ನು ವಿವಿಧ ಹಂತಗಳ ಪಂಚಾಯತಿಗಳಿಗೆ ಸಮರ್ಪಕವಾಗಿ ಹಂಚುವ, ವಿವಿಧ ರೀತಿಯ ತೆರಿಗೆಗಳನ್ನು ವಿಧಿಸುವ, ಸಂಗ್ರಹಿಸುವ, ವಿನಿಯೋಗಿಸುವ, ಆರ್ಥಿಕ ಸಂಪನ್ಮೂಲಗಳನ್ನು ಸದ್ಬಳಕೆ ಮಾಡಿಕೊಳ್ಳುವ, ಆರ್ಥಿಕ ಯೋಜನೆಗಳು ಮತ್ತು ಕಾರ್ಯಕ್ರಮಗಳನ್ನು ವಿವಿಧ ಹಂತಗಳಲ್ಲಿ ರೂಪಿಸಿ ಕಾರ್ಯಗತಗೊಳಿಸುವ ಬಗ್ಗೆ ತರಬೇತಿಯನ್ನು ಕೊಡಬೇಕು.

### ೫. ಅಭಿವೃದ್ಧಿ ಕ್ಷೇತ್ರದ ತರಬೇತಿ :

ಮೂರು ಹಂತಗಳ ಪಂಚಾಯತಿಯ ಸದಸ್ಯರುಗಳು ಗ್ರಾಮದ ಸಮಸ್ಯೆಗಳನ್ನು ಹುಡುಕುವ, ಜನರ ಬೇಡಿಕೆಗಳು, ಅವಶ್ಯಕತೆಗಳನ್ನು ಪೂರೈಸುವ, ಗ್ರಾಮದ ಮೂಲಭೂತ ಸೌಕರ್ಯಗಳನ್ನು ಒದಗಿಸುವ, ಅವುಗಳಲ್ಲಿ ಸರ್ವರಿಗೂ ಕುಡಿಯುವ ನೀರು, ವಸತಿ ನಿರ್ಮಾಣ ಮತ್ತು ಕಲ್ಯಾಣ, ಶಿಕ್ಷಣ, ವಿದ್ಯುತ್ ನೀಡಿಕೆ, ಆರೋಗ್ಯ, ರಸ್ತೆ-ಚರಂಡಿ ನಿರ್ಮಾಣ, ಸಾರಿಗೆ ಸಂಪರ್ಕ ವ್ಯವಸ್ಥೆ, ಗುಡಿಕೈಗಾರಿಕೆಗಳ ಸ್ಥಾಪನೆ, ಕೃಷಿ, ನೀರಾವರಿಗೆ ಆದ್ಯತೆ, ಪ.ಜಾ/ ಪ.ಪಂ., ಹಿಂದುಳಿದ ಮತ್ತು ಮಹಿಳೆಯರ ಅಭಿವೃದ್ಧಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ, ಸ್ವಯಂ ಉದ್ಯೋಗ ಕೈಗೊಳ್ಳುವುದು ಇತ್ಯಾದಿಗಳ ಬಗ್ಗೆ ಸದಸ್ಯರುಗಳಿಗೆ ತರಬೇತಿ ನೀಡಬೇಕು.

### ಈಗಿರುವ ತರಬೇತಿಯ ಲೋಪದೋಷಗಳು :

ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದಂತೆ ಸ್ಥಳೀಯ ಸದಸ್ಯರಿಗೆ (ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮ ಪಂಚಾಯತಿ) ತರಬೇತಿಯನ್ನು ಕೆಲವು ಸರ್ಕಾರೇತರ ಸಂಘ ಸಂಸ್ಥೆಗಳಿಗೆ (ಎನ್.ಜಿ.ಓ.ಗಳು) ವಹಿಸುತ್ತಿರುವುದರಿಂದ ಅವು ನಿಗದಿತ ಕಾಲಾವಧಿಯಲ್ಲಿ ಸಂಪನ್ಮೂಲ ವ್ಯಕ್ತಿಗಳು, ಆಡಳಿತ ತಜ್ಞರಿಂದ ವಿವಿಧ ಹಂತಗಳಲ್ಲಿ ತರಬೇತಿಯನ್ನು ನೀಡುತ್ತಿವೆ. ಇಂತಹ ಸಂಸ್ಥೆಗಳು ಈಗಾಗಲೇ ಕೆಲವು ಜಿಲ್ಲೆಯ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಂಡು ಅಲ್ಲಿನ ಪ್ರತಿನಿಧಿಗಳಿಗೆ ಪ್ರಾಯೋಗಿಕವಾದ ತರಬೇತಿಯನ್ನು ಕಲಾ ಜಾಥಾ, ಗುಂಪು ಚರ್ಚೆ, ಉಪನ್ಯಾಸ, ಜನಾಂದೋಲನ, ಬೀದಿ ನಾಟಕ, ಹಾಡುಗಳು, ಕಿರುಚಿತ್ರ ಪ್ರದರ್ಶನ, ನೃತ್ಯನಾಟಕ ಇತ್ಯಾದಿಗಳ ಮೂಲಕ ತರಬೇತಿಯನ್ನು ಕೈಗೊಳ್ಳುತ್ತಿವೆ. ಈ ರೀತಿಯ ತರಬೇತಿಯಿಂದಾಗಿ ಕೆಲ ಪಂಚಾಯತಿಗಳಲ್ಲಿ ವ್ಯಾಪಕ ಬದಲಾವಣೆ ಕಂಡುಬರುತ್ತಿದೆ. ಆದರೂ ಇಂತಹ ತರಬೇತಿಯ ಕಳಪೆಯಾಗಿದ್ದು ಪರಿಣಾಮಕಾರಿಯಾಗಿಲ್ಲದಿರುವುದು ಕಂಡುಬರುತ್ತಿದೆ. ಇನ್ನೂ ಅನೇಕ ಸದಸ್ಯರುಗಳು ಈ ತರಬೇತಿಯ ಪ್ರಯೋಜನವನ್ನು ಪಡೆದುಕೊಂಡಿಲ್ಲ. ಕೆಲವು ಸದಸ್ಯರು ತರಬೇತಿಯಲ್ಲಿ ಭಾಗವಹಿಸುವಿಕೆಯಲ್ಲಿ ಆಸಕ್ತಿಯನ್ನು ತೋರಿಸುತ್ತಿಲ್ಲ. ಇನ್ನು ಕೆಲವು ಪಂಚಾಯತಿಗಳಲ್ಲಿ ಸದಸ್ಯರುಗಳ ಮತ್ತು ಅಧಿಕಾರಿಗಳ ನಡುವಣ ಸಂಬಂಧಗಳು ಉತ್ತಮವಾಗಿಲ್ಲ.

ತರಬೇತಿ ಪಡೆದ ನಂತರವೂ ಸದಸ್ಯರು ಮಹಿಳೆಯರೂ ಸೇರಿದಂತೆ ಸ್ವಯಂ ನಿರ್ಧಾರ ಕೈಗೊಳ್ಳುವುದು, ನೀತಿ, ಯೋಜನೆಗಳನ್ನು ರೂಪಿಸುವುದು ಸಾಧ್ಯವಾಗುತ್ತಿಲ್ಲ.

ಮೂರು ಹಂತಗಳ ಪಂಚಾಯತಿ ಸದಸ್ಯರು ತರಬೇತಿಯಲ್ಲಿ ಭಾಗವಹಿಸಲು ಅವರವರ ಕ್ಷೇತ್ರಗಳಲ್ಲಿ ತರಬೇತಿ ಕೇಂದ್ರಗಳು ಇಲ್ಲದೇ ಕೊರತೆಯಾಗಿದೆ. ಇದರಿಂದಾಗಿ ಸದಸ್ಯರು (ಮಹಿಳೆ) ತರಬೇತಿಯಲ್ಲಿ ಭಾಗವಹಿಸುವಲ್ಲಿ ನಿರಾಸಕ್ತಿ ಮೂಡಿರುತ್ತದೆ.

ಸರ್ಕಾರ ಕೆಲವೊಂದು ಸ್ಥಳೀಯ ಸ್ವಯಂ ಸಂಸ್ಥೆಗಳಿಗೆ ತರಬೇತಿ ನೀಡಲು ಸಹಕಾರ ನೀಡುತ್ತಿದೆ. ಆದರೆ ಸದಸ್ಯರಿಗೆ ಆ ಸಂಸ್ಥೆಯ ಉದ್ದೇಶವು ಸ್ಪಷ್ಟವಾಗಿರದೇ ಬೇರೆ ಉದ್ದೇಶ ಹೊಂದಿರುತ್ತದೆ. ಇದರಿಂದ ಸ್ಥಳೀಯರೇ ಆದ ಸದಸ್ಯರಿಗೆ ಆ ಸಂಸ್ಥೆಯ ಬಗ್ಗೆ ನಂಬಿಕೆ ಇರುವುದಿಲ್ಲ. ಇದರಿಂದ ಸದಸ್ಯರು ತರಬೇತಿ ಕಾರ್ಯಗಳಲ್ಲಿ ಭಾಗವಹಿಸಲು ಆಸಕ್ತಿ ತೋರಿಸುತ್ತಿಲ್ಲ.

ಈಗಾಗಲೇ ತರಬೇತಿ ಪಡೆದ ಕೆಲವು ಪಂಚಾಯತಿಗಳು ಅಭಿವೃದ್ಧಿಯನ್ನು ಸಾಧಿಸುವಲ್ಲಿ ಮುನ್ನುಗ್ಗುತ್ತಿವೆ. ಆದರೆ ಇನ್ನೂ ಕೆಲವು ಪಂಚಾಯತಿಗಳಲ್ಲಿ ಇಂತಹ ಅಭಿವೃದ್ಧಿಯನ್ನು ಕಾಣಲಾಗುತ್ತಿಲ್ಲ.

ಪಂಚಾಯತಿಗೆ ಸದಸ್ಯರು ಹೊಸದಾಗಿ ಆಯ್ಕೆಗೊಂಡ ತಕ್ಷಣವೇ ಅವರಿಗೆ ಸೂಕ್ತ ತರಬೇತಿಯನ್ನು ನೀಡಬೇಕು. ಆದರೆ ಸದಸ್ಯರು ಆಯ್ಕೆಯಾಗಿ ಬಹಳಷ್ಟು ತಿಂಗಳು, ವರ್ಷಗಳಾದರೂ ಅವರಿಗೆ ತರಬೇತಿಯನ್ನು ನೀಡಲು ಸಾಧ್ಯವಾಗುತ್ತಿಲ್ಲ. ಇದರಿಂದಾಗಿ ಪಂಚಾಯತಿಗಳು ಸಮರ್ಪಕವಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ.

ಈಗಿನ ಪಂಚಾಯತಿ ಸದಸ್ಯರುಗಳಿಗೆ ನೀಡುತ್ತಿರುವ ತರಬೇತಿಗಳು ಹೆಚ್ಚಾಗಿ ಉಪನ್ಯಾಸ ಮಾದರಿಯಲ್ಲಿರುವುದರಿಂದ ಅನಕ್ಷರಸ್ಥ ಸದಸ್ಯರುಗಳಿಗೆ ಇದು ಕ್ಲಿಷ್ಟಕರವಾಗಿದೆ. ಇದರಿಂದ ಸದಸ್ಯರುಗಳಿಗೆ ಪಂಚಾಯತಿಯ ಕಾರ್ಯವೈಖರಿ, ಗ್ರಾಮದ ಅಭಿವೃದ್ಧಿಯ ಬಗ್ಗೆ ಸಂಪೂರ್ಣ ಅರ್ಥವಾಗದೆ ಅಭಿವೃದ್ಧಿಗೆ ಅಡಚಣೆ ಉಂಟಾಗುತ್ತಿದೆ.

**ತರಬೇತಿಯ ಪಠ್ಯ ವಿಷಯಗಳು :**

## ಪರಿವಿಡಿ

**ಅಧ್ಯಾಯ -೧ :**

**ಪಂಚಾಯತ್ ರಾಜ್ ವ್ಯವಸ್ಥೆ**

- ಪಂಚಾಯತಿಯ ಅರ್ಥ, ವ್ಯಾಪ್ತಿ ಮತ್ತು ಪ್ರಾಮುಖ್ಯತೆ.
- ಪಂಚಾಯತಿಯ ರಚನೆ, ಗುರಿ ಮತ್ತು ಉದ್ದೇಶಗಳು.
- ಪಂಚಾಯತಿಯ ಐತಿಹಾಸಿಕ ಹಿನ್ನೆಲೆ : ಬೆಳೆದು ಬಂದ ದಾರಿಗಳು.
- ಪಂಚಾಯತಿಯ ವಿವಿಧ ಸಮಿತಿಗಳು, ವರದಿಗಳು, ಶಿಫಾರಸ್ಸುಗಳ ಅನುಷ್ಠಾನ.
- ಪಂಚಾಯತಿಯ ಕಾಯ್ದೆಗಳು, ೧೯೫೯, ೧೯೮೩, ೧೯೯೩ರ ಪಂಚಾಯತ್ ರಾಜ್ ಕಾಯ್ದೆಗಳ ಲಕ್ಷಣಗಳು, ಅಧಿಕಾರ, ಕಾರ್ಯಗಳು, ಅನುಷ್ಠಾನ ಮತ್ತು ಪರಿಣಾಮಗಳು.
- ಸಂವಿಧಾನದ ೭೩ನೇ ತಿದ್ದುಪಡಿ ಕಾಯ್ದೆಯ ಲಕ್ಷಣಗಳು, ಪರಿಣಾಮಗಳು. ಪಂಚಾಯತ್ ರಾಜ್ ಆಡಳಿತ ವ್ಯವಸ್ಥೆಯ ಸುಧಾರಣಾ ಕ್ರಮಗಳು.

**ಅಧ್ಯಾಯ -೨ :**

**ಪಂಚಾಯತ್ ರಾಜ್ ಆಡಳಿತದ ಸ್ವರೂಪ**

**೧. ಗ್ರಾಮ ಪಂಚಾಯತಿ :**

- ರಚನೆ, ಅಧಿಕಾರ ಮತ್ತು ಕಾರ್ಯಗಳು
- ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರು ಮತ್ತು ಕಾರ್ಯದರ್ಶಿಗಳ ಹಕ್ಕು ಮತ್ತು ಕರ್ತವ್ಯಗಳು
- ಗ್ರಾಮಸಭೆ, ಸಾಮಾನ್ಯಸಭೆ, ಆಯ-ವ್ಯಯ, ಜಮಾಬಂದಿ.

**೨. ತಾಲ್ಲೂಕು ಪಂಚಾಯತಿ :**

- ರಚನೆ, ಅಧಿಕಾರ ಮತ್ತು ಕಾರ್ಯಗಳು
- ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರು ಮತ್ತು ಕಾರ್ಯ ನಿರ್ವಾಹಣಾಧಿಕಾರಿಗಳ ಹಕ್ಕು ಮತ್ತು ಕರ್ತವ್ಯಗಳು ಸಾಮಾನ್ಯ ಸಭೆ, ತಾಲ್ಲೂಕು ಪಂಚಾಯತಿ ಸಮಿತಿಗಳು, ಹಣಕಾಸು ನಿರ್ವಹಣೆ.

### ೩. ಜಿಲ್ಲಾ ಪಂಚಾಯತಿ :

- ರಚನೆ, ಅಧಿಕಾರ ಮತ್ತು ಕಾರ್ಯಗಳು.
- ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯ ಹಕ್ಕು ಮತ್ತು ಕರ್ತವ್ಯಗಳು.
- ಸಾಮಾನ್ಯ ಸಭೆ, ಸ್ಥಾಯಿ ಸಮಿತಿಗಳು, ಹಣಕಾಸು ನಿರ್ವಹಣೆ.

## ಅಧ್ಯಾಯ -೩ :

### ಪಂಚಾಯತ್ ಆಡಳಿತದ ಕಾರ್ಯವೈಖರಿ

- ಪಂಚಾಯತ್ ಸದಸ್ಯರುಗಳಿಗೆ ನೀತಿ ನಿಯಮ, ಭಾಗವಹಿಸುವಿಕೆ, ಕಾರ್ಯಚಟುವಟಿಕೆಗಳು, ಸದಸ್ಯರು, ಅಧಿಕಾರಿಗಳು ಸಿಬ್ಬಂದಿವರ್ಗದ ನಡುವಿನ ಸಹಕಾರ-ಸಮನ್ವಯತೆ.
- ಸದಸ್ಯರು ಯೋಜನೆಗಳಿಗೆ ತೆಗೆದುಕೊಳ್ಳುವ ಸ್ವಯಂ ನಿರ್ಧಾರದ ಪ್ರಮಾಣ.
- ಸರ್ಕಾರದ ಯೋಜನೆಗಳು ಮತ್ತು ಅವುಗಳ ಅನುಷ್ಠಾನತೆ.
- ಕೇಂದ್ರ-ರಾಜ್ಯದ ಹಣ ವಿನಿಯೋಗದ ಖರ್ಚು-ವೆಚ್ಚದ ತಿಳಿವಳಿಕೆ.
- ಮೀಸಲಾತಿ ಬಳಕೆಯಲ್ಲಿ ಎಸ್.ಸಿ/ಎಸ್.ಟಿ., ಹಿಂದುಳಿದ ಮತ್ತು ಮಹಿಳಾ ಸದಸ್ಯರ ಪಾತ್ರ.
- ಅಧಿಕಾರಿಗಳ ಕಾರ್ಯದಕ್ಷತೆ, ಪ್ರಾಮಾಣಿಕತೆ, ಪಾರದರ್ಶಕ ಆಡಳಿತ ನೀಡಿಕೆ.
- ವಿವಿಧ ಇಲಾಖೆಗಳ ಅಧಿಕಾರಿಗಳು ಮತ್ತು ಸದಸ್ಯರುಗಳ ನಡುವಿನ ಸಂಬಂಧಗಳ ಸುಧಾರಣೆ.
- ಅನಕ್ಷರಸ್ಥ, ಅನನುಭವಿ ಸದಸ್ಯರುಗಳಿಗೆ ಯೋಗ್ಯ ಶಿಕ್ಷಣ ಮತ್ತು ರಾಜಕೀಯ ಪ್ರಜ್ಞೆ.
- ಸದಸ್ಯರಿಗೆ ಪರಿಣಾಮಕಾರಿ ನಾಯಕತ್ವ ಮನೋಭಾವನೆ.
- ಸದಸ್ಯರುಗಳಿಗೆ ಸೂಕ್ತ ತರಬೇತಿ ಮತ್ತು ಮಾರ್ಗದರ್ಶನ.

## ಅಧ್ಯಾಯ-೪ :

### ಗ್ರಾಮೀಣ ಅಭಿವೃದ್ಧಿ :

- ಗ್ರಾಮೀಣಾಭಿವೃದ್ಧಿಯ ಸ್ವರೂಪ, ವ್ಯಾಪ್ತಿ ಮತ್ತು ಪ್ರಾಮುಖ್ಯತೆ.
- ಅಭಿವೃದ್ಧಿಯ ಗುರಿ ಮತ್ತು ಉದ್ದೇಶಗಳು .
- ಕೃಷಿ ಕ್ಷೇತ್ರದ ಅಭಿವೃದ್ಧಿ ಕಾರ್ಯಕ್ರಮಗಳು.
- ವ್ಯವಸಾಯ, ನೀರಾವರಿ, ಭೂಸುಧಾರಣೆ, ರಾಸಾಯನಿಕ ಗೊಬ್ಬರ, ಬಿತ್ತನೆಬೀಜ.
- ಗುಡಿಕೈಗಾರಿಕೆ, ತಾಂತ್ರಿಕತೆ.

### ಅಭಿವೃದ್ಧಿಯ ವಿಶೇಷ ಯೋಜನೆಗಳು ಮತ್ತು ಕಾರ್ಯಕ್ರಮಗಳು :

**೧. ಯೋಜನೆಗಳ ಲಕ್ಷಣಗಳು, ಅವಶ್ಯಕತೆ, ಸಮಸ್ಯೆಗಳು, ಸಾಧನೆಗಳು, ಅನುಷ್ಠಾನ.**

- ಆಶ್ರಯ, ಅಂಬೇಡ್ಕರ್, ಇಂದಿರಾ ಅವಾಜ್ ಯೋಜನೆ.

- ಜವಾಹರ್ ರೋಜ್‌ಗಾರ್ ಯೋಜನೆ, ಸ್ವರ್ಣಜಯಂತಿ ಸ್ವರಾಜ್‌ಗಾರ್ ಯೋಜನೆ.
- ಉದ್ಯೋಗ ಭರವಸೆ ಯೋಜನೆ, ಅಂತ್ಯೋದಯ ಯೋಜನೆ.
- ಸ್ವಚ್ಛ ಗ್ರಾಮ ಯೋಜನೆ, ಸ್ವಸ್ತಿ ಗ್ರಾಮ ಯೋಜನೆ.
- ಜಲಸಂವರ್ಧನ ಯೋಜನೆ, ಸ್ವಜಲಧಾರ ಯೋಜನೆ.
- ಬರಪೀಡಿತ ಪ್ರದೇಶಾಭಿವೃದ್ಧಿ ಯೋಜನೆ, ಬಂಜರುಭೂಮಿ ಅಭಿವೃದ್ಧಿ ಯೋಜನೆ.
- ಪ್ರಧಾನಮಂತ್ರಿ ಗ್ರಾಮ ಸಡಕ್ ಯೋಜನೆ, ಗ್ರಾಮೀಣ ನೀರು ಸರಬರಾಜು ಯೋಜನೆ.
- ಶಾಲಾಭಿವೃದ್ಧಿ ಸಮಿತಿ ಯೋಜನೆ, ಅಕ್ಷರ ದಾಸೋಹ ಯೋಜನೆ.

## ಪ್ರಾಯೋಗಿಕವಾಗಿ ತರಗತಿಗಳು ಅಗತ್ಯವೇ ?

ಪಂಚಾಯತಿ ಸದಸ್ಯರಿಗೆ ಪ್ರಾಯೋಗಿಕವಾದ ತರಗತಿಗಳನ್ನು ನೀಡಬೇಕಾದುದು ಈಗ ಹೆಚ್ಚು ಅಗತ್ಯವಿದೆ. ಏಕೆಂದರೆ ಬಹುತೇಕ ಸದಸ್ಯರು ಅನಕ್ಷರಸ್ಥರು, ಅನನುಭವಿಗಳು. ಪಂಚಾಯತಿಗಳಲ್ಲಿ ಆಯ್ಕೆಯಾಗಿರುವುದರಿಂದ ಅವರುಗಳಿಗೆ ಪ್ರಾಯೋಗಿಕವಾದ ತರಗತಿಗಳ ಮೂಲಕವಾಗಿ ವಿವಿಧ ತರಬೇತಿಗಳನ್ನು ನೀಡಿದರೆ ಒಳ್ಳೆಯದು. ಇದರಿಂದ ಪಂಚಾಯತಿಯ ಎಲ್ಲಾ ಸದಸ್ಯರುಗಳು ತಮ್ಮ ಪಂಚಾಯತಿ ವ್ಯಾಪ್ತಿಯ ಸಮಸ್ಯೆಗಳನ್ನು ಗುರುತಿಸುವ, ಜನರ ನೋವು ನಲಿವುಗಳನ್ನು ಅರ್ಥ ಮಾಡಿಕೊಳ್ಳುವ, ಸರ್ಕಾರದ ನೀತಿ ನಿಯಮಗಳನ್ನು ತಿಳಿಯಲು, ಪಂಚಾಯತಿ ಆಡಳಿತ ವ್ಯವಸ್ಥೆಯಲ್ಲಿ ಮುಕ್ತವಾಗಿ ಭಾಗವಹಿಸಲು ಸಾಧ್ಯವಾಗುತ್ತದೆ. ಅಂತಹ ಪ್ರಾಯೋಗಿಕವಾದ ತರಗತಿಗಳು ಮುಖಾಮುಖಿ ಚರ್ಚೆ, ಪರಸ್ಪರ ವಿಚಾರ ವಿನಿಮಯ, ವಿಚಾರ ಸಂಕಿರಣ, ಸಾಂಸ್ಕೃತಿಕ ಕಾರ್ಯಕ್ರಮ, ಕಾರ್ಯಾಗಾರ, ಕಿರುಚಿತ್ರಗಳ ಪ್ರದರ್ಶನ, ಬೀದಿನಾಟಕ, ಹಾಡುಗಳು, ಸಂವಾದ ಇತ್ಯಾದಿಗಳ ಮೂಲಕ ಸದಸ್ಯರನ್ನೂ ಜಾಗೃತಿ ಮೂಡಿಸುವಂತಹ ಸಾಮರ್ಥ್ಯಾಭಿವೃದ್ಧಿಯ ತರಬೇತಿಗಳನ್ನು ನೀಡಬೇಕಾಗಿರುವುದು ತುಂಬಾ ಅವಶ್ಯಕ.

## ಕರ್ನಾಟಕದಲ್ಲಿ ಈಗಿರುವ ತರಬೇತಿಯ ಗುಣಮಟ್ಟ :

ಪ್ರಜಾಸತ್ತಾತ್ಮಕ ಅಧಿಕಾರ ವಿಕೇಂದ್ರೀಕರಣದ ಹಿನ್ನೆಲೆಯಲ್ಲಿ ರೂಪುಗೊಂಡು ಮೂರು ಹಂತಗಳ ಪಂಚಾಯತ್ ರಾಜ್ ಸಂಸ್ಥೆಗಳ ಮೂಲಕ ಗ್ರಾಮಗಳ ಸರ್ವತೋಮುಖ ಅಭಿವೃದ್ಧಿಗಾಗಿ ಹಲವಾರು ಮಹತ್ವಪೂರ್ಣವಾದ ಪ್ರಗತಿಪರ ಯೋಜನೆ ಮತ್ತು ಕಾರ್ಯಕ್ರಮಗಳನ್ನು ಕಾಲಕಾಲಕ್ಕೆ ಹಮ್ಮಿಕೊಂಡು ಸಮರ್ಥವಾಗಿ ಮತ್ತು ವ್ಯವಸ್ಥಿತವಾಗಿ ಅನುಷ್ಠಾನಗೊಳಿಸುವಲ್ಲಿ ಕರ್ನಾಟಕವು ಮಹತ್ತರವಾದ ಪಾತ್ರವನ್ನು ವಹಿಸುತ್ತಿದೆ. ಇಲ್ಲಿನ ಸರ್ಕಾರವು ಸ್ಥಳೀಯ ಆಡಳಿತ ಸಂಸ್ಥೆಗಳಿಗೆ ಹೆಚ್ಚಿನ ಅಧಿಕಾರ ನೀಡಲು ಮತ್ತು ಯೋಜನೆಗಳನ್ನು ಅರ್ಥಪೂರ್ಣ ಹಾಗೂ ಪಾರದರ್ಶಕವಾಗಿರುವಂತೆ ರೂಪಿಸುವ ಜೊತೆಗೆ ಜನತೆಯನ್ನು ಆಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವ ದೃಷ್ಟಿಯಿಂದ ಚುನಾಯಿತ ಪಂಚಾಯತಿ ಸದಸ್ಯರುಗಳಿಗೆ ವಿವಿಧ ಹಂತಗಳಲ್ಲಿ ಹಲವಾರು ರೀತಿಯ ತರಬೇತಿಗಳನ್ನು ಹಮ್ಮಿಕೊಳ್ಳಲಾಗಿದೆ. ಇಂತಹ ತರಬೇತಿಯನ್ನು ನೀಡುವ ಸರ್ಕಾರದ ಮುಖ್ಯ ಉದ್ದೇಶವು 'ಸದಸ್ಯರುಗಳು ತಮಗಿರುವ ಸಾಧ್ಯತೆಗಳನ್ನು ಅರ್ಥಮಾಡಿಕೊಂಡು ಪರಿಸ್ಥಿತಿ ಹಾಗೂ ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕುವಂತೆ ಮಾಡುವುದಲ್ಲದೇ ಮಹತ್ವವಾದ ಕಾರ್ಯಗಳನ್ನು ರಚನಾತ್ಮಕವಾಗಿ ಯೋಜಿಸಿ ಮಾಡುವುದೇ ಆಗಿದೆ'. ಇದನ್ನು ಕರ್ನಾಟಕ ಸರ್ಕಾರದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಮೈಸೂರಿನ ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ತರಬೇತಿ ಸಂಸ್ಥೆ, ಬೆಂಗಳೂರಿನ ಇನ್ಸ್‌ಟಿಟ್ಯೂಟ್ ಆಫ್ ಸೋಷಿಯಲ್ ಸೈನ್ಸ್ (I.S.S.) ಮತ್ತು ಸರ್ಚ್ (SEARCH) ಸ್ವಯಂ ಸೇವಾ ಸಂಸ್ಥೆಗಳಿಂದ ಪಂಚಾಯತಿ ಸದಸ್ಯರುಗಳಿಗೆ ವಿವಿಧ ಹಂತಗಳಲ್ಲಿ ತರಬೇತಿಗಳನ್ನು ನಡೆಸಲಾಗುತ್ತಿದೆ.

ಇಂತಹ ತರಬೇತಿಯನ್ನು ಕಳೆದಬಾರಿ ರಾಜ್ಯಾದ್ಯಂತ ಏಕಕಾಲಕ್ಕೆ ೧೮ ಜಿಲ್ಲೆಗಳ ೪೫ ತಾಲ್ಲೂಕುಗಳಲ್ಲಿ ನಡೆಸಲಾಯಿತು. ಇದರಲ್ಲಿ ೯೫೨ ಗ್ರಾಮ ಪಂಚಾಯತಿಗಳನ್ನು ಆಯ್ಕೆ ಮಾಡಿಕೊಂಡು ಆಯ್ದ ಜಿಲ್ಲೆಯ ತಾಲ್ಲೂಕಿಗೆ ಸೇರಿದ ೯೫೨ ಗ್ರಾಮ ಪಂಚಾಯತಿಗಳಲ್ಲಿರುವ ೭೬೩ ಪುರುಷರು, ೫೯೦೯ ಮಹಿಳಾ ಸದಸ್ಯರು ಸೇರಿ ಒಟ್ಟು ೧೩,೫೩೦ ಮಂದಿ ಗ್ರಾಮ ಪಂಚಾಯತಿ

ಸದಸ್ಯರಿಗೆ ತರಬೇತಿಯನ್ನು ವಿವಿಧ ಹಂತಗಳಲ್ಲಿ ಹಮ್ಮಿಕೊಳ್ಳಲಾಯಿತು. ರಾಜ್ಯದ ಗ್ರಾಮ ಪಂಚಾಯತಿ ಸದಸ್ಯರ ಸಂಖ್ಯೆಗನುಸಾರ ಕನಿಷ್ಠ ೩೫ ರಿಂದ ೪೦ ಸದಸ್ಯರನ್ನೊಳಗೊಂಡ ಒಂದೊಂದು ತಂಡವನ್ನು ಮಾಡಿ ತರಬೇತಿಯನ್ನು ನೀಡಲಾಯಿತು. ತರಬೇತಿ ಅವಧಿಯಲ್ಲಿ ಪ್ರತಿ ಸದಸ್ಯರಿಗೆ ಬರೆಯಲು ಸಲಕರಣೆ, ಉಪಾಹಾರ, ಊಟ, ಚಹಾ, ವಸತಿ ಮತ್ತು ಗೌರವ ಭತ್ಯೆಯನ್ನು ನೀಡಲಾಯಿತು. ಎಲ್ಲಾ ಸದಸ್ಯರುಗಳಿಗೆ ತರಬೇತಿಯನ್ನು ಸಂಪನ್ಮೂಲ ವ್ಯಕ್ತಿಗಳಿಂದ, ಪಂಚಾಯತಿ ಪರಿಣಿತರಿಂದ ನೀಡಲಾಗಿತ್ತು. ಈ ರೀತಿಯಾದ ತರಬೇತಿಯನ್ನು ಇನ್ನು ಹಲವು ಸರ್ಕಾರೇತರ ಸಂಘ ಸಂಸ್ಥೆಗಳು ವಿನೂತನ ರೀತಿಯಲ್ಲಿ ಗುಣಮಟ್ಟದ ತರಬೇತಿಗಳನ್ನು ಹಂತ ಹಂತವಾಗಿ ನಡೆಸುತ್ತಿವೆ. ಜೊತೆಗೆ ಸರ್ಕಾರವೂ ಕೂಡ ಪಂಚಾಯತ್ ಸಮಾವೇಶಗಳನ್ನು ನಡೆಸುವ ಮೂಲಕ ಸದಸ್ಯರುಗಳಲ್ಲಿ ಜಾಗೃತಿ ಮೂಡಿಸಲು ಪ್ರಯತ್ನಿಸುತ್ತಿದೆ. ಇದರಿಂದಾಗಿ ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದಂತೆ ಪಂಚಾಯತಿ ಸದಸ್ಯರುಗಳಲ್ಲಿ ಉತ್ಸಾಹ, ಹೊಸ ಆಶಾಭಾವನೆಯ ಅರಿವು ಮೂಡುತ್ತಿದೆ. ನೂತನ ಸದಸ್ಯರಲ್ಲಿಯೂ ಸಾಮರ್ಥ್ಯಾಭಿವೃದ್ಧಿ ಬೆಳೆಯಲು ಸಾಧ್ಯವಾಗುತ್ತದೆ. ಅಂತಹ ವಿನೂತನ ತರಬೇತಿಗಳೆಂದರೆ -

- ಚಲನಚಿತ್ರ, ಕಿರುಚಿತ್ರಗಳ ಪ್ರದರ್ಶನ
- ಮುಕ್ತ ಚರ್ಚೆ, ಸಂವಾದ, ಸ್ಪಂದನ, ಗುಂಪು ಚರ್ಚೆ
- ಜನಾಧಿಕಾರ, ಜನಾಂದೋಲನ, ಕಲಾ ಜಾಥಾ
- ಉಪನ್ಯಾಸ, ವಿಚಾರ ಸಂಕಿರಣ, ಕಾರ್ಯಾಗಾರ
- ವಿಚಾರಗೋಷ್ಠಿ, ಸಂವಹನಾತ್ಮಕ
- ಸಾಂಸ್ಕೃತಿಕ ಕಾರ್ಯಕ್ರಮಗಳಾದ ಬೀದಿನಾಟಕ, ನೃತ್ಯ ನಾಟಕ, ಹಾಡುಗಳು
- ಜಾನಪದ ಸಾಂಸ್ಕೃತಿಕ ಕಾರ್ಯಕ್ರಮಗಳು
- ವಿಶೇಷ ಜಾಗೃತಿ ಶಿಬಿರ, ಪಂದ್ಯಾವಳಿ
- ಪಂಚಾಯತಿಯ ಸಮಾವೇಶ
- ಇತ್ಯಾದಿಗಳು.

ಚುನಾಯಿತ ಪಂಚಾಯತಿ ಸದಸ್ಯರಿಗೆ ಮೇಲಿನ ಎಲ್ಲಾ ರೀತಿಯ ತರಬೇತಿಗಳನ್ನು ಪ್ರಾಯೋಗಿಕವಾಗಿ ಹಂತ ಹಂತವಾಗಿ ನೀಡುತ್ತಿರುವುದರಿಂದ ಹಲವಾರು ಸದಸ್ಯರು ನಿಖರವಾದ, ಸ್ಪಷ್ಟವಾದ, ವ್ಯವಸ್ಥಿತವಾದ ಮತ್ತು ಗುಣಾತ್ಮಕ ಅರಿವನ್ನು ಹೊಂದಲು ಸಾಧ್ಯವಾಗುತ್ತಿದೆ.

ಇಷ್ಟೆಲ್ಲಾ ತರಬೇತಿಗಳನ್ನು ನೀಡುತ್ತಿದ್ದರೂ ಸಹ ಗ್ರಾಮೀಣ ಪ್ರದೇಶವು ನಿರೀಕ್ಷಿತ ಮಟ್ಟದಲ್ಲಿ ಅಭಿವೃದ್ಧಿ ಹೊಂದಲು ಇನ್ನೂ ಸಾಧ್ಯವಾಗಿಲ್ಲ. ಗ್ರಾಮಗಳಲ್ಲಿ ಅನಕ್ಷರತೆ, ಬಡತನ, ನಿರುದ್ಯೋಗ, ಅಸಮಾನತೆ, ಜಾತೀಯತೆ ಇನ್ನೂ ಜೀವಂತವಾಗಿವೆ. ಎಷ್ಟೋ ಗ್ರಾಮಗಳು ಮೂಲಭೂತ ಸೌಕರ್ಯ ಸೌಲಭ್ಯಗಳಿಲ್ಲದೆ ವಂಚಿತವಾಗಿವೆ. ಈ ನಿಟ್ಟಿನಲ್ಲಿ ಸದಸ್ಯರಿಗೆ ಇನ್ನೂ ಪರಿಣಾಮಕಾರಿಯಾದ ಗುಣಮಟ್ಟದ ತರಬೇತಿ ಸಾಧ್ಯವಿದೆ.

## ತರಬೇತಿಯಿಂದ ಸುಧಾರಣೆ ಮಾಡಲು ಸಾಧ್ಯವಿದೆಯೇ !

## ಅಂತಹ ಸುಧಾರಣೆಗಳು ಯಾವುವು?

೧. ತರಬೇತಿಯು ಪಂಚಾಯತಿಯ ಮೂರು ಹಂತಗಳ ಸದಸ್ಯರು ಗ್ರಾಮದ ಅಭಿವೃದ್ಧಿಯಲ್ಲಿ ಅನ್ಯೋನ್ಯತೆಯಿಂದ ಹೊಂದಿಕೊಂಡು ಕಾರ್ಯ ನಿರ್ವಹಿಸುವಂತಹ ಗ್ರಾಮ ಪಂಚಾಯತ್ ಹಂತದಲ್ಲಿ 'ಸಹಕಾರ ಆಂದೋಲನ'ವನ್ನು ಏರ್ಪಡಿಸಬೇಕು. ಇದನ್ನು ಸ್ಥಳೀಯ ಸರ್ಕಾರೇತರ ಸಂಘ ಸಂಸ್ಥೆಗಳಿಂದ ಆಯೋಜಿಸಬೇಕು. ಸರ್ಕಾರ ಅಂತಹ ಸಂಘ ಸಂಸ್ಥೆಗಳನ್ನು ಪ್ರೋತ್ಸಾಹಿಸಬೇಕು.

೨. ತರಬೇತಿಯನ್ನು ಸದಸ್ಯರು ಚುನಾಯಿತರಾದ ತಕ್ಷಣವೇ ಆರಂಭಿಸಬೇಕು. ಈ ತರಬೇತಿಯನ್ನು ಪಂಚಾಯತ್ ಆಡಳಿತ ವ್ಯವಸ್ಥೆಯ ವಿವಿಧ ಹಂತದ ಕಾರ್ಯ ನಿರ್ವಹಣೆ, ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನ, ಯೋಜನೆಗಳ ತಯಾರಿಕೆ, ಹಣಕಾಸು ನಿರ್ವಹಣೆ ಇತ್ಯಾದಿಗಳನ್ನು ಒಳಗೊಂಡಿರಬೇಕು. ಇದನ್ನು ಪ್ರತಿಷ್ಠಿತ ಗುಣಮಟ್ಟದ ಸ್ವಯಂಸೇವಾ ಸಂಸ್ಥೆಗಳು, ಪಂಚಾಯತಿ ಪರಿಣತರು, ಅನುಭವವುಳ್ಳವರು, ಸಂಪನ್ಮೂಲ ವ್ಯಕ್ತಿಗಳಿಂದ ಹಂತ ಹಂತವಾಗಿ ಹಮ್ಮಿಕೊಳ್ಳಬೇಕು.

೩. ತರಬೇತಿಯು ಜನರ ಸಹಭಾಗಿತ್ವವನ್ನು ಹೆಚ್ಚಿಸುವಂತಿರಬೇಕು. ಇಂತಹ ಸಹಭಾಗಿತ್ವವು ಸದಸ್ಯರು ಜನರ ಸಮಸ್ಯೆಗಳನ್ನು, ಗ್ರಾಮದ ಸಮಸ್ಯೆಗಳನ್ನು ಗುರುತಿಸುವ, ನಿಭಾಯಿಸುವಂತಹ ಮನೋಭಾವನೆಯನ್ನು ಮೂಡಿಸುವಂತಿರಬೇಕು. ಜೊತೆಗೆ ಅಧಿಕಾರಿಗಳು, ಪ್ರತಿನಿಧಿಗಳು, ಸಿಬ್ಬಂದಿವರ್ಗಗಳ ನಡುವೆ ಪರಸ್ಪರ ಸಹಕಾರ, ಹೊಂದಾಣಿಕೆ, ಸಮನ್ವಯದಿಂದ ಕಾರ್ಯ ನಿರ್ವಹಿಸುವಂತೆ ಇರಬೇಕು.

೪. ತರಬೇತಿಯು ಸದಸ್ಯರುಗಳಿಗೆ ಗ್ರಾಮದ ಅಭಿವೃದ್ಧಿ ಕಾಮಗಾರಿಗಳು ಈಗಾಗಿರುವ, ಆಗುತ್ತಿರುವ ಮತ್ತು ಮುಂದೆ ಆಗಬೇಕಾಗಿರುವ ಬಗ್ಗೆ ಗಂಭೀರ ಚಿಂತನೆ ಮಾಡುವ ಮೂಲಕ ಮೂರು ಹಂತದ ಸದಸ್ಯರುಗಳು ಆಗಾಗ್ಗೆ ಆತ್ಮಾವಲೋಕನ ಮಾಡಿಕೊಳ್ಳುವಂತಿರಬೇಕು. ಈ ಬಗ್ಗೆ ಆಯಾಯ ಹಂತಗಳಲ್ಲಿ ಅಭಿವೃದ್ಧಿ ಕಾಮಗಾರಿಗಳ ಅನುಷ್ಠಾನಕ್ಕೆ ಹಾಗೂ ದೈನಂದಿನ ಚಟುವಟಿಕೆಗಳ ಕಾರ್ಯನಿರ್ವಹಣೆಯನ್ನು ಪರೀಕ್ಷಿಸಲು ಪ್ರತ್ಯೇಕ 'ನಿಗಾ ಸಮಿತಿ' ಎಂಬುದನ್ನು ಸೃಷ್ಟಿಸಬೇಕು. ಇದು ಪಾರದರ್ಶಕವಾಗಿ ಕಾರ್ಯನಿರ್ವಹಿಸುವಂತೆ ಅನುಭವಸ್ಥರನ್ನು ನೇಮಿಸುವುದು ಮತ್ತು ನೋಡಿಕೊಳ್ಳುವುದು ಸರ್ಕಾರದ ಜವಾಬ್ದಾರಿಯಾಗಬೇಕು.

೫. ಪಂಚಾಯತ್ ಸದಸ್ಯರಿಗೆ ಕೊಡುವ ತರಬೇತಿಯು ಗ್ರಾಮೀಣ ಅಭಿವೃದ್ಧಿಗೆ ಪೂರಕವಾಗಿರಬೇಕು. ಅಂದರೆ ಗ್ರಾಮಗಳಲ್ಲಿ ಕೈಗೊಂಡ ವಿವಿಧ ಹಂತಗಳಲ್ಲಿನ ಅಭಿವೃದ್ಧಿ ಕಾಮಗಾರಿಗಳ ಕಾರ್ಯ ನಿರ್ವಹಣೆ,. ಮೂಲಭೂತ ಸೌಕರ್ಯಗಳ ಸಮರ್ಪಕ ಹಂಚಿಕೆ, ದುರ್ಬಲ ವರ್ಗಗಳ ಮತ್ತು ಮಹಿಳೆಯರ ಸಬಲೀಕರಣ, ಬಡತನ ಮತ್ತು ನಿರುದ್ಯೋಗ ನಿವಾರಣೆಗೆ ಸಂಬಂಧಿಸಿರಬೇಕು. ಪ್ರತಿ ಮೂರು ಹಂತಗಳ ಪಂಚಾಯತಿಗಳ ಕಾರ್ಯವೈಖರಿಯನ್ನು ಗುರುತಿಸಲು, ತಪಾಸಣೆ ಮಾಡಲು 'ಮೌಲ್ಯಮಾಪನ ಸಮಿತಿ'ಯನ್ನು ತೆರೆಯಬೇಕು.

೬. ತರಬೇತಿಯು ತೌಲನಿಕ ಅಧ್ಯಯನವಾಗಿರಬೇಕು. ಇದು ಈಗಾಗಲೇ ಅಭಿವೃದ್ಧಿ ಹೊಂದಿದಂತಹ ಮತ್ತು ಅಭಿವೃದ್ಧಿ ಹೊಂದುತ್ತಿರುವ ಪಂಚಾಯತಿಗಳು ಹಾಕಿಕೊಂಡಿರುವ ವಿನೂತನ ಯೋಜನೆ, ಕಾರ್ಯಕ್ರಮಗಳು, ಸದಸ್ಯರು ಅನುಸರಿಸುತ್ತಿರುವ ಮಾರ್ಗಗಳು ಯಾವ ರೀತಿ ಇದೆ ಎಂಬುದನ್ನು ಅವಲೋಕಿಸಿ ಅಂತಹ ಪಂಚಾಯತಿಗಳಿಗೆ ಸದಸ್ಯರುಗಳನ್ನು ಹೋಲಿಕಾ ಅಧ್ಯಯನ ಮಾಡಲು ಪ್ರವಾಸದ ಮೂಲಕ ಬೇರೆ ಜಿಲ್ಲೆಗಳು ಮತ್ತು ರಾಜ್ಯಗಳಿಗೆ ಕಳುಹಿಸುವ ವ್ಯವಸ್ಥೆ ಮಾಡಬೇಕು.

೭. ತರಬೇತಿ ಹೊಂದಿದ ನಂತರ ಸದಸ್ಯರು ಆಯಾ ಪಂಚಾಯತಿ ವ್ಯಾಪ್ತಿಯಲ್ಲಿ ಅಸ್ತಿತ್ವದಲ್ಲಿರುವ ಸ್ತ್ರೀ ಶಕ್ತಿ ಗುಂಪುಗಳು, ಸ್ವಸಹಾಯ ಗುಂಪುಗಳು, ಸ್ವಯಂ ಸೇವಾ ಸಂಸ್ಥೆಗಳು, ವಿವಿಧ ಸಂಘ ಸಂಸ್ಥೆಗಳು, ಯುವಕರು ಮತ್ತು ಗ್ರಾಮಸ್ಥರೊಂದಿಗೆ ಬೆರತು ಅವರ ಸಹಭಾಗಿತ್ವದಲ್ಲಿ ಗ್ರಾಮದ ಮೂಲಭೂತ ಸೌಲಭ್ಯಗಳನ್ನು ಗುರುತಿಸಬೇಕು. ಮುಖ್ಯವಾಗಿ ಅನಕ್ಷರಸ್ಥರು, ಬಡವರು, ಹಿಂದುಳಿದವರು, ಪರಿಶಿಷ್ಟ ಜಾತಿ ಮತ್ತು ವರ್ಗದವರು ಮತ್ತು ಮಹಿಳೆಯರನ್ನು ಗಮನದಲ್ಲಿಟ್ಟುಕೊಂಡು ಅವರಿಗೆ ಸರ್ಕಾರದ ವಿವಿಧ ಯೋಜನೆಗಳು ಮತ್ತು ಕಾರ್ಯಕ್ರಮಗಳ ಬಗ್ಗೆ ತಿಳಿವಳಿಕೆ ಮೂಡಿಸಬೇಕು. ಅಂತಹವುಗಳನ್ನು ನ್ಯಾಯಯುತವಾಗಿ, ಸಮರ್ಪಕವಾಗಿ ಸದುಪಯೋಗಪಡಿಸಿಕೊಳ್ಳುವಂತೆ ಪ್ರೇರೇಪಿಸಬೇಕು.

೮. ಪಂಚಾಯತಿ ಆಡಳಿತದಲ್ಲಿ ಅಧಿಕಾರ ದುರುಪಯೋಗ, ಹಗರಣ, ಭ್ರಷ್ಟಾಚಾರ, ವಿಳಂಬತೆ, ಅವ್ಯವಹಾರ ಇತ್ಯಾದಿಗಳನ್ನು ನಿಯಂತ್ರಿಸಲು ಪ್ರತಿ ಹಂತಗಳ ಪಂಚಾಯತಿಯಲ್ಲಿ ಒಂದೊಂದು 'ತನಿಖಾ ಸಂಸ್ಥೆ'ಗಳನ್ನು ತೆರೆಯಬೇಕು. ಇದರಿಂದ ಮೀಸಲಾತಿಯ ದುರ್ಬಳಕೆ, ಕಳಪೆ ಕಾಮಗಾರಿಗಳಂತಹವುಗಳನ್ನು ಗುರುತಿಸಲು ಅಭಿವೃದ್ಧಿ ಕಾರ್ಯಗಳನ್ನು ಪಾರದರ್ಶಕವಾಗಿರುವಂತೆ ನೋಡಿಕೊಳ್ಳಲು ಸಾಧ್ಯವಾಗುತ್ತದೆ. ಇದಕ್ಕಾಗಿ ಸರ್ಕಾರ ಸೂಕ್ತ ಗಮನಹರಿಸುವಂತೆ ತರಬೇತಿಯನ್ನು ಸದಸ್ಯರುಗಳಿಗೆ ಆಯೋಜಿಸಬೇಕು.

೯. ಸ್ಥಳೀಯ ಸಂಸ್ಥೆಗಳ ಸದಸ್ಯರ ಕಾರ್ಯಚಟುವಟಿಕೆಗಳನ್ನು ಪರಿಣಾಮಕಾರಿಯನ್ನಾಗಿಸಲು ಅವರಿಗೆ ಶಿಸ್ತು, ಪ್ರಾಮಾಣಿಕತೆ, ದಕ್ಷತೆ, ನಿಷ್ಠೆಯ ಬಗ್ಗೆ ಮಾರ್ಗದರ್ಶನ ನೀಡುವಂತಹ ತರಬೇತಿ ಕೊಡಬೇಕು. ಒಂದು ವೇಳೆ ಪಂಚಾಯತಿಗಳ ತರಬೇತಿ ಹೊಂದಿದ ನಂತರವೂ ಅಧಿಕಾರಿಗಳು, ಸಿಬ್ಬಂದಿಗಳು ಮತ್ತು ಸದಸ್ಯರುಗಳು ಅಶಿಸ್ತು, ಅದಕ್ಷತೆ, ದುರ್ನಡತೆ, ಅಪ್ರಾಮಾಣಿಕತೆ, ಉದಾಸೀನತೆ, ತಾತ್ಸಾರ ಮನೋಭಾವನೆಯಿಂದ ವರ್ತಿಸಿದ ಮತ್ತು ಅವ್ಯವಹಾರ, ದುರುಪಯೋಗದಲ್ಲಿ ಭಾಗಿಯಾಗಿದ್ದರೆ ಅಂತಹವರನ್ನು ಸರ್ಕಾರ ಯಾವ ದಯೆ ದಾಕ್ಷಿಣ್ಯವಿಲ್ಲದೇ ಸೂಕ್ತ ಕ್ರಮ ಕೈಗೊಂಡು ಪಂಚಾಯತಿಯಿಂದ ತೆಗೆದುಹಾಕಬೇಕು.

೧೦. ಗ್ರಾಮದ ಅಭಿವೃದ್ಧಿಗೆ ಸಂಬಂಧಿಸಿದಂತೆ ಮೂರು ಹಂತಗಳ ತರಬೇತಿ ನೀಡುವ ಮುನ್ನ ಮತ್ತು ತರಬೇತಿ ಪಡೆದ ನಂತರದ ಅವರ ಕೆಲಸ ಕಾರ್ಯಗಳನ್ನು ಸಂಬಂಧಪಟ್ಟ ಆಯಾ ಕ್ಷೇತ್ರದ ಶಾಸಕರು ಪಕ್ಷಭೇದ ಮರೆತು ಆಗಿಂದಾಗ್ಗೆ ಪರಿಶೀಲಿಸಬೇಕು.

## ನೆರೆರಾಜ್ಯಗಳಲ್ಲಿನ ಉತ್ತಮ ಅಂಶಗಳು :

ಗ್ರಾಮೀಣ ಅಭಿವೃದ್ಧಿಯಲ್ಲಿ ಸ್ಥಳೀಯ ಸಂಸ್ಥೆಗಳ ಸದಸ್ಯರಿಗೆ ಅಗತ್ಯವಾದ ತರಬೇತಿಯನ್ನು ಕರ್ನಾಟಕವೂ ಸೇರಿದಂತೆ ನೆರೆ ರಾಜ್ಯಗಳಾದ ಕೇರಳ, ತಮಿಳುನಾಡು, ಆಂಧ್ರ ಪ್ರದೇಶ, ಮಹಾರಾಷ್ಟ್ರ, ರಾಜಸ್ಥಾನ, ಹರಿಯಾಣ ಇನ್ನಿತರ ರಾಜ್ಯಗಳಲ್ಲಿಯೂ ನೀಡಲಾಗುತ್ತಿದೆ. ೧೯೫೨ ಮತ್ತು ೧೯೫೯ರಲ್ಲಿ ಕ್ರಮವಾಗಿ ಜಾರಿಗೆ ಬಂದ ಸಾಮುದಾಯಿಕ ಅಭಿವೃದ್ಧಿ ಕಾರ್ಯಕ್ರಮಗಳು ಮತ್ತು ಪಂಚಾಯತ್ ರಾಜ್ ಸಂಸ್ಥೆಗಳ ಕಾರ್ಯಗಳನ್ನು ಅನುಷ್ಠಾನಗೊಳಿಸಲು ಪಂಚಾಯತಿಯ ಪ್ರತಿನಿಧಿಗಳಿಗೆ ತರಬೇತಿಯನ್ನು ನೀಡಬೇಕೆನ್ನುವ ಪರಿಕಲ್ಪನೆ ಬೆಳೆದುಬಂದಿತು. ಇದಕ್ಕೆ ಹಲವು ರಾಜ್ಯ ಸರ್ಕಾರಗಳು ನೇಮಿಸಿದ ವಿವಿಧ ಸಮಿತಿಗಳು ಕೂಡ ಸದಸ್ಯರಿಗೆ ತರಬೇತಿಯನ್ನು ನೀಡುವ ಬಗ್ಗೆ ಒತ್ತಿ ಹೇಳಿದ್ದವು. ಅವುಗಳಲ್ಲಿ ಆಂಧ್ರ ಪ್ರದೇಶದ ನರಸಿಂಹನ್ ಸಮಿತಿಯು ಗ್ರಾಮೀಣ ಮೂಲಭೂತ ಸೌಕರ್ಯ, ಯೋಜನೆಗಳ ಅವಶ್ಯಕತೆ, ಪಂಚಾಯತ್ ನೌಕರರು ಮತ್ತು ನೌಕರೇತರರಿಗೆ ತರಬೇತಿಯನ್ನು ನೀಡಬೇಕೆಂದು ಹೇಳಿತ್ತು. ಮಹಾರಾಷ್ಟ್ರದ ಬಂಗಿರ್‌ವಾರ್ ಸಮಿತಿಯು ಪಂಚಾಯತ್ ರಾಜ್ ಸಂಸ್ಥೆಗಳ ನಿಯಮಗಳು, ವ್ಯವಸ್ಥೆ, ಸಮಸ್ಯೆಗಳು ಅಭಿವೃದ್ಧಿಯ ಅವಶ್ಯಕತೆಗಳ ಬಗ್ಗೆ ತಿಳಿಸಿತ್ತು. ರಾಜಾಸ್ಥಾನದಲ್ಲಿ ಸಾದಿಕ್ ಅಲಿ ಮತ್ತು ಗಿರಿಧರ್‌ಲಾಲ್ ವ್ಯಾಸ್ ಸಮಿತಿಯು ಪಂಚಾಯತ್ ರಾಜ್ ಕ್ಷೇತ್ರಗಳಲ್ಲಿ ಮಾನವೀಯ ಸಂಬಂಧಗಳ ಹಾಗೂ ಸರ್ಕಾರಿ ಮತ್ತು ಸರ್ಕಾರೇತರರಿಬ್ಬರಿಗೂ ತರಬೇತಿ ನೀಡುವ ಬಗ್ಗೆ ಹಾಗೂ ಗುಜರಾತ್‌ನಲ್ಲಿ ಜೀನ ಹಾವಿದಾರ್ಜಿ ಸಮಿತಿಯು 'ತರಬೇತಿಯು ಪಂಚಾಯತ್ ರಾಜ್ ಯಶಸ್ಸಿಗೆ ಒಂದು ಪ್ರಮುಖ ಅಳತೆಗೋಲಾಗಿದೆ' ಎಂದು ಹೇಳಿದ್ದವು. ಇವೆಲ್ಲಾ ರಾಜ್ಯ ಸರ್ಕಾರಗಳು ಪಂಚಾಯತ್‌ನ ವಿವಿಧ ಹಂತಗಳ ಹಲವಾರು ಅಭಿವೃದ್ಧಿ ಯೋಜನೆಗಳನ್ನು ಅನುಷ್ಟಾನಗೊಳಿಸುವ ಮತ್ತು ಪ್ರತಿನಿಧಿಗಳ ಕಾರ್ಯಗಳ ಬಗ್ಗೆ ತರಬೇತಿಯನ್ನು ನೀಡುವ ಬಗ್ಗೆ ಹೇಳಿವೆ.

## ಕೇರಳ ರಾಜ್ಯದಲ್ಲಿ :

ಅಧಿಕಾರ ವಿಕೇಂದ್ರೀಕರಣದ ಹಿನ್ನೆಲೆಯಲ್ಲಿ ಕೇರಳ ರಾಜ್ಯ ಸರ್ಕಾರವು ಸ್ಥಳೀಯ ಆಡಳಿತ ಸಂಸ್ಥೆಗಳಿಗೆ ಅಧಿಕಾರ ನೀಡಲು ಹಾಗೂ ಯೋಜನೆಗಳನ್ನು ಅರ್ಥಪೂರ್ಣ ಮತ್ತು ಪಾರದರ್ಶಕವಾಗಿರುವಂತೆ ರಚಿಸುವಲ್ಲಿ ಹಲವಾರು ಕ್ಷೇತ್ರಗಳಲ್ಲಿ ಮುಂಚೂಣಿಯಲ್ಲಿದೆ. ಈ ರಾಜ್ಯದಲ್ಲಿ ಶಿಕ್ಷಣ, ಆರೋಗ್ಯ, ಭೂಸುಧಾರಣೆ, ಸಾರ್ವಜನಿಕ ಪಡಿತರ ವಿತರಣೆಯಂತಹ ಅನೇಕ ಮೂಲಭೂತ ಅಂಶಗಳಿಗೆ ಪ್ರಾಮುಖ್ಯತೆ ನೀಡಿ ಅಭಿವೃದ್ಧಿಗೆ ಹೊಸ ಅರ್ಥವನ್ನು ಕೊಡುವಲ್ಲಿ ವಿವಿಧ ಪ್ರಯೋಗ ಮತ್ತು ಪ್ರಯತ್ನಗಳ ಮೂಲಕ ಮಾದರಿ ಹೆಜ್ಜೆಗಳನ್ನಿಡುತ್ತಿದೆ. ಅಂತಹವುಗಳಲ್ಲಿನ ಉತ್ತಮ ಅಂಶಗಳೆಂದರೆ-

ಜನತೆಯನ್ನು ಸಕ್ರಿಯವಾಗಿ ಪಾಲ್ಗೊಳ್ಳುವಂತೆ ಮಾಡುವ ದೃಷ್ಟಿಯಿಂದ 'ಜನತೆಯ ಪ್ರಚಾರಾಂದೋಲನ' ಎಂಬ ಹೆಸರಿನ ಜನಾಂದೋಲನಕ್ಕೆ ಚಾಲನೆ ನೀಡಿದೆ. ಇದನ್ನು ಪರಿಣಾಮಕಾರಿಯಾಗಿ ಆರು ವಿವಿಧ ಹಂತಗಳಲ್ಲಿನ ಮೂಲಕ ಮಾರ್ಗಸೂಚಿಗಳನ್ನು ಅಳವಡಿಸಿಕೊಂಡು ಹಲವಾರು ರೀತಿಯ ಅಭಿವೃದ್ಧಿಗ ವಿಶಿಷ್ಟವಾದ ತರಬೇತಿಯನ್ನು ನೀಡುವ ಮೂಲಕ ಕಾರ್ಯಾನುಷ್ಠಾನ ಗೊಳಿಸಲಾಗುತ್ತಿಗೆ.

ವಿಕೇಂದ್ರೀಕರಣದೆಡೆಗೆ ದೃಷ್ಟಿ ಹರಿಸಿ ಅದರ ತತ್ವ ಮತ್ತು ಲಕ್ಷಣಗಳಿಗೆ ಹೆಚ್ಚು ಮಹತ್ವ ನೀಡಿದೆ. ಅದರಲ್ಲಿ ಜನತೆಯ ಪರಿಣಾಮಕಾರಿ ಪಾಲ್ಗೊಳ್ಳುವಿಕೆ, ಸ್ವಾಯತ್ತತೆ, ಅಧೀನತೆ, ಪಾತ್ರಗಳ ಸ್ಪಷ್ಟತೆ, ಪೂರೈಕೆ, ಏಕರೂಪತೆ, ಹೊಣೆಗಾರಿಕೆ, ಪಾರದರ್ಶಕತೆಯಂತಹ ಅಂಶಗಳಿಗೆ ಪ್ರಾಮುಖ್ಯತೆಯನ್ನು ನೀಡಿದೆ.

ಅಭಿವೃದ್ಧಿಯ ಕುರಿತು ಸ್ಥಳೀಯ ಮಟ್ಟದಲ್ಲಿ ಯೋಜನೆ ಮತ್ತು ವರದಿಯನ್ನು ರೂಪಿಸುವಲ್ಲಿ ಚುನಾಯಿತ ಸದಸ್ಯರು, ಅಧಿಕಾರಿಗಳು, ಅಧಿಕಾರೇತರ ತಜ್ಞರು, ಸ್ವಯಂ ಸೇವಕರು ಮತ್ತು ಜನರು ಗ್ರಾಮಸಭೆಯಲ್ಲಿ ಭಾಗವಹಿಸುವ ಮೂಲಕ ಸಭೆ ನಡೆಯುತ್ತದೆ.

## ಹರಿಯಾಣ ರಾಜ್ಯದಲ್ಲಿ :

ಹರಿಯಾಣ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯಿಂದ (ಹೆಚ್.ಐ.ಆರ್.ಡಿ.) ೧೯೯೭-೯೮ ರಿಂದ ೨೦೦೧-೦೨ ರವರೆಗೆ ೧೮೩೫ ಅಧಿಕಾರಿಗಳು ಮತ್ತು ೧,೨೩೬ ಅಧಿಕಾರೇತರರು ಸೇರಿ ಒಟ್ಟು ೨,೬೭೧ ಅಧಿಕಾರ ವರ್ಗದವರಿಗೆ ತರಬೇತಿಯನ್ನು ನೀಡಲಾಗಿದೆ. ಜೊತೆಗೆ ಹರಿಯಾಣ ರಾಜ್ಯ ಸಮುದಾಯ ಅಭಿವೃದ್ಧಿ ತರಬೇತಿ ಕೇಂದ್ರ (ಎಸ್.ಸಿ.ಟಿ.ಡಿ.ಸಿ.) ದ ವತಿಯಿಂದ ೨೦೦೧-೦೨ರಲ್ಲಿ ಸಮುದಾಯಕ ಅಭಿವೃದ್ಧಿಗ್ಗಳಿಗೆ ಸಂಬಂಧಿಸಿದಂತೆ ೩೦ ದಿನದ ತರಬೇತಿಯನ್ನು ಸರ್ಕಾರಿ ಮತ್ತು ಸರ್ಕಾರೇತರ ಸಂಸ್ಥೆಗಳಿಂದ ವಿವಿಧ ಪುನರ್ಮನನ ಕೋರ್ಸುಗಳು, ಕಾರ್ಯಾಗಾರಗಳನ್ನು ನಡೆಸಿತ್ತು. ಇದರಲ್ಲಿ ಪಂಚಾಯತಿ ಕಾರ್ಯದರ್ಶಿಗಳು, ಲೆಕ್ಕಾಧಿಕಾರಿಗಳು, ಗ್ರಾಮಪಂಚಾಯತಿ ಸದಸ್ಯರು, ಲೆಕ್ಕ ಪರಿಶೋಧಕರು, ಗುಮಾಸ್ತರು, ಕಿರಿಯ ಇಂಜಿನಿಯರ್ ಸೇರಿದಂತೆ ೩ ದಿನದ ಕಾರ್ಯಕ್ರಮಗಳನ್ನು ಗ್ರಾಮ ನೈರ್ಮಲ್ಯದ ಮೇಲೆ ಆಯೋಜಿಸಲಾಗಿತ್ತು. ಇಂತಹ ಸಂಸ್ಥೆಗಳಿಂದ ಸಮುದಾಯ ಅಭಿವೃದ್ಧಿ ಕಾರ್ಯಕ್ರಮಗಳ ಮೇಲಿನ ತರಬೇತಿ, ಪಂಚಾಯತ್ ರಾಜ್ ಕಾರ್ಯ ವೈಖರಿ, ಸಣ್ಣ ನೀರಾವರಿ, ಸಾಮಾಜಿಕ ಶಿಕ್ಷಣ, ನೈರ್ಮಲ್ಯತೆ, ಗ್ರಾಮೀಣ ಕೈಗಾರಿಕೆ, ಪಶುಸಂಗೋಪನೆ, ಕೃಷಿ, ಕುಟುಂಬ ಯೋಜನೆ, ಸ್ವರ್ಣಜಯಂತಿ ಗ್ರಾಮ ಸ್ವರಾಜ್‌ಗಾರ್ ಯೋಜನೆ (SGSY), ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (SGRY), ಟ್ರೈಸಂ (TRYSEM)ಗೆ ಸಂಬಂಧಿಸಿದಂತೆ ತರಬೇತಿಯನ್ನು ಸುಮಾರು ೯೪ ದಿನಗಳಲ್ಲಿ ೩೮ ವಿವಿಧ ರೀತಿಯ ಕೋರ್ಸುಗಳಿಂದ ನೀಡಲಾಯಿತು. ಇದರಲ್ಲಿ ಒಟ್ಟು ೪,೩೫೨ ತರಬೇತಿದಾರರು ಭಾಗವಹಿಸಿದ್ದರು. ಈ ತರಬೇತಿಗೆ ರಾಜ್ಯ ಸರ್ಕಾರದಿಂದ ರೂ. ೪೩,೮೦,೦೦೦ ಮತ್ತು ಕೇಂದ್ರದಿಂದ ೪೦,೬೬,೭೫೩ ರೂ. ಗಳನ್ನು ಖರ್ಚು ಮಾಡಲಾಗಿತ್ತು.

ನೆರೆ ರಾಜ್ಯಗಳಾದ ಕೇರಳ, ಆಂಧ್ರ ಪ್ರದೇಶ, ಮಹಾರಾಷ್ಟ್ರ, ತಮಿಳುನಾಡು ಮತ್ತು ಇನ್ನಿತರೇ ರಾಜ್ಯಗಳಲ್ಲಿನ ಗ್ರಾಮೀಣ ಅಭಿವೃದ್ಧಿಗೆ ಸ್ಥಳೀಯ ಸಂಸ್ಥೆಗಳ ಸದಸ್ಯರಿಗೆ ನೀಡುವ ತರಬೇತಿಯನ್ನು ಹೆಚ್ಚು ಕಡಿಮೆ ಕರ್ನಾಟಕದಲ್ಲಿಯೂ ಮೂರು ಹಂತದ ಪಂಚಾಯತ್ ಸದಸ್ಯರಿಗೆ ನೀಡಲಾಗುತ್ತಿದ್ದರೂ ಕೂಡ ಇಲ್ಲಿನ ಗ್ರಾಮೀಣ ಅಭಿವೃದ್ಧಿಯ ಅನುಷ್ಠಾನವು ಪರಿಣಾಮಕಾರಿಯಾಗಿ, ಯಶಸ್ವಿಯಾಗಿ, ನಿರೀಕ್ಷಿತ ಗರಿಷ್ಠ ಪ್ರಮಾಣದ ಮಟ್ಟವನ್ನು ತಲುಪುವಲ್ಲಿ ಇನ್ನೂ ಹಲವಾರು ಅಡಚಣೆಗಳು ಕಂಡುಬರುತ್ತಿವೆ.

## ಉಪಸಂಹಾರ :

ಗ್ರಾಮಗಳು ದೇಶದ ಬೆನ್ನಲುಬಿದ್ದಂತೆ. ಗ್ರಾಮಗಳ ಅಭಿವೃದ್ಧಿಯಿಂದ ಮಾತ್ರ ದೇಶದ ಅಭಿವೃದ್ಧಿ ಸಾಧ್ಯವಿದೆ. ಈ ನಿಟ್ಟಿನಲ್ಲಿ ಪಂಚಾಯತ್ ರಾಜ್ ಸಂಸ್ಥೆಯ ೩ ಹಂತಗಳ ಪ್ರತಿನಿಧಿಗಳು ತಮ್ಮ ಅಧಿಕಾರ ಮತ್ತು ಕರ್ತವ್ಯಗಳನ್ನು ಗಮನದಲ್ಲಿಟ್ಟುಕೊಂಡು ಕಾರ್ಯೋನ್ಮುಖರಾಗಬೇಕು. ಗ್ರಾಮಗಳಲ್ಲಿ ತಾಂಡವವಾಡುತ್ತಿರುವ ಅನಕ್ಷರತೆ, ಅಜ್ಞಾನ, ಬಡತನ, ಮೂಢನಂಬಿಕೆಗಳನ್ನು ಹೋಗಲಾಡಿಸುವಲ್ಲಿ ಹೆಚ್ಚು ಪಾತ್ರವಹಿಸಬೇಕು. ಜನಪ್ರತಿನಿಧಿಗಳು ಸರ್ಕಾರ ಹಮ್ಮಿಕೊಂಡಿರುವ ಯೋಜನೆಗಳು ಮತ್ತು ಕಾರ್ಯಕ್ರಮಗಳ ಬಗ್ಗೆ ಪೂರ್ಣ ಮಾಹಿತಿ ಪಡೆಯುವುದರ ಜೊತೆಗೆ ಅವುಗಳ ಯಶಸ್ವಿ ಅನುಷ್ಠಾನಕ್ಕೆ ಒತ್ತು ನೀಡಬೇಕು. ಬೇರೆ ಚುನಾಯಿತ ಪ್ರತಿನಿಧಿಗಳು ಎಲ್ಲಾ ಹಂತಗಳಲ್ಲಿಯೂ ನಿಷ್ಪಕ್ಷಪಾತವಾಗಿರಬೇಕು, ಮುಕ್ತವಾಗಿರಬೇಕು ಮತ್ತು ತಮಗಿರುವ ಅಧಿಕಾರವನ್ನು ಚಲಾಯಿಸುವ ಸಾಮರ್ಥ್ಯವಿರಬೇಕು.

ಜನಪ್ರತಿನಿಧಿಗಳಲ್ಲಿ ಸಾಮಾಜಿಕ ಕಂದಾಚಾರಗಳ ಬಗ್ಗೆ ಜಾಗೃತಿ ಮೂಡಿಸಬೇಕು, ಸದಸ್ಯರು ಪಂಚಾಯತಿ ಕಾರ್ಯಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುವುದಕ್ಕೆ ಪ್ರೋತ್ಸಾಹಿಸುವುದು, ಪಂಚಾಯತಿಗಳ ಆರ್ಥಿಕ ಸುಭದ್ರತೆಗೆ ಸೂಕ್ತ ಕ್ರಮಗಳನ್ನು ಕೈಗೊಳ್ಳುವುದು, ಪಂಚಾಯತಿಗಳಲ್ಲಿ ಗುಂಪು ರಾಜಕಾರಣವನ್ನು ರದ್ದುಗೊಳಿಸುವುದು, ನಾನಾ ರೀತಿಯ ಹೊಸ ಹೊಸ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಮೂಲಕ ಗ್ರಾಮೀಣ ಅಭಿವೃದ್ಧಿಗೆ ಚಾಲನೆ ನೀಡಬೇಕಾದುದು ಅತ್ಯಗತ್ಯವಾಗಿದೆ. ಈ ಎಲ್ಲಾ ಕಾರ್ಯಕ್ರಮಗಳಿಗೆ ಸರ್ವ ರಾಜಕೀಯ ಪಕ್ಷಗಳ ಬದ್ಧತೆ ಮತ್ತು ಸಹಕಾರ, ಜನತೆ ಹಾಗೂ ಸರ್ಕಾರೇತರ ಸಂಘ ಸಂಸ್ಥೆಗಳ ಬೆಂಬಲ ಹಾಗೂ ಪಂಚಾಯತಿ ಪದಾಧಿಕಾರಿಗಳಲ್ಲಿ ಕೌಶಲ್ಯಗಳ ವೃದ್ಧಿ ಅಗತ್ಯವಾಗಿವೆ. ಗ್ರಾಮಸಭೆಯಲ್ಲಿ ನಿಗದಿತವಾದ ಬಡ ಫಲಾನುಭವಿಗಳನ್ನು ಗುರುತಿಸಲು ಒಂದು ವೇದಿಕೆಯಾಗಬೇಕು. ಗ್ರಾಮಸಭಾ ಸಭೆಗಳಲ್ಲಿ ಪಂಚಾಯತಿ ಸದಸ್ಯರುಗಳ ಹಾಜರಾತಿ ಹೆಚ್ಚಿಸಬೇಕು. ಇದರಲ್ಲಿ ಅರ್ಥಪೂರ್ಣ ಚರ್ಚೆ ನಡೆಯಲು ಎಲ್ಲಾ ಇಲಾಖೆಗಳ ಎಲ್ಲಾ ಅಧಿಕಾರಿಗಳು ಕಡ್ಡಾಯವಾಗಿ ಬರಲೇಬೇಕು. ಗ್ರಾಮದ ಅಭಿವೃದ್ಧಿಗೆ ಚಟುವಟಿಕೆಗಳನ್ನು ಕೈಗೊಳ್ಳಲು ಪಂಚಾಯತಿಯಲ್ಲಿ ಎಲ್ಲರೂ ಚರ್ಚಿಸಿ ನಿರ್ಧಾರಗಳನ್ನು ಕೈಗೊಳ್ಳಬೇಕು. ಇದರಿಂದ ಗ್ರಾಮಸಭೆಗಳನ್ನು ಇನ್ನಷ್ಟು ಬಲಪಡಿಸಬೇಕು.

ಸ್ಥಳೀಯ ಸಂಸ್ಥೆಗಳ ಸದಸ್ಯರು ಸ್ವ-ಸಹಾಯ ಗುಂಪುಗಳ ಮೂಲಕ ಹಲವಾರು ಕಾರ್ಯಕ್ರಮಗಳನ್ನು ಗ್ರಾಮೀಣ ಅಭಿವೃದ್ಧಿಯನ್ನು ಸುಧಾರಿಸಲು ಹಮ್ಮಿಕೊಳ್ಳಬೇಕು. ಗ್ರಾಮದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಗುರುತಿಸಿ, ಅವರ ಸಮಸ್ಯೆಗಳನ್ನು ನೀಗಿಸುವಲ್ಲಿ ಸತತ ಪ್ರಯತ್ನ ಮಾಡಬೇಕು. ಈ ನಿಟ್ಟಿನಲ್ಲಿ ಸರ್ಕಾರ, ಸಂಶೋಧನಾ ಸಂಸ್ಥೆಗಳು ಹಾಗೂ ಸ್ವಯಂ ಸೇವಾ ಸಂಸ್ಥೆಗಳು ಸ್ಥಳೀಯ ಸಂಸ್ಥೆಗಳ ಸದಸ್ಯರಿಗೆ ತರಬೇತಿ ನೀಡುವ ಮತ್ತು ಜಾಗೃತಿ ಮೂಡಿಸುವ ಹಾಗೂ ಕೌಶಲ್ಯಗಳನ್ನು ಅಭಿವೃದ್ಧಿ ಪಡಿಸುವ ಮೂಲಕ ಗ್ರಾಮದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಬೇಕು. ನೆರೆರಾಜ್ಯಗಳ ಸ್ಥಳೀಯ ಸಂಸ್ಥೆಗಳು ಯಾವ ರೀತಿ ನಡೆಯುತ್ತಿವೆ ಎಂಬುದನ್ನು ತಿಳಿಯಲು ಸದಸ್ಯರಿಗೆ ವಿನಿಮಯ ಕಾರ್ಯಕ್ರಮಗಳ ಮೂಲಕ ಸಂಪರ್ಕ ಪ್ರವಾಸಗಳನ್ನು ಹಮ್ಮಿಕೊಳ್ಳಬೇಕು. ಪಂಚಾಯತಿಯ ಸದಸ್ಯರು ಆಯಾ ಪಂಚಾಯತಿ ವ್ಯಾಪ್ತಿಯಲ್ಲಿರುವ ಸದಸ್ಯರುಗಳನ್ನು ಹುಡುಕಿ ಪರಸ್ಪರ ವಿಚಾರ ವಿನಿಮಯ ಮಾಡಿಕೊಂಡು ಅವುಗಳನ್ನು ಇತ್ಯರ್ಥಪಡಿಸುವುದರ ಜೊತೆಗೆ ಗ್ರಾಮದ ಅಭಿವೃದ್ಧಿಯ ಕಾರ್ಯನಿರ್ವಹಣೆಯನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸಬೇಕು. ಇದಕ್ಕೆ ಸರ್ಕಾರವು ವಿವಿಧ ಯೋಜನೆಗಳನ್ನು ಪ್ರಕಟಿಸಿ ಪಂಚಾಯತಿ ಎಲ್ಲಾ ಹಂತಗಳ ಚುನಾಯಿತ ಪ್ರತಿನಿಧಿಗಳಿಗೆ ಹಂಚಬೇಕು. ಜೊತೆಗೆ ಇವುಗಳು ಸ್ವಾವಲಂಬಿ ಸಂಸ್ಥೆಗಳಾಗಿ ಕಾರ್ಯನಿರ್ವಹಿಸಲು ಹೆಚ್ಚು ಹಣವನ್ನು ನೀಡಬೇಕು. ಅಲ್ಲದೆ ಪಂಚಾಯತಿ ಸದಸ್ಯರು ಮತ್ತು ಅಧಿಕಾರಿಗಳ ನಡುವೆ ಸೂಕ್ತ ಸಮನ್ವಯ ಹೊಂದಾಣಿಕೆ ಇರಬೇಕು. ಸ್ಥಳೀಯ ಆಡಳಿತದ ಮೂಲಕವಾಗಿ ಗ್ರಾಮೀಣಾಭಿವೃದ್ಧಿಯನ್ನು ಸಾಧಿಸುವ ಸಲುವಾಗಿ ಪ್ರತಿನಿಧಿಗಳು ಧನಾತ್ಮಕ ದೃಷ್ಟಿಕೋನವನ್ನು ಹೊಂದಬೇಕು. ಯಾವುದೇ ಕಾರಣಕ್ಕೂ ಚುನಾಯಿತ ಪ್ರತಿನಿಧಿಗಳು ತಮ್ಮ ಜವಾಬ್ದಾರಿ ಮತ್ತು ಹೊಣೆಗಾರಿಕೆಗಳಿಂದ ನುಸುಳಿಕೊಳ್ಳಬಾರದು. ಈಗಿರುವ ಪರಿಸ್ಥಿತಿಗಳಲ್ಲಿಯೇ ತಮ್ಮ ಪದವಿ ಮತ್ತು ಸಾಮರ್ಥ್ಯಗಳಿಂದ ಜನರ ಸಮಸ್ಯೆಗಳಿಗೆ ಸ್ಪಂದಿಸಬೇಕು.

ಪಂಚಾಯತ್ ರಾಜ್ ವ್ಯವಸ್ಥೆಯು ಸ್ಥಳೀಯ ಸರ್ಕಾರದ ಒಂದು ವ್ಯವಸ್ಥೆಯಾಗಿದ್ದು ಗ್ರಾಮೀಣಾಭಿವೃದ್ಧಿ ವ್ಯವಸ್ಥೆಯಲ್ಲಿ ಮಹತ್ತರವಾದ ಪಾತ್ರವನ್ನು ವಹಿಸುತ್ತದೆ. ಇದರಿಂದ ಪಂಚಾಯತಿಗಳಲ್ಲಿ ಕೆಳಹಂತದಿಂದ ಮೇಲಿನ ಹಂತದವರೆಗೂ ದಕ್ಷತೆ ಮತ್ತು ಸಾಮರ್ಥ್ಯಗಳು ವೃದ್ಧಿಸುತ್ತವೆ. ನಾಯಕತ್ವದ ಬೆಳವಣಿಗೆಯನ್ನು ಮೂಡುತ್ತದೆ. ಜನರಲ್ಲಿ ರಾಜಕೀಯ ಪ್ರಜ್ಞೆಯನ್ನು ಬೆಳೆಯುತ್ತದೆ. ಗ್ರಾಮ ಪಂಚಾಯತಿಯಿಂದ ಲೋಕಸಭೆಯವರೆಗೂ ಒಂದು ಸಂಬಂಧದ ಸರಣಿ ಸೂಚಿತವಾಗುತ್ತದೆ. ಇದರಿಂದ ವಿವಿಧ ಹಂತದ ನಾಯಕರಿಗೆ ತರಬೇತಿಯನ್ನು ನೀಡಿದಂತಾಗುತ್ತದೆ. ತನ್ಮೂಲಕ ಪ್ರಜಾಪ್ರಭುತ್ವದ ಯಶಸ್ಸಿಗೆ ಅವಕಾಶ ಕಲ್ಪಿಸಿಕೊಡದಂತಾಗುತ್ತದೆ. ಸ್ಥಳೀಯ ವ್ಯಕ್ತಿಗಳಿಗೆ ಅಧಿಕಾರವನ್ನು ಕೊಡುವ ಮೂಲಕ ರಾಜ್ಯ ಸರ್ಕಾರದ ಕಾರ್ಯಭಾರವೂ ಕಡಿಮೆಯಾಗುತ್ತದೆ. ಒಟ್ಟಾರೆ ಪಂಚಾಯತ್ ರಾಜ್ ವ್ಯವಸ್ಥೆಯು ದೇಶವನ್ನು 'ಕಲ್ಯಾಣ ರಾಷ್ಟ್ರ' ಮಾಡುವ ಪರಮಗುರಿಯನ್ನು ಹೊಂದಿದೆ.

●




# ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಗ್ರಾಮಸಭೆಗಳು

ಎಲ್. ಬಿ. ಮನ್ನೀಕಟ್ಟಿ

ಪಂಚಾಯತ್ ರಾಜ್ ಸಂಸ್ಥೆಗಳಿಗೆ ಅಧಿಕಾರಗಳನ್ನು ವಹಿಸಿಕೊಡುವಲ್ಲಿ, ಹಾಗೂ ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯ ಗುರಿಗಳ ಸಾಧನೆಗಾಗಿ ಯೋಜನೆಗಳನ್ನು ರೂಪಿಸಿ ಅನುಷ್ಠಾನ ಗೊಳಿಸುವಲ್ಲಿ, ಮತ್ತು ಯೋಜನೆಗಳ ಮೌಲ್ಯಮಾಪನ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಅವುಗಳನ್ನು ಸಶಕ್ತವಾಗುವಂತೆ ಮಾಡುವಲ್ಲಿ ಹೆಚ್ಚು ಪರಿಶ್ರಮ ವಹಿಸಿ ಯಶಸ್ವಿಯಾದ ಕೆಲವೇ ರಾಜ್ಯಗಳಲ್ಲಿ ಕರ್ನಾಟಕವೂ ಒಂದು. ಅಧಿಕಾರ ವಿಕೇಂದ್ರೀಕರಣದ ಇತಿಹಾಸದಲ್ಲಿ ಒಂದು ಮೈಲಿಗಲ್ಲು ಎಂದೇ ಚಿರಪರಿಚಿತವಾದ, ಸಂಸತ್ತು ಜಾರಿಗೆ ತಂದ, ಸಂವಿಧಾನದ ೭೩ನೇ ತಿದ್ದುಪಡಿ ಪರಿಣಾಮವಾಗಿ ಕರ್ನಾಟಕ ವಿಧಾನ ಮಂಡಲವು ೧೯೮೩ರ ಕರ್ನಾಟಕ ಜಿಲ್ಲಾ ಪರಿಷತ್ತುಗಳು, ತಾಲ್ಲೂಕು ಪಂಚಾಯತಿಗಳು, ಮಂಡಲ ಪಂಚಾಯತಿಗಳು ಮತ್ತು ನ್ಯಾಯ ಪಂಚಾಯತಿಗಳ ಕಾಯಿದೆ ಬದಲು ೧೯೯೩ರ ಕರ್ನಾಟಕ ಪಂಚಾಯತ್ ರಾಜ್ ಕಾಯಿದೆಯನ್ನು ೧೯೯೩ರ ಮೇ ೧೦ರಿಂದ ಜಾರಿಗೆ ತಂದಿತು. ಕಾರ್ಯಕ್ರಮಗಳಲ್ಲಿ ಜನರನ್ನು ಸಕ್ರಿಯವಾಗಿ ತೊಡಗಿಸುವುದು ಮತ್ತು ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದೇ ಕಾಯಿದೆಯ ಉದ್ದೇಶ.

**ಪ್ರತಿ ವರ್ಷ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನ ಮಾಡುವುದು ಹಾಗೂ ಫಲಾನುಭವಿಗಳನ್ನು ಗುರುತಿಸಿ ಅವರಿಗೆ ಸರ್ಕಾರದ ಕಾರ್ಯ ಕ್ರಮಗಳನ್ನು ಮುಟ್ಟಿಸುವುದು ಗ್ರಾಮಸಭೆಯ ಮಹತ್ವದ ಜವಾಬ್ದಾರಿ. ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಗ್ರಾಮ ಸಭೆಯೇ ಮೂಲ.**

## ವಾರ್ಡ್ ಸಭೆಗಳ ಸ್ಥಾಪನೆ :

ರಾಜ್ಯದಲ್ಲಿ, ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಗ್ರಾಮಸಭೆಯೇ ತಳಹದಿ. ಗ್ರಾಮಸಭೆಯ ರಚನೆ, ಕಾರ್ಯಗಳು, ಅಧಿಕಾರಗಳು ಮತ್ತು ವರ್ಷದಲ್ಲಿ ನಡೆಸಬೇಕಾದ ಸಭೆಗಳ ಸಂಖ್ಯೆಯನ್ನು ೧೯೯೩ರ ಕಾಯಿದೆಯಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ. ಈ ಕಾಯಿದೆಯ ಎರಡನೇ ಪ್ರಕರಣದ ೧೬ನೇ ಉಪವಿಧಿಯ ಪ್ರಕಾರ ಗ್ರಾಮ ಪಂಚಾಯತಿ ಪ್ರದೇಶದೊಳಗೆ ಇರುವ ಗ್ರಾಮದ ಮತದಾರರ ಪಟ್ಟಿಯಲ್ಲಿ ದಾಖಲಾಗಿರುವ ವ್ಯಕ್ತಿಗಳ ಸಂಸ್ಥೆಯೇ ಗ್ರಾಮಸಭೆ. ವಾರ್ಷಿಕ ಲೆಕ್ಕಪತ್ರಗಳ ವಿವರಣೆಯನ್ನು, ಆಡಳಿತ ವರದಿಯನ್ನು, ಉತ್ತರಗಳ ಸಹಿತ ಹಿಂದಿನ ಲೆಕ್ಕ ಪರಿಶೋಧನೆ ವರದಿಯನ್ನು ಮತ್ತು ಹಿಂದಿನ ಮತ್ತು ಪ್ರಸ್ತುತ ವರ್ಷದ ಗ್ರಾಮ ಪಂಚಾಯತಿಯ ಅಭಿವೃದ್ಧಿ ಕಾರ್ಯಕ್ರಮಗಳ ವರದಿಯನ್ನು ಪರಿಶೀಲಿಸುವುದು ಮತ್ತು ಗ್ರಾಮ ಪಂಚಾಯತಿಗೆ ಶಿಫಾರಸು ಮತ್ತು ಸಲಹೆಗಳನ್ನು ಮಾಡುವುದು ಗ್ರಾಮಸಭೆಯ ಕಾರ್ಯ. ಅಭಿವೃದ್ಧಿ ಕಾರ್ಯಕ್ರಮಗಳ ಫಲಾನುಭವಿಗಳನ್ನು ಗುರುತಿಸುವ ಜವಾಬ್ದಾರಿಯನ್ನು ಗ್ರಾಮಸಭೆಗೆ ವಹಿಸಿಕೊಟ್ಟಿರುವುದು ಹೆಚ್ಚು ಮಹತ್ವದ್ದು ಆಗಿತ್ತು.

ಗ್ರಾಮ ಪಂಚಾಯತಿ ಮಟ್ಟದಲ್ಲೇ ಅಲ್ಲದೆ, ಗ್ರಾಮ ಪಂಚಾಯತಿ ಮತಕ್ಷೇತ್ರದಲ್ಲಿ, ಎಂದರೆ ಕ್ಷೇತ್ರ (ವಾರ್ಡ್) ಮಟ್ಟದಲ್ಲಿ ಅಥವಾ ಪ್ರಜಾ ಸಮೂಹದ ಪ್ರದೇಶದಲ್ಲಿ ನಡೆಸುವುದು ಅವಶ್ಯಕ; ಯೋಜನೆ ಮತ್ತು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ವಾರ್ಡ್ ಮತ್ತು ಗ್ರಾಮಸಭಾಗಳು ಹೆಚ್ಚು ಹೆಚ್ಚಾಗಿ ಪಾಲ್ಗೊಳ್ಳುವಂತೆ ಮಾಡಲು, ಅವುಗಳಿಗೆ ಇನ್ನೂ ಹೆಚ್ಚು ಅಧಿಕಾರ ಮತ್ತು ಕಾರ್ಯಗಳನ್ನು ವಹಿಸಿಕೊಡುವುದು ಅತ್ಯಂತ ಸೂಕ್ತ ಎಂದು ಭಾವಿಸಲಾಯಿತು. ಕೊನೆಯ ಹಂತದಲ್ಲಿಯ ಸ್ಥಳೀಯ ಜನತೆಯ ಕುಂದುಕೊರತೆಗಳಿಗೆ ಆದ್ಯತೆ ಕೊಡುವ ಉದ್ದೇಶದಿಂದಲೂ ವಾರ್ಡ್‌ಸಭೆಗಳನ್ನು ಸ್ಥಾಪಿಸಲು ನಿರ್ಧರಿಸಲಾಯಿತು. ಆದ್ದರಿಂದ ೨೦೦೨ರ ಕರ್ನಾಟಕ ಪಂಚಾಯತ್ ರಾಜ್ (ತಿದ್ದುಪಡಿ) ಕಾಯಿದೆಯನ್ನು (೨೦೦೩ರ ಕರ್ನಾಟಕ ಕಾಯಿದೆ ಸಂಖ್ಯೆ ೩೭ನ್ನು) ಜಾರಿಗೆ ತಂದು, ೨೦೦೩ ಸೆಪ್ಟೆಂಬರ್ ೩ ಕರ್ನಾಟಕ ಗೆಜೆಟ್ಟಿನ ವಿಶೇಷ ಸಂಚಿಕೆಯಲ್ಲಿ ಪ್ರಕಟಿಸಲಾಯಿತು. ಈ ತಿದ್ದುಪಡಿ ಕಾಯಿದೆಯಲ್ಲಿ, ವಾರ್ಡ್‌ಸಭೆ ಮತ್ತು ಗ್ರಾಮಸಭೆಗಳಿಗೆ ವ್ಯಾಪಕವಾದ ಅಧಿಕಾರ ಮತ್ತು ಕಾರ್ಯಗಳನ್ನು ವಹಿಸಿಕೊಟ್ಟಿರುವುದನ್ನು ವಿವರಿಸಲಾಗಿದೆ.

## ಗ್ರಾಮ ಪಂಚಾಯತಿ ನಿರ್ಣಯಗಳ ನ್ಯಾಯಸಮ್ಮತತೆಯನ್ನು ವಿಚಾರಿಸುವ ಹಕ್ಕು :

ವಾರ್ಡ್ ಸಭೆಯ ಅಧ್ಯಕ್ಷತೆಯನ್ನು ಆ ಮತಕ್ಷೇತ್ರದ ಗ್ರಾಮ ಪಂಚಾಯತಿ ಸದಸ್ಯರೊಬ್ಬರು ವಹಿಸುತ್ತಾರೆ. ಗ್ರಾಮಸಭೆಯ ಅಧ್ಯಕ್ಷತೆಯನ್ನು ಗ್ರಾಮ ಪಂಚಾಯತಿಯ ಅಧ್ಯಕ್ಷರು ಅಥವಾ ಉಪಾಧ್ಯಕ್ಷರು, ಅಧ್ಯಕ್ಷರ ಗೈರುಹಾಜರಿಯಲ್ಲಿ ವಹಿಸುತ್ತಾರೆ. ವಾರ್ಡ್‌ಸಭೆ ಮತ್ತು ಗ್ರಾಮಸಭೆಯನ್ನು ಕನಿಷ್ಠ ಆರು ತಿಂಗಳಿಗೊಮ್ಮೆ ನಡೆಸುವುದು ಕಡ್ಡಾಯವಾಗಿರುತ್ತದೆ.

ಈ ತಿದ್ದುಪಡಿಯಲ್ಲಿ ವಿವರಿಸಿರುವ ಪ್ರಕಾರ, ವಾರ್ಡ್ ಸಭೆಗೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸುವ ಮತ್ತು ತನ್ನ ವಾರ್ಡಿನೊಳಗೆ ಅವುಗಳನ್ನು ಅನುಷ್ಠಾನಗೊಳಿಸಲು ಆದ್ಯತೆಯನ್ನು ನಿಗದಿಮಾಡುವ ಮತ್ತು ಗ್ರಾಮ ಪಂಚಾಯತಿ ಅಭಿವೃದ್ಧಿ ಯೋಜನೆಯಲ್ಲಿ ಅವುಗಳನ್ನು ಸೇರಿಸಲು ಗ್ರಾಮಸಭೆಗೆ ಕಳುಹಿಸಿಕೊಡುವ ಅಧಿಕಾರ ಇರುತ್ತದೆ. ಅಲ್ಲದೆ, ವಾರ್ಡ್ ಪ್ರದೇಶದಲ್ಲಿ ಬೀದಿ ದೀಪಗಳನ್ನು, ಸಮುದಾಯ ನೀರಿನ ನಲ್ಲಿಗಳನ್ನು ಎಲ್ಲಿ ಹಾಕಬೇಕು ಮತ್ತು ಸಾರ್ವಜನಿಕ ಬಾವಿಗಳನ್ನು ಮತ್ತು ನೈರ್ಮಲ್ಯ ಘಟಕಗಳನ್ನು ಎಲ್ಲಿ ಸ್ಥಾಪಿಸಬೇಕು ಎಂಬ ಬಗ್ಗೆ ಸಲಹೆಗಳನ್ನು ಸಹ ವಾರ್ಡ್ ಸಭೆಯು ನೀಡಬಹುದಾಗಿದೆ. ಫಲಾನುಭವಿ ಆಧಾರಿತ ಯೋಜನೆಗಳ ಪ್ರಯೋಜನ ಪಡೆಯಲು ಅತ್ಯಂತ ಅರ್ಹರಾದ ವ್ಯಕ್ತಿಗಳನ್ನು ಗುರುತಿಸಿ, ಆನಂತರ ಆದ್ಯತೆಯ ಪ್ರಕಾರ ಪಟ್ಟಿಯನ್ನು ಸಿದ್ಧಪಡಿಸಿ, ಅಭಿವೃದ್ಧಿ ಯೋಜನೆಯಲ್ಲಿ ಅದನ್ನು ಸೇರಿಸಲು ಗ್ರಾಮಪಂಚಾಯತಿಗೆ ಕಳುಹಿಸಿಕೊಡುತ್ತದೆ. ತನ್ನ ಪ್ರದೇಶಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯತಿಯು ನ್ಯಾಯಸಮ್ಮತ ನಿರ್ಣಯ ಕೈಗೊಂಡಿರುವುದನ್ನು ತಿಳಿದುಕೊಳ್ಳಲು ಗ್ರಾಮ ಪಂಚಾಯತಿಯಿಂದ ಮಾಹಿತಿ ಪಡೆಯುವ ಹಕ್ಕು ವಾರ್ಡ್‌ಸಭೆಗೆ ಇರುತ್ತದೆ. ಇದು ತುಂಬಾ ಮಹತ್ವದ್ದು.

## ಗ್ರಾಮಸಭೆಯ ಫಲಾನುಭವಿಗಳ ಪಟ್ಟಿಯೇ ಅಂತಿಮವಾದುದು :

ಈ ತಿದ್ದುಪಡಿ ಅನ್ವಯ, ಗ್ರಾಮ ಪಂಚಾಯತಿಯು ತಯಾರಿಸಿದ ವಾರ್ಷಿಕ ಯೋಜನೆಯನ್ನು ಗ್ರಾಮಸಭೆಯು ಪರಿಶೀಲಿಸಿ ಅನುಮೋದಿಸಬೇಕಾಗುತ್ತದೆ. ಗ್ರಾಮಸಭೆಯು, ೧೯೯೩ರ ಕಾಯಿದೆಯ ಮೊದಲಿನ ಪ್ರಕರಣ ೩(೨) ರಲ್ಲಿ ತನಗೆ ವಹಿಸಿರುವ ಅಧಿಕಾರಗಳನ್ನು ಚಲಾಯಿಸುವುದು ಮತ್ತು ಕಾರ್ಯಗಳನ್ನು ನೆರವೇರಿಸುವುದು ಅಲ್ಲವೆ, ಗ್ರಾಮಪಂಚಾಯತಿ ಪ್ರದೇಶದಲ್ಲಿ ಯಾರಾದರೂ ಬಾಲಕಾರ್ಮಿಕರು ಇದ್ದರೆ ಗುರುತಿಸಿ, ರಾಜ್ಯ ಹಾಗೂ ಕೇಂದ್ರ ಸರ್ಕಾರಗಳ ನಿರ್ದೇಶನದಂತೆ ಅಂಥ ಬಾಲಕಾರ್ಮಿಕರ ಪುನರ್ವಸತಿಗೆ ಮತ್ತು ಕಾನೂನು ಕ್ರಮಗಳಿಗೆ ಸಹಾಯ ಮಾಡಲು ಕ್ರಮ ಕೈಗೊಳ್ಳಬಹುದಾಗಿದೆ. ಜಾತಿ, ಮತ ಮತ್ತು ಲಿಂಗ ಆಧಾರದ ಮೇಲೆ ತಾರತಮ್ಯ ಆಗುವುದನ್ನು ತಡೆಯಲು ಕ್ರಮ ಕೈಗೊಳ್ಳುವ ಅಧಿಕಾರವೂ ಗ್ರಾಮಸಭೆಗೆ ಇದೆ. ಅಲ್ಲದೆ, ಮದ್ಯ ಮಾರಾಟದ ಅಂಗಡಿಗಳಿಗೆ ಮತ್ತು ಜೂಜು ಸ್ಥಳಗಳಿಗೆ ಪರವಾನಗಿ ನೀಡದಿರುವಂತೆಯೂ ಗ್ರಾಮಸಭೆಯು ಗ್ರಾಮ ಪಂಚಾಯತಿಗೆ ಸೂಚಿಸಬಹುದಾಗಿದೆ. ವಾರ್ಡ್‌ಸಭಾ ತಯಾರಿಸಿದ ಪಟ್ಟಿಗಳನ್ನು ಪರಿಶೀಲಿಸಿದ ನಂತರ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳು ನಿಗದಿಗೊಳಿಸಿದ ಮಾನದಂಡಗಳ ಅನುಸಾರ, ಆದ್ಯತೆ ಪ್ರಕಾರ ಗ್ರಾಮಸಭೆಯು ತಯಾರಿಸಿದ, ಅತ್ಯಂತ ಅರ್ಹ ಫಲಾನುಭವಿಗಳ ಪಟ್ಟಿಯೇ ಅಂತಿಮವಾದುದು. ಆಯಾ ಪಂಚಾಯತಿ ರಾಜ್ ಸಂಸ್ಥೆಯು ಅದನ್ನೇ ಕಾರ್ಯಗತಗೊಳಿಸಬೇಕಿರುತ್ತದೆ. ಇವೆಲ್ಲವೂ ಪಂಚಾಯತ್ ಆಡಳಿತದ ವ್ಯವಸ್ಥೆಯ ಬೇರುಮಟ್ಟದಲ್ಲಿ ಕೆಲಸಕಾರ್ಯಗಳನ್ನು ನಿರ್ವಹಿಸುವ ವಾರ್ಡ್ ಮತ್ತು ಗ್ರಾಮಸಭೆಗಳನ್ನು ಸಶಕ್ತಗೊಳಿಸಲು ರೂಪಿಸಿರುವಂಥ

ಪ್ರಮುಖ ವಿಧಿ ವಿಧಾನಗಳು. ಗ್ರಾಮಸಭೆಯ ಅಭಿಪ್ರಾಯಗಳಿಗೆ, ಸಲಹೆಗಳಿಗೆ ಮತ್ತು ಶಿಫಾರಸ್ಸುಗಳಿಗೆ ಗ್ರಾಮ ಪಂಚಾಯತಿಯು ಸೂಕ್ತ ಗಮನ ಕೊಡಬೇಕೆಂಬುದೇ ತಿದ್ದುಪಡಿಯ ಉದ್ದೇಶ. ಇದರಿಂದ, ಗ್ರಾಮಸಭೆಯ ವರ್ಚಸ್ಸು ಹೆಚ್ಚು ಬಲಿಷ್ಠವಾಗುತ್ತದೆ.

## ವಾರ್ಡ್/ಗ್ರಾಮ ಸಭೆಯ ಕೋರಂ :

ವಾರ್ಡ್ ಸಭೆ ಮತ್ತು ಗ್ರಾಮ ಸಭೆ ಕೋರಂಗೆ ಅನುಕ್ರಮವಾಗಿ ೨೦ ಸದಸ್ಯರು ಮತ್ತು ೧೦೦ ಸದಸ್ಯರುಗಳ (ಒಟ್ಟು ಸಂಖ್ಯೆ ೧/೧೦, ಇವೆರಡರಲ್ಲಿ ಯಾವುದು ಕಡಿಮೆ ಅಷ್ಟು ಸದಸ್ಯರುಗಳ) ಅವಶ್ಯಕತೆ ಇರುತ್ತದೆ. ಮಹಿಳೆಯರಿಗೆ ಮತ್ತು ಅನುಸೂಚಿತ ಜಾತಿಗಳಿಗೆ ಹಾಗೂ ಅನುಸೂಚಿತ ಪಂಗಡಗಳಿಗೆ ಸೂಕ್ತ ಪ್ರಾತಿನಿಧ್ಯಕ್ಕೆ ತಿದ್ದುಪಡಿಯಲ್ಲಿ ಅವಕಾಶ ಕಲ್ಪಿಸಲಾಗಿದೆ. ಇದರಿಂದ, ಅವರ ಸಮಸ್ಯೆಗಳಿಗೆ ಸೂಕ್ತ ಗಮನ ಸಿಗುತ್ತದೆ. ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯದ ಪ್ರಯೋಜನಗಳಲ್ಲಿ ಅವರು ತಕ್ಕ ಪಾಲು ಪಡೆಯಲು ಸಾಧ್ಯವಾಗುತ್ತದೆ.

## ಉದಾಸೀನತೆ ಸಲ್ಲ :

ರಾಜೀವ್ ಗಾಂಧಿ ಫೌಂಡೇಶನ್ ದಿಲ್ಲಿ ಟಾಸ್ಕ್‌ಫೋರ್ಸ್ ಇದರ "ಭಾರತದಲ್ಲಿ ಪಂಚಾಯತ್ ರಾಜ್ಯ ೧೯೯೯" ಈ ವರದಿಯಲ್ಲಿ ಕರ್ನಾಟಕದಲ್ಲಿ ಮೊದಲಿನ ಗ್ರಾಮಸಭೆ ವ್ಯವಸ್ಥೆಯ ಬಗ್ಗೆ ಕೆಳಗಿನಂತೆ ಹೇಳಲಾಗಿದೆ.

"ಯೋಜನೆಗಳನ್ನು ಪ್ರಾರಂಭಿಸುವಲ್ಲಿ ಮತ್ತು ಕೊನೆಯ ನಿರ್ಣಯಗಳನ್ನು ತಕ್ಕೊಳ್ಳುವಲ್ಲಿ ಅಧಿಕಾರಿಗಳು ಮತ್ತು ಅಧಿಕಾರೇತರರು ಅಗ್ರಸ್ಥಾನದಲ್ಲಿ ಇರುವರು ಎಂದು ಮತದಾರರ ದೃಢ ಅನಿಸಿಕೆ. ಇದು ನಿರ್ಣಯ ತೆಗೆದುಕೊಳ್ಳುವ ಹಂತದಲ್ಲಿ ಪ್ರಜೆಗಳ ಸಹಭಾಗಿತ್ವದ ಅವಶ್ಯಕತೆಯನ್ನು ಎತ್ತಿತೋರಿಸುತ್ತದೆ". ಆದ್ದರಿಂದ ವಾರ್ಡ್ ಮತ್ತು ಗ್ರಾಮಸಭೆಗಳ ಅಧಿಕಾರ ಮತ್ತು ಕಾರ್ಯಗಳನ್ನು ಆಯಾ ಸದಸ್ಯರುಗಳು ಹುಮ್ಮಸ್ಸಿನಿಂದ ಮತ್ತು ಪರಿಣಾಮಕಾರಿಯಾಗಿ ನೆರವೇರಿಸುವುದಕ್ಕೆ ತಿದ್ದುಪಡಿಯಲ್ಲಿ ಒತ್ತುನೀಡಲಾಗಿದೆ. ಜಿಲ್ಲಾ ಪಂಚಾಯತಿಗಳು ವಾರ್ಡ್/ಗ್ರಾಮ ಮಟ್ಟದಲ್ಲಿ ತರಬೇತಿ ಮತ್ತು ಶಿಕ್ಷಣ ಕೊಡುವುದರ ಮೂಲಕ ಸದಸ್ಯರುಗಳ ಸಾಮರ್ಥ್ಯವನ್ನು ಹೆಚ್ಚಿಸುವುದು ಅತ್ಯಂತ ಅಗತ್ಯ. ವಾರ್ಡ್ ಮತ್ತು ಗ್ರಾಮ ಪಂಚಾಯತಿ ಮಟ್ಟಗಳಲ್ಲಿ ಸಭೆಗಳ ಅಧಿಕಾರ ಮತ್ತು ಕಾರ್ಯಗಳ ಬಗ್ಗೆ ವಿಚಾರ ಸಂಕಿರಣಗಳು, ಕಾರ್ಯಾಗಾರಗಳು ಮತ್ತು ಚರ್ಚೆಗಳನ್ನು ಏರ್ಪಡಿಸುವುದರಿಂದ, ಈ ಸಭೆಗಳ ಸದಸ್ಯರುಗಳು, ಆಯಾ ಮಟ್ಟದಲ್ಲಿ ತೀರ್ಮಾನಗಳನ್ನು ಕೈಗೊಳ್ಳುವುದರಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದಕ್ಕೆ ಮತ್ತು ವಾರ್ಡ್‌ಸಭೆಯು ಕಳುಹಿಸಿದ ಪ್ರಸ್ತಾವನೆಗೆ ಸಂಬಂಧಪಟ್ಟಂತೆ ಗ್ರಾಮ ಪಂಚಾಯತಿಗಳು ಕೈಗೊಂಡ ನಿರ್ಣಯಗಳ ಬಗ್ಗೆ ಜಾಗೃತರಾಗಿರುವಂತೆ ಪ್ರೇರೇಪಣೆ ದೊರಕುತ್ತದೆ. ಆದಾಗ್ಯೂ ವಾರ್ಡ್ ಮತ್ತು ಗ್ರಾಮಸಭೆ ಹಾಗೂ ಗ್ರಾಮ ಪಂಚಾಯತಿ ಕೆಲಸ ಕಾರ್ಯಗಳ ಬಗ್ಗೆ ಹಾಗೂ ತಮ್ಮ ಹಕ್ಕುಗಳು, ಅಧಿಕಾರ ಮತ್ತು ಜವಾಬ್ದಾರಿಗಳ ಬಗ್ಗೆ ಸದಸ್ಯರುಗಳಲ್ಲಿ ಇರುವ ಉದಾಸೀನ ಮನೋಭಾವವನ್ನು ಎಲ್ಲ ರೀತಿಯಲ್ಲೂ ಹೋಗಲಾಡಿಸಬೇಕಾಗಿದೆ. ಈ ಕ್ಷೇತ್ರದಲ್ಲಿ ವಾರ್ಡ್ ಮತ್ತು ಗ್ರಾಮ ಸಭೆಗಳ ಸದಸ್ಯರುಗಳು ಜುಗುಪ್ಸೆಯನ್ನು ತೊರೆದು ತಮ್ಮನ್ನು ತಾವೇ ತೊಡಗಿಸಿಕೊಳ್ಳಬೇಕಾಗಿದೆ. ಹಾಗೂ ಈ ದಿಶೆಯಲ್ಲಿ ಅಧಿಕಾರಿ ಮತ್ತು ಅಧಿಕಾರೇತರರು ಪ್ರೇರೇಪಿಸುವ ಪಾತ್ರವನ್ನು ವಹಿಸಿ. ಮತದಾರರ ಸಹ ಭಾಗಿತ್ವ ಗುಣ ಮಟ್ಟವನ್ನು ವೃದ್ಧಿಗೊಳಿಸಬೇಕಾಗಿದೆ. ಹಾಗಾದಾಗ ಮಾತ್ರ ಈ ತಿದ್ದುಪಡಿಯು ಅಪೇಕ್ಷಿಸಿದ ಸಾಫಲ್ಯ ಹೊಂದುವುದು.

ಇಲ್ಲಿ ೧೮ನೇ ಶತಮಾನದ ಫ್ರೆಂಚ್ ಮಹಾನ್ ದಾರ್ಶನಿಕ, ಚಿಂತಕ ಮಾಂಟೆಸ್‌ಕ್ಯೂ ಹೇಳಿರುವುದನ್ನು ನೆನಪು ಮಾಡಿಕೊಳ್ಳುವುದು ಸೂಕ್ತ. ಅದು ಪ್ರಸ್ತುತ ಪರಿಸ್ಥಿತಿಯಲ್ಲಿಯೂ ಅನ್ವಯಿಸುತ್ತದೆ. ಅವರು ಕೆಳಗಿನಂತೆ ಅಭಿಪ್ರಾಯಪಟ್ಟಿದ್ದಾರೆ.

"ಮಿತ ಜನಾಧಿಪತ್ಯವುಳ್ಳ ಪ್ರಭುತ್ವದಲ್ಲಿ ದೊರೆಯ ನಿರಂಕುಶಾಧಿಕಾರ ಅಷ್ಟೇನೂ ಅಪಾಯಕಾರಿಯಲ್ಲ. ಆದರೆ ಪ್ರಜಾಪ್ರಭುತ್ವದಲ್ಲಿ ಪ್ರಜೆಯ ಆಲಸ್ಯ, ಉದಾಸೀನ ಮನೋಭಾವ ಅತ್ಯಂತ ಅಪಾಯಕಾರಿ."

●






# ರಾಜಕೀಯ ಮುಂದಾಳತ್ವ

ಎಂ. ವಿ. ರಾಜೀವ್‌ಗೌಡ

ಈ ಶತಮಾನವು ಭಾರತದ ಶತಮಾನವಾಗಬೇಕಾದರೆ ನಾವು ಮಾರುಕಟ್ಟೆ ಜಾಗದಲ್ಲಿ ಆಶಿಸುತ್ತಿರುವುದನ್ನು ರಾಜಕೀಯ ವಲಯದಲ್ಲಿ ಸಾಧಿಸಬೇಕಾದುದು ಪ್ರಾಮುಖ್ಯವಾದುದು. ನವಭಾರತದಲ್ಲಿ ಸಕಾರಾತ್ಮಕ ಬದಲಾವಣೆಗೆ ಅನುಕೂಲ ಕಲ್ಪಿಸುವ ಮತ್ತು ನಮ್ಮ ಸಮಾಜದ ಎಲ್ಲಾ ವರ್ಗದವರು ತಮ್ಮ ಭವಿಷ್ಯದ ನಿರೀಕ್ಷೆಯನ್ನು ಉತ್ತಮಪಡಿಸಿಕೊಳ್ಳುವ ಭರವಸೆಯು ಸರಕಾರದ ಮುಂದಾಳತ್ವವಿಲ್ಲದಿದ್ದರೆ, ಅಥವಾ ಯಾವುದೇ ಪ್ರಜ್ವಲಿಸುವ ಆರ್ಥಿಕ ಪ್ರಕ್ಷೇಪಣ ಅಥವಾ ಗತಿನೋಟವನ್ನು ಸಾಧಿಸಲಾಗುವುದಿಲ್ಲ ಅಥವಾ ಸ್ಥಿರವಾಗಿಸಲಾಗುವುದಿಲ್ಲ. ಬಲವಾದ, ನಿಷ್ಠೆಯುಳ್ಳ ಮತ್ತು ಭದ್ರವಾದ, ಸ್ಪಷ್ಟವಾಗಿ ಕಾಣುವ ಸಾರ್ವಜನಿಕ ನಿರ್ವಹಣೆ ಚೌಕಟ್ಟು ಹಿನ್ನೆಲೆಯಲ್ಲಿದ್ದಿದ್ದರೆ ಯಾವುದೇ ಮಾಯಾಮಂತ್ರವು ತನ್ನ ಅವಶ್ಯಕತೆಗಳನ್ನು ಉಪಯೋಗಿಸುವುದಿಲ್ಲ.

**ನಮ್ಮ ರಾಜಕೀಯ ಮುಂದಾಳತ್ವದ ಗುಣಮಟ್ಟವನ್ನು ಉತ್ತಮಪಡಿಸಲು ಒಂದು ಧೈರ್ಯವಾದ ಪ್ರಯತ್ನವೆಂದರೆ ಸುಪ್ರೀಂ ಕೋರ್ಟ್ ಬೆಂಬಲಿಸಿದ, ನಾಗರಿಕ ಸಮಾಜದ ಕರ್ತೃತ್ವ ಶಕ್ತಿಯ ಪರಿಣಾಮವಾಗಿ ಜಾರಿಗೊಳಿಸಿದ ಬಹಿರಂಗಗೊಳಿಸದ ಕಾನೂನಿನಿಂದ ಬರಬಹುದು.**

ಶ್ರೇಷ್ಠ ಮಾನದಂಡದ, ಒಳ್ಳೆಯ ಗುಣಮಟ್ಟದ ಆಳ್ವಿಕೆಯನ್ನು ಸಾಧಿಸುವುದರಲ್ಲಿ ನಾವು ಇನ್ನೂ ಬಹಳ ದೂರವಿದ್ದೇವೆ. ಪ್ರತಿವರ್ಷವೂ ನಂಬಲಾಗದ ಕುಶಾಗ್ರತೆಯ ಮತ್ತು ನಿರ್ಲಜ್ಜತನದ ಹಗರಣಗಳಿಂದ ಬಹುವಿಧದ ಗೊಂದಲಗಳನ್ನು ನಾವು ಎದುರಿಸುತ್ತಿದ್ದೇವೆ. ಕಾನೂನನ್ನು ಜಾರಿಗೊಳಿಸುವ ಮತ್ತು ಎತ್ತಿಹಿಡಿಯುವ ಅನೇಕರು ದುಷ್ಕೃತ್ಯ ಮತ್ತು ಭ್ರಷ್ಟಾಚಾರದಂತಹ ಅವಮಾನಕರವಾದ ಕಾರ್ಯಗಳಿಂದ ಹೂತುಹೋಗಿದ್ದಾರೆ. ಅನೇಕ ಸಲ ನಮಗೆ ಹೆಚ್ಚೇನೂ ಮಾಡಲಾಗುವುದಿಲ್ಲ. ಅನೇಕ ಸಲ ನೀಚರನ್ನು ಹೊರಗೆಸೆದು ದುಷ್ಟರನ್ನು ಸ್ವಾಗತಿಸಬೇಕಾದ ಪರಿಸ್ಥಿತಿಯಿರುತ್ತದೆ.

ಕೆಟ್ಟದ್ದು ಒಳ್ಳೆಯದನ್ನು ಹೊಡೆದೋಡಿಸುತ್ತದೆ ಎಂಬುದು ಅನಿವಾರ್ಯವೇ? ಈ ಬೆಳವಣಿಗೆಗಳ ಬಗ್ಗೆ ನಾವೇನೂ ಮಾಡಲಾಗುವುದಿಲ್ಲವೇ? ಸಾರ್ವಜನಿಕ ವಲಯವನ್ನು ನಾವು ಹೇಗೆ ಉತ್ತಮಪಡಿಸಬಹುದು? ನಮ್ಮ ರಾಜಕೀಯ ನೇತಾರರ ಗುಣಮಟ್ಟವನ್ನು ನಾವು ಹೇಗೆ ಪರಿವರ್ತಿಸಬಹುದು?

ಒಳ್ಳೆಯ ಆಡಳಿತಕ್ಕೆ ಬಲವಾದ ಬೇಡಿಕೆ ಇರುತ್ತದೆ ಎಂಬುದರ ಬಗ್ಗೆ ಯಾವ ಸಂದೇಹವೂ ಬೇಡ. ನಿರಾಶೆಯಿಂದ ಪೀಡಿತರಾಗಿರುವ ಬದಲು ಆದರ್ಶವನ್ನು ಹೊಂದಿರುವ ೨೫ ವರ್ಷದೊಳಗಿನ ನಮ್ಮ ಯುವಕರು ಜನಸಂಖ್ಯೆಯ ಅರ್ಧದಷ್ಟು ಆಗಲೇ ಇದ್ದಾರೆ. ಅತಿ ಉತ್ತಮ ಗುಣಮಟ್ಟದ ವಸ್ತುಗಳಿಗೆ ಹೊಂದಿಕೊಂಡಿರುವ ಅವರು ಅತಿ ಹೆಚ್ಚಿನ ನಿರೀಕ್ಷೆಗಳನ್ನು ತಮ್ಮ

ನಾಯಕರು ಪೂರೈಸಬೇಕೆಂದು ಒತ್ತಾಯಿಸುತ್ತಾರೆ. ನಗರೀಕರಣ ತೀವ್ರಗತಿಯಲ್ಲಿ ಆಗುತ್ತಿದೆ. ಇದು ಸರಕಾರದ ಉತ್ತಮ ಸೇವೆಗಳಿಗೆ ಬಾಯಿಮಾತಿನ ಬೇಡಿಕೆಗಳಿಗೆ ಎಡೆಮಾಡಿಕೊಡುತ್ತದೆ. ಈಗಾಗಲೇ ಮಾಧ್ಯಮಗಳು ಹೊಣೆಗಾರಿಕೆಯನ್ನು ಕೋರಲು ಧ್ವನಿಯೆತ್ತುತ್ತಿವೆ. ನಮ್ಮ ಬಡಜನರೂ ಕೂಡ ದೃಢವಾಗಿ ಮತ ಹಾಕುತ್ತಿದ್ದಾರೆ. ಉದಾಹರಣೆಗೆ ಕಳಪೆ ಗುಣಮಟ್ಟದ ಸರಕಾರಿ ಶಿಕ್ಷಣದಿಂದ ದೂರಮಾಡಿ ಖಾಸಗಿ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳುಹಿಸುತ್ತಿದ್ದಾರೆ. ಬಡಜನರಿಗೆ ಕ್ರಮಾಗತವಾದ ಪರಿವರ್ತನೆ ಬೇಕೆ ಹೊರತು ರೊಟ್ಟಿಯ ತುಣುಕಲ್ಲ.

ರಾಜಕೀಯ ಮಾರುಕಟ್ಟೆಯ ಸರಬರಾಜು ಹೇಗೆ ವಿತರಿಸುತ್ತದೆ ಎಂದು ಹೇಗೆ ಭರವಸೆ ನೀಡಬಹುದು? ನಮ್ಮ ರಾಜಕೀಯ ಮುಂದಾಳತ್ವದ ಗುಣಮಟ್ಟವನ್ನು ಉತ್ತಮಪಡಿಸಲು ಒಂದು ಧೈರ್ಯವಾದ ಪ್ರಯತ್ನವೆಂದರೆ ಸುಪ್ರೀಂ ಕೋರ್ಟ್ ಬೆಂಬಲಿಸಿದ, ನಾಗರಿಕ ಸಮಾಜದ ಕರ್ತೃತ್ವಶಕ್ತಿಯ ಪರಿಣಾಮವಾಗಿ ಜಾರಿಗೊಳಿಸಿದ ಬಹಿರಂಗಗೊಳಿಸಿದ ಕಾನೂನಿನಿಂದ ಬರಬಹುದು. ಅಭ್ಯರ್ಥಿಗಳು ತಮ್ಮ ಸಂಪತ್ತು, ಶಿಕ್ಷಣ ಮತ್ತು ಅಪರಾಧ ದಾಖಲೆಗಳು (ಏನಾದರೂ ಇದ್ದರೆ) ಅಧ್ಯಾದೇಶ ನೀಡುವುದರಿಂದ ನಂಬಲಾಗದ ಮತ್ತು ಧಿಕ್ಕರಿಸುವವರನ್ನು ತೊಡೆದು ಹಾಕುವುದರ ಬಗ್ಗೆ ಈ ಕಾನೂನು ಮೊದಲನೇ ಹೆಜ್ಜೆ. ಆದರೆ ಬಹಿರಂಗಗೊಳಿಸುವ ಕಾನೂನುಗಳು ತಮ್ಮ ನಿಜವಾದ ಪರಿಣಾಮವನ್ನು ಬೀರಬೇಕಾದರೆ ರಾಜಕೀಯ ವಲಯದೊಳಕ್ಕೆ ಉನ್ನತ ಪ್ರತಿಭೆಯುಳ್ಳ ಅಂದರೆ ಭಾರತವು ಕೊಡಬಹುದಾದ ಅತ್ಯುತ್ತಮವಾದ ಮತ್ತು ಅತಿಪ್ರಕಾಶಮಾನವಾದ ಪ್ರತಿಭೆಯಿರುವವರನ್ನು ಆಕರ್ಷಿಸುವಂತಿರಬೇಕು. ರಾಜಕೀಯ ಪಕ್ಷಗಳು, ವಿವಿಧ ಕ್ಷೇತ್ರಗಳು ಮತ್ತು ಹಂತಗಳಿಂದ ಅತ್ಯುತ್ತಮ ಸಾಧಕರನ್ನು ಹುಡುಕಲು ಮಾರ್ಗಗಳನ್ನು ಕಂಡುಹಿಡಿಯಬೇಕು ಮತ್ತು ರಾಜಕೀಯ ಜೀವನದಲ್ಲಿ ಅಂಥವರ ಬೆಳವಣಿಗೆಯನ್ನು ಪೋಷಿಸುವ ಅಗತ್ಯವಿದೆ. ಸರಕಾರವನ್ನು ಅತಿ ಕೆಳಗಿನ ಹಂತಕ್ಕೆ ಒಯ್ಯುವ ಪಂಚಾಯತಿ ರಾಜ್ಯ ವ್ಯವಸ್ಥೆಯಿಂದ ಪ್ರತಿಯೊಂದು ಮಟ್ಟದಲ್ಲಿ ಮುಂದಾಳುಗಳಾಗಲು ಆಸೆಪಡುವವರಿಗೆ ಈಗ ಅನೇಕ ಅವಕಾಶಗಳಿವೆ.

ಆದರೂ ಬಹಳ ಜಾಗರೂಕ ಪರಿಗಣನೆಯಿಂದ ಈಗಾಗಲೇ ರಾಜಕೀಯದಲ್ಲಿ ಅಗಾಧವಾದ ಪ್ರತಿಭೆಯಿದೆ ಎಂಬುದು ಸ್ಪಷ್ಟವಾಗಿದೆ. ನಮ್ಮ ಅನೇಕ ನಾಯಕರು ಆದರ್ಶವಾದಿಗಳಿದ್ದಾರೆ. ಅವರು ದೇಶದ ಬಗ್ಗೆ ಬದ್ಧತೆಯಿಂದ ಪ್ರಚೋದಿತವಾಗಿದ್ದಾರೆ. ಅವರು ಅತ್ಯುತ್ತಮ ಉದ್ಯಮಶೀಲ ಲಕ್ಷಣಗಳಾದ ಆಕಸ್ಮಿಕ ಸಹಿಸಿಕೊಳ್ಳುವ ಸಾಮರ್ಥ್ಯ, ಖಂಡಿತವಾದ ನಿರ್ಧಾರ, ತ್ಯಾಗಕ್ಕೆ ಇಚ್ಛೆ ಮತ್ತು ಎಲ್ಲಾ ಜೀವನ ಶೈಲಿಯಲ್ಲಿರುವ ಜನರ ಜೊತೆ ಕೆಲಸ ಮಾಡುವ ಸಾಮರ್ಥ್ಯವನ್ನು ಪ್ರದರ್ಶಿಸುವವರಾಗಿದ್ದು, ಒಳ್ಳೆಯವರನ್ನು ನಾವು ಗುರುತಿಸುವ, ಗುರುತಿಸಿ ಅವರಿಗೆ ಕೊರತೆಯಿರುವ ಕ್ಷೇತ್ರದಲ್ಲಿ ಅವರನ್ನು ಬಲಯುತರನ್ನಾಗಿ ಮಾಡಬೇಕು ಮತ್ತು ನಮ್ಮ ದೇಶವನ್ನು ನಡೆಸಲು ಹೆಚ್ಚುತ್ತಿರುವ ಸಂಕೀರ್ಣ ಸವಾಲುಗಳನ್ನು ಎದುರಿಸಲು ಅವರನ್ನು ಸಿದ್ಧಪಡಿಸಬೇಕು.

ರಾಜಕೀಯ ನೇತಾರರು ರಾಜಕೀಯ ಆಂದೋಲನ ವ್ಯವಸ್ಥೆ ಮಾಡಲು ಪ್ರಚಾರ ನಡೆಸಲು ಚೆನ್ನಾಗಿ ನುರಿತವರಾಗಿದ್ದಾರೆ. ಆದರೆ ನೀತಿ ರೂಪಿಸುವಲ್ಲಿ ಮತ್ತು ಅನುಷ್ಠಾನದಲ್ಲಿ ಸಾರ್ವಜನಿಕ ಅಧಿಕಾರ ವರ್ಗದ ಮತ್ತು ಕೈಗಾರಿಕೆಗಳ ಜೊತೆಯಲ್ಲಿ ಕೆಲಸ ಮಾಡಿ ಭಾರತವು ಅಪೇಕ್ಷಿಸುವ ಉತ್ತಮಟ್ಟದ ಆಡಳಿತವನ್ನು ಒದಗಿಸುವುದರ ಸವಾಲುಗಳಿಗೆ ಅವರು ಸಿದ್ಧರಾಗಿಲ್ಲ. ಮಂತ್ರಿಗಳಾಗುವ ಪಕ್ಷದ ಕೆಲವೇ ನಾಯಕರುಗಳು ನಿರ್ದಿಷ್ಟ ವಿಷಯಗಳಲ್ಲಿ ತಜ್ಞತೆ ಪಡೆದುಕೊಳ್ಳುತ್ತಿರುವವರು ಅದೃಷ್ಟವಂತರು. ಅಧಿಕಾರದಲ್ಲಿರಲಿ ಅಥವಾ ಪ್ರತಿಪಕ್ಷದಲ್ಲಿರಲಿ ಇತರರ ಕೆಲಸವನ್ನು ಕಲಿತುಕೊಳ್ಳಲು ಶೀಘ್ರವಾಗಿ ಪ್ರಯತ್ನಪಡಬೇಕು ಮತ್ತು ರಾಜಕಾರಣದ ಒತ್ತಡಗಳು ಅವರ ಜ್ಞಾನ ಮತ್ತು ಕೌಶಲ್ಯಗಳನ್ನು ವೃದ್ಧಿಗೊಳಿಸುವುದಕ್ಕೆ ಸಾಕಷ್ಟು ಸಮಯವಿರುವುದಿಲ್ಲ.

ಇದು ಬದಲಾಗಬೇಕು. ನಾವು ಖಾಸಗಿ ಕ್ಷೇತ್ರಕ್ಕೆ ನಿರ್ವಾಹಕರುಗಳನ್ನು ತರಬೇತಿಗೊಳಿಸುವ ಹಾಗೆ ಅರೆ-ಶೈಕ್ಷಣೀಯ ಆದರೂ ಕಾರ್ಯತಃ ಗುರಿಯಿರುವ ಸಂಸ್ಥೆಯ ಅಗತ್ಯವಿದ್ದು, ಅದರಲ್ಲಿ ಕಾರ್ಯನಿರ್ವಾಹಕ ಶಿಕ್ಷಣವನ್ನು ನೀಡಿ ಸಾರ್ವಜನಿಕ ವಲಯದಲ್ಲಿ ವಿವಿಧ ಸಮುದಾಯಗಳ ನಡುವೆ ಜಾಲವನ್ನು ಏರ್ಪಡಿಸುವುದಕ್ಕೆ ನಿಷ್ಕೃಷ್ಟವಾದ ಸ್ಥಾನ ಹೊಂದಿರುವಂತೆ ಮಾಡಬೇಕು. ಅದರ ಅಧ್ಯಾದೇಶವು ಸರಕಾರದಲ್ಲಿ ಉತ್ತಮ ನಾಯಕರನ್ನು ಸೃಷ್ಟಿಸುವಂತಿರಬೇಕು. ಮಾಧ್ಯಮ ಮತ್ತು ನಾಗರಿಕ ಸಮಾಜದ ಸಂಬಂಧಿತ ವ್ಯಾಪ್ತಿಯಲ್ಲಿ ಕೂಡ ಅಧ್ಯಾದೇಶವಿರಬೇಕು. ಇದರಿಂದ ಉತ್ತಮ ಮಟ್ಟದ ಸಾರ್ವಜನಿಕ ಚರ್ಚೆ ಮತ್ತು ರಾಜಕೀಯ ವಿಶ್ಲೇಷಣೆಯ ಭರವಸೆ ಉಂಟಾಗಬೇಕು. ಆಡಳಿತ ಮತ್ತು ನೀತಿ ರೂಪಿಸುವಲ್ಲಿ ಸಾರ್ವಜನಿಕ ಜೀವನದಲ್ಲಿರುವವರು ಚಾಣಾಕ್ಷರಾಗಿರುವುದಕ್ಕೆ ಅದು ಸಹಾಯ ಮಾಡಬೇಕು. ತೀವ್ರವಾದ ವಿಶ್ಲೇಷಣೆಗೆ (ಅದರಲ್ಲಿಯೂ ಪ್ರತಿಪಕ್ಷದಲ್ಲಿರುವವರು) ಹರಿತವಾಗಿರುವವರಾಗಬೇಕು, ಸೇವೆಯೂ

ವಿತರಣೆಯಲ್ಲಿ ಮಾರ್ಪಾಡು ತರಬೇಕು. ಮಾಧ್ಯಮ ಸಂಬಂಧಗಳಲ್ಲಿ ಸಮಯೋಚಿತ ಜಾಣ್ಮೆಯಿಂದಿರಬೇಕು ಮತ್ತು ಅಧಿಕಾರಯುತರಾಗಿರುವ ನಾಗರಿಕರ ಜೊತೆಯಲ್ಲಿ ಬಹಳ ಉತ್ತಮವಾಗಿ ಕೆಲಸ ಮಾಡಬೇಕು.

ಕಾರ್ಪೊರೇಟ್ ಭಾರತ, ಹೊರದೇಶದಲ್ಲಿ ವಾಸಿಸುವ ಭಾರತೀಯರು ಮತ್ತು ನಾವೆಲ್ಲರೂ ಪರಿಸ್ಥಿತಿಯನ್ನು ಬದಲಾಯಿಸಲು ಶಕ್ತಿಯುಳ್ಳವರಾಗಿದ್ದೇವೆ. ರಾಜಕೀಯ ನೇತಾರರಿಗೆ ಕಾರ್ಯನಿರ್ವಾಹಕ ಶಿಕ್ಷಣ ಕಾರ್ಯಕ್ರಮಗಳು, ವೈವಿಧ್ಯಮಯವಾದ ಸರಕಾರಿ ಮತ್ತು ಸರಕಾರೇತರ ಸನ್ನಿವೇಶಗಳಲ್ಲಿ ಯುವಕರಿಗೆ ಇಂಟರ್ನ್‌ಷಿಪ್‌ಗಳು, ಬದ್ಧತೆಯುಳ್ಳ ಸಾಧಕರಿಗೆ ಫೆಲೋಷಿಪ್‌ಗಳು ಮತ್ತು ಸಾರ್ವಜನಿಕ ಕ್ಷೇತ್ರದಲ್ಲಿ ಹೊಸತನ್ನು ಕಂಡುಹಿಡಿಯುವವರಿಗೆ ಪ್ರೋತ್ಸಾಹ ನೀಡುವ, ಪಾರಿತೋಷಕಗಳನ್ನು ನೀಡುವ ಅಗತ್ಯವಿದೆ. ಭಾರತದ ಮೆದುಳು ಶಕ್ತಿ ಮತ್ತು ಶಕ್ತಿಯನ್ನು ಉಪಯೋಗಿಸಿಕೊಳ್ಳಲು ವಾಸ್ತವವಾದ ಮತ್ತು ನೈಜವಾದ ಜಾಲಗಳನ್ನು ಸೃಷ್ಟಿಸುವ ಅಗತ್ಯವಿದೆ. ನೀತಿ ವಿಶ್ಲೇಷಣೆಗೆ ಚಿಂತನ ಚಿಲುಮೆಗಳನ್ನು ಸೃಷ್ಟಿಸುವ ಅಗತ್ಯವಿದೆ. ಅಂತಿಮವಾಗಿ ಚುನಾವಣೆಗೆ ಹಣ ಸಹಾಯ ಮಾಡಬೇಕು (ಇದೇ ಭ್ರಷ್ಟಾಚಾರದ ಪ್ರಮುಖ ಚಾಲಕ ಮತ್ತು ಆದರ್ಶವಾದಿಯ ಪ್ರವೇಶಕ್ಕೆ ತಡೆ ತರುವುದು) ಮತ್ತು ಅದು ಪಾರದರ್ಶಕರಾಗಿರಬೇಕು. ಸಾರ್ವಜನಿಕ ಚೈತನ್ಯದಿಂದ ಕೂಡಿರಬೇಕು.

ಇದನ್ನು ಮಾಡಬಹುದು. ಇದನ್ನು ಮಾಡಲೇಬೇಕು. ಕಸುಬುದಾರ ರಾಜಕಾರಣಿಗಳನ್ನು ಹೊಂದಿದ್ದರೆ ಮಾತ್ರ ನಾವು ಅಪೇಕ್ಷೆ ಪಡುವಂತಹ ಭಾರತವನ್ನು ಆಳುವ ಜನರು ಸಿಗುತ್ತಾರೆ.

# ಗ್ರಾಮ-ನಗರ ಅಸಮಾನತೆ ನಿವಾರಣೆ

ಡಾ. ಡಿ. ಎಂ. ನಂಜುಂಡಪ್ಪ






೧೯೮೦ರ ದಶಕದ ಪ್ರಾರಂಭದಲ್ಲಿ ಗ್ರಾಮೀಣ ಆರ್ಥಿಕತೆಯ ಅಭಿವೃದ್ಧಿಯ ಬಗ್ಗೆ ಒತ್ತಡವು ಪುನಃ ಪ್ರಾರಂಭವಾಯಿತು. ಇದಕ್ಕೆ ಸಾಕ್ಷಿಯಾಗಿ, ಯೋಜನೆಯ ಪತ್ರದಲ್ಲಿ ಗ್ರಾಮೀಣ ಅಭಿವೃದ್ಧಿ ಶೇ. ೪೦ರ ವೆಚ್ಚವನ್ನು ನಮೂದಿಸಲಾಗಿತ್ತು. ಇದೂ ಕೂಡ ೬ನೇ ಪಂಚವಾರ್ಷಿಕ ಯೋಜನೆಯಷ್ಟು ತಡವಾಗಿ ಬಂದಿತು. ಮೂಲಭೂತ ಕನಿಷ್ಟ ಅಗತ್ಯಗಳ ಕಾರ್ಯಕ್ರಮವು ೫ನೇ ಪಂಚವಾರ್ಷಿಕ ಯೋಜನೆವರೆಗೆ ಕಾಯಬೇಕಾಯಿತು. ಆಗಲೂ ಕೂಡ, ಮೂಲಭೂತ ಕನಿಷ್ಟ ಅಗತ್ಯಗಳಿಗೆ ಹಂಚಿಕೆಯು ಉಳಿಕೆ ಹಣ ಎಂಬಂತಾಗಿದ್ದು ದುರದೃಷ್ಟಕರ. ೭ನೇ ಮತ್ತು ೮ನೇ ಪಂಚವಾರ್ಷಿಕ ಯೋಜನೆಗಳು ವಿಕೇಂದ್ರೀಕರಣದ ಮೇಲೆ ಅದರಲ್ಲಿಯೂ ವಿಶೇಷವಾಗಿ ಪಂಚಾಯತಿ ರಾಜ್ಯ ಸಂಸ್ಥೆಗಳ ಕಡೆಗೆ ಕೇಂದ್ರೀಕರಿಸಿತ್ತು. ಆದರೂ ೮೦ರ ರ ದಶಕದ ಮಧ್ಯಭಾಗದಿಂದ ಗ್ರಾಮೀಣ ಅಭಿವೃದ್ಧಿ ವಿಷಯಗಳಿಗೆ ಬದಲಾಗಿ ಉದಾರೀಕರಣದ ಕಡೆಗೆ ಹೆಚ್ಚಿನ ಗಮನ ಕೊಡಲಾಯಿತು. ೯ನೇ ಪಂಚವಾರ್ಷಿಕ ಯೋಜನೆಯು ಸಾಮಾಜಿಕ ನ್ಯಾಯ ಮತ್ತು ಸಮಾನತೆಯೊಂದಿಗೆ ಬೆಳವಣಿಗೆಯ ಉದ್ದೇಶಗಳನ್ನು ರೂಪಿಸುವುದರಲ್ಲಿ ಅಬ್ಬರ ಮಾಡುತ್ತಿತ್ತು. ಆದರೆ ಕಾರ್ಯಕ್ರಮಗಳು, ನೀತಿಗಳು ಮತ್ತು ವೆಚ್ಚಗಳು ಈ ಉದ್ದೇಶವನ್ನು ಪೂರೈಸಿಲ್ಲ.

ಆದರೂ ನೀತಿಗಳು ಮತ್ತು ಹಂಚಿಕೆಗಳು ಇಂತಹ ಉದ್ದೇಶಕ್ಕೆ ವಿರುದ್ಧವಾಗಿ ಹೋಯಿತು. ಒಟ್ಟಿನಲ್ಲಿ ಭಾರತದ ಆರ್ಥಿಕತೆಯ ಕ್ಷಿಪ್ರ ಬೆಳವಣಿಗೆಯ ಸಂಕೇತವಾಯಿತು. ಹತ್ತನೇ ಯೋಜನೆ ಮಾರ್ಗವು ಗ್ರಾಮೀಣ ಅಭಿವೃದ್ಧಿಯ ಹೊಸ ದೃಷ್ಟಿಯನ್ನು ಬಿಟ್ಟು ಹೆಚ್ಚು ಅಲಂಕಾರಿಕವಾಗಿದ್ದಿತು.

ಯೋಜನಾ ಪತ್ರದಲ್ಲಿ ಬಹಳ ತೀಕ್ಷ್ಣವಾಗಿ ನಮಗೆ ಹೊಳೆಯುವುದೇನೆಂದರೆ ಯೋಜನೆ ಸಾಮೀಪ್ಯ, ಉದ್ದೇಶಗಳು, ತಾಂತ್ರಿಕತೆಗಳು ಮತ್ತು ಆದ್ಯತೆಗಳು, ಬೆಳವಣಿಗೆ, ಉಳಿತಾಯ ಮತ್ತು ಹೂಡಿಕೆ, ಖಾಸಗಿ ಮತ್ತು ಸಾರ್ವಜನಿಕ ಕ್ಷೇತ್ರಗಳು, ನೀತಿಯ ಸಾಧನಗಳು, ಅಂತರ ಕ್ಷೇತ್ರೀಯ ಶಿಲ್ಕುಗಳು ಮುಂತಾದ ವಿಷಯಗಳನ್ನು ಆವರಿಸಿಕೊಂಡಿದೆ. ಇವತ್ತಿನ ವಿಷಯಕ್ಕೆ ಸುಸಂಬದ್ಧವಾಗಿರುವ ಅಂತರ ಕ್ಷೇತ್ರೀಯ ಶಿಲ್ಕುಗಳಿಗೆ ಬಂದಾಗ, ಮಾರ್ಗವು ವಿಸ್ತಾರವಾದ ಕೈಗಾರಿಕಾ-ಕೃಷಿ ಕ್ಷೇತ್ರಗಳು, ಕ್ಷೇತ್ರೀಯ ಮುಖಚ್ಛಾಯೆ ಮತ್ತು ಶಿಲ್ಕುಗಳನ್ನು ಉಲ್ಲೇಖಿಸುತ್ತದೆ. ಅಭಿವೃದ್ಧಿಯ ಕಾರ್ಯವಿಧಾನದಲ್ಲಿ ಮುಖ್ಯವಾದ ಅಂತರ-ಕ್ಷೇತ್ರ ಶಿಲ್ಕುಗಳಾಗಿ ಗ್ರಾಮೀಣ ನಗರ ಯೋಜನೆಗಳಿಗೆ ಅಗತ್ಯವನ್ನು ಅಪರೂಪವಾಗಿ ಗುರುತಿಸುತ್ತೇವೆ.

***ಯೋಜನಾ ಪತ್ರದಲ್ಲಿ ಬಹಳ ತೀಕ್ಷ್ಣವಾಗಿ ನಮಗೆ ಹೊಳೆಯುವುದೇನೆಂದರೆ ಯೋಜನೆ ಸಾಮೀಪ್ಯ, ಉದ್ದೇಶಗಳು, ತಾಂತ್ರಿಕತೆಗಳು ಮತ್ತು ಆದ್ಯತೆಗಳು, ಬೆಳವಣಿಗೆ, ಉಳಿತಾಯ ಮತ್ತು ಹೂಡಿಕೆ, ಖಾಸಗಿ ಮತ್ತು ಸಾರ್ವಜನಿಕ ಕ್ಷೇತ್ರಗಳ ನೀತಿ.***

ಆದರ ಪರಿಣಾಮವಾಗಿ ಯೋಜನೆಯಿಂದ ಯೋಜನೆಗೆ ಗ್ರಾಮ-ನಗರ ಅಸಮಾನತೆಗಳು ವಿಸ್ತಾರಗೊಳ್ಳುತ್ತಿವೆ ಮತ್ತು ಈಗ ಅಸಮಾನತೆಗಳು ಹೆದರಿಸುವ ಪ್ರಮಾಣಗಳನ್ನು ಪಡೆದಿವೆ.

ಈ ಬೆಳವಣಿಗೆಗೆ ಒಂದು ಪ್ರಮುಖವಾದ ಕಾರಣವೆಂದರೆ ತೀವ್ರವಾದ ನಗರ ಪಕ್ಷಪಾತದಿಂದಾಗಿ ಕೃಷಿ ಮತ್ತು ಕೈಗಾರಿಕೆಗಳಲ್ಲಿ ಉಳಿಸಿದ ಸಂಪನ್ಮೂಲಗಳು ಹೆಚ್ಚಾಗಿ ಪಟ್ಟಣ ಮತ್ತು ಮಹಾನಗರಗಳಿಗೆ ಹೋಗಿರುವುದು. ನಗರ ಪಕ್ಷಪಾತದ ಮೊದಲ ಗುರಿಯು ಮೊದಲನೆ ಯೋಜನೆಯಲ್ಲಿ ಕಂಡು ಬಂದಿತು. ಆಗ ಕೈಗಾರಿಕಾ ಉತ್ಪನ್ನಗಳು ಮತ್ತು ಮಜೂರಿಗಳಲ್ಲಿ ಬೆಲೆ ಏರಿಕೆಯನ್ನು ತಡೆಯಲು ಕೃಷಿ ಬೆಲೆಗಳನ್ನು ಕೆಳಗಿಡಬೇಕೆಂದು ಪ್ರಸ್ತಾಪಿಸಲಾಗಿತ್ತು.

ಎರಡನೆಯ ಯೋಜನೆಯಲ್ಲಿ ಮಾತ್ರ ಗ್ರಾಮೀಣ ಭಾರತ ಪುನರ್ನಿರ್ಮಾಣವನ್ನು ಅಪೇಕ್ಷಿಸಿತು. ಆದರೆ ನಿರಂತರವಾದ ಅನುಕರಣೆ ಅಲ್ಲಿಂದಾಚೆಗೆ ಇರಲಿಲ್ಲ. ಗ್ರಾಮ-ನಗರ ಅಸಮಾನತೆಯು ದಿಗ್ಭ್ರಮೆಗೊಳಿಸುವ ಪ್ರಮಾಣವನ್ನು ತಲುಪಿದ್ದು ಅವುಗಳ ನಡುವೆ ಅಸಾಮರಸ್ಯವನ್ನು ಪ್ರಚೋದಿಸಿದೆ.

ನೀತಿ ರೂಪಕರು ನಗರ-ಗ್ರಾಮ ಸಮತೋಲನ ಅಭಿವೃದ್ಧಿಯ ವಿಷಯಗಳ ಬದಲು ಕೈಗಾರಿಕೀಕರಣದ ವಿಷಯದಲ್ಲಿ ಒಂದು ರಾಜ್ಯವು ಇನ್ನೊಂದು ರಾಜ್ಯದ ಜೊತೆಯಲ್ಲಿ ಹೇಗೆ ಹೋಲುತ್ತದೆ ಎಂಬುದನ್ನು ಮುಂದುವರಿಸುತ್ತಾರೆ. ನಗರದ ಕಡೆಗಿನ ಪಕ್ಷಪಾತವು ಸಂಪನ್ಮೂಲಗಳ ಮತ್ತು ಸೇವೆಗಳ ಪಾಲು ರಕ್ಷಿಸಿಕೊಳ್ಳಲಾಗದ ವಿಷಯವಾಗಿದ್ದು, ಗ್ರಾಮೀಣ ಪ್ರದೇಶಗಳಿಗೆ ಅಷ್ಟೇ ಹಂಚಿಕೆ ಮಾಡಿದರೆ ಸರಿಯಾದ ಪ್ರಯೋಜನಗಳನ್ನು ಪಡೆಯುವ ಸಾಧ್ಯತೆಯನ್ನು ಕಡೆಗಣಿಸಿ ಕ್ರಮಾಗತವಾಗಿ ನಗರ ಪ್ರದೇಶಗಳಿಗೆ ಅವುಗಳನ್ನು ಪಂಚಲಾಗುತ್ತಿದೆ. ಈ ನಗರ ಪಕ್ಷಪಾತವು ನಗರದ ಅಧಿಕಾರ ಕ್ಲಬ್ಬುಗಳ ಕುಟಿಲೋಪಾಯದ ಪರಿಣಾಮವಾಗಿದ್ದು ಈ ಕ್ಲಬ್ಬಿನಲ್ಲಿ ರಾಜಕಾರಣಿಗಳು, ಸರಕಾರಿ ನೌಕರರು, ವಿಶ್ವವಿದ್ಯಾನಿಲಯದ ಅಧ್ಯಾಪಕರು, ವ್ಯಾಪಾರಗಾರರು, ಸಂಘದ ನೇತಾರರು ಮತ್ತು ಶ್ರೀಮಂತ ರೈತರಿದ್ದು ಅವರು ಸರಕಾರದಲ್ಲಿ ಅಧಿಕಾರ ಹೋರಾಟದ ಕೇಂದ್ರದಲ್ಲಿದ್ದು ಆಧುನೀಕರಣದ ಅಸಮ ಪ್ರಮಾಣದ ಪ್ರಯೋಜನದಿಂದ ಸುಖಪಡಲು ನೋಡುತ್ತಿರುತ್ತಾರೆ.

ಮೂಲಭೂತ ಕನಿಷ್ಠ ಅಗತ್ಯಗಳ ಮೇಲೆ ನಗರ ಮತ್ತು ಗ್ರಾಮೀಣ ಭಾರತದಲ್ಲಿನ ಅಂಕಿಅಂಶಗಳು ಪ್ರತ್ಯೇಕವಾಗಿ ಸಿದ್ಧವಾಗಿ ದೊರೆಯುತ್ತಿಲ್ಲ. ಉದಾಹರಣೆಗೆ ಕರ್ನಾಟಕದಲ್ಲಿನ ಗ್ರಾಮೀಣ-ನಗರ ಅಸಮಾನತೆಯನ್ನು ಈ ಕೆಳಗೆ ಕೊಟ್ಟಿದೆ.

ಶೌಚಗೃಹಗಳು : ಗ್ರಾಮೀಣ ಶೇ. ೮, ನಗರ ಶೇ. ೬೯. ಸಾಕ್ಷರತೆ: ಗ್ರಾಮೀಣ ಶೇ. ೩೫, ನಗರ ಶೇ.೬೮. ಬಡತನ ಪ್ರಮಾಣ. ಗ್ರಾಮೀಣ ಶೇ. ೩೦, ನಗರ ಶೇ. ೪೦. ೧೦,೦೦೦ಸಾವಿರ ಹಳ್ಳಿಗಳಿಗೆ ನೀರಿನ ಸೌಕರ್ಯವಿಲ್ಲ. ೫೦೦೦ ಹಳ್ಳಿಗಳಲ್ಲಿ ಕಲುಷಿತ ನೀರಿದ್ದು ಹೆಚ್ಚಿನ ಪ್ರಮಾಣದಲ್ಲಿ (flourosis) ಫ್ಲೂರೋಸಿಸ್ ಆಗುತ್ತದೆ. ಶೇ.೮೬ ರಷ್ಟು ಹಳ್ಳಿಗಳಿಗೆ ಕಕ್ಕಸುಗಳಿಲ್ಲ.

ಗ್ರಾಮೀಣ ಮತ್ತು ನಗರ ಭಾರತಕ್ಕೆ ತಲಾ ಆದಾಯವು ಸಿದ್ಧವಾಗಿ ದೊರೆಯುತ್ತಿಲ್ಲ. ವಿಸ್ತಾರವಾಗಿ, ಗ್ರಾಮೀಣ ತಲಾ ಆದಾಯವು ನಗರ ತಲಾ ಆದಾಯದ ಸುಮಾರು ಶೇ. ೩೫-೪೦ರಷ್ಟು ಇವೆ. ಆದರೂ, ಕರ್ನಾಟಕದಲ್ಲಿ ದೊರೆಯುತ್ತಿರುವ ೧೯೯೩-೯೪ ರ ಅಂಕಿಗಳು ತೋರಿಸುವುದೇನೆಂದರೆ ಹಳ್ಳಿಯ ತಲಾ ಆದಾಯವು ರೂ. ೬೦೦೦ ಇದ್ದು, ನಗರ ಪ್ರದೇಶದ ತಲಾ ಆದಾಯವು ರೂ. ೧೧,೭೯೩ ಇದ್ದಿತು. ಭಾರತದಲ್ಲಿ, ಗ್ರಾಮೀಣ ಪ್ರದೇಶದ ತಲಾ ಆದಾಯವು ೫೭೮೩ ರೂ. ಇದ್ದು, ನಗರದ ತಲಾ ಆದಾಯವು ರೂ. ೧೩೫೨೫ ಇದ್ದಿತು. ರಾಷ್ಟ್ರೀಯ ಮಟ್ಟಕ್ಕೆ ಮತ್ತು ಹೆಚ್ಚಿನ ಇತರ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕದಲ್ಲಿ ಗ್ರಾಮ-ನಗರ ಅಸಮಾನತೆಯು ಕಡಿಮೆಯಿದೆ.

## ನಗರದ ಅಧಿಕಾರ ಕ್ಲಬ್ಬುಗಳು :

ನಿರ್ಣಯದ ಕಾರ್ಯ ವಿಧಾನದಲ್ಲಿ ನಗರ ಪಕ್ಷಪಾತವು ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ಈ ಕೆಳಗಿನ ಉದಾಹರಣೆಗಳಿಂದ ಕಾಣಬಹುದು.

೧. ಬೆಲೆ ಸ್ಥಿರತೆಯ ಹೆಸರಿನಲ್ಲಿ ನಗರ ಪ್ರದೇಶಗಳಲ್ಲಿ ವ್ಯವಸ್ಥಿತ ವರ್ಗಗಳಿಗೋಸ್ಕರ ಆಹಾರ ಧಾನ್ಯದ ಬೆಲೆಗಳನ್ನು ಉದ್ದೇಶಪೂರ್ವಕವಾಗಿ ಇಳಿಮುಖಗೊಳಿಸಲಾಗುತ್ತದೆ.

೨. ಕೃಷಿ ಮಜೂರಿಗಳನ್ನೂ ಕೂಡ ಕೆಳಮಟ್ಟದಲ್ಲಿ ನಿಗದಿಪಡಿಸಲಾಗುತ್ತದೆ.

೩. ಗ್ರಾಮೀಣ ಪ್ರದೇಶಗಳಿಗೆ ದೊರಕುವ ವಿದ್ಯುಚ್ಛಕ್ತಿ ಪ್ರಮಾಣವನ್ನು ಕಡಿಮೆಗೊಳಿಸಲಾಗುತ್ತದೆ.

೪. ಗ್ರಾಮೀಣ ಪ್ರದೇಶಗಳಿಗೆ ಕೈಗಾರಿಕೆಗಳು ಹೋಗುವಂತೆ ಮಾಡಲು ಪೂರಕ ಸೌಲಭ್ಯಗಳನ್ನು ಅಭಿವೃದ್ಧಿಪಡಿಸಿಲ್ಲ.

೫. ಸಾಗಣೆಯಲ್ಲಿ ರಾಷ್ಟ್ರೀಯ ಹೆದ್ದಾರಿಗಳು, ರಾಜ್ಯ ಹೆದ್ದಾರಿಗಳು ಮತ್ತು ವಿಮಾನ ನಿಲ್ದಾಣಗಳಿಗೆ ಆದ್ಯತೆ ದೊರೆಯುತ್ತದೆ.

೬. ನಗರ ಪ್ರದೇಶಗಳಿಗೆ ಹೋಲಿಸಿದರೆ ಗ್ರಾಮೀಣ ಪ್ರದೇಶದಲ್ಲಿ ಆಸ್ಪತ್ರೆಗಳು ಮತ್ತು ಅವುಗಳ ಸ್ಥಿತಿಗಳು ಶೋಚನೀಯವಾಗಿದೆ.

೭. ಹೆಚ್ಚಿನ ಗ್ರಾಮಗಳಿಗೆ ಕೊಳವೆಯಲ್ಲಿ ನೀರು ಸರಬರಾಜು ಇನ್ನೂ ಒಂದು ಕನಸು.

೮. ಭೂ ಸುಧಾರಣೆಯಡಿಯಲ್ಲಿ ಭೂ ಪರಿಮಿತಿ ಇದೆ. ಆದರೆ ನಗರದ ಆಸ್ತಿಯ ಮೇಲೆ ಅಂತಹ ಪರಿಮಿತಿಯಿಲ್ಲ.

೯. ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಮುಖ್ಯವಾದ ಅನುಕೂಲಗಳು ರಾಜ್ಯ ಮತ್ತು ಜಿಲ್ಲಾ ಮುಖ್ಯ ಸ್ಥಳಗಳಿಗೆ ಮತ್ತು ಕೆಲವು ಪ್ರಮುಖ ಪಟ್ಟಣಗಳಿಗೆ ಹೆಚ್ಚು ಕಡಿಮೆ ಮೀಸಲಾಗಿದೆ.

ನಗರದಿಂದ ಹಳ್ಳಿಗಳಿಗೆ ಸಂಪನ್ಮೂಲಗಳನ್ನು ಏಕೆ ಒಯ್ಯಬಾರದು? ಇದಕ್ಕೆ ಉತ್ತರ ನೀಡುತ್ತಾ ದಕ್ಷತೆಯು ಹಳ್ಳಿಯ ಆರ್ಥಿಕತೆಯಲ್ಲಿ ಸಾಧ್ಯವಿಲ್ಲವೆಂಬ ಪಾರೋಷಿಯನ್ ದಕ್ಷತೆಯ ಮಾನದಂಡವನ್ನು ಉಲ್ಲೇಖಿಸಲಾಗುತ್ತದೆ. ಕಲ್ಯಾಣವನ್ನು ಗರಿಷ್ಠಗೊಳಿಸುವುದಕ್ಕೆ ದೀರ್ಘಕಾಲದ ವರಮಾನವನ್ನು ಹಂಚುವ ಮಾನದಂಡದ ಸರಿಯಾದ ಗುರುತನ್ನು ಕೊಡುತ್ತಿಲ್ಲ. ತತ್ವಶಃ ಮತ್ತು ಕಾರ್ಯಶಃ ನಗರದಿಂದ ಹಳ್ಳಿಗಳಿಗೆ ಸಂಪನ್ಮೂಲಗಳನ್ನು ಬದಲಾಯಿಸುವುದರಿಂದ ಸಂಪನ್ಮೂಲಗಳ ದಕ್ಷತೆಯನ್ನು ಉತ್ತಮಪಡಿಸುವುದು ಸಾಧ್ಯ. ಆದರೆ ಇದನ್ನು ಗುರುತಿಸಲಾಗಿಲ್ಲ.

ಗ್ರಾಮೀಣ ಪ್ರದೇಶಗಳಿಗೆ ಸಂಪನ್ಮೂಲಗಳ ವರ್ಗಾವಣೆಯಿಂದ ಉಳಿತಾಯದ ಸರಬರಾಜು ವಿಸ್ತಾರವಾಗುವುದಿಲ್ಲ ಎಂದು ಕೆಲವು ಅರ್ಥಶಾಸ್ತ್ರಜ್ಞರು ವಾದ ಮಾಡಿದ್ದಾರೆ. (ಕಾಲ್ಡೋರ್, ರೋಸ್ಟೋವ್) ಉಳಿತಾಯದ ವಾದವನ್ನು ತುಂಬಾ ಮುಂದಕ್ಕೆ ತೆಗೆದುಕೊಂಡು ಹೋದರೆ ಗ್ರಾಮೀಣ ಜೀವನವನ್ನು ಬದಲಾಯಿಸುವುದಕ್ಕೆ ಕಡಿಮೆ ಅವಕಾಶವಿರುತ್ತದೆ. ನಗರದ ಅಧಿಕಾರವಿರುವ ಗಣ್ಯರು ತಮ್ಮ ಹಿತಾಸಕ್ತಿ ಮತ್ತು ಭದ್ರತೆಯ ದೃಷ್ಟಿಯಿಂದ ಗ್ರಾಮೀಣ ಅಭಿವೃದ್ಧಿಯು ಅಗತ್ಯ ಎಂಬುದನ್ನು ಅರಿತುಕೊಳ್ಳುವುದಿಲ್ಲ. "ಶೋಷಣೆಯು ಬಿಳಿಮುಖದಂತೆ ಸುಲಭವಾಗಿ ಕಪ್ಪು ಅಥವಾ ಕಂದು ಮುಖವನ್ನು ಹೊಂದಬಹುದು. ಅದರ ವಿಧಿತ ಕ್ರಮವು ಮುಖ್ಯವಾಗಿ ನಗರ-ಗ್ರಾಮವಾಗಿರುತ್ತದೆ".

ಗ್ರಾಮೀಣ ಪ್ರದೇಶಗಳಿಗೆ ಯೋಜನೆಯಲ್ಲಿ ಅಭಿವೃದ್ಧಿ ವೆಚ್ಚವು ಮೊದಲನೆ ಯೋಜನೆಯಲ್ಲಿದ್ದ ಶೇ. ೫೧ ರಿಂದ ಈಗ ಸುಮಾರು ಶೇ. ೩೫ಕ್ಕೆ ಇಳಿದಿದೆ. ೯ನೇ ಯೋಜನೆಯಲ್ಲಿ ಪ್ರಮುಖ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹಂಚಿಕೆಯು ೧೯೯೭ ಮತ್ತು ೨೦೦೦ದ ನಡುವೆ ಇಳಿಯಿತು. ಹಂಚಿಕೆಯ ೭,೫೩೪ಕೋಟಿ ರೂಗಳಿಗೆ ಬದಲಾಗಿ ನೈಜ ವೆಚ್ಚವು ೪,೪೦೦ ಕೋಟಿ ರೂ. ಗಳಾಗಿದ್ದವು. ಹಾಗಾಗಿ ಹಂಚಲಾದ ಹಣವನ್ನು ಉಪಯೋಗಿಸುವುದರಲ್ಲಿ ತುಂಬಾ ಅದಕ್ಷತೆ ಇದೆ. ನಗರ ಗ್ರಾಮೀಣದ ಅವಕಾಶದ ಆಧಾರಕ್ಕಿಂತ ಕ್ಷೇತ್ರೀಯ ಆಧಾರದ ಮೇಲೆ ವೆಚ್ಚವನ್ನು ಸಾಮಾನ್ಯವಾಗಿ ಮಾಡಿದಾಗ ಈ ಪ್ರಮಾಣವನ್ನು ಲೆಕ್ಕ ಮಾಡುವುದು ಬಹಳ ಕಷ್ಟ. ಆದರೂ ಕೆಲವು ವಿಧಾನಗಳನ್ನು ಅಭಿವೃದ್ಧಿಪಡಿಬಹುದು. ಗ್ರಾಮೀಣ ಆರ್ಥಿಕತೆಗೆ ಯೋಜನಾ ವೆಚ್ಚವು ೬೦ ಶೇ. ಕ್ಕಿಂತ ಕಡಿಮೆಯಾಗಬಾರದು. ಏಕೆಂದರೆ ಈಗಲೂ ಕೂಡ ಶೇ. ೭೦ ರಷ್ಟು ಜನಸಂಖ್ಯೆಯು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಾರೆ ಎಂಬ ಆಧಾರದ ಮೇಲೆ ಅಭಿವೃದ್ಧಿಪಡಿಸಬೇಕು.

ಗ್ರಾಮೀಣ ಆರ್ಥಿಕತೆಯಿಂದ ಹೆಚ್ಚಿನ ಉಳಿತಾಯ ಸಾಧ್ಯವಿಲ್ಲ ಎಂದು ಹೇಳುವುದು ಸರಿಯಲ್ಲ. ಈಗಿರುವಂತೆ ದೊರಕುವ ಅಂಕಿಅಂಶವು ತೋರಿಸುವುದೇನೆಂದರೆ ೩.೨೬ ಲಕ್ಷ ಕೋಟಿ ರೂ.ಗಳ ಠೇವಣಿಯು ಗ್ರಾಮೀಣ ಮತ್ತು ಅರೆ ನಗರ ಶಾಖೆಗಳಿಂದ ಬರುತ್ತಿದ್ದು ಒಟ್ಟು ಠೇವಣಿಯಾದ ೯.೫೦ ಲಕ್ಷ ಕೋಟಿ ರೂ.ಗಳ ಶೇ.೩೫ ರಷ್ಟು ಇರುತ್ತದೆ. ೬೫,೯೦೮ ಬ್ಯಾಂಕು ಶಾಖೆಗಳಲ್ಲಿ ಸುಮಾರು ೩೨,೦೦೦ ಶಾಖೆಗಳು ಗ್ರಾಮೀಣ ಪ್ರದೇಶಗಳಲ್ಲಿ ಸ್ಥಾಪಿತವಾಗಿವೆ ಎಂಬುದನ್ನು ಗಮನಿಸಬೇಕು. ಆದರೂ ಗ್ರಾಮೀಣ ಪ್ರದೇಶಗಳಲ್ಲಿ ಮುಂಗಡಗಳು ಕೇವಲ ೫೬,೦೦೦ ಕೋಟಿ ರೂ.ಗಳಾಗಿದ್ದು ಒಟ್ಟು ಮುಂಗಡವಾದ ೫,೫೬,೦೦೦ ಕೋಟಿ ರೂ.ಗಳ ಶೇ.೧೦ ಭಾಗವಾಗಿದೆ. ಅರೆ-ನಗರ ಪ್ರದೇಶಗಳಲ್ಲಿ ಮುಂಗಡಗಳು ೬೩,೦೦೦ ಕೋಟಿ ರೂ. ಗಳಿದ್ದು ಅದು ಶೇ.೧೧ ರಷ್ಟಾಗುತ್ತದೆ. ಹಾಗಾಗಿ ಒಟ್ಟು ಮುಂಗಡಗಳ ಶೇ.೨೧ ರಷ್ಟು ಮಾತ್ರ ಗ್ರಾಮೀಣ ಪ್ರದೇಶದ್ದಾಗಿರುತ್ತದೆ. ಇದನ್ನು ಹೇಗೆ ನೋಡ ಬಹುದೆಂದರೆ ಗ್ರಾಮೀಣ ಠೇವಣಿಯು ೧,೪೬,೦೦೦ ಕೋಟಿ ರೂ. ಗಳಾಗಿದ್ದು ಗ್ರಾಮೀಣ ಪ್ರದೇಶಗಳಲ್ಲಿ ನೀಡುವ ಸಾಲವು ಕೇವಲ ೫೬,೦೦೦ ಕೋಟಿ ರೂ. ಗಳಾಗಿವೆ. ಇನ್ನೂ ಆಶ್ಚರ್ಯಕರ ಸಂಗತಿಯೆಂದರೆ ಸಣ್ಣ ರೈತರು, ಅತಿ ಸಣ್ಣ ರೈತರು ಮತ್ತು ಭೂರಹಿತ ಕೃಷಿ ಕಾರ್ಮಿಕರಿರುವ ದೇಶದಲ್ಲಿ ೨೫,೦೦೦ ರೂ.ಗಳಿಗಿಂತ ಕಡಿಮೆ ಇರುವ ಸಾಲವು ಕೇವಲ ೧೨,೦೦೦ ಕೋಟಿ ರೂ.ಗಳಾಗುತ್ತವೆ. ಆದ್ದರಿಂದ ಹೂಡಿಕೆ ಮತ್ತು ಸಾಲದ ವಿಷಯದಲ್ಲಿ ಗ್ರಾಮೀಣ ಆರ್ಥಿಕತೆಯನ್ನು ಬಹಳ ಪಕ್ಷಪಾತವಾಗಿ ನೋಡಲಾಗುತ್ತಿದೆ.

ಕೃಷಿ ಬೆಲೆ ನಿಗದಿ ಮತ್ತು ಗ್ರಾಮೀಣ ಕೆಲಸಗಾರರಿಗೆ ಮಜೂರಿ ನೀತಿಯ ಮಾರ್ಗವನ್ನು ತೀವ್ರವಾಗಿ ಬದಲಾಯಿಸಬೇಕಾದ ತುರ್ತು ಅಗತ್ಯವಿದೆ. ಅವರಿಗೆ ಕೃಷಿಯೇತರ ಉತ್ಪನ್ನಗಳಿಗೆ ಸಮನಾಗುವಂತೆ ಬೆಲೆ ಸಿಗಬೇಕು ಮತ್ತು ಮಜೂರಿಯ ಜೀವನ ವೆಚ್ಚಕ್ಕೆ ಸಮನಾಗಿ ದೊರೆಯಬೇಕು. ನಗರದ ಆರ್ಥಿಕತೆಯಲ್ಲಿ ವ್ಯವಸ್ಥಿತ ಕಾರ್ಮಿಕರ ವಿಷಯದಲ್ಲಿ ಕಂಡುಬರುವಂತೆ ಅನಿವಾರ್ಯವಾದ ಸಾಮಾಜಿಕ ಭದ್ರತೆ ಇರಬೇಕು. ಬೆಲೆ ಸ್ಥಿರತೆಯ ವಿಷಯದಲ್ಲಿ ಸಮಾಜದಲ್ಲಿ ಉತ್ತಮ ಸ್ಥಿರತೆಯಲ್ಲಿರುವ ನಗರವಾಸಿಗಳಿಗೆ ರೈತರು ತ್ಯಾಗ ಅಥವಾ ಅನುದಾನ ನೀಡುವಂತೆ ಮಾಡಬಾರದು. ಈ ಸನ್ನಿವೇಶದಲ್ಲಿ ಈ ಪ್ರಶ್ನೆಯನ್ನು ಕೇಳಬಹುದು: ಯಾರಿಗಾಗಿ ಈ ಬೆಲೆ ಸ್ಥಿರತೆ? ಇನ್ನೊಂದು ಸುಸಂಬದ್ಧ ಪ್ರಶ್ನೆ ಏನಾಗಿರಬೇಕೆಂದರೆ, ಸ್ಥಿರತೆಗಾಗಿ ಕೃಷಿ ವಸ್ತು ಸಂಗ್ರಹಣೆಯಿದ್ದರೆ ಗ್ರಾಮೀಣ ಪ್ರದೇಶದ ಉಪಯೋಗಕ್ಕೆ ಕಡಿಮೆ ಬೆಲೆಯಲ್ಲಿ ಕೈಗಾರಿಕಾ ಉತ್ಪನ್ನಗಳನ್ನು ಹಾಗೆಯೇ ಏಕೆ ಕಡ್ಡಾಯ ಸಂಗ್ರಹಮಾಡಬಾರದು? ಪುನಃ ಭೂ ಮಿತಿ ವಿಷಯದಲ್ಲಿರುವಂತೆ ನಗರದ ಆಸ್ತಿಯ ಮಾಲೀಕತ್ವದ ಮೇಲೆ ಏಕೆ ಮಿತಿ ಇರಬಾರದು? ಗ್ರಾಮೀಣ ಆರ್ಥಿಕತೆಯ ಬಗ್ಗೆ ಪಕ್ಷಪಾತವು ಹೋಗಬೇಕು. ಗ್ರಾಮೀಣ ಆರ್ಥಿಕತೆಯು ವರಮಾನ ತೆರಿಗೆಯಿಂದ ವಿನಾಯಿತಿ ಪಡೆದಿದೆ ಎಂದು ಕೆಲವರು ವಾದ ಮಾಡುತ್ತಾರೆ. ಗ್ರಾಮೀಣ ಆರ್ಥಿಕತೆಯಲ್ಲಿ ನೀರು ಮತ್ತು ವಿದ್ಯುಚ್ಛಕ್ತಿಯ ಉಪಯೋಗಕ್ಕೆ ಸರಿಯಾದ ಉಪಯೋಗ ದರಗಳ ಬಗ್ಗೆ ನಾನು ವಾದ ಮಾಡಿದ್ದರೂ, ಕೃಷಿ ಉತ್ಪನ್ನಗಳಿಗೆ ಲಾಭದಾಯಕ ಬೆಲೆ ದೊರೆಯುವಂತೆ ಸರಕಾರವು ಜಾಗರೂಕತೆ ವಹಿಸಬೇಕು. ಅವುಗಳ ಪರಿಷ್ಕರಣಕ್ಕೆ ಮತ್ತು ದಾಸ್ತಾನಿಗೆ ಸೌಕರ್ಯಗಳು ಮತ್ತು ಬೆಲೆಯು ತೀವ್ರವಾಗಿ ಬಿದ್ದು ಹೋದಾಗ ಮಾರುಕಟ್ಟೆಯಲ್ಲಿ ಸರಕಾರವು ತಕ್ಷಣ ಹಸ್ತಕ್ಷೇಪ ಮಾಡಬೇಕು. ವಿಶೇಷವಾಗಿ ಕಳೆದ ಎರಡು ವರ್ಷಗಳಿಂದ ಅದು ಆಗಿಲ್ಲ, ಇದು ಗ್ರಾಮೀಣ ಆರ್ಥಿಕತೆಯ ಪೂರ್ಣ ನಿರ್ಲಕ್ಷ್ಯಕ್ಕೆ ಸರಕಾರದ ಕಣ್ಣು ತೆರೆಸುವಂತಾಗಬೇಕು.

ಈ ಮುಂದೆ ಸಲಹೆ ಮಾಡುವುದೇನೆಂದರೆ ಈಗ ಕೈಗಾರಿಕಾ ಮತ್ತು ನಗರ ಚೌಕಟ್ಟಿಗೆ ಮಿತಿಗೊಂಡಿರುವ ಯೋಜನೆಯ ದೃಶ್ಯದಿಂದ ಕ್ಷೇತ್ರೀಯ ದೃಶ್ಯಕ್ಕೆ ಬದಲಾಗಬೇಕೆಂದು ಒತ್ತಾಯ ಮಾಡಲಾಗಿದೆ. ಈಗ ನೀತಿ ರೂಪಿಸುವಿಕೆಯು ಪಾವತಿ ಶುಲ್ಕಗಳ ಸ್ಥಿತಿ, ಮುಖ್ಯ ಸರಕುಗಳಲ್ಲಿ ಉತ್ಪಾದನೆಯ ಪ್ರವೃತ್ತಿಗಳು ದೊಡ್ಡ ಸೂಚಕಗಳು. ಬೃಹತ್ ಮಟ್ಟದಲ್ಲಿ ಬೆಲೆ ಪ್ರವೃತ್ತಿಯ ವಿಶ್ಲೇಷಣೆಗಳ ವಿಷಯಗಳ ಮೇಲೆ ಈಗ ನಿಗದಿಯಾಗುತ್ತಿದ್ದು ಗ್ರಾಮೀಣ ದೃಶ್ಯದಲ್ಲಿ ಏನು ಬದಲಾವಣೆಯಾಗುತ್ತಿದೆ ಎಂಬುದರ ಸರಿಯಾದ ಚಿತ್ರಣವನ್ನು ಕೊಡುವುದಿಲ್ಲ ಎಂದು ನಾನು ಹೇಳಬೇಕು. ಆದ್ದರಿಂದ ಬಜೆಟ್ಟಿನ ನಮೂನೆ ಮತ್ತು ವಿಷಯದಲ್ಲಿ ತೀವ್ರವಾದ ಬದಲಾವಣೆಯನ್ನು ಸಲಹೆ ಮಾಡುತ್ತೇನೆ. ಚರ್ಚೆಯು ಗ್ರಾಮೀಣ ಮಟ್ಟದಲ್ಲಿ ಆಗಿದ್ದು ಕುಡಿಯುವ ನೀರಿನ ದೊರಕುವಿಕೆ, ಉತ್ತಮ ರಸ್ತೆಗಳು, ಉತ್ತಮ ನೈರ್ಮಲ್ಯ, ಉತ್ತಮ ಶಾಲೆಗಳು, ಉತ್ತಮ ಆಸ್ಪತ್ರೆಗಳು, ಉತ್ತಮ ದಾಸ್ತಾನು ಮತ್ತು ಸಾಲ ಸೌಲಭ್ಯಗಳು ಮುಂತಾದಂತಹವುಗಳಲ್ಲಿ ಗ್ರಾಮೀಣ ಆರ್ಥಿಕತೆಯ ಅಭಿವೃದ್ಧಿಯ ಮೇಲೆ ಒತ್ತು ಕೊಡುವ ಸೂಚಕಗಳ ಬಗ್ಗೆ ಉಲ್ಲೇಖಿಸಬೇಕು. ಬೆಲೆಗಳು ಮತ್ತು ಮಜೂರಿ ನೀತಿಗಳಿಗೆ ಆದ್ಯತೆಯ ಗಮನಕೊಡಬೇಕು. ಅದರಲ್ಲಿಯೂ ಕೃಷಿಕ್ಷೇತ್ರದಲ್ಲಿ ಮಾರುಕಟ್ಟೆಗಳು ಸರಿಯಾಗಿರುವುದಿಲ್ಲ ಎಂಬುದನ್ನು ಅರಿತುಕೊಂಡಿರಬೇಕು. ಸಂಪನ್ಮೂಲ ನಿರ್ಬಂಧಗಳಿದ್ದು, ಹಣವನ್ನು ಒದಗಿಸುವುದರಲ್ಲಿ ನಗರದ ಕಡೆಗೆ ಪಕ್ಷಪಾತವು ನಿಲ್ಲಬೇಕು ಮತ್ತು ಒಟ್ಟಾರೆ ಆರ್ಥಿಕತೆಯಲ್ಲಿ ಹೆಚ್ಚಿನ ಬೆಳವಣಿಗೆಯ ಜೀವನಾಧಾರವನ್ನು ಒದಗಿಸುವುದಲ್ಲದೆ ಅಗತ್ಯವಾದ ಬದಲಾವಣೆಗಳನ್ನೂ ಗ್ರಾಮೀಣ ಪ್ರದೇಶಗಳಲ್ಲಿ ತರುವುದಕ್ಕೆ ಸಂಪನ್ಮೂಲಗಳನ್ನು ಅಲ್ಲಿಗೆ ವರ್ಗಾಯಿಸಬೇಕು. ನಿಸ್ಸಂದೇಹವಾಗಿ ಇದು ರಾಜಕೀಯ ಆರ್ಥಿಕತೆಯ ಸಮಸ್ಯೆಯಾಗಿದ್ದು ಕೇವಲ ತಾಂತ್ರಿಕತೆಯ ಪ್ರಶ್ನೆಯಲ್ಲ. ರಾಜಕೀಯ ದೃಢತೆ ಅಗತ್ಯ ಎಂದು ಹೇಳಿಕೊಂಡು ಅಸಹಾಯಕತೆ ಹೇಳುವುದನ್ನು ನಾವು ನಿಲ್ಲಿಸಬೇಕು. ಜನರ ದೃಢತೆ ನಿಲ್ಲಬೇಕು. ರೈತರು ಮತ್ತು ಕೃಷಿ ಕಾರ್ಮಿಕರೂ ಸೇರಿದಂತೆ ಗ್ರಾಮೀಣ ಜನರು ಒಗ್ಗೂಡಬೇಕು ಮತ್ತು ಗ್ರಾಮೀಣ ಪ್ರದೇಶಗಳಿಗೆ ಹೆಚ್ಚಿನ ಸಂಪನ್ಮೂಲಗಳನ್ನು ಒದಗಿಸುವಂತೆ ಸರಕಾರದ ಮೇಲೆ ಅಗತ್ಯವಾದ ಒತ್ತಡವನ್ನು ತರಬೇಕು. ಅಭಿವೃದ್ಧಿ ಕಾರ್ಯಕ್ರಮಗಳು ಕಾಲ ಮಿತಿಯೊಳಗೆ ಪರಿಣಾಮಕಾರಿಯಾಗಿ ಅನುಷ್ಠಾನವಾಗುವಂತೆ ಒತ್ತಡ ಹೇರಬೇಕು.

ವರಮಾನ ಮತ್ತು ಪ್ರಗತಿಯಲ್ಲಿ ಗ್ರಾಮ-ನಗರ ಅಸಮಾನತೆಗಳನ್ನು ಕಡಿಮೆ ಮಾಡುವುದಕ್ಕೆ ಇಲ್ಲವೆ ಹೋಗಲಾಡಿಸುವುದಕ್ಕೆ ಎನ್.ಸಿ.ಎ.ಇ.ಆರ್. (ನ್ಯಾಷನಲ್ ಕೌನ್ಸಿಲ್ ಆಫ್ ಅಪ್ಲೈಡ್ ಎಕನಾಮಿಕ್ ರಿಸರ್ಚ್) ನಂತಹ ರಾಷ್ಟ್ರೀಯ ಆರ್ಥಿಕ ಸಂಶೋಧನೆ ಸಂಸ್ಥೆಯ ದೂರದೃಷ್ಟಿಯು ಈ ವ್ಯಾಕುಲದಲ್ಲಿ ಭಾಗಿಯಾಗುವುದಿಲ್ಲ. ಕೇವಲ ಎರಡು ದಿನಗಳ ಹಿಂದೆ ಕೃಷಿಕ್ಷೇತ್ರದಲ್ಲಿ ಹೆಚ್ಚಿನ ಬೆಳವಣಿಗೆಯು (ಶೇ. ೫.೧ರಷ್ಟು) ಗ್ರಾಮೀಣ ಪ್ರದೇಶದ ಜನರಿಗೆ ಪ್ರಯೋಜನವಾಗಬಹುದು. ಆದರೆ ಕೃಷಿಯೇತರ ಕ್ಷೇತ್ರಗಳಲ್ಲಿ ಬೇಡಿಕೆಯನ್ನು ಹೆಚ್ಚಿಸಲು ಇದು ಸಾಕಾಗುವುದಿಲ್ಲ ಎಂಬ ಫಲಿತಾಂಶ ತಿಳಿಸಿದ್ದಾರೆ. ಈ ಆಧಾರದ ಮೇಲೆ ನಾವು ಇಲ್ಲಿಯವರೆಗೆ ಮಾಡಿದಂತೆ ಗ್ರಾಮೀಣ ಆರ್ಥಿಕತೆಯನ್ನು ನಿರ್ಲಕ್ಷಿಸುವುದಾದರೆ "ಗ್ರಾಮೀಣ ಭಾರತವು" 'ನೈಜ ಭಾರತ' ಎಂಬ ಅಂಶದಿಂದ 'ಗ್ರಾಮೀಣ ಭಾರತ' ಮತ್ತು "ನಗರ ಭಾರತ" ಎಂಬ ಇನ್ನೂ ಹೆಚ್ಚಿನ ವಿಭಜನೆಯನ್ನು ಪೋಷಿಸಿದಂತಾಗುತ್ತದೆ.

# ಸಹಬಂಧ

## ಗ್ರಾಮೀಣ-ನಗರ ಅಸಮತೆ-ಕೆಲವು ಆಯ್ದ ಸೂಚ್ಯಾಂಕಗಳು

| ವರ್ಷ | | | ೧೯೮೫ | | ೨೦೦೦ | |
|---|---|---|---|---|---|---|
| ಕ್ರಮ ಸಂಖ್ಯೆ | ವಿಷಯ | ಘಟಕ ಪ್ರದೇಶ | ಗ್ರಾಮೀಣ ಪ್ರದೇಶ | ನಗರ ಪ್ರದೇಶ | ಗ್ರಾಮೀಣ ಪ್ರದೇಶ | ನಗರ ಪ್ರದೇಶ |
| ೧ | ಜನಸಂಖ್ಯೆ | ಕೋಟಿಗಳು | ೫೭.೫ | ೧೮.೮ | ೭೪.೨ | ೨೮.೫ |
| ೨ | ಸಾಕ್ಷರತೆ | ಶೇಕಡಾ | ೨೯.೭ | ೫೭.೪ | ೫೯.೪ | ೮೦ |
| ೩ | ಬಡತನರೇಖೆಯ ಕೆಳಗಿನ ಜನಸಂಖ್ಯೆ | ಶೇಕಡಾ | ೫೦.೮ | ೩೮.೨ | ೨೭.೧೯ | ೨೩.೬೪ |
| ೪ | ವಿದ್ಯುದೀಕರಣಗೊಳಿಸಿದ ಹಳ್ಳಿಗಳು | ಶೇಕಡಾ | ೬೨.೭ | ೧೦೦ | ೮೬(ಎ) | ೧೦೦ |
| ೫ | ವಿದ್ಯುಚ್ಛಕ್ತಿ ಉಪಯೋಗದಲ್ಲಿ ಕೃಷಿಯ ಪಾಲು | ಶೇಕಡಾ | ೧೬.೯ | ೮೩ | ೩೩ | ೬೭ |
| ೬ | ಗೃಹಗಳಿಗೆ ಹಂಚಲಾದ ವಿದ್ಯುಚ್ಛಕ್ತಿ | ಶೇಕಡಾ | ೬.೫ | ೫೬ | ೩೧ | ೬೮.೯ |
| ೭ | ಒಟ್ಟು ಮನೆಗಳಲ್ಲಿ ಶೇಕಡಾವಾರು ಶೌಚಾಲಯಗಳಿಲ್ಲದ ಮನೆಗಳು | ಶೇಕಡಾ | ೯೨.೪ | ೩೩ | ೯೧.೨ (ಬಿ) | ೩೬.೪(ಬಿ) |
| ೮ | ಒಟ್ಟು ಮನೆಗಳಲ್ಲಿ ಶೇಕಡಾವಾರು ನಲ್ಲಿಯಿಂದ ಕುಡಿಯುವ ನೀರಿನ ಸರಬರಾಜಿನ ಮೂಲ ಇರುವ ಮನೆಗಳು | ಶೇಕಡಾ | ೪.೭ | ೬೭ | ೨೮.೭(ಸಿ) | ೭೧.೩(ಸಿ) |
| ೯ | ಮನೆಗಳ ಕೊರತೆ | ಲಕ್ಷಗಳು | ೨೨೩ (೧೯೯೦) | ೬೯ (೧೯೯೦) | ೨೭.೧(ಡಿ) | ೧೬೫ |
| ೧೦ | ನೈರ್ಮಲ್ಯ | ಶೇಕಡಾ | ದೊರೆಯುವುದಿಲ್ಲ | ದೊರೆಯುವುದಿಲ್ಲ | ೧೯ | ೬೯ |
| ೧೧ | ಒಟ್ಟು ಶಾಲೆಗಳಲ್ಲಿ ಶೇಕಡಾವಾರು ಏಕ ಉಪಾಧ್ಯಾಯರ ಶಾಲೆಗಳು | ಶೇಕಡಾ | ೩೫.೧ | ೫.೮ | ದೊರೆಯುವುದಿಲ್ಲ | ದೊರೆಯುವುದಿಲ್ಲ |
| ೧೨ | ಬಯಲಿನಲ್ಲಿ ನಡೆಸುವ ಶಾಲೆಗಳು | ಸಂಖ್ಯೆ | ೩೯,೬೦೦ | ೧,೧೨೪ | " | " |
| ೧೩ | ಗುಡಿಸಲುಗಳಲ್ಲಿ ನಡೆಸುವ ಶಾಲೆಗಳು | ಸಂಖ್ಯೆ | ೪೬,೪೫೭ | ೧,೨೬೨ | ೪೧,೧೧೯ | " |

| ವರ್ಷ | | | ೧೯೮೫ | | ೨೦೦೦ | |
|---|---|---|---|---|---|---|
| ಕ್ರಮ ಸಂಖ್ಯೆ | ವಿಷಯ | ಘಟಕ ಪ್ರದೇಶ | ಗ್ರಾಮೀಣ ಪ್ರದೇಶ | ನಗರ ಪ್ರದೇಶ | ಗ್ರಾಮೀಣ ಪ್ರದೇಶ | ನಗರ ಪ್ರದೇಶ |
| ೧೪ | ಕಚ್ಚಾ ಮತ್ತು ಮಣ್ಣು ಕಟ್ಟಡಗಳಲ್ಲಿನ ನಡೆಸುವ ಶಾಲೆಗಳು | ಸಂಖ್ಯೆ | ೯೭,೭೪೪ | ೩,೬೦೮ | ದೊರೆಯುವುದಿಲ್ಲ | ದೊರೆಯುವುದಿಲ್ಲ |
| ೧೫ | ಕೊಠಡಿಗಳ ಕೊರತೆಯಿರುವ ಪ್ರಾಥಮಿಕ ಶಾಲೆಗಳು | ಸಂಖ್ಯೆ | ೩,೧೭,೨೨೮ | ೨೭,೦೦೦ | ದೊರೆಯುವುದಿಲ್ಲ | " |
| ೧೬ | ಮೂತ್ರಿಗಳು ಮತ್ತು ಕಕ್ಕಸ್ಸುಗಳುಳ್ಳ ಪಾಥಮಿಕ ಶಾಲೆಗಳು | ಶೇಕಡಾ | ೧೦ | ೫೫ | ದೊರೆಯುವುದಿಲ್ಲ | " |
| ೧೭ | ಕುಡಿಯುವ ನೀರಿರುವ ಪ್ರಾಥಮಿಕ ಶಾಲೆಗಳು | ಶೇಕಡಾ | ೩೭ | ೬೭ | ದೊರೆಯುವುದಿಲ್ಲ | " |
| ೧೮ | ಕಪ್ಪು ಹಲಗೆಗಳಿರುವ ಪ್ರಾಥಮಿಕ ಶಾಲೆಗಳು | ಶೇಕಡಾ | ೫೮೫ | ೭೮ | ದೊರೆಯುವುದಿಲ್ಲ | " |
| ೧೯ | ಚಾಪೆಗಳು, ಪೀಠೋಪಕರಣಗಳಿರುವ ಶಾಲೆಗಳು | ಶೇಕಡಾ | ೩೬ | ೧೮ | ದೊರೆಯುವುದಿಲ್ಲ | " |
| ೨೦ | ಆಸ್ಪತ್ರೆಗಳು | ಸಂಖ್ಯೆ | ೧,೮೨೧ | ೫,೦೦೦ | ೪,೩೧೦(ಡಿ) | ೯,೩೮೨(ಇ) |
| ೨೧ | ಔಷಧಾಲಯಗಳು | ಸಂಖ್ಯೆ | ೧೧,೦೮೦ | ದೊರೆಯುವುದಿಲ್ಲ | ೧೧,೦೮೦(ಡಿ) | ೧೬,೩೨೩ |
| ೨೨ | ಆಸ್ಪತ್ರೆಯ ಹಾಸಿಗೆಗಳ ಸಂಖ್ಯೆ | ಸಂಖ್ಯೆ | ೬೪,೦೦೦ | ೪,೧೨,೦೦೦ | ೧೯.೪(ಎಫ್) | ೨೧೭.೯(ಎಫ್) |
| ೨೩ | ಕುಡಿಯುವ ನೀರಿನ ಸಮಸ್ಯೆ ಇರುವ ಹಳ್ಳಿಗಳು | ಶೇಕಡಾ | ೨೨ | ದೊರೆಯುವುದಿಲ್ಲ | ೩೦ | ದೊರೆಯುದಿಲ್ಲ |
| ೨೪ | ನಲ್ಲಿಗಳಿರುವ ಹಳ್ಳಿಗಳು | ಶೇಕಡಾ | ೫ | ೬೭ | ದೊರೆಯುವುದಿಲ್ಲ | " |
| ೨೫ | ಸರ್ವ-ಋತುಮಾನ ರಸ್ತೆಗಳಿರುವ ಹಳ್ಳಿಗಳು | ಶೇಕಡಾ | ೩೦ | - | ೪೦ | - |
| ೨೬ | ಲಕ್ಷ ಜನಸಂಖ್ಯೆಗೆ ಬ್ಯಾಂಕು ಕಚೇರಿಗಳು | ಸಂಖ್ಯೆ | ೫ | ೧೧.೭ | ೫ | ೧೧ |
| ೨೭ | ಅಂಚೆ ಕಛೇರಿಗಳು | ಸಂಖ್ಯೆ | ೧,೨೬,೦೦೦ | ೧೫,೦೦೦ | ೧,೩೮,೧೪೯ | ೧೬,೪೦೨ |
| ೨೮ | ತಲಾ ರಾಷ್ಟ್ರೀಯ ಆದಾಯ (೧೯೭೦-೭೧) | ರೂ. | ೪೪೯(ಜಿ) | ೧,೨೦೧(ಜಿ) | ೭,೧೨೦(ಹೆಚ್) | ೧೬.೩೪೩(ಹೆಚ್) |
| ೨೯ | ದೂರವಾಣಿಗಳು (ಒಳಗೊಂಡಿರುವ ಹಳ್ಳಿಗಳ ಸಂಖ್ಯೆ) | ಲಕ್ಷಗಳು | ದೊರೆಯುವುದಿಲ್ಲ | ದೊರೆಯುವುದಿಲ್ಲ | ೪.೦೯ | ಎಲ್ಲಾ ನಗರ ಪ್ರದೇಶಗಳು ಆವೃತ್ತವಾಗಿವೆ |
| ೩೦ | ಬ್ಯಾಂಕು ಮುಂಗಡಗಳ ಸಿ.ಡಿ. ಪ್ರಮಾಣ | ಶೇಕಡಾ | | ೬೨(೨)(ಐ) | ೪೪.೬(ಇ) | ೭೫.೭(ಇ) |
| ೩೧ | ಸಾಲದ ಮೊಬಲಗು | ಕೋಟಿ ರೂ.ಗಳು | | ೫೭.೩೯೨ (ಜೆ) | ೩೨,೩೭೨/ | ೩,೦೦,೦೦೦(ಜೆ) |
| ೩೨ | ಒಂದು ಕಿ.ಮೀ. ಒಳಗೆ ಪ್ರೈಮರಿ ಶಾಲೆಗಳು | ಶೇಕಡಾ | - | - | ೮೩.೪/೮೪ | - |

| ವರ್ಷ | | ೧೯೮೫ | | ೨೦೦೦ | |
|---|---|---|---|---|---|
| ಕ್ರಮ ಸಂಖ್ಯೆ ವಿಷಯ | ಘಟಕ ಪ್ರದೇಶ | ಗ್ರಾಮೀಣ ಪ್ರದೇಶ | ನಗರ ಪ್ರದೇಶ | ಗ್ರಾಮೀಣ ಪ್ರದೇಶ | ನಗರ ಪ್ರದೇಶ |
| ೩೩ ಪ್ರೈಮರಿ ಶಾಲೆಗಳಿಲ್ಲದ ಹಳ್ಳಿಗಳು | ಶೇಕಡಾ | - | - | ೧೫.೬ (೧೦.೬ ಲಕ್ಷ ನಿವಾಸಿಗಳು) | ದೊರೆಯುವುದಿಲ್ಲ - |

ಗಮನಿಸಿ (ಎ) ಅಷ್ಟೇ ಸಂಖ್ಯೆಯ ಉಪಹಳ್ಳಿಗಳಿಗೆ ವಿದ್ಯುಚ್ಛಕ್ತಿ ದೊರಕಿಲ್ಲ

(ಬಿ) ಅಂದಾಜು

(ಸಿ) ೧೯೯೭

(ಡಿ) ಬಹಳ ಕಡಿಮೆಯೆಂದು ಕಾಣುತ್ತದೆ

(ಇ) ೧೯೯೮

(ಎಫ್) ಪ್ರತಿ ಲಕ್ಷ ಜನಸಂಖ್ಯೆಗೆ

(ಜಿ) ೧೯೭೦-೭೧

(ಹೆಚ್) ಅಂದಾಜು

(ಐ) ಗ್ರಾಮೀಣ ಪ್ರದೇಶಗಳಲ್ಲಿ ಶೇ.೨೫. ನಗರ ಪ್ರದೇಶಗಳಲ್ಲಿ ಶೇ.೪೦(ಇ)

(ಜೆ) ರೂ. ೧೧,೪೪೦ ಕೋಟಿ (ಗ್ರಾಮೀಣ) ರೂ. ೪೫,೯೫೨ ಕೋಟಿ (ನಗರ) (ಇ)

ಮೂಲ : ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಬುಲೆಟಿನ್‌ಗಳು, ಇಂಡಿಯಾ ೧೯೮೧-೨೦೦೨ ಪಂಚವಾರ್ಷಿಕ ಯೋಜನೆಗಳು.

## ಪ್ರಸಕ್ತ ಬೆಲೆಗಳಲ್ಲಿ ಕರ್ನಾಟಕದಲ್ಲಿನ ಜಿಲ್ಲಾವಾರು ಆದಾಯ-೨೦೦೧-೦೨

| ಕ್ರ.ಸಂ. | ಜಿಲ್ಲೆ | ಒಟ್ಟು ಆದಾಯ (ಲಕ್ಷ ರೂ.ಗಳಲ್ಲಿ) | | ತಲಾವಾರು ಆದಾಯ (ರೂ.ಗಳಲ್ಲಿ) | |
|---|---|---|---|---|---|
| | | ಒಟ್ಟು | ನಿವ್ವಳ | ಒಟ್ಟು | ನಿವ್ವಳ |
| 1 | ಬಾಗಲಕೋಟೆ | ೨೮೯೨೭೪ | ೨೬೧೧೮೦ | ೧೭೩೨೦ | ೧೫೬೩೮ |
| 2 | ಬೆಂಗಳೂರು | ೨೪೭೯೭೬೫ | ೨೦೯೭೧೩೬ | ೩೭೬೦೬ | ೩೧೮೦೪ |
| 3 | ಬೆಂಗಳೂರು (ಗ್ರಾ) | ೪೮೮೯೧೨ | ೪೧೪೪೨೬ | ೨೫೭೬೨ | ೨೧೮೨೧ |
| 4 | ಬೆಳಗಾಂ | ೭೧೮೮೫೯ | ೬೪೨೪೭೨ | ೧೬೯೦೨ | ೧೫೧೦೬ |
| 5 | ಬಳ್ಳಾರಿ | ೩೬೬೩೫೨ | ೩೨೩೮೫೪ | ೧೭೮೯೫ | ೧೫೮೧೯ |
| 6 | ಬೀದರ್ | ೧೮೬೨೬೧ | ೧೬೮೦೭೭ | ೧೨೨೭೩ | ೧೧೦೭೫ |
| 7 | ಬಿಜಾಪುರ | ೨೬೩೪೪೫ | ೨೩೯೨೬೬ | ೧೪೪೦೮ | ೧೩೦೮೫ |
| 8 | ಚಾಮರಾಜನಗರ | ೧೪೮೭೦೦ | ೧೩೫೨೯೬ | ೧೫೨೫೫ | ೧೩೮೮೦ |
| 9 | ಚಿಕ್ಕಮಗಳೂರು | ೨೪೪೫೭೬೦ | ೨೨೦೭೯ | ೨೧೨೪೦ | ೧೯೧೭೫ |
| 10 | ಚಿತ್ರದುರ್ಗ | ೨೨೭೯೩೨ | ೨೦೭೧೨೦ | ೧೪೯೩೦ | ೧೩೫೬೭ |
| 11 | ದಕ್ಷಿಣ ಕನ್ನಡ | ೫೮೬೭೪೭ | ೫೨೪೭೩೫ | ೩೦೬೦೭ | ೨೭೩೭೩ |
| 12 | ದಾವಣಗೆರೆ | ೨೭೯೩೮೩ | ೨೫೪೩೦೦ | ೧೫೪೪೩ | ೧೪೦೫೬ |
| 13 | ಧಾರವಾಡ | ೩೦೯೦೬೪ | ೨೭೩೬೩೦ | ೧೯೦೬೪ | ೧೬೮೭೮ |
| 14 | ಗದಗ | ೧೫೨೨೧೨ | ೧೩೭೬೮೫ | ೧೫೪೯೨ | ೧೪೦೧೩ |
| 15 | ಗುಲ್ಬರ್ಗ | ೪೨೧೫೯೨ | ೩೮೦೬೦೨ | ೧೩೩೪೬ | ೧೨೦೪೯ |
| 16 | ಹಾಸನ | ೨೬೪೪೬೨ | ೨೪೦೦೨೧ | ೧೫೧೯೯ | ೧೩೭೯೪ |
| 17 | ಹಾವೇರಿ | ೧೯೪೮೭೪ | ೧೭೪೩೬೭ | ೧೩೪೦೭ | ೧೧೯೯೬ |
| 18 | ಕೊಡಗು | ೧೪೪೮೯೪ | ೧೩೩೪೦೦ | ೨೬೨೮೫ | ೨೪೨೦೦ |
| 19 | ಕೋಲಾರ | ೩೮೫೩೫೯ | ೩೪೫೬೩೮ | ೧೫೧೦೭ | ೧೩೫೫೦ |
| 20 | ಕೊಪ್ಪಳ | ೨೦೮೬೫೬ | ೧೮೩೦೧೬ | ೧೭೨೯೫ | ೧೫೧೭೦ |
| 21 | ಮಂಡ್ಯ | ೨೬೭೮೯೮ | ೨೪೪೬೭೦ | ೧೫೦೪೩ | ೧೩೭೩೯ |
| 22 | ಮೈಸೂರು | ೫೪೨೮೬೯ | ೪೭೮೩೪೪ | ೨೦೪೫೯ | ೧೮೦೨೭ |
| 23 | ರಾಯಚೂರು | ೧೯೯೮೯೨ | ೧೮೨೭೭೨ | ೧೧೯೯೭ | ೧೦೯೭೦ |
| 24 | ಶಿವಮೊಗ್ಗ | ೩೦೫೮೭೪ | ೨೭೮೨೨೩ | ೧೮೪೫೫ | ೧೬೭೮೭ |
| 25 | ತುಮಕೂರು | ೩೭೬೧೬೪ | ೩೩೭೫೫೫ | ೧೪೪೨೬ | ೧೨೯೪೫ |
| 26 | ಉಡುಪಿ | ೨೬೨೦೧೮ | ೨೩೬೫೦೫ | ೨೩೩೬೨ | ೨೧೦೮೭ |
| 27 | ಉತ್ತರಕನ್ನಡ | ೨೪೯೭೪೭ | ೨೨೩೪೯೩ | ೧೮೨೫೬ | ೧೬೩೩೭ |
| | ರಾಜ್ಯ | ೧೦೫೬೫೭೭೫ | ೯೩೩೮೨೮೨ | ೧೯೮೨೧ | ೧೭೫೧೮ |

ಆಧಾರ : ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ ಬೆಂಗಳೂರು




# ಸ್ಥಳೀಯ ಸಂಸ್ಥೆಗಳಲ್ಲಿ ಸಂಪನ್ಮೂಲ ಕ್ರೋಢೀಕರಣ

ಟಿ. ಆರ್. ರಘುನಂದನ್

## ೧. ಪರಿಚಯ :

ರಾಜ್ಯದಲ್ಲಿ ಗ್ರಾಮ ಪಂಚಾಯತಿಗಳಿಂದ ಆಸ್ತಿ ತೆರಿಗೆಗಳ ಸಂಗ್ರಹಣೆಯನ್ನು ಸುಧಾರಿಸುವ ಕುರಿತು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಹಲವಾರು ಪ್ರಯತ್ನಗಳಿಗೆ ಚಾಲನೆ ನೀಡಿದೆ. ಆಸ್ತಿ ತೆರಿಗೆಗಳು ಗ್ರಾಮ ಪಂಚಾಯತಿ ಹಂತದ ಬಹುಮುಖ್ಯ ತೆರಿಗೆಗಳಲ್ಲಿ ಒಂದಾಗಿದೆ. ಹಾಗಿದ್ದಾಗ್ಯೂ, ಈ ಮೊದಲು ಈ ತೆರಿಗೆಗಳನ್ನು ಸಂಗ್ರಹಿಸಲು ಗ್ರಾಮ ಪಂಚಾಯತಿಗಳಿಗೆ ಪ್ರೇರಣೆ ಹಾಗೂ ಮಾರ್ಗದರ್ಶನ ನೀಡಲು ಹೆಚ್ಚು ಗಮನ ನೀಡಿರಲಿಲ್ಲ. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ಈ ಹಿಂದೆ ನಾವು ಪ್ರತಿ ಜಿಲ್ಲೆಯಿಂದ ಬೇಡಿಕೆ ಸಂಗ್ರಹ ಮತ್ತು ಬಾಕಿಯ ಸಂಚಿತ ಮಾಹಿತಿಯನ್ನು ಮಾತ್ರ ಸಂಗ್ರಹಿಸಿದ್ದೆವು. ಇದು ಆಸ್ತಿ ತೆರಿಗೆಗಳ ಸಂಗ್ರಹ ಮತ್ತು ಬಳಕೆಯ ಪ್ರಕ್ರಿಯೆಯಲ್ಲಿರುವ ಹಲವಾರು ಬಣ್ಣಗಳನ್ನು ಮುಚ್ಚಿಡುತ್ತದೆ. ವಿಶ್ವಬ್ಯಾಂಕ್ ಕೈಗೊಂಡ ಆರ್ಥಿಕ ವಿಕೇಂದ್ರೀಕರಣ ಅಧ್ಯಯನದ ಒಂದು ಭಾಗವಾಗಿ ನಾವು ೧೯೯೯-೨೦೦೦ ಮತ್ತು ೨೦೦೦-೦೧ನೇ ಸಾಲಿಗೆ ರಾಜ್ಯದಲ್ಲಿನ ಎಲ್ಲ ಗ್ರಾಮಪಂಚಾಯತಿಗಳ ಆರ್ಥಿಕ ಪರಿಸ್ಥಿತಿ ಕುರಿತು ಸಮಗ್ರ ಅಧ್ಯಯನ ಮಾಡಿದೆವು. ಈ ಪ್ರಯತ್ನದ ಮೂಲಕ, ಮೊದಲ ಬಾರಿಗೆ ನಮಗೆ ರಾಜ್ಯದ ಬಹುಪಾಲು ಪ್ರತಿ ಗ್ರಾಮ ಪಂಚಾಯತಿಯಿಂದ ಆಸ್ತಿ ತೆರಿಗೆ ಮತ್ತು ಇತರ ತೆರಿಗೆ ಮಾಹಿತಿ ಸಂಗ್ರಹಿಸಲು ಸಾಧ್ಯವಾಯಿತು. ವಿವರವಾದ ಅಂಕಿ ಅಂಶಗಳ ಲಭ್ಯತೆಯು ಉತ್ತಮ ಸಾಧಕರು, ಸ್ಥಳೀಯ ಏರಿಳಿತಗಳು ಮತ್ತು ಉತ್ತಮ ನಡವಳಿಗಳು, ಉತ್ತಮ ಗ್ರಾಮಪಂಚಾಯತಿಯ ಪ್ರೇರಕ ಯಾವುದು, ತೆರಿಗೆಗಳ ಸಂಗ್ರಹಣೆಗೆ ಅಡ್ಡಿ ಬರುವ ಸಂಗತಿಗಳಾವುವು ಮತ್ತು ಗ್ರಾಮ ಪಂಚಾಯತಿಗಳ ರಾಜಸ್ವ ಹಾಗೂ ವೆಚ್ಚದ ಅಂಶದಲ್ಲಿ ಏನೇನು ಇರುತ್ತವೆ ಎಂಬುದನ್ನು ಗುರ್ತಿಸಲು ನಮಗೆ ಅನುವು ಮಾಡಿಕೊಟ್ಟಿತು. ನಮ್ಮ ಕೆಲವು ಸಂಶೋಧನೆಗಳು ಮುಂದಿನಂತಿವೆ:

> *ಸ್ಥಳೀಯ ಸಂಸ್ಥೆಗಳು ಜನಪರ ಕಾರ್ಯಕ್ರಮಗಳನ್ನು ಕೈಗೊಳ್ಳಲು ಬೇಕಾದ ಆರ್ಥಿಕ ಸಂಪನ್ಮೂಲವನ್ನು ಸಂಗ್ರಹಿಸುವುದು, ಸರ್ಕಾರದಿಂದ ಬಂದ ಸಂಪನ್ಮೂಲವನ್ನು ಸದುಪಯೋಗಪಡಿಸಿಕೊಳ್ಳುವುದು ಅಗತ್ಯವೆನಿಸಿದೆ. ಇದರ ಚಿಂತನೆ ಇಲ್ಲಿದೆ.*

ಸ್ಥಳೀಯ ತೆರಿಗೆಗಳ ಸಂಗ್ರಹಣೆಗೆ ಸಂಬಂಧಿಸಿದಂತೆ ರಾಷ್ಟ್ರೀಯ ದೃಷ್ಟಿಕೋನದಿಂದ ಕರ್ನಾಟಕದ ಗ್ರಾಮ ಪಂಚಾಯತಿಗಳು ಉತ್ತಮ ಸಾಧನೆ ಮಾಡಿವೆ. ದೇಶದಲ್ಲಿ ೨.೩೯ ಲಕ್ಷ ಗ್ರಾಮ ಪಂಚಾಯತಿಗಳಿದ್ದು ಅದರಲ್ಲಿ ಕರ್ನಾಟಕದಲ್ಲಿ ೫೬೫೩ ಗ್ರಾಮ ಪಂಚಾಯತಿಗಳಿದ್ದರೂ (ಸುಮಾರು ಶೇ.೨) ೨೦೦೧ರಲ್ಲಿ ದೇಶದಲ್ಲಿನ ಎಲ್ಲಾ ಗ್ರಾಮ ಪಂಚಾಯತಿಗಳಿಂದ ಸಂಗ್ರಹವಾಗುವ ಒಟ್ಟು ತೆರಿಗೆಗಳ ಮೊತ್ತ ರೂ. ೫೮೦ ಕೋಟಿಗಳಲ್ಲಿ ಕರ್ನಾಟಕದ

ಗ್ರಾಮ ಪಂಚಾಯತಿಗಳು ರೂ.೬೩ ಕೋಟಿಗಳಷ್ಟು (ಶೇ.೧೨) ಸಂಗ್ರಹಿಸಿಕೊಟ್ಟಿವೆ. ಹಾಗಿದ್ದಾಗ್ಯೂ ಕರ್ನಾಟಕದಲ್ಲೂ ಆಸ್ತಿ ತೆರಿಗೆಗಳ ಸಂಗ್ರಹಣೆಯಲ್ಲಿ ಸುಧಾರಣೆ ತರಲು ಹೆಚ್ಚು ಅವಕಾಶವಿದೆ ಎಂಬ ಸಂಗತಿಯನ್ನು ನಿರಾಕರಿಸುವಂತಿಲ್ಲ.

* ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ತಲಾ ಆಸ್ತಿ ತೆರಿಗೆಯು ಸರಾಸರಿ ಪ್ರತಿವರ್ಷ ತಲಾ ಸುಮಾರು ರೂ.೧೦.೬೨ ರಷ್ಟಿದ್ದು. ಇದು ತೀರಾ ಕಡಿಮೆ ಎನ್ನಬಹುದು.
* ಉತ್ತಮ ಮತ್ತು ಕಳಪೆ ಸಾಧಕರ ನಡುವೆ ತಲಾ ಸಂಗ್ರಹಗಳಲ್ಲಿ ಉನ್ನತ ಪ್ರಮಾಣದಲ್ಲಿ ಓರೆಯಾಗಿರುತ್ತದೆ.
* ನಾವು ಕೋಲಾರ ಹಾಗೂ ಮಂಡ್ಯ ಜಿಲ್ಲೆಗಳ ಎರಡು ಗ್ರಾಮ ಪಂಚಾಯತಿಗಳಲ್ಲಿ ಮಾರ್ಗದರ್ಶಿ ಅಧ್ಯಯನ ನಡೆಸಿದ್ದು, ಅವು ಈ ಮುಂದಿನಂತೆ ನಿರ್ದಿಷ್ಟ ಕೊರತೆಗಳನ್ನು ತೋರಿಸಿವೆ :
* ಆಸ್ತಿಯ ಮಾಲೀಕ ಮತ್ತು ಆಸ್ತಿಯ ಸೂಕ್ತ ವಿವರಗಳನ್ನು ನಿರ್ವಹಿಸಿರಲಿಲ್ಲ.
* ನಿಗದಿಪಡಿಸಿದ ತೆರಿಗೆಯ ಆಸ್ತಿಯ ಗಾತ್ರಕ್ಕೂ ಮತ್ತು ಮೌಲ್ಯಕ್ಕೂ ಸಂಬಂಧವಿರಲಿಲ್ಲ. ಹಲವು ಬಾರಿ ಆಸ್ತಿಯ ಗಾತ್ರಕ್ಕೆ ಸಂಬಂಧವಿಲ್ಲದೆ ಇಡುಗಂಟು ಆಧಾರದ ಮೇಲೆ ತೆರಿಗೆಯನ್ನು ಸಂಗ್ರಹಿಸಲಾಗಿತ್ತು.
* ಅಷ್ಟು ಕಡಿಮೆ ತೆರಿಗೆಯನ್ನೂ ಕಂತುಗಳಲ್ಲಿ ಸಂಗ್ರಹಿಸಲಾಗಿದ್ದು, ಫಲಿತಾಂಶವಾಗಿ ಅದಕ್ಷತೆ ಹಾಗೂ ಸಂಗ್ರಹಣೆಯ ವೆಚ್ಚ ಅಧಿಕವಾಯಿತು;
* ಸೂಚನಾ ಪತ್ರಗಳನ್ನು ಕಳುಹಿಸಲಾದ, ಸ್ವೀಕರಿಸಬಹುದಾದ ಒಟ್ಟು ತೆರಿಗೆಗಳು ತಕ್ಷಣವೇ ಲಭ್ಯವಾಗದೇ ಇದ್ದು, ತೆರಿಗೆ ಬೇಡಿಕೆ ನೋಂದಣಿ ಪುಸ್ತಕಗಳು ಹಳೆತಾದವು.
* ಬಾಕಿದಾರರು ದಂಡ ತೆರುವಂತಹ ಸನ್ನಿವೇಶಗಳನ್ನು ಎದುರಿಸದೇ ಇದ್ದುದರಿಂದಾಗಿ ತೆರಿಗೆಗಳನ್ನು ಸಕಾಲದಲ್ಲಿ ಅಥವಾ ಎಂದಿಗೂ ಪಾವತಿ ಮಾಡಲು ಉತ್ತೇಜನವಿರಲಿಲ್ಲ.

೨. ಒಂದು ವೇಳೆ ಸೂಕ್ತ ವಾತಾವರಣ ಮತ್ತು ಪ್ರೋತ್ಸಾಹವಿದ್ದಲ್ಲಿ ಮತ್ತು ತೆರಿಗೆಗಳನ್ನು ಪಾವತಿ ಮಾಡುವಲ್ಲಿ ಜನರ ನಿರಾಸಕ್ತಿಯನ್ನು ನಿವಾರಿಸಿದಲ್ಲಿ ಆಸ್ತಿ ತೆರಿಗೆ ಸಂಗ್ರಹಣೆಯನ್ನು ಸಾಕಷ್ಟು ಪ್ರಮಾಣದಲ್ಲಿ ಹೆಚ್ಚಿಸಲು ಸಾಧ್ಯವೆಂಬುದು ಗ್ರಾಮ ಪಂಚಾಯತಿಗಳೊಂದಿಗೆ ಸಮಾಲೋಚನೆ ಮಾಡಿದಾಗ ನಮಗೆ ಮನವರಿಕೆಯಾಯಿತು. ಗ್ರಾಮಪಂಚಾಯತಿ ಹಣಕಾಸುಗಳ ಮೇಲೆ ಇದರ ಪರಿಣಾಮಗಳನ್ನು ಊಹಿಸಬಹುದಾಗಿದೆ. ಗ್ರಾಮಪಂಚಾಯತಿಗಳು ಅವುಗಳಿಂಗ ಲಭ್ಯವಿರುವ ಹೆಚ್ಚುವರಿ ನಿಧಿಗಳನ್ನು ಬಳಸಿ ಕೈಗೊಳ್ಳಬಹುದಾದ ಕಾಮಗಾರಿಗಳ ಜೊತೆಗೆ, ಈ ನಿಧಿಗಳನ್ನು ಬಳಸುವ ಮೂಲಕ ಸ್ವರೋಜ್‌ಗಾರ್ ಯೋಜನೆಯ ಮೂಲಕ ಆಹಾರಧಾನ್ಯ ಅಥವಾ ಬ್ಯಾಂಕ್ ಸಾಲಗಳ ಮೂಲಕವೂ ಹೆಚ್ಚುವರಿ ನಿಧಿ ಪಡೆಯುವುದನ್ನು ಸರಾಗಗೊಳಿಸಬಹುದು. ಹೀಗೆ, ಸುಮಾರು ಎಂಟು ತಿಂಗಳ ಹಿಂದೆ, ನಾವು ತೆರಿಗೆ ಮತ್ತು ಬಳಕೆದಾರ ಶುಲ್ಕ ಸಂಗ್ರಹಣೆ ಹಾಗೂ ಗ್ರಾಮ ಪಂಚಾಯತಿಗಳಿಗೆ ಅವುಗಳ ತೆರಿಗೆಗಳನ್ನು ಸಂಗ್ರಹಿಸಲು ಅವಕಾಶ ಕಲ್ಪಿಸುವ ಅರಿವು ಮೂಡಿಸುವ ಆಂದೋಲನ ಪ್ರಾರಂಭಿಸುವ ಸಾಹಸಕ್ಕೆ ಕೈ ಹಾಕಿದೆವು.

## ೩. ಕಾನೂನು ಮತ್ತು ಸರ್ಕಾರದ ನೀತಿಗಳಡಿ ಆಸ್ತಿ ತೆರಿಗೆಗಳ ಪ್ರಸಕ್ತ ಸ್ಥಾನಮಾನ :

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ೧೯೯ (೧) ನೇ ಪ್ರಕರಣವು ಗ್ರಾಮ ಪಂಚಾಯತಿಗಳಿಗೆ ಈ ಮುಂದಿನ ನಿಬಂಧನೆಗಳೊಂದಿಗೆ ಆಸ್ತಿ ತೆರಿಗೆ ವಿಧಿಸಲು ಮತ್ತು ಸಂಗ್ರಹಿಸಲು ಅಧಿಕಾರ ನೀಡುತ್ತದೆ:

"ಪ್ರತಿ ಗ್ರಾಮ ಪಂಚಾಯತಿಯು ಅನುಸೂಚಿ IV ರಲ್ಲಿ ನಿಗದಿಪಡಿಸಿದ ಗರಿಷ್ಠ ದರವನ್ನು ಮೀರದ ರೀತಿಯಲ್ಲಿ ಗ್ರಾಮಪಂಚಾಯತಿ ಪ್ರದೇಶ ವ್ಯಾಪ್ತಿಯೊಳಗೆ ಕೃಷಿ ತೆರಿಗೆ ನಿರ್ಧರಣೆಗೆ ಒಳಪಡದಿರುವ ಭೂಮಿ ಮತ್ತು ಕಟ್ಟಡಗಳ ಮೇಲೆ ತೆರಿಗೆ ವಿಧಿಸತಕ್ಕದ್ದು."

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ IVನೇ ಅನುಸೂಚಿಯು ಈ ಮುಂದಿನಂತೆ ಹೇಳುತ್ತದೆ :

## ತೆರಿಗೆಯ ಗರಿಷ್ಟ ದರ :

| | |
|---|---|
| ಆಸ್ತಿ ತೆರಿಗೆ | ಪ್ರತಿ ವರ್ಷಕ್ಕೆ ವಾರ್ಷಿಕ ಬಾಡಿಗೆ ಮೌಲ್ಯದ ಶೇಕಡ ೧೦ರಷ್ಟು ಕಟ್ಟಡಗಳ ಮೇಲಿನ ತೆರಿಗೆ.<br>"ವಾರ್ಷಿಕ ಬಾಡಿಗೆ ಮೌಲ್ಯ" ಎಂದರೆ ಯಾವುದೇ ಕಟ್ಟಡ ಅಥವಾ ಭೂಮಿಗೆ ಅದರಲ್ಲಿರುವ ಅಥವಾ ಅದರಲ್ಲಿ ಸ್ಥಾಪಿಸಲಾಗಿರುವ ಪೀಠೋಪಕರಣ ಅಥವಾ ಯಂತ್ರಗಳನ್ನು ಹೊರತುಪಡಿಸಿ ಅದಕ್ಕೆ ವರ್ಷದಿಂದ ವರ್ಷಕ್ಕೆ ಸೂಕ್ತ ಮೊತ್ತಕ್ಕೆ ಬಾಡಿಗೆ ಕೊಡಬಹುದೆಂದು ನಿರೀಕ್ಷಿಸಲಾಗುವ ವಾರ್ಷಿಕ ಬಾಡಿಗೆ." |
| ಕೃಷಿ ತೆರಿಗೆ ನಿರ್ಧರಣೆಗೆ ಒಳಪಡದ ಭೂಮಿಯ ಮೇಲೆ ತೆರಿಗೆ | ಪ್ರತಿ ಒಂದುನೂರು ಚದರ ಮೀಟರ್‌ಗೆ ಪ್ರತಿ ವರ್ಷಕ್ಕೆ ಒಂದು ರೂಪಾಯಿ. |

ಗ್ರಾಮ ಪಂಚಾಯತಿ ಪ್ರದೇಶವನ್ನು ಪ್ರಕರಣ ೨ (೨೮)ರಲ್ಲಿ, ಪ್ರಕರಣ ೪ರಡಿ ಪಂಚಾಯತಿ ಪ್ರದೇಶವೆಂದು ಘೋಷಿಸಲಾದ ಯಾವುದೇ ಪ್ರದೇಶ ಎಂಬುದಾಗಿ ವ್ಯಾಖ್ಯಾನಿಸಲಾಗಿದೆ. ಪ್ರಕರಣ ೪(೧)ರಲ್ಲಿ ವಿವರಿಸಿದಂತೆ, ಸರ್ಕಾರದ ಸಾಮಾನ್ಯ ಮತ್ತು ವಿಶೇಷ ಆದೇಶಗಳಿಗೆ ಒಳಪಟ್ಟಂತೆ, ಜಿಲ್ಲಾಧಿಕಾರಿಯು ಈ ಅಧಿನಿಯಮದ ಉದ್ದೇಶಗಳಿಗಾಗಿ ಪ್ರಕರಣದಲ್ಲಿ ಪಂಚಾಯತಿ ಪ್ರದೇಶವೆಂದು ನಿರ್ದಿಷ್ಟಪಡಿಸಿದ ಜನಸಂಖ್ಯೆಯ ಮಿತಿಗನುಗುಣವಾಗಿ ಗ್ರಾಮ ಅಥವಾ ಗ್ರಾಮಗಳ ಗುಂಪನ್ನು ಒಳಗೊಂಡ ಯಾವುದೇ ಪ್ರದೇಶವನ್ನು ಪಂಚಾಯತಿ ಪ್ರದೇಶವೆಂದು ಘೋಷಿಸುವುದಲ್ಲದೆ ಅದರ ಕೇಂದ್ರ ಸ್ಥಾನವನ್ನು ನಿರ್ದಿಷ್ಟಪಡಿಸಬಹುದು. ಶಾಸನ ರಚನೆಯ ಹೊರತಾಗಿ, ಗ್ರಾಮ ಪಂಚಾಯತಿಗಳು ತೆರಿಗೆಗಳನ್ನು ಹೇಗೆ ಅಂದಾಜು ಮಾಡಬೇಕು ಮತ್ತು ಸಂಗ್ರಹಿಸಬೇಕು ಎಂಬುದರ ಕುರಿತು ಸರ್ಕಾರದ ಮೌನ ಗಮನಾರ್ಹವಾಗಿದೆ ಎಂಬುದನ್ನು ನಾವು ಕಂಡುಕೊಂಡೆವು. ತೆರಿಗೆಗಳ ಸಂಗ್ರಹಣೆಗೆ ಸ್ಥಳೀಯವಾಗಿ ದಿಢೀರ್ ಚಾಲನೆಗಳನ್ನು ಕೈಗೊಳ್ಳಲಾಗಿದ್ದರೂ ಅವುಗಳಲ್ಲಿ ಎಲ್ಲವೂ ಸಮಾನ ಮಾನದಂಡ ಹೊಂದಿರಲಿಲ್ಲ ಅಥವಾ ಸುಸ್ಥಿರವಾಗಿ ಉಳಿಯಲಿಲ್ಲ. ಕಾನೂನು ಅಧ್ಯಯನದ ಬಳಿಕ ನಾವು, ಆಸ್ತಿ ತೆರಿಗೆ ಸಂಗ್ರಹವನ್ನು ಅಭಿವೃದ್ಧಿಪಡಿಸುವಲ್ಲಿ ಗ್ರಾಮ ಪಂಚಾಯತಿಗಳು ತಕ್ಷಣವೇ ಗಮನಹರಿಸಬೇಕಾದ ಕೆಲವು ಅಂಶಗಳನ್ನು ಪಟ್ಟಿ ಮಾಡಿದ್ದೇವೆ.

* ಮೊದಲು ಎಲ್ಲಾ ಆಸ್ತಿಗಳನ್ನು ಪಟ್ಟಿ ಮಾಡುವುದು.
* ಅವುಗಳನ್ನು ಒಂದು ಪ್ರಮಾಣಿತ ಮಾನದಂಡದ ಮೂಲಕ ಅಳೆಯತಕ್ಕದ್ದು ಹಾಗೂ ವರ್ಗೀಕರಿಸುವುದು.
* ಪಾವತಿಸಬಹುದಾದ ಆಸ್ತಿ ತೆರಿಗೆಯನ್ನು ಪಾರದರ್ಶಕ ಮಾನದಂಡದ ಪ್ರಕಾರ ಮತ್ತು ಕಾನೂನಿನಲ್ಲಿ ನಿಗದಿಪಡಿಸಿದ ಅಂತರದಲ್ಲಿ ನಿರ್ಧರಣೆ ಮಾಡುವುದು.

ಪ್ರತಿ ವಿಷಯವನ್ನು ಕೆಳಗೆ ಚರ್ಚಿಸಲಾಗಿದೆ.

೪. **ವಿಷಯ ೧** : ತೆರಿಗೆ ವಿಧಿಸಬಹುದಾದ ಆಸ್ತಿಗಳ ಪಟ್ಟಿ ಮಾಡುವುದು. ಗ್ರಾಮಪಂಚಾಯತಿಗಳು ತೆರಿಗೆ ವಿಧಿಸಬೇಕಾಗಿರುವ ಆಸ್ತಿಗಳ ಪಟ್ಟಿಯನ್ನು ಖಾತಾ ಪುಸ್ತಕದಲ್ಲಿ ನಿರ್ವಹಿಸುವುದು. ಹಾಗಿದ್ದಾಗ್ಯೂ, ಈ ಖಾತಾ ಪುಸ್ತಕದಲ್ಲಿ ಆಸ್ತಿ ತೆರಿಗೆ ಪಾವತಿಸಬೇಕಾದ ಎಲ್ಲಾ ಆಸ್ತಿಗಳ ಪಟ್ಟಿಯಿರುವುದಿಲ್ಲ. ಒಂದುವೇಳೆ ಖಾತೆ ನೀಡಿದಲ್ಲಿ ಅದು ಸದಾ ವ್ಯಾಪ್ತಿಯ ವಿವರಣೆ, ನಿರ್ಮಾಣದ ವಿಧ ಮತ್ತು ಅದರ ಉಪಯೋಗದ ಬಗ್ಗೆ ವಿವರಗಳನ್ನು ಹೊಂದಿರದೇ ಇರಬಹುದು. ಕ್ಷೇತ್ರಾಧಿಕಾರಿಗಳೊಂದಿಗಿನ ಚರ್ಚೆಯಲ್ಲಿ, ಹಲವಾರು ಗ್ರಾಮ ಪಂಚಾಯತಿಗಳಲ್ಲಿ, ಕಂದಾಯ ಭೂಮಿಯಲ್ಲಿನ ನಿರ್ಮಾಣಗಳಿಗೆ ಎಂದರೆ ಕೃಷಿ ತೆರಿಗೆ ನಿರ್ಧರಣೆಗೆ ಒಳಪಟ್ಟ ಭೂಮಿಗಳಾಗಿದ್ದು ಅವುಗಳನ್ನು ಕೃಷಿಯೇತರ ಉದ್ದೇಶಗಳಿಗೆ ಬಳಸುತ್ತಿದ್ದಾಗಲೂ ಅವುಗಳನ್ನು ಭೂ ಕಂದಾಯ ಅಧಿನಿಯಮದಡಿ ಪರಿವರ್ತಿಸಿರದ ಕಾರಣವಾಗಿ ಅನುಸೂಚಿ ೪ರಲ್ಲಿ (ಪ್ರತಿ ೧೦೦ ಚದರ ಮೀಟರ್ ಗೆ ೧ ರೂ. ನಂತೆ) ನಿರ್ದಿಷ್ಟಪಡಿಸಿದ ದರದಲ್ಲಿ ಆಸ್ತಿ ತೆರಿಗೆ ವಿಧಿಸಿದ್ದುದನ್ನು ನಾವು ಪತ್ತೆ ಹಚ್ಚಿದೆವು. ಈ ಸ್ಪಷ್ಟನೆಯ ಅನುಪಸ್ಥಿತಿಯಲ್ಲಿ ಹಲವಾರು

ಗ್ರಾಮ ಪಂಚಾಯತಿಗಳು"ಕಂದಾಯ" ನಿವೇಶನಗಳ ಮೇಲೆ ನಿರ್ಮಿಸಿದ ಕಟ್ಟಡಗಳಿಗೆ ಆಸ್ತಿ ತೆರಿಗೆ ವಿಧಿಸುತ್ತಿಲ್ಲವಾದ್ದರಿಂದ, ಈ ಲೆಕ್ಕದಲ್ಲಿ ತೆರಿಗೆ ಸೋರಿಹೋಗುತ್ತಿದೆ. ಇದು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಪ್ರಕರಣ ೧೯೯ರ ಅಪ-ವ್ಯಾಖ್ಯಾನದಿಂದ ಆದ ಪರಿಣಾಮವಾಗಿದೆ. ಶಾಸನದ ನಿಜವಾದ ಇಂಗಿತದಂತೆ ನಾವು ಕೂಡ ಈ ವಿಷಯಕ್ಕೆ ವಿವರಣೆ ನೀಡುವುದು ಮುಖ್ಯವೆಂದು ಪರಿಗಣಿಸಿದ್ದರಿಂದ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ನಿರ್ಮಾಣವಾದ ಯಾವುದೇ ಕಟ್ಟಡಗಳಲ್ಲಿ ವಾಸಿಸುವವರು ಗ್ರಾಮ ಪಂಚಾಯತಿಯ ಸೇವೆಯನ್ನು ಪಡೆದುಕೊಳ್ಳುವುದರಿಂದ ತೆರಿಗೆ ವಿಧಿಸಬಹುದಾದ ಮೌಲ್ಯದ ಮೇಲೆ ಲೆಕ್ಕ ಹಾಕಿದ ಆಸ್ತಿ ತೆರಿಗೆಯನ್ನು ಪಾವತಿಸತಕ್ಕದೆಂದು ಅನುಷ್ಠಾನಗೊಳಿಸತಕ್ಕದ್ದು.

ನಾವು ಈ ಮುಂದಿನಂತೆ ನಿರ್ಣಯಿಸುತ್ತೇವೆ :

* ಗ್ರಾಮ ಪಂಚಾಯತಿಯು ಗ್ರಾಮ ಠಾಣಾದ ಹೊರಭಾಗದಲ್ಲಿರುವ ಹಾಗೂ ಪರಿವರ್ತಿತವಾಗಿರದ ಕೃಷಿ ಭೂಮಿಯ ಮೇಲೆ ನಿರ್ಮಿಸಿದ ಕಟ್ಟಡಗಳೂ ಸೇರಿದಂತೆ ಪಂಚಾಯತಿ ಪ್ರದೇಶದೊಳಗಡೆ ಬರುವ ಎಲ್ಲ ಕಟ್ಟಡಗಳ ಮೇಲೆ ತೆರಿಗೆ ಹಾಕಬಹುದಾದ ಮೌಲ್ಯ ಆಧಾರದಲ್ಲಿ ಲೆಕ್ಕಹಾಕಿದ ಆಸ್ತಿತೆರಿಗೆಗಳನ್ನು ವಿಧಿಸಬಹುದಾಗಿದೆ.
* ಒಂದು ಗ್ರಾಮ ಪಂಚಾಯತಿಯು ಕೃಷಿ ತೆರಿಗೆಯನ್ನು ವಿಧಿಸದ ಖಾಲಿ ಭೂಮಿಯ ಮೇಲೆ ಆಸ್ತಿ ತೆರಿಗೆಗಳನ್ನು ವಿಧಿಸಬಹುದು.
* ಕಟ್ಟಡಗಳನ್ನು ತೆರಿಗೆ ವಿಧಿಸುವ ಉದ್ದೇಶಕ್ಕಾಗಿ ಒಂದು ಪ್ರತ್ಯೇಕ ಹಾಗೂ ವಿಶಿಷ್ಟ ಪ್ರವರ್ಗದಲ್ಲಿ ಪಟ್ಟಿಮಾಡಲಾಗಿರುವುದರಿಂದಾಗಿ, ಸಕ್ಷಮ ಪ್ರಾಧಿಕಾರಗಳಿಂದ ಅನುಮತಿ ಪಡೆಯದೆ ಕಂದಾಯ ಭೂಮಿಯ ಮೇಲೆ ನಿರ್ಮಿಸಿದ ಕಟ್ಟಡ ಅಥವಾ ಭೂ ಪರಿವರ್ತನೆಯು ಅಧಿನಿಯಮದ ೪ನೇ ಅನುಸೂಚಿಯಲ್ಲಿ ಪಟ್ಟಿ ಮಾಡಲಾದ ರೀತಿಯಲ್ಲಿ ಆಸ್ತಿ ತೆರಿಗೆ ನಿರ್ಧರಣೆಗೆ ಒಳಪಡುತ್ತದೆ. ಆದ್ದರಿಂದ ಕಟ್ಟಡಗಳನ್ನು ಒಂದು ವೇಳೆ "ಕಂದಾಯ" ಭೂಮಿಯ ಮೇಲೆ ನಿರ್ಮಿಸಿದ್ದರೂ, ಇದು ಒಂದು ವೇಳೆ ಪಂಚಾಯತಿ ಪ್ರದೇಶದೊಳಗೆ ಬಂದರೂ ಸಹ ಆಸ್ತಿ ತೆರಿಗೆಯನ್ನು ವಿಧಿಸಬಹುದಾಗಿರುತ್ತದೆ. "ಕಂದಾಯ" ನಿವೇಶನಗಳಲ್ಲಿ ನಿರ್ಮಿಸಲಾದ ಕಟ್ಟಡಗಳ ಮೇಲೆ ಆಸ್ತಿ ತೆರಿಗೆ ವಿಧಿಸುವ ಮೂಲಕ ನಾವು ಮನೆಯ ಕಾನೂನು ಬಾಹಿರ ನಿರ್ಮಾಣವನ್ನು ಸಕ್ರಮಗೊಳಿಸುತ್ತಿದ್ದೇವೆಂದು ಭಾವಿಸಿ ಕಂದಾಯ ಇಲಾಖೆಯು ಆಕ್ಷೇಪಣೆ ವ್ಯಕ್ತಪಡಿಸಬಹುದು ಎಂಬುದನ್ನು ನಾವು ನಿರೀಕ್ಷಿಸಿದ್ದೆವು. ಹಾಗಿದ್ದಾಗ್ಯೂ ಸ್ಥಳೀಯ ಸಂಸ್ಥೆಯ ಆಸ್ತಿ ತೆರಿಗೆ ವಿಧಿಸುವ ಉದ್ದೇಶಕ್ಕಾಗಿ ಮಾಡಿದ ಆಸ್ತಿ ಪಟ್ಟಿಯನ್ನು ನೀಡುವ ಮೂಲಕ ಸಂಬಂಧಪಟ್ಟವರು ಹಕ್ಕು ಸಾಧಿಸುವುದಕ್ಕೆ ನ್ಯಾಯಾಲಯಗಳು ತಡೆ ನೀಡಿರುವುದರಿಂದ ಅಂತಹ ನಿಲುವನ್ನು ಸಮರ್ಥಿಸಿಕೊಳ್ಳಲಾಗದು ಎಂಬುದು ನಮ್ಮ ತಿಳುವಳಿಕೆಯಾಗಿದೆ. ನಿರ್ಮಾಣದ ನ್ಯಾಯಬಾಹಿರತೆಯನ್ನು ಪ್ರಸಕ್ತ ಕಾನೂನುವಹಿ ಇತ್ಯರ್ಥಪಡಿಸಿಕೊಳ್ಳಬೇಕಿರುತ್ತದೆ. ಇದರಿಂದಾಗಿ, ಈ ನೆಪವೊಡ್ಡಿ ಗ್ರಾಮ ಪಂಚಾಯತಿಗಳು ಕಂದಾಯ ಭೂಮಿಯಲ್ಲಿ ಪರವಾನಗಿಗಳನ್ನು ಕೊಡಲು ಬರುವುದಿಲ್ಲ. ಆದರೂ ಸುರಕ್ಷತೆಯ ದೃಷ್ಟಿಯಿಂದ ಈ ಮೇಲಿನ ವ್ಯತ್ಯಾಸದ ಬಗ್ಗೆ ನಾವು ಕಾನೂನು ಇಲಾಖೆಯ ಸ್ಪಷ್ಟೀಕರಣ ಪಡೆದಿದ್ದೇವೆ, ನಮ್ಮ ನಿಲುವಿಗೆ ಕಾನೂನು ಇಲಾಖೆಯೂ ಸಮ್ಮತಿಸಿದೆ.

೫. ವಿಷಯ ೨ ಮತ್ತು ೩: ಎಲ್ಲ ಕಟ್ಟಡಗಳು ಹಾಗೂ ಭೂಮಿಗಳನ್ನು ಅಳತೆಮಾಡುವುದು ಹಾಗೂ ಆಸ್ತಿ ತೆರಿಗೆ ವಿಧಿಸಲು ಆಧಾರ ರೂಪಿಸಿವುದು:

೫.೧ ಪಂಚಾಯತ್ ರಾಜ್ ಅಧಿನಿಯಮದಡಿ, ಆಸ್ತಿ ತೆರಿಗೆಗಳ ಅಂದಾಜು ಮಾಡುವ ವಿಧಾನವು ಅದನ್ನು ವಾರ್ಷಿಕ ಬಾಡಿಗೆಗೆ ನೀಡುವ ಮೌಲ್ಯಕ್ಕೆ ಶೇಕಡಾವಾರಿನಂತೆ ಲೆಕ್ಕ ಹಾಕುವುದಾಗಿದೆ. ಬಾಡಿಗೆ ಮೌಲ್ಯದ ಆಸ್ತಿ ತೆರಿಗೆ ಅಂದಾಜು ಪದ್ಧತಿಯನ್ನು ಪಟ್ಟಣ ಪ್ರದೇಶಗಳಲ್ಲಿ ಬಂಡವಾಳ ಮೌಲ್ಯ ಪದ್ಧತಿಯ ಪರವಾಗಿ ನಿಷೇಧಿಸಲಾಗಿದೆಯಾದಲ್ಲಿ ತಿದ್ದುಪಡಿ ಮಂಡಿಸುವ ಮೂಲಕ ಸಮಯ ವ್ಯರ್ಥ ಮಾಡಲು ನಾವು ಸಿದ್ಧರಿರದ ಕಾರಣ ಇದರ ವಿರುದ್ಧ ನಿರ್ಣಯ ಕೈಗೊಂಡೆವು. ವಾರ್ಷಿಕ ಬಾಡಿಗೆ ಮೌಲ್ಯಕ್ಕೆ ಶೇಕಡಾವಾರಿನಂತೆ ಲೆಕ್ಕ ಹಾಕುವುದಾಗಿದೆ. ಬಾಡಿಗೆ ಮೌಲ್ಯದ ಆಸ್ತಿ ತೆರಿಗೆ ಅಂದಾಜು ಪದ್ಧತಿಯನ್ನು ಪಟ್ಟಣ ಪ್ರದೇಶಗಳಲ್ಲಿ ಬಂಡವಾಳ ಮೌಲ್ಯ ಪದ್ಧತಿಯ ಪರವಾಗಿ ನಿಷೇಧಿಸಲಾಗಿದೆಯಾದರೂ ತಿದ್ದುಪಡಿ ಮಂಡಿಸುವ ಸಮಯ ವ್ಯರ್ಥ ಮಾಡಲು ನಾವು ಸಿದ್ಧರಿರದ ಕಾರಣ ಇದರ ವಿರುದ್ಧ ನಿರ್ಣಯ ಕೈಗೊಂಡೆವು. ವಾರ್ಷಿಕ ಬಾಡಿಗೆ ಮೌಲ್ಯವನ್ನು ಯಾವ ರೀತಿಗಳಲ್ಲಿ ಕಂಡು ಹಿಡಿಯ

ಬೇಕೆಂಬುದರತ್ತ ನಾವು ಗಮನ ಕೇಂದ್ರೀಕರಿಸಿದೆವು. ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ೪ನೇ ಅನುಸೂಚಿ ಮೇರೆಗೆ, ವಾರ್ಷಿಕ ಬಾಡಿಗೆ ಮೌಲ್ಯವನ್ನು ಯಾವುದೇ ಕಟ್ಟಡ ಅಥವಾ ಭೂಮಿಗೆ ಅದರಲ್ಲಿರುವ ಅಥವಾ ಅದರಲ್ಲಿ ಸ್ಥಾಪಿಸಿರುವ ಪೀಠೋಪಕರಣಗಳ ಅಥವಾ ಯಂತ್ರಗಳನ್ನು ಹೊರತುಪಡಿಸಿದಂತೆ ಅದಕ್ಕೆ ವರ್ಷದಿಂದ ವರ್ಷಕ್ಕೆ ಸೂಕ್ತ ಮೊತ್ತದ ಬಾಡಿಗೆ ಕೊಡಬಹುದೆಂದು ನಿರೀಕ್ಷಿಸಲಾಗುವ ವಾರ್ಷಿಕ ಬಾಡಿಗೆ ಎಂದು ವ್ಯಾಖ್ಯಾನಿಸಲಾಗಿದೆ.

ಹಾಗಿದ್ದಾಗ್ಯೂ ಈ ಲೆಕ್ಕಾಚಾರವನ್ನು 'ಗಣನೀಯವಾಗಿ' ಹೇಗೆ ಮಾಡಬಹುದು ಎಂಬುದರ ಬಗ್ಗೆ ಕಾನೂನಿನಲ್ಲಿ ಮಾರ್ಗದರ್ಶಿ ಸೂತ್ರಗಳು ಲಭ್ಯವಿಲ್ಲ ಮತ್ತು ಅಂತಹವುಗಳನ್ನು ಹೊರಡಿಸಿಲ್ಲ. ಗ್ರಾಮೀಣ ಆಸ್ತಿಗಳಲ್ಲಿ ಅದರಲ್ಲಿ ವಿಶೇಷವಾಗಿ ವಾಸದ ಮನೆಗಳನ್ನು ಬಾಡಿಗೆಗೆ ನೀಡಿರುವ ಬಗ್ಗೆ ವಾಸ್ತವವಾಗಿ ಯಾವುದೇ ಅಂಕಿ ಅಂಶ ಇಲ್ಲವಾಗಿದ್ದು, ತೆರಿಗೆ ನಿರ್ಧರಣ ಪದ್ಧತಿಯು ನ್ಯಾಯೋಚಿತವಾಗಿ ಪ್ರಾರಂಭಿಕವಾದುದಾಗಿದೆ. ಬಹುದೊಡ್ಡ ಸಂಖ್ಯೆಯ ಗ್ರಾಮ ಪಂಚಾಯತಿಗಳಲ್ಲಿ ತೆರಿಗೆ ಅಂದಾಜು ಪದ್ಧತಿಯು ವರ್ಷಗಳಿಂದಲೂ ಬದಲಾಗದೇ ಉಳಿದು ಬಂದಿದೆ. ತೆರಿಗೆಗಳು ನಂಬಲಾಗದಷ್ಟು ಕಡಿಮೆಯಿದೆ ಮತ್ತು ತೆರಿಗೆಗಳನ್ನು ಮನಬಂದಂತೆ ನಿಗದಿಪಡಿಸಲಾಗಿದೆ ಎಂಬುದನ್ನು ನಮ್ಮ ತನಿಖೆಗಳು ತೋರಿಸಿವೆ. ಸತ್ಯದ ಸಂಗತಿಯೆಂದರೆ, ಬಹುಪಾಲು ಗ್ರಾಮಪಂಚಾಯತಿಗಳಲ್ಲಿ, ಪ್ರಸಕ್ತ ತೆರಿಗೆಗಳನ್ನು ಯಾವ ಆಧಾರದಲ್ಲಿ ನಿಗದಿಪಡಿಸಲಾಗಿದೆ ಎಂಬುದು ಯಾರಿಗೂ ಗೊತ್ತಿಲ್ಲ. ಕೆಲವು ಗ್ರಾಮಪಂಚಾಯತಿಗಳಲ್ಲಿ ಪ್ರಾರಂಭಿಕ ಹಂತದ ತಾರ್ಕಿಕ ವ್ಯವಸ್ಥೆಯೊಂದು ಚಲಾವಣೆಯಲ್ಲಿದ್ದು, ಅದರಂತೆ ಗ್ರಾಮ ಪಂಚಾಯತಿ ಪ್ರಾಧಿಕಾರಗಳು ಪ್ರತಿ ಆಸ್ತಿಯನ್ನು ಅಳೆದು ಮೌಲ್ಯ ಗೊತ್ತುಪಡಿಸಿ ನಿರ್ಮಾಣದ ಗಾತ್ರ ಮತ್ತು ಗುಣಮಟ್ಟ ಆಧರಿಸಿ ಆಸ್ತಿ ತೆರಿಗೆಗಳನ್ನು ವಿಧಿಸಲಾಗುತ್ತಿದೆ. ಈ ಸಂಬಂಧ ಸೂಚನೆಗಳನ್ನು ಮತ್ತು ಮಾಗದರ್ಶಿ ಸೂತ್ರಗಳನ್ನು ನೀಡುವ ಅವಶ್ಯಕತೆ ನಮಗಿದೆ ಎಂಬುದನ್ನು ನಾವು ಗುರ್ತಿಸಿದ್ದೇವೆ.

೫.೨ ವಾರ್ಷಿಕ ಬಾಡಿಗ ಮೌಲ್ಯ ಅಂದಾಜು ಮಾಡಲು ನಿಯಮಗಳನ್ನು ನಿರ್ಧರಿಸುವುದು:

ಗ್ರಾಮ ಪಂಚಾಯತಿ ಆಸ್ತಿ ತರಿಗೆ ವಿಧಿಸುವ ನಿಯಮಗಳ ನಿಯಮ ೧೪ (೧) ರಡಿ ನಿರ್ಧರಣ ಪಟ್ಟಿಯ ಪ್ರತಿ ಭಾಗವನ್ನು ಪ್ರತಿ ನಾಲ್ಕು ವರ್ಷಗಳಿಗೆ ಕಡಿಮೆ ಇಲ್ಲದಂತೆ ಒಮ್ಮೆ ಸಂಪೂರ್ಣವಾಗಿ ಪರಿಷ್ಕರಿಸತಕ್ಕದ್ದು. ನಿಯಮ ೧೪ (೨) ರಡಿ, ಕಾರ್ಯದರ್ಶಿಯು (ಗ್ರಾಮ ಪಂಚಾಯತಿಯ) ಹಿಂದಿನ ವರ್ಷದ ಪಟ್ಟಿಯಲ್ಲಿ ಮಾಡಲಾದ ಮೌಲ್ಯೀಕರಣ ಮತ್ತು ಅಂದಾಜನ್ನು ತಕ್ಷಣದ ಮುಂದಿನ ವರ್ಷಕ್ಕೆ ಅವಶ್ಯಕವೆಂದು ಭಾವಿಸುವ ಮಾರ್ಪಾಟುಗಳೊಂದಿಗೆ ಅಳವಡಿಸಿಕೊಳ್ಳಬಹುದು. ಹಾಗಿದ್ದಾಗ್ಯೂ ವಾರ್ಷಿಕ ಬಾಡಿಗೆಗೆ ನೀಡಬಹುದಾದ ಮೌಲ್ಯವನ್ನು ಖಚಿತವಾಗಿ ಹೇಗೆ ನಿರ್ಧರಿಸಬಹುದೆಂಬುದರತ್ತ ನಿಯಮಗಳು ಬೆಳಕು ಚೆಲ್ಲುವುದಿಲ್ಲ.

ನಾವು ಆಸ್ತಿಗಳ ವಿಭಿನ್ನ ವಿವರಣೆಗಳಿಗೆ ಅನ್ವಯವಾಗುವ ಘಟಕ ಪ್ರದೇಶ ಆಧರಿಸಿದ ಪಟ್ಟಿಯೊಂದಿಗೆ ತೆರಿಗೆ ಹಾಕಬಹುದಾದ ಮೌಲ್ಯ ನಿರ್ಧರಿಸಲು ಪಾಲ್ಗೊಳ್ಳುವಿಕೆ ವಿಧಾನವೊಂದನ್ನು ಜಾರಿಗೆ ತರಲು ಪ್ರಸ್ತಾಪಿಸಿದ್ದೇವೆ. ಇದು ಮೂಲಭೂತವಾಗಿ ಈ ಮುಂದಿನಂತೆ ಕಾರ್ಯನಿರ್ವಹಿಸುತ್ತದೆ ಎಂದು ನಾವು ಪ್ರಸ್ತಾಪಿಸಿದ್ದೇವೆ;

* ಗ್ರಾಮ ಪಂಚಾಯತಿ ಪ್ರದೇಶದೊಳಗಿನ ಎಲ್ಲ ಕಟ್ಟಡಗಳನ್ನು ನಿರ್ಮಾಣದ ರೀತಿಯನ್ನು ಆಧರಿಸಿ ಮೂರು ಪ್ರವರ್ಗಗಳಾಗಿ ವರ್ಗೀಕರಿಸಲಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಅತಿ ಹೆಚ್ಚು ಸುಲಭವಾಗಿ ಆಸ್ತಿಯ ಮೌಲ್ಯ ಗುರ್ತಿಸುವ ಪರೋಕ್ಷ ವಿಧಾನವೆಂದರೆ ಛಾವಣಿ ನಿರ್ಮಾಣಕ್ಕೆ ಬಳಸಲಾದ ಮಾದರಿ ಮತ್ತು ಗುಣಮಟ್ಟ; ಆದ್ದರಿಂದ ಆಸ್ತಿಗಳನ್ನು ಕಾಂಕ್ರೀಟ್ ಅಥವಾ ಚಪ್ಪಡಿ ಛಾವಣಿ, ಹೆಂಚಿನ ಛಾವಣಿ ಅಥವಾ ಹುಲ್ಲು-ಗರಿ ಛಾವಣಿ ಎಂಬುದಾಗಿ ವರ್ಗೀಕರಿಸಬಹುದಾಗಿದೆ.
* ಮೇಲೆ ಪಟ್ಟಿ ಮಾಡಲಾದಂತೆ ಪ್ರತಿ ಆಸ್ತಿಯಡಿ ಪ್ರತಿ ಮಾದರಿಯ ನಿರ್ಮಾಣವನ್ನು ಮಾಡಲಾದ ಪ್ರದೇಶದ ವಿಸ್ತೀರ್ಣವನ್ನು ಅಳತೆ ಮಾಡತಕ್ಕದ್ದು.
* ಬಳಕೆ ವಾಸಕ್ಕೋ ಅಥವಾ ವಾಣಿಜ್ಯ ಬಳಕೆಗೋ ಎಂಬುದರ ಆಧಾರದ ಮೇಲೂ ಕಟ್ಟಡಗಳನ್ನು ವರ್ಗೀಕರಿಸಲಾಗಿದೆ.
* ಮೇಲಿನ ಕ್ರಮಗಳೊಂದಿಗೆ, ನಿರ್ಮಾಣದ ಗುಣಮಟ್ಟ ಮತ್ತು ಅಂತ್ಯ ಬಳಕೆಯ ಆರು ಸಾಧ್ಯ ಸಂಯೋಗಗಳು ಈ ಮುಂದಿನಂತಿವೆ.

| | |
|---|---|
| ಕಾಂಕ್ರೀಟ್ ಅಥವಾ ಚಪ್ಪಡಿ ಹಾಸಿದ ಛಾವಣಿ : ವಾಸ | ಕಾಂಕ್ರೀಟ್ ಅಥವಾ ಚಪ್ಪಡಿ ಹಾಸಿದ ಛಾವಣಿ : ವಾಣಿಜ್ಯ |
| ಹೆಂಚಿನ ಛಾವಣಿ : ವಾಸ | ಹೆಂಚಿನ ಛಾವಣಿ : ವಾಣಿಜ್ಯ |
| ಹುಲ್ಲುಗರಿ ಹೊದಿಸಿದ ಛಾವಣಿ : ವಾಸ | ಹುಲ್ಲು-ಗರಿ ಛಾವಣಿ : ವಾಣಿಜ್ಯ |

* ಮುಖ್ಯ ಕಾರ್ಯನಿರ್ವಹಣಾಧಿಕಾರಿ ನೇತೃತ್ವದಲ್ಲಿ ಸಂಬಂಧಪಟ್ಟ ಗ್ರಾಮ ಪಂಚಾಯತಿಯೂ ಸದಸ್ಯತ್ವ ಹೊಂದಿರುವ ಉಪಸಮಿತಿಯು ಪ್ರತಿ ಗ್ರಾಮ ಪಂಚಾಯತಿಗೆ ಸಲಹೆ ಮಾಡಿದ ಗರಿಷ್ಟ ಹಾಗೂ ಕನಿಷ್ಟ ವಾರ್ಷಿಕ ತೆರಿಗೆ ಮೌಲ್ಯ ಪಟ್ಟಿಯಿಂದ ಗ್ರಾಮ ಪಂಚಾಯತಿಯು ಮೇಲೆ ನಿರ್ದಿಷ್ಟಪಡಿಸಿದ ಪ್ರತಿ ಪ್ರವರ್ಗಕ್ಕೂ ಚದರಡಿಗೆ ತಕ್ಕಂತೆ ದರ ನಿಗದಿಪಡಿಸಬೇಕಾಗುತ್ತದೆ.
* ಪ್ರತಿ ಪ್ರವರ್ಗಕ್ಕೆ ನಿಗದಿಪಡಿಸಲಾದ ದರವನ್ನು ವಾರ್ಷಿಕ ಬಾಡಿಗೆ ಮೌಲ್ಯಕ್ಕೆ ತರಲು ಪ್ರತಿ ಪ್ರವರ್ಗದಡಿ ಬರುವ ಪ್ರದೇಶವನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ.
* ಪ್ರತಿ ಆಸ್ತಿಯ ಮೇಲೆ ವಿಧಿಸಬಹುದಾದ ಆಸ್ತಿ ತೆರಿಗೆಯನ್ನು ಲೆಕ್ಕಹಾಕುವುದಕ್ಕಾಗಿ ಗ್ರಾಮ ಪಂಚಾಯತಿಯು ಮೇಲೆ ಬಂದಂಥ ವಾರ್ಷಿಕ ಬಾಡಿಗೆ ಮೌಲ್ಯಕ್ಕೆ ಶೇಕಡಾ ತೆರಿಗೆಯೊಂದನ್ನು (ಕಾನೂನಿನಡಿ ಶೇ. ೧೦ರವರೆಗೆ ಎಂದು ನಿಗದಿಪಡಿಸಲಾಗಿದೆ). ಅನ್ವಯಿಸಬೇಕಾಗುತ್ತದೆ.

ಸಿ : ಆಸ್ತಿ ತೆರಿಗೆಯ ಸ್ವಯಂ ನಿರ್ಧರಣೆಗೆ ಅವಕಾಶ ಕಲ್ಪಿಸುವುದು.

ಆಸ್ತಿ ತೆರಿಗೆ ಅಂದಾಜು ಮಾಡುವಲ್ಲಿ ಸ್ವಯಂ ನಿರ್ಧರಣೆಯ ಅಂಶಗಳನ್ನು ತರಲು ನಾವು ಪ್ರಸ್ತಾಪಿಸಿದ್ದೇವೆ. ಸ್ವಯಂ ನಿರ್ಧಾರಣೆಯಡಿ, ಕಾರ್ಯದರ್ಶಿಯು ಆಸ್ತಿ ಮಾಲೀಕರಿಗೆ ಮೇಲ್ಕಂಡ ನಿಯಮಗಳನ್ನು ಆಧರಿಸಿ ಅವರುಗಳ ಆಸ್ತಿಗಳ ಮೇಲೆ ಪಾವತಿಸಬಹುದಾದ ತೆರಿಗೆಯನ್ನು ತಮಗೆ ತಾವೇ ಅಂದಾಜು ಮಾಡಿಕೊಳ್ಳಲು ಅವಕಾಶ ನೀಡಬೇಕು. ಒಂದುವೇಳೆ ಮಾಲೀಕರು ಒಪ್ಪುವಂತಿದ್ದರೆ ಅವರು ನಿಗದಿತ ನಮೂನೆಯಲ್ಲಿ ವಾರ್ಷಿಕ ಬಾಡಿಗೆ ಮೌಲ್ಯವನ್ನು ಲೆಕ್ಕಹಾಕಿ ಅದನ್ನು ಗ್ರಾಮಪಂಚಾಯತಿಗೆ ಸಲ್ಲಿಸಬಹುದು. ಒಂದು ವೇಳೆ ಅವರು ಹಾಗೆ ಮಾಡಲು ಆಯ್ಕೆ ಮಾಡಿಕೊಳ್ಳದಿದ್ದಲ್ಲಿ, ಕಾರ್ಯದರ್ಶಿಯು ಮಾರ್ಗದರ್ಶಿ ಸೂತ್ರಗಳ ಪ್ರಕಾರ ಆಸ್ತಿಯ ನಿರ್ಧಾರಣೆ ಮಾಡಬಹುದು.

## ೬. ಸಮಾಲೋಚನೆಗಳು ಮತ್ತು ಪೂರಕ ಮಾಹಿತಿ :

೬.೧ ಅನುಷ್ಠಾನಗೊಳಿಸುವ ಮೊದಲು ರಾಜ್ಯದುದ್ದಕ್ಕೆ ಪಾಲುದಾರರೊಂದಿಗೆ, ನಿರ್ದಿಷ್ಟವಾಗಿ ಗ್ರಾಮ ಪಂಚಾಯತಿಗಳೊಂದಿಗೆ ವ್ಯಾಪಕ ಸಮಾಲೋಚನೆ ಅವಶ್ಯಕತೆಯಿತ್ತು ಎಂದು ನಾವು ಭಾವಿಸಿದ್ದೆವು. ಅದರಂತೆ ನಾವು ಎಂಟು ತಾಲ್ಲೂಕುಗಳಲ್ಲಿ ಗ್ರಾಮ ಪಂಚಾಯತ್ ಅಧ್ಯಕ್ಷರು, ಗ್ರಾಮ ಪಂಚಾಯತ್ ಕಾರ್ಯದರ್ಶಿಗಳು, ಇತರೆ ಚುನಾಯಿತ ಪ್ರತಿನಿಧಿಗಳು, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಅಧಿಕಾರಿಗಳೊಂದಿಗೆ ವಿಷಯಮಂಡಿಸಿ, ಸಮಾಲೋಚನೆ ನಡೆಸಿದೆವು.

೬.೨ ಪ್ರತಿಕ್ರಿಯೆಯು ಉತ್ತೇಜನಕಾರಿಯಾಗಿತ್ತು ಹಾಗೂ ನಮ್ಮ ಪ್ರಸ್ತಾವನೆಗಳಿಗೆ ಅಲ್ಲಿ ಜಾಗೃತಿ ಇತ್ತು ಮತ್ತು ಬೆಂಬಲಗಳು ದೊರೆತಿದ್ದವು. ಹಲವಾರು ಗ್ರಾಮ ಪಂಚಾಯತಿ ಅಧ್ಯಕ್ಷರು, ಭೂಮಿ ದಾಖಲೆಗಳು ಮತ್ತು ಪಡಿತರ ಚೀಟಿ ವಿತರಣೆಗಳಂತಹ ಇತರ ಇಲಾಖಾ ಕಾರ್ಯಗಳನ್ನು ಗ್ರಾಮ ಪಂಚಾಯತಿ ಹಂತದಲ್ಲಿ ವಿಕೇಂದ್ರೀಕರಣ ಮಾಡುವ ನಿಟ್ಟಿನಲ್ಲಿ ಕಂಪ್ಯೂಟರೀಕರಣವು ಮುಂದಿನ ಹೆಜ್ಜೆಯಾಗಬಹುದೆಂದು ಭಾವಿಸಿದರು. ಈ ನಮ್ಮ ಪ್ರಸ್ತಾವನೆಗಳನ್ನು ಸ್ವಯಂ ನಿರ್ಧಾರಣೆ ಯೋಜನೆ ಎಂಬ ಪದಬಳಸಿ ಕರೆಯದೆ ಪಾಲ್ಗೊಳ್ಳುವಿಕೆ ನಿರ್ಧಾರಣಾ ಯೋಜನೆ ಎಂಬುದಾಗಿ ಕರೆಯಬೇಕೆಂಬುದು ನಾವು ಸ್ವೀಕರಿಸಿದ ಬಹು ಮುಖ್ಯ ಪೂರಕ ಮಾಹಿತಿಯಾಗಿದೆ. ಸ್ವಯಂ-ನಿರ್ಧಾರಣಾ ಪ್ರಕ್ರಿಯೆಯು ಬಡ ಜನರ ಗ್ರಹಿಕೆಗೆ ಮೀರಿದ್ದಾಗಿದೆಯೆಂಬ ಭಾವನೆ ಅವರಲ್ಲಿದ್ದು, ಆದ್ದರಿಂದ ಈ ಯೋಜನೆಯನ್ನು 'ಆಸ್ತಿ ತೆರಿಗೆಯ ಪಾಲ್ಗೊಳ್ಳುವಿಕೆ ಮತ್ತು ಪಾರದರ್ಶಕ ನಿರ್ಧಾರಣೆ' ಎಂದು ಕರೆಯಬಹುದಾಗಿದೆ ಎಂದು ಹೇಳಿದರು.

## ೭. ನಮ್ಮ ಹೆಗ್ಗುರುತು ಸುತ್ತೋಲೆ :

೨೪ನೇ ೨೦೦೩ರಂದು ನಾವು ಆಸ್ತಿ ತೆರಿಗೆ ನಿಗದಿಪಡಿಸುವ ನೀತಿ ಕುರಿತಂತೆ ವಿವರವಾದ ಸುತ್ತೋಲೆಯೊಂದನ್ನು ಹೊರಡಿಸಿದ್ದು ಅದು ಮುಂದಿನಂತಿದೆ.

೧, ಗ್ರಾಮ ಪಂಚಾಯತಿಗಳಿಂದ ಆಸ್ತಿ ತೆರಿಗೆ ಸಂಗ್ರಹಣೆಯನ್ನು ಸುಧಾರಿಸುವ ಕಾರ್ಯವು ಸಕಾರದ ಗಮನವನ್ನು ಸೆಳೆಯುತ್ತಿದೆ. ರಾಜ್ಯದಲ್ಲಿನ ಎಲ್ಲ ಗ್ರಾಮ ಪಂಚಾಯತಿಗಳಿಂದ ಲಭ್ಯವಾದ ಅಂಕಿ ಅಂಶ ಮತ್ತು ಕೋಲಾರ ಮತ್ತು ಮಂಡ್ಯ ಜಿಲ್ಲೆಗಳ ಎರಡು ಗ್ರಾಮ ಪಂಚಾಯತಿಗಳಲ್ಲಿ ಕೈಗೊಳ್ಳಲಾದ ಮುಂಚೂಣಿ ಅಧ್ಯಯನಗಳು ಆಸ್ತಿ ತೆರಿಗೆಗಳ ಸಂಗ್ರಹಣೆಯಲ್ಲಿ ಈ ಮುಂದಿನ ಕೊರತೆಗಳನ್ನು ಹೊರಗೆಡವಿತು.

* ರಾಜ್ಯದ ಪ್ರದೇಶಗಳಲ್ಲಿ ತಲಾ ಆಸ್ತಿಕ ತೆರಿಗೆಯ ಸರಾಸರಿ ಪ್ರತಿ ವರ್ಷ ತಲಾ ಸುಮಾರು ರೂ. ೧೦.೬೨ ರಷ್ಟಿದ್ದು, ಇದು ತೀರಾ ಕಡಿಮೆ ಎನ್ನಬಹುದು. ಪ್ರತಿ ವರ್ಷ ಪ್ರತಿ ತಲಾ ಚಿತ್ರಣ ತೆರಿಗೆಯ ಸಂಗ್ರಹಣೆಯು ರೂ. ೧೯.೩೬ ರಷ್ಟಿದೆ.
* ಆಸ್ತಿಯ ಮಾಲೀಕ ಮತ್ತು ಆಸ್ತಿಯ ಸೂಕ್ತ ವಿವರಗಳನ್ನು ನಿರ್ವಹಿಸಿರಲಿಲ್ಲ.
* ನಿಗದಿಪಡಿಸಿದ ತೆರಿಗೆಗೂ ಆಸ್ತಿಯ ಗಾತ್ರ ಮತ್ತು ಮೌಲ್ಯಕ್ಕೂ ಸಂಬಂಧವಿರಲಿಲ್ಲ ಹಾಗೂ ಹಲವು ಬಾರಿ ಆಸ್ತಿಯ ಗಾತ್ರಕ್ಕೆ ಸಂಬಂಧವಿಲ್ಲದೆ ಇಡುಗಂಟು ಆಧಾರದ ಮೇಲೆ ತೆರಿಗೆಯನ್ನು ಸಂಗ್ರಹಿಸಲಾಗಿದೆ.
* ಅಷ್ಟು ಕಡಿಮೆ ತೆರಿಗೆಯನ್ನು ಕಂತುಗಳಲ್ಲಿ ಸಂಗ್ರಹಿಸಿದರೂ ಫಲಿತಾಂಶವಾಗಿ ಅದಕ್ಷತೆ ಹಾಗೂ ಸಂಗ್ರಹಣೆಯ ವೆಚ್ಚ ಅಧಿಕವಾಯಿತು.
* ಸೂಚನಾ ಪತ್ರಗಳನ್ನು ಕಳುಹಿಸಲಾದ ಸ್ವೀಕರಿಸಬಹುದಾದ ಒಟ್ಟು ತೆರಿಗೆಗಳು ತಕ್ಷಣವೇ ಲಭ್ಯವಾಗಲಿಲ್ಲ.
* ತೆರಿಗೆ ಬೇಡಿಕೆ ನೋಂದಣಿ ಪುಸ್ತಕಗಳು ಹಳತಾದವು.
* ಬಾಕಿದಾರರು ದಂಡ ತೆರುವಂತಹ ಸನ್ನಿವೇಶಗಳನ್ನು ಎದುರಿಸದೇ ಇದ್ದುದರಿಂದಾಗಿ ತೆರಿಗೆಗಳನ್ನು ಸಕಾಲದಲ್ಲಿ ಅಥವಾ ಎಂದಿಗೂ ಪಾವತಿ ಮಾಡುವ ಉತ್ತೇಜನವಿಲ್ಲ.

೧. ಆದ್ದರಿಂದ ಸೂಕ್ತ ಪ್ರೋತ್ಸಾಹ ಮತ್ತು ಸೂಕ್ತ ವಾತಾವರಣವನ್ನು ಒದಗಿಸಿದಲ್ಲಿ ಆಸ್ತಿ ತೆರಿಗೆಗಳ ಸಂಗ್ರಹಣೆಯಲ್ಲಿ ಹೆಚ್ಚಿನ ಸುಧಾರಣೆಗೆ ಅವಕಾಶವಿದೆ.

೨. ಸರಕಾರವು ಗ್ರಾಮ ಪಂಚಾಯತಿಗಳು ಆಸ್ತಿ ತೆರಿಗೆಯನ್ನು ಸಂಗ್ರಹಿಸಲು ಒಂದು ಪ್ರೋತ್ಸಾಹಕ ಪ್ಯಾಕೇಜ್‌ನ್ನು ಹೊರಡಿಸಿದೆ.

೩. ಆಸ್ತಿ ತೆರಿಗೆಗಳು : ಕಾನೂನು ಮತ್ತು ಸರ್ಕಾರದ ನೀತಿಗಳಡಿ ಆಸ್ತಿ ತೆರಿಗೆಗಳು ಪ್ರಸಕ್ತ ಸ್ಥಾನಮಾನ : ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ೧೯೯ (೧) ನೇ ಪ್ರಕರಣವು ಗ್ರಾಮ ಪಂಚಾಯತಿಗಳಿಗೆ ಈ ಮುಂದಿನ ನಿಬಂಧನೆಗಳೊಂದಿಗೆ ಆಸ್ತಿ ತೆರಿಗೆಯನ್ನು ವಿಧಿಸಲು ಮತ್ತು ಸಂಗ್ರಹಿಸಲು ಅಧಿಕಾರಗಳನ್ನು ನೀಡುತ್ತದೆ:

ಪ್ರತಿ ಗ್ರಾಮ ಪಂಚಾಯತಿಯು ಅನುಸೂಚಿ iv ರಲ್ಲಿ ನಿಗದಿಪಡಿಸಿದ ಗರಿಷ್ಠ ದರವನ್ನು ಮೀರದ ರೀತಿಯಲ್ಲಿ ಗ್ರಾಮ ಪಂಚಾಯತಿ ಪ್ರದೇಶ ವ್ಯಾಪ್ತಿಯೊಳಗಡೆ ಕೃಷಿ ತೆರಿಗೆ ನಿರ್ಧಾರಣೆಗೆ ಒಳಪಡದಿರುವ ಭೂಮಿ ಮತ್ತು ಕಟ್ಟಡಗಳ ಮೇಲೆ ತೆರಿಗೆ ವಿಧಿಸತಕ್ಕದ್ದು.

ಅಧಿನಿಯಮದಲ್ಲಿ ಕಟ್ಟಡವನ್ನು ಅತ್ಯಂತ ಸಮಗ್ರ ರೀತಿಯಲ್ಲಿ ವ್ಯಾಖ್ಯಾನಿಸಲಾಗಿದ್ದು ಎಲ್ಲಾ ರೀತಿಯ ನಿರ್ಮಾಣಗಳನ್ನು ಒಳಗೊಳ್ಳುವಂತಿದೆ. ಆದ್ದರಿಂದ ತೆರಿಗೆ ಆಧಾರವನ್ನು ಹೆಚ್ಚಿಸಲು ವ್ಯಾಪಕ ಅವಕಾಶವಿದೆ. ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ iv ನೇ ಅನುಸೂಚಿಯು ಈ ಕೆಳಗಿನಂತೆ ಹೇಳುತ್ತದೆ :

## ತೆರಿಗೆಯ ಗರಿಷ್ಠ ದರ :

| | |
|---|---|
| ಆಸ್ತಿಯ ಮೇಲಿನ ತೆರಿಗೆ | ಕಟ್ಟಡಗಳ ಮೇಲಿನ ತೆರಿಗೆ-ಪ್ರತಿ ವರ್ಷಕ್ಕೆ ವಾರ್ಷಿಕ ಬಾಡಿಗೆ ಮೌಲ್ಯದ ಶೇ. ೧೦ ರಷ್ಟು. ವಾರ್ಷಿಕ ಬಾಡಿಗೆ ಮೌಲ್ಯ ಎಂದರೆ ಯಾವುದೇ ಕಟ್ಟಡ ಅಥವಾ ಭೂಮಿಗೆ ಅದರಲ್ಲಿರುವ ಅಥವಾ ಅದರಲ್ಲಿ ಸ್ಥಾಪಿಸಿರುವ ಪೀಠೋಪಕರಣಗಳ ಅಥವಾ ಯಂತ್ರಗಳನ್ನು ಹೊರತು ಪಡಿಸಿ ಅದಕ್ಕೆ ವರ್ಷದಿಂದ ವರ್ಷಕ್ಕೆ ಸೂಕ್ತ ಬಾಡಿಗೆ ನಿರೀಕ್ಷಿಸಲಾಗುವ ವಾರ್ಷಿಕ ಬಾಡಿಗೆ. |
| ಕೃಷಿ ತೆರಿಗೆ ನಿರ್ಧಾರಣಕ್ಕೆ ಒಳಪಡದ ಭೂಮಿಯ ಮೇಲಿನ ತೆರಿಗೆ | ಪ್ರತಿ ೧೦೦ ಚದರ ಮೀಟರ್‌ಗೆ ಪ್ರತಿ ವರ್ಷಕ್ಕೆ ಒಂದು ರೂಪಾಯಿಗಳು |

ಗ್ರಾಮ ಪಂಚಾಯತಿಯ ಪ್ರದೇಶವನ್ನು ಪ್ರಕರಣ ೨ (೨೮) ರಲ್ಲಿ, ಪ್ರಕರಣ ೪ ರಡಿ ಪಂಚಾಯತಿ ಪ್ರದೇಶವೆಂದು ಘೋಷಿಸಲಾದ ಯಾವುದೇ ಪ್ರದೇಶ ಎಂಬುದಾಗಿ ವ್ಯಾಖ್ಯಾನಿಸಲಾಗಿದೆ. ಪ್ರಕರಣ ೪ (೧)ರಲ್ಲಿ ವಿವರಿಸಿದಂತೆ, ಸರ್ಕಾರದ ಸಾಮಾನ್ಯ ಅಥವಾ ವಿಶೇಷ ಆದೇಶಗಳಿಗೆ ಒಳಪಟ್ಟಂತೆ, ಜಿಲ್ಲಾಧಿಕಾರಿಯು, ಈ ಅಧಿನಿಯಮದ ಉದ್ದೇಶಗಳಿಗಾಗಿ ಪ್ರಕರಣದಲ್ಲಿ ಪಂಚಾಯತಿ ಪ್ರದೇಶವೆಂದು ನಿರ್ದಿಷ್ಟಪಡಿಸಿದ ಜನಸಂಖ್ಯೆಯ ಮಿತಿಗನುಗುಣವಾಗಿ ಗ್ರಾಮ ಅಥವಾ ಗ್ರಾಮಗಳ ಗುಂಪನ್ನು ಒಳಗೊಂಡ ಯಾವುದೇ ಪ್ರದೇಶವನ್ನು ಪಂಚಾಯತಿ ಪ್ರದೇಶವೆಂದು ಘೋಷಿಸುವುದಲ್ಲದೆ ಅದರ ಕೇಂದ್ರ ಸ್ಥಾನವನ್ನು ನಿರ್ದಿಷ್ಟ ಪಡಿಸಬಹುದು.

೫. ಆಸ್ತಿ ತೆರಿಗೆ ಸಂಗ್ರಹಣೆ ಸುಧಾರಿಸಲು ಒತ್ತು ಕೊಡಬೇಕಾದ ನಾಲ್ಕು ಕ್ಷೇತ್ರಗಳು ಈ ಕೆಳಕಂಡಂತಿವೆ:

* ಮೊದಲನೆಯದಾಗಿ ಎಲ್ಲಾ ಆಸ್ತಿಗಳನ್ನು ಪಟ್ಟಿ ಮಾಡತಕ್ಕದ್ದು.
* ಎರಡನೆಯದಾಗಿ ಗ್ರಾಮ ಪಂಚಾಯತಿಗಳಿಗೆ ತಾಲ್ಲೂಕುವಾರು ಆಧಾರದ ಮೇಲೆ ಸೂಚನಾತ್ಮಕ ವಾರ್ಷಿಕ ಮೌಲ್ಯಗಳ ನಿರ್ಧಾರ; ಪಾವತಿಸಬೇಕಾದ ಆಸ್ತಿ ತೆರಿಗೆಯನ್ನು ಕಾನೂನಿನಲ್ಲಿ ನಿಗದಿಪಡಿಸಿದಂತೆ ಅಂದಾಜು ಮಾಡತಕ್ಕದ್ದು.
* ಮೂರನೆಯದಾಗಿ, ಎಲ್ಲಾ ಆಸ್ತಿಗಳನ್ನು ಒಂದು ಪ್ರಮಾಣಿತ ಮಾನದಂಡದ ಮೂಲಕ ಅಳೆಯತಕ್ಕದ್ದು ಮತ್ತು ವರ್ಗೀಕರಿಸತಕ್ಕದ್ದು.
* ನಾಲ್ಕನೆಯದಾಗಿ, ಆಸ್ತಿ ತೆರಿಗೆಗಳ ಸಂಗ್ರಹಣೆಗೆ ಚಾಲನೆ ನೀಡತಕ್ಕದ್ದು.

**ವಿಷಯ ಸಂಖ್ಯೆ ೧ : ಎಲ್ಲಾ ಆಸ್ತಿಗಳನ್ನು ಪಟ್ಟಿ ಮಾಡುವುದು :**

ಗ್ರಾಮ ಪಂಚಾಯತಿ ಪ್ರದೇಶದೊಳಗಿನ ಎಲ್ಲಾ ಆಸ್ತಿಗಳನ್ನು ಕಾನೂನಿನ ಉಪಬಂಧಗಳಿಗನುಗುಣವಾಗಿ ಪಟ್ಟಿ ಮಾಡಿ ಗ್ರಾಮಪಂಚಾಯತಿ ಆಸ್ತಿ ಪಟ್ಟಿಗೆ ತರಬೇಕಾಗುತ್ತದೆ. ಎಲ್ಲಾ ನಿರ್ಮಾಣಗಳನ್ನು ೬ ಪ್ರವರ್ಗಗಳಾಗಿ ಈ ಮುಂದಿನಂತೆ ಪಟ್ಟಿ ಮಾಡಲಾಗುತ್ತದೆ.

| ವೈಯಕ್ತಿಕ ಬಳಕೆ ಉದ್ದೇಶಕ್ಕೆ | ವಾಣಿಜ್ಯ ಬಳಕೆಗೆ |
|---|---|
| ಹುಲ್ಲುಗರಿ ಹೊದಿಸಿದ | ಹುಲ್ಲುಗರಿ ಹೊದಿಸಿದ |
| ಹೆಂಚಿನ | ಹೆಂಚಿನ |
| ಆರ್.ಸಿ.ಸಿ. | ಆರ್.ಸಿ.ಸಿ. |

**ವಿಷಯ ಸಂಖ್ಯೆ ೨ : ಸೂಚನಾತ್ಮಕ ವಾರ್ಷಿಕ ತೆರಿಗೆ ಹಾಕಬಹುದಾದ ಮೌಲ್ಯಗಳ ನಿರ್ಧಾರಣೆ :**

ಕಾರ್ಯನಿರ್ವಾಹಕ ಅಧಿಕಾರಿ, ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ ಮತ್ತು ಸಂಬಂಧಪಟ್ಟ ಗ್ರಾಮಪಂಚಾಯತಿಯ ಅಧ್ಯಕ್ಷ, ಉಪಾಧ್ಯಕ್ಷ ಹಾಗೂ ಕಾರ್ಯದರ್ಶಿ ಅವರನ್ನೊಳಗೊಂಡ ತಾಲ್ಲೂಕು ಮಟ್ಟದ ಸಮಿತಿಯೊಂದನ್ನು ರಚಿಸಲಾಯಿತು. ಈ ಸಮಿತಿಯು ಪ್ರತಿ ಗ್ರಾಮ ಪಂಚಾಯತಿಗೆ, ಪ್ರತಿ ಪ್ರವರ್ಗದ ನಿರ್ಮಾಣಗಳಿಗೆ ಸಲಹೆ ಮಾಡಲಾದ ಪ್ರತಿ ಚದರ ಮೀಟರ್ ವಾರ್ಷಿಕ ತೆರಿಗೆ ಮೌಲ್ಯವನ್ನು ಸೂಚಿಸುತ್ತದೆ. ಈ ಸಮಿತಿಯು ವ್ಯಾಪಕ ಪ್ರಚಾರ ನೀಡಿದ ಬಳಿಕ ಸ್ಥಳೀಯ ಭೇಟಿ ನೀಡಲು, ಸೂಚನಾತ್ಮಕ ಪಟ್ಟಿ ತಯಾರಿಸಲು, ಆಕ್ಷೇಪಣೆಗಳನ್ನು ಆಹ್ವಾನಿಸಲು ಮತ್ತು ಪರಿಶೀಲನೆಯ ಬಳಿಕ ಪ್ರವರ್ಗವಾರು ಹಾಗೂ ಗ್ರಾಮ ಪಂಚಾಯತಿವಾರು ಆಧಾರದ ಮೇಲೆ ವಾರ್ಷಿಕ ತೆರಿಗೆ ಮೌಲ್ಯಗಳನ್ನು ನಿಗದಿಪಡಿಸುವ ಅಧಿಕಾರ ಹೊಂದಿರುತ್ತದೆ. ಸಮಿತಿಯು ಸ್ಥಳೀಯವಾಗಿ ಪಾವತಿಸಲಾಗುತ್ತಿರುವ ಬಾಡಿಗೆ, ಆಸ್ತಿಗಳ ಸ್ಥಳೀಯ ಮಾರಾಟಗಳ ಅಂಕಿಅಂಶ ಮತ್ತು ಗಣನೀಯ ವಾರ್ಷಿಕ ತೆರಿಗೆ ಮೌಲ್ಯಕ್ಕೆ ಬರಲು ನೆರವಾಗುವ ಇತರ ಯಾವುದೇ ಮಾಹಿತಿಯತ್ತ ಆದ್ಯಗಮನ ನೀಡಬೇಕಾಗುತ್ತದೆ. ತಾಲ್ಲೂಕು ಮಟ್ಟದ ಸಮಿತಿಯು ಸಂಬಂಧಪಟ್ಟ ಪ್ರತಿ ಗ್ರಾಮ ಪಂಚಾಯತಿಗೆ ವಾರ್ಷಿಕ ತೆರಿಗೆ ಮೌಲ್ಯದ ಹೆಚ್ಚಿನ ಮತ್ತು ಕಡಿಮೆ ಮೌಲ್ಯಗಳ ಸೂಚಕಗಳನ್ನು ತಿಳಿಸುವುದು.

**ವಿಷಯ ಸಂಖ್ಯೆ ೩ : ಗ್ರಾಮ ಪಂಚಾಯತಿಗಳಿಂದ ಆಸ್ತಿ ತೆರಿಗೆಗಳನ್ನು ಲೆಕ್ಕ ಹಾಕುವುದು :**

* ಸಮಿತಿಯು ಗ್ರಾಮ ಪಂಚಾಯತಿಗೆ ತಿಳಿಸಿದ ಹೆಚ್ಚಿನ ಮತ್ತು ಕಡಿಮೆ ಮೌಲ್ಯಗಳಿಗೆ ವ್ಯಾಪಕ ಪ್ರಚಾರ ನೀಡತಕ್ಕದ್ದು.
* ಇದಾದ ಬಳಿಕ, ಗ್ರಾಮ ಪಂಚಾಯತಿಗಳು ಅದನ್ನು ತಮ್ಮ ಗ್ರಾಮ ಪಂಚಾಯತಿಗಳಲ್ಲಿ ಅನ್ವಯಗೊಳಿಸುವುದಕ್ಕಾಗಿ ಇದನ್ನು ಪರಿಗಣಿಸಿ ಹೆಚ್ಚಿನ ಮತ್ತು ಕಡಿಮೆ ಮೌಲ್ಯಗಳಷ್ಟು ಅಥವಾ ಅವುಗಳ ನಡುವಣ ಮೌಲ್ಯವೊಂದನ್ನು - ನಿರ್ಣಯದ ಮೂಲಕ ಅಳವಡಿಸಿಕೊಳ್ಳುವುದು. ಇದನ್ನು ಜನರ ಪೂರ್ಣ ಪಾಲ್ಗೊಳ್ಳುವಿಕೆಯೊಂದಿಗೆ ಪಾರದರ್ಶಕ ರೀತಿಯಲ್ಲಿ ಮಾಡಬೇಕು.
* ಗ್ರಾಮ ಪಂಚಾಯತಿಯ ತನ್ನ ವ್ಯಾಪ್ತಿ ಪ್ರದೇಶದಲ್ಲಿ ಅಳವಡಿಸಲೆಂದು ನಿರ್ಣಯಿಸಿದ ವಾರ್ಷಿಕ ತೆರಿಗೆ ಮೌಲ್ಯ ದರಗಳನ್ನು ಒಪ್ಪಿಕೊಂಡ ಬಳಿಕ, ಗ್ರಾಮ ಪಂಚಾಯತಿಯಿಂದ ಅದರ ಪ್ರದೇಶಗಳ ಎಲ್ಲ ಜನರಿಗೆ ಇಂತಹ ನಿರ್ಧಾರಣೆಯನ್ನು ಮಾಡಲಾಗುತ್ತದೆಯೆಂದು ವ್ಯಾಪಕ ಪ್ರಚಾರ ನೀಡಬೇಕು.
* ವಾರ್ಷಿಕ ತೆರಿಗೆ ಮೌಲ್ಯದ ಶೇ. ೧೦ರ ವರೆಗೆ ಪಾವತಿಸಬಹುದಾದ ತೆರಿಗೆ ಮೀಸಲು ಕಾನೂನು ಗ್ರಾಮ ಪಂಚಾಯತಿಗೆ ನೀಡುವುದರಿಂದ ನಿರ್ಧಾರಿತ ವಾರ್ಷಿಕ ತೆರಿಗೆ ಮೌಲ್ಯದ ಮೇಲೆ ಅನ್ವಯವಾಗುವ ತೆರಿಗೆ ದರವನ್ನು ನಿಗದಿಪಡಿಸುವ ಗ್ರಾಮ ಪಂಚಾಯತಿಯ ಪ್ರತ್ಯೇಕ ನಿರ್ಣಯವೊಂದನ್ನು ಅಂಗೀಕರಿಸಬೇಕಾಗುತ್ತದೆ.

**ವಿಷಯ ಸಂಖ್ಯೆ ೩ : ನಿಗದಿಪಡಿಸಿದ ಮಾನದಂಡಕ್ಕೆ ಅನುಗುಣವಾಗಿ ಆಸ್ತಿಗಳನ್ನು ಅಳತೆ ಮಾಡುವುದು ಮತ್ತು ವರ್ಗೀಕರಿಸುವುದು :**

* ಇದನ್ನು ಅನುಸರಿಸಿ, ವಿವರಗಳನ್ನು ಕಂಪ್ಯೂಟರೀಕರಣದಲ್ಲಿ ಬಳಸಬಹುದಾದ ಮಾಹಿತಿ ಭರ್ತಿ ಮಾಡುವ ನಮೂನೆಯಲ್ಲಿ ಸಂಗ್ರಹಿಸತಕ್ಕದ್ದು.
* ಅಳತೆ ಮಾಡುವ ವೇಳಾಪಟ್ಟಿಯ ಬಗ್ಗೆ ಆಸ್ತಿಯ ಮಾಲೀಕರಿಗೆ ಪೂರ್ಣ ಮಾಹಿತಿ ಕೊಡಬೇಕಾಗಿದ್ದು, ಅವರ ಎದುರಿಗೇ ಅಳತೆಯನ್ನು ಮಾಡತಕ್ಕದ್ದು. ಸಾಧ್ಯವಿರುವ ಕಡೆಗಳಲ್ಲಿ (ವಿಶೇಷವಾಗಿ ಪಟ್ಟಣ ಹೊರವಲಯಗಳು ಹಾಗೂ ಸಾಕ್ಷರತೆ ಹೆಚ್ಚಿಗೆ ಇರುವ ಕಡೆ) ವಿವರಗಳನ್ನು ಜನರೇ ಭರ್ತಿ ಮಾಡುವಂತೆ ಅವಕಾಶ ನೀಡುವ ಜೊತೆಗೆ ಉತ್ತೇಜನವನ್ನು ನೀಡಬೇಕಿದ್ದು, ಭರ್ತಿ ಮಾಡಿದ್ದು ಸರಿಯಿದೆಯೇ ಇಲ್ಲವೇ ಎಂಬುದರ ಬಗ್ಗೆ ಖಾತರಿಯಾಗಿ ಆಯ್ದುಕೊಂಡಂತೆ ಪರಿಶೀಲನೆ ಮಾಡಬಹುದು.
* ಆಸ್ತಿ ಮಾಲೀಕರ ಸಮ್ಮತಿ ಮತ್ತು ಸ್ವಯಂ-ಘೋಷಣೆಯನ್ನು ನಿಗದಿತ ನಮೂನೆಯಲ್ಲಿ ಪಡೆದುಕೊಳ್ಳತಕ್ಕದ್ದು.
* ಮನೆಗಳ ಖಚಿತ ಗಣತಿಗಾಗಿ ಪಟ್ಟಿ ಮಾಡಲಾದ ಪ್ರತಿ ಆಸ್ತಿಗೆ ರೂ. ೧೦ರ ಪ್ರೋತ್ಸಾಹಕ ನೀಡಲು ಗ್ರಾಮ ಪಂಚಾಯತಿಗೆ ಅಧಿಕಾರವಿದೆ. ಈ ಪ್ರೋತ್ಸಾಹಕವನ್ನು ಗ್ರಾಮ ಪಂಚಾಯತಿಯು ತನ್ನ ಸ್ವಂತ ನಿಧಿಯಿಂದ ಕೊಡಬೇಕಾಗುತ್ತದೆ.
* ಆಸ್ತಿಗಳ ಪಟ್ಟಿ ಮಾಡಿದ ಬಳಿಕ ಅವುಗಳನ್ನು ಗ್ರಾಮ ಪಂಚಾಯತಿಯ ಆಸ್ತಿ ನೋಂದಣಿ ಪುಸ್ತಕದಲ್ಲಿ ದಾಖಲಿಸತಕ್ಕದ್ದು ಮತ್ತು ಕಾನೂನಿನ ಪ್ರಕಾರ ಆಕ್ಷೇಪಣೆಗಳನ್ನು ಕೇಳಲು ಒಂದು ತಿಂಗಳ ಕಾಲಾವಕಾಶ ನೀಡತಕ್ಕದ್ದು. ಆಕ್ಷೇಪಣೆಗಳನ್ನು ಕೇಳಿದ ಬಳಿಕ ಗ್ರಾಮ ಪಂಚಾಯತಿಯು ತೆರಿಗೆ ನಿರ್ಧರಣೆಯನ್ನು ಖಚಿತ ಪಡಿಸಿ, ಅವುಗಳ ಸಂಗ್ರಹಣೆಗೆ ಸಂಬಂಧಪಟ್ಟವರಿಗೆ ಬೇಡಿಕೆ ಸೂಚನಾ ಪತ್ರಗಳನ್ನು ಹೊರಡಿಸತಕ್ಕದ್ದು.

**ವಿಷಯ ಸಂಖ್ಯೆ ೪ : ಸಂಗ್ರಹಗಳನ್ನು ಕೈಗೊಳ್ಳುವುದು :**

ಸಂಗ್ರಹ ಚಾಲನೆ ಘೋಷಣೆ ಕುರಿತು ವ್ಯಾಪಕ ಪ್ರಚಾರ ನೀಡತಕ್ಕದ್ದು. ಸಂಗ್ರಹ ಚಾಲನೆಯಲ್ಲಿ ಭಾಗವಹಿಸಲು ಗ್ರಾಮ ಪಂಚಾಯತಿಯ ಎಲ್ಲಾ ಸದಸ್ಯರಿಗೆ ಉತ್ತೇಜನ ನೀಡತಕ್ಕದ್ದು.

ಸುತ್ತೋಲೆಯ ಬಳಿಕ ಸುತ್ತೋಲೆಯ ಕಾರ್ಯವಿಧಾನ ಕುರಿತು ನಮ್ಮ ಅಧಿಕಾರಿಗಳಿಗೆ ಅರಿವು ಮೂಡಿಸಲು ವಿಭಾಗವಾರು ಕಾರ್ಯಾಗಾರಗಳನ್ನು ನಡೆಸಲಾಯಿತು. ಎಲ್ಲ ಆಸ್ತಿಗಳನ್ನು ಒಂದು ವರ್ಷದೊಳಗೆ ಸಂಪೂರ್ಣ ವ್ಯಾಪಿಸುವ ಗುರಿ ನಮ್ಮದಾಗಿದೆ.

ವ್ಯಾಪಕ ಹರಡುವಿಕೆ ಹಾಗೂ ಪ್ರಸ್ತಾವಿಕ ಪ್ರಕ್ರಿಯೆಯ ತರ್ಕಬದ್ಧ ಹಾಗೂ ಪಾರದರ್ಶಕ ಅನ್ವಯದ ಜೊತೆಗೆ ಪ್ರತಿಯೊಬ್ಬ ಗ್ರಾಮೀಣ ದುಡಿಯುವ ವ್ಯಕ್ತಿಯ ಆಸ್ತಿ ತೆರಿಗೆಗೆ ಸುಮಾರು ಆತನ ಕನಿಷ್ಠ ಒಂದು ದಿನದ ವೇತನ ಪಾವತಿಸುವ ಸ್ಥಾನ ತಲುಪುವ ನಂಬಿಕೆ ನಮ್ಮದು. ಇದರಿಂದ ಒಟ್ಟು ಸಂಗ್ರಹವಾಗುವ ಆಸ್ತಿ ತೆರಿಗೆಯ ಮೊತ್ತ ರೂ. ೨೫೦.೦೦ ಕೋಟಿಗೆ ತಲುಪಬಹುದು ಎಂದು ನಾವು ಅಂದಾಜು ಮಾಡಿದ್ದೇವೆ. ಒಂದು ವೇಳೆ ಇದನ್ನು ಸಾಧಿಸಿದಲ್ಲಿ ಗ್ರಾಮ ಪಂಚಾಯತಿ ಗಳಿಸುವ ಅಧಿಕಾರ ಮತ್ತು ಸ್ವಾತಂತ್ರ್ಯ ಕ್ರಾಂತಿಕಾರಕವೆನಿಸುತ್ತದೆ - ಇದು ವಿಕೇಂದ್ರೀಕರಣ ಕುರಿತು ಆಗಾಗ ಕೇಳುತ್ತಲೇ ಇರುವ ಭಾಷಣವನ್ನು ಮೀರಿ ಬಹುದೂರ ಸಾಗುತ್ತದೆ.

**ಸಂಪರ್ಕ ಮತ್ತು ತರಬೇತಿ :**

ಇದರೊಂದಿಗೆ, ಈ ಯೋಜನೆ ಒಳಗೊಂಡ ಕ್ರಮಗಳ ಬಗ್ಗೆ ಸಂಬಂಧಪಟ್ಟ ಎಲ್ಲರಲ್ಲೂ ಅರಿವು ಮೂಡಿಸಲು ಸಂಪರ್ಕ ಮತ್ತು ನಿರ್ವಹಣಾ ಕಾರ್ಯಕ್ರಮವನ್ನೂ ನಾವು ಹಮ್ಮಿಕೊಂಡಿದ್ದೇವೆ. ಆಸ್ತಿ ತೆರಿಗೆಗಳ ಸಂಗ್ರಹಣೆಯ ಪರಿಣಾಮಗಳ ಜೊತೆಗೆ ಅದು ಒಳಗೊಂಡ ಪ್ರಕ್ರಿಯೆ ಕುರಿತು ಗ್ರಾಮ ಪಂಚಾಯತಿ ಸದಸ್ಯರಿಗೆ ನೇರ ಮಾಹಿತಿ ನೀಡಲು ಉಪಗ್ರಹ ಕಾರ್ಯಕ್ರಮವನ್ನು ಬಳಸಿಕೊಳ್ಳಲಾಗಿದೆ. ಪ್ರಗತಿಯನ್ನು ಸಮೀಪದಿಂದ ಮೇಲುಸ್ತುವಾರಿ ನಡೆಸುವುದಕ್ಕಾಗಿ ಎರಡು ಸಲ ವಿಭಾಗೀಯ ಮಟ್ಟದ ಸಭೆಗಳನ್ನು ನಡೆಸಲಾಗಿದೆ.

ರಾಜ್ಯ ಮಟ್ಟದಲ್ಲಿ ಕಾರ್ಯಕ್ರಮದ ಪ್ರಗತಿಯನ್ನು ತಾಲ್ಲೂಕುವಾರು ಆಧಾರದ ಮೇಲೆ ಮೇಲುಸ್ತುವಾರಿ ನಡೆಸುವುದೆಂದು ನಾವು ನಿರ್ಧರಿಸಿದ್ದೇವೆ. ಈ ಕಾರ್ಯಕ್ರಮದ ಯಶಸ್ಸಿಗೆ ಕಾರ್ಯ ನಿರ್ವಾಹಕ ಅಧಿಕಾರಿಗಳ ಪಾತ್ರ ಮಹತ್ವದ್ದಾಗಿದೆ.

**ಕಂಪ್ಯೂಟರೀಕರಣ :**

ಆಸ್ತಿ ತೆರಿಗೆಯ ಸಂಗ್ರಹಣೆಯ ನಿರ್ವಹಣೆಗಾಗಿ ಕಂಪ್ಯೂಟರ್ ಕಾರ್ಯಕ್ರಮವೊಂದನ್ನು ನಾವು ಅಭಿವೃದ್ಧಿಪಡಿಸಿದ್ದೇವೆ. ಈ ಕಾರ್ಯಕ್ರಮದ ಲಕ್ಷಣಗಳು ಈ ಮುಂದಿನಂತಿವೆ:

* ಅಂದಾಜು ಪಟ್ಟಿಯ ನಿರ್ವಹಣೆ

* ಬೇಡಿಕೆಯ ಶಾಸನಬದ್ಧ ಬಿಲ್, ಬೇಡಿಕೆ ಪತ್ರ ಹಾಗೂ ನಿಗದಿತ ದಿನಾಂಕದೊಳಗೆ ಆಸ್ತಿ ತೆರಿಗೆ ಪಾವತಿಸದಿದ್ದಲ್ಲಿ ಹೊರಡಿಸುವ ಎಚ್ಚರಿಕೆ ಪತ್ರವನ್ನು ತಂತಾನೆ ಮುದ್ರಿಸುವ ವ್ಯವಸ್ಥೆ.

* ಕಾಲಕಾಲಕ್ಕೆ ಅರ್ಧವಾರ್ಷಿಕ ಸೂಚನಾ ಪತ್ರಗಳು ಸಿದ್ಧಗೊಳ್ಳುತ್ತವೆ.

* ಬಾಕಿದಾರರ ಪಟ್ಟಿಯೂ ತಯಾರಾಗುತ್ತದೆ.

* ಪ್ರತಿ ಆಸ್ತಿಗೆ ಆಸ್ತಿ ಗುರ್ತು ಸಂಖ್ಯೆಯನ್ನು ನೀಡಲಾಗುತ್ತದೆ. ಇದು ಪ್ರತಿ ಆಸ್ತಿಗೆ ವಿಶಿಷ್ಟ ಖಾತಾ ಸಂಖ್ಯೆಯನ್ನು ನೀಡುತ್ತದೆ. ಒಂದು ವೇಳೆ ಇದನ್ನು ಮಾಡಲಾಯಿತೆಂದರೆ ರಾಜ್ಯವನ್ನು ಒಂದು ಇಡಿಯಾಗಿ ಪರಿಗಣಿಸಿ ರಾಜ್ಯದಲ್ಲಿನ ಗ್ರಾಮ ಪಂಚಾಯತಿಗಳ ಅಸಂಖ್ಯಾತ ಅಂಕಿ ಅಂಶಗಳ ವಿವರಗಳನ್ನು ತಯಾರಿಸಬಹುದು.

* ಕಂಪ್ಯೂಟರ್ ಪ್ರತಿ ದಿನ ಬೇಡಿಕೆ, ಸಂಗ್ರಹ ಮತ್ತು ಬಾಕಿಯನ್ನು ಹೊರಕ್ಕೆ ಕೊಡುತ್ತದೆ. ಮಾಡಲಾದ ಸಂಗ್ರಹಣೆಯು ಲೆಕ್ಕಪತ್ರ ಪ್ಯಾಕೇಜಿನಲ್ಲಿ ಪ್ರತಿಫಲಿಸಲಿದ್ದು (ದಿನ ನಮೂದು ಪದ್ಧತಿ) ಇದನ್ನು ಪ್ರತ್ಯೇಕವಾಗಿ ರೂಪಿಸಲಾಗಿದೆ.

ಕಂಪ್ಯೂಟರೀಕರಣವನ್ನು ಶೀಘ್ರದಲ್ಲೇ ಅಳವಡಿಸಲಾಗುವುದು.

**ಪದೇ ಪದೇ ಕೇಳುವ ಪ್ರಶ್ನೆಗಳು :**

* ಮೊದಲ ದಿನದಿಂದಲೂ ಹಲವಾರು ಗ್ರಾಮ ಪಂಚಾಯತಿಗಳು ಸ್ಪಷ್ಟನೆಗಳನ್ನು ಕೇಳಲಾರಂಭಿಸಿವೆ. ನಾವು ಹಲವಾರು ವಿಷಯುಗಳನ್ನು ಈ ಮುಂದಿನಂತೆ ಸ್ಪಷ್ಟಪಡಿಸಿದ್ದೇವೆ.
* ಕಂದಾಯ ನಿವೇಶನಗಳಲ್ಲಿ ನಿರ್ಮಿಸಿದ ಕಟ್ಟಡಗಳು ಸೇರಿದಂತೆ ಎಲ್ಲ ಕಟ್ಟಡಗಳನ್ನು ಆಸ್ತಿ ತೆರಿಗೆಗಾಗಿ ಪಟ್ಟಿ ಮಾಡಲೇಬೇಕು. ಆಸ್ತಿ ತೆರಿಗೆಗಾಗಿ ಇಂತಹ ಆಸ್ತಿಯನ್ನು ನಮೂದಿಸಿದ ಕ್ಷಣ ಅದು ಸಕ್ರಮಗೊಳಿಸಿದಂತಲ್ಲ ಹಾಗೂ ಪರಿವರ್ತನಾ ದಂಡವನ್ನು ತೆರುವುದರಿಂದ ಹೊರತುಪಡಿಸಿದಂತಲ್ಲ.

* ಕಟ್ಟುನಿಟ್ಟಾಗಿ ಹೇಳುವುದೆಂದರೆ, ಆಸ್ತಿ ತೆರಿಗೆಯ ಪಾವತಿಯು ಯಾರೊಬ್ಬರಿಗೂ ಆಸ್ತಿಯನ್ನು ಹೊಂದುವ ಶಾಶ್ವತ ಅಧಿಕಾರವನ್ನು ನೀಡುವುದಿಲ್ಲ. ಹಾಗಿದ್ದಾಗ್ಯೂ ಆಸ್ತಿಯ ಮೇಲಿನ ಹಕ್ಕು ಸಾಧಿಸಲು ಯಾವುದೇ ಏಕೈಕ ನಿರ್ಣಾಯಕ ಕಾನೂನು ಬದ್ಧ ದಾಖಲೆ ಇಲ್ಲದಿರುವುದರಿಂದ ಆಸ್ತಿ ತೆರಿಗೆಗಳ ಪಾವತಿಯನ್ನು ಆಸ್ತಿಯು ಸ್ವಾಧೀನದಲ್ಲಿರುವುದಕ್ಕೆ ಒಂದು ಮುಖ್ಯವಾದ ಪೂರಕ ಸಾಕ್ಷಿಯಾಗಿ ತೆಗೆದುಕೊಳ್ಳಬಹುದಾಗಿದೆ. ಆಸ್ತಿ ತೆರಿಗೆ ಪಾವತಿ ರಸೀದಿ ಅಥವಾ ಅಂದಾಜು ಪಟ್ಟಿ ತಃಖ್ತೆ ಹೊಂದುವ ಮೂಲಕ ಅದನ್ನು ಪಡೆದವನಿಗೆ ಯಾವುದೇ ಆಸ್ತಿಯ ಶಾಶ್ವತ ಹಕ್ಕುದಾರಿಕೆಯನ್ನು ಕೊಟ್ಟಂತಾಗುವುದಿಲ್ಲ ಎಂಬ ಹಿಂಬರಹವನ್ನು ಅಂದಾಜು ಪಟ್ಟಿ ತಃಖ್ತೆಗಳು ಹೊಂದಿರಲೇಬೇಕೆಂದು ನಿರ್ದಿಷ್ಟವಾಗಿ ನಾವು ನಮ್ಮ ಸೂಚನೆಗಳಲ್ಲಿ ನಿರ್ದೇಶನ ನೀಡಿದ್ದೇವೆ. ಹಾಗಿದ್ದಾಗ್ಯೂ, ನ್ಯಾಯಾಲಯಗಳು ಇನ್ನೂ ಅಂತಹ ತಃಖ್ತೆಗಳನ್ನು ಸಾಕ್ಷಿ ಮೌಲ್ಯವಾಗಿ ಪರಿಗಣಿಸುವ ಸಾಧ್ಯತೆಯನ್ನು ನಾವು ನಿರಾಕರಿಸಲಾಗುವುದಿಲ್ಲ. ಈ ದೃಷ್ಟಿಕೋನದಲ್ಲಿ ಸರ್ಕಾರಿ ಭೂಮಿಯನ್ನು ಒತ್ತುವರಿ ಮಾಡಿಕೊಂಡು ನಿರ್ಮಿಸಲಾದ ಕಟ್ಟಡಗಳ ಮೇಲೆ ಮುಂದಿನ ಸೂಚನೆಯ ಮೇರೆಗೆ ನಾವು ಆಸ್ತಿ ತೆರಿಗೆ ವಿಧಿಸಲಾಗುವುದಿಲ್ಲ ಎಂದು ಸ್ಪಷ್ಟಪಡಿಸಿದ್ದೇವೆ.
* ಕೆಲವು ಜನರು ಆಸ್ತಿ ತೆರಿಗೆಯನ್ನು ಹಿಂದಿನ ವರ್ಷಗಳಿಗೂ ಪೂರ್ವಾನ್ವಯವಾಗುವಂತೆ ಪಾವತಿ ಮಾಡಲು ಉತ್ಸುಕರಾಗಿದ್ದಾರೆ. ಏಕೆಂದರೆ ಆ ಪಾವತಿಗೆ ನೀಡಲಾಗುವ ರಸೀದಿಗಳಿಂದ ಸದರಿ ಆಸ್ತಿಯ ಮೇಲೆ ತಾವು ದೀರ್ಘಕಾಲದಿಂದಲೂ ಹಕ್ಕು ಹೊಂದಿದ್ದೇವೆಂದು ಸಾಧಿಸಬಹುದೆಂಬ ನಂಬಿಕೆ ಅವರದು. ಆದರೆ ತೆರಿಗೆಗಳನ್ನು ನಾವು ಪೂರ್ವಾನ್ವಯವಾಗದಂತೆ ಸಂಗ್ರಹಿಸದೇ ಹೋದರೂ ನಾವು ರಾಜಸ್ವ ಸಂಗ್ರಹಣೆ ಹೆಚ್ಚಿಸುವ ಅವಕಾಶ ಕಳೆದುಕೊಳ್ಳುತ್ತೇವೆ. ತೆರಿಗೆಗಳನ್ನು ಸಂಗ್ರಹಿಸುವಾಗ ಆಸ್ತಿ ಎಂದಿನಿಂದ ಅಸ್ತಿತ್ವದಲ್ಲಿದೆ ಎಂಬ ಅಪಾಯಕಾರಿ ಊಹೆ ಮಾಡಲು ಗ್ರಾಮ ಪಂಚಾಯತಿಗೆ ಅಧಿಕಾರ ನೀಡಲಾಗುವುದಿಲ್ಲ. ಆಸ್ತಿ ತೆರಿಗೆಯನ್ನು ಪೂರ್ವಾನ್ವಯಗೊಳ್ಳುವಂತೆ ಸಂಗ್ರಹಿಸಲು ಅವಕಾಶ ನೀಡುವುದೂ ಸಹ ಅಧಿಕಾರ ದುರುಪಯೋಗಕ್ಕೆಡೆ ಮಾಡಿಕೊಡಬಹುದು ಮತ್ತು ಗ್ರಾಮ ಪಂಚಾಯತಿಯ ಸಿಬ್ಬಂದಿ ಮಧ್ಯ ಪ್ರವೇಶಿಸಿ ಪೂರ್ವಾನ್ವಯ ಅಧಿಕಾರ ಬಳಸಿ ವಿಶೇಷವಾಗಿ ವಿವಾದಕ್ಕೊಳಗಾದ ಆಸ್ತಿಗಳ ವಿಚಾರದಲ್ಲಿ ಸ್ವಾಧೀನಾನುಭವ ಹಕ್ಕು ಸೃಷ್ಟಿಸಲು ಪ್ರಯತ್ನಿಸುವ ಸಾಧ್ಯತೆಗಳಿರುತ್ತವೆ. ಆದ್ದರಿಂದ ಆಸ್ತಿ ತೆರಿಗೆಗಳನ್ನು ಹೊಸ ಸುತ್ತೋಲೆಯ ಪ್ರಕಾರ ಮುನ್ನೋಟ ಪರಿಣಾಮ ಬೀರುವಂತೆ ಮಾತ್ರ ಸಂಗ್ರಹಿಸಬೇಕೆಂದು ನಾವು ಸ್ಪಷ್ಟಪಡಿಸಿದ್ದೇವೆ.
* ಒಂದು ಗ್ರಾಮ ಪಂಚಾಯತಿಯ ಒಳಗಡೆಯೇ ಪರಿಸರ ಕಾರಣಕ್ಕಾಗಿ ಒಂದು ಆಸ್ತಿ ಇತರ ಪ್ರದೇಶಗಳಿಗಿಂತ ತೀರಾ ಕಡಿಮೆ ಮೌಲ್ಯವುಳ್ಳದ್ದಾಗಿರಬಹುದು. ಆದ್ದರಿಂದ ತೆರಿಗೆಗಳನ್ನು ವಿಧಿಸುವ ಉದ್ದೇಶಕ್ಕಾಗಿ ವಲಯಗಳನ್ನು ರಚಿಸುವುದು ಅಪೇಕ್ಷಣೀಯ ಮತ್ತು ಇದನ್ನು ಗ್ರಾಮ ಪಂಚಾಯತಿಗಳು ಅಳವಡಿಸಿಕೊಳ್ಳಬಹುದು.

**ಪ್ರಗತಿ :**

ನಿಧಾನವಾಗಿಯಾದರೂ ಖಚಿತವಾಗಿ, ನಮ್ಮ ಪ್ರಯತ್ನಗಳು ಫಲಪ್ರದವಾಗುತ್ತಿರುವುದನ್ನು ನಾವು ಕಂಡಿದ್ದೇವೆ. ರಾಜ್ಯದುದ್ದಕ್ಕೂ ನಾವು ಉತ್ತಮ ಉದಾಹರಣೆಗಳನ್ನು ಕಂಡಿದ್ದೇವೆ. ನಾವು ಅವುಗಳಿಗೆ ಪ್ರಚಾರ ನೀಡಲು ಆರಂಭಿಸಿದ್ದೇವೆ. ಉತ್ತಮ ಕಾರ್ಯನಿರ್ವಾಹಣಾಧಿಕಾರಿಗಳು ಒಬ್ಬರಿಗೊಬ್ಬರು ಸ್ಪರ್ಧಿಸಲಾರಂಭಿಸಿದ್ದಾರೆ. ಅದರಲ್ಲಿ ಯಶಸ್ವಿಯಾದವರು ಪ್ರೇರೇಪಿಸುವುದರಲ್ಲಿ ಹೆಚ್ಚು ಗಂಟೆಗಳನ್ನು ವ್ಯಯಿಸುತ್ತಿರುವುದು ಮತ್ತು ಆದೇಶ ನೀಡುವ ಭಂಗಿಯಿಂದ ದೂರ ಇರುವುದನ್ನು ಅಳವಡಿಸಿಕೊಂಡಿರುವುದನ್ನು ನಾವು ಕಂಡಿದ್ದೇವೆ. ನಾವು ನಮ್ಮ ಅಧಿಕಾರಿಗಳಿಗೆ ಪದೇ ಪದೇ ಈ ಮುಂದಿನಂತೆ ತಿಳಿಸುವಂತೆ ಸಲಹೆ ಮಾಡಿದೆವು.

* ನಿಮ್ಮ ಗ್ರಾಮ ಪಂಚಾಯತಿಯು ಎಷ್ಟು ಮೊತ್ತದ ಹಣ ಖರ್ಚು ಮಾಡುತ್ತದೆ (ಉದಾಹರಣೆಯೊಂದಿಗೆ ವಿವರಿಸಿ).
* ಇದು ಸಂಬಳಕ್ಕೆ ಎಷ್ಟು ಮೊತ್ತವನ್ನು ಖರ್ಚು ಮಾಡುತ್ತದೆ. (ಉದಾಹರಣೆಯೊಂದಿಗೆ ವಿವರಿಸಿ).
* ಇದು ಸೇವೆಗಳ ಮೇಲೆ ಎಷ್ಟು ಮೊತ್ತವನ್ನು ಖರ್ಚು ಮಾಡುತ್ತದೆ. (ಉದಾಹರಣೆಯೊಂದಿಗೆ ವಿವರಿಸಿ).
* ಇದು ಈಗ ನೀವು ಪಾವತಿ ಮಾಡುವ ತೆರಿಗೆ (ಇದು ತಲಾ ಎಷ್ಟು ಕಡಿಮೆ ಎಂದು ತೋರಿಸಿ. ಉದಾಹರಣೆ, ನೀವು ಪ್ರತಿ ವರ್ಷ ಎರಡು ಕಪ್ ಚಹಾಕ್ಕೆ ತಗಲುವುದಕ್ಕಿಂತ ಕಡಿಮೆ ಮೊತ್ತವನ್ನು ನೀರಿನ ತೆರಿಗೆಗೆ ಪಾವತಿಸುತ್ತೀರಿ.)

* ಈ ಯಾವುದೇ ತೆರಿಗೆ ಪಾವತಿಸದ ಆಸ್ತಿಗಳ ಸಂಖ್ಯೆ (ಮನೆಗಳನ್ನು ಗುರುತಿಸಿ).
* ಇದರಲ್ಲಿ ನಿಮ್ಮ ಗ್ರಾಮದಲ್ಲಿರುವ ಅತ್ಯಂತ ಶ್ರೀಮಂತ ವ್ಯಕ್ತಿಗಳು ಪಾವತಿಸುವ ಮೊತ್ತ (ನೋಂದಣಿ ಪುಸ್ತಕದಿಂದ ತೋರಿಸಿ).
* ಗುಡಿಸಲು ವಾಸಿಗಳು ಪಾವತಿಸುವ ಮೊತ್ತ (ಅವರದೇ ಆದ ನೋಂದಣಿ ಪುಸ್ತಕಗಳಿಂದ ಇದನ್ನು ತೋರಿಸಿ).
* ನೀವು ತೆರಿಗೆಗಳ ರೂಪದಲ್ಲಿ ಪಾವತಿಸುವ ಹಣವು ಬೇರೆಲ್ಲಿಗೂ ಹೋಗುವುದಿಲ್ಲ; ಅದು ನಿಮ್ಮ ಗ್ರಾಮ ಪಂಚಾಯತಿಯಲ್ಲೇ ಉಳಿಯುತ್ತದೆ. (ಅವರನ್ನು ಉತ್ತಮ ಗ್ರಾಮ ಪಂಚಾಯತಿಗಳಿಗೆ ಕರೆದೊಯ್ಯಿರಿ ಮತ್ತು ಹಣವನ್ನು ಹೇಗೆ ಖರ್ಚು ಮಾಡಲಾಗುತ್ತಿದೆ ಎಂಬುದನ್ನು ಅವರಿಗೆ ತೋರಿಸಿ).
* ನೀವು ಹಣವನ್ನು ಸೇವೆಗಳನ್ನು ಉತ್ತಮಪಡಿಸಲು ನಿಮಗೆ ಬೇಕೆನಿಸಿದ ಯಾವುದೇ ರೀತಿಯಲ್ಲಿ ಖರ್ಚು ಮಾಡಬಹುದು. (ಅವರಿಗೆ ಏನು ಬೇಕೋ ಕೇಳಿ. ಒಂದು ವೇಳೆ ಅವರ ಬಳಿ ಹಣವಿದ್ದರೆ ಮತ್ತು ಗ್ರಾಮಸಭೆಯು ಸಮ್ಮತಿಸಿದಲ್ಲಿ ಅವರ ಸ್ವಂತ ಆದಾಯಗಳನ್ನು ಬಳಸಿ ಅವರಿಗೆ ಏನು ಬೇಕೋ ಅದನ್ನು ಪಡೆಯಬಹುದು ಎಂದು ತಿಳಿಸಿ).
* ಗ್ರಾಮಸಭೆಯ ಸದಸ್ಯರಾಗಿ, ಗ್ರಾಮ ಪಂಚಾಯತಿಯು ಅದರ ಹಣವನ್ನು ಎಲ್ಲಿ ಖರ್ಚು ಮಾಡಿದೆ ಎಂಬುದನ್ನು ಕೇಳಲು ನಿಮಗೆ ಹಕ್ಕಿದೆ (ಕೆಲವು ಸರಳ ಪ್ರಶ್ನೆಗಳನ್ನು ನಿಮ್ಮಷ್ಟಕ್ಕೆ ನೀವೇ ಕೇಳಿ).
* ನಿಜ, ಅಲ್ಲಿ ಬರ ಇದೆ. ಆದರೆ ಅಬಕಾರಿ ಸಂಗ್ರಹಗಳು ಕೆಳಗಿಳಿದಿವೆಯೇ? (ನಿಮ್ಮ ಈ ಭಾಷಣ ಸದಾ ನಗೆ ಉಕ್ಕಿಸಬಹುದು ಆದರೆ ಹಲವು ಮಂದಿ ನಿಮ್ಮ ತರ್ಕಕ್ಕೆ ಒಪ್ಪಿ ತಲೆದೂಗಲೂಬಹುದು.)
* ನೋಡಿ ನಿಮ್ಮ ಗ್ರಾಮ ಪಂಚಾಯತಿಯು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುವಂತೆ ಮಾಡಲು ನೀವು ಎಷ್ಟು ಕಡಿಮೆ ಮೊತ್ತವನ್ನು ಪಾವತಿಸುವ ಅವಶ್ಯಕತೆಯಿದೆ.
* ಅಂತಿಮವಾಗಿ ಒಂದು ವೇಳೆ ಈಗಲೂ ನೀವು ತೆರಿಗೆಗಳನ್ನು ಸಂಗ್ರಹಿಸಲು ಬಯಸದಿದ್ದಲ್ಲಿ ಅದು ನಿಮ್ಮ ನಿರ್ಧಾರ; ನಿಮಗೆ ಒಳ್ಳೆಯದಾಗಲಿ.

## ೧೨. ನಮ್ಮ ಪ್ರಯತ್ನದ ಫಲಿತಾಂಶಗಳು :

| | ಮಾಹಿತಿ ಪರಿಷ್ಕರಣೆಯ ಮೊದಲು | ೧೭೬ ತಾಲ್ಲೂಕುಗಳು ಪರಿಷ್ಕರಣೆಯ ನಂತರ |
|---|---|---|
| ಆಸ್ತಿಗಳ ಸಂಖ್ಯೆ (ಲಕ್ಷದಲ್ಲಿ) | ೭೪.೧೬ | ೧೦೪.೪೭ |
| ರೂ. ಕೋಟಿಗಳಲ್ಲಿ | | |
| ಆಸ್ತಿ ತೆರಿಗೆ | ೩೭.೮೬ | ೮೬.೨೫ |
| ಆರೋಗ್ಯ ಕರ | ೬.೦೦ | ೧೩.೫೬ |
| ಶಿಕ್ಷಣ ಕರ | ೪.೧೦ | ೯.೬೬ |
| ಗ್ರಂಥಾಲಯ ಕರ | ೨.೪೫ | ೯.೩೫ |
| ನೀರಿನ ಕರ | ೧೬.೦೭ | ೪೯.೩೩ |
| ಬೀದಿ ದೀಪ ಕರ | ೭.೦೧ | ೧೯.೨೩ |
| ವೃತ್ತಿ ತೆರಿಗೆ | ೧.೦೨ | ೩.೦೭ |
| ಇತರೆ ತೆರಿಗೆ | ೬.೪೫ | ೮.೫೩ |
| ಒಟ್ಟು | ೮೦.೯೬ | ೧೯೮.೯೯ |

ಇಡೀ ದೇಶವನ್ನು ಪರಿಗಣಿಸಿದಾಗ, ಭಾರತ ಸರ್ಕಾರವು ಸಂಗ್ರಹಿಸಿದ ಅಂಕಿ ಅಂಶಗಳ ಪ್ರಕಾರವೇ ಗ್ರಾಮ ಪಂಚಾಯತಿಗಳ ಸಂಖ್ಯೆಯು ೨,೩೯,೦೦ ಮತ್ತು ಆ ಹಂತದಲ್ಲಿ ಸಂಗ್ರಹಣೆಯಾದ ಒಟ್ಟು ಆಸ್ತಿ ಮತ್ತು ಇತರ ತೆರಿಗೆಗಳು ರೂ. ೫೮೦.೦೦ ಕೋಟಿಗೆ ಹೋಲಿಸಿದಾಗ ಕರ್ನಾಟಕದಲ್ಲಿ ಕೇವಲ ೫೬೩೩ ಗ್ರಾಮ ಪಂಚಾಯತಿಗಳಿಂದ ಮಾಡಲಾಗಿರುವ ಪ್ರಗತಿ ಆಶ್ಚರ್ಯ ಹುಟ್ಟಿಸುತ್ತದೆ.

## ಮುಂದಿರುವ ಸವಾಲುಗಳು :

ಹೌದು, ಬೇಡಿಕೆಯನ್ನು ಮಂಡಿಸಲಾಗಿದೆ.

ಸಂಗ್ರಹಗಳ ಕತೆ ಏನು? ಎಂದು ಕೇಳಬಹುದು. ಅದಕ್ಕಾಗಿ ಕಾದುನೋಡಿ, ಪ್ರಸಕ್ತ ವರ್ಷದಲ್ಲಿ ಸಂಗ್ರಹಣೆಗಳು ಕಡಿಮೆ ಇರಬಹುದು ಎಂಬುದು ನಮ್ಮದೇ ಆದ ಭಾವನೆಯಾಗಿದೆ. ಹಾಗಿದ್ದಾಗ್ಯೂ, ಗುಲ್ಬರ್ಗಾದಿಂದ ಈಗಾಗಲೇ ಡಿಸೆಂಬರ್ ಹೊತ್ತಿಗೆ ಶೇ. ೩೭ ರಷ್ಟು ಸಂಗ್ರಹವಾಗಿರುವ ವರದಿ ಬಂದಿದೆ. ಬೆಳಗಾಂನಲ್ಲಿ ಶೇ. ೮೦ ರಷ್ಟು ಸಂಗ್ರಹ ಮಾಡುವ ಗ್ರಾಮ ಪಂಚಾಯತಿಗಳಿಗೆ ಜಲ ನಿರ್ಮಲ ಯೋಜನೆಯಲ್ಲಿ ಗುತ್ತಿಗೆ ನೀಡಲು ಹಾಗೂ ಟೆಂಡರುಗಳನ್ನು ಆಯ್ಕೆ ಮಾಡುವಲ್ಲಿ ಹೆಚ್ಚಿನ ಸ್ವಾತಂತ್ರ್ಯ ನೀಡಲಾಗುವುದೆಂಬ ಹೇಳಿಕೆ ನೀಡುವ ಮೂಲಕ ಗ್ರಾಮ ಪಂಚಾಯತಿಗಳಿಗೆ ಉತ್ತೇಜನ ನೀಡಲಾಗಿದೆ ಎಂದು ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಪ್ರಕಟಿಸಿದ್ದಾರೆ. ಎಲ್ಲೆಡೆಯಿಂದಲೂ ಉತ್ತಮ ಪ್ರತಿಕ್ರಿಯೆ ಬರುತ್ತವೆ. ತುರುವೇಕೆರೆ ತಾಲ್ಲೂಕಿನ ಮಾಯಸಂದ್ರ ಗ್ರಾಮ ಪಂಚಾಯತಿಯಲ್ಲಿ ಸಂಗ್ರಹಣೆಗಳು ಶೇ. ೫೭ ರಷ್ಟಕ್ಕೆ ಮುಟ್ಟಿದೆ. ಉಪಗ್ರಹ ತರಬೇತಿ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿಗಳ ಸೂಚನೆಯ ಪ್ರಕಾರ ಗ್ರಾಮ ಪಂಚಾಯತಿಗಳಿಗೆ ಪ್ರೋತ್ಸಾಹಕ ಮೊತ್ತವನ್ನು ಯಾವಾಗ ನೀಡಲಾಗುವುದು ಎಂದು ನಮ್ಮನ್ನು ಅಡಿಗಡಿಗೆ ಕೇಳಲಾಗುತ್ತಿದೆ. ಇವೆಲ್ಲಾ ಭವಿಷ್ಯದ ಸೂಚಕಗಳಾಗಿವೆ.

ರಾಜ್ಯದೆಲ್ಲೆಡೆ ತೆರಿಗೆಗಳನ್ನು ಸಂಗ್ರಹಿಸಲು ತುಂಬಿ ಬರುತ್ತಿರುವ ಉತ್ಸಾಹವು ಪ್ರತಿ ಹಂತದಲ್ಲೂ ನಮಗೆ ಸಂತಸ ಹೊರ ಹೊಮ್ಮುವಂತೆ ಮಾಡಿದೆ.

ಚಿಕ್ಕಮಗಳೂರು ತಾಲ್ಲೂಕಿನ ಎಲ್ಲಾ ಗ್ರಾಮ ಪಂಚಾಯತಿಗಳ ಅಧ್ಯಕ್ಷರು ಮುಖ್ಯಮಂತ್ರಿಗಳಿಗೆ ಪತ್ರಬರೆದು, ಪಡಿತರ ಚೀಟಿ, ಜನನ ಪ್ರಮಾಣ ಪತ್ರ, ಬೇಬಾಕಿ ಪ್ರಮಾಣ ಪತ್ರಗಳು ಮುಂತಾದವುಗಳನ್ನು ನೀಡುವಂತಹ ಜಾರಿ ಮತ್ತು ನಿಯಂತ್ರಣ ಅಧಿಕಾರಿಗಳನ್ನು ನೀಡಿದಲ್ಲಿ, ಅವರುಗಳ ತೆರಿಗೆ ಸಂಗ್ರಹಣೆಯಲ್ಲೂ ಹೆಚ್ಚಿನ ಪ್ರಗತಿ ಕಾಣಲು ಸಾಧ್ಯ ಎಂದು ತಿಳಿಸಿದ್ದಾರೆ. ಇದೊಂದು ಮಹಾನ್ ಕಲ್ಪನೆ ಮತ್ತು ಇದನ್ನು ಚಿಕ್ಕಮಗಳೂರಿನಂತಹ ಜಿಲ್ಲೆಯಿಂದ ನಿರೀಕ್ಷಿಸಬಹುದು ಎಂದು ನನಗನ್ನಿಸಿತು. ಗುಲ್ಬರ್ಗಾ ಜಿಲ್ಲೆಯ ಎಲ್ಲಾ ಗ್ರಾಮ ಪಂಚಾಯತಿಗಳ ಅಧ್ಯಕ್ಷರು ಸಹಿ ಮಾಡಿದ್ದು, ಮುಖ್ಯಮಂತ್ರಿಗಳಿಗೆ ಬರೆದ ಇಂತಹುದೇ ಮತ್ತೊಂದು ಪತ್ರ ಮರುದಿನ ಪ್ರತಿ ಮನೆಯನ್ನು ಅಳತೆ ಮಾಡುತ್ತಿರುವಂತೆಯೇ ಅದರ ಛಾಯಾಚಿತ್ರವನ್ನೂ ತೆಗೆದು ಅಂಕಿ ಅಂಶ ಮಾಹಿತಿಯಲ್ಲಿ ಸೇರಿಸಲು ಮುಳಬಾಗಿಲು ತಾಲ್ಲೂಕಿನ ಪಿಚ್ಚಗೊಂಡಹಳ್ಳಿ ಗ್ರಾಮ ಪಂಚಾಯತಿ ಉದ್ದೇಶಿಸಿದೆ.

ಈ ಸಂಗ್ರಹಣೆಗಳ ಅರ್ಥ ದೀರ್ಘಕಾಲಿಕವಾಗಿ ಗ್ರಾಮಪಂಚಾಯಿತಿಗಳು ಅತ್ಯುತ್ತಮ ಆರ್ಥಿಕ ಕಾರ್ಯಸಾಧ್ಯತೆ ಮಾಡುವುದಾಗಿದೆ. ಇದು ಎರಡು ಮಾರ್ಗಗಳಲ್ಲಿ ಅನುವು ಮಾಡಿಕೊಡುತ್ತದೆ. ಮೊದಲಿಗೆ ನಾವು ಸ್ಥಳೀಯ ಸಂಸ್ಥೆಗಳಿಗೆ ವಹಿಸಬೇಕೆಂದುಕೊಂಡಿರುವ ಇತರ ವಲಯವಾರು ಪ್ರಕಾರ್ಯಗಳಿಗೆ ಸಂಬಂಧಿಸಿದಂತೆಯೂ ಆರ್ಥಿಕವಾಗಿ ಆರೋಗ್ಯವಾಗಿರುವ ಸ್ಥಳೀಯ ಸಂಸ್ಥೆ ಮಾತ್ರವೇ ಉತ್ತಮವಾಗಿ ಕಾರ್ಯನಿರ್ವಹಿಸಲು ಸಾಧ್ಯ. ಎರಡನೆಯದಾಗಿ ಬಹುಪಾಲು ಇಲಾಖೆಗಳು ಗ್ರಾಮ ಪಂಚಾಯತಿಗಳನ್ನು ಕೇಳಿಕೊಂಡಲ್ಲಿ ಹಾಗೂ ಅದು ಅವರಿಗೆ ಒಪ್ಪಿಗೆಯಾದಲ್ಲಿ ಹೆಚ್ಚುವರಿ ನಿಧಿಗಳನ್ನು ಇಲಾಖಾ ಆದ್ಯತೆಗಳ ಮೇಲೆ ಖರ್ಚು ಮಾಡಲು ಗ್ರಾಮ ಪಂಚಾಯತಿಗಳು ಸಮರ್ಥವಿರುತ್ತವೆ.

ಅಂತಿಮವಾಗಿ, ಹಣಕ್ಕಿಂತ ಅಧಿಕಾರ ನೀಡುವುದು ಯಾವುದೂ ಇಲ್ಲ ಹಣವಿರುವ ಗ್ರಾಮಪಂಚಾಯತಿಗಳ ಬಳಿಗೆ ಎಲ್ಲಾ ಇಲಾಖೆಗಳು ಓಡುತ್ತವೆ ಮತ್ತು ಮುಂದೆ ಅದೊಂದು ಅಪವಾದವೆನಿಸಿದ ನಿಯಮವೇ ಆಗಿಬಿಡಬಹುದು. ಒಂದು ವೇಳೆ ಗ್ರಾಮ ಪಂಚಾಯತಿಗಳು ಅವುಗಳಿಗೆ ವಹಿಸಲಾದ ತೆರಿಗೆಗಳನ್ನು ಸಂಗ್ರಹಿಸಿ ಜವಾಬ್ದಾರಿಯುತವಾಗಿ ಖರ್ಚು ಮಾಡಬಲ್ಲವು ಎಂಬುದನ್ನು ಸಾಬೀತುಪಡಿಸಿದಲ್ಲಿ, ಶೀಘ್ರದಲ್ಲೇ ಅವರಿಗೆ ನೀರಿನ ತೆರಿಗೆ ಅಥವಾ ಭೂಕಂದಾಯ ಅಥವಾ ವಿದ್ಯುಚ್ಛಕ್ತಿ ಬಾಕಿಗಳನ್ನು ಸಂಗ್ರಹಿಸುವ ಅಧಿಕಾರಗಳನ್ನು ವಹಿಸಬಹುದಾಗಿದೆ.




# ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಬಿ. ಎಸ್. ಹಿರೇಮಠ

## ೧. ಗ್ರಾಮೀಣಾಭಿವೃದ್ಧಿ :

೧.೧ ಭಾರತವು ಹಳ್ಳಿಗಳ ದೇಶ. ಸುಮಾರು ಶೇಕಡಾ ೭೦ರಷ್ಟು ಕುಟುಂಬಗಳು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿವೆ. ಕರ್ನಾಟಕವೂ ಇದಕ್ಕೆ ಹೊರತಾಗಿಲ್ಲ. ೨೦೦೧ರ ಜನಗಣತಿ ಪ್ರಕಾರ ರಾಜ್ಯದಲ್ಲಿ ೫.೨೯ ಕೋಟಿ ಜನಸಂಖ್ಯೆಯಿದ್ದು ಅದರಲ್ಲಿ ೩.೪೯ ಕೋಟಿ ಅಂದರೆ ೬೬ ರಷ್ಟು ಗ್ರಾಮೀಣ ಜನಸಂಖ್ಯೆಯನ್ನು ಹೊಂದಿದೆ. ಗ್ರಾಮೀಣ ಸಮಾಜದ ವಿಭಿನ್ನ ಗುಣಲಕ್ಷಣಗಳು ಈ ಕೆಳಗಿನಂತಿವೆ.

- ಗ್ರಾಮೀಣ ಜನರು ಕೃಷಿ ಮತ್ತು ಅದಕ್ಕೆ ಸಂಬಂಧಿಸಿದ ಚಟುವಟಿಕೆಗಳ ಮೇಲೆ ಅವಲಂಬಿತರಾಗಿದ್ದಾರೆ.
- ಜನಸಂಖ್ಯೆಗೆ ಹೋಲಿಸಿದಾಗ ರಾಜ್ಯದ ದಿನಬಳಕೆ ಉತ್ಪಾದನೆಯಲ್ಲಿ ಗ್ರಾಮೀಣ ಪಾಲು ಬಹಳಷ್ಟು ಕಡಿಮೆಯಿದೆ.
- ಗ್ರಾಮೀಣ ಜನರ ತಲಾ ವರಮಾನವೂ ಕಡಿಮೆ.
- ರಸ್ತೆ, ವಿದ್ಯುಚ್ಛಕ್ತಿ, ವಸತಿ ಮತ್ತು ನೀರು ಪೂರೈಕೆಯಂತಹ ಮೂಲಭೂತ ಸೌಕರ್ಯಗಳು ನಿರೀಕ್ಷಿತ ಮಟ್ಟದಲ್ಲಿಲ್ಲ.
- ಸಾಕ್ಷರತೆ, ಆರೋಗ್ಯ ಸೇವೆಗಳು, ಮಾನವ ಸಂಪನ್ಮೂಲ ಅಭಿವೃದ್ಧಿ ಅಂಶಗಳಲ್ಲಿ ಪಟ್ಟಣ ಪ್ರದೇಶಗಳಿಗೆ ಹೋಲಿಸಿದಾಗ ಗ್ರಾಮೀಣ ಪ್ರದೇಶಗಳು ಬಹಳ ಹಿಂದುಳಿದಿವೆ.
- ಜನವಸತಿಗಳು ಹೆಚ್ಚಿನ ಸಂಖ್ಯೆಯಲ್ಲಿದ್ದು ವಿರಳವಾಗಿ ಹರಡಿವೆ.

೧.೨ ಮೇಲಿನ ಕೊರತೆಗಳನ್ನು ನೀಗಿಸಿ ಗ್ರಾಮೀಣ ಜನತೆಗೆ ಸಮಾನ ಅವಕಾಶವನ್ನು ಒದಗಿಸಿ ಆರ್ಥಿಕ ಮತ್ತು ಸಾಮಾಜಿಕವಾಗಿ ಬಲಗೊಳಿಸುವುದೇ ಗ್ರಾಮೀಣ ಅಭಿವೃದ್ಧಿ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಗ್ರಾಮೀಣ ಅಭಿವೃದ್ಧಿಗಾಗಿ ಅನೇಕ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಾ ಬಂದಿವೆ. ಆದಾಗ್ಯೂ ಗ್ರಾಮೀಣ ಪ್ರದೇಶದ ಜನರು ನಗರ ಪ್ರದೇಶದ ಜನರ ಜೀವನ ಮಟ್ಟವನ್ನು ತಲುಪಲು ಇನ್ನೂ ಸಾಧ್ಯವಾಗಿಲ್ಲ. ಅದಕ್ಕಾಗಿ ನಿರಂತರ ಪ್ರಯತ್ನ ನಡೆದೇ ಇದೆ.

*ಗ್ರಾಮೀಣ ಜನತೆಗೆ ಸಮಾನ ಅವಕಾಶವನ್ನು ಒದಗಿಸಿ ಆರ್ಥಿಕ ಮತ್ತು ಸಾಮಾಜಿಕವಾಗಿ ಬಲಗೊಳಿಸುವುದೇ ಗ್ರಾಮೀಣ ಅಭಿವೃದ್ಧಿ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಗ್ರಾಮೀಣ ಅಭಿವೃದ್ಧಿಗಾಗಿ ಅನೇಕ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುವುದು.*

೧.೩ ಅಭಿವೃದ್ಧಿಯನ್ನು ಸಾಧಿಸಲು ಪ್ರಜೆಗಳೇ ಪ್ರಭುಗಳಾಗಿ ಆಡಳಿತದ ಚುಕ್ಕಾಣಿ ಹಿಡಿಯಬೇಕು. ಈ ನಿಟ್ಟಿನಲ್ಲಿ ಮಹಾತ್ಮ ಗಾಂಧೀಜಿಯವರು ನಡೆಸಿದ ಚಿಂತನೆಗಳು ಪಂಚಾಯತಿಗಳ ಸ್ಥಾಪನೆಗೆ ನಾಂದಿಯಾದವು. ಜನರ ಆಡಳಿತವಿರುವ ವ್ಯವಸ್ಥೆಯನ್ನು ತರಬೇಕನ್ನುವ ದಿಸೆಯಲ್ಲಿ ಪಂಚಾಯತಿ ರಾಜ್ಯ ವ್ಯವಸ್ಥೆಯು ಮೂರ್ತ ಸ್ವರೂಪ ತಾಳಿತು. ಕಾಲ ಹಾಗೂ ಪರಿಸ್ಥಿತಿಗೆ ಅನುಗುಣವಾಗಿ ಈ ವ್ಯವಸ್ಥೆಯಲ್ಲಿ ಸುಧಾರಣೆಗಳನ್ನು ತರಲಾಗುತ್ತಿದೆ.

## ೨. ಪಂಚಾಯತಿ ರಾಜ್ಯ ವ್ಯವಸ್ಥೆ :

೨.೧ ಗಾಂಧೀಜಿಯವರ ಚಿಂತನೆಯ ಪ್ರಭಾವದಿಂದ ಭಾರತದ ಸಂವಿಧಾನದಲ್ಲಿ ಪಂಚಾಯತಿ ರಾಜ್ಯ ವ್ಯವಸ್ಥೆಯ ವಿಷಯವನ್ನು ೪೦ನೇ ವಿಧಿಯಲ್ಲಿ ಈ ಕೆಳಗಿನಂತೆ ಸೇರ್ಪಡೆ ಮಾಡಲಾಗಿತ್ತು.

**"ಗ್ರಾಮಗಳಲ್ಲಿ ಪಂಚಾಯತಿ ವ್ಯವಸ್ಥೆಯನ್ನು ನಿರ್ಮಾಣ ಮಾಡಿ ಅವುಗಳಿಗೆ ಅಧಿಕಾರ ಮತ್ತು ಸ್ವಯಂ ಆಡಳಿತವನ್ನು ನಿರ್ವಹಿಸುವ ಶಕ್ತಿಯನ್ನು ನೀಡುವಂತೆ ಸರ್ಕಾರವು ಕ್ರಮ ಕೈಗೊಳ್ಳತಕ್ಕದ್ದು."**

೨.೨ ಸ್ವಾತಂತ್ರ್ಯ ಪೂರ್ವದಲ್ಲಿ ಆಡಳಿತ ವಿಕೇಂದ್ರೀಕರಣದ ಬಗ್ಗೆ ಭಾರತದಲ್ಲಿ ಅನೇಕ ಪ್ರಯತ್ನಗಳು ನಡೆದಿವೆ. ಸ್ವಾತಂತ್ರ್ಯಾನಂತರ ಮೇಲಿನ ಸಂವಿಧಾನದ ವಿಧಿಯನ್ವಯ ಅನೇಕ ರಾಜ್ಯಗಳು ಈ ದಿಶೆಯಲ್ಲಿ ಅಧಿನಿಯಮಗಳನ್ನು ಜಾರಿಗೆ ತಂದವು. ೧೯೫೬ರಲ್ಲಿ ರಾಜ್ಯಗಳ ಪುನರ್ ವಿಂಗಡಣೆಯಾದಾಗ ಕರ್ನಾಟಕ ರಾಜ್ಯದಲ್ಲಿ ಸ್ಥಳೀಯ ಸಂಸ್ಥೆಗಳಿಗೆ ಸಂಬಂಧಿಸಿದಂತೆ ಎಂಟು ಪ್ರತ್ಯೇಕ ಅಧಿನಿಯಮಗಳು ಜಾರಿಯಲ್ಲಿದ್ದವು. ೧೯೫೭ರಲ್ಲಿ ಬಲ್ವಂತರಾಯ್ ಮೆಹ್ತಾ ಸಮಿತಿಯು ರಾಷ್ಟ್ರದಲ್ಲಿ ಮೂರು ಹಂತಗಳ ಪಂಚಾಯತ್‌ರಾಜ್ ವ್ಯವಸ್ಥೆಯನ್ನು ಪ್ರತಿಪಾದಿಸಿತು. ಅದರಿಂದ ಪ್ರಭಾವಿತವಾದ ರಾಜ್ಯ ಸರ್ಕಾರವು ಕರ್ನಾಟಕ (ಮೈಸೂರು) ಗ್ರಾಮ ಪಂಚಾಯತ್ ಮತ್ತು ಜಿಲ್ಲಾ ಮಂಡಳಿಗಳ ಅಧಿನಿಯಮ, ೧೯೫೯ನ್ನು ಜಾರಿಗೆ ತಂದಿತು. ಈ ಅಧಿನಿಯಮವು ೧೯೮೩ ರವರೆಗೆ ಜಾರಿಯಲ್ಲಿತ್ತು.

## ೩. ವಿಕೇಂದ್ರೀಕರಣದ ಸೀಮೋಲ್ಲಂಘನ :

೩.೧ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಮೇಲಿನ ವ್ಯವಸ್ಥೆಯಲ್ಲಿ ಹೆಚ್ಚಿನ ಅಧಿಕಾರವಿರಲಿಲ್ಲ. ರಾಜಕೀಯ, ಆಡಳಿತ, ಹಣಕಾಸು ವಿಷಯಗಳ ವಿಕೇಂದ್ರೀಕರಣ ಸಂಪೂರ್ಣವಾಗಿ ಕೈಗೊಂಡಿರಲಿಲ್ಲ. ಇದರಿಂದ ಈ ಸಂಸ್ಥೆಗಳು ಸ್ವಯಂ ಆಡಳಿತ ನಡೆಸಲು ಸಾಧ್ಯವಾಗಿರಲಿಲ್ಲ.

೩.೨ ೧೯೭೮ರಲ್ಲಿ ಸಲ್ಲಿಸಿದ ಅಶೋಕ ಮೆಹ್ತಾ ಸಮಿತಿಯ ವರದಿಯು ಕರ್ನಾಟಕದಲ್ಲಿ ನೂತನ ಪಂಚಾಯತಿ ರಾಜ್ಯ ವ್ಯವಸ್ಥೆಗೆ ನಾಂದಿ ಹಾಡಿತು. ತತ್ಪರಿಣಾಮವಾಗಿ ರಾಜ್ಯದಲ್ಲಿ ಕರ್ನಾಟಕ ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯತ್ ಸಮಿತಿ, ಮಂಡಳ ಪಂಚಾಯತ್ ಮತ್ತು ನ್ಯಾಯ ಪಂಚಾಯತಿಗಳ ಅಧಿನಿಯಮ, ೧೯೮೩ ಜಾರಿಗೆ ಬಂದಿತು. ಎರಡು ಹಂತದ ಜಿಲ್ಲಾ ಪರಿಷತ್ತು, ಗ್ರಾಮ ಪಂಚಾಯತಿ ವ್ಯವಸ್ಥೆಗೆ ನಿರ್ದಿಷ್ಟ ಕರ್ತವ್ಯಗಳನ್ನು, ಸಂಪನ್ಮೂಲಗಳನ್ನು ಒದಗಿಸಿ ಸ್ವಯಂ ಸರ್ಕಾರಗಳಾಗಿ ಕಾರ್ಯನಿರ್ವಹಿಸಲು ಅನುಕೂಲವಾಗುವಂತೆ ಸಿಬ್ಬಂದಿ ಹಾಗೂ ಅಧಿಕಾರಗಳನ್ನು ನೀಡಲಾಯಿತು. ಇದರಿಂದ ರಾಜ್ಯ, ಜಿಲ್ಲೆ ಹಾಗೂ ಮಂಡಳ ಮಟ್ಟದಲ್ಲಿ ವಲಯವಾರು ಯಾವ ಕಾರ್ಯಕ್ರಮಗಳನ್ನು ನಿರ್ವಹಿಸಬೇಕೆಂಬ ಬಗ್ಗೆ ಸ್ಪಷ್ಟ ಚಿತ್ರಣವನ್ನು ನೀಡಲಾಗಿತ್ತು. ದುರ್ಬಲ ವರ್ಗದವರು ಮತ್ತು ಮಹಿಳೆಯರಿಗೆ ಮೀಸಲಾತಿಯನ್ನು ಅಧಿನಿಯಮದಲ್ಲಿ ಕಲ್ಪಿಸಲಾಗಿತ್ತು.

೩.೩ ಭಾರತದಲ್ಲೇ ಮೊದಲ ಬಾರಿಗೆ ಕರ್ನಾಟಕವು ರಾಜ್ಯ ಮಟ್ಟದ ಅಧಿಕಾರವನ್ನು ಸಂಪನ್ಮೂಲಗಳೊಂದಿಗೆ ಪಂಚಾಯತಿ ರಾಜ್ಯ ಸಂಸ್ಥೆಗಳಿಗೆ ವಿಕೇಂದ್ರೀಕರಿಸಿತು. ಇದರಿಂದ ಪ್ರಜೆಗಳು, ಪ್ರಜಾಪ್ರತಿನಿಧಿಗಳಿಗೆ ಸಹಭಾಗಿತ್ವದಲ್ಲಿ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಯಲ್ಲಿ ತಮ್ಮ ವಿಚಾರಗಳನ್ನು ವ್ಯಕ್ತಪಡಿಸಲು, ಆದ್ಯತೆಗಳನ್ನು ಗುರುತಿಸಲು ಹಾಗೂ ಸೂಕ್ತ ಆಯ್ಕೆಗಳನ್ನು ಮಾಡಲು ಅಧಿಕಾರವನ್ನು ನೀಡಲಾಗಿತ್ತು. ಈ ವ್ಯವಸ್ಥೆಯು ಹಿಂದಿನ ವ್ಯವಸ್ಥೆಗಳಿಂದ ಬಹುದೂರ ಗ್ರಾಮೀಣ ಅಭಿವೃದ್ಧಿಯತ್ತ ಕೊಂಡೊಯ್ದಿತ್ತು.

೩.೪ ಕರ್ನಾಟಕದ ಈ ಯಶಸ್ವೀ ಪ್ರಯೋಗವನ್ನು ಕೇಂದ್ರ ಸರ್ಕಾರವು ಆಧಾರವಾಗಿಟ್ಟುಕೊಂಡು ದೇಶದಲ್ಲಿ ಸ್ವಯಂ ಸರ್ಕಾರಗಳನ್ನಾಗಿ ಮೂರು ಹಂತಗಳ ಪಂಚಾಯತ್ ರಾಜ್ ಸಂಸ್ಥೆಗಳನ್ನು ಸ್ಥಾಪಿಸುವ ಏಕರೂಪ ಕಾಯಿದೆಯನ್ನು ೧೯೯೨ರಲ್ಲಿ ಸಂವಿಧಾನಕ್ಕೆ ೭೩ನೇ ತಿದ್ದುಪಡಿ ಮೂಲಕ ತಂದಿತು. ಸಂವಿಧಾನದ ೭೩ನೇ ತಿದ್ದುಪಡಿಗೆ ಅನುಗುಣವಾಗಿ ಕರ್ನಾಟಕ ಸರ್ಕಾರವು ಕರ್ನಾಟಕ ಪಂಚಾಯತ್

ರಾಜ್ ಅಧಿನಿಯಮ, ೧೯೯೩ನ್ನು ಮೇ ೧೦,೧೯೯೩ ರಿಂದ ಜಾರಿಗೆ ತಂದ ಮೊದಲ ರಾಜ್ಯವಾಯಿತು. ಸದರಿ ತಿದ್ದುಪಡಿಯಲ್ಲಿ ಪಟ್ಟಿ ಮಾಡಿದ ಎಲ್ಲ ೨೯ವಿಷಯಗಳನ್ನು ಹಣಕಾಸು, ಕಾರ್ಯಗಳು ಹಾಗೂ ಅಧಿಕಾರಗಳೊಂದಿಗೆ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ, ಗ್ರಾಮ ಪಂಚಾಯತಿಗಳಿಗೆ ವರ್ಗಾಯಿಸಿದ ಏಕೈಕ ರಾಜ್ಯವಾಗಿಯೂ ಕರ್ನಾಟಕ ಹೊರಹೊಮ್ಮಿತು.

## ೪. ಭಾಗವಹಿಸುವಿಕೆ :

೪.೧ ಅಭಿವೃದ್ಧಿ ಕಾರ್ಯಕ್ರಮಗಳ ಯೋಜನೆ ತಯಾರಿಕೆ, ಅನುಷ್ಠಾನ ಹಾಗೂ ಉಸ್ತುವಾರಿಯಂತಹ ಕಾರ್ಯಗಳಲ್ಲಿ ಜನರು ಭಾಗವಹಿಸಿದಲ್ಲಿ ಸ್ಥಳೀಯ ಬೇಡಿಕೆಗಳಿಗೆ ಹಾಗೂ ಅವಶ್ಯಕತೆಗಳಿಗೆ ಮಾನ್ಯತೆ ಸಿಗುತ್ತದೆ. ಅಭಿವೃದ್ಧಿಯ ಫಲಗಳು ಸಮವಾಗಿ ಹಂಚಿಕೆ ಮಾಡಲು ಸಾಧ್ಯವಾಗುತ್ತದೆಯೆಂಬ ಪರಿಕಲ್ಪನೆಯು ೧೯೮೦ರ ದಶಕದಲ್ಲಿ ಚಲಾವಣೆಗೆ ಬಂತು. ಭಾಗವಹಿಸುವಿಕೆ ಪ್ರಕ್ರಿಯೆಯು ಅಭಿವೃದ್ಧಿ ಕಾರ್ಯಗಳ ಮೇಲೆ ಬೆಳಕನ್ನು ಚೆಲ್ಲಿದೆ ಹಾಗೂ ಯೋಜನೆ, ಅನುಷ್ಠಾನ ಪದ್ಧತಿಗಳಲ್ಲಿ ಬದಲಾವಣೆಗಳನ್ನು ತರಲು ಸಹಾಯಕವಾಗಿದೆ.

೪.೨ ಕರ್ನಾಟಕದಲ್ಲಿ ೧೯೮೩ರ ಕಾಯಿದೆಯಲ್ಲಿ ಗ್ರಾಮಸಭೆಯನ್ನು ಸ್ಥಾಪಿಸಲಾಯಿತು. ಪ್ರತಿ ಗ್ರಾಮದಲ್ಲಿ ವರ್ಷಕ್ಕೆ ಕನಿಷ್ಟ ಎರಡು ಬಾರಿ ಗ್ರಾಮಸಭೆಗಳನ್ನು ನಡೆಸಿ ವಯಸ್ಕ ಜನರು ಪಾಲ್ಗೊಳ್ಳಲು ಅವಕಾಶ ಮಾಡಿಕೊಡಲಾಯಿತು. ಇದರ ಪ್ರಮುಖ ಕರ್ತವ್ಯ ಮಂಡಳ ಪಂಚಾಯತಿಗಳ ಕಾರ್ಯನಿರ್ವಹಣೆಯ ಉಸ್ತುವಾರಿಯಾಗಿತ್ತು. ಇದಲ್ಲದೆ ಅಧಿಕಾರಿಗಳು ಪರಿಣಾಮಕಾರಿಯಾಗಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವಂತೆ ಗ್ರಾಮಸಭೆಗೆ ಹೆಚ್ಚು ಜವಾಬ್ದಾರರನನ್ನಾಗಿ ಮಾಡುವುದೇ ಆಗಿತ್ತು.

೪.೩ ೧೯೯೩ರ ಅಧಿನಿಯಮದಲ್ಲೂ "ಗ್ರಾಮಸಭೆ" ಸಂಸ್ಥೆಯನ್ನು ಮುಂದುವರೆಸಲಾಯಿತು. ಆದರೆ ಗ್ರಾಮಸಭೆಗಳು ಸರಿಯಾಗಿ ನಡೆಯದೇ ಇರುವುದರಿಂದ ಅವು ಮಹತ್ವವನ್ನು ಕಳೆದುಕೊಂಡವು. ಅಲ್ಲದೆ ಗ್ರಾಮಸಭೆಯ ಪ್ರಸ್ತಾವನೆಗಳಿಗೆ, ಆಯ್ಕೆಯಾದ ಫಲಾನುಭವಿಗಳಿಗೆ ಪಂಚಾಯತ್‌ರಾಜ್ ಸಂಸ್ಥೆಗಳು ಮನ್ನಣೆ ಕೊಡದೇ ಇರುವುದು ಇದಕ್ಕೆ ಕಾರಣವಾಯಿತು. ಅದಕ್ಕಾಗಿ ಗ್ರಾಮ ಸಭೆಗಳನ್ನು ಸಬಲೀಕರಣಗೊಳಿಸಲು ಕ್ರಮ ಕೈಗೊಳ್ಳಲಾಯಿತು.

## ೫. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ :

೫.೧ ಪಂಚಾಯತ್‌ರಾಜ್ ಹಾಗೂ ಗಾಮೀಣ ಅಭಿವೃದ್ಧಿ ವಿಷಯಗಳ ಉಸ್ತುವಾರಿಯನ್ನು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಗಳು ಕೇಂದ್ರ ಹಾಗೂ ರಾಜ್ಯ ಮಟ್ಟದಲ್ಲಿ ಮಾಡುತ್ತ ಬಂದಿವೆ. ನಿರಂತರ ಅಧ್ಯಯನವನ್ನು ಕೈಗೊಂಡು ಎರಡೂ ಕ್ಷೇತ್ರಗಳಲ್ಲಿ ಕಾಲ ಹಾಗೂ ಪರಿಸ್ಥಿತಿಗೆ ಅನುಗುಣವಾಗಿ ವ್ಯವಸ್ಥೆಯಲ್ಲಿ ಸುಧಾರಣೆಯನ್ನು ತರುವ ಪ್ರಯತ್ನಗಳನ್ನು ಕೈಗೊಂಡಿವೆ.

೫.೨ ಕರ್ನಾಟಕದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯು ಸರ್ಕಾರದ ಒಂದು ಪ್ರಮುಖ ಇಲಾಖೆಯಾಗಿದ್ದು ಎರಡು ಮಹತ್ವದ ಕಾರ್ಯಕ್ಷೇತ್ರಗಳನ್ನು ನಿರ್ವಹಿಸುತ್ತಿದೆ. ಒಂದು, ಇದು ಪಂಚಾಯತಿರಾಜ್ಯ ವ್ಯವಸ್ಥೆಯ ಮೂಲಕ ಗ್ರಾಮೀಣ ಸ್ಥಳೀಯ ಆಡಳಿತವನ್ನು ನಿರ್ವಹಿಸುವ ರಾಜ್ಯಮಟ್ಟದ ಸರ್ಕಾರದ ಸಚಿವಾಲಯವಾಗಿದೆ. ಈ ಪ್ರಾಂತದಲ್ಲಿ, ಇದು ಪಂಚಾಯತಿರಾಜ್ಯ ಸಂಸ್ಥೆಗಳಿಗೆ ಅಧಿಕಾರ, ರಾಜಕೀಯ, ಆರ್ಥಿಕ ಮತ್ತು ಆಡಳಿತಾತ್ಮಕ ವಿಷಯಗಳ ವಿಕೇಂದ್ರೀಕರಣದಲ್ಲಿ ಮಹತ್ವದ ನೀತಿಗಳನ್ನು ರೂಪಿಸುವ ಮತ್ತು ಅನುಷ್ಠಾನಗೊಳಿಸುವ ಕಾರ್ಯವನ್ನು ಮಾಡುತ್ತದೆ. ಆರೋಗ್ಯ, ಶಿಕ್ಷಣ, ಕೃಷಿ, ನೀರು ಪೂರೈಕೆ, ಗ್ರಾಮೀಣ ರಸ್ತೆ ಇತ್ಯಾದಿ ಬಹುಸಂಖ್ಯಾ ವಲಯಗಳನ್ನು ಪಂಚಾಯತಿರಾಜ್ಯ ಸಂಸ್ಥೆಗಳಿಗೆ ವಹಿಸಿರುವುದರಿಂದ, ಈ ವಲಯಗಳಲ್ಲಿ ನೀತಿ ರೂಪಿಸುವ ಕಾರ್ಯವನ್ನೂ ಗ್ರಾಮೀಣಾಭಿವೃದ್ದಿ ಮತ್ತು ಪಂಚಾಯತ್‌ರಾಜ್ ಇಲಾಖೆಯು ಹೊಂದಿದೆ. ಎರಡನೆಯದಾಗಿ, ಈ ಇಲಾಖೆಯು ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಪ್ರಮುಖ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿದೆ. ನೀರು ಪೂರೈಕೆ, ಗ್ರಾಮೀಣ ರಸ್ತೆ, ಜಲಾನಯನ ಅಭಿವೃದ್ಧಿ, ಗ್ರಾಮೀಣ ವಸತಿ, ಗ್ರಾಮೀಣ ಇಂಧನ ಮತ್ತು ಬಡತನ ನಿರ್ಮೂಲನಾ ಕಾರ್ಯಕ್ರಮಗಳನ್ನು ಇಲಾಖೆಯು ನಿರ್ವಹಿಸುತ್ತಿದೆ.

೫.೩ ವಿಕೇಂದ್ರೀಕರಣವೆಂಬುದು ನಿಂತ ನೀರಾಗಬಾರದು. ಅದು ನಿರಂತವಾಗಿ ಮುನ್ನಡೆಯುತ್ತಿರಬೇಕು. ಪಂಚಾಯತಿ ರಾಜ್ಯ ಸಂಸ್ಥೆಗಳಿಗೆ ರಾಜಕೀಯ, ಆಡಳಿತಾತ್ಮಕ ಮತ್ತು ಆರ್ಥಿಕ ಜವಾಬ್ದಾರಿಗಳನ್ನು ವರ್ಗಾಯಿಸಿ ಈ ಸಂಸ್ಥೆಗಳ ಮೇಲೆ ನಿಯಂತ್ರಣ ಹೊಂದಲು ಸಮುದಾಯಗಳಿಗೆ ಅಧಿಕಾರ ನೀಡುವ ಮೂಲಕ ವಿಕೇಂದ್ರೀಕರಣವು ಇನ್ನೂ ಹೆಚ್ಚು ಅರ್ಥಪೂರ್ಣವಾಗಬೇಕು. ಈ ದೃಷ್ಟಿಕೋನದಲ್ಲಿ ಪಂಚಾಯತಿರಾಜ್ಯ ಸಂಸ್ಥೆಗಳು ಸಂಪೂರ್ಣವಾಗಿ ಜನತೆಯ ಸಂಸ್ಥೆಗಳಾಗಿ ಹೊರಹೊಮ್ಮಲು ಇನ್ನೂ ಬಹುದೂರ ಕ್ರಮಿಸಬೇಕು. ಸ್ಥಳೀಯ ಯೋಜನೆಗಳನ್ನು ಬೇಡಿಕೆ ಆಧಾರದ ಮೇಲೆ ರೂಪಿಸುವ ಬದಲಿಗೆ ಅನುದಾನವನ್ನು ಚುನಾಯಿತ ಪ್ರತಿನಿಧಿಗಳ ನಡುವೆ ಸಮನಾಗಿ ಹಂಚಿಕೊಳ್ಳುವ ಪ್ರವೃತ್ತಿಯು ಬೆಳೆಯುತ್ತಿದ್ದು ಯೋಜನೆಗಳಿಂದ ನಿರೀಕ್ಷಿತ ಪರಿಣಾಮಗಳನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ವಿವಿಧ ಕಾರಣಗಳಿಗಾಗಿ ಅನುದಾನ ಮತ್ತು ಕಾರ್ಯ ಚಟುವಟಿಕೆಗಳ ಹಂಚಿಕೆಯಲ್ಲಿ ಹೊಂದಾಣಿಕೆಯಿಲ್ಲದಿರುವುದು ಕಂಡುಬಂದಿದೆ. ಪಂಚಾಯತಿ ರಾಜ್ಯ ಸಂಸ್ಥೆಗಳಿಗೆ ಹೆಚ್ಚಿನ ಅನುದಾನ ಮತ್ತು ಅಧಿಕಾರಗಳನ್ನು ಸಂಪೂರ್ಣವಾಗಿ ವರ್ಗಾಯಿಸಿ ಅದರ ಜೊತೆಗೆ ಈ ಸಂಸ್ಥೆಗಳು ಅರ್ಥಪೂರ್ಣವಾಗಿ ಮತ್ತು ದಕ್ಷತೆಯಿಂದ ಪರಿಣಾಮಕಾರಿಯಾಗಿ ಕಾರ್ಯನಿರ್ವಸುವಂತೆ ಮಾಡಬೇಕಿದೆ. ಈ ನಿಟ್ಟಿನಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯು ಶ್ರಮಿಸುತ್ತಿದೆ.

## ೬. ವಿಕೇಂದ್ರೀಕರಣ ತಲೆಮಾರು :

೬.೧ ಕರ್ನಾಟಕದಲ್ಲಿ ವಿವಿಧ ಅವಧಿಗಳಲ್ಲಿ ಕೈಕೊಂಡ ವಿಕೇಂದ್ರೀಕರಣದ ಸುಧಾರಣೆಗಳನ್ನು ತಲೆಮಾರುಗಳೆಂದು ಇಲ್ಲಿ ಹೆಸರಿಸಬಹುದು. ೧೯೮೭ರಲ್ಲಿ ಕೈಗೊಳ್ಳಲಾದ ಕ್ರಮಗಳು ಪ್ರಾರಂಭಿಕ ಮೊದಲ ತಲೆಮಾರಿನ ವಿಕೇಂದ್ರೀಕರಣ ಸುಧಾರಣೆಗಳಾಗಿದ್ದು ಸುಭದ್ರ ಜಿಲ್ಲಾ ಮಟ್ಟದ ಸ್ಥಳೀಯ ಸರ್ಕಾರಗಳನ್ನು ಸೃಷ್ಟಿಸುವ ಮತ್ತು ಸಶಕ್ತಗೊಳಿಸುವ ಪ್ರಮುಖ ಉದ್ದೇಶಗಳನ್ನು ಹೊಂದಿದ್ದವು. ೧೯೯೨ರ ಸಂವಿಧಾನಿಕ ತಿದ್ದುಪಡಿಗಳು ತುಳಿತಕ್ಕೊಳಗಾದ ವರ್ಗಗಳಿಗೆ ಮೀಸಲಾತಿ ನೀಡಲು ಒತ್ತು ನೀಡುವ ಮೂಲಕ ಆ ಜನರಲ್ಲಿ ನಾಯಕತ್ವ, ವಿಕೇಂದ್ರೀಕರಣದೊಂದಿಗೆ ಸಾಮಾಜಿಕ ನ್ಯಾಯ ಒದಗಿಸುವ ನಿಟ್ಟಿನಲ್ಲಿ ಎರಡನೇ ತಲೆಮಾರಿನ ಸುಧಾರಣೆಗಳಾಗಿವೆ. ಈಗ ವಿಕೇಂದ್ರೀಕರಣದ ಮೂರನೇ ತಲೆಮಾರಿನ ಸುಧಾರಣೆಗಳನ್ನು ಕಾರ್ಯರೂಪಕ್ಕೆ ತರಲಾಗುತ್ತಿದೆ. ಮೂರನೇ ತಲೆಮಾರಿನ ಸುಧಾರಣೆಗಳ ಉದ್ದೇಶವು ಹೆಚ್ಚಿನ ಜವಾಬ್ದಾರಿ, ಪಾರದರ್ಶಕತೆ ಮತ್ತು ನಿರ್ವಹಿಸುವ ಪಾತ್ರದ ಸ್ಪಷ್ಟತೆ, ವಿಕೇಂದ್ರೀಕರಣದ ಮೂಲಕ ಉತ್ತಮ ಆಡಳಿತ ಮತ್ತು ಹೊಣೆಗಾರಿಕೆಗೆ ಒತ್ತು ನೀಡುವುದೇ ಆಗಿದೆ. ಜನತೆಯ ಹೆಚ್ಚಿನ ಭಾಗವಹಿಸುವಿಕೆ, ನಾಗರಿಕ ಆಧಾರಿತ ಸೇವೆ, ಸುಧಾರಿತ ಸೇವಾ ಸೌಲಭ್ಯ, ಸುಧಾರಿಸಿದ ಆರ್ಥಿಕ ನಿರ್ವಹಣೆ ಮತ್ತು ಹೆಚ್ಚಿನ ಕೆಳಮುಖ ಹೊಣೆಗಾರಿಕೆಯಂತಹ ಮೂಲಭೂತ ಆಡಳಿತ ಸುಧಾರಣೆಗಳನ್ನು ತರಲು ವಿಕೇಂದ್ರೀಕರಣವನ್ನು ಬಳಸಿಕೊಳ್ಳಲು ಉದ್ದೇಶಿಸಿದೆ.

## ೭. ಇತ್ತೀಚಿನ ಸುಧಾರಣೆಗಳು :

೭.೧ ಕರ್ನಾಟದಲ್ಲಿ ವಿಕೇಂದ್ರೀಕರಣದ ಮೂರನೇ ತಲೆಮಾರಿನ ಸುಧಾರಣೆಗಳು ಗ್ರಾಮ ಪಂಚಾಯತಿಗಳನ್ನು ಸಶಕ್ತಗೊಳಿಸುವತ್ತ ಗಮನ ಹರಿಸಿವೆ. ಜಿಲ್ಲಾ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿಗಳು ಸಹಾಯ ಒದಗಿಸುವ, ಸಾಮರ್ಥ್ಯ ನಿರ್ಮಿಸುವ ಮತ್ತು ಸಮನ್ವಯದಂತಹ ಹಿರಿಯಣ್ಣನ ಪಾತ್ರ ವಹಿಸಬೇಕಾಗಿದೆ. ಗ್ರಾಮ/ವಾರ್ಡ್ ಸಭೆಗಳು ಜನತೆಯ ಪಾಲ್ಗೊಳ್ಳುವಿಕೆಯ ಸಾಧನಗಳಾಗಿ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುವುದನ್ನು ಖಾತರಿಪಡಿಸುವತ್ತ ಒತ್ತು ನೀಡಲಾಗಿದೆ. ತಂತ್ರಜ್ಞಾನದ ಪ್ರಗತಿಯೂ ಅವಶ್ಯಕ ಸೇವೆಗಳನ್ನು ಗ್ರಾಮ ಪಂಚಾಯತಿ ಮಟ್ಟದಲ್ಲಿ ಸಮರ್ಥವಾಗಿ ಒದಗಿಸಲು ಅವಕಾಶ ಮಾಡಿಕೊಟ್ಟಿದೆ. ಶಿಕ್ಷಣ, ಜಾಗೃತಿ ಮತ್ತು ಸಂವಹನದಲ್ಲಿ ಆಗಿರುವ ಸುಧಾರಣೆಗಳ ಜೊತೆಗೆ ಗ್ರಾಮ ಪಂಚಾಯತಿಯ ಸಾಮರ್ಥ್ಯ ಬೆಳೆಯುತ್ತಿದೆ. ಈ ಸುಧಾರಣೆಗಳ ಅಂತಿಮ ಫಲಿತಾಂಶವು ಪಂಚಾಯತಿಗಳನ್ನು ಸ್ವಯಂ ಆಡಳಿತದ ಸಂಸ್ಥೆಗಳಂತೆ ಕಾರ್ಯನಿರ್ವಹಿಸಲು ಅಗತ್ಯವಾದ ಅಧಿಕಾರ ಮತ್ತು ಪ್ರಾಧಿಕಾರಗಳನ್ನು ನೀಡುವುದಾಗಿದೆ. (ಸಂವಿಧಾನ ೨೪೩ಜಿ). ನಿರಂತರವಾಗಿ ಬದಲಾಗುತ್ತಿರುವ ಸನ್ನಿವೇಶಗಳಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ ರಾಜ್ಯ ಇಲಾಖೆಯು ವಿಕೇಂದ್ರೀಕರಣ ಪ್ರಕ್ರಿಯೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಆದರೆ ಈ ಪ್ರಕ್ರಿಯೆಯನ್ನು ನಿರ್ದೇಶಿಸುವುದಾಗಲೀ ಅಥವಾ ಅದನ್ನು ಅತಿಯಾಗಿ ನಿಯಂತ್ರಿಸುವುದನ್ನಾಗಲಿ ಮಾಡದೆ ಅದನ್ನು ಬೆಂಬಲಿಸುವುದಷ್ಟೇ ಇಲಾಖೆಯ ಕರ್ತವ್ಯವಾಗಿದೆ.

೭.೨ ಕಳೆದ ಮೂರು ವರ್ಷಗಳಲ್ಲಿ ಸರ್ಕಾರದಿಂದ ಶಾಸನ ಮತ್ತು ಆಡಳಿತಾತ್ಮಕ ಕ್ರಮಗಳೆರಡರಲ್ಲೂ, ಪಂಚಾಯತಿರಾಜ್ಯ ಸಂಸ್ಥೆಗಳ ದಕ್ಷತೆ ಮತ್ತು ಸಾಮರ್ಥ್ಯಗಳನ್ನು ಹೆಚ್ಚಿಸುವ, ನಿರ್ಣಯ ಕೈಗೊಳ್ಳುವಲ್ಲಿ ಜನರ ಹೆಚ್ಚಿನ ಪಾಲ್ಗೊಳ್ಳುವಿಕೆಗಾಗಿ ವಿಧಾನಗಳನ್ನು ರೂಪಿಸುವ, ಆರ್ಥಿಕ ವಿಧಾನಗಳನ್ನು ಸರಳೀಕರಣಗೊಳಿಸುವ, ವಿಕೇಂದ್ರೀಕೃತ ಸ್ಥಳೀಯ ಸಂಸ್ಥೆಗಳ ಕಾರ್ಯನಿರ್ವಹಣೆ ಮತ್ತು ಆಡಳಿತಾತ್ಮಕ ವಿಧಾನಗಳನ್ನು ರೂಪಿಸುವ ಹಲವಾರು ಕ್ರಮಗಳನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಕೈಗೊಂಡಿದೆ.

## ೮. ತಿದ್ದುಪಡಿಗಳು :

೮.೧ ಶಾಸನ ಸಭೆಯ ಜಂಟಿ ಆಯ್ಕೆ ಸಮಿತಿಯು ತಿದ್ದುಪಡಿ ಅಂಶಗಳನ್ನು ಪರಿಗಣಿಸಿದ ಬಳಿಕ ಕರ್ನಾಟಕ ಪಂಚಾಯತಿ ರಾಜ್ಯ ಅಧಿನಿಯಮ,.೧೯೯೩ಕ್ಕೆ ತಂದ ೪೭ ತಿದ್ದುಪಡಿಗಳನ್ನು ಸರ್ವಾನುಮತದಿಂದ ಅಂಗೀಕರಿಸಲಾಯಿತು. ಈ ತಿದ್ದುಪಡಿಗಳು ೨೦೦೩ರ ಅಕ್ಟೋಬರ್‌ನಿಂದ ಜಾರಿಗೆ ಬಂದಿದೆ. ಜನರ ಪಾಲ್ಗೊಳ್ಳುವಿಕೆಗೆ ಅವಕಾಶ ಕಲ್ಪಿಸುವುದು ಮತ್ತು ಪಂಚಾಯತಿ ರಾಜ್ಯ ಸಂಸ್ಥೆಗಳು ಹೆಚ್ಚು ಹೊಣೆಗಾರವಾಗುವಂತೆ ಮಾಡುವುದು ಈ ತಿದ್ದುಪಡಿಗಳ ಮುಖ್ಯ ಉದ್ದೇಶವಾಗಿದೆ.

## ೯. ತಿದ್ದುಪಡಿಗಳ ಮುಖ್ಯಾಂಶಗಳು :

- ಗ್ರಾಮ ಪಂಚಾಯತಿಯ ಪ್ರತಿಯೊಂದು ಕ್ಷೇತ್ರ ಮಟ್ಟದಲ್ಲಿ ವಾರ್ಡ್ ಸಭೆ ಮತ್ತು ಪಂಚಾಯತಿ ಮಟ್ಟದಲ್ಲಿ ಗ್ರಾಮಸಭೆಗಳ ಎರಡು ಹಂತದ ವ್ಯವಸ್ಥೆಯನ್ನು ಜಾರಿಗೆ ತರಲಾಗಿದೆ. ಜನತೆಯ ಪಾಲ್ಗೊಳ್ಳುವಿಕೆಯನ್ನು ಹೆಚ್ಚಿನ ಪ್ರಮಾಣದಲ್ಲಿ ಮತ್ತು ಪರಿಣಾಮಕಾರಿಯಾಗಿ ಮಾಡಲು ಈ ತಿದ್ದುಪಡಿ ಅನುವು ಮಾಡಿಕೊಟ್ಟಿದೆ. ಗ್ರಾಮಸಭೆಗಳು ಮತ್ತು ವಾರ್ಡ್ ಸಭೆಗಳು ಕ್ರಮವಾಗಿ ಕನಿಷ್ಟ ಒಂದು ವರ್ಷದಲ್ಲಿ ಎರಡು ಬಾರಿ ಸಭೆ ಸೇರಬೇಕು.
- ಎಲ್ಲ ಸರ್ಕಾರಿ ಯೋಜನೆಗಳ ಫಲಾನುಭವಿಗಳನ್ನು ಗುರುತಿಸುವ, ಆದ್ಯತೆಯನ್ನು ನಿರ್ಧರಿಸುವ ಮತ್ತು ಅಭಿವೃದ್ಧಿ ಯೋಜನೆಗಳನ್ನು ಅನುಮೋದಿಸುವ ಅಧಿಕಾರವನ್ನು ವಾರ್ಡ್ ಸಭೆ ಮತ್ತು ಗ್ರಾಮಸಭೆಗಳಿಗೆ ನೀಡಲಾಗಿದೆ ಹಾಗೂ ಕಡ್ಡಾಯಗೊಳಿಸಲಾಗಿದೆ.
- ಗ್ರಾಮ ಪಂಚಾಯತಿ ಸಭೆಗಳ ಅವಧಿಯನ್ನು ಎರಡು ತಿಂಗಳಿಗೊಮ್ಮೆ ಇದ್ದುದನ್ನು ತಿಂಗಳಿಗೆ ಒಂದು ಸಭೆ ಎಂಬುದಾಗಿ ಹೆಚ್ಚಿಸಲಾಗಿದೆ.
- ಸಾಮಾನ್ಯ ಉದ್ದೇಶಗಳನ್ನು ಅನುಸರಿಸುವುದಕ್ಕಾಗಿ ಪಂಚಾಯತಿರಾಜ್ಯ ಸಂಸ್ಥೆಗಳಿಗೆ ಅವುಗಳ ನಡುವೆ ಜಂಟಿ ಸಮಿತಿಗಳನ್ನು ರಚಿಸಲು ಹೆಚ್ಚಿನ ಸ್ವಾತಂತ್ರ್ಯವನ್ನು ನೀಡಲಾಗಿದೆ.
- ಪಂಚಾಯತಿರಾಜ್ಯ ಸಂಸ್ಥೆಯ ಸದಸ್ಯರು ಸಂಬಂಧಪಟ್ಟ ಪಂಚಾಯತಿರಾಜ್ಯ ಸಂಸ್ಥೆಯ ಸಭೆಯಲ್ಲಿ ಪರಿಗಣನೆಗೆ ಬರುವ ಯಾವುದೇ ಪ್ರಶ್ನೆಗಳಲ್ಲಿ ಸ್ವಹಿತಾಸಕ್ತಿ ಇದೆಯೇ ಎಂಬುದನ್ನು ಬಹಿರಂಗಪಡಿಸಬೇಕಾಗುತ್ತದೆ.
- ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿ ಸದಸ್ಯರು ಅವರುಗಳ ಆಸ್ತಿಗಳನ್ನು ಘೋಷಿಸಿಬೇಕು; ತಪ್ಪು ಅಥವಾ ಸರಿಯಾಗಿರದ ಘೋಷಣೆಯಿಂದ ಸದಸ್ಯತ್ವ ರದ್ದಾಗುತ್ತದೆ.
- ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿ ಸದಸ್ಯರು ಚುನಾವಣಾ ಖರ್ಚುಗಳ ಲೆಕ್ಕಪತ್ರ ಇಡಬೇಕು; ಲೆಕ್ಕ ಸಲ್ಲಿಸುವಲ್ಲಿ ವಿಫಲರಾದಲ್ಲಿ ಸದಸ್ಯತ್ವ ಅನೂರ್ಜಿತವಾಗುತ್ತದೆ.
- ಪಂಚಾಯತಿರಾಜ್ಯ ಸಂಸ್ಥೆಗಳ ನಡವಳಿಗಳನ್ನು, ಪರ ಅಥವಾ ವಿರುದ್ಧ ಮತ ಚಲಾಯಿಸಿದವರು ಯಾರ್‍ಯಾರು ಎಂಬ ವಿವರಗಳೊಂದಿಗೆ ೭೨ ಗಂಟೆಗಳೊಳಗೆ ಬಹಿರಂಗಪಡಿಸಬೇಕಾಗುತ್ತದೆ.
- ಪಂಚಾಯತಿರಾಜ್ಯ ಸಂಸ್ಥೆಗಳ ಸಭೆಗಳಿಗೆ ಕೋರಂಅನ್ನು ಒಟ್ಟು ಸದಸ್ಯರ ಸಂಖ್ಯೆಯ ಶೇ. ೫೦ಕ್ಕೆ ನಿಗದಿಗೊಳಿಸಲಾಗಿದೆ.
- ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿಗಳಲ್ಲಿರುವಂತೆ ಗ್ರಾಮ ಪಂಚಾಯತಿ ಅಧ್ಯಕ್ಷರು ಗ್ರಾಮ ಪಂಚಾಯತಿಯ ಕಾರ್ಯಕಾರಿ ಮುಖ್ಯಸ್ಥರನ್ನಾಗಿ ಮಾಡಲಾಗಿದೆ.

- ಬಾಹ್ಯ ಮೂಲಗಳಿಂದ ತಾಂತ್ರಿಕ ಸಿಬ್ಬಂದಿಯ ಸೇವೆಗಳನ್ನು ಪಡೆಯಲು ಗ್ರಾಮ ಪಂಚಾಯತಿಗಳಿಗೆ ಅಧಿಕಾರ ನೀಡಲಾಗಿದೆ.
- ಅಧಿಕಾರಿಗಳು ಗ್ರಾಮ ಪಂಚಾಯತಿ ಸಭೆಗೆ ಹಾಜರಾಗುವುದನ್ನು ಕಡ್ಡಾಯ ಮಾಡಲಾಗಿದೆ.
- ಪ್ರತಿ ಗ್ರಾಮಪಂಚಾಯತಿಗೆ ಕನಿಷ್ಠ ರೂ. ೫ ಲಕ್ಷಗಳನ್ನು ಶಾಸನಬದ್ಧ ಅಭಿವೃದ್ಧಿ ಅನುದಾನವನ್ನಾಗಿ ನಿಗದಿಪಡಿಸಲಾಗಿದೆ.

## ೧೦. ಚಟುವಟಿಕೆ ನಕ್ಷೆ :

೧೦.೧ ತಿದ್ದುಪಡಿಗಳಿಗೆ ಸಮಾನಾಂತರವಾಗಿ, ಪಂಚಾಯತಿರಾಜ್ಯ ಸಂಸ್ಥೆಗಳು ಹೆಚ್ಚಿನ ಸ್ವಾತಂತ್ರ್ಯದೊಂದಿಗೆ ಕಾರ್ಯನಿರ್ವಹಿಸುವಂತೆ ಮಾಡಲು ಎರಡು ಸುಧಾರಣೆಗಳನ್ನು ಕೈಗೊಳ್ಳಲಾಗಿದೆ. ಒಂದು, ಚಟುವಟಿಕೆ ನಕ್ಷೆಯನ್ನು ತಯಾರಿಸುವುದು, ಎರಡು, ಕಾರ್ಯಕ್ರಮಗಳನ್ನು ಸರಳೀಕರಣಗೊಳಿಸುವುದು. ಪಂಚಾಯತಿರಾಜ್ಯ ಸಂಸ್ಥೆಗಳು ನಿರ್ವಹಿಸುವ ಕಾರ್ಯಕ್ರಮಗಳಲ್ಲಿ ಸ್ಪಷ್ಟತೆ ಇರಲಿಲ್ಲ. ಯಾವ ಕೆಲಸವನ್ನು ಯಾವ ಹಂತದಲ್ಲಿ ನಿರ್ವಹಿಸಬೇಕೋ ಅದೇ ಹಂತದಲ್ಲಿ ನಿರ್ವಹಿಸಬೇಕೆಂಬ ತತ್ವದ ಆಧಾರದ ಮೇಲೆ ಮೂರೂ ಹಂತಗಳಿಗೆ ಅವು ಕೈಗೊಳ್ಳಬೇಕಾದ ಚಟುವಟಿಕೆಗಳನ್ನು ವಿಂಗಡಿಸಿ ಚಟುವಟಿಕೆ ನಕ್ಷೆ ತಯಾರಿಸಿ ಯಾವ ಕೆಲಸ ಯಾವ ಹಂತದಲ್ಲಾಗಬೇಕೆಂಬುದನ್ನು ಸೂಚಿಸಲಾಗಿದೆ.

## ೧೧. ಕಾರ್ಯಕ್ರಮಗಳ ಸರಳೀಕರಣ :

೧೧.೧ ಪಂಚಾಯತಿ ರಾಜ್ಯ ಸಂಸ್ಥೆಗಳು ಅಸಂಖ್ಯ ಕಾರ್ಯಕ್ರಮಗಳನ್ನು ನಿರ್ವಹಿಸುತ್ತಿದ್ದು ಅವುಗಳ ಉಸ್ತುವಾರಿ ಬಹಳ ಕಷ್ಟದಾಯಕವಾಗಿತ್ತು. ಸಮಯ ಹಾಗೂ ಹಣ ವ್ಯರ್ಥವಾಗುತ್ತಿತ್ತು. ಬಹಳ ಸಣ್ಣ ಸಣ್ಣ ಹಾಗೂ ಒಂದೇ ತರಹದ ಕಾರ್ಯಕ್ರಮಗಳನ್ನು ವಿಲೀನಗೊಳಿಸಿ ಯೋಜನೆ ಹಾಗೂ ಯೋಜನೇತರ ಕಾರ್ಯಕ್ರಮಗಳನ್ನು ೬೫೪ ರಿಂದ ೩೩೫ಕ್ಕೆ ಇಳಿಸಲಾಗಿದೆ.

## ೧೨. ಗ್ರಾಮಪಂಚಾಯತಿಗಳ ಹಣಕಾಸು ಸುಧಾರಣೆ :

೧೨.೧ ಪಂಚಾಯತಿರಾಜ್ಯ ಸಂಸ್ಥೆಗಳಲ್ಲಿ ಗ್ರಾಮ ಪಂಚಾಯತಿಗೆ ಮಾತ್ರ ತೆರಿಗೆ ವಿಧಿಸುವ ಅಧಿಕಾರವಿದೆ. ಪಂಚಾಯತಿ ತನ್ನ ಸ್ವಂತ ಆದಾಯವನ್ನು ಹೆಚ್ಚಿಸಬೇಕು. ಜನರಿಗೆ ಅತ್ಯುತ್ತಮ ಸೇವೆಯನ್ನು ಒದಗಿಸಬೇಕು ಎಂಬ ಉದ್ದೇಶದಿಂದ ಆಸ್ತಿ ತೆರಿಗೆ ಪರಿಷ್ಕರಣೆಗಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಿಂದ ಎಲ್ಲ ಗ್ರಾಮಪಂಚಾಯತಿಗಳಿಗೆ ಸಾಮಾನ್ಯ ಮಾರ್ಗಸೂಚಿ ನಿಯಮಗಳನ್ನು ಮೇ ೨೦೦೩ ರಲ್ಲಿ ಹೊರಡಿಸಲಾಯಿತು. ಪಾರದರ್ಶಕ ತೆರಿಗೆ ನಿರ್ಧಾರಣೆ ಪ್ರಕ್ರಿಯೆಯಲ್ಲಿ ಜನರು ಭಾಗವಹಿಸಲು ಅವಕಾಶ ನೀಡಲಾಗಿತ್ತು. ಆಸ್ತಿ ಪಟ್ಟಿಗಳನ್ನು ತಯಾರಿಸಿ ವೀಕ್ಷಣೆಗಾಗಿ ಅವುಗಳನ್ನು ಪ್ರಕಟಣಾ ಫಲಕದಲ್ಲಿ ಪ್ರಕಟಿಸಲಾಗಿತ್ತು. ಈ ಪ್ರಕ್ರಿಯೆಯಿಂದ ಶೇ.೩೦ ರಷ್ಟು ಹೆಚ್ಚಿನ ಸಂಖ್ಯೆಯ ಆಸ್ತಿಗಳನ್ನು ನೋಂದಾಯಿಸಿ ತೆರಿಗೆ ವ್ಯಾಪ್ತಿಗೆ ತರಲಾಯಿತು. ಗ್ರಾಮ ಪಂಚಾಯತಿಗಳ ಒಟ್ಟು ಆದಾಯವು ಪರಿಷ್ಕರಣೆ ಮೊದಲು ರೂ.೮೧ ಕೋಟಿಗಳಾಗಿದ್ದದ್ದು ಪರಿಷ್ಕರಣೆ ಬಳಿಕ ರೂ. ೧೯೮ ಕೋಟಿ ಆಗಿದೆ.

೧೨.೨ ಇಡೀ ಪ್ರಯೋಗವು ಭಾಗವಹಿಸುವಿಕೆ ಮತ್ತು ಸ್ವಯಂ ಪಾಲ್ಗೊಳ್ಳುವಿಕೆಯೊಂದಿಗೆ ನಡೆದಿದ್ದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಯಾವುದೇ ಒತ್ತಡ ತಂತ್ರಗಳನ್ನು ಹೇರಿಲ್ಲ. ಆದರೆ ತೆರಿಗೆ ಪರಿಷ್ಕರಣೆ ಪ್ರಕ್ರಿಯೆಯಲ್ಲಿ ಪಾರದರ್ಶಕತೆಗೆ ಹೆಚ್ಚಿನ ಒತ್ತು ನೀಡಲಾಗಿತ್ತು.

## ೧೩. ಗ್ರಾಮ ಪಂಚಾಯತಿಗಳ ವಿದ್ಯುಚ್ಛಕ್ತಿ ಬಿಲ್ಲುಗಳ ಬಾಕಿಯ ಇತ್ಯರ್ಥ :

೧೩.೧ ನೀರು ಪೂರೈಕೆ ಮತ್ತು ಬೀದಿ ದೀಪಗಳಿಗೆ ಬಳಸಿದ ವಿದ್ಯುಚ್ಛಕ್ತಿ ಬಿಲ್ಲುಗಳು ಗ್ರಾಮಪಂಚಾಯತಿಗಳ ವೆಚ್ಚದ ಅತಿ ದೊಡ್ಡ ಬಾಬ್ತಾಗಿ ಪರಿಣಮಿಸಿವೆ. ಸರ್ಕಾರದಿಂದ ಬರುವ ಅನುದಾನ, ತನ್ನ ಸ್ವಂತ ಆದಾಯದ ಹೆಚ್ಚಿನ ಪಾಲು ಈ ಬಿಲ್ಲುಗಳನ್ನು ಪಾವತಿಸುವುದಕ್ಕಾಗಿಯೇ ವಿನಿಯೋಗವಾಗುತ್ತಿರುವುದರಿಂದ ಉಳಿದ ಕಾರ್ಯಗಳನ್ನು ಕೈಗೊಳ್ಳಲು ಅನುದಾನ ಲಭ್ಯವಾಗುವುದಿಲ್ಲ. ಆದುದರಿಂದ ಗ್ರಾಮ ಪಂಚಾಯತಿಗಳು ವಿದ್ಯುಚ್ಛಕ್ತಿ ಬಿಲ್ಲುಗಳನ್ನು ಬಾಕಿ ಇಟ್ಟು ಉಳಿದ ಕೆಲಸಗಳನ್ನು ಮಾಡುತ್ತವೆ. ಇದರಿಂದ ಬಾಕಿ ಮೊತ್ತ ಹೆಚ್ಚುತ್ತಾ ಹೋಗುತ್ತದೆ. ಗ್ರಾಮ ಪಂಚಾಯತಿಗಳಿಗೆ ಎಸ್ಕಾಂಗಳು ನೀಡುವ ಬಿಲ್ಲುಗಳಲ್ಲಿಯೂ ಅಸಮರ್ಪಕತೆಯಿರುವುದು

ವಿಶ್ಲೇಷಣೆಯಿಂದ ತಿಳಿದುಬಂದಿದೆ. ಕಾರಣ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯು ಗ್ರಾಮ ಪಂಚಾಯತಿವಾರು ಬಿಲ್ಲುಗಳನ್ನು ಎಸ್ಕಾಂ ಹಾಗೂ ಪಂಚಾಯತಿ ಅಧಿಕಾರಿಗಳ ಸಮ್ಮುಖದಲ್ಲಿ ಮರುಹೊಂದಾಣಿಕೆ ಮಾಡುವ ಕ್ರಮ ಕೈಗೊಂಡಿದ್ದು ಈ ಮರುಹೊಂದಾಣಿಕೆಯಿಂದ ವಿದ್ಯುತ್ ಬಾಕಿ ಬಿಲ್ಲುಗಳ ಮೊತ್ತ ರೂ. ૩೨೨ ಕೋಟಿಗಳಿಂದ ರೂ. ೨೮೦ ಕೋಟಿಗಳಿಗೆ ಇಳಿದಿದೆ.

೧೩.೨ ಈ ಪ್ರಕ್ರಿಯೆಯಿಂದಾಗಿ ಬಿಲ್ ಮಾಡುವುದರಲ್ಲಿ ಇನ್ನೂ ಹಲವಾರು ವಿಷಯಗಳಲ್ಲಿ ಅಸಮರ್ಪಕತೆ ಇರುವುದು ಕಂಡುಬಂದಿದೆ. ಗ್ರಾಮ ಪಂಚಾಯತಿಗಳು ಬಿಲ್ಲು ಪಾವತಿ ಮಾಡುವಲ್ಲಿ ಜಾಗ್ರತೆ ವಹಿಸಲು ಹಾಗೂ ವಿದ್ಯುಚ್ಛಕ್ತಿಯನ್ನು ಮಿತವಾಗಿ ಬಳಸುವುದು ಮತ್ತು ಅವುಗಳ ಬಿಲ್ಲಿನ ಮೊತ್ತ ಕಡಿಮೆ ಮಾಡಲು ಅನುವಾಗುವಂತೆ ಗ್ರಾಮ ಪಂಚಾಯತಿ ಮತ್ತು ಬಿಲ್ ಪ್ರಾಧಿಕಾರಗಳಿಗೂ ಅನುಕೂಲವಾಗುವಂತೆ ವಿವರವಾದ ಕೈಪಿಡಿಯನ್ನು ಇಲಾಖೆಯು ತಯಾರಿಸಿದೆ.

## ೧೪. ಮಾಹಿತಿಯ ಹಕ್ಕನ್ನು ಕಾರ್ಯಾಚರಣೆಗೊಳಿಸುವುದು :

೧೪.೧ ಕೈಗೊಂಡ ಕಾಮಗಾರಿಗಳು, ಅಂದಾಜುಗಳು ಇತ್ಯಾದಿ ವಿವರಗಳೂ ಸೇರಿದಂತೆ ૩೪ ಕಾರ್ಯ ಕ್ಷೇತ್ರಗಳಿಗೆ ಸಂಬಂಧಿಸಿದ ಮಾಹಿತಿಯು ಜನರಿಗೆ ಲಭ್ಯವಾಗುವಂತೆ ಮಾಡಲು ಗ್ರಾಮ ಪಂಚಾಯತಿಗಳೂ ಸೇರಿದಂತೆ ಎಲ್ಲಾ ಪಂಚಾಯತಿ ರಾಜ್ಯಸಂಸ್ಥೆಗಳಿಗೆ ವಿವರವಾದ ಸೂಚನೆಗಳನ್ನು ಇಲಾಖೆಯು ಹೊರಡಿಸಿದೆ. ಎಲ್ಲ ಗ್ರಾಮ ಪಂಚಾಯತಿಗಳು ಅನುದಾನ ಮತ್ತು ಅಭಿವೃದ್ಧಿ ಕಾರ್ಯಗಳಿಗೆ ಭರಿಸಲಾದ ವೆಚ್ಚ ಹಾಗೂ ಗ್ರಾಮಪಂಚಾಯತಿ ಪ್ರದೇಶದಲ್ಲಿ ಇತರ ಸರ್ಕಾರಿ ಸಂಸ್ಥೆಗಳು ಕೈಗೊಂಡ ಕಾಮಗಾರಿಗಳು, ಬರಪರಿಹಾರ ಕಾಮಗಾರಿಗಳೂ ಸೇರಿದಂತೆ ಕೈಗೊಳ್ಳಲಾದ ಎಲ್ಲ ಕಾಮಗಾರಿಗಳ ಮಾಹಿತಿಯನ್ನು ಒಳಗೊಂಡ ಪ್ರದರ್ಶನ ಫಲಕಗಳನ್ನು ನಿರ್ವಹಿಸುವಂತೆ ನಿರ್ದೇಶನಗಳನ್ನು ಇಲಾಖೆಯಿಂದ ಹೊರಡಿಸಲಾಗಿದೆ.

## ೧೫. ಪಂಚಾಯತಿರಾಜ್ಯ ಸಂಸ್ಥೆಯ ಸದಸ್ಯರ ಸಾಮರ್ಥ್ಯ ನಿರ್ಮಾಣ :

೧೫.೧ ಗ್ರಾಮ ಪಂಚಾಯತಿ ಸದಸ್ಯರ ತರಬೇತಿಗೆ ಹೊಸ ಉತ್ತೇಜನ ನೀಡಲು ಮತ್ತು ಸದಸ್ಯರು ತಮ್ಮ ಕಾರ್ಯಗಳನ್ನು ಸಮರ್ಪಕವಾಗಿ ಕೈಗೊಳ್ಳುವಂತೆ ಅವರನ್ನು ಸಬಲೀಕರಣಗೊಳಿಸಲು ಕ್ರಮಕೈಗೊಂಡಿದೆ. ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆಯು ಮೈಸೂರಿನಲ್ಲಿ ಸ್ಥಾಪಿಸಲಾದ ಉಪಗ್ರಹ ಕೇಂದ್ರದ ಮೂಲಕ ಹೊಸ ಪರಸ್ಪರ ಸಂವಾದ -ಸಂವಹನ ತರಬೇತಿ ಕಾರ್ಯಕ್ರಮವನ್ನು ಅಭಿವೃದ್ಧಿಪಡಿಸಿ ೮೦,೦೦೦ ಗ್ರಾಮ ಪಂಚಾಯತಿ ಸದಸ್ಯರಿಗೆ ತರಬೇತಿಯನ್ನು ನೀಡಿದೆ.

೧೫.೨ ಚಲನಚಿತ್ರಗಳು, ಸ್ಥಳೀಯ ಅಂತರ ಸಂವಾದ ಮತ್ತು ಸಮುದಾಯ ಸಂಘಟನೆಯನ್ನು ಆಧರಿಸಿ ತರಬೇತಿಯು ರೂಪುಗೊಂಡಿದ್ದು ಪಂಚಾಯತಿ ರಾಜ್ಯ ಇತಿಹಾಸ ಮತ್ತು ರಚನೆ, ಗ್ರಾಮಸಭೆ, ಗ್ರಾಮ ಪಂಚಾಯತಿ ನಿಯಮಗಳು ಮತ್ತು ಪಂಚಾಯತಿ ಆಯವ್ಯಯ ಲೆಕ್ಕ ಪತ್ರ ಮತ್ತು ಜಮಾಬಂದಿ, ಶಿಕ್ಷಣ, ಆರೋಗ್ಯ, ಪೌಷ್ಟಿಕತೆ, ಶಿಶುಸಂರಕ್ಷಣೆ, ನೀರು, ನೈರ್ಮಲ್ಯ ಕುರಿತ ವಲಯವಾರು ವಿಚಾರಗಳು ಮತ್ತು ಸಾಮಾನ್ಯ ಆಸ್ತಿ ಹಕ್ಕುಗಳು, ಒಟ್ಟಾರೆ ಅಭಿವೃದ್ಧಿ ಮತ್ತು ಸ್ಥಳೀಯ ಯೋಜನೆ ರೂಪಿಸುವಿಕೆಯಲ್ಲಿ ಗ್ರಾಮ ಪಂಚಾಯತಿ ಪಾತ್ರ, ಮಾಹಿತಿ ಹಕ್ಕು ಮತ್ತು ಸ್ಥಳೀಯ ಕಂದಾಯ ಸಂಗ್ರಹಣೆ ಸೇರಿದಂತೆ ಸಾಮಾನ್ಯ ವಿಷಯಗಳ ಬಗೆಗಿನ ತರಬೇತಿಯನ್ನು ನೀಡಲಾಗಿದೆ.

## ೧೬. ಬೇಲೂರು ಘೋಷಣೆ : ವಿಕೇಂದ್ರೀಕರಣಕ್ಕೆ ಮತ್ತಷ್ಟು ಒತ್ತು :

೧೬.೧ ವಿಕೇಂದ್ರೀಕರಣಕ್ಕೆ ಹೆಚ್ಚು ಒತ್ತು ನೀಡುವ ಸಲುವಾಗಿ ಜನವರಿ ೨೦೦೪ರಲ್ಲಿ ಧಾರವಾಡ ತಾಲ್ಲೂಕಿನ ಬೇಲೂರು ಗ್ರಾಮದಲ್ಲಿ ಎಲ್ಲಾ ಪಂಚಾಯತಿ ರಾಜ್ಯ ಸಂಸ್ಥೆಗಳ ಸದಸ್ಯರ ಸಮಾವೇಶವನ್ನು ನಡೆಸಲಾಯಿತು. ಈ ಸಮಾವೇಶದಲ್ಲಿ ವಿಕೇಂದ್ರೀಕರಣವನ್ನು ಮುನ್ನಡೆಸುವ ದೃಷ್ಟಿಯಲ್ಲಿ ಹಲವಾರು ದೂರಗಾಮಿ ನಿರ್ಣಯಗಳನ್ನು ಕೈಗೊಳ್ಳಲಾಯಿತು. ಗ್ರಾಮ ಪಂಚಾಯತಿಯು ಅಭಿವೃದ್ಧಿಯ ಕೇಂದ್ರಬಿಂದುವಾಗಿದ್ದು, ಜನಸಾಮಾನ್ಯರಿಗೆ ಹತ್ತಿರದ ಸಂಸ್ಥೆಯಾಗಿರುವುದರಿಂದ ವಿಕೇಂದ್ರೀಕರಣವನ್ನು ಗ್ರಾಮ ಪಂಚಾಯತಿಯೆಡೆಗೆ

ಕೊಂಡೊಯ್ಯುವ ಸರ್ಕಾರದ ಘೋಷಣೆಗಳನ್ನು ಸಮಾವೇಶದಲ್ಲಿ ಪ್ರಕಟಿಸಿ ಅದಕ್ಕೆ ಅನುಮೋದನೆಯನ್ನು ಪಡೆಯಲಾಯಿತು. ಅಲ್ಲದೆ ಪಂಚಾಯತಿ ರಾಜ್ಯ ಸಂಸ್ಥೆಗಳು ಸಮಗ್ರತೆ ಮತ್ತು ಪಾರದರ್ಶಕತೆಯನ್ನು ಕಾಯ್ದುಕೊಂಡು ದಕ್ಷತೆಯಿಂದ ಕಾರ್ಯನಿರ್ವಹಿಸಿ ಉತ್ತಮ ಗುಣಮಟ್ಟದ ಸೇವೆಯನ್ನು ಜನರಿಗೆ ನೀಡುವುದಾಗಿಯೂ ಪಣತೊಟ್ಟವು.

### ೧೬.೨ ಸರ್ಕಾರದ ಘೋಷಣೆಗಳು :

೧. ಯಾವ ಕೆಲಸವನ್ನು ಯಾವ ಹಂತದಲ್ಲಿ ನಿರ್ವಹಿಸಬೇಕೋ ಆ ಹಂತದಲ್ಲೇ ನಿರ್ವಹಿಸಬೇಕು ಎಂಬ ತತ್ವದ ಪ್ರಕಾರ ಮೂರು ಹಂತದ ಪಂಚಾಯತಿರಾಜ್ಯ ಸಂಸ್ಥೆಗಳ ಕೆಲಸಗಳನ್ನು ಚಟುವಟಿಕೆ ನಕ್ಷೆ ಪ್ರಕಾರ ಕಾರ್ಯರೂಪಕ್ಕೆ ತರುವುದು. ಇದಕ್ಕೆ ಅನುಗುಣವಾಗಿ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಹಣಕಾಸು ಸಿಬ್ಬಂದಿ ಮತ್ತು ಜವಾಬ್ದಾರಿಗಳನ್ನು ವಹಿಸುವುದು.

೨. ಪ್ರಾದೇಶಿಕ ಅಸಮತೋಲನವನ್ನು ಸರಿಪಡಿಸುವ ಯೋಜನೆಗಳನ್ನು ರೂಪಿಸುವಲ್ಲಿ ಪಂಚಾಯತಿ ರಾಜ್ಯ ಮತ್ತು ನಗರ ಸ್ಥಳೀಯ ಸಂಸ್ಥೆಗಳನ್ನು ತೊಡಗಿಸಿಕೊಳ್ಳುವುದು.

೩. ಗ್ರಾಮ ಪಂಚಾಯತಿ ಮಟ್ಟದಲ್ಲಿ ಕೃಷಿ ಉತ್ಪನ್ನವನ್ನು ಹೆಚ್ಚಿಸುವುದು ಹಾಗೂ ಇತರೆ ಭೂ ಆಧಾರಿತ ಕಾರ್ಯಕ್ರಮಗಳನ್ನು ಕ್ರೋಢೀಕರಿಸುವುದು.

೪. "ಅಕ್ಷರ ದಾಸೋಹ" ಕಾರ್ಯಕ್ರಮವನ್ನು ಗ್ರಾಮ ಪಂಚಾಯತಿಗಳಿಗೆ ಮತ್ತು ನಗರ ಸ್ಥಳೀಯ ಸಂಸ್ಥೆಗಳಿಗೆ ವರ್ಗಾಯಿಸುವುದು.

೫. ಪ್ರಾಥಮಿಕ ಶಾಲೆಗಳು, ಗ್ರಾಮೀಣ ಗ್ರಂಥಾಲಯಗಳು, ವಯಸ್ಕರ ಶಿಕ್ಷಣ ಕೇಂದ್ರಗಳು, ಅಂಗನವಾಡಿಗಳು, ಎ.ಎನ್.ಎಂ. ಉಪಕೇಂದ್ರಗಳು ಮತ್ತು ನ್ಯಾಯ ಬೆಲೆ ಅಂಗಡಿಗಳನ್ನು ಗ್ರಾಮ ಪಂಚಾಯತಿಯ ಆಡಳಿತ ವ್ಯಾಪ್ತಿಗೆ ತರುವುದು.

೬. ಗ್ರಾಮ ಪಂಚಾಯತಿ ಆಡಳಿತ ವ್ಯವಸ್ಥೆಯನ್ನು ಬಲಗೊಳಿಸುವುದು ಮತ್ತು ಗ್ರಾಮ ಮಟ್ಟದ ಕಂದಾಯ ಸಿಬ್ಬಂದಿ ಮತ್ತು ಜವಾಬ್ದಾರಿಗಳನ್ನು ಗ್ರಾಮ ಪಂಚಾಯತಿ ಆಡಳಿತ ವ್ಯಾಪ್ತಿಗೆ ಒಳಪಡಿಸುವುದು.

೭. ಸ್ಥಳೀಯ ಸಂಸ್ಥೆಗಳು ತಮ್ಮ ಹೊಣೆಗಾರಿಕೆಯನ್ನು ಕ್ರಮಬದ್ಧವಾಗಿ ನಿರ್ವಹಿಸಿಕೊಂಡು ಹೋಗಲು ಲೋಕಾಯುಕ್ತರ ಅಧೀನದಲ್ಲಿ ಪ್ರತಿ ಜಿಲ್ಲೆಯಲ್ಲಿ ಓಂಬಡ್ಸಮನ್ ಸಂಸ್ಥೆಯನ್ನು ಸ್ಥಾಪಿಸುವುದು.

೮. ನಿರಂತರ ತರಬೇತಿ, ಶಿಕ್ಷಣ, ಸಂವಹನ ಕಾರ್ಯಕ್ರಮಗಳ ಮೂಲಕ ಪಂಚಾಯತಿ ರಾಜ್ಯ ಸದಸ್ಯರ ಸಾಮರ್ಥ್ಯವನ್ನು ಹೆಚ್ಚಿಸುವದರ ಜೊತೆಗೆ ಗ್ರಾಮ ಪಂಚಾಯತಿಗಳ ತಾಂತ್ರಿಕ ಮತ್ತು ಹಣಕಾಸು ನಿರ್ವಹಣಾ ಸಾಮರ್ಥ್ಯವನ್ನು ಬಲಗೊಳಿಸುವುದು.

೯. ಗ್ರಾಮ ಪಂಚಾಯತಿಗಳನ್ನು ಗಣಕೀಕರಣಗೊಳಿಸಿ ಇ-ಆಡಳಿತಕ್ಕೆ ಚಾಲನೆ ನೀಡುವುದು.

೧೦. ಸಹಕಾರಿ ಸಾಲ ವ್ಯವಸ್ಥೆಯನ್ನು ಬಲಗೊಳಿಸಲು ಪ್ರಾಥಮಿಕ ವ್ಯವಸಾಯ ಸಹಕಾರಿ ಸಂಘಕ್ಕೆ ಗ್ರಾಮ ಪಂಚಾಯತಿ ಸದಸ್ಯರೊಬ್ಬರನ್ನು ನಾಮ ನಿರ್ದೇಶನ ಮಾಡುವುದು.

### ೧೬.೩ ಪಂಚಾಯತಿ ರಾಜ್ಯ ಸಂಸ್ಥೆಗಳು :

೧. ಸಾರ್ವಜನಿಕ ಹಣವನ್ನು ಖರ್ಚುಮಾಡುವಲ್ಲಿ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಅತ್ಯುನ್ನತಮಟ್ಟದ ಸಮಗ್ರತೆ ಮತ್ತು ಪಾರದರ್ಶಕತೆಯನ್ನು ಕಾಯ್ದುಕೊಳ್ಳುವುದು.

೨. ಪ್ರತಿ ವರ್ಷ ಕನಿಷ್ಟ ಎರಡು ವಾರ್ಡ್ ಸಭೆಗಳನ್ನು ಮತ್ತು ಎರಡು ಗ್ರಾಮಸಭೆಗಳನ್ನು ನಡೆಸುವುದು.

೩. ಪ್ರತಿಯೊಂದು ಯೋಜನೆಯಡಿ ಅತ್ಯಂತ ಅರ್ಹ ಫಲಾನುಭವಿಗಳನ್ನು ವಾರ್ಡ್ ಮತ್ತು ಗ್ರಾಮಸಭೆಗಳಲ್ಲಿ ಆಯ್ಕೆ ಮಾಡುವುದು.

೪. ತೆರಿಗೆ ಸುಧಾರಣೆಗಳು ಮತ್ತು ಹೆಚ್ಚಿನ ಸಂಗ್ರಹಣಾ ಸಾಮರ್ಥ್ಯದ ಮೂಲಕ ಪಂಚಾಯತಿ ರಾಜ್ಯ ಸಂಸ್ಥೆಗಳ ಸಂಪನ್ಮೂಲಗಳನ್ನು ಹೆಚ್ಚಿಸುವುದು ಮತ್ತು ಎಲ್ಲ ವಸತಿ ಪ್ರದೇಶಗಳನ್ನು ಗ್ರಾಮ ಠಾಣಾ ವ್ಯಾಪ್ತಿಗೆ ಸೇರಿಸುವುದು.

೫. ಆದಾಯ ತರುವ ಸ್ವತ್ತುಗಳನ್ನು ಸ್ಥಾಪಿಸುವುದು ಮತ್ತು ನಿರ್ವಹಿಸುವುದು.

೬. ಶ್ರದ್ದೆ ಮತ್ತು ನಿಷ್ಠೆಯಿಂದ ಜನರ ಆಕಾಂಕ್ಷೆಗಳನ್ನು ಪೂರೈಸುವುದು.

## ೧೬.೪ ಬೇಲೂರು ಘೋಷಣೆ ಅನುಷ್ಠಾನ :

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಬೇಲೂರು ಘೋಷಣೆಯನ್ನು ಕಾರ್ಯಾಚರಣೆಗೊಳಿಸಲು ತನಗೆ ಸಂಬಂಧಿಸಿದ ಎಲ್ಲ ಕಾರ್ಯಕ್ರಮಗಳ ಬಗ್ಗೆ ಕ್ರಮ ಕೈಗೊಂಡಿದೆ. ಪರಿಣಾಮವಾಗಿ, ವಸತಿ ಕಾರ್ಯಕ್ರಮಗಳ ಅನುಷ್ಠಾನವನ್ನು ಗ್ರಾಮ ಪಂಚಾಯತಿಗಳಿಗೆ ವರ್ಗಾಯಿಸಲಾಗಿದೆ. ಬೇಲೂರು ಘೋಷಣೆಗೆ ಅನುಸಾರವಾಗಿ ಹಾಗೂ ಭಾರತ ಸರ್ಕಾರದ ನಿರ್ದೇಶನಗಳಿಗೆ ಅನುಗುಣವಾಗಿ ಕೊಳವೆ ಬಾವಿಗಳ ನಿರ್ವಹಣೆಯನ್ನೂ ಗ್ರಾಮ ಪಂಚಾಯತಿಗಳಿಗೆ ವರ್ಗಾಯಿಸಲಾಗಿದೆ. ಹೆಚ್ಚುವರಿಯಾಗಿ, ಜಲ ನಿರ್ಮಲ ಯೋಜನೆ ಮತ್ತು ಸ್ವಜಲಧಾರಾ ಯೋಜನೆಯಲ್ಲಿ ಮಾಡಲಾಗಿರುವಂತೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ನೀರು ಪೂರೈಕೆ ಯೋಜನೆಗಳಲ್ಲಿ ಬರುವ ಬಂಡವಾಳ ವೆಚ್ಚವನ್ನೂ ಗ್ರಾಮ ಪಂಚಾಯತಿಗಳಿಗೇ ವರ್ಗಾಯಿಸಲಾಗಿದೆ. ೪೦ ಹೆಕ್ಟೇರ್‌ಗಳಿಗಿಂತ ಕಡಿಮೆ ಅಚ್ಚುಕಟ್ಟು ಪ್ರದೇಶವಿರುವ ಸಣ್ಣ ನೀರಾವರಿ ಕೆರೆಗಳ ನಿರ್ವಹಣೆಯನ್ನೂ ಗ್ರಾಮ ಪಂಚಾಯತಿಗಳಿಗೆ ವರ್ಗಾವಣೆ ಮಾಡಲಾಗಿದೆ.

## ೧೭. ಭವಿಷ್ಯದಲ್ಲಿ ತೆಗೆದುಕೊಳ್ಳಬೇಕಾದ ಸುಧಾರಣೆಗಳು :

೧೭.೧ ಜೀವನ ಶೈಲಿಯಲ್ಲಿ ಬದಲಾವಣೆ, ಹೊಸ ಹೊಸ ತಂತ್ರಜ್ಞಾನಗಳ ಆವಿಷ್ಕಾರಗಳ ಮಧ್ಯೆ ಆಡಳಿತ ವ್ಯವಸ್ಥೆ ಹಾಗೂ ಅಭಿವೃದ್ಧಿ ಆಯಾಮಗಳಲ್ಲಿ ಆಯಾ ಪರಿಸ್ಥಿತಿಗೆ ಅನುಗುಣವಾಗಿ ಬದಲಾವಣೆಗಳನ್ನು ತರುತ್ತಾ ಹೋಗಬೇಕಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಮಾಹಿತಿ ತಂತ್ರಜ್ಞಾನದ ಬಳಕೆ ಹೆಚ್ಚಾಗಿದ್ದು ಈ ವ್ಯವಸ್ಥೆಯಲ್ಲಿಯೂ ಅದನ್ನು ಅಳವಡಿಸಬೇಕಾಗುತ್ತದೆ. ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯು ಈ ಹಿಂದೆ "ಮೂರನೇ ತಲೆಮಾರಿನ ಸುಧಾರಣೆಗಳು" ಎಂದು ಹೆಸರಿಸಿದ ಸುಧಾರಣೆಗಳನ್ನು ತರುವಲ್ಲಿ ದಿಟ್ಟ ಹೆಜ್ಜೆಯನ್ನಿಟ್ಟು ಮುಂದೆ ಸಾಗುತ್ತಿದೆ. ಆದಾಗ್ಯೂ ಇನ್ನೂ ಅನೇಕ ಸುಧಾರಣೆಗಳನ್ನು ಅದು ಕೈಗೊಳ್ಳಬೇಕಾಗಿದ್ದು, ಆ ದಿಶೆಯಲ್ಲಿ ಮುನ್ನಡೆಯಬೇಕಾಗಿದೆ.

೧೭.೨ ಸಂಯುಕ್ತ ಪ್ರಗತಿಪರ ಒಕ್ಕೂಟದ ಸರ್ಕಾರವು ಹೊಸದಾಗಿ ಸ್ಥಾಪಿತವಾದ ಕೆಲವೇ ದಿನಗಳಲ್ಲಿ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿರಾಜ್ಯ ವಿಷಯಗಳ ಕುರಿತು ಜೂನ್ ಕೊನೆಯ ವಾರದಲ್ಲಿ ದೆಹಲಿಯಲ್ಲಿ ನಡೆದ ಎಲ್ಲಾ ರಾಜ್ಯಗಳ ಮುಖ್ಯ ಮಂತ್ರಿಗಳ, ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರ ಸಮ್ಮೇಳನವನ್ನು ಉದ್ಘಾಟಿಸಿ ಮಾತನಾಡಿದ ಪ್ರಧಾನ ಮಂತ್ರಿಗಳು ಪ್ರಜಾಪ್ರಭುತ್ವದ ಪ್ರಕ್ರಿಯೆಯನ್ನು ಇನ್ನಷ್ಟು ಬಲಗೊಳಿಸಿ ಗ್ರಾಮೀಣ ಆದಾಯವನ್ನು ಹೆಚ್ಚಿಸುವ, ಬಡತನವನ್ನು ಹೋಗಲಾಡಿಸುವ, ಸ್ಥಳೀಯ ಯೋಜನೆಗಳನ್ನು ರೂಪಿಸುವ ಕುರಿತು ಸಲಹೆ ನೀಡಿದ್ದಾರೆ. ಗ್ರಾಮೀಣ ಜನತೆಗೆ ಈಗಿರುವ ಜೀವನ ಮಟ್ಟಕ್ಕಿಂತ ಉತ್ತಮವಾದ ಮತ್ತು ಅವರಿಗೆ ಸೂಕ್ತವೆನಿಸುವ ಪರಿಸ್ಥಿತಿಯನ್ನು ನಿರ್ಮಾಣ ಮಾಡುವ ಕ್ರಮ ಕೈಗೊಳ್ಳಬೇಕೆಂದು ಸೂಚಿಸಿದ್ದಾರೆ.

೧೭.೩ ಈ ಹಿನ್ನೆಲೆಯಲ್ಲಿ ಹಲವಾರು ಸುಧಾರಣೆಗಳನ್ನು ಕೈಗೊಳ್ಳಬೇಕಾಗಿದ್ದು ಅವುಗಳ ವಿವರಗಳನ್ನು ಕೆಳಗೆ ಕೊಡಲಾಗಿದೆ.

- ಗ್ರಾಮ ಪಂಚಾಯತಿಗಳಿಗೆ ಹೆಚ್ಚಿನ ಪ್ರಕಾರ್ಯಗಳನ್ನು ಮತ್ತು ಜವಾಬ್ದಾರಿಗಳನ್ನು ವಹಿಸಲಾಗುತ್ತಿದ್ದು ಅವುಗಳ ಸಮರ್ಪಕ ನಿರ್ವಹಣೆಗಾಗಿ ಆಡಳಿತ ವ್ಯವಸ್ಥೆಯನ್ನು ಬಲಗೊಳಿಸುವುದು.
- ಕಾರ್ಯನಿರ್ವಹಣೆಯಲ್ಲಿ ಸುಧಾರಣೆ ತರುವುದಕ್ಕಾಗಿ, ಸಿಬ್ಬಂದಿ ಸಾಮರ್ಥ್ಯವನ್ನು ಬಲಗೊಳಿಸುವುದಕ್ಕಾಗಿ ಪಂಚಾಯತಿ ರಾಜ್ಯ ಸಂಸ್ಥೆಗಳ ಅಧಿಕಾರಿಗಳು, ಸಿಬ್ಬಂದಿ ಮತ್ತು ತಾಂತ್ರಿಕ ವರ್ಗದವರಿಗೆ ವ್ಯಾಪಕ ತರಬೇತಿಯನ್ನು ನೀಡುವುದು.
- ಮಾಹಿತಿ ತಂತ್ರಜ್ಞಾನ ಲಾಭವನ್ನು ಪಡೆದು ಉತ್ತಮ ಗುಣಮಟ್ಟದ ಸೇವೆಯನ್ನು ನೀಡುವುದಕ್ಕಾಗಿ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳನ್ನು ಕಂಪ್ಯೂಟರೀಕರಣಗೊಳಿಸುವುದು. ವಿದ್ಯುನ್ಮಾನ ಆಡಳಿತಕ್ಕೆ ಒತ್ತು ನೀಡುವುದು
- ನೀರು ಪೂರೈಕೆ, ಬೀದಿ ದೀಪಗಳ ವಿದ್ಯುಚ್ಛಕ್ತಿ ಬಿಲ್ಲುಗಳ ಹೊರೆ ಗ್ರಾಮಪಂಚಾಯತಿಗಳಿಗೆ ಭಾರವಾಗಿದ್ದು ಇದರಿಂದ ಅಭಿವೃದ್ಧಿ ಕಾರ್ಯಗಳಿಗೆ ಅನುದಾನವೇ ಉಳಿಯುತ್ತಿಲ್ಲ. ಸ್ವಂತ ಆದಾಯ ಹಾಗೂ ಸರ್ಕಾರಿ ಅನುದಾನವು ಈ ಬಿಲ್ಲುಗಳ ಪಾವತಿಗೆ ವ್ಯಯವಾಗುತ್ತಿದೆ. ಅಸಮರ್ಪಕ ನಿರ್ವಹಣೆಯನ್ನು ಸರಿಪಡಿಸುವ ಹಾಗೂ ಎಲ್ಲ ಸ್ಥಾವರಗಳಿಗೆ ಮೀಟರ್ ಅಳವಡಿಸುವ ಕ್ರಮ ಕೈಗೊಳ್ಳುವುದು ಹಾಗೂ ಸರ್ಕಾರದಿಂದ ಗ್ರಾಮ ಪಂಚಾಯತಿಗಳಿಗೆ ರಿಯಾಯತಿ ದರದಲ್ಲಿ ವಿದ್ಯುಚ್ಛಕ್ತಿ ದರಗಳನ್ನು ನಿಗದಿಪಡಿಸುವುದು.

- ಪಂಚಾಯತಿರಾಜ್ಯ ಸಂಸ್ಥೆಗಳಿಗೆ ಸಂವಿಧಾನಿಕವಾಗಿ ಹಾಗೂ ಕಾನೂನುಬದ್ಧವಾಗಿ ೨೯ ವಿಷಯಗಳನ್ನು ವಹಿಸಲಾಗಿದೆ. ಆದಾಗ್ಯೂ ರಾಜ್ಯಮಟ್ಟದಲ್ಲಿ ವಿವಿಧ ಇಲಾಖೆಗಳು ಈ ವಿಷಯಗಳಿಗೆ ಸಂಬಂಧಪಟ್ಟ ಕಾರ್ಯಕ್ರಮಗಳನ್ನು ಸಮಾನಾಂತರ ವ್ಯವಸ್ಥೆಯ ಮೂಲಕ ಜಾರಿಗೊಳಿಸುತ್ತಿವೆ. ಯಾವ ಹಂತದ ಕೆಲಸ ಕಾರ್ಯಗಳನ್ನು ಯಾವ ಹಂತದಲ್ಲಿ ಮಾಡಬೇಕೋ ಅದೇ ಹಂತದಲ್ಲಿ ಮಾಡಲು ಅನುಕೂಲವಾಗುವಂತೆ ಚಟುವಟಿಕೆ ನಕ್ಷೆಯಲ್ಲಿ ಕಾರ್ಯಗಳನ್ನು ವಿಂಗಡಿಸಿ ಹಂಚಿಕೆ ಮಾಡಿದಂತೆ ಇಂತಹ ಎಲ್ಲಾ ಕಾರ್ಯಕ್ರಮಗಳನ್ನು ಅನುದಾನದೊಂದಿಗೆ ಸಂಬಂಧಪಟ್ಟ ಪಂಚಾಯತಿರಾಜ್ಯ ಸಂಸ್ಥೆಗಳಿಗೆ ವರ್ಗಾಯಿಸುವುದು.
- ಪಂಚಾಯತಿ ರಾಜ್ಯ ಸಂಸ್ಥೆಗಳಿಗೆ ಈಗ ಒದಗಿಸುತ್ತಿರುವ ಅನುದಾನ ಮುಂದುವರಿದ ಕಾರ್ಯಕ್ರಮಗಳಿಗೆ ಸಾಕಾಗುವುದರಿಂದ ಬೇಡಿಕೆ ಹಾಗೂ ಅವಶ್ಯಕತೆಗೆ ಅನುಗುಣವಾಗಿ ಬೇಕಾದ ಕಾರ್ಯಕ್ರಮಗಳಿಗೆ ಹಂಚಿಕೆ ಮಾಡಲು ಸಾಧ್ಯವಾಗುತ್ತಿಲ್ಲ. ಈಗ ಒದಗಿಸುವ ಅನುದಾನಕ್ಕೆ ಹೆಚ್ಚುವರಿಯಾಗಿ ಮುಕ್ತ ಅನುದಾನವನ್ನು ಒದಗಿಸುವ ಕ್ರಮ ಕೈಗೊಳ್ಳುವುದು.
- ಡಾ. ಡಿ.ಎಂ. ನಂಜುಂಡಪ್ಪ ಅವರ ಅಧ್ಯಕ್ಷತೆಯ ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಮಟ್ಟದ ಸಮಿತಿಯ ವರದಿಯ ಪ್ರಕಾರ ೧೧೪ ತಾಲ್ಲೂಕುಗಳನ್ನು ಹಿಂದುಳಿದ ತಾಲ್ಲೂಕುಗಳನ್ನಾಗಿ ವರ್ಗೀಕರಿಸಿದ್ದು ಅದರಲ್ಲಿ ೩೯ ಅತ್ಯಂತ ಹಿಂದುಳಿದ ಹಾಗೂ ೪೫ ಅತಿ ಹಿಂದುಳಿದ ತಾಲ್ಲೂಕುಗಳಾಗಿ ವರ್ಗೀಕರಿಸಲಾಗಿದೆ. ಹಿಂದುಳಿದ ತಾಲ್ಲೂಕುಗಳ ಅಭಿವೃದ್ಧಿಯ ಮಟ್ಟವನ್ನು ರಾಜ್ಯ ಮಟ್ಟಕ್ಕೆ ತರಬೇಕಾದಲ್ಲಿ ಸಮಿತಿಯು ನಿರ್ಧರಿಸಿದ ತಾಲ್ಲೂಕುವಾರು ಸಂಯುಕ್ತ ಅಭಿವೃದ್ಧಿ ವಿಲೋಮಾನುಪಾತದಲ್ಲಿ ತಾಲ್ಲೂಕುಗಳಿಗೆ ಅನುದಾನದ ಹಂಚಿಕೆಯನ್ನು ಮಾಡುವುದು. ಈಗಿರುವ ಜಿಲ್ಲಾವಾರು ಹಂಚಿಕೆಯನ್ನು ಕೈಬಿಡಬೇಕು.
- ಇನ್ನು ಮುಂದೆ ಯಾವುದೇ ವಲಯದಡಿ ಹೊಸ ಕಾರ್ಯಕ್ರಮಗಳನ್ನು ಹಮ್ಮಿಕೊಂಡಾಗ ಮೇಲಿನ ವರದಿಯಲ್ಲಿನ ಸೂಚ್ಯಂಕಗಳನ್ನು ಆಧಾರವಾಗಿಟ್ಟುಕೊಂಡು ತಾಲ್ಲೂಕುವಾರು ಹಂಚಿಕೆಯನ್ನು ಕೈಗೊಳ್ಳಬೇಕು.
- ಸ್ವಸಹಾಯ ಗುಂಪುಗಳು, ಸ್ವಯಂ ಸೇವಾ ಸಂಸ್ಥೆಗಳು, ಮಾಜಿ ಯೋಧರು ಇತ್ಯಾದಿ ಸಂಘ ಸಂಸ್ಥೆಗಳ ಸೇವೆಯನ್ನು ಗ್ರಾಮೀಣ ಅಭಿವೃದ್ಧಿಗಾಗಿ ಉಪಯೋಗಿಸಿ ಗ್ರಾಮೀಣ ಪುನರ್‌ರಚನೆಯನ್ನು ಕೈಗೊಳ್ಳುವುದು. ಬಡತನ ನಿರ್ಮೂಲನೆ, ಗ್ರಾಮೀಣ ಉದ್ಯೋಗ ಹಾಗೂ ಉತ್ಪಾದನೆಗೆ ಹೆಚ್ಚಿನ ಆದ್ಯತೆಯನ್ನು ನೀಡುವುದು.
- ಸ್ಥಳೀಯವಾಗಿ ವಿದ್ಯುತ್ ಉತ್ಪಾದಿಸುವುದು ಹಾಗೂ ವಿತರಣೆಯ ಕಾರ್ಯವನ್ನು ಗ್ರಾಮ ಪಂಚಾಯತಿಗಳಿಗೆ ವಹಿಸುವುದು.
- ಜಿಲ್ಲಾ ಅಭಿವೃದ್ಧಿ ಮುನ್ನೋಟ ಯೋಜನೆಯನ್ನು ಜಿಲ್ಲಾ ಯೋಜನಾ ಸಮಿತಿಗಳ ಮಾರ್ಗದರ್ಶನದಲ್ಲಿ ರೂಪಿಸಿ ಅನುಷ್ಠಾನಗೊಳಿಸುವುದು. ವಾರ್ಡ್‌ಸಭೆ, ಗ್ರಾಮಸಭೆಗಳ ಮೂಲಕ ಯೋಜನೆ ತಯಾರಿಕೆಯನ್ನು ಕೈಗೊಳ್ಳುವುದು. ಸ್ಥಳೀಯ ಸಮಸ್ಯೆಗಳಿಗೆ ಪರಿಹಾರಗಳನ್ನು ಹಾಗೂ ಅಭಿವೃದ್ಧಿ ವಿಷಯಗಳಲ್ಲಿ ಇರುವ ಅಂತರಗಳನ್ನು ತುಂಬಲು ಈ ಯೋಜನೆಯಲ್ಲಿ ಅವಕಾಶ ಕಲ್ಪಿಸುವುದು. ಮುನ್ನೋಟ ಯೋಜನೆಗೆ ಅನುಗುಣವಾಗಿ ಸ್ಥಳೀಯ ಸಂಸ್ಥೆಗಳ ಪಂಚವಾರ್ಷಿಕ ಹಾಗೂ ವಾರ್ಷಿಕ ಯೋಜನೆಗಳನ್ನು ಜಿಲ್ಲಾ ಯೋಜನಾ ಸಮಿತಿಗಳ ಮಾರ್ಗದರ್ಶನದಲ್ಲಿ ರೂಪಿಸಿ ಅನುಷ್ಠಾನಗೊಳಿಸುವುದು.
- ಸೌಲಭ್ಯ ವಂಚಿತ ಜನರಿಗೆ ಅಭಿವೃದ್ಧಿಯ ಫಲಗಳು ಸರಿಯಾಗಿ ಮುಟ್ಟುತ್ತಿಲ್ಲವೆಂಬ ದೂರುಗಳಿವೆ. ಬಡತನವನ್ನು ಆದಾಯದ ಮೂಲಗಳಿಂದ ಅಳತೆ ಮಾಡುವ ಬದಲಿಗೆ ಅವರ ಜೀವನ ಶೈಲಿ, ಪರಿಸರ ಸೌಲಭ್ಯಗಳ ಕೊರತೆಯ ಆಧಾರದ ಮೇಲೆ ಕುಟುಂಬಗಳ ಸಮೀಕ್ಷೆ ಮಾಡುವುದು. ಈ ಪಟ್ಟಿಯಿಂದ ಬಡತನದ ಸೂಚಿಗಳಲ್ಲಿ ಅತಿ ಹೆಚ್ಚು ಅಂಶಗಳಿರುವ ನಿರ್ಗತಿಕ ಕುಟುಂಬಗಳಿಂದ ಪ್ರಾರಂಭಿಸಿ ಕಡಿಮೆ ಅಂಶಗಳನ್ನು ಹೊಂದಿರುವ ಕುಟುಂಬಗಳನ್ನು ಮೇಲೆತ್ತುವ **ಬಡತನ ನಿವಾರಣಾ ಉಪಯೋಜನೆಯನ್ನು** ತಯಾರಿಸುವುದು. ಇದಕ್ಕಾಗಿ ಅವರನ್ನು ಸ್ವಸಹಾಯ ಗುಂಪುಗಳಾಗಿ ಸಂಘಟಿಸಿ ರಾಜ್ಯ ಮತ್ತು ಕೇಂದ್ರ ಸರ್ಕಾರದ ಕಾರ್ಯಕ್ರಮಗಳು, ಮಂಡಳಿ, ಕಾರ್ಪೋರೇಶನ್‌ಗಳು ಇತ್ಯಾದಿಗಳ ಮೂಲಕ ಕಾರ್ಯಗತಗೊಳಿಸುವ ಕಾರ್ಯಕ್ರಮಗಳು ಪರಿಶಿಷ್ಟ ಜಾತಿಯವರಿಗಾಗಿ ವಿಶೇಷ ಘಟಕ ಯೋಜನೆ, ಪರಿಶಿಷ್ಟ ಪಂಗಡದವರಿಗೆ ಗಿರಿಜನ ಉಪಯೋಜನೆ, ಹಿಂದುಳಿದ ವರ್ಗದವರಿಗಾಗಿ ಇರುವ ಕಾರ್ಯಕ್ರಮಗಳ ಅನುದಾನವನ್ನು ಕ್ರೋಢೀಕರಿಸಿ ಉಪಯೋಜನೆಗೆ ಬಳಸುವುದು. ಒಂದು ಕುಟುಂಬವನ್ನು ಬಡತನದಿಂದ ಮೇಲೆ ತರಲು ಬೇಕಾಗುವ ಎಲ್ಲ ಸಹಾಯವನ್ನು ನೀಡುವುದು.
- ವಾರ್ಡ್ ಸಭೆ ಹಾಗೂ ಗ್ರಾಮಸಭೆಗಳನ್ನು ಪಂಚಾಯತಿ ರಾಜ್ಯ ಸಂಸ್ಥೆಗಳ ಕಾವಲುಪಡೆಯಾಗಿ ಕೆಲಸ ಮಾಡುವಂತೆ ಅವುಗಳನ್ನು ಇನ್ನಷ್ಟು ಬಲಪಡಿಸುವುದು. ಅಧಿಕಾರಿಗಳು ಮತ್ತು ಅಧಿಕಾರೇತರರು ಈ ಸಭೆಗೆ ಹೊಣೆಗಾರರಾಗಿರುವಂತೆ ಮಾಡುವುದು. ಎಲ್ಲ ನಿರ್ಣಯಗಳು ಪಾರದರ್ಶಕವಾಗಿರುವಂತೆ ನೋಡಿಕೊಳ್ಳುವುದು.

- ವಿಕೇಂದ್ರೀಕರಣ ಮುನ್ನಡೆಯ ಪ್ರಕ್ರಿಯೆಯಲ್ಲಿ ಹೆಚ್ಚಿನ ಪ್ರಕಾರ್ಯಗಳನ್ನು ಕೆಳಮಟ್ಟದ ಸಂಸ್ಥೆಗಳಿಗೆ ವಹಿಸಲಾಗುತ್ತಿದೆ. ತಾಲ್ಲೂಕು ಹಾಗೂ ಕೆಳಮಟ್ಟದಲ್ಲಿ ಯೋಜನಾ ಉಸ್ತುವಾರಿ ಹಾಗೂ ಮೌಲ್ಯಮಾಪನ ಘಟಕಗಳು ಅಸ್ತಿತ್ವದಲ್ಲಿಲ್ಲ. ಇದರಿಂದ ಕಾರ್ಯಕ್ರಮಗಳ ಬಗ್ಗೆ ತಿಳುವಳಿಕೆಯನ್ನು ನೀಡುವ, ಅನುಷ್ಠಾನದಲ್ಲಿ ನ್ಯೂನತೆಗಳನ್ನು ಸರಿಪಡಿಸುವ ಕೆಲಸ ಸಮರ್ಪಕವಾಗಿ ನಡೆಯುತ್ತಿಲ್ಲ. ತಾಲ್ಲೂಕು ಪಂಚಾಯತಿ ಹಾಗೂ ಗ್ರಾಮಪಂಚಾಯತಿಗಳಿಗೆ ಮಾರ್ಗದರ್ಶನ ನೀಡುವ ಯೋಜನಾ ಕಾರ್ಯಕ್ರಮಗಳ ಉಸ್ತುವಾರಿಯನ್ನು ಕೈಗೊಳ್ಳುವ ಸಲುವಾಗಿ ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕಾ ಯೋಜನಾ ಘಟಕವನ್ನು ಸ್ಥಾಪಿಸುವುದು.
- ಜಿಲ್ಲಾ ಪಂಚಾಯತಿ ಹಾಗೂ ತಾಲ್ಲೂಕು ಪಂಚಾಯತಿಗಳಿಗೆ ತೆರಿಗೆ ವಿಧಿಸುವ ಅಧಿಕಾರಗಳಿಲ್ಲ. ಅವುಗಳಿಗೆ ರಾಜ್ಯದ ತೆರಿಗೆಯ ಯಾವುದೇ ಪಾಲನ್ನು ಒದಗಿಸುತ್ತಿಲ್ಲ. ಈ ಸಂಸ್ಥೆಗಳಿಗೆ ಮುಕ್ತ ಅನುದಾನವನ್ನು ಒದಗಸಲು ತೆರಿಗೆ ವಿಧಿಸುವ ಅಧಿಕಾರವನ್ನು ನೀಡಬೇಕು ಅಥವಾ ರಾಜ್ಯದ ತೆರಿಗೆಯ ಒಂದು ಭಾಗವಾಗಿ ಮುಕ್ತ ಅನುದಾನವನ್ನು ಒದಗಿಸಬೇಕು.
- ಗ್ರಾಮ ಪಂಚಾಯತಿಗಳು ತೆರಿಗೆ ಸಂಗ್ರಹಣೆಯನ್ನು ಹೆಚ್ಚಸಲು ಪ್ರೋತ್ಸಾಹ ನೀಡಲು ಅವುಗಳಿಗೆ ಪ್ರೋತ್ಸಾಹಧನ ಒದಗಿಸುವ ಕ್ರಮವನ್ನು ಕೈಗೊಳ್ಳಬೇಕು.
- ಪಂಚಾಯತಿರಾಜ್ಯ ಸಂಸ್ಥೆಗಳು ತೆರಿಗೆಯೇತರ ಆದಾಯದ ಬಾಬುಗಳನ್ನು ಗುರುತಿಸಿ ವಿವಿಧ ವಲಯಗಳಲ್ಲಿ ಸ್ವತ್ತುಗಳನ್ನು ನಿರ್ಮಿಸಿ ಆದಾಯವನ್ನು ಹೆಚ್ಚಿಸಿಕೊಳ್ಳುವ ಕ್ರಮ ಕೈಗೊಳ್ಳಬೇಕು. ಮೀನುಗಾರಿಕೆ, ಅರಣ್ಯ ಇತ್ಯಾದಿ ವಲಯಗಳಲ್ಲಿ ಆದಾಯವನ್ನು ಹೆಚ್ಚಿಸಿಕೊಳ್ಳಬೇಕು.
- ಪ್ರತಿಯೊಂದು ಕಾರ್ಯಕ್ರಮದಲ್ಲಿ ಸಮುದಾಯ ವಂತಿಗೆಯನ್ನು ಸಂಗ್ರಹಿಸಿ ಯೋಜನಾ ವೆಚ್ಚದ ಬಹುಪಾಲನ್ನು ಸ್ಥಳೀಯವಾಗಿ ಭರಿಸಿ ಹೆಚ್ಚಿನ ಕಾರ್ಯಗಳನ್ನು ಅನುಷ್ಠಾನಗೊಳಿಸಬೇಕು.

## ೧೮. ಉಪಸಂಹಾರ :

೧೮.೧ ಗ್ರಾಮೀಣ ಅಭಿವೃದ್ಧಿಯ ಪ್ರಕ್ರಿಯೆಗಳು ನಿರಂತರವಾಗಿ ಮುಂದುವರೆಯುತ್ತಲೇ ಹೋಗಬೇಕು. ಪ್ರಾದೇಶಿಕ ಸಮತೋಲನವನ್ನು ಕಾಯ್ದುಕೊಳ್ಳಲು ಹೆಚ್ಚು ಹೆಚ್ಚು ಮುಕ್ತ ಅನುದಾನವನ್ನು ಪಂಚಾಯತಿ ರಾಜ್ಯ ಸಂಸ್ಥೆಗಳಿಗೆ ಪ್ರಾದೇಶಿಕ ಅಸಮತೋಲನ ಸಮಿತಿಯ ವರದಿಯಲ್ಲಿ ಸೂಚಿಸಿದ ಆಧಾರದ ಮೇಲೆ ಒದಗಿಸಬೇಕು. ತಾಂತ್ರಿಕ ಯುಗದಲ್ಲಿ ಬದಲಾಗುತ್ತಿರುವ ಸ್ಥಿತಿಗಳಿಗೆ ಅನುಗುಣವಾಗಿ ವಿಕೇಂದ್ರೀಕರಣ ಪ್ರಕ್ರಿಯೆಯನ್ನು ಮುನ್ನಡೆಸಿಕೊಂಡು ಹೋಗಬೇಕು. ಸಮರ್ಪಕ ಸಂಪನ್ಮೂಲ ಬಳಕೆಗೆ, ಸಮಗ್ರ ಗ್ರಾಮೀಣ ಅಭಿವೃದ್ಧಿಗೆ ಹೆಚ್ಚಿನ ಆದ್ಯತೆಯನ್ನು ನೀಡಬೇಕು. ಗ್ರಾಮಗಳು, ನಗರ ಜನಜೀವನ ಮಟ್ಟವನ್ನು ಹೊಂದುವಲ್ಲಿ ಬೇಕಾದ ಉತ್ತಮ ಗುಣಮಟ್ಟದ ಸವಲತ್ತುಗಳನ್ನು, ಸೇವೆಗಳನ್ನು ಒದಗಿಸುವ ಕ್ರಮ ಜರುಗಿಸಬೇಕು.

೧೮.೨ ಪಂಚಾಯತಿ ರಾಜ್ಯ ಸಂಸ್ಥೆಗಳಿಗೆ ಆಡಳಿತ, ರಾಜಕೀಯ ಹಾಗೂ ಹಣಕಾಸು ವಿಷಯಗಳಲ್ಲಿ ಇನ್ನಷ್ಟು ಅಧಿಕಾರವನ್ನು ವಿಕೇಂದ್ರೀಕರಿಸಿ ಸ್ಥಳೀಯವಾಗಿಯೇ ಯೋಜನೆಗಳನ್ನು ತಯಾರಿಸಿ ಸಮತೋಲನವುಳ್ಳ ಸಂಪೂರ್ಣ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸಲು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯು ನಿರ್ವಹಿಸುವ ತನ್ನ ಪಾತ್ರವನ್ನು ಪರಿಣಾಮಕಾರಿಯಾಗಿ ಮುಂದುವರೆಸಿಕೊಂಡು ಹೋಗಬೇಕು. ಈ ಸಂಸ್ಥೆಗಳು ಸ್ಥಳೀಯ ಸ್ವಯಂ ಸರ್ಕಾರಗಳಾಗಿ ಕಾರ್ಯನಿರ್ವಹಿಸುವ ಎಲ್ಲ ಸೌಲಭ್ಯಗಳನ್ನು ನೀಡಬೇಕು. ಪಂಚಾಯತಿ ರಾಜ್ಯ ಸಂಸ್ಥೆಗಳು ಜನರಿಗೆ ಉತ್ತಮ ಮಟ್ಟದ ಸೇವೆಯನ್ನು ಒದಗಿಸಲು ಪಾರದರ್ಶಕವಾಗಿ ಕಾರ್ಯ ನಿರ್ವಹಿಸುವಂತೆ ಮಾಡುವ ಹಾಗೂ ಹೊಣೆಗಾರಿಕೆಯನ್ನು ವಹಿಸುವ ನಿಯಮಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಬೇಕು.




# ಗ್ರಾಮೀಣಾಭಿವೃದ್ಧಿಯ ಪ್ರಯೋಗಗಳು

ಡಾ. ಶೇಖರ್ ಎಫ್. ಪೂಜಾರ್

ಹಾಗೆ ನೋಡಿದರೆ, ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿಯ ಅನೇಕಾನೇಕ ಪ್ರಯೋಗಗಳು ನಡೆದಿವೆ; ನಡೆಯುತ್ತಲೂ ಇವೆ. ಆದರೆ ಕಾರ್ಯಕ್ರಮಗಳು ಸುಸಂಘಟಿತವಾಗಿರಲಿಲ್ಲವಾದ್ದರಿಂದಾಗಿ, ವೃತ್ತಿ ತರಬೇತಿ ಪಡೆದ ಕಾರ್ಯಕರ್ತರ [Professional workers] ಕೊರತೆಯಿಂದಾಗಿ, ವಚನಬದ್ಧತೆ ಹಾಗೂ ಅರ್ಪಣಾ ಭಾವದ ಕೊರತೆಯಿಂದಾಗಿ ಜನಸಾಮಾನ್ಯರ (ಗ್ರಾಮೀಣ ಜನರ) ಸಹಭಾಗಿತ್ವದಲ್ಲಿ ಅನಾಸಕ್ತಿಯಿಂದಾಗಿ, ಸಮಸ್ಯೆಗಳನ್ನು ಎದುರಿಸುವಲ್ಲಿ ಅಥವಾ ಪರಿಹರಿಸುವಲ್ಲಿ ನಿರಾಸಕ್ತಿಯಿಂದಾಗಿ ಈ ಅಭಿವೃದ್ಧಿ ಪ್ರಯೋಗಗಳು ನಿರೀಕ್ಷಿತ ಗುರಿಯನ್ನು ತಲುಪಿಲ್ಲ. ಆದರೂ ಹಲ ಕೆಲವು ಕ್ಷೇತ್ರಗಳಲ್ಲಿ ಗಣನೀಯ ಅಭಿವೃದ್ಧಿ ಸಾಧಿಸಿವೆ ಎಂದರೆ ಅತಿಶಯೋಕ್ತಿ ಏನಲ್ಲ.

ಭಾರತದಲ್ಲಿ ಆರು ಲಕ್ಷಕ್ಕೂ ಹೆಚ್ಚು ಗ್ರಾಮಗಳಿದ್ದು ಅಂದಾಜು ೬೫ ಕೋಟಿ ಜನಸಂಖ್ಯೆಯನ್ನು ಹೊಂದಿದೆ. ಇದು ದೇಶದ ಜನಸಂಖ್ಯೆಯ ಪ್ರತಿಶತ ೭೫ರಷ್ಟು ಹಾಗೂ ಜಗತ್ತಿನ ಜನಸಂಖ್ಯೆಯ ಹತ್ತರಲ್ಲೊಂದು ಭಾಗದಷ್ಟಿದೆ. ಅಂದಮೇಲೆ ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿಯ ಅವಶ್ಯಕತೆ ತೀವ್ರತರದ್ದಾಗಿದೆ ಎಂದು ಬೇರೆ ಹೇಳಬೇಕಾಗಿಲ್ಲ.

> ವೃತ್ತಿ ತರಬೇತಿ ಪಡೆದ ಕಾರ್ಯಕರ್ತರ ಅಭಾವ, ವಚನಬದ್ಧತೆ ಹಾಗೂ ಅರ್ಪಣಾ ಮನೋಭಾವದ ಕೊರತೆ, ಜನಸಾಮಾನ್ಯರು ಅಭಿವೃದ್ಧಿ ಕೆಲಸಗಳಲ್ಲಿ ವಹಿಸಿದ ನಿರಾಸಕ್ತಿಯಿಂದಾಗಿ ಅಭಿವೃದ್ಧಿ ಪ್ರಯೋಗಗಳು ನಿರೀಕ್ಷಿತ ಗುರಿ ಮುಟ್ಟಿಲ್ಲ.

## ಗ್ರಾಮೀಣ ಅಭಿವೃದ್ಧಿಯ ವ್ಯಾಖ್ಯೆಗಳು :

ಈಗ ಗ್ರಾಮೀಣ ಅಭಿವೃದ್ಧಿಯ ವ್ಯಾಖ್ಯೆಗಳನ್ನು ನೋಡುವ ಜಾಗತಿಕ ಬ್ಯಾಂಕಿನ ಅಭಿಪ್ರಾಯದಲ್ಲಿ, ಆ ವಿಶೇಷ ಜನಸಮೂಹದ ಗ್ರಾಮೀಣ ಬಡಜನರ ಆರ್ಥಿಕ ಹಾಗೂ ಸಾಮಾಜಿಕ ಜೀವನವನ್ನು ಅಭಿವೃದ್ಧಿಪಡಿಸಲು ರೂಪಿಸಿದ ನಕ್ಷೆ ಅಥವಾ ಯೋಜನೆ. ಜಾಗತಿಕ ಬ್ಯಾಂಕಿನ ಪ್ರಕಟನೆಯ ಪ್ರಕಾರ, ಗ್ರಾಮೀಣ ಅಭಿವೃದ್ಧಿ ವ್ಯಾಖ್ಯೆಯು "ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಅಲ್ಪ ಆದಾಯದ ರಾಶಿ ಜನರ ಜೀವನ ಮಟ್ಟವನ್ನು ಅಭಿವೃದ್ಧಿಪಡಿಸುವುದು ಮತ್ತು ಗ್ರಾಮೀಣ ಅಭಿವೃದ್ಧಿಯ ಪ್ರಕ್ರಿಯೆಯನ್ನು ಸ್ವಯಂ ನಿರ್ವಹಿಸುವಂತೆ ಮಾಡುವದು" [English version : Joel S.G. R. Bhose, 2003: 68-69].

ಮೈಕೆಲ್ ಟೊಡ್ಯಾರೋ (Michal Todaro) ಅವರ ದೃಷ್ಟಿಯಲ್ಲಿ "ಗ್ರಾಮೀಣ ಅಭಿವೃದ್ಧಿಯು, ಗ್ರಾಮೀಣ ಜನರಿಗೆ ೧. ಉದ್ಯೋಗ, ಶಿಕ್ಷಣ, ಆರೋಗ್ಯ ಮತ್ತು ಪೌಷ್ಟಿಕ ಆಹಾರ, ಆಶ್ರಯ ಹಾಗೂ ವಿವಿಧ ಸಾಮಾಜಿಕ ಸೇವೆಗಳನ್ನೊಳಗೊಂಡು ಜನರ ಜೀವನಮಟ್ಟವನ್ನು ಸುಧಾರಿಸುವದು

೬. ಗ್ರಾಮೀಣ ಉತ್ಪನ್ನಗಳ ಹಂಚಿಕೆಯಲ್ಲಿ ಅಸಮಾನತೆಯನ್ನು ಮತ್ತು ಗ್ರಾಮೀಣ-ನಗರಗಳಲ್ಲಿ ಆದಾಯಗಳ ಹಾಗೂ ಆರ್ಥಿಕ ಅವಕಾಶಗಳ ವ್ಯತ್ಯಾಸಗಳನ್ನು ತಗ್ಗಿಸುವದು. ೩. ಅಭಿವೃದ್ಧಿ ಸುಧಾರಣೆಯ ನಿರ್ವಹಣೆ ಮತ್ತು ತೀವ್ರತೆಯನ್ನು ಹೆಚ್ಚಿಸಲು ಗ್ರಾಮೀಣ ಭಾಗದ ಸಾಮರ್ಥ್ಯಗಳನ್ನು ಒಳಗೊಂಡಿದೆ."

ಭಾರತದ ಯೋಜನಾ ಆಯೋಗದ (Planning Commission) ಪ್ರಕಾರ ಗ್ರಾಮೀಣ ಸಮುದಾಯಭಿವೃದ್ಧಿಯ ವ್ಯಾಖ್ಯೆಯು ಈ ಕೆಳಗಿನಂತಿದೆ: "ಗ್ರಾಮೀಣ ಸಮುದಾಯಾಭಿವೃದ್ಧಿಯು ಜನರ ಪ್ರಯತ್ನದ ಮುಖಾಂತರವೇ ಅವರ ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನೆಯನ್ನು ತರಲು ಮಾಡಿದ ಒಂದು ಪ್ರಯತ್ನವಾಗಿರುತ್ತದೆ." (English Version, Quoted by K. Singh 1989 : 124)

ಯುನೈಟೆಡ್ ನೇಶನ್ಸ್‌ನ ಸಾಮಾಜಿಕ ಕಾರ್ಯಗಳ ಕಛೇರಿ (United Nations Bureau of Social Affairs) ಪ್ರಕಾರ "ಗ್ರಾಮೀಣ ಸಮುದಾಯ ಅಭಿವೃದ್ಧಿಯು ಸಮುದಾಯದ ಚುರುಕಾದ ಸಹಭಾಗಿತ್ವ ಮತ್ತು ನೇತೃತ್ವ ಅಥವಾ ಉಪಕ್ರಮದ ಮೇಲೆ ಸಾಧ್ಯವಾದಷ್ಟು ಪರಿಪೂರ್ಣ ಸ್ವಾವಲಂಬನದೊಂದಿಗೆ ಇಡಿಯ ಸಮುದಾಯಕ್ಕೆ ಆರ್ಥಿಕ ಹಾಗೂ ಸಾಮಾಜಿಕ ಪ್ರಗತಿಯ ಅವಸ್ಥೆಗಳನ್ನು ಅಥವಾ ಅಂತಸ್ತನ್ನು ನಿರ್ಮಿಸಲು ರೂಪಿಸಿದ ಒಂದು ಪ್ರಕ್ರಿಯೆ" [Ibid]

ಕೇಂಬ್ರಿಜ್‌ನ ಬೇಸಿಗೆ ಸಮ್ಮೇಳನ [The cambridge Summer Conference] ಸಮುದಾಯಭಿವೃದ್ಧಿಯನ್ನು ಈ ಕೆಳಗಿನಂತೆ ವ್ಯಾಖ್ಯಾನಿಸಿದೆ: ಸಮುದಾಯಾಭಿವೃದ್ಧಿಯು ಸಮುದಾಯದ ಆಸಕ್ತಿ ಚುರುಕಾದ ಅಥವಾ ಪರಿಣಾಮಕಾರಿಯಾದ ಸಹಭಾಗಿತ್ವ ಹಾಗೂ ಸಮುದಾಯದ ನೇತೃತ್ವದೊಂದಿಗೆ ಇಡಿಯ ಸಮುದಾಯಕ್ಕೆ ಉತ್ತಮ ಜೀವನವನ್ನು ಪ್ರೋತ್ಸಾಹಿಸಲು ರೂಪುಗೊಂಡ ಒಂದು ಆಂದೋಲನವಾಗಿದೆ" [Ibid]

ಜೋಯೆಲ್ ಎಸ್.ಜಿ.ಆರ್. ಭೋಸರ [English version, Joel S.G.R. Bhose: 2003 :56]ಪ್ರಕಾರ, ಅಭಿವೃದ್ಧಿಯ ವ್ಯಾಖ್ಯೆಯು ಇಂತಿದೆ: 'ಜನರನ್ನು ಪರಾವಲಂಬನೆಯ ಬಂಧನದಿಂದ ಸ್ವಾವಲಂಬನದೆಡೆಗೆ, ಅವಕಾಶ ಮತ್ತು ಸಂಪನ್ಮೂಲಗಳ ವಿತರಣೆಯನ್ನು ಖಚಿತಪಡಿಸುವತ್ತ ಮತ್ತು ಸಮಾಜೋ-ಆರ್ಥಿಕ ನ್ಯಾಯದ ಭರವಸೆಯತ್ತ ಹಾಗೂ ಸಮಾಜದ ಎಲ್ಲ ಪಂಗಡಗಳ ಮಧ್ಯೆ ಮಧುರ ಸಂಬಂಧಗಳತ್ತ ನಿರಂತರ ಪ್ರಗತಿಯ ಒಂದು ಪ್ರಕ್ರಿಯೆಯಾಗಿರುತ್ತದೆ.'

ಇಲ್ಲಿ ಒಂದು ಕಾರ್ಯಕ್ರಮದ ಅಡಿಯಲ್ಲಿ ಅಭಿವೃದ್ಧಿಯ ಎಲ್ಲ ಕಾರ್ಯಕ್ರಮಗಳ ಸಮನ್ವಯಕ್ಕೆ ಮಹತ್ವ ನೀಡಲಾಗಿದೆ.ಇದು ಬದಲಾವಣೆ ತರಲು ಸ್ಥಳೀಯ ಸಮುದಾಯದ ಸಂಪನ್ಮೂಲ ಹಾಗೂ ಸ್ವನಿರ್ಧಾರಗಳ ಉಪಯೋಗದ ಮೇಲೂ ಒತ್ತಡ ಹಾಕುತ್ತದೆ. [English version A.P. Barnabas 1987 :395]

## ಭಾರತದ ಗ್ರಾಮೀಣ ಅಭಿವೃದ್ಧಿಯ ಪ್ರಯೋಗಗಳು :

ಸ್ವಾತಂತ್ರ್ಯಪೂರ್ವದ ದಿನಗಳಲ್ಲಿ ಗ್ರಾಮೀಣ ಅಭಿವೃದ್ಧಿಯು ಮುಖ್ಯವಾಗಿ ಗ್ರಾಮೀಣ ಜನರ ವಚನಬದ್ಧ ನಿಸ್ವಾರ್ಥ ಮನೋಭಾವವುಳ್ಳ ಮಹಾನ್ (ಘನವಾದ) ವ್ಯಕ್ತಿಗಳ ಸ್ವಸಂತೋಷದ ಐಚ್ಛಿಕ ಸಂಘಟನೆಗಳ ಒಂದು ಕಾರ್ಯವಾಗಿತ್ತು. ಉದಾಹರಣೆ ರವೀಂದ್ರನಾಥ ಟ್ಯಾಗೋರ್, ಮಹಾತ್ಮ ಗಾಂಧೀಜಿ ಮುಂತಾದವರು.

ಭಾರತದ ಗ್ರಾಮೀಣ ಅಭಿವೃದ್ಧಿಯ ಕೆಲವು ಅಗ್ರಗಾಮಿ ಪ್ರಯೋಗಗಳನ್ನು ಈ ಕೆಳಗೆ ವಿವರಿಸಲಾಗಿದೆ.

ಭಾರತದಲ್ಲಿ ಬ್ರಿಟಿಷ್ ಸರಕಾರವು ಗ್ರಾಮೀಣ ಜನರ ಸ್ಥಿತಿಗತಿಗಳನ್ನು ಸುಧಾರಿಸಲು ಕೆಲವು ಪ್ರಯತ್ನಗಳನ್ನು ಮಾಡಿತು. ಆದರೆ ಆ ಪ್ರಯತ್ನಗಳು ಸಮಸ್ಯೆಯೊಂದಿಗೆ ಒಂದೇ ಪ್ರಮಾಣದಲ್ಲಿರಲಿಲ್ಲ. ಆಗ ೧೮೮೦, ೧೯೦೦ ಮತ್ತು ೧೯೦೧ರ ಬರಗಾಲ ಆಯೋಗಗಳು; ೧೯೦೩ರ ನೀರಾವರಿ ಆಯೋಗ ೧೯೧೫ರ ಸಹಕಾರ ಸಮಿತಿಗಳು ಕೃಷಿ ಸುಧಾರಣೆಗೆ ಶಿಫಾರಸುಗಳನ್ನು ಮಾಡಲು ಮತ್ತು ಗ್ರಾಮೀಣ ಜನತೆಯ ಕಲ್ಯಾಣ ಮತ್ತು ಅಭಿವೃದ್ಧಿಯ ಪ್ರವರ್ಧಮಾನಕ್ಕೆ ನೇಮಿಸಲ್ಪಟ್ಟವು. ಅವರ ಕಾರ್ಯಕ್ರಮಗಳು ಅಥವಾ ಉಪಾಯಗಳು ಗ್ರಾಮೀಣ ಬಡವರ ಸುಧಾರಣೆಗೆ ಸಾಕಾಗಲಿಲ್ಲ ಮತ್ತು ಮಾಡಬೇಕಾದದ್ದು ಎಷ್ಟೋ ಇನ್ನೂ ಉಳಿದು ಹೋಯಿತು. ಪರಿಸ್ಥಿತಿಯನ್ನು ಗುಣಪಡಿಸಲು, ಸರಿ ಮಾಡಲು ಭಾರತ ಸರಕಾರವು ೧೯೨೬ರಲ್ಲಿ ಕೃಷಿಯನ್ನು ಕುರಿತು ಅಭ್ಯಸಿಸಿ ಸಲಹೆ, ಸೂಚನೆ ಹಾಗೂ ಶಿಫಾರಸುಗಳನ್ನು ನೀಡಲು ರಾಯಲ್ (Royal Commission) ಆಯೋಗವನ್ನು ನೇಮಿಸಿತು.

**ಆಯೋಗದ ಶಿಫಾರಸುಗಳು** : ಹಿಡುವಳಿಗಳನ್ನು ಒಡೆಯುವ ಹಾಗೂ ತುಂಡುಮಾಡುವ ಕುರಿತು, ಜಾನುವಾರುಗಳ ಸುಧಾರಣೆ, ನೀರಾವರಿ, ವಿಕ್ರಿ, ಸಹಕಾರ, ಗ್ರಾಮೀಣ ಪುನರ್ರಚನೆ. ಗ್ರಾಮೀಣ ಅಭಿವೃದ್ಧಿಗೆ ವಿವಿಧ ಕ್ಷೇತ್ರಗಳಲ್ಲಿ ಶಿಕ್ಷಣ ಮತ್ತು ಅನೇಕ ಕಾನೂನುಗಳು ಪಾಸಾದವು. ಆದರೂ ಹೇಳಿಕೊಳ್ಳುವಂಥ ಸಾಧನೆ ಆಗಲೇ ಇಲ್ಲ. ಅಂದರೆ ಬ್ರಿಟಿಷ್ ಸರಕಾರವು ಭಾರತದ ಅಭಿವೃದ್ಧಿಯನ್ನು ಬಯಸಿರಲೂ ಇಲ್ಲ.

## ಮಹಾತ್ಮ ಗಾಂಧೀಜಿ ಅವರ ಸೇವಾಗ್ರಾಮ ಪ್ರಯೋಗ :

ಮಹಾತ್ಮ ಗಾಂಧೀಜಿಯವರು ರಾಜಕಾರಣಿ ಮಾತ್ರವಾಗಿರದೆ ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕ ಸುಧಾರಕರೂ ಆಗಿದ್ದರು. ಸ್ವರಾಜ್ಯ ಅಥವಾ ಸ್ವಾಯತ್ತ ಸರಕಾರವೆಂದರೆ ನೂರಾರು ಬಾಯಿ ಇಲ್ಲದ ಜನರಿಗಾಗಿ ದೇಶದ ರಾಷ್ಟ್ರೀಯ ಆಂದೋಲನವು ಗ್ರಾಮೀಣ ಜೀವನದ ಎಲ್ಲ ಮಜಲುಗಳನ್ನು ಮುಟ್ಟಲೇಬೇಕೆಂಬುದು.

ಸೇವಾಗ್ರಾಮ ಪ್ರಯೋಗವು ಮಹಾತ್ಮ ಗಾಂಧೀಜಿಯವರು ಮಾಡಿದ ಪ್ರಯತ್ನವಾಗಿದೆ. ಅವರ ಅನುಸಂಧಾನವು ಅನೇಕ (ಕಾರ್ಯಕ್ರಮದ) ಭೂಮಿಕೆಗಳ ಮೇಲೆ ಆಧಾರಿತವಾಗಿತ್ತು.

೧) ಗ್ರಾಮೀಣ ಸ್ವರಾಜ್ಯ-ವಿಕೇಂದ್ರೀಕರಣ ೨) ಗ್ರಾಮಗಳೊಂದಿಗೆ ಗುರುತಿಸಿಕೊಳ್ಳುವುದು ೩) ಸ್ವಯಂ ಶುದ್ಧೀಕರಣ ೪) ಸ್ವಯಂ ಮಾದರಿ ಮತ್ತು ಸ್ವಾವಲಂಬನೆ ೫) ಗೃಹೋದ್ಯೋಗದ ಅಭಿವೃದ್ಧಿ ೬) ಉಪಯೋಗಕ್ಕಾಗಿ (ಬಳಕೆಗಾಗಿ) ಉತ್ಪಾದನೆ ೭) ನಿಷೇಧಾಜ್ಞೆ ೮) ಅಸ್ಪೃಶ್ಯತಾ ನಿವಾರಣೆ ೯) ಮೂಲಭೂತವಾದ ಶಿಕ್ಷಣ. ಸಾಮಾಜಿಕ ಮತ್ತು ಆರ್ಥಿಕ ಸಮಾನತೆ ತರುವುದು ಮತ್ತು ಶಿಕ್ಷಣಕ್ಕಾಗಿ ಎಲ್ಲರಿಗೂ ಸಮಾನ ಅವಕಾಶ ಕೊಡುವುದು ಗುರಿಯಾಗಿತ್ತು. ಈ ವಿಧಾನವು ಸಾಮಾಜಿಕ ಜವಾಬ್ದಾರಿಯ ಮತ್ತು ಸ್ವಯಂ ಆಳ್ವಿಕೆಯ ಅರಿವು ಮೂಡಿಸುವುದಾಗಿತ್ತು.

ಗಾಂಧೀಜಿಯವರು ಅಹಿಂಸೆಯ ಸಾಧನದ ಮುಖಾಂತರ ಗ್ರಾಮೀಣ ಜನರ ಅಭಿವೃದ್ಧಿಯ ಉದ್ದೇಶವನ್ನು ಈಡೇರಿಸಲು ನೈತಿಕ-ಮೌಲ್ಯಗಳ ಅವಶ್ಯಕತೆಯನ್ನು ಒತ್ತಿ ಹೇಳಿದರು. ಈ ಪ್ರಕಾರ ರಚನಾತ್ಮಕ ಕಾರ್ಯದ ಶಕ್ತಿಯುತ ಪರಂಪರೆ ಸ್ಥಾಪಿತವಾಯಿತು. ಭೂದಾನ, ಗ್ರಾಮದಾನ ಆಂದೋಲನಗಳು ಕೂಡ ನಿಜವಾದ ಅರ್ಥದಲ್ಲಿ ಗಾಂಧೀಜಿಯವರ ಪರಂಪರೆಯ ಮುಂದುವರಿಕೆಗಳಾಗಿದ್ದವು.

ಇನ್ನೂ ಮುಂದುವರಿದು ಅವರ ಕಾರ್ಯಸಾಧನೆಗಳನ್ನು ವಿವರಿಸಬಹುದಾಗಿದೆ. ಗಾಂಧೀಜಿಯವರು ಚರಖಾ ಪುನರುಜ್ಜೀವನಗೊಳಿಸುತ್ತ ಸ್ವದೇಶಿ ಅಭಿವೃದ್ಧಿಯ ಯೋಜನೆಗಳನ್ನು ಕೂಡ ಅಭಿವೃದ್ಧಿಗೊಳಿಸಿದರು. ನೇಕಾರರಿಗೆ ಆರ್ಥಿಕ ನೆರವು ನೀಡಲು, ಖಾದಿ ತಯಾರಿಸಲು ಹಾಗೂ ಮಾರಾಟ ಮಾಡಲು ಅಖಿಲ ಭಾರತ ನೇಕಾರ ಸಂಘವನ್ನು ೧೯೨೩ರಲ್ಲಿ ರಚಿಸಿದರು. ನಶಿಸುತ್ತಿರುವ ಗ್ರಾಮೋದ್ಯೋಗಗಳನ್ನು ಪುನರುಜ್ಜೀವನಗೊಳಿಸಲು ಮತ್ತು ಕೈಮಗ್ಗಗಳನ್ನು ಪ್ರೋತ್ಸಾಹಿಸಲು ೧೯೩೪ರಲ್ಲಿ ಅಖಿಲ ಭಾರತ-ಗ್ರಾಮೋದ್ಯೋಗ ಸಂಘವನ್ನು ಸ್ಥಾಪಿಸಿ ಗ್ರಾಮೀಣ ಜೀವನವನ್ನು ಪುನಃ ಸಂಘಟಿಸಿದರು. ಕೈಯಿಂದ ಕುಟ್ಟಿದ ಅಕ್ಕಿ, ಕೈಯಿಂದ ಬೀಸಿದ ಹಿಟ್ಟು, ಸಾಬೂನು ತಯಾರಿಕೆ, ಜೇನು ಸಾಕಾಣಿಕೆ, ಚರ್ಮ ಹದಗೊಳಿಸುವಿಕೆ-ಮತ್ತು ಚಮ್ಮಾರಿಕೆ ಕೆಲಸ ಹಾಗೂ ಕಾಗದ ತಯಾರಿಕೆಗಳು ಗ್ರಾಮೋದ್ಯೋಗದಲ್ಲಿ ಸೇರಿದ್ದವು. ಇವು ಸ್ಥಳೀಯ ವಸ್ತು ಹಾಗೂ ಕ್ರಮಗಳನ್ನು ಉಪಯೋಗಿಸುವದಷ್ಟೇ ಅಲ್ಲದೆ ಪೌಷ್ಠಿಕ ಮೌಲ್ಯವನ್ನೂ ಹೊಂದಿದ್ದವು. ಅಖಿಲ ಭಾರತ ಗ್ರಾಮೋದ್ಯೋಗ ಸಂಘವು ಗ್ರಾಮೀಣ ಕಲ್ಯಾಣ ಕಾರ್ಯಕರ್ತರಿಗೆ ತರಬೇತಿ ಕೊಡುವ ಉದ್ದೇಶ ಹೊಂದಿದ್ದು ವಾರ್ಧಾದಲ್ಲಿ ತರಬೇತಿ ಶಾಲೆಯನ್ನೂ ಸ್ಥಾಪಿಸಿತು.

ಅದರಂತೆ ಅಖಿಲಭಾರತ-ನೇಕಾರರ ಸಂಘವು ತರಬೇತಿ ನೀಡಲು ಸೇವಾಗ್ರಾಮದಲ್ಲಿ ಕೇಂದ್ರೀಯ ಖಾದಿ ವಿದ್ಯಾಲಯವನ್ನು ಹೊಂದಿತ್ತು. ಎಲ್ಲ ರೀತಿಯ ಸುಧಾರಿತ ಗೋವುಗಳು ಮತ್ತು ಹಾಲು, ಹಯನಗಳು ಸಾರ್ವಜನಿಕರಿಗೆ ದೊರೆಯುವಂತೆ-ಮಾಡಲು ಅನೇಕ ವಿಧಾನಗಳಿಂದ ವೈಜ್ಞಾನಿಕವಾಗಿ ಉತ್ತಮ ತಳಿಗಳನ್ನು ಹೊಂದಲು ಗೋಶಾಲೆಯನ್ನು ಪುನಃ ಸಂಘಟಿಸಲು ೧೯೪೧ರಲ್ಲಿ ಗೋಸೇವಾ ಸಂಘ ಸ್ಥಾಪಿಸಲ್ಪಟ್ಟಿತು. ಸ್ವಾರ್ಥರಹಿತ ಮತ್ತು ಶ್ರದ್ಧಾಭರಿತ ಕಾರ್ಯಕರ್ತರು ಕಲ್ಯಾಣಕಾರ್ಯಗಳನ್ನು ಸಮನ್ವಯಿಸಲು ಗಾಂಧಿ ಸೇವಾಸಂಘದೊಡನೆ ಜೊತೆಗೂಡಿದ್ದರು.

ಇವುಗಳನ್ನಲ್ಲದೆ ಮೂಲೋದ್ಯೋಗವನ್ನು ಕೇಂದ್ರವನ್ನಾಗಿಟ್ಟುಕೊಂಡು ಕಲಿಸುವಿಕೆಯನ್ನು, ಮೌಲ್ಯಕ್ಕೆ ಒತ್ತು ಕೊಡುವ ವಾರ್ಧಾ ಶಿಕ್ಷಣ ಯೋಜನೆಯನ್ನು ಮತ್ತು ಅಸ್ಪೃಶ್ಯತಾ ನಿವಾರಣೆಯನ್ನೊಳಗೊಂಡು ಸಾಮಾಜಿಕ ಸುಧಾರಣೆಗಳನ್ನು ಇಲ್ಲಿ ಉಲ್ಲೇಖಿಸಬಹುದು.

ಅವರು ಹರಿಜನರ ಉದ್ಧಾರಕ್ಕಾಗಿ ೧೯೩೨ರಲ್ಲಿ ಹರಿಜನ ಸೇವಾ ಸಂಘವನ್ನು ಸಂಘಟಿಸಿದರು ಅದು ಹರಿಜನೋದ್ಧಾರದ ಕಾರ್ಯವನ್ನು ಅತ್ಯಂತ ಉಪಯುಕ್ತವಾಗಿ ಮಾಡಿತು.

ಒಟ್ಟಾರೆ ಗಾಂಧೀಜಿಯವರ ಗ್ರಾಮೀಣ ಅಭಿವೃದ್ಧಿ ಪ್ರಯೋಗವು ಪರಿಪೂರ್ಣ ಅಭಿವೃದ್ಧಿಯನ್ನು ಪಡೆಯಲು ವ್ಯಕ್ತಿಯ ಎಲ್ಲ ಯುಕ್ತಿ-ಶಕ್ತಿ ಸಂಪನ್ಮೂಲಗಳನ್ನು ಪರಿಣಾಮಕಾರಿಯಾಗಿ ಮತ್ತು ಪರಿಪೂರ್ಣವಾಗಿ ತೊಡಗಿಸಿಕೊಂಡು ಅಳವಡಿಸಲು ಪ್ರಯತ್ನಿಸಿತು. ಅದು ಮಾನವ ಜೀವನದ ಪ್ರತಿಯೊಂದು ಮಜಲನ್ನು ರೂಪಿಸಲು ಯತ್ನಿಸಿತು. ಸ್ವಾವಲಂಬಿ, ಸ್ವಯಂ ಆಡಳಿತ, ಸ್ವರಾಜ್ಯ ಭಾರಮಾಡುವ ಗ್ರಾಮಗಳ ಆಧಾರದ ಮೇಲೆ ಸಮಾಜದ ಪುನರ್ರಚನೆಯನ್ನು ಊಹಿಸಿತು. ಈ ಸಮಾಜದ ಅರ್ಥವ್ಯವಸ್ಥೆಯ ಗಮನವು ಸ್ವಯಂಪೂರ್ಣತೆಯಾಗಿತ್ತು. ಆಹಾರ ಮುಂತಾದ ಎಲ್ಲ ಬೇಡಿಕೆಗಳನ್ನು ಮತ್ತು ಜೀವನದ ಇತರ ಅವಶ್ಯಕತೆಗಳನ್ನು ಪೂರೈಸಲು ಬೇಕಾದವುಗಳನ್ನು ಗ್ರಾಮಗಳಲ್ಲೇ ಬೆಳೆಸಬೇಕು ಅಥವಾ ಉತ್ಪಾದಿಸಬೇಕು ಎಂಬುದನ್ನು ತಾನಾಗಿ ತಿಳಿದಿದ್ದಾಯಿತು. ಆಗ ಮೂಲ ಆಹಾರ ಅಥವಾ ಕಚ್ಚಾವಸ್ತುಗಳ ಉತ್ಪಾದನೆ ಸಲುವಾಗಿ ಯೋಗ್ಯ ಮಣ್ಣನ್ನು ನಿರ್ಮಿಸಲು ವಿಜ್ಞಾನದ ನೆರವು ಬೇಕಾಯಿತು.

ಗಾಂಧೀಜಿಯವರು ಆದರ್ಶ ಗ್ರಾಮ ಅಥವಾ ಸ್ವಯಂಪೂರ್ಣ ಗ್ರಾಮವನ್ನು ಕಾರ್ಯಗತ ಮಾಡುವಲ್ಲಿ ಗ್ರಾಮೋದ್ಯೋಗಗಳನ್ನು ಅವಲಂಬಿಸುವುದನ್ನು ಪ್ರತಿಪಾದಿಸಿದರು. ಗ್ರಾಮೀಣ ಜನರಿಗೆ ಇದು ಉದ್ಯೋಗ ನೀಡಬಲ್ಲುದೆಂದು ಯೋಚಿಸಿದರು. ಅವರು ಉದ್ದಿಮೆಯಲ್ಲಿ ಯಂತ್ರಗಳ ಅಥವಾ ಯಾಂತ್ರೀಕರಣದ ಉಪಯೋಗಕ್ಕೆ ವಿರುದ್ಧವಾಗಿರಲಿಲ್ಲ, ಆದರೆ ಅವರು ಗ್ರಾಮೀಣ ಉದ್ದಿಮೆಗಳನ್ನು ನಾಶ ಮಾಡುವುದಕ್ಕೆ ಮತ್ತು ಅದರಿಂದ ನಿರುದ್ಯೋಗಕ್ಕೆ ಕಾರಣವಾಗುವಂತೆ ಯಂತ್ರಗಳನ್ನು ಉಪಯೋಗಿಸುವದನ್ನು ವಿರೋಧಿಸಿದರು.

ಅವರ ಯೋಜನೆಯಲ್ಲಿ ಗ್ರಾಮ ಸರಕಾರವು ಗ್ರಾಮದ ಪ್ರೌಢ ಪ್ರಜೆಗಳಿಂದ ವರ್ಷಕ್ಕೊಮ್ಮೆ ಆಯ್ಕೆಗೊಂಡ ಪಂಚಾಯತಿಯಿಂದ ನಿರ್ವಹಿಸಲ್ಪಡಬೇಕೆಂದಿತ್ತು. ಅವರಿಗೆ, ಪರಿಣಾಮಕಾರಿಯಾಗಿ ಕಾರ್ಯಮಾಡುವ ಪಂಚಾಯತಿಯ ಮುಖಾಂತರ ಜನರ ಇಚ್ಛೆ ಪ್ರತಿಪಾದನೆ ಆಗಬಹುದೆಂಬ ವಿಶ್ವಾಸವಿತ್ತು. ಅದರಂತೆ ಅವರಿಗೆ ಪಂಚಾಯತಿ ರಾಜ್ಯ ಆಡಳಿತ ಯಂತ್ರ ಕಾರ್ಯದ ಮುಖಾಂತರ ಗ್ರಾಮ ಹಾಗೂ ನಗರದ ಮಧ್ಯೆ ಅಧಿಕಾರದ ಅಸಮತೋಲನವು ಅಳಿಯಬಹುದೆಂಬುದು ಖಚಿತವಾಗಿತ್ತು. ಯಾಕೆಂದರೆ ಅದು ರಾಜಕೀಯ ಅಧಿಕಾರದಲ್ಲಿ ಯೋಗ್ಯ ಪಾಲನ್ನು ಪಡೆಯಲು ಗ್ರಾಮೀಣ ಭಾರತವನ್ನು ಬಲಗೊಳಿಸಬಲ್ಲದು ಎಂದು ನಂಬಿದ್ದರು. ಗಾಂಧೀಜಿಯವರು, ದೇಶದ ಹಿತ-ದೃಷ್ಟಿಯಿಂದ ಮಾನವ ಜೀವನವನ್ನು ಸುಖಮಯ ಹಾಗೂ ಶ್ರೀಮಂತಗೊಳಿಸಲು ಪ್ರತಿಯೊಬ್ಬ ವ್ಯಕ್ತಿಯೊಂದಿಗೆ ಸಹಕಾರ ನೀಡುವಂತೆ ಸ್ವಾಯತ್ತ ಗ್ರಾಮಗಳ ಆಧಾರದ ಮೇಲೆ ಸರಕಾರದ ರಚನೆಯನ್ನು ಯೋಚಿಸಿದ್ದರು.

ಗಾಂಧೀ ತತ್ವವು ಲೋಕಶಕ್ತಿ ಕೇಂದ್ರವಾದದ್ದರಿಂದ ಹೊಸ ಕಾರ್ಯಕ್ರಮಕ್ಕೆ ರೂಪವನ್ನು ಮತ್ತು ವಚನಬದ್ಧತೆಯನ್ನು ನೀಡಿತು ಎನ್ನುವುದು ಅತಿಶಯೋಕ್ತಿಯಲ್ಲ.

### ರವೀಂದ್ರನಾಥ ಟ್ಯಾಗೋರರ ಶ್ರೀನಿಕೇತನ-ಗ್ರಾಮೀಣ ಪುನರ್ರಚನಾ ಕಾರ್ಯಕ್ರಮ ಪ್ರಯೋಗ :

ಗ್ರಾಮೀಣ ಅಭಿವೃದ್ಧಿ ಸಮಸ್ಯೆಗೆ ಟ್ಯಾಗೋರ್ ಅವರ ವಿಧಾನವು ಗಾಂಧೀಜಿಯವರ ಮಾರ್ಗಕ್ಕಿಂತ ಅತಿಭಿನ್ನವಾಗಿತ್ತು. ಒಬ್ಬ ಮಹಾನ್ ಕವಿಗೆ ಬಡತನವನ್ನು ತೆಗೆದುಹಾಕುವದಷ್ಟೇ ಅಲ್ಲದೆ ಜೀವನಕ್ಕೆ ಆನಂದವನ್ನು ನೀಡುವುದೂ ಅವಶ್ಯವಾಗುತ್ತದೆ. ಅವರು ಗ್ರಾಮಾಭಿವೃದ್ಧಿಯನ್ನೂ ಮೀರಿ ಸುಂದರ ಸುಮಧುರ ಹಾಗೂ ಬಂಧುರ ಗ್ರಾಮವನ್ನು ಹೆಚ್ಚು ಇಷ್ಟಪಟ್ಟರು.

ಗತಕಾಲದಲ್ಲಿ ಒಂದು ಗ್ರಾಮವು ಒಂದೇ ಬಗೆಯಲ್ಲಿ ಹತ್ತಿರವಾಗಿ ಹೆಣೆದುಕೊಂಡು ಸ್ವಯಂಪೂರ್ಣ ಘಟಕವಾಗಿತ್ತು. ಸಮುದಾಯ (ನಾವು) ಎಂಬ ಭಾವನೆ ಮತ್ತು ಸಹಕಾರದ ರೂಢಿಯು ಇದ್ದ ಬಗೆಯನ್ನು ರವೀಂದ್ರನಾಥ ಟ್ಯಾಗೋರ್ ಅವರು ೧೯೦೪ರಲ್ಲಿ ತಮ್ಮ "ಸ್ವದೇಶಿ ಸಮಾಜ" ಎಂಬ ಲೇಖನದಲ್ಲಿ ಔಚಿತ್ಯಪೂರ್ಣವಾಗಿ ಬಣ್ಣಿಸಿದ್ದಾರೆ. ಗ್ರಾಮಗಳಲ್ಲಿ ಬಂಧುತ್ವದ ಬಂಧನದ ಮೇಲೆ ವಾಸಿಸುವುದನ್ನು ಟ್ಯಾಗೋರ್ ಅವರು ಹೇಳಿದ್ದಾರೆ: "ಮಾನವ ಮತ್ತು ಮಾನವನ ನಡುವೆ ವೈಯಕ್ತಿಕ ಸಂಬಂಧವನ್ನು ಸ್ಥಾಪಿಸಲು ಭಾರತವು ಸತತವಾದ ಪ್ರಯತ್ನವನ್ನು ಹೊಂದಿತ್ತು. ವ್ಯಕ್ತಿಯು ದೂರದ ಸಂಬಂಧಿಗಳೊಡನೆಯೂ ಸಂಪರ್ಕವನ್ನು ಇಟ್ಟುಕೊಳ್ಳಬೇಕಾಗುವುದು. ಮಕ್ಕಳು ಬೆಳೆದು ವಯಸ್ಸಿಗೆ ಬಂದಾಗ ಮಗನ ಅಥವಾ ಮಗಳ ಸಂಬಂಧಗಳು ಕಳಚಿಹೋಗುವುದಿಲ್ಲ; ನಮ್ಮ ಸಂಬಂಧಗಳ ಬಂಧವು ಜಾತಿ ಅಥವಾ ಪರಿಸ್ಥಿತಿಗಳನ್ನು ಗಣನೆಗೆ ತೆಗೆದುಕೊಳ್ಳದೆ ಗ್ರಾಮಗಳಲ್ಲಿ ನೆರೆ ಹೊರೆ ಮತ್ತು ಇತರ ಅನೇಕರನ್ನು ಒಳಗೊಳ್ಳುತ್ತವೆ. ಶಿಕ್ಷಕರು ಮತ್ತು ಪೂಜಾರಿಗಳು, ಅತಿಥಿಗಳು ಮತ್ತು ಭಿಕ್ಷಾರ್ಥಿಗಳು, ಭೂಮಿ ಒಡೆಯ ಮತ್ತು ಗೇಣಿದಾರರೊಂದಿಗೆ ಸಂಬಂಧಗಳಿವೆ.

ಇವು ಧರ್ಮಗ್ರಂಥಗಳು ಕಟ್ಟಳೆ ಮಾಡಿದ ಸಂಬಂಧಗಳಲ್ಲ. ಆದರೆ ಹೃದಯದ ಸಂಬಂಧಗಳು, ಅಂತಹುದು ನಮ್ಮ ಸ್ವಭಾವ, ನಾವು ಉಪಯುಕ್ತತೆಯ ಸಂಬಂಧವನ್ನು ಹೃದಯದ ಸಂಬಂಧದಿಂದ ಸ್ವೀಕರಿಸಿದ ನಂತರ ಅವುಗಳನ್ನು ಒಪ್ಪಿಕೊಳ್ಳುತ್ತೇವೆ" ಎಂದು.

ಸಂತಕವಿ ಸರ್ವಜ್ಞನು ಇನ್ನೂ ವಿಶಾಲ ಅರ್ಥದಲ್ಲಿ ಅಂದರೆ ವಿಶ್ವ ಸಮುದಾಯದ ಎತ್ತರಕ್ಕೆ ಕೊಂಡೊಯ್ಯುತ್ತಾನೆ. ಅವನ ಒಂದು ವಚನದಲ್ಲಿ ಇದನ್ನು ನೋಡಬಹುದು:

ಊರೆಲ್ಲ ನೆಂಟರು, ಕೇರಿ ಎಲ್ಲವು ಬಳಗ
ಈ ಧಾರುಣಿಯೆ ನನ್ನ ಕುಲದೈವ। ಇದರಲ್ಲಿ
ಯಾರನ್ನು ಬಿಡಲೋ ಸರ್ವಜ್ಞ॥

ರವೀಂದ್ರನಾಥ ಟ್ಯಾಗೋರ್ ಅವರು ಹಿಂದೆ ಹೇಳಿದಂತೆ ಸುಂದರ ಬಂಧುರ ಹಾಗೂ ಸುಮಧುರ ಗ್ರಾಮವನ್ನು ದೃಷ್ಟಿಯಲ್ಲಿಟ್ಟುಕೊಂಡು ೧೯೨೧ರಲ್ಲಿ ಗ್ರಾಮೀಣ ಪುನರ್ರಚನೆಯ ಕಾರ್ಯಕ್ರಮವನ್ನು ಶ್ರೀನಿಕೇತನದಲ್ಲಿ ಪ್ರಾರಂಭಿಸಿದರು. ಇದರ ಮೂಲಭೂತ ವಿಚಾರವೆಂದರೆ ಗ್ರಾಮದಲ್ಲಿ ಅದರ ಪೂರ್ಣತ್ವದಲ್ಲಿ ಜೀವನವನ್ನು ಮರಳಿ ತರುವುದಾಗಿತ್ತು.

ಶ್ರೀನಿಕೇತನದ ಕಾರ್ಯಕ್ರಮವು ಗ್ರಾಮೀಣ ಜೀವನದ ಒಂದು ಸಂಪೂರ್ಣ ದೃಷ್ಟಿಯನ್ನು ಅನುಸರಿಸುವುದು, ಸಾಂಸ್ಕೃತಿಕ ಮಜಲುಗಳ ಮಹತ್ವ ಮತ್ತು ಭೌತಿಕ-ಸಂಪನ್ಮೂಲಗಳನ್ನು ಅಭಿವೃದ್ಧಿಗೊಳಿಸುವ ಅವಶ್ಯಕತೆಗಳಿಗೆ ಮಹತ್ವಕೊಟ್ಟಿತು. ಕೈಗೊಂಡ ಕಾರ್ಯ ಚಟುವಟಿಕೆಗಳು, ಪ್ರದರ್ಶನ, ಸಹಕಾರಿ ಸಂಸ್ಥೆಗಳ ಸಂಘಟನೆ, ಕರಕುಶಲ ವೃತ್ತಿ ಮತ್ತು ಗೃಹೋದ್ಯೋಗಗಳಲ್ಲಿ ತರಬೇತಿ, ಯುವಕರ ಗುಂಪುಗಳನ್ನು ರಚಿಸುವುದು, ಸಂಗೀತ ಮತ್ತು ನಾಟಕಗಳಿಗೆ ಪ್ರೋತ್ಸಾಹ ನೀಡುವುದು ಮತ್ತು ಹಬ್ಬಗಳನ್ನು ಸಂಘಟಿಸುವುದು ಇವುಗಳನ್ನು ಒಳಗೊಂಡಿದ್ದವು,.

ವಿಶ್ವಭಾರತಿ (ಈಗ ಶಾಂತಿನಿಕೇತನವೆಂದು ಕರೆಯಲ್ಪಡುತ್ತದೆ) ಸಂಸ್ಥೆಯನ್ನು ಬೋಲ್ಪುರದಲ್ಲಿ ಸ್ಥಾಪಿಸಿದರು. ಈ ಸಂಸ್ಥೆಯ ಉದ್ದೇಶವೆಂದರೆ :

(೧) ಗ್ರಾಮೀಣ ಜನರಿಗೆ ಅವರ ಸಮಸ್ಯೆಗಳನ್ನು ಅವರೇ ಬಗೆಹರಿಸಿಕೊಳ್ಳಲು ನೆರವು ನೀಡುವುದು (೨) ಜನರ ಸಮಸ್ಯೆಗಳನ್ನು ಅಧ್ಯಯನ ಮಾಡಲು ಮತ್ತು ಮುಂದೆ ಅವುಗಳ ಪರಿಹಾರವನ್ನು ಗ್ರಾಮಕ್ಕೆ ಕೊಂಡೊಯ್ಯಲು ವರ್ಗಕೋಣೆಗೆ ತರುವುದು. (೩) ಗ್ರಾಮೀಣ ಜನರ ಸಂಪನ್ಮೂಲಗಳನ್ನು ಮತ್ತು ಅವರ ವಿಶ್ವಾಸವನ್ನು ಅಭಿವೃದ್ಧಿಗೊಳಿಸುವುದು. (೪) ಬೆಳೆ ಮತ್ತು ತರಕಾರಿಗಳನ್ನು ಬೆಳೆಯುವ ಹಾಗೂ ಜಾನುವಾರುಗಳನ್ನು ಸಾಕುವ ಉತ್ತಮ ವಿಧಾನಗಳನ್ನು ಕಲಿಸುವುದು (೫) ಅವರಿಗೆ ಕಲೆ, ಹಸ್ತಕೌಶಲ್ಯಗಳನ್ನು ಕಲಿಸುವುದು ಮತ್ತು ಅದನ್ನು ರೂಢಿಯಲ್ಲಿ ತರುವುದನ್ನು ಪ್ರೋತ್ಸಾಹಿಸುವುದು. ಸಾಂಘಿಕ ಜೀವನದ, ಪರಸ್ಪರ ಸಹಾಯದ ಮತ್ತು ಸಾರ್ವಜನಿಕ ಪ್ರಯತ್ನಗಳ ಲಾಭವು ಅವರ ಮನೆಗಳಿಗೂ ಆಗುವುದೆಂಬುದನ್ನು ತಿಳಿಸುವದು.

ಕಾರ್ಯಕ್ರಮವು ಸೀಮಿತ ಸಂಪನ್ಮೂಲಗಳ ಕಾರಣದಿಂದ ಸೀಮಿತ ಯಶಸ್ಸನ್ನು ಪಡೆಯಿತು ಮತ್ತು ಕೇವಲ ಕೆಲವೊಮ್ಮೆ ಗ್ರಾಮಗಳಲ್ಲಿ ಮಾತ್ರ ಕೈಕೊಳ್ಳಲಾಯಿತು. ಟ್ಯಾಗೂರ್‌ರವರು ಗ್ರಾಮಗಳ ಸಾಂಸ್ಕೃತಿಕ ಮಟ್ಟ ಕ್ಷೀಣವಾಗುವ ಕಾರಣ ವ್ಯಥೆಗೊಂಡು ಗ್ರಾಮೋದ್ಧಾರ ಕಾರ್ಯಕ್ಕೆ ಸೆಳೆಯಲ್ಪಟ್ಟರು. ಅವರು ಗ್ರಾಮೀಣ ಜನರ ಸಾಂಸ್ಕೃತಿಕ ಪುನರುಜ್ಜೀವನದ ಸಲುವಾಗಿ ಕೆಲಸ ಮಾಡಿದರು. ಅವರ ವಿಧಾನವು ಜನರಿಗೆ ಶಿಕ್ಷಣ ಕೊಡುವುದಾಗಿತ್ತು. ಕಲಿಯುವ ಮುಖಾಂತರ ಜ್ಞಾನೋದಯ [light through learning] ಈ ಕಾರ್ಯಕ್ರಮದ ಉದ್ದೇಶವಾಗಿತ್ತು.

**ಭಾರತ-ಸೇವಕರ ಸಮಾಜ** (Servants of India Society) : ಗೋಪಾಲಕೃಷ್ಣ ಗೋಖಲೆಯವರಿಂದ ೧೯೦೫ರಲ್ಲಿ ಭಾರತ ಸೇವಕರ ಸಮಾಜವು ಸಂಘಟಿಸಲ್ಪಟ್ಟಿತು. ಈ ಸಮಾಜವು ಗ್ರಾಮೀಣ ಪುನರ್ರಚನೆಯ ಕಾರ್ಯವನ್ನು ಕೈಕೊಳ್ಳಲು ಅನೇಕ ಕೇಂದ್ರಗಳನ್ನು ಸ್ಥಾಪಿಸಿತು. ಅನೇಕ ಪ್ರಾಂತಗಳಲ್ಲಿ ಕೇಂದ್ರಗಳನ್ನು ಆರಂಭಿಸುವುದಲ್ಲದೆ ಹೆರಿಗೆ ಆಸ್ಪತ್ರೆ, ಮಕ್ಕಳ ಕ್ಷೇಮ ಚಿಕಿತ್ಸಾಲಯ, ಕೋಳಿಸಾಕಣೆ, ಸುಧಾರಿತ-ಕೃಷಿ ವಿಧಾನಗಳನ್ನು ಪರಿಚಯಿಸುವ, ಗೃಹೋದ್ಯೋಗಗಳನ್ನು ಪ್ರೋತ್ಸಾಹಿಸುವ ಅನೇಕ ಚಟುವಟಿಕೆಗಳನ್ನೊಳಗೊಂಡು ಅದು ಕೃಷಿ, ಪಶುಸಂಗೋಪನೆ, ಬಟ್ಟೆ ನೇಯುವಿಕೆ ಮುಂತಾದವುಗಳಲ್ಲಿ ತರಬೇತಿಗಳನ್ನೂ ನಡೆಸಿತು. ಅವುಗಳಲ್ಲಿ ಗಮನಾರ್ಹವಾದ ಶಾಲೆ ಎಂದರೆ ಮದ್ರಾಸದಲ್ಲಿ ಮಾಯನೂರ ಗ್ರಾಮೀಣ ಕೇಂದ್ರವಾಗಿತ್ತು.

**ಡ್ಯಾನಿಯಲ್ ಹ್ಯಾಮಿಲ್ಟನ್ ಮತ್ತು ಗುರ್ಗಾಂವ ಪ್ರಯೋಗ** : ಸರ್ ಡ್ಯಾನಿಯಲ್ ಹ್ಯಾಮಿಲ್ಟನ್ನರು ೧೯೦೩ರಲ್ಲಿ ಒಂದು ಮಾದರಿಯ ಸ್ಥಿರಾಸ್ತಿ (ಇಸ್ಟೇಟ್)ಯನ್ನು ಮಾಡುವ ದೃಷ್ಟಿಯಿಂದ ಅರಣ್ಯವನ್ನು ತೆಗೆಯಲು ಮತ್ತು ಗೋಸಾಬಾದಲ್ಲಿ ವಸತಿಯನ್ನು ಸ್ಥಾಪಿಸಲು ಬಂಗಾಲ ಸರಕಾರದಿಂದ ಭೂಮಿಯನ್ನು ಪಡೆದುಕೊಂಡರು. ಅವರು ಈ ಭೂಮಿಯನ್ನು ವಿಶ್ವಾಸಾರ್ಹ ಕೃಷಿಕರಿಗೆ ನೀಡಿದರು. ಅಲ್ಲದೆ ಗ್ರಾಮಗಳಲ್ಲಿ ಸಹಕಾರಿ ಸಂಘಗಳನ್ನು ಪ್ರಾರಂಭಿಸಿದರು. ಅವು ಕೇಂದ್ರೀಯ ಬ್ಯಾಂಕಿನಡಿಯಲ್ಲಿ ಸಂಲಗ್ನಗೊಂಡಿದ್ದವು. ನಂತರ ಒಂದು ಮಾರಾಟ ಸಂಘ, ಗ್ರಾಹಕರ ಅಂಗಡಿ ಹಾಗೂ ಅಕ್ಕಿ ಗಿರಣಿಗಳು ಕೂಡ ಪ್ರಾರಂಭವಾದುವು. ಅವರು ಆರೋಗ್ಯ ಮತ್ತು ಶೈಕ್ಷಣಿಕ ಕಾರ್ಯಕ್ರಮಗಳನ್ನೊಳಗೊಂಡು ಇಸ್ಟೇಟಿನಲ್ಲಿ ಇತರ ಗ್ರಾಮೀಣ ಪುನರ್ರಚನಾ ಕಾರ್ಯ ಚಟುವಟಿಕೆಗಳನ್ನು ಆರಂಭಿಸಿದರು ಮತ್ತು ಒಂದು ಗ್ರಾಮೀಣ ಪುನರ್ರಚನಾ ಸಂಸ್ಥೆಯನ್ನು ಸ್ಥಾಪಿಸಿದರು.

ಈ ಪ್ರಯೋಗದಲ್ಲಿ ಎಫ್. ಎಲ್ ಬ್ರೇಯ್ನೆಯವರ ಹೆಸರೂ ಕೂಡ ಉಲ್ಲೇಖನಾರ್ಹ. ಅವರು ೧೯೧೯ರಲ್ಲಿ ಗ್ರಾಮೀಣ ಪುನರ್ರಚನಾ ಯೋಜನೆಯನ್ನು ಆರಂಭಿಸಿದರು. ಅವರ ಈ ಯೋಜನೆಯು ಕೃಷಿ, ನೈರ್ಮಲ್ಯ ಹಾಗೂ ಶಿಕ್ಷಣ ವಿಷಯಗಳನ್ನೊಳಗೊಂಡಿದೆ. ಈ ಯೋಜನೆಯ ಹಿಂದಿರುವ ಉದ್ದೇಶವೆಂದರೆ ಗ್ರಾಮೀಣ ಜನರಲ್ಲಿ ಅವರ ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಅಭಿವೃದ್ಧಿಯ ಬಗೆಗೆ ಅಭಿರುಚಿಯನ್ನು ಹುಟ್ಟಿಸುವುದು. ಇದು ಗ್ರಾಮೀಣ ಪುನರ್ರಚನೆಯ ಅತಿ ಮಹತ್ವದ ಸಮಸ್ಯೆಯತ್ತ ಅಭಿರುಚಿಯನ್ನು ಹುಟ್ಟಿಸಿತು.

ಇತರರಲ್ಲಿ ಜಿ.ಕೆ. ಪುರಾಣಿಕರ ಹೆಸರನ್ನು ಇಲ್ಲಿ ಉಲ್ಲೇಖಿಸಬಹುದು. ಅವರು ಗ್ವಾಲಿಯರದ ಪೊಹ್ರಿಯಲ್ಲಿ ೧೯೨೮ರಲ್ಲಿ ಗ್ರಾಮೀಣ ಪುನರ್ರಚನಾ ಕೇಂದ್ರಗಳನ್ನು ಸ್ಥಾಪಿಸಿದರು. ನಾವು ಇಲ್ಲಿ ಬರೋಡಾ ಮತ್ತು ಕರ್ನಾಟಕದಲ್ಲಿಯ ಗ್ರಾಮೀಣ ಪುನರ್ರಚನಾ ಕಾರ್ಯಕ್ರಮಗಳನ್ನು ಉಲ್ಲೇಖಿಸಬಹುದು.

**ಕ್ರಿಶ್ಚಿಯನ್ ಧರ್ಮಬೋಧಕ ಮಂಡಳಿಗಳು ಮತ್ತು ಡಾ. ಸ್ಪೆನ್ಸರ್ ಹಾಚ್ [Christian Missionaries & Dr. Hatch] (ಮಾರ್ತಾಂಡಮ್ ಯೋಜನೆ) :**

ಭಾರತದಲ್ಲಿ ಅನೇಕ ಕ್ರಿಶ್ಚಿಯನ್ ಧರ್ಮಬೋಧಕ ಮಂಡಳಿಗಳು ಗ್ರಾಮೀಣ ಜನತೆಗೆ ಪ್ರಥಮವಾಗಿ ಅವರ ಅನುಯಾಯಿಗಳಿಗೆ ಕೆಲವು ಉಪಯುಕ್ತ ಕಾರ್ಯಗಳನ್ನು ಮಾಡುತ್ತಿದ್ದಾರೆ. ಈ ಮಂಡಳಿಗಳ ಕಾರ್ಯಚಟುವಟಿಕೆಗಳು ಹೆಚ್ಚಾಗಿ ಶಿಕ್ಷಣ, ಆರೋಗ್ಯ ಮತ್ತು ಗ್ರಾಮೀಣ ಪುನರ್ರಚನೆಗಳೆಂದು ಮೂರು ಕ್ಷೇತ್ರಗಳಲ್ಲಿ ವಿಂಗಡಿಸಲ್ಪಟ್ಟಿವೆ. ರಾಷ್ಟ್ರೀಯ ಕ್ರಿಶ್ಚಿಯನ್ ಮಂಡಳಿಯು ಗ್ರಾಮೀಣ ಕಾರ್ಯದ ಬಗೆಗೆ ಒಂದು ಸಮಿತಿಯನ್ನು ಸ್ಥಾಪಿಸಿತು ಮತ್ತು ಅದರಂತೆ ಪ್ರಾಂತೀಯ ಕ್ರಿಶ್ಚಿಯನ್ ಮಂಡಳಿಗಳು ಗ್ರಾಮೀಣ ಸೇವಾ ಸಮಿತಿಗಳನ್ನು ಹೊಂದಿದ್ದವು. ಈ ಮಂಡಳಿಗಳು ಗ್ರಾಮೀಣ ಕಲ್ಯಾಣ ಕಾರ್ಯಗಳನ್ನು ಕೈಕೊಳ್ಳಲು ಶಾಲೆ-ಕಾಲೇಜುಗಳಲ್ಲಿ ಕಲಿಸುವ ಶಿಕ್ಷಣವು ಗ್ರಾಮೀಣ ಪರಿಸರಕ್ಕೆ ಹೊಂದುವಂತಿರುವುದು ಅವಶ್ಯವೆಂಬುದನ್ನು ಗುರುತಿಸಿದವು. ಆದ್ದರಿಂದ ಸಾಕ್ಷರತೆಯ ಮಹತ್ವವನ್ನು ಹೆಚ್ಚಿಸಲು ಸಾಮಾನ್ಯ ಶೈಕ್ಷಣಿಕ ಸಂಸ್ಥೆಗಳನ್ನು ನಡೆಸುವುದಲ್ಲದೆ ಗ್ರಾಮೀಣ ಪುನರ್ರಚನಾ ಕೇಂದ್ರಗಳಿಗೆ ಕೇಂದ್ರಿಯ ಸಂಸ್ಥೆಗಳನ್ನು ಜೋಡಿಸಿದರು. ಮಂಡಳಿಗಳು ಅನೇಕ ಗ್ರಾಮೀಣ ಪುನರ್ರಚನಾ ಕೇಂದ್ರಗಳನ್ನು ಪ್ರಾರಂಭಿಸಿದವು. ಅವುಗಳಲ್ಲಿ ಮದ್ರಾಸದಲ್ಲಿ ಮಾರ್ತಾಂಡಂ ಹಾಗೂ ಬಂಗಾಲದಲ್ಲಿ ಉಷಾಗ್ರಾಮ್ ಮುಖ್ಯವಾದವುಗಳು. ಮುಂದೆ ಮಂಡಳಿಗಳು ದೇಶದಲ್ಲಿ ಅನೇಕ ಆಸ್ಪತ್ರೆಗಳನ್ನು ಪ್ರಾರಂಭಿಸಿದವು. ಅವುಗಳಲ್ಲಿ ಕೆಲವು ಗ್ರಾಮೀಣ ಪ್ರದೇಶಗಳಲ್ಲಿವೆ ಎಂಬುದು ಗಮನಾರ್ಹ.

ಕ್ರಿಶ್ಚಿಯನ್ ಯುವಜನ ಸಂಘದ ಗ್ರಾಮೀಣ ಪುನರ್ರಚನಾ ಯೋಜನೆಯ ಮುಖ್ಯ ಉದ್ದೇಶವೆಂದರೆ, ಗ್ರಾಮೀಣ ಜನರ ಸ್ವಸಹಾಯ ಮತ್ತು ಸ್ನೇಹಪರ, ಅನುಭವಶಾಲಿ ಸಮಾಲೋಚನೆಯ ಆಧಾರದ ಮೇಲೆ ಗ್ರಾಮಗಳನ್ನು ಅಭಿವೃದ್ಧಿಪಡಿಸುವುದು. ಇದು ಗ್ರಾಮೀಣ ಜನತೆಯಲ್ಲಿ ಉತ್ಸಾಹಕ್ಕೆ ಆಹ್ವಾನಿಸಿತು ಮತ್ತು ಇದು ಗ್ರಾಮೀಣ ಪುನರ್ರಚನೆಯ ಒಂದು ವ್ಯಾಪಕ ಕಾರ್ಯಕ್ರಮವನ್ನು ಸಿದ್ಧಪಡಿಸಲು ದಾರಿಮಾಡಿಕೊಟ್ಟಿತು.

**ರೈತ ಸಭೆಗಳು** [Kisan Sabhas] : ಅಖಿಲ ಭಾರತ ಕಿಸಾನ್ ಸಭೆಯು ತನ್ನ ಶಾಖೆಗಳೊಂದಿಗೆ ೧೯೩೫ರಲ್ಲಿ ಸ್ಥಾಪಿತವಾಯಿತು. ಇದಕ್ಕಿಂತ ಮೊದಲು ಜಮೀನ್ದಾರರಿಂದ ನಡೆಯುವ ಅನ್ಯಾಯಗಳ ವಿರುದ್ಧ ಹೋರಾಡಲು ಬೇರೆ ಬೇರೆ ಪ್ರಾಂತ್ಯಗಳಲ್ಲಿ ಅನೇಕ ಕಿಸಾನ್ ಸಭೆಗಳು ಜನ್ಮ ತಳೆದಿದ್ದವು. ಮುಂದೆ ಅವು ಅಖಿಲ ಭಾರತ ಕಿಸಾನ್ ಸಭೆಯಲ್ಲಿ ಸೇರಿಕೊಂಡವು. ಅಖಿಲ ಭಾರತ ಕಿಸಾನ್ ಸಭೆಯು ನೇರವಾಗಿ ಯಾವುದೇ ಗ್ರಾಮೀಣ ಪುನರ್ರಚನೆಯ ಕಾರ್ಯವನ್ನು ಕೈಗೆತ್ತಿಕೊಳ್ಳಲಿಲ್ಲ. ಆದರೆ ಕಾನೂನಿನ ಪ್ರಭಾವದಿಂದ ಜನರ

ಕುಂದುಕೊರತೆಗಳನ್ನು ಹೋಗಲಾಡಿಸುವ ಕಾರ್ಯದಲ್ಲಿ ಯಶಸ್ವಿಯಾಯಿತು. ಪ್ರಾರಂಭದಲ್ಲಿ ಅದು ರಾಷ್ಟ್ರೀಯ ಕಾಂಗ್ರೆಸ್ಸಿನ ಭಾಗವಾಗಿ ಕಾರ್ಯಮಾಡಿತು. ನಂತರ ಅದು ಕಮ್ಯುನಿಸ್ಟ್ ಪ್ರಭಾವಕ್ಕೊಳಗಾಯಿತು.

## ಫಿರ್ಕಾ ಯೋಜನೆ :

ಫಿರ್ಕಾ ಅಭಿವೃದ್ಧಿ ಯೋಜನೆಯು ೧೯೪೬ರಲ್ಲಿ ಮದ್ರಾಸ್ ರಾಜ್ಯ (ಈ ತಮಿಳ್ನಾಡು)ದಲ್ಲಿ ಪ್ರಾರಂಭವಾಯಿತು. ಈ ಯೋಜನೆಯ ಹಿಂದಿರುವ ಉದ್ದೇಶವೆಂದರೆ ಗ್ರಾಮಸ್ಥರನ್ನು ಸ್ವಯಂಪೂರ್ಣ ಮತ್ತು ಸ್ವಾವಲಂಬಿಗಳನ್ನಾಗಿ ಮಾಡುವ ದೃಷ್ಟಿಯಿಂದ ಹಾಗೂ ಸಹಕಾರ ಮಾರ್ಗಗಳ ಆಧಾರದ ಮೇಲೆ ಅವರ ಆರ್ಥಿಕ-ಸಾಮಾಜಿಕ ಜೀವನವನ್ನು ಸಂಘಟಿಸಲು ಗ್ರಾಮೀಣ ಜನರಿಗೆ ಚೇತನ ನೀಡುವುದು; ಬಲಪಡಿಸುವುದು. ಇದು ರಾಜ್ಯದ ೩೪ ಫಿರ್ಕಾಗಳಲ್ಲಿ ಪ್ರಾರಂಭಿಸಲ್ಪಟ್ಟಿತು.

## ನಿಲೋಖೇರಿ ಯೋಜನೆ :

ಭಾರತ ಪಾಕಿಸ್ತಾನ ವಿಭಜನೆಯ ನಂತರ ಬೃಹತ್ ಸಂಖ್ಯೆಯಲ್ಲಿ ನಿರಾಶ್ರಿತರಾದ ಜನರಿಗೆ ಪುನರ್ವಸತಿ ಕಲ್ಪಿಸುವಾಗ ಗ್ರಾಮೀಣ ಪುನರ್‍ರಚನೆಯಲ್ಲಿ ಹೊಸ ಪ್ರಯೋಗಗಳು ನಡೆದವು. ಅವುಗಳಲ್ಲಿ ಎರಡು ಯೋಜನೆಗಳು ವಿಶೇಷ ಮಹತ್ವವನ್ನು ಹೊಂದಿದ್ದವು. ಒಂದು ಎಸ್. ಕೆ. ಡೇ ಅವರಿಂದ ಪ್ರಾರಂಭವಾದ ನಿಲೋಖೇರಿ ಯೋಜನೆಯಾಗಿತ್ತು. ಈ ಯೋಜನೆಯು ಉತ್ತರ ದಿಲ್ಲಿಯಿಂದ ಅಂದಾಜು ೮೭ ಮೈಲು ದೂರವಿರುವ ೧,೧೦೦ ಎಕರೆ ಜವಳು ಭೂಮಿಯ ಮೇಲೆ ನಿರಾಶ್ರಿತರಿಗೆ ಪುನರ್ವಸತಿ ಕಲ್ಪಿಸುವ ಉದ್ದೇಶ ಹೊಂದಿತ್ತು. ಡೇ ಅವರು ನಿರಾಶ್ರಿತರಾಗಿದ್ದ ಜನರಲ್ಲಿ ಸಮುದಾಯ ಕಾರ್ಯದ (Community Work) ಉತ್ಸಾಹವಿರುವದಿಲ್ಲ ಎಂದು ಅದನ್ನು ನಿರಾಕರಿಸಿದರು; ಅಂದರೆ ದೂರದಲ್ಲಿರುವ ಜವಳು ಭೂಮಿಯ ಮೇಲೆ ಪುನರ್ವಸತಿ ಕಾರ್ಯವನ್ನು ನಿರಾಕರಿಸಿದರು. ಅದರ ಬದಲು ಸಂಯುಕ್ತ ಸಮುದಾಯ ಅಭಿವೃದ್ಧಿಯ ಕಾರ್ಯವನ್ನು ಪ್ರಾರಂಭಿಸಿದರು. ಈ ಯೋಜನೆಯು ತ್ವರಿತವಾಗಿ ಪ್ರತಿಫಲ ಕೊಡಲಾರಂಭಿಸಿತು ಮತ್ತು ಸುತ್ತುಮುತ್ತಲಿನ ಗ್ರಾಮಗಳನ್ನು ಕೂಡಿಕೊಂಡು ಗ್ರಾಮ-ನಗರ ಮಿಶ್ರಿತ ಶಹರವಾಗಿ ಅಭಿವೃದ್ಧಿ ಹೊಂದಿತು.

ಈ ಪ್ರಯೋಗವು ಗ್ರಾಮೀಣ ಕ್ಷೇತ್ರಗಳ ಸಮಗ್ರ ಹಾಗೂ ಸಮತೋಲನವಾದ ಅಭಿವೃದ್ಧಿಗೆ ಸಮರ್ಪಕ ಉತ್ತರವನ್ನು ನೀಡಿತು. ಅದರಂತೆ ಅಂದಿನ ಬಾಂಬೆ (ಮುಂಬಯಿ) ಸರಕಾರವು ೧೯೪೯ರಲ್ಲಿ ಸರ್ವೋದಯ ಯೋಜನೆಯನ್ನು ಪ್ರಾರಂಭಿಸಿತು.

## ಇಟಾವಾ ಮಾದರಿ ಯೋಜನೆ [Etawah Project] :

ಇಟಾವಾ ಗ್ರಾಮೀಣ ಅಭಿವೃದ್ಧಿ ಪ್ರಯೋಗವು ಸಮುದಾಯ ಅಭಿವೃದ್ಧಿ ಯೋಜನೆಯ ಪೂರ್ವಭಾವಿ ಮಾದರಿಯ ಯೋಜನೆಯಾಗಿತ್ತು. ಈ ಯೋಜನೆಯು ೧೯೪೮ರಲ್ಲಿ ಉತ್ತರ ಪ್ರದೇಶ ರಾಜ್ಯದ ಇಟಾವಾದಲ್ಲಿ ಕಾರ್ಯರೂಪಕ್ಕೆ ಬಂದಿತು. ಅಮೆರಿಕಾದ ಆಲ್ಬರ್ಟ್ ಮೇಯರರು [Albert Mayer] ಈ ಮಹತ್ವದ ಯೋಜನೆಯನ್ನು ಮುಂದುವರಿಸಲು ನೆರವಾದರು. ಇದು ೯೭ ಗ್ರಾಮಗಳಲ್ಲಿ ಕಾರ್ಯವ್ಯಾಪ್ತಿಯನ್ನು ಹೊಂದಿತ್ತು.

ಈ ಯೋಜನೆಯ ಉದ್ದೇಶವೆಂದರೆ ಉತ್ಪಾದಕ ಮತ್ತು ಸಾಮಾಜಿಕ ಆಂದೋಲನ, ಅದರಂತೆ ಜನರ ಉಪಕ್ರಮ ಮತ್ತು ವಿಶ್ವಾಸ ಹಾಗೂ ಸಮನ್ವಯತೆಯನ್ನು ಯಾವ ಪ್ರಮಾಣದಲ್ಲಿ ಅಭಿವೃದ್ಧಿಗೊಳಿಸಬಲ್ಲದು ಎಂಬುದನ್ನು ನೋಡುವುದು. ಈ ಪ್ರಯೋಗದ ಇತರ ಮಜಲುಗಳೆಂದರೆ "ಪ್ರಯೋಗದ ಅನುಕರಣಾಶಕ್ತಿ, ಜನರ ಸಹಕಾರದ ಗಾಢತೆ ಮತ್ತು ಗ್ರಾಮೀಣ ಮುಖಂಡತ್ವದ ಅಭಿವೃದ್ಧಿ" ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಗ್ರಾಮೀಣ ಪುನರ್‍ರಚನೆಯಲ್ಲಿ ಈ ಮೊದಲಿನ ಪ್ರಯತ್ನಗಳು ಸಮಸ್ಯೆಯ ಅಂಚನ್ನು ಮಾತ್ರ ತಲುಪಿದ್ದವು. ಕಾರಣ, ಈ ಮಹತ್ವದ ಇಟಾವಾ ಪ್ರಯೋಗವು ಶಾಶ್ವತ ಫಲಿತಾಂಶಕ್ಕಾಗಿ ಎಲ್ಲಾ ಚಟುವಟಿಕೆಗಳನ್ನು (ಯೋಜನೆಗಳನ್ನು) ಸಮಾವೇಶಗೊಳಿಸಬೇಕು ಮತ್ತು ಕೂಡಲೇ ಅಳವಡಿಸಬೇಕೆಂಬುದನ್ನು ಮನಗಂಡಿತು.

ಗ್ರಾಮ ಮಟ್ಟದಲ್ಲಿ ವಿವಿಧೋದ್ದೇಶದ ಕಾರ್ಯಕರ್ತನಿಗೆ ತರಬೇತಿ ನೀಡಿತು. ಜನರ ಸಹಕಾರವನ್ನು ಹೊರತರಲು ಸಾಮಾಜಿಕ ಶಿಕ್ಷಣವನ್ನು ಪ್ರಾರಂಭಿಸಿತು. ಇಲ್ಲಿ ಭೂಮಿಯನ್ನು ಕೃಷಿಯೋಗ್ಯ ಮಾಡುವುದು, ಕೃಷಿ ಪ್ರದರ್ಶನ ಮತ್ತು ಬೀಜಗಳ ಹಾಗೂ ಗೊಬ್ಬರದ ಪೂರೈಕೆ ಮಾಡುವುದು ಇವು ಯೋಜನೆಯ ಚಟುವಟಿಕೆಗಳಲ್ಲಿ ಸೇರಿದವು.

ಈ ಪ್ರಯೋಗದ ಫಲಿತಾಂಶಗಳು ಪ್ರೋತ್ಸಾಹದಾಯಕವಾಗಿದ್ದವು. ಭೌತಿಕ ಲಾಭಗಳನ್ನು ಹಾಗೂ ಜನರ ನಡವಳಿಕೆಯಲ್ಲಿ ಬದಲಾವಣೆಗಳನ್ನು ತರುವ ನಿಟ್ಟಿನಲ್ಲಿ ಈ ಕಾರ್ಯಕ್ರಮದ ಯಶಸ್ಸು ಕಾರ್ಯಕ್ರಮವನ್ನು ವಿಸ್ತರಿಸಲು ಸರಕಾರವನ್ನು ಪ್ರೋತ್ಸಾಹಿಸಿತು. ಇಟಾವಾ ಅನುಭವದ ಕೆಲ ಅಂಶಗಳನ್ನು ವಿಶೇಷವಾಗಿ ವಿವಿಧೋದ್ದೇಶಿತ-ಗ್ರಾಮ ಮಟ್ಟದ ಕಾರ್ಯಕರ್ತರ ಸಂಸ್ಥೆಯನ್ನೊಳಗೊಂಡು ೧೯೫೨ರಲ್ಲಿ ಮೊದಲ ೫೫ ಸಮುದಾಯ ಅಭಿವೃದ್ಧಿ ಯೋಜನೆಗಳು ಪ್ರಾರಂಭವಾದವು.

ಮುಂದೆ ಸಮುದಾಯ ಅಭಿವೃದ್ಧಿ ಕಾರ್ಯಕ್ರಮವು ಪ್ರಥಮ ಪಂಚ ವಾರ್ಷಿಕ ಯೋಜನೆಯ ಭಾಗವಾಗಿ ಪ್ರಾರಂಭವಾಯಿತು.

## ಹೆಚ್ಚು ಆಹಾರ ಬೆಳೆಯಿರಿ ಆಂದೋಲನ :

ಏತನ್ಮಧ್ಯೆ ದೇಶವು ಆಹಾರ ಸಮಸ್ಯೆಯ ಅತಿಯಾದ ಬವಣೆಯನ್ನು ಎದುರಿಸಬೇಕಾಯಿತು. ಈ ತೀವ್ರತರ ಸಮಸ್ಯೆಯನ್ನು ಗ್ರಾಮೀಣ ಪ್ರದೇಶಗಳಲ್ಲಿ ನಿಭಾಯಿಸಬೇಕಾಯಿತು. ಇಲ್ಲಿ 'ಹೆಚ್ಚು ಆಹಾರ ಬೆಳೆಯಿರಿ' ಎಂಬ ಅನೇಕ ಆಂದೋಲನಗಳು ಭಾಗಶಃ ಯಶಸ್ಸನ್ನು ಮಾತ್ರ ಕಂಡ ವರದಿಯಾಯಿತು.

ಹೆಚ್ಚು ಆಹಾರ ಬೆಳೆಯಿರಿ ವಿಚಾರಣಾ ಸಮಿತಿ (೧೯೫೨)ಯು ಗ್ರಾಮೀಣ ಜೀವನದ ಎಲ್ಲ ಮಜಲುಗಳು ಪರಸ್ಪರ ಸಂಬಂಧ ಹೊಂದಿದವುಗಳಾಗಿವೆ ಮತ್ತು ವಿಶಿಷ್ಟವಾದ ಸಮಸ್ಯೆಗಳು ವಿಶೇಷ ಗಮನಹರಿಸಲು ಕರೆ ನೀಡಬಹುದಾಗಿವೆ ಎಂಬುದನ್ನು ಕಂಡುಕೊಂಡಿತು. "ಯೋಜನೆಗಳು ಅವುಗಳಿಗೆ ಭಾಗಗಳಾಗಿ ರೂಪುಗೊಳ್ಳಬೇಕು ಹಾಗೂ ಅವು ವಿಕೃತವಾದ ಗುರಿಗಳ ಸಾಧನೆಗಳೊಂದಿಗೆ ಸಮಾವೇಶಗೊಳ್ಳಬೇಕು"

ಈ ಸಮಿತಿಯ ಶಿಫಾರಸುಗಳು, ವ್ಯಾಪಕ ವಿಧಾನ (ಅನುಸಂಧಾನ)ವನ್ನು ರೂಪಿಸುವಲ್ಲಿ ಬಹುದೊಡ್ಡ ಜವಾಬ್ದಾರಿಯಾಗಿತ್ತು. ಈ ವಿಧಾನವು ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಅವಶ್ಯಕವಾದ ಒಂದು ಯಾನವಾಗಿತ್ತು. ಒಂದು ವೇಳೆ ಸಮುದಾಯ ಅಭಿವೃದ್ಧಿಯ ಕಾರ್ಯಕ್ರಮ ಮುಖ್ಯ (ಮಧ್ಯ) ಗುರಿಯು ಮಾನವನ ಮೇಲೆ ಬಂಡವಾಳವನ್ನು ತೊಡಗಿಸುವದಾದರೆ ಸಮಗ್ರ ವ್ಯಾಪಕ ಸೇವೆಗಳು ಆ ಕೊನೆಯನ್ನು ತಲುಪಲು ಮುಖ್ಯ ಸಾಧನಗಳಾಗಬೇಕು, ವೈಜ್ಞಾನಿಕ ಜ್ಞಾನ ಮತ್ತು ತಂತ್ರಗಳು ವಿಸ್ತರಣಾ ಸಂಸ್ಥೆಯ (Extension Agency) ಮುಖಾಂತರ ಜನರಿಗೆ ತಲುಪಬೇಕೆಂಬುದು ಅನುಭವಕ್ಕೆ ವಿದಿತವಾಯಿತು.

## ಸಮುದಾಯ ಅಭಿವೃದ್ಧಿ ಕಾರ್ಯಕ್ರಮದ ಪ್ರಾರಂಭ :

ಸಮುದಾಯ ಅಭಿವೃದ್ಧಿ ಕಾರ್ಯಕ್ರಮವು ಗಾಂಧೀಜಯಂತಿಯ ಶುಭ ಸಂದರ್ಭದಲ್ಲಿ ೨ ಅಕ್ಟೋಬರ್ ೧೯೫೨ರಂದು ಪ್ರಾರಂಭವಾಯಿತು. ಅದರ ಗುರಿಯು ಗ್ರಾಮೀಣ ಭಾರತದ ಸಮಗ್ರ ಅಭಿವೃದ್ಧಿಯನ್ನು ತರುವುದಾಗಿದೆ. ಅಂದರೆ ಸಮುದಾಯ ಜೀವನದ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಮಜಲುಗಳ ಸಮಗ್ರ ಅಭಿವೃದ್ಧಿಯನ್ನು ವ್ಯಾಪಿಸಿದೆ. ಕಾರ್ಯಕ್ರಮದಲ್ಲಿ ಕೃಷಿಗೆ ಅತಿ ಹೆಚ್ಚಿನ ಪ್ರಾಶಸ್ತ್ಯ ಅಂದರೆ ಅಗ್ರಸ್ಥಾನವನ್ನು ನೀಡಲಾಯಿತು. ಇದರಲ್ಲಿ ಇತರ ಮುಖ್ಯ ಕಾರ್ಯಕ್ಷೇತ್ರಗಳೆಂದರೆ ಸಂಪರ್ಕ ಸುಧಾರಣೆ, ಆರೋಗ್ಯ, ನೈರ್ಮಲ್ಯ, ಆಶ್ರಯ, ಶಿಕ್ಷಣ, ಗ್ರಾಮೀಣ ಉದ್ಯೋಗ, ಮಹಿಳಾ ಹಾಗೂ ಮಕ್ಕಳ ಕಲ್ಯಾಣ ಮತ್ತು ಗೃಹೋದ್ಯೋಗ ಹಾಗೂ ಸಣ್ಣ ಕೈಗಾರಿಕೆಗಳನ್ನು ಒಳಗೊಂಡಿದೆ.

ಸಮುದಾಯ ಅಭಿವೃದ್ಧಿಯು ನಿರಂತರವಾದ ಒಂದು ಪ್ರಕ್ರಿಯೆ. ಇದರಿಂದ ಜನರ ಪರಿಶ್ರಮಗಳು ಒಗ್ಗೂಡಲ್ಪಡುತ್ತವೆ; ಅಂದರೆ, ಸರಕಾರಿ ಅಧಿಕಾರಿಗಳೊಂದಿಗೆ ಸಮುದಾಯದ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸ್ಥಿತಿಗಳನ್ನು ಸುಧಾರಿಸಲು, ಸಮುದಾಯಗಳನ್ನು ರಾಷ್ಟ್ರಜೀವನದಲ್ಲಿ ಸಮಾವೇಶಗೊಳಿಸಲು/ವಿಲೀನಗೊಳಿಸಲು ಹಾಗೂ ರಾಷ್ಟ್ರೀಯ ಪ್ರಗತಿಗೆ ಪೂರ್ಣವಾಗಿ ಅವರನ್ನು ಬೆಂಬಲಿಸಲು ಜನರ ಪ್ರಯತ್ನಗಳು ಮತ್ತು ಪರಿಶ್ರಮಗಳು ಒಂದಾಗುತ್ತವೆ. ಹೆಚ್ಚಾಗಿ ಸ್ವಸಹಾಯ ಮತ್ತು ಸ್ವಾವಲಂಬನೆಯು ಅದರ ಮುಖ್ಯ ಉದ್ದೇಶವಾಗಿರುವುದರಿಂದ ಸರಕಾರದಿಂದ ದೊರೆಯುವ ಸೌಲಭ್ಯಗಳನ್ನು ಪಡೆದುಕೊಂಡು ವ್ಯಕ್ತಿ ಹಾಗೂ ಸಮುದಾಯವನ್ನು ಚುರುಕುಗೊಳಿಸುವದು ಮತ್ತು ಜನರ ಸಹಭಾಗಿತ್ವಗಳು ಕಾರ್ಯಕ್ರಮದ ಮುಖ್ಯ ವಿಷಯಗಳಾಗಿವೆ.'

ಯೋಜನಾ ಆಯೋಗವು, "ಸಮುದಾಯ ಅಭಿವೃದ್ಧಿಯು ಒಂದು ವಿಧಾನ ಮತ್ತು ಗ್ರಾಮೀಣ ವಿಸ್ತರಣಾ ಸಂಸ್ಥೆಯ ಮುಖಾಂತರ ಪಂಚವಾರ್ಷಿಕ ಯೋಜನೆಯು ಗ್ರಾಮೀಣ ಜನರ ಸಾಮಾಜಿಕ ಮತ್ತು ಆರ್ಥಿಕ ಜೀವನ ಪರಿವರ್ತನೆಯ ಒಂದು ಪ್ರಕ್ರಿಯೆಯನ್ನು

ಪ್ರಾರಂಭಿಸಲು ಪ್ರಯತ್ನಿಸುತ್ತದೆ" ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತದೆ. ಈ ಸಮುದಾಯ ಅಭಿವೃದ್ಧಿ ಕಾರ್ಯಕ್ರಮವು ಇಲ್ಲಿಯವರೆಗಿನ ಎಲ್ಲ ಪಂಚವಾರ್ಷಿಕ ಯೋಜನೆಗಳಲ್ಲಿ ವಿವಿಧ ಕಾರ್ಯಕ್ರಮಗಳೊಂದಿಗೆ ಹರಿದುಬಂದಿದೆ.

ಯೋಜನಾ ಆಯೋಗದಿಂದ ನಿವೇದಿಸಲ್ಪಟ್ಟ ಸಮುದಾಯ ಅಭಿವೃದ್ಧಿಯ ನಿಶ್ಚಿತವಾದ ಉದ್ದೇಶಗಳು ಈ ಕೆಳಗಿನಂತಿವೆ;

೧. ಗ್ರಾಮಗಳಲ್ಲಿ ಕೆಲಸಮಾಡುವ ಇಲಾಖೆಗಳ ವಿಧಾನವು ಅಥವಾ ಅನುಸಂಧಾನವು (Approach) ಸಮನ್ವಯ ಹೊಂದಿರಬೇಕು ಮತ್ತು ಗ್ರಾಮೀಣ ಜನರ ಜೀವನವನ್ನು ಇಡಿಯಾಗಿ ಗ್ರಹಿಸುವುದು. ಈ ವಿಧಾನವು ಗ್ರಾಮೀಣ ಕಾರ್ಯದಲ್ಲಿ ನಿರತವಾಗಿರುವ ಎಲ್ಲ ಮುಖ್ಯ ಇಲಾಖೆಗಳಿಗೆ ಗ್ರಾಮ ಮಟ್ಟದ ಕಾರ್ಯಕರ್ತನೆಂದು ಗುರುತಿಸಲ್ಪಟ್ಟ ಸಾಮಾನ್ಯ ಏಜಂಟನ ಮುಖಾಂತರ ಕಾರ್ಯ ನಡೆಯಬೇಕು.

೨. ಅಧಿಕಾರ ಯಂತ್ರವು ಮಾರ್ಗದರ್ಶನ ಹಾಗೂ ನೆರವನ್ನು ನೀಡುತ್ತದೆ. ತಮ್ಮ ಸ್ವಸ್ಥಿತಿಯನ್ನು ಸುಧಾರಿಸುವ ಮುಖ್ಯ ಜವಾಬ್ದಾರಿಯು ಜನರಿಂದಲೇ ಆಗಬೇಕೆನ್ನುವುದು ಮುಖ್ಯ. ಸ್ವಸಹಾಯ ಮತ್ತು ಪರಸ್ಪರ ಸಹಕಾರಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಮೊಟ್ಟಮೊದಲಿಗೆ ಕೈಗೆತ್ತಿಕೊಳ್ಳಬೇಕು.

೩. ವೈಜ್ಞಾನಿಕ ಕೃಷಿ, ಗೃಹ ಮತ್ತು ಸಣ್ಣ ಕೈಗಾರಿಕೆಗಳ ಬಳಕೆಯ ಮುಖಾಂತರ ದೀರ್ಘಕಾಲದ ಅರೆಉದ್ಯೋಗ, ನಿರುದ್ಯೋಗಗಳನ್ನು ತೊಡೆದುಹಾಕಬೇಕು.

೪. ಕಾರ್ಯರೂಪದ ನೆರವುಗಳಿಂದ ಅಂದರೆ ಅವರ ಸಮಸ್ಯೆಗಳನ್ನು ನಿವಾರಿಸಲು, ಹಣಕಾಸು, ಬೀಜ, ಗೊಬ್ಬರ ಹಾಗೂ ತಾಂತ್ರಿಕ ಮಾರ್ಗದರ್ಶನಗಳ ಸಮಾಲೋಚನೆ ಮತ್ತು ಸಂವೇದನಗಳು ಬೆಂಬಲಿಸಲ್ಪಡಬೇಕು.

೫. ಪರಿಶ್ರಮಪೂರ್ಣವಾಗಿ ಕಾರ್ಯಕ್ರಮವನ್ನು ಹಿಂಬಾಲಿಸುವುದರಿಂದ ಅತ್ಯುತ್ತಮ ಪ್ರತಿಫಲಗಳನ್ನು ಪಡೆಯಬೇಕು. ಗ್ರಾಮಗಳಲ್ಲಿ ಎಲ್ಲ ಕುಟುಂಬಗಳನ್ನು ಕಾರ್ಯತಃ ಕಾರ್ಯಕ್ರಮಗಳಲ್ಲಿ ತರಬೇಕು. ವಿಶೇಷತಃ ಸಹಕಾರಿ ಆಂದೋಲನ ಮತ್ತು ಇತರ ಸಂಸ್ಥೆಗಳಲ್ಲಿ ಸ್ಥಾನಗಳನ್ನು ಪಡೆಯಲು ದಲಿತರು ಬರುವಂತಾಗಬೇಕು.

೬. ಗ್ರಾಮೀಣ ಜನತೆಯಲ್ಲಿ ಉತ್ತಮ ಜೀವನ ಮಟ್ಟದ ಸಲುವಾಗಿ, ಉತ್ತಮವಾಗಿ ಬದುಕುವ ಮನಸ್ಸು ಮಾಡುವ ಸಲುವಾಗಿ ಒಂದು ಕೆರಳುವ ತವಕವನ್ನು (ಇಚ್ಛೆಯನ್ನು) ಹುಟ್ಟಿಸಬೇಕು.

ಇಲ್ಲಿ ಡಾ. ಡಗ್ಲಾಸ್ ಎನ್ಸ್‌ಮಿಂಗರರೂ (Dr. Douglass Ensminger) ಕೂಡ ವಿಸ್ತೃತವಾದ ಉದ್ದೇಶಗಳನ್ನು ಚರ್ಚಿಸಿದ್ದಾರೆ.

ಮುಂದೆ ಸಮುದಾಯ ಅಭಿವೃದ್ಧಿ ಯೋಜನೆಗಳು, ರಾಷ್ಟ್ರೀಯ ವಿಸ್ತರಣಾ ಸೇವಾ ಯೋಜನೆ ಮುಂತಾದವುಗಳು ಅಭಿವೃದ್ಧಿ ಕಾರ್ಯದಲ್ಲಿ ತೊಡಗಿದವು. ಡಾ. ಲೀಗನ್ಸ್ (Dr. Leagans) ಗ್ರಾಮೀಣ ವಿಸ್ತೃತ-ಶಿಕ್ಷಣ ಮಾಹಿತಿಯ ಕುರಿತು ವಿವರಿಸಿದ್ದಾರೆ. ವಿಸ್ತೃತ ಶಿಕ್ಷಣದಿಂದ ಗ್ರಾಮೀಣ ಜನತೆಗೆ ಆಗುವ ಲಾಭಗಳನೇಕ. ಅದರಿಂದ ಜನತೆಯ ಜೀವನ ಸುಧಾರಣೆ, ಶಿಕ್ಷಣ, ಪ್ರಜಾಸತ್ತಾತ್ಮಕ, ಪ್ರಜಾಪ್ರಭುತ್ವಗಳ ಸಂಸ್ಕೃತಿ, ಅಭಿರುಚಿ ಬದಲಾವಣೆ ಆಸಕ್ತಿ ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವ ಮಾರ್ಗವನ್ನು ಮನವರಿಕೆ ಮಾಡುವ ವಿಧಾನವು ಇದಾಗಿದೆ ಎನ್ನಬಹುದು. ಹೀಗೆ ಪ್ರಜಾಸತ್ತಾತ್ಮಕ ಆಡಳಿತ ರಚನೆ, ಅಧಿಕಾರ ವಿಕೇಂದ್ರೀಕರಣ ಮುಂತಾದ ಯೋಜನೆಗಳು ರೂಪುಗೊಂಡು ಜಾರಿಗೆ ಬಂದವು. ದೇಶದ ಪಂಚವಾರ್ಷಿಕ ಯೋಜನೆಗಳಲ್ಲಿ ಗ್ರಾಮಾಭಿವೃದ್ಧಿಯ ಅನೇಕಾನೇಕ-ಪ್ರಯೋಗಗಳು ಮುಂದುವರಿದಿವೆ.

## ಸಮುದಾಯ ಅಭಿವೃದ್ಧಿಯ ಕಾರ್ಯಕ್ರಮಗಳು :

ಈ ಕಾರ್ಯಕ್ರಮಗಳಲ್ಲಿ ಮೂರು ಮುಖ್ಯವಾದ ಕಾರ್ಯ ಚಟುವಟಿಕೆಗಳಿವೆ : ೧) ಕೃಷಿ ಕ್ಷೇತ್ರದಲ್ಲಿ ಉತ್ಪಾದನೆ ಮತ್ತು ಉದ್ಯೋಗಗಳಲ್ಲಿ ಹೆಚ್ಚಳ. ಈ ಉದ್ದೇಶಕ್ಕಾಗಿ ಕಾರ್ಯಕ್ರಮದಲ್ಲಿ ಅನೇಕ ಯೋಜನೆಗಳು ಸೇರಿಕೊಂಡವು. ಅವುಗಳಲ್ಲಿ ಹೆಚ್ಚು ಮಹತ್ವದವುಗಳೆಂದರೆ, ನೀರಾವರಿ ಯೋಜನೆಯ ಪೂರ್ಣ ಉಪಯೋಗ, ವಿವಿಧ ಬೆಳೆಗಳು, ಸುಧಾರಿತ ಬೀಜಗಳ ಹೆಚ್ಚಳ, ರಾಸಾಯನಿಕ ಗೊಬ್ಬರಗಳ ಪೂರೈಕೆ, ಕಾಂಪೋಸ್ಟ್ ಹಾಗೂ ಹಸಿರು ಗೊಬ್ಬರಗಳ ಕಾರ್ಯಕ್ರಮ, ಸುಧಾರಿತ ಬೇಸಾಯ ವಿಧಾನದ ಅಳವಡಿಕೆ, ಗೃಹ ಹಾಗೂ ಸಣ್ಣ ಕೈಗಾರಿಕೆಗಳಿಗೆ ಪ್ರೋತ್ಸಾಹ ೨) ಸ್ವಾವಲಂಬನ ಮತ್ತು ಹೆಚ್ಚಿನ ಪ್ರಮಾಣದಲ್ಲಿ ಸಹಕಾರದ ಅನ್ವಯಿಕತೆ. ಅದಕ್ಕಾಗಿ ಉಚಿತ ಶಿಕ್ಷಣ, ಉಚಿತ ವೈದ್ಯಕೀಯ ನೆರವು, ನೈರ್ಮಲ್ಯ, ಸಾರ್ವಜನಿಕ ಆರೋಗ್ಯ ಸೌಕರ್ಯಗಳು ಮತ್ತು ಗ್ರಾಮೀಣ ಗೃಹ

ನಿರ್ಮಾಣಕ್ಕೆ ಸುಧಾರಿತ ತಂತ್ರ ಹಾಗೂ ಮಾದರಿ ಸೌಲಭ್ಯಗಳನ್ನು ಒದಗಿಸಲು ವಿವಿಧ ಸಂಘ ಸಂಸ್ಥೆಗಳು ಪ್ರಾರಂಭವಾದವು ೩) ಲಭ್ಯವಿರುವ ಮಾನವ ಶಕ್ತಿ ಸಂಪನ್ಮೂಲಗಳನ್ನು ಶ್ರಮದಾನ (gift of labour) ಮುಂತಾದ ಸೇವೆಗಳನ್ನು ಸಾಧ್ಯವಾದಷ್ಟು ಹೆಚ್ಚಿನ ಪ್ರಮಾಣದಲ್ಲಿ ಸಜ್ಜುಗೊಳಿಸುವದು.

ಸಮುದಾಯ ಅಭಿವೃದ್ಧಿ ಕಾರ್ಯಕ್ರಮವು ಎಷ್ಟೇ ಉತ್ತಮವಾಗಿದ್ದರೂ ಅನುಷ್ಠಾನದಲ್ಲಿ ನಿರೀಕ್ಷಿತ ಫಲ ದೊರೆಯಲಿಲ್ಲ. ಅದಕ್ಕೆ ಕಾರಣಗಳೂ ಇಲ್ಲದಿಲ್ಲ. ಇಲ್ಲಿ ಕೆಲವು ಕಾರಣಗಳನ್ನು ನೋಡಬಹುದು.

೧. ಕಾರ್ಯಕ್ರಮದಿಂದಾದ ಲಾಭಗಳನ್ನು ಸಮನಾಗಿ ಹಂಚದಿರುವುದು

೨. ಕಾರ್ಯಕ್ರಮದಲ್ಲಿ ಆದ್ಯತೆಗಳನ್ನು ಸ್ಪಷ್ಟವಾಗಿ ಉಲ್ಲೇಖಿಸದಿರುವುದು

೩. ಜನರ ಜನಪ್ರಿಯ ಪ್ರತಿಕ್ರಿಯೆಯನ್ನು ಆಹ್ವಾನಿಸದಿರುವುದು

೪. ಯೋಗ್ಯ ಶಿಕ್ಷಣ ಮತ್ತು ತರಬೇತಿ ಇಲ್ಲದ ಸಿಬ್ಬಂದಿ

೫. ಕಾರ್ಯ ಜವಾಬ್ದಾರಿ ಕೊರತೆ ಇತ್ಯಾದಿ.

## ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ : [Integrated Rural Development Programme]

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು (ಕಾರ್ಯಕ್ರಮವು) ಆರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಪ್ರಾರಂಭವಾಯಿತು.

**ಸ.ಗ್ರಾ. ಅ. ಕಾಲದ ಪರಿಕಲ್ಪನೆ** : ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮವು ನಿರ್ದಿಷ್ಟ ಅವಧಿಯಲ್ಲಿ- ಹಿಂದುಳಿಯುವಿಕೆ (Backwardness) ಅಜ್ಞಾನ ಮತ್ತು ಬಡತನಗಳ ನಿವಾರಣೆ ಮುಖಾಂತರ ಗ್ರಾಮೀಣ ಪ್ರದೇಶದಲ್ಲಿ ಸಮಾಜೋ-ಆರ್ಥಿಕ ಪರಿವರ್ತನೆ ತರುವುದರಿಂದ ಗ್ರಾಮೀಣ ಬದುಕಿನಲ್ಲಿ ಕ್ರಾಂತಿ ತರಲು ಉಪಾಯ ಹೂಡಿತು. ಈ ಕಾರ್ಯಕ್ರಮವು ಅಲ್ಲಿರುವ ಎಲ್ಲ ಪಂಗಡದ ಜನರನ್ನು ಭೌತಿಕವಾಗಿ ಉದ್ಧಾರಮಾಡಲು ಹಾಗೂ ಇಡೀ ಬದುಕನ್ನು ಉತ್ತಮಗೊಳಿಸಲು, ಗ್ರಾಮಗಳ ಒಂದು ಗೊಂಚಲ(Cluster)ದ ಸ್ವಾಭಾವಿಕ ಮತ್ತು ಮಾನವ ಸಂಪನ್ಮೂಲಗಳ ಅತ್ಯುತ್ತಮ ಸ್ಥಿತಿಯ ಬಳಕೆಯನ್ನು ಗ್ರಹಿಸುತ್ತದೆ.

ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಈ ಕೆಳಗೆ ವಿವರಿಸಿದ ಕಾರ್ಯಗಳನ್ನು ಒಂದು ಛತ್ರಿನ ಅಡಿಯಲ್ಲಿ ತರಲಾಗಿದೆ.

೧. ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ. ೨. ಸಣ್ಣ ರೈತರ ಅಭಿವೃದ್ಧಿ ಸಂಘ. ೩. ಬರಗಾಲ ಪೀಡಿತ ಕ್ಷೇತ್ರದ ಕಾರ್ಯಕ್ರಮ.

೪. ಜಲಪ್ರಳಯ ಪರಿಹಾರ ಕಾರ್ಯ. ೫. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ. ೬. ಕನಿಷ್ಠ ಬೇಡಿಕೆಗಳ ಕಾರ್ಯಕ್ರಮ.

ಅದೇ ಪ್ರಕಾರ, ರಾಜ್ಯ ಸರಕಾರಗಳು ಕೈಕೊಂಡ ಯೋಜನೆಗಳು ಇಂತಿವೆ: ಮಹಾರಾಷ್ಟ್ರ ರಾಜ್ಯದಲ್ಲಿ ಕೈಕೊಂಡ ಉದ್ಯೋಗ ಖಾತ್ರಿ ಯೋಜನೆ, ಕರ್ನಾಟಕದಲ್ಲಿ ಭೂಸೈನ್ಯ ಯೋಜನೆ, ಕೇರಳದಲ್ಲಿ ಕಾರ್ಮಿಕ ಬ್ಯಾಂಕ್ ಯೋಜನೆ, ಆಂಧ್ರ ಪ್ರದೇಶದಲ್ಲಿ ವಿಶೇಷ ಉದ್ಯೋಗ ಯೋಜನೆ, ಹಾಗೆಯೇ ಖಾದಿ ಹಾಗೂ ಗ್ರಾಮೋದ್ಯೋಗಗಳ ಆಯೋಗ, ಇತರ ಅಖಿಲ ಭಾರತ ಮಂಡಳಿಗಳು ಹಾಗೂ ಸ್ವಯಂ ಸೇವಾ ಸಂಘಗಳ ಕಾರ್ಯಕ್ರಮಗಳು ಕೂಡ ಒಟ್ಟಿಗೆ ಇದರಲ್ಲಿ ಸೇರಿಕೊಂಡವು.

ಒಟ್ಟಾರೆ ಬಡಜನರು ತಮ್ಮ ಬಡತನದ ಬವಣೆಯ ಬಲೆಯಿಂದ ಹೊರಬಂದು ತಮ್ಮನ್ನು ತಾವೇ ಎತ್ತರಿಸಿಕೊಳ್ಳುವಂತೆ ಮಾಡುವುದು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ನಿಸ್ಸಂಶಯವಾಗಿ ಅತೀವ ಸಂಕೀರ್ಣವಾದ ಕೆಲಸ. ಇದಕ್ಕೆ ಕ್ರಿಯಾಶೀಲ ಹಾಗೂ ವಿಧೇಯ ಸಂಘಟನೆಗಳ ಅವಶ್ಯಕತೆ ಇದೆ. ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸಾಮಾಜಿಕ ಮತ್ತು ಆರ್ಥಿಕವಾಗಿ ದುರ್ಬಲರಾದ ದಲಿತರು, ಭೂಹೀನರು ಹಾಗೂ ಬುಡಕಟ್ಟು ಜನರು ಮನಸಾರೆ ಪಾಲ್ಗೊಳ್ಳಬೇಕಾದುದು ಅತ್ಯವಶ್ಯ ಮತ್ತು ಈ ಕಾರ್ಯಕ್ರಮದ ಸೌಲಭ್ಯಗಳನ್ನು ಶೋಷಣೆ ಮಾಡುವ ಶ್ರೀಮಂತರು, ಅಧಿಕಾರಿಗಳು, ಮಧ್ಯವರ್ತಿಗಳು ಮುಂತಾದವರನ್ನು ಪ್ರಾಮಾಣಿಕವಾಗಿ ತಡೆಯಲೇಬೇಕು.

ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಗ್ರಾಮ ಮಟ್ಟದ ಕಾರ್ಯಕರ್ತರು, ಅಧಿಕಾರಿಗಳು ಹಾಗೂ ಸಂಘ ಸಂಸ್ಥೆಗಳು ತಡೆಗೋಡೆಗಳಾಗದೆ ಗ್ರಾಮೀಣ ಅಭಿವೃದ್ಧಿಯ ಲಾಭಪಡೆಯುವಂತಾಗಬೇಕು. ಸರಕಾರದ ಸಹಾಯಧನ ಮತ್ತು ಗ್ರಾಮೀಣ ಹಾಗೂ ಇತರ ಬ್ಯಾಂಕುಗಳಿಂದ ಪಡೆದ ಸಾಲ ಸೌಲಭ್ಯಗಳ ಸದುಪಯೋಗವಾಗಬೇಕು; ಸರಿಪಡಿಸಬೇಕು.

ಸರಕಾರದ ಸಾಲ ನೋಡು

ದರಕಾರಿಲ್ದ ಖರ್ಚು ಮಾಡು

ಮನ್ನಾ ಮಾಡ್ತೊ ಯತ್ನ ಮಾಡು-ಅನ್ನುವಂತಾಗಬಾರದು. ರೈತರು, ಬಡವರು ಆತ್ಮವಂಚನೆ, ಆತ್ಮಹತ್ಯೆಗಳಂಥ ದುರಂತಗಳಿಗೆ ತುತ್ತಾಗದಂತೆ-ಅವರಲ್ಲಿ ಆತ್ಮವಿಶ್ವಾಸ ಮೂಡಿಸಬೇಕು.

ಭಾರತದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿಯು ಪ್ರಾಮಾಣಿಕವಾಗಿ, ನ್ಯಾಯಯುತವಾಗಿ ಸಹಕಾರ ಹಾಗೂ ಸಮುದಾಯದ ಸಹಭಾಗಿತ್ವದ ಮೇಲೆ ನಡೆಯಬೇಕಾಗಿದೆ.

## ಪಂಚಾಯತ್‌ರಾಜ್ ಹಾಗೂ ಗ್ರಾಮೀಣಾಭಿವೃದ್ಧಿ :

ಪಂಚಾಯತಿ ರಾಜ್ಯ ಅಥವಾ ಸ್ಥಾನಿಕ ಸರಕಾರವು ಆಡಳಿತಾಧಿಕಾರದ ವಿಕೇಂದ್ರೀಕರಣದಲ್ಲಿ ಒಂದು ಪ್ರಯೋಗವಾಗಿರುತ್ತದೆ. (English Version: Dr. ಗೋಪಾಲ್ ಲಾಲ್ ಜೈನ್) ಇದು ಜನವರಿ ೧೨, ೧೯೫೮ರಲ್ಲಿ ಸ್ಥಾಪಿತವಾಯಿತು. ನಿಜ ಹೇಳಬೇಕೆಂದರೆ ಗ್ರಾಮೀಣ ಅಭಿವೃದ್ಧಿಯು ವಿವಿಧ ಕ್ಷೇತ್ರಗಳಲ್ಲಿ ಆಗಬೇಕಾಗುತ್ತದೆ. ಸಾಮಾಜಿಕ, ಆರ್ಥಿಕ-ರಾಜಕೀಯ ಮತ್ತು ಸಾರ್ವಜನಿಕ ಕಾರ್ಯ ಅಂದರೆ, ರಸ್ತೆ, ಕಟ್ಟಡ ಮುಂತಾದವು, ಇತರ ಸಂಬಂಧಪಟ್ಟ ಸೌಕರ್ಯಗಳ ಪುನರ್ರಚನೆ ಆಗುವುದು ಅವಶ್ಯ. ಸಾಮಾಜಿಕ ಅಭಿವೃದ್ಧಿಯ ಕ್ಷೇತ್ರದಲ್ಲಿ ಗ್ರಾಮ ಪಂಚಾಯತಿಯು ಅನೇಕ ಚಟುವಟಿಕೆಗಳನ್ನು ಕೈಕೊಳ್ಳಬೇಕಾಗುತ್ತದೆ.

**೧. ಸಾಮಾಜಿಕ ಸುಧಾರಣೆ** : ಬಾಲ್ಯ ವಿವಾಹವನ್ನು ತಡೆಯುವುದು, ವಿಧವಾ ವಿವಾಹವನ್ನು ಪ್ರೋತ್ಸಾಹಿಸುವುದು, ಜಾತೀಯತೆಯನ್ನು ಹೋಗಲಾಡಿಸುವುದು, ವಿವಾಹ ಮುಂತಾದ ಸಾಮಾಜಿಕ ಸಮಾರಂಭಗಳಲ್ಲಿ ದುಂದು ವೆಚ್ಚ, ಹೆಚ್ಚು ಕಾಲವ್ಯಯ ಮಾಡುವುದನ್ನು ತಪ್ಪಿಸುವುದು; ಅಲ್ಲದೆ ಜನರ ಕೆಟ್ಟ ಚಟಗಳನ್ನು, ದುಷ್ಟ ಹವ್ಯಾಸಗಳನ್ನು ಬದಲಾಯಿಸಿ ಆರ್ಥಿಕ ಹಾಗೂ ಸಾಮಾಜಿಕ ಜೀವನದ ಸುಧಾರಣೆಗಳಲ್ಲಿ ಅಭಿರುಚಿ ಹುಟ್ಟಿಸುವುದು.

**೨. ಶಿಕ್ಷಣ ಸೌಲಭ್ಯಗಳನ್ನು ಒದಗಿಸುವುದು** : ಪಂಚಾಯತರಾಜ್‌ವು ಅನಕ್ಷರತೆಯನ್ನು ತೊಡೆದುಹಾಕಲು ಒಂದು ಸಮರ್ಥ ಸಂಸ್ಥೆಯಾಗಬಲ್ಲದು. ಒಂದು ವೇಳೆ ಹಾಗೆ ಮಾಡಿದ್ದಾದರೆ ಇತರ ಸಮಸ್ಯೆಗಳಾದ ಅಸ್ಪೃಶ್ಯತೆ-ಬಡತನ ಮುಂತಾದವುಗಳ ನಿವಾರಣೆಯು ಸಾಧ್ಯವಾಗಬಹುದು. ಪಂಚಾಯತಿಯು ಮಕ್ಕಳಿಗೆ, ಪ್ರೌಢರಿಗೆ ಶಾಲೆಗಳನ್ನು, ಸಾಮಾಜಿಕ ಶಿಕ್ಷಣದ ಕಾರ್ಯಕ್ರಮಗಳನ್ನು ನಡೆಸಬಲ್ಲುದು. ಕೆಲವು ಗ್ರಾಮ ಪಂಚಾಯತಿಗಳು ಸರಕಾರಿ ಸಂಘಗಳು ವಹಿಸಿಕೊಟ್ಟ ಕಾರ್ಯವನ್ನು ನೆರವೇರಿಸಿವೆ. ನೆರವೇರಿಸುತ್ತಲೂ ಇವೆ.

**೩. ಮಕ್ಕಳ ಹಾಗೂ ಮಹಿಳೆಯರ ಕಲ್ಯಾಣ ಕಾರ್ಯಕ್ರಮಗಳು** : ಗ್ರಾಮ ಪಂಚಾಯತಿಗಳ ಮುಖಾಂತರ ಮಕ್ಕಳ ಹಾಗೂ ಮಹಿಳಾ ಕಲ್ಯಾಣದ ಬಹಳಷ್ಟು ಕಾರ್ಯಕ್ರಮಗಳನ್ನು ಕೈಕೊಳ್ಳಬಹುದಾಗಿದೆ. ಅವು ಕುಟುಂಬದಲ್ಲಿ ಮಹಿಳೆಯರ ಮಹತ್ವವನ್ನು ಕುರಿತು ಜ್ಞಾನ, ಶಿಕ್ಷಣವನ್ನು ನೀಡುವ ಕಾರ್ಯಕ್ರಮಗಳನ್ನು ಕೈಕೊಳ್ಳಬಲ್ಲವು. ಪಂಚಾಯತಿಗಳು ಮಗು ಮತ್ತು ಮಾತೆಯರ ಕಲ್ಯಾಣ ಕೇಂದ್ರಗಳನ್ನು ಸಹ ಸ್ಥಾಪಿಸಬಲ್ಲವು.

ಕೆಲವೇ ಪಂಚಾಯತಿಗಳು ಈ ಕಾರ್ಯಕ್ರಮಗಳನ್ನು ಕೈಗೆತ್ತಿಕೊಂಡಿವೆ. ಈ ಕಾರ್ಯಕ್ರಮಗಳು ಗ್ರಾಮೀಣ ಸಮಾಜದ ಅಭಿವೃದ್ಧಿಗೆ ಅತಿ ಮಹತ್ವವಾದವುಗಳಾಗಿವೆ. ಕೆಲವು ಪ್ರದೇಶಗಳಲ್ಲಿ ಸರಕಾರಿ ಸಂಘಗಳ ಪ್ರೋತ್ಸಾಹದಿಂದ ಕೆಲವು ಕಾರ್ಯಕ್ರಮಗಳನ್ನು ಕೈಗೆತ್ತಿಕೊಂಡಿವೆ.

**೪. ನಿಷೇಧಾಜ್ಞೆ ಕಾರ್ಯಕ್ರಮ** : ಗ್ರಾಮದ ಜನರು ಮಾದಕ ವಸ್ತುಗಳ ಸೇವನೆಯನ್ನು ಬಿಟ್ಟರೆ ಬಹಳಷ್ಟು ಹಣವನ್ನು ಉಳಿಸಬಲ್ಲರು ಮತ್ತು ಆರೋಗ್ಯವನ್ನು ಸುಧಾರಿಸಿಕೊಳ್ಳಬಲ್ಲರು. ನಿಷೇಧಾಜ್ಞೆಯು ರಾಷ್ಟ್ರೀಯ ಧೋರಣೆಯ ಒಂದು ಅಂಶವಾಗಿದೆ. ಗ್ರಾಮ ಪಂಚಾಯತಿಗಳು ಈ ಕ್ಷೇತ್ರದಲ್ಲಿ ಅತಿಮಹತ್ವದ ಪಾತ್ರವನ್ನು ವಹಿಸಬಹುದಾಗಿದೆ. ಆದರೆ ಗ್ರಾಮ ಪಂಚಾಯತಿಗಳು ಈ ಕ್ಷೇತ್ರದಲ್ಲಿ ಏನನ್ನೂ ಮಾಡಲಿಲ್ಲ. ಗ್ರಾಮ ಪಂಚಾಯತಿ ಮುಖಂಡರೇ ಮದ್ಯಪಾನ ಮತ್ತು ಮಾದಕವಸ್ತುಗಳ ಸೇವನೆಯಿಂದ ಸುಖಾನುಭವ ಪಡೆಯುತ್ತಿದ್ದಾರೆ. ಇದು ನಮ್ಮೆಲ್ಲರ ದುರ್ದೈವ ಮತ್ತು ಇದು ವ್ಯಕ್ತಿಗೆ, ಸಮಾಜಕ್ಕೆ ಆರೋಗ್ಯಕರವಲ್ಲ. ಸರಕಾರಿ ಸಂಘ ಸಂಸ್ಥೆಗಳು ಗ್ರಾಮ ಪಂಚಾಯತಿಗಳಿಗೆ ನಿಷೇಧಾಜ್ಞೆ ಕಾರ್ಯಕ್ರಮವನ್ನು ಕೈಕೊಳ್ಳುವಂತೆ ಬೆನ್ನು ಬೀಳಬೇಕು; ಹಿಂಬಾಲಿಸಬೇಕು.

೫. **ಮನರಂಜನಾ ಕಾರ್ಯಕ್ರಮಗಳು** : ಗ್ರಾಮೀಣ ಸಮಾಜದಲ್ಲಿ ಆರೋಗ್ಯಕರ ಮನರಂಜನೆಯು ಬಹಳ ಅವಶ್ಯವಾಗಿ ಬೇಕಾಗುತ್ತದೆ. ಗ್ರಾಮೀಣ ಜನರಿಗೆ ಸಾಕಷ್ಟು ಬಿಡುವಿನ ವೇಳೆ ಇರುವುದರಿಂದ ಅದನ್ನು ಅನೇಕ ಕೆಟ್ಟ ಕಾರ್ಯಗಳಿಗೆ ಉಪಯೋಗಿಸಿಕೊಳ್ಳಬಹುದಾಗಿದೆ. ಸಾಕಷ್ಟು ವೇಳೆ ದೊರೆಯುವುದರಿಂದ ಗ್ರಾಮದಲ್ಲಿ ಗುಂಪುಗಾರಿಕೆಯೂ ಬೆಳೆಯುತ್ತದೆ. ಒಂದು ವೇಳೆ ಆರೋಗ್ಯಕರ ಮನರಂಜನಾ ಸಾಧನಗಳು, ಸ್ಥಳೀಯ ಕಲಾ ಕೌಶಲ್ಯಗಳು ಲಭ್ಯವಿದ್ದರೆ ಅವುಗಳನ್ನು ಲಾಭದಾಯಕವಾಗಿ ಬಳಸಿಕೊಳ್ಳಬಹುದು. ಗ್ರಾಮ ಪಂಚಾಯತಿಗಳು ರೇಡಿಯೊ ಅಥವಾ ಟಿ.ವಿ. ಸೆಟ್ಟುಗಳನ್ನು ತಂದುಕೊಳ್ಳಬಹುದು. ಕೆಲವು ಪಂಚಾಯತಿಗಳಲ್ಲಿ ಇವು ಈಗಾಗಲೇ ಲಭ್ಯ ಇವೆ. ಅವುಗಳ ಸದುಪಯೋಗವಾಗಬೇಕು. ಆಗಾಗ ಚಲನಚಿತ್ರ ಪ್ರದರ್ಶನಗಳ ವ್ಯವಸ್ಥೆ ಮಾಡಬಹುದು ಮತ್ತು ವರ್ತಮಾನ ಪತ್ರಿಕೆಗಳನ್ನು ತರಿಸುವ, ಆಟ ಪಾಠಗಳನ್ನು ಸಂಘಟನೆ ಮಾಡುವ, ಮುಂತಾದವುಗಳ ವ್ಯವಸ್ಥೆ ಮಾಡಬಹುದು.

ಈ ವಿಚಾರದಲ್ಲಿ ಅನೇಕ ಗ್ರಾಮ ಪಂಚಾಯತಿಗಳು ನಿಜಕ್ಕೂ ಹೇಳಿಕೊಳ್ಳುವಂಥ ಅವಕಾಶಗಳನ್ನು ಒದಗಿಸಿವೆ ಎನ್ನಬಹುದು. ಹೆಚ್ಚಾಗಿ ಎಲ್ಲಾ ಪಂಚಾಯತಿಗಳಲ್ಲಿ ರೇಡಿಯೋ ಸೆಟ್ಟುಗಳು ಕಾಣಸಿಗುತ್ತವೆ.

೬. **ಸಾಮುದಾಯಿಕ ಸಾಂಘಿಕ ಜೀವನ ಸಂಘಟನೆ** : ಜಾತಿ ವ್ಯವಸ್ಥೆಯಲ್ಲಿ ಬದಲಾವಣೆ ಮತ್ತು ಜಮೀನ್ದಾರಿ ವ್ಯವಸ್ಥೆಯನ್ನು ರದ್ದುಗೊಳಿಸಿದ್ದರಿಂದ ಗ್ರಾಮಗಳಲ್ಲಿ ಸಾಂಘಿಕ ಜೀವನ ವಿಧಾನವು ಬದಲಾದಂತಿದೆ. ಸಾಂಘಿಕ ಜೀವನವು ಧಕ್ಕೆಗೊಳಗಾಗದಂತೆ ಅಖಂಡವಾಗಿ ಉಳಿಯಬೇಕು ಮತ್ತು ಗ್ರಾಮ ಪಂಚಾಯತಿಗಳು ಈ ದಿಶೆಯಲ್ಲಿ ಅತಿ ಮಹತ್ವದ ಪಾತ್ರಗಳನ್ನಾಡಬಲ್ಲವು.

ಆದರೆ ಗ್ರಾಮ ಪಂಚಾಯತಿಗಳು ಮುಖಂಡರುಗಳ, ವಿವಿಧ ಜಾತಿಗಳ ಹಾಗೂ ಹಿಂದಿನ ಜಮೀನ್ದಾರರ ಪ್ರಭಾವದಿಂದ ಇನ್ನೂ ಮುಕ್ತವಾಗಿಲ್ಲ. ಆದ್ದರಿಂದ ಅವು ಈ (ಕ್ಷೇತ್ರದಲ್ಲಿ) ವಿಷಯದಲ್ಲಿ ಹೆಚ್ಚಿನ ಸಾಧನೆ ಮಾಡಲು ಮುಂದಾಗಿಲ್ಲ. ಗ್ರಾಮದ ಸಾಂಘಿಕ ಜೀವನವು ಅಖಂಡವಾಗಿ ಉಳಿಯಬೇಕಾದರೆ ಈ ಗ್ರಾಮ ಪಂಚಾಯತಿಗಳು ತಮ್ಮ ಪಾತ್ರವನ್ನು ಪರಿಣಾಮಕಾರಿಯಾಗಿ ನಿರ್ವಹಿಸಬೇಕಾಗಿದೆ.

**ಗ್ರಾಮ ಸಮಾಜದಲ್ಲಿ ಆರ್ಥಿಕ ಪುನರ್ರಚನೆ ಹಾಗೂ ಗ್ರಾಮ ಪಂಚಾಯತಿಗಳ ಪಾತ್ರ** : ಗ್ರಾಮ ಪಂಚಾಯತಿಗಳಿಗೆ ಆರ್ಥಿಕ ಪುನರ್ರಚನೆಯ ಪೂರ್ಣ ಜವಾಬ್ದಾರಿಯನ್ನು ಹೊರಲಾಗದಿದ್ದರೂ ಸರಕಾರದ ಏಜಂಟರಾಗಿ ಅವು ಕೆಲಸ ಮಾಡಬಲ್ಲವು ಮತ್ತು ಆರ್ಥಿಕ ಪುನರ್ರಚನೆಯ ಕಾರ್ಯದಲ್ಲಿ ಅವು ನೆರವಾಗಬಲ್ಲವು. ಅದಕ್ಕೋಸ್ಕರ ಈ ಕೆಳಗಿನ ಕಾರ್ಯಗಳನ್ನು ಮಾಡಬಲ್ಲವು:

೧) ಕೃಷಿಯಲ್ಲಿ ಸುಧಾರಣೆ. ೨)ಗೃಹೋದ್ಯೋಗಗಳ ಅಭಿವೃದ್ಧಿ. ೩) ನೀರಾವರಿ ಸೌಲಭ್ಯ. ೪) ಗೋಮಾಳ ಮತ್ತು ಸುಧಾರಿತ ಜಾನುವಾರು ತಳಿಗಳ ವ್ಯವಸ್ಥೆ. ೫) ಭೂರಹಿತ ಶ್ರಮಜೀವಿಗಳ ಪುನರ್ನಿವೇಶನ. ೬) ಮಾರುಕಟ್ಟೆ ವ್ಯವಸ್ಥೆ. ೭) ವ್ಯಾಜ್ಯಗಳನ್ನು ಬಗೆಹರಿಸುವುದು.

**ಗ್ರಾಮೀಣ ಸಮಾಜದ ರಾಜಕೀಯ ಪುನರ್ರಚನೆ ಹಾಗೂ ಗ್ರಾಮ ಪಂಚಾಯತಿಗಳ ಪಾತ್ರ** : ಗ್ರಾಮ ಪಂಚಾಯತಿಗಳು ಗ್ರಾಮೀಣ ಅಭಿವೃದ್ಧಿಗಾಗಿ ಪೌರ/ನಾಗರಿಕತೆಗೆ ಸಂಬಂಧಿಸಿದ ವಿಷಯಗಳಲ್ಲಿ ಶಿಕ್ಷಣವನ್ನು ನೀಡಬೇಕಾಗುವದು. ಇದನ್ನು ಭಾಷಣ, ವ್ಯಾಖ್ಯಾನ, ರೇಡಿಯೋ, ವರ್ತಮಾನಪತ್ರಿಕೆ ಮುಂತಾದವುಗಳ ಮುಖಾಂತರ ಮಾಡಬಹುದು.

## ಸಾರ್ವಜನಿಕ ಮತ್ತು ನಾಗರಿಕ ಸೌಲಭ್ಯಗಳ ಪುನರ್ರಚನೆ :

ಒಂದು ವೇಳೆ ಗ್ರಾಮ ಸಮಾಜವು ನಿಜವಾಗಿಯೂ ಅಭಿವೃದ್ಧಿಗೊಳ್ಳಬೇಕಾದರೆ ಗ್ರಾಮ ಪಂಚಾಯತಿಗಳು ಉತ್ತಮ ರಸ್ತೆಗಳನ್ನು, ಆರೋಗ್ಯಕರ ಕಟ್ಟಡಗಳನ್ನು ಇತರ ನಾಗರಿಕ ಸೌಲಭ್ಯಗಳನ್ನು ಹೊಂದಿರಬೇಕು. ಗ್ರಾಮ ಪಂಚಾಯತಿಗಳು ಸ್ಥಾನಿಕ-ಸರಕಾರ ಮತ್ತು ಸ್ಥಾನಿಕ ಸ್ವಾಯತ್ತ ಸರಕಾರದ ಘಟಕಗಳಾಗಿರುತ್ತವೆ. ಅವು ಅನೇಕ ಕಾರ್ಯಗಳನ್ನು ಕೈಗೊಳ್ಳಬೇಕು. ಅಂದರೆ ಸಾರಿಗೆ ಸಂಪರ್ಕ ವ್ಯವಸ್ಥೆ ಮಾಡುವುದು. ಶ್ರಮದಾನಗಳ ಮುಖಾಂತರ ರಸ್ತೆಗಳ ನಿರ್ಮಾಣ ಮಾಡುವುದು, ಗ್ರಾಮದ ಜನರಿಗೆ ವೈದ್ಯಕೀಯ ಮತ್ತು ಆರೋಗ್ಯ ಸೌಲಭ್ಯಗಳನ್ನು ಒದಗಿಸುವುದು; ಬರಗಾಲ, ಜಲಪ್ರಳಯ, ಚಂಡಮಾರುತ, ಬೆಳೆಹಾನಿ, ರೋಗ ರುಜಿನಗಳು ದಾಳಿ ಮಾಡಿದಾಗ ಪರಿಹಾರ ಕಾರ್ಯವನ್ನು ಜವಾಬ್ದಾರಿಯಿಂದ ಕೈಕೊಳ್ಳಬೇಕು.

## ಗ್ರಾಮ ಪಂಚಾಯತಿ ವ್ಯವಸ್ಥೆಯ ದೌರ್ಬಲ್ಯಗಳು :

ಗ್ರಾಮ ಪಂಚಾಯತಿ ವ್ಯವಸ್ಥೆಯಲ್ಲಿ ಕೆಲವು ದೌರ್ಬಲ್ಯಗಳೂ ಇವೆ. ಅವುಗಳಲ್ಲಿ ಈ ಕೆಳಗಿನವು ಮಹತ್ವವುಳ್ಳವುಗಳಾಗಿವೆ.

೧. ಗ್ರಾಮದ ಜನರಲ್ಲಿ ಭಿನ್ನ ಮತಗಳು ಮಾತ್ರ ಸಾಕಷ್ಟಿವೆ. ಆದ್ದರಿಂದ ಪಂಚಾಯತಿಯಲ್ಲಿ ಸರ್ವಸಮ್ಮತ ನಿರ್ಣಯಗಳು ಅಸಾಧ್ಯವಾಗುತ್ತವೆ.

೨. ಗ್ರಾಮಗಳಲ್ಲಿ ಸರಿಯಾದ ಮುಖಂಡತ್ವದ ಕೊರತೆಯಿಂದಾಗಿ ಗ್ರಾಮ ಪಂಚಾಯತಿಯು ಬೇಜವಾಬ್ದಾರಿ ಜನರ ಕೈಗೊಂಬೆಯಾಗಿದೆ.

೩. ಅಭಿವೃದ್ಧಿ ಕಾರ್ಯ ಮತ್ತು ಕಾರ್ಯಕರ್ತರ ಕಾರ್ಯದಲ್ಲಿ ರಾಜಕೀಯ ಅಡ್ಡಬರುವುದರಿಂದ ಅಭಿವೃದ್ಧಿ ಕಾರ್ಯಗಳಿಗೆ ತೊಂದರೆ ಉಂಟಾಗುತ್ತದೆ. ಕಾರಣ ಪರಿಣತ ಹಾಗೂ ಅರ್ಹ ವ್ಯಕ್ತಿಗಳು ಈ ಸಂಸ್ಥೆಗಳಲ್ಲಿ ಕಾರ್ಯ ಮಾಡಲಿಕ್ಕೆ ಬರುವುದನ್ನು ತಡೆಗಟ್ಟುತ್ತಿದೆ.

೪. ಗ್ರಾಮ ಪಂಚಾಯತಿಗಳು ಗ್ರಾಮದಲ್ಲಿ ಭೂಮಾಲೀಕರ, ಸಾಲಕೊಡುವ ವ್ಯಕ್ತಿಗಳ ಪ್ರಭಾವ ಹಾಗೂ ಅಧಿಕಾರದ ದಬ್ಬಾಳಿಕೆಯಿಂದ ನರಳುತ್ತಿದೆ. ಆದ್ದರಿಂದ ಪ್ರಜಾಸತ್ತೆಯ ತರಬೇತಿ ಒಂದು ಕಡೆ, ಸ್ಥಾನಿಕ ಅಧಿಕಾರದ ದಬ್ಬಾಳಿಕೆ ಇನ್ನೊಂದು ಕಡೆಯಾಗಿ ಜನರು ಕಂಗಾಲಾಗಿದ್ದಾರೆ.

೫. ಗ್ರಾಮದ ಉತ್ಪಾದನಾ ಯೋಜನೆಗಳು ಕಾಗದದಲ್ಲಿ ಮಾತ್ರ ಜೀವಂತವಾಗಿವೆ. ಅವೂ ಕೂಡ ಕೆಲವು ಗ್ರಾಮಮಟ್ಟದ ಕಾರ್ಯಕರ್ತರ, ಸರಪಂಚರ ಹಾಗೂ ಹಿರಿಯರ ಒಳಸಂಚಿನಿಂದ ತಯಾರಾದವುಗಳಾಗಿವೆ.

ಪ್ರತಿ ಕುಟುಂಬಕ್ಕೆ ಉತ್ಪಾದನಾ ಗುರಿಗಳನ್ನೊಳಗೊಂಡ ಯಾವುದೇ ಅಧಿಕೃತ ಯೋಜನೆಯನ್ನು ರೂಪಿಸಲು ಯಾವುದೇ ಗಂಭೀರ ಪ್ರಯತ್ನಗಳು ನಡೆದಿಲ್ಲ. ಇತ್ಯಾದಿ.

## ಗ್ರಾಮೀಣ ಅಭಿವೃದ್ಧಿ ಹಾಗೂ ಸಹಕಾರ :

ಸಹಕಾರವು ಸರ್ವರ ಒಳಿತನ್ನು ಸಾಧಿಸಲು ವ್ಯಕ್ತಿಗಳ ಸ್ವಸಂಘದ ವಿಚಾರವನ್ನು ಒತ್ತಿ ಹೇಳುತ್ತದೆ. "ಅದು ಪ್ರತಿಯೊಬ್ಬನಿಗೆ ಎಲ್ಲರೂ ಮತ್ತು ಎಲ್ಲರಿಗೆ ಪ್ರತಿಯೊಬ್ಬನು" (all for each and each for all) ಎನ್ನುವ ತತ್ವದ ನೆಲಗಟ್ಟಿನಲ್ಲಿ ನಿಲ್ಲುತ್ತದೆ. ಪ್ರತ್ಯೇಕವಾಗಿದ್ದ ದುರ್ಬಲರು ಇತರರೊಂದಿಗೆ ಒಗ್ಗೂಡಿ ಪರಸ್ಪರ ಬೆಂಬಲ ನೀಡುತ್ತ ತನ್ನದೇ ಆದ ಅಭಿವೃದ್ಧಿಗಾಗಿ ಭೌತಿಕ ಲಾಭವನ್ನು ಪಡೆದು ಅವನ ಭೌತಿಕ ಸ್ವಾಭಾವಿಕ ಸಾಮರ್ಥ್ಯದಿಂದ ಅಭಿವೃದ್ಧಿ ಹೊಂದುವದು ಇದರ ಉದ್ದೇಶವಾಗಿರಬಹುದು. ಡಾ. ಕೈಲಾಸನಾಥ ಕಟಜು ಅವರ ಪ್ರಕಾರ, "ಸಹಕಾರವು ಸ್ವಸಹಾಯ ಹಾಗೂ ಪರಸ್ಪರ ಸಹಾಯವಾಗಿರುತ್ತದೆ"

ಭಾರತದಲ್ಲಿ ಸಾಲದ ಬಾಧೆಯನ್ನು ಎದುರಿಸುವ ಮತ್ತು ಗ್ರಾಮೀಣ ಸಾಲ ಪೂರೈಸುವ ಸಾಧನವನ್ನಾಗಿ ಸಹಕಾರವನ್ನು ಬಳಸುವ ವಿಚಾರವು ೧೮೯೫ರಲ್ಲಿ ಫೆಡ್ರಿಕ್-ನಿಕೋಲ್ಸನ್‌ರ (Fredrick Nicholson) ವರದಿಯಲ್ಲಿ ಮೊದಲಿಗೆ ಸೂಚಿಸಲ್ಪಟ್ಟಿತು. ದೇಶದಲ್ಲಿ ಸಹಕಾರಿ ಆಂದೋಲನದ ನಿಜವಾದ ಪ್ರಾರಂಭವು ಸಹಕಾರಿ ಸಾಲ ಸಂಘಗಳ ಕಾನೂನು ೧೯೦೪ನ್ನು ಪಾಸು ಮಾಡುವುದಾಗಿತ್ತು. ಈ ಕಾನೂನು ಸಹಕಾರಿ ಸಂಘಗಳ ನೋಂದಣಿ ಸಲುವಾಗಿ ಉಪಯೋಗವಾಯಿತು. ಆದರೆ ಈ ಕಾನೂನು ಕೆಲವು ನ್ಯೂನತೆಗಳಿಂದ ಮುಕ್ತವಾಗಿರಲಿಲ್ಲ. ಮುಂದೆ ಸಹಕಾರಿ ಸಂಘಗಳ ಕಾನೂನು ೧೯೧೨ ಈ ನ್ಯೂನತೆಗಳನ್ನು ಸರಿಪಡಿಸಲು ಉದ್ದೇಶಿಸಿತ್ತು. ನಂತರ ಈ ಆಂದೋಲನವು ತೀವ್ರತೆಯನ್ನು ಪಡೆದದ್ದರಿಂದ ಸಹಕಾರಿ ಸಾಲ ಸಂಘ ಮತ್ತು ಸಾಲೇತರ ಸಹಕಾರಿ ಸಂಘಗಳ ಸಂಖ್ಯೆಯು ಅತಿ ವೇಗವಾಗಿ ಬೆಳೆಯಿತು. ಮುಂದೆ ೧೯೧೯ರಲ್ಲಿ ಭಾರತ ಸರಕಾರದ ಕಾನೂನು ಪಾಸಾಯಿತು. ಆಗ 'ಸಹಕಾರ'ವು ಪ್ರಾಂತ್ಯಗಳಿಗೆ ಸಂಬಂಧಪಟ್ಟ ವಿಷಯವಾಯಿತು. ೧೯೧೯ರ ಕಾನೂನು ಸಹಕಾರಿ ಆಂದೋಲನಕ್ಕೆ ಒಳ್ಳೆಯ ಉತ್ತೇಜನವನ್ನು ಕೊಟ್ಟಿತು.

ಈ ಸಹಕಾರಿ ಸಂಘಗಳನ್ನು ವಿಶಾಲವಾದ ಅರ್ಥದಲ್ಲಿ ಎರಡು ಬಗೆಯಾಗಿ ವಿಂಗಡಿಸಬಹುದಾಗಿದೆ: ೧. ಪ್ರಾಥಮಿಕ ಸಹಕಾರಿ ಸಂಘಗಳು ೨. ಕೇಂದ್ರ ಸಹಕಾರಿ ಸಂಘಗಳು.

ಮುಂದೆ ಸಂಘಗಳು ವಹಿಸಿಕೊಂಡ ಕಾರ್ಯಗಳ ಪ್ರಕಾರ ಮತ್ತೆ ಎರಡು ಬಗೆಯ ಸಂಘಗಳಿವೆ : ೧. ಸಾಲ ನೀಡುವ ಸಹಕಾರಿ ಸಂಘ. ೨. ಸಾಲ ರೂಪ ಸಹಕಾರಿ ಸಂಘ.

ಸಾಲರಹಿತ ಸಂಘಗಳನ್ನು ಮುಂದೆ ಈ ಕೆಳಗಿನಂತೆ ವರ್ಗೀಕರಿಸಬಹುದು :

೧. ವಿಕ್ರಯ (ಮಾರಾಟ) ಸಹಕಾರಿ ಸಂಘಗಳು. ೨) ಗ್ರಾಹಕರ ಸಹಕಾರಿ ಸಂಘಗಳು. ೩) ಗೃಹ ನಿರ್ಮಾಣ ಸಹಕಾರಿ ಸಂಘಗಳು. ೪. ಕಾರ್ಮಿಕ ಸಹಕಾರಿ ಸಂಘಗಳು.

ಈ ಪ್ರಕಾರ ಭಾರತದಲ್ಲಿ ಸಹಕಾರ ಆಂದೋಲನವು ಮಹತ್ವದ ಎಲ್ಲ ಆರ್ಥಿಕ ಚಟುವಟಿಕೆಗಳಲ್ಲಿ ವಿಸ್ತರಿಸಲ್ಪಟ್ಟಿದೆ. ಈಗ ದೇಶದಲ್ಲಿ ಅಂದಾಜು ಪ್ರತಿಶತ ೯೦ರಷ್ಟು ಗ್ರಾಮಗಳು ಸಹಕಾರಿ ಸಂಘಗಳನ್ನು ಹೊಂದಿವೆ ಎಂದರೆ ಕಡಿಮೆ ಸಾಧನೆ ಏನಲ್ಲ. ಸಹಕಾರಿ ಸಾಲದ ಸಂಘ, ಸಹಕಾರಿ ಮಾರಾಟ ಸಂಘ, ಸಹಕಾರಿ ಸಾರಿಗೆ, ಸಂಗ್ರಹಣ ಹಾಗೂ ಸಹಕಾರಿ ಸಾಗುವಳಿ ಕ್ಷೇತ್ರದಲ್ಲಿ ಈ ಆಂದೋಲನವು ಪ್ರಶಂಸನೀಯ ಪ್ರಗತಿಯನ್ನು ಸಾಧಿಸಿದೆ.

## ಸಹಕಾರಿ ಸಂಘಗಳ ದೌರ್ಬಲ್ಯಗಳು :

ಸಹಕಾರಿ ಸಂಘಗಳ ದೌರ್ಬಲ್ಯಗಳು ಹಲವು. ಪ್ರಾರಂಭದಿಂದಲೂ ಇಡೀ ಕಾರ್ಯಕ್ರಮದಲ್ಲಿ ಸ್ವಯಂ ಸ್ಫೂರ್ತಿಯ ಅಥವಾ ಸ್ವಪ್ರೇರಣೆಯ ಕೊರತೆ; ಸಂಘಗಳ ಕಾರ್ಯಗಳಲ್ಲಿ ಅಧಿಕಾರಶಾಹಿಗಳ ಹಸ್ತಕ್ಷೇಪ; ಎರಡನೆಯದಾಗಿ-ದೇಶದಲ್ಲಿ ಜನಸಾಮಾನ್ಯರು ಸಹಕಾರದ ಅರ್ಥ ಹಾಗೂ ತತ್ವಗಳನ್ನು ಸ್ಪಷ್ಟವಾಗಿ ತಿಳಿಯದಿರುವುದು; ಮೂರನೆಯದಾಗಿ-ಸಹಕಾರಿ ಸಂಘಗಳು ಕಾರ್ಯಮಾಡುವಲ್ಲಿ ಸ್ವತಃ ಅನೇಕ ದೌರ್ಬಲ್ಯಗಳಿಂದ ನರಳುತ್ತವೆ. ನಾಲ್ಕನೆಯದಾಗಿ-ಸಹಕಾರಿ ಆಂದೋಲನದ ಹೆಚ್ಚಿನ ಸಮಯ ಸಾಮರ್ಥ್ಯಗಳು ರೈತರಿಗೆ ಸಾಲ ಒದಗಿಸುವದರಲ್ಲೇ ಕಳೆದುಹೋಗಿವೆ. ಕೊನೆಯದಾಗಿ-ಬೇಡಿಕೆಗೆ ಸಂಬಂಧಿಸಿದಂತೆ ಹಣಕಾಸು ತರಬೇತಿ ಪಡೆದ ಸಿಬ್ಬಂದಿ, ನಿರ್ವಹಣೆ ಮುಂತಾದವುಗಳಲ್ಲಿ ಸಹಕಾರಿ ಸಂಘಗಳ ಆಂತರಿಕ-ಸಂಪನ್ಮೂಲಗಳ ಅಸಮಂಜಸತೆ ಮುಂತಾದವುಗಳು ಸಹಕಾರಿ ಸಂಘಗಳ ದೌರ್ಬಲ್ಯಗಳಾಗಿವೆ.

ಹೆಚ್ಚಿನ ಉತ್ಸಾಹ, ತಂತ್ರಜ್ಞಾನ, ಪ್ರಜಾಸತ್ತೆ, ಅರ್ಹ ಸಿಬ್ಬಂದಿ ಮುಂತಾದ ವಿಷಯಗಳಲ್ಲಿ ಸುಧಾರಣೆಯಾಗುವುದು ಅತ್ಯವಶ್ಯಕವಾಗಿದೆ.

## ಕ್ಷೇಮಾಭಿವೃದ್ಧಿ ಗುಣಲಕ್ಷಣ [Welfare Feature] :

ಈಗ ಸಾಮಾಜಿಕ ಅಭಿವೃದ್ಧಿ ದರ್ಶಕಗಳು, ಮೂಲಭೂತ ಸೌಲಭ್ಯಗಳು ಬದುಕಿನ ಭೌತಿಕಗುಣ ಸೂಚಿಕೆಗಳಲ್ಲದೆ ಮಾನವ ಅಭಿವೃದ್ಧಿ ಸೂಚಿಕೆಗಳಿಗೆ ಹೆಚ್ಚಿನ ಮಹತ್ವ ನೀಡುವ ಅವಶ್ಯಕತೆ ಇದೆ. ಒಕ್ಕೂಟ ರಾಷ್ಟ್ರಗಳ (UNS) ಅಭಿವೃದ್ಧಿ ಕಾರ್ಯಕ್ರಮವು ಮಾನವ ಅಭಿವೃದ್ಧಿಗೆ ಮಹತ್ವವನ್ನು ನೀಡುವ ಅಭಿವೃದ್ಧಿಯ ಮತ್ತೊಂದು ನಿರ್ದೇಶನವನ್ನು ಸೂತ್ರ ರೂಪದಲ್ಲಿ ವ್ಯಕ್ತಪಡಿಸಿತು. (ಯು.ಎನ್.ಡಿ.ಪಿ. ೧೯೯೦) ಈ ದೃಷ್ಟಿಯಿಂದ ಅಭಿವೃದ್ಧಿಯು ಜನರ ಅವಕಾಶಗಳನ್ನು ವಿಸ್ತಾರಗೊಳಿಸುವ ಪ್ರಕ್ರಿಯೆ ಎಂದು ವ್ಯಾಖ್ಯಾನಿಸಲ್ಪಟ್ಟಿದೆ.

ಮಾನವ ಅಭಿವೃದ್ಧಿಯ ಮಾಪನವು ಜೀವನದ ಅವಶ್ಯಕ ಮೂರು ಭಾಗಗಳ ಮೇಲೆ ಕೇಂದ್ರಿತವಾಗಿವೆ. ಅವುಗಳೆಂದರೆ ದೀರ್ಘಾವಧಿ ಜೀವನ, ಜ್ಞಾನದ ಮಟ್ಟ ಮತ್ತು ಜೀವನಮಟ್ಟಗಳಾಗಿವೆ. ಮುಂದೆ ಅದು ದೀರ್ಘಾವಧಿ ಜೀವನ, ಸಾಕ್ಷರತೆ ಮತ್ತು ಆದಾಯ ಈ ಮೂರು ಭಾಗಗಳನ್ನು ಸೇರಿಸಿ ಮಾನವ ಅಭಿವೃದ್ಧಿಯ ಸಂಯುಕ್ತ ಸೂಚಿಯನ್ನು ರಚಿಸುವುದು ವಿಹಿತವೆಂಬುದನ್ನು ಪ್ರತಿಪಾದಿಸಲಾಯಿತು.

ನೋಬಲ್ ಪಾರಿತೋಷಕ ವಿಜೇತ ಡಾ. ಅಮರ್ತ್ಯ ಸೇನರು ಕೂಡ ಕ್ಷೇಮಾಭಿವೃದ್ಧಿ ಅರ್ಥಶಾಸ್ತ್ರದ ಪ್ರಾಮುಖ್ಯತೆಯನ್ನು ಒತ್ತಿ ಹೇಳುತ್ತಾರೆ. ಅವರು ಮಾನವರ ಆರೋಗ್ಯ ಶಿಕ್ಷಣ, ಪೌಷ್ಠಿಕ ಆಹಾರ ಹಾಗೂ ಶಕ್ತಿ-ಸಾಮರ್ಥ್ಯಗಳನ್ನು ನೀಡಿ ಇಚ್ಛಿತ ಅಭಿವೃದ್ಧಿಯನ್ನು ತರುವ ಕಾರ್ಯಕ್ರಮಗಳಲ್ಲಿ ಬಂಡವಲು ತೊಡಗಿಸುವುದನ್ನು ಪ್ರತಿಪಾದಿಸುತ್ತಾರೆ.

## ಸ್ವರ್ಣ ಜಯಂತಿ ಗ್ರಾಮ ಸ್ವರೋಜಗಾರ ಯೋಜನೆ :

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು (IRDP) ಪ್ರಾರಂಭದಲ್ಲಿ ಬರಿಯ ಸ್ವಯಂ ಉದ್ಯೋಗ ಕಾರ್ಯಕ್ರಮವಾಗಿತ್ತು. ಮುಂದೆ ಸ್ವಯಂ ಉದ್ಯೋಗ ಕಾರ್ಯಕ್ರಮಗಳಿಗೆ, ಗ್ರಾಮೀಣ ಯುವಕರ ತರಬೇತಿ, ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮ (DWCRA) ಗ್ರಾಮೀಣ ಕುಶಲಕರ್ಮಿಗಳಿಗೆ ಸುಧಾರಿತ-ಉಪಕರಣಗಳ ಚೀಲ (Kit) (SITRA), ಗಂಗಾ ಕಲ್ಯಾಣ ಯೋಜನೆ (GKY) ಗಳಂಥ ಅನೇಕಾನೇಕ ಕಾರ್ಯಕ್ರಮಗಳು ಸೇರಿಕೊಂಡವು. ಅವು ಕಾರ್ಯಕ್ರಮಗಳ ಬಾಹುಳ್ಯದಿಂದಾಗಿ ಅವುಗಳಲ್ಲೇ ಪ್ರತ್ಯೇಕ ಕಾರ್ಯಕ್ರಮಗಳೆಂದು ಪರಿಗಣಿಸಲ್ಪಟ್ಟವು. ಕಾರಣ ಸರಿಯಾದ ಮಧ್ಯಸ್ಥಿಕೆಯ ಕೊರತೆಯಾಗಿ ಹಾಗೂ ಈ ಕಾರ್ಯಕ್ರಮಗಳ ಮಧ್ಯೆ ಇಚ್ಛಿತ ಕೊಂಡಿ ಇಲ್ಲದಾಗಿ ಅನುಷ್ಠಾನದ ಉದ್ದೇಶವು ಈಡೇರಲಿಲ್ಲ. ಈ ಪರಿಸ್ಥಿತಿಯನ್ನು ಸರಿಪಡಿಸಲು ಸರಕಾರವು ಸ್ವಯಂ ಉದ್ಯೋಗ ಕಾರ್ಯಕ್ರಮಗಳನ್ನು ಪುನರ್ರಚಿಸಲು ನಿರ್ಧರಿಸಿತು. ಅದರಿಂದಾಗಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜಗಾರ ಯೋಜನೆ (SGSY) ಎಂಬ ಹೊಸಕಾರ್ಯಕ್ರಮವು ಏಪ್ರಿಲ್ ೧೯೯೯ರಲ್ಲಿ ಪ್ರಾರಂಭವಾಯಿತು. ಇದು ಬಡಜನರನ್ನು ಸ್ವಸಹಾಯ ಗುಂಪುಗಳಲ್ಲಿ ಸಂಘಟಿಸುವ ತರಬೇತಿ, ಸಾಲ, ತಾಂತ್ರಿಕ ಜ್ಞಾನ, ಮೂಲಭೂತ ಸೌಕರ್ಯ ಮತ್ತು ವಿಕ್ರಯಂಥ ಸ್ವಯಂ ಉದ್ಯೋಗದ ಎಲ್ಲ ಮಜಲುಗಳನ್ನೂ ಒಳಗೊಳ್ಳುವ ಒಂದು ಸಂಪೂರ್ಣ ಕಾರ್ಯಕ್ರಮವಾಗಿರುತ್ತದೆ. ಈ ಯೋಜನೆಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ೭೫:೨೫ ಪ್ರಮಾಣದಲ್ಲಿ ಹಣಕಾಸನ್ನು ಒದಗಿಸುತ್ತವೆ.

ಈ ಯೋಜನೆಯ ಉದ್ದೇಶವೆಂದರೆ ಬ್ಯಾಂಕ್ ಸಾಲ ಮತ್ತು ಸರಕಾರದ ಸಹಾಯ ಧನಗಳ ಮಿಶ್ರಣದಿಂದ ನೆರವು ಪಡೆದ ಬಡ ಕುಟುಂಬಗಳನ್ನು ಅಥವಾ ಸ್ವರೋಜಗಾರಿಗಳನ್ನು ಮೂರು ವರ್ಷಗಳಲ್ಲಿ ಬಡತನ ರೇಖೆಯಿಂದ ಮೇಲೆ ತರುವುದು ಮತ್ತು ಗ್ರಾಮೀಣ ಬಡಜನರ ಸಾಮರ್ಥ್ಯದ ಆಧಾರದ ಮೇಲೆ ಗ್ರಾಮೀಣ ಕ್ಷೇತ್ರಗಳಲ್ಲಿ ಬಹುಸಂಖ್ಯೆಯಲ್ಲಿ ಸಣ್ಣ ಸಣ್ಣ ಉದ್ದಿಮೆಗಳನ್ನು ಸ್ಥಾಪಿಸುವುದು, ಇದರ ಗುರಿಯಾಗಿದೆ. ಭಾರತದ ಗ್ರಾಮೀಣ ಬಡಜನರಲ್ಲೂ ಸಾಮರ್ಥ್ಯವಿದೆ ಎಂಬ ನಂಬಿಕೆಯಿಂದ ಈ ಯೋಜನೆಯು ಜನ್ಮ ತಳೆದಿದೆ.

ಅವರಿಗೆ ಸರಿಯಾದ ಬೆಂಬಲ ನೀಡಿದ್ದಾದರೆ ಅವರು ಬೆಲೆಬಾಳುವ ವಸ್ತು, ಸೇವೆಗಳನ್ನು (goods & services) ಉತ್ಪಾದಿಸುವುದರಲ್ಲಿ ಜಯಶಾಲಿಯಾಗಬಲ್ಲರು, ನೆರವು ಪಡೆದ ಕುಟುಂಬಗಳು ಅಂದರೆ ಈಗ ಸ್ವರೋಜಗಾರರೆಂದು ಗುರುತಿಸಿದ ವ್ಯಕ್ತಿಗಳು ಅಥವಾ ಗುಂಪುಗಳಾಗಿರಬಹುದು (ಸ್ವಸಹಾಯ ಗುಂಪುಗಳು). ಈ ಯೋಜನೆಯಲ್ಲಿ ಗುಂಪು ವಿಧಾನದ ಮೇಲೆ ಒತ್ತುಕೊಡಲಾಗಿದೆ. ಈಗ ಈ ಯೋಜನೆಯಿಂದ ಸ್ವಸಹಾಯ ಗುಂಪುಗಳಲ್ಲಿರುವ ಮಹಿಳೆಯರ ಆರ್ಥಿಕ ಸ್ಥಿತಿ ಸುಧಾರಿಸುತ್ತದೆ; ಮಹಿಳೆಯರು ಚಟುವಟಿಕೆಯಿಂದ ಓಡಾಡುತ್ತಿದ್ದಾರೆ. ಆದರೆ ಪುರುಷರು ಹುಬ್ಬೇರಿಸಬಹುದು. ಎಲ್ಲವೂ ಕ್ರಮೇಣ ಸರಿದೂಗಿ ಪುರುಷರೂ ಸಹಕರಿಸಿ ಪ್ರೋತ್ಸಾಹಿಸಲು ಮುಂದಾಗುವುದು ಖಚಿತವೆನಿಸುತ್ತದೆ.

## ಗ್ರಾಮೀಣ ಅಭಿವೃದ್ಧಿಯ ಮೇಲ್ಮೈಗಳು :

ಒಟ್ಟಾರೆ ಗ್ರಾಮೀಣ ಅಭಿವೃದ್ಧಿಯ ಮೇಲ್ಮೈಗಳು ಮುಖ್ಯವಾಗಿ ನಾಲ್ಕು. ಅವುಗಳು ಈ ಕೆಳಗಿನಂತಿವೆ:

೧. ಜೀವನೋಪಾಯ ಮತ್ತು ಆದಾಯ ಉತ್ಪಾದನೆ.

೨. ಭೌತಿಕ-ಹಾಗೂ ಮೂಲಭೂತ ಸೌಕರ್ಯಗಳ ಅಭಿವೃದ್ಧಿ.

೩. ಮಾನವನ ಸಾಮಾಜಿಕ ಅಭಿವೃದ್ಧಿ.

೪. ಸಶಕ್ತೀಕರಣ.

ಯಾವುದೇ ಸಮುದಾಯವು ಅಭಿವೃದ್ಧಿ ಹೊಂದಬೇಕಾದರೆ ಬರೀ ಆರ್ಥಿಕ ಅಭಿವೃದ್ಧಿಯಾದರಷ್ಟೇ ಸಾಲದು. ಸಾಮಾಜಿಕ, ಮಾನವನ ಬೌದ್ಧಿಕ, ಮಾನಸಿಕ, ಸಾಂಸ್ಕೃತಿಕ ಅಭಿವೃದ್ಧಿಯೂ ಅವಶ್ಯ. ಅಂದರೆ (Material advancement with Moral Progress).

## ಪ್ರಧಾನಮಂತ್ರಿ ಗ್ರಾಮೋದಯ ಯೋಜನೆ :

ಪ್ರಧಾನ ಮಂತ್ರಿ ಗ್ರಾಮೋದಯ ಯೋಜನೆಯನ್ನು ೨೦೦೦-೦೧ನೆಯ ಸಾಲಿನಲ್ಲಿ ಕೇಂದ್ರ ಸರಕಾರವು ಜಾರಿಗೆ ತಂದಿರುತ್ತದೆ. ಇದು ಗ್ರಾಮೀಣ ಜನಜೀವನದ ಗುಣಮಟ್ಟವನ್ನು ಸುಧಾರಿಸುವ ಉದ್ದೇಶ ಹೊಂದಿರುತ್ತದೆ. ಇದರಲ್ಲಿ ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ವಸತಿ, ರಸ್ತೆ ಸಂಪರ್ಕ ಮತ್ತು ಪೌಷ್ಠಿಕ ಆಹಾರಗಳು ಅತ್ಯಂತ ಮಹತ್ವವನ್ನು ಪಡೆದಿರುತ್ತವೆ.

## ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ :

ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯನ್ನು ೨೫ ಡಿಸೆಂಬರ್ ೨೦೦೦ದಿಂದ ಕೇಂದ್ರ ಸರಕಾರವು ಜಾರಿಗೆ ತಂದಿರುತ್ತದೆ.

ಸಂಪರ್ಕವು ಗ್ರಾಮೀಣ ಅಭಿವೃದ್ಧಿಯಲ್ಲಿ ಅತಿ ಮಹತ್ವದ ಪಾತ್ರವನ್ನು ವಹಿಸಿಕೊಂಡಿದೆ. ಕೃಷಿ ಉತ್ಪಾದನೆ ಮತ್ತು ಉದ್ಯೋಗಾವಕಾಶಗಳನ್ನು ಹೆಚ್ಚಿಸುವುದರ ಜೊತೆಗೆ ಗ್ರಾಮೀಣ ರಸ್ತೆಗಳು, ಶಿಕ್ಷಣ, ಆರೋಗ್ಯ ,ಮಾರುಕಟ್ಟೆ ಸೌಲಭ್ಯ ಮುಂತಾದವುಗಳಿಗೆ ಹೆಚ್ಚಿನ ಅನುಕೂಲ ಕಲ್ಪಿಸಿಕೊಟ್ಟು ಸಮಗ್ರ ಅಭಿವೃದ್ಧಿಗೆ ಮತ್ತು ಬಡತನ ನಿವಾರಣಾ ಕಾರ್ಯಕ್ರಮಕ್ಕೆ ದಾರಿಮಾಡಿಕೊಡುತ್ತದೆ. ಗ್ರಾಮೀಣ ಸಂಪರ್ಕಕ್ಕೆ ಮೂರು ಪ್ರಕಾರದ ರಸ್ತೆ ವ್ಯವಸ್ಥೆಯನ್ನು ಮಾಡಲಾಗುತ್ತದೆ.

೧. ವರ್ಷದ ಎಲ್ಲ ಋತುಗಳಲ್ಲಿ ವ್ಯವಹರಿಸಲು ಯೋಗ್ಯವಾದ ರಸ್ತೆ ನಿರ್ಮಾಣ ಇದಕ್ಕೆ 'ಸರ್ವಋತು' ರಸ್ತೆ ಎಂದು ಕರೆಯಲಾಗುತ್ತದೆ.

೨. ಮಳೆಗಾಲವನ್ನು ಹೊರತುಪಡಿಸಿ ಉಳಿದ ಕಾಲದಲ್ಲಿ ವ್ಯವಹರಿಸಲು ಯೋಗ್ಯವಾದ ರಸ್ತೆ ನಿರ್ಮಾಣ ಇದಕ್ಕೆ 'ಮಧುರ ಋತು' (Fair Weather) ರಸ್ತೆ ಎನ್ನುತ್ತಾರೆ.

೩. ೫೦೦ಕ್ಕಿಂತ ಹೆಚ್ಚಿನ ಜನಸಂಖ್ಯೆ ಹೊಂದಿದ್ದು ಸರ್ವಋತು ರಸ್ತೆಯಿಂದ ಅಥವಾ ಸರ್ವಋತು ರಸ್ತೆ ಸಂಪರ್ಕ ಹೊಂದಿದ ಇನ್ನೊಂದು ಜನವಸತಿಯಿಂದ ಕನಿಷ್ಠ ೫೦೦ ಮೀಟರ್ ದೂರದ ಜನವಸತಿಯನ್ನು "ಸಂಪರ್ಕ ರಹಿತ ಜನವಸತಿ" ಎಂದು ಪರಿಗಣಿಸಲಾಗುವುದು. ಇಲ್ಲಿ ಸಂಪರ್ಕ ಕಲ್ಪಿಸಿದ ಮೇಲೆ ರಸ್ತೆಗಳನ್ನು ಮೇಲ್ದರ್ಜೆಗೇರಿಸುವ ಕಾರ್ಯ ಕೈಗೊಳ್ಳಲಾಗುವುದು.

**ಸ್ವಾತಂತ್ರ್ಯಾನಂತರ ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿಯ ಕಾರ್ಯಕ್ರಮಗಳನ್ನು ಈ ಕೆಳಗಿನ ಪಟ್ಟಿಯಲ್ಲಿ ನೋಡಬಹುದು :**

| ಅನುಕ್ರಮ | ಕಾರ್ಯಕ್ರಮ / ಯೋಜನೆ | ವರ್ಷ |
|---|---|---|
| ೧. | ಭೂದಾನ ಆಂದೋಲನ | ೧೯೫೧ |
| ೨. | ಗ್ರಾಮದಾನ ಆಂದೋಲನ | ೧೯೫೨ |
| ೩. | ಸಮುದಾಯ ಅಭಿವೃದ್ಧಿ ಕಾರ್ಯಕ್ರಮ | ೧೯೫೨ |
| ೪. | ರಾಷ್ಟ್ರೀಯ ಕೃಷಿ ವಿಸ್ತರಣಾ ಸೇವೆ | ೧೯೫೩ |
| ೫. | ಅನ್ವಯಿಕ ಪೌಷ್ಠಿಕ ಆಹಾರ ಕಾರ್ಯಕ್ರಮ | ೧೯೫೮ |
| ೬. | ಪಂಚಾಯತ ರಾಜ್ಯ | ೧೯೫೯ |
| ೭. | ಗುಡ್ಡಗಾಡು ಕ್ಷೇತ್ರ ಅಭಿವೃದ್ಧಿ ಕಾರ್ಯಕ್ರಮ | ೧೯೬೦ |
| ೮. | ಅತಿವರ್ಧಿತ ಕೃಷಿ ಜಿಲ್ಲಾ ಕಾರ್ಯಕ್ರಮ | ೧೯೬೦ |
| ೯. | ಬುಡಕಟ್ಟು ಕ್ಷೇತ್ರ ಅಭಿವೃದ್ಧಿ ಕಾರ್ಯಕ್ರಮ | ೧೯೬೨ |
| ೧೦. | ಅತಿವರ್ಧಿತ ಕೃಷಿ ಕ್ಷೇತ್ರ ಕಾರ್ಯಕ್ರಮ | ೧೯೬೪ |
| ೧೧. | ಹೆಚ್ಚು ಇಳುವರಿ ವೈವಿಧ್ಯ ಕಾರ್ಯಕ್ರಮ | ೧೯೬೫ |

| | | |
|---|---|---|
| ೧೨. | ಅತಿವರ್ಧಿತ ಕ್ಷೇತ್ರಾಭಿವೃದ್ಧಿ | ೧೯೬೫ |
| ೧೩. | ಸಣ್ಣ ರೈತರ ಅಭಿವೃದ್ಧಿ ಸಂಘ | ೧೯೬೫ |
| ೧೪. | ಅತಿ ಸಣ್ಣ (ಅಂಚಿನ) ರೈತನ ಕೃಷಿ ಶ್ರಮಿಕರ ಅಭಿವೃದ್ಧಿ ಸಂಘ | ೧೯೬೯ |
| ೧೫. | ಬರಗಾಲ ಪೀಡಿತ ಕ್ಷೇತ್ರ ಕಾರ್ಯಕ್ರಮ | ೧೯೭೦ |
| ೧೬. | ಗ್ರಾಮೀಣ ದುಡಿಮೆಯ ಕಾರ್ಯಕ್ರಮ | ೧೯೭೧ |
| ೧೭. | ಗ್ರಾಮೀಣ ಉದ್ಯೋಗದ ಯೋಜನೆ ಕಾರ್ಯಕ್ರಮ (Crash Scheme for Rural Employment) | ೧೯೭೧ |
| ೧೮. | ಅತಿವರ್ಧಿತ ಗ್ರಾಮೀಣ ಉದ್ಯೋಗದ ಮಾದರಿ ಯೋಜನೆಗಳು | ೧೯೭೨ |
| ೧೯. | ಉದ್ಯೋಗ ಭರವಸೆ ಯೋಜನೆ | ೧೯೭೨ |
| ೨೦. | ಕನಿಷ್ಠ ಬೇಡಿಕೆಗಳ (ಅವಶ್ಯಕತೆಗಳ) ಕಾರ್ಯಕ್ರಮ | ೧೯೭೪ |
| ೨೧. | ಇಪ್ಪತ್ತಂಶದ ಕಾರ್ಯಕ್ರಮ | |
| ೨೨. | ವಸತಿ ಆಂದೋಲನ [halsital Movement] | |
| ೨೩. | ಕೂಲಿಗಾಗಿ ಕಾಳು ಕಾರ್ಯಕ್ರಮ | ೧೯೭೭ |
| ೨೪. | ಅಂತ್ಯೋದಯ | - |
| ೨೫. | ಮರುಭೂಮಿ ಅಭಿವೃದ್ಧಿ ಕಾರ್ಯಕ್ರಮ | ೧೯೭೭ |
| ೨೬. | ಬರ್ಗಾ (Barga) ಕಾರ್ಯಾಚರಣೆ | - |
| ೨೭. | ಅಧೀನ ಕ್ಷೇತ್ರದ ಅಭಿವೃದ್ಧಿ ಕಾರ್ಯಕ್ರಮ | ೧೯೭೮ |
| ೨೮. | ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ | ೧೯೮೦ |
| ೨೯. | ಸ್ವಯಂ ಉದ್ಯೋಗಕ್ಕಾಗಿ ಗ್ರಾಮೀಣ ಯುವಕರ ತರಬೇತಿ | ೧೯೮೦ |
| ೩೦. | ಸಮಗ್ರ ಗ್ರಾಮಾಭಿವೃದ್ಧಿ ಕಾರ್ಯಕ್ರಮ | - |
| ೩೧. | ಮಹಿಳೆ ಹಾಗೂ ಮಕ್ಕಳಿಗಾಗಿ ವಿಶೇಷ ಕಾರ್ಯಕ್ರಮಗಳು | - |
| ೩೨. | ತಗ್ಗು ಪ್ರದೇಶಗಳಿಗಾಗಿ ಕಾರ್ಯಕ್ರಮ | - |
| ೩೩. | ಬುಡಕಟ್ಟು ಅಭಿವೃದ್ಧಿ ಸಂಸ್ಥೆ | - |
| ೩೪. | ರಾಷ್ಟ್ರೀಯ ಬೀಜಗಳ ಕಾರ್ಯಕ್ರಮ | - |
| ೩೫. | ಗ್ರಾಮೀಣ ಪ್ರದೇಶದಲ್ಲಿ ಮಹಿಳೆ ಹಾಗೂ ಮಕ್ಕಳ ಅಭಿವೃದ್ಧಿ ಯೋಜನೆ | - |
| ೩೬. | ಅತಿವರ್ಧಿತ ಬೇಳೆಕಾಳು ಅಭಿವೃದ್ಧಿ ಕಾರ್ಯಕ್ರಮ | - |
| ೩೭. | ಬೇಸಿಗೆ ಸೇಂಗಾ ಉತ್ಪಾದನಾ ಕಾರ್ಯಕ್ರಮ | - |
| ೩೮. | ಅತಿವರ್ಧಕ ಹತ್ತಿ ಅಭಿವೃದ್ಧಿ ಕಾರ್ಯಕ್ರಮ | - |
| ೩೯. | ಗ್ರಾಮೀಣ ಸಣ್ಣ ಉದ್ದಿಮೆ ಕಾರ್ಯಕ್ರಮ | - |
| ೪೦. | ಖಾದಿ ಗ್ರಾಮೋದ್ಯೋಗ ಕಾರ್ಯಕ್ರಮ | - |
| ೪೧. | ಕ್ಷೀರ ಕ್ಷೇತ್ರ ಅಭಿವೃದ್ಧಿ ಕಾರ್ಯಕ್ರಮ | - |

| | | |
|---|---|---|
| ೪೨. | ಜೈವಿಕ ಅನಿಲ ಕಾರ್ಯಕ್ರಮ | ೧೯೮೧ |
| ೪೩. | ವಿದ್ಯಾವಂತ ನಿರುದ್ಯೋಗಿ ಯುವಕರಿಗೆ ಸ್ವಯಂ ಉದ್ಯೋಗ ಕಾರ್ಯಕ್ರಮ | ೧೯೮೩ |
| ೪೪. | ಗ್ರಾಮೀಣ ಭೂರಹಿತರ ಉದ್ಯೋಗ ಭರವಸೆ ಕಾರ್ಯಕ್ರಮ | ೧೯೮೩ |
| ೪೫. | ಗ್ರಾಮೀಣ ಬಡವರ ಆರ್ಥಿಕ ಪುನರ್ವಸತಿ | - |
| ೪೬. | ಗ್ರಾಮಗಳ ಕಾರ್ಯಕ್ರಮ ಅಭಿವೃದ್ಧಿಗಾಗಿ ಯೋಜನೆ ಮಾಡುವುದು | - |
| ೪೭. | ಸಮಗ್ರ ಗ್ರಾಮೀಣ ಬಲ (ಶಕ್ತಿ) ಕಾರ್ಯಕ್ರಮ | ೧೯೮೧ |
| ೪೮. | ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ | - |
| ೪೯. | ಔದ್ಯೋಗಿಕವಾಗಿ ಹಿಂದುಳಿದ ಪ್ರದೇಶಗಳಿಗಾಗಿ ವಿಶೇಷ ಪ್ರೋತ್ಸಾಹ ಕಾರ್ಯಕ್ರಮ | - |
| ೫೦. | ಗ್ರಾಮೀಣ ಕೂಲಿ ಉದ್ಯೋಗ ಭರವಸೆ ಕಾರ್ಯಕ್ರಮ | - |
| ೫೧. | ತ್ವರಿತವಾದ ಗ್ರಾಮೀಣ ನೀರು ಸರಬರಾಜು ಕಾರ್ಯಕ್ರಮ | - |
| ೫೨. | (ಭಾರತದ) ಅಭಿವೃದ್ಧಿಗಾಗಿ ಜನರ ಕ್ರಮದ ಕಾರ್ಯಕ್ರಮ | - |
| ೫೩. | ಸಾಮಾಜಿಕ ಅರಣ್ಯ ಕಾರ್ಯಕ್ರಮ | - |
| ೫೪. | ಪ್ರತಿ ಮಗುವಿಗೊಂದು ಮರ ಕಾರ್ಯಕ್ರಮ | - |
| ೫೫. | ಜಲಪ್ರಳಯ ಕಾರ್ಯಾಚರಣೆ- I | |
| ೫೬. | ಜಲಪ್ರಳಯ ಕಾರ್ಯಚರಣೆ- II | - |
| ೫೭. | ಗ್ರಾಮೀಣ ಅಭಿವೃದ್ಧಿ ಕೇಂದ್ರಗಳು | - |
| ೫೮. | ಗ್ರಾಮೀಣ ಪ್ರದೇಶಗಳಲ್ಲಿ ಶಕ್ತಿಸಂಪನ್ಮೂಲಗಳ ನವೀಕರಣ | - |
| ೫೯. | ಅಭಿವೃದ್ಧಿ ಕ್ಷೇತ್ರದಲ್ಲಿ ಸಾಮಾಜಿಕ ಅಂಶಗಳನ್ನು ಸೇರಿಸುವುದು | - |
| ೬೦. | ವಿಶೇಷ ಆಹಾರ ಧಾನ್ಯಗಳನ್ನು ಉತ್ಪಾದಿಸುವ ಕಾರ್ಯಕ್ರಮ | ೧೯೮೬ |
| ೬೧. | ವಿಶೇಷ ಅಕ್ಕಿ ಉತ್ಪಾದನಾ ಕಾರ್ಯಕ್ರಮ | ೧೯೮೬ |
| ೬೨. | ಇಂದಿರಾ ಆವಾಸ ಕಾರ್ಯಕ್ರಮ | ೧೯೮೬ |
| ೬೩. | ಗ್ರಾಮೀಣ ಬಡಜನರಿಗೆ ಅರಣ್ಯ ಕೃಷಿ ಯೋಜನೆ | - |
| ೬೪. | ರಾಷ್ಟ್ರೀಯ ಎಣ್ಣೆಬೀಜಗಳ ಅಭಿವೃದ್ಧಿ ಕಾರ್ಯಕ್ರಮ | - |
| ೬೫. | ಜವಾಹರ ರೋಜಗಾರ ಯೋಜನೆ | ೧೯೮೯ |
| ೬೬. | ಪಂಚಾಯತಿ ರಾಜ್ಯ ೭೩ನೇ ತಿದ್ದುಪಡಿ | ೧೯೯೩ |
| ೬೭. | ಕುಟುಂಬ ಸಾಲ ಯೋಜನೆ | ೧೯೯೩ |
| ೬೮. | ರಾಷ್ಟ್ರೀಯ ಜಲಾನಯನ ಅಭಿವೃದ್ಧಿ ಯೋಜನೆ | ೧೯೯೬ |
| ೬೯. | ಬೆಳೆ ವಿಮಾ ಯೋಜನೆ | ೧೯೯೯ |
| ೭೦. | ಸ್ವರ್ಣ ಜಯಂತಿ ಗ್ರಾಮ ಸ್ವರೋಜಗಾರ ಯೋಜನೆ | ೧೯೯೯ |
| ೭೧. | ಪ್ರಧಾನ ಮಂತ್ರಿ ಗ್ರಾಮೋದಯ ಯೋಜನೆ | ೨೦೦೦ |
| ೭೨. | ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ | ೨೦೦೦ |

## ಗ್ರಾಮೀಣ ಅಭಿವೃದ್ಧಿ ಕುರಿತು ಪಂಚವಾರ್ಷಿಕ ಯೋಜನಾ ಧೋರಣೆಗಳು

| ಪಂಚವಾರ್ಷಿಕ ಯೋಜನೆ | ಗ್ರಾಮೀಣ ಅಭಿವೃದ್ಧಿ ಧೋರಣೆ |
|---|---|
| ಒಂದನೆ ಪಂಚವಾರ್ಷಿಕ ಯೋಜನೆ (೧೯೫೧-೫೬) | ಸಮುದಾಯ ಅಭಿವೃದ್ಧಿಯು ಒಂದು ವಿಧಾನದಂತೆ ಮತ್ತು ರಾಷ್ಟ್ರೀಯ ವಿಸ್ತರಣಾ ಸೇವೆಯು ಒಂದು ಸಂಸ್ಥೆಯಂತೆ. |
| ಎರಡನೆಯ ಪಂಚವಾರ್ಷಿಕ ಯೋಜನೆ (೧೯೫೬-೬೧) | ಸಹಕಾರಿ ಸಾಗುವಳಿ (ಕೃಷಿ) ಮುಂದೆ ಸ್ಥಾನಿಕ ಸಹಭಾಗಿತ್ವ |
| ಮೂರನೆಯ ಪಂಚವಾರ್ಷಿಕ ಯೋಜನೆ (೧೯೬೧-೬೬) | ಪಂಚಾಯತ ರಾಜ್ಯ ಪ್ರಜಾಪ್ರಭುತ್ವ, ವಿಕೇಂದ್ರೀಕರಣ ತ್ರಿಶ್ರೇಣಿ ಮಾದರಿ. |
| ನಾಲ್ಕನೆಯ ಪಂಚವಾರ್ಷಿಕ ಯೋಜನೆ (೧೯೬೯-೭೪) | ಪಕ್ಷಗಾರ ಆಧಾರಿತ ಹಾಗೂ (ಕ್ಷೇತ್ರಾಧಾರಿತ) ಪ್ರದೇಶಾಧಾರಿತ ಕಾರ್ಯಕ್ರಮಗಳು. |
| ಐದನೆಯ ಪಂಚವಾರ್ಷಿಕ ಯೋಜನೆ (೧೯೭೪-೭೯) | ಮೂಲಭೂತವಾದ ಕನಿಷ್ಟ ಬೇಡಿಕೆಗಳ (ಅವಶ್ಯಕತೆಗಳ) ಪರಿಕಲ್ಪನೆಯನ್ನು ಪರಿಚಯಿಸಿತು. |
| ಆರನೆಯ ಪಂಚವಾರ್ಷಿಕ ಯೋಜನೆ (೧೯೮೦-೮೫) | ಗ್ರಾಮೀಣ ಪ್ರದೇಶಗಳಲ್ಲಿ ಸಮಾಜೋ-ಆರ್ಥಿಕ ಮೂಲಭೂತ ಸೇವೆಗಳನ್ನು ಬಲಪಡಿಸುವುದು, ಗ್ರಾಮೀಣ ಜನರ ಬಡತನವನ್ನು ಶಮನಗೊಳಿಸುವುದು ಮತ್ತು ಪ್ರಾದೇಶಿಕ ವ್ಯತ್ಯಾಸವನ್ನು ಕಡಿಮೆ ಮಾಡುವುದರ ಬಗೆಗೆ ಮಹತ್ವ ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ (IRDP) |
| ಏಳನೆಯ ಪಂಚವಾರ್ಷಿಕ ಯೋಜನೆ (೧೯೮೫ ೯೦) | ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗ ಸೃಷ್ಟಿಯು ಪ್ರಪ್ರಥಮ ಕೇಂದ್ರ ಬಿಂದುವಾಯಿತು. ಭಾರತ ಗ್ರಾಮೀಣ ಭೂರಹಿತರ ಉದ್ಯೋಗ ಕಾರ್ಯಕ್ರಮ (RLEP) ಮತ್ತು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ (NREP) ಗಳನ್ನು ಪ್ರಾರಂಭಿಸಿತು. |
| ಎಂಟನೆಯ ಪಂಚವಾರ್ಷಿಕ ಯೋಜನೆ (೧೯೯೨-೯೭) | ಭಾರತವು ಜವಾಹರ ರೋಜಗಾರ ಯೋಜನೆಯನ್ನು ಪ್ರಾರಂಭಿಸಿತು. ಇದರಲ್ಲಿ ಗ್ರಾಮೀಣ ಭೂರಹಿತ ಜನರ ಉದ್ಯೋಗ ಕಾರ್ಯಕ್ರಮ [RLEP] ಮತ್ತು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ[NREP]ಗಳು ಸೇರಿದವು; ಭಾರತದ ರಾಷ್ಟ್ರಪತಿಯಿಂದ ೭೩ನೆಯ ಸಂವಿಧಾನಿಕ ತಿದ್ದುಪಡಿ ಮಸೂದೆ ಒಪ್ಪಿಗೆ ಪಡೆಯಿತು; ಈ ಮಸೂದೆಯು ಕಾನೂನಾಗಿ ಪರಿಣಮಿಸಿತು. ಈ ತಿದ್ದುಪಡಿಯು ಮೂರರಲ್ಲಿ |

| ಪಂಚವಾರ್ಷಿಕ ಯೋಜನೆ | ಗ್ರಾಮೀಣ ಅಭಿವೃದ್ಧಿ ಧೋರಣೆ |
|---|---|
| | ಒಂದು ಭಾಗ ಮಹಿಳೆಯರಿಗೆ ಮೀಸಲಾತಿ ಮತ್ತು ಪಂಚಾಯತಿಗೆ ಹೆಚ್ಚಿನ ಅಧಿಕಾರವನ್ನು ಒದಗಿಸುತ್ತದೆ. ಮುಂದೆ ಕುಟುಂಬ ಸಾಲ ಯೋಜನೆ ಪ್ರಾರಂಭವಾಯಿತು. ಸಾಮಾನ್ಯ ಕನಿಷ್ಠ ಕಾರ್ಯಕ್ರಮವು ಘೋಷಿಸಲ್ಪಟ್ಟಿತು. ಸರಕಾರವು ರೈತರಿಗೆ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಅನುಕೂಲವಾಗಿದ್ದರೂ ಯಾವುದೇ ಕಾರ್ಯಕ್ರಮದ ಅನುಷ್ಠಾನವು ಪರಿಣಾಮಕಾರಿಯಾಗಿ ಆಗಲು ಸಾಧ್ಯವಾಗಲಿಲ್ಲ. |
| ಒಂಬತ್ತನೆಯ ಪಂಚವಾರ್ಷಿಕ ಯೋಜನೆ (೧೯೯೭-೨೦೦೧) | ಹಳೆಯ ಕಾರ್ಯಕ್ರಮಗಳು ಮುಂದುವರಿದವು. ಸ್ವಸಹಾಯ ಗುಂಪುಗಳ ಅಭಿವೃದ್ಧಿಗೆ ಮಹತ್ವ ನೀಡಿತು. ಮಹಿಳಾ ಗುಂಪುಗಳ ಮೂಲದ ಸ್ವಸಹಾಯ ಗುಂಪಿನ ಆಂದೋಲನಕ್ಕೆ ಉತ್ತೇಜನ ನೀಡಲು ಎಲ್ಲಾ ಗ್ರಾಮೀಣ ಯೋಜನೆಗಳನ್ನು ಅನುಷ್ಠಾನಕ್ಕೆ ತರಲು ಆಜ್ಞೆಗಳನ್ನು ಹೊರಡಿಸಲಾಯಿತು. ಆದರೂ, ಸರಕಾರವು ಅದರ ಸಹಯೋಗಿ ಪಂಗಡಗಳು ಸತತವಾಗಿ ಅಡಚಣೆ ಒಡ್ಡಿದ್ದರಿಂದ ಯಾವುದೇ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಕೈಕೊಳ್ಳಲಾಗಲಿಲ್ಲ. ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ, ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆ ಹಾಗೂ ಮಕ್ಕಳ ಅಭಿವೃದ್ಧಿ ಕಾರ್ಯಕ್ರಮ ಮುಂತಾದವನ್ನು ಸ್ವರ್ಣ ಜಯಂತಿ ಗ್ರಾಮ ಸ್ವರೋಜಗಾರ ಯೋಜನೆಯ ಅಡಿಯಲ್ಲಿ ಸೇರಿಸಲಾಯಿತು. |

**ಸಮಾರೋಪ :**

ಭಾರತದಲ್ಲಿ ಸರಕಾರಿ ಹಾಗೂ ಸ್ವಯಂ ಸೇವಾ ಸಂಘ ಸಂಸ್ಥೆಗಳಿಂದ ಇಪ್ಪತ್ತನೆಯ ಶತಮಾನದಲ್ಲಿ ಗ್ರಾಮೀಣ ಅಭಿವೃದ್ಧಿಯ ಕಾರ್ಯ, ಪ್ರಯೋಗಗಳು ಬಹು-ದಿಶೆಯಲ್ಲಿ ನಡೆದಿವೆ. ಈ ವೈವಿಧ್ಯಮಯ ಮತ್ತು ಬಹು-ದಿಶೆಯ ಪ್ರಯೋಗಗಳು ಇದ್ದಾಗ್ಯೂ ಗ್ರಾಮೀಣ ಬಡವರ ಸಂಖ್ಯೆ ಹಿಮ್ಮೆಟ್ಟದೆ ಹೆಚ್ಚುತ್ತಲೇ ನಡೆದಿದೆ. ಬಡತನ ದೂರವಾಗುವುದು, ನಿವಾರಣೆಯಾಗುವುದು ದೂರವೇ ಉಳಿಯಿತು. "ಬಡವರ ಮ್ಯಾಲ್ ಬಾಳಾ ಪ್ರೀತಿ, ಬೆಳಸ್ತೀವಿ ಬಡವರ ಸಂಖ್ಯೆ" ಎನ್ನುವಂತಾಗಿದೆ.

ಗ್ರಾಮೀಣ ಬಡತನ ಒಂದು ಕಲಂಕವಾಗೇ ಉಳಿದಿದೆ. ನಿರಕ್ಷರತೆ ನಿರ್ಮೂಲವಾಗಿಲ್ಲ; ಹಸಿದ ಹೊಟ್ಟೆಗೆ ಹಿಟ್ಟಿನ ಕೊರತೆ ನೀಗಿಲ್ಲ. ಸಮಾಜೋ-ಆರ್ಥಿಕ ಸುಧಾರಣೆಗಳು ಕಾಣುತ್ತಿಲ್ಲ. ಜೀವನ ಮಟ್ಟ ಕುಸಿಯುತ್ತಿದೆ. ಜನರಲ್ಲಿ ಪ್ರಜಾಪ್ರಭುತ್ವ, ಸಹಭಾಗಿತ್ವಗಳ ಕಲ್ಪನೆ; ಸಂಸ್ಕೃತಿ ಬೆಳೆದಿಲ್ಲ. ಸರಕಾರವು ಕುಂತಲ್ಲಿಗೆ ಹೋಗಿ ಸೇವೆ-ಸೌಲಭ್ಯಗಳನ್ನು ನೀಡಿದ್ದರಿಂದ ಸ್ವಾವಲಂಬನೆಗೆ ದಾರಿ ಮಾಡದೆ ಪರಾವಲಂಬನೆಗೆ ಜೋತು ಬೀಳುವಂತಾಗಿದೆ. ಮನೆಮಾರು ಕಟ್ಟಿಸಿಕೊಡುವ ಸೇವೆಗಿಂತ ಸ್ವತಃ ಮನೆ ಕಟ್ಟಿಸಿಕೊಳ್ಳುವ ಶಕ್ತಿ ಸಾಮರ್ಥ್ಯಗಳನ್ನು ನೀಡುವಂತಾಗಬೇಕು.

ಪಂಚವಾರ್ಷಿಕ ಯೋಜನೆಗಳ ಉದ್ದೇಶಗಳಂತೆ ಐವತ್ತು ವರ್ಷಗಳ ಹಿಂದೆಯೇ ಜನರ ಸಹಭಾಗಿತ್ವ ಮತ್ತು ಪ್ರಜಾಪ್ರಭುತ್ವದ ಸಂಸ್ಕೃತಿ ಬೆಳೆಯಬೇಕಿತ್ತು. ಅದನ್ನು ಕೃಷಿ ಮಾಡಬೇಕಾಗಿತ್ತು. ಸಂಸ್ಕೃತಿಯನ್ನು ಕೃಷಿ ಮಾಡಿ ಪಡೆಯಬೇಕಾಗುವುದು (Culture

'comes out of Cultivation') ಅದಕ್ಕೇ ಬೇಂದ್ರೆ ಅವರು, "ಬೆದೆಯರಿತು ಹದಮಾಡು ಹೃದಯದೀ ಹೊಲವನ್ನು" ಎಂದು ಹೇಳಿದ್ದಾರೆ.

ಗ್ರಾಮೀಣ ಅಭಿವೃದ್ಧಿ ಕಾರ್ಯದಲ್ಲಿ ವೃತ್ತಿ ತರಬೇತಿ ಪಡೆದ (Professional Social work Training) ಅದರಲ್ಲೂ ಸಮುದಾಯ ಸಂಘಟನಾ ವಿಧಾನ (Method of Community Organization) ವನ್ನು ಕರಗತ ಮಾಡಿಕೊಂಡ ಕಾರ್ಯಕರ್ತರ ತಂಡ ಇಲ್ಲವೇ ಸೈನ್ಯವನ್ನೇ ಕಟ್ಟಬೇಕಾಗುವುದು. ಸಂಬಂಧಪಟ್ಟ ಸರಕಾರಿ ಹಾಗೂ ಸ್ವಯಂ ಸೇವಾ ಸಂಸ್ಥೆಗಳು ಅರ್ಪಣಾಭಾವ, ಭಕ್ತಿಗಳಿಂದ, ವಚನಬದ್ಧತೆಗಳಿಂದ ಪರಿಶ್ರಮಿಸುವ ಕಾರ್ಯಕರ್ತರ ಸೇವೆಗಳನ್ನು ಪಡೆದುಕೊಳ್ಳಬೇಕು. ಸಂಘ-ಸಂಸ್ಥೆಗಳು, ತಜ್ಞರು ಸಮಸ್ಯೆಗಳನ್ನು ಅಧ್ಯಯನ ಮಾಡುವಾಗ ಪರಿಹಾರ ಕೈಕೊಳ್ಳುವ ದೃಷ್ಟಿ ಇರುವುದು ಅತ್ಯವಶ್ಯ.

ಭಾರತಕ್ಕೆ ಸ್ವಾತಂತ್ರ್ಯ ಬಂದ ಕೂಡಲೇ ಈ ಮಾರ್ಗ ವಿಧಾನಗಳನ್ನು ಅನ್ವಯಿಸಬೇಕಾಗಿತ್ತು, ಅನುಸರಿಸಬೇಕಾಗಿತ್ತು. ಜನಪದ ಸಾಹಿತ್ಯ, ಕಥೆ, ನಾಟಕಗಳ ಮುಖಾಂತರ ಗ್ರಾಮೀಣ ಜನರ ಅಭಿವೃದ್ಧಿ ಮತ್ತು ಮನ ಒಲಿಸಬೇಕಾಗಿತ್ತು. ಭಾರತದಲ್ಲಿ ನೂರಾರು ಸಮಾಜಕಾರ್ಯ ತರಬೇತಿ ನೀಡುವ ಸಂಸ್ಥೆಗಳು, ವಿಶ್ವವಿದ್ಯಾಲಯಗಳು ಪರಿಣಾಮಕಾರಿಯಾಗಿ ಪ್ರಯೋಗ ಮಾಡುತ್ತ ತರಬೇತಿ ನೀಡುತ್ತ ಬಂದಿವೆ. ಆ ಮುಖಾಂತರ ಗ್ರಾಮೀಣ ಶಿಬಿರಗಳನ್ನು ನಡೆಸಿವೆ. ಕೆಲಗ್ರಾಮಗಳನ್ನು ದತ್ತು ಸ್ವೀಕರಿಸಿ ಸರ್ವಾಂಗೀಣ ಅಭಿವೃದ್ಧಿ ಪ್ರಯತ್ನಗಳನ್ನು ಕೈಕೊಂಡಿವೆ. ಅವುಗಳ ಪ್ರಯತ್ನಕ್ಕೆ ಫಲದೊರೆತಿದೆ ಎಂಬುದು ಹೆಮ್ಮೆಯ ವಿಷಯ. ಈಗ ಗ್ರಾಮೀಣ ಅಭಿವೃದ್ಧಿ ವಿಫಲವಾಗಿದೆ ಎನ್ನುವುದಕ್ಕಿಂತ ಗ್ರಾಮೀಣ ಅಭಿವೃದ್ಧಿ ಮುಂದುವರಿಯಬೇಕಾಗಿದೆ. ಗ್ರಾಮೀಣ ಜನರಲ್ಲಿ ಹೃದಯವಂತಿಕೆ ಇದೆ. ತಪ್ಪು ತಿಳುವಳಿಕೆ, ಅಜ್ಞಾನವನ್ನು ಹೋಗಲಾಡಿಸಿದರೆ ಮತ್ತೆ ಚೇತರಿಸಿಕೊಳ್ಳುತ್ತಾರೆ.

ಗ್ರಾಮೀಣ ಅಭಿವೃದ್ಧಿ ಪ್ರಯತ್ನಗಳು, ಪ್ರಯೋಗಗಳು ಕೆಲವು ಕ್ಷೇತ್ರಗಳಲ್ಲಿ ಅದ್ಭುತಗಳನ್ನು ಸಾಧಿಸಿವೆ. ಆದರೆ ಸಮಗ್ರ ಅಭಿವೃದ್ಧಿ ದಾಖಲಿಸುವಷ್ಟು ಆಗಿಲ್ಲ ಎನ್ನಬಹುದು. ಒಟ್ಟಾರೆ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು ಯಾವುದೇ ಸಮಾಜವು ಅಭಿವೃದ್ಧಿಯನ್ನು ಸಾಧಿಸಬೇಕಾದರೆ ವ್ಯಕ್ತಿಗಳ ಅಭಿವೃದ್ಧಿಯೂ ಅವಶ್ಯವೇ ಆಗಿದೆ. ಅಭಿವೃದ್ಧಿ ತಜ್ಞರು ವ್ಯಕ್ತಿಯ ಮತ್ತು ಸಮಾಜದ ಅಭಿವೃದ್ಧಿಯನ್ನು ಈ ಕೆಳಗಿನಂತೆ ವ್ಯಾಖ್ಯಾನಿಸಿದ್ದಾರೆ.

"ಯಾವ ವ್ಯಕ್ತಿಯು ಆತ್ಮವಿಶ್ವಾಸವುಳ್ಳವನಾಗಿ, ಸ್ವಾವಲಂಬಿಯಾಗಿ, ಸೃಜನಶೀಲ ಹಾಗೂ ಸ್ನೇಹಪರನಾಗಿರುತ್ತಾನೋ ಆ ವ್ಯಕ್ತಿಯು ಅಭಿವೃದ್ಧಿ ಹೊಂದಿದ ವ್ಯಕ್ತಿಯಾಗಿರುತ್ತಾನೆ" (A developed individual is defined as one who is self reliant, creative and sociale) ಅದರಂತೆ, ಯಾವ ಸಮಾಜವು ತನ್ನ ವ್ಯಕ್ತಿಗಳಿಗೆ ಅಥವಾ ಸದಸ್ಯರುಗಳಿಗೆ ಅವಕಾಶಗಳ ಆಯ್ಕೆಮಾಡಲಿಕ್ಕೆ, ಮಾಡಬೇಕಾದ ಕಾರ್ಯಗಳಲ್ಲಿ ಸ್ವಾತಂತ್ರ್ಯ, ಸಮಾನ ಅವಕಾಶ ಮತ್ತು ಪರಸ್ಪರ ಬೆರೆಯಲು ಮುಕ್ತ ಅವಕಾಶ ಒದಗಿಸುತ್ತದೋ ಆ ಸಮಾಜವು ಅಭಿವೃದ್ಧಿ ಹೊಂದಿದ ಸಮಾಜವೆನಿಸಿಕೊಳ್ಳುತ್ತದೆ. (ಕನ್ನಡ ಡಾ. ಎಸ್. ಎಫ್. ಪೂಜಾರ ೨೦೦೩:೫೭) (A Developed Society is one which provides its members with freedom of choice, action equality of opportunity and the scope to mix freely with one another)

●




# ಗ್ರಾಮೀಣ ಅಭಿವೃದ್ಧಿ-ಒಂದು ಉಪಾಯ


ಡಾ. ಎಂ. ಮಹದೇವಪ್ಪ


**ಭಾ**ರತದಲ್ಲಿ ಜನಸಂಖ್ಯೆಯು ಒಂದು ಬಿಲಿಯವನ್ನು ದಾಟಿದ್ದು, ಇಸವಿ ೨೦೨೫ರ ಹೊತ್ತಿಗೆ ೧.೪ ಬಿಲಿಯನ್ ತಲುಪುವ ನಿರೀಕ್ಷೆ ಇದೆ. ತಲಾವಾರು ಜಮೀನು ದೊರಕುವುದು(೧.೧೫ಹೆ) ಖಂಡಿತಾ ಗಣನೀಯವಾಗಿ ಕಡಿಮೆ ಆಗುತ್ತದೆ. ಗಾಂಧೀಜಿ ಒಮ್ಮೆ ಹೀಗೆ ಹೇಳಿದ್ದರು: "ಭಾರತವು ಹಳ್ಳಿಗಳಲ್ಲಿ ಜೀವಿಸುತ್ತದೆ, ಸುಮಾರು ಶೇ.೭೦ರಷ್ಟು ಭಾರತದ ಜನಸಂಖ್ಯೆಯು ತಮ್ಮ ಜೀವನೋಪಾಯಕ್ಕಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ನಿರಂತರವಾಗಿ ಹೆಚ್ಚುತ್ತಿರುವ ಜನಸಂಖ್ಯೆಯ ಜತೆಗೆ ಭೂಸಂಪನ್ಮೂಲಗಳು ಕಡಿಮೆ ಆಗುತ್ತಿರುವುದರಿಂದ, ಸಂರಕ್ಷಣೆ ಆಗುವಷ್ಟು ಉತ್ಪಾದನೆಗೆ ಈ ಸಂಪನ್ಮೂಲಗಳನ್ನು ಸಂರಕ್ಷಿಸುವ ಅಗತ್ಯವಿದೆ. ನಾವು ವಿಶ್ವದಲ್ಲಿ ಸ್ಪರ್ಧಿಗಳಾಗಿರಬೇಕಾಗಿರುವುದರಿಂದ ಉತ್ಪಾದಕತೆ, ಲಾಭ ಮತ್ತು ಜೀವನಾಧಾರ ಕ್ರಮಗಳನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳಬೇಕು. ಆದರೆ ಭಾರತದ ಕೃಷಿಯು ಇನ್ನೂ ಹೆಚ್ಚಿನ ಏಳರಿಂದ ಒಂಬತ್ತು ಮಿಲಿಯ ಟನ್ ಆಹಾರ ಧಾನ್ಯಗಳನ್ನು ಉತ್ಪಾದಿಸಿ ಈಗ ಲೆಕ್ಕ ಹಾಕಿದ ಬೇಡಿಕೆಯನ್ನು ಪೂರೈಸಲು ತನ್ನ ಸಾಮರ್ಥ್ಯವನ್ನು ಮೇಲ್ಮಟ್ಟಕ್ಕೆ ತರಬೇಕಾಗುತ್ತದೆ. 12090

ಅದೃಷ್ಟವಶಾತ್ ಭಾರತವು ಮಣ್ಣು, ನೀರು, ಹವಾಮಾನದಂತಹ ಸಂಪದ್ಭರಿಂತ ಸ್ವಾಭಾವಿಕ ಸಂಪನ್ಮೂಲಗಳಲ್ಲಿ ವೈವಿಧ್ಯತೆಯಿಂದ ಕೂಡಿದ್ದು, ಹಾಗೆಯೇ ಜೀವವೈವಿಧ್ಯತೆಯನ್ನೂ ಹೊಂದಿದೆ. ಕೆಟ್ಟಯೋಜನೆಗಳಿಂದ ಅಥವಾ ಸಂಪನ್ಮೂಲಗಳ ಮಿತಿಮೀರಿದ ಉಪಯೋಗದಿಂದ ಉತ್ಪಾದಕತೆಯಲ್ಲಿ ತುಂಬಾ ಇಳಿಮುಖವಾಗುವ ಸಾಧ್ಯತೆ ಇದೆ. ವಿವಿಧ ಸಂಪನ್ಮೂಲಗಳ ಸರಿಯಾದ ನಿರ್ವಹಣೆಯು ಹೆಚ್ಚಿನ ಉತ್ಪಾದಕತೆ ಮತ್ತು ಪರಿಸರ ರಕ್ಷಣೆಯನ್ನು ಕಾಪಾಡಲು ಒಂದು ಉಪಾಯವಾಗಿದೆ. ಈ ಸಂದರ್ಭದಲ್ಲಿ ಹೇಳಬಹುದಾದ ಉದಾಹರಣೆ ಎಂದರೆ, ಇಸ್ರೇಲ್‌ನಲ್ಲಿ ದಕ್ಷ ನೀರು, ಮತ್ತು ಭೂ ಉಪಯೋಗ, ಚೀನಾದಲ್ಲಿ ನಿರಂತರವಾಗಿ ಹೆಚ್ಚುತ್ತಿರುವ ಕೃಷಿ ಉತ್ಪಾದಕತೆಯ ಪ್ರವೃತ್ತಿ, ಹಸಿರು ಕ್ರಾಂತಿಯ ಮುಂಚಿನ ಯುಗದಲ್ಲಿ ಕಡಿಮೆ ಹೂಡುವಳಿ ಉಪಯೋಗ ಮತ್ತು ಕಡಿಮೆ ಉತ್ಪಾದಕ ತಂತ್ರಜ್ಞಾನಗಳ ಅಳವಡಿಕೆಯಿಂದ ಬೆಳವಣಿಗೆ ಕುಂಠಿತವಾಯಿತು. ಅರವತ್ತರ ದಶಕದ ಮಧ್ಯಭಾಗದನಂತರ ಹೆಚ್ಚು ಹೂಡುವಳಿ ಮತ್ತು ಹೆಚ್ಚು ಉತ್ಪಾದಕ ತಂತ್ರಜ್ಞಾನಗಳ ಜೊತೆಯಲ್ಲಿ ಹೆಚ್ಚು ಇಳುವರಿಯ ರಸಗೊಬ್ಬರಕ್ಕೆ ಸ್ಪಂದಿಸುವ,

***ಇಸ್ರೇಲ್‌ನಲ್ಲಿ ದಕ್ಷ ನೀರು, ಮತ್ತು ಭೂ ಉಪಯೋಗ, ಚೀನಾದಲ್ಲಿ ನಿರಂತರವಾಗಿ ಹೆಚ್ಚುತ್ತಿರುವ ಕೃಷಿ ಉತ್ಪಾದಕತೆಯು ಪ್ರವೃತ್ತಿ. ಹಸಿರು ಕ್ರಾಂತಿಯ ಮುಂಚಿನ ಯುಗದಲ್ಲಿ ಕಡಿಮೆ ಹೂಡುವಳಿ ಉಪಯೋಗ ಮತ್ತು ಕಡಿಮೆ ಉತ್ಪಾದಕ ತಂತ್ರಜ್ಞಾನಗಳ ಅಳವಡಿಕೆಯಿಂದಾಗಿ ಬೆಳವಣಿಗೆ ಕುಂಠಿತವಾಗಿದೆ.***

ಬೆಳೆಯ ಜಾತಿಗಳ ಜತೆಗೆ ಸೇರಿದಂತೆ, ಸುಧಾರಿಸಿದ ಉತ್ಪಾದನಾ ಪದ್ಧತಿಗಳಿಂದ, ದೇಶವು ಆಹಾರ ಧಾನ್ಯದಲ್ಲಿ ಸ್ವಸಂಪೂರ್ಣತೆ ಪಡೆಯಲು, ಸಹಾಯ ಮಾಡಿದವು.

ಕರ್ನಾಟಕ ರಾಜ್ಯದ ಭೌಗೋಳಿಕ ವಿಸ್ತೀರ್ಣವು ೧೯.೦೪೯ ಮಿಲಿಯ ಹೆಕ್ಟೇರ್‌ಗಳಿದ್ದು, ಅದರಲ್ಲಿ ೧೦.೭೯ ಮಿಲಿಯ ಹೆಕ್ಟೇರ್ ಕೃಷಿಭೂಮಿ ಇದೆ. ಇದರಲ್ಲಿ ಸುಮಾರು ೨.೩೨ ಮಿಲಿಯ ಹೆಕ್ಟೇರ್ ಜಮೀನು ಮಳೆಯ ಕರುಣೆಯ ಮೇಲೆ ಅವಲಂಬಿಸಿದೆ. ಮಳೆಯ ಅನಿಶ್ಚಿತತೆಗಳು ಮತ್ತು ವಿರಳವಾದ ಸಂಪನ್ಮೂಲಗಳು, ಮಳೆ ಆಧಾರಿತ ಕೃಷಿಯನ್ನು ಒಂದು ಜೂಜಾಟವನ್ನಾಗಿ ಮಾಡಿದೆ. ಅಲ್ಲದೆ ರೈತಸಮುದಾಯದ ಅತಿ ದಾರುಣವಾದ ಆರ್ಥಿಕ ಪರಿಸ್ಥಿತಿಗಳಿಂದ ಸಂಪನ್ಮೂಲಗಳನ್ನು ಮೇಲ್ದರ್ಜೆಗೆ ತರುವುದಕ್ಕೆ ಹೂಡಿಕೆಗಾಗಿ ಹೆಚ್ಚಿನ ಪ್ರಯತ್ನ ಮಾಡುತ್ತಿಲ್ಲ.

## ಮಣ್ಣು ಮತ್ತು ಜಲಸಂಪನ್ಮೂಲ :

ಮಣ್ಣಿನ ಅವನತಿಯ ವಿಸ್ತಾರ ಮತ್ತು ತೀವ್ರತೆಯ ವಿಷಯಗಳಲ್ಲಿ, ಭಾರತವು ಅಭಿವೃದ್ಧಿಯಾಗುತ್ತಿರುವ ದೇಶಗಳಲ್ಲೇ ಕೆಳಮಟ್ಟದಲ್ಲಿದೆ. ಮಣ್ಣಿನ ಸಂರಕ್ಷಣೆ ಮತ್ತು ಭೂ ಉಪಯೋಗದ ಯೋಜನೆಯ ರಾಷ್ಟ್ರೀಯ ಬ್ಯೂರೋದ ಇತ್ತೀಚಿನ ಅಂದಾಜಿನ ಪ್ರಕಾರ ಸುಮಾರು ೧೮೭.೭ ಮಿಲಿಯ ಹೆಕ್ಟೇರ್ ಜಮೀನು, ಗಾಳಿ ಮತ್ತು ನೀರಿನಿಂದ ಮಣ್ಣಿನ ಸವೆತ, ಕ್ಷಾರೀಯತೆ ಮತ್ತು ನೀರು ನಿಲ್ಲುವುದು ಮುಂತಾದ ಕಾರಣಗಳಿಂದ ಅವನತಿಗೊಂಡಿದೆ. ಕರ್ನಾಟಕ ರಾಜ್ಯವು ವೈವಿಧ್ಯಮಯವಾದ ಮಣ್ಣು ಮತ್ತು ಹವಾಮಾನ ಸ್ಥಿತಿಗಳನ್ನು ಹೊಂದಿದ್ದು, ಕೇಂದ್ರ ಮತ್ತು ದಕ್ಷಿಣ ಶುಷ್ಕವಲಯಗಳಲ್ಲಿ ಕೆಂಪು ಮಣ್ಣು ಮತ್ತು ಉತ್ತರದ ಶುಷ್ಕ ವಲಯಗಳಲ್ಲಿ ಕಪ್ಪುಮಣ್ಣು ಪ್ರಧಾನವಾಗಿದೆ. ಆಮ್ಲೀಯ ಜಂಬಿಟ್ಟಿಗೆ ಮಣ್ಣು ಹೆಚ್ಚು ಮಳೆ ಬೀಳುವ ಬೆಟ್ಟ ಮತ್ತು ತೀರಪ್ರದೇಶಗಳಲ್ಲಿ ದೊರೆಯುತ್ತದೆ. ಹಾಗಾಗಿ ಮಣ್ಣಿನ ಸಮಸ್ಯೆಗಳ ಸ್ವಭಾವವು ಹವಮಾನ ಮತ್ತು ಮಣ್ಣಿನ ವಿಧಗಳ ಮೇಲೆ ಅವಲಂಬಿಸಿದೆಯಾದುದರಿಂದ, ನಿರ್ವಹಣೆಯ ತಂತ್ರಕೌಶಲ್ಯಗಳನ್ನು ಅದೇ ರೀತಿ ಅಭಿವೃದ್ಧಿಪಡಿಸಬೇಕಾದ ಅಗತ್ಯವಿದೆ. ಒಂದು ಅಂದಾಜಿನ ಪ್ರಕಾರ ಕರ್ನಾಟಕದಲ್ಲಿ ಪ್ರತಿಕೂಲ ಮಣ್ಣುಗಳ ಹಂಚಿಕೆಯು ಈ ರೀತಿ ಇದೆ. ಉಪ್ಪು ಮಣ್ಣು ೧,೦೪ ಲಕ್ಷ ಹೆಕ್ಟೇರ್‌ಗಳು. ಕ್ಷಾರೀಯ ಮಣ್ಣು ೧.೦೨ಲಕ್ಷ ಹೆಕ್ಟೇರ್‌ಗಳು, ಜವುಗು ಮಣ್ಣು. ೦.೩೦ಲಕ್ಷ ಹೆಕ್ಟೇರ್‌ಗಳು ಮತ್ತು ಆಮ್ಲೀಯ ಮಣ್ಣು ೧೨.೩೦ ಲಕ್ಷ ಹೆಕ್ಟೇರ್‌ಗಳು ಇವೆ. ಇದು ಯಾವಾಗಲೂ ಒಣಗಿ ಹೋಗಿರುವ ಮತ್ತು ಫಲವತ್ತಿಲ್ಲದ, ಖುಷ್ಕಿ ಜಮೀನನ್ನು ಒಳಗೊಂಡಿಲ್ಲ. ಇಂತಹ ಪ್ರತಿಕೂಲ ಪರಿಸ್ಥಿತಿಗಳಲ್ಲಿ ಸಂರಕ್ಷಣೆಯ ಆಧಾರದ ಮೇಲೆ ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಪ್ರಮುಖ ಅಂಶವೆಂದರೆ, ಭೂ ಸಂಪನ್ಮೂಲ ನಿರ್ವಹಣೆ. ಇದು ಗ್ರಾಮೀಣ ಸಾಮಾನ್ಯ ಜನರ ಜೀವನವನ್ನು ಉತ್ತಮಪಡಿಸುವುದೆಂದು ನಿರೀಕ್ಷಿಸಲಾಗಿದೆ.

ಸ್ವಾಭಾವಿಕ ಸಂಪನ್ಮೂಲಗಳ ನಿರ್ವಹಣೆಗೆ, ಜಲಾನಯನ ಮಾರ್ಗದಿಂದ ಮಣ್ಣಿನ ಉಳಿತಾಯ, ನೀರು ಮತ್ತು ಸಸ್ಯಗಳನ್ನು ಸರಿಯಾಗಿ ಕಾಪಾಡುವುದು, ಸುಧಾರಿತ ಬೆಳೆ ಮತ್ತು ಮಣ್ಣು ನಿರ್ವಹಣೆ ಪದ್ಧತಿಗಳಿಂದ ಬೆಳೆ ಇಳುವರಿಯನ್ನು ಸ್ಥಿರಗೊಳಿಸುವುದು, ಪರಿಸರ ಅವನತಿಯನ್ನು ತಡೆಗಟ್ಟಲು ಮತ್ತು ಸಮತೋಲನ ಕಾಪಾಡಲು ಪರ್ಯಾಯ ಭೂ ಉಪಯೋಗ ಪದ್ಧತಿಗಳನ್ನು ಅಭಿವೃದ್ಧಿ ಪಡಿಸುವುದು. ಭಾರತದ ಕೃಷಿಯು ಅನಿಶ್ಚಿತ ಮಳೆಯಿಂದ ಮಾತ್ರವಲ್ಲದೇ ದೋಷಪೂರಿತ ನಿರ್ವಹಣೆಯಿಂದ ಕೂಡ ನೀರಿನ ಕೊರತೆಯನ್ನು ಅನುಭವಿಸುತ್ತಿದೆ. ಮಳೆಯ ಗಣನೀಯ ಭಾಗವು ಮೇಲ್ಭಾಗದಲ್ಲಿ ಹರಿದುಹೋಗಿ, ಆಳವಾಗಿ ಇಳಿದುಹೋಗಿ, ಸಮುದ್ರಕ್ಕೆ ಹರಿದುಹೋಗುವುದರಿಂದ ನಷ್ಟವಾಗುತ್ತದೆ. ಹೆಚ್ಚಿನ ಮಳೆಯ ನೀರು ಸೋಸುವಿಕೆಯಿಂದ ಪಶ್ಚಿಮ ಘಟ್ಟಪ್ರದೇಶಗಳಲ್ಲಿ, ಅರಬ್ಬೀ ಸಮುದ್ರವನ್ನು ಸೇರುತ್ತದೆ. ಹೆಚ್ಚಿನ ಪ್ರದೇಶಗಳಲ್ಲಿ ಬೀಳುವ ಮಳೆಯು ಬಹುಕಡಿಮೆ ಇರುವುದರಿಂದ , ಅಷ್ಟನ್ನಾದರೂ ಕಾಪಾಡಿಕೊಳ್ಳುವ ಅಗತ್ಯವನ್ನು ಸೂಚಿಸುತ್ತದೆ. ಮಳೆ ನೀರನ್ನು ಅಂತರ್ಜಲಕ್ಕೆ ಕಳುಹಿಸುವುದು ಒಳ್ಳೆಯದು. ಇದರಿಂದ ಜಲಾನಯನ ನಿರ್ವಹಣೆಯಲ್ಲಿ ಅನುಕೂಲವಾಗಿ ಭೂಮಿ ಮತ್ತು ನೀರಿನ ಸಂಪನ್ಮೂಲಗಳನ್ನು ಪೋಷಣಾಧಾರ ಕೃಷಿ ಉತ್ಪನ್ನಕ್ಕೆ ಸರಿಯಾಗಿ ಸಮಗ್ರಗೊಳಿಸಲು ಅನುಕೂಲವಾಗುತ್ತದೆ. ಮಳೆ ಆಧಾರಿತ ಪ್ರದೇಶಗಳಲ್ಲಿ ಮಳೆ ನೀರಿನ ಸಂಗ್ರಹಣೆಯು ಆಗಾಗ ಬರುವ ಬರಗಾಲದ ವಿರುದ್ಧ ರಕ್ಷಿಸಿಕೊಳ್ಳಬಹುದೆಂದು ನಿರೀಕ್ಷಿಸಲಾಗಿದೆ. ನೀರಾವರಿ ಪ್ರದೇಶಗಳಲ್ಲಿ ನೀರು ಮತ್ತು ಬೆಳೆ ನಿರ್ವಹಣೆಯ ವೈಜ್ಞಾನಿಕ ವಿಧಗಳ ಅನ್ವಯದಿಂದ ಲವಣ ಸಂಗ್ರಹ ಕ್ಷಾರ ಮತ್ತು ನೀರು ನಿಲ್ಲುವುದರಿಂದಾಗುವ ಮಣ್ಣಿನ ಅವನತಿಯನ್ನು ಕಡಿಮೆ ಮಾಡಲು ಸಹಾಯವಾಗುತ್ತದೆ. ಉತ್ತಮ ಮಟ್ಟದಲ್ಲಿ ಅಂತರ್ಜಲ ಹೊಂದಿರುವ ಪ್ರದೇಶಗಳಲ್ಲಿ ಮಿತಿ ಮೀರಿ ನೀರಿನ ಬಳಕೆಯ ವಿರುದ್ಧ ಜಾಗ್ರತೆ ಅಗತ್ಯ. ಇಸ್ರೇಲಿನ

ಮಾದರಿಯಂತೆ ಅಂತರ್ಜಲದ ಸಂರಕ್ಷಣೆ ಮತ್ತು ನೀರಿನ ಸರಿಯಾದ ಉಪಯೋಗವು ಅನುಕರಣಾ ಯೋಗ್ಯವಾದುದು. ಹಾಳಾಗಿರುವ ಮಣ್ಣುಗಳ ಹಸನು ಮಾಡುವುದು ಹೂಡಿರುವ ನೀರು ಮತ್ತು ಪೋಷಕಾಂಶಗಳಿಂದ ಹೆಚ್ಚಿನ ಪ್ರತಿಫಲವನ್ನು ಪಡೆಯಲು ಅಗತ್ಯ.

ಕ್ಷಾರೀಯ ಮಣ್ಣುಗಳಲ್ಲಿನ ಮಿತಿಮೀರಿದ ಕ್ಷಾರಗಳನ್ನು ಬಸಿದು ಹೋಗುವಂತೆ ಮಾಡುವುದು, ಆಮ್ಲೀಯತೆಯನ್ನು ಸರಿಪಡಿಸುವುದು, ಇವುಗಳನ್ನು ಸೂಕ್ತವಾದ ವಸ್ತುಗಳಿಂದ ಸರಿಪಡಿಸುವುದು, ಅಂತಹ ಮಣ್ಣುಗಳಿಂದ ಹೆಚ್ಚಿನ ಉತ್ಪಾದಕತೆಯನ್ನು ಪಡೆಯುವುದಕ್ಕೆ ಅಗತ್ಯವಾಗಿದೆ.

ಸಮತೋಲನ ಪೌಷ್ಠಿಕಾಂಶದ ಉಪಯೋಗವು ಪೋಷಣಾಧಾರಿತ ಉತ್ಪಾದಕತೆಗೆ ಮುಖ್ಯವಾಗಿದೆ. ಹಾಗಾಗಿ ಸಮಗ್ರ ಪೋಷಣಾಂಶ ನಿರ್ವಹಣೆಯು ಪ್ರಾಮುಖ್ಯವಾಗಿದೆ. ತೀವ್ರವಾದ ಕೃಷಿಯಲ್ಲಿ ಹಾಕಿದ ಪೋಷಣಾಂಶಗಳು ಮತ್ತು ಬೆಳೆಗಳು ಉಪಯೋಗಿಸಿಕೊಳ್ಳುವ ಪೋಷಣಾಂಶಗಳ ನಡುವೆ ದೊಡ್ಡ ಅಂತರವಿದೆ. ಶಿಫಾರಸು ಮಾಡಿದ ಸಾರಜನಕ, ರಂಜಕ, ಪೊಟ್ಯಾಶಿಯಂ ಪ್ರಮಾಣವನ್ನು ಮಣ್ಣಿಗೆ ಸೇರಿಸಿದರೂ ಕೂಡ ಬೆಳೆಯ ಉತ್ಪಾದಕತೆಯಲ್ಲಿ ಗಣನೀಯ ಇಳಿಮುಖವನ್ನು ಕಾಣಬಹುದು. ಇದಕ್ಕೆ ಕಾರಣ, ಸಣ್ಣ ಮತ್ತು ಅಷ್ಟೊಂದು ಪ್ರಾಮುಖ್ಯವಲ್ಲದ ಪೋಷಣಾಂಶಗಳ ತೀವ್ರ ಕೊರತೆಯಿಂದ ಆಗಿದೆ. ರಸಗೊಬ್ಬರ ಪೋಷಣಾಂಶದ ಪ್ರತಿ ಘಟಕಕ್ಕೆ ಉತ್ಪಾದನಾ ದಕ್ಷತೆಯು ಗಣನೀಯವಾಗಿ ಇಳಿಮುಖವಾಗಿದೆ. ಮಣ್ಣಿನ ಉತ್ಪಾದನಾ ಸಾಮರ್ಥ್ಯಗಳ ಈ ಇಳಿಮುಖಕ್ಕೆ ಮಣ್ಣಿನ ಆರೋಗ್ಯದ ಅವನತಿಯೂ ಕಾರಣ ಎಂದು ಹೇಳಲಾಗಿದೆ. ಸಾವಯವ ಗೊಬ್ಬರ, ಹಸಿರುಗೊಬ್ಬರ ಮತ್ತು ಜೈವಿಕ ಗೊಬ್ಬರಗಳೊಡನೆ ರಾಸಾಯನಿಕ ಗೊಬ್ಬರಗಳನ್ನು ಉಪಯೋಗಿಸಿದಾಗ ಪೋಷಣಾಂಶದ ವಸ್ತುವಿಗೆ ಎಲ್ಲ ಕಾಲದಲ್ಲಿ ಸರಿಯಾದ ಗಮನಕೊಡಬೇಕು. ೮೦ರ ದಶಕದಿಂದ ೯೦ ರ ದಶಕದವರೆಗೆ ಎಲ್ಲ ಬೆಳೆಗಳ ವಾರ್ಷಿಕ ಇಳುವರಿಯು ಕಡಿಮೆಯಾಗಿರುವುದನ್ನು ನೋಡಬಹುದು.

**ಭಾರತದಲ್ಲಿ ಪ್ರಮುಖ ಬೆಳೆಗಳ ಇಳುವರಿಯಲ್ಲಿ ಸರಾಸರಿ ವಾರ್ಷಿಕ ಬೆಳವಣಿಗೆಯ ದರ :**

| ಬೆಳೆ | ೧೯೭೯-೧೯೯೦ | ೧೯೯೦-೧೯೯೯ |
|---|---|---|
| ಭತ್ತ | ೩.೮೨ | ೧.೨೭ |
| ಗೋಧಿ | ೩.೬೫ | ೧.೯೬ |
| ಮೆಕ್ಕೆಜೋಳ | ೨.೭೪ | ೧.೪೪ |
| ಒಟ್ಟು ದವಸ ಧಾನ್ಯಗಳು | ೩.೪೩ | ೧.೬೩ |
| ಒಟ್ಟು ಬೇಳೆ ಕಾಳುಗಳು | ೨.೬೩ | ೦.೬೫ |
| ಒಟ್ಟು ಆಹಾರಧಾನ್ಯಗಳು | ೩.೩೩ | ೧.೪೨ |
| ಒಟ್ಟು ಎಣ್ಣೆ ಕಾಳುಗಳು | ೨.೭೩ | ೧.೬೨ |
| ಕಬ್ಬು | ೧.೮೧ | ೧.೦೮ |
| ಹತ್ತಿ | ೩.೫೬ | -೦.೪೭ |
| ಆಹಾರೇತರ ಕಾಳುಗಳು | ೨.೪೭ | ೧.೨೮ |
| ಎಲ್ಲಾ ಬೆಳೆಗಳು | ೨.೯೯ | ೧.೩೪ |

(ಎಂ.ಎಸ್. ಸ್ವಾಮಿನಾಥನ್ (೨೦೦೦) : ಅಂತಾರಾಷ್ಟ್ರೀಯ ಸಮ್ಮೇಳನದಲ್ಲಿ ಪ್ರಾರಂಭಿಕ ಭಾಷಣ-೨೧ ನೆಯ ಶತಮಾನದಲ್ಲಿ ಜೀವನಾಧಾರ ಕೃಷಿ ಉತ್ಪಾದನೆಗೆ ಸ್ವಾಭಾವಿಕ ಸಂಪನ್ಮೂಲಗಳ ನಿರ್ವಹಣೆ.)

ಹಿಂದೆಂದೂ ಮಣ್ಣಿನ ಆರೋಗ್ಯದ ಬಗ್ಗೆ ಇಷ್ಟೊಂದು ವ್ಯಾಕುಲತೆ ಇರಲಿಲ್ಲ. ಈಗ ಇರುವುದಕ್ಕೆ ಸ್ಪಷ್ಟವಾದ ಕಾರಣವೆಂದರೆ ಶಿಫಾರಸು ಮಾಡಿದ ಪದ್ಧತಿಗಳಲ್ಲಿಯೇ ಕೃಷಿ ಮಾಡುತ್ತಿದ್ದರೂ, ಇಳುವರಿಯ ಇಳಿಮುಖವು ಸ್ಪಷ್ಟವಾಗಿ ಗೋಚರವಾಗುತ್ತಿರುವುದರಿಂದ

ಆಗಿದೆ. ಮಣ್ಣಿನ ಅತಿಯಾದ ಬಳಕೆ ಮತ್ತು ಕಳಪೆ ಸಾವಯವ ವಸ್ತುಸ್ಥಿತಿಗಳು ಮಣ್ಣಿನ ಆರೋಗ್ಯದ ಅವನತಿಗೆ ಕಾರಣವಾಗಿದೆ. ಮುಂದುವರಿದ ದೇಶಗಳಾದ ಅಮೆರಿಕಾ ಮತ್ತು ಯುರೋಪ್ ದೇಶಗಳು ನಿರಂತರ ಪರಿವೀಕ್ಷಣೆಯಿಂದ ಮಣ್ಣಿನ ಆರೋಗ್ಯ ಕಾಪಾಡಲು ಹೆಚ್ಚಿನ ಒತ್ತು ನೀಡಿವೆ. ಚೀನಾ, ಮಣ್ಣಿನ ಅವನತಿಯನ್ನು ತಡೆಯುವುದಕ್ಕೆ ಸಾವಯವ ವಸ್ತುಗಳ ಪುನರುಪಯೋಗದಿಂದ ಮತ್ತು ಮಾನವ ಮಲವನ್ನು ಉಪಯೋಗಿಸುವುದರಿಂದ ಮಣ್ಣಿನ ಅವನತಿಯನ್ನು ತಡೆದಿದೆ. ಇತರ ದೇಶಗಳೂ ಕೂಡಾ ಇದರಿಂದ ಪಾಠಕಲಿಯಬಹುದು.

ಭೂಸಂಪನ್ಮೂಲ ನಿರ್ವಹಣೆಯ ಮೂಲಕ ಗ್ರಾಮೀಣ ಅಭಿವೃದ್ಧಿಗೆ ಪ್ರಧಾನವಾಗಿರುವ ಅಂಶವೆಂದರೆ ಒಂದು ಘಟಕವಾದ ಪ್ರದೇಶದಲ್ಲಿ ಉತ್ಪಾದಕತೆ ಹೆಚ್ಚಿಸುವುದು. ಹೆಚ್ಚು ಇಳುವರಿ ಬೆಳಗಳ ಉತ್ಪಾದನಾ ಸಾಮರ್ಥ್ಯವನ್ನು ಮಣ್ಣು, ನೀರು ಮತ್ತು ಸಂಪನ್ಮೂಲಗಳ ಸರಿಯಾದ ನಿರ್ವಹಣೆಯಿಂದ ಹೆಚ್ಚಿಸುವ ಸಾಧ್ಯತೆ ಇದೆ. ಮಣ್ಣಿನ ಆರೋಗ್ಯದ ಕಾಲಕಾಲದ ಪರಿವೀಕ್ಷಣೆ, ನೀರಿನ ಗುಣಮಟ್ಟ, ಸುಧಾರಿಸಿದ ತಂತ್ರಜ್ಞಾನದ ಶೀಘ್ರವಾದ ವರ್ಗಾವಣೆ ಮತ್ತು ಸ್ವಾಭಾವಿಕ ಸಂಪನ್ಮೂಲಗಳ ಅನಿವಾರ್ಯತೆಯ ಬಗ್ಗೆ ರೈತರಿಗೆ ಅರಿವು, ಸಂಪನ್ಮೂಲಗಳ ಸರಿಯಾದ ಉಪಯೋಗ ಮಾಡದಿರುವುದರಿಂದ ನಿರೀಕ್ಷಿತ ಆಪತ್ತುಗಳ ಅರಿವು ಇವುಗಳಲ್ಲಿ ಭವಿಷ್ಯದ ಸವಾಲನ್ನು ಎದುರಿಸಲು ತುಂಬಾ ಸಹಾಯವಾಗುತ್ತದೆ.

ಗ್ರಾಮೀಣ ಜನರ ಸಮಗ್ರ ಅಭಿವೃದ್ಧಿಗೆ ಸಹಾಯ ಮಾಡಲು ಆಹಾರ ಮತ್ತು ಇತರ ಅಗತ್ಯಗಳ ಉತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಬೆಳೆ ಬೆಳೆಯುವ ಕೌಶಲ್ಯಗಳನ್ನು ಉಪಯೋಗಿಸುವುದರ ಮೂಲಕ ಈ ಸವಾಲವನ್ನು ಎದುರಿಸಬಹುದು.

**ಶಿಫಾರಸುಗಳು :**

೧. ನಮ್ಮ ಭೂಸಂಪನ್ಮೂಲಗಳು ಹಿಗ್ಗುವವಲ್ಲ ಮತ್ತು ತಲಾ ವಿಸ್ತೀರ್ಣವು ಅನೇಕ ವರ್ಷಗಳಲ್ಲಿ ಗಣನೀಯವಾಗಿ ಕಡಿಮೆಯಾಗಿದೆ. ಹಿಡುವಳಿಯ ಗಾತ್ರದಲ್ಲಿ ಅಂತಹ ಕಡಿತ ಸಣ್ಣ ಕೃಷಿ ಕ್ಷೇತ್ರದಲ್ಲಿ ಪರಿಣಾಮಕಾರಿಯಾದ ವೈಜ್ಞಾನಿಕ ನಿರ್ವಹಣೆಗೆ ಅವಕಾಶವನ್ನು ಒದಗಿಸುವುದಿಲ್ಲ. ಆದ್ದರಿಂದ ಹಿಡುವಳಿಗಳನ್ನು ಒಟ್ಟಾಗಿ ಸೇರಿಸಿ ಕೃಷಿ ಸಹಕಾರ ಸಂಘಗಳನ್ನು ರಚಿಸುವುದರಿಂದ ವೈವಿಧ್ಯಮಯ ಮತ್ತು ದಕ್ಷ ಕೃಷಿ ಕಾರ್ಯಗಳನ್ನು ನಡೆಸುವುದಕ್ಕೆ ಈ ವಿಸ್ತೃತ ಹಿಡುವಳಿಗಳನ್ನು ಒಳಪಡಿಸಬೇಕು ಎಂದು ಅಪೇಕ್ಷಿಸಲಾಗಿದೆ.

೨. ಬೆಳೆ ಬೆಳೆಯುವ ಅಗತ್ಯಗಳ ತೀವ್ರಗೊಳಿಸುವಿಕೆಯನ್ನು ಸೂಕ್ತವಾದ ಭೂ ಉಪಯೋಗ ತಂತ್ರಜ್ಞಾನವನ್ನು ಕಂಡುಹಿಡಿದು ಒಂದು ಬೆಳೆ ಪದ್ಧತಿಯಿಂದ ಬಹು ಅಥವಾ ಮಿಶ್ರ ಬೆಳೆ ಪದ್ಧತಿಗೆ ಬದಲಾಯಿಸುವುದರಿಂದ ಮಣ್ಣಿನ ಆರೋಗ್ಯಕ್ಕೆ ಗಮನ ನೀಡಬಹುದು. ಅಲ್ಲದೆ ದವಸಧ್ಯಾನಗಳು ಮತ್ತು ಇತರ ಬೆಳೆಗಳನ್ನು ಒಳಗೊಂಡಿರುವ ೨-ಹಂತ ಅಥವಾ ೩ ಹಂತದ ಬೆಳೆ ಬೆಳೆಯುವ ಪದ್ಧತಿಗಳನ್ನು ಪ್ರಯತ್ನಿಸುವುದು.

೩. ಭೂ ಉಪಯೋಗ ಸರ್ವೇಕ್ಷಣೆ ಘಟಕವನ್ನು ಅತ್ಯುತ್ತಮವಾದ ಭೂ ಉಪಯೋಗವನ್ನು ಕಂಡುಹಿಡಿಯುವುದಕ್ಕೆ ತಾಲ್ಲೂಕು / ಹೋಬಳಿ ಮಟ್ಟದವರೆಗೆ ವಿಕೇಂದ್ರೀಕರಿಸಬೇಕು.

೪. ಪ್ರತಿಯೊಂದು ಜಮೀನಿನ ಅಲ್ಲಿಯ ಮಣ್ಣಿನ ಗುಣಲಕ್ಷಣಗಳು ವಿವಿಧ ಬೆಳೆಗಳಿಗೆ ರಸಗೊಬ್ಬರದ ಅವಶ್ಯಕತೆ ಮತ್ತು ವಿವರಗಳನ್ನು ಒಳಗೊಂಡಿರುವ ಒಂದು ಅಂಕಿಅಂಶದ ಕಾರ್ಡು ಗ್ರಾಮ ಪಂಚಾಯತಿ ಮಟ್ಟದಲ್ಲಿ ದೊರೆಯುವಂತ ಮಾಡಬೇಕು. ಇದರಿಂದ ರೈತರಿಗೆ ಅದು ಸುಲಭವಾಗಿ ದೊರೆಯುತ್ತದೆ. ಆದರೂ ಅಂತಹ ಅಂಕಿಅಂಶ ಆಧಾರವನ್ನು ಕಾಲಕಾಲಕ್ಕೆ ನವೀಕರಿಸಬೇಕಾಗುತ್ತದೆ.

೫. ಬೇಳೆಕಾಳುಗಳು (ಇವು ಮಣ್ಣಿನ ಭೌತಿಕ, ರಾಸಾಯನಿಕ ಮತ್ತು ಜೈವಿಕ ಲಕ್ಷಣಗಳನ್ನು ಉತ್ತಮಪಡಿಸುತ್ತದೆ.) ಅರಣ್ಯ ನೆಡುತೋಪು ನೀರಾವರಿ ಪರಿಸ್ಥಿತಿಯಲ್ಲಿ ತೋಟದ ಬೆಳೆಗಳಂತಹವುಗಳ ಜೀವನಾಧಾರ ವಿಷಯಗಳಿಗೆ ಗಮನಕೊಡುವುದು.

ಭೂ ಸಂಪನ್ಮೂಲ ನಿರ್ವಹಣೆಯು ಜೀವನಾಧಾರ ಕೃಷಿ ಅಭಿವೃದ್ಧಿಗೆ ಆಧಾರವಾಗಿರುತ್ತದೆ. ಕೃಷಿಯಲ್ಲಿ ಒಟ್ಟಾರ ಅಭಿವೃದ್ಧಿಯು ಗ್ರಾಮೀಣ ಜನರ ಜೀವನದಲ್ಲಿ ಸಕಾರಾತ್ಮಕ ಬದಲಾವಣೆಯನ್ನು ಖಂಡಿತಾ ತರುತ್ತದೆ. ಹಳ್ಳಿಗಳಲ್ಲಿ ಅಭಿವೃದ್ಧಿಯಾದರೆ ಭಾರತವು ಅಭಿವೃದ್ಧಿಯಾಗುತ್ತದೆ. ಇದೇ ಭಾರತದ ಪಿತಾಮಹರುಗಳ ದೂರದೃಷ್ಟಿ ಆಗಿತ್ತು.




# ಗ್ರಾಮೀಣ ಅಭಿವೃದ್ಧಿಯಲ್ಲಿ ಬ್ಯಾಂಕುಗಳು

ಪಿ. ಎಸ್. ಪರ್ವತಿ

"ಬಿಸಿಲಿನ ಧಗೆಯಲ್ಲಿ ಹಸಿದ ಹೊಟ್ಟೆಯಿಂದ ಅರೆಬೆತ್ತಲಾಗಿ ತನ್ನ ಚಿಕ್ಕ ನೆಲವನ್ನು ನೇಗಿಲಿನಿಂದ ಉಳುವ ರೈತನನ್ನು ಕಲ್ಪಿಸಿಕೊಂಡು... ನಿಮ್ಮ ಯಾವತ್ತು ಕೆಲಸವನ್ನು ಅವರ ಹಿತಾಸಕ್ತಿಗಾಗಿ ಕೈಕೊಳ್ಳಿ" ಎಂಬ ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ನುಡಿಯಲ್ಲಿ "Rural India is Real India" ಎಂಬ ಭಾವನೆ ಸುಸ್ಪಷ್ಟವಾಗುತ್ತದೆ.

ನಮ್ಮನ್ನಾಳಿದ ಬ್ರಿಟಿಷರು ತಮ್ಮ ೨೦೦ ವರ್ಷಗಳ ಆಡಳಿತ ಕಾಲದಲ್ಲಿ ದೇಶಾದಾದ್ಯಂತ ಸಂಪರ್ಕ ಸಾಧನೆಗಾಗಿ ರಸ್ತೆ, ರೈಲ್ವೆ ವ್ಯವಸ್ಥೆ ಹಾಗೂ ದೂರಸಂಪರ್ಕದಂತಹ ಮೂಲಭೂತ ಸೌಲಭ್ಯಗಳನ್ನು ಈ ದೇಶವನ್ನು ತಮ್ಮ ಅಧೀನದಲ್ಲಿ ಇಟ್ಟುಕೊಳ್ಳುವುದಕ್ಕಾಗಿ ಒದಗಿಸಿರುವುದು ಇತಿಹಾಸದ ಪುಟಗಳಿಂದ ವೇದ್ಯವಾಗುತ್ತದೆ. ಅವರ ಆಡಳಿತಾವಧಿಯಲ್ಲಿ ಗ್ರಾಮೀಣಾಭಿವೃದ್ಧಿಗಾಗಲಿ ಅಥವಾ ಕೈಗಾರಿಕಾ ತಳಹದಿ ರೂಪಿಸಲಾಗಲಿ ಯಾವುದೇ ಮಹತ್ವಪೂರ್ಣ ಕ್ರಮ ಜರುಗಿಸಲಿಲ್ಲ. ಕೃಷಿ ಕ್ಷೇತ್ರದಲ್ಲಿ ಅವರು ದೇಶೀಯ ಮಾರುಕಟ್ಟೆಗೆ ಅಗತ್ಯವಾದ ಉತ್ಪನ್ನಗಳನ್ನು ಪ್ರೋತ್ಸಾಹಿಸಿದರೇ ಹೊರತು ಅಂದು ರಾಷ್ಟ್ರವ್ಯಾಪಿಯಾಗಿದ್ದ ಬಡತನ ಅದರಲ್ಲೂ ಹಳ್ಳಿಗಳ ಅಭಿವೃದ್ಧಿಯನ್ನಲ್ಲ. ಹೀಗಾಗಿ ಕೃಷಿ ಉತ್ಪಾದಕತೆ ಸಹ ಬಹಳ ಕಡಿಮೆ ಪ್ರಮಾಣದಲ್ಲಿತ್ತು. ಕೃಷಿ ನಮ್ಮ ದೇಶದ ಆರ್ಥಿಕತೆಯ ಜೀವನಾಡಿ. ಅತೀ ಹೆಚ್ಚು ಜನ ಅವಲಂಬಿಸಿರುವುದೇ ಕೃಷಿಯನ್ನು. ಒಟ್ಟು ಜನಸಂಖ್ಯೆಯ ಮುಕ್ಕಾಲು ಪಾಲು ಜನ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಕೃಷಿಯನ್ನು ಅವಲಂಬಿಸಿದ್ದಾರೆ. ಇದರಿಂದಾಗಿ ದೇಶ ಎದುರಿಸುತ್ತಿರುವ ಅನೇಕ ಸಮಸ್ಯೆಗಳ ಇತ್ಯರ್ಥಗೊಳಿಸುವಿಕೆಯು ಕೃಷಿ ಕ್ಷೇತ್ರದ ಸಮಗ್ರ ಅಭಿವೃದ್ಧಿ ಹಾಗೂ ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯುನ್ನು ಆಧರಿಸಿದೆಯೆಂದರೆ ಅತಿಶಯೋಕ್ತಿಯಾಗಲಾರದು.

**ದೇಶ ವಿಭಜನೆಗೊಂಡಾಗ ಗ್ರಾಮಗಳ ಪರಿಸ್ಥಿತಿ ನಿರಾಶ ದಾಯಕವಾಗಿತ್ತು. ಆರ್ಥಿಕವಾಗಿ ಸದೃಢವಾಗದ ಗ್ರಾಮದ ಜನತೆ ಸಾಲದಲ್ಲಿ ಹುಟ್ಟಿ, ಸಾಲದಲ್ಲೇ ಬೆಳೆದು, ಸಾಲದಲ್ಲೇ ಸಾಯುವ ಸ್ಥಿತಿಯಿತ್ತು. ಹೀಗಾಗಿ ಗ್ರಾಮೀಣ ಅಭಿವೃದ್ಧಿ ನಿಂತ ನೀರಿನಂತೆ ಜಡವಾಗಿತ್ತು.**

## ವಿಷವರ್ತುಲ :

೧೯೪೭ ರಲ್ಲಿ ದೇಶ ವಿಭಜನೆಗೊಂಡು ಸ್ವತಂತ್ರ ಭಾರತದ ರಚನೆಯಾದಾಗ ಭಾರತೀಯ ಗ್ರಾಮಗಳು ಹೇಗಿದ್ದವು ಎಂಬುದನ್ನು ಕಲ್ಪಿಸಿಕೊಂಡಾಗ ನಿರಾಶಾದಾಯಕ ಚಿತ್ರಣ ನಮ್ಮೆದುರಿಗೆ ಕಾಣುತ್ತದೆ. ಆಗಿದ್ದ ಜಮೀನ್ದಾರಿ, ಜಹಗೀರದಾರಿ ಮತ್ತು ರೈತವಾರಿ ಭೂ ಹಿಡುವಳಿ ಪದ್ಧತಿಗಳಲ್ಲಿ, ರೈತವಾರಿ ಹಿಡುವಳಿ ಕೇವಲ ಶೇ. ೫ ರಷ್ಟಿತ್ತು. ಭೂ ಹಿಡುವಳಿಯ ಸಿಂಹಪಾಲು ಜಮೀನ್ದಾರರಿಗೆ ಹಾಗೂ ಜಹಗೀರದಾರರಿಗೆ ಸೇರಿದ್ದಾಗಿತ್ತು. ಕೃಷಿ ವರಮಾನದಲ್ಲಿ

ಮಧ್ಯವರ್ತಿಗಳು ತಮ್ಮ ಪಾಲು ಪಡೆದ ನಂತರ ನಿಜವಾದ ಕೃಷಿಕನಿಗೆ ಅಲ್ಪ ಆದಾಯ ದೊರೆಯುತ್ತಿತ್ತು. ಕೃಷಿ ಅಭಿವೃದ್ಧಿಗೆ ಅಗತ್ಯವಾದ ಉತ್ತಮ ಗುಣಮಟ್ಟದ ಬೀಜ, ಗೊಬ್ಬರ, ಕೃಷಿ ಉಪಕರಣಗಳ ಬಳಕೆಗೆ ಆಸ್ಪದವಿರಲಿಲ್ಲ. ನಮ್ಮ ಗ್ರಾಮಗಳು ಸಂಪರ್ಕವಿಲ್ಲದ ದ್ವೀಪಗಳಾಗಿದ್ದವು. ಸಾಮಾಜಿಕವಾಗಿ ಸಂಪ್ರದಾಯಶೀಲವಾದ ಹಳ್ಳಿಗಳಲ್ಲಿ ಮೂಢನಂಬಿಕೆ, ಕಂದಾಚಾರ ಹಾಗೂ ಅನಿಷ್ಟ ಪದ್ಧತಿಗಳ ಆಚರಣೆಯಿಂದಾಗಿ ಬದುಕು ದುರ್ಭರವಾಗಿತ್ತು. ಆರ್ಥಿಕವಾಗಿ ಸದೃಢವಾಗದ ಗ್ರಾಮದ ಜನತೆ ಸಾಲದಲ್ಲಿ ಹುಟ್ಟಿ, ಸಾಲದಲ್ಲೇ ಬೆಳೆದು, ಸಾಲದಲ್ಲೇ ಸಾಯುವ ಸ್ಥಿತಿಯಿತ್ತು. ಹೀಗಾಗಿ ಗ್ರಾಮೀಣ ಅಭಿವೃದ್ಧಿ ನಿಂತ ನೀರಿನಂತೆ ಜಡವಾಗಿತ್ತು.

ರಾಷ್ಟ್ರೀಯ ಆರ್ಥಿಕ ವಿಕಾಸಕ್ಕೆ ತೊಡಕುಂಟಾಗಿದ್ದ ಜಮೀನ್ದಾರಿ, ಜಹಗೀರದಾರಿ ಇತ್ಯಾದಿ ಪದ್ಧತಿಗಳನ್ನು ರದ್ದುಗೊಳಿಸಿದ್ದರ ಪರಿಣಾಮವಾಗಿ ಕೃಷಿಭೂಮಿ ನಿಜವಾದ ಕೃಷಿಕನ ಕೈಸೇರಿತು. ಇದರಿಂದಾಗಿ ೧೯೫೦ರ ದಶಕದಲ್ಲಿ ರೈತರು ಕೃಷಿ ಹಾಗೂ ಆಹಾರಧಾನ್ಯ ಉತ್ಪಾದನೆ ಹೆಚ್ಚಿಸಲು ವೈಯಕ್ತಿಕ ಆಸಕ್ತಿಯನ್ನು ತೋರಿರುವುದು ಕಂಡುಬರುತ್ತದೆ.

ಅಭಿವೃದ್ಧಿಗೆ ಸಾಲ ವಿಧಾನ ಒಂದು ಪ್ರಮುಖ ಸಾಧನವಾಗಿದೆ. ಆದರೆ ಗ್ರಾಮಾಂತರ ಪ್ರದೇಶದ ಜನರ ಚಟುವಟಿಕೆಗಳಿಗೆ ಅಗತ್ಯವಾದ ಆರ್ಥಿಕ ನೆರವು ಸ್ವಾತಂತ್ರ್ಯಪೂರ್ವ ಹಾಗೂ ನಂತರದ ದಿನಗಳಲ್ಲಿ ಇಂದಿನಷ್ಟು ಸುಲಭವಾಗಿರಲಿಲ್ಲ. ಹೀಗಾಗಿ ಗ್ರಾಮೀಣ ಕೃಷಿ ಚಟುವಟಿಕೆಗಾಗಿ ಮಣ್ಣಿನ ಮಕ್ಕಳು ನಿರಂತರ ಹೋರಾಟ ಮಾಡುವ ಸನ್ನಿವೇಶ ಆ ದಿನಗಳಲ್ಲಿ ಸಾಮಾನ್ಯವಾಗಿತ್ತು. ಹಳ್ಳಿಯ ಜನರಿಗೆ ಸಮಯಕ್ಕೆ ಸರಿಯಾಗಿ ಸಾಕಷ್ಟು ಪ್ರಮಾಣದಲ್ಲಿ ಸಾಲ ಸರಳವಾಗಿ ದೊರೆಯುತ್ತಿರಲಿಲ್ಲ. ತನ್ನ ಅಗತ್ಯ - ಅನಿವಾರ್ಯತೆಗಳಿಗಾಗಿ ಕೃಷಿಕರು ಬಡ್ಡಿಗಾಗಿ ಸಾಲ ನೀಡುವ ಶ್ರೀಮಂತರು, ಖಾಸಗಿ ಸಾಲಗಾರರು ಹಾಗೂ ಲೇವಾದೇವಿಗಾರರ ಬಾಗಿಲಿಗೆ ಹೋಗಿ ಹಣದ ನೆರವು ಪಡೆಯುತ್ತಿದ್ದರು. ಈ ಸಾಲದ ಭದ್ರತೆಗಾಗಿ ಅವರು ತಮ್ಮ ಭೂಮಿ, ಮನೆ, ಮನೆಯಲ್ಲಿರುವ ಆಭರಣ, ಬಂಗಾರ, ಬೆಳ್ಳಿ, ಹಲವು ಸಂದರ್ಭಗಳಲ್ಲಿ ತಮ್ಮ ಗೃಹೋಪಯೋಗಿ ಸಾಮಗ್ರಿಗಳನ್ನು ಮತ್ತು ಜಾನುವಾರುಗಳನ್ನು ಅಡವು ಇಡಬೇಕಾಗಿತ್ತು. ಪಡೆದ ಸಾಲಕ್ಕೆ ಬಡ್ಡಿ, ಚಕ್ರಬಡ್ಡಿಯು ಪ್ರಾಪ್ತವಾಗಿ ವಿಷವರ್ತುಳದಲ್ಲಿ ನೊಂದ ರೈತರು, ಉಳ್ಳವರ ಕಪಿಮುಷ್ಟಿಗೆ ಸಿಲುಕಿ ನಲುಗುತ್ತಿದ್ದರು. ಅಧಿಕ ಬಡ್ಡಿ ಹಾಗೂ ಅಸಲು ಸಾಲದ ಹೊರೆಯಿಂದ ಮುಕ್ತವಾಗಲು ಸಾಲಕ್ಕಾಗಿ ಅಡವು ಇಟ್ಟ ತಮ್ಮ ಆಸ್ತಿಗಳನ್ನು ಕಳೆದುಕೊಳ್ಳುವ ಮೂಲಕ ಅವರು ಶೋಷಣೆಗೊಳಗಾಗುವುದು ಸರ್ವೇ ಸಾಮಾನ್ಯವಾಗಿತ್ತು. ಅಖಿಲ ಭಾರತ ಗ್ರಾಮಾಂತರ ಸಾಲ ಸರ್ವೇಕ್ಷಣ ಸಮಿತಿ ೧೯೫೪ರಲ್ಲಿ ಸಲ್ಲಿಸಿದ ವರದಿಯೊಂದರ ಪ್ರಕಾರ "ಗ್ರಾಮಾಂತರ ಬೇಸಾಯಗಾರರಿಗೆ ಅವಶ್ಯಕವಾದ ಸಾಲ ನೀಡುವವರಲ್ಲಿ ಖಾಸಗಿ ಸಾಲ ನೀಡುವವರ ಪಾಲು ಶೇ.೭೦ ರಷ್ಟು ಮತ್ತು ಸರಕಾರಿ ಹಾಗೂ ಸಹಕಾರಿ ಸಂಸ್ಥೆಗಳ ಪಾಲು ಅನುಕ್ರಮವಾಗಿ ಶೇ. ೩.೩ ಮತ್ತು ಶೇ. ೩.೧ ರಷ್ಟು ಆಗಿದ್ದಿತ್ತೆಂಬುದನ್ನು" ಅವಲೋಕಿಸಿದಾಗ ಖಾಸಗಿ ಸಾಲ ಎಷ್ಟೊಂದು ಅಧಿಕ ಪ್ರಮಾಣದಲ್ಲಿ ವಿತರಣೆಯಾಗುತ್ತಿತ್ತು ಎಂಬುದು ಅರಿವಾಗುತ್ತದೆ.

**ಸಹಕಾರ ಸಂಕಲ್ಪ :**

ಗ್ರಾಮೀಣ ಲೇವಾದೇವಿಗಾರರು ಹಾಗೂ ಸಾಹುಕಾರರ ಕಪಿಮುಷ್ಟಿಯಲ್ಲಿ ಸಿಕ್ಕು ಕೃಶವಾಗುತ್ತಿದ್ದ ಗ್ರಾಮೀಣ ಜನರನ್ನು ಈ ವಿಷಚಕ್ರದಿಂದ ಮುಕ್ತ ಮಾಡಲು ಹಾಗೂ ಋಣ ಪರಿಹಾರ ಮಾರ್ಗೋಪಾಯವಾಗಿ ಸಹಕಾರ ಸಂಘಗಳನ್ನು ಸ್ಥಾಪಿಸಲು ನಿರ್ಧರಿಸಲಾಯಿತು.

ಸ್ವಾತಂತ್ರ್ಯ ಪೂರ್ವದಲ್ಲಿ ಸಹಕಾರ ಸಂಸ್ಥೆಗಳ ಬಗ್ಗೆ ಸ್ಪಷ್ಟವಾದ ಕಾರ್ಯನೀತಿ ಇಲ್ಲದಿದ್ದುದು ಮತ್ತು ಸರ್ಕಾರ ಅದರ ಬೆಳವಣಿಗೆ ಬಗ್ಗೆ ಸಕ್ರಿಯ ಬೆಂಬಲ ನೀಡದಿರುವುದು ಗೋಚರವಾಗುತ್ತದೆ. ಕೇಂದ್ರ ಸರ್ಕಾರ ೧೯೦೪ ರಲ್ಲಿ ಸಹಕಾರ ಪತ್ತಿನ ಕಾಯ್ದೆಯನ್ನು ರಚಿಸಿತು. ರಾಜ್ಯಕ್ಕೆ ಸಂಬಂಧಿಸಿದಂತೆ ಹಿಂದಿನ ಮೈಸೂರು ಸಂಸ್ಥಾನದಲ್ಲಿ ೧೯೦೫ರಲ್ಲಿ ಈ ಕುರಿತು ಒಂದು ಕಾಯ್ದೆಯನ್ನು ರಚಿಸಲಾಗಿತ್ತು.

ಸ್ವಾತಂತ್ರ್ಯಾನಂತರದ ಯೋಜನಾಬದ್ಧ ಆರ್ಥಿಕ ಬೆಳವಣಿಗೆಯ ಕಾರ್ಯಕ್ರಮಗಳಿಂದ ಸಹಕಾರಿ ಸಂಸ್ಥೆಗಳ ಬೆಳವಣಿಗೆಯಲ್ಲಿ ಹೊಸ ಯುಗ ಪ್ರಾರಂಭವಾಯಿತು. ರಾಜ್ಯ ಪುನರ್ಘಟನೆಯಿಂದ ರಾಷ್ಟ್ರೀಯ ಅರ್ಥವ್ಯವಸ್ಥೆಯಲ್ಲಿ ಸಹಕಾರ ವಲಯ ಮುಖ್ಯ ಸಾಧನವೆಂದು ಪರಿಗಣಿಸಲಾಯಿತು.

ರಾಜ್ಯ ಪುನರ್ಘಟನೆಯಿಂದಾಗಿ ವಿವಿಧ ರಾಜ್ಯಗಳಿಂದ ಬಂದ ಪ್ರದೇಶಗಳಲ್ಲಿ ಅವುಗಳ ಮೂಲ ರಾಜ್ಯದ ಸಹಕಾರ ಕಾಯ್ದೆಗಳು ಜಾರಿಯಲ್ಲಿದ್ದವು. ಇಡೀ ರಾಜ್ಯಕ್ಕೆ ಅನ್ವಯವಾಗುವಂತೆ ಒಂದು ಸಮಗ್ರ ಸಹಕಾರಿ ಕಾನೂನು ರಚಿಸುವ ಅವಶ್ಯಕತೆಗನುಗುಣವಾಗಿ

ಮೈಸೂರು ಸಹಕಾರ ಸಂಘ ಕಾನೂನು-೧೯೫೯ ಮತ್ತು ಅದರಡಿಯಲ್ಲಿ ನಿಯಮಗಳು-೧೯೬೦, ಇವುಗಳನ್ನು ರಚಿಸಿ ಸಹಕಾರ ಸಂಘಗಳ ಕಾಯ್ದೆಯಲ್ಲಿ ಏಕರೂಪತೆ ತರಲಾಯಿತು. ಇದರಿಂದಾಗಿ ರಾಜ್ಯದಲ್ಲಿ ಸಹಕಾರಿ ಆಂದೋಲನವು ತ್ವರಿತವಾಗಿ ಪ್ರಗತಿಯಾಯಿತು. ಸಹಕಾರಿ ಚಳವಳಿಯಿಂದ ಸಂಘಗಳ ಸಂಖ್ಯಾಭಿವೃದ್ಧಿ ಹಾಗೂ ಗ್ರಾಮೀಣ ಚಟುವಟಿಕೆಗಳಿಗೆ ಆರ್ಥಿಕ ನೆರವು ಹರಿದು ಬಂದಿತು. ತನ್ಮೂಲಕ ಗ್ರಾಮೀಣಾಭಿವೃದ್ಧಿಗೆ ನಾಂದಿಯಾಯಿತು.

ಪ್ರಜಾಪ್ರಭುತ್ವ ತಳಹದಿಯ ಮೇಲೆ ರೂಪುಗೊಂಡ ಸಹಕಾರ ಕ್ಷೇತ್ರವು ಜನರಿಂದ ಜನರಿಗಾಗಿ ಜನರೇ ನಡೆಸುವ ಚಳವಳಿಯಾಗಿ ರೂಪುಗೊಂಡಿತು. ವ್ಯಕ್ತಿಯ ವಿಕಾಸದೊಂದಿಗೆ ಸಮುದಾಯ ಶ್ರೇಯೋಭಿವೃದ್ಧಿ ಕಲ್ಪನೆಯ ಈ ಚಳವಳಿಯು ಸದಸ್ಯರ ಸಾಮಾಜಿಕ, ಆರ್ಥಿಕ ಸ್ಥಿತಿ ಸುಧಾರಿಸುವದರೊಂದಿಗೆ ದೇಶದ ಆರ್ಥಿಕ ಸ್ಥಿತಿಯ ಬಲವರ್ಧನೆಗೆ ನೆರವಾಯಿತು.

ಸಹಕಾರ ಸಂಘಗಳು, ಮೂಲಭೂತವಾಗಿ ರೈತರ ಪತ್ತಿನ ಅವಶ್ಯಕತೆಗಳನ್ನು ಪೂರೈಸಲು ಸ್ಥಾಪಿತವಾದ ಪ್ರಮುಖ ಸಾಂಘಿಕ ವ್ಯವಸ್ಥೆಗಳಾಗಿವೆ. ಕೃಷಿ ಪತ್ತಿನಲ್ಲಿ ಮೂರು ಸ್ತರದ ವ್ಯವಸ್ಥೆಯನ್ನು ರೂಪಿಸಲಾಯಿತು. ರಾಜ್ಯ ಮಟ್ಟದಲ್ಲಿ ಕರ್ನಾಟಕ ಸಹಕಾರಿ ಅಪೆಕ್ಸ್ ಬ್ಯಾಂಕ್, ಜಿಲ್ಲಾ ಮಟ್ಟದಲ್ಲಿ ಕೇಂದ್ರ ಸಹಕಾರಿ ಬ್ಯಾಂಕುಗಳು ಮತ್ತು ಕ್ಷೇತ್ರ ಮಟ್ಟದಲ್ಲಿ ಪ್ರಾಥಮಿಕ ಪತ್ತಿನ ಸಹಕಾರಿ ಸಂಘಗಳನ್ನು ರಚಿಸಲಾಯಿತು. ಅವುಗಳು ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳನ್ನು ರೈತರಿಗೆ ಒದಗಿಸತೊಡಗಿದವು. ರಾಜ್ಯಮಟ್ಟದಲ್ಲಿರುವ ಸಹಕಾರಿ ಅಪೆಕ್ಸ್ ಬ್ಯಾಂಕು ರಾಜ್ಯದಲ್ಲಿ ವಿವಿಧ ಜಿಲ್ಲೆಗಳಲ್ಲಿ ಸ್ಥಾಪಿತವಾಗಿರುವ ಜಿಲ್ಲಾ ಸಹಕಾರಿ ಬ್ಯಾಂಕುಗಳು ದೀರ್ಘಾವಧಿ ಪತ್ತಿನ ಅಗತ್ಯತೆಯನ್ನು ಪೂರೈಸಲು ಮುಂದಾದವು. ಈ ಉದ್ದೇಶಕ್ಕಾಗಿ ಈ ಬ್ಯಾಂಕು ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನಿಂದ (ನಬಾರ್ಡ್) ಮರುಸಾಲ ಸೌಲಭ್ಯ ಹೊಂದಿದೆ.

ಅಭಿವೃದ್ಧಿ ವಂಚಿತರು ವಿಶೇಷವಾಗಿ ಗ್ರಾಮೀಣ ಬಡಜನರಲ್ಲಿ ಆರ್ಥಿಕ ಸಾಮರ್ಥ್ಯ ಮತ್ತು ಆತ್ಮವಿಶ್ವಾಸ ಹೆಚ್ಚಿಸುವುದಕ್ಕಾಗಿ ಸಹಕಾರ ತತ್ವದ ತಳಹದಿಯ ಮೇಲೆ ಈ ಸಂಘಟನೆಯನ್ನು ಹುಟ್ಟುಹಾಕಲಾಯಿತು. ಸಹಕಾರ ಸಂಸ್ಥೆಗಳ ಸರ್ವತೋಮುಖ ಅಭಿವೃದ್ಧಿಗೆ ಅನುಕೂಲ ಕಲ್ಪಿಸಿ, ಈ ಸಂಸ್ಥೆಗಳಿಗೆ ಅವಶ್ಯವಿರುವ ನೆರವು, ಉತ್ತೇಜನ, ಸಹಾಯ ನೀಡುವ ಮೂಲಕ ಸ್ವಾಯತ್ತತೆ, ಸ್ವಾವಲಂಬನೆ ಮತ್ತು ಪ್ರಜಾಪ್ರಭುತ್ವ ತಳಹದಿಯ ಸಂಸ್ಥೆಗಳನ್ನಾಗಿಸಿ ತಮ್ಮ ಸದಸ್ಯರಿಗೆ ಜವಾಬ್ದಾರಿಯಾಗಿರುವಂತೆ ಮಾಡುವುದು ಸಹಕಾರ ನೀತಿಯ ಮುಖ್ಯ ಉದ್ದೇಶವಾಗಿದೆ. ಕರ್ನಾಟಕದಲ್ಲಿ ಸಹಕಾರ ಚಳವಳಿಯು ಗ್ರಾಮೀಣ ಜನತೆಯ ಸಾಮಾಜಿಕ ಮತ್ತು ಆರ್ಥಿಕ ಚಟುವಟಿಕೆಗಳೊಂದಿಗೆ ಬಹು ನಿಕಟ ಸಂಬಂಧ ಹೊಂದಿದ್ದು, ಜನರ ಆರ್ಥಿಕೋನ್ನತಿಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ರಾಜ್ಯದಲ್ಲಿ ಕರ್ನಾಟಕ ಸಹಕಾರ ಕಾಯಿದೆ-೧೯೯೭ ರ ಅಡಿಯಲ್ಲಿ ೨೬೨ ಸಹಕಾರಿ ಸಂಘಗಳು ನೋಂದಾಯಿಸಲ್ಪಟ್ಟಿವೆ.

**ಪಂಚವಾರ್ಷಿಕ ಯೋಜನೆ :**

ರಾಜ್ಯದಲ್ಲಿ ಸಹಕಾರಿ ಚಳವಳಿ ೧೯೦೫ ರಲ್ಲಿಯೇ ಪ್ರಾರಂಭವಾಗಿದೆ. ಮೊದಲ ಸಹಕಾರಿ ಸಂಘ ಸ್ಥಾಪಿಸಿದ ಹೆಗ್ಗಳಿಕೆ ಗದಗ ಜಿಲ್ಲೆಯ (ಈ ಪೂರ್ವದ ಧಾರವಾಡ ಜಿಲ್ಲೆ) ಕಣಗಿನಹಾಳ ಗ್ರಾಮಕ್ಕೆ ಸಲ್ಲುತ್ತದೆ. ಈ ಗ್ರಾಮದಲ್ಲಿ ಶ್ರೀ ಸಿದ್ದನಗೌಡ ಸಣ್ಣರಾಮನಗೌಡ ಪಾಟೀಲ ಅವರು ೧೯೦೫ರಲ್ಲಿ ಮೊದಲ ಸಹಕಾರ ಸಂಘವನ್ನು ರಚಿಸಿದರು. ಇಂದು ಈ ಕ್ಷೇತ್ರ ಬೃಹತ್ ಪ್ರಮಾಣದಲ್ಲಿ ಬೆಳೆದು ಕೋಟ್ಯಾಂತರ ಜನರಿಗೆ ಆಶ್ರಯ ಒದಗಿಸಿದೆ. ರಾಜ್ಯಕ್ಕೆ ಈಗ ಸಹಕಾರ ಚಳವಳಿಯ ಶತಮಾನೋತ್ಸವದ ಸಂಭ್ರಮ. ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ಸಹಕಾರ ಸಂಘಟನೆಯ ಸಮುದಾಯ ಅಭಿವೃದ್ಧಿಗೆ ಒತ್ತು ನೀಡಲಾಯಿತು. ಎರಡನೇ ಪಂಚವಾರ್ಷಿಕ ಅಭಿವೃದ್ಧಿ ಕಾರ್ಯ ಯೋಜನೆಯ ಭಾಗವಾಗಿ ಸಹಕಾರಿ ಕ್ಷೇತ್ರದ ನಿರ್ಮಾಣಕ್ಕೆ ರಾಷ್ಟ್ರೀಯ ನೀತಿ ರೂಪಿಸಲಾಯಿತು. ಮೂರನೇ ಯೋಜನೆಯಲ್ಲಿ ಸಹಕಾರ ರಂಗವನ್ನು ಪ್ರಗತಿ ಪಥದಲ್ಲಿ ಕೊಂಡೊಯ್ಯಲು ಸಂಘಟನೆಗೆ ಆದ್ಯತೆ ನೀಡಲಾಯಿತು. ನಾಲ್ಕನೇ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿ ಮತ್ತು ಗ್ರಾಹಕ ಸಹಕಾರಿ ಕ್ಷೇತ್ರಕ್ಕೆ ಪ್ರಧಾನ ಸ್ಥಾನ ನೀಡಲಾಯಿತು. ಐದನೆಯ ಯೋಜನೆಯಲ್ಲಿ ಸಹಕಾರ ಸಂಘಗಳ ಬಲವರ್ಧನೆ, ಈ ಕ್ಷೇತ್ರದ ಅಭಿವೃದ್ಧಿಯಲ್ಲಿ ಪ್ರಾದೇಶಿಕ ಅಸಮತೋಲನ ಸರಿಪಡಿಸುವಿಕೆ, ಸಹಕಾರ ಅಭಿವೃದ್ಧಿಗಾಗಿ ಪುನರ್ ರಚನೆ ಹಾಗೂ ಪುನರ್ ಸಂಘಟನೆಯಿಂದ ಸಣ್ಣ, ಅತೀ ಸಣ್ಣ ರೈತರು ಹಾಗೂ ಸಮಾಜದ ಇತರ ಅವಕಾಶ ವಂಚಿತರ ಕಡೆಗೆ ಗಮನ ಹರಿಸಲು ಆದ್ಯತೆ ನೀಡಿದರೆ, ೬ ಹಾಗೂ ೭ ನೇ ಪಂಚವಾರ್ಷಿಕ ಯೋಜನೆಯಲ್ಲಿ ಗ್ರಾಮೀಣ ಪ್ರಾಥಮಿಕ ಸಹಕಾರ ಸಂಘ, ವಿವಿಧೋದ್ದೇಶ ಪ್ರಾಥಮಿಕ ಕೃಷಿ ಪತ್ತಿನ ಸಂಘಗಳನ್ನು ಬಲಪಡಿಸಲು ವ್ಯಾಪಕ ಗಮನ ನೀಡಲಾಯಿತು. ಸಾಲಸೌಲಭ್ಯ

ವಿಸ್ತರಣೆ, ಕಚ್ಚಾ ಸಾಮಾಗ್ರಿ ಹಾಗೂ ದುರ್ಬಲ ವರ್ಗದವರಿಗೆ ನೆರವಾಗುವದಕ್ಕಾಗಿ ಸಹಕಾರ ನೀತಿ ಹಾಗೂ ನಿಯಮ ಪುನರ್ ರಚಿಸಲಾಯಿತು. ೯ನೇ ಯೋಜನೆಯಲ್ಲಿ ಸಹಕಾರ ಸಂಘಗಳ ಸ್ವಾಯತ್ತತೆ ಹಾಗೂ ಸಹಕಾರ ಸಂಘಗಳು ಸ್ವಸಾಮರ್ಥ್ಯ ಹಾಗೂ ಇತರೇ ಮೂಲಗಳಿಂದ ತಮಗೆ ಬೇಕಾದ ಹೂಡಿಕೆಯ ಸಂಪನ್ಮೂಲಗಳನ್ನು ಪಡೆಯಲು ಸಮರ್ಥವಾಗಿರಬೇಕಾದುದನ್ನು ತಿಳಿಸಲಾಯಿತು. ೧೦ ನೇ ಯೋಜನೆಯಲ್ಲಿ ಸಹಕಾರ ಸಂಘಗಳ ಮೂಲಕ ಕಿಸಾನ್ ಕ್ರೆಡಿಟ್ ವ್ಯವಸ್ಥೆ ಜಾರಿಗೊಳಿಸಿ ಸಾಲ ಸೌಲಭ್ಯ ಹೆಚ್ಚಿಸುವದು, ಸಹಕಾರಿ ಬ್ಯಾಂಕುಗಳನ್ನು ಮರು ಬಂಡವಾಳೀಕರಣದ ಮೂಲಕ ಬಲಪಡಿಸುವುದು, ಸ್ವಸಹಾಯ ಗುಂಪು, ಮಹಿಳಾ ಗುಂಪು ರಚನೆ, ಅಂಶಿಕ ಹಣಕಾಸು (ಮೈಕ್ರೋ ಫೈನಾನ್ಸ್) ವ್ಯವಸ್ಥೆ ಉತ್ತಮಪಡಿಸುವಿಕೆ, ಮಾಹಿತಿ ತಂತ್ರಜ್ಞಾನದ ಮೂಲಕ ಕೃಷಿ ಉತ್ಪನ್ನಗಳನ್ನು ಯೋಗ್ಯ ಬೆಲೆಗೆ ಮಾರಾಟ ಮಾಡುವ ಉದ್ದೇಶ ಹೊಂದಲಾಗಿದೆ.

## ಅಭಿವೃದ್ಧಿಗೆ ಸಹಕಾರ :

ರಾಜ್ಯದಲ್ಲಿ ಕಳೆದ ಐದೂವರೆ ದಶಕಗಳ ಅವಧಿಯಲ್ಲಿ ಸಹಕಾರ ಕ್ಷೇತ್ರವು ಅರ್ಥವ್ಯವಸ್ಥೆಯ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಪ್ರಮಾಣದಲ್ಲಿ ತೊಡಗಿಕೊಂಡು ಗ್ರಾಮೀಣ ಅಭಿವೃದ್ಧಿಗೆ ಸಹವರ್ತಿಯಾಗಿರುವದು ಕಂಡುಬರುತ್ತದೆ. ಸಹಕಾರಿ ಸಂಸ್ಥೆಗಳನ್ನು ಐದು ವಲಯಗಳಾಗಿ ವರ್ಗೀಕರಣ ಮಾಡಲಾಗಿದೆ.

ಕೃಷಿ ಪತ್ತಿನ ವಲಯದಲ್ಲಿ, ಅಲ್ಪಾವಧಿ (ಬೆಳೆಸಾಲ) ಮತ್ತು ಮಧ್ಯಮಾವಧಿ ಸಾಲವನ್ನು ಮೂರು ಹಂತದ ವ್ಯವಸ್ಥೆ ಮೂಲಕ ಅಂದರೆ ಗ್ರಾಮ ಮಟ್ಟದಲ್ಲಿ ೪೪೬೪ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಜಿಲ್ಲಾ ಮಟ್ಟದಲ್ಲಿ ೨೧ ಕೇಂದ್ರ ಸಹಕಾರ ಬ್ಯಾಂಕುಗಳು, ರಾಜ್ಯ ಮಟ್ಟದಲ್ಲಿ ಸಹಕಾರಿ ಅಪೆಕ್ಸ್ ಬ್ಯಾಂಕಿನ ಮೂಲಕ ರೈತರಿಗೆ ನೀಡಲಾಗುತ್ತಿದೆ. ಈ ಕೃಷಿ ಪತ್ತಿನ ಸಂಸ್ಥೆಗಳು ಸಾರ್ವಜನಿಕರಿಂದ ಸಂಗ್ರಹಿಸಿದ ಠೇವಣಿಗಳು ಮತ್ತು ನಬಾರ್ಡ್‌ನಿಂದ ಪಡೆದ ಪುನರ್ಧನದ ಸೌಕರ್ಯದ ಮೂಲಕ ಸಾಲಗಳನ್ನು ಒದಗಿಸುತ್ತವೆ. ಪ್ರಸ್ತುತ (೩೧-೦೩-೨೦೦೪ಕ್ಕೆ) ರಾಜ್ಯದಲ್ಲಿ ೩೨,೮೦೪ ಸಹಕಾರಿ ಸಂಘಗಳಿದ್ದು, ಅದರಲ್ಲಿ ೨೭,೨೬೧ ಸಹಕಾರ ಸಂಘಗಳು ಕಾರ್ಯನಿರ್ವಹಿಸುತ್ತಿವೆ. ಈ ಸಂಘಗಳಲ್ಲಿ ೧,೭೦೮. ೭೭ ಕೋಟಿ ರೂ.ಷೇರು ಬಂಡವಾಳವಿದ್ದು, ೧.೯೭ ಕೋಟಿ ಸದಸ್ಯರಿದ್ದಾರೆ. ದುಡಿಯುವ ಬಂಡವಾಳ ೨೩,೭೮೬.೯೦ ಕೋಟಿ ರೂ.ಗಳಿದ್ದು ೧೩.೦೫೩.೬೦ ಕೋಟಿ ರೂ, ಠೇವಣಿ ಇರುತ್ತದೆ. ಸದ್ಯಕ್ಕೆ ರಾಜ್ಯದ ಎಲ್ಲ ಗ್ರಾಮಗಳಲ್ಲೂ ಸಹಕಾರಿ ಸಂಘಗಳಿವೆ. ಕಳೆದ ಐದು ವರ್ಷಗಳಲ್ಲಿ (೧೯೯೯-೨೦೦೦ ದಿಂದ ೨೦೦೩-೦೪) ಈ ಸಂಘಗಳ ಮೂಲಕ ೬,೦೩೦ ಕೋಟಿ ರೂ. ಅಲ್ಪಾವಧಿಸಾಲ ಹಾಗೂ ೨೨೦.೦೪ ಕೋಟಿ ರೂ. ಮಧ್ಯಮಾವಧಿ ಸಾಲ ವಿತರಿಸಲಾಗಿದೆ. ದೀರ್ಘಾವಧಿ ಸಾಲವನ್ನು ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ಮತ್ತು ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ವಿತರಿಸುತ್ತಿವೆ. ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ತನ್ನ ೨೪ ಶಾಖೆಗಳ ಮೂಲಕ ಕಳೆದ ಐದು ವರ್ಷಗಳಲ್ಲಿ ಕೃಷಿ ಚಟುವಟಿಕೆಗಳಿಗೆ ೬೩೨.೮೦ ಕೋಟಿ ಸಾಲ ವಿತರಿಸಿದೆ.

ಭೂ ಸಮತಟ್ಟುಗೊಳಿಸುವಿಕೆ, ಒಡ್ಡು ನಿರ್ಮಾಣ, ದನದಕೊಟ್ಟಿಗೆ, ಭೂ ಮಾಲೀಕತ್ವ ಉದ್ದೇಶಗಳಲ್ಲದೇ ವಿಶೇಷ ಅಭಿವೃದ್ಧಿ ಕಾರ್ಯಕ್ರಮಗಳಾದ ಸಣ್ಣ ನೀರಾವರಿ, ತೋಟಗಾರಿಕೆ, ಅರಣ್ಯ, ಕೃಷಿ, ಬಂಜರುಭೂಮಿ ಅಭಿವೃದ್ಧಿ, ಹೈನುಗಾರಿಕೆ, ಹಂದಿ-ಕೋಳಿ ಸಾಕಾಣಿಕೆ, ರೇಷ್ಮೆ ಕೃಷಿ, ಎತ್ತು ಗಾಡಿ, ಕೃಷಿ ಯಂತ್ರೋಪಕರಣ, ಅಚ್ಚುಕಟ್ಟು ಭೂ ಅಭಿವೃದ್ಧಿ ಯೋಜನೆಗಳಿಗೆ ಸಾಲ ವಿತರಿಸಿದೆ. ಗ್ರಾಮೀಣ ಪ್ರದೇಶ ಮಹಿಳೆಯರ ಆರ್ಥಿಕ ನೆರವಿಗಾಗಿ ಮಹಿಳಾ ಅಭಿವೃದ್ಧಿ ಕೋಶವನ್ನು ಬ್ಯಾಂಕು ಸ್ಥಾಪಿಸಿದೆ. ಅರ್ಹ ಮಹಿಳೆಯರನ್ನು ಗುರುತಿಸಿ ಅವರಿಗೆ ಆರ್ಥಿಕ ನೆರವು ಪಡೆಯಲು ಪ್ರೇರೇಪಿಸಲಾಗಿದ್ದು, ಕಳೆದ ಮೂರು ವರ್ಷಗಳಲ್ಲಿ ೧೦ ಸಾವಿರ ಮಹಿಳೆಯರಿಗೆ ೪೭.೬೪ ಕೋಟಿ ರೂ. ಆರ್ಥಿಕ ನೆರವು ಒದಗಿಸಲಾಗಿದೆ. ಇದಲ್ಲದೇ ಬ್ಯಾಂಕಿನ ಎಲ್ಲ ಯೋಜನೆಗಳಲ್ಲಿ ದುರ್ಬಲ ವರ್ಗವಾಗಿರುವ ಸಣ್ಣ ಹಿಡುವಳಿದಾರರು, ಪ.ಜಾತಿ/ಪಂಗಡದವರಿಗೂ ಆದ್ಯತೆ ನೀಡಲಾಗಿದ್ದು, ಈ ವರ್ಗದ ೧೪.೯೬ ಲಕ್ಷ ಫಲಾನುಭವಿಗಳಿಗೆ ೨,೪೫೪.೭೪ ಕೋಟಿ ರೂ. ಸಾಲವನ್ನು ವಿತರಿಸಲಾಗಿದೆ. ಕೃಷಿಯೇತರ ಹಣಕಾಸು ಸಾಲಕ್ಕಾಗಿ ಪಟ್ಟಣ ಸಹಕಾರಿ ಬ್ಯಾಂಕುಗಳು, ಪತ್ತಿನ ಸಹಕಾರಿ ಸಂಘಗಳು ಮತ್ತು ನೌಕರರ ಸಹಕಾರ ಸಂಘಗಳು ಕಾರ್ಯನಿರ್ವಹಿಸುತ್ತಿವೆ. ಬರಗಾಲದ ಹಿನ್ನೆಲೆಯಲ್ಲಿ ರೈತರ ಕೃಷಿ ಸಾಲದ ಬಡ್ಡಿ ಮನ್ನಾ ಯೋಜನೆ ರಾಜ್ಯದ ಸಹಕಾರಿ ಸಂಘಗಳ ಸದಸ್ಯರಿಗೆ ಯಶಸ್ವಿನಿ ಎಂಬ ವಿನೂತನ ಆರೋಗ್ಯ ರಕ್ಷಣೆ ಯೋಜನೆಯನ್ನು ೧-೬-೨೦೦೩ ರಿಂದ ಜಾರಿಗೊಳಿಸಿದೆ. ಈ ಯೋಜನೆಯಡಿ ವಾರ್ಷಿಕ ೬೦ ರೂ. ವಂತಿಗೆ ನೀಡಿ, ರಾಜ್ಯಾದ್ಯಂತ

ಗುರುತಿಸಲಾದ ಆಸ್ಪತ್ರೆಗಳಲ್ಲಿ ರೋಗ ಚಿಕಿತ್ಸೆಯನ್ನು ಸಹಕಾರಿಗಳು ಉಚಿತವಾಗಿ ಪಡೆಯಬಹುದಾಗಿದೆ. ಸಹಕಾರ ಮಾರಾಟ ವಲಯದಲ್ಲಿ ಗ್ರಾಮೀಣಾಭಿವೃದ್ಧಿಗೆ ನೇರವಾದ ಸಂಬಂಧ ಕಲ್ಪಿಸುವ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡುವುದಕ್ಕಾಗಿ ತಾಲ್ಲೂಕಿನಲ್ಲಿ ಸಹಕಾರ ಮಾರಾಟ ಸಂಘಗಳು ಸ್ಥಾಪನೆಯಾಗಿವೆ. ರಾಜ್ಯ ಮಟ್ಟದಲ್ಲಿ ಸಹಕಾರ ಮಾರಾಟ ಮಹಾ ಮಂಡಳಿಯು ಕಾರ್ಯ ನಿರ್ವಹಿಸುತ್ತಿದೆ. ಇದು ರಸಗೊಬ್ಬರ, ಬೀಜ ಮತ್ತು ಕೀಟ ನಾಶಕಗಳ ಮಾರಾಟ ಮತ್ತು ಸರಬರಾಜಿನಲ್ಲಿ ತೊಡಗಿಕೊಂಡಿದೆ. ಸಹಕಾರಿ ಸಂಘಟನಾ ವಲಯದಲ್ಲಿ ಸಹಕಾರಿ ಸಕ್ಕರೆ, ನೂಲಿನ ಗಿರಣಿ, ಎಣ್ಣೆ ಗಿರಣಿ, ಅಡಿಕೆ ಸಂಸ್ಕರಣಾ ಮತ್ತು ಮಾರಾಟ ಸಹಕಾರಿ ಸಂಘಗಳು, ಕಾಫಿ ಸಂಸ್ಕರಣಾ ಮತ್ತು ಮಾರಾಟ ಸಹಕಾರ ಸಂಘಗಳು ಹಾಗೂ ಅಕ್ಕಿ ಮತ್ತು ಬೇಳೆ ಗಿರಣಿಗಳು ಕಾರ್ಯನಿರ್ವಹಿಸುತ್ತಿವೆ. ಹಾಲು ಸಂಗ್ರಹಣೆ, ಸಂಸ್ಕರಣೆ, ಮಾರಾಟ ವಲಯದಲ್ಲಿ ಹಾಲು ಮತ್ತು ಹಾಲಿನ ಉತ್ಪನ್ನ ಸಂಸ್ಕರಣೆ ಮತ್ತು ಮಾರಾಟಕ್ಕಾಗಿ ೧೩ ಜಿಲ್ಲಾ ಮಟ್ಟದ ಸಹಕಾರಿ ಹೈನು ಯೂನಿಯನ್‌ಗಳು ಸ್ಥಾಪನೆಗೊಂಡಿವೆ. ರಾಜ್ಯ ಮಟ್ಟದ ಸಹಕಾರಿ ಮಹಾಮಂಡಳ ಸಹ ರಚನೆಗೊಂಡು ಈ ಕ್ಷೇತ್ರದಲ್ಲಿ ಶ್ವೇತಕ್ರಾಂತಿಯಾಗಿದೆ. ಖಾಸಗಿ ವಲಯದ ತೀವ್ರ ಪೈಪೋಟಿ ಇದ್ದಾಗ್ಯೂ ಈ ಸಹ ಸೇವಾವಲಯದಲ್ಲಿ ಸಹಕಾರ ಸಂಘಗಳ ಪಾತ್ರ ಪ್ರಮುಖವಾಗಿದೆ. ಸಹಕಾರಿ ಸೇವಾ ವಲಯದಲ್ಲಿ ಪ್ರಾಥಮಿಕ ಗ್ರಾಹಕ ಸಹಕಾರ ಸಂಘಗಳು ಮತ್ತು ರಾಜ್ಯ ಮಟ್ಟದಲ್ಲಿ ರಾಜ್ಯ ಗ್ರಾಹಕರ ಮಹಾಮಂಡಳ ಸೇವಾ ನಿರತವಾಗಿದೆ. ಸದಸ್ಯರ ವಸತಿ ಅವಶ್ಯಕತೆ ಪೂರೈಸಲು ರಾಜ್ಯದಲ್ಲಿ ೧೫೪೯ ಗೃಹ ನಿರ್ಮಾಣ ಸಹಕಾರಿ ಸಂಘಗಳು ಸ್ಥಾಪಿತವಾಗಿದ್ದು, ಇದುವರೆಗೆ ರಾಜ್ಯದ ವಿವಿಧ ಪ್ರದೇಶಗಳಲ್ಲಿ ೧೦ ಸಾವಿರಕ್ಕೂ ಹೆಚ್ಚು ಎಕರೆ ಭೂಮಿ ಸ್ವಾಧೀನ ಪಡಿಸಿಕೊಂಡು ೨.೧೧ ಲಕ್ಷ ನಿವೇಶನಗಳನ್ನು ವಿತರಿಸಲಾಗಿದೆ. ಪರಿಶಿಷ್ಟ ವರ್ಗದವರಿಗಾಗಿ, ನೀರು ಬಳಕೆದಾರರಿಗಾಗಿ, ಸಾರಿಗೆ ಮತ್ತು ಮಹಿಳೆಯರ ಆರ್ಥಿಕ ಅಭಿವೃದ್ಧಿಗಾಗಿ ಪ್ರತ್ಯೇಕ ಸಹಕಾರ ಸಂಘಗಳು ಕಾರ್ಯ ನಿರ್ವಹಿಸುತ್ತಿವೆ.

ಇಷ್ಟೊಂದು ಬೃಹತ್ ಜಾಲದ ಮೂಲಕ ಗ್ರಾಮೀಣ ಅಭಿವೃದ್ಧಿಗೆ ಸಹಕಾರ ರಂಗ ತನ್ನ ಸೇವೆ ಸಲ್ಲಿಸುತ್ತಿದೆ. ಈ ಕ್ಷೇತ್ರದ ಬಲವರ್ಧನೆಗೆ ಎನ್.ಸಿ.ಡಿ.ಸಿ. ಪ್ರಾಯೋಜಿತ ಸಮಗ್ರ ಸಹಕಾರಿ ಅಭಿವೃದ್ಧಿ ಯೋಜನೆ, ಪ್ರಾಥಮಿಕ ಕೃಷಿ ಸಹಕಾರ ಸಂಘಗಳು ಆರ್ಥಿಕವಾಗಿ ಸದೃಢವಾಗಲು ವ್ಯಾಪಾರ ಅಭಿವೃದ್ಧಿ ಯೋಜನೆ, ಸಹಕಾರ ವ್ಯವಸ್ಥೆಯನ್ನು ಪುನಃಶ್ಚೇತನಗೊಳಿಸಲು ಮತ್ತು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕು, ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ಹಾಗೂ ಕೆಳಹಂತದ ಸಂಯೋಜಿತ ಸಂಸ್ಥೆಗಳ ಸ್ವ ಸಹಾಯ ಸಂಘ ಸುಧಾರಿಸಲು ಅಭಿವೃದ್ಧಿ ಕ್ರಿಯಾ ಯೋಜನೆ ಅನುಷ್ಠಾನಗೊಂಡು, ಎನ್.ಸಿ.ಡಿ.ಸಿ. ವತಿಯಿಂದ ವಿವಿಧ ಸಾಮರ್ಥ್ಯದ ಗೋದಾಮುಗಳ ನಿರ್ಮಾಣದ ಕಾರ್ಯಕ್ರಮವನ್ನು ಕರ್ನಾಟಕ ಸರಕಾರ ಅನುಷ್ಠಾನಗೊಳಿಸುತ್ತಿದೆ. ಈ ಯೋಜನೆಯಡಿ ಪ್ರಾಥಮಿಕ ಕೃಷಿ ಸಹಕಾರ ಸಂಘಗಳು ಹಾಗೂ ಪ್ರಾಥಮಿಕ ಮಾರಾಟ ಸಹಕಾರ ಸಂಘಗಳು ಕೃಷಿ ಉತ್ಪನ್ನ ಮತ್ತು ದಾಸ್ತಾನು ಸಂಗ್ರಹಕ್ಕೆ ವಿವಿಧ ಸಾಮರ್ಥ್ಯದ ಗೋದಾಮು ನಿರ್ಮಾಣಕ್ಕೆ ಹಣಕಾಸು ನೆರವು ಪಡೆದುಕೊಳ್ಳಬಹುದು. ಎನ್.ಸಿ.ಡಿ.ಸಿ.ಯು ಯೋಜನಾ ವೆಚ್ಚದ ಶೇ.೯೦ ರಷ್ಟು ನೆರವು ನೀಡುತ್ತದೆ.

ಗಣನೀಯ ಪ್ರಮಾಣದ ಬೆಳವಣಿಗೆ ಸಾಧಿಸಿದಾಗ್ಯೂ, ಈ ಕ್ಷೇತ್ರವು ಶಾಸನಾತ್ಮಕ ಹಾಗೂ ಕಾರ್ಯ ನೀತಿಯ ಬೆಂಬಲ, ಸಂಪನ್ಮೂಲದ ಸೌಲಭ್ಯತೆ, ಮೂಲಭೂತ ಸೌಕರ್ಯಗಳ ಅಭಿವೃದ್ಧಿ, ಸಂಸ್ಥೆಗಳಲ್ಲಿನ ನ್ಯೂನತೆ, ಸದಸ್ಯರಲ್ಲಿನ ಅರಿವಿನ ಕೊರತೆ ಮತ್ತು ಸಹಕಾರ ಸಂಘಗಳ ಕಾರ್ಯ ನಿರ್ವಹಣೆಯಲ್ಲಿ ಅನಗತ್ಯ ಹಸ್ತಕ್ಷೇಪದಂತಹ ಹಲವು ನಿರ್ಬಂಧಗಳನ್ನು ಎದುರಿಸುತ್ತಿದ್ದು ಅವುಗಳ ನಿವಾರಣೆಗೆ ಗಮನಹರಿಸುವುದು ಅಗತ್ಯವಾಗಿದೆ.

## ಬ್ಯಾಂಕ್ ರಾಷ್ಟ್ರೀಕರಣ :

ಆರ್ಥಿಕ ಮೂಲಗಳ ಸದ್ವಿನಿಯೋಗದಿಂದ ಅಭಿವೃದ್ಧಿ ಸಾಧಿಸುವದಕ್ಕಾಗಿ ಸ್ವತಂತ್ರ ಭಾರತವು ಬ್ಯಾಂಕಿಂಗ್ ವ್ಯವಸ್ಥೆಯ ಸುಧಾರಣೆಗಾಗಿ ೧೯೪೯ ರಲ್ಲಿ 'ಬ್ಯಾಂಕಿಂಗ್ ನಿಯಂತ್ರಣ ಆ್ಯಕ್ಟ್' ಎಂಬ ಐತಿಹಾಸಿಕ ಕಾನೂನು ಜಾರಿಗೊಳಿಸಿತು. ತದನಂತರ ೧೯೫೫ ರಲ್ಲಿ "ಇಂಪೀರಿಯಲ್ ಬ್ಯಾಂಕ್ ಆಫ್ ಇಂಡಿಯಾ"ವನ್ನು ರಾಷ್ಟ್ರೀಕರಿಸಿ, "ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ" ರಚಿಸಲಾಯಿತು. ಹಳ್ಳಿಗಾಡಿನ ಜನತೆಯ ಸೇವೆಗಾಗಿ ಗ್ರಾಮಾಂತರ ಪ್ರದೇಶದಲ್ಲಿ ಶಾಖೆ ಆರಂಭಿಸುವುದು ಮತ್ತು ಕೃಷಿ ಹಾಗೂ ಕೈಗಾರಿಕೆಗಳಿಗೆ ಹಣ ಒದಗಿಸುವುದು ಇದರ ಮುಖ್ಯ ಗುರಿಯಾಗಿತ್ತು. ನಂತರ ೧೯೬೦ ರಲ್ಲಿ ಹಿಂದಿನ ಸಂಸ್ಥಾನ ರಾಜ್ಯಗಳಲ್ಲಿದ್ದ ಏಳು ಬ್ಯಾಂಕುಗಳನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಸಹ ಸಂಸ್ಥೆಗಳೆಂದು ಗುರುತಿಸಲಾಯಿತು. ಈ ಬೆಳವಣಿಗೆಯಿಂದಾಗಿ ಬ್ಯಾಂಕಿಂಗ್ ಉದ್ಯಮಕ್ಕೆ

ಹೊಸ ಚೈತನ್ಯ ದೊರೆಯಿತು. ತನ್ಮೂಲಕ ಕೈಗಾರಿಕೆಗಳಿಗೆ ಸಾಲ ಸೌಲಭ್ಯ ದೊರೆಯಿತಲ್ಲದೆ ಠೇವಣಿ ಸಂಗ್ರಹಣೆಗೆ ರಕ್ಷಣೆ ಲಭ್ಯವಾಯಿತು. ಐವತ್ತರ ದಶಕದಲ್ಲಿ ಸರ್ಕಾರ ಯೋಜನಾ ಅನುಷ್ಠಾನ ಕಾರ್ಯದಲ್ಲಿ ಬ್ಯಾಂಕಿಂಗ್ ಚಟುವಟಿಕೆಗಳಿಗೆ ನೆರವು ನೀಡುವದಕ್ಕಾಗಿ ಕೆಲವು ನಿರ್ದೇಶನಗಳನ್ನು ನೀಡಲು ಚಿಂತನೆ ನಡೆಸಿದ ಸಂದರ್ಭದಲ್ಲಿ ಪ್ರಮುಖ ಬ್ಯಾಂಕಗಳು ದೊಡ್ಡ ಕೈಗಾರಿಕೋದ್ಯಮಿಗಳ ಮಾಲೀಕತ್ವ ಅಥವಾ ನಿಯಂತ್ರಣದಲ್ಲಿ ಇದ್ದುದರಿಂದ ಇದು ಕಷ್ಟದಾಯಕವಾಗಿತ್ತು. ಕೇವಲ ಉಳ್ಳವರ ಸೇವೆಗೆ ಲಭ್ಯವಾಗುತ್ತಿದ್ದ ಬ್ಯಾಂಕುಗಳು ರೈತರು, ಕುಶಲಕರ್ಮಿಗಳು, ಬಡವರ ಪಾಲಿಗೆ ಕೇವಲ ಕನ್ನಡಿ ಗಂಟಾಗಿ ಪರಿಣಮಿಸಿದ್ದವು. ೧೯೬೮ ರಲ್ಲಿ ಬ್ಯಾಂಕಿಂಗ್ ಕಾಯ್ದೆಗೆ ತಿದ್ದುಪಡಿ ಜಾರಿಗೆ ತರಲಾಯಿತಾದರೂ ಇದರಿಂದ ಉದ್ದೇಶಿತ ಫಲ ದೊರೆಯದಿದ್ದಾಗ ಜುಲೈ ೧೯೬೯ ರಲ್ಲಿ ೫೦ಕೋಟಿ ರೂ.ಗಳಿಗಿಂತ ಹೆಚ್ಚಿನ ಠೇವಣಿ ಹೊಂದಿದ ೧೪ ಪ್ರಮುಖ ಬ್ಯಾಂಕ್‌ಗಳ ರಾಷ್ಟ್ರೀಕರಣಗೊಳಿಸುವ ಐತಿಹಾಸಿಕ ಘಟನೆ ಜರುಗಿತು. ಇದರಿಂದಾಗಿ ಸಾಲ ನೀಡಿಕೆಯು ಸಂಪೂರ್ಣ ರೂಪಾಂತರಗೊಂಡಿತು.

## ಬದಲಾದ ಧೋರಣೆ :

ಬ್ಯಾಂಕ್ ರಾಷ್ಟ್ರೀಕರಣದ ಮೊದಲು ಸಹಕಾರಿ ಸಂಘಗಳು ಮಾತ್ರ ಕೃಷಿಗೆ ಸಾಂಘಿಕ ಸಾಲ ಒದಗಿಸುತ್ತಿದ್ದವು. ಈ ಹಂತದಲ್ಲಿ ಹಸಿರು ಕ್ರಾಂತಿ ಮತ್ತು ಕೃಷಿ ಉತ್ಪನ್ನ ಹಾಗೂ ಉತ್ಪಾದನೆಯನ್ನು ಅಧಿಕಗೊಳಿಸಲು ಅಗತ್ಯವಾದ ಸಾಲದ ಮೊತ್ತವನ್ನು ಪೂರೈಸಲು ಹಾಗೂ ಹಳ್ಳಿಗಳಲ್ಲಿ ಅಗತ್ಯವಿರುವ ಎಲ್ಲ ಸಣ್ಣ ರೈತರು ಹಾಗೂ ದುರ್ಬಲರಿಗೆ ಆರ್ಥಿಕ ನೆರವು ಕಲ್ಪಿಸುವುದು ಸಹಕಾರಿ ಸಂಘಗಳಿಂದ ಸಾಧ್ಯವಾಗದು ಎಂಬುದನ್ನು ಮನಗಂಡ ನಂತರ ಸಹಕಾರಿ ಸಂಘಗಳ ಪ್ರಯತ್ನಕ್ಕೆ ಪೂರಕವಾಗಿ ಬ್ಯಾಂಕುಗಳ ರಾಷ್ಟ್ರೀಕರಣ ಮಾಡಲಾಯಿತು. ಇದರಿಂದಾಗಿ ಗ್ರಾಮೀಣ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಜಾಲದ ವ್ಯಾಪಕತೆ ಹೆಚ್ಚಿಸುವದರೊಂದಿಗೆ ಅವುಗಳಲ್ಲಿ ಅಭಿವೃದ್ಧಿಗೆ ಒತ್ತು ನೀಡುವ ಧೋರಣೆಯ ಕ್ರಮಗಳನ್ನು ಭಾರತದ ರಿಸರ್ವ್ ಬ್ಯಾಂಕು ಕೈಗೊಂಡಿತು. ಹೀಗಾಗಿ ಸಂಪನ್ಮೂಲ ಕ್ರೋಢೀಕರಣ ಮತ್ತು ಸಾಲ ಸೌಕರ್ಯಗಳ ವಿಸ್ತರಣೆಯ ದೃಷ್ಟಿಯಿಂದ ಬ್ಯಾಂಕ್ ಸಾಲ ಸೌಲಭ್ಯವಿಲ್ಲದ ಗ್ರಾಮೀಣ ಮತ್ತು ಭಾಗಶಃ ಪಟ್ಟಣ ಪ್ರದೇಶಗಳಲ್ಲಿ ಬ್ಯಾಂಕಿಂಗ್ ಸೌಲಭ್ಯ ಹೆಚ್ಚಿಸಲು ಹೆಚ್ಚಿನ ಗಮನ ನೀಡಲಾಯಿತು. ಗ್ರಾಮೀಣ ಸಾಲ ನೀಡುವಿಕೆಯಲ್ಲಿ ವ್ಯಾಪಕ ಅಂತರವಿದ್ದುದರಿಂದಾಗಿ ೧೯೭೫ ರಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಜಾರಿಗೆ ತರಲಾಯಿತು. ವಾಣಿಜ್ಯ ಬ್ಯಾಂಕು ಹಾಗೂ ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರದ ಪ್ರೇರಕತ್ವದಲ್ಲಿ ಉದಯವಾದ ಗ್ರಾಮೀಣ ಬ್ಯಾಂಕುಗಳು, ಗ್ರಾಮಾಂತರ ಜನರ ಅವಶ್ಯಕತೆಗಳಿಗೆ ಸ್ಪಂದಿಸುವಂತಾಯಿತು. ೧೯೮೦ ರ ಏಪ್ರಿಲ್‌ನಲ್ಲಿ ಸರ್ಕಾರವು ೨೦೦ ಕೋಟಿ ರೂ. ಗಳಿಗೆ ಅಧಿಕ ಠೇವಣಿಯುಳ್ಳ ಆರು ಬ್ಯಾಂಕುಗಳನ್ನು ಪುನಃ ರಾಷ್ಟ್ರೀಕರಣಗೊಳಿಸಿತು. ೮೦ ರ ದಶಕದಲ್ಲಿ ಬ್ಯಾಂಕಿಂಗ್ ವಲಯ ತೀವ್ರತರವಾಗಿ ಬೆಳೆಯಿತು. ಇದೇ ಕಾಲದಲ್ಲಿ (೧೯೮೨) ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್(National Bank for Agriculture and Rural Development-NABARD) ಆರಂಭವಾಯಿತು. ಇಂತಹ ಕೆಲವು ಪರಿಣಾಮಕಾರಿ ಕ್ರಮಗಳಿಂದ ಗ್ರಾಮೀಣ ಸಾಲ ಚಟುವಟಿಕೆಗಳು ಚುರುಕುಗೊಂಡವು.

ಸಾಲದ ಯೋಜನೆ ಮತ್ತು ವಿತರಣೆಗಾಗಿ ಜಿಲ್ಲೆಯನ್ನು ಒಂದು ಘಟಕವನ್ನಾಗಿಟ್ಟುಕೊಂಡು ಅಗ್ರಣೀಯ (ಲೀಡ್) ಬ್ಯಾಂಕ್ ಯೋಜನೆಯನ್ನು ರೂಪಿಸಲಾಗಿದೆ. ಜಿಲ್ಲೆಯ ಸಮಗ್ರ ಅಭಿವೃದ್ಧಿಯಲ್ಲಿ ಬ್ಯಾಂಕುಗಳ ಭಾಗವಹಿಸುವಿಕೆಯು ಈ ಯೋಜನೆಯ ಉದ್ದೇಶವಾಗಿದೆ. ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ಕ್ಷೇತ್ರದ ಒಂದು ಪ್ರಮುಖ ಬ್ಯಾಂಕ್‌ನ್ನು ಜಿಲ್ಲೆಯ ಲೀಡ್ ಬ್ಯಾಂಕ್ ಎಂದು ಘೋಷಿಸಲಾಗುವುದು. ರಾಜ್ಯ, ಜಿಲ್ಲಾ ಮತ್ತು ಬ್ಲಾಕ್ ಮಟ್ಟಗಳಲ್ಲಿ ಯೋಜನೆಯ ಪ್ರಕಾರ ಬ್ಯಾಂಕು ಮತ್ತು ಅಭಿವೃದ್ಧಿ ಏಜೆನ್ಸಿಗಳು ಹಾಕಿಕೊಂಡ ಕಾರ್ಯ ಚಟುವಟಿಕೆಗಳನ್ನು ಈ ಬ್ಯಾಂಕು ನಿಯಂತ್ರಿಸುತ್ತದೆ ಮತ್ತು ಸಮನ್ವಯಗೊಳಿಸುತ್ತದೆ. ಲೀಡ್ ಬ್ಯಾಂಕ್ ಜಿಲ್ಲೆಯ ವಾರ್ಷಿಕ ಸಾಲ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವದಲ್ಲದೇ ಸಾಲ ವಿಸ್ತರಣೆ ಮತ್ತು ಅದರ ಅನುಷ್ಠಾನ ಪ್ರಗತಿಯನ್ನು ಪರಿಶೀಲಿಸುತ್ತದೆ. ಬ್ಲಾಕ್ ಮಟ್ಟದಲ್ಲಿ ಬ್ಯಾಂಕ್‌ಗಳ ಸಮಿತಿ, ಜಿಲ್ಲಾ ಮಟ್ಟದಲ್ಲಿ ಪರಿಶೀಲನಾ ಸಮಿತಿ ಹಾಗೂ ರಾಜ್ಯ ಮಟ್ಟದಲ್ಲಿ ಬ್ಯಾಂಕ್‌ಗಳ ಸಮಿತಿಗಳು ಸಾಲ ಯೋಜನೆಯ ಅನುಷ್ಠಾನ ಪರಿಶೀಲಿಸಿ ಸಕಾಲಿಕ ಮಾರ್ಗದರ್ಶದ ಹಾಗೂ ನಿರ್ದೇಶನಗಳನ್ನು ನೀಡುವ ಕ್ರಮ ಜಾರಿಯಲ್ಲಿದೆ. ಪ್ರತಿ ಬ್ಯಾಂಕ್ ಶಾಖೆಗೆ ನಿರ್ದಿಷ್ಟ ಪ್ರದೇಶವನ್ನು ಗೊತ್ತು ಮಾಡುವುದರಿಂದಾಗಿ ಸಾಲ ನೀಡಿಕೆಗೆ ಹೆಚ್ಚು ಗಮನ ಹರಿಸುವದರೊಂದಿಗೆ ಆ ಪ್ರದೇಶದ ತೀವ್ರ ಅಭಿವೃದ್ಧಿಗೆ ಪೂರಕವಾಗಲು ಭಾರತ ರಿಸರ್ವ್ ಬ್ಯಾಂಕ್, ೧೯೮೯ ರಿಸರ್ವ್ ಬ್ಯಾಂಕ್ ಮತ್ತು ವಾಣಿಜ್ಯ ಬ್ಯಾಂಕುಗಳಿಗಾಗಿ ಸೇವಾ ಕ್ಷೇತ್ರ (ಸರ್ವಿಸ್ ಏರಿಯಾ ಅಪ್ರೋಚ್) ಎಂಬ ಯೋಜನೆಯನ್ನು ಅನುಷ್ಠಾನಗೊಳಿಸಿತು.

ಪ್ರತಿ ಶಾಖೆ ತನ್ನ ಸೇವಾ ಕ್ಷೇತ್ರದಲ್ಲಿನ ಎಲ್ಲ ಗ್ರಾಮಗಳಿಗಾಗಿ ಸರ್ವಿಸ್ ಏರಿಯಾ ಕ್ರೆಡಿಟ್ ಪ್ಲಾನ್ ಸಿದ್ಧಪಡಿಸಲಾಯಿತು. ಒಂದು ಬ್ಲಾಕ್‌ನಲ್ಲಿ ಎಲ್ಲ ಶಾಖೆಗಳ ಸರ್ವಿಸ್ ಏರಿಯಾ ಕ್ರೆಡಿಟ್ ಪ್ಲಾನ್‌ಗಳನ್ನು ಒಗ್ಗೂಡಿಸಿ ಬ್ಲಾಕ್ ಕ್ರೆಡಿಟ್ ಪ್ಲಾನ್ ಹಾಗೂ ಎಲ್ಲ ಬ್ಲಾಕ್ ಕ್ರೆಡಿಟ್ ಪ್ಲಾನ್ ಸೇರಿದಂತೆ ಜಿಲ್ಲೆಗಾಗಿ ವಾರ್ಷಿಕ ಸಾಲ ಯೋಜನೆ (Annual Credit Plan) ರೂಪಿಸುವಂತಹ ವಿಶಿಷ್ಟ ಕ್ರಮವನ್ನು ಜಾರಿಗೊಳಿಸುವದರಿಂದ ಗ್ರಾಮೀಣ ಸಾಲ ನೀಡಿಕೆಗೆ ಈಗ ವಿಧ್ಯುಕ್ತ ವ್ಯವಸ್ಥೆಯನ್ನು ರೂಪಿಸಲಾಗಿದೆ.

## ಜೀವನಮಟ್ಟ ಸುಧಾರಣೆ :

'ಗ್ರಾಮೀಣ ಅಭಿವೃದ್ಧಿ' ನಮಗೆ ಈಗ ಚಿರಪರಿಚಿತ ಪದ. ಗ್ರಾಮೀಣ ಪ್ರದೇಶದ ಬಡತನ ನಿರ್ಮೂಲನೆಯೊಂದೇ ಗ್ರಾಮೀಣಾಭಿವೃದ್ಧಿ ಆಗಲಾರದು. ಕೃಷಿ ಬೆಳವಣಿಗೆ, ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿ, ಗ್ರಾಮೀಣ ಭಾಗದ ಸ್ವಾಸ್ಥ್ಯ ರಕ್ಷಣೆ, ಶಿಕ್ಷಣದ ವಿಕಾಸ, ಸಾಕ್ಷರತೆ ಹಾಗೂ ಸಂಪರ್ಕ ಸುಧಾರಣೆಯ ಅಂಶಗಳಿಂದ ಅಧಿಕ ಕೃಷಿ ಉತ್ಪಾದನೆ ಹಾಗೂ ಗ್ರಾಮೀಣ ಜನರಿಗೆ ಲಾಭದಾಯಕ ಉದ್ಯೋಗ ಒದಗಿಸುವ ಎಲ್ಲ ಕಾರ್ಯಕ್ರಮಗಳನ್ನು ಗ್ರಾಮೀಣಾಭಿವೃದ್ಧಿ ಪದ ಒಳಗೊಂಡಿದೆ. ಬ್ಯಾಂಕ್ ರಾಷ್ಟ್ರೀಕರಣದ ಈ ಮೂರು ದಶಕಗಳಲ್ಲಿ ಗ್ರಾಮೀಣ ಜೀವನಮಟ್ಟದ ಸುಧಾರಣೆಯಲ್ಲಿ ಬ್ಯಾಂಕಿಂಗ್ ಉದ್ಯಮ ನೇರವಾಗಿ ಅಥವಾ ಪರೋಕ್ಷವಾಗಿ ಪಾಲುಗೊಂಡಿರುವದನ್ನು ಮನಗಾಣಬಹುದಾಗಿದೆ. ಗ್ರಾಮೀಣ ಅರ್ಥ ವ್ಯವಸ್ಥೆಯನ್ನು ಪ್ರತ್ಯೇಕವಾಗಿ ಗಮನಿಸಿದಾಗ್ಯೂ ಸಹ ಬ್ಯಾಂಕ್‌ಗಳ ಕೊಡುಗೆ ಗಣನೀಯವಾಗಿದೆ. ಸಂಪನ್ಮೂಲದ ಕ್ರೋಢೀಕರಣ ಮತ್ತು ಅದರ ವ್ಯವಸ್ಥಿತ ಬಳಕೆ ಗ್ರಾಮಾಭಿವೃದ್ಧಿಯ ಅವಿಭಾಜ್ಯ ಅಂಗವಾಗಿದೆ. ರಾಷ್ಟ್ರೀಯ ಯೋಜನಾ ಆದ್ಯತೆಗಳಿಗೆ ಅನುಗುಣವಾಗಿ ಆರ್ಥಿಕತೆಯ ವಿವಿಧ ಕ್ಷೇತ್ರಗಳಿಗೆ ಸಾಲವು ಸುಗಮವಾಗಿ ದೊರೆಯುವ ಭರವಸೆ ನೀಡಲು ಸಾಲ ನೀಡಿಕೆಯ ಮುಖ್ಯಕ್ಷೇತ್ರವನ್ನು ಅಭಿವೃದ್ಧಿಪಡಿಸಲಾಯಿತು. ಇದರಿಂದಾಗಿ ಇದುವರೆಗೆ ಕಡೆಗಣಿಸಲಾದ ಕ್ಷೇತ್ರಗಳಲ್ಲಿ ಸಾಲ ವಿಸ್ತರಣೆ ಸಾಧ್ಯವಾಯಿತು. ಬ್ಯಾಂಕ್ ಸೌಕರ್ಯವಿಲ್ಲದ ಗ್ರಾಮೀಣ ಪ್ರದೇಶಗಳಲ್ಲಿ ಅದರಲ್ಲೂ ಕುಗ್ರಾಮಗಳಲ್ಲಿ ಬ್ಯಾಂಕ್ ಶಾಖೆಗಳು ಆರಂಭಗೊಂಡವು. ಗ್ರಾಮೀಣ ಕ್ಷೇತ್ರದ ಸಾಲ ವಿಸ್ತರಿಸುವುದರೊಂದಿಗೆ ಆದ್ಯತೆಯ ಕ್ಷೇತ್ರಕ್ಕಾಗಿ ಬ್ಯಾಂಕ್ ಸಾಲದ ಒಂದು ಭಾಗ ಮೀಸಲಾಗಿಡುವ ವ್ಯವಸ್ಥೆಯಾಯಿತು.

ಆದ್ಯತೆಯ ಕ್ಷೇತ್ರದಲ್ಲಿ ಕೃಷಿ, ಸಣ್ಣ ಕೈಗಾರಿಕೆ, ಚಿಕ್ಕ ವಹಿವಾಟು, ವೃತ್ತಿಪರ ಮತ್ತು ಸ್ವಯಂ ಉದ್ಯೋಗ, ಸ್ವಯಂ ಸಹಾಯ ತಂಡ, ಗೃಹ ನಿರ್ಮಾಣ, ಚಿಕ್ಕ ನೀರಾವರಿ, ದುರ್ಬಲ ವರ್ಗದವರಿಗೆ ಸಾಲಗಳ ವಿಸ್ತರಣೆ, ಸರ್ಕಾರಿ ಸಂಯೋಜಿತ ಕಾರ್ಯಕ್ರಮ ಮುಂತಾದುವು ಸೇರ್ಪಡೆಯಾಗಿರುವದು ಸಮಗ್ರ ಗ್ರಾಮೀಣ ಅಭಿವೃದ್ಧಿಗೆ ಆಸರೆಯಾಗಿದೆ.

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ನಂತರ ಗ್ರಾಮೀಣ ಸಾಲದ ವ್ಯವಸ್ಥೆಗೆ ಇನ್ನಷ್ಟು ಸಹಕಾರಿಯಾಯಿತಲ್ಲದೇ ಹಳ್ಳಿಯ ಜನರಲ್ಲಿ ಉಳಿತಾಯ ಪ್ರವೃತ್ತಿ ಬಲಗೊಂಡಿತು. ಹೀಗಾಗಿ ಗ್ರಾಮಾಂತರ ಠೇವಣಿ ಸಂಗ್ರಹ ಸಹ ಉತ್ತೇಜನಕಾರಿಯಾಗಿರುವದನ್ನು ನಾವಿಂದು ಕಾಣಬಹುದಾಗಿದೆ. ಬ್ಯಾಂಕುಗಳು ಕೆಲ ಗ್ರಾಮಗಳನ್ನು ದತ್ತು ಪಡೆದುಕೊಂಡು ಅವುಗಳ ಸರ್ವಾಂಗೀಣ ಪ್ರಗತಿಗೆ ಮುಂದಾಗಿವೆಯಲ್ಲದೇ ವಿವಿಧ ವಿಸ್ತರಣಾ ಚಟುವಟಿಕೆಗಳನ್ನು ಹಮ್ಮಿಕೊಂಡು ಗ್ರಾಮೀಣ ಅಭಿವೃದ್ಧಿಗೆ ನೆರವಾಗಿವೆ. ಇದೆಲ್ಲದರ ಪರಿಣಾಮವಾಗಿ ಗ್ರಾಮ ಭಾರತದ ಆರ್ಥಿಕ ಚಟುವಟಿಕೆಗಳಲ್ಲಿ ವೈವಿಧ್ಯತೆ ಮೈಗೂಡಿದೆ.

ಗ್ರಾಮೀಣ ಬಡಜನತೆ ತಮ್ಮ ಸಾಲದ ಅಗತ್ಯತೆಗೆ ವಿಧ್ಯುಕ್ತ ಸಾಲ ಸಂಸ್ಥೆಗಳನ್ನು ಸಂಪರ್ಕಿಸದಿರುವಿಕೆಗೆ ಅವರಿಗೆ ಆಸ್ತಿ ಇಲ್ಲದಿರುವಿಕೆ ಒಂದು ಕಾರಣವಾಗಿರುತ್ತದೆ. ಸಾಲ ಸಂಸ್ಥೆಗಳು ಸಹ ಇಂತಹವರ ಬಳಿ ವೈಯಕ್ತಿಕವಾಗಿ ಹೋಗಲಾರವು. ಬಡಜನರಿಗೆ ವಿವಿಧ ಸಮಯಕ್ಕನುಗುಣವಾಗಿ ಸಣ್ಣ ಪ್ರಮಾಣದ ನೆರವಿನ ಅಗತ್ಯವಿರುತ್ತದೆ ಮತ್ತು ಈ ಉದ್ದೇಶಕ್ಕಾಗಿ ವಿಧ್ಯುಕ್ತ ಸಾಲ ನೀಡಿಕೆ ವ್ಯವಸ್ಥೆ ಸಾಕಷ್ಟು ಸಜ್ಜಾಗಿರುವುದಿಲ್ಲ. ಅದಕ್ಕೆ ಗ್ರಾಮೀಣ ಜನತೆ ಅನೌಪಚಾರಿಕ ತಂಡಗಳನ್ನು ಸ್ವಯಂ ಸೇವಾ ಸಂಸ್ಥೆಗಳು ಅಥವಾ ಬೇರೆ ಏಜೆನ್ಸಿಗಳ ನೆರವಿನೊಡನೆ ರಚಿಸುವ ಮೂಲಕ ತಮ್ಮ ತುರ್ತು ಅಗತ್ಯಗಳಿಗೆ ಹಣ ಪಡೆಯುವಲ್ಲಿ ತಮಗೆ ತಾವೇ ಸಹಾಯ ಮಾಡಿಕೊಳ್ಳುವ ದೃಷ್ಟಿಯಿಂದ ತಮ್ಮ ಅಲ್ಪ ಉಳಿತಾಯದಿಂದ ಆರ್ಥಿಕ ನೆರವು ಪಡೆಯಲು ಸ್ವ ಸಹಾಯ ಗುಂಪುಗಳನ್ನು ಈಗ ಪ್ರೋತ್ಸಾಹಿಸಲಾಗಿದೆ. ಮಾರ್ಚ್ ೨೦೦೩ರ ಅಂತ್ಯಕ್ಕೆ ೭,೧೭,೩೬೦ ಸ್ವ ಸಹಾಯ ಸಶಕ್ತ ಗುಂಪುಗಳ ಮೂಲಕ ೨೦೪೯ ಕೋಟಿ ರೂ. ಗಳಷ್ಟು ಸಾಲ ಗ್ರಾಮೀಣ ಪ್ರದೇಶದಲ್ಲಿ ವಿತರಣೆಯಾಗಿದೆ.

ಈ ಗುಂಪುಗಳು ಸಾಮಾನ್ಯವಾಗಿ ಗ್ರಾಹಕ ಅಗತ್ಯಗಳಿಗೆ ಆದ್ಯತೆ ನೀಡುವದಲ್ಲದೇ ವಿಶಿಷ್ಟ ಉತ್ಪಾದಕ ಚಟುವಟಿಕೆಗಳತ್ತ ಕೇಂದ್ರೀಕೃತವಾಗಿರುತ್ತವೆ. ಸ್ವಯಂ ಸಹಾಯ ಗುಂಪುಗಳ ಮೂಲಕ ಬಡಜನತೆಗೆ ಹಣಕಾಸು ನೆರವನ್ನು ಪರಿಣಾಮಕಾರಿ ರೀತಿಯಲ್ಲಿ ವಿತರಿಸಲು ಕೇಂದ್ರ ಸರ್ಕಾರವು ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕು (ನಬಾರ್ಡ್) ಮತ್ತು ಭಾರತದ ಸಣ್ಣ ಕೈಗಾರಿಕಾ ಅಭಿವೃದ್ಧಿ ಬ್ಯಾಂಕ್ (SIDBI) ಸಹಾಯದೊಡನೆ ಬ್ಯಾಂಕುಗಳಿಂದ ಸ್ವ ಸಹಾಯ ಗುಂಪುಗಳಿಗೆ ಆದ್ಯತೆ ನೀಡುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಸ್ವ ಸಹಾಯ ಸಂಘಗಳು ಸಮಾನಾಂತರ ಬ್ಯಾಂಕಿಂಗ್ (Parallel Banking) ಮಾಡುವಷ್ಟು ಈಗ ಸಮರ್ಥವಾಗಿದೆ. ಮೂರು ದಶಕಗಳಿಂದ ಬಳಕೆಯಲ್ಲಿರುವ ಸಾಲ ಯೋಜನೆಗಳಿಂದ ಗ್ರಾಮೀಣ ಜನತೆ ಸಬಲೀಕರಣದ ಸಂತಸ ಕಂಡಿದ್ದರೂ ಅದು ಆಳಕ್ಕಿಳಿದಿರಲಿಲ್ಲ. ಈ ಸ್ವ ಸಹಾಯ ಗುಂಪುಗಳು ಗ್ರಾಮಾಂತರ ಪ್ರದೇಶದಲ್ಲಿ ಸ್ವ ಸಹಾಯ (Self Help) ಮತ್ತು ಸ್ವಾವಲಂಬನೆ ಮೌಲ್ಯಗಳನ್ನು ವರ್ಧಿಸಿವೆ. ಸ್ವ ಸಹಾಯ ಸಂಘಗಳು ಮುಂದಿನ ದಿನಗಳಲ್ಲಿ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಹೊಸ ಆಯಾಮ ನೀಡುವಲ್ಲಿ ಸಂಶಯವಿಲ್ಲ.

ಬ್ಯಾಂಕುಗಳು ಇಂದು ಗ್ರಾಮೀಣ ಕ್ಷೇತ್ರದ ಸಾಲ ಬೇಡಿಕೆ ಈಡೇರಿಸುವಲ್ಲಿ ನಾವೀನ್ಯತೆ ಮತ್ತು ವೈವಿಧ್ಯತೆ ಅಳವಡಿಸಲು ಮುಂದಾಗಿವೆ. ಕಿಸಾನ್ ಕ್ರೆಡಿಟ್ ಕಾರ್ಡ್ ಮೂಲಕ ಬೆಳೆ ಮತ್ತಿತರ ಕೃಷಿ ಸಾಲ ವಿತರಣೆ ಪ್ರಕ್ರಿಯೆ ರಾಷ್ಟ್ರೀಯ ಆದ್ಯತೆ ಪಡೆದಿದೆ. ವರ್ಷಂಪ್ರತಿ ಬೇಕಾಗುವ ಪುನರ್ ಸಾಲಗಳಿಗೆ ರೈತರು ಮಂಜೂರಾತಿಗೆ ಕಾಯದೇ ಸಾಲ ಸೌಲಭ್ಯವನ್ನು ಕಿಸಾನ್ ಕ್ರೆಡಿಟ್ ಕಾರ್ಡ್ ಮೂಲಕ ಪಡೆಯಬಹುದಾಗಿದೆ.

ಬಡತನ ನಿರ್ಮೂಲನಾ ಕಾರ್ಯಕ್ರಮಗಳಿಗೂ ಬ್ಯಾಂಕುಗಳು ಒತ್ತು ನೀಡುತ್ತಿವೆ. ಸಮಗ್ರ ಗ್ರಾಮೀಣ ಅಭಿವೃದ್ಧಿ (IRDP) ಯೋಜನೆಯಲ್ಲಿ ಬಡತನ ರೇಖೆ ಕೆಳಗಿರುವ ವ್ಯಕ್ತಿ ಅಥವಾ ತಂಡಗಳಿಗೆ ಬ್ಯಾಂಕ್ ಸಾಲ ಹಾಗೂ ಸರ್ಕಾರದ ಸಹಾಯಧನ ನೀಡಲಾಗುತ್ತಿದೆ. ಈಗ IRDP ಮತ್ತು ತತ್ಸಂಬಂಧಿತ ಯೋಜನೆಗಳನ್ನು ಪುನರ್ ರೂಪಿಸಿ ಸ್ವರ್ಣಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (SGSY) ಕಾರ್ಯಕ್ರಮ ರೂಪಿಸಲಾಗಿದೆ. ಕಡಿಮೆ ಬಡ್ಡಿದರದ ಡಿಫರೆನ್ಷಿಯಲ್ ರೇಟ್ ಆಫ್ ಇಂಟರೆಸ್ಟ್ (D.R.I) ಯೋಜನೆ ೧೯೭೨ ರಿಂದ ಜಾರಿಗೆ ಬಂದಿದ್ದು, ಕಡಿಮೆ ವರಮಾನದ ಫಲಾನುಭವಿಗಳ ಉತ್ಪಾದನಾ ಪ್ರಯತ್ನಕ್ಕೆ ಇದರಿಂದ ಸಾಕಷ್ಟು ಸಹಾಯವಾಗಿದೆ. ಪ್ರಧಾನ ಮಂತ್ರಿಗಳ ರೋಜಗಾರ ಯೋಜನೆಯನ್ನು (PMRY) ವಿದ್ಯಾವಂತ ನಿರುದ್ಯೋಗಿ ಯುವಜನತೆಯ ಸ್ವಯಂ ಉದ್ಯೋಗ ಅವಕಾಶ ಕಲ್ಪಿಸಲು ರೂಪಿಸಲಾಗಿದ್ದು, ಬ್ಯಾಂಕುಗಳು ತನ್ಮೂಲಕ ಹಳ್ಳಿಗಳ ವರಮಾನ ಹಾಗೂ ಕೌಶಲ್ಯಗಳ ಅಭಿವೃದ್ಧಿಗೆ ಮುಂದಾಗಿವೆ.

ಗ್ರಾಮೀಣ ಅಭಿವೃದ್ಧಿಗೆ ಬ್ಯಾಂಕುಗಳ ನೆರವು ವೇಗವರ್ಧಕವಾಗಿ ಪರಿಣಮಿಸಿದ್ದು, ಬ್ಯಾಂಕುಗಳು ನಮ್ಮ ಗ್ರಾಮಗಳ ಅನಿವಾರ್ಯ ಭಾಗವಾಗಿ ರೂಪುಗೊಂಡಿವೆ. ಹೀಗಾಗಿ ಗ್ರಾಮೀಣ ಚಿತ್ರಣ ಬದಲಾಗಿದೆ. ಗ್ರಾಮೀಣ ಜನತೆಯ ಮನೋಧೋರಣೆಯಲ್ಲಿ ಅಗತ್ಯ ಬದಲಾವಣೆ ತರುವ ಮೂಲಕ ಗ್ರಾಮೀಣ ಅಭಿವೃದ್ಧಿಯಲ್ಲಿ ಬ್ಯಾಂಕುಗಳು ರಚನಾತ್ಮಕ ಕಾರ್ಯ ನಿರ್ವಹಿಸುತ್ತಿವೆ.

ಇದೀಗ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಉದಾರೀಕರಣ ಹಾಗೂ ಆಧುನಿಕ ತಂತ್ರಜ್ಞಾನದಿಂದಾಗಿ ನಿರೀಕ್ಷೆಗೂ ಮೀರಿದ ಹೊಸತನ ಕಂಡುಬರುತ್ತಿವೆ. ಇಂದಿನ ಸ್ಪರ್ಧಾತ್ಮಕ ಯುಗದಲ್ಲಿ ಗ್ರಾಹಕರ ಆಶೋತ್ತರ ಈಡೇರಿಸಲು ಈ ಬದಲಾವಣೆ ಅನಿವಾರ್ಯವಾಗಿದೆ. ಈ ಸುಧಾರಣೆಗಳ ಪರಿಕಲ್ಪನೆಯಲ್ಲಿ ಗ್ರಾಮೀಣ ಅಭಿವೃದ್ಧಿಗೆ ಹೆಚ್ಚಿನ ಆರ್ಥಿಕ ನೆರವು ಹಾಗೂ ಬೆಂಬಲ ನೀಡಲು ಬ್ಯಾಂಕುಗಳು ಮುಂದಾಗಬೇಕಿದೆ.

ಗ್ರಾಮೀಣ ಸಾಲ ನೀಡಿಕೆಯಲ್ಲಿ ಒಳ್ಳೆಯ ಪ್ರಗತಿ ಸಾಧಿಸಲಾಗಿದ್ದರೂ ವಾಯಿದೆ ಮೀರಿದ ಸಾಲದ ವಸೂಲಾತಿ ಪ್ರಮಾಣ ಕುಗ್ಗಿದ್ದರಿಂದಾಗಿ ಬ್ಯಾಂಕುಗಳು ತೊಂದರೆ ಅನುಭವಿಸುತ್ತಿರುವುದನ್ನು ಈ ಸಂದರ್ಭದಲ್ಲಿ ಗಂಭೀರವಾಗಿ ಯೋಚಿಸ ಬೇಕಾಗಿದೆ. ಹೆಚ್ಚುತ್ತಿರುವ ಅನುತ್ಪಾದಕ ಆಸ್ತಿ (NPA), ಕುಂಠಿತಗೊಂಡ ವಸೂಲಾತಿಯ ಈ ಸನ್ನಿವೇಶದಲ್ಲಿ ಬ್ಯಾಂಕುಗಳು ಸಾಲ ವಿತರಣೆಯಲ್ಲಿ ಇನ್ನಷ್ಟು ಹೆಚ್ಚಿನ ವೃತ್ತಿಪರತೆ (Professional)ಯನ್ನು ರೂಢಿಸಿಕೊಳ್ಳುವ ಅಗತ್ಯತೆ ಇದೆ. ಸಾರ್ವಜನಿಕರ ಸಾಲ ಮರುಪಾವತಿಯ ಧೋರಣೆಯಲ್ಲಿ ಸಹ ಧನಾತ್ಮಕ ಬದಲಾವಣೆಗಳಾಗಬೇಕಿದೆ. ಅಂದಾಗ ಮಾತ್ರ ಬ್ಯಾಂಕುಗಳು ಗ್ರಾಮೀಣ ಅಭಿವೃದ್ಧಿಯಲ್ಲಿ ಇನ್ನೂ ಹೆಚ್ಚು ಅರ್ಥಪೂರ್ಣವಾಗಿ ಸೇವೆ ಸಲ್ಲಿಸಲು ಸಾಧ್ಯವಾಗುತ್ತದೆ.

●






# ಗ್ರಾಮೀಣ ಪ್ರದೇಶದಲ್ಲಿ ಬಡತನ ನಿವಾರಣೆ

ಡಾ. ಕೆ. ಎ. ಜಾಲಿಹಾಳ್
ಡಾ. ಎಂ. ಶಿವಮೂರ್ತಿ

ಕೌಶಲ್ಯಗಳು ಎಂದರೆ ವೇಗವಾಗಿ ಮತ್ತು ಪರಿಣಾಮಕಾರಿಯಾಗಿ ಅಭಿವೃದ್ದಿ ಕಾರ್ಯಕ್ರಮದ ಉದ್ದೇಶಗಳನ್ನು ಪೂರೈಸಲು ಪ್ರಾರಂಭಿಸಬೇಕಾದ ಕಾರ್ಯಗಳ ವಿಧಾನಗಳು ಎಂದು ಅರ್ಥ. ಆದ್ದರಿಂದ ಗ್ರಾಮೀಣ ಬಡತನ ನಿವಾರಣೆಯಲ್ಲಿ ಉಪಯೋಗಿಸಬೇಕಾದ ತಂತ್ರಕೌಶಲ್ಯಗಳು. ಈ ಉದ್ದೇಶಗಳನ್ನು ಗಮನದಲ್ಲಿ ಇಟ್ಟುಕೊಳ್ಳಬೇಕು. ವಿವಿಧ ಅಭಿವೃದ್ಧಿಯಾಗುತ್ತಿರುವ ದೇಶಗಳಲ್ಲಿ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮಾಡುವ ಅನುಭವವು ಬಡತನ ನಿವಾರಣಾ ಕಾರ್ಯಕ್ರಮಗಳ ಪರಿಣಾಮಕಾರೀ ಅನುಷ್ಠಾನವನ್ನು ಗಮನದಲ್ಲಿಟ್ಟುಕೊಳ್ಳಬೇಕಾದ ಅನೇಕ ಉಪಯುಕ್ತ ವಿಷಯಗಳನ್ನು ಸಲಹೆ ಮಾಡಿದೆ. ಈ ಕೆಳಗಿನ ಪ್ಯಾರಾಗಳಲ್ಲಿ ಕೆಲವು ಮುಖ್ಯವಾದ ತಂತ್ರ ಕೌಶಲ್ಯಗಳನ್ನು ಸಲಹೆ ಮಾಡಲಾಗಿದೆ.

## ೧. ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮವು ವಿಸ್ತಾರವಾದ ವ್ಯಾಪ್ತಿಯ ಚಟುವಟಿಕೆಗಳನ್ನು ಹೊಂದಿರಬೇಕು :

ವಿಶ್ವಬ್ಯಾಂಕ್ ವರದಿಯ ಪ್ರಕಾರ ೧೯೭೫ "ಬಡತನ ನಿವಾರಣೆಗೆ ಗ್ರಾಮೀಣ ಅಭಿವೃದ್ಧಿಯ ಕಾರ್ಯತಃ ಗುರಿಯು ಯಾವುದೇ ನಿರ್ದಿಷ್ಟ ಕ್ಷೇತ್ರದಿಂದಲೂ ಮುಂದಕ್ಕೂ ವಿಸ್ತರಿಸುತ್ತದೆ. ಅವುಗಳಲ್ಲಿ ಅಭಿವೃದ್ಧಿಪಡಿಸಿದ ಉತ್ಪಾದಕತೆಯೂ ಸೇರಿದೆ. ಮತ್ತು ಇದರಿಂದಾಗಿ ಗುರಿಗುಂಪುಗಳಿಗೆ ಹೆಚ್ಚಿನ ವರಮಾನಗಳು ಹಾಗೂ ಕನಿಷ್ಠ ಒಪ್ಪಿಕೊಳ್ಳಲಾಗಿರುವ ಮಟ್ಟಗಳಲ್ಲಿ ಆಹಾರ, ನೆರಳು, ಶಿಕ್ಷಣ, ಆರೋಗ್ಯಸೇವೆಗಳು ಒಳಗೊಂಡಿರುತ್ತವೆ. ಈ ಉದ್ದೇಶಗಳನ್ನು ಸಾಧಿಸಲು ಗ್ರಾಮೀಣ ಜನರಿಗೆ ದೊರೆಯುವ ಸರಕುಗಳು ಮತ್ತು ಸೇವೆಗಳು ವಿಸ್ತಾರಗೊಳ್ಳಬೇಕು ಆರ್ಥಿಕ ಮತ್ತು ಸಾಮಾಜಿಕ ಸೇವಗಳ ಪೂರ್ಣವ್ಯಾಪ್ತಿಯಿಂದ ಅವರಿಗೆ ಸಂಪೂರ್ಣ ಪ್ರಯೋಜನ ದೊರೆಯಲು ಸಹಾಯವಾಗುವಂತೆ ಸಂಸ್ಥೆಗಳು ಮತ್ತು ನೀತಿಗಳು ವಿಸ್ತಾರಗೊಳ್ಳಬೇಕು. ಅಭಿವೃದ್ಧಿಯು ಸ್ವಯಂ ಆಧಾರಿತವಾಗುವುದಕ್ಕೆ ಗುರಿಗುಂಪುಗಳ ಸದಸ್ಯರು ಕಾರ್ಯಕ್ರಮದ ವ್ಯವಸ್ಥೆಯಲ್ಲಿ ಭಾಗವಹಿಸುವುದು ವಿಶೇಷವಾಗಿ ಪ್ರಮುಖವಾಗಿದೆ. ಗ್ರಾಮೀಣ ಅಭಿವೃದ್ಧಿಯ ಕಾರ್ಯಕ್ರಮವು ವಿಸ್ತಾರವಾದ ವ್ಯಾಪ್ತಿಯ ಮತ್ತು ಮಿಶ್ರ ಚಟುವಟಿಕೆಗಳನ್ನು ಆಧರಿಸಿಕೊಂಡಿದ್ದು, ಕೃಷಿ ಉತ್ಪನ್ನವನ್ನು ಹೆಚ್ಚಿಸಲು ಆರೋಗ್ಯ ಮತ್ತು ಶಿಕ್ಷಣವನ್ನು ಉತ್ತಮಪಡಿಸಲು, ಸಂಪರ್ಕಗಳನ್ನು ವಿಸ್ತರಿಸುವುದು ಮತ್ತು ಗೃಹಗಳನ್ನು ಉತ್ತಮಪಡಿಸುವುದರ ಯೋಜನೆಗಳು ಸೇರಿವೆ.

*ಗ್ರಾಮೀಣ ಅಭಿವೃದ್ಧಿಯಲ್ಲಿ ಬಡತನ ನಿವಾರಣೆಯ ಆದ್ಯತಾ ವಲಯುಗಳೆಂದರೆ ಆಹಾರ, ನೆರಳು, ಶಿಕ್ಷಣ ಹಾಗೂ ಆರೋಗ್ಯ ಸೇವೆಗಳು-ಇವುಗಳ ಗರಿಷ್ಠ ಉಪಯೋಗ ಜನರಿಗೆ ದೊರೆಯುಬೇಕು. ಅದಕ್ಕೆ ಸರ್ಕಾರ ಹಾಗೂ ಜನಪ್ರತಿನಿಧಿಗಳು ಒಟ್ಟಾಗಿ ದುಡಿಯಬೇಕು.*

ಚಟುವಟಿಕೆಗಳ ಮಿಶ್ರಣವು ಒಂದು ಪ್ರಾಂತ್ಯದ ಅಗತ್ಯಗಳು ಮತ್ತು ನಿರ್ದಿಷ್ಟ ಸಮಯಗಳಲ್ಲಿ ಮತ್ತು ಅಭಿವೃದ್ಧಿಯ ನಿರ್ದಿಷ್ಟ ಹಂತಗಳೊಳಗೆ, ಆದ್ಯತೆಯಿಂದ ಹಂಚುವ ಅಂಶಗಳನ್ನು ಒಳಗೊಂಡಿರುತ್ತವೆ. ಕಾರ್ಯಕ್ರಮವನ್ನು ಅನುಕ್ರಮ ಯೋಜನೆಗಳ ಶ್ರೇಣಿಗಳ ಮೇಲೆ ಆಧರಿಸಿರಬೇಕು. ಮೊದಲು ಆರೋಗ್ಯ, ನಂತರ ಶಿಕ್ಷಣ, ಅನಂತರ ಕೃಷಿ ಅಭಿವೃದ್ಧಿ, ಅಥವಾ ಪ್ರಯತ್ನವು ವಿಸ್ತಾರ ಆಧಾರವುಳ್ಳ ಬಹುಸಂಖ್ಯಾ ಕ್ಷೇತ್ರ ಮಾರ್ಗವಾಗಿರಬಹುದು. ಇದರಲ್ಲಿ ಹೆಚ್ಚು ಕಡಿಮೆ ಒಂದೇ ಸಮಯದಲ್ಲಿ ಅನೇಕ ಚಟುವಟಿಕೆಗಳನ್ನು ಕೈಗೊಳ್ಳಬೇಕು. ಈ ಎಲ್ಲ ಸಂದರ್ಭಗಳಲ್ಲಿ ಅಂಗ ಅಂಶಗಳು ಒಂದಕ್ಕೊಂದು ಪೂರಕವಾಗಿರಬೇಕು ಮತ್ತು ಬೆಂಬಲ ಕೊಡುವಂತಿರಬೇಕು".

"ಗ್ರಾಮೀಣ ಪ್ರದೇಶದಲ್ಲಿ ಕಡಿಮೆ ವರಮಾನದ ಗುಂಪಿನ ಹೆಚ್ಚಿನ ಜನರು ಜೀವನೋಪಾಯಕ್ಕಾಗಿ ಕೃಷಿಯನ್ನು ಹೆಚ್ಚಾಗಿ ಅವಲಂಬಿಸಿದ್ದಾರೆ. ಗ್ರಾಮೀಣ ವರಮಾನವನ್ನು ಹೆಚ್ಚಿಸಲು ಉದ್ದೇಶಿಸಿರುವ ಅನೇಕ ಕಾರ್ಯಕ್ರಮಗಳು ಕೃಷಿ ಅಭಿವೃದ್ಧಿಯ ಸುತ್ತ ತಿರುಗುತ್ತಿರಬೇಕು".

### ೨. ಕಾರ್ಯಕ್ರಮವು ಜೀವನಾಧಾರ ಅಭಿವೃದ್ಧಿ ಮತ್ತು ಗ್ರಾಮೀಣ ಬಡಜನರ ಬೆಳವಣಿಗೆಯಲ್ಲಿ ಸಾಮ್ಯದ ಗುರಿ ಇಟ್ಟುಕೊಳ್ಳಬೇಕು :

ವರ್ಷಗಳು ಕಳೆದಂತೆ ಸಾಧಿಸಿದ ಪ್ರಗತಿಯು ಜೀವನಾಧಾರವಾಗಿಬೇಕು. ಶ್ರೀಮಂತರ ಮತ್ತು ಬಡವರ ನಡುವೆ ಅಂತರವು ಹೆಚ್ಚಬಾರದು. ಕಾರ್ಯಕ್ರಮವನ್ನು ಅಭಿವೃದ್ಧಿಪಡಿಸಿ, ಅನುಷ್ಠಾನಗೊಳಿಸುವಾಗ ಈ ಅಂಶದ ಮೇಲೆ ನಿರ್ದಿಷ್ಟ ಗಮನವನ್ನು ಹರಿಸಿದಾಗ ಇದನ್ನು ಸಾಧಿಸಲು ಸಾಧ್ಯವಾಗಬಹುದು. ದುರದೃಷ್ಟವಶಾತ್ ಭಾರತದಲ್ಲಿ ಇದು ಈಗ ಆಗುತ್ತಿಲ್ಲ. ಲನೆಯ ಯೋಜನೆಯು ಈ ಕೊರತೆಯನ್ನು ಒಪ್ಪಿಕೊಂಡು ಹೀಗೆ ಹೇಳಿದೆ: "ಹಳ್ಳಿಯಲ್ಲಿ ಕೆಲವು ದೀರ್ಘಕಾಲದ ಆಸ್ತಿಗಳ ಸೃಷ್ಟಿಗೆ ಮತ್ತು ಜನರಿಗೆ ಉದ್ಯೋಗವನ್ನು ಒದಗಿಸಲು ಬಡತನ ನಿವಾರಣಾ ಕಾರ್ಯಕ್ರಮಗಳು ಜಯಶಾಲಿ ಆಗಿದ್ದರೂ ಸಾಧನೆಗಳು ಅವುಗಳ ಮೇಲೆ ವೆಚ್ಚಮಾಡಲಾಗಿರುವ ಸಂಪನ್ಮೂಲಗಳಿಗೆ ಸಮನಾಗಿಲ್ಲ ಎಂಬುದು ಅನುಭವದಿಂದ ತಿಳಿದುಬಂದ ವಿಷಯ."

ಐ.ಆರ್.ಡಿ.ಪಿ.ಅಡಿಯಲ್ಲಿ ಸುಮಾರು ಅರ್ಧದಷ್ಟು ಫಲಾನುಭವಿಗಳು ಇನ್ನೂ ಬಾಕಿ ಕೊಡಬೇಕಾಗಿದ್ದು ಸಾಲ ತೀರಿಸುವ ಸಾಮರ್ಥ್ಯದ ಬಗ್ಗೆ ಸಂದೇಹ ಉಂಟುಮಾಡಿದೆ. ಬಹು ಕಡಿಮೆ ಮಟ್ಟದ ಸಹಾಯದಿಂದ ಸಾಲದ ಮರುಪಾವತಿಗೆ ಮತ್ತು ಜೀವನಾಧಾರಕ್ಕೆ ಸಾಕಷ್ಟು ವರಮಾನ ಇಲ್ಲದಿರುವುದರಿಂದ ಹೀಗಿದೆ ಎಂದು ವಾದಮಾಡಲಾಗಿದೆ. ಆದರೂ ಬ್ಯಾಂಕ್‌ಗಳು ಸಾಲದ ಮಿತಿ ಹೆಚ್ಚಿಸುವುದಕ್ಕೆ ಇಷ್ಟಪಡುತ್ತಿಲ್ಲ. ಏಕೆಂದರೆ ಗುರಿಗುಂಪಿನ ಮರುಪಾವತಿ ಸಾಮರ್ಥ್ಯದ ಬಗ್ಗೆ ಸಂದೇಹವಿದೆ. ಸುಮಾರು ೧/೩ ರಷ್ಟು ಜನರು ಅವರಿಗೆ ಕೊಡಲಾದ ಮೂಲ ಆಸ್ತಿಯನ್ನೇ ಇಟ್ಟುಕೊಂಡಿಲ್ಲವೆಂದು ಅಂದಾಜುಮಾಡಲಾಗಿದೆ. ಫಲಾನುಭವಿಗಳಿಗೆ ಹಣ ಬೇಕಾಗಿರುವುದರಿಂದ ಆ ಆಸ್ತಿಯನ್ನು ಮಾರಬೇಕಾದ ಒತ್ತಾಯ ಉಂಟಾಗುತ್ತವೆ. ಇನ್ನೂ ಹೆಚ್ಚಿಗೆ ಏನೆಂದರೆ ಬಡತನದ ರೇಖೆಯನ್ನು ದಾಟುವುದಕ್ಕೆ ಸಾಕಷ್ಟು ಹೆಚ್ಚುವರಿ ವರಮಾನವನ್ನು ಉತ್ಪಾದಿಸುವರೂ ಕೂಡ ಕುಟುಂಬದಲ್ಲಿ ಜನರ ಸಂಖ್ಯೆ ಜಾಸ್ತಿ ಆಗುವುದರಿಂದ ಮತ್ತು ಅವರು ಆಯ್ದುಕೊಂಡಿರುವ ಚಟುವಟಿಕೆಯು ಲಾಭದಾಯಕವಲ್ಲದ್ದರಿಂದ ಅವರು ಪುನಃ ಬಡವರಾಗುವ ಸಾಧ್ಯತೆ ಹೆಚ್ಚು. ಫಲಾನುಭವಿಗಳು, ತಮ್ಮ ವರಮಾನವನ್ನು ಸಾಕಷ್ಟು ಹೆಚ್ಚಿಸಿಕೊಳ್ಳುವುದಕ್ಕೆ ಮತ್ತು ಜೀವನಾಧಾರ ಅಭಿವೃದ್ಧಿಯನ್ನು ಪಡೆಯುವುದಕ್ಕೆ ಅವರಿಗೆ ಸಹಾಯ ಮಾಡುವುದಕ್ಕೆ ಕೊಡುವ ಸಾಲವನ್ನು ಹೆಚ್ಚಿಸಬೇಕಾದ ಅವಶ್ಯಕತೆ ಇದೆ. ಅಭಿವೃದ್ಧಿಗೆ ಆಸ್ತಿಗಳನ್ನು ಪಡೆಯುವುದಕ್ಕೆ ಹಾಲಿ ಇರುವ ಸಹಾಯದ ಜೊತೆಗೆ ಕೆಲವು ವರ್ಷಗಳವರೆಗೆ ಪುನರಾವರ್ತಿತ ವೆಚ್ಚಕ್ಕೆ ಸಾಲವನ್ನು ಒದಗಿಸುವ ರೀತಿಯಲ್ಲಿ ಅವರಿಗೆ ಸಹಾಯ ಮಾಡಬೇಕಾದ ಅಗತ್ಯವಿದೆ.

### ೩. ಸಫಲವಾದ ಕೌಶಲ್ಯಕ್ಕೆ ಸ್ಥಳೀಯ ಯೋಜನೆಯು ಕೇಂದ್ರವಾಗಬೇಕು :

ಈ ಕೌಶಲ್ಯವನ್ನು ವಿಶ್ವ ಬ್ಯಾಂಕ್, ೧೯೭೫ ಈ ಕೆಳಗಿನಂತೆ ವಿವರಿಸಿದೆ.

"ಆದರ್ಶವಾಗಿ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಯೋಜನೆ ಮತ್ತು ಅನುಷ್ಠಾನವು ಸಾಕಷ್ಟು ಪ್ರಾಂತೀಯ ಯೋಜನೆ, ಬಲವಾದ ಕೇಂದ್ರದ ಸಮನ್ವಯ, ಪರಿಣಾಮಕಾರಿಯಾದ ಸ್ಥಳೀಯ ಮಟ್ಟದ ವ್ಯವಸ್ಥೆ, ಯೋಜನೆ ಮತ್ತು ಅನುಷ್ಠಾನದ ಕಾರ್ಯವಿಧಾನಗಳಲ್ಲಿ ಗ್ರಾಮೀಣ ಜನರ ಭಾಗಿತ್ವವು ಒಳಗೊಂಡಿದೆ. ಕೆಲವೇ ದೇಶಗಳು ಈ ಆದರ್ಶದ ಸಮೀಪ ಬರುವ ಸಾಮರ್ಥ್ಯ ಹೊಂದಿದೆ. ಪ್ರಾಂತೀಯ ಯೋಜನೆಯು ಅಪೇಕ್ಷಣೀಯ. ಏಕೆಂದರೆ ಗ್ರಾಮೀಣ ಅಭಿವೃದ್ಧಿಯು ಎಲ್ಲ ಕ್ಷೇತ್ರಗಳಲ್ಲಿಯೂ ಹೊಕ್ಕಿರುತ್ತದೆ. ಪ್ರಾಂತೀಯ

ಸ್ಥಿತಿಗತಿಗಳನ್ನು ಎದುರಿಸಲು ಗ್ರಾಮೀಣ ಕಾರ್ಯಕ್ರಮಗಳನ್ನು ರೂಪಿಸಬೇಕಾದ ಅಗತ್ಯವಿದೆ. ತಾಂತ್ರಿಕ ಮತ್ತು ಹಣಕಾಸಿನ ಸಂಪನ್ಮೂಲಗಳ ಅಂತರ ಪ್ರಾಂತೀಯ ಹಂಚಿಕೆಗಳನ್ನು ಸಂಪನ್ಮೂಲ ದತ್ತಿಗಳಿಗೆ ಸಂಬಂಧಿಸಿದಂತೆ, ದೊರಕುವ ದೇಶೀಯ ಮತ್ತು ವಿದೇಶೀಯ ನಿಧಿಗಳು, ಸಮಾನತೆ ಮತ್ತು ಬೆಳವಣಿಗೆ ಪರಿಗಣನೆಯ ಸಮತೋಲನ ಮತ್ತು ಕೇಂದ್ರ ಮತ್ತು ಸ್ಥಳೀಯ ಅಧಿಕಾರಿಗಳ ನಡುವೆ ಜವಾಬುದಾರಿಗಳನ್ನು ಹಂಚಿಕೊಳ್ಳುವುದಕ್ಕೆ ಪರಿಸ್ಪರ ಒಪ್ಪಿಗೆಯಾದ ವ್ಯವಸ್ಥೆಗಳಿಗೆ ಸಂಬಂಧಿಸಿದಂತೆ ನಿರ್ಧರಿಸಬೇಕು. ಈ ಎಲ್ಲ ಅಂಶಗಳನ್ನೂ ಆಂತರಿಕವಾಗಿ ಸಮತೋಲನಗೊಳಿಸಿದ ಗ್ರಾಮೀಣಾಭಿವೃದ್ಧಿ ಯೋಜನೆಯೊಳಕ್ಕೆ ಒಟ್ಟಿಗೆ ತರಬೇಕು. ಆದರೂ ವ್ಯಾಪಕವಾದ ಗ್ರಾಮೀಣಾಭಿವೃದ್ಧಿ ಯೋಜನೆಯ ಕೊರತೆಯು ಸ್ಥಳೀಯ ಮಟ್ಟದ ಕಾರ್ಯಕ್ರಮದ ವಿಕಸನೆಗೆ ಅಡ್ಡಿಯಾಗಕೂಡದು".

## ೪. ಗ್ರಾಮೀಣಾಭಿವೃದ್ಧಿಗೆ ಕೌಶಲ್ಯವಾಗಿ ಸಹಭಾಗಿತ್ವ ಮಾರ್ಗವನ್ನು ಪ್ರೇರೇಪಿಸುವುದು :

೧೯೯೬ರ ಅಕ್ಟೋಬರ್‌ನಲ್ಲಿ ದೆಹಲಿಯಲ್ಲಿ ಸಂಯುಕ್ತ ರಾಷ್ಟ್ರಗಳಿಂದ ಪ್ರಾಯೋಜಿತವಾದ ಬಡತನ ನಿವಾರಣೆಯ ಮೇಲೆ ನಡೆದ ಸಮಾಲೋಚಕ ಚರ್ಚೆಯಲ್ಲಿ ತೋರಿಸಿದುದು ಏನೆಂದರೆ, "ಜನರಿಗೆ ತಮಗೆ ಅತ್ಯುತ್ತಮವಾದುದು ಯಾವುದು ಎಂದು ತಿಳಿಯಲಾಗದುದರಿಂದ ಪ್ರವೃತ್ತಿಯ ಕಣ್‌ಕಾಪು ಮತ್ತು ತಪ್ಪು ತಿಳಿದುಕೊಂಡ ಅಭಿಪ್ರಾಯದಿಂದ ಬಡತನ ನಿವಾರಣೆಯನ್ನು ತಡೆದಿಡುವುದು ಅಷ್ಟಾಗಿ ಸಂಪನ್ಮೂಲಗಳ ಕೊರತೆಯಿಂದ ಅಲ್ಲ. ಆದ್ದರಿಂದ ಈ ಸಮಾಲೋಚಕ ಚರ್ಚೆಯಲ್ಲಿ ಒಂದು ಕೌಶಲ್ಯವಾಗಿ ಸಮುದಾಯಕ್ಕೆ ಅಧಿಕಾರವನ್ನು ಎತ್ತಿಹೇಳಿದೆ. ಈ ಚರ್ಚೆಯಲ್ಲಿ ತೋರಿಸಿದುದು ಏನೆಂದರೆ ಬಡತನದ ನಿವಾರಣೆಗೆ ಪ್ರಮುಖವಾದ ಅಡ್ಡಿ ಹಣವಲ್ಲ, ಆದರೆ ಜನರ ತೊಡಗಿಕೊಳ್ಳುವಿಕೆಯನ್ನು ತಡೆಯಲು, ಇರುವ ಮೇಲಿನಿಂದ ಕೆಳಗಿನ ಮಾರ್ಗವಾಗಿದೆ".

## ೫. ಸುಭದ್ರವಾದ ಗ್ರಾಮೀಣಾಭಿವೃದ್ಧಿ ಕೌಶಲ್ಯಕ್ಕೆ ಕೃಷಿ ಅಭಿವೃದ್ಧಿಯ ಮೇಲೆ ಕೇಂದ್ರೀಕರಿಸುವ ಅಗತ್ಯವಿದೆ :

೧೯೯೨ರಲ್ಲಿ, ಕೊಲಂಬೋದಲ್ಲಿ ನಡೆದ ಕಾಮನ್‌ವೆಲ್ತ್ ಸಮಾಲೋಚಕ ಗುಂಪು ಗ್ರಾಮೀಣ ಬಡತನವನ್ನು ಎದುರಿಸಲು ಕೃಷಿಯ ನಿರ್ಲಕ್ಷ್ಯತೆಯೂ ಮುಖ್ಯವಾದ ಸಮಸ್ಯೆಗಳಲ್ಲಿ ಒಂದು ಎಂದು ಗುರುತಿಸಿದೆ. ಭಾರತವು ಈ ಕೊರತೆಯ ಸ್ಪಷ್ಟವಾದ ಉದಾಹರಣೆ ಆಹಾರ ಸ್ವಯಂ ಸಂಪೂರ್ಣತೆಯ ಬಗ್ಗೆ ನಾವು ದೊಡ್ಡ ಭಾಷಣಗಳನ್ನು ಮಾಡುತ್ತಿದ್ದರೂ ಭಾರತವು ತನ್ನ ಕೃಷಿ ಅಭಿವೃದ್ಧಿಯಲ್ಲಿ ಬಹು ಮಂದಗತಿಯಲ್ಲಿದೆ. ಕೃಷಿ ಕಾರ್ಯಕ್ರಮಗಳು ಮತ್ತು ನೀತಿಗಳ ಮೇಲೆ ೧೯೯೦ರಲ್ಲಿ ಭಾರತ ಸರಕಾರವು ನೇಮಿಸಿದ ಉನ್ನತಾಧಿಕಾರ ಸಮಿತಿಯು ತನ್ನ ವರದಿಯಲ್ಲಿ ತೋರಿಸಿರುವುದೇನೆಂದರೆ,"ಬಡತನ ನಿರುದ್ಯೋಗ ಮತ್ತು ಅಸಮಾನತೆಗಳನ್ನು ಭಾರತದಲ್ಲಿ ಕಡಿಮೆ ಮಾಡಬೇಕಾದರೆ ಶೀಘ್ರವಾದ, ಖಚಿತವಾದ ಮತ್ತು ಬಹುಪರಿಣಾಮಕಾರೀ ಮಾರ್ಗವೆಂದರೆ, ಭಾರತದ ಕೃಷಿಯಲ್ಲಿನ ಪಡೆಯಲಾಗದಿರುವ ವಿಸ್ತಾರವಾದ ಸಾಮರ್ಥ್ಯವನ್ನು ಉಪಯೋಗಿಸುವುದು. ಗುರಿಯು ಮುಂದಿನ ೧೫ ವರ್ಷಗಳೊಳಗೆ ನಮ್ಮ ಕೃಷಿ ಉತ್ಪಾದನೆಯನ್ನು ದ್ವಿಗುಣಗೊಳಿಸಬೇಕು. ಅಂದರೆ ವಾರ್ಷಿಕವಾಗಿ ೪.೭% ನ ಸರಾಸರಿ ಬೆಳವಣಿಗೆಯ ದರವನ್ನು ಪಡೆಯಬೇಕು. ಈ ಬೆಳವಣಿಗೆಯ ದರವನ್ನು ಸಾಧಿಸುವುದು ಕಷ್ಟವೇನಲ್ಲ. ೧೯೭೯-೮೧ ಮತ್ತು ೧೯೮೬-೮೮ರ ನಡುವೆ ನಮ್ಮ ನೆರೆ ದೇಶಗಳಾದ ಪಾಕಿಸ್ತಾನ (೪.೯೨%), ಚೀನಾ (೪.೯೪%) ಮತ್ತು ಬರ್ಮಾ (೪.೯೮%) ಹೆಚ್ಚಿನ ಬೆಳವಣಿಗೆಯ ದರದಲ್ಲಿ ಇವೆ. ಭಾರತವು ಏಕೆ ಹಿಂದೆ ಬಿದ್ದಿದೆ ಎನ್ನುವುದಕ್ಕೆ ಒಂದೇ ಕಾರಣ, ಇತರ ದೇಶಗಳಿಗಿಂತ ನಮ್ಮಲ್ಲಿನ ಕೃಷಿಗೆ ಬಂಡವಾಳದ ಕೊರತೆ ಇದೆ".

## ೬. ಗ್ರಾಮೀಣ ಬೆಳವಣಿಗೆ ಕೇಂದ್ರಗಳ ಅಭಿವೃದ್ಧಿ :

ಪ್ರತಿ ೩೦೦ ಚದರ ಮೀಟರ್ ದೂರಕ್ಕೆ, ಗ್ರಾಮೀಣ ಬೆಳವಣಿಗೆಯ ಕೇಂದ್ರವನ್ನು ಒದಗಿಸಬೇಕು. ಇವುಗಳಲ್ಲಿ ಅಭಿವೃದ್ಧಿಯ ಕನಿಷ್ಟ ೪ ಅಂಶಗಳಾದರೂ ಇರಬೇಕು. ೧. ಪೂರ್ಣವಾಗಿ ಅಭಿವೃದ್ಧಿಯಾಗಿರುವ ಒಂದು ಪ್ರಾಥಮಿಕ ಶಾಲೆ. ೨. ಆಸ್ಪತ್ರೆಯ ಸೌಕರ್ಯಗಳುಳ್ಳ ಗ್ರಾಮೀಣ ಔಷಧಾಲಯ. ೩. ಗ್ರಾಮೀಣ ಬ್ಯಾಂಕಿನ ಒಂದು ಶಾಖೆ. ೪. ಆಹಾರ ಧಾನ್ಯಗಳು ಮತ್ತು ಕೃಷಿ ಹಿಡುವಳಿಗಳಿಗೆ ಒಂದು ವಿವಿಧೋದ್ದೇಶ ಸರಬರಾಜು ಮಳಿಗೆ.

ಈ ಸಂಸ್ಥೆಗಳಿಗೆ ಸರಕಾರೀ ಸಾರಿಗೆಯನ್ನು ಒದಗಿಸಬೇಕು. ಅದು ಗಾಮೀಣ ಬಡಜನರಿಗೆ ತಮ್ಮ ಮನೆಯಿಂದ ಬೆಳವಣಿಗೆಯ ಕೇಂದ್ರಗಳಿಗೆ ನಿರ್ದಿಷ್ಟ ದಿನಗಳಲ್ಲಿ ಹೋಗಿ ಬರುವಂತಿರಬೇಕು.

## ೭. ಸಬ್ಸಿಡಿ ಯೋಜನೆಯನ್ನು ನಿಲ್ಲಿಸುವುದು :

ಎಸ್‌ಕಾಫ್ ಪ್ರಕಟಣೆಯಾದ 'ಗ್ರಾಮೀಣ ಬಡವರು' ೧೯೮೫ನ, ಅಂತಿಮ ಪ್ಯಾರಾದಲ್ಲಿ ಸಬ್ಸಿಡಿ ಯೋಜನೆ ಬಗ್ಗೆ ಈ ಕೆಳಗಿನಂತೆ, ಟೀಕೆ ಮಾಡಿದೆ. "ಅಸಾಧ್ಯವಾದ ಬಡತನದ ಚಕ್ರದಲ್ಲಿ ಸಿಕ್ಕಿ ನರಳುತ್ತಿರುವ ಲಕ್ಷಾಂತರ ಜನರ ಸಮಸ್ಯೆಯನ್ನು ರಾಷ್ಟ್ರಗಳು ಎದುರಿಸುತ್ತಿರುವಾಗ ಅವರ ಕಷ್ಟವು ಪರಿಹರಿಸಲಾಗದ್ದು, ಎಂದು ಕಂಡು ಬರುತ್ತದೆ. ವಾಸ್ತವವಾಗಿ ಈ ಜನರಿಗೆ ಸಾಕಷ್ಟು ಸರಕಾರದ ಸಹಾಯವನ್ನು ಒದಗಿಸುವುದು, ಖಂಡಿತವಾಗಿ ಪ್ರಗತಿಪರ ದೇಶಗಳ ಕೈಯಲ್ಲಿ ಇರುವ ಹಣಸಂಪನ್ಮೂಲ ಸಾಕಾಗುವುದಿಲ್ಲ. ಹಾಗೆಯೇ ವಿದೇಶೀ ಸಹಾಯವೂ ಕೂಡಾ ಇದಕ್ಕೆ ಉತ್ತರವನ್ನು ಕೊಡಲಾಗುವುದಿಲ್ಲ. ಏಕೆಂದರೆ ಅಂತಹ ಸಹಾಯಗಳ ದಕ್ಷ ಉಪಯೋಗ ಮಾಡಿಕೊಳ್ಳುವುದಕ್ಕೆ ಅನೇಕ ಸಾರಿ ಸಾಮರ್ಥ್ಯವಿರುವುದಿಲ್ಲ. ಅಥವಾ ಕೆಲವು ಸಂದರ್ಭದಗಳಲ್ಲಿ ಇರುವಂತೆ, ಸಹಾಯ ಪಡೆಯಲು ತೀವ್ರ ಆಸಕ್ತಿ ತೋರಿಸಿದರೂ ಅದು ಗುರಿ ಗುಂಪುಗಳನ್ನು ತಲುಪುವಷ್ಟರಲ್ಲಿ ಮುಗಿದಿರುತ್ತದೆ. ಇಂತಹ ಸಂದರ್ಭಗಳಲ್ಲಿ ಅನುದಾನಕ್ಕೆ ಬದಲಾಗಿ ಸಾಲ ಬಂಡವಾಳವನ್ನು ಉಪಯೋಗಿಸಿ, ಬಡವರು ಆರ್ಥಿಕವಾಗಿ ಮೇಲೆ ಬರುವ ಕಾರ್ಯಕ್ರಮಗಳು ಒಪ್ಪಿಕೊಳ್ಳಬಹುದಾದ ಪರ್ಯಾಯವಾಗಿದೆ. ಅದೃಷ್ಟವಶಾತ್, ಎಸ್. ಎಫ್. ಡಿ.ಪಿಯು ಈ ವಿಧವು ಸಾಧ್ಯವೆಂದು ತೋರಿಸಿರುವುದಲ್ಲದೇ, ಗುರಿ ಗುಂಪಗಳು ಚೆನ್ನಾಗಿ ಸ್ವಾಗತಿಸಿವೆ. ಇವರು ಹಿಂದೆ ಹೆಚ್ಚು ಪೋಷಕವಾಗಿದ್ದ ಕಾರ್ಯಕ್ರಮಗಳ ಫಲವನ್ನು ಅನುಭವಿಸುತ್ತಿದ್ದರು. ಇದರಿಂದಾಗಿ ಅವರುಗಳು ಸರಕಾರದ ಮೇಲೆ ಹೆಚ್ಚು ಅವಲಂಬಿತರಾದರೇ ಹೊರತು, ಸ್ವಾವಲಂಬನಗೆ ಮನಸ್ಸು ಮಾಡಲಿಲ್ಲ ಅದು ಈಗಿನ ಪರಿಸ್ಥಿತಿಯಲ್ಲಿ ಅನಿವಾರ್ಯ."

## ೮. ಗ್ರಾಮೀಣ ಅಭಿವೃದ್ಧಿ ಕಾರ್ಯದಲ್ಲಿ ಮೂಲಭೂತ ಗ್ರಾಮೀಣ ಸಂಸ್ಥೆಗಳ ಬೆಂಬಲ ಪಡೆಯುವುದು :

ಕಳೆದ ೫೦ ವರ್ಷಗಳಲ್ಲಿ ಸರಕಾರವು ಗ್ರಾಮ ಮಟ್ಟದಲ್ಲಿ ಮೂರು ಮೂಲಭೂತ ಸಂಸ್ಥೆಗಳನ್ನು ಅಭಿವೃದ್ಧಿಪಡಿಸುವುದರಲ್ಲಿ ತುಂಬಾ ಹಣವನ್ನು ವೆಚ್ಚಮಾಡಿದೆ. ಈ ಮೂರು ಮೂಲಭೂತ ಸಂಸ್ಥೆಗಳು-ಶಾಲೆಗಳು, ಪಂಚಾಯತಿಗಳು ಮತ್ತು ಸಹಕಾರ ಸಂಘಗಳು. ಈಗ ಹಳ್ಳಿಗಳಲ್ಲಿ ಗ್ರಾಮೀಣ ಅಭಿವೃದ್ಧಿ ಕಾರ್ಯವನ್ನು ಮಾಡಲು ಈ ಸಂಸ್ಥೆಗಳ ಸೇವೆಗಳನ್ನು ಸಾಕಷ್ಟು ಉಪಯೋಗಿಸುತ್ತಿಲ್ಲ. ಈ ಸಂಸ್ಥೆಗಳ ಕಾರ್ಯಸ್ಥಳವು ಹಳ್ಳಿಗಳಲ್ಲಿದ್ದು, ಅವುಗಳಲ್ಲಿ ಸಾಕಷ್ಟು ಸಿಬ್ಬಂದಿ ಇದ್ದು, ಅವರು ಗ್ರಾಮೀಣ ಜನತೆಯೊಡನೆ ಹೆಚ್ಚು ಸಂಪರ್ಕ ಹೊಂದಿರುತ್ತಾರೆ. ಅಭಿವೃದ್ಧಿ ಕಾರ್ಯಗಳಲ್ಲಿ ಈ ಮೂಲಭೂತ ಸಂಸ್ಥೆಗಳನ್ನು ಉಪಯೋಗಿಸುವ ಮೊದಲಿನ ಸಿದ್ಧಾಂತವು ಉಪಯೋಗಿಸಲ್ಪಟ್ಟಿಲ್ಲ. ಅದರ ಪರಿಣಾಮವಾಗಿ, ಗ್ರಾಮೀಣ ಅಭಿವೃದ್ಧಿ ಕಾರ್ಯಗಳಲ್ಲಿ ಈ ಸಂಸ್ಥೆಗಳು, ನೇರವಾಗಿ ತೊಡಗಿಕೊಂಡಿಲ್ಲ. ಗ್ರಾಮಸಭೆಗಳನ್ನು ನಡೆಸುವುದರಲ್ಲಿ, ಸಾಮಾಜಿಕ ಸರ್ವೇಕ್ಷಣ ಮಾಡುವುದರಲ್ಲಿ, ಸೇವೆಗಳನ್ನು ಒದಗಿಸುವುದರಲ್ಲಿ, ಗ್ರಾಮೀಣ ಬಡಜನರಿಗೆ ಸಹಾಯ ಮಾಡುವುದರಲ್ಲಿ, ಶಿಕ್ಷಣ ಕಾರ್ಯದಲ್ಲಿ, ವಿಸ್ತರಣಾ ಸೇವೆಗಳಿಗೆ ಸಹಾಯ ಮಾಡುವುದರಲ್ಲಿ, ತರಬೇತಿ ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುವುದರಲ್ಲಿ ಮತ್ತು ಹಳ್ಳಿಗಳನ್ನು ಭೇಟಿಮಾಡುವುದರಲ್ಲಿ ಈ ಸಂಸ್ಥೆಗಳು ಮುಖ್ಯ ಪಾತ್ರವಹಿಸಬಹುದು. ಗಾಮೀಣ ಅಭಿವೃದ್ಧಿ ಕಾರ್ಯದಲ್ಲಿ ಈ ಸಂಸ್ಥೆಗಳ ಸಕ್ರಿಯ ಬೆಂಬಲವನ್ನು ಪಡೆದುಕೊಳ್ಳಬೇಕು.

## ೯. ಯಾವುದೇ ಒಳ್ಳೆಯ ಕೌಶಲ್ಯಕ್ಕೆ ಗ್ರಾಮೀಣ ಬಡಜನರಿಗೆ ರಕ್ಷಣೆ ಒದಗಿಸುವುದು ಅತ್ಯಗತ್ಯ :

ಗ್ರಾಮೀಣ ಬಡಜನತೆ ತಂತ್ರಜ್ಞಾನದಲ್ಲಿ ಏನಾದರೂ ಆಪತ್ತು ಇದೆ ಎಂದಾದರೆ ವರಮಾನ ನೀಡುವ ಹೊಸ ಯೋಜನೆಗಳ ಬಗ್ಗೆ ಆಕರ್ಷಿತರಾಗುವುದಿಲ್ಲ. ಹಾಗಾಗಿ ಗ್ರಾಮೀಣ ಬಡವರ ವರಮಾನವನ್ನು ಉತ್ತಮಪಡಿಸುವುದಕ್ಕೆ ಮುಖ್ಯವಾದುದು ಏನೆಂದರೆ ಅನಿಶ್ಚಿತತೆಯನ್ನು ಕಡಿಮೆಮಾಡಲು ಮತ್ತು ಆಪತ್ತನ್ನು ತಡೆದುಕೊಳ್ಳುವುದಕ್ಕೆ, ಗ್ರಾಮೀಣ ಬಡಜನರ ಸಾಮರ್ಥ್ಯವನ್ನು ಹೆಚ್ಚಿಸುವುದಕ್ಕೆ ರಕ್ಷಣಾಜಾಲಗಳನ್ನು ಒದಗಿಸುವುದು, ಸರಕಾರದ ನೀತಿಯಾಗಿರಬೇಕು. ಇದರಲ್ಲಿ ಗಮನಿಸಬೇಕಾದ ಮುಖ್ಯ ಅಂಶವು ವರಮಾನ ಹೆಚ್ಚಿಸುತ್ತಿರುವ ತಂತ್ರಜ್ಞಾನದಿಂದ ಅನುಸರಿಸಲು ಬಡಜನರ ಸಕ್ರಿಯ ಭಾಗಿತ್ವಕ್ಕೆ ಸಾಲಸಿಗುವ ಸೌಲಭ್ಯ ಒದಗಿಸಿದರೆ ಮಾತ್ರ ಸಾಲದು. ಗ್ರಾಮೀಣ ಬಡವರ ಅಭಿವೃದ್ಧಿ ಯೋಜನೆಗಳಿಗೆ ಯಾವುದೇ ಪರಿಣಾಮಕಾರಿ ಕೌಶಲ್ಯವನ್ನು ಉಪಯೋಗಿಸುವಾಗ, ಜಾಗರೂಕವಾಗಿ ಈ ವಿಷಯವನ್ನು ಪರೀಕ್ಷಿಸಿ ನಂತರ ವಿಮೆ, ಆಪತ್ತುರಹಿತ ತಂತ್ರಜ್ಞಾನ, ಬೆಲೆಯ ಮೇಲೆ ಪರಿಣಾಮ ಮತ್ತು ಕೊಳ್ಳುವ ಬೆಲೆಯ ಮೇಲೆ ಪರಿಣಾಮ ಬೀರುವ ತಂತ್ರಜ್ಞಾನದಿಂದ ರಕ್ಷಣಾ ಜಾಲವನ್ನು ಅಗತ್ಯವಾಗಿ ಒದಗಿಸುವುದರಿಂದ ಅನಿಶ್ಚಿತತೆಗಳು ಮತ್ತು ಕೊಳ್ಳುವ ಬೆಲೆಯ ಮೇಲೆ ಪರಿಣಾಮ ಬೀರಿ ಉತ್ಪನ್ನವನ್ನು ಮಾರಾಟ ಮಾಡುವುದರಲ್ಲಿ ಆಪತ್ತು ಬರದಂತೆ ಮಾಡಬಹುದು.

ಖುಷ್ಕಿರೀತಿಯ ಕೃಷಿ ಪ್ರದೇಶಗಳಲ್ಲಿ ರಸಗೊಬ್ಬರಗಳ ಉಪಯೋಗವೂ ಕೂಡಾ ಯಾವುದೇ ಕಾಲದಲ್ಲಿ ಉಂಟಾಗಬಹುದಾದ ಬರಗಾಲ ಪರಿಸ್ಥಿತಿಯಿಂದ ಆಪತ್ತು ಉಂಟಾಗುತ್ತದೆ. ಶ್ರಮದ ತೀವ್ರತೆ ಇರುವ ತಂತ್ರಜ್ಞಾನ, ಕಾರ್ಯನಿರತ ಬಂಡವಾಳ ಹೆಚ್ಚಾಗಿ ಬೇಕಾಗುತ್ತದೆ. ಕ್ರಿಮಿಗಳು ಮತ್ತು ರೋಗಗಳಿಂದ ಆಪತ್ತು ಬಂದು ಇಳುವರಿ ಮತ್ತು ಉತ್ಪಾದನೆಯ ಅಸ್ಥಿರತೆ ಹೆಚ್ಚಾಗುತ್ತದೆ. ಹಾಗಾಗಿ ಕಾಲಾನುಕಾಲಕ್ಕೆ ಗ್ರಾಮೀಣ ಬಡವರು ಶ್ರಮದ ತೀವ್ರತೆ ಇರುವ ಉದ್ಯಮವನ್ನು ಕೈಗೊಳ್ಳುವುದಿಲ್ಲ. ಹಾಗ ಮೇಲ್ನೋಟಕ್ಕೆ ನೋಡಿದರ ಈ ಯೋಜನೆಗಳು ಅವರಿಗೆ ಅನುಕೂಲವಾಗಿದೆ ಎಂದು ಕಾಣಬಹುದು. ಅಂತಹ ಸಂದರ್ಭಗಳಲ್ಲಿ ಪಾಲಿಸಿಗಳ (ನೀತಿ) ಅಗತ್ಯಗಳಿಗೆ ಸಾಕಷ್ಟು ರಕ್ಷಣಾ ಜಾಲಗಳನ್ನು ಈ ಕೆಳಗಿನ ರೀತಿಯಲ್ಲಿ ಒದಗಿಸಬೇಕು.

೧. ಹವಾಮಾನ ವೈಪರೀತ್ಯಗಳನ್ನು ಸಹಿಸಿಕೊಳ್ಳುವ, ಶ್ರಮದ ತೀವ್ರತೆ ಇರುವ ಉದ್ಯಮಗಳ ಅನಿಶ್ಚಿತತೆಯನ್ನು ತೊಡೆದುಹಾಕಲು ಸಂಶೋಧನೆ ಮಾಡಿ ಅವರಿಗೆ ತಿಳಿಸಬೇಕು. ೨. ಸಾಲ ಸೌಲಭ್ಯಗಳನ್ನು ಉತ್ತಮ ಪಡಿಸುವುದು, ಅಂತಹ ಉದ್ಯಮಗಳ ಹೆಚ್ಚು ಆಪತ್ತಿನ ಸ್ಥಿತಿಗಳನ್ನು ಎದುರಿಸಲು ಇವರಿಂದ ಸಹಾಯವಾಗುವುದು. ೩. ಬೆಲೆ ಏರಿಳಿತಗಳನ್ನು ಮತ್ತು ಆಪತ್ತುಗಳನ್ನು ಕಡಿಮೆಮಾಡಲು ಮಾರುಕಟ್ಟೆ ಮತ್ತು ಪರಿಷ್ಕರಣ ಸೌಲಭ್ಯಗಳನ್ನು ಕುರಿತು ನೋಬೆಲ್ ಪಾರಿತೋಷಕ ವಿಜೇತರಾದ ಅಮರ್ತ್ಯ ಸೇನ್(೧೯೯೮) ಈ ಕೆಳಗಿನ ಪದಗಳಲ್ಲಿ ರಕ್ಷಣಾ ಬಲಗಳ ಅವಕಾಶವನ್ನು ಒತ್ತಿ ಹೇಳುತ್ತಾರೆ. "ಗ್ರಾಮೀಣ ಬಡವರಿಗೆ ರಕ್ಷಣಾಬಲಗಳನ್ನು ಒದಗಿಸದೇ ಆರ್ಥಿಕ ಅಭಿವೃದ್ಧಿಯು ಅರ್ಥಹೀನವಾದದ್ದು".

## ೧೦. ಎಲ್ಲ ಹಂತಗಳಲ್ಲಿ ಸಮನ್ವಯ ಬಹುಮುಖ್ಯವಾದದ್ದು :

ರಾಷ್ಟ್ರೀಯ ಮತ್ತು ರಾಜ್ಯಮಟ್ಟಗಳಲ್ಲಿ ಗ್ರಾಮೀಣ ಅಭಿವೃದ್ಧಿಯ ಕಾರ್ಯಕ್ರಮಗಳ ಸಫಲವಾದ ಅನುಷ್ಠಾನಕ್ಕೆ ಬಲವಾದ ಸಮನ್ವಯ ಅಗತ್ಯ. ಕೇಂದ್ರ ಮಟ್ಟದಲ್ಲಿ ಒಬ್ಬ ವಿಶೇಷ ಸಮನ್ವಯಾಧಿಕಾರಿ ಬೇಕಾಗಿದ್ದು, ಗುರಿಗುಂಪುಗಳ ಸಂಪೂರ್ಣ ಜವಾಬ್ದಾರಿಯನ್ನು ಹೊಂದಿರುವುದಲ್ಲದೇ ರಾಷ್ಟ್ರ ಮತ್ತು ರಾಜ್ಯ ಪ್ರಯತ್ನಗಳ ಸಮನ್ವಯ ಮತ್ತು ರಾಷ್ಟ್ರೀಯ ಉಪ ಏಜನ್ಸಿಗಳ ಚಟುವಟಿಕೆಗಳ ಏಕೀಕರಣವನ್ನು ನೋಡಿಕೊಳ್ಳಬೇಕು. ಅಲ್ಲದೆ ಎಲ್ಲ ಇಲಾಖೆಗಳ ನೀತಿಗಳು ಗ್ರಾಮೀಣ ಅಭಿವೃದ್ಧಿ ಉದ್ದೇಶಗಳೊಂದಿಗೆ ಸಮವ್ಯಾಪಕವಾಗಿರುವಂತೆ ನೋಡಿಕೊಳ್ಳಬೇಕು. ಸ್ಥಳೀಯ ಮಟ್ಟದಲ್ಲಿ ಸಮನ್ವಯಕ್ಕೆ ಒತ್ತುಕೊಡಲಾಗಿದೆ. ಏಕೆಂದರೆ ಅನೇಕ ಕ್ಷೇತ್ರಗಳ ಕಾರ್ಯಕ್ರಮಗಳನ್ನು ಹೆಚ್ಚು ವಿಕೇಂದ್ರೀಕರಣಗೊಳಿಸುವ ಮೂಲಕ ಹೆಚ್ಚು ಪರಿಣಾಕಾರಿಯಾಗಿ ಅನುಷ್ಠಾನಗೊಳಿಸಬಹುದು ಎಂಬುದಕ್ಕೆ ಸಾಕಷ್ಟು ಸಾಕ್ಷ್ಯಗಳಿವೆ. ಸಂರಕ್ಷಿಸುವ ಅಭಿವೃದ್ಧಿ ಕಾರ್ಯ ವಿಧಾನಗಳಿಗೆ ಅಗತ್ಯವಾಗಿರುವ ಸಮುದಾಯ ತೊಡಗಿಕೊಳ್ಳುವಿಕೆಯು ಕೇಂದ್ರೀಯ ನಿಯಂತ್ರಣಕ್ಕಿಂತ ಸ್ಥಳೀಯ ನಿಯಂತ್ರಣದಿಂದ ಹೆಚ್ಚು ಅನುಕೂಲವಾಗುತ್ತದೆ. ವಿಶೇಷವಾದ ಅಂಶವೆಂದರೆ ಸ್ಥಳೀಯ ಸಂಸ್ಥೆಗಳ ಪ್ರತಿನಿಧಿಗಳು ನೋಡಿರುವಂತೆ ಮತ್ತು ಸ್ಥಳೀಯ ಅಧಿಕಾರಿಗಳು ಸಲಹೆ ಮಾಡಿರುವಂತೆ, ಸ್ಥಳೀಯ ಪ್ರದೇಶಗಳ ಸಮಸ್ಯೆಗಳನ್ನು ಸುಲಭವಾಗಿ ಸರಿಪಡಿಸಬಹುದು. ಕಾರ್ಯಕ್ರಮ ಮಟ್ಟದಲ್ಲಿ ಸಮನ್ವಯವು ಬಹುಮುಖ್ಯ. ಏಕೆಂದರೆ ವಿವಿಧ ಚಟುವಟಿಕೆಗಳಿಗೆ ಗ್ರಾಮೀಣಾಭಿವೃದ್ಧಿಯಲ್ಲಿ ಜವಾಬುದಾರಿಗಳನ್ನು ಸಾಲ ಸರಬರಾಜು ಮುಂತಾದ ವಿವಿಧ ಇಲಾಖೆಗಳಿಗೆ ವಹಿಸಲಾಗುತ್ತದೆ.

## ೧೧. ಸೇವೆಗಳು ಸಮೀಪದಲ್ಲಿಯೇ ದೊರೆಯಲು ಗ್ರಾಮೀಣ ಜನರಿಗೆ ಸಹಾಯವು ಕಡ್ಡಾಯವಾಗಬೇಕು :

ಗ್ರಾಮೀಣ ಬಡವರಿಗೆ ಅನೇಕ ವಿಧವಾದ ಸೇವೆಗಳನ್ನು ಒದಗಿಸುವುದಕ್ಕೆ ಅನೇಕ ವಿಧವಾದ ಸಂಸ್ಥೆಗಳನ್ನು ಸ್ಥಾಪಿಸುವುದರಿಂದ, ಸರ್ಕಾರದ ಜವಾಬ್ದಾರಿಯು ತೀರಿತು ಎಂಬ ನಂಬಿಕೆ ದೇಶದಲ್ಲಿದೆ. ಇದನ್ನು ಗಮನದಲ್ಲಿಟ್ಟುಕೊಂಡು, ಗ್ರಾಮೀಣ ಬಡಜನತೆಗೆ ಸಹಾಯಮಾಡಲು ಅನೇಕ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಉದಾಹರಣೆಗೆ ಗ್ರಾಮೀಣ ಬ್ಯಾಂಕ್‌ಗಳನ್ನು ಸ್ಥಾಪಿಸಲಾಗಿದೆ. ಹಾಗೆಯೇ ರೈತರ ಸೇವಾಸಂಘಗಳನ್ನು ಸ್ಥಾಪಿಸಲಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ನಾಗರಿಕರ ಹಕ್ಕು ಕೇಂದ್ರಗಳಿಗೆ ಬೇಕಾದ ವಸ್ತುಗಳನ್ನು ಸರಬರಾಜು ಮಾಡಲಾಗಿದೆ. ವಿಸ್ತರಣಾ ಸೇವೆಗಳನ್ನು ಕೂಡಾ ಸ್ಥಳೀಯ ಮಟ್ಟಗಳಲ್ಲಿ ಬಲಪಡಿಸಲಾಗಿದೆ. ಆದರೆ ಈ ಸಂಸ್ಥೆಗಳೆಲ್ಲಾ ಇದ್ದರೂ ಗ್ರಾಮೀಣ ಪರಿಸ್ಥಿತಿಯು ತೃಪ್ತಿಕರವಾಗಿ ಬದಲಾಗಿಲ್ಲ. ಗ್ರಾಮೀಣ ಬಡವರು ತಮ್ಮ ಸಹಾಯಕ್ಕೆ ಈ ವಿವಿಧ ಸಂಸ್ಥೆಗಳನ್ನು ಇನ್ನೂ ಸಂಪರ್ಕಿಸಿಲ್ಲ. ಇಲ್ಲಿ ಯುಕ್ತವಾಗಿರುವ ಅಂಶವೆಂದರೆ ಈ ಸೇವೆಗಳ ಜೊತೆಗೆ ಗ್ರಾಮೀಣ ಬಡವರಿಗೆ ಸಹಾಯವಾಗಲು ನಿರ್ವಹಣಾ ಸೇವೆಗಳೆಂದು ಕರೆಯಲ್ಪಡುವ ಒಂದು ವಿಶೇಷ ವಿಧವಾದ ಸೇವೆಯನ್ನು ಒದಗಿಸುವುದು ಅತಿ ಅಗತ್ಯ. ವಿಶ್ವಬ್ಯಾಂಕ್ "ಬಡತನ ೧೯೯೪" ಎಂಬ ತಮ್ಮ ಪ್ರಕಟಣೆಯಲ್ಲಿ ಹೀಗೆ ಹೇಳಿದೆ: "ಸಾಮಾನ್ಯವಾಗಿ ಸಾರ್ವಜನಿಕವಾಗಿ ಒದಗಿಸಿದ ಸರಕುಗಳು ಮತ್ತು ಇತರ ಸೌಲಭ್ಯಗಳು ಇತರ ಗುಂಪುಗಳಿಗಿಂತ ಬಡವರಿಗೆ ದೊರೆಯುವುದು ಕಷ್ಟ". ಒಟ್ಟಾರೆ, ಸರಕಾರಗಳು ಬಡವರನ್ನು

ಸಂಪರ್ಕಿಸುವುದರಲ್ಲಿ ವಿಫಲವಾಗಿವೆ. ನಗರ ಪ್ರದೇಶಗಳಲ್ಲಿ ಕೂಡಾ ಬಡ ನೆರೆಕೆರೆಗಳಿಗೆ, ತಮ್ಮ ನೆರೆಯ ಶ್ರೀಮಂತರಿಗಿಂತ ಸೇವೆಗಳು ಕಡಿಮೆಯಾಗಿ ದೊರೆಯುತ್ತದೆ. ಸೇವೆಗಳ ಸಾಮೀಪ್ಯ ಹೊಂದುವಿಕೆಗೆ ಗ್ರಾಮೀಣ ಬಡವರಿಗೆ ಸಹಾಯ ಮಾಡುವ ಕಾರ್ಯವು ಅಷ್ಟಾಗಿ ಗಮನ ಸೆಳೆದಿಲ್ಲ. ಕೂಂಬ್ಸ್ ಮತ್ತು ಅಹಮದ್ (೧೯೭೪) ಈ ವಿಷಯದ ಮೇಲೆ ಈ ಕೆಳಗಿನಂತೆ ಟೀಕೆ ಮಾಡಿದ್ದಾರೆ.

"ಗ್ರಾಮೀಣ ಕಡಿಮೆ ಅಭಿವೃದ್ಧಿಯ ಕಾರಣ ಹಾಗೂ ಲಕ್ಷಣಗಳೇನೆಂದರೆ ಸೇವೆಗಳ ಒದಗುವಿಕೆಗೆ ಮತ್ತು ಸರಬರಾಜಿಗೆ ಸೌಕರ್ಯಗಳಿಲ್ಲ ಅಥವಾ ಪರಿಣಾಮಕಾರಿಯಾಗಿ ಕೆಲಸ ಮಾಡುವುದಿಲ್ಲ. ಆದರೆ ಅವಕಾಶಗಳನ್ನು ಮಾಡಿಕೊಟ್ಟಾಗಲೂ ಪರಿಣಾಮಕಾರಿಯಾಗಿ ಕೆಲಸ ಮಾಡುವುದಿಲ್ಲ. ಏಕೆಂದರೆ ನಿರ್ವಹಣೆ ಮತ್ತು ಸಮನ್ವಯಕ್ಕೆ ಒಂದು ಆಡಳಿತ ಯಂತ್ರವಿಲ್ಲ. ಅದರಲ್ಲಿಯೂ ಸ್ಥಳೀಯ ಮಟ್ಟದಲ್ಲಿ ಇದು ಪೂರ್ಣವಾಗಿ ಇಲ್ಲ ಎಂದರೂ ಸರಿಯೆ. ಈ ನಿರ್ವಹಣೆಯ ವಿಷಯದಲ್ಲಿ ದೊಡ್ಡ ರೈತರಿಗೆ ಅನುಕೂಲವಿದೆ. ಸಣ್ಣರೈತರಿಗೆ ತಮ್ಮ ವಾಸಸ್ಥಳದಲ್ಲಿ ಸೇವೆಗಳು ಮತ್ತು ಸರಬರಾಜನ್ನು ನಿರ್ವಹಿಸುವುದು ಕಷ್ಟವಾಗುತ್ತದೆ. ಸರಕಾರವು ಇಂಜಿನಿಯರಿಂಗ್, ತಾಂತ್ರಿಕ, ಆರ್ಥಿಕ ಮತ್ತು ಸಾಮಾಜಿಕ ಸೇವೆಗಳನ್ನು ಒದಗಿಸುತ್ತಿವೆಯಾದರೂ ನಿರ್ವಹಣೆ ಸೇವೆಯಲ್ಲಿ, ಸೇವೆಯನ್ನು ಒದಗಿಸುವುದರಲ್ಲಿ ವಿಫಲವಾಗಿದೆ. ರೈತರ ಒಟ್ಟಾರೆ ಪರಿಸ್ಥಿತಿಯ ಸಮಗ್ರವಾದ ಮತ್ತು ಕ್ರಮವಾದ ಅಭಿಪ್ರಾಯದ ಕೊರತೆ ಇರುವುದರಿಂದ, ಪ್ರತಿಯೊಂದು ಗ್ರಾಮೀಣ ಬೆಂಬಲ ಸೇವೆಗಳನ್ನು ಸ್ವತಂತ್ರವಾದವುಗಳೂ ಮತ್ತು ತಮ್ಮದೇ ರೀತಿಯಲ್ಲಿ ನಡೆಯುತ್ತವೆಂದೂ ಭಾವಿಸಲಾಗಿದೆ. ಇವುಗಳನ್ನು ಬಂಧಿಸಲು ನಿರ್ವಹಣೆ ಸೇವೆಯ ಅಗತ್ಯವನ್ನು ಗುರುತಿಸಿಲ್ಲ. ಸಣ್ಣರೈತರಿಗೆ ನಿರ್ವಹಣಾ ಸೇವೆಗಳೊಡನೆ, ಸಹಭಾಗಿತ್ವ ಸಂಸ್ಥೆಗಳ ಅಭಿವೃದ್ಧಿಯು ತಮ್ಮ ಜೀವನಾಧಾರ ಜೀವನದಿಂದ ಹೊರಬಿದ್ದು, ಆಧುನೀಕರಿಸಿದ ಕೃಷಿ ಪ್ರಪಂಚದಲ್ಲಿರಲು ಅವಕಾಶವಾಗುತ್ತದೆ. ಆದ್ದರಿಂದ ಹೆಚ್ಚುಗಮನ ಮತ್ತು ಸಂಪನ್ಮೂಲಗಳುಳ್ಳ ಈ ಮಾರ್ಗವು ಅತ್ಯಂತ ಪ್ರಮುಖವಾದುದು ಎಂದು ನಾವು ಭಾವಿಸುತ್ತೇವೆ".

ಗ್ರಾಮೀಣ ಬಡವರಿಗೆ ನಿರ್ವಹಣಾ ಸೇವೆ(ಮ್ಯಾನೇಜ್ ಮೆಂಟ್)ಗಳನ್ನು ಒದಗಿಸುವುದು ಹೇಗೆಂದರೆ, ತರಬೇತಿ, ಸರಬರಾಜು, ಸೇವೆಗಳು, ಸಾಲಗಳು, ಸಬ್ಸಿಡಿಗಳ ಮೂಲಕ ಅಲ್ಲದೆ,ಉತ್ಪನ್ನದ ಪರಿಷ್ಕರಣ ಮತ್ತು ಮಾರುಕಟ್ಟೆಗೂ ಸಹಾಯ ಮಾಡುವುದು ಮುಂತಾದುವುಗಳಿಂದ.

### ೧೨. ಸರಕಾರ ಬೆಂಬಲಿತ ಯೋಜನೆಗಳಲ್ಲಿ ಪಾರದರ್ಶಕತೆಯನ್ನು ಜಾರಿಗೊಳಿಸುವುದು :

ಹಣದ ದುರುಪಯೋಗವನ್ನು ಕಡಿಮೆ ಮಾಡಲು ಮತ್ತು ಭ್ರಷ್ಟಾಚಾರವನ್ನು ಹೋಗಲಾಡಿಸಲು ಇದು ಅಗತ್ಯ. ಸಾಕಷ್ಟು ದೊಡ್ಡ ಪ್ರಮಾಣದ ಹಣವನ್ನು ಗ್ರಾಮೀಣ ಅಭಿವೃದ್ಧಿ ಕಾರ್ಯಗಳಿಗೆ ಮೀಸಲಿಟ್ಟಿದ್ದರೂ ಸರಿಯಾಗಿ ಉಪಯೋಗವಾಗುತ್ತಿಲ್ಲ ಮತ್ತು ಸರಕಾರದ ಹಣದ ದುರುಪಯೋಗದಿಂದ ಅನೇಕ ಭ್ರಷ್ಟಾಚಾರದ ಪದ್ಧತಿಗಳಿಗೆ ಎಡೆಮಾಡಿಕೊಟ್ಟಿದೆ. ಎಂದು ಸಾಮಾನ್ಯವಾಗಿ ಒಪ್ಪಿಕೊಳ್ಳಲಾಗಿದೆ. ಸಂಯುಕ್ತ ರಾಷ್ಟ್ರ ಸಂಸ್ಥೆಗಳಿಂದ ಪ್ರಾಯೋಜಿತವಾದ, ನವದೆಹಲಿಯಲ್ಲಿ ೧೯೬೭ರ ಅಕ್ಟೋಬರ್‌ನಲ್ಲಿ ನಡೆದ ರಾಷ್ಟ್ರಮಟ್ಟದ ಸಮಾಲೋಚನ ಚರ್ಚೆಯು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮದ ಕಾರ್ಯಗಳಲ್ಲಿ ಈ ದೋಷವನ್ನು ಎತ್ತಿ ತೋರಿಸಿದೆ. ಭ್ರಷ್ಟ ಪದ್ಧತಿಗಳಿಗೆ ಸಾಮಾನ್ಯ ಉದಾಹರಣೆಗಳು ಯಾವುವೆಂದರೆ ಜೀವಿಸಿಲ್ಲದಿರುವ ವ್ಯಕ್ತಿಗಳ ಹೆಸರನ್ನು ಹಾಜರಿಪಟ್ಟಿಯಲ್ಲಿ ಸೇರಿಸಿರುವುದು, ಮತ್ತು ಅಸ್ತಿತ್ವದಲ್ಲಿ ಇಲ್ಲದ ಕಂಪೆನಿಗಳಿಗೆ ಹಣಪಾವತಿಸುವುದು ಮುಂತಾದವು. ಇಂತಹ ಭ್ರಷ್ಟಪದ್ಧತಿಗಳನ್ನು ತಪ್ಪಿಸಲು ಅಗತ್ಯವಾದ ಕ್ರಮವೆಂದರೆ, ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಿಗೆ ವೆಚ್ಚ ಮಾಡಲಾದ ಸಾರ್ವಜನಿಕ ಹಣದ ಸರಕಾರಿ ದಾಖಲೆಗಳನ್ನು ಸಂಪೂರ್ಣವಾಗಿ ಪಾರದರ್ಶಕವಾಗಿ ಇಡುವುದು.

### ೧೩. ಗ್ರಾಮೀಣ ಅಭಿವೃದ್ಧಿಯಲ್ಲಿ ಮಹಿಳೆಯರಿಗೆ ಅಧಿಕಾರ ನೀಡುವುದು :

ಗ್ರಾಮೀಣ ಅಭಿವೃದ್ಧಿ ಕಾರ್ಯಗಳಲ್ಲಿ ಹೆಚ್ಚು ಪರಿಣಾಮಕಾರಿಯಾದ ಒಂದೇ ಒಂದು ದೊಡ್ಡ ಆಸೆ ಯಾವುದೆಂದರೆ, ಮಹಿಳೆಯರ ಮತ್ತು ಯುವಕರ ಪಾತ್ರವನ್ನು ಗುರುತಿಸುವುದು, ಗ್ರಾಮೀಣ ಬಡಮಹಿಳೆಯರ ಗುಂಪುಗಳನ್ನು ವ್ಯವಸ್ಥೆಗೊಳಿಸಲು ಮತ್ತು ಅವರಿಗೆ ಉತ್ತಮವಾಗಿ ಕೆಲಸ ಕಾರ್ಯಗಳಲ್ಲಿ ಭಾಗವಹಿಸಲು ಸಹಾಯವಾಗಿ ಹೆಚ್ಚಿನ ಕಾನೂನು ಸಹಾಯವನ್ನು ಒದಗಿಸುವುದು. ಸಮುದಾಯ ಮಟ್ಟದಲ್ಲಿ ಉತ್ತಮ ಸಹಭಾಗಿತ್ವ ಮತ್ತು ಅರ್ಥಪೂರ್ಣವಾಗಿ ತೊಡಗಿಸಿಕೊಳ್ಳುವುದರೆಡೆಗೆ ಹೆಚ್ಚು ಗಮನಕೊಡಬೇಕು. ಗ್ರಾಮೀಣ ಕುಟುಂಬಗಳಿಗೆ ಸೇರಿದ ಗ್ರಾಮೀಣ ಮಹಿಳೆಯರಿಗೆ ಅಧಿಕಾರ ನೀಡುವ ಕಾರ್ಯವಿಧಾನವನ್ನು ಚುರುಕುಗೊಳಿಸಲು ಕಾರ್ಯಪ್ರವೃತ್ತ ವಿಧಾನಗಳನ್ನು ಕಂಡುಹಿಡಿಯಬೇಕು.

●

# ಭೂಸುಧಾರಣೆ

ಎಚ್. ಸಿ. ನೀರಾವರಿ




ಮಾನವನಿಗೆ ನೀರು ಮತ್ತು ಗಾಳಿಯಷ್ಟೆ ಆಹಾರವು ಅತ್ಯಾವಶ್ಯಕ. "ಒಕ್ಕಲಿಗನು ಒಕ್ಕದಿದ್ದರೆ ಜಗವೆಲ್ಲ ಬಿಕ್ಕುವುದು". ಒಕ್ಕಲುತನವೇ ಮಾನವನ ನಾಗರಿಕತೆಯ ಪ್ರಥಮ ಕುರುಹು. "The hoary Civilization is but the agricultural surplus" (ಒಂದು ದೇಶದ ಕೃಷಿ ಉತ್ಪನ್ನದ ಹೆಚ್ಚುವರಿಯೇ ಆ ದೇಶದ ಮಹೋನ್ನತ ನಾಗರಿಕತೆ) ಎಂಬ ಖ್ಯಾತ-ಇತಿಹಾಸ ತಜ್ಞ ಎಚ್.ಜಿ. ವೆಲ್ಸ್ ಅವರ ನುಡಿ ತುಂಬಾ ಪ್ರಸ್ತುತ. "One who can grow two bades of grass grow where only one grew before is a greater politician than all the politicians put together."

ಸಮಾಜವಾದದ ತಳಹದಿಯ ಮೇಲೆ ದೇಶವನ್ನು ಕಟ್ಟಬೇಕೆಂಬ ಉದ್ದೇಶದ ಭಾರತದ ಭೂವ್ಯವಸ್ಥೆಯ ದೋಷಗಳನ್ನು ಕುರಿತು ಹೇಳುವಲ್ಲಿ ಆಸ್ತಿಯ ಅತಿ ಕೇಂದ್ರೀಕರಣ, ಕಡಿಮೆ ಭೂಉತ್ಪನ್ನತೆ, ಅಧಿಕ ಆರ್ಥಿಕ-ಸಾಮಾಜಿಕ ಅಸಮಾನತೆ ಇತ್ಯಾದಿಗಳಿದ್ದು ಇವನ್ನು ಹೋಗಲಾಡಿಸಲು ಭೂಸುಧಾರಣೆಯನ್ನು ಸಮಾನತೆಯ ಸಿದ್ಧಾಂತದ ಮೇಲೆ ರೂಪಿಸುವದು ಅವಶ್ಯಕ. ಸಮಾನತೆಯ ಸಿದ್ಧಾಂತದ ಮೇಲೆಯೇ ಭೂಪರಿಮಿತಿ ಶಾಸನ ಆಧಾರಿತವಾದರೆ ಅದರಿಂದ ಸಾಮಾಜಿಕ ನ್ಯಾಯ ಮತ್ತು ಆರ್ಥಿಕ ಪ್ರಗತಿ ಸಾಧಿಸಬಹುದು. ದೇಶದಲ್ಲಿ ಹಾಗೂ ರಾಜ್ಯದಲ್ಲಿ ಭೂವಿತರಣೆ ಸಮರ್ಪಕವಾಗಿಲ್ಲ. ರಾಷ್ಟ್ರ ಹಾಗೂ ರಾಜ್ಯ ಕೃಷಿ ಪ್ರಧಾನ ಮತ್ತು ಗ್ರಾಮೀಣ ಪ್ರಧಾನ ಶೇ. ೭೦ರಷ್ಟು ಜನ ಗ್ರಾಮೀಣ ಪ್ರದೇಶದಲ್ಲಿ ವಾಸ. ಹಾಗೆಯೇ ಮುಕ್ಕಾಲು ಪಾಲು ಜನ ಕೃಷಿಯನ್ನೇ ಆಶ್ರಯಿಸಿದ್ದಾರೆ. ಕೃಷಿ ಭೂಮಿಯ ಹಂಚಿಕೆಯ ತಾರತಮ್ಯವನ್ನು ಕೆಳಗಿನ ಅಂಕಿ ಅಂಶಗಳಿಂದ ನೋಡಬಹುದು. ಭೂಹಿಡುವಳಿ ಕಾಲಕಾಲಕ್ಕೆ ಬದಲಾವಣೆ ಆಗುತ್ತಿದ್ದರೂ, ವಿತರಣೆಯ ತಾರತಮ್ಯದಲ್ಲಿ ಹೆಚ್ಚು ಬದಲಾವಣೆ ಕಾಣುತ್ತಿಲ್ಲ. ದೇಶದಲ್ಲಿ ಕೈಕೊಂಡ ಎರಡನೆಯ ಕೃಷಿ ಗಣತಿ ೧೯೭೬-೭೭ರ ವರದಿ ೧೯೮೪ರಲ್ಲಿ ಲಭ್ಯವಾಗಿದೆ. ಅದರ ಪ್ರಕಾರ ದೇಶದಲ್ಲಿ ಒಂದು ಹೆಕ್ಟೇರ್‌ಗಿಂತ ಕಡಿಮೆ ಇದ್ದ ಹಿಡುವಳಿಗಳು ೫೪ ದಶಲಕ್ಷ. ಚಿಕ್ಕ ಹಿಡುವಳಿಗಳು (ಒಂದು ಮತ್ತು ಎರಡು ಹೆಕ್ಟೇರ್ ನಡುವಣದ್ದು) ೧೮.೬ ದಶಲಕ್ಷ. ಎರಡು ಮತ್ತು ನಾಲ್ಕು ಹೆಕ್ಟೇರ್ ನಡುವಣ ಹಿಡುವಳಿಗಳು ೧೪.೭೯ ದಶಲಕ್ಷ. ನಾಲ್ಕರಿಂದ ಹತ್ತು ಹೆಕ್ಟೇರ್ ಗಾತ್ರದ ಹಿಡುವಳಿಗಳು ೧೦.೦೬ ದಶಲಕ್ಷ. ಹತ್ತು ಹೆಕ್ಟೇರ್‌ಗಿಂತ ಹೆಚ್ಚಿನ ಗಾತ್ರದ ಹಿಡುವಳಿಗಳು ೩.೦೫ ದಶಲಕ್ಷ. ಮಧ್ಯಮ ಮತ್ತು ದೊಡ್ಡ ಹಿಡುವಳಿಗಳ ಸಂಖ್ಯೆ ಕಡಿಮೆ ಇದ್ದರೂ ಈ ಹಿಡುವಳಿಗಳು

> *ಆಸ್ತಿಯ ಅತಿ ಕೇಂದ್ರೀಕರಣ, ಕಡಿಮೆ ಭೂಉತ್ಪನ್ನತೆ, ಅಧಿಕ ಆರ್ಥಿಕ-ಸಾಮಾಜಿಕ ಅಸಮಾನತೆ ಇತ್ಯಾದಿಗಳಿದ್ದು ಇವನ್ನು ಹೋಗಲಾಡಿಸಲು ಭೂಸುಧಾರಣೆಯನ್ನು ಸಮಾನತೆಯ ಸಿದ್ಧಾಂತದ ಮೇಲೆ ರೂಪಿಸುವದು ಅವಶ್ಯಕ.*

ಒಳಗೊಂಡಿರುವ ಕ್ಷೇತ್ರ ತುಂಬಾ ಹೆಚ್ಚು. ಇದರ ವಿಶ್ಲೇಷಣೆಯನ್ನು ಕೆಳಗೆ ನೋಡಬಹುದು. ಒಟ್ಟು ಸಾಗುವಳಿದಾರರ ಶೇ. ೫ರಷ್ಟು ಮಾತ್ರ ಇರುವ ಅತಿದೊಡ್ಡ ಸಾಗುವಳಿದಾರರು ಒಟ್ಟು ಭೂಮಿಯ ಶೇ. ೩೦ರಷ್ಟು ಅಧಿಕ ಭಾಗದ ಒಡೆಯರು. ಶೇ. ೪೦ರಷ್ಟು ಅಧಿಕ ಸಂಖ್ಯೆಯಲ್ಲಿ ಇರುವ ಸಣ್ಣ ಹಿಡುವಳಿದಾರರು ಕೇವಲ ಶೇ. ೧೦ರಷ್ಟು ಭೂಮಿಯ ಭಾಗದ ಒಡೆಯರು. ಶೇ. ೨೦ರಷ್ಟು ಗ್ರಾಮೀಣ ಕುಟುಂಬಗಳಿಗೆ ಭೂಮಿಯೇ ಇಲ್ಲ.

ದೊಡ್ಡ ಹಿಡುವಳಿದಾರರಲ್ಲಿ ಪ್ರಮುಖರೆಂದರೆ ಜೋಡಿದಾರರು, ಜಾಗೀರ್ದಾರರು, ದೇಶಮುಖರು, ದೇಶಪಾಂಡೆಯವರು, ದೇಸಾಯಿಯವರು, ಜಮೀನ್ದಾರ ಗೌಡರು, ಶಾನಭಾಗರು, ಪಟೇಲರು ಇತ್ಯಾದಿ. ಇವರಲ್ಲಿ ಹೆಚ್ಚಿನವರು ಸ್ವಂತ ಬೇಸಾಯಗಾರರಲ್ಲ. ದೊಡ್ಡ ಜಮೀನ್ದಾರರಾಗಿದ್ದರೂ, ಕೃಷಿಯನ್ನು ಉಪಕಸಬು ಎಂಬಂತೆ ಪರಿಗಣಿಸಿದವರು. ಒಂದು ರೀತಿಯಲ್ಲಿ Absolute Land Lords ಇವರಿಂದ ಗೇಣಿ ಪದ್ಧತಿ ಜಾರಿಗೆ ಬಂದಿದೆ. ನಮ್ಮ ದೇಶ ಆಹಾರ ಬೆಳವಣಿಗೆಯಲ್ಲಿ ಶೀಘ್ರವೇ ಸ್ವಾವಲಂಬನೆ ಸಾಧಿಸದಿದ್ದುದಕ್ಕೆ ಇದೂ ಕೂಡ ಒಂದು ಕಾರಣ. "ಕೋಟಿ ವಿದ್ಯೆಗಳಲ್ಲಿ ಮೇಟಿ ವಿದ್ಯೆಯೇ ಮೇಲು" "ಉತ್ತಮ ಖೇತಿ (ಕೃಷಿ), ಮಧ್ಯಮ ವ್ಯಾಪಾರ, ಕನಿಷ್ಠ ನೌಕರಿ" ಮುಂತಾದ ನಾಣ್ಣುಡಿಗಳು ಕೇವಲ ಸಾಂಕೇತವಾಗಿ ಉಳಿದವಲ್ಲದೆ ವಾಸ್ತವಿಕ ಜೀವನದಲ್ಲಿ ಸರಕಾರಿ ನೌಕರಿ ಹಾಗೂ ವ್ಯಾಪಾರ ಪ್ರಮುಖ ಸ್ಥಾನ ಪಡೆದವು. ಅವಿದ್ಯಾವಂತರು, ಅನನುಭವಿಗಳು, ತರಬೇತಿ ಪಡೆಯದವರು ಒಕ್ಕಲುತನದ ಆಧಾರಸ್ತಂಭವಾದರು. ಹಸಿರುಕ್ರಾಂತಿಯಿಂದಾಗಿ ಸ್ವಲ್ಪ ಮಟ್ಟಿಗೆ ನಿಟ್ಟುಸಿರು ಬಿಡುವಂತಾಗಿದೆ.

ಭೂಹಿಡುವಳಿಯ ತಾರತಮ್ಯ ತೊಲಗಿ ಉಳುವವನೇ ಭೂ ಒಡೆಯನಾದಾಗ, ಅವರಿಗೆ ಭೂಮಿಯಲ್ಲಿ ನಿಜವಾದ ಆಸಕ್ತಿ ಹುಟ್ಟಿ, ಭದ್ರತೆಯ ಭಾವನೆಯು ಬಂದಾಗ ಹಾಗೂ ತನ್ನ ದುಡಿತಕ್ಕೆ ತಕ್ಕ ಪ್ರತಿಫಲ ದೊರೆಯಬಹುದೆಂಬ ಭರವಸೆ ಮೂಡಿದಾಗ, ಕೃಷಿ ಅರ್ಥಪೂರ್ಣವಾಗುತ್ತದೆ. ಕೃಷಿ ಉತ್ಪನ್ನ ಅಧಿಕವಾಗಿ ದೇಶವು ಆಹಾರ ಉತ್ಪನ್ನದಲ್ಲಿ ಸ್ವಾವಲಂಬಿಯಾಗುತ್ತದೆ. ಜೊತೆಗೆ ರೈತನ ಆರ್ಥಿಕ ಮತ್ತು ಸಾಮಾಜಿಕ ಸ್ಥಾನಮಾನಗಳು ಕೂಡ ಸುಧಾರಣೆ ಆಗುತ್ತವೆ.

ಕರ್ನಾಟಕ ರಾಜ್ಯ ರಚನೆ ಪೂರ್ವದಲ್ಲಿ, ಅದು ಬೇರೆ ಬೇರೆ ಪ್ರಾಂತ್ಯಗಳಲ್ಲಿ ಹರಿದು ಹಂಚಿಹೋಗಿದ್ದು ಸರಿಯಷ್ಟೆ. ಏಕೀಕರಣದ ಪೂರ್ವದಲ್ಲಿ ಆಯಾಯ ಪ್ರಾಂತ್ಯದಲ್ಲಿ ಭೂಸುಧಾರಣೆಯ ಸ್ವರೂಪ ಏನಿತ್ತು ಎಂಬುದನ್ನು ಸೂಕ್ಷ್ಮವಾಗಿ ಗಮನಿಸಬಹುದು.

ಆಗಿನ ಮುಂಬೈ ಕರ್ನಾಟಕ ಭಾಗದಲ್ಲಿ ೧೯೩೯ರ ಮುಂಬೈ ಲ್ಯಾಂಡ್ ರೆವೆನ್ಯೂ ಕೋಡ್ ಅಧಿನಿಯಮ ೮೩ರಲ್ಲಿ ಮಾತ್ರ ಭೂಧಣಿ ಮತ್ತು ಗೇಣಿದಾರ ಇವರ ಸಂಬಂಧವನ್ನು ಹೇಳಲಾಗಿತ್ತು. ೧೯೩೫ರ ಪ್ರಜಾಪ್ರತಿನಿಧಿ ಕಾಯ್ದೆಯನ್ವಯ ಅಸ್ತಿತ್ವಕ್ಕೆ ಬಂದ ಕಾಂಗ್ರೆಸ್ ಸರಕಾರ ೧೯೩೯ರಲ್ಲಿ ಮುಂಬೈ ಟೆನೆನ್ಸಿ ಕಾಯ್ದೆಯನ್ನು ಜಾರಿಗೆ ತಂದಿತು. ಅದರಲ್ಲಿಯ ಮುಖ್ಯಾಂಶಗಳೆಂದರೆ :

೧) ಗೇಣಿದಾರನಿಗೆ ಭದ್ರತೆ.

೨) ಭೂಧಣಿ ಮನಬಲ್ಲಂತೆ ಗೇಣಿ ಹಣ ವಸೂಲಿ ನಿರ್ಬಂಧನೆ. ಕೃಷಿ ಭೂಮಿಯ ಒಟ್ಟು ಉತ್ಪನ್ನದ ೧/೩ ಭಾಗ ಮತ್ತು ಬಾಗಾಯತ್ ಭೂಮಿಯ ಒಟ್ಟು ಉತ್ಪನ್ನದ ೧/೪ ಭಾಗ ಗೇಣಿ ಎಂದು ನಿಗದಿ ಇತ್ಯಾದಿ.

ಮುಂಬೈ ಸರಕಾರ ಪುನಃ ೧೯೪೮ರಲ್ಲಿ "ಮುಂಬೈ ಗೇಣಿ ಮತ್ತು ಕೃಷಿ ಭೂಮಿ ಕಾಯ್ದೆ" ಯನ್ನು ಜಾರಿಗೆ ತಂದಿತು. ಅದರ ಮುಖ್ಯಾಂಶಗಳು :

೧) ಗೇಣಿದಾರರನ್ನು ಸಾದಾಕುಳ, ಖಾಯಂ ಕುಳ, ಸುರಕ್ಷಿತ ಕುಳ ಎಂದು ವರ್ಗೀಕರಣ ಮತ್ತು ಅವರಿಗೆ ಸೂಕ್ತ ರಕ್ಷಣೆ.

೨) ೪೮ ಎಕ್ರೆಗಿಂತ ಹೆಚ್ಚುವರಿ ಭೂಮಿಯನ್ನು ಹೊಂದಿದ್ದ ಭೂಧಣಿ ಗೇಣಿ ಭೂಮಿಯನ್ನು ಬಿಡಿಸಿಕೊಳ್ಳದಂತೆ ನಿರ್ಬಂಧ.

೩) ಭೂಧಣಿ ಸಾಗುವಳಿ ಮಾಡದೆ ಇದ್ದರೆ ಅಂತಹ ಭೂಮಿಯನ್ನು ಸರಕಾರದ ವಶಕ್ಕೆ ತೆಗೆದುಕೊಂಡು ಸಾಗುವಳಿ ಮಾಡಿಸುವ ಏರ್ಪಾಡು.

೪) ಹಿಡುವಳಿದಾರರಲ್ಲದವರು ಕೃಷಿ ಭೂಮಿ ಕ್ರಯಕ್ಕೆ ನಿರ್ಬಂಧ.

೫) ಗೇಣಿ ಹಣವನ್ನು ೧/೬ಕ್ಕೆ ಇಳಿಸುವದು.

೬) ಕಂತಿನ ಮೇಲೆ ಗೇಣಿದಾರನು ಗೇಣಿ ಭೂಮಿಯನ್ನು ಖರೀದಿ ಮಾಡಲು ಅವಕಾಶ ಇತ್ಯಾದಿಗಳು.

ಎಲ್ಲದಕ್ಕೂ ಮುಖ್ಯವಾಗಿ ಮೇಲೆ ನಮೂದಿಸಿದ ಭೂಸುಧಾರಣಾ ಕಾಯ್ದೆಯನ್ನು ೧೯೫೫ರಲ್ಲಿ ತಿದ್ದುಪಡಿ ಮಾಡಿ ಮೊರಾರ್ಜಿ ದೇಸಾಯಿ ನೇತೃತ್ವದ ಸರಕಾರ ದಿನಾಂಕ ೧-೪-೧೯೫೭ರಿಂದ ಜಾರಿಗೆ ಬರುವಂತೆ 'ಉಳುವವನೇ ಭೂಮಿಯ ಒಡೆಯ' ಎಂದು ಘೋಷಿಸಿದ್ದು. ಹೀಗೆ ಉಳುವವನೇ ಭೂಮಿಯ ಒಡೆಯ ಎಂಬ ಕ್ರಾಂತಿಕಾರಿ ಕಾಯ್ದೆ ಜಾರಿಗೆ ತಂದ ಪ್ರಪ್ರಥಮ ರಾಜ್ಯ ಆಗಿನ ಮುಂಬೈ ರಾಜ್ಯ. ಆದರೆ ರಾಜ್ಯಗಳ ಪುರ್ನಘಟನೆಯಿಂದಾಗಿ ಮುಂಬೈ ಕರ್ನಾಟಕ ಭಾಗದ ರೈತರಿಗೆ ಇದರ ಪ್ರಯೋಜನ ದೊರಕಲಿಲ್ಲವೆಂಬುದು ಅಷ್ಟೇ ವಿಷಾದದ ಸಂಗತಿ.

ಆಗಿನ ಹೈದರಾಬಾದ್ ನಿಜಾಮ ಸರಕಾರ ಭೂ ಸುಧಾರಣಾ ಸಮಿತಿಯೊಂದನ್ನು ರಚಿಸಿ ಅದರಿಂದ ಸಲಹೆ ಮತ್ತು ಮಾರ್ಗದರ್ಶನ ಪಡೆಯಲು ಇಚ್ಛಿಸಿತು. ಆ ಸಮಿತಿ ೧೯೩೯ರ ಮುಂಬೈ ಭೂ ಸುಧಾರಣಾ ಕಾಯ್ದೆಯನ್ನು ಅನ್ವಯಿಸಿಕೊಳ್ಳುವಂತೆ ಶಿಫಾರಸ್ಸು ಮಾಡಿತು. ಆದುದರಿಂದ ೧೯೪೫ರ ಹೈದರಾಬಾದ್ ಕಾಯ್ದೆಯಲ್ಲಿ ಹೆಚ್ಚು ಕಡಿಮೆ ೧೯೩೯ರ ಮುಂಬೈ ಭೂಸುಧಾರಣಾ ಕಾಯ್ದೆಯಲ್ಲಿದ್ದ ಅವಕಾಶಗಳನ್ನೆ ಕಲ್ಪಿಸಲಾಗಿತ್ತು. ಸ್ವಾತಂತ್ರ್ಯ ನಂತರ ಹೈದರಾಬಾದ್ ಟೆನೆನ್ಸಿ ಅಂಡ್ ಅಗ್ರಿಕಲ್ಚರಲ್ ಲ್ಯಾಂಡ್ಸ್ ಆ್ಯಕ್ಟ್ ೧೯೫೦ ಜಾರಿಗೆ ಬಂದಿತು. ತದನಂತರ ಅದು ಒಂದೆರಡು ಸಾರಿ ತಿದ್ದುಪಡಿಗೆ ಒಳಗಾಯಿತು. ಅದರ ಮುಖ್ಯಾಂಶಗಳು :

೧) ಕುಟುಂಬದ ಹಿಡುವಳಿಯನ್ನು ನಿಗದಿಪಡಿಸಿತು.

೨) ಗೇಣಿ ಹಣ ಕಂದಾಯದ ೩ ಅಥವಾ ೪ ಪಟ್ಟು, ಹುಟ್ಟುವಳಿಯ ೧/೪ ಅಥವಾ ೧/೫ ನೇ ಭಾಗ ಎಂದು ನಿಗದಿಪಡಿಸಿತು.

೩) ಭೂಧಣಿ ಕುಟುಂಬ ಹಿಡುವಳಿಯ ೩ ಪಟ್ಟು ಭೂಮಿ ಮಾತ್ರ ಬಿಡಿಸಿಕೊಳ್ಳದ ನಿರ್ಬಂಧ. ಆದರೆ ಗೇಣಿದಾರನಿಗೆ ಅರ್ಧದಷ್ಟು ಬಿಡತಕ್ಕದ್ದು.

೪) ೫ ವರ್ಷಗಳ ನಂತರ ಗೇಣಿ ಭೂಮಿಯನ್ನು ಬಿಡಿಸಿಕೊಳ್ಳುವ ಹಕ್ಕು ನಷ್ಟ.

೫) ಮುಂದಿನ ಭೂಹಿಡುವಳಿ ಸಂಪಾದನೆ ಕೂಡ ಒಟ್ಟು ೩ ಕುಟುಂಬಗಳ ಹಿಡುವಳಿಯಷ್ಟನ್ನು ಮೀರಕೂಡದು ಇತ್ಯಾದಿ.

ಆಗಿನ ಮೈಸೂರು ರಾಜ್ಯ ೧೯೫೭ರ ಭೂಸುಧಾರಣಾ ಕಾಯ್ದೆಯ ಮೂಲಕ ಗೇಣಿ ಹಕ್ಕನ್ನು ಮೊಟಕುಗೊಳಿಸುವದನ್ನು ಸ್ಥಗಿತಗೊಳಿಸಿತು. ಅದರ ಪೂರ್ವದಲ್ಲಿ ಮೈಸೂರು ಲ್ಯಾಂಡ್ ರೆವೆನ್ಯೂ ಕೋಡ್ ೧೮೮೮ರ ಪ್ರಕಾರ ಭೂಧಣಿ ಮತ್ತು ಗೇಣಿದಾರ ಸಂಬಂಧವನ್ನು ವಿವರಿಸಲಾಗಿತ್ತು. ಅದರಲ್ಲಿ ಎರಡು ತರಹದ ಗೇಣಿದಾರರಿದ್ದರು.

೧) ಇನಾಮ ಗ್ರಾಮದಲ್ಲಿ ಕದಿಮ ಗೇಣಿದಾರರು ಇವರು ಕೇವಲ ಭೂಕಂದಾಯ ಮಾತ್ರ ಕೊಡುವುದು. ೨) ಇನಾಮ ಮತ್ತು ಸರಕಾರ ಎರಡೂ ಹಳ್ಳಿಗಳಲ್ಲಿ ಇರುವ ಖಾಯಂ ಗೇಣಿದಾರರು. ಸಂಸ್ಥಾನದ ವಿಲೀನೀಕರಣದ ನಂತರ ಮೈಸೂರು ಟೆನೆನ್ಸಿ ಆ್ಯಕ್ಟ್ ೧೯೫೨ ಜಾರಿಗೆ ಬಂದಿತು. ಅದರಲ್ಲಿಯ ಮುಖ್ಯಾಂಶಗಳು :

೧) ದಿನಾಂಕ ೧-೪-೧೯೫೧ರ ಪೂರ್ವದಲ್ಲಿ ೧೨ ವರ್ಷ ಭೂಮಿಯ ಕಬ್ಜೆಯಲ್ಲಿದ್ದ ಗೇಣಿದಾರರಿಗೆ ಹೆಚ್ಚು ಭದ್ರತೆಯನ್ನು ಕೊಟ್ಟು ಅಂತಹ ಭೂಮಿಯ ಕೆಲವು ಭಾಗವನ್ನು ಮಾತ್ರ ಭೂಧಣಿಗೆ ಬಿಡಿಸಿಕೊಳ್ಳಲು ಅನುಮತಿ ನೀಡಿತು.

೨) ಗೇಣಿ ಹಣ ಹುಟ್ಟುವಳಿ ಹಣದ ಅರ್ಧಕ್ಕಿಂತ ಹೆಚ್ಚಾಗಬಾರದು.

೩) ಭೂಮಿಯನ್ನು ಪಡ ಬೀಳಗೊಡಬಾರದು.

೪) ಕೃಷಿಯೇತರ ಚಟುವಟಿಕೆಗಳಿಗೆ ಉಪಯೋಗಿಸಕೂಡದು. ಪ್ಲೇಟ್ ಲಾವಣಿ ಕೊಡಕೂಡದು.

೫) ಗೇಣಿದಾರ ಸ್ವಂತ ಸಾಗುವಳಿ ಮಾಡತಕ್ಕದ್ದು ಇತ್ಯಾದಿ.

ಮದ್ರಾಸ್ ಪ್ರಾಂತ್ಯದಲ್ಲಿ "ಮದ್ರಾಸ್ ಕಲ್ಟಿವೇಟಿಂಗ್ ಟೆನೆಂಟ್ಸ್ ಪ್ರೊಟೆಕ್ಷನ್ ಆ್ಯಕ್ಟ್, ೧೯೫೫ ಮತ್ತು ಮದ್ರಾಸ್ ಕಲ್ಟಿವೇಟಿಂಗ್ ಟೆನೆಂಟ್ಸ್ (ಪೇಮೆಂಟ್ ಆಫ್ ಫೇರ್ ರೆಂಟ್) ಆ್ಯಕ್ಟ್, ೧೯೫೬ ಜಾರಿಯಲ್ಲಿದ್ದು ಅವುಗಳಲ್ಲಿಯ ಮುಖ್ಯಾಂಶಗಳು.

೧) ಗೇಣಿದಾರನನ್ನು ೩ ವರ್ಷಗಳವರೆಗೆ ಹೊರಹಾಕುವುದನ್ನು ಸ್ಥಗಿತಗೊಳಿಸಲಾಯಿತು.

೨) ಭೂಧಣಿಗೆ ಸ್ವಂತ ಸಾಗುವಳಿಗೆ ಕೆಲವು ಭಾಗವನ್ನು ಮಾತ್ರ ಹಿಂದೆ ಪಡೆದುಕೊಳ್ಳುವ ಅವಕಾಶ ಕಲ್ಪಿಸಲಾಯಿತು.

೩) ಗೇಣಿ ಹಣವನ್ನು ಶೇ. ೩೩ ೧/೩ ರಿಂದ ಶೇ. ೪೦ರವರೆಗೆ ಗೊತ್ತುಪಡಿಸಲಾಯಿತು, ಇತ್ಯಾದಿ.

ಇನ್ನು ಕೊಡಗಿನಲ್ಲಿ ದಿನಾಂಕ ೧೧.೩.೧೯೫೭ರ ಪೂರ್ವದಲ್ಲಿ ಭೂಸುಧಾರಣೆ ಕಾಯ್ದೆ ಇರಲಿಲ್ಲ.

ಇದು ರಾಜ್ಯಗಳ ಭಾಷಾವಾರು ಪುನರ್ ಘಟನೆ ಆಗುವವರೆಗೆ ಭೂಸುಧಾರಣೆಯ ಬಗ್ಗೆ ಇದ್ದ ವಾಸ್ತವಿಕ ಚಿತ್ರಣ. ಏಕೀಕರಣದ ನಂತರ ರಾಜ್ಯದಲ್ಲಿ ಏಕಸ್ವರೂಪದ ಕಾಯ್ದೆಯನ್ನು ತರುವ ದೃಷ್ಟಿಯಿಂದ ೧೯೫೭ರಲ್ಲಿ ಶಾಸಕರಾಗಿದ್ದ ಬಿ.ಡಿ. ಜತ್ತಿ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಲಾಯಿತು. ಬಿ.ಡಿ. ಜತ್ತಿಯವರು ಮುಂಬೈ ಮೊರಾರ್ಜಿ ದೇಸಾಯಿಯವರ ನೇತೃತ್ವದ ಸರಕಾರದಲ್ಲಿ ಪಾರ್ಲಿಮೆಂಟರಿ ಕಾರ್ಯದರ್ಶಿಯಾಗಿದ್ದುದನ್ನು ಇಲ್ಲಿ ಸ್ಮರಿಸಬಹುದು. ಜತ್ತಿ ಸಮಿತಿಯ ಕೇವಲ ನಾಲ್ಕು ತಿಂಗಳುಗಳಲ್ಲಿ ತನ್ನ ವರದಿಯನ್ನು ಸರಕಾರಕ್ಕೆ ಸಲ್ಲಿಸಿತು. ಸಮಿತಿಯ ಶಿಫಾರಸ್ಸುಗಳನ್ನು ಗಮನದಲ್ಲಿಟ್ಟುಕೊಂಡು ಜತ್ತಿ ನೇತೃತ್ವದ ಸರಕಾರ ದಿನಾಂಕ ೧೮.೧೧.೧೯೬೧ರಂದು ಭೂಸುಧಾರಣಾ ಮಸೂದೆಯನ್ನು ವಿಧಾನಮಂಡಲದಲ್ಲಿ ಮಂಡಿಸಿ ಭೂಸುಧಾರಣಾ ಕಾಯ್ದೆಯನ್ನು ಪಾಸು ಮಾಡಿತು. ಆದರೆ ಅದನ್ನು ಜಾರಿಗೆ ಕೊಟ್ಟದ್ದು ನಿಜಲಿಂಗಪ್ಪ ನೇತೃತ್ವದ ಸರಕಾರ, ದಿನಾಂಕ ೨-೧೦-೧೯೬೫ರಿಂದ. ವಾಸ್ತವಿಕವಾಗಿ ಈ ಕಾಯ್ದೆಗೆ ಚಾಲನೆ ದೊರೆತದ್ದು ಅರಸು ಸರಕಾರ ತಿದ್ದುಪಡಿ ಮಾಡಿ ದಿನಾಂಕ ೧-೩-೧೯೭೪ರಿಂದ ಜಾರಿಗೆ ಕೊಟ್ಟ ಮೇಲೆ ಮಾತ್ರ.

ದೇವರಾಜ ಅರಸು ಅವರು ಕರ್ನಾಟಕದಲ್ಲಿ ಭೂಸುಧಾರಣಾ ಕಾಯ್ದೆ ಅತ್ಯಂತ ಕ್ರಾಂತಿಕಾರಿ ಕಾಯ್ದೆ ಆಗುವುದರ ಹಾಗೂ ಅನುಷ್ಠಾನಗೊಳ್ಳುವುದರ ಹರಿಕಾರರೆಂದೇ ಹೇಳಬೇಕು. ದಿನಾಂಕ ೧-೩-೧೯೭೪ರ ತಿದ್ದುಪಡಿಯ ಮೂಲಕ ಎರಡು ಮಹತ್ವದ ಗುರಿಗಳನ್ನು ಸಾಧಿಸಲು ಉದ್ದೇಶಿಸಲಾಗಿತ್ತು. ೧) ಉಳುವವನೇ ಭೂ ಒಡೆಯನಾಗತಕ್ಕದ್ದು. ೨) ಕುಟುಂಬ ಹೊಂದಬಹುದಾದ ಭೂಹಿಡುವಳಿಯನ್ನು ನಿಗದಿಪಡಿಸಿ, ಹೆಚ್ಚುವರಿ ಭೂಮಿಯನ್ನು ಸರಕಾರದ ವಶಕ್ಕೆ ತೆಗೆದುಕೊಂಡು ಅದರಲ್ಲಿ ಶೇ. ೫೦ರಷ್ಟನ್ನು ಪ.ಜಾ. ಮತ್ತು ಪ.ಪಂ. ಗಳಿಗೆ ಸೇರಿದ ಭೂರಹಿತರಿಗೆ ಹಂಚಿಕೆ ಮಾಡುವುದು. ಇನ್ನುಳಿದ ಶೇ. ೫೦ ರಷ್ಟನ್ನು ಭೂರಹಿತ, ಕೃಷಿ ಕಾರ್ಮಿಕರಿಗೆ ವಿತರಿಸುವದು. ಇದು ಸುಲಭ ಸಾಧ್ಯವಾದ ಸಂಗತಿಯಾಗಿರಲಿಲ್ಲ. ಎರಡು ಕಾರಣಗಳಿಂದ ಭೂಮಾಲೀಕರು ತಮ್ಮ ಹಕ್ಕಿನ ಭೂಮಿಯನ್ನು ಸುಲಭವಾಗಿ ಬಿಟ್ಟುಕೊಡಲು ಒಪ್ಪಲಿಲ್ಲ. ಮೊದಲನೆಯದಾಗಿ ಅವರು ಭೂಮಿಯೊಂದಿಗೆ ಹೊಂದಿದ ಭಾವನಾತ್ಮಕ ಸಂಬಂಧ. ಎರಡನೆಯದಾಗಿ, ಭೂಮಾಲೀಕರು ಪ್ರಭಾವಿ ವ್ಯಕ್ತಿಗಳಾಗಿದ್ದು, ಅದು ಅವರ ಪ್ರತಿಷ್ಠೆಯ ಪ್ರಶ್ನೆಯಾಗಿತ್ತು.

ಮೇಲೆ ಹೇಳಿದ ಕ್ರಾಂತಿಕಾರಿ ಭೂಸುಧಾರಣಾ ಕಾಯ್ದೆಯ ಅನುಷ್ಠಾನದ ವಿವರಗಳು ಕೆಳಗಿನಂತಿವೆ :

**೧) ಉಳುವವನೇ ಭೂ ಒಡೆಯ** : ಕರ್ನಾಟಕ ಭೂಸುಧಾರಣಾ ಕಾಯ್ದೆಯ ಅಧಿನಿಯಮ ೪೪ರನ್ವಯ ಗೇಣಿ ಭೂಮಿಯು ದಿನಾಂಕ ೧-೪-೧೯೭೪ರಿಂದ ಜಾರಿಗೆ ಬರುವಂತೆ ರಾಜ್ಯ ಸರಕಾರಕ್ಕೆ ವರ್ಗಾವಣೆ ಹೊಂದಿ ಅದರ ವಶಕ್ಕೆ ಸೇರಲ್ಪಡುತ್ತದೆ. ಅದೇ ಕಾಯ್ದೆಯ ಅಧಿನಿಯಮ ೪೮ರನ್ವಯ ಭೂ ನ್ಯಾಯ ಮಂಡಳಿಗಳ ರಚನೆ. ಪ್ರತಿ ತಾಲ್ಲೂಕಿಗೂ ಒಂದು ಅಥವಾ ಒಂದಕ್ಕಿಂತ ಹೆಚ್ಚು ಭೂ ನ್ಯಾಯ ಮಂಡಳಿಗಳ ಅಸ್ತಿತ್ವ. ಈ ಭೂ ನ್ಯಾಯ ಮಂಡಳಿಗಳು ವಿಚಾರಣೆಯ ನಂತರ ಪ್ರತಿಯೊಬ್ಬ ಅರ್ಜಿದಾರನು ಅವನ ಅರ್ಜಿಯಲ್ಲಿ ನಮೂದಿಸಿದ ಭೂಮಿ ಗೇಣಿ ಭೂಮಿಯೇ ಅಥವಾ ಅಲ್ಲವೆ ಎಂಬುದನ್ನು ತೀರ್ಮಾನಿಸತಕ್ಕದ್ದು. ಗೇಣಿಭೂಮಿ ಎಂದು ತೀರ್ಮಾನಿಸಲ್ಪಟ್ಟ ಭೂಮಿಯನ್ನು ವಾಸ್ತವಿಕ ಅರ್ಜಿದಾರನ ಹೆಸರಿಗೆ ನೋಂದಾಯಿಸತಕ್ಕದ್ದು.

ರಾಜ್ಯದಲ್ಲಿ ಮೇಲೆ ಹೇಳಿದ ಪ್ರಕ್ರಿಯೆ ನಡೆದು ದಿನಾಂಕ ೧-೩-೧೯೭೪ರಿಂದ ಈವರೆವಿಗೂ ಭೂಸುಧಾರಣಾ ಕಾಯ್ದೆಯನ್ವಯ ಗೇಣಿದಾರರಿಂದ ಸಲ್ಲಿಸಲ್ಪಟ್ಟ ಒಟ್ಟು ಅರ್ಜಿಗಳು ೭,೯೯,೬೮೨. ಇದರ ಪೈಕಿ ಭೂಒಡೆಯರಾದವರ ಸಂಖ್ಯೆ ೫,೧೨,೮೦೨. ಗೇಣಿದಾರರಿಂದ ಸಲ್ಲಿಸಲ್ಪಟ್ಟ ಅರ್ಜಿಗಳಲ್ಲಿ ಒಳಗೊಂಡಿದ್ದ ಭೂ ವಿಸ್ತೀರ್ಣ ವಿವರ ಲಭ್ಯವಿಲ್ಲ. ದಕ್ಷಿಣ ಕನ್ನಡದಂತಹ ಜಿಲ್ಲೆಯಲ್ಲಿ ೫ ಸೆಂಟ್ಸ್ ಭೂಮಿಗೂ ಹಲವಾರು ಅರ್ಜಿದಾರರು ಭೂಒಡೆಯರಾಗಿದ್ದಾರೆ. ಅದು ಗ್ರಾಮದ ಆರ್ಥಿಕ ಉನ್ನತಿಗೆ ಯಾವ ರೀತಿಯಿಂದಲೂ ಸಹಾಯವಾಗದು.

೨) ಇನ್ನು ಹೆಚ್ಚುವರಿ ಭೂಮಿಯ ಘೋಷಣೆ ಮತ್ತು ವಿವರಣೆ ಪರಿಶೀಲಿಸಿದಾಗ ರಾಜ್ಯದಲ್ಲಿ ಒಟ್ಟು ೧,೬೪,೬೨೪ ಎಕರೆಗಳಷ್ಟು ಭೂಮಿಯನ್ನು ಹೆಚ್ಚುವರಿ ಭೂಮಿ ಎಂದು ಘೋಷಿಸಿದ್ದು, ಅದನ್ನು ೩೨,೬೧೮ ಅರ್ಹ ಫಲಾನುಭವಿಗಳಿಗೆ ವಿತರಿಸಲಾಗಿದೆ. ಲಭ್ಯವಿರುವ ಅಂಕಿ ಅಂಶಗಳನ್ನು ಕೆಳಗೆ ನಮೂದಿಸಿದ ಪಟ್ಟಿಯಿಂದ ಪರಿಶೀಲಿಸಿದಲ್ಲಿ ಇನ್ನೂ ಸ್ಪಷ್ಟವಾದ ಚಿತ್ರಣ ಸಿಗಬಹುದು.

## ಹೆಚ್ಚುವರಿ ಜಮೀನು ಹಂಚಿಕೆ ಹಾಗೂ ಗೇಣಿ ಅರ್ಜಿಗಳ ಬಗ್ಗೆ

| ಕ್ರ.ಸಂ. | ಜಿಲ್ಲೆಗಳು | ದಿನಾಂಕ ೧.೩.೭೪ ಅಂದರೆ ಭೂ ಸುಧಾರಣೆ ಕಾಯ್ದೆ ನಂತರ ಎಲ್ಲಾ ಜಿಲ್ಲೆಗಳಲ್ಲಿ ಬಂದ ಗೇಣಿದಾರರ ಅರ್ಜಿಗಳ ಸಂಖ್ಯೆ | ಹೀಗೆ ಅರ್ಜಿ ಹಾಕಿದ ಎಷ್ಟು ಗೇಣಿದಾರರಿಗೆ ಭೂಮಿ ದೊರಕಿದೆ? | ಭೂ ಸುಧಾರಣೆ ಕಾಯ್ದೆಯಿಂದ ದೊರೆತ ಹೆಚ್ಚುವರಿ ಭೂಮಿ ಎಷ್ಟು ? | ಎಷ್ಟು ಜನ ಫಲಾನುಭವಿಗಳಿಗೆ ಹಂಚಿಕೆಯಾಗಿದೆ? |
|---|---|---|---|---|---|
| ೧ | ೨ | ೩ | ೪ | ೫ ಎಕರೆಗಳಲ್ಲಿ | ೬ |
| ೧ | ಬೆಂಗಳೂರು ನಗರ | ೧೫,೪೯೪ | ೬,೪೭೦ | ೩೧೧೬.೩೨ | ೬ |
| ೨ | ಬೆಂಗಳೂರು ಗ್ರಾ. | ೪೬,೬೭೩ | ೧೬,೯೭೪ | ೨೬೯೭.೧೩ | ೧೪ |
| ೩ | ಬಿಜಾಪುರ | ೨೧,೧೪೫ | ೧೧,೩೭೭ | ೨೩,೨೭೮.೩೬ | ೪೭೩೨ |
| ೪ | ಬೀದರ್ | ೨,೦೧೭ | ೧,೬೪೧ | ೨೨೫೧.೧೫ | ೬೦೩ |
| ೫ | ಬಳ್ಳಾರಿ | ೧೬,೮೧೪ | ೬೪೭ | ೧೫,೬೯೯.೩೩ | ೪೯೯೯ |
| ೬ | ಗದಗ | ೧೧,೬೩೦ | ೬,೦೮೦ | ೪೧೪೯.೩೭ | ೯೭೯ |
| ೭ | ಶಿವಮೊಗ್ಗ | ೬೨,೦೭೧ | ೩೧,೩೬೯ | ೧,೬೯೪.೨೧ | ೪೦೪ |
| ೮ | ಉತ್ತರ ಕನ್ನಡ | ೯೯,೭೦೨ | ೮೦,೭೪೦ | ೧೭೩.೩೪ | ೭೮ |
| ೯ | ಕೊಪ್ಪಳ | ೧೦,೦೭೭ | ೩,೩೧೬ | ೬,೮೧೪.೨೧ | ೧೭೫೪ |
| ೧೦ | ಚಿತ್ರದುರ್ಗ | ೫೬೨೪ | ೧೯೭೯ | ೨೦೮೨.೦೯ | ೬೬೩ |
| ೧೧ | ದಕ್ಷಿಣ ಕನ್ನಡ | ೧,೦೫೯೪೨ | ೬೯೮೨೬ | ೨೨೧.೧೯ | ೮೩ |
| ೧೨ | ಕೊಡಗು | ೫೫೦೭ | ೧೬೭೦ | ೧೯೩.೪೫ | ೬೯ |
| ೧೩ | ರಾಯಚೂರು | ೧೩,೬೮೩ | ೧೩೮೭ | ೪೧೪೩೬.೩೨ | ೪೬೪೪ |
| ೧೪ | ಮಂಡ್ಯ | ೧೪,೮೩೩ | ೮೨೨೩ | ೫೬.೩೦ | ೩ |
| ೧೫ | ತುಮಕೂರು | ೧೮,೦೬೩ | ೬೯೫೩ | ೨೫೬೬.೧೦.೫ | ೬೨೮ |
| ೧೬ | ಬಾಗಲಕೋಟೆ | ೨೦,೪೫೪ | ೧೨,೯೨೬ | ೬೯೨೫.೧೧ | ೨೦೯೩ |
| ೧೭ | ಧಾರವಾಡ | ೧೮,೦೭೦ | ೫೪೮೯ | ೨೧೪೫.೦೬ | ೧೦೧೦ |
| ೧೮ | ಮೈಸೂರು | ೩೦,೮೮೭ | ೧೭,೧೦೨ | ೮೫೮.೧೦ | ೩೪೯ |
| ೧೯ | ದಾವಣಗೆರೆ | ೧೦,೫೮೭ | ೨೬೦೩ | ೮೫೭.೦೭ | ೨೬೦ |
| ೨೦ | ಗುಲ್ಬರ್ಗಾ | ೬೧,೨೬೫ | ೧೦,೮೮೧ | ೨೨೭೬೬.೩೫ | ೪,೪೬೯ |
| ೨೧ | ಬೆಳಗಾವಿ | ೮೦,೪೯೨ | ೫೩,೮೮೭ | ೧೮,೮೮೨.೩೨ | ೩೧೧೬ |
| ೨೨ | ಚಿಕ್ಕಮಗಳೂರು | ೧೯,೫೫೩ | ೧೦,೭೦೪ | ೬೪೬.೦೫ | ೨೧೮ |
| ೨೩ | ಹಾವೇರಿ | ೩೧,೧೩೧ | ೧೯,೬೦೭ | ೨೫೧೪.೩೯ | ೭೧೪ |
| ೨೪ | ಹಾಸನ | ೩೦,೬೪೩ | ೧೨,೪೧೪ | ೧೯೪೫.೧೩ | ೩೯೪ |
| ೨೫ | ಉಡುಪಿ | ೧,೧೧,೨೯೦ | ೯೮,೩೦೭ | ೨೩೬೩.೩೮ | ೩೯ |
| ೨೬ | ಕೋಲಾರ | ೩೬,೦೬೬ | ೧೬,೦೭೦ | ೪೩೬.೨೨ | ೨೫೭ |
| ೨೭ | ಚಾಮರಾಜನಗರ | ೧೧೨೫೯ | ೪೧೬೦ | ೪೨೨.೨೬ | ೪೦ |
| | ಒಟ್ಟು | ೭,೯೯,೬೮೨ | ೫,೧೨,೮೦೨ | ೧,೬೪,೬೨೪ | ೩೨,೬೧೮ |

(ಕೃಪೆ : ಕಂದಾಯ ಇಲಾಖೆ)

ಬೆಂಗಳೂರು ನಗರ ಜಿಲ್ಲೆಯಲ್ಲಿ ಅರ್ಜಿ ಸಲ್ಲಿಸಿದ ಗೇಣಿದಾರರ ಸಂಖ್ಯೆ ೧೫,೪೯೪. ಫಲಾನುಭವಿಗಳ ಸಂಖ್ಯೆ ೬,೪೭೦. ಹೆಚ್ಚುವರಿ ಭೂಮಿ ೩೧೧೬.೩೨ ಎಕ್ರೆ. ಫಲಾನುಭವಿಗಳ ಸಂಖ್ಯೆ ೬. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಅರ್ಜಿ ಸಲ್ಲಿಸಿದ ಗೇಣಿದಾರರ ಸಂಖ್ಯೆ ೪೬,೬೭೩. ಫಲಾನುಭವಿಗಳ ಸಂಖ್ಯೆ ೧೬,೯೭೪. ಹೆಚ್ಚುವರಿ ಭೂಮಿ ೨೬೯೭.೧೩ ಎಕ್ರೆ. ಫಲಾನುಭವಿಗಳ ಸಂಖ್ಯೆ ೧೪. ವಿಶಾಲ ಭೂಪ್ರದೇಶ ಹೊಂದಿದ್ದ ಅವಿಭಾಜ್ಯ ಬಿಜಾಪುರ ಜಿಲ್ಲೆಯಲ್ಲಿ ಅರ್ಜಿ ಸಲ್ಲಿಸಿದ್ದ ಗೇಣಿದಾರರ ಸಂಖ್ಯೆ ೪೧,೫೯೯. ಫಲಾನುಭವಿಗಳ ಸಂಖ್ಯೆ ೨೪,೩೦೩, ಹೆಚ್ಚುವರಿ ಭೂಮಿ ೩೦,೨೦೩ ಎಕರೆ ಫಲಾನುಭವಿಗಳ ಸಂಖ್ಯೆ ೬೮೨೫. ಮಂಡ್ಯ ಜಿಲ್ಲೆಯಲ್ಲಿ ಹೆಚ್ಚುವರಿ ಭೂಮಿ ೫೬.೦೩ ಎಕರೆ ಫಲಾನುಭವಿಗಳ ಸಂಖ್ಯೆ ೩ ಇತ್ಯಾದಿ.

ಅರಸು ನೇತೃತ್ವದ ಸರಕಾರ ಈ ತಿದ್ದುಪಡಿ ತರುವ ಪೂರ್ವದಲ್ಲಿ ಮಾಡಿದ ಒಂದು ಅಂದಾಜಿನ ಪ್ರಕಾರ ಸರಕಾರಕ್ಕೆ ಸುಮಾರು ೫ ಲಕ್ಷ ಎಕರೆ ಹೆಚ್ಚುವರಿಯಾಗಿ ಸಿಗುವ ಸಾಧ್ಯತೆ ಇತ್ತು. ವಾಸ್ತವಿಕವಾಗಿ ೧,೬೪,೬೨೪ ಎಕರೆ ಭೂಮಿ ದೊರಕಿದ್ದು ಇದು ಅಂದಾಜಿನ ೧/೩ ಭಾಗಕ್ಕಿಂತಲೂ ಕಡಿಮೆ. ಅದೇ ರೀತಿ ಸುಮಾರು ೧೦ ಲಕ್ಷ ಗೇಣಿದಾರರನ್ನು ಭೂ ಒಡೆಯರನ್ನಾಗಿ ಮಾಡಲು ಅರಸು ಅವರು ಕನಸು ಕಂಡಿದ್ದರೆ ವಾಸ್ತವಿಕವಾಗಿ ೫,೧೨,೮೦೨ ಗೇಣಿದಾರರು ಭೂಒಡೆಯರಾಗಿದ್ದು, ಸುಮಾರು ಶೇ. ೫೦ರಷ್ಟು ಗುರಿ ಸಾಧನೆಯಾಗಿದೆ. ಭೂಸುಧಾರಣೆ ಶಾಸನವನ್ನು ಪ್ರಾಮಾಣಿಕವಾಗಿ ಜಾರಿಗೆ ತರಬೇಕೆನ್ನುವ ಶಾಸನದ ಉದ್ದೇಶವಿದ್ದರೂ ಸರಿಯಾದ ಭೂದಾಖಲೆಗಳ ಕೊರತೆಯಿಂದಾಗಿ ಅನುಕ್ರಮವಾಗಿ ಬಂದ ಸರಕಾರ ಹಾಗೂ ಭೂನ್ಯಾಯ ಮಂಡಲಿಗಳು ಅನುಷ್ಠಾನದಲ್ಲಿ ತೋರಿದ ನಿಷ್ಠೆ ಹಾಗೂ ದಕ್ಷತೆಯ ಕೊರತೆಯಿಂದಾಗಿ ನಿರೀಕ್ಷಿಸಿದ ಫಲ ದೊರೆತಿಲ್ಲ.

ಬಲಿಷ್ಠ, ಪ್ರಭಾವಿ ಭೂಮಾಲೀಕನನ್ನು ಗ್ರಾಮೀಣ ಅವಿದ್ಯಾವಂತ, ಬಡ, ಶಕ್ತಿಹೀನ ಹಾಗೂ ಯಾವುದೇ ಸಂದರ್ಭದಲ್ಲಿ ಭೂಮಾಲೀಕನಿಗೆ ಸರಿಸಾಟಿಯಾಗದ ಗೇಣಿದಾರ ಮುಖ್ಯವಾಗಿ ಅಸಮರ್ಪಕವಾಗಿದ್ದ ಭೂದಾಖಲೆಗಳ ಹಿನ್ನೆಲೆಯಲ್ಲಿ ನ್ಯಾಯ ಪಡೆಯುವುದು ಸುಲಭದ ಸಂಗತಿಯಾಗಿರಲಿಲ್ಲ. ಹಲವಾರು ಜಿಲ್ಲೆಗಳಲ್ಲಿ ಭೂಮಾಲೀಕರು ಗೇಣಿದಾರರಿಗೆ ಅರ್ಜಿ ಸಲ್ಲಿಸಲು ಪ್ರಬಲವಾದ ತಡೆ ಒಡ್ಡಿದರೆ, ಎಷ್ಟೋ ಕಡೆಗಳಲ್ಲಿ ಗೇಣಿದಾರರು ತಾನು ಬೇಸಾಯ ಮಾಡುತ್ತಿದ್ದ ಭೂಮಿಯ ವಿವರ ಪಡೆಯಲು ಅಸಮರ್ಥವಾಗಿದ್ದ. ಹಲವೆಡೆ ಇದು ಹಿಂಸಾಚಾರಕ್ಕೆ ತಿರುಗಿ ಗೇಣಿದಾರರು ನಿರ್ಗತಿಕರಾದ ನಿದರ್ಶನಗಳಿವೆ.

ಈ ಸಂದರ್ಭಧಲ್ಲಿ ಒಂದೆರಡು ವಿಚಾರಣೆಯನ್ನು ಇಲ್ಲಿ ಉಲ್ಲೇಖಿಸುವದು ಸೂಕ್ತವೆನಿಸುತ್ತದೆ. ಸ್ವಾತಂತ್ರ್ಯಾನಂತರ ಹಲವಾರು ಜನಪರ ಯೋಜನೆಗಳು ಜಾರಿಗೆ ಬಂದಿವೆ. ಪ್ರತಿಯೊಂದು ಯೋಜನೆಯ ಉದ್ದೇಶ ದೇಶದ ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಅಭಿವೃದ್ಧಿ, ತನ್ಮೂಲಕ ಜನಹಿತ. ಆದರೆ ಬಹುತೇಕ ಯೋಜನೆಗಳ ಅನುಷ್ಠಾನ ನಿರೀಕ್ಷಿಸಿದ ಮಟ್ಟಕ್ಕಿಂತ ಬಹುದೂರ. ಅದು ಪ.ಜಾ.ಯವರಿಗಾಗಿ ಸಹಸ್ರಾರು ಕೋಟಿ ರೂ.ಗಳ ವಿಶೇಷ ಘಟಕ ಯೋಜನೆ ಇರಬಹುದು. ದಶಲಕ್ಷ ಟನ್‌ಗಳ ಕೂಲಿಗಾಗಿ ಕಾಳು ಯೋಜನೆ ಇರಬಹುದು. ಇವೆಲ್ಲ ಯೋಜನೆಗಳ ಪರ್ಯಾವಸಾನ ದುರುಪಯೋಗದಲ್ಲಿ.

ಪ್ರತಿಯೊಂದು ಯೋಜನೆಯ ಅನುಷ್ಠಾನ ಪ್ರಾರಂಭವಾದಾಗಿನಿಂದ ಅದು ಯಶಸ್ವಿಯಾಗಿ ಮುಗಿಯುವವರೆಗೆ ಸತತವಾಗಿ ಕಾಲಕಾಲಕ್ಕೆ ಅದರ ಪ್ರಾಮಾಣಿಕ ಪರಿಶೀಲನೆ ನಡೆಯಬೇಕು. ಅಂತಹ ಅನುಷ್ಠಾನದ ದೃಢೀಕರಣಗಳನ್ನು ಮಾಡಿಕೊಂಡು ಅನುಷ್ಠಾನವಲ್ಲಿ ಕಂಡುಬರಬಹುದಾದ ಲೋಪದೋಷಗಳನ್ನು ಆಗಿಂದಾಗ್ಗೆ ಸರಿಪಡಿಸಬೇಕು. ಭೂಸುಧಾರಣೆಯ ಅನುಷ್ಠಾನದಲ್ಲಿ ಜರುಗಿರಬಹುದಾದ ಲೋಪದೋಷಗಳನ್ನು ಈ ಹಂತದಲ್ಲಿ ಯಾವುದೇ ಕ್ರಮದ ಮೂಲಕ ಸರಿಪಡಿಸುವದು ಸಾಧ್ಯವಿಲ್ಲ.

ರಾಜ್ಯದಲ್ಲಿ ಭೂಸುಧಾರಣಾ ಶಾಸನದ ಅನುಷ್ಠಾನದಲ್ಲಿ ಕೂಡ ಪ್ರಭಾವ, ಅಧಿಕಾರದ ದುರುಪಯೋಗ, ಅದಕ್ಷತೆ ನುಸುಳಿ ಸರಿಯಾದ ಅನುಷ್ಠಾನದ ಕೊರತೆ ಕಂಡುಬರುತ್ತದೆ. ಈಗಾಗಲೇ ನಮೂದಿಸಿದಂತೆ ಭೂಸುಧಾರಣಾ ಶಾಸನದ ಅಧಿನಿಯಮ ೪೪ರನ್ವಯ ಗೇಣಿ ಭೂಮಿ ದಿನಾಂಕ ೧.೩.೧೯೭೪ ರಿಂದ ರಾಜ್ಯ ಸರಕಾರದ ವಶಕ್ಕೆ ಬರುತ್ತದೆ. ತದನಂತರ ಅದು ಗೇಣಿದಾರನ ಹೆಸರಿಗೆ ನೋಂದಾಯಿಸಲ್ಪಡುತ್ತದೆ. ಈ ಪ್ರಕ್ರಿಯೆ ಸಮರ್ಪಕವಾಗಿ ಜರುಗಿದ್ದಲ್ಲಿ ಬಹುತೇಕ ಗುರಿ ಸಾಧನೆ ಮಾಡಬಹುದಾಗಿತ್ತು. ಎರಡನೆಯದಾಗಿ, ಈ ತಿದ್ದುಪಡಿ ಶಾಸನ ಜಾರಿಗೆ ಕೊಡುವ ಮೊದಲು ರಾಜ್ಯ ಸರಕಾರ ಭೂದಾಖಲೆಗಳ ಅಸಮರ್ಪಕತೆಯನ್ನು ತೊಡೆದುಹಾಕಬೇಕಿತ್ತು.

ಆದರೆ ಭೂನ್ಯಾಯ ಮಂಡಳಿಗಳು ಅರ್ಜಿದಾರನ ಹೆಸರಿಗೆ ನೊಂದಾಯಿಸಿದ ಭೂಮಿ ಮಾತ್ರ ಸರಕಾರದ ವಶಕ್ಕೆ ಬಂದಿರುವುದಾಗಿ ಪರಿಗಣಿಸಿರುವುದರಿಂದ ಅಂತಹ ಭೂಮಿ ಮಾತ್ರ ಸರಕಾರದ ವಶಕ್ಕೆ ಬಂದಂತಾಯಿತು. ಭೂಸುಧಾರಣಾ ಶಾಸನದಲ್ಲಿ ರಾಜಿಸೂತ್ರಕ್ಕೆ

ಅವಕಾಶವಿಲ್ಲ. ಗೇಣಿದಾರ, ಭೂಮಾಲೀಕ ಒಂದಾಗಿ ಸರಕಾರವನ್ನು ವಂಚಿಸುವ ಹಾಗಿಲ್ಲ. ಅರ್ಜಿದಾರ ಗೇಣಿದಾರನಾಗಿದ್ದು, ಭೂಮಾಲೀಕನ ಒತ್ತಡದಿಂದಾಗಲಿ ಅಥವಾ ಯಾವುದೇ ಪ್ರಲೋಭನಕ್ಕೆ ಒಳಗಾಗಿ ಆಗಲಿ ಅಥವಾ ಭೂಮಾಲೀಕನ ಜೊತೆ ಶಾಮೀಲಾಗಿ ಅರ್ಜಿ ವಜಾ ಮಾಡುವಂತೆ ಕೇಳಿಕೊಂಡಲ್ಲಿ ಹಾಗೆ ಅರ್ಜಿ ವಜಾ ಮಾಡುವ ಅಧಿಕಾರ ಭೂನ್ಯಾಯ ಮಂಡಳಿಗಳಿಗೆ ಇಲ್ಲ. ಅರ್ಜಿಯಲ್ಲಿ ನಮೂದಿಸಿದ ಭೂಮಿ ವಿಚಾರಣೆ ನಂತರ ಗೇಣಿ ಭೂಮಿ ಎಂದು ರುಜುವಾತಾದರೆ, ಆಗ ಅರ್ಜಿ ವಜಾ ಮಾಡಿ ಆ ಭೂಮಿಯನ್ನು ಸರಕಾರದ ವಶಕ್ಕೆ ತಂದು, ಅದನ್ನು ಹೆಚ್ಚುವರಿ ಭೂಮಿಯ ಜೊತೆಗೆ ವಿತರಣೆ ಮಾಡಬೇಕಾಗುತ್ತದೆ. ಈ ಯಾವ ಪ್ರಕ್ರಿಯೆಯೂ ಸಮರ್ಪಕವಾಗಿ ಜರುಗಿದಂತೆ ಕಂಡುಬರುವದಿಲ್ಲ.

ಮೇಲಾಗಿ ಶಾಸನದ ಸಮರ್ಪಕ ಅನುಷ್ಠಾನದ ಕೊರತೆಗೆ ಇನ್ನೊಂದು ಕಾರಣ ಭೂನ್ಯಾಯ ಮಂಡಳಿಯಲ್ಲಿ ಬರುವಂತಹ ನಿರ್ಣಯಕ್ಕೆ ಅವಕಾಶ ಭೂನ್ಯಾಯ ಮಂಡಳಿ ಒಬ್ಬ ಅಧಿಕಾರಿ ಅಧ್ಯಕ್ಷ ಹಾಗೂ ೪ ಜನ ಅಧಿಕಾರೇತರ ಸದಸ್ಯರಿಂದ ಒಳಗೊಂಡಿದ್ದು, ಇದು ಸತ್ಯಶೋಧನೆಯ ಒಂದು ಸಂಪುಟ. ಅದರ ಬದಲು ಬಹುಮತದ ತೀರ್ಮಾನವೆಂದರೆ ಅನುಷ್ಠಾನ ಯಾವ ರೀತಿಯಾಗಬಹುದೆಂಬುದನ್ನು ಊಹಿಸಬಹುದಾಗಿದೆ.

ಈ ಕ್ರಾಂತಿಕಾರಿ ಶಾಸನದ ಅನುಷ್ಠಾನದಿಂದ ಗ್ರಾಮದ ಆರ್ಥಿಕ ಉನ್ನತಿ ನಿಜವಾದ ಅರ್ಥದಲ್ಲಿ ಆಗಿದೆಯೇ ಎಂಬುದು ಮುಖ್ಯ ಪ್ರಶ್ನೆ. ಶಾಸನದ ಅಸಮರ್ಪಕ ಅನುಷ್ಠಾನದ ಬಗ್ಗೆ ಈಗಾಗಲೇ ಚರ್ಚಿಸಲಾಗಿದೆ. ಗ್ರಾಮಗಳ ಸಮಗ್ರ ಉನ್ನತಿ, ಅದರಲ್ಲಿಯೂ ಆರ್ಥಿಕ ಉನ್ನತಿಯ ಬಗ್ಗೆ, ಕರ್ನಾಟಕದಲ್ಲಿ ಅಧಿಕಾರಕ್ಕೆ ಬರುವ ರಾಜಕೀಯ ಪಕ್ಷಗಳು ಹೆಚ್ಚು ತಲೆ ಕೆಡಿಸಿಕೊಂಡಂತೆ ಕಾಣುವುದಿಲ್ಲ. ಸರಕಾರಕ್ಕೆ ಯಾವುದೇ ಮೂಲದಿಂದಾದರೂ ಹಣದ ಸಂಗ್ರಹ ಆಗಬೇಕು. ಇದಕ್ಕೆ ಉದಾಹರಣೆಗಳು ಮದ್ಯಪಾನ, ಇತ್ತೀಚಿನವರೆಗೆ ಜಾರಿಯಲ್ಲಿದ್ದ ಆನ್ ಲೈನ್ ಲಾಟರಿ ಇತ್ಯಾದಿಗಳು. ಸರಕಾರ ಮದ್ಯಪಾನವನ್ನು ಅಪರೋಕ್ಷವಾಗಿ ಪ್ರೋತ್ಸಾಹಿಸುತ್ತಿದೆ. ಇದಕ್ಕೆ ಬಲಿಯಾಗುವವರು ಗ್ರಾಮೀಣ ಬಡ ರೈತರು ಹಾಗೂ ಕೃಷಿ ಕಾರ್ಮಿಕರು. ಪ್ರತಿ ವರ್ಷ ಅಬಕಾರಿ ಇಲಾಖೆಯಿಂದ ಸರಕಾರಕ್ಕೆ ಹೆಚ್ಚು ಹೆಚ್ಚು ಹಣ ಕ್ರೋಢೀಕರಣವಾದಾಗಲೆಲ್ಲಾ ಅದು ಗ್ರಾಮೀಣ ಪ್ರದೇಶದ ಬಡರೈತ, ಕೃಷಿ ಕಾರ್ಮಿಕ ಮುಂತಾದವರ ರಕ್ತವನ್ನೇ ಹೀರಿರುತ್ತದೆ. ತುಂಗಭದ್ರ ಜಲಾಶಯದಿಂದ ಅವಿಭಾಜ್ಯ ರಾಯಚೂರು ಜಿಲ್ಲೆಯ ಗಂಗಾವತಿ, ಸಿಂಧನೂರ, ಮಾನ್ವಿ, ರಾಯಚೂರು ತಾಲ್ಲೂಕುಗಳು, ಬಳ್ಳಾರಿ ಜಿಲ್ಲೆಯ ಹೊಸಪೇಟೆ, ಬಳ್ಳಾರಿ, ಶಿರಗುಪ್ಪ ತಾಲ್ಲೂಕುಗಳಿಗೆ ಸುಮಾರು ೫೦ ವರ್ಷಗಳಿಂದ ನೀರಾವರಿ ಅನುಕೂಲವಾಗಿದ್ದು ಈ ಭಾಗದ ರೈತರು ಮದ್ಯಪಾನದಂತಹ ದುಶ್ಚಟಕ್ಕೆ ಬಲಿಯಾಗಿದ್ದು ಈ ಫಲವತ್ತಾದ ಬಹುಭಾಗ ಭೂಮಿ ನೆರೆಯ ಆಂಧ್ರದ ರೈತರ ವಶದಲ್ಲಿರುವುದು ಇದಕ್ಕೊಂದು ಬಹುದೊಡ್ಡ ನಿದರ್ಶನ. ಇದು ರಾಜ್ಯದ ಇತರೆ ಜಲಾಶಯಗಳ ಅಚ್ಚುಕಟ್ಟಿನ ಭೂಮಿಗೆ ಹರಡಬಹುದೆಂಬ ಭೀತಿಯಿಂದ ಕೃಷ್ಣ ನೇತೃತ್ವದ ಸರಕಾರ ಜಲಾಶಯಗಳ ಅಚ್ಚುಕಟ್ಟಿನಲ್ಲಿ ಬರುವ ಭೂಮಿಯ ಪರಭಾರೆಯನ್ನು ನಿಷೇಧಿಸುವುದನ್ನು ಇಲ್ಲಿ ಸ್ಮರಿಸಬಹುದು. ಮೇಲಿನ ವಾಸ್ತವಿಕ ಅಂಶಗಳೇ ರಾಜ್ಯದಲ್ಲಿ ಭೂಸುಧಾರಣಾ ಶಾಸನದ ಅನುಷ್ಠಾನದಿಂದ ಗ್ರಾಮದ ಆರ್ಥಿಕ ಉನ್ನತಿ ನಿರೀಕ್ಷಿಸಿದ ಮಟ್ಟದಲ್ಲಿ ಆಗಿಲ್ಲವೆಂದು ಸ್ಪಷ್ಟಪಡಿಸುತ್ತದೆ.

ಇವೆಲ್ಲದರ ಮಧ್ಯದಲ್ಲಿಯೂ ಇಡೀ ರಾಷ್ಟ್ರದಲ್ಲಿ ಕರ್ಪೂರಿ ಠಾಕೂರರಂತಹ ಖ್ಯಾತ ಸಮಾಜವಾದಿ ನಾಯಕರನ್ನು ಮೊದಲುಗೊಂಡು ರಾಷ್ಟ್ರದ ಅನೇಕ ನಾಯಕರು ಇಂತಹ ಕ್ರಾಂತಿಕಾರಿ ಶಾಸನ ತರುವಲ್ಲಿ ವಿಫಲರಾದರೆ, ದೇವರಾಜ ಅರಸು ಅವರು ಭೂಸುಧಾರಣೆ ಅಂತಹ ಕ್ರಾಂತಿಕಾರಿ ಶಾಸನದ ಮೂಲಕ ಗ್ರಾಮೀಣ ಬಡ ಗೇಣಿದಾರರು ಹಾಗೂ ಭೂರಹಿತರಿಗೆ ಧ್ವನಿ ಕೊಟ್ಟರು. ಅವರಲ್ಲಿ ಆತ್ಮಸ್ಥೈರ್ಯ ತುಂಬಿದರು. ಬಲಿಷ್ಠ ಕೋಮಿನ ಜಮೀನ್ದಾರರನ್ನು ಎದುರು ಹಾಕಿಕೊಂಡು ಹಿಂದುಳಿದ ಪರಿಶಿಷ್ಠ ಜಾತಿ ಹಾಗೂ ಪರಿಶಿಷ್ಠ ವರ್ಗದ ಗೇಣಿಕಾರ ಹಾಗೂ ಭೂರಹಿತರಲ್ಲಿ ಸಾಮಾಜಿಕ ಹಾಗೂ ರಾಜಕೀಯ ಜಾಗೃತಿ ಮೂಡಿಸಿದರು. ಅವರಿಗೆ ತಮ್ಮ ಹಕ್ಕಿನ ಅರಿವನ್ನು ಮೂಡಿಸಿದರು. ಶಾಸನಬದ್ಧವಾದ ಹಕ್ಕಿಗಾಗಿ ಬಲಿಷ್ಠರ ವಿರುದ್ಧ ಹೋರಾಟಕ್ಕೆ ಅಣಿಮಾಡಿದರು. ಅತ್ಯಲ್ಪ ಅವಧಿಯಲ್ಲಿ ಕಾಲಾಂತರದಿಂದ ಶೋಷಣೆಗೊಳಗಾಗಿದ್ದ ಮುಗ್ಧ, ಅಸಹಾಯಕ, ಗ್ರಾಮೀಣ ಜನರಲ್ಲಿ ಜಾಗೃತಿ ಮೂಡಿಸುವುದು ದೇವರಾಜ ಅರಸು ಅವರಂತಹ ಧೀಮಂತ ನಾಯಕರಿಂದ ಮಾತ್ರ ಸಾಧ್ಯ.

●




# ಕೃಷಿ ಹಾಗೂ ಗ್ರಾಮೀಣಾಭಿವೃದ್ಧಿ

ಡಾ. ಎಸ್. ಎ. ಪಾಟೀಲ

ಭಾರತವು ಕೃಷಿ ಪ್ರಧಾನವಾದ ದೇಶ. ಭಾರತವು ಅಭಿವೃದ್ಧಿಶೀಲ ದೇಶವೆಂದು ಗುರುತಿಸಿದ್ದರೂ ಕೂಡ ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಯಲ್ಲಿ ಅಭಿವೃದ್ಧಿ ಹೊಂದಿದ ದೇಶಗಳ ಗುಂಪಿಗೆ ಸೇರಿದೆ. ಬಾಹ್ಯಾಕಾಶ ವಿಜ್ಞಾನ, ಕಂಪ್ಯೂಟರ್ ತಂತ್ರಜ್ಞಾನ ಹಾಗೂ ಅಣುಶಕ್ತಿ ಸಂಶೋಧನೆಯಂತೆ ಕೃಷಿ ಸಂಶೋಧನೆಯಲ್ಲಿಯೂ ಕೂಡ ನಮ್ಮ ಸಾಧನೆ ಹಿರಿದಾಗಿದೆ. ಕಾಲ ಬದಲಾದಂತೆ ಕೃಷಿಯಲ್ಲಿ ಕೂಡ ಸಾಕಷ್ಟು ಬದಲಾವಣೆಗಳು ಕಂಡುಬಂದಿವೆ. ಕೃಷಿಯು ಸಾಕಷ್ಟು ನೈಸರ್ಗಿಕ ಪ್ರಕೋಪಗಳಿಗೆ ಹಾಗೂ ಮಾನವ ನಿರ್ಮಿತ ಸಂಕಷ್ಟಗಳಿಗೆ ತುತ್ತಾಗಿದೆ. ಬರಗಾಲ, ನೆರೆಹಾವಳಿ, ಬಿರುಗಾಳಿ, ಭೂಕಂಪ, ರೋಗಗಳು, ಯುದ್ಧಗಳು, ಆರ್ಥಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ರೈತರು ಎದುರಿಸುವಂತಾಗಿ ಕೃಷಿಯ ಮೇಲೆ ಪರಣಾಮ ಬೀರಿವೆ.

> ***ನೆಲ ಜಲ ಅಭಿವೃದ್ಧಿಪಡಿಸಿ ಫಲಾನುಭವಿಗಳ ಸಹಭಾಗಿತ್ವ, ಸಹಕಾರ, ಪಾರದರ್ಶಕ ಆಡಳಿತ ಮತ್ತು ನಿರ್ವಹಣೆಯಿಂದ ಕೃಷಿ ಹಾಗೂ ಗ್ರಾಮೀಣಾಭಿವೃದ್ಧಿ ಸಾಧ್ಯ. ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಗೆ ಪೂರಕವಾಗುವ ಹೊಸ ಕೃಷಿ ನೀತಿಯನ್ನು ಜಾರಿಗೆ ತರಲಾಗಿದೆ.***

ಹತ್ತು ಸಾವಿರ ವರ್ಷಕ್ಕಿಂತ ಹೆಚ್ಚಿನ ಇತಿಹಾಸ ಇರುವ ಕೃಷಿ ಕಳೆದ ೧೦೦ ವರ್ಷಗಳಲ್ಲಿ ಹೆಚ್ಚು ಬದಲಾವಣೆ ಹೊಂದಿ ಹೆಚ್ಚುತ್ತಿರುವ ಜನಸಂಖ್ಯೆಯ ಬೇಡಿಕೆಯನ್ನು ಉದಾ : ಆಹಾರ, ಮೇವು, ಬಟ್ಟೆ, ನಾರು, ಕಟ್ಟಿಗೆ ಇತ್ಯಾದಿ ಪೂರೈಸುವ ಪ್ರಮುಖ ಉದ್ದಿಮೆಯಾಯಿತು. ಮೊದಲ ೯೯೦೦ ವರ್ಷಗಳ ಕಾಲ ಕೃಷಿ ಆಂತರಿಕವಾಗಿ ಹೆಚ್ಚು ಸ್ವಾವಲಂಬಿಯಾಗಿ ಸ್ಥಳೀಯ ಮತ್ತು ನೈಸರ್ಗಿಕ ಸಂಪನ್ಮೂಲಗಳೂ, ಸಸ್ಯಸಂಪತ್ತು ಹಾಗೂ ಪ್ರಾಣಿಸಂಪತ್ತು ಮಾನವನ ಬೇಡಿಕೆಗಳನ್ನು ಪೂರೈಸುವಲ್ಲಿ ಒಂದಕ್ಕೊಂದು ಪೂರಕವಾಗಿ ನಡೆದುಕೊಂಡು ಬಂದಿದ್ದವು. ಆದರೆ ಕಳೆದ ೧೦೦ ವರ್ಷಗಳಲ್ಲಿ ಕೃಷಿ ಬಹಳ ವೇಗವಾಗಿ ಸಾಗಿ ಆಂತರಿಕದಿಂದ ಬಾಹ್ಯದ ಕಡೆಗೆ ಲಕ್ಷ್ಯ ಕೊಟ್ಟು ಉತ್ಪಾದನೆ ಹೆಚ್ಚಿಸುವ ಉದ್ದೇಶ ಹೊಂದಿ ಬಾಹ್ಯ ಸಂಪನ್ಮೂಲಗಳಾದ ಗೊಬ್ಬರ, ಪೀಡೆ ನಾಶಕಗಳು ಹಾಗೂ ಇಂಧನಗಳನ್ನು ಹೆಚ್ಚು ಹೆಚ್ಚು ಬಳಸಿ ಇವುಗಳನ್ನು ಉತ್ಪಾದಿಸಲು ಅನಾದಿ ಕಾಲದಿಂದ ಅಭಿವೃದ್ಧಿ ಹೊಂದಿದ ಸಸ್ಯ ಮೂಲ ಖನಿಜ ಇಂಧನ ಹಾಗೂ ಇತರ ಸಂಪನ್ಮೂಲಗಳನ್ನು ನಾಶ ಮಾಡುತ್ತಿದ್ದೇವೆ. ಜಗತ್ತಿನಾದ್ಯಂತ ರೈತರು ಭೌತಿಕ, ರಾಸಾಯನಿಕ ಹಾಗೂ ಜೈವಿಕ ಕ್ಷೇತ್ರಗಳಲ್ಲಿ ಆದ ನವೀನತೆಯನ್ನು ಕಲ್ಪಿಸುವ ಹೊಸ ಸಂಶೋಧನೆಯನ್ನು ಆಧುನಿಕ ಕೃಷಿ ಸಾಧನೆಗಳೆಂದು ಅಳವಡಿಸುವದರಿಂದ ಕೃಷಿಯೂ ಒಂದು ಬಲಿಷ್ಠ ಔದ್ಯಮೀಕರಣ ಯಂತ್ರವಾಗಿ ಮಾರ್ಪಟ್ಟಿತು. ಆದರೆ, ಈ ಆಧುನಿಕ ಕೃಷಿ ಬಾಹ್ಯ ಸಂಪನ್ಮೂಲಗಳಾದ ಶಕ್ತಿಯಿಂದ ಕೂಡಿದ ರಸಗೊಬ್ಬರಗಳು, ಪೀಡೆನಾಶಕಗಳು ಹಾಗೂ ಯಾಂತ್ರೀಕರಣದ

ಮೇಲೆ ಹೆಚ್ಚು ಅವಲಂಬಿತವಾಗಿದ್ದು ಇವುಗಳ ಲಭ್ಯತೆ ಮರುಬಳಕೆಯಾಗದೆ ಖನಿಜ ಇಂಧನಗಳ (Fossil Fuel) ಮೇಲೆ ಅವಲಂಬಿಸಿದ್ದು ಮುಂಬರುವ ದಿನಗಳಲ್ಲಿ ಇವುಗಳ ಲಭ್ಯತೆ ಮತ್ತು ಅವುಗಳನ್ನು ಪಡದುಕೊಳ್ಳುವ ಸಾಮರ್ಥ್ಯದ ಮೇಲೆ ನಮ್ಮ ಕೃಷಿಯು ಅವಲಂಬಿಸಿದೆ.

ಸ್ಥಿರ ಕೃಷಿಯ ಸಮಸ್ಯೆಗಳು ಹೆಚ್ಚಿನ ಪ್ರಮಾಣದಲ್ಲಿ ನಾವು ಪ್ರಕೃತಿಯ ಮೂಲ ತತ್ವಗಳನ್ನು ಬದಿಗೊತ್ತಿರುವುದರಿಂದ ಹಾಗೂ ಅನಾದಿ ಕಾಲದಿಂದ ಬಂದ ಸ್ಥಳೀಯ ಕೃಷಿ ಪದ್ಧತಿಗಳ ಕಡೆ ಗಮನ ಕೊಡದೆ ಇದ್ದುದರಿಂದ ಎಂದರೆ ತಪ್ಪಾಗಲಾರದು. ಅಸಮರ್ಪಕ ಆಧುನಿಕ ಕೃಷಿ ಪದ್ಧತಿಗಳಿಂದ ನೈಸರ್ಗಿಕ ಸಂಪನ್ಮೂಲಗಳಾದ ಭೂಮಿ, ನೀರು, ವಾಯು ಹಾಗೂ ಪರಿಸರದ ಮೇಲೆ ಆದ ದುಷ್ಪರಿಣಾಮ ಗಮನಿಸಿದರೆ ಆಧುನಿಕ ಕೃಷಿ ಅಷ್ಟೊಂದು ಲಾಭದಾಯಕವಾಗಿಲ್ಲ ಎಂದರೆ ತಪ್ಪಾಗಲಾರದು. ಜಾಗತೀಕರಣ, ಮುಕ್ತ ಮಾರಾಟದಿಂದ ಕೃಷಿ ಉತ್ಪನ್ನಗಳ ಮಾರಾಟ ಮತ್ತು ಬೆಲೆ ಕುಸಿತದಿಂದ ಭಾರತದ ರೈತರ ಪರಿಸ್ಥಿತಿ ಇನ್ನಷ್ಟು ಹದಗೆಟ್ಟಿದೆ. ಅದರಲ್ಲೂ ಮಳೆಯನ್ನೇ ಅವಲಂಬಿಸಿದ ರೈತರ ಜೀವನ ಬಹಳ ಕಳವಳಕಾರಿ ಪರಿಸ್ಥಿತಿಯಲ್ಲಿದೆ.

ವಿಶ್ವ ಸಂಸ್ಥೆಯು "ಪರಿಸರ ಮತ್ತು ಅಭಿವೃದ್ಧಿ ಸಮಾವೇಶ"ವನ್ನು ೧೯೯೨ರಲ್ಲಿ ಆಯೋಜಿಸಿ ರೈಯೋ ಘೋಷಣೆಯ ಮೂಲಕ ಜಾಗತಿಕ ಸಮುದಾಯಕ್ಕೆ ಈ ಭೂಮಿಯ ನೈಜ ಪ್ರಕೃತಿಯನ್ನು ಕಾಪಾಡಿಕೊಂಡು ಬರುವ ಅವಶ್ಯಕತೆ ಇದೆ. ಇದಕ್ಕೆ ನೈಸರ್ಗಿಕ ಸಂಪನ್ಮೂಲಗಳೇ ಆಧಾರ. ಅವುಗಳನ್ನು ನಿರಂತರವಾಗಿ ಕಾಪಾಡಿಕೊಂಡು ಬರುವುದು, ಅಭಿವೃದ್ಧಿಪಡಿಸುವದು ಹಾಗೂ ಸಮರ್ಪಕವಾಗಿ ಬಳಸುವ ಅವಶ್ಯಕತೆ ಇದೆ ಎಂದು ಒತ್ತಿ ಹೇಳಿದೆ. ಆರ್ಥಿಕ ಅಭಿವೃದ್ಧಿ ಹಾಗೂ ಪರಿಸರ ಸಂರಕ್ಷಣೆಗಳನ್ನು ಒಂದಕ್ಕೊಂದು ನಿಕಟಗೊಳಿಸಿ ನೀರು, ಇಂಧನ, ಕೃಷಿ, ಆರೋಗ್ಯ ಮತ್ತು ಜೈವಿಕ ವೈವಿಧ್ಯತೆಯನ್ನು ಕಾಪಾಡಿಕೊಂಡು ಪರಿಸರವನ್ನು ಸಂರಕ್ಷಿಸಿ ಉತ್ತಮ ಜೀವನ ನಡೆಸಬೇಕಾಗಿದೆ. ಆರ್ಥಿಕ ಅಭಿವೃದ್ಧಿ ಹಾಗೂ ಪರಿಸರ ಎರಡೂ ಒಂದಕ್ಕೊಂದು ಪೂರಕವಾಗಿರುವುದು ಬಹಳ ಕಠಿಣ. ಆದರೆ ಅದನ್ನು ಸಾಧಿಸುವುದು ಅವಶ್ಯ. ಇದು ನಮ್ಮ ಸಂಶೋಧನೆ ಹಾಗೂ ಅಭಿವೃದ್ಧಿಯ ಗುರಿಯಾಗಬೇಕು.

ದಕ್ಷಿಣ ಆಫ್ರಿಕಾದ ಜೋಹಾನ್ಸ್ ಬರ್ಗದಲ್ಲಿ (ಆಗಸ್ಟ್ ೪, ೨೦೦೨) ರೈಯೋ ಶೃಂಗ ಸಮ್ಮೇಳನದಲ್ಲಿ ಕೈಗೊಂಡ ಘೋಷಣೆಗಳನ್ನು ಮತ್ತೆ ಒತ್ತಿ ಹೇಳಲಾಗಿದೆ. ವಿಶ್ವ ಸಂಸ್ಥೆಯ ಗೌರವ ಕಾರ್ಯದರ್ಶಿಗಳಾದ ಕೋಫಿ ಅನ್ನನ್ ಅವರು ನಿರಂತರ ಸುಸ್ಥಿರ ಕೃಷಿ ಅಭಿವೃದ್ಧಿ ಜಾಗತಿಕ ಮಾನವ ಕುಲದ ಏಳಿಗೆಗೆ ಮತ್ತು ಜಾಗತಿಕ ಆಹಾರ ಭದ್ರತೆಗೆ ಅವಶ್ಯವೆಂದು ಹೇಳಿದ್ದಾರೆ. ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಆರ್ಥಿಕ ಪರಿಸ್ಥಿತಿ ಪ್ರಮುಖವಾಗಿ ಕೃಷಿಯ ಮೇಲೆ ಅವಲಂಬಿಸಿದ್ದು ಸುಸ್ಥಿರ ಕೃಷಿ ಈ ದೇಶಗಳ ಆರ್ಥಿಕ, ಸಾಮಾಜಿಕ ಮತ್ತು ಆಹಾರ ಭದ್ರತೆ ಒದಗಿಸಲು ಶಕ್ಯವಾಗಿದೆ. ಮಾನ್ಯ ಹಣಕಾಸು ಸಚಿವರಾಗಿದ್ದ ಜಸ್ವಂತ್‌ಸಿಂಗ್ ಕೂಡ ಮುಂಬರುವ ೨೦೦೪-೦೫ರ ಮುಂಗಡ ಪತ್ರದ ಬಗ್ಗೆ ವಿಶ್ಲೇಷಿಸುವಾಗ, ಭಾರತದ ಆರ್ಥಿಕ ಸ್ಥಿತಿ ಕಂಪ್ಯೂಟರ್ ತಂತ್ರಜ್ಞಾನದ ಮೇಲೆ ಮಾತ್ರ ಅವಲಂಬಿಸದೆ, ಜಗತ್ತಿನಲ್ಲಿ ಅತೀ ಹೆಚ್ಚು ಭೂ ಬೆಳೆ ಪ್ರದೇಶ ಹೊಂದಿರುವ ಕೃಷಿ ಅಭಿವೃದ್ಧಿಯ ಮೇಲೆ ಅವಲಂಬಿಸಿದೆ. ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿಯಿಂದ ದೇಶದ ಅಭಿವೃದ್ಧಿ ಸಾಧ್ಯ ಎಂದು ಅಭಿಪ್ರಾಯಪಟ್ಟಿದ್ದಾರೆ.

ಆಹಾರ ಉತ್ಪಾದನೆಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದ್ದರೂ ಕೂಡ ಅದರ ಲಭ್ಯತೆ ಎಲ್ಲರಿಗೂ ಸಮನಾಗಿಲ್ಲ. ಜಾಗತಿಕ ಆಹಾರ ಸಂಸ್ಥೆಯ ಒಂದು ಅಂದಾಜಿನ ಪ್ರಕಾರ ಜಗತ್ತಿನಲ್ಲಿ ಮೂವತ್ನಾಲ್ಕು ದೇಶಗಳು ಆಹಾರದ ಕೊರತೆ ಎದುರಿಸುತ್ತಿವೆ ಹಾಗೂ ೮೨೬ ಮಿಲಿಯನ್ ಜನಸಂಖ್ಯೆಗೆ ಆಹಾರ ಪೂರೈಕೆ ಸಮರ್ಪಕವಾಗಿರದೆ ಕೊರತೆಯನ್ನು ಅನುಭವಿಸುತ್ತಿದ್ದಾರೆ. ಜಗತ್ತಿನ ಒಂದು ಮೂರಾಂಶ ಮಕ್ಕಳು ಆಹಾರ ಕೊರತೆಯನ್ನು ಅನುಭವಿಸುತ್ತಿರುವುದು ಒಂದು ಕಡೆಯಾದರೆ, ಒಂದು ಐದಾಂಶ ಮಕ್ಕಳು ಪೋಷಿತ ಆಹಾರ ಹಾಗೂ ವಿವಿಧ ಸೌಕರ್ಯಗಳಿಂದ ವಂಚಿತರಾಗಿ ೫ ವರ್ಷಕ್ಕಿಂತ ಮೊದಲೇ ಅಸುನೀಗುತ್ತಿದ್ದಾರೆ. ಜಗತ್ತಿನಲ್ಲಿ ಆಹಾರ, ನೀರು, ಇಂಧನ, ತಯಾರಿಸಿದ ವಸ್ತುಗಳು ಮತ್ತು ವಿವಿಧ ಸೇವೆಗಳ ಲಭ್ಯತೆ ಹಾಗೂ ಅವುಗಳ ಉಪಯೋಗದಲ್ಲಿಯೂ ಕೂಡ ಬಹಳ ತಾರತಮ್ಯ ಕಾಣುತ್ತಿದ್ದೇವೆ.

## ಆಹಾರ ಉತ್ಪಾದನೆ ಹಾಗೂ ಆಹಾರ ಲಭ್ಯತೆ :

ಭಾರತವು ೨.೨ ಪ್ರತಿಶತ ಭೌಗೋಳಿಕ ಕ್ಷೇತ್ರ, ಮಳೆ ಪ್ರತಿಶತ ೧ರಷ್ಟು, ಅರಣ್ಯ ಪ್ರತಿಶತ ೦.೫ರಷ್ಟು ಹಾಗೂ ಹುಲ್ಲುಗಾವಲುಗಳು ೦.೫ ಪ್ರತಿಶತದಷ್ಟು ಹೊಂದಿದ್ದು, ಜಗತ್ತಿನ ಪ್ರತಿಶತ ೧೬ರಷ್ಟು ಜನಸಂಖ್ಯೆಗೆ ಆಶ್ರಯ ಕೊಟ್ಟಿದೆ. ಅಲ್ಲದೆ ಅದರಲ್ಲಿ ಪ್ರತಿಶತ ೭೦ರಷ್ಟು ಜನಸಂಖ್ಯೆ ಕೃಷಿಯನ್ನು ಅವಲಂಬಿಸಿದೆ. ಜಗತ್ತಿನ ಪ್ರತಿಶತ ೧೫ರಷ್ಟು ಜಾನುವಾರುಗಳೂ ಕೂಡಾ ಈ ಪ್ರದೇಶದ ಮೇಲೆ

ಅವಲಂಬಿಸಿವೆ. ಇದಕ್ಕೆ ಪೂರಕವಾಗಿ ಜನಸಂಖ್ಯೆ ಬೆಳವಣಿಗೆ ಕೂಡಾ ನಿರಂತರವಾಗಿ ಪ್ರತಿಶತ ೨.೧ಕ್ಕಿಂತ ಹೆಚ್ಚಿಗೆ ಇದ್ದು ಭೂ ಪ್ರದೇಶದ ಮೇಲೆ ಹಾಗೂ ನೈಸರ್ಗಿಕ ಸಂಪನ್ಮೂಲಗಳ ಮೇಲೆ ಹೆಚ್ಚು ಒತ್ತಡ ಹೇರಿವೆ. ಇತ್ತೀಚೆಗೆ ಸುಮಾರು ೫೦ವರ್ಷಗಳಿಂದ ಕೃಷಿ ಸಂಶೋಧನೆಯಲ್ಲಾದ ಗಣನೀಯ ಪ್ರಗತಿಯಿಂದಾಗಿ ಕೃಷಿ ಅಗಾಧ ಮಾರ್ಪಾಟುಗಳನ್ನು ಕಂಡುಕೊಂಡಿದೆ. ಆಹಾರ ಉತ್ಪಾದನೆಯ ಪ್ರಗತಿಯು ಕೂಡಾ ಜನಸಂಖ್ಯೆಯ ಬೆಳವಣಿಗೆಗೆ ಸಮನಾಗಿ ಸಾಗಿದೆ. ಸಮೀಕ್ಷೆಯೊಂದರ ಪ್ರಕಾರ ಭಾರತದ ಜನಸಂಖ್ಯೆ ಕ್ರಿ.ಶ. ೨೦೧೫ರ ಹೊತ್ತಿಗೆ ೧೨೨೫ ಮಿಲಿಯನ್ ಮತ್ತು ಜಾನುವಾರುಗಳ ಸಂಖ್ಯೆ ೬೦೦ ಮಿಲಿಯನ್‌ವರೆಗೆ ಮುಟ್ಟಲಿದ್ದು, ಈ ಜನಸಂಖ್ಯೆಯ ಬೇಡಿಕೆ ಪೂರೈಸಲು ನಾವು ೨೭೫ ಮಿಲಿಯನ್ ಟನ್ ಆಹಾರಧಾನ್ಯ, ೧೦೮೩ ಮಿಲಿಯನ್ ಟನ್ ಹಸಿರು ಮೇವು ಮತ್ತು ೨೩೫ ಮಿಲಿಯನ್ ಘನ ಮೀಟರ್ ಉರುವುಲು ಕಟ್ಟಿಗೆ ಬೇಕಾಗುವುದು. ಕೃಷಿ ಸಂಶೋಧನೆಯಲ್ಲಾದ ಪ್ರಗತಿಯಿಂದ ಹಸಿರು ಕ್ರಾಂತಿ ಸಾಧಿಸಿ ಆಹಾರ ಧಾನ್ಯಗಳ ಉತ್ಪಾದನೆಯನ್ನು ೫೦ ಮಿಲಿಯನ್ ಟನ್‌ನಿಂದ (೧೯೫೦-೫೧) ಸುಮಾರು ೨೦೬ ಮಿಲಿಯನ್ ಟನ್‌ಗೆ (೨೦೦೦-೦೧) ಹೆಚ್ಚಿಸಿ ಜಗತ್ತಿನ ಆಹಾರ ಸ್ವಾವಲಂಬಿ ರಾಷ್ಟ್ರವೆಂಬ ಹಿರಿಮೆಗೆ ಪಾತ್ರರಾಗಿದ್ದೇವೆ. ಈ ಉತ್ಪಾದನೆಯಿಂದ ನಮ್ಮ ಆಹಾರ ದಾಸ್ತಾನು ಸುಮಾರು ೬೦ ಮಿಲಿಯನ್ ಟನ್‌ಗಿಂತ ಹೆಚ್ಚಿಗೆ ಇದ್ದು, ಇಂದು ನಾವು ದೇಶದ ಮೂಲೆ ಮೂಲೆಗೆ ಅವಶ್ಯವಿದ್ದ ಆಹಾರ ಪೂರೈಕೆ ಸಾಮಾನ್ಯ ಪಡಿತರ ವ್ಯವಸ್ಥೆಯಿಂದ ಕೈಗೊಂಡಿದ್ದೇವೆ. ಪ್ರತಿಯೊಬ್ಬರಿಗೆ ಆಹಾರ ಲಭ್ಯತೆಯು ೪೯೫ ಗ್ರಾಂನಿಂದ ೫೦೦ ಗ್ರಾಂ.ಗೆ ಹೆಚ್ಚಿದೆ. ಗೋಧಿ ಮತ್ತು ಭತ್ತಗಳಲ್ಲಿ ಸಾಧಿಸಿದ ಹಸಿರು ಕ್ರಾಂತಿ ಇತರ ಉತ್ಪಾದನೆಗಳಾದ ಜೋಳ, ಗೋವಿನಜೋಳ, ಎಣ್ಣೆಕಾಳು, ಹಾಲು, ಹಣ್ಣು, ಕಾಯಿಪಲ್ಲೆಗಳಲ್ಲಿಯೂ ಕೂಡಾ ಕಂಡುಕೊಂಡಿದ್ದೇವೆ.

ಆಹಾರ ಉತ್ಪಾದನೆಯಲ್ಲಿ ಸ್ವಾವಲಂಬನೆ ಕೈಕೊಂಡಿದ್ದೇವೆ ಎಂಬುದು ನಿಜ, ಆದರೆ ಪ್ರತಿಯೊಬ್ಬರಿಗೆ ಆಹಾರ ಲಭ್ಯತೆ ಒದಗಿಸುವಲ್ಲಿ ಯಶಸ್ವಿಯಾಗಿಲ್ಲವೆಂದರೆ ತಪ್ಪಾಗಲಾರದು. ಆಹಾರ ಭದ್ರತೆ ಪ್ರತಿಯೊಬ್ಬರಿಗೆ ಒದಗಿಸುವದು ದೇಶದ ಜವಾಬ್ದಾರಿ. ಪ್ರತಿಯೊಬ್ಬರಿಗೆ ಪೋಷಕ ಆಹಾರ, ಶುದ್ಧ ಕುಡಿಯುವ ನೀರು, ನೈರ್ಮಲ್ಯ, ಆರೋಗ್ಯ ಮತ್ತು ಶಿಕ್ಷಣ ಸೌಲಭ್ಯಗಳು ಒಳ್ಳೆಯ ಜೀವನಕ್ಕೆ, ವ್ಯಕ್ತಿ ಮತ್ತು ಸಮಾಜದ ಬೆಳವಣಿಗೆಗೆ ಅವಶ್ಯ. ಈ ದಿಸೆಯಲ್ಲಿ ನಾವು ಸಾಧಿಸಬೇಕಾದುದು ಸಾಕಷ್ಟಿದೆ.

ಒಂದು ಅಂದಾಜಿನ ಪ್ರಕಾರ ಆಹಾರ ಉತ್ಪಾದನೆಯ ಬೆಳವಣಿಗೆಯು ೧೯೭೦ರಲ್ಲಿ ೩ ಪ್ರತಿಶತವಿದ್ದುದು ಈಗ ೧.೩ ಪ್ರತಿಶತಕ್ಕೆ ಇಳಿದಿದೆ. ಪ್ರಾಯೋಗಿಕ ಕ್ಷೇತ್ರಗಳಲ್ಲಿಯೂ ಕೂಡಾ ಉತ್ಪಾದಕತೆ ಸ್ಥಗಿತಗೊಂಡಿದೆ (ಮ್ಯಾಕ್‌ಕಲ್ಲಾ, ೧೯೯೪). ಭಾರತ ದೇಶದಲ್ಲಿ ಭತ್ತ ಮತ್ತು ಗೋಧಿ ಉತ್ಪಾದನೆಯನ್ನು ಹೆಚ್ಚು ಹೆಚ್ಚು ರಸಗೊಬ್ಬರಗಳು, ನೀರು ಹಾಗೂ ಪೀಡೆ ನಾಶಕಗಳ ಬಳಕೆಯಿಂದ ಕಾಯ್ದುಕೊಂಡು ಬರಲಾಗುತ್ತಿದೆ. ಜಾಗತಿಕ ಸಂಸ್ಥೆಯ ಒಂದು ಅಂದಾಜಿನ ಪ್ರಕಾರ ಭಾರತವು ೨೦೩೦ರ ಹೊತ್ತಿಗೆ ಪ್ರತಿ ವರ್ಷ ಸುಮಾರು ೪೦ ಮಿಲಿಯನ್ ಟನ್‌ನಷ್ಟು ಆಹಾರ ಕೊರತೆ ಕಂಡುಕೊಳ್ಳಬಹುದೆಂದು ಊಹಿಸಲಾಗಿದೆ. ನಾವು ನಮ್ಮ ಆಹಾರ ಭದ್ರತೆ ಕಾಯ್ದುಕೊಂಡು ಬರಬೇಕೆಂದರೆ ಈ ವಿಷಯದ ಬಗ್ಗೆ ಹೆಚ್ಚು ಚಿಂತನೆ ಕೈಗೊಳ್ಳಬೇಕಾಗಿದೆ. ಹೆಚ್ಚುತ್ತಿರುವ ಜನಸಂಖ್ಯೆಯ ಬೇಡಿಕೆ ಪೂರೈಸಲು ಹೆಚ್ಚು ಆಹಾರ, ಬಟ್ಟೆ, ಮೇವು, ಉರುವಲು ಇತ್ಯಾದಿಗಳ ಉತ್ಪಾದನೆಗೆ ಹೆಚ್ಚು ಹೆಚ್ಚು ಪ್ರದೇಶವನ್ನು ಕೃಷಿಗೆ ಒಳಪಡಿಸುವದರಿಂದ ನಮ್ಮ ನೈಸರ್ಗಿಕ ಸಂಪನ್ಮೂಲಗಳು ಕ್ಷೀಣಿಸಿ ಈ ಆಹಾರ ಭದ್ರತೆ ಸಾಧಿಸಲು ಸವಾಲೆಸಗಿದೆ. ಚೀನಾ ದೇಶವು ನಮಗಿಂತ ಹೆಚ್ಚು ಭೌಗೋಳಿಕ ಪ್ರದೇಶ ಹೊಂದಿದ್ದರೂ ಕೂಡಾ ಕಡಿಮೆ ಪ್ರದೇಶವನ್ನು ಕೃಷಿಗೆ ಒಳಪಡಿಸಿ ಹೆಚ್ಚು ಆಹಾರ ಉತ್ಪಾದನೆ ಮಾಡುತ್ತಿದೆ. ಜಾಗತಿಕ ನಿರ್ಬಂಧದ ಪ್ರಕಾರ ಪ್ರತಿಯೊಂದು ದೇಶವು ಭೌಗೋಳಿಕ ಪ್ರದೇಶದ ಪ್ರತಿಶತ ೩೩ರಷ್ಟು ಅರಣ್ಯ ಪ್ರದೇಶವನ್ನು ಕಾಯ್ದುಕೊಂಡು ಬರುವದು ಅವಶ್ಯ. ಬದಲಾಗುತ್ತಿರುವ ಕೃಷಿ ಉತ್ಪನ್ನಗಳ ಬಳಕೆ, ಜೋಳ, ರಾಗಿ ಹಾಗೂ ತೃಣಧಾನ್ಯಗಳ ಬದಲಾಗಿ ಹೆಚ್ಚುತ್ತಿರುವ ಅಕ್ಕಿ, ಗೋಧಿ, ಹಾಲು, ಹಣ್ಣು, ಕಾಯಿಪಲ್ಲೆ, ಮೊಟ್ಟೆ ಇತ್ಯಾದಿಗಳ ಬಳಕೆ ಕೂಡಾ ನಮ್ಮ ಕೃಷಿ ಪದ್ಧತಿಗಳ ಮೇಲೆ ಪರಿಣಾಮ ಬೀರಿವೆ. ಇದರಿಂದ ಕೃಷಿ ಮಾರುಕಟ್ಟೆ ಹಾಗೂ ಬೆಲೆಯ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿ ಕೃಷಿ ಯೋಜನೆಗಳಲ್ಲಿ ಬದಲಾವಣೆ ಅವಶ್ಯವಾಗಿದೆ.

ಪ್ರಾದೇಶಿಕ ತಾರತಮ್ಯವು ಕೂಡಾ ಕೃಷಿ ಅಸ್ಥಿರತೆಗೆ ಕಾರಣ. ನೀರಾವರಿ ಹಾಗೂ ಅಚ್ಚುಕಟ್ಟು ಪ್ರದೇಶಗಳು ನಮ್ಮ ಕೃಷಿ ಸಂಶೋಧನೆಯಲ್ಲಿ, ಸರಕಾರದ ಯೋಜನೆಗಳಲ್ಲಿ, ಹಣಕಾಸಿನ ಲಭ್ಯತೆಯಲ್ಲಿ ಹಾಗೂ ಕೃಷಿ ಅಭಿವೃದ್ಧಿ ಕಾರ್ಯಗಳಲ್ಲಿ ಹೆಚ್ಚು ಮಹತ್ವ ಪಡೆದುಕೊಂಡಿವೆಯೇ ವಿನಃ ಒಣ ಪ್ರದೇಶಗಳಲ್ಲಲ್ಲ. ಇನ್ನು ಮುಂದೆ ಕೃಷಿ ಉತ್ಪಾದನೆಯಲ್ಲಿ ಹೆಚ್ಚಳ ಹಾಗೂ ಸ್ವಾವಲಂಬನೆ ಸಾಧಿಸಬೇಕಾದರೆ, ನಾವು ಒಣ ಪ್ರದೇಶಕ್ಕೆ ಹೆಚ್ಚು ಗಮನ ಕೊಡಬೇಕು. ನೀರಾವರಿ ಪ್ರದೇಶಗಳು ಇನ್ನೂ ಹೆಚ್ಚು ಒತ್ತಡವನ್ನು

ತಡೆಮುಕೊಳ್ಳಲು ಅಸಮರ್ಥವಾಗಿವೆ, ಲಘು ಪೋಷಕಾಂಶಗಳ ಕೊರತೆ ಕಂಡುಬಂದು ಉತ್ಪಾದಕತೆ ಕಡಿಮೆಯಾಗುತ್ತಿದೆ. ಸೌಳು, ಜೌಳು ಸಮಸ್ಯೆಗಳು ಉದ್ಭವಿಸಿ ಭೂಮಿ ಬರಡಾಗುತ್ತಿದೆ. ಈ ಪ್ರದೇಶಗಳಲ್ಲಿ ಕೀಟ ಮತ್ತು ರೋಗಗಳ ಸಮಸ್ಯೆಗಳು ಕೂಡಾ ತೀವ್ರಗೊಂಡು ಕೃಷಿ ಲಾಭದಾಯಕವಾಗುತ್ತಿಲ್ಲ. ಮೊದಲು ಸಾಧಿಸಿದ ಉತ್ಪಾದಕತೆ ವಿವಿಧ ಬೆಳೆಗಳಲ್ಲಿ ಕಡಿಮೆಯಾಗಿದೆ. ಕಾರಣ, ಇನ್ನೂ ಹೆಚ್ಚುತ್ತಿರುವ ಆಹಾರ ಉತ್ಪಾದನೆಯ ಬೇಡಿಕೆಯನ್ನು ಒಣ ಬೇಸಾಯ ಪ್ರದೇಶಗಳಿಂದ ಪಡೆಯುವುದು ಅನಿವಾರ್ಯವಾಗಿದೆ. ಒಣಪ್ರದೇಶಗಳ ಸಮಗ್ರ ಅಭಿವೃದ್ಧಿ ಕಡೆ ಹೆಚ್ಚು ಗಮನಹರಿಸಬೇಕಾಗಿದೆ.

ಒಣ ಪ್ರದೇಶಗಳಲ್ಲಿಯೂ ಕೂಡಾ ಹೆಚ್ಚುತ್ತಿರುವ ನೀರಿನ ಮತ್ತು ಮಣ್ಣಿನ ಸವಕಳಿ, ಇದರಿಂದ ಉದ್ಭವಿಸಿದ ಪೋಷಕಾಂಶಗಳ ಕೊರತೆ, ಅಕಾಲಿಕ ಮಳೆಯಿಂದ ಸಸ್ಯ ಸಂಪತ್ತು ನಶಿಸಿ ಭೂಮಿಯು ಕ್ಷಾರವಾಗಿ ಸಸ್ಯ ಪೋಷಣೆಗೆ ಸೂಕ್ತ ವಾತಾವರಣವಿಲ್ಲದೆ ಫಲವತ್ತತೆ ಕಳೆದುಕೊಂಡಿದೆ. ಹವಾಮಾನದ ವೈಪರೀತ್ಯ ಉಂಟಾಗಿ ಮಳೆಯ ಅಕಾಲಿಕ ಅಸಮರ್ಪಕ ಹಂಚುವಿಕೆಯಿಂದಾಗಿ ಅನಾವೃಷ್ಟಿ ಮತ್ತು ಅತಿವೃಷ್ಟಿಯಿಂದ ಹಾನಿ ಉಂಟಾಗುತ್ತಿದೆ. ಇಂತಹ ಸಂದಿಗ್ಧ ಸಂದರ್ಭದಲ್ಲಿ ಎರಡೂ ಪ್ರದೇಶಗಳ ಸಮತೋಲನ ಕಾಯ್ದುಕೊಂಡು ರೈತರ ಸಮಸ್ಯೆಗಳಿಗೆ ಪರಿಹಾರ ಹುಡುಕಿ ಅವರ ಆಶೆ ಆಕಾಂಕ್ಷೆಗಳಿಗೆ ಸ್ಪಂದಿಸುವದು ಕೃಷಿ ಸಂಶೋಧನೆಯ ಮುಖ್ಯ ಗುರಿಯಾಗಿದೆ.

ಕೃಷಿಯಲ್ಲಿ ಪ್ರತಿಶತ ೭೫ರಷ್ಟು ರೈತರು, ರೈತ ಕೂಲಿಕಾರರು ಹಾಗೂ ಕುಶಲ ಕರ್ಮಿಗಳು ಅನಕ್ಷರಸ್ಥರಾಗಿದ್ದು, ಕೃಷಿ ವಿಜ್ಞಾನದ ಹೊಸ ಹೊಸ ವಿಚಾರ ಹಾಗೂ ತಂತ್ರಜ್ಞಾನಗಳ ತಿಳಿವಳಿಕೆ ಮುಟ್ಟದೆ ಅಥವಾ ಆರ್ಥಿಕ ಸ್ಥಿತಿ, ಭೌಗೋಳಿಕ ಹಾಗೂ ಸಾಮಾಜಿಕ ಸ್ಥಿತಿ ವ್ಯತಿರಿಕ್ತವಾಗಿದ್ದು, ಈ ಪ್ರಯೋಜನ ಸಮಗ್ರವಾಗಿ ತಲುಪಿಲ್ಲ ಎಂದರೆ ತಪ್ಪಾಗಲಾರದು. ಈ ಎಲ್ಲಾ ವಿಷಯಗಳನ್ನು ಗಮನಿಸಿದಾಗ ಕೃಷಿಯಲ್ಲಿ ಮಹತ್ತರ ಬದಲಾವಣೆ ತರುವುದು ಮತ್ತು ನಿರಂತರವಾಗಿ ಸ್ಥಿರತೆಯ ಕಡೆಗೆ ಹೆಚ್ಚು ಗಮನ ಕೊಡುವುದು ಅವಶ್ಯ.

ನಿರಂತರ ಸುಸ್ಥಿರ ಕೃಷಿ, ಪ್ರಕೃತಿಯ ರಕ್ಷಣೆ, ಆಹಾರ ಭದ್ರತೆ, ಸಾಮಾಜಿಕ ಮತ್ತು ಹಣಕಾಸಿನ ಭದ್ರತೆ ಮತ್ತು ಅಭಿವೃದ್ಧಿಗೆ ಈ ಕೆಳಗಿನ ಅಂಶಗಳು ಪ್ರಾಮುಖ್ಯತೆ ಪಡೆದಿವೆ.

## ೧. ನೆಲ ಮತ್ತು ಜಲ ಸಂರಕ್ಷಣೆ :

ಪ್ರಾಕೃತಿಕ ಕೊಡುಗೆಗಳಾದ ನೆಲ ಮತ್ತು ಜಲಗಳೇ ಕೃಷಿಯ ಜೀವಾಳ, ಇವುಗಳ ಅಸಮರ್ಪಕ ಬಳಕೆ ಸರ್ವನಾಶಕ್ಕೆ ನಾಂದಿ. ಕಾರಣ ಈ ಸಂಪನ್ಮೂಲಗಳ ಸಂರಕ್ಷಣೆ ನಮ್ಮ ಆದ್ಯ ಕರ್ತವ್ಯ ಮತ್ತು ಕಾರ್ಯಕ್ರಮವಾಗಬೇಕು. ಪ್ರತಿ ವರ್ಷ ನಮ್ಮ ದೇಶದಲ್ಲಿ ೫೩,೦೦೦ ಮಿಲಿಯನ್ ಟನ್‌ನಷ್ಟು ಮಣ್ಣು ಸವಕಳಿ ಹೊಂದಿ ಸುಮಾರು ೮-೧೦ ಮಿಲಿಯನ್ ಟನ್‌ನಷ್ಟು ಪೋಷಕಾಂಶಗಳು ಹರಿದು ಜಲಾಶಯ ಸೇರುತ್ತವೆ. ಬಿದ್ದ ಮಳೆ ನೀರಿನ ಬಹುಭಾಗ (೨೦-೪೦%) ಹೊರಗೆ ಹರಿದು ಹೋಗಿ ತೇವಾಂಶದ ಕೊರತೆ ಕೂಡ ಗಮನಾರ್ಹವಾಗಿದೆ.

ನಮ್ಮ ರಾಜ್ಯದ ಬೇಸಾಯಕ್ಕೆ ಒಳಪಟ್ಟಿರುವ ೧೦.೨ ಮಿಲಿಯನ್ ಹೆಕ್ಟೇರ್ ಪ್ರದೇಶದಲ್ಲಿ ಶೇ. ೫೦ ರಷ್ಟು ಪ್ರದೇಶದ ವ್ಯವಸಾಯ ಅಕಾಲಿಕವಾಗಿಯೂ, ಅನಿಶ್ಚಿತವಾಗಿಯೂ ಹಾಗೂ ರಭಸದಿಂದ ಬೀಳುವ ಮಳೆಯ ಆಶ್ರಯವನ್ನು ಅವಲಂಬಿಸಿದೆ. ಕಡಿಮೆ ಮಳೆಯಾಗುವ ಈ ಪ್ರದೇಶದಲ್ಲಿ ಬೆಳೆಗಳ ಇಳುವರಿಯನ್ನು ಹೆಚ್ಚಿಸಿ ರೈತರ ಆರ್ಥಿಕ ಪರಿಸ್ಥಿತಿ ಸುಧಾರಿಸಲು ಮಣ್ಣು ಮತ್ತು ನೀರು ಸಂರಕ್ಷಣೆ ಅತೀ ಮುಖ್ಯವಾಗಿದೆ. ಈ ಪ್ರದೇಶದಿಂದ ಪ್ರತಿಶತ ೪೦ರಷ್ಟು ಆಹಾರ ಧಾನ್ಯ ಹಾಗೂ ೬೦ರಷ್ಟು ಎಣ್ಣೆಕಾಳು ಮತ್ತು ಬೇಳೆಕಾಳುಗಳ ಉತ್ಪಾದನೆಯಾಗುತ್ತಿದೆ. ಈ ದಿಶೆಯಲ್ಲಿ ಕೃಷಿ ಸಂಶೋಧನಾ ಕೇಂದ್ರ, ಬಿಜಾಪುರ, ರಾಷ್ಟ್ರೀಯ ಮಣ್ಣು ಮತ್ತು ನೀರು ಸಂರಕ್ಷಣಾ ಸಂಶೋಧನಾ ಕೇಂದ್ರ, ಬಳ್ಳಾರಿ, ಮುಖ್ಯ ಸಂಶೋಧನಾ ಕೇಂದ್ರ, ಬೆಂಗಳೂರು ಹಾಗೂ ಇತರ ಕೇಂದ್ರಗಳಲ್ಲಿ ವಿವಿಧ ಮಣ್ಣು ಮತ್ತು ನೀರು ಸಂರಕ್ಷಣೆ ಪದ್ಧತಿಗಳನ್ನು ಅಭಿವೃದ್ಧಿಪಡಿಸಲಾಗಿದ್ದು, ವಿವಿಧ ಬೆಳೆಗಳಲ್ಲಿ ಪ್ರತಿಶತ ೨೫-೫೦ರಷ್ಟು ಹೆಚ್ಚಿನ ಇಳುವರಿ ಪಡೆಯಲಾಗಿದೆ. ಬಿದ್ದ ಮಳೆ ನೀರು ಹರಿದುಹೋಗಿ ಪೋಲಾಗದಂತೆ ಅದರ ಪ್ರತಿಯೊಂದು ಹನಿಯನ್ನು ನೆಲದಲ್ಲಿ ಇಂಗಿಸುವದು ಒಣ ಬೇಸಾಯ ಪ್ರದೇಶದ ಗುರಿಯಾಗಬೇಕು.

ಇದೀಗ ಜಲಾನಯನ ಅಭಿವೃದ್ಧಿ ಯೋಜನೆಯಡಿ ಪ್ರದೇಶವೊಂದರ ನೆಲ, ಜಲ, ಪ್ರಾಣಿ, ಸಸ್ಯ ಸಂಪತ್ತುಗಳೊಂದಿಗೆ ಪರಿಸರದ ಒಟ್ಟಾರೆ ಅಭಿವೃದ್ಧಿ ಕಾರ್ಯಕ್ರಮಗಳ ಅಳವಡಿಕೆಗೆ ಪ್ರಾಮುಖ್ಯತೆ ನೀಡಲಾಗುತ್ತಿದೆ. ಮಣ್ಣು ಮತ್ತು ನೀರು ಇವು ರಾಷ್ಟ್ರದ ಸಂಪತ್ತು. ಇವುಗಳ ರಕ್ಷಣೆಯಲ್ಲಿ ಸರ್ಕಾರದ ಪಾತ್ರವೂ ಪ್ರಮುಖ. ಈ ದಿಶೆಯಲ್ಲಿ ರಾಜ್ಯ ಸರ್ಕಾರಗಳು ಹಾಗೂ ಕೇಂದ್ರ ಸರ್ಕಾರ

ಸಾಕಷ್ಟು ಕಾರ್ಯಯೋಜನೆಗಳನ್ನು ಹಾಕಿಕೊಂಡಿದ್ದು ಅವು ಫಲಪ್ರದವಾಗಬೇಕು. ಪದ್ಮಶ್ರೀ ಅಣ್ಣಾ ಹಜಾರೆಯಂತಹ ಧೀಮಂತ ನಾಯಕರು ಜಲಾನಯನ ಯೋಜನೆ ಸಾಮಾನ್ಯ ಜನರು ಅರ್ಥ ಮಾಡಿಕೊಳ್ಳಬಹುದಾದ ಮತ್ತು ಅನುಸರಿಸಬಹುದಾದ ಕ್ರಮವೆಂದು ತೋರಿಸಿಕೊಟ್ಟು, ಪ್ರಕೃತಿ ಸಂಪನ್ಮೂಲಗಳ ಉತ್ಪಾದನಾ ಸಾಮರ್ಥ್ಯ ಹೆಚ್ಚಿಸುವಲ್ಲಿ ಮಾದರಿಯಾಗಿದ್ದಾರೆ. ತಾಂತ್ರಿಕ ವಿಧಾನಗಳಿಂದ, ಜೈವಿಕ ವಿಧಾನಗಳಿಂದ ಹಾಗೂ ಬೆಳೆ ಪದ್ಧತಿಗಳಿಂದ ಸೂಕ್ತ ಜಲ-ನೆಲ ಸಂರಕ್ಷಣಾ ಕಾರ್ಯಗಳನ್ನು ಕೈಗೊಳ್ಳಬೇಕು.

ಭೂಮಿಯ ಉತ್ಪಾದನಾ ಸಾಮರ್ಥ್ಯ ಮತ್ತು ಬೀಳುವ ಮಳೆಯನ್ನಾಧರಿಸಿ ಕೃಷಿ, ಹುಲ್ಲುಗಾವಲು, ತೋಟಗಾರಿಕೆ ಹಾಗೂ ಅರಣ್ಯ ಬೆಳೆಗಳ ಉತ್ಪಾದನಾ ಯೋಜನೆಯ ಅನುಕರಣೆ ಮತ್ತು ಆಧುನಿಕ ಒಣ ಬೇಸಾಯ ತಾಂತ್ರಿಕತೆಗಳನ್ನು ಅನುಸರಿಸುವುದರಿಂದ ಕೃಷಿಯನ್ನು ಲಾಭದಾಯಕವನ್ನಾಗಿ ಮಾಡುವುದರಲ್ಲಿ ಸಂದೇಹವಿಲ್ಲ.

## ೨. ಸಸ್ಯತಳಿ ಅಭಿವೃದ್ಧಿ ಹಾಗೂ ಕೃಷಿ ಜೈವಿಕ ತಂತ್ರಜ್ಞಾನ :

ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಉತ್ತಮ ತಳಿಗಳ ಪಾತ್ರ ಬಹಳ ಮುಖ್ಯವಾದದ್ದು. ಕೃಷಿಯಲ್ಲಿ ಸುಧಾರಿತ ತಳಿಗಳನ್ನು ಉಪಯೋಗಿಸುವುದರಿಂದ, ಪ್ರತಿಶತ ೩೦ರಷ್ಟು ಅಧಿಕ ಇಳುವರಿ ಪಡೆಯಲು ಸಾಧ್ಯವೆಂದು ತಿಳಿದುಬಂದಿದೆ. ಕೃಷಿ ವಿಶ್ವವಿದ್ಯಾಲಯ, ಧಾರವಾಡ ಮತ್ತು ಬೆಂಗಳೂರು ಹಾಗೂ ಇತರ ಸಂಸ್ಥೆಗಳು ವಿವಿಧ ಬೆಳೆಗಳಲ್ಲಿ ಅಧಿಕ ಇಳುವರಿ ಕೊಡುವ, ಉತ್ತಮ ಗುಣಮಟ್ಟ ಹೊಂದಿದ ತಳಿಗಳನ್ನು ಅಭಿವೃದ್ಧಿಪಡಿಸಿವೆ. ಪ್ರಪಂಚದಲ್ಲಿಯೇ ಮೊಟ್ಟ ಮೊದಲ ಬಾರಿಗೆ ೧೯೭೧ರಲ್ಲಿ ವರಲಕ್ಷ್ಮೀ ಅಂತರ ಜಾತಿಯ ಸಂಕರಣ ತಳಿಯನ್ನು ಧಾರವಾಡ ಕೇಂದ್ರದಲ್ಲಿ ಅಭಿವೃದ್ಧಿಪಡಿಸಲಾಯಿತು. ಇದು ಹತ್ತಿ ಉತ್ಪಾದನೆಯಲ್ಲಿ ಒಂದು ಹೊಸ ಆಯಾಮವನ್ನು ಸೃಷ್ಟಿಸಿತು ಮತ್ತು ರೈತರು ಇದರ ಸಂಪೂರ್ಣ ಪ್ರಯೋಜನ ಪಡೆದುಕೊಂಡು ತಮ್ಮ ಆರ್ಥಿಕ ಪರಿಸ್ಥಿತಿ ಸುಧಾರಿಸಿಕೊಂಡರು. ಹೀಗೆ ವಿವಿಧ ಬೆಳೆಗಳಲ್ಲಿ ತಳಿ ಅಭಿವೃದ್ಧಿ ಕಾರ್ಯಕ್ರಮ ಕೈಗೊಂಡು ಹಸಿರು ಕ್ರಾಂತಿಯ ಮುಖಾಂತರ ಆಹಾರ ಉತ್ಪಾದನೆಯಲ್ಲಿ ಸ್ವಾವಲಂಬನೆಯನ್ನು ಸಾಧಿಸಲಾಯಿತು.

ಅನೇಕ ಬೆಳೆಗಳಲ್ಲಿ ಪ್ರಸ್ತುತ ತಳಿಗಳ ಇಳುವರಿ ಈಗಾಗಲೇ ಗರಿಷ್ಠ ಪ್ರಮಾಣ ಮುಟ್ಟಿರುವುದರಿಂದ ಇನ್ನೂ ಹೆಚ್ಚಿನ ಇಳುವರಿಯಲ್ಲಿಯ ಸಾಮರ್ಥ್ಯ ಭೇದಿಸಬೇಕಾಗಿರುವುದು ಅವಶ್ಯವಾಗಿದೆ. ಸಾಂಪ್ರದಾಯಿಕ ಪದ್ಧತಿಗಳಲ್ಲಿ ಇತ್ತೀಚೆಗೆ ಜೈವಿಕ ತಂತ್ರಜ್ಞಾನ ಉಪಯೋಗಿಸಿ ವರ್ಣ ತಂತುಗಳ/ವಂಶವಾಹಿನಿಗಳ ಕಸಿಯಿಂದ ಉತ್ಪಾದನೆ ಹೆಚ್ಚಿಸಬಹುದು ಅಥವಾ ನಮಗೆ ಬೇಕಾದ ಗುಣ-ಧರ್ಮಗಳನ್ನು ಪ್ರಚಲಿತ ತಳಿಗಳಲ್ಲಿ ಅಳವಡಿಸಿ ಲಾಭ ಪಡೆಯಬಹುದಾಗಿದೆ. ಬರ ನಿರೋಧಕತೆ, ಕೀಟ ಮತ್ತು ರೋಗಗಳಿಗೆ ನಿರೋಧಕ ಸಾಮರ್ಥ್ಯ ಮತ್ತು ಉತ್ಪನ್ನ ಗುಣಮಟ್ಟದಲ್ಲಿ ಹೆಚ್ಚಳ ಹೀಗೆ ವಿವಿಧ ರೀತಿಯಿಂದ ಈ ತಂತ್ರಜ್ಞಾನ ಬಳಸಿ ಅಳವಡಿಸಬೇಕು. ಇದುವರೆಗಿನ ಸಂಶೋಧನೆಗಳಿಂದ ಹತ್ತಿ, ಗೋವಿನ ಜೋಳದಲ್ಲಿ ಬಿಟಿ ತಳಿಗಳು, ರೌಂಡ್‌ಅಪ್ ಸೋಯಾಬಿನ್, ವಿಟಾಮಿನ್ 'ಎ' ಹೊಂದಿರುವ ಬಂಗಾರದ ಅಕ್ಕಿ, ಸಾಸುವೆ ಇತ್ಯಾದಿ ಕೆಲವೊಂದು ಉದಾಹರಣೆಗಳು. ಪರಿಸರವಾದಿಗಳು ಟರ್ಮಿನೇಟರ್ ವಂಶವಾಹಿ ಬಳಕೆಯಿಂದ ನೈಸರ್ಗಿಕ ವೈವಿಧ್ಯತೆಯು ನಾಶವಾಗಬಹುದೆಂದು ಆತಂಕ ವ್ಯಕ್ತಪಡಿಸಿ ಇವುಗಳ ಬಳಕೆಯನ್ನು ಆಕ್ಷೇಪಿಸುತ್ತಿರುವುದುಂಟು. ಆದರೆ ಜೈವಿಕ ತಂತ್ರಜ್ಞಾನದ ಬಳಕೆ ನಮ್ಮ ಕೃಷಿಯ ಸಮಸ್ಯೆಗಳಿಗೆ ಸೂಕ್ತ ಪರಿಹಾರ ನೀಡುವುದರಲ್ಲಿ ಸಂದೇಹವಿಲ್ಲ ಮತ್ತು ಇದರಲ್ಲಿ ಈಗ ಟರ್ಮಿನೇಟರ್ ವಂಶವಾಹಿಗಳನ್ನು ಬಳಸುತ್ತಿಲ್ಲ. ಹೆಚ್ಚಿನ ಸಂಶೋಧನೆ ಮತ್ತು ಆರ್ಥಿಕ ಬಳಕೆಗೆ ಉತ್ತೇಜನ ನೀಡುವುದು ಅವಶ್ಯ.

## ೩. ಮಣ್ಣಿನ ಫಲವತ್ತತೆಗೆ ಸಮಗ್ರ ಪೋಷಕಾಂಶಗಳ ನಿರ್ವಹಣೆ ಹಾಗೂ ತ್ಯಾಜ್ಯ ವಸ್ತುಗಳ ಮರುಬಳಕೆ :

ಕೃಷಿ ಲಾಭದಾಯಕ ಮತ್ತು ನಿರಂತರವಾಗಿ ಸುಸ್ಥಿರವಾಗಿರಬೇಕಾದರೆ, ಮಣ್ಣಿನಲ್ಲಿರುವ ಪೋಷಕಾಂಶಗಳು ಅದರ ಭೌತಿಕ, ರಾಸಾಯನಿಕ ಮತ್ತು ಜೈವಿಕ ಕ್ರಿಯೆ ಕಾಪಾಡಿಕೊಂಡು ಬರುವುದು ಬಹಳ ಮುಖ್ಯ. ಕೃಷಿಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದ್ದರೂ ಉತ್ಪಾದಕತೆಯ ಮಟ್ಟ ಕಾಯ್ದುಕೊಳ್ಳಲು ಸಾಧ್ಯವಾಗುತ್ತಿಲ್ಲ. ಈ ವಿಶಾಲ ಕೃಷಿ ಪ್ರದೇಶದಲ್ಲಿ ಸಾಧ್ಯವಿರುವ ಉತ್ಪಾದಕತೆ ಕಾಯ್ದುಕೊಳ್ಳಲು ರಸಾಯನಿಕಗಳ ಉಪಯೋಗ ಅತ್ಯವಶ್ಯ. ಖ್ಯಾತ ಕೃಷಿ ವಿಜ್ಞಾನಿ ಡಾ. ಬೊರಲಾಗ್ ಅವರು ಹಸಿರು ಕ್ರಾಂತಿಗೆ ಅಧಿಕ ಇಳುವರಿ ಕೊಡುವ ತಳಿಗಳಿಗೆ ಇಂಧನವಾಗಿ ರಸಗೊಬ್ಬರಗಳ ಬಳಕೆಯಾಗಿ ಗುರಿ ಸಾಧಿಸಲಾಯಿತು ಎಂದು ಅಭಿಪ್ರಾಯಪಟ್ಟಿದ್ದಾರೆ. ರಸಗೊಬ್ಬರಗಳ ಬಳಕೆ ಅವಶ್ಯ, ಆದರೆ ಅದರ ಜೊತೆಗೆ ಸಮಗ್ರವಾಗಿ ಸಾವಯವ ಗೊಬ್ಬರಗಳನ್ನು ಇತರ ಮೂಲಗಳಿಂದ ಪೋಷಕಾಂಶ ಪೂರೈಸುವುದು

ಸ್ಥಿರ ಕೃಷಿಗೆ ಅವಶ್ಯ. ನಮ್ಮ ದೇಶದಲ್ಲಿ ೧೭.೮೫ ಮಿಲಿಯನ್ ಟನ್‌ನಷ್ಟು ರಸಗೊಬ್ಬರ ಬಳಕೆಯಾಗುತ್ತಿದ್ದು, ಅದರಲ್ಲಿ ಪ್ರತಿಶತ ೬೫ರಷ್ಟು ಸಾರಜನಕಯುಕ್ತ ಗೊಬ್ಬರಗಳಾಗಿವೆ (ಎಫ್.ಎ.ಅಯ್. ೨೦೦೧). ಸರಾಸರಿ ಗೊಬ್ಬರದ ಬಳಕೆ ೧೦೬ ಗ್ರಾಂ. ಪ್ರತಿ ಹೆಕ್ಟೇರಿಗೆ ಇದ್ದು, ಇದು ಚೀನಾ, ಜಪಾನ್, ಇಂಗ್ಲೆಂಡ್, ಕೊರಿಯಾ ಮತ್ತು ನೆದರಲ್ಯಾಂಡ್ ರಾಷ್ಟ್ರಗಳಿಗೆ (ಅನುಕ್ರಮವಾಗಿ ೨೭೧, ೨೯೫, ೩೪೩, ೪೫೯ ಹಾಗೂ ೫೦೧ ಕಿ.ಗ್ರಾಂ./ಹ) ಹೋಲಿಸಿದರೆ ಬಹಳ ಕಡಿಮೆ. ಆಹಾರ ಉತ್ಪಾದನೆ ಹೆಚ್ಚಿಸಬೇಕಾದರ ನಾವು ರಸಗೊಬ್ಬರಗಳ ಬಳಕೆಯನ್ನು, ಅದರ ಮೇಲಿನ ಅವಲಂಬನೆಯನ್ನು ಕಡೆಗಣಿಸುವಂತಿಲ್ಲ. ಭೂಮಿಯ ಫಲವತ್ತತೆಗೆ ಅನುಗುಣವಾಗಿ ರಸಗೊಬ್ಬರಗಳನ್ನು ಬಳಸಬೇಕು ಮತ್ತು ರಸಗೊಬ್ಬರಗಳ ಸಮರ್ಥ ಬಳಕೆಯತ್ತ ಹೆಚ್ಚು ಗಮನ ಕೊಡಬೇಕು. ರಸಗೊಬ್ಬರಗಳ ಬಳಕೆ ಸಾಮರ್ಥ್ಯವು ಸಾರಜನಕ, ರಂಜಕ ಮತ್ತು ಪೊಟ್ಯಾಷ್ ಗೊಬ್ಬರಗಳಲ್ಲಿ ಅನುಕ್ರಮವಾಗಿ ೩೦-೫೦, ೧೫-೨೦ ಮತ್ತು ೭೦-೭೫ ಪ್ರತಿಶತದಷ್ಟು ಇದೆ. ರಸಗೊಬ್ಬರಗಳ ಸದ್ಬಳಕೆಯಿಂದ, ರಸಗೊಬ್ಬರಗಳ ಸಮರ್ಥ ಬಳಕೆಯಾಗುವುದಲ್ಲದೇ, ಇದರಿಂದ ಭೂಮಿಯ ರಸಸಾರದ ಮೇಲೆ ಆಗುವ ಏರಿಳಿತ, ಲವಣಾಂಶದ ಹೆಚ್ಚಳ, ಕುಡಿಯುವ ನೀರು ಮಲಿನಗೊಳ್ಳುವಿಕೆ ಮತ್ತು ವಾತಾವರಣದಲ್ಲಿಯ ಉಷ್ಣತೆಯಲ್ಲಿ ಹೆಚ್ಚುವಿಕೆ ಮುಂತಾದ ತೊಂದರೆಗಳನ್ನು ಬಗೆಹರಿಸಬಹುದು. ಒಂದು ಸಮೀಕ್ಷೆಯ ಪ್ರಕಾರ ದೇಶದಲ್ಲಿಯ ಸದ್ಯದ ಬಳಕೆ ಸಾಮರ್ಥ್ಯವನ್ನು ಪ್ರತಿಶತ ೧೦ರಷ್ಟು ಹೆಚ್ಚಿಸುವುದರಿಂದ ರಸಗೊಬ್ಬರಗಳ ಬೇಡಿಕೆ ಪ್ರಮಾಣವನ್ನು ಸಾಕಷ್ಟು ಪ್ರಮಾಣದಲ್ಲಿ ಈಡೇರಿಸಲು ಸಾಧ್ಯವಾಗಬಹುದೆಂದು ಊಹಿಸಲಾಗಿದೆ. ರಸಗೊಬ್ಬರಗಳ ಸಾಮರ್ಥ್ಯ ಹೆಚ್ಚಿಸುವುದು ಗೊಬ್ಬರಗಳ ಬಳಕೆ ದೃಷ್ಟಿಯಿಂದ ಮಹತ್ವದ ಅಂಶವಾಗಿದ್ದು ಈ ಕೆಳಗಿನ ಅಂಶಗಳನ್ನು ಪರಿಗಣಿಸಬೇಕು :

* ಸೂಕ್ತ ಪ್ರಮಾಣದಲ್ಲಿ ಮತ್ತು ಸರಿಯಾದ ಸಮಯದಲ್ಲಿ ರಸಗೊಬ್ಬರದ ಬಳಕೆ.

* ಸರಿಯಾದ ಪದ್ಧತಿಯಿಂದ ರಸಗೊಬ್ಬರ ಪೂರೈಕೆ-ಸಿಂಪರಣೆ, ನಿಧಾನವಾಗಿ ಕರಗುವ ರಸಗೊಬ್ಬರಗಳು, ರಸಗೊಬ್ಬರಗಳನ್ನು ಉಪಚರಿಸುವುದು, ರಸಾವರಿ ಪದ್ಧತಿ ಅನುಸರಿಸುವುದು ಇತ್ಯಾದಿ.

* ಸಮತೋಲನ ಪೋಷಕಾಂಶಗಳ ಬಳಕೆ-ರಸಗೊಬ್ಬರ ಸಾವಯವ ಗೊಬ್ಬರಗಳ ಸಮಗ್ರ ಬಳಕೆ.

* ಮಣ್ಣಿನಲ್ಲಿ ತೇವಾಂಶ ಹಂತಗಳ ಹಾಗೂ ಬೆಳೆಯ ಬೆಳವಣಿಗೆ ಹಂತಗಳ ಮತ್ತು ಆಯಾ ಹಂತಗಳಲ್ಲಿ ಪೋಷಕಾಂಶಗಳ ಬೇಡಿಕೆಯ ಪರಿಜ್ಞಾನ.

* ಸೂಕ್ತ ಬೆಳೆ ಯೋಜನೆ ಹಾಗೂ ಕೃಷಿ ತಾಂತ್ರಿಕತೆ ಅಳವಡಿಕೆ.

ಈಗ ಕೃಷಿ ಮತ್ತು ಕೃಷಿಯೇತರ ಕೈಗಾರಿಕೆಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ತ್ಯಾಜ್ಯ ವಸ್ತುಗಳು ದೊರೆಯುತ್ತಿದ್ದು, ಅವುಗಳ ಸಮರ್ಪಕ ಮರು ಬಳಕೆಯಾಗದಿರುವುದರಿಂದ ಪರಿಸರ ಕಲುಷಿತಗೊಳ್ಳುತ್ತಿದೆ. ಈ ತ್ಯಾಜ್ಯ ವಸ್ತುಗಳನ್ನು ಮೂಲ ಇಲ್ಲವೆ ಪರಿವರ್ತಿತ ರೂಪದಲ್ಲಿ ಕೃಷಿಯಲ್ಲಿ ಬಳಸಬಹುದು. ಕಬ್ಬಿಣ, ತಾಮ್ರ, ಬಂಗಾರ ಇತ್ಯಾದಿ ಉತ್ಪಾದನಾ ಕಾರ್ಖಾನೆಗಳ ಅವಶೇಷಗಳನ್ನು ಮತ್ತು ಥರ್ಮಲ್ ವಿದ್ಯುದಾಗಾರದ ಬೂದಿ ಬಳಕೆಯಿಂದ ಕೃಷಿ ಉತ್ಪಾದನೆಯಲ್ಲಿ ವೃದ್ಧಿ ಸಾಧ್ಯವೆಂದು ಸಂಶೋಧನೆಯಿಂದ ತಿಳಿದು ಬಂದಿದೆ.

## ೪. ಸಾವಯವ ಕೃಷಿಗೆ ಉತ್ತೇಜನ :

ಸಾವಯವ ಕೃಷಿ ಇತ್ತೀಚೆಗೆ ಹೆಚ್ಚು ಪ್ರಚಾರ ಪಡೆಯುತ್ತಿರುವ ಒಂದು ಪರ್ಯಾಯ ಕೃಷಿ ಪದ್ಧತಿಯಾಗಿದೆ. ಇದು ಈ ಆಧುನಿಕ ಕೃಷಿಗೆ ಒಂದು ಪರ್ಯಾಯ ಕೃಷಿಯಾಗಿದ್ದು, ಸ್ಥಿರ ಕೃಷಿಗೆ ದಾರಿ ಮಾಡಿಕೊಡಬಲ್ಲದು. ಜಗತ್ತಿನಾದ್ಯಂತ ಸಾವಯವ ಆಹಾರೋತ್ಪನ್ನಗಳಿಗೆ ವಿಶೇಷ ಬೇಡಿಕೆ ಬಂದು ಸಾವಯವ ಕೃಷಿ ನಮ್ಮ ದೇಶಕ್ಕೆ ಹಾಗೂ ರೈತರಿಗೆ ವರವಾಗಿ ಪರಿಣಮಿಸುವುದರಲ್ಲಿ ಸಂದೇಹವಿಲ್ಲ. ಸಾವಯವ ಕೃಷಿ ಅಂದರೆ, ಕೃಷಿಯಲ್ಲಿ ಸಾವಯವ ಪದಾರ್ಥಗಳ ಬಳಕೆಯಿಂದ ಹಾಗೂ ಜೈವಿಕ ವಿಧಾನಗಳಿಂದ ಮಣ್ಣಿನ ಫಲವತ್ತತೆ ಹಾಗೂ ಉತ್ಪಾದಕತೆ ಹೆಚ್ಚಿಸುವುದು. ಕೀಟ ಮತ್ತು ರೋಗಗಳನ್ನು ನಿರ್ವಹಿಸುವುದು, ತನ್ಮೂಲಕ ಸ್ವಾಭಾವಿಕ ಜೈವಿಕ ಕ್ರಿಯೆಗಳನ್ನು ತ್ವರಿತಗೊಳಿಸುವುದು. ಉತ್ಪಾದಕತೆ ಹೆಚ್ಚಿಸುವುದು, ಉತ್ಪಾದನಾ ವೆಚ್ಚವನ್ನು ಕಡಿಮೆಗೊಳಿಸಿ ನಿವ್ವಳ ಲಾಭವನ್ನು ಹೆಚ್ಚಿಸುವುದು. ಆಧುನಿಕ ಕೃಷಿಯಲ್ಲಿ ಅನಿಶ್ಚಿತತ ರೈತರ ಸಮಸ್ಯೆಯಾಗಿರುವುದರಿಂದ ಕೃಷಿಯಲ್ಲಿ ಭರವಸೆ ಮೂಡಿಸುವುದು ಇದರ ಮುಖ್ಯ ಉದ್ದೇಶ.

ಸಾವಯವ ಕೃಷಿಯಲ್ಲಿ ರೈತರು ಹೆಚ್ಚು ಆಸಕ್ತಿ ತೋರಿಸುತ್ತಿದ್ದಾರೆ. ರೈತರ ಉತ್ತೇಜನದಿಂದ ಪ್ರಾರಂಭಗೊಂಡ ಸಾವಯವ ಕೃಷಿ ರೈತರಿಂದ ರೈತರಿಗೆ ನೇರ ಪ್ರಸಾರ ಹೊಂದುತ್ತಿದೆ. ಕೆಲವು ರೈತರು ಸಮಗ್ರ ರೀತಿಯಿಂದ ಸಾವಯವ ಕೃಷಿ ಅಳವಡಿಸಿ ಅದರಿಂದ ಸಂತುಷ್ಟರಾಗಿ ಅವರ ಕೃಷಿ ಕ್ಷೇತ್ರಗಳು ಸಾವಯವ ಕೃಷಿ ಆಸಕ್ತರಿಗೆ ಮಾರ್ಗದರ್ಶನ ನೀಡುತ್ತಿವೆ. ಈ ಸಾವಯವ ಕೃಷಿ ವೈಜ್ಞಾನಿಕವಾಗಿ, ಅಭಿವೃದ್ಧಿ ಹೊಂದಿ ವಾಣಿಜ್ಯೀಕರಣ ಹೊಂದುವುದು ಮತ್ತು ವಿವಿಧ ಮೂಲಗಳ ಮುಖಾಂತರ ತಾಂತ್ರಿಕತೆ ಲಭ್ಯಗೊಂಡು ಸಧೃಡವಾಗಿ ಬೆಳೆಯಬೇಕು. ಈ ದಿಶೆಯಲ್ಲಿ ವಿಶ್ವವಿದ್ಯಾಲಯಗಳು, ಸರಕಾರಿ ಮತ್ತು ಸರಕಾರೇತರ ಸಂಸ್ಥೆಗಳು ಸಮಗ್ರ ರೀತಿಯಿಂದ ಸಾವಯವ ಕೃಷಿಗೆ ಪೂರಕವಾಗುವ ಯೋಜನೆಗಳನ್ನು, ರಾಜನೀತಿ ಮತ್ತು ಕಾರ್ಯನೀತಿಗಳನ್ನು ಹಾಕಿಕೊಳ್ಳಬೇಕಾಗಿದೆ. ಈ ದಿಶೆಯಲ್ಲಿ ಇತ್ತೀಚೆಗೆ ಕರ್ನಾಟಕ ಸರ್ಕಾರವು ಸಾವಯವ ಕೃಷಿ ನೀತಿಯನ್ನು ಸಿದ್ಧಪಡಿಸುತ್ತಲಿದ್ದು ರಾಜ್ಯದಲ್ಲಿ ಸಾವಯವ ಕೃಷಿಗೆ ಉತ್ತೇಜನ ದೊರಕಲಿದೆ. ಸಾವಯವ ಉತ್ಪನ್ನಗಳಿಗೆ ಮಾರುಕಟ್ಟೆಯಲ್ಲಿ ವಿಶೇಷ ಸ್ಥಾನಮಾನ, ಬೆಲೆ ಸಿಗುವಲ್ಲಿ, ಬಳಕೆದಾರರ ವಿಶೇಷ ಬೇಡಿಕೆ ಹಾಗೂ ರಫ್ತು ಬೇಡಿಕೆಗೆ ಇನ್ನೂ ಹೆಚ್ಚಿನ ಮಾನ್ಯತೆ ಸಿಕ್ಕಿಲ್ಲ. ಸಾವಯವ ಕೃಷಿ ಸಾಮಾನ್ಯ ರೈತನಿಗೆ ಮುಟ್ಟಬೇಕು, ಅವನಿಗೆ ಶಕ್ಯವಾದ ತಂತ್ರಜ್ಞಾನ ಲಭ್ಯವಾಗಬೇಕು, ಅದರಲ್ಲಿ ಸರಳತೆ ತರಬೇಕು ಹಾಗೂ ಆಧುನಿಕ ಕೃಷಿ ಜೊತೆಗೆ ಇದರ ಸಂಯೋಗವಾಗಬೇಕು. ಅದರಲ್ಲಿರುವ ಮಹತ್ತರ ಪರಿಸರ ಪೂರಕ ತಂತ್ರಜ್ಞಾನಗಳನ್ನು ಅಳವಡಿಸಿ, ಸಾವಯವ ಮೂಲಗಳನ್ನು ಅಭಿವೃದ್ಧಿಪಡಿಸುವುದರಿಂದ ಸಾವಯವ ಕೃಷಿಯನ್ನು ಇನ್ನೂ ಸಧೃಡ ಮಾಡಬಹುದು.

## ೫. ತೋಟಗಾರಿಕೆ ಅಭಿವೃದ್ಧಿ :

ಕೃಷಿ ಕ್ಷೇತ್ರದಲ್ಲಿ ದೇಶವು ಆಹಾರ ಧಾನ್ಯಗಳ ಉತ್ಪಾದನೆಯಲ್ಲಿ ಗಮನಾರ್ಹ ಹೆಚ್ಚಳ ಮಾಡಿ ಅರವತ್ತರ ದಶಕದಲ್ಲಿ ಹಸಿರು ಕ್ರಾಂತಿಯನ್ನು ಕಂಡರೆ, ರಾಷ್ಟ್ರವು ಇಂದು ತೋಟಗಾರಿಕಾ ಕ್ಷೇತ್ರದಲ್ಲಿ ದಾಪುಗಾಲು ಹಾಕುತ್ತಿದೆ. ಒಂದು ಕಾಲದಲ್ಲಿ ಒಣ ಪ್ರದೇಶ ಎಂದು ಮೂದಲಿಸಲ್ಪಡುತ್ತಿದ್ದ ಬಿಜಾಪುರ ಜಿಲ್ಲೆಯು ಇಂದು ಪ್ರಮುಖ ತೋಟಗಾರಿಕಾ ಬೆಳೆಗಳ ಬೀಡಾಗಿರುವುದು ಇದಕ್ಕೆ ಪುಷ್ಟಿ ನೀಡುತ್ತದೆ. ದ್ರಾಕ್ಷಿ ಮತ್ತು ಇತರೆ ಅನೇಕ ಹಣ್ಣುಗಳ ಕಣಜವಾಗಿರುವ ಬಿಜಾಪುರ ಮತ್ತು ಬಾಗಲಕೋಟೆ ಪ್ರದೇಶಗಳು ತೋಟಗಾರಿಕಾ ಜಿಲ್ಲೆಗಳು ಎಂದು ರಾಜ್ಯದಲ್ಲಿ ಗುರುತಿಸಲ್ಪಟ್ಟಿರುವುದು ಹೆಮ್ಮೆಯ ಸಂಗತಿ. ಇದೇ ರೀತಿ ಆರ್ಥಿಕವಾಗಿ ಹಿಂದುಳಿದ ಪ್ರದೇಶಗಳಾದ ಹೈದ್ರಾಬಾದ್ ಕರ್ನಾಟಕದಲ್ಲಿ ಕೂಡ ತೋಟಗಾರಿಕೆ ಬೆಳೆಗಳಿಗೆ ಒಳ್ಳೆಯ ಅವಕಾಶಗಳಿವೆ. ಈ ಪ್ರದೇಶದಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯಿಂದ ನೀರಾವರಿ ಅಭಿವೃದ್ಧಿಯಾಗಿರುವುದು ತೋಟಗಾರಿಕೆ ಅಭಿವೃದ್ಧಿಗೆ ಪೂರಕವಾಗಿದೆ. ಇದಕ್ಕೆ ಒತ್ತು ಕೊಟ್ಟರೆ, ಈ ಪ್ರದೇಶವು ಅಭಿವೃದ್ಧಿಯಾಗುವುದರಲ್ಲಿ ಸಂಶಯವಿಲ್ಲ.

ಇವೊತ್ತು ಹೂಗಳು ಪೂಜಾ ಕೋಣೆಗೆ ಮಾತ್ರವೇ ಸೀಮಿತವಾಗಿರದೇ ಹೊರದೇಶಗಳಿಗೂ ರಫ್ತಾಗುತ್ತಿರುವ ವಸ್ತುವಾಗಿದ್ದು ಪುಷ್ಪ ಕೃಷಿ ಬೃಹತ್ ಉದ್ಯಮವಾಗಿ ಬೆಳೆದಿದೆ. ರಫ್ತಾಗುತ್ತಿರುವ ಒಟ್ಟಾರೆ ಕೃಷಿ ಉತ್ಪನ್ನಗಳಲ್ಲಿ ಅತಿ ಹೆಚ್ಚು ವಿದೇಶಿ ವಿನಿಮಯ ತರುತ್ತಿರುವ ಸಾಂಬಾರ ಪದಾರ್ಥಗಳು ಪ್ರಮುಖ ತೋಟಗಾರಿಕಾ ಬೆಳೆಗಳು ಎನ್ನುವುದು ಗಮನಾರ್ಹ. ಇಂದು ಎಲ್ಲರ ಆಸಕ್ತಿ ನೈಸರ್ಗಿಕ ಉತ್ಪನ್ನಗಳತ್ತ ಹರಿಯುತ್ತಿದ್ದು ಔಷಧೀಯ ಸಸ್ಯ ಹಾಗೂ ಸುಗಂಧ ದ್ರವ್ಯ ಸಸ್ಯಗಳಿಗೆ ಪ್ರಾಮುಖ್ಯತೆ ಹೆಚ್ಚುತ್ತಿದೆ. ಸುಮಾರು ಐವತ್ತು ಬಗೆಗೂ ಮೀರಿದ ಆರೋಗ್ಯವರ್ಧಕ ತರಕಾರಿಗಳನ್ನು ಇಂದು ಕರ್ನಾಟಕದಲ್ಲಿ ಬೆಳೆಯುತ್ತಿದ್ದು, ಅದಕ್ಕೆ ಪೂರಕವಾದ ನೈಸರ್ಗಿಕ ವಾತಾವರಣವು ಇಲ್ಲಿರುವುದು ಒಂದು ವರದಾನವಾಗಿದೆ. ಈ ಎಲ್ಲಾ ತೋಟಗಾರಿಕಾ ಬೆಳೆಗಳ ವಿಸ್ತಾರ ಹಾಗೂ ಉತ್ಪಾದನೆಯಲ್ಲಿ ಎದ್ದು ಕಾಣುವ ಬೆಳವಣಿಗೆಯಾಗಿವೆ. ರೈತರ, ತನ್ಮೂಲಕ ದೇಶದ ಆರ್ಥಿಕ ಪ್ರಗತಿಗೆ ತೋಟಗಾರಿಕಾ ಬೆಳೆಗಳ ಕೊಡುಗೆ ಗಣನೀಯವಾಗಿದೆ. ಆದ್ದರಿಂದ, ತೋಟಗಾರಿಕಾ ಕ್ಷೇತ್ರದಲ್ಲಾದ ಈ ಬೆಳವಣಿಗೆಯನ್ನು ಕಳೆದ ಶತಮಾನದ ಅಂತ್ಯದಲ್ಲಿ 'ಚಿನ್ನದ ಕ್ರಾಂತಿ' ಎಂದು ಗುರುತಿಸಲಾಗಿದೆ.

ಶೈಕ್ಷಣಿಕವಾಗಿ, ಆರ್ಥಿಕವಾಗಿ ಮತ್ತು ನಾಗರಿಕವಾಗಿ ರಾಜ್ಯದ ಉಳಿದೆಲ್ಲ ಜಿಲ್ಲೆಯ ಜನರಿಗಿಂತ ಮುಂದಿರುವ ಉತ್ತರ ಕನ್ನಡ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ತಲಾವಾರು ಲಭ್ಯವಿರುವ ಕೃಷಿ ಭೂಮಿ ಬಹಳ ಕಡಿಮೆ. ಆದರೆ ಇಲ್ಲಿ ಬೆಳೆಯುವ ಸಾಂಬಾರ ಮತ್ತು ತೋಟಪಟ್ಟಿ ಬೆಳೆಗಳು ಲಾಭದಾಯಕ ಬೆಳೆಗಳಾಗಿದ್ದು ಆ ಭಾಗದ ಜನರ ಸರ್ವತೋಮುಖ ಅಭಿವೃದ್ಧಿಗೆ ಕಾರಣವಾಗಿವೆ. ಕರ್ನಾಟಕದ ದಕ್ಷಿಣದಲ್ಲಿರುವ ಕೋಲಾರ ಜಿಲ್ಲೆಯು ಯಾವುದೇ ಜಲಾಶಯ-ನಾಲೆಗಳನ್ನು ಹೊಂದಿಲ್ಲದ ಒಣ ಪ್ರದೇಶವಾಗಿದ್ದರೂ ಇಲ್ಲಿನ ಕಷ್ಟಜೀವಿಗಳಾದ ರೈತರು ಸಾವಿರ ಅಡಿಗಳಷ್ಟು ಆಳದಿಂದ ಅಂತರ್ಜಲ ಹೆಕ್ಕಿ ತೆಗೆದು ಮಿತವ್ಯಯ

ನೀರಾವರಿ ಪದ್ಧತಿ ಅನುಸರಿಸಿ ಮಾವು, ದ್ರಾಕ್ಷಿ, ಟೊಮ್ಯಾಟೋ, ಆಲೂಗಡ್ಡೆ, ಮೆಣಸಿನಕಾಯಿ ಮುಂತಾದ ತೋಟಗಾರಿಕಾ ಬೆಳೆಗಳಲ್ಲಿ ಮುಂಚೂಣಿ ಸಾಧಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಆರ್ಥಿಕ ಪ್ರಗತಿ ಸಾಧಿಸುತ್ತಿರುವ ಬಿಜಾಪುರ, ಬಾಗಲಕೋಟೆ ಜಿಲ್ಲೆಗಳು ಗ್ರಾಮೀಣ ಅಭಿವೃದ್ಧಿಯಲ್ಲಿ ತೋಟಗಾರಿಕಾ ಬೆಳೆಗಳ ಪಾತ್ರವನ್ನು ದೃಢೀಕರಿಸುತ್ತವೆ.

ಕೋಲಾರ, ಧಾರವಾಡ ಮತ್ತು ಬೆಳಗಾಂವ ಪ್ರದೇಶಗಳು ಹಣ್ಣುಗಳ ರಾಜ ಮಾವಿನ ಬೆಳೆಗೆ ಪ್ರಸಿದ್ಧವಾಗಿವೆ. ತರಕಾರಿ ಬೆಳೆಗಳನ್ನು ರಾಜ್ಯದ ಉದ್ದಗಲಕ್ಕೂ ಬೆಳೆಯುತ್ತಿದ್ದು, ರಾಣೆಬೆನ್ನೂರಿನಲ್ಲಿ ಅನೇಕ ರಾಷ್ಟ್ರೀಯ ಹಾಗೂ ಬಹುರಾಷ್ಟ್ರೀಯ ಬೀಜೋತ್ಪಾದನಾ ಘಟಕಗಳು ತಲೆ ಎತ್ತಿವೆ. ವಿವಿಧ ಬಣ್ಣದ, ಆಕಾರದ ಮನಮೋಹಕ ಪುಷ್ಪಗಳು, ಅಲಂಕಾರಿಕ ಸಸ್ಯಗಳು, ಮನೆಯ ಅಂಗಳದ ಹೂದೋಟಗಳು ಇಂದು ಎಲ್ಲರ ಆಕರ್ಷಣೆಯಾಗಿರುವುದು ನಾಗರಿಕ ಸಮಾಜದ ಲಕ್ಷಣವಾಗಿದೆ. ಹಸಿರು ಮನೆಗಳಲ್ಲಿ, ಪಾಲಿಹೌಸ್‌ಗಳಲ್ಲಿ ಕೃತಕ ವಾತಾವರಣ ಸೃಷ್ಟಿಸಿ ಹೂ ಬೆಳೆಯುವ ಅತ್ಯಾಧುನಿಕ ಕೃಷಿ ಪದ್ಧತಿ ವರ್ಷದ ಎಲ್ಲಾ ಕಾಲದಲ್ಲಿಯೂ ಪುಷ್ಪಕೃಷಿಯಲ್ಲಿ ಮಾಡುವ ಅವಕಾಶ ಕಲ್ಪಿಸಿದೆ. ಹೀಗಾಗಿ ಹೂ ಬೆಳೆ ಇಂದು ರಫ್ತು ಉದ್ಯಮವಾಗಿ ಬೆಳೆದು ನಿಂತಿದೆ. ಕರ್ನಾಟಕದ ಪುಷ್ಪಕೃಷಿ ದೇಶದಲ್ಲೇ ಮುಂಚೂಣಿಯಲ್ಲಿದ್ದು ಇಂದು ಸುಮಾರು ೧೫೦ ಎಕರೆಗಳಷ್ಟು ವಿಸ್ತಾರದಲ್ಲಿ ಹೆಚ್ಚಿನ ವೆಚ್ಚದ ಹಸಿರು ಮನೆ ಮತ್ತು ಪಾಲಿಹೌಸ್‌ಗಳು ನಿರ್ಮಾಣಗೊಂಡಿರುವುದು ಇದಕ್ಕೆ ಪುಷ್ಟಿ ನೀಡುತ್ತದೆ.

ಜೈವಿಕ ತಂತ್ರಜ್ಞಾನ ಮತ್ತು ಕೊಯ್ಲೋತ್ತರ ತಂತ್ರಜ್ಞಾನದ ಪ್ರಾಮುಖ್ಯತೆ ಹಿಂದೆಂದಿಗಿಂತಲೂ ಇಂದು ಅಧಿಕವಾಗಿದೆ. ಜಗತ್ತು ಇಂದು ಮುಕ್ತ ಮಾರುಕಟ್ಟೆಯಾಗಿ ಪರಿವರ್ತಿತವಾಗುತ್ತಿರುವ ಹಿನ್ನೆಲೆಯಲ್ಲಿ ರೈತರ ಒಟ್ಟು ಉತ್ಪನ್ನಕ್ಕಿಂತ ಎಕರೆವಾರು ಉತ್ಪನ್ನದತ್ತ ಗಮನಹರಿಸಬೇಕಾಗಿದೆ. ಹೀಗಾಗಿ ಜೈವಿಕ ತಂತ್ರಜ್ಞಾನ, ಅಂಗಾಂಶ ಕೃಷಿ ಮತ್ತು ಕುಲಾಂತರ ಸಸ್ಯಗಳ ಮೂಲಕ ಕೃಷಿಯಲ್ಲಿ ಆಶ್ಚರ್ಯಗಳನ್ನು ಸೃಷ್ಟಿಸುವ ವಿಧಾನವೆಂದು ಪರಿಗಣಿಸಲಾಗಿದೆ. ಸಮಾಜದಲ್ಲಿ ಇಂದು ಆಹಾರ ಸೇವನೆಯ ಬಗೆಯಲ್ಲಿ ಬಹಳಷ್ಟು ಪರಿವರ್ತನೆಯಾಗಿದ್ದು ಸಂಸ್ಕರಿಸಿದ ತೋಟಗಾರಿಕಾ ಉತ್ಪನ್ನಗಳಿಗೆ ಬೇಡಿಕೆ ಹೆಚ್ಚಿದೆ. ಅಧಿಕ ಉತ್ಪನ್ನ ಬಂದ ಸಮಯದಲ್ಲಿ ಹಣ್ಣು ತರಕಾರಿಗಳನ್ನು ಶೀತಗೃಹದಲ್ಲಿ ಶೇಖರಿಸಿಡುವುದರಿಂದ ಮತ್ತು ಸಂಸ್ಕರಿಸುವುದರಿಂದ ಇಂದು ಸಮಸ್ಯೆಯಾಗಿ ಪರಿಣಮಿಸಿರುವ ಬೆಲೆ ಕುಸಿಯುವಿಕೆ ತಪ್ಪಿ ರೈತರಿಗೆ ಉತ್ತಮ ಲಾಭ ದೊರೆಯುತ್ತದೆ. ಅಮೇರಿಕದಲ್ಲಿ ಶೇ. ೭೦ ರಷ್ಟು ತೋಟಗಾರಿಕಾ ಉತ್ಪನ್ನ ಸಂಸ್ಕರಣೆಗೊಂಡರೆ ಅದು ನಮ್ಮ ದೇಶದಲ್ಲಿ ಶೇ. ೧ಕ್ಕಿಂತ ಸ್ವಲ್ಪ ಹೆಚ್ಚು ಅಂದರೆ ನಮ್ಮ ಸಂಸ್ಕರಣಾ ಸಾಮರ್ಥ್ಯ ಶೇ. ೫೦ ರಷ್ಟಾದರೆ ತೋಟಗಾರಿಕೆಯನ್ನು ಅವಲಂಬಿಸದ ಬೃಹತ್ ಉದ್ಯಮಗಳು ಸೃಷ್ಟಿಯಾಗಿ ಉದ್ಯೋಗಾವಕಾಶಗಳ ಜೊತೆಗೆ ತೋಟಗಾರಿಕೆಯೂ ಉತ್ತೇಜನ ಪಡೆಯುತ್ತದೆ.

ತೋಟಗಾರಿಕೆ ಪ್ರಮುಖವಾಗಿರುವ ಪ್ರದೇಶಗಳಲ್ಲಿ ಆರೋಗ್ಯಪೂರಕ ನಿರ್ಮಲ ಪರಿಸರವಿದೆ. ಜನರಿಗೆ ಕೈತುಂಬಾ ಕೆಲಸವಿದ್ದು ಸೋಮಾರಿತನಕ್ಕೆ ಅಂಟಿಕೊಳ್ಳುವ ದುಶ್ಚಟಗಳು ಕಡಿಮೆ. ಹೀಗಾಗಿ ತೋಟಗಾರಿಕೆಯಿಂದ ಆರ್ಥಿಕ ಪ್ರಗತಿ, ಆರ್ಥಿಕ ಪ್ರಗತಿಯಿಂದ ಶೈಕ್ಷಣಿಕ ಪ್ರಗತಿ, ಆ ಮೂಲಕ ರಾಜಕೀಯ ತಿಳುವಳಿಕೆಯುಳ್ಳ ಗ್ರಾಮೀಣ ಪರಿಸರ ಸೃಷ್ಟಿಯಾಗಿ ಸಮಾಜದ ನಾಗರಿಕತೆ ಹೆಚ್ಚುತ್ತಾ ಹೋಗುತ್ತದೆ. ಮುಂಬರುವ ದಿನಗಳಲ್ಲಿ ನಮ್ಮ ದೇಶದ ಶೇಕಡಾ ೭೦ರಷ್ಟು ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಿರುವ ಜನತೆಗೆ ತೋಟಗಾರಿಕೆ ಬೆಳೆಗಳು ನಿರ್ಮಲ ಪರಿಸರವನ್ನು ಒದಗಿಸಿ ಜನರಿಗೆ ಕೈತುಂಬಾ ಕೆಲಸ ಕಲ್ಪಿಸಿ ಆರ್ಥಿಕ ಮಟ್ಟ ಹೆಚ್ಚಿಸಿ ಸಮಗ್ರ ಗ್ರಾಮೀಣಾಭಿವೃದ್ಧಿಗೆ ಸಹಾಯಕವಾಗುತ್ತವೆಂಬುದು ಸ್ಪಷ್ಟವಾಗುತ್ತದೆ.

### ೬. ಕೃಷಿ ಅರಣ್ಯ :

ನಮ್ಮ ದೇಶದ ಅರಣ್ಯ ಪ್ರದೇಶವು ೭೫ ಮಿಲಿಯನ್ ಹೆಕ್ಟೇರ್‌ನಷ್ಟಿದ್ದು ಇದು ಒಟ್ಟು ಭೌಗೋಳಿಕ ಕ್ಷೇತ್ರದ ಪ್ರತಿಶತ ೨೦.೧೫ ರಷ್ಟಿದೆ. ಆದರೆ, ಅರಣ್ಯ ಕ್ಷೇತ್ರ ಭೂಭಾಗದ ಕನಿಷ್ಟ ೩೩ ಪ್ರತಿಶತ ಇರಬೇಕು ಎಂದು ೧೯೮೮ರ ರಾಷ್ಟ್ರೀಯ ಅರಣ್ಯ ಧೋರಣೆಯಲ್ಲಿ ತಿಳಿಸಲಾಗಿದೆ. ಅರಣ್ಯಗಳು ಹವಾಮಾನದ ಶೀತೋಷ್ಣಗಳನ್ನು ನಿಯಂತ್ರಿಸುವಲ್ಲಿ ಜೀವ ಪೋಷಕಾಂಶಗಳನ್ನು ಆವರ್ತಿಸುವಲ್ಲಿ, ವಾತಾವರಣದ ವಿವಿಧ ಅನಿಲಗಳನ್ನು ಮಿತಿಯಾದ ಸಂಯೋಜನೆಯಲ್ಲಿ ಹಿಡಿದಿಡುವಲ್ಲಿ ಮತ್ತು ಪರಿಸರದ ಆರೋಗ್ಯತೆಯನ್ನು ಕಾಯುವಲ್ಲಿ ಪ್ರಮುಖ ಪಾತ್ರವಹಿಸಿವೆ. ನೈಸರ್ಗಿಕ ಪ್ರಕೋಪಗಳಾದ ಅತಿವೃಷ್ಟಿ, ಬರ ಮುಂತಾದವುಗಳನ್ನು ನಿಯಂತ್ರಿಸಲು ಮರಗಳು ಸಹಾಯಕವಾಗಿವೆ. ಸಾಮಾಜಿಕ ಅರಣ್ಯದಿಂದ ನೆಲ, ನೀರು ಮತ್ತು ಜಲ ಮಾಲಿನ್ಯವನ್ನು ತಡೆಯಬಹುದು. ಹಳ್ಳಿ, ಪಟ್ಟಣಗಳ

ಸುತ್ತಲಿರುವ ಬೀಳು ಜಾಗೆಗಳಲ್ಲಿ, ಗೋಮಾಳಗಳಲ್ಲಿ, ರಸ್ತೆ, ಕೆರೆ-ಕಾಲುವೆಗಳ ಬದಿಯಲ್ಲಿ, ಹಳ್ಳಗಳ ಹಾಗೂ ಕೊಳ್ಳಗಳ ಬದಿಯಲ್ಲಿ ವಿವಿಧ ಜಾತಿಯ ಗಿಡಮರಗಳನ್ನು ಬೆಳೆಸುವುದು ಅವಶ್ಯ. ಜನರ ಸಹಭಾಗಿತ್ವದಲ್ಲಿ ಈ ಅರಣ್ಯವನ್ನು ಅಭಿವೃದ್ಧಿಪಡಿಸಬೇಕು.

ಸಾಗುವಳಿ ಜಮೀನುಗಳಲ್ಲಿ ಕೃಷಿ ಬೆಳೆಯೊಂದಿಗೆ ಸೂಕ್ತವಾದ ಗಿಡಮರಗಳನ್ನು ಬೆಳೆಸುವ ಪದ್ದತಿಗೆ ಕೃಷಿ ಅರಣ್ಯವೆಂದು ಕರೆಯುತ್ತಾರೆ. ನಮ್ಮ ನೈಸರ್ಗಿಕ ಅರಣ್ಯಗಳು ಬಹಳ ಕ್ಷೀಣಿಸಿರುವುದರಿಂದ ಕೃಷಿ ಅರಣ್ಯಕ್ಕೆ ಹೆಚ್ಚು ಮಹತ್ವ ಕೊಡಬೇಕಾಗಿದೆ. ಗಿಡಮರಗಳಿಂದ ರೈತರಿಗೆ ದಿನನಿತ್ಯದ ಬಳಕೆಗೆ ಉರುವುಲು, ದನಕರುಗಳಿಗೆ ಮೇವು, ಒಕ್ಕಲುತನದ ಸಾಮಾನುಗಳು, ಮನೆಕಟ್ಟಲು ಕಟ್ಟಿಗೆ, ಹಣ್ಣು ಹಂಪಲು, ಔಷಧಿ ಮುಂತಾದವು ದೊರೆಯುತ್ತವೆ. ಮಣ್ಣಿನ ಫಲವತ್ತತೆ ಹೆಚ್ಚಿಸಲು ಮತ್ತು ರಕ್ಷಣೆ ಮಾಡಲು ಮರಗಳು ಸಹಕಾರಿಯಾಗಿವೆ. ವಾತಾವರಣದಲ್ಲಿಯ ಸಾರಜನಕ, ಗಿಡಗಳ ಮೂಲಕ ಭೂಮಿಗೆ ಸೇರುತ್ತದೆ. ಒಂದು ಹೆಕ್ಟೇರು ಕ್ಷೇತ್ರದಲ್ಲಿ ಬೆಳೆದ ಸಬಬಾಬುಲನಿಂದ ಪ್ರತಿ ವರ್ಷ ೨೦೦ ಕಿಲೋ ಸಾರಜನಕ ಭೂಮಿಗೆ ಸೇರುತ್ತದೆ. ಗಿಡಗಳ ಬೇರುಗಳು ಭೂಮಿಯ ಆಳಕ್ಕೆ ಹೋಗುವುದರಿಂದ ಮಣ್ಣಿನ ಕೆಳ ಪದರದಲ್ಲಿರುವ ಪೋಷಕಾಂಶಗಳು ಗಿಡಗಳ ಎಲೆ ಹಾಗೂ ತರಗುಗಳ ಮೂಲಕ ಭೂಮಿಯ ಮೇಲ್ಭಾಗಕ್ಕೆ ಸೇರುತ್ತವೆ. ಗಿಡಗಳನ್ನು ಭೂಮಿಯ ಇಳಿಜಾರಿಗೆ ಅಡ್ಡವಾಗಿ ಬೆಳೆದಾಗ ಫಲವತ್ತಾದ ಮೇಲ್ಮಣ್ಣು ಕೊಚ್ಚಿಹೋಗುವುದಿಲ್ಲ ಮತ್ತು ನೈಸರ್ಗಿಕ ಸಂಪನ್ಮೂಲಗಳನ್ನು ಸಂರಕ್ಷಿಸಬಹುದು.

ಕೃಷಿ ಜಮೀನುಗಳಲ್ಲಿ ಅರಣ್ಯ ಗಿಡಗಳನ್ನು ಬೆಳೆಸಲು ಸಾಕಷ್ಟು ಅವಕಾಶಗಳಿವೆ. ಬೆಳೆಯಬಹುದಾದ ಕೆಲವೊಂದು ವಿಧಾನ ಮತ್ತು ಅವುಗಳಿಗೆ ಸೂಕ್ತವಾದ ಗಿಡಮರಗಳು ಈ ಕೆಳಗಿನಂತಿವೆ.

| ಕೃಷಿ ಭೂಮಿಯಲ್ಲಿ ಗಿಡಮರ ಬೆಳೆಸಬಹುದಾದ ವಿಧಾನ | ಸೂಕ್ತವಾದ ಗಿಡಮರಗಳು |
|---|---|
| ಹೊಲದಲ್ಲಿ ಅಲ್ಲೊಂದು ಇಲ್ಲೊಂದು | ಬನ್ನಿ, ಮೇವು, ಹುಣಸೆ, ಬೆಟ್ಟದ ನೆಲ್ಲಿ, ಬೂರಲ, |
| ನಿರ್ದಿಷ್ಟ ಅಂತರದ ಸಾಲುಗಳಲ್ಲಿ | ತೇಗ, ಹೊನ್ನೆ, ಸೂಬಾಬುಲ, ಸರ್ವೆ ಮರ, ನೀಲಗಿರಿ |
| ಬದು ಅಥವಾ ಒಡ್ಡಗಳ ಮೇಲೆ | ಅಂಜನ, ಹುಣಸೆ, ಬೇವು, ದಾಮನಿ, ಬೀಟೆ, ತೇಗ |
| ಜಮೀನಿಗೆ ಹೊಂದಿಕೊಂಡಿರುವ ಹೊಳೆ ಹಳ್ಳಗಳ ದಂಡೆಗುಂಟ | ಬಿದಿರು, ನೇರಲ, ಜಾಲಿ, ಮುತ್ತಲ |
| ನೀರಾವರಿ ಕಾಲುವೆಗಳ ಬದಿಯಲ್ಲಿ | ತೇಗ, ನೀಲಗಿರಿ, ಸರ್ವೆಮರ |
| ತೋಟಗಾರಿಕೆ ಬೆಳೆಗಳ ಮಧ್ಯ | ನುಗ್ಗೆ, ತೇಗ, ಸರ್ವೆಮರ |
| ಜಮೀನಿನ ದಂಡೆಗುಂಟ | ಸೀಗ, ಗೊಬ್ಬರ ಗಿಡ, ಸರ್ವೆಮರ, ಬೆಟ್ಟದ ನೆಲ್ಲಿ, ಔಡಲ |
| ಕೃಷಿಗೆ ಸೂಕ್ತವಲ್ಲದ ಕ್ಷೇತ್ರದಲ್ಲಿ | ಹೊಂಗೆ, ಗೊಬ್ಬರ ಗಿಡ, ಜಾಲಿ, ಬಿದಿರು, ಹುಣಸೆ, ಔಡಲ, ನೀಲಗಿರಿ |
| ಇಡೀ ಬೆಳೆಯಾಗಿ | ತೇಗ, ಹೊನ್ನೆ, ಬಿದಿರು, ನೀಲಗಿರಿ, ಸರ್ವೆಮರ, ಸೂಬಾಬುಲ್ |

**ಕೃಷಿ ಅರಣ್ಯಕ್ಕೆ ಸೂಕ್ತ ಮರಗಳ ಆಯ್ಕೆ**

ಕೃಷಿ ಬೆಳೆ ಜೊತೆಗೆ ಬೆಳೆಯಲು ಸೂಕ್ತವಾದ ಮರಗಳಲ್ಲಿ ಇರಬೇಕಾದ ಗುಣಗಳೆಂದರೆ :

* ಕಾಂಡ ನೇರವಾಗಿದ್ದು ಟೊಂಗೆ ಹೆಚ್ಚು ಹರಡಬಾರದು.
* ಬೇರು ಆಳವಾಗಿ ಭೂಮಿಯ ಒಳ ಪದರಿಗೆ ಹೋಗುವ ಗುಣವಿರಬೇಕು.
* ಕಡಿಮೆ ನೆರಳು ಕೊಡುವಂತಿರಬೇಕು.

* ವಾತಾವರಣದಲ್ಲಿನ ಸಾರಜನಕ ಹಿಡಿದಿಡುವ ಗುಣ ಹೊಂದಿರಬೇಕು.

* ಹಣ್ಣು ಕೊಡುವ ಮರವಾಗಿದ್ದಲ್ಲಿ ಕಸಿ ಮಾಡಿದ ಸಸಿಗಳನ್ನು ಆಯ್ಕೆ ಮಾಡಬೇಕು. ಉದಾಹರಣೆಗೆ ಹುಣಸೆ, ನೇರಲ, ಬೆಟ್ಟದ ನೆಲ್ಲಿ, ಹಲಸು, ಬಳುವಲ ಇವುಗಳಲ್ಲಿ ಕಸಿ ಮಾಡಿದ ಸಸಿಗಳು ಸಿಗುತ್ತವೆ.

ಸೂಕ್ತವಾದ ಮರಗಳ ಆಯ್ಕೆ ಮಾಡುವುದರಿಂದ ಮರಗಳಿಂದ ಅಧಿಕ ಆದಾಯ ಬರುವದಲ್ಲದೆ ಗಿಡಗಳ ಸುತ್ತ ಕೃಷಿ ಬೆಳೆಗಳಿಗೆ ಆಗುವ ಹಾನಿಯನ್ನು ಸಾಕಷ್ಟು ಮಟ್ಟಿಗೆ ಕಡಿಮೆ ಮಾಡಬಹುದು. ಕೃಷಿ ಅರಣ್ಯಗಳು ನೈಸರ್ಗಿಕ ಸಂಪನ್ಮೂಲಗಳನ್ನು ಸಂರಕ್ಷಣೆ ಮಾಡುವುದಲ್ಲದೆ ರಕ್ಷಿತ ಅರಣ್ಯಗಳ ಮೇಲಿನ ಒತ್ತಡ ಕೂಡ ಕಡಿಮೆಯಾಗುತ್ತದೆ.

## ೭. ನೀರಿನ ಸದ್ಬಳಕೆ :

ಕರ್ನಾಟಕದಲ್ಲಿ ವಿಫುಲ ಜಲ ಸಂಪನ್ಮೂಲಗಳಿದ್ದರೂ ಕೂಡ ಬಹಳಷ್ಟು ಜಿಲ್ಲೆಗಳಲ್ಲಿ ನೀರಿನ ಕೊರತೆ ಕಂಡುಬರುತ್ತದೆ. ಇದಕ್ಕೆ ಲಭ್ಯವಿರುವ ಜಲ ಸಂಪನ್ಮೂಲಗಳನ್ನು ಸರಿಯಾಗಿ ಬಳಸದಿರುವುದು ಮುಖ್ಯ ಕಾರಣವಾಗಿದೆ. ನೀರು ದೊಡ್ಡ ಪ್ರಮಾಣದಲ್ಲಿ ವ್ಯರ್ಥವಾಗಿ ಹೋಗುತ್ತದೆ. ನೀರಿನ ಮಹತ್ವವನ್ನು ಆದಷ್ಟು ಬೇಗನೇ ತಿಳಿದುಕೊಂಡರೆ ಒಳ್ಳೆಯದು. ಅದಕ್ಕಾಗಿ ರಾಜ್ಯ ಸರ್ಕಾರ ಮತ್ತು ಜನತೆ ಜಲ ಸಂಪನ್ಮೂಲಗಳನ್ನು ಸಂರಕ್ಷಿಸುವ ಯೋಗ್ಯ ಕ್ರಮಗಳನ್ನು ಕೈಗೊಳ್ಳಬೇಕು.

ದೇಶದ ಒಟ್ಟು ಮೇಲ್ಮೈ ಜಲಸಂಪನ್ಮೂಲ ೧,೭೦,೦೦೦ ದಶಲಕ್ಷ ಘ.ಮೀ., ಇದರಲ್ಲಿ ಕರ್ನಾಟಕದ ಪಾಲು ಶೇ. ೬ ಅಥವಾ ೯೭,೩೫೨ ಘ.ಮೀ. ರಾಜ್ಯದಲ್ಲಿ ಲಭ್ಯವಿರುವ ಒಟ್ಟು ಮೇಲ್ಮೈ ಜಲ ಸಂಪನ್ಮೂಲಗಳಲ್ಲಿ ಪ್ರತಿಶತ ೪೨ರಷ್ಟು ಪೂರ್ವಕ್ಕೆ ಹರಿಯುವ ನದಿಗಳಿಂದ ಬಂಗಾಳ ಕೊಲ್ಲಿಗೆ ಮತ್ತು ಪ್ರತಿಶತ ೫೮ರಷ್ಟು ಪಶ್ಚಿಮಕ್ಕೆ ಹರಿಯುವ ನದಿಗಳಿಂದ ಅರಬ್ಬೀ ಸಮುದ್ರಕ್ಕೆ ಸೇರುತ್ತವೆ. ನಮ್ಮ ರಾಜ್ಯದಲ್ಲಿ ಏಳು ಮುಖ್ಯ ನದಿಗಳ ಕಣಿವೆ ಸಂಪನ್ಮೂಲಗಳಿದ್ದು ಅವುಗಳ ಒಟ್ಟು ನೀರಿನ ಇಳುವರಿ ಈ ಕೆಳಗಿನಂತಿದೆ.

| ಅ.ಸಂ. | ನದಿ-ಕಣಿವೆಗಳು | ಇಳುವರಿ (ಟಿ.ಎಂ.ಸಿ.) |
| --- | --- | --- |
| ೧ | ಕೃಷ್ಣಾ ಕಣಿವೆ | ೯೩೨.೦೦ |
| ೨ | ಕಾವೇರಿ, ಗೋದಾವರಿ | ೪೭೪.೯೭ |
| ೩ | ಪಶ್ಚಿಮಕ್ಕೆ ಹರಿದು ಹೋಗುವ ನದಿಗಳು | ೧೯೯೮.೮೩ |
| ೪ | ಉತ್ತರ ಪೆನ್ನಾರ, ದಕ್ಷಿಣ ಪೆನ್ನಾರ, ಪಾಲಾರ | ೩೨.೦೦ |
| | ಒಟ್ಟು | ೩೪೩೮.೦೦ |

ಇದರಲ್ಲಿ ನೀರಾವರಿಗೆ ಉಪಯೋಗಿಸಬಹುದಾದ ನೀರಿನ ಸಂಪನ್ಮೂಲ ೧೬೯೫ ಟಿ.ಎಂ.ಸಿ. ಮಾತ್ರ.

ಪಶ್ಚಿಮ ಘಟ್ಟ ಪ್ರದೇಶದಲ್ಲಿ ಸುಮಾರು ೨೦೦೦ ಟಿ.ಎಂ.ಸಿ. ನೀರಿನ ಸಂಪನ್ಮೂಲವಿದ್ದು ಇದನ್ನು ಬರಪೀಡಿತ ಪೂರ್ವ ಪ್ರದೇಶಕ್ಕೆ ಬಳಸಲು ಕಾರ್ಯಯೋಜನೆ ರೂಪಿಸಬೇಕಾಗಿದೆ. ಈ ನೀರನ್ನು ಪಂಪು ಮೂಲಕ ಎತ್ತರವಿದ್ದ ಪ್ರದೇಶದಲ್ಲಿ ಸಂಗ್ರಹಿಸಿ ವಿದ್ಯುತ್ ಉತ್ಪಾದನೆಗೆ ಮತ್ತು ನೀರಾವರಿಗೆ ಬಳಸಲು ಹೇರಳ ಅವಕಾಶಗಳಿವೆ. ಹೀಗೆ ಮಾಡಿದಲ್ಲಿ ಘಟ್ಟ ಪ್ರದೇಶದಲ್ಲಿ ಅಂತರ್ಜಲ ಮಟ್ಟ ಹೆಚ್ಚಿಸಬಹುದು. ನದಿ ಜೋಡಣೆಗಳನ್ನು ಪ್ರಮುಖವಾಗಿ ಮಹಾದಾಯಿ-ಮಲಪ್ರಭಾ, ಕೃಷ್ಣಾ-ಘಟಪ್ರಭಾ ಹಾಗೂ ಕೃಷ್ಣಾ-ಭೀಮಾ ಕಾರ್ಯ ಕೂಡ ಜಲಸಂಪನ್ಮೂಲ ಅಭಿವೃದ್ಧಿಯಲ್ಲಿ ಒಂದು ಪ್ರಮುಖ ಅಂಶವಾಗಿದೆ. ಕರ್ನಾಟಕದಲ್ಲಿ ೫೫ ಲಕ್ಷ ಹೆಕ್ಟೇರ್ ಪ್ರದೇಶವನ್ನು ನೀರಾವರಿಗೆ ಒಳಪಡಿಸುವ ಸಾಮರ್ಥ್ಯವಿದ್ದರೂ ೨೬ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಮಾತ್ರ ನೀರಾವರಿ ಕೈಗೊಳ್ಳಲಾಗಿದೆ. ಬೃಹದಾಕಾರದ ನೀರಾವರಿ ಯೋಜನೆಗಳಿಗಿಂತ ಸಣ್ಣ ನೀರಾವರಿ ಯೋಜನೆಗಳಿಗೆ ಹೆಚ್ಚು ಮಹತ್ವ ಕೊಡಬೇಕು.

ಜಲ ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸುವುದು ಒಂದಾದರೆ, ಅವುಗಳ ಸಮರ್ಪಕ ಉಪಯೋಗ ಬಹಳ ಮಹತ್ವದ್ದಾಗಿದೆ. ನೀರಾವರಿ ಇತಿಹಾಸವನ್ನು ನೋಡಿದಲ್ಲಿ, ಜಗತ್ತಿನಲ್ಲಿ ಎಲ್ಲ ಸಂಸ್ಕೃತಿಗಳು ನದೀ ತೀರದಲ್ಲಿ ಬೆಳೆದುಬಂದು ನೀರಿನ ಅಸಮರ್ಪಕ ಬಳಕೆಯಿಂದ ಅಲ್ಲೇ ಅವಸಾನ ಕಂಡವು. ಲಭ್ಯವಿರುವ ಜಲ ಸಂಪನ್ಮೂಲಗಳನ್ನು ಪೂರ್ಣವಾಗಿ ಬಳಸಿಕೊಳ್ಳಲು ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆಯಾಗಬೇಕಿದೆ.

ಒಂದು ಅಂದಾಜಿನ ಪ್ರಕಾರ ಕಾಲುವೆಗಳಲ್ಲಿ ಇಂಗುವುದರಿಂದ ಮತ್ತು ಬಸಿದು ಹೋಗುವುದರಿಂದ ಪ್ರತಿಶತ ೩೦-೪೦ ರಷ್ಟು ನೀರು ನಷ್ಟವಾಗುತ್ತಿದೆ. ಅಲ್ಲದೇ, ಇದರಿಂದ ಜವಳು ಮತ್ತು ಸವಳು ಭೂಮಿ ಸೃಷ್ಟಿಯಾಗುತ್ತದೆ. ತುಂಗಭದ್ರಾ ಮತ್ತು ಕೃಷ್ಣಾ ಮೇಲ್ದಂಡೆ ಯೋಜನೆ ಪ್ರದೇಶದಲ್ಲಿ ಅನುಕ್ರಮವಾಗಿ, ಸುಮಾರು ೮೦ ಮತ್ತು ೨೦ ಸಾವಿರ ಹೆಕ್ಟೇರ್ ಪ್ರದೇಶ ಜವಳು ಮತ್ತು ಸವಳಾಗಿ ಕೃಷಿಗೆ ನಿರುಪಯುಕ್ತವಾಗಿದೆ. ಪ್ರತಿ ವರ್ಷ ಸುಮಾರು ೩೦೦೦ ಹೆಕ್ಟೇರ್ ಕೃಷಿ ಪ್ರದೇಶ ಇದರಿಂದ ಕ್ಷೀಣಿಸುತ್ತಿದೆ.

ನೀರಿನ ಸಮರ್ಪಕ ಬಳಕೆಗೆ ನೀರಾವರಿಗಾಗಿ ಭೂ ಅಭಿವೃದ್ಧಿಪಡಿಸುವುದು, ನೀರಾವರಿ ಕ್ಷೇತ್ರಗಳಲ್ಲಿ ಬಸಿ ಕಾಲುವೆಗಳನ್ನು ನಿರ್ಮಿಸಿ ಭೂಮಿಯನ್ನು ಜವಳು ಮತ್ತು ಸವಳಿನಿಂದ ಸಂರಕ್ಷಿಸುವುದು, ಬೆಳೆಗಳ ಅವಶ್ಯಕತೆಗೆ ತಕ್ಕಂತೆ ನೀರನ್ನು ಪೂರೈಸುವುದು, ಸೂಕ್ತ ನೀರು ನಿರ್ವಹಣೆ ಪದ್ಧತಿಗಳನ್ನು ಅನುಸರಿಸುವುದು, ನೀರು ಲಭ್ಯತೆ ಮೇಲೆ ಬೆಳೆ ಯೋಜನೆಯನ್ನು ಅಳವಡಿಸುವುದು, ಸಾಧ್ಯವಿದ್ದಲ್ಲಿ ನೀರಾವರಿ ಮತ್ತು ಅಂತರ್ಜಲಗಳ ಸಂಯೋಜಿತ ಬಳಕೆ ಹಾಗೂ ತೇವಾಂಶಗಳ ಕೊರತೆ ಮತ್ತು ಪೂರಕ ತಾಂತ್ರಿಕತೆಗಳನ್ನು ಬಳಸಿ ಉತ್ಪಾದಕತೆಯನ್ನು ಕಾಯ್ದುಕೊಳ್ಳುವುದು ಅವಶ್ಯ. ನೀರಿನ ಸಮರ್ಥ ಬಳಕೆ ಕೊಡುವ ಪದ್ಧತಿಯಿಂದ ತುಂತುರು ಹಾಗೂ ಹನಿ ನೀರಾವರಿ ಪದ್ಧತಿಗಳನ್ನು ಅನುಸರಿಸುವುದು, ನೀರು ಲಭ್ಯತೆ ಮೇಲೆ ಬೆಳೆ ಯೋಜನೆಯನ್ನು ಅಳವಡಿಸುವುದು, ಸಾಧ್ಯವಿದ್ದಲ್ಲಿ ನೀರಾವರಿ ನೀರು ಮತ್ತು ಅಂತರ್ಜಲಗಳ ಸಂಯೋಜಿತ ಬಳಕೆ ಹಾಗೂ ತೇವಾಂಶಗಳ ಕೊರತೆ ಮತ್ತು ಪೂರಕ ತಾಂತ್ರಿಕತೆಗಳನ್ನು ಬಳಸಿ ಉತ್ಪಾದಕತೆಯನ್ನು ಕಾಯ್ದುಕೊಳ್ಳುವುದು ಅವಶ್ಯ. ನೀರಿನ ಸಮರ್ಥ ಬಳಕೆ ಕೊಡುವ ಪದ್ಧತಿಯಿಂದ ತುಂತುರು ಹಾಗೂ ಹನಿ ನೀರಾವರಿ ಪದ್ಧತಿಗಳನ್ನು ಇನ್ನೂ ಹೆಚ್ಚಿನ ಕ್ಷೇತ್ರಗಳಲ್ಲಿ ಅಳವಡಿಸುವುದು ಅವಶ್ಯ. ಸರಕಾರದ ಸಹಾಯಧನ, ಹನಿ ನೀರಾವರಿ ಮತ್ತು ತುಂತುರು ನೀರಾವರಿಗೆ ಸಾಕಷ್ಟು ಸಿಗುತ್ತಿದ್ದು ಇದನ್ನು ವೃದ್ಧಿಪಡಿಸಬೇಕು. ತುಂತುರು ಮತ್ತು ಹನಿ ನೀರಾವರಿ ಪದ್ಧತಿ ಅಳವಡಿಸುವುದರಿಂದ ಪ್ರತಿಶತ ೫೦-೬೦ ರಷ್ಟು ನೀರಿನ ಉಳಿತಾಯ ಮಾಡಬಹುದು. ಈ ದಿಸೆಯಲ್ಲಿ ಇಸ್ರೇಲ್ ದೇಶದ ನೀರಾವರಿ ಕ್ಷಮತೆ ಮತ್ತು ಪದ್ಧತಿ ಅನುಸರಿಸುವುದು ಯೋಗ್ಯವಾಗಿದೆ.

ನೀರು ನಿರ್ವಹಣಾ ತಂತ್ರಜ್ಞಾನಗಳನ್ನು ರೈತರಿಗೆ ವರ್ಗಾಯಿಸುವ ಕ್ರಮಗಳನ್ನು ಇನ್ನಷ್ಟು ಹೆಚ್ಚಿಸಲು ಒತ್ತು ಕೊಡಬೇಕು. ಅಚ್ಚುಕಟ್ಟು ಪ್ರದೇಶದಲ್ಲಿ ನೀರು ನಿರ್ವಹಣೆಗೆ ನೀರು ಬಳಕೆದಾರರ ಸಂಘಗಳ ಪಾತ್ರ ಮಹತ್ವದ್ದಾಗಿದೆ. ನೀರಾವರಿ ಇಲಾಖೆ ಕೈಗೊಂಡ ಈ ಸಾಧನೆ ಶ್ಲಾಘನೀಯ. ಆದರೆ, ಈ ಸಂಘಗಳನ್ನು ಇನ್ನಷ್ಟು ಬಲಪಡಿಸಿ ನೀರಿನ ಮಿತವ್ಯಯ ಸಾಧಿಸಬಹುದಲ್ಲದೇ, ಪ್ರಕೃತಿದತ್ತವಾದ ಭೂಮಿಯ ಉತ್ಪಾದಕತೆಯನ್ನು ಕಾಪಾಡಿಕೊಂಡು ಬರಬಹುದು. ಜಲ ಸಂಪನ್ಮೂಲಗಳನ್ನು ಅಭಿವೃದ್ಧಿಪಡಿಸಬೇಕು ಮತ್ತು ಅವುಗಳ ಸಮರ್ಥ ಬಳಕೆ ಮಾಡಲು ಒಟ್ಟಾರೆಯಾಗಿ ನಿಸರ್ಗ ನಿಯಮ ಬಾಹಿರವಾಗದಂತೆ ಎಚ್ಚರವಹಿಸಬೇಕಾದುದು ಎಲ್ಲರ ಕರ್ತವ್ಯವಾಗಿದೆ.

## ೮. ಪಶು ಸಂಗೋಪನೆ ಅಭಿವೃದ್ಧಿ :

ಅನಾದಿ ಕಾಲದಿಂದ ಕೃಷಿಯ ಜೊತೆಗೆ ಹೈನುಗಾರಿಕೆ, ಕೋಳಿ ಸಾಕಾಣಿಕೆ, ಮೀನುಗಾರಿಕೆ ಇತ್ಯಾದಿ ಉಪಕಸಬುಗಳು ರೈತರ ಆರ್ಥಿಕತೆಗೆ ಬೆಂಬಲವಾಗಿವೆ. ಒಕ್ಕಲುತನದಿಂದ ಬರುವ ಉಪ-ಪದಾರ್ಥಗಳಾದ ಕಣಿಕೆ, ಹೊಟ್ಟು, ಕಾಳು ಕಡ್ಡಿಗಳನ್ನು ಜಾನವಾರುಗಳು ಆಹಾರವಾಗಿ ಉಪಯೋಗಿಸುತ್ತವೆ. ಕೃಷಿಯು ಸುಸ್ಥಿರವಾಗಿರಬೇಕಾದರೆ, ಸಾವಯವಗಳಾದ ಕೊಟ್ಟಿಗೆ ಗೊಬ್ಬರ, ಕಾಂಪೋಸ್ಟ್, ಬಯೋಗ್ಯಾಸ್ ಗೊಬ್ಬರ ಇತ್ಯಾದಿ ಉತ್ಪಾದನೆಗೆ ಪಶುಸಂಗೋಪನೆ ಅವಶ್ಯ.

ಜಾನುವಾರುಗಳು ನಮ್ಮ ರಾಷ್ಟ್ರೀಯ ಆರ್ಥಿಕತೆಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ರಾಷ್ಟ್ರೀಯ ಜಿ.ಎನ್.ಪಿ. (GNP) ಗೆ ಜಾನುವಾರುಗಳ ಕೊಡುಗೆ ರೂ. ೨೨೭ ಬಿಲಿಯನ್‌ರಷ್ಟಿದ್ದು, ಇದು ಒಟ್ಟು ಉತ್ಪಾದನೆಯ ಪ್ರತಿಶತ ೨೫ರಷ್ಟಿದೆ. ಒಂದು ಅಂದಾಜಿನ ಪ್ರಕಾರ ಎತ್ತುಗಳ ಸಾಗಾಣಿಕೆ ಶಕ್ತಿಯು ೪೭,೦೦೦ ಮೆಗಾವ್ಯಾಟದಷ್ಟಿದ್ದು, ಅದು ರೇಲ್ವೆ ಸರಕು ಸಾಗಾಣಿಕೆಗಿಂತ ಹೆಚ್ಚಾಗಿದೆ. ಇದರ ಕೊಡುಗೆ ರೂ. ೯೦೦೦ ಕೋಟಿ ರೂಪಾಯಿಗಳಿದ್ದು, ಇದರಿಂದ ೫,೦೦೦ ಕೋಟಿ ಪೆಟ್ರೋಲ್/ಡೀಸೆಲ್ ಆಮದು ಉಳಿಯುತ್ತದೆ.

ಹೈನು ದನಗಳ ಕೊಡುಗೆ ರೂ. ೨೦,೦೦೦ ಕೋಟಿಗಳಷ್ಟಿದ್ದು, ಹಾಲು ಹಾಗೂ ಹಾಲೋತ್ಪನ್ನಗಳ ಕೊಡುಗೆ ರೂ. ೭೫೦೦ ಕೋಟಿಗಳಷ್ಟಿದೆ.

ಹೈನುಗಾರಿಕೆಯಿಂದ ರೈತ ಕುಟುಂಬಕ್ಕೆ ಸಮತೋಲನ ಮತ್ತು ಸಂಪೂರ್ಣವಾದ ಆಹಾರ ದೊರೆಯುತ್ತದೆ. ನಿರಂತರ ಆದಾಯ ಹಾಗೂ ಸತತವಾಗಿ ಉದ್ಯೋಗ ದೊರೆಯುತ್ತದೆ. ಸಗಣಿಯಿಂದ ಜೈವಿಕ ಅನಿಲ ಉತ್ಪಾದಿಸಿ ಅದರಿಂದ ಇಂಧನ, ಬೆಳಕು ಹಾಗೂ ಅಣುಜೀವಿ ಸತ್ವಭರಿತ ಹೆಚ್ಚು ಪೋಷಕಾಂಶಗಳು ಸತ್ತ ಮೇಲೆ ಕೂಡ ಅವುಗಳ ಚರ್ಮ, ಎಲಬು, ಕೊಂಬು, ರಕ್ತ ಇತ್ಯಾದಿ ಉಪಯೋಗ ಲಭಸುತ್ತವೆ. ಹೀಗೆ ದನಕರುಗಳು ಕೃಷಿಗೆ ಪೂರಕವಾಗಿದ್ದು ಇವುಗಳ ಸಂಖ್ಯೆ ಕ್ರಮೇಣ ಕಡಿಮೆಯಾಗುತ್ತಿರುವುದು ವಿಷಾದನೀಯ. ಇದಕ್ಕೆ ಪೂರಕ ಯೋಜನೆಗಳನ್ನು ರೂಪಿಸುವುದು ಅವಶ್ಯ.

ಹೈನುಗಾರಿಕೆಯಲ್ಲಿ ಹೆಚ್ಚು ಹಾಲು ಕೊಡುವ ಉತ್ತಮವಾದ ತಳಿ ಹಾಗೂ ಮಿಶ್ರತಳಿಗಳನ್ನು ಆರಿಸುವುದು ಹಾಗೂ ಸುಧಾರಿತ ಪಶುಪಾಲನಾ ಪದ್ಧತಿಗಳನ್ನು ಅನುರಿಸುವುದು, ಜಾನುವಾರುಗಳಿಗೆ ಕಡಿಮೆ ಖರ್ಚಿನಲ್ಲಿ ಸಮತೋಲನ ಗೊಬ್ಬರ ಹಾಗೂ ಸಂಪೂರ್ಣ ಆಹಾರವನ್ನು ಒದಗಿಸುವುದು ಬಹಳ ಮುಖ್ಯ. ಜಾನುವಾರುಗಳ ಪಾಲನೆಯಲ್ಲಿ ಒಟ್ಟು ಖರ್ಚಿನ ಪ್ರತಿಶತ ೬೫-೭೫ರಷ್ಟು ಅವುಗಳ ಆಹಾರಕ್ಕಾಗಿ ಖರ್ಚಾಗುತ್ತದೆ. ಮೇವಿನ ಬೆಳೆಗಳನ್ನು ಇತರ ಬೆಳೆಗಳ ಜೊತೆಗೆ ಬೆಳೆಯುವುದು, ಕೃಷಿ-ಅರಣ್ಯ, ಹುಲ್ಲುಗಾವಲುಗಳ ಅಭಿವೃದ್ಧಿಪಡಿಸುವುದರ ಕಡೆಗೆ ಗಮನ ಕೊಡಬೇಕು. ಮೇವನ್ನು ಹಾಳಾಗದಂತೆ ಸೂಕ್ತ ರೀತಿಯಿಂದ ಉಪಚರಿಸಿ ಮೇಯಿಸುವುದು, ಮಳೆಗಾಲದಲ್ಲಿ ಹೆಚ್ಚಾದ ಮೇವನ್ನು ರಸ ಮೇವಾಗಿ ಪರಿವರ್ತಿಸಿ ಶೇಖರಿಸಿಟ್ಟರೆ ಅದನ್ನು ಬೇಸಿಗೆಯಲ್ಲಿ ಮೇವಿನ ತುಟಾಗ್ರತೆ ಇದ್ದಾಗ ಬಳಸುವುದು ಉತ್ತಮ.

ಸಾಮೂಹಿಕವಾಗಿ ಸರ್ಕಾರ ಹಾಗೂ ಸರ್ಕಾರೇತರ ಸಂಸ್ಥೆಗಳು, ರೈತರು ಮೇವಿನ ಬ್ಯಾಂಕ್‌ಗಳನ್ನು ಹಳ್ಳಿಗಳ ಮಟ್ಟದಲ್ಲಿ ಅಭಿವೃದ್ಧಿಪಡಿಸಬೇಕು. ಅವಶ್ಯವಿರುವ ಮೇವಿನ ಬೀಜಗಳನ್ನು ಪೂರೈಸುವದು, ಮೇವು ಉತ್ಪಾದನೆಗೆ ಇತರ ವಾಣಿಜ್ಯ ಬೆಳೆಗಳಿಗೆ ಸಿಗುವಂತೆ ಧನಸಹಾಯ, ಮೇವು ಶೇಖರಣೆ ಸೌಕರ್ಯಗಳು, ಬೆಳೆ ವಿಮೆ, ಆಸ್ಪತ್ರೆ ಸೌಲಭ್ಯ, ಜಾನುವಾರು ಪಾಲನೆ ಬಗ್ಗೆ ತಾಂತ್ರಿಕತೆ ಇತ್ಯಾದಿ ಗ್ರಾಮೀಣ ಮಟ್ಟದಲ್ಲಿ ಒದಗಿಸುವದರಿಂದ ಪಶುಸಂಪತ್ತನ್ನು ಅಭಿವೃದ್ಧಿಪಡಿಸಲು ಹಾಗೂ ಕಾಯ್ದುಕೊಂಡು ಹೋಗಲು ಸಹಕಾರಿಯಾಗತ್ತದೆ.

ಕೋಳಿ ಸಾಕಾಣಿಕೆ ಕೂಡ ನಮ್ಮ ದೇಶದಲ್ಲಿ ಪ್ರಾಚೀನ ಕಾಲದಿಂದ ನಡೆದು ಬಂದ ಒಂದು ಉದ್ಯೋಗವಾಗಿದೆ. ಜಗತ್ತಿನಲ್ಲಿ ನಮ್ಮ ದೇಶ ತತ್ತಿ ಉತ್ಪಾದನೆಯಲ್ಲಿ (೭೦ ಮಿಲಿಯನ್ ತತ್ತಿಗಳು) ೫ನೇ ಸ್ಥಾನ ಮತ್ತು ಮಾಂಸದ ಕೋಳಿ ಉತ್ಪಾದನೆಯಲ್ಲಿ (೮೦ ಮಿಲಿಯನ್ ಕೋಳಿ) ೧೯ನೇ ಸ್ಥಾನ ಪಡೆದಿರುತ್ತದೆ. ಭಾರತೀಯ ವೈದ್ಯಕೀಯ ಸಂಶೋಧನಾ ಸಂಸ್ಥೆಯ ಶಿಫಾರಸಿನ ಪ್ರಕಾರ ಪ್ರತಿಯೊಬ್ಬರಿಗೆ ಪ್ರತಿ ವರ್ಷ ಅವಶ್ಯವಾದ ತತ್ತಿ ಪ್ರಮಾಣ ಮತ್ತು ಮಾಂಸದ ಪ್ರಮಾಣ ೧೮೦ ತತ್ತಿ ಮತ್ತು ೨.೫ ಕೆ.ಜಿ. ಮಾಂಸ ಇದ್ದು, ಈಗ ಲಭ್ಯವಿರುವ ಪ್ರಮಾಣ ೪೦ ತತ್ತಿ ಮತ್ತು ೬೦೦ ಗ್ರಾಂ ಮಾಂಸ ಇದೆ. ಇದನ್ನು ಗಮನಿಸಿದಾಗ ನಮ್ಮ ದೇಶದಲ್ಲಿ ತತ್ತಿ ಮತ್ತು ಮಾಂಸದ ಉತ್ಪಾದನೆಗೆ ಸಾಕಷ್ಟು ಬೇಡಿಕೆ ಇದೆ.

ಕೋಳಿ ಸಾಕಾಣಿಕೆಯನ್ನು ಕೃಷಿಗೆ ಪೂರಕವಾಗಿ ವೈಜ್ಞಾನಿಕ ರೀತಿಯಲ್ಲಿ ಕೈಗೊಂಡರೆ ಕೃಷಿ ಉದ್ದಿಮೆಗಳ ತ್ಯಾಜ್ಯಗಳಾದ ತೌಡು, ಹಿಂಡಿ, ಕಾಳಿನ ನುಚ್ಚು ಇತ್ಯಾದಿ ಉಪಯೋಗಿಸಿ ಉತ್ತಮ ಪೌಷ್ಠಿಕ ಪದಾರ್ಥಗಳಿಂದ ತತ್ತಿ ಮತ್ತು ಮಾಂಸ ಪಡೆಯಬಹುದು. ಕಡಿಮೆ ಅವಧಿಯಲ್ಲಿ ಅಧಿಕ ಲಾಭ, ವರ್ಷವಿಡೀ ಉದ್ಯೋಗ, ಸಾವಯವ ಗೊಬ್ಬರ ಹಾಗೂ ಮಹಿಳೆಯರಿಗೂ ಕೂಡ ಉದ್ಯೋಗ ಕಲ್ಪಿಸಿ, ಕೃಷಿಯನ್ನು ಆರ್ಥಿಕವಾಗಿ ಬೆಂಬಲಿಸಬಹುದು.

ಕೋಳಿ ಸಾಕಾಣಿಕೆಯನ್ನು ಪ್ರಾರಂಭಿಸಲು ಉತ್ತಮ ತರಬೇತಿ ಹಾಗೂ ಯಶಸ್ವಿ ಸಾಕಾಣಿಕೆದಾರರ ಜೊತೆಗೆ ವ್ಯಾವಹಾರಿಕ ಜ್ಞಾನ ಪಡೆದುಕೊಳ್ಳುವದು ಅವಶ್ಯ. ಕೋಳಿ ಸಾಕಾಣಿಕೆಗೆ ಶುದ್ಧವಾದ ನೀರು, ಸ್ಥಳ, ವಿದ್ಯುತ್ ಪೂರೈಕೆ, ಪಶುವೈದ್ಯಕೀಯ ಸೇವೆ, ಸಾಗಾಣಿಕೆ ಮತ್ತು ಮಾರಾಟ ಕೇಂದ್ರಗಳನ್ನು ಅಭಿವೃದ್ಧಿ ಪಡಿಸುವುದರಿಂದ ಈ ಉದ್ದಿಮೆಗೆ ಪ್ರೋತ್ಸಾಹ ದೊರಕಿ ರೈತರು ಇದರ ಲಾಭ ಪಡೆಯಬಹುದು.

ಕರ್ನಾಟಕ ರಾಜ್ಯವು ಮೀನು ಸಾಕಣೆಗೆ ವೈವಿಧ್ಯಮಯ ಜಲಸಂಪನ್ಮೂಲಗಳನ್ನು ಹೊಂದಿರುವಂತಹ ರಾಜ್ಯ. ಕರಾವಳಿ ತೀರ ೩೦೦ ಕಿ.ಮೀ. ಗಿಂತ ಹೆಚ್ಚಿಗೆ ಇದ್ದು ಇದು ಹೇರಳ ಜಲಸಂಪತ್ತು ಹೊಂದಿದೆ. ಅಲ್ಲದೆ ಇಲ್ಲಿಯ ಒಳನಾಡು ಜಲಸಂಪನ್ಮೂಲಗಳು ೪.೫೭ ಲಕ್ಷ ಹೆಕ್ಟೇರ್ ಇದ್ದು, ಅದರಲ್ಲಿ ೨.೨೨ ಲಕ್ಷ ಹೆಕ್ಟೇರ್ ಸರೋವರಗಳು ಹೊಂದಿದ್ದು ಅದರ ೨೨೦೦ ಕಿ.ಮೀ.ನಷ್ಟು ಉದ್ದ ವರ್ಷಾವಧಿ ನೀರಿನಿಂದ ಕೂಡಿದ್ದು ಆಳ ಮಡುಗಳನ್ನು ಹೊಂದಿದೆ. ಕೃಷಿಗೆ ನೀರುಣಿಸುವ ನೀರಾವರಿ ಕಾಲುವೆಗಳು ಸಹ ಕೆಲವು ಪ್ರದೇಶಗಳಲ್ಲಿ ಮೀನುಸಾಕಾಣಿಕೆಗೆ ವರಪ್ರದವಾಗಿವೆ. ನಮ್ಮ ರಾಜ್ಯದಲ್ಲಿ ವಾರ್ಷಿಕ ೬ ಕೋಟಿ ಮೌಲ್ಯದ ೭೦,೦೦೦ ಟನ್‌ಗಳಷ್ಟು ಒಳನಾಡು ಮೀನನ್ನು ಉತ್ಪಾದಿಸಲಾಗುತ್ತಿದೆ. ಉತ್ತಮ ಜಾತಿಯ ಮೀನುಮರಿಗಳ ಅಭಾವದಿಂದಾಗಿ ಹಾಗೂ ಮಂದಗತಿಯ ವೈಜ್ಞಾನಿಕ ತಾಂತ್ರಿಕತೆಯ ವರ್ಗಾವಣೆಯಿಂದಾಗಿ ಮೀನು ಉತ್ಪಾದನೆಯಲ್ಲಿ ನಿಗದಿತ ಗುರಿಯನ್ನು ಸಾಧಿಸಲಾಗುತ್ತಿಲ್ಲ. ನಮ್ಮ ರಾಜ್ಯದಲ್ಲಿಯೇ ಜಲಸಂಪನ್ಮೂಲಕ್ಕನುಗುಣವಾಗಿ ಸುಮಾರು ೪೦೦ ಮಿಲಿಯನ್ ಮೀನು ಮರಿಗಳ ಬೇಡಿಕೆ ಇದ್ದು, ಸದ್ಯದಲ್ಲಿ ಕೇವಲ ೧೨೦ ಮಿಲಿಯನ್ ಮರಿಗಳ ಉತ್ಪಾದನೆ ಕೈಗೊಳ್ಳಲಾಗುತ್ತಿದೆ. ಮಿಶ್ರ ಮೀನು ಸಾಕಣೆ, ಕೃಷಿಯ ಜೊತೆಗೆ ಭತ್ತದಲ್ಲಿ, ಹೈನುಗಾರಿಕೆ, ಕೋಳಿ, ಹಂದಿ, ಬಾತುಕೋಳಿ ಒಗ್ಗೂಡಿಸಿ ಸಮನ್ವಯ ಮೀನು ಸಾಕಣೆ, ಒಳನಾಡು ಸೀಗಡಿ ಸಾಕಣೆ, ಕ್ಷಾರ ಮತ್ತು ಜೌಗು ಪ್ರದೇಶದಲ್ಲಿ ಮೀನು ಸಾಕಾಣಿಕೆಗೆ ತಂತ್ರಜ್ಞಾನ ಲಭ್ಯವಿದ್ದು ಇದನ್ನು ಯಶಸ್ವಿಯಾಗಿ ಅನುಸರಿಸಬೇಕಾಗಿದೆ. ಕರ್ನಾಟಕದಲ್ಲಿ ಒಳನಾಡು ಮೀನು ಸಾಕಾಣಿಕೆಯಿಂದ ವರ್ಷಕ್ಕೆ ೪ ಲಕ್ಷ ಟನ್‌ಗಳಿಗಿಂತ ಹೆಚ್ಚು ಮೀನನ್ನು ಉತ್ಪಾದಿಸುವ ಸಾಮರ್ಥ್ಯವಿದ್ದು ಇದಕ್ಕೆ ಪೂರಕವಾಗಿ ತಾಂತ್ರಿಕತೆ ಲಭ್ಯತೆ ಮತ್ತು ಇತರ ಸೌಕರ್ಯಗಳನ್ನು ಕಲ್ಪಿಸಿಕೊಡುವ ಅವಶ್ಯಕತೆ ಇದೆ.

## ೯. ಗ್ರಾಮೀಣ ಅಭಿವೃದ್ಧಿಯಲ್ಲಿ ಮಹಿಳೆಯರು :

ದೈನಂದಿನ ಕಾರ್ಯಗಳ ಜೊತೆಗೆ ಕೃಷಿ ಮಹಿಳೆಯರು ಸ್ವಯಂ ಉದ್ಯೋಗ/ಆದಾಯ ಉತ್ಪನ್ನ ಚಟುವಟಿಕೆಗಳನ್ನು ಕೈಗೊಳ್ಳುವದು ಅವಶ್ಯವಿದೆ. ಜೀವನ ಮಟ್ಟದ ಸುಧಾರಣೆ, ಅವಶ್ಯಕ ವಸ್ತುಗಳ ಬೆಲೆ ಏರಿಕೆ, ವಿದ್ಯಾಭ್ಯಾಸಕ್ಕೆ ಹೆಚ್ಚಿನ ಖರ್ಚು ಈ ಎಲ್ಲ ಕಾರಣಗಳಿಂದ ಉಪಕಸಬು ಮತ್ತು ಸ್ವಯಂ ಉದ್ಯೋಗ ಕೈಕೊಳ್ಳುವುದು ಅವಶ್ಯವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಆಧಾರಿತ ಉತ್ತಮ ಗುಣಮಟ್ಟದ ಉತ್ಪನ್ನಗಳನ್ನು ಹೊರತರುವದರಿಂದ ಕೃಷಿ ಮೌಲ್ಯ ಹೆಚ್ಚುತ್ತದೆ ಹಾಗೂ ಸಮಾಜದ ಏಳ್ಗೆಗಾಗಿ ಸಹಾಯ ಮಾಡಿದಂತಾಗುತ್ತದೆ.

ಇಂದು, ಮುಂದಿನ ಜನಾಂಗದ ಆರೋಗ್ಯಕ್ಕಾಗಿ ಮಹಿಳೆಯರು ನ್ಯೂಟ್ರಿಸಿಟಿಕಲ್ಸ್ ಆರೋಗ್ಯ ಆಹಾರ ತಯಾರಿಸಬಹುದು. ನ್ಯೂಟ್ರಿಸಿಕಲ್ಸ್ ಅಂದರೆ ಆರೋಗ್ಯಕ್ಕಾಗಿಯೇ ಪ್ರತ್ಯೇಕವಾಗಿ ತಯಾರಿಸಿದ ಮೂಲವರ್ಧಕ ಆಹಾರ. ಈ ಆಹಾರವನ್ನು ರಚಿಸಿದ (ಡಿಜೆನ್ಸ) ಅಥವಾ ಸಂಕಲ್ಪಸಿದ (ಫ್ಯಾಬ್ರಿಕೇಟೆಡ್) ಆಹಾರವೆಂದು ಕರೆಯುವರು. ಸಾಮಾನ್ಯವಾಗಿ ಈ ಆಹಾರ ಎರಡು ಅಥವಾ ಇನ್ನು ಹೆಚ್ಚು ಆಹಾರ ಪದಾರ್ಥಗಳನ್ನು ಸಂಸ್ಕರಿಸಿ ಅಥವಾ ಮಿಶ್ರ ಮಾಡಿ ಒಂದು ಹೊಸ ರೂಪ ಹಾಗೂ ವೈಶಿಷ್ಟ್ಯತೆಯನ್ನು ಕೊಟ್ಟು ಅದರಲ್ಲಿನ ಆರೋಗ್ಯದ ಮೌಲ್ಯವನ್ನು ಎತ್ತಿಹಿಡಿಯುವದು. ಇಂತಹ ಆಹಾರಗಳಿಗಾಗಿಯೇ ಮಾರುಕಟ್ಟೆಗಳು ಹೆಚ್ಚು ಪ್ರಚಲಿತವಾಗಿದ್ದು ಮುಂದುವರೆದ ಹಾಗೂ ಮುಂದುವರೆಯುತ್ತಿರುವ ದೇಶದಲ್ಲಿ ಸಾಕಷ್ಟು ಹೆಸರು ಮಾಡಿವೆ. ಗ್ರಾಮೀಣ ಗೃಹವಿಜ್ಞಾನ ಮಹಾವಿದ್ಯಾಲಯ ಧಾರವಾಡದಲ್ಲಿ ವೃದ್ಧರ ಆಹಾರ, ಶಿಶು ಆಹಾರ, ಚಿಕಿತ್ಸಾ ಆಹಾರ, ಕಡಿಮೆ ಶಕ್ತಿಯುಳ್ಳ ಆಹಾರ, ಹೆಚ್ಚು ನಾರುಳ್ಳ ಆಹಾರ, ಮಧುಮೇಹ ಆಹಾರ, ತಿನ್ನಲು ತಯಾರಾದ ಆಹಾರ ಹೀಗೆ ಅನೇಕ ಮೌಲ್ಯಾಧಾರಿತ ಆಹಾರಗಳನ್ನು ತಾಂತ್ರಿಕ ದೃಷ್ಟಿಯಿಂದ ತಯಾರಿಸಲಾಗಿದೆ. ಈ ಮೌಲ್ಯಾಧಾರಿತ ಆಹಾರಗಳನ್ನು ನಮ್ಮ ಗ್ರಾಮೀಣ ಮಹಿಳೆಯರು ತಾವು ಬೆಳೆದ ಉದಾ : ಗೋಧಿ, ಜೋಳ, ಅಕ್ಕಿ, ತೃಣ ಧಾನ್ಯಗಳು, ಬೇಳೆಕಾಳುಗಳು, ಎಣ್ಣೆಕಾಳುಗಳು, ಸಾಂಬಾರು ಪದಾರ್ಥಗಳು (ಈರುಳ್ಳಿ, ಬೆಳ್ಳುಳ್ಳಿ, ಅರಿಸಿಣ, ಮೆಂತೆ, ಮೆಣಸು, ಮೆಣಸಿನಕಾಯಿ, ದಾಲಚಿನ್ನಿ ಇತ್ಯಾದಿ), ಸೊಪ್ಪುಗಳು, ಔಷಧೀಯ ಸಸ್ಯಗಳನ್ನು ಉಪಯೋಗಿಸಿ ತಯಾರಿಸಬಹುದು. ಸೋಯಾಬೀನಿನಂತಹ ಬೆಳೆಗಳಿಂದ ಶ್ರೀಖಂಡ, ಪನೀರ, ಹಾಲು, ಮೊಸರು ಹಾಗೂ ಚೀಸ ಪದಾರ್ಥಗಳನ್ನು ಸುಲಭವಾಗಿ ತಯಾರಿಸಬಹುದು. ತೃಣಧಾನ್ಯಗಳಾದ ರಾಗಿ, ನವಣೆ, ಸಾವಿ, ಬರಗು, ಉದಲು, ಹಾರಕ, ರಾಜಗೀರಿ ಮುಂತಾದವುಗಳನ್ನು ನಮ್ಮ ಕರ್ನಾಟಕದ ಮಟ್ಟಿಗೆ ಉತ್ಪಾದನೆ ದೃಷ್ಟಿಯಿಂದ ಒಂದು ಮಹತ್ವದ ಸ್ಥಾನ ಪಡೆದಿವೆ. ಇವುಗಳು ಪೌಷ್ಟಿಕವಾಗಿದ್ದು ಖನಿಜ, ನಾರಿನಾಂಶ ಹೆಚ್ಚಿಗೆ ಹೊಂದಿದ್ದು, ಸಕ್ಕರೆ, ಪಿಷ್ಠ ಕಡಿಮೆ ಇರುವುದರಿಂದ ಮಧುಮೇಹ, ರಕ್ತದೊತ್ತಡ, ಬೊಜ್ಜು ಮೊದಲಾದ ಅವ್ಯವಸ್ಥೆಯಲ್ಲಿ ಇವು ಉತ್ತಮ ಪೋಷಕ ಆಹಾರ ಪೂರೈಸುತ್ತವೆ. ಹಣ್ಣು, ತರಕಾರಿಗಳು ಪೋಷಕಾಂಶಗಳ ಗಣಿ ಎಂದು ಹೇಳಬಹುದು. ವಾಣಿಜ್ಯಮಟ್ಟದಲ್ಲಿ

ಹಣ್ಣು ತರಕಾರಿಗಳನ್ನು ಸಂಸ್ಕರಿಸಿ, ಸಂರಕ್ಷಿಸಿ ಮೌಲ್ಯವರ್ಧಿತ ಆಹಾರಗಳನ್ನು ತಯಾರಿಸುವಲ್ಲಿ ಸಾಕಷ್ಟು ಅವಕಾಶಗಳಿವೆ. ಇದರಿಂದ ಇವುಗಳ ಉತ್ಪಾದನೆ ಋತುಮಾನಕ್ಕನುಗುಣವಾಗಿದ್ದರೂ ಕೂಡಾ ಲಭ್ಯತೆಯನ್ನು ವರ್ಷವಿಡೀ ಹಾಗೂ ಪ್ರತಿಯೊಂದು ಮೂಲೆ ಮೂಲೆಗೂ ಅವಶ್ಯಕ ಪ್ರಮಾಣದಲ್ಲಿ ದೊರೆಯುವಂತಾಗುತ್ತದೆ. ಇದರಿಂದ ರೈತರಿಗೆ ಉತ್ತಮ ಬೆಲೆ, ರೈತಮಹಿಳೆಯರಿಗೆ ಉದ್ಯೋಗ ಮತ್ತು ಲಾಭ ಹಾಗೂ ಜನಸಾಮಾನ್ಯರಿಗೆ ಪೌಷ್ಠಿಕ ಆಹಾರ ದೊರೆಯುತ್ತದೆ. ಹೀಗೆ ಗ್ರಾಮೀಣ ಮಹಿಳೆಯರು ಸ್ವತಂತ್ರರಾಗಿ ವಿವಿಧ ಸ್ವಯಂ ಉದ್ಯೋಗಗಳನ್ನು ಕೈಗೊಂಡು, ಬೇರೆಯವರಿಗೆ ಉದ್ಯೋಗ ಕೊಡುವಂತಹ ಶಕ್ತಿ ಹೊಂದುವದರಲ್ಲಿ ಸಂದೇಹವಿಲ್ಲ.

## ೧೦. ನಿರ್ಬಂಧಿತ ವಿಶ್ವವ್ಯಾಪಾರ :

ಜಾಗತಿಕ ವ್ಯಾಪಾರ ಸಂಘಟನೆ ಅನುಷ್ಠಾನವನ್ನು ೧೯೯೫ರಲ್ಲ ಕೈಗೊಂಡ ನಂತರ ಕೃಷಿಯಲ್ಲಿ ಸಾಕಷ್ಟು ಬದಲಾವಣೆ ಮಾಡುವ ಅವಶ್ಯಕತೆ ಕಂಡುಬಂದಿದೆ. ಆಮದು ಮತ್ತು ರಫ್ತುಗಳಲ್ಲಿನ ನಿರ್ಬಂಧನೆ, ತೆರಿಗೆ ಇತ್ಯಾದಿಗಳ ಸಡಿಲಿಕೆಯಿಂದಾಗಿ ಯಾರೊಬ್ಬರೂ ತಮ್ಮ ಉತ್ತಮ ಗುಣಮಟ್ಟದ ಉತ್ಪನ್ನಗಳನ್ನು ಬೇಡಿಕೆಯಿರುವ ಇತರೇ ಯಾವುದೇ ದೇಶಕ್ಕೆ ಮಾರಾಟ ಮಾಡಬಹುದಾಗಿದೆ. ಹೀಗಾಗಿ ಇದುವರೆಗೆ ದೇಶೀಯ ಮಾರುಕಟ್ಟೆಯ ಬೇಡಿಕೆಯನ್ನು ಗಮನಿಸಿ ಉತ್ಪಾದನಾ ಯೋಜನೆಗಳನ್ನು ರೂಪಿಸಿಕೊಳ್ಳುತ್ತಿದ್ದ ರೈತನೀಗ ಅಂತರರಾಷ್ಟ್ರೀಯ ಬೇಡಿಕೆಯ ಮೇಲೆ ಮತ್ತು ಅವಶ್ಯಕ ಗುಣವಿಶೇಷತೆಗಳ ಬಗ್ಗೆ ನಿಗಾವಹಿಸಿ ಉತ್ಪಾದಿಸಿದರೆ ಹೆಚ್ಚಿನ ಲಾಭ ಪಡೆಯಬಹುದು. ನಮ್ಮ ದೇಶದ ರೈತರು ಜಾಗತಿಕ ವಿಶ್ವ ವ್ಯಾಪಾರ ಸಂಘಟನೆ (WTO) ಅನುಸಾರ ಜಾಗತಿಕ ಮಟ್ಟಕ್ಕೆ ಸ್ಪರ್ಧೆಗಿಳಿಯಬೇಕಾಗಿದೆ ಮತ್ತು ಅದಕ್ಕೆ ಪೂರಕ ಕೃಷಿ ನೀತಿಗಳಲ್ಲಿ, ರೈತರ ಮನೋಭಾವ, ಕರ್ತವ್ಯ ಮತ್ತು ಕೃಷಿ ತಾಂತ್ರಿಕತೆಯಲ್ಲಿ ಬದಲಾವಣೆಯಾಗುವ ಅವಶ್ಯಕತೆ ಇದೆ.

ಕೃಷಿ ಉತ್ಪಾದನೆಯಲ್ಲಿ ನೇರವಾಗಿ ಹೋಗುವ ಪರಿಕರಗಳಾದ ಬೀಜ, ಗೊಬ್ಬರ, ನೀರಾವರಿ, ವಿದ್ಯುತ್ ಇತ್ಯಾದಿಗಳ ಮೇಲೆ ಸಹಾಯಧನ ಹೆಚ್ಚಾಗಿ ಕೊಡುವುದಕ್ಕೆ ಜಾಗತೀಕರಣದ ವ್ಯಾಪಾರ ಸಂಘಟನೆಯ ನಿರ್ಬಂಧವಿದೆ. ಆದರೆ ನಮ್ಮ ದೇಶದ ಸಹಾಯಧನ ಪ್ರಮಾಣ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಗಿಂತ ಕಡಿಮೆ ಇರುವುದರಿಂದ ನಾವು ಕಡಿಮೆ ಮಾಡುವ ಅವಶ್ಯಕತೆ ಇಲ್ಲ. ಆದರೆ ಒಣಭೂಮಿ ಅಭಿವೃದ್ಧಿ, ಜಲಸಂಪನ್ಮೂಲ ಅಭಿವೃದ್ಧಿ, ಅರಣ್ಯ ಅಭಿವೃದ್ಧಿ ಮುಂತಾದ ಪರಿಸರ ಸಂರಕ್ಷಣೆ ಮತ್ತು ಸಂಪನ್ಮೂಲ ಅಭಿವೃದ್ಧಿ ಕೆಲಸಗಳಿಗೆ ಹೆಚ್ಚು ಹೆಚ್ಚು ಸಹಾಯಧನ ಕೊಡಲು ಉತ್ತೇಜನವಿದೆ. ಇದು ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿಗೆ ಪೂರಕವಾಗಬಹುದು. ಆಹಾರ ಭದ್ರತೆಯ ಧಕ್ಕೆಯನ್ನು ನಿಭಾಯಿಸಲು ಆಹಾರ ಧಾನ್ಯಗಳ ಆಮದನ್ನು ನಿಯಂತ್ರಿಸುವದು ಮತ್ತು ಆಹಾರಧಾನ್ಯ ಉತ್ಪಾದನೆಯನ್ನು ಹೆಚ್ಚಿಸುವದು ಅವಶ್ಯವಾಗಿದೆ. ಯಾವ ಕೃಷಿ ಪದಾರ್ಥಗಳ ಉತ್ಪಾದನೆ ಮತ್ತು ರಫ್ತು ಮಾಡುವಲ್ಲಿ ಬೇರೆ ದೇಶಗಳಿಗಿಂತ ಲಾಭದಾಯಕವಿರುವುವೋ ಅಂತಹ ಕೃಷಿ ಪದಾರ್ಥಗಳನ್ನು ಆರಿಸಿ ಅವುಗಳ ಅಧಿಕ ಉತ್ಪಾದನೆ ಹಾಗೂ ಗುಣಮಟ್ಟದಲ್ಲಿ ಅಭಿವೃದ್ಧಿ ಮಾಡಿ ಹೆಚ್ಚು ಪ್ರೋತ್ಸಾಹ ಕೊಡಬೇಕು. ರಫ್ತು ಯೋಗ್ಯ ಕೃಷಿ ಪದಾರ್ಥಗಳ ಮಂಡಳಿಗಳನ್ನು ರಚಿಸಿ ಅವುಗಳಿಗೆ ಉತ್ತೇಜನ ಹಾಗೂ ಸಹಾಯಧನ ಕೊಡಬೇಕು.

ಭಾರತವು ಜಾಗತೀಕರಣ ರಂಗದಲ್ಲಿ ಹಣ್ಣು ಮತ್ತು ಕಾಯಿಪಲ್ಲೆ ಉತ್ಪಾದನೆಯಲ್ಲಿ ಎರಡನೆಯ ಮತ್ತು ಮೊದಲನೆಯ ಸ್ಥಾನದಲ್ಲಿದೆ. ರಾಷ್ಟ್ರದ ಹಣ್ಣುಗಳ ನಿರ್ಯಾತವು ಸುಮಾರು ೧೮೮ ಕೋಟಿ ರೂಪಾಯಿ ಇದ್ದು, ಇದರಲ್ಲಿ ಮಾವು ಹಾಗೂ ಬಾಳೆಹಣ್ಣು ಪ್ರಮುಖ ಸ್ಥಾನದಲ್ಲಿದೆ. ಇದರ ಜೊತೆಗೆ ಅನಾನಸ್, ಲಿಂಬೆ, ದ್ರಾಕ್ಷಿ, ದಾಳಿಂಬೆಗಳಂತಹ ಹಣ್ಣುಗಳಿಗೂ ಹೆಚ್ಚಿನ ಅವಕಾಶವಿದೆ. ದೇಶದ ಒಟ್ಟಾರೆ ನಿರ್ಯಾತ ಸಾಮರ್ಥ್ಯ ಪೂರ್ಣ ರೀತಿಯಲ್ಲಿ ಉಪಯೋಗವಾಗಿಲ್ಲ. ನಮ್ಮಲ್ಲಿ ಮೂಲಭೂತ ಸೌಕರ್ಯಗಳು ಅಂದರೆ ಕೊಯ್ಲು ನಂತರ ನಿರ್ವಹಣೆ, ಶೇಖರಣೆ ಕೊರತೆಯಿಂದಾಗಿ ಪ್ರತಿಶತ ೩೦ರಷ್ಟು ನಷ್ಟವಾಗುತ್ತಿದೆ. ಈ ದಿಶೆಯಲ್ಲಿ ವಿವಿಧ ಪದಾರ್ಥಗಳ ಮಂಡಳಿಗಳನ್ನು ಅಭಿವೃದ್ಧಿಪಡಿಸುವ ಅವಶ್ಯಕತೆ ಇದೆ. ರಾಷ್ಟ್ರೀಯ ತೋಟಗಾರಿಕೆ ಮಂಡಳಿಯು ಉತ್ಪಾದನಾ ತಾಂತ್ರಿಕತೆ ಅಭಿವೃದ್ಧಿ, ಕೊಯ್ಲು ಅಲ್ಲದೆ ಹಣ್ಣು ತರಕಾರಿಗಳು ಸಂಸ್ಕರಣೆ ಜವಾಬ್ದಾರಿ ವಹಿಸಿದ ಅತ್ಯುನ್ನತ ಸಂಸ್ಥೆಯಾಗಿದೆ. ಸಹಾಯಧನ ಯೋಜನೆಯಲ್ಲಿ ಬೇಗ ನಾಶವಾಗುವ ಹುಟ್ಟುವಳಿಗಾಗಿ ಶೀತಲ ಗೃಹ ಸೌಲಭ್ಯದೊಂದಿಗೆ ಸಾಕಾಣಿಕೆ ಹಾಗೂ ಶೇಖರಣೆಗೆ ಶೀತಲ ಗೃಹಗಳ ನಿರ್ಮಾಣಕ್ಕೆ ಆದ್ಯತೆ ಕೊಡಬೇಕು.

ನಮ್ಮ ದೇಶದಲ್ಲಿ ಆಹಾರಧಾನ್ಯ ಸಂಗ್ರಹ ೬೦ ಮಿಲಿಯನ್ ಟನ್‌ಗಿಂತ ಹೆಚ್ಚಿಗೆ ಇದ್ದು ಇದು ನಮ್ಮ ಆಹಾರ ಭದ್ರತೆಗೆ ಬೇಕಾಗಿರುವ ೨೪ ಮಿಲಿಯನ್ ಟನ್‌ಗಿಂತ ಅಧಿಕವಾಗಿದೆ. ಸರಕಾರಕ್ಕೆ ಹೆಚ್ಚಿನ ಹೊರೆಯಾಗಿದೆ ಎಂದೆ ತಪ್ಪಾಗಲಾರದು. ಅಕ್ಕಿ ಮತ್ತು ಗೋಧಿಗಳನ್ನು ಬೇರೆ ದೇಶಗಳಿಗೆ ನಮ್ಮ ಮಾರುಕಟ್ಟೆಯ ಬೆಲೆಯ ೬೦ ಪ್ರತಿಶತ ಬೆಲೆಗೆ ರಫ್ತು ಮಾಡಲಾಗುತ್ತಿದ್ದು ಇದು ಸ್ಥಳೀಯ ಜೋಳ, ರಾಗಿ ಇನ್ನಿತರ ಬೆಲೆಗಳ ಮೇಲೆಯೂ ಪರಿಣಾಮ ಬೀರಿದೆ. ಇದಕ್ಕೆ ತದ್ವಿರುದ್ಧವಾಗಿ ನಾವು ನಮ್ಮ ಬೇಡಿಕೆಯ ಪ್ರತಿಶತ ೪೦ ರಷ್ಟು ಎಣ್ಣೆಕಾಳು ಮತ್ತು ಪ್ರತಿಶತ ೭ರಷ್ಟು ಬೇಳೆಕಾಳು ಆಮದು ಮಾಡಿಕೊಳ್ಳುವುದರಿಂದ ಹೆಚ್ಚಿನ ವಿದೇಶಿ ವಿನಿಮಯ ತೆರಬೇಕಾಗಿದೆ. ಆದ್ದರಿಂದ, ಈ ಬೆಳೆಗಳನ್ನು ಸ್ಥಳೀಯವಾಗಿ ಉತ್ಪಾದಿಸಲು ಹೆಚ್ಚಿನ ಪ್ರೋತ್ಸಾಹ ಕೊಡಬೇಕಾಗಿದೆ.

ನೇರವಾಗಿ ಕೃಷಿ ಉತ್ಪನ್ನಗಳ ಬೆಲೆಗಳು ಬಹಳ ಕಡಿಮೆ ಇದ್ದು, ಇದೇ ಕೃಷಿ ಉತ್ಪನ್ನಗಳನ್ನು ಸಂಸ್ಕರಿಸಿದರೆ ಅವುಗಳ ಬೆಲೆಯು ೨೦೦-೫೦೦ ಪ್ರತಿಶತ ಹೆಚ್ಚಾಗುತ್ತದೆ. ಸಂಸ್ಕರಿಸಿದ ಪದಾರ್ಥಗಳನ್ನು ರಫ್ತು ಮಾಡುವುದರಿಂದ ರೈತರು ಹೆಚ್ಚಿನ ಬೆಲೆ ಪಡೆಯಬಹುದು. ಗ್ರಾಮೀಣ ಪ್ರದೇಶಗಳಲ್ಲಿ ಸಂಸ್ಕರಣೆಗೆ ಹೆಚ್ಚು ಉತ್ತೇಜನ ಕೊಡಬೇಕು.

ನಮ್ಮ ದೇಶದಲ್ಲಿ ಸಣ್ಣ ಹಿಡುವಳಿಗಳು, ತಂತ್ರಜ್ಞಾನದ ಕೊರತೆ, ಕೃಷಿ ಪರಿಕರಗಳ ಕೊರತೆ, ಆಧುನೀಕರಣದ ಕೊರತೆ, ಹೆಚ್ಚಿನ ಉತ್ಪಾದನಾ ವೆಚ್ಚ ಹಾಗೂ ಸೂಕ್ತ ಕಾಯ್ದೆ ಕಾನೂನುಗಳು ಲಭ್ಯವಾಗದೇ ಇರುವುದರಿಂದ ನಮ್ಮ ಕೃಷಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಪೈಪೋಟಿ ಮಾಡುವುದು ಕಷ್ಟವಾಗುತ್ತಿದೆ. ಕೃಷಿ ವೆಚ್ಚ ಕಡಿಮೆ ಮಾಡುವದು, ಸಂಘಟಿತ ಕೃಷಿ, ಗುತ್ತಿಗೆ ಕೃಷಿ, ಆಧುನಿಕ ತಂತ್ರಜ್ಞಾನವನ್ನು ಅಳವಡಿಸುವುದು ಇತ್ಯಾದಿಗಳಿಂದ ಕೃಷಿ ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸಬೇಕಾಗಿದೆ.

ವಿವಿಧ ಕ್ಷೇತ್ರಗಳಲ್ಲಿ ಲಭ್ಯವಿರುವ ಈ ತಂತ್ರಜ್ಞಾನವನ್ನು ಅಳವಡಿಸಿ, ನೆಲ-ಜಲ ಅಭಿವೃದ್ಧಿಪಡಿಸಿ ಫಲಾನುಭವಿಗಳ ಸಹಭಾಗಿತ್ವ, ಸಹಕಾರ, ಪಾರದರ್ಶಕ ಆಡಳಿತ ಮತ್ತು ನಿರ್ವಹಣೆಯಿಂದ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಸಾಧ್ಯ. ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿಗೆ ಪೂರಕವಾಗುವ ಹೊಸ ಕೃಷಿ ನೀತಿಯನ್ನು ನಮ್ಮ ರಾಜ್ಯ ಸರಕಾರ ತಯಾರಿಸಿದೆ. ಕೃಷಿ ಹಾಗೂ ಗ್ರಾಮೀಣ ಕ್ಷೇತ್ರದಲ್ಲಿ ಸೇವೆ ಮಾಡುತ್ತಿರುವ ಕೃಷಿ, ತೋಟಗಾರಿಕೆ, ನೀರಾವರಿ, ಜಲಾನಯನ, ಅರಣ್ಯ ಹಾಗೂ ಗ್ರಾಮೀಣ ಅಭಿವೃದ್ಧಿ ಇಲಾಖೆಗಳು ಹಾಗೂ ಕೃಷಿ ವಿಶ್ವವಿದ್ಯಾಲಯಗಳು ರೈತರ ಸಮಸ್ಯೆಗಳಿಗೆ ಸ್ಪಂದಿಸಿ ಕೃಷಿ ಯೋಜನೆಗಳನ್ನು ಅನುಷ್ಠಾನಗೊಳಿಸಬೇಕು. ಇವುಗಳ ನಡುವೆ ನೇರ ಸಂಪರ್ಕ ಏರ್ಪಡಿಸಬೇಕಾದ ಅವಶ್ಯಕತೆ ಇದೆ. ಒಂದು ಗ್ರಾಮೀಣ ಕ್ಷೇತ್ರದ ಸಂಪೂರ್ಣ ನೈಪುಣ್ಯತೆ, ಕುಶಲತೆ, ಸ್ವಾವಲಂಬನೆ, ಸಾಮಾಜಿಕ ಹಾಗೂ ಆರ್ಥಿಕ ಭದ್ರತೆ, ಜಾಗತಿಕ ಆಗುಹೋಗುಗಳು ಹಾಗೂ ರೈತರ ಸಮಸ್ಯೆಗಳನ್ನು ಅರಿತು ಅದಕ್ಕೆ ಪೂರಕವಾಗಿ ಯೋಜನೆಗಳನ್ನು ಹಾಕಿಕೊಳ್ಳಬೇಕು. ಪ್ರತಿ ಶತ ೬೦ ಪ್ರದೇಶ ಹೊಂದಿರುವ, ಅನಿಶ್ಚಿತತೆ ಮತ್ತು ಏರುಪೇರುಗಳಿಗೆ ತುತ್ತಾಗಿರುವ, ಬಡತನದ ಛಾಯೆಯಲ್ಲಿರುವ ಖುಷ್ಕಿ ಪ್ರದೇಶಕ್ಕೆ ಹೆಚ್ಚು ಮಹತ್ವ ಕೊಡಬೇಕು. ಕೃಷಿಯನ್ನು ಲಾಭದಾಯಕ ಹಾಗೂ ಸ್ವಾವಲಂಬಿ ಉದ್ದಿಮೆಯಾಗಿ ಮಾರ್ಪಡಿಸಬೇಕಾಗಿದೆ. ಪ್ರಕೃತಿ ಆಧಾರಿತ ಪರಿಸರ ಸ್ನೇಹಿ ಕೃಷಿಯ ಅಭಿವೃದ್ಧಿ ಮತ್ತು ಅದಕ್ಕೆ ಪೂರಕವಾಗಿ ಕೃಷಿ ಹಾಗೂ ಗ್ರಾಮೀಣ ಪ್ರದೇಶಕ್ಕೆ ಸಂಬಂಧಿತ ವ್ಯವಸ್ಥೆಗಳ ಬೆಳವಣಿಗೆ ಈ ಹೊಸ ಶತಮಾನದ ಮೂಲ ಅವಶ್ಯಕತೆಯಾಗಿದೆ.

●




# ಸಮಗ್ರ ಕೃಷಿ ಪದ್ಧತಿ

ಡಾ. ಎಂ. ಎನ್. ಶೀಲವಂತರ್

ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವ ದಿಸೆಯಲ್ಲಿ ಇಂದು ನಮ್ಮ ಸರ್ಕಾರಗಳು ಹಾಗೂ ಸರ್ಕಾರೇತರ ಗ್ರಾಮಾಭ್ಯುದಯನಿರತ ಸಂಘ ಸಂಸ್ಥೆಗಳು ವ್ಯಾಪಕವಾಗಿ ಗ್ರಾಮೀಣ ಸೌಲಭ್ಯಗಳು, ಆರೋಗ್ಯ, ಶಿಕ್ಷಣ ಇತ್ಯಾದಿಯಾಗಿ ಏನೆಲ್ಲ ಕಾರ್ಯಕ್ರಮಗಳನ್ನು ಎಷ್ಟೇ ಕಾಳಜಿಪೂರ್ವಕವಾಗಿ ಹಮ್ಮಿಕೊಂಡಾಗ್ಯೂ, ಗ್ರಾಮೀಣ ಪ್ರದೇಶದ ಜನತೆಯಿಂದ ಈ ಕಾರ್ಯಕ್ರಮಗಳ ಅಳವಡಿಕೆಯಲ್ಲಿ ಸೂಕ್ತ ಸ್ಪಂದನ ದೊರೆಯುತ್ತಿಲ್ಲ. ಇದಕ್ಕೆ ಕಾರಣವೇನೆಂದು ವಿಶ್ಲೇಷಣೆ ಮಾಡಿದಾಗ ನಮ್ಮೆದುರು ನಿಲ್ಲುವ ವಾಸ್ತವಾಂಶವೆಂದರೆ, ಗ್ರಾಮೀಣ ಜನತೆಗೆ ಮೂಲಭೂತ ಅವಶ್ಯಕತೆಯಾದ ಎರಡು ಹೊತ್ತು ಹೊಟ್ಟೆ ತುಂಬ ಊಟ ದೊರೆಯುವುದು ದುಸ್ತರವಾಗಿರುವಾಗ, ಉಳಿದ ಯಾವುದೇ ವಿಕಾಸಪರ ಕಾರ್ಯಕ್ರಮಗಳು ಅವರಿಗೆ ಅಸಿಂಧುವೆನಿಸುತ್ತಿವೆ. ನಮ್ಮ ದೇಶದ ಜನತೆಯಲ್ಲಿ ಪ್ರತಿಶತ ೭೦ ರಷ್ಟು ಜನರು ಗ್ರಾಮಗಳಲ್ಲಿ ಬದುಕುವ ಕೃಷಿಕರು. ಈ ದಿಕ್ಕಿನಲ್ಲಿ ನಮ್ಮ ರಾಷ್ಟ್ರದ ಪ್ರಸ್ತುತ ಪರಿಸ್ಥಿತಿಯನ್ನು ಪ್ರತಿಬಿಂಬಿಸುವ ಕೆಲವು ಅಂಕಿ ಅಂಶಗಳನ್ನು ಗಮನಿಸೋಣ.

> **ರೈತನು ತಲತಲಾಂತರದಿಂದ ಅನುಸರಿಸುತ್ತ ಬಂದಿರುವ ಒಕ್ಕಲುತನ ಪದ್ಧತಿಗಳಾದ ಹೈನುಗಾರಿಕೆ, ಕುರಿ ಸಾಕಾಣಿಕೆ, ಜೇನು ಸಾಕಾಣಿಕೆ, ತೋಟಗಾರಿಕೆ, ಹಣಬೆ ಬೇಸಾಯ ಮುಂತಾದವುಗಳ ಅಳವಡಿಕೆಯಿಂದ ಆತನು ಸ್ವಾವಲಂಬಿಯಾಗಲು ಸಾಧ್ಯ.**

ನಮ್ಮ ರಾಷ್ಟ್ರದ ಜನಸಂಖ್ಯೆಯು ಕ್ರಿ.ಶ. ೨೦೩೦ರ ವೇಳೆಗೆ ೧೩೭ ಕೋಟಿ ಹಾಗೂ ೨೦೫೦ರ ವೇಳೆಗೆ ೧೬೬ ಕೋಟಿಗಳನ್ನು ಮುಟ್ಟುವ ಅಂದಾಜಿದೆ. ಪ್ರಸ್ತುತದಲ್ಲಿ ಗರಿಷ್ಠ ಮಟ್ಟವಾದ ೨೧೦ದಶಲಕ್ಷ ಟನ್ನುಗಳಷ್ಟಿರುವ ಆಹಾರೋತ್ಪಾದನೆಯು ೨೦೩೦ರ ವೇಳೆಗೆ ೨೮೯ ದಶಲಕ್ಷ ಟನ್ನುಗಳಿಗೂ, ೨೦೫೦ರ ವೇಳೆಗೆ ೩೪೯ ದಶಲಕ್ಷ ಟನ್ನುಗಳಿಗೂ ತಲುಪಬೇಕಾದ ಕ್ಲಿಷ್ಟಕರ ಅನಿವಾರ್ಯತೆ ನಮ್ಮ ಮುಂದಿದೆ. ಐಷಾರಾಮೀ ಜೀವನದ ಬೆನ್ನು ಹತ್ತಿ ನಗರೀಕರಣದತ್ತ ವಾಲುತ್ತಿರುವ ನಮ್ಮ ಪ್ರಯತ್ನಗಳಿಂದಾಗಿ ಕೃಷಿಯೋಗ್ಯವಾದ, ಕೃಷಿಗೆ ಲಭ್ಯವಿದ್ದ ಎಷ್ಟೋ ಜಮೀನು, ಕಟ್ಟಡಗಳಿಂದ ಮತ್ತು ಕೈಗಾರೀಕರಣದಿಂದ ಆವೃತವಾಗಿ ಪ್ರಸ್ತುತ ೧೪೨.೮ ದಶಲಕ್ಷ ಹೆಕ್ಟೇರು ಇರುವ ಕೃಷಿ ಜಮೀನು ೨೦೫೦ರ ವೇಳೆಗೆ ಸುಮಾರು ೧೩೭ ದಶಲಕ್ಷ ಹೆಕ್ಟೇರುಗಳಿಗೆ ಇಳಿಯುವ ಸಾಧ್ಯತೆಯಿದೆ. ಅಂದಮೇಲೆ ಉತ್ಪಾದಕತೆಯನ್ನು ದುಪ್ಪಟ್ಟುಗೊಳಿಸುವ ಅಗಾಧವಾದ ಗುರುತರ ಹೊಣೆ ನಮ್ಮ ಮೇಲಿದೆ.

ಇಂದು ಒಂದು ಅಂದಾಜಿನ ಪ್ರಕಾರ ಆರು ಲಕ್ಷ ಹಳ್ಳಿಗಳಲ್ಲಿ ಸುಮಾರು ೧೦೫ ದಶಲಕ್ಷ ರೈತ ಕುಟುಂಬಗಳು ಕೃಷಿಯ ಬದುಕಿನಲ್ಲಿ ತಮ್ಮನ್ನು ತೊಡಗಿಸಿಕೊಂಡಿವೆ. ೧೯೮೫-೮೬ರಲ್ಲಿ ನಡೆದ ಗಣತಿಯ ಪ್ರಕಾರ, ರೈತಾಪಿ ಜನರಲ್ಲಿ ಸುಮಾರು ಪ್ರತಿಶತ ೭೬.೨ರಷ್ಟು ಜನ ಸಣ್ಣ ಮತ್ತು

ಅತಿಸಣ್ಣ ರೈತರಿದ್ದಾರೆ. ಕೃಷಿ ಮಾಡಲ್ಪಡುತ್ತಿರುವ ಒಟ್ಟು ಜಮೀನಿನಲ್ಲಿ ಪ್ರತಿಶತ ೨೯ರಷ್ಟು ಮಾತ್ರ ಇವರ ಪಾಲಿನದಾಗಿದೆ. ರಾಷ್ಟ್ರಕ್ಕೆ ಸ್ವಾತಂತ್ರ್ಯ ಲಭಿಸಿದಾಗ ಪ್ರತಿ ವ್ಯಕ್ತಿಗೆ ಲಭ್ಯವಿದ್ದ ೦.೪೮ ಹೆಕ್ಟೇರು ಜಮೀನು ಕ್ರಿ.ಶ. ೨೦೦೦ದ ವೇಳೆಗೆ ೦.೧೫ ಹೆಕ್ಟೇರಿಗೆ ಇಳಿದಿದೆ. ಮುಂಬರುವ ದಿನಗಳಲ್ಲಿ ಲಭ್ಯವಿರುವ ಜಮೀನಿನಿಂದ ಏರುತ್ತಿರುವ ಜನಸಂಖ್ಯೆಗೆ ಅಗತ್ಯ ಆದಾಯ ಒದಗಿಸಿಕೊಳ್ಳುವುದು ದುಸ್ಸಾಧ್ಯವೆನಿಸಿದೆ. ಈ ಎಲ್ಲ ಪರಿಸ್ಥಿತಿಗಳ ಆಮೂಲಾಗ್ರ ಅಧ್ಯಯನದಿಂದ ಕಂಡುಬರುವ ಒಂದೇ ಮಾರ್ಗವೆಂದರೆ-ನೀರಾವರಿಯಲ್ಲಾಗಲೀ ಮಳೆಯಾಶ್ರಯದಲ್ಲಾಗಲೀ, ರೈತನು ತಲತಲಾಂತರಗಳಿಂದ ಅನುಸರಿಸುತ್ತ ಬಂದಿರುವ ಒಕ್ಕಲುತನ ಪದ್ಧತಿಗಳಾದ ಹೈನುಗಾರಿಕೆ, ಕುರಿ ಸಾಕಣೆ, ಕೋಳಿ ಸಾಕಣೆ, ಜೇನು ಸಾಕಣೆ, ಮೀನು ಸಾಕಣೆ, ರೇಷ್ಮೆ ಬೇಸಾಯ, ತೋಟಗಾರಿಕೆ, ಹಣಬೆ ಕೃಷಿ ಮುಂತಾದವುಗಳ ಸೂಕ್ತ ಅಳವಡಿಕೆಯಿಂದ ರೈತನನ್ನು ಸ್ವಾವಲಂಬನೆಯ ಕಡೆಗೆ ನಡೆಸುವುದು ಇಂದಿನ ಆದ್ಯ ಕರ್ತವ್ಯವಾಗಿದೆ. ಪ್ರತಿಯೊಂದು ರೈತ ಕುಟುಂಬದಲ್ಲಿ ಪೋಷಕಾಂಶಯುಕ್ತ ಆಹಾರದ ಸಮೃದ್ಧಿ, ಸ್ವಲ್ಪವೇ ಆದರೂ ನಿರಂತರವಾಗಿ ಹಣಕಾಸು ಒದಗಿಬರುವಂತಹ ಆರ್ಥಿಕ ಸ್ವಾವಲಂಬನೆ ಹಾಗೂ ಸಾಮಾಜಿಕ ಭದ್ರತೆಗಳನ್ನು ಸಾಕಾರಗೊಳಿಸಿದರೆ ಅವರ ಬದುಕಿನಲ್ಲಿ ಸುಸ್ಥಿರತೆ ಕಂಡುಬಂದು, ನಾವು ಕೈಗೊಳ್ಳಬಹುದಾದ ಯಾವುದೇ ಕಲ್ಯಾಣ ಕಾರ್ಯಕ್ರಮಗಳು ಅರ್ಥಪೂರ್ಣವೆನಿಸುತ್ತವೆ. ಸುಸ್ಥಿರತೆಯೆಂದು ಹೇಳುವಾಗ, ಕೇವಲ ಉತ್ಪಾದನೆ ಹೆಚ್ಚಿಸಿ, ಹಣಕಾಸು ಸ್ಥಿತಿ ಸುಧಾರಿಸುವುದು ಮಾತ್ರವಲ್ಲ, ರೈತನಿಗೆ ಲಭ್ಯವಿರುವ ಪ್ರತಿಯೊಂದು ನೈಸರ್ಗಿಕ ಸಂಪನ್ಮೂಲಗಳ ಸದ್ಬಳಕೆಯಾಗಿ, ಉತ್ಪಾದನೆಗಾಗಿ ಅವನು ಬಳಸುವ ಪ್ರತಿಯೊಂದು ಸಾಮಗ್ರಿಯಲ್ಲೂ ಸ್ವಾವಲಂಬನೆ ಸಾಧಿಸುವುದರ ಜೊತೆಗೆ, ತಲತಲಾಂತರಗಳಿಂದ ತನಗೆ, ತನ್ನ ಮನೆತನಕ್ಕೆ ಆಶ್ರಯತಾಣವಾಗಿರುವ ಭೂಮಿಯ ಫಲವತ್ತತೆಯಲ್ಲಿ ಸುಸ್ಥಿರತೆಯನ್ನು ಕಾಯ್ದುಕೊಳ್ಳುವುದರ ಜೊತೆಗೆ, ಅದನ್ನು ಅಭಿವೃದ್ಧಿಪಡಿಸುತ್ತಾ ತನ್ನ ಮುಂದಿನ ಜನಾಂಗಕ್ಕೆ ಬಳುವಳಿಯಾಗಿ ಕೊಡುವ ಭೂಮಿಕಾಣೆ ಸಂಪದ್ಭರಿತವಾಗಿರುವಂತೆ ನೋಡಿಕೊಳ್ಳುವ ಗುರುತರ ಜವಾಬ್ದಾರಿ ಅವನ ಮೇಲಿದೆ.

ಈ ನಿಟ್ಟಿನಲ್ಲಿ ಮೇಲಿನ ಎಲ್ಲಾ ಅಂಶಗಳನ್ನೂ ಒಳಗೊಂಡು ನಮ್ಮ ರಾಷ್ಟ್ರದ ಪ್ರತಿಯೊಬ್ಬ ಸಣ್ಣ ಮತ್ತು ಅತಿ ಸಣ್ಣ ರೈತರೂ ಹಮ್ಮಿಕೊಳ್ಳಬಹುದಾದ, ಸಮಗ್ರ ಕೃಷಿ ಪದ್ಧತಿಯ ಮಾದರಿಯೊಂದನ್ನು ಚಿಕ್ಕಮಗಳೂರು ಜಿಲ್ಲೆಯ ಬಾವಿಕೆರೆ-ತರೀಕೆರೆಯಲ್ಲಿ ನಮ್ಮ ವಿಶ್ವವಿದ್ಯಾನಿಲಯಕ್ಕೆ ಸೇರಿದ ಕೃಷಿ ಸಂಶೋಧನಾ ಕೇಂದ್ರದಲ್ಲಿ ಹಿರಿಯ ವಿಜ್ಞಾನಿ ಎಂ. ರುದ್ರಾರಾಧ್ಯ ಅವರು ಅಭಿವೃದ್ಧಿಪಡಿಸಿ, ಕಳೆದ ನಾಲ್ಕು ವರ್ಷಗಳಿಂದ ಸತತ ಪರೀಕ್ಷೆಗೆ ಒಳಪಡಿಸಿ, ಸಫಲತೆಯನ್ನು ಸಾಧಿಸಿದ್ದಾರೆ. ಆ ಮಾದರಿಯ ಬಗೆಗಿನ ಸ್ಥೂಲ ಚಿತ್ರಣವನ್ನು ಇಲ್ಲಿ ನೀಡುವುದು ಪ್ರಸ್ತುತವೆನಿಸುತ್ತದೆ.

## ಮಾದರಿಯ ವಿನ್ಯಾಸ :

ಈ ಮಾದರಿಯನ್ನು ಒಂದು ಎಕರೆ ವಿಸ್ತೀರ್ಣದಲ್ಲಿ (೧೦೦X ೪೦ ಮೀ.) ಅಭಿವೃದ್ಧಿಪಡಿಸಲಾಗಿದೆ. ಇದನ್ನು ವಿನ್ಯಾಸ ಮಾಡುವಾಗ ಜಮೀನಿನ ನೆಲಮಟ್ಟವನ್ನು ಆಧರಿಸಿ, ಇದನ್ನು ಮಳೆಯಾಶ್ರಿತ ರೈತರಿಗಾಗಿ ಅಭಿವೃದ್ಧಿಪಡಿಸಿರುವುದರಿಂದ, ಈ ಒಂದು ಹಿಡುವಳಿಯ ಮೇಲೆ ಬಿದ್ದಂತಹ ಮಳೆಯ ನೀರು ಒಂದು ಹನಿಯೂ ಪೋಲಾಗಿ ಕೊಚ್ಚಿ ಹೋಗದಂತೆ ಇಳಿಜಾರಿಗೆ ಅಡ್ಡಲಾಗಿ ಬದುಗಳನ್ನು ನಿರ್ಮಿಸಿ ಐದು ತಾಕುಗಳಾಗಿ ವಿಂಗಡಿಸಲಾಗಿದೆ. ಯಾಕೆಂದರೆ ಮಳೆಯ ನೀರು ಕೊಚ್ಚಣೆಯಾಗಿ ಹೋಗುವುದರಿಂದ ನೀರು ನಷ್ಟವಾಗುವುದರ ಜೊತೆಗೆ ಜಮೀನಿನಲ್ಲಿನ ಮೇಲ್ಪದರದ ಫಲವತ್ತಾದ ಮಣ್ಣು ಸಹ ಕೊಚ್ಚಿಹೋಗುತ್ತದೆಯಲ್ಲದೆ, ನಾವು ಬಳಸಿದ ಗೊಬ್ಬರ ರೂಪದ ಪೋಷಕಾಂಶಗಳೂ ಕೊಚ್ಚಿಹೋಗಿ ಹಾನಿಯಾಗುತ್ತದೆ. ಇಂತಹ ನಷ್ಟವನ್ನು ತಡೆಯುವುದೇ ಈ ಮಾದರಿಯ ವಿಶೇಷತೆ. ಇಷ್ಟೇ ಅಲ್ಲದೆ, ಇಳಿಜಾರಿಗೆ ಅಡ್ಡವಾಗಿ ಬದುತಡೆಗಳನ್ನು ನಿರ್ಮಿಸಿ, ನೀರಿನ ಚಲನೆಯ ಗತಿಗೆ ಸ್ಪಷ್ಟ ರೀತಿಯ ನಿರ್ದೇಶನ ನೀಡುವುದರಿಂದ ಬೆಳೆಗೆ ಮಾಮೂಲಿಗಿಂತ ಹೆಚ್ಚು ನೀರು ದೀರ್ಘಕಾಲ ಲಭ್ಯವಾಗಿ ಉತ್ತಮ ಫಸಲನ್ನು ನಿರೀಕ್ಷಿಸಬಹುದು. ಅಲ್ಲದೆ, ನೀರಿನ ಚಲನೆಯ ಮಾರ್ಗಗಳನ್ನು ನಿರ್ಮಿಸಿ, ಅವುಗಳೆಲ್ಲವೂ ಹಿಡುವಳಿಯ ಅತ್ಯಂತ ತಗ್ಗಿನ ಪ್ರದೇಶದಲ್ಲಿ ತೋಡಲಾಗಿರುವ ಕೃಷಿ ಹೊಂಡವೊಂದಕ್ಕೆ ಬಂದು ಸೇರುವಂತೆ ವ್ಯವಸ್ಥೆ ಮಾಡಲಾಗಿದೆ. ಇದರಿಂದಾಗಿ, ಹೆಚ್ಚು ಮಳೆ ಬಿದ್ದಾಗ ಹರಿದುಹೋಗಬಹುದಾದ ನೀರು ಕೃಷಿ ಹೊಂಡದಲ್ಲಿ ಶೇಖರಣೆಯಾಗುತ್ತದೆ. ಈ ನೀರನ್ನು ಅಗತ್ಯ ಬಿದ್ದಾಗ ಮಾದರಿಯಲ್ಲಿನ ಕೈತೋಟದಲ್ಲಿ ತರಕಾರಿ ಬೆಳೆಗಳಿಗೆ ಬಳಸಿಕೊಳ್ಳುವುದರ ಜೊತೆಗೆ ಮೀನು ಸಾಕಣೆಯನ್ನೂ ಕೈಗೊಳ್ಳಲಾಗಿದೆ.

ಈ ಮಾದರಿಯಲ್ಲಿ ಒತ್ತು ಕೊಡಲಾಗಿರುವ ಮತ್ತೊಂದು ಮಹತ್ವದ ಅಂಶವೆಂದರೆ, ಒಬ್ಬ ಚಿಕ್ಕ ರೈತ ತನ್ನ ಕುಟುಂಬಕ್ಕೆ ಅವಶ್ಯವಿರುವ ಸಾಧ್ಯವಾದ ಎಲ್ಲವನ್ನೂ ತನ್ನ ಒಂದು ಎಕರೆ ಪ್ರದೇಶದಲ್ಲೇ ಉತ್ಪಾದಿಸಿಕೊಂಡು ತಾನು ತನ್ನ ಕುಟುಂಬ ಮತ್ತು

ಜಾನುವಾರುಗಳು ಅಲ್ಲೇ ನೆಲೆಸಿ, ಕೆಲವು ಉಪಕಸುಬುಗಳನ್ನೂ ಕೈಗೊಂಡು, ಕುಟುಂಬದ ಆದಾಯದಲ್ಲಿ ಸ್ಥಿರತೆ ಕಂಡುಕೊಂಡು, ಸ್ವಾವಲಂಬನೆಯತ್ತ ಮುನ್ನಡೆಯುವುದೇ ಆಗಿದೆ. ಅದರಂತೆ ಲಭ್ಯವಿರುವ ಐದು ತಾಕುಗಳಲ್ಲಿ ಇವೆಲ್ಲವನ್ನೂ ಅಳವಡಿಸಲಾಗಿದೆ. ಮನುಷ್ಯನ ದೈನಂದಿನ ಅವಶ್ಯಕತೆಗಳಾದ ಆಹಾರಧಾನ್ಯ, ಬೇಳೆಕಾಳುಗಳು, ಎಣ್ಣೆಕಾಳುಗಳು, ತರಕಾರಿಗಳು, ಹಣ್ಣು ಹಂಪಲುಗಳು, ಹಾಲು, ಜೇನು, ಹೂವು, ಮಾಂಸ, ಔಷಧೀಯ ಗಿಡಗಳು, ಮೇವು ಉತ್ಪಾದನೆ, ಹಸಿರೆಲೆ ಗೊಬ್ಬರ, ಸಾವಯವ ಗೊಬ್ಬರ ಉತ್ಪಾದನೆ ಇತ್ಯಾದಿಯಾಗಿ ಎಲ್ಲಕ್ಕೂ ಅನುವು ಮಾಡಿಕೊಡಲಾಗಿದೆ. ಕ್ಷೇತ್ರದ ಸುತ್ತ ಮರಮುಟ್ಟು, ಮೇವಿನ ಬೆಳೆಗಳು, ಗೊಬ್ಬರದ ಗಿಡ, ನಾರು ಮತ್ತು ಮೇವಿನ ಗಿಡಗಳಿಗೆ ಅವಕಾಶ ಕಲ್ಪಿಸಲಾಗಿದೆ. ಅವುಗಳ ವಿವರಗಳನ್ನು ಅಳವಡಿಸಿಕೊಳ್ಳುವವರಿಗಾಗಿ ಈ ಮುಂದೆ ಕೊಡಲಾಗಿದೆ.

## ಸಜೀವ ಬೇಲಿಯ ಬೆಳೆಗಳು :

ಸರ್ವೆಗಿಡ ಮತ್ತು ಸಿಲ್ವರ್ ಓಕ್‌ಗಳನ್ನು ಕ್ಷೇತ್ರದ ಪರಿಧಿಯ ಸುತ್ತ ಒಂದರ ನಂತರ ಒಂದರಂತೆ ಪರ್ಯಾಯವಾಗಿ ಬೆಳೆಯಲಾಗಿದ್ದು, ಇವುಗಳ ನಡುವೆ ೧೨ ಅಡಿಗಳ ಅಂತರವಿರಬೇಕು. ಅಂತರದಲ್ಲಿ ಎರಡು ಅಡಿಗೊಂದರಂತೆ ಕ್ಯಾಲಿಯಾಂಡ್ರಾ, ಗ್ಲಿರ್‌ಸೀಡಿಯ, ಕತ್ತಾಳೆ, ಚೊಗಚೆ ಮತ್ತು ಬಾಗೆಗಳನ್ನು ಬೆಳೆಸಬೇಕು. ವಿವಿಧೋದ್ದೇಶಗಳಿಗಾಗಿ ಅಲ್ಲಲ್ಲಿ ಒಂದೊಂದು ಬಿದಿರು, ಹೊಂಗೆ, ಬೇವು, ಸೀಗೆಕಾಯಿ, ಅಂಟುವಾಳ, ದಾಸವಾಳ ಇತ್ಯಾದಿ ಗಿಡಗಳನ್ನೂ ಬೆಳೆದುಕೊಳ್ಳಬಹುದು. ಬೇಲಿಯಲ್ಲಿ ಬೆಳೆದುಕೊಳ್ಳುವ ಯಾವುದೇ ಸಸ್ಯ ತನ್ನ ರೆಂಬೆ ಕೊಂಬೆಗಳಿಂದ ಪಸರಿಸಿ ಹರಡಿಕೊಳ್ಳದಂತೆ ಆಗಿಂದಾಗ್ಗೆ ರೆಂಬೆ ಕೊಂಬೆಗಳನ್ನು ಕತ್ತರಿಸುತ್ತಾ ವಿವಿಧೋದ್ದೇಶಗಳಿಗೆ ಬಳಸಿಕೊಳ್ಳಬೇಕು. ಈ ಸಸ್ಯಗಳು ನೇರವಾಗಿ ಉದ್ದಕ್ಕೆ ಬೆಳೆದು, ನಾವು ತಾಕುಗಳಲ್ಲಿ ಬೆಳೆದುಕೊಳ್ಳುವ ಬೆಳೆಗಳಿಗೆ ಈ ಬೇಲಿಯ ಬೆಳೆಗಳ ನೆರಳಿನಿಂದ ಹಾಗೂ ಬೇರುಗಳಿಂದ ಧಕ್ಕೆಯಾಗದಂತೆ ನೋಡಿಕೊಳ್ಳುವುದು ಅತ್ಯವಶ್ಯ.

## ಸಸ್ಯ ಸಮೃದ್ಧ ಬದುಗಳು :

ಕ್ಷೇತ್ರವನ್ನು ಐದು ತಾಕುಗಳಾಗಿ ವಿಂಗಡಿಸಲು ಹಾಗೂ ಇಳಿಜಾರಿಗೆ ತಡೆ ಒಡ್ಡಲು ನಿರ್ಮಿಸಿದ ನಾಲ್ಕು ಬದುಗಳ ಮೇಲೆ ಹಲವು ಕಟಾವುಗಳನ್ನು ಪಡೆಯಬಲ್ಲ ಹಸಿರು ಹುಲ್ಲಿನ ಬೆಳೆ ಹಾಗೂ ಗೊಬ್ಬರದ ಗಿಡ ಗ್ಲಿರ್‌ಸೀಡಿಯಾಗಳನ್ನು ಪರ್ಯಾಯವಾಗಿ ಬೆಳೆಯಬೇಕು. ಇದರಿಂದ ಜಾನುವಾರುಗಳಿಗೆ ಹಸಿರು ಹುಲ್ಲು ಮತ್ತು ಹಸಿರೆಲೆ ಗೊಬ್ಬರ ಒದಗಿ ಬರುವುದರ ಜೊತೆಗೆ ಕೊಚ್ಚಣೆಯನ್ನೂ ತಡೆಗಟ್ಟಬಹುದು. ಹುಲ್ಲಿನ ಬೆಳೆಯಾಗಿ ಖಸ್ ಅಥವಾ ಸ್ಟೈಲೋ ಹುಲ್ಲುಗಳನ್ನು ಯಶಸ್ವಿಯಾಗಿ ಅಳವಡಿಸಿಕೊಂಡು ಮಳೆಯ ನೀರು, ಮಣ್ಣು ಮತ್ತು ಪೋಷಕಾಂಶಗಳ ಕೊಚ್ಚಣೆಯನ್ನು ತಡೆಗಟ್ಟಬಹುದು.

## ಜೈವಿಕ ಅನಿಲ ಘಟಕ :

ಇದನ್ನು ಅತ್ಯಂತ ಕಡಿಮೆ ಖರ್ಚಿನಲ್ಲಿ ನಿರ್ಮಿಸಿಕೊಳ್ಳಲು ಅವಕಾಶವಿದೆ. ಕುಟುಂಬದ ಅಡಿಗೆಗೆ ಸಾಕಾಗುವಷ್ಟು ಅನಿಲ ಒದಗುವುದರ ಜೊತೆಗೆ ಕುಟೀರಕ್ಕೆ ಹಾಗೂ ಜಾನುವಾರು ಕೊಟ್ಟಿಗೆಗೆ ಒಂದೊಂದು ದೀಪ ಮತ್ತು ಕುಟೀರದ ಹೊರಗೆ ( ಮುಂದೆ) ಒಂದು ದೀಪದ ವ್ಯವಸ್ಥೆ ಮಾಡಲು ಸಾಧ್ಯ. ಈ ಹೊರದೀಪದ ಕೆಳಗೆ ಒಂದು ತೊಟ್ಟಿ ನಿರ್ಮಿಸಿ ನೀರು ತುಂಬಿಸಿದರೆ, ರಾತ್ರಿ ವೇಳೆ ದೀಪಕ್ಕೆ ಆಕರ್ಷಿತವಾದ, ಬೆಳೆಗಳಲ್ಲಿರಬಹುದಾದ ಶತ್ರುಕೀಟಗಳು ನೀರಿನಲ್ಲಿ ಬಿದ್ದು ಅವುಗಳ ಮಾಹಿತಿ ದೊರೆತು, ನಿವಾರಣೆಗೆ ಕ್ರಮ ಕೈಗೊಳ್ಳಲು ಅನುವಾಗುತ್ತದೆ. ಕೆಲ ಹುಳುಗಳು ನೇರವಾಗಿ ಹೊಂಡದೊಳಕ್ಕೆ ಬೀಳುವುದರಿಂದ ಅಲ್ಲಿ ಸಾಕಲಾಗುವ ಮೀನುಗಳಿಗೆ ಪುಷ್ಕಳ ಭೋಜನ ದೊರೆತಂತಾಯಿತು.

## ಗೊಬ್ಬರ ಉತ್ಪಾದನಾ ಘಟಕಗಳು :

ಐದು ಸಾವಯವ ಗೊಬ್ಬರ ಉತ್ಪಾದನಾ ತೊಟ್ಟಿಗಳನ್ನು ನಿರ್ಮಿಸಿ, ಎರೆಗೊಬ್ಬರ / ಕಾಂಪೋಸ್ಟು ಗೊಬ್ಬರಗಳ ಉತ್ಪಾದನೆಗೆ ಒತ್ತುಕೊಡಲಾಗಿದೆ. ಕ್ಷೇತ್ರದ ಎಲ್ಲಾ ತ್ಯಾಜ್ಯವಸ್ತುಗಳು, ಬೆಳೆಗಳ ಪಳೆಯುಳಿಕೆಗಳು, ಅನಿಲ ಘಟಕದಿಂದ ದೊರೆಯುವ ಬಗ್ಗಡದೊಂದಿಗೆ ಬೆರೆತು, ಶೀಘ್ರ ಕಳಿತು ಉತ್ತಮ ಗೊಬ್ಬರ ನೀಡುತ್ತವೆ. ಈ ಎಲ್ಲ ತೊಟ್ಟಿಗಳ ಮೇಲೆ ನೆರಳಿಗಾಗಿ ಚಪ್ಪರಗಳನ್ನು ನಿರ್ಮಿಸಿ, ಈ ಹಂದರಗಳ ಮೇಲಕ್ಕೆ ತೊಂಡೆಕಾಯಿ, ಪಡವಲಕಾಯಿ, ಹೀರೆ, ಸೌತೆ, ಕರಬೂಜ, ಸಿಹಿಗುಂಬಳ, ಬಸಳೆ ಇತ್ಯಾದಿ ಬಳ್ಳಿಗಳನ್ನು

ಹಬ್ಬಿಸಿ ಪ್ರಯೋಜನ ಪಡೆಯಲಾಗಿದೆ. ಐದು ಗೊಬ್ಬರದ ಘಟಕಗಳಿಗೆ ಅವಕಾಶವಿರುವುದರಿಂದ, ಎಲ್ಲ ಐದು ತಾಕುಗಳಿಗೂ ವಿಫುಲವಾಗಿ ಸಾವಯವ ಗೊಬ್ಬರ ಲಭ್ಯ. ಈ ಮಾದರಿಯನ್ನು ಹಮ್ಮಿಕೊಂಡ ಮೂರನೇ ವರ್ಷದ ಮುಂಗಾರು ಹಂಗಾಮಿನಲ್ಲಿ ಆರಂಭಕ್ಕೆ ಎಲ್ಲ ತರಕಾರಿ ಬೆಳೆಗಳಿಗೆ ಸಾಕಾಗುವಷ್ಟು ಎರೆಗೊಬ್ಬರವಲ್ಲದೆ, ಉಳಿದ ತೊಟ್ಟಿಗಳಿಂದ ಐದು ಟ್ರಾಕ್ಟರು ಲೋಡುಗಳಷ್ಟು ಚೆನ್ನಾಗಿ ಕಳಿತ ಕಾಂಪೋಸ್ಟು ಗೊಬ್ಬರ ಲಭ್ಯವಾಯಿತು. ಅಂದಮ್ಯೇಲೆ ಉತ್ತಮ ನಿರ್ವಹಣೆಯೊಂದಿಗೆ ಇಡೀ ಕ್ಷೇತ್ರವನ್ನು ಸಾವಯವ ಕೃಷಿ ಕ್ಷೇತ್ರವನ್ನಾಗಿ ಪರಿವರ್ತಿಸಿ ಉತ್ಕೃಷ್ಟ ಗುಣಮಟ್ಟದ ಫಸಲನ್ನು ಪಡೆಯುವುದು ಸಣ್ಣ ರೈತನಿಗೂ ಸಾಧ್ಯವಾಗುತ್ತದೆ. ಇನ್ನು ವಿವಿಧ ತಾಕುಗಳಲ್ಲಿ ಬೆಳೆಯುಕೊಳ್ಳಬಹುದಾದ ಬೆಳೆಗಳು, ಹಮ್ಮಿಕೊಳ್ಳಬಹುದಾದ ಕೃಷಿ ಸಂಬಂಧಿ ಉಪಕಸುಬುಗಳ ಬಗ್ಗೆ ನೋಡೋಣ.

**ತಾಕು - ೧ ( ಹಣ್ಣಿನ ಬೆಳೆಗಳು ಮತ್ತು ಅಂತರ ಬೆಳೆಗಳು) :**

ತ್ರಿಕೋನಾಕೃತಿಯಲ್ಲಿ ೧೦ ಮೀ. x ೧೦ಮೀ. ಅಂತರದಲ್ಲಿ ಬರುವಂತೆ ಮಾಡಿ ಎರಡು ಮಾವು, ಒಂದೊಂದು ಸಪೋಟ, ಹಲಸು, ಹುಣಿಸೆ, ಹೊಂಗೆ, ಬೇವು, ಗೇರು, ನೇರಳೆ ಹಾಗೂ ಬೆಟ್ಟದನೆಲ್ಲಿಗಳಿಗೆ ಅವಕಾಶ ಕಲ್ಪಿಸಲಾಗಿದೆ. ಇವುಗಳ ಸಾಲಿನ ನಡುವಿನ ಅಂತರದಲ್ಲಿ ಅಲಸಂದೆ, ಅವರೆ, ಬಟಾಣಿ, ಹೆಸರು, ಉದ್ದು, ಸೋಯಾಅವರೆ ಇತ್ಯಾದಿಗಳನ್ನು ಅಂತರ ಬೆಳೆಯಾಗಿ ತೆಗೆದುಕೊಳ್ಳಲಾಗಿದೆ. ಇವುಗಳ ಕಟಾವಿನ ನಂತರ ಚಳಿಗಾಲದಲ್ಲಿ ಹುರುಳಿಯನ್ನು ಬೆಳೆದುಕೊಳ್ಳಬಹುದು. ಕಳೆದ ಮೂರು ಸಾಲಿನಲ್ಲಿ ಸುಮಾರು ೨೦೦೦ ರೂಪಾಯಿ ಮೌಲ್ಯದ ಅಂತರ ಬೆಳೆಗಳನ್ನು ತೆಗೆದುಕೊಳ್ಳಲು ಸಾಧ್ಯವಾಗಿದೆ.

**ತಾಕು - ೨ (ನೆಲಗಡಲೆ + ತೊಗರಿ-೮:೨) :**

ಎರಡನೇ ತಾಕಿನಲ್ಲಿ ಎಂಟು ಸಾಲು ನೆಲಗಡಲೆ ಮತ್ತು ಎರಡು ಸಾಲು ತೊಗರಿ (ಜೋಡಿಸಾಲು) ಗಳನ್ನು ಮಿಶ್ರ ಬೆಳೆಗಳಾಗಿ ತೆಗೆದುಕೊಳ್ಳಲಾಗಿದೆ. ಇದರಿಂದ ಸುಮಾರು ೨೫೦ ರಿಂದ ೨೮೫ ಕೆ.ಜಿ. ನೆಲಗಡಲೆಕಾಯಿ ಹಾಗೂ ೧೨೦ರಿಂದ೧೩೦ ಕೆ.ಜಿ. ತೊಗರಿಕಾಳು ಫಸಲುಗಳನ್ನು ಪಡೆಯಲು ಸಾಧ್ಯವಾಗಿದೆ.

**ತಾಕು - ೩(ರಾಗಿ + ಹುಚ್ಚೆಳ್ಳು-೪:೧) :**

ನಾಲ್ಕು ಸಾಲು ರಾಗಿ ಮತ್ತು ಒಂದು ಸಾಲು ಹುಚ್ಚೆಳ್ಳು ಬರುವಂತೆ ಅವುಗಳನ್ನು ಮಿಶ್ರ ಬೆಳೆಯಾಗಿ ತೆಗೆದುಕೊಳ್ಳಲಾಗಿದೆ. ಇದರಿಂದ ಸುಮಾರು ೨೦೦ ರಿಂದ ೨೫೦ ಕೆ.ಜಿ. ರಾಗಿ ಮತ್ತು ೨೦ ರಿಂದ ೨೫ ಕೆ.ಜಿ. ಹುಚ್ಚೆಳ್ಳು ಪಡೆಯಲಾಗಿದೆ. ರಾಗಿಯನ್ನು ನಾಟಿಪದ್ಧತಿಯಲ್ಲಿ ತೆಗೆದುಕೊಳ್ಳಲಾಗುತ್ತಿದ್ದು, ನಾಟಿ ಮಾಡುವಾಗ ರಾಗಿ ಸಾಲಿನಲ್ಲಿ ತೆಳ್ಳಗೆ ಸಾಸಿವೆ ಬಿತ್ತಿ ೪ರಿಂದ ೬ಕೆ.ಜಿ. ಗಳಷ್ಟು ಸಾಸಿವೆಯನ್ನೂ ಸಹ ಪಡೆಯಬಹುದಾಗಿದೆ.

**ತಾಕು - ೪ (ರಾಗಿ + ಅವರೆ-೪:೧) :**

ನಾಲ್ಕನೇ ತಾಕಿನಲ್ಲಿ ನಾಲ್ಕು ಸಾಲು ರಾಗಿ ಮತ್ತು ಒಂದು ಸಾಲು ಅವರೆಯಂತೆ ಮಿಶ್ರಬೆಳೆಯಾಗಿ ತೆಗೆದುಕೊಳ್ಳಬಹುದು. ಇಲ್ಲೂ ಸಹ ರಾಗಿ ಸಾಲಿನಲ್ಲಿ ಸಾಸಿವೆಯನ್ನು ಬೆಳೆದುಕೊಳ್ಳಬಹುದು. ಈ ತಾಕಿನಿಂದ ೨೦೦ ರಿಂದ ೨೫೦ ಕೆ.ಜಿ. ರಾಗಿ ಮತ್ತು ೪ರಿಂದ ೬ಕೆ.ಜಿ. ಸಾಸಿವೆ ಪಡೆಯಬಹುದಲ್ಲದೆ ಅವರೆಯನ್ನು ಹಸಿ ತರಕಾರಿಯಾಗಿ ೭೫ ರಿಂದ ೮೦ ಕೆ.ಜಿ. ಮತ್ತು ತೊಳಲಿನಿಂದ ೩೫-೪೦ ಕೆ.ಜಿ. ಒಣಗಿದ ಅವರೆಕಾಳನ್ನು ಪಡೆಯಬಹುದು.

ವರ್ಷದಿಂದ ವರ್ಷಕ್ಕೆ ತಾಕು ಎರಡರಿಂದ ನಾಲ್ಕರವರೆಗೆ ಬೆಳೆ ಪರಿವರ್ತನೆಗೆ ಒತ್ತು ಕೊಡಲಾಗಿದೆ.

**ತಾಕು - ೫ :**

ಐದನೇ ತಾಕಿನಲ್ಲಿ ರೈತ ಕುಟುಂಬ ವಾಸಿಸಲು ಒಂದು ಕುಟೀರ, ಜಾನುವಾರುಗಳಿಗಾಗಿ ಒಂದು ಕೊಟ್ಟಿಗೆ, ಒಂದು ಶೌಚಾಲಯ, ಒಂದು ಜೈವಿಕ ಅನಿಲ ಘಟಕ, ಐದು ಸಾವಯವ ಗೊಬ್ಬರ ಉತ್ಪಾದನಾ ಘಟಕಗಳು, ಒಂದು ಕೃಷಿ ಹೊಂಡ ಮತ್ತು ಅವಕ್ಕೆ ಹೊಂದಿಕೊಂಡಂತೆ ಹೊಂಡದ ಮೇಲೆಯೇ ನಿರ್ಮಿಸಲ್ಪಟ್ಟ ಒಂದು ಕೋಳಿಗೂಡು ಹಾಗೂ ಒಂದು ಕೈತೋಟಕ್ಕೆ ಅವಕಾಶ ಕಲ್ಪಿಸಲಾಗಿದೆ.

## ಕ್ಷೇತ್ರ ಕುಟೀರ :

ಕುಟೀರದಲ್ಲಿ ಒಂದು ವಿಸ್ತಾರವಾದ ಪಡಸಾಲೆ ಮತ್ತು ಅಡಿಗೆ ಕೋಣೆಗಳಿಗೆ ಒತ್ತು ನೀಡಲಾಗಿದೆ. ಪಡಸಾಲೆಯ ಒಂದು ಭಾಗಕ್ಕೆ ಜಗತಿಕಟ್ಟೆ ನಿರ್ಮಿಸಿ, ಅದರ ಮುಂದಕ್ಕೆ ಬಿದಿರಿನಲ್ಲಿಯೇ ಒಂದು ಮೇಜು ನಿರ್ಮಿಸಿ, ಅದನ್ನು ಊಟಕ್ಕೆ ಹಾಗೂ ಅಧ್ಯಯನಗಳಿಗೆ ಬಳಸಬಹುದಾಗಿದೆ. ಕೃಷಿ ವಿಷಯಗಳನ್ನೊಳಗೊಂಡ ಒಂದು ಪುಟ್ಟ ಗ್ರಂಥಭಂಡಾರವೂ ಇದೆ. ಅಡಿಗೆಮನೆಯಲ್ಲಿ ಮಣ್ಣಿನಿಂದ ನಿರ್ಮಿಸಿದ ಎರಡು ಒಲೆಗಳು, ಒಂದು ಬಯೋಗ್ಯಾಸ್ ಒಲೆ (ಎರಡು ಒಲೆಗಳನ್ನುಳ್ಳದ್ದು), ಒಂದು ಮೂಲೆಗೆ ಚಿಕ್ಕ ಸ್ನಾನದ ಬಚ್ಚಲು, ಮತ್ತೊಂದು ಮೂಲೆಯಲ್ಲಿ ಪೂಜಾ ಸ್ಥಳ, ಪರಿಕರಗಳನ್ನಿಟ್ಟುಕೊಳ್ಳಲು ಬಚ್ಚಲ ಮೇಲೆ ಒಂದು ಚಿಕ್ಕದಾದ ಅಟ್ಟ - ಹೀಗೆ ಎಲ್ಲ ಸುವ್ಯವಸ್ಥಿತವಾಗಿದೆ. ನಿಜಕ್ಕೂ ಹೇಳಬೇಕೆಂದರೆ ಕೇವಲ ಒಂದು ಬಡ ಗುಡಿಸಲು ಎಂದು ಪ್ರಾರಂಭಿಸಿದ ಈ ಕುಟೀರ ಇದೀಗ ಹೈಟೆಕ್ ಹಟ್ ಎಂಬ ಅಭಿದಾನ ಪಡೆಯಲು ಅರ್ಹವಾಗಿದೆ. ಯಾಕೆಂದರೆ ಅಡಿಗೆಗಾಗಿ ಇಲ್ಲಿ ಉರುವಲು/ಕಟ್ಟಿಗೆ ಸುಡುವುದಿಲ್ಲ. ಪಾತ್ರೆ ಮಸಿಯಾಗುವುದಿಲ್ಲ. ಬೆಳಕಿಗಾಗಿ ವಿದ್ಯುಚ್ಛಕ್ತಿಯನ್ನು ಅವಲಂಬಿಸುವುದಿಲ್ಲ. ಇದೆಲ್ಲವನ್ನು ಜೈವಿಕ ಅನಿಲ ಘಟಕ ಸಾಧ್ಯವಾಗಿಸಿದೆ.

## ಶೌಚಾಲಯ :

ಇದನ್ನು ಇಟ್ಟಿಗೆ ಮತ್ತು ಸಿಮೆಂಟ್ ಬಳಸಿ ಆಧುನಿಕವಾಗಿ ನಿರ್ಮಿಸಲಾಗಿದೆ. ರೈತರ ಕುಟುಂಬಕ್ಕೆ ಪರಿಸರ ಮಾಲಿನ್ಯವಾಗದಂತೆ ನೋಡಿಕೊಳ್ಳುವುದರ ಜೊತೆಗೆ, ಇದನ್ನು ಜೈವಿಕ ಅನಿಲ ಘಟಕಕ್ಕೆ ಹೊಂದಿಸುವುದರ ಮೂಲಕ ಏನೂ ವ್ಯರ್ಥವಾಗಿ ಹೋಗದಂತೆ ಮಾಡಲು ಸಾಧ್ಯ.

## ಜಾನುವಾರು ಕೊಟ್ಟಿಗೆ :

ಇದರಲ್ಲಿ ಒಂದೆರಡು ಎಮ್ಮೆ / ಹಸು ಹಾಗೂ ೧೦-೧೨ ಕುರಿಗಳ ಜೋಪಾಸನೆಗೆ ಅವಕಾಶ ಮಾಡಿಕೊಡಲಾಗಿದೆ. ಚೆನ್ನಾಗಿ ಗಾಳಿ ಬೆಳಕು ದೊರೆಯುವಂತೆ ವ್ಯವಸ್ಥೆ ಮಾಡಲಾಗಿದ್ದು, ಒಂದು ಅಟ್ಟವನ್ನು ನಿರ್ಮಿಸಿ, ಅಲ್ಲಿ ಜಾನುವಾರುಗಳ ಮೇವು (ಶೇಂಗಾ ಹಿಂಡಿ ಇತ್ಯಾದಿ) ಶೇಖರಿಸಿಡಲು ಉತ್ತಮ ವ್ಯವಸ್ಥೆಯಿದೆ. ಜೈವಿಕ ಅನಿಲ ಘಟಕದಿಂದ ಒಂದು ದೀಪದ ಅನುಕೂಲತೆಯನ್ನು ಕಲ್ಪಿಸಿಲಾಗಿದೆ. ಒಂದು ಮುರ್ರಾ ಜಾತಿಯ ಎಮ್ಮೆ ಸಾಕಲಾಗಿದೆ. ಮನೆಗೆ ಸಾಕಷ್ಟು ಹಾಲು - ಹೈನು ಬಳಸಿಕೊಂಡು ಹೆಚ್ಚಾದುದನ್ನು ಮಾರಿ ದಿನಕ್ಕೆ ೨೫ ರಿಂದ ೩೦ ರೂಪಾಯಿ ಆದಾಯ ಗಳಿಸಬಹುದಾಗಿದೆ. ನಾಲ್ಕು ಕುರಿಗಳ ಸಾಕಣೆಯಿಂದ ಆರಂಭವಾದದ್ದು, ಈಗ ಸಂಖ್ಯೆ ಹತ್ತಾಗಿದೆ. ಮುಂದೆ ೮ ಹೆಣ್ಣು ಕುರಿ ಹಾಗು ೨ ಟಗರುಗಳಿರುವಂತೆ ನೋಡಿಕೊಳ್ಳಲಾಗಿದೆ. ಇದರಿಂದಾಗಿ ಪ್ರತಿ ವರ್ಷವೂ ಹತ್ತು -ಹನ್ನೆರಡು ಚೆನ್ನಾಗಿ ಕೊಬ್ಬಿದ ನಾಲ್ಕೈದು ಕುರಿಮರಿಗಳು ಹುಟ್ಟುತ್ತವೆ. ಆಗ ಈ ಮೊದಲೇ ಹುಟ್ಟಿ ಉತ್ತಮ ಪೋಷಣೆಯಿಂದ ಚೆನ್ನಾಗಿ ಕೊಬ್ಬಿದ ನಾಲ್ಕೈದು ಕುರಿಗಳನ್ನು ಮಾರಬಹುದು. ಇದರಿಂದಾಗಿ ಪ್ರತಿ ವರ್ಷವೂ ಹತ್ತು - ಹನ್ನೆರಡು ಸಾವಿರ ಆದಾಯ ನಿರೀಕ್ಷಿಸಬಹುದು. ಈ ಹಣದಿಂದ ಮಕ್ಕಳ ವಿದ್ಯಾಭ್ಯಾಸ ಮತ್ತು ಕುಟುಂಬಕ್ಕೆ ಬೇಕಾಗುವ ಬಟ್ಟೆ ಇತ್ಯಾದಿ ಖರ್ಚುಗಳನ್ನು ಸರಿದೂಗಿಸಲು ಸಾಧ್ಯ.

## ಕೃಷಿ ಹೊಂಡ :

ಮೇಲ್ಭಾಗದಲ್ಲಿ ೮ ಮೀ. X ೮ಮೀ., ತಳದಲ್ಲಿ ೫ ಮೀ. X ೫ ಮೀ. ಬರುವಂತೆ ೩ ಮೀ. ಆಳಕ್ಕೆ ಇಳಿಜಾರು ಕೊಟ್ಟು ಕೃಷಿ ಹೊಂಡ ನಿರ್ಮಿಸಲಾಗಿದೆ. ಈ ಮೊದಲೇ ತಿಳಿಸಿರುವಂತೆ ಒಂದು ಎಕರೆ ಹಿಡುವಳಿಯಲ್ಲಿ ಹೆಚ್ಚು ಮಳೆ ಬಿದ್ದಾಗ ಹರಿಯುವ ನೀರು ಸ್ವಲ್ಪವೂ ಪೋಲಾಗದಂತೆ ನಿರ್ಮಿಸಲಾಗಿರುವ ನಿರ್ದಿಷ್ಟ ಚಲನೆಯ ಮಾರ್ಗಗಳಲ್ಲಿ ಚಲಿಸಿ ಈ ಹೊಂಡವನ್ನು ಸೇರುತ್ತವೆ. ಶಾಸ್ತ್ರೀಯವಾಗಿ ಹೊಂಡಕ್ಕಿರಬೇಕಾದ ಎಲ್ಲಾ ವ್ಯವಸ್ಥೆಗಳನ್ನೂ ಕಲ್ಪಿಸಲಾಗಿದೆ. ಇದರಲ್ಲಿ ನೀರು ಸಂಗ್ರಹವಾದಾಗ ಸುಮಾರು ೧೦೦ ಮೀನಿನ ಮರಿಗಳನ್ನು ಬಿಟ್ಟು ಜೂನ್ - ಜುಲೈನಿಂದ ಡಿಸೆಂಬರ್ -ಜನವರಿಯವರೆಗೆ ಸುಮಾರು ಆರೇಳು ತಿಂಗಳುಗಳ ಕಾಲ ಸಾಕಿ ಪ್ರತಿಯೊಂದು ಮೀನು ಅರ್ಧದಿಂದ ಮುಕ್ಕಾಲು ಕೆ.ಜಿ. ಯಷ್ಟು ಬೆಳೆಯುವಂತೆ ಮಾಡಲು ಸಾಧ್ಯವಿದೆ. ಇದರ ಮೇಲೆ ಸುಮಾರು ೨೦ ಕೋಳಿಗಳನ್ನು ಸಾಕಬಹುದಾದ ಕೋಳಿ ಗೂಡೊಂದನ್ನು ನಿರ್ಮಿಸಿ ಕೋಳಿ ಸಾಕಣೆ ಕೈಗೊಳ್ಳಲಾಗಿದೆ. ಈ ವ್ಯವಸ್ಥೆಗೆ ವೈಟ್ ಲೆಗ್ ಹಾರ್ನ್ ಜಾತಿಯ ಕೋಳಿಗಳೇ ಸೂಕ್ತ. ನಾಟಿ ಕೋಳಿಗಳು ಸೂಕ್ತವಲ್ಲ. ಕೋಳಿಗಳು ವಿಸರ್ಜಿಸುವ ಹಿಕ್ಕೆ, ಗೂಡನ್ನು ತೊಳೆದಾಗ ನೇರವಾಗಿ ಮೀನಿನ

ಕೊಳಕ್ಕೆ ಬೀಳುವಂತೆ ವ್ಯವಸ್ಥೆ ಮಾಡಿದೆ. ಇದರಿಂದ ಮೀನುಗಳಿಗೆ ಆಹಾರ ಒದಗಿಸಿದಂತಾಯಿತು. ಹೊಂಡದ ಸುತ್ತ ಬಿದಿರಿನ ಬೇಲಿಯೊಂದನ್ನು ನಿರ್ಮಿಸಿ, ಅದರ ಮೇಲೂ ಹಾಗಲಕಾಯಿ, ಬಳ್ಳಿ ಜಾತಿ ಹುರುಳೀಕಾಯಿ, ತರಕಾರಿ ಅಲಸಂದೆ, ಹೀರೆ ಇತ್ಯಾದಿಗಳನ್ನು ಹಬ್ಬಿಸಿ ಪ್ರಯೋಜನ ಪಡೆಯಲಾಗಿದೆ.

**ಕೈತೋಟ :**

ಸುಮಾರು ನಾಲ್ಕು ಗುಂಟೆ ಪ್ರದೇಶದಲ್ಲಿ ಇದನ್ನು ಹಮ್ಮಿಕೊಳ್ಳಲಾಗಿದೆ. ತಿಂಗಳಹುರುಳಿ, ಬದನೆ, ಬೆಂಡೆ, ಎಲೆಕೋಸು, ಮೂಲಂಗಿ, ತರಕಾರಿ ಅಲಸಂದೆ, ಟೊಮೇಟೋ, ಇತ್ಯಾದಿ ಅನೇಕ ತರಕಾರಿಗಳನ್ನು ಯಶಸ್ವಿಯಾಗಿ ಬೆಳೆಯಲಾಗಿದೆ. ವಿಶೇಷವಾಗಿ ೧೨ ಚಿಕ್ಕ ಮಡಿಗಳಲ್ಲಿ ೧೨ ತೆರನಾದ ಹಸಿರು ಸೊಪ್ಪಿನ ತರಕಾರಿಗಳನ್ನು ಬೆಳೆಸಿ ವರ್ಷವಿಡೀ ತಾಜಾ ಹಸಿರು ಸೊಪ್ಪು ಒದಗಿ ಬರುವಂತೆ ಮಾಡಲಾಗಿದೆ. ಮೆಣಸಿನ ಗಿಡಗಳಿಗೆ ಒತ್ತು ಕೊಟ್ಟು ಹಸಿ ಮೆಣಸಿನಕಾಯಿ ಜೊತೆಗೆ, ಹಣ್ಣಾಗಿ ಒಣಗಿದ ೮-೧೦ಕೆ.ಜಿ. ಒಣಮೆಣಸಿಕಾಯಿ ಪಡೆಯಲು ಸಾಧ್ಯವಾಗಿದೆ. ಮನೆಯ ಮುಂದೆ ಚಪ್ಪರ ನಿರ್ಮಿಸಿ ಒಳ್ಳೆಯ ಚಪ್ಪರದವರೆ, ಬಳ್ಳಿ ಆಲಸಂದೆ ಬೆಳೆಯಲಾಗಿದೆ. ಕ್ಷೇತ್ರ ಕುಟೀರ ಮತ್ತು ಕೊಟ್ಟಿಗೆಗಳ ಮೇಲೆ ಹಾಗೂ ಗೊಬ್ಬರದ ತೊಟ್ಟಿಗಳ ಮೇಲೆ ನಿರ್ಮಿಸಲಾದ ಹಂದರಗಳ ಮೇಲೆ ಸೋರೆ, ಕುಂಬಳ, ತೊಂಡೆ, ಪಡವಲ ಮುಂತಾದ ಹಬ್ಬುವ ತರಕಾರಿಗಳನ್ನು ಯಥೇಚ್ಛವಾಗಿ ಪಡೆಯಲಾಗುತ್ತಿದೆ. ಸರಾಸರಿಯಾಗಿ ಪ್ರತಿವರ್ಷ ತರಕಾರಿಗಳಿಂದಲೇ ೨೫೦೦-೩೦೦೦ ರೂಪಾಯಿ ಆದಾಯ ಪಡೆಯಲು ಸಾಧ್ಯವಾಗಿದೆ.

**ಇತರೆ ಸೌಲಭ್ಯಗಳು :**

ಕುಟೀರದ ಹಿಂದೆ, ಮುಂದೆ, ಅಕ್ಕ-ಪಕ್ಕ ಸಾಧ್ಯವಿರುವ ಕಡೆಗಳಲ್ಲಿ ಹೂವಿನಗಿಡಗಳು, ಒಂದೆರೆಡು ತೆಂಗು, ಒಂದು ಅಡಿಕೆ, ವೀಳ್ಯದೆಲೆ, ಮೆಣಸು, ನಿಂಬೆ, ಕರಿಬೇವು, ಕೆಲವು ಔಷಧೀಯ ಗಿಡಗಳು, ಪಪ್ಪಾಯ ಇತ್ಯಾದಿ ಬೆಳೆಸಲಾಗಿದೆ. ಸಾಧ್ಯವಿರುವ ಎಲ್ಲ ಕಡೆ ೧೦-೧೨ ಬಾಳೆಗಿಡಗಳಿಗೆ ಅನುವು ಮಾಡಿಕೊಡಲಾಗಿದೆ. (ಚಿತ್ರ-೧ ಮಾದರಿಯ ಸಮಗ್ರ ನೋಟವನ್ನು ಬಿಂಬಿಸುತ್ತದೆ)

ಪ್ರಾರಂಭದ ವರ್ಷದಲ್ಲಿ ಈ ಮಾದರಿಯಲ್ಲಿ ತಗಲುವ ಖರ್ಚು ಹಾಗೂ ನೀರೀಕ್ಷಿಸಬಹುದಾದ ಆದಾಯಗಳನ್ನು ಈ ಕೆಳಗಿನ ಕೋಷ್ಟಕಗಳಲ್ಲಿ ಕೊಡಲಾಗಿದೆ.

**ಒಂದು ಎಕರೆಯಲ್ಲಿ ಬೆಳೆಯಲು ತಗಲುವ ಒಟ್ಟು ಖರ್ಚು (ಮೊದಲನೇ ವರ್ಷ)**

| | ಖರ್ಚಿನ ವಿವರ | ಮೊಬಲಗು (ರೂ) |
|---|---|---|
| ೧ | ಬಿತ್ತನೆಯ ಬೀಜ /ಕಸಿ/ಸಸಿ | ೧೪೫೦-೦೦ |
| ೨ | ಗೊಬ್ಬರಗಳು | ೧೪೫೦-೦೦ |
| ೩ | ಕಾರ್ಮಿಕ ಕೆಲಸ | ೫೦೦-೦೦ |
| ೪ | ಇತರೆ | ೧೦೦-೦೦ |
| | ಒಟ್ಟು | ೩೫೦೦-೦೦ |

**ಇತರೆ ಬಾಬುಗಳ ಮೇಲೆ ಖರ್ಚು (ಮೊದಲನೇ ವರ್ಷ)**

| | ಖರ್ಚಿನ ವಿವರ | ಮೊಬಲಗು (ರೂ) |
|---|---|---|
| ೧ | ಕುರಿಗಳು (೨ ಕುರಿಗಳು + ೧ ಟಗರು) | ೪೫೦೦-೦೦ |
| ೨ | ಎಮ್ಮೆ/ಹಸು (೧) | ೧೦,೦೦೦-೦೦ |
| ೩ | ಕೋಳಿಗಳು (೧೦-೨೦) | ೫೦೦-೦೦ |
| ೪ | ಇನ್ನಿತರ ಖರ್ಚುಗಳು | ೧೫೦೦-೦೦ |
| | ಒಟ್ಟು | ೧೬,೫೦೦-೦೦ |

ಮೊದಲ ವರ್ಷ ಹಿಡುವಳಿಯ ಮೇಲೆ ತಗಲುವ ಒಟ್ಟು ಖರ್ಚು : ರೂ. ೨೦,೦೦೦-೦೦

## ಮೊದಲ ವರ್ಷ ಹಿಡುವಳಿಯಿಂದ ನಿರೀಕ್ಷಿಸಬಹುದಾದ ಆದಾಯ :

| | ಎಲ್ಲಿಂದ (ಯಾವ ಬಾಬಿನಿಂದ) | ಎಷ್ಟು ಮೊಬಲಗು (ರೂ) |
|---|---|---|
| ೧ | ತಾಕು -೧ರ ಅಂತರ ಬೆಳೆಗಳು (ಕಾಳುಗಳು/ತರಕಾರಿ) | ೨,೦೦೦-೦೦ |
| ೨ | ತಾಕು-೨ರಿಂದ : ಅ) ನೆಲಗಡಲೆ (೩ಕ್ವಿಂಟಾಲು) | ೪೫೦೦-೦೦ |
| | ಆ) ತೊಗರಿ (೧೨೦ಕೆ.ಜಿ.) | ೩೦೦೦-೦೦ |
| ೩ | ತಾಕು -೩ ರಿಂದ : ಅ) ರಾಗಿ + ಸಾಸಿವೆ | ೧೦೦೦-೦೦ |
| | ಆ) ಹುಚ್ಚೆಳ್ಳು | ೭೫೦-೦೦ |
| ೪ | ತಾಕು - ೪ ರಿಂದ : ಅ) ರಾಗಿ + ಸಾಸಿವೆ | ೧೦೦೦-೦೦ |
| | ಆ) ಅವರೆ | ೧೨೫೦-೦೦ |
| ೫ | ತಾಕು-೫ ರಿಂದ : ತರಕಾರಿಗಳು/ ಹಣ್ಣುಗಳು ಬೀಜ, ಇತ್ಯಾದಿ | ೩೦೦೦-೦೦ |
| ೬ | ಹಾಲಿನ ಮಾರಾಟ (೨೦೦ದಿನ x ೩ಲೀ. x ೭ರೂ.) | ೪೨೦೦-೦೦ |
| ೭ | ಕೋಳಿಮೊಟ್ಟೆ, ಮುದಿ ಕೋಳಿಗಳು ಇತ್ಯಾದಿ | ೨೦೦೦-೦೦ |
| ೮ | ಮೀನಿನ ಮಾರಾಟ (೩೦ ಕೆ.ಜಿ.೩೦ರೂ.) | ೯೦೦-೦೦ |
| ೯ | ಕಾಂಪೋಸ್ಟು ಗೊಬ್ಬರ (ಮೌಲ್ಯ) | ೧೫೦೦-೦೦ |
| | ಒಟ್ಟು | ೨೫,೦೦೦-೦೦ |

### ಉಪ ಸಂಹಾರ :

ಒಟ್ಟಿನಲ್ಲಿ ಹೇಳುವುದಾದರೆ, ಈ ಮಾದರಿ ಬಂಡವಾಳಕ್ಕಿಂತ ಮಿಗಿಲಾಗಿ ರೈತಕುಟುಂಬದ ಪೂರ್ಣ ಮನಸ್ಸಿನಿಂದ ತೊಡಗಿಸಿಕೊಳ್ಳುವಿಕೆ ಹಾಗೂ ತನ್ನ ಕ್ಷೇತ್ರದ ಬಗ್ಗೆ ಹೃದಯ ತುಂಬಿದ ಪ್ರೀತಿಯನ್ನು ಬೇಡುತ್ತದೆ. ಅಷ್ಟೇ ಅಲ್ಲ, ಅತ್ಯುತ್ತಮ ಗುಣಮಟ್ಟದ ಫಲ ಸಮೃದ್ಧಿಯನ್ನು ನೀಡಿ, ವರ್ಷದಿಂದ ವರ್ಷಕ್ಕೆ ಅಭಿವೃದ್ಧಿ ಸಾಧಿಸುತ್ತಾ ರೈತಕುಟುಂಬವನ್ನು ನೆಮ್ಮದಿಯ ನೆಲೆಗಟ್ಟಿನ ಮೇಲೆ ನಿಲ್ಲಿಸುತ್ತದೆ. ಸಾಲ ಸೋಲಗಳಿಂದ ಮುಕ್ತವಾದ ಬದುಕನ್ನು ನೀಡುತ್ತದೆ. ರೈತಕುಟುಂಬವು ತನ್ನ ಮುಂದಿನ ಪೀಳಿಗೆಗೆ ಸುಸ್ಥಿರತೆ-ಫಲವತ್ತತೆ ಕಾಯ್ದುಕೊಂಡ ಜಮೀನನ್ನು ಬಳುವಳಿಯಾಗಿ ನೀಡಲು ಶಕ್ತವಾಗುತ್ತದೆ.

ನಮ್ಮ ರಾಷ್ಟ್ರದಲ್ಲಿ ಕೃಷಿ ಸನ್ನಿವೇಶಗಳು ವಿಭಿನ್ನವಾಗಿದ್ದು, ಬೆಳೆ ಯೋಜನೆಗಳು ಒಂದೇ ತೆರನಾಗಿರಲು ಸಾಧ್ಯವಿಲ್ಲ. ಆದಾಗ್ಯೂ ಈ ಮಾದರಿಯನ್ನು ಅಳವಡಿಸಿಕೊಳ್ಳುವಾಗ ಆಯಾ ಸನ್ನಿವೇಶಕ್ಕೆ, ಕೃಷಿ ಪರಿಸರಕ್ಕೆ ಒಗ್ಗಿ ಬರುವ ಬೆಳೆಗಳನ್ನು ಬೆಳೆದುಕೊಳ್ಳಬಹುದು. ಈ ಮಾದರಿಯಲ್ಲಿ ಕಂಡುಬರುವ ಅಖಂಡ ವಿಶೇಷತೆಯೆಂದರೆ, ಮಳೆನೀರು ಕೊಚ್ಚಿಹೋಗದಂತೆ ಹಾಗೂ ಮಣ್ಣು ಮತ್ತು ಪೋಷಕಾಂಶಗಳು ನಷ್ಟವಾಗದಂತೆ ಸಂರಕ್ಷಿಸುವುದು, ಕುಟುಂಬಕ್ಕೆ ಬೇಕಾದ ಎಲ್ಲವನ್ನೂ ಮಾದರಿಯಲ್ಲೇ ಉತ್ಪಾದಿಸಿಕೊಳ್ಳುವುದು. ಕೃಷಿಗೆ ಅಗತ್ಯವಾದ ಗೊಬ್ಬರ, ಬೀಜ ಇತ್ಯಾದಿಗಳಲ್ಲಿ ಸ್ವಾವಲಂಬನೆ ಸಾಧಿಸುವುದು. ಇಲ್ಲಿ ಸಾರ್ವತ್ರಿಕ ಅಂದರೆ ಎಲ್ಲಿ ಬೇಕಾದರೂ ಅಳವಡಿಸಿಕೊಳ್ಳಬಹುದು.

ಬಾವಿ ಕೆರೆಯ ಈ ಸಂಶೋಧನಾತ್ಮಕ ಪ್ರಾತ್ಯಕ್ಷಿಕೆಯ ಪ್ರಯೋಜನವನ್ನು ಕಂಡುಕೊಂಡ ಕರ್ನಾಟಕ ರಾಜ್ಯದ ಕೃಷಿ ಇಲಾಖೆಯು ೨೦೦೪-೦೫ರ ಮುಂಗಾರು ಹಂಗಾಮಿನಿಂದ ಪ್ರತಿ ಜಿಲ್ಲೆಯಲ್ಲಿ ಒಂದು ಹೆಕ್ಟೇರು ಪ್ರದೇಶದ ಎರಡು ಪ್ರಾತ್ಯಕ್ಷಿಕೆಗಳಿಗೆ ಧನಸಹಾಯದ ಜೊತೆಗೆ ತರಬೇತಿಯನ್ನೂ ವ್ಯವಸ್ಥೆಗೊಳಿಸಿದೆ. ಅದೇ ರೀತಿ ಕರ್ನಾಟಕ ರಾಜ್ಯದ ಜಲಾನಯನ ಅಭಿವೃದ್ಧಿ ಇಲಾಖೆಯು ರಾಜ್ಯಾದ್ಯಂತ ವ್ಯಾಪಿಸಿರುವ ಎಲ್ಲಾ ಜಲಾನಯನ ಪ್ರದೇಶಗಳಲ್ಲಿ ಇಂತಹ ಒಂದು ಮಾದರಿಯನ್ನು ಅಭಿವೃದ್ಧಿಪಡಿಸಲು ಸಜ್ಜಾಗಿ, ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಅಂತೆಯೇ ರಾಜ್ಯದ ಪ್ರತಿಷ್ಠಿತ ಸರ್ಕಾರೇತರ ಅಭಿವೃದ್ಧಿ ಸಂಸ್ಥೆಗಳಾದ ಗ್ರೀನ್ ಫೌಂಡೇಷನ್, ಎ.ಎಂ.ಇ. ಫೌಂಡೇಷನ್, ಪರಿಸರ ಪ್ರಜ್ಞಾ ಪ್ರತಿಷ್ಠಾನ, ಕಾವೇರಿ ನೀರಾವರಿ ನಿಗಮ, ವಿಕಸನ ಸಂಸ್ಥೆ, ನೆಕ್ಲೆಂಟ್ ಇಂಡಿಯಾ ಮುಂತಾದವರು ಈ ಮಾದರಿಯ ತದ್ರೂಪಗಳನ್ನು ರೈತರ ತಾಕಿನಲ್ಲಿ ಹಮ್ಮಿಕೊಳ್ಳಲು ಮುಂದೆ ಬಂದಿದ್ದಾರೆ ಎಂಬುದನ್ನು ನೋಡುವಾಗ ಗ್ರಾಮೀಣ ಅಭಿವೃದ್ಧಿ ಸಾಧಿಸುವಲ್ಲಿ ಸಮಗ್ರ ಕೃಷಿ ಪದ್ಧತಿಯ ಅನುಷ್ಠಾನ ಮುಂಚೂಣಿಯಲ್ಲಿ ನಿಲ್ಲುತ್ತದೆ ಎಂಬುದರ ಅರಿವಾಗುತ್ತದೆ.

















ಸಣ್ಣ ಮತ್ತು ಅತಿ ಸಣ್ಣ ರೈತರಿಗಾಗಿ ಸಮಗ್ರ ಕೃಷಿ ಮಾದರಿ

**ಸಮಗ್ರ ಕೃಷಿ ಪದ್ಧತಿಯ ಅನುಸರಣೆಯ ಪ್ರಯೋಜನಗಳು :**

* ಲಭ್ಯ ಕೃಷಿ ಸಂಪನ್ಮೂಲಗಳಾದ ಜಮೀನು, ನೀರು, ಕೃಷಿ ಪರಿಕರಗಳು -ಸವಲತ್ತುಗಳ ಸಂಪೂರ್ಣ ಬಳಕೆ.
* ಕುಟುಂಬಕ್ಕೆ ಬೇಕಾದ ವಿವಿಧ ಬಳಕೆಯ ವಸ್ತುಗಳನ್ನು ಕ್ಷೇತ್ರದಲ್ಲಿಯೇ ಉತ್ಪಾದಿಸುವುದರಿಂದ ಅವುಗಳಿಗೆ ತಗಲುವ ವೆಚ್ಚದ ಉಳಿತಾಯ.
* ಬಳಸುವ ಆಹಾರ ವಸ್ತುಗಳು ಕಲಬೆರಕೆಯಿಲ್ಲದೆ ಸದಾ ತಾಜಾ ಹಾಗೂ ಮಾಲಿನ್ಯರಹಿತವಾಗಿರುತ್ತವೆ.
* ಒಂದು ಕೃಷಿ ಉದ್ದಿಮೆಯ ತ್ಯಾಜ್ಯ ವಸ್ತು / ಉಪ ಉತ್ಪನ್ನವು ಇನ್ನೊಂದು ಕೃಷಿ ಉದ್ದಿಮೆಗೆ ಕಚ್ಚಾ ಸಾಮಗ್ರಿಯನ್ನೊದಗಿಸುವಂತಾದಾಗ, ಉದ್ದಿಮೆಗಳು ಒಂದಕ್ಕೊಂದು ಪೂರಕವೆನಿಸುತ್ತವೆ. ಇದರಿಂದ ಎರಡು ಉದ್ದಿಮೆಗಳಿಗೂ ಲಾಭವಾಗುವುದರಿಂದ ಒಟ್ಟು ಆದಾಯವು ಹೆಚ್ಚಾಗುತ್ತದೆ.
* ಕೃಷಿ ಹಾಗೂ ಗೃಹ ತ್ಯಾಜ್ಯ ನಿರ್ವಹಣೆಯು ಸಮಸ್ಯೆಯೆನಿಸುವುದಿಲ್ಲ.
* ಬೆಳೆ ಉತ್ಪಾದನೆಗೆ ಬೇಕಾದ ಅತಿ ಪ್ರಮುಖ ಸಂಪನ್ಮೂಲಗಳಾದ ಬೀಜ ಮತ್ತು ಸಾವಯವ ಗೊಬ್ಬರಗಳನ್ನು ಕ್ಷೇತ್ರದಲ್ಲಿಯೇ ಉತ್ಪಾದಿಸುವುದರಿಂದ ಹೊರಗಿನಿಂದ ಕೊಂಡು ತರುವ ಅವಶ್ಯಕತೆ ಇಲ್ಲವಾಗಿ, ಕೃಷಿಕನು ಸಾಲದ ಸುಳಿಗೆ ಸಿಲುಕುವ ಅಪಾಯವಿರುವುದಿಲ್ಲ.
* ವಾತಾವರಣದಲ್ಲಿನ ಸಾರಜನಕವನ್ನು ಸ್ವೀಕರಿಸುವ ಸಾಮರ್ಥ್ಯವುಳ್ಳ ದ್ವಿದಳ ಧಾನ್ಯ ಬೆಳೆಗಳನ್ನೂ, ಮರಗಳನ್ನೂ ಬೆಳೆಯುವುದರಿಂದ, ಪ್ರತಿವರ್ಷವೂ ಗಣನೀಯ ಪ್ರಮಾಣದಲ್ಲಿ ಸಾರಜನಕವು ಮಣ್ಣಿಗೆ ಸೇರ್ಪಡೆಯಾಗಿ, ಇದರಿಂದ ಅಲ್ಪ ವೆಚ್ಚದ ಸುಸ್ಥಿರ ಕೃಷಿಗೆ ಮಾರ್ಗವಾಗುತ್ತದೆ.
* ಸಾವಯವ ಕೃಷಿ ಪದ್ಧತಿಯಲ್ಲಿ ಬೆಳೆ ಉತ್ಪಾದನೆ ಮಾಡವುದರಿಂದ, ಬೆಳೆಗಳಿಗೆ ತಗಲುವ ಕೀಟ, ರೋಗಗಳು ಕಡಿಮೆಯಾಗಿ ಕೀಟನಾಶಕಗಳ ಮೇಲೆ ಮಾಡುವ ವೆಚ್ಚವೂ ಕಡಿಮೆಯಾಗುತ್ತದೆ.
* ಸಮಗ್ರ ಕೃಷಿ ಪದ್ಧತಿಯಲ್ಲಿ ಬೆಳೆಯಲಾಗುವ ಅನೇಕ ಮರಗಳಲ್ಲಿ ಆಸರೆ ಪಡೆಯುವ ಹಕ್ಕಿ ಪಕ್ಷಿಗಳು ಕ್ಷೇತ್ರದ ಬೆಳೆಗಳಿಗೆ ತಗಲುವ ಕೀಟಗಳಿಗೆ ಸ್ವಾಭಾವಿಕ ಶತ್ರುಗಳಾಗುವುದರಿಂದ, ಕೀಟಗಳ ಹಾವಳಿ ಕಡಿಮೆಯಾಗುತ್ತದೆ.
* ವಿವಿಧ ಉದ್ದಿಮೆಗಳ ಜವಾಬ್ದಾರಿಯನ್ನು ಕುಟುಂಬದ ಸದಸ್ಯರೆಲ್ಲರೂ ವಹಿಸಿಕೊಳ್ಳುವುದರಿಂದ, ಕ್ಷೇತ್ರ ನಿರ್ವಹಣಾ ಹೊಣೆಯ ಹಂಚಿಕೆಯಾಗುತ್ತದೆ. ಇದರಿಂದ ಅವರೆಲ್ಲರಿಗೆ ದುಡಿಮೆಯಲ್ಲಿ ಪಾಲುದಾರಿಕೆಯ ಅನುಭವವಾಗುತ್ತದೆ ಮತ್ತು ತಮ್ಮ ತಮ್ಮ ವೈಶಿಷ್ಟ್ಯಪೂರ್ಣ ಕೌಶಲ್ಯಗಳನ್ನು ಅಭಿವೃದ್ಧಿಗೊಳಿಸಿಕೊಳ್ಳಲು ಸಹಾಯಕವಾಗುತ್ತದೆ. ದೊಡ್ಡ ಕುಟುಂಬಗಳು ಸೌಹಾರ್ದಯುತವಾಗಿ ಬಾಳಲು, ಸಮಗ್ರ ಕೃಷಿ ಪದ್ಧತಿಯು ಅತ್ಯುತ್ತಮ ಮಾರ್ಗ.
* ಕುಟುಂಬದ ಸದಸ್ಯರು ಸದಾ ದುಡಿಮೆಯಲ್ಲಿ ತೊಡಗಿರುವುದರಿಂದ ದುಶ್ಚಟಗಳಿಗೆ ದಾಸರಾಗುವ ಅವಕಾಶಗಳು ಕಡಿಮೆ.
* ಅನೇಕ ಉದ್ದಿಮೆಗಳಿಂದ ಆದಾಯವು ಬರುವುದರಿಂದ ಆದಾಯದಲ್ಲಿ ಸುಸ್ಥಿರತೆಯಿರುತ್ತದೆಯಲ್ಲದೇ, ಬರುವ ಆದಾಯವು ವರ್ಷದಲ್ಲಿ ಬಹುಕಾಲ ಹಂಚಿ ಬರುತ್ತದೆ.
* ಮರದ ಬೆಳೆಗಳ ಆದಾಯವು ವಾರ್ಷಿಕ ಮಳೆಯ ಮೇಲೆ ಹೆಚ್ಚು ಅವಲಂಬಿಸದೇ ಇರುವುದರಿಂದ, ಮಳೆಯ ಏರುಪೇರಿನಂತೆ ಆದಾಯವೂ ಏರುಪೇರಾಗದೆ, ಸುಸ್ಥಿರ ಆದಾಯವು ದೊರೆಯುತ್ತದೆ.
* ಯಾವುದೇ ಒಂದು ಬೆಳೆ/ ಉದ್ದಿಮೆ ವಿಫಲವಾದರೂ ಸಹ, ಅನೇಕ ಬೆಳೆ/ ಉದ್ದಿಮೆಗಳಿರುವುದರಿಂದ ಆದಾಯದಲ್ಲಿ ಸ್ಥಿರತೆ ಇರುತ್ತದೆ.
* ಮಳೆಯ ನೀರನ್ನು ಪರಿಣಾಮಕಾರಿಯಾಗಿ ಸಂಗ್ರಹಿಸುವುದರಿಂದ ಹರಿದು ನಷ್ಟವಾಗುತ್ತಿದ್ದ ನೀರಿನ ಸದ್ಬಳಕೆಯಾಗುವುದಲ್ಲದೇ, ಅಲ್ಪ ಪ್ರದೇಶದಲ್ಲಿ ಬೇಸಿಗೆಯಲ್ಲಿಯೂ ತರಕಾರಿ ಬೆಳೆ ಮಾಡಲು ಅವಕಾಶವಾಗುವುದು.

* ಗೃಹಬಳಕೆಯ ನೀರನ್ನೂ ಸಹ ಭಾಗಶಃ ಸಂಗ್ರಹಿಸಿ ಮೇವಿನ ಉತ್ಪಾದನೆಗೆ, ತೋಟಗಾರಿಕೆ ಬೆಳೆಗಳಿಗೆ ಹನಿ ನೀರಾವರಿ ವಿಧಾನದಲ್ಲಿ ನೀರುಣಿಸುವುದರಿಂದ ಗಣನೀಯ ಪ್ರದೇಶವನ್ನು ನೀರಾವರಿಯಲ್ಲಿ ತರಬಹುದು.
* ಎಲ್ಲಕ್ಕಿಂತ ಮಿಗಿಲಾಗಿ ಮುಂದಿನ ಪೀಳಿಗೆಗೆ ಕೊಡಲ್ಪಡುವ ಭೂಮಿಯು ಫಲವತ್ತತೆಯಲ್ಲಿ ಸಮೃದ್ಧವಾಗಿದ್ದು ಸುಸ್ಥಿರತೆಯ ನಿಜವಾದ ಅನುಭವವಾಗುತ್ತದೆ.

●




# ಕೃಷಿ ವಿಸ್ತರಣೆ

ಡಾ. ಆರ್. ದ್ವಾರಕೀನಾಥ್

ಪುರಾತನ ಸಂಸ್ಕೃತಿಗಳಲ್ಲಿ ಒಂದಾದ ಭಾರತವು, ಸ್ವಾತಂತ್ರ್ಯ ಸಾಧನೆಯ ನಂತರ, ಆಧುನೀಕರಣದತ್ತ ಸಾಗಲು ಶ್ರಮಿಸುತ್ತಿದೆ. ಈ ದೇಶದಲ್ಲಿ ಗ್ರಾಮ ಸಮಾಜವು ಹಿಂದಿನಿಂದಲೂ ಹಿರಿದಾಗಿದ್ದು, ಇಂದಿಗೆ ಮೂರುಪಟ್ಟು ಬೆಳೆದಿದೆ. ಈ ಎಲ್ಲಾ ಜನರ ಜೀವನೋದ್ಧಾರವು ಕೃಷಿಯಿಂದಲೇ ಆಗಬೇಕಾಗಿದೆ. ಆದುದರಿಂದ, ಸ್ವಾತಂತ್ರ್ಯಾನಂತರದ ದಿನಗಳಲ್ಲಿ, ಜನತೆಯ ಕ್ಷೇಮಾಭಿವೃದ್ಧಿಯ ಮಾರ್ಗದಲ್ಲಿ ಕೃಷಿ ಅಭಿವೃದ್ಧಿಯೇ ಪ್ರಧಾನವಾಗಿರುತ್ತದೆ. ಅಲ್ಲದೇ, ಅನ್ಯಥಾ ಮಾರ್ಗವು ಇಲ್ಲ.

ಕಳೆದ ಐದು ದಶಕಗಳಲ್ಲಿ, ದೇಶದಲ್ಲಿ ಸಾಕಷ್ಟು ಆರ್ಥಿಕ ಪ್ರಗತಿಯೆನೋ ನಡೆದಿದೆ ಆದರೆ ಈ ಬೆಳವಣಿಗೆಯಲ್ಲಿ ಗ್ರಾಮದ ಜನತೆಗೆ ಎಷ್ಟು ಉದ್ಯೋಗಾವಕಾಶಗಳು ದೊರಕಬೇಕಿತ್ತೋ ಅಷ್ಟು ದೊರಕಿಲ್ಲ. ಮುಖ್ಯವಾಗಿ ಇಂದಿನ ಉದ್ಯಮಗಳು ಹೆಚ್ಚಾಗಿ ತಂತ್ರಜ್ಞಾನದ ಮೇಲೆಯೇ ಆಧಾರಪಟ್ಟಿರುವುದರಿಂದ ಆಳು ಬಲದ ಅವಶ್ಯಕತೆಯೇ ಹೆಚ್ಚಾಗಿಲ್ಲ. ಹಾಗೆಯೇ, ವಾಣಿಜ್ಯ ಹಾಗೂ ಸೇವಾ ರಂಗಗಳೂ ಅಧಿಕವಾಗಿ ವೃತ್ತಿಪರ ಕ್ಷೇತ್ರಗಳಾಗುತ್ತಿವೆ. ಈ ಎಲ್ಲಾ ಕಾರಣಗಳಿಗಾಗಿ, ಗ್ರಾಮದ ಜನತೆಯು ಮುಂದಿನ ದಿನಗಳಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿಯೇ ತಮ್ಮ ಜೀವನಾವಕಾಶಗಳನ್ನು ಹುಡುಕಿ ಕೊಳ್ಳಬೇಕಾಗಿದೆ.

**ಕೃಷಿ ವಿಸ್ತರಣಾ ಕಾರ್ಯವೆಂದರೆ ಬೆಳೆಗಳನ್ನು ಮಾಡುವ ತಂತ್ರಜ್ಞಾನ ಮಾತ್ರವಲ್ಲದೆ ನೈಸರ್ಗಿಕ ಸಂಪನ್ಮೂಲ ವರ್ಧನೆ, ಕೃಷಿ ಅಭಿವೃದ್ಧಿ ಹಾಗೂ ಮಾರುಕಟ್ಟೆ ಜೊತೆ ವ್ಯವಹರಿಸಲು ರೈತನ ಸಾಮರ್ಥ್ಯ ಹೆಚ್ಚಿಸುವುದು ಆಗಿರುತ್ತದೆ.**

ಇದರೊಂದಿಗೆ ಗ್ರಾಮ ಸಮಾಜದಲ್ಲಿ ಇತ್ತೀಚೆಗೆ ಜನಜಾಗೃತಿಯೂ ತೀವ್ರವಾಗಿ ಬೆಳೆಯುತ್ತಿದೆ. ಮಾಧ್ಯಮ ಸಂಪರ್ಕದ ಫಲವಾಗಿ, ಜನರಲ್ಲಿ ಹೊರ ಜಗತ್ತಿನ ಪರಿವೆ, ಉತ್ತಮ ಜೀವನದ ಆಕಾಂಕ್ಷೆ ಹಾಗೂ ನಗರ ಜೀವನದ ಅನುಕರಣೆಯ ಕಡೆಗೆ ಒಲವು ಮೂಡುತ್ತಿದೆ. ಈ ಆಸೆಗಳು ಸ್ವಲ್ಪ ಮಟ್ಟಿಗಾದರೂ ಕೈಗೂಡಬೇಕಾದರೆ ಗ್ರಾಮಾಭಿವೃದ್ಧಿ ಕಾರ್ಯವು ವ್ಯಾಪಕವಾಗಿ ಮತ್ತು ತ್ವರಿತವಾಗಿ ನಡೆಯಬೇಕಾಗಿದೆ. ಶೀಘ್ರಗತಿಯ ಬೆಳವಣಿಗೆಯನ್ನು ನಾವು ಕಾಣಬೇಕಾದರೆ ಹೊಸ ವಿಚಾರಗಳು, ಹೊಸ ತಂತ್ರಜ್ಞಾನ ಮತ್ತು ಸಂಪನ್ಮೂಲಗಳು ಗ್ರಾಮದ ಜನತೆಗೆ ದೊರೆಯಬೇಕಾಗಿದೆ.

ಈ ದಿಶೆಯಲ್ಲಿ ಮುಂದುವರೆಯಬೇಕಾದರೆ, ಮೊದಲು ಕೃಷಿರಂಗದಲ್ಲಿ ಪ್ರಗತಿಯನ್ನು ಸಾಧಿಸಬೇಕು. ಏಕೆಂದರೆ, ಈ ಮೊದಲೇ ಕಂಡಂತೆ ಕೃಷಿಯೇ ಗ್ರಾಮದ ಜನತೆಯ ಪ್ರಮುಖ ವೃತ್ತಿ. ಇದುವರೆಗೆ ಸಾಂಪ್ರದಾಯಿಕ ಅನುಭವದ ಮೇಲೆಯೇ ಬೆಳೆದುಬಂದ ಕೃಷಿಯು, ಮುಂದಕ್ಕೆ ದೊಡ್ಡದಾಗಿ ಬೆಳೆಯಬೇಕಾದರೆ ವೈಜ್ಞಾನಿಕವಾದ ಹೊರಜ್ಞಾನದ ಮೂಲಗಳನ್ನು

ಅಳವಡಿಸಿಕೊಳ್ಳಬೇಕಾಗುತ್ತದೆ. ಈ ಹೊಸ ತಂತ್ರಜ್ಞಾನವನ್ನು ಬಳಸಿಕೊಳ್ಳುವಾಗ ಹೊಸ ಸಂಪನ್ಮೂಲಗಳು ಹಾಗೂ ಸಾಲ ಸೌಲಭ್ಯದ ಅವಕಾಶವೂ ಹೆಚ್ಚಾಗಬೇಕಾಗುತ್ತದೆ. ಇದಲ್ಲದೆ, ಸಂಪ್ರದಾಯ ಕೃಷಿಯಲ್ಲಿಯೇ ತೊಡಗಿದ ರೈತರು ಆಧುನಿಕ ಕೃಷಿಯ ಹಾದಿಯಲ್ಲಿ ನಡೆಯಬೇಕಾದರೆ ಅವರ ಜ್ಞಾನದ ಮಟ್ಟದ ಜೊತೆಗೆ ನಿರ್ವಹಣಾ ಸಾಮರ್ಥ್ಯವೂ ಹೆಚ್ಚಾಗಬೇಕಾಗುತ್ತದೆ. ಹೀಗೆ ಸಾಂಪ್ರದಾಯಿಕ ಕೃಷಿಯಲ್ಲಿ ಹೊಸ ತಂತ್ರಜ್ಞಾನವನ್ನು ತೊಡಗಿಸುವುದಕ್ಕೂ, ಕೃಷಿ ಬೆಳವಣಿಗೆಗೆ ಬೇಕಾದ ಸೌಲಭ್ಯಗಳನ್ನು ಉಂಟು ಮಾಡುವುದಕ್ಕೂ ಮತ್ತು ಕೃಷಿಕರಲ್ಲಿ ಹೆಚ್ಚಿನ ಸಾಮರ್ಥ್ಯವನ್ನು ಬೆಳೆಸುವುದಕ್ಕೂ ನಿರ್ಮಾಣವಾಗಿರುವ ಅಭಿವೃದ್ಧಿ ಸಾಧನವೇ ಕೃಷಿ ವಿಸ್ತರಣಾ ವ್ಯವಸ್ಥೆ. ಈ ವ್ಯವಸ್ಥೆಯು, ಹಿಂದೆ ನಮ್ಮ ಆಹಾರದ ಕೊರತೆಯನ್ನು ನೀಗಲು ಶ್ರಮಿಸಿದ್ದರೆ, ಇನ್ನು ಮುಂದೆ ಮತ್ತೂ ವಿಶಾಲವಾದ ಕೃಷಿ ಅಭಿವೃದ್ಧಿ ಕಾರ್ಯದಲ್ಲಿ ತೊಡಗಬೇಕಾಗುತ್ತದೆ.

ಕೃಷಿ ರಂಗದಲ್ಲಿ ಅಭೂತಪೂರ್ವ ಸಾಧನೆಯನ್ನು ಭಾರತ ದೇಶವು ಈಗಾಗಲೇ ಮಾಡಿದೆ. ಈ ಅಪ್ರತಿಮ ಸಾಧನೆಗೆ ಹಸಿರು ಕ್ರಾಂತಿಯೇ ಕಾರಣ. ಈ ಕ್ರಾಂತಿಯಿಂದಾಗಿ ಕೃಷಿ ರಂಗದಲ್ಲಿ ಹಲವಾರು ಬೆಳವಣಿಗೆಗಳು ಎದ್ದು ಕಾಣುತ್ತಿವೆ. ಮೊದಲನೆಯದಾಗಿ, ಕುಟುಂಬ ಜೀವನಕ್ಕೆ ಆಧಾರವಾಗಿದ್ದ ಸರಳ ವ್ಯವಸಾಯ ಪದ್ಧತಿಯ ಉತ್ಪಾದನಾ ಮಟ್ಟವನ್ನು ಗಣನೀಯವಾಗಿ ಹೆಚ್ಚಿಸುವುದಕ್ಕೆ ಈ ಕ್ರಾಂತಿಯು ಆಧಾರವಾಯಿತು. ಎರಡನೆಯದಾಗಿ, ಹೊರ ಜಗತ್ತಿನ ಸಂಪರ್ಕವಿಲ್ಲದೆ ದೂರದೂರದ ಹಳ್ಳಿಗಳಲ್ಲಿ ವಾಸ ಮಾಡುತ್ತಿದ್ದ, ಅಕ್ಷರ ಜ್ಞಾನವಿಲ್ಲದ ರೈತ ಸಮೂಹವು ಈ ಆಧುನಿಕ ತಂತ್ರಜ್ಞಾನವನ್ನು ಅತ್ಯಲ್ಪ ಕಾಲದಲ್ಲಿ ಅರಗಿಸಿಕೊಂಡು ಆಚರಣೆಗೆ ತಂದಿರುವುದು ಇಡೀ ಜಗತ್ತಿಗೇ ಸೋಜಿಗವನ್ನುಂಟುಮಾಡಿದೆ. ಮೂರನೆಯದಾಗಿ, ಜನಸಂಖ್ಯೆ ಅಧಿಕವಾಗಿದ್ದು, ಹಿಡುವಳಿಗಳು ಚಿಕ್ಕದಾಗಿದ್ದು, ಬಹುಪಾಲು ಮಳೆಯಾಶ್ರಿತವಾಗಿರುವ ಭಾರತವು ಕೃಷಿರಂಗದಲ್ಲಿ ಈ ಅದ್ಭುತ ಸಾಧನೆ ಮಾಡಿದ್ದು ಮತ್ತೊಂದು ಮೆಚ್ಚಿಗೆಯ ವಿಚಾರ.

ಹಸಿರು ಕ್ರಾಂತಿಯಿಂದ ಉಂಟಾದ ಅನುಕೂಲಗಳ ಜೊತೆಗೆ, ಹಲವು ಅನಾನುಕೂಲಗಳೂ ಇವೆ. ಇವುಗಳಲ್ಲಿ ಮುಖ್ಯವಾಗಿ ತಳಿ ಮತ್ತು ಇಳುವರಿಯ ಕಡೆಗೇ ಹೆಚ್ಚು ಗಮನವನ್ನು ನೀಡಿರುವ ರೈತರು ತಮ್ಮ ಹಿಡುವಳಿಯಲ್ಲಿರುವ ನೈಸರ್ಗಿಕ ಸಂಪನ್ಮೂಲಗಳ ಸಂವರ್ಧನೆಯ ಕಡೆಗೆ ಹೆಚ್ಚಾಗಿ ಚಿಂತನೆ ಮಾಡಲಿಲ್ಲ. ಆದುದರಿಂದ ಈ ೫೦ ವರ್ಷಗಳಲ್ಲಿ ನಮ್ಮ ಹೊಲ ಗದ್ದೆಗಳು ಅನೇಕ ರೀತಿಯಲ್ಲಿ ಜೀಳಾಗುತ್ತಿವೆ. ಅಲ್ಲದೇ ಬೆಳೆಗಳನ್ನು ಬೆಳೆಯುವ ರೀತಿಯಲ್ಲಿಯೂ ಕೆಲವು ಅಸಮರ್ಪಕ ಬೆಳವಣಿಗೆಗಳು ಕಾಣಬರುತ್ತಿವೆ. ಇದರ ಪರಿಣಾಮವಾಗಿ ಬೆಳೆಗಳ ಪರಿವರ್ತನೆ ಕ್ರಮವನ್ನು ನಾವು ಕೈಬಿಟ್ಟಿದ್ದೇವೆ. ಹಾಗೆಯೇ ಹೊಲ ಗದ್ದೆಗಳಿಗೆ ಬಳಸುತ್ತಿದ್ದ ಅಧಿಕ ಪ್ರಮಾಣದ ತಿಪ್ಪೆ ಗೊಬ್ಬರವನ್ನು ಕಡಿಮೆ ಮಾಡುತಿದ್ದೇವೆ. ಎಲ್ಲಕ್ಕೂ ಮಿಗಿಲಾಗಿ, ರಸಗೊಬ್ಬರ ಮತ್ತು ಸಸ್ಯಸಂರಕ್ಷಣಾ ರಾಸಾಯನಿಕಗಳ ಮೇಲೆ ಹೆಚ್ಚು ಅವಲಂಬಿತರಾಗುತ್ತಾ, ನಮ್ಮ ಮಣ್ಣಿನ ಆರೋಗ್ಯವೂ ಕೆಡುತ್ತಿರುವುದನ್ನು ನಾವು ಗಮನಿಸುತ್ತಿಲ್ಲ. ಇವೆಲ್ಲದುದರ ಪರಿಣಾಮವಾಗಿ ನಾವು ಕೊಂಡು ಬಳಸುವ ಸಾಮಗ್ರಿಗಳು ಹೆಚ್ಚಾಗಿ, ಬೆಳೆಗಳನ್ನು ಬಾಧಿಸುವ ಪೀಡೆಗಳು ಅಧಿಕವಾಗಿ, ಮಣ್ಣಿನ ಉತ್ಪಾದನಾ ಶಕ್ತಿಯು ಕಡಿಮೆಯಾಗುತ್ತಿದೆ. ಇದರಿಂದ ರೈತರು ವ್ಯವಸಾಯವನ್ನು ಒಂದು ಲಾಭದಾಯಕವಾದ ವೃತ್ತಿಯಾಗಿ ಕಾಣುವುದು ಕಷ್ಟವಾಗಿದೆ.

ಈ ರೀತಿಯಲ್ಲಿ ಇದುವರೆಗೆ, ಕೃಷಿ ರಂಗದಲ್ಲಿ ಆದ ಬದಲಾವಣೆಗಳನ್ನು, ಅನುಕೂಲಗಳನ್ನು ಹಾಗೂ ಅನಾನುಕೂಲಗಳನ್ನು ಅವಲೋಕಿಸಿದ ಮೇಲೆ, ಕೃಷಿ ಅಭಿವೃದ್ಧಿಯ ಮಾರ್ಗದಲ್ಲಿ ಯಾವ ವಿಚಾರಗಳಿಗೆ ಹೆಚ್ಚಿನ ಗಮನವನ್ನು ಕೊಡಬೇಕೆಂದು ಚಿಂತಿಸಬೇಕಾಗುತ್ತದೆ. ಈ ದಿಸೆಯಲ್ಲಿ ಜಾಗತಿಕವಾಗಿ ಇದುವರೆಗೆ ಆಗಿರುವ ವ್ಯಾಪಕ ಪರಿವರ್ತನೆಗಳನ್ನೂ ನಾವು ಪರಿಗಣಿಸಬೇಕಾಗುತ್ತದೆ. ಇಂತಹ ವ್ಯಾಪಕ ಪ್ರಭಾವಗಳು ಎಂದರೆ- ಉದಾರೀಕರಣ, ಖಾಸಗೀಕರಣ, ಜಾಗತೀಕರಣ.

ಈ ನಿಟ್ಟಿನಲ್ಲಿ, ನಮ್ಮ ಮುನ್ನೋಟಕ್ಕೆ ಕಾಣುವುದು ನಾಲ್ಕು ಅಂಶಗಳು.

ಮೊದಲನೆಯದಾಗಿ, ನಮ್ಮ ಉತ್ಪಾದನಾ ಸಾಮರ್ಥ್ಯವನ್ನು ಇನ್ನೂ ಅಧಿಕಗೊಳಿಸಬೇಕಾಗಿದೆ. ಏಕೆಂದರೆ, ನಮ್ಮ ಜನಸಂಖ್ಯೆ ಇನ್ನೂ ಬೆಳೆಯುತ್ತಿದೆ. ಮುಂದಿನ ಎರಡು-ಮೂರು ದಶಕಗಳಲ್ಲಿ ಮತ್ತೊಮ್ಮೆ ಆಹಾರದ ಕೊರತೆಯು ಕಾಣಬಹುದೆಂಬ ಭೀತಿಯೂ ಇದೆ. ಇದಕ್ಕಾಗಿ, ನಾವು ನಮ್ಮ ಕೃಷಿಯಲ್ಲಿ ಉತ್ಪಾದನಾ ಸಾಮರ್ಥ್ಯವನ್ನು ಇನ್ನೂ ಹೆಚ್ಚು ಮಾಡಬೇಕಾಗುತ್ತದೆ. ಪರಿಣತರ ಅಭಿಪ್ರಾಯದಲ್ಲಿ ಈಗಾಗಲೇ ನಮಗೆ ಒದಗಿರುವ ತಂತ್ರಜ್ಞಾನದಲ್ಲಿ ಕೇವಲ ೫೦%-೬೦% ಪಾಲನ್ನು ಮಾತ್ರ ನಾವು ಬಳಸುತ್ತಿದ್ದೇವೆ. ಆದುದರಿಂದ ಮುಖ್ಯವಾಗಿ ಆಹಾರ ಧಾನ್ಯಗಳ ಬೆಳವಣಿಗೆಯನ್ನು ಇನ್ನೂ ೩೦-೪೦ ರಷ್ಟು ಹೆಚ್ಚು ಮಾಡಲು ಅವಕಾಶವಿದೆ. ಹೀಗಾಗಿ ಆಹಾರ

ಧಾನ್ಯಗಳ ಉತ್ಪಾದನೆಯಲ್ಲಿ ಉತ್ಪಾದನಾ ಸಾಧನವನ್ನು ಹೆಚ್ಚು ಮಾಡುವ ಅವಶ್ಯಕತೆ ಹಾಗೂ ಅವಕಾಶಗಳು ನಮಗಿವೆ. ಈ ಸಾಧನೆಯಿಂದ ಆಹಾರಕ್ಕಾಗಿ ನಾವು ಈಗ ಬಳಸುತ್ತಿರುವ ಭೂಮಿಯಲ್ಲಿ ಸ್ವಲ್ಪ ಭಾಗವನ್ನು ತೆರವು ಮಾಡಿಕೊಳ್ಳಲು ಸಾಧ್ಯವಾಗುತ್ತದೆ. ಹೀಗೆ ತೆರವಾದ ಭೂಮಿಯನ್ನು ಬೇರೆ ಬಗೆಯ ಕೃಷಿ ಉತ್ಪಾದನೆಗಳಿಗಾಗಿ ಬಳಸುವುದು ಸಾಧ್ಯವಾಗುತ್ತದೆ.

ಎರಡನೆಯದಾಗಿ, ಹೊಲ ಗದ್ದೆಗಳಲ್ಲಿರುವ ನೈಸರ್ಗಿಕ ಸಂಪನ್ಮೂಲಗಳನ್ನು ನಾವು ಬಹು ಎಚ್ಚರದಿಂದ ಸಂರಕ್ಷಿಸಿಕೊಳ್ಳುವುದಲ್ಲದೇ ಅವುಗಳ ಉತ್ಪಾದನಾ ಶಕ್ತಿಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಹಸಿರು ಕ್ರಾಂತಿಯ ಕಾಲದಲ್ಲಿ ಮತ್ತು ಅನಂತರದಲ್ಲಿಯೂ ಕೃಷಿ ಅಭಿವೃದ್ಧಿಯಲ್ಲಿ ಬಹು ಪ್ರಮುಖವಾದ ಈ ವಿಚಾರಕ್ಕೆ ನಾವು ಗಮನವನ್ನೇ ಕೊಡಲಿಲ್ಲ. ಇದರಿಂದಾಗಿ ನಮ್ಮ ಮಣ್ಣಿನ ಸವಕಳಿಯು ಹೆಚ್ಚಾಗಿ, ಭೂ ಜಲವು ಕಡಿಮೆಯಾಗಿ, ಭೂಮಿಯ ಸಾರ ಸಂಪತ್ತು ಕ್ಷೀಣವಾಗಿದೆ. ಆದುದರಿಂದ ಹಿಡುವಳಿಗಳಲ್ಲಿ ಉತ್ಪಾದನಾ ಸಾಮರ್ಥ್ಯ ಕುಗ್ಗುತ್ತಿದೆ. ಈ ಹಿನ್ನೆಲೆಯಲ್ಲಿ ಕೃಷಿ ಭೂಮಿಯು ನೈಸರ್ಗಿಕ ಸಂಪತ್ತು ಎಂದರೆ ಮಣ್ಣು, ನೀರು ಮತ್ತು ಜೀವ ವೈವಿಧ್ಯತೆಯ ಸಂವರ್ಧನೆಗಾಗಿ ನಾವು ಹೆಚ್ಚಿನ ಗಮನ ಕೊಡಬೇಕಾಗಿತ್ತದೆ.

ಮೂರನೆಯದಾಗಿ, ಉಷ್ಣ ವಲಯದ ಭಾಗವಾಗಿರುವ ನಮ್ಮಲ್ಲಿ ಕೃಷಿಯು ಸಮೃದ್ಧಿಯಾಗಿರಬೇಕಾದರೆ ಪರಿಸರದ ಪೋಷಣೆಯು ಬಹು ಮುಖ್ಯವಾಗುತ್ತದೆ. ಆದರೆ, ಈ ೪ - ೫ ದಶಕಗಳಲ್ಲಿ ಕೃಷಿಯೇತರ ಭೂಮಿಯಲ್ಲಿ ನೈಸರ್ಗಿಕವಾಗಿದ್ದ ಗಿಡಗಂಟೆಗಳನ್ನು ನಾವು ನಿರ್ಮೂಲ ಮಾಡಿರುವುದರಿಂದ ಕೃಷಿಯ ಪರಿಸರವೇ ಹದಗೆಟ್ಟಿದೆ. ಕೃಷಿಯ ಪರಸರವು ಸಮರ್ಪಕವಾಗಿದ್ದಲ್ಲಿ ಕೃಷಿ ಉದ್ದಿಮೆಗೆ ಹಲವು ಅನುಕೂಲಗಳಾಗುತ್ತವೆ. ಎಂದರೆ, ಕೃಷಿಗೆ ಬೇಕಾದ ಸಸ್ಯಾಧಾರ ಗೊಬ್ಬರವು ವಿಫಲವಾಗಿ ದೊರಕುತ್ತದೆ; ಮಳೆಯ ನೀರಿನ ಸಂಗ್ರಹಣೆಯು ಉತ್ತಮವಾಗಿದ್ದು, ಮೇಲ್ಮೈ ನೀರು ಹಾಗು ಭೂಜಲವು ಅಧಿಕವಾಗಲು ಅನುಕೂಲವಾಗುತ್ತದೆ. ; ಬೆಳೆಯ ವಾತಾವರಣವು ತಂಪಾಗಿದ್ದು, ಮಳೆಗಳು ಹಿಂದಾದಾಗ ಬೆಳೆಗಳು ಒಣಗುವ ಪ್ರಸಂಗವು ಕಡಿಮೆಯಾಗುತ್ತದೆ ; ಕೀಟ, ಪಕ್ಷಿ ಮತ್ತು ಇತರೆ ಜೈವಿಕ ಸಂಪರ್ಕವು ಪರಿಸರ ಹಾಗೂ ಬೆಳೆಗಳ ಮಧ್ಯ ಉತ್ತಮಗೊಂಡು ಬೆಳೆಗಳಿಗೆ ಅನುಕೂಲವಾಗುತ್ತದೆ.

ನಾಲ್ಕನೆಯದಾಗಿ, ಕೌಟುಂಬಿಕ ಆಧಾರವಾಗಿದ್ದ ಕೃಷಿಯು ಇಂದಿಗೆ ಆಹಾರವನ್ನು ಒದಗಿಸುವುದರ ಜೊತೆಗೆ ರೈತರಿಗೆ ವರಮಾನವನ್ನೂ ಒದಗಿಸಬೇಕಾಗುತ್ತದೆ. ಇದಕ್ಕಾಗಿ ರೈತನು ಇಂದಿನ ದಿನಗಳಲ್ಲಿ ಧಾನ್ಯಗಳನ್ನು ಮಾತ್ರ ಬೆಳೆಯದೆ, ರೊಕ್ಕದ ಬೆಳೆಗಳನ್ನೂ ಬೆಳೆಯತೊಡಗಿದ್ದಾನೆ. ಆದರೆ, ಕೃಷಿಯು ಹೆಚ್ಚು ಹೆಚ್ಚಾಗಿ ಮಾರುಕಟ್ಟೆಯ ಕಡೆಗೆ ಮುಂದುವರೆದಾಗ ಮಾರುಕಟ್ಟೆಯ ಸ್ವರೂಪವನ್ನು ಆಳವಾಗಿ ಅರಿಯದ ರೈತರು ಅನೇಕ ವೇಳೆ ದುಸ್ಥಿತಿಗೆ ಒಳಗಾಗುತ್ತಾರೆ. ಆದುದರಿಂದ ಕೃಷಿಗೂ ಮಾರುಕಟ್ಟೆಗೂ ಒಂದು ಸಾಮರಸ್ಯವು ಬೆಳೆಯಬೇಕಾದರೆ ಕೃಷಿ ವ್ಯಾಪಾರ ನಿರ್ವಹಣೆಯ ಸಾಮರ್ಥ್ಯವನ್ನು ರೈತರಲ್ಲಿ ಬೆಳೆಸಬೇಕಾಗುತ್ತದೆ. ಇದೆಲ್ಲದುದರ ಅರ್ಥವೇನೆಂದರೆ, ಕೃಷಿ ವಿಸ್ತರಣಾ ಕಾರ್ಯವು ಇದುವರೆಗೆ ನಿರತವಾಗಿದ್ದ ಬೆಳೆಗಳನ್ನು ಮಾಡುವ ತಂತ್ರಜ್ಞಾನವನ್ನು ಒದಗಿಸುವ ಕಾರ್ಯ ಒಂದಕ್ಕೇ ಸೀಮಿತವಾಗದೆ ನೈಸರ್ಗಿಕ ಸಂಪನ್ಮೂಲ ಸಂವರ್ಧನಗೆ, ಕೃಷಿ ಪರಿಸರದ ಅಭಿವೃದ್ಧಿಗೆ ಮತ್ತು ಮಾರುಕಟ್ಟೆ ಜೊತೆ ವ್ಯವಹರಿಸಲು ರೈತ ಸಾಮರ್ಥ್ಯದ ಬಗ್ಗೆ ಹೆಚ್ಚು ಗಮನವನ್ನು ಹರಿಸಬೇಕಾಗುತ್ತದೆ.

ಹೀಗಾದಲ್ಲಿ ಮಾತ್ರವೇ ಕೃಷಿ ರಂಗದಿಂದ ನಮ್ಮ ಆರ್ಥಿಕ ವ್ಯವಸ್ಥೆಗೆ ಆಗಬಹುದಾದ ಬಹು ವಿಧದ ಅನುಕೂಲಗಳು ಸಾಧ್ಯವಾಗುತ್ತವೆ. ಈ ಅನುಕೂಲಗಳೆಂದರೆ, ಕೃಷಿ ನಿರತ ಕುಟುಂಬಗಳಿಗೆ ಆಹಾರ ಭದ್ರತೆ, ಕೃಷಿಯೇತರ ಜನತೆಗೆ ಆಹಾರ ಪೂರೈಕೆ ಕೃಷಿ ಉದ್ಯಮಗಳಿಗೆ ಕಚ್ಚಾ ವಸ್ತಗಳು ಒದಗುವಿಕೆ ಮತ್ತು ಕೃಷಿ ರಫ್ತಿಗೆ ಬೆಂಬಲ - ಇವು ದೊರಕಲು ಸಾಧ್ಯವಾಗುತ್ತದೆ. ಇದೇ ಇಂದಿನ ಕೃಷಿ ವಿಸ್ತರಣೆ ವ್ಯವಸ್ಥೆಯ ಪಾತ್ರ.




# ಸಾವಯುವ ಕೃಷಿ

ಡಾ. ಜಿ. ಕೆ. ವೀರೇಶ್

ಸ್ವಾತಂತ್ರ ಬಂದ ಅರ್ಧ ಶತಮಾನದಲ್ಲಿ, ಕೃಷಿ ಕ್ಷೇತ್ರದಲ್ಲಿ, ಭಾರತ ಗಣನೀಯ ಪ್ರಗತಿಯನ್ನು ಸಾಧಿಸಿದೆ. ಭಾರತೀಯ ಕೃಷಿ ಅನುಸಂಧಾನ (ICAR) ಕೃಷಿ ಪ್ರಗತಿಯ ಮಂಚೂಣಿಯಲ್ಲಿದ್ದು ಕೃಷಿ ಸಂಶೋಧನೆ, ಬೋಧನೆ ಮತ್ತು ವಿಸ್ತರಣೆಯ ಮೂಲ ಧ್ಯೇಯ ಧೋರಣೆಗಳನ್ನು ನಿರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದೆ. ಭಾರತ ಸರ್ಕಾರ, ಕೃಷಿ ಅನುಸಂಧಾನದ ಸಲಹೆ, ಶಿಫಾರಸ್ಸುಗಳನ್ನು ಅನುಷ್ಠಾನಕ್ಕೆ ತಂದು, 'ಭಿಕ್ಷೆ ಪಾತ್ರೆ' ಸ್ಥಿತಿಯಲ್ಲಿದ್ದ ಆಹಾರ ಉತ್ಪಾದನೆಯನ್ನು 'ರಫ್ತು ಸ್ಥಿತಿಗೆ' ಮುಟ್ಟಿಸಿದೆ. ಸಾವಿರದ ಒಂಬೈನೂರ ಐವತ್ತರ ದಶಕದಲ್ಲಿ ನಮ್ಮ ಆಹಾರ ಉತ್ಪಾದನೆ ಸುಮಾರು ಐವತ್ತು ದಶಲಕ್ಷ ಟನ್‌ಗಳಷ್ಟು ಇದ್ದದ್ದು, ಎರಡು ಸಾವಿರ ಇಸವಿಯಲ್ಲಿ ೨೦೬ ದಶಲಕ್ಷ ಟನ್ ಮುಟ್ಟಿದೆ. ಕೃಷಿ ಉತ್ಪಾದನೆ ೧೯೦೦ ರಿಂದ ೧೯೫೦ರವರೆಗೆ ವರ್ಷಾವಾರು ೦.೩ ಪ್ರತಿಶತಗಳಿದ್ದದ್ದು ೧೯೬೦-೭೦ರ ದಶದಲ್ಲಿ ೩.೩ಕ್ಕೆ ಏರಿತು. ಇದೇ ಸಮಯದಲ್ಲಿ ದೇಶದ ಜನಸಂಖ್ಯೆ ೩೩ ಕೋಟಿ ಇದ್ದದ್ದು ಒಂದು ನೂರು ಕೋಟಿ ದಾಟಿದೆ. ದೇಶದ ದಾಸ್ತಾನಿನಲ್ಲಿ ೬೦ ಮಿಲಿಯನ್ ಟನ್ ಆಹಾರ ಇದೆ. ಆದರೆ ಒಂದು ಅಂದಾಜಿನ ಪ್ರಕಾರ ೩೦ ಕೋಟಿ ಜನ ಒಂದು ಹೊತ್ತು ಉಪವಾಸ ಬೀಳುತ್ತಾರೆ. ಸಾತಂತ್ರ್ಯ ಪೂರ್ವದಲ್ಲಿ ಭಾರತೀಯರ ಸರಾಸರಿ ಆಯುಸ್ಸು ೩೨ ವರುಷವಿದ್ದುದ್ದು ಈಗ ೬೨ಕ್ಕೆ ಏರಿದೆ. ಇದಕ್ಕೆ ಆಹಾರದ ಪಾತ್ರವೂ ಒಂದು ಮುಖ್ಯ ಕಾರಣ.

**ಸಾಗುವಳಿಯಲ್ಲಿ ಭೂಮಿಯಲ್ಲಿ ಸಾಮಾನ್ಯವಾಗಿ ತಲೆದೋರುವ ತೊಂದರೆಗಳೆಂದರೆ ಸಮತೋಲನ ಪೌಷ್ಟಿಕ ಅಂಶವನ್ನು ಕಾಪಾಡುವುದು. ಮಣ್ಣಿನಲ್ಲಿ ಜೀವ ವೈವಿಧ್ಯತೆಯನ್ನು ಕಾಪಾಡುವುದೇ ಸಾವಯುವ ಕೃಷಿ. ಇದು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ತುಂಬಾ ಪ್ರಸಿದ್ಧಿಯಾಗಿದೆ.**

ಭಾರತವು ಅರವತ್ತು, ಎಪ್ಪತ್ತರ ದಶಕದಲ್ಲಿ ಆಹಾರ ಉತ್ಪಾದನೆಯಲ್ಲಿ 'ಹಸಿರು ಕ್ರಾಂತಿ' ಯನ್ನು ಸಾಧಿಸಿ, ತೊಂಬತ್ತರ ದಶಕದಲ್ಲಿ ಹಾಲು ಉತ್ಪಾದನೆಯಲ್ಲಿ 'ಬಿಳಿ ಕ್ರಾಂತಿ' ಯನ್ನು ಸಾಧಿಸಿ, ಪ್ರಪಂಚದಲ್ಲಿ ಮೊದಲನೇ ಸ್ಥಾನ ಗಳಿಸಿದೆ. ಕೃಷಿ-ಪಶುಸಂಗೋಪನೆ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಗೋಧಿ (೭೪ ಮಿ.ಟ.) ಮತ್ತು ಅಕ್ಕಿ (೮೮.ಮಿ.ಟ.) ಉತ್ಪಾದನೆಯಲ್ಲಿ ರಫ್ತುಮಾಡುವ ಸ್ಥಿತಿಯಲ್ಲಿದ್ದೇವೆ. ಎಣ್ಣೆ ಕಾಳು (೨೫.ಮಿ.ಟ.) ಉತ್ಪಾದನೆ ನಮ್ಮ ಬೇಡಿಕೆಯನ್ನು ನೀಗಿಸುವಷ್ಟಿದ್ದರೂ, ಹೊರ ದೇಶದಿಂದ ಆಮದನ್ನು ತಡೆಯುವಂತಾಗಿಲ್ಲ. ಹಾಲು (೭೫ .ಮಿ.ಟ.) ಮೀನು (೫.೫.ಮಿ.ಟ.); ಮೊಟ್ಟೆ (೩೬೦ ಸಾವಿರ ಕೋಟಿ); ಹಣ್ಣು (೪೩ ಮಿ.ಟ.) ಮತ್ತು ತರಕಾರಿ (೮೩ ಮಿ.ಟ.) ಉತ್ಪಾದನೆಯಲ್ಲಿ ಗಣನೀಯವಾದ ಸಾಧನೆ ಮಾಡಿದ್ದೇವೆ. ಪೌಷ್ಟಿಕಾಂಶ ದೃಷ್ಟಿಯಿಂದ ಈ ಮೂಲ ಆಹಾರ ಉತ್ಪಾದನೆ ಬಹುಮುಖ್ಯ.

ಇವೆಲ್ಲವುಗಳ ಸಾಧನೆಯ ಹಿನ್ನೆಲೆಯಲ್ಲಿ ದೇಶದಾದ್ಯಂತ ಇರುವ ಕೃಷಿ ಅನುಸಂಧಾನದ ೪೬ ಕೇಂದ್ರ ಸಂಶೋಧನಾ ಕ್ಷೇತ್ರಗಳು; ೩೩ ಸ್ಟೇಟ್ ಅಗ್ರಿಕಲ್ಚರ್ ಯೂನಿವರ್ಸಿಟಿಗಳು; ಕಾಫಿ, ಟೀ, ರಬ್ಬರ್, ರೇಷ್ಮೆ ಮುಂತಾದ ಬೋರ್ಡ್‌ಗಳು; ೮೦ ಆಲ್ ಇಂಡಿಯಾ ಕೋ-ಆರ್ಡಿನೇಟೆಡ್ ಪ್ರಾಜೆಕ್ಟ್‌ಗಳು ಇವುಗಳೆಲ್ಲದರ ಒಟ್ಟು ಕೃಷಿ ವಿಜ್ಞಾನಿಗಳ ಸಂಖ್ಯೆ ಮೂವತ್ತು ಸಾವಿರದಷ್ಟು. ಪ್ರಪಂಚದ ಮತ್ತಾವ ದೇಶದಲ್ಲೂ ಇಷ್ಟೊಂದು ಕೃಷಿ ವಿಜ್ಞಾನಿಗಳು ಇಲ್ಲ. ಇದರ ಜೊತೆಗೆ ನಮ್ಮಲ್ಲಿರುವ ಜೀವವೈವಿಧ್ಯ (ಬಯೋಡೈವರ್ಸಿಟಿ) ವೈಶಿಷ್ಟ್ಯವಾದದ್ದು. ಪ್ರಪಂಚದ ಹನ್ನೆರಡು ಮೆಘಾ ಬಯೋಡೈವರ್ಸಿಟಿ ದೇಶಗಳಲ್ಲಿ ಭಾರತವೂ ಒಂದು. ಪ್ರಪಂಚದಾದ್ಯಂತ ೫,೦೦,೦೦೦ ಬಗೆಬಗೆಯ ಮಾನವ ತಿನ್ನುವಂತಹ ಆಹಾರ ಒದಗಿಸುವ ಸಸ್ಯ, ಗಿಡಮೂಲಿಕೆಗಳಿವೆ. ಆದರೆ ಕೇವಲ ೧೫ ಬಗೆ ಸಸ್ಯಗಳು ಪ್ರಪಂಚದ ಶೇಕಡ ೯೦ರಷ್ಟು ಆಹಾರ ಒದಗಿಸುತ್ತಿವೆ. ಉಳಿದವನ್ನು ನಾವು ಬಳಕೆಗೆ ತಂದಿಲ್ಲ.

ನಮಗೆ ತಿಳಿದಿರುವ ನಮ್ಮಲ್ಲಿರುವ ೮೧,೦೦೦ ಬಗೆ ಪ್ರಾಣಿಗಳಲ್ಲಿ, ೩೫೦ ಬಗೆ ಸಸ್ತನಿಗಳು (ಮ್ಯಾಮಲ್ಸ್); ೧,೨೨೪ ಬಗೆ ಪಕ್ಷಿ; ೪೦೮ ಬಗೆ ಹಾವು; ೧೯೭ ಬಗೆ ಆಂಫಿಬಿಯನ್; ೧೯೭ ಬಗೆ ಮೀನುಗಳಿವೆ. ೪೫,೦೦೦ ಸಸ್ಯ ಜಾತಿಗಳಲ್ಲಿ ೧,೫೦೦ ಬಗೆ ಹೂವಿನ ಗಿಡಗಳಿವೆ. ಮಾನವನ ಅಳಿವು, ಉಳಿವು ಈ ಪ್ರಾಣಿ, ಸಸ್ಯಗಳ ಸಂರಕ್ಷಣೆ ಮೇಲೆ ನಿಂತಿದೆ. ಅವು ಉಳಿದರೆ ನಾವು, ಅವು ಅಳಿದರೆ ನಾವಿಲ್ಲ. ಈ ದೃಷ್ಟಿಕೋನದಿಂದ ನೆಲ, ಜಲ, ವಾಯು ಕಲ್ಮಷಗೊಳ್ಳದಂತೆ ನಮ್ಮ ಹೊಟ್ಟೆ ತುಂಬಿಸುವ ಆತುರದಲ್ಲಿ ಹಾಗೂ ಕೆಲವರ ಭೋಗ ಭಾಗ್ಯಗಳ ದುರಾಸೆಗೆ ನಮ್ಮ ನೆಲದ ಜೀವ ವೈವಿಧ್ಯವನ್ನು ನಿರ್ಲಕ್ಷಿಸುತ್ತಿದ್ದೇವೆ. ಇಪ್ಪತ್ತೊಂದನೇ ಶತಮಾನಕ್ಕೆ ಕಾಲಿಟ್ಟಿರುವ ನಾವು ಹಿಂದೆ ಮಾಡಿರುವ ತಪ್ಪುಗಳನ್ನು ಜ್ಞಾಪಿಸಿಕೊಂಡು, ಮುಂದೆ ನಾವು ನಿರೂಪಿಸಿಕೊಳ್ಳುವಂತಹ ವ್ಯವಸಾಯ ಧೋರಣೆ, 'ಸರ್ವೇ ಜನಾಃ ಸುಖಿನೋ ಭವಂತು' ಅನ್ನುವ ಮೂಲ ಆಧಾರದ ಮೇಲೆ ನಿಂತಿರಬೇಕು. ಸರ್ವೇ ಜನಾಃ ಅಂದರೆ, ಮನುಷ್ಯನೂ ಸೇರಿದಂತೆ ಎಲ್ಲ ಪ್ರಾಣಿ, ಪಶು, ಪಕ್ಷಿ, ಸಸ್ಯ ಸೇರಿಕೊಂಡಿದೆ. ಹಸಿರು ಕ್ರಾಂತಿ ನಮ್ಮ ಹೊಟ್ಟೆ ತುಂಬಿಸಲು ಅನುಕೂಲವಾಯಿತೇ ಹೊರತು, ಸರ್ವೇ ಜನಾಃ ಸುಖಿಕ್ಕಲ್ಲ. ಇದಕ್ಕೆ ಪರ್ಯಾಯವಾಗಿ ಸಾವಯವ ಕೃಷಿ ಅಥವಾ ನೈಸರ್ಗಿಕ ಕೃಷಿ, ಪ್ರಕೃತಿಗೆ ಸ್ಪಂದಿಸಿ, ನಾವೂ ಬದುಕಿ ಬೇರೆಯವರನ್ನೂ ಬದುಕಲು ಬಿಡುವ ಒಂದು ತಂತ್ರ. ಮನುಕುಲದ ಉನ್ನತಿ ಹಾಗೂ ಉಳಿವು ಲಕ್ಷಾಂತರ ಜಾತಿಯ ಸಸ್ಯ, ಪ್ರಾಣಿ ಹಾಗೂ ಸೂಕ್ಷ್ಮಾಣು ಜೀವಿಗಳನ್ನು ಅವಲಂಬಿಸಿದೆ. ಜೀವವೈವಿಧ್ಯ ನಮ್ಮ ಬದುಕಿನ ಅವಿಭಾಜ್ಯ ಅಂಗ. ಕೃಷಿ, ಔಷಧ, ಆಹಾರ ಹಾಗೂ ಕೈಗಾರಿಕಾ ಕ್ಷೇತ್ರಗಳ ಬೆಳವಣಿಗೆಗೆ, ಜೀವವೈವಿಧ್ಯ, ಪರಿಸರ ಸಮತೋಲನ ಹಾಗೂ ಜೀವ ವಿಕಾಸ ಕ್ರಿಯೆಯನ್ನು ಸಮರ್ಪಕವಾಗಿ ನಿರ್ವಹಿಸುತ್ತದೆ. ಭಾರತೀಯರು ಹಿಂದಿನಿಂದಲೂ ಈ ಜೀವವೈವಿಧ್ಯವನ್ನು ಪಾರಂಪರಿಕವಾಗಿ ಪೂಜಿಸುತ್ತಾ ಬಂದಿದ್ದಾರೆ. ಭಾರತೀಯರ ಸಂಸ್ಕೃತಿ ಹಾಗೂ ನೀತಿ ಸಂಹಿತೆಗಳಲ್ಲಿ ಸಂರಕ್ಷಣೆ ಹಾಗೂ ಜೀವವೈವಿಧ್ಯದ ಸಂಯಮಯುತ ಬಳಕೆ ಅಂತರ್ಗತವಾಗಿದೆ. ಪರಿಸರ ಮಾಲಿನ್ಯವಿಲ್ಲದ ಸ್ವಸ್ಥಿರ ಕೃಷಿ ಈ ಸಾವಯವ ಕೃಷಿ ಆಧಾರದ ಮೇಲೆ ನಿಂತಿದೆ. ಮೂಲತಃ ಸಾವಯವ ಕೃಷಿ ಅನೇಕ ವರ್ಷಗಳ ಅನುಭವದ ದೇಶೀಯ ತಂತ್ರಜ್ಞಾನವುಳ್ಳದ್ದಾಗಿರಬೇಕು.

ಪಂಚಭೂತಗಳಾದ ನೆಲ, ನೀರು, ಗಾಳಿ, ಬೆಂಕಿ, ಆಕಾಶ (ವಾಯುಮಂಡಲ)ಗಳನ್ನು ವೇದ ಪುರಾಣ ಕಾಲದಿಂದಲೂ ಆರಾಧಿಸುತ್ತಾ ಬಂದಿದ್ದೇವೆ. ಬೇಡಿಕೆಗಳು ಎಷ್ಟು ಕನಿಷ್ಠ ಪ್ರಮಾಣದಲ್ಲಿದ್ದವೋ ಅಷ್ಟೇ ಉನ್ನತ ಮಟ್ಟದಲ್ಲಿ ಪಂಚಭೂತಗಳನ್ನು ಅನುಭವಿಸುತ್ತಾ ಇದ್ದವು. ಕಾಲ ಉರುಳಿದಂತೆ, ಜನ-ಜಾನುವಾರುಗಳು ಹೆಚ್ಚಿದಂತೆ, ನೆಲ, ನೀರು, ಇಂಧನ(ಬೆಂಕಿ)ವನ್ನು ಹೆಚ್ಚು ಹೆಚ್ಚು ಉಪಯೋಗಿಸುತ್ತಾ ಬಂದ ಹಾಗೆಲ್ಲಾ ನಮ್ಮ ನೈಸರ್ಗಿಕ ಭಂಡಾರ ಬರಿದಾಗುವುದರ ಜೊತೆಗೆ ನೆಲ, ನೀರು, ಗಾಳಿ, ವಾಯುಮಂಡಲ ಕಲುಷಿತಗೊಂಡವು. ನಮ್ಮ ಪೃಥ್ವಿಯನ್ನು ಕಾಪಾಡುತ್ತಿರುವ ಹೊರ ವಲಯದ ಪರೆ 'ಓಜೋನ್' ಪದರದಲ್ಲಿ ದೊಡ್ಡ ರಂಧ್ರ ಉಂಟಾಗಿ ಪೃಥ್ವಿಯ ಮೇಲಿನ ಜೀವಕ್ಕೆ ಸಂಚಕಾರ ಬಂದಿದೆ. ಎಲ್ಲ ಜೀವಿಗಳಿಗೆ ಆಧಾರವಾಗಿರುವ ಸಸ್ಯ, ಮರ, ಗಿಡ ಕ್ರಮೇಣ ಕುಂಠಿತವಾಗುತ್ತಾ ಬಂದಿದೆ.

ಪ್ರಪಂಚದಾದ್ಯಂತ ಪ್ರತಿ ವರ್ಷ ೧೮-೨೦ ದಶಲಕ್ಷ ಹೆಕ್ಟೇರ್ ಕಾಡನ್ನು ನಾಶಮಾಡುತ್ತಿದ್ದೇವೆ. ಕಾಡುಗಳನ್ನು ಒತ್ತರಿಸಿ ಬೇಸಾಯ ಮಾಡುತ್ತಿದ್ದೇವೆ. ಜಾನುವಾರುಗಳು ಹೆಚ್ಚಿದಂತೆಲ್ಲಾ ಕಾಡು ಹಿಂಜರಿಯುತ್ತಿದೆ. ಪ್ರಪಂಚದ ಜನಸಂಖ್ಯೆಯ ಹದಿನಾರರಷ್ಟು ಜಾನುವಾರಿರುವ ನಮ್ಮ ದೇಶ ಪ್ರಪಂಚದ ಕೇವಲ ಶೇಕಡ ಎರಡರಷ್ಟು ಜಾಗದಲ್ಲಿ ಮಾತ್ರ ಕಾಡನ್ನು ಹೊಂದಿದ್ದೇವೆ. ಅಂದಮೇಲೆ ಪ್ರಕೃತಿ ಸಂಪತ್ತಿನ ಮೇಲಿರುವ ಒತ್ತಡವೆಷ್ಟಿದೆಯೆಂದು ಗ್ರಹಿಸಬಹುದು.

ನಮ್ಮ ದೇಶದ ಒಟ್ಟು ವಿಸ್ತೀರ್ಣದ ೩೨೮.೭ ದಶಲಕ್ಷ ಹೆಕ್ಟೇರ್‌ನಲ್ಲಿ ಶೇಕಡ ೬೮ ಭಾಗ ಮಳೆ ಆಶ್ರಿತ ಬೇಸಾಯಕ್ಕೆ ಒಳಪಟ್ಟಿದೆ. ಶೇಕಡ ೬೮ ಭಾಗದ ಭೂಮಿಯಿಂದ ನಮ್ಮ ಒಟ್ಟು ಆಹಾರ ಉತ್ಪಾದನೆಯ ಶೇಕಡ ೪೦ರಷ್ಟು ಮಾತ್ರ ಒಣ ಬೇಸಾಯದಿಂದ ಬರುವುದು. ಉಳಿದ ಶೇಕಡ ೬೦ರಲ್ಲಿ, ಶೇಕಡ ೩೨ರಷ್ಟು ನೀರಾವರಿ ಪ್ರದೇಶದಿಂದ ಬರುತ್ತದೆ. ನಮ್ಮ ದೇಶದ ಹಲವಾರು ಆಹಾರ ಬೆಳೆಗಳ ಉತ್ಪನ್ನ ಪ್ರಪಂಚದ ಎಕರೆವಾರು ಇಳುವರಿಯ ಕನಿಷ್ಟ ಪ್ರಮಾಣದಲ್ಲಿದೆ. ಅದರಲ್ಲೂ ಒಣಭೂಮಿ ಬೇಸಾಯವಂತು ಅತಿ ಕನಿಷ್ಟ ಪ್ರಮಾಣದ್ದು. ಸರ್ಕಾರ ಎಷ್ಟೇ ಪ್ರಯತ್ನ ಮಾಡಿದರೂ ನಮ್ಮ ಬೇಸಾಯ ಭೂಮಿಯ ಶೇಕಡಾ ೪೦ ಕ್ಕಿಂತ ಹೆಚ್ಚಿಗೆ ನೀರಾವರಿಗೆ ಪರಿವರ್ತಿಸಲು ಸಾಧ್ಯವಿಲ್ಲ. ಅಂದಮೇಲೆ ಶೇಕಡ ೬೦ರಷ್ಟು ಸಾಗುವಳಿ ಭೂಮಿ ಮುಂದೆಯೂ ಮಳೆ ಆಶ್ರಯದಿಂದಲೇ ಬೆಳೆಯದೆ ವಿಧಿ ಇಲ್ಲ. ದೇಶದ ಅತಿ ಬಡತನ ರೇಖೆಯಲ್ಲಿರುವ ಜನ ಹೆಚ್ಚಾಗಿ ಈ ಪ್ರದೇಶದಲ್ಲಿರುವವರು. ಆಗಾಗ ಹೊಟ್ಟೆಪಾಡಿಗಾಗಿ ಊರು ಬಿಟ್ಟು ಹೋಗುವವರ ಸಂಖ್ಯೆ ಹೆಚ್ಚು. ವಿದ್ಯೆ, ಪರಿಣತೆ ಇಲ್ಲದ ಇವರಿಗೆ ಹೊಸ ಜಾಗದಲ್ಲಿ ವಸತಿ, ಮಕ್ಕಳಿಗೆ ವಿದ್ಯೆ ದುರ್ಲಭ. ಇವರು ಬಡತನದ ರೇಖೆಯಿಂದ ಪಾರಾಗುವ ಬಗೆ ಹೇಗೆ? ಇದರ ಪರಿಹಾರಕ್ಕಾಗಿ ಇವರ ಮೂಲ ಜೀವನೋಪಾಯವಾದ ವ್ಯವಸಾಯವನ್ನು ಲಾಭದಾಯಕವಾಗಿ ಉತ್ತಮಪಡಿಸುವ ವಿಧಾನ ಸಾವಯವ ಕೃಷಿ ಮೂಲಕ ಸ್ವಸ್ಥಿರ ಕೃಷಿಯನ್ನು ಬಲಪಡಿಸಬೇಕಾಗಿದೆ.

ಸಾವಯವ ಕೃಷಿ ಬಗ್ಗೆ ಓದುಗರಿಗೆ ಕೆಲವು ಸಹಜವಾದ ಅನುಮಾನಗಳು ಉದ್ಭವಿಸಬಹುದು. ಈಗಿರುವ ಆಧುನಿಕ ಬೇಸಾಯ ಪದ್ಧತಿಯಿಂದ ನಮ್ಮ ಆಹಾರ ಉತ್ಪಾದನೆಯನ್ನು ೫೦ ದಶಲಕ್ಷ ಟನ್‌ಗಳಿಂದ ೨೦೦ ದಶಲಕ್ಷ ಟನ್‌ಗಳಿಗೆ ಏರಿಸಿ, ಭಿಕ್ಷೆ ಪಾತ್ರೆಯಿಂದ ವಿಮುಕ್ತರಾಗಿರುವಾಗ, ಪರ್ಯಾಯವಾಗಿ ಇದಕ್ಕಿಂತಲೂ ಉತ್ತಮವಾದ ಬೇರೆ ವಿಧಾನ ಏಕೆ ಬೇಕು? ಈಗಿರುವ ಪದ್ಧತಿಯನ್ನೆ ಮುಂದುವರಿಸಿದರೆ ಆಹಾರ ಉತ್ಪಾದನೆಯನ್ನು ದ್ವಿಗುಣಗೊಳಿಸಲು ಸಾಧ್ಯವಿಲ್ಲವೆ? ಸಾವಯವ ಕೃಷಿಯಿಂದ ನಮ್ಮ ಆಹಾರ ಬೇಡಿಕೆಯನ್ನು ನಿಭಾಯಿಸಲು ಸಾಧ್ಯವೇ? ಈ ತಂತ್ರಜ್ಞಾನ ಎಷ್ಟರಮಟ್ಟಿಗೆ ನಂಬಲರ್ಹ? ಮುಂತಾದವು.

ಈ ದೇಶದ ಕೃಷಿ ಪರಂಪರೆಯಲ್ಲಿ ಇಪ್ಪತ್ತನೇ ಉತ್ತರಾರ್ಧದ ಅರವತ್ತು ಎಪ್ಪತ್ತರ ದಶಕದಲ್ಲಿ ಆದ ಹಸಿರುಕ್ರಾಂತಿ ಹಿಂದೆಂದೂ ಆಗಿದ್ದಿಲ್ಲ. ಮುಂದೆಯೂ ಇದೇ ಮಾದರಿಯಲ್ಲಿ ಆಹಾರ ಉತ್ಪಾದನೆ ಇಮ್ಮಡಿ, ಮುಮ್ಮಡಿ ಆಗುವ ಚಿನ್ಹೆಗಳೂ ಇಲ್ಲ. ಇದೊಂದು ಕ್ರಾಂತಿಯೆಂದು ಹೇಳುವುದಕ್ಕಿಂತ ಕೋಟ್ಯಂತರ ಜನರ ಹಸಿವಿನ ಕೂಗಿಗೆ ಓಗೊಟ್ಟ ವರದಾನವೆಂದು ಹೇಳಬಹುದು. ಹಸಿರುಕ್ರಾಂತಿಗೆ ಬಹುಮುಖ್ಯವಾದ ನಾಲ್ಕು ಅಂಶಗಳು ಒಟ್ಟಿಗೆ ಕೂಡಿ ಬಂದ ಕಾಲವೂ ಪ್ರಸ್ತುತವಾಗಿತ್ತು. ದೇಶವು ಆಹಾರ ಅಭಾವದಿಂದ ತತ್ತರಿಸುತ್ತಿದ್ದಾಗ ಹೇಗಾದರೂ ಜಯಿಸಬೇಕೆಂಬ ಸರ್ಕಾರದ ಮತ್ತು ರೈತರ ಮನೋಗತಿಗೆ ಸರಿಯಾಗಿ ವರದಾನವಾದ ಹೆಚ್ಚು ಇಳುವರಿ ಕೊಡುವ ಬೀಜಗಳು ಸಮಯಕ್ಕೆ ಸರಿಯಾಗಿ ದೊರೆತವು. ರಾಸಾಯನಿಕ ಗೊಬ್ಬರದ ಉಪಯೋಗವನ್ನು ಹೊರಚಿಮ್ಮುವ ಶಕ್ತಿ ನಮ್ಮ ಭೂಮಿಯಲ್ಲಿತ್ತು. ಅದಕ್ಕೆ ಬೇಕಾದ ನೀರಾವರಿಗೆ ಮೊದಲನೇ ಪಂಚವಾರ್ಷಿಕ ಯೋಜನೆಯಿಂದಲೇ ಪ್ರಾರಂಭವಾದ ಬೃಹತ್ ನೀರಾವರಿ ಯೋಜನೆಗಳು ಪೂರ್ಣಗೊಂಡಿದ್ದವು. ಕೀಟಬಾಧೆ, ರೋಗರುಜಿನಗಳನ್ನು ನಿಗ್ರಹಿಸುವಂತಹ ಔಷಧಿಗಳು ಮಾರುಕಟ್ಟೆಯಲ್ಲಿ ಆಗ ತಾನೇ ಹೇರಳವಾಗಿ ದೊರೆಯುವಂತಾಗಿದ್ದವು. ಹೆಚ್ಚು ಇಳುವರಿ ಕೊಡುವ ಬೀಜ, ಇವು ಬೆಳೆಯಲು ಅತ್ಯವಶ್ಯಕವಾದ ನೀರು, ರಾಸಾಯನಿಕ ಗೊಬ್ಬರ ಮತ್ತು ಬೆಳೆ ಸಂರಕ್ಷಿಸುವ ಔಷಧಿಗಳು ಸಕಾಲದಲ್ಲಿ ಸರಿಯಾದ ಪ್ರಮಾಣದಲ್ಲಿ ಉಪಯೋಗಿಸುವ ತಂತ್ರಜ್ಞಾನ ಇವೆಲ್ಲ ಸವಲತ್ತುಗಳು ರೈತರಿಗೆ ದೊರೆಯಲು ಸಹಾಯ ಮಾಡಿದ ಸರ್ಕಾರದ ನಿಲುವು ಒಟ್ಟಿಗೆ ಕೂಡಿ ಬಂದದ್ದು ಹಸಿರು ಕ್ರಾಂತಿಗೆ ಪೂರಕವಾದವು. ಹಸಿರು ಕ್ರಾಂತಿಯ ಪರಿಣಾಮ ಹೇಗಾಯಿತೆಂದರೆ, ಪೆನಿಸಿಲಿನ್ ಚುಚ್ಚುವುದು, ಮೊದಲು ಪ್ರಚಲಿತಕ್ಕೆ ಬಂದಾಗ ಒಂದು ರಾಮಬಾಣವಾಗಿ ಪರಿಣಮಿಸಿದ ಹಾಗೆ ಹಿಂದೆಂದೂ ಈ ತರಹದ ಚುಚ್ಚುಮದ್ದನ್ನು ಬಳಸದಿದ್ದವರಿಗೆ ಪೆನಿಸಿಲಿನ್ ವರದಾನವಾಗಿ ಕಂಡಿತು. ಏನೇ ಖಾಯಿಲೆ ಬಂದರೂ ಮೊದಲು ಇಂಜೆಕ್ಷನ್ ಕೊಡಿ ಎಂದು ಕೇಳುವ ಕಾಲವಿತ್ತು. ಬಳಕೆಗೆ ಬಂದ ಐವತ್ತು ವರುಷದಲ್ಲಿ ಅದು ಎಲ್ಲ ಖಾಯಿಲೆಗಳಿಗೆ ರಾಮಬಾಣವಲ್ಲವೆಂದು ತಿಳಿಯಿತು. ಹಾಗೆಯೇ ಎಲ್ಲಾ ಪ್ರದೇಶದಲ್ಲಿ, ಎಲ್ಲಾ ಕಾಲದಲ್ಲಿ, ಎಲ್ಲಾ ಭೂಮಿಯಲ್ಲಿ ಯಾವ ಬೆಳೆಯನ್ನಾಗಲಿ, ಅದಕ್ಕೆ ತಕ್ಕ ಬೀಜ, ರಸಗೊಬ್ಬರ, ನೀರು, ಔಷಧಿ ಸಿಕ್ಕಿದರೆ ಗ್ರಹಿಸದಷ್ಟು ಇಳುವರಿಯನ್ನು ತೆಗೆಯುತ್ತೇನೆಂದು ಹೇಳುತ್ತಿದ್ದ ಧೈರ್ಯ ಈಗ ಎಲ್ಲರಿಗಿಲ್ಲ. ಪೆನಿಸಿಲಿನ್ ಕೆಲವರಿಗೆ ಅಲರ್ಜಿ ಇದ್ದ ಹಾಗೆ ರಾಸಾಯನಿಕ ಗೊಬ್ಬರ ಮತ್ತು ರಾಸಾಯನಿಕ ಔಷಧಿ ಕೆಲವು ಭೂಮಿಯನ್ನು ಈಗಾಗಲೇ ನಿಷ್ಪ್ರಯೋಜನ ಮಾಡಿವೆ. ಈ ದೇಶದ ಕಣಜದಂತಿದ್ದ ಪಂಜಾಬ್, ಹರಿಯಾಣಗಳಲ್ಲಿ ಈಗಾಗಲೇ ಹೆಚ್ಚು ನೀರು ಮತ್ತು ರಸಗೊಬ್ಬರ ಬಳಸಿ ಲಕ್ಷಾಂತರ ಎಕರೆ ಭೂಮಿ ಬೇಸಾಯಕ್ಕೆ ಅಯೋಗ್ಯವಾಗಿದೆ.

ದೇಶದಾದ್ಯಂತ ನಮ್ಮ ಆಹಾರ ಉತ್ಪಾದನೆಯನ್ನು ಎರಡು ದಶಕದಲ್ಲಿ (೧೯೬೦-೭೦) ನೂರು ಮಿಲಿಯನ್ ಟನ್ ಹೆಚ್ಚಿಸಿದೆವು. ಆದರೆ ಅದೇ ಎಂಬತ್ತು ಮತ್ತು ತೊಂಬತ್ತರ ದಶಕದಲ್ಲಿ ಎಲ್ಲಾ ಆಧುನಿಕ ತಂತ್ರಜ್ಞಾನ ಬಳಸಿಯೂ, ನಮ್ಮ ಮಳೆಗಾಲ ಸತತವಾಗಿ ಒಳ್ಳೆಯದಾಗಿದ್ದಾಗ್ಯೂ, ಹತ್ತು ದಶಲಕ್ಷ ಟನ್ ಹೆಚ್ಚಿಗೆ ಉತ್ಪಾದನೆ ಮಾಡಲು ಮುಗ್ಗರಿಸಿದೆವು. ಆಧುನಿಕ ಬೇಸಾಯದ ಕೆಲವು ನ್ಯೂನತೆಗಳು ಸ್ವಸ್ಥಿರ ಕೃಷಿಗೆ ತಕ್ಕದಲ್ಲವಾಗಿ ಕಂಡುಬಂದವು. ಅದರಲ್ಲೂ ರಾಸಾಯನಿಕ ಗೊಬ್ಬರ ಮತ್ತು ಔಷಧಿ, ಜನ ಜಾನುವಾರುಗಳ ಆರೋಗ್ಯಕ್ಕೆ ದುಷ್ಪರಿಣಾಮ ಬೀರುವುದರೊಂದಿಗೆ ವಾತಾವರಣ ಕಲುಷಿತಗೊಳಿಸಿ ಗೊಂದಲ ಉಂಟುಮಾಡಿದವು. ಜನ ಎಚ್ಚೆತ್ತುಕೊಳ್ಳಲು ಪ್ರಾರಂಭಿಸಿದರು. ಪರ್ಯಾಯ ಕೃಷಿ ಪದ್ಧತಿ ಕಡೆಗೆ ಗಮನ ಹರಿಸಲು ಪ್ರಾರಂಭಿಸಿದರು. ಇಂದು ಪ್ರಪಂಚದಾದ್ಯಂತ ಸಾವಯವ ಕೃಷಿ ಪದ್ಧತಿಯಿಂದ ಬೆಳೆದ ಆಹಾರಕ್ಕೆ ಹೆಚ್ಚು ಹೆಚ್ಚು ಬೇಡಿಕೆ ಬರುವಂತಾಗಿದೆ. ಪಾಶ್ಚಿಮಾತ್ಯ ದೇಶಗಳಲ್ಲಿ ರಾಸಾಯನಿಕ ವಸ್ತುಗಳ ಕಲ್ಮಶವಿಲ್ಲದ ಆಹಾರ ಹಣ್ಣು ತರಕಾರಿಗಳಿಗೆ ಹೆಚ್ಚು ಗಮನ ಕೊಡಲಾಗುತ್ತಿದೆ. ಅವರು ಯಥೇಚ್ಛವಾಗಿ, ರಾಸಾಯನಿಕ ಗೊಬ್ಬರ, ಕಳೆನಾಶಕ, ಕೀಟ ನಾಶಕಗಳನ್ನು ಉಪಯೋಗಿಸಿ ಹೆಚ್ಚು ಇಳುವರಿ ತೆಗೆಯುವ ತಂತ್ರಜ್ಞಾನವನ್ನು ಬಳಸುತ್ತಿರುವುದರಿಂದ ಆಹಾರದಲ್ಲಿ ರಾಸಾಯನಿಕ ವಸ್ತುಗಳು ಕಲುಷಿತಗೊಳ್ಳುವ ಸಾಧ್ಯತೆಗಳು ಹೆಚ್ಚು ಮತ್ತು ಹಣ್ಣು ತರಕಾರಿಗಳ ಸ್ವಾದವೂ ಕಡಿಮೆ. ಇಂತಹ ಪದಾರ್ಥಗಳ ಸೇವನೆಯಿಂದ ಪರೋಕ್ಷವಾಗಿ ದೇಹದಾರೋಗ್ಯ ಮತ್ತು ಸ್ವಾಭಾವಿಕ ಲಕ್ಷಣಗಳು ಬದಲಾಗುವ ಚಿಹ್ನೆ ಹಂಡುಬಂದಿದೆ. ನಮ್ಮ ದೇಶದಲ್ಲಿ ಇಂತಹ ದುಷ್ಪರಿಣಾಮಗಳು ಸದ್ಯಕ್ಕೆ ತಲೆದೋರದಿದ್ದರೂ ಮುಂದೆ ಮುಂದೆ ಹೆಚ್ಚು ಹೆಚ್ಚು ರಾಸಾಯನಿಕ ವಸ್ತುಗಳನ್ನು ವ್ಯವಸಾಯದಲ್ಲಿ ಬಳಸಿದಾಗ ಇಂತಹ ನ್ಯೂನತೆಗಳು ಬರುವ ಸಾಧ್ಯತೆಗಳಿವೆ. ಈಗಾಗಲೇ ಕೆಲವು ಸ್ಥಳಗಳಲ್ಲಿ ರಾಸಾಯನಿಕ ಗೊಬ್ಬರಗಳನ್ನು ಹೆಚ್ಚು ಉಪಯೋಗಿಸಿದ ಕಡೆ ಕುಡಿಯುವ ಬಾವಿಯ ನೀರಿನಲ್ಲಿ ಗರಿಷ್ಠ ಮಿತಿಗಿಂತ ಹೆಚ್ಚಿನ ಪ್ರಮಾಣದಲ್ಲಿ ನೈಟ್ರೇಟಿನ ಅಂಶ ಕಂಡುಬಂದಿದೆ. ರಾಸಾಯನಿಕ ಔಷಧಗಳನ್ನು ಕೀಟ ಮತ್ತು ರೋಗಗಳನ್ನು ತಡೆಯಲು ಉಪಯೋಗಿಸಲು ಪ್ರಾರಂಭಿಸಿದಾಗಿನಿಂದ ಹಿಂದೆ ಎಂದೂ ಇಲ್ಲದಿದ್ದ ಕೀಟ ಮತ್ತು ರೋಗಬಾಧೆಗಳು ತಲೆದೋರಿವೆ. ಅಲ್ಲದೆ ಕೆಲವೆಡೆ ಎಷ್ಟೇ ಔಷಧಿ ಹೊಡೆದರೂ ಕೀಟ ನಿಯಂತ್ರಣವಾಗದೆ ರೈತರು ಹತಾಶರಾಗಿ ಆತ್ಮಹತ್ಯೆ ಮಾಡಿಕೊಂಡಿದ್ದಾರೆ.

ಸ್ವಸ್ಥಿರ ಕೃಷಿ (Sustainable Agriculture)ಯ ಮೂಲ ಗುರಿ ಸ್ಥಳೀಯರಿಂದ, ಸ್ಥಳೀಯವಾಗಿ ದೊರೆಯುವ ಮೂಲವಸ್ತುಗಳಾದ ಬಿತ್ತನೆ, ಗೊಬ್ಬರ, ನೀರು ಮತ್ತು ಸಲಕರಣೆಗಳ ಸಂಪನ್ಮೂಲಗಳನ್ನು ಬಳಸಿ, ಪರಿಸರಕ್ಕೆ ಹಾನಿಯಾಗದಂತೆ, ಹವಾಮಾನಕ್ಕೆ ಹೊಂದಿಕೊಂಡು, ಇಳುವರಿಯನ್ನು ಸದಾ ಒಂದು ಗರಿಷ್ಠ ಮಟ್ಟದಲ್ಲಿ ಕಾಪಾಡಿಕೊಂಡು ಬರುವಂತಹ ನೈಸರ್ಗಿಕ ಬೇಸಾಯ ಪದ್ಧತಿ. ನಮ್ಮ ಪೂರ್ವಿಕರು ಶತಮಾನಗಳಿಂದ ನಡೆದು ಬಂದ ಕೃಷಿ ಪದ್ಧತಿಯನ್ನು ವಿಶ್ಲೇಷಿಸಿ, ಸಂಸ್ಕರಿಸಿ, ನವೀಕರಿಸಿ, ಸ್ಥಳ ಹವಾಮಾನಕ್ಕೆ ಹೊಂದಿಕೊಳ್ಳುವಂತಹ ತಳಿಗಳನ್ನು ಅಭಿವೃದ್ಧಿ ಪಡಿಸಿ, ಸ್ಥಳೀಯವಾಗಿಯೇ ದೊರೆಯುವಂತಹ ಗೊಬ್ಬರಗಳನ್ನು ಬಳಸಿ, ಭೂಮಿಯ ಫಲವತ್ತತೆಯನ್ನು ಕಾಪಾಡಿಕೊಂಡು, ಬೇಸಾಯ ಪದ್ಧತಿಯನ್ನು ಅನುಕರಣೀಯವಾಗಿ ಮಾಡುತ್ತಾ ಬಂದರು. ಕೆಲವು ಬಾರಿ ಹವಾಮಾನದ ವೈಪರೀತ್ಯದಿಂದ ಬೆಳೆ ಹಾಳಾದ ನಿದರ್ಶನಗಳನ್ನು ಬಿಟ್ಟರೆ, ಇಳುವರಿಯನ್ನು ಒಂದು ದೃಢವಾದ ಮಟ್ಟದಲ್ಲಿ ಕಾಪಾಡಿಕೊಂಡು ಬರುತ್ತಿದ್ದರು. ಈ ಪದ್ಧತಿಯು ಮೂಲತಃ ಸಾವಯವ ಕೃಷಿ ಅಥವಾ ಸ್ವಸ್ಥಿರ ಕೃಷಿ ಆಧಾರದ ಮೇಲೆ ನಡೆದುಬಂದಿದೆ. ನಮ್ಮ ದೇಶದ ನೂರ ಇಪ್ಪತ್ತು ವಿವಿಧ ಬೇಸಾಯ ಹವಾಗುಣ ವಲಯಗಳಲ್ಲಿ (Agro-climatic Zones) ಬೆಳೆಯಬಹುದಾದಂತಹ ಆಹಾರ, ಹಣ್ಣು, ಹಂಪಲು, ತರಕಾರಿಗಳನ್ನು ಅವಲಂಬಿಸಿ ಅಲ್ಲಲ್ಲಿಯ ಜನರು ಅವರದೇ ಆದ ಆಹಾರ ಪದ್ಧತಿಯನ್ನು ರೂಢಿಸಿಕೊಂಡು ಬಂದರು. ಉದಾಹರಣೆಗೆ ಕರ್ನಾಟಕವನ್ನೇ ಪರಿಗಣಿಸಿದರೆ, ತೀರ ಪ್ರದೇಶದ ದಕ್ಷಿಣ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಭತ್ತ ಮತ್ತು ತೆಂಗು ಹೆಚ್ಚಿರುವುದರಿಂದ ಕುಸುಬಲಕ್ಕಿ ಅನ್ನ, ತೆಂಗಿನಕಾಯಿ ಮತ್ತು ತೆಂಗಿನ ಎಣ್ಣೆ ಆಹಾರದ ಮುಖ್ಯ ಭಾಗಗಳಾದವು. ಘಟ್ಟ ಪ್ರದೇಶದ ಮಲೆನಾಡಿನಲ್ಲಿ ಭತ್ತ, ಗೆಡ್ಡೆ ಗೆಣಸು, ಹಾಲು, ಬೆಣ್ಣೆ, ತುಪ್ಪ ಮೂಲ ಆಹಾರವಾದವು. ದಕ್ಷಿಣ ಕರ್ನಾಟಕದ ಮೈದಾನ ಪ್ರದೇಶದಲ್ಲಿ ರಾಗಿ, ಜೋಳ, ಸಜ್ಜೆ, ಹಾರಕ, ನವಣೆ, ದ್ವಿದಳ ಧಾನ್ಯಗಳು, ಎಣ್ಣೆ ಕಾಳುಗಳು ಜನರ ದಿನನಿತ್ಯದ ಆಹಾರ.

ಐವತ್ತು ವರುಷಗಳ ಹಿಂದೆ ದಕ್ಷಿಣ ಭಾರತದಲ್ಲಿ ಗೋಧಿ ಉಪಯೋಗಿಸುತ್ತಿದ್ದದ್ದು ಬಹಳ ವಿರಳ. ಬೆಂಗಳೂರಿನಂತಹ ದೊಡ್ಡ ಪಟ್ಟಣಗಳಲ್ಲಿ 'ಬೊಂಬಾಯಿ ಹೋಟೆಲ್' ಗಳಲ್ಲಿ ಮಾತ್ರ ಚಪಾತಿ, ಪೂರಿ ದೊರೆಯುತ್ತಿದ್ದವು. ಈಗ ಹಳ್ಳಿ ಹಳ್ಳಿಗಳಲ್ಲಿ ಗೋಧಿ ಪದಾರ್ಥಗಳು, ಬ್ರೆಡ್, ಬನ್ ದೊರೆಯುತ್ತವೆ. ಅಕ್ಕಿ ರೊಟ್ಟಿ, ರಾಗಿ ರೊಟ್ಟಿ, ಜೋಳದ ರೊಟ್ಟಿ ಮಾಡುವಂತಹ ಹೋಟೆಲ್‌ಗಳನ್ನು

ಹುಡುಕಿಕೊಂಡು ಹೋಗಬೇಕು. ಎರಡು ಸಾವಿರ ಮೈಲಿಗೂ ದೂರದ ಪಂಜಾಬ್, ಹರಿಯಾಣ, ಉತ್ತರ ಪ್ರದೇಶದಿಂದ ಗೋಧಿಯನ್ನು ದಕ್ಷಿಣಕ್ಕೆ ಸಾಗಿಸಲು ತಗಲುವ ವೆಚ್ಚ, ಅವುಗಳನ್ನು ದಾಸ್ತಾನು ಮಾಡಲು ಗೋದಾಮುಗಳು, ಸಾಗಾಣಿಕೆಯಲ್ಲಿ, ದಾಸ್ತಾನಿನಲ್ಲಿ ಹಾಳಾಗುವ ನಷ್ಟವೆಲ್ಲವನ್ನು ಪರಿಗಣಿಸಿದರೆ ನಮ್ಮ ಆಹಾರ ಬಳಕೆಯಲ್ಲಿ ಅಡ್ಡ ದಾರಿ ಹಿಡಿದಿದ್ದೇವೆ ಅನ್ನಿಸುತ್ತದೆ. ಸ್ಥಳೀಯವಾಗಿ ದೊರೆಯುವ ಆಹಾರ ಧಾನ್ಯಗಳಿಗೆ ಬೇಡಿಕೆ ಇಲ್ಲದಾಗಿ ಬೆಲೆ ಕುಸಿದು, ಬೇಸಾಯವನ್ನೆ ಬಿಟ್ಟಿರುವ ನಿದರ್ಶನಗಳಿವೆ.

ಆಧುನಿಕ ಬೇಸಾಯ ಪದ್ಧತಿ ಪರಾವಲಂಬನೆಯದು. ಬೀಜ, ಗೊಬ್ಬರ (ಫರ್ಟಿಲೈಸರ್), ಔಷಧಿ (ಪೆಸ್ಟಿಸೈಡ್ಸ್) ಮುಂತಾದವು ಸ್ಥಳೀಯವಾಗಿ ದೊರೆಯುತ್ತಿಲ್ಲ. ದೇಶದ ಯಾವುದೋ ಮೂಲೆಯಲ್ಲಿರುವ ಫರ್ಟಿಲೈಸರ್ಸ್ ಫ್ಯಾಕ್ಟರಿಯಿಂದ ಅಥವಾ ಹೊರ ದೇಶದಿಂದ ನಮ್ಮ ಗೊಬ್ಬರ ಬರಬೇಕು. ಬೀಜವನ್ನು ಕೊಂಡೇ ತರಬೇಕು. ಔಷಧಿಗಳನ್ನಂತೂ ಅವುಗಳ ಹುಟ್ಟು ಗುಣ, ಉಪಯೋಗ ಏನನ್ನೂ ತಿಳಿಯದೆ, ಕಡ್ಡಾಯವಾಗಿ ಉಪಯೋಗಿಸುವ ಸ್ಥಿತಿಗೆ ಬಂದಿದ್ದೇವೆ. ಇವೆಲ್ಲ ಇದ್ದರೂ ಇವುಗಳನ್ನು ಉಪಯೋಗಿಸುವ ತಾಂತ್ರಿಕ ಜ್ಞಾನವನ್ನು ಮತ್ತೊಬ್ಬರಿಂದ ತಿಳಿಯಬೇಕು. ಇವುಗಳಲ್ಲಿ ಯಾವುದಾದರೂ ಒಂದು ದೊರೆಯದಿದ್ದಾಗ ಕೃಷಿಕ ಕಂಗಾಲಾಗುತ್ತಾನೆ. ಇಂದು ನಾವು ನಮ್ಮ ಇಂಧನಕ್ಕೆ ಹೊರದೇಶದಿಂದ ತೈಲ ಆಮದಿಗೆ ಅವಲಂಬಿಸಿ ಹೇಗೆ ತತ್ತರಿಸುತ್ತಿದ್ದೇವೆಯೋ ಹಾಗೆ ನಮ್ಮ ಆಧುನಿಕ ಬೇಸಾಯ ಪದ್ಧತಿಯಲ್ಲಿ ನಮ್ಮ ಸ್ವಂತಿಕೆಯನ್ನು ಕಳೆದುಕೊಂಡು ಆತ್ಮ ಚೈತನ್ಯವಿಲ್ಲದವರಾಗಿದ್ದೇವೆ. ಪರ್ಯಾಯವಾಗಿ ಸಾವಯವ ಕೃಷಿ ತತ್ವಾಧಾರಿತ ಪದ್ಧತಿ ಕೃಷಿಯಲ್ಲಿ ಹೆಚ್ಚು ನಂಬಿಕೆ ಉಂಟುಮಾಡುವಂತಾಗಬಹುದು.

ಆಧುನಿಕ ಬೇಸಾಯದ ಮೂಲಮಂತ್ರ ರಾಸಾಯನಿಕ ಗೊಬ್ಬರ (ಫರ್ಟಿಲೈಸರ್) ಬಳಕೆ. ಐವತ್ತು ವರುಷದ ಹಿಂದೆ ನಮ್ಮ ನಾಡಿನ ಖುಷ್ಕಿ ಬೇಸಾಯದಲ್ಲಿ ರಾಸಾಯನಿಕ ಗೊಬ್ಬರ ಕಂಡಿದ್ದಿಲ್ಲ. ಸಾವಿರದ ಒಂಬೈನೂರ ಐವತ್ತರ ದಶಕದಲ್ಲಿ ನಾನು ವ್ಯವಸಾಯ ಕಾಲೇಜು ವಿದ್ಯಾರ್ಥಿಯಾಗಿದ್ದಾಗ, ಯು.ಎಸ್. ಎಯಿಡ್ ತಜ್ಞರು ಹಾಗೂ ಅಮೆರಿಕೆಯ ಪೀಸ್ ಕೋರ್‌ನವರು ಕೈಯಲ್ಲಿ ಐದು ಕೆ.ಜಿ.ಫರ್ಟಿಲೈಸರ್ ಹಿಡಿದು ಮನೆ ಮನೆ ಬಾಗಿಲಿಗೆ ಹೋಗಿ ಅದರ ಉಪಯೋಗವನ್ನು ವರ್ಣಿಸುತ್ತಿದ್ದಾಗ ಕೆಲವರಿಂದ ಅವರು ಬೈಗುಳ ತಿನ್ನುತ್ತಿದ್ದುದು ಇತ್ತು. 'ಉಪ್ಪು' (ಫರ್ಟಿಲೈಸರ್) ಹಾಕಿದರೆ ಬೆಳೆ ಉರಿದುಹೋಗುತ್ತದೆ ಎಂದು ರೈತರು ನಂಬಿದ್ದರು. ಆದರೆ ಕಾಲಚಕ್ರ ಉರುಳಿದಂತೆ, 'ಉಪ್ಪಿ'ಲ್ಲದೆ ಏನನ್ನೂ ಬೆಳೆಯಲು ಸಾಧ್ಯವಿಲ್ಲವೆನ್ನುವ ಪರಿಸ್ಥಿತಿಗೆ ತಲುಪಿದ್ದೇವೆ. ರಾಸಾಯನಿಕ ಗೊಬ್ಬರ ನಮ್ಮ ಹಸಿರು ಕ್ರಾಂತಿಯಲ್ಲಿ ಮಹತ್ವವಾದ ಪಾತ್ರ ವಹಿಸಿದೆ ನಿಜ. ಆಗ ನಮ್ಮ ಭೂಮಿಯಲ್ಲಿ ಫಲವತ್ತತೆ ಇತ್ತು, ಫರ್ಟಿಲೈಸರ್ ಹಾಕಿದಾಗ ಅದರ ಜೊತೆ ಇತರೆ ಸತ್ವಗಳೂ ಕೂಡ ಸಸ್ಯಗಳಿಗೆ ದೊರೆಯುವಂತಾಗಿ ಹಿಂದೆ ಎಂದೂ ಕಾಣದಿದ್ದಂತಹ ಬೆಳೆ ಬಂತು. ಹೆಚ್ಚು ಹೆಚ್ಚು ಫರ್ಟಿಲೈಸರ್ ಹಾಕಿ ಹೆಚ್ಚು ಉತ್ಪತ್ತಿ ತೆಗೆಯಬಹುದೆಂಬ ನಂಬಿಕೆ ಬೇಗ ಹುಸಿಯಾಯಿತು. ಕೂಡಲೇ ಒಂದೆರಡು ದಶಕದಲ್ಲಿ ಎಲ್ಲೆಲ್ಲಿ ಹೆಚ್ಚು ಹೆಚ್ಚು ಫರ್ಟಿಲೈಸರ್ ಉಪಯೋಗಿಸಿತ್ತೋ ಅಲ್ಲೆಲ್ಲ ದುಷ್ಪರಿಣಾಮಗಳು ತಲೆದೋರಿದವು. ಮೊದನೆಯದಾಗಿ ಹಿಂದೆಂದೂ ನೋಡದ ಕೆಲವು ಕೀಟ ಬಾಧೆ, ರೋಗ ಬಾಧೆ ಉದ್ಭವಿಸಿದವು. ಇದರೊಂದಿಗೆ ಇಳುವರಿಯೂ ಕಡಮೆಯಾಗುತ್ತಾ ಬಂತು. ಕಾರಣ ಮೂಲತಃ ಸಸ್ಯಗಳು ಬೆಳವಣಿಗೆಗೆ ಒಟ್ಟು ೩೫ ಪೋಷಕಾಂಶಗಳನ್ನು ಬಳಸಿಕೊಂಡರೂ ಅವುಗಳಲ್ಲಿ ಕನಿಷ್ಟ ಹದಿನಾರು ಮೂಲ ಸತ್ವಗಳು (Elements) ಅವಶ್ಯಕ. ಅವುಗಳಲ್ಲಿ ಎನ್.ಪಿ.ಕೆ.(ಸಾರಜನಕ, ರಂಜಕ ಮತ್ತು ಪೊಟಾಷ್) ಬಹು ಮುಖ್ಯವಾದರೂ, ಮೊದಮೊದಲು ಅಷ್ಟಿಷ್ಟು ಉಳಿದ ಮೂಲ ಸತ್ವಗಳು ಭೂಮಿಯೊಳಗೆ ಇದ್ದವು. ಎನ್.ಪಿ.ಕೆ.ಜೊತೆ ಸೇರಿ ಹುಲುಸಾದ ಬೆಳೆ ಬರಲು ಕಾರಣವಾದವು. ಇವು ಬರಿದಾದಾಗ, ಹಾಗೂ ಬೇರೆ ಮೂಲಗಳಿಂದ ಇವುಗಳು ದೊರೆಯದಿದ್ದಾಗ ಭೂಮಿ ಬರಡಾಯಿತು, ಇಳುವರಿ ಕುಸಿಯಿತು, ಬೆಳೆ ಶಕ್ತಿ ಕುಂದಿತು, ಹೆಚ್ಚು ಹೆಚ್ಚು ಕೀಟ-ರೋಗ ಬಾಧೆಗೆ ತುತ್ತಾದವು. ಸಾವಯವ ಗೊಬ್ಬರದಲ್ಲಿ ಎನ್.ಪಿ.ಕೆ. ಜೊತೆಗೆ ಉಳಿದೆಲ್ಲ ಮೂಲ ಪೌಷ್ಟಿಕಾಂಶಗಳು ದೊರಕುವುದರಿಂದ ಮೇಲೆ ಹೇಳಿದ ದುಷ್ಪರಿಣಾಮಗಳನ್ನು ನಿಭಾಯಿಸಬಹುದು.

ಮತ್ತೊಂದು ದೊಡ್ಡ ದುಷ್ಪರಿಣಾಮ ರಾಸಾಯನಿಕ ಗೊಬ್ಬರ ಬಳಕೆಯಿಂದ ಉತ್ಪತ್ತಿಯಾದದ್ದೆಂದರೆ, ಕೀಟ-ರೋಗ ಬಾಧೆ ಉಲ್ಬಣವಾದದ್ದು. ತತ್ಪರಿಣಾಮವಾಗಿ ಕೀಟ ನಾಶಕಗಳ ಬಳಕೆ ಗಗನಕ್ಕೇರಿತು. ಈ ದೇಶದ ಕೀಟನಾಶಕ ಬಳಕೆ ೧೯೫೦ ದಶಕದಲ್ಲಿ ತಲಾವಾರು ೦.೩ ಕೆ.ಜಿ.ಇದ್ದದ್ದು, ೧೯೮೦ರ ದಶಕದಲ್ಲಿ ಒಂದು ಕೆ.ಜಿ.ಗೆ ಏರಿತು. ಇವುಗಳಿಂದ ಪರಿಸರಕ್ಕೆ ಆದ ಹಾನಿ ಊಹಿಸಲಸಾಧ್ಯ. ಸಾರಜನಕ ರಸಗೊಬ್ಬರ ಬಳಸಿದಾಗ ಬೆಳೆ ರಸವತ್ತಾಗಿ ಬೆಳೆದು ಪ್ರೊಟೀನಿನ ಅಂಶ ಹೆಚ್ಚಾದಾಗ ಕೀಟ-ರೋಗಗಳನ್ನು ಆಕರ್ಷಿಸುತ್ತದೆ,

ಜೊತೆಗೆ ಕೀಟ-ರೋಗಬಾಧೆ ನಿಗ್ರಹಿಸುವ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ಉದಾಹರಣೆಗೆ ಭತ್ತದ ಬೆಂಕಿ ರೋಗ ಹಾಗೂ ಕಂದುಜಿಗಿ ಹುಳ ಉಲ್ಬಣವಾಗಿದ್ದು ಈ ಕಾರಣದಿಂದ. ಅವುಗಳನ್ನು ನಿಯಂತ್ರಿಸಲು ಕಡ್ಡಾಯವಾಗಿ ಬೆಳೆ ಹಂತವನ್ನು ಆಧರಿಸಿ ಔಷಧಿ ಸಿಂಪರಣೆ ಮಾಡಲೇಬೇಕಾಯಿತು. ಕಂದುಜಿಗಿ ಹುಳ ಪೈರಿನ ಕಾಂಡದ ಮೇಲೆ ಕುಳಿತು ದಟ್ಟವಾದ ಪೈರಿನ ಅಡಿಯಲ್ಲಿರುವುದರಿಂದ ಕೀಟನಾಶಕ ಸಿಂಪರಣೆಯಿಂದ ಸಮರ್ಪಕವಾದ ಹತೋಟಿ ದೊರೆಯುವುದು ದುರ್ಲಭ. ಆದರೆ ಕೀಟನಾಶಕ ಬಳಕೆಯಿಂದ ಆದ ದುಷ್ಪರಿಣಾಮಗಳು ಹಲವಾರು. ಕೀಟಗಳ ಸ್ವಾಭಾವಿಕ ಶತ್ರುಗಳು ಅದರಲ್ಲೂ ಕಂದುಜಿಗಿ ಹುಳುವನ್ನು ಹತೋಟಿಯಲ್ಲಿಡುವಂತಹ ಜೇಡಗಳು, ಗದ್ದೆಯ ಪರಿಸರದಲ್ಲೆಲ್ಲ ನಾಶವಾದವು. ಶತ್ರುವಿಲ್ಲದ ವಾತಾವರಣದಲ್ಲಿ ಪಿಡುಗು ಉಲ್ಬಣಗೊಂಡಿತು. ಹೆಚ್ಚು ಹೆಚ್ಚು ಕೀಟನಾಶಕಗಳನ್ನು ಬಳಸಬೇಕಾಯಿತು. ಈ ಔಷಧಗಳು ನೀರಿನಲ್ಲಿ ಸೇರಿ ಗದ್ದೆಯಲ್ಲಿದ್ದ ಮೀನು,ಏಡಿ ಮತ್ತಿತರ ಜಲಚರ ಪ್ರಾಣಿಗಳು ನಾಶವಾದವು. ವಿಷ ಹಳ್ಳ ಕೊಳ್ಳಗಳಲ್ಲಿ ಹರಿದು ಅಲ್ಲಿಯೂ ದುಷ್ಪರಿಣಾಮ ಬೀರಿದವು. ಕಲುಷಿತ ಮೀನು ಏಡಿಗಳನ್ನು ತಿಂದು 'ಹಂದಿಗೋಡು ಸಿಂಡ್ರೋಂ' ನಂತಹ ಖಾಯಿಲೆ ಕಾಣಿಸಿಕೊಂಡವು. ಡಿ.ಡಿ.ಟಿ.,ಬಿ.ಎಚ್.ಸಿ. ಯಂತಹ ಔಷಧಿಗಳ ಮೂಲವಸ್ತುವಾದ 'ಕ್ಲೋರಿನೇಟೆಡ್ ಹೈಡ್ರೋಕಾರ್ಬನ್ಸ್' ವಿಷ ಸರಪಳಿ ಅಗೋಚರವಾಗಿ ಮೀನು, ಕಪ್ಪೆ, ಪಕ್ಷಿಗಳಿಗೆ ಮಾರಕವಾದವು. ಈ ವಿಷ ಸಣ್ಣ ಮೀನುಗಳಲ್ಲಿ ಅಲ್ಪ ಪ್ರಮಾಣದಲ್ಲಿ ಹುದುಗಿದ್ದು ಅವಕ್ಕೆ ಮಾರಕವಾಗಲಿಲ್ಲ, ಆದರೆ ಹಲವಾರು ಸಣ್ಣ ಮೀನು ನುಂಗಿದ ದೊಡ್ಡ ಮೀನಿಗೆ ಮೃತ್ಯು ಒದಗಿತು. ಸಣ್ಣ ಮೀನು ತಿಂದ ಪಕ್ಷಿಗಳು ಸಾಯದಿದ್ದರೂ ಅವುಗಳ ಮೊಟ್ಟೆಯ ಕರಡು ಮೆತ್ತಗಾಗಿ ಮರಿಯಾಗುವುದೇ ತೊಂದರೆಯಾಯಿತು. ಇಂತಹ ತೊಂದರೆಗಳು ಲೆಕ್ಕಕ್ಕೆ ಎಟುಕದಷ್ಟಿವೆ. ಆದರೆ ಜನಸಾಮಾನ್ಯರಿಗೆ ಈ ತೊಂದರೆಗಳ ಮೂಲ ಯಾವುದೆಂದು ಗ್ರಹಿಸುವುದು ಕಷ್ಟ.

ಕೀಟನಾಶಕಗಳನ್ನು ಬೆಳೆಗಳ ಮೇಲೆ ಮೊದಲು ಉಪಯೋಗಿಸಿದಾಗ ರಾಮಬಾಣದಂತೆ ಕಂಡವು. ಕೀಟನಾಶಕಗಳು ಸುಲಭವಾಗಿ ಅಂಗಡಿಗಳಲ್ಲಿ ದೊರೆಯುತ್ತಿದ್ದರಿಂದ ಮಾರುವವನ, ಕೊಳ್ಳುವವನ ಮಧ್ಯೆ ಯಾರಿಂದಲೂ ಅಡೆ ತಡೆ ಅಥವಾ ತಜ್ಞರ ಸಲಹೆ ಇಲ್ಲದ್ದರಿಂದ ಕೀಟ ಬಾಧೆ ಇರಲಿ- ಇಲ್ಲದಿರಲಿ, ಶಾಸ್ತ್ರೋಕ್ತವಾಗಿ ಔಷಧಿ ಸಿಂಪಡಿಸುವ ಪರಿಪಾಟು ರೈತರಲ್ಲಿ ಬೆಳೆಯಿತು. ಕಾಣದ ಶತ್ರುವನ್ನು ಬರದ ಹಾಗೆ ತಡೆಗಟ್ಟುವ ನೆಪದಲ್ಲಿ ಬೆಳೆಯ ಹಂತದಲ್ಲಿ ಬರಬಹುದಾದ ಪಿಡುಗನ್ನು ತಡೆಯಲು, ಕ್ಯಾಲೆಂಡರ್ ಬೇಸ್ಡ್ (ಅಂದರೆ ತಾರೀಕು ಲೆಕ್ಕದಲ್ಲಿ) ಸಸ್ಯ ಸಂರಕ್ಷಣೆ ತೆಗೆದುಕೊಳ್ಳುವುದು ವಾಡಿಕೆಯಾಯಿತು. ಕೀಟ ಅಥವಾ ರೋಗ ಹಾನಿಕಾರಕ ಮಟ್ಟ ಮುಟ್ಟಿದಾಗ (ನೀಡ್ ಬೇಸ್ಡ್) ಮಾತ್ರ ಕೈಗೊಳ್ಳಬೇಕಾದ ನಿಯಂತ್ರಣವನ್ನು ಹಲವಾರು ಕಾರಣಗಳಿಂದ ಅಳವಡಿಸಲಿಲ್ಲ. ಎಷ್ಟೋ ಸಂದರ್ಭದಲ್ಲಿ ಕೀಟ ರೋಗಬಾಧೆಯಿಂದ ನಷ್ಟವಾಗುವುದು ಅವುಗಳನ್ನು ನಿಯಂತ್ರಿಸುವ ಖರ್ಚಿಗಿಂತ ಎಷ್ಟೋ ಪಾಲು ಕಡಿಮೆ ಇರುವುದು. ಆದರೂ ಅಗೋಚರ ಆಗಂತುಕನ ಭಯ ಇವನನ್ನು ಬಿಡದು. ಈ ಭಯದ ಅನಿಶ್ಚಿತತೆಯ ಸುರುಳಿಗೆ ಸಿಕ್ಕಿ ನೂರಾರು ಆಂಧ್ರದ ಹತ್ತಿ ಬೆಳೆಗಾರರು ಆತ್ಮಹತ್ಯೆ ಮಾಡಿಕೊಂಡರು. ಹತ್ತಿ ಬೆಳೆಯ ಸಂರಕ್ಷಣೆಗೆ ಸಮಗ್ರ ಹತೋಟಿ ತಂತ್ರಜ್ಞಾನ ಕೇವಲ ಮೂರು ನಾಲ್ಕು ಸಿಂಪರಣೆ ಲಾಭದಾಯಕವಾಗಿದ್ದರೂ ರೈತರು ಹದಿನೈದು-ಇಪ್ಪತ್ತು ಬಾರಿ ಔಷಧ ಹೊಡೆಯುತ್ತಿರುವುದು ಶೋಚನೀಯ. ಇದರಿಂದ ಒಂದೆರಡು ಕ್ವಿಂಟಾಲ್ ಹತ್ತಿ ಹೆಚ್ಚಿಗೆ ಬಂದರೂ, ಖರ್ಚು ಅದರ ನಾಲ್ಕರಷ್ಟಾಗಿರುತ್ತದೆ. ಇವರ ಪಾಲಿಗೆ ಬರುವುದು ನಷ್ಟವೆ. ಹತ್ತಿಯ ಬೆಳೆಗಾರರು ಯದ್ವಾತದ್ವ ಕೀಟನಾಶಕಗಳನ್ನು ಬಳಸಿ, ಬಹುತೇಕ ಕೀಟಗಳು ಹತ್ತಿಯ ಪರಿಸರದಲ್ಲಿ ಯಾವ ಔಷಧಿಗೂ ಸಾಯದಂತಾದವು. ಈಗ ಬಿ.ಟಿ.ಕಾಟನ್ ಕಡೆ ಕೈ ಜೋಡಿಸಿದ್ದಾರೆ. ಅದರದೂ ಒಂದು ದಿನ ಈ ಪಾಡೇ. ಸಾವಯವ ಕೃಷಿಯಲ್ಲಿ ಸಮಗ್ರ ಕೀಟ ಹತೋಟಿಗೆ ರಾಸಾಯನಿಕ ಔಷಧಗಳ ಬಳಕೆ ಕೂಡದು. ಪ್ರಕೃತಿಗೆ ಸ್ಪಂದಿಸುವಂತಹ, ಸ್ವಸ್ಥಿರ ಕೃಷಿಗೆ, ತತ್ವಾಧಾರಿತ ಸಮಗ್ರ ಕೀಟ ಹತೋಟಿ ಪರಿಸರ ಸಮತೋಲನದಲ್ಲಿರುವಂತೆ ಕಾಪಾಡುತ್ತದೆ.

ರಾಸಯನಿಕ ಗೊಬ್ಬರ, ಕೀಟನಾಶಕ, ಕಳೆನಾಶಕಗಳು ಮಣ್ಣಿನ ಫಲವತ್ತತೆಗೆ ಅಗತ್ಯವಿರುವ ಸೂಕ್ಷ್ಮಾಣು ಜೀವಿಗಳಾದ ರೈಝೋಬಿಯಂ, ಅಜೈಟೋಬ್ಯಾಕ್ಟರ್, ನೈಟ್ರೋಬ್ಯಾಕ್ಟರ್ ಮುಂತಾದುವು ಹಾಗೂ ಮಣ್ಣಿನ ಮಿತ್ರ ಎರೆಹುಳುಗಳಂತಹ ಜೀವಿಗಳ ಸಂತತಿ ಕಡಿಮೆ ಮಾಡುತ್ತವೆ. ಆದರೆ ಸಾವಯವ ಗೊಬ್ಬರ ಇವುಗಳ ಸಂತಾನವನ್ನು ಬಹುಪಾಲು ವೃದ್ಧಿಸುತ್ತದೆ, ತೇವಾಂಶವನ್ನು ದೀರ್ಘಕಾಲ ಹಿಡಿದಿಡುತ್ತದೆ.

ಆಧುನಿಕ ಬೇಸಾಯ ಬಹುಪಾಲು ರಾಸಾಯನಿಕ ವಸ್ತುಗಳನ್ನು ಅವಲಂಬಿಸಿರುವುದರಿಂದ ಮತ್ತು ಈ ರಾಸಾಯನಿಕ ವಸ್ತುಗಳು ಜನ-ಜಾನುವಾರುಗಳ ಆರೋಗ್ಯದ ಮೇಲೆ ಹಾಗೂ ಪರಿಸರದ ಮೇಲೆ ಆತಂಕಕಾರಿ ಪರಿಣಾಮ ಬೀರಿರುವ ಹಿನ್ನೆಲೆಯಲ್ಲಿ ಇವುಗಳ ಬಳಕೆಯನ್ನು ಕಡಿಮೆ ಮಾಡುವ ಅಥವಾ ಪೂರ್ಣ ಕೈಬಿಡುವ ಸಾಧ್ಯತೆಗಳೇನಾದರೂ ಇವೆಯೇ ಎಂದು ಚಿಂತಿಸಿದಾಗ ಮೊದಲು ಮನಸ್ಸಿಗೆ ಬರುವುದು ಈಗಿರುವ ಆಹಾರ ಉತ್ಪತ್ತಿ ಸಾಮರ್ಥ್ಯ ಕುಗ್ಗುವುದೆಂಬ ಭಯ. ರಾಸಾಯನಿಕ ಗೊಬ್ಬರ ಮತ್ತು ಕೀಟನಾಶಕಗಳು ಅಂಗಡಿಗಳಲ್ಲಿ ಸಿಕ್ಕುವಂತೆ ಸಮರ್ಪಕವಾಗಿ ಕೆಲಸ ಮಾಡುವ ಸಾವಯವ ಗೊಬ್ಬರ ಮತ್ತು ಪರ್ಯಾಯ ಕೀಟನಾಶಕಗಳು ಮಾರುಕಟ್ಟೆಯಲ್ಲಿ ದೊರೆಯದಿದ್ದುದು ಈ ಭಯಕ್ಕೆ ಪುಷ್ಟಿ ಕೊಟ್ಟಿದೆ. ಪ್ರಪಂಚದ ಹಲವಾರು ಕಡೆ ರಾಸಾಯನಿಕ ಗೊಬ್ಬರ, ಕೀಟನಾಶಕಗಳನ್ನು ಬಳಸದೆ ಬೇಸಾಯ ಮಾಡಿ, ಅತ್ಯಧಿಕ ಇಳುವರಿ ತೆಗೆದಿದ್ದರೂ ಲಾಭದಾಯಕ ಪರಿಣಾಮ ದೊರೆತಿವೆಯಲ್ಲದೆ ರುಚಿಯಾದ, ಪುಷ್ಟಿಕರವಾದ ಆಹಾರ, ಹಣ್ಣು ತರಕಾರಿಗಳು ಜನರ ಮನಸ್ಸನ್ನು ಒಲಿಸಿವೆ. ಅಮೆರಿಕಾದಲ್ಲಿ ರೋಡೇಲ್ ಫಾರಂನಲ್ಲಿ ನಡೆದ ಸಂಶೋಧನೆ, ಲಿಸ (Low Input sustainable Agriculture-LISA) ಪ್ರಯತ್ನಗಳು, ಜಪಾನಿನಲ್ಲಿ ಪುಕುವೊಕಾ ತತ್ವ, ಮೊಕಿಚಿ ಒಕಡಾ ತತ್ವಾಧಾರಿತ ಕೃಷಿ ಪದ್ಧತಿಗಳು ರಾಸಾಯನಿಕ ಗೊಬ್ಬರ ಹಾಗೂ ಕೀಟನಾಶಕಗಳನ್ನು ಬಳಸದೆ, ಇಳುವರಿ ಮಟ್ಟವನ್ನು ಒಂದು ಸ್ಥಿರತೆಯಲ್ಲಿ ಕಾಪಾಡಿಕೊಂಡು ಬೇಸಾಯ ಮಾಡಬಹುದೆಂದು ನಂಬಿಕೆ ಹುಟ್ಟಿಸಿವೆ. ನಾಮ ಹಲವಾರು, ಆದರೆ ತತ್ವ ಒಂದೇ ಎನ್ನುವಂತೆ ಈ ವಿಧದ ಕೃಷಿಗೆ ನೈಸರ್ಗಿಕ ಕೃಷಿ, ಸಾವಯವ ಕೃಷಿ, ಉಳುಮೆ ಇಲ್ಲದ ಕೃಷಿ (ಪುಕುವೋಕ ತತ್ವ), ಕಡಿಮೆ ವೆಚ್ಚದ ಕೃಷಿ, ಮಿತವ್ಯಯದ ಕೃಷಿ (ಲೋ ಇನ್‌ಪುಟ್ ಅಗ್ರಿಕಲ್ಚರ್) ಹೀಗೆ ಹಲವು ಹತ್ತಾರು ಹೆಸರುಗಳು ರೂಢಿಗೆ ಬಂದಿವೆ.

ಕೆಲವರು ಸಾವಯವ ಕೃಷಿಯನ್ನು ಸಂಪ್ರದಾಯ ಕೃಷಿ ಎನ್ನುವರು, ಇದು ತಪ್ಪು. ಸಂಪ್ರದಾಯ ಕೃಷಿಯಲ್ಲಿ ರಾಸಾಯನಿಕ ವಸ್ತುಗಳನ್ನು ಬಳಸದಿದ್ದದ್ದು ನಿಜ. ಆದರೆ, ಸಾವಯವ ಕೃಷಿ ಕೇವಲ ರಾಸಾಯನಿಕ ವಸ್ತುಗಳು ವರ್ಜಿತವಾದದ್ದಲ್ಲ. ಸಾವಯವ ಕೃಷಿಯಲ್ಲಿ ಅಳವಡಿಸಬೇಕಾದ ವೈಜ್ಞಾನಿಕ ತತ್ವಗಳು ಆಧುನಿಕ ಬೇಸಾಯಕ್ಕಿಂತಲೂ ಕಠಿಣವಾದವು. ದಡ್ಡನ ಆರಂಭ ಗೊಬ್ಬರದಲ್ಲಿ ಅನ್ನುವ ಕಾಲ ಹಿಂದಿನ ಮಾತು. 'ಜ್ಞಾನಂ ಅನಂತಂ ಬ್ರಹ್ಮ' ಎನ್ನುವುದು ಇಂದಿನ ಮಾತು. ಬೇಸಾಯಗಾರ ಪ್ರಜ್ಞಾವಂತನಾಗಿದ್ದರೆ ಸಾವಯವ ಕೃಷಿ ಸಾಧ್ಯ. ಇಲ್ಲಿ ಸೋಮಾರಿತನಕ್ಕೆ ಎಡೆಯಿಲ್ಲ. ಬಿತ್ತನೆ, ಮಣ್ಣು, ನೀರು, ನಿರ್ವಹಣೆ, ಪೌಷ್ಟಿಕಾಂಶದ ಸಮತೋಲನ, ಸಸ್ಯ ಸಂರಕ್ಷಣೆ, ಕಟಾವಿನ ನಂತರ ಅನುಸರಿಸಬೇಕಾದ ನಿಯಮವೆಲ್ಲವನ್ನೂ ವೈಜ್ಞಾನಿಕವಾಗಿ ತಿಳಿದವನಿಗೆ ಮಾತ್ರ ನಿಜವಾದ ಸಾವಯವ ಕೃಷಿ ಸಾಧ್ಯ. ಇವೆಲ್ಲವೂ ಅಂಗಡಿಯಲ್ಲಿ ಕೊಳ್ಳುವ ವಸ್ತುಗಳಲ್ಲ. ಕೆಲವನ್ನು ಕೃಷಿಕನೇ ಸೃಷ್ಟಿಸಬೇಕಾಗುತ್ತದೆ. ಸಾವಯವ ಕೃಷಿ ಸ್ವಾವಲಂಬನೆಯುಳ್ಳದ್ದು. ಕೈ ಕೆಸರಾದರೆ ಬಾಯಿ ಮೊಸರಾಗುವುದು. ಗ್ರಾಮೀಣ ಪ್ರದೇಶದಲ್ಲಿ ಬಹುತೇಕ ಕೃಷಿಕರು ಅನಕ್ಷರಸ್ಥರು. ಓದು ಬರಹ ಇದ್ದವರೂ ಕೂಡ ಕೃಷಿ ತಂತ್ರಜ್ಞಾನ ಓದುವ ಕಡೆಗೆ ಗಮನ ಹರಿಸುವುದಿಲ್ಲ. ಆದ್ದರಿಂದ ಈ ಮೇಟಿ ವಿದ್ಯೆ 'ಆರಂಭದಲ್ಲೇ' ಇದೆ. ಬಹಳ ಜನ ರೈತರು ಅನುಕರಿಸುವವರೆ ಹೊರತು ಹೊಸ ಹೊಸ ಅನುಭವಗಳನ್ನು ಹೊರಚೆಲ್ಲುವವರಲ್ಲ. ಸಾವಯವ ಕೃಷಿ ಲಾಭದಾಯಕವಾಗಿ ಮನಸ್ಸಿಗೆ ಉಲ್ಲಾಸ ಕೊಡಬೇಕಾದರೆ, ಬೆಳೆಯ ಪ್ರತಿಯೊಂದು ಹಂತದಲ್ಲಿಯೂ ಏನು, ಏಕೆ, ಹೇಗೆ, ಯಾವಾಗ, ಯಾರು ಎಂಬ ಪ್ರಶ್ನೆಗಳು ಮೂಡುತ್ತಲಿರಬೇಕು. 'ವಿಜ್ಞಾನವಿಲ್ಲದ ಕೃಷಿ ಕುಂಟು, ಕೃಷಿಗಲ್ಲದ ವಿಜ್ಞಾನ ಕುರುಡು'.

ಸಾವಯವ ಕೃಷಿಯ ಮೂಲತತ್ವ ಭೂಮಿಯನ್ನು ಬಳಲಿಸದೆ ಬೇಸಾಯ ಮಾಡುವುದು. ನಮ್ಮ ದೇಶದ ಮನುಷ್ಯರಲ್ಲಿ ೮೦೦ಕ್ಕೂ ಹೆಚ್ಚು ಜಾತಿಗಳಿರುವಂತೆ, ಭೂಮಿಯಲ್ಲೂ ಕೂಡ ಹಲವಾರು ವಿಧದ ವಾಯುಗುಣಕ್ಕೆ ಹೊಂದಿಕೊಂಡು ಬಗೆ ಬಗೆಯಾದ ಮಣ್ಣುಗಳಿವೆ. ಫಲವತ್ತತೆ, ಜಲ, ಭೂಮಿಯ ಏರಿಳಿತ, ಗುಡ್ಡಗಾಡು, ಕಣಿವೆ ಕೊತ್ತಲು, ಸಮತಟ್ಟು, ಇಳಿಜಾರು, ತೀರ ಪ್ರದೇಶ, ಮುಂತಾದ ಬಗೆಗಳು ಇವೆ. ಇವನ್ನು ಸುಮಾರು ನೂರ ಇಪ್ಪತ್ತು ಅಗ್ರೋಕ್ಲೈಮ್ಯಾಟಿಕ್ ಜೋನ್‌ಗಳಾಗಿ ವಿಂಗಡಸಿದ್ದಾರೆ. ಇಷ್ಟೊಂದು ವೈವಿಧ್ಯಮಯವಾದ ನೆಲ, ಜಲ,ವಾಯು ಇರುವ ನಮ್ಮ ದೇಶದಲ್ಲಿ ಕೃಷಿ ಸಮಸ್ಯೆಗಳಿಗೆ ಎಲ್ಲಾ ಪ್ರದೇಶಕ್ಕೆ, ಎಲ್ಲಾ ಬೆಳೆಗೆ, ಎಲ್ಲಾ ಕಾಲಕ್ಕೆ ಅನುಗುಣವಾಗುವಂತಹ ಸೂಕ್ತವಾದ ಸಲಹೆ ಕೊಡುವುದು ಕಷ್ಟ. ನಮ್ಮ ದೇಶದ ಸುಮಾರು ೫೬೦ ಜಿಲ್ಲೆಗಳ ಪೈಕಿ, ೨೨೮ ಜಿಲ್ಲೆಗಳಲ್ಲಿ ಸಾರಜನಕದ ಕೊರತೆ, ೪೭ ಜಿಲ್ಲೆಗಳಲ್ಲಿ ಪೊಟ್ಯಾಶ್ ಕೊರತೆ ಮತ್ತು ೧೭೦ ಜಿಲ್ಲೆಗಳಲ್ಲಿ ರಂಜಕದ ಕೊರತೆಯಿದೆ. ಅಧಿಕ ಪ್ರಮಾಣದ ಸಾರಜನಕ, ರಂಜಕ, ಪೊಟಾಶ್ ಇರುವ ಜಿಲ್ಲೆಗಳು ಕ್ರಮವಾಗಿ ೧೮, ೧೭ ಮತ್ತು ೧೨೨. ಉಳಿದ ಜಿಲ್ಲೆಗಳಲ್ಲಿ ಮೂರು ಪೋಷಕಾಂಶಗಳು ಮಧ್ಯಮ ಪ್ರಮಾಣದಲ್ಲಿ ದೊರೆಯುತ್ತವೆ. ಆದುದರಿಂದ ಆಯಾ ಪ್ರದೇಶಕ್ಕೆ ಅಗತ್ಯವಿರುವ ಪೋಷಕಾಂಶಗಳನ್ನು

ಆ ಪ್ರದೇಶದ ಬೆಳೆಯನ್ನು ಆಧರಿಸಿ, ಸ್ಥಳೀಯವಾಗಿ ದೊರೆಯುವ ತ್ಯಾಜ್ಯ ವಸ್ತುಗಳನ್ನು (ಸಸ್ಯಜನ್ಯ ಮತ್ತು ಪ್ರಾಣಿಜನ್ಯ) ವೈಜ್ಞಾನಿಕವಾಗಿ ಕಾಂಪೋಸ್ಟ್ ಮಾಡಿ ಭೂಮಿಯ ಫಲವತ್ತತೆಯನ್ನು ಹೆಚ್ಚಿಸಬೇಕು.

ಆಧುನಿಕ ಬೇಸಾಯದಲ್ಲಿ ಹಲವಾರು ನ್ಯೂನತೆಗಳಿವೆಯೆಂದು ರೈತರು, ಕೃಷಿ ವಿಜ್ಞಾನಿಗಳು ಹಾಗೂ ವಿಸ್ತರಣೆ ಸಹಾಯಕರು ಮನಗಂಡಿದ್ದಾರೆ. ಹೆಚ್ಚಿನ ಸಾರಜನಕವಿರುವ ರಸಗೊಬ್ಬರ ಅಥವಾ ಪ್ರಾಣಿಜನ್ಯ ತ್ಯಾಜ್ಯವನ್ನು ಹೆಚ್ಚು ಹೆಚ್ಚು ಬಳಸಿದಾಗ ನೈಟ್ರೇಟ್ ಅಂಶವು ಹೆಚ್ಚಾಗಿ ಅಂತರ್ಜಲವನ್ನು ಸೇರಿ ಆರೋಗ್ಯಕ್ಕೆ ಹಾನಿಕಾರಕವಾಗಿ ಮಾರ್ಪಾಟಾಗುತ್ತದೆ. ಹೀಗೆಯೇ ಫಾಸ್ಫೇಟ್ ಅಂಶ ನೀರಿನಲ್ಲಿ ಸೇರಿ ಕೆರೆ ಕುಂಟೆಗಳಲ್ಲಿ ಜಲಚರ ಕಳೆಗಳು ವೃದ್ಧಿಯಾಗುತ್ತವೆ. ಕೀಟನಾಶಕ, ಕಳೆನಾಶಕಗಳು ಪ್ರತ್ಯಕ್ಷವಾಗಿಯಾಗಲಿ, ಪರೋಕ್ಷವಾಗಿಯಾಗಲಿ ನಮ್ಮ ಆಹಾರ ಕಲುಷಿತಗೊಳಿಸುತ್ತವೆ. ಜನ-ಜಾನುವಾರುಗಳ ಖಾಯಿಲೆ ನಿವಾರಣೆಗೆ ಹೆಚ್ಚು ಹೆಚ್ಚು ಔಷಧಿಗಳನ್ನು ಬಳಸಿದರೂ ನಿವಾರಣೆಯಾಗದಂತಹ, ಹಿಂದೆಂದೂ ಕಂಡರಿಯದಂತಹ ಖಾಯಿಲೆಗಳು ತಲೆದೋರುತ್ತಿವೆ. ದುಬಾರಿ ಕೃಷಿ ಪರಿಕರಗಳಿಂದಾಗಿ ವ್ಯವಸಾಯದಲ್ಲಿ ಖರ್ಚು ಮಾಡಿದ್ದನ್ನು ಭರಿಸಲಾಗದ ಸ್ಥಿತಿ ಮುಟ್ಟಿದೆ. ಹೆಚ್ಚು ಹೆಚ್ಚು ಇಳುವರಿ ತೆಗೆಯುವ ಆಸೆಯಲ್ಲಿ ನಷ್ಟವನ್ನು ಅನುಭವಿಸುವ ರೈತ ಹತಾಶನಾಗುತ್ತಿದ್ದಾನೆ. ಇವೆಲ್ಲವನ್ನು ಪರಿಗಣಿಸಿದಾಗ ಈಗಿರುವ ಕೃಷಿ ಪದ್ಧತಿಯಲ್ಲಿ ನಾವೆಲ್ಲೋ ಎಡವಿದ್ದೇವೆಯೆ ಎಂಬ ಸಂಶಯ ಬರುತ್ತದೆ. ಇಳುವರಿಯಲ್ಲಿ ಏರುಪೇರಾಗಿ ಸ್ಥಿರತೆ ಮಟ್ಟವನ್ನು ಮುಟ್ಟಲಾಗುತ್ತಿಲ್ಲ. ವ್ಯವಸಾಯ ವ್ಯಾಪಾರದ ಹಾಗೆ ಲಾಭದ ದೃಷ್ಟಿ ಒಂದೇ ಅಲ್ಲ, ಆರ್ಥಿಕವಾಗಿ ವ್ಯವಸಾಯ ಲಾಭದಾಯಕವಾಗುವುದರ ಜೊತೆಗೆ ಪರಿಸರಕ್ಕೂ ಸ್ಪಂದಿಸುವಂತಿರಬೇಕು. ಅನುಭವಸ್ಥ ರೈತರಿಗೆ, ಕಡಿಮೆ ವೆಚ್ಚದಲ್ಲಿ ಭೂಮಿ ಫಲವತ್ತತೆ ವೃದ್ಧಿಸುವ ಉಪಾಯಗಳು ಮನವರಿಕೆಯಾಗಿವೆ. ಬೇಸಾಯ ಭೂಮಿಯ ಮಣ್ಣಿನಲ್ಲಿ ಹಾಗೂ ಆಸುಪಾಸಿನಲ್ಲಿರುವ, ಕಣ್ಣಿಗೆ ಕಾಣುವ, ಕಾಣದಿರುವ ಅನೇಕ ಬಗೆಯ ಜೀವಜಂತುಗಳು ಸಮೃದ್ಧಿ ಬೇಸಾಯಕ್ಕೆ ಪೂರಕವೆನ್ನುವುದು ತಿಳಿದಿದೆ. ಆದರೆ ಪ್ರವಾಹದಲ್ಲಿ ಎಲ್ಲವೂ ತೇಲಿ ಹೋಗುವಂತೆ ರಾಸಾಯನಿಕ ಗೊಬ್ಬರ, ಸಸ್ಯ ಸಂರಕ್ಷಣೆ ಔಷಧಿ, ಅಧಿಕ ಇಳುವರಿ ಕೊಡುವ ಬೀಜ ಮುಂತಾದವುಗಳ ಮಾರಾಟಗಾರರ ಪ್ರವಾಹದಲ್ಲಿ ನುರಿತ ಅಲ್ಪಸ್ವಲ್ಪ ರೈತರು ತಲೆ ಎತ್ತಲು ತತ್ತರಿಸುತ್ತಿದ್ದಾರೆ. ರೈತನ ಕೃಷಿ ಸಮಸ್ಯೆಗಳಿಗೆಲ್ಲ, ರಾಸಾಯನಿಕ ಮೂಲದ ಪರಿಹಾರವಿದೆಯೆಂಬ ನಂಬಿಕೆ ಉದ್ಭವಿಸಿದೆ. ಮಣ್ಣಿನಲ್ಲಿ ಪೌಷ್ಟಿಕಾಂಶ ಕಡಿಮೆಯಾದರೆ ರಾಸಾಯನಿಕ ಗೊಬ್ಬರ ಹಾಕಿದರಾಯಿತು, ರೋಗ ರುಜಿನ ಬಂದರೆ ರಾಸಾಯನಿಕ ಔಷಧಿ ಹೊಡೆದರಾಯಿತು, ಮಣ್ಣಿನ ತೇವಾಂಶ ಕಡಿಮೆಯಾದರೆ ಆಳವಾಗಿ ಉತ್ತರಾಯಿತು- ಹೀಗೆ ಚಿಂತಿಸುವಾಗ ಪರ್ಯಾಯವಾಗಿ ಯೋಚಿಸುವ ಗೋಜಿಗೆ ಹೋಗುವುದಿಲ್ಲ.

ಮೂಲತಃ ಮಣ್ಣಿನ ಫಲವತ್ತತೆಗೆ ಸಾವಯವ ವಸ್ತು ಬಹುಮುಖ್ಯ. ಸಾಗುವಳಿ ಭೂಮಿಯಲ್ಲಿ ಸಾಮಾನ್ಯವಾಗಿ ತಲೆದೋರುವ ತೊಂದರೆಗಳೆಂದರೆ, ಸಮತೋಲನ ಪೌಷ್ಟಿಕಾಂಶವನ್ನು ಕಾಪಾಡುವುದು. ಮಣ್ಣಿನಲ್ಲಿ ಸಾಧ್ಯವಾದಷ್ಟು ದೀರ್ಘಕಾಲ ತೇವಾಂಶವನ್ನು ಹಿಡಿದಿಟ್ಟಿರುವುದು, ಬೆಳೆಗೆ ಬರುವ ರೋಗ ಕೀಟಬಾಧೆಗಳನ್ನು ನಿಗ್ರಹಿಸುವ ಶಕ್ತಿಯನ್ನು ತುಂಬುವುದು, ಮಣ್ಣಿನಲ್ಲಿ ಜೀವ ವೈವಿಧ್ಯತೆಯನ್ನು ಕಾಪಾಡುವುದು ಮುಂತಾದುವು. ಇವೆಲ್ಲವನ್ನೂ ಸಾಕಷ್ಟು ಸಾವಯವ ಗೊಬ್ಬರ ಬಳಸುವುದರಿಂದ ಪರಿಹರಿಸಲು ಸಾಧ್ಯವೆಂದು ಸಂಶೋಧನೆಯಿಂದ ಕಂಡುಬಂದಿದೆ. ಕೇವಲ ರಾಸಾಯನಿಕ ಗೊಬ್ಬರ, ಕೀಟನಾಶಕ, ಕಳೆನಾಶಕ ಬಳಕೆಯಿಂದ ಭೂಮಿಯನ್ನು ಸಜೀವಗೊಳಿಸಲು ಸಾಧ್ಯವಿಲ್ಲ. ಎಲ್ಲಿಯತನಕ ಭೂಮಿಯಲ್ಲಿ ಸಾಕಷ್ಟು ಸಾವಯವ ಪದಾರ್ಥ ಇರುವುದೋ, ಅಲ್ಲಿಯವರೆಗೆ ರಾಸಾಯನಿಕ ವಸ್ತುಗಳ ಅಗತ್ಯ ಕಾಣುವುದಿಲ್ಲ. ಸಾವಯವ ವಸ್ತು ಬರಿದಾದ ಮೇಲೆ ಭೂಮಿ ಬರಡಾಗುತ್ತದೆ. ಬರಡು ಭೂಮಿಯಲ್ಲಿ ಫಲವನ್ನು ಅಪೇಕ್ಷಿಸುವುದು ಬಂಜೆಯಲ್ಲಿ ಶಿಶುವನ್ನು ಅಪೇಕ್ಷಿಸಿದಂತೆ.

ಹದಿನೇಳನೇ ಶತಮಾನದಿಂದೀಚೆಗೆ ಮಣ್ಣಿನ ಫಲವತ್ತತೆಗೆ, ಸಾವಯವ ವಸ್ತುವಿಗೂ ಮಣ್ಣು ಜೀವಿಗಳಿಗೂ ಇರುವ ನಿಕಟ ಸಂಬಂಧ, ಫಲವತ್ತತೆ ಕಡಿಮೆಯಾದಂತೆಲ್ಲ ಮಣ್ಣಿಗೆ ಸಾವಯವ ಗೊಬ್ಬರ ಸೇರಿಸಿ ಉತ್ಪತ್ತಿಯನ್ನು ಹೆಚ್ಚಿಸಬಹುದೆಂದು ಅನುಭವದಿಂದ ತಿಳಿದಿದ್ದನ್ನು ಸಂಶೋಧನೆಯಿಂದ ದೃಢಪಡಿಸಲಾಗಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರತಿಪಾದಿಸಿದ ಚಾರ್ಲ್ಸ್ ಡಾರ್ವಿನ್‌ರವರ ಎರೆಹುಳುವಿನ (Earthworm) ಪಾತ್ರ ಮತ್ತು ಮಣ್ಣಿನ ಫಲವತ್ತತೆ ಎಂಬ ಲೇಖನಗಳು ಜನಸಾಮಾನ್ಯರೆಲ್ಲರಿಗೆ ಮಣ್ಣಿನ ಫಲವತ್ತತೆಗೆ ಸಾವಯವ ವಸ್ತುವಿನ ಮಹತ್ವದ ಬಗ್ಗೆ ಕಣ್ಣು ತೆರೆಸಿದವು. ಆದರೆ ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ರಾಸಾಯನಿಕ ಗೊಬ್ಬರ, ಕೀಟನಾಶಕ ಔಷಧಿ, ಕಳೆನಾಶಕ, ಕೃತಕ ಪೌಷ್ಟಿಕಾಂಶ ತಯಾರಕರೆಲ್ಲರ ಒಟ್ಟಾರೆ ಪ್ರಾಬಲ್ಯ ಹಾಗೂ ಇವುಗಳ ಮಾರಾಟಗಾರರ

ತಂತ್ರಗಳಿಂದ ಶತಮಾನಗಳಿಂದ ದೃಢಪಡಿಸಿದ್ದ ಸಾವಯವ ಕೃಷಿ ಪದ್ಧತಿ ಮೂಲೆಗುಂಪಾಯಿತು. ಕೇವಲ ಐವತ್ತು ವರ್ಷಗಳಲ್ಲಿ ರಸಗೊಬ್ಬರ, ರಾಸಾಯನಿಕ ಔಷಧಿಗಳ ಉಪಯೋಗದಿಂದ ಆದ ದುಷ್ಪರಿಣಾಮಗಳಿಂದಾಗಿ, ಕೃಷಿಕರಲ್ಲಿ ಸ್ವಸ್ಥಿರ ಕೃಷಿಯ ಬಗ್ಗೆ ಚಿಂತಿಸುವ ಪ್ರಯತ್ನ ಪ್ರಾರಂಭವಾಯಿತು. ಪುನಃ ಸಾವಯವ ಆಧಾರಿತ ಸುಸ್ಥಿರ ಕೃಷಿ ಪರಿಸರಪ್ರಿಯವೂ ಹೌದೆಂದು ಮನಗಾಣುವಂತಾಯಿತು.

ಪರಿಕರಗಳನ್ನು ಅಂಗಡಿಯಿಂದ ಕೊಂಡು ತಂದು ಹಾಕುವ ಪದ್ಧತಿ ರೂಢಿಗೆ ಬಂದ ಮೇಲೆ ನಮ್ಮ ಕೃಷಿಕರಲ್ಲಿ ಪರಂಪರೆಯಾಗಿ ಮೈಗೂಡಿಸಿಕೊಂಡು ಬಂದಿದ್ದ ಶ್ರಮಜೀವನ ಕಡಿಮೆಯಾಗಿ ಕ್ರಮೇಣ ಸೋಮಾರಿತನ ಆವರಿಸಿತು. ದನಕರುಗಳನ್ನು ಸಾಕಿ, ಸಗಣಿ ಸಂಗ್ರಹಿಸಿ, ಗೊಬ್ಬರ ಮಾಡುವ ಪದ್ಧತಿ ಕೆಲವರಲ್ಲಿ ಮಾತ್ರ ಉಳಿಯಿತು. ಹಸಿರೆಲೆ, ತರಗೆಲೆ, ಕಸಕಡ್ಡಿ ಸಂಗ್ರಹಿಸಿ ಕಾಂಪೋಸ್ಟ್ ಮಾಡುವುದು ಬಹಳ ಅಪರೂಪವಾಯಿತು. ಆಗಾಗ್ಗೆ ಹಸಿರೆಲೆ ಗೊಬ್ಬರ ಬೆಳೆಗಳನ್ನು ಬೆಳೆದು ಭೂಮಿಗೆ ಸೇರಿಸುವ ಪದ್ಧತಿ ಮರೆಯುತ್ತಾ ಬಂತು. ಕೊಯ್ಲು ಆದ ತಕ್ಷಣ ಅಳಿದುಳಿದ ಕೂಳೆ ಬೆಳೆಯುಳಿಕೆಗಳನ್ನು ಭೂಮಿಗೆ ಸೇರಿಸುವ ಮಾಗಿ ಉಳುಮೆ ಇಲ್ಲದಂತಾಯಿತು. ಮಳೆ ಬಂದ ಮೇಲೆ ಬಾಡಿಗೆಗೆ ಟ್ರಾಕ್ಟರೋ ನೇಗಿಲೋ ತಂದು ಒಂದೆರಡು ಉಳುಮೆ ಮಾಡಿ ಅಂಗಡಿಯಿಂದ ಬಿತ್ತನೆ, ಗೊಬ್ಬರ ತಂದು ಕೂಲಿ ಆಳು ಹಿಡಿದು ಬಿತ್ತನೆ ಮಾಡುವಂತಾಯಿತು. ಮುಯ್ಯಿ ಆಳು ಪದ್ಧತಿ, ಸಾಮೂಹಿಕ ಬೇಸಾಯ ಮರೆಯಾಯಿತು. ಬೆಲೆ ಹಂತ ನೋಡಿ ಕೀಟರೋಗ ಇರಲಿ ಇಲ್ಲದಿರಲಿ ದುಬಾರಿಯಾದ ಔಷಧಿಗಳನ್ನು ಅಂಗಡಿಯಿಂದ ತಂದು ಸಿಂಪಡಿಸುವ ಪದ್ಧತಿ ಪ್ರಾರಂಭವಾಯಿತು. ಕೊಯ್ಲಾದ ನಂತರ ಕಾಳು ಬೇರ್ಪಡಿಸಿ ಉಳಿದದ್ದನ್ನು ದನಕರುಗಳಿಗೆ ಸಂಗ್ರಹಿಸಿಡಬೇಕೆಂಬ ನಿಯಮವಿಲ್ಲ. ಹಿಂದೆಂದೂ ಇಲ್ಲದ ಬೆಲೆ ಬೆಳೆಗೆ ದೊರೆತರೂ ರೈತರಲ್ಲಿ ಸಾಲಗಾರರ ಸಂಖ್ಯೆ ಹೆಚ್ಚುತ್ತಲೇ ಇದೆ. ಕಾರಣ, ಬೇಸಾಯದ ಪ್ರತಿ ಹಂತದಲ್ಲೂ ಪರಿಕರಗಳಿಗೆ-ಕೂಲಿಗೆ ದುಬಾರಿ ಬೆಲೆ ತೆರುವುದರ ಜೊತೆಗೆ ಸಮತೋಲನ ಪೌಷ್ಟಿಕಾಂಶದ ಕೊರತೆಯಿಂದ ಇಳುವರಿ ಕಡಿಮೆಯಾದಾಗ ರೈತನಿಗೆ ಬರುವುದು ನಷ್ಟವೇ. ಬದಲಾಗಿ ತಾನು ಬಿತ್ತುವ ಬೀಜವನ್ನು ತಾನೇ ಸಂಗ್ರಹಿಸಿ, ಪೂರ್ಣ ಪ್ರಮಾಣದ ಗೊಬ್ಬರವನ್ನು ತಾನೇ ಉತ್ಪತ್ತಿ ಮಾಡಿ, ಅನಿವಾರ್ಯವಾಗಿ ತಲೆದೋರುವ ರೋಗರುಜಿನಗಳಿಗೆ ಸ್ಥಳೀಯವಾಗಿ ದೊರೆಯುವ ಉಪಾಯಗಳನ್ನು ಉಪಯೋಗಿಸಿ ಹತೋಟಿ ಮಾಡಿದರೆ ಇವೆಲ್ಲಕ್ಕೂ ತಗಲುವ ಖರ್ಚು ಉಳಿತಾಯವಾದದ್ದೇ ಲಾಭ. ಸಾವಯವ ಕೃಷಿಯ ಮೂಲ ಧ್ಯೇಯ ಅನಗತ್ಯ ಖರ್ಚುಗಳನ್ನು ಕಡಿಮೆ ಮಾಡುವುದು. ಸ್ಥಳೀಯವಾಗಿ ದೊರೆಯುವ ಸಂಪನ್ಮೂಲಗಳನ್ನು ಆಧರಿಸಿ, ಭೂಮಿಯ ಫಲವತ್ತತೆಯನ್ನು ಒಂದು ಗರಿಷ್ಠ ಹಂತದಲ್ಲಿ ಕಾಪಾಡಿಕೊಂಡು, ಮಣ್ಣು ನೀರು ನಿರ್ವಹಣೆ ಗಮನದಲ್ಲಿಟ್ಟುಕೊಂಡು, ಸಸ್ಯ ಸಂರಕ್ಷಣೆ ಮಾಡಲೇಬೇಕಾದಾಗ ಜೈವಿಕ ಅಥವಾ ದೇಶೀಯ ತಂತ್ರಜ್ಞಾನ ಉಪಯೋಗಿಸಿ, ಮಣ್ಣಿನೊಳಗೆ ಮತ್ತು ಮಣ್ಣಿನ ಮೇಲೆ ಇರುವ ಯಾವುದೇ ಜೀವಿಗೆ ತೊಂದರೆಯಾಗದಂತೆ ಮಾಡುವುದು ಸಾವಯವ ಕೃಷಿಯ ಮೂಲ ಉದ್ದೇಶ.

ಸಾವಯವ ಕೃಷಿಯಲ್ಲಿ ಮಣ್ಣು ಮತ್ತು ಸಾವಯವ ವಸ್ತು ಇವೆರಡರ ಸಂಬಂಧದಿಂದ ಆಗುವ ಕ್ರಿಯೆ, ಬೆಳೆಗಳ ಮೇಲೆ ಆಗುವ ದುಷ್ಪರಿಣಾಮದ ಬಗ್ಗೆ ಹೆಚ್ಚು ಗಮನ ಕೊಡಲಾಗುವುದು.

## ಸಾಂಪ್ರದಾಯಕ ಗೊಬ್ಬರ :

ಈ ದೇಶದಲ್ಲಿ ಪ್ರತಿ ದಿನ ಹೊರಬೀಳುವ ಸಸ್ಯಜನ್ಯ, ಪ್ರಾಣಿಜನ್ಯ (ಮನುಷ್ಯರ ಮಲಮೂತ್ರವೂ ಸೇರಿದಂತೆ) ತ್ಯಾಜ್ಯ ವಸ್ತು ಹೇರಳ. ಒಂದು ಅಂದಾಜಿನ ಪ್ರಕಾರ ವರುಷದಲ್ಲಿ ಸುಮಾರು ೨೦೦೦ ಮಿಲಿಯನ್ ಟನ್ ತ್ಯಾಜ್ಯವಸ್ತು ಹೊರಬೀಳುತ್ತದೆ. ಇದೆಲ್ಲ ಕೊಳೆತು, ಕರಗಿ, ಕಳಿತಾಗ ಸಾವಯವ ಗೊಬ್ಬರವಾಗುತ್ತದೆ. ಹೊರಗಿನಿಂದ ನಮ್ಮ ದೇಶಕ್ಕೆ ಬರುವವರಿಗೆ ಮೊದಲು ಕಾಣುವುದು ಎಲ್ಲೆಲ್ಲೂ ಕೊಳಕು ನಾರುತ್ತಿರುವ ಹೇಸಿಗೆ. ಆದರೆ ಕೃಷಿಕರು ನೋಡಬೇಕಾದ್ದು ಇದರಲ್ಲಿರುವ ರಸ. ವ್ಯವಸ್ಥಿತ ರೀತಿಯಲ್ಲಿ ಇದೆಲ್ಲವನ್ನು ಸಂಗ್ರಹಿಸಿ ಕಾಂಪೋಸ್ಟ್ ಮಾಡಿದಾಗ ಅತ್ಯುತ್ತಮ ಸಾವಯವ ಗೊಬ್ಬರವಾಗುತ್ತದೆ. ಭೋಗವಿಲ್ಲದೆ ಬಳಲುತ್ತಿರುವ ನಮ್ಮ ಭೂಮಿಗೆ ವರದಾನವಾಗುವುದು.

ಒಮ್ಮೆ ಬಾಟ ಕಂಪನಿಯವರು ಆಫ್ರಿಕಾ ದೇಶದಲ್ಲಿ ಪಾದರಕ್ಷೆಗಳ ಬೇಡಿಕೆ ಹೇಗಿದೆಯೆಂದು ಅಧ್ಯಯನ ಮಾಡಲು ಇಬ್ಬರನ್ನು ಕಳುಹಿಸಿದರಂತೆ. ಒಬ್ಬ ಈ ದೇಶದಲ್ಲಿ ಯಾರೂ ಪಾದರಕ್ಷೆ ಉಪಯೋಗಿಸುತ್ತಿಲ್ಲ, ಬೇಡಿಕೆಯೇ ಇಲ್ಲ ಎಂದರೆ, ಮತ್ತೊಬ್ಬ ಅಗಾಧವಾದ

ಬೇದಿಕೆ ಇವೆ, ಕೂಡಲೇ ವ್ಯವಸ್ಥೆ ಮಾಡಬೇಕು ಎಂದು ಹೇಳಿದನಂತೆ. ಅಂತೆಯೇ ನಮ್ಮ ದೇಶದಲ್ಲಿ ಕೆಲವರು ಕೊಳಕನ್ನೇ ನೋಡುವವರಿದ್ದರೆ, ಮತ್ತೆ ಕೆಲವರು ಅದರಲ್ಲಿ ಸಂಪತ್ತನ್ನೂ ನೋಡುವವರು ಇದ್ದಾರೆ. ಈ ಕಸವನ್ನು ರಸವನ್ನಾಗಿ ಪರಿವರ್ತಿಸಲು ಅಗಾಧವಾದ ಶ್ರಮ ಬೇಕಿಲ್ಲ. ಆಳವಾದ ಗಣಿಯಿಂದ ಕಲ್ಲು ಮೇಲೆತ್ತಿ ಕುಟ್ಟಿ ಪುಡಿಮಾಡಿ ಅದರಲ್ಲಿರುವ ಅತಿ ಅಲ್ಪ ಪ್ರಮಾಣದ ಚಿನ್ನವನ್ನು ಕಷ್ಟಪಟ್ಟು ತೆಗೆಯುತ್ತಿರುವ ನಾವು ನಮ್ಮ ಕಣ್ಣು ಮುಂದೆ ಇರುವ ಕಸವನ್ನು ರಸವನ್ನಾಗಿ ಮಾಡಿದರೆ ಭೋಗವಿಲ್ಲದ ಭೂಮಿಯ ಫಲವತ್ತತೆಯನ್ನು ಸುಲಭವಾಗಿ ಹೆಚ್ಚಿಸಬಹುದು. ನಮಗೆ ಲಭ್ಯವಿರುವ ವಿವಿಧ ಮೂಲದ ಸಾವಯವ ವಸ್ತುಗಳನ್ನು ಪರಿಶೀಲಿಸಿದರೆ ಸಾಕಷ್ಟು ಗೊಬ್ಬರ ದೊರೆಯುವ ಅರಿವು ಮೂಡುವುದು. (Our wealth is in our filth).

## ದನಿನ ಗೊಬ್ಬರ :

ದನಿನ ಗೊಬ್ಬರ (ಗ್ರಾಮ್ಯ ಭಾಷೆ) ಅಂದರೆ ಸಾಕು ಪ್ರಾಣಿಗಳ ಮಲ ಮೂತ್ರ ಶೇಖರಿಸಿದ್ದು. ದನಗಳು ಅಥವಾ ಜಾನುವಾರುಗಳು ಅಂದರೆ ಹಸು, ಎಮ್ಮೆ, ಎತ್ತು, ಕೋಣ, ಹಂದಿ, ಕುರಿ, ಮೇಕೆ ಮುಂತಾದವುಗಳ ಸಮೂಹಕ್ಕೆ ದನಗಳು ಮತ್ತು ಅವುಗಳ ಮಲಮೂತ್ರಕ್ಕೆ ದನಿನ ಗೊಬ್ಬರವೆಂದು ಹೇಳುವ ರೂಢಿ. ಇತ್ತೀಚೆಗೆ ಕೋಳಿ ಸಾಕಾಣಿಕೆ ಬೃಹತ್ ಪ್ರಮಾಣದಲ್ಲಿ ನಡೆಯುವುದರಿಂದ ಕೋಳಿಗೊಬ್ಬರ, ದನಿನ ಗೊಬ್ಬರದ ಒಂದು ಭಾಗವಾಗಿ ಪರಿಗಣಿಸಲಾಗಿದೆ.

ಪುರಾತನ ಕಾಲದಿಂದಲೂ ವ್ಯವಸಾಯ ಮತ್ತು ಹೈನುಗಾರಿಕೆ ಒಂದೇ ನಾಣ್ಯದ ಎರಡು ಮುಖಗಳಂತೆ ಇದ್ದವು. ಕಳೆದ ಶತಮಾನದ ಉತ್ತರಾರ್ಧದಲ್ಲಿ ಆದ ವಿಜ್ಞಾನ ತಂತ್ರಜ್ಞಾನದ ಕ್ರಾಂತಿಯ ಬಿಸಿ ಕೃಷಿ ಮತ್ತು ಪಶುಪಾಲನೆಗೂ ತಗುಲಿತು. ಪ್ರಪಂಚಾದ್ಯಂತ ಕೃಷಿ ಮತ್ತು ಪಶುಪಾಲನೆ ಒಂದು ಜೀವನ ಶೈಲಿಯಾಗಿದ್ದದ್ದು ಈಗ ಒಂದು ಬಗೆಯ ವ್ಯಾಪಾರಕ್ಕೆ ತಿರುಗಿತು. ಪ್ರತಿ ಸಂಸಾರಕ್ಕೆ ಅಥವಾ ಆ ಪ್ರದೇಶಕ್ಕೆ ಬೇಕಿದ್ದ ಅವಶ್ಯ ವಸ್ತುಗಳನ್ನೆಲ್ಲ ಸ್ಥಳೀಯವಾಗಿ ಉತ್ಪತ್ತಿ ಮಾಡಿ ಹತ್ತಿರದ ಊರು ಪಟ್ಟಣಗಳಲ್ಲಿ ಮಾರಿ ಅಥವಾ ವಿನಿಮಯ ಮಾಡಿಕೊಂಡು ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿದ್ದರು. ಈಗ ಕಾರ್ಖಾನೆಗಳಲ್ಲಿ ವಸ್ತುಗಳನ್ನು ಹೇರಳವಾಗಿ ಉತ್ಪಾದಿಸಿ ದೇಶ ವಿದೇಶಗಳಿಗೆ ಕಳುಹಿಸುವಂತೆ ಆಹಾರ ಪದಾರ್ಥ, ಹಾಲು, ಮೊಟ್ಟೆ, ಮಾಂಸ, ಮೀನು ಮುಂತಾದುವನ್ನು ಒಂದು ಕಡೆ ಉತ್ಪತ್ತಿ ಮಾಡಿ ಮತ್ತೊಂದೆಡೆಗೆ ಕಳುಹಿಸುವ ಪ್ರವೃತ್ತಿ ಬೆಳೆದಿದೆ. ದೇಶಕ್ಕೆಲ್ಲ ಪೂರೈಸಿ ಹೊರದೇಶಗಳಿಗೂ ಕಳುಹಿಸುವಷ್ಟು ಗೋಧಿಯನ್ನು ಪಂಜಾಬ್, ಹರಿಯಾಣ, ಉತ್ತರ ಪ್ರದೇಶದಲ್ಲಿ ಬೆಳೆಯಲಾಗುತ್ತಿದೆ. ಹಿಮಾಚಲದ ಸೇಬು, ಕರ್ನಾಟಕದ ಕಾಫಿ,ಮಹಾರಾಷ್ಟ್ರ-ಗುಜರಾತಿನ ಹತ್ತಿ, ಅಸ್ಸಾಮಿನ ಟೀ ಮುಂತಾದ ಬೆಳೆಗಳಿಗೆ ಬೇಕಿರುವ ಗೊಬ್ಬರ, ದೂರದ ಅಥವಾ ಹೊರದೇಶದ ಗೊಬ್ಬರ ಕಾರ್ಖಾನೆಯಲ್ಲಿ ತಯಾರಾದ ರಸಗೊಬ್ಬರ ಬಿಟ್ಟರೆ ಬೇರೆ ಮಾರ್ಗವೇ ಇಲ್ಲವೆಂಬ ನಂಬಿಕೆ ಉಂಟಾಗಿದೆ. ಈ ಬೆಳೆಗಾರರಿಗೆ ಸಾವಯವ ಗೊಬ್ಬರ ಸರಬರಾಜು ದುಸ್ತರವಾದದ್ದೆಂದು ಮತ್ತು ಸಾವಯವ ಗೊಬ್ಬರವನ್ನೇ ನಂಬಿಕೊಂಡರೆ ಇಳುವರಿ ಕುಂಠಿತವಾಗುವುದೆಂಬ ನಂಬಿಕೆ ಅಚಲವಾದಂತೆ ಕಾಣುತ್ತದೆ. ಇದರೊಂದಿಗೆ ರಾಸಾಯನಿಕ ಗೊಬ್ಬರ ತಯಾರಕರು ಬೆಳೆಗಾರರನ್ನು ತಿರಸ್ಕರಿಸುವ ಮಟ್ಟಕ್ಕೆ ಮುಟ್ಟಿದೆ. ರಸಗೊಬ್ಬರವೊಂದನ್ನೇ ಅವಲಂಬಿಸಿಕೊಂಡರೆ ಭೂಮಿಯು ನಿರ್ಜೀವವಾಗುವುದೆಂದು ಬಹಳ ಜನಕ್ಕೆ ತಿಳಿಯದು.

ಸುಮಾರು ೧೯೫೦ ದಶಕದಲ್ಲಿ ಅಮೆರಿಕೆಯ ಪೀಸ್ ಕೋರ್‌ನವರು ರಸಗೊಬ್ಬರದ ಬಳಕೆಯನ್ನು ಪ್ರಚಾರ ಮಾಡುತ್ತಿರುವಾಗ ನಮ್ಮ ಖುಷ್ಕಿ ಬೇಸಾಯಗಾರರು'ಉಪ್ಪು' ಹಾಕಿದರೆ ಬೆಳೆ ಸುಟ್ಟು ಹೋಗುತ್ತದೆಯೆಂಬ ನಂಬಿಕೆಯಿಂದ ತಿರಸ್ಕರಿಸುತ್ತಿದ್ದರು. ಕ್ರಮೇಣ ಕೂತಲ್ಲಿ ನಿಂತಲ್ಲಿ ಹೋದಲ್ಲಿ ಬಂದಲ್ಲಿ ಈ ರಸಗೊಬ್ಬರ ಪ್ರಚಾರದ ಅಬ್ಬರ ಇವರನ್ನು ಅತ್ತ ಮನ ಒಲಿಸುವಂತೆ ಮಾಡಿತು. ಮೊದಮೊದಲು ರಸಗೊಬ್ಬರ ಉಪಯೋಗಿಸಿದಾಗ ಹಿಂದೆಂದೂ ಕಾಣದ ಇಳುವರಿ ಬಂತು. ಹೆಚ್ಚು ಹೆಚ್ಚು ಉಪಯೋಗಿಸಿದಂತೆ ಅನುಪಾತವಾಗಿ ಇಳುವರಿ ಹೆಚ್ಚಲಿಲ್ಲ. ಬದಲಾಗಿ ಕೀಟರೋಗ ಬಾಧೆಗಳು ಹಿಂದೆಂದೂ ಕಂಡರಿಯದ ಮಟ್ಟ ಮುಟ್ಟಿದವು. ಕಳೆದ ೫೦ ವರುಷಗಳಿಂದ ಸಾವಯವ ಗೊಬ್ಬರ ಹಾಕುವ ಪ್ರವೃತ್ತಿ ಕ್ರಮೇಣ ಕ್ಷೀಣಿಸಿ ಈಗ ಮರತೇಹೋಯಿತು ಎನ್ನುವ ಮಟ್ಟ ಮುಟ್ಟಿದೆ. ಇವಕ್ಕೆ ಸರ್ಕಾರದ ನಿಲುವು, ಕೃಷಿ ವಿಜ್ಞಾನಿಗಳು ಇಳುವರಿ ಹೆಚ್ಚಿಸಲು ರಸಗೊಬ್ಬರದ ಬಳಕೆಗೆ ಒತ್ತು ಕೊಟ್ಟ ಸಂಶೋಧನೆ, ರೈತರಲ್ಲಿ ಹೆಚ್ಚುತ್ತಿರುವ ಸೋಮಾರಿತನ ಎಲ್ಲವೂ ಒಟ್ಟಾಗಿ ಸಾವಯವ ಗೊಬ್ಬರದ ಬಳಕೆ ಕಡಿಮೆಯಾಗುತ್ತಿದೆ. ಮಣ್ಣಿನ ಫಲವತ್ತತೆ ಹೆಚ್ಚಿಸಲು ಮಣ್ಣಿನೊಳಗೆ ಜೀವವೈವಿಧ್ಯತೆ ಕಾಪಾಡಲು ಅನುಸರಿಸಬೇಕಾದ ಕ್ರಮಗಳು ಮತ್ತು ಅದಕ್ಕೆ ಬೇಕಾಗಿರುವ ಮೂಲವಸ್ತು ಸಾವಯವ ಗೊಬ್ಬರ ತಯಾರಿಕೆ ಮರೆತೇಹೋದಂತಿದೆ. ಬಹುಶಃ ಸಾವಯವ ಕೃಷಿ ಪದ್ಧತಿ ಪುನಶ್ಚೇತನಗೊಳ್ಳಲು ಇನ್ನೂ ಹತ್ತಾರು ವರುಷಗಳಾದರೂ

ಬೇಕು. ಕಳೆದ ೫೦ ವರುಷಗಳಿಂದ ವ್ಯವಸಾಯದಲ್ಲಿ ಉಪಯೋಗಿಸಿರುವ ರಸಾಯನಿಕ ವಸ್ತುಗಳ ದುಷ್ಪರಿಣಾಮದ ಅರಿವು ಈಗ ಅಲ್ಲಲ್ಲಿ ಕಾಣಿಸಿಕೊಳ್ಳುತ್ತಿದೆ. ಡಿ.ಡಿ.ಟಿ. ಹೊಸದಾಗಿ ಮಾರುಕಟ್ಟೆಗೆ ಬಂದಾಗ ಇದೊಂದು 'ರಾಮಬಾಣ' ವೆಂದು ಪರಿಗಣಿಸಿದ್ದರು. ಇನ್ನು ಮುಂದೆ ಯಾವುದೇ ಕೀಟಬಾಧೆಗೆ ಹೆದರಬೇಕಿಲ್ಲವೆಂಬ ಹುಸಿ ನಂಬಿಕೆ ಹುಟ್ಟಿತು. ಇದನ್ನು ಕಂಡುಹಿಡಿದ ಸ್ವಿಸ್ ಕೀಟಶಾಸ್ತ್ರಜ್ಞ ಪಾಲ್ ಮುಲ್ಲರ್‌ಗೆ ೧೯೪೮ ರಲ್ಲಿ ನೋಬೆಲ್ ಪಾರಿತೋಷಕವೂ ದೊರೆಯಿತು. ಆದರೆ ಇದನ್ನು ಉಪಯೋಗಿಸಿದ ಎರಡು ದಶಕಗಳಲ್ಲಿ ಡಿ.ಡಿ.ಟಿ.ಯ ದುಷ್ಪರಿಣಾಮ ತಲೆದೋರಲು ಪ್ರಾರಂಭಿಸಿತು. 'ಸೈಲೆಂಟ್ ಸ್ಪಿಂಗ್' (Silent spring) ಎಂಬ ಪುಸ್ತಕವನ್ನು ರಾಖಿಲ್ ಕಾರ್ಸನ್‌ರವರು (Rachel Carson, 1907-1964) 1962ರಲ್ಲಿ ಬರೆದಾಗ, ಅದರಲ್ಲಿ ಡಿ.ಡಿ.ಟಿ.ಯ ವಿಷಚಕ್ರ ವರ್ಣಿಸಿರುವುದನ್ನು ಒಂದು ಕಟ್ಟುಕತೆಯೆಂದು ಡಿ.ಡಿ.ಟಿ. ತಯಾರಕರು ಬಣ್ಣಿಸಿದರು. ಆದರೆ ಆದದ್ದೇನು? ಮುಂದಿನ ಎರಡು ದಶಕದಲ್ಲಿ ಪ್ರಪಂಚದಾದ್ಯಂತ ಡಿ.ಡಿ.ಟಿ.ಯನ್ನು ಬಹಿಷ್ಕರಿಸಬೇಕಾಯಿತು. ಹೀಗೆ ಕೃಷಿಯಲ್ಲಿ ಬಳಸುವ ಎಲ್ಲ ರಾಸಾಯನಿಕ ವಸ್ತುಗಳ ವಿಷಸಂಕಲೆ ಒಂದಲ್ಲ ಒಂದು ದಿನ ಹೊರಬೀಳುವುದು. ಅಷ್ಟರಲ್ಲಿ ಎಷ್ಟೋ ಮಣ್ಣಿನಲ್ಲಿರುವ ಮುಗ್ಧ ಜೀವಿಗಳ ಬಲಿದಾನವಾಗಿರುವುದು.

ನಮ್ಮ ದೇಶದಲ್ಲಿ ಬೇಸಾಯಕ್ಕೆ ಒಳಪಟ್ಟಿರುವ ಜಮೀನಿನ ವಿಸ್ತೀರ್ಣ ಸುಮಾರು ೧೫೦ ಮಿಲಿಯನ್ ಹೆಕ್ಟೇರ್‌ಗಿಂತ ಅಧಿಕ. ಇದಕ್ಕೆಲ್ಲ ಆಗುವಷ್ಟು ಸಾವಯವ ಗೊಬ್ಬರ ಒದಗಿಸಲು ಸಾಧ್ಯವೆ ಎಂಬ ಶಂಕೆ ಬುದ್ಧಿಜೀವಿಗಳನ್ನೂ ಬಿಟ್ಟಿಲ್ಲ. ನಮ್ಮ ದೇಶದ ಜನಸಂಖ್ಯೆ ಪ್ರಪಂಚದ ಜನಸಂಖ್ಯೆಯ ಹದಿನಾರನೇ ಒಂದರಷ್ಟಿದೆ. ಜಾನುವಾರುಗಳ ಸಂಖ್ಯೆಯೂ ಪ್ರಪಂಚದ ಒಟ್ಟು ಸಂಖ್ಯೆಯ ಹದಿನೈದನೇ ಒಂದರಷ್ಟಿದೆ. ಪ್ರಾಯಕ್ಕೆ ಬಂದ ಒಂದು ಸಾಮಾನ್ಯ ಆಕಳಿಂದ ಪ್ರತಿದಿನ ೧೦-೧೫ ಕೆ.ಜಿ.ಸಗಣಿ, ೩-೪ಲೀಟರ್ ಗಂಜಲ ದೊರೆಯುತ್ತದೆ. ನಮ್ಮ ದೇಶದಲ್ಲಿ ಪ್ರತಿ ವರುಷ ದೊರೆಯುವ ದನಿನ ಗೊಬ್ಬರ ಮತ್ತು ಮೂತ್ರ ಪ್ರಮಾಣ ಸುಮಾರು ೨,೦೦೦ ಮಿಲಿಯನ್ ಟನ್ ಎಂದು ಅಂದಾಜು ಮಾಡಲಾಗಿದೆ. ಇದರ ಜೊತೆಯಲ್ಲಿ ವ್ಯವಸಾಯ ಕ್ಷೇತ್ರದಲ್ಲಿ ದೊರೆಯುವ ತ್ಯಾಜ್ಯ ವಸ್ತುವಿನ ಪ್ರಮಾಣ ಸುಮಾರು ೭೦೦ ಮಿಲಿಯನ್ ಟನ್. ಇವುಗಳೆಲ್ಲದರ ಒಟ್ಟು ಪೋಷಕಾಂಶಗಳು ಈಗ ನಾವು ಉಪಯೋಗಿಸುತ್ತಿರುವ ೧೫-೨೦ ಮಿಲಿಯನ್ ಟನ್ ರಾಸಾಯನಿಕ ಗೊಬ್ಬರದ ಪೋಷಕಾಂಶಗಳಿಗಿಂತ ಹಲವಾರು ಪಟ್ಟು ಹೆಚ್ಚಿನದಾಗಿದೆ. ಆದರೆ ನಮ್ಮ ನಿರ್ಲಕ್ಷ್ಯದಿಂದ, ಅಸಡ್ಡೆಯಿಂದ ಅಥವಾ ದಡ್ಡತನದಿಂದ ಅಮೂಲ್ಯವಾದ ಸಾವಯವ ವಸ್ತುವನ್ನು ಪೋಲು ಮಾಡುತ್ತಿದ್ದೇವೆ. ದನಗಳ ಸಗಣಿಯನ್ನು ಬೆರಣಿ ಮಾಡಿ ಸುಡುತ್ತೇವೆ. ಹೊಲಗದ್ದೆಗಳಲ್ಲಿ, ಪಟ್ಟಣ ಪ್ರದೇಶದಲ್ಲಿ, ಕಾಡು ಮೇಡುಗಳಲ್ಲಿ ದೊರೆಯುವ ತ್ಯಾಜ್ಯ ವಸ್ತುವನ್ನು ಸುಟ್ಟು ಹಾಳು ಮಾಡುತ್ತಿದ್ದೇವೆ. ಇಲ್ಲವೇ ಪ್ರಯೋಜನಕ್ಕೆ ಬಾರದ ರೀತಿಯಲ್ಲಿ ವಿತರಿಸುತ್ತಿದ್ದೇವೆ. ಕೊಟ್ಟಿಗೆ ಗೊಬ್ಬರ, ದನಿನ ಗೊಬ್ಬರವನ್ನು ಸರಿಯಾದ ಪ್ರಮಾಣದಲ್ಲಿ ಬೇರೆ ಸಾವಯವ ವಸ್ತುಗಳೊಂದಿಗೆ ಬೆರೆಸಿ ಕಾಂಪೋಸ್ಟ್ ಮಾಡಿದರೆ ಅದರ ಪ್ರಮಾಣವನ್ನು ನಾಲ್ಕು ಪಟ್ಟು ಹೆಚ್ಚಿಸಬಹುದು. ಇದರ ಪೌಷ್ಠಿಕಾಂಶದ ಪ್ರಮಾಣ ಕನಿಷ್ಟ ಶೇಕಡ ೦.೫ ರಿಂದ ೧.೦ ಇದ್ದರೂ ಅಂದಾಜಿಗೆ ಎಟುಕದಷ್ಟು ದೊರೆಯುವುದು.

ಕಳೆದ ೫೦ ವರುಷದಲ್ಲಿ ವ್ಯವಸಾಯ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನೆಗಳು ನಡೆದಿರುವುದು, ಯಾವ ಬೆಳೆಗೆ ಯಾವ ಹಂತದಲ್ಲಿ, ಎಷ್ಟು ಪ್ರಮಾಣದ ರಸಾಯನಿಕ ಗೊಬ್ಬರ ಹಾಕಿದರೆ ಎಷ್ಟು ಹೆಚ್ಚು ಇಳುವರಿ ಪಡೆಯಬಹುದೆಂದು ಗುರುತಿಸಲು, ದೇಶದ ಎಲ್ಲ ಕೃಷಿ ಸಂಶೋಧನಾ ಕ್ಷೇತ್ರಗಳಲ್ಲಿ, ಕೃಷಿ ವಿಶ್ವವಿದ್ಯಾನಿಲಯಗಳಲ್ಲಿ ಹಾಗೂ ಕೃಷಿ ಇಲಾಖೆಗಳಲ್ಲಿ, ಬೆಳೆಗಳಿಗೆ ಬೇಕಾಗುವ ರಾಸಾಯನಿಕ ಗೊಬ್ಬರದ ಪ್ರಮಾಣ ಹಾಗೂ ಅವುಗಳನ್ನು ಹಾಕುವ ಹಂತದ ದೊಡ್ಡ ಪಟ್ಟಿಯನ್ನು ಪ್ರದರ್ಶಿಸಿರುತ್ತಾರೆ. ಆದರೆ ಅದರ ಜೊತೆಯಲ್ಲಿ ಸಾವಯವ ಗೊಬ್ಬರದ ಪ್ರಮಾಣ ಮತ್ತು ಅದರ ಅವಶ್ಯಕತೆಯನ್ನು ವಿವರಿಸಿರುವ ವಿವರಗಳು ದೊರೆಯುವುದು ದುರ್ಲಭ. ಅನೇಕ ವೇಳೆ ಬಹುತೇಕ ಬೆಳೆಗಳಿಗೆ ಈ ಅಂಶವನ್ನು ತಿಳಿಯಪಡಿಸಿರುವುದೇ ಇಲ್ಲ. ಬಹುಶಃ ವಿಜ್ಞಾನಿಗಳ ಅನಿಸಿಕೆಯಲ್ಲಿ ರೈತರೆಲ್ಲರೂ ಕಡ್ಡಾಯವಾಗಿ ಸಾವಯವ ಗೊಬ್ಬರ ಹಾಕುತ್ತಾರೆಂಬ ನಂಬಿಕೆಯಿಂದ, ಅದರ ಬಗ್ಗೆ ಮಾಹಿತಿ ಬೇಕಿಲ್ಲವೆಂದಿರಬಹುದು. ವಸ್ತುಸ್ಥಿತಿಯಲ್ಲಿ ಈ ಗ್ರಹಿಕೆ ತಪ್ಪು. ಸಣ್ಣ ಹಿಡುವಳಿದಾರರು, ಅಂದರೆ ನಮ್ಮ ದೇಶದ ಶೇಕಡ ೬೫ ರಷ್ಟು ಹಿಡುವಳಿದಾರರು ಜಾನುವಾರುಗಳನ್ನು ಇಡುವ ಸ್ಥಿತಿಯಲ್ಲಿಲ್ಲ. ಕೊಂಡು ಹಾಕುವುದಂತೂ ಇವರ ಪಾಲಿಗೆ ದುಸ್ಸಾಧ್ಯ. ಸರ್ಕಾರದ ಅನುದಾನದಿಂದ ಅಷ್ಟಿಷ್ಟು ರಾಸಾಯಮಿಕ ಗೊಬ್ಬರ ಹಾಕಿದರೆ ಹೆಚ್ಚು. ನಮ್ಮ ದೇಶದ ಹಲವಾರು ಬೆಳೆಗಳ ಎಕರೆವಾರು ಇಳುವರಿ ಪ್ರಪಂಚದಲ್ಲೇ ಕನಿಷ್ಟವೆಂದು ಪರಿಗಣಿಸಿದ್ದಾರೆ. ಅದರ ಮೂಲ ನಮ್ಮ ಸಾಗುವಳಿ ಭೂಮಿಯ ಪೌಷ್ಠಿಕಾಂಶದ ಕೊರತೆ. ಹಸಿರು ಕ್ರಾಂತಿ ಕೇವಲ ಶೇಕಡಾ ೩೦ ರಷ್ಟು ನೀರಾವರಿಗೆ ಒಳಪಟ್ಟಿರುವ ಜಮೀನಿಗೆ ಸೀಮಿತವಾಯಿತೇ ಹೊರತು,ಉಳಿದ ಶೇಕಡಾ ೭೦ ರಷ್ಟು ಮಳೆ ಆಶ್ರಿತ ಜಮೀನಿಗೆ ಗಮನ ಹರಿಸಲಿಲ್ಲ.

ಈ ಪ್ರದೇಶದ ಜನಸಂಖ್ಯೆಯ ಹೆಚ್ಚಿನ ಭಾಗ ಬಡತನ ರೇಖೆಯ ಕೆಳಗಿರುವುದು ಜಮೀನಿನ ಹಸಿವಿನಿಂದ. ಈ ಜಮೀನಿನ ನೀರಡಿಕೆ ಎಷ್ಟು ದುರ್ಭರವೋ, ಅಷ್ಟೇ ಪೌಷ್ಠಿಕಾಂಶದ ಕೊರತೆಯಿಂದ ಹಸಿವೂ ಕೂಡ. ಸಾವಯವ ವಸ್ತು ಹೆಚ್ಚು ಇರುವ ಭೂಮಿಯಲ್ಲಿ ಪೌಷ್ಠಿಕಾಂಶ ಹೆಚ್ಚಿರುವುದಲ್ಲದೆ ತೇವಾಂಶವನ್ನು ಹಿಡಿದಿಡುವ ಶಕ್ತಿಯೂ ಇರುತ್ತದೆ.

ಯಾವುದೇ ಪ್ರದೇಶದ ಬೇಸಾಯ ಭೂಮಿಯಲ್ಲಿ ಸಾವಯವ ವಸ್ತುವಿನ ನಿಗದಿತ ಪ್ರಮಾಣ ಇಷ್ಟೇ ಇರಬೇಕೆಂಬ ನಿಬಂಧನೆಯಾಗಲೀ ಅಥವಾ ಒಳ್ಳೆಯ ಇಳುವರಿಗೆ ಬೇಕಾಗಿರುವ ಪ್ರಮಾಣವೆಷ್ಟೆಂದಾಗಲೀ ತಿಳಿಯದು. ಆದರೆ ಸಾವಯವ ವಸ್ತು ಕಡಿಮೆಯಾದಂತೆಲ್ಲ ಇಳುವರಿ ಕುಂಠಿತವಾಗುವುದೆಂಬ ವೈಜ್ಞಾನಿಕ ಅಂಶ ತಿಳಿದಿದೆ. ಮಣ್ಣನ್ನು ಜೀವಂತ ಮಾಡಬೇಕಾದರೆ ಸಾವಯವ ವಸ್ತು ಅಗತ್ಯವಾಗಿ ಬೇಕು. ಮಣ್ಣಿನ ಜೀವವೈವಿಧ್ಯೆಯನ್ನು ಸತತವಾಗಿ ಕಾಪಾಡಿಕೊಳ್ಳಲು ಹಲವಾರು ವಿಧಾನಗಳನ್ನು ಅನುಸರಿಸಬೇಕು. ವರ್ಷದಲ್ಲಿ ಒಂದೆರೆಡು ಬಾರಿ ಸಾವಯವ ಗೊಬ್ಬರ ಹಾಕಿದರೆ ಸಾಲದು. ಹಾಕಿದ್ದೂ ಕೊಚ್ಚಿಹೋಗದ ಹಾಗೆ ಮಣ್ಣನ್ನು ಸಂರಕ್ಷಿಸಬೇಕು. ಕಾಂಪೋಸ್ಟ್, ಹಸಿರೆಲೆ ಗೊಬ್ಬರ, ಕಟಾವಿನ ನಂತರ ಉಳಿಯುವ ಕೊಳೆ ಮತ್ತಿತರ ಕಸಕಡ್ಡಿಗಳನ್ನು ಮಣ್ಣಿನಲ್ಲಿ ತೇವಾಂಶವಿದ್ದಾಗ ಸೇರಿಸುತ್ತಿರಬೇಕು. ಬೆಳೆ ಪರಿವರ್ತನೆ, ದ್ವಿದಳ ಧಾನ್ಯ ಜಾತಿಗೆ ಸೇರಿದ ಲೆಗ್ಯೂಮಿನಸ್ ಸಸ್ಯಗಳನ್ನು ಮಧ್ಯಂತರ ಬೆಳೆಯಾಗಿ ಬೆಳೆದು ಉಳುಮೆ ಮಾಡುವುದು, ಸನಹೆಂಪ್, ಸಸ್‌ಬೇನಿಯ ಮುಂತಾದ ಹಸಿರೆಲೆ ಬೆಳೆ ಬೆಳೆದು ಕಾಂಪೋಸ್ಟ್ ಮಾಡಿ ಬಿತ್ತನೆ ಸಮಯದಲ್ಲಿ ಸೇರಿಸುವುದು ಮುಂತಾದ ಉಪಾಯಗಳಿಂದ ಮಣ್ಣಿನ ಜೀವವೈವಿಧ್ಯೆಯನ್ನು ಸತತವಾಗಿ ಕಾಪಾಡಬಹುದು.

ಸಾಕುಪ್ರಾಣಿಗಳ ಗೊಬ್ಬರದ ಪೌಷ್ಠಿಕಾಂಶ ಆಯಾ ಪ್ರಾಣಿಗಳ ಮಲಮೂತ್ರ, ಅವುಗಳು ತಿನ್ನುವ ಆಹಾರ, ಅವುಗಳನ್ನು ಕೂಡುವಲ್ಲಿ ಬಳಸುವ ಹೊದಿಕೆ ಮತ್ತು ಸಂಗ್ರಹಿಸಿ ಕೂಡಿಡುವ ವಿಧಾನ ಮುಂತಾದುವುಗಳ ಮೇಲೆ ಅವಲಂಬಿಸಿರುತ್ತದೆ. ಮಲಮೂತ್ರಗಳನ್ನು ಸಂಗ್ರಹಿಸಿ ಒಂದೆಡೆ ಬಹಳ ಕಾಲ ಮುಚ್ಚದೆ ಇಟ್ಟಾಗ ಪೌಷ್ಠಿಕಾಂಶ ಕಡಿಮೆಯಾಗುತ್ತಾ ಬರುತ್ತದೆ. ಗೊಬ್ಬರವನ್ನು ಗುಡ್ಡೆ ಮಾಡಿ ಮುಚ್ಚದೆ ಹಾಗೇ ಬಿಟ್ಟಿದ್ದರೆ ಒಂದು ವರುಷದಲ್ಲಿ ಶೇಕಡ ೧೦ ರಷ್ಟು ಸಾರಜನಕ, ಮೂರರಷ್ಟು ರಂಜಕ ಮತ್ತು ೨೦ ರಷ್ಟು ಪೊಟಾಷ್ ಪೋಲಾಗುವುದೆಂದು ಸಂಶೋಧನೆಯಿಂದ ತಿಳಿದುಬಂದಿದೆ. ಕೋಳಿ ಗೊಬ್ಬರವನ್ನು ಬಯಲಿನಲ್ಲಿ ಬಿಟ್ಟರೆ ಶೇಕಡಾ ೫೦ ರಷ್ಟು ಸಾರಜನಕ ಕಡಿಮೆಯಾಗುವುದು. ಕೋಳಿಗೊಬ್ಬರದಲ್ಲಿ ಅಪಾರ ಅಮೋನಿಯ ಇರುವುದರಿಂದ ಬೇಗ ಆವಿಯಾಗಿ ಹೋಗುವುದು. ಹಸುವಿನ ತೊಪ್ಪೆಯನ್ನು ೪೮ ಗಂಟೆ ಕಾಲ ಬಿಸಿಲಿನಲ್ಲಿ ಬಿಟ್ಟರೆ ಶೇಕಡಾ ೪೦ ರಷ್ಟು ಸಾರಜನಕ ಅಮೋನಿಯ ಮುಖಾಂತರ ಆವಿಯಾಗಿ ಹೋಗುವುದು. ದನ ಸಾಕುವ ರೈತರಿಗೆಲ್ಲ ಅನುಭವವಿರುವಂತೆ ಬೆಳಗಿನ ಜಾವ ಕೊಟ್ಟಿಗೆಗೆ ಹೋದಾಗ ಸಗಣಿಯ ಗಂಧ ಮೂಗಿಗೆ ಬಡಿಯುವುದು, ಅದೇ ಒಣಗಿದ ತೊಪ್ಪೆಯನ್ನು ಮೂಸಿದರೂ ಆ ವಾಸನೆ ಬಾರದು. ಆದ್ದರಿಂದ ಸಗಣಿಯನ್ನು ಬಹಳ ಹೊತ್ತು ಆರಲು ಬಿಡದೆ ಶೇಖರಿಸಿ ಮುಚ್ಚಿಟ್ಟರೆ ಪೌಷ್ಠಿಕಾಂಶ ಪೋಲಾಗುವುದಿಲ್ಲ. ವಿವಿಧ ಸಾವಯವ ವಸ್ತುಗಳು ಹಾಗೂ ಅವುಗಳಲ್ಲಿನ ಪೋಷಕಾಂಶಗಳ ಶೇಕಡಾವಾರು ಪ್ರಮಾಣವನ್ನು ಕೋಷ್ಟಕ ೧ ರಲ್ಲಿ ಕೊಡಲಾಗಿದೆ.

**ಕೋಷ್ಟಕ ೧**

**ವಿವಿಧ ಸಾವಯವ ವಸ್ತುಗಳು ಹಾಗೂ ಅವುಗಳಲ್ಲಿನ ಪೋಷಕಾಂಶಗಳ ಪ್ರಮಾಣ (ಶೇಕಡಾವಾರು)**

| ಅ.ನಂ | ಗೊಬ್ಬರ | ಸಾರಜನಕ | ರಂಜಕ | ಪೊಟ್ಯಾಷ್ |
|---|---|---|---|---|
| ೧. | ಕೊಟ್ಟಿಗೆ ಗೊಬ್ಬರ | ೦.೪-೧.೦ | ೦.೪-೦.೮ | ೦.೮-೧.೨ |
| ೨. | ಟೌನ್ ಕಾಂಪೋಸ್ಟ್ | ೧-೧.೫ | ೦.೭-೦.೮ | ೧.೦-೧.೫ |
| ೩. | ಸ್ಟಾಂಡರ್ಡ್ ಕಾಂಪೋಸ್ಟ್ | ೧.೫-೩.೦ | ೧.೫-೩.೦ | ೧.೦-೧.೫ |
| ೪. | ನೆಲಗಡಲೆ ಹಿಂಡಿ | ೫-೭.೦ | ೧.೩-೨.೦ | ೧.೫-೨.೦ |
| ೫. | ಬೇವಿನ ಹಿಂಡಿ | ೪.೭-೫.೨ | ೦.೮-೧-೧ | ೦.೭೫-೧.೫ |
| ೬. | ಮೀನಿನ ಗೊಬ್ಬರ | ೫.೦-೮.೦ | ೪.೦-೫೦ | .. |
| ೭. | ಕೋಳಿ ಗೊಬ್ಬರ | ೧.೪-೧.೯ | ೧.೫-೧.೯೫ | ೧.೦-೧.೬ |

| | | | | |
|---|---|---|---|---|
| ೮. | ಹಸಿರೆಲೆ ಗೊಬ್ಬರ | ೦.೫-೦.೭ | ೦.೧-೦.೨ | ೦.೬-೦.೮ |
| ೯. | ಜೈವಿಕ ಗೊಬ್ಬರ | ೪.೦-೬.೦ | ೦.೫-೬.೦ | ೩.೦-೬.೦ |
| ೧೦. | ಎರೆಹುಳು ಗೊಬ್ಬರ | ೦.೪-೦.೬೬ | ೦.೭೫-೧.೦ | ೦.೨-೦.೫ |
| ೧೧. | ತೆಂಗಿನ ನಾರಿನ ಹುಡಿ ಗೊಬ್ಬರ | ೧.೦-೧.೨೨ | ೦.೧೧-೦.೦೬ | ೦.೮-೧.೨ |
| ೧೨. | ಹಂದಿ ಗೊಬ್ಬರ | ೧.೫-೧.೮೮ | ೨.೦-೨.೫ | ೦.೪-೦.೬೭ |
| ೧೩. | ಬೂದಿ | ೦.೦೨-೦.೦೬ | ೧.೫-೨.೦ | ೩.೦-೫.೦ |
| ೧೪. | ಮೀನಿನ ಹುಡಿ ಗೊಬ್ಬರ | ೪-೬.೦ | ೨.೫-೩.೯ | ೦.೬-೧.೫ |
| ೧೫. | ಮೂಳೆ ಗೊಬ್ಬರ | ೩-೪.೦ | ೨೦.೦-೨೫.೦ | .. |
| ೧೬. | ಹೊಂಗೆಯ ಹಿಂಡಿ | ೨.೮-೩.೯ | ೦.೮-೦.೯೦ | ೧.೦-೧.೨೦ |
| ೧೭. | ಮಾನವನ ಮಲ | ೧.೨-೧.೫ | ೦.೬-೦.೮೦ | ೦.೪-೦.೫೦ |
| ೧೮. | ತೆಂಗಿನ ಹಿಂಡಿ | ೩.೦-೩.೨ | ೦.೯-೧.೮ | ೦.೬-೧.೦೦ |
| ೧೯. | ಹರಳಿನ ಹಿಂಡಿ | ೫.೮ | ೧.೯ | ೧.೪ |
| ೨೦. | ಹತ್ತಿಕಾಳಿನ ಹಿಂಡಿ | ೩.೯ | ೨.೫ | ೧.೬ |
| ೨೧. | ಡಿಕಾರ್ಟಿಕೇಟ್ ಮಾಡಿದ ಹತ್ತಿಕಾಳಿನ ಹಿಂಡಿ | ೬.೯ | ೩.೧ | ೨.೧ |
| ೨೨. | ಮಹ್ವಾ ಹಿಂಡಿ | ೨.೫ | ೦.೮ | ೧.೯ |
| ೨೩. | ಸಾಸಿವೆ ಹಿಂಡಿ | ೫.೧ | ೧.೮ | ೧.೦ |
| ೨೪. | ಎಳ್ಳಿನ ಹಿಂಡಿ | ೬.೨ | ೨.೦ | ೧.೨ |
| ೨೫. | ಪ್ರೆಸ್ ಮಡ್ | ೨.೧೦ | ೪.೪೦ | ೦.೮೦ |
| ೨೬. | ಕಬ್ಬಿನ ಸೋಗೆ | ೦.೪೦ | ೦.೧೮ | ೧.೨೮ |
| ೨೭. | ಭತ್ತದ ಹುಲ್ಲು | ೦.೬೧ | ೦.೧೮ | ೧.೩೮ |
| ೨೮. | ಗೋಧಿ ಹುಲ್ಲು | ೦.೪೮ | ೦.೧೬ | ೧.೧೮ |

ಹಸು, ಹಂದಿ, ಕೋಳಿ ಮುಂತಾದುವುಗಳ ಗೊಬ್ಬರದ ಪೌಷ್ಠಿಕಾಂಶ ಅವುಗಳ ತಿನ್ನುವ ಆಹಾರವನ್ನು ಅವಲಂಬಿಸಿರುತ್ತದೆ. ಉದಾಹರಣೆಗೆ ಬಯಲಿನಲ್ಲಿ ಮೇಯ್ದು ಬಂದು, ಕೊಟ್ಟಿಗೆಯಲ್ಲಿ ಒಣ ಹುಲ್ಲು ತಿಂದು, ವಿಸರ್ಜಿಸಿದ ಸಗಣಿಯಲ್ಲಿರುವ ಪೌಷ್ಠಿಕಾಂಶವನ್ನು ಕ್ರಾಸ್‌ಬ್ರೀಡ್ ಹಸುವಿನ ಸಗಣಿಗೆ ಹೋಲಿಸಿದರೆ ವ್ಯತ್ಯಾಸವಿರುತ್ತದೆ. ಹಾಲು ಕೊಡುವ ಕ್ರಾಸ್‌ಬ್ರೀಡ್ ತಳಿಗಳಿಗೆ ಬೂಸ, ಹಿಂಡಿ, ಹಸಿರು ಹುಲ್ಲು ಮತ್ತಿತರ ಪೌಷ್ಠಿಕಾಂಶಗಳನ್ನು ಕೊಡುವುದರಿಂದ ಅದರ ಗೊಬ್ಬರದಲ್ಲಿ ಹೆಚ್ಚಿನ ಪೌಷ್ಠಿಕಾಂಶ ಇರುವುದು ಸಹಜ-ಹಾಗೆಯೇ ಫಾರಂ ಕೋಳಿ ಗೊಬ್ಬರಕ್ಕೂ, ನಾಟಿ ಕೋಳಿ ಗೊಬ್ಬರಕ್ಕೂ ವ್ಯತ್ಯಾಸವಿರುತ್ತದೆ. ಕೇವಲ ಸಗಣಿ ಅಥವಾ ಹಿಕ್ಕೆಯನ್ನು ನೇರವಾಗಿ ಭೂಮಿಗೆ ಹಾಕಿದಾಗ ದೊರಕುವ ಪೌಷ್ಠಿಕಾಂಶ, ಸರಿಯಾದ ಪ್ರಮಾಣದಲ್ಲಿ ಕಾಂಪೋಸ್ಟ್ ಮಾಡಿದ ಗೊಬ್ಬರದ ಪೌಷ್ಠಿಕಾಂಶಕ್ಕಿಂತ ಬಹಳ ಕಡಿಮೆ ಇರುತ್ತದೆ. ಇಂದಿಗೂ ಭಾರತದಲ್ಲಿ ಸಾಮಾನ್ಯವಾಗಿ ಬಳಸುವ ಗೊಬ್ಬರ, ಗುಡ್ಡೆ ಮಾಡಿದ ಅಥವಾ ಗುಂಡಿಯಲ್ಲಿ ಹಾಕಿದ ಹಟ್ಟಿಗೊಬ್ಬರ ಅಥವಾ ಕೊಟ್ಟಿಗೆ ಗೊಬ್ಬರದ ಪೌಷ್ಠಿಕಾಂಶ ಕಡಿಮೆ ಇರುತ್ತದೆ.

ಹಿಂದೆ ನಮ್ಮ ಹಳ್ಳಿಗಳ ಜೀವನ ಮಟ್ಟವನ್ನು ಮಾಪನ ಮಾಡುವ ವಿಧಾನ ಅದರಲ್ಲಿರುವ ಗೊಬ್ಬರ ಗುಂಡಿಗಳ ಸಂಖ್ಯೆ ಮತ್ತು ಕಣದಲ್ಲಿ ಹುಲ್ಲು ಮೆದೆಗಳ ಗಾತ್ರ. ಇಂದು ಇವುಗಳ ಕಡೆಗೆ ಗಮನವೇ ಹರಿಯುವುದಿಲ್ಲ. ಸ್ವಾತಂತ್ರ್ಯಪೂರ್ವದಲ್ಲಿ ಸ್ವಾತಂತ್ರ್ಯಕ್ಕಾಗಿ ಹೂಡಿದ ಆಂದೋಲನ ಸ್ವಾತಂತ್ರ್ಯದ ನಂತರವೂ ಹಲವಾರು ಕ್ಷೇತ್ರದಲ್ಲಿ ವಿವಿಧ ರೀತಿಯಲ್ಲಿ ಮುಂದುವರಿಯುತ್ತಲೇ ಇದೆ. ಆದರೆ ಮನುಷ್ಯನ ಮಲವೂ ಸೇರಿದಂತೆ ಪ್ರಾಣಿ, ಸಸ್ಯಜನ್ಯ, ಸಾವಯವ ವಸ್ತುಗಳನ್ನು ವೈಜ್ಞಾನಿಕವಾಗಿ ಕಾಂಪೋಸ್ಟ್ ಮಾಡುವ ಆಂದೋಲನ ದೇಶಾದ್ಯಂತ ನಡೆಯಬೇಕಾಗಿರುವುದು ನಡೆದಿಲ್ಲ. ಭೂಮಿಯ ಮೇಲೆ ಕಾಣುವ ಬೃಹತ್ ಕಟ್ಟಡಗಳು, ರಹದಾರಿಗಳು, ವಾಹನ

ಸಂಪರ್ಕ, ಮಾಹಿತಿ ತಂತ್ರಜ್ಞಾನ, ದೂರಸಂಪರ್ಕ ಜಾಲವೆಲ್ಲವೂ ಒಂದು ಬಗೆಯ ವಿಸ್ಮಯ ಉಂಟುಮಾಡುವ, ಮೂಲವನ್ನೇ ಮರೆಸುವ ಮಾರ್ಪಾಟುಗಳು. ಆದರೆ ಬೇಸಾಯ ಭೂಮಿಯಲ್ಲಿ ನಶಿಸುತ್ತಿರುವ ಪೋಷಕಾಂಶಗಳ ಕೊರತೆಯಿಂದ ಭೂಮಿಯ ಹಸಿವನ್ನು ನೀಗಿಸುವ ಪ್ರಯತ್ನ ಕುಂಟುತ್ತಿದೆ. ಕಾರಣ ಸಾಕಷ್ಟು ಸಾವಯವ ವಸ್ತುಗಳನ್ನು ಸರಿಯಾಗಿ ಸಂಗ್ರಹಿಸಿ, ಪರಿಪಕ್ವ ಮಾಡಿ, ಸಕಾಲದಲ್ಲಿ ಭೂಮಿಗೆ ಹಾಕುವ ಪ್ರಯತ್ನ ಸಮರ್ಪಕವಾಗಿ ಆಗುತ್ತಿಲ್ಲ.

ಭೂಮಿಯ ಭೋಗ ಬೇಗ ಹೆಚ್ಚಿಸುವ ಸುಲಭ ವಿಧಾನವೆಂದರೆ ಸಾವಯವ ವಸ್ತುವನ್ನು ಸರಿಯಾದ ಪ್ರಮಾಣದಲ್ಲಿ ವೈಜ್ಞಾನಿಕವಾಗಿ ಕಾಂಪೋಸ್ಟ್ ಮಾಡಿ, ಹಣವನ್ನು ಸೇಫ್ಟಿ ಲಾಕರ್‌ನಲ್ಲಿಡುವಂತೆ ಬಿತ್ತನೆ ಕಾಲದವರೆವಿಗೂ ಸರಿಯಾಗಿ ಶೇಖರಿಸಿಟ್ಟು ಹದವಾದ ತೇವಾಂಶ ಇದ್ದಾಗ ಮಣ್ಣಿನೊಳಗೆ ಮಿಶ್ರಣ ಮಾಡುವುದು. ನಮ್ಮ ದೇಶದಲ್ಲಿ ಎಷ್ಟು ಟಿ.ವಿ.ಗಳಿವೆ, ರೇಡಿಯೋಗಳಿವೆ, ಕಾರುಗಳಿವೆ, ಅನಕ್ಷರಸ್ಥರೆಷ್ಟು, ಬಡತನ ರೇಖೆ ಕೆಳಗಿರುವವರೆಷ್ಟು ಮುಂತಾದುವುಗಳಿಗೆಲ್ಲ ಮಾಹಿತಿ ಇದೆ. ಆದರೆ ಶೇಕಡಾ ೭೦ ರಷ್ಟು ಬೇಸಾಯಗಾರರಿರುವ ದೇಶದಲ್ಲಿ ಅವರು ಮಾಡುತ್ತಿರುವ ಬೇಸಾಯದ ಕಸುಬು ವೈಜ್ಞಾನಿಕವಾಗಿದೆಯೆ, ಬೆಳಗೆ ಕನಿಷ್ಠ ಬೇಕಿರುವ ಪೌಷ್ಠಿಕಾಂಶಗಳು ದೊರಕುತ್ತಿವೆಯೇ? ಕೊರತೆ ಎಷ್ಟಿದೆ? ಈ ಕೊರತೆಯನ್ನು ಎಲ್ಲಿಂದ ಹೇಗೆ ಭರಿಸುವುದು? ಮುಂತಾದುವುಗಳ ಬಗ್ಗೆ ಖಚಿತ ಮಾಹಿತಿ ಇರುವುದು ಅನುಮಾನ.

ದನಿನ ಗೊಬ್ಬರ ಅಥವಾ ಕೊಟ್ಟಿಗೆ ಗೊಬ್ಬರ ಎಕರೆಗೆ ಎಷ್ಟು ಹಾಕಬೇಕು? ರಾಸಾಯನಿಕ ಗೊಬ್ಬರಕ್ಕೆ ನಿಗದಿ ಮಾಡಿರುವಂತೆ ಕೊಟ್ಟಿಗೆ ಗೊಬ್ಬರದ ಪ್ರಮಾಣ ಯಾವ ಬೆಳೆಗೆ, ಯಾವ ಮಣ್ಣಿನಲ್ಲಿ ಎಷ್ಟು ಹಾಕಬೇಕೆಂಬ ನಿಯಮವಿಲ್ಲ. ಏಕೆಂದರೆ ರಾಸಾಯನಿಕ ಗೊಬ್ಬರದಲ್ಲಿರುವ ಸಾರಜನಕ, ರಂಜಕ ಮತ್ತು ಪೊಟ್ಯಾಶ್ ಪ್ರಮಾಣ ತಿಳಿದಿರುತ್ತದೆ. ಇದನ್ನು ಎಲ್ಲಿಯೇ ತಯಾರು ಮಾಡಿದ್ದರೂ ಅದರಲ್ಲಿರುವ ಪೋಷಕಾಂಶಗಳನ್ನು ನಿಗದಿಪಡಿಸಿರುತ್ತದೆ. ಪ್ರತಿ ಬೆಳೆಗೂ ಬೇಕಿರುವ ಪೋಷಕಾಂಶಗಳ ಆಧಾರದ ಮೇಲೆ ವಿವಿಧ ಬೆಳೆಗೆ ಬೇಕಿರುವ ರಾಸಾಯನಿಕ ಗೊಬ್ಬರದ ಪ್ರಮಾಣವನ್ನು ನಿಗದಿಪಡಿಸುವುದು ಕಷ್ಟ. ಉದಾಹರಣೆಗೆ ಕೊಟ್ಟಿಗೆ ಗೊಬ್ಬರದಲ್ಲಿ ಸಾರಜನಕದ ಪ್ರಮಾಣ ಶೇಕಡ ೦.೪ರಿಂದ ೦.೫ ರವರೆಗೆ ಇರುವುದೆಂದು ಅಂದಾಜು ಮಾಡಲಾಗಿದೆ. ರಂಜಕ ಮತ್ತು ಪೊಟ್ಯಾಷ್ ಅಂಶ, ದನಗಳಿಗೆ ಹಾಕುವ ಮೇವಿನ ಮೇಲೆ ಹೊಂದಿರುತ್ತದೆ. ಹಾಲು ಕರೆಯುವ ಹಸುಗಳಿಗೆ ಬೂಸ, ಹಿಂಡಿ, ಹಸಿರು ಹುಲ್ಲು ಮತ್ತಿತರ ಪೌಷ್ಠಿಕಾಂಶ ಹಾಕುವುದರಿಂದ ಅವುಗಳ ಸಗಣಿಯಲ್ಲಿ ಪೋಷಕಾಂಶಗಳು ಜಾಸ್ತಿ ಇರುತ್ತವೆ. ಈ ಸಗಣಿಯನ್ನು ಒಣಗಲು ಬಿಡದೆ ವೈಜ್ಞಾನಿಕವಾಗಿ ಕಾಂಪೋಸ್ಟ್ ಮಾಡಿದಾಗ ಪೋಷಕಾಂಶಗಳು ಮೂರು ನಾಲ್ಕು ಪಟ್ಟು ಹೆಚ್ಚಾಗುವುದು. ಈ ಕಾಂಪೋಸ್ಟನ್ನು ನಿಗದಿತ ವೇಳೆಯಲ್ಲಿ ಭೂಮಿಗೆ ಸೇರಿಸಿದಾಗ ಇದರ ಉಪಯೋಗ ಪೂರ್ಣ ಪ್ರಮಾಣದಲ್ಲಿ ಬೆಳೆಗೆ ದೊರೆಯುವುದು. ಇಂತಹ ಗೊಬ್ಬರ ಹೆಕ್ಟೇರಿಗೆ ಹತ್ತರಿಂದ ಇಪ್ಪತ್ತು ಟನ್ ಹಾಕಿದಾಗ ರಾಸಾಯನಿಕ ಗೊಬ್ಬರದಿಂದ ದೊರೆಯುವ ಪೌಷ್ಠಿಕಾಂಶಗಳಷ್ಟೆ ಬೆಳೆಗೆ ದೊರೆಯುವುದರಿಂದ ಇಳುವರಿ ಕುಂಠಿತವಾಗುವುದಿಲ್ಲ; ಸಾಮಾನ್ಯವಾಗಿ ದನಗಳಿಂದ ಒದಗುವ ಸಗಣಿ,ಗಂಜಲವನ್ನು ತಿಪ್ಪೆಯಲ್ಲಿ ದಿನನಿತ್ಯ ಶೇಖರಿಸಿ ಆರು ತಿಂಗಳು ಅಥವಾ ವರುಷದ ನಂತರ ತೆಗೆದು ಮುಂಗಾರು ಮಳೆಗೆ ಮುಂಚಿತವಾಗಿಯೇ ಹೊಲಗದ್ದೆಗಳಲ್ಲಿ ಹಾಕಿದಾಗ ಮೊದಲು ವಿವರಿಸಿದ ಕಾಂಪೋಸ್ಟ್ ಗೊಬ್ಬರದ ಪ್ರಮಾಣದ ಹತ್ತನೆ ಒಂದು ಭಾಗ ಪೋಷಕಾಂಶಗಳು ಬೆಳೆಗೆ ದೊರೆಯುವುದು ದುರ್ಲಭ. ತಿಪ್ಪೆಯಲ್ಲಿ ಮೊದಲು ಹಾಕಿದ ಗೊಬ್ಬರ ಹೆಚ್ಚಿನ ಉಷ್ಣಾಂಶದ ಒತ್ತಡದಿಂದ ಅದರಲ್ಲಿರುವ ಸೂಕ್ಷ್ಮಾಣು ಜೀವಿಗಳೆಲ್ಲ ಸತ್ತು ಕಪ್ಪಗೆ ರೊಟ್ಟಿಯಂತೆ ಕಾಣುವುದು. ಮೇಲ್ಪದರದಲ್ಲಿರುವ ಗೊಬ್ಬರ, ಕಸಕಡ್ಡಿ ಸರಿಯಾದ ತೇವಾಂಶವಿಲ್ಲದೆ ಪಕ್ವವಾಗಿ ಕರಗಿರುವುದಿಲ್ಲ. ಇಂತಹ ಗೊಬ್ಬರವನ್ನು ಭೂಮಿಯಲ್ಲಿ ತೇವಾಂಶವಿಲ್ಲದಾಗ ಹರಡಿದ್ದರೆ ಬಹುತೇಕ ಗೊಬ್ಬರ ಗಾಳಿ, ಮಳೆಗೆ, ಕೊಚ್ಚಿ ಹೋಗಿ ಉಳಿದದ್ದು ಗೆದ್ದಲಿನ ಪಾಲಾಗುವುದು. ರೈತನಿಗೆ ಎಕರೆಗೆ ಹತ್ತು-ಇಪ್ಪತ್ತು ಗಾಡಿ ಗೊಬ್ಬರ ಹೊಲಗದ್ದೆಗೆ ಹಾಕಿದ್ದೇನೆಂಬ ಸಮಾಧಾನವಿದ್ದರೂ ಬೆಳೆಗೆ ಲಭ್ಯವಾಗುವುದು ಅತ್ಯಲ್ಪ. "ದಡ್ಡನ ಆರಂಭ ಗೊಬ್ಬರದಲ್ಲಿ" ಎಂಬ ನಾಣ್ನುಡಿ ಸತ್ಯವಾಗಿ ಉಳಿಯಬೇಕಾದರೆ ಸಾವಯವ ಗೊಬ್ಬರವನ್ನು ಪರಿಪಕ್ವ ಮಾಡುವ ವಿಧಾನವನ್ನು ಮನದಟ್ಟಾಗುವಂತೆ ಅರಿಯಬೇಕು, ಅರಿತು ಅಳವಡಿಸಿಕೊಳ್ಳಬೇಕು.

ಭೂಮಿಯ ಉತ್ಪಾದಕತೆ ಹೆಚ್ಚಿಸಬೇಕಾದರೆ ಕನಿಷ್ಟ ಒಂದಷ್ಟಾದರೂ ಸಾವಯವ ವಸ್ತುವಿನ (Organic matter) ಅಂಶ ಮಣ್ಣಿನಲ್ಲಿರಬೇಕು. ಉಷ್ಣವಲಯದಲ್ಲಿ ಅದರಲ್ಲೂ ಖುಷ್ಕಿ ಜಮೀನಿನಲ್ಲಿ ಈ ಮಟ್ಟವನ್ನು ಕಡಿಮೆಯೆಂದೇ ಪರಿಗಣಿಸುತ್ತಾರೆ. ಸಾಮಾನ್ಯವಾಗಿ ಖುಷ್ಕಿ ಭೂಮಿಯಲ್ಲಿ ಸಾವಯವ ಇಂಗಾಲ ಅಂಶ (Soil Organic carbon) ೦.೪ರಿಂದ ೦.೫ ರವರೆಗೆ ಇದ್ದರೆ ಹೆಚ್ಚು. ಇದನ್ನು ಕನಿಷ್ಟ ೦.೮ ಅಥವಾ ೦.೯ಕ್ಕೆ ಏರಿಸಬೇಕಾದರೆ ಹಸನಾದ ಕಳಿತ ಗೊಬ್ಬರವನ್ನೇ ಹಾಕಬೇಕು. ಬೆಳೆ ಇಡುವ ೩ ವಾರ

ಮುಂಚಿತವಾಗಿ ಹಾಕಿದರೆ ಆ ವರುಷ ಹಾಕಿದ ಗೊಬ್ಬರದ ಶೇಕಡಾ ೫೦ರಷ್ಟಾದರೂ ಬೆಳೆಗೆ ದೊರೆತು ಉಳಿದದ್ದು ಮಣ್ಣಿನಲ್ಲಿ ಸೇರಿರುತ್ತದೆ. ಬೇಸಿಗೆಯ ಬಿಸಿಲು ಮತ್ತು ತಾಪಮಾನದಿಂದ ಮಣ್ಣಿನಲ್ಲಿರುವುದು ಹೆಚ್ಚಿನಾಂಶ ಕರಗಿಹೋಗುವ ಸಾಧ್ಯತೆ ಇದೆ. ಮಣ್ಣಿನ ಸಾವಯವ ಇಂಗಾಲ (Soil Organic carbon) ಬೆಳೆಯ ಉತ್ಪಾದಕತೆಯ ಕೀಲಿ ಇದ್ದ ಹಾಗೆ. ಇದನ್ನು ಒಂದು ಗರಿಷ್ಠ ಮಟ್ಟದಲ್ಲಿ ಕಾಪಾಡದಿದ್ದರೆ ರಾಸಾಯನಿಕ ಗೊಬ್ಬರದ ಸಫಲತೆಯೂ ಕಡಿಮೆಯಾಗುವುದು. ಆದ್ದರಿಂದ ಪಕ್ವವಾದ ಸಾವಯವ ಗೊಬ್ಬರ (ಸಗಣಿ ಗೊಬ್ಬರ, ಕೊಟ್ಟಿಗೆ ಗೊಬ್ಬರ, ತಿಪ್ಪೆ ಗೊಬ್ಬರ, ಕಾಂಪೋಸ್ಟ್, ತ್ಯಾಜ್ಯ ವಸ್ತುಗಳು ಮುಂತಾದುವು. ಕೋಳಿ, ಕುರಿ, ಹಂದಿ ಮುಂತಾದುವುಗಳ ಮಲ ಮೂತ್ರ)ವನ್ನು ಪ್ರತಿ ವರ್ಷ ನಿಗದಿತ ಪ್ರಮಾಣದಲ್ಲಿ, ಸಕಾಲದಲ್ಲಿ ಸಾಗುವಳಿ ಭೂಮಿಗೆ ಹಾಕುವುದು ಅನಿವಾರ್ಯ ಹಾಗೂ ಬಹಳ ಅಗತ್ಯ. ನಾಲ್ಕಾರು ವರುಷ ಸತತವಾಗಿ ಪೋಷಕಾಂಶಗಳನ್ನು ವೃದ್ಧಿಸಿದ ಕಾಂಪೋಸ್ಟನ್ನು ಸಾಕಷ್ಟು ಪ್ರಮಾಣದಲ್ಲಿ ಭೂಮಿಗೆ ಹಾಕುತ್ತಿದ್ದರೆ, ಭೂಮಿಯಲ್ಲಿನ ಜೀವವೈವಿಧ್ಯತೆಯಿಂದ ಸೂಕ್ಷ್ಮಜೀವಿಗಳು ವೃದ್ಧಿಯಾಗಿ ಫಲವತ್ತತೆಯನ್ನು ಹೆಚ್ಚಿಸುವುದಲ್ಲದೆ, ಅನೇಕ ರೋಗ ರುಜಿನಗಳನ್ನು ನಿಗ್ರಹಿಸುವ ಶಕ್ತಿ ಬೆಳೆಗೆ ಬರುತ್ತದೆ. ಅಂತಹ ಜಮೀನಿಗೆ ರಾಸಾಯನಿಕ ಗೊಬ್ಬರದ ಅಗತ್ಯವಿರುವುದಿಲ್ಲ, ಇಳುವರಿ ಕುಂಠಿತವಾಗುವುದಿಲ್ಲ. ಸ್ವಸ್ಥಿರ ಕೃಷಿಗೆ ಇದೇ ಮೂಲಮಂತ್ರ.

ಕರ್ನಾಟಕದಲ್ಲಿ ಲಭ್ಯವಿರುವ ಒಟ್ಟು ಜಾನುವಾರುಗಳ ಗೊಬ್ಬರದ ಮೊತ್ತ ಸುಮಾರು ೪೫೦ ಲಕ್ಷ ಟನ್ ಎಂದು ಅಂದಾಜು ಮಾಡಲಾಗಿದೆ. ವರ್ಷಕ್ಕೆ ಸುಮಾರು ೨೦೦೦ ಕೋಟಿ ರೂ. ಬೆಲೆ ಬಾಳುವ ಈ ಗೊಬ್ಬರವನ್ನು ವ್ಯವಸ್ಥಿತ ರೀತಿಯಲ್ಲಿ ಉಪಯೋಗಿಸಿದರೆ ನಮಗೆ ರಾಸಾಯನಿಕ ಗೊಬ್ಬರದ ಅಗತ್ಯವಿರುವುದಿಲ್ಲವೆಂದು ತಜ್ಞರ ಅಭಿಪ್ರಾಯ. ಮುಖ್ಯವಾಗಿ ಸಾಕುಪ್ರಾಣಿಗಳಾದ ದನ (೩೦೦ ಲಕ್ಷ ಟನ್), ಎಮ್ಮೆ/ಕೋಣ (೧೨೦ ಲಕ್ಷ ಟನ್), ಕುರಿ/ಮೇಕೆ (೨೨ ಲಕ್ಷ ಟನ್), ಹಂದಿ (೪ ಲಕ್ಷ ಟನ್), ಕೋಳಿ (೩ ಲಕ್ಷ ಟನ್)ಗಳಿಂದ ದೊರೆಯುವ ಗೊಬ್ಬರದ ಮೊತ್ತವನ್ನು ಕಾಂಪೋಸ್ಟ್ ವಿಧಾನದಿಂದ ನಾಲ್ಕು ಪಟ್ಟು ಹೆಚ್ಚಿಸುವ ಸಾಧ್ಯತೆ ಇದೆ. ವ್ಯವಸಾಯ ಕ್ಷೇತ್ರದಲ್ಲಿ ಬರುವ ಉಳಿಕೆಗಳು, ಪಟ್ಟಣ ಪ್ರದೇಶದಲ್ಲಿ ದೊರೆಯುವ ತ್ಯಾಜ್ಯ ವಸ್ತುಗಳು, ಹಸಿರೆಲೆ, ಕೊಳೆ, ಕಳೆ ಮುಂತಾದುವುಗಳಿಂದ ಒದಗುವ ಬೆಳೆಯುಳಿಕೆ(ಬಯೊ ಮಾಸ್) ಮುಂತಾದುವನ್ನು ಸಂಗ್ರಹಿಸಿ ಜಾನುವಾರುಗಳ ಗೊಬ್ಬರದೊಂದಿಗೆ ೨:೮ ಅಥವಾ ೩:೭ ಪ್ರಮಾಣದಲ್ಲಿ, ಶೇಕಡ ೬೦ ರಷ್ಟು ತೇವಾಂಶವಿರುವಂತೆ, ಪಕ್ವ ಮಾಡಿ ಕಾಂಪೋಸ್ಟ್ ಮಾಡಿದರೆ ಗೊಬ್ಬರದ ಪ್ರಮಾಣ ನಾಲ್ಕು ಪಟ್ಟು ಹೆಚ್ಚಿಸುವುದರ ಜೊತೆಗೆ, ಪೋಷಕಾಂಶಗಳನ್ನು ಶೇಕಡ ೧.೫ ರಿಂದ ೨ರವರೆಗೆ ವೃದ್ಧಿಸಬಹುದು. ಇಂತಹ ಗೊಬ್ಬರದ ಪೋಷಕಾಂಶಗಳು ಬೆಳೆಗೆ ಬೇಗ ದೊರೆಯುವುದರಿಂದ ಪೋಲಾಗುವುದನ್ನು ತಡೆಗಟ್ಟಬಹುದು, ರಸಗೊಬ್ಬರದ ಅಗತ್ಯವಿರುವುದಿಲ್ಲ.

## ಹಸಿರೆಲೆ ಗೊಬ್ಬರ :

ಜಾನುವಾರು ಗೊಬ್ಬರ, ಕಾಂಪೋಸ್ಟ್, ಎಣ್ಣೆ ತೆಗೆದ ಹಿಂಡಿಗಳು, ಕೆರೆ ಗೋಡು, ಕಾರ್ಖಾನೆಯ ತ್ಯಾಜ್ಯವಸ್ತು, ಪಟ್ಟಣ ಪ್ರದೇಶದ ತ್ಯಾಜ್ಯವಸ್ತು ಮುಂತಾದುವನ್ನು ಬೇಸಾಯ ಭೂಮಿಯಲ್ಲಿ ಬಳಸುವ ಮುಖ್ಯ ಉದ್ದೇಶ ಬೆಳೆಗೆ ಪೋಷಕಾಂಶಗಳನ್ನು ಒದಗಿಸುವ ದೃಷ್ಟಿಯಿಂದ. ಹಸಿರಲೆ ಗೊಬ್ಬರ ಬೆಳೆಗೆ ಸಾರಜನಕವನ್ನು ಒದಗಿಸುವುದರ ಜೊತೆಗೆ ಮಣ್ಣಿನ ಆರೋಗ್ಯ ಕಾಪಾಡುವಲ್ಲಿ ಮಹತ್ವದ ಪಾತ್ರ ವಹಿಸುತ್ತದೆ. ಆದುದರಿಂದ ಚೀನೀಯರು ಮೂರು ಸಾವಿರ ವರುಷದ ಹಿಂದಿನಿಂದಲೂ ಹಸಿರೆಲೆ ಗೊಬ್ಬರವನ್ನು ಬಳಕೆಗೆ ತಂದಿದ್ದಾರೆ. ಗ್ರೀಕರು, ರೋಮನ್ನರೂ ಕೂಡ ಹಸಿರೆಲೆ ಗೊಬ್ಬರಕ್ಕೆ ಆದ್ಯತೆ ಕೊಡುತ್ತಿದ್ದರೆಂಬ ದಾಖಲೆಗಳಿವೆ. ಮಣ್ಣಿನ ಕ್ಷಾರವನ್ನು ಸರಿಪಡಿಸಲು ಹಾಗೂ ಮಣ್ಣಿನ ಭೌತಿಕ ಮತ್ತು ರಾಸಾಯನಿಕ ಗುಣಗಳನ್ನು ಹೆಚ್ಚಿಸಲು ಹಸಿರೆಲೆ ಗೊಬ್ಬರ ಸಹಾಯವಾಗುತ್ತದೆ.; ಮಣ್ಣಿನ ಸಾವಯವ ಅಂಶವನ್ನು ಉಳಿಸಿಕೊಂಡು, ಸೂಕ್ಷ್ಮಾಣುಗಳಿಗೆ ಆಹಾರ ಹಾಗೂ ಶಕ್ತಿಯನ್ನು ದೊರಕಿಸಿ ಮಣ್ಣನ್ನು ಜೀವಂತವಾಗಿಡುವಲ್ಲಿ ನೆರವಾಗುತ್ತದೆ; ಮಣ್ಣಿನ ಸವೆತವನ್ನು ತಪ್ಪಿಸಿ, ಆಳದಲ್ಲಿರುವ ಪೋಷಕಾಂಶಗಳನ್ನು ಮೇಲಕ್ಕೆ ತಂದು ಬೆಳೆಗೆ ಒದಗಿಸುವಲ್ಲಿ ಸಹಕಾರಿಯಾಗುತ್ತದೆ.

ಹಸಿರೆಲೆ ಗೊಬ್ಬರವನ್ನು ಮೂರು ವಿಧದಲ್ಲಿ ಭೂಮಿಗೆ ಒದಗಿಸಬಹುದು. ಹಸಿರೆಲೆ ಒದಗಿಸುವ ಗಿಡ, ಮರಗಳನ್ನು ಆಜುಬಾಜುವಿನಲ್ಲಿ ಬೆಳೆದು, ವರ್ಷದಲ್ಲಿ ಒಂದೆರಡು ಬಾರಿ ಸೊಪ್ಪಿನ ಭಾಗವನ್ನು ಕತ್ತರಿಸಿ ಕಾಂಪೋಸ್ಟ್ ಮಾಡುವುದು. ಎರಡನೆಯದು, ಬೇಸಾಯ ಭೂಮಿಯಲ್ಲಿಯೇ ಮುಖ್ಯ ಬೆಳೆಗಿಂತ ಮುಂಚಿತವಾಗಿ ಬೆಳೆದು ಉತ್ತು ಭೂಮಿಗೆ ಸೇರಿಸುವುದು. ಮೂರನೆಯದು, ಹೊದಿಕೆ

ಬೆಳೆಯಾಗಿ (Cover crop) ಬೆಳೆದು ಅಲ್ಲಲ್ಲಿಯೇ ಕತ್ತರಿಸಿ ಮೇಲ್ಪದರದಲ್ಲಿ ಬಿಡುವುದು. ಈ ವಿಧಾನವನ್ನು ಹೆಚ್ಚಾಗಿ ಪ್ಲಾಂಟೇಷನ್‌ಗಳಲ್ಲಿ, ರಬ್ಬರ್ ತೋಟಗಳಲ್ಲಿ, ದೀರ್ಘಾವಧಿ ಬೆಳೆಗಳಾದ ಹಣ್ಣಿನ ತೋಟ ಮುಂತಾದುವಲ್ಲಿ ಅಳವಡಿಸಬಹುದು. ಈ ವಿಧಾನದ ಉದ್ದೇಶ ನೆಲ ಒಣಗದ ಹಾಗೆ ಹೊದಿಕೆಯಾಗಿ ಬೆಳೆಯುವುದು, ಕಳೆ ನಿಯಂತ್ರಣ ಮಾಡುವುದು ಮತ್ತು ಅದು ಬೆಳೆದಂತೆಲ್ಲಾ ಕತ್ತರಿಸಿ ಅಲ್ಲಿಯೇ ಹಾಕುವುದರಿಂದ ಹೆಚ್ಚಿನ ಸಾರಜನಕ ಒದಗಿಸುವುದರ ಜೊತೆಗೆ ಮಣ್ಣಿನಲ್ಲಿ ಜೀವವೈವಿಧ್ಯ ವೃದ್ಧಿಯಾಗಿ ಮಣ್ಣಿನ ಫಲವತ್ತತೆ ಹೆಚ್ಚುತ್ತದೆ. ಮಲೆನಾಡು ಪ್ರದೇಶದ ಇಳಿಜಾರು ಜಾಗಗಳಲ್ಲಿ ಮಳೆಗಾಲದಲ್ಲಿ ಮಣ್ಣು ಕೊಚ್ಚಿ ಹೋಗದಿರುವಂತೆ ಹೊದಿಕೆ ಬೆಳೆಗಳು ಸಹಾಯಕವಾಗುತ್ತವೆ. ಉದಾಹರಣೆಗೆ, ಕ್ಯಾಲಪೋಗೋನಿಯಂ, ಪ್ಯುರೇರಿಯ, ಮಿಮೊಸಾ (ಮುಳ್ಳಿಲ್ಲದ ಮುಟ್ಟಿದರೆ ಮುನಿ) ಮುಂತಾದುವನ್ನು ಹೊದಿಕೆ ಬೆಳೆಯಾಗಿ ಬೆಳೆಯಬಹುದು. ಇವುಗಳು ದ್ವಿದಳ ಧಾನ್ಯದ ಜಾತಿಗೆ ಸೇರಿದವಾದುದರಿಂದ ಬೇರಿನ ಗಂಟಿನಲ್ಲಿ ವಾಯುವಿನ ಸಾರಜನಕವನ್ನು ಹಿಡಿದು ಗಂಟು ಕಟ್ಟಿ ಮಣ್ಣಿಗೆ ಒದಗಿಸಿ ಫಲವತ್ತತೆ ಹೆಚ್ಚಿಸುತ್ತವೆ.

ಹಸಿರೆಲೆ ಗೊಬ್ಬರದಲ್ಲಿ ಲಿಗ್‌ನಿನ್ ಅಂಶ ಕಡಿಮೆ ಪ್ರಮಾಣದಲ್ಲಿದ್ದು, ಹೆಚ್ಚಿನಂಶ ಸಾರಜನಕವಿರುವುದರಿಂದ ಸಿ.ಎನ್. ಅನುಪಾತ ಕಡಿಮೆ ಪ್ರಮಾಣದಲ್ಲಿರುವುದರಿಂದ ಭೂಮಿಯೊಳಗೆ ಬೇಗ ಕೊಳೆಯುತ್ತವೆ. ಸೂಕ್ಷ್ಮಾಣುಗಳು ವೃದ್ಧಿಸುತ್ತವೆ. ಮಣ್ಣಿನ ಸಾವಯವ ಕಾರ್ಬನ್ ಅಧಿಕವಾಗುತ್ತದೆ. ಶೇಕಡ ಕನಿಷ್ಟ ೨೦ ರಷ್ಟು ಪ್ರಮಾಣದಲ್ಲಿ ಹಸಿರೆಲೆಯನ್ನು ಕಾಂಪೋಸ್ಟ್ ಗುಂಡಿಯಲ್ಲಿ ಪದರ ಪದರವಾಗಿ ಹಾಕಿದಾಗ ತಿಪ್ಪೆಗೊಬ್ಬರ, ಒಣಹುಲ್ಲು, ಕಸಕಡ್ಡಿ ಬೇಗ ಕರಗಿ ಪರಿಪಕ್ವವಾಗುವುದು. ಇದಕ್ಕೆ ಸರಿಯಾದ ಪ್ರಮಾಣದ ತೇವಾಂಶವೂ ಇರಬೇಕು. ಹಸಿರೆಲೆ ಇಲ್ಲದ ಕಾಂಪೋಸ್ಟ್ ಕೊಳೆಯಲು ಬಹಳ ಸಮಯ ತೆಗೆದುಕೊಳ್ಳುತ್ತದೆ. ಪೋಷಕಾಂಶಗಳೂ ಕೂಡ ಕಡಿಮೆ ಪ್ರಮಾಣದಲ್ಲಿರುತ್ತವೆ.

**ಕೋಷ್ಟಕ ೨**

**ಸಾಮಾನ್ಯವಾಗಿ ಬೆಳೆಯುವ ಹಸಿರೆಲೆ ಗೊಬ್ಬರಗಳಲ್ಲಿರುವ ಪೋಷಕಾಂಶಗಳು**

| ಸಸ್ಯಗಳ ಹೆಸರು | ಹಸಿರೆಲೆಗಳಲ್ಲಿರುವ ಪೋಷಕಾಂಶಗಳ ಪ್ರಮಾಣ (ಶೇಕಡ) | | |
|---|---|---|---|
| | ಸಾರಜನಕ | ರಂಜಕ | ಪೊಟ್ಯಾಷ್ |
| ಡಯಂಚ | ೩.೫೦ | ೦.೬೦ | ೧.೨೦ |
| ಸೆಸ್‌ಬೇನಿಯ | ೩.೦೦ | ೦.೫೦ | ೧.೬೦ |
| ಸಣಬು | ೨.೩೦ | ೦.೫೦ | ೧.೮೦ |
| ಅಲಸಂದಿ | ೨.೩೦ | ೦.೫೦ | ೨.೧೦ |
| ಗ್ಲಿರಿಸಿಡಿಯಾ | ೦.೮೦ | ೦.೧೦ | ೦.೭೦ |
| ಹೊಂಗೆ | ೧.೨೦ | ೦.೨೦ | ೦.೮೦ |
| ಎಕ್ಕದ ಗಿಡ | ೨.೦೬ | ೦.೫೪ | ೦.೩೧ |
| ಕ್ಯಾಶಿಯ | ೧.೬೦ | ೦.೨೪ | ೧.೨೦ |

ಭಾರತದಲ್ಲಿ ಸುಮಾರು ೬೪ ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಹಸಿರೆಲೆ ಗೊಬ್ಬರಗಳನ್ನು ಬಳಸುವರು. ಇದು ಒಟ್ಟು ಸಾಗುವಳಿ ಭೂಮಿಯ ಶೇಕಡ ೪.೪ ರಷ್ಟು ಪ್ರದೇಶದಲ್ಲಿ ಬಳಕೆಯಾಗುತ್ತಿದೆ. ಮುಖ್ಯವಾಗಿ ಎರಡು ವಿಧದಲ್ಲಿ ಹಸಿರೆಲೆ ಗೊಬ್ಬರವನ್ನು ಸಂಗ್ರಹಿಸಬಹುದು. ಕಾಡುಮೇಡುಗಳಲ್ಲಿ ದೊರೆಯುವ ನೇರಳೆ, ಹೊಂಗೆ ಮುಂತಾದ ಕಾಡುಮರಗಳ ಸೊಪ್ಪನ್ನು ಸಂಗ್ರಹಿಸಿ ನೇರವಾಗಿ ಜಮೀನಿನೊಳಗೆ ಹಾಕಿ ಉಳುಮೆ ಮಾಡುವುದು ಅಥವಾ ಗೊಬ್ಬರದ ಗುಂಡಿಗೆ ಹಾಕಿ, ಗೊಬ್ಬರದ ಜೊತೆ ಜಮೀನಿಗೆ ಹಾಕುವುದು ಇಲ್ಲವೇ ಕಾಂಪೋಸ್ಟ್ ಮಾಡಿ ಉಪಯೋಗಿಸುವುದು. ಎರಡನೇ ವಿಧಾನ ಸ್ವಂತ ಹೊಲಗದ್ದೆಗಳಲ್ಲಿ ಬೆಳೆದು ಸಂಗ್ರಹಿಸುವುದು. ಮೊದಲನೆ ವಿಧಾನ ಮಲೆನಾಡು ಗುಡ್ಡಗಾಡು ಪ್ರದೇಶದಲ್ಲಿ ಚಾಲ್ತಿಯಲ್ಲಿತ್ತು. ಕೆಲವು ಪ್ರದೇಶಗಳಲ್ಲಿ ಇದಕ್ಕಾಗಿಯೇ 'ಸೊಪ್ಪಿನ ಬೆಟ್ಟ'

ವನ್ನು ಮೀಸಲಿರಿಸಲಾಗುತ್ತಿತ್ತು. ದಕ್ಷಿಣ ಕನ್ನಡ, ಉಡುಪಿ,ಉತ್ತರ ಕನ್ನಡ, ಶಿವಮೊಗ್ಗ ಜಿಲ್ಲೆಗಳಲ್ಲಿ ಸೊಪ್ಪಿನ ಬೆಟ್ಟ ಇದ್ದವು. ಯಥೇಚ್ಛವಾಗಿ ಗದ್ದೆಗೆ ಮತ್ತು ಅಡಿಕೆ ತೋಟಗಳಿಗೆ ಸೊಪ್ಪನ್ನು ನೇರವಾಗಿ ಬಳಸುತ್ತಿದ್ದರು. ಇತ್ತೀಚೆಗೆ ಸೊಪ್ಪಿನ ಬೆಟ್ಟಗಳು ಬರಿದಾಗಿ, ಕಾಡುಗಳು ಕಡಿಮೆಯಾಗಿ ಈ ಬಗೆಯ ಹಸಿರೆಲೆ ಗೊಬ್ಬರವನ್ನು ಸಂಗ್ರಹಿಸುವುದು ಕಡಿಮೆಯಾಗಿದೆ. ಈಗ ಮಲೆನಾಡು ಪ್ರದೇಶದ ಬಹುತೇಕ ಕಡೆಗಳಲ್ಲಿ ಯುಪಟೋರಿಯಂ (ಕಮ್ಯುನಿಸ್ಟ್ ಗ್ರಾಸ್) ದಟ್ಟವಾಗಿ ಬೆಳೆಯುವುದನ್ನು ನೋಡಬಹುದು. ಇದು ಹಸಿರೆಲೆ ಗೊಬ್ಬರಕ್ಕೆ ಬಹಳ ಉಪಯುಕ್ತ. ಆದರೂ ಇದನ್ನು ಶೇಖರಿಸಿ, ಕಾಂಪೋಸ್ಟನ್ನಾಗಲಿ ಅಥವಾ ನೇರವಾಗಿ ಗದ್ದೆಗೆ ಹಾಕುವ ವಾಡಿಕೆಯಾಗಲಿ ಬೆಳೆದಿಲ್ಲ. ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ಮೂಡಿಗೆರೆ ಸಂಶೋಧನಾ ಕೇಂದ್ರದಲ್ಲಿ ಪ್ರಾಯೋಗಿಕವಾಗಿ ಮಾಡಿದ ಸಂಶೋಧನೆಯಲ್ಲಿ ಕಂಡುಬಂದಿರುವ ಅಂಶವೆಂದರೆ ಯುಪಟೋರಿಯಂ ಕಳೆಯನ್ನು ನಾಟಿಗೆ ಮುಂಚೆ ಹಾಕಿ ಉಳುಮೆ ಮಾಡಿದರೆ, ರಾಸಾಯನಿಕ ಗೊಬ್ಬರದಿಂದ ಬರುವ ಶೇಕಡ ೫೦ ರಷ್ಟು ಸಾರಜನಕ ಇದರಿಂದ ಒದಗುವುದಲ್ಲದೆ, ಪೈರಿಗೆ ಕೆಲವು ರೋಗಕೀಟ ನಿಗ್ರಹಿಸುವ ಶಕ್ತಿಯೂ ಬರುವುದೆಂದು ಗೊತ್ತಾಗಿದೆ. ಈ ಪ್ರದೇಶದಲ್ಲಿರುವ ರೈತರೆಲ್ಲರೂ ಈ ಕಳೆಯನ್ನು ಹಸಿರೆಲೆ ಗೊಬ್ಬರವನ್ನಾಗಿ ಉಪಯೋಗಿಸಿದರೆ, ಕಳೆ ನಿಯಂತ್ರಣದೊಂದಿಗೆ ಬಹು ಉಪಯುಕ್ತವಾದ ಭೂಮಿ ಫಲವತ್ತತೆ ಹೆಚ್ಚಿಸಬಹುದು, ಬೇರೆ ಹಸಿರು ಮರಗಳನ್ನು ಕತ್ತರಿಸುವುದನ್ನೂ ತಪ್ಪಿಸಬಹುದು. ಸರ್ಕಾರ ಈಗ ಕೊಡುತ್ತಿರುವ ಯಾವುದಾದರೂ ಅನುದಾನದಲ್ಲಿ ಒಂದಿಷ್ಟನ್ನು ಈ ಕಳೆಯನ್ನು ಸಂಗ್ರಹಿಸಿ ರೈತರಿಗೆ ಸರಬರಾಜು ಮಾಡಲು ಕೊಡುವುದಾದರೆ ಪರಿಸರಕ್ಕೆ ಒಳ್ಳೆಯದು, ರೈತರಿಗೆ ಲಾಭ, ಉದ್ಯೋಗ ಅವಕಾಶ ಮುಂತಾದವು ಲಭಿಸುವುವು. ಯುಪಟೋರಿಯಂ ಶಾಪವಾಗುವ ಬದಲು ವರದಾನವಾಗಬಹುದು.

ನಮಗೆ ಈಗ ಉಳಿದಿರುವುದು ಬೇಕಾದ ಹಸಿರೆಲೆ ಗೊಬ್ಬರದ ಗಿಡಗಳನ್ನು ಬೇಸಾಯ ಭೂಮಿಯಲ್ಲೇ ಬೆಳೆಯುವುದು. ಈ ಪದ್ಧತಿ ರೈತರಿಗೆ ಹೊಸದೇನಲ್ಲ. ಈಗಲೂ ಗದ್ದೆಯಲ್ಲಿ ಸಣಬು ಬೆಳೆಸಿ ಉಳುಮೆ ಮಾಡುವುದನ್ನು ಅಲ್ಲಲ್ಲಿ ನೋಡಬಹುದು. ಆದರೂ ಹಸಿರೆಲೆ ಗೊಬ್ಬರದ ಗಿಡಗಳನ್ನು ಬೆಳೆಸಿ, ಬಳಸುವ ಪದ್ಧತಿ ಕ್ಷೀಣಿಸುತ್ತಿದೆ. ಅದರಲ್ಲೂ ರಸಗೊಬ್ಬರ ಬಳಕೆಗೆ ಬಂದಮೇಲೆ ಈ ಪದ್ಧತಿಯನ್ನು ಕೈಬಿಟ್ಟಿರುವಂತೆ ಕಾಣುತ್ತದೆ. ಮನುಷ್ಯನ ಆರೋಗ್ಯಕ್ಕೆ ಹಾಲು, ತುಪ್ಪ, ಮೀನು, ಮಾಂಸ, ಮೊಟ್ಟೆಯೊಂದಿಗೆ ಸೊಪ್ಪು, ಕಾಯಿ ಪಲ್ಯಗಳು ಹೇಗೆ ಅವಶ್ಯಕವೋ ಹಾಗೆ ಮಣ್ಣಿನ ಆರೋಗ್ಯಕ್ಕೆ ಹಸಿರೆಲೆ ಗೊಬ್ಬರ ಅಗತ್ಯ. ಹಸಿರೆಲೆ ಗೊಬ್ಬರ ಒಂದರಿಂದಲೇ ಬೆಳೆಗೆ ಪೂರ್ಣ ಪೋಷಕಾಂಶಗಳನ್ನು ಒದಗಿಸಲು ಸಾಧ್ಯವಿಲ್ಲ. ಆದರೂ ಅದರ ಒತ್ತು ಇಲ್ಲದಿದ್ದರೆ, ರಾಸಾಯನಿಕ ಗೊಬ್ಬರದ ಪೂರ್ಣ ಉಪಯೋಗವೂ ದೊರೆಯದು. ಕೆಲವು ಸಣ್ಣ ಪ್ರಮಾಣದಲ್ಲಿ ಬೇಕಾಗುವ ಪೋಷಾಕಾಂಶಗಳು ಹಾಗೂ ಸೂಕ್ಷ್ಮಾಣು ಜೀವಿಗಳಿಂದ ಉತ್ಪತ್ತಿಯಾಗುವ, ನಮಗೆ ಅರಿಯದೆ ಇರುವ, ಪೈರಿಗೆ ಚೈತನ್ಯ ಕೊಡುವ ವಸ್ತು ಉತ್ಪತ್ತಿಯಾಗಲು ಹಸಿರೆಲೆ ಗೊಬ್ಬರ ಸಹಾಯವಾಗುವುವು. ಈ ಚೈತನ್ಯಕ್ಕೆ ಪೂರಕವಾಗಿ ಬೇಕಾಗಿರುವ ತೇವಾಂಶ ಮಣ್ಣಿನೊಳಗೆ ಹೆಚ್ಚು ಕಾಲ ಉಳಿಯಬೇಕಾದರೆ ಹಸಿರೆಲೆ ಗೊಬ್ಬರದ ಅವಶ್ಯಕತೆ ಇದೆ.

ಮುಖ್ಯವಾದ ಕೆಲವು ಹಸಿರೆಲೆ ಗಿಡಗಳು ಬಳಕೆಯಲ್ಲಿರುವವು ಅಥವಾ ಬಳಸಬಹುದಾದವುಗಳೆಂದರೆ ಅಲಸಂದೆ, ಸನ್‌ಹೆಂಪ್(ಕ್ರೊಟಲೇರಿಯಾ ಬಗೆ), ಸೆಸ್‌ಬೇನಿಯಾ (ಸೆಸ್‌ಬೇನಿಯಾ ಸ್ಪೀನಿಯೋಸಾ), ಡಯಾಂಚ (ಸೆಸ್‌ಬೇನಿಯಾ ಆಕ್ಯುರಿಯೇಟಾ), ಟೆಫ್ರೋಸಿಯಾ ಪರ್‌ಫ್ಯೂರಿಯಾ ಇಂಡಿಗೋಫೆರಾ ಮುಂತಾದವು. ಹಸಿರಲೆ ಮರಗಳಲ್ಲಿ ಹೊಂಗೆ, ನೇರಳೆ, ಬೇವು, ಎಕ್ಕ, ಉಗನಿ, ಕಾಸರಕ ಮುಖ್ಯವಾದವು. ಪೊದೆಗಳಲ್ಲಿ ಲಾಂಟಾನ, ಟೆಫ್ರೋಸಿಯ, ಇಂಡಿಗೊಫೆರ, ಗ್ಲಿರಿಸಿಡಿಯಾ ಮುಂತಾದುವನ್ನು ಆಬಾದಿನ ಜಮೀನಿನ ಸುತ್ತಮುತ್ತ ಖಾಲಿ ಜಾಗದಲ್ಲಿ ಬೆಳೆಸಿ ವರುಷದಲ್ಲಿ ಒಂದೆರಡು ಬಾರಿ ಕತ್ತರಿಸಿ ಉಪಯೋಗಿಸಬಹುದು.

ನಮ್ಮ ಭೂಮಿಯ ಫಲವತ್ತತೆ ಮತ್ತು ಉತ್ಪಾದಕತೆ ಕಡಿಮೆಯಾಗಿದ್ದರೆ ಕಾಡು ಬರಿದು ಮಾಡಿದ್ದೇ ಒಂದು ಮುಖ್ಯ ಕಾರಣ. ಕಳೆದ ಐವತ್ತು ವರುಷದಲ್ಲಿ ಮೂವತ್ತುಮೂರು ಕೋಟಿ ಇದ್ದ ಜನಸಂಖ್ಯೆ ೧೦೩ ಕೋಟಿಗೆ ಏರಿದರೂ, ಆಹಾರ ಉತ್ಪಾದನೆಯಲ್ಲಿ ಸ್ವಾವಲಂಬಿಗಳಾಗಿದ್ದೇವೆಂದು ಹೆಮ್ಮೆಪಟ್ಟುಕೊಂಡರೂ, ಪರಿಸರ ದೃಷ್ಟಿಯಿಂದ, ಭೂಮಿಯ ಫಲವತ್ತತೆ ದೃಷ್ಟಿಯಿಂದ, ನಮ್ಮ ಪ್ರಗತಿಯನ್ನು ನೂರು ವರ್ಷಕ್ಕೆ ಹಿಂದೆ ತಳ್ಳಿದ್ದೇವೆಂದರೆ ತಪ್ಪಾಗಲಾರದು. ಒಂದು ಗಿಡ ಮರವಾಗಿ ಬೆಳೆದು ನೂರು ವರ್ಷ ಬದುಕಿದ ನಂತರವೇ ಅದರ ಭೋಗ ಭೂಮಿಗೆ ದೊರೆಯುವುದು. ಮರದ ಅಡಿ ಸತತವಾಗಿ ಬೀಳುವ ಎಲೆ, ಕಸ, ಕಡ್ಡಿ ಕೊಳೆತು ಹಲವಾರು ಜೀವಜಂತುಗಳು ಅಲ್ಲಿ ವೃದ್ಧಿಸಿ, ಮರದ ಆಶ್ರಯದಿಂದ ಮಳೆ, ಗಾಳಿಗೆ ಕೊಚ್ಚಿ ಹೋಗದೆ, ಫಲವತ್ತಾದ ಮಣ್ಣು ನಿರ್ಮಿತವಾಗುವುದು.

ಇಂತಹ ಮಣ್ಣನ್ನು ಮಾನವ ನಿರ್ಮಿಸುವುದು ಕಷ್ಟ. ಭಾರತದ ಉದ್ದಗಲಕ್ಕೆ ಇದ್ದ ಗೊಂಡಾರಣ್ಯವನ್ನು ಪುರಾಣ ಇತಿಹಾಸಗಳಲ್ಲಿ ಓದಿದ್ದೇವೆಯೇ ಹೊರತು ಇಂದಿನ ಪೀಳಿಗೆಗೆ ಅರಿವೇ ಇಲ್ಲ. ಏರುತ್ತಿರುವ ಜನಸಂಖ್ಯೆಗೆ ಆಹಾರ ಒದಗಿಸುವ ಆತುರದಿಂದ ಇದ್ದ ಗಿಡ, ಮರ ಪೊದೆಗಳನ್ನೆಲ್ಲ ಕತ್ತರಿಸಿ ಉಳುವ ಭೂಮಿಯನ್ನು ವಿಸ್ತರಿಸಿ ಹಸಿರು ಕಾಣದಂತಾಯಿತು. ಅರಣ್ಯದ ಅಗತ್ಯತೆಯನ್ನು ಅರಿತು, ಸರ್ಕಾರ ಅರಣ್ಯವನ್ನು ವಿಸ್ತರಿಸುವ ಹಲವಾರು ಯೋಜನೆಗಳನ್ನು ಹಾಕಿಕೊಂಡರೂ, ಅವುಗಳ ದೃಷ್ಟಿ ಸದ್ಯದ ಮಾನವನ ಅಗತ್ಯ ಪೂರೈಸಲು ಉರುವಲು ಅಥವಾ ಕಾರ್ಖಾನೆಗಳಿಗೆ ಬೇಕಾದ ಮರಗಿಡಗಳನ್ನು ಬೆಳೆಸುವ ಉದ್ದೇಶವಾಗಿಯೇ ಹೊರತು ನಿತ್ಯಹರಿದ್ವರ್ಣವಾಗಿ ಮುಂದೆಂದೂ ನಾಶವಾಗದಂತೆ ಮರಗಳನ್ನು ಬೆಳೆಸುವ ಪ್ರವೃತ್ತಿ ಕಾಣುವುದಿಲ್ಲ. ಹಿಂದಿನ ಕಾಲದಲ್ಲಿ ಪ್ರತಿಯೊಂದು ಹಳ್ಳಿಗೂ ಒಂದು ಗುಂಡು ತೋಪು, ನೆಡು ತೋಪು ಅಥವಾ ದೇವರ ಕಾಡು, ಊರು ಕಾಡು ಎಂದು ಮೀಸಲಾಗಿ ಇರುತ್ತಿತ್ತು. ಊರ ಜನರು ಯಾವುದೇ ಕಾರಣಕ್ಕೂ ಇಲ್ಲಿಯ ಗಿಡಮರಗಳನ್ನು ಕಡಿಯುತ್ತಿರಲಿಲ್ಲ. ಇವುಗಳಿಂದ ವರ್ಣಿಸಲಾಗದ ಉಪಯೋಗವಿದ್ದರೂ ಮುಖ್ಯವಾಗಿ ಇವುಗಳ ಪರಿಸರದಲ್ಲೊಂದು ಬಗೆಯ ಜೀವಕಳೆ ಇರುತ್ತಿತ್ತು. ಜನರ ಶಾಂತಿ ಸೌಹಾರ್ದತೆಗೆ ಕಂಕಣಬದ್ಧವಾಗಿ ನಿಂತಿವೆಯೋ ಎಂಬಂತಿರುತ್ತಿತ್ತು. ಇಂದು ಇಂತಹ ನೆಡತೋಪು ಕೆಲವು ಕಡೆ ಬೋಳು ಮರಗಳಾಗಿ ನಿಂತಿವೆ. ಇವುಗಳನ್ನು ಪುನಶ್ಚೇತನ ಮಾಡುವ ಯಾವುದೇ ಕಾರ್ಯಕ್ರಮಗಳು ಕಾಣುತ್ತಿಲ್ಲ. ಅದಕ್ಕಾಗಿ ಮೀಸಲಿದ್ದ ಜಾಗಗಳೆಷ್ಟೋ ನಿವೇಶನಗಳಾಗಿ ಮನೆಗಳಾಗಿವೆ. ಇಂತಹ ತೋಪುಗಳನ್ನು ಮಾಡಬೇಕೆಂಬ ಮನಸ್ಸಿದ್ದವರಿಗೂ ಜಾಗ ದೊರೆಯುವುದು ಕಷ್ಟ.

ಪ್ರತಿಯೊಬ್ಬ ರೈತನಿಗೂ, ಮನೆಯಲ್ಲಿ ಮಕ್ಕಳಿರುವಂತೆ ಅವನ ಜಮೀನಿನಲ್ಲಿ ಮರಗಳಿರಬೇಕೆಂಬ ಅರಿವು ಮೂಡಬೇಕು. ಮಡದಿ, ಮಕ್ಕಳಾದರೆ ಸಂಸಾರದ ಬವಣೆ, ಮರಗಳ ಅಡಿಯಾದರೋ ಮನಶ್ಶಾಂತಿ. ಸಾವಯವ ಕೃಷಿಗೆ, ವ್ಯವಸಾಯ ಭೂಮಿಯ ಆಜುಬಾಜಿನಲ್ಲಿ ಮರಗಳಿದ್ದರೆ ಪಕ್ಷಿಗಳಿಗೆ ಆಶ್ರಯ ಸ್ಥಾನ. ಅವುಗಳಿಂದ ಕೀಟಬಾಧೆ ನಿಯಂತ್ರಣ, ಮರಗಳಿಂದ ಉದುರುವ ಎಲೆ, ಕಸಕಡ್ಡಿ ಭೂಮಿಗೆ ಬೆರಗು. ಹಣ್ಣು ಹಂಪಲು ಮರಗಳಾದರೆ ರೈತನಿಗೂ ಉಪಯೋಗ. ಕನಿಷ್ಠ ಒಂದು ಎಕರೆ ಸಾಗುವಳಿ ಜಮೀನಿಗೆ ಒಂದೆರಡು ಮರವನ್ನಾದರೂ ಕಡ್ಡಾಯವಾಗಿ ಬದುವಿನ ಮೇಲೋ, ಖಾಲಿ ಜಾಗದಲ್ಲೋ ಬೆಳೆಸಲು ಉತ್ತೇಜಿಸಿದರೆ, ಮುನ್ನೂರು ದಶಲಕ್ಷ ಮರಗಳು ಈ ದೇಶದಲ್ಲಿ ಕೊಡಲಿ ಪೆಟ್ಟಿಗೆ ಸಿಗದೆ ಶಾಶ್ವತವಾಗಿ ಬದುಕಲು ಸಾಧ್ಯ. ಸರ್ಕಾರ ರೈತರಿಗೆ ಹಲವಾರು ಸವಲತ್ತುಗಳನ್ನು ಕೊಟ್ಟು, ಪ್ರೋತ್ಸಾಹಿಸಬಹುದು. ನಗರ, ಪಟ್ಟಣ ಪ್ರದೇಶದಲ್ಲಿ ಬೀದಿಯ ಇಕ್ಕೆಲದಲ್ಲಿ ಮರ ಬೆಳೆಸಲು ಅದೆಷ್ಟು ಖರ್ಚು ಮಾಡುವರು. ಗುಂಡಿ ತೆಗೆದು, ಗೊಬ್ಬರ ಹಾಕಿ, ಸಸಿನೆಟ್ಟು, ನೀರು ಎರೆದು, ರಕ್ಷಾ ಕವಚ ತೊಡಿಸಿ (Tree Guard) ಬೆಳೆಸಿದ ಗಿಡಗಳನ್ನು ತಲೆ ಎತ್ತದಂತೆ ಕಡಿಯಲು, ಫೋನ್ ಮತ್ತು ವಿದ್ಯುತ್ ಇಲಾಖೆಯವರು ಸದಾ ಹವಣಿಸುತ್ತಿರುತ್ತಾರೆ. ಮೂವತ್ತು ವರ್ಷವಾದರೂ ಮರ ಮೊಟುಕಾಗಿಯೇ ಉಳಿಯುವುದು. ಈ ಸವಲತ್ತುಗಳನ್ನು ರೈತರಿಗೆ ಒದಗಿಸಿದರೆ ಅದೆಷ್ಟು ಗಿಡಗಳು ಮರವಾಗಿ ನಿಂತಿರುತ್ತಿದ್ದವೋ !

ಹಸಿರೆಲೆ ಗೊಬ್ಬರದ ಗಿಡಗಳನ್ನು ಬೆಳೆಸಿ ಬಳಸುವ ಕ್ರಮ ಹೇಗೆ? ಅದರಲ್ಲೂ ಖುಷ್ಕಿ ಜಮೀನಿನಲ್ಲಿ ಕೇವಲ ನಾಲ್ಕೈದು ತಿಂಗಳು ತೇವಾಂಶ ದೊರೆಯುವುದರಿಂದ ಕಟಾವಿನ ನಂತರ, ಬಿತ್ತನೆಗೆ ಮುಂಚೆ ಬೆಳೆಯಲು ಸಾಧ್ಯವಿಲ್ಲ. ನೀರಾವರಿ ಗದ್ದೆಗಳಲ್ಲಾದರೆ ಸಂದರ್ಭೋಚಿತವಾಗಿ ಸೆಣಬು, ಸ್‌ಸ್‌ಬೇನಿಯ, ಸನ್‌ಹೆಂಪ್‌ಗಳನ್ನು ಬೆಳೆದು, ಉತ್ತು ಭೂಮಿಗೆ ಸೇರಿಸಬಹುದು. ನೀರಿನ ಅಭಾವವಿರುವಲ್ಲಿ ಮಳೆಗಾಲದಲ್ಲಿಯೆ ಇವುಗಳನ್ನು ಬೆಳೆಸಬೇಕು. ನಾಲ್ಕೈದು ಎಕರೆ ಜಮೀನಿರುವ ರೈತರು, ಕನಿಷ್ಠ ಅರ್ಧ ಎಕರೆಯಲ್ಲಿಯಾದರೂ ಹಸಿರೆಲೆ ಗೊಬ್ಬರದ ಬೀಜಗಳನ್ನು ಮುಖ್ಯ ಬೆಳೆ ಬಿತ್ತುವಾಗಲೆ ಬಿತ್ತಿ ಬೆಳೆದು ಹೂವಿಗೆ ಬರುವಾಗ ಕಟಾವು ಮಾಡಿ ಗೊಬ್ಬರದ ಜೊತೆ ಕಾಂಪೋಸ್ಟ್ ಮಾಡಿ, ಮುಂದಿನ ಬೆಳೆಗೆ ಉಪಯೋಗಿಸಿದಾಗ ಅರ್ಧ ಎಕರೆಯಲ್ಲಿ ನಷ್ಟವಾದ ಇಳುವರಿಗಿಂತ ಹೆಚ್ಚಿನ ಇಳುವರಿಯನ್ನು ಉಳಿದ ಜಮೀನಿನಲ್ಲಿ ಪಡೆಯಬಹುದು. ಅಲಸಂದೆ, ಸನ್‌ಹೆಂಪ್, ಕ್ರೊಟಲೇರಿಯ ಮುಂತಾದ ಹಸಿರೆಲೆಗಳು ಹವೆಯಲ್ಲಿರುವ ಸಾರಜನಕವನ್ನು ಸಂಗ್ರಹಿಸಿ, ಬೇರುಗಳ ಗಂಟಿನಲ್ಲಿ ಕಟ್ಟಿಟ್ಟು ಭೂಮಿಗೆ ನಿಧಾನವಾಗಿ ಒದಗಿಸುತ್ತವೆ. ಇವುಗಳು ಬೆಳೆದಂಥ ಜಾಗ ಫಲವತ್ತಾಗುತ್ತದೆ. ಪ್ರತಿ ವರುಷ ಒಂದು ಎಕರೆಯಲ್ಲಿ ಇವುಗಳನ್ನು ಬೆಳೆಸಿದರೆ ನಾಲ್ಕೈದು ಎಕರೆ ಜಮೀನಿನಲ್ಲಿ ನಾಲ್ಕೈದು ವರುಷದಲ್ಲಿ ಎಲ್ಲ ಪ್ರದೇಶದಲ್ಲಿ ಬೆಳೆದಂತಾಗಿ ಭೂಮಿ ಹಸನಾಗುವುದು. ಒಂದು ಎಕರೆಗೆ ಬೇಕಾಗುವ ಬೀಜ- ಅಲಸಂದೆಯಾದರೆ

೧೦-೧೨ ಕೆ.ಜಿ. ಸನ್‌ಹೆಂಪ್ ೧೩-೧೫ ಕೆ.ಜಿ. ಮೂರು ತಿಂಗಳಲ್ಲಿ ೩-೪ ಟನ್ ಅಲಸಂದೆ, ೨-೩ ಟನ್ ಸನ್‌ಹೆಂಪ್ ಹಸಿರೆಲೆ ದೊರೆಯುವುದು. ಇವನ್ನು ಒಣಗಲು ಬಿಡದೆ, ಹಟ್ಟಿಗೊಬ್ಬರ, ದರಗು, ಒಣಹುಲ್ಲು ಇತರೆ ವ್ಯವಸಾಯ ತ್ಯಾಜ್ಯವಸ್ತುವಿನ ಒಟ್ಟಾರೆ ಅಂಶದ ೨೦ ಭಾಗದಂತೆ, ತೇವಾಂಶ ಶೇಕಡ ೬೦ ರಷ್ಟಿರುವಂತೆ ಕಾಂಪೋಸ್ಟ್ ಮಾಡಿದಾಗ ಒಣಹುಲ್ಲು, ದರಗು, ಕಸಕಡ್ಡಿ, ಗೊಬ್ಬರದೊಂದಿಗೆ ಬೆರೆತು ಬೇಗ ಕಾಂಪೋಸ್ಟ್ ಆಗಿ, ಪೋಷಕಾಂಶಗಳು ಮೂರು ನಾಲ್ಕು ಪಟ್ಟು ಹೆಚ್ಚುವುವು. ಯಾವುದೇ ತ್ಯಾಜ್ಯ ವಸ್ತುವನ್ನು ಕಾಂಪೋಸ್ಟ್ ಮಾಡುವಾಗ ಕನಿಷ್ಠ ಶೇಕಡ ೨೦ ರಷ್ಟು ಹಸಿರೆಲೆ ಬೇಕು. ಹಸಿರೆಲೆಯಲ್ಲಿ ಸಾರಜನಕ ಮತ್ತು ಇಂಗಾಲದ ಪ್ರಮಾಣ ೫೦-೮೦:೧ರವರೆಗೆ ಇರುವುದರಿಂದ ಕೊಳೆಯಲು ಪೂರಕವಾಗಿ ಸೂಕ್ಷ್ಮಾಣುಗಳಿಗೆ ಪ್ರೋತ್ಸಾಹ ನೀಡಿ ಕೊಳೆಯುವ ಕ್ರಿಯೆಯನ್ನು ಚುರುಕುಗೊಳಿಸುತ್ತದೆ. ಹಸಿರೆಲೆ ಕನಿಷ್ಠ ಪ್ರಮಾಣದಲ್ಲಿ ಇಲ್ಲದಿದ್ದರೆ, ಕಾಂಪೋಸ್ಟ್ ಕೊಳೆಯಲು ಆರು ತಿಂಗಳಿಂದ ವರ್ಷವೇ ಹಿಡಿಯಬಹುದು. ಅಷ್ಟು ಸಮಯ ತೆಗೆದುಕೊಂಡರೂ ದನಿನ ಗೊಬ್ಬರ ಮತ್ತು ಹಸಿರೆಲೆ ಗೊಬ್ಬರ ಇಲ್ಲದಿದ್ದರೆ ಕಾಂಪೋಸ್ ಹ್ಯೂಮಸ್ ಆಗಿ ಪರಿವರ್ತನೆ ಆಗುವುದು ದುರ್ಲಭ.

ಹಸಿರೆಲೆ ಗೊಬ್ಬರ ಬೇಸಾಯ, ಎರಡು ದೃಷ್ಟಿಯಿಂದ ರೈತರಿಗೆ ಲಾಭದಾಯಕ. ಮೊದಲನೆಯದು ಇವುಗಳು ಬೆಳೆದ ನೆಲ ಫಲವತ್ತಾಗುತ್ತದೆ, ಎರಡನೆಯದು ಕಾಂಪೋಸ್ಟ್ ಹಸನಾಗಿ ನಾಲ್ಕು ಪಟ್ಟು ಪೋಷಕಾಂಶಗಳು ವೃದ್ಧಿಯಾಗುತ್ತವೆ. ಕೇವಲ ಕೊಟ್ಟಿಗೆ ಗೊಬ್ಬರ, ತಿಪ್ಪೆ ಗೊಬ್ಬರ ಹೊಲಗದ್ದೆಗಳಿಗೆ ಹಾಕಿದಾಗ ಬೆಳೆಗೆ ದೊರೆಯುವ ಪೋಷಕಾಂಶ ಅತ್ಯಲ್ಪ. ಏಕೆಂದರೆ ಇದು ಪೂರ್ಣ ಕೊಳೆತಿರುವುದಿಲ್ಲ. ತೇವಾಂಶವಿಲ್ಲದಾಗ ಹಾಕಿದರೆ ಗೆದ್ದಲು ತಿಂದು ಹಾಳಾಗುತ್ತದೆ. ಮಣ್ಣಿನೊಳಗೆ ಸೇರಿದ್ದು ಮಣ್ಣಿನೊಳಗಿರುವ ಸಾರಜನಕದ ಸಹಾಯದಿಂದ ಸೂಕ್ಷ್ಮಾಣು ವೃದ್ಧಿಸಿ ಇದನ್ನು ಕರಗಿಸಿ ಗಿಡಗಳಿಗೆ ಒದಗಿಸಬೇಕು. ಅಷ್ಟರಲ್ಲಿ ನಾನಾ ಕಾರಣಗಳಿಂದ ಇದು ಪೋಲಾಗುವ ಸಾಧ್ಯತೆಗಳಿವೆ. ಕೊಳೆತ ಕಾಂಪೋಸ್ಟ್ ಅನ್ನು ಗೆದ್ದಲು ಕೂಡ ತಿನ್ನುವುದಿಲ್ಲ. ಹೆಚ್ಚಿನ ಪೋಷಕಾಂಶಗಳು ಬೆಳೆಗೆ ಬೇಗನೆ ದೊರೆಯುತ್ತವೆ. ಅಧಿಕ ಇಳುವರಿ ಬರುತ್ತದೆ. ಈ ಕಾರಣಗಳಿಗಾಗಿ ಹಸಿರೆಲೆ ಬೆಳೆಗಳನ್ನು ಕಾಂಪೋಸ್ಟ್ ಮಾಡಿ ಉಪಯೋಗಸುವುದರಿಂದ ಭೂಮಿಗೆ ಒಳ್ಳೆಯದು, ರೈತನಿಗೂ ಲಾಭದಾಯಕ.

ಬಯಲುಸೀಮೆಯ ಬೆಂಗಾಡಿನಲ್ಲಿ ಹಸಿರೆಲೆ ಗೊಬ್ಬರವನ್ನು ಎಲ್ಲಿಂದ ಸಂಗ್ರಹಿಸುವುದು? ಅವನ ಸ್ವಂತ ಜಮೀನಿನಲ್ಲೇ ಬೆಳೆಯಬೇಕು. ಬಿತ್ತನೆ ಕಾಲದಲ್ಲಿ ಬದುವಿನ ಸುತ್ತ, ಮಧ್ಯೆ ಸಾಲುಗಳಲ್ಲಿ ಅಥವಾ ಪ್ರತ್ಯೇಕವಾಗಿ ಬೆಳೆದು ಕಾಂಪೋಸ್ಟ್ ಮಾಡಬೇಕು. ಮನುಷ್ಯನ ಪೌಷ್ಟಿಕತೆಯ ದೃಷ್ಟಿಯಿಂದ ನಾವು ತಿನ್ನುವ ಧಾನ್ಯ, ಕಾಳು ಕಡ್ಡಿಯನ್ನು ದನ, ಕುರಿ, ಕೋಳಿ, ಹಂದಿಗೆ ಹಾಕಿ ಅವುಗಳಿಂದ ಬರುವ ಹಾಲು, ಮೊಟ್ಟೆ, ಮಾಂಸವನ್ನು ತಿನ್ನುವುದಿಲ್ಲವೆ? ಹಾಗೆಯೇ ಭೂಮಿಯನ್ನು ಜೀವಂತಗೊಳಿಸಲು ಅದಕ್ಕೂ ಸಾವಯವ ಪೌಷ್ಟಿಕ ಆಹಾರ ಬೇಕು. ಸಾವಯವ ವಸ್ತುಗಳನ್ನು ಸೂಕ್ಷ್ಮಾಣುಗಳಿಗೆ ಉಣಿಸಿದಾಗ ಸಸ್ಯಗಳಿಗೆ ಬೇಕಿರುವ ಪೌಷ್ಟಿಕಾಂಶಗಳೆಲ್ಲ ದೊರೆಯುವುವು. ಅವು ತಿಂದು ಪಕ್ವ ಮಾಡಿ ಅದರೊಂದಿಗೆ ಅವುಗಳ ದೇಹವೂ ಬೆರೆತು ಪಕ್ವವಾಗಿ ಮಣ್ಣು ಜೀವಂತವಾಗುತ್ತದೆ. ಕೇವಲ ರಾಸಾಯನಿಕ ಗೊಬ್ಬರದಿಂದ ಜೀವಂತ ಮಾಡಲು ಸಾಧ್ಯವಿಲ್ಲ. ಬದಲಾಗಿ ಬರಡಾಗುವ ಸಾಧ್ಯತೆಗಳೇ ಹೆಚ್ಚು.

ಸೆಸ್‌ಬೇನಿಯಾವನ್ನು ವಿವಿಧ ರೀತಿಯಲ್ಲಿ ಭತ್ತದ ಗದ್ದೆಗೆ ಬಳಸಲಾಗುತ್ತದೆ. ಅತಿ ಕಡಿಮೆ ಖರ್ಚಿನಲ್ಲಿ ಬೆಳೆಯುವ ವಿಧಾನವೆಂದರೆ ಭತ್ತದ ಕಟಾವಿಗೆ ೩-೪ ದಿನಗಳ ಮುಂಚಿತವಾಗಿ ೨೦ ಕೆ.ಜಿ.ಯಷ್ಟು ಸೆಸ್‌ಬೇನಿಯ ಬೀಜವನ್ನು ಒಂದು ಎಕರೆ ಪ್ರದೇಶದಲ್ಲಿ ಚೆಲ್ಲಿದಾಗ, ಕಟಾವಿನ ಸಮಯದಲ್ಲಿ ಜನರ ಕಾಲಿಗೆ ಸಿಕ್ಕಿ ಮಣ್ಣಿನೊಂದಿಗೆ ಬೆರೆತು, ಅಲ್ಲಿರುವ ತೇವಾಂಶದಲ್ಲೇ ಮೊಳಕೆಯೊಡೆದು ಬೆಳೆಯುತ್ತದೆ. ಹದವಾಗಿ ಬೆಳೆದ ಸೆಸ್‌ಬೇನಿಯವನ್ನು ಸ್ವಲ್ಪ ತೇವಾಂಶವಿರುವಾಗಲೇ ಉಳುಮೆ ಮಾಡಿ ಮಣ್ಣಿನೊಳಗೆ ಸೇರಿಸಬಹುದು.

ಕಬ್ಬು ಕಟಾವಾದ ಮೇಲೆ, ಸೋಗೆಯನ್ನು ಒಣಗಲು ಬಿಟ್ಟು, ಬೆಂಕಿ ಹಚ್ಚಿ ಸುಡುವುದು ಸಾಮಾನ್ಯ ಪದ್ಧತಿ. ಸ್ಥಳದಲ್ಲೇ ದೊರೆಯುವ ಇಷ್ಟೊಂದು ಹಸಿರು ಎಲೆಯನ್ನು ಸುಡುವುದು ದಡ್ಡತನ, ಕಬ್ಬಿನ ಸೋಗೆಯಲ್ಲಿ ಕೇವಲ ೦.೨ ಅಂಥ ಸಾರಜನಕವಿದ್ದರೂ, ಬೇರೆ ಹಸಿರೆಲೆ ಗೊಬ್ಬರಗಳಂತೆ ಸಾರಜನಕಕ್ಕಾಗಿ ಕಾಂಪೋಸ್ಟ್ ಮಾಡುವುದೂ ಸೂಕ್ತವಲ್ಲ. ಆದರೆ ಕಬ್ಬು ಕಟಾವು ಆದ ತಕ್ಷಣ ಸೋಗೆ ಇನ್ನೂ ಹಸಿರಾಗಿಯೇ ಇರುವಾಗ ಸಾಲಿನ ಮಧ್ಯದಲ್ಲಿ ಆಳವಾದ ಕಡಲು ಮಾಡಿ ಸೋಗೆಯನ್ನು ಹೂಳಿದರೆ ಭೂಮಿಯ ಭೌತಿಕ ರಚನೆ ಹಸನಾಗುವುದಾಗಿ ತಿಳಿದಿದೆ. ಸ್ವಲ್ಪ ಶ್ರಮವಾದರೂ, ಹೀಗೆ ಹೂಳಿದ ಕಬ್ಬಿನ ಸೋಗೆಗೆ ಸಗಣಿಯ ಬಗ್ಗಡವನ್ನು ತೆಳುವಾಗಿ

ಹಾಕಿದರೆ, ಕಾಂಪೋಸ್ಟ್ ಮಾದರಿಯ ಗೊಬ್ಬರವಾಗಿಯೂ ಪರಿಣಮಿಸುವುದು. ಸೋಗೆಗಳನ್ನು ಸುಡದೆ ಅದೇ ಗದ್ದೆಯಲ್ಲಿ ಹೂಳಿ ಹಲವಾರು ಕೂಳೆ ಬೆಳೆ ತೆಗೆದುಕೊಂಡು ದಾಖಲೆ ಮಾಡಿರುವುದಕ್ಕೆ ಶಿವಮೊಗ್ಗದ ಡಾ. ಪ್ರಫುಲ್ಲಚಂದ್ರರವರೆ ನಿದರ್ಶನ.

ಕಬ್ಬಿನ ಗದ್ದೆಗೆ ಹಸಿರೆಲೆ ಗೊಬ್ಬರ ದೊರಕಿಸುವ ಮತ್ತೊಂದು ವಿಧಾನವೆಂದರೆ ಕಬ್ಬು ನಾಟಿ ಮಾಡುವಾಗ ಸಾಲಿನ ಮಧ್ಯೆ ಸೋಯಾ ಅವರೆ ಅಥವಾ ಅಲಸಂದೆಯನ್ನು ಬೆಳೆದು ಮೂರು ತಿಂಗಳಲ್ಲಿ ತೆಗೆದುಕೊಂಡು ಉಳಿಕೆಯನ್ನು ಅಲ್ಲಿಯೇ ಬಿಟ್ಟರೆ ಅಥವಾ ಮಣ್ಣಿನಲ್ಲಿ ಸೇರಿಸಿದರೆ ಕಬ್ಬಿನ ಇಳುವರಿ ಹೆಚ್ಚಾಗುವುದಲ್ಲದೆ, ಈ ಬೆಳೆಗಳಿಂದ ರೈತರ ಆದಾಯವೂ ಸ್ವಲ್ಪಮಟ್ಟಿಗೆ ಸುಧಾರಿಸುತ್ತದೆ.

## ಕಾಂಪೋಸ್ಟ್ ಗೊಬ್ಬರ :

ಕಾಂಪೋಸ್ಟ್ ತಯಾರುಮಾಡುವುದು ಒಂದು ಕಲೆ ಹಾಗೂ ವಿಜ್ಞಾನ. ಪಾಕಶಾಲೆಯಲ್ಲಿ ವಿವಿಧ ಭಕ್ಷ್ಯಗಳನ್ನು ತಯಾರು ಮಾಡುವ ಕಲೆ ಮತ್ತು ಯಾವ ಪದಾರ್ಥವನ್ನು ಯಾವಾಗ, ಎಷ್ಟೆಷ್ಟು ಹಾಕಬೇಕೆನ್ನುವ ವಿಜ್ಞಾನ ಹೇಗೆ ಮುಖ್ಯವೋ ಹಾಗೆ, ಕಾಂಪೋಸ್ಟ್ ತಯಾರುಮಾಡುವ ಕಲೆಯಲ್ಲಿ ತ್ಯಾಜ್ಯ ವಸ್ತುಗಳನ್ನು ಯಾವ ಪ್ರಮಾಣದಲ್ಲಿ ಹೇಗೆ ಹಾಕಬೇಕೆಂಬ ಜ್ಞಾನ ಮುಖ್ಯ. ಒಂದೇ ಬಗೆಯ ಕಾಂಪೋಸ್ಟ್ ಎಲ್ಲಾ ಬೆಳೆಗಳಿಗೆ, ಎಲ್ಲಾ ಪ್ರದೇಶಗಳಲ್ಲಿ ಸೂಕ್ತವಲ್ಲವೆಂಬ ಅಂಶವನ್ನು ನಾನು ಕಂಡಿದ್ದು ಜಪಾನಿನ ಓಹಿಟೊ ಫಾರಂನಲ್ಲಿ. ಸಾವಯವ ಕೃಷಿ ತರಬೇತಿಯಲ್ಲಿದ್ದಾಗ ಒಂದು ಬಗೆಯ ಕಾಂಪೋಸ್ಟನ್ನು ನಿರ್ದಿಷ್ಟಿತ ಪ್ರಮಾಣದಲ್ಲಿ ಆರು ಬಗೆಯ ಬೆಳೆ, ಅಂದರೆ ಆಹಾರ ಧಾನ್ಯ, ಎಣ್ಣೆ ಕಾಳು, ಬೇಳೆ ಕಾಳು, ಸಾಸಿವೆ, ಬೆಂಡೆ, ಸೋಯ ಅವರೆಗಳಿಗೆ ಉಪಯೋಗಿಸಿದಾಗ ಮೊಳಕೆ ಒಡೆಯುವುದರಿಂದ ಹೂವಿನ ಹಂತದವರೆಗೆ ಪರೀಕ್ಷಿಸಿ, ಆಯಾ ಬೆಳೆಗಳಿಗೆ ಪ್ರತ್ಯೇಕ ಕಾಂಪೋಸ್ಟ್ ತಯಾರುಮಾಡಿ ಬೆಳೆದ ಬೆಳೆಗಳಿಗೆ ಹೋಲಿಸಿದಾಗ ಆಶ್ಚರ್ಯಕರವಾದ ಫಲಿತಾಂಶಗಳು ದೊರೆತವು. ಅಂದರೆ ವಿವಿಧ ರಾಸಾಯನಿಕ ಗೊಬ್ಬರಗಳನ್ನೂ ವಿವಿಧ ಬೆಳೆಗೆ ಪ್ರತ್ಯೇಕ ಪ್ರಮಾಣದಲ್ಲಿ ವಿವಿಧ ಹಂತಗಳಲ್ಲಿ ಕೊಡುವ ಹಾಗೆ, ಕಾಂಪೋಸ್ಟ್ ಗೊಬ್ಬರವನ್ನು ತಯಾರುಮಾಡಿದಾಗ ಪೂರ್ಣ ಫಲ ದೊರೆಯುವುದು.

ಸಾಮಾನ್ಯವಾಗಿ ಬಹಳ ಜನ ಈಗ ಅನುಸರಿಸುತ್ತಿರುವ ಪದ್ಧತಿಯೆಂದರೆ ಮನಸ್ಸಿಗೆ ಬಂದಂತೆ ಗುಂಡಿಗಳನ್ನು ತೋಡಿ, ಅದರೊಳಕ್ಕೆ ಗೊಬ್ಬರದಿಂದ ಹಿಡಿದು ಪರಿಸರದಲ್ಲಿ ದೊರೆಯುವ ಕಳೆ, ಕಸ, ಕಡ್ಡಿ, ಬೂದಿ, ಕಣದ ಉಳಿಕೆ ಮುಂತಾದುವುಗಳನ್ನು ಹಲವಾರು ದಿನಗಳು ತುಂಬಿ ಒಂದೆರಡಡಿ ಎತ್ತರಕ್ಕೆ ಬಂದಾಗ ಮೇಲೆ ಮುಚ್ಚಿಯೋ ಅಥವಾ ಮಣ್ಣುಮೆತ್ತಿ ಕೆಲವು ತಿಂಗಳು ಬಿಡುವುದು. ಈ ಕಾಂಪೋಸ್ಟ್ ಗುಂಡಿಯಲ್ಲಿ ತೇವಾಂಶ ಎಷ್ಟಿರಬೇಕು, ಸಗಣಿ ಮತ್ತಿತರ ತ್ಯಾಜ್ಯ ವಸ್ತುಗಳ ಪರಸ್ಪರ ಪ್ರಮಾಣ ಎಷ್ಟಿರಬೇಕು, ಹಸಿರೆಲೆ ಪ್ರಮಾಣವೆಷ್ಟಿರಬೇಕೆಂಬ ನಿಯಮಗಳಿಲ್ಲ. ಕಾಂಪೋಸ್ಟ್ ಗುಂಡಿಯಲ್ಲಿ ಉತ್ಪತ್ತಿಯಾಗುವ ಶಾಖ (ಟೆಂಪರೇಚರ್) ಗಣನೆಗೆ ಬರುವುದಿಲ್ಲ. ಇಂತಹ ಗುಂಡಿಗಳಲ್ಲಿ ಮೊದಲು ಹಾಕಿದ ಗೊಬ್ಬರ, ತ್ಯಾಜ್ಯವಸ್ತು, ಹೆಚ್ಚಿನ ಶಾಖಕ್ಕೆ ತುತ್ತಾಗಿ ಅಲ್ಲಿರುವ ಜೀವಾಣುಗಳೆಲ್ಲ ಸತ್ತು ಗಸೆಯಾಗುವುದು. ಮೇಲ್ಪದರದಲ್ಲಿ ಸರಿಯಾದ ಪ್ರಮಾಣದ ತೇವಾಂಶವಿಲ್ಲದೆ, ಶಾಖವೂ ಸಾಲದೆ, ಕಳಿಯದೆ ಹಾಗೇ ಇರುವುದು ಅಥವಾ ಅರ್ಧಂಬರ್ಧ ಕಳಿತಿರುವುದು.

ಕಾಂಪೋಸ್ಟಿಂಗ್ ಪ್ರಕ್ರಿಯೆಗಳು ಹಲವಾರು ಬಗೆ ಸೂಕ್ಷ್ಮ ಜೀವಿಗಳಿಂದ ನಡೆಯುವ ಕ್ರಿಯೆ. ಹಾಲು ಮೊಸರಾಗಬೇಕಾದರೆ ಹೆಪ್ಪು ಹಾಕುವಾಗ ಹಾಲು ಹದವಾಗಿ ಬೆಚ್ಚಗಿರಬೇಕು. ಹೆಪ್ಪು ಕೂಡ ಸೂಕ್ತ ಕಲ್ಚರ್ ಆಗಿರಬೇಕು. ಹುಳಿ ಹೆಪ್ಪು ಹಾಕಿದರೆ ಮೊಸರು ಹುಳಿಯಾಗುತ್ತದೆ, ಸಿಹಿಯಾದರೆ ಸಿಹಿಯಾಗುತ್ತದೆ. ಹಾಲಿನ ಬಿಸಿ ಹೆಚ್ಚಿದ್ದರೆ ಮೊಸರು ಒಡಕೊಡಕಾಗುತ್ತದೆ, ತಣ್ಣಗಿದ್ದರೆ ಬೇಗ ಹೆಪ್ಪಾಗುವುಲ್ಲ. ಕಾಂಪೋಸ್ಟ್ ಕ್ರಿಯೆಯೂ ಕೂಡ ಒಂದು ವಿಧದಲ್ಲಿ ಹಾಲು ಮೊಸರಾಗುವ ರೀತಿ. ಸೂಕ್ಷ್ಮ ಜೀವಿಗಳಿಗೆ ಸರಿಯಾದ ವಾತಾವರಣ ಕಲ್ಪಿಸದಿದ್ದರೆ ಬೇಕಾದ ಸಂಖ್ಯೆಯಲ್ಲಿ ಬೇಗ ವೃದ್ಧಿಯಾಗದೆ ಕೊಳೆಯುವ ಕ್ರಿಯೆಯಲ್ಲಿ ಏರುಪೇರಾಗುತ್ತದೆ. ಈ ಕ್ರಿಯೆಯಲ್ಲಿ ಭಾಗವಹಿಸುವ ಸೂಕ್ಷ್ಮ ಜೀವಿಗಳಿಗೆ ಉಷ್ಣಾಂಶ ೪೫ ರಿಂದ ೫೫ ಡಿಗ್ರಿ ಸೆಲ್ಸಿಯಸ್ ಇರಬೇಕು. ಆಮ್ಲಜನಕ ಧಾರಾಳವಾಗಿರಬೇಕು. ಸರಿಯಾದ ಪ್ರಮಾಣದ ತೇವಾಂಶ ಇರಬೇಕು. ಹೆಚ್ಚಿನ ಉಷ್ಣಾಂಶ ಬಯಸುವ ಜೀವಾಣುಗಳನ್ನು 'ಥರ್ಮೊಫಿಲಿಕ್' ಜೀವಾಣುಗಳೆಂದು ಕರೆಯುತ್ತಾರೆ. ಜೀವಾಣುಗಳ ಉಷ್ಣಾಂಶ ೪೫° ರಿಂದ ೫೫° ಸೆ. ಕೆಳಗೆ ಹೋದಾಗ ಇವುಗಳ ಕ್ರಿಯೆ ಮಂದಗತಿಯಲ್ಲಿ ನಡೆಯುತ್ತದೆ. ಆದುದರಿಂದ ಬೇಕಾದ ಉಷ್ಣಾಂಶ, ಧಾರಾಳವಾದ ಆಮ್ಲಜನಕ ಮತ್ತು ಸರಿಯಾದ ಪ್ರಮಾಣದ ತೇವಾಂಶ ಬಹುಮುಖ್ಯ. ಇವುಗಳ

ಜೊತೆಗೆ ಕಾಂಪೋಸ್ಟ್ ಮಾಡುವ ತ್ಯಾಜ್ಯ ವಸ್ತುಗಳ ಸಾರಜನಕ-ಇಂಗಾಲದ ಪ್ರಮಾಣದ ಮೇಲೆಯೂ ಜೀವಾಣುಗಳ ಭವಿಷ್ಯ ನಿಂತಿರುತ್ತದೆ. ಕಾಂಪೋಸ್ಟ್ ಬೇಗ ಕೊಳೆಯಬೇಕಾದರೆ ಇಂಗಾಲ-ಸಾರಜನಕ ಅಂಶ ೨೫-೪೦:೧ ಇದ್ದರೆ ಒಳ್ಳೆಯದು. ಅಂದರೆ ಒಣಹುಲ್ಲು, ಮರದ ಹುಡಿ, ಒಣಗಿದ ಕಸಕಡ್ಡಿ, ತರಗೆಲೆ ಹೊಟ್ಟು ಮುಂತಾದುವುಗಳಲ್ಲಿ ಸಿ.ಎನ್. ಅಂಶ ೫೦:೧ರ ಮೇಲಿರುತ್ತದೆ. ಹಸಿರೆಲೆ ಗೊಬ್ಬರದಲ್ಲಿ ೧೦:೧ರ ಒಳಗೆ ಇರುತ್ತದೆ. ಕೋಳಿಗೊಬ್ಬರ, ಹಂದಿಗೊಬ್ಬರ, ಹಸಿ ಸಗಣಿ ಮುಂತಾದವುಗಳಲ್ಲಿ ಸಾರಜನಕ ಜಾಸ್ತಿ ಇರುತ್ತದೆ. ಆದ್ದರಿಂದ ಕೊಳೆಯುವ ಪ್ರಕ್ರಿಯೆ ಬೇಗ ಆಗಬೇಕಾದರೆ ಹಸಿರೆಲೆ ಗೊಬ್ಬರವನ್ನು ಕನಿಷ್ಠ ಶೇಕಡ ೨೦ ರಷ್ಟಾದರೂ ಸೇರಿಸಬೇಕು. ಪ್ರಾಣಿಗಳ ಮಲಮೂತ್ರವನ್ನು ಉಪಯೋಗಿಸುವಾಗ ಅವುಗಳ ನಾಲ್ಕಾರು ಪಟ್ಟು ಬೇರೆ ತ್ಯಾಜ್ಯ ವಸ್ತುವನ್ನು ಬಳಸುವುದರಿಂದ ಸಿ:ಎನ್ ಪ್ರಮಾಣವನ್ನು ಸಮತೋಲನವಾಗಿ ಕಾಪಾಡಬಹುದು. ಆಗ ತ್ಯಾಜ್ಯ ವಸ್ತುಗಳನ್ನು ಕರಗಿಸುವಲ್ಲಿ ಜೈವಿಕ ಕ್ರಿಯೆ ಪರಿಣಾಮಕಾರಿಯಾಗುತ್ತದೆ.

ಕಾಂಪೋಸ್ಟ್ ಮಾಡುವಾಗ ಗಮನದಲ್ಲಿಡಬೇಕಾದ ಅಂಶವೆಂದರೆ ತ್ಯಾಜ್ಯ ವಸ್ತುಗಳು ತೀರ ಪುಡಿಯಾಗಿಯೂ ಇರಬಾರದು ಅಥವಾ ದೊಡ್ಡ ದೊಡ್ಡ ತುಂಡುಗಳಾಗಿಯೂ ಇರಬಾರದು. ತೀರ ಹುಡಿಯಾಗಿದ್ದದ್ದನ್ನು ನಾಲ್ಕೈದು ಅಡಿ ಎತ್ತರಕ್ಕೆ ಒಟ್ಟಿದಾಗ, ಒತ್ತಾಗಿ ಅಡಕವಾಗಿ, ಗಾಳಿಯಾಡಲು ತೊಂದರೆಯಾಗಿ, ಆಮ್ಲಜನಕದ ಅಭಾವದಿಂದ ಜೈವಿಕ ಕ್ರಿಯೆ ನಿಧಾನವಾಗುವುದು. ದೇಶದ ಅಥವಾ ಹೊರದೇಶದ ಕೇವಲ ಕೆಲವು ಕಾರ್ಖಾನೆಗಳು ಈ ಗೊಬ್ಬರ ತಯಾರುಮಾಡಿ, ಸಾವಿರಾರು ಮೈಲಿ ಸಾಗಿಸಿ ವಿತರಣೆ ಮಾಡುತ್ತಿವೆ. ತಯಾರಿಸುವ ಖರ್ಚು ಕೂಡ ದುಬಾರಿ. ಒಂದು ಟನ್ ರಾಸಾಯನಿಕ ಗೊಬ್ಬರ ತಯಾರಿಕೆಗೆ ತಗಲುವ ವೆಚ್ಚ ಸುಮಾರು ಎಂಟು ಸಾವಿರ ರೂಪಾಯಿಗಳಿಗೂ ಮಿಗಿಲು. ರೈತರು ಆ ವೆಚ್ಚದಲ್ಲಿ ಗೊಬ್ಬರ ಕೊಳ್ಳಲು ಶಕ್ತರಿಲ್ಲ. ಸರ್ಕಾರ ರೈತರ ಪರವಾಗಿ ಕಾರ್ಖಾನೆಗಳಿಗೆ ಧನ ಸಹಾಯ ಮಾಡಿ ಕಾರ್ಖಾನೆಗಳನ್ನು ಸಲಹುತ್ತಿದೆ. ದೇಶದ ಸದ್ಯದ ರಸಗೊಬ್ಬರದ ಬೇಡಿಕೆ ೧೫ ರಿಂದ ೨೦ ಮಿಲಿಯನ್ ಟನ್. ಇದು ಕೇವಲ ನಮ್ಮ ಸಾಗುವಳಿ ಭೂಮಿಯ ಶೇಕಡ ೩೦ ರಷ್ಟಕ್ಕೆ ಮಾತ್ರ ಭರಿಸುತ್ತದೆ. ಎಲ್ಲರೂ ರಾಸಾಯನಿಕ ಗೊಬ್ಬರ ಬಳಸುವುದಾದರೆ ಇನ್ನೂ ಮೂರು ಪಟ್ಟು ತಯಾರು ಮಾಡಬೇಕು. ಮುಂದೆ ಮುಂದೆ ರಾಸಾಯನಿಕ ಗೊಬ್ಬರ ತಯಾರು ಮಾಡುವ ಖರ್ಚು ದುಬಾರಿಯಾಗುವುದು. ಈ ಕೊರತೆಯನ್ನು ನೀಗಿಸಲು ಉಳಿದಿರುವ ಉಪಾಯ ಸ್ಥಳೀಯ ಸಂಪನ್ಮೂಲಗಳನ್ನು ಕ್ರೋಢೀಕರಿಸಿ ಸ್ಥಳೀಯರಿಂದಲೇ ಸಾಧ್ಯವಾದಷ್ಟು ಗೊಬ್ಬರವನ್ನು ಸಂಗ್ರಹಿಸುವುದು. ಕಾಂಪೋಸ್ಟ್ ವಿಧಾನದ ಮೂಲಕ, ಸ್ಥಳೀಯ ಗೊಬ್ಬರದ ಬೇಡಿಕೆಯನ್ನು ಪೂರೈಸುವ ಸಾಧ್ಯತೆಗಳಿವೆ. ಈಗಾಗಲೇ ಹಲವಾರು ಸಂಘ ಸಂಸ್ಥೆಗಳು, ಕಾಂಪೋಸ್ಟ್ ಕಾರ್ಪೊರೇಷನ್, ವರ್ಮಿ ಕಾಂಪೋಸ್ಟ್ ತಯಾರಕರು, ಕಾಂಪೋಸ್ಟ್ ಬಳಕೆಯನ್ನು ವೃದ್ಧಿಸಿದ್ದಾರೆ.

ನಮ್ಮ ರಾಜ್ಯದ ಶೇಕಡ ೬೫ ರಷ್ಟು ರೈತರು ಸಣ್ಣ ಹಿಡುವಳಿದಾರರು. ಎರಡು ಮೂರು ಎಕರೆಗಿಂತ ಕಡಿಮೆ ಜಮೀನು ಇರುವವರು ದನಗಳನ್ನು ಸಾಕಲು ಶಕ್ತರಲ್ಲ. ಅಂತಹವರು ಕೊಟ್ಟಿಗೆ ಗೊಬ್ಬರ ಕೊಂಡು ಹಾಕುವ ಸ್ಥಿತಿಯಲ್ಲಿಯೂ ಇಲ್ಲ. ಅನುದಾನದ ನೆಪದಲ್ಲಿ ಅಷ್ಟಿಷ್ಟು ರಸಗೊಬ್ಬರ ಹಾಕಿದರೆ ಆಯಿತು, ಇಲ್ಲದಿದ್ದರೆ ಇವರ ಜೊತೆ ಇವರ ಜಮೀನು ಕೂಡ ಹಸಿವಿನಿಂದ ನರಳುತ್ತಿರುತ್ತದೆ. ಕೆಲವರು ಹಾಲಿಗೋಸ್ಕರ ಹಸು, ಎಮ್ಮೆ ಇಟ್ಟುಕೊಂಡಿರುವವರು ಸಗಣಿಯನ್ನು ವಿತರಣೆ ಮಾಡುವವರಿದ್ದಾರೆ. ಸುಮಾರು ಒಂದು ಸಾವಿರ ಎಕರೆ ಸಾಗುವಳಿ ಇರುವ ಹಳ್ಳಿಗಳ ರೈತರೆಲ್ಲರೂ ಪರಸ್ಪರ ಸಹಾಯದಿಂದ ಅವರುಗಳ ಜಮೀನಿಗೆ ಸಾಕಾಗುವಷ್ಟು ಗೊಬ್ಬರವನ್ನು ತಯಾರು ಮಾಡುವ ಸಾಧ್ಯತೆ ಇದೆ. ಎಕರೆಗೆ ೫-೧೦ ಟನ್ ಗೊಬ್ಬರ ಬೇಕಿದ್ದರೆ, ಸಾವಿರ ಎಕರೆಗೆ ೫,೦೦೦ದಿಂದ ೧೦,೦೦೦ ಟನ್ ಗೊಬ್ಬರ ಬೇಕಾಗಬಹುದು. ಹಳ್ಳಿಯ ಯುವಕರು ಸ್ವಸಹಾಯ ಪದ್ಧತಿಯಿಂದಾಗಲಿ ಅಥವಾ ಸಣ್ಣ ಕೈಗಾರಿಕೆ ಮಾದರಿಯಲ್ಲಾಗಲಿ, ಮೂರು ನಾಲ್ಕು ಕಿಲೋಮೀಟರ್ ವ್ಯಾಸದಲ್ಲಿ ಕಾಂಪೋಸ್ಟ್ ತಯಾರಿಕೆಯ ಘಟಕವನ್ನು ಸ್ಥಾಪಿಸಿ ಅದಕ್ಕೆ ಬೇಕಾಗಿರುವ ಕಚ್ಚಾ ಪದಾರ್ಥವಾದ ಸಗಣಿ, ಕೊಟ್ಟಿಗೆ ಗೊಬ್ಬರ, ವ್ಯವಸಾಯ ಉಳಿಕೆ, ಹಸಿರೆಲೆ ಗೊಬ್ಬರ ಮುಂತಾದುವನ್ನು ರೈತರಿಂದ ನಿಗದಿತ ಬೆಲೆಗೆ ಕೊಂಡು, ಕಾಂಪೋಸ್ಟ್ ತಯಾರು ಮಾಡಿ, ಖರ್ಚು ವೆಚ್ಚವನ್ನು ಕಳೆದು, ಕನಿಷ್ಠ ಲಾಭದೊಂದಿಗೆ ಸ್ಥಳೀಯ ರೈತರಿಗೆ ಮಾರಿದರೆ ಕೊಳ್ಳುವವರಿಗೂ ದುಬಾರಿಯಾಗುವುದಿಲ್ಲ, ಮಾರುವವರಿಗೂ ನಷ್ಟವಿರುವುದಿಲ್ಲ. ಕಾಂಪೋಸ್ಟ್ ತಯಾರಿಕೆಯಲ್ಲಿ ಬೇಕಾಗಿರುವ ಹಸಿರೆಲೆ ಗೊಬ್ಬರವನ್ನು ಬೆಳೆಸಿಕೊಂಡು ಹಾಕಬಹುದು. ದನ, ಕುರಿ, ಕೋಳಿ ಗೊಬ್ಬರಗಳನ್ನು ಮಾರುವವರಿಂದ ನಿಗದಿತ ಬೆಲೆಗೆ

ಕೊಳ್ಳಬಹುದು. ಸುತ್ತಮುತ್ತಲಿನ ಕಳೆ, ಕಸ, ತರಗು, ಪಟ್ಟಣ ಪ್ರದೇಶದ ಗಾರ್ಬೇಜ್ ಮುಂತಾದುವನ್ನು ಟೆಂಡರ್ ಮೂಲಕ ಸಂಗ್ರಹಿಸಬಹುದು. ಸುಮಾರು ಹತ್ತು ಸಾವಿರ ಟನ್ ಕಾಂಪೋಸ್ಟ್ ತಯಾರಿಸಲು ಬೇಕಿರುವ ಸಣ್ಣ ಕೈಗಾರಿಕೆಗೆ ಕೊಡುತ್ತಿರುವ ಪ್ರೋತ್ಸಾಹವನ್ನು ಇದಕ್ಕೂ ಕೊಡಬಹುದು. ಸಣ್ಣ ಹಿಡುವಳಿದಾರರು ತಮ್ಮ ದುಡಿಮೆಯ ಮೂಲಕ ಅಥವಾ ಕಚ್ಚಾ ವಸ್ತುಗಳನ್ನು ಸಂಗ್ರಹಿಸುವ ಮೂಲಕ ಅವರಿಗೆ ಬೇಕಾಗಿರುವ ಗೊಬ್ಬರವನ್ನು ಕೊಳ್ಳುವ ಶಕ್ತಿಯನ್ನು ಪಡೆಯಬಹುದು. ಈಗ ರಾಸಾಯನಿಕ ಗೊಬ್ಬರಕ್ಕೆ ಕೊಡುತ್ತಿರುವ ಸಬ್ಸಿಡಿಯನ್ನು ಇದಕ್ಕೂ ಅನ್ವಯಿಸುವಂತೆ ಮಾಡಬಹುದು. ಒಟ್ಟಿನಲ್ಲಿ ಸ್ಥಳೀಯರೇ, ಸ್ಥಳೀಯ ಸಂಪನ್ಮೂಲ ಸಂಗ್ರಹಿಸಿ, ಸ್ಥಳದಲ್ಲಿಯೇ ತಯಾರುಮಾಡಿದ ಗೊಬ್ಬರ ಸ್ಥಳೀಯ ಬೆಳೆಗೆ ಬೇಕಿರುವ ಪೂರ್ಣ ಪೋಷಕಾಂಶಗಳನ್ನು ಒದಗಿಸುವುದಲ್ಲದೆ, ಅದಕ್ಕಿಂತಲೂ ಸುಲಭ ಬೆಲೆಗೆ ಅಷ್ಟೇ ಹಸನಾದ ಬೇರೆ ಗೊಬ್ಬರ ಹೊರಗಿನಿಂದ ದೊರೆಯುವುದು ದುರ್ಲಭ. ಗ್ರಾಮಾಂತರ ಯುವಕರಿಗೆ ಉದ್ಯೋಗ ಅವಕಾಶ ದೊರಕಿಸುವ, ಹೆಚ್ಚಿನ ಬಂಡವಾಳವಿಲ್ಲದೆ ಅವಿದ್ಯಾವಂತನೂ ಮಾಡಬಹುದಾದ ಗ್ರಾಮಾಂತರ ಕೈಗಾರಿಕೆಯಾಗುವುದಲ್ಲದೆ, ನಮ್ಮ ಹತ್ತಿರದ ನೆರೆಹೊರೆಯ ರೈತರಿಗೆ ಸಹಾಯವನ್ನು ಮಾಡಿ ಪರಿಸರ ಮಾಲಿನ್ಯ ತಡೆಗಟ್ಟಿ ಭೂಮಿಯ ಉತ್ಪಾದಕತೆಯನ್ನು ಹೆಚ್ಚಿಸುವುದಕ್ಕೆ ಕಾಂಪೋಸ್ಟ್ ಗೊಬ್ಬರ ತಯಾರಿಕೆ ವರದಾನವಾಗಬಲ್ಲದು.

●




# ಪರಿಸರ ಸಂರಕ್ಷಣೆ

ಡಾ. ಅ. ನ. ಯಲ್ಲಪ್ಪರೆಡ್ಡಿ

೨೫೦ ವರ್ಷಗಳ ಹಿಂದೆ ಆಗಿನ ಮಹಾರಾಜರು ಬುಕಾನಿನ್ ಎಂಬ ವಿಜ್ಞಾನಿಯನ್ನು ನಮ್ಮ ರಾಜ್ಯದಲ್ಲಿ ಇರತಕ್ಕಂತಹ ಸಂಪನ್ಮೂಲಗಳು ಹಾಗೂ ಗ್ರಾಮೀಣ ಪ್ರದೇಶದ ಜೈವಿಕ ವ್ಯವಸ್ಥೆ, ಕೈಗಾರಿಕೆಗಳು ಇತ್ಯಾದಿಗಳನ್ನು ಅಭ್ಯಾಸ ಮಾಡಿ ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಯಾವ ರೀತಿಯ ಕಾರ್ಯಕ್ರಮಗಳನ್ನ ರೂಪಿಸಬೇಕು ಎಂಬ ಸಲಹೆಗಳನ್ನು ಕೊಡಲು ಕೋರಿದ್ದರು. ಡಾ. ಬುಕಾನಿನ್‌ರವರು ದಕ್ಷಿಣ ಭಾರತದ ಬಹಳಷ್ಟು ಗ್ರಾಮಗಳಿಗೆ ಭೇಟಿಕೊಟ್ಟು ಅಲ್ಲಿಯ ಜೀವನ ಶೈಲಿ, ವ್ಯವಸಾಯ ಪದ್ಧತಿಗಳು, ಸಂಪನ್ಮೂಲ ಬಳಕೆಯ ವಿಧಿ ವಿಧಾನಗಳು, ಗುಡಿ ಕೈಗಾರಿಕೆಗಳು ಇತ್ಯಾದಿಗಳನ್ನು ಅಭ್ಯಾಸ ಮಾಡಿ ಆಗಿನ ಬ್ರಿಟಿಷ್ ಸರಕಾರಕ್ಕೆ ಮಹತ್ವವಾದಂತಹ ವರದಿಯನ್ನು ಕೊಟ್ಟಿದ್ದರು. ಈ ವರದಿಯಲ್ಲಿ ಅವರ ಅಧ್ಯಯನಗಳ ಪಟ್ಟಿ ಬಹಳ ವಿವರವಾಗಿತ್ತು. ಈ ವರದಿಯಲ್ಲಿ ಆಗಿನ ಗ್ರಾಮಜೀವನ ವ್ಯವಸಾಯ ಪದ್ಧತಿಗಳನ್ನು, ಆರ್ಥಿಕ ಸ್ಥಿತಿಗತಿಗಳನ್ನು ಮತ್ತು ಸಂಪನ್ಮೂಲಗಳ ಬಳಕೆ, ಪೋಷಣೆ ಇತ್ಯಾದಿಗಳನ್ನು ಬಹಳಷ್ಟು ಮೆಚ್ಚಿ ಬರೆದಿದ್ದರು. ಭೂಮಿಯ ಫಲವತ್ತತೆ ಸಂರಕ್ಷಣೆ, ಜೈವಿಕ ಸಂಪನ್ಮೂಲಗಳ ಬಳಕೆ, ಅದರಲ್ಲಿಯೂ ಗುಡಿ ಕೈಗಾರಿಕೆಗಳಾದಂತಹ ನೇಯ್ಗೆ, ಬಣ್ಣ ಕಟ್ಟುವ ವಿಧಾನಗಳು, ವ್ಯವಸಾಯಕ್ಕೆ ಬೇಕಾದಂತಹ ಸಲಕರಣೆಗಳ ತಯಾರಿಕೆ ಇವೆಲ್ಲವುಗಳನ್ನು ಅಧ್ಯಯನಮಾಡಿ ಗ್ರಾಮಗಳ ಸ್ವಾವಲಂಬನೆಯನ್ನು ಮೆಚ್ಚಿ ಬರೆದಿದ್ದರು.

> ***ಕೆರೆ ಕುಂಟೆಗಳು ವೇಗವಾಗಿ ನಶಿಸಿಹೋದವು. ಗ್ರಾಮೀಣ ಪ್ರದೇಶದ ಪರಿಸರ ತಮ್ಮ ಜೈವಿಕ ಚೈತನ್ಯವನ್ನು ದಿನೇ ದಿನೇ ಕಳೆದುಕೊಳ್ಳುತ್ತ ಬಂತು. ಸ್ವಾತಂತ್ರ್ಯಾನಂತರ ಸಹ ಈ ಗಂಭೀರ ಪರಿಸ್ಥಿತಿಯನ್ನು ಸರಿಪಡಿಸಲು ಸಮಗ್ರ ಯೋಜನೆ ರೂಪಿತವಾಗಲಿಲ್ಲ.***

ಇದಾದ ನಂತರ ಸುಮಾರು ೧೫೦ ವರ್ಷಗಳ ಹಿಂದೆ ಆಗಿನ ಇನ್ಸ್‌ಪೆಕ್ಟರ್ ಜನರಲ್ ಆಫ್ ಫಾರೆಸ್ಟ್ ಡಾ. ಬ್ರಾನ್ ಡೀಸ್‌ರವರು ಒಬ್ಬ ಆಂಗ್ಲ ವಿಜ್ಞಾನಿಯನ್ನು ನೇಮಿಸಿ ಮೈಸೂರು ರಾಜ್ಯದಲ್ಲಿ ಇರತಕ್ಕಂತಹ ಮತ್ತು ಬಳಸುವ ವಿಧಿ ವಿಧಾನಗಳ ಬಗ್ಗೆ ಅಧ್ಯಯನ ಮಾಡಿ ಸರ್ವಾಂಗೀಣ ಪರಿಸರ ಮತ್ತು ಅರಣ್ಯ ಸಂರಕ್ಷಣೆಗೆ ಮತ್ತು ಅಭಿವೃದ್ಧಿಗೆ ಕೈಗೊಳ್ಳಬೇಕಾದಂತಹ ಕಾರ್ಯಕ್ರಮಗಳ ಒಂದು ವರದಿಯನ್ನು ತಯಾರಿಸಲು ನೇಮಿಸಿದ್ದರು. ಆ ವಿಜ್ಞಾನಿ ರಾಜ್ಯದ ಜನತೆ ಅದರಲ್ಲಿಯೂ ರೈತರು ಮತ್ತು ಗ್ರಾಮಸ್ಥರು ತಮ್ಮ ಎಲ್ಲಾ ಸಂಪನ್ಮೂಲಗಳನ್ನು ಸಂರಕ್ಷಿಸಿ ಬಹಳ ವೈಜ್ಞಾನಿಕವಾಗಿ ಬಳಸಿಕೊಳ್ಳುತ್ತಿದ್ದಾರೆ ಎಂದು ವರದಿ ಮಾಡುವಾಗ ಆಗಿನ ಮೈಸೂರು ರಾಜ್ಯದ ಸುಮಾರು ೧೩,೦೦೦ ಗ್ರಾಮಗಳಲ್ಲಿ ೧೬,೦೦೦ ಗುಂಡು ತೋಪುಗಳನ್ನು ಮತ್ತು ಸಾವಿರಾರು ಕೆರೆ ಕುಂಟೆಗಳನ್ನು ಅಶ್ವತ್ಥ ಕಟ್ಟೆಗಳನ್ನು ಮತ್ತು ನೆಲ, ಜಲ ಅರಣ್ಯ ಸಂಪನ್ಮೂಲಗಳ ಬಳಕೆಯ ವಿಧಿ ವಿಧಾನಗಳನ್ನು ಅಧ್ಯಯನ ಮಾಡಿ ಇಲ್ಲಿಯ

ಗ್ರಾಮಸ್ಥರು ಬಹಳ ವೈಜ್ಞಾನಿಕವಾಗಿ ತಮ್ಮ ಪರಿಸರವನ್ನು ಮತ್ತು ಸಂಪನ್ಮೂಲಗಳನ್ನು ರಕ್ಷಿಸಿ, ಪೋಷಿಸಿ, ಬೆಳೆಸಿ, ಬಳಸುವ ವಿಧಿ ವಿಧಾನಗಳನ್ನು ಮೆಚ್ಚಿ ವರದಿಯನ್ನು ಕೊಟ್ಟಿದ್ದರು.

ಈ ಎರಡು ಸತ್ಯಾಂಶಗಳಿಂದ ನಮಗೆ ಗೋಚರವಾಗುವುದು ನಮ್ಮ ರಾಜ್ಯದಲ್ಲಿ ಪರಿಸರ ಮತ್ತು ಸಂಪನ್ಮೂಲಗಳು ಗ್ರಾಮೀಣ ಪ್ರದೇಶದಲ್ಲಿ ಸುಸ್ಥಿರ ಜೈವಿಕ ವ್ಯವಸ್ಥೆಯನ್ನು ನಿರ್ಮಾಣ ಮಾಡಿಕೊಂಡಿದ್ದರು ಎಂದು ತಿಳಿದುಬರುತ್ತದೆ. ಆದರೆ ೧೯೦೦ರ ನಂತರ ಬರಗಾಲ, ಎರಡು ಮಹಾಯುದ್ಧಗಳು ಮತ್ತು ಬ್ರಿಟಿಷರ ಆಳ್ವಿಕೆಯಿಂದ ಎಲ್ಲಾ ಸಂಪನ್ಮೂಲಗಳನ್ನು, ಭೂಮಿಯನ್ನು, ಅರಣ್ಯಗಳನ್ನು, ಗೋಮಾಳ ಗೋಕಟ್ಟೆಗಳನ್ನು, ಕೆರೆಕುಂಟೆಗಳನ್ನು ಸರ್ಕಾರದ ಅಧೀನಕ್ಕೆ ಮತ್ತು ಆಡಳಿತಕ್ಕೆ ತೆಗೆದುಕೊಂಡ ನಂತರ ಈ ಎಲ್ಲಾ ಅದ್ಭುತ ವ್ಯವಸ್ಥೆಗಳ ನಿರ್ವಹಣೆ ಕ್ಷೀಣಿಸುತ್ತಾ ತಮ್ಮ ರೂಪುರೇಷೆಗಳನ್ನು ಕಳೆದುಕೊಂಡು ಸಂಪನ್ಮೂಲಗಳು ವೇಗವಾಗಿ ನಶಿಸಿಹೋದವು. ಗ್ರಾಮೀಣ ಪ್ರದೇಶದ ಪರಿಸರ ತಮ್ಮ ಜೈವಿಕ ಚೈತನ್ಯವನ್ನು ದಿನೇ ದಿನೇ ಕಳೆದುಕೊಳ್ಳುತ್ತಾ ಬಂತು. ಸ್ವಾತಂತ್ರ್ಯದ ನಂತರ ಸಹ ಈ ಗಂಭೀರ ಪರಿಸ್ಥಿತಿಯನ್ನು ಸರಿಪಡಿಸಲು ಸಮಗ್ರ ಯೋಜನೆಗಳು ರೂಪಿತವಾಗಿಲ್ಲದಿರುವುದಕ್ಕೆ ಮುಖ್ಯ ಕಾರಣ ಆಡಳಿತ ವ್ಯವಸ್ಥೆ, ಬ್ರಿಟಿಷರ ಆಳ್ವಿಕೆಯ ಪದ್ಧತಿಗಳನ್ನು ಅನುಕರಿಸಿದ್ದು ಎಂದು ತೋರುತ್ತೆ.

1960ರ ನಂತರ ಆಹಾರದಲ್ಲಿ ಸ್ವಾವಲಂಬನೆಯಾಗಲು ನಾವು ಕೈಗೊಂಡ ಪಂಚವಾರ್ಷಿಕ ಯೋಜನೆಗಳಲ್ಲಿ ಕೈಗೊಂಡ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಆಹಾರ ಉತ್ಪಾದನೆಗೆ ಮಾನ್ಯತೆ ಕೊಟ್ಟು ನೀರಾವರಿ, ವಿದ್ಯುತ್ ತಯಾರಿಕೆ ಮತ್ತು ಜೈವಿಕ ತಳಿಗಳು, ರಸಾಯನಿಕ ಗೊಬ್ಬರ, ಕೀಟನಾಶಕಗಳ ಬಳಕೆ ಇತ್ಯಾದಿಗಳನ್ನು ಸಬ್ಸಿಡಿ ಕೊಟ್ಟು ಯಥೇಚ್ಛವಾಗಿ ಬಳಸಲು ಯೋಜನೆಯಡಿಯಲ್ಲಿ ಕಾರ್ಯಕ್ರಮಗಳನ್ನು ರೂಪಿಸಿ ನಮ್ಮ ಹಿಂದಿನ ಪದ್ಧತಿಗಳನ್ನು ಕಡೆಗಣಿಸಲಾಯಿತು. ಇದರಿಂದ ಭೂಮಿಯ ಫಲವತ್ತತೆ ಕ್ಷೀಣಿಸುತ್ತಾ ಬಂತು. ನೀರಿನ ಬಳಕೆ, ಅದರಲ್ಲಿಯೂ ಅಂತರ್ಜಲ ಬಳಕೆ ಅತಿ ವೇಗವಾಗಿ, ಸರ್ಕಾರದ ಯೋಜನೆಗಳ ಅಡಿಯಲ್ಲಿಯೇ ಬಳಸಲಾಯಿತು. ಇದೇ ಧಾಟಿಯಲ್ಲಿ ಅರಣ್ಯಗಳ ನಾಶ, ಅರಣ್ಯಗಳ ಒತ್ತುವರಿ, ಅತಿಕ್ರಮಣಗಳನ್ನು ಸಕ್ರಮಗೊಳಿಸುವುದು, ಗೋಮಾಳಗಳ ಅತಿಕ್ರಮಣವನ್ನು ಸಕ್ರಮಗೊಳಿಸುವುದು, ಗೋಕಟ್ಟೆಗಳ ಸಂರಕ್ಷಣೆ, ಕೆರೆ ಕುಂಟೆಗಳ ಸಂರಕ್ಷಣೆ ಈ ಎಲ್ಲಾ ಜೈವಿಕ ವ್ಯವಸ್ಥೆಗಳು ದಿನೇ ದಿನೇ ಕ್ಷೀಣಿಸುತ್ತಾ ಇಂದು ಇವೆಲ್ಲವನ್ನು ಸರಿಪಡಿಸಲು ನಾವು ಸಾಲ ಪಡೆದು ಕಂಟ್ರಾಕ್ಟರ್ ಮತ್ತು ಇಂಜಿನಿಯರ್‌ಗಳ ಯೋಜನೆಗಳಾಗಿ, ನಿರೀಕ್ಷಿಸಿದ ಫಲಗಳನ್ನು ಕೊಡದೆ ಗ್ರಾಮೀಣ ಜೀವನ ಪರಿಸ್ಥಿತಿ ಹದಗೆಡುವುದಲ್ಲದೆ ಜೀವಜಲ,ಪ್ರಾಣವಾಯು, ಮಣ್ಣು ಸಂರಕ್ಷಣೆ ಇತ್ಯಾದಿಗಳನ್ನು ಸಹ ಕಡೆಗಣಿಸಿದ ಕಾರಣ ಜೈವಿಕ ವ್ಯವಸ್ಥೆ ಏರುಪೇರಾಗಿ ಗ್ರಾಮಸ್ಥರು ದಿಕ್ಕು ತೋಚದೆ ಜೀವನವನ್ನು ನಡೆಸುತ್ತಿದ್ದಾರೆ. ತಮ್ಮ ಎಲ್ಲಾ ಮೂಲಭೂತ ಅವಶ್ಯಕತೆಗಳನ್ನು ಹೊರಗಡೆಯಿಂದ ಹಣ ಕೊಟ್ಟು ಕೊಂಡು ಉತ್ಪಾದಿಸಿ ಜೀವನ ನಡೆಸುತ್ತಿದ್ದಾರೆ ಎಂಬ ಅಂಶ ಸ್ಪಷ್ಟವಾಗಿ ಕಂಡುಬರುತ್ತದೆ. ಹೈನುಗಾರಿಕೆಯ ಸಹ ಇದಕ್ಕೆ ವಿಭಿನ್ನವಾಗಿಲ್ಲ. ಇಲ್ಲಿಯೂ ಸಹ Cross breed ತಳಿಗಳು, Cattle feed ಇತ್ಯಾದಿಗಳಿಂದ ನಮ್ಮ ಅತಿಶ್ರೇಷ್ಠ ಮತ್ತು ಬಹು ಉಪಯೋಗಿ ತಳಿಗಳು ಸಹ ತಮ್ಮ ಸ್ಥಾನವನ್ನು ಕಳೆದುಕೊಂಡು ಗ್ರಾಮಸ್ಥರು ಟ್ರಾಕ್ಟರ್ ಯಂತ್ರ ಮತ್ತು ಅಸ್ವಾಭಾವಿಕ ಪೋಷಕಾಂಶಗಳು, ಗೊಬ್ಬರಗಳು, ಕಳೆನಾಶಕಗಳನ್ನು ಅವಲಂಬಿಸಿ ಜೀವನ ವ್ಯವಸ್ಥೆಗಳು ಹಾಗೂ ಪರಿಸರ ತನ್ನ ಚೈತನ್ಯವನ್ನು ಕಳೆದುಕೊಂಡು ಶೇ ೭೦ರಷ್ಟು ಭೂ ಪ್ರದೇಶ ತಮ್ಮ ಉತ್ಪಾದನಾ ಶಕ್ತಿಯನ್ನು ಕಳೆದುಕೊಂಡಿದೆ. ಇದಕ್ಕೆ ಮುಖ್ಯ ಕಾರಣ ಅಲ್ಲಿಯ ಎಲ್ಲಾ ಜೈವಿಕ ಸಂಪನ್ಮೂಲಗಳ ಅದರಲ್ಲಿಯೂ ವೃಕ್ಷ ಸಂಪತ್ತು, ಜಲಸಂಪತ್ತು, ಪೋಷಕಾಂಶಗಳ ವಿನಾಶ, ಅವ್ಯವಸ್ಥಿತ ಹೈನುಗಾರಿಕೆ ಹಾಗು ಸಮಗ್ರ ಆರ್ಥಿಕ ಲಾಭದ ಪದ್ಧತಿಗಳು ಇತ್ಯಾದಿಗಳು ದಿನೇ ದಿನೇ ತಮ್ಮ ಕೊಂಡಿಗಳನ್ನು ಕಳಚಿಕೊಂಡು ಈಗಿನ ಪರಿಸ್ಥಿತಿಗೆ ಕಾರಣವಾಗಿವೆ.

ಇವೆಲ್ಲವುಗಳ ಅರಿವು ಇದ್ದಂತಹ ಮಹಾನ್ ವ್ಯಕ್ತಿ ಮಹಾತ್ಮಗಾಂಧಿ ಅವರು. ಇವರು ಆಗಿನ ರಾಜಕಾರಣಗಳಿಗೆ ಮನವರಿಕೆ ಮಾಡಲು ಮತ್ತು ಗ್ರಾಮೀಣ ರಾಜಕೀಯ ವ್ಯವಸ್ಥೆ ಬಲಗೊಳಿಸಲು, ಉತ್ತಮಗೊಳಿಸಲು ಶಕ್ತಿ ಮೀರಿ ಪ್ರಯತ್ನಪಟ್ಟಂತಹ ಮಹಾ ಪುರುಷ. ಇವರ ಅನಿಸಿಕೆಗಳನ್ನು 1992ರ Rio Conference ನಲ್ಲಿ ಸೂಚಿಸಿರುವ ಸಲಹೆಗಳು ಸ್ಪಷ್ಟವಾಗಿ ಪ್ರತಿಧ್ವನಿಸುತ್ತವೆ. ಅದರಲ್ಲಿಯೂ Agenda 15 of 1992 ಮಹಾತ್ಮಗಾಂಧಿಯವರ ಬಹುಪಾಲು ಗ್ರಾಮೀಣ ಅಭಿವೃದ್ಧಿ ಮತ್ತು ಪರಿಸರ ಸಂರಕ್ಷಣೆ ಇವುಗಳನ್ನು ಎತ್ತಿ ತೋರುತ್ತವೆ. ಹಾಗೆಯೇ 2002 Rio after 10 years, WSSD (World Sumit on Sustainable Development) ಸಹ ಹೆಚ್ಚಿನ ಮಹತ್ವವನ್ನು ಸುಸ್ಥಿರ ಗ್ರಾಮೀಣ ಅಭಿವೃದ್ಧಿ ಮತ್ತು ಪದ್ಧತಿಗಳಿಗೆ ತಿಳಿಸಲಾಗಿದ್ದು ಭಾರತ ದೇಶವೂ ಒಪ್ಪಿ ಸಹಿ ಹಾಕಿದ್ದರೂ ವಿಜ್ಞಾನಿಗಳು ವಿಶ್ವಮಟ್ಟದಲ್ಲಿ ಕೊಟ್ಟಂತಹ ಮತ್ತು ಒಪ್ಪಿದಂತಹ ಸಲಹೆಗಳನ್ನು ಕಾರ್ಯ ಯೋಜನೆಯಾಗಿ

ಪರಿವರ್ತನೆಯಾಗಲು ಸಫಲವಾಗಲಿಲ್ಲ. ಇದಕ್ಕೆ ಮುಖ್ಯ ಕಾರಣ ಮುಂದುವರಿದ ರಾಷ್ಟ್ರಗಳ ನೀತಿ ಹಾಗೂ ಬಹುರಾಷ್ಟ್ರ ಕಂಪನಿಗಳ 'ತಮ್ಮ ಲಾಭ ಅಭಿವೃದ್ಧಿಯೇ ವಿಶ್ವದ ಅಭಿವೃದ್ಧಿ' ಎಂಬ ಕಲ್ಪನೆಯೇ ಆಗಿದೆ.

ಈಗಿನ ಸ್ಥಿತಿಗತಿಗಳಿಂದ ಮತ್ತು ಹಲವಾರು ವೈಜ್ಞಾನಿಕ ಸಂಶೋಧನೆ ವರದಿಗಳಿಂದ ನೆಲ,ಜಲ ತಮ್ಮ ಶಕ್ತಿಯನ್ನು ಕಳೆದುಕೊಳ್ಳುವುದಲ್ಲದೆ ಮಾಲಿನ್ಯಗೊಂಡು ಆಹಾರ ಸರಪಳಿಯಲ್ಲಿ ಬಹು ಹಾನಿಕಾರಕ ವಿಷಪೂರಿತ ಪದಾರ್ಥಗಳು ಸೇರಿ ಮನುಜಕುಲಕ್ಕೇ ಅಲ್ಲದೆ ಇಡೀ ಜೈವಿಕ ವ್ಯವಸ್ಥೆಯ ಮೇಲೂ ದುಷ್ಪರಿಣಾಮಗಳ ಬಗ್ಗೆ ನೂರಾರು ವರದಿಗಳು ಈಗಾಗಲೇ ಪ್ರಕಟವಾಗಿವೆ. ಈ ಹಿನ್ನೆಲೆಯಲ್ಲಿ ಈಗ ವಿಶ್ವಮಟ್ಟದಲ್ಲಿಯೂ ಸಹ ಬಹಳಷ್ಟು ಕಠಿಣ ಕ್ರಮಗಳನ್ನು ಕೈಗೊಳ್ಳುತ್ತಿದ್ದಾರೆ. ಅವುಗಳಲ್ಲಿ Organic farming, Natural farming, Use of Natural Resourses, Use of Natural Dyes, Essences, Flavours, Perfumes and Natural Plant based Medicines ಇವುಗಳ ಬಗ್ಗೆ ಮಾನ್ಯತೆಯನ್ನು ಕೊಡುತ್ತಿದ್ದಾರೆ. ಇವನ್ನೆಲ್ಲಾ ೧೫೦-೨೦೦ ವರ್ಷಗಳ ಹಿಂದೆ ನಮ್ಮ ನಮ್ಮ ಸಂಸ್ಕೃತಿಯಲ್ಲಿ ಬೇರೂರಿ ಗ್ರಾಮೀಣ ಜೀವನ ಶೈಲಿಯಲ್ಲಿ ಅಳವಡಿಸಿಕೊಳ್ಳಲಾಗಿತ್ತು. ಇವೆಲ್ಲಾ ಮನೆ, ಕೈಗಾರಿಕೆ ಮತ್ತು ಗುಡಿ ಕೈಗಾರಿಕೆಗಳಿಂದ ತಯಾರಾಗತಕ್ಕಂತಹ ವಸ್ತುಗಳಾಗಿದ್ದವು. ಅಂದರೆ Mass production ಬದಲು Masses production ಆಗಿತ್ತು. ಇದನ್ನೇ ಮಹಾತ್ಮಾಜೀರವರು ಸಹ ಪದೇ ಪದೇ ತಿಳಿಸಿ ಮುನ್ನೆಚ್ಚರಿಕೆ ನೀಡಿದ್ದಾಗಲೂ ನಾವು Mass productionಗೆ ಹಾಗೂ ವ್ಯಾಪಾರೀಕರಣಕ್ಕೆ ಮತ್ತು ಬೃಹತ್ ಕೈಗಾರಿಕೆಗಳಿಗೆ ಮಾನ್ಯತೆ ಕೊಟ್ಟು ನಮ್ಮ ಜೈವಿಕ ವ್ಯವಸ್ಥೆಗಳ ಕೊಂಡಿಗಳನ್ನು ಕತ್ತರಿಸಿ, ಇಡೀ ಗ್ರಾಮೀಣ ಸಮಾಜದ ಭವಿಷ್ಯವನ್ನು ಈ ವ್ಯವಸ್ಥೆಗಳು ಕ್ರಮೇಣವಾಗಿ ಕತ್ತರಿಸುವಂತೆ ಮಾಡಿ, ಅವ್ಯವಸ್ಥೆಗಳನ್ನು ನಮಗೆ ಗೋಚರವಿಲ್ಲದೆ ಆಹ್ವಾನಿಸಿ ಘೋರ ತಪ್ಪು ಹೆಜ್ಜೆಗಳನ್ನಿರಿಸಿದ್ದೇವೆ.

ಇದರ ಹಿನ್ನೆಲೆಯಲ್ಲಿಯೇ ಬಾಹ್ಯಾಕಾಶದ ಮಹಾನ್ ವಿಜ್ಞಾನಿ ಸತೀಶ್ ಧಾವನ್‌ರವರ ರಾಷ್ಟ್ರದ ಅಭಿವೃದ್ಧಿಯ ಕಲ್ಪನೆ ವಿಭಿನ್ನವಾಗಿತ್ತು ಎಂದು ಈಗಿನ ರಾಜ್ಯಸಭಾ ಸದಸ್ಯರಾದ ಹಾಗೂ ಬಾಹ್ಯಾಕಾಶದ ಅಧ್ಯಕ್ಷರಾದ ಕೆ. ಕಸ್ತೂರಿ ರಂಗನ್ ಅವರು ಸತೀಶ ಧಾವನ್ ಬಗ್ಗೆ ಒಂದು ಲೇಖನವನ್ನು ಬರೆಯುತ್ತಾ ಅವರು ಉದ್ಧರಿಸಿದ ಒಂದು ಭಾಷಣದ ಸಂಕ್ಷಿಪ್ತ ವಿವರಣೆಯನ್ನು ಈ ಲೇಖನದಲ್ಲಿ ನೀಡಿರುತ್ತಾರೆ. 1976 ಫೆಬ್ರವರಿಯಲ್ಲಿ Indian Institute of Technology, Chennaiನಲ್ಲಿ Rockel Propellent Technology ಅಭಿವೃದ್ಧಿ ಪಡಿಸಿದಂತಹ ವಿಕ್ರಮ್ ಸಾರಾಭಾಯಿ ಸೆಂಟರ್ ತಿರುವಂತಪುರಂ (Technology) ತಾಂತ್ರಿಕತೆಗಳು ಗ್ರಾಮೀಣ ಪ್ರದೇಶದ ಕೋಟ್ಯಾನುಕೋಟಿ Unskilled, illiterate and Predominate Tribal populationಗೆ ಅನುಕೂಲವಾಗಬೇಕು ಎಂದು ಸೂಚಿಸುತ್ತಾ ಹೀಗೆ ತಿಳಿಸುತ್ತಾರೆ "The technology related to developing polyols using naturally available oilseeds, that could lead to production of alternate petrolieum products. The project involved collection of oil seeds, both cultivated and uncultivated, from Castor, Mahua, Pisa, Neem, Honge etc, de-hulling, transportation to oil extract centers & transportation of oil. The capital investment estimated was Rs. 190 crore & operating cost Rs. 461 crores, while the value of the product was estimated at Rs.487 crores per year. Further it would have resulted in about 4 million ton per year of non-polluting , non-toxic & Bio degradable manure that would have significantly enhanced agricultural & food production. Dhawan was peeved when the project was shelved due to economic consideration. He felt that the feasibility study was purely an economic analysis & didn't assess the sociological benefit that would have accrued to million gross root level population.

While most believe that development & prospects means economic prosperity, Dhawan viewed it as that related to the very grass roots level people of the country & their lives. For him, the impact of information created by even the most sophisticated technology was of no use, if it didn't address the grass roots reality of the country. His views were reveling & of great value to keep one's foot on the ground even while being enthusiastic about a new and promising technology.'

ಈ ಮೇಲೆ ಸೂಚಿಸಿದಂತಹ ಒಬ್ಬ ಮಹಾನ್ ವಿಜ್ಞಾನಿಯ ಅನಿಸಿಕೆ, 1976ರಲ್ಲಿ ಎಷ್ಟು ಮಹತ್ವವಾದದ್ದು ಎಂದು ಈಗಿನ ಸ್ಥಿತಿಗತಿಗಳನ್ನು ಅವಲೋಕಿಸಿದಲ್ಲಿ ತಿಳಿದುಬರುತ್ತದೆ ಹಾಗೂ ಇಂತಹ ಮಹತ್ವಪೂರ್ಣವಾದದ್ದು ಆರ್ಥಿಕ ಸಲಹೆಗಳನ್ನು ಕಡೆಗಣಿಸಿದ ಫಲಾಪನೆಗಳ ಆರ್ಥಿಕ ಚಿತ್ರಣ ನಮ್ಮ ಮುಂದೆ ನರ್ತನವಾಡುತ್ತಿವೆ.

ಇಂದು ನಮ್ಮ ರಾಷ್ಟ್ರದ ಶೇಕಡಾ ೫೦ ಕ್ಕಿಂತ ಹೆಚ್ಚು ಹಣ ನಾವು ವೆಚ್ಚ ಮಾಡುತ್ತಿರುವುದು ಪೆಟ್ರೋಲ್, ಡೀಸಲ್, ಪೆಟ್ರೋಲಿಯಂ ಪ್ರಾಡಕ್ಟ್ಸ್ ಇವುಗಳನ್ನು ಕೊಳ್ಳಲು. ಇದರ ಹಿನ್ನೆಲೆಯಲ್ಲಿ ನಮ್ಮ ರಾಷ್ಟ್ರದ ಸುಮಾರು 320 Million ಭೂಪ್ರದೇಶದಲ್ಲಿ ಸುಮಾರು ಒಂದು ನೂರು ಮಿಲಿಯನ್ ಹೆಕ್ಟೇರ್ ಭೂಪ್ರದೇಶ ಕೇವಲ ೪-೫ ದಶಕಗಳಲ್ಲಿ ತಮ್ಮ ಉತ್ಪಾದನಾ ಶಕ್ತಿ ಕಳೆದುಕೊಂಡು ಭೂಮಿ ಬರಡಾಗಿ ಬಂಜೆಯಾಗಿರುವುದು ಈಗಿನ ರಾಷ್ಟ್ರದ ಕಠಿಣ ಸ್ಥಿತಿಗೆ ಮೂಲಕಾರಣ ಅಂದರೆ floods and droughts. ಇಡೀ ರಾಷ್ಟ್ರ floods & droughts ಇವುಗಳಿಂದ, ಕುಡಿಯುವ ನೀರಿನ ಅಭಾವಗಳಿಂದ ಮತ್ತು ನದಿ, ಭೂಮಿ, ಪ್ರಾಣವಾಯು, ಇವೆಲ್ಲವೂ ಮಾಲಿನ್ಯಗೊಂಡು ಜೀವಜಾಲದ ಮೇಲೆ, ಜೈವಿಕ ಸಂಪನ್ಮೂಲಗಳ ಮೇಲೆ, ಆರೋಗ್ಯದ ಮೇಲೆ ದೊಡ್ಡ ದುಷ್ಪರಿಣಾಮ ಬೀರುತ್ತಿವೆ.

ಇದಲ್ಲದೆ ಬಹು ಮುಖ್ಯವಾದ ಒಂದಂಶ ಈ ರಾಷ್ಟ್ರದ ಜೈವಿಕ ಸಂಪನ್ಮೂಲಗಳು ಮತ್ತು ಅವುಗಳ ವೈವಿಧ್ಯತೆ ಹಾಗೂ ನಮ್ಮ ಪೂರ್ವಜರು ಅಭಿವೃದ್ಧಿಪಡಿಸಿದಂತಹ ತಾಂತ್ರಿಕತೆಯ ಜ್ಞಾನದ ಭಂಡಾರ ಅದರಲ್ಲಿಯೂ ಆಯುರ್ವೇದ, ವೃಕ್ಷ ಆಯುರ್ವೇದ, ಸುಸ್ಥಿರ ವ್ಯವಸಾಯ ಪದ್ಧತಿ, ಸಂಪನ್ಮೂಲಗಳನ್ನು ಪೂಜ್ಯ ಭಾವನೆಯಿಂದ ಬಳಸಿ ಸಂರಕ್ಷಿಸುವ ವಿಧಿ ವಿಧಾನಗಳು ಇವೆಲ್ಲವನ್ನು ಮೂಲಭೂತ ಕರ್ತವ್ಯಗಳಾಗಿ ಪರಿಗಣಿಸಲಾಗಿತ್ತು. ಅದಕ್ಕೆ ಬದಲಾಗಿ ನಾವು ವ್ಯಾಪಾರೀಕರಣದ ದೃಷ್ಟಿಯನ್ನು ಉತ್ತೇಜಿಸಿ ಸಂಪನ್ಮೂಲಗಳನ್ನು ಸ್ವಾರ್ಥ, ಕ್ಷಣಿಕ ಲಾಭಕ್ಕಾಗಿ ದೋಚುವ ತಾಂತ್ರಿಕತೆಗಳನ್ನು ರೂಪಿಸಿಕೊಂಡು ಕೇವಲ ೩-೪ ದಶಕಗಳಿಂದ ರಾಷ್ಟ್ರದ ಹಾಗೂ ನಮ್ಮ ರಾಜ್ಯದ ಎಲ್ಲಾ ಸಂಪನ್ಮೂಲಗಳನ್ನು ದೋಚಿರುವುದಲ್ಲದೆ, ಮಾಲಿನ್ಯಗೊಳಿಸಿ ಈ ರಾಷ್ಟ್ರದ ಅದ್ಭುತ ವ್ಯವಸ್ಥೆಯ ಕೊಂಡಿಗಳನ್ನು ಕಳಚಿದ್ದೇವೆ. ಆದುದರಿಂದ ಇಂದು ಈ ಕೊಂಡಿಗಳನ್ನು ಪುನಃ ಜೋಡಿಸಿ ಸಂವೃದ್ಧಿಗೊಳಿಸುವುದೊಂದೇ ನಮಗೆ ಉಳಿದಿರುವ ದಾರಿ ಎಂದು ತೋರುತ್ತೆ. ಅಂತರರಾಷ್ಟ್ರೀಯ ಒಪ್ಪಂದಗಳಲ್ಲಿ ನಾವು ಸಹ ಸಹಿ ಹಾಕಿದ್ದೇವೆ. ಆದರೆ ಬಹುಪಾಲು ಎಲ್ಲಾ ಒಪ್ಪಂದಗಳನ್ನು ಕಾರ್ಯಗತಗೊಳಿಸುವಲ್ಲಿ ವಿಫಲರಾಗಿರುತ್ತೇವೆ. ಆದುದರಿಂದ ಒಂದು ಸಮಗ್ರವಾದ ಯೋಜನೆಯನ್ನು ರೂಪಿಸಿ ನೆಲ, ಜಲ, ವೃಕ್ಷಸಂಪತ್ತು,ಪ್ರಾಣಿ ಸಂಪತ್ತು ಇವೆಲ್ಲವುಗಳನ್ನು ಸಂರಕ್ಷಿಸಿ ಬಳಸಿಕೊಳ್ಳುವ ವಿಧಿ ವಿಧಾನಗಳ ಬಗ್ಗೆ ಚಿಂತಿಸುವುದು ಅಗತ್ಯ.

●




# ಮಣ್ಣು ಮತ್ತು ನೀರು ಸಂರಕ್ಷಣೆ

ಎಮ್. ಬಿ. ಗುಳೇದ
ವಿ. ಎಸ್. ಸುರಕೋಡ
ಎಮ್. ಐ. ಬೆಳಗಾಮಿ

ಕರ್ನಾಟಕದ ಉತ್ತರ ಭಾಗವು ಪ್ರತಿಶತ ೭೮ರಷ್ಟು ಕಪ್ಪು ಮಣ್ಣಿನಿಂದ ಕೂಡಿದೆ. ಈ ಪ್ರದೇಶದಲ್ಲಿ ಸರಾಸರಿ ವಾರ್ಷಿಕ ಮಳೆಯ ಪ್ರಮಾಣ ೪೭೫ರಿಂದ ೬೦೦ ಮಿ.ಮೀ. ನಷ್ಟಿದ್ದು ಅದು ಅಕಾಲಿಕ, ಅನಿಶ್ಚಿತ ಹಾಗೂ ರಭಸದಿಂದ ಕೂಡಿದ್ದಾಗಿರುತ್ತದೆ. ಕಪ್ಪು ಮಣ್ಣಿನಲ್ಲಿ ನೀರು ಇಂಗುವ ಪ್ರಮಾಣವು ಕೂಡ ಕಡಿಮೆ ಇರುವದರಿಂದ ಮಳೆ ನೀರು ಭೂಮಿಯಲ್ಲಿ ಸಾಕಷ್ಟು ಇಂಗದೇ ಹರಿದುಹೋಗಲು ಅವಕಾಶವಾಗುವದು ಮತ್ತು ಭೂಮಿಯ ಫಲವತ್ತಾದ ಮೇಲ್ಮಣ್ಣು ಕೊಚ್ಚಿಹೋಗಿ ಭೂ ತೇವಾಂಶವು ಬೆಳೆಗಳಿಗೆ ಸಾಕಷ್ಟು ಸಿಗದೆ ಅವುಗಳ ಇಳುವರಿ ಕಡಿಮೆಯಾಗುವುದು. ಇಂಥ ಭೂಮಿಯಲ್ಲಿ ಸವಕಳಿಯಾಗುವ ಮಣ್ಣಿನ ಪ್ರಮಾಣ ಪ್ರತಿ ವರ್ಷ ಪ್ರತಿ ಹೆಕ್ಟೇರಿಗೆ ೧೨ ರಿಂದ ೪೩ ಟನ್ನುಗಳಷ್ಟು ಎಂದು ಕಂಡುಕೊಳ್ಳಲಾಗಿದೆ. ಈ ಪ್ರಮಾಣದಲ್ಲಿ ಮಣ್ಣು ಕೊಚ್ಚಣೆಯಿಂದ ಸಾಗುವಳಿ ಭೂಮಿಯು ಕಡಿಮೆಯಾಗಿ ಅದರ ಫಲವತ್ತತೆಯು ಕುಂಠಿತವಾಗುತ್ತದೆ. ಆದ್ದರಿಂದ ಕಡಿಮೆ ಮಳೆಯಾಗುವ ಪ್ರದೇಶದಲ್ಲಿ ಬೆಳೆಗಳ ಇಳುವರಿಯನ್ನು ಹೆಚ್ಚಿಸಿ ರೈತರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ನೈಸರ್ಗಿಕ ಮೂಲಗಳಾದ ಮಣ್ಣು ಮತ್ತು ಮಳೆ ನೀರಿನ ಸಂರಕ್ಷಣೆ ಅತಿ ಮುಖ್ಯವಾಗಿದೆ. ಈ ವಿಷಯವಾಗಿ ಬಿಜಾಪುರದ ಕೃಷಿ ಸಂಶೋಧನಾ ಕೇಂದ್ರದಲ್ಲಿ ಈ ನೈಸರ್ಗಿಕ ಮೂಲಗಳನ್ನು ರಕ್ಷಿಸುವ ಬೇರೆ ಬೇರೆ ವಿಧಾನಗಳ ಮೇಲೆ ಸಂಶೋಧನೆ ನಡೆಸಿ ಕೆಳಗೆ ಕೊಟ್ಟ ಬದು ಹಾಗೂ ಅಂತರ ಬದು ಪದ್ಧತಿಗಳು ಯೋಗ್ಯವೆಂದು ಕಂಡುಬಂದಿರುತ್ತವೆ.

**ಕಡಿಮೆ ಮಳೆಯಾಗುವ ಪ್ರದೇಶದಲ್ಲಿ ಇಳುವರಿ ಹೆಚ್ಚಿಸಲು ನೈಸರ್ಗಿಕ ಮೂಲಗಳಾದ ಮಣ್ಣು ಮತ್ತು ಮಳೆ ನೀರಿನ ರಕ್ಷಣೆ ಅತ್ಯಂತ ಅಗತ್ಯವಾದುದು. ಇದರಿಂದ ಕೃಷಿಯಲ್ಲಿ ಹೊಸತನ ಕಾಣುವುದಲ್ಲದೆ ರೈತನ ಆರ್ಥಿಕ ಸ್ಥಿತಿ ಸುಧಾರಿಸಲು ಸಾಧ್ಯವಿದೆ.**

## ಅ. ಬದು ಪದ್ಧತಿಗಳು :

ಭೂಮಿಯ ಮೇಲ್ಮಣ್ಣಿನ ಸಂರಕ್ಷಣೆಯ ಸಲುವಾಗಿ ಮಣ್ಣಿನ ಆಳ ಮತ್ತು ಭೂಮಿಯ ಇಳಿಜಾರನ್ನು ಅವಲಂಬಿಸಿ ವಿವಿಧ ಪ್ರಕಾರದ ಬದು (ಒಡ್ಡು) ಪದ್ಧತಿಗಳನ್ನು ಅನುಸರಿಸಬೇಕಾಗುತ್ತದೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಸಮಪಾತಳಿ ಬದುಗಳು (ಕಂಟೂರ ಬಂಡ್ಸ), ಅಗಲಾದ ತಳದ ಬದುಗಳು (ಬ್ರಾಡ ಬೇಸ್ಡ ಬಂಡ್ಸ), ಅಲ್ಪ ಇಳಿಜಾರಿನ ಬದುಗಳು (ಗ್ರೇಡೆಡ್ ಬಂಡ್ಸ) ಮುಂತಾದವುಗಳಾಗಿವೆ.

ಕಪ್ಪು ಮಣ್ಣಿನ ಪ್ರದೇಶಗಳಲ್ಲಿ ಮೇಲ್ಮಣ್ಣಿನ ಆಳಕ್ಕೆ ತಕ್ಕಂತೆ ಈ ಕೆಳಗೆ ವಿವರಿಸಿರುವ ರೀತಿಯಲ್ಲಿ ಬದುಗಳನ್ನು ಹಾಕುವದು ಒಣಬೇಸಾಯದ ಯಶಸ್ಸಿನಲ್ಲಿ ಮೊದಲ ಹೆಜ್ಜೆ.

### ೧. ಕಡಿಮೆ ಆಳದ ಕಪ್ಪು ಭೂಮಿ :

ಇಂತಹ ಮಣ್ಣಿನ ಆಳ ಸುಮಾರು ೨೨.೫ ಸೆಂ.ಮೀ.ನ ವರೆಗೆ ಇರುತ್ತದೆ. ಭೂಮಿಯ ಇಳಿಜಾರಿಗೆ ಅನುಗುಣವಾಗಿ ಪ್ರತಿ ೧ ರಿಂದ ೧.೫ ಮೀಟರ್ ಇಳಿಜಾರು ಅಂತರದಲ್ಲಿ ೧ ರಿಂದ ೧.೨ ಚದರ ಮೀಟರುಗಳಷ್ಟು ಗಾತ್ರದ ಸಮಪಾತಳಿ ಬದುಗಳನ್ನು ಹಾಕಿ, ಬದುಗಳ ಹತ್ತಿರದ ಮೇಲ್ಭಾಗದ ಭೂಮಿಯನ್ನು ಸಮಪಾತಳಿಗೆ ಮಟ್ಟ ಮಾಡಿಕೊಳ್ಳಬೇಕು.

### ೨. ಮಧ್ಯಮ ಆಳದ ಕಪ್ಪು ಭೂಮಿ :

ಈ ಗುಂಪಿಗೆ ಸೇರುವ ಜಮೀನುಗಳಲ್ಲಿನ ಮಣ್ಣಿನ ಆಳ ಸುಮಾರು ೨೨.೫ ಸೆಂ.ಮೀ. ನಿಂದ ೪೫ ಸೆಂ.ಮೀ. ನಷ್ಟಿರುತ್ತದೆ.

ಅ) ಇಂತಹ ಮಣ್ಣಿನಲ್ಲಿ ಸ್ವಲ್ಪ ದೊಡ್ಡ ಗಾತ್ರದ ಅಂದರೆ ೧.೨ ರಿಂದ ೧.೪ ಚದರ ಮೀ. ಗಾತ್ರದ ಸಮಪಾತಳಿ ಬದುಗಳನ್ನು ಪ್ರತಿ ೧ ರಿಂದ ೧.೫ ಮೀಟರ್ ಇಳಿಜಾರು ಅಂತರದಲ್ಲಿ ಹಾಕಬೇಕು. ಬದುಗಳ ಹತ್ತಿರದ ಮೇಲ್ಭಾಗದಲ್ಲಿ ೧/೪ ಭಾಗ ಭೂಮಿಯನ್ನು ಮಟ್ಟ ಮಾಡಬೇಕು. ಈ ರೀತಿ ಜಮೀನನ್ನು ಮಟ್ಟ ಮಾಡದಿದ್ದರೆ ಮಳೆ ನೀರು ಬದುಗಳ ಹತ್ತಿರ ನಿಂತು ಜೌಗನ್ನುಂಟುಮಾಡುವುದಲ್ಲದೆ, ಬದುಗಳು ಒಡೆದುಹೋಗುವ ಸಂಭವ ಉಂಟು.

ಅಥವಾ

ಆ) ಜಮೀನಿನಲ್ಲಿ ೩೦ ಸೆಂ.ಮೀ. ಲಂಬಾಂತರಕ್ಕೆ ಒಂದರಂತೆ ಸಮಪಾತಳಿ ಬದು ಪಟ್ಟಿಗಳನ್ನು ನಿರ್ಮಿಸಿ ಈ ಪದ್ಧತಿಯಲ್ಲಿ ಹೆಚ್ಚುವರಿ ನೀರು ಹೊರಗೆ ಹೋಗಲು ತಡೆಗಳುಳ್ಳ ನೀರುಗಾಲುವೆಗಳನ್ನು ಮಾಡಬೇಕು.

### ೩. ಹೆಚ್ಚು ಆಳದ ಕಪ್ಪು ಭೂಮಿ :

ಈ ಭೂಮಿಯ ಮಣ್ಣಿನ ಆಳ ೪೫ ಸೆಂ.ಮೀ.ಗಿಂತ ಹೆಚ್ಚಾಗಿರುತ್ತದೆ.

ಅ) ಇಂತಹ ಮಣ್ಣಿನಲ್ಲಿ ಇಳಿಜಾರಿಗೆ ಅಡ್ಡಲಾಗಿ ೧.೫ ರಿಂದ ೧.೭೫ ಚದರ ಮೀಟರ್ ಅಗಲ ತಳದ ಬದುಗಳನ್ನು ಪ್ರತಿ ೧ ರಿಂದ ೧.೫ ಮೀಟರ್ ಅಂತರದಲ್ಲಿ ನಿರ್ಮಿಸಬೇಕು. ಬದುಗಳ ಹತ್ತಿರ ಮೇಲ್ಭಾಗದ ಅರ್ಧಭಾಗ ಭೂಮಿಯನ್ನು ಮಟ್ಟ ಮಾಡುವದಲ್ಲದೆ ಹೆಚ್ಚುವರಿ ನೀರು ಹೊರಗೆ ಹರಿದು ಹೋಗಲು ಜೇಡಿ ಮಣ್ಣಿನ ಕೊಳವೆಗಳನ್ನು ಬಳಸಿ ಸೂಕ್ತವಾದ ಕೋಡಿಗಳನ್ನು ನಿರ್ಮಿಸುವದು ಅವಶ್ಯಕ.

ಅಥವಾ

ಆ) ಶೇಕಡಾ ೦.೧ ರಿಂದ ೦.೨ ರಷ್ಟು ಇಳಿಜಾರು ಕೊಟ್ಟು ೩೦ ಸೆಂ.ಮೀ. ಲಂಬಾಂತರಕ್ಕೆ ಒಂದರಂತೆ ಇಳಿಜಾರು ಬದು ಪಟ್ಟಿಗಳನ್ನು ನಿರ್ಮಿಸಿ, ಬದುಪಟ್ಟಿಗಳ ಕೊನೆಯಿಂದ ಅಥವಾ ನೀರು ಹೊರಗೆ ಹರಿದು ಹೋಗಲು ನೀರುಗಾಲುವೆಗಳನ್ನು ಮಾಡಬೇಕು.

ಅಥವಾ

ಇ) ಶೇಕಡಾ ೦.೧ ರಿಂದ ೦.೨ ರಷ್ಟು ಇಳಿಜಾರು ಇಟ್ಟುಕೊಂಡು ೦.೮೫ ಚದರ ಮೀಟರ್ ಗಾತ್ರದ ಇಳಿಜಾರು ಬದುಗಳನ್ನು ಪ್ರತಿ ೦.೭೫ ರಿಂದ ೧ ಮೀಟರ್ ಇಳಿಜಾರು ಅಂತರದಲ್ಲಿ ನಿರ್ಮಿಸಬೇಕು.

## ಬ. ಅಂತರ ಬದು ಪದ್ಧತಿ :

ಬೀಳುವ ಮಳೆ ನೀರಿನ ಹೆಚ್ಚುಭಾಗ ಭೂಮಿಯಲ್ಲಿ ಇಂಗುವಂತೆ ಮಾಡುವದು ಒಣ ಬೇಸಾಯದಲ್ಲಿ ಒಂದು ಬಹು ಮುಖ್ಯವಾದ ಅಂಶ. ಈ ರೀತಿ ಸಂಗ್ರಹಿಸಿದ ನೀರು ಬೆಳೆಗಳಿಗೆ ದೊರೆತು ಹೆಚ್ಚು ಇಳುವರಿಗೆ ಸಹಾಯಕವಾಗುತ್ತದೆ. ಮಳೆ ನೀರಿನ ಹೆಚ್ಚು ಭಾಗ ಭೂಮಿಯಲ್ಲಿ ಇಂಗುವಂತೆ ಮಾಡಲು ಈ ಕೆಳಗೆ ಸೂಚಿಸಿರುವ ಕ್ರಮಗಳನ್ನು ಅನುಸರಿಸಬೇಕು.

### ೧. ಭೂಮಿ ಮಟ್ಟ ಮಾಡುವದು :

ಎರಡು ಬದುಗಳ ಮಧ್ಯದ ಭೂಮಿಯನ್ನು ಸಮವಾದ ಇಳಿಜಾರಿಗೆ ತರಲು ಭೂಮಿಯ ಉಬ್ಬು ತಗ್ಗುಗಳನ್ನು ಸರಿಪಡಿಸುವದು ಎಲ್ಲ ವಿಧವಾದ ಜಮೀನುಗಳಲ್ಲಿಯೂ ಅವಶ್ಯಕ. ಈ ರೀತಿ ಮಾಡುವದರಿಂದ ಮಳೆ ನೀರು ಹೆಚ್ಚಿನ ಪ್ರಮಾಣದಲ್ಲಿ ಭೂಮಿಯಲ್ಲಿ ಇಂಗಲು ತೆಗುದುಕೊಳ್ಳುವ ಬೇಸಾಯ ಕ್ರಮಗಳು ಹೆಚ್ಚು ಯಶಸ್ವಿಯಾಗಲು ಅನುವು ಮಾಡಿಕೊಟ್ಟಂತಾಗುತ್ತದೆ.

### ೨. ಮಾಗಿ ಉಳುಮೆ :

ಬೆಳೆಗಳು ಕಟಾವು ಆದ ಮೇಲೆ ಕಡಿಮೆ ಆಳದ ಕಪ್ಪು ಭೂಮಿಯಲ್ಲಿ ಪ್ರತಿ ವರ್ಷವೂ ಆಳವಾದ ಉಳುಮೆ ಮಾಡಬೇಕು. ಹೆಚ್ಚು ಆಳದ ಕಪ್ಪು ಭೂಮಿಯಲ್ಲಿ ಮಧ್ಯದಿಂದ ಎರಡು ಅಥವಾ ಮೂರು ವರ್ಷಗಳಿಗೊಮ್ಮೆ ಆಳವಾದ ಉಳುಮೆ ಮಾಡುವುದು ಒಳ್ಳೆಯ

ಪದ್ಧತಿ. ಇದರಿಂದ ಭೂಮಿಯಲ್ಲಿ ನೀರು ಇಂಗುವ ಶಕ್ತಿಯನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ. ಬೆಳೆ ಕಟಾವು ಆದ ಮೇಲೆ ಉಳುಮೆ ಮಾಡಲು ಸಾಧ್ಯವಾಗದಿದ್ದಲ್ಲಿ ಮುಂಗಾರಿನಲ್ಲಿ ಆದಷ್ಟು ಮುಂಚಿತವಾಗಿ ಉಳುಮೆ ಮಾಡಬೇಕು.

**೩. ಸಮಪಾತಳಿ ಬೇಸಾಯ :**

ಉಳುಮೆ, ಬಿತ್ತನೆ ಮುಂತಾದ ಎಲ್ಲ ಬೇಸಾಯ ಪದ್ಧತಿಗಳನ್ನು ಸಮಪಾತಳಿ ರೇಖೆಗೆ ಅನುಗುಣವಾಗಿ ಅಥವಾ ಇಳಿಜಾರಿಗೆ ಅಡ್ಡಲಾಗಿ ಮಾಡುವದು ಅತೀ ಅವಶ್ಯಕ. ಈ ಪದ್ಧತಿಯಿಂದ ಜಮೀನಿನಿಂದ ಹೊರಗೆ ಹರಿದುಹೋಗುವ ನೀರಿನ ಪ್ರಮಾಣವನ್ನು ಕಡಿಮೆ ಮಾಡಿ, ಬೆಳೆಗಳ ಇಳುವರಿಯನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ.

**೪. ಚೌಕು ಮಡಿಗಳ ನಿರ್ಮಾಣ :**

ಕರ್ನಾಟಕ ರಾಜ್ಯದ ಬಿಜಾಪುರ, ಬಾಗಲಕೋಟ ಮತ್ತು ಕೊಪ್ಪಳ ಜಿಲ್ಲೆಗಳು ಆಳವಾದ ಕಪ್ಪು ಮಣ್ಣಿನ ಜಮೀನುಗಳನ್ನು ಒಳಗೊಂಡಿರುತ್ತದೆ. ಇಲ್ಲಿ ಮಣ್ಣಿನಲ್ಲಿ ನೀರು ಇಂಗುವಿಕೆಯ ಪ್ರಮಾಣ ಕಡಿಮೆಯಾಗಿರುತ್ತದೆ. ಆದ್ದರಿಂದ ಇಂತಹ ಜಮೀನುಗಳಲ್ಲಿ ಚೌಕು ಮಡಿಗಳನ್ನು ನಿರ್ಮಾಣ ಮಾಡುವುದು ಉತ್ತಮ ಪದ್ಧತಿ. ಚೌಕು ಮಡಿಗಳು ತೇವಾಂಶವನ್ನು ಸಂಗ್ರಹಿಸಲು ಹೆಚ್ಚು ಸಹಾಯಕವಾಗಿರುತ್ತವೆ. ಚೌಕು ಮಡಿಗಳಲ್ಲಿ ಬಿದ್ದ ಮಳೆ ನೀರು ಹೊರಗೆ ಹರಿದು ಹೋಗದೆ ಮಡಿಗಳಲ್ಲಿ ಹೆಚ್ಚು ಸಮಯ ಉಳಿಯುವದರಿಂದ ಜಮೀನಿನಲ್ಲಿ ಇಂಗುವ ನೀರಿನ ಪ್ರಮಾಣ ಹೆಚ್ಚಾಗಿರುತ್ತದೆ. ಇದರಿಂದ ಮಣ್ಣಿನಲ್ಲಿ ನೀರಿನ ತೇವಾಂಶ ಸಂರಕ್ಷಣೆಯಾಗುತ್ತದೆ. ಈ ಪದ್ಧತಿಯು ಅಲ್ಪ ಮಳೆಯ ಕಾಲದಲ್ಲಿ ತುಂಬಾ ಉಪಯುಕ್ತವಾಗಿರುತ್ತದೆ.

ಭೂಮಿಯ ಇಳಿಜಾರು ಶೇಕಡಾ ೧.೫ ವರೆಗಿರುವ ಕಪ್ಪು ಮಣ್ಣಿನ ಜಮೀನಿನಲ್ಲಿ ೯ ಚದರ ಮೀಟರನಿಂದ ೨೦ ಚದರ ಮೀಟರಗಳವರೆಗೆ ಕ್ಷೇತ್ರ ಇರುವ ಚೌಕು ಮಡಿಗಳನ್ನು ನಿರ್ಮಿಸಬೇಕು. ಹೆಚ್ಚು ಇಳಿಜಾರು ಇರುವ ಜಮೀನುಗಳಲ್ಲಿ ಸಣ್ಣ ಮಡಿಗಳನ್ನು ಅಂದರೆ ೯ ಚದರ ಮೀಟರ (೩ ಮೀ. X ೩ ಮೀ.) ಹಾಗೂ ಕಡಿಮೆ ಇಳಿಜಾರಿನ ಜಮೀನುಗಳಲ್ಲಿ ೨೦ ಚದರ ಮೀಟರ್ (೪.೫ಮೀ. X ೪.೫ ಮೀ) ಚೌಕು ಮಡಿಗಳನ್ನು ಅಳವಡಿಸಿಕೊಳ್ಳುವುದು ಸೂಕ್ತ. ಬದು ನಿರ್ಮಾಪಕ (ಬಂಡ್ ಫಾರ್ಮರ್) ಉಪಕರಣವನ್ನು ಬಳಸಿಕೊಂಡು ಚೌಕು ಮಡಿಗಳನ್ನು ನಿರ್ಮಿಸಬಹುದು. ಈ ಪದ್ಧತಿಯನ್ನು ಅನುಸರಿಸಿದಾಗ ಬೆಳೆ ಇಳುವರಿ ಶೇಕಡಾ ೨೫ ರಿಂದ ೪೦ರಷ್ಟು ಹೆಚ್ಚುವುದು ಕಂಡುಬಂದಿದೆ.

**೫. ಅಡೆತಡೆಗಳುಳ್ಳ ದಿಂಡು ಸಾಲುಗಳ ನಿರ್ಮಾಣ :**

ಇಳಿಜಾರಿಗೆ ಅಡ್ಡಲಾಗಿ ಸುಮಾರು ೩೦ ರಿಂದ ೪೦ ಸೆಂ.ಮೀ. ಎತ್ತರದ ದಿಂಡು ಸಾಲುಗಳನ್ನು ೬೦ ರಿಂದ ೭೦ ಸೆಂ.ಮೀ. ಅಂತರದಲ್ಲಿ ನಿರ್ಮಿಸಿ, ಸಾಲುಗಳಲ್ಲಿ ಪ್ರತಿ ೫ ಮೀಟರ ಅಂತರದಲ್ಲಿ ೫ ರಿಂದ ೬ ಸೆಂ.ಮೀ. ಎತ್ತರದ ಮಣ್ಣಿನ ಅಡೆತಡೆಗಳನ್ನು ನಿರ್ಮಿಸಬೇಕು. ಮಣ್ಣಿನ ಅಡೆತಡೆಗಳ ಎತ್ತರ ದಿಂಡಿನ ಸಾಲಿನ ಎತ್ತರಕ್ಕಿಂತ ಹೆಚ್ಚಿಗೆಯಾಗಿರಬಾರದು. ದಿಂಡು ಸಾಲುಗಳನ್ನು ಜುಲೈ ತಿಂಗಳಲ್ಲಿ ಒಂದು ಮಳೆ ಆದ ನಂತರ ಮಾಗಿ ಉಳುಮೆ ಮಾಡಿದ ಜಮೀನುಗಳಲ್ಲಿ ಮಣ್ಣನ್ನು ಹದವಾಗಿ ತಯಾರುಮಾಡಿ ಒಂದೆರಡು ಸಾರಿ ಕುಂಟೆ ಹೊಡೆದ ನಂತರ ನಿರ್ಮಿಸಬೇಕು. ಈ ದಿಂಡು ಸಾಲುಗಳನ್ನು ಹಿಂಗಾರು ಬೆಳೆ ಬಿತ್ತುವವರೆಗೆ ಕಾಪಾಡಿಕೊಂಡು ಬರುವುದರಿಂದ ಬಿದ್ದ ಮಳೆ ನೀರಿನ ಬಹುಭಾಗವನ್ನು ಜಮೀನಿನಲ್ಲಿ ಶೇಕಡಾ ೬೩ರಷ್ಟು ಸಂಗ್ರಹಿಸಬಹುದು; ಶೇಕಡಾ ೮೪ರಷ್ಟು ಮಣ್ಣನ್ನು ಸಂರಕ್ಷಿಸಿ, ಶೇಕಡಾ ೫೦ರಷ್ಟು ತೊಗರಿ ಮತ್ತು ಜೋಳದ ಇಳುವರಿಯನ್ನು ಹೆಚ್ಚಿಸಬಹುದು.

**೬. ತಟ್ಟೆಯಾಕಾರದ ಗುಣಿಗಳು :**

ಮಧ್ಯಮದಿಂದ ಹೆಚ್ಚು ಆಳವಿರುವ ಕಪ್ಪು ಮಣ್ಣಿನಲ್ಲಿ ಬಿದ್ದ ಮಳೆ ನೀರನ್ನು ಜಮೀನಿನಲ್ಲಿಯೇ ಇಂಗುವಂತೆ ಮಾಡಲು ಅಲ್ಲಲ್ಲಿ ತಟ್ಟೆಯಾಕಾರದ ಚಿಕ್ಕ ಗುಣಿಗಳನ್ನು ಮಾಡಬಹುದು. ಎಡೆ ಕುಂಟೆ ಅಥವಾ ದಿಂಡು ಉಪಕರಣಗಳಿಂದ ಈ ಗುಣಿಗಳನ್ನು ತೆಗೆಯಬಹುದು. ಗುಣಿಗಳನ್ನು ಮುಂಗಾರು ಮಳೆಯಾಗುವ ಮೊದಲು ನಿರ್ಮಿಸಿ, ಹಿಂಗಾರು ಬೆಳೆಗಳನ್ನು ಬಿತ್ತುವದಕ್ಕೆ ಮುಂಚೆ ಸಮ ಮಾಡಿಕೊಳ್ಳಬೇಕು.

**೭. ಸಸ್ಯ ಹೊದಿಕೆಗಳ ಅಳವಡಿಕೆ :**

ಜೋಳದ ಹಾಗೂ ಸಜ್ಜೆಯ ಕೋಲಿಗಳನ್ನು, ಸೂರ್ಯಕಾಂತಿಯ ದಂಟುಗಳನ್ನು, ಹಸಿರೆಲೆ ಗೊಬ್ಬರವಾದ ಗ್ಲಿರಿಸಿಡಿಯಾ ಸಸ್ಯವನ್ನು, ಬೀಜ ರಹಿತ ಒಣ ಹುಲ್ಲು ಮುಂತಾದವುಗಳನ್ನು ಹಿಂಗಾರಿ ಬೆಳೆಯನ್ನು ಬಿತ್ತುವುದಕ್ಕೆ ೨-೩ ವಾರಗಳಿರುವಾಗ ಭೂಮಿಯ

ಮೇಲೆ ಹರಡಬೇಕು. ನಂತರ ಬೋದು ಸಾಲುಗಳನ್ನು ನಿರ್ಮಿಸಿ ಮೇಲ್ಕಾಣಿಸಿದ ಸಾವಯವ ಅಂಶವನ್ನು ಮಣ್ಣಿನಲ್ಲಿ ಸೇರಿಸಿ ಮುಚ್ಚಬೇಕು. ಈ ರೀತಿ ಮಾಡುವುದರಿಂದ ಮಳೆ ಹನಿಯ ರಭಸದಿಂದಾಗುವ ಮಣ್ಣಿನ ಸವಕಳಿಯನ್ನು ತಡೆಯಬಹುದು. ಮಣ್ಣಿನ ಕಣಗಳ ರಚನೆಯನ್ನು ಸಂರಕ್ಷಿಸಬಹುದು. ಮಳೆ ನೀರಿನ ಬಹುಭಾಗವನ್ನು (ಶೇಕಡಾ ೮೦ ರಷ್ಟು) ಭೂಮಿಯಲ್ಲಿ ಸಂಗ್ರಹಿಸಿ ಶೇಕಡಾ ೬೬ರಷ್ಟು ಮಣ್ಣು ಕೊಚ್ಚಿ ಹೋಗುವದನ್ನು ಕಡಮೆ ಮಾಡಿ ಭೂ ಫಲವತ್ತತೆ ಹೆಚ್ಚಿಸಿ ಅಧಿಕ ಇಳುವರಿಯನ್ನು ಪಡೆಯಲು ಹೆಚ್ಚು ಸಹಾಯಕವಾಗುವದು.

### ೮. ದಪ್ಪ ಉಸುಕಿನ ಹೊದಿಕೆ :

ಗದಗ ಜಿಲ್ಲೆ ಮತ್ತು ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲ್ಲೂಕುಗಳಲ್ಲಿ ಸುಮಾರು ೨.೫ ಲಕ್ಷ ಹೆಕ್ಟೇರ್ ಪ್ರದೇಶವು ಕರ್ಲು ಭೂಮಿಯಿಂದ ಕೂಡಿದೆ. ಈ ಭೂಮಿಯಲ್ಲಿ ನೀರು ಇಂಗುವಿಕೆಯ ಪ್ರಮಾಣ ಬಹಳ ಕಡಮೆಯಾಗಿರುತ್ತದೆ. (೪ ಸೆಂ.ಮೀ./ದಿನ). ಆದ್ದರಿಂದ ಬಿದ್ದ ಮಳೆಯ ಹೆಚ್ಚಿನ ಪ್ರಮಾಣದ ನೀರು ಭೂಮಿಯಿಂದ ಹೊರಗೆ ಹರಿದುಹೋಗುತ್ತದೆ. ಹೀಗಾಗಿ ರೈತರು ಯಾವುದೇ ನೀರು ಸಂರಕ್ಷಣಾ ಪದ್ಧತಿಗಳನ್ನು ಅಳವಡಿಸುತ್ತಿರುವುದಿಲ್ಲ. ಆದ್ದರಿಂದ ಕೆಲವು ರೈತರು ಸುಮಾರು ೨೦ ವರ್ಷಗಳಿಂದ ದಪ್ಪ ಉಸುಕನ್ನು ಭೂಮಿಯ ಮೇಲೆ ಹೊದಿಕೆಯಾಗಿ ಹಾಕಿ ಬೆಳೆಗಳ ಇಳುವರಿಯನ್ನು ಪಡೆಯುತ್ತಿದ್ದಾರೆ. ಆದ್ದರಿಂದ ಬಿಜಾಪುರ ಕೇಂದ್ರದ ಒಣ ಬೇಸಾಯ ಯೋಜನೆ ಅಡಿಯಲ್ಲಿ ಈ ಪದ್ಧತಿಗೆ ತಿರುವು ನೀಡಿ ಹೆಚ್ಚು ರೈತರಿಗೆ ಅನುಕೂಲವಾಗುವ ರೀತಿಯಲ್ಲಿ ಅಳವಡಿಸಲು ಅಭಿವೃದ್ಧಿಗೊಳಿಸಲಾಗಿದೆ.

ದಪ್ಪ ಉಸುಕಿನ ಹೊದಿಕೆಯನ್ನು ಕರ್ಲು ಭೂಮಿಗಳಲ್ಲಿ ಶಿಫಾರಸ್ಸು ಮಾಡಲಾಗಿದೆ. ಈ ಪದ್ಧತಿಯು ಹೆಚ್ಚಿನ ಪ್ರಮಾಣ ತೇವಾಂಶ ಸಂರಕ್ಷಿಸುವುದಲ್ಲದೆ ಕಳೆಗಳ ನಿಯಂತ್ರಣ ಮಾಡಿ ಆವಿಯಾಗಿ ಹೋಗುತ್ತಿರುವ ತೇವಾಂಶವನ್ನು ಪ್ರತಿಶತ ೨೫ ರಿಂದ ೩೦ರಷ್ಟು ಕಡಿಮೆಗೊಳಿಸುತ್ತದೆ. ಭೂಮಿಗೆ ದಪ್ಪ ಉಸುಕನ್ನು ಹರಡುವುದಕ್ಕಿಂತ ಮುಂಚೆ ಬಹುವಾರ್ಷಿಕ ಕಳೆಗಳಾದ ಕರಿಕೆ ಮತ್ತು ಜೇಕುಗಳಂತ ಕಳೆಗಳನ್ನು ನಿರ್ನಾಮ ಮಾಡಿ, ಆಳವಾದ ಮಾಗಿ ಉಳುಮೆಯಾದ ನಂತರ ಸಾಕಷ್ಟು ತಿಪ್ಪೆ ಗೊಬ್ಬರವನ್ನು ಹಾಕಿ, ಸರಿಯಾಗಿ ಮಣ್ಣಿನಲ್ಲಿ ಮಿಶ್ರಣವಾಗುವಂತೆ ಕುಂಟೆಯಿಂದ ಹರಗಿ ಭೂಮಿಯನ್ನು ಹದಗೊಳಿಸಿದ ನಂತರ ಸುಮಾರು ೨೫೦ ರಿಂದ ೨೭೫ ಟ್ರಾಕ್ಟರ್ ಲೋಡ್ ಪ್ರತಿ ಹೆಕ್ಟೇರಿಗೆ ದಪ್ಪ ಉಸುಕನ್ನು ಜಮೀನಿನ ಮೇಲೆ ೧೦ ರಿಂದ ೧೫ ಸೆಂ.ಮೀ. ದಪ್ಪಗೆ ಹಾಕಬೇಕು. ದಪ್ಪ ಉಸುಕು ಜಮೀನಿನ ಮೇಲೆ ಹರಡಿದ ನಂತರ ಕೇವಲ ಹರಗುವ ಕುಂಟೆಯಿಂದ ತೆಳುವಾಗಿ ಹರಗುವದನ್ನು ಬಿಟ್ಟು ಯಾವುದೇ ಉಳುಮೆಯನ್ನು ಮಾಡಬಾರದು. ಜಮೀನಿನ ಮೇಲೆ ದಪ್ಪ ಉಸುಕು ಹರಡುವುದಕ್ಕೆ ಒಟ್ಟು ರೂ. ೨೮೦೦೦ ಪ್ರತಿ ಹೆಕ್ಟೇರಿಗೆ ತಗಲುವ ವೆಚ್ಚವಾಗಿದೆ. ಒಂದು ಸಲ ಈ ರೀತಿ ಜಮೀನಿನ ಮೇಲೆ ದಪ್ಪ ಉಸುಕು ಹರಡಿದರೆ ಸುಮಾರು ೧೫ ರಿಂದ ೨೦ ವರ್ಷಗಳವರೆಗೆ ಬಳಕೆ ಬರುವದು. ಆದರೆ ಪ್ರತಿ ೫ ವರ್ಷಕ್ಕೊಮ್ಮೆ ಜಮೀನಿನ ಮೇಲೆ ಉಸುಕು ಹಾಳಾದ ಸ್ಥಳದಲ್ಲಿ ಹಾಕಿ ನವೀಕರಿಸಬೇಕು.

ಜಮೀನಿನ ಮೇಲೆ ಉಸುಕಿನ ಹೊದಿಕೆಯನ್ನು ಹಾಕುವುದರಿಂದ ಬಿದ್ದ ಮಳೆ ನೀರು ಸ್ಥಳದಲ್ಲಿಯೇ ಇಂಗುವುದಕ್ಕೆ ಸಹಾಯಕವಾಗುತ್ತದೆ. ಈ ರೀತಿಯಾದ ಪದ್ಧತಿಯನ್ನು ಅನುಸರಿಸುವುದರಿಂದ ಒಂದು ವರ್ಷದಲ್ಲಿ ಎರಡು ಬೆಳೆಗಳನ್ನು ತೆಗೆದುಕೊಳ್ಳುವದಕ್ಕೆ ಸಾಧ್ಯವಾಗುತ್ತದೆ. ಈ ಪದ್ಧತಿಯನ್ನು ಅಳವಡಿಸುವುದರಿಂದ ವಿವಿಧ ಬೆಳೆಗಳಲ್ಲಿ ಇಳುವರಿಯು ಶೇಕಡಾ ೨೦೦ ರಿಂದ ೩೦೦ ರಷ್ಟು ಹೆಚ್ಚಾದದ್ದು ಕಂಡುಬಂದಿರುತ್ತದೆ. ಜಮೀನಿನ ಮೇಲೆ ದಪ್ಪ ಉಸುಕನ್ನು ಹರಡುವದಕ್ಕೆ ತಗಲುವ ವೆಚ್ಚವನ್ನು ಎರಡು ವರ್ಷದೊಳಗಾಗಿ ವಾಪಸ್ ಪಡೆಯಲು ಸಾಧ್ಯವಾಗುತ್ತದೆ.

ಕೊಪ್ಪಳ ಜಿಲ್ಲೆ ಮತ್ತು ಗದಗ ಜಿಲ್ಲೆಗಳಲ್ಲಿ ಸುಮಾರು ೨೫ ರಿಂದ ೩೦ ಸಾವಿರ ಹೆಕ್ಟೇರ್ ಪ್ರದೇಶಗಳಲ್ಲಿ ಈ ತಂತ್ರಜ್ಞಾನವನ್ನು ಅಳವಡಿಸುತ್ತಿದ್ದಾರೆ.

### ೯. ಬೆಣಚು ಕಲ್ಲುಗಳ ಹೊದಿಕೆ :

ಉತ್ತರ ಕರ್ನಾಟಕದಲ್ಲಿ ಸುಮಾರು ೨ ಸಾವಿರ ಹೆಕ್ಟೇರ್ ಕಪ್ಪು ಮಣ್ಣಿನ ಪ್ರದೇಶವು ಬೆಣಚುಕಲ್ಲುಗಳಿಂದ ನೈಸರ್ಗಿಕವಾಗಿ ಇದ್ದದ್ದು ಕಂಡುಬಂದಿದೆ. ಬೆಣಚು ಕಲ್ಲುಗಳ ಗಾತ್ರವು ೧೫ ರಿಂದ ೨೦ ಮಿ.ಮೀ. ಇರುವುದು ಕಂಡುಬಂದಿದೆ. ಇದು ಒಂದಾನೊಂದು ಕಾಲದಲ್ಲಿ ನದಿ ಪ್ರದೇಶವಾಗಿದ್ದಿತು. ಸರ್ವೇ ಸಾಮಾನ್ಯವಾಗಿ ರೈತರು ಜಮೀನಿನ ಮೇಲೆ ಇರುವಂಥ ಬೆಣಚು ಕಲ್ಲುಗಳು ತಾವು

ಅನುಸರಿಸುತ್ತಿರುವ ಸಾಗುವಳಿ ಕ್ರಮಗಳಿಗೆ ಅಡಚಣೆ ಮಾಡುತ್ತವೆ ಎಂದು ತಿಳಿದುಕೊಂಡಿದ್ದಾರೆ. ಹೀಗಾಗಿ ರೈತರು ಜಮೀನಿನ ಮೇಲೆ ಇರುವ ಬೆಣಚು ಕಲ್ಲುಗಳನ್ನು ಆರಿಸಿ ಬದುಗಳ ಮೇಲೆ ಹಾಕುವ ರೂಢಿ ಇರುತ್ತದೆ.

ನೈಸರ್ಗಿಕವಾಗಿ ಜಮೀನಿನ ಮೇಲೆ ಕಾಣುವ ಬೆಣಚು ಕಲ್ಲುಗಳು ಬಿದ್ದ ಮಳೆ ನೀರು ಹರಿದು ಹೋಗುವುದನ್ನು ತಡೆಗಟ್ಟುವ ಸಾಧನದಂತೆ ವರ್ತಿಸುತ್ತದೆ. ಆದ್ದರಿಂದ ಬಿದ್ದ ಮಳೆ ನೀರಿಗೆ ಜಮೀನಿನ ಮೇಲೆ ನಿಧಾನವಾಗಿ ಹರಿಯುವದಕ್ಕೆ ಸಮಯ ಸಿಗುವುದರಿಂದ ನೀರು ಇಂಗುವಿಕೆಯ ಪ್ರಮಾಣ ಹೆಚ್ಚಾಗಿರುತ್ತದೆ. ಹೀಗಾಗುವುದರಿಂದ ಮಣ್ಣಿನಲ್ಲಿ ತೇವಾಂಶವನ್ನು ಸಂರಕ್ಷಿಸಿ ಅದರ ಆವಿಯಾಗುವಿಕೆಯನ್ನು ಕಡಮೆ ಮಾಡಬಹುದು.

ಬಿಜಾಪುರ, ಬಾಗಲಕೋಟ ಮತ್ತು ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ರೈತರು ಸುಮಾರು ೫೦೦೦-೬೦೦೦ ಹೆಕ್ಟೇರ್ ಪ್ರದೇಶದಲ್ಲಿ ಈ ಪದ್ಧತಿಯನ್ನು ಅಳವಡಿಸಿಕೊಂಡಿದ್ದಾರೆ.

### ೧೦. ಹೊದಿಕೆಯ ಬೆಳೆಗಳು :

ಉತ್ತರ ಕರ್ನಾಟಕದ ಪ್ರದೇಶದಲ್ಲಿ ಬರುವ ಆಳವಾದ ಕಪ್ಪುಮಣ್ಣಿನ ಭೂಮಿಗಳಲ್ಲಿ ಮುಂಗಾರಿ ಹಂಗಾಮಿನ ಬೆಳೆಗಳನ್ನು ಬೆಳೆಯದೆ ಖಾಲಿ ಬಿಟ್ಟು ಹಿಂಗಾರಿ ಬೆಳೆಗಳಾದ ಜೋಳ, ಕಡಲೆ ಮತ್ತು ಸೂರ್ಯಕಾಂತಿ ಬೆಳೆಗಳನ್ನು ತೆಗೆದುಕೊಳ್ಳುತ್ತಾರೆ. ಈ ರೀತಿ ಮಾಡುವುದರಿಂದ ಮುಂಗಾರಿಯಲ್ಲಿ ಬಿದ್ದ ಮಳೆ ನೀರಿನ ರಭಸಕ್ಕೆ ಮಣ್ಣಿನ ಕಣಗಳು ಛಿದ್ರವಾಗಿ ನೀರಿನ ಮುಖಾಂತರ ಹರಿದು ಹೋಗುವುದರಿಂದ ಜಮೀನಿನ ಫಲವತ್ತತೆ ಕಡಿಮೆಯಾಗುತ್ತದೆ.

ಸೆಣಬು, ಹೆಸರು, ಉದ್ದು, ಹುರಳಿ, ಅಲಸಂದಿ, ಸವತೆಕಾಯಿ, ಹೀರೆಕಾಯಿ ಬೆಳೆಗಳನ್ನು ಮುಂಗಾರಿನಲ್ಲಿ ಬೆಳೆಯುವುದರಿಂದ ಅವುಗಳು ಜಮೀನಿನ ಮೇಲೆ ೪೦ ರಿಂದ ೫೦ ದಿನಗಳೊಳಗಾಗಿ ನೆಲವನ್ನು ಸಂಪೂರ್ಣ ಆವರಿಸಿರುದರಿಂದ ಮುಂಗಾರಿನಲ್ಲಿ ಬಿದ್ದ ಮಳೆ ನೀರಿನ ಪೆಟ್ಟನ್ನು ತಡೆಯುವದಕ್ಕೆ ಸಹಾಯಕವಾಗುವುದಲ್ಲದೇ ಹರಿದುಹೋಗುವ ನೀರನ್ನು ಭೂಮಿಯಲ್ಲಿ ಇಂಗುವಂತೆ ಮಾಡುತ್ತದೆ. ಬೆಳೆ ಉಳಿಕೆಗಳನ್ನು ಕಟಾವಾದ ನಂತರ ಭೂಮಿಯಲ್ಲಿ ಮುಗ್ಗು ಹೊಡೆಯುವುದರಿಂದ ಜಮೀನಿನ ಸಾರಜನಕದ ಪ್ರಮಾಣವನ್ನು ಹೆಚ್ಚಿಸಿ ಮಣ್ಣಿನ ಭೌತಿಕ ರಚನಾತ್ಮಕ ಲಾಭಗಳನ್ನು ಪಡೆಯಬಹುದು. ಈ ಪದ್ಧತಿಯನ್ನು ಬಿಜಾಪುರ ಕೇಂದ್ರದ ಒಣ ಬೇಸಾಯ ಯೋಜನೆಯಲ್ಲಿ ಅಭಿವೃದ್ಧಿಪಡಿಸಲಾಗಿದೆ.

ಹೊದಿಕೆಯ ಬೆಳೆಗಳನ್ನು ಬೆಳೆಯುವದರಿಂದ ಬಿದ್ದ ಮಳೆ ನೀರನ್ನು ಸ್ಥಳದಲ್ಲಿಯೇ ಇಂಗುವಂತೆ ಮಾಡುವುದಲ್ಲದೆ ಮಳೆ ನೀರಿನ ಪೆಟ್ಟಿಗೆ ಆಗುವ ಮಣ್ಣಿನ ಕಣಗಳ ಚದುರುವಿಕೆಯನ್ನು ತಡೆಯುತ್ತವೆ. ಇದಲ್ಲದೆ ಈ ಬೆಳೆಗಳಿಂದ ಹೆಚ್ಚಿನ ನಿವ್ವಳ ಲಾಭ ಪಡೆಯಬಹುದು.

### ೧೧. ಸಾವಯವ ಹಸಿರೆಲೆ ಗೊಬ್ಬರಗಳ ಬಳಕೆ :

ಸಾವಯವ ಹಸಿರೆಲೆ ಗೊಬ್ಬರಗಳಾದ ಸೆಣಬು, ಗ್ಲಿರಿಸಿಡಿಯಾ, ಕ್ಯಾಸಿಯಾ ಸಿರೆಸಿಯಾ, ಪೊಂಗ್ಯಾಮಿಯಾ ಮುಂತಾದವುಗಳನ್ನು ಸರಿಯಾದ ಸಮಯದಲ್ಲಿ ಸೂಕ್ತ ರೀತಿಯಲ್ಲಿ ಭೂಮಿಯಲ್ಲಿ ಮುಗ್ಗಿ ಹೊಡೆಯುವುದರಿಂದ ಮಣ್ಣಿನ ಫಲವತ್ತತೆ ಹಾಗೂ ಉತ್ಪಾದನೆ ಹೆಚ್ಚಿಸಬಹುದಲ್ಲದೆ ಸಾರಜನಕ, ರಂಜಕ ಮತ್ತು ಪೊಟ್ಯಾಷ್ ಸತ್ವಗಳನ್ನೊದಗಿಸುವ ರಾಸಾಯನಿಕ ಗೊಬ್ಬರಗಳೊಂದಿಗೆ ಸರಿಯಾದ ಪ್ರಮಾಣದಲ್ಲಿ ಬೆಳೆಗೆ ಒದಗಿಸಬೇಕು. ಅವುಗಳ ಉಪಯೋಗ ಬೇಗನೆ ಕಂಡುಬಂದು ಬೆಳೆಯ ಇಳುವರಿ ಹೆಚ್ಚುತ್ತದೆ.

### ೧೨. ಅಗಲ ಅಂತರ ಸಾಲುಗಳು ಮತ್ತು ಪುನರಾವರ್ತಿತ ಅಂತರ ಬೇಸಾಯ ಪದ್ಧತಿ :

ಕರ್ನಾಟಕದ ಕಪ್ಪು ಜಮೀನುಗಳಲ್ಲಿ ರೈತರು ೩೫ ರಿಂದ ೪೦ ಸೆಂ.ಮೀ. ಅಂತರದ ಸಾಲುಗಳಲ್ಲಿ ಬೇಸಾಯ ಮಾಡುವ ಪದ್ಧತಿ ಇದೆ. ಈ ರೀತಿ ಅಳವಡಿಸಿದ ಕಡಿಮೆ ಅಂತರ ಸಾಲಿನಲ್ಲಿ ಬೆಳೆಗಳ ಎಲೆಗಳು ಬೆಳೆದು ಹರಡಿ ಒಂದಕ್ಕೊಂದು ಕೂಡಿ ಜಮೀನುಗಳಲ್ಲಿ ತೆರೆದ ಹೊದಿಕೆಯಾಗುವುದರಿಂದ ಹೊಲಗಳಲ್ಲಿ ತೆರೆದ ಬಿರುಕುಗಳನ್ನು ಅಂತರ ಬೇಸಾಯ ಪದ್ಧತಿಯಿಂದ ಮುಚ್ಚಲು ಅನಾನುಕೂಲವಾಗುತ್ತದೆ. ಹೀಗಾಗಿ ಭೂಮಿಯ ಆಳದಲ್ಲಿರುವ ತೇವಾಂಶವು ಬಿರುಕುಗಳ ಮುಖಾಂತರ ಆವಿಯಾಗಿ ಹೋಗುವುದರಿಂದ ಬೆಳೆಯ ಸಂದಿಗ್ಧ ಹಂತದಲ್ಲಿ ತೇವಾಂಶದ ಕೊರತೆಯಾಗುತ್ತದೆ. ಆದ್ದರಿಂದ ಬೆಳೆಗಳ ಬೆಳವಣಿಗೆಯು ಕುಂಠಿತವಾಗುವುದರಿಂದ ಇಳುವರಿಯ ಮೇಲೆ ಗಣನೀಯವಾದ ಪರಿಣಾಮ ಬೀರುತ್ತದೆ.

ಆಳವಾದ ಕಪ್ಪು ಜಮೀನುಗಳಲ್ಲಿ ಸೂರ್ಯಕಾಂತಿಗೆ ಮತ್ತು ಕಡಿಮೆ ಆಳವಾದ ಕಪ್ಪು ಜಮೀನುಗಳಲ್ಲಿ ಸಜ್ಜೆ ಬೆಳೆಗೆ ೧೨೦ ರಿಂದ ೧೩೫ ಸೆಂ.ಮೀ.ವರೆಗೆ ಅಗಲವಾದ ಅಂತರದ ಸಾಲುಗಳಲ್ಲಿ ಬೆಳೆಯುವ ಪದ್ಧತಿಯನ್ನು ಬಿಜಾಪುರ ಕೇಂದ್ರದ ಒಣ ಬೇಸಾಯ ಯೋಜನೆಯ ಅಡಿಯಲ್ಲಿ ಅಭಿವೃದ್ಧಿಪಡಿಸಲಾಯಿತು. ಈ ಪದ್ಧತಿಯನ್ನು ಬೆಳೆಯ ಪರಿಣಾಮಕಾರಿ ಬೇರುವಲಯ ಹೆಚ್ಚಿಸುವುದಲ್ಲದೆ ಮಣ್ಣಿನ ತೇವಾಂಶ ಬಹಳ ಕಾಲದವರೆಗೆ ಬೆಳೆಗೆ ಒದಗಲು ಸಹಾಯವಾಗುತ್ತದೆ. ಸಾಲುಗಳ ಮಧ್ಯದಲ್ಲಿ ಮೇಲಿಂದ ಮೇಲೆ ಅಂತರ ಬೇಸಾಯವನ್ನು ೧೦ ಸೆಂ.ಮೀ. ಆಳದಲ್ಲಿ ಹೊಡೆಯುವದರಿಂದ ಮಣ್ಣಿನ ಮೇಲೆ ಹೊದಿಕೆ ತಯಾರಿಸುವುದರಿಂದ ಬಿರುಕುಗಳನ್ನು ಮುಚ್ಚುವಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಸಹಾಯವಾಗುತ್ತದೆ. ಇದರಿಂದ ಮಣ್ಣಿನಲ್ಲಿರುವ ತೇವಾಂಶ ಆವಿಯಾಗುವುದನ್ನು ತಡೆಗಟ್ಟುವುದರಿಂದ ಸಂರಕ್ಷಣೆಯಾಗುವುದು. ಇದಲ್ಲದೆ ಕಳೆಗಳ ನಿಯಂತ್ರಣವನ್ನು ಹೆಚ್ಚು ಪರಿಣಾಮಕಾರಿಯಾಗಿ ಮಾಡುವುದು. ಹೀಗೆ ಅಗಲವಾದ ಅಂತರ ಸಾಲು ಪದ್ಧತಿ ಅಳವಡಿಸುವುದರಿಂದ ಸೂರ್ಯನ ಕಿರಣಗಳು ಸಾಲುಗಳಲ್ಲಿ ಪ್ರತಿಯೊಂದು ಸಸಿಗೆ ಮುಟ್ಟುವದರಿಂದ ಅವುಗಳ ದ್ಯುತಿಸಂಶ್ಲೇಷಣೆ ಕ್ರಿಯೆ ಹೆಚ್ಚುತ್ತದೆ. ಈ ಪದ್ಧತಿಯಲ್ಲಿ ರೈತರು ಬಿತ್ತುವ ಕೂರಿಗೆ ಮತ್ತು ಹರಗುವ ಕುಂಟೆಗಳನ್ನೇ ಉಪಯೋಗಿಸಬಹುದು. ಈ ರೀತಿ ಮಾಡುವುದರಿಂದ ಹೆಚ್ಚಿನ ಹಣ ವೆಚ್ಚವಾಗುವುದಿಲ್ಲ. ಬಿತ್ತುವ ಸಮಯದಲ್ಲಿ ಪ್ರತಿ ಹೆಕ್ಟೇರಿಗೆ ಬೇಕಾಗುವ ಶಿಫಾರಸ್ಸು ಮಾಡಿದ ಬೀಜದ ಪ್ರಮಾಣವನ್ನು ಉಪಯೋಗಿಸಿ ಬಿತ್ತನೆ ಕೂರಿಗೆಯ ಮಧ್ಯದ ರಂಧ್ರವನ್ನು ತೆರೆದಿಟ್ಟು ದಂಡೆಯ ಎರಡು ರಂಧ್ರಗಳನ್ನು ಮುಚ್ಚಿ ಬಿತ್ತಬೇಕು.

### ೧೩. ಲಂಬ ಹೊದಿಕೆ :

ಶೇಕಡಾ ೨ ರಿಂದ ೩ ರಷ್ಟು ಇಳಿಜಾರಿರುವ ಜಮೀನುಗಳಲ್ಲಿ ಇಳುಕಲಿಗೆ ಅಡ್ಡಲಾಗಿ ಪ್ರತಿ ೩-೪ ಮೀ. ಅಂತರದಲ್ಲಿ ೩೦ ಸೆಂ.ಮೀ. ಆಳವಿರುವ ಮತ್ತು ೧೫ ಸೆಂ.ಮೀ. ಅಗಲವಿರುವ ಹರಿಗಳನ್ನು ಟ್ರಾಕ್ಟರ್ ಅಥವಾ ಎತ್ತಿನ ಕಬ್ಬಿಣ ನೇಗಿಲ ಸಹಾಯದಿಂದ ನಿರ್ಮಿಸಿ ಅದರಲ್ಲಿ ಜೋಳದ ಕೋಲಿಗಳು ಭೂಮಿಯ ಮೇಲ್ಗಡೆ ನಾಲ್ಕು ಅಂಗುಲ ಕಾಣುವ ರೀತಿಯಲ್ಲಿ ಜೋಡಿಸಿ ಮುಚ್ಚಬೇಕು. ಇದರಿಂದ ಮಧ್ಯಮ ಆಳವಾದ ಕಪ್ಪು ಮಣ್ಣುಗಳಲ್ಲಿ ಮಳೆ ನೀರಿನ ಇಂಗುವ ಪ್ರಮಾಣ ಹೆಚ್ಚಾಗಿ, ಬಿಳಿಜೋಳದ ಇಳುವರಿಯಲ್ಲಿ ಶೇ. ೨೬ ರಿಂದ ೫೪ರಷ್ಟು ಹೆಚ್ಚಳವಾದುದು ಕಂಡುಬಂದಿದೆ.

## ಕ. ಕ್ಷೇತ್ರ ಹೊಂಡಗಳು :

ನೀರು ಮತ್ತು ಮಣ್ಣು ಸಂರಕ್ಷಣೆಯ ಎಲ್ಲ ಕ್ರಮಗಳನ್ನು ಅನುಸರಿಸಿದಾಗಲೂ ಹೆಚ್ಚುವರಿ ಮಳೆ ನೀರು ಹೊಲದಿಂದ ಹೊರಗೆ ಹರಿದುಹೋಗುತ್ತದೆ. ಹೀಗೆ ಅನವಶ್ಯಕವಾಗಿ ಹೊರಗೆ ಹರಿದು ಹೋಗುವ ನೀರನ್ನು ಹೊಲದಲ್ಲಿಯೇ ನಿರ್ಮಿಸಿದ ಚಿಕ್ಕ ಹೊಂಡಗಳಲ್ಲಿ ಶೇಖರಿಸಿ ಬೆಳೆ ಬಾಡುವ ಸಂದರ್ಭದಲ್ಲಿ ಒಂದೆರಡು ಸಾರಿ ಬೆಳೆಗೆ ನೀರು ಹಾಯಿಸಬಹುದು.

ಒಂದು ಹೆಕ್ಟೇರ್ ಪ್ರದೇಶಕ್ಕೆ ೧೫೦ ಘ.ಮೀ. ಅಳತೆಯ ಹೊಂಡ ಬೇಕಾಗುತ್ತದೆ. ಈ ಹೊಂಡದ ಸುತ್ತಲೂ ಪಾರ್ಶ್ವ ಇಳಿಜಾರು ಅಗಲಕ್ಕೆ ಹೋಲಿಸಿದಾಗ ೧.೫ ರಷ್ಟು ಇದ್ದು ಆಳ ೨.೫ ರಿಂದ ೩.೦ ಮೀಟರುಗಳಿರಬೇಕು. ಇಂತಹ ಒಂದು ಹೊಂಡವನ್ನು ನಿರ್ಮಿಸಲು ತಗಲುವ ಅಂದಾಜು ಖರ್ಚು ರೂ. ೧೫೦೦ಗಳು. ದೊಡ್ಡ ಜಮೀನುಗಳಲ್ಲಿ ಒಂದೇ ಒಂದು ದೊಡ್ಡ ಹೊಂಡವನ್ನು ನಿರ್ಮಿಸುವುದಕ್ಕಿಂತ ೨ ರಿಂದ ೪ ಹೆಕ್ಟೇರುಗಳಿಗೆ ಒಂದರಂತೆ ಹಲವು ಚಿಕ್ಕ ಚಿಕ್ಕ ಹೊಂಡಗಳನ್ನು ನಿರ್ಮಿಸಿಕೊಳ್ಳುವದು ಸೂಕ್ತ.

ಈ ಹೊಂಡಗಳನ್ನು ನೀರು ಇಂಗುವ ಪ್ರಮಾಣ ಕಡಿಮೆ ಇದ್ದ ಗಟ್ಟಿ ಪದರ ಹೊಂದಿರುವ ಭಾಗಗಳಲ್ಲಿ ನಿರ್ಮಿಸಬೇಕು. ಹೊಂಡಗಳ ಮೇಲ್ಭಾಗದ ಪ್ರದೇಶವನ್ನು ಮಟ್ಟ ಮಾಡುವುದರಿಂದ ನೀರು ಹೊಂಡಕ್ಕೆ ಸೇರುವ ಮುಂಚೆ ಮಟ್ಟಮಾಡಿದ ಭೂಮಿಯ ಮೇಲೆ ಹರಡಿ ಆ ಭಾಗಗಳಿಗೆ ಹೆಚ್ಚು ತೇವಾಂಶವನ್ನು ಒದಗಿಸಿಕೊಡುತ್ತದೆ. ಬೆಳೆ ಬಾಡಿದ ಸಂದರ್ಭಗಳಲ್ಲಿ ಹೊಂಡದಲ್ಲಿ ಶೇಖರಿಸಿದ ನೀರನ್ನು ಬಳಸಿ ಜಲಾನಯನದ ೧/೨ ಅಥವಾ ೧/೩ ರಷ್ಟು ಭಾಗ ಪ್ರದೇಶಕ್ಕೆ ೫ ಸೆಂ.ಮೀ. ಆಳ ನೀರು ಹಾಯಿಸಬಹುದು.

●




# ಕೆರೆಗಳ ಸಂರಕ್ಷಣೆ

ಡಾ. ಎಚ್. ಚಂದ್ರಶೇಖರ

ನೀರು ಸಕಲ ಜೀವರಾಶಿಗಳಿಗೆ ಗಾಳಿಯ ನಂತರ ಅತ್ಯಂತ ಅವಶ್ಯಕ ವಸ್ತು. ಮನುಷ್ಯನಾಗಲೀ ಪ್ರಾಣಿಗಳಾಗಲೀ ಆಹಾರವಿಲ್ಲದೆ ಹಲವು ದಿನಗಳ ಕಾಲ ಜೀವ ಹಿಡಿದುಕೊಂಡಿರಬಹುದು, ಆದರೆ ನೀರಿಲ್ಲದೆ ಕೆಲವು ಗಂಟೆಗಳ ಕಾಲ ಅಥವಾ ಒಂದೆರೆಡು ದಿನಗಳ ಕಾಲ ಜೀವಿಸಬಹುದು. ಅಂದರೆ ನೀರಿಲ್ಲದೆ ಜೀವವಿಲ್ಲ, ಜೀವನವಿಲ್ಲ. ಆದ್ದರಿಂದ ಇತಿಹಾಸಪೂರ್ವಕಾಲದಿಂದಲೂ ಮಾನವನು ನೀರಿನ ಬಳಿಯೇ ತನ್ನ ವಸತಿಗಳನ್ನು ನಿರ್ಮಿಸುತ್ತಾ ಬಂದಿದ್ದಾನೆ. ಮೊದಮೊದಲಿಗೆ ನದಿ, ಹಳ್ಳಗಳ ಬಳಿ ವಾಸಿಸುತ್ತಿದ್ದ ಮನುಷ್ಯನು, ಜನಸಂಖ್ಯೆ ಬೆಳೆದಂತೆ ಮತ್ತು ನಾಗರಿಕತೆ ಬೆಳೆದಂತೆ ನದಿ ಅಥವಾ ಹಳ್ಳಗಳಿಂದ ದೂರ ವಾಸಿಸಲು ಆರಂಭಿಸಿದ, ಹೀಗೆ ದೂರ ಸರಿದಂತೆ ಆದಿಮಾನವನು ನೀರನ್ನು ಸಂಗ್ರಹಿಸಲು ಯೋಚಿಸತೊಡಗಿದನು. ಶಿಲೆಗಳಲ್ಲಿರುವ ನೈಸರ್ಗಿಕ ಕೊರಕಲು ಮತ್ತು ಗಟಾರಗಳಲ್ಲಿ ನೀರನ್ನು ಸಂಗ್ರಹಿಸಲು ಅಡ್ಡಗಟ್ಟೆಗಳನ್ನು ಕಟ್ಟಲು ಆರಂಭಿಸಿನು. ಹೀಗೆ ಶಿಲಾಯುಗದ ಆದಿಮಾನವನು ಕೆರೆಗಳ ರಚನೆಗೆ ನಾಂದಿ ಹಾಡಿದನು.

ಮನುಷ್ಯನ ಅವಶ್ಯಕತೆಗಳು ಬೆಳೆದಂತೆ, ಯೋಚನಾ ಶಕ್ತಿ ಬೆಳೆದಂತೆ ಅವನು ಕೃಷಿ ಜೀವನಕ್ಕೆ ಅಂಟಿಕೊಂಡಂತೆಲ್ಲಾ ನೀರಿನ ಅವಶ್ಯಕತೆ ಇನ್ನೂ ಹೆಚ್ಚಾಯಿತು. ಮಳೆ ಬಂದಾಗ ಶಿಲೆಗಳ ಕೊರಕಲುಗಳಲ್ಲಿ ಸಂಗ್ರಹಿತಗೊಂಡ ಅಲ್ಪಪ್ರಮಾಣದ ನೀರು ಅವನ ಅವಶ್ಯಕತೆಯನ್ನು ಪೂರೈಸದಿದ್ದಾಗ ಅವನು ಸಣ್ಣ ಸಣ್ಣ ಹಳ್ಳಗಳಿಗೆ ಅಡ್ಡಗಟ್ಟೆಗಳನ್ನು ಕಟ್ಟಲು ಆರಂಭಿಸಿರಬೇಕು. ಇದೇ ಕೆರೆಗಳ ನಿರ್ಮಾಣದ ಆರಂಭ. ದಕ್ಷಿಣ ಭಾರತದಲ್ಲಿ ಪುಣೆಯ ಬಳಿಯ ಇನಾಮುಗಾಂವ್ ಬಳಿ ಕ್ರಿ.ಪೂ. ೧೫೦೦ರಲ್ಲಿ ಒಂದು ಕೆರೆಗೆ ಅಣೆಕಟ್ಟನ್ನು ಕಲ್ಲು ಮತ್ತು ಗಾರೆ (ಗಚ್ಚು) ಯಿಂದ ಕಟ್ಟಲಾಗಿತ್ತು ಎಂದು ಅಲ್ಲಿ ನಡೆದ ಉತ್ಖನನದಿಂದ ತಿಳಿದುಬಂದಿದೆ. ಈ ಒಡ್ಡನ್ನು ಒಂದು ಸಣ್ಣ ಹಳ್ಳಕ್ಕೆ ಅಡ್ಡಲಾಗಿ ಕಟ್ಟಿ ನೀರಾವರಿ ಕಾಲುವೆಯನ್ನು ತೆಗೆಯಲಾಗಿತ್ತು. ಈ ಒಡ್ಡಿನ ಉದ್ದ ೨೪೦ ಮೀಟರ್ ಮತ್ತು ಅಗಲ ೨.೨ ಮೀಟರ್‌ಗಳಷ್ಟು ಇತ್ತು ಎಂದರೆ ಅಚ್ಚರಿಪಡಬೇಕಾದ ವಿಷಯ.

***ಮಳೆ ಬಂದಾಗ ಶಿಲೆಗಳ ಕೊರಕಲುಗಳಲ್ಲಿ ಸಂಗ್ರಹಗೊಂಡ ಅಲ್ಪಪ್ರಮಾಣದ ನೀರು ಅವಶ್ಯಕತೆ ಪೂರೈಸದಿದ್ದಾಗ ಮಾನವ ಅಡ್ಡಗಟ್ಟೆಗಳನ್ನು ಕಟ್ಟಲು ಪ್ರಾರಂಭಿಸಿದ. ಇದೇ ಕೆರೆಗಳ ನಿರ್ಮಾಣದ ಆರಂಭ. ಕ್ರಿಸ್ತ ಪೂರ್ವ ೧೫೦೦ರಲ್ಲಿ ಒಂದು ಅಣೆಕಟ್ಟನ್ನು ಕಲ್ಲು ಮತ್ತು ಗಾರೆಯಿಂದ ಕಟ್ಟಲಾಗಿತ್ತು.***

## ಕರ್ನಾಟಕದಲ್ಲಿ ಕೆರೆಗಳ ಇತಿಹಾಸ

ಭಾರತದಲ್ಲಿ ಅಣೆಕಟ್ಟಿನ ಬಗ್ಗೆ ನಿಖರವಾದ ಸೂಚನೆ ಮತ್ತು ರೂಪರೇಷೆಗಳನ್ನು ನೀಡುವ ಅತ್ಯಂತ ಪುರಾತನ ಗ್ರಂಥವೆಂದರೆ ಕೌಟಿಲ್ಯನ ಅರ್ಥಶಾಸ್ತ್ರ (ಕ್ರಿ.ಪೂ. ೩೦೦.) ರಾಜನು ಅಣೆಕಟ್ಟು ನಿರ್ಮಿಸಬೇಕು

ಮತ್ತು ಅವುಗಳನ್ನು ನಿರ್ವಹಿಸಬೇಕೆಂಬ ಹಲವು ವಿವರಗಳನ್ನು ಈ ಗ್ರಂಥದಲ್ಲಿ ನೋಡಬಹುದು. ಇದೇ ಕಾಲದ ಮೌರ್ಯರು (ಕ್ರಿ.ಪೂ.೩೨೦) ಕರ್ನಾಟಕದ ಬಹುಭಾಗವನ್ನಾಳುತ್ತಿದ್ದರು. ಆದ್ದರಿಂದ ಕರ್ನಾಟಕವನ್ನಾಳಿದ ಶಾತವಾಹನರು ಮತ್ತು ಚುಟುಕುಲದ ಅರಸರು ಈ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಬಳುವಳಿಯಾಗಿ ಪಡೆದಿರಬಹುದು. ನಂತರ ಕರ್ನಾಟಕವನ್ನಾಳಿದ ಕದಂಬರು ಈ ರಾಜ್ಯದಲ್ಲಿ ಕೆರೆಗಳನ್ನು ಕಟ್ಟಿಸಿದ ಸ್ಪಷ್ಟ ಇತಿಹಾಸವಿದೆ. ಚಿತ್ರದುರ್ಗದಿಂದ ಕೇವಲ ೩-೪. ಕಿ.ಮೀ. ದೂರದಲ್ಲಿ ಚಂದ್ರವಳ್ಳಿಯ ಕೆರೆಯನ್ನು ಕದಂಬ ಮಯೂರವರ್ಮನು (ಕ್ರಿ.ಶ.೩೫೦) ಕಟ್ಟಿಸಿದನು. ನಂತರ ಕರ್ನಾಟಕವನ್ನಾಳಿದ ಗಂಗರು, ಬಾದಾಮಿ ಚಾಲುಕ್ಯರು ಮತ್ತು ರಾಷ್ಟ್ರಕೂಟರು ಈ ಪರಂಪರೆಯನ್ನು ಮುಂದುವರೆಸಿದರು. ಕಲ್ಯಾಣ ಚಾಲುಕ್ಯರು ಕರ್ನಾಟಕದ ವಾಸ್ತು ಶಿಲ್ಪಕ್ಕೆ ಬಹು ದೊಡ್ಡ ಕೊಡುಗೆಯನ್ನು ಕೊಟ್ಟಂತೆ, ಕೆರೆಗಳ ನಿರ್ಮಾಣ ಮತ್ತು ನಿರ್ವಹಣೆಗೂ ಬಹು ದೊಡ್ಡ ಕೊಡುಗೆಯನ್ನು ನೀಡಿದರು. ಇವರ ಕಾಲವನ್ನು (ಕ್ರಿ.ಶ.೯೨೩-೧೩೩೬) ಕೆರೆಗಳ ನಿರ್ಮಾಣದ ಸುವರ್ಣಯುಗವೆಂದರೂ ಸರಿಯೇ. ಇವರ ಕಾಲದಲ್ಲಿ ನೂರಾರು ಕೆರೆಗಳನ್ನು ನಿರ್ಮಿಸಲಾಯಿತು. ನಿರ್ವಹಣೆಯನ್ನು ವ್ಯವಸ್ಥಿತಗೊಳಿಸಲಾಯಿತು.

**ಪಟ್ಟಿ ೧ : ಕರ್ನಾಟಕದಲ್ಲಿ ೧೯೯೩-೯೪ರಲ್ಲಿದ್ದ ಕೆರೆಗಳ ಸಂಖ್ಯೆ ಮತ್ತು ಚದರ ಕಿಲೋಮೀಟರ್‌ನಲ್ಲಿರುವ ಕೆರೆಯ ಸಾಂದ್ರತೆ**

| ಕ್ರಮ ಸಂಖ್ಯೆ | ಜಿಲ್ಲೆ | ವಿಸ್ತೀರ್ಣ (ಲಕ್ಷ ಚ.ಕೀ.ಮೀಟರು) | ಕೆರೆಗಳಸಂಖ್ಯೆ ೧೯೯೩-೯೪ರಲ್ಲಿ | ಪ್ರತಿಚದರ ಕಿಲೋ. ಮೀಟರ್‌ಗೆ ಕೆರೆಗಳ ಸಂಖ್ಯೆ |
|---|---|---|---|---|
| ೧. | ಬೆಂಗಳೂರು (ನಗರ) | ೨೨ | ೬೫೨ | ೦.೩೦ |
| ೨. | ಬೆಂಗಳೂರು (ಗ್ರಾ) | ೫೮ | ೧೨೫೩ | ೦.೦೦ |
| ೩. | ಚಿತ್ರದುರ್ಗ | ೧೦೯ | ೨೮೩ | ೦.೨೪ |
| ೪. | ಕೋಲಾರ | ೮೨ | ೩೨೯೮ | ೦.೪೦ |
| ೫. | ಶಿವಮೊಗ್ಗ | ೧೦೬ | ೬೪೯೯ | ೦.೬೧ |
| ೬. | ತುಮಕೂರು | ೧೦೬ | ೧೬೪೨ | ೦.೧೫ |
| **I** | **ಬೆಂಗಳೂರು ವಿಭಾಗ** | **೪೮೩** | **೧೩.೨೨೭** | **೦.೨೮೪** |
| ೭. | ಬೆಳಗಾವಿ | ೧೩೪ | ೮೮೬ | ೦.೦೭ |
| ೮. | ಬಿಜಾಪುರ | ೧೭೧ | ೧೦೭ | ೦.೦೧ |
| ೯. | ಧಾರವಾಡ | ೧೩೭ | ೩೦೭೬ | ೦.೨೨ |
| ೧೦. | ಉತ್ತರ ಕನ್ನಡ | ೧೦೩ | ೩೬೦೫ | ೦.೩೫ |
| **II** | **ಬೆಳಗಾವಿ ವಿಭಾಗ** | **೫೪೫** | **೭,೬೭೪** | **೦.೧೪** |
| ೧೧. | ಬಳ್ಳಾರಿ | ೯೯ | ೧೯೮ | ೦.೦೨ |
| ೧೨. | ಬೀದರ್ | ೫೪ | ೭೭ | ೦.೦೧ |
| ೧೩. | ಕಲ್ಬುರ್ಗಿ | ೧೬೨ | ೩೭೮ | ೦.೦೨ |
| ೧೪. | ರಾಯಚೂರು | ೧೪೦ | ೩೪೫ | ೦.೦೦೩ |
| **III** | **ಕಲ್ಬುರ್ಗಿ ವಿಭಾಗ** | **೪೫೫** | **೯೯೮** | **೦.೦೭೧** |
| ೧೫. | ಚಿಕ್ಕಮಗಳೂರು | ೭೨ | ೨೧೮೦ | ೦.೧೪ |
| ೧೬. | ದಕ್ಷಿಣ ಕನ್ನಡ | ೮೪ | ೧೧೩೮ | ೦.೩೦ |

| ಕ್ರಮ ಸಂಖ್ಯೆ | ಜಿಲ್ಲೆ | ವಿಸ್ತೀರ್ಣ (ಲಕ್ಷ ಚ.ಕೀ.ಮೀಟರು) | ಕೆರೆಗಳ ಸಂಖ್ಯೆ ೧೯೯೩-೯೪ರಲ್ಲಿ | ಪ್ರತಿಚದರ ಕಿಲೋ.ಮೀ. ಮೀಟರ್‌ಗೆ ಕೆರೆಗಳ ಸಂಖ್ಯೆ |
|---|---|---|---|---|
| ೧೭. | ಹಾಸನ | ೬೮ | ೬೦೬೬ | ೦.೮೯ |
| ೧೮. | ಕೊಡಗು | ೪೧ | ೧೩೯೫ | ೦.೩೪ |
| ೧೯. | ಮಂಡ್ಯ | ೫೦ | ೬೧೮ | ೦.೧೨ |
| ೨೦. | ಮೈಸೂರು | ೧೨೦ | ೧೨೦೭ | ೦.೧೦ |
| IV | **ಮೈಸೂರು ವಿಭಾಗ** | ೪೩೫ | ೧೨,೬೦೪ | ೦೨೮೯ |
| | ರಾಜ್ಯ | ೧,೯೧೮ | ೩೫,೦೦೩ | ೦.೧೮೨ |

ಆಧಾರ : ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು)

## ಶಿವಶರಣರ ಕೊಡುಗೆ :

ಕೆರೆ ಕುಂಟೆಗಳನ್ನು ಕಟ್ಟಿಸುವುದೊಂದು ಪವಿತ್ರ ಕಾರ್ಯವೆಂಬ ಭಾವನೆಯ ಜನರಲ್ಲಿತ್ತು ಎಂಬುದಕ್ಕೆ ೧೨ನೇ ಶತಮಾನದ ಶರಣ ಶಿವಯೋಗಿ ಸಿದ್ದರಾಮನೇ ಉದಾಹರಣೆ. ಯಾವ ರಾಜಕೀಯ ಶಕ್ತಿಯೂ ಇಲ್ಲದೆ ಮತ್ತು ರಾಜಕೀಯ ಲಾಭದಾಸೆ ಇಲ್ಲದೆ ಕೇವಲ ಸಾಮಾಜಿಕ ಹಿತಾರ್ಥದ ದೃಷ್ಟಿಯಿಂದ ಪ್ರೇರಿತರಾಗಿ ಕಾಯಕಯೋಗಿ ಮತ್ತು ಶಿವಯೋಗಿ ಸಿದ್ದರಾಮ ಅಂದಿನ ಕರ್ನಾಟಕದ ಭಾಗವಾಗಿದ್ದ ಸೊನ್ನಲಾಪುರದ (ಸೊಲ್ಲಾಪುರ) ಸುತ್ತುಮುತ್ತಲ ಪ್ರದೇಶದಲ್ಲಿ ಹಲವು ಕೆರೆಗಳನ್ನು ನಿರ್ಮಿಸಿದನು. ಅವನು ಕಟ್ಟಿಸಿದ ಕೆರೆಯೊಂದು ಇಂದಿಗೂ ಆ ನಗರದ ಮಧ್ಯ ಪ್ರದೇಶದಲ್ಲಿ ಕಂಗೊಳಿಸುತ್ತಲಿದೆ. ಅಂತೆಯೇ ಮಡಿವಾಳ ಮಾಚಿದೇವ ಇತ್ಯಾದಿ ಶರಣರೂ ಕೆರೆಗಳನ್ನು ಕಟ್ಟಿದರು.

**ಪಟ್ಟಿ ೨ : ನೀರಾವರಿಗಾಗಿ ಒದಗಿಸಿದ ಒಟ್ಟು ಹಣದಲ್ಲಿ ಸಣ್ಣ ನೀರಾವರಿಯ ಪಾಲು**

| ಯೋಜನಾವಧಿ | (ಕೋಟಿರೂಪಾಯಿಗಳಲ್ಲಿ) | | |
|---|---|---|---|
| | ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳು | ಸಣ್ಣ ನೀರಾವರಿ ಕಾಮಗಾರಿಗಳು | ಒಟ್ಟು |
| ಮೊದಲನೆಯ ಯೋಜನೆ | ೩೮೦ | ೬೬ | ೪೪೬ |
| ಎರಡನೆಯ ಯೋಜನೆ | ೩೮೦ | ೧೪೨ | ೫೨೨ |
| ಮೂರನೆಯ ಯೋಜನೆ | ೫೮೧ | ೩೨೮ | ೯೦೯ |
| ಮೂರು ವಾರ್ಷಿಕ ಯೋಜನೆಗಳು (೧೯೬೬-೬೯) | ೪೩೪ | ೩೨೬ | ೭೬೦ |
| ನಾಲ್ಕನೆಯ ಯೋಜನೆ (೧೯೬೯-೭೪) | ೧,೨೩೭ | ೫೧೩ | ೧,೭೫೦ |
| ಐದನೆಯ ಯೋಜನೆ(೧೯೭೪-೭೮) | ೨,೪೪೨ | ೬೩೧ | ೩,೦೭೩ |
| ವಾರ್ಷಿಕ ಯೋಜನೆ(೧೯೭೮-೭೯) | ೯೭೭ | ೨೩೭ | ೧,೨೧೪ |
| ವಾರ್ಷಿಕ ಯೋಜನೆ(೧೯೭೯-೮೦) | ೧,೦೭೯ | ೨೬೦ | ೧,೩೩೯ |
| ಆರನೆಯ ಯೋಜನೆ(೧೯೮೦-೮೫) ೧೯೫೦-೫೧ರಿಂದ ೧೯೮೪-೮೫ರವರೆಗೆ | ೭,೫೧೬ | ೧,೮೦೨ | ೯,೩೧೮ |
| **ಒಟ್ಟು ೩೫ ವರ್ಷಗಳ ಅವಧಿ** | ೧೫,೦೨೬ | ೪,೩೦೫ | ೧೯,೩೩೧ |
| **ಏಳನೆಯ ಯೋಜನೆ (೧೯೮೫-೯೦)** | ೧೧,೫೫೬ | ೨,೮೦೫ | ೧೪,೩೬೧ |

ಈ ಪರಂಪರೆ ಹೊಯ್ಸಳರ ಮತ್ತು ಸೇವುಣರ ಕಾಲದಲ್ಲಿ ಮುಂದುವರೆದು ವಿಜಯನಗರದ ಕಾಲದಲ್ಲಿ ಬಹು ದೊಡ್ಡ ಪ್ರಮಾಣದ ಕೆರೆಗಳ ನಿರ್ಮಾಣಕ್ಕೆ ಎಡೆ ಮಾಡಿಕೊಟ್ಟಿತು. ಹಾಗೆಯೇ ಆದಿಲ್‌ಶಾಹಿಗಳೂ ತಮ್ಮ ಸೇವೆಯನ್ನು ಸಲ್ಲಿಸಿದ್ದಾರೆ. ವಿಜಯನಗರದ ವಾರಸುದಾರರಂತೆ ಬೆಳೆದು ಬೆಳಗಿದ ಕೆಳದಿ ಅರಸರು ಇಂದಿನ ಶಿವಮೊಗ್ಗ ಜಿಲ್ಲೆ, ಉತ್ತರ ಕನ್ನಡ ಜಿಲ್ಲೆ ಮತ್ತು ಧಾರವಾಡ ಜಿಲ್ಲೆಯ ಭಾಗಗಳಲ್ಲಿ ನೀರಾವರಿ ಕೆರೆಗಳನ್ನು ಕಟ್ಟಿಸಿದರು. ಅವುಗಳು ಇಂದಿಗೂ ಉಪಯುಕ್ತವಾಗಿವೆ. ನಂತರ ಮೈಸೂರು ಒಡೆಯರ ಕಾಲದಲ್ಲಿಯೂ ಕೆರೆಗಳನ್ನು ನಿರ್ಮಿಸಿ ಬರವನ್ನು ದೂರವಿಡುವ ಪ್ರಯತ್ನ ಮುಂದುವರೆಯಿತು. ಬ್ರಿಟಿಷರ ಕಾಲದಲ್ಲಿ ಮುಂಬೈ ಕರ್ನಾಟಕದಲ್ಲಿ ಬ್ರಿಟಿಷರು ಹಲವು ದೊಡ್ಡ ಕೆರೆಗಳನ್ನು ನಿರ್ಮಿಸಿ ನೀರಾವರಿ ಸಾಮರ್ಥವನ್ನು ವೃದ್ಧಿಸಿದರು. ಈ ಪ್ರಮಾಣದ ಕೆಲಸ ಹೈದ್ರಾಬಾದ ಕರ್ನಾಟಕದಲ್ಲಿ ನಿಜಾಮರ ಕಾಲದಲ್ಲಿ ನಡೆಯಲಿಲ್ಲ. ಹೀಗೆ ಕೆರೆಗಳ ನಿರ್ಮಾಣಕ್ಕೆ ಕನಿಷ್ಠ ಸುಮಾರು ೧೭೦೦ ವರ್ಷಗಳ ಸ್ಪಷ್ಟ ಇತಿಹಾಸ ದೊರೆಯುತ್ತದೆ. ಕರ್ನಾಟಕದಲ್ಲಿ ಇಂದು ಅಸ್ತಿತ್ವದಲ್ಲಿರುವ ಕೆರೆಗಳ ಸಂಖ್ಯೆ ೩೫,೦೦೩. ಇವುಗಳನ್ನು ಜಿಲ್ಲಾವಾರು ವಿಂಗಡಿಸಿ ಪಟ್ಟಿ ೧ರಲ್ಲಿ ಕೊಡಲಾಗಿದೆ. ಈ ಪಟ್ಟಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಕೆರೆಗಳ ಸಂಖ್ಯೆಯು ಹಳೆಯ ಮೈಸೂರಿನಲ್ಲಿ ಅತಿ ಹೆಚ್ಚು ಎಂಬುದು ಸ್ಪಷ್ಟವಾಗಿ ಗೋಚರಿಸುತ್ತದೆ. ಅಂತೆಯೇ ಕೆರೆ ನೀರಾವರಿ ಪ್ರದೇಶವು ಹಳೆಯ ಮೈಸೂರು ಭಾಗದಲ್ಲಿ ತುಲನಾತ್ಮಕವಾಗಿ ಹೆಚ್ಚು.

## ಸ್ವಾತಂತ್ರ್ಯಾನಂತರದ ಬೆಳವಣಿಗೆ :

ಸ್ವಾತಂತ್ರ್ಯಾನಂತರ ಭಾರತದಲ್ಲಿ ಭಾರಿ ಮತ್ತು ಮಧ್ಯಮ ನೀರಾವರಿ ಕಾಮಗಾರಿಗೆ ಅತಿ ಹೆಚ್ಚಿನ ಪ್ರಾಮುಖ್ಯತೆ ಲಭಿಸಿತು. ದಿವಂಗತ ಪಂಡಿತ ಜವಹರಲಾಲ ನೆಹರು ಈ ದೊಡ್ಡ ದೊಡ್ಡ ಅಣೆಕಟ್ಟುಗಳನ್ನು ಆಧುನಿಕ ಭಾರತದ ದೇವಾಲಯಗಳೆಂದು ಕರೆದರೆಂಬುದೇ ಭಾರಿ ಅಣೆಕಟ್ಟುಗಳ ನಿರ್ಮಾಣಕ್ಕೆ ಸಿಕ್ಕ ಪ್ರಾಮುಖ್ಯತೆಗೆ ಸಾಕ್ಷಿ. ಇದಕ್ಕೆ ಹಲವಾರು ವೈಜ್ಞಾನಿಕ ಕಾರಣಗಳಿವೆ ಎಂದು ಒಪ್ಪಿಕೊಂಡರೂ, ಸ್ವಲ್ಪ ಮಟ್ಟಿಗೆ ಹೆಚ್ಚಿನ ಆದ್ಯತೆ ಭಾರಿ ಮತ್ತು ಮಧ್ಯಮ ನೀರಾವರಿ ಕಾಮಗಾರಿಗಳಿಗೆ ನೀಡಲಾಯಿತೆಂಬುದು ಸ್ಪಷ್ಟ. ಅಂತೆಯೇ ಅದುವರೆಗೆ ಕೆರೆ ಕುಂಟೆಗಳ ನಿರ್ಮಾಣ ಮತ್ತು ನಿರ್ವಹಣೆಗೆ ನೀಡಲಾಗಿದ್ದ ಪ್ರಾಶಸ್ತ್ಯವನ್ನು ಗೌಣಗೊಳಿಸಲಾಯಿತೆಂಬುದು ಕಟು ಸತ್ಯ. ಪಟ್ಟಿ ೨ನ್ನು ಸೂಕ್ಷ್ಮವಾಗಿ ಗಮನಿಸಿದಾಗ ಈ ಮಾತು ಸಾಬೀತಾಗುತ್ತದೆ. ಒಟ್ಟು ೩೫ ವರ್ಷಗಳ ಅವಧಿಯಲ್ಲಿ ಸಣ್ಣ ನೀರಾವರಿ ಯೋಜನೆಗಳಿಗೆ ೧೫,೦೨೬ಸಾವಿರ ಕೋಟಿ ರೂಪಾಯಿಗಳನ್ನು ಒದಗಿಸಲಾಯಿತು. ವಿಪರ್ಯಾಸವೆಂದರೆ, ಸೃಷ್ಟಿಸಲಾದ ನೀರಾವರಿ ಸಾಮರ್ಥ್ಯದಲ್ಲಿ ಸಣ್ಣ ನೀರಾವರಿಯದೇ ದೊಡ್ಡಪಾಲು (ಪಟ್ಟಿ ೩).

**ಪಟ್ಟಿ ೩ : ಯೋಜನೆಗಳ ಮೇರೆಗೆ ಸೃಷ್ಟಿಸಲಾದ ನೀರಾವರಿ ಸಾಮರ್ಥ್ಯ**
**ಸೃಷ್ಟಿಸಲಾದ ನೀರಾವರಿ ಸಾಮರ್ಥ್ಯ (ದಶಲಕ್ಷ ಹೆಕ್ಟೇರುಗಳಲ್ಲಿ)**

| ಯೋಜನಾವಧಿ | ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳಿಂದ | ಸಣ್ಣ ನೀರಾವರಿ ಯೋಜನೆಗಳಿಂದ | ನೀರಾವರಿಗೆ ಒಳಗಾದ ಒಟ್ಟು ಪ್ರದೇಶ | ಹೊಸದಾಗಿ ಸೃಷ್ಟಿಸಲಾದ ಹೆಚ್ಚುವರಿ ನೀರಾವರಿ ಸಾಮರ್ಥ್ಯ |
|---|---|---|---|---|
| ೧೯೫೦-೫೧ರಲ್ಲಿ | ೯.೭ | ೧೨.೯ | ೨೨.೬ | - |
| ಮೊದಲನೆಯ ಯೋಜನೆಯ ಕೊನೆಯಲ್ಲಿ | ೧೨.೨ | ೧೪.೧ | ೨೬.೩ | ೩.೭ |
| ಎರಡನೆಯ ಯೋಜನೆಯ ಕೊನೆಯಲ್ಲಿ | ೧೪.೩ | ೧೪.೮ | ೨೯.೧ | ೨.೮ |
| ಮೂರನೆಯ ಯೋಜನೆಯ ಕೊನೆಯಲ್ಲಿ | ೧೬.೬ | ೧೭.೦ | ೩೩.೬ | ೪.೯ |
| ಮೂರು ವಾರ್ಷಿಕ ಯೋಜನೆಗಳ ಕೊನೆಯಲ್ಲಿ (೧೯೬೮-೬೯) | ೧೮.೧ | ೧೯.೦ | ೩೭.೧ | ೩.೧ |
| ನಾಲ್ಕನೆಯ ಯೋಜನೆಯ ಕೊನೆಯಲ್ಲಿ | | | | |

| | | | | |
|---|---|---|---|---|
| (೧೯೭೩ -೭೪) | ೦.೭ | ೨೩.೫ | ೪೪.೨ | ೭.೧ |
| ಐದನೆಯ ಯೋಜನೆಯ ಕೊನೆಯಲ್ಲಿ (೧೯೭೭-೭೮) | ೨೪.೮ | ೨೭.೩ | ೫೨.೧ | ೭ |
| ವಾರ್ಷಿಕ ಯೋಜನೆ (೧೯೭೮-೭೯) | ೨೫.೯ | ೨೮.೬ | ೫೪.೫ | ೨.೪ |
| ವಾರ್ಷಿಕ ಯೋಜನೆ(೧೯೭೯-೮೦) | ೨೬.೬ | ೩೦.೦ | ೫೬.೬ | ೨.೧ |
| ಆರನೆಯ ಯೋಜನೆಯ ಕೊನೆಯಲ್ಲಿ (೧೯೮೦-೮೫) | ೩೦.೫ | ೩೭.೪ | ೬೭.೯ | ೧೧.೩ |
| ಏಳನೆಯ ಯೋಜನೆಯ ಕೊನೆಯಲ್ಲಿ (೧೯೮೫-೯೦)ಗುರಿ | ೩೪.೮ | ೪೬.೦ | ೮೦.೮ | ೧೨.೯ |

ಕರ್ನಾಟಕದಲ್ಲಿ ಭಾರಿ ಮತ್ತು ಮಧ್ಯಮ ಅಣೆಕಟ್ಟುಗಳಿಂದ (ಅಥವಾ ಕಾಲುವೆಗಳಿಂದ) ಮತ್ತು ಕೆರೆಗಳಿಂದ ನೀರುಣ್ಣಿಸುವ ಪ್ರದೇಶದ ವಿಸ್ತೀರ್ಣವನ್ನು (೧೯೯೩-೯೪ವರ್ಷದಲ್ಲಿ) ಪಟ್ಟಿ ೪ರಲ್ಲಿ ಕೊಡಲಾಗಿದೆ. ಈ ಪಟ್ಟಿಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಬೆಂಗಳೂರು ವಿಭಾಗದಲ್ಲಿ ಕೆರೆ ನೀರಾವರಿ ಪ್ರದೇಶವು ಕಾಲುವೆ ನೀರಾವರಿ ಪ್ರದೇಶಕ್ಕಿಂತ ಹೆಚ್ಚು ಎಂಬ ವಿಷಯ ಗೊತ್ತಾಗುತ್ತದೆ. ರಾಜ್ಯದ ಉಳಿದ ವಿಭಾಗದಲ್ಲಿ ಕಾಲುವೆ ನೀರಾವರಿ ಪ್ರದೇಶವೇ ಹೆಚ್ಚಾಗಿದೆ. ಕೆರೆ ನೀರಾವರಿ ಪ್ರದೇಶವು ಬೆಂಗಳೂರು ವಿಭಾಗವನ್ನು ಬಿಟ್ಟರೆ ಮೈಸೂರು ವಿಭಾಗದಲ್ಲಿಯೇ ಹೆಚ್ಚು. ಕಲ್ಬುರ್ಗಿ ವಿಭಾಗ ಮತ್ತು ಬೆಳಗಾಂ ವಿಭಾಗಗಳು ಅನುಕ್ರಮವಾಗಿ ಮೂರನೇ ಮತ್ತು ನಾಲ್ಕನೇ ಸ್ಥಾನಗಳನ್ನು ಪಡೆದಿವೆ.

ಈ ಪಟ್ಟಿಯಿಂದ ಇನ್ನೆರಡು ಪ್ರಮುಖ ಉಪಸಿದ್ಧಾಂತಗಳು ನಮಗೆ ದೊರೆಯುತ್ತವೆ. ಕೆರೆಗಳ ನಿರ್ವಹಣೆ ಮತ್ತು ಪುನರುಜ್ಜೀವನ ಯೋಜನೆಗಳಿಗೆ ಬೆಂಗಳೂರು ಮತ್ತು ಮೈಸೂರು ವಿಭಾಗಗಳಲ್ಲಿ ತುಲನಾತ್ಮಕವಾಗಿ ಹೆಚ್ಚಿನ ಆದ್ಯತೆ ನೀಡಬೇಕು ಹಾಗೂ ಕಲ್ಬುರ್ಗಿ ಮತ್ತು ಬೆಳಗಾಂ ವಿಭಾಗಗಳಲ್ಲಿ ಹೊಸ ಕೆರೆಗಳ ಅನ್ವೇಷಣೆ ಮತ್ತು ಹೊಸ ಕೆರೆಗಳ ನಿರ್ಮಾಣಕ್ಕೆ ತುಲನಾತ್ಮಕವಾಗಿ ಹೆಚ್ಚಿನ ಆದ್ಯತೆ ನೀಡಬೇಕು.

## ಕೆರೆಗಳ ಉಪಯುಕ್ತತೆ ಮತ್ತು ಪುನರುಜ್ಜೀವನ :

ಭಾರಿ ಮತ್ತು ಮಧ್ಯಮ ನೀರಾವರಿ ಯೋಜನೆಗಳಿಗೆ ಹಣ ಮತ್ತು ಕಾಲ ಹೆಚ್ಚು ಬೇಕಾಗುತ್ತದೆ. ಆದರೆ ಕೆರೆಗಳ ನಿರ್ಮಾಣಕ್ಕೆ ತಗಲುವ ವೆಚ್ಚವೂ ಅಲ್ಪ ಮತ್ತು ಇವುಗಳ ನಿರ್ಮಾಣಕ್ಕೆ ಹಿಡಿಯುವ ಕಾಲವೂ ಅಲ್ಪ. ಆದ್ದರಿಂದ ಸಾಧ್ಯವಿದ್ದೆಡೆಯಲ್ಲೆಲ್ಲಾ ಕೆರೆಗಳ ನಿರ್ಮಾಣಕ್ಕೆ ಹೆಚ್ಚಿನ ಆದ್ಯತೆ ನೀಡಿದರೆ ಒಳ್ಳೆಯದು. ಕೆರೆಗಳಿಂದ ಆಗುವ ಮುಳುಗಡೆ ಪ್ರದೇಶ ಅಲ್ಪ. ಆದ್ದರಿಂದ ಪುನರ್ವಸತಿಯ ಸಮಸ್ಯೆಗಳು ಇಲ್ಲವೆಂದರೂ ತಪ್ಪಾಗದು. ಕೆರೆಯಿಂದ ಕಾಲುವೆಗಳಿಂದ ನೀರನ್ನು ಸಾಗಿಸುವಾಗ ನೀರಿನ ಹಾನಿ ಇಲ್ಲವೆನ್ನುವಷ್ಟು ಅಲ್ಪ. ಯಾಕೆಂದರೆ ಕೆರೆಗೂ ಮತ್ತು ಅದರ ಅಚ್ಚುಕಟ್ಟು ಪ್ರದೇಶಕ್ಕೂ ಅಂತರವಿರುವುದಿಲ್ಲ. ಆದ್ದರಿಂದ ಸಾಗಾಟದ ಹಾನಿ (Transmssion loss) ಅಲ್ಪ. ಭಾರಿ ಮತ್ತು ಮಧ್ಯಮ ನೀರಾವರಿ ಅಣೆಕಟ್ಟುಗಳು ತಮ್ಮ ಆಯಾ ಅಚ್ಚುಕಟ್ಟುಗಳ ಪ್ರದೇಶಗಳಿಂದ ಹಲವಾರು ಮೈಲಿಗಳ ದೂರದಲ್ಲಿರುವುದರಿಂದ ಸಾಗಾಟದ ಹಾನಿ ಹೆಚ್ಚು. ಕೆರೆಗಳ ನಿವೇಶನಗಳು ಉಳುವ ಭೂಮಿಗೆ ಹತ್ತಿರವಾಗಿರುವುದರಿಂದ ಕೆರೆಗಳ ಅಂಗಳದಲ್ಲಿ ಶೇಖರಗೊಳ್ಳುವ ನೀರಿನ ಸಂಗ್ರಹದಿಂದ ಗಣನೀಯ ಪ್ರಮಾಣದಲ್ಲಿ (ಬಹುಶಃ ಶೇಖರಗೊಂಡ ನೀರಿನ ಶೇ. ೨೦ರಷ್ಟು) ಭೂಮಿಯೊಳಕ್ಕೆ ಇಂಗಿ ಹೋಗಿ ಅಂತರ್ಜಲವಾಗಿ ಸಂಗ್ರಹಗೊಳ್ಳುತ್ತದೆ. ಇದರಿಂದ ಬಾಷ್ಪೀಕರಣದಿಂದುಂಟಾಗುವ ಹಾನಿಯೂ (Evaporation loss) ಇಲ್ಲದಂತಾಗುತ್ತದೆ. ಕೆರೆಗಳ ಕೆಳಭಾಗದಲ್ಲಿರುವ (Downstream) ಬಾವಿಗಳ ಇಳುವರಿ ಹೆಚ್ಚಾಗುತ್ತದೆ. ಹೀಗೆ ಕೆರೆಗಳಿಂದ ಹಲವಾರು ಲಾಭಗಳು ಲಭ್ಯವಾಗುವುದರಿಂದ ಕೆರೆಗಳ ನಿರ್ಮಾಣಕ್ಕೆ ಆದ್ಯತೆ ನೀಡುವುದು ಅವಶ್ಯಕ.

ಹಲವಾರು ದಶಕಗಳ ಹಿಂದೆ ಅಥವಾ ಶತಮಾನಗಳ ಹಿಂದೆ ಕಟ್ಟಲಾಗಿರುವ ಕೆರೆಗಳ ಅಂಗಳ ಹೂಳಿನಿಂದ ತುಂಬಿ ಅವುಗಳ ಸಂಗ್ರಹಣ ಸಾಮರ್ಥ್ಯ ಕಡಿಮೆಯಾಗುತ್ತದೆ. ಇದಕ್ಕೆ ಕಾರಣವೆಂದರೆ ಕೆರೆಯ ಮೇಲಿನ (Upstream) ಪ್ರದೇಶದಲ್ಲಿ ಆಗುವ ಮಣ್ಣಿನ

ಸವಕಳಿಗೆ ಹಲವಾರು ಕಾರಣಗಳಿವೆಯಾದರೂ, ಅರಣ್ಯ ಮತ್ತು ಹುಲ್ಲುಗಾವಲು ಪ್ರದೇಶಗಳ ನಾಶವೇ ಪ್ರಮುಖ. ಆದ್ದರಿಂದ ಮೇಲಿನ ಪ್ರದೇಶದಲ್ಲಿ ಮಣ್ಣಿನ ಸವಕಳಿಯನ್ನು ತಡಗಟ್ಟುವ ಕ್ರಮಗಳನ್ನು ಕೈಗೊಳ್ಳಬೇಕು. ಹಿಂದೆ, ಅಂದರೆ ರಾಸಾಯನಿಕ ಗೊಬ್ಬರ ಬಳಕೆಗೆ ಬರುವ ಪೂರ್ವದಲ್ಲಿ ರೈತರು ಪ್ರತಿ ಬೇಸಿಗೆಯಲ್ಲಿ ಒಣಗಿದ ಕೆರೆಯಂಗಳದಿಂದ ಹೊಂಡವನ್ನು ತೋಡಿ ಬಂಡಿಗಳಲ್ಲಿ ತಮ್ಮತಮ್ಮ ಹೊಲಗಳಿಗೆ ಸಾಗಿಸಿ, ತಮ್ಮ ಹೊಲಗಳ ಫಲವತ್ತತೆಯನ್ನು ಹೆಚ್ಚಿಸಿಕೊಳ್ಳುತ್ತಿದ್ದರು. ಇದರಿಂದ ಇನ್ನೊಂದು ಲಾಭವೆಂದರೆ ಕೆರೆಯ ಸಂಗ್ರಹ ಸಾಮರ್ಥ್ಯವು ಕುಂದುತ್ತಿರಲಿಲ್ಲ. ಅಂತೆಯೇ ಕೆಳಗಿನ ಬಾವಿಗಳ ಇಳುವರಿಯೂ ಹೆಚ್ಚಾಗುತ್ತಿತ್ತು. ಆದರೆ ರೈತರು ಇಂಥ ಸುಲಭ ಬೆಲೆಯ ಮತ್ತು ಪರಿಸರಕ್ಕೆ ಹಿತಕಾರಿಯಾಗಿದ್ದ ಪದ್ಧತಿಯನ್ನು ಬಿಟ್ಟಿರುವುದರಿಂದ ಕೆರೆಗಳ ಅಂಗಳಗಳಲ್ಲಿ ಹೂಳು ಹೊಂಡು ದಿನೇದಿನೇ ಹೆಚ್ಚುತ್ತಲಿದೆ. ಇದರಿಂದ ಸಂಗ್ರಹ ಸಾಮರ್ಥ್ಯ ಕುಂದುತ್ತಾ ನಡೆದಿದೆ. ಜೊತೆಗೆ ಬಾವಿಗಳ ಇಳುವರಿಯೂ ಕಡಿಮೆಯಾಗುತ್ತಲಿದೆ. ಈ ಪ್ರಕ್ರಿಯೆಯನ್ನು ನಾವು ತಡೆಗಟ್ಟಲೆಬೇಕು. ಇದಕ್ಕಾಗಿ ಕೆರೆಯ ಹೂಳನ್ನು ಎತ್ತುವ ಮತ್ತು ಸೂಕ್ತ ಸ್ಥಳಗಳಿಗೆ ಸಾಗಿಸುವ ಯೋಜನೆಯನ್ನು ವ್ಯಾಪಕವಾಗಿ ಹಮ್ಮಿಕೊಳ್ಳಬೇಕು. ಈ ಯೋಜನೆಯನ್ನು ಹಮ್ಮಿಕೊಳ್ಳುವ ಪೂರ್ವದಲ್ಲಿ ಪ್ರತಿ ಕೆರೆಯ ಜಲಾನಯನ ಪ್ರದೇಶದ ಭೂವೈಜ್ಞಾನಿಕ ಮತ್ತು ಭೂಮ್ಯಾಕೃತಿಯ ಲಕ್ಷಣಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಬೇಕು. ಆಯಾ ಕೆರೆಯ ಮೇಲೆ ಯಾವುದಾದರೂ ಹೊಸ ಕೆರೆಯ ನಿರ್ಮಾಣವಾಗಿದೆಯೇ ಇಲ್ಲವೇ ಎಂಬುದನ್ನು ಗಮನಿಸಬೇಕು. ಜಲಾನಯನ ಪ್ರದೇಶದಲ್ಲಿ ಬೀಳುವ ಮಳೆ ನೀರಿನ ಪರಿಮಾಣ ಮತ್ತು ಅದರ ತೀವ್ರತೆ (Intensity)ಯನ್ನು ವಿಶ್ಲೇಷಿಸಬೇಕು. ಈ ಎಲ್ಲಾ ವೈಜ್ಞಾನಿಕ ಮತ್ತು ತಾಂತ್ರಿಕ ಅಂಶಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಿದ ನಂತರ ಸೂಕ್ತವೆಂದು ಕಂಡರೆ ಹೂಳನ್ನು ಎತ್ತುವ ಯೋಜನೆಯನ್ನು ಹಮ್ಮಿಕೊಳ್ಳುಬೇಕು. ಇಲ್ಲವಾದರೆ ಹಣ ಪೋಲಾಗುತ್ತದೆ. ಹೂಳೆತ್ತುವ ಯೋಜನೆ ಎಷ್ಟು ಅವಶ್ಯವೋ ಅದರ ಉಪಯುಕ್ತತೆ ಮತ್ತು ಸೂಕ್ತತೆಯೂ ಅಷ್ಟೇ ಅವಶ್ಯಕವೆಂಬುದನ್ನು ಮರೆಯಲೇಬಾರದು.

**ಪಟ್ಟಿ ೪ : ಕರ್ನಾಟಕದಲ್ಲಿ ಕಾಲುವೆಗಳಿಂದ ಮತ್ತು ಕೆರೆಗಳಿಂದ ನೀರಾವರಿಯಾಗುವ ನಿವ್ವಳ ಪ್ರದೇಶ**
(೧೯೯೩-೯೪) ನೀರಾವರಿ ಪ್ರದೇಶ ಹೆಕ್ಟೇರ್‌ಗಳಲ್ಲಿ

| ಕ್ರಮ ಸಂಖ್ಯೆ | ಜಿಲ್ಲೆ | ಕಾಲುವೆಗಳಿಂದ | ಕೆರೆಗಳಿಂದ |
|---|---|---|---|
| ೧. | ಬೆಂಗಳೂರು (ನಗರ) | -- | ೩,೬೦೨ |
| ೨. | ಬೆಂಗಳೂರು (ಗ್ರಾ) | ೨,೭೯೪ | ೧೯,೪೨೭ |
| ೩. | ಚಿತ್ರದುರ್ಗ | ೫೭,೮೪೧ | ೭,೨೫೦ |
| ೪. | ಕೋಲಾರ | -- | ೨೧,೫೦೧ |
| ೫. | ಶಿವಮೊಗ್ಗ | ೭೨,೦೯೫ | ೫೭,೪೭೯ |
| ೬. | ತುಮಕೂರು | ೨೭೦ | ೩೦,೪೫೬ |
| **I** | **ಬೆಂಗಳೂರು ವಿಭಾಗ** | **೧,೩೩,೦೦೦** | **೧,೩೯,೭೧೫** |
| ೭. | ಬೆಳಗಾವಿ | ೮೭,೬೯೮ | ೫,೫೯೭ |
| ೮. | ಬಿಜಾಪುರ | ೬೯.೨೮೧ | ೯.೩೫೭ |
| ೯. | ಧಾರವಾಡ | ೬೧,೦೫೮ | ೨೯,೧೦೫ |
| ೧೦. | ಉತ್ತರ ಕನ್ನಡ | -- | ೯,೨೬೮ |
| **II** | **ಬೆಳಗಾವಿ ವಿಭಾಗ** | **೨,೧೮,೦೨೭** | **೫೩,೭೪೧** |
| ೧೧. | ಬಳ್ಳಾರಿ | ೧,೧೦,೭೪೩ | ೬,೧೨೪ |
| ೧೨. | ಬೀದರ್ | ೧೩೮ | ೯೩೨ |
| ೧೩. | ಕಲ್ಬುರ್ಗಿ | ೮೪,೧೯೭ | ೬,೯೪೧ |
| ೧೪. | ರಾಯಚೂರು | ೧,೮೬,೭೫೫ | ೫,೦೯೨ |

| ಕ್ರಮ ಸಂಖ್ಯೆ | ಜಿಲ್ಲೆ | ಕಾಲುವೆಗಳಿಂದ | ಕೆರೆಗಳಿಂದ |
|---|---|---|---|
| **III** | **ಕಲ್ಬುರ್ಗಿ ವಿಭಾಗ** | **೩,೮೧,೮೩೩** | **೧೯,೦೮೯** |
| ೧೫. | ಚಿಕ್ಕಮಗಳೂರು | ೬,೬೦೦ | ೮,೧೩೨ |
| ೧೬. | ದಕ್ಷಣ ಕನ್ನಡ | -- | ೩,೫೭೩ |
| ೧೭. | ಹಾಸನ | ೨೩,೩೫೪ | ೨೬,೩೫೫ |
| ೧೮. | ಕೊಡಗು | ೨,೨೨೭ | ೧೪೧ |
| ೧೯. | ಮಂಡ್ಯ | ೮೬,೪೭೧ | ೮,೩೫೩ |
| ೨೦. | ಮೈಸೂರು | ೮೨,೯೫೩ | ೧೩,೬೭೬ |
| **IV** | ಮೈಸೂರುವಿಭಾಗ | ೨,೦೧,೬೦೫ | ೬೦.೨೩೦ |
| | **ಕರ್ನಾಟಕ ರಾಜ್ಯ** | **೯,೩೪,೪೭೫** | **೨,೭೨,೭೨೫** |
| ಆಧಾರ : ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು | | | |

**ಕೊನೆಯ ಮಾತುಗಳು :**

ಕೆಲ ವರ್ಷಗಳ ಹಿಂದೆ ವಿಶ್ವಬ್ಯಾಂಕಿನಿಂದ ಕರ್ನಾಟಕಕ್ಕೆ 'ಜಲಸಂವರ್ಧನೆ' ಎಂಬ ಹೆಸರಿನಲ್ಲಿ ಹಲವು ಕೋಟಿಗಳ ಸಾಲ ಸಿಕ್ಕಿದೆ. ಕರ್ನಾಟಕ ಸರ್ಕಾರ ಆಸಕ್ತಿಯಿಂದ ಇದಕ್ಕಾಗಿ ಒಂದು ಸಂಸ್ಥೆಯನ್ನೇ ಹುಟ್ಟುಹಾಕಿತು. ಈ ಯೋಜನೆಯ ಮುಖ್ಯ ಉದ್ದೇಶ ಕೆರೆಗಳ ಹೂಳನ್ನು ಎತ್ತಿ ಕೆರೆಗಳನ್ನು ಪುನರುಜ್ಜೀವನಗೊಳಿಸುವುದು. ಪರಿಕಲ್ಪನೆಯು ಎಲ್ಲರೂ ಒಪ್ಪಬೇಕಾದದ್ದೇ ಆಗಿದೆ. ಆದರೆ ಈ ಯೋಜನೆಯ ಅನುಷ್ಠಾನ ಹೇಗಿದೆ ಎಂಬುದರ ಬಗ್ಗೆ ಪ್ರಾಮಾಣಿಕವಾದ ಮೌಲ್ಯಮಾಪನ ಆಗಬೇಕಾಗಿದೆ. ಪತ್ರಿಕೆಗಳಲ್ಲಿ ಆಕರ್ಷಕ ಜಾಹೀರಾತುಗಳನ್ನು ನೀಡುವುದರಿಂದ ಮಾತ್ರ ಯೋಜನೆ ಯಶಸ್ವಿಯಾಗದು. ಕೆಲವು ಕಡೆ ಹಣದ ದುರುಪಯೋಗವಾಗಿದೆ ಎಂಬುದು ಪತ್ರಿಕೆಗಳಲ್ಲಿ ವರದಿಯಾಗಿದೆ. ಆದ್ದರಿಂದ ಈ ಯೋಜನೆಯ ಅನುಷ್ಠಾನದ ಬಗ್ಗೆ ಜನರ ಮನಸ್ಸಿನಲ್ಲಿ ಅನುಮಾನಗಳಿವೆ. ಅದು ಏನೇ ಇದ್ದರೂ, ಇಂಥ ಯೋಜನೆಗಳ ಅನುಷ್ಠಾನದ ಮೌಲ್ಯಮಾಪನ ಆಗಲೇಬೇಕು. ಇದಕ್ಕಾಗಿ ಪ್ರಾಮಾಣಿಕ ಭೂ ವಿಜ್ಞಾನಿಗಳ ಮತ್ತು ಇತರ ತಜ್ಞರ ಸ್ವತಂತ್ರವಾದ ತಂಡದಿಂದ ಆಗಿಂದಾಗ್ಗೆ ಮೌಲ್ಯಮಾಪನವನ್ನು ಮಾಡಿಸಬೇಕು.

ಕೊನೆಯಲ್ಲಿ ಒಂದು ಮಾತು. ಕೆರೆಗಳ ನಿರ್ಮಾಣ, ನಿರ್ವಹಣೆಯಲ್ಲಿ ಸ್ಥಳೀಯ ಫಲಾನುಭವಿಗಳ ಸಕ್ರಿಯ ಪಾತ್ರ ಅಷ್ಟೇ ಅವಶ್ಯಕ. ಈ ಎಚ್ಚೆತ್ತ ಫಲಾನುಭವಿಗಳಿದ್ದಲ್ಲಿ ಕೆರೆಗಳ ನಿರ್ವಹಣೆಯಂತೂ ತೀರ ಸುಗಮ. ಆದ್ದರಿಂದ ಸಾಮಾನ್ಯ ಜನರಲ್ಲಿ ಕೆರೆಗಳ ಬಗ್ಗೆ ಜ್ಞಾನ ಹೆಚ್ಚುವಂತೆ ಮಾಡುವುದು ಅವಶ್ಯ. ಜನರ ಸಕ್ರಿಯಾತ್ಮಕ ಪಾತ್ರದ ಜೊತೆಗೆ ಸರ್ಕಾರೀ ಯಂತ್ರದ ಸಹಭಾಗಿತ್ವ ದೊರೆತರೆ ಕೆರೆಗಳ ಪುನರುಜ್ಜೀವನವೊಂದು ಯಶಸ್ವೀ ಕಾರ್ಯಕ್ರಮವಾಗಿ ನಮ್ಮ ಗ್ರಾಮೀಣ ಬದುಕಿನಲ್ಲಿ ನಲಿವನ್ನೂ ಚೆಲುವನ್ನೂ ತುಂಬೀತು ಎಂಬುದರಲ್ಲಿ ಸಂಶಯವಿಲ್ಲ.

●




# ನೀರಿನ ಸದ್ಬಳಕೆ

ಪ್ರೊ. ಬಿ. ವಿ. ವೆಂಕಟರಾವ್

## ಪಂಚಭೂತಗಳಲ್ಲಿ ಒಂದಾದ, ನೀರು ಮತ್ತು ಅದರ ವ್ಯಾಪಕತೆ :

ಜೀವಕ್ಕೆ ಗಾಳಿ ಮತ್ತು ನೀರು ಮೂಲಾಧಾರ. ಮಗು ಹುಟ್ಟಿದಾಗ ನೀರು ಪ್ರೋಕ್ಷಿಸಿದ ಮೇಲೆ ಚೇತನ ಬರುತ್ತೆ. ಮನುಷ್ಯನಿಗೆ ಅಂತ್ಯವಾಗಿ ಬಾಯಲ್ಲಿ ಗಂಗೆ ಹೊಯ್ಯುತ್ತಾರೆ. ಗಾಂಧೀಜಿ ಆಹಾರ ತೊರೆದು ೫೦ ದಿನಗಳಿಗೂ ಹೆಚ್ಚು ಉಪವಾಸ ಮಾಡಿದ್ದನ್ನು ನಾವು ನೋಡಿದ್ದೇವೆ. ನೀರನ್ನುಳಿದು ೧-೨ ದಿನಗಳು ಮನುಷ್ಯ ಜೀವಿಸಿದ್ದನ್ನು ಯಾರೂ ಅರಿಯರು. ನಮ್ಮ ಸಂಸ್ಕೃತಿಯಲ್ಲಿ ನೀರಿಗೆ ದೈವತ್ವ ಉಂಟು; ಪಾವಿತ್ರ್ಯತೆ ಉಂಟು. ಅದು ಪಂಚಭೂತಗಳಲ್ಲಿ ಒಂದು. ಇಷ್ಟಾದರೂ ನಾವು ನೀರನ್ನು ಕುರಿತು ಗಹನವಾಗಿ ಚಿಂತಿಸುವುದು ಅಪರೂಪ. ನಲ್ಲಿಯಲ್ಲಿ ನೀರಿಲ್ಲದಿದ್ದರೆ, ಬಾವಿ ಒಣಗಿದರೆ, ಕೆರೆ ಕುಂಟೆ ನದಿ ಬತ್ತಿದರೆ ಸರ್ಕಾರವನ್ನೊ ಪೌರಾಡಳಿತವನ್ನೊ ದೈವವನ್ನೊ ಬೈದು ತೆಪ್ಪಗಾಗುತ್ತೇವೆ.

ನೀರು ಭೂಮಿಯ ಮೇಲೆ ಅತ್ಯಂತ ಸಮೃದ್ಧವಾದ ಸಂಯುಕ್ತ ವಸ್ತು. ಸಮುದ್ರ, ಸರೋವರ, ನದಿ ಮೊದಲಾದ ಅನೇಕ ರೂಪಗಳಲ್ಲಿ ಭೂಮಿಯ ಮೇಲ್ಮೈಯ ಅರ್ಧಕ್ಕೂ ಹೆಚ್ಚು ಭಾಗವನ್ನು ಆವರಿಸಿದೆ. ನೀರು ಅದರ ಕೇವಲ ಸಾಮಾನ್ಯ ರೂಪದಲ್ಲಿ ಬಣ್ಣ, ವಾಸನೆ, ರುಚಿಯಿಲ್ಲದ ದ್ರವ ವಸ್ತು. ಅದು ಘನವಾದಾಗ ಮಂಜಿನ ಗಡ್ಡೆ ರೂಪದಲ್ಲಿರುತ್ತದೆ. ವಾಯುವಿನಲ್ಲಿ ಆವಿಯ ರೂಪದಲ್ಲಿದ್ದು, ಆಗಾಗ್ಗೆ ದ್ರವ ರೂಪ ತಳೆದು ಮಳೆ ಬೀಳುತ್ತದೆ. ಪ್ರತಿವರ್ಷ ಸುಮಾರು ೨೪,೦೦೦ ಘನ ಮೈಲಿಗಳಷ್ಟು ನೀರು ಭೂಮಿಯ ಮೇಲೂ, ೭೪,೦೦೦ ಘನ ಮೈಲಿಗಳಷ್ಟು ನೀರಿನ ಮೇಲೂ ಮಳೆಯ ರೂಪದಲ್ಲಿ ಬೀಳುತ್ತದೆ ಎಂದು ಅಂದಾಜು ಮಾಡಲ್ಪಟ್ಟಿದೆ. ಶೀತ ದೇಶಗಳಲ್ಲಿ ಛಳಿಗಾಲದಲ್ಲಿ ಶಾಖ ಕಡಿಮೆ ಇರುತ್ತೆ. ವಾತಾವರಣದಲ್ಲಿನ ನೀರಿನ ಆವಿ ಘನೀಕರಣವಾಗಿ ಹಿಮವಾಗಿ ಬೆಳ್ಳಿಯ ಹೊದಿಕೆಯಂತೆ ಬಿದ್ದಿರುವುದು ಒಂದು ಸೋಜಿಗದ ದೃಶ್ಯ, ಕೆಲವು ಸಮಯದಲ್ಲಿ ವಾತಾವರಣದಲ್ಲಿನ ನೀರಿನ ಆವಿ ಘನೀಕರಣವಾಗಿ ಆಲಿಕಲ್ಲು ಬೀಳುತ್ತದೆ.

> **ನಮ್ಮ ಸಂಸ್ಕೃತಿಯಲ್ಲಿ ನೀರಿಗೆ ದೈವತ್ವ ಉಂಟು; ಪಾವಿತ್ರ್ಯತೆ ಉಂಟು. ಅದು ಪಂಚಭೂತಗಳಲ್ಲಿ ಒಂದು. ನಲ್ಲಿಯಲ್ಲಿ ನೀರಿಲ್ಲದಿದ್ದರೆ, ಬಾವಿ ಒಣಗಿದರೆ, ಕೆರೆ ಕುಂಟೆ ನದಿ ಬತ್ತಿದರೆ ಸರ್ಕಾರವನ್ನೊ, ಪೌರಾಡಳಿತವನ್ನೊ, ದೈವವನ್ನೊ ಬೈದು ತೆಪ್ಪಗಾಗುತ್ತೇವೆ.**

ನಮಗೆ ನೀರೆಂದರೆ, ಸೌಂದರ್ಯ ಮತ್ತು ಮನರಂಜನೆ ಭಾಸವಾಗುತ್ತೆ. ನದಿ, ಸರೋವರ, ಸಮುದ್ರ ಇವುಗಳೆಡೆ ಸುಂದರ ದೃಶ್ಯ ಸ್ವಾಭಾವಿಕ. ಇವುಗಳು ಈಜುವುದಕ್ಕೆ, ದೋಣಿ ನಡೆಸುವುದಕ್ಕೆ, ಇನ್ನೂ ಅನೇಕ

ರೀತಿಯ ವಿಹಾರಕ್ಕೆ ಎಡೆ. ಇದಲ್ಲದೆ ವಿಜ್ಞಾನದ ಮಾನದಂಡಗಳಿಗೆ ನಿಲುಕದ ಇನ್ನೊಂದು ವಿಶಿಷ್ಟ ಗುಣ ನೀರಿಗಿದೆ. ಅದು ಪ್ರೇಮದ ವಿಕಾಸಕ್ಕೆ ಉತ್ತೇಜಕ.

## ಉಪಯುಕ್ತ ವಸ್ತು :

ನೀರು ಮಾನವನ ಜೀವನಕ್ಕೆ ಅತ್ಯುಪಯುಕ್ತ ವಸ್ತು. ತೊಳೆಯುವುದಕ್ಕೆ, ವೈಯಕ್ತಿಕ ನೈರ್ಮಲ್ಯಕ್ಕೆ ನೀರು ಆಧಾರ. ನೀರಿನ ಮೇಲೆ ದೋಣಿ, ಹಡಗು ಇವುಗಳಲ್ಲಿ ಸರಕು ಸಾಮಾನು ಸಾಗಾಣಿಕೆ ಪುರಾತನ ಕಾಲದಿಂದಲೂ ರೂಢಿಯಲ್ಲಿದೆ. ವಿದ್ಯುಚ್ಛಕ್ತಿ ತಯಾರಿಸಿ ಅದರಿಂದ ಅನೇಕ ಬಗೆಯ ಜೀವನಾನುಕೂಲಗಳನ್ನು ಕಲ್ಪಿಸಿಕೊಳ್ಳುವುದಕ್ಕೆ ನೀರು ಸಾಧನ.

ನೀರಿನಿಂದ ಮೀನು ಒದಗುತ್ತೆ. ಕೈಗಾರಿಕೆಗಳಿಗೆ ನೀರು ಆಧಾರ. ನೀರನ್ನು ಆವಿಯಾಗಿ ಮಾರ್ಪಡಿಸಲು ಅತಿ ಹೆಚ್ಚಿನ ಶಕ್ತಿ (ಶಾಖ) ಬೇಕಾಗುತ್ತೆ. ಈ ವಿಶಿಷ್ಟ ಗುಣವನ್ನು ಶೈತ್ಯೀಕರಣದಲ್ಲಿ ಅಳವಡಿಸಿಕೊಳ್ಳುತ್ತಾರೆ. ಅದರ ವಿದ್ಯುತ್ ಗುಣಗಳಿಂದ ಅದು ಆದರ್ಶ ದ್ರಾವಣ ಮತ್ತು ಶುಚೀಕರಣ ಕರ್ತೃವಾಗಿದೆ.

ನೀರಾವರಿ ಬೇಸಾಯಕ್ಕೆ ನಮ್ಮ ದೇಶದಲ್ಲಿ ಹೆಚ್ಚಿನ ಮೊತ್ತದ ನೀರು ಬಳಕೆಯಾಗುತ್ತದೆ. ಸುಮಾರು ೧೨೦ ಲಕ್ಷ ಎಕರೆ (೫೦ ದಶಲಕ್ಷ ಹೆಕ್ಟೇರ್)ಗಳಷ್ಟು ಭೂಮಿ ನೀರಾವರಿಯಲ್ಲಿದೆ. ನೀರಿನ ಉಪಯೋಗದಲ್ಲಿ ಕೈಗಾರಿಕೋದ್ಯಮಕ್ಕೆ ದ್ವಿತೀಯ ಸ್ಥಾನ. ಇದಲ್ಲದೆ ಮನೆಗೆಲಸಗಳಿಗೆ ಅಧಿಕ ಪ್ರಮಾಣದ ನೀರು ಬೇಕು. ಈ ನೀರೆಲ್ಲಾ ಮಲಿನವಾಗಿ ನದಿಗಳಿಗೆ ಹಿಂದಿರುಗುತ್ತೆ. ಈ ನೀರನ್ನು ಸೂಕ್ತ ಕ್ರಮಗಳಿಂದ ಶುದ್ಧಿಗೊಳಿಸಿ, ಮರು ಉಪಯೋಗ ಮಾಡಬಹುದು.

## ಜೀವಕ್ಕೆ ಆಧಾರ :

ಮಾನವ ಮತ್ತು ಇತರ ಮೇಲಿನ ಮಟ್ಟದ ಪ್ರಾಣಿಗಳಿಗೆ ಜೀವಿಸಲು ಆರ್ದ್ರ ವಾತಾವರಣ ಅಗತ್ಯ. ಅಣು ಕೋಶಗಳ ವಿಭಜನೆ ಮತ್ತು ಅವುಗಳ ಜೀವಗತಿ ನೀರಿನಲ್ಲೇ ಸಾಗುವುದು. ಅಣುಕೋಶ ಒಣಗಿದಾಕ್ಷಣ ಜೀವರಹಿತವಾಗುತ್ತೆ. ಹೀಗೆ ಅನೇಕ ಅಣುಕೋಶಗಳು ಒಣಗಿದರೆ ಜೀವವಸ್ತು ಮರಣ ಹೊಂದುತ್ತೆ.

ಪ್ರಾಣಿ ಮತ್ತು ಸಸ್ಯ ದೇಹಗಳಲ್ಲಿ ನಡೆಯುವ ಎಲ್ಲಾ ಪ್ರತಿಕ್ರಿಯೆಗಳಿಗೂ ನೀರು ಅಗತ್ಯ. ಪೋಷಕ ವಸ್ತುಗಳು ಮತ್ತು ವ್ಯರ್ಥ ಪದಾರ್ಥಗಳು ನೀರಿನಲ್ಲಿ ಕರಗಿರುತ್ತವೆ. ದೇಹದ ಎಲ್ಲಾ ಭಾಗಗಳಿಗೆ ಪೋಷಕ ಸರಬರಾಜು ಮತ್ತು ಹೊರಹಾಕಿದ ವಸ್ತುಗಳಿಗೆ ಸಾಗಾಣಿಕೆ ನೀರಿನ ಮೂಲಕವೇ ಆಗಬೇಕು. ವಿವಿಧ ಭಾಗಗಳಿಗೆ ಆಮ್ಲಜನಕವನ್ನು ಒದಗಿಸಿ, ಇಂಗಾಲಾಮ್ಲವನ್ನ ಹೊರತರುವುದು ರಕ್ತಚಲನೆಯನ್ನವಲಂಬಿಸಿದೆ. ರಕ್ತದ ಶೇಕಡಾ ೮೦ ಭಾಗ ನೀರು.

ಬೆಳೆಯುತ್ತಿರುವ ಸಸ್ತನಿಗಳ ಭ್ರೂಣದ ಶೇ. ೮೦ ಭಾಗ ನೀರಿರುತ್ತೆ. ಹಾಗೆಯೇ ವಯಸ್ಸಿಗೆ ಬಂದ ಸಸ್ತನಿಗಳ ತೂಕದ ೫೦-೬೦ ಭಾಗ ನೀರು. ಪ್ರಾಣಿಗಳು ದೇಹದ ಜಿಡ್ಡನ್ನು ಮತ್ತು ಅರ್ಧಭಾಗ ಸಸಾರಜನಕ ವಸ್ತುವನ್ನು ಕಳೆದುಕೊಂಡರೂ ಜೀವಿಸಬಲ್ಲವು. ಅವುಗಳ ನೀರಿನಂಶ ಶೇ. ೧೦ರಷ್ಟು ಕಡಿಮೆಯಾದರೆ ಅಸು ನೀಗುತ್ತವೆ. ಶುಷ್ಕ ವಾತಾವರಣದಲ್ಲಿ ಜೀವ ಸಾಧ್ಯವಿಲ್ಲ.

ಸಸ್ಯ ಶರೀರದ ೮೦ಕ್ಕೂ ಭಾಗ ನೀರಿದೆ. ಸಸ್ಯದಲ್ಲಿ ಇಂಗಾಲಾಮ್ಲ, ನೀರು, ಸೂರ್ಯರಶ್ಮಿಯ ಶಕ್ತಿಯಿಂದ ಆಹಾರ ಸಂಘಟನೆಯಾಗುತ್ತೆ. ನೀರು ಮತ್ತು ಜೀವವಸ್ತುಗಳಲ್ಲಿರುವ ಜೀವದ್ರವ್ಯ ಮುಂತಾದ ಅಸ್ಫಟಿಕ ಸಂಕೀರ್ಣ ಇವುಗಳಿಗೆ ನಿಕಟ ಸಂಬಂಧವಿದೆ.

## ಮಣ್ಣಿನಲ್ಲಿ ನೀರು ಶೇಖರಣೆಯಾಗುತ್ತೆ :

ಮನುಷ್ಯ ಉಪಯೋಗಿಸುವ ಬಹುಭಾಗ ನೀರು ಮಣ್ಣಿನ ಮೂಲಕ ಪ್ರವಹಿಸುತ್ತದೆ ಮತ್ತು ಕಾಲಕಾಲ ಅಲ್ಲಿ ಶೇಖರಿಸಲ್ಪಟ್ಟಿರುತ್ತದೆ. ಹೀಗಿಲ್ಲದಿದ್ದರೆ ಮಳೆ ಬಿದ್ದಾಗ ಉಕ್ಕಿ ಹರಿದು, ಇಲ್ಲದಾಗ ಒಣವರಿ ಸ್ಥಿತಿ ಇರಬೇಕಾಗಿತ್ತು. ಮಳೆ ನೀರು ಭೂಮಿಯಲ್ಲಿ ಇಳಿದು ಕ್ರಮೇಣ ಹಳ್ಳ, ನದಿಗಳನ್ನು ಸೇರುತ್ತೆ. ಮಣ್ಣಿನಲ್ಲಿ ಇಳಿದ ನೀರು ನಿಧಾನವಾಗಿ ಆಳಕ್ಕೆ ಇಳಿದು ತಳದಲ್ಲಿ ಶೇಖರಣೆಯಾಗಿ ಮೇಲಕ್ಕೆ ಉಕ್ಕಬಹುದು. ಬಾವಿಯಲ್ಲಿ ಜಲವಾಗಿ ಸಿಗಬಹುದು ಅಥವಾ ಅಂತರ್ಜಲವಾಗಿ ಹರಿದು, ನದಿಗಳಲ್ಲಿ ಕಾಣಿಸಿಕೊಳ್ಳಬಹುದು. ಭೂಮಿಯೊಳಗಿನ

ಕೆಲವಂಶ ನೀರನ್ನು ಮೇಲಕ್ಕೆತ್ತಿ ಮನುಷ್ಯ ಬಳಸುತ್ತಾನೆ. ಸಸ್ಯ ಬೆಳವಣಿಗೆಗೆ ಸ್ವಲ್ಪ ಭಾಗ ನೀರು ಉಪಯೋಗವಾಗುತ್ತೆ. ಅಧಿಕಾಂಶ, ಭೂಮಿಯ ಮೇಲ್ಮೈಯಲ್ಲಿ ಆರಿ ಆವಿಯಾಗಿ ಹೋಗುತ್ತೆ.

ಮಳೆ ಬಂದು ಸಮೃದ್ಧಿಯಾಗಿದ್ದಾಗ, ನೀರು ಮಣ್ಣಿನಲ್ಲಿ ಹೀರಿ ಕ್ರಮೇಣ ಬಿಡುಗಡೆಯಾಗಿ ಒದಗುವುದು, ಪ್ರಕೃತಿ ಮಾನವನಿಗೆ ಕೊಟ್ಟಿರುವ ಒಂದು ಅಮೂಲ್ಯ ವರ. ಹೀಗಾಗದಿದ್ದರೆ ಮನುಷ್ಯ ತನಗೆ, ಜಾನುವಾರುಗಳಿಗೆ, ಪಚ್ಚೆ ಪೈರುಗಳಿಗೆ ಬೇಕಾಗುವ ನೀರನ್ನು ದಾಸ್ತಾನು ಮಾಡುವುದು ಅಗತ್ಯವಾಗುತ್ತಿತ್ತು. ಜಾನುವಾರುಗಳಿಗೆ ಅವುಗಳ ಅವಶ್ಯಕತೆಗನುಗುಣವಾಗಿ ಕಾಲಕಾಲಕ್ಕೆ ಕೊಡುವುದಲ್ಲದೆ, ಪೈರುಗಳ ಅವಶ್ಯಕತೆಯನ್ನು ಸತತವಾಗಿ ಪೂರೈಸಬೇಕಾಗಿತ್ತು.

ಕೆಲವೆಡೆ ಸಮೃದ್ಧಿಯಾಗಿ ನೀರೊದಗುತ್ತೆ. ಇನ್ನು ಕೆಲವೆಡೆ ನೀರು ಹೆಚ್ಚಾಗಿ, ಜೌಗಾಗುತ್ತೆ. ಮತ್ತಿತರೆಡೆ ನೀರೇ ಇರುವುದಿಲ್ಲ. ಇಂತಹ ಸನ್ನಿವೇಶಗಳಲ್ಲಿ ಮನುಷ್ಯ ವಾಸಿಸಬೇಕಾದಲ್ಲಿ ತನಗೆ, ಜಾನುವಾರುಗಳಿಗೆ, ಪೈರಿಗೆ ನೀರು ಒದಗಿಸಿಕೊಳ್ಳಬೇಕಾಗುತ್ತದೆ. ಪುರಾತನ ಕಾಲದಿಂದ ನೀರಿರುವೆಡೆಯಿಂದ, ನೀರಿಲ್ಲದೆಡೆಗೆ ಕಾಲುವೆಗಳ ಮೂಲಕ ಸಾಗಿಸಿ, ಅವಶ್ಯಕತೆಯನ್ನು ಪೂರೈಸುವ ಪ್ರಯತ್ನ ನಡೆದಿರುವುದನ್ನು ಚರಿತ್ರೆಯಲ್ಲಿ ನಾವು ಕಂಡಿದ್ದೇವೆ. ಅಗತ್ಯವಿದ್ದಾಗ ನೀರನ್ನು ಉಪಯೋಗಿಸಿಕೊಳ್ಳುವ ಉದ್ದೇಶದಿಂದ ನದಿಗಳಿಗೆ ಕಟ್ಟೆಹಾಕಿ ಜಲಾಶಯಗಳನ್ನು ನಿರ್ಮಿಸಿರುವುದು ಎಲ್ಲಾ ದೇಶಗಳ ಸಂಸ್ಕೃತಿಗಳಲ್ಲೂ ಕಾಣಬರುತ್ತದೆ. ನೀರಾವರಿ ವ್ಯವಸಾಯ ಅನಾದಿ ಕಾಲದಿಂದಲೂ ಬಳಕೆಯಲ್ಲಿದೆ.

ಪ್ರಸ್ತುತ ನಮಗಿರುವ ಸಂಪತ್ಸಾಧನಗಳನ್ನು ವಿವೇಚನೆಯಿಂದ ನಿಯಂತ್ರಿಸಿ ಬೆಳೆಸುವುದೇ ಮಾನವನ ಮುಂದಿರುವ ಬೃಹತ್ ಸಮಸ್ಯೆ. ಇದನ್ನು ಸಾಧಿಸಲು ನೀರಿನ ವಿಷಯದಲ್ಲಿ ವಿವಿಧ ಮುಖವಾದ ಸಂಶೋಧನೆ ಅವಶ್ಯಕ.

## ನೀರಿನ ಗುಣಗಳು :

ಮಳೆಯಿಂದ ಮಣ್ಣಿನಲ್ಲಿ ಬಿದ್ದ ನೀರು, ಬಸಿದಮೇಲೆ ಅದರಲ್ಲಿ ಉಳಿಯುವ ನೀರಿನ ಬಗ್ಗೆ ನಾವು ಅನೇಕ ವಿಷಯಗಳನ್ನು ತಿಳಿಯಬೇಕಾಗಿದೆ. ಈ ನೀರೇ ಸಸ್ಯಾವಶ್ಯಕತೆಯನ್ನ ಪೂರೈಸುವುದು. ಇದು ಮಣ್ಣಿನಲ್ಲಿ ಸೂಕ್ಷ್ಮ ಕಣಾಂತರಗಳಲ್ಲಿ ಅತಿ ನವಿರಾದ ಪೊರೆಪೊರೆಯಾಗಿ ಜೋಡಿ ಕಣಗಳ ಮೇಲ್ಮೈಯಲ್ಲಿರುತ್ತೆ. ಸಸ್ಯಕ್ಕೆ ಈ ನೀರೇ ಆಧಾರ. ಈ ವಿಶಿಷ್ಟ ಪರಿಸ್ಥಿತಿಯಲ್ಲಿ ನೀರಿನ ಗುಣಗಳೇನು, ಅದರ ವರ್ತನೆ ಏನು ಎಂಬುದನ್ನು ತಿಳಿಯುವುದೇ ಪ್ರಸ್ತುತ ನೀರಿನ ಸಂಶೋಧನೆಯ ಗುರಿ. ನೀರಿನ ಮೂಲಭೂತ ಪರಿಶೀಲನೆ, ಮಣ್ಣಿನಲ್ಲಿ, ಸಸ್ಯಗಳಲ್ಲಿ ಇರುವ ನೀರಿನ ನವಿರು ಪೊರೆಗಳ ಗುಣವಿಶೇಷಣಗಳನ್ನರಿಯುವುದಕ್ಕೆ ಸಹಾಯಕಾರಿಯಾಗಬಹುದು.

**ನೀರು ಸರ್ವವ್ಯಾಪಕ** : ಅದನ್ನು ವಿಜ್ಞಾನದಲ್ಲಿ ಇತರ ವಸ್ತುಗಳ ಮೊತ್ತವನ್ನು ನಿರ್ದೇಶಿಸುವುದಕ್ಕೆ ಪ್ರಮಾಣವಾಗಿ ಇಟ್ಟುಕೊಳ್ಳಲಾಗಿದೆ. ಉದಾಹರಣೆಗಾಗಿ, ಉಷ್ಣದ ಅಳತೆಯಲ್ಲಿ ಒಂದು 'ಗ್ರಾಂ' ಎಂದು ಪರಿಗಣಿಸಿ, ವಸ್ತುಗಳ ಸಾಂದ್ರತೆಗೆ ಪ್ರಮಾಣ ಕಲ್ಪಿಸಲಾಗಿದೆ. ಒಂದು ಘನ ಸೆಂಟಿಮೀಟರ್ ನೀರಿನಲ್ಲಿ ೩.೪x೧೦$^{೨೨}$ ಬಿಡಿ ಅಣುಗಳಿವೆ. ಈ ಸಂಖ್ಯೆ ಊಹೆಗೆ ಮೀರಿದ್ದು. ಹಾಗೆಯೇ ಈ ಅಣುವಿನ ವ್ಯಾಸವು ಸಹ ಬಹಳ ಸಣ್ಣದು. ವ್ಯಾಸ ೩.೦ ಆಂಗ್‌ಸ್ಟ್ರಂ ಅಥವಾ ೩x೧೦$^{೮}$ ಸೆಂಟಿಮೀಟರ್.

ನಾವು ಪರಿಶೀಲಿಸುತ್ತಿರುವ ಜೀವ-ಭೌತವ್ಯೂಹದಲ್ಲಿ ಕೆಲವೆಡೆ ನೀರಿನ ಪೊರೆಗಳು ಕೆಲವೇ ಅಣುಗಳ ದಪ್ಪವುಳ್ಳದ್ದಾಗಿರುತ್ತೆ. ಇನ್ನಿತರ ಸಂದರ್ಭಗಳಲ್ಲಿ ಸಾವಿರಾರು ಅಣುಗಳ ದಪ್ಪದ್ದಾಗಿರುತ್ತದೆ. ನೀರಿನ ಪ್ರತಿಯೊಂದು ಅಣುವಿನಲ್ಲಿ ಒಂದು ಆಮ್ಲಜನಕದ ಪರಮಾಣುವಿಗೆ, ಎರಡು ಜಲಜಕದ ಪರಮಾಣುಗಳು ಪರಸ್ಪರ ೧೦೫ ಡಿಗ್ರಿ ಕೋನದಲ್ಲಿ ಸೇರಿಕೊಂಡಿವೆ. ಈ ರೀತಿಯ ಸೇರಿಕೆಯಿಂದ ವಿದ್ಯುತ್ ಕಣಗಳ ಅಸಮತೆಯಾಗಿ, ಧನ ವಿದ್ಯುತ್ ಕೇಂದ್ರ ಒಂದು ಕೊನೆಯಲ್ಲಿ, ವಿದ್ಯುತ್ ಕೇಂದ್ರ ಮತ್ತೊಂದು ಕೊನೆಗಾಗುತ್ತೆ. ಈ ರೀತಿಯ ವಿದ್ಯುತ್ ಕ್ಷೇತ್ರವಿರುವುದರಿಂದಲೇ ನೀರು ಅತ್ಯಂತ ಉತ್ತಮ ದ್ರಾವಕವಾಗಿರುವುದು. ನೀರು ಘನವಾಗಿ ಸ್ಫಟಿಕಾಕೃತಿ ತಾಳಿದಾಗ ಅದರ ಅಣುವಿನಲ್ಲಿ ಜಲಜನಕ ಮತ್ತೊಂದು ನೀರಿನ ಅಣುವಿನಲ್ಲಿರುವ ಆಮ್ಲಜನಕದ ಹತ್ತಿರ ಸರಿಯುವುದರಿಂದ ಷಡ್ಭುಜಾಕಾರದ ಸ್ಫಟಿಕಾಕೃತಿಯ ಚೌಕಟ್ಟು ಉಂಟಾಗಿ, ಅಂತರ ಹೆಚ್ಚಾಗುತ್ತದೆ. ಇದರಿಂದ ಗಾತ್ರ ಹೆಚ್ಚಿ ಸಾಂದ್ರತೆ ಕಡಿಮೆಯಾಗುತ್ತೆ. ಅದಕ್ಕೇನೇ ಮಂಜು ನೀರಿನಲ್ಲಿ ತೇಲುವುದು. ಈ ಮೇಲಿನ ಕಾರಣದಿಂದ ನೀರು ಘನರೂಪದಲ್ಲಿದ್ದಾಗ ಒಂದೊಂದು ಅಣುಗಳೂ ವ್ಯವಸ್ಥಿತ ಸ್ಥಿತಿಯಲ್ಲಿರುತ್ತೆ. ನೀರು ದ್ರವರೂಪಕ್ಕೆ ಮಾರ್ಪಾಟಾದಾಗ ಅಣುಗಳ ಚಲನೆ ಮತ್ತು ಅಂತಃಶಕ್ತಿ ಹೆಚ್ಚುತ್ತೆ. ಈ ಕಾರಣದಿಂದಲೇ

ನೀರು ಘನವಾಗಿ ಮಂಜುರೂಪಕ್ಕೆ ತಿರುಗಿದಾಗ, ಒಂದು ಗ್ರಾಂಗೆ ೮೦ ಕ್ಯಾಲೋರಿಯಷ್ಟು ಉಷ್ಣ ಬಿಡುಗಡೆಯಾಗುತ್ತೆ. ನೀರು ಅನಿಲರೂಪದಲ್ಲಿರುವಾಗ ಇನ್ನೂ ಹೆಚ್ಚು ಚಲನಾತ್ಮಕವಾಗಿರುವುದರಿಂದ ಅದರ ಅಂತಃಶಕ್ತಿ ಬಹುಪಾಲು ಹೆಚ್ಚುತ್ತೆ. ಒಂದು ಗ್ರಾಂ ನೀರನ್ನು ಅನಿಲವಾಗಿ ಪರಿವರ್ತಿಸಲು ೫೪೦ ಕ್ಯಾಲೋರಿ ಉಷ್ಣಾಂಶ ಅಗತ್ಯ. ನೀರು ಕುದಿಯುವುದಕ್ಕೆ ಪ್ರಾರಂಭವಾದ ಮೇಲೆ ಇನ್ನೂ ಕಾಯಿಸುತ್ತಾ ಹೋದರೂ, ಅದರ ಶಾಖ ೧೦೦°C ಉಳಿದು, ನೀರೆಲ್ಲಾ ಆವಿಯಾಗುವವರೆವಿಗೂ ಅಷ್ಟೇ ಇರುತ್ತೆ. ಇದಕ್ಕೇನೇ ನಾವು ನೀರಿನ ಸುಪ್ತೋಷ್ಣ ಎಂದು ಕರೆಯುವುದು.

**ಕರ್ಷಣ ಶಕ್ತಿ** : ವಸ್ತುಗಳ ಮೇಲ್ಮೈ ಗುಣಗಳನ್ನು ವಿಚಾರ ಮಾಡುವಾಗ ನೀರಿನ ಮತ್ತು ಸ್ಫಟಿಕಾಕಾರದ ಅಥವಾ ಘನವಸ್ತುಗಳ ಮಧ್ಯೆ ಉಂಟಾಗುವ ಕರ್ಷಣ ಶಕ್ತಿಯನ್ನು ಪರಿಶೀಲಿಸುವುದು ಅಗತ್ಯ. ನೀರಿನ ಮತ್ತು ಘನವಸ್ತುಗಳ ಮಧ್ಯದ ಈ ಕರ್ಷಣಶಕ್ತಿ ಘನವಸ್ತು ಮತ್ತು ವಾಯುವಿನ ಮಧ್ಯದ ಕರ್ಷಣಶಕ್ತಿಗಿಂತ ಹೆಚ್ಚಾದರೆ ನೀರು ವಸ್ತುವಿನ ಮೇಲ್ಮೈಯಲ್ಲಿ ಮಂದರೂಪದಲ್ಲಿ ಉಳಿಯುತ್ತೆ. ಎಲ್ಲಾ ಜೀವಂತ ವ್ಯೂಹಗಳಲ್ಲೂ ಸ್ಥಿತಿ ಹೀಗೆಯೇ ಇರುತ್ತೆ. ನೀರು ಮತ್ತು ಘನವಸ್ತುಗಳ ಮಧ್ಯದ ಕರ್ಷಣ ಶಕ್ತಿ ವಾಯು ಮತ್ತು ಘನವಸ್ತುವಿನ ಮಧ್ಯದ ಶಕ್ತಿಗಿಂತ ಕಡಿಮೆಯಾದರೆ ವಸ್ತುಗಳು ಒದ್ದೆಯಾಗುವುದಿಲ್ಲ.

**ಅಂತಸ್ಥ ಶಕ್ತಿ** : ನೀರು ಮೇಲಿನಿಂದ ಧುಮುಕಿದಾಗ ಒಂದು ಕ್ರಿಯಾಶಕ್ತಿ ಉಂಟಾಗುತ್ತೆ. ಹೀಗೆ ಅಸ್ತಿತ್ವಕ್ಕೆ ಬಂದ ಅಂತಸ್ಥಶಕ್ತಿ ಧನರೂಪದ್ದು. ಮಣ್ಣಿನಿಂದ ಸಸ್ಯಗಳು ನೀರನ್ನು ಹೀರಿಕೊಳ್ಳುವಾಗ ಶಕ್ತಿ ವ್ಯಯವಾಗುತ್ತೆ. ಈ ಅಂತಸ್ಥಶಕ್ತಿ ಋಣರೂಪದ್ದು. ಮಣ್ಣಿನಲ್ಲಿ ನೀರಿನಂಶ ಕಡಿಮೆಯಾದಷ್ಟೂ ಸಸ್ಯಗಳು ನೀರನ್ನೆಳೆದುಕೊಳ್ಳಲು ಹೆಚ್ಚು ಹೆಚ್ಚು ಶಕ್ತಿ ವ್ಯಯಮಾಡುವುದವಶ್ಯಕವಾಗುತ್ತೆ. ಮಣ್ಣಿನಲ್ಲಿ ತೇವದ ಮಟ್ಟ ಇಳಿಯುತ್ತಾ ಹೋದಂತೆ, ಈ ಶಕ್ತಿಯ ಮೊತ್ತ ಅಧಿಕವಾಗುತ್ತಾ, ಒಂದು ಮಟ್ಟದಲ್ಲಿ ಸಸ್ಯಗಳು ನೀರನ್ನೆಳೆಯಲು ಅಶಕ್ತವಾಗಿ ಒಣಗಿಹೋಗುತ್ತವೆ. ಮಣ್ಣು, ಸಸ್ಯ, ನೀರು ಇವುಗಳ ಬಗ್ಗೆ ಅನೇಕ ಹೊಸ ವಿಷಯಗಳು ಇತ್ತೀಚಿನ ದಿನಗಳಲ್ಲಿ ತಿಳಿದುಬಂದಿವೆ. ಮಣ್ಣಿನಲ್ಲಿ ಸಸ್ಯಕ್ಕೆ ಬೇಕಾದ ನೀರಿನ ಶೇಖರಣೆಯಾಗಲು, ಮಣ್ಣಿನ ವಿವೇಚನಾಯುತವಾದ ಸಂರಕ್ಷಣೆಯ ಅಗತ್ಯ ಸಾಕಷ್ಟು ಮನವರಿಕೆಯಾಗಿದೆ.

12090

ನೀರಿನ ಸಂಪತ್ಸಾಧನಗಳನ್ನು ವೃದ್ಧಿಗೊಳಿಸುವ ಹಾದಿಯಲ್ಲಿಯೂ ಅನೇಕ ಪ್ರಯತ್ನಗಳು ನಡೆದಿವೆ. ಸಮುದ್ರದ ನೀರನ್ನು ಲವಣ ರಹಿತವಾಗಿ ಮಾಡುವ ಪ್ರಯೋಗಗಳು ಕ್ಯಾಲಿಫೋರ್ನಿಯಾದ ಬರ್ಕ್ಲಿ ವಿಶ್ವವಿದ್ಯಾನಿಲಯದಲ್ಲಿ ಕೆಲವಾರು ವರ್ಷಗಳಿಂದ ನಡೆಯುತ್ತಾ ಇವೆ. ಇನ್ನು ೧೦-೧೫ ವರ್ಷಗಳಲ್ಲಿ ಸಮುದ್ರದಿಂದ ಸಿಹಿ ನೀರನ್ನು ನಮ್ಮ ಅನೇಕ ಉಪಯೋಗಗಳಿಗೆ ಪಡೆಯಬಹುದೆಂಬ ಭರವಸೆಯಿದೆ. ಉಪ್ಪು ನೀರನ್ನೇ ವಿವೇಚನೆಯಿಂದ ಬಳಸಿ ಬೆಳೆ ತೆಗೆಯುವ ವಿಷಯದಲ್ಲಿ ಸಂಶೋಧನೆಗಳು ಇಸ್ರೇಲಿನಲ್ಲಿ ನಡೆಯುತ್ತಿವೆ. ಮೋಡವನ್ನು ಘನೀಕರಿಸಿ ಬೇಕಾದೆಡೆ ಮಳೆ ಸುರಿಸುವ ಪ್ರಯತ್ನದಲ್ಲೂ ಸತತವಾದ ಪ್ರಯೋಗಗಳು ಸಾಗುತ್ತಿವೆ.

## ಕರ್ನಾಟಕದ ಕೃಷಿಯಲ್ಲಿ ನೀರು :

ಕರ್ನಾಟಕದ ಭೂವಿಸ್ತಾರ ೧,೯೧,೭೭೩ ಚದರ ಕಿಲೋಮಿಟರುಗಳು; ಜನಸಂಖ್ಯೆ ೫ ಕೋಟಿ. ವಿಸ್ತಾರ ಹಾಗೂ ಜನಸಂಖ್ಯೆಗಳ ಆಧಾರದ ಮೇಲೆ ಭಾರತದ ೨೨ ರಾಜ್ಯಗಳಲ್ಲಿ, ರಾಜ್ಯಕ್ಕೆ ೮ನೇ ಸ್ಥಾನ. ಮಣ್ಣು, ವಾಯುಗುಣ, ಮಳೆ, ಬೆಳೆ ಇವೂ ವೈವಿಧ್ಯಮಯ. ಪಶ್ಚಿಮ ಕಡಲತೀರ ಹಾಗೂ ಅದರ ಉದ್ದಕ್ಕೂ ಸಮಾನಾಂತರವಾಗಿ ಹಬ್ಬಿರುವ ಪರ್ವತ ಪ್ರದೇಶದಲ್ಲಿ ಅಪಾರವಾದ ಮಳೆ. ಪಶ್ಚಿಮಾಭಿಮುಖವಾಗಿ ಹರಿಯುವ ನದಿಗಳು ಕೆಲವೇ ಮೈಲಿಗಳಷ್ಟು ದೂರ ಇಳಿ ಮೇಡುಗಳಲ್ಲಿ ಹರಿದು, ಸಮುದ್ರವನ್ನು ಸೇರುವುದರಿಂದ, ಅವುಗಳಿಂದ ವ್ಯವಸಾಯಕ್ಕೆ ಅನುಕೂಲ ಕಡಿಮೆ. ಪೂರ್ವಾಭಿಮುಖವಾಗಿ ಹರಿಯುವ ಕಾವೇರಿ ಹಾಗೂ ಹೇಮಾವತಿ, ಲಕ್ಷ್ಮಣತೀರ್ಥ, ಯಗಚಿ, ಕಬಿನಿ ಮುಂತಾದ ಅದರ ಉಪನದಿಗಳು, ಕೃಷ್ಣಾ ಜಲಾನಯನ ಭೂಮಿಗೆ ಪೂರಕಗಳಾದ ತುಂಗಭದ್ರ, ಮಲಪ್ರಭ, ಘಟಪ್ರಭ, ಭೀಮ ಈ ಎಲ್ಲ ಜೀವನದಿಗಳು, ರಾಜ್ಯದ ದಕ್ಷಿಣ ಹಾಗೂ ಉತ್ತರ ಬಯಲುಸೀಮೆಗಳಿಗೆ ಸಾಕಷ್ಟು ನೀರನ್ನು ಒದಗಿಸುತ್ತವೆ. ಉನ್ನತಮಟ್ಟದ ವ್ಯವಸಾಯ ಹಾಗೂ ಅದರಿಂದ ಹೊರಹೊಮ್ಮುವ, ಸಂಪದ್ಭರಿತ ಜನಜೀವನಕ್ಕೆ ಕಾರಕಗಳಾಗಿವೆ.

**ಜೆಂಬಿಟ್ಟಿಗೆ ಮಣ್ಣು** : ರಾಜ್ಯದ ತೀರ ಹಾಗೂ ಕರಾವಳಿ ಪ್ರದೇಶ ಅಂದರೆ, ಉತ್ತರ ಹಾಗೂ ದಕ್ಷಿಣ ಕನ್ನಡ, ಕೊಡಗು, ಹಾಸನ, ಶಿವಮೊಗ್ಗ ಜಿಲ್ಲೆಗಳಲ್ಲಿ ಮಳೆ ಅತ್ಯಧಿಕ; ೨,೫೦೦ ರಿಂದ ೯,೦೦೦ ಮಿಲಿಮೀಟರುಗಳು; ಮಳೆ ಹಾಗೂ ಉಷ್ಣ ಹವಾಗುಣದಿಂದ ಅಸ್ತಿತ್ವಕ್ಕೆ ಬರುವ ಜೆಂಬಟ್ಟಿಗೆ ಮಣ್ಣುಗಳು ಈ ಪ್ರದೇಶದ ವೈಶಿಷ್ಟ್ಯ. ರಾಜ್ಯದ ಬಹುತೇಕ ಅರಣ್ಯ ಪ್ರದೇಶ

ಇರುವುದು ಇಲ್ಲಿಯೇ; ಕಣಿವೆಗಳ ತಗ್ಗುಗಳಲ್ಲಿ ಭತ್ತ, ಬೆಟ್ಟಗುಡ್ಡಗಳ ಇಳಿಜಾರುಗಳಲ್ಲಿ ಕಾಫಿ, ಅಡಿಕೆ ಇಂಥ ಪ್ಲಾಂಟೇಷನ್ ಹಾಗೂ ಭತ್ತದ ಬೆಳೆಗಳು ಸಮೃದ್ಧ. ಇಲ್ಲಿನ ವ್ಯವಸಾಯಕ್ಕೆ ಮಳೆಯೇ ಆಧಾರ.

**ಮರಳು ಗೋಡು ಮಣ್ಣು** : ಸಮುದ್ರದ ಮಟ್ಟಕ್ಕೆ ೨೦೦೦ ದಿಂದ ೩೦೦೦ ಅಡಿ ಎತ್ತರದ ರಾಜ್ಯದ ದಕ್ಷಿಣ ಬಯಲು ಪ್ರದೇಶ ಅಂದರೆ ಮೈಸೂರು, ಹಾಸನದ ಪೂರ್ವಾರ್ಧ, ಮಂಡ್ಯ, ಕೋಲಾರ, ಬೆಂಗಳೂರು, ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಮಳೆ ಪ್ರಮಾಣ ೬೦೦ ರಿಂದ ೧೦೦೦ ಮಿಲಿಮೀಟರುಗಳು; ಸುಲಭವಾಗಿ ನೀರು ಬಸಿಯುವ ಕೆಂಪು ಮರಳು ಮತ್ತು ಕೆಂಪುಗೋಡು ಮಣ್ಣುಗಳಿಂದ ಕೂಡಿದ ಈ ಪ್ರದೇಶದಲ್ಲಿ ಮಳೆ ಆಶ್ರಯದಲ್ಲಿ ಹಾಗೂ ನೀರಾವರಿಯಲ್ಲಿ ಹಲವಾರು ಬೆಳೆಗಳನ್ನು ಬೆಳೆಯಬಹುದು.

**ಕಪ್ಪು ಮಣ್ಣು** : ಬಳ್ಳಾರಿ, ರಾಯಚೂರು, ಗುಲ್ಬರ್ಗ, ಬಿಜಾಪುರ, ಬೆಳಗಾವಿಯ ಪೂರ್ವದ ಬಹುಭಾಗ, ಧಾರವಾಡ ಜಿಲ್ಲೆಗಳು, ರಾಜ್ಯದ ಉತ್ತರ ಶುಷ್ಕ ಪ್ರದೇಶಗಳು; ಮಳೆ ೫೦೦-೬೦೦ ಮಿಲಿಮೀಟರುಗಳು; ದಕ್ಷಿಣದಲ್ಲಿ ಕೆಂಪು ಮಣ್ಣುಗಳು ಪ್ರಧಾನವಾದರೆ, ಈ ಉತ್ತರ ಭಾಗದಲ್ಲಿ ಫಲವದ್ಭರಿತ ಕಪ್ಪುಮಣ್ಣುಗಳು ಮುಖ್ಯವಾದುವು. ಮಳೆಯಾಶ್ರಯದಲ್ಲಿ ಜೋಳ, ಹತ್ತಿ ಬೆಳೆಗಳು ಸಾಮಾನ್ಯ. ಇತ್ತೀಚಿನ ದಿನಗಳಲ್ಲಿ ತುಂಗಭದ್ರ, ಮಲಪ್ರಭ, ಘಟಪ್ರಭಾ ಮೇಲ್ಭಾಗದ ಕೃಷ್ಣಾ ಇಂಥಾ ಬೃಹತ್ ಜಲಾಶಯಗಳ ನಿರ್ಮಾಣದ ಕಾರಣ ವಿಸ್ತಾರವಾದ ಭೂ ಪ್ರದೇಶಗಳು ನೀರಾವರಿಗೊಳಗಾಗುತ್ತಿವೆ. ಈ ಪ್ರದೇಶದ ಕಪ್ಪುಮಣ್ಣುಗಳ ನೀರುಳಿಸಿಕೊಳ್ಳುವ ಶಕ್ತಿ ಅಪಾರ; ಖರೀಫ್ ಅಂದರೆ, ಜೂನ್-ಸೆಪ್ಟೆಂಬರ್ ತಿಂಗಳುಗಳಲ್ಲಿನ ಮಳೆಯಿಂದ ಭೂಮಿಯಲ್ಲುಳಿದ ತೇವ; ರಬಿ, ಅಂದರೆ ಸೆಪ್ಟೆಂಬರ್ ಅಂತ್ಯದಿಂದ-ಜನವರಿ ಕಾಲದ ಬೆಳೆಗಳನ್ನು ಅಗ ಮಾಡುತ್ತದೆ. ಇದರಿಂದ ಎದ್ದು ಕಾಣುವ ಅಂಶವೆಂದರೆ, ಮಳೆ ಅಥವಾ ಹರಿ ನೀರಾವರಿಯಿಂದ ಹೆಚ್ಚು ನೀರು ಭೂಮಿಯಲ್ಲಿ ಬಿದ್ದಾಗ ಅದು ಮಣ್ಣಿನೊಳಗೆ ಇಳಿದು ಬಸಿಯದೆ ಭೂಮಿ ರಾಡಿಯಾಗುತ್ತದೆ, ಬೆಳೆಗೆ ಅನಾನುಕೂಲ ಪರಿಸ್ಥಿತಿ ಉಂಟಾಗುತ್ತದೆ. ನಿಲು ನೀರಾವರಿ ಬೇಡುವಂಥ ಭತ್ತದ ಬೆಳೆ ಈ ಕಪ್ಪು ಭೂಮಿಗಳಿಗೆ ಸಾಧುವಲ್ಲ; ಕೇವಲ ಬೆಳೆಗಳ ನೀರಿನ ಅವಶ್ಯಕತೆ ಪೂರೈಸುವಷ್ಟೇ ನೀರನ್ನು ಭೂಮಿಗೆ ಕೊಡುವಂಥ ನೀರಾವರಿ ತಂತ್ರಜ್ಞಾನ ವೃದ್ಧಿಪಡಿಸುವ ದಿಸೆಯಲ್ಲಿ ಇನ್ನೂ ವ್ಯಾಪಕ ಕೆಲಸ ಆಗಬೇಕಾಗಿದೆ. ಬಸಿಯುವ ಸಾಮರ್ಥ್ಯವಿಲ್ಲದ ಈ ಭೂಮಿಗಳಲ್ಲಿ ನೀರು ಹರಿಸಿದರೆ, ಭೂಮಿ ಜೌಗಾಗಿ ಉಪ್ಪು-ಕ್ಷಾರವಾಗಿ, ಅನತಿ ದೂರದಲ್ಲೇ ಹಾನಿ ಶತಸ್ಸಿದ್ಧ.

## ಮಣ್ಣು ಮತ್ತು ನೀರು :

ಇದುವರೆವಿಗೂ ಸ್ಥೂಲವಾಗಿ ವಿಚಾರ ಮಾಡಿದ ಮಳೆ-ಕೃಷಿ-ವಾಯುಗುಣ ಹಿನ್ನೆಲೆಯಲ್ಲಿ, ರಾಜ್ಯದ ನೀರಿನ ಸಂಪತ್ಸಾಧನ ಹಾಗೂ ಅದನ್ನು ರಾಜ್ಯದ ಶ್ರೇಯೋಭಿವೃದ್ಧಿಗೆ ವಿವೇಚನೆಯಿಂದ ಬಳಸುವ ಬಗ್ಗೆ ಪರಿಶೀಲಿಸಬಹುದು. ಮಳೆ ನೀರು ಭೂಮಿಯ ಮೇಲೆ ಬಿದ್ದಾಗ ಮೇಲ್ಮಣ್ಣು ನೆನೆಯುತ್ತದೆ; ಒದ್ದೆಯಾಗುತ್ತದೆ. ನಂತರ ಹೆಚ್ಚಿನ ನೀರು ಒಳಗೆ ಇಳಿದು, ಅಂತರ್ಜಲ ಸೇರಿ ಕ್ರಮೇಣ ಒರತೆಯಾಗಿ ಹಳ್ಳ, ತೊರೆ, ನದಿಗಳಲ್ಲಿ ಕಾಣಿಸಿಕೊಳ್ಳುತ್ತದೆ. ಇದಾಗಬೇಕಾದರೆ, ಮಣ್ಣಿನ ಮೇಲ್ಮೈ ಸಡಿಲವಾಗಿ ಅದು ಸ್ಪಂಜಿನೋಪಾದಿಯಲ್ಲಿ ಬಿದ್ದ ನೀರನ್ನು ಒಳ ಎಳೆದುಕೊಳ್ಳುವ ಸ್ಥಿತಿಯಲ್ಲಿರಬೇಕು. ಸ್ವಾಭಾವಿಕ ಸಸ್ಯಗಳಿಂದ ಕೂಡಿದ ಕಾಡಿನಂಥ ಸನ್ನಿವೇಶದಲ್ಲಿ ನೆಲದ ಮೇಲೆ ಉದುರೆಲೆ, ಬಳ್ಳಿ, ಪೊದೆ ಇವುಗಳ ಹೊದಿಕೆ ಇದ್ದು, ಬಿದ್ದ ನೀರು ಮೇಲೆ ಕೊಚ್ಚಿ ಹರಿಯದೆ ಒಳಗೆ ಇಳಿಯುವುದು ಸಾಧ್ಯ. ಮಣ್ಣಿನ ಕಣರಚನೆ ಉತ್ತಮವಾಗಿರುವುದರಿಂದ ಸಾಕಷ್ಟು ಮೊತ್ತದ ನೀರು ಮಣ್ಣಿನ ಸೂಕ್ಷ್ಮ ಕಣಾಂತರಗಳಲ್ಲಿ ಉಳಿದು, ಮಣ್ಣಿನ ತಂಪು ಅಥವಾ ತೇವ ಒಳಬೇಸಿಗೆಯಲ್ಲೂ ಆರುವುದಿಲ್ಲ. ನಾವು ಆಗಲೇ ಕಂಡಂತೆ ಹೆಚ್ಚು ನೀರು ಅಂತರ್ಜಲದ ಮೂಲಕ ನಿಧಾನವಾಗಿ ನೀರಿನ ಪಾತ್ರಗಳನ್ನು ಸೇರಿ ಹಳ್ಳ, ತೊರೆ, ನದಿಗಳು ಯಾವಾಗಲೂ ಬತ್ತುವುದಿಲ್ಲ.

## ಹರಿನೀರಿನ ಶೇಖರಣೆ :

ಮಳೆಗಾಲದಲ್ಲಿ ಸತತವಾಗಿ ಹೆಚ್ಚು ಮಳೆಯಾದಾಗ ಅದರ ಪ್ರಮಾಣ ಸ್ವಾಭಾವಿಕವಾಗಿ ಮಣ್ಣಿನ ಮೂಲಕ ಅಂತರ್ಜಲವನ್ನು ಸೇರುವುದಕ್ಕಿಂತ ಹೆಚ್ಚಾಗುತ್ತದೆ. ಅದು ಭೂಮಿಯ ಮೇಲ್ಮೈಯಲ್ಲಿ ಹರಿದು ನೇರವಾಗಿ ಹಳ್ಳಕೊಳ್ಳಗಳನ್ನು ಸೇರಿ ಅವು ತುಂಬಿ, ಉಕ್ಕಿ ಹರಿದು ಪ್ರವಾಹ ಉಂಟಾಗುತ್ತದೆ. ಒರತೆಯಿಂದ ಹಾಗೂ ಮಳೆಗಾಲದಲ್ಲಿ ಮೇಲ್ಮೈ ಹರಿನೀರನ್ನು ಕುಂಟೆ, ಕೆರೆ, ಜಲಾಶಯಗಳಲ್ಲಿ ಶೇಖರಿಸಿ ನೀರಾವರಿಗೆ ಬಳಸುವ ತಂತ್ರ ನಮ್ಮಲ್ಲಿ ಸಾವಿರಾರು ವರ್ಷಗಳಿಂದ ಪ್ರಚಲಿತವಾಗಿದೆ. ಪ್ರತಿಹಳ್ಳಿಯಲ್ಲಿಯೂ ಇವು ಜನರ

ದಿನನಿತ್ಯದ ಬಳಕೆಗೆ ಹಾಗೂ ಕೆಲವಷ್ಟು ಭೂಮಿಗೆ ನೀರಾವರಿಗೆ ಆಸರೆ. ಕಾವೇರಿ ಪಾತ್ರದ ಉದ್ದಕ್ಕೂ ನದಿಗೆ ಅಡ್ಡಲಾಗಿ ಅಣೆಕಟ್ಟೆಗಳನ್ನು ಕಟ್ಟಿ, ನೂರಾರು ಮೈಲಿ ಕಾಲುವೆಗಳನ್ನು ನಿರ್ಮಿಸಿ, ಹತ್ತಾರು ಸಾವಿರ ಎಕರೆಗಳಿಗೆ ೭-೮ ಶತಮಾನಗಳಿಂದ ನೀರೊದಗಿಸಲಾಗುತ್ತಿದೆ. ವಿಜಯನಗರದ ಕಾಲದಲ್ಲಿ ನಿರ್ಮಿಸಿದ ಕಾಲುವೆ ನೀರಾವರಿ ವ್ಯವಸ್ಥೆ ಬಳ್ಳಾರಿ ಜಿಲ್ಲೆಯಲ್ಲಿ ಇಂದೂ ಅಸ್ತಿತ್ವದಲ್ಲಿದೆ. ಇದರೊಟ್ಟಿಗೆ ಇತ್ತೀಚೆಗೆ ನದಿ ನೀರನ್ನು ಹತ್ತಾರು ಮೈಲಿ ಮೇಲಕ್ಕೆತ್ತಿ ಹರಿಸಿ ಪಟ್ಟಣಗಳಿಗೆ ಶುದ್ಧೀಕರಿಸಿದ ನೀರೊದಗಿಸುವ ಬೃಹತ್ ಕಾರ್ಯ ವ್ಯಾಪಕವಾಗಿ ನಡೆದಿದೆ.

## ರಾಜ್ಯದಲ್ಲಿ ನೀರಿನ ಸಂಪತ್ತು :

ನಮ್ಮ ರಾಜ್ಯದಲ್ಲಿ ಒದಗುವ ಮೇಲ್ಮೈ ಹರಿನೀರಿನ ಪ್ರಮಾಣ ಅಪಾರ. ಅದು ಒಟ್ಟು ೩೫೦೦ ಟಿ.ಎಂ.ಸಿ.ಎಫ್.ಟಿ. (ಸಾವಿರ ದಶಲಕ್ಷ ಘನ ಅಡಿಗಳು) ಎಂದು ಅಂದಾಜು ಮಾಡಲಾಗಿದೆ. ಈ ಬೃಹತ್ ಮೊತ್ತದ ನೀರಿನ ಕಲ್ಪನೆಗೋಸ್ಕರ ಹೇಳುವುದಾದರೆ (ತುಂಗಭದ್ರಾ ಜಲಾಶಯದಲ್ಲಿನ ನೀರಿನ ಶೇಖರಣೆ ೧೩೦ ಟಿ.ಎಂ.ಸಿ.ಎಫ್.ಟಿ; ಅದರ ಆಯಕಟ್ಟು ಸುಮಾರು ೧೦ ಲಕ್ಷ ಎಕರೆಗಳು) ಅದರ ಪ್ರಮಾಣ ರಾಜ್ಯದ ವಿವಿಧ ಜಲಾನಯನ ಭೂಮಿಗಳಲ್ಲಿ ಹೀಗಿದೆ: ಕೃಷ್ಣಾ-೯೭೦, ಕಾವೇರಿ-೩೯೦, ಗೋದಾವರಿ-೫೦, ಉತ್ತರ ಪಿನಾಕಿನಿ, ಪಾಲಾರ್ ಇತ್ಯಾದಿ-೩೦, ಪಶ್ಚಿಮಾಭಿಮುಖವಾಗಿ ಹರಿಯುವ ನೀರು-೨೦೦೦. ಇಷ್ಟು ಅಪಾರ ಮೊತ್ತದ ಹರಿನೀರಿನಲ್ಲಿ ಪ್ರಸ್ತುತ ಎಲ್ಲಾ ಮೂಲಗಳು ಅಂದರೆ ಕುಂಟೆ, ಕೆರೆ, ಮಧ್ಯಮ ಹಾಗೂ ಬೃಹತ್ ಜಲಾಶಯಗಳಿಂದ ಬಳಕೆಯಾಗುತ್ತಿರುವ ನೀರು ಸುಮಾರು ೭೦೦ ಟಿ.ಎಂ.ಸಿ.ಎಫ್.ಟಿ.ಯಷ್ಟು ಕಾವೇರಿ ಕಣಿವೆಯ ಕನ್ನಂಬಾಡಿ, ಹಾರಂಗಿ, ಹೇಮಾವತಿ, ಕಬಿನಿ; ಕೃಷ್ಣಾ ಕಣಿವೆಯ ಮಲಪ್ರಭಾ, ಘಟಪ್ರಭಾ, ಆಲಮಟ್ಟಿ, ತುಂಗಭದ್ರಾ ಹಾಗೂ ಈ ಭೂವಿಸ್ತಾರದ ಎಲ್ಲ ಕೆರೆ, ಕುಂಟೆ ಸೇರಿದಂತೆ ಇದ್ದೀತು.

**ಹೊಸದೃಷ್ಟಿ** : ಪಶ್ಚಿಮಾಭಿಮುಖವಾಗಿ ಘಟ್ಟ ಪ್ರದೇಶದಿಂದ ಅರಬ್ಬೀ ಸಮುದ್ರಕ್ಕೆ ಹೊರಳುವ ಸುಮಾರು ೨೦೦೦ ಟಿ.ಎಂ.ಸಿ.ಎಫ್.ಟಿ. ನೀರು ಬಳಕೆಯಾಗದೆ ಹೋಗುವುದು ಹಾಗಿರಲಿ, ಅದರಿಂದ ಪ್ರತಿವರ್ಷ, ತೀರ ಪ್ರದೇಶ ಪ್ರವಾಹಕ್ಕೀಡಾಗಿ ಅಪಾರ ಹಾನಿಯಾಗುತ್ತಿದೆ. ಪಶ್ಚಿಮ ಪರ್ವತ ಪ್ರದೇಶಗಳಲ್ಲಿ ಬಿದ್ದು ಸಮುದ್ರದ ಪಾಲಾಗುವ ನೀರಿನ ಕೆಲ ಭಾಗವನ್ನಾದರೂ ಪೂರ್ವಕ್ಕೆ ಹರಿಸುವ ಚಿಂತನೆಯ ರೂಪರೇಷೆಗಳನ್ನು ೧೯೭೨ರಲ್ಲೇ ಮಂಡಿಸಲಾಗಿತ್ತು. ಈ ವಿಷಯದ ಬಗ್ಗೆ ಸಂಬಂಧಪಟ್ಟ ಧುರೀಣರ ಗಮನ ಹರಿಯುವುದು ಉಚಿತ.

**ಅಂತರ್ಜಲ** : ರಾಜ್ಯದ ಅಂತರ್ಜಲ ಸಂಪನ್ಮೂಲದ ಬಗ್ಗೆಯೂ ಸಾಕಷ್ಟು ವಿಷಯ ಸಂಗ್ರಹಣೆಯಾಗಿದೆ. ಬಿದ್ದ ಮಳೆಯಲ್ಲಿ ಸುಮಾರು ೪೦೦ ಟಿ.ಎಂ.ಸಿ.ಎಫ್.ಟಿ.ಯಷ್ಟು ಅಂತರ್ಜಲ ಮೂಲಕ್ಕೆ ಪುನರಾವರ್ತನೆಯಗುತ್ತದೆ ಎಂದು ಅಂದಾಜು ಮಾಡಲಾಗಿದೆ. ಸಾಗುವಳಿಯಾಗುತ್ತಿರುವ ಹಾಗೂ ಸಾಗುವಳಿಯಾಗದೆ ಇರುವ ಬಂಜರು ಮತ್ತಿತರ ಭೂಮಿಗಳನ್ನು ವಿವೇಚನೆಯಿಂದ ನಿರ್ವಹಿಸಿ, ಬಿದ್ದ ಮಳೆನೀರನ್ನು ಭೂಮಿಯ ಮೇಲೆ ಕೊಚ್ಚಿ ಪೋಲಾಗಿಸದೆ, ಆದಷ್ಟು ಭೂಮಿಯಲ್ಲಿ ಇಳಿದು ಒರತೆಯಾಗಿ ಕ್ರಮೇಣ ಅಂತರ್ಜಲವನ್ನು ಸೇರುವಂತಾದರೆ ಬೇಸಿಗೆಯಲ್ಲಿ ಬಾವಿಗಳು ಒಣಗದೆ ಹೆಚ್ಚು ನೀರು ಒದಗುವುದು ಸಾಧ್ಯ.

## ನೀರಿನ ಬಳಕೆಯಲ್ಲಿ ದಕ್ಷತೆ :

ಇವೆಲ್ಲಕ್ಕಿಂತ ಹೆಚ್ಚಾಗಿ, ಈಗ ನಮಗೆ ಇರುವ ನೀರಾವರಿ ಸೌಲಭ್ಯವನ್ನು ದಕ್ಷತೆಯಿಂದ ಬಳಸಿ ಹೆಚ್ಚು ಬೆಳೆ ತೆಗೆಯುವುದು ನಮ್ಮ ಮುಂದಿರುವ ಸವಾಲು. ನಮ್ಮ ಜನ ಬಾವಿ ನೀರನ್ನು ಬಹಳ ಎಚ್ಚರಿಕೆಯಿಂದ ಬಳಸುತ್ತಾರೆ. ಒದಗಿಸಿಕೊಳ್ಳುವ ಪ್ರತಿಯೊಂದು ಲೀಟರ್ ನೀರಿಗೂ ಅವರು ಪಡುವ ಶ್ರಮ ಹಾಗೂ ವೆಚ್ಚದ ಅರಿವು ಅವರಿಗೆ ಉಂಟು. ಅದೇ ಕೆರೆ ಅಥವಾ ಕಾಲುವೆ ನೀರಾದರೆ ಉಳಿದ ರೈತರ ಅವಶ್ಯಕತೆಯನ್ನು ಪರಿಗಣಿಸದೆ ಅಗತ್ಯಕ್ಕಿಂತ ಹೆಚ್ಚಾದ ನೀರನ್ನು ಬಳಸುವ ಪರಿಪಾಠ ಎಲ್ಲರಿಗೂ ಚಿರಪರಿಚಿತ. ಕಾಲುವೆಗಳಲ್ಲಿ ಸೋರಿಹೋಗುವ ನೀರು ಅಪಾರ. ಇದನ್ನು ತಪ್ಪಿಸಲು ಅವಕ್ಕೆ ಕಾಂಕ್ರೀಟ್ ಇಲ್ಲವೇ ಕಲ್ಲುಚಪ್ಪಡಿ ಹಾಸುವ ಚಿಂತನೆ ನಡೆದಿದೆ. ಹಾಗೆಯೇ ಡ್ರಿಪ್, ಸ್ಪ್ರಿಂಕ್ಲರ್, ಪಿಚರ್ ಇಂಥ ಮಿತನೀರಾವರಿ ಕ್ರಮಗಳು ಬಳಕೆಯಾಗಬೇಕು.

ನೀರು ಬಂದ ತಕ್ಷಣ ಎಲ್ಲರಿಗೂ ಭತ್ತ ಬೆಳೆಯುವ ಗೀಳೇ. ಒಂದು ಎಕರೆ ಭತ್ತಕ್ಕೆ ಬೇಕಾದ ನೀರಿನಿಂದ ४-೫ ಎಕರೆ ಅರೆನೀರಾವರಿ ಬೆಳೆಗಳನ್ನು ತೆಗೆದುಕೊಳ್ಳಬಹುದು. ಒಂದು ಕೆರೆ ಅಥವಾ ಜಲಾಶಯದಲ್ಲಿ ಶೇಖರಣೆಯಾದ ನೀರಿಗೆ ಅತ್ಯಂತ ಹೆಚ್ಚು ಪ್ರತಿಫಲ ಕೊಡುವ ಬೆಳೆ ಕಾರ್ಯಕ್ರಮ ನಿರೂಪಿತವಾಗಬೇಕು. ಇದು ಆಯಾಕಟ್ಟಿನ ಎಲ್ಲ ರೈತರ ಕಾರ್ಯಕ್ರಮವಾದರೆ, ದೇಶ ನೀರಾವರಿಗೆ ಹೂಡಿದ ಬಂಡವಾಳ ಸಾರ್ಥಕವಾಗುತ್ತದೆ.

ಆಕಾಶ ನೋಡಿಕೊಂಡು ವ್ಯವಸಾಯ ಮಾಡುವ ಮನೋಭಾವ ಬದಲಾವಣೆಯಾಗಬೇಕು. ಹಲವು ವರ್ಷಗಳಲ್ಲಿ ಮಳೆ ತೀರ ಕಡಿಮೆಯಾಗಬಹುದಾದರೂ, ಸಾಮಾನ್ಯವಾಗಿ ಮಳೆ ಸ್ವಲ್ಪ ಹಿಂದು ಮುಂದಾದರೂ ಅದರ ಪ್ರಮಾಣ ಒಂದು ಸನ್ನಿವೇಶದಲ್ಲಿ ಹೆಚ್ಚು ಕಡಿಮೆ ಒಂದು ಮಟ್ಟದಲ್ಲೇ ಇರುತ್ತದೆ. ಜಾಣತನದಿಂದ ಮಣ್ಣಿನ ನೀರು ಹಾಗೂ ಬೆಳೆ ಧಾರಣಾ ಸಾಮರ್ಥ್ಯ ಅಂದರೆ, ಮಣ್ಣಿನ ಪರಿಸರವನ್ನು ಸುಧಾರಿಸಿ, ಆದಷ್ಟು ಮಟ್ಟದಲ್ಲಿ ಮಳೆ ಏರುಪೇರುಗಳನ್ನು ತಾಳಬಲ್ಲ ಬಹುವಾರ್ಷಿಕ ಬೆಳೆಗಳನ್ನು ಅಲ್ಪಾವಧಿ ಬೆಳೆಗಳೊಟ್ಟಿಗೆ ಅಳವಡಿಸಿಕೊಂಡಲ್ಲಿ ಮಳೆಯಾಶ್ರಯದ ಬೇಸಾಯದಲ್ಲಿ ಬರವನ್ನು ಎದುರಿಸುವುದು ಬಹುಮಟ್ಟಿಗೆ ಸಾಧ್ಯ. ಅದೇ ರೀತಿ ಕೆರೆ, ಜಲಾಶಯಗಳಲ್ಲಿ ಶೇಖರಿಸಿದ ನೀರನ್ನು ವಿವೇಚನೆಯಿಂದ ಬಳಸಿದಲ್ಲಿ ನೀರಿನ ಕೊರತೆಯಿಂದ ಆಗಬಹುದಾದ ಹಾನಿಯನ್ನು ತಪ್ಪಿಸಿಕೊಳ್ಳಬಹುದು. ಸಾಗುವಳಿಯಾದ ಹಾಗೂ ಸಾಗುವಳಿಯಾಗದ ಭೂಮಿಗಳ ಹದವರಿತ ನಿರ್ವಹಣೆಯಿಂದ ಮಳೆನೀರು ತಕ್ಷಣ ಕೊಚ್ಚಿ ಹಳ್ಳ, ತೊರೆ, ನದಿಗಳಿಗೆ ಧಾವಿಸಿ, ಉಕ್ಕಿ ಹರಿಯುವುದನ್ನು ತಪ್ಪಿಸಿ, ಅದು ಭೂಮಿಯೊಳಗೆ ಇಳಿದು ಒರತೆಯಾಗಿ ಬೇಸಿಗೆಯಲ್ಲಿ ನೀರಿನ ಪಾತ್ರಗಳು ಒಣಗುವುದನ್ನು ನಿವಾರಿಸಬಹುದು.

## ಅರಿವು ಅಗತ್ಯ :

ಇದನ್ನೆಲ್ಲಾ ನಾವು ಸಾಧಿಸಬೇಕಾದರೆ ನೀರಿನ ಸಂಪತ್ಸಾಧನೆಗಳ ಮೇಲೆ ಇನ್ನೂ ಹೆಚ್ಚಿನ ಮಟ್ಟದ ನಿರ್ಣಯ ಅಗತ್ಯ. ನೀರಿನ ಮೂಲಭೂತ ಉಪಯೋಗ, ವಿವಿಧ ಪರಿಸ್ಥಿತಿಯಲ್ಲಿ ಅದರ ವರ್ತನೆ ಇವುಗಳ ವಿಷಯಗಳಲ್ಲಿ ಜ್ಞಾನ ಬೆಳೆದರೇನೇ ಅದರ ಮೇಲೆ ಪ್ರಭುತ್ವ ಮತ್ತು ನಮಗೆ ಅದರ ಉಪಯೋಗ ಸಾಧ್ಯ. ನೀರು ಹೇಗೆ, ಎಲ್ಲಿಂದ ಬರುತ್ತೆ?; ಅದರ ಪೋಲು ಮಾಡದೆ ದಕ್ಷತೆಯಿಂದ ಹೇಗೆ ಉಪಯೋಗಿಸಬೇಕು? ಪ್ರವಾಹಕ್ಕೆ ಕಾರಣಗಳೇನು? ಅದನ್ನು ತಡೆಗಟ್ಟುವುದು ಹೇಗೆ? ನಮಗೆ ಬೇಕಾದ ಸಮೃದ್ಧವಾದ ಮತ್ತು ನಿರ್ಮಲವಾದ ನೀರಿನ ಸರಬರಾಜಿಗೆ ಕಾರಣಗಳಾದ ಬೆಟ್ಟ, ಗುಡ್ಡ, ಕಾಡು, ಬೇಸಾಯದ ಭೂಮಿಗಳನ್ನೊಳಗೊಂಡ ಜಲಾನಯನ ಭೂಮಿಗಳನ್ನು ಕಾಪಾಡುವುದು ಹೇಗೆ? ಎಂಬ ಅಂಶಗಳನ್ನು ಕುರಿತು ಸಾಮಾನ್ಯ ಮನುಷ್ಯ ಯೋಚಿಸುವುದಕ್ಕೆ ಮೊದಲುಮಾಡಿದರೆ, ನೀರಿನ ಸಂಶೋಧನೆಗೆ ಅಗತ್ಯವಾದ ಪ್ರೋತ್ಸಾಹ ದೊರೆಯುತ್ತೆ. ನೀರು, ಭೂಮಿ ಮತ್ತು ಮಾನವ ಇವೆಲ್ಲವನ್ನೂ ಒಳಗೊಂಡ ಪರಿಸರದ ಒಂದೊಂದಂಶಗಳು ಒಂದಕ್ಕೊಂದು ಪರಸ್ಪರ ಸಮನ್ವಯ ಬದುಕಾದರೆನೇ ಕಲ್ಯಾಣ ಸಾಧ್ಯ ಎನ್ನುವ ಸತ್ಯದ ಅರಿವು ಉಂಟಾಗಿ, ನೈಸರ್ಗಿಕ ಸಂಪತ್ಸಾಧನಗಳ ಬಳಕೆಯಲ್ಲಿ ವಿವೇಚನೆ ಮೂಡಿ, ಮಾನವನ ಹಿತಸಾಧನೆಯಾಗುವುದರಲ್ಲಿ ಸಂಶಯವಿಲ್ಲ.

●




# ಕೃಷಿಗೆ ನೀರು ಚಿನ್ನ

ಡಾ. ಎ. ಟಿ. ಯರಗಟ್ಟಿಕರ

ನೀರು ನೈಸರ್ಗಿಕ ಪರಿಸರದ ಒಂದು ಮೂಲ ಘಟಕ. ಅದು ಸಕಲ ಜೀವಿಗಳ ಜೀವನಾಧಾರ. ಜೀವಿಗಳ ಹುಟ್ಟು ಬೆಳವಣಿಗೆ, ಸಂತಾನ ಮತ್ತು ಹಂಚಿಕೆಗಳಲ್ಲಿ ನೀರು ಪ್ರಮುಖ ಪಾತ್ರ ವಹಿಸುತ್ತದೆ. ಒಂದು ಪ್ರದೇಶದಲ್ಲಿ ನೀರು ದೊರೆಯದಿದ್ದರೆ ಪ್ರಾಣಿಗಳು ವಲಸೆ ಹೋಗುತ್ತವೆ ಮತ್ತು ಸಸ್ಯಗಳು ನಾಶವಾಗುತ್ತವೆ. ಹೀಗೆ ಜೀವಿಗಳು ಬದುಕಲು ವಾಯುವನ್ನು ಬಿಟ್ಟರೆ ಅತ್ಯಂತ ಅವಶ್ಯಕವಾದ ವಸ್ತು ನೀರು. ಅದು ಇಂತಹ ಅಮೂಲ್ಯ ವಸ್ತುವಾದ್ದರಿಂದಲೇ ನಮ್ಮ ಪೂರ್ವಜರು ನೀರಿನ ತಾಣಗಳಾದ ನದಿ ಮೈದಾನಗಳಲ್ಲಿ ತಮ್ಮ ನೆಲೆಗಳನ್ನು ಸ್ಥಾಪಿಸಿದರು. ಇದರಿಂದಾಗಿಯೇ ಈಜಿಪ್ಟ್, ಬೆಬಿಲೋನಿಯ, ಚೀನಾ, ಸಿಂಧೂ ಮೊದಲಾದ ಪ್ರಾಚೀನ ನಾಗರಿಕತೆಗಳು ನದಿ ಪಾತ್ರಗಳಲ್ಲೇ ಬೆಳೆದುಬಂದವು. ನೀರಿನ ಮಹತ್ವವನ್ನು ಮನಗಂಡು ನಮ್ಮ ಪೂರ್ವಜರು ನೀರನ್ನು ದೇವಸ್ವರೂಪವೆಂದು ಭಾವಿಸಿದರು. ಗಂಗೆ, ಯುಮುನೆ, ಸರಸ್ವತಿ, ಭಾಗೀರಥಿ, ಕಾವೇರಿ, ಕೃಷ್ಣೆ, ಮಲಪ್ರಭ ಮೊದಲಾದವು ನಮ್ಮ ದೇಶದ ಪೂಜ್ಯವಾದ ನದಿಗಳು. ಇತಿಹಾಸದಲ್ಲಿ ನೀರಿನ ಆಸರೆಯ ಅನೇಕ ಯುದ್ಧಗಳು ನಡೆದಿವೆ. ಇಂದಿಗೂ ರಾಷ್ಟ್ರ-ರಾಷ್ಟ್ರಗಳ ಮತ್ತು ರಾಜ್ಯ-ರಾಜ್ಯಗಳ ಮಧ್ಯೆ ಜಲ ವಿವಾದಗಳು ಸಾಮಾನ್ಯವಾಗಿ ಕಂಡುಬರುತ್ತವೆ.

> ***ಗಂಗೆ ಯಮುನೆ ಸರಸ್ವತಿ ಕಾವೇರಿ ಮೊದಲಾದವುಗಳು ನಮ್ಮ ದೇಶದ ಪೂಜ್ಯ ನದಿಗಳು. ನೀರಿನ ಆಸರೆಗಾಗಿ ಅನೇಕ ಯುದ್ಧಗಳು ನಡೆದಿವೆ. ಇಂದಿಗೂ ರಾಷ್ಟ್ರ ಮತ್ತು ರಾಜ್ಯ ರಾಜ್ಯಗಳ ನಡುವೆ ಜಲವಿವಾದ ಸಾಮಾನ್ಯವಾದುದು.***

ಸಸ್ಯಗಳ ಅಸ್ತಿತ್ವಕ್ಕೆ ನೀರು ಅತ್ಯಂತ ಅಗತ್ಯವಾದ ಸಂಪನ್ಮೂಲ. ಇಂತಹ ಅಮೂಲ್ಯವಾದ ಜಲ ಸಂಪನ್ಮೂಲ ಈ ಭೂಮಿಯ ಮೇಲೆ ವಿಪುಲವಾಗಿದ್ದರೂ ಸಹ, ವ್ಯವಸಾಯಕ್ಕೆ ಸರಿಯಾದ ಪ್ರಮಾಣದಲ್ಲಿ ನೀರು ಸಿಗುತ್ತಿಲ್ಲ. ಭೂಮಿಯ ಮೇಲಿರುವ ಒಟ್ಟು ನೀರನ್ನು ೧.೩೬ ಬಿಲಿಯನ್ ಘನ ಕಿ.ಮೀ. ಎಂದು ಅಂದಾಜು ಮಾಡಲಾಗಿದೆ. ಇದರಲ್ಲಿ ಶೇ.೧ಭಾಗ ಮಾತ್ರ ನದಿ, ಸರೋವರ ಮತ್ತು ಅಂತರ್ಜಲ ರೂಪದಲ್ಲಿದೆ ಈ ನೀರು ಸಂಪೂರ್ಣವಾಗಿ ವ್ಯವಸಾಯಕ್ಕೆ ಮೀಸಲಾಗಿಲ್ಲ. ಹೀಗೆ ಸಿಗುವ ನೀರಿನಿಂದ ಪ್ರಪಂಚದ ಶೇ.೧೨ ರಷ್ಟು ಕೃಷಿಭೂಮಿ ಮಾತ್ರ ನೀರಾವರಿ ಸೌಲಭ್ಯವನ್ನು ಹೊಂದಿದೆ. ಒಂದು ಕಡೆ ವ್ಯವಸಾಯಕ್ಕೆ ಯೋಗ್ಯವಾದ ಭೂಮಿ ನೀರಾವರಿ ಸೌಲಭ್ಯವಿಲ್ಲದೆ ಕಾದು ಬೆಂಡಾಗುತ್ತಿದ್ದರೆ ಮತ್ತೊಂದು ಕಡೆ ನೀರಿನ ಅಯೋಜಿತ ಬಳಕೆ ಹಾಗೂ ಅಪವ್ಯಯದಿಂದ ಫಲವತ್ತಾದ ಭೂಮಿ ಸವಳು ಹಾಗೂ ಜವಳು ಹಿಡಿದು ನಿಷ್ಪ್ರಯೋಜಕವಾಗುತ್ತಿದೆ. ಅನೇಕ ನದಿಗಳಲ್ಲಿ ಹರಿಯುವ ನೀರಿನ್ನು ಸಂಪೂರ್ಣವಾಗಿ ಬಳಸಿಕೊಳ್ಳಲಾಗದೆ ಉತ್ತಮ ನೀರು ಯಾವ ಪ್ರಯೋಜನಕ್ಕೂ ಬಾರದೆ ಸಮುದ್ರ ಸೇರಿ ಉಪ್ಪು ನೀರಾಗುತ್ತಿದೆ. ಮತ್ತೆ ಕೆಲವು ಭಾಗಗಳ ಜನ ಆಗಾಗ್ಗೆ

ಪ್ರವಾಹಗಳ ಸಂಕಷ್ಟಗಳನ್ನು ಅನುಭವಿಸುತ್ತಿದ್ದಾರೆ. ನೀರಾವರಿ ಇತಿಹಾಸವನ್ನು ನೋಡಿದಲ್ಲಿ ಜಗತ್ತಿನ ಎಲ್ಲಾ ಸಂಸ್ಕೃತಿಗಳು ನದಿ ತೀರಗಳಲ್ಲೇ ಬೆಳೆದು ಬಂದಿವೆ. ಆದರೆ ನೀರಿನ ಅಸಮರ್ಪಕ ಬಳಕೆಯಿಂದ ಅವುಗಳು ಅಲ್ಲೇ ಅವಸಾನ ಕಂಡವು. ಲಭ್ಯವಿರುವ ಜಲಸಂಪನ್ಮೂಲಗಳನ್ನು ಪೂರ್ಣವಾಗಿ ಬಳಸಿಕೊಳ್ಳಲು ವಿಜ್ಞಾನ ಮತ್ತು ತಂತ್ರಜ್ಞಾನ ಬಳಕೆಯಾಗಬೇಕಿದೆ. ತನ್ನ ಪೂರ್ವಜರ ಪಾಪಗಳ ನಿವಾರಣೆಗಾಗಿ ಭಗೀರಥ ಗಂಗೆಯನ್ನು ತಂದಂತೆ ಇಂದು ವಿಶಾಲ ಭೂಭಾಗಗಳಿಗೆ ನೀರಾವರಿ ಸೌಲಭ್ಯವನ್ನೊದಗಿಸಲು ವಿಜ್ಞಾನ, ತಂತ್ರಜ್ಞಾನಗಳೆಂಬ ಭಗೀರಥ ಕಾರ್ಯೋನ್ಮುಖವಾಗಿ ಅವರ ದಾರಿದ್ರ್ಯವನ್ನು ತೊಳೆದು ಆಹಾರೋತ್ಪಾದನೆಯನ್ನು ಹೆಚ್ಚಿಸುವ ಅಗತ್ಯವಿದೆ. ಆದರೆ ಇಂತಹ ಯೋಜನೆಗಳಿಂದ ಪರಿಸರ ಸಮತೋಲನದ ಮೇಲಾಗುವ ದೀರ್ಘಕಾಲಿಕ ಪರಿಣಾಮಗಳತ್ತ ಆದ್ಯ ಗಮನ ನೀಡಬೇಕಾಗಿದೆ.

ದೇಶದ ಒಟ್ಟು ಮೇಲ್ಮೈ ಜಲಸಂಪನ್ಮೂಲ (೧,೭೦೦,೦೦ದಶಲಕ್ಷ ಘ. ಮೀ.) ಗಳಲ್ಲಿ ಕರ್ನಾಟಕದ ಪಾಲು ಶೇ.೬ ಅಥವಾ ೯೭,೩೫೨ ಘ.ಮೀ. ರಾಜ್ಯದಲ್ಲಿ ಲಭ್ಯವಿರುವ ಒಟ್ಟು ಮೇಲ್ಮೈ ಜಲಸಂಪನ್ಮೂಲಗಳಲ್ಲಿ ಶೇ. ೪೨ ಪೂರ್ವಕ್ಕೆ ಹರಿಯುವ ನದಿಗಳಿಂದ ಅರಬ್ಬಿ ಸಮುದ್ರಕ್ಕೆ ಸೇರುತ್ತದೆ. ಕರ್ನಾಟಕದಲ್ಲಿ ದೇಶದ ಒಟ್ಟು ೨,೭೦,೦೦೦ ದ.ಘ.ಮೀ. ಅಂತರ್ಜಲದ ಪೈಕಿ ಶೇ.೪.೪ ಅಂದರೆ ೧೨,೦೦೦ ದ.ಘ.ಮೀ, ಅಂತರ್ಜಲವಿದೆ. ಇದರಲ್ಲಿ ಕಾಲು ಭಾಗದಷ್ಟು ಮಾತ್ರ ಉಪಯೋಗವಾಗುತ್ತಿದೆ. ರಾಜ್ಯದಲ್ಲಿ ಸುಮಾರು ೪,೦೦,೦೦೦ ಬಾವಿಗಳಿವೆ. ಇವುಗಳಲ್ಲಿ ಬಹಳಷ್ಟು ನೀರಾವರಿ ಬಾವಿಗಳಾಗಿವೆ.

ಕರ್ನಾಟಕದಲ್ಲಿ ಪ್ರತಿ ವರ್ಷ ನೀರಾವರಿ ಸಲುವಾಗಿ ಉಯೋಗಿಸಬಹುದಾದ ಅಂತರ್ಜಲ ೧೩,೭೫೯ ದ.ಶ.ಮೀ. ಗಳಷ್ಟಿದೆ. ಇದರಿಂದ ೧೩,೭೫೯ ದಶಲಕ್ಷ ಹೆಕ್ಟೇರು ಭೂಮಿಯನ್ನು ೧ ಮೀ. ಆಳದವರೆಗೆ ನೀರಾವರಿ ಮಾಡಬಹುದಾಗಿದೆ. ಹೀಗೆ ೪೫೬೯ ದ.ಘ.ಮೀ. (೩೪%) ಅಂತರ್ಜಲವನ್ನು ಉಪಯೋಗಿಸಲಾಗಿದೆ. ಜಿಲ್ಲಾವಾರು ಇದರ ಉಪಯೋಗ ಗಣನೀಯವಾಗಿ ಹೆಚ್ಚು ಕಡಿಮೆಯಾಗುತ್ತದೆ. ಶಿವಮೊಗ್ಗ ಜಿಲ್ಲೆಯಲ್ಲಿ ನೀರಾವರಿಗಾಗಿ ಉಪಯೋಗಿಸಬಹುದಾದ ಅತ್ಯಧಿಕ (೧೨೭೪ದ.ಘ.ಮೀ.) ಅಂತರ್ಜಲವಿದೆ ಹಾಗೂ ಕೊಡಗು ಜಿಲ್ಲೆ ಅತ್ಯಂತ ಕಡಿಮೆ ಅಂತರ್ಜಲ (೧೪೧ ದ.ಘ.ಮೀ.) ಹೊಂದಿದೆ. ಧಾರವಾಡ ಜಿಲ್ಲೆಯಲ್ಲಿ ೮೮೩ದ.ಘ.ಮೀ. ಅಂತರ್ಜಲವಿದೆ. ಅದರೆ ಇದರ ಶೇಕಡ ೧೯ ರಷ್ಟು ಮಾತ್ರ ನೀರಾವರಿಗೆ ಬಳಕೆಯಾಗುತ್ತಿದೆ. ಕರ್ನಾಟಕದಲ್ಲಿ ವಿಪುಲ ಜಲ ಸಂಪನ್ಮೂಲಗಳಿದ್ದರೂ ಕೂಡ ಬಹಳಷ್ಟು ಜಿಲ್ಲೆಗಳಲ್ಲಿ ನೀರಿನ ಕೊರತೆ ಕಂಡು ಬರುತ್ತದೆ.ಇದಕ್ಕೆ ಲಭ್ಯವಿರುವ ಜಲ ಸಂಪನ್ಮೂಲಗಳನ್ನು ಸರಿಯಾಗಿ ಬಳಸದಿರುವುದೇ ಮುಖ್ಯ ಕಾರಣವಾಗಿದೆ. ನೀರು ದೊಡ್ಡ ಪ್ರಮಾಣದಲ್ಲಿ ವ್ಯರ್ಥವಾಗಿ ಹೋಗುತ್ತಲಿದೆ. ನೀರಿನ ಮಹತ್ವವನ್ನು ಆದಷ್ಟು ಬೇಗನೆ ತಿಳಿದುಕೊಂಡರೆ ಒಳ್ಳೆಯದು. ಅದಕ್ಕಾಗಿ ರಾಜ್ಯ ಸರ್ಕಾರ ಮತ್ತು ಜನತೆ ಜಲಸಂಪನ್ಮೂಲಗಳನ್ನು ಸಂರಕ್ಷಿಸುವ ಯೋಗ್ಯ ಕ್ರಮಗಳನ್ನು ಕೈಗೊಳ್ಳಬೇಕು.

## ಜಲ ಸಂಪನ್ಮೂಲಗಳ ಅಸಮರ್ಪಕ ಬಳಕೆಯಿಂದ ಕೃಷಿಯಲ್ಲಿ ಆಗುವ ದುಷ್ಪರಿಣಾಮಗಳು :

ನೀರಾವರಿ ಜಮೀನಿನಲ್ಲಿ ಬೆಳೆಗಳನ್ನು ಬೆಳೆಯುವಾಗ ನೀರನ್ನು ಯಥೇಚ್ಛವಾಗಿ ಬಳಸುವುದರಿಂದ, ಹೊಲ ಗದ್ದೆಗಳು ಜವುಳು ಪ್ರದೇಶಗಳಾಗಬಹುದು ಅಥವಾ ಸವುಳು ಮಣ್ಣಿನ ಬಂಜರು ನೆಲವಾಗಬಹುದು. ನೀರಿದೆ ಎಂಬ ಕಾರಣದಿಂದ ಅವಶ್ಯಕತೆಗಿಂತಲೂ ಹೆಚ್ಚು ನೀರನ್ನು ಬಳಸಿದಾಗ, ಅದು ಜವುಗು ನೆಲವಾಗಬಹುದು. ಅದು ಮಣ್ಣಿನಲ್ಲಿ ಇಂಗಿಹೋಗದೆ ಹೊರಕ್ಕೂ ಹರಿದುಹೋಗದೆ ಜವುಗು ನೆಲವಾಗಲು ಕಾರಣವಾಗುತ್ತದೆ.

ಒಂದೊಂದು ಹೊಲಕ್ಕೆ ಅದರಲ್ಲಿ ಬೆಳೆಯುವ ಬೆಳೆಗೆ ಸಮನಾಗಿ ನೀರಿನ ಪ್ರಮಾಣವನ್ನು ನಿಯಂತ್ರಿಸುವ ವ್ಯವಸ್ಥೆ ನಮ್ಮಲ್ಲಿಲ್ಲ. ಜೊತೆಗೆ ಕಾಲುವೆಗಳಲ್ಲಿ ಹರಿಯುವ ನೀರು ಇಂಗದಂತೆ ಮಾಡಲು ಯಾವ ಕ್ರಮವನ್ನೂ ಕೈಗೊಂಡಿಲ್ಲ. ಆದ್ದರಿಂದ ನೀರು ಭೂಮಿಯೊಳಕ್ಕೆ ಇಂಗಿ ನಷ್ಟವಾಗುವ ಪ್ರಮಾಣ ಶೇಕಡ ೩೦-೪೦ ರಷ್ಟೆಂದು ಅಂದಾಜು ಮಾಡಿದ್ದಾರೆ. ನೀರು ಇಂಗುವುದರಿಂದ ಅಂತರ್ಜಲದ ಮಟ್ಟ ಮೇಲೇರುತ್ತದೆ. ಮಣ್ಣಿನ ಒಳಗಡೆಯಿರುವ ಉಪ್ಪು ಮೇಲಕ್ಕೆ ಬಂದು ಸವಳು ಮಣ್ಣಾಗಲು ಇದೇ ಕಾರಣ.

## ನೀರಾವರಿ ನೀರಿನ ಸದ್ಬಳಕೆಯ ಕ್ರಮಗಳು :

ನೀರಿನ ಸಮರ್ಪಕ ಬಳಕೆಯಾಗಬೇಕಾದರೆ ಈ ಕೆಳಗಿನ ವಿಧಾನಗಳನ್ನು ಅನುಸರಿಸುವುದು ಸೂಕ್ತ.

## ನೀರಾವರಿಗಾಗಿ ಜಮೀನನ್ನು ಅಭಿವೃದ್ಧಿಪಡಿಸುವುದು :

ಭೂಮಿಯನ್ನು ನೀರಾವರಿಗಾಗಿ ತಯಾರುಮಾಡಬೇಕಾದರೆ ಮೊದಲು ಭೂಮಿಯನ್ನು ಮಟ್ಟ ಮಾಡಬೇಕು. ಇಲ್ಲದಿದ್ದರೆ ತಗ್ಗು ಪ್ರದೇಶಗಳಲ್ಲಿ ನೀರು ನಿಂತು ಜೌಗು ಆಗುವ ಇಲ್ಲವೇ ಹೆಚ್ಚು ಉಪ್ಪು ಶೇಖರಣೆಯಾಗುವ ಸಂಭವವಿರುತ್ತದೆ. ಭೂಮಿಯನ್ನು ಮಟ್ಟ ಮಾಡುವುದು ಮುಖ್ಯವಾಗಿ ಮಣ್ಣಿನ ಪ್ರಕಾರಗಳು, ಮಣ್ಣಿನ ಆಳ, ಜಮೀನಿನ ಇಳಿಜಾರು, ದೊರೆಯುವ ನೀರಿನ ಪ್ರಮಾಣ, ಅನುಸರಿಸುವ ನೀರಾವರಿ ಪದ್ಧತಿ ಮುಂತಾದವುಗಳ ಮೇಲೆ ಅವಲಂಬಿಸಿದೆ.

## ಬೆಳೆಗಳಿಗೆ ಬೇಕಾದ ನೀರಿನ ಪ್ರಮಾಣಕ್ಕನುಸಾರವಾಗಿ ನೀರನ್ನು ಪೂರೈಸುವುದು :

ಬೆಳೆಗಳಿಗೆ ಬೇಕಾಗುವ ಒಟ್ಟು ನೀರಿನ ಪ್ರಮಾಣವು ಆಯಾ ಪ್ರದೇಶದ ಹವಾಮಾನ, ವಿವಿಧ ಬೆಳೆಗಳು, ತಳಿಯ ಅವಧಿ, ಬೆಳೆ ಬೆಳೆಯುವ ಹಂಗಾಮು ಮತ್ತು ಮಣ್ಣಿನ ಗುಣಧರ್ಮಗಳ ಮೇಲೆ ಅವಲಂಬಿಸಿದೆ.

ಇದಲ್ಲದೆ ಅಚ್ಚುಕಟ್ಟು ಪ್ರದೇಶದಲ್ಲಿ ನೀರಿನ ಲಭ್ಯತೆ ಎಲ್ಲಾ ರೈತರಿಗೂ ಒಂದೇ ತರಹ ಇರುವುದಿಲ್ಲ. ಆದ್ದರಿಂದ ರೈತರು ತಮ್ಮ ನೀರನ ಲಭ್ಯತೆಗೆ ಅನುಗುಣವಾಗಿ ಬೆಳೆಗಳನ್ನು ಬೆಳೆಯಬೇಕು ಹಾಗೂ ನೀರನ್ನು ಯಾವಾಗ ಕೊಡಬೇಕು ಎಂದು ತಿಳಿದುಕೊಂಡು ಕೊಡುವುದರಿಂದ ನೀರಿನ ಉಳಿತಾಯ ಮಾಡಬಹುದು. ಇದಕ್ಕಾಗಿ ಹಲವಾರು ಪದ್ಧತಿಗಳಿವೆ. ಅವುಗಳಲ್ಲಿ ಅತಿ ಸರಳವಾಗಿ ರೈತರು ಉಪಯೋಗಿಸಬಹುದಾದ-ಎರಡು ನೀರು ಕೊಡುವ ಮಧ್ಯ ನಿಶ್ಚಿತ ಅಂತರ ಪಾಲಿಸುವುದು ಒಂದು ವಿಧಾನ.

## ಸೂಕ್ತ ನೀರಾವರಿ ಪದ್ಧತಿ ಅಳವಡಿಸುವುದು :

ಸೂಕ್ತವಾದ ನೀರಾವರಿ ಪದ್ದತಿಯನ್ನು ಆರಿಸುವುದು ಮುಖ್ಯವಾಗಿ ಮಣ್ಣಿನ ಪ್ರಕಾರಗಳು, ಯೋಜಿಸಿದ ಬೆಳೆ ಇತ್ಯಾದಿಗಳ ಮೇಲೆ ಅವಲಂಬಿಸಿರುತ್ತದೆ. ಮುಖ್ಯವಾಗಿ ಬದುಪಟ್ಟಿ ನೀರಾವರಿ ಪದ್ಧತಿಯನ್ನು ಕಡಿಮೆ ಅಂತರದ ಸಾಲುಗಳಲ್ಲಿ ಬೆಳೆಯುವ ಬೆಳೆಗಳಾದ ಜೋಳ, ಸಜ್ಜೆ, ಶೇಂಗಾ ಬೆಳೆಗಳಿಗೆ ಅಳವಡಿಸಬಹುದು. ಬೋದು ನೀರಾವರಿ ಅಥವಾ ಹರಿ ನೀರಾವರಿ ಪದ್ಧತಿಯನ್ನು ಹೆಚ್ಚಿನ ಅಂತರದ ಸಾಲುಗಳಲ್ಲಿ ಬೆಳೆಯುವ ಬೆಳೆಗಳಾದ ಹತ್ತಿ, ತೊಗರಿ, ಮುಸುಕಿನ ಜೋಳ, ಕಬ್ಬು ಬೆಳೆಗಳಿಗೆ ಉಪಯೋಗಿಸಬಹುದು.

ಇತ್ತೀಚಿನ ಸಂಶೋಧನೆಗಳ ಪ್ರಕಾರ ಬೋದು ನೀರಾವರಿ ಪದ್ಧತಿಯಲ್ಲಿ (ಕಪ್ಪು ಮಣ್ಣಿನಲ್ಲಿ / ಎರೆಮಣ್ಣಿನಲ್ಲಿ) ಒಂದು ಸಾಲು ಬಿಟ್ಟು ಇನ್ನೊಂದು ಸಾಲಿಗೆ ನೀರು ಕೊಡಬಹುದು ಎಂದು ಕಂಡುಬಂದಿದೆ. ಇದರಿಂದ ನೀರನ್ನು ಶೇಕಡಾ ೨೫-೩೫ರಷ್ಟು ಉಳಿತಾಯ ಮಾಡಬಹುದು ಮತ್ತು ಇಳುವರಿಯ ಮೇಲೆ ಯಾವುದೇ ವ್ಯತಿರಿಕ್ತ ಪರಿಣಾಮ ಆಗುವುದಿಲ್ಲ.

## ನೀರಿನ ಲಭ್ಯತೆ ಮೇಲೆ ಬೆಳೆ ಯೋಜನೆ ಅಳವಡಿಸುವುದು :

ಯಾವುದೇ ನೀರಾವರಿ ಪ್ರದೇಶಕ್ಕೆ ಬೆಳೆಗಳ ಯೋಜನೆ ತಯಾರಿಸಬೇಕಾದರೆ ಭೂಗುಣ, ನೀರು ಸಿಗುವ ಪ್ರಮಾಣ ಮತ್ತು ಕಾಲವನ್ನು ಗಣನೆಗೆ ತೆಗೆದುಕೊಳ್ಳಬೇಕು. ಉದಾ: ಎರಡು ಹಂಗಾಮಗಳಲ್ಲಿ ಭತ್ತವನ್ನು ಬೆಳೆಯುವ ಬದಲು ಬೇರೆ ಲಾಭದಾಯಕ ಬೆಳೆಗಳಾದ ಶೇಂಗಾ, ಸೂರ್ಯಕಾಂತಿ ಬೆಳೆಯಬಹುದು. ಏಕೆಂದರೆ ಒಂದು ಭತ್ತದ ಬೆಳೆಯನ್ನು ಬೆಳೆಯಲು ಕೊಡುವ ನೀರಿನಲ್ಲಿ ಶೇಂಗಾ ಅಥವಾ ಸೂರ್ಯಕಾಂತಿ ಬೆಳೆಗಳನ್ನು ೨-೩ ಸಾರಿ ಬೆಳೆಯಬಹುದು. ಇದರಿಂದಾಗಿ ಒಟ್ಟು ಉತ್ಪನ್ನವು ಹೆಚ್ಚುವುದಲ್ಲದೆ, ನೀರಿನ ಉಪಯೋಗ ಸಹ ಚೆನ್ನಾಗಿ ಆಗುತ್ತದೆ.

## ನೀರಾವರಿಯಲ್ಲಿ ನೀರು ಪೋಲಾಗುವುದನ್ನು ತಪ್ಪಿಸಬೇಕು :

ಮೊಟ್ಟಮೊದಲು ಕಾಲವೆಯಲ್ಲಿ ನೀರು ಸೋರಿಹೋಗುವುದನ್ನು ತಪ್ಪಿಸಬೇಕು. ಇದಕ್ಕಾಗಿ ಕಾಲುವೆಯ ಒಳಮೈ ಮೂರಂ ಹಾಕಬೇಕು. ಇಲ್ಲಿ ಹಬ್ಬುವ ಗುಣವುಳ್ಳ ಹುಲ್ಲನ್ನು ಕಾಲುವೆಯ ಒಳಮೈಯಲ್ಲಿ ಬೆಳೆಸಬೇಕು.

* ನೀರಾವರಿ ಕ್ಷೇತ್ರದಲ್ಲಿ ಸೂಕ್ತವಾದ ಬಿಸಿಕಾಲುವೆಯನ್ನು ನಿರ್ಮಿಸುವುದರಿಂದ ಭೂಮಿಯನ್ನು ಸವಳು ಮತ್ತು ಜವಳು ಆಗುವುದು ತಡೆಗಟ್ಟಬಹುದು.
* ಅಂತರಜಲ ಮಟ್ಟದ ಬಳಕೆಯನ್ನು ಒಂದು ಮಟ್ಟಕ್ಕೆ ಸೀಮಿತಗೊಳಿಸುವುದಲ್ಲದೆ ಅಂತರ್ಜಲದ ಮಟ್ಟವನ್ನು ಹೆಚ್ಚಿಸುವ ಕ್ರಮವನ್ನು ಕೈಗೊಳ್ಳುವುದು.

* ಸಾಧ್ಯವಿದ್ದಲ್ಲಿ ನೀರಾವರಿ ನೀರಿನ ಸಂಯೋಜಿತ ಬಳಕೆ (Conjunctive utilization of groumd and surface water).
* ನೀರಿನ ಸಮರ್ಥ ಬಳಕೆ ಕೊಡುವ ಪದ್ಧತಿಗಳಾದ ತುಂತುರು ಹಾಗೂ ಹನಿ ನೀರಾವರಿ ಪದ್ಧತಿಗಳ ಕ್ಷೇತ್ರವನ್ನು ಹೆಚ್ಚಿಸುವುದು. ನಮ್ಮ ದೇಶದಲ್ಲಿ ಬಾವಿ ಮತ್ತು ಕೊಳವೆ ಬಾವಿ ನೀರಾವರಿ ಕ್ಷೇತ್ರ ಶೇಕಡಾ ೫೨ ಇರುವುದರಿಂದ ತುಂತುರು ಹಾಗೂ ಹನಿ ನೀರಾವರಿ ಕ್ಷೇತ್ರ ಹೆಚ್ಚಿಸಲು ಬಹಳಷ್ಟು ಅವಕಾಶವಿದೆ.
* ನೀರು ನಿರ್ವಹಣೆಯ ತಂತ್ರಜ್ಞಾನಗಳನ್ನು ರೈತರಿಗೆ ವರ್ಗಾಯಿಸುವ ಕ್ರಮಗಳನ್ನು ಇನ್ನಷ್ಟು ಹೆಚ್ಚಿಸಲು ಒತ್ತುಕೊಡಬೇಕು. ಒಂದು ಇತ್ತೀಚಿನ ಸಮೀಕ್ಷೆ ಪ್ರಕಾರ ಅಚ್ಚುಕಟ್ಟು ರೈತರಿಗೆ ಬೆಳೆಗಳಿಗೆ ನೀರು ಎಷ್ಟು ಕೊಡಬೇಕು, ಯಾವಾಗ ಕೊಡಬೇಕು ಮತ್ತು ಹೇಗೆ ಕೊಡಬೇಕು ಎಂಬ ಬಗ್ಗೆ ಜ್ಞಾನವಿಲ್ಲವಾಗಿದೆ.
* ಅಚ್ಚುಕಟ್ಟು ಪ್ರದೇಶದಲ್ಲಿ ನೀರು ನಿರ್ವಹಣೆಯಲ್ಲಿ ಬಳಕೆದಾರ ರೈತರ ಸಹಭಾಗಿತ್ವ ಹಾಗೂ ಸಹಕಾರ ಅವಶ್ಯವಾಗಿದೆ. ಇದನ್ನು ನೀರು ಬಳಕೆದಾರರ ಸಹಕಾರಿ ಸಂಘದ ಮೂಲಕ ಸಾಧಿಸಬಹುದು.
* ನೀರಿನ ಬಳಕೆಯ ಆಧಾರದ ಮೇಲೆ ಉಪಯೋಗಿಸಿದ ಪ್ರಮಾಣಕ್ಕೆ ತಕ್ಕಂತೆ ಸೂಕ್ತವಾದ ಕಾಲುವೆ ನೀರಿಗೆ ಬೆಲೆಯನ್ನು ನಿರ್ಧರಿಸುವುದು ಸೂಕ್ತ. ಇದರಿಂದ ರೈತರಿಗೆ ನೀರಿನ ಮಿತವ್ಯಯ ಬಳಕೆ ಬಗ್ಗೆ ಪ್ರೇರಣೆ/ಪ್ರೋತ್ಸಾಹ ದೊರೆಯುತ್ತದೆ.

ಈ ಮೇಲೆ ತಿಳಿಸಿದ ಅಂಶಗಳಲ್ಲದೆ ಬೆಳೆಗಳ ಬೇಸಾಯ ಕ್ರಮಗಳು, ಗೊಬ್ಬರ ಪೂರೈಕೆ, ಕಳೆ ನಿಯಂತ್ರಣ, ಕೀಟ ಹಾಗೂ ರೋಗ ನಿಯಂತ್ರಣ ಮಾಡುವುದು-ಇವೆಲ್ಲವುಗಳು ಬೆಳೆಗಳ ನೀರಿನ ಬೇಡಿಕೆಯನ್ನು ಹೆಚ್ಚು ಕಡಿಮೆ ಮಾಡುವುದು ಸಾಮಾನ್ಯ. ಆದ್ದರಿಂದ ಈ ಎಲ್ಲ ಕ್ರಮಗಳನ್ನು ಹದವರಿತು ಕೈಗೊಂಡು ಬೆಳೆಗಳಿಗೆ ಎಷ್ಟು ಬೇಕೋ ಅಷ್ಟೇ ನೀರನ್ನು ಕೊಡವುದರಿಂದ ನೀರಿನ ಉಪಯೋಗವನ್ನು ಹೆಚ್ಚಿಸಬಹುದು.

●




# ನದಿಗಳ ಜೋಡಣೆ

ಜೆ. ಆರ್. ನರಸಿಂಹಸ್ವಾಮಿ

ದಕ್ಷಿಣದ ಮತ್ತು ಉತ್ತರದ ನದಿಗಳ ಜೋಡಣೆಯ ಅಭಿಪ್ರಾಯವು ಸ್ವಾತಂತ್ರ್ಯಾ ನಂತರದ ಕಾಲದಿಂದ ಪ್ರಚಲಿತವಾಗಿದೆ. ಇದಕ್ಕೆ ಮುಖ್ಯವಾದ ಕಾರಣ ಉತ್ತರದ ಭಾರತ ನದಿಗಳು ವರ್ಷದ ೩೬೫ ದಿನಗಳೂ ಹರಿಯುತ್ತಿರುತ್ತವೆ. ದಕ್ಷಿಣ ಭಾರತದ ನದಿಗಳಂತೆ ಬತ್ತಿಹೋಗುವುದಿಲ್ಲ. ಉತ್ತರ ಭಾರತದಲ್ಲಿ ನದಿಗಳು ಬಹಳ ವಿಸ್ತಾರವಾದ ಪ್ರದೇಶದಲ್ಲಿ ಹರಿಯುವುದರಿಂದ ಉತ್ತರದ ರಾಜ್ಯಗಳಲ್ಲಿ ನದಿ ನೀರಿನ ಬಗ್ಗೆ ಅಷ್ಟಾಗಿ ವಿವಾದಗಳಿಲ್ಲ.

ಆದರೆ ದಕ್ಷಿಣ ಭಾರತದ ಸಮಸ್ಯೆಯೇ ಬೇರೆ. ದಕ್ಷಿಣ ಭಾರತದ ಐದು ರಾಜ್ಯಗಳಾದ ಮಹಾರಾಷ್ಟ್ರ, ಆಂಧ್ರಪ್ರದೇಶ, ಕರ್ನಾಟಕ, ತಮಿಳುನಾಡು ಮತ್ತು ಕೇರಳದಲ್ಲಿ ಮಳೆಗಾಲದಲ್ಲಿ (ಮುಂಗಾರು ಮತ್ತು ಹಿಂಗಾರು) ಸಾಕಷ್ಟು ಮಳೆ ಬರುವುದಿಲ್ಲವಾದ್ದರಿಂದ ರಾಜ್ಯಗಳ ನಡುವೆ ನೀರಿಗೆ ಕಚ್ಚಾಟ ತೀವ್ರವಾಗಿದೆ. ಕೆಲವು ರಾಜ್ಯಗಳಲ್ಲಿ ನೀರಿನ ಕೊರತೆಯ ಕೂಗು ಯಾವಾಗಲೂ ಕೇಳಿಸುತ್ತಿರುತ್ತದೆ. ಅದಕ್ಕಾಗಿ ನದಿ ಪ್ರಾಧಿಕಾರಗಳನ್ನು ರಚಿಸಿದ್ದರೂ ಕಾರಣಾಂತರಗಳಿಂದ ನದಿ ನೀರಿನ ಹಂಚಿಕೆ ಸಮರ್ಪಕವಾಗಿಲ್ಲ ಎಂಬ ವಿವಾದವಿದ್ದೇ ಇದ್ದು ಅದನ್ನು ಪರಿಹರಿಸಲು ಸುಪ್ರೀಂ ಕೋರ್ಟ್‌ನ ಮೊರೆ ಹೋಗುತ್ತವೆ. ಆದರೆ ಮಳೆ ಸರಿಯಾಗಿ ಬಾರದಿದ್ದರೆ ಅಥವಾ ಜಲಾಶಯಗಳಲ್ಲಿ ಸಾಕಷ್ಟು ನೀರು ಸಂಗ್ರಹವಾಗದಿದ್ದರೆ ಕೆಳಗಿರುವ ರಾಜ್ಯಗಳಿಗೆ ನೀರು ಬಿಡುವುದು ಅಷ್ಟು ಸುಲಭವಲ್ಲ. ಜಲಾಶಯದಲ್ಲಿ ಬಹಳ ಕಡಿಮೆ ನೀರಿದ್ದರೂ ಅಂದರೆ ಅವುಗಳು ಹರಿದು ಹೋಗಲಾಗದಿದ್ದರೂ ನೀರು ಬಿಡಬೇಕೆಂದು ಬೊಬ್ಬೆ ಹಾಕುವ ಪ್ರವೃತ್ತಿ ಬೆಳೆದಿದೆ. ಇದನ್ನು ಸರಿಪಡಿಸುವುದಕ್ಕೆ ಉತ್ತರ ಮತ್ತು ದಕ್ಷಿಣ ಭಾರತದ ನದಿಗಳ ಜೋಡಣೆ ಕಾರ್ಯಕ್ರಮವು ಕಳೆದ ೨೦ ವರ್ಷದಿಂದ ಅನೇಕ ಕಾರಣಗಳಿಂದ ನೆನೆಗುದಿಗೆ ಬಿದ್ದಿದೆ. ಇದಕ್ಕೆ ಮುಖ್ಯವಾಗಿ ಹಣಕಾಸಿನ ಕೊರತೆಯಿದೆ. ಈಗಿನ ಅಂದಾಜಿನ ಪ್ರಕಾರ ಈ ಕಾರ್ಯಕ್ಕೆ ೧೦,೦೦೦ ಕೋಟಿ ರೂ.ಗಳಿಗಿಂತ ಜಾಸ್ತಿ ಬೇಕಾಗುತ್ತದೆ. ಅಲ್ಲದೆ ಅನೇಕ ರಾಜ್ಯಗಳ ಮಧ್ಯೆ ಈ ಕಾಲುವೆಗಳು ಹರಿಯಬೇಕಾಗಿರುವುದರಿಂದ ಉದ್ಭವವಾಗುವ ಅನೇಕ ಸಮಸ್ಯೆಗಳಿವೆ. ಅವುಗಳನ್ನು ಮುಂದೆ ವಿವರಿಸಲಾಗುವುದು.

***ಉತ್ತರ ಭಾರತದಲ್ಲಿ ನದಿಗಳು ಬಹಳ ವಿಸ್ತಾರವಾದ ಪ್ರದೇಶದಲ್ಲಿ ಹರಿಯುವುದರಿಂದ ಅಲ್ಲಿನ ರಾಜ್ಯಗಳಲ್ಲಿ ನದಿ ನೀರಿನ ಬಗ್ಗೆ ವಿವಾದಗಳಿಲ್ಲ. ದಕ್ಷಿಣ ಭಾರತದ ಸಮಸ್ಯೆ ಬೇರೆ. ಇಲ್ಲಿ ಸಾಕಷ್ಟು ಮಳೆ ಬರುವುದಿಲ್ಲವಾದ್ದರಿಂದ ರಾಜ್ಯ ರಾಜ್ಯಗಳ ನಡುವೆ ನೀರಿಗೆ ಹಾಹಾಕಾರವಿದೆ.***

ಈಗ ತುಂಬಾ ಸಮಸ್ಯೆಗಳನ್ನುಳ್ಳ ಕರ್ನಾಟಕದ ಬಗ್ಗೆ ನೋಡೋಣ. ಕರ್ನಾಟಕದಲ್ಲಿ ಕಾವೇರಿ ಮತ್ತು ಕೃಷ್ಣಾ ನದಿಗಳ ಜಲಾನಯನ ಪ್ರದೇಶಗಳಿವೆ. ಈ ನದಿಗಳಲ್ಲಿ ಕಾವೇರಿ ನದಿಯು ಕೊಡಗಿನ ಭಾಗಮಂಡಲದಲ್ಲಿ ಹುಟ್ಟಿ ತಮಿಳುನಾಡಿನಲ್ಲಿ ಹರಿದು ಬಂಗಾಳ ಕೊಲ್ಲಿಯನ್ನು ಸೇರುತ್ತದೆ. ಕೃಷ್ಣಾ ನದಿಯು ಮಹಾರಾಷ್ಟ್ರದಲ್ಲಿ ಹುಟ್ಟಿ ಕರ್ನಾಟಕ, ಆಂಧ್ರದಲ್ಲಿ ಹರಿದು ಬಂಗಾಳ ಕೊಲ್ಲಿಯನ್ನು ಸೇರುತ್ತದೆ. ಈ ನದಿಗಳು ಹರಿಯುವ ದಕ್ಷಿಣದ ನಾಲ್ಕು ರಾಜ್ಯಗಳಾದ ಮಹಾರಾಷ್ಟ್ರ, ಕರ್ನಾಟಕ, ಆಂಧ್ರಪ್ರದೇಶ ಮತ್ತು ತಮಿಳುನಾಡುಗಳಲ್ಲಿ ಜಲವಿವಾದ ತುಂಬಾ ಜ್ವಲಂತ ಸಮಸ್ಯೆಯಾಗಿದೆ. ಇದಕ್ಕಾಗಿ ಹರತಾಳಗಳು ನಡೆದು ಅನೇಕರು ಸಾವನ್ನಪ್ಪಿರುವ ಉದಾಹರಣೆಗಳೂ ಇವೆ. ಸರಕಾರಗಳು ಉರುಳದಿರಬೇಕಾದರೆ ನೀರಿನ ಸಮಸ್ಯೆಯನ್ನು ಎತ್ತುತ್ತಲೇ ಇರಬೇಕು.

ಕರ್ನಾಟಕದ ಜಲ ವಿವಾದವಿರುವ ಈ ಎರಡು ನದಿಗಳಲ್ಲದೆ ಅನೇಕ ಸಣ್ಣ ನದಿ ಜಲಾನಯನ ಪ್ರದೇಶಗಳಿದ್ದು, ಅವುಗಳ ಬಗ್ಗೆ ಯಾವುದೇ ಅಂತರ ರಾಜ್ಯ ವಿವಾದಗಳಿಲ್ಲ. ಏಕೆಂದರೆ ಅವು ರಾಜ್ಯದಲ್ಲೇ ಹುಟ್ಟಿ ರಾಜ್ಯದೊಳಗೆ ಹರಿಯುತ್ತವೆ. ಅವುಗಳಲ್ಲಿ ಹೆಚ್ಚಿನವು ಪಶ್ಚಿಮ ಘಟ್ಟದಲ್ಲಿ ಹುಟ್ಟಿ ಅರಬ್ಬಿ ಸಮುದ್ರವನ್ನು ಸೇರುತ್ತವೆ. ಮುಂಗಾರು ಮಳೆಯಿಂದ ರಾಜ್ಯಕ್ಕೆ ಗರಿಷ್ಠ ಮಳೆ ಬರುತ್ತಿದ್ದು, ಅದರಲ್ಲಿ ಹೆಚ್ಚಿನವು ಅಂದರೆ ಸುಮಾರು ೬೦೦೦-೧೦೦೦೦ ಮಿ.ಮೀ.ನಷ್ಟು ವಾರ್ಷಿಕವಾಗಿ ಸಮುದ್ರ ಕಡೆಗಿರುವ ಇಳಿಜಾರಿನಲ್ಲಿ ಹರಿದುಹೋಗುತ್ತದೆ. ಮುಂಗಾರು ಮಾರುತಗಳು ಪೂರ್ವದ ಕಡೆಗೆ ಅಂದರೆ ಕೃಷ್ಣ ಮತ್ತು ಕಾವೇರಿ ಜಲಾನಯನ ಪ್ರದೇಶಗಳಿಗೆ ಹೋಗಿ ಉಳಿದಿರುವ ೬೦೦ ರಿಂದ ೧೦೦೦ ಮಿ. ಮೀ.ನಷ್ಟು ಮಳೆಯನ್ನು ಸುರಿಸುತ್ತವೆ.

ಕೇಂದ್ರ ಜಲ ಆಯೋಗದ ವರದಿಯಂತೆ ರಾಜ್ಯದಲ್ಲಿ ಅತಿಹೆಚ್ಚಿನ ಅಂದರೆ ಶೇ. ೭೯ರಷ್ಟು ಭೌಗೋಳಿಕ ಪ್ರದೇಶವು ಬರಗಾಲ ಪೀಡಿತ ಪ್ರದೇಶವಾಗಿದ್ದು, ಆ ಪ್ರದೇಶವು ಕೃಷ್ಣ ಮತ್ತು ಕಾವೇರಿ ಜಲಾನಯನ ಭೂಮಿ ಪ್ರದೇಶದಲ್ಲಿದೆ. ಇಲ್ಲಿಯೇ ಹೆಚ್ಚಿನ ನಗರಪ್ರದೇಶಗಳು ಮತ್ತು ಕೃಷಿಯ ತೀವ್ರತೆಯೂ ಕಂಡುಬರುತ್ತದೆ. ಹಾಗಾಗಿ ಇಲ್ಲಿ ನೀರು ಮತ್ತು ವಿದ್ಯುಚ್ಛಕ್ತಿಗೆ ಹೆಚ್ಚಿಗೆ ಬೇಡಿಕೆಯಿದ್ದು, ಅಲ್ಲಿಯೇ ಜನಸಂಖ್ಯೆಯೂ ಹೆಚ್ಚಿದ್ದು, ಅಂತರ ರಾಜ್ಯ ನೀರು ಹಂಚಿಕೆ ವಿಷಯದಲ್ಲಿ ನೆರೆ ರಾಜ್ಯಗಳ ಜೊತೆಯಲ್ಲಿ ಜಗಳ ಮತ್ತು ಘರ್ಷಣೆ ಉಂಟಾಗುತ್ತದೆ. ಜನಸಂಖ್ಯೆ ಹೆಚ್ಚುತ್ತಿದ್ದು, ಆಹಾರ ಮುಂತಾದವಕ್ಕೆ ಬೇಡಿಕೆ ಹೆಚ್ಚುತ್ತಿದ್ದು, ಜೀವನಾಧಾರಕ್ಕೆ ಅನೇಕ ಕೈಗಾರಿಕೆಗಳು ಮತ್ತು ಕೃಷಿ ಚಟುವಟಿಕೆಗಳು ನಡೆಯುವುದರಿಂದ ಪರಿಸರ ಮಾಲಿನ್ಯವೂ ಆಗುತ್ತದೆ. ಇವುಗಳೆಲ್ಲದರಿಂದಾಗಿ ನೀರಿನ ಕೊರತೆ ದಿನದಿಂದ ದಿನಕ್ಕೆ ಹೆಚ್ಚುತ್ತಾ ಹೋಗುತ್ತದೆ. ಇದರಿಂದ ಜನಗಳಲ್ಲಿ ಪೈಪೋಟಿ ಉಂಟಾಗಿ ಘರ್ಷಣೆ ಮತ್ತು ರಕ್ತಪಾತ ಮುಂತಾದವುಗಳಿಗೆ ಅವಕಾಶವಾಗುತ್ತದೆ. ಈ ರೀತಿಯಾದ ಘರ್ಷಣೆಯು ಕಾವೇರಿ ನದಿ ನೀರಿನ ಹಂಚಿಕೆಯ ವಿಷಯದಲ್ಲಿ ನಡೆದು ರಕ್ತಪಾತ ಸಂಭವಿಸಿದೆ.

ಈ ಅಂತರರಾಜ್ಯ ವಿವಾದಗಳನ್ನು ತಪ್ಪಿಸಲು ಮತ್ತು ಉತ್ತರ ಭಾರತದಂತೆ ದಕ್ಷಿಣ ಭಾರತದಲ್ಲಿಯೂ ಕೂಡ ನೀರಿನ ಅಭಾವ ಕಡಿಮೆ ಮಾಡುವ ಉದ್ದೇಶದಿಂದ ನದಿಗಳ ಜೋಡಣೆ ಯೋಜನೆ ಕಾರ್ಯರೂಪಕ್ಕೆ ಬರಬೇಕಾದರೆ ಬಹಳ ಸಮಯ ಮತ್ತು ತುಂಬಾ ಹಣ ಬೇಕಾಗುತ್ತದೆ. ಅದಕ್ಕಾಗಿ ಸ್ಥಳೀಯವಾದ ಕೆಲವು ಕಾರ್ಯಕ್ರಮಗಳನ್ನು ಕೈಗೊಳ್ಳುವುದುಚಿತ.

ಸ್ಥಳೀಯವಾದ ಕಾರ್ಯಕ್ರಮಗಳು ಎಂದರೆ, ಪೋಲಾಗುತ್ತಿರುವ ನೀರನ್ನು ಸರಿಯಾದ ರೀತಿಯಲ್ಲಿ ಬಳಕೆ ಮಾಡುವುದರಿಂದ ನೀರಿನ ಕೊರತೆಯನ್ನು ಕಡಿಮೆ ಮಾಡುವ ಸಾಧ್ಯತೆ ಇದೆ. ಇದರಿಂದ ಪುನರ್ವಸತಿ ಸಮಸ್ಯೆ ಇಲ್ಲ. ದೊಡ್ಡ ಅಣೆಕಟ್ಟುಗಳನ್ನು ನಿರ್ಮಿಸಬೇಕಾಗಿಲ್ಲ. ಜಮೀನುಗಳ ಮುಳುಗಡೆ ಇಲ್ಲ. ಪರಿಸರದ ಹಾನಿ ಕಡಿಮೆಯಾಗುವುದು. ಇದಕ್ಕೂ ಹೆಚ್ಚಾಗಿ ಅತಿಮುಖ್ಯವಾದುದು ಏನೆಂದರೆ- ವೆಚ್ಚ ಕಡಿಮೆ, ಜನರ ಸಹಭಾಗಿತ್ವವನ್ನು ಪಡೆಯಬಹುದು, ಸರಕಾರವು ನಿಯಂತ್ರಿಸಿದ ಖಾಸಗೀ ಕ್ಷೇತ್ರವನ್ನು ಬಳಸಿಕೊಳ್ಳಬಹುದು. ದೇಶದ ಖಜಾನೆಗೆ ಹೊರೆ ಕಡಿಮೆ ಆಗಿ, ಸಾರ್ವಜನಿಕ ಮತ್ತು ಖಾಸಗೀ ಕ್ಷೇತ್ರಗಳಿಂದ ಇದಕ್ಕೆ ಬೇಕಾದ ಹೂಡುವಳಿಯನ್ನು ಪಡೆಯಬಹುದು. ಇಡೀ ಯೋಜನೆಯನ್ನು ಆದ್ಯತೆಗೆ ಅನುಗುಣವಾಗಿ, ಹಂತಹಂತಗಳಲ್ಲಿ ಮಾಡಿಕೊಂಡು ಬರಬಹುದಾದುದರಿಂದ ಹಣಕಾಸಿನ ಹೊರೆ ಕಡಿಮೆ ಆಗುತ್ತದೆ. ಪರಿಸರದ ಹಾನಿ ಬಹು ಕಡಿಮೆ ಆಗುವುದರಿಂದ, ಪ್ರತಿಯೊಂದು ಹಂತದ ಅಭಿವೃದ್ಧಿಯಲ್ಲಿ ಜೀವನಾಧಾರ ಸ್ಥಿತಿಯನ್ನು ಗಮನದಲ್ಲಿ ಇಡಬಹುದು. ಇದರಿಂದ ಉತ್ತರ ಭಾರತದ ನದಿಗಳು, ಶತಮಾನಗಳ ಹಿಂದೆ ಇದ್ದಂತೆ ತುಂಬಿ ಹರಿಯುವಂತಾಗಬಹುದು ಮತ್ತು ದಕ್ಷಿಣ ಭಾರತದ ನದಿಗಳು ಬತ್ತಿಹೋಗುವುದನ್ನು ತಡೆದು, ವರ್ಷಪೂರಾ ಹರಿಯುವಂತೆ ಮಾಡಬಹುದು.

ಈ ಹೊಸ ಕ್ರಮದಿಂದ ಅಂತರರಾಜ್ಯ ಘರ್ಷಣೆಗಳನ್ನು ತಪ್ಪಿಸುವ ಸಾಧ್ಯತೆ ಇದೆ. ಈಗ ಒಂದೊಂದಾಗಿ ಕ್ರಮಗಳನ್ನು ವಿವರಿಸಬಹುದು. ನಮ್ಮ ರಾಜ್ಯದ ಪಶ್ಚಿಮ ಘಟ್ಟಗಳಲ್ಲಿನ ಹೆಚ್ಚಿನ ನೀರಿನ ಪ್ರಮಾಣವು ಇಳಿಜಾರಿನಲ್ಲಿ ಹರಿದುಹೋಗಿ ಅರಬ್ಬೀ

ಸಮುದ್ರವನ್ನು ಸೇರುತ್ತದೆ. ನಮ್ಮ ರಾಜ್ಯದ ಘಟ್ಟಪ್ರದೇಶವು ರಾಜ್ಯದ ಒಟ್ಟು ಭೂಭಾಗದ ಶೇ. ೧೩ರಷ್ಟು ಎಂದು ಸರಕಾರದ ಜಲಸಂಪನ್ಮೂಲ ಅಭಿವೃದ್ಧಿ ಲೆಕ್ಕಾಚಾರ ಹಾಕಿದೆ. ಇದರಲ್ಲಿ ಮೇಲ್ಭಾಗದ ನೀರಿನ ಹರಿವು ೨೦೦೦ ಟಿ.ಎಂ.ಸಿ.ಗಳಾಗಿವೆ. ಉಳಿದ ಭಾಗಗಳಿಗೆ ಹೋಲಿಸಿದರೆ, ಕೃಷ್ಣಾ ಮತ್ತು ಕಾವೇರಿ ಜಲಾನಯನ ಭೂಭಾಗವು ರಾಜ್ಯದ ಭೂಭಾಗದ ಶೇ. ೮೦ರಷ್ಟಿದ್ದು, ಇದರ ಮೇಲಿನ ಹರಿವು ೧೪೫೦ ಟಿ.ಎಂ.ಸಿ.ಗಳಾಗಿದೆ. ಇದರಲ್ಲಿ ಕೃಷ್ಣಾ ೯೫೦, ಕಾವೇರಿ ೫೦೦ ಟಿ.ಎಂ.ಸಿ.ಗಳೆಂದು ಅಂದಾಜು ಮಾಡಲಾಗಿದೆ.

ಕೃಷ್ಣಾ ಮತ್ತು ಕಾವೇರಿ ಪ್ರದೇಶಗಳಲ್ಲಿ ನೀರು ಕಡಿಮೆ ಪ್ರಮಾಣದಲ್ಲಿ ದೊರಕುತ್ತಿದ್ದು, ಇದಕ್ಕಾಗಿ ತಿಕ್ಕಾಟವಿದೆ. ಆದರೆ ಘಟ್ಟಪ್ರದೇಶದ ಎರಡು ಸಾವಿರ ಟಿ.ಎಂ.ಸಿ. ನೀರು ಸುಮ್ಮನೆ ಹರಿದುಹೋಗುತ್ತದೆ. ಕಾಳಿನದಿ ಮತ್ತು ಶರಾವತಿಗಳಿಂದ ಜಲವಿದ್ಯುತ್ ಉತ್ಪಾದನೆ ಆದನಂತರ ಹೊರಬರುವ ನೀರು ಪ್ರಯೋಜನಕ್ಕೆ ಬಾರದಾಗಿದೆ. ಇಲ್ಲಿಯವರೆಗೆ ಇವುಗಳಿಗೆಲ್ಲ ಸರಿಯಾದ ಯೋಜನೆ ಮಾಡದೆ, ಅಂದರೆ ಪಶ್ಚಿಮದಲ್ಲಿ ಹರಿದುಹೋಗುವ ನೀರನ್ನು ಕೃಷ್ಣ ಮತ್ತು ಕಾವೇರಿ ಕೊಳ್ಳದ ನೀರಿನ ಕೊರತೆ ಇರುವ ಪ್ರದೇಶಗಳಿಗೆ ಹೋಗುವುದಕ್ಕೆ ಸೂಕ್ತವಾದ ಇಂಜಿನಿಯರಿಂಗ್ ಕೌಶಲ್ಯಗಳನ್ನು ಕಂಡುಹಿಡಿಯಬೇಕು. ಆದರೆ ಇಲ್ಲಿರುವ ಅಗಾಧವಾದ ಪ್ರಶ್ನೆಯೆಂದರೆ, ೨೦೦೦ ಅಡಿ ಎತ್ತರದ ಘಟ್ಟಪ್ರದೇಶಗಳಲ್ಲಿ ಪರಿಸರ ಹಾನಿಯನ್ನು ಕಡಿಮೆ ಮಾಡಿ, ಘಟ್ಟಗಳಿಂದ ಕೆಳಗೆ ಹರಿಯುವಂತೆ ಮಾಡಬೇಕು. ಇದಕ್ಕಾಗಿ ದೊಡ್ಡದೊಡ್ಡ ಅಣೆಕಟ್ಟುಗಳನ್ನು ಕಟ್ಟಲಾಗುವುದಿಲ್ಲ. ಆದರೆ ನಿರ್ದಿಷ್ಟ ಎತ್ತರಗಳಲ್ಲಿ ಸಣ್ಣಸಣ್ಣ ಜಲಾಶಯಗಳನ್ನು ನಿರ್ಮಿಸಿ, ಮೇಲುಮೇಲಕ್ಕೆ ನೀರು ಹೋಗುವಂತೆ ವ್ಯವಸ್ಥೆ ಮಾಡಬೇಕು. ಇದರಿಂದ ಹಿಂದೆ ಹೇಳಿದ ಸಮಸ್ಯೆಗಳನ್ನು ಎದುರಿಸಬೇಕಾದ ಅವಶ್ಯಕತೆ ಇಲ್ಲ.

ಇದಕ್ಕಾಗಿ ಘಟ್ಟಪ್ರದೇಶಗಳಲ್ಲಿ ಪಂಪು, ನೀರು ಶೇಖರಿಸುವ ಯೋಜನೆಯನ್ನು ಕೈಗೊಳ್ಳಬೇಕು ಇದರಲ್ಲಿ, ನೀರಿನ ಎರಡು ಸಣ್ಣ ಕೊಳಗಳನ್ನು, ಅಂದರೆ ಒಂದು ಎತ್ತರದಲ್ಲಿ, ಇನ್ನೊಂದು ಕೆಳಗೆ ರಚಿಸಿ, ಅದಕ್ಕೆ ಹಿಂತಿರುಗಿ ಬರುವಂತಹ (ರಿವರ್ಸಿಬಲ್) ಕೊಳವೆಗಳನ್ನು ಜೋಡಿಸಿ, ಅದು ವಿದ್ಯುತ್ ಯಂತ್ರಗಳ ಚಾಲನೆಗೆ ಉಪಯೋಗವಾಗುವಂತೆ ಅನುಕೂಲ ಮಾಡಬೇಕು. ಇದರಲ್ಲಿ ಎರಡು ವಿಧದ ಕೆಲಸವಿದೆ. ಒಂದು, ಮೇಲಿನ ಕೊಳದಿಂದ ಕೆಳಗಿನ ಕೊಳಕ್ಕೆ ನೀರು ಹರಿಯುವಂತ ಮಾಡಿ ಜಲವಿದ್ಯುತ್ ಅನ್ನು ಉತ್ಪಾದಿಸುವುದು, ನಂತರ ಅದನ್ನು ಮೇಲೆ ಹೋಗುವಂತೆ ಮಾಡಿ ಉಪಯೋಗಿಸಿಕೊಳ್ಳಬಹುದು. ಈ ಕಾರ್ಯವು ದಿನದ ೨೪ ಗಂಟೆಯೂ ಪರ್ಯಾಯವಾಗಿ ನಡೆಯುತ್ತಿರಬೇಕು.

ಪರಿಸರ ಹಾನಿಯನ್ನು ಕಡಿಮೆ ಮಾಡುವುದಕ್ಕೆ, ವಿದ್ಯುದಾಗಾರವನ್ನು ಟನಲ್‌ಗಳ ಅಡಿಯಲ್ಲಿ, ಭೂಮಿಯ ಒಳಗೆ ನಿರ್ಮಿಸಬೇಕು. ಆದರೆ ನೀರಿನ ಕೊಳಗಳು ಮೇಲೆ ಕಾಣಿಸುವಂತಿರಬೇಕು. ಇದು ಸಣ್ಣ ನೀರಾವರಿ ಕೆರೆಗಳಂತೆ ಇದ್ದು, ಜನರನ್ನು ಬೇರೆಡೆಗೆ ಪುನರ್‌ವಸತಿ ಆಗುವಂತೆ ಮಾಡಬೇಕಾಗಿಲ್ಲ ಮತ್ತು ಜಮೀನು ಮುಳುಗಡೆ ಆಗುವುದಿಲ್ಲ. ಘಟ್ಟಪ್ರದೇಶಗಳ ಅಡಿಯಲ್ಲಿ ಬಂಡೆಗಳು ಇರುವುದರಿಂದ ವಿದ್ಯುತ್ ಸ್ಥಾವರಗಳನ್ನು ನಿರ್ಮಿಸಲು ಅನುಕೂಲ. ಪಶ್ಚಿಮ ಘಟ್ಟದಲ್ಲಿ, ಮುಂಗಾರಿನಲ್ಲಿ ಅತಿಹೆಚ್ಚು ಮಳೆ ಬೀಳುವುದರಿಂದ, ಆ ನೀರನ್ನು ಪೂರ್ವದ ಕಡೆಗೆ ತಿರುಗಿಸಲು ನೀರು ಪಂಪ್ ಮಾಡುವ ಅವಧಿಯನ್ನು ಹೆಚ್ಚಿಸಿಕೊಳ್ಳಬಹುದು. ಸ್ವಲ್ಪ ಭಾಗವನ್ನು ಮಾತ್ರ, ವಿದ್ಯುತ್ ಉತ್ಪಾದನೆಗೆ ಉಪಯೋಗ ಮಾಡಬಹುದು.

ಈಚೆಗೆ ವಿದ್ಯುದಾಗಾರಗಳನ್ನು ಥರ್ಮಲ್ ಅಥವಾ ಅಣುಶಕ್ತಿಯಿಂದ ನಡೆಸಲಾಗುತ್ತಿದೆ. ಏಕೆಂದರೆ ಜಲವಿದ್ಯುತ್ತಿಗೆ, ದೊಡ್ಡ ಜಲಾಶಯಗಳು ಬೇಕಾಗಿದ್ದು, ಅದರಿಂದ ನಾವು ಅನೇಕ ತೊಂದರೆಗಳನ್ನು ಅನುಭವಿಸಬೇಕಾಗಬಹುದು. ಅಲ್ಲದೆ ನೀರಿನ ಅಭಾವದಿಂದ ಜಲವಿದ್ಯುತ್ ಉತ್ಪಾದನೆಯೂ ಕೂಡಾ ಕಡಿಮೆ ಆಗುತ್ತಿವೆ. ಒಂದು ಕಾಲದಲ್ಲಿ ಕರ್ನಾಟಕವು ಜಲವಿದ್ಯುತ್ ಉತ್ಪಾದನೆಗೆ ಹೆಸರಾಗಿತ್ತು. ಆದರೆ ಈಗ ಅದು ಥರ್ಮಲ್ ವಿದ್ಯುತ್‌ಗೆ ಶರಣಾಗಬೇಕಾದ ಪರಿಸ್ಥಿತಿ ಉಂಟಾಗಿದೆ. ಇಡೀ ದೇಶದಲ್ಲೇ ಶೇ. ೭೦ ರಿಂದ ೮೦ರಷ್ಟು ವಿದ್ಯುತ್ ಉತ್ಪಾದನೆಯು ಥರ್ಮಲ್ ಮಾದರಿಯಿಂದ ಆಗುತ್ತಿದೆ. ಇದರಲ್ಲಿ, ದಿನದ ೨೪ ಗಂಟೆಯಲ್ಲೂ ವಿದ್ಯುತ್ ಉತ್ಪಾದನೆಯು ಒಂದೇ ಸಮನಾಗಿರುತ್ತದೆ. ಆದರೆ ಜಲವಿದ್ಯುತ್ ಉತ್ಪಾದನೆಯಲ್ಲಿ ದಿನಕ್ಕೆ ಬೇಕಾಗಿರುವ ವಿದ್ಯುತ್ ಅನ್ನು ಪೂರೈಸಲು ಸಾಧ್ಯವಿಲ್ಲ.

ಈಗ ನಾವು ನೋಡುತ್ತಿರುವುದು ವಿದ್ಯುತ್ ಸರಬರಾಜು ದಿನದ ೨೪ ಗಂಟೆಗಳಲ್ಲಿ ಒಂದೇ ಸಮನಾಗಿರುವುದಿಲ್ಲ. ಬೆಳಿಗ್ಗೆ ೬ ಗಂಟೆಯಿಂದ ಬೇಡಿಕೆ ಹೆಚ್ಚಾಗಿರುತ್ತದೆ. ಕೃಷಿ ಕಾರ್ಯಗಳಿಗೆ ವಿದ್ಯುತ್ ಶೇ. ೪೦ ರಿಂದ ೫೦ ರಷ್ಟು ಉಪಯೋಗವಾಗುತ್ತದೆ. ಬೆಳಿಗ್ಗೆ ೮ ಗಂಟೆಯ ಮೇಲೆ ಕೈಗಾರಿಕೆಗಳು ಪ್ರಾರಂಭವಾದಾಗ ಗೃಹ ಮತ್ತು ಕಚೇರಿ ಬಳಕೆ ಹೆಚ್ಚಾದಾಗ ಬೇಡಿಕೆ ಅಧಿಕ. ಸಂಜೆ ೬ ಗಂಟೆ ಆದ

ಮೇಲೆ ಈ ಬೇಡಿಕೆ ಕಡಿಮೆ ಆಗುತ್ತಾ ಹೋಗುತ್ತದೆ. ಆಗ ಗೃಹ ಬಳಕೆ, ಕೆಲವು ಅಗತ್ಯ ಕೈಗಾರಿಕೆಗಳನ್ನು ಬಿಟ್ಟರೆ ಬಳಕೆಯು ಕಡಿಮೆ. ಆದರೆ ಥರ್ಮಲ್ ಉತ್ಪಾದನೆಯಲ್ಲಿ ಈ ಅವಧಿಯಲ್ಲಿ ಉತ್ಪಾದನೆಯನ್ನು ಕಡಿಮೆ ಮಾಡಲಾಗುವುದಿಲ್ಲ. ಆಗ ಉತ್ಪಾದನೆ ಆದ ವಿದ್ಯುತ್ ಅನ್ನು ಭೂಮಿಯ ಒಳಗೆ ನಿರ್ಮಿಸಿದ ಪಂಪ್‌ಸೆಟ್ಟುಗಳನ್ನು ಉಪಯೋಗಿಸಿ ಹೆಚ್ಚಾದುದನ್ನು ಗ್ರಿಡ್‌ಗೆ ಬಿಡಬಹುದು.

ಕೃಷಿ ಬಳಕೆಯಲ್ಲಿ ಉಪಯೋಗಿಸುವ ೩.೨ ಯೂನಿಟ್, ನಷ್ಟಗೊಂಡ ವಿದ್ಯುತ್‌ನಲ್ಲಿ ೨.೮ ಯೂನಿಟ್‌ಗಳನ್ನು ಹಿಂದಕ್ಕೆ ಪಡೆದು ಬೇರೆ ರೀತಿಯಲ್ಲಿ ಉಪಯೋಗಿಸಬಹುದು.

ಈ ತಂತ್ರಜ್ಞಾನವನ್ನು ಪಾಶ್ಚಿಮಾತ್ಯ ದೇಶಗಳಲ್ಲಿ ೬ ದಶಕಗಳ ಹಿಂದೆಯೇ ಕಾರ್ಯಗತ ಮಾಡಿದ್ದು, ಅದನ್ನು ಸುಲಭವಾಗಿ ನಮ್ಮ ರಾಜ್ಯದಲ್ಲಿ ಅಳವಡಿಸಿಕೊಳ್ಳಬಹುದು. ಈಗ ನಾವು ಥರ್ಮಲ್ ವಿದ್ಯುತ್, ಜಲವಿದ್ಯುತ್ ಮತ್ತು ಅಣುವಿದ್ಯುತ್ ಅನ್ನು ಮಿಶ್ರವಾಗಿ ಉಪಯೋಗಿಸುತ್ತಿರುವುದರಿಂದ ಜಲವಿದ್ಯುತ್ ಆಗರಗಳನ್ನು ಘಟ್ಟ ಪ್ರದೇಶಗಳಲ್ಲಿ ನೀರನ್ನು ಮೇಲಕ್ಕೆ, ಕೆಳಗೆ, ಪಂಪ್ ಮಾಡಲು ಮತ್ತು ನೀರಿನ ಕೊರತೆ ಇರುವ ಪ್ರದೇಶಗಳಿಗೆ ನೀರು ಹಾಯಿಸಲು ಉಪಯೋಗಿಸಬಹುದು. ಇಂತಹ ರೀತಿಯಿಂದ ಶೇ. ೧೦ರಷ್ಟು ಭಾಗದ ನೀರನ್ನು ಅಂದರೆ ೨೦೦೦ ಟಿ.ಎಂ.ಸಿ. ಪೋಲಾಗುತ್ತಿದ್ದ ಪಶ್ಚಿಮಘಟ್ಟದ ನೀರಿನಲ್ಲಿ ೨೦೦ ಟಿ.ಎಂ.ಸಿ. ನೀರನ್ನು ನೀರಿನ ಕೊರತೆ ನೀಗಿಸಲು ಉಪಯೋಗಿಸಬಹುದು. ಅಲ್ಲದೆ ನೀರಿಗಾಗಿ ನಮ್ಮೊಡನೆ ಘರ್ಷಣೆ ನಡೆಸುವ ತಮಿಳುನಾಡು, ಆಂಧ್ರ ಪ್ರದೇಶಕ್ಕೂ ಮಾರಾಟ ಮಾಡಬಹುದು. ಹೆಚ್ಚಾಗಿರುವ ಥರ್ಮಲ್ ವಿದ್ಯುತ್ ಅನ್ನು ಗ್ರಿಡ್‌ಗೆ ಕೊಡಬಹುದು. ಈ ಮೇಲಿನ ಪಂಪು ಯೋಜನೆಯಿಂದ ಇಡೀ ಪಶ್ಚಿಮ ಘಟ್ಟಗಳಲ್ಲಿ ಈ ಕೊಳಗಳಿಂದ ಇಳಿಯುವ ನೀರು ತುಂಬಿರುವುದು. ಇದರಿಂದ ಅಲ್ಲಿರುವ ಜನರಿಗೆ ಕುಡಿಯುವ ನೀರಿನ ಕ್ಷಾಮವಿರುವುದಿಲ್ಲ. ಕೆಲವು ಸ್ಥಳಗಳಲ್ಲಿ ನೀರಿನ ಹರಿವು ಚೆನ್ನಾಗಿ ಇರುವುದರಿಂದ, ತುಂತುರು ನೀರಾವರಿಗೆ ಅನುಕೂಲವಾಗಿ, ತೋಟಗಾರಿಕೆ ಬೆಳೆಯನ್ನು ಫಲಪ್ರದವಾಗಿ ಬೆಳೆಯಬಹುದು. ಇಂಥ ಅನೇಕ ಪಂಪು ಯೋಜನೆಗಳಿಂದ ಘಟ್ಟದುದ್ದಕ್ಕೂ ಮತ್ತು ನದಿಗಳುದ್ದಕ್ಕೂ ಉತ್ಪಾದಿಸಲಾದ ವಿದ್ಯುತ್ತನ್ನು ರೈತರಿಗೆ ಕೃಷಿ ಕಾರ್ಯಗಳಿಗೆ ಮತ್ತು ತುಂತುರು ನೀರಾವರಿಗೆ, ಒದಗಿಸಬಹುದು. ಇದರಿಂದ ಘಟ್ಟದ ಇನ್ನೊಂದು ಬದಿಗೆ ಇರುವ ಜನರು ಮತ್ತು ಕೃಷ್ಣಾ, ಕಾವೇರಿ ಕೊಳ್ಳದ ಜನರು ಹಗಲೂ ಕೂಡಾ ವಿದ್ಯುತ್ ಉಪಯೋಗಿಸಬಹುದು.

ಇದೇ ರೀತಿಯ ಸನ್ನಿವೇಶ ಮತ್ತು ಭೌಗೋಳಿಕ ಲಕ್ಷಣಗಳಿರುವ ಅಂದರೆ ಮಹಾರಾಷ್ಟ್ರ ಮತ್ತು ಕೇರಳದಲ್ಲಿ ಪಶ್ಚಿಮ ತೀರಪ್ರದೇಶ, ಆಂಧ್ರ ಮತ್ತು ತಮಿಳುನಾಡುಗಳಲ್ಲಿ ಪೂರ್ವ ತೀರಪ್ರದೇಶಗಳಲ್ಲಿ ಮೇಲೆ ವಿವರಿಸಿರುವ ಸನ್ನಿವೇಶ ಮತ್ತು ಭೌಗೋಳಿಕ ಲಕ್ಷಣಗಳಿರುವುದರಿಂದ ಈ ವಿಧಾನಗಳನ್ನು ಅನುಸರಿಸಿದರೆ ಅನುಕೂಲವುಂಟಾಗಿ ನೀರಿನ ಬವಣೆ ಕಡಿಮೆ ಮಾಡಬಹುದು. ಇದಕ್ಕಾಗಿ ಇನ್ನೂ ಒಂದು ಸಲಹೆ ಏನೆಂದರೆ ಈ ಐದೂ ರಾಜ್ಯಗಳೂ ಸೇರಿ ನೀರು ಮತ್ತು ವಿದ್ಯುಚ್ಛಕ್ತಿ ಸಮಿತಿಯನ್ನು ರಚಿಸಿಕೊಂಡರೆ ಜಲ ಮತ್ತು ವಿದ್ಯುಚ್ಛಕ್ತಿ ಕ್ಷೇತ್ರಗಳಲ್ಲಿ ಧಾರಾಳವಾಗಿರುವ ಸ್ವಾಭಾವಿಕ ಸಂಪನ್ಮೂಲಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳಲು ಸಾಧ್ಯವಾಗುತ್ತದೆ. ಆಗ ಅನೇಕ ವರ್ಷಗಳವರೆಗೆ ನೀರಿನ ಕೊರತೆ ಕಂಡುಬರುವುದಿಲ್ಲ. ಅದರಿಂದಾಗಿ ನೀರಿಗಾಗಿ ಘರ್ಷಣೆಯೂ ಇರುವುದಿಲ್ಲ. ಯಾವ ರಾಜ್ಯದಲ್ಲಿ ನೀರು ಮತ್ತು ವಿದ್ಯುಚ್ಛಕ್ತಿ ಹೆಚ್ಚಾಗಿರುತ್ತದೆಯೋ ಅವು ಕಡಿಮೆ ಇರುವ ರಾಜ್ಯಕ್ಕೆ ಒಪ್ಪಂದದ ರೀತಿಯಲ್ಲಿ ಸರಬರಾಜು ಮಾಡಬಹುದು. ಜನಸಂಖ್ಯೆಯು ೨೦೫೦ರ ಹೊತ್ತಿಗೆ ಸ್ಥಿರಗೊಂಡರೆ (ಇದನ್ನು ಪ್ರಕ್ಷೇಪಣದಲ್ಲಿ ಅಂದಾಜಿಸಲಾಗಿದೆ) ಮೇಲೆ ಹೇಳಿರುವ ಅಭಿವೃದ್ಧಿ ವಿಧಾನಗಳಿಂದ ಯಾವುದೇ ಕಾಲದಲ್ಲಿ ಇವುಗಳ ಕೊರತೆಯು ಉಂಟಾಗುವುದಿಲ್ಲ.

ದಕ್ಷಿಣದ ನೀರು ಮತ್ತು ವಿದ್ಯುತ್ ಸಮಿತಿಯನ್ನು ಈ ಐದೂ ರಾಜ್ಯಗಳನ್ನು ಸೇರಿಸಿ ರಚಿಸಿ ಆ ರಾಜ್ಯಗಳ ಮುಖ್ಯಮಂತ್ರಿಗಳು ಅದರಲ್ಲಿ ಸದಸ್ಯರಾಗಿದ್ದು, ಅಧ್ಯಕ್ಷರಾಗಿ ದೇಶದ ಪ್ರಧಾನಮಂತ್ರಿ ಇರಬೇಕು. ಎಲ್ಲರ ಹಿತದೃಷ್ಟಿಯಿಂದ ಮತ್ತು ಏನಾದರೂ ಭಿನ್ನಾಭಿಪ್ರಾಯಗಳು ಬಂದರೆ ಪರಿಹರಿಸಲು ಪ್ರಧಾನಿಯು ಅಧ್ಯಕ್ಷರಾಗಿರುವುದು ಒಳ್ಳೆಯದು. ಈ ಸಮಿತಿಯು ದಕ್ಷಿಣದ ಮಂಡಳಿಗಳಿಗೆ ಅಥವಾ ನದೀ ಮುಖಜ ಭೂಮಿಯ ಪ್ರಾಧಿಕಾರಿಗಳಿಗೆ ನದಿ ಮಂಡಳಿಗಳ ಕಾಯ್ದೆಯಂತೆ ಸಂಪನ್ಮೂಲಗಳನ್ನು ನಿರ್ವಹಿಸುವುದಕ್ಕೆ ಮತ್ತು ಅಂತರರಾಜ್ಯ ಜಲವಿವಾದಗಳ ಕಾಯ್ದೆ (೧೯೫೬)ಯ ಅಡಿಯಲ್ಲಿ ಈಗ ನೋಡಿರುವಂತೆ ಬಹಳ ವೆಚ್ಚದ ಮತ್ತು ಅತೃಪ್ತಿಕರ ನ್ಯಾಯಮಂಡಳಿಗಳ ರಚನೆಯನ್ನು ತಪ್ಪಿಸಬಹುದಾಗಿದೆ.

## ಪಂಪು ಮಾಡಿದ ನೀರಿನ ದಾಸ್ತಾನು ಯೋಜನೆಗಳಿಗೆ ಹಣಕಾಸಿನ ಹೂಡಿಕೆ :

ಮುಂಬರುವ ವರ್ಷಗಳಲ್ಲಿ ಈಗಿರುವಂತೆ ಸರಕಾರಗಳಿಗೆ ಹಣಕಾಸಿನ ಕೊರತೆ ಮುಂದುವರಿಯುವುದರಿಂದ ಮೇಲೆ ಹೇಳಿರುವ ಕಾರ್ಯಕ್ರಮಕ್ಕೆ ಸಾರ್ವಜನಿಕ-ಖಾಸಗಿ ಸಹಭಾಗಿತ್ವದೊಂದಿಗೆ ಜನರ ಗುರಿಯಿರುವ ಕಾರ್ಯಗಳನ್ನು ಕೈಗೊಂಡು ಸರಕಾರದ ನಿರ್ವಹಣೆಯನ್ನು ಕಡಿಮೆ ಮಾಡಿ ಖಾಸಗಿ ಹೂಡಿಕೆ ಮತ್ತು ನಿರ್ವಹಣೆಗೆ ಬಿಡಬೇಕು. ಕರ್ನಾಟಕದಲ್ಲಿನ ಆಗುಂಬೆ ಘಟ್ಟಗಳು, ನೇತ್ರಾವತಿ ಕೊಳ್ಳದಲ್ಲಿ ಮೈದಾಲಿ, ಕುಮಾರಧಾರ, ವಾರಾಹಿ, ಅಘನಾಶಿನಿ ಮುಂತಾದವುಗಳನ್ನು ಇಂತಹ ಪಂಪು ಮಾಡಿದ ದಾಸ್ತಾನು ಯೋಜನೆಗಳನ್ನು ಸುಲಭವಾಗಿ ಮಾಡಬಹುದು. ಇವುಗಳನ್ನು ೩೦ ರಿಂದ ೩೫ ವರ್ಷಗಳವರೆಗೆ ಖಾಸಗಿಯವರಿಗೆ ಗೇಣಿಗೆ ಕೊಡಬಹುದು. ಇದಕ್ಕಾಗಿ ಒಂದು ಒಪ್ಪಂದವನ್ನು ಮಾಡಿಕೊಂಡು ಅವುಗಳಲ್ಲಿ ಆ ಯೋಜನೆಯ ಎಲ್ಲಾ ಆಗುಹೋಗುಗಳನ್ನು ವಿವರಿಸಬೇಕು. ಅವುಗಳು ಅನ್ವೇಷಣೆ, ಯೋಜನೆ, ಅನುಷ್ಠಾನ ಮತ್ತು ಯೋಜನೆಗಳನ್ನು ಪ್ರಾರಂಭಿಸಿ ನಡೆಸುವುದು ಮತ್ತು ಮಳೆಗಾಲದಲ್ಲಿ ನೀರು ಸಂಗ್ರಹಣೆ ಮತ್ತು ಹೆಚ್ಚು ನೀರಿರುವ ಕಾಲದಲ್ಲಿ ಅತಿಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಮಾಡಬೇಕು.

ವಿದ್ಯುತ್ ಮತ್ತು ನೀರಿನ ಕೊಳ್ಳುವ ಒಪ್ಪಂದದಲ್ಲಿ ಸರಕಾರವು ನೀರು ಮತ್ತು ವಿದ್ಯುತ್ತನ್ನು ಯೂನಿಟ್ ದರದಲ್ಲಿ ಕೊಂಡುಕೊಂಡು ಅವನ್ನು ಸಂಘಗಳು/ಫೆಡರೇಷನ್‌ಗಳಿಗೆ ಮಾರಾಟ ಮಾಡಬಹುದು. ಉತ್ಪತ್ತಿಯಾದ ಹೆಚ್ಚು ವಿದ್ಯುತ್ ಅನ್ನು ಕೈಗಾರಿಕೆಗಳಿಗೆ ಮಾರಬಹುದು.

ಈ ಯೋಜನೆಗಳನ್ನು ಅನುಷ್ಠಾನಗೊಳಿಸುವ ಕಂಪೆನಿಗಳು ವಿಧಿಸುವ ಬೆಲೆಯನ್ನು ದೊಡ್ಡ ಪ್ರಮಾಣದ ಕೊಳ್ಳುವಿಕೆಗೆ ವಾರ್ಷಿಕವಾಗಿ ಇಳಿಮುಖಗೊಳಿಸುತ್ತಾ ಹೋಗುವಂತೆ ಒಪ್ಪಂದವನ್ನು ಮಾಡಿಕೊಳ್ಳಬೇಕು. ಮತ್ತು ೩೦-೩೫ ವರ್ಷಗಳ ಅಂತ್ಯದಲ್ಲಿ ಅದು ಏನೂ ಇಲ್ಲದಂತೆ ಆಗುತ್ತದೆ. ಇಷ್ಟೊತ್ತಿಗೆ ಖಾಸಗಿ ಕಂಪನಿಗಳು ತಮ್ಮ ಬಂಡವಾಳ ಹೂಡಿಕೆಗೆ ತುಂಬಾ ಲಾಭವನ್ನು ಮಾಡಿಕೊಂಡಿರುತ್ತವೆ. ಲೀಸ್ ಅವಧಿ ಮುಗಿದ ಮೇಲೆ ಈ ಯೋಜನೆಯನ್ನು ಸರಕಾರಕ್ಕೆ ಮುಫತ್ತಾಗಿ ಕೊಡಬೇಕು ಮತ್ತು ಅಂತಹುದೇ ಇನ್ನೊಂದು ಯೋಜನೆಯನ್ನು ಮಾಡಲು ಅವಕಾಶ ನೀಡಬೇಕು. ಇದರ ಕಾರ್ಯ ಮತ್ತು ನಿರ್ವಹಣೆಯನ್ನು ಸರಕಾರಕ್ಕೆ ಮುಫತ್ತಾಗಿ ವರ್ಗಾಯಿಸಬೇಕು. ಸರಕಾರವು ತಾನೇ ನಿರ್ವಹಿಸಬಹುದು ಅಥವಾ ನಿರ್ವಹಣಾ ಸಂಸ್ಥೆಗಳನ್ನು ನೇಮಕ ಮಾಡಿ ಅದನ್ನು ದಳ್ಳಾಳಿ ಒಪ್ಪಂದದಂತೆ ನೀಡಬಹುದು.

ಪ್ರಾರಂಭದಲ್ಲಿ ಇದನ್ನು ಖಾಸಗಿ ಕಂಪೆನಿಗೆ ವಹಿಸಿಕೊಟ್ಟರೆ ಸರಕಾರದ ಜವಾಬ್ದಾರಿ ತೀರಿಹೋಗುವುದಿಲ್ಲ. ಅದರ ಮೇಲ್ವಿಚಾರಣೆ ಸುರಕ್ಷತೆಯ ಜಾಗ್ರತೆ ಮತ್ತು ಇತರ ನಿಯಂತ್ರಣ ಕ್ರಮಗಳನ್ನು ಅನುಸರಿಸಬೇಕು. ಘಾಟ್ಗರ್ ದಾಸ್ತಾನು ಯೋಜನೆಯು ಘಟ್ಟ ಪ್ರದೇಶದಲ್ಲಿದ್ದು ಕಾರ್ಯನಡೆಸುತ್ತಿದೆ ಮತ್ತು ಮಹಾರಾಷ್ಟ್ರದಲ್ಲಿನ ಭೀರಾ ಯೋಜನೆಯು ಈಗ ತಾನೇ ಮುಗಿದಿದ್ದು, ಈ ಯೋಜನೆಗಳು ಒಳ್ಳೆಯ ಉದಾಹರಣೆಗಳು. ಯುಗೋಸ್ಲಾವಿಯಾ, ಜಪಾನ್ ಮತ್ತು ಇನ್ನೂ ಅನೇಕ ದೇಶಗಳಲ್ಲಿ ಪಂಪು ದಾಸ್ತಾನು ಯೋಜನೆಯ ತಂತ್ರಜ್ಞಾನವನ್ನು ಹೆಚ್ಚು ನೀರಿರುವ ಕೆಳಗಿನ ಮಟ್ಟದಿಂದ ನೀರು ಕಡಿಮೆ ಇರುವ ಎತ್ತರದ ಪ್ರದೇಶಗಳಿಗೆ ಪಂಪು ಮಾಡಲಾಗುತ್ತಿದೆ ಮತ್ತು ಹೆಚ್ಚು ವಿದ್ಯುತ್ ಪ್ರವಾಹವನ್ನು ತಯಾರಿಸಿದ ವಿದ್ಯುತ್‌ಗೆ ಹೆಚ್ಚು ಬೆಲೆಯಿದ್ದು, ದೇಶಗಳಲ್ಲಿ ಕೈಗಾರಿಕೆಗಳು ಅಭಿವೃದ್ಧಿಗೊಂಡಾಗ ಉಪಯೋಗಕ್ಕೆ ಬರುತ್ತದೆ. ಪಂಪು ದಾಸ್ತಾನು ಯೋಜನೆಯಲ್ಲಿ ಚೀನಾವು ಈಗ ಪ್ರಥಮಸ್ಥಾನದಲ್ಲಿದೆ. ಇತ್ತೀಚೆಗೆ ದಕ್ಷಿಣ ಆಫ್ರಿಕಾದಲ್ಲಿನ ಕೇಪ್‌ಟೌನ್‌ನ ಹತ್ತಿರ ೪೦೦ ಮೆ.ವಾ.ನ ಪಾಮೆಟ್ ಪಂಪು ದಾಸ್ತಾನು ಯೋಜನೆಯಿಂದ ನೀರಿನ ಕೊರತೆ ಇರುವ ಎತ್ತರದ ಪ್ರಸ್ಥ ಭೂಮಿಗೆ ನೀರು ಸರಬರಾಜು ಮಾಡಲು ಉಪಯೋಗಿಸಲಾಗುತ್ತಿದ್ದು ಮತ್ತು ಇದರಿಂದ ಉತ್ಪತ್ತಿಯಾದ ಹೆಚ್ಚಿನ ವಿದ್ಯುತ್‌ಅನ್ನು ವಿದ್ಯುತ್ ಗ್ರಿಡ್ಡನ್ನು ಸ್ವೀಕರಿಸಲು ಉಪಯೋಗಿಸಲಾಗಿದ್ದು, ಪರಿಸರದ ಬಗ್ಗೆ ಜಾಗರೂಕತೆ ತೆಗೆದುಕೊಂಡಿರುವ ಈ ಇಂಜಿನಿಯರಿಂಗ್ ತಂತ್ರಜ್ಞಾನದ ಶ್ರೇಷ್ಠತೆಗೆ ಯುನೆಸ್ಕೊ ಶಿಫಾರಸು ಮಾಡಿದ ೨೦೦೩ರ ಅಂತರರಾಷ್ಟ್ರೀಯ ಹೈಡ್ರಲಾಜಿಕಲ್ ಸಂಘದ ಪ್ರಶಸ್ತಿ ದೊರೆಯಿತು.

## ಉತ್ತರ ಭಾರತಕ್ಕೆ ತಂತ್ರಕೌಶಲ್ಯ :

ಉತ್ತರ ಭಾರತಕ್ಕೆ ತಂತ್ರಕೌಶಲ್ಯ ರಚಿಸಬೇಕಾದರೆ ಹಿಮಾಲಯದ ಕೆಳಗೆ ಪಶ್ಚಿಮದಿಂದ ಪೂರ್ವಕ್ಕೆ ವಿಶಾಲವಾದ, ನಿರಂತರವಾದ, ಆಳವಾದ ಜಲವಾಹಕವಿರುವ ಇಡೀ ಗಂಗಾನದಿಯ ಮೈದಾನದ ಪ್ರದೇಶದಲ್ಲಿ ಬರಿದಾಗದಿರುವ ಅಂತರ್ಜಲ ಸಾಮರ್ಥ್ಯವನ್ನು ತಿಳಿದುಕೊಳ್ಳಬೇಕು. ಇದು ವಿಶ್ವದಲ್ಲೇ ಅತಿದೊಡ್ಡ ಜಲವಾಹಕವೆಂದರೆ ಉತ್ಪ್ರೇಕ್ಷೆಯಲ್ಲ. ಇದರ ಹೆಚ್ಚಿನ ಪ್ರದೇಶಗಳಲ್ಲಿ ಜಲವಾಹಕವು

ಒಂದು ಮೈಲಿ ಆಳಕ್ಕಿಂತ ಹೆಚ್ಚಾಗಿ ಹೋಗಿರುತ್ತದೆ. ಇಷ್ಟು ಅಗಾಧವಾದ ಜಲವಾಹಕಕ್ಕೆ ನಿರಂತರವಾಗಿ ಯಾವಾಗಲೂ ಹರಿಯುವ ಹಿಮಾಲಯದ ನದಿಗಳು ನೀರನ್ನು ಒದಗಿಸುತ್ತವೆ. ಇವುಗಳು ಅಂತಿಮವಾಗಿ ಬಂಗಾಳ ಕೊಲ್ಲಿಯನ್ನು ಸೇರುತ್ತವೆ. ಒಂದು ಪ್ರಶ್ನೆ ಉದ್ಭವಿಸುವದೇನೆಂದರೆ ಇಂತಹ ಸಾಮರ್ಥ್ಯವಿರುವಾಗ ಅಡ್ಡಗಟ್ಟೆಗಳು ಮತ್ತು ನೀರು ಸಂಗ್ರಹಣದ ಅಣೆಕಟ್ಟುಗಳನ್ನು ನಿರ್ಮಿಸಿ ಬಹಳ ಉದ್ದವಾದ ನಾಲಾ ವ್ಯವಸ್ಥೆಯನ್ನು ಮಾಡಿ ಮೇಲ್ಮೈ ನೀರಾವರಿ ಮಾಡಿ ಇದರಿಂದ ಕ್ಷಾರೀಯತೆ ಮತ್ತು ನಿರಂತರವಾಗಿ ಜೌಗು ಉಂಟಾಗುವಂತೆ ಮಾಡಬೇಕೆ? ಇಂತಹ ಕಡೆಗಳಲ್ಲಿ ಕಾರ್ಯತಃ ಮೇಲ್ಮೈ ನೀರಾವರಿ ಪದ್ಧತಿಯೇ ಹೆಚ್ಚು ಅಭ್ಯಾಸದಲ್ಲಿದೆ. ಇದರಿಂದಾಗುವ ಮೇಲ್ಮೈ ನೀರಾವರಿಯ ದೋಷಗಳು ಮತ್ತು ನಕಾರಾತ್ಮಕ ಪರಿಣಾಮವು ಅಂದರೆ ಜೌಗುಂಟಾಗುವುದು ಮತ್ತು ಕ್ಷಾರೀಯತೆಯು ಸ್ಪಷ್ಟವಾಗಿ ಕಾಣುತ್ತದೆ. ಉತ್ತರ ಪ್ರದೇಶದಲ್ಲಿ ಶೇ. ೭೫ರಷ್ಟು ನೀರಾವರಿ ಜಮೀನು ಜೌಗು ಮತ್ತು ಕ್ಷಾರೀಯವಾಗುತ್ತಿವೆ. ಇದು ಉತ್ಪಾದಕತೆಯನ್ನು ಕೊಲ್ಲುತ್ತಿದೆ. ಒಂದು ಕಾಲದಲ್ಲಿ ಫಲವತ್ತಾಗಿರುವ ಜಮೀನು ಈಗ ಹಾಳಾಗುತ್ತಿದೆ.

ಸುಮಾರು ೧೫೦ ವರ್ಷಗಳ ಹಿಂದೆ ಭಾರತಕ್ಕೆ ದೊಡ್ಡ ಪ್ರಮಾಣದಲ್ಲಿ ಕ್ಷಾಮ ಉಂಟಾಗುತ್ತಿದ್ದಾಗ ಮೊಘಲರು ಪ್ರಾರಂಭಿಸಿದ ಮೇಲ್ಮೈ ನೀರಾವರಿ ಪದ್ಧತಿಯನ್ನು ಬ್ರಿಟಿಷರು ಮುಂದುವರಿಸಿ ಅದನ್ನು ಹೆಚ್ಚು ಮಾಡಿದರು. ಆ ಕಾಲದಲ್ಲಿ ಅಂತರ್ಜಲ ನೀರಿನ ಮಟ್ಟವು ತುಂಬಾ ಮೇಲೆ ಇದ್ದು, ಫಲವತ್ತಾದ ಮೈದಾನ ಪ್ರದೇಶಗಳಲ್ಲಿ ಹೆಚ್ಚು ಉತ್ಪಾದನೆಯಾಗಿ ಕ್ಷಾಮದ ಪರಿಣಾಮಗಳನ್ನು ಬಹಳ ಮಟ್ಟಿಗೆ ಕಡಿಮೆ ಮಾಡಿದ್ದವು. ಆದರೆ ಮೇಲ್ಮೈ ನೀರಾವರಿ ಪದ್ಧತಿಯು ವರ್ಷಗಳುರುಳಿದಂತೆ ಇದು ಒಂದು ಶಾಪವಾಗಿ ಪರಿಣಮಿಸಿ ಜೌಗು ಮತ್ತು ಕ್ಷಾರದ ಜಮೀನು ಹೆಚ್ಚಾಗಲು ಕಾರಣವಾಯಿತು. ಈಗ ಇದನ್ನು ಸಂಪೂರ್ಣವಾಗಿ ನಿಲ್ಲಿಸಿ ಹಳೆಯ ಪದ್ಧತಿಗೇ ಶರಣಾಗಬೇಕೆಂಬ ಅಭಿಪ್ರಾಯ ಮೂಡಿಬರುತ್ತಿದೆ. ಅದಕ್ಕಾಗಿ ಇನ್ನು ಮುಂದೆ ಗಂಗಾ ಮುಖಜ ಭೂಮಿಯಲ್ಲಿ ಅಂತರ್ಜಲ ನೀರಾವರಿಯನ್ನು ಹೆಚ್ಚಾಗಿ ಜಾರಿಗೆ ತರುವುದು ಒಳಿತಾಗಿದೆ. ಈ ದೊಡ್ಡ ಜಲವಾಹಕವನ್ನು ಮೇಲ್ಮೈ ಮತ್ತು ಉಪ ಮೇಲ್ಮೈ ಹರಿವುಗಳಿಂದ ನಿರಂತರವಾಗಿ ಭರ್ತಿಯಾಗುವಂತೆ ಮಾಡಿ ಅಂತರ್ಜಲ ನೀರಿನ ಉಪಯೋಗವು ಕಮ್ಮಿಯಾಗದಂತೆ ಮಾಡಬೇಕು.

ಎಲ್ಲಾ ಕಡೆಯಲ್ಲಿಯೂ ಒಂದು ನಿರ್ದಿಷ್ಟ ಮಟ್ಟದಲ್ಲಿ ನೀರಿನ ಮಟ್ಟವು ಇರುವಂತೆ ಮಾಡಲು ಅಂತರ್ಜಲ ನೀರಿನ ಹೊರ ತೆಗೆಯುವಿಕೆ ಮತ್ತು ಅದೇ ಸಮಯದಲ್ಲಿ ವಿರುದ್ಧ ಕ್ರಮದಲ್ಲಿ ಅಂತರ್ಜಲ ಹೊರತೆಗೆಯುವಿಕೆಯನ್ನು ನೀರಿನ ಮಟ್ಟವು ಆಳಕ್ಕೆ ಹೋದ ಕಡೆ ಅಂದರೆ ಗಂಗಾ ನದಿ ಮೈದಾನದುದ್ದಕ್ಕೂ ಮಾಡುವುದು ಒಳ್ಳೆಯದು. ಒಂದು ನಿರ್ದಿಷ್ಟವಾದ ವಿಭಾಗದಲ್ಲಿ ಹಿಮಾಲಯದ ಬುಡದಿಂದ ದೊಡ್ಡ ವ್ಯಾಸದ ವಿರುದ್ಧ ಕ್ರಮದ ಕೊಳವೆ ಬಾವಿಗಳನ್ನು ಪೂರ್ವದಿಂದ ಪಶ್ಚಿಮದವರೆಗೆ ಮಾಡಬೇಕು. ಈ ಬಾವಿಗಳನ್ನು ಹಿಮಾಲಯ ನದಿಗಳ ಎರಡೂ ದಡದಲ್ಲಿ ತುಂಬಾ ಹೆಚ್ಚಾಗಿ ತೆಗೆಯಬೇಕು. ಸ್ವಲ್ಪ ಭಾಗವನ್ನು ಹಿಮಾಲಯ ನದಿಗಳ ಎರಡೂ ದಡಗಳಲ್ಲಿರುವ ಸಣ್ಣ ಅಣೆಕಟ್ಟುಗಳು ಮತ್ತು ಸಣ್ಣ ಮಾರ್ಗ ಪಲ್ಲಟ ಕಟ್ಟಡಗಳ ಮೂಲಕ ಒಂದು ನಿಯಂತ್ರಿತ ರೀತಿಯಲ್ಲಿ ಜಲವಾಹಕಗಳಿಗೆ ನೀರು ನಿರಂತರವಾಗಿ ಹರಿಯುವಂತೆ ಮಾಡಬಹುದು.

ಇಂತಹ ವ್ಯವಸ್ಥೆಯಿಂದ ಪ್ರವಾಹ ನೀರನ್ನೂ ಸೇರಿಸಿ ಹೆಚ್ಚಿನ ನೀರನ್ನು ವಿರುದ್ಧ ಕ್ರಮದ ಕೊಳವೆ ಬಾವಿಗಳಿಗೆ ಹರಿಯುವಂತೆ ಮಾಡಿ ಇದೇ ಗಂಗಾ ಬಯಲುಭೂಮಿಗೆ ನೀರು ದೊರೆಯುವಂತೆ ಮಾಡಬಹುದು. ಈ ರೀತಿಯಾಗಿ ಪಡೆಯಲಾದ ಜಲವಾಹಕ ಸಾಮರ್ಥ್ಯವನ್ನು ನೀರಾವರಿಗೆ, ಕುಡಿಯುವ ನೀರಿನ ಸರಬರಾಜಿಗೆ ಮತ್ತು ಕೈಗಾರಿಕಾ ಅಗತ್ಯಗಳಿಗೆ ಇಡೀ ಪ್ರದೇಶದಲ್ಲಿ ಉಪಯೋಗಕ್ಕೆ ಬರುವಂತೆ ಮಾಡಬಹುದು. ಹಾಲಿ ಇರುವ ಮೇಲ್ಮೈ ನೀರಾವರಿ ಪದ್ಧತಿಯನ್ನು ನಿಧಾನವಾಗಿ ತೆಗೆದುಹಾಕಿ ಮಣ್ಣಿನ ಫಲವತ್ತು ಉಳಿಯುವಂತೆ ಮಾಡಿ ಉತ್ಪಾದನೆಯನ್ನು ಹೆಚ್ಚಿಸಬಹುದು. ಇದರಿಂದ ಹೆಚ್ಚುತ್ತಿರುವ ಜನಸಂಖ್ಯೆಯ ಆಹಾರದ ಅಗತ್ಯಗಳನ್ನು ಪೂರೈಸಬಹುದಾಗಿದೆ. ಅಗಲೂ ಸ್ವಲ್ಪ ಮೇಲ್ಮೈ ನೀರನ್ನು ಬರಗಾಲದಲ್ಲಿ ಉಪಯೋಗಿಸಿಕೊಂಡು ಅಂದರೆ ನೀರಿನಲ್ಲಿ ಮುಳುಗಿರುವ ಜಮೀನನ್ನು ಉತ್ಪಾದನೆಗೆ ದೊರೆಯುವಂತೆ ಮಾಡಬಹುದು. ಪ್ರವಾಹದ ಹರಿವಿನ ಪರಿಣಾಮಗಳನ್ನು ಕಡಿಮೆ ಮಾಡಲು, ಆ ಪ್ರದೇಶದ ಅಂದರೆ ಹಿಮಾಲಯ ಪ್ರದೇಶದ ನದಿ ನೀರು ಹರಿಯುವೆಡೆಯಲ್ಲಿ ಉಪಗ್ರಹ ಇಮೇಜರಿಯನ್ನು ಬೇಸಿಗೆ ಕಾಲದಲ್ಲಿ ಮತ್ತು ಪ್ರವಾಹ ಬರುವ ಕಾಲಗಳೆರಡರಲ್ಲಿಯೂ ತಯಾರಿಸಬೇಕು. ಸಂಗಮದ ಜಾಗದಲ್ಲಿ ನೀರಿನ ಹರಿಯುವ ವೇಗವನ್ನು ಅತಿ ಕಡಿಮೆಗೊಳಿಸಿವಾಗ ಮೆಕ್ಕಲು ಮಣ್ಣು ಮತ್ತು ಇತರ ವಸ್ತುಗಳು ಬಂದು ಸೇರುವಾಗ ನದಿ ಮುಖಜಭೂಮಿ ಉಂಟಾಗುತ್ತದೆ. ವರ್ಷಂಪ್ರತಿ ಈ ಶೇಖರಣೆಗಳು ಹೆಚ್ಚುತ್ತಾ ಹೋಗಿ ನೀರು ನದಿಯ ಮೂಲದ ಕಡೆಗೇ ಹರಿಯುತ್ತಾ ಹೋಗುತ್ತದೆ. ಆಗ ಹಿಮಾಲಯ ನದಿಗಳ ಅಡಿಪಾಯದ ಮಟ್ಟವು

ಏರುತ್ತಾ ಹೋಗಿ ಪ್ರವಾಹ ಉಂಟಾಗುತ್ತವೆ. ಅದರಿಂದ ರಕ್ಷಣೆಯ ದಂಡೆಗಳನ್ನು ವರ್ಷಂಪ್ರತಿ ಕಟ್ಟುತ್ತಿದ್ದರೂ ಅವು ಕೊಚ್ಚಿ ಹೋಗುವ ಸಂಭವ ಜಾಸ್ತಿ. ಈ ಪರಿಸ್ಥಿತಿಯನ್ನು ಹೆಚ್ಚಾಗಿ ಬಿಹಾರದಲ್ಲಿ ಕಾಣಬಹುದು. ಅಲ್ಲಿ ಪ್ರವಾಹವನ್ನು ತಡೆಯಲು ಬಹುಸಂಖ್ಯೆಯ ಅಣೆಕಟ್ಟುಗಳನ್ನು ನಿರ್ಮಿಸಲಾಗಿದೆ.

ಆದರೂ ಈ ಪ್ರವಾಹದ ಅಣೆಕಟ್ಟೆಗಳು ಶಾಶ್ವತ ಪರಿಹಾರವನ್ನು ಒದಗಿಸಿಲ್ಲ. ಗಂಗಾನದಿ ಬಯಲಿನಲ್ಲಿ ಕೋಟ್ಯಾಂತರ ರೂಪಾಯಿಗಳನ್ನು ಇದಕ್ಕಾಗಿ ವೆಚ್ಚ ಮಾಡಲಾಗಿದೆ. ಪ್ರವಾಹ ರಕ್ಷಣೆ ಮತ್ತು ಪರಿಹಾರ ಕಾರ್ಯಗಳಿಗೆ ಸುಮಾರು ೬೦,೦೦೦ ಕೋಟಿ ರೂ.ಗಳನ್ನು ವೆಚ್ಚ ಮಾಡಲಾಗಿದೆ ಎಂದು ಅಂದಾಜು ಮಾಡಲಾಗಿದೆ. ಇಷ್ಟೆಲ್ಲ ವೆಚ್ಚ ಮಾಡಿದ್ದರೂ ಪ್ರವಾಹವು ನಿಯಂತ್ರಣಕ್ಕೆ ಬಂದಿಲ್ಲವೆಂಬುದು ವಾಸ್ತವಾಂಶ.

ಮುಖಜಭೂಮಿಯ ಪ್ರದೇಶದಲ್ಲಿ ಅದರಲ್ಲಿಯೂ ವಿಶೇಷವಾಗಿ ಗಂಗಾ-ಬ್ರಹ್ಮಪುತ್ರಾ-ಮೇಘ್ನಾಗಳಲ್ಲಿ ಬಂದು ಬೀಳುವ ಮೆಕ್ಕಲು ಮಣ್ಣನ್ನು ತೆಗೆಯುವ ಒಂದು ಯಾಂತ್ರಿಕತೆಯನ್ನು ಅಭಿವೃದ್ಧಿಪಡಿಸಿದರೆ ನೀರು ನದಿಯ ಮೂಲದ ಕಡೆಗೆ ಹರಿಯುವುದನ್ನು ತಡೆಯಬಹುದು. ಮುಖಜಭೂಮಿಯಲ್ಲಿನ ಹೆಚ್ಚಿನ ನೀರು ವೇಗದಿಂದ ನದಿ ದಂಡೆಗಳನ್ನು ಆಳ ಮಾಡುತ್ತದೆ. ಮಾನವ ನಿರ್ಮಿತ ಕಾಲುವೆಗಳಲ್ಲಿನ ತಡೆಗಳನ್ನು ತೆಗೆಯುವುದಕ್ಕೆ ಇದು ಸಮನಾಗಿರುತ್ತದೆ. ಇಂತಹ ಒಂದು ಪರಿಸ್ಥಿತಿ ನಿರ್ಮಾಣವಾದರೆ ನಾಲೆಗಳು ಆಳಗೊಂಡು ಪ್ರವಾಹವನ್ನು ನಿಯಂತ್ರಿಸಬಹುದು. ಹಾಗೆಯೇ ಪ್ರವಾಹದ ಇತರ ದೋಷಗಳನ್ನು ತಡೆಯಬಹುದು. ಇಲ್ಲಿರುವ ಪ್ರಶ್ನೆಯೆಂದರೆ ಈ ಮುಖಜ ಭೂಮಿಯ ಪ್ರದೇಶಗಳಲ್ಲಿ ಈ ದೊಡ್ಡ ತಡೆಗಳನ್ನು ಹೇಗೆ ತೆಗೆಯುವುದು ಎಂಬುದಾಗಿದೆ. ಒಂದು ಅಸಾಂಪ್ರದಾಯಿಕ ಮಾರ್ಗವೆಂದರೆ ಈ ಮುಖಜ ಭೂಮಿಯಲ್ಲಿನ ಸಂಗ್ರಹಣೆಗಳನ್ನು ಪ್ರವಾಹದ ಕಾಲದಲ್ಲಿ ಸಿಡಿಯುವಂತೆ ಮಾಡಿ ಆ ಸಂಗ್ರಹಣೆಯನ್ನು ಬಂಗಾಳ ಕೊಲ್ಲಿಗೆ ಹರಿಯುವಂತೆ ಮಾಡುವುದು. ಇದಕ್ಕಾಗಿ ಆ ಪ್ರದೇಶದಲ್ಲಿ ಪ್ರವಾಹ ಕಾಲದಲ್ಲಿ ಮತ್ತು ಪ್ರವಾಹವಿಲ್ಲದ ಕಾಲದಲ್ಲಿ ಉಪಗ್ರಹ ಇಮೇಜರಿ ಅಧ್ಯಯನಗಳನ್ನು ಮಾಡಿ ಸಿಡಿಸುವ ಸಾಧನಗಳನ್ನು ಈ ಪ್ರದೇಶದಲ್ಲಿ ಸೂಕ್ತ ಸ್ಥಳದಲ್ಲಿ ಸ್ಥಾಪಿಸಬೇಕು. ಅದನ್ನು ಪ್ರವಾಹ ಕಾಲದಲ್ಲಿ ಎಲೆಕ್ಟ್ರಾನಿಕ್ಸ್ ಸಾಧನಗಳ ಮೂಲಕ ಸಿಡಿಯುವಂತೆ ಮಾಡಬೇಕು. ಆಗ ಮೆಕ್ಕಲು ಮಣ್ಣು ಮತ್ತು ಕಸಕಡ್ಡಿಗಳು ಸಮುದ್ರದೊಳಕ್ಕೆ ಆಳವಾಗಿ ಹೋಗುವಂತೆ ಮಾಡಬಹುದು. ಇದರ ಉದ್ದೇಶ ನದಿಗಳ ಮುಖಜ ಭೂಮಿಯಲ್ಲಿರುವ ಮಣ್ಣು ಮತ್ತು ಕೊಳೆಯನ್ನು ತೆಗೆಯುವುದಾಗಿರುತ್ತದೆ. ನದಿಯ ಗಾತ್ರವನ್ನನುಸರಿಸಿ ಮತ್ತು ಮುಖಜ ಭೂಮಿಯ ರಚನೆಯನ್ನನುಸರಿಸಿ ತುಂಬಾ ಬೃಹತ್ ಪ್ರಮಾಣದಲ್ಲಿ ಈ ಕಾರ್ಯ ಆಗಬೇಕು. ಇದಕ್ಕಾಗಿ ಪ್ರಾರಂಭಿಕ ಪ್ರಯೋಗಗಳನ್ನು ಮಾಡಿ ಈ ತಂತ್ರ ಕೌಶಲ್ಯವನ್ನು ಹೇಗೆ ಉಪಯೋಗಿಸಬೇಕು ಎಂಬುದನ್ನು ಕಂಡುಹಿಡಿಯಬೇಕು. ಆದರೆ ಇದು ಒಂದು ಸಲ ಮಾಡಿ ಮುಗಿಸುವ ಕಾರ್ಯವಾಗಿರುವುದಿಲ್ಲ. ಅನೇಕ ವರ್ಷಗಳವರೆಗೆ ಮುಂದುವರಿಸಿದರೆ ಬೇಕಾದ ಫಲಿತಾಂಶ ದೊರೆಯುತ್ತದೆ.

ಎರಡನೆಯ ಹಂತದ ಕೆಲಸವೆಂದರೆ ಪ್ರವಾಹದ ವೇಗವನ್ನು ಕಡಿಮೆ ಮಾಡುವುದು. ಇದಕ್ಕಾಗಿ ಆಕಾಶದಿಂದ ಛಾಯಾಚಿತ್ರಗಳನ್ನು ತೆಗೆದು, ಅದನ್ನು ಸರಿಯಾಗಿ ಅರ್ಥೈಸಿ ಸೂಕ್ತವಾದ ತಂತ್ರಕೌಶಲ್ಯವನ್ನು ರಚಿಸಿ ಬೆಟ್ಟದ ಇಳಿಜಾರಿನಿಂದ ಮಣ್ಣು ಮತ್ತು ಕಸಗಳು ನೀರಿಗೆ ಬಂದು ಸೇರುವುದನ್ನು ತಪ್ಪಿಸಬೇಕು. ಇದಕ್ಕಾಗಿ ಈ ಪ್ರದೇಶದಲ್ಲಿ ವಿಮಾನದ ಮೂಲಕ ಅರಣ್ಯ ಸಸಿಗಳ ಬೀಜ ಬಿತ್ತನೆ ಮಾಡುವುದು. ಇವು ಬೆಳೆದು ಮಣ್ಣಿಗೆ ಹೊದಿಕೆಯಂತಾಗಿ ಅದು ನದಿಗಳಿಗೆ ಹರಿದು ಹೋಗುವುದನ್ನು ತಪ್ಪಿಸಬಹುದು. ಆದರೆ ಈ ಕಡಿದಾದ ಇಳಿಜಾರಿನಲ್ಲಿ ಬೀಜಗಳು ತಮಗೆ ತಾವೇ ಮೊಳಕೆಯೊಡೆಯುತ್ತವೆ ಎಂದು ಭಾವಿಸಬಾರದು. ಇವು ಪ್ರವಾಹದಲ್ಲಿ ಕೊಚ್ಚಿ ಹೋಗುವ ಸಾಧ್ಯತೆಯೇ ಹೆಚ್ಚು. ಅದಕ್ಕಾಗಿ ಸಿಂಪಡಿಸಲು ಒಂದು ವಿಶೇಷವಾದ ತೆಳುಪೊರೆ ಆವರಿಸಿಕೊಳ್ಳುವಂತೆ ಅವುಗಳ ಮೇಲೆ ಸಿಂಪಡಿಸಬೇಕು ಇದರಿಂದ ಬೀಜಗಳು ಕೊಚ್ಚಿ ಹೋಗುವುದನ್ನು ತಡೆಯಬಹುದು. ಇದಕ್ಕೆ ಸರಿಯಾದ ತಾಂತ್ರಿಕತೆಯನ್ನು ಕಂಡುಹಿಡಿಯಲು ಸಂಶೋಧನೆ ಅಗತ್ಯ.

ಹಾಗಾಗಿ ಉತ್ತರ ಭಾರತಕ್ಕೆ ಮೂರು ಮುಖ್ಯವಾದ ತಂತ್ರಕೌಶಲ್ಯ ಅಗತ್ಯವಾಗಿದೆ.

೧. ಮೇಲ್ಮೈ ನೀರಾವರಿಯನ್ನು ತಪ್ಪಿಸಿ ಅಂತರ್ಜಲದ ಉಪಯೋಗವನ್ನು ಹೆಚ್ಚಿಸುವುದು.

೨. ನದೀ ಮುಖದಲ್ಲಿ ಸಂಗ್ರಹವಾದ ಮೆಕ್ಕಲನ್ನು ಸಿಡಿಸಿ ಸಮುದ್ರಕ್ಕೆ ಹೋಗುವಂತೆ ಮಾಡುವುದು.

೩. ನದಿಗಳಿಗೆ ಮೆಕ್ಕಲು ಮತ್ತು ಕಸಗಳನ್ನು ಹರಿಸುವುದನ್ನು ಕಡಿಮೆ ಮಾಡಲು ಆ ಪ್ರದೇಶಗಳಲ್ಲಿ ಅಲ್ಲಲ್ಲಿ ತಡೆಗಳನ್ನೊಡ್ಡುವುದು. ಇದರಿಂದ ಜೌಗು ನಿಲ್ಲುವುದು ಮತ್ತು ಕ್ಷಾರದ ಪರಿಣಾಮಗಳನ್ನು ನಿವಾರಿಸುವುದಕ್ಕೆ ಅವಕಾಶವಾಗುತ್ತದೆ. ಅಲ್ಲಿಗೆ ಗಂಗಾ ನದಿಯ ಬಯಲು ಪ್ರದೇಶದಲ್ಲೆಲ್ಲಾ ಶುದ್ಧವಾದ ನೀರನ್ನು ಒದಗಿಸಬಹುದು. ಇದಕ್ಕೆಲ್ಲಾ ತುಂಬಾ ವಿದ್ಯುತ್ ಬೇಕಾಗುತ್ತದೆ. ಅದನ್ನು ಅಣು ವಿದ್ಯುತ್‌ನಿಂದ ಪಡೆಯುವ ಪ್ರಯತ್ನ ಮಾಡಬಹುದು. ಈಗಾಗಲೇ ಇದು ಬಹಳವಾಗಿ ಅಭಿವೃದ್ಧಿಗೊಂಡಿದ್ದು, ಪಾಶ್ಚಿಮಾತ್ಯ ದೇಶಗಳಿಗಿಂತ ಸುರಕ್ಷಿತವಾದ ತಂತ್ರಕೌಶಲ್ಯಗಳನ್ನು ಅಭಿವೃದ್ಧಿಪಡಿಸಲಾಗಿದೆ.

ಇವುಗಳ ಜೊತೆಗೆ ಇನ್ನೊಂದು ಕ್ರಮವೆಂದರೆ ಟಿಬೆಟ್‌ನಲ್ಲಿ ಬ್ರಹ್ಮಪುತ್ರ ನದಿಗೆ ಸಮುದ್ರ ಮಟ್ಟದಿಂದ ೧೫,೦೦೦ ಅಡಿ ಎತ್ತರದಲ್ಲಿ ಹಿಮಾಲಯದ ಕಡೆಗೆ ದೊಡ್ಡ ಕಾಲುವೆ ಮಾಡಿ ಆ ನೀರನ್ನು ಬಿಹಾರದ ದಕ್ಷಿಣದ ಕಡೆಗೆ ಹರಿಯುವಂತೆ ಮಾಡುವುದು. ಇವುಗಳೆಲ್ಲದರಿಂದ ನೀರನ್ನು ಪಡೆಯಬಹುದು. ಆದರೆ ನೇಪಾಳ, ಬಾಂಗ್ಲಾದೇಶ ಮತ್ತು ಚೀನಾದ ಅಂತರರಾಷ್ಟ್ರೀಯ ಸಹಕಾರ ಬೇಕಾಗುತ್ತದೆ. ಇದರಿಂದಲೂ ತುಂಬಾ ವಿದ್ಯುತ್ ಉತ್ಪಾದಿಸಬಹುದು. ಉಳಿದ ನೀರನ್ನು ಯಾವುದೇ ಜಮೀನಿನ ನಷ್ಟವಿಲ್ಲದೆ ಗಂಗಾ ನದಿಗೆ ಹೋಗುವಂತೆ ಮಾಡಬಹುದು. ಆದರೆ ಇವುಗಳೆಲ್ಲ ಅಸಾಂಪ್ರದಾಯಿಕ ಅಭಿಪ್ರಾಯಗಳೇ ಹೌದು. ಆದರೂ ಪ್ರಯತ್ನ ಮಾಡಬಹುದು. ಇದರಿಂದ ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ಪರಿಸರ ನಷ್ಟವೇನೂ ಆಗುವುದಿಲ್ಲ.

●




# ಜಲಸಂವರ್ಧಕರು

ಶ್ರೀಪಡ್ರೆ

ಹದಿನೈದು ವರ್ಷಗಳ ಹಿಂದೆ ರಾಜ್ಯದ ಬಹುಪಾಲು ಜನರಿಗೆ ಮಳೆ ಕೊಯ್ಲು ಎನ್ನುವುದು ಅಪರಿಚಿತವಾಗಿತ್ತು. ಆದರೆ ಈಗ ಹಾಗಲ್ಲ. ರಾಜ್ಯದ ಉದ್ದಗಲದಲ್ಲಿ ಈ ಬಗ್ಗೆ ಆಸಕ್ತಿ ಮೂಡಿದೆ. ಸರಕಾರದ ಸಹಾಯ ನಿರೀಕ್ಷಿಸದೆ ಸಾಕಷ್ಟು ಅನುಷ್ಠಾನ ನಡೆಯುತ್ತಿದೆ. ಮಲೆನಾಡಿನಲ್ಲಂತೂ ಮಳೆಕೊಯ್ಲಿನ ಮೌನ ಆಂದೋಳನವೇ ಆರಂಭವಾಗಿದೆ. ಒಂದು ರೀತಿಯಲ್ಲಿ ಮಲೆನಾಡಿನಲ್ಲಂತೂ ಮಳೆಕೊಯ್ಲಿನ ದೊಡ್ಡ ದೊಡ್ಡ ಕನಸುಗಾರರೂ ನಿರೀಕ್ಷಿಸದಷ್ಟು ಸಾಮೂಹಿಕ ಒಲವು ಈಗ ಮೂಡಿಬರುತ್ತಿದೆ.

ಹಾಗೆ ನೋಡಿದರೆ ಈ ವಿದ್ಯೆ ಅತಿ ಅಗತ್ಯ ಇರುವುದು ಮಳೆಯಾಧಾರಿತ ಕೃಷಿಯ ನಮ್ಮ ಬಯಲು ಸೀಮೆಗೆ. ಆದರೆ ಮಲೆನಾಡಿಗೆ ಹೋಲಿಸಿದರೆ ಇಲ್ಲಿ ಈ ಬಗ್ಗೆ ಅಭಿರುಚಿ ಬೇರುಬಿಡುತ್ತಿರುವುದು ನಿಧಾನ.

ಕರ್ನಾಟಕಕ್ಕೆ ಬರ ಸಂಭಾವ್ಯ ಪ್ರದೇಶದ ಒಟ್ಟು ವಿಸ್ತೀರ್ಣದಲ್ಲಿ ದೇಶದಲ್ಲೇ ಎರಡನೆಯ ಸ್ಥಾನ. ಮೊದಲನೆಯದು ರಾಜಸ್ಥಾನ. ಕಳೆದೆರಡು ದಶಕಗಳಲ್ಲಿ ಜಲಾನಯನ ಅಭಿವೃದ್ಧಿಗಾಗಿ ರಾಜ್ಯ ವ್ಯಯಿಸಿದ ಮೊತ್ತ ಅಗಾಧ. ಸಾವಿರದ ನೂರ ಹದಿನಾರೂವರೆ ಕೋಟಿ ರೂಪಾಯಿಗಳು ಅಂದರೆ ಯೋಚಿಸಿ. ಆದರೆ ಫಲಿತಾಂಶ? ತುಂಬಾ ನಿರುತ್ತೇಜಕ.

ಕಳೆದ ಮೂರು ವರ್ಷಗಳ ಬರ ರಾಜ್ಯದ ಜನರನ್ನು ಧೃತಿಗೆಡಿಸಿದೆ. ಬಯಲು ಸೀಮೆಯ ಆತ್ಮಹತ್ಯೆಗಳ ಹಿಂದಿನ ಒಂದು ಮುಖ್ಯ ಕಾರಣ ನೀರು ಅಥವಾ ಅದರ ಕೊರತೆ. ಕಳೆದ ವರ್ಷ ಸರಕಾರ ಮೋಡ ಬಿತ್ತನೆಯಂತಹ ಭಾರೀ ವೆಚ್ಚದ ತಂತ್ರಜ್ಞಾನದ ಮೊರೆ ಹೊಕ್ಕಿದೆ. ಅದು ಅಷ್ಟೊಂದು ಫಲಿತಾಂಶ ನಿರ್ದೇಶಿತ ಕೆಲಸ ಅನ್ನುವಂತಿಲ್ಲ.

> **ಕರ್ನಾಟಕಕ್ಕೆ ಬರ ಸಂಭಾವ್ಯದ ವಿಚಾರದಲ್ಲಿ ದೇಶದಲ್ಲಿ ಎರಡನೆಯ ಸ್ಥಾನ. ಮೊದಲನೆಯ ಸ್ಥಾನ ರಾಜಸ್ಥಾನ. ಕಳೆದ ಎರಡು ದಶಕಗಳಲ್ಲಿ ಜಲಾನಯನ ಅಭಿವೃದ್ಧಿಗಾಗಿ ರಾಜ್ಯ ಖರ್ಚು ಮಾಡಿದ ಮೊತ್ತ ಸಾವಿರದ ನೂರಾ ಹದಿನಾರುವರೆ ಕೋಟಿ ರೂಗಳು. ಆದರೆ ಫಲಿತಾಂಶ ನಿರುತ್ತೇಜಕ.**

ಬೀಳುವ ಮಳೆಯನ್ನು ಹೆಚ್ಚಿಸುವುದು ನಮ್ಮ ಕೈಗಳಲ್ಲಿಲ್ಲ. ಆದರೆ ಸುರಿಯುವ ಮಳೆಯಷ್ಟನ್ನೂ ನಮ್ಮ ನಮ್ಮ ಜಮೀನು, ಮನೆ, ವಠಾರಗಳಲ್ಲಿ ನಿಯಂತ್ರಿಸುವ ಕೆಲಸ ನಮ್ಮಿಂದ ಸಾಧ್ಯವಿದೆ. ಬರದ ನಡುವೆಯೂ ಬೀಳುವ ಮಳೆಯನ್ನು ಹಿಡಿದಿಡುವ ವ್ಯವಸ್ಥೆಗಳನ್ನು ರೂಪಿಸಿಕೊಂಡರೆ ಬದುಕು ಇನ್ನೆಷ್ಟೋ ಸಹ್ಯವಾದೀತು. ಬಹುತೇಕ ಸಂದರ್ಭಗಳಲ್ಲೂ ಕ್ಷಾಮ ಎನ್ನುವುದು ಮಾನವ ನಿರ್ಮಿತ. ನಾವುಗಳು ಮನಸ್ಸು ಮಾಡಿದರೆ ಈ ಸ್ಥಿತಿಯನ್ನು ಬದಲಿಸಲು ಸಾಧ್ಯ. ಅದು ಲಭ್ಯ ಮಳೆ ನೀರನ್ನು ನಾವು ಹೇಗೆ ಸದುಪಯೋಗ ಪಡಿಸುತ್ತೇವೆ ಎನ್ನುವುದರ ಮೇಲೆ ಅವಲಂಬಿಸಿದೆ.

ಮೇಲಿನ ಸಂದೇಶವನ್ನು ಇಂದು ಎಲ್ಲೆಡೆ ಹಬ್ಬಿಸಬೇಕಿದೆ. ಆದರೆ ದುರದೃಷ್ಟವಶಾತ್, ಪರಿಸ್ಥಿತಿ ತೀರಾ ಕಳವಳಕಾರಿಯಾಗಿದ್ದು ದಕ್ಷಿಣ ಭಾರತದಲ್ಲೇ ಕರ್ನಾಟಕ ಸರಕಾರ ಜಲಜಾಗೃತಿಯಲ್ಲಿ ಹಿಂದೆ ಬಿದ್ದಿದೆ. ಹಾಗೆಂದು, ನೀರಿನಂತಹ ದೊಡ್ಡ ವಿಚಾರದಲ್ಲಿ ಸರಕಾರ ಮಾತ್ರದಿಂದ ಸುಸ್ಥಿತಿ ತರಲು ಸಾಧ್ಯವಿಲ್ಲ. ಜನ ಸಹಭಾಗಿತ್ವ ಬೇಕು. ಸ್ವಯಂ ಪ್ರೇರಣೆಯಿಂದ ನೀರು ನೆಮ್ಮದಿಯ ಸಂದೇಶ ಹಬ್ಬಿಸುವ, ಮಳೆಕೊಯ್ಲು ಮಾಡಿ ತೋರಿಸುವ ಜಲಯೋಧರ ಪ್ರಸಕ್ತಿ ಬರುವುದು ಇಲ್ಲಿ.

ಇಂದು ರಾಜ್ಯದಲ್ಲಿ ಇಂಥವರ ಸಂಖ್ಯೆ ಐವತ್ತಕ್ಕೂ ಹೆಚ್ಚು ಇದೆ. ಮಲೆನಾಡು ಮತ್ತು ನೆರೆಯ ಜಿಲ್ಲೆಗಳಲ್ಲಿ ವರ್ಷಕ್ಕೆ ಏನಿಲ್ಲವೆಂದರೂ ಐನೂರಕ್ಕೂ ಹೆಚ್ಚು ಮಾಹಿತಿ ಶಿಬಿರ-ಸ್ಲೈಡ್ ಶೋಗಳು ನಡೆಯುತ್ತಿವೆ. ಸಾವಿರಾರು ಮಂದಿ ಬೇರೆಬೇರೆ ರೀತಿಯಲ್ಲಿ ಕಡಿಮೆ ವೆಚ್ಚದಲ್ಲಿ, ಬೀಳುವ ಮಳೆಯನ್ನು ತಡೆದು ಫಲ ಉಣ್ಣತೊಡಗಿದ್ದಾರೆ. ಅವರಲ್ಲಿ ಕೆಲವರು ಪರಿಚಯ ಇಲ್ಲಿದೆ.

ಬೆಂಗಳೂರಿನ 'ರೈನ್ ವಾಟರ್ ಕ್ಲಬ್' ಇಂದು ದೇಶ ಮಾತ್ರವಲ್ಲ, ಜಗತ್ತಿನಲ್ಲೇ ಚಿರಪರಿಚಿತ. ವಿಶ್ವನಾಥ್-ಚಿತ್ರಾ ದಂಪತಿ ಇದರ ರೂವಾರಿಗಳು. ವಿಶ್ವನಾಥ್ ಸಿವಿಲ್ ಎಂಜಿನಿಯರ್. ಚಿತ್ರಾ ವಾಸ್ತುಶಿಲ್ಪಿ. ಹತ್ತು ವರ್ಷ ಹಿಂದೆ ವಿದ್ಯಾರಣ್ಯಪುರದಲ್ಲಿ ಕಟ್ಟಿದ ಇವರ ಮನೆ ಅನನ್ಯ. ಚಾವಣಿಯ ನೀರಿನ ಸಂಗ್ರಹ ಬಳಕೆಯ ಬಹುಶಃ ನಗರದ ಚೊಚ್ಚಲ ಪ್ರಯೋಗ. ಈ ನೀರು ಈ ಮನೆಮಂದಿ ಮತ್ತು ಬರುವ ಸಂದರ್ಶಕರ ಬಳಕೆಗೆ ಆರು ತಿಂಗಳಿಗೆ ಸಾಕಾಗುತ್ತದೆ.

ವಿಶ್ವನಾಥ್ ಇಂದು ನಗರಗಳ ಬಗೆಗಿನ ಮಳೆಕೊಯ್ಲಿನ ವಿಚಾರದಲ್ಲಿ ರಾಷ್ಟ್ರಾಂತರೀಯ ಮಟ್ಟದ ವಿಶೇಷಜ್ಞ. ಮಾಹಿತಿ ಕೇಳಿ ಬಂದವರಿಗೆ ತೋರಿಸಲೆಂದೇ ಮನೆಯ ಮಹಡಿಯ ಮೇಲೆ ಚಾವಣಿ ನೀರ ಸಂಗ್ರಹ (ಚಾನೀಸಂ) ದ ಜೀವಂತ ಮಾದರಿ ನಿರ್ಮಿಸಿದ್ದಾರೆ.

ಕರ್ನಾಟಕ ಮಾತ್ರವಲ್ಲ, ದೇಶದ ಹಲವೆಡೆ ಚಾವಣಿ ನೀರಿನ ಸಂಗ್ರಹ, ಔದ್ಯಮಿಕ ಆವರಣಗಳಲ್ಲಿ ಮಳೆಕೊಯ್ಲು-ಹೀಗೆ ವಿಭಿನ್ನ ಪರಿಸ್ಥಿತಿಗಳಿಗೆ ಹೊಂದುವ ಮಳೆಕೊಯ್ಲಿನ ವ್ಯವಸ್ಥೆಗಳನ್ನು ವಿಶ್ವ ವಿನ್ಯಾಸಗೊಳಿಸಿದ್ದಾರೆ. ಕರ್ನಾಟಕದ ಹತ್ತು ಜಿಲ್ಲೆಗಳಲ್ಲಿ ನೀರಿನಲ್ಲಿರುವ ಫ್ಲೋರೈಡ್ ಅಂಶದಿಂದ ತುಂಬ ಆರೋಗ್ಯ ಸಮಸ್ಯೆಗಳು ಹುಟ್ಟುತ್ತಿವೆ. "ಕುಡಿಯಲು ಮತ್ತು ಅಡುಗೆಗೆ ಇವರಿಗೆ ಕನಿಷ್ಟ ಆರುಸಾವಿರ ಲೀಟರಿನ ಟಾಂಕಿಯೊಂದಿಗೆ ಚಾನೀಸಂ ವ್ಯವಸ್ಥೆ ಮಾಡಿಕೊಟ್ಟರೆ ವರ್ಷಪೂರ್ತಿ ಬಳಕೆಗೆ ಸಾಕು. ಸ್ಥಳೀಯ ವ್ಯಕ್ತಿ, ವಸ್ತುಗಳನ್ನು ಬಳಸಿಕೊಂಡರೆ ಈ ವ್ಯವಸ್ಥೆಗೆ ಏಳೆಂಟು ಸಾವಿರ ರೂಪಾಯಿ ಸಾಕಾಗಬಹುದು" ಎನ್ನುವುದು ವಿಶ್ವನಾಥ್ ಅಭಿಪ್ರಾಯ. ಈಗಿನ ಸುಸ್ಥಿರವಲ್ಲದ ಕೇಂದ್ರೀಕೃತ ನೀರು ಸರಬರಾಜು ಏರ್ಪಾಡಿಗೆ ಸರಕಾರಕ್ಕೆ ತಗಲುವ ವೆಚ್ಚ ಇದಕ್ಕಿಂತ ಕಡಿಮೆ ಏನಲ್ಲ ಎಂದವರು ಲೆಕ್ಕಾಚಾರ ಎದುರಿಡುತ್ತಾರೆ.

ಬೆಂಗಳೂರಿನಲ್ಲಿ ಮಧ್ಯಮ ವರ್ಗದವರು ಮನೆ ಕಟ್ಟಿಸುವಾಗ ತಪ್ಪದೆ ಒಂದು ಭೂಗತ ಸಂಪ್ ಮಾಡಿಸಿಕೊಳ್ಳುತ್ತಾರೆ. ಮನೆ ಕಟ್ಟುವಾಗಲೇ ಮಳೆಕೊಯ್ಲಿನ ಏರ್ಪಾಡು ಮಾಡಿಸಿಕೊಂಡರೆ ಒಟ್ಟು ವೆಚ್ಚದ ಶೇ. ೧-೨% ಹೆಚ್ಚುವರಿ ಅಸಲಿನಲ್ಲಿ ಮಳೆಕೊಯ್ಲಿನ ಪೂರಕ ವ್ಯವಸ್ಥೆ ಮಾಡಿಕೊಳ್ಳಬಹುದು ಎನ್ನುವುದು ಅವರ ಸಲಹೆ. (ವಿಳಾಸ: ಚಿತ್ರಾ-ವಿಶ್ವನಾಥ್, ರೈನ್ ವಾಟರ್ ಕ್ಲಬ್, ೨೬೪, ೬ನೇ ಮೈನ್, ೬ನೇ ಬ್ಲಾಕ್, ಬಿ.ಇ.ಎಲ್. ಲೇಔಟ್, ವಿದ್ಯಾರಣ್ಯಪುರ, ಬೆಂಗಳೂರು-೫೬೦೦೯೭. ದೂರವಾಣಿ-೨೩೬೪ ೧೬೯೦)

ಮೈಸೂರಿನ 'ಕಾರ್ಟ್' ಸಂಸ್ಥೆಯ ನಿರ್ದೇಶಕ ಉ.ನಾ.ರವಿಕುಮಾರ್ ಶಹರದ ಮಳೆಕೊಯ್ಲಿನ ಇನ್ನೊಬ್ಬ ಅನುಭವಿ. ಮೈಸೂರು ಸುತ್ತಮುತ್ತ ನೂರಾರು ಮನೆಗಳಲ್ಲಿ ಇವರ ಮಾರ್ಗದರ್ಶನದಲ್ಲಿ ಮಳೆಕೊಯ್ಲು ನಡೆದಿದೆ. ಆಸಕ್ತ ತರುಣರಿಗೆ ಮಳೆಕೊಯ್ಲು ಮಾಡುವ ರೀತಿಯನ್ನು ತಿಳಿಸುವ ತರಬೇತಿ ಶಿಬಿರಗಳನ್ನೂ ರವಿ ನಡೆಸಿದ್ದಾರೆ. ರಾಜ್ಯ ಸಂಪನ್ಮೂಲ ಕೇಂದ್ರ ಹೊರತರುವ 'ಜಲಸಾಕ್ಷರತೆ' ಎಂಬ ಖಾಸಗಿ ಪ್ರಸಾರದ ವಾರ್ತಾಪತ್ರಕ್ಕೆ ಇವರದೇ ಬೆಂಬಲ.

ಮಳೆ ನೀರನ್ನು ಹಿಡಿಯುವ ಜತೆಜತೆಗೆ ಅದನ್ನು ಸಾಧ್ಯವಿದ್ದಷ್ಟೂ ಇಂಧನದ ಅವಲಂಬನೆ ಇಲ್ಲದೆ ಬಳಸುವುದಕ್ಕೆ ರವಿ ಆದ್ಯತೆ ಕೊಡುತ್ತಾರೆ. ಟಾಂಕಿಯನ್ನು ನೆಲಮಟ್ಟಕ್ಕಿಂತ ಸ್ವಲ್ಪ ಎತ್ತರದಲ್ಲಿ ಕಟ್ಟಿಕೊಂಡರೆ ಸುಲಭದಲ್ಲಿ ನೀರನ್ನು ಹೊರತೆಗೆದುಕೊಳ್ಳಬಹುದು. ಮಾನವಶಕ್ತಿಯಿಂದ ಚಲಾಯಿಸುವ 'ಕಾಟ್' ಪಂಪನ್ನೂ ಇವರು ಬೆಳಕಿಗೊಡ್ಡಿದ್ದಾರೆ.

ಐದು ಲೀಟರ್ ನೀರಿನಲ್ಲಿ ನಲವತ್ತು ಮಂದಿ ಕೈ ತೊಳೆಯಲು ಸಾಧ್ಯ ಎನ್ನುತ್ತಾರೆ. ಭೇಲ್‌ಪುರಿ ಅಂಗಡಿ, ಪ್ರಾಥಮಿಕ ಶಾಲೆ ಮುಂತಾದೆಡೆ ನೀರು ಸುಲಭ ಲಭ್ಯವಲ್ಲದೆಡೆ ಬಳಸಲು ಇವರು 'ನಿಲ್ಲೆ ನಲ್ಲಿ' (ಟಪ್ಪಿಟ್ಯಾಪ್)ಯನ್ನು ಅಭಿವೃದ್ಧಿಪಡಿಸಿದ್ದಾರೆ. ಇದು

ಮಾರುಕಟ್ಟೆಯಲ್ಲಿ ಸಿಗುವಂಥದ್ದಲ್ಲ. ಯಾರೂ ಐದು ಲೀಟರಿನ ಪ್ಲಾಸ್ಟಿಕ್ ಕ್ಯಾನ್ ತೆಗೆದುಕೊಂಡು ಸುಲಭದಲ್ಲಿ ಸ್ವತಃ ಮಾಡಿಕೊಳ್ಳಬಹುದಾದದ್ದು. (ವಿಳಾಸ: ಉ.ನಾ.ರವಿಕುಮಾರ್, ನಿರ್ದೇಶಕರು, ಕಾರ್ಟ್, ನ್ಯಾಶನಲ್ ಇನ್‌ಸ್ಟಿಟ್ಯೂಟ್ ಆಫ್ ಎಂಜಿನಿಯರಿಂಗ್, ಮೈಸೂರು; ದೂರವಾಣಿ: (0821)254 4014=Extn 320)

ಚಿತ್ರದುರ್ಗದ ದೇವರಾಜರೆಡ್ಡಿ ಕಲಿಕೆಯಿಂದ ಭೂಗರ್ಭಶಾಸ್ತ್ರಜ್ಞರು. ಆರಂಭದ ದಿನಗಳಲ್ಲಿ 'ಬೋರ್‌ವೆಲ್ ಪಾಯಿಂಟ್' ಮಾಡುತ್ತಾ ಅಂತರ್ಜಲದ ಅತಿಬಳಕೆಯ ಅಪಾಯ ಮನವರಿಕೆಯಾಯಿತು. ಮಳೆಕೊಯ್ಲಿನತ್ತ ಒಲವು, ಅಧ್ಯಯನ. ಪಾಯಿಂಟ್ ಮಾಡಿಕೊಡಿ ಎಂದು ಕೇಳಲು ಬಂದವರಿಗೆ ಮರುಪೂರಣದ ಸಲಹೆ. ಜತೆಜತೆಗೆ ಒಣ ಊರುಗಳಲ್ಲಿ ಚಾವಣಿ ನೀರ ಸಂಗ್ರಹ. ರಾಜ್ಯದಲ್ಲೇ ದೇವರಾಜ್ ಅತಿ ಹೆಚ್ಚು ಕೊಳವೆ ಬಾವಿ ಕೃತಕ ಮರುಪೂರಣ ಮಾಡಿಸಿದ ವ್ಯಕ್ತಿ. 'ಕೊಳವೆಬಾವಿಯ ಮರುಪೂರಣ' ಎಂಬ ಪುಸ್ತಿಕೆಯನ್ನೂ ಬರೆದಿದ್ದಾರೆ. ಬಯಲು ಸೀಮೆಯಲ್ಲಿ ಜಲಜಾಗೃತಿ ಮೂಡಿಸುವುದರ ನಿರತರು. (ವಿಳಾಸ: ಎನ್.ಜೆ.ದೇವರಾಜ್ ರೆಡ್ಡಿ, ಭೂಗರ್ಭಶಾಸ್ತ್ರಜ್ಞ, ಆದರ್ಶ ಕಲ್ಯಾಣ ಮಂಟಪದ ಎದುರು, ಮೆದೇನಳ್ಳಿ ರಸ್ತೆ, ಚಿತ್ರದುರ್ಗ, ೫೭೭೫೦೧-ದೂರವಾಣಿ:೦೮೧೯-೪೨೫ ೪೫೮ (ನಿ)

ಬೆಳಗಾವಿ ಬಳಿಯ ಕಟ್ಟನಭಾವಿಯ ಮುಖಛಾಯೆ ಬದಲಿಸಿದ ಕೀರ್ತಿ ಶಿವಾಜಿ ಕಾಗನೇಕರ್ ಎಂಬ ಗಾಂಧೀವಾದಿಗೆ ಸಲ್ಲುತ್ತದೆ. ಇಪ್ಪತ್ತೈದು ವರ್ಷದ ಹಿಂದೆ ಈ ಊರಿನಲ್ಲಿ ಕುಡಿಯುವ ನೀರಿರಲಿಲ್ಲ. ಒಂದೇ ಒಂದು ಮರವಿತ್ತು. ಉಳಿದದ್ದೆಲ್ಲಾ ಊರವರ ಕೊಡಲಿಗೆ ಆಹುತಿಯಾಗಿತ್ತು. ಹೊರ ಊರುಗಳಿಂದ ಹುಡುಗಿಯರನ್ನು ಮದುವೆಮಾಡಿ ಕೊಡಲೂ ಹಿಂಜರಿಯುತ್ತಿದ್ದರು. ಜನ್ ಜಾಗರಣ್ ಎಂಬ ಸಂಸ್ಥೆ ಮತ್ತು ಒಬ್ಬರು ಜರ್ಮನ್ ನಾಗರಿಕರ ನೆರವಿನಿಂದ ಶಿವಾಜಿ ಹಳ್ಳಿಗರ ಮನ ಬದಲಿಸಿದರು. ಮಳೆನೀರಿಂಗಿಸಲು ಸಮತಳ ಅಗಳುಗಳ ನಿರ್ಮಾಣ. ಗುಡ್ಡಗಳಲ್ಲಿ ಗಿಡ ನಾಟಿ; ದನಗಳಿಂದ ರಕ್ಷಣೆ. ಈಗ ಈ ಊರಿನಲ್ಲಿ ನೆಟ್ಟ ಮರಗಳೇ ೪೦,೦೦೦ಕ್ಕೂ ಹೆಚ್ಚಿವೆ. ಪುನರುಜ್ಜೀವನವಾದದ್ದು ಇನ್ನೂ ಹೆಚ್ಚು. ಬೇಸಿಗೆಯಲ್ಲೂ ನೀರಿರುತ್ತದೆ. ಹಾಲಿನ ಉತ್ಪಾದನೆ ಎಂಟು ಪಟ್ಟು ಏರಿದೆ. (ವಿಳಾಸ: ಶಿವಾಜಿ ಕಾಗನೇಕರ್, ಕಟ್ಟನಭಾವಿ, ಅಂಚೆ: ಬಂಬರ್ಗ, ಬೆಳಗಾವಿ ಜಿಲ್ಲೆ-೫೯೧೧೪೩; ದೂರವಾಣಿ:(೦೮೩೧) ೨೫೫ ೪೦೬೯; ೨೫೫ ೪೧೫೮ (PP)

ಶಿರಸಿಯ ಶಿವಾನಂದ ಕಳವೆ ಪತ್ರಕರ್ತರು. ಅರಣ್ಯ, ಅರಣ್ಯ ಮತ್ತು ನೀರಿನ ಸಂಬಂಧದ ಬಗ್ಗೆ ಆಳ ಅಧ್ಯಯನ. ನೀರಿಂಗಿಸುವ ಬಗ್ಗೆ ವಿಶೇಷ ಆಸಕ್ತಿ ಇಟ್ಟುಕೊಂಡು ಆ ಬಗ್ಗೆ ತಿಳಕೊಂಡು ಸ್ಲೈಡ್ ಶೋ ನಡೆಸುತ್ತಿದ್ದಾರೆ. ಇವರ ಮಾರ್ಗದರ್ಶನದಲ್ಲಿ ಶಿರಸಿ ಪೇಟೆಯಲ್ಲಿ ನೂರಕ್ಕೂ ಹೆಚ್ಚು ಮನೆಗಳಲ್ಲಿ ಮಳೆಕೊಯ್ಲು ಆಗುತ್ತಿದೆ. ಇಲ್ಲಿನ ಬಹುತೇಕ ಲಾಜಿಂಗ್‌ಗಳಲ್ಲೂ ಕೂಡಾ. (ವಿಳಾಸ: ಶಿವಾನಂದ ಕಳವೆ, ಅಂಚೆ: ಕಳವೆ, ಉತ್ತರ ಕನ್ನಡ ಜಿಲ್ಲೆ; ದೂರವಾಣಿ: (೦೮೩೮೪) ೨೪೩ ೪೫೫)

ಸಾಗರದ ಸುತ್ತಮುತ್ತ ಕೃಷಿಪ್ರಯೋಗ ಪರಿವಾರದ ಎ.ಎಸ್.ಆನಂದ್ ಮತ್ತು ಅರುಣ್ ಮಳೆಕೊಯ್ಲಿನ ಪ್ರಚಾರ ಮಾಡುತ್ತಿದ್ದಾರೆ. ಪ್ರೌಢಶಾಲಾ ವಿದ್ಯಾರ್ಥಿಗಳಿಗಾಗಿ ಜಾಥಾ, ಅಧ್ಯಾಪಕರಿಗೆ ತರಬೇತಿ ಶಿಬಿರ-ಹೀಗೆ ಬೇರೆಬೇರೆ ಕಾರ್ಯಕ್ರಮಗಳು. ಜತೆಗೆ 'ನೀರ ನೆಮ್ಮದಿಗೆ ನೂರೆಂಟು ದಾರಿ' ಎಂಬ ಪುಸ್ತಕ ಪ್ರಕಾಶನ.(ದೂರವಾಣಿ: (೦೮೧೮೨)೨೪೮ ೦೩೭

ನಿಸರಾಣೆಯ ಶಾಲಾ ಅಧ್ಯಾಪಕ ಲಕ್ಷ್ಮೀನಾರಾಯಣ ಭಟ್ ಕಳೆದ ಮೂರು ವರ್ಷಗಳಿಂದ ನೀರಿಂಗಿಸುತ್ತಿದ್ದಾರೆ. ಜತೆಜತೆಗೆ ಅಲ್ಲಲ್ಲಿ ಓಡಾಡಿ ಮಾಹಿತಿ ಹಂಚಿಕೆ. ಈಗಾಗಲೇ ೬೦-೭೦ ಸ್ಲೈಡ್ ಶೋ. ನೂರಾರು ಜನರಿಗೆ ನೀರಿಂಗಿಸುವ ಬಗ್ಗೆ ಸಲಹೆ. (ದೂರವಾಣಿ: (೦೮೧೮೪) ೪೬೩ ೩೯೬)

ಬಾರಕೂರಿನ ನಿವೃತ್ತ ಪ್ರಾಂಶುಪಾಲ ಸೀತಾರಾಮಶೆಟ್ಟಿ ಈ ಭಾಗದ ಜಲಯೋಧರು. ಹೈಸ್ಕೂಲುಗಳ ಇಕೋ ಕ್ಲಬ್ಬುಗಳಿಗೆ, ಸುತ್ತಲಿನ ನಾಗರಿಕರಿಗೆ ಆಹ್ವಾನದ ಮೇರೆಗೆ ಜಲಕೊಯ್ಲಿನ ಮಾಹಿತಿ ಕೊಡುತ್ತಾರೆ. ಬಾರಕೂರಿನ ಸುತ್ತಮುತ್ತ ಕೆರೆಯ ಹೂಳೆತ್ತುವುದರಿಂದ ತೊಡಗಿ, ಚಾನೀಸಂ ಮೊದಲಾದ ಹಲವು ರೀತಿಯ ಜಲಸಂರಕ್ಷಣೆಯ ಕೆಲಸಗಳಲ್ಲಿ ಸಕ್ರಿಯ ಪಾತ್ರ. (ದೂರವಾಣಿ: ೦೮೨೫೨ ೨೫೮ ೭೧೯೩)

ಹಾವೇರಿ ಜಿಲ್ಲೆಯ ಸವಣೂರು ಮಳೆ ನೆರಳಿನ ಪ್ರದೇಶ. ಅಲ್ಲಿನ ಉದ್ಯಮಿ-ಕೃಷಿಕ ರಾಜಶೇಖರ್ ಸಿಂಧೂರ್ ಪುರಸಭಾಧ್ಯಕ್ಷರು ಕೂಡಾ. ಇಲ್ಲಿ ನೀರಿಗೆ ತುಂಬಾ ತತ್ವಾರ. ರಾಜಶೇಖರ್ ತನ್ನ ಹೊಲ, ಮನೆ, ಉದ್ಯಮದ ಶಾಖೆಗಳಲ್ಲಿ ಮಳೆಕೊಯ್ಲು ಮಾಡಿದ್ದು

ಮಾತ್ರವಲ್ಲ, ನೆಂಟರು, ಗೆಳೆಯರನ್ನೆಲ್ಲಾ ಈ ಕೆಲಸಕ್ಕೆ ಪ್ರೇರೇಪಿಸಿದ್ದಾರೆ. ಸವಣೂರು ಪುರಸಭೆ ವ್ಯಾಪ್ತಿಯಲ್ಲಿ ಮುಂದೆ ಕಟ್ಟುವ ಹೊಸ ಮನೆಗಳವರು ಮಳೆಕೊಯ್ಲು ಮಾಡುವುದನ್ನು ಕಡ್ಡಾಯವಾಗಿಸಿದ್ದೂ ಇವರೇ. ಅಂಥವರಿಗೆ ತಾನೇ ಮುಂದೆ ನಿಂತು ಮಾಹಿತಿ ಕೊಡುವ ಹುರುಪು. ಸಾರ್ವಜನಿಕ ಉಪಯೋಗಕ್ಕೆ ಸ್ವಂತ ವೆಚ್ಚದಿಂದ ಒಂದೆಕ್ರೆಯ ಕೆರೆ ನಿರ್ಮಾಣ. ಈಗ ಇವರು ಶಾಸಕರು. (ದೂರವಾಣಿ: (೦೮೩೭)೨೪೧ ೭೦೧(ನಿ)

ಮಂಗಳೂರಿನ ಹೆನ್ರಿ ವಾಲ್ಡರ್ ಹಲವು ವರ್ಷಗಳಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಳೆಕೊಯ್ಲಿನ ಬಗ್ಗೆ ತಿಳಿವಳಿಕೆ ಕೊಡುತ್ತಾ ಬಂದಿದ್ದಾರೆ. (ದೂರವಾಣಿ: (೦೮೨೪)೨೪೫೪೮೦೨೪(ಕಚೇರಿ) ಜತೆಗೆ ಸಾವಯವ ಕೃಷಿಗೆ ಒತ್ತು. ಸಮತಳ ಅಗಳು ನಿರ್ಮಾಣಕ್ಕೆ ಮಾರ್ಗದರ್ಶನ. ಇದೇ ಜಿಲ್ಲೆಯ ವಾರಣಾಶಿ ಫಾರ್ಮ್ಸ್‌ನ ಡಾ. ಕೃಷ್ಣಮೂರ್ತಿ-ಅಶ್ವಿನಿ ದಂಪತಿಗಳು ತಮ್ಮ ಜಮೀನಿನಲ್ಲಿ ಜಲಕೊಯ್ಲಿನಲ್ಲಿ ದೊಡ್ಡ ಸಫಲತೆ ಕಂಡವರು. ಕನ್ನಡ ಇಂಗ್ಲಿಷಿನಲ್ಲಿ ಆಗಾಗ ಈ ಬಗ್ಗೆ ಒಂದು ದಿನದ ತರಬೇತಿ ನಡೆಸುತ್ತಿರುತ್ತಾರೆ. (ವಿಳಾಸ: ವಾರಣಾಶಿ ಫಾರ್ಮ್ಸ್, ಅಂಚೆ: ಅಡ್ಯನಡ್ಕ, ದಕ್ಷಿಣ ಕನ್ನಡ ಜಿಲ್ಲೆ. ದೂರವಾಣಿ: (೦೮೨೫೫) ೨೭೦೨೫೪)

ಮಂಗಳೂರಿನಲ್ಲಿ ಜಲಕೊಯ್ಲಿನ ಸಮಾನಾಸಕ್ತರು-ಸಂತ ಆಗ್ನೇಸ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾದ ಕ್ಲೆಮೆಂಟ್ ಡಿಸೋಜಾ ಮತ್ತು ಚಾರ್ಲ್ಸ್ ಪಾಯಿಸ್, ಸಿ.ಒ.ಡಿ.ಪಿ. ಸಂಸ್ಥೆಯ ನಿರ್ದೇಶಕ ಫಾವುಸ್ಟಿನ್ ಲೋಬೋ, ಫಾವಲೇರಿಯನ್ ಡಿಸೋಜಾ ಸೇರಿಕೊಂಡು ಮಳೆಕೊಯ್ಲಿನ ಮಾಹಿತಿ ಕೇಂದ್ರವೊಂದನ್ನು-ರೈನ್ ಸೆಂಟರ್-ತೆರೆದಿದ್ದಾರೆ. (ವಿಳಾಸ: ರೈನ್ ಸೆಂಟರ್ ಕೇ/ಆ ಸಿ.ಒ.ಡಿ.ಪಿ. ಕದ್ರಿ ಗುಡ್ಡ, ನಂತೂರು, ಮಂಗಳೂರು-೫೭೫೦೦೫: ದೂರವಾಣಿ: (೦೮೨೪) ೨೨೧೭೬೪೧;೨೨೧೫೦೮೦)

ಮಂಡ್ಯದಲ್ಲಿ ಎಂಜಿನಿಯರಿಂಗ್ ಕಾಲೇಜು ಪ್ರಾಧ್ಯಾಪಕ ಡಾ. ಪ್ರಸನ್ನಕುಮಾರ್ (ದೂರವಾಣಿ: (೦೮೨೩೨)೨೫೧ ೦೪೮೨(ನಿ), ಪುತ್ತೂರು ಫಿಲೋಮಿನಾ ಕಾಲೇಜು ಪ್ರಾಧ್ಯಾಪಕ ಡಾ. ಶಿವಕುಮಾರ್(ದೂರವಾಣಿ:(೦೮೨೪)೨೩೫ ೦೦೧(ನಿ) ತಂತಮ್ಮ ಪ್ರದೇಶದಲ್ಲಿ ಬಿಡುವಿನ ವೇಳೆಯಲ್ಲಿ ಆಸಕ್ತರಿಗೆ ಮಾಹಿತಿ ಕೊಡುವ, ಸಲಹೆ ಕೊಡುವ ಕೆಲಸ ಮಾಡುತ್ತಿದ್ದಾರೆ. ಕೋಲಾರ ಜಿಲ್ಲೆಯ ಗೌರಿಬಿದನೂರಿನಲ್ಲಿರುವ ನಿವೃತ್ತ ವಿದ್ಯಾ ಇಲಾಖೆಯ ಅಧಿಕಾರಿ ಕೆ.ನಾರಾಯಣಸ್ವಾಮಿ ಅಲ್ಲಿನ ಫ್ಲೋರೈಡ್ ಸಮಸ್ಯೆಯ ಬಗ್ಗೆ ಜನರಲ್ಲಿ ಪ್ರಜ್ಞೆ ಮೂಡಿಸುತ್ತಾ ಮಳೆಕೊಯ್ಲೇ ಅಲ್ಲಿಗೆ ಉತ್ತಮ ಪರಿಹಾರ ಎಂಬುದನ್ನು ಬಿಂಬಿಸುವುದಕ್ಕೆ ತುಂಬ ಶ್ರಮಪಡುತ್ತಿದ್ದಾರೆ. (ಕೆ.ನಾರಾಯಣಸ್ವಾಮಿ, ಜಂಟಿ ನಿರ್ದೇಶಕರು(ನಿ), ಕೇ/ಆ ಕೆ. ಜಿ. ಲಕ್ಷ್ಮೀನಾರಾಯಣ, ಡೋರ್ ನಂ.ಡಿ-೯೫೧,ವಿ.ವಿ.ಪುರಂ, ಗೌರಿಬಿದನೂರು-೫೬೧ ೨೦೮, ದೂರವಾಣಿ: (೦೮೧೫೫)೫೮೪ ೧೪೦.)

ಹಾವೇರಿ ಜಿಲ್ಲೆಯ ಕಾಕೋಳು ೧೯೭೫ರ ಸುಮಾರಿಗೆ ನೀರು,ಬೆಳೆ ಎಲ್ಲದರಲ್ಲೂ ಸಮೃದ್ಧಿ ಇದ್ದ ಹಳ್ಳಿ ಊರಲ್ಲಿರುವ ೧೬೫ ಬಾವಿಗಳಲ್ಲೂ ನೀರಿತ್ತು. ಕಪಿಲೆಯಲ್ಲಿ ನೀರೆತ್ತಿ ಬೆಳೆ. ಕಾಲಕ್ರಮದಲ್ಲಿ ಆಧುನಿಕ ಕೃಷಿ ಹೆಚ್ಚಿತು. ಬೀಜ ಉದ್ಯಮ ಕಾಲಿಟ್ಟಿತು. ಊರಲ್ಲಿ ಹಣ ಝುಣಗುಟ್ಟತೊಡಗಿತು. ಕೊಳವೆಬಾವಿಗಳು ಇಳಿದುವು. ನೀರು ಬತ್ತತೊಡಗಿ ಊರು ಭಣಗುಟ್ಟಿತು. ನಾಲ್ಕು ವರ್ಷದ ಹಿಂದೆ ಇಲ್ಲಿನ ಕೃಷಿಕ ಚೆನ್ನಬಸಪ್ಪ ಕೋಂಬ್ಳಿ ಅವರಿಗೆ ಬೈಫ್ ಸಂಸ್ಥೆಯಿಂದ ಜಲಕೊಯ್ಲಿನ ಸ್ಫೂರ್ತಿ. ಚಿಂತಿಸಿ ಚಿಂತಿಸಿ ಊರಿನ ಬೆಟ್ಟದಿಂದಿಳಿದು ಹರಿದುಬರುವ ನೀರನ್ನೆಲ್ಲಾ ಕ್ರಮವಾಗಿ ಬತ್ತಿದ ಬಾವಿಗೆ ತಿರುಗಿಸಿಬಿಟ್ಟರು. ಹಳೆಬಾವಿಗಳೇ ಇಂಗುಗುಂಡಿಗಳು. ಹಳ್ಳ ಸೇರುವ ನೀರು ಹೊಲಗಳ ಬಳಿ ಇಂಗಿತು. ಒಂದೇ ವರ್ಷದಲ್ಲಿ ಊರಿನವರಿಗೆ ಸಫಲತೆಯ ರುಚಿ. ಈಗ ಸಾಮೂಹಿಕ ಕೆಲಸ. ನೆಲ-ಜಲ ಸಂರಕ್ಷಣೆಗಾಗಿಯೇ ನೊಂದಾಯಿತ ಸಂಸ್ಥೆ ರಚನೆ. ಮಾಹಿತಿ ಪ್ರಸಾರ. ( ವಿಳಾಸ: ಚೆನ್ನಬಸಪ್ಪ ಕೋಂಬ್ಳಿ. ಅಂಚೆ: ಕಾಕೋಳು, ರಾಣೆಬೆನ್ನೂರು ತಾ., ಹಾವೇರಿ ಜಿಲ್ಲೆ, ದೂರವಾಣಿ: (೦೮೩೭೩)೮೫೩ ೫೦೪)

ಗದಗದ ಬಳಿಯ ಕಪ್ಪತ್‌ಗುಡ್ಡದ ಮೇಲೆ ನಂದಿವೇರಿ ಮಠವಿದೆ. ಕಳೆದ ವರ್ಷ ಆಗಸ್ಟ್ ತಿಂಗಳಲ್ಲಿ ಶಿವಕುಮಾರ ಸ್ವಾಮೀಜಿ ಇಲ್ಲಿ ಅಧಿಕಾರ ವಹಿಸಿಕೊಂಡರು. ಆಗ, ಮಳೆಗಾಲದಲ್ಲೇ ಇಲ್ಲಿನ ಎರಡೂ ತೆರೆದ ಬಾವಿಗಳು ಬತ್ತಿದ್ದವು. ದೂರದ ಹೊಲದಲ್ಲಿ ಕೊಳವೆಬಾವಿ ಕೊರೆದು ನೀರು ತರಬೇಕಾಯಿತು. ಸ್ವಾಮೀಜಿ ಉಳಿದೆಲ್ಲಾ ಕೆಲಸಕ್ಕಿಂತ ನೆಲ-ಜಲ ಸಂರಕ್ಷಣೆಗೆ ಆದ್ಯತೆ ಕೊಟ್ಟರು. ಸರಕಾರದ ಇಲಾಖೆ, ಜನಪ್ರತಿನಿಧಿಗಳ ಗಮನ ಸೆಳೆದರು. ಒಂದೇ ವರ್ಷದಲ್ಲಿ ಇಲ್ಲಿನ ೨೫೦ ಹೆಕ್ಟೇರ್ ಜಾಗದಲ್ಲಿ ಮಣ್ಣು-ನೀರು ತಡೆಯುವ ದೊಡ್ಡ ಕೆಲಸ. ನಾಲಾ ಬಂದ್, ಕೊರಕಲು ತಡೆ, ಸಮತಳ ಅಗಳು, ಇಂಗು ಗುಂಡಿಗಳಿಂದ ತೊಡಗಿ ಸಸ್ಯಾವರಣದ ಯತ್ನದವರೆಗೆ ವೈವಿಧ್ಯಮಯ ಉಪಚಾರ. ನೆಟ್ಟ ಒಂದು ಲಕ್ಷ ಗಿಡದಲ್ಲಿ ಹೆಚ್ಚಿನವು ಬದುಕಿವೆ. ಬರೇ ಬಿತ್ತಿಬಿಟ್ಟ ಎರಡು ಲಕ್ಷ

ಬೀಜಗಳಲ್ಲಿ ಅರ್ಧಕ್ಕರ್ಧ ಗಿಡವಾಗಿ ಚಿಗುರಹತ್ತಿವೆ. ಏಪ್ರಿಲ್ ನಂತರ ಹದಿನೈದು ದಿನಕೊಮ್ಮೆ ಸುರಿದ ಮಳೆಯ ಕೃಪೆಯಿದು. ಈಗ, ಒಂದೇ ವರ್ಷದ ನಂತರ, ಮಠದ ಎರಡೂ ಬಾವಿಗಳಲ್ಲಿ ನೀರು ತುಂಬಿದೆ. ಇಲ್ಲಿನ ಬಂಗಾರಹಳ್ಳದಲ್ಲಿ ಹೆಚ್ಚಿದ ಅಲ್ಪಕಾಲದ ಹರಿವು ಕೆಳಗಿನ ಹಳ್ಳಿಗರಲ್ಲಿ ಮಳೆಕೊಯ್ಲಿನ ಬಗ್ಗೆ ನಂಬಿಕೆ ಕುದುರಿಸುವಷ್ಟು ಫಲ ಕೊಟ್ಟಿದೆ. ಶಿವಕುಮಾರ ಸ್ವಾಮೀಜಿ, 'ಜಲಾಯ ನಮಃ ಕಾಡಿಲ್ಲದೆ ಬದುಕಿಲ್ಲ' ಎಂಬ ಸಂದೇಶವನ್ನು ನಾಲ್ದೆಸೆಗೆ ಬಿತ್ತುತ್ತಿದ್ದಾರೆ. (ವಿಳಾಸ: ಶಿವಕುಮಾರ ಸ್ವಾಮೀಜಿ, ನಂದಿವೇರಿ ಮಠ, ಡೋಣಿ-ಕಪೋತಗಿರಿ, ಮುಂಡರಗಿ ತಾ, ಗದಗ ಜಿಲ್ಲೆ, ದೂರವಾಣಿ : (೦೮೩೭೧) ೫೦೬೩೪೭.)

ಉತ್ತರ ಕನ್ನಡದ ಬನವಾಸಿಯ ಓಣಿಕೇರಿಯಲ್ಲಿ ೩೪ ಮನೆಗಳ ಊರು. ವಾರಕ್ಕೆರಡು ದಿನ ಶ್ರಮದಾನ ಮಾಡುತ್ತಾ ಮಾಡುತ್ತಾ ಕಳೆದೆರಡು ವರ್ಷಗಳಿಂದ ಈ ಊರ ರೈತರು ಮುನ್ನೂರು ಎಕ್ರೆ ಜಾಗದಲ್ಲಿ ನೀರಿಂಗಿಸಿದ್ದಾರೆ. ನೀರ ನೆಮ್ಮದಿಯತ್ತ ದೃಢ ಹೆಜ್ಜೆ ಇಡುತ್ತಿದ್ದಾರೆ. (ಸಂಪರ್ಕ: ಗಣಪತಿ ದ.ಹೆಗಡೆ, ಅಂಚೆ: ಓಣಿಕೇರಿ, ಬನವಾಸಿ ರಸ್ತೆ, ಶಿರಸಿ ತಾಲ್ಲೂಕು, ಉತ್ತರ ಕನ್ನಡ, ೫೮೧೩೧೮ ದೂರವಾಣಿ: ೦೮೩೮೪-೨೮೪೭೩೧)

ದಕ್ಷಿಣ ಕನ್ನಡದ ಪುತ್ತೂರಿನ ಬಳಿಯ ಇಡ್ಕಿದು ೩೬೪ ಕೊಳವೆ ಬಾವಿಗಳಿರುವ ಊರು. ಊರ ಜನ ಪ್ರಜ್ಞಾವಂತರು. 'ಅಮೃತ ಸಿಂಚನ ರೈತರ ಒಕ್ಕೂಟ'ದ ಆಶ್ರಯದಲ್ಲಿ ಕಳೆದೆರಡು ವರ್ಷಗಳಿಂದ ಇಲ್ಲಿನ ಮನೆಮನೆಗಳಲ್ಲಿ ಮಳೆಕೊಯ್ಲು ನಡೆಯುತ್ತಿದೆ. (ವಿಳಾಸ: ಅಮೃತ ಸಿಂಚನ, ಇಡ್ಕಿದು ಸೇವಾ ಸಹಕಾರಿ ಬ್ಯಾಂಕು, ಅಂಚೆ: ಇಡ್ಕಿದು, ೫೭೪೨೨೦; ಸಂಪರ್ಕ : ವೆಂಕಟ್ರಮಣ ಭಟ್ ಕೆದಿಮಾರು, ದೂರವಾಣಿ: ೦೮೨೫೫-೨೮೧೩೨೦)

ಸರಕಾರೇತರ ಸಂಸ್ಥೆಗಳು ಹಲವು ಜಲಾನಯನ ಅಭಿವೃದ್ಧಿಯಲ್ಲಿ ಮೆಚ್ಚತಕ್ಕ ಕೆಲಸ ಮಾಡಿವೆ. ತಿಪಟೂರು ಮತ್ತು ಧಾರವಾಡಗಳ 'ಬೈಫ್' ಸಂಸ್ಥೆ, ಮೈರಾಡಾ, ಗುರುವಾಯನಕೆರೆಯ ನಾಗರಿಕ ಸೇವಾ ಟ್ರಸ್ಟ್, ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ ಈ ರಂಗದಲ್ಲಿ ಸಾಧನೆ ಮಾಡಿರುವ ಕೆಲವು ಸಂಸ್ಥೆಗಳು.

ಹಾಗೆಯೇ ಮಂಗಳೂರಿನ ಪಿಲಿಕುಳದ ಬಳಿಯ ಹಳ್ಳಿ ಕಿರಾಮ್, (ಸಂಪರ್ಕ : ರೋಶನ್ ಎಂ. ಕಾಮತ್ , ಕಿರಾಮ್ ಮನೆ, ಅಂಚೆ : ಮೂಡುಶೆಡ್ಡೆ, ಮಂಗಳೂರು (ದ.ಕ.) ದೂರವಾಣಿ: (೦೮೨೪) ೨೬೨೨೨೦. ಶಿವಮೊಗ್ಗ ಜಿಲ್ಲೆಯ ಕೋಣಂದೂರಿನ ಶರಾವತಿ ಪ್ರಥಮ ದರ್ಜೆ ಕಾಲೇಜು (ವಿಳಾಸ: ಗಣೇಶಮೂರ್ತಿ, ಪ್ರಾಂಶುಪಾಲರು, ಶರಾವತಿ ಪ್ರಥಮ ದರ್ಜೆ ಕಾಲೇಜು , ಅಂಚೆ: ಕೋಣಂದೂರು-೫೭೭ ೪೨೨, ಶಿವಮೊಗ್ಗ ಜಿಲ್ಲೆ. ದೂರವಾಣಿ: ೦೮೧೮೧-೨೭೬ ೬೩೫;೨೭೬೪೫೫ (ಕಾಲೇಜು); (೦೮೧೮೫) ೨೫೧೧೨೨; ೨೫೧೧೦೨ (ಮನೆ), ಸಾಗರದ ಬಳಿಯ ಹುಳೇಗಾರುಗಳಲ್ಲಿ (ಸಂಪರ್ಕ : ಎಚ್.ಟಿ.ಸದಾಶಿವ ಭಟ್, ಹುಳೇಗಾರು, ಅಂಚೆ: ಸಾಸರವಳ್ಳಿ, ಸಾಗರ-ಶಿವಮೊಗ್ಗ, ೫೭೭ ೪೦೧, ದೂರವಾಣಿ: (೦೮೧೮೩)೩೩೧ ೯೭೮. ಇಲ್ಲೆಲ್ಲಾ ಉಲ್ಲೇಖಿಸಬಹುದಾದಂತಹ ಸಾಮೂಹಿಕ ಜಲಕೊಯ್ಲು ನಡೆದಿದೆ. ಈ ರೀತಿಯ ಸಾಧನೆ ಮಾಡಿದ ಸಂಸ್ಥೆ, ವ್ಯಕ್ತಿಗಳ ಪಟ್ಟಿ ಇನ್ನೂ ದೊಡ್ಡದಿದೆ. ಕೆಲವೊಂದರ ಚಿತ್ರಣ ಮಾತ್ರ ಇಲ್ಲಿ ಕೊಟ್ಟಿದ್ದೇನೆ.

ಈ ಎಲ್ಲಾ ನೀರ ನೆಮ್ಮದಿಯ ಸಂದೇಶವಾಹಕರ ಒಂದು ಎದ್ದು ಕಾಣುವ ಸಮಾನ ಅಂಶವೆಂದರೆ, ಅವರು ಸ್ವಯಂಪ್ರೇರಣೆಯಿಂದ ಕೆಲಸ ಮಾಡುತ್ತಿದ್ದಾರೆಂಬುದು ಮಾತ್ರವಲ್ಲ. ತಾವು ಮೊತ್ತಮೊದಲು ಒಂದಷ್ಟು ಮಳೆಕೊಯ್ಲಿನ ಅನುಷ್ಠಾನ ಮಾಡಿ ಯಶ ಪಡೆದು ಪ್ರಯೋಗ ಮಾಡುತ್ತಾ ಕಲಿಯುತ್ತಾ ಇವರು ಮುಂದುವರಿಯುತ್ತಿದ್ದಾರೆ. ಒಂದೆಡೆಯ ಮಾದರಿ ಸುತ್ತಲಿನವರಿಗೆ ಪ್ರೇರೇಪಣೆ ಒದಗಿಸಿದೆ. ಬರೇ 'ಕೇಳಿದ್ದನ್ನು' ಹೇಳುವವರು ಇವರಲ್ಲ, ಬದಲಿಗೆ 'ನೋಡಿ', ಇನ್ನೂ ಹೆಚ್ಚಾಗಿ 'ಮಾಡಿ' ಹೇಳುತ್ತಿರುವುದರಿಂದ ಆಗುತ್ತಿರುವ ಪರಿಣಾಮವೂ ದೊಡ್ಡದು.

## ಜಲಸಂವರ್ಧನೆಗೆ ಲೇಖಕರ ಕೊಡುಗೆ :

ಕೇರಳದ ಕಾಸರಗೋಡು ಜಿಲ್ಲೆಯ ಪತ್ರಕರ್ತ. 'ಅಡಿಕೆ ಪತ್ರಿಕೆ' ಯ ಸ್ಥಾಪಕ ಸಂಪಾದಕ. ಈಗ ಸಂಪಾದಕೀಯ ಸಲಹೆಗಾರ. ಅಡಿಕೆ ಪತ್ರಿಕೆ ಮತ್ತು ಜಲಕೂಟದ ಆಶ್ರಯದಲ್ಲಿ ಒಂದು ದಶಕದಿಂದ ಮಳೆ ಕೊಯ್ಲಿನ ಬಗ್ಗೆ ಅಧ್ಯಯನ-ಬರವಣಿಗೆ-ದೇಶ ವಿದೇಶಗಳಲ್ಲಿ ಮಳೆ ನೀರಿಂಗಿಸಿ ಗೆದ್ದವರ ವಿವರ ಸಂಗ್ರಹ ; ಪ್ರಸಾರ.

ಮಳೆ ನೀರಿಂಗಿಸುವ ಬಗ್ಗೆ ಒಟ್ಟು ಏಳು ಪುಸ್ತಕಗಳ ಪ್ರಕಟಣೆ. ಕನ್ನಡದಲ್ಲಿ ಆರು; ಇಂಗ್ಲಿಷಿನಲ್ಲಿ ಒಂದು. ಪುಸ್ತಕಗಳು: ನೆಲ ಜಲ ಉಳಿಸಿ, ಹನಿಗೂಡಿಸುವ ಹಾದಿಯಲ್ಲಿ, ಮತ್ತೆ ರೂಪಾರೆಲ್ ಬತ್ತಲಿಲ್ಲ, ಬಾನಿಗೊಂದು ಆಲಿಕೆ, ಗುಜರಾತಿನ ನೀರ ತಿಜೋರಿ ಟಾಂಕಾ ನೀರ ನೆಮ್ಮದಿಗೆ ನೂರಾರು ದಾರಿ ಮತ್ತು ಇಂಗ್ಲಿಷಿನಲ್ಲಿ ರೈನ್‌ವಾಟರ್ ಹಾರ್ವೆಸ್ಟಿಂಗ್. ಜಲಕೂಟ ಜಗತ್ತಿನೆಲ್ಲೆಡೆಯ ಮಳೆಕೊಯ್ಲಿನ ಯಶೋಗಾಥೆಗಳನ್ನು ದಾಖಲಿಸುತ್ತಿದೆ. ಪಾರಂಪರಿಕ ಮಳೆ ನೀರಿಂಗಿಸುವ ವ್ಯವಸ್ಥೆಗಳ ಬಗ್ಗೆ ಒತ್ತು- 'ಹನಿಗೂಡಿಸೋಣ' ಬೇಗನೆ ಹೊರಬರಲಿರುವ ಕೃತಿ.

ಎರಡು ವರ್ಷದಿಂದ 'ವಿಜಯ ಕರ್ನಾಟಕ'ದಲ್ಲಿ 'ಹನಿಗೂಡಿಸೋಣ' ಎಂಬ ಅಂಕಣ. ಹಿಂದೆ 'ಜನವಾಹಿನಿ'ಯಲ್ಲಿ ಇದೇ ವಿಚಾರದಲ್ಲಿ 'ಸುಜಲಾಂ ಸುಫಲಾಂ' ಎಂಬ ವಾರದ ಅಂಕಣ ಬರಹ. 'ದಿ ಹಿಂದು' 'ಇಲಿಯಾ' ಮತ್ತಿತರ ಹಲವು ಪತ್ರಿಕೆಗಳಲ್ಲಿ ಲೇಖನ.

ಕರ್ನಾಟಕ ಕೇರಳಗಳಲ್ಲಿ ನಾನೂರಕ್ಕೂ ಹೆಚ್ಚು ಸ್ಲೈಡ್ ಶೋ ಮೂಲಕ ಜಲಜಾಗೃತಿ. ಕಳೆದೆರಡು ವರ್ಷಗಳಲ್ಲಿ ಕರ್ನಾಟಕದ ಆರು ಜಿಲ್ಲೆಗಳಲ್ಲಿ ಇನ್ನೂರಕ್ಕೂ ಹೆಚ್ಚು ಸ್ಲೈಡ್ ಶೋ; ಇದಕ್ಕಾಗಿ ೩೦,೦೦೦ ಕಿಲೋಮೀಟರ್ ಪ್ರಯಾಣ. ಅಡಿಕೆ ಪತ್ರಿಕೆ ಕಳೆದ ಎಂಟು ವರ್ಷದಿಂದ ಪ್ರಕಟಿಸುತ್ತಿರುವ 'ನೆಲಜಲ ಉಳಿಸಲು ನೂರು ವಿಧಿ' ಎಂಬ ಲೇಖನ ಮಾಹಿತಿಯ ತಯಾರಿಕೆಯಲ್ಲಿ ಪಾಲುಗಾರಿಕೆ ಅಡಿಕೆಯಿಂದ ಮಾಹಿತಿ/ ಸ್ಫೂರ್ತಿ ಪಡೆದು ವೈಯಕ್ತಿಕ ಮಟ್ಟದಲ್ಲಿ ನೀರಿಂಗಿಸಿ ಸಫಲತೆ ಪಡೆದವರು ಆರೇಳು ಜಿಲ್ಲೆಯಲ್ಲಿ ನೂರಕ್ಕೂ ಹೆಚ್ಚು ಮಂದಿ ಇದ್ದಾರೆ.

ಇವರು ಕೊಟ್ಟ ಮಾಹಿತಿ/ಪ್ರೇರಣೆಯಿಂದ ಆರೆಂಟು ಜಿಲ್ಲೆಯಲ್ಲಿ ನೂರಾರು ಮಂದಿ ಸರಕಾರದಿಂದ ಚಿಕ್ಕಾಸೂ ಬಯಸದೆ ತಂತಮ್ಮ ನೀರ ಕೊರತೆಯನ್ನು ಹಂತಹಂತವಾಗಿ ಪರಿಹರಿಸಿಕೊಳ್ಳುತ್ತಿದ್ದಾರೆ. ಇವರ ಅಂಕಣ ಓದಿ, ಸ್ಲೈಡ್‌ಶೋ ನೋಡಿ ಸ್ವತಃ ಮಳೆಕೊಯ್ಲು ಮಾಡಿ ಸಫಲರಾದ ನೂರಾರು ಮಂದಿ ಕರ್ನಾಟಕದ ಹಲವೆಡೆ ಇದ್ದಾರೆ. ಮೂವತ್ತಕ್ಕೂ ಹೆಚ್ಚು ಮಂದಿ ಸ್ವಯಂಸ್ಫೂರ್ತಿಯಿಂದ ಮಾಹಿತಿ ಹಂಚುತ್ತಿದ್ದಾರೆ.

## ರಾಷ್ಟ್ರಮಟ್ಟದಲ್ಲಿ ಜಲಸಂವರ್ಧನೆಗೆ ದುಡಿದವರು :

ರಾಳೆಗಾಂವ್ ಸಿದ್ದಿ ಮತ್ತು ಸುಖೋಮಾಜ್ರಿಗಳು ದೇಶದ ನೆಲ-ಜಲ ಪುನರುಜ್ಜೀವನದ ಮೊದಲ ಮೈಲಿಗಲ್ಲುಗಳು. ಎಂಬತ್ತರ ದಶಕದ ಆದಿಯ ಕಾಲಘಟ್ಟ. ಇಲ್ಲಿ ನಡೆದದ್ದು ಪವಾಡವೇನಲ್ಲ. ತಪ್ಪಿನ ಅರಿವು. ಯೋಜಿತ ಜನಯತ್ನ. ಬೀಳುವ ಮಳೆಯನ್ನು ಅಲ್ಲಲ್ಲೇ ಹಿಡಿಯುವತ್ತ ಒತ್ತು. ಅತ್ಯಮೂಲ್ಯ ಆಸ್ತಿಯಾದ ಮೇಲ್ಮಣ್ಣಿನ ಸವಕಳಿ ತಪ್ಪಿಸಿ ಊರಿನ ಸುಸ್ಥಿರ ಅಭಿವೃದ್ಧಿಗೆ ಬೆಂಬಲವಾಗಲು ಹಸಿರೆಬ್ಬಿಸುವ ಕಾರ್ಯ.

ದೇಶದುದ್ದಗಲಕ್ಕೆ ಸ್ಫೂರ್ತಿಯ ಕಿಡಿ ಹಬ್ಬಿಸಿದ ಪ್ರಕೃತಿ ಪುನರುಜ್ಜೀವನದ ಆಂದೋಲನ ರಾಜಸ್ಥಾನದ್ದು. ಡಾ.ರಾಜೇಂದ್ರಸಿಂಗ್ ಅವರ 'ತರುಣ ಭಾರತ' ಸಂಘದ ಸಾಧನೆ. ಬಡವರ ಜತೆ ಬದುಕುತ್ತಾ ಅವರಿಗಾಗಿ 'ಏನೋ ಒಳ್ಳೆಯದನ್ನು' ಮಾಡಬೇಕೆನ್ನುವ 'ಹುಚ್ಚು ಕನಸು' ಈ ಆಯುರ್ವೇದ ಡಾಕ್ಟರಿಗೆ. ಈ ಹುಚ್ಚೇ ೧೯೮೫ ಅಕ್ಟೋಬರ್ ೨ ರಂದು ಅವರನ್ನು ಆಲ್ವಾರ್ ಜಿಲ್ಲೆಯ ಭೀಕಾಂಪುರ ಕಿಶೋರಿಗೆ ಕರೆತಂದಿತು. ತಲೆಯಲ್ಲಿ ಜಯಪ್ರಕಾಶ್ ನಾರಾಯಣರ ತತ್ವಗಳು. ಆಗ ಆಲ್ವಾರಿನಲ್ಲಿ ಕಿತ್ತು ತಿನ್ನುವ ಬಡತನ. ನೂರಕ್ಕೆ ತೊಂಬತ್ತು ಜನ ಒಕ್ಕಲುತನ ಸಾಧ್ಯವಾಗದೆ ಶಹರಕ್ಕೆ ಗುಳೇ ಹೋಗಿದ್ದರು. ಸಮಸ್ಯೆಗಳ ಬೇರುಗಳನ್ನು ಅರಸಲು ರಾಜೇಂದ್ರರಿಗೆ ವರ್ಷಗಳೇ ಹಿಡಿದವು. ನೀರಿನ ಕೊರತೆ, ಕಾಡು ಬೋಳಾದದ್ದು ಬದುಕು ಅಸ್ಥಿರವಾಗಲು ಮೂಲಕಾರಣವಾಗಿತ್ತು.

ಈ ಸಮಸ್ಯೆಗೆ ಪರಿಹಾರವೇನು? ಹಳ್ಳಿಗರ ಪಾರಂಪರಿಕ ಜ್ಞಾನಭಂಡಾರದಲ್ಲಿ ಇದಕ್ಕೆ ಉತ್ತರವಿತ್ತು-ಜೋಹಾಡ್. 1988 ರಲ್ಲಿ ಒಂದು ಜೋಹಾಡಿನ ಪುನರ್ನಿರ್ಮಾಣ. ಕೆಳಗಿನ ಬತ್ತಿದ ಬಾವಿಗಳಲ್ಲಿ ನೀರು. ಒಂದೇ ವರ್ಷದಲ್ಲಿ ಸುತ್ತಲಿನ ಹಳ್ಳಿಗಳಲ್ಲಿ ಜನ ಇನ್ನೂ ೫೦ ಜೋಹಾಡ್ ನಿರ್ಮಿಸಿದರು. ಹತ್ತು ವರ್ಷಗಳಲ್ಲಿ ಈ ಆಂದೋಲನ ೬೫೦ ಹಳ್ಳಿಗಳಿಗೆ ಹಬ್ಬಿತು. ಮೂರು ಸಾವಿರಕ್ಕಿಂತ ಹೆಚ್ಚು ಜೋಹಾಡ್ ಮತ್ತು ತಡೆಗಟ್ಟೆಗಳು ತಯಾರಾಗಿ ಮಳೆ ಹಿಡಿಯತೊಡಗಿದವು. ಅಷ್ಟರಲ್ಲಿ ಯಾರೂ ಕನಸು ಕಾಣದ ದೊಡ್ಡ ಬದಲಾವಣೆ ಆಯಿತು. ಮಳೆಗಾಲದ ನಂತರ ಒಂದೆರಡು ತಿಂಗಳು ಮಾತ್ರ ಹರಿಯುತ್ತಿದ್ದ ಐದು ನದಿಗಳು-ಆರ್‌ವಾರಿ,ರೂಪಾರೇಲ್, ಸರ್ಸಾ,

ಭಗಿನಿ-ಟೆಲ್ಡೆಹ್ ಮತ್ತು ಜಹಜ್‌ವಾಲಿ ೧೯೯೫ ರಲ್ಲಿ ಮೊತ್ತಮೊದಲಿಗೆ ಹನ್ನೆರಡು ತಿಂಗಳೂ ಹರಿದವು. ತಾನು 'ಕಪ್ಪು ಪ್ರದೇಶ' ಎಂದು ಘೋಷಿಸಿದ ಜಾಗ 'ಬಿಳಿ'ಯಾಗಿದೆ ಎಂದು ನಬಾರ್ಡ್ ತಿಳಿಸಿತು. ಕೃಷ್ಯುತ್ಪನ್ನ ಹತ್ತು ಪಟ್ಟು ಏರಿತು. ವಲಸೆ ಹೋದವರು ಹಿಂದುರುಗಿ ಬಂದು ತಂತಮ್ಮ ಜಮೀನಿನಲ್ಲಿ ಕೃಷಿ ಆರಂಭಿಸಿದರು. ಊರವರು ತಮ್ಮದೇ ಆದ ಅಭಯಾರಣ್ಯ ಬೆಳೆಸಿದರು. ಪುನರುಜ್ಜೀವನದ ಮೂಲಕ ಅರಣ್ಯದ ದಟ್ಟಣೆ ಹೆಚ್ಚಿತು.

ತರುಣ ಭಾರತ ಸಂಘದ ಆಂದೋಲನ ನಮಗೇಕೆ ಮುಖ್ಯವಾಗಿದೆ ಎಂದರೆ ಅಲ್ಲಿ ಇಂಗಿದ್ದು ನೀರು ಮಾತ್ರವಲ್ಲ, ಜ್ಞಾನ ಕೂಡಾ. ನೀರುಳಿಸಲು, ಕಾಡು ಬೆಳೆಸಲು ಏನು ಮಾಡಬೇಕು, ಇವು ಬದುಕಿಗೇಕೆ ಅಗತ್ಯ ಎನ್ನುವ ಅರಿವು ಅಲ್ಲಿನ ಪ್ರತಿಯೊಬ್ಬ ಹಳ್ಳಿಗರಿಗೂ ತಲುಪಿದೆ. ಒಂದು ಉದಾಹರಣೆ ನೋಡಿ. ಜೈಪುರದಿಂದ ೩೫ ಕಿ.ಮೀ. ದೂರದಲ್ಲಿ ನೀಮಿ ಎಂಬ ಹಳ್ಳಿ ಇದೆ. ಇಲ್ಲಿ ಕೃಷಿಯೇ ಇರಲಿಲ್ಲ. ದಿನನಿತ್ಯದ ಅಗತ್ಯಕ್ಕೂ ಜೈಪುರ, ದೆಹಲಿಗಳಿಂದ ಬರುವ ತರಕಾರಿ, ಧಾನ್ಯ. ಈ ಹಳ್ಳಿಯ ಕೆಲವು ಹುಡುಗಿಯರನ್ನು ಭೀಕಾಂಪುರ-ಕಿಶೋರಿಗೆ ಮದುವೆ ಮಾಡಿಕೊಟ್ಟಿದ್ದರು. ಬೀಗರಲ್ಲಿಗೆ ಹೋಗಿ ನೋಡಿದಾಗ ಇವರಿಗೆ ಅಚ್ಚರಿ. ಅಲ್ಲಿ ಎಲ್ಲವೂ ಬದಲಾಗಿತ್ತು. ನೀರಿತ್ತು, ಹಸಿರಿತ್ತು, ಬದುಕಲ್ಲಿ ನೆಮ್ಮದಿಯೂ. ಭಾವನೆಂಟರೊಡನೆ 'ಈ ವಿದ್ಯೆಯನ್ನು ನಮಗೂ ಕಲಿಸಿಕೊಡಿ' ಎಂಬ ವಿನಂತಿ. ನೆಂಟರು ನೀಮಿಗೆ ಬಂದು ತಿಳಿವಳಿಕೆಯ ಧಾರೆ ಎರೆದರು. ಈಗ ನೀಮಿ ಪೂರ್ತಿ ಬದಲಾಗಿದೆ. ತರಕಾರಿ ಸೀಸನ್ನಿನಲ್ಲಿ ದಿನಕ್ಕೆ ೪೦-೫೦ ಲಾರಿ ತರಕಾರಿಯನ್ನು ಅದೇ ಜೈಪುರ-ದೆಹಲಿಗೆ 'ರಫ್ತು' ಮಾಡುತ್ತಿದೆ.

ಮನುಷ್ಯ ಯತ್ನದಿಂದ ಬತ್ತುತ್ತಿದ್ದ ಹೊಳೆ ವರ್ಷವಿಡೀ ಹರಿಯತೊಡಗಿದ್ದು ಇದು ಜಗತ್ತಿನಲ್ಲೇ ಪ್ರಥಮ. ಡಾ.ಸಿಂಗ್ ಅವರಿಗೆ ಮ್ಯಾಗ್‌ಸೇಸೆ ಪ್ರಶಸ್ತಿ ಕೊಡುವಾಗ ಫಿಲಿಪೀನ್ಸ್ ಅಧ್ಯಕ್ಷರು ಅವರೊಡನೆ ಕೇಳಿದ್ದೇನು ಗೊತ್ತೇ? "ನಮ್ಮ ನದಿಯನ್ನೂ ವರ್ಷಪೂರ್ತಿ ಹರಿಯುವಂತೆ ಮಾಡುವ ದಾರಿ ಹೇಳಿಕೊಡಿ" ಅಂತ. ಗದಗದ ಬಳಿಯ ಈಚಲಹಳ್ಳವನ್ನು ಸತತ ಹರಿಯುವ ಹಾಗೆ ಮಾಡಬೇಕೆಂದು ಅಲ್ಲಿನ ಶಾಸಕರುಗಳಾದ ಸೋದರರು ಸಿಂಗ್ ಅವರನ್ನು ಇಲ್ಲಿಗೆ ಆಗಾಗ ಕರೆಸಿಕೊಳ್ಳುತ್ತಾರೆ.

ರಾಜಸ್ಥಾನದಲ್ಲೇ ಇದೆ ಲಕ್ಷ್ಮಣಸಿಂಗರ ಲಾಪೋಡಿಯಾ. ಲಾಪೋಡಿಯಾ ಅಂದರೆ 'ಹುಚ್ಚರ ಹಳ್ಳಿ' ಎಂದರ್ಥ. ಒಂದು ಕಾಲದಲ್ಲಿ ಅದು ಹಾಗೆಯೇ ಇತ್ತು. ಪರದೂಷಣೆ ಮಾಡುತ್ತಾ ಸೋಮಾರಿಗಳಾಗಿ ಇಲ್ಲಿನ ಹಳ್ಳಿಗರು ದಿನ ಕಳೆಯುತ್ತಿದ್ದರು. ಊರು ದುರ್ಗತಿಯಲ್ಲಿತ್ತು. ಇದರಿಂದ ಬೇಸತ್ತ ಲಕ್ಷ್ಮಣ ಸಿಂಗ್ ಒಂದು ಬಾರಿ ರಜೆಗೆಂದು ಊರಿಗೆ ಬಂದವರು ಮತ್ತೆ ಶಾಲೆಗೆ ಕಾಲಿಡಲಿಲ್ಲ. ತನ್ನಷ್ಟೂ ವಿದ್ಯೆ ಇಲ್ಲದವರಿಗಾಗಿ ರಾತ್ರಿ ಶಾಲೆ ತೆರೆದರು. ಊರಿಗೇ ಅಕ್ಷರ ಕಲಿಸಿದರು. ನಿಧಾನವಾಗಿ ಗಮನ ಊರ ದುಸ್ಥಿತಿಯ ಕಡೆಗೆ. ಕೆರೆಗಳು ಹಾಳುಬಿದ್ದಿದ್ದುವು. ಅವುಗಳ ದುರಸ್ತಿಗೆ ಹಣವಿಲ್ಲ. ಇದಕ್ಕಾಗಿ ಸಿಂಗ್ ಹೊಸ ಯೋಜನೆ ರೂಪಿಸಿದರು. ನಲವತ್ತೆರಡು ಹಳ್ಳಿಗಳ ಒಕ್ಕೂಟ. ಒಂದು ಹಳ್ಳಿಯ ಕೆರೆ ಕೆಲಸಕ್ಕೆ ಉಳಿದ ೪೧ ಊರವರೂ ಬರಬೇಕು. ಅವರಿಗೆ ಊಟ, ವಸತಿ ಒದಗಿಸುವುದಷ್ಟೇ ಅತಿಥೇಯ ಹಳ್ಳಿಯ ಜವಾಬ್ದಾರಿ. ಈ ಹಳ್ಳಿಗಳ ಸರ್ವತೋಮುಖ ಅಭಿವದ್ಧಿಗಾಗಿ [sic] 'ಗ್ರಾಮೀಣ ವಿಕಸನ ನವಯುವಕ ಮಂಡಲ, ಲಾಪೋಡಿಯಾ' ಸ್ಥಾಪನೆ- ದೇಸೀ ಹಸುಗಳ ಅಭಿವೃದ್ಧಿಗೆ- ಗೋಚರಾವು ಅಭಿವೃದ್ಧಿಗೆ ಗಮನ.

ತಮ್ಮೂರಿನ ಅಭಿವೃದ್ಧಿಯ ತಳಹದಿ ಪಶುಪಾಲನೆ ಎಂಬುದು ಇವರಿಗೆ ಅರಿವಾಗಿದೆ. ಬೇಕಾದಷ್ಟು ಹುಲ್ಲು ಬೆಳೆದುಕೊಳ್ಳಲು ಸಮತಳ ಅಗಳಿನಂತಹ ಮಣ್ಣು-ನೀರಿನ ಸಂರಕ್ಷಣಾ ವಿಧಾನ ಅಷ್ಟು ಸೂಕ್ತವಲ್ಲ ಅಂತ ಲಕ್ಷ್ಮಣ್‌ಸಿಂಗರಿಗೆ ಅನಿಸಿತು. ಈ ಚಿಂತನೆಯಿಂದ ಅವರು ಆವಿಷ್ಕರಿಸಿದ್ದು 'ಚೌಕ' ವಿಧಾನ. ಇಂದು ರಾಜಸ್ಥಾನದ ನೂರಾರು ಹಳ್ಳಿಗಳಲ್ಲಿ ಈ ವಿಧಾನ ಜನಪ್ರಿಯ. ಇಂದಿಗೂ ದೀಪಾವಳಿಯ ನಂತರದ ಹನ್ನೊಂದನೆಯ ದಿನ ಈ ಹಳ್ಳಿಗಳ ಉತ್ಸಾಹಿಗಳು ಇತರ ನಲವತ್ತೊಂದು ಹಳ್ಳಿಗಳಿಗೆ ಜಾಥಾ ಹೋಗುತ್ತಾರೆ. ಸುಮ್ಮನೆ ಮಜಾ ಮಾಡಿ ಬರುವುದಕ್ಕಲ್ಲ. ಯಾವುದಾದರೂ ಹಳ್ಳಿಯ ಕೆರೆಗೆ ದುರಸ್ತಿ ಬೇಕು ಎನಿಸಿದರೆ- ಈ ನಿರ್ಧಾರವನ್ನೂ ಜನರೇ ಮಾಡುತ್ತಾರೆ- ಅಲ್ಲೇ ಉಳಿದು, ಆ ಕೆಲಸ ಪೂರೈಸಿದ ನಂತರ ಜಾಥಾ ಮುಂದುವರಿಯುತ್ತದೆ.

ಸೌರಾಷ್ಟ್ರದಲ್ಲಿ ನಡೆಯುತ್ತಿರುವ ತೆರೆದ ಬಾವಿಯ ಮರುಪೂರಣ ಆಂದೋಲನವೂ ಮಹತ್ವದ್ದೇ. ೮೦ರ ದಶಕದ ಮಧ್ಯದಲ್ಲಿ ಅಲ್ಲಿ ಮೂರು ವರ್ಷ ಸತತ ಬರಗಾಲ. ಜನ ಸ್ನಾನ ಮಾಡಿದ ನೀರನ್ನೂ ಮರುಬಳಕೆ ಮಾಡಲು ಕಲಿತದ್ದು ಆ ಸಂಕಟ ಕಾಲದಲ್ಲಿ. ನಾಲ್ಕನೆಯ ವರ್ಷ ಒಳ್ಳೆ ಮಳೆ. ಒಬ್ಬ ರೈತ ನೆರೆಹೊರೆಯವರ ಎಚ್ಚರಿಕೆಯನ್ನೂ ಲೆಕ್ಕಿಸದೆ ತನ್ನ ಬಾವಿಯ ಸುತ್ತ ಬಿದ್ದ ನೀರನ್ನು ಬಾವಿಗೆ

ತುಂಬಿದ. ಮುಂದಿನ ವರ್ಷ ನೀರು ಉಳಿದದ್ದು ಅವನ ಬಾವಿಯಲ್ಲಿ ಮಾತ್ರ. ಇದನ್ನೆಲ್ಲಾ ಹಿರಿಯರೊಬ್ಬರು ಕುತೂಹಲದಿಂದ ಗಮನಿಸುತ್ತಿದ್ದರು-ಶ್ಯಾಮ್‌ಜಿಭಾಯ್ ಅಂಟಾಲಾ.

ಈ ಅಲ್ಪವೆಚ್ಚದ ವಿಧಾನ ತಮ್ಮೂರಿಗೆ ಹೇಳಿಸಿದ್ದು ಎನಿಸಿತು ಅವರಿಗೆ. ಒಂದಷ್ಟು ಸುಧಾರಣೆಗಳನ್ನು ಮಾಡಿ ಅವರು ಅದನ್ನು ವ್ಯಾಪಕವಾಗಿ ಪ್ರಚಾರಮಾಡತೊಡಗಿದರು. ಸೌರಾಷ್ಟ್ರದಲ್ಲಿ ಅಂದಾಜು ಏಳು ಲಕ್ಷ ತೆರೆದ ಬಾವಿಗಳಿವೆ. ಇವೆಲ್ಲಾ ಎರಡು-ಮೂರು ಲಕ್ಷ ಲೀಟರ್ ನೀರು ಹಿಡಿಸುವ ನೀರಾವರಿಗೆ ಮಾತ್ರ ಬಳಕೆಯಾಗುವ ಬಾವಿಗಳು. ಹತ್ತಿರ ಗುಡ್ಡೆ ಸಿಕ್ಕರೆ ಅಲ್ಲಿಂದ ಹರಿದುಬರುವ ಮಳೆನೀರನ್ನು ಒಂದು ಸೋಸುಗುಂಡಿಯಲ್ಲಿ ಸೋಸಿ ನೇರವಾಗಿ ಬಾವಿಯೊಳಕ್ಕೆ ಬಿಡುವುದು. ಗುಡ್ಡದಿಂದ ಬರುವ ನೀರು ಸಾಕಷ್ಟು ಇಲ್ಲದಿದ್ದರೆ, ಹತ್ತಿರವೇ ಹಳ್ಳ ಇದ್ದರೆ, ಅಲ್ಲಿನ ನೀರನ್ನು ಭೂಗತ ಕೊಳವೆಗಳ ಮೂಲಕ ಸೋಸುಗುಂಡಿಗೆ ತಂದು ಒಳಹರಿಸುವುದು.

ನೀರಿಂಗಿಸುವ ವಿದ್ಯೆಗಳ ಪ್ರಚಾರಕ್ಕಾಗಿಯೇ ಸ್ನೇಹಿತರೊಡಗೂಡಿ ಅಂಟಾಲಾ 'ಸೌರಾಷ್ಟ್ರ ಲೋಕ ಮಂಚ್' ಎಂಬ ಸಂಸ್ಥೆ ಕಟ್ಟಿದರು. ಆ ಕಾಲಘಟ್ಟದಲ್ಲಿ ಅಲ್ಲಿ ಸಾಮೂಹಿಕ ಮದುವೆ ಜನಪ್ರಿಯ ಆಗಿತ್ತು. ಒಂದೊಂದು ಮದುವೆಯಲ್ಲೂ ನೂರಾರು ಜೋಡಿಗಳು. ಸಾಮೂಹಿಕ ಮದುವೆ ನಡೆಯುವಲ್ಲೇ ಸಂಸ್ಥೆ ಮಳೆಕೊಯ್ಲಿನ ಮಾದರಿಗಳನ್ನು ಮಾಡಿಟ್ಟು ತಿಳಿವಳಿಕೆ ಕೊಡಲು ಆರಂಭಿಸಿತು. ಹತ್ತು ವರ್ಷಗಳಲ್ಲಿ ಹಳ್ಳಿಹಳ್ಳಿಗಳಲ್ಲಿ ಜನ ಬಾವಿಗಳ ಮರುಪೂರಣ ಮಾಡಿದರು. ಒಂದು ಅಂದಾಜಿನಂತೆ ಮೂರು ಲಕ್ಷ ಬಾವಿಗಳು ಹೀಗೆ ಮರುಜೀವ ಪಡೆದಿವೆ. ಇದರಿಂದಾಗಿ ಮೂರು ಲಕ್ಷ ಹೆಕ್ಟೇರಿನಲ್ಲಿ ಕೃಷ್ಯುತ್ಪಾದನೆ ಹೆಚ್ಚಿತು. ಅಂದಾಜು ೧೫೦ ಕೋಟಿ ರೂ.ಗಳ ಹೆಚ್ಚುವರಿ ವರಮಾನ. ರಾಜ್‌ಕೋಟ್‌ನಂತಹ ಶಹರಗಳಲ್ಲಿ ನೀರಿಗಾಗಿಯೇ ವ್ಯಯಿಸಬೇಕಾಗಿತ್ತು. ಇಂಥವರಿಗೆ ಮಳೆಕೊಯ್ಲಿನ ಮಾಹಿತಿ ತುಂಬಾ ಇಷ್ಟವಾಯಿತು. ರಾಜ್‌ಕೋಟ್ ಪಟ್ಟಣವೊಂದರಲ್ಲೇ ೮,೦೦೦ ಮನೆಗಳಲ್ಲಿ ಜನ ಛಾವಣಿ ನೀರನ್ನು ತಂತಮ್ಮ ಕುಡಿನೀರಿನ ಕೊಳವೆಬಾವಿಗೆ ಉಣಿಸಲು ತೊಡಗಿಸಿದರು.

ಸೌರಾಷ್ಟ್ರದ್ದೇ ಆದ ಇನ್ನೊಂದು ದೊಡ್ಡ ಜಲಾಂದೋಲನ ಸೂರತ್ತಿನ ಜಲಧಾರಾ ಟ್ರಸ್ಟಿನದ್ದು. ಇದರ ಸ್ಥಾಪಕ ವಜ್ರದ ವ್ಯಾಪಾರಿ ಮಾಥುರ್‌ಭಾಯ್ ಸವಾನಿ. ದೀಪಾವಳಿ ರಜೆಗೆಂದು ಸ್ವಂತ ಊರಾದ ಖೋಪಾಲಕ್ಕೆ ಹೋದಾಗ ಅಲ್ಲಿನ ನೀರ ಬವಣೆ, ಬಡತನ ಕಂಡು ಮಾಥುರ್‌ಭಾಯ್‌ಗೆ ಸಂಕಟವಾಯಿತು. ಇದಕ್ಕೇನು ಪರಿಹಾರ ಎಂಬ ಚಿಂತನೆ. ರಾಜಸ್ಥಾನದ ಆಲ್ವಾರಿಗೆ ಭೇಟಿ. ಅಲ್ಲಿನ ಕೆಲಸಗಳ ಅಧ್ಯಯನ. ಊರಿಗೆ ಮರಳಿ ದೊಡ್ಡ ಪ್ರಮಾಣದಲ್ಲಿ ನೀರಿಂಗಿಸುವ ಕೆಲಸ. ಮುಖ್ಯವಾಗಿ ನಿರ್ಮಿಸಿದ್ದು ತಡೆಗಟ್ಟೆ. ಆರೇ ತಿಂಗಳಲ್ಲಿ ೨೦೦ ತಡೆಗಟ್ಟೆ, ಹತ್ತು ಕೆರೆಗಳ ನಿರ್ಮಾಣ. ಎಲ್ಲವೂ ಶ್ರಮದಾನದಿಂದ. ಒಂದೇ ವರ್ಷದಲ್ಲಿ ಬದಲಾವಣೆ! ಖೊಪಾಲಾದ ಕೆಲವೆಡೆ ಅಂತರ್ಜಲದ ಮಟ್ಟ ೨೦ ರಿಂದ ೫೦ ಅಡಿ ಏರಿತು. ಐದುಸಾವಿರ ಜನಸಂಖ್ಯೆ, ೧೬,೦೦೦ ಬಿಘಾ ಜಮೀನಿರುವ ಈ ಹಳ್ಳಿ ಒಂದೇ ವರ್ಷದಲ್ಲಿ ೫.೪೪ ಕೋಟಿ ರೂ. ಮೌಲ್ಯದ ಕೃಷ್ಯುತ್ಪನ್ನ ಬೆಳೆಯಿತು.

ಊರನ್ನು ಬೆಳಗುವ ದಾರಿ ತಿಳಿದದ್ದೇ ತಡ, ಮಾಥುರ್‌ಬಾಯ್ ಖೊಪಾಲದ ಯಶಸ್ಸನ್ನು ಎಲ್ಲೆಡೆಗೆ ಹಬ್ಬಿಸುವ ನಿರ್ಧಾರಕ್ಕೆ ಬಂದರು. ಸೂರತ್ ಮಾತ್ರವಲ್ಲ, ಭಾವನಗರ್, ಅಹಮದಾಬಾದ್‌ಗಳ ಎಲ್ಲಾ ವಜ್ರದ ವ್ಯಾಪಾರಿ, ಕೆಲಸಗಾರರ ಸಭೆ ಕರೆದರು. ತಮ್ಮ ಯೋಜನೆ ಮುಂದಿಟ್ಟರು. ಜಲಧಾರಾ ಟ್ರಸ್ಟ್ ಹುಟ್ಟಿಕೊಂಡಿತು. ನವೆಂಬರ್ ೧೯೯೯ ರಲ್ಲಿ ಇಡೀ ಸೌರಾಷ್ಟ್ರದ ೩,೨೫ ಕಿಲೋಮೀಟರ್ ದೂರ ಪಾದಯಾತ್ರೆ, ಜಲಕೊಯ್ಲು ಮತ್ತು ಹಸಿರೀಕರಣದ ಮಹತ್ವವನ್ನು ಸಾರಲು. ಖೊಪಾಲಾಕ್ಕೆ ಉಳಿದ ಊರುಗಳ ಜನರ ಜಲಯಾತ್ರೆಗೆ ಪ್ರೇರಣೆ.

ಕಳೆದ ವರ್ಷ ಟ್ರಸ್ಟ್ ಜಲಕೊಯ್ಲಿಗಾಗಿ ವೆಚ್ಚ ಮಾಡಿದ ಮೊತ್ತ ೪೦ ಕೋಟಿ ರೂ. ಇನ್ನೂರು ಹಳ್ಳಿಗಳಲ್ಲಿ ತಡೆಗಟ್ಟೆ ಕಟ್ಟಲು ಸಹಾಯ. ಟ್ರಸ್ಟ್ ಮಂಜೂರು ಮಾಡಿದ ಯೋಜನೆಗೆ ಸಕಾಲದಲ್ಲಿ ಅದು ಹತ್ತು ಲಾರಿ ತುಂಬಾ ಸಿಮೆಂಟ್ ಸ್ಥಳಕ್ಕೇ ಕಳಿಸಿಕೊಡುತ್ತದೆ. ಮಾತ್ರವಲ್ಲ, ತನ್ನೊಡನೆ ಇರುವ ೨೦ ಜೆ.ಸಿ.ಬಿ.ಗಳನ್ನು ಉಚಿತವಾಗಿ ಕನಿಷ್ಠ ೫೦೦ ಗಂಟೆ ಕಾಲ ದುಡಿಸಿಕೊಳ್ಳಲು ಕೊಡುತ್ತದೆ. ಊರ ಜನ ಡೀಸೆಲ್ ಹಾಕಿಸಿಕೊಂಡರೆ ಸಾಕು. ಅವರು ಈಗಿನ ದರದಲ್ಲಿ ೫೦೦ ಗಂಟೆಗಳಿಗೆ ಜೆ.ಸಿ.ಬಿ. ಬಾಡಿಗೆಗೆ ಹಿಡಿದರೆ ಅಂದಾಜು ೨,೭೫,೦೦೦ ರೂ. ವೆಚ್ಚವಾಗುತ್ತದಂತೆ. ಈ ಅವಧಿಗೆ ಡೀಸೆಲ್‌ಗೆ ಕೇವಲ ೫೦,೦೦೦ ರೂ. ಸಾಕು. ಕಳೆದ ವರ್ಷದವರೆಗಿನ ಲೆಕ್ಕಾಚಾರದಂತೆ ಟ್ರಸ್ಟ್ ತಡೆಗಟ್ಟೆ ಕಟ್ಟಲು ಬೇರೆ ಬೇರೆ ಹಳ್ಳಿಗಳಿಗ ಉಚಿತವಾಗಿ ಕೊಟ್ಟ ಸಿಮೆಂಟ್ ಎರಡು ಲಕ್ಷ

ಚೀಲ. ಇನ್ನು ಏಳು ಲಕ್ಷ ಚೀಲವನ್ನು ರಿಯಾಯಿತಿ ದರದಲ್ಲಿ ಪೂರೈಸಿದೆ! ಸೌರಾಷ್ಟ್ರದ ೨೫೦ಕ್ಕೂ ಹೆಚ್ಚು ಹಳ್ಳಿಗಳಲ್ಲೀಗ 'ಜಲಧಾರಾ' ನೆರವಿನಿಂದ ತೀವ್ರ ಮಳೆಕೊಯ್ಲು ನಡೆಯುತ್ತಿದೆ.

ರಾಜ್ ಸಮಾಧಿಯಾಲ ಗುಜರಾತಿನ ಒಂದು ಸಣ್ಣ ಹಳ್ಳಿ. ಬೀಳುವ ಮಳೆ ೫೦೦ ಮಿ.ಮೀ. ಎರಡು ದಶಕಗಳ ಹಿಂದೆ ನೆರೆಯ ಊರುಗಳಿಂದ ಇಲ್ಲಿಗೆ ಹೆಣ್ಮಕ್ಕಳನ್ನು ಮದುವೆಮಾಡಿ ಕೊಡುತ್ತಿರಲಿಲ್ಲ. ಇದು ನೀರಿಲ್ಲದ ಹಳ್ಳಿ! ಇನ್ನೂರ ಎಂಬತ್ತು ಮನೆಗಳ ಈ ಹಳ್ಳಿಯ ಸರಪಂಚ ಹರ್‌ದೇವ್‌ಸಿಂಗ್ ಜಡೇಜಾ. ಅವರಿಗೆ ನೀರೇ ಬದುಕಿನ ಮೊದಲ ಆಧಾರ ಎಂಬುದು ಗೊತ್ತಿತ್ತು. ವಿವಿಧ ಸರಕಾರಿ ಏಜೆನ್ಸಿಗಳ ಸಂಪರ್ಕ. ಅವರ ಆರ್ಥಿಕ ಸಹಾಯ, ಊರವರ ಶ್ರಮದಾನದಿಂದ ಚಿಕ್ಕಚಿಕ್ಕ ತಡೆಗಟ್ಟೆಗಳ ನಿರ್ಮಾಣ. ಹಿಂದೆ ಈ ಊರಲ್ಲಿ ಒಂದೇ ಒಂದು ಬೆಳೆ. ಮಳೆಯಾಧಾರಿತ. ಈಗ ಸಾಕಷ್ಟು ನೀರಾವರಿ ಬೆಳೆಯೂ ಆಗುತ್ತಿದೆ. ವಾರ್ಷಿಕ ತರಕಾರಿ ಉತ್ಪಾದನೆಯೇ ೨೫ ಲಕ್ಷ ರೂಪಾಯಿಯದ್ದು ಅಂದ ಮೇಲೆ!

ಹಿವರೆ ಬಜಾರ್ ಗುಜರಾತಿನ ಇಂಥದೇ ಇನ್ನೊಂದು ಯಶೋಗಾಥೆ. ಸರಪಂಚ ಪೋಪಟ್ ಪವಾರ್ ಇಲ್ಲಿನ ಅಭಿವೃದ್ಧಿಯ ಹರಿಕಾರ. ಇಲ್ಲಿ ಬೀಳುವುದು ೩೫೦-೪೦೦ ಮಿ.ಮೀ. ಮಳೆ. ಶ್ರಮದಾನದ ಮೂಲಕ ಪ್ರಕೃತಿ ಪುನರುಜ್ಜೀವನ. ಪರಿಣಾಮ: ಹಿಂದೆ ೭೦-೮೦ ಅಡಿ ಆಳದಲ್ಲಿದ್ದ ಅಂತರ್ಜಲ ಈಗ ೨೦-೨೫ ಅಡಿಗೇರಿದೆ. ಸಾವಿರದ ಐನೂರು ಟನ್ ಮೇವು ಬೆಳೆಯುತ್ತಿದ್ದಲ್ಲಿ ಈಗ ಅದರ ನಾಲ್ಕು ಪಟ್ಟು ಬೆಳೆಸಲು ಸಾಧ್ಯವಾಗುತ್ತಿದೆ. ಹಾಲಿನ ಉತ್ಪಾದನೆ ಹಿಂದಿನ ೩೦೦ ಲೀಟರಿನಿಂದ ೩೦೦೦ ಕ್ಕೇರಿದೆ. ೧೯೯೨ರಲ್ಲಿ ಇಲ್ಲಿನ ಒಟ್ಟು ೧೮೦ ಕುಟುಂಬಗಳಲ್ಲಿ ೧೬೮ ಬಡತನ ರೇಖೆಗಿಂತ ಕೆಳಗಿದ್ದರು. ಈಗ ಹನ್ನೆರಡು ವರ್ಷಗಳ ನಂತರ, ಒಂದೇ ಒಂದು ಕುಟುಂಬವೂ ಬಡತನದ ರೇಖೆಗಿಂತ ಕೆಳಗೆ ಉಳಿದಿಲ್ಲ!

ಉತ್ತರ ಭಾರತದ ಉಳಿದೆಲ್ಲಾ ರಾಜ್ಯಗಳು ಮೂರು ವರ್ಷಗಳ ಸತತ ಬರದಿಂದ ತತ್ತರಿಸುತ್ತಿದ್ದಾಗ 'ಡೌನ್ ಟು ಅರ್ತ್' ಪತ್ರಿಕೆ ತನ್ನ ಬಾತ್ಮೀದಾರರನ್ನು ಹಳ್ಳಿಹಳ್ಳಿಗಳಿಗೆ ಕಳಿಸಿತು. ಎಲ್ಲಾದರು ಹಸಿರು ಕಾಣಿಸುತ್ತಿದೆಯೇ ಎಂದು ಹುಡುಕಿ ನೋಡಲು. ಆಗ ಸುತ್ತಮುತ್ತಲಿನ ಬೆಂಗಾಡಿನ ಧಗೆಯ ನಡುವೆ ರಾಜ್ ಸಮಾಧಿಯಾಲಾ ಮತ್ತು ಹಿವರೆ ಬಜಾರ್ ತಂಪಾಗಿ ಉಳಿದಿದ್ದುವು.

ಮಹಾರಾಷ್ಟ್ರದ ವಿಲಾಸ್‌ರಾವ್ ಸಾಲುಂಕೆಯವರ 'ಗ್ರಾಮ ಗೌರವ ಪ್ರತಿಷ್ಠಾನ'ದ ಮೂಲಕ ಜಾರಿಗೆ ಬಂದ ಪಾನಿ ಪಂಚಾಯತ್ ನೀರಿನ ಸಮಾನ ಹಂಚಿಕೆಯ ದೃಷ್ಟಿಯಿಂದ ದೇಶದಲ್ಲೇ ಶ್ಲಾಘನೆಗೆ ಪಾತ್ರವಾಗಿದೆ. ನೀರಿನ ಸಂರಕ್ಷಣೆಯ ಜತೆಜತೆಗೆ ಅದರ ದಕ್ಷ ನಿರ್ವಹಣೆ ಸಮಾನ ಹಂಚಿಕೆ ಆದಾಗಲಷ್ಟೇ ಅದು ಸುಸ್ಥಿರ ವ್ಯವಸ್ಥೆಯಾಗಲು ಸಾಧ್ಯ. ಇಲ್ಲಿನ ವಿನೂತನ ಏರ್ಪಾಡು ಹೇಗಿದೆ ನೋಡಿ. ಐದು ಜನರ ಒಂದು ಕುಟುಂಬಕ್ಕೆ ಒಂದು ಹೆಕ್ಟೇರ್ ಭೂಮಿ. ಕಡಿಮೆ ನೀರು ಬಳಸುವ ಬೆಳೆಯನ್ನು ಮಾತ್ರ ಬೆಳೆಯಬೇಕು. ನೀರಿನ ಹಕ್ಕು ಭೂಮಿಯ ಹಕ್ಕಿನೊಂದಿಗೆ ಸೇರಿಕೊಂಡಿರುವುದಿಲ್ಲ. ಯಾರಾದರೊಬ್ಬರು ತನ್ನ ಜಮೀನು ಮಾರಿದಾಗ ನೀರಿನ ಹಕ್ಕು ಮರಳಿ ಸಂಬಂಧಪಟ್ಟ ರೈತ ಒಕ್ಕೂಟಕ್ಕೆ. ಜಮೀನಿಲ್ಲದವರಿಗೂ ನೀರಿನ ಹಕ್ಕು ಇರುತ್ತದೆ. ನೀರಿನ ನಿರ್ವಹಣೆ, ಯೋಜನೆ, ಆಡಳಿತ ಎಲ್ಲವೂ ಸಮಾನತೆಯ ಆಧಾರದಲ್ಲಿ ಹಳ್ಳಿಗರೇ ಮಾಡಿಕೊಳ್ಳುತ್ತಾರೆ.

ಈ ಕ್ರಾಂತಿಕಾರಿ ಬದಲಾವಣೆ ಬಂದದ್ದರಿಂದ ವರ್ಷಕ್ಕೆ ೨,೫೦೦-೪,೦೦೦ ರೂ. ವರಮಾನ ಇದ್ದ ಕುಟುಂಬಗಳು ೧೦,೦೦೦ ರಿಂದ ಒಂದು ಲಕ್ಷ ರೂ. ವರೆಗೆ ಗಳಿಸಿದ ಉದಾಹರಣೆಗಳಿವೆ. ಹಿಂದೆ ಧಾನ್ಯದ ಬೆಳೆ ಮಾತ್ರ ತೆಗೆಯಲು ಸಾಧ್ಯವಾಗುತ್ತಿದ್ದಲ್ಲಿ ಇಂದು ತೋಟಗಾರಿಕಾ ಬೆಳೆ, ಹೂ ಕೃಷಿಗೂ ಆಸ್ಪದವಾಗಿದೆ.

ನೀರೆತ್ತುವ ವ್ಯವಸ್ಥೆಗೆ ಸಂಬಂಧಪಟ್ಟ ರೈತರು ಶೇ. ೨೦ ಹಣ ಪಾವತಿ ಮಾಡಬೇಕು. ಸರಕಾರ ಶೇಕಡಾ ೫೦ ಕೊಡುತ್ತದೆ. ಉಳಿದ ಹಣವನ್ನು ಪಾನಿ ಪಂಚಾಯತ್ ಈ ಕೃಷಿಕರಿಗೆ ನಿಬ್ಬಡ್ಡಿ ಸಾಲವಾಗಿ ಒದಗಿಸುತ್ತದೆ. ಜಮೀನುರಹಿತ ಕೃಷಿಕರೂ ಕೂಡಾ ಪಾನಿ ಪಂಚಾಯತಿಯ ನಿಯಮಗಳಿಂದಾಗಿ ಭೂಮಿಯನ್ನು 'ಲೀಸ್' ಮೇಲೆ ಪಡೆದು ಕೃಷಿ ಮಾಡಲು ಸಾಧ್ಯವಾಗಿದೆ. ಮಹಾರಾಷ್ಟ್ರದ ೨೫ ಹಳ್ಳಿಗಳ ೨೦೦೦ ಕುಟುಂಬಗಳ ನಡುವೆ ಈ ವ್ಯವಸ್ಥೆ ಈಗಲೂ ಜೀವಂತ.

ಬಿಹಾರದಲ್ಲಿ 'ಸಂಶೋಧನೆ ಮತ್ತು ಕ್ರಿಯಾ ಕೇಂದ್ರ' ಎಂಬ ಹೆಸರಿನಡಿಯಲ್ಲಿ ಇಬ್ಬರು ತರುಣರು-ಮಹೇಶ್‌ಕಾಂತ್ ಮತ್ತು ಸರಿತಾ-ನಡೆಸಿದ ಪಾರಂಪರಿಕ ಜಲಸಂರಕ್ಷಣಾ ವ್ಯವಸ್ಥೆಯ ಪುನರುಜ್ಜೀವನ ಇಡೀ ದೇಶದ ಕಣ್ಣು ತೆರೆಸಬೇಕಾದದ್ದು. ಅಲ್ಲಿ ಬಹಳ

ಹಿಂದಿನ, ಅಂದರೆ ಚಂದ್ರಗುಪ್ತ ಮೌರ್ಯನ ಕಾಲದಿಂದಲೇ 'ಅಹರ್ ಮತ್ತು ಪೈನ್' ಎಂಬ ವ್ಯವಸ್ಥೆಯಿತ್ತು. ಇದು ಬಹಳ ಸರಳವಾದದ್ದು. ಮಳೆಗಾಲದಲ್ಲಿ ಹಳ್ಳಗಳಿಗೆ ಅಡ್ಡಗಟ್ಟೆ ಕಟ್ಟಿ ನೆರೆ ನೀರನ್ನು ಕಾಲುವೆಗಳ (ಪೈನ್) ಜಾಲದ ಮೂಲಕ ಒಳಭೂಮಿಗೆ ಹರಿಸುವುದು. ಕಾಲುವೆ ಹರಿಯುವಲ್ಲಿ ಮಾನವನಿರ್ಮಿತ ಕೆರೆ-ಅಹರ್‌ಗಳು. ಅಹರ್‌ಗಳಲ್ಲಿ ತುಂಬಿದ ನೀರು ಕುಡಿಯಲು, ಕೃಷಿ-ದನಕರುಗಳಿಗೆ ಮತ್ತು ಅಂತರ್ಜಲ ಮರುಪೂರಣಕ್ಕೆ ಸಹಾಯಕ.

ಬರುಬರುತ್ತಾ ಈ ವ್ಯವಸ್ಥೆ ಹಾಳಾಯಿತು. ಪೈನ್‌ಗಳು ಹೂತುಹೋದವು. ಈ ಭಾಗದಲ್ಲಿ ನಕ್ಸಲೈಟ್ ಹಾವಳಿ ಜಾಸ್ತಿ. ಎಲ್ಲೆಲ್ಲೂ ದಿಕ್ಕುಗಾಣದ ಬಡತನ. ಸಾಧ್ಯತೆ ಇರುವ ಬೆಳೆ ಭತ್ತ ಮಾತ್ರ. ಆದರೆ ಅದು ನೀರಾವರಿ ಇರುವ ಶ್ರೀಮಂತರಿಗಷ್ಟೇ ಸಾಧ್ಯ. ಮಹೇಶ್-ಸರಿತಾ ಬಡಜನರ ವಿಶ್ವಾಸ ಪಡೆಯಲು ಅವರ ಜತೆ ವಾಸಿಸತೊಡಗಿದರು. ಅವರ ಚಿಕ್ಕಪುಟ್ಟ ಸಮಸ್ಯೆ ಪರಿಹರಿಸಿ ಮನವೊಲಿಸುವುದರಲ್ಲೇ ಅವರ ಬಹಳಷ್ಟು ಸಮಯ ಕಳೆದುಹೋಯಿತು. ಕೊನೆಗೂ ಮೂರು ವರ್ಷದ ಸಹಬಾಳ್ವೆಯ ನಂತರ ಅಲ್ಲಿನವರು ಅಹರ್-ಪೈನ್‌ಗಳ ಪುನರುಜ್ಜೀವನಕ್ಕೆ ಮುಂದಾದರು. ಒಂದು ವರ್ಷದ ಕೆಲಸ. ನೂರ ಎಪ್ಪತ್ತು ಚಿಕ್ಕಪುಟ್ಟ ಅಹರ್‌ಗಳು ಮತ್ತು ಅವುಗಳನ್ನು ಸಂಧಿಸುವ ೪೫ ಕಿ.ಮೀ. ಉದ್ದದ ಪೈನಿನ ದುರಸ್ತಿ-ಪುನರ್‌ನಿರ್ಮಾಣ ಎನ್ನಬೇಕು-ನಡೆಯಿತು.

ಫಲಿತಾಂಶ ಅನಿರೀಕ್ಷಿತ. ಈ ಹಿಂದೆ ಕೃಷಿ ಮಾಡಲು ಸಾಧ್ಯವಾಗದ ಬಡವರ ಜಮೀನುಗಳಲ್ಲೂ ನೀರು ಹರಿಯಿತು. ಭತ್ತದ ಬೆಳೆ ಮೇಲೆದ್ದಿತು. ಊರ ಆದಾಯ ವೃದ್ಧಿ. ಜಗಳ-ವಿವಾದಗಳು ಇಳಿದುವು. ಸರಕಾರ ಕೂಡಾ ಇಲ್ಲಿ- ಈ ನಕ್ಸಲೈಟ್ ಪ್ರದೇಶದಲ್ಲಿ- ಅಪರಾಧ ಮತ್ತು ವಿವಾದದ ಪ್ರಮಾಣ ಇಳಿಮುಖವಾದುದನ್ನು ಒಪ್ಪಿಕೊಂಡಿತು. ನೀರ ಕೊರತೆ ಸಮಾಜದಲ್ಲಿ ಒಡಕು ಮೂಡಿಸಿದರೆ, ದಕ್ಷ ನಾಯಕತ್ವವಿದ್ದಲ್ಲಿ, ಮಳೆಕೊಯ್ಲು ಸಮಾಜವನ್ನು ಒಗ್ಗೂಡಿಸಲು ಸಾಧ್ಯ ಎನ್ನುವುದಕ್ಕೆ ಇಲ್ಲಿನದು ಅತ್ಯುತ್ತಮ ದೃಷ್ಟಾಂತ. ಜನರಿಗೆ ಅಪರಾಧ ಮಾಡುವುದಕ್ಕೆ ಪುರುಸೊತ್ತು ಸಿಗಲಿಲ್ಲ. ಏಕೆ ಗೊತ್ತೇ? ಅವರಿಗೆ ಕೈತುಂಬಾ ಕೃಷಿಯ ಕೆಲಸ ಇತ್ತು.

ಇನ್ನೊಂದು ವಿಚಾರವನ್ನೂ ಇಲ್ಲಿ ಹೇಳಬೇಕು. ನಮ್ಮಲ್ಲಿ ಎಷ್ಟೋ ಹಳ್ಳಿಗಳಲ್ಲಿ ಸರಕಾರ ಬೇರೆಬೇರೆ ತರದ 'ಬಡತನ ನಿರ್ಮೂಲನಾ ಕಾರ್ಯಕ್ರಮ' ಹಾಕಿಕೊಳ್ಳುತ್ತದೆ. ಫಿನಾಯಿಲ್ ತಯಾರಿ,ಟೈಲರಿಂಗ್ ತರಬೇತಿ, ಕೋಳಿ ಸಾಕಣೆ, ಕುರಿ ಸಾಕಣೆ, ರೇಶ್ಮೆ ಕೃಷಿ...ಇನ್ನೇನೋ. ನೆಲ-ಜಲದ ಸ್ಥಿತಿಯೇ ಕಂಗೆಟ್ಟಲ್ಲಿ ಮೊತ್ತಮೊದಲು ಅದನ್ನು ಸರಿಪಡಿಸದೆ ಬೇರೆ ಯಾವ ಆದಾಯವರ್ಧನೆ ಯೋಜನೆಯೂ ಬಹಳಷ್ಟು ಫಲ ಕೊಡದು. ಸರಿಯಾದ ರೀತಿಯಲ್ಲಿ ಮಣ್ಣು-ನೀರು ಪುನರುಜ್ಜೀವನ ನಡೆಸಿದಲ್ಲಿ ಅದುವೇ ಆದಾಯ ಹೆಚ್ಚಿಸುವ ದಾರಿ ತೋರಿಸುತ್ತದೆ.

ಬೇಸರದ ಸಂಗತಿ ಎಂದರೆ, ಸಾಮಾಜಿಕ ಕ್ರಾಂತಿಗೆ ಕಾರಣರಾದ ಮಹೇಶ್- ಸರಿತಾರನ್ನು ಬಿಹಾರದ ಭೂರಕ್ಕಸರ ಗೂಂಡಾಗಳು ಇತ್ತೀಚೆಗೆ ಗುಂಡಿಕ್ಕಿ ಕೊಂದರು.

ತಮಿಳುನಾಡಿನ 'ಧನ್' ಪ್ರತಿಷ್ಠಾನ ಅಲ್ಲಿನ ಜಲನಿಧಿಗಳಾದ ಕೆರೆಗಳ ಪುನರುಜ್ಜೀವನದ ಕೆಲಸವನ್ನು ದೊಡ್ಡ ರೀತಿಯಲ್ಲಿ ಮಾಡುತ್ತಾ ಬಂದಿದೆ. ಧನ್ ಪರಿಕಲ್ಪನೆ ಪ್ರಕಾರ ಕೆರೆಯ ಪುನರುಜ್ಜೀವನ ಎಂದರೆ ಅದರ ಹೂಳೆತ್ತುವುದು ಮಾತ್ರ ಅಲ್ಲ. ಅದು ಕೇವಲ ಒಂದು ಭೌತಿಕ ಕ್ರಿಯಾಭಾಗ. ಮೊತ್ತಮೊದಲು ಕೆರೆಯ ಮಹತ್ವದ ಬಗ್ಗೆ ಊರವರಲ್ಲಿ ಅರಿವು ಮೂಡಿಸುವುದು, ಪುನರುಜ್ಜೀವನದ ಬಗ್ಗೆ ಒಲವು ಮೂಡಿಸುವುದು, ಕೆರೆಗೆ ಮಳೆನೀರು ಹರಿದುಬರುವ ಕಾಲುವೆಗಳನ್ನು ತೆರವುಗೊಳಿಸಿ ದುರಸ್ತಿ ಮಾಡುವುದು, ಹೂಳು ಎತ್ತುವುದು, ನಂತರ ಹೆಚ್ಚಾದ ನೀರಿನ ಸದ್ಬಳಕೆ ಬಗ್ಗೆ ಒಮ್ಮತಾಭಿಪ್ರಾಯ, ನಿಯಮಾವಳಿಗಳಿಗೆ ರೂಪ ಕೊಡುವುದು, ಕೆರೆಯ ನಿರ್ವಹಣೆ, ಬೆಳೆಯ ಆಯ್ಕೆ, ಆಡಳಿತಕ್ಕಾಗಿ ಸ್ಥಳೀಯರ ಸಮಿತಿ ರಚನೆ, ಕಡಿಮೆ ನೀರಿನ ಬೆಳೆಯ ಆಯ್ಕೆಗಾಗಿ ಮಾಹಿತಿ ನೀಡಿಕೆ ಇವೆಲ್ಲವೂ ಪುನರುಜ್ಜೀವನ ಕಾರ್ಯದಲ್ಲಿ ಸೇರಿರುತ್ತದೆ.

ತಮಿಳುನಾಡು ಸರಕಾರ ಇಟ್ಟ ಒಂದು ದಿಟ್ಟ ಹೆಜ್ಜೆಯ ಬಗ್ಗೆ ಇಲ್ಲಿ ಪ್ರಸ್ತಾಪಿಸಲೇಬೇಕು. ಹೊಸ ಮನೆಗಳ ಬಳಿ ಮಾತ್ರವಲ್ಲ, ರಾಜ್ಯದ ಎಲ್ಲಾ ಹಳೆಯ ಮನೆಗಳಲ್ಲೂ ಮಳೆಕೊಯ್ಲನ್ನು ಅಲ್ಲಿ ಕಡ್ಡಾಯ ಮಾಡಿದ್ದಾರೆ. ಈ ಕೆಲಸ ಮಾಡದಿದ್ದವರ ಮನೆಗಳ ನಲ್ಲಿ ಸಂಪರ್ಕ ಕಡಿಯುವ ಅಧಿಕಾರ ಇಲಾಖೆಗಿದೆ. ಕೊಯಂಬತ್ತೂರಿನಂತಹ ಒಣ ಊರಿನಲ್ಲೂ ಇಂದು ಶೇ. ೯೫ ರಷ್ಟು ಮಳೆಕೊಯ್ಲು ನಡೆದಿದೆಯಂತೆ. ಆದರೆ ಹೀಗೊಂದು ನಿಯಮ ತರುವ ಮುನ್ನ ಜನರಿಗೆ ಮಳೆಕೊಯ್ಲಿನ ಬಗ್ಗೆ ತಿಳಿವಳಿಕೆ-ಒಲವು ಮೂಡಿಸಲು ಕೂಡಾ ಅಲ್ಲಿನ ಸರಕಾರ ತುಂಬಾ ಶ್ರಮಪಟ್ಟಿದೆ. ಸ್ವಯಂ ಪ್ರೇರಣೆಯಿಂದ ಈ ಬಗ್ಗೆ ಮಾಹಿತಿ ಹಬ್ಬಿಸುತ್ತಿರುವ ಇಪ್ಪತ್ತು-ಮೂವತ್ತು

ಜಲಯೋಧರು ಚೆನ್ನೈಯಲ್ಲಿದ್ದಾರೆ. ಒಂದೇ ಕಡೆ ಆಸಕ್ತರಿಗೆ ಶಹರದ ಮಳೆಕೊಯ್ಲಿನ ರೀತಿ-ರಿವಾಜುಗಳು ಪೂರ್ಣದರ್ಶನ ಮಾಡಿಸಲೆಂದು ಸರಕಾರೇತರ ವ್ಯವಸ್ಥೆ, 'ರೈನ್ ಸೆಂಟರ್' ದೊಡ್ಡ ಕೊಡುಗೆ ನೀಡುತ್ತಿದೆ.

ಲಡಾಖ್‌ನ ಕೃಷಿಕರಿಗೆ ದೊಡ್ಡ ಸಂಕಟ. ಅಲ್ಲಿ ಬೇಸಿಗೆ ಅತಿ ಹ್ರಸ್ವ. ಮಳೆ ಬೇಗನೆ ಸುರಿಯುತ್ತದೆ. ಬೇಸಗೆಯ ಆರಂಭದಲ್ಲೇ ಕೃಷಿ ಮಾಡಿದರೆ ಬೆಳೆ ಚೆನ್ನಾಗಿ ಕೈಗೆ ಹತ್ತುತ್ತದೆ. ಹಿಮಾಲಯದ ಮಂಜು ಕರಗಿ ಕೆಳಗಿಳಿಯುವ ನೀರೇ ಕೃಷಿಗೆ ಆಧಾರ. ಆದರೆ ಬೇಸಿಗೆಯಲ್ಲಿ ಉಷ್ಣತೆ ಹೆಚ್ಚಿ ಹಿಮಾಲಯದ ನೀರು ಕರಗಿ ಕೆಳಗಿನ ಕೊಳ್ಳಕ್ಕೆ ತಲುಪುವುದು ಯಾವಾಗಲೂ ವಿಳಂಬ. ಇದರಿಂದ ಕೃಷಿಯ ಸೋಲು, ಬೇಸತ್ತ ಯುವಕರ ವಲಸೆ. ಅದೇ ಊರಿನ ಚೆವಾಂಗ್ ನಾರ್ಫೆಲ್ ಇದಕ್ಕೊಂದು ಉಪಾಯ ಹೂಡಿದರು. ಚಳಿಗಾಲಕ್ಕೆ ಮುನ್ನ ಹಿಮಾಲಯದ ತಪ್ಪಲಿನ ಗುಡ್ಡಗಳಲ್ಲಿ ಕೃತಕ ಹಿಮರಾಜಿ-ಮಂಜುಗುಡ್ಡೆ-ಸೃಷ್ಟಿ! ಹೇಗೆ ಅಂತೀರಾ? ತತ್ವ ಬಲು ಸರಳ. ಆಗ ಅಲ್ಲಿ ಹರಿದು ಬರುವ ನೀರನ್ನು ಅಡ್ಡಗಟ್ಟೆ ಕಟ್ಟಿ ಬದಿಗಾಲುವೆಗಳಿಗೆ ತಿರುಗಿಸಿಕೊಳ್ಳುವುದು. ಅಲ್ಲಿಂದ ಚಿಕ್ಕಚಿಕ್ಕ ಲೋಹದ ಕೊಳವೆ ಮೂಲಕ ಗುಡ್ಡದ ಕೆಳಕ್ಕೆ ಹರಿಯಬಿಡುವುದು. ಕೆಳಗೆ ಸ್ಥಳೀಯ ಕಲ್ಲುಗಳ ಅಡ್ಡಗೋಡೆ. ಒಂದರ ಕೆಳಗೆ ಇನ್ನೊಂದು. ಚಳಿಗಾಲದಲ್ಲಿ ಲೋಹದ ಕೊಳವೆಯಿಂದ ಕೆಳಗಿಳಿವ ನೀರು ಐಸ್ ಆಗಿ ಅಲ್ಲೇ ಗಟ್ಟಿಕಟ್ಟುತ್ತದೆ. ಅಡ್ಡಗೋಡೆಯ ಮೇಲೆ ಹಿಮರಾಜಿ. ಟನ್‌ಗಟ್ಟಲೆ ನೀರು-ಐಸ್ ರೂಪದಲ್ಲಿ ತಯಾರು. ಈ ಕೃತಕ ಮಂಜುಗಡ್ಡೆಗೂ ಹಿಮಾಲಯದ ಶಿಖರಗಳಿಗೂ ಏಳೆಂಟು ಕಿಲೋಮೀಟರ್ ಅಂತರವಿದೆ. ಹೀಗಾಗಿ ಬೇಸಿಗೆಯಲ್ಲಿ ಇಲ್ಲಿ ಮಂಜು ಬೇಗನೆ ನೀರಾಗತೊಡಗುತ್ತದೆ. ಕೃಷಿಗೆ ಬೇಗನೆ ನೀರು ಒದಗುತ್ತದೆ. ಚೆವಾಂಗ್ ಈಗ ಲಡಾಖ್‌ನ ಹಲವೆಡೆ ಇಂತಹ ಮಂಜುಗಡ್ಡೆಗಳನ್ನು ಜನರ ಸಹಭಾಗಿತ್ವದಿಂದ ನಿರ್ಮಿಸುತ್ತಿದ್ದಾರೆ.

ನೆಲಜಲ ಉಳಿಸುವ ಆಂದೋಲನಗಳ ಕತೆ ಇಲ್ಲಿಗೇ ಮುಗಿಯುವುದಿಲ್ಲ. ಈ ದೇಶದಲ್ಲಿ ಸಾಂಪ್ರದಾಯಿಕ ಜಲಸಂರಕ್ಷಣ ವ್ಯವಸ್ಥೆಯ ದೊಡ್ಡ ಭಂಡಾರವಿದೆ. ಇವು ಇಂದಿಗೂ ಪ್ರಸ್ತುತ-ಮಹತ್ವ ಅರ್ಥಮಾಡಿಕೊಂಡು ಪುನರುಜ್ಜೀವನಗೊಳಿಸಿದರೆ. ಚೆವಾಂಗ್ ನಾರ್ಫೆಲರಂತಹ, ಡಾ. ರಾಜೇಂದ್ರ ಸಿಂಗ್, ಮಾಥುರ್‌ಬಾಯ್ ಸವಾನಿ, ಲಕ್ಷ್ಮಣ್ ಸಿಂಗರಂತಹ, ಸಮಾಜಹಿತದ ರಾಜಕೀಯರಹಿತ ನೇತಾರರಿದ್ದಾರೆ. ಬಿಹಾರದ ಶೇಕಡಾ ೫ ಮಾಡೆಲ್, ಮಹಾರಾಷ್ಟ್ರದ ಅಹ್ಮದ್‌ನಗರದ ಫಾ.ಕ್ರಿಸ್ಪಿನೋ ಲೋಬೋ ನೇತೃತ್ವದ ಡಬ್ಲ್ಯು.ಒ.ಟಿ.ಆರ್., ಕೇರಳದ ಚೆಲ್ಲಾನಂನಲ್ಲಿ ಅತಿ ಅಗ್ಗದ ಚಾವಣಿ ನೀರಿನ ಸಂಗ್ರಹದ ವಿಧಾನ ರೂಪಿಸಿದ ಬಡ ಬೆಸ್ತರದು, ಬೈಫ್, ಆಂಧ್ರದ ಟಿಂಬಕ್ಟು ಎನ್‌ಕ್ಲೇವ್, ರಿಶಿವ್ಯಾಲಿ ಶಾಲೆಯದು...ಹೀಗೆ ಇನ್ನೂ ಹತ್ತಾರು ನೂರಾರು ಹೇಳದೆ ಉಳಿದ ಯಶೋಗಾಥೆಗಳಿವೆ!

## ಜಲ ಅಭಿವೃದ್ಧಿಯ ಪಿತಾಮಹ - ಅಣ್ಣಾ ಹಜಾರೆ :

ಮಹಾರಾಷ್ಟ್ರದ ಅಹಮದ್ ನಗರದ ರಾಳೆಗಂವ್‌ಸಿದ್ದಿ ಗ್ರಾಮದ ಅಣ್ಣಾ ಹಜಾರೆ ಸೈನ್ಯದಲ್ಲಿ ಡ್ರೈವರ್ ಆಗಿ ಕೆಲಸ ಮಾಡುತ್ತಿದ್ದವರು ಇವರ ಕೆಲಸ ಸೈನಿಕರನ್ನು ಒಂದು ಕಡೆಯಿಂದ ಮತ್ತೊಂದು ಕಡೆ ಸಾಗಿಸುವುದು.

ಒಂದು ದಿವಸ ೫೯ ಜನ ಸೈನಿಕರು ಹತ್ತಿದ ವಾಹನವನ್ನು ಓಡಿಸಿಕೊಂಡು ಹೋಗುವಾಗ ಹಾದಿಯಲ್ಲಿ ಭಯೋತ್ಪಾದಕರು ಅಡಗಿಸಿ ಇಟ್ಟಿದ್ದ ನೆಲ ಬಾಂಬ್ ಸ್ಫೋಟಗೊಂಡು ಅದರಲ್ಲಿದ್ದ ಎಲ್ಲ ಸೈನಿಕರ ದೇಹ ಚೂರುಚೂರಾಗಿ ೫೯ ಜನ ಸೈನಿಕರ ಮಾಂಸದ ಮುದ್ದೆಯಾಯಿತು. ಈ ದುರ್ಘಟನೆಯಿಂದ ಅಣ್ಣಾ ಹಜಾರೆಗೆ ಸಣ್ಣ ಪುಟ್ಟ ಗಾಯವಾಗಿ ಬದುಕುಳಿದರು. ಈ ದೃಶ್ಯ ಕಂಡ ಹಜಾರೆ ದಿಗ್ಭ್ರಾಂತರಾದರು. ದೇಶಕ್ಕಾಗಿ ಪ್ರಾಣ ಕೊಡುವ ಸೈನಿಕರು ಅಸುನೀಗಿದಾಗ ನಾನೇಕೆ ಬದುಕಬೇಕು? ಎಂದು ಪ್ರಶ್ನೆ ಹಾಕಿದಾಗ ಆತ್ಮಹತ್ಯೆ ಮಾಡಿಕೊಳ್ಳುವ ಯೋಚನೆ ಇರುವಾಗ ಇನ್ನೊಂದು ಮನಸ್ಸು ಹೇಳಿತು, ಈ ೫೯ ಜನ ಪ್ರಾಣ ತೆಗೆದು ನಾನು ಬದುಕಿರಬೇಕಾದರೆ ಸಮಾಜಕ್ಕೆ ನನ್ನಿಂದ ಏನೋ ನಡೆಯಬೇಕಿದೆ- ಎಂದು ಯೋಚಿಸಿ ಕೆಲಸಕ್ಕೆ ವಿದಾಯ ಹೇಳಿ, ಬಂದ ಪಿಂಚಣಿ ಗ್ರ್ಯಾಚ್ಯುಟಿ ಹಣ ಪಡೆದು ಹಳ್ಳಿಗೆ ವಾಪಸಾದರು.

ಆದರೆ ಇವರು ವಿವಾಹವಾಗಿಲ್ಲವಾದ್ದರಿಂದ ನನಗೆ ಯಾರೂ ಬಂಧು ಮಿತ್ರರಿಲ್ಲ, ಸಮಾಜವೇ ನನ್ನ ಬಂಧು ಎಂದು ಭಾವಿಸಿದರು. ಕೆಲವರು ನಿಮ್ಮ ಅಣ್ಣ ತಮ್ಮಂದಿರ ಮನೆಗೆ ಹೋಗಿ ಎಂದರು. ಯಾರ ಮಾತೂ ಕೇಳದೆ ದೇವಸ್ಥಾನದಲ್ಲಿ ವಾಸಿಸಹತ್ತಿದರು.

ಸ್ವಲ್ಪ ಸಮಯದ ನಂತರ ದೇವಸ್ಥಾನದಲ್ಲಿ ನಡೆಯುವ ಭಜನಾ ಮಂಡಳಿಯವರ ಸ್ನೇಹವಾಗಿ ಭಜನೆ ಮಾಡಹತ್ತಿದರು. ಕೆಲವು ದಿನಗಳ ನಂತರ ಗೆಳೆಯರ ಮಾತು ಕಡೆಯಲ್ಲಿ ಶಿಥಿಲಗೊಂಡಿದ್ದ ಗುಡಿಯ ಜೀರ್ಣೋದ್ಧಾರದ ಕಡೆಗೆ ಬಂತು. ಆಗ ಒಬ್ಬ ಇದಕ್ಕೆ ಹಣ

ಎಲ್ಲಿ ತರುವುದು, ಕಲ್ಲು ಸಿಮೆಂಟು ಎಲ್ಲಿ ತರುವುದು ಎಂದು ಪ್ರಶ್ನೆಗಳು ಬಂದಾಗ ಅಣ್ಣಾವರು ಸಿಮೆಂಟು ಕಲ್ಲಿನ ಖರ್ಚನ್ನು ನಾನು ಭರಿಸುತ್ತೇನೆ, ನೀವು ಶ್ರಮದಾನ ಮಾಡಿ ಈ ಗುಡಿ ಕಟ್ಟುವುದಾದರೆ ಎಂದಾಗ ಹಳ್ಳಿಯ ಜನ ಸಂತೋಷಭರಿತರಾಗಿ ಶ್ರಮದಾನ ಮಾಡಲು ಸಿದ್ಧರಾದರು. ಗುಡಿ ಜೀರ್ಣೋದ್ಧಾರ ಮುಗಿಯಿತು. ಒಂದು ಗುಡಿಯಿಂದ ಹತ್ತಾರು ಗುಡಿ ಮುಗಿದವು. ಶಾಲೆ, ಕಾಲೇಜು ಮುಗಿದವು. ಹೀಗೆ ಇವರ ಸಮಾಜ ಸೇವಾ ಕೆಲಸಕ್ಕೆ ಚಾಲನೆ ದೊರೆತು ಜನರ ಸಹಭಾಗಿತ್ವದಲ್ಲಿ ಏನು ಬೇಕಾದರೂ ಸಾಧಿಸಬಹುದು ಎಂದು ಮನಗಂಡ ಹಜಾರೆ ಸಮಾಜದ ಪಿಡುಗುಗಳಾದ ಸಾರಾಯಿ, ಗುಟುಕಾ, ವರದಕ್ಷಿಣೆ ಪದ್ಧತಿ ದೂರ ಮಾಡುವಲ್ಲಿ ಯಶಸ್ಸು ಪಡೆದರು. ಜನರ ಸಹಭಾಗಿತ್ವವನ್ನು ಅರಿತು ಕೆಲಸ ಪ್ರಾರಂಭಿಸಿದ ಇವರಿಗೆ ವ್ಯಾಪಕ ಬೆಂಬಲ ದೊರೆಯಿತು. ಸರಕಾರದ ಬೆಂಬಲ ಸಿಕ್ಕಿತು.

ಇವರ ಸಿದ್ಧಾಂತ ಕೇವಲ ಸರಕಾರದ ಹಣದಲ್ಲಿ ಯೋಜನೆಯನ್ನು ನಿರೂಪಿಸುವುದಲ್ಲ, ಜನ ಸಹಭಾಗಿತ್ವದಲ್ಲಿ ಜಲಸಂವರ್ಧನೆ, ಪರಿಸರ ಸಂರಕ್ಷಣೆ, ಕಾಡಿನ ನಿರ್ವಹಣೆ ಸಾಧ್ಯ ಮಾಡುವುದು ಇವರಿಂದ ಪ್ರೇರೇಪಿತರಾಗಿ ಹಲವಾರು ರಾಜ್ಯಗಳಲ್ಲಿ ಪ್ರಯೋಗ ಮಾಡಿದ ಅನೇಕರು ಅಂತರಾಷ್ಟ್ರೀಯ ಮಟ್ಟದ ಅಶೋಕಾ ಫೆಲೋಷಿಪ್ ಪಡೆದಿದ್ದಾರೆ. ಈ ರೀತಿ ಎಲ್ಲರಿಂದ ಜನಾಂದೋಲನವಾದಾಗ ಗಾಂಧೀಜಿಯವರ ಗ್ರಾಮ ಸ್ವರಾಜ್ಯದ ಕನಸು ನನಸಾಗುವುದರಲ್ಲಿ ಸಂದೇಹವಿಲ್ಲ.

## ಬತ್ತಿದ ಬಾವಿಗಳ ಭಗೀರಥ - ಅಯ್ಯಪ್ಪ ಮ. ಮಸಗಿ :

ಅಯ್ಯಪ್ಪ ಮಸಗಿ ಹುಟ್ಟಿದ್ದು ಗದಗ ಜಿಲ್ಲೆ, ರೋಣ ತಾಲ್ಲೂಕಿನ ನಾಗರಾಳ ಎಂಬ ಕುಗ್ರಾಮದಲ್ಲಿ. ಇವರದು ಅನಕ್ಷರಸ್ಥ ಅವಿಭಕ್ತ ಕುಟುಂಬ. ಓದಿಗೆ ಇಲ್ಲಿ ಅವಕಾಶವಿಲ್ಲ. ಬೇಸಾಯ ವಂಶಪಾರಂಪರ್ಯವಾಗಿ ಬಂದ ಕಸಬು. ತಾಯಿ ಮಕ್ಕಳನ್ನು ಓದಿಸಬೇಕೆಂದು ಮನೆಯಿಂದ ಆಚೆ ಬಂದು ಕೂಲಿ ಮಾಡಿ ಮಕ್ಕಳನ್ನು ಓದಿಸಿದರು. ಓದಿನಲ್ಲಿ ಮುಂದೆ ಇದ್ದ ಅಯ್ಯಪ್ಪ ತಳಮಟ್ಟದಿಂದ ತಾಂತ್ರಿಕ ತರಬೇತಿ ಪಡೆದು ನೌಕರಿ ಸಿಕ್ಕ ನಂತರ ಡಿಪ್ಲೊಮೊ ಇಂಜಿನಿಯರಿಂಗ್ ಮಾಡಿ ಇಂಜಿನಿಯರಿಂಗ್ ಹುದ್ದೆಗೆ ಏರಿದರು.

ಅಯ್ಯಪ್ಪ ಮಸಗಿ ಒಬ್ಬ ಸ್ವಯಂ ನಿವೃತ್ತಿ ಹೊಂದಿದ ಇಂಜಿನಿಯರ್. ೨೧ ವರ್ಷಗಳ ಕಾಲ ಎಲ್ ಅಂಡ್ ಟಿ ಲಿಮಿಟೆಡ್‌ನಲ್ಲಿ ಪ್ರಾಜೆಕ್ಟ್ ಇಂಜಿನಿಯರ್ ಆಗಿ ಸೇವೆ ಸಲ್ಲಿಸಿ ೨೦೦೨ ರಲ್ಲಿ ಈಗ ಇವರೇ ಪ್ರಾರಂಭಿಸಿದ ಜಲಸಾಕ್ಷರತಾ ಆಂದೋಲನದಲ್ಲಿ ಪೂರ್ಣ ಪ್ರಮಾಣದಲ್ಲಿ ತೊಡಗಿದ್ದಾರೆ. ಈ ಆಂದೋಲನವನ್ನು ೧೯೯೮ ನೇ ಇಸವಿಯಲ್ಲಿ ಇವರೇ ಪ್ರಾರಂಭಿಸಿದರು. ಈ ಕಾರ್ಯಕ್ರಮದಡಿ ಕರ್ನಾಟಕ ರಾಜ್ಯದಾದ್ಯಂತ ನೀರಿನ ಉಳಿಕೆ, ಗಳಿಕೆ, ಬಳಕೆ ಬಗ್ಗೆ ೫೦೦ಕ್ಕೂ ಹೆಚ್ಚು ಜನರಿಗೆ ತಿಳುವಳಿಕೆ ನೀಡಿದ್ದಾರೆ. ಅಂತರ್ಜಲ ಅಭಿವೃದ್ಧಿಗೆ ಹೊಸ ಆವಿಷ್ಕಾರ ಮಾಡಿ, ಮೊದಲು ಅವರದೇ ಸ್ವಂತ ಕೊಳವೆಬಾವಿಯ ಮೇಲೆ ಪ್ರಯೋಗ ಮಾಡಿದರು. ಈ ಯಶಸ್ಸನ್ನು ಕುರಿತು ನಾಡಿನ ಪತ್ರಿಕೆಗಳು ಲೇಖನಗಳನ್ನು ಪ್ರಕಟಿಸಿದವು. ಕರ್ನಾಟಕದಲ್ಲಿ ಸುತ್ತಾಡಿ, ಅಸಂಖ್ಯಾತ ಕೊಳವೆ ಬಾವಿಗಳನ್ನು ಪುನರುಜ್ಜೀವನಗೊಳಿಸಿ ಗ್ರಾಮೀಣ ಪ್ರದೇಶದ ಜನರಿಗೆ ಪ್ರೇರಣೆ ನೀಡಿ ಕೆರೆಯ ಕಲ್ಪನೆ ಇಲ್ಲದ ರೋಣ ತಾಲ್ಲೂಕಿನ ಗಜೇಂದ್ರಗಡದ ಸುತ್ತಮುತ್ತ ೧೯ ಕೆರೆ ನಿರ್ಮಾಣ ಮಾಡಿ, ಹಲವಾರು ಜಲಸಂವರ್ಧನಾ ಕಾರ್ಯಕ್ರಮ ನೀಡಿದ್ದಕ್ಕೆ "ಬತ್ತಿದ ಕೊಳವೆ ಬಾವಿಗಳ ಪಿತಾಮಹ" ನೆಂದು ಬಿರುದು ನೀಡಿ ಅಹಮದಾಬಾದಿನಲ್ಲಿ ಸನ್ಮಾನ, ಪ್ರಶಸ್ತಿ ನೀಡಿ ಗೌರವಿಸಲಾಗಿರುತ್ತದೆ.

ಹಾಗೇ ಅಯ್ಯಪ್ಪ ಮಸಗಿಯವರು ಆಸಕ್ತಿ ತೋರಿದ ರೈತರಿಗೆ/ ಸಂಘ/ಶಾಲೆ/ಕಾಲೇಜು/ಕ್ಲಬ್‌ಗಳ ಮುಖಾಂತರ ಅಂತರ್ಜಲ ವೃದ್ಧಿಯ ತರಬೇತಿ ನೀಡಿದ್ದಾರೆ. ಈ ಸಾಧನೆ ಕಂಡು ಆಂಧ್ರ ಪ್ರದೇಶದ ರೋಸಸ್ ಸಂಸ್ಥೆ 'ಬತ್ತಿದ ಕೊಳವೆ ಬಾವಿಗಳ ವೈದ್ಯ'ನೆಂದು ಕರೆದು, ಅಲ್ಲಿ ನೂರಾರು ಕೊಳವೆ ಬಾವಿಗೆ ಮರುಪೂರಣ ಮಾಡುವ ಮೂಲಕ ರೈತರ ಆತ್ಮಹತ್ಯೆ ತಡೆಗಟ್ಟುವ ನಿಟ್ಟಿನತ್ತ ಸಹಾಯಧನ ನೀಡಲು ಮುಂದೆ ಬಂದಿದೆ.

ಅಂತರ್ಜಲ ನಿರ್ವಹಣೆ ಮತ್ತು ಆ ಮೂಲಕ ಪರಿಸರ ರಕ್ಷಣೆ ಮಾಡುವುದರ ಬಗ್ಗೆ ವ್ಯಾಪಕ ಶಿಕ್ಷಣ ನೀಡಿದ್ದಾರೆ. ಜನರನ್ನು ಪ್ರಚೋದಿಸಿ, ಅವರೇ ಖರ್ಚು ಮಾಡಿ ತಮ್ಮ ಕೆಲಸಗಳನ್ನು ಮಾಡುವಂತೆ ಅವರಿಗೆ ಶಿಕ್ಷಣ ನೀಡಿದ್ದಾರೆ. ಇದುವರೆಗೆ ಏನಿಲ್ಲವೆಂದರೂ ರೂ. ೧.೭೫ ರಿಂದ ೨.೦೦ ಕೋಟಿ ಮೊತ್ತದಷ್ಟು ಹಣ ಜನರಿಂದಲೇ ಉತ್ಪತ್ತಿಯಾಗಿ ಪ್ರಕೃತಿ ರಕ್ಷಣೆಗೆ ಹಾಗೂ ನೀರಿನ ಸ್ವಾವಲಂಬನೆಗೆ ಖರ್ಚಾಗಿದೆ. ಇಲ್ಲಿ ಸರ್ಕಾರದ ಸಹಾಯ ಪಡೆಯುವುದಕ್ಕಿಂತ ಸ್ವಾವಲಂಬನೆ ಮೂಲಕ ಕೆಲಸ ಸಾಧಿಸಲಾಗಿದೆ

ಎನ್ನುವ ಅಂಶ ಗಮನಾರ್ಹ. ಇವರ ಈ ಎಲ್ಲ ಕಾರ್ಯಗಳಿಂದ ಈ ಪ್ರದೇಶದಲ್ಲಿ ಕೋಟ್ಯಾಂತರ ಲೀಟರ್‌ಗಳಷ್ಟು ನೀರು ಸಂಗ್ರಹವಾಗಿ ಪಶುಪಕ್ಷಿಗಳಿಗೆ ನಿತ್ಯ ನೀರು ದೊರೆತಿದೆ. ಜೈವಿಕ ಚಟುವಟಿಕೆ ಹೆಚ್ಚಿ ಹಸಿರು ಬೆಳೆದು ಕಾಡು ನಿರ್ಮಾಣವಾಗಲು ಕಾರಣವಾಗಿದೆ. ರೈತರು ಹೆಚ್ಚು ಬೆಳೆದು, ತಮ್ಮ ಕಷ್ಟಗಳಿಗೆ ಶಾಶ್ವತ ಪರಿಹಾರ ಕಂಡುಕೊಂಡಿದ್ದಾರೆ.

ಜೊತೆಗೆ ಇವರು ಈಗಾಗಲೇ ಬರೆದ "ನೆಲ-ಜಲ" ಎಂಬ ಪುಸ್ತಕ ಕರ್ನಾಟಕದಲ್ಲಿ ತನ್ನ ಕಂಪನ್ನು ಹರಡಿದೆ. ಈ ಪುಸ್ತಕ ಸಾವಯವ ಕೃಷಿ ಮಳೆ ನೀರಿನಿಂದ ರೈತರಿಗೆ ವ್ಯಕ್ತಿ ವಿಕಸನ ನೀಡುವ ವಿಷಯ ಒಳಗೊಂಡಿದೆ. ನೆಲ-ಜಲ-ಜನಕ್ಕೆ ಮಾಡಿದ ಕ್ರಾಂತಿ ಎಂದು ಬಣ್ಣಿಸಿ ಕರ್ನಾಟಕ ಕನ್ನಡ ಕ್ರಿಯಾ ಸಮಿತಿ "ರಾಮಜಾಧವ ಪ್ರಶಸ್ತಿ" ಮತ್ತು ರೂ. ೫೦೦೧/-ಗಳ ಬಹುಮಾನ ನೀಡಿ ಇವರನ್ನು ಗೌರವಿಸಿರುತ್ತದೆ.

●

(ನೆರವು : ಈ ಮೂವರು ಮಹನೀಯರ ವಿಚಾರ ತಿಳಿಸಿದವರು ಡಾ. ಟಿ.ಎಸ್. ಪ್ರಕಾಶ್, ಪ್ರಾಧ್ಯಾಪಕರು, ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯ)




# ಕೃಷಿ ತಂತ್ರಜ್ಞಾನ ಮತ್ತು ಯೋಜನೆ

ಡಾ. ಕೆ. ವಿ. ಪುರಾಣಿಕ್‌ಮಠ್

ಕೃಷಿ ತಂತ್ರಜ್ಞಾನ ಮತ್ತು ಯೋಜನೆಗೆ ಕೌಶಲ್ಯಯುತ ತಂತ್ರಜ್ಞಾನ ಮತ್ತು ಮಾರುಕಟ್ಟೆಯನ್ನು ಒಳಗೊಂಡು ಹೂಡುವಳಿ ಮತ್ತು ಹುಟ್ಟುವಳಿ ನಿರ್ವಹಣೆಗೆ ಒತ್ತುಕೊಡುವ ೨ನೆಯ ಹಸಿರು ಕ್ರಾಂತಿ ಅಗತ್ಯವಾಗಿದೆ. ಸ್ವಾತಂತ್ರ್ಯಕ್ಕೆ ಮೊದಲು ಇದ್ದಂತಹ ಆಹಾರ ಉತ್ಪಾದನೆಯನ್ನು ೪ಪಟ್ಟು ಹೆಚ್ಚಿಸುವುದಕ್ಕೆ ಅಗಾಧ ಶ್ರಮದ ಸಾಧನೆಗಳು ಯಾವುದೆಂದರೆ ಊಹಿಸಲೂ ಆಗದಂತಹ ರಸಗೊಬ್ಬರದ ಉಪಯೋಗ, ಹೈಬ್ರಿಡ್‌ಗಳು ಮತ್ತು ಕ್ರಿಮಿನಾಶಕಗಳನ್ನು ಪ್ರಸಿದ್ಧಿಪಡಿಸುವ ಸಾಮಾನ್ಯ ತಂತ್ರಜ್ಞಾನವಾಗಿತ್ತು.

೨ನೆಯ ಹಸಿರು ಕ್ರಾಂತಿಯು ರೈತರಿಗೆ ಸರಿಯಾದ ಬೆಲೆ ದೊರಕಿಸುವ ಇನ್ನೊಂದು ಅಗಾಧ ಕಾರ್ಯವಾಗಿದೆ. ಅಲ್ಲದೆ ಬೆಳೆ ಕಟಾವು ಆದಮೇಲೆ ಸ್ವಲ್ಪ ಕಾಲದಲ್ಲಿ ಬೃಹತ್ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಲು ಸರಿಯಾದ ತಂತ್ರಜ್ಞಾನಕ್ಕೆ ಒಂದು ವಿಶ್ವ ಯೋಜನೆ ತೊಡಗುವಿಕೆ ಅಗತ್ಯವಾಗಿದ್ದು ಅದರಿಂದ ಕೃಷಿ ಉತ್ಪನ್ನಗಳನ್ನು ಹೆಚ್ಚಿನ ಬೆಲೆಯಲ್ಲಿ ಮಾರಾಟ ಮಾಡಿ ಸಾಮಾಜಿಕ ಜೀವನದಲ್ಲಿ ಕೈಗಾರಿಕೋದ್ಯಮಿಗಳಿಗಿಂತ ಉತ್ತಮವಾಗಿರುವಂತೆ ಮಾಡಬಹುದು. ನಾವು ಜಟಿಲವಾದ ಸಂಸ್ಥೆಗಳಾದ ಡಬ್ಲ್ಯೂಟಿಓ, ಗ್ಯಾಟ್ ಕಡಿಮೆ ತೊಡಗುವಿಕೆ ಇರುವ ಉರುಗ್ವೆ ಠರಾವುಗಳು ಮತ್ತು ಸ್ವದೇಶೀಸಂಸ್ಥೆಗಳಾದ ಅಪ್ಪೆಡಾ (APPEDA), ರಾಜ್ಯಮಟ್ಟದ ರಫ್ತು ಮತ್ತು ಪರಿಷ್ಕರಣ ಘಟಕಗಳು ರಫ್ತಿನ ಲೈಸೆನ್ಸ್ ನೀಡುವುದು ಮುಂತಾದವುಗಳನ್ನು ಸರಿಯಾಗಿ ನಿರ್ವಹಿಸಿ, ಬಿಳಿ ಆನೆಗಳಾದ ಡಬ್ಲ್ಯೂಟಿಓ, ಗ್ಯಾಟ್ ಮುಂತಾದವುಗಳನ್ನು ಎದುರು ಹಾಕಿಕೊಳ್ಳದಿರುವಂತಹ ನೀತಿಗಳನ್ನು ರೂಪಿಸಬೇಕು.

> **ಬೆಳೆ ಕಟಾವು ಆದ ಮೇಲೆ ಸ್ವಲ್ಪ ಕಾಲದಲ್ಲಿ ಬೃಹತ್ ಕೃಷಿ ಉತ್ಪನ್ನಗಳನ್ನು ಮಾರಾಟ ಮಾಡಲು ಸರಿಯಾದ ತಂತ್ರಜ್ಞಾನ ಅಗತ್ಯವಾಗಿದ್ದು ಅದರಿಂದ ಕೃಷಿ ಉತ್ಪನ್ನಗಳನ್ನು ಹೆಚ್ಚಿನ ಬೆಲೆಯಲ್ಲಿ ಮಾರಾಟ ಮಾಡಿ ಸಾಮಾಜಿಕ ಜೀವನದಲ್ಲಿ ಕೈಗಾರಿಕೋದ್ಯಮಿಗಳಿಗಿಂತ ರೈತರು ಸಹ ಉತ್ತಮ ವಾಗಿರುವಂತೆ ಮಾಡಬಹುದು.**

ಮುಂದಿನ ಪ್ಯಾರಾಗಳಲ್ಲಿ ವಿವಿಧ ಸಮುದ್ರವಲಯಗಳ ಹವಾಮಾನ ಮತ್ತು ಮಣ್ಣಿನ ಸ್ಥಿತಿಗಳಡಿಯಲ್ಲಿ ಉತ್ಪಾದನೆಯ ವಿವಿಧ ವಿಧಾನಗಳನ್ನು ಕೊಡಲಾಗಿದೆ. ಕರ್ನಾಟಕ ರಾಜ್ಯದಲ್ಲಿ ಅನೇಕ ವಿಧವಾದ ಮಣ್ಣು, ವಾಯುಗುಣ ಮತ್ತು ಬೆಳೆಗಳು ಇವೆ ತಂತ್ರಜ್ಞನು ಈ ಮೇಲಿನವುಗಳನ್ನು ಸಮನ್ವಯಗೊಳಿಸಲು ಬಹಳ ಕಷ್ಟಪಡಬೇಕು. ಕರ್ನಾಟಕದಲ್ಲಿ ಸಂಬಾರ ಪದಾರ್ಥಗಳು, ನೆಡುತೋಪು, ಹಣ್ಣಿನ ಬೆಳೆಗಳು, ದವಸಧಾನ್ಯಗಳು, ಬೇಳೆ ಕಾಳುಗಳು, ಎಣ್ಣೆ ಕಾಳುಗಳು, ಕಬ್ಬು ಮತ್ತು ಹೊಗೆಸೊಪ್ಪಿನಂತಹ ಹೆಚ್ಚಿನ ಸಂಖ್ಯೆಯ ಬೆಳೆಗಳಿವೆ. ಅಡಿಕೆ, ಏಲಕ್ಕಿ, ಮೆಣಸು, ಲವಂಗದಂತಹ ಶೇ. ೬೦ರಷ್ಟು ಸಂಬಾರ ಬೆಳೆಗಳನ್ನು ಕರ್ನಾಟಕದಲ್ಲಿ ಬೆಳೆಯಲಾಗುತ್ತಿದೆಯಾದರೂ ಉತ್ತರ ಪ್ರದೇಶ ಮತ್ತು ಮಧ್ಯ ಪ್ರದೇಶದಲ್ಲಿ

ಇವುಗಳ ಉಪಯೋಗ ಹೆಚ್ಚು. ಮಣ್ಣಿನ ಬಗ್ಗೆ ಹೇಳುವುದಾದರೆ ಇಲ್ಲಿ ಕೆಂಪುಮಣ್ಣು, ಕಪ್ಪುಮಣ್ಣು, ಮರಳುಮಣ್ಣು ಇದ್ದು ಮಳೆಯ ಆಧಾರದ ಮೇಲೆ ಬಿತ್ತನೆಯು ಮಾರ್ಚ್ ತಿಂಗಳಿನಲ್ಲಿ ಪ್ರಾರಂಭವಾಗಿ, ಅಕ್ಟೋಬರ್‌ನಲ್ಲಿ ಅಂತ್ಯಗೊಳ್ಳುತ್ತದೆ. ಹಾಗಾಗಿ ರೈತರಿಗೆ ಹೂಡುವಳಿಗಳು ಮತ್ತು ತಂತ್ರಜ್ಞಾನವನ್ನು ಒದಗಿಸುವುದಕ್ಕೆ ನಿರ್ವಹಣೆ ಮತ್ತು ಸಮನ್ವಯಗೊಳಿಸುವ ಕಾರ್ಯವು ಬಹು ಕಷ್ಟದ್ದು. ಇಂತಹ ಪರಿಸ್ಥಿತಿಗಳಲ್ಲಿ ರೈತರು ಹೆಚ್ಚು ಸಹಕಾರ ನೀಡಿ ಸ್ವಾತಂತ್ರ್ಯದ ಮೊದಲಿಗಿಂತ ನಾಲ್ಕು ಪಟ್ಟು ಬೆಳೆದಿದ್ದಾರೆ.

ಕೃಷಿ ಇಲಾಖೆ ಮತ್ತು ಕೃಷಿ ವಿಶ್ವವಿದ್ಯಾಲಯವು ತಮ್ಮ ಹೆಚ್ಚಿನ ಸಮಯವನ್ನು ತಂತ್ರಜ್ಞಾನಕ್ಕೆ ಉಪಯೋಗಿಸಿರುವುದರಿಂದ ಮಾರಾಟಕ್ಕೆ ಸಮಯ ಉಳಿದಿಲ್ಲ. ಮಾರಾಟಕ್ಕೆ ರೈತರಿಗೆ ಮಾರ್ಗದರ್ಶನ ನೀಡಲು ಮತ್ತು ಹೆಚ್ಚಿನ ಬೆಲೆ ಪಡೆಯುವುದಕ್ಕೆ ಮಾರುಕಟ್ಟೆ ಇಲಾಖೆ ಕೂಡಾ ಕೃಷಿ ಇಲಾಖೆಯ ಜತೆಗೂಡಬೇಕು. ಈ ಕೆಳಗಿನ ಎರಡು ಪಟ್ಟಿಗಳು ವಿಸ್ತೀರ್ಣ, ಉತ್ಪಾದನೆ ಮತ್ತು ಉತ್ಪಾದಕತೆಯ ಒಂದು ಅಭಿಪ್ರಾಯವನ್ನು ಅಖಿಲಭಾರತ (ಪಟ್ಟಿ೧) ಮತ್ತು ಕರ್ನಾಟಕದ ಬಗ್ಗೆ (ಪಟ್ಟಿ೨) ಒಂದು ಅಭಿಪ್ರಾಯವನ್ನು ಕೊಡುತ್ತದೆ.

**ಪಟ್ಟಿ-೧**

**ಅಖಿಲ ಭಾರತ**

| ವರ್ಷಗಳು | | ಆಹಾರ ಧಾನ್ಯಗಳು | ಎಣ್ಣೆ ಕಾಳುಗಳು | ಹತ್ತಿ | ಸೆಣಬು ಮತ್ತು ಮೆಸ್ತ | ಕಬ್ಬು |
|---|---|---|---|---|---|---|
| ೧೯೫೦-೧೯೫೧ | ಉತ್ಪಾದನೆ | ೫೦.೯೨ | ೫-೧೬ | ೩.೦೪ | ೩.೩೧ | ೫೭.೦೫ |
| | ಇಳುವರಿ | ೫೨೨ | ೪೮೧ | ೮೮ | ೧೦೪೩ | ೩೩-೪೦ |
| ೧೯೬೪-೧೯೬೫ | ಉತ್ಪಾದನೆ | ೮೯-೩೬ | ೮-೬೫ | ೬-೦೧ | ೭-೬೬ | ೧೨೧.೯೧ |
| | ಇಳುವರಿ | ೭೫೯ | ೫೬೧ | ೧೨೨ | ೧೧೩೬ | ೪೬.೮೦ |
| ೧೯೭೦-೧೯೭೧ | ಉತ್ಪಾದನೆ | ೧೦೬.೪೨ | ೯.೬೩ | ೪.೭೬ | ೬.೧೯ | ೧೨೬.೩೭ |
| | ಇಳುವರಿ | ೮೭೨ | ೫೭೧ | ೧೦೬ | ೧೦೩೨ | ೪೮.೩೨ |
| ೧೯೯೯-೨೦೦೦ | ಉತ್ಪಾದನೆ | ೨೦೧ | ೨೧-೫೪ | ೧೦-೪೫ | ೯-೫೩ | ೨೯೨-೫೪ |
| | ಇಳುವರಿ | ೧೬೩೭ | ೮೫೫ | ೨೦೫ | ೧೭೭೯ | ೭೧-೯೯ |

**ಗಮನಿಸಿ** : ಉತ್ಪಾದನೆಯು ಮಿಲಿಯ ಟನ್ನುಗಳಲ್ಲಿದೆ. ಇಳುವರಿ ಹೆಕ್ಟೇರಿಗೆ ಕೆಜಿಗಳಲ್ಲಿದೆ. ಆದರೆ ಕಬ್ಬಿನಲ್ಲಿ ಇದು ಹೆಕ್ಟೇರಿಗೆ ಟನ್ನುಗಳಲ್ಲಿದೆ.

**ಕರ್ನಾಟಕ**

**ಪಟ್ಟಿ-೨**

| **ವರ್ಷಗಳು** | | **ಆಹಾರ ಧಾನ್ಯಗಳು** | **ಎಣ್ಣೆ ಕಾಳುಗಳು** | **ಹತ್ತಿ** | **ಕಬ್ಬು** |
|---|---|---|---|---|---|
| ೧೯೫೫-೫೬ | ಉತ್ಪಾದನೆ | ೩.೮೧ | ೦.೬೯ | ೦.೩೦ | ೩.೧೧ |
| | ಇಳುವರಿ | ೫೨೩ | ೫೮೨ | ೪೭ | ೫೧ |
| ೧೯೬೪-೬೫ | ಉತ್ಪಾದನೆ | ೪.೮೪ | ೦.೭೩ | ೦.೫೧ | ೫.೭೫ |
| | ಇಳುವರಿ | ೬೩೨ | ೬೦೧ | ೯೬ | ೭೫ |
| ೧೯೭೦-೭೧ | ಉತ್ಪಾದನೆ | ೫.೭೫ | ೦.೮೬ | ೦.೫೭ | ೦.೮೨ |
| | ಇಳುವರಿ | ೮೧೬ | ೬೫೯ | ೯೫ | ೮೨ |
| ೧೯೯೮-೯೯ | ಉತ್ಪಾದನೆ | ೯.೯೮ | ೧.೭೧ | ೦.೯೦ | ೩೮.೪೦ |
| | ಇಳುವರಿ | ೧೪೨೩ | ೭೪೦ | ೨೫೨ | ೧೦೯ |

ಗಮನಿಸಿ: ಉತ್ಪಾದನೆ ಮಿಲಿಯ ಟನ್ನುಗಳಲ್ಲಿದೆ. ಇಳುವರಿ ಹೆಕ್ಟೇರಿಗೆ ಕೆಜಿಗಳಲ್ಲಿದೆ. ಆದರೆ ಕಬ್ಬಿನಲ್ಲಿ ಅದು ಹೆಕ್ಟೇರಿಗೆ ಟನ್ನುಗಳಲ್ಲಿದೆ.

ಕೃಷಿತಂತ್ರಜ್ಞಾನದ ಅಂದು ಇಂದು ಮುಂದು ಎಂಬುದರ ಬಗ್ಗೆ ಒಂದು ವಿಶಾಲ ದೃಷ್ಟಿಹೊಂದಲು ಈ ಕೆಳಕಂಡ ಅಂಶಗಳನ್ನು ಚರ್ಚಿಸಲಾಗಿದೆ.

೧. ರಾಷ್ಟ್ರೀಯ ವರಮಾನದ ಬಗ್ಗೆ ಹೇಳುವುದಾರೆ ಶೇ.೬೦ರಷ್ಟು ರಾಷ್ಟ್ರೀಯ ವರಮಾನವು ಶೇ. ೨೦ರಷ್ಟು ಜನರಿಂದ ಉಪಯೋಗಿಸಲ್ಪಡುತ್ತಿದೆ. ಉಳಿದ ಶೇ.೪೦ರಷ್ಟು ರಾಷ್ಟ್ರೀಯ ವರಮಾನವನ್ನು ಶೇ.೮೦ರಷ್ಟು ಜನರು ಉಪಯೋಗಿಸುತ್ತಿದ್ದಾರೆ. ಈ ಸಾಮ್ಯವೂ ಹೋಗಬೇಕು.

೨. ರೈತರಿಂದ ಗ್ರಾಹಕರಿಗೆ ನೇರ ಸಂಪರ್ಕವಿರಬೇಕು. ರೈತನು ಸಗಟು ಉತ್ಪಾದಕನಾಗಬೇಕು. ಆತ ವ್ಯಾಪಾರಿಗೆ ಬೆಲೆ ನಿಗದಿಪಡಿಸಬೇಕು ಮತ್ತು ಮಾರಾಟಗಾರನ ಲಾಭವನ್ನು ಶೇ. ೧೦ರಿಂದ ೨೦ಕ್ಕೆ ನಿಗದಿಪಡಿಸಬೇಕು.

೩. ರಸಗೊಬ್ಬರದ ದರಗಳನ್ನು ಅಧ್ಯಯನಮಾಡಲು ಒಂದು ಸಮಿತಿಯನ್ನು ರಚಿಸಲಾಯಿತು. ಆ ವರದಿಯಲ್ಲಿ ಶೇ. ೮೦ರಷ್ಟು ಇರುವ ರೈತನಿಗೆ ಬದಲಾಗಿ ಕೈಗಾರಿಕಾ ನೌಕರನಿಗೆ ಪ್ರಾಮುಖ್ಯತೆ ಕೊಟ್ಟಿತು.

೪. ರಸಗೊಬ್ಬರಗಳು ಇತರ ದೇಶಗಳಲ್ಲಿ ಅಗ್ಗದ ದರದಲ್ಲಿ ದೊರೆಯುತ್ತಿವೆಯಾದರೂ ಸರಕಾರವು ಆಮದು ಮಾಡಿಕೊಳ್ಳುತ್ತಿಲ್ಲ ಅದಕ್ಕೆ ಬದಲಾಗಿ ಸರಕಾರವು ಶೇ.೮೦ ರಷ್ಟು ಜನರ ಮೇಲೆ ಪರಿಣಾಮ ಬೀರುವ ಕೃಷಿ ಉತ್ಪನ್ನಗಳನ್ನು ಆಮದು ಮಾಡಿಕೊಳ್ಳುತ್ತಿದೆ.

೫. ಆಹಾರ ಪರಿಷ್ಕರಣ ಕೈಗಾರಿಕೆಯನ್ನು ಸಾಂಸ್ಥಿಕಗೊಳಿಸುವುದು, ಅದನ್ನು ಐ.ಎಸ್.ಓ. ೯೦೦೦ಕ್ಕೆ ತರುವುದು ಒಳ್ಳೆಯ ಹೆಜ್ಜೆ.

೬. ರೈತರಿಗೆ ರಫ್ತು ಲೈಸೆನ್ಸ್ ಪಡೆಯಲು, ರಫ್ತು ನೀತಿಗಳನ್ನು ಮತ್ತು ರಫ್ತು ಹಂಚಿಕೆಗಳನ್ನು ತಿಳಿದುಕೊಳ್ಳುವುದರಲ್ಲಿ ತರಬೇತಿ ಕೊಡಬೇಕು.

೭. ಆಹಾರ ಧಾನ್ಯಗಳ ಲೆವಿಯ ಮಾರ್ಗದಲ್ಲಿಯೇ ಕೈಗಾರಿಕಾ ಸರಕುಗಳನ್ನು ಕೂಡಾ ಸರಕಾರವು ಪಡೆದುಕೊಂಡು ಹಳ್ಳಿಗಳಲ್ಲಿ ಪಡಿತರ ಅಂಗಡಿಗಳ ಮೂಲಕ ಅಗ್ಗದ ದರಗಳಲ್ಲಿ ರೈತರಿಗೆ ಕೊಡಬೇಕು.

೮. ಕೃಷಿ ಸರಕುಗಳು ಮತ್ತು ಕೈಗಾರಿಕಾ ಸರಕುಗಳ ನಡುವೆ ದರದಲ್ಲಿ ತುಂಬಾ ವ್ಯತ್ಯಾಸವಿದೆ. ಈ ಅಸಮತೋಲವನ್ನು ಹೋಗಲಾಡಿಸಬೇಕು, ಅದಕ್ಕಾಗಿ ರೈತನಿಗೆ ಸಕಾಲದಲ್ಲಿ ಕೃಷಿ ಸರಕುಗಳನ್ನು ದೇಶದ ಒಂದು ಭಾಗದಿಂದ ಸಾಗಿಸಲು ಸಾಗಣೆ ಮತ್ತು ಇತರ ಕಾನೂನು, ಸಾಮಾಜಿಕ ಸಹಾಯವನ್ನು ಸಕಾಲದಲ್ಲಿ ಒದಗಿಸಬೇಕು.

೯. ಸರಿಯಾದ ಹೂಡುವಳಿ ಮತ್ತು ಹುಟ್ಟುವಳಿಯ ನಿರ್ವಹಣೆ. ಹೂಡುವಳಿ ಎಂದರೆ ಗುಣಮಟ್ಟದ ಹೂಡುವಳಿಯನ್ನು ಮತ್ತು ಆಧುನಿಕ ತಂತ್ರಜ್ಞಾನವನ್ನು ಸಕಾಲದಲ್ಲಿ ಒದಗಿಸುವುದು ಎಂದರ್ಥ. ಹುಟ್ಟುವಳಿ ಎಂದರೆ ಸರಿಯಾದ ಬೆಲೆ ಎಂದರ್ಥ.

೧೦. ವಿಶ್ವ ವ್ಯಾಪಾರ ಸಂಸ್ಥೆ : ರೈತರಿಗೆ ಉತ್ತಮ ಬೆಲೆ ದೊರೆಯುವುದಕ್ಕೆ ಸರಿಯಾದ ಜ್ಞಾನ.

ಎ) ತಂದು ತುಂಬಬಾರದ Anti -Dumping ಕಾನೂನನ್ನು ಅನುಸರಿಸಬೇಕು.

ಬಿ) ಭಾರತದಲ್ಲಿ ಈಗಾಗಲೇ ಹೆಚ್ಚಾಗಿರುವ ವಸ್ತುಗಳ ಮೇಲೆ ಶೇ.೩೦೦ರಷ್ಟು ತೆರಿಗೆ ಹಾಕಬೇಕು.

ಸಿ) ರೈತರ ಹಿತಾಸಕ್ತಿಗೆ ಅಲ್ಲವಾದ ವಸ್ತುಗಳು, ಅಂತಹ ಸಂದರ್ಭಗಳಲ್ಲಿ ಸರಕಾರವು ಮಕ್ಕಳ ಶ್ರಮವನ್ನು ಇರುವಂತೆ ಅಮೆರಿಕಾದಲ್ಲಿ ವಿರೋಧಿಸಬೇಕು. ನಾರ್ವೆಯಲ್ಲಿರುವಂತೆ ಸಮುದ್ರದ ಆಳದಲ್ಲಿನ ಮೀನುಗಾರಿಕೆ ಅಭ್ಯಾಸ ಮಾಡಬೇಕು. ಇವಿಲ್ಲವೆಂದಾದರೆ ಡಬ್ಲ್ಯೂ.ಟಿ.ಓ.ವು ನಮ್ಮ ಬೇಡಿಕೆಗಳನ್ನು ಒಪ್ಪುತ್ತದೆ.

ಭಾರತವು ವಿಸ್ತಾರವಾದ ದೇಶವಾದರೂ, ಉತ್ಪಾದನೆಯನ್ನು ಹೆಚ್ಚಿಸಲು ಸಾಕಷ್ಟು ಅವಕಾಶವಿದ್ದರೂ, ಸರಿಯಾದ ಬೆಲೆ ರೈತರಿಗೆ ದೊರೆಯುವ ಕಡೆಗೆ ಗಮನ ನೀಡಬೇಕು. ೨ನೆಯ ಹಸಿರು ಕ್ರಾಂತಿಯು ಮೇಲೆ ಚರ್ಚಿಸಿರುವ ಅಂಶಗಳನ್ನು ಗುರಿಯಾಗಿ ಇಟ್ಟುಕೊಳ್ಳಬೇಕು.

●




# ಅಧಿಕ ಇಳುವರಿ ಬೀಜಗಳು

ಡಾ. ಟಿ. ಎನ್. ವೆಂಕಟರೆಡ್ಡಿ
ಡಾ. ಟಿ. ಎನ್. ಪ್ರಕಾಶ್

ಕೃಷಿ ಅಭಿವೃದ್ಧಿಯಲ್ಲಿ ಅಧಿಕ ಇಳುವರಿಯ ಉತ್ತಮ ಬೀಜಗಳ ಪಾತ್ರ ಅಪಾರ. ಅರವತ್ತರ ದಶಕದಲ್ಲಿ ಭಾರತ ಸಾಧಿಸಿದ ಹಸಿರು ಕ್ರಾಂತಿಯ ಹಿಂದೆ ಗೋಧಿ ಮತ್ತು ಭತ್ತ ಈ ಎರಡು ಬೆಳೆಗಳಲ್ಲಿ ಅಧಿಕ ಬೀಜಗಳು ರೈತರಿಗೆ ದೊರೆಯುವಂತಾಗಿರುವುದೇ ಮೂಲ ಕಾರಣ ಆಗಿರುತ್ತದೆ. ಭಾರತದಂತಹ ದೇಶದಲ್ಲಿ ಶತಮಾನಗಳಿಂದ ನಮ್ಮ ರೈತರು ನೂರಾರು ನಾಟೀ ತಳಿಗಳನ್ನು ಬೆಳೆದು ರಕ್ಷಿಸಿಕೊಂಡು ಬಂದಿರುತ್ತಾರೆ. ಈ ನಾಟಿ ತಳಿಗಳಿಂದಾಗಿ ನಮ್ಮ ಜೈವಿಕ ಸಂಪತ್ತೇನೋ ಹೆಚ್ಚಾಗಿರುತ್ತದೆ. ಆದರೆ ಇವುಗಳನ್ನು ಹೆಚ್ಚು ಹೆಚ್ಚು ಭೂ ಪ್ರದೇಶಗಳಲ್ಲಿ ಬಳಕೆ ಮಾಡಲು ಹಾಗೇ ನೀರು, ರಸಗೊಬ್ಬರ ಇತ್ಯಾದಿ ಆಧುನಿಕ ಹೂಡಿಕೆಗಳನ್ನು ಜೀರ್ಣಿಸಿಕೊಂಡು ಅಧಿಕ ಇಳುವರಿ ಕೊಡಲು ಇವುಗಳಿಗೆ ಅಸಾಧ್ಯವಾಗಿರುತ್ತದೆ. ಆದಕಾರಣ ಸಸ್ಯ ತಳಿ ಶಾಸ್ತ್ರಜ್ಞರು ತಳಿ ಅಭಿವೃದ್ಧಿ (Improvement) ಮತ್ತು ಸಂಕರಣ (Hybridigehn) ಪ್ರಕ್ರಿಯೆ ಮೂಲಕ ಈ ಸಮಸ್ಯೆಗಳನ್ನು ಹೋಗಲಾಡಿಸಿ ಅಧಿಕ ಇಳುವರಿಯ ಬೀಜಗಳ ಸೃಷ್ಟಿ ಮಾಡಿರುವುದು ಕೃಷಿ ಕ್ಷೇತ್ರದ ದೊಡ್ಡದೊಂದು ಸಾಧನೆ ಎಂದರೆ ತಪ್ಪಾಗಲಾರದು. ಇವುಗಳಿಂದಾಗಿ ಇಂದು ನಾವು ಆಹಾರದಲ್ಲಿ ಸ್ವಾವಲಂಬನೆ ಸಾಧಿಸಿರುವುದರಲ್ಲಿ ಎರಡು ಮಾತಿರದು.

**ಸಸ್ಯ ತಳಿ ಶಾಸ್ತ್ರಜ್ಞರು ತಳಿ ಅಭಿವೃದ್ಧಿ ಮತ್ತು ಸಂಕರಣ ಪ್ರಕ್ರಿಯೆಗಳ ಮೂಲಕ ಅಧಿಕ ಇಳುವರಿ ಬೀಜ ಸೃಷ್ಟಿ ಮಾಡಿರುವುದು ಕೃಷಿ ಕ್ಷೇತ್ರದ ದೊಡ್ಡ ಸಾಧನೆ. ಇದರಿಂದಾಗಿ ನಾವು ಆಹಾರದಲ್ಲಿ ಸ್ವಾವಲಂಬಿಗಳಾಗಿದ್ದೇವೆ.**

ಇಂದು ನಮ್ಮ ರೈತರಿಗೆ ಇಂತಹ ಅಧಿಕ ಇಳುವರಿಯ ಬೀಜಗಳು ವಿವಿಧ ಮೂಲಗಳಿಂದ ದೊರೆಯುತ್ತಿವೆ. ಈ ಬೀಜಗಳ ಸೃಷ್ಟಿಯಲ್ಲಿ ಕೃಷಿ ವಿಶ್ವವಿದ್ಯಾನಿಲಯಗಳು, ಹಾಗೇ ಕೇಂದ್ರ ಸರ್ಕಾರದ ಮೇಲ್ವಿಚಾರಣೆಯಲ್ಲಿರುವ ವಿವಿಧ ಸಂಶೋಧನಾ ಕೇಂದ್ರಗಳು ಅಪಾರ ಪಾತ್ರವಹಿಸುತ್ತಲಿವೆ. ನಮ್ಮ ರಾಜ್ಯದಲ್ಲಿ ಇಂದು ಎರಡು ಕೃಷಿ ವಿಶ್ವವಿದ್ಯಾನಿಲಯಗಳಿದ್ದು, ಬೆಂಗಳೂರು ಕೃಷಿ ವಿಶ್ವ ವಿದ್ಯಾನಿಲಯವು ೧೯೬೬ ರಲ್ಲಿ ಬೋಧನೆ, ಸಂಶೋಧನೆ ಹಾಗೂ ವಿಸ್ತರಣಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪ್ರಾರಂಭಿಸಲ್ಪಟ್ಟಿರುತ್ತದೆ. ಇದು ಅಲ್ಪ ಪ್ರಮಾಣದಲ್ಲಿ ಬೀಜೋತ್ಪಾದನೆಯಲ್ಲಿ ಭಾಗವಹಿಸುತ್ತ ಬಂದಿದ್ದರೂ ಸಹ, ೧೯೭೬ರಿಂದೀಚೆಗೆ ಹೊಲದ ಬೆಳೆಗಳ ಮೂಲ ಬೀಜಗಳನ್ನು ಮುಂದೆ ದ್ವಿಗುಣಪಡಿಸಿ ಒದಗಿಸುವ ಜವಾಬ್ದಾರಿಯನ್ನೂ ಹೊಂದಿದೆ. ಇದರ ಜೊತೆಯಲ್ಲಿ ಬೀಜ ಉತ್ಪಾದನೆ, ಸಂಸ್ಕರಣೆ, ಶೇಖರಣೆ ಮತ್ತು ಮಾರುಕಟ್ಟೆಗೆ ಸಂಬಂಧಿಸಿದಂತೆ ವಿವರವಾದ ಸಂಶೋಧನೆಯಲ್ಲಿಯೂ ಸಹ ತೊಡಗಿದೆ. ಅಲ್ಲದೆ ಈ ವಿಶ್ವ ವಿದ್ಯಾನಿಲಯುವು ಭಾರತದಲ್ಲಿ

ಬೀಜ ವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿಯನ್ನು ಪ್ರಾರಂಭಿಸಿದ ಎರಡನೇ ವಿಶ್ವವಿದ್ಯಾನಿಲಯವಾಗಿದ್ದು ೧೯೮೭ ರಿಂದ ಡಾಕ್ಟರೇಟ್ ಪದವಿ ವ್ಯಾಸಂಗವನ್ನು ಪ್ರಾರಂಭಿಸಿದೆ. ಈ ವಿಶ್ವವಿದ್ಯಾನಿಲಯ ತನ್ನ ಆಡಳಿತಕ್ಕೆ ಒಳಪಟ್ಟಿರುವ ಸಂಶೋಧನಾ ಕ್ಷೇತ್ರಗಳಲ್ಲಿ ಸೂಕ್ತವಾದ ಮೂಲ ಬೀಜಗಳನ್ನು ಉತ್ಪಾದಿಸಿ ಕರ್ನಾಟಕ ರಾಜ್ಯ ಬೀಜ ನಿಗಮ, ವ್ಯವಸಾಯ ಇಲಾಖೆ, ರಾಷ್ಟ್ರೀಯ ಬೀಜ ನಿಗಮ, ತೋಟಗಾರಿಕಾ ಇಲಾಖೆ, ಕರ್ನಾಟಕ ರಾಜ್ಯ ಎಣ್ಣೆ ಕಾಳು ಉತ್ಪಾದನಾ ಸಹಕಾರಿ ಸಂಘಗಳ ಒಕ್ಕೂಟ ಹಾಗೂ ಇತರೆ ಸಂಘ ಸಂಸ್ಥೆಗಳಿಗೆ ಒದಗಿಸುತ್ತದೆ.

ಕೃಷಿ ವಿಶ್ವವಿದ್ಯಾನಿಲಯಗಳು ಹೊಸ ತಳಿಗಳನ್ನು ಕಂಡುಹಿಡಿಯುವಲ್ಲಿ ಅತಿ ಪ್ರಾಮುಖ್ಯತೆಯನ್ನು ಹೊಂದಿರುತ್ತವೆ. ಎಲ್ಲಾ ಬೆಳೆಗಳ, ತಳಿಗಳ ಬೀಜ ಉತ್ಪಾದನೆಯನ್ನು ತಳಿ ವಿಜ್ಞಾನಿಗಳು ಹಾಗೂ ಇತರ ವಿಜ್ಞಾನಿಗಳ ಸ್ವಂತ ಮೇಲ್ವಿಚಾರಣೆಯಲ್ಲಿ ಮಾಡಲಾಗುವುದು. ಕೃಷಿ ವಿಶ್ವವಿದ್ಯಾನಿಲಯವು ಕಂಡುಹಿಡಿದಿರುವ ರಾಗಿ, ಭತ್ತ, ಹತ್ತಿ, ಸೂರ್ಯಕಾಂತಿ ಹಾಗೂ ಇತರ ಬೆಳೆಗಳ ತಳಿಗಳು ಕರ್ನಾಟಕ ರಾಜ್ಯದಲ್ಲಿ ಅಲ್ಲದೆ ಇತರ ರಾಜ್ಯಗಳಲ್ಲಿಯೂ ಕೂಡಾ ಬಹಳ ಬೇಡಿಕೆಯಲ್ಲಿ ಇವೆ. ಇದೇ ಕಾರ್ಯವನ್ನು ೧೯೮೬ರಲ್ಲಿ ಧಾರವಾಡದಲ್ಲಿ ಸ್ಥಾಪಿತವಾದ ಮತ್ತೊಂದು ಕೃಷಿ ವಿಶ್ವವಿದ್ಯಾನಿಲಯ ಕೂಡ ಮಾಡುತ್ತಲಿದೆ.

ಹಾಗೇ ಕೇಂದ್ರದ ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆ, ಭಾರತೀಯ ಕೃಷಿ ಸಂಶೋಧನಾ ಮಂಡಳಿ, ನವದೆಹಲಿಯ ಅಧೀನ ಸಂಸ್ಥೆ, ಇದರ ಕೇಂದ್ರ ಕಛೇರಿ ಹಾಗೂ ಸಂಶೋಧನಾ ಕೇಂದ್ರ ಬೆಂಗಳೂರಿನ ಹೆಸರಘಟ್ಟದಲ್ಲಿ ಇದ್ದು ಪ್ರಾದೇಶಿಕ ಸಂಶೋಧನಾ ಕೇಂದ್ರಗಳು ದೇಶದ ವಿವಿಧ ಭಾಗಗಳಲ್ಲಿ ಇವೆ. ಈ ಸಂಸ್ಥೆಯ ಮುಖ್ಯ ಉದ್ದೇಶ ತೋಟಗಾರಿಕಾ ಬೆಳೆಗಳಲ್ಲಿ ಸಂಶೋಧನೆ ನಡೆಸುವುದು. ಈ ಸಂಸ್ಥೆ ಕಂಡು ಹಿಡಿದ ವಿವಿಧ ತರಕಾರಿ ಹಾಗೂ ತೋಟಗಾರಿಕಾ ತಳಿಗಳು ಹೆಚ್ಚು ಇಳುವರಿಗೆ ಹೆಸರುವಾಸಿಯಾಗಿದ್ದು ರೈತರಿಂದ ಅಪಾರ ಬೇಡಿಕೆಯಲ್ಲಿದೆ.

ಇಂತಹ ಅಧಿಕ ಇಳುವರಿ ಬೀಜಗಳ ಗುಣಮಟ್ಟ ಕಾಪಾಡುವುದೂ ಮುಖ್ಯವಾಗಿದ್ದು ಈ ನಿಟ್ಟಿನಲ್ಲಿ ಕರ್ನಾಟಕ ರಾಜ್ಯ ಬೀಜ ಪ್ರಮಾಣನ ಸಂಸ್ಥೆ ಮಹತ್ತರ ಪಾತ್ರ ವಹಿಸುತ್ತಿದೆ. ಕರ್ನಾಟಕ ರಾಜ್ಯ ಬೀಜ ಪ್ರಮಾಣನ ಸಂಸ್ಥೆಯನ್ನು ೧೯೭೪ ರಲ್ಲಿ ಒಂದು ಸ್ವಾಯತ್ತ ಸಂಸ್ಥೆಯಾಗಿ ಕರ್ನಾಟಕ ಸರ್ಕಾರ ಸ್ಥಾಪನೆ ಮಾಡಿದೆ. ಬೀಜ ಉತ್ಪಾದನೆಯಲ್ಲಿ ಗುಣಮಟ್ಟವನ್ನು ಕಾಪಾಡಿ ರೈತರಿಗೆ ಉತ್ತಮ ಗುಣಮಟ್ಟದ ಬೀಜಗಳನ್ನು ಒದಗಿಸುವಂತೆ ಸಹಾಯ ಮಾಡುವುದೇ ಕರ್ನಾಟಕ ರಾಜ್ಯ ಬೀಜ ಪ್ರಮಾಣನ ಸಂಸ್ಥೆಯ ಮೂಲ ಉದ್ದೇಶ. ಗುರುತಿಸಲಾದ ತಳಿಗಳ ಬೀಜ ಉತ್ಪಾದನೆಯಲ್ಲಿ ಅಳವಡಿಸಬೇಕಾದ ಪದ್ಧತಿಗಳನ್ನು ಕಟ್ಟುನಿಟ್ಟಾಗಿ ನಿರ್ವಹಿಸುವಂತೆ ಪ್ರಮಾಣನ ಸಂಸ್ಥೆ ಉಸ್ತುವಾರಿ ನೋಡಿಕೊಳ್ಳುತ್ತದೆ.

ಬೀಜೋತ್ಪಾದನೆಯನ್ನು ಬೀಜ ಪ್ರಮಾಣೀಕರಣಕ್ಕೆ ಒಳಪಡಿಸುವುದು ಕಡ್ಡಾಯವಲ್ಲದಿದ್ದರೂ ಬೀಜ ಮಾರಾಟ ಮಾಡುವಾಗ ಚೀಲದೊಡನೆ ವಿವರವಾದ ಚೀಟಿಯನ್ನು ಲಗತ್ತಿಸಿರುವುದನ್ನು ಕಡ್ಡಾಯ ಮಾಡಲಾಗಿದೆ. ಬೀಜ ಉತ್ಪಾದನೆಯಲ್ಲಿ ತೊಡಗಿರುವ ಯಾವ ವ್ಯಕ್ತಿಯೇ ಆಗಲಿ, ಯಾವ ಸಂಸ್ಥೆಯೇ ಆಗಿರಲಿ ಅವರಿಗೆ ಮೇಲ್ವಿಚಾರಕ ಹಾಗೂ ಸಲಹೆಗಾರರಾಗಿ ಪ್ರಮಾಣನ ಸಂಸ್ಥೆ ಪಾತ್ರ ವಹಿಸುತ್ತದೆ. ಬೀಜ ಉತ್ಪಾದನೆಯನ್ನು ಬೀಜ ಪ್ರಮಾಣನಕ್ಕೆ ಒಳಪಡಿಸಿ ಬೆಳೆದ ಬೀಜಗಳಿಗೆ ಮಾತ್ರ ಬೀಜ ಪ್ರಮಾಣ ಪತ್ರವನ್ನು ನೀಡಲಾಗುವುದು. ಬೀಜ ಪ್ರಮಾಣನಕ್ಕೆ ಒಳಪಡಿಸಿದ ಬೀಜೋತ್ಪಾದನೆಯನ್ನು ಮೂಲ ಬೀಜ ಉಪಯೋಗದಿಂದ ಹಿಡಿದು ಬೀಜಗಳನ್ನು ಚೀಲಕ್ಕೆ ತುಂಬಿ ಮುದ್ರೆ ಹಾಕುವವರೆಗೆ ಎಲ್ಲಾ ಹಂತಗಳಲ್ಲೂ ಬೀಜ ಪ್ರಮಾಣನ ಸಂಸ್ಥೆಯು ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತದೆ. ಬೀಜಗಳನ್ನು ವಿವಿಧ ರೀತಿಯ ಗುಣಮಟ್ಟದ ನಿರ್ದಿಷ್ಟ ಮಾನ ದಂಡಗಳಿಗೆ ಒಳಪಡಿಸಿ ಅದರಲ್ಲಿ ತೇರ್ಗಡೆಯಾದರೆ ಮಾತ್ರ ಬೀಜ ಪ್ರಮಾಣನ ಪತ್ರವನ್ನು ನೀಡಲಾಗುವುದು. ಆದುದರಿಂದ ಬೀಜ ಪ್ರಮಾಣನ ಸಂಸ್ಥೆ ನೀಡುವ ಪ್ರಮಾಣ ಪತ್ರವು ಉತ್ತಮ ಗುಣಮಟ್ಟದ ಒಂದು ಪ್ರತೀಕವೇ ಸರಿ. ಆದಕಾರಣ ರೈತರಿಗೆ ಒಂದು ಕಿವಿಮಾತು-ಬೀಜ ಖರೀದಿಸುವ ಮೊದಲು ಅದು ಪ್ರಮಾಣೀಕರಿಸಿದ ಬೀಜವೆಂದು ಖಾತ್ರಿ ಮಾಡಿಕೊಳ್ಳಬೇಕು. ಬೀಜದ ಚೀಲಕ್ಕೆ ಲಗತ್ತಿಸಿರುವ ಪ್ರಮಾಣನ ಪತ್ರಕ್ಕೆ ಧಕ್ಕೆ ಉಂಟಾಗಿದೆಯೇ ಎಂದು ಖಚಿತಪಡಿಸಿಕೊಳ್ಳಬೇಕು. ಪ್ರಮಾಣನ ಪತ್ರವನ್ನು ಪ್ರತಿ ಚೀಲ ಅಥವಾ ಪ್ಯಾಕೆಟ್‌ಗೆ ಲಗತ್ತಿಸಿರುತ್ತದೆ. ಇದೇ ರೀತಿಯಲ್ಲಿ ಕೈಗಾರಿಕಾ ವಸ್ತುಗಳಿಗೆ ಐಎಸ್‌ಐ ಮುದ್ರೆಯನ್ನು ಅಳವಡಿಸಿರುತ್ತಾರೆ.

ಬೀಜ ಪ್ರಮಾಣನ ಸಂಸ್ಥೆಯ ಇತರ ಮುಖ್ಯ ಉದ್ದೇಶಗಳೆಂದರೆ ವಿವಿಧ ಸಂಸ್ಥೆ ಹಾಗೂ ರೈತರಿಂದ ಬೀಜ ಪ್ರಮಾಣನಕ್ಕೆ ಒಳಪಡಿಸಿದ ಬೀಜೋತ್ಪಾದನೆಯ ಮೇಲ್ವಿಚಾರಣೆಯನ್ನು ನಿರ್ವಹಿಸುವುದು, ಬೀಜ ಸಂಸ್ಕರಣ ಘಟಕಗಳ ಮೇಲ್ವಿಚಾರಣೆ ನೋಡಿಕೊಳ್ಳುವುದು, ಅಂಗೀಕೃತವಾದ(ಪ್ರಕಟಿಸಲಾದ) ಬೀಜ ಪರೀಕ್ಷಾ ಕೇಂದ್ರಗಳಲ್ಲಿ ಬೀಜ ಪರೀಕ್ಷೆಗೆ ಏರ್ಪಾಡು ಮಾಡುವುದು ಹಾಗೂ ಇನ್ನಿತರೆ.

ಕರ್ನಾಟಕ ರಾಜ್ಯ ಬೀಜ ಪ್ರಮಾಣನ ಸಂಸ್ಥೆಯ ಕೇಂದ್ರ ಕಛೇರಿ ಬೆಂಗಳೂರಿನಲ್ಲಿದ್ದು ಸಂಸ್ಥೆಯ ಸಿಬ್ಬಂದಿ ರಾಜ್ಯದ ವಿವಿಧ ಕೇಂದ್ರಗಳಲ್ಲಿ ಕೆಲಸ ನಿರ್ವಹಿಸುತ್ತಿರುತ್ತಾರೆ. ಇಂತಹ ಅಧಿಕ ಇಳುವರಿ ನೀಡುವ ಬೀಜಗಳನ್ನು ಸೃಷ್ಟಿಸಿ, ಗುಣಮಟ್ಟವನ್ನು ಕಾಪಾಡಿಕೊಳ್ಳಲು ಏರ್ಪಾಡು ಮಾಡಿದರೆ ಮಾತ್ರ ಸಾಲದು, ಭಾರತದಂತಹಾ ಬೃಹತ್ ಕೃಷಿ ಪ್ರಧಾನ ರಾಷ್ಟ್ರದ ರೈತರಿಗೆ ಅಗತ್ಯವಾದಷ್ಟು ಬೀಜವನ್ನು ಸಾಕಷ್ಟು ಪ್ರಮಾಣದಲ್ಲಿ ಉತ್ಪಾದಿಸಿ ಸಕಾಲದಲ್ಲಿ ಹಂಚುವುದೂ ಅಷ್ಟೇ ಪ್ರಮುಖವಾಗಿರುತ್ತದೆ. ಈ ಕಾರ್ಯವನ್ನು ರಾಷ್ಟ್ರ ಮತ್ತು ರಾಜ್ಯಮಟ್ಟದಲ್ಲಿ ಸರ್ಕಾರಿ ಸಾಮ್ಯದ ಎರಡು ಸಂಸ್ಥೆಗಳು ನೆರವೇರಿಸುತ್ತಿವೆ. ಅವುಗಳೆಂದರೆ:

## ಕರ್ನಾಟಕ ರಾಜ್ಯ ಬೀಜ ನಿಗಮ (ನಿಯಮಿತ) :

ಕರ್ನಾಟಕ ರಾಜ್ಯ ಬೀಜ ನಿಗಮ ೧೯೭೯ ರಲ್ಲಿ ಒಂದು ಸ್ವಾಯತ್ತ ಸಂಸ್ಥೆಯಾಗಿ ಸ್ಥಾಪಿಸಲ್ಪಟ್ಟಿತು. ಇದಕ್ಕೂ ಮೊದಲು ಕರ್ನಾಟಕ ರಾಜ್ಯ ಆಗ್ರೋ ಬೀಜ ಸಂಸ್ಥೆ (೧೯೭೩) ಕರ್ನಾಟಕ ಆಗ್ರೋ ಕೈಗಾರಿಕಾ ಸಂಸ್ಥೆಯ ಅಧೀನ ಸಂಸ್ಥೆಯಾಗಿ ಕೆಲಸ ಮಾಡುತ್ತಿತ್ತು. ಕರ್ನಾಟಕ ರಾಜ್ಯ ಬೀಜ ನಿಗಮವು ಬೀಜ ಉತ್ಪಾದನೆ, ಬೀಜ ಸಂಸ್ಕರಣ ಹಾಗೂ ಬೀಜ ಮಾರಾಟದಲ್ಲಿ ತೊಡಗಿರುತ್ತದೆ. ರಾಜ್ಯದ ಪ್ರಾಮುಖ್ಯತೆಯ ವಿವಿಧ ತಳಿಗಳ ಉತ್ಪಾದನೆ, ಸಂಸ್ಕರಣ ಹಾಗೂ ಮಾರಾಟದ ನಿರ್ವಹಣೆಯನ್ನೂ ಮಾಡುತ್ತಿದೆ. ನ್ಯಾಯ ಬೆಲೆಯಲ್ಲಿ, ಸೂಕ್ತ ಸ್ಥಳದಲ್ಲಿ, ಸೂಕ್ತ ಸಮಯಕ್ಕೆ ಉತ್ತಮ ಬೀಜಗಳನ್ನು ರೈತಾಪಿ ಜನರಿಗೆ ಹಾಗೂ ವಿವಿಧ ಸಂಘ ಸಂಸ್ಥೆಗಳಿಗೆ ಒದಗಿಸಿ ರಾಜ್ಯದ ಬೀಜ ಕೈಗಾರಿಕೆಯಲ್ಲಿ ಮುಂದಾಳಾಗಿ ಉದಯಿಸುವುದು ಬೀಜ ನಿಗಮದ ಮುಖ್ಯ ಹಾಗೂ ಮೂಲ ಉದ್ದೇಶ.

ಬೀಜ ನಿಗಮದ ಆಡಳಿತವನ್ನು ನಿರ್ದೇಶಕರ ಸಮಿತಿಯ ನಿರ್ಧಾರಗಳಂತೆ ವ್ಯವಸ್ಥಾಪಕ ನಿರ್ದೇಶಕರು ನಡೆಸುತ್ತಾರೆ. ಎಲ್ಲಾ ಮುಖ್ಯ ನಿರ್ಧಾರಗಳನ್ನು ತೆಗೆದುಕೊಳ್ಳುವ ಈ ನಿರ್ದೇಶಕರ ಸಮಿತಿಯಲ್ಲಿ ರೈತರೇ ಆದ ಬೀಜ ಉತ್ಪಾದಕರಿಂದ ಚುನಾಯಿಸಿದ ಪ್ರತಿನಿಧಿಗಳು ಇರುತ್ತಾರೆ. ರೈತರು ಬೀಜ ನಿಗಮದ ಷೇರುದಾರರಾಗಿ (ಪಾಲುದಾರರಾಗಿ) ವಿವಿಧ ರೀತಿಯ ಲಾಭವನ್ನೂ ಪಡೆಯುವುದೇ ಅಲ್ಲದೆ ಸಂಸ್ಥೆಯನ್ನು ನಡೆಸುವ ಅವಕಾಶವನ್ನೂ ಉಪಯೋಗಿಸಿಕೊಳ್ಳಬಹುದು.

ಬೀಜ ನಿಗಮ ಬೀಜ ಉತ್ಪಾದನೆ ವಿಭಾಗದಲ್ಲಿ ಅತೀ ಚುರುಕಾಗಿ ಕಾರ್ಯನಿರ್ವಹಿಸುತ್ತಿದ್ದು ಮೂಲ ಬೀಜವನ್ನು ಕೃಷಿ ವಿಶ್ವ ವಿದ್ಯಾನಿಲಯಗಳು ಹಾಗೂ ಇತರೆ ಸಂಸ್ಥೆಗಳಿಂದ ಪಡೆದು ಪ್ರಮಾಣೀಕೃತ ಬೀಜ ಉತ್ಪಾದನೆಯ ವ್ಯವಸ್ಥೆ ಮಾಡುತ್ತಿದೆ. ಬೀಜ ಉತ್ಪಾದನೆಯನ್ನು ಬೀಜ ನಿಗಮ ತನ್ನ ಷೇರುದಾರರಾದ ರೈತರಿಗೆ ಕೊಟ್ಟು ಮೊದಲೇ ಮಾಡಿಕೊಂಡ ಕರಾರಿನ ಪ್ರಕಾರ ಖರೀದಿಸುತ್ತದೆ.

ಬೀಜ ಮಾರಾಟದಲ್ಲಿ ಕೂಡ ಬೀಜ ನಿಗಮ ಉತ್ತಮ ಜಾಲವನ್ನು ಹೊಂದಿದ್ದು, ಕರ್ನಾಟಕದಾದ್ಯಂತ ಸ್ವಂತ ಮಾರಾಟ ಮಳಿಗೆಗಳಿಲ್ಲದೇ ಅಂಗೀಕರಿಸಿದ ಖಾಸಗಿ ವರ್ತಕರ ಮೂಲಕ ಬೀಜಗಳನ್ನು ರೈತರಿಗೆ ಸುಲಭವಾಗಿ ಲಭಿಸುವಂತೆ ಮಾಡುವಲ್ಲಿ ಶ್ರಮಿಸುತ್ತಿದೆ. ಬೀಜ ನಿಗಮ ತನ್ನದೇ ಆದ ಬೀಜ ಸಂಸ್ಕರಣ ಘಟಕಗಳನ್ನು ಹೊಂದಿರುತ್ತದೆ. ಉತ್ತಮ ಗುಣಮಟ್ಟದ ಬೀಜಗಳಿಗಾಗಿ ರೈತರು ಬೀಜ ನಿಗಮದ ಪ್ರಮಾಣೀಕರಿಸಿದ ಬೀಜಗಳನ್ನು ಉಪಯೋಗಿಸಬಹುದು. ಬೀಜ ನಿಗಮದ ಆಡಳಿತ ಕಛೇರಿ ಹೆಬ್ಬಾಳ, ಬೆಂಗಳೂರಿನಲ್ಲಿ ಇದೆ.

ರಾಷ್ಟ್ರೀಯ ಬೀಜ ನಿಗಮ (ನಿಯಮಿತ) ಭಾರತ ಸರ್ಕಾರದ ಕೃಷಿ ಮಂತ್ರಾಲಯದ ಆಡಳಿತದ ಅಧೀನಕ್ಕೆ ಒಳಪಟ್ಟ ಒಂದು ಸಂಸ್ಥೆಯಾಗಿದೆ. ಈ ಸಂಸ್ಥೆಯನ್ನು ೧೯೬೩ರಲ್ಲಿ ಸ್ಥಾಪನೆ ಮಾಡಲಾಗಿದೆ. ಈ ಸಂಸ್ಥೆಯ ಉದ್ದೇಶ ಭಾರತದಲ್ಲಿ ಬೀಜ ಕೈಗಾರಿಕೆಗೆ ಉತ್ತಮ ಬುನಾದಿಯನ್ನು ಹಾಕುವುದು. ರಾಷ್ಟ್ರೀಯ ಬೀಜ ನಿಗಮದ ಅತಿ ಮುಖ್ಯ ಉದ್ದೇಶವೆಂದರೆ ಭಾರತದಲ್ಲಿ ಬೀಜ ಉತ್ಪಾದನೆ, ಬೀಜ ಸಂಸ್ಕರಣೆ, ಬೀಜ ಶೇಖರಣೆ, ಬೀಜ ವಿತರಣೆ, ಬೀಜ ಸಾಕಾಣಿಕೆ, ಬೀಜ ಮಾರಾಟ ಹಾಗೂ ಇವುಗಳಿಗೆ ಸಂಬಂಧಪಟ್ಟ

ವಿಷಯಗಳಲ್ಲಿ ರಾಜ್ಯ ಸರ್ಕಾರಗಳು, ಸಹಕಾರಿ ಸಂಘಗಳು, ನಿಗಮಗಳು ಇತರ ಸರ್ಕಾರಿ ಪ್ರತಿನಿಧಿಗಳೊಂದಿಗೆ ಒಪ್ಪಂದ ಮಾಡಿಕೊಳ್ಳುವುದು.

ರಾಷ್ಟ್ರೀಯ ಬೀಜ ನಿಗಮದ ಕೇಂದ್ರ ಕಛೇರಿ ನವದೆಹಲಿಯಲ್ಲಿ ಇದ್ದು, ಪ್ರಾದೇಶಿಕ ಕಛೇರಿಗಳು ಎಲ್ಲಾ ರಾಜ್ಯಗಳಲ್ಲೂ ಇವೆ. ಬೆಂಗಳೂರಿನಲ್ಲಿ ಒಂದು ಪ್ರಾದೇಶಿಕ ಕಛೇರಿ ಇದ್ದು, ಇದರ ಉಪ ಕಛೇರಿಗಳು ಕರ್ನಾಟಕದ ವಿವಿಧ ಭಾಗಗಳಲ್ಲಿ ಇವೆ. ರಾಷ್ಟ್ರೀಯ ಬೀಜ ನಿಗಮದ ನಿರ್ದೇಶಕರಲ್ಲಿ ಸರ್ಕಾರ ನಾಮಕರಣ ಮಾಡಿದ ರೈತ ಪ್ರತಿನಿಧಿಗಳು ಇರುತ್ತಾರೆ.

ಈ ರೀತಿಯಾಗಿ ಅಧಿಕ ಇಳುವರಿ ಬೀಜದ ಸೃಷ್ಟಿ, ಉತ್ಪಾದನೆ, ಗುಣಮಟ್ಟ ಕಾಪಾಡಿಕೊಳ್ಳುವ ದಾರಿಗಳನ್ನು ಸರಿಪಡಿಸಿಕೊಂಡ ಮೇಲೆ ಅವುಗಳನ್ನು ಯೋಗ್ಯ ರೀತಿಯಲ್ಲಿ ನಮ್ಮ ರೈತರು ಬಳಸಿ ಅಧಿಕ ಇಳುವರಿಯನ್ನು ಪಡೆದುಕೊಳ್ಳುವ ದಾರಿಯನ್ನೂ ಹೇಳಿ ಕೊಡಬೇಕಾಗುತ್ತದೆ. ಈ ಕಾರ್ಯಕ್ಕಾಗಿ ನಮ್ಮ ರಾಜ್ಯದಲ್ಲಿ ವಿಶೇಷ ವಿಸ್ತರಣಾ ಜಾಲವನ್ನೇ ಏರ್ಪಡಿಸಲಾಗಿದೆ. ಈ ಕಾರ್ಯಕ್ಕೆ ನಿಯೋಜಿತವಾದ ಎರಡು ಪ್ರಮುಖ ಇಲಾಖೆಗಳೆಂದರೆ-ರಾಜ್ಯ ಕೃಷಿ ಮತ್ತು ತೋಟಗಾರಿಕಾ ಇಲಾಖೆಗಳು. ಕೃಷಿ ಇಲಾಖೆ ಕರ್ನಾಟಕ ಸರ್ಕಾರದ ಒಂದು ವಿಭಾಗವಾಗಿದ್ದು ರೈತರಿಗೆ ವಿವಿಧ ರೀತಿಯ ಕೃಷಿ ಕಚ್ಚಾ ವಸ್ತುಗಳನ್ನು ಒದಗಿಸುತ್ತಿದ್ದು ಅವುಗಳಲ್ಲಿ ಬೀಜ ಒಂದು ಮುಖ್ಯವಾದ ಅಂಶವಾಗಿದೆ. ಇಲಾಖೆ ತನ್ನ ಸ್ವಂತ ನಿಶ್ಚಿತ ಸ್ಥಿತಿಯ ಬೀಜ ಉಗ್ರಾಣಗಳನ್ನು ಹೊಂದಿದೆ. ರಾಜ್ಯದ ವಿವಿಧ ಭಾಗಗಳಲ್ಲಿ ೬೦ ಬೀಜ ಉತ್ಪಾದನಾ ಕ್ಷೇತ್ರಗಳನ್ನು ಹೊಂದಿದೆ. ಈ ಬೀಜ ಉತ್ಪಾದನಾ ಕ್ಷೇತ್ರದಲ್ಲಿ ಮೂಲ ಬೀಜ ಉತ್ಪಾದನೆಯನ್ನು ಮಾದರಿಯಾಗಿ ಬೆಳೆದು ರೈತರಿಗೆ ಪ್ರತ್ಯಕ್ಷ ಪ್ರದರ್ಶನಗಳನ್ನು ಏರ್ಪಡಿಸಲಾಗುವುದು. ರಾಜ್ಯಾದ್ಯಂತ ತನ್ನ ಸಿಬ್ಬಂದಿಯ ಮೂಲಕ ಉತ್ತಮ ಬೀಜದ ಉಪಯೋಗದ ಬಗ್ಗೆ ರೈತರನ್ನು ಖುದ್ದಾಗಿ ಭೇಟಿ ಮಾಡಿ ಮಾಹಿತಿ ನೀಡುತ್ತಾರೆ. ಕಡಿಮೆ ಬೆಲೆಯಲ್ಲಿ ರೈತರಿಗೆ ಬೀಜವನ್ನು ಹಂಚುತ್ತಾರೆ.

ಪ್ರಪಂಚದಾದ್ಯಂತ ಅಭಿವೃದ್ಧಿಯಾಗಿರುವ ಬೀಜ ಪರೀಕ್ಷಾ ಪದ್ಧತಿಗಳನ್ನು ಗಮನದಲ್ಲಿ ಇಟ್ಟುಕೊಂಡು ಕೃಷಿ ಇಲಾಖೆ, ಹೆಬ್ಬಾಳ (ಬೆಂಗಳೂರು) ಹಾಗೂ ಧಾರವಾಡದಲ್ಲಿ ಬೀಜ ಪರೀಕ್ಷಾ ಪ್ರಯೋಗಾಲಯಗಳನ್ನು ಸ್ಥಾಪಿಸಿದೆ. ಈ ಬೀಜ ಪ್ರಯೋಗ ಶಾಲೆಗಳು ಆಹಾರದ ಕಾಳುಗಳು, ಬೇಳೆ ಕಾಳುಗಳು, ಎಣ್ಣೆ ಬೀಜಗಳು ಹಾಗೂ ಇತರೆ ಕೃಷಿ ಬೆಳೆಗಳ ಬೀಜಗಳನ್ನು ಪರೀಕ್ಷೆ ಮಾಡಲು ಮಾನ್ಯತೆ ಪಡೆದಿರುತ್ತದೆ.

ಬೀಜ ಪ್ರಯೋಗ ಶಾಲೆಯಲ್ಲಿ ಬೀಜಗಳ ನಮೂನೆಗಳನ್ನು ತೆಗೆದು ಶೇಕಡಾವಾರು ಅಂಕುರಿಸುವಿಕೆ, ಬೀಜ ಶುದ್ಧತೆ ಹಾಗೂ ಬೀಜ ತೇವಾಂಶವನ್ನು ಪರೀಕ್ಷೆ ಮಾಡಲಾಗುವುದು. ಬೀಜ ನಮೂನೆಗಳನ್ನು ಬೀಜ ಪರೀಕ್ಷೆಗಾಗಿ ಕೃಷಿ ಇಲಾಖೆ, ತೋಟಗಾರಿಕಾ ಇಲಾಖೆ, ಖಾಸಗಿ ಬೀಜ ಸಂಸ್ಥೆಗಳು, ಖಾಸಗಿ ಬೀಜ ಉತ್ಪಾದಕರು, ಕರ್ನಾಟಕ ರಾಜ್ಯ ಬೀಜ ನಿಗಮ, ಕರ್ನಾಟಕ ರಾಜ್ಯ ಬೀಜ ಪ್ರಮಾಣನ ಸಂಸ್ಥೆ, ಕೃಷಿ ವಿಶ್ವವಿದ್ಯಾಲಯಗಳು ಹಾಗೂ ರೈತರಿಂದ ಸ್ವೀಕರಿಸಲಾಗುವುದು.

ಬೀಜ ಪರೀಕ್ಷೆಯ ಪ್ರಾಮುಖ್ಯತೆಯನ್ನು ಅಳೆಯಲು ಅಸಾಧ್ಯ. ರೈತರು ಬಿತ್ತನೆ ಮಾಡಿದ ನಂತರ ಬೀಜ ಅಂಕುರಿಸದೆ ಸಂಭವಿಸುವ ಗಂಡಾಂತರ (ನಷ್ಟ)ವನ್ನು ತಪ್ಪಿಸಬಹುದು. ಬೀಜ ಶುದ್ಧತೆ ಪರೀಕ್ಷೆಯಿಂದ ಅದೇ ಬೆಳೆಯ ಬೇರೆ ತಳಿಗಳ ಮಿಶ್ರಣ ಹಾಗೂ ಕಳೆ ಬೀಜಗಳ ಮಿಶ್ರಣವನ್ನು ಪತ್ತೆ ಹಚ್ಚಬಹುದು. ಬೀಜ ತೇವಾಂಶ ಅಂದಾಜು ಪರೀಕ್ಷೆಯಿಂದ ಅತಿ ತೇವಾಂಶದಿಂದ ಬೀಜ ನಾಶವನ್ನು ತಡೆಗಟ್ಟಬಹುದು. ಒಟ್ಟಾರೆ ಹೇಳುವುದಾದರೆ ಕರ್ನಾಟಕ ರಾಜ್ಯ ಕೃಷಿ ಇಲಾಖೆ ರೈತರ ಗೆಳೆಯ, ಮಾರ್ಗದರ್ಶಿ ಹಾಗೂ ಸರ್ಕಾರದ ಒಂದು ಪ್ರತಿನಿಧಿಯಂತೆ ರೈತರ ಸೇವೆಯಲ್ಲಿ ಸದಾ ಸಿದ್ಧವಿರುವ ಒಂದು ಸಂಸ್ಥೆ ಎಂದು ಹೇಳಬಹುದು.

ಹಾಗೇ ಕರ್ನಾಟಕ ರಾಜ್ಯ ತೋಟಗಾರಿಕೆ ಇಲಾಖೆ ಕರ್ನಾಟಕ ಸರ್ಕಾರದ ಒಂದು ವಿಭಾಗ. ತೋಟಗಾರಿಕೆ ಇಲಾಖೆ ರೈತರಿಗೆ ಅಪ್ಪಟವಾದ ಹಣ್ಣು, ತರಕಾರಿ, ತೋಟದ ಮಸಾಲೆ ಹಾಗೂ ಅಲಂಕಾರಿಕ ಗಿಡಗಳ ಎಳೆ ಸಸಿ ಹಾಗೂ ಬೀಜಗಳನ್ನು ಒದಗಿಸುವುದು ಒಂದು ಉದ್ದೇಶ. ಈ ದಿಸೆಯಲ್ಲಿ ಉತ್ತಮ ಸಾಧನೆಯನ್ನು ಮಾಡಲು ಇಲಾಖೆ ರಾಜ್ಯಾದ್ಯಂತ ೩೮೦ ತೋಟಗಾರಿಕಾ ಕ್ಷೇತ್ರಗಳನ್ನು ಸ್ಥಾಪಿಸಿದೆ. ಈ ಕ್ಷೇತ್ರಗಳಲ್ಲಿ ಅಪ್ಪಟ ಗುಣಮಟ್ಟದ ಸಸಿ ಹಾಗೂ ಬೀಜಗಳನ್ನು ಬೆಳೆದು ನ್ಯಾಯ ಬೆಲೆಯಲ್ಲಿ ರೈತರಿಗೆ ವಿತರಿಸಲಾಗುವುದು. ಇಲಾಖೆ ತನ್ನ ಸಿಬ್ಬಂದಿಯ ಮೂಲಕ ಉತ್ತಮ ಬೀಜ ಹಾಗೊ ಸಸಿಗಳ ಉಪಯೋಗದ ಬಗ್ಗೆ ರೈತರಿಗೆ ಮಾಹಿತಿ ನೀಡುತ್ತದೆ.

ತರಕಾರಿ, ಹೂ ಗಿಡಗಳು ಹಾಗೂ ಇತರೆ ತೋಟಗಾರಿಕಾ ಬೆಳೆಗಳ ಪ್ರದರ್ಶನವನ್ನು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲೂ ಏರ್ಪಾಡು ಮಾಡಿ ರೈತರು ಪ್ರತ್ಯಕ್ಷ ಮಾಹಿತಿಯನ್ನು ಪಡೆಯಲು ಅನುವು ಮಾಡಿಕೊಡುತ್ತದೆ.

ಹೀಗೆ ಅಧಿಕ ಇಳುವರಿ ತಳಿಯ ಬೀಜಗಳ ಪೂರೈಕೆಗೆ ನಮ್ಮ ದೇಶದಲ್ಲಿ ವಿಸ್ತೃತವಾದ ವ್ಯವಸ್ಥೆಯೇ ಇದೆ ಎಂದರೆ ತಪ್ಪಾಗಲಾರದು. ಹಾಗಿದ್ದರೆ ಗುಣಮಟ್ಟ, ವಿತರಣೆಗಳಲ್ಲಿ ಲೋಪದೋಷಗಳು, ಮಧ್ಯವರ್ತಿಗಳ ಅತಿಯಾದ ಹಾವಳಿಯಿಂದ ನಮ್ಮ ರೈತರು ಆಗಾಗ್ಗೆ ಬವಣೆಪಡುವಂತಾಗಿರುವರು. ಇದನ್ನು ತಪ್ಪಿಸುವ ಸಲುವಾಗಿಯೇ ನಮ್ಮ ಸರಕಾರಗಳು ಹಲವಾರು ಕಟ್ಟುನಿಟ್ಟಿನ ಕಾಯಿದೆ ಕಾನೂನುಗಳನ್ನು ತಂದಿರುತ್ತದೆ. ಅವುಗಳಲ್ಲಿ ಮುಖ್ಯವಾದವೆಂದರೆ :

### ಬೀಜ ಕಾಯಿದೆ (Seeds Act) ೧೯೬೬ ಮತ್ತು ಬೀಜ ನಿರ್ಬಂಧ ಆಜ್ಞೆ (Seed Control Order) ೧೯೮೩ :

ಈ ಮೇಲಿನ ಕ್ರಮಗಳ ಮೂಲಕ ಬಿತ್ತನೆ ಬೀಜವನ್ನು 'ಅಗತ್ಯ ವಸ್ತುಗಳ ಕಾನೂನು ೧೯೫೫' ರ ಅಡಿಯಲ್ಲಿ ತರಲಾಗಿದೆ. ಈ ಕಾನೂನು ಪ್ರಕಾರ ಬೀಜ ಮಾರಾಟಗಾರರು (ರಫ್ತುದಾರರು ಮತ್ತು ಆಮದುಗಾರರು) ಕಡ್ಡಾಯವಾಗಿ ಲೈಸೆನ್ಸ್ ಪಡೆಯಬೇಕಾಗಿದೆ. ಬಿತ್ತನೆ ಬೀಜದ ಚಿಲ್ಲರೆ ಮಾರಾಟಗಾರರು ಬೀಜ ದಾಸ್ತಾನು ವಿವರಗಳನ್ನು, ಹಾಗೇ ಮಾರಾಟ ದರಗಳನ್ನು ಕಡ್ಡಾಯವಾಗಿ ಪ್ರಕಟಿಸಬೇಕು. ಮಾರಾಟ ಮಾಡಿದಾಗ ಕಡ್ಡಾಯವಾಗಿ ರಶೀದಿಯನ್ನು ನೀಡಬೇಕು. ಸಾರ್ವಜನಿಕ ಹಿತದೃಷ್ಟಿಯಿಂದ ಬಿತ್ತನೆ ಬೀಜವನ್ನು ಸರ್ಕಾರವು ತನ್ನ ಇಚ್ಛೆ ಮೇರೆಗೆ ಮಾರಾಟ ಮಾಡಲು ಮಾರಾಟಗಾರರಿಗೆ ಆದೇಶ ನೀಡಲು ಅವಕಾಶವಿದೆ. ಬೀಜ ಕಾನೂನು ಉಲ್ಲಂಘನೆಯಾದರೆ ಕಾನೂನು ಕ್ರಮ ಜರುಗಿಸಿ ಅವರ ಮೇಲೆ ದಂಡ ವಿಧಿಸುವ ಅವಕಾಶವಿದೆ. ಬಿತ್ತನೆ ಬೀಜದ ಚಿಲ್ಲರೆ ಮಾರಾಟಗಾರರು ತಮ್ಮ ಎಲ್ಲಾ ವ್ಯವಹಾರದ ಲೆಕ್ಕ ಪತ್ರಗಳನ್ನು ನಿಗದಿಪಡಿಸಿದ ಅವಧಿಯಲ್ಲಿ ಸರ್ಕಾರಕ್ಕೆ ಒಪ್ಪಿಸಬೇಕಾಗಿದೆ. ಬಿತ್ತನೆ ಬೀಜದ ಗುಣಮಟ್ಟದಲ್ಲಿ ದೋಷ ಕಂಡು ಬಂದಾಗ, ರೈತರು ದೂರು ನೀಡಿದರೆ, ಸರ್ಕಾರದ ಅಧಿಕಾರಿಗಳು ಬೀಜ ಮಾದರಿ ಪರೀಕ್ಷೆಗೆ ಒಳಪಡಿಸಬಹುದು. ಆರೋಪ ಸಾಬೀತಾದರೆ, ಬೀಜ ಮಾರಾಟಗಾರರ ಮೇಲೆ ಕಾನೂನು ಕ್ರಮ ತೆಗೆದುಕೊಳ್ಳಲಾಗುವುದು. ಮಾರಾಟದಡಿ ಬಿತ್ತನೆ ಬೀಜವು ಕನಿಷ್ಟ ಮೊಳಕೆ ಪ್ರಮಾಣ ಹಾಗೂ ಅನುವಂಶೀಯ ಗುಣಮಟ್ಟವನ್ನು ಹೊಂದಿರಬೇಕಾಗುತ್ತದೆ. ಮಾರಾಟ ಮಾಡಿದ ಬೀಜವು ಕಡ್ಡಾಯವಾಗಿ ಚೀಲ/ಡಬ್ಬಿಗಳಲ್ಲಿ ಹಾಕಿರಬೇಕು ಹಾಗೂ ಇಂತಹ ಚೀಲ/ಡಬ್ಬಿ ಸೀಲ್ ಮಾಡಿರಬೇಕು. ಈ ಚೀಲದ ಮೇಲೆ ಕಡ್ಡಾಯವಾಗಿ ಬೀಜದ ತೂಕ, ಪರೀಕ್ಷೆ ಮಾಡಿದ ದಿನಾಂಕ, ಬೀಜೋಪಚಾರದ ವಿವರಗಳು, ಉತ್ಪಾದಕರ ಹೆಸರು ಮತ್ತು ವಿಳಾಸ, ಮೊಳಕೆಯ ಪ್ರಮಾಣದ ವಿವರಗಳನ್ನು ನಮೂದಿಸಿರಬೇಕು.

ಹಾಗೇ "ಗ್ರಾಹಕರ ಹಿತರಕ್ಷಣಾ ಕಾನೂನು, 1989" ಕೂಡ ಈ ನಿಟ್ಟಿನಲ್ಲಿ ಮಹತ್ತರ ಪಾತ್ರ ವಹಿಸಲಿದೆ. ಈ ಕಾನೂನು ಪ್ರಕಾರ, ಬಿತ್ತನೆ ಬೀಜ ಖರೀದಿಸಿದ ರೈತರು ಬೀಜದಲ್ಲಿನ ಗುಣಮಟ್ಟದಲ್ಲಿ ಲೋಪ ದೋಷ ಕಂಡುಬಂದಲ್ಲಿ " ಜಿಲ್ಲಾ ಗ್ರಾಹಕರ ಕುಂದು ಕೊರತೆ ನಿವಾರಣಾ ಸಮಿತಿ"ಯಲ್ಲಿ ಅಹವಾಲನ್ನು ಸಲ್ಲಿಸಬಹುದು. ಈ ದೂರನ್ನು ದಾಖಲಿಸಲು ರೈತರು ಕಡ್ಡಾಯವಾಗಿ, ಖರೀದಿಸಿದ ರಶೀದಿಯನ್ನು ಮತ್ತು ಬಿತ್ತನೆ ಬೀಜದ ಮಾದರಿಯನ್ನು ಕೊಡಬೇಕು. ಬೆಳೆ ನಷ್ಟದ ಪರಿಹಾರದ ಮೊತ್ತವನ್ನು ನಮೂದಿಸಬೇಕು. ಸರ್ಕಾರ ಯಾವುದೇ ವಕೀಲರ ಸಹಾಯವಿಲ್ಲದೆ ರೈತನೇ ನೇರವಾಗಿ ತಮ್ಮ ವಾದವನ್ನು ಮಂಡಿಸಿ, ಒಂದೇ ದಿನದಲ್ಲಿ ನಿರ್ಣಯವನ್ನು ಪ್ರಕಟಿಸುವಂತಹ ವ್ಯವಸ್ಥೆಯನ್ನು ಏರ್ಪಡಿಸಿರುತ್ತದೆ. ಈ ದೂರನ್ನು ಬಿತ್ತನೆ ಬೀಜ ಖರೀದಿ ಮಾಡಿದ ಜಿಲ್ಲಾ ಅಧೀನದಲ್ಲಿ ಬರುವ ಗ್ರಾಹಕರ ನ್ಯಾಯಾಲಯದಲ್ಲಿ ಸಲ್ಲಿಸಬಹುದು. ಈ ವಿವರಗಳನ್ನು ರೈತರು ತಮ್ಮ ಜಿಲ್ಲಾ ಕೇಂದ್ರದಲ್ಲಿ ಇರುವ ಗ್ರಾಹಕರ ಕುಂದುಕೊರತೆ ನಿವಾರಣಾ ಕಚೇರಿಯಲ್ಲಿ ವಿಚಾರಿಸಬಹುದು.

### ಜಾಗತೀಕರಣದ ಪ್ರಭಾವ :

ಜಾಗತೀಕರಣದ ಪ್ರಭಾವದಿಂದಾಗಿ ಬೇರೆಲ್ಲಾ ಕ್ಷೇತ್ರಗಳಲ್ಲಿ ಎದ್ದಿರುವ ಆಸೆ, ಆತಂಕಗಳು ಬೀಜ ಕ್ಷೇತ್ರದಲ್ಲೂ ಉಂಟಾಗಿರುತ್ತದೆ. ಇದರ ತಕ್ಷಣದ ಪರಿಣಾಮವೆಂದರೆ ಬೀಜದ ಸೃಷ್ಟಿ, ಉತ್ಪಾದನೆ ಮತ್ತು ವಿಚಾರಣೆಯಲ್ಲಿ ಇದುವರೆಗೂ ಇದ್ದ ಸರ್ಕಾರ ಸ್ವಾಮ್ಯದ ಸಂಶೋಧನಾ ಕೇಂದ್ರಗಳು, ಬೀಜ ನಿಗಮ ಮತ್ತು ಇಲಾಖೆಗಳ ಪಾತ್ರ ನಿಧಾನವಾಗಿ ಕ್ಷೀಣಿಸುತ್ತಾ ಈ ಕಾರ್ಯದಲ್ಲಿ ಖಾಸಗೀ

ಸಂಸ್ಥೆಗಳು ಅದರಲ್ಲೂ ಬಹುರಾಷ್ಟ್ರೀಯ ಸಂಸ್ಥೆಗಳ ಪಾತ್ರ ಅಧಿಕವಾಗುವಂತಾಗುವುದು. ಇದರಿಂದ ಬೀಜ ಕ್ಷೇತ್ರದಲ್ಲಿ ದಕ್ಷತೆ ಹೆಚ್ಚಿ, ಹೂಡಿಕೆ ಅಧಿಕವಾಗುವುದು ಮಾತ್ರವಲ್ಲ. ಜೈವಿಕ ತಂತ್ರಜ್ಞಾನದಂತಹ ಅತ್ಯಾಧುನಿಕ ತಂತ್ರಜ್ಞಾನ ಪ್ರಭೇದಗಳೂ ಕೃಷಿ ಕ್ಷೇತ್ರಕ್ಕೆ ಕಾಲಿಡುವಂತಾಗುತ್ತದೆಯೆಂದು ಆಶಿಸಲಾಗಿದೆ. ಹಾಗೇ, ಇವುಗಳಿಂದ ಇದುವರೆಗೂ ಅಗ್ಗ ಎನಿಸಿದ್ದ ಬೀಜಗಳು ಮುಂದೆ ದುಬಾರಿಯಾಗಿ ನಮ್ಮ ಬಡ ರೈತರ ಕೈಗೆಟುಕದಾಗುತ್ತವೆ ಎನ್ನುವ ಆತಂಕ ಕೂಡ ಏಳುವಂತಾಗಿದೆ. ಇನ್ನು ಆ ಜೈವಿಕ ತಂತ್ರಜ್ಞಾನದಿಂದಾಗಿ ಪರಿಸರ ಮತ್ತು ಆಹಾರ ವಲಯದ ಮೇಲೆ ಯಾವ ರೀತಿಯ ಪರಿಣಾಮವಾಗಬಹುದು, ಅವುಗಳ ರಕ್ಷಣೆ ಸಾಧ್ಯವೆ ಎಂಬ ಭಯ ಕೂಡ ಗಟ್ಟಿಯಾಗುತ್ತಲಿದೆ. ಇವೆಲ್ಲಕ್ಕಿಂತ ಮಿಗಿಲಾಗಿ, ಇಂದು ಸರ್ಕಾರಿ ಮತ್ತು ಖಾಸಗಿ ವಲಯಗಳೆರಡರ ನಡುವೆ ಬೀಜ ಉತ್ಪಾದನೆ ಮತ್ತು ವಿತರಣೆಯಲ್ಲಿ ಒಂದು ಸ್ಪರ್ಧಾತ್ಮಕ ವಾತಾವರಣ ಎದ್ದು ರೈತರಿಗೆ ಒಂದು ವಿಧದಲ್ಲಿ ಇದರಿಂದ ಉಪಯೋಗವೇ ಆಗಿದೆ. ಜಾಗತೀಕರಣದಿಂದಾಗಿ ಸರ್ಕಾರಿ ವಲಯದ ಸ್ಥಾನ ಕುಂಠಿತವಾಗಿ, ನಮ್ಮ ಬೀಜ ಕ್ಷೇತ್ರದ ಮೇಲಿನ ಹಿಡಿತ ಮನ್ಸಾಂಟೋದಂತಹಾ ಬಹುರಾಷ್ಟ್ರೀಯ ಕಂಪನಿಯ ಅಧೀನವಾದಲ್ಲಿ ಅದರಿಂದ ಅಹಿತಕರ ಪರಿಣಾಮವೇ ಜಾಸ್ತಿಯಾಗಬಹುದೆನ್ನುವ ಭಯ ಏಳುತ್ತಿದೆ. ಈ ಎಲ್ಲಾ ವಿಚಾರಗಳನ್ನು ವಸ್ತುನಿಷ್ಠವಾಗಿ ಚಿಂತಿಸಿ, ಜಾಗತೀಕರಣದ ಹಿನ್ನೆಲೆಯಲ್ಲಿ ಕೃಷಿ ಬೀಜದ ವಿಚಾರವಾಗಿ ಜಾಗರೂಕತೆಯಿಂದ ಹೆಜ್ಜೆ ಇಡುವುದು ಈಗ ಅತ್ಯಗತ್ಯವಾಗಿದೆ.

ಈ ನಿಟ್ಟಿನಲ್ಲಿ ಒಂದು ಪ್ರಯತ್ನವಾಗಿ ಸಸ್ಯ ತಳಿ ಸಂರಕ್ಷಣೆ ಮತ್ತು ರೈತರ ಹಕ್ಕಿನ ಕಾಯಿದೆ ೨೦೦೧ಯನ್ನು (Plant variety Protection and Farmers Rights Act) ನಮ್ಮ ದೇಶದಲ್ಲಿ ಜಾರಿಗೆ ತರಲಾಗಿರುತ್ತದೆ. ಈ ಕಾಯಿದೆ ಮೂಲಕ ನಾಟೀ ತಳಿಗಳನ್ನು ಇದುವರೆಗೂ ಸಂರಕ್ಷಿಸಿಕೊಂಡು ಬಂದಿರುವ ರೈತರು, ಬುಡಕಟ್ಟು ಜನಾಂಗಗಳು ಹಾಗೇ ಸಮುದಾಯಗಳಿಗೆ ಅದರ ಹಕ್ಕನ್ನು ನೀಡುವುದು ಮಾತ್ರವಲ್ಲ, ಅದನ್ನು ಅಧಿಕ ಇಳುವರಿ ತಳಿಗಳ ಸೃಷ್ಟಿಗೆ ಬಳಸಿದ್ದೇ ಆದಲ್ಲಿ ಅದರಿಂದ ಬರುವ ಲಾಭಾಂಶದಲ್ಲಿ ಪಾಲನ್ನು ಕೂಡ ಕೊಡುವ ಮಹದಾಸೆಯನ್ನು ಅಳವಡಿಸಲಾಗಿದೆ. ಹಾಗೇ ಗುಣಮಟ್ಟದ ಖಾತರಿ, ಜೈವಿಕ ತಂತ್ರಜ್ಞಾನದ ಬಗ್ಗೆ ಎಚ್ಚರ ಇತ್ಯಾದಿ ಅಂಶಗಳನ್ನೂ ಇದರಲ್ಲಿ ಸೇರಿಸಲಾಗಿದೆ. ಇಂತಹ ಪ್ರಯತ್ನಗಳಿಂದ ಬೀಜಸ್ವಾಮ್ಯದ ಮೇಲಿನ ನಮ್ಮ ರೈತರ ಹಕ್ಕು ಗಟ್ಟಿಯಾಗಿ ಸುಸ್ಥಿರ ಕೃಷಿ ಅಭಿವೃದ್ಧಿಗೆ ಇವು ಹೇಗೆ ಸಹಕಾರಿಯಾಗಲಿವೆ ಎಂದು ಕಾದು ನೋಡಬೇಕಾಗಿದೆ.

●




# ಬೆಳೆ ವಿಮಾ ಯೋಜನೆ

ಡಾ. ಎಂ. ಎಸ್. ಜಯರಾಮ್

ಭಾರತ ದೇಶ ಕೃಷಿ ಪ್ರಧಾನ ದೇಶವಾಗಿದ್ದು, ಶೇ. ೭೦ರಷ್ಟು ಜನ ಜೀವನೋಪಾಯಕ್ಕಾಗಿ ಕೃಷಿಯನ್ನೇ ಅವಲಂಬಿಸಿದ್ದಾರೆ. ರೈತರು ಅನೇಕ ವರ್ಷಗಳಿಂದ ಕೃಷಿ ಕಸುಬಿನಲ್ಲಿ ತೊಡಗಿದ್ದು, ಅನೇಕ ರೀತಿಯಾದ ಬೆಳೆಗಳನ್ನು ಬೆಳೆಯುತ್ತಿದ್ದರೂ, ಇವರ ಆರ್ಥಿಕ ಹಾಗೂ ಜೀವನೋಪಾಯದ ಮಟ್ಟ ನಿರೀಕ್ಷಿಸಿದಷ್ಟು ಸುಧಾರಿಸಿಲ್ಲ. ಅದಕ್ಕೆ ಕಾರಣಗಳು ಅನೇಕ. ಇವರಲ್ಲಿ ಬಹಳಷ್ಟು ಜನ ಸಣ್ಣ ಮತ್ತು ಅತಿ ಸಣ್ಣ ರೈತರಾಗಿದ್ದು ಮಳೆಯನ್ನೇ ನಂಬಿರುತ್ತಾರೆ. ಸಕಾಲಕ್ಕೆ ಮಳೆ ಬಾರದೇ, ಬೆಳೆಯಾಗದೇ, ಒಂದು ಕಡೆ ನಷ್ಟ ಅನುಭವಿಸಿದರೆ, ಮತ್ತೊಂದೆಡೆ ಪ್ರಕೃತಿ ವಿಕೋಪದಿಂದಾಗಿ ಅತಿವೃಷ್ಟಿಯಿಂದಲೂ ರೈತರು ಮುಖ್ಯವಾಗಿ ಸಣ್ಣ ಮತ್ತು ಅತಿ ಸಣ್ಣ ರೈತರು ನಷ್ಟವನ್ನು ಅನುಭವಿಸುತ್ತಾ ಬಂದು ಕಂಗಾಲಾಗಿರುತ್ತಾರೆ. ಇತ್ತೀಚೆಗಿನ ದಿನಗಳಲ್ಲಿ ಅವರ ಪರಿಸ್ಥಿತಿ ಹದಗೆಟ್ಟು, ಪಡೆದ ಬ್ಯಾಂಕ್ ಮತ್ತು ವ್ಯಾಪಾರಸ್ಥರ ಸಾಲವನ್ನು ವಾಪಸ್ಸು ಕೊಡಲಾಗದೇ, ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು ದುರದೃಷ್ಟಕರವಾಗಿದೆ. ಕೃಷಿ ಇಷ್ಟೊಂದು ಪ್ರಧಾನವಾದ ಕಸುಬಾಗಿದ್ದು, ಶೇ. ೭೦ರಷ್ಟು ಜನಸಂಖ್ಯೆ ಇದರಲ್ಲಿ ತೊಡಗಿದ್ದು, ನಾನಾ ಕಾರಣಗಳಿಂದ ರೈತರು ಬೆಳೆ ನಷ್ಟಗಳಿಂದ ಸದಾ ಕಷ್ಟ ಅನುಭವಿಸುತ್ತಿದ್ದರೂ, ಅನೇಕ ವರ್ಷಗಳ ಕಾಲ ಯಾವುದೇ ರೀತಿಯಾದಂತಹ 'ನಷ್ಟ ತುಂಬಿಕೊಡುವ' ಯೋಜನೆ ವ್ಯವಸ್ಥಿತ ರೀತಿಯಲ್ಲಿ ನಮ್ಮ ದೇಶದಲ್ಲಿ ಇರಲಿಲ್ಲ. ಮೊಟ್ಟಮೊದಲನೆಯದಾಗಿ, ಭಾರತ ಸರ್ಕಾರದವರು ೧೯೭೦ರ ದಶಕದಲ್ಲಿ ಬೆಳೆ ವಿಮಾ ಯೋಜನೆ ಪ್ರಾರಂಭ ಮಾಡಿದರೂ ಸಹ, ಅದು ಹೆಚ್ಚು ರೈತರಿಗೆ ಸಹಾಯಕವಾಗಿ ಪರಿಣಮಿಸಲಿಲ್ಲ. ನಂತರ ೧೯೮೫ರ ದಶಕದಿಂದೀಚೆಗೆ 'ಸಮಗ್ರ ಬೆಳೆ ವಿಮಾ ಯೋಜನೆ' (Comprehensive Crop Insurance Scheme) ಜಾರಿಗೊಳಿಸಿದ್ದು, ಇದರಿಂದಾಗಿ ರೈತರಿಗೆ ಬೆಳೆ ನಷ್ಟವನ್ನು ತುಂಬಿಸಿಕೊಡಲು ಅನುಕೂಲವಾಗಿದ್ದು ಸ್ವಲ್ಪ ಚೇತರಿಸಿಕೊಳ್ಳುವಂತಾಗಿರುವರು.

> **ಅತಿ ಸಣ್ಣ ರೈತರ ಪರಿಸ್ಥಿತಿ ಹದಗೆಟ್ಟು ಬ್ಯಾಂಕು ಮತ್ತು ವ್ಯಾಪಾರಸ್ಥರಲ್ಲಿ ಮಾಡಿದ ಸಾಲ ವಾಪಸ್ಸು ಕೊಡಲಾಗದೆ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು ದುರದೃಷ್ಟಕರ. ರೈತರು ಬೆಳೆಗಳಿಂದ ನಷ್ಟ ಅನುಭವಿಸುತ್ತಿದ್ದರೂ ಅವರಿಗೆ ಯಾವುದೇ ರೀತಿಯಾದಂತಹ 'ನಷ್ಟ ತುಂಬಿಕೊಡುವ' ವ್ಯವಸ್ಥೆ ದೇಶದಲ್ಲಿ ಇರಲಿಲ್ಲ.**

## ಬೆಳೆ ವಿಮಾ ಯೋಜನೆ ಉದ್ದೇಶಗಳು :

೧) ಪ್ರಕೃತಿ ವಿಕೋಪ, ಪೀಡೆ ಹಾಗೂ ರೋಗಗಳಿಂದ ನಿಗದಿಪಡಿಸಿದ ಬೆಳೆಗಳಿಗೆ ರೈತರಿಗೆ ವಿಮೆ ರೂಪದಲ್ಲಿ ಆರ್ಥಿಕ ಸಹಾಯ ಒದಗಿಸುವಿಕೆ.

೨) ಸುಧಾರಿತ ಕೃಷಿ ಪದ್ಧತಿಗಳನ್ನು ಅಳವಡಿಸಲು ಉತ್ತೇಜನ ಹಾಗೂ ಮಾರುಕಟ್ಟೆಯಿಂದ ಅಧಿಕ ವೆಚ್ಚದ ಹೂಡಿಕೆ ಹಾಗೂ ಸುಧಾರಿತ ತಾಂತ್ರಿಕತೆಯನ್ನು ಆಳವಡಿಸಲು ರೈತರಿಗೆ ಪ್ರೋತ್ಸಾಹ ಕೊಡುವುದು.

೩) ಹೆಚ್ಚಿನ ಅನಾಹುತ ಉಂಟಾಗುವ ವರ್ಷಗಳಲ್ಲಿ ರೈತರ ಆದಾಯ ಸ್ಥಿರಗೊಳಿಸಲು ಸಹಾಯ ಒದಗಿಸುವಿಕೆ.

## ಬೆಳೆ ವಿಮಾ ಯೋಜನೆಯಡಿಯಲ್ಲಿ ಬರುವ ಬೆಳೆಗಳು :

ಬೆಳೆ ವಿಮೆಯನ್ನು ಈ ಕೆಳಕಂಡ ವಿಸ್ತಾರವಾದ ಗುಂಪಿನ ಬೆಳೆಗಳಿಗೆ ಒದಗಿಸಲಾಗಿದೆ.

೧) ಆಹಾರ ಬೆಳೆಗಳು

೨) ಎಣ್ಣೆ ಬೀಜ ಬೆಳೆಗಳು

೩) ಕಬ್ಬು, ಹತ್ತಿ, ಆಲೂಗಡ್ಡೆ, ವಾರ್ಷಿಕ ವಾಣಿಜ್ಯ ಹಾಗೂ ತೋಟಗಾರಿಕೆ ಬೆಳೆಗಳು

ಭಾರತ ಸರ್ಕಾರ ಬೆಳೆ ವಿಮೆ ಯೋಜನೆಯನ್ನು ಎಲ್ಲಾ ರಾಜ್ಯಗಳಿಗೂ ಹಾಗೂ ಕೇಂದ್ರ ಆಡಳಿತ ಪ್ರದೇಶಗಳಿಗೂ ಈ ಮೇಲ್ಕಂಡ ಬೆಳೆಗಳಿಗೆ ಒದಗಿಸಿದೆ. ಬೆಳೆ ವಿಮೆ ಯೋಜನೆ ಒಂದು ಒತ್ತಾಯವಿಲ್ಲದ ಯೋಜನೆಯಾಗಿದ್ದು, ಯಾವುದೇ ರಾಜ್ಯ ಸರ್ಕಾರ ಅಥವಾ ಕೇಂದ್ರ ಆಡಳಿತ ಪ್ರದೇಶಗಳು ಈ ಯೋಜನೆಯನ್ನು ರೈತರ ಹಿತದೃಷ್ಟಿಯಿಂದ ಅಳವಡಿಸಬಹುದು ಇಲ್ಲವೇ ಅಳವಡಿಸದೇ ಇರಬಹುದು. ಒಂದು ವೇಳೆ ಯಾವುದೇ ಸರ್ಕಾರ/ಕೇಂದ್ರಾಡಳಿತ ಸರ್ಕಾರಗಳು ಅಳವಡಿಸಿಕೊಂಡರೆ, ಅಂತಹ ಸರ್ಕಾರಗಳು ೩ ವರ್ಷಗಳ ಕಾಲ ಸತತವಾಗಿ ಈ ಯೋಜನೆಯನ್ನು ಮುಂದುವರಿಸಬೇಕು. ಮಧ್ಯದಲ್ಲಿ ಈ ಯೋಜನೆಯನ್ನು ಕೈಬಿಡುವಂತಿಲ್ಲ.

## ಬೆಳೆ ವಿಮೆ ಯೋಜನೆಯಡಿಯಲ್ಲಿ ಬರುವ ಕೃಷಿಕರು :

ಬೆಳೆ ವಿಮೆ ಯೋಜನೆ ನಿಗದಿಪಡಿಸಿದ ಬೆಳೆಗಳನ್ನು ಬೆಳೆಯುವ ಎಲ್ಲಾ ವರ್ಗದ ರೈತರಿಗೂ ಅಂದರೆ ದೊಡ್ಡ ರೈತರು, ಸಣ್ಣ ರೈತರು, ಅತಿ ಸಣ್ಣ ರೈತರು, ಗೇಣಿದಾರರು ಹಾಗೂ ಬೆಳೆ ಹಂಚಿಕೊಳ್ಳುವ ರೈತರು (share croppers) ಈ ಯೋಜನೆಯಡಿಯಲ್ಲಿ ಬರುತ್ತಾರೆ.

ನಿಗದಿಪಡಿಸಿದ ಬೆಳೆಗಳನ್ನು ಬೆಳೆಯಲು ಸಾಲವನ್ನು ಪಡೆಯುವಂತಹ ಎಲ್ಲಾ ವರ್ಗದ ರೈತರಿಗೂ ಸಾಲ ನೀಡುವ ಸಂಸ್ಥೆಗಳ ಮೂಲಕ ಈ ಯೋಜನೆಯನ್ನು ಕಡ್ಡಾಯವಾಗಿ ಅನ್ವಯಿಸಲಾಗುತ್ತದೆ. ನಿಗದಿಪಡಿಸಿದ ಬೆಳೆಯನ್ನು ಬೆಳೆಯಲು ಸಾಲ ಪಡೆಯದಿರುವ ರೈತರಿಗೆ ಈ ಯೋಜನೆ ಕಡ್ಡಾಯವಲ್ಲ. ಅಂತಹ ರೈತರು ಬೆಳೆ ವಿಮಾ ಯೋಜನೆಯ ಪ್ರಯೋಜನ ಪಡೆಯುವುದಾದರೆ ಪಡೆಯಬಹುದು, ಇಲ್ಲವಾದಲ್ಲಿ ಬಿಡಬಹುದು.

## ಬೆಳೆ ವಿಮೆ ಯೋಜನೆ ಅಡಿಯಲ್ಲಿ ಭರಿಸುವ ಗಂಡಾಂತರಗಳು :

ಈ ಕೆಳಕಂಡ ಭರಿಸಲಾಗದ ಗಂಡಾಂತರಗಳಿಗೆ ಬೆಳೆ ವಿಮೆ ಯೋಜನೆ ಅನ್ವಯಿಸುತ್ತದೆ:

೧. ಸ್ವಾಭಾವಿಕ ಬೆಂಕಿ ಹಾಗೂ ಸಿಡಿಲು

೨. ಬಿರುಗಾಳಿ/ಸುಂಟರಗಾಳಿ /ಚಂಡಮಾರುತ/ ಆಣಿಕಲ್ಲು

೩. ಪ್ರವಾಹ/ ಭೂಮಿ ಕುಸಿಯುವಿಕೆ (Land slides)

೪. ಬರಗಾಲ/ಸಾಕಾಗದಿರುವ ಮಳೆ (Dry spells)

೫. ಪೀಡೆಗಳು ಹಾಗೂ ರೋಗಗಳು

ಯುದ್ಧ, ಅಣು ವಿಕಿರಣದ ಗಂಡಾಂತರ ಹಾಗೂ ಇತರೆ ಮಾನವ ನಿರ್ಮಿತ ಗಂಡಾಂತರಗಳಿಗೆ ಬೆಳೆ ವಿಮೆ ಯೋಜನೆ ಅನ್ವಯವಾಗುವುದಿಲ್ಲ.

ಬೆಳೆ ವಿಮೆ ಯೋಜನೆ ಪ್ರಾರಂಭವಾದಾಗಿನಿಂದಲೂ ಭಾರತ ಸರ್ಕಾರ ಹಾಗೂ ಸಾರ್ವಜನಿಕ ವಿಮಾ ನಿಗಮ (General Insurance Corporation of India) ಒಟ್ಟಾಗಿ ಇದರ ಅನುಷ್ಠಾನದಲ್ಲಿ ತೊಡಗಿರುತ್ತವೆ. ಜನರಲ್ ಇನ್ಸ್ಯೂರೆನ್ಸ್ ಕಾರ್ಪೊರೇಶನ್ ಆಫ್ ಇಂಡಿಯಾ ತನ್ನದೇ ಆದಂತಹ ವ್ಯವಸ್ಥೆ ಇಲ್ಲದಿರುವುದರಿಂದ, ಈ ಯೋಜನೆಯನ್ನು ವಾಣಿಜ್ಯ ಬ್ಯಾಂಕ್, ಗ್ರಾಮೀಣ ಬ್ಯಾಂಕ್,

ಸಹಕಾರಿ ಬ್ಯಾಂಕ್ ಇವುಗಳ ಸಹಾಯದಿಂದ ದೇಶದ ವಿವಿಧ ಭಾಗಗಳಲ್ಲಿ ಜಾರಿಗೊಳಿಸುತ್ತಿದೆ. ಬೆಳೆ ವಿಮೆ ಯೋಜನೆಯನ್ನು ಜಾರಿಗೊಳಿಸಲು ಪ್ರತ್ಯೇಕವಾದ ಒಂದು ಸಂಸ್ಥೆ 2002-2003ರವರೆಗೆ ಇಲ್ಲದಿದ್ದರಿಂದ ಹಾಗೂ ನೋಡಲ್ ಬ್ಯಾಂಕ್‌ಗಳ ಮೇಲೆ ಹೆಚ್ಚಾಗಿ ಅವಲಂಬಿಸಿದ್ದರಿಂದ, ಈ ಯೋಜನೆಯನ್ನು ಜಾರಿಗೊಳಿಸುವಲ್ಲಿ ಬಹಳಷ್ಟು ತೊಡಕುಗಳು ಉಂಟಾಗಿದ್ದು, ರೈತರಿಗೆ ಯೋಜನೆಯ ಪೂರ್ಣ ಫಲ ದೊರಕಲು ಅಸಾಧ್ಯವಾಗಿರುತ್ತದೆ. ಜೊತೆಗೆ, ಯೋಜನೆಯನ್ನು ಕಾರ್ಯರೂಪಕ್ಕೆ ತರಲು ನಿರೀಕ್ಷೆಗಿಂತ ಹೆಚ್ಚಾಗಿ ಹಣ ಖರ್ಚಾಗಿದೆ. ಈ ಯೋಜನೆಯನ್ನು ಕಾರ್ಯಗತಗೊಳಿಸುವುದಕ್ಕೆ ಪರಿಣತಗೊಂಡಿರುವಂತಹ ಸಿಬ್ಬಂದಿಯ ಅಭಾವ ಹಾಗೂ ಮಾಹಿತಿ ತಂತ್ರಜ್ಞಾನದ ಆಳವಡಿಕೆ ಕೊರತೆ ಮತ್ತು ಇನ್ನೂ ಇತರೆ ಅಡಚಣೆಗಳಿಂದ ಸಮರ್ಪಕವಾಗಿ ಈ ಯೋಜನೆಯನ್ನು ಇದುವರೆಗೂ ಜಾರಿಗೊಳಿಸಲು ಸಾಧ್ಯವಾಗಲಿಲ್ಲ. ಆದ್ದರಿಂದ, ಭಾರತ ಸರ್ಕಾರ 2002-03ರಲ್ಲಿ ಬೆಳೆ ವಿಮೆ ಯೋಜನೆಯನ್ನು ಜಾರಿಗೊಳಿಸಲು ಡಿಸೆಂಬರ್ ೨೦೦೨ರಿಂದ ಅಗ್ರಿಕಲ್ಚರಲ್ ಇನ್ಶೂರೆನ್ಸ್ ಕಂಪನಿ ಆಫ್ ಇಂಡಿಯಾ ಎಂಬ ಪ್ರತ್ಯೇಕವಾದಂತಹ ಸಂಸ್ಥೆಯನ್ನು ಸ್ಥಾಪಿಸಿತು. ಹಿಂದಿನ ಸಮಗ್ರ ಬೆಳೆ ವಿಮೆ ಯೋಜನೆಯಲ್ಲಿ ಕಂಡುಬಂದಂತಹ ನ್ಯೂನತೆಗಳನ್ನು ಗಣನೆಗೆ ತೆಗೆದುಕೊಂಡು, ಅವುಗಳನ್ನು ಸರಿಪಡಿಸಿ, ಈ ಯೋಜನೆಯಡಿಯಲ್ಲಿ ಬೆಳೆವಿಮೆಯನ್ನು ನಿಗದಿತ ಸಮಯದಲ್ಲಿ, ಅರ್ಥಪೂರ್ಣವಾಗಿ , ರೈತರಿಗೆ ಪ್ರಕೃತಿ ವಿಕೋಪದಿಂದ ಉಂಟಾಗುವ ನಷ್ಟಗಳನ್ನು ತುಂಬಿಕೊಡಲು ಪ್ರಯತ್ನಿಸಲಾಗಿದೆ.

## ಬೆಳೆ ವಿಮೆ ಯೋಜನೆಯನ್ನು ರೈತರು ಆಳವಡಿಸಿಕೊಳ್ಳುವ ವಿಧಾನ :

ಪ್ರತಿ ರಾಜ್ಯ, ಕೇಂದ್ರಾಡಳಿತ ಸರ್ಕಾರಗಳು ಬೀಜ ಬಿತ್ತಿದ ಒಂದು ತಿಂಗಳು ಮುಂಚಿತವಾಗಿ ಬೆಳೆ ವಿಮೆ ಯೋಜನೆಯಡಿಯಲ್ಲಿ ಬರುವ ವಿವರಪಟ್ಟಿ ಹಾಗೂ ಅನ್ವಯವಾಗುವಂತಹ ವಲಯಗಳ ವಿವರಗಳನ್ನು ಪ್ರಕಟಿಸಿ,ಈ ಪ್ರಕಟಣೆಯನ್ನು ಎಲ್ಲಾ ಕೃಷಿ/ತೋಟಗಾರಿಕೆ ಇಲಾಖೆಗಳಿಗೂ, ನೋಡಲ್ ಬ್ಯಾಂಕ್‌ಗಳಾದ ವಾಣಿಜ್ಯ ಬ್ಯಾಂಕ್, ಗ್ರಾಮೀಣ ಬ್ಯಾಂಕ್, ಸಹಕಾರಿ ಬ್ಯಾಂಕ್‌ಗಳಿವೆ ಕಳುಹಿಸಿ, ಕ್ರಮವಾಗಿ ರೈತರ ಮಾಹಿತಿಗಾಗಿ ಪ್ರಕಟಿಸುತ್ತವೆ. ಕೃಷಿ/ತೋಟಗಾರಿಕೆ ಇಲಾಖೆಯಲ್ಲಿ ರೈತರೊಂದಿಗೆ ಸಂಪರ್ಕ ಹೊಂದಿರುವ ಅಧಿಕಾರಿಗಳು ನೇರವಾಗಿ ರೈತರ ಗಮನಕ್ಕೆ ತರುತ್ತಾರೆ. ಈ ಪ್ರಕಟಣೆಯ ನಂತರ ರೈತರು ಯಾವಯಾವ ಬೆಳೆಗಳನ್ನು ಯಾವಯಾವ ವಲಯಗಳಲ್ಲಿ ಬೆಳೆದರೆ ವಿಮೆ ಸಾಧ್ಯ ಎಂಬುದನ್ನು ತಿಳಿದುಕೊಂಡು ಅಂತಹ ಬೆಳೆಗಳಿಗೆ ಸಂಬಂಧಪಟ್ಟ ನೋಡಲ್ ಬ್ಯಾಂಕ್‌ನಿಂದ ನಿಗದಿಪಡಿಸಿದ ನಮೂನೆಯ ಅರ್ಜಿಗಳನ್ನು ಪಡೆದು ಎಲ್ಲಾ ವಿವರಗಳನ್ನು ಭರ್ತಿಮಾಡಿ, ಬೀಜ ಬಿತ್ತಿದ/ನಾಟಿ ಮಾಡಿದ ಒಂದು ತಿಂಗಳ ಒಳಗೆ ನಿಗದಿಪಡಿಸಿದ ಬೆಳೆ ವಿಮೆಯ ಪ್ರೀಮಿಯಂ ಹಣವನ್ನು ತುಂಬಿ ಅರ್ಜಿಯೊಂದಿಗೆ ಸಂಬಂಧಪಟ್ಟ ಬ್ಯಾಂಕ್‌ಗೆ ಸಲ್ಲಿಸತಕ್ಕದ್ದು. ಒಂದು ವೇಳೆ ಪ್ರಕೃತಿ ವಿಕೋಪ / ನಿಭಾಯಿಸಲಾಗದಂತಹ ಗಂಡಾಂತರಗಳು/ಪೀಡೆ ರೋಗಗಳಿಂದ ಬೆಳೆ ನಾಶವಾದರೆ, ನಷ್ಟದ ಪ್ರಮಾಣವನ್ನು ಸಂಬಂಧಪಟ್ಟ ಅಧಿಕಾರಿಗಳು ಗುರುತಿಸಿ, ಅದರ ಆಧಾರದ ಮೇಲೆ ರೈತರಿಗೆ ನಷ್ಟವನ್ನು ತುಂಬಿಕೊಡಲಾಗುತ್ತದೆ.

## ನಿಗದಿಪಡಿಸಿದ ಪ್ರೀಮಿಯಂ ದರಗಳು :

೧) ಆಹಾರ ಬೆಳೆಗಳು : ನಿಗದಿಪಡಿಸಿದ ವಿಮೆಯ ಒಟ್ಟು ಹಣದ ಶೇ. ೨.೫.

೨) ಎಣ್ಣೆ ಬೀಜಗಳು : ನಿಗದಿಪಡಿಸಿದ ವಿಮೆಯ ಒಟ್ಟು ಹಣದ ಶೇ. ೩.೫.

೩) ವಾರ್ಷಿಕ ವಾಣಿಜ್ಯ ಹಾಗೂ ವಾರ್ಷಿಕ ತೋಟಗಾರಿಕೆ ಬೆಳೆಗಳು : (Actuarial Rate) ಉದಾ: ನಿಗದಿಪಡಿಸಿದ ವಿಮೆಯ ಒಟ್ಟು ಮೊತ್ತ ರಾಗಿ ಬೆಳೆಗೆ ರೂ.೧೦,೦೦೦/-. ಇದಕ್ಕೆ ಶೇ. ೨.೫ ಪ್ರೀಮಿಯಮ್ ಅಂದರೆ ರೂ. ೨೫೦/-)

ಈ ಯೋಜನೆಯಡಿಯಲ್ಲಿ ಸಣ್ಣ ರೈತರು/ ಅತಿ ಸಣ್ಣ ರೈತರ ಪ್ರೀಮಿಯಂ ಹಣದಲ್ಲಿ ಶೇ.೫೦ರಷ್ಟನ್ನು ರಿಯಾಯ್ತಿ ರೂಪದಲ್ಲಿ ಸರ್ಕಾರವೇ ತುಂಬುತ್ತದೆ.

ಆದರೆ ಈ ಬೆಳೆ ವಿಮಾ ಯೋಜನೆಯ ಮುಖ್ಯ ಲೋಪದೋಷಗಳೆಂದರೆ ಬೆಳೆ ಹಾನಿಯನ್ನು ನಿರ್ಧರಿಸುವ ರೀತಿ. ಸದ್ಯದ ಯೋಜನೆ ಪ್ರಕಾರ, ಬೆಳೆ ಹಾನಿ ನಿರ್ಧಾರಕ್ಕೆ ಒಂದು ತಾಲ್ಲೂಕನ್ನು ಘಟಕ (unit) ಎಂದು ನಿರ್ಧರಿಸಲಾಗಿದೆ. ಅಂದರೆ, ಒಂದು

ಹಳ್ಳಿಯ ರೈತರ ಬೆಳೆ ಸಕಾರಣದಿಂದ ನಾಶವಾಗಿದ್ದರೂ ಕೂಡ, ಇಡೀ ತಾಲ್ಲೂಕೆ ನಷ್ಟ ಅನುಭವಿಸಿರುವ ತಾಲ್ಲೂಕೆಂದು ಘೋಷಣೆಯಾಗದಿದ್ದಲ್ಲಿ ಆ ಹಳ್ಳಿಯ ರೈತರಿಗೆ ಪರಿಹಾರ ಅಸಾಧ್ಯ. ಅದ್ದರಿಂದ ಬೆಳೆ ಹಾನಿ ನಿರ್ಧಾರದ ಘಟಕವನ್ನು ತಾಲ್ಲೂಕಿನಿಂದ ಕನಿಷ್ಟ ಗ್ರಾಮಕ್ಕಾದರೂ ಇಳಿಸಬೇಕೆಂಬುದು ಹಲವು ತಜ್ಞರ ಅಭಿಮತ. ಹಾಗೇ ಸದ್ಯದ ಬೆಳೆ ವಿಮಾ ಯೋಜನೆ ಸಾಲ ನೀಡುವ ಸಂಸ್ಥೆಗೇ ಹೆಚ್ಚು ಸಹಕಾರಿಯಾದಂತಿದೆ. ಕಾರಣ, ಈ ಸಂಸ್ಥೆಗಳಿಂದ ಸಾಲ ಪಡೆದ ರೈತರೇ ಹೆಚ್ಚು ಈ ಯೋಜನೆಯಡಿಯಲ್ಲಿ ಬರುವಂತಾಗಿರುತ್ತದೆ. ಇದನ್ನು ಸರಿಪಡಿಸಲು, ಎಲ್ಲಾ ಬೆಳೆಗಳನ್ನೂ ಸಕಲ ರೈತಾಪಿ ವರ್ಗವನ್ನೂ ಈ ಯೋಜನೆಯಡಿಯಲ್ಲಿ ಬರುವಂತೆ ಮಾಡಬೇಕಾಗುತ್ತದೆ.

ಬೆಳೆ ವಿಮಾ ಯೋಜನೆ ಹೊರತಾಗಿ ಬೆಳೆ ನಷ್ಟವಾದರೆ ನಷ್ಟ ತುಂಬಿ ಕೊಡಲು ಬೇರೆ ಯಾವ ಯೋಜನೆಯೂ ಸರ್ಕಾರದಿಂದಾಗಲೀ ಅಥವಾ ಇನ್ನಾವುದಾದರೂ ಮೂಲದಿಂದಾಗಲೀ ಇಲ್ಲ. ಆದ್ದರಿಂದ ಈ ಯೋಜನೆಯನ್ನು ಅತ್ಯಂತ ಯಶಸ್ವಿಯಾಗಿ ಜಾರಿಗೊಳಿಸಬೇಕಾದರೆ ಸರ್ಕಾರ, ಸಾಲ ಸಂಸ್ಥೆಗಳು, ರೈತರು ಮತ್ತು ಸಂಬಂಧಪಟ್ಟವರೆಲ್ಲರೂ ನಿಜವಾದ ಮಾಹಿತಿ ಕೊಟ್ಟು ಯೋಜನೆ ಫಲಪ್ರದವಾಗಲು ಸಹಕರಿಸಬೇಕು.

●



# ರೈತರ ಸಾಲ

ಶೇಷನಾರಾಯಣ

ನಮ್ಮ ರಾಜ್ಯದಲ್ಲಿ ಪ್ರಸಕ್ತ ಆರ್ಥಿಕ ವರ್ಷದಲ್ಲಿ ಇದುವರೆಗೆ ಹದಿನೇಳು ರೈತರು ಸಾಲದ ಹೊರೆ ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಮೂರು ವರ್ಷಗಳಲ್ಲಿ ಈ ಸಂಖ್ಯೆ ಲಕ್ಷ ಆಗಿದೆ. ಇದು ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಸುದ್ದಿ.

ಕಳೆದ ವಿಧಾನಸಭೆ ಅಧಿವೇಶನ ನಡೆಯುತ್ತ ಇದ್ದಾಗ ಒಬ್ಬರು ಎಂಎಲ್ಎ "ಸಾಲದ ಹೊರೆ ತಾಳಲಾರದೆ ರೈತ ಹೀಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಆದರೆ ಯಾರಾದರೂ ಅಬಕಾರಿ ಗುತ್ತಿಗೆದಾರರು ಆತ್ಮಹತ್ಯೆ ಮಾಡಿಕೊಂಡಿದ್ದಾರೆಂಬ ಸುದ್ದಿ ಪತ್ರಿಕೆಗಳಲ್ಲಿ ಬಂದದ್ದನ್ನು ನೀವು ನೋಡಿದ್ದೀರಾ ಅಥವಾ ಕೇಳಿದ್ದೀರಾ?" ಎನ್ನುವಂಥ ಒಂದು ಸೊಗಸಾದ ಪ್ರಶ್ನೆಯನ್ನು ಎಸೆದಿದ್ದಾರೆ.

ಕೇಂದ್ರದ ಹಣಕಾಸು ಸಚಿವ ಪಿ. ಚಿದಂಬರಂ ಅವರು ಇತ್ತೀಚೆಗೆ ಮಂಡ್ಯ ಜಿಲ್ಲೆಯಲ್ಲಿ ಕೆಲವು ಬ್ಯಾಂಕುಗಳಿಗೆ ಭೇಟಿ ನೀಡಿದ್ದಾರೆ. ಬ್ಯಾಂಕುಗಳು ಕೃಷಿಗೆ ಆದ್ಯತೆ ನೀಡದೆ ಕೈಗಾರಿಕೆಗಳಿಗೆ ಹೆಚ್ಚು ಸಾಲ ನೀಡಿರುವುದು ಅವರ ಗಮನಕ್ಕೆ ಬಂದಿದೆ. ರೈತರಲ್ಲಿ ಸುಮಾರು ಅರವತ್ತು ಮಂದಿ ಬ್ಯಾಂಕುಗಳಲ್ಲಿ ಸಾಲ ಸಿಗದೆ ಅಥವಾ ಬ್ಯಾಂಕ್ ನಿಬಂಧನೆಗಳ ಸುತ್ತು ಸುತ್ತು ಜಾಸ್ತಿಯಾಗಿ, ಬ್ಯಾಂಕುಗಳಿಗೆ ಸುತ್ತಾಡುವುದನ್ನು ನಿಲ್ಲಿಸಿ, ಖಾಸಗಿ ಲೇವಾದೇವಿಗಾರರ ಬಳಿಗೇ ಹೋಗುತ್ತಿರುವ ಸತ್ಯ ಸಂಗತಿಯೇ ವಾಸ್ತವಿಕತೆಗೆ ಹತ್ತಿರವಾಗಿ ಕಂಡುಬಂದಿದೆ. ಹೀಗಾಗಿ ಬ್ಯಾಂಕುಗಳು ನಮ್ಮ ರೈತರಿಗೆ ಆದ್ಯತೆಯ ಮೇಲೆ ಸಾಲ ನೀಡಬೇಕು ಎಂದು ಹಿತೋಪದೇಶ ನೀಡಿದ್ದಾರೆ.

> **ಸಾಲದ ಹೊರೆ ತಾಳಲಾರದೆ ರೈತ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಆದರೆ ಯಾರಾದರೂ ಅಬಕಾರಿ ಗುತ್ತಿಗೆದಾರರು ಆತ್ಮಹತ್ಯೆ ಮಾಡಿಕೊಂಡಿದ್ದಾರೆಂಬ ಸುದ್ದಿ ಪತ್ರಿಕೆಗಳಲ್ಲಿ ಬಂದದ್ದನ್ನು ನೀವು ನೋಡಿದ್ದೀರಾ ಅಥವಾ ಕೇಳಿದ್ದೀರಾ.**

ಈ ಹಿನ್ನೆಲೆಯಲ್ಲಿ ನಮ್ಮ ಗ್ರಾಮೀಣ ಅಭಿವೃದ್ಧಿಯನ್ನು ರೈತನ ಇಂದಿನ ಸ್ಥಿತಿಗತಿಗಳನ್ನು, ಅವನ ಕಷ್ಟ ಕೋಟಲೆಗಳಿಗಾಗಿ ಸಾಲ ಪಡೆಯುವುದನ್ನು ನೈಸರ್ಗಿಕವಾಗಿ ಬಂದೊದಗುವ ಕುತ್ತುಗಳಿಗೆ ಹೆದರಿ ಹೀಗೆ ಆತ ಆತ್ಮಹತ್ಯೆಯ ದಾರಿ ಹಿಡಿಯುತ್ತ ಇರುವುದನ್ನು ಸ್ಥೂಲವಾಗಿ ತಿಳಿದುಕೊಳ್ಳುವ ಒಂದು ಸಣ್ಣ ಪ್ರಯತ್ನವನ್ನು ನಾವು ಈಗ ಮಾಡೋಣ.

ಐವತ್ತು ವರ್ಷಗಳ ಹಿಂದೆ ಎಂದರೆ ನಮ್ಮ ನಾಡು ಸ್ವಾತಂತ್ರ್ಯ ಗಳಿಸುವುದಕ್ಕೆ ಮೊದಲು ನಮ್ಮ ಗ್ರಾಮಗಳು ಹೇಗಿದ್ದವು, ರೈತ ಜನ ಹೇಗಿದ್ದರು, ಕೃಷಿ ಕೆಲಸ ಕಾರ್ಯಗಳು ಹೇಗೆ ನಡೆಯುತ್ತ ಇದ್ದವು ಎನ್ನುವುದರ ಬಗ್ಗೆಯೂ ಒಂದು ಪಕ್ಷಿನೋಟವನ್ನು ಹರಿಸೋಣ. ಇದು ಬಹಳ ಮುಖ್ಯವಾದದ್ದು.

ಈಗಿನ ಹಾಗೆ ಆ ಕಾಲದಲ್ಲಿ ರೈತನಿಗೆ ಸರಕಾರದಿಂದ ಯಾವ ಸಹಾಯವೂ ಸಿಗುತ್ತಾ ಇರಲಿಲ್ಲ. ಸಿಕ್ಕಿದರೂ ಅಲ್ಪಸ್ವಲ್ಪ. ಈಗಿನಷ್ಟು ಅಣೆಕಟ್ಟುಗಳು, ಬೇಸಾಯ ಅಭಿವೃದ್ಧಿ, ವ್ಯವಸಾಯ ಸಲಕರಣೆಗಳು ಹೀಗೆ ಎಲ್ಲವೂ ಕುಂಠಿತಗೊಂಡಿದ್ದ ಕಾಲ ಅದು. ತಾಂತ್ರಿಕತೆ ಈಗ ಶರವೇಗದಲ್ಲಿ ಬೆಳೆದಿದೆ. ಕೃಷಿಯಲ್ಲಿಯೂ, ಕೃಷಿ ಪದ್ಧತಿಯಲ್ಲಿಯೂ ಹಲವು ಬಗೆಯ ಸುಧಾರಣೆಗಳು ಆಗಿವೆ.' ಅಪ್ಪ ಹಾಕಿದ ಆಲದಮರ' ವನ್ನು ದಾಟಿ ಇಂದಿನ ರೈತ ಹಲವು ಪ್ರಯೋಗಗಳನ್ನು ಮಾಡಿ ಯಶಸ್ವಿಯೂ ಆಗಿದ್ದಾನೆ. ಬ್ಯಾಂಕುಗಳು ನಿಬಂಧನೆಗಳ ಮೇಲೆ ಸಾಲಗಳನ್ನು ಕೊಡುತ್ತಾ ಇವೆ. ಸಹಕಾರ ಸಂಘಗಳು, ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ಇತ್ಯಾದಿ ರೈತರ ಏಳ್ಗೆಗಾಗಿಯೇ ಕೆಲಸ ಮಾಡುತ್ತಾ ಇವೆ. ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲ ನೀಡಿಕೆ ವಿಧಾನಗಳಿಂದ ಕೃಷಿಕ್ಷೇತ್ರದಲ್ಲಿ ಸಾಧನೆಗಳು ಬಹುವಾಗಿ ಅಭಿವೃದ್ಧಿಗೊಂಡಿವೆ.

ಭಾರತ ಕೃಷಿ ಪ್ರಧಾನವಾದ ಒಂದು ದೊಡ್ಡ ದೇಶ. ಗ್ರಾಮೀಣ ಅಭಿವೃದ್ಧಿಗಾಗಿಯೇ ಸರಕಾರ ಹಲವು ಯೋಜನೆಗಳನ್ನು ಹಾಕಿಕೊಂಡಿದೆ; ಜಾರಿಗೆ ತಂದಿದೆ. ಅವುಗಳನ್ನು ಹೀಗೆ ವಿಂಗಡಿಸಬಹುದು.

೧) ಯೋಜನೆಯಲ್ಲಿ ಸಾಧಿಸಿರುವ ಪ್ರಗತಿ. ೨)ಮಹಿಳಾ ಸಹಕಾರ ಸಂಘಗಳಿಗೆ ನೀಡಿರುವ ಆರ್ಥಿಕ ಸಹಾಯ. ೩) ಎಲ್ಲಾ ವಿಧದ ಸಹಕಾರ ಸಂಘಗಳಲ್ಲಿ ಮಹಿಳೆಯರನ್ನು / ಅಲ್ಪ ಸಂಖ್ಯಾತರನ್ನು ಸದಸ್ಯರನ್ನಾಗಿ ನೋಂದಾಯಿಸಲು ನೀಡಿರುವ ಸಹಾಯಧನ. ೪) ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳ ವಿತರಣೆ. ೫) ಕಿಸಾನ್ ಕ್ರೆಡಿಟ್ ಕಾರ್ಡ್‌ಗಳ ವಿತರಣೆಯ ಪ್ರಗತಿ. ೬) ಸ್ವಸಹಾಯ ತಂಡಗಳ ರಚನೆಯ ಪ್ರಗತಿ. ೭) 2001-02 ನೆಯ ಸಾಲಿನಲ್ಲಿ ರೈತನಿಗೆ ನೀಡಿದ ಬಡ್ಡಿ ರಿಯಾಯಿತಿ. ೮) 2002-2003 ನೆಯ ಸಾಲಿನಲ್ಲಿ ನೀಡಿರುವ ಬಡ್ಡಿ ರಿಯಾಯಿತಿ. ೯) ಏಕಕಾಲಿಕ ಸಾಲ ತೀರುವಳಿ ಯೋಜನೆ. ೧೦) ಯಶಸ್ವಿನಿ ಆರೋಗ್ಯ ವಿಮಾ ಯೋಜನೆ-ಹೀಗೆ ಗ್ರಾಮೀಣ ಅಭಿವೃದ್ಧಿಗೆ ಈ ದಶ ಸೂತ್ರಗಳು ಬಹಳ ಮುಖ್ಯವಾದ ಅಂಶಗಳಾಗಿವೆ.

ಹಿಂದೆ ನಮ್ಮ ನಾಡು ಸ್ವಾತಂತ್ರ್ಯ ಗಳಿಸುವುದಕ್ಕೆ ಮೊದಲು 'ರೈತರ ಆತ್ಮಹತ್ಯೆ' ಎನ್ನುವುದು ಸಾಧಾರಣವಾಗಿ ಇರಲೇ ಇಲ್ಲ. ಈಗ ಆತನಿಗೆ ಎಂದರೆ ರೈತನಿಗೆ ಸರಕಾರ ಹಲವು ಬಗೆಯ ಸೌಲಭ್ಯಗಳನ್ನು ಒದಗಿಸಿಕೊಟ್ಟಿದೆ; ಒದಗಿಸಿಕೊಡುತ್ತಾ ಇದೆ. ಅವನ ಬೆನ್ನು ತಟ್ಟಿ ಹುರಿದುಂಬಿಸಲು ಗ್ರಾಮೀಣ ಅಭಿವೃದ್ಧಿಗಾಗಿ ಹಲವು ಯೋಜನೆಗಳು ಜಾರಿಗೆ ಬಂದಿವೆ. ಅವುಗಳಲ್ಲಿ ಸಫಲವಾಗುವುದು ಎಷ್ಟು, ವಿಫಲವಾಗುವುದು ಎಷ್ಟು ಎನ್ನುವುದರ ವಿಮರ್ಶೆ ಬೇಡ. ಆದರೂ 'ನಿನ್ನ ಬೆಂಬಲಕ್ಕೆ ನಾವಿದ್ದೇವೆ' ಎಂದು ಹೇಳಲು ಸರಕಾರಗಳೂ ಮುಂದಾಗಿವೆ. ಎಲ್ಲ ರಾಜ್ಯಗಳಲ್ಲಿಯೂ ಕೇಂದ್ರದಲ್ಲಿಯೂ ಗ್ರಾಮೀಣ ಅಭಿವೃದ್ಧಿಗಾಗಿಯೇ ಸಚಿವರು ಇದ್ದಾರೆ; ಇಲಾಖೆ ಇದೆ.

ಈಗ ಕರ್ನಾಟಕದಲ್ಲಿ ಸರಕಾರ ರೈತನಿಗೆ ನೆರವಾಗಲು ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲ ವಿತರಣೆಯನ್ನು ಇತ್ತೀಚೆಗೆ ಹೇಗೆ ಮಾಡಿದೆ ಎನ್ನುವುದನ್ನು ಈಗ ಪರಿಶೀಲಿಸೋಣ. ಇವುಗಳು ಎಲ್ಲವೂ ಕೋಟಿ ರೂ.ಗಳ ಲೆಕ್ಕದಲ್ಲಿ ಆಗಿವೆ.

| ವರ್ಷ | ಅಲ್ಪಾವಧಿ | ಮಧ್ಯಮಾವಧಿ | ದೀರ್ಘಾವಧಿ |
|---|---|---|---|
| ೧೯೯೯-೦೦ | ೯೯೦.೧೫ | ೮೨.೧೪ | ೧೬೩.೧೯ |
| ೨೦೦೦-೦೧ | ೧೧೫೦.೯೮ | ೪೮.೯೫ | ೧೪೦.೬೧ |
| ೨೦೦೧-೦೨ | ೧೩೮೪.೪೪ | ೩೨.೩೩ | ೧೧೭.೭೧ |
| ೨೦೦೨-೦೩ | ೮೦೦.೮೮ | ೨೫.೬೭ | ೮೯.೪೫ |

(ಫೆಬ್ರವರಿ ಅಂತ್ಯದವರೆಗೆ)

ನಮ್ಮ ನಾಡು ಸ್ವಾತಂತ್ರ್ಯ ಗಳಿಸುವುದಕ್ಕೆ ಮೊದಲು ನಮ್ಮ ಗ್ರಾಮಗಳ ಸ್ಥಿತಿಗತಿಗಳು ಘೋರ ಎನ್ನಬಹುದಾದ ಸ್ಥಿತಿಯಲ್ಲಿಯೇ ಇದ್ದವು. ಭಾರೀಭಾರೀ ಜಮೀನ್ದಾರರ ಅಟ್ಟಹಾಸ. ಹಲವರು ದೀನರು, ದಲಿತರು ಎನ್ನುವವರಲ್ಲಿ ಹೆಚ್ಚಿನವರು ಈ ಭೂಮಾಲೀಕರಿಗೆ ತಲೆತಲಾಂತರಗಳ ಜೀತದಾಳುಗಳಾಗಿ ಇರುತ್ತಾ ಇದ್ದರು. ಧಾರ್ಮಿಕ ನಂಬಿಕೆಗಳೂ, ಆಚರಣೆಗಳೂ ಸಹ ಅವರಿಗೆ ಸಹಾಯವಾಗಿದ್ದವು. ಕಳೆದ ಜನ್ಮದಲ್ಲಿ ಅವನು ಪುಣ್ಯ ಮಾಡಿದ್ದಾನೆ, ಈ ಜನ್ಮದಲ್ಲಿ ಅದರ ಫಲ ಅನುಭವಿಸುತ್ತಿದ್ದಾನೆ-ಈ ರೀತಿ. ಹೀಗಾಗಿ ಅದು

ಜಾತಿಪದ್ಧತಿ ಮಾಮೂಲಾಗಿ ಇದ್ದ ಕಾಲ. ಮೇಲು ಕೀಳಿನ ಉದ್ದದ ಏಣಿ-ಜೀತ ಮಾಡುವವನು ಕಳೆದ ಜನ್ಮದಲ್ಲಿ ಪಾಪ ಮಾಡಿರುವವನು-ಇಂಥ ನಂಬಿಕೆ; ಆಚರಣೆ.

ಜನ ಎಚ್ಚೆತ್ತರು, ಯೋಚಿಸಲು ಪ್ರಾರಂಭಿಸಿದರು. ಬುದ್ಧ, ಬಸವಣ್ಣ, ಕಾರ್ಲ್ ಮಾರ್ಕ್ಸ್‌ನಂಥವರು 'ನೀನು ಚೆನ್ನಾಗಿ ಯೋಚಿಸು, ಯೋಚಿಸದೆ ಯಾವ ಕೆಲಸ ಕಾರ್ಯಗಳನ್ನು ಮಾಡುವುದು ಬೇಡ' ಎಂದು ಜನರಿಗೆ ತಿಳಿವಳಿಕೆ ಹೇಳಿದ್ದರ ಫಲವಾಗಿ ವಿದ್ಯೆ, ನಾಲ್ಕಕ್ಷರ ಕಲಿತದ್ದರ ಪರಿಣಾಮವಾಗಿ, ನಾವು ಶೋಷಣೆಗೆ ಒಳಗಾಗಿದ್ದೇವೆ ಎನ್ನುವ ಅರಿವು ದುಡಿಯುವ ವರ್ಗದವರಿಗೆ ಮೂಡತೊಡಗಿತು. ಆಗಷ್ಟೇ 'ಉಳುವವನೇ ಹೊಲದ ಒಡೆಯ' ಎನ್ನುವ ಘೋಷಣೆ ಮೊಳಗಿತು. ಜೀತದಾಳಾಗಿ ಉತ್ತು ಉತ್ತು ಜಡ್ಡುಗಟ್ಟಿದ್ದ ರೈತ ಸ್ವತಂತ್ರನಾದ. ನಾಲ್ಕು ಎಕರೆ ಭೂಮಿ ಅವನಿಗೆ ದೊರಕುವಂತಾಯಿತು.

ಇವೆಲ್ಲವೂ ನಾವು ಸ್ವಾತಂತ್ರ್ಯ ಗಳಿಸಿದ ಫಲ. ಯಾವಾಗ ನಾಡು ಸ್ವಾತಂತ್ರ್ಯಗಳಿಸಿತೋ ಆಗ 'ಹಸಿರುಕ್ರಾಂತಿ'ಯ ಯೋಜನೆ ಪ್ರಾರಂಭವಾಯಿತು. ಪಂಚವಾರ್ಷಿಕ ಯೋಜನೆಗಳು ಸಿದ್ಧವಾದವು; ಜಾರಿಗೆ ಬಂದವು. ಭೋರ್ಗರೆಯುವ ನದಿಗಳಿಗೆ ಹೊಸ ಹೊಸ ಅಣೆಕಟ್ಟುಗಳನ್ನು ಕಟ್ಟುವ ಪ್ರಯತ್ನ ಮುಂದುವರೆಯಿತು. ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದಾಗ ಕೇವಲ ೩೦೦ ಯೋಜನೆಗಳು ಮಾತ್ರ ಇದ್ದವು. ಈಗ ಭಾರತದಲ್ಲಿ ದೊಡ್ಡದು ಸಣ್ಣದು ಎಲ್ಲ ಸೇರಿ ೪೨೯೧ ಜಲಾಶಯಗಳಾಗಿವೆ. ೧೯೭೧ ರಿಂದ ೧೯೯೦ ರವರೆಗಿನ ಅವಧಿಯಲ್ಲಿ ೨೨೫೬ ಅಣೆಕಟ್ಟುಗಳನ್ನು ಕಟ್ಟಿ ಮುಗಿಸಿದ್ದಾರೆ. ನೀರಾವರಿ ಯೋಜನೆಗಳ ಕೆಲಸ ಈಗ ಸಾಕಷ್ಟು ಪ್ರಗತಿ ಆಗಿದೆ. ಸದ್ಯ ನಮ್ಮ ನೀರಿನ ಬಳಕೆ ಭಾರತದಲ್ಲಿ ೧೯೦೦ ಘನ ಮೀಟರ್ ಆಗುತ್ತದೆ. ಜಗತ್ತಿನಲ್ಲಿ ಸರಾಸರಿ ಬಳಕೆ ೭೪೦೦ ಘನ ಮೀಟರುಗಳು. ಇಷ್ಟಾದರೂ ಜಗತ್ತಿಗೆ ಹೋಲಿಸಿದರೆ ನಮ್ಮ ಪ್ರಮಾಣ ಶೇಕಡಾ ೯ ಮಾತ್ರ ಆಗುತ್ತದೆ. ಜಗತ್ತಿನ ಮುಂದೆ ನಾವು ಇನ್ನೂ ಕುಳ್ಳರೇ. ಭಾರತದಲ್ಲಿ ನೀರಾವರಿ ವ್ಯವಸಾಯವೂ ಅಷ್ಟೇ. ೨೯೫೧ ರಲ್ಲಿ ೨೨.೬ ಮಿಲಿಯನ್ ಹೆಕ್ಟೇರ್ ಇದ್ದುದು ೧೯೯೬ ರಲ್ಲಿ ೮೯.೬ ಮಿಲಿಯನ್ ಹೆಕ್ಟೇರುಗಳಿಗೆ ಅಭಿವೃದ್ಧಿಗೊಂಡಿದೆ.

ಒಟ್ಟು ಭಾರತದ ಸ್ಥಿತಿಗತಿಗಳು ಕೃಷಿಯಲ್ಲಿ ಹೀಗೆ ಮುಂದುವರಿದಂತೆ ರಾಜ್ಯ ರಾಜ್ಯಗಳೂ ಪ್ರಗತಿಯತ್ತ ದಾಪುಗಾಲು ಹಾಕಿವೆ. ಕರ್ನಾಟಕವೂ ಈ ಪಟ್ಟಿಗೆ ಸೇರಲೇಬೇಕಷ್ಟೇ; ಸೇರಿದೆ. ಕರ್ನಾಟಕದಲ್ಲಿ ಯೋಜನೆಗಳಲ್ಲಿ ಸಾಧಿಸಿರುವ ಪ್ರಗತಿಯ ಕಡೆಗೆ ಈಗ ಒಂದು ಕಣ್ಣುನೋಟ ಹರಿಸೋಣವೆ? ಎಲ್ಲವೂ ಲಕ್ಷ ರೂ.ಗಳಲ್ಲಿ ಲೆಕ್ಕ.

| ವರ್ಷ | ಆಯವ್ಯಯ | | | ವೆಚ್ಚ | | |
|---|---|---|---|---|---|---|
| | ಯೋಜನೆ | ಯೋಜನೇತರ | ಒಟ್ಟು | ಯೋಜನೆ | ಯೋಜನೇತರ | ಒಟ್ಟು |
| ೧೯೯೯-೦೦ | ೧೮೫೯.೨೭ | ೨೭೯೨.೮೬ | ೪೬೫೦.೧೩ | ೧೮೨೭.೨೭ | ೨೪೭೯.೧೩ | ೪೩೦೬.೪೦ |
| ೨೦೦೦-೦೧ | ೨೫೨೫.೭೦ | ೨೪೪೩.೩೮ | ೪೯೬೯.೦೮ | ೨೩೩೬.೯೬ | ೨೦೧೧.೦೩ | ೪೩೪೭.೯೮ |
| ೨೦೦೧-೦೨ | ೧೯೮೧.೬೯ | ೨೫೦೨.೫೦ | ೪೪೮೪.೧೯ | ೧೩೭೫.೭೩ | ೨೧೫೯.೭೧ | ೨೫೩೫.೪೪ |
| ೨೦೦೨-೦೩ | ೨೧೧೨.೩೭ | ೨೫೧೭.೪೯ | ೪೭೨೯.೮೬ | ೭೮೨.೧೨ | ೧೮೭೩.೨೦ | ೨೬೫೫.೩೨ |

ಇದು ಯೋಜನೆ-ಯೋಜನೇತರ ಲೆಕ್ಕಗಳ ಒಂದು ಪಟ್ಟಿ ಆಯಿತು, ಸರಿಯೇ. ಹಾಗೆಯೇ ಗ್ರಾಮೀಣ ಅಭಿವೃದ್ಧಿಯ ವಿಚಾರದಲ್ಲಿ ಸರಕಾರ ಏನು ಮಾಡಿದೆ, ಮಾಡುತ್ತಾ ಇದೆ-ಎನ್ನುವ ಮಹತ್ವದ ಸಂಗತಿಯ ಬಗ್ಗೆಯೂ ಈಗ ಸ್ವಲ್ಪ ಪ್ರಸ್ತಾಪಿಸೋಣ.

ರಾಜ್ಯದಲ್ಲಿ 2002-03ನೇ ಸಾಲಿನಲ್ಲಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಮತ್ತು ಕೃಷಿಪತ್ತಿನ ಸಹಕಾರ ಸಂಘಗಳು ರೂ. 1,32,375-54 ಗಳ ಅಲ್ಪಾವಧಿ ಬೆಳೆ ಸಾಲವನ್ನು ನೀಡಿದೆ. ಈ ಒಟ್ಟು ಸಾಲದ ವಿತರಣೆಯಲ್ಲಿ ಅಂದಾಜು ಶೇಕಡಾ ೩೦ ರಷ್ಟು ನಬಾರ್ಡ್ ಕಡೆಯಿಂದ ವಿತರಣೆ ಆಗುತ್ತಿದ್ದು ಉಳಿದ ಶೇ. ೭೦ ರಷ್ಟನ್ನು ಅಪೆಕ್ಸ್ ಬ್ಯಾಂಕ್ ಮತ್ತು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಹಾಗೂ ಕೃಷಿ ಸಂಬಂಧದ ಸಹಕಾರಗಳ ಮೂಲಕ ರೈತರಿಗೆ ಒದಗಿಸುತ್ತಾ ಬಂದಿದೆ. ಒಟ್ಟಿನ ಮೇಲೆ ಕೃಷಿ ಸಂಬಂಧವಾದ ಸಹಕಾರ ಸಂಘಗಳ ಮೂಲಕ ಕೃಷಿಗೆ ನೆರವಾಗಲು ಕೃಷಿಕನಿಗೆ ಸಾಲ ಕೊಡುವುದಕ್ಕಾಗಿ ಗ್ರಾಮೀಣ ಅಭಿವೃದ್ಧಿಗೆ ನೆರವಾಗುವುದೇ ಈ ಸಾಲದ ಉದ್ದೇಶ ಆಗಿದೆ. ಹಾಗೆಯೇ ವಿತರಣೆಯೂ ಆಗುತ್ತಾ ಇದೆ.

೨೦೦೨-೦೩ನೇ ಸಾಲಿನಲ್ಲಿ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲದ ಗುರಿಯನ್ನು ಕ್ರಮವಾಗಿ ರೂ. ೧೭೭೫ ಕೋಟಿ ಮತ್ತು ರೂ. ೧೩೭ ಕೋಟಿ ಹೊಂದಿದ್ದು ಅಕ್ಟೋಬರ್ ೨೦೦೨ ರವರೆಗೆ ಈ ಮೊಬಲಗಿನಲ್ಲಿ ರೂ. ೫೮೪.೩೭ ಮತ್ತು ರೂ. ೧೫.೬೯ ಕೋಟಿಗಳನ್ನು ರೈತರಿಗೆ ಒದಗಿಸಿದ್ದೂ ಆಗಿದೆ.

ಇದು ನಾಣ್ಯದ ಒಂದು ಮುಖ. ಇಲ್ಲಿ ಒಂದು ಪ್ರಶ್ನೆ ನಮ್ಮ ಕಣ್ಣ ಮುಂದೆ ಈಗ ಧುತ್ತನೆ ನಿಲ್ಲುತ್ತದೆ. ಐವತ್ತು ವರುಷಗಳ ಹಿಂದೆ ನಮ್ಮ ಗ್ರಾಮಗಳಲ್ಲಿ ರೈತನ 'ಆತ್ಮಹತ್ಯೆ' ಎನ್ನುವ ಸುದ್ದಿಯೇ ಇರಲಿಲ್ಲ. ಆಗಿನ ಸಾಮಾಜಿಕ ಸ್ಥಿತಿಗತಿಗಳೂ ಗ್ರಾಮೀಣ ಜನಜೀವನವೂ ಈಗಿಗಿಂತ ಭಿನ್ನವಾಗಿತ್ತು. ಈಗಿನ ಪೀಳಿಗೆಯವರು ಆಗಿನ ಸ್ಥಿತಿಗತಿಗಳನ್ನು ನೆನಪಿಸಿಕೊಳ್ಳಲೂ ಸಾಧ್ಯವಿಲ್ಲ, ಹಾಗಿತ್ತು.

ಆ ಕಾಲದಲ್ಲಿ ಗ್ರಾಮ ಗ್ರಾಮಗಳಲ್ಲಿ ರಸ್ತೆಗಳೇ ಇರಲಿಲ್ಲ. ಅಂಚೆ ಸೌಲಭ್ಯ, ಶಾಲೆಗಳು, ಆಸ್ಪತ್ರೆಗಳು- ಹೀಗೆ ಮೂಲಭೂತ ಸೌಕರ್ಯಗಳೂ ಇಲ್ಲದಿದ್ದ ಕಾಲ ಅದು.

ಈಗ ಅವು ಎಲ್ಲವೂ ಇವೆ. ಬಸ್ ಹೋಗದಿದ್ದ ಹಳ್ಳಿಗಳೇ ಈಗ ಇಲ್ಲ ಎಂದೂ ಹೇಳಿಬಿಡಬಹುದು. ಗ್ರಾಮ ಪಂಚಾಯಿತಿಗಳೂ ಈಗ ಏರ್ಪಟ್ಟಿವೆ. ನಮ್ಮ ಹಳ್ಳಿಗಳು ನಾನಾ ಬಗೆಯಲ್ಲಿ ಖಂಡಿತವಾಗಿಯೂ ಅಭಿವೃದ್ಧಿಯನ್ನು ಹೊಂದಿವೆ. ಹಳೆಯ ಕಾಲದ ಜೀತ ಪದ್ಧತಿ ಹೊರಟೇ ಹೋಗಿದೆ. ಕದ್ದು ಮುಚ್ಚಿ ;'ಜೀತ' ಎನ್ನುವ ಸಂಕೋಲೆಗೆ ಯಾರಾದರೂ ಒಳಗಾಗಿದ್ದರೆ ಅಂಥದ್ದು ಕಣ್ಣಿಗೆ ಬಿದ್ದರೆ ಜೀತಕ್ಕೆ ನೇಮಿಸಿಕೊಂಡವನು ಕಾನೂನಿನ ಪ್ರಕಾರ ಶಿಕ್ಷೆಗೂ ಒಳಗಾಗಬೇಕಾಗುತ್ತದೆ. ಜೈಲಿಗೂ ಸೇರಬೇಕಾಗುತ್ತದೆ.

ಹೀಗೆಲ್ಲಾ ಸೌಲಭ್ಯಗಳು ಈಗ ನಮಗೆ ಇರುವಾಗ ನಮ್ಮ ರೈತ ಯಾಕೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ? ಮಾಡಿಕೊಳ್ಳುತ್ತಾ ಇದ್ದಾನೆ? ಇದು ದೀರ್ಘವಾಗಿ ಯೋಚಿಸಬೇಕಾದ ವಿಚಾರವಾಗಿದೆ ಮತ್ತು ನಾಗರಿಕರು ತಲೆತಗ್ಗಿಸುವಂಥ ವಿಷಯವೂ ಆಗಿದೆ.ಇದಕ್ಕೆ ಕಾರಣ:

ಇಷ್ಟೆಲ್ಲಾ ಸೌಲಭ್ಯಗಳು ಇದ್ದರೂ ರೈತನಿಗೆ ಪ್ರತಿ ತಿಂಗಳೂ ಇಂತಿಷ್ಟು ಖಚಿತ ಆದಾಯ ಎನ್ನುವುದೇ ಇರುವುದಿಲ್ಲ. ಇದೇ ಮುಖ್ಯವಾದ ಸಂಗತಿ. ರೈತ ತಾನು ಗಳಿಸಿ ಉಳಿಸಿದ ಹಣದಿಂದಲೋ ಅಥವಾ ಸರಕಾರದ ಇನ್ನಿತರೇ ಸಾಲ ಮುಂತಾದುವುಗಳಿಂದಲೋ ಒಟ್ಟು ಮೊತ್ತವಾಗಿ ವ್ಯವಸಾಯ ಕಾಲದಲ್ಲಿ ಬೆಳೆ ತೆಗೆಯಲು ಖರ್ಚು ಮಾಡಬೇಕಾಗುತ್ತದೆ. ಈ ಬೆಳೆ ನಾಲ್ಕು ಐದು ತಿಂಗಳು ಅವನ ಕೈಗೆ ಬಂದು ಅವನು ಬೆಳೆದ ಬೆಳೆ ಅಥವಾ ಧಾನ್ಯ ಅವನ ಕೈ ಸೇರುವವರೆಗೆ ಆತ ತನ್ನ ಕುಟುಂಬ ಪಾಲನೆಗಾಗಿ ಸಕಲ ಸಿದ್ಧತೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಎಂದರೆ ಇಲ್ಲಿ ಅವನಿಗೆ ನಾಲ್ಕಾರು ತಿಂಗಳು ಬರೇ ಖರ್ಚಿನ ಸುದ್ದಿಯೇ ಆಗಿರುತ್ತದೆ.

ಆ ಬೆಳೆ ಅಥವಾ ಧಾನ್ಯ ಅವನ ಕೈ ಸೇರಿ ಅದು ಮಾರುಕಟ್ಟೆಯಲ್ಲಿ ವ್ಯಾಪಾರವಾಗಿ ಅವನು ಮೂರು ನಾಲ್ಕು ತಿಂಗಳು ವ್ಯವಸಾಯಕ್ಕೆ ಎಂದು ಖರ್ಚು ಮಾಡಿದ ಹಣ ಅವನ ಕೈಸೇರಿತೋ ಅವನು ಗೆದ್ದ. ಅವನ ಮುಂದಿನ ವ್ಯವಸಾಯಕ್ಕೆ ಅನುಕೂಲವಾಗುತ್ತದೆ. ಕಾಲಚಕ್ರ ಸರಾಗವಾಗಿ ಸುತ್ತುತ್ತದೆ.

ಹಾಗಿಲ್ಲದೆ ನೈಸರ್ಗಿಕವಾಗಿ ಮಳೆ ಸುತರಾಂ ಇಲ್ಲದೆ ಅಥವಾ ಬಿತ್ತನೆ ಕಾಲದಲ್ಲಿ ಸುರಿದ ಮಳೆ ಆಮೇಲೆ ಇಲ್ಲವಾಗಿ ಬೆಳೆ ನಾಶವಾಗಿ ಹೋದರೆ, ಕ್ರಿಮಿಕೀಟಗಳ ಅಥವಾ ಹೊಸ ಬಗೆಯ ರೋಗಗಳಿಂದ ಅವನು ಬೆಳೆದ ಬೆಳೆ ಸಂಪೂರ್ಣ ನಾಶವಾದರೆ ಖಂಡಿತಾ ಅಂಥ ಸಮಯಗಳಲ್ಲಿ ಆತ ಹತಾಶನಾಗುತ್ತಾನೆ. ಯಾರೂ ಈಗ ಹತಾಶರಾಗಬೇಕಾದದ್ದೇ. ಮೂರು ನಾಲ್ಕು ತಿಂಗಳು ವ್ಯವಸಾಯಕ್ಕಾಗಿ ಅವನು ಮಾಡಿದ ಖರ್ಚು, ಅವನ ದುಡಿಮೆ,ಮನೆಯ ದೈನಂದಿನ ಅನ್ನ ಬಟ್ಟೆಯ ಖರ್ಚುಗಳು, ಅವನಿಗೆ ಅನ್ನ ನೀಡುವ ಜಾನುವಾರುಗಳ ರಕ್ಷಣೆ-ಹೀಗೆ ಅವನು ಮಾಡಿದ ಎಲ್ಲ ವೆಚ್ಚಗಳೂ ಕೈಗೂಡದೆ ಹೋದರೆ, ಯಾರೂ ಹತಾಶರಾಗಬೇಕಾದದ್ದೇ ಸರಿ. ಇದರಲ್ಲಿ ಯಾವ ಸಂದೇಹವೂ ಇಲ್ಲ.

ಆಗ ಆತ ಖಾಸಗಿ ಲೇವಾದೇವಿಗಾರರ ಬಳಿ ಹೋಗುತ್ತಾನೆ; ಕೈಯೊಡ್ಡುತ್ತಾನೆ. ಯಾವಾಗ ಆತ ಈ ಹುತ್ತದೊಳಗೆ ಕೈಯಿಕ್ಕಿದನೋ ಖಂಡಿತ ಆಗ ಆತ ಅಧೋಗತಿಗೆ ಇಳಿದಿದ್ದಾನೆ ಎಂದೇ ಅರ್ಥ. ಈ ಖಾಸಗಿ ಲೇವಾದೇವಿಗಾರರು ಮಹಾಧೂರ್ತರು. ಏನು ಮಾಡಲೂ ಹೇಸದವರು. ಮಾನ-ಮರ್ಯಾದೆ ಇರುವಾತ ಇವರ ಬಳಿ ಹೋದರೆ ಖಂಡಿತಾ ಆತ ಕೆಟ್ಟದ್ದನ್ನೆಲ್ಲಾ ಯೋಚನೆ ಮಾಡಬೇಕಾಗುತ್ತದೆ. ಅಷ್ಟು ಬಗೆಯಲ್ಲಿ ಈ ಜನ ಯಮಕಿಂಕರರೇ ಆಗಿರುತ್ತಾರೆ. ಮಾನವೀಯತೆ ಎನ್ನುವುದೇ ಇವರ ಬಳಿ ಇರುವುದಿಲ್ಲ.

ವಾರ್ಷಿಕವಾಗಿ ಇಂಥ ಧೂರ್ತರು ಶೇಕಡಾ ೬೦-೭೫ ಹೀಗೆ ತಮ್ಮ ತಮ್ಮ ಮನಸೋಇಚ್ಛೆ ಬಡ್ಡಿ ವಸೂಲಿ ಮಾಡುತ್ತಾರೆ. ಈ ಕುಣಿಕೆಯಿಂದ ಜಾರಿಕೊಳ್ಳುವುದು ಯಾರಿಂದಲೂ ಸಾಧ್ಯವೇ ಇರುವುದಿಲ್ಲ. ಇದು ನೈಜ ಸಂಗತಿ.

ಮತ್ತೊಂದು ಮುಖ್ಯವಾದ ವಿಚಾರ.

ನಗರಗಳಲ್ಲಾದರೆ ಸಾಲ ಪಡೆದವನಿಂದ ತಲೆ ತಪ್ಪಿಸಿಕೊಂಡು ಕಾಲತಳ್ಳಬಹುದು. ಆದರೆ ಗ್ರಾಮಗಳಲ್ಲಿ ಹಾಗೆ ಮಾಡಲು ಸಾಧ್ಯವೇ ಇರುವುದಿಲ್ಲ. ಒಂದು ಎರಡು ಸುತ್ತು ಹಾಕಿದರೆ ಇಡೀ ಗ್ರಾಮ ಆಗಿಬಿಡುತ್ತದೆ. ಇಂಥ ಲೇವಾದೇವಿಗಾರರು ಒಂದೊಂದು ಗ್ರಾಮಕ್ಕೂ ಇಬ್ಬರೋ ಮೂವರೋ ಹೀಗೇ ಇರುತ್ತಾರೆ. ರಾಜಕೀಯ ಬೆಂಬಲವೂ ಇವರಿಗೆ ಇರುತ್ತದೆ. ಗಳಿಸಿಕೊಂಡಿರುತ್ತಾರೆ. ಆ ಭಾಗದ ಎಂಎಲ್‌ಎ ಯನ್ನು ಗೆಲ್ಲಿಸುವವರೂ ಇವರೇ.

ಇವರು ಮತ್ತು ಇವರ ಗೂಂಡಾಗಳು ಸಾಲ ಪಡೆದವನ ಮನೆಯ ಮುಂದೆ ಹೋಗಿ ನಿಂತು ಆರ್ಭಟ ಮಾಡುತ್ತಾರೆ. ಊರು, ಊರ ಜನ, ಹೆಂಡತಿ ಮಕ್ಕಳ ಮುಂದೆ ಹೋಗಿ ನಿಂತು ಮಾನ ಮರ್ಯಾದೆ ತೆಗೆಯುತ್ತಾರೆ. ಹೆಂಡತಿ ಮಕ್ಕಳನ್ನೂ ಬೈಯುತ್ತಾರೆ. ಸರಕಾರದಿಂದಲೂ ಜಪ್ತಿ ಮುಂತಾದ ಹೆದರಿಕೆಗಳು ಇದ್ದೇ ಇರುತ್ತದೆ. ಈಗಾಗಲೇ ಸಹಕಾರ ಸಂಘ ಇತ್ಯಾದಿಗಳಿಂದ ರೈತ ತಾನು ಪಡೆದ ಸಾಲಕ್ಕೆ ಸಾಲ-ಬಡ್ಡಿ ಹೀಗೆ ಯಾವುದನ್ನೂ ಕಟ್ಟಿರುವುದಿಲ್ಲ. ಕೈಸಾಲಗಳು ಸಾಕಷ್ಟು ಆಗಿರುತ್ತವೆ. ಯಾರೂ ಸಹಾಯಕ್ಕೆ ಮುಂದಾಗುವುದಿಲ್ಲ ಅಥವಾ ನೆರವು ನೀಡಲು ಅವರೂ ಇದೇ ಸ್ಥಿತಿಯಲ್ಲಿ ಇರುತ್ತಾರೆ. ಅಯ್ಯೋ ಪಾಪ ಎನ್ನುವುದನ್ನು ಬಿಟ್ಟರೆ ಬೇರೆ ಮಾರ್ಗವೇ ಇರುವುದಿಲ್ಲ.

ಹೀಗಾಗಿ ಗ್ರಾಮಗಳಲ್ಲಿ ಗೌರವವಾಗಿ ಬಾಳಿದ ಒಬ್ಬ ವ್ಯಕ್ತಿ, ಒಬ್ಬ ರೈತ, ನಾಲ್ಕು ಜನರ ಎದುರಿಗೆ ಹೀನಾಯವಾಗಿ ಕಾಣುತ್ತಾನೆ! ಹತಾಶನಾಗುತ್ತಾನೆ. ತನ್ನ ಹೆಂಡತಿ ಮಕ್ಕಳು ತನ್ನ ಮುಂದಿನ ಭವಿಷ್ಯ-ಹೀಗೆ ಸರ್ವಸ್ವವನ್ನೂ ಆತ ಮರೆಯುತ್ತಾನೆ. ಕಾಲನ ಕುಣಿಕೆಗೆ ತಲೆಯೊಡ್ಡುತ್ತಾನೆ.

ಮತ್ತೊಂದು ಬಗೆಯಾಗಿಯೂ ರೈತ ಅತಿ ಆಸೆಗೆ ಒಳಗಾಗಿ ತನ್ನ ದುರಂತವನ್ನು ತಾನೇ ಅಪ್ಪಿಕೊಳ್ಳುತ್ತಾನೆ. ಅದು, ಒಂದು ವರ್ಷ ಒಂದು ಬೆಳೆ ಅವನ ಕೈಗೂಡಿದರೆ ಲಾಭವನ್ನು ತಂದುಕೊಟ್ಟರೆ, ಮುಂದಿನ ವರ್ಷವೂ ಅದೇ ಬೆಳೆಯನ್ನ ಹೆಚ್ಚಿನ ವ್ಯಾಪ್ತಿಯಲ್ಲಿ ವ್ಯವಸಾಯ ಮಾಡುತ್ತಾನೆ. ಎಲ್ಲಾ ರೈತರೂ ಇದೇ ದಾರಿ ಹಿಡಿಯುತ್ತಾರೆ. ಆ ಬೆಳೆ ಅಥವಾ ಧಾನ್ಯ ಆ ವರ್ಷ ಸಮೃದ್ಧಿಯಾಗಿ ಮಾರುಕಟ್ಟೆಯಲ್ಲಿ ಬೆಲೆ ಕುಸಿಯುತ್ತದೆ. ಆಗ ಒಂದು ರೂಪಾಯಿಗೆ ಒಂದು ಕೆ.ಜಿ. ಟೊಮ್ಯಾಟೋ ಸಿಗುವಂತಾಗುತ್ತದೆ. ಜನರಿಗೇನೋ ಒಂದು ರೂಪಾಯಿಗೆ ಸಿಕ್ಕಿತು, ಸರಿಯೇ. ಆದರೆ ಬೆಳೆ ತೆಗೆದವನ ಗತಿ? ಇಂಥ ವರ್ಷಗಳಲ್ಲಿ ಅವರು ಸಾಲದಿಂದ ತಪ್ಪಿಸಿಕೊಳ್ಳುವುದು ಸಾಧ್ಯವೇ ಇರುವುದಿಲ್ಲ.

ಹೀಗೆ ನಮ್ಮ ರೈತರಲ್ಲಿ ಸುಮಾರು ಶೇಕಡಾ ೬೦ ಮಂದಿ ಅಧಿಕೃತ ಹಣಕಾಸು ಸಂಸ್ಥೆಗಳಿಂದ ನೆರವು ಸಿಗದೆ ಖಾಸಗಿ ಲೇವಾದೇವಿಗಾರರ ಬಳಿ ಕೈ ಚಾಚುತ್ತಾರೆ ಎಂದು ಒಂದು ಅಂದಾಜು ಇದೆ.

ಇದಕ್ಕೆ ಪರಿಹಾರ ಹೇಗೆ? ಕೃಷಿಗೆ ಕೃಷಿಕನಿಗೆ. ನಮ್ಮ ಗ್ರಾಮೀಣ ಅಭಿವೃದ್ಧಿಗೆ ಹಲವು ಸಮಿತಿಗಳು-ವರದಿಗಳು ಇದ್ದರೂ ಡಾ. ವೀರೇಶ ಸಮಿತಿ ವರದಿ ಅತ್ಯಂತ ಗಮನಾರ್ಹವಾದ ಒಂದು ವರದಿಯೇ ಆಗಿದೆ. ಈ ಬಗೆಯಲ್ಲಿ ಈ ಸಮಿತಿ ನೀಡಿರುವ ಕೆಲವು ಶಿಫಾರ್ಸುಗಳು ತುಂಬಾ ಉಪಯುಕ್ತತೆಯಿಂದ ಕೂಡಿವೆ. ಈ ಸಮಿತಿಯ ಕೆಲವು ಮುಖ್ಯ ಅಂಶಗಳು ಹೀಗಿವೆ.

ರೈತರಿಗೆ ನೀಡುತ್ತ ಇರುವ ಕೃಷಿ ಸಾಲಗಳ ಮೇಲಿನ ಬಡ್ಡಿಯನ್ನು ಈಗಿರುವುದಕ್ಕಿಂತಲೂ ಕಡಿಮೆ ಮಾಡಬೇಕು. ನಮ್ಮ ರಾಜ್ಯದಲ್ಲಿ ಶೇ.೨೭ರಷ್ಟು ಸಣ್ಣ ಮತ್ತು ಶೇ.೪೫.೯ ರಷ್ಟು ಅತಿ ಸಣ್ಣ ರೈತರು ಭೂ ಹಿಡುವಳಿ ಹೊಂದಿದ್ದಾರೆ. ಇವರು ಗಳಿಸುವ ಕೃಷಿ ಉತ್ಪಾದನೆಯಿಂದ ಹೆಚ್ಚಿನ ಆದಾಯವನ್ನು ನಿರೀಕ್ಷಿಸದೆ, ಇವರ ದಿನಬಳಕೆಗೆ, ಈ ಉತ್ಪಾದನೆಯಿಂದ ಸಾಕಷ್ಟು ಆದಾಯವೂ ಇಲ್ಲದೆ, ಈ ಹಿಡುವಳಿದಾರರು ಪಡೆದಿರುವ ಸಹಕಾರ ಬ್ಯಾಂಕುಗಳು ಅಸಲು ಮತ್ತು ಕಂತುಗಳನ್ನು ಮರು ಪಾವತಿಸುವುದು ಖಂಡಿತ ಸಾಧ್ಯವಿರುವುದಿಲ್ಲ. ಸರಕಾರ ಆರ್ಥಿಕ ಸಂಕಷ್ಟಕ್ಕೆ ಸಿಲುಕಿರುವ ಇಂಥವರಿಗೆ ಖರ್ಚನ್ನು ತುಂಬಿಕೊಡಬೇಕು.

ಇದು ಈ ಸಮಿತಿ ನೀಡಿರುವ ಬಹಳ ಮುಖ್ಯವಾದ ಹಾಗೂ ಪರಿಣಾಮಕಾರಿಯಾದ ಶಿಫಾರಸುಗಳು ಮತ್ತು ವಿಚಾರಗಳು.

ಖಾಸಗಿ ಲೇವಾದೇವಿಗಾರ ಎನ್ನುವ ಭಯಂಕರ ಹುತ್ತದಿಂದ, ಯಮನ ಬಾಯಿಂದ ನಮ್ಮ ರೈತನನ್ನು ಈ ಬಗೆಯಲ್ಲಿ ಮೇಲೆ ಎತ್ತಿ ಹಾಕಬೇಕಾಗಿದೆ.

ಭಾರತ ಕೃಷಿ ಪ್ರಧಾನವಾದ ದೇಶ ಎಂದು ನಾವು ಮಾತು ಮಾತಿಗೂ ಹೇಳುತ್ತೇವೆ; ಭಾಷಣ ಮಾಡುತ್ತೇವೆ. ಆದರೆ ಭಾಷಣಗಳಿಂದ, ಓತೋಕ್ತಿಗಳಿಂದ ಸಮಸ್ಯೆಗಳು ಇತ್ಯರ್ಥ ಆಗುವುದಿಲ್ಲ. ನಮಗೆ ಅನ್ನ ನೀಡುವವನು ರೈತ. ಹೀಗೆ ಅನ್ನ ನೀಡುವ ನಮ್ಮ ರೈತ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ ಎನ್ನುವುದು ಖಂಡಿತವಾಗಿಯೂ ನಾವು ನಾಚಿಕೆಪಡಬೇಕಾದ ಸಂಗತಿಯೇ ಸರಿ. ಗ್ರಾಮಗಳಲ್ಲಿ ಕುಡಿತ ಜೂಜು ಹಾಗು ಇನ್ನಿತರೆ ದುರ್ವ್ಯಸನಗಳಿಂದ ಸಾಲ ಮಾಡಿಕೊಳ್ಳುತ್ತಾರೆ ಎನ್ನುವ ಒಂದು ಸಣ್ಣ ಮಾತೂ ಕೇಳಿ ಬರುತ್ತದೆ-ನಿಜ. ಅಂಥವರೂ ಇದ್ದಾರೆ, ಇಲ್ಲ ಎಂದಲ್ಲ. ಆದರೆ ಇವರು ಇಂಥವರು ಬೆರಳೆಣಿಕೆಯ ಮಂದಿ. ನಿಜವಾಗಿಯೂ ದುಡಿದು ಫಲ ಕಾಣದೆ ಹತಾಶರಾಗುವ ಜನರೇ ಜಾಸ್ತಿ.

ಭಾರತದಲ್ಲಿ ಪಂಜಾಬ್, ಹರಿಯಾಣ ಮತ್ತು ತಮಿಳುನಾಡು ರಾಜ್ಯಗಳು ವ್ಯವಸಾಯದಲ್ಲಿ ಮುಂಚೂಣಿಯಲ್ಲಿ ಇವೆ; ಮುಂದಿವೆ. ನಮ್ಮ ನೆರೆಯ ನಾಡಾದ ತಮಿಳುನಾಡಿನಲ್ಲಿ ರೈತ ಆತ್ಮಹತ್ಯೆ ಮಾಡಿಕೊಂಡ ಸುದ್ದಿ ತುಂಬಾ ಅಪರೂಪ. ಕರ್ನಾಟಕ ಮತ್ತು ಆಂಧ್ರದಲ್ಲಿ ಈ ಸಂಖ್ಯೆ ಜಾಸ್ತಿ ಇದೆ.

ಕೃಷಿತಜ್ಞರು, ಸರಕಾರ ಈ ಬಗೆಯಲ್ಲಿ ದೀರ್ಘವಾಗಿ ಯೋಚಿಸಬೇಕಾಗಿದೆ. ಗ್ರಾಮೀಣ ಅಭಿವೃದ್ಧಿ ಆಗಬೇಕಾದರೆ ನಮ್ಮ ಗ್ರಾಮಗಳ ಒಂದು ಭಾಗವೇ ಆಗಿರುವ ರೈತ ಸಮುದಾಯವನ್ನು ತನ್ನ ಕಾಲ ಮೇಲೆ ಯಾರ ಹಂಗೂ ಇಲ್ಲದೆ ನಿಂತುಕೊಂಡರೆ ಮಾತ್ರ ಆಗ ಸಾಧನೆಗೆ ಮೆಟ್ಟಿಲು. ಯಶಸ್ಸಿಗೆ ಸೋಪಾನ. ಈ ಬಗೆಯಲ್ಲಿ ಜನ ಎಚ್ಚೆತ್ತು ನಮ್ಮ ರೈತನಿಗೆ ನೆರವಾಗುವಂತೆ ನಾವು ಆಯ್ಕೆ ಮಾಡಿ ಕಳಿಸುವ ಜನಪ್ರತಿನಿಧಿಗಳ ಮೇಲೆ ಒತ್ತಡ ಹೇರಬೇಕಾಗಿದೆ. ಚುನಾವಣೆಗಳಲ್ಲಿ ಈ ಪ್ರಸ್ತಾಪವನ್ನು ಮುಖ್ಯವಾಗಿ ಒತ್ತಿ ಹೇಳಬೇಕಾಗಿದೆ. ಹಾಗಾದರೇ ನಮ್ಮ ಓಟು ಎನ್ನಬೇಕಾಗಿದೆ.

ಗ್ರಾಮವಿಲ್ಲದೆ ರೈತನಿಲ್ಲ. ರೈತ ಇಲ್ಲದೆ ಗ್ರಾಮ ಇಲ್ಲ. ನಾವು ಬದುಕಬೇಕಾದರೆ, ನಾವು ಅನ್ನ ತಿನ್ನಬೇಕಾದರೆ, ರೈತನ ನೆರವು ಬೇಕೇ ಬೇಕು. ಆತ ಹತಾಶನಾದರೆ ನಾವೂ ಹತಾಶರಾದಂತೆಯೇ. ಈ ನೈಜ ಸಂಗತಿಯನ್ನು, ಸತ್ಯವನ್ನು ನಮ್ಮ ಜನ ತಿಳಿದುಕೊಳ್ಳಬೇಕಾಗಿದೆ ಈ ತಿಳಿವು ಇಲ್ಲದವರಿಗೆ ತಿಳಿವನ್ನು ಮೂಡಿಸಬೇಕಾಗಿದೆ.

●






# ರೈತರ ಸಂತೆ

ಡಾ. ಬಿ. ಎಂ. ಶಶಿಧರ್
ಟಿ. ಎನ್. ವೆಂಕಟರೆಡ್ಡಿ

ಕೃಷಿ ಉತ್ಪನ್ನಗಳನ್ನು ಉತ್ಪಾದಕರೇ ನೇರವಾಗಿ ಮಾರಾಟಮಾಡುವ ವ್ಯವಸ್ಥೆ ಇತ್ತೀಚಿನ ದಿನಗಳಲ್ಲಿ ಪ್ರಾಮುಖ್ಯತೆಯನ್ನು ಗಳಿಸುತ್ತಿದೆ. ಈ ಪದ್ದತಿಯಲ್ಲಿ ಉತ್ಪಾದಕರೇ ನೇರವಾಗಿ ಬಳಕೆದಾರರನ್ನು ಸಂಪರ್ಕಿಸುವ ಮೂಲಕ ಬಳಕೆದಾರರ ಅಭಿರುಚಿಯನ್ನು ಅರ್ಥಮಾಡಿಕೊಳ್ಳಲು ನೆರವಾಗುತ್ತದೆ. ಉತ್ಪಾದಕರು ಒಳ್ಳೆಯ ದರವನ್ನು ಪಡೆಯುತ್ತಾರೆ ಹಾಗೂ ಬಳಕೆದಾರರಿಗೆ ಕಡಿಮೆ ದರದಲ್ಲಿ ವಸ್ತುಗಳು ದೊರೆಯುತ್ತವೆ. ಈ ಪದ್ದತಿಯಲ್ಲಿ ಮಧ್ಯವರ್ತಿಗಳ ಪಾತ್ರ ಇಲ್ಲದಿರುವುದರಿಂದ ಸಣ್ಣ ಪ್ರಮಾಣದ ಉತ್ಪಾದಕರಿಗೆ ಬಹಳಷ್ಟು ಸಹಾಯವಾಗುತ್ತದೆ.

ಕೃಷಿ ಉತ್ಪನ್ನ ಮಾರಾಟದಲ್ಲಿ ರೈತರೇ ನೇರವಾಗಿ ಮಾರಾಟಮಾಡುವ ಪದ್ಧತಿ ಪ್ರಪಂಚದಾದ್ಯಂತ ಬಹಳಷ್ಟು ಪ್ರಾಚೀನವಾದ ಪದ್ಧತಿಯಾಗಿದೆ. ಭಾರತದಲ್ಲಂತೂ, ಸಂತೆಗಳು ಗ್ರಾಮೀಣ ಜೀವನದ ಒಂದು ಅವಿಭಾಜ್ಯ ಅಂಗವಾಗಿ ಬೆಳೆದುಬಂದಿವೆ. ಗುಪ್ತರ ಕಾಲದ ಸುವರ್ಣಯುಗದಲ್ಲೇ ಸಂತೆಗಳು ಪ್ರಖ್ಯಾತ್ಯವಾಗಿದ್ದು, ನಂತರದ ದೊರೆಗಳು ಈ ಪದ್ಧತಿಗೆ ಸಾಕಷ್ಟು ಪ್ರೋತ್ಸಾಹವನ್ನು ನೀಡಿರುತ್ತಾರೆ. ಭಾರತದ ಚರಿತ್ರೆಯನ್ನು ಇಣಕು ನೋಡಿದಾಗ ಗ್ರಾಮೀಣ ಸಾಮಾಜಿಕ ವ್ಯವಸ್ಥೆಯಲ್ಲಿ ಸಂತೆಗಳು ಒಂದು ಅವಿಭಾಜ್ಯ ಅಂಗಗಳಾಗಿರುತ್ತವೆ. ವಾರಕ್ಕೊಮ್ಮೆ ನಡೆಯುವ ಈ ಸಂತೆಗಳು ಕೇವಲ ಕೃಷಿ ಉತ್ಪನ್ನ ಮಾರಾಟ ಮತ್ತು ಕೊಳ್ಳುವಿಕೆಗೆ ಅಷ್ಟೇ ಸೀಮಿತವಾಗದೇ, ನೆಂಟರಿಷ್ಟರು ಮತ್ತು ಸ್ನೇಹಿತರನ್ನು ಭೇಟಿಮಾಡುವ ಒಂದು ಸುಸಮಯವೂ ಆಗಿರುತ್ತದೆ. ಇದೊಂದು ಸಮಾಜ ಸಂಪರ್ಕ ವೇದಿಕೆಯಾಗಿಯೇ ಆಗಿದೆ. ಆದರೆ ಕಾಲಕ್ರಮೇಣ ಈ ಸಂತೆಗಳು ವೈಶಿಷ್ಟ್ಯತೆಯನ್ನು ಕಳೆದುಕೊಂಡು ಉತ್ಪಾದಕರೇ ನೇರವಾಗಿ ಮಾರಾಟಮಾಡುವ ಆ ಜಾಗವನ್ನು ಸಣ್ಣ ವ್ಯಾಪಾರಸ್ಥರು ತಮ್ಮ ಹಿಡಿತಕ್ಕೆ ತೆಗೆದುಕೊಂಡಿರುತ್ತಾರೆ. ಆದರೆ, ಇತ್ತೀಚಿನ ದಿನಗಳಲ್ಲಿ ಇದು ಒಂದು ಕಳೆದ ಅಧ್ಯಾಯವೇ ಆಗಿದೆ.

**ಗ್ರಾಮೀಣ ಸಾಮಾಜಿಕ ವ್ಯವಸ್ಥೆಯಲ್ಲಿ ವಾರಕ್ಕೊಮ್ಮೆ ನಡೆಯುವ ಸಂತೆಗಳು ಅವರ ಅವಿಭಾಜ್ಯ ಅಂಗವಾಗಿರುತ್ತವೆ. ಕೇವಲ ಕೃಷಿ ಉತ್ಪನ್ನ ಮಾರಾಟ ಮತ್ತು ಕೊಳ್ಳುವಿಕೆಗೆ ಸೀಮಿತವಾಗದೆ ನೆಂಟರಿಷ್ಟರನ್ನು ಭೇಟಿ ಮಾಡುವ ಸಮಯವೂ ಆಗಿರುತ್ತದೆ.**

ಈಗ ನಶಿಸಿ ಹೋಗುತ್ತಿರುವ ಪದ್ಧತಿಯನ್ನು ಪುನರ್ ಜೀವನಗೊಳಿಸಲು ವಿವಿಧ ದೇಶಗಳಲ್ಲಿ ಸರ್ಕಾರ/ಸರ್ಕಾರೇತರ ಸಂಸ್ಥೆಗಳು ತಮ್ಮ ಗಮನಹರಿಸಿವೆ. ಈ ಸಂತೆಯ ಪದ್ಧತಿಯನ್ನು ಕೆಲವು ಮಾರ್ಪಾಟುಗಳೊಂದಿಗೆ, ವಿವಿಧ ಯೋಜನೆಯಡಿಯಲ್ಲಿ ಕಾರ್ಯರೂಪಕ್ಕೆ ತರಲು ಪ್ರಯತ್ನಗಳು ನಡೆದಿವೆ.

೧೭೦೦ಕ್ಕಿಂತ ಮುಂಚೆ ಅಮೇರಿಕೆಯಲ್ಲಿ ರೈತ ಮಾರುಕಟ್ಟೆಗಳು ಚಾಲ್ತಿಯಲ್ಲಿದ್ದು, ೨೦ನೇ ಶತಮಾನದ ಹೊತ್ತಿಗೆ ಕಾರಣಾಂತರಗಳಿಂದ ರೈತ ಸಂತೆಗಳು ಮತ್ತು ಇತರೆ ನೇರ ಸಂತೆಗಳು ೨ನೇ ವಿಶ್ವಯುದ್ಧದ ನಂತರ ನಶಿಸಿಹೋದವು. ಆದರೆ ೨೦ನೇ ಶತಮಾನದ ಕೊನೆಯ ಹಂತದಲ್ಲಿ, ಈ ನೇರ ಮಾರಾಟದ ವ್ಯವಸ್ಥೆ ಪುನರ್ ಜೀವನಗೊಂಡಿದೆ. ಇದಕ್ಕೆ ಮುಖ್ಯ ಕಾರಣ, ಉತ್ತಮ ಗುಣಮಟ್ಟದ ಹಾಗೂ ತಾಜಾ ತರಕಾರಿ ಮತ್ತು ಹಣ್ಣುಗಳ ಬೇಡಿಕೆ ಹೆಚ್ಚಾಗಿದ್ದುದು ಒಂದು ಕಾರಣ. ಈ ಎಲ್ಲಾ ಕಾರಣಗಳಿಂದ, ಯುಎಸ್‌ಎನಲ್ಲಿ ಸಧ್ಯ ೩೧೦೦ಕ್ಕಿಂತ ಹೆಚ್ಚು ರೈತ ಮಾರುಕಟ್ಟೆಗಳು ಕಾರ್ಯ ನಿರ್ವಹಿಸುತ್ತಿವೆ. ಇದೇ ರೀತಿ ಇಂಗ್ಲೆಂಡ್ ದೇಶದಲ್ಲೂ ಸುಮಾರು ೫೦೦ ಮಾರುಕಟ್ಟೆಗಳು ವಿವಿಧ ನಗರ ಹಾಗೂ ಪಟ್ಟಣಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಇದೇ ರೀತಿ ಐರೋಪ್ಯ ರಾಷ್ಟ್ರಗಳಲ್ಲಿ ಹಾಗೂ ಆಸ್ಟ್ರೇಲಿಯದಲ್ಲೂ ರೈತ ಮಾರುಕಟ್ಟೆಗಳು ಬಹಳಷ್ಟು ಪ್ರಾಮುಖ್ಯತೆ ಪಡೆದಿವೆ.

ತರಕಾರಿ ಹಾಗೂ ಹಣ್ಣು ಉತ್ಪಾದನೆಯಲ್ಲಿ ಪ್ರಪಂಚದಲ್ಲೇ ಭಾರತ ೨ನೇ ಸ್ಥಾನ ಗಳಿಸಿವೆ. ಭಾರತದ ವಾರ್ಷಿಕ ಉತ್ಪಾದನೆ ಸುಮಾರು ೭೧ ಮಿ.ಮೆ.ಟನ್ ಇದೆ. ಕರ್ನಾಟಕ ರಾಜ್ಯ ಭಾರತದ ಅತಿ ಮುಖ್ಯವಾದ ಹಣ್ಣು ಮತ್ತು ತರಕಾರಿ ಉತ್ಪಾದನೆ ರಾಜ್ಯವಾಗಿದೆ. ಕರ್ನಾಟಕದಲ್ಲಿ ಅಂದಾಜು ವರ್ಷಕ್ಕೆ ೪೦ ಲಕ್ಷ ಮೆ.ಟನ್ ಹಣ್ಣುಗಳು ಮತ್ತು ೮೦ ಲಕ್ಷ ಮೆ.ಟನ್ ತರಕಾರಿಗಳನ್ನು ಉತ್ಪಾದಿಸಲಾಗುತ್ತಿದೆ. ತರಕಾರಿ ಮತ್ತು ಹಣ್ಣು ಉತ್ಪಾದನೆ ಗಣನೀಯವಾಗಿ ಹೆಚ್ಚಾಗಿದ್ದರೂ, ರೈತರು ಸಂಕಷ್ಟ ಸ್ಥಿತಿಯಲ್ಲಿ ಸಿಲುಕಿದ್ದಾರೆ. ಉತ್ಪಾದನೆ ವೆಚ್ಚ ಹೆಚ್ಚುತ್ತಿದ್ದರೂ ಸಹ ಮಾರಾಟ ದರದಲ್ಲಿ ಹೆಚ್ಚು ಕಂಡು ಬರುತ್ತಿಲ್ಲ. ಹೆಚ್ಚಾದ ಖರ್ಚು ವೆಚ್ಚಗಳನ್ನು ವ್ಯಾಪಾರಸ್ಥರ ಅಥವಾ ಬಳಕೆದಾರರ ಮೇಲೆ ವರ್ಗಾಯಿಸಲು ಆಗುತ್ತಿಲ್ಲ. ಇಷ್ಟಲ್ಲದೆ. ಹಣ್ಣು ಮತ್ತು ತರಕಾರಿ ದರಗಳಲ್ಲಿ ಪದೇ ಪದೇ ಏರುಪೇರುಗಳು ಕಂಡುಬರುತ್ತಿವೆ. ಮಾರಾಟ ದರ ಕುಸಿದಾಗಲಂತೂ ರೈತರು ಬಹಳಷ್ಟು ನಷ್ಟ ಅನುಭವಿಸುತ್ತಿದ್ದಾರೆ.

ಕರ್ನಾಟಕ ರಾಜ್ಯದಲ್ಲಿ ಸುಮಾರು ೭೫೦ ಸಂತೆಗಳು ಕಾರ್ಯ ನಿರ್ವಹಿಸುತ್ತಿವೆ. ಸಧ್ಯದ ಪರಿಸ್ಥಿತಿಯಲ್ಲಿ ಈ ಸಂತೆಗಳಲ್ಲಿ ರೈತರೇ ನೇರವಾಗಿ ಬಳಕೆದಾರರಿಗೆ ಮಾರಾಟ ಮಾಡುವ ಪದ್ಧತಿ ನಶಿಸಿಹೋಗಿದ್ದು, ಈ ವಾರದ ಸಂತೆಗಳ ರೂಪರೇಷೆಗಳೇ ಮಾರ್ಪಾಟಾಗಿವೆ. ಈ ಬದಲಾದ ಪರಿಸ್ಥಿತಿಯ ಹಿನ್ನೆಲೆಯಲ್ಲಿ, ರೈತರಿಗಾಗಲಿ/ ಗ್ರಾಹಕರಿಗಾಗಲಿ ಈ ವ್ಯವಸ್ಥೆಯ ಪ್ರಯೋಜನ ಸಿಗುತ್ತಿಲ್ಲ. ಬದಲಾಗಿ, ಇದು ವರ್ತಕರು ರೈತರು ಮತ್ತು ಗ್ರಾಹಕರನ್ನು ಶೋಷಣೆ ಮಾಡುವಂತಹ ಒಂದು ವ್ಯವಸ್ಥೆಯಾಗಿದೆ.

ಈ ಹಿನ್ನೆಲೆಯಲ್ಲಿ ರೈತರ ಮತ್ತು ಗ್ರಾಹಕರ ಸಂಕಷ್ಟ ಪರಿಸ್ಥಿತಿಯನ್ನು ಗಮನಿಸಿದ ವಿವಿಧ ರಾಜ್ಯ ಸರಕಾರಗಳು ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿವೆ. ಈ ಯೋಜನೆಗಳಲ್ಲಿ ರೈತರುಗಳೇ ನೇರವಾಗಿ ಗ್ರಾಹಕರಿಗೆ ಮಾರಾಟ ಮಾಡುವಂತಹ ಒಂದು ವ್ಯವಸ್ಥೆಯನ್ನು ಕಾರ್ಯರೂಪಕ್ಕೆ ತರಲಾಗಿದೆ. ರೈತರ ಸಂಕಷ್ಟ ಪರಿಸ್ಥಿತಿಯನ್ನು ನಿವಾರಿಸಲು ಮೊದಲ ಹೆಜ್ಜೆ ಇಟ್ಟ ರಾಜ್ಯವೆಂದರೆ ಪಂಜಾಬ್. ಈ ಹಿನ್ನಲೆಯಲ್ಲಿ ರಾಜ್ಯ ಸರಕಾರಗಳು, ಬೇರೆ ದೇಶಗಳಲ್ಲಿ ಅದರಲ್ಲೂ ಮುಖ್ಯವಾಗಿ ಅಮೆರಿಕಾ ಮತ್ತು ಐರೋಪ್ಯ ದೇಶಗಳಲ್ಲಿ ಯಶಸ್ವಿಯಾಗಿರುವ ರೈತ ಮಾರುಕಟ್ಟೆಯಿಂದ ಪ್ರಭಾವಿತಗೊಂಡು, ಈ ಪದ್ಧತಿಯನ್ನು ಭಾರತದಲ್ಲಿ ಜಾರಿಗೊಳಿಸಲಾಯಿತು. ಈ ದೃಷ್ಟಿಯಲ್ಲಿ ಪಂಜಾಬ್ ಸರಕಾರವು ಪ್ರಥಮ ಬಾರಿಗೆ ೧೯೮೭ರಲ್ಲಿ ಅಪ್ನ ಮಂಡಿ ಸ್ಥಾಪಿಸುವ ಮೂಲಕ ಜಾರಿಗೆ ತಂದಿತು. ಪಂಜಾಬ್ ರಾಜ್ಯದಲ್ಲಿ ರೈತರ ಸಂತೆ ವ್ಯವಸ್ಥೆಯನ್ನು ಪ್ರಪ್ರಥಮ ಬಾರಿಗೆ ಸಣ್ಣ ಪ್ರಮಾಣದ ರೈತರಿಗೆ ನಗರದಲ್ಲಿ ವಾಸಿಸುವ ಗ್ರಾಹಕರಿಗೆ ನೇರವಾಗಿ ಮಾರಾಟ ಮಾಡುವಂತಹ ವ್ಯವಸ್ಥೆಯನ್ನು ಕಲ್ಪಿಸಲಾಯಿತು. ಈ ವ್ಯವಸ್ಥೆಯ ಮುಖ್ಯ ಉದ್ದೇಶವೆಂದರೆ, ರೈತರು ತಾವು ಬೆಳೆದ ಉತ್ಪನ್ನಗಳಿಗೆ ಒಳ್ಳೆಯ ಬೆಲೆ ಸಿಗುವಂತೆ ಮಾಡುವುದು ಮತ್ತು ಗ್ರಾಹಕರಿಗೂ ಆದಷ್ಟೂ ಕಡಿಮೆ ಬೆಲೆಯಲ್ಲಿ ಉತ್ತಮ ಗುಣಮಟ್ಟದ ಹಣ್ಣು ಮತ್ತು ತರಕಾರಿಗಳನ್ನು ಒದಗಿಸುವುದು. ತದನಂತರ, ಈ ವ್ಯವಸ್ಥೆಯನ್ನು ಭಾರತದ ಇತರೆ ರಾಜ್ಯಗಳಾದ, ತಮಿಳುನಾಡು ಮತ್ತು ಆಂಧ್ರ ಪ್ರದೇಶಗಳಲ್ಲಿ ಜಾರಿಗೆ ತರಲಾಗಿದೆ.

ಈ ಹಿನ್ನೆಲೆಯಲ್ಲಿ ಕರ್ನಾಟಕ ಸರಕಾರವು ಕೂಡ ರೈತರೇ ನೇರವಾಗಿ ಮಾರಾಟ ಮಾಡುವಂತಹ ವ್ಯವಸ್ಥೆಯನ್ನು, ರೈತರ ಸಂತೆ ಎಂಬ ನೂತನ ಮಾರಾಟ ವ್ಯವಸ್ಥೆಯನ್ನು ರಾಜ್ಯ ಸರ್ಕಾರ ೨೦೦೨ರಲ್ಲಿ ಮೊಟ್ಟಮೊದಲ ಬಾರಿಗೆ ಬೆಂಗಳೂರಿನ ಉತ್ತರ ತಾಲ್ಲೂಕು ಯಲಹಂಕದಲ್ಲಿ ಸ್ಥಾಪನೆಮಾಡಿದೆ.

## ರೈತರ ಸಂತೆಯ ಉದ್ದೇಶಗಳು :

- ರೈತರು ತಾವು ಬೆಳೆದ ಹಣ್ಣು ಮತ್ತು ತರಕಾರಿಗಳನ್ನು ಗ್ರಾಹಕರಿಗೆ ನೇರ ಮಾರಾಟ ಮಾಡುವ ವ್ಯವಸ್ಥೆ ಕಲ್ಪಿಸುವುದು.
- ಗ್ರಾಹಕರಿಗೆ ರೈತರು ಬೆಳೆದ ಹಣ್ಣು ಮತ್ತು ತರಕಾರಿಗಳು ಆದಷ್ಟು ಕಡಿಮೆ ಬೆಲೆಯಲ್ಲಿ ದೊರಕುವಂತಹ ವ್ಯವಸ್ಥೆ ಕಲ್ಪಿಸುವುದು.
- ರೈತರಿಂದ ತಾಜಾ ಹಾಗೂ ಉತ್ತಮ ಗುಣಮಟ್ಟವುಳ್ಳ ಪದಾರ್ಥಗಳನ್ನೇ ಮಾರಾಟ ಮಾಡಿಸುವುದು.
- ರೈತ ಸಂತೆಯನ್ನು ವ್ಯವಸಾಯ ವ್ಯವಹಾರದ ಕೇಂದ್ರ ಬಿಂದುವನ್ನಾಗಿ ಪರಿವರ್ತಿಸಿ ರೈತರಿಗೆ ಬೇಕಾದ ಎಲ್ಲಾ ಅವಶ್ಯಕತೆಗಳನ್ನು ಪೂರೈಸುವಂತಹ ವ್ಯವಸ್ಥೆ ಕಲ್ಪಿಸುವುದು.
- ಗ್ರಾಹಕರ ಅವಶ್ಯಕತೆಗೆ ತಕ್ಕಂತಹ ಉತ್ತಮ ಗುಣಮಟ್ಟದ ಎಲ್ಲಾ ರೀತಿಯ ಹಣ್ಣು ಮತ್ತು ತರಕಾರಿಗಳನ್ನು ರೈತರು ಬೆಳೆದು ಮಾರಾಟ ಮಾಡುವುದು.
- ವ್ಯವಸಾಯ ಉತ್ಪನ್ನಗಳ ಬೆಲೆಯಲ್ಲಿ ಸ್ಥಿರತೆಯನ್ನು ತರುವುದು.

ರೈತರದೇ ಸ್ವಂತ ಮಾರುಕಟ್ಟೆಯಾದ ರೈತರ ಸಂತೆ ಸ್ಥಾಪನೆ ಮತ್ತು ನಿರ್ವಹಣಾ ಜವಾಬ್ದಾರಿಯನ್ನು ಆಯಾ ವಲಯದ ಕೃಷಿ ಉತ್ಪನ್ನ ಮಾರಾಟ ಸಮಿತಿ (ಎಪಿಎಂಸಿ)ಗೆ ವಹಿಸಲಾಗಿದೆ. ಎಪಿಎಂಸಿಗಳು ತಮ್ಮ ಸ್ವಂತ ಹಣವನ್ನು ವೆಚ್ಚಮಾಡಿ, ಅಲ್ಲಿ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿಕೊಡುತ್ತವೆ. ರೈತರಿಗೂ ಮತ್ತು ಬಳಕೆದಾರರಿಗೂ ಅನುಕೂಲವಾಗುವಂತಹ ಸ್ಥಳವನ್ನು ಗುರುತಿಸಿ, ರೈತರ ಸಂತೆ ಸ್ಥಾಪನೆ ಮಾಡಲಾಗುತ್ತದೆ. ಈ ಎಪಿಎಂಸಿಗಳು ರೈತ ಸಂತೆ ಪ್ರಾಂಗಣದಲ್ಲಿ ಕೆಳಕಾಣಿಸಿದ ವಿವಿಧ ಸೌಕರ್ಯಗಳನ್ನು ಕಲ್ಪಿಸಿಕೊಡುತ್ತದೆ.

೧. ಮಾರಾಟ ಮಳಿಗೆಗಳು
೨. ಕಾಂಪೌಂಡ್ ಗೋಡೆ
೩. ಪ್ಲಾಟ್‌ಫಾರ್ಮ್
೪. ಕುಡಿಯುವ ನೀರಿನ ವ್ಯವಸ್ಥೆ
೫. ಶೌಚಾಲಯ ವ್ಯವಸ್ಥೆ
೬. ಉಪಾಹಾರ ಗೃಹ ವ್ಯವಸ್ಥೆ
೭. ಭದ್ರತಾ ವ್ಯವಸ್ಥೆ
೮. ತೂಕ ಮಾಡುವ ತಕ್ಕಡಿ ವ್ಯವಸ್ಥೆ
೯. ಹಣ್ಣು ಮತ್ತು ತರಕಾರಿ ಇಡಲು ಪ್ಲಾಸ್ಟಿಕ್ ಡಬ್ಬಗಳ ವ್ಯವಸ್ಥೆ
೧೦. ವಿದ್ಯುತ್ ದೀಪಗಳು
೧೧. ದೂರವಾಣಿ ಸಂಪರ್ಕ
೧೨. ಸ್ವಚ್ಛಗೊಳಿಸುವ ವ್ಯವಸ್ಥೆ
೧೩. ಇತರೆ ವ್ಯವಸ್ಥೆಗಳನ್ನು ಏರ್ಪಾಡುಮಾಡಲಾಗುತ್ತದೆ.

ರೈತರ ಸಂತೆಯ ವಿಶೇಷವೆಂದರೆ, ಈ ಎಲ್ಲಾ ವ್ಯವಸ್ಥೆಗಳನ್ನು ಉಚಿತವಾಗಿ ಎಪಿಎಂಸಿ ಖರ್ಚಿನಲ್ಲಿ ಮಾಡಲಾಗುತ್ತದೆ. ತಿಂಗಳಿಗೆ ಅಂದಾಜು ೭೫,೦೦೦ ಸಾವಿರದಿಂದ ಒಂದು ಲಕ್ಷ ರೂಪಾಯಿಗಳ ಖರ್ಚು ಭರಿಸಬೇಕಾಗುತ್ತದೆ. ಹಳ್ಳಿಯಿಂದ ಹಣ್ಣು ಮತ್ತು ತರಕಾರಿಗಳನ್ನು ಸಾಗಿಸಲು ಸಾಗಾಣಿಕೆ ವ್ಯವಸ್ಥೆಯನ್ನು ಕೂಡ ಮಾಡಲಾಗುತ್ತದೆ. ರೈತರ ಸಂತೆ ಸುತ್ತಮುತ್ತಲ ಪ್ರದೇಶಗಳಲ್ಲಿ ಹಣ್ಣು ಮತ್ತು ತರಕಾರಿ ಬೆಳೆಯುವ ಅತಿಸಣ್ಣ/ಸಣ್ಣ ರೈತರನ್ನು ಕರ್ನಾಟಕ ಸರ್ಕಾರದ ಕಂದಾಯ, ತೋಟಗಾರಿಕೆ ಇಲಾಖೆಗಳು ಮತ್ತು ಎಪಿಎಂಸಿಯವರು ಗುರುತಿಸಿ, ಗುರುತಿನ ಚೀಟಿಯನ್ನು ಭಾವಚಿತ್ರದ ಸಮೇತ ನೀಡಲಾಗುತ್ತದೆ. ರೈತರ ಸಂತೆ ಪ್ರವೇಶ ಮಾಡಲು ಈ ಗುರುತಿನ ಚೀಟಿ ಕಡ್ಡಾಯವಾಗಿದೆ. ರೈತರ ಸಂತೆ ಬಗ್ಗೆ ಬೆಳೆಗಾರರಿಗೆ ಅರಿವು ಮೂಡಿಸಲು ಪ್ರಚಾರ ಕಾರ್ಯವನ್ನು ಮಾಡಲಾಗುತ್ತದೆ,

ರೈತರ ಸಂತೆಯ ದಿನನಿತ್ಯದ ವಹಿವಾಟು ಉಸ್ತುವಾರಿಯನ್ನು ಮಾಡಲು ಎಪಿಎಂಸಿ ತನ್ನ ಸಿಬ್ಬಂದಿ ವರ್ಗವನ್ನು ನೇಮಿಸಿ ರೈತರ ಸಂತೆಯ ಚಟುವಟಿಕೆಗಳ ಮೇಲ್ವಿಚಾರಣೆ ಕಾರ್ಯವನ್ನು ಜಿಲ್ಲಾಧಿಕಾರಿಗಳ ನೇತೃತ್ವದ ಸಮಿತಿ ನೋಡಿಕೊಳ್ಳುತ್ತದೆ. ಈ ಸಮಿತಿಯಲ್ಲಿ ರೈತರ ಪ್ರಾತಿನಿಧ್ಯವೂ ಇರುತ್ತದೆ. ಈ ನಿರ್ವಹಣಾ ಸಮಿತಿಯೇ ಪ್ರತಿದಿನದ ಮಾರಾಟ ದರಗಳನ್ನು ನಿರ್ಣಯಿಸುತ್ತದೆ. ಈ ಮಾರಾಟ ದರಗಳನ್ನು ನಿರ್ಣಯಮಾಡುವಾಗ ಹಿಂದಿನ ದಿನದ ಸಗಟು ಹಾಗೂ ಚಿಲ್ಲರೆ ದರಗಳನ್ನು ಆಧಾರವಾಗಿ ಇಟ್ಟುಕೊಂಡು ಸಗಟು ದರ (ಹೋಲ್‌ಸೇಲ್)ವು ಹಿಂದಿನ ದಿನದ ಸಗಟು ದರಕ್ಕಿಂತ ಶೇ.೨೦ರಷ್ಟು ಹೆಚ್ಚಾಗಿ ಇಡಲಾಗುತ್ತದೆ. ಈ ಪದ್ಧತಿಯಿಂದ ರೈತರಿಗೆ ಸಗಟು ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದಕ್ಕಿಂತ ಹೆಚ್ಚಿನ ಲಾಭ ಗಳಿಸಲು ಅನುಕೂಲವಾಗುತ್ತದೆ. ಇದೇ ರೀತಿ ಈ ಮಾರಾಟ ದರ ಚಿಲ್ಲರೆ ಮಾರಾಟ ದರಕ್ಕಿಂತ ಶೇ. ೨೦ರಷ್ಟು ಕಡಿಮೆಯೂ ಇಡಲಾಗುತ್ತದೆ. ಇದರಿಂದ ಬಳಕೆದಾರರಿಗೆ ತಾಜಾ ತರಕಾರಿಗಳ ಜೊತೆಗೆ ಕಡಿಮೆ ದರದಲ್ಲಿ ತರಕಾರಿ ಮತ್ತು ಹಣ್ಣುಗಳು ದೊರೆಯುವಂತಾಗಿದೆ. ಯಲಹಂಕ ಮಾರುಕಟ್ಟೆ ನಂತರ ಹುಬ್ಬಳ್ಳಿ ಮತ್ತು ಚಿತ್ರದುರ್ಗ ಪಟ್ಟಣಗಳಲ್ಲೂ ರೈತರ ಸಂತೆ ಸ್ಥಾಪನೆ ಮಾಡಲಾಗಿದೆ. ಈ ದಿಕ್ಕಿನಲ್ಲಿ ಕರ್ನಾಟಕ ಸರಕಾರ ಒಂದು ಬೃಹತ್ ಯೋಜನೆಯನ್ನು ಮುಂದಿಟ್ಟುಕೊಂಡು ಕರ್ನಾಟಕದಾದ್ಯಂತ ರೈತ ಸಂತೆಗಳನ್ನು ಸ್ಥಾಪಿಸಲು ಕೃಷಿ ವಿಶ್ವವಿದ್ಯಾನಿಲಯ, ಬೆಂಗಳೂರು ಮತ್ತು ಧಾರವಾಡಗಳಿಂದ ಸಂಶೋಧನಾ ವರದಿಗಳನ್ನು ತರಿಸಿಕೊಂಡಿದೆ. ಆದರೆ, ಈಗಾಗಲೇ ನಿರ್ಮಾಣಗೊಂಡಿರುವ ರೈತ ಸಂತೆಗಳ ಕಾರ್ಯ ಚಟುವಟಿಕೆಗಳನ್ನು ಗಮನಿಸಿದಾಗ, ರೈತರ ಪಾಲ್ಗೊಳ್ಳುವಿಕೆ ತೀರ ಕಡಿಮೆ ಅಂತಲೇ ಹೇಳಬಹುದು. ಇದಕ್ಕೆ ಕಾರಣಗಳು ಹಲವಾರು ಇದ್ದರೂ, ಕರ್ನಾಟಕ ರೈತ ಸಮುದಾಯ ಇದರ ಸದುಪಯೋಗಪಡಿಸಿಕೊಂಡು ತಮ್ಮ ಶ್ರಮಕ್ಕೆ ಸರಿಯಾದ ಫಲವನ್ನು ಪಡೆಯಲು ಪ್ರಯತ್ನಿಸಬೇಕಾಗಿದೆ.

●




# ಕುರಿ ಸಾಕಾಣಿಕೆ


ಪ್ರೊ. ಎಂ. ಜಿ. ಗೋವಿಂದಯ್ಯ

ಡಾ. ಆರ್. ಜಗನ್ನಾಥ್

ಡಾ. ಎಂ. ವಸುಂಧರಾದೇವಿ


ಗ್ರಾಮಾಂತರ ಪ್ರದೇಶದ ಜನಜೀವನ ಹಾಗೂ ಆರ್ಥಿಕ ಸುಧಾರಣೆಯಲ್ಲಿ ಕುರಿ ಸಂಗೋಪನೆ ಮಹತ್ವದ ಪಾತ್ರ ವಹಿಸುತ್ತದೆ. ಕುರಿಯನ್ನು ಬಡವರ ಬಂಧು, ಅದರಲ್ಲೂ ಸಣ್ಣ ಮತ್ತು ಅತಿ ಸಣ್ಣ ರೈತರ 'ಕಿರು ಕಾಮಧೇನು' ಎಂದು ಕರೆಯಲಾಗುತ್ತದೆ. ಕುರಿಯಿಂದ ಬರುತ್ತಿರುವ ಉಣ್ಣೆ, ಮಾಂಸ, ಚರ್ಮ ಮತ್ತು ಗೊಬ್ಬರ ಇತ್ಯಾದಿ ಉಪಯುಕ್ತ ವಸ್ತುಗಳು ರೈತರ ಮತ್ತು ದೇಶದ ಆರ್ಥಿಕ ಸುಧಾರಣೆಯಲ್ಲಿ ಉತ್ತಮ ಪಾತ್ರವನ್ನು ವಹಿಸಿವೆ. ರಾಜ್ಯದಲ್ಲಿ ಕುರಿಸಾಕಾಣಿಕೆಯು ಸಣ್ಣ, ಅತಿ ಸಣ್ಣ ಮತ್ತು ಕೃಷಿ ಕಾರ್ಮಿಕರಿಗೆ ಮುಖ್ಯ ಕಸುಬು. ಪ್ರಪಂಚದ ಒಟ್ಟು ೧೦೨೪ ದಶಲಕ್ಷ (೨೦೦೩) ಕುರಿಗಳಲ್ಲಿ ಭಾರತದಲ್ಲಿ ೫೯ ದಶಲಕ್ಷ ಕುರಿಗಳಿವೆ. ಭಾರತವು ಕುರಿ ಸಂಖ್ಯೆಯಲ್ಲಿ ೩ನೇ ಸ್ಥಾನದಲ್ಲಿದೆ. ನಮ್ಮ ದೇಶದಲ್ಲಿ ಸುಮಾರು ೪೦ ವಿವಿಧ ಕುರಿ ತಳಿಗಳಿವೆ. ನಮ್ಮ ದೇಶದಲ್ಲಿ ಶೇಕಡ ೫.೭೬ ರಷ್ಟು ಪ್ರಪಂಚದ ಕುರಿ ಸಂಖ್ಯೆಯಿದ್ದಾಗೂ ಸಹ ಶೇಕಡ ೨.೬ರಷ್ಟು ಉಣ್ಣೆ ಮಾತ್ರ ಗುಣಮಟ್ಟದ್ದಾಗಿರುತ್ತದೆ.

> **ಕುರಿಯನ್ನು ಬಡವರ ಬಂಧು, ಸಣ್ಣ ರೈತರ ಕಿರು ಕಾಮಧೇನು ಎಂದು ಕರೆಯಲಾಗುತ್ತದೆ. ಇದರ ಉಪಯುಕ್ತತೆ ಅಪಾರ. ಭಾರತವು ಕುರಿ ಸಾಕಾಣಿಕೆಯಲ್ಲಿ ವಿಶ್ವದಲ್ಲಿ ಮೂರನೆಯ ಸ್ಥಾನದಲ್ಲಿದೆ. ಆದರೆ ಇದರಿಂದ ಪಡೆಯುತ್ತಿರುವ ಗುಣಮಟ್ಟದ ಉಣ್ಣೆಯ ಪ್ರಮಾಣ ಮಾತ್ರ ಅತ್ಯಂತ ಕಡಿಮೆ.**

ಕರ್ನಾಟಕವು ೧೯೧೭೯೧ ಚ.ಕಿ.ಮೀ. ವಿಸ್ತಾರವನ್ನು ಹೊಂದಿದ್ದು ದೇಶದಲ್ಲಿ ೮ನೇ ಅತಿ ದೊಡ್ಡ ರಾಜ್ಯವಾಗಿದೆ. ೨೦೦೩ನೇ ಜಾನುವಾರು ಗಣತಿಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ೭೨.೫೬ ಲಕ್ಷ ಕುರಿಗಳು ಮತ್ತು ೪೪.೮೪ ಲಕ್ಷ ಮೇಕೆಗಳಿವೆಯೆಂದು ತಿಳಿದುಬಂದಿದೆ. ಕರ್ನಾಟಕದಲ್ಲಿರುವ ೨೭ ಜಿಲ್ಲೆಗಳಲ್ಲಿ ೯.೦೨ ಲಕ್ಷ ಕುರಿಗಳನ್ನು ಹೊಂದಿರುವ ಬೆಳಗಾಂ ಜಿಲ್ಲೆ ಪ್ರಥಮ ಸ್ಥಾನದಲ್ಲಿದ್ದು, ತುಮಕೂರು ೮.೮೫ ಲಕ್ಷ, ಚಿತ್ರದುರ್ಗ ೭.೧೫ ಲಕ್ಷ ಮತ್ತು ಕೋಲಾರ ೬.೩೩ ಲಕ್ಷ ಸಂಖ್ಯೆ ಹೊಂದಿದ್ದು ಕ್ರಮವಾಗಿ ನಂತರದ ಸ್ಥಾನಗಳನ್ನು ಪಡೆದಿವೆ. ಕರ್ನಾಟಕದ ಕರಾವಳಿ ಮತ್ತು ಮಲೆನಾಡು ಪ್ರದೇಶಗಳಲ್ಲಿ ಕುರಿಗಳ ಸಾಂದ್ರತೆ ಹಾಗೂ ಸಂಖ್ಯೆ ಅತ್ಯಂತ ವಿರಳವಾಗಿದೆ. ಒಣ ವಾತಾವರಣವಿರುವ ಮತ್ತು ೫೪೫-೭೦೦ ಮಿಲಿಮೀಟರ್ ಮಳೆ ಬೀಳುವ ಭಾಗಗಳಲ್ಲಿ ಕುರಿಸಂಗೋಪನೆಯು ತುಂಬಾ ಉತ್ತಮವಾಗಿದೆ. ಹೆಚ್ಚು ಮಳೆ ಬೀಳುವ ಹಾಗೂ ಶೀತವಾಯುಗುಣದ ಅರಣ್ಯ ಪ್ರದೇಶವು ಕುರಿ ಸಂಗೋಪನೆಗೆ ಅಷ್ಟೊಂದು ಯೋಗ್ಯವಲ್ಲ. ನಮ್ಮ ರಾಜ್ಯದಲ್ಲಿ ಕುರಿಗಳನ್ನು ಮುಖ್ಯವಾಗಿ ಮಾಂಸ, ಉಣ್ಣೆ, ಚರ್ಮ ಮತ್ತು ಗೊಬ್ಬರಕ್ಕಾಗಿ ಸಾಕುತ್ತಾರೆ. ಗ್ರಾಮಾಂತರ ಜನತೆಗೆ ಕುರಿ ಸಾಕಾಣಿಕೆಯು ಲಾಭದಾಯಕ ಹಾಗೂ ಉತ್ತಮ ಜನಜೀವನ ಸಾಗಿಸುವಂತಹ ಫಲಕಾರಿಯಾದ ಕಸುಬಾಗಿದೆ. ಕುರಿಗಳು ಎಂತಹ ಸಂಕಷ್ಟ ಸಮಯದಲ್ಲೂ ಸಹ ಬದುಕಿ ಉಳಿಯಬಲ್ಲವು. ಕುರಿಗಳಿಗೆ ಹೆಚ್ಚಿನ ನೀರಿನ

ಅವಶ್ಯಕತೆ ಇರುವುದಿಲ್ಲ. ಆಧುನಿಕ ತಂತ್ರಜ್ಞಾನ ಹಾಗೂ ತಳಿಯ ಅಭಿವೃದ್ಧಿ ಜ್ಞಾನವನ್ನು ಅಳವಡಿಸಿ ಕುರಿಗಳನ್ನು ಸಾಕಿದರೆ ಹೆಚ್ಚಿನ ಲಾಭ ಗಳಿಸಬಹುದು. ಇಂದು ಕುರಿ ಸಾಕಾಣಿಕೆಯು ಅಲೆಮಾರಿ ಜನರಿಗೆ, ಕೃಷಿ, ಕೂಲಿಕಾರರಿಗೆ ಹಾಗೂ ಆರ್ಥಿಕವಾಗಿ ಹಿಂದುಳಿದಿರುವ ಎಲ್ಲಾ ವರ್ಗದ ಜನರಿಗೆ ಜೀವನಾಡಿ ಹಾಗೂ ಜೀವಂತ ಚಲಿಸುವ ನಿಧಿ (ಬ್ಯಾಂಕ್)ಯಾಗಿ ಪರಿಣಮಿಸಿದೆ.

ಕರ್ನಾಟಕದಲ್ಲಿ ಕುರಿ ಸಂಗೋಪನೆಯು ಸಾಮಾನ್ಯವಾಗಿ ಹೆಚ್ಚಿನ ಪ್ರಮಾಣದಲ್ಲಿ ಕೆಲವೇ ಕೋಮಿನ ಜನರ ಕಸುಬಾಗಿದ್ದು, ಅದು ಇನ್ನೂ ವಂಶಪಾರಂಪರ್ಯ ಹಾಗೂ ಗ್ರಾಮೀಣ ಪದ್ಧತಿಯಲ್ಲಿದೆ. ಕರ್ನಾಟಕದಲ್ಲಿ ಕುರಿ ಸಂಗೋಪನೆಯನ್ನು ೩ ವಿಧಗಳಲ್ಲಿ ಅನುಸರಿಸಲಾಗುತ್ತಿದೆ. ಅವುಗಳೆಂದರೆ ಅಲೆಮಾರಿ, ಅರೆ ಅಲೆಮಾರಿ ಮತ್ತು ಸ್ಥಾನಿಕ (ಸ್ಟೇಷನರಿ) ಮಾದರಿಗಳು.

ಬೆಳಗಾವಿ, ಧಾರವಾಡ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿ ಕುರಿ ಸಂಗೋಪನೆಯಲ್ಲಿ ಅಲೆಮಾರಿ ಮಾದರಿ (ಮೈಗ್ರೆಟರಿ) ಮತ್ತು ಅರೆ ಅಲೆಮಾರಿ (ಸೆಮಿಮೈಗ್ರೆಟರಿ) ಪದ್ಧತಿಯನ್ನು ಅನುಸರಿಸಲಾಗುತ್ತಿದೆ. ಈ ಪದ್ಧತಿಗಳಲ್ಲಿ ಕುರಿಗಾರರು ಕುರಿಯ ಮಂದೆಗಳನ್ನು ಮೇಯಿಸುವ ಸಲುವಾಗಿ ಋತುಮಾನಕ್ಕೆ ಹೊಂದಿಕೊಂಡು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಮೇವಿನ ಸಲುವಾಗಿ ಹಾಗೂ ತಮ್ಮ ಹೊಟ್ಟೆಯನ್ನು ತುಂಬುವ ಸಲುವಾಗಿ ವಲಸೆ ಹೋಗುತ್ತಾರೆ. ಸ್ಥಾನಿಕ ಕುರಿ ಸಂಗೋಪನೆ (ಸ್ಟೇಷನರಿ ಫ್ಲಾಕ್)ಯನ್ನು ಬೆಂಗಳೂರು, ಹಾಸನ, ಕೋಲಾರ ಮತ್ತು ಮಂಡ್ಯ ಜಿಲ್ಲೆಗಳಲ್ಲಿ ಅನುಸರಿಸಲಾಗುತ್ತಿದೆ. ಈ ಮಾದರಿಯಲ್ಲಿ ಕುರಿಗಳ ಸಂಖ್ಯೆಯು ೧೦ ರಿಂದ ೨೫ ರಷ್ಟಿದ್ದು ತಮ್ಮ ಸ್ವಂತ ಜಮೀನಿನಲ್ಲಿ ಹಾಗೂ ರಸ್ತೆಯ ಆಜು ಬಾಜುಗಳಲ್ಲಿ ಮೇಯಿಸುತ್ತಾರೆ.

ಕರ್ನಾಟಕ ರಾಜ್ಯದಲ್ಲಿ ಮುಖ್ಯವಾಗಿ ಈ ಕೆಳಕಂಡ ಐದು ವಿಧವಾದ ನಾಡು ಕುರಿ ತಳಿಗಳಿರುತ್ತವೆ. ಜೊತೆಗೆ ಕೃಷಿ ವಿಶ್ವವಿದ್ಯಾಲಯವು ಸಹ ಹೊಸ ಕುರಿ ತಳಿಯನ್ನು ಬಿಡುಗಡೆ ಮಾಡಿದೆ.

೧. **ಡೆಕನಿ ತಳಿ** : ಈ ತಳಿಯ ಸಾಂದ್ರತೆ ಹೆಚ್ಚಾಗಿರುವ ಜಿಲ್ಲೆಗಳು ಅಂದರೆ ಬೆಳಗಾಂ, ಬಿಜಾಪುರ, ಧಾರವಾಡ, ಹಾವೇರಿ, ಗದಗ, ಗುಲ್ಬರ್ಗ ಮತ್ತು ರಾಯಚೂರು ಜಿಲ್ಲೆಯ ಕೆಲವು ಭಾಗಗಳು. ಈ ತಳಿಯನ್ನು ದಕ್ಷಿಣ ಪ್ರಸ್ಥಭೂಮಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಾಕುವುದರಿಂದ 'ಡೆಕನಿ' ಎಂದು ಕರೆಯಲಾಗುತ್ತದೆ. ಈ ಕುರಿಗಳಿಂದ ಉತ್ತಮ ಮಟ್ಟದ ಉಣ್ಣೆಯು ದೊರೆಯುತ್ತದೆ. ದಕ್ಷಿಣ ಭಾರತದ ಕುರಿಗಳಲ್ಲಿ ಈ ತಳಿಯಿಂದ ಮಾತ್ರವೇ ಉಣ್ಣೆ ಲಭ್ಯವಿರುವುದು.

೨. **ಬಳ್ಳಾರಿ ತಳಿ** : ಈ ತಳಿಯ ಸಾಂದ್ರತೆ ಯಥೇಚ್ಛವಾಗಿರುವ ಜಿಲ್ಲೆಗಳು ಅಂದರೆ ಬಳ್ಳಾರಿ, ರಾಯಚೂರು, ಧಾರವಾಡ ಮತ್ತು ಚಿತ್ರದುರ್ಗ ಜಿಲ್ಲೆಯ ಕೆಲವು ಭಾಗಗಳು. ಈ ತಳಿಯು ಅನುವಂಶೀಯ ಗುಣ ವಿಶೇಷತೆಯಲ್ಲಿ ಹೆಚ್ಚಾಗಿ ಡೆಕನಿ ತಳಿಯನ್ನು ಹೋಲುತ್ತದೆ. ಇದು ಡೆಕನಿ ಕುರಿಯ ಮತ್ತೊಂದು ಪ್ರಭೇದವೆಂದು ತಿಳಿಯಬಹುದು. ಬಹುತೇಕ ಕುರಿಗಳು ಕಪ್ಪು ಬಣ್ಣದ್ದಾಗಿರುತ್ತವೆ. ಹಾಗು ಕಪ್ಪನೆ ಬಣ್ಣದ ಒರಟು ಉಣ್ಣೆ ನೀಡುತ್ತವೆ. ಮಾಂಸವು ಬಂಡೂರು ಕುರಿಯ ಮಾಂಸಕ್ಕೆ ಸರಿಸಾಟಿಯಾಗಲಾರದು.

೩. **ಹಾಸನ ತಳಿ** : ಈ ತಳಿಯ ಸಾಂದ್ರತೆ ಹೆಚ್ಚಾಗಿರುವ ಜಿಲ್ಲೆಗಳು ಅಂದರೆ ಹಾಸನ, ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕು ಮತ್ತು ಮಂಡ್ಯ ಹಾಗೂ ತುಮಕೂರು ಜಿಲ್ಲೆಯ ಗಡಿ ಪ್ರದೇಶ. ಈ ತಳಿಯ ಮೂಲ ಸ್ಥಳ ಹಾಸನ ಜಿಲ್ಲೆ ಆದ್ದರಿಂದಲೇ ಈ ತಳಿಯನ್ನು ಸದರಿ ಜಿಲ್ಲೆಯ ಹೆಸರಿನಿಂದಲೇ ಕರೆಯಲಾಗುತ್ತದೆ.

೪. **ಬಂಡೂರು (ಬನ್ನೂರು/ಮಂಡ್ಯ) ತಳಿ** : ಈ ತಳಿ ಸಾಂದ್ರತೆ ಯಥೇಚ್ಛವಾಗಿರುವ ಜಿಲ್ಲೆಗಳು ಅಂದರೆ ಮಂಡ್ಯ, ಮೈಸೂರು, ಬೆಂಗಳೂರು ಗ್ರಾಮಾಂತರ, ಬೆಂಗಳೂರು ನಗರ, ಕೋಲಾರ ಮತ್ತು ತುಮಕೂರು ಜಿಲ್ಲೆಯ ಭಾಗಗಳು. ಈ ತಳಿಯ ಮೂಲ ಸ್ಥಳ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಬಂಡೂರು ಎಂಬ ಗ್ರಾಮವಾಗಿದ್ದು, ಈ ಗ್ರಾಮವು ಬನ್ನೂರಿಗೂ ಹತ್ತಿರವಿರುವುದರಿಂದ ಈ ತಳಿಯನ್ನು ಬನ್ನೂರು ಅಥವಾ ಬಂಡೂರು ಎಂದು ಸಹ ಕರೆಯಲಾಗಿದೆ. ಈ ತಳಿಯು ಉತ್ತಮ ಮಾಂಸದ ತಳಿಯೆಂದು ವಿಶ್ವವಿಖ್ಯಾತಿ ಪಡೆದಿದೆ. ಆದರೆ ಈ ತಳಿಯಿಂದ ಬರುವ ಉಣ್ಣೆ ಬಹಳ ಕೀಳು ಮಟ್ಟದ್ದಾಗಿದೆ ಹಾಗೂ ಕಂಬಳಿ ತಯಾರಿಸಲು ಸಹ ಉಪಯೋಗವಾಗುತ್ತಿಲ್ಲ.

೫. **ಕೆಂಗುರಿ** : ಈ ತಳಿಯು ಹೆಚ್ಚಾಗಿ ಬಿಜಾಪುರ, ಗುಲ್ಬರ್ಗ ಹಾಗೂ ರಾಯಚೂರು ಜಿಲ್ಲೆಗಳಲ್ಲಿ ಕಂಡುಬರುತ್ತವೆ. ಇದು ಗಾತ್ರದಲ್ಲಿ ಡೆಕನಿ ಕುರಿಗಿಂತ ದೊಡ್ಡದಾಗಿದ್ದು, ಮೈಬಣ್ಣ ಮಾಸಲು ಕೆಂಬಣ್ಣ ಹೊಂದಿದ್ದು ಮೇಕೆಯಂತೆ ಕಾಣುತ್ತದೆ. ಇತ್ತೀಚಿನ ದಿನಗಳಲ್ಲಿ ಈ ತಳಿಯು ಮಾಂಸಕ್ಕೆ ಹೆಸರು ಪಡೆದಿದೆ.

**೬. ಯು.ಎ.ಎಸ್. ಕುರಿ** : ಇದು ತ್ರಿಜಾತಿಯ ಮಿಶ್ರತಳಿ ಈ ತಳಿಯಲ್ಲಿ ಬಂಡೂರು (ಶೇ. ೨೫), ಸೌತ್‌ಡೌನ್ ವಿದೇಶಿ ಕುರಿತಳಿ (ಶೇ. ೨೫) ಹಾಗೂ ಡೆಕನಿ (ಶೇ. ೫೦) ಅನುವಂಶೀಯತೆಯ ಗುಣಗಳನ್ನು ಪಡೆದಿರುತ್ತದೆ. ಇದನ್ನು ಅಂದಿನ ಕೃಷಿ ವಿಶ್ವವಿದ್ಯಾಲಯ ಅಭಿವೃದ್ಧಿಪಡಿಸಿ ೧೯೮೩ರಲ್ಲಿ ರೈತರಿಗೋಸ್ಕರ ಹೊಸತಳಿಯಾಗಿ ಬಿಡುಗಡೆ ಮಾಡಿದೆ. ಈ ತಳಿಯ ಅಭಿವೃದ್ಧಿ ಮತ್ತು ಬಿಡುಗಡೆಯಲ್ಲಿ ಡಾ. ಎಂ. ಜಿ. ಗೋವಿಂದಯ್ಯ ಸಹಭಾಗಿಯಾಗಿದ್ದಾರೆ. ಈ ತಳಿಯಿಂದ ಉತ್ತಮ ಉಣ್ಣೆ ಹಾಗೂ ಮಾಂಸ ಬರುತ್ತದೆ. ಕರ್ನಾಟಕದಲ್ಲಿ ಎಲ್ಲಾ ಭಾಗಗಳಿಗೆ ಹೊಂದಿಕೊಂಡು ಬೆಳೆಯುತ್ತದೆ.

## ೧. ಕರ್ನಾಟಕದಲ್ಲಿ ಕುರಿ ಅಭಿವೃದ್ಧಿಗೆ ಕೈಗೊಂಡ ಕ್ರಮಗಳು :

ಕರ್ನಾಟಕ ಸರ್ಕಾರವು ರಾಜ್ಯದಲ್ಲಿರುವ ಕುರಿಗಾರರ ಹಿತರಕ್ಷಣೆ ಮಾಡುವ ಸಲುವಾಗಿ ಕುರಿತಳಿಗಳ ಸಮಗ್ರ ಅಭಿವೃದ್ಧಿಗಾಗಿ ಮತ್ತು ಅವುಗಳ ಉತ್ಪಾದನೆ ಸಾಮರ್ಥ್ಯ ಹೆಚ್ಚಿಸುವ ನಿಟ್ಟಿನಲ್ಲಿ ೧೯೭೫ನೇ ಇಸವಿಯಲ್ಲಿ ಕರ್ನಾಟಕ ಕುರಿ ಮತ್ತು ಕುರಿ ಉತ್ಪನ್ನಗಳ ಅಭಿವೃದ್ಧಿ ಮಂಡಳಿಯನ್ನು ಸ್ಥಾಪಿಸಿದ್ದು, ಸದರಿ ಮಂಡಳಿಯ ಚಟುವಟಿಕೆಗಳನ್ನು ಬಲಪಡಿಸುವ ದೃಷ್ಟಿಯಿಂದ ರಾಜ್ಯ ಸರ್ಕಾರವು ದಿನಾಂಕ ೦೧-೦೪-೨೦೦೭ರಿಂದ ಜಾರಿಗೆ ಬರುವಂತೆ ಮಂಡಳಿಯನ್ನು "ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ" ವನ್ನಾಗಿ ಪರಿವರ್ತಿಸಿದೆ.

ಕುರಿಮಂಡಳಿಯ ಕಾರ್ಯತತ್ಪರಿಕೆಯಿಂದಾಗಿ ೧೯೯೧ರಲ್ಲಿದ್ದಂತಹ ೪೭.೨೪ ಲಕ್ಷ ಕುರಿಗಳ ಸಂಖ್ಯೆಯು ೧೯೯೯ರಲ್ಲಿ ಗಣನೀಯ ಮಟ್ಟದಲ್ಲಿ ವೃದ್ಧಿಗೊಂಡು ೮೦.೦೩ ಲಕ್ಷಕ್ಕೆ ಮುಟ್ಟಿತು. ಇತ್ತೀಚಿನ ೨೦೦೩ನೇ ಗಣತಿ ಪ್ರಕಾರ ೭೨.೫೦ ಲಕ್ಷಕ್ಕೆ ಇಳಿದಿದೆ. ಆದರೂ ಸಹ ರಾಜ್ಯವು ರಾಷ್ಟ್ರದ ಕುರಿಸಂಖ್ಯೆಯಲ್ಲಿ ೬ನೇ ಸ್ಥಾನ ಪಡೆದಿದೆ. ಕುರಿಸಂಖ್ಯೆಯ ಇಳಿಮುಖಕ್ಕೆ ಬಹು ಮುಖ್ಯ ಕಾರಣವೆಂದರೆ, ರಾಜ್ಯವು ಅನುಭವಿಸುತ್ತಿರುವ ಸತತವಾಗಿ ಮೂರು ವರ್ಷದ ಬರಗಾಲ, ಮೇವಿನ ಕೊರತೆ ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಕುರಿಗಳನ್ನು ಮಾಂಸಕ್ಕೆ ವಧೆ ಮಾಡಿರುವುದು. ಮುಂದಿನ ದಿನಗಳಲ್ಲಿ ಕುರಿಯ ಸಂಗೋಪನೆ ಹಾಗೂ ಕುರಿಯ ಅಭಿವೃದ್ಧಿ ಕಾರ್ಯಗಳು ತ್ವರಿತಗೊಂಡು, ಕುರಿಗಳ ಸಂಖ್ಯೆಯು ಹೆಚ್ಚುವ ಸಂಭವವಿದೆ. ಇದಕ್ಕೆ ರಾಜ್ಯ ಸರ್ಕಾರ ಹಾಗೂ ರೈತರು ಜೊತೆಗೂಡಿ ಕಾರ್ಯೋನ್ಮುಖರಾಗಬೇಕು. ಈ ದಿಕ್ಕಿನಲ್ಲಿ ರಾಜ್ಯ ಸರ್ಕಾರವು ಕುರಿ ಮಂಡಳಿಯನ್ನು ೦೧-೦೪-೨೦೦೭ರಿಂದ ಜಾರಿಗೆ ಬರುವಂತೆ "ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮವನ್ನಾಗಿ" ಪರಿವರ್ತಿಸಿದೆ. ಈಗಾಗಲೇ ನಿಗಮವು ಕುರಿ ಅಭಿವೃದ್ಧಿ ಬಗ್ಗೆ ಸಾಕಷ್ಟು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

ಈ ಮೇಲೆ ತಿಳಿಸಿದ ತಳಿಗಳು ಸ್ಥಳೀಯ ತಳಿಗಳಾಗಿದ್ದು ಇವುಗಳ ಉಣ್ಣೆ ಒರಟಾಗಿದ್ದು ಉಪಯುಕ್ತತೆ ಕಡಿಮೆ ಇರುತ್ತದೆ. ಇವುಗಳ ಸರಾಸರಿ ದೇಹ ತೂಕ ಕಡಿಮೆಯಿರುವುದರಿಂದ ಮಾಂಸದ ಇಳುವರಿಯೂ ಸಹ ಕಡಿಮೆಯಿರುತ್ತದೆ.

ಈ ತಳಿಗಳು ಉಣ್ಣೆ ಮತ್ತು ಮಾಂಸದ ಗುಣಮಟ್ಟ ಹಾಗೂ ಇಳುವರಿಯನ್ನು ಹೆಚ್ಚಿಸುವ ಸಲುವಾಗಿ ಮಿಶ್ರತಳಿ ಸಂವರ್ಧನೆಯ ಕಾರ್ಯವು ಅತೀ ಅವಶ್ಯಕವಿರುತ್ತದೆ.

ಈ ಬಗ್ಗೆ ಸರಕಾರ ಹಮ್ಮಿಕೊಂಡಿರುವ ಪ್ರಮುಖ ಕಾರ್ಯಚಟುವಟಿಕೆಗಳೆಂದರೆ ನಮ್ಮ ರಾಜ್ಯದ ತಳಿಗಳನ್ನು ವಿದೇಶೀ ತಳಿಯೊಂದಿಗೆ ಸಂವರ್ಧನಗೊಳಿಸಿ ಮಿಶ್ರತಳಿ ಸೃಷ್ಟಿಸುವುದು ಹಾಗೂ ರೈತರ ಹತ್ತಿರವಿರುವ ನಾಡುಕುರಿಗಳೊಂದಿಗೆ ಸಂವರ್ಧನೆ ಮಾಡಿ ಉತ್ತಮ ಉಣ್ಣೆ ಹಾಗೂ ಮಾಂಸ ಪಡೆಯುವುದು. ಆದರೆ ಈ ಕಾರ್ಯಕ್ರಮಕ್ಕೆ ಅನೇಕ ಅಡಚಣೆಗಳು ಅಂಟಿಕೊಂಡಿವೆ.

ಪ್ರಮುಖ ಸಮಸ್ಯೆಯೆಂದರೆ ರಾಜ್ಯದ ಹೆಚ್ಚಿನ ಸಂಖ್ಯೆಯ ಕುರಿಗಳಿಗೆ ಸಂವರ್ಧನೆಗೆ ಬೇಕಾಗುವ ಹೆಚ್ಚಿನ ಸಂಖ್ಯೆಯ ಮಿಶ್ರತಳಿ ಟಗರುಗಳನ್ನು ಒದಗಿಸಬೇಕಾಗಿರುವುದು. ಈ ಮಿಶ್ರತಳಿ ಟಗರನ್ನು ಒದಗಿಸುವ ಕೇಂದ್ರಗಳೆಂದರೆ ರಾಜ್ಯದಲ್ಲಿರುವ ೬ ಕುರಿಸಂಶೋಧನಾ ಕ್ಷೇತ್ರಗಳು. ಈ ಕ್ಷೇತ್ರಗಳಲ್ಲಿ ಉತ್ಪಾದಿಸಲಾಗುವ ಒಟ್ಟು ಟಗರುಗಳ ಉತ್ಪಾದನೆ ರಾಜ್ಯದಾದ್ಯಂತ ಇರುವ ಅವಶ್ಯಕತೆಗೆ ಏನೇನೂ ಸಾಲದು. ಕೃತಕ ಗರ್ಭಧಾರಣೆ ಜಾನುವಾರುಗಳಲ್ಲಿ ಪ್ರಮುಖ ಸಂವರ್ಧನೆ ಸಾಧನವೆಂದು ಸಾಬೀತಾಗಿದೆ. ಈ ಮಹತ್ವದ ತಂತ್ರಜ್ಞಾನವನ್ನು ಕುರಿಗಳ ಸಂವರ್ಧನೆಯಲ್ಲಿ ಅಳವಡಿಸಬೇಕಾಗಿದೆ. ಈ ಬಗ್ಗೆ ರಾಜ್ಯದ ಹಲವೆಡೆ ನಡೆದ ಪ್ರಯೋಗಗಳು ಉತ್ತಮ ಪ್ರೋತ್ಸಾಹಕ ಫಲಿತಾಂಶ ತಂದು ಕೊಟ್ಟಿವೆ. ಆದರೂ ಸಹ ಕುರಿಗಳಲ್ಲಿ ಕೃತಕ ಗರ್ಭಧಾರಣಾ ವಿಧಾನವನ್ನು ತೀವ್ರಗತಿಯಲ್ಲಿ ನಡೆಸಲು ಸಾಧ್ಯವಿಲ್ಲದ್ದಕ್ಕೆ ಹಲವು ಕಾರಣಗಳಿವೆ. ಏಕೆಂದರೆ ಕುರಿಗಳು ಹೆಚ್ಚಿನ ಸಂಖ್ಯೆಯಲ್ಲಿರುವುದು ಹಾಗೂ ಮಂದೆಗಳು ಊರಿಂದ ಊರಿಗೆ ವಲಸೆ ಹೋಗುವ ಪ್ರವೃತ್ತಿಯಿರುವುದು. ಈ ವೈಜ್ಞಾನಿಕ ವಿಧಾನವನ್ನು ಸ್ಥಾನಿಕ (ಒಂದೇ ಕಡೆ ನೆಲೆಗೊಂಡಿರುವ) ಮಂದೆಗಳಲ್ಲಿ ಯಶಸ್ವಿಯಾಗಿ

ಪ್ರಯೋಗಿಸಬಹುದು. ಈ ವಿಧಾನದಿಂದ ಹೆಚ್ಚಿನ ಸಂಖ್ಯೆಯ ಮಿಶ್ರತಳಿ ಟಗರನ್ನು ಉತ್ಪಾದಿಸಬಹುದು. ಕುರಿಗಳ ಅಭಿವೃದ್ಧಿ ಹಾಗೂ ಒಂದೇ ಬಾರಿ ಹೆಚ್ಚಿನ ಸಂಖ್ಯೆಯಲ್ಲಿ ಮರಿಗಳನ್ನು ಪಡೆಯುವಂತಹ ತಂತ್ರಜ್ಞಾನದಲ್ಲಿ ನಮ್ಮ ವಿಜ್ಞಾನಿಗಳು ಇನ್ನೂ ಒಂದು ಮಹತ್ತರ ಹೆಜ್ಜೆ ಮುಂದೆ ಸಾಗಿದ್ದಾರೆ. ಅದು ಭ್ರೂಣ ತಂತ್ರಜ್ಞಾನ ಹಾಗೂ ವರ್ಗಾವಣೆ. ಈ ತಂತ್ರಜ್ಞಾನದಲ್ಲಿ ಆಯ್ದ ಕುರಿಗಳಿಂದ ಹೆಚ್ಚಿನ ಮಟ್ಟದಲ್ಲಿ ಭ್ರೂಣ ಉತ್ಪತ್ತಿ ಮಾಡಿ (ಡೋನರ್ ಕುರಿ), ಅವುಗಳನ್ನು ಹೊರತೆಗೆದು ಬೇರೆ ಕುರಿಗಳಿಗೆ ವರ್ಗಾವಣೆ ಮಾಡಿ (ಸಾರೋಗೇಟ್ ಮದರ್) ಪೂರ್ಣ ಗರ್ಭ ವ್ಯವಸ್ಥೆ ನಂತರ ಮರಿಗಳನ್ನು ಪಡೆಯಬಹುದು. ಈ ಕ್ರಮವು ಇನ್ನೂ ಶೈಶವಾವಸ್ಥೆಯಲ್ಲಿದೆ. ಈ ಭ್ರೂಣ ವರ್ಗಾವಣೆ ತಂತ್ರಜ್ಞಾನ ಫಲಕಾರಿಯಾದರೆ ಹೆಚ್ಚಿನ ಮಟ್ಟದಲ್ಲಿ ಮಿಶ್ರ ಟಗರು ಮರಿಗಳನ್ನು ಉತ್ಪಾದಿಸಿ ರೈತರಿಗೆ ಸುಲಭ ದರದಲ್ಲಿ ಮಾರಬಹುದು. ಈ ಮಿಶ್ರ ಟಗರುಗಳನ್ನು ರೈತರು ತಮ್ಮಲ್ಲಿರುವ ಸ್ಥಳೀಯ ಅಥವಾ ನಾಟಿ ಕುರಿಗಳೊಂದಿಗೆ ಸಂವರ್ಧನೆ ಮಾಡಿ ಉತ್ತಮ ಕುರಿಮರಿಯ ಫಸಲನ್ನು ಪಡೆಯಬಹುದು.

ಈ ಮಿಶ್ರತಳಿ ಸಂವರ್ಧನಾ ಕ್ರಿಯೆಯಿಂದ ಉತ್ತಮ ಗುಣವುಳ್ಳ ಹಾಗೂ ಹೆಚ್ಚಿನ ಪ್ರಮಾಣದ ಮಾಂಸ ಹಾಗೂ ಉಣ್ಣೆಯ ಉತ್ಪನ್ನ ಪಡೆಯಬಹುದು. ಈ ಮಿಶ್ರತಳಿಯ ಉಣ್ಣೆಯನ್ನು ಸಂಸ್ಕರಿಸುವ ವಿಧಾನ ನಮ್ಮ ಅನುವಂಶೀಯ ಹಾಗೂ ಗ್ರಾಮ ಪದ್ಧತಿಗಿಂತ ಹೊರತಾಗಿದೆ. ಕರ್ನಾಟಕ ರಾಜ್ಯವು ಮಿಶ್ರತಳಿ ಟಗರನ್ನು ಆರು ಕುರಿಸಂಶೋಧನಾ ಕೇಂದ್ರಗಳಿಂದ ಒದಗಿಸುವ ವ್ಯವಸ್ಥೆ ಮಾಡಿರುತ್ತದೆ.

## ೨. ಕುರಿ ಸಂಗೋಪನೆಯಲ್ಲಿ ಸರ್ಕಾರದ ಪ್ರೋತ್ಸಾಹ ಮತ್ತು ವಿಫಲತೆ :

ಕರ್ನಾಟಕ ಘನ ಸರ್ಕಾರವು ಕುರಿ ಸಂಗೋಪನೆಯ ಮಹತ್ವವನ್ನು ಅರಿತಿದ್ದು ಇದಕ್ಕಾಗಿ ಹೆಚ್ಚಿನ ಒತ್ತು ನೀಡಿದೆ. ೧೯೭೨ರಲ್ಲಿ ಕುರಿ ಸಂಗೋಪನೆ ಮೇಲ್ವಿಚಾರಣೆಗೆಂದೇ ಕರ್ನಾಟಕ ಕುರಿ ಮತ್ತು ಕುರಿ ಉತ್ಪನ್ನಗಳ ಅಭಿವೃದ್ಧಿ ಮಂಡಳಿಯನ್ನು ಸ್ಥಾಪಿಸಿದ್ದು, ಅಲ್ಲಿಂದ ಇಲ್ಲಿಯವರೆಗೂ ಕುರಿ ಸಂಗೋಪನೆಗೆ ಅಗತ್ಯ ಪ್ರೋತ್ಸಾಹ ಕೊಡುತ್ತಾ ಬಂದಿದೆ. ನಿಗಮವು ತನ್ನ ಕಾರ್ಯಾಚರಣೆಯಲ್ಲಿ ಪ್ರಮುಖವಾಗಿ ಕುರಿ ಸಂಗೋಪನೆಯ ಅಭಿವೃದ್ಧಿಗಾಗಿ ಹಲವಾರು ಜನಪರ ಹಾಗೂ ಜನಹಿತ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಅವುಗಳಲ್ಲಿ ಮುಖ್ಯವಾದುವುಗಳು ತಳಿ ಅಭಿವೃದ್ಧಿ, ಆರೋಗ್ಯ ರಕ್ಷಣೆ, ತರಬೇತಿ, ಸಹಕಾರಿ ಆಂದೋಲನ, ಉಣ್ಣೆ ಮಾರುಕಟ್ಟೆಗೆ ಸಹಾಯ, ಕುರಿ ಸಂವರ್ಧನ ಕೇಂದ್ರಗಳ ಸ್ಥಾಪನೆ, ಸಮಗ್ರ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಯೋಜನೆಗಳು, ಕುರಿ ಅಭಿವೃದ್ಧಿಗಾಗಿ ಬಡತನ ರೇಖೆಗಿಂತ ಕೆಳಗಿರುವ ಫಲಾನುಭವಿಗಳಿಗೆ ಅಂಚಿನ ಹಣದ ಯೋಜನೆ ಅಡಿಯಲ್ಲಿ ಕುರಿ ಘಟಕ ಸ್ಥಾಪನೆಗಾಗಿ ಸಾಲ ನೀಡಿಕೆ, ಕುರಿ ಮತ್ತು ಕುರಿ ಉತ್ಪನ್ನಗಳಿಗೆ ವೈಜ್ಞಾನಿಕ ಮಾರುಕಟ್ಟೆ ವ್ಯವಸ್ಥೆ ಇನ್ನೂ ಮುಂತಾದ ಜನಪರ ಮತ್ತು ಫಲಪ್ರದ ಕಾರ್ಯಕ್ರಮಗಳನ್ನು ಸರ್ಕಾರವು ನಿಗಮದ ಮೂಲಕ ಹಮ್ಮಿಕೊಂಡಿದೆ. ಈ ಕಾರ್ಯಕ್ರಮಗಳ ಫಲಕಾರಿಯಿಂದ ೨೦೦೩ನೇ ಇಸವಿಯಲ್ಲಿ ಕರ್ನಾಟಕವು ದೇಶದ ಕುರಿ ಸಂಖ್ಯೆಯಲ್ಲಿ ೪ನೇ ಸ್ಥಾನ ಮತ್ತು ಉಣ್ಣೆ ಉತ್ಪಾದನೆಯಲ್ಲಿ ૩ನೇ ಸ್ಥಾನವನ್ನು ಪಡೆಯಲು ಸಾಧ್ಯವಾಗಿದೆ.

ಆದರೂ ಸಹ ಕುರಿಸಾಕಾಣಿಕೆಯ ಚಟುವಟಿಕೆಗಳು ನಿರೀಕ್ಷಿತ ಮತ್ತು ಅಗತ್ಯ ಮಟ್ಟದಲ್ಲಿ ಬೆಳೆದಿಲ್ಲವೆಂಬುದು ಇಂದಿಗೂ ಕಹಿ ಸತ್ಯ. ಇದಕ್ಕೆ ಸರ್ಕಾರವನ್ನೇ ಹೊಣೆ ಮಾಡುವುದು ಅಥವಾ ಇದು ಸರ್ಕಾರದ ವಿಫಲತೆ ಎಂದು ಪರಿಗಣಿಸುವುದು ಸಮಂಜಸವಲ್ಲ. ಭಾರತ ವಿಶ್ವದಲ್ಲಿ ಒಂದು ಬೃಹತ್ ಪ್ರಜಾಪ್ರಭುತ್ವ ರಾಷ್ಟ್ರ ಪ್ರಜೆಗಳಿಂದ, ಪ್ರಜೆಗಳಿಗಾಗಿ, ಪ್ರಜೆಗಳಿಗೋಸ್ಕರವಾಗಿಯೇ ನಡೆಯಲ್ಪಡುವ ಸರ್ಕಾರ. ಆದುದರಿಂದ ಇತರೆ ದೇಶಗಳಂತೆ ಕಠಿಣ ನಿಲುವುಗಳನ್ನು ತಳೆಯುವುದು ಅಥವಾ ಅವುಗಳನ್ನು ಹೇರುವುದು ಇಲ್ಲಿ ಅಸಾಧ್ಯ. ಒಂದು ಯೋಜನೆ ಅಥವಾ ಚಟುವಟಿಕೆ ಯಶಸ್ವಿಯಾಗಬೇಕಾದರೆ ಸರ್ಕಾರದ ಪ್ರಯತ್ನದೊಂದಿಗೆ ಜನರ ಸಹಭಾಗಿತ್ವ ಹಾಗೂ ಸಹಕಾರ ಅತಿ ಮುಖ್ಯ. ನಮಗೆ ತಿಳಿದಿರುವ ರೀತಿಯಲ್ಲಿ ನಮ್ಮ ಸಮಾಜದಲ್ಲಿ ಯಾವುದೇ ಬದಲಾವಣೆ ಆಗಬೇಕಾದರೆ ಅದು ತಕ್ಷಣವೇ ಜನರಿಂದ ಅಂಗೀಕಾರವಾಗಿ ಒಂದು ನಿರ್ದಿಷ್ಟ ದೀರ್ಘಾವಧಿಯಲ್ಲಿ ವೃದ್ಧಿಸುತ್ತವೆ. ಇದಕ್ಕೆ ನಮ್ಮ ಹಸಿರು ಕ್ರಾಂತಿ ಮತ್ತು ಕ್ಷೀರ ಕ್ರಾಂತಿಗಳೇ ಪ್ರತ್ಯಕ್ಷ ಸಾಕ್ಷಿಗಳು. ಸರ್ಕಾರದ ವಿಶ್ವಪ್ರಯತ್ನಗಳ ನಂತರವೂ ಕುರಿಸಂಗೋಪನೆ ನಿರೀಕ್ಷಿತ ಮಟ್ಟದಲ್ಲಿ ಬೆಳೆಯದೇ ಇರುವುದಕ್ಕೆ ಹಲವಾರು ಸಾಧಕ ಬಾಧಕಗಳಿವೆ. ಅವುಗಳಲ್ಲಿ ಮುಖ್ಯವಾದುವುಗಳನ್ನು ಸ್ಪಷ್ಟವಾಗಿ ಇಲ್ಲಿ ವಿಶ್ಲೇಷಿಸಲಾಗಿದೆ.

**ಅ. ತಳಿ ಅಭಿವೃದ್ಧಿ :** ನಮ್ಮ ರಾಜ್ಯದ ಸ್ಥಳೀಯ ಕುರಿಗಳು ಸಂಖ್ಯೆಯಲ್ಲಿ ಹೆಚ್ಚಿದ್ದರೂ ಸಹ ಸರಾಸರಿ ಉತ್ಪನ್ನಗಳ ಉತ್ಪಾದನೆಯಲ್ಲಿ ರಾಷ್ಟ್ರೀಯ ಇತರೆ ಕುರಿ ತಳಿಗಳಿಗಿಂತ ಕೆಳಮಟ್ಟದಲ್ಲಿವೆ. ಇದಕ್ಕೆ ನಮ್ಮ ಸ್ಥಳೀಯ ಕುರಿಗಳ ಅನುವಂಶೀಯತೆಯ ಗುಣಮಟ್ಟ ಬಹಳಷ್ಟು ಕಾರಣವಾಗುವುದು. ಇದರಲ್ಲಿ ಬದಲಾವಣೆ ಬಯಸುವುದಾದರೆ, ಕುರಿ ಉತ್ಪನ್ನಗಳ ಪ್ರಮಾಣ ಮತ್ತು ಗುಣಮಟ್ಟ ಎರಡರಲ್ಲಿ ಏಕಕಾಲದಲ್ಲಿ ಉತ್ತಮತೆ ಕಂಡುಕೊಳ್ಳುವುದು ಅಗತ್ಯ. ಇದನ್ನು ಮಿಶ್ರತಳಿ ಸಾಕಾಣಿಕೆಯಿಂದ ಪಡೆಯಬಹುದಾಗಿದೆ. ಈ ನಿಟ್ಟಿನಲ್ಲಿ

ಸರ್ಕಾರವು ವಿದೇಶದಿಂದ ರ್‍ಯಾಂಬ್ಯುಲೇ, ಮೆರಿನೋ, ಸೌತ್‌ಡೌನ್ ಮುಂತಾದ ಉತ್ತಮ ತಳಿಯ ಕುರಿಗಳನ್ನು ಈ ಮುಂಚೆಯೇ ಆಮದು ಮಾಡಿಕೊಂಡು ನಾಡುತಳಿಗಳೊಂದಿಗೆ ಸಂವರ್ಧನೆ ಮಾಡಿ ಮಿಶ್ರ ಕುರಿಗಳನ್ನು ಉತ್ಪಾದಿಸಿ ಮಿಶ್ರತಳಿ ಟಗರುಗಳನ್ನು ತಮ್ಮಲ್ಲಿರುವ ಕುರಿಮಂದೆಯನ್ನು ಉತ್ತಮಪಡಿಸಲು ಸರ್ಕಾರದ ವತಿಯಿಂದ ವಿತರಿಸಲಾಗಿದೆ. ಆದರೆ ರೈತರು ಈ ಯೋಜನೆಯನ್ನು ಅಷ್ಟೊಂದು ಮುಕ್ತ ಮನಸ್ಸಿನಿಂದ ಸ್ವೀಕರಿಸಿಲ್ಲ ಹಾಗೂ ತಳಿ ಅಭಿವೃದ್ಧಿಯಲ್ಲಿ ರಾಜಿಯಾಗಿಲ್ಲವೆಂಬುದು ವಿಷಾದನೀಯ ಸಂಗತಿ. ಕಾರಣ, ಕರ್ನಾಟಕದ ಒಟ್ಟು ಕುರಿಗಳಲ್ಲಿ ಶೇಕಡ ೮೦ ಭಾಗ ಕಪ್ಪು ಬಣ್ಣದ ಕುರಿಗಳಿವೆ. ಈ ಕುರಿಗಳನ್ನು ಸಾಕುವ ವಿಚಾರದಲ್ಲಿ ವಿದೇಶಿ ಬಿಳಿ ಬಣ್ಣದ ಕುರಿಗಳಿಗೆ ಕೊಟ್ಟ ಉಪಚಾರ ಮಹತ್ವವನ್ನು ಕುರಿಗಾರರು ನೀಡುವದಿಲ್ಲ. ವಿದೇಶಿ ತಳಿಗಳು ಬಿಳಿ ಬಣ್ಣದ್ದಾಗಿರುವುದರಿಂದ ಇವುಗಳನ್ನು ಕಪ್ಪು ಕುರಿಗಳೊಂದಿಗೆ ಸಂಕರಣ ಮಾಡಲು ಕುರಿಗಾರರು ಒಪ್ಪುತ್ತಿಲ್ಲ. ಜೊತೆಗೆ ಮಿಶ್ರತಳಿ ಸಂಕರಣೆ ಕಾರ್ಯ ಕೇವಲ ಕೆಲವೇ ಕ್ಷೇತ್ರಗಳಿಗೆ ತಲುಪಿದ್ದು ಇಲ್ಲಿ ಅನಿವಾರ್ಯ ವಿಫಲತೆ ಉಂಟಾಗಿದೆ.

**ಆ. ಉಣ್ಣೆ ಮಾರಾಟ** : ಕರ್ನಾಟಕದಲ್ಲಿ ಉತ್ಪಾದಿಸುವ ಉಣ್ಣೆ ಒರಟು ಕಾರ್ಪೆಟ್ ಮಾದರಿಯದು. ಇದು ಸೂಕ್ಷ್ಮ ಅಪಾರೆಲ್‌ಗಳಿಗೆ ಸೂಕ್ತವಲ್ಲ. ಆದ್ದರಿಂದ ಇದಕ್ಕೆ ಬೇಡಿಕೆ ಕಡಿಮೆ. ರಾಜ್ಯದಲ್ಲಿ ಉತ್ಪಾದಿಸುತ್ತಿರುವ ಉಣ್ಣೆಯ ಶೇ. ೧೦ರಷ್ಟು ಮಾತ್ರ ಕಂಬಳಿ ತಯಾರಿಕೆಗೆ ಉಪಯೋಗವಾಗುತ್ತಿದ್ದು ಉಳಿದ ಶೇ. ೮೦ ಭಾಗ ವ್ಯರ್ಥವಾಗುತ್ತಿದೆ. ಕರ್ನಾಟಕದಲ್ಲಿ ಉಣ್ಣೆಯನ್ನು ಉಣ್ಣೆ ವಸ್ತುಗಳಿಗಾಗಿ ಮಾರ್ಪಡಿಸುವ ಕಾರ್ಖಾನೆಗಳೇ ಇಲ್ಲದಿರುವುದು ಸಕಾರಣವಾಗಿದೆ. ಈ ಕಾರಣದಿಂದಾಗಿ ಉಣ್ಣೆಗೆ ಬೆಲೆ ಇಲ್ಲ. ಉಣ್ಣೆ ಸಂಸ್ಕರಣೆ ಮತ್ತು ಬಳಕೆ ಘಟಕಗಳು ಸ್ಥಾಪನೆ ಆಗಬೇಕಾಗಿದೆ.

**ಇ. ಮಾಂಸದ ಮಾರುಕಟ್ಟೆ-ಮಧ್ಯವರ್ತಿಗಳ ಮರ್ಜಿಯಲ್ಲಿ :**

ಕಂಪ್ಯೂಟರ್ ಯುಗದಲ್ಲಿ ಮಧ್ಯವರ್ತಿಗಳ ಹಾವಳಿ ತಪ್ಪಿಲ್ಲ. ರಾಜ್ಯದಲ್ಲಿ ಮಾಂಸದ ಮಾರುಕಟ್ಟೆ ಸಂಪೂರ್ಣವಾಗಿ ಮಧ್ಯವರ್ತಿಗಳ ಹಿಡಿತದಲ್ಲಿದೆ. ಇದರಿಂದಾಗಿ ಉತ್ಪಾದಕನಿಗೆ ಕಡಿಮೆ ಲಾಭಾಂಶ ಮತ್ತು ದಲ್ಲಾಳಿಗೆ ಅಧಿಕ ಲಾಭ ದೊರೆಯುತ್ತಿದೆ. ಈವರೆಗೆ ಒಂದು ವ್ಯವಸ್ಥಿತ ಮಾರುಕಟ್ಟೆ ವ್ಯವಸ್ಥೆ ಸ್ಥಾಪನೆ ಆಗಿಲ್ಲ. ಆದರೆ ಈಗ ಪ್ರಯತ್ನ ಪ್ರಾರಂಭವಾಗಿದೆ ಪ್ರತಿಫಲ ಕಾದುನೋಡಬೇಕಾಗಿದೆ.

**ಈ. ಅಲೆಮಾರಿ ಕುರಿಗಾರರಿಗೆ ಮೂಲ ಸೌಲಭ್ಯಗಳ ಕೊರತೆ :**

ಈವರೆಗೆ ಕುರಿಗಳಿಗೆ ಪ್ರಾಮುಖ್ಯತೆ ಕೊಡುತ್ತಿದ್ದ ನಾವು ಅವುಗಳನ್ನು ಜೋಪಾನ ಮಾಡಲು ಹಗಲಿರುಳು ಕಾಡಿನಲ್ಲಿ ಜೀವನ ಕಳೆಯುವ ಕುರಿಗಾರನ ಕುಟುಂಬದ ಕನಿಷ್ಟ ಅವಶ್ಯಕತೆಗಳು ಮತ್ತು ಕುರಿಗಳು ಎದುರಿಸುವ ವಿಪತ್ತುಗಳ ಕಡೆ ಗಮನ ಹರಿಸಿಲ್ಲ. ಕುರಿಗಳಿಗೆ ಆಹಾರ, ನೀರು, ಸುರಕ್ಷತೆ ಮತ್ತು ಅಲೆಮಾರಿ ಕುರಿಗಾರರಿಗೆ ಸಾಮಾಜಿಕ ಭದ್ರತೆ, ಶಿಕ್ಷಣ, ವಿಮೆ ಮುಂತಾದ ವ್ಯವಸ್ಥೆಗಳನ್ನು ಕಲ್ಪಿಸಬೇಕಾಗಿದೆ.

ಕುರಿ ಸಂಗೋಪನೆ ಅಗತ್ಯಗಳನ್ನು ಅರಿತಿರುವ ಸರ್ಕಾರ ವಿಫಲತೆಯನ್ನರಿತಿದ್ದು ಇದನ್ನು ಸಾಫಲ್ಯಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳುವ ದಾರಿಯಲ್ಲಿ ದಿಟ್ಟ ಹೆಜ್ಜೆ ಇಟ್ಟಿದೆ.

## ೩. ಗ್ರಾಮೀಣ ಪ್ರದೇಶದಲ್ಲಿ ಜನರ ಆರ್ಥಿಕ ಶಕ್ತಿಯನ್ನು ಹೆಚ್ಚಿಸಲು ಕುರಿ ಸಂಗೋಪನೆಯಿಂದ ಹೇಗೆ ಸಾಧ್ಯ ?

ಕರ್ನಾಟಕ ಕೃಷಿ ಪ್ರಧಾನ ರಾಜ್ಯ. ಶೇ. ೭೫ರಷ್ಟು ಜನಸಂಖ್ಯೆ ಗ್ರಾಮೀಣ ಪ್ರದೇಶದಲ್ಲಿದ್ದು ಇದು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಕೃಷಿಯನ್ನೇ ಅವಲಂಬಿಸಿದೆ. ಭೂಸುಧಾರಣೆ ಕಾಯ್ದೆ ಜಾರಿಗೆ ಬಂದ ನಂತರ ರಾಜ್ಯ ಹಾಗೂ ದೇಶದಲ್ಲಿ ದೊಡ್ಡ ಹಿಡುವಳಿದಾರರು ಕಡಿಮೆಯಾಗಿ ಸಣ್ಣ ಹಿಡುವಳಿದಾರರ ಸಂಖ್ಯೆ ಹೆಚ್ಚಾಗಿದೆ. ಸಣ್ಣ ರೈತರು, ಅತಿ ಸಣ್ಣ ರೈತರು, ಕೃಷಿ ಕಾರ್ಮಿಕರು ಮತ್ತು ಕೃಷಿಯೇತರ ಕಾರ್ಮಿಕರು ಗ್ರಾಮೀಣ ಸಮಾಜದ ಬಹು ಮುಖ್ಯ ಭಾಗವನ್ನು ಪ್ರತಿನಿಧಿಸುತ್ತಾರೆ. ಈ ವಿಭಾಗಗಳ ಜನತೆ ಬಹುತೇಕ ಅನಕ್ಷರಸ್ಥರು ಹಾಗೂ ಕಡುಬಡವರು. ಸುರಕ್ಷಿತ ಸಮಾಜ ಶಹರುಗಳಲ್ಲಿ ಉತ್ತಮ ಉದ್ಯೋಗಗಳಲ್ಲಿ ಮೋಜು ಮಾಡಿದರೆ ಗ್ರಾಮೀಣ ಸಮಾಜ ಅನಕ್ಷರತೆ, ನಿರುದ್ಯೋಗ ಸಮಸ್ಯೆಗೆ ತುತ್ತಾಗಿದೆ. ಇದಕ್ಕೆ ಕಾರಣ ನಮ್ಮ ಕೃಷಿಯ ಶೇ. ೮೫ ಭಾಗ ಮಳೆ ಆಧಾರಿತವಾಗಿದೆ. ಅಕಾಲಿಕ ಮಳೆ, ಅನಾವೃಷ್ಟಿ, ಅತಿವೃಷ್ಟಿಯಂತಹ ಪ್ರಕೃತಿ ವಿಕೋಪಗಳಿಂದಾಗಿ ಮಳೆ ಆಧಾರಿತ ಕೃಷಿ ಅನಿಶ್ಚಿತವಾಗಿದೆ. ಇದರಿಂದ ರೈತನಿಗೆ ನಿರಂತರ ಆದಾಯ ಮರೀಚಿಕೆಯಾಗಿದೆ. ಬೆಳೆ ಬೆಳೆಯಲು ಮಾಡಿದ ಸಾಲ, ತೀರಿಸಲಾಗದ ಬಡ್ಡಿಯ ಹೊರೆ,

ಸಾಮಾಜಿಕ ಕಟ್ಟುಪಾಡುಗಳ ನಡುವೆ ನಲುಗಿದ ರೈತ ಆತ್ಮಹತ್ಯೆಗೆ ಶರಣು ಹೋಗುತ್ತಿರುವುದು, ಸ್ವತಂತ್ರ ಭಾರತದ ಅರ್ಧ ದಶಕ ಇತಿಹಾಸದಲ್ಲಿ ಒಂದು ಕಪ್ಪು ಚುಕ್ಕೆಯಾಗಿ ಉಳಿಯಲಿದೆ. ಇದಕ್ಕೆ ಪರಿಹಾರವೇ ಪರ್ಯಾಯ ಆರ್ಥಿಕ ಮೂಲಗಳ ಅವಲಂಬನೆ. ಗ್ರಾಮೀಣ ಜನರು ಶೈಕ್ಷಣಿಕವಾಗಿ ಹಿಂದುಳಿದಿರುವ ಕಾರಣ ಅವರಿಗೆ ಪಶು ಸಂಗೋಪನೆ ಒಂದು ಸೂಕ್ತ ಪೂರಕ ಆದಾಯದ ಮೂಲವಾಗಬಹುದು.

ಕುರಿ ಸಾಕಾಣಿಕೆಗಾಗಿ ಯಾವುದೇ ನಿಪುಣತೆ ಅವಶ್ಯಕತೆ ಇಲ್ಲ ಮತ್ತು ಅತ್ಯಂತ ಕಡಿಮೆ ಮಳೆ ಬೀಳುವ ಪ್ರದೇಶಗಳಲ್ಲಿ ಚೆನ್ನಾಗಿ ಹೊಂದಿಕೊಳ್ಳುವ ಗುಣವನ್ನು ಹೊಂದಿದೆ. ಕೃಷಿ ಕಾರ್ಮಿಕರು ಮತ್ತು ಸಣ್ಣ ಹಿಡುವಳಿದಾರರು ತಮ್ಮ ಚಟುವಟಿಕೆಗಳೊಂದಿಗೆ ಕುರಿ ಸಂಗೋಪನೆಯನ್ನು ಅಳವಡಿಸಿಕೊಳ್ಳುವುದರಿಂದ ವರ್ಷದಲ್ಲಿ ನಿರಂತರ ಆದಾಯ ಪಡೆಯುವ ಮೂಲಕ ತಮ್ಮ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳಬಹುದಾಗಿದೆ. ಆರ್ಥಿಕ ಸಬಲತೆ ಮನೋಸ್ಥೈರ್ಯವನ್ನು ಹೆಚ್ಚಿಸುವ ಕಾರಣ ಆತ್ಮಹತ್ಯಾ ಮನೋಭಾವವನ್ನು ತೊಡೆದುಹಾಕಿ ನೆಮ್ಮದಿಯ ಜೀವನವನ್ನು ನಡೆಸಲು ಕೃಷಿಕನಿಗೆ ಸಹಕಾರಿಯಾಗಲಿದೆ. ಮಾರುಕಟ್ಟೆಯಲ್ಲಿ ಹೆಚ್ಚುತ್ತಿರುವ ಮಾಂಸದ ಬೇಡಿಕೆ ಮತ್ತು ಜನಸಂಖ್ಯೆಗೆ ಅನುಗುಣವಾಗಿ ಲಭ್ಯವಾಗದ ಮಾಂಸದ ಪ್ರಮಾಣ ಇವುಗಳನ್ನು ಗಮನಿಸಿದಾಗ ಕುರಿಸಂಗೋಪನೆ ಗ್ರಾಮೀಣ ಜನರಿಗೆ ಒಂದು ಆಶಾದಾಯಕ ಲಾಭದಾಯಕ ಉಪಉದ್ಯಮವಾಗಲಿದೆ.

ಗ್ರಾಮೀಣ ಜನರಿಗೆ ೧೦+೧ ಅಥವಾ ೨೦+೧ ಗಾತ್ರದ ಕುರಿ ಘಟಕವನ್ನು ಸಾಮಾಜಿಕ ಆರ್ಥಿಕ ಕಾರ್ಯಕ್ರಮಗಳ ಮೂಲಕ ಮತ್ತು ಹಣಕಾಸು ಸಂಸ್ಥೆಗಳಿಂದ ವಿತರಿಸುವ ಮೂಲಕ ಮತ್ತು ರೈತರನ್ನು ವೈಜ್ಞಾನಿಕ ಕುರಿಸಾಕಾಣಿಕೆಯಲ್ಲಿ ತರಬೇತಿಗೊಳಿಸುವ ಮೂಲಕ ರೈತರ ಆದಾಯ ವೃದ್ಧಿಗೊಳಿಸಬಹುದಾಗಿದೆ.

ಹೆಣ್ಣು ಕುರಿಗಳು ೨ ವರ್ಷದಲ್ಲಿ ೩ ಬಾರಿ ಮರಿ ಹಾಕುತ್ತವೆ. ಶೇ. ೮೦ ಫಲಪ್ರದವಾಗುತ್ತವೆ. ಎರಡು ವರ್ಷದಲ್ಲಿ ೨೪ ಮರಿಗಳು ಹುಟ್ಟಲಿದ್ದು ಇವುಗಳಲ್ಲಿ ಶೇ. ೫೦ ಹೆಣ್ಣು ಮತ್ತು ಶೇ. ೫೦ಗಂಡು ಮರಿಗಳಿರುತ್ತವೆ. (ಪ್ರತಿ ಮರಿಗೆ ರೂ. ೧೦೦೦ ದಂತೆ ಗಂಡು ಮತ್ತು ಹೆಣ್ಣು ಮರಿಗಳ ಮಾರಾಟ ಮತ್ತು ಗೊಬ್ಬರದ ಮಾರಾಟದಿಂದ ಅಂದರೆ ಪ್ರತಿ ಕುರಿಗೆ ೧ ದಿನಕ್ಕೆ ೨೫೦ ಗ್ರಾಂನಂತೆ ಒಟ್ಟು ೨.೭೫ ಟನ್ ಪ್ರತಿ ಟನ್‌ಗೆ ರೂ. ೫೦೦) ಒಟ್ಟು ರೂ. ೧೩,೩೭೫ ಗಳ ಆದಾಯವಿದ್ದು ಆವರ್ತಕ ವೆಚ್ಚ ರೂ. ೪,೫೦೦- ಗಳನ್ನು ಕಳೆದು ರೂ. ೮,೮೭೫/- ಗಳ ನಿವ್ವಳ ವಾರ್ಷಿಕ ಲಾಭ ದೊರೆಯುತ್ತದೆ.

ಆದ್ದರಿಂದ ಕುರಿ ಸಂಗೋಪನೆ ಗ್ರಾಮೀಣ ಜನರ ಆರ್ಥಿಕ ಶಕ್ತಿಯನ್ನು ಹೆಚ್ಚಿಸುವಲ್ಲಿ ಸಹಕಾರಿಯಾಗುವುದು.

## ೪. ಕುರಿಸಾಕಾಣಿಕೆ ಉದ್ಯಮವನ್ನು ಸಹಕಾರಿ ತತ್ವದಲ್ಲಿ ಅಳವಡಿಸುವುದು ಸಾಧ್ಯವೇ ?

ಒಗ್ಗಟ್ಟಿನಲ್ಲಿ ಬಲವಿದೆ, ಸಂಘಟನೆಯಲ್ಲಿ ಶಕ್ತಿಯಿದೆ ಎನ್ನುವ ಮಾತು ಸತ್ಯಕ್ಕೆ ಸನಿಹವಾದದ್ದು. ಸಹಕಾರಿ ರಂಗ ಸಮಾಜದ ಆರ್ಥಿಕ ಮಟ್ಟದ ಸುಧಾರಣೆಯಲ್ಲಿ ನಿರ್ವಹಿಸಿರುವ ಮುಖ್ಯವಾದ ಪಾತ್ರ ಎಲ್ಲರಿಗೂ ತಿಳಿದ ವಿಷಯವಾಗಿದೆ. ಸಹಕಾರಿ ಆಂದೋಲನದ ಜನಕ ಡಾ। ಕುರಿಯನ್ ಮತ್ತು ಅವರು ಹುಟ್ಟುಹಾಕಿದ ಅಮುಲ್ ಇದಕ್ಕೆ ಜೀವಂತ ನಿದರ್ಶನ. 'ಅಮುಲ್ ಮಾದರಿ' ಎಂದೇ ವಿಶ್ವವಿಖ್ಯಾತವಾಗಿರುವ ಈ ಸಹಕಾರಿ ತತ್ವ ಎಲ್ಲಾ ರಂಗಗಳಿಗೂ ಸೂಕ್ತವಾಗಿದೆ. ಈ ಮಾದರಿಯಲ್ಲಿ ಕುರಿಸಾಕಾಣಿಕೆಯ ಉದ್ಯಮವನ್ನು ಸಹಕಾರಿ ತತ್ವದ ಮೇಲೆ ಅಳವಡಿಸಲು ಸಾಧ್ಯವಿದೆ.

ಸಹಕಾರಿ ತತ್ವವನ್ನು ಕುರಿಸಂಗೋಪನೆಗೆ ವ್ಯವಸ್ಥಿತವಾಗಿ ಅಳವಡಿಸುವ ಹೆಚ್ಚು ಅವಕಾಶಗಳಿವೆ. ಸಹಕಾರ ತತ್ವದ ಆಧಾರದ ಮೇರೆಗೆ ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮವು ಸ್ಥಾಪಿತವಾಗಿ ಕುರಿಕಾರರು ಹಾಗೂ ಕುರಿ ಅಭಿವೃದ್ಧಿಗೆ ಆರು ಆಕಾರಗಳ ಕಾರ್ಯಕ್ರಮಗಳನ್ನು ರೂಪಿಸಿದೆ ಹಾಗೂ ಈಗಾಗಲೇ ತ್ವರಿತ ಕ್ರಮ ಜರುಗಿಸಿದೆ. ರಾಜ್ಯದಲ್ಲಿ ಕುರಿಸಂಖ್ಯೆಯ ಆಧಾರದ ಮೇಲೆ ಒಟ್ಟು ೨೦೦ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳನ್ನು ಸ್ಥಾಪಿಸುವ ಗುರಿ ಹೊಂದಲಾಗಿದ್ದು ಈವರೆಗೆ ೧೪೪ ಸಹಕಾರಿ ಸಂಘಗಳನ್ನು ಸ್ಥಾಪಿಸಲಾಗಿದೆ. ಈ ಸಹಕಾರಿ ಸಂಘಗಳು ಸಹಕಾರಿ ಕಾಯ್ದೆ ಅಡಿಯಲ್ಲಿ ರಾಜ್ಯ ಸಹಕಾರ ಇಲಾಖೆಯಲ್ಲಿ ನೋಂದಾಯಿಸಿ ನಂತರ ಕುರಿ ಅಭಿವೃದ್ಧಿ ನಿಗಮದ ಮನ್ನಣೆಯನ್ನು ಪಡೆದಿದೆ. ನಿಗಮದಲ್ಲಿ ನೋಂದಾಯಿತವಾದ ಸಹಕಾರಿ ಸಂಘಗಳಿಗೆ ನಿಗಮದ ವತಿಯಿಂದ ಪ್ರತಿ ಸಂಘಕ್ಕೆ ರೂ. ೧೦,೦೦೦ ದಂತೆ ಶೇರು ಬಂಡವಾಳವನ್ನು ಕೊಡುತ್ತಿದ್ದು ಈವರೆಗೆ ೭೬ ಸಂಘಗಳಿಗೆ ಶೇರು ಬಂಡವಾಳ ಬಿಡುಗಡೆ ಮಾಡಲಾಗಿದೆ. ಈ ಸಹಕಾರಿ ಕ್ಷೇತ್ರದಲ್ಲಿ ತಾಲ್ಲೂಕು ಮಟ್ಟ ಜಿಲ್ಲಾ ಮಟ್ಟದ ಸಂಘಗಳನ್ನು ಮತ್ತು ರಾಜ್ಯಮಟ್ಟದ

ಒಕ್ಕೂಟಗಳನ್ನು ಸಂಘಟಿಸಲು ಉದ್ದೇಶಿಸಲಾಗಿದೆ. ಈ ಸಹಕಾರಿ ಸಂಘಗಳ ಮುಖ್ಯ ಉದ್ದೇಶ ಕುರಿಗಾರರು ಉತ್ಪಾದಿಸುವ ಕುರಿ, ಉಣ್ಣೆ, ಮಾಂಸ, ಚರ್ಮ ಮುಂತಾದ ಉತ್ಪನ್ನಗಳಿಗೆ ವ್ಯವಸ್ಥಿತ ಮಾರುಕಟ್ಟೆ ಕಲ್ಪಿಸಲು ಹೋಬಳಿ, ತಾಲ್ಲೂಕು ಮತ್ತು ಜಿಲ್ಲಾ ಕೇಂದ್ರಗಳಲ್ಲಿ ಸಂಘಗಳನ್ನು ಹಾಗೂ ರಾಜ್ಯ ಒಕ್ಕೂಟಗಳ ಮೂಲಕ ಯೋಜಿಸುವ ಉದ್ದೇಶ ಹೊಂದಲಾಗಿದೆ. ಕುರಿಗಾರರನ್ನು ಮಧ್ಯವರ್ತಿಯ ಹಿಡಿತದಿಂದ ಮುಕ್ತಗೊಳಿಸಲು ಕುರಿ ಮತ್ತು ಕುರಿ ಉತ್ಪನ್ನಗಳಿಗೆ ವೈಜ್ಞಾನಿಕ ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸಲು ಯೋಜಿಸಲಾಗಿದ್ದು, ಇದಕ್ಕಾಗಿ ನಿಗಮವು ರೂ. ೧೦೦ ಲಕ್ಷ ನಿಗದಿಗೊಳಿಸಿದ್ದು, ಈಗಾಗಲೇ ಕಾರ್ಯ ಪ್ರಾರಂಭವಾಗಿದೆ. ಈ ಯೋಜನೆಯಲ್ಲಿ ಕುರಿಗಾರರು ಉತ್ಪಾದಿಸುವ ಕುರಿ ಮತ್ತು ಮೇಕೆಗಳಿಂದ ಬರುವ ಉತ್ಪನ್ನಗಳನ್ನು ಸಂಘಗಳ ಮೂಲಕ ಖರೀದಿಸಿ ಉತ್ತಮ ಬೇಡಿಕೆ ಇರುವ ಸ್ಥಳಗಳಿಗೆ ಸಾಗಿಸಿ ನಿಗಮದ ವತಿಯಿಂದ ಮಾರಾಟ ಮಾಡಿ ಉತ್ಪಾದಕರಿಗೆ ಉತ್ತಮ ಬೆಲೆ ಮತ್ತು ಆದಾಯ ನೀಡುವ ಗುರಿ ಹೊಂದಲಾಗಿದೆ. ಕುರಿ ಮತ್ತು ಕುರಿ ಉತ್ಪನ್ನಗಳಿಗೆ ವೈಜ್ಞಾನಿಕ ಮಾರುಕಟ್ಟೆ ವ್ಯವಸ್ಥೆಯ ರೂಪರೇಷೆ ಮತ್ತು ಕಾರ್ಯತಂತ್ರದ ಸಂಕ್ಷಿಪ್ತ ವಿವರ ಈ ಕೆಳಕಂಡಂತಿದೆ.

## ೫. ಕುರಿ ಸಾಕಾಣಿಕೆಯನ್ನು ಸಹಕಾರಿ ತತ್ವದಲ್ಲಿ ನಡೆಸಲು, ಅಗತ್ಯ ಮಾರುಕಟ್ಟೆ ಜಾಲದ ಒಂದು ಸಂಕ್ಷಿಪ್ತ ವಿವರಣೆ :

ಕರ್ನಾಟಕ ರಾಜ್ಯದಲ್ಲಿ ಕುರಿ ಮತ್ತು ಕುರಿ ಉತ್ಪನ್ನಗಳಿಗೆ ವೈಜ್ಞಾನಿಕ ಮಾರುಕಟ್ಟೆ ಸೌಲಭ್ಯ ಒದಗಿಸಲು ಪ್ರಸ್ತಾವನೆ ಈ ರೀತಿಯಿದೆ.

**ಉದ್ದೇಶಗಳು :**

೧. ಕುರಿ ಮತ್ತು ಕುರಿ ಉತ್ಪನ್ನಗಳ ಸಂಗ್ರಹಣೆ ಮತ್ತು ಮಾರುಕಟ್ಟೆ ವೈಜ್ಞಾನಿಕ ಪದ್ದತಿಗಳನ್ನು ಆವಿಷ್ಕರಿಸುವುದು.

೨. ಕುರಿ ಸಾಕಾಣೆದಾರರು ಉತ್ಪಾದಿಸುವ ಉತ್ಪನ್ನಗಳಿಗೆ ಉತ್ತಮ ಮಾರುಕಟ್ಟೆ ದರ ದೊರಕಿಸುವುದು.

೩. ಕುರಿ ಮತ್ತು ಕುರಿ ಉತ್ಪನ್ನಗಳ ಮಾರಾಟ ವ್ಯವಸ್ಥೆಯಲ್ಲಿ ಮಧ್ಯವರ್ತಿಗಳನ್ನು ತಪ್ಪಿಸುವುದು.

೪. ಕುರಿ ಮತ್ತು ಕುರಿ ಉತ್ಪನ್ನಗಳ ಸಹಕಾರ ಸಂಘಗಳನ್ನು ಬಲಪಡಿಸುವುದು.

**ಉದ್ದೇಶಿತ ಕಾರ್ಯತಂತ್ರ :**

ಮಾಂಸಕ್ಕಾಗಿ ಕುರಿ ಮತ್ತು ಮೇಕೆಗಳ ಸಂಗ್ರಹಣೆ ಮತ್ತು ಮಾರಾಟ ಸದಸ್ಯತ್ವ ಹೊಂದಿರುವ ಕುರಿ ಸಾಕಣೆದಾರರಿಂದ ಕುರಿ ಮತ್ತು ಕುರಿ ಉತ್ಪನ್ನಗಳ ಸಹಕಾರ ಸಂಘಗಳ ಸ್ಥಾಪನೆ, ಸಂಘಗಳ ಮೂಲಕ ಕುರಿ ಮತ್ತು ಮೇಕೆಗಳನ್ನು ಅವುಗಳ ದೇಹ, ತೂಕ, ಆಧಾರ, ತಳಿ ಆರೋಗ್ಯಸ್ಥಿತಿ, ವಯಸ್ಸು, ಲಿಂಗ, ಮುಂತಾದ ಆಧಾರದ ಮೇಲೆ ವೈಜ್ಞಾನಿಕವಾಗಿ ನಿಗದಿಪಡಿಸಿದ ದರಗಳಲ್ಲಿ ಉದ್ದೇಶಿಸಲಾಗಿದೆ. ಸ್ಥಳೀಯ ಮಾರುಕಟ್ಟೆ ನಿಯೋಜಿತ ಮಾರುಕಟ್ಟೆ ಸಂಸ್ಥೆಯೊಂದಿಗೆ ನಿಗಮವು ಸಂಗ್ರಹಿಸಿದ ಕುರಿ ಮತ್ತು ಮೇಕೆಗಳನ್ನು ಮಾರಾಟ ಮಾಡಲು ಒಪ್ಪಂದ ಮಾಡಿಕೊಳ್ಳಲು ಉದ್ದೇಶಿಸಲಾಗಿದೆ. ಇದರಿಂದಾಗಿ ಕುರಿಗಾರರಿಗೆ ಅವರ ಉತ್ಪನ್ನಗಳಿಗೆ ನಿರಂತರವಾಗಿ ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸಿದಂತಾಗಿದೆ.

## ೬. ಕುರಿ ಅಭಿವೃದ್ಧಿ ನಿಗಮದ ಕಾರ್ಯಚಟುವಟಿಕೆಗಳು :

ಕರ್ನಾಟಕ ರಾಜ್ಯದ ಗ್ರಾಮೀಣ ಜನತೆಯ ಆರ್ಥಿಕ ಮಟ್ಟವನ್ನು ಸುಧಾರಿಸುವಲ್ಲಿ ಕುರಿ ಮತ್ತು ಮೇಕೆಗಳ ಸಂಗೋಪನೆ ಮತ್ತು ಕುರಿಗಾರರ ಸರ್ವತೋಮುಖ ಅಭಿವೃದ್ಧಿಯ ಮೇಲ್ವಿಚಾರಣೆಗಾಗಿ ಕರ್ನಾಟಕ ಸರ್ಕಾರವು ಕರ್ನಾಟಕ ಕುರಿ ಮತ್ತು ಕುರಿ ಉತ್ಪನ್ನಗಳ ಅಭಿವೃದ್ಧಿ ಮಂಡಳಿಯನ್ನು ೧೯೭೫ರಲ್ಲಿ ಸ್ಥಾಪಿಸಿತು. ಸ್ಥಾಪನಾ ದಿನದಿಂದ ೩೧-೦೩-೨೦೦೨ ರವರೆಗೆ ಮಂಡಳಿಯು ಕರ್ನಾಟಕದಲ್ಲಿ ಕುರಿ, ಮೇಕೆ ಸಂಗೋಪನಾ ಕಾರ್ಯದ ಸಮಗ್ರ ಅಭಿವೃದ್ಧಿಗಾಗಿ ತನ್ನನ್ನು ತಾನು ತೊಡಗಿಸಿಕೊಂಡು ಕರ್ನಾಟಕದ ಆರ್ಥಿಕ ಅಭಿವೃದ್ಧಿಗೆ ಅಪಾರವಾದ ಕೊಡುಗೆಯನ್ನು ನೀಡಿದೆ. ಮಂಡಳಿಯನ್ನು ಬಲಪಡಿಸಿ ಆರ್ಥಿಕವಾಗಿ ಸ್ವಾವಲಂಬಿಯಾಗಿಸಲು ಮಂಡಳಿಯನ್ನು ದಿನಾಂಕ ೦೧-೦೪-೨೦೦೨ರಿಂದ ಜಾರಿಗೆ ಬರುವಂತೆ ನಿಗಮವನ್ನಾಗಿ ಪರಿವರ್ತಿಸಲಾಗಿದೆ. ನಿಗಮವು ರಾಜ್ಯದಲ್ಲಿ ಅನೇಕ ಪ್ರಗತಿಪರ ಜನಪರ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವ ಮಹತ್ವದ ಪಾತ್ರವನ್ನು ವಹಿಸಿದೆ.

## ನಿಗಮದ ಉದ್ದೇಶಗಳು :

೧. ಕುರಿ ಸಾಕಾಣಿಕೆ, ವ್ಯವಸ್ಥಾಪನೆ ಮತ್ತು ಮೇಯಿಸುವುದು. ೨. ಕುರಿ ತಳಿ ಸಂವರ್ಧನೆ.

೩. ಕುರಿಗಳ ಉಣ್ಣೆ ಕಟಾವಣೆ. ೪. ಕುರಿಗಳ ಉಣ್ಣೆಯಿಂದ ಅಥವಾ ಭಾಗಶಃ ಉಣ್ಣೆಯಿಂದ ಸರಕುಗಳ ತಯಾರಿಕೆ.

೫. ಕುರಿ, ಉಣ್ಣೆ, ಮಾಂಸ ಮತ್ತು ಇವುಗಳ ಉಪ ಉತ್ಪನ್ನಗಳು ಮತ್ತು ಕುರಿ ಆಹಾರ ಇವುಗಳ ಕ್ರಯ-ವಿಕ್ರಯ.

## ನಿಗಮದ ಕಾರ್ಯ ಚಟುವಟಿಕೆಗಳು :

ನಿಗಮವು ರಾಜ್ಯದ ಕುರಿ, ಮೇಕೆ ಸಂಗೋಪನಾ ಕಾರ್ಯದ ಸರ್ವತೋಮುಖ ಅಭಿವೃದ್ಧಿಗಾಗಿ ಹಲವಾರು ಕಾರ್ಯಚಟುವಟಿಕೆಗಳನ್ನು ಕೈಗೊಂಡಿದೆ.

೧. ಕುರಿಗಳ ಆರೋಗ್ಯ ರಕ್ಷಣೆ, ೨. ಕಾರ್ಪೆಟ್ ನೇಯ್ಗೆ ತರಬೇತಿ, ೩. ಯಾಂತ್ರೀಕೃತ ಉಣ್ಣೆ ಕಟಾವಣೆ ತರಬೇತಿ, ೪. ವೈಜ್ಞಾನಿಕ ಕುರಿ ಸಾಕಾಣಿಕೆಯಲ್ಲಿ ರೈತರಿಗೆ ತರಬೇತಿ, ೫. ತಳಿ ಅಭಿವೃದ್ಧಿ, ೬. ಕುರಿ ಸಾಕಾಣಿಕೆದಾರರ ಸಹಕಾರ ಸಂಘಗಳ ಸ್ಥಾಪನೆ, ೭. ಉಣ್ಣೆ ಸಂಗ್ರಹಣಾ ಗೋದಾಮುಗಳ ಸ್ಥಾಪನೆ, ೮. ಆಡಳಿತ ಬಲವರ್ಧನೆ, ೯. ಕುರಿ ಸಂವರ್ಧನಾ ಕೇಂದ್ರಗಳ ನಿರ್ವಹಣೆ, ೧೦. ಕುರಿ ಮತ್ತು ಉಣ್ಣೆ ಅಭಿವೃದ್ಧಿ ಯೋಜನೆ- ಕೋಲಾರ, ರಾಣೆಬೆನ್ನೂರು, ೧೧. ಸಮಗ್ರ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಯೋಜನೆ, ೧೨. ನಬಾರ್ಡ್ ಸಹಾಯದ ಯೋಜನೆ, ೧೩. ಕರ್ನಾಟಕದಲ್ಲಿ ಕುರಿ ಅಭಿವೃದ್ಧಿಗಾಗಿ ಬಡತನ ರೇಖೆಯಿಂದ ಕೆಳಗಿರುವ ರೈತರಿಗಾಗಿ ಅಂಚಿನ ಹಣದ ಯೋಜನೆ, ೧೪. ಕುರಿ ಮತ್ತು ಕುರಿ ಉತ್ಪನ್ನಗಳಿಗೆ ವೈಜ್ಞಾನಿಕ ಮಾರುಕಟ್ಟೆ ಅಭಿವೃದ್ಧಿ ಯೋಜನೆ, ೧೫. ಮೇಕೆ ಸಂವರ್ಧನಾ ಕೇಂದ್ರಗಳ ಸ್ಥಾಪನೆ.

### ಅ. ಕುರಿಗಳ ಆರೋಗ್ಯ ರಕ್ಷಣೆ :

ಕುರಿಗಳು ನೆಲಕಚ್ಚಿ ಮೇಯುವುದರಿಂದ ಮಣ್ಣಿನ ನಿಕಟ ಸಂಪರ್ಕದಿಂದಾಗಿ, ಹಲವಾರು ಸೂಕ್ಷ್ಮಾಣು ಜೀವಿಗಳಿಂದ ಸಾಂಕ್ರಾಮಿಕ ಮತ್ತು ಇತರೆ ರೋಗಗಳಿಗೆ ತುತ್ತಾಗುತ್ತವೆ. ಮಣ್ಣಿನಲ್ಲಿ ಕೂಡಿರುವ ಪರೋಪಜೀವಿಗಳ ಮರಿಗಳು ಮತ್ತು ಮೊಟ್ಟೆಗಳು ಕುರಿಗಳ ದೇಹವನ್ನು ಬಾಯಿಯ ಮೂಲಕ ನಿರಂತರ ಪ್ರವೇಶಿಸುವುದರಿಂದ ಕುರಿಗಳು ಮೇಲಿಂದ ಮೇಲೆ ಒಳ ಪರೋಪಜೀವಿಗಳ ಬಾಧೆಗೆ ತುತ್ತಾಗುತ್ತವೆ. ಇದರಿಂದ ಕುರಿಗಳ ರೋಗನಿರೋಧಕ ಶಕ್ತಿ ಕ್ಷೀಣಿಸಿ ಅವುಗಳು ಇತರೆ ಸಾಂಕ್ರಾಮಿಕ ಮಾರಣಾಂತಿಕ ರೋಗಗಳಿಗೆ ತುತ್ತಾಗುತ್ತವೆ. ಅಲ್ಲದೆ ದೇಹದ ತೂಕ ಕಡಿಮೆಯಾಗಿ ಮಾಂಸ ಮತ್ತು ಉಣ್ಣೆ, ಚರ್ಮ ಮತ್ತು ಇತರೇ ಉತ್ಪನ್ನಗಳ ಪ್ರಮಾಣ, ಗುಣಮಟ್ಟ ಇಳಿಮುಖವಾಗುವುದರಿಂದ ಕುರಿಗಾರನಿಗೆ ಮತ್ತು ರಾಜ್ಯದ ಆರ್ಥಿಕ ಅಭಿವೃದ್ಧಿಗೆ ಅಪಾರ ನಷ್ಟ ಸಂಭವಿಸುತ್ತದೆ. ಆದ್ದರಿಂದ ಕುರಿಗಳ ಆರೋಗ್ಯ ರಕ್ಷಣೆಯಲ್ಲಿ ಪ್ರಮುಖವಾದದ್ದು ಒಳಪರೋಪ ಜೀವಿಗಳ ನಿಗ್ರಹ. ಇದಕ್ಕಾಗಿ ನಿಗಮವು ಜಂತುನಾಶಕ ಔಷಧಿಗಳನ್ನು ಖರೀದಿಸಿ ಕುರಿಗಾರರಿಗೆ ನಿರಂತರವಾಗಿ ಉಚಿತವಾಗಿ ನೀಡುತ್ತಾ ಬಂದಿದೆ. ಇದು ಒಂದು ಜನಪರ ಮತ್ತು ಜನಾನುರಾಗಿ ಕಾರ್ಯಕ್ರಮವಾಗಿದೆ.

ಕುರಿಗಳನ್ನು ಕಾಡುವ ಇತರೆ ಸಾಂಕ್ರಾಮಿಕ ರೋಗಗಳಾದ ಪಿಪಿಆರ್, ಕರುಳುಬೇನೆ, ಸಿಡುಬು, ನೀಲಿನಾಲಿಗೆ ರೋಗ, ಗಂಟಲು ಬೇನೆ ಮುಂತಾದವುಗಳಿಗೆ ಪರಿಣಾಮಕಾರಿಯಾದ ಮುಂಜಾಗ್ರತಾ ಲಸಿಕೆಗಳು ಲಭ್ಯವಿದ್ದು, ಇವುಗಳನ್ನು ನಿಗದಿತ ಅವಧಿಯಲ್ಲಿ ಕುರಿಗಳಿಗೆ ಕೊಡಿಸುವುದರಿಂದ ರೋಗಗಳನ್ನು ತಡೆಗಟ್ಟಬಹುದು. ಲಸಿಕೆಗಳು ಪಶು ಆರೋಗ್ಯ ಮತ್ತು ಜೈವಿಕ ಸಂಸ್ಥೆ ಬೆಂಗಳೂರಿನಲ್ಲಿ ಕಡಿಮೆ ವೆಚ್ಚದಲ್ಲಿ ಲಭ್ಯವಿವೆ.

ಇಡೀ ಭಾರತ ದೇಶದಲ್ಲಿ ಕುರಿಗಾರರಿಗೆ ಸಿಂಹಸ್ವಪ್ನವಾಗಿದ್ದ ನೀಲಿನಾಲಿಗೆ ರೋಗವನ್ನು ವಿನಾಶಕಾರಿ ರೋಗವೆಂದೇ ಕರೆಯಲಾಗಿತ್ತು. ಈ ರೋಗಕ್ಕೆ ಯಾವುದೇ ಮುಂಜಾಗ್ರತಾ ಲಸಿಕೆ ಲಭ್ಯವಿರದ ಕಾರಣ ಲಕ್ಷ ಸಂಖ್ಯೆಯಲ್ಲಿ ಕುರಿಗಳು ಮರಣ ಹೊಂದುತ್ತಿದ್ದದ್ದು ಸಾಮಾನ್ಯ. ಆದರೆ ನಿಗಮವು ಪಶು ಆರೋಗ್ಯ ಮತ್ತು ಜೈವಿಕ ಸಂಸ್ಥೆಯ ಸಹಯೋಗದೊಂದಿಗೆ ನೀಲಿನಾಲಿಗೆ ರೋಗಕ್ಕೆ ಮುಂಜಾಗ್ರತಾ ಲಸಿಕೆಯನ್ನು ಆವಿಷ್ಕಾರಗೊಳಿಸುವಲ್ಲಿ ಯಶಸ್ವಿಯಾಗಿದ್ದು, ಇದು ದೇಶದಲ್ಲೇ ಪ್ರಥಮ ಬಾರಿಗೆ ಕರ್ನಾಟಕಕ್ಕೆ ಹೆಗ್ಗಳಿಕೆಯನ್ನು ತಂದಿದೆ.

### ಆ. ಕಾರ್ಪೆಟ್ ನೇಯ್ಗೆ ತರಬೇತಿ :

ರಾಜ್ಯದ ಪ್ರಾಥಮಿಕ ಮತ್ತು ನಗರ ಪ್ರದೇಶಗಳಲ್ಲಿರುವ ವಿದ್ಯಾವಂತ ನಿರುದ್ಯೋಗಿ ಯುವಕ ಯುವತಿಯರನ್ನು ಸ್ವಾವಲಂಬಿಗಳನ್ನಾಗಿಸುವ ಉದ್ದೇಶದಿಂದ ನಿಗಮದ ಅಧೀನದಲ್ಲಿ ಏಳು ಕಾರ್ಪೆಟ್ ನೇಯ್ಗೆ ತರಬೇತಿ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.

ಕೋಲಾರ, ಮುಳಬಾಗಿಲು, ಮೈಸೂರು, ರಾಣೆಬೆನ್ನೂರು, ಘಟಪ್ರಭಾ, ಗುಲಬರ್ಗಾ, ಹಾವೇರಿ ಕೇಂದ್ರದಲ್ಲಿ ಈ ಯೋಜನೆ ಅಡಿಯಲ್ಲಿ ಪ್ರತಿ ವರ್ಷ ೨೪ ಅಭ್ಯರ್ಥಿಗಳಿಗೆ ಉಣ್ಣೆಯಿಂದ ಕಾರ್ಪೆಟ್ ಮತ್ತು ಇತರೆ ವಸ್ತುಗಳನ್ನು ತಯಾರಿಸುವ ಕಲೆಯಲ್ಲಿ ತರಬೇತಿಯನ್ನು ೭ ತಿಂಗಳ ಕಾಲ ನೀಡಲಾಗುವುದು. ತರಬೇತಿಯ ಅವಧಿಯಲ್ಲಿ ಪ್ರತಿ ಅಭ್ಯರ್ಥಿಗೆ ಮಾಸಿಕ ರೂ. ೫೦೦ ಶಿಷ್ಯವೇತನ ಮತ್ತು ಇಬ್ಬರು ಬೋಧಕರಿಗೆ ಮಾಸಿಕ ರೂ. ೨೦೦೦ ಗೌರವಧನವನ್ನು ನೀಡಲಾಗುವುದು. ತರಬೇತಿಯ ನಂತರ ಅಭ್ಯರ್ಥಿಗಳು ತಮ್ಮ ಸ್ವಂತ ಉದ್ಯೋಗವನ್ನು ಪ್ರಾರಂಭಿಸಿ ಸ್ವಾವಲಂಬಿಗಳಾಗಬುಹುದು.

**ಇ. ಯಾಂತ್ರೀಕೃತ ಉಣ್ಣೆಯ ಕಟಾವಣೆ ತರಬೇತಿ :**

ಕುರಿಗಳ ಉಣ್ಣೆಯ ಗುಣಮಟ್ಟ ಮತ್ತು ಉಪಯುಕ್ತತೆಯನ್ನು ಉತ್ತಮಪಡಿಸುವ ಸಲುವಾಗಿ ಯಾಂತ್ರೀಕೃತ ಉಣ್ಣೆ ಕಟಾವಣೆ ಪರಿಣಾಮಕಾರಿ. ಈ ಚಟುವಟಿಕೆಯಲ್ಲಿ ಕುರಿಸಾಗಾಣಿಕೆಯಲ್ಲಿ ತೊಡಗಿರುವ ಕುಟುಂಬಗಳ ಯುವಕರಿಗೆ ಮತ್ತು ಯುವತಿಯರಿಗೆ ತರಬೇತಿಯನ್ನು ನೀಡುವ ಕಾರ್ಯಕ್ರಮವನ್ನು ನಿಗಮವು ಹಮ್ಮಿಕೊಂಡಿದೆ. ಈ ಯೋಜನೆಯನ್ನು ಕೇಂದ್ರೀಯ ಉಣ್ಣೆ ಅಭಿವೃದ್ಧಿ ಮಂಡಳಿಯ ಸಹಾಯದಿಂದ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ನಿಗಮದ ಅಧೀನದ ಕುರಿ ಸಂವರ್ಧನಾ ಕೇಂದ್ರ, ಕುಂದಾಪುರ, ಚಳ್ಳಕೆರೆ ಮತ್ತು ಉಳ್ಳವರ್ತಿ ಕೇಂದ್ರಗಳಲ್ಲಿ ಪ್ರತಿ ಕೇಂದ್ರದಲ್ಲಿ ಒಂದು ವರ್ಷದಲ್ಲಿ ೪೦ ಜನ ಅಭ್ಯರ್ಥಿಗಳಿಗೆ ೪ ತಿಂಗಳ ಅವಧಿಯ ತರಬೇತಿಯನ್ನು ನೀಡಲಾಗುತ್ತಿದೆ. ತರಬೇತಿಯ ಅವಧಿಯಲ್ಲಿ ಅಭ್ಯರ್ಥಿಗಳಿಗೆ ರೂ. ೧೦೦ ಮಾಸಿಕ ಶಿಷ್ಯವೇತನವನ್ನು ನೀಡಲಾಗುತ್ತದೆ.

**ಈ. ವೈಜ್ಞಾನಿಕ ಕುರಿ ಸಾಗಾಣಿಕೆಯಲ್ಲಿ ತರಬೇತಿ :**

ರಾಜ್ಯದಲ್ಲಿ ಕುರಿ ಸಂಗೋಪನೆಯಲ್ಲಿ ತೊಡಗಿರುವ ಕುರಿಗಾರರು ಪರಂಪರಾಗತ ಪದ್ಧತಿಗಳನ್ನು ಅಳವಡಿಸಿಕೊಂಡಿರುವುದರಿಂದ ಆರ್ಥಿಕ ಲಾಭ ಕಡಿಮೆ ಮಟ್ಟದಲ್ಲಿದೆ. ಇದನ್ನು ಉತ್ತಮಪಡಿಸುವ ದೃಷ್ಟಿಯಿಂದ ಕುರಿಗಾರರಿಗೆ ವೈಜ್ಞಾನಿಕ ಕುರಿ ಸಂಗೋಪನೆಯಲ್ಲಿ ತರಬೇತಿ ನೀಡುವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ. ನಿಗಮದ ಅಧೀನದ ಕುರಿ ಸಂವರ್ಧನಾ ಕೇಂದ್ರ, ಕುದಾಪುರ, ಚಳ್ಳಕೆರೆ ಮತ್ತು ಉಳ್ಳವರ್ತಿ ಈ ಕೇಂದ್ರಗಳಲ್ಲಿ ತರಬೇತಿ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಇಲ್ಲಿ ಪ್ರತಿ ತಂಡದಲ್ಲಿ ೨೦ ಜನರಂತೆ ೨ ದಿನದ ತರಬೇತಿಯನ್ನು ೨೦೦೩-೦೪ನೇ ಸಾಲಿನಲ್ಲಿ ೧೨೦೦ ಕುರಿಗಾರರಿಗೆ ತರಬೇತಿ, ಊಟ, ವಸತಿ ಮತ್ತು ಪ್ರಯಾಣ ಭತ್ಯೆಯ ಸೌಲಭ್ಯವನ್ನು ಕಲ್ಪಿಸಲಾಗಿದೆ.

**ಉ. ತಳಿ ಅಭಿವೃದ್ಧಿ :**

ರಾಜ್ಯದಲ್ಲಿ ಕಂಡುಬರುವ ಸ್ಥಳೀಯ ಜಾತಿಯ ಡೆಕ್ಕನಿ, ಬಳ್ಳಾರಿ, ಹಾಸನ, ಕೆಂಗುರಿ ತಳಿಯ ಕುರಿಗಳಲ್ಲಿ ದೇಹದ ತೂಕ ತುಲನಾತ್ಮವಾಗಿ ಕಡಿಮೆಯಿರುವುದರ ಜೊತೆಗೆ ಅವುಗಳಿಂದ ಬರುವ ಉಣ್ಣೆ ಒರಟಾಗಿದ್ದು ಉಣ್ಣೆಯ ಗೃಹ ಕೈಗಾರಿಕೆಗೆ ಯೋಗ್ಯವಾಗಿಲ್ಲ. ಕುರಿ ಉತ್ಪನ್ನಗಳ ಪ್ರಮಾಣ ಸಂಖ್ಯೆಗೆ ಹೋಲಿಸಿದಲ್ಲಿ ತುಲನಾತ್ಮಕವಾಗಿ ಗಣನೀಯವಾಗಿ ಕಡಿಮೆ ಇದೆ. ಆದ್ದರಿಂದ ಏಕಕಾಲದಲ್ಲಿ ಮಾಂಸ ಮತ್ತು ಉಣ್ಣೆ ಉತ್ಪಾದನೆಯ ಪ್ರಮಾಣ ಮತ್ತು ಗಣಮಟ್ಟವನ್ನು ಹೆಚ್ಚಿಸಲು ವಿದೇಶಿ ಮೂಲದ ರ್‍ಯಾಂಬುಲೇ ತಳಿಯ ಕುರಿಗಳನ್ನು ಸ್ಥಳೀಯ ಕುರಿಗಳೊಂದಿಗೆ ಸಂಕರಣಗೊಳಿಸುವ ಮಿಶ್ರತಳಿ ಕುರಿ ಅಭಿವೃದ್ಧಿಯ ಯೋಜನೆಯನ್ನು ನಿಗಮವು ಹಮ್ಮಿಕೊಂಡಿದೆ. ಈ ಯೋಜನೆ ಅಡಿ ನಿಗಮದ ಅಧೀನದ ಕುರಿ ಸಂವರ್ಧನಾ ಕೇಂದ್ರಗಳಲ್ಲಿ ಉತ್ಪಾದಿಸುವ ಮಿಶ್ರತಳಿ ರ್‍ಯಾಂಬುಲೇ ಟಗರುಗಳನ್ನು ಕುರಿಗಾರರಿಗೆ ನಿಗದಿತ ರಿಯಾಯಿತಿ ದರಗಳಲ್ಲಿ ಪೂರೈಸಲಾಗುತ್ತಿದೆ. ಇವುಗಳನ್ನು ಸ್ಥಳೀಯ ಕುರಿಗಳನ್ನು ಮೇಲ್ದರ್ಜೆಗೇರಿಸಲು ಉಪಯೋಗಿಸಲಾಗುತ್ತಿದೆ.

ವಿಶ್ವವಿಖ್ಯಾತ ಮಾಂಸದ ಕುರಿ ತಳಿ "ಬನ್ನೂರು ತಳಿ" ಇದು ಕರ್ನಾಟಕದ ಹೆಮ್ಮೆ. ಈ ಕುರಿಯು ತನ್ನ ರಸವತ್ತಾದ ರುಚಿಕರ ಮಾಂಸಕ್ಕಾಗಿ ವಿಶ್ವಖ್ಯಾತಿಯನ್ನು ಹೊಂದಿದೆ. ಈ ತಳಿಯನ್ನು ಸಂರಕ್ಷಿಸಿ ಸಂವರ್ಧನೆಗೊಳಿಸುವ ಸಲುವಾಗಿ ನಿಗಮವು ಮಂಡ್ಯ ಜಿಲ್ಲೆಯ ಧನಗೂರ ಗ್ರಾಮದಲ್ಲಿ ಬಂಡೂರು ಕುರಿ ತಳಿ ಸಂವರ್ಧನಾ ಕೇಂದ್ರವನ್ನು ಸ್ಥಾಪಿಸಿದೆ. ಇಲ್ಲಿ ಬಂಡೂರು ಶುದ್ಧತಳಿಯ ಟಗರುಗಳನ್ನು ಉತ್ಪಾದಿಸಿ ಕುರಿಗಾರರಿಗೆ ನಿಗದಿತ ದರಗಳಲ್ಲಿ ಒದಗಿಸಲಾಗುತ್ತಿದೆ.

ರೈತರು ಹಾಗೂ ಕುರಿ ಸಾಕಾಣಿಕೆದಾರರು ರ್‍ಯಾಂಬುಲೇ ಮಿಶ್ರತಳಿಯ ಟಗರುಗಳನ್ನು ಪ್ರತಿ ಕೆ.ಜಿ. ದೇಹ ತೂಕಕ್ಕೆ ರೂ. ೮೦-೦೦ರಂತೆಯೂ ಮತ್ತು ಬಂಡೂರು ಶುದ್ಧ ತಳಿಯ ಟಗರುಗಳನ್ನು ಪ್ರತಿ ಕೆ.ಜಿ.ಗೆ ರೂ. ೧೦೦-೦೦ ದರಗಳಲ್ಲೂ ಕೇಂದ್ರಗಳಿಂದ ಪಡೆಯಬಹುದಾಗಿದೆ.

**ಊ. ಕುರಿ ಸಾಕಾಣಿಕೆದಾರರ ಸಹಕಾರ ಸಂಘಗಳ ಸ್ಥಾಪನೆ :**

ಕರ್ನಾಟಕ ರಾಜ್ಯ ಕುರಿ ಉತ್ಪನ್ನಗಳ ಉತ್ಪಾದನೆಯಲ್ಲಿ ದೇಶದಲ್ಲಿ ಅಗ್ರಸ್ಥಾನದಲ್ಲಿದ್ದರೂ ರಾಜ್ಯದಲ್ಲಿ ಕುರಿ ಉತ್ಪನ್ನಗಳಿಗೆ ವ್ಯವಸ್ಥಿತವಾದ ಮಾರುಕಟ್ಟೆ ಸೌಲಭ್ಯಗಳ ಲಭ್ಯವಿರದ ಕಾರಣ ಕುರಿಗಾರನು ತನ್ನ ಉತ್ಪನ್ನಗಳಿಗೆ ಸೂಕ್ತ ಬೆಲೆ ದೊರಕದೆ ಮಧ್ಯವರ್ತಿಗಳ ಶೋಷಣೆಯಿಂದಾಗಿ ಸಂಕಷ್ಟದಲ್ಲಿದ್ದಾನೆ. ಈ ಕಾರಣದಿಂದಾಗಿ ಕುರಿಗಾರರನ್ನು ಮಧ್ಯವರ್ತಿಗಳ ಬಿಗಿಮುಷ್ಟಿಯಿಂದ ಪಾರಾಗಿಸಲು ಅಮುಲ್ ಮಾದರಿಯಲ್ಲಿ ಸಹಕಾರ ಆಂದೋಲನವನ್ನು ಕರ್ನಾಟಕದ ಕುರಿ ಸಂಗೋಪನಾ ಕ್ಷೇತ್ರದಲ್ಲಿ ಪ್ರಾರಂಭಿಸಲಾಗಿದೆ. ಪ್ರತಿ ೨೫೦೦ ಕುರಿಗಳಿಗೊಂದರಂತೆ ಒಂದು ಕುರಿಗಾರರ ಸಹಕಾರ ಸಂಘವನ್ನು ಸ್ಥಾಪಿಸುವ ಉದ್ದೇಶವನ್ನು ಹೊಂದಿದ್ದು ರಾಜ್ಯದಲ್ಲಿ ೨೦೦ ಸಹಕಾರ ಸಂಘಗಳ ಸ್ಥಾಪನೆಯ ಗುರಿ ಹೊಂದಲಾಗಿದೆ. ಈವರೆಗೆ ಸುಮಾರು ೧೪೪ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳನ್ನು ಸ್ಥಾಪಿಸಲಾಗಿದ್ದು, ಇವುಗಳಿಗೆ ಮೂಲಬಂಡವಾಳಕ್ಕಾಗಿ ತಲಾ ರೂ. ೧,೦೦೦-೦೦ ಮೊತ್ತವನ್ನು ನಿಗಮದಿಂದ ನೀಡಲಾಗುತ್ತಿದೆ. ಕುರಿ ಉತ್ಪನ್ನಗಳಾದ ಕುರಿ, ಉಣ್ಣೆ, ಚರ್ಮ ಇತ್ಯಾದಿಗಳನ್ನು ಸಹಕಾರ ಸಂಘಗಳ ಒಕ್ಕೂಟಗಳ ಮೂಲಕ ಕ್ರೋಢೀಕರಿಸಿ ಅಗತ್ಯವಿರುವೆಡೆ ಮಾಡುವುದಲ್ಲದೇ ಕುರಿಗಾರನಿಗೆ ನಿಶ್ಚಿತವಾದ ಮೌಲ್ಯವನ್ನು ದೊರಕಿಸುವ ಪ್ರಯತ್ನ ಇದಾಗಿದೆ.

**ಋ. ಉಣ್ಣೆಯ ಸಂಗ್ರಹಣಾ ಗೋದಾಮುಗಳ ಸ್ಥಾಪನೆ :**

ಸಹಕಾರಿ ಆಂದೋಲನಕ್ಕೆ ಪೂರಕವಾಗಿ ಕುರಿಗಾರರಿಂದ ಸಂಗ್ರಹವಾಗುವ ಬೃಹತ್ ಪ್ರಮಾಣದ ಉಣ್ಣೆಯನ್ನು ಸಂಗ್ರಹಿಸಿಟ್ಟು, ಮಾರುಕಟ್ಟೆ ವ್ಯವಸ್ಥೆ ಕಲ್ಪಿಸುವ ದೃಷ್ಟಿಯಿಂದ ರಾಜ್ಯದ ವಿವಿಧೆಡೆ ೧೦ ಉಣ್ಣೆ ಸಂಗ್ರಹಣಾ ಗೋದಾಮುಗಳನ್ನು ರೂ. ೧೦೦ ಲಕ್ಷ ವೆಚ್ಚದಲ್ಲಿ ನಿರ್ಮಿಸಲು ಯೋಜನೆ ಕೈಗೊಳ್ಳಲಾಗಿದೆ. ರಾಜ್ಯದ ಬೆಳಗಾವಿ, ಬಿಜಾಪುರ, ಹೊಸಪೇಟೆ, ರಾಣೆಬೆನ್ನೂರು, ಕೋಲಾರ, ಗುಲ್ಬರ್ಗಾ, ಚಳ್ಳಕೆರೆ, ತುಮಕೂರು, ಮಂಡ್ಯ ಮತ್ತು ಮೈಸೂರು ಈ ಸ್ಥಳಗಳಲ್ಲಿ ಉಣ್ಣೆ ಸಂಗ್ರಹಣಾ ಗೋದಾಮುಗಳನ್ನು ಸ್ಥಾಪಿಸಲಾಗುತ್ತಿದೆ. ಈಗಾಗಲೇ ನಾಲ್ಕು ಗೋದಾಮುಗಳ ನಿರ್ಮಾಣ ಕಾರ್ಯ ಪೂರ್ಣಗೊಂಡಿದೆ.

**ಎ. ಆಡಳಿತ ಬಲವರ್ಧನೆ :**

ನಿಗಮದ ಪರಿಶ್ರಮದ ಫಲವನ್ನು ಕುರಿಗಾರರಿಗೆ ನೇರವಾಗಿ ತಲುಪಿಸುವ ದೃಷ್ಟಿಯಿಂದ ರಾಜ್ಯದ ಬಹುತೇಕ ಜಿಲ್ಲೆಗಳಲ್ಲಿ ನಿಗಮದ ಅಧಿಕಾರಿ ಮತ್ತು ಸಿಬ್ಬಂದಿ ವರ್ಗವನ್ನು ನೇಮಿಸಲಾಗಿದೆ. ವಿವಿಧ ಜಿಲ್ಲೆಗಳಲ್ಲಿ ೪೫ ಹುದ್ದೆಗಳನ್ನು ಸೃಷ್ಟಿಸಿದ್ದು, ಇವರು ಜಿಲ್ಲಾಮಟ್ಟದಲ್ಲಿ ನಿಗಮದ ನೇರ ಪ್ರತಿನಿಧಿಗಳಾಗಿದ್ದಾರೆ. ಕುರಿ, ಮೇಕೆ ಸಂಗೋಪನೆಯಲ್ಲಿ ತೊಡಗಿರುವ ಆಸಕ್ತಿ ಇರುವ ರೈತರು ಈ ಅಧಿಕಾರಿಗಳನ್ನು ನಿತ್ಯವೂ ಸಂಪರ್ಕಿಸಬಹುದಾಗಿದೆ.

**ಏ. ಕುರಿ ಸಂಗೋಪನಾ ಕೇಂದ್ರಗಳ ನಿರ್ವಹಣೆ ಹಾಗೂ ಮಿಶ್ರತಳಿ ಟಗರುಗಳ ವಿತರಣೆ :**

ಕುರಿ ಸಾಗಾಣಿಕೆದಾರರಿಗೆ ಉತ್ತಮ ತಳಿಯ ಮಿಶ್ರತಳಿ ಮತ್ತು ಶುದ್ಧತಳಿ ಯೋಗ್ಯ ಟಗರುಗಳನ್ನು ಉತ್ಪಾದಿಸಿ ವಿತರಿಸುವ ಉದ್ದೇಶದಿಂದ ನಿಗಮವು ತನ್ನ ಅಧೀನದಲ್ಲಿ ೬ ಕುರಿ ಸಂವರ್ಧನಾ ಕೇಂದ್ರಗಳನ್ನು ಹೊಂದಿದೆ.

೧. ಕುರಿ ಸಂವರ್ಧನಾ ಕೇಂದ್ರ, ಕುದಾಪುರ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.
೨. ಕುರಿ ಸಂವರ್ಧನಾ ಕೇಂದ್ರ, ಉಳ್ಳವರ್ತಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.
೩. ಕುರಿ ಸಂವರ್ಧನಾ ಕೇಂದ್ರ, ಗುತ್ತಲು, ಹಾವೇರಿ ತಾಲ್ಲೂಕು, ಹಾವೇರಿ ಜಿಲ್ಲೆ.
೪. ಕುರಿ ಸಂವರ್ಧನಾ ಕೇಂದ್ರ, ಸುತ್ತಟ್ಟಿ, ಅಥಣಿ ತಾಲ್ಲೂಕು, ಬೆಳಗಾವಿ ಜಿಲ್ಲೆ.
೫. ಕುರಿ ಸಂವರ್ಧನಾ ಕೇಂದ್ರ, ಅನಗವಾಡಿ, ಬೀಳಗಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ.
೬. ಕುರಿ ಸಂವರ್ಧನಾ ಕೇಂದ್ರ, ಧನಗೂರು, ಮಳವಳ್ಳಿ ತಾಲ್ಲೂಕು, ಮಂಡ್ಯ ಜಿಲ್ಲೆ.

ಕುರಿ ಸಂವರ್ಧನಾ ಕೇಂದ್ರ ಕುದಾಪುರ, ಉಳ್ಳವರ್ತಿ, ಗುತ್ತಲ, ಸುತ್ತಟ್ಟಿಗಳಲ್ಲಿ ಡೆಕ್ಕನಿ ತಳಿಯ ಹೆಣ್ಣು ಕುರಿಗಳಿಗೆ ರ್‍ಯಾಂಬುಲೇ ಶುದ್ಧ ತಳಿಯ ಟಗರುಗಳೊಂದಿಗೆ ಸಂಕರಣೆಗೊಳಿಸಿ ಮಿಶ್ರತಳಿ ಟಗರುಗಳನ್ನು ಉತ್ಪಾದಿಸಿ ಕುರಿಗಾರರಿಗೆ ವಿತರಿಸಲಾಗುತ್ತಿದೆ. ಕುರಿ ಸಂವರ್ಧನಾ ಕೇಂದ್ರ, ಉಳ್ಳವರ್ತಿಯಲ್ಲಿ ವಿದೇಶದಿಂದ ಆಮದಾದ ಶುದ್ಧ ರ್‍ಯಾಂಬುಲೇ ತಳಿಯ ಹೆಣ್ಣು ಮತ್ತು ಗಂಡು ಕುರಿಗಳಿಂದ ಶುದ್ಧ ರ್‍ಯಾಂಬುಲೇ ತಳಿಯ ಟಗರುಗಳನ್ನು ಉತ್ಪಾದಿಸಿ ನಿಗಮದ ಅಧೀನದ ಕುರಿ ಸಂವರ್ಧನಾ ಕೇಂದ್ರಗಳಿಗೆ ತಳಿ ವರ್ಧನೆಗಾಗಿ ವಿತರಿಸಲಾಗುತ್ತಿದೆ. ಬಂಡೂರು ಕುರಿ ಸಂವರ್ಧನಾ ಕೇಂದ್ರ, ಧನಗೂರಿನಲ್ಲಿ ಶುದ್ಧ ಬಂಡೂರು ಹೆಣ್ಣು ಮತ್ತು ಗಂಡು ಕುರಿಗಳನ್ನು ಸಂತಾನೋತ್ಪತ್ತಿಗೊಳಪಡಿಸಿ ಶುದ್ಧ ಬಂಡೂರು ತಳಿಯ ಟಗರುಗಳನ್ನು ಉತ್ಪಾದಿಸಿ ಕುರಿಗಾರರಿಗೆ ಒದಗಿಸಲಾಗುತ್ತದೆ. ಅಂಗನವಾಡಿ ಕೇಂದ್ರದಲ್ಲಿ ಮೇಕೆ ಸಂವರ್ಧನಾ ಕೇಂದ್ರವನ್ನು ಸ್ಥಾಪಿಸಲು ಯೋಜಿಸಲಾಗಿದೆ.

**ಐ. ಕುರಿ ಮತ್ತು ಉಣ್ಣೆ ಅಭಿವೃದ್ಧಿ ಯೋಜನೆ ಕೋಲಾರ: ರಾಣೆಬೆನ್ನೂರು :**

ರಾಜ್ಯದ ಕೋಲಾರ ಮತ್ತು ರಾಣೆಬೆನ್ನೂರು ಪ್ರದೇಶಗಳು ಕುರಿ ಸಾಕಾಣಿಕೆಗಾಗಿ ಹೆಸರುವಾಸಿಯಾಗಿವೆ. ಇಲ್ಲಿ ಕುರಿ ಸಾಕಾಣಿಕೆ ಮುಖ್ಯ ಚಟುವಟಿಕೆಯಾಗಿರುವುದರಿಂದ ಇಲ್ಲಿ ಕುರಿಗಾರರ ಉಪಯೋಗಕ್ಕಾಗಿ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಯೋಜನೆಯನ್ನು ನಿಗಮವು ಸ್ಥಾಪಿಸಿದೆ. ಈ ಯೋಜನೆಯ ವ್ಯಾಪ್ತಿಯಲ್ಲಿ ಪ್ರತಿ ಯೋಜನೆ ಅಡಿ ತಲಾ ೮ ಕುರಿ ಮತ್ತು ಉಣ್ಣೆ ವಿಸ್ತರಣಾ ಘಟಕವನ್ನು ನಿಗಮವು ಸ್ಥಾಪಿಸಿದೆ. ಈ ಯೋಜನೆಯ ವ್ಯಾಪ್ತಿಯಲ್ಲಿ ಪ್ರತಿ ಯೋಜನೆ ಅಡಿ ತಲಾ ೮ ಕುರಿ ಮತ್ತು ಉಣ್ಣೆ ವಿಸ್ತರಣಾ ಘಟಕವನ್ನು ಹೊಂದಲಾಗಿದ್ದು ಇವುಗಳು ಕುರಿ, ಮೇಕೆಗಳ ಆರೋಗ್ಯ ರಕ್ಷಣೆ, ತಳಿ ಅಭಿವೃದ್ಧಿ ಮುಂತಾದ ಅಭಿವೃದ್ಧಿ ಕಾರ್ಯಗಳ ಉದ್ದೇಶ ಹೊಂದಿವೆ. ಕೋಲಾರದಲ್ಲಿ ಕುರಿಗಾರರಿಗೆ ಕಾರ್ಪೆಟ್ ನೇಯ್ಗೆ ತರಬೇತಿ ವ್ಯವಸ್ಥೆ, ಉಣ್ಣೆ ಸಂಸ್ಕರಣಾ ಘಟಕ. ಸ್ಕೋರಿಂಗ್, ಕಾರ್ಡಿಂಗ್ ಮತ್ತು ಸ್ಪಿನ್ನಿಂಗ್ ಸೌಕರ್ಯಗಳು ಲಭ್ಯವಿದೆ. ರಾಣೆಬೆನ್ನೂರಿನಲ್ಲಿ ಕೇಂದ್ರೀಯ ಉಣ್ಣೆ ಅಭಿವೃದ್ಧಿ ಮಂಡಳಿಯ ಸಹಾಯದಿಂದ ರೂ. ೯.೫ ಲಕ್ಷ ವೆಚ್ಚದಿಂದ ಒಂದು ಉಣ್ಣೆ ವಿಶ್ಲೇಷಣಾ ಪ್ರಯೋಗಾಲಯ ಸ್ಥಾಪನೆಯಾಗುತ್ತಿದೆ ಮತ್ತು ರೂ. ೧೦.೫ ಲಕ್ಷ ವೆಚ್ಚದಲ್ಲಿ ಒಂದು ಮಿನಿ ವುಲ್ ಸ್ಕೋರಿಂಗ್ ಸ್ಥಾಪಿತವಾಗುತ್ತಿದೆ.

**ಒ. ಸಮಗ್ರ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಯೋಜನೆ :**

ಇದು ಕೇಂದ್ರೀಯ ಉಣ್ಣೆ ಅಭಿವೃದ್ಧಿ ಮಂಡಳಿಯ ಸಹಾಯದಿಂದ ಯೋಜನೆ ಅಡಿಯಲ್ಲಿ ೫೦ ಸಾವಿರ ಕುರಿ ಸಂಖ್ಯೆಯ ಪ್ರದೇಶವನ್ನು ಗುರುತಿಸಿ ಈ ಯೋಜನಾ ಪ್ರದೇಶದಲ್ಲಿ ೫೦ ಸಾವಿರ ಕುರಿಗಳ ಸಮಗ್ರ ಅಭಿವೃದ್ಧಿಗಾಗಿ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಲಾಗುತ್ತಿದೆ. ಆರೋಗ್ಯ ರಕ್ಷಣೆ, ತಳಿ ಅಭಿವೃದ್ಧಿ ಉತ್ಪನ್ನಗಳ ಅಭಿವೃದ್ಧಿ ಮಾರುಕಟ್ಟೆ ಸಹಾಯ ಮತ್ತು ಕುರಿಗಾರರಿಗೆ ಇದುವರೆಗೆ ರಾಜ್ಯದಲ್ಲಿ ೭ ಯೋಜನಾ ಪ್ರದೇಶಗಳಲ್ಲಿ ೧ ಕಾರ್ಯಕ್ರಮ ಅನುಷ್ಠಾನಗೊಳಿಸಲಾಗಿದೆ. ಆನೇ ಪ್ರದೇಶದಲ್ಲಿ ೨೦೦೪-೦೫ನೇ ಸಾಲಿನಲ್ಲಿ ಕಾರ್ಯಕ್ರಮ ಅನುಷ್ಠಾನಗೊಳಿಸಲಿದ್ದು, ಇದಕ್ಕೆ ರೂ. ೧೩.೫ಲಕ್ಷ ಯೋಜನಾ ವೆಚ್ಚ ನಿಗದಿಯಾಗಿದೆ.

**ಓ. ನಬಾರ್ಡ್ ಸಹಾಯದ ಯೋಜನೆ :**

ನಿಗಮದ ಕಾರ್ಯಚಟುವಟಿಕೆಗಳನ್ನು ವಿಸ್ತರಿಸಿ ನಿಗಮದ ಆದಾಯವನ್ನು ಹೆಚ್ಚಿಸಿ ನಿಗಮವನ್ನು ಸ್ವಾವಲಂಬಿಯಾಗಿಸುವ ದೃಷ್ಟಿಯಿಂದ ನಬಾರ್ಡ್ ಸಂಸ್ಥೆಯಿಂದ ರೂ. ೧೧೧೫.೮೮ ಲಕ್ಷ ಮೊತ್ತದ ಸಾಲವನ್ನು ಪಡೆಯಲು ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಈ ಯೋಜನೆ ಅಡಿಯಲ್ಲಿ ಕುರಿ ಸಂವರ್ಧನಾ ಕೇಂದ್ರಗಳ ಬಲವರ್ಧನೆಗೆ, ಮೇಕೆ ಸಂವರ್ಧನಾ ಕೇಂದ್ರಗಳ ಸ್ಥಾಪನೆ, ಉಣ್ಣೆಯ ಸಂಗ್ರಹಣೆ ಮತ್ತು ಮಾರಾಟ, ಸಂತಾನ ಯೋಗ್ಯ ಟಗರುಗಳ ಸಂಗ್ರಹಣೆ ಮತ್ತು ಮಾರಾಟ, ಮಾಂಸಕ್ಕಾಗಿ ಕುರಿ, ಮೇಕೆಗಳ ಸಂಗ್ರಹಣೆ ಮತ್ತು ಮಾರಾಟ ಈ ಯೋಜನೆಗಳನ್ನು ಅನುಷ್ಠಾನಗೊಳಿಸಲು ಉದ್ದೇಶಿಸಲಾಗಿದೆ.

**ಔ. ಕರ್ನಾಟಕದಲ್ಲಿ ಕುರಿ ಅಭಿವೃದ್ಧಿಗಾಗಿ ಅಂಚಿನ ಹಣದ ಯೋಜನೆ :**

೨೦೦೩-೦೪ನೇ ಸಾಲಿಗಾಗಿ ಮಾನ್ಯ ಮಂತ್ರಿಗಳ ಆಯವ್ಯಯ ಭಾಷಣದಲ್ಲಿ ಘೋಷಿಸಿದ ಈ ನೂತನ ಯೋಜನೆಯು, ಕುರಿ ಸಂಗೋಪನೆಯಲ್ಲಿ ಒಂದು ಮೈಲಿಗಲ್ಲಾಗಲಿದೆ. ಈ ಯೋಜನೆ ಅಡಿ ರಾಜ್ಯದಲ್ಲಿ ಬಡತನ ರೇಖೆಯಿಂದ ಕೆಳಗಿರುವ ಒಂದು ಲಕ್ಷ

ಕುಟುಂಬಗಳಿಗೆ ಕುರಿ ಸಾಕಾಣಿಕೆಗಾಗಿ ಅಂಚಿನ ಹಣದ ಯೋಜನೆ ರೂಪಿಸಲಾಗಿದೆ. ಪ್ರಾರಂಭದಲ್ಲಿ ೨೦೦೩-೦೪ನೇ ಸಾಲಿಗಾಗಿ ಒಟ್ಟು ೨೨೨೨ ಕುಟುಂಬಗಳಿಗೆ ರೂ. ೧೦೦ ಲಕ್ಷ ಅನುದಾನದಲ್ಲಿ ೧೦+೧ ಕುರಿ ಘಟಕವನ್ನು ಒದಗಿಸಲು ಯೋಜಿಸಲಾಗಿದೆ. ರೂ ೧೮೦೦೦-೦೦ಘಟಕದ ವೆಚ್ಚದಲ್ಲಿ ಶೇ.೨೫ ಅಂಚಿನ ಹಣವನ್ನು ನಿಗಮವು ಭರಿಸಲಿದ್ದು, ಅಂಚಿನ ಹಣವನ್ನು ಶೇ. ೪ ಬಡ್ಡಿಯೊಂದಿಗೆ ನಿಗಮಕ್ಕೆ ನಿಯಮಿತ ಕಂತುಗಳಲ್ಲಿ ಹಿಂದಿರುಗಿಸಬೇಕು.

**ಅಂ. ಕುರಿ ಮತ್ತು ಕುರಿ ಉತ್ಪನ್ನಗಳಿಗೆ ವೈಜ್ಞಾನಿಕ ಮಾರುಕಟ್ಟೆ ಅಭಿವೃದ್ಧಿ ಯೋಜನೆ :**

ಕರ್ನಾಟಕದಲ್ಲಿ ಸದ್ಯದ ಪರಿಸ್ಥಿತಿಯಲ್ಲಿ ಕುರಿಗಾರರು ಎದುರಿಸುತ್ತಿರುವ ಮಾರುಕಟ್ಟೆ ವ್ಯವಸ್ಥೆ ಕೊರತೆಯನ್ನು ಸ್ವಲ್ಪ ಮಟ್ಟಿಗೆ ಹೋಗಲಾಡಿಸಲು, ೨೦೦೩-೦೪ನೇ ಸಾಲಿನಲ್ಲಿ ನೂತನವಾಗಿ ಮಾನ್ಯಮಂತ್ರಿಗಳಿಂದ ಘೋಷಿತವಾದ ಕುರಿ ಮತ್ತು ಕುರಿ ಉತ್ಪನ್ನಗಳಿಗೆ ವೈಜ್ಞಾನಿಕ ಮಾರುಕಟ್ಟೆ ವ್ಯವಸ್ಥೆ ಕಲ್ಪಿಸುವ ಕಾರ್ಯಕ್ರಮವನ್ನು ರೂ. ೧೦೦ ಲಕ್ಷ ವೆಚ್ಚದಲ್ಲಿ ಹಮ್ಮಿಕೊಳ್ಳಲಾಗಿದೆ. ಈ ಯೋಜನೆ ಅಡಿ ಕುರಿ ಸಂಶೋಧನಾ ಕೇಂದ್ರ, ಕುದಾಪುರ, ಚಳ್ಳಕೆರೆಯಲ್ಲಿ ಕುರಿ ಸಂಗ್ರಹಣಾ ಆಶ್ರಯ ಶೆಡ್ ನಿರ್ಮಿಸಿ, ಇಲ್ಲಿಗೆ ಕುರಿಗಾರರು ಉತ್ಪಾದಿಸುವ ಕುರಿ ಮೇಕೆಗಳನ್ನು ಖರೀದಿಸಿ ಮಾರುಕಟ್ಟೆಯಲ್ಲಿ ಅವುಗಳನ್ನು ಮಾಂಸಕ್ಕಾಗಿ ಮಾರಾಟ ಮಾಡುವ ವ್ಯವಸ್ಥೆ ಯೋಜಿಸಲಾಗಿದೆ. ಇಲ್ಲಿ ಪ್ರತಿ ತಿಂಗಳು ೩೦,೦೦೦ ಕುರಿಗಳನ್ನು ಖರೀದಿಸಿ ಮಾರಾಟ ಮಾಡುವ ಗುರಿ ಹೊಂದಲಾಗಿದೆ.

**ಅಃ. ಮೇಕೆ ಸಂವರ್ಧನೆ ಕೇಂದ್ರಗಳ ಸ್ಥಾಪನೆ :**

ಕುರಿಗಳು ನೀಡಬಲ್ಲ ಆರ್ಥಿಕ ಲಾಭಕ್ಕಿಂತ ೨೧/೨ ಪಟ್ಟು ಹೆಚ್ಚು ಆದಾಯ ತರುವ ಮೇಕೆ ಕರ್ನಾಟಕದಲ್ಲಿ ಕಡೆಗಣಿಸಲ್ಪಟ್ಟಿದೆ, ಅರಣ್ಯ ನಾಶಕ್ಕೆ ಕಾರಣವಾಗಿದೆ ಎಂಬ ತಪ್ಪು ಆಪಾದನೆಗೆ ಗುರಿಯಾಗಿರುವ ಮೇಕೆಯು ಮರಿಗಳ ಉತ್ಪಾದನೆಯ ಕಾರ್ಖಾನೆ ಇದ್ದಂತೆ. ಒಂದು ಬಾರಿ-೨-೩-೪ ಮರಿಗಳನ್ನು ನೀಡುವ ಮೇಕೆ ಔಷಧೀಯ ಗುಣವುಳ್ಳ ಹಾಲು ಮತ್ತು ಮಾಂಸವನ್ನು ನೀಡುತ್ತದೆ. ಮೇಕೆಯ ಉಪಯುಕ್ತತೆಯನ್ನು ಮನಗಂಡು ನಿಗಮವು ತನ್ನ ಅಧೀನದ ಕುರಿ ಸಂವರ್ಧನಾ ಕೇಂದ್ರ, ಕುದಾಪುರ, ಉಳ್ಳವರ್ತಿ, ಅನಗವಾಡಿ ಕೇಂದ್ರಗಳಲ್ಲಿ ಒಟ್ಟು ೬೦೦೬೦ ಮೇಕೆಗಳೊಂದಿಗೆ ೩ ಮೇಕೆ ಸಂವರ್ಧನಾ ಕೇಂದ್ರಗಳನ್ನು ಸ್ಥಾಪಿಸಲು ೨೦೦೪-೦೫ನೇ ಸಾಲಿನಲ್ಲಿ ೩೦ ಲಕ್ಷ ರೂ.ಗಳನ್ನು ನಿಗದಿಪಡಿಸಿದೆ.

## ೭. ಕುರಿ ಸಂಗೋಪನಾ ಕಾರ್ಯದ ಪುನಃಶ್ಚೇತನಕ್ಕೆ ಅಗತ್ಯವಿರುವ ಕ್ರಮಗಳು :

ಕರ್ನಾಟಕದಲ್ಲಿ ಕುರಿಸಂಗೋಪನಾ ಚಟುವಟಿಕೆಯ ಪುನಃಶ್ಚೇತನಕ್ಕಾಗಿ ಈ ಕೆಳಕಂಡ ಕ್ರಮಗಳು ಅಗತ್ಯವಿರುತ್ತದೆ:

**ಅ. ಗ್ರಾಮ ಮಟ್ಟದಲ್ಲಿ ಹುಲ್ಲುಗಾವಲು ಅಭಿವೃದ್ಧಿ :**

ಕರ್ನಾಟಕದಲ್ಲಿ ಸತತವಾಗಿ ೪ ವರ್ಷಗಳಿಂದ ಬರಗಾಲದ ಛಾಯೆ ಆವರಿಸಿರುವ ಹಿನ್ನೆಲೆಯಲ್ಲಿ ಬರಗಾಲದ ಪರಿಣಾಮಗಳನ್ನು ನಿವಾರಿಸುವ ನಿಟ್ಟಿನಲ್ಲಿ ಶಾಶ್ವತ ಪರಿಹಾರಗಳನ್ನು ಕಂಡುಕೊಳ್ಳುವುದು ಅನಿವಾರ್ಯವಾಗಿದೆ. ಆದ್ದರಿಂದ ಪ್ರತಿವ್ಯಾಪ್ತಿಯಲ್ಲಿ ಸರ್ಕಾರದ ಒಡೆತನದ ಅರಣ್ಯ ಭೂಮಿ, ರಾಜಸ್ವ ಭೂಮಿ, ಗೋಮಾಳ ಮತ್ತು ಇತರೆ ಭೂ ಪ್ರದೇಶಗಳನ್ನು ಗುರುತಿಸಿ ೨೦೦ ಎಕರೆಯ ಕನಿಷ್ಠ ೫ ಭೂ-ಭಾಗಗಳನ್ನು ಅಭಿವೃದ್ಧಿಗೊಳಿಸಿ, ಈ ಪ್ರದೇಶದಲ್ಲಿ ಸುಧಾರಿತ ತಳಿಯ ಮೇವಿನ ಬೆಳೆಗಳನ್ನು, ಹುಲ್ಲುಗಾವಲನ್ನು ಅಭಿವೃದ್ಧಿಪಡಿಸಿ ಶಾಶ್ವತ ನೀರಾವರಿ ಸೌಲಭ್ಯಗಳನ್ನು ಅಳವಡಿಸಿ, ಗ್ರಾಮದ ರೈತರ ವೈಯಕ್ತಿಕ ಸಹಕಾರದೊಂದಿಗೆ ನಿರ್ವಹಣೆಯನ್ನು ಕೈಗೊಳ್ಳುವುದರಿಂದ ಪ್ರತಿ ಗ್ರಾಮದ ಜಾನುವಾರುಗಳ ಮೇವಿನ ಕೊರತೆಯನ್ನು ನಿವಾರಿಸಿದಂತಾಗುತ್ತದೆ. ಈ ಯೋಜನೆಗೆ ರೂ. ೧೭.೫ ಕೋಟಿ ಅನುದಾನದ ಅಗತ್ಯವಿದೆ.

**ಆ. ಕುರಿಗಳಿಗೆ ಕುಡಿಯುವ ನೀರಿನ ವ್ಯವಸ್ಥೆ :**

ಕರ್ನಾಟಕದ ಕುರಿಗಾರರು ಬಹುತೇಕ ಅಲೆಮಾರಿ ಪದ್ಧತಿಯನ್ನು ಅನುಸರಿಸುತ್ತಿದ್ದು, ಅವರು ಸಾಮಾನ್ಯವಾಗಿ ಅರಣ್ಯ ಪ್ರದೇಶಗಳಲ್ಲಿ ಬೀಡುಬಿಡುವುದರಿಂದ ಭೂಮಿಯ ಮೇಲ್ಮಟ್ಟದ ನೀರು ಲಭ್ಯವಾಗದೆ ಇರುವುದರಿಂದ ಕುರಿಗಳಿಗೆ ಅತೀವ ಕುಡಿಯುವ ನೀರಿನ

ತೊಂದರೆಯಿರುತ್ತದೆ. ಈ ಬವಣೆಯನ್ನು ಹೋಗಲಾಡಿಸಲು ಕುರಿಗಾರರು ವಲಸೆ ಹೋಗುವ ಮಾರ್ಗಗಳಲ್ಲಿ ಕೊಳವೆ ಬಾವಿಗಳನ್ನು ಕೊರೆದು ನೀರಿನ ತೊಟ್ಟಿಗಳನ್ನು ನಿರ್ಮಿಸಿ ಕುಡಿಯುವ ನೀರಿನ ಸೌಲಭ್ಯ ಕಲ್ಪಿಸಲಾಗಿದೆ.

**ಇ. ಕುರಿಗಾರರಿಗೆ ರಾಜ್ಯಮಟ್ಟದ ಬಂದೂಕು ಪರವಾನಗಿ ವಿತರಿಸುವ ಬಗ್ಗೆ :**

ಕುರಿಗಾರರು ಅರಣ್ಯ ಪ್ರದೇಶಗಳಲ್ಲಿ ವಾಸಿಸುವುದರಿಂದ ಅವರಿಗೆ ವನ್ಯಮೃಗಗಳು ಮತ್ತು ಆಗಂತುಕರಿಂದ ಜೀವಭಯ ಇರುವುದರಿಂದ ಅವರಿಗೆ ಆತ್ಮರಕ್ಷಣೆಗಾಗಿ ಬಂದೂಕು ಹೊಂದುವ ಪರವಾನಗಿಯನ್ನು ಸೂಕ್ತ ಪ್ರಾಧಿಕಾರದಿಂದ ದೊರಕಿಸುವುದು ಮತ್ತು ಸದರಿ ಬಂದೂಕನ್ನು ಯಾವುದೇ ಜಿಲ್ಲೆಗಳ ಗಡಿಗಳ ನಿರ್ಬಂಧವಿಲ್ಲದೆ, ಇಡೀ ರಾಜ್ಯಾದ್ಯಂತ ಕೊಂಡು ಹೋಗಲು ಪರವಾನಗಿಯನ್ನು ದೊರಕಿಸುವುದು ಅವಶ್ಯವಿರುತ್ತದೆ.

**ಈ. ಕುರಿಗಾರರಿಗೆ ಜನಶ್ರೀ ವಿಮಾ ಯೋಜನೆ :**

ಅಕಾಲಿಕ ಮತ್ತು ಅನಿರ್ದಿಷ್ಟ ವರಮಾನದಿಂದಾಗಿ ತತ್ತರಿಸಿರುವ ಕುರಿಗಾರರು ಆಕಸ್ಮಿಕ ದುರಂತಗಳಿಗೆ ತುತ್ತಾದ ಸಂದರ್ಭಗಳಲ್ಲಿ ದುಡಿಯುವ ವ್ಯಕ್ತಿ ಇಲ್ಲದ ಕುಟುಂಬಗಳು ಬೀದಿ ಪಾಲಾಗುತ್ತಿವೆ. ಇಂತಹ ದುರಂತಮಯ ಸನ್ನಿವೇಶಗಳನ್ನು ತಡೆಗಟ್ಟಲು ಕುರಿಗಾರರಿಗೆ ಜನಶ್ರೀ ವಿಮಾ ಯೋಜನೆಯನ್ನು ಜಾರಿಗೊಳಿಸುವುದು ಅವಶ್ಯವಿದೆ. ಈ ಯೋಜನೆಯಲ್ಲಿ ಪ್ರತಿ ಕುರಿಗಾರರಿಗೆ ವಿಮೆಯ ಮೊತ್ತ ರೂ. ೨೦೦ನ್ನು ಭರಿಸಲೇಬೇಕಾಗಿದ್ದು, ಇದರಲ್ಲಿ ರೂ. ೧೦೦ನ್ನು ಭಾರತೀಯ ಜೀವ ವಿಮಾ ನಿಗಮ ಭರಿಸಲಿದ್ದು, ರೂ. ೬೦ನ್ನು ಕೇಂದ್ರ ಸರ್ಕಾರವು ಮತ್ತು ಉಳಿದ ರೂ. ೪೦ನ್ನು ರಾಜ್ಯ ಸರ್ಕಾರವು ಭರಿಸುವಂತೆ ನಿಯಮ ರೂಪಿಸಬಹುದಾಗಿದೆ. ಈ ಯೋಜನೆಗೆ ರೂ. ೫ ಕೋಟಿ ಅನುದಾನದ ಅಗತ್ಯವಿದೆ.

**ಉ. ಕುರಿಗಳಿಗೆ ಸಮಗ್ರ ವಿಮಾ ಯೋಜನೆ ಜಾರಿಗೊಳಿಸುವುದು :**

ಅತಿವೃಷ್ಟಿ, ಅನಾವೃಷ್ಟಿ ಮತ್ತು ಇತರೆ ಪ್ರಕೃತಿ ವಿಕೋಪಗಳಿಗೆ ತುತ್ತಾಗುವ ಕುರಿಗಳಿಗೆ ರಾಜ್ಯಮಟ್ಟದಲ್ಲಿ ಒಂದು ಸಮಗ್ರವಾದ ಕೀರುಕಾಮಧೇನು ವಿಮಾ ಯೋಜನೆಯನ್ನು ಸಂಪೂರ್ಣ ರಾಜ್ಯ ಸರ್ಕಾರದ ವಂಟತನದಿಂದ ಜಾರಿಗೊಳಿಸುವುದು ಅವಶ್ಯವಿರುತ್ತದೆ. ಈ ಯೋಜನೆಗೆ ರೂ. ೫ ಕೋಟಿ ವಂಟತನ ಅಗತ್ಯವಿದೆ.

**ಊ. ರೋಗನಿರೋಧಕ ಲಸಿಕೆ :**

ಕರ್ನಾಟಕ ರಾಜ್ಯದಲ್ಲಿ ದೊಡ್ಡರೋಗ ಶೂನ್ಯ ಕಾರ್ಯಕ್ರಮದಡಿ ಸತತ ಲಸಿಕೆ ನೀಡುವ ಕಾರ್ಯದಿಂದ ದೊಡ್ಡ ರೋಗವನ್ನು ಇಲ್ಲವಾಗಿಸಿರುವುದು ಅಭಿನಂದನಾರ್ಹ ಸಾಧನೆ. ಸದ್ಯದಲ್ಲಿ ರಾಜ್ಯದಲ್ಲಿ ಕುರಿಗಳನ್ನು ಕಾಡುತ್ತಿರುವ ಪಿ ಪಿ ಆರ್, ಮೈಲಿಬೇನೆ ಮತ್ತು ನೀಲಿನಾಲಿಗೆ ರೋಗಗಳಿಗೆ ಇದೇ ಮಾದರಿಯಲ್ಲಿ ಸತತವಾಗಿ ೫ ವರ್ಷಗಳ ಕಾಲ ಉಚಿತವಾಗಿ ರೋಗನಿರೋಧಕ ಲಸಿಕೆ ಕಾರ್ಯಕ್ರಮವನ್ನು ಹಾಕುವ ಆಂದೋಲನವನ್ನು ಕೈಗೊಂಡು ಪಲ್ಸ್ ಪೋಲಿಯೋ ಅಭಿಯಾನದ ಮಾದರಿಯಲ್ಲಿ ಆಂದೋಲನವನ್ನು ಕೈಗೊಳ್ಳುವುದು ಅಗತ್ಯವಾಗಿದೆ. ಈ ಯೋಜನೆಗೆ ಒಂದು ವರ್ಷಕ್ಕೆ ರೂ. ೪.೫ ಕೋಟಿ ವಂಟನದ ಅಗತ್ಯವಿದೆ.

**ಋ. ಅಂಚಿನ ಹಣದ ಯೋಜನೆ :**

ಕರ್ನಾಟಕದ ಕುರಿ ಉದ್ಯಮದ ಇತಿಹಾಸದಲ್ಲಿ ಪ್ರಪ್ರಥಮ ಬಾರಿಗೆ ಕುರಿ ಸಂಗೋಪನೆಗಾಗಿ ಬಡತನ ರೇಖೆಯಿಂದ ಕೆಳಗಿರುವ ಕುಟುಂಬಗಳಿಗೆ ಅಂಚಿನ ಹಣದ ಯೋಜನೆಯನ್ನು ಮಾನ್ಯ ಮುಖ್ಯಮಂತ್ರಿಗಳು ೨೦೦೩-೦೪ನೇ ಸಾಲಿಗಾಗಿ ಘೋಷಿಸಿರುವುದು ಒಂದು ಮೈಲಿಗಲ್ಲಾಗಿದೆ. ಆದರೆ ಈ ಯೋಜನೆಯಡಿ ಸದ್ಯದಲ್ಲಿ ಫಲಾನುಭವಿಗಳ ಆಯ್ಕೆಯ ಹೊಣೆಯನ್ನು ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಪಂಚಾಯತ್ ಇವರ ಅಧ್ಯಕ್ಷತೆಯಲ್ಲಿ ತಾಲ್ಲೂಕು ಮಟ್ಟದ ಸಮಿತಿಗೆ ವಹಿಸಿರುವುದರಿಂದ, ಫಲಾನುಭವಿಗಳ ಆಯ್ಕೆ ಪ್ರಕ್ರಿಯೆ ವಿಳಂಬ ಮತ್ತು ದೋಷಪೂರ್ಣವಾಗುವ ಸಾಧ್ಯತೆಗಳವೆ. ಆದ್ದರಿಂದ ಸದರಿ ಯೋಜನೆಯಡಿ ಫಲಾನುಭವಿಗಳ ಆಯ್ಕೆಯನ್ನು ನಿಗಮದಲ್ಲಿ ನೋಂದಾಯಿತಗೊಂಡ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳ ಸಹಕಾರದೊಂದಿಗೆ ನಿಗಮದ ಅಧಿಕಾರಿಗಳೇ

ಆಯ್ಕೆ ಮಾಡುವಂತೆ ಆದೇಶಿಸುವುದು ಅಗತ್ಯವಿದೆ. ಮುಂದುವರಿದಂತೆ ಸದರಿ ಯೋಜನೆಯನ್ನು ರಾಷ್ಟ್ರೀಕೃತ ಬ್ಯಾಂಕ್, ಗ್ರಾಮೀಣ ಬ್ಯಾಂಕ್‌ಗಳ ಮೂಲಕ ಅನುಷ್ಠಾನಗೊಳಿಸಲು ಆದೇಶಿಸಲಾಗಿದೆ.

**ಎ. ಅಂಚಿನ ಹಣದ ಯೋಜನೆಯಡಿ ಫಲಾನುಭವಿಗಳನ್ನು ಹೆಚ್ಚಿಸುವುದು :**

ಅಂಚಿನ ಹಣದ ಯೋಜನೆಯಡಿ ೨೦೦೩-೦೪ನೇ ಸಾಲಿಗೆ ೨೨೨೨ ಕುಟುಂಬಗಳ ಗುರಿಯಿರುತ್ತದೆ. ಈ ದರದಲ್ಲಿ ಕರ್ನಾಟಕ ಕುರಿಗಾರರ ಬೇಡಿಕೆಗಳನ್ನು ಪೂರೈಸುವುದು ಕಠಿಣವಾದುದರಿಂದ ಕನಿಷ್ಟ ಪ್ರತಿ ವರ್ಷಕ್ಕೆ ಪ್ರತಿ ತಾಲ್ಲೂಕಿಗೆ ೨೦೦ ಫಲಾನುಭವಿಗಳಿಗೆ ಅಥವಾ ಒಂದು ವರ್ಷಕ್ಕೆ ೨೫೦೦ ಸಾವಿರ ಫಲಾನುಭವಿಗಳ ಗುರಿಯನ್ನು ನೀಡುವುದು ಅವಶ್ಯಕವಿರುತ್ತದೆ.

**ಐ. ಸದ್ಯದಲ್ಲಿ ಅನುಷ್ಠಾನಗೊಳ್ಳುತ್ತಿರುವ ಯೋಜನೆಯಡಿಯಲ್ಲಿ ಕುರಿಸಾಕಾಣಿಕೆಗೆ ಒತ್ತು ನೀಡುವುದು :**

ಪ್ರಸ್ತುತ ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯದ ಸಂಸ್ಥೆಗಳಾದ ಹಿಂದುಳಿದ ವರ್ಗಗಳ, ಅಲ್ಪಸಂಖ್ಯಾತರ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮಗಳು ವಿವಿಧ ಸಾಮಾಜಿಕ, ಆರ್ಥಿಕ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿರುವ ಯೋಜನೆಗಳಲ್ಲಿ ಪ್ರತಿ ವರ್ಷವೂ ಹೆಚ್ಚಿನ ಮಟ್ಟದಲ್ಲಿ ಕುರಿ ಸಂಗೋಪನೆಗಾಗಿ ಯೋಜನೆಯನ್ನು ಮೀಸಲಿಡಲು ಆದೇಶ ಹೊರಡಿಸುವುದು ಅವಶ್ಯವಿರುತ್ತದೆ.

**ಒ. ಸ್ತ್ರೀ ಶಕ್ತಿ ಯೋಜನೆಮೂಡಿ ಕುರಿಸಂಗೋಪನೆಗೆ ಪ್ರಾಮುಖ್ಯತೆ :**

ದೇಶದ ಇತಿಹಾಸದಲ್ಲಿ ಕ್ರಾಂತಿಕಾರಿಯೆನ್ನಬಹುದಾದ ಕರ್ನಾಟಕ ಮಹತ್ಸಾಧನೆ ಸ್ತ್ರೀ-ಶಕ್ತಿ ಯೋಜನೆ. ಅಬಲೆಯಾದ ಮಹಿಳೆಯನ್ನು ಸಬಲೆಯಾಗಿಸುವ ಈ ಯೋಜನೆಯಲ್ಲಿ ಸ್ತ್ರೀಯರ ಆರ್ಥಿಕ ಮಟ್ಟವನ್ನು ನಿರ್ದಿಷ್ಟ ಅವಧಿಯಲ್ಲಿ ಗರಿಷ್ಟ ಪ್ರಮಾಣದಲ್ಲಿ ವೃದ್ಧಿಸುವ ಸಲುವಾಗಿ ಸ್ತ್ರೀಯರಿಗೆ ಸೂಕ್ತವಾಗಿರುವ ಕುರಿ ಸಂಗೋಪನೆ ಯೋಜನೆಗೆ ಹೆಚ್ಚಿನ ಮಹತ್ವ ಮತ್ತು ಗುರಿ ನೀಡುವ ಅಗತ್ಯವಿದೆ.

**ಓ. ಎಲ್ಲೆಲ್ಲಿ ವಲಸೆಯೋ ಅಲ್ಲಿ ಶಾಲೆ :**

ಕರ್ನಾಟಕದಲ್ಲಿ ಕುರಿಗಾರರು ವರ್ಷವಿಡೀ ಕುರಿಗಳ ಜೊತೆ ರಾಜ್ಯಾದ್ಯಂತ ವಲಸೆ ಹೋಗುವುದರಿಂದ ಕುರಿಗಾರರ ಮಕ್ಕಳಿಗೆ ಬಿಹಾರ ಸರ್ಕಾರದ ಮಾದರಿಯಲ್ಲಿ ಎಲ್ಲಿ ವಲಸೆಯೋ ಅಲ್ಲಿ ಶಾಲೆ ಯೋಜನೆಯನ್ನು ಜಾರಿಗೊಳಿಸುವುದು ಅಗತ್ಯವಿದೆ. ಈ ಯೋಜನೆಯಡಿ ಕ್ಷೇತ್ರ ಶಿಕ್ಷಣ ಸಂಪನ್ಮೂಲ ಕೇಂದ್ರಗಳಿಂದ ಕುರಿಗಾರರ ಮಕ್ಕಳಿಗೆ ವರ್ಗಾವಣೆ ಪತ್ರವನ್ನು ವಿತರಿಸಿ ಕುರಿಗಾರರು ವಲಸೆಯ ಸಮಯದಲ್ಲಿ ನೆಲೆಸಬಹುದಾದ ಒಂದು ಯಾವುದೇ ಗ್ರಾಮದ ಶಾಲೆಯಲ್ಲಿ ಸದರಿ ಗ್ರಾಮದಲ್ಲಿ ತಂಗಿರುವಷ್ಟು ಸಮಯ ಆ ಶಾಲೆಯಲ್ಲಿ ಕುರಿಗಾರನ ಮಕ್ಕಳಿಗೆ ದಾಖಲಾತಿಯನ್ನು ದೊರಕಿಸಿ ಮುಂದಿನ ಗ್ರಾಮಕ್ಕೆ ವಲಸೆ ಹೋಗುವ ಮುನ್ನ ವರ್ಗಾವಣೆ ಪತ್ರದಲ್ಲಿ ದಾಖಲಿಸಿ ಮುಂದಿನ ಶಾಲೆಗೆ ವರ್ಗಾಯಿಸುವ ಪದ್ಧತಿಯನ್ನು ಅನುಸರಿಸುವುದು.

**ಔ. ಕುರಿ ಮೇಕೆಗಳಿಗೆ ಮಾರುಕಟ್ಟೆ ಸೌಲಭ್ಯ :**

ಕರ್ನಾಟಕದಲ್ಲಿ ಅಗಾಧವಾದ ಕುರಿ ಮತ್ತು ಮೇಕೆ ಸಂಪತ್ತಿದ್ದು, ಇದು ರಾಜ್ಯದ ಆರ್ಥಿಕ ಪರಿಸ್ಥಿತಿಗೆ ಒಂದು ಮೂಲ ಬಂಡವಾಳವಾಗಿದೆ. ಆದರೆ ಸದ್ಯದ ಮಾರುಕಟ್ಟೆ ವ್ಯವಸ್ಥೆಯಲ್ಲಿ ಮಧ್ಯವರ್ತಿಗಳ ಹಾವಳಿಯಿಂದ ಕುರಿಗಾರರಿಗೆ ಸಲ್ಲಬೇಕಾದ ನ್ಯಾಯಯುತವಾದ ಮೌಲ್ಯ ದೊರಕುತ್ತಿಲ್ಲ. ಆದ್ದರಿಂದ ಕುರಿಗಾರರಿಗೆ ಪ್ರಾದೇಶಿಕ ಮಟ್ಟದಲ್ಲಿ ಉತ್ತಮ ಮಾರುಕಟ್ಟೆ ಸೌಲಭ್ಯ ಒದಗಿಸುವ ಸಲುವಾಗಿ ಬೆಳಗಾವಿ, ರಾಯಚೂರು, ಮೈಸೂರು ಮತ್ತು ಧಾರವಾಡಗಳಲ್ಲಿ ಸುಸಜ್ಜಿತವಾದ ಕಸಾಯಿಖಾನೆಗಳನ್ನು ಸ್ಥಾಪಿಸುವುದು ಅವಶ್ಯವಿದೆ. ಈ ಯೋಜನೆಗೆ ರೂ. ೮೦ ಕೋಟಿ ವಂಟನದ ಅಗತ್ಯವಿದೆ.

**ಅಂ. ಯಶಸ್ವಿನಿ ವಿಮಾಯೋಜನೆ :**

ಸದ್ಯದಲ್ಲಿ ಘನ ಕರ್ನಾಟಕ ಸರ್ಕಾರ ಜಾರಿಗೊಳಿಸುತ್ತಿರುವ ರಾಜ್ಯದ ರೈತರಿಗಾಗಿ ಯಶಸ್ವಿನಿ ವಿಮಾ ಯೋಜನೆ ರಾಜ್ಯದ ಬಡರೈತರಿಗೆ ಒಂದು ವರದಾನವಾಗಿದೆ. ಆದರ ಈ ಯೋಜನೆಯನ್ನು ವ್ಯವಸಾಯ ಸೇವಾ ಸಹಕಾರ ಸಂಘಗಳ ಸದಸ್ಯರಿಗೆ

ಸೀಮಿತಗೊಳಿಸಿರುವುದರಿಂದ ಭೂರಹಿತ ಕುರಿಗಾರರಿಗೆ ಈ ಯೋಜನೆ ಸೌಲಭ್ಯ ದೊರಕುತ್ತಿಲ್ಲ. ಆದ್ದರಿಂದ ಸದರಿ ಯೋಜನೆ ಅಡಿಯಲ್ಲಿ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳ ಸದಸ್ಯರಾಗಿರುವ ಕುರಿಗಾರರಿಗೂ ಸಹ ಸದರಿ ಯೋಜನೆಯ ಸೌಲಭ್ಯವನ್ನು ವಿಸ್ತರಿಸಿ ಆದೇಶಿಸುವುದು ಅಗ್ಯತ್ಯವಿದೆ.

**ಅಃ. ಕಂಬಳಿ ಉದ್ಯಮಕ್ಕೆ ಕಾಯಕಲ್ಪ :**

ಪರಂಪರಾಗತ ಪದ್ಧತಿಗಳಲ್ಲಿ ಕಂಬಳಿ ನೇಯುತ್ತಿರುವ ಕಂಬಳಿ ನೇಕಾರರು ಅತ್ಯಾಧುನಿಕ ನೇಯ್ಗೆ ವಸ್ತುಗಳ ಪೈಪೋಟಿಯಲ್ಲಿ ನೆಲಕಚ್ಚಿದ್ದಾರೆ. ಬದುಕಿಗೆ ಬದಲಿ ಆಸರೆ ಇಲ್ಲದೆ ತತ್ತರಿಸಿ ಆತ್ಮಹತ್ಯೆಯ ಹಾದಿ ತುಳಿಯುತ್ತಿದ್ದಾರೆ. ಆದ್ದರಿಂದ ಕಂಬಳಿ ಉದ್ಯೋಗಕ್ಕೆ ಕಾಯಕಲ್ಪ ನೀಡುವುದು ತಕ್ಷಣದ ಅವಶ್ಯಕತೆಯಾಗಿದೆ. ಇದಕ್ಕಾಗಿ ಸರ್ಕಾರದ ಅಧೀನದ ವಿದ್ಯಾರ್ಥಿನಿಲಯಗಳು, ಜೈಲುಗಳು, ರಿಮ್ಯಾಂಡ್ ಹೋಮುಗಳು, ಅನಾಥಾಶ್ರಮಗಳು ಮತ್ತು ಇತರೆ ಯಾವುದೇ ಹೊದಿಕೆಗಳನ್ನು ಖರೀದಿಸುವ ಸಂಸ್ಥೆಗಳಿಗೆ ನಿಗಮದಿಂದ ಕಂಬಳಿಗಳನ್ನು ಖರೀದಿಸುವುದನ್ನು ಕಡ್ಡಾಯಗೊಳಿಸಿ ಆದೇಶಿಸುವುದು ಅಗತ್ಯವಿದೆ.

**ಕ. ಜವಳಿ ಇಲಾಖೆಯಲ್ಲಿ ಕಂಬಳಿ ನೇಕಾರರಿಗೆ ಪ್ರಾಶಸ್ತ್ಯ :**

ಜವಳಿ ಇಲಾಖೆಯಲ್ಲಿ ನೇಕಾರರಿಗೆ ಅನೇಕ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ. ಈ ಸೌಲಭ್ಯಗಳನ್ನು ಹತ್ತಿ ಮತ್ತು ರೇಷ್ಮೆ ನೇಕಾರರಿಗೆ ಮಾತ್ರ ಈವರೆಗೆ ಸೀಮಿತಗೊಳಿಸಲಾಗಿತ್ತು. ಆದರೆ ಉಣ್ಣೆ ನೇಕಾರರನ್ನು ಜವಳಿ ಇಲಾಖೆಯ ವ್ಯಾಪ್ತಿಗೆ ತಂದಿರುವುದು ಸ್ವಾಗತಾರ್ಹ. ಮುಂದಿನ ದಿನಗಳಲ್ಲಿ ಜವಳಿ ಇಲಾಖೆಯಿಂದ ನೇಕಾರರಿಗೆ ದೊರಕಿಸುವ ಯಾವುದೇ ಸೌಲಭ್ಯಗಳಲ್ಲಿ ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಉಣ್ಣೆ ನೇಕಾರರಿಗೆ ಪ್ರಾಶಸ್ತ್ಯವನ್ನು ಕಡ್ಡಾಯವಾಗಿ ನೀಡುವಂತೆ ಆದೇಶಿಸುವುದು ಅಗತ್ಯವಿದ.

**ಖ. ಆರೋಗ್ಯ ರಕ್ಷಣೆ :**

ರಾಜ್ಯದಲ್ಲಿರುವ ಸಮಸ್ತ ಕುರಿ ಮತ್ತು ಮೇಕೆಗಳ ಆರೋಗ್ಯ ರಕ್ಷಣೆಗಾಗಿ ಜಂತುನಾಶಕ ಔಷಧಿಗಳನ್ನು ಪೂರೈಸುವುದು ಅಗತ್ಯವಿದೆ. ಈ ಯೋಜನೆಗಾಗಿ ಪ್ರತಿ ವರ್ಷ ನಿಗಮಕ್ಕೆ ರೂ. ೩೦೦ ಲಕ್ಷ ಮೊತ್ತವನ್ನು ಆಯವ್ಯಯದಲ್ಲಿ ಅಳವಡಿಸಿ ಒದಗಿಸಲು ಆದೇಶಿಸುವುದು ಅಗತ್ಯವಿದೆ.

## ೮. ಕುರಿ ಸಂಗೋಪನೆ ಸಂಬಂಧಿಸಿದಂತೆ ರಾಜ್ಯ ಸರ್ಕಾರವು ಕೈಗೊಳ್ಳಬೇಕಾದ ಕ್ರಮಗಳು :

ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯದಲ್ಲಿ ಕುರಿ ಮತ್ತು ಕುರಿಗಾರರ ಅಭಿವೃದ್ಧಿಗೆ ಅಗತ್ಯವಿರುವ ಕಾರ್ಯಕ್ರಮಗಳು:

೧. ಕರ್ನಾಟಕ ರಾಜ್ಯದಲ್ಲಿರುವ ಕುರಿ ಮತ್ತು ಮೇಕೆಗಳಿಗೆ ಉಚಿತವಾಗಿ ಎಲ್ಲಾ ಸಂಕ್ರಾಮಿಕ ರೋಗಗಳ ವಿರುದ್ಧ ಲಸಿಕೆ ಹಾಕುವ ಕಾರ್ಯಕ್ರಮ ಕೈಗೊಳ್ಳುವುದು.

೨. ಕರ್ನಾಟಕ ಕುರಿ ಮತ್ತು ಉಣ್ಣೆ ಅಭಿವೃದ್ಧಿ ನಿಗಮ ನಿಯಮಿತ ಕಾರ್ಯಚಟುವಟಿಕೆಗಳ ವಿಸ್ತರಣೆಗಾಗಿ ರೂ. ೫೦೦.೦೦ ಲಕ್ಷ ಮೂಲ ಬಂಡವಾಳ (ಬೀಜಧನ) ಒದಗಿಸುವುದು.

೩. ರಾಜ್ಯದಲ್ಲಿನ ಕುರಿಗಳ ಹಾಗೂ ಕುರಿಗಾರರ ಸರ್ವತೋಮುಖ ಅಭಿವೃದ್ಧಿಗಾಗಿ ನಿಗಮದ ಕಾರ್ಯಚಟುವಟಿಕೆಗಳನ್ನು ವಿಸ್ತರಿಸುವ ಸಲುವಾಗಿ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್‌ನಿಂದ ಸರ್ಕಾರದ ಗ್ಯಾರಂಟಿಯೊಂದಿಗೆ ರೂ. ೧೦೧೫.೦೦ ಲಕ್ಷಗಳ ಆರ್ಥಿಕ ನೆರವನ್ನು ಪಡೆಯುವ ಸಲುವಾಗಿ ಈಗಾಗಲೇ ಸಲ್ಲಿಸಲಾದ ಸಮಗ್ರ ಪ್ರಸ್ತಾವನೆ ಬಗ್ಗೆ ಕ್ರಮ ಕೈಗೊಳ್ಳುವುದು.

೪. ಕರ್ನಾಟಕ ಕುರಿ ಮತ್ತು ಮೇಕೆಗಳನ್ನು ಒಳಪರೋಪಜೀವಿಗಳ ಬಾಧೆಯಿಂದ ರಕ್ಷಿಸಿ, ಉತ್ಪನ್ನಗಳ ಪ್ರಮಾಣ ಹಾಗೂ ಗುಣಮಟ್ಟ ಹೆಚ್ಚಿಸುವ ಸಲುವಾಗಿ "ಕುರಿಗಳ ಆರೋಗ್ಯ ರಕ್ಷಣೆ" ಕಾರ್ಯಕ್ರಮದಡಿಯಲ್ಲಿ ಜಂತುನಾಶಕ ಔಷಧಿಯನ್ನು ಸರಬರಾಜು ಮಾಡುವ ಸಲುವಾಗಿ ನಿಗಮಕ್ಕೆ ರೂ. ೪೦೦.೦೦ ಲಕ್ಷಗಳನ್ನು ಒದಗಿಸುವುದು.

೫. ಕುರಿಗಳಿಗೆ ಹಾಗೂ ಕುರಿಗಾರರಿಗೆ ವಲಸೆ ಸಮಯದಲ್ಲಿ ಅನುಕೂಲವಾಗುವಂತೆ ತಂಗುದಾಣಗಳ ಸ್ಥಾಪನೆ, ನೀರಿನ ಸೌಕರ್ಯಗಳ ಅಭಿವೃದ್ಧಿ, ಹುಲ್ಲುಗಾವಲುಗಳ ಅಭಿವೃದ್ಧಿ ಹಾಗೂ ಮೇವಿನ ಬ್ಯಾಂಕ್‌ಗಳ ಸ್ಥಾಪನೆಗಾಗಿ ಕೇಂದ್ರೀಯ ಉಣ್ಣೆ ಅಭಿವೃದ್ಧಿ ಮಂಡಳಿಯ ಸಹಯೋಗದೊಂದಿಗೆ ಕ್ರಮ ಕೈಗೊಳ್ಳುವುದು.

೬. ಪ್ರಕೃತಿ ವಿಕೋಪದಿಂದ ಸಂಕಷ್ಟಕ್ಕೀಡಾದ ಕುರಿಗಾರರಿಗೆ ಹಾಗೂ ಅವರ ಕುಟುಂಬಗಳಿಗೆ ಭದ್ರತೆ ಒದಗಿಸುವ ಸಲುವಾಗಿ ಭಾರತೀಯ ಜೀವ ವಿಮಾ ನಿಗಮದ "ಜನಶ್ರೀ ಬಿಮಾ ಯೋಜನೆ"ಯಂತಹ ವಿಮಾ ಯೋಜನೆಯನ್ನು ರೂ. ೩೫೦.೦೦ ಲಕ್ಷಗಳ ವೆಚ್ಚದಲ್ಲಿ ಅಳವಡಿಸುವುದು.

೭. ರಾಜ್ಯದಲ್ಲಿ ಉತ್ಪಾದನೆಯಾಗುವ ಉಣ್ಣೆಯನ್ನು ಸಂಗ್ರಹಿಸಿ ಮಾರುಕಟ್ಟೆ ಅಭಿವೃದ್ಧಿಪಡಿಸುವ ಸಲುವಾಗಿ ಉಣ್ಣೆ ಸಂಗ್ರಹಣಾ ಗೋದಾಮುಗಳನ್ನು ನಿರ್ಮಾಣ ಮಾಡಬೇಕಾಗಿದ್ದು, ಇದಕ್ಕಾಗಿ ಸುಮಾರು ರೂ. ೬೦.೦೦ ಲಕ್ಷ ಅವಶ್ಯಕತೆಯಿದೆ.

೮. ರಾಜ್ಯದಲ್ಲಿ ೨೦೦ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘಗಳ ಸ್ಥಾಪನೆಯ ಗುರಿಯಿದ್ದು, ಈಗಾಗಲೇ ೧೪೪ ಸಹಕಾರ ಸಂಘಗಳನ್ನು ಸ್ಥಾಪಿಸಲಾಗಿದೆ. ಈ ಸಂಘಗಳನ್ನು ಆರ್ಥಿಕವಾಗಿ ಸದೃಢವಾಗಿಸಿ, ಪ್ರಗತಿಪರ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವಂತೆ ಪ್ರೋತ್ಸಾಹಿಸುವ ಸಲುವಾಗಿ ಪ್ರತಿ ಸಂಘಕ್ಕೆ ರೂ. ೧೦೦೦೦-೦೦ ದಂತೆ ಒಟ್ಟು ರೂ. ೨೦.೦೦ ಲಕ್ಷಗಳ ಅವಶ್ಯಕತೆಯಿದೆ.

೯. ಇದುವರೆಗೂ ಸಹ ರಾಜ್ಯದ ಮೇಕೆಗಳ ಅಭಿವೃದ್ಧಿಗಾಗಿ ಯಾವುದೇ ಕಾರ್ಯಕ್ರಮಗಳು ಇಲ್ಲದಿರುವುದರಿಂದ, ಪ್ರಥಮ ಬಾರಿಗೆ ರಾಜ್ಯದಲ್ಲಿನ ಕುರಿ ಸಂವರ್ಧನಾ ಕೇಂದ್ರಗಳಲ್ಲಿ ಹೆಚ್ಚು ಲಾಭದಾಯಕವಾದ ಮೇಕೆ ಸಾಕಾಣಿಕಾ ಕೇಂದ್ರಗಳನ್ನು ಸ್ಥಾಪಿಸಿ, ಉತ್ತಮ ತಳಿಯ ಮೇಕೆಗಳನ್ನು ಒದಗಿಸಲು ಕ್ರಮಕೈಗೊಳ್ಳುವುದು.

೧೦. ರಾಜ್ಯದಲ್ಲಿರುವ ಕುರಿಗಳ ತಳಿ ಅಭಿವೃದ್ಧಿಗಾಗಿ ಹೆಚ್ಚಿನ ಸಂಖ್ಯೆಯಲ್ಲಿ ಮಿಶ್ರತಳಿ ಟಗರುಗಳ ಅವಶ್ಯಕತೆಯಿದ್ದು, ಈಗಾಗಲೇ ನಿಗಮದ ಅಧೀನ ಕೇಂದ್ರಗಳಲ್ಲಿ ಲಭ್ಯವಿರುವ ಮಿಶ್ರತಳಿ ಟಗರುಗಳ ಜತೆಗೆ ಹೊರರಾಜ್ಯಗಳಿಂದ ಮಿಶ್ರತಳಿ ಟಗರುಗಳನ್ನು ಖರೀದಿಸಿ ಸರಬರಾಜು ಮಾಡುವ ಸಲುವಾಗಿ ರೂ. ೩೦.೦೦ ಲಕ್ಷಗಳ ಅನುದಾನದ ಅವಶ್ಯಕತೆಯಿದೆ.

೧೧. ನಿಗಮದ ಕಾರ್ಯಚಟುವಟಿಕೆಗಳನ್ನು ಬಲಪಡಿಸುವ ಸಲುವಾಗಿ ೨೦೦೪-೦೫ನೇ ಸಾಲಿನಲ್ಲಿ ಯೋಜನೇತರ ಹಾಗೂ ಯೋಜನಾ ಲೆಕ್ಕ ಶೀರ್ಷಿಕೆಯಡಿಯಲ್ಲಿ ನಿಗಮಕ್ಕೆ ಈಗಾಗಲೇ ನಿಗದಿಪಡಿಸಿರುವ ವಂಟನದ ಜೊತೆಯಲ್ಲಿ ಹೆಚ್ಚುವರಿಯಾಗಿ ಕ್ರಮವಾಗಿ ರೂ. ೧೪೩.೮೮ ಲಕ್ಷ ಹಾಗೂ ರೂ. ೧೩೦.೦೦ ಲಕ್ಷಗಳ ವಂಟನವನ್ನು ಒದಗಿಸುವುದು.

**ಮುಕ್ತಾಯ :**

ಕುರಿ ಮೇಕೆಗಳು ಜೀವಂತ ಚಲಿಸುವ ಬ್ಯಾಂಕ್ ಎಂದು ಖ್ಯಾತಿ ಪಡೆದಿವೆ. ಕುರಿಸಂಗೋಪನಾ ಚಟುವಟಿಕೆಯಿಂದ ಕುರಿಗಾರನ ವೈಯಕ್ತಿಕ ಆದಾಯದ ವೃದ್ಧಿ, ಗ್ರಾಮೀಣ ಜನರ ಜೀವನ ಮಟ್ಟ ಸುಧಾರಣೆ, ರಾಜ್ಯದ ಹಾಗೂ ದೇಶದ ಆರ್ಥಿಕ ಬೆಳವಣಿಗೆಗೆ ಈ ಪ್ರಾಣಿಗಳು ಪೂರಕವಾಗುತ್ತವೆ. ಪ್ರಗತಿಶೀಲ ಮತ್ತು ಮುಂದುವರೆದ ರಾಷ್ಟ್ರಗಳಿಗೆ ಕುರಿ ಮತ್ತು ಮೇಕೆಗಳ ಉತ್ಪನ್ನಗಳ ರಫ್ತಿನಿಂದಾಗಿ ದೇಶದ ಬೊಕ್ಕಸಕ್ಕೆ ಬರಬಹುದಾದ ವಿದೇಶಿ ವಿನಿಮಯ ಹೆಚ್ಚಿಸಿ ಸಮಾಜದಲ್ಲಿ ಜನರ ಜೀವನವನ್ನೇ ಬದಲಾಯಿಸುವ ಶಕ್ತಿಯನ್ನು ಹೊಂದಿವೆ. ಆದ್ದರಿಂದ ಕುರಿ ಸಂಗೋಪನೆಯು ಬರೀ ಸರ್ಕಾರದ ಕಾರ್ಯಕ್ರಮವಾಗದೇ ಸಮಸ್ತ ಜನರ ಆಂದೋಲನವಾಗಬೇಕು. ಇದು ಸಹಕಾರಿ ಆಂದೋಲನವಾಗಿ ವೃದ್ಧಿಗೊಂಡು ಒಂದು ಸ್ವಯಂಸೇವೆಯ ಆಂದೋಲನವಾಗಿ ಬೆಳಗಬೇಕು. ಇದಕ್ಕೆ ಎಲ್ಲಾ ರೀತಿಯ ಸರ್ಕಾರದ ಬೆಂಬಲ ಸಿಗುವಂತಾಗಬೇಕು.

**"ಕುರಿ ಸಾಕಿ- ಕುಬೇರರಾಗಿ"** ಎಂಬ ನಾಣ್ಣುಡಿಯ ಸತ್ಯದ ಅರಿವಾಗುವ ದಿನ ಬರಲಿ ಎಂದು ಆಶಿಸೋಣ.

●




# ಹಾಲು ಉತ್ಪಾದನೆ

ಡಾ. ಟಿ. ಅಶ್ವತ್ಥನಾರಾಯಣ

ಕರ್ನಾಟಕ ಗ್ರಾಮೀಣ ಅಭಿವೃದ್ಧಿಯಲ್ಲಿ ಪಶುಸಂಗೋಪನೆಯ ಮಹತ್ವ ಡಾ. ಕುರಿಯನ್‌ರವರ ವಿಚಾರಧಾರೆ, ಹಾಲು ಉತ್ಪಾದನೆಯಲ್ಲಿ ರಾಷ್ಟ್ರದಲ್ಲಿ ಕರ್ನಾಟಕದ ಸ್ಥಾನ, ಸಹಕಾರ ತತ್ವದ ಮೇಲೆ ಹೈನುಗಾರಿಕೆ ಉದ್ಯಮ ನಡೆಯುತ್ತಿರುವ ರೀತಿ, ಗ್ರಾಮ ಪ್ರದೇಶದಲ್ಲಿ ಈ ಉದ್ಯಮದ ಮಹತ್ವ, ಇದರ ಅಭಿವೃದ್ಧಿಗೆ ಕೈಗೊಳ್ಳಬೇಕಾದ ಕಾರ್ಯಕ್ರಮಗಳು, ಭಾರತದ ಹೈನುಗಾರಿಕೆಯಲ್ಲಿ ಕರ್ನಾಟಕದ ಸ್ಥಾನ. ೧೯೭೭ ರ ಜಾನುವಾರು ಗಣತಿಯ ಪ್ರಕಾರ ನಮ್ಮ ರಾಜ್ಯದಲ್ಲಿ ೧೦೮೩೧೧೩೪ ಹಸುಗಳು, ೪೩೬೭೧೮೭ ಎಮ್ಮೆಗಳು, ೮೦೦೩೦೭೮ ಕುರಿಗಳು, ೨೧೫೯೮೭೫ ಕೋಳಿಗಳಿವೆ. ಈ ಎಲ್ಲಾ ಜಾನುವಾರುಗಳ ರಕ್ಷಣೆಗಾಗಿ ನಮ್ಮ ರಾಜ್ಯದಲ್ಲಿ ೩೭೭೩ ಪಶುವೈದ್ಯಕೀಯ ಚಿಕಿತ್ಸಾಲಯಗಳಿವೆ. ವೈಜ್ಞಾನಿಕ ಹೈನುಗಾರಿಕೆಗೆ ಅವಶ್ಯಕವಾದ ಹಾಲು ಉತ್ಪಾದಕರ ಸಹಕಾರ ಸಂಘಗಳು, ಕೃತಕ ಗರ್ಭಧಾರಣಾ ಕೇಂದ್ರಗಳು ಹಾಗೂ ಸುಧಾರಿತ ಹುಲ್ಲಿನ ಬೀಜ ಮತ್ತು ಬೇರು, ತಾಂತ್ರಿಕ ಸಲಹೆ ಇತ್ಯಾದಿಗಳನ್ನು ನಮ್ಮ ಪಶುಪಾಲನಾ ಇಲಾಖೆ ಹಾಗೂ ಕರ್ನಾಟಕ ಹಾಲು ಮಹಾಮಂಡಳಿಯಿಂದ ನೀಡಲಾಗುತ್ತಿದೆ. ಇದಲ್ಲದೇ ಸ್ವಯಂ ಉದ್ಯೋಗಕ್ಕಾಗಿ ವಿದ್ಯಾವಂತ ಗ್ರಾಮೀಣ ನಿರುದ್ಯೋಗಿ ಯುವಕರಿಗೆ ಮತ್ತು ಮಹಿಳೆಯರಿಗೆ ಇಲ್ಲಿ ಪ್ರಾಧಾನ್ಯತೆ ಕೊಡಲಾಗಿದೆ.

**_ಕರ್ನಾಟಕ ಗ್ರಾಮೀಣ ಅಭಿವೃದ್ಧಿಯಲ್ಲಿ ಪಶುಸಂಗೋಪನೆಯ ಮಹತ್ವ, ಡಾ. ಕುರಿಯನ್‌ರವರ ವಿಚಾರಧಾರೆ, ಹಾಲು ಉತ್ಪಾದನೆಯಲ್ಲಿ ರಾಷ್ಟ್ರ ದಲ್ಲಿ ಕರ್ನಾಟಕದ ಸ್ಥಾನ, ಸಹಕಾರ ತತ್ವದ ಮೇಲೆ ಹೈನು ಗಾರಿಕೆ ಉದ್ಯಮ ನಡೆಯುತ್ತಿರುವ ರೀತಿಯನ್ನು ಇಲ್ಲಿ ಚಿಂತಿಸಲಾಗಿದೆ._**

ಕರ್ನಾಟಕದಲ್ಲಿ ಮುಖ್ಯ ಹೈನು ತಳಿಗಳೆಂದರೆ ಹೊಲೆಸ್ಟಿನ್ ಫ್ರಿಷಿಯನ್, ಜರ್ಸಿ, ಕೃಷ್ಣಾ ವ್ಯಾಲಿ, ಖಿಲಾರಿ ಹಾಗೂ ಎಮ್ಮೆ ತಳಿಗಳಲ್ಲಿ ಸೂರ್ತಿ, ಮುರ್ರಾ, ಪಂಡರಾಪುರಿ, ಧಾರವಾರಿ. ನಮ್ಮ ದೇಶದಲ್ಲಿ ಕೆಲವು ನಿರ್ದಿಷ್ಟ ಹೈನು ತಳಿಗಳು ಇದ್ದರೂ ಸಹ ಅವುಗಳ ಹಾಲು ಉತ್ಪಾದನಾ ಸಾಮರ್ಥ್ಯ ಹೆಚ್ಚು ಲಾಭದಾಯಕವಾಗಿಲ್ಲ; ಆದರೆ ಅವು ಕೆಲಸ ಮತ್ತು ಹಾಲು ಉತ್ಪಾದನೆಯಲ್ಲಿ ದ್ವಿಗುಣ ಶಕ್ತಿ ಹೊಂದಿರುತ್ತವೆ.

ಗ್ರಾಮೀಣ ಪ್ರದೇಶದ ಜನರಿಗೆ ಮತ್ತು ನಿರುದ್ಯೋಗಿ ವಿದ್ಯಾವಂತ ಯುವಕ ಯುವತಿಯರಿಗೆ ಹೈನುಗಾರಿಕೆ ಒಂದು ಲಾಭದಾಯಕ ಉದ್ಯಮ. ಈ ಉದ್ಯಮಕ್ಕೆ ಸುಲಭವಾಗಿ ಬಂಡವಾಳ ಸಿಗುತ್ತದೆ. ನಿರುದ್ಯೋಗ ನಿವಾರಣೆಗೆ ನಬಾರ್ಡ್ ಬ್ಯಾಂಕ್ ಮತ್ತು ಎಲ್ಲಾ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಸಾಲ ದೊರೆಯುತ್ತದೆ. ಈ ಸಾಲದ ಬಡ್ಡಿ ಕಡಿಮೆ. ಡಿಪಿಎಪಿ ಮತ್ತು ಎಸ್‌ಎಲ್‌ಪಿಸಿ ಯೋಜನೆಯಲ್ಲೂ ಸಬ್ಸಿಡಿ ಇದ್ದು, ಕಡಿಮೆ ಬಡ್ಡಿ ದರದಲ್ಲಿ ಸಾಲ ಸಿಗುತ್ತದೆ. ರಾಷ್ಟ್ರೀಯ ಹೈನು ಅಭಿವೃದ್ಧಿ ಮಂಡಳಿಯ ಅಧೀನದಲ್ಲಿ ಆಪರೇಷನ್ ಫ್ಲಡ್-I (Operation

Flood-I) ರ ಅಂಗವಾಗಿ ಕರ್ನಾಟಕದ ಹೈನು ಅಭಿವೃದ್ಧಿ ನಿಗಮವು ಅಧಿಕ ಹಾಲು ಉತ್ಪಾದನೆಗಾಗಿ ಜಾನುವಾರುಗಳಲ್ಲಿ ಮಿಶ್ರತಳಿ ವರ್ಧನೆ, ಅವುಗಳ ಉತ್ತಮ ನಿರ್ವಹಣೆ, ರೋಗ ನಿಯಂತ್ರಣ ಉದ್ದೇಶದಿಂದ ರಾಜ್ಯದ ೮ ಜಿಲ್ಲೆಗಳಲ್ಲಿ ಬೆಂಗಳೂರನ್ನು ಕೇಂದ್ರಸ್ಥಾನವಾಗಿಟ್ಟುಕೊಂಡು ಕಾರ್ಯಾಚರಣೆಗೆ ಬಂದಿತು. ನಂತರ ಆಪರೇಷನ್ ಫ್ಲಡ್-II (Operation Flood-II) ರಲ್ಲಿ ಈ ನಿಗಮವು ಮಹಾಮಂಡಳಿಯಾಗಿ ಪರಿವರ್ತನೆಗೊಂಡು ತನ್ನ ಕಾರ್ಯಾಚರಣೆಯಲ್ಲಿ ಎಮ್ಮೆಗಳನ್ನು ಒಳಗೊಂಡು ಇಡೀ ರಾಜ್ಯದಲ್ಲಿ ತನ್ನ ಚಟುವಟಿಕೆಗಳನ್ನು ವಿಸ್ತರಿಸಿಕೊಂಡಿದೆ ಮತ್ತು ಉತ್ಪಾದನೆಯಾದ ಹಾಲನ್ನು ಶೇಖರಿಸಿ ತನ್ನ ಕ್ಷೀರಾಗಾರದಲ್ಲಿ ಸಂಸ್ಕರಿಸಿ ಹಾಲು ಹಾಗೂ ಅದರ ಉತ್ಪನ್ನಗಳನ್ನು ಸಾರ್ವಜನಿಕರಿಗೆ ವಿತರಣೆ ಮಾಡುತ್ತದೆ.

ಡಾ। ಕುರಿಯನ್‌ರವರು ಭಾರತೀಯ ಹಾಗೂ ಕರ್ನಾಟಕ ರಾಜ್ಯ ರೈತರ ಅರ್ಥವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸುವ ವಿಷಯವನ್ನು ಕುರಿತಂತೆ ಶಾಶ್ವತವಾದ ಫಲವನ್ನು ನೀಡುವಂತಹ ಯೋಜನೆಯನ್ನು ಯೋಚಿಸಿ ಅನುಷ್ಠಾನಕ್ಕೆ ತಂದಿರುವರು.

ಕರ್ನಾಟಕ ಹಾಲು ಮಹಾಮಂಡಳಿಯು ಸಹಕಾರ ತತ್ವದ ಮೇಲೆ ಕಾರ್ಯನಿರ್ವಹಿಸುತ್ತಾ ಬಂದಿದೆ. ಇವುಗಳಲ್ಲಿ ಮುಖ್ಯವಾಗಿ

**೧) ಸ್ವಯಂಪ್ರೇರಿತ ಮತ್ತು ಮುಕ್ತ ಸದಸ್ಯತ್ವ**

**೨) ಆರ್ಥಿಕ ಚಟುವಟಿಕೆಯಲ್ಲಿ ಸದಸ್ಯರ ಪಾಲು**

**೩) ರಕ್ಷಣೆ, ತರಬೇತಿ, ಪ್ರಚಾರ**

**೪) ಸಾಮಾಜಿಕ ಕಳಕಳಿ**

**೫) ಪ್ರಜಾಸತ್ತಾತ್ಮಕ ಸದಸ್ಯ ಹತೋಟಿ**

**೬) ಸ್ವಾಯತ್ತತೆ ಮತ್ತು ಸ್ವಾತಂತ್ಯ**

**೭) ಸಹಕಾರ ಸಂಘಗಳ ನಡುವೆ ಸಹಕಾರ- ಇವುಗಳನ್ನು ಒಳಗೊಂಡಿದೆ.**

ಕೇಂದ್ರ ಸರ್ಕಾರದ ಹಾಲು ಮತ್ತು ಹಾಲು ಉತ್ಪನ್ನಗಳ ಆರ್ಡರ್-೯೨ ರ ಕಾಯಿದೆ ಪ್ರಕಾರ ಪ್ರತಿದಿನ ೧೦,೦೦೦ ಲೀಟರ್‌ಗಿಂತ ಹೆಚ್ಚು ಹಾಲನ್ನು ಸಂಗ್ರಹಿಸುವ ಮತ್ತು ಸಂಸ್ಕರಿಸುವ ಡೈರಿ ಘಟಕಗಳಿಗೆ ರಾಜ್ಯ ನೋಂದಣಿ ಪ್ರಾಧಿಕಾರ ಅಥವಾ ಕೇಂದ್ರ ನೋಂದಣಿ ಪ್ರಾಧಿಕಾರದಿಂದ ಪರವಾನಗಿ ಪಡೆಯಬೇಕಾಗಿದೆ. ಹಾಗೇಯೇ ೫೦೦ ಮೆಟ್ರಿಕ್ ಟನ್ ಪ್ರತಿವರ್ಷ ಹಾಲು ಉತ್ಪನ್ನಗಳ ಮಾರಾಟ ಮಾಡುವ ಘಟಕಗಳಿಗೂ ಪರವಾನಗಿ ನೀಡಲಾಗಿದೆ. ರಾಜ್ಯ ನೋಂದಣಿ ಪ್ರಾಧಿಕಾರಕ್ಕೆ ಪ್ರತಿ ದಿನ ೧೦,೦೦೦ ಲೀಟರ್ ಹಾಲಿನಿಂದ ೨.೦೦ ಲಕ್ಷ ಲೀಟರ್ ಹಾಲಿನ ಡೈರಿಗೆ ಪರವಾನಗಿ ನೀಡುವ ಅಧಿಕಾರ ನೀಡಲಾಗಿದೆ. ಇದುವರೆಗೆ ನಮ್ಮ ರಾಜ್ಯದಲ್ಲಿರುವ ೧೫ ಡೈರಿ ಘಟಕಗಳಿಗೆ ಕೇಂದ್ರ ನೋಂದಣಿ ಪ್ರಾಧಿಕಾರದಿಂದಲೂ ಹಾಗೂ ೧೯ ಡೈರಿ ಘಟಕಗಳಿಗೆ ರಾಜ್ಯ ನೋಂದಣಿ ಪ್ರಾಧಿಕಾರದಿಂದಲೂ ಪರವಾನಗಿ ನೀಡಲಾಗಿದೆ.

ಹಾಲಿನ ಉತ್ಪಾದನೆಯಲ್ಲಿ ಕರ್ನಾಟಕ ರಾಜ್ಯವು ೯ ನೇ ಸ್ಥಾನವನ್ನು ಹೊಂದಿರುತ್ತದೆ. ಮಾದರಿ ಸಮೀಕ್ಷೆ 2001-2002ರ ಪ್ರಕಾರ ನಮ್ಮ ರಾಜ್ಯದಲ್ಲಿ ಪ್ರತಿ ದಿನ ೧೩೧ ಲಕ್ಷ ಕೆ.ಜಿ. ಗಳಷ್ಟು ಹಾಲಿನ ಉತ್ಪಾದನೆಯಾಗುತ್ತಿದೆ. ಇದರ ಪೈಕಿ ೨೧ ಲಕ್ಷ ಕೆ.ಜಿ.ಗಳಷ್ಟು ಹಾಲನ್ನು ಮಾತ್ರ ಕರ್ನಾಟಕ ಹಾಲು ಮಹಾಮಂಡಳಿ ಸಂಗ್ರಹಿಸಿ ವಿತರಣೆ ಮಾಡುತ್ತಿದೆ. ಇನ್ನುಳಿದ ಹಾಲು ಖಾಸಗಿ ಡೈರಿಗಳು ಹಾಗೂ ಸಣ್ಣ ಪ್ರಮಾಣದ ಮಾರಾಟಗಾರರಿಂದ ಹಾಲಿನ ವಿತರಣೆಯಾಗುತ್ತಿದೆ. ಒಂದು ರಾಜ್ಯದಿಂದ ಮತ್ತೊಂದು ರಾಜ್ಯಕ್ಕೆ ಹಾಲಿನ ಸರಬರಾಜು ತಡೆಗಟ್ಟಲು ಕಾನೂನಿನ ಅನ್ವಯ ಸಾಧ್ಯವಿರುವುದಿಲ್ಲ. ಕೇಂದ್ರ ಸರ್ಕಾರವು ದಿನಾಂಕ: ೧-೪-೨೦೦೨ರಂದು ಹೊರಡಿಸಿದ ಆದೇಶದ ಅನ್ವಯ ಹಾಲನ್ನು ತಡೆರಹಿತ (ಡಿ-ಕಂಟ್ರೋಲ್) ವಸ್ತುವನ್ನಾಗಿ ಪರಿಗಣಿಸಿದೆ. ನಮ್ಮ ರಾಜ್ಯದಲ್ಲಿ ಈಗ ೩೪ ಡೈರಿ ಘಟಕಗಳಿವೆ. ನಮ್ಮ ರಾಜ್ಯಕ್ಕೆ ನೆರೆ ರಾಜ್ಯವಾದ ತಮಿಳುನಾಡಿನ ಈರೋಡ್‌ನಿಂದ ಕಲಬೆರಕೆ ಹಾಲು ಕಡಿಮೆ ಬೆಲೆಯಲ್ಲಿ ಸರಬರಾಜಾಗುತ್ತಿದ್ದು ರಾಜ್ಯದಲ್ಲಿ ಉತ್ಪತ್ತಿಯಾಗುತ್ತಿರುವ ಹಾಲಿಗೆ ಬೇಡಿಕೆ ಕುಸಿಯುತ್ತಿದ್ದು ನಮ್ಮ ರೈತರು ಸರಬರಾಜು ಮಾಡುತ್ತಿರುವ ಹಾಲಿಗೆ ಒಳ್ಳೆಯ ಬೆಲೆ ಸಿಕ್ಕದೇ ಕಂಗಾಲಾಗಿದ್ದಾರೆ. ಆದುದರಿಂದ ಈ ರೈತರ ಹಿತರಕ್ಷಣೆ ಕಾಪಾಡಲು ಹಾಗೂ ಜನರ ಆರೋಗ್ಯ ರಕ್ಷಣೆಯ ಹಿತದೃಷ್ಟಿಯಿಂದ ಕಲಬೆರಕೆ ಹಾಲಿನ ಸರಬರಾಜನ್ನು ತಡೆಗಟ್ಟಲು ಸಮರೋಪಾದಿಯಲ್ಲಿ ಕ್ರಮಗಳನ್ನು ಕೈಗೊಳ್ಳಲು ಪಶುಪಾಲನಾ ಇಲಾಖೆ ಹಾಗೂ ಬೆಂಗಳೂರು ನಗರ ಪಾಲಿಕೆಯವರು ಕರ್ತವ್ಯ ನಿರ್ವಹಿಸುತ್ತಿರುವರು.

●




# ಒಳನಾಡು ಮೀನುಗಾರಿಕೆ

ಡಾ. ಡಿ. ಸೀನಪ್ಪ
ಡಾ. ಎಚ್. ಖಾದರ್‌ಖಾನ್

ಗ್ರಾಮೀಣ ಅಭಿವೃದ್ಧಿಯಲ್ಲಿ ಮೀನುಗಾರಿಕೆ ಪ್ರಮುಖ ಪಾತ್ರ ವಹಿಸಿದೆ. ಪ್ರಪಂಚದ ಮೀನು ಉತ್ಪಾದನೆ ಗ್ರಾಮೀಣ ಜಲಸಂಪನ್ಮೂಲಗಳನ್ನು ಹೆಚ್ಚಾಗಿ ಅವಲಂಬಿಸಿದ್ದು, ಕಡಿಮೆ ಆದಾಯ ಹೊಂದಿರುವ ರಾಷ್ಟ್ರಗಳಿಂದ ಬರುತ್ತಿದೆ ಮತ್ತು ಒಟ್ಟು ಮೀನು ಉತ್ಪಾದನೆಯಲ್ಲಿ ಶೇ. ೬೦ರಷ್ಟು ಪಾಲು ಏಷ್ಯಾ ಖಂಡದಿಂದಾಗುತ್ತಿದೆ. ರಾಷ್ಟ್ರದಲ್ಲಿ ಮೀನುಗಾರಿಕೆ ಪ್ರಾಚೀನ ಕಾಲದಿಂದಲೂ ಪ್ರಚಲಿತವಾಗಿದ್ದು ಗ್ರಾಮೀಣ ಅಭಿವೃದ್ಧಿಯಲ್ಲಿ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಪ್ರತಿವರ್ಷ ಶೇಕಡ ೪ರಿಂದ ೬ರ ಪ್ರಮಾಣದಲ್ಲಿ ಅಭಿವೃದ್ಧಿಗೊಂಡು, ಸುಮಾರು ೬ದಶಲಕ್ಷ ಟನ್‌ನಷ್ಟು ಮೀನು ಉತ್ಪಾದನೆಯಾಗುತ್ತಿದೆ. ದೇಶವು ಮೀನುಗಾರಿಕೆಯಿಂದ ಸುಮಾರು ೬,೦೦೦ ಕೋಟಿಗೂ ಹೆಚ್ಚು ವಿದೇಶಿ ವಿನಿಮಯವನ್ನು ಪ್ರತಿವರ್ಷ ಗಳಿಸುತ್ತಿದೆ.

ಗ್ರಾಮೀಣ ಮಟ್ಟದಲ್ಲಿ ರೈತರ ಆರ್ಥಿಕತೆ ಕಡಿಮೆ ಮಟ್ಟದಲ್ಲಿರುವುದರಿಂದ ಪೌಷ್ಟಿಕ ಆಹಾರದ ಬಳಕೆ ಕಡಿಮೆ. ಅಲ್ಲದೆ, ಪ್ರಾಣಿಜನ್ಯ ಸಸಾರಜನಕದ ಬಳಕೆ ಗ್ರಾಮೀಣ ಮಕ್ಕಳ, ಮಹಿಳೆಯರ ಮತ್ತು ವೃದ್ಧರ ಆರೋಗ್ಯ ದೃಷ್ಟಿಯಿಂದ ಅವಶ್ಯಕತೆಯಿದ್ದರೂ ಬಳಕೆ ವಿರಳ. ಸಾಂಪ್ರಾದಾಯಿಕ ಮೀನುಗಾರಿಕೆ ಹಾಗೂ ಪಾಲನೆಯಿಂದ ಉತ್ಪಾದಿಸಿದ ಮೀನು ಪ್ರಾಚೀನ ಕಾಲದಿಂದಲೂ ಭಾರತೀಯರ ಆಹಾರದಲ್ಲಿ ಸೇರಿಕೊಂಡು ಪೌಷ್ಟಿಕ ಆಹಾರದ ಕೊರತೆ ನಿಭಾಯಿಸುವಲ್ಲಿ ಸಹಕಾರಿಯಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಮೀನುಗಾರಿಕೆ ಸಣ್ಣ ರೈತರ ಜೀವನಾಧಾರವಾಗಿ ಬೆಳೆಯುತ್ತಿದ್ದು, ಜನತೆಯ ಸಾಮಾಜಿಕ ಮತ್ತು ಆರ್ಥಿಕ ಪ್ರಗತಿಗೆ ಸಾಧಕವಾಗಿದೆ. ಅಲ್ಲದೇ ಕಡಿಮೆ ಬೆಲೆಯಲ್ಲಿ ಉತ್ತಮ ಪೌಷ್ಟಿಕ ಆಹಾರ ಹಳ್ಳಿಗಳಲ್ಲಿ ದೊರೆಯುವಂತಾಗಿದೆ. ಇದರ ಸಾಕಣೆಯು ಹಲವರಿಗೆ ವೃತ್ತಿಯಾಗಿದ್ದು ಗ್ರಾಮೀಣ ಜನತೆಯ ಆರ್ಥಿಕ ಏಳಿಗೆಗೆ ಒಂದು ಪ್ರಮುಖ ಸಾಧನವಾಗಿದೆ.

*ಪ್ರಾಚೀನ ಕಾಲದಿಂದಲೂ ಭಾರತೀಯರ ಆಹಾರ ಪದ್ಧತಿಯಲ್ಲಿ ಮೀನು ಸೇರಿಕೊಂಡು ಪೌಷ್ಟಿಕ ಆಹಾರದ ಕೊರತೆ ನೀಗಿಸುವಲ್ಲಿ ಸಹಕಾರಿಯಾಗಿದೆ. ಸಣ್ಣ, ಅತಿ ಸಣ್ಣ ರೈತರ ಜೀವನಾಧಾರವಾಗಿದೆ ಮೀನುಗಾರಿಕೆ.*

**ಮೀನಿನ ಪೌಷ್ಟಿಕತೆ :**

ಪೌಷ್ಟಿಕತೆ ದೃಷ್ಟಿಯಲ್ಲಿ ಮೀನು ಉತ್ತಮ ಆಹಾರ. ಸುಲಭವಾಗಿ ಪಚನವಾಗುವಂತಹ ಒಳ್ಳೆಯ ಗುಣಮಟ್ಟದ ಸಸಾರಜನಕ, ಹೆಚ್ಚಿನ ಪ್ರಮಾಣದಲ್ಲಿ ಒಮೇಗ-೩ ಗುಂಪಿನ ಅಪರಿಪಕ್ವ ಕೊಬ್ಬಿನ ಆಮ್ಲ, ಕೊಬ್ಬಿನಲ್ಲಿ ಕರಗಿರುವ 'ಎ', 'ಡಿ' 'ಇ', 'ಕೆ', ಜೀವಸತ್ವಗಳು ಹಾಗೂ ಅಧಿಕ

ಪ್ರಮಾಣದಲ್ಲಿ ಲವಣ (ಕ್ಯಾಲ್ಷಿಯಂ, ರಂಜಕ, ಕಬ್ಬಿಣ, ಐಯೋಡಿನ್ ಮತ್ತು ಸೆಲೇನಿಯಂ)ಗಳನ್ನು ಹೊಂದಿದೆ. ಪೋಷಕಾಂಶಗಳ ಗುಣಮಟ್ಟದಲ್ಲಿ ಇತರೆ ಮಾಂಸಗಳಿಗಿಂತ ಶ್ರೇಷ್ಠ, ಆರೋಗ್ಯದ ದೃಷ್ಟಿಯಿಂದಲೂ ಉತ್ತಮ ಮತ್ತು ಕಡಿಮೆ ಖರ್ಚಿನಲ್ಲಿ ದೊರೆಯಬಹುದಾದ ಆಹಾರ. ಆ ಕಾರಣ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಮೀನಿಗೆ ಅಪಾರವಾದ ಬೇಡಿಕೆಯಿದೆ.

ರಾಷ್ಟ್ರದಲ್ಲಿ ತಲಾವಾರು ಪ್ರತಿವರ್ಷ ೯ ಕೆ.ಜಿ.ಯಷ್ಟು ಮೀನು ಮಾತ್ರ ಬಳಕೆಯಾಗುತ್ತಿದೆ. ಹಳ್ಳಿಗಳಲ್ಲಿ ಉತ್ಪಾದಿಸಲ್ಪಡುತ್ತಿರುವ ಮೀನಿನ ಶೇ. ೭೮ ಭಾಗ ಗ್ರಾಮೀಣ ಪ್ರದೇಶದಲ್ಲಿಯೇ ಉಪಯೋಗಿಸಲಾಗುತ್ತಿದೆಯೆಂದು ಅಂದಾಜಿಸಲಾಗಿದೆ. ಮೀನಿನ ಬಳಕೆ ಕನಿಷ್ಠ ೧೧ ರಿಂದ ೧೩ ಕೆ.ಜಿ.ಯಷ್ಟಾದರೂ ಹೆಚ್ಚಾಗಬೇಕೆಂದು ರಾಷ್ಟ್ರಮಟ್ಟದಲ್ಲಿ ಸರ್ವ ಪ್ರಯತ್ನಗಳು ನಡೆಯುತ್ತಿವೆ. ಹೆಚ್ಚುತ್ತಿರುವ ಮೀನಿನ ಬೇಡಿಕೆ ನಿಭಾಯಿಸಲು ಮೀನುಗಾರಿಕೆಯ ಸರ್ವತೋಮುಖ ಅಭಿವೃದ್ಧಿಯಾಗಬೇಕಾಗಿದೆ. ಈ ನಿಟ್ಟಿನಲ್ಲಿ ಕರಾವಳಿ ಮೀನುಗಾರಿಕೆ, ಹಿನ್ನೀರು ಮತ್ತು ಒಳನಾಡು ಮೀನುಗಾರಿಕೆ, ಮೀನುಪಾಲನೆ, ಸೀಗಡಿ ಮತ್ತು ಇತರೆ ಆಹಾರಕ್ಕಾಗಿ ಉಪಯೋಗಿಸುವಂತಹ ಜಲಚರಗಳ ಪಾಲನೆ ಮತ್ತು ಅಭಿವೃದ್ಧಿ ಯೋಜನೆಗಳು ಬಹಳ ಮುಖ್ಯ ಪಾತ್ರವನ್ನು ವಹಿಸಿವೆ.

## ಗ್ರಾಮೀಣ ಮೀನುಕೃಷಿಗೆ ಒಳನಾಡು ಜಲಸಂಪನ್ಮೂಲ :

ರಾಜ್ಯವು ಸುಮಾರು ೫.೩ ಲಕ್ಷ ಹೆಕ್ಟೇರ್‌ನಷ್ಟು ಒಳನಾಡು ಜಲಸಂಪನ್ಮೂಲ ಹೊಂದಿದ್ದು ರಾಷ್ಟ್ರದಲ್ಲಿ ೩ನೇ ಸ್ಥಾನವನ್ನು ಪಡೆದಿದೆ. ಶೇಕಡ ೬೦ಕ್ಕೂ ಹೆಚ್ಚು ಜಲಸಂಪನ್ಮೂಲ ಕೆರೆ, ಕುಂಟೆ, ಕೊಳ ಹಾಗೂ ಸರೋವರಗಳ ರೀತಿಯಲ್ಲಿದ್ದು ಸುಮಾರು ಶೇ. ೪೦ರಷ್ಟು ಪ್ರದೇಶ ೭೪ ಜಲಾಶಯಗಳಿಂದ ಕೂಡಿದೆ (೨.೩ ಲಕ್ಷ ಹೆಕ್ಟೇರ್). ರಾಜ್ಯದ ಜಲಾಶಯಗಳ ಒಟ್ಟು ನೀರು ಹರಡಿದ ಕ್ಷೇತ್ರವು ಇತರೆ ರಾಜ್ಯಗಳ ಕ್ಷೇತ್ರಕ್ಕಿಂತ ಹೆಚ್ಚು. ರಾಜ್ಯದಲ್ಲಿ ದೊಡ್ಡ ಕೆರೆಗಳು ಸುಮಾರು ೬,೧೧೫, ಸಣ್ಣ ಮತ್ತು ಅತಿ ಸಣ್ಣ ಕೆರೆಗಳು ೧೯,೬೦೭, ನದಿ ಪ್ರದೇಶ ೬,೦೦೦ ಕಿ.ಮೀ. ಮತ್ತು ನೀರಾವರಿ ಕಾಲುವೆ ೩,೦೦೦ ಕಿ.ಮೀ. ಪ್ರದೇಶವಿದ್ದು ಗ್ರಾಮೀಣ ಜನತೆಯ ಸರ್ವತೋಮುಖ ಅಭಿವೃದ್ಧಿಗೆ ಸಹಕಾರಿಯಾಗಿದೆ. ಇದಲ್ಲದೆ ರಾಜ್ಯದಲ್ಲಿ ಸುಮಾರು ೧೦ಲಕ್ಷ ಹೆಕ್ಟೇರ್‌ನಷ್ಟು ಜಲಾನಯನ ಪ್ರದೇಶ ಜೌಗು ಭೂಮಿಯಾಗಿದ್ದು ಮೀನು ಸಾಕಾಣಿಗೆ ಉತ್ತಮ ಅವಕಾಶಗಳನ್ನು ಕಲ್ಪಿಸಿದೆ.

ಜಲಾನಯನ ಪ್ರದೇಶದಲ್ಲಿ ಕೃಷಿ ಹೊಂಡಗಳು, ನಾಲಾ ಬದುಗಳು, ಗ್ರಾಮದ ಕೆರೆ, ಕುಂಟೆಗಳು ಇತರ ಪ್ರಮುಖ ಜಲಸಂಪನ್ಮೂಲಗಳಾಗಿವೆ. ಪ್ರತಿ ಉಪಜಲಾನಯನ ಪ್ರದೇಶದಲ್ಲಿ ಸುಮಾರು ೧೫ ರಿಂದ ೨೦ ಹೆಕ್ಟೇರ್ ಪ್ರದೇಶದ ಕೃಷಿ ಹೊಂಡಗಳು, ಸುಮಾರು ೧೦-೧೫ ಹೆಕ್ಟೇರ್ ಪ್ರದೇಶದ ಇತರ ನೀರು ಸಂಗ್ರಹಣ ಸೌಲಭ್ಯಗಳು ನಿರ್ಮಿತಗೊಂಡಿವೆ. ಪ್ರತಿ ಒಂದು ಹೆಕ್ಟೇರ್ ಪ್ರದೇಶಕ್ಕೆ ಸುಮಾರು ೨೫೦ ಘನ ಚ.ಮೀ. ವಿಸ್ತೀರ್ಣದ 'ಕೃಷಿ ಹೊಂಡ' ಜಲಾನಯನ ಪ್ರದೇಶದ ರೈತರ ಜಮೀನಿನಲ್ಲಿ ನಿರ್ಮಿಸಲಾಗಿದೆ. ರಾಜ್ಯದಲ್ಲಿ ಶೇಕಡ ೧೦-೧೫ ರಷ್ಟು ಜಮೀನು ಅಂತರ್ಜಲ ಆಧಾರಿತ ಕೃಷಿಯಾಗಿದ್ದು, ಸುಮಾರು ಶೇ. ೮೪ರಷ್ಟು ಕೊಳವೆ ಬಾವಿ ಹೊಂದಿರುವ ರೈತರು 'ನೀರು ಸಂಗ್ರಹಣ ಕೊಳ'ಗಳನ್ನು ಹೊಂದಿರುತ್ತಾರೆಂದು ಅಂದಾಜಿಸಲಾಗಿದೆ. ಈ ಕೊಳಗಳು ಸುಮಾರು ೧೦೦ರಿಂದ ೪೦೦ ಚ.ಮಿ. ವಿಸ್ತೀರ್ಣ ಹೊಂದಿದ್ದು ಮಣ್ಣಿನ ಇಲ್ಲವೆ ಸಿಮೆಂಟ್ ಅಥವಾ ಕಲ್ಲಿನಿಂದ ನಿರ್ಮಿತಗೊಂಡಿರುತ್ತವೆ. ಸುಮಾರು ೨೧,೦೦೦ ಹೆಕ್ಟೇರ್ ಪ್ರದೇಶ ಈ ಸಂಪನ್ಮೂಲದಿಂದ ಕೂಡಿರುವುದೆಂದು ಅಂದಾಜಿಸಲಾಗಿದೆ. ಈ ಎಲ್ಲಾ ಜಲ ಸಂಪನ್ಮೂಲಗಳನ್ನು ಗ್ರಾಮೀಣ ಮೀನು ಕೃಷಿಗೆ ಬಳಸಿಕೊಳ್ಳುವ ಸಾಧ್ಯತೆಗಳಿವೆ.

## ಒಳನಾಡು ಮೀನುಗಾರಿಕೆ ಉತ್ಪನ್ನ :

ರಾಜ್ಯದಲ್ಲಿ ಒಳನಾಡು ಮೀನುಗಾರಿಕೆಯಿಂದ ೨೦೦೦-೦೧ ಸಾಲಿನಲ್ಲಿ ೧.೩ ಲಕ್ಷ ಟನ್ ಮೀನು ಉತ್ಪಾದನೆಯಾಗಿದೆ. ರಾಜ್ಯದ ಒಟ್ಟಾರೆ ಮೀನು ಉತ್ಪಾದನೆಯಲ್ಲಿ ಶೇಕಡ ೨೧ ರಿಂದ ೩೦ರಷ್ಟು ಪಾಲು ಒಳನಾಡು ಮೀನುಗಾರಿಕೆಯಿಂದ ಆಗಿದ್ದು ಸುಮಾರು ೩೦೦ ಕೋಟಿ ರೂ. ಗಳಿಕೆಯಾಗಿದೆ. ಅಲ್ಲದೆ ಸುಮಾರು ೩೪,೯೦೫ ದೊಡ್ಡ ಕೆರೆಗಳ ವಿಲೇವಾರಿಯಿಂದ ರಾಜ್ಯದ ಬೊಕ್ಕಸಕ್ಕೆ ೧೯೬ ಲಕ್ಷ ರೂ. ಸಂದಾಯವಾಗಿದೆ. ಪ್ರತಿ ವರ್ಷ ೩ಲಕ್ಷ ಟನ್‌ಗೂ ಹೆಚ್ಚು ಮೀನು ಉತ್ಪಾದನೆಯನ್ನು ಒಳನಾಡು ಸಂಪನ್ಮೂಲಗಳಿಂದ ಪಡೆಯಬಹುದಾಗಿದೆ. ಆದರೆ ಸಂಪನ್ಮೂಲಗಳ ಸದ್ಬಳಕೆ ಮತ್ತು ಉತ್ಪಾದನೆ ತಾಂತ್ರಿಕತೆಗಳ ಅಳವಡಿಕೆ ಕಳಪೆಯಾಗಿರುವುದರಿಂದ ಉತ್ಪನ್ನ ಕುಂಠಿತವಾಗಿದೆ. ಲಭ್ಯವಿರುವ ಕೆರೆ, ಕುಂಟೆಗಳ ೪.೧೪ ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಸುಮಾರು

೧.೫ ಲಕ್ಷ ಹೆಕ್ಟೇರ್ ಪ್ರದೇಶವನ್ನು ಮೀನು ಕೃಷಿಗೆ ಅಳವಡಿಸಿ ಸುಮಾರು ೧.೫೫ ಲಕ್ಷ ಟನ್ ಮೀನು ಉತ್ಪಾದನೆ ಮಾಡಬಹುದೆಂದು ಅಂದಾಜಿಸಲಾಗಿದೆ.

## ಗ್ರಾಮೀಣ ಅಭಿವೃದ್ಧಿಯಲ್ಲಿ ಜಲಸಂಪನ್ಮೂಲಗಳ ಪಾತ್ರ :

ರಾಜ್ಯದಲ್ಲಿ ಸುಮಾರು ೫.೭೨ಲಕ್ಷ ಒಳನಾಡು ಮೀನುಗಾರರಿದ್ದು ಅದರಲ್ಲಿ ಸುಮಾರು ೧.೧೧ ಲಕ್ಷಕ್ಕೂ ಹೆಚ್ಚು ಜನರು ಮೀನುಗಾರಿಕೆಯಲ್ಲಿ ಸಕ್ರಿಯವಾಗಿ ಪಾಲುಗೊಂಡು ಜೀವನ ನಡೆಸುತ್ತಿದ್ದಾರೆ. ಗ್ರಾಮೀಣ ಅಭಿವೃದ್ಧಿ ದೃಷ್ಟಿಯಲ್ಲಿ ಕೆರೆಗಳು ಮಹತ್ತರವಾದ ಪಾತ್ರ ವಹಿಸಿವೆ. ರಾಜ್ಯದ ಸುಮಾರು ೩,೩೩೦ ದೊಡ್ಡ ಕೆರೆಗಳು (>೧೦-೨೫ ಹೆಕ್ಟೇರ್) ಜಿಲ್ಲಾ ಪಂಚಾಯತಿ ವ್ಯಾಪ್ತಿಯಲ್ಲಿ (೦.೫೨ ಲಕ್ಷ ಹೆಕ್ಟೇರ್) ಮತ್ತು ೨,೬೮೫ ಕೆರೆಗಳು (>೨೫ ಹೆಕ್ಟೇರ್) ಮೀನುಗಾರಿಕೆ ಇಲಾಖೆ ವ್ಯಾಪ್ತಿಯಲ್ಲಿ (೧.೮೭ ಲಕ್ಷ ಹೆಕ್ಟೇರ್) ಹಾಗೂ ೧೯,೯೯೭ ಸಣ್ಣ ಕೆರೆಗಳು (>೧೦ ಹೆಕ್ಟೇರ್) ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ ವ್ಯಾಪ್ತಿಯಲ್ಲಿ (೦.೫೪ಲಕ್ಷ ಹೆಕ್ಟೇರ್) ನಿರ್ವಹಣೆ ಮಾಡಲಾಗುತ್ತಿದೆ. ಸುಮಾರು ೬ರಿಂದ ೮ತಿಂಗಳ ಅವಧಿ ನೀರು ಹೊಂದಿರುವ ಕೆರೆಗಳಲ್ಲಿ ಪ್ರತಿ ಹೆಕ್ಟೇರ್‌ಗೆ ೫೦೦ ಕೆ.ಜಿ.ಯಂತೆ ಮತ್ತು ಸದಾ ನೀರಿರುವ ಕೆರೆಗಳಲ್ಲಿ ವರ್ಷಕ್ಕೆ ಒಂದು ಟನ್‌ಗೂ ಹೆಚ್ಚು ಮೀನು ಉತ್ಪನ್ನ ಪಡೆಯಬಹುದಾಗಿದೆ. ರಾಜ್ಯದ ಕೆರೆಗಳಿಂದಲೇ ಪ್ರತಿ ವರ್ಷ ಸುಮಾರು ೩ರಿಂದ ೪ ಲಕ್ಷ ಟನ್‌ಗೂ ಹೆಚ್ಚು ಮೀನು ಉತ್ಪನ್ನ ಮಾಡಬಹುದಾಗಿದೆ. ಮೀನುಗಾರಿಕೆ ಮಾಡಲು ಕೆರೆಗಳ ಗುತ್ತಿಗೆಯನ್ನು ಆದ್ಯತೆ ಮೇರೆಗೆ ಕರ್ನಾಟಕ ಮೀನುಗಾರಿಕೆ ಸಹಕಾರ ಸಂಘಗಳ ಮಹಾಮಂಡಳಿಗೆ, ಮೀನುಗಾರರ ಸಹಕಾರ ಸಂಘಗಳಿಗೆ, ಮಹಿಳಾ ಮೀನುಗಾರರ ಸಹಕಾರ ಸಂಘಗಳಿಗೆ,ಹಿಂದುಳಿದ ಜಾತಿ ಹಾಗೂ ಪಂಗಡದ ಮೀನುಗಾರರ ಸಹಕಾರ ಸಂಘಗಳಿಗೆ, ನಿರುದ್ಯೋಗಿ ಮೀನುಗಾರಿಕೆ ಪದವೀಧರರಿಗೆ, ಗ್ರಾಮಪಂಚಾಯಿತಿ ಮತ್ತು ಅಧಿಕೃತ ಯುವಕರ ಮತ್ತು ಮಹಿಳೆಯರ ಸಂಘಗಳಿಗೆ ನೀಡಲಾಗುತ್ತಿದೆ. ಕೆರೆಗಳಿಂದ ಉತ್ಪಾದನೆಯಾಗುತ್ತಿರುವ ಮೀನು ಗ್ರಾಮೀಣ ಮೀನು ಕೃಷಿಕರ ಆದಾಯ, ಜೀವನೋಪಾಯ ಮತ್ತು ಆರ್ಥಿಕ ಪ್ರಗತಿಗೆ ಪ್ರಮುಖವಾಗಿದೆ.

ರಾಜ್ಯದ ೪೧ ದೊಡ್ಡ ಜಲಾಶಯ (>೫೦೦ ಹೆಕ್ಟೇರ್)ಗಳು (೨.೨೨ ಲಕ್ಷ ಹೆಕ್ಟೇರ್) ಮತ್ತು ೩೩ ಸಣ್ಣ ಜಲಾಶಯ (<೫೦೦ಹೆಕ್ಟೇರ್)ಗಳು (೦.೦೮ ಲಕ್ಷ ಹೆಕ್ಟೇರ್), ಸುಮಾರು ೨,೨೦೦ ಕಿ.ಮೀ. ಉದ್ದದ ನದಿಗಳ ಆಳ ಮಡುಗಳು ವರ್ಷವಿಡೀ ನೀರನ್ನು ಹೊಂದಿದ್ದು ಸ್ಥಳೀಯ ಜಾತಿ ಮೀನುಗಳಿಗೆ ಉತ್ತಮ ಆಶ್ರಯ ನೀಡಿವೆ. ಜಲಾಶಯ ಮತ್ತು ನದಿ ದಡಗಳ ಮೇಲೆ ವಾಸವಾಗಿರುವ ಗ್ರಾಮೀಣ ಜನತೆಯ ಪೌಷ್ಟಿಕ ಆಹಾರದ ಬೇಡಿಕೆ, ಜೀವನೋಪಾಯ ಮತ್ತು ಅಲ್ಪಮಟ್ಟಿನ ಆರ್ಥಿಕ ಗಳಿಕೆಗೆ ಸಹಾಯಕವಾಗಿದೆ. ದೊಡ್ಡ ಜಲಾಶಯಗಳಲ್ಲಿ ಪ್ರತಿ ಹೆಕ್ಟೇರ್‌ಗೆ ಸುಮಾರು ೭೫ ಕೆ.ಜಿ. ಮಧ್ಯಮ ಮತ್ತು ಸಣ್ಣ ಜಲಾಶಯಗಳಲ್ಲಿ ಸುಮಾರು ೨೦೦ ಕೆ.ಜಿ.ಗೂ ಹೆಚ್ಚು ಮೀನು ಉತ್ಪಾದನೆ ಮಾಡಬಹುದಾಗಿದ್ದು ಸೂಕ್ತ ಕ್ರಮಗಳ ಅಳವಡಿಕೆಯಿಂದ ಪ್ರತಿ ವರ್ಷ ೨೫ ಸಾವಿರ ಟನ್‌ಗೂ ಹೆಚ್ಚು ಮೀನು ಉತ್ಪನ್ನ ಪಡೆಯಬಹುದೆಂದು ಅಂದಾಜಿಸಲಾಗಿದೆ. ಸೂಕ್ತ ತಳಿ ಮೀನು ಮರಿಗಳ ಬಿತ್ತನೆ ಮಾಡುವುದರಿಂದ ಈ ಸಂಪನ್ಮೂಲಗಳಲ್ಲಿ ಮೀನಿನ ಲಭ್ಯತೆ ಹೆಚ್ಚಿಸಿ ಗ್ರಾಮೀಣ ಜನತೆಗೆ ಅನುಕೂಲ ಮಾಡಿಕೊಡಲಾಗುತ್ತಿದೆ.

## ಗ್ರಾಮೀಣ ಮಟ್ಟದ ಮೀನುಗಾರಿಕೆ ಅಭಿವೃದ್ಧಿ ಯೋಜನೆಗಳು :

ರಾಜ್ಯದಲ್ಲಿ ಒಳನಾಡು ಮೀನುಗಾರಿಕೆಯನ್ನು ಅಭಿವೃದ್ಧಿಪಡಿಸಲು ಮೀನುಗಾರಿಕೆ ಇಲಾಖೆ, ಕರ್ನಾಟಕ ಮೀನುಗಾರರ ಸಹಕಾರ ಸಂಘ ಮಹಾಮಂಡಳಿ, ಮೈಸೂರು (KCFF), ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳು (FFDA), ರಾಜ್ಯದ ಕೃಷಿ ವಿಶ್ವವಿದ್ಯಾನಿಲಯಗಳು ಹಾಗೂ ಕೇಂದ್ರಿಯ ಸಂಶೋಧನಾ ಕೇಂದ್ರಗಳು ಶ್ರಮಿಸುತ್ತಿವೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಅನೇಕ ಯೋಜನೆಗಳು, ನಬಾರ್ಡ್, ರಾಷ್ಟ್ರೀಯ ಸಹಕಾರ ಅಭಿವೃದ್ಧಿ ಕಾರ್ಪೋರೇಶನ್ (NCDC), ವಿಶ್ವಬ್ಯಾಂಕ್ (ಜಲಸಂವರ್ಧನೆ ಸುಜಾಲ ಯೋಜನೆಗಳು) ಮುಂತಾದ ಸಂಸ್ಥೆಗಳ ನೆರವಿನಿಂದ (ಸಾಲ ಮತ್ತು ಧನಸಹಾಯದಿಂದ) ವೈಜ್ಞಾನಿಕವಾಗಿ ಒಳನಾಡು ಮೀನುಗಾರಿಕೆ ಅಭಿವೃದ್ಧಿ ಮಾಡಲಾಗುತ್ತಿದೆ. ಇತ್ತೀಚಿನ ವರ್ಷಗಳಲ್ಲಿ ಗ್ರಾಮಪಂಚಾಯತಿ, ಜಿಲ್ಲಾ ಪಂಚಾಯತಿಗಳು ಸಹ ಮೀನುಗಾರಿಕೆಯಲ್ಲಿ ನೇರವಾಗಿ ತೊಡಗಿಸಿಕೊಂಡಿರುವುದರಿಂದ ಗ್ರಾಮೀಣ ಮಟ್ಟದಲ್ಲಿ ಜಲಸಂಪನ್ಮೂಲಗಳ ಸದ್ಬಳಕೆ ಹೆಚ್ಚುತ್ತಿದೆ. ಇದರಿಂದ ಒಳನಾಡು ಮೀನು ಉತ್ಪಾದನೆ ಹೆಚ್ಚುವುದೆಂದು ಮತ್ತು ಗ್ರಾಮದ ಪ್ರಗತಿ ಉತ್ತಮವಾಗಬಹುದೆಂದು ನಿರೀಕ್ಷಿಸಲಾಗಿದೆ.

## ಮೀನುಗಾರಿಕೆ ಇಲಾಖೆ ಯೋಜನೆಗಳು :

ಇತ್ತೀಚಿನ ವರ್ಷಗಳವರೆಗೆ ರಾಜ್ಯದ ಮೀನುಗಾರಿಕೆ ಇಲಾಖೆಯು ಮೀನು ಮರಿ ಉತ್ಪಾದನೆ, ಪಾಲನೆ ಹಾಗೂ ಪೋಷಣೆಗೆ ಅನೇಕ ಯೋಜನೆಗಳ ಮೂಲಕ ಖಾಸಗಿ ವಲಯದಲ್ಲಿ ಸಹಾಯಧನವನ್ನು ನೀಡಿ ಪ್ರೋತ್ಸಾಹಿಸಿದೆ. ಮೀನು ಕೃಷಿ ಕೈಗೊಳ್ಳಲು ಕೊಳಗಳ ನಿರ್ಮಾಣಕ್ಕೆ ಅಚ್ಚುಕಟ್ಟು ಪ್ರದೇಶದಲ್ಲಿನ ಚೌಳು ಹಾಗು ಉಪ್ಪು ಭೂಮಿ, ನೀರು ಸದಾ ನಿಲ್ಲುವ ಜೌಗು ಪ್ರದೇಶಗಳಲ್ಲಿ ಮೀನು ಸಾಕಣೆ ಪ್ರೋತ್ಸಾಹಿಸಲು ಕೊಳದ ನಿರ್ಮಾಣಕ್ಕೆ ಹೆಚ್ಚಿನ ಸಹಾಯಧನ ಮೀನುಗಾರರ ಮಾದರಿ ಗ್ರಾಮ ನಿರ್ಮಾಣ ಯೋಜನೆ ಅಡಿಯಲ್ಲಿ ಮೀನುಗಾರರ ಕುಟುಂಬಕ್ಕೆ ಮನೆ, ಕುಡಿಯುವ ನೀರು, ಕೊಳವೆ ಬಾವಿಗಳ ವ್ಯವಸ್ಥೆ, ಸಮುದಾಯ ಭವನ, ಮೀನುಗಾರರಿಗೆ ಅಪಘಾತ ವಿಮೆ, ರಸ್ತೆ ದುರಸ್ತಿ ಕಾರ್ಯಗಳು, ಮೀನು ಹಿಡಿಯುವ ಬಲೆ, ತೆಪ್ಪ ಮುಂತಾದ ಅವಶ್ಯಕ ವಸ್ತುಗಳನ್ನು ಖರೀದಿಸಲು ಮತ್ತು ಮೀನು ಸಾಗಣೆ ಹಾಗೂ ಮಾರುಕಟ್ಟೆ ಅಭಿವೃದ್ಧಿಗೆ ಸಹಾಯಧನ ನೀಡುತ್ತ ಪ್ರೋತ್ಸಾಹಿಸಿದೆ.

ರಾಜ್ಯದಲ್ಲಿ ೧.೫ ಲಕ್ಷ ಹೆಕ್ಟೇರ್ ಜಲಸಂಪನ್ಮೂಲವನ್ನು ಮೀನುಸಾಕಣೆಗೆ ಅಳವಡಿಸಿಕೊಳ್ಳಲು ಸುಮಾರು ೬೨ ಕೋಟಿ ಬೆರಳುದ್ದ ಗಾತ್ರದ ಮೀನುಮರಿಗಳ ಅಗತ್ಯವಿದೆ. ಆದರೆ ಮೀನುಮರಿ ಪಾಲನೆ ಹಾಗೂ ಪೋಷಣಾ ಕೇಂದ್ರಗಳಲ್ಲಿ ಅವಶ್ಯಕ ಸೌಕರ್ಯಗಳು ಲಭ್ಯವಿಲ್ಲದಿರುವುದರಿಂದ ಕೇವಲ ೧೦-೧೨ ಕೋಟಿಯಷ್ಟು ಮರಿಗಳು ಮಾತ್ರ ಉತ್ಪಾದನೆಯಾಗುತ್ತಿವೆ. ಖಾಸಗಿ ವಲಯದಲ್ಲಿ ಸುಮಾರು ೧೮ ಮೀನುಮರಿ ಉತ್ಪಾದನಾ ಕೇಂದ್ರ ಮತ್ತು ೬೩ ಮೀನುಮರಿ ಪಾಲನ ಕೇಂದ್ರಗಳನ್ನು ಸ್ಥಾಪಿಸಲು ಇಲಾಖೆಯು ನೆರವು ನೀಡಿದೆ. ಅಲ್ಲದೆ ೪ ಮೀನುಗಾರರ ತರಬೇತಿ ಕೇಂದ್ರಗಳು ಮತ್ತು ಮೀನುಗಾರಿಕೆಯ ಸಂಘ ಸಂಸ್ಥೆಗಳ ಪಾತ್ರವನ್ನು ಹೆಚ್ಚಿಸಲು ಸುಮಾರು ೪೦೦ಕ್ಕೂ ಹೆಚ್ಚು ಸಂಸ್ಥೆಗಳ ನಿರ್ಮಾಣಕ್ಕೆ ಎಡೆ ಮಾಡಿಕೊಟ್ಟಿದೆ. ರಾಜ್ಯದಲ್ಲಿ ಇಲಾಖೆ ವತಿಯಿಂದ ೧೭೪ ಮತ್ತು ಖಾಸಗಿ ವತಿಯಿಂದ ೨೪೭ ಮೀನು ಮಾರುಕಟ್ಟೆಗಳು ನಿರ್ಮಾಣವಾಗಿ ವ್ಯವಸ್ಥಿತ ರೀತಿಯಲ್ಲಿ ಮೀನು ಮಾರಾಟ ಅನುವಾಗಿದೆ.

## ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಯ ಯೋಜನೆಗಳು :

ರಾಜ್ಯದ ಸಣ್ಣ ಕೆರೆಗಳಲ್ಲಿ ಮೀನು ಕೃಷಿ ಪ್ರೋತ್ಸಾಹಿಸಲು ೧೨ ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಗಳು ಕೇಂದ್ರ ಸರ್ಕಾರದ ಯೋಜನಾ ನೆರವಿನಿಂದ ಸ್ಥಾಪಿತಗೊಂಡು ಸುಮಾರು ೦.೩೨ಲಕ್ಷ ಹೆಕ್ಟೇರ್‌ಪ್ರದೇಶವನ್ನು ಮೀನು ಸಾಕಣೆಗೆ ತೊಡಗಿಸಲು ಸಾಧ್ಯವಾಗಿದೆ. ಅಲ್ಲದೆ, ಪ್ರತಿ ಹೆಕ್ಟೇರ್‌ನಲ್ಲಿ ಸುಮಾರು ೧.೫ ಟನ್‌ಗೂ ಹೆಚ್ಚು ಮೀನು ಉತ್ಪಾದನೆ ಮಾಡಲು ಅನುವಾಗಿದೆ. ಗ್ರಾಮೀಣ ಮಟ್ಟದಲ್ಲಿ ಆಸಕ್ತಿಯಿರುವ ರೈತರಿಗೆ ಸೂಕ್ತ ತರಬೇತಿ, ಮೀನು ಸಾಕಣೆಗೆ ಅಗತ್ಯವಿರುವ ಕೆರೆಗಳನ್ನು ಲಾವಣಿ ರೂಪದಲ್ಲಿ ನೀಡಿ, ಪೂರಕ ವಸ್ತುಗಳನ್ನು ರಿಯಾಯಿತಿ ದರದಲ್ಲಿ ಸರಬರಾಜು ಮಾಡಿ ತಾಂತ್ರಿಕ ಮಾಹಿತಿ, ಬ್ಯಾಂಕುಗಳ ಮೂಲಕ ಸಾಲ ಸೌಲಭ್ಯ, ಬೆಳೆದ ಮೀನಿಗೆ ಮಾರುಕಟ್ಟೆ ವ್ಯವಸ್ಥೆ ಮುಂತಾದ ಸೌಕರ್ಯಗಳನ್ನು ನೀಡುತ್ತಾ ಗ್ರಾಮಗಳ ಜಲಸಂಪನ್ಮೂಲಗಳಲ್ಲಿ ಮೀನು ಸಾಕಣೆ ಹೆಚ್ಚು ಪ್ರಚಲಿತಗೊಳಲು ಅನುವು ಮಾಡಿದೆ. ಇದರ ಪರಿಣಾಮವಾಗಿ ಇತ್ತೀಚಿನ ವರ್ಷಗಳಲ್ಲಿ ಗ್ರಾಮಸ್ಥರು ಮೀನು ಸಾಕಣೆ ಚಟುವಟಿಕೆಯಲ್ಲಿ ಪಾಲುಗೊಳ್ಳವುದು ಹೆಚ್ಚಾಗಿದೆ.

## ಕರ್ನಾಟಕ ಮೀನುಗಾರ ಸಹಕಾರ ಸಂಘ ಮಹಾಮಂಡಳಿಯ ಯೋಜನೆಗಳು :

ಕರ್ನಾಟಕ ಮೀನುಗಾರ ಸಹಕಾರ ಸಂಘ ಮಹಾಮಂಡಳಿಯು ಕೆರೆಗಳ ಮೀನುಗಾರಿಕೆಯಲ್ಲಿ ಸರ್ವತೋಮುಖ ಅಭಿವೃದ್ಧಿ ಸಾಧಿಸಲು 'ಸಮಗ್ರ ಮೀನುಗಾರಿಕೆ ಅಭಿವೃದ್ಧಿ' ಯೋಜನೆಯನ್ನು ಕಳೆದ ಕೆಲವು ವರ್ಷಗಳಿಂದ ಕಾರ್ಯರೂಪಕ್ಕೆ ತಂದಿದೆ. ರಾಜ್ಯದಲ್ಲಿ ಮೀನುಗಾರರ ಸಹಕಾರ ಸಂಘದ ಪಾತ್ರವನ್ನು ವೃದ್ಧಿಗೊಳಿಸಿ ಹೆಚ್ಚಿನ ಮೀನು ಉತ್ಪಾದನೆ ಮತ್ತು ಮೀನುಗಾರರ ಆರ್ಥಿಕ ಪ್ರಗತಿ ಸಾಧಿಸಲು ಸಹಾಯ ಹಸ್ತ ನೀಡಿದೆ.

## ಕೃಷಿ ವಿಶ್ವವಿದ್ಯಾನಿಲಯದ ಕಾರ್ಯಕ್ರಮಗಳು :

ಕೃಷಿ ವಿಶ್ವವಿದ್ಯಾನಿಲಯವು ತನ್ನ ವಿಸ್ತರಣ ಶಿಕ್ಷಣ ಘಟಕಗಳ ಮೂಲಕ ಗ್ರಾಮೀಣ ಮೀನು ಕೃಷಿ ಪ್ರಚಲಿತಗೊಲಿಸಲು ಹೆಚ್ಚಿನ ಸಂಶೋಧನೆ ಮತ್ತು ವಿಸ್ತರಣ ಕಾರ್ಯಗಳನ್ನು ರಾಜ್ಯದಲ್ಲಿ ಕೈಗೊಂಡಿದೆ. ಈಗಾಗಲೇ ಬೆಂಗಳೂರು, ಕೋಲಾರ, ತುಮಕೂರು

ಮುಂತಾದ ಜಿಲ್ಲೆಗಳಲ್ಲಿ ಮೀನುಪಾಲನೆ ಪ್ರಾತ್ಯಕ್ಷಿಕೆಗಳನ್ನು ಗ್ರಾಮದ ಕೆರೆ, ಕುಂಟೆ, ನೀರಾವರಿ ಬಾವಿ, ಸಂಗ್ರಹಣ ಕೊಳ ಮತ್ತು ಕೃಷಿ ಹೊಂಡಗಳಲ್ಲಿ ಕೈಗೊಂಡು ಲಾಭದಾಯಕ ಮೀನು ಉತ್ಪಾದನೆ ಸಾಧ್ಯತೆಗಳನ್ನು ರೈತರಿಗೆ ತಿಳಿಸಿಕೊಡಲಾಗಿದೆ. ರೈತರ ಕೃಷಿ ಜಮೀನಿನಲ್ಲಿರುವ ಸಂಗ್ರಹಣ ಕೊಳ ಮತ್ತು ಕೃಷಿ ಹೊಂಡಗಳಲ್ಲಿ ಹೆಕ್ಟೇರ್‌ಗೆ ಸುಮಾರು ೩ರಿಂದ ೬ಟನ್ ಮೀನು ಉತ್ಪನ್ನ ಮಾಡಬಹುದೆಂದು ನಿರೂಪಿಸಿದೆ. ಅಲ್ಲದೆ, ರೈತರು ಗ್ರಾಮ ಮಟ್ಟದಲ್ಲಿ ಸಾಮಾನ್ಯ ಗೆಂಡೆ ತಳಿ ಮೀನು ಮರಿ ಉತ್ಪಾದನೆ, ಮೀನು ಮರಿ ಪಾಲನೆ ಹಾಗೂ ಸಮಗ್ರ ಮೀನು ಕೃಷಿಯನ್ನು ವ್ಯವಸಾಯ, ತೋಟಗಾರಿಕೆ, ಹೈನುಗಾರಿಕೆ, ರೇಷ್ಮೆ ಹುಳುವಿನ ಸಾಕಣೆ ಮುಂತಾದ ಚಟುವಟಿಕೆಗಳ ಜೊತೆ ಲಾಭದಾಯಕವಾಗಿ ಕೈಗೊಳ್ಳಬಹುದೆಂದು ರೈತರಿಗೆ ತೋರಿಸಿಕೊಟ್ಟಿದೆ. ಗ್ರಾಮ ಮಟ್ಟದಲ್ಲಿನ ಜಲಸಂನ್ಮೂಲಗಳ ಸಮಗ್ರತೆ ಮಾದರಿ (ಚಿತ್ರ-೧)ಯನ್ನು ಸಹ ಕ್ಷೇತ್ರ ಪ್ರಯೋಗಗಳ ಮೂಲಕ ತಯಾರಿಸಿ ಮೀನುಕೃಷಿಗೆ ಸಹಾಯ ಮಾಡುತ್ತಿದೆ. ಆಸಕ್ತಿಯುಳ್ಳ ರೈತರಿಗೆ ತರಬೇತಿ, ತಾಂತ್ರಿಕತೆ, ಕೃಷಿಮೇಳ, ರೈತರ ಕ್ಷೇತ್ರ ಭೇಟಿ ನೆರವೇರಿಸಿ ಗ್ರಾಮೀಣ ಮಟ್ಟದಲ್ಲಿ ಮೀನು ಸಾಕಣೆ ಬೆಳೆಯಲು ಶ್ರಮಿಸುತ್ತಿದೆ.

### ಚಿತ್ರ-೧ ಗ್ರಾಮೀಣ ಜಲಸಂಪನ್ಮೂಲಗಳ ಸಮಗ್ರತೆ ಮಾದರಿ




### ಕೃಷಿ ಜಮೀನಿನಲ್ಲಿ ಸಮಗ್ರ ಜಲಕೃಷಿ



## ಗ್ರಾಮೀಣ ಮಟ್ಟದ ಮೀನುಗಾರಿಕೆಗೆ ಇತರೆ ಸಾಧ್ಯತೆಗಳು :

### ೧. ಮೀನು ಮರಿ ಉತ್ಪಾದನೆ ಮತ್ತು ಪಾಲನೆ :

ಮೀನುಮರಿಗಳ ಕೊರತೆ ಒಳನಾಡು ಮೀನುಗಾರಿಕೆ ಅಭಿವೃದ್ಧಿಯಲ್ಲಿ ಕಂಟಕವಾಗಿದೆ. ಮೀನುಮರಿಗಳ ಉತ್ಪಾದನೆ ಮತ್ತು ರೈತರಿಗೆ ಸರಿಯಾದ ಕಾಲಕ್ಕೆ ಲಭ್ಯತೆ ಬಗ್ಗೆ ಹೆಚ್ಚು ಕಾಳಜಿ ವಹಿಸಬೇಕಾಗಿದೆ. ಗ್ರಾಮಗಳಲ್ಲಿರುವ ಸಣ್ಣ ಕೆರೆ, ಕುಂಟೆ, ಸಂಗ್ರಹಣಾ ಕೊಳಗಳನ್ನು ಮೀನುಮರಿ ಉತ್ಪಾದನೆ ಮತ್ತು ಪಾಲನೆ ಕಾರ್ಯಗಳಿಗೆ ಅಳವಡಿಸಿಕೊಳ್ಳಬಹುದು. ಈ ದಿಕ್ಕಿನಲ್ಲಿ ರೈತರಿಗೆ ಸೂಕ್ತ ತರಬೇತಿ, ಮಾರ್ಗದರ್ಶನ, ಅಗತ್ಯವಿರುವ ಸೌಲಭ್ಯಗಳನ್ನು ನಿರ್ಮಿಸಿಕೊಡುವುದು, ಗ್ರಾಮೀಣ ಮಟ್ಟದಲ್ಲಿಯೇ ಸಾಮಾನ್ಯ ಗೆಂಡೆಯಂತಹ ಹಲವು ಉತ್ತಮ ತಳಿ ಮೀನುಮರಿಗಳನ್ನು ಉತ್ಪಾದಿಸಲು ಮತ್ತು ಕಾಟ್ಲ ಹಾಗೂ ರೋಹು ತಳಿಗಳ ಸಣ್ಣ ಮೀನು ಮರಿಗಳನ್ನು ಪಾಲನೆ ಮಾಡಿ ಸಾಕಣೆಗೆ ಅಗತ್ಯವಿರುವ ಯೋಗ್ಯ ಗಾತ್ರದ ಮೀನು ಮರಿಗಳ ಉತ್ಪಾದನೆ ಮಾಡಲು ಪ್ರೋತ್ಸಾಹಿಸುವುದು ಅಗತ್ಯ. ಇದರಿಂದ ಹೆಚ್ಚಿನ ಮೀನು ಉತ್ಪನ್ನಕ್ಕೆ ಮತ್ತು ಜಲಸಂಪನ್ಮೂಲಗಳ ಸದ್ಬಳಕೆಗೆ ನೆರವಾಗುತ್ತದೆ. ಅಲ್ಲದೆ, ಗ್ರಾಮೀಣ ಮಟ್ಟದಲ್ಲಿ ಹೆಚ್ಚಿನ ವೃತ್ತಿ ಮತ್ತು ಆರ್ಥಿಕ ಸಂಪಾದನೆಗೆ ಸಹಾಯವಾಗುತ್ತದೆ.

### ೨. ಮೀನು ಉತ್ಪಾದನೆ :

ಗ್ರಾಮೀಣ ಪ್ರದೇಶದಲ್ಲಿ ರೈತರು ಹೊಂದಿರುವ ಸಂಗ್ರಹಣಾ ಕೊಳ,ಕೃಷಿ ಹೊಂಡಗಳು, ಗ್ರಾಮದ ಸಾರ್ವಜನಿಕ ಸಂಪನ್ಮೂಲಗಳಾದ ಗೋಕಟ್ಟೆ, ಗ್ರಾಮದ ಕೆರೆ, ಕುಂಟೆಗಳಲ್ಲಿ ಮೀನು ಸಾಕಣೆಗೆ ಅಗತ್ಯವಿರುವ ಪ್ರೋತ್ಸಾಹ, ತಾಂತ್ರಿಕತೆ, ಮೀನುಮರಿ ಮತ್ತು ಇತರ ಪೂರಕ ವಸ್ತುಗಳ ಸಹಾಯ ಹಾಗೂ ಸರಬರಾಜು, ಸಂಪನ್ಮೂಲಗಳ ಅಭಿವೃದ್ಧಿಗೆ ಬೇಕಾದ ಸಹಾಯಧನ ಮುಂತಾದ ಸವಲತ್ತುಗಳನ್ನು ಇಲಾಖೆ ಹಾಗೂ ಇತರೆ ಸಂಘ ಸಂಸ್ಥೆಗಳು ನೀಡಿ ಉತ್ತೇಜಿಸುವುದರಿಂದ ಗ್ರಾಮೀಣ ಮಟ್ಟದಲ್ಲಿ ಮೀನುಪಾಲನೆ ಹಾಗೂ ಉತ್ಪನ್ನ ಹೆಚ್ಚುತ್ತದೆ. ವ್ಯವಸಾಯ ಮತ್ತು ಇತರ ಉದ್ದೇಶಗಳಿಗೆಂದು ನಿರ್ಮಿತವಾದ ಈ ರೀತಿಯ ಜಲಸಂಪನ್ಮೂಲಗಳಲ್ಲಿ ಮೂಲ ಉದ್ದೇಶಕ್ಕೆ ಧಕ್ಕೆಯಾಗದ ರೀತಿ ಮೀನು ಸಾಕಣೆ ಮಾಡಬಹುದು. ಅಲ್ಲದೆ ಮೀನು ಸಾಕಣೆಯನ್ನು ವ್ಯವಸಾಯ, ತೋಟಗಾರಿಕೆ, ರೇಷ್ಮೆ ಸಾಕಣೆ, ಕೋಳಿ ಮತ್ತು ಇತರೆ ಕಸುಬುಗಳ ಜೊತೆ ಸಮಗ್ರವಾಗಿ ಕೈಗೊಳ್ಳಬಹುದು. ಈ ಕಸುಬುಗಳ ತ್ಯಾಜ್ಯ ವಸ್ತುಗಳನ್ನು ಮೀನಿಗೆ ಆಹಾರವಾಗಿ ಬಳಸಿಕೊಂಡು ಉತ್ಪಾದನಾ ವೆಚ್ಚದಲ್ಲಿಯೂ ಸಹ ಉಳಿತಾಯ ಮಾಡಬಹುದು. ಒಳನಾಡು ಮೀನುಗಾರಿಕೆಯನ್ನು ಗ್ರಾಮದ ಇತರ ಕಸುಬುಗಳ ಜೊತೆ ಸಮಗ್ರಗೊಳಿಸಿ ಮೀನು ಉತ್ಪಾದನೆ ಕೈಗೊಂಡಲ್ಲಿ ಗ್ರಾಮದ ವಾತಾವರಣದ ಶುಚಿತ್ವ ಹಾಗೂ ಸಾಮಾಜಿಕ ಕಷ್ಟಗಳನ್ನು ನಿಭಾಯಿಸುವ ಶಕ್ತಿ ಹೊಂದಿ ಸರ್ವತೋಮುಖ ಅಭಿವೃದ್ಧಿ ಸಾಧಿಸಬಹುದಾಗಿದೆ.

## ಅಗತ್ಯವಿರುವ ವಿಸ್ತರಣೆ, ಅಭಿವೃದ್ಧಿ ಮತ್ತು ಯೋಜನಾ ಕಾರ್ಯಗಳು :

ಒಳನಾಡು ಮೀನುಗಾರಿಕೆಯು ಗ್ರಾಮೀಣ ಜನತೆಯ ಜೀವನಾಧಾರವಾಗಲು ಹೆಚ್ಚಿನ ವಿಸ್ತರಣೆ ಮತ್ತು ಅಭಿವೃದ್ಧಿ ಕಾರ್ಯಗಳ ಅಗತ್ಯವಿದೆ. ನೈಸರ್ಗಿಕ ಜಲಸಂಪನ್ಮೂಲಗಳ ಸಮಗ್ರ ನಿರ್ವಹಣೆ ಹಾಗೂ ರೈತರ ಸಹಭಾಗಿತ್ವದಲ್ಲಿ ಮೀನುಗಾರಿಕೆ ಕೈಗೊಳ್ಳುವುದು ಮುಂದಿನ ದಿನಗಳಲ್ಲಿ ಮಹತ್ವವಾಗಿದೆ. ಮೀನು ಸಾಕಣೆ ಕಾರ್ಯಗಳನ್ನು ಉತ್ತಮಗೊಳಿಸಲು ರೈತರ ಒಳಗೂಡಿ ಸಾಕಣೆ ಬಗ್ಗೆ ಸಂಶೋಧನೆ ನಡೆಸಿ ತಾಂತ್ರಿಕತೆ ರೂಪಿಸುವುದು, ರೈತರ ತರಬೇತಿ ಮತ್ತು ಮೀನು ಕೃಷಿಕರ ಸಂಪನ್ಮೂಲ ಆಧಾರಿತ ಬೆಳವಣಿಗೆ ಕಾರ್ಯಗಳನ್ನು ಕೈಗೊಳ್ಳುವುದು ಅವಶ್ಯಕ. ಕೆರೆಗಳ ಪುನಃಶ್ಚೇತನ, ಅಗತ್ಯವಿರುವ ಜ್ಞಾನಾರ್ಜನೆ, ತರಬೇತಿ, ರೈತರ ಶಿಬಿರಗಳನ್ನು ನಡೆಸುವುದು, ಸಕ್ರಿಯಾತ್ಮಕ ಪಾತ್ರದೊಡನೆ ಸರಕಾರದ ಅಧಿಕಾರಿಗಳ ಸಹಭಾಗಿತ್ವದ ಅಗತ್ಯವಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಮೀನು ಉತ್ಪಾದನೆ ಹೆಚ್ಚಿಸಲು ಉತ್ತಮ ಅವಕಾಶಗಳಿದ್ದರೂ, ಸಾಕಣೆಗೆ ಅಗತ್ಯವಾಗಿ ಬೇಕಾದ ಸಾಮಗ್ರಿಗಳ ಕೊರತೆ ಮತ್ತು ಸರಿಯಾದ ಕಾಲಕ್ಕೆ ಲಭ್ಯವಿಲ್ಲದಿರುವುದರಿಂದ ಅಭಿವೃದ್ಧಿ ಕುಂಠಿತವಾಗಿದೆ. ಗ್ರಾಮೀಣ ಮಟ್ಟದಲ್ಲಿ ಮೀನು ಸಾಕಣೆಗೆ ಅವಶ್ಯಕವಿರುವ ಪೂರಕ ವಸ್ತುಗಳನ್ನು ಮತ್ತು ಮೀನುಮರಿ ಉತ್ಪಾದನೆ ಚಟುವಟಿಕೆಗಳನ್ನು ಕಾರ್ಯರೂಪಕ್ಕೆ ತರುವುದು, ಸೂಕ್ತ ಮಾರ್ಗದರ್ಶನ, ತಾಂತ್ರಿಕ ತರಬೇತಿ, ನಿರ್ವಹಣಾ ಜ್ಞಾನವನ್ನು ಹಳ್ಳಿಯ ಮಟ್ಟದಲ್ಲಿಯೇ ನೀಡುವುದು ಅವಶ್ಯಕ.

ಕೆರೆ ಮತ್ತು ಜಲಾಶಯಗಳ ಅಭಿವೃದ್ಧಿ ಕಾರ್ಯಗಳ ಮೂಲಕ ಮೀನು ಉತ್ಪನ್ನ ಹೆಚ್ಚಿಸಿ ಗ್ರಾಮೀಣ ಮೀನು ಕೃಷಿಕರ ಮತ್ತು ಮೀನುಗಾರಿಕೆಯನ್ನೇ ಅವಲಂಬಿಸಿದ ಬಡ ಕುಟುಂಬಗಳ ಆದಾಯ ವೃದ್ಧಿ ಮಾಡಲು ಹೆಚ್ಚಿನ ಸಂಖ್ಯೆಯಲ್ಲಿ ಸಂಘ ಸಂಸ್ಥೆಗಳ ಸ್ಥಾಪನೆ ಮತ್ತು ರೈತರ ಸಂಘಟನೆ, ಸಾಮರ್ಥ್ಯ ಹೆಚ್ಚಿಸಲು ಅಗತ್ಯವಿರುವ ತಿಳಿವಳಿಕೆ ಕಾರ್ಯಕ್ರಮಗಳನ್ನು ನಡೆಸಬೇಕು.

ಸುಧಾರಿತ ಮೀನು ಕೃಷಿ, ಗ್ರಾಮೀಣ ಜಲಸಂಪನ್ಮೂಲಗಳ ಸದ್ಬಳಕೆ, ಸಂಘಸಂಸ್ಥೆಗಳ ರಚನೆ ಮತ್ತು ಅಗತ್ಯತೆ, ವ್ಯವಸ್ಥಿತ ರೀತಿಯಲ್ಲಿ ಮೀನು ಸಾಕಣೆ ಕೈಗೊಳ್ಳುವ ಬಗ್ಗೆ ಮಾಹಿತಿಯನ್ನು ಗ್ರಾಮಸ್ಥರಿಗೆ ಮನದಟ್ಟು ಮಾಡುವಂತಹ ಕಾರ್ಯಕ್ರಮಗಳನ್ನು ಹೆಚ್ಚಿನ ರೀತಿಯಲ್ಲಿ ರೂಪಿಸಬೇಕು.

ಹೆಚ್ಚಿನ ಗ್ರಾಮ ಕೆರೆ, ಕುಂಟೆಗಳು, ಹೊಂಡಗಳು ಗ್ರಾಮಸ್ಥರ ಬೇಜಬ್ದಾರಿಯಿಂದಾಗಿ ಹೂಳು ತುಂಬಿಕೊಂಡು ನೀರು ಸಂಗ್ರಹಣೆ ಸಾಮರ್ಥ್ಯ ಕಳೆದುಕೊಂಡಿವೆ. ಇವುಗಳ ಪುನಶ್ಚೇತನ ಮತ್ತು ಮುಂದಿನ ದಿನಗಳನಲ್ಲಿ ಇವುಗಳ ಶಾಶ್ವತ ನಿರ್ವಹಣೆ ಮಾಡುವಂತೆ ವ್ಯವಸ್ಥೆ ನಿರ್ಮಾಣ ಮಾಡುವುದು ಹಾಗೂ ಸ್ಥಳೀಯ ಫಲಾನುಭವಿಗಳ ಸಕ್ರಿಯ ಪಾತ್ರ ವೃದ್ಧಿಸುವ ಕಾರ್ಯ ಅನಿವಾರ್ಯ.

ವಿವಿಧ ಯೋಜನೆಗಳ ಮೂಲಕ ಸಂಗ್ರಹಣಾ ಕೊಳದ ಆಳ ಹೆಚ್ಚಿಸಿ ಸದಾ ೩-೪ಅಡಿ ನೀರು ಕೊಳವಲ್ಲಿ ಸಂಗ್ರಹವಾಗಿರುವಂತೆ ಮಾಡುವುದು, ಕೃಷಿ ಹೊಂಡಗಳಲ್ಲಿ ಹೂಳು ತೆಗೆಯುವಿಕೆ, ನೀರು ಬಸಿದು ಹೋಗದಂತೆ ಗೋಡು ಮಣ್ಣಿನಿಂದ ಕೊಳದ ತಳ ತಯಾರಿ ಮಾಡುವುದು, ನೀರು ಹೆಚ್ಚು ಆವಿಯಾಗದಂತೆ ಹೊಂಡದ ಬದುಗಳ ಮೇಲೆ ಗಿಡ ಮರಗಳನ್ನು ಬೆಳೆಸುವುದು, ವ್ಯವಸ್ಥಿತ ರೀತಿಯಲ್ಲಿ ನೀರಿನ ಬಳಕೆ ಮಾಡುವುದು, ಮೀನು ಮರಿ ಉತ್ಪಾದನೆ ಮತ್ತು ಪಾಲನೆ ಕಾರ್ಯಕ್ರಮಗಳನ್ನು ರೈತರು ಹೊಂದಿರುವ ಸಣ್ಣ ಜಲಸಂಪನ್ಮೂಲಗಳಲ್ಲಿ ಕೈಗೊಂಡು ಗ್ರಾಮದ ಇತರ ಜಲಸಂಪನ್ಮೂಲಗಳ ಸಮಗ್ರ ಬಳಸುವಿಕೆ ರೀತಿಯನ್ನು ಕಾರ್ಯರೂಪಕ್ಕೆ ತರಬೇಕು.

ರಾಜ್ಯದಲ್ಲಿ ಹೆಚ್ಚು ಪಾಲಿನ ಒಳನಾಡು ಜಲಸಂಪನ್ಮೂಲ ದೊಡ್ಡ ಕೆರೆಗಳಾಗಿರುವುದರಿಂದ ಮೀನು ಉತ್ಪಾದನೆಗೆ ಸಣ್ಣ ಮತ್ತು ಅತಿ ಸಣ್ಣ ಕೆರೆಗಳಲ್ಲಿ ಮತ್ತು ವಾಣಿಜ್ಯ ರೂಪದಲ್ಲಿ ಮೀನು ಸಾಕಣೆ ಮಾಡಲು ಜಲಾಶಯಗಳ ಅಚ್ಚು ಕಟ್ಟು ಪ್ರದೇಶಗಳಲ್ಲಿ ಪ್ರೋತ್ಸಾಹ ನೀಡುವ ಅಗತ್ಯವಿದೆ. ದೊಡ್ಡಕೆರೆ ಮತ್ತು ಜಲಾಶಯಗಳ ಮೀನು ಉತ್ಪನ್ನವನ್ನು ಆಶ್ರಯಿಸಿ ಸುತ್ತಮುತ್ತ ವಾಸಮಾಡುತ್ತಿರುವ ಕುಟುಂಬಗಳು ಪಂಜರ ಹಾಗೂ ಬಲೆಗೂಡುಗಳಲ್ಲಿ ಮೀನುಮರಿ ಪಾಲನೆ, ಮೀನುಸಾಕಾಣೆ ಮಾಡುವುದಕ್ಕೆ ಪ್ರೇರಣೆಬೇಕಾಗಿದೆ.

ರಿಯಾಯಿತಿ ದರದಲ್ಲಿ ಪೂರಕ ವಸ್ತುಗಳ ಸರಬರಾಜು, ವ್ಯವಸಾಯಕ್ಕೆ ದೊರೆಯುವ ಹಣಕಾಸಿನ ಸೌಲಭ್ಯ, ಜೀವವಿಮೆ ಮುಂತಾದ ಸೌಲಭ್ಯಗಳನ್ನು ಮೀನು ಕೃಷಿಗೂ ಸಹ ವಿಸ್ತರಿಸುವ ಅಗತ್ಯವಿದೆ.

ಮೀನನ್ನು ತಾಜಾ ರೀತಿಯಲ್ಲಿ ಮಾರುಕಟ್ಟೆಗೆ ಸಾಗಣೆ ಮಾಡುವ ವ್ಯವಸ್ಥೆ, ಮಾರುಕಟ್ಟೆ ಸೌಲಭ್ಯ, ಬೆಂಬಲಿತ ಬೆಲೆ, ಮೀನುಗಳನ್ನು ಸರಿಯಾದ ರೀತಿಯಲ್ಲಿ ಸಂಸ್ಕರಿಸಿ ಮಾರುಕಟ್ಟೆ ಮಾಡುವುದು, ಸಣ್ಣ ಹಾಗೂ ಕಳಪೆ ಮೀನುಗಳನ್ನು ಸೂಕ್ತ ರೀತಿಯಲ್ಲಿ ಸಂಸ್ಕರಿಸಿ ತಯಾರಿಸಿದ ಪದಾರ್ಥಗಳನ್ನು ಮಾಡಿ ಮಾರಾಟ ಮಾಡುವುದು, ಮೀನನ್ನು ಸಂಸ್ಕರಣೆ ಮಾಡಿ ಹೆಚ್ಚಿನ ಬೆಲೆಗೆ ಮಾರಾಟ ಮಾಡಲು ಅಗತ್ಯವಿರುವ ಸೌಲಭ್ಯಗಳನ್ನು ಗ್ರಾಮೀಣ ಮಟ್ಟದಲ್ಲಿ ಅಭಿವೃದ್ಧಿ ಪಡಿಸಬೇಕಾಗಿರುವುದು ಅನಿವಾರ್ಯ ಮತ್ತು ಅಗತ್ಯವಾಗಿದೆ.

ಗ್ರಾಮೀಣ ಮಟ್ಟದಲ್ಲಿ ಲಭ್ಯವಿರುವ ಜಲಸಂಪನ್ಮೂಲಗಳಲ್ಲಿ ಮೀನುಗಾರಿಕ ತೊಡಗಿಸಲು ರೈತರ ಗುಂಪು ನಿರ್ಮಾಣ, ಯಜಮಾನಿಕೆ ವ್ಯವಸ್ಥೆ, ಸಂಘಸಂಸ್ಥೆಗಳನ್ನು ಪ್ರೋತ್ಸಾಹಿಸುವಂತೆ ಯೋಜನಾ ಕಾರ್ಯಗಳನ್ನು ಹಮ್ಮಿಕೊಳ್ಳಬೇಕು. ಈ ದಿಟ್ಟಿನಲ್ಲಿ ಇಲಾಖಾ ಅಧಿಕಾರಿಗಳ, ಯೋಜನಾಕಾರರ ಮತ್ತು ಸಂಬಂಧಪಟ್ಟ ಇತರೆ ಇಲಾಖಾ ಅಧಿಕಾರಿಗಳ ತಿಳುವಳಿಕೆ ಮಟ್ಟವನ್ನು ಹೆಚ್ಚಿಸುವ ಕಾರ್ಯಕ್ರಮಗಳ ಅಗತ್ಯವಿದೆ. ತಾಲ್ಲೂಕು ಇಲ್ಲವೆ ಹೋಬಳಿ ಮಟ್ಟದಲ್ಲಿ ಮೀನು ಕೃಷಿಕರ ಸಹಕಾರ ಸಂಘಗಳ ಸ್ಥಾಪನೆ ಮಾಡಿ ಮೀನು ಸಾಕಣೆ ಅಭಿವೃದ್ಧಿ ಕಾರ್ಯಗಳ ಉಸ್ತುವಾರಿ, ಸಾಕಣೆಗೆ ಬೇಕಾಗುವ ಪೂರಕ ವಸ್ತುಗಳ ಸರಬರಾಜು, ಮೀನಿನ ಮಾರಾಟ ಮುಂತಾದ ಚಟುವಟಿಕೆಗಳನ್ನು ಕೈಗೊಳ್ಳಬೇಕು.

ಗ್ರಾಮೀಣ ಮಟ್ಟದಲ್ಲಿ ಸಂಘಸಂಸ್ಥೆಗಳು (ಯುವಕ ಸಂಘಗಳು, ಸ್ವಸಹಾಯ ಗುಂಪುಗಳು, ಗ್ರಾಮ ಪಂಚಾಯಿತಿ ಪಾಲುಗಾರಿಕೆ ಇತ್ಯಾದಿ) ಮತ್ತು ಗ್ರಾಮೀಣ ಮಹಿಳೆಯರ ಪಾಲುಗಾರಿಕೆ ಹೆಚ್ಚಿಸುವ ಕಾರ್ಯಕ್ರಮಗಳಿಗೆ ಪ್ರೋತ್ಸಾಹ ಅವಶ್ಯಕ. ಮೀನು ಕೃಷಿ

ಅಭಿವೃದ್ಧಿಗೆ ಶ್ರಮಿಸುತ್ತಿರುವ ಸಂಘ ಸಂಸ್ಥೆಗಳ ಪುನಶ್ಚೇತನ, ಕಾರ್ಯವೈಖರಿ ಬಲಪಡಿಸುವಿಕೆ ಮುಂತಾದ ಕಾರ್ಯಕ್ರಮಗಳನ್ನು ಅಗತ್ಯವಾಗಿ ಕೈಗೊಳ್ಳಬೇಕು.

ಕೆರೆಗಳ ಸದ್ಬಳಕೆಯನ್ನು ಗ್ರಾಮಸ್ಥರ ಅಭಿವೃದ್ಧಿಗಾಗಿ ಬಳಸಿಕೊಳ್ಳುವ ರೀತಿಯಲ್ಲಿ ಕಾರ್ಯಕ್ರಮಗಳನ್ನು ರೂಪಿಸಬೇಕು. ಬಡರೈತರು ಹಾಗೂ ಜಮೀನುರಹಿತ ಗ್ರಾಮದ ಜನತೆ ಇಂತಹ ಸಂಪನ್ಮೂಲಗಳನ್ನು ಮೀನು ಸಾಕಣೆಗೆ ಬಳಸಿಕೊಂಡು ಆರ್ಥಿಕ ಪ್ರಗತಿ ಹೊಂದುವಂತೆ ಯೋಜನೆಗಳನ್ನು ಕೈಗೊಳ್ಳಬೇಕು.

ವಿಜ್ಞಾನಿಗಳು, ವಿಸ್ತರಣ ಸಿಬ್ಬಂದಿಗಳು, ಮೀನುಗಾರಿಕೆ ಇಲಾಖಾ ಅಧಿಕಾರಿಗಳು ಹಾಗೂ ಸಂಘಸಂಸ್ಥೆಗಳ ಕಾರ್ಯಕರ್ತರುಗಳು ಮತ್ತು ಇತರೆ ಇಲಾಖೆ ಅಧಿಕಾರಿಗಳು ಜಂಟಿ ಸಭೆ ಹಾಗೂ ಚರ್ಚೆಗಳ ಮೂಲಕ ವಿಚಾರ ವಿನಿಮಯ ಮಾಡಿ ತಾಂತ್ರಿಕಜ್ಞಾನವನ್ನು ರೈತರಿಗೆ ಮುಟ್ಟಿಸುವ ರೀತಿಯಲ್ಲಿ ನೀತಿನಿಯಮಗಳನ್ನು ರೂಪಿಸಬೇಕು.

ಮೀನುಗಾರಿಕೆ ಯೋಜನೆ ಮತ್ತು ಕಾರ್ಯತಂತ್ರಗಳು ಗ್ರಾಮೀಣ ಪ್ರದೇಶದಲ್ಲಿ ಲಭ್ಯವಿರುವ ಜಲಸಂಪನ್ಮೂಲಗಳ ಆಧಾರಿತವಾಗಿರಬೇಕು ಮತ್ತು ಅವುಗಳ ಸದ್ಬಳಕೆ, ನಿರ್ವಹಣೆಗಳ ಮೇಲೆ ಕೇಂದ್ರೀಕೃತವಾಗಿರಬೇಕು.

ಗ್ರಾಮೀಣ ಅಭಿವೃದ್ಧಿ ಸಾಧಿಸುವಲ್ಲಿ ಅಗತ್ಯವಿರುವ ದಕ್ಷ ಆಡಳಿತ, ಗ್ರಾಮದ ಎಲ್ಲಾ ಪಾಲುದಾರರ ಸಹಭಾಗಿತ್ವ, ಗ್ರಾಮೀಣ ಜನತೆಯ ಸಂಪನ್ಮೂಲ ಆಧಾರಿತವಾದ ಸುರಕ್ಷಿತ ಹಾಗೂ ಸ್ಥಿರವಾದ ಸಮಗ್ರ ಮೀನು ಕೃಷಿ ಯೋಜನೆ ಮತ್ತು ಕಾರ್ಯಕ್ರಮಗಳು, ಸರಿಯಾದ ರೀತಿಯಲ್ಲಿ ಅನುಷ್ಠಾನಕ್ಕೆ ತರಬಹುದಾದಂತಹ ಕಾನೂನು ಮತ್ತು ಸುವ್ಯವಸ್ಥೆ,ಅಚ್ಚುಕಟ್ಟು ಕಾರ್ಯರೂಪಕ್ಕೆ ತರಲು ಅಗತ್ಯವಿರುವ ರೂಪರೇಷೆಗಳನ್ನು ಅಭಿವೃದ್ಧಿಪಡಿಸಬೇಕು.

ದೊಡ್ಡ ಕೆರೆಗಳನ್ನು ದೀರ್ಘಾವಧಿಯ ಕಾಲ ಮೀನುಕೃಷಿಗೆ ಬಳಸಿಕೊಳ್ಳಲು ಅಗತ್ಯವಿರುವ ಹಕ್ಕು ಬಾಧ್ಯತೆಗಳನ್ನು ನೀಡುವಂತಹ ನೀತಿ ನಿಯಾಮಾವಳಿಗಳನ್ನು ಸರಕಾರ ರೂಪಿಸುವುದು ಅಗತ್ಯವಾಗಿದೆ. ಇದರಿಂದ ಜಲಸಂಪನ್ಮೂಲಗಳ ಉತ್ತಮ ನಿರ್ವಹಣೆ, ಅವಶ್ಯವಿರುವ ಬಂಡವಾಳ ಹೂಡಿಕೆ, ವೈಜ್ಞಾನಿಕ ರೀತಿಯ ಮೀನು ಸಾಕಣೆ, ಮೀನುಮರಿ ಉತ್ಪಾದನೆ, ಸಾಕಣೆ ಹಾಗೂ ಸಂಪನ್ಮೂಲಗಳ ಬಳಕೆ, ಅಲ್ಲದೇ ಸಂಘಸಂಸ್ಥೆಗಳ ಭಾಗವಹಿಸುವಿಕೆ ವೃದ್ಧಿಯಾಗಿ ಗ್ರಾಮದ ಬೆಳವಣಿಗೆಗೆ ಪೂರಕವಾದ ವಾತಾವರಣ ನಿರ್ಮಾಣವಾಗುವ ಸಾಧ್ಯತೆಗಳಿವೆ.

ನಿರುದ್ಯೋಗಿ ಗ್ರಾಮೀಣ ಯುವಕರು ಮತ್ತು ಸ್ಥಳೀಯ ಸಂಘಸಂಸ್ಥೆಗಳು ಹೆಚ್ಚಿನ ಜವಾಬ್ದಾರಿ ವಹಿಸಿ ಗ್ರಾಮಗಳಲ್ಲಿ ಮೀನು ಸಾಕಣೆ ಕೈಗೊಂಡಲ್ಲಿ ಜಲಸಂಪನ್ಮೂಲದ ಸದ್ಬಳಕೆ, ಮೀನು ಉತ್ಪನ್ನದಲ್ಲಿ ಪ್ರಗತಿ, ಆರ್ಥಿಕ ಲಾಭ ಗಳಿಸುವ ಮೂಲಕ ರಾಜ್ಯದ ಗ್ರಾಮೀಣ ಅಭಿವೃದ್ದಿ ಯಶಸ್ವಿಯಾಗಿ ನೆರೆ ರಾಜ್ಯಗಳಿಗೂ ಮಾದರಿಯಾಗುವ ಸಾಧ್ಯತೆ ಅಪಾರವಾಗಿದೆ.

●




# ರೇಷ್ಮೆ ಉದ್ಯಮ

ಡಾ. ಶಂಕರ್ ಬಿ. ದಂಡಿನ್

ರೇಷ್ಮೆ ತನ್ನ ಹೊಳಪು, ಮೃದುತ್ವ ಹಾಗೂ ನವಿರು ಇತ್ಯಾದಿ ಗುಣಗಳಿಂದ ಜಗತ್ತಿನ ಬೇರಾವ ಉಡುಪುಗಳಿಗೆ ಹೋಲಿಸಿಕೊಳ್ಳದೆ ತನ್ನದೇ ಆದ ವೈಶಿಷ್ಟ್ಯ ಹಾಗೂ ರಾಜಮರ್ಯಾದೆಯನ್ನು ಕಾಪಾಡಿಕೊಂಡು ವಸ್ತ್ರಗಳ ರಾಣಿ ಎಂದೇ ಪ್ರಸಿದ್ಧಿ ಪಡೆದಿದೆ. ಸುಮಾರು ೫೦೦೦ ವರ್ಷಗಳಷ್ಟು ಐತಿಹಾಸಿಕ ಪರಂಪರೆ ಹೊಂದಿದ ಈ ವಸ್ತ್ರ, ಮಾನವ ಸಂಸ್ಕೃತಿಯ ಒಂದು ಅವಿಭಾಜ್ಯ ಅಂಗವಾಗಿದೆ. ಭಾರತ ದೇಶದಲ್ಲಿ ಪುರಾತನ ಕಾಲದಿಂದಲೂ ರೇಷ್ಮೆಗೆ ವಿಶೇಷ ಸ್ಥಾನಮಾನಗಳನ್ನು ಕಲ್ಪಿಸಲಾಗಿದ್ದು ಮಹಾಭಾರತ, ರಾಮಾಯಣಗಳಂತಹ ಪ್ರಸಿದ್ಧ ಗ್ರಂಥಗಳಲ್ಲಿ ಉಲ್ಲೇಖಿಸಲಾಗಿದೆ. ಭಾರತ ದೇಶವು ಜಗತ್ತಿನಲ್ಲಿ ಬೆಳೆಯುವ ಎಲ್ಲಾ ಐದು ತೆರನಾದ ಅಂದರೆ ಹಿಪ್ಪುನೇರಳೆ, ಟಸಾರ್, ಈರಿ, ಮೂಗಾ ಹಾಗೂ ಓಕ್ ಟಸಾರ್ ಬೆಳೆಯುವ ಏಕೈಕ ರಾಷ್ಟ್ರವಾಗಿದ್ದು ಜಗತ್ತಿನಲ್ಲಿ ರೇಷ್ಮೆ ಉತ್ಪಾದಿಸುವ ರಾಷ್ಟ್ರಗಳಲ್ಲಿ ಎರಡನೇ ಸ್ಥಾನ ಹೊಂದಿದೆ. ಮೂಗಾ ರೇಷ್ಮೆಯು ಕೇವಲ ಭಾರತದಲ್ಲಿ ಮಾತ್ರ ಬೆಳೆಯಲಾಗುತ್ತಿದ್ದು ಇದಕ್ಕೆ ಜಾಗತಿಕ ಸ್ವಾಮ್ಯ ದೊರೆತಿದೆ. ಇಂದು ಭಾರತ ದೇಶದಲ್ಲಿ ಸುಮಾರು ೧೫,೦೦೦ ಮೆಟ್ರಿಕ್ ಟನ್ನಿನಷ್ಟು ರೇಷ್ಮೆ ಉತ್ಪಾದನೆಯಾಗುತ್ತಿದ್ದು ಇದರಲ್ಲಿ ದಕ್ಷಿಣದ ಮೂರು ರಾಜ್ಯಗಳು ಅಂದರೆ ಕರ್ನಾಟಕ, ಆಂಧ್ರ ಹಾಗೂ ತಮಿಳು ನಾಡುಗಳು ಸುಮಾರು ೯೦ ಪ್ರತಿಶತದಷ್ಟು ರೇಷ್ಮೆ ಉತ್ಪಾದಿಸಿ ಸಿಂಹಪಾಲು ಪಡೆದಿವೆ.

> ಭಾರತದಲ್ಲಿ ಪುರಾತನ ಕಾಲದಿಂದಲೂ ರೇಷ್ಮೆಗೆ ವಿಶೇಷ ಮಹತ್ವವಿದೆ. ರಾಮಾಯಣ, ಮಹಾಭಾರತ ದಂತಹ ಗ್ರಂಥಗಳಲ್ಲಿ ಇದರ ಉಲ್ಲೇಖವಿದೆ. ಇಂದು ಭಾರತದಲ್ಲಿ ಹದಿನೈದು ಸಾವಿರ ಮೆಟ್ರಿಕ್ ಟನ್ ರೇಷ್ಮೆ ಉತ್ಪಾದನೆಯಾಗುತ್ತಿದೆ.

ಕರ್ನಾಟಕ ಭಾರತ ದೇಶದ ಒಟ್ಟು ರೇಷ್ಮೆ ಉತ್ಪಾದನೆಯಲ್ಲಿ ಸುಮಾರು ೬೦ ಭಾಗದಷ್ಟು ಉತ್ಪಾದಿಸುತ್ತಿದ್ದು, ಬೆಂಗಳೂರು ದೇಶದ ಹಾಗೂ ಅಂತರರಾಷ್ಟ್ರೀಯ ರೇಷ್ಮೆ ಕೇಂದ್ರವೆಂದೇ ಪ್ರಸಿದ್ಧಿ ಪಡೆದಿದೆ. ಅಂದಿನ ಮೈಸೂರು ಪ್ರಾಂತ್ಯದ ಅರಸು ಟಿಪ್ಪುಸುಲ್ತಾನರು ೧೭೭೮ರ ದಶಕದಲ್ಲಿ ರೇಷ್ಮೆ ವ್ಯವಸಾಯವನ್ನು ಪ್ರಾರಂಭಿಸಿ ಈ ಉದ್ಯಮಕ್ಕೆ ನಾಂದಿ ಹಾಡಿದರು. ತದನಂತರ ಕರ್ನಾಟಕದಲ್ಲಿ ಈ ಉದ್ಯಮವನ್ನು ಸ್ಥಾಪಿಸಿ, ಬೆಳೆಸಿ, ಉಳಿಸಿ, ಉಚ್ಛ್ರಾಯ ಸ್ಥಿತಿಗೆ ತಲುಪಿಸಿದವರಲ್ಲಿ ಅನೇಕ ಮಹನೀಯರು, ಮನೆತನಗಳು ಹಾಗೂ ಸಂಘ ಸಂಸ್ಥೆಗಳು ಸಕ್ರಿಯವಾಗಿ ಕಾರ್ಯ ನಿರ್ವಹಿಸಿರುವುದು ಉಲ್ಲೇಖನೀಯ. ಶ್ರೀರಂಗಪಟ್ಟಣದ ದೊರೆ ಟಿಪ್ಪುಸುಲ್ತಾನ್ ಅವರ ಆಸ್ಥಾನ ಪಂಡಿತರಾದ ದಿವಾನ್ ಪೂರ್ಣಯ್ಯ, ಮೈಸೂರಿನ ಅರಸು ಮನೆತನ ಹಾಗೂ ಅವರ ದಿವಾನರಾಗಿದ್ದ ಶೇಷಾದ್ರಿ ಅಯ್ಯರ್, ಜೆ.ಎನ್.ಟಾಟಾ, ಸರ್.ಎಂ. ವಿಶ್ವೇಶ್ವರಯ್ಯ, ನವರತ್ನ ರಾಮರಾವ್ ಮುಂತಾದವರು

ರೇಷ್ಮೆ ಇತಿಹಾಸದ ಪುಟದಲ್ಲಿ ಅಚ್ಚಳಿಯದೇ ನಿಂತಿರುವರು. ಅವರು ಹಾಕಿ ಕೊಟ್ಟ ದಾರಿಯಲ್ಲಿ ಕಳೆದ ಸುಮಾರು ಐದು ದಶಕಗಳಿಂದ ರೇಷ್ಮೆ ಕೃಷಿಗೆ ವಿಶೇಷ ಗಮನ ಹರಿಸಿ ಅದು ಒಂದು ಲಾಭದಾಯಕ ಗುಡಿ ಕೈಗಾರಿಕೆಯಾಗಿ ಗ್ರಾಮೀಣ ಜನರ ಬದುಕನ್ನು ಹಸನುಗೊಳಿಸುವಲ್ಲಿ ಸದಾ ಪ್ರಯತ್ನಿಸುತ್ತಿರುವ ಇನ್ನೋರ್ವ ಮಹನೀಯರೆಂದರೆ ಎಂ. ವಿ. ರಾಜಶೇಖರನ್‌ರವರು.

ಎಪ್ಪತ್ತೈದರ ಪ್ರಾಯದ ಎಂ.ವಿ.ರಾಜಶೇಖರನ್‌ರವರು ಕನಕಪುರ ತಾಲ್ಲೂಕಿನ ದೊಡ್ಡಮರಳವಾಡಿಯ ಕೃಷಿ ಅದರಲ್ಲೂ ರೇಷ್ಮೆಕೃಷಿ ಕುಟುಂಬದಲ್ಲಿ ೧೯೩೪ನೇ ಇಸವಿಯಲ್ಲಿ ಜನಿಸಿ ಅಂದಿನಿಂದ ಇಂದಿನವರೆಗೂ ಕೃಷಿ, ಕೃಷಿಕ, ಗ್ರಾಮಾಭಿವೃದ್ಧಿಗೆ ನಿರಂತರವಾಗಿ ತಮ್ಮನ್ನು ಅರ್ಪಿಸಿಕೊಂಡು ಅದನ್ನೇ ಉಸಿರಾಗಿಸಿ, ಹಸಿರಾಗಿಸುವ ಕಾಯಕದಲ್ಲಿ ನಿರತರಾಗಿರುವರು. ಕೇಂದ್ರ ಸರಕಾರದ ವಿಜ್ಞಾನ ಹಾಗೂ ತಾಂತ್ರಿಕ ಇಲಾಖೆಯ ಸಾಮಾನ್ಯ ವಿಜ್ಞಾನ ಮತ್ತು ತಂತ್ರಜ್ಞಾನವೆಂಬ ವಿಭಾಗಕ್ಕೆ ಇವರು ಪ್ರಮುಖ ಸಲಹೆಗಾರರಾಗಿದ್ದಾಗ ರೇಷ್ಮೆ ಬೆಳೆಗಾರರು ಹಾಗೂ ನೂಲು ಬಿಚ್ಚಾಣಿಕದಾರರು ಅದರಲ್ಲೂ ಸ್ತ್ರೀಯರು ಎದುರಿಸುತ್ತಿರುವ ಹಲವಾರು ಸಮಸ್ಯೆಗಳ ನಿವಾರಣೆಗೆ ಹಣಸಹಾಯ ಒದಗಿಸಿ ಕಾರ್ಯಕ್ರಮಗಳನ್ನು ರೂಪಿಸಿದರು. ಅರ್ಕಾವತಿ ನದಿಗೆ ಅಡ್ಡಲಾಗಿ ಕಟ್ಟಿದ ಮಂಚನಬೆಲೆ ಅಣೆಕಟ್ಟೆ ಯೋಜನೆಗೆ ಶ್ರಮಿಸಿ ಸಾವಿರಾರು ರೇಷ್ಮೆ ಬೆಳೆಗಾರರಿಗೆ ಅನುಕೂಲ ಮಾಡಿಕೊಟ್ಟಿರುವ ಸಂಗತಿ ರಾಜಶೇಖರನ್‌ರವರ ರೇಷ್ಮೆ ವ್ಯವಸಾಯದ ಬಗೆಗಿನ ಆಸಕ್ತಿಯನ್ನು ಎತ್ತಿ ತೋರಿಸುತ್ತದೆ.

ರೇಷ್ಮೆ ಕೈಗಾರಿಕೆಯಲ್ಲಿ ತೊಡಗಿದ ಸಮುದಾಯದ ಅಭಿವೃದ್ಧಿಗೆ ಹೆಚ್ಚಿನ ತಾಂತ್ರಿಕತೆ ಹಾಗೂ ಕೌಶಲ್ಯತೆಯಿಂದಲೇ ಸಾಧ್ಯವೆಂಬ ಸತ್ಯತೆಯನ್ನು ಮನಗಂಡು, ಅವರಿಗೆ ತರಬೇತಿ ನೀಡಲು ತಾವೇ ೧೯೭೬ರಲ್ಲಿ ಕಟ್ಟಿದ ಏಶಿಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯಲ್ಲಿ ವಿಶೇಷ ರೇಷ್ಮೆ ತರಬೇತಿ ಘಟಕ ಸ್ಥಾಪಿಸಿದರು. ಎಂ.ವಿ. ರಾಜಶೇಖರನ್‌ರವರ ರೇಷ್ಮೆ ಉದ್ಯಮಕ್ಕಿರುವ ಅಭಿಲಾಷೆಗಳನ್ನು ಮನಗಂಡು ಕೇಂದ್ರ ಸರಕಾರವು ಇವರನ್ನು ಎರಡು ಅವಧಿಗೆ (೧೯೬೭-೭೦ ಹಾಗೂ ೨೦೦೧-೨೦೦೪ನೇ ಅವಧಿಗೆ) ಕೇಂದ್ರ ರೇಷ್ಮೆ ಮಂಡಳಿಯ ಸದಸ್ಯರನ್ನಾಗಿ ನೇಮಿಸಿತು. ಈ ಅವಧಿಯಲ್ಲಿ ರಾಜಶೇಖರನ್‌ರವರು ಉದ್ಯಮದ ಪ್ರಗತಿಗೆ ಉಪಯುಕ್ತವಾಗುವ ಹಲವಾರು ಸಲಹೆಗಳನ್ನು ನೀಡಿ ಅವುಗಳು ಅನುಷ್ಠಾನವಾಗಲು ಶ್ರಮಿಸಿದರು.

ಅವರು ಕೇಂದ್ರದಲ್ಲಿ ಯೋಜನಾ ಇಲಾಖೆಯ ರಾಜ್ಯ ಮಂತ್ರಿಗಳಾದ ಮೊದಲ ದಿನದಿಂದಲೇ ರೇಷ್ಮೆ ಉದ್ಯಮದ ಅಭಿವೃದ್ಧಿಗೆ ಪೂರಕವಾಗುವಂತಹ ಹಲವಾರು ಯೋಜನೆಗಳನ್ನು ರೂಪಿಸಲು ಕೇಂದ್ರ ರೇಷ್ಮೆ ಮಂಡಳಿಯ ಸದಸ್ಯ ಕಾರ್ಯದರ್ಶಿಯಾದ ಜಾಯ್ ಓಮನ್, ಕೇಂದ್ರ ಸರಕಾರದ ರೇಷ್ಮೆ ಇಲಾಖೆಯ ಉನ್ನತ ಅಧಿಕಾರಿಗಳ ಜೊತೆ ಚರ್ಚಿಸುತ್ತಿರುವರು. ಇವರು ಸಚಿವರಾಗಿ ಅಧಿಕಾರ ವಹಿಸಿಕೊಂಡ ಕೇವಲ ಒಂದೇ ತಿಂಗಳ ಅವಧಿಯಲ್ಲಿ ಮೈಸೂರಿನ ಕೇಂದ್ರ ರೇಷ್ಮೆ ಸಂಶೋಧನಾ ಮತ್ತು ತರಬೇತಿ ಸಂಸ್ಥೆಗೆ ಭೇಟಿ ನೀಡಿ ಅಲ್ಲಿ ನಡೆಯುತ್ತಿರುವ ಸಂಶೋಧನೆ ಹಾಗೂ ತರಬೇತಿ ಕಾರ್ಯಕ್ರಮಗಳನ್ನು ವೀಕ್ಷಿಸಿ ತುಂಬಾ ಸಂತೋಷ ವ್ಯಕ್ತ ಪಡಿಸಿದರಲ್ಲದೆ ವಿಜ್ಞಾನಿಗಳಿಗೆ ಶುಭ ಕೋರಿದರು. ಇದೇ ರೀತಿ ಕರ್ನಾಟಕ ರೇಷ್ಮೆ ಸಂಶೋಧನೆ ಹಾಗೂ ಅಭಿವೃದ್ಧಿ ಸಂಸ್ಥೆ, ತಲಘಟ್ಟಪುರ ಇದರೊಂದಿಗೆ ನಿಕಟ ಸಂಪರ್ಕ ಹೊಂದಿ ಈ ಸಂಸ್ಥೆಯ ಸಹಭಾಗಿತ್ವದಲ್ಲಿ ಮರಳವಾಡಿಯಲ್ಲಿ ಸ್ಥಾಪಿಸಿರುವ ತರಬೇತಿ ಘಟಕದ ಜೊತೆ ಹಲವಾರು ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಿರುವುದು ಎಂ. ವಿ. ರಾಜಶೇಖರನ್‌ರವರು ಹಾಗೂ ರೇಷ್ಮೆ ಉದ್ಯಮದ ಬಾಂಧವ್ಯಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಈ ಮಹನೀಯರ ಸಾಲಿನಲ್ಲಿ ಉದ್ಯಮಕ್ಕ ಕಳೆದ ಅರ್ಧ ದಶಕದಲ್ಲಿ ಶ್ರಮಿಸಿದ ಮಹನೀಯರಲ್ಲಿ ದಿ. ವೈ. ಕೆ. ರಾಮಯ್ಯ, ದಿ. ಡಾ. ಎಸ್. ಕೃಷ್ಣಸ್ವಾಮಿ, ದಿ. ವೇಣುಗೋಪಾಲ ನಾಯರ್, ಪಿ. ಬಾಲಸುಬ್ರಹ್ಮಣ್ಯಮ್, ಹೆಚ್. ಕೆ. ರಂಗನಾಥರಾವ್, ಉತ್ತಮನ್, ಡಾ. ಎಮ್. ಎಸ್. ಜಾಲಿ, ಡಾ. ಎಮ್. ಎನ್. ನರಸಿಂಹಣ್ಣ, ಟಿ. ಎನ್. ಸೋನವಾಲಕರ್, ಡಿ. ಮಹದೇವಪ್ಪ ಮುಂತಾದವರ ಕೊಡುಗೆಯನ್ನು ಸ್ಮರಿಸಬಹುದು.

ಅಂದಿನಿಂದ ಇಂದಿನವರೆಗೂ ಹಲವಾರು ಏರು-ಪೇರುಗಳನ್ನು ಕಂಡ ರೇಷ್ಮೆ ಉದ್ಯಮ ಇಂದು ಹೆಚ್ಚು ಆದಾಯ ತರಬಲ್ಲ ಗ್ರಾಮೀಣ ಕಸುಬಾಗಿ ಪೂರ್ಣಪ್ರಮಾಣದ ವಾಣಿಜ್ಯ ಬೆಳೆಯಾಗಿ ಲಕ್ಷಾಂತರ ರೈತರ ಜೀವನಾಧಾರವಾಗಿದೆ. ರಾಜ್ಯದಲ್ಲಿ ಸುಮಾರು ೩ ಲಕ್ಷ ಕುಟುಂಬಗಳಿಗೆ, ಅದರಲ್ಲೂ ಗ್ರಾಮೀಣ ರೈತಾಪಿ ಹಾಗೂ ಆರ್ಥಿಕವಾಗಿ ಹಿಂದುಳಿದ ಭೂರಹಿತ ವರ್ಗಕ್ಕೆ ಕಾಮಧೇನುವಾಗಿ ಬದುಕಿನ ಬೆಳಕಾಗಿದೆ. ಇದಕ್ಕೆಲ್ಲ ಮುಖ್ಯ ಕಾರಣ ರೇಷ್ಮೆ ಉದ್ಯಮಕ್ಕೆ ಇರುವ ಹಲವಾರು ವಿಶಿಷ್ಟತೆಗಳು. ಇವುಗಳಲ್ಲಿ ಮುಖ್ಯವಾದವುಗಳನ್ನು ಈ ರೀತಿ ವಿಶ್ಲೇಷಿಸಬಹುದು.

## ರಾಷ್ಟ್ರೀಯ ಅಭಿವೃದ್ಧಿಯಲ್ಲಿ ರೇಷ್ಮೆ ಉದ್ಯಮದ ಪಾತ್ರ :

ದೇಶದಲ್ಲಿ ಹೆಚ್ಚಾಗಿರುವ ಮಾನವಶಕ್ತಿ ಸಂಪನ್ಮೂಲಕ್ಕೆ ಅದರಲ್ಲೂ ಗ್ರಾಮೀಣ ಜನತೆಗೆ ಕೆಲಸ ಒದಗಿಸಿ ಜೀವನಾಧಾರ ಕಲ್ಪಿಸಬಲ್ಲ ಸಾಮರ್ಥ್ಯ.

ಕಡಿಮೆ ಖರ್ಚಿನಲ್ಲಿ ಹೆಚ್ಚಿನ ಲಾಭ ತರುವ ಶಕ್ತಿ.

ಸಾಂಪ್ರದಾಯಿಕ ಹಾಗೂ ಹೆಚ್ಚು ನೈಪುಣ್ಯ ಇರದೆ ಎಲ್ಲಾ ಜನರು ಸುಲಭವಾಗಿ ಅನುಸರಿಸುವಂತಹ ಸರಳ ಹಾಗೂ ಹೆಚ್ಚು ನೈಪುಣ್ಯ ಇರದೆ ಎಲ್ಲಾ ಜನರು ಸುಲಭವಾಗಿ ಅನುಸರಿಸುವಂತಹ ಸರಳ ಹಾಗೂ ಸುಲಭ ತಾಂತ್ರಿಕತೆಗಳು.

ದೇಶದ ಹೊರಗೆ ಹಾಗೂ ಒಳಗೆ ಹೆಚ್ಚಾಗುತ್ತಿರುವ ಕಚ್ಚಾ ರೇಷ್ಮೆಗೆ ಬೇಡಿಕೆ.

ಗ್ರಾಮೀಣ ಭಾಗದ ಜನರು ಪಟ್ಟಣಕ್ಕೆ ವಲಸೆ ಹೋಗಲು ಕಡಿವಾಣ ಹಾಕುವ ಶಕ್ತಿ.

ದೇಶದ ಕೆಲವು ಪ್ರಾಂತ್ಯಗಳಲ್ಲಿ ರೇಷ್ಮೆ ಉದ್ಯಮಕ್ಕೆ ಹೇಳಿಮಾಡಿಸಿದಂತಹ ಭೂ ಹಾಗೂ ಹವಾಗುಣ ಲಭ್ಯತೆ.

ಉದ್ಯಮದ ವಿವಿಧ ಹಂತಗಳಲ್ಲಿ ದೊರೆಯುವ ಉಪವಸ್ತುಗಳಿಂದ ಹಲವಾರು ಸಣ್ಣ ಸಣ್ಣ ಉದ್ಯಮ ಬೆಳೆಯಲು ಅನುಕೂಲತೆ.

ಶ್ರೀಮಂತರಿಂದ, ಬಡ ವರ್ಗಕ್ಕೆ ಹಣದ ವರ್ಗಾವಣೆ.

ದೇಶದ ಆರ್ಥಿಕ ಸುಧಾರಣೆಗೆ ಬೇಕಾದ ವಿದೇಶಿ ವಿನಿಮಯ ಗಳಿಕೆ ಹಾಗೂ ಆಮದಿನಿಂದ ವ್ಯಯವಾಗುವ ಹಣದ ಉಳಿತಾಯ.

## ಗ್ರಾಮೀಣ ರೈತವರ್ಗದ ಅಭಿವೃದ್ಧಿಗೆ ರೇಷ್ಮೆ ಉದ್ಯಮ :

ಹೆಚ್ಚು ಓದದೆ ಕಡಿಮೆ ಆರ್ಥಿಕ ಅನುಕೂಲತೆ ಹೊಂದಿರುವ ಗ್ರಾಮೀಣ ಜನತೆಗೆ ಅನುಕೂಲವಾಗುವ ಹಲವಾರು ಗುಣಧರ್ಮಗಳು ರೇಷ್ಮೆ ಉದ್ಯಮಕ್ಕೆ ಇರುವುದರಿಂದ ಈ ಒಂದು ಕೃಷಿ ಆಧಾರಿತ ಕೈಗಾರಿಕೆ ಗ್ರಾಮೀಣ ಅಭಿವೃದ್ಧಿಗೆ ಬಹಳ ಸೂಕ್ತವಾಗಿದೆ. ಈ ದಿಸೆಯಲ್ಲಿ ಈ ಉದ್ಯಮಕ್ಕೆ ಇರುವ ಮುಖ್ಯ ಸಾಮರ್ಥ್ಯಗಳೆಂದರೆ :

೧. ಸಣ್ಣ ಹಾಗೂ ಅತೀ ಸಣ್ಣ ಹಿಡುವಳಿದಾರರು ಸುಲಭವಾಗಿ ಕೈಗೊಳ್ಳಬಹುದಾದ ವಿಶಿಷ್ಟತೆ.

೨. ಕಡಿಮೆ ಬಂಡವಾಳದಿಂದ ಹೆಚ್ಚು ಆದಾಯ ತರಬಲ್ಲ ಶಕ್ತಿ.

೩. ವರ್ಷವಿಡೀ ಮಹಿಳೆಯರಿಗೆ, ಮಕ್ಕಳಿಗೆ, ವೃದ್ಧರಿಗೆ ಮನೆಯ ಅಂಗಳದಲ್ಲೇ ಕೆಲಸ ಕಲ್ಪಿಸಬಲ್ಲ ಹೆಚ್ಚು ಶ್ರಮವಿಲ್ಲದ ಚಟುವಟಿಕೆಗಳು.

೪. ವರ್ಷಕ್ಕೆ ೬-೧೦ ಸಾರಿ ಗೂಡು ಬೆಳೆದು ಹಣ ಸಂಪಾದನಾ ವ್ಯವಸ್ಥೆ.

೫. ಬೆಳೆದವನಿಗೆ ಹೆಚ್ಚ ಆದಾಯ ತರುವ ವಿಶೇಷ ಅನುಕೂಲತೆ.

೬. ಸರಳ, ಕಡಿಮೆ ಖರ್ಚಿನ ಹಾಗೂ ಎಲ್ಲರೂ ತಿಳಿದುಕೊಳ್ಳಬಹುದಾದಂತಹ ತಾಂತ್ರಿಕತೆಗಳು.

೭. ಹೆಣ್ಣುಮಕ್ಕಳಿಗೆ ನೈಜ ಹಾಗೂ ದೈವದತ್ತವಾಗಿ ಬಂದ ಶುಶ್ರೂಷೆ ಮತ್ತು ಕೋಮಲ ಗುಣಗಳಿಗೆ ತಕ್ಕದಾಗಿರುವ ರೇಷ್ಮೆ ಸಾಕಣೆ.

ಈ ಮೇಲಿನ ಕಾರಣಗಳಿಂದಾಗಿ ರೇಷ್ಮೆ ಉದ್ಯಮ ಗ್ರಾಮೀಣ ಅಭಿವೃದ್ಧಿಗೆ ಹೇಳಿ ಮಾಡಿಸಿದಂತಹ ಒಂದು ಉದ್ಯಮವಾಗಿದೆ.

ಇಂದು ಭಾರತ ದೇಶದ ಅದರಲ್ಲೂ ಕರ್ನಾಟಕ ರಾಜ್ಯದ ರೇಷ್ಮೆ ಉದ್ಯಮ ಕವಲು ದಾರಿಯಲ್ಲಿದೆ ಎಂದು ಹೇಳಿದರೆ ತಪ್ಪಾಗಲಾರದು. ಭಾರತದ ಗ್ರಾಮೀಣ ಪ್ರದೇಶದಲ್ಲಿ ನೆಲೆಸಿರುವ ಹಾಗೂ ಬಹಳಷ್ಟು ಜನ ತಮ್ಮ ಜೀವನಕ್ಕೆ ಕೃಷಿ ಹಾಗೂ ಕೃಷಿ ಆಧಾರಿತ ಕಸುಬುಗಳಿಂದ ಜೀವನ ಸಾಗಿಸುತ್ತಿದ್ದು, ಅವರಿಗೆ ಮೈತುಂಬಾ ಕೆಲಸ-ಕೈ ತುಂಬಾ ಹಣ ತರಬಲ್ಲ ಉತ್ತಮವಾದ ಕೃಷಿ ರೇಷ್ಮೆ ಕೃಷಿ. ಆದರೆ ಮುಂದುವರಿದಂತಹ ದೇಶಗಳಾದ ಚೀನಾ, ಬ್ರೆಜಿಲ್ ಇವುಗಳಿಗೆ ಹೋಲಿಸಿದರೆ ದೇಶದಲ್ಲಿ ರೇಷ್ಮೆ ಉತ್ಪಾದಕತೆ,

ಗುಣಮಟ್ಟ ಕಡಿಮೆಯಾಗಿದ್ದು ಉತ್ಪಾದನೆಗೆ ತಗಲುವ ಖರ್ಚುಗಳು ದುಬಾರಿಯಾಗಿ ದೇಶದ ಬಹುತೇಕ ನೇಕಾರರು ಹಾಗೂ ಬಟ್ಟೆ ತಯಾರಕರು ಕಡಿಮೆ ಬೆಲೆಯಲ್ಲಿ ಸಿಗುವ ಉತ್ತಮ ಗುಣಮಟ್ಟದ ಚೀನಾ ದೇಶದ ರೇಷ್ಮೆಗೆ ಮಾರುಹೋಗಿರುವರು. ದೇಶದಲ್ಲಿನ ರೇಷ್ಮೆ ಬೇಡಿಕೆ ಉತ್ಪಾದನೆಗಿಂತ ಸುಮಾರು ೪೦ ಪ್ರತಿಶತದಷ್ಟು ಹೆಚ್ಚಾಗಿದ್ದು ಈ ಬೇಡಿಕೆಯನ್ನು ಆಂತರಿಕವಾಗಿ ತುಂಬಲು ರೇಷ್ಮೆ ಉದ್ಯಮಕ್ಕೆ ಸಾಧ್ಯವಾಗದೆ ಹೊರದೇಶದ ಅದರಲ್ಲೂ ಚೀನಾ ದೇಶದ ರೇಷ್ಮೆ ಆಮದು ಅನಿವಾರ್ಯವಾಗದೆ. ಇದಕ್ಕೆ ಇರುವ ಕೆಲವು ಮುಖ್ಯ ಕಾರಣಗಳೆಂದರೆ :

೧. ಉದ್ಯಮದ ಎಲ್ಲಾ ಹಂತಗಳಲ್ಲೂ ಅತಿಸಣ್ಣ ರೈತರು, ಸಣ್ಣ ರೈತರು, ಬಿತ್ತನೆ ತಯಾರಕರು, ನೂಲು ಬಿಚ್ಚಾಣಿಕೆದಾರರು ಕಾರ್ಯ ನಿರ್ವಹಿಸುವುದರಿಂದ, ಉತ್ಪಾದಿಸಿದ ಸರಕು ಏಕರೂಪವಾಗಿರದೆ ಹಲವಾರು ನ್ಯೂನತೆಗಳಿಂದ ಕೂಡಿದ್ದು ಗುಣಮಟ್ಟದಲ್ಲಿ ಇಳಿತ.

೨. ಹೆಚ್ಚು ಬಂಡವಾಳ ತೊಡಗಿಸಲು ಸಾಮರ್ಥ್ಯವಿಲ್ಲದ ಈ ಸಣ್ಣ ಹಾಗೂ ಅತಿಸಣ್ಣ ಹಿಡುವಳಿದಾರರಿಂದ ಹೊಸ ಹೊಸ ತಾಂತ್ರಿಕತೆಗಳನ್ನು ಅಳವಡಿಸಿಕೊಳ್ಳಲು ಸಂಪನ್ಮೂಲದ ಕೊರತೆ.

೩. ಉದಾರೀಕರಣ, ಜಾಗತೀಕರಣ ಹಾಗೂ ಖಾಸಗೀಕರಣದಿಂದಾಗಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಪೈಪೋಟಿ ನಡೆಸಲು ದೊಡ್ಡ ದೊಡ್ಡ ಉದ್ದಿಮೆದಾರರಿಗೆ ಬಂಡವಾಳ ಹೂಡಿಕೆಗೆ ಆಸಕ್ತಿ ಹೊಂದಲು ಕಾನೂನು ಹಾಗೂ ನಿಯಮಾವಳಿಗಳ ಅಡ್ಡಗಾಲು.

ಈ ಮೇಲಿನ ಕಾರಣಗಳಿಂದ ಹೊರಬರಲು ದೇಶದಲ್ಲಿ ಅಂತರರಾಷ್ಟ್ರೀಯ ಗುಣಮಟ್ಟದ ಬೈವೋಲ್‌ಟೈನ್ ರೇಷ್ಮೆ ಉತ್ಪಾದಿಸಲು ಭಾರತ ಸರಕಾರವು ರಾಜ್ಯ ಸರಕಾರಗಳ ಸಹಭಾಗಿತ್ವದಲ್ಲಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಿದೆ. ಇವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಸ್ಥೂಲವಾಗಿ ವಿವರಿಸಲಾಗಿದೆ.

ಕಳೆದ ಸುಮಾರು ೧೦ ವರ್ಷಗಳಲ್ಲಿ ಕೇಂದ್ರ ರೇಷ್ಮೆ ಮಂಡಳಿ, ಜಪಾನಿನ ಜೈಕಾ ಸಂಸ್ಥೆಗಳು ಜಂಟಿಯಾಗಿ ಹಾಕಿಕೊಂಡ ಸಂಶೋಧನೆ ಯೋಜನೆಯ ಫಲವಾಗಿ ಹೊಸ ಬೈವೋಲ್ಟೈನ್ ರೇಷ್ಮೆ ತಳಿಗಳು, ವೈಜ್ಞಾನಿಕವಾಗಿ ಮೊಟ್ಟೆ ತಯಾರಿಕೆ, ಸುಧಾರಿತ ಹಿಪ್ಪುನೇರಳೆ ವ್ಯವಸಾಯ ಕ್ರಮಗಳು, ಕಡಿಮೆ ಖರ್ಚಿನ ಹುಳು ಸಾಕಾಣಿಕಾ ಮನೆ ಮತ್ತು ಸುಧಾರಿತ ಚಂದ್ರಿಕೆಗಳು, ರೇಷ್ಮೆ ಹುಳು ಹಾಗೂ ಹಿಪ್ಪು ನೇರಳೆಗೆ ತಗಲುವ ರೋಗ ಹಾಗೂ ಕೀಟಗಳ ನಿರ್ವಹಣೆ ಇತ್ಯಾದಿಗಳನ್ನು ಹೊರತಂದಿದ್ದು ರಾಜ್ಯದಲ್ಲಿ ಬೈವೋಲ್ಟೈನ್ ಬೆಳೆಯನ್ನು ರೈತರು ಫಲಪ್ರದವಾಗಿ ಬೆಳೆಯುತ್ತಿರುವರಲ್ಲದೆ ಹೆಚ್ಚಿನ ಆದಾಯವನ್ನು ಗಳಿಸುತ್ತಿರುವರು. ಈ ಪ್ರಾಥಮಿಕ ಹಂತದ ಅಭಿವೃದ್ಧಿ ಹಾಗೂ ಒಳ್ಳೆಯ ಪರಿಣಾಮಗಳನ್ನು ಮನಗಂಡು, ಕೇಂದ್ರ ಹಾಗೂ ರಾಜ್ಯ ಸರಕಾರಗಳ ಜೊತೆಗೆ ಜಪಾನಿನ ಜೈಕಾ ಸಂಸ್ಥೆ ಐದು ವರ್ಷಗಳ ದ್ವಿತಳಿ ವಿಸ್ತರಣಾ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುತ್ತಿದ್ದು ಕರ್ನಾಟಕ, ತಮಿಳುನಾಡು ಹಾಗೂ ಆಂಧ್ರಪ್ರದೇಶ ರಾಜ್ಯದಲ್ಲಿ ಆಯ್ದ ೧೮ ತಾಂತ್ರಿಕ ಸೇವಾಕೇಂದ್ರಗಳ ವ್ಯಾಪ್ತಿಯಲ್ಲಿ ಬರುವ ಸುಮಾರು ೧೦೦೦ ರೈತರನ್ನೊಳಗೊಂಡಂತೆ ಬೈವೋಲ್ಟೈನ್ ಗೂಡು ಬೆಳೆಯಲು ವಿಸ್ತರಣಾ ವ್ಯವಸ್ಥೆಯನ್ನು ರೂಪಿಸುವ ಯೋಜನೆಯನ್ನು ಜಾರಿಗೊಳಿಸಲಾಗುತ್ತಿದೆ. ಇದಕ್ಕೆ ನೆರವಾಗುವಂತೆ ಕೆಟಲಿಕ್ ಅಭಿವೃದ್ಧಿ ಯೋಜನೆಯಲ್ಲಿ ರೈತರಿಗೆ ಹಲವಾರು ರೀತಿಯಲ್ಲಿ ಹಣಕಾಸು ನೆರವು ಒದಗಿಸುತ್ತಿರುವರು. ಇವುಗಳಲ್ಲಿ ಮುಖ್ಯವಾದ ಹಣ ಸಹಾಯ ಪಡೆಯುವ ಅಂಶಗಳೆಂದರೆ ಸುಧಾರಿತ ಹಿಪ್ಪುನೇರಳೆ ಸಸಿಗಳ ಸರಬರಾಜು, ಹನಿ ನೀರಾವರಿ, ಹುಳು ಸಾಕುವ ಪ್ರತ್ಯೇಕ ಮನೆ, ಚಾಕಿ ಸಾಕಾಣಿಕಾ ಕೇಂದ್ರಗಳು, ಹುಳು ಸಾಕುವ ಸಲಕರಣೆ, ಸೋಂಕು ನಿವಾರಕಗಳು, ಇವಲ್ಲದೆ ಹಲವಾರು ಸಂಸ್ಥೆಗಳ ಸಹಾಯದಿಂದ ರೈತರಿಗೆ, ರೈತ ಮಹಿಳೆಯರಿಗೆ, ಚಾಕಿ ಸಾಕಾಣಿಕದಾರರಿಗೆ ಸರಕಾರದ ಖರ್ಚಿನಲ್ಲಿ ತರಬೇತಿ ನೀಡಿ ತಾಂತ್ರಿಕ ನೈಪುಣ್ಯತೆ ಹೆಚ್ಚಿಸುವ ಕಾರ್ಯಕ್ರಮವೂ ಕೂಡ ತ್ವರಿತಗತಿಯಲ್ಲಿ ಸಾಗಿದೆ. ಈ ನಿಟ್ಟಿನಲ್ಲಿ ಭವಿಷ್ಯದಲ್ಲಿ ಕೈಗೊಳ್ಳಬೇಕಾದ ಅತ್ಯಾವಶ್ಯಕ ಕಾರ್ಯಕ್ರಮಗಳೆಂದರೆ :

೧. ಕೇಂದ್ರ ಹಾಗೂ ರಾಜ್ಯ ಸರಕಾರಗಳು ಜೊತೆಗೂಡಿ ತಾಂತ್ರಿಕತೆಗಳ ಕ್ಷೇತ್ರ ವರ್ಗಾವಣೆಗೆ ರೈತರ ಸಹಭಾಗಿತ್ವದಲ್ಲಿ ಹೆಚ್ಚಿನ ಕಾರ್ಯಕ್ರಮ ರೂಪಿಸಿಕೊಳ್ಳುವುದು.

೨. ರೇಷ್ಮೆ ಉದ್ಯಮದಲ್ಲಿ ಖಾಸಗಿಯವರಿಗೆ ಹೆಚ್ಚಿನ ಬಂಡವಾಳ ಹೂಡಿಕೆಗೆ ಅನುಕೂಲ ಮಾಡಿಕೊಡಲು ಹಾಗೂ ಅವರು ಮಣ್ಣಿನಿಂದ ಮೊದಲ್ಗೊಂಡು ಬಟ್ಟೆಯವರೆಗಿನ ಸಮಗ್ರ ಕಾರ್ಯಕ್ರಮ ರೂಪಿಸಿ ಗುಣಮಟ್ಟದ ಸರಕು ಉತ್ಪಾದಿಸಲು ಕಾನೂನು ಹಾಗೂ ನಿಯಮಗಳಲ್ಲಿ ಮಾರ್ಪಾಡು ಮಾಡಿ ಉದ್ಯಮದ ಬೆಳವಣಿಗೆಗೆ ಪೂರಕವಾದ ವಾತಾವರಣ ನಿರ್ಮಿಸುವುದು.

೩. ಬೆಳೆಗಾರರಿಗೆ, ನೂಲು ಬಿಚ್ಚಾಣಿಕೆದಾರರಿಗೆ ಹಾಗೂ ನೇಕಾರರಿಗೆ ನೇರವಾದ ಸಂಬಂಧ ಕಲ್ಪಿಸಿ ಅವರಿಗೆ ತಾವು ಬೆಳೆದ / ಉತ್ಪಾದಿಸಿದ ಸರಕುಗಳಿಗೆ ಸ್ವಇಚ್ಛಾನುಸಾರ ವಿಲೇವಾರಿ ಮಾಡಲು ಅನುಕೂಲವಾಗುವಂತೆ ಕಾನೂನು / ನಿಯಮಾವಳಿಗೆ ತಿದ್ದುಪಡಿಗೆ ತರುವುದು.

೪. ಸಹಕಾರಿ, ಗುತ್ತಿಗೆ ಹಾಗೂ ಗುಂಪು ವ್ಯವಸಾಯ ಮಾಡಲು ಮುಂದೆ ಬಂದವರಿಗೆ ರಹದಾರಿ ನೀಡಿ ಪ್ರೋತ್ಸಾಹ ನೀಡುವುದು.

೫. ಮೊಟ್ಟೆ, ಗೂಡು, ದಾರ ಹಾಗೂ ರೇಷ್ಮೆ ಬಟ್ಟೆಯ ವಹಿವಾಟನ್ನು ಗುಣಮಟ್ಟದ ಆಧಾರದ ಮೇಲೆ ವಿಶ್ಲೇಷಿಸಿ, ದೃಢೀಕರಿಸಿ ಬೆಲೆ ನಿಗದಿ ಮಾಡಿ ವಹಿವಾಟು ನಡೆಸಲು ವ್ಯವಸ್ಥೆ ಕಲ್ಪಿಸುವುದು.

೬. ಹೆಚ್ಚಿನ ಪ್ರಮಾಣದಲ್ಲಿ ದ್ವಿತಳಿಗೂಡು ಉತ್ಪಾದಿಸಲು ಅನುಕೂಲವಾಗುವಂತೆ ಬಿತ್ತನೆ ಗೂಡು ಹಾಗೂ ಮೊಟ್ಟೆ ತಯಾರಿಕೆಗೆ ಹಾಗೂ ಚಾಕಿ ಸಾಕಾಣಿಕೆ ಮಾಡಿ ಚಾಕಿ ಹುಳು ವಿತರಿಸಲು ಹೆಚ್ಚಿನ ಆದ್ಯತೆ ಕೊಡುವುದು.

೭. ಗೂಡಿನ ಗುಣಮಟ್ಟ ಸುಧಾರಿಸಲು ಬೇಕಾದ ಸೋಂಕು ನಿವಾರಣೆ, ಚಂದ್ರಿಕೆ ಇತ್ಯಾದಿಗಳಿಗೆ ಸಹಾಯಧನ ಒದಗಿಸುವುದು.

ಈ ಕಾರ್ಯಕ್ರಮಗಳನ್ನು ಶೀಘ್ರವಾಗಿ ಅನುಸರಿಸಿದರೆ ಭಾರತ ಗುಣಮಟ್ಟದ ರೇಷ್ಮೆ ಉತ್ಪಾದಿಸುವಲ್ಲಿ ಸ್ವಾವಲಂಬಿಯಾಗುವುದಲ್ಲದೆ, ಉಷ್ಣವಲಯದ ರೇಷ್ಮೆ ಉತ್ಪಾದಿಸಬಲ್ಲ ಏಕೈಕ ರಾಷ್ಟ್ರವಾಗಿ ಹಾಗೂ ಗ್ರಾಮೀಣ ಜನತೆಯ ಅಭಿವೃದ್ಧಿಯಲ್ಲಿ ಹೆಚ್ಚಿನ ಪಾತ್ರ ವಹಿಸುವುದರಲ್ಲಿ ಸಂದೇಹವಿಲ್ಲ.

●






# ತೋಟಗಾರಿಕೆ

ಡಾ. ಜಿ. ಕೆ. ವಸಂತಕುಮಾರ್

ಕರ್ನಾಟಕ ರಾಜ್ಯ ರಾಷ್ಟ್ರದ ತೋಟಗಾರಿಕೆ ನಕ್ಷೆಯಲ್ಲಿ ವಿಶಿಷ್ಟ ಸ್ಥಾನ ಪಡೆದಿದೆ. ರಾಜ್ಯದಲ್ಲಿರುವ ವೈವಿಧ್ಯಮಯ ಭೂ ಹವಾಗುಣಗಳು ಎಲ್ಲಾ ರೀತಿಯ ತೋಟಗಾರಿಕೆ ಬೆಳೆಗಳನ್ನು ಬೆಳೆಯಲು ಪೂರಕವಾಗಿದೆ. ತೋಟಗಾರಿಕೆಯ ಅಭಿವೃದ್ಧಿ ದೃಷ್ಟಿಯಿಂದ ಕರ್ನಾಟಕ ರಾಜ್ಯ ತುಂಬಾ ಮುಂಚೂಣಿಯಲ್ಲಿದೆ. ಈ ಬೆಳೆಗಳ ವಿಸ್ತೀರ್ಣ ೧೫.೩೦ ಲಕ್ಷ ಹೆಕ್ಟೇರ್ ಪ್ರದೇಶದಲ್ಲಿದ್ದು, ವಾರ್ಷಿಕ ಉತ್ಪಾದನೆ ೧೧೮ ಲಕ್ಷ ಟನ್‌ಗಳಷ್ಟು ಇದೆ. ತೋಟಗಾರಿಕೆ ಬೆಳೆಗಳು ಒಟ್ಟು ಸಾಗುವಳಿ ಪ್ರದೇಶದಲ್ಲಿ ಕೇವಲ ಶೇ. ೧೪.೬ರಷ್ಟು ಇದ್ದರೂ ಇದರ ಮೌಲ್ಯ ೮,೦೦೦,೦೦ ಕೋಟಿ ರೂ.ಗಳೆಂದು ಅಂದಾಜು ಮಾಡಲಾಗಿದೆ. ರಾಜ್ಯದ ಸಮಗ್ರ ಕೃಷಿ ಮೂಲಗಳಿಂದ ದೊರಕುವ ಒಟ್ಟು ಆದಾಯದ ಶೇ. ೪೦ರಷ್ಟು ಆದಾಯ ತೋಟಗಾರಿಕೆಯಿಂದ ಬರುತ್ತಿದೆ ಎಂಬ ಅಂಶ ತೋಟಗಾರಿಕೆ ರಂಗದ ಪ್ರಾಮುಖ್ಯತೆಯನ್ನು ಎತ್ತಿ ತೋರಿಸುತ್ತದೆ. ಇಷ್ಟೇ ಅಲ್ಲದೆ ಕೃಷಿ ಬೆಳೆಗಳಿಗಿಂತ ತೋಟಗಾರಿಕೆ ಬೆಳೆಗಳು ಹೆಚ್ಚು ಲಾಭದಾಯಕ ಎಂದು ಸಾಬೀತುಪಡಿಸುತ್ತದೆ.

***ದೇಶದಲ್ಲಿ ಪ್ರಪ್ರಥಮ ಬಾರಿಗೆ ತೋಟಗಾರಿಕೆ ಇಲಾಖೆ ಪ್ರಾರಂಭಿಸಿದ ಕೀರ್ತಿ ಕರ್ನಾಟಕದ್ದು. ಕೃಷಿ ಬೆಳೆಗಿಂತ ತೋಟಗಾರಿಕೆ ಬೆಳೆ ಹೆಚ್ಚು ಲಾಭದಾಯಕ. ಆದಕ್ಕಾಗಿ ಇದನ್ನು ಬೆಳೆಯಲು ರೈತರು ಉತ್ಸುಕರಾಗಿರುತ್ತಾರೆ.***

ರಾಜ್ಯದಲ್ಲಿ ಇಂದು ತೋಟಗಾರಿಕೆಯು ದಿನದಿಂದ ದಿನಕ್ಕೆ ಪ್ರಾಮುಖ್ಯತೆಯನ್ನು ಪಡೆಯುತ್ತಿದೆ. ಪ್ರತಿ ವರ್ಷ ತೋಟಗಾರಿಕೆ ಬೆಳೆಗಳ ವಿಸ್ತೀರ್ಣವು ಶೇ.೩.೫ರ ಪ್ರಮಾಣದಲ್ಲಿ ಹೆಚ್ಚುತ್ತಲಿದೆ. ಹಣ್ಣು, ತರಕಾರಿ, ಸಾಂಬಾರು ಮತ್ತು ಪ್ಲಾಂಟೇಶನ್ ಬೆಳೆಗಳು, ವಾಣಿಜ್ಯ ಪುಷ್ಪಗಳನ್ನು ಬೆಳೆಸಲು ರೈತರು ಉತ್ಸುಕರಾಗಿದ್ದಾರೆ. ಇತ್ತೀಚಿನ ದಿನಗಳಲ್ಲಿ ಉನ್ನತ ತಂತ್ರಜ್ಞಾನ ಆಧಾರಿತ ತೋಟಗಾರಿಕೆ ರಾಜ್ಯದಲ್ಲಿ ಹೆಚ್ಚು ಹೆಚ್ಚಾಗಿ ನೆಲೆಗೊಳ್ಳುತ್ತಿದೆ. ರಾಜ್ಯದ ಅನೇಕ ಕಡೆಗಳಲ್ಲಿ ಅಂಗಾಂಶ ಕೃಷಿ ಪ್ರಯೋಗಾಲಯಗಳು ಮತ್ತು ಉತ್ಪಾದನಾ ಘಟಕಗಳು ಕಾರ್ಯಪ್ರವೃತ್ತವಾಗಿವೆ. ಅಂಗಾಂಶ ಕೃಷಿ ವಿಧಾನದಿಂದ ಉತ್ಪಾದಿಸಿದ ಬಾಳೆ ಗಿಡಗಳನ್ನು ರೈತರು ಹೆಚ್ಚಾಗಿ ಬೆಳೆಸುತ್ತಿದ್ದಾರೆ. ಈ ಎಲ್ಲಾ ಅಂಶಗಳಿಂದ ಕರ್ನಾಟಕದಲ್ಲಿ ತೋಟಗಾರಿಕೆಯು ಪ್ರಗತಿಪಥದಲ್ಲಿ ಸಾಗುತ್ತಿದೆ ಎನ್ನುವುದಕ್ಕೆ ನಿದರ್ಶನವಾಗಿದೆ.

ಇಡೀ ದೇಶದಲ್ಲಿ ಪ್ರಪ್ರಥಮ ಬಾರಿಗೆ ಪ್ರತ್ಯೇಕ ತೋಟಗಾರಿಕೆ ಇಲಾಖೆಯನ್ನು ಪ್ರಾರಂಭ ಮಾಡಿರುವ ಕೀರ್ತಿ ಕರ್ನಾಟಕ ರಾಜ್ಯಕ್ಕೆ ಸಲ್ಲುತ್ತದೆ. ಆರಂಭದಲ್ಲಿ ತೋಟಗಾರಿಕೆ ಇಲಾಖೆಯ ಚಟುವಟಿಕೆಗಳು ಕೇವಲ ಉದ್ಯಾನವನಗಳ ನಿರ್ಮಾಣ ಮತ್ತು ನಿರ್ವಹಣೆಗೆ ಮಾತ್ರ ಸೀಮಿತವಾಗಿತ್ತು.

ನಂತರ ಹಲವಾರು ಅಭಿವೃದ್ಧಿ ಯೋಜನೆಗಳನ್ನು ಕೈಗೆತ್ತಿಕೊಂಡು ರಾಜ್ಯದಲ್ಲಿ ಬಹಳಷ್ಟು ಪ್ರದೇಶದಲ್ಲಿ ಎಲ್ಲಾ ತೋಟಗಾರಿಕೆ ಬೆಳೆಗಳನ್ನು ಬೆಳೆಯುವುದಕ್ಕೆ ಪ್ರೋತ್ಸಾಹಿಸಲಾಯಿತು. ಇದಕ್ಕೆ ಪೂರಕವಾಗಿ ಬೇಕಾದ ತಾಂತ್ರಿಕ ನೆರವು, ಉತ್ತಮ ಸಸಿ, ಕಸಿ ಮತ್ತು ಬೀಜಗಳನ್ನು ಇಲಾಖೆಯ ಮುಖಾಂತರ ವಿತರಿಸಲು ಕ್ರಮ ತೆಗೆದುಕೊಳ್ಳಲಾಯಿತು.

ರೈತರಿಗೆ ಅಗತ್ಯವಿರುವ ಉತ್ತಮ ಗುಣಮಟ್ಟದ ಸಸಿ ಕಸಿ ಬೀಜಗಳನ್ನು ಯೋಗ್ಯ ಬೆಲೆಗೆ ಪೂರೈಸಲು ತೋಟಗಾರಿಕೆ ಇಲಾಖೆಯು ರಾಜ್ಯಾದ್ಯಂತ ೪೧೫ ಕ್ಷೇತ್ರ ನರ್ಸರಿಗಳಲ್ಲಿ ವ್ಯಾಪಕ ಸಸ್ಯೋತ್ಪಾದನೆ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಇದಲ್ಲದೆ ಖಾಸಗಿ ರಂಗದಲ್ಲಿರುವ ೧೦೦೦ಕ್ಕೂ ಮಿಕ್ಕಿದ ಸಂಖ್ಯೆಯಲ್ಲಿರುವ ನರ್ಸರಿಗಳಲ್ಲೂ ಅಪಾರ ಸಂಖ್ಯೆಯಲ್ಲಿ ಸಸಿ ಕಸಿಗಳನ್ನು ಉತ್ಪಾದಿಸಲಾಗುತ್ತಿದ್ದು, ರಾಜ್ಯದ ಒಳಗೆ ಮತ್ತು ಹೊರಗೆ ಮಾರಾಟವಾಗುತ್ತಲಿವೆ. ಅಲ್ಲದೇ ತರಕಾರಿ ಬೀಜೋತ್ಪಾದನೆಯನ್ನು ಖಾಸಗಿ ವಲಯದಲ್ಲಿ ಭಾರೀ ಪ್ರಮಾಣದಲ್ಲಿ ಕೈಗೊಂಡಿರುವ ೨೦ಕ್ಕೂ ಮಿಕ್ಕಿದ ಖಾಸಗಿ ಕಂಪನಿಗಳು ಕರ್ನಾಟಕದ ಕೀರ್ತಿಯನ್ನು ಭಾರತವಷ್ಟೇ ಅಲ್ಲ. ಇಡೀ ವಿಶ್ವಕ್ಕೂ ಕೊಂಡೊಯ್ದಿವೆ ಎಂಬುದು ಹೆಮ್ಮೆಯ ವಿಷಯ.

ಈ ಎಲ್ಲ ಪ್ರಗತಿಯ ಹಿಂದೆ ನಮ್ಮ ರಾಜ್ಯದ ರೈತರ ಪರಿಶ್ರಮದ ಛಾಯೆಯನ್ನು ಕಾಣಬಹುದಾಗಿದೆ. ರಾಜ್ಯದಲ್ಲಿ ಕಾಣ ಬರುವ ಭೂ ಹವಾಮಾನಗಳ ವೈವಿಧ್ಯತೆಗಳ ಲಾಭವನ್ನು ಪಡೆದುಕೊಂಡು ವಿಜ್ಞಾನಿಗಳು ನೀಡುವ ತಾಂತ್ರಿಕತೆಯನ್ನಾಧರಿಸಿ ತಮ್ಮ ಕಠಿಣ ಪರಿಶ್ರಮದ ಮೂಲಕ ರಾಜ್ಯವಿಂದು ಪ್ರಗತಿಪಥದಲ್ಲಿದೆ ಎಂದು ಹೇಳಲು ಸಂತೋಷವಾಗುತ್ತದೆ.

ಗ್ರಾಮೀಣಾಭಿವೃದ್ಧಿಯಲ್ಲಿ ತೋಟಗಾರಿಕೆಯು ಸಕ್ರಿಯ ಪಾತ್ರ ವಹಿಸುತ್ತದೆ. ಈ ಬೆಳೆಗಳನ್ನು ಸಮರ್ಪಕವಾಗಿ ಯೋಜಿಸಿ ಬೆಳೆಸಿದಲ್ಲಿ ಆಹಾರ ಭದ್ರತೆ, ಆರ್ಥಿಕ ಭದ್ರತೆ ಮತ್ತು ಸಾಮಾಜಿಕ ಭದ್ರತೆಯನ್ನು ಸಾಧಿಸಬಹುದಾಗಿದೆ. ಅನೇಕ ತೋಟಗಾರಿಕೆ ಬೆಳೆಗಳು ಹೆಚ್ಚು ಲಾಭದಾಯಕವಾಗಿದ್ದು, ರೈತರಿಗೆ ಸಹಾಯವಾಗುವುದಲ್ಲದೆ, ಉತ್ತಮ ಉದ್ಯೋಗಾವಕಾಶವನ್ನೂ ಕಲ್ಪಿಸುತ್ತದೆ. ಉದಾ: ಹೂವಿನ ಕಸಬನ್ನು ತೆಗೆದುಕೊಂಡಲ್ಲಿ, ಕ್ಷೇತ್ರದಲ್ಲಿ ಹೂಗಳನ್ನು ಬೆಳೆಸಲು ವೃತ್ತಿಪರತೆ ಇರುವ ಜನರು ಬೇಕಾಗುತ್ತದೆ. ಅದೂ ಅಲ್ಲದೆ, ಪ್ಯಾಕೇಜಿಂಗ್, ಕೂಲಿಂಗ್, ಸಾಗಾಣಿಕೆ ಮುಂತಾದ ಸೌಕರ್ಯಗಳು ಅಭಿವೃದ್ಧಿ ಹೊಂದುತ್ತವೆ. ಇದೇ ರೀತಿ ಅನೇಕ ಹಣ್ಣು, ತರಕಾರಿ, ಹೂಗಳನ್ನು ರಫ್ತು ಮಾಡುವ ಅವಕಾಶಗಳಿದ್ದು, ಇದರಿಂದಲೂ ಉತ್ತಮ ಲಾಭ ಪಡೆಯಲು ಸಾಧ್ಯವಿದೆ. ಆದರೆ ಇದಕ್ಕೆ ಹೆಚ್ಚಿನ ತಂತ್ರಜ್ಞಾನಗಳ ಅವಶ್ಯಕತೆಯ ಅಗತ್ಯವಿದೆ. ರೈತರು ಎಚ್ಚರದಿಂದ ಮಾಹಿತಿಯನ್ನು ಪಡೆದು ಸ್ವಂತ ಪರಿಶ್ರಮದಿಂದ ತಮ್ಮ ತಮ್ಮ ಕ್ಷೇತ್ರದಲ್ಲಿ ಈ ತಂತ್ರಜ್ಞಾನವನ್ನು ಅಳವಡಿಸಬೇಕು.

ಗ್ರಾಮೀಣ ರೈತರು ಬೆಳೆ ಬೆಳೆಸುವ ಉತ್ಸಾಹದಲ್ಲಿ ತಮ್ಮ ಜಲ ಸಂಪತ್ತನ್ನು ಸಮರ್ಪಕವಾಗಿ ನಿರ್ವಹಿಸುತ್ತಿಲ್ಲ. ಉದಾ : ಅನೇಕ ಕಡೆ ಆ ಭಾಗಕ್ಕೆ ಸರಿ ಹೊಂದುವ ಬೆಳೆಗಳನ್ನು ತೆಗೆದುಕೊಳ್ಳಲು, ಅನೇಕ ಬೋರ್‌ವೆಲ್ ತೆಗೆದು ಜಲಮಟ್ಟ ಒಣಗಲು ಕಾರಣವಾಗಿದೆ. ಇದನ್ನು ತಡೆಗಟ್ಟಬೇಕು. ಮಳೆ ನೀರು ಶೇಖರಣೆ ಮಾಡಲು ಎಲ್ಲರೂ ಪ್ರಯತ್ನಿಸಬೇಕು. ಕೆರೆ ಕಟ್ಟೆಗಳನ್ನು ಸ್ವಚ್ಛವಾಗಿ ಮಣ್ಣು ತುಂಬದಂತೆ ಗ್ರಾಮಸ್ಥರೇ ಕಾಪಾಡಬೇಕು. ಒಣ ಬೇಸಾಯದಲ್ಲಿ ಬರುವಂತಹ ಹಣ್ಣಿನ ಗಿಡಗಳಿಗೆ ಆದ್ಯತೆ ನೀಡಬೇಕು.

ಪ್ರಮುಖವಾಗಿ ಪರಿಸರಕ್ಕೆ ಧಕ್ಕೆ ತರುವಂತಹ ಯಾವುದೇ ಕಾರ್ಯವನ್ನು ನಾವು ಮಾಡಕೊಳ್ಳಬಾರದು. ಮರಗಳನ್ನು ಹೆಚ್ಚಾಗಿ ಬೆಳೆಸಬೇಕು. ಉರುವಲಿಗಾಗಿ ಜಾಗಗಳನ್ನು ಕಾದಿರಿಸಿ ಪ್ರತಿ ರೈತ ಇದನ್ನು ಬೆಳೆಸಿ ಬಳಸುವಂತಾಗಬೇಕು.

ತೋಟಗಾರಿಕೆ ಇಲಾಖೆಯು ಬೆಳೆಗಾರರ ಉತ್ಕರ್ಷಕ್ಕಾಗಿ ಅನೇಕ ಯೋಜನೆ, ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಿದೆ. ಇದಕ್ಕಾಗಿ ೧೧ ಯೋಜನೆಗಳನ್ನು ರಾಜ್ಯ ವಲಯದಲ್ಲೂ, ೩ ಯೋಜನೆಗಳನ್ನು ಕೇಂದ್ರ ವಲಯದಲ್ಲೂ ಹಾಗೂ ೭ ಯೋಜನೆಗಳನ್ನು ಜಿಲ್ಲಾ ವಲಯದಲ್ಲೂ ಅನುಷ್ಠಾನಗೊಳಿಸಲಾಗುತ್ತಿದೆ. ಉಷ್ಣವಲಯದ ಹಣ್ಣುಗಳ ಅಭಿವೃದ್ಧಿ ಯೋಜನೆ, ಸಾಂಬಾರು ಬೆಳೆಗಳ ಸಮಗ್ರ ಅಭಿವೃದ್ಧಿ ಯೋಜನೆ, ತೆಂಗು ಅಭಿವೃದ್ಧಿ ಯೋಜನೆ, ಪುಷ್ಪಾಭಿವೃದ್ಧಿ ಯೋಜನೆ, ಉತ್ತಮ ಗುಣಮಟ್ಟದ ಸಸಿ ಉತ್ಪಾದನಾ ಯೋಜನೆ, ಸಮಗ್ರ ಸಸ್ಯಸಂರಕ್ಷಣಾ ಯೋಜನೆ, ವಿಶೇಷ ಘಟಕ ಯೋಜನೆ, ಗಿರಿಜನ ಉಪಯೋಜನೆ, ಹನಿ ನೀರಾವರಿ ಯೋಜನೆ, ತೆಂಗಿನ ನುಸಿ ನಿಯಂತ್ರಣ ಕಾರ್ಯಕ್ರಮಗಳನ್ನು ವಿಶೇಷವಾಗಿ ಹೆಸರಿಸಬಹುದಾಗಿದೆ.

ಇತ್ತೀಚಿನ ವರ್ಷಗಳಲ್ಲಿ ರಾಜ್ಯ ಸತತವಾಗಿ ಮೂರು ಬರಗಾಲಗಳನ್ನು ಎದುರಿಸಿದೆ. ಈ ಬರಗಾಲಗಳಿಂದಾಗಿ ಅಂತರ್ ಜಲದ ಮಟ್ಟ ತೀವ್ರವಾಗಿ ಕುಸಿದು ಬಹುವಾರ್ಷಿಕ ತೋಟಗಾರಿಕೆ ಬೆಳೆಗಳಿಗೂ ಇದರ ಪರಿಣಾಮ ತಟ್ಟಿದೆ. ಲಭ್ಯವಿರುವ ನೀರನ್ನು ಪರಿಣಾಮಕಾರಿಯಾಗಿ ಉತ್ಪಾದಕತೆಗೆ ಬಳಸಬೇಕಾಗಿದೆ. ಮಳೆಯ ನೀರಿನ ಸಂಗ್ರಹಣೆಯನ್ನು ಮಾಡಿ ಅಂತರ್‌ಜಲದ ಮಟ್ಟವನ್ನು

ಕಾಯ್ದುಕೊಳ್ಳಬೇಕಾಗಿದೆ. ಇದಕ್ಕೆ ಪೂರಕವಾಗಿ ಬೇಕಾಗುವ ತಂತ್ರಜ್ಞಾನವನ್ನು ಬಳಸಿ ಮಳೆಯ ನೀರು ಸ್ವಲ್ಪವೂ ಪೋಲಾಗದಂತೆ ಜಮೀನಿನಲ್ಲಿಯೇ ಮಳೆಯ ನೀರನ್ನು ಇಂಗಿಸಿಕೊಳ್ಳುವ ಕಾರ್ಯಕ್ರಮಗಳನ್ನು ರೈತ ಬಾಂಧವರು ಹಮ್ಮಿಕೊಳ್ಳಬೇಕಾಗಿದೆ. ಅಪ್ರಧಾನ ಹಣ್ಣುಗಳಾದ ನೆಲ್ಲಿ, ಹುಣಸೆ, ಬೋರೆ, ಬೇಲ, ನೇರಳೆ, ಪನ್ನೇರಳೆ ಇತ್ಯಾದಿಗಳನ್ನು ಬೆಳೆಯುವಲ್ಲಿ ರೈತರು ಆಸಕ್ತಿ ವಹಿಸಬೇಕು. ಕಡಿಮೆ ನೀರನ್ನು ಉಪಯೋಗಿಸಿಕೊಂಡು ಬೆಳೆಯುವ ತೋಟಗಾರಿಕೆ ಬೆಳೆಗಳನ್ನು ಹೆಚ್ಚಾಗಿ ಅಳವಡಿಸಿಕೊಳ್ಳಲು ರೈತರು ಗಮನಹರಿಸಬೇಕು.

ರಸಗೊಬ್ಬರಗಳು, ರಾಸಾಯನಿಕ ಕೀಟನಾಶಕಗಳನ್ನು ಬಳಸಿ ಬೆಳೆಯುವ ಬೆಳೆಗಳ ಉತ್ಪನ್ನದಿಂದ ಆರೋಗ್ಯಕ್ಕೆ ಧಕ್ಕೆಯಾಗುತ್ತಿದೆ ಎಂಬುದರ ಬಗ್ಗೆ ಜನಜಾಗೃತಿ ಮೂಡುತ್ತಿದೆ. ಈ ಹಿನ್ನೆಲೆಯಲ್ಲಿ ಸಾವಯವ ಕೃಷಿಗೆ ಹೆಚ್ಚಿನ ಮಹತ್ವ ಬಂದಿದೆ. ಸಾವಯವ ಕೃಷಿಯ ವಿಧಾನದಿಂದ ಬೆಳೆದ ಉತ್ಪನ್ನಗಳಿಗೆ ವಿದೇಶದಲ್ಲಿ ಸಾಕಷ್ಟು ಬೇಡಿಕೆ ಇದೆ. ಸಾವಯವ ಗೊಬ್ಬರಗಳನ್ನು, ಸಸ್ಯಜನ್ಯ ಕೀಟನಾಶಕ, ರೋಗನಾಶಕಗಳನ್ನು ಬಳಸುವುದಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಲಾಗುತ್ತಿದೆ. ಈ ನಿಟ್ಟಿನಲ್ಲಿ ತೋಟಗಾರಿಕೆ ಇಲಾಖೆ ಬೆಂಗಳೂರಿನ ಹುಳಿಮಾವು ತೋಟಗಾರಿಕೆ ಕ್ಷೇತ್ರದಲ್ಲಿ ಜೈವಿಕ ತಂತ್ರಜ್ಞಾನದ ಕೇಂದ್ರವನ್ನು ಸ್ಥಾಪಿಸಲಾಗಿದೆ. ಈ ಕೇಂದ್ರದಲ್ಲಿ ಸಾವಯವ ಕೃಷಿಯ ಬಗ್ಗೆ ತರಬೇತಿ ನೀಡಲಾಗುತ್ತಿದೆ. ಸಾವಯವ ಗೊಬ್ಬರಗಳ ಗುಣಮಟ್ಟವನ್ನು ವಿಶ್ಲೇಷಿಸಲು ಪ್ರಯೋಗಾಲಯವನ್ನು ಸ್ಥಾಪಿಸಲಾಗಿದೆ. ಇತ್ತೀಚಿನ ದಿನಗಳಲ್ಲಿ ಜನರು ಆಲೋಪತಿ ಔಷಧಿಗಳಿಗಿಂತ ಸಸ್ಯಜನ್ಯ ಔಷಧಿಗಳೆಡೆಗೆ ಹೆಚ್ಚು ಒಲವನ್ನು ತೋರುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಸಸ್ಯ ಜನ್ಯ ಔಷಧಿಗಳಿಗೆ ಹೆಚ್ಚು ಬೇಡಿಕೆ ಬರುತ್ತಿದೆ. ಔಷಧೀಯ ಸಸ್ಯಗಳನ್ನು ಬೆಳೆಸುವಲ್ಲಿ ರೈತರಿಗೆ ಬೇಕಾಗುವ ತರಬೇತಿ ಮತ್ತು ಮಾಹಿತಿಗಳನ್ನು ಇಲಾಖೆ ನೀಡುತ್ತಿದೆ. ಇದಲ್ಲದೆ ಹಲವಾರು ಯೋಜನೆಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸಲಾಗುತ್ತಿದೆ.

ತೋಟಗಾರಿಕೆ ಬೆಳೆಗಳನ್ನು ಬೆಳೆಸುವ ಬಗ್ಗೆ ಹಾಗೂ ಇದರಲ್ಲಾಗಿರುವ ಆವಿಷ್ಕಾರಗಳ ಬಗ್ಗೆ ಹೆಚ್ಚಿನ ಅರಿವು ಮೂಡಿಸಲು ನಗರ ಪ್ರದೇಶಗಳಲ್ಲಿ ನಗರ ತೋಟಗಾರಿಕೆ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಮೀಣ ತೋಟಗಾರಿಕೆ ತರಬೇತಿ ಕಾರ್ಯಕ್ರಮಗಳನ್ನು ಸರ್ಕಾರೇತರ ಸಂಸ್ಥೆಗಳ ಮುಖಾಂತರ ಹಮ್ಮಿಕೊಂಡು ಅನುಷ್ಠಾನಗೊಳಿಸಲಾಗುತ್ತಿದೆ. ಈ ಕಾರ್ಯಕ್ರಮಗಳು ಹೆಚ್ಚು ಜನಪ್ರಿಯವಾಗುತ್ತಿವೆ.

ತೋಟಗಾರಿಕೆ ಬೆಳೆಗಳ ಉತ್ಪಾದನೆಗೆ ಸಂಬಂಧಿಸಿದಂತೆ ಹೆಚ್ಚು ಪ್ರಗತಿಯಾಗಿದ್ದರೂ ಸಹ ರೈತರು ಬೆಳೆದ ಉತ್ಪನ್ನಗಳಿಗೆ ಯೋಗ್ಯ ಬೆಲೆ ಸಿಗದೆ ರೈತರು ಆಗಾಗ ಹೆಚ್ಚಿನ ಸಂಕಷ್ಟಕ್ಕೆ ಸಿಲುಕುತ್ತಿರುವ ವಿಷಯವು ಕಳವಳಕ್ಕೀಡುಮಾಡುತ್ತಿದೆ. ಬೆಳೆಯ ವಿಸ್ತಾರ ಮತ್ತು ಉತ್ಪಾದನೆ ಬಗ್ಗೆ ನಿಯಂತ್ರಣವಿಲ್ಲದೆ ಇರುವುದು, ವೈಜ್ಞಾನಿಕ ಶಾಸ್ತ್ರೀಯ ರೀತಿಯಲ್ಲಿ ಮಾರಾಟ ಮಾಡಲು ಮಾರುಕಟ್ಟೆಗಳ ಅಭಾವ, ಹೆಚ್ಚಿನ ತೋಟಗಾರಿಕೆ ಉತ್ಪನ್ನಗಳು ಬೇಗನೆ ಕೊಳೆತು ಹಾಳಾಗುವ ಅಂಶ, ಕೊಯ್ಲೋತ್ತರ ಮೂಲಭೂತ ಸೌಕರ್ಯಗಳಾದ ವೈಜ್ಞಾನಿಕ ಸಾಗಾಣಿಕೆ ಸೌಕರ್ಯಗಳು, ಶೀತಲಗೃಹಗಳ ವ್ಯವಸ್ಥೆ, ಸಾಮಾನ್ಯ ಸಂಗ್ರಹ ವ್ಯವಸ್ಥೆ ಇತ್ಯಾದಿಗಳಲ್ಲಿರುವ ತೀವ್ರ ಕೊರತೆ ಹಾಗೂ ಅಡಚಣೆಗಳು, ಮಧ್ಯವರ್ತಿಗಳ ಹಾವಳಿಯಿಂದಾಗಿ ರೈತರು ಬೆಳೆದ ಪದಾರ್ಥಗಳಿಗೆ ಸೂಕ್ತ ಬೆಲೆ ಸಿಗುತ್ತಿಲ್ಲ. ಮಹಾರಾಷ್ಟ್ರದ ರೈತರ ಮಾದರಿಯಲ್ಲಿ ರೈತರು ಬೆಳೆಗಾರರ ಸಂಘಗಳನ್ನು ರಚಿಸಿಕೊಳ್ಳುವುದರ ಜೊತೆಗೆ ಸರ್ಕಾರದ ವತಿಯಿಂದ ಮಾರುಕಟ್ಟೆ ಯಾರ್ಡ್‌ಗಳು, ಶೀತಲ ಗೃಹಗಳು, ಸಾಗಾಣಿಕೆಗೆ ಅನುಕೂಲವಾಗಲು ಸೂಕ್ತ ರಸ್ತೆ ನಿರ್ಮಾಣ, ವಾಹನಗಳನ್ನು ಒದಗಿಸುವುದರ ಜೊತೆಗೆ ಬೆಳೆ ವಿಸ್ತಾರದ ಬಗ್ಗೆ ರೈತರಿಗೆ ತಿಳಿಸಿ ಹೇಳುವುದರಿಂದ ಈ ಕ್ಲಿಷ್ಟ ಸಮಸ್ಯೆಯನ್ನು ನಿವಾರಿಸಲು ಸಾಧ್ಯವೆಂದು ಭಾವಿಸಬಹುದಾಗಿದೆ. ಈ ದಿಸೆಯಲ್ಲಿ ರೈತರ ಸಹಕಾರ ಬಹು ಮುಖ್ಯವಾಗಿರುತ್ತದೆ. ಉತ್ತಮ ಬೆಲೆ ಸಿಕ್ಕ ನಂತರದ ಮುಂದಿನ ಹಂಗಾಮಿನಲ್ಲಿ ಎಲ್ಲಾ ರೈತರು ಒಟ್ಟಿಗೆ ಇನ್ನೂ ಹೆಚ್ಚು ಪ್ರದೇಶದಲ್ಲಿ ಒಂದೇ ಬೆಳೆ ಹಾಕಿದರೆ ಆ ತೋಟಗಾರಿಕೆ ಬೆಳೆಯ ಉತ್ಪನ್ನಗಳಿಗೆ ಬೆಲೆಗಳು ಕುಸಿದು ರೈತರು ಆರ್ಥಿಕ ಸಂಕಷ್ಟವನ್ನು ಎದುರಿಸಬೇಕಾಗುತ್ತದೆ. ಈ ಅಂಶವನ್ನು ರೈತರು ಮನಗಂಡು ಬೆಳೆ ನಿಯಂತ್ರಣದ ಬಗ್ಗೆ ಹೆಚ್ಚಿನ ಗಮನ ನೀಡಬೇಕಾಗಿದೆ.

ಈಗ W.T.O. (ಜಾಗತಿಕ ಮಾರಾಟ ಸಂಸ್ಥೆ) ಆಧಾರಿತ ಮುಕ್ತ ಮಾರುಕಟ್ಟೆ ಪದ್ಧತಿ ಜಾರಿಗೆ ಬರುವುದರಲ್ಲಿದ್ದು, ಇದರ ಪರಿಣಾಮ ನಮ್ಮ ರೈತರ ಮೇಲೂ ಆಗುತ್ತದೆ. ಈ ದಿಸೆಯಲ್ಲಿ ಸರ್ಕಾರ ರೈತರ ಹಿತ ಕಾಪಾಡಲು ಕೆಲ ನಿರ್ಬಂಧಗಳನ್ನು ವಿಧಿಸುವುದರ ಜೊತೆಗೆ ರೈತರೂ ಸಹ ಉತ್ತಮ ಗುಣಮಟ್ಟದ ಉತ್ಪನ್ನಗಳನ್ನು ಪ್ರತಿ ಯೂನಿಟ್ ಪ್ರದೇಶದಲ್ಲಿ ಹೆಚ್ಚಾಗಿ ಬೆಳೆದರೆ ಮಾತ್ರ ರೈತರು ಸಂಭವನೀಯ ತೊಂದರೆಗಳಿಂದ ಪಾರಾಗಬಹುದು ಮತ್ತು ಮುಕ್ತ ಜಾಗತಿಕ ಮಾರಾಟ ವ್ಯವಸ್ಥೆಯ ಈ ದಿನಗಳಲ್ಲಿ ಆಧುನಿಕ ಕೃಷಿ ಮತ್ತು ತೋಟಗಾರಿಕೆ ಪದ್ಧತಿಗಳು ರೈತರನ್ನು ಕಾಪಾಡಬಲ್ಲವು. ಪ್ರಪಂಚದಲ್ಲಿ ಆಗುತ್ತಿರುವ ಬದಲಾವಣೆಗಳು, ಮಾರಾಟ ಪ್ರಕ್ರಿಯೆ,

ಬೇಡಿಕೆಯ ಏರಿಳಿತಗಳು, ಬೆಲೆಗಳ ಸಂಕೀರ್ಣತೆಗಳ ಬಗ್ಗೆ ತಿಳಿದಿರಬೇಕಾಗುತ್ತದೆ. ಮಾಹಿತಿ ತಂತ್ರಜ್ಞಾನ ಬಹಳಷ್ಟು ಬೆಳೆದಿದ್ದು, ಈ ತಂತ್ರಜ್ಞಾನವನ್ನು ರೈತರು ಬಳಸಿಕೊಂಡು ಬೆಳೆಗಳನ್ನು ಬೆಳೆಯುವುದು ಸೂಕ್ತ.

ತೋಟಗಾರಿಕೆ ಬೆಳೆಗಳಲ್ಲಿ ಉತ್ಪಾದಕತೆಯನ್ನು ಹೆಚ್ಚಿಸಿ ಅಧಿಕ ಆದಾಯವನ್ನು ಗಳಿಸುವುದು ಇಂದಿನ ನೀತಿಯಾಗಿದೆ. ಇದಕ್ಕೆ ಪೂರಕವಾಗಿ ಉನ್ನತ ತಂತ್ರಜ್ಞಾನದ ಬಗ್ಗೆ, ಆಧುನಿಕ ಬೇಸಾಯ ಕ್ರಮದ ಬಗ್ಗೆ ತಿಳಿದುಕೊಂಡು ರೈತರು ಮುಂದುವರಿದಲ್ಲಿ ಕರ್ನಾಟಕದಲ್ಲಿ ತೋಟಗಾರಿಕೆಯನ್ನು ಉತ್ತಮ ಸ್ಥಿತಿಯಿಂದ ಅತ್ಯುತ್ತಮ ಸ್ಥಿತಿಗೆ ಕೊಂಡೊಯ್ಯಬಹುದು.

ಉತ್ತಮವಾಗಿ ತೋಟಗಾರಿಕೆ ಕೃಷಿಯನ್ನು ಮಾಡುವುದರಿಂದ ಹೆಚ್ಚಿನ ಲಾಭ ಪಡೆಯುವುದಲ್ಲದೆ, ಆ ಗ್ರಾಮದ ಪರಿಸರ ರಕ್ಷಣೆ, ಉದ್ಯೋಗಾವಕಾಶ ಹಾಗೂ ಇತರೇ ಕೈಗಾರಿಕೆ ಅಭಿವೃದ್ಧಿಗೆ (ಸಂಸ್ಕರಣೆ) ವಿಪುಲ ಅವಕಾಶಗಳು ಸಿಗುವುದರಿಂದ, ಈ ಬಗ್ಗೆ ಚಿಂತನೆ ಮಾಡಿ ರೈತರು ತೋಟಗಾರಿಕೆಗೆ ಹೆಚ್ಚಿನ ಒತ್ತನ್ನು ನೀಡುವರೆಂದು ಆಶಿಸಿದೆ.

●




# ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು

ಬಿ. ಇ. ಗೋವಿಂದರಾಜು

**ಪೀಠಿಕೆ :**

ರೈತ ನಾಡಿನ ಜೀವನಾಡಿ. ಭೂಮಿ ಅವನ ಸಂಪತ್ತು. ದುಡಿಮೆ ಅವನ ಉಸಿರು. ಅವಶ್ಯಕತೆಗಳು ಹೆಚ್ಚಿದಂತೆಲ್ಲಾ ಅವುಗಳ ಪೂರೈಕೆಗೆ ಅನುಸರಿಸುವ ಮಾರ್ಗ ಹಲವಾರು. ನಿರಂತರವಾಗಿ ಬೆಳೆಯುತ್ತಿರುವ ಜನಸಂಖ್ಯೆಯ ಕೃಷಿ ಉತ್ಪನ್ನಗಳ ಬೇಡಿಕೆಯನ್ನು ಈಡೇರಿಸಲು ಕೃಷಿ ಕ್ಷೇತ್ರದಲ್ಲಿ ಲಭ್ಯವಿರುವ ಸಂಪನ್ಮೂಲಗಳನ್ನು ಸಮರ್ಥವಾಗಿ ಬಳಸಿಕೊಂಡು ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಹಗಲಿರುಳೆನ್ನದೇ ದುಡಿಯುತ್ತಾ ರೈತ ಬೇಸಾಯವನ್ನು ತನ್ನ ಜೀವನಕ್ರಮವನ್ನಾಗಿಸಿಕೊಂಡಿದ್ದಾನೆ. ಈ ಶ್ರಮದ ಫಲವಾಗಿ ಇಂದು ಬೇಸಾಯ ಜೀವನಾಧಾರ ಹಂತದಿಂದ ವಾಣಿಜ್ಯ ಹಂತವನ್ನು ತಲುಪಿದೆ. ಹಳ್ಳಿಗೆ ಸೀಮಿತವಾಗಿದ್ದ ಮಾರಾಟ ಅಂತರ ರಾಷ್ಟ್ರೀಯ ಮಾರುಕಟ್ಟೆವರೆಗೂ ವ್ಯಾಪಿಸಿದೆ. ಸಾಗುವಳಿ ಕ್ಷೇತ್ರದಿಂದ ಸಂತೆಯವರೆಗೂ ತಲುಪದಿದ್ದ ಕೃಷಿ ಉತ್ಪನ್ನಗಳು ಇಂದು ಸಾಗರದಾಚೆಗೆ ರವಾನೆಯಾಗಿ ತಮ್ಮ ಮಾರುಕಟ್ಟೆ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿವೆ. ಕೈಮುಚ್ಚಿನ ಪದ್ಧತಿಯಿಂದ ಪ್ರಾರಂಭವಾದ ಕೃಷಿ ಉತ್ಪನ್ನಗಳ ಮಾರಾಟ ಇಂದು ಕಂಪ್ಯೂಟರ್ ಬಳಕೆಯ ಹಂತ ತಲುಪಿದೆ. ನವೀನ ತಂತ್ರಜ್ಞಾನಗಳನ್ನು ಅಳವಡಿಸಿಕೊಂಡು ಕೃಷಿ ಉತ್ಪಾದನೆ ಹೆಚ್ಚಿದಂತೆ ಕೃಷಿ ಮಾರಾಟ ಕ್ಷೇತ್ರದಲ್ಲಿಯೂ ಸುಧಾರಣೆಯಾಗಿ ರಾಷ್ಟ್ರವು ಅಭಿವೃದ್ಧಿಯ ಹಾದಿಯಲ್ಲಿ ಚಲಿಸುತ್ತಿದೆ. ಈ ಹಾದಿಯಲ್ಲಿ ಕರ್ನಾಟಕವೂ ಮುನ್ನಡೆಯುತ್ತಿದ್ದು, ಶೋಷಣೆಯ ಸಂಕೋಲೆಯಲ್ಲಿ ಸಿಲುಕಿ ನರಳುತ್ತಿದ್ದ ರೈತರನ್ನು ವಿಮುಕ್ತಗೊಳಿಸುವ ಕಾರ್ಯಗಳನ್ನು ಸ್ವಾತಂತ್ರ್ಯ ಪೂರ್ವದಲ್ಲಿಯೇ ಪ್ರಾರಂಭಿಸಿದ ಹೆಗ್ಗಳಿಕೆಯನ್ನು ರಾಜ್ಯದ ಕೃಷಿ ಮಾರಾಟ ಇಲಾಖೆ ಹೊಂದಿದೆ.

> ***ಹಳ್ಳಿಗೆ ಸೀಮಿತವಾಗಿದ್ದ ಕೃಷಿ ಉತ್ಪನ್ನಗಳ ಮಾರಾಟ ಈಗ ಅಂತರರಾಷ್ಟ್ರೀಯ ಮಟ್ಟದವರೆಗೂ ವ್ಯಾಪಿಸಿದೆ. ಕೈಮುಚ್ಚಿನ ಪದ್ಧತಿಯಿಂದ ಪ್ರಾರಂಭವಾದ ಕೃಷಿ ಉತ್ಪನ್ನಗಳ ಮಾರಾಟ ಇಂದು ಕಂಪ್ಯೂಟರ್ ಬಳಕೆಯ ಹಂತದವರೆಗೂ ತಲುಪಿದೆ.***

**ಅಂದಿನ ಮಾರುಕಟ್ಟೆಗಳು :**

ಸ್ವಾತಂತ್ರ್ಯ ಪೂರ್ವದಲ್ಲಿ ರಾಜ್ಯದಲ್ಲಿನ ಮಾರಾಟ ಸ್ಥಿತಿ ಇತರ ರಾಜ್ಯಗಳಿಗಿಂತೇನೂ ಭಿನ್ನವಾಗಿರಲಿಲ್ಲ. ಜನಸಂಖ್ಯೆ ಬೆಳೆದಂತೆ ಬೇಡಿಕೆ ಹೆಚ್ಚಾಗಿ ಉತ್ಪಾದನೆಗೆ ಪ್ರೋತ್ಸಾಹ ನೀಡಲಾಯಿತು. ನೀರಾವರಿ ಹಾಗೂ ವಿದ್ಯುಚ್ಛಕ್ತಿ ಸೌಕರ್ಯಗಳು ರೈತರಿಗೆ ಲಭಿಸಿದವು. ಸಾಗಾಣಿಕೆ ವ್ಯವಸ್ಥೆಯಲ್ಲಿ ಸುಧಾರಣೆಯಾಯಿತು. ಇದರಿಂದಾಗಿ ಉತ್ಪನ್ನಗಳ ಪೂರೈಕೆಯ ಪ್ರಮಾಣ ಹೆಚ್ಚಾಗಿ ಸಣ್ಣ ವಿನಿಮಯ

ಕೇಂದ್ರಗಳಾಗಿದ್ದ ಪೇಟೆಗಳು ದೊಡ್ಡ ಪ್ರಮಾಣದ ಮಾರುಕಟ್ಟೆಗಳಾಗಿ ಬೆಳೆಯಲಾರಂಭಿಸಿದವು. ವ್ಯಾಪಾರ ವಹಿವಾಟು ಹೆಚ್ಚಿದಂತೆ ಮಾರುಕಟ್ಟೆಗಳು ಗಾತ್ರದಲ್ಲಿ ಬೆಳೆದರೂ ಗುಣಮಟ್ಟದಲ್ಲಿ ಬೆಳೆಯದೆ ರೈತರ ಶೋಷಣಾ ಕೇಂದ್ರಗಳೆನಿಸುವಂತಾದವು. ದೋಷಪೂರ್ಣ ತಕ್ಕಡಿ, ತೂಕದ ಕಲ್ಲುಗಳ ಜೊತೆಗೆ ಕಾಡುಗಲ್ಲುಗಳನ್ನಿಡುವುದು, ವ್ಯಾಪಾರಿಯ ಕೈಚಳಕ, ಕಾಲ್ಚಳಕ, ದೇವರ ಹೆಸರಿನಲ್ಲಿ ಮೂರ್ತಿಯನ್ನಿಡುವುದು ಮುಂತಾದ ರೂಪದಲ್ಲಿ ತೂಕದಲ್ಲಿ ಮೋಸವಾಗುತ್ತಿತ್ತು.

ದಲ್ಲಾಲರು ಹಾಗೂ ಖರೀದಿದಾರರು ಗುಪ್ತಸಂಜ್ಞೆಗಳ ಮೂಲಕ ಬೆಲೆ ನಿಗದಿ ಮಾಡಿ, ಕಡಿಮೆ ಧಾರಣೆ ನೀಡುತ್ತಿದ್ದರು. ಅನಧಿಕೃತ ರಿವಾಜುಗಳ ಹಾವಳಿಗೆ ಅಂದಿನ ರೈತರು ಬಲಿಯಾಗಿದ್ದರು. ಮಾರಾಟ ಹಂತದಲ್ಲಿ ಯಾವುದೇ ಸಮಸ್ಯೆಗಳು ಉದ್ಭವಿಸಿದರೂ ಮಾರಾಟ ಮಧ್ಯವರ್ತಿಗಳು ನೀಡುವ ನಿರ್ಣಯಕ್ಕೆ ನಿಸ್ಸಹಾಯಕರಾಗಿ ತಲೆ ತಗ್ಗಿಸಿ ಮನೆ ದಾರಿ ಹಿಡಿಯುತ್ತಿದ್ದ ರೈತರು ತಮ್ಮ ಶೋಷಣೆ ವಿರುದ್ಧ ಮೊರೆ ಹೋಗಲು ಯಾವುದೇ ಸಂಸ್ಥೆಗಳು ಇರಲಿಲ್ಲವಾದುದರಿಂದ ಮುಂದಿನ ದಾರಿ ಕಾಣದೆ ತಡಕಾಡುವಂತಾಗಿತ್ತು.

## ನಿಯಂತ್ರಣಕ್ಕೆ ನಾಂದಿ ಹಾಡಿದ ಮಾರುಕಟ್ಟೆಗಳು :

ರೈತರನ್ನು ಶೋಷಣೆಗಳಿಂದ ಮುಕ್ತಗೊಳಿಸಿ ಕೃಷಿ ಉತ್ಪಾದನೆಗೆ ಹೆಚ್ಚಿನ ಉತ್ತೇಜನ ನೀಡಲು ಅನುಕೂಲವಾಗುವಂತೆ ಸುಧಾರಿತ ಕ್ರಮಗಳನ್ನು ಕೈಗೊಳ್ಳಲು ಅಂದಿನ ಬ್ರಿಟಿಷ್ ಸರಕಾರ ೧೯೨೬ರಲ್ಲಿ ರಾಯಲ್ ಕೃಷಿ ಆಯೋಗವನ್ನು ನೇಮಿಸಿತು. ಈ ಆಯೋಗವು ದೇಶದ ವಿವಿಧ ಭಾಗಗಳಲ್ಲಿ ಸಂಚರಿಸಿ ರೈತರ ಸಮಸ್ಯೆಗಳ ಕೂಲಂಕಷ ಅಧ್ಯಯನ ಮಾಡಿ, ಕೃಷಿ ಮಾರಾಟ ಕ್ಷೇತ್ರದಲ್ಲಿರುವ ಸಮಸ್ಯೆಗಳು, ಮಾರುಕಟ್ಟೆಗಳಲ್ಲಾಗುತ್ತಿರುವ ಶೋಷಣೆ, ಅವೈಜ್ಞಾನಿಕ ಸಂಗ್ರಹಣೆಯ ವಿಧಾನ, ಅಸಮರ್ಪಕ ಹಣಕಾಸು ನೆರವು, ಸಾಗಾಣಿಕೆ ಕೊರತೆ ಇವೆಲ್ಲವೂ ಕೃಷಿ ಉತ್ಪಾದನೆ ಕುಂಠಿತಗೊಳ್ಳಲು ಕಾರಣವೆಂದು ೧೯೨೮ರಲ್ಲಿ ಸಲ್ಲಿಸಿದ ತನ್ನ ವರದಿಯಲ್ಲಿ ತಿಳಿಸಿತು. ಕೃಷಿ ಮಾರಾಟ ವ್ಯವಸ್ಥೆಯಲ್ಲಿ ರೈತರ ಶೋಷಣೆಯನ್ನು ತಡೆಗಟ್ಟಲು ರೈತರದೇ ಪ್ರಾತಿನಿಧ್ಯವನ್ನು ಹೊಂದಿದ ನಿಯಂತ್ರಿತ ಮಾರುಕಟ್ಟೆಗಳನ್ನು ಸ್ಥಾಪಿಸಿ ಶೋಷಣಾಮುಕ್ತ ಮಾರಾಟ ವ್ಯವಸ್ಥೆಯನ್ನು ಜಾರಿಗೆ ತರಬೇಕೆಂದು ಶಿಫಾರಸ್ಸು ಮಾಡಿತು. ಈ ಶಿಫಾರಸುಗಳನ್ವಯ ಕೃಷಿ ಉತ್ಪನ್ನ ಮಾರಾಟಕ್ಕೆ ಸಂಬಂಧಿಸಿದ ಮಾದರಿ ಶಾಸನಗಳನ್ನು ರಚಿಸಿ ಜಾರಿಗೆ ತರಲು ಆಯಾ ದೇಶೀಯ ಸಂಸ್ಥಾನಗಳಲ್ಲಿ ಕೃಷಿ ಅಥವಾ ಸಹಕಾರ ಇಲಾಖೆಯ ಒಂದು ಅಂಗವಾಗಿ ಕೃಷಿ ಮಾರಾಟ ವಿಭಾಗವನ್ನು ಪ್ರಾರಂಭಿಸಲಾಯಿತು.

ಈಗಿನ ಬಿಜಾಪುರ, ಬೆಳಗಾಂ, ಧಾರವಾಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳನ್ನು ಒಳಗೊಂಡ ಅಂದಿನ ಮುಂಬೈ ಪ್ರಾಂತ್ಯದಲ್ಲಿ ಬಾಂಬೆ ಹತ್ತಿ ಮಾರುಕಟ್ಟೆಗಳ ಕಾಯಿದೆ, ೧೯೨೭ ಜಾರಿಗೆ ಬಂದು ಈ ಕಾಯಿದೆಯನ್ವಯ ಬೆಳಗಾಂ ಜಿಲ್ಲೆಯ ಬೈಲಹೊಂಗಲದಲ್ಲಿ ಹತ್ತಿ ಮಾರಾಟ ನಿಯಂತ್ರಣಕ್ಕಾಗಿ ಪ್ರಪ್ರಥಮವಾಗಿ ೧೯೩೬ರಲ್ಲಿ ನಿಯಂತ್ರಿತ ಮಾರುಕಟ್ಟೆಯನ್ನು ಸ್ಥಾಪಿಸಿ ಸ್ಪರ್ಧಾತ್ಮಕ ಮಾರಾಟ ಪದ್ಧತಿ, ಕರಾರುವಕ್ಕಾದ ತೂಕದ ವ್ಯವಸ್ಥೆ, ತಕ್ಷಣ ಹಣ ಸಂದಾಯ ಸೌಲಭ್ಯಗಳ ಮೂಲಕ ಶೋಷಣಾಮುಕ್ತ ಮಾರಾಟ ವ್ಯವಸ್ಥೆಗೆ ಮುಂಬೈ ಪ್ರಾಂತ್ಯದಲ್ಲಿ ನಾಂದಿ ಹಾಡಿತು. ಇಂದಿಗೂ ಈ ಮಾರುಕಟ್ಟೆ ಹತ್ತಿಯ ಮಾರಾಟಕ್ಕೆ ಪ್ರಖ್ಯಾತವಾಗಿದೆ.

ಹೈದರಾಬಾದ್ ಪ್ರಾಂತ್ಯದಲ್ಲಿ ಜಾರಿಯಲ್ಲಿದ್ದ ಹೈದರಾಬಾದ್ ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ, ೧೩೩೯ ಫಸ್ಲಿಯನ್ವಯ ೧೯೩೪ರಲ್ಲಿ ರಾಯಚೂರು ಮಾರುಕಟ್ಟೆಯ ಸ್ಥಾಪನೆಯಾಗಿ ಈ ಪ್ರಾಂತ್ಯದಲ್ಲಿ ಮಾರುಕಟ್ಟೆಗಳ ನಿಯಂತ್ರಣದ ಶುಭಾರಂಭವಾಯಿತು.

ಉತ್ತರ ಕರ್ನಾಟಕದಲ್ಲಿ ಉಗಮವಾದ ಈ ಮಾರುಕಟ್ಟೆಗಳ ಪ್ರಯೋಜನಗಳಿಂದ ಪ್ರೇರಿತವಾಗಿ ೧೯೩೭ ರಲ್ಲಿ ಬಿಜಾಪುರ, ೧೯೪೦ರಲ್ಲಿ ಬೀದರ್ ಮತ್ತು ಗುಲ್ಬರ್ಗಾ, ೧೯೪೩ರಲ್ಲಿ ಗದಗ ಮತ್ತ ಹುಬ್ಬಳ್ಳಿ, ೧೯೪೫ರಲ್ಲಿ ಬಾಗಲಕೋಟೆ, ೧೯೪೭ರಲ್ಲಿ ನರಗುಂದ, ಸೇಡಂ ಹಾಗೂ ಯಾದಗಿರಿ ಮಾರುಕಟ್ಟೆಗಳು ಹತ್ತಿ, ಶೇಂಗಾ, ತೊಗರಿ, ಜೋಳ ಮುಂತಾದ ಪ್ರಮುಖ ಉತ್ಪನ್ನಗಳನ್ನು ನಿಯಂತ್ರಣದ ಕಕ್ಷೆಗೆ ಒಳಪಡಿಸಿ ಮಾರುಕಟ್ಟೆ ಪ್ರಾಂಗಣದಲ್ಲಿ ಅಗತ್ಯ ಸೌಕರ್ಯ ಸೌಲಭ್ಯಗಳನ್ನು ಒದಗಿಸಿ ರೈತರ ಭರವಸೆಯನ್ನು ಈಡೇರಿಸುವ ಆಶಾಕಿರಣಗಳಾಗಿ ಮೂಡಿಬಂದವು. ಬಳ್ಳಾರಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮದ್ರಾಸ್ ವಾಣಿಜ್ಯ ಬೆಳೆಗಳ ಮಾರುಕಟ್ಟೆ ಕಾಯಿದೆ- ೧೯೩೩ ಹಾಗೂ ಮೈಸೂರು ಪ್ರಾಂತ್ಯದಲ್ಲಿ ಮೈಸೂರು ಕೃಷಿ ಉತ್ಪನ್ನಗಳ ಮಾರುಕಟ್ಟೆ ಕಾಯಿದೆ, ೧೯೩೯ ಜಾರಿಯಲ್ಲಿದ್ದರೂ ೧೯೪೭ರವರೆಗೆ ಮಾರುಕಟ್ಟೆಗಳ ಸ್ಥಾಪನೆಗೆ ಪ್ರಯತ್ನಗಳು ಮುಂದುವರೆದಿದ್ದವು.

## ಸ್ವಾತಂತ್ರ್ಯಾನಂತರದ ಬೆಳವಣಿಗೆಗಳು :

ಸ್ವಾತಂತ್ರ್ಯಾನಂತರ ಕೃಷಿ ಉತ್ಪಾದನೆಗೆ ನೀಡಿದ ಆದ್ಯತೆಯಿಂದಾಗಿ ಉತ್ಪಾದನೆ ಹೆಚ್ಚಾಯಿತು. ಮಾರುಕಟ್ಟೆಗೆ ಪೂರೈಕೆ ಹೆಚ್ಚಿದಂತೆ ಕ್ರಮಬದ್ಧವಾದ ಮಾರುಕಟ್ಟೆಗಳ ಸ್ಥಾಪನೆ ಅವಶ್ಯಕವಾಯಿತು. ಇದಕ್ಕಾಗಿ ಮೈಸೂರು ಪ್ರಾಂತ್ಯದಲ್ಲಿ ಜಾರಿಯಲ್ಲಿದ್ದ ಮೈಸೂರು ಕೃಷಿ

ಉತ್ಪನ್ನ ಮಾರುಕಟ್ಟೆಗಳ ಕಾಯಿದೆ, ೧೯೩೯ರನ್ವಯ ತಿಪಟೂರಿನಲ್ಲಿ ೧೯೪೪ರಲ್ಲಿ ಮಾರುಕಟ್ಟೆಯನ್ನು ಸ್ಥಾಪಿಸಿ ಕೊಬ್ಬರಿಯ ಮಾರಾಟವನ್ನು ನಿಯಂತ್ರಣದ ಕಕ್ಷೆಗೆ ತಂದು ಮೈಸೂರು ಪ್ರಾಂತ್ಯದಲ್ಲಿ ನಿಯಂತ್ರಿತ ಮಾರುಕಟ್ಟೆಗಳ ಸ್ಥಾಪನೆಗೆ ನಾಂದಿ ಹಾಡಲಾಯಿತು.

ಮದ್ರಾಸ್ ವಾಣಿಜ್ಯ ಬೆಳೆಗಳ ಮಾರುಕಟ್ಟೆಗಳ ಕಾಯಿದೆ, ೧೯೩೩ರನ್ವಯ ಬಳ್ಳಾರಿಯಲ್ಲಿ ೧೯೪೯ರಲ್ಲಿ ಹಾಗೂ ಮಂಗಳೂರಿನಲ್ಲಿ ೧೯೬೧ರಲ್ಲಿ ಮಾರುಕಟ್ಟೆಗಳನ್ನು ಸ್ಥಾಪಿಸಿ ವಿವಿಧ ಕೃಷಿ ಉತ್ಪನ್ನಗಳನ್ನು ನಿಯಂತ್ರಣದ ಕಕ್ಷೆಗೆ ಒಳಪಡಿಸಲಾಯಿತು.

ಇದೇ ವರ್ಷದಲ್ಲಿ ದಾವಣಗೆರೆ, ಬ್ಯಾಡಗಿ, ಗೋಕಾಕ, ಅಣ್ಣಿಗೇರಿ, ಅಥಣಿ ಮಾರುಕಟ್ಟೆಗಳು ಆಯಾ ಭಾಗಗಳಲ್ಲಿ ಅಸ್ತಿತ್ವಕ್ಕೆ ಬಂದವು. ೧೯೪೮ರಿಂದ ೧೯೬೦ರವರೆಗೆ ೫೧ ಮಾರುಕಟ್ಟೆಗಳು ಹಾಗೂ ೧೯೬೧ರಿಂದ ೧೯೬೬ರವರೆಗೆ ೨೩ ಮಾರುಕಟ್ಟೆಗಳು ಸ್ಥಾಪನೆಯಾಗಿ ೧೯೪೭ರ ವರೆಗಿದ್ದ ೧೧ ಮಾರುಕಟ್ಟೆಗಳು ಸೇರಿ ೧೯೬೬ರಲ್ಲಿ ಮುಖ್ಯ ಮಾರುಕಟ್ಟೆಗಳ ಸಂಖ್ಯೆ ೮೫ಕ್ಕೆ ಹೆಚ್ಚಿತು. ಈ ಅವಧಿಯಲ್ಲಿ ಮಾರುಕಟ್ಟೆಗಳ ಸ್ಥಾಪನೆಗೆ ಹಾಗೂ ಪ್ರಾಂಗಣಗಳ ಅಭಿವೃದ್ಧಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿ ಅಕ್ರಮ ಮಾರಾಟ ಪದ್ಧತಿಗಳು ಹಾಗೂ ಅನಧಿಕೃತ ರಿವಾಜುಗಳ ಆಕರಣೆಗೆ ಕಡಿವಾಣ ಹಾಕಿ ಪ್ರಜಾಪ್ರತಿನಿಧಿಗಳ ಆಡಳಿತ ವ್ಯವಸ್ಥೆಯನ್ನು ಬಲಪಡಿಸಲಾಯಿತು.

## ಏಕರೂಪ ಶಾಸನದ ರಚನೆ :

೧೯೫೬ರಲ್ಲಿ ಭಾಷಾ ತಳಹದಿ ಮೇಲೆ ರಾಜ್ಯಗಳ ಪುನರ್ ರಚನೆಯಾಗಿ ಮೈಸೂರು ರಾಜ್ಯ ಉದಯವಾದಾಗ ಕೃಷಿ ಮಾರಾಟಕ್ಕೆ ಸಂಬಂಧಿಸಿದ ಐದು ಶಾಸನಗಳು ರಾಜ್ಯದ ವಿವಿಧ ಭಾಗಗಳಲ್ಲಿ ಜಾರಿಯಲ್ಲಿದ್ದವು. ಅವುಗಳೆಂದರೆ :-

೧. ಮುಂಬೈ ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ, ೧೯೩೯.

೨. ಹೈದರಾಬಾದ್ ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ, ೧೯೩೩ ಪಸ್ಲಿ.

೩. ಮದ್ರಾಸ್ ವಾಣಿಜ್ಯ ಬೆಳೆಗಳ ಮಾರುಕಟ್ಟೆ ಕಾಯಿದೆ, ೧೯೩೩.

೪. ಮೈಸೂರು ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ, ೧೯೩೯.

೫. ಕೊಡಗು ಕೃಷಿ ಉತ್ಪನ್ನ ಮಾರುಕಟ್ಟೆಗಳ ಕಾಯಿದೆ, ೧೯೫೬.

ಈ ಐದು ಶಾಸನಗಳ ಉದ್ದೇಶ ಏಕರೀತಿಯಾಗಿದ್ದರೂ ಒಂದೇ ಆಡಳಿತ ವ್ಯವಸ್ಥೆಯಲ್ಲಿ ವಿವಿಧ ಭಾಗಗಳಿದ್ದ ಬೇರೆಬೇರೆ ಶಾಸನಗಳನ್ನು ಯಶಸ್ವಿಯಾಗಿ ಜಾರಿಗೆ ತರಲು ಅನೇಕ ತೊಡಕುಗಳು ಉಂಟಾದವು. ಒಂದು ದಶಕದ ಈ ವ್ಯವಸ್ಥೆಯಲ್ಲಿ ಎದುರಿಸಿದ ಸಮಸ್ಯೆಗಳನ್ನು ಆಧರಿಸಿ ರಾಜ್ಯದ ಎಲ್ಲಾ ಭಾಗಗಳಲ್ಲಿಯೂ ನಿಯಂತ್ರಣ ಕಾರ್ಯ ಏಕರೂಪವಾಗಿ ಅನ್ವಯವಾಗುವಂತೆ ಸಮಗ್ರ ಕೃಷಿ ಮಾರಾಟ (ನಿಯಂತ್ರಣ) ಶಾಸನವನ್ನು ೧೯೬೬ರಲ್ಲಿ ರಚಿಸಿದ ನಂತರ ಈವರೆಗಿದ್ದ ಐದು ಶಾಸನಗಳನ್ನು ಅನೂರ್ಜಿತಗೊಳಿಸಲಾಯಿತು. ಕ್ರೋಡೀಕೃತ ೧೯೬೬ರ ಶಾಸನವನ್ನು ಜಾರಿಗೆ ತರಲು ಅನುಕೂಲವಾಗುವಂತೆ ೧೯೬೮ರಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ನಿಯಮಗಳನ್ನು ರಚಿಸಲಾಯಿತು. ೧೯೬೮ರಲ್ಲಿ ಮೇ ಮೊದಲ ದಿನದಂದು ಕಾರ್ಯಾಚರಣೆಗೆ ತಂದ ಈ ಶಾಸನ ಹಾಗೂ ನಿಯಮಗಳು ರಾಜ್ಯದಲ್ಲಿ ಕೃಷಿ ಮಾರಾಟ ರಂಗದ ಸರ್ವತೋಮುಖ ಅಭಿವೃದ್ಧಿಗೆ ದಾರಿದೀಪವಾದವು.

## ಕೃಷಿ ಮಾರಾಟ-ಇಂದಿನ ಬೆಳವಣಿಗೆಗಳು :

ರಾಜ್ಯದ ಏಕೀಕರಣದ ನಂತರ ಏಕರೂಪದ ಶಾಸನವನ್ನು ರಚಿಸಿ ಎಲ್ಲಾ ಮಾರುಕಟ್ಟೆಗಳನ್ನು ಒಂದೇ ಶಾಸನದ ಕಕ್ಷೆಯಲ್ಲಿ ತಂದು ಅಭಿವೃದ್ಧಿಪಡಿಸಲು ಸಾಧ್ಯವಾಯಿತು. ವಿವಿಧ ಪ್ರದೇಶಗಳಲ್ಲಿದ್ದ ಅಸಮಾನತೆಯನ್ನು ಹೋಗಲಾಡಿಸಲು ಗ್ರಾಮೀಣ ಪ್ರದೇಶಗಳಲ್ಲಿ ಮಾರುಕಟ್ಟೆಗಳನ್ನು ಸ್ಥಾಪಿಸಿ ಅಗತ್ಯ ಸೌಲಭ್ಯಗಳನ್ನು ಒದಗಿಸಲಾಯಿತು. ಮಾರುಕಟ್ಟೆ ಪ್ರಾಂಗಣಗಳ ಅಭಿವೃದ್ಧಿ, ವಿವಿಧ ಕಾರ್ಯ ನಿರ್ವಹಣೆಗೆ ಯಾಂತ್ರಿಕೃತ ಉಪಕರಣಗಳ ಬಳಕೆ, ರೈತರ ಆರ್ಥಿಕ ತೊಂದರೆಗಳನ್ನು ನಿವಾರಿಸಲು ಹಾಕಿಕೊಂಡ ವಿವಿಧ ಯೋಜನೆಗಳು ಸಹಕಾರ ಇಲಾಖೆಯ ಒಂದು ಭಾಗವಾಗಿ ಕಾರ್ಯನಿರ್ವಹಿಸುತ್ತಿದ್ದ ಕೃಷಿ ಮಾರಾಟ ವಿಭಾಗದ ಜವಾಬ್ದಾರಿಯನ್ನು ಹೆಚ್ಚಿಸಿದವು. ಕೃಷಿ ಉತ್ಪಾದನಾ ಪ್ರಗತಿಗೆ ಸ್ಪಂದಿಸಲು ಮಾರಾಟ ಇಲಾಖೆ ಸಜ್ಜಾಗಬೇಕಾಯಿತು.

## ಸ್ವಾತಂತ್ರ್ಯ ರಜತೋತ್ಸವ ಬೆಳಕಿನಲ್ಲಿ ಬೆಳಗಿದ ಕೃಷಿ ಮಾರಾಟ ಇಲಾಖೆ :

ಹಸಿರು ಕ್ರಾಂತಿಯ ಪರಿಣಾಮವಾಗಿ ಕೃಷಿ ಉತ್ಪಾದನೆಯ ಹೆಚ್ಚಳ ಒಂದೆಡೆಯಾದರೆ ಕೃಷಿ ಮಾರಾಟ ರಂಗದಲ್ಲಿ ಕ್ರಮಬದ್ಧ ಮಾರಾಟ ವ್ಯವಸ್ಥೆಯನ್ನು ರೂಪಿಸುವ ತವಕ ಇನ್ನೊಂದೆಡೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಹೆಚ್ಚಿನ ಉತ್ಪಾದನೆಗೆ ಉತ್ತೇಜನಕಾರಕ

ಮಾರಾಟ ವ್ಯವಸ್ಥೆಯನ್ನು ಬಲಪಡಿಸುವ ಪ್ರಯತ್ನವಲ್ಲಿ ತೊಡಗಿದವು. ಸ್ವತಂತ್ರ ಭಾರತದ ರಜತ ಮಹೋತ್ಸವ ವರ್ಷಕ್ಕೆ ಕಾಲಿಡುವ ಹರ್ಷದೊಂದಿಗೆ ವಿವಿಧ ಕ್ಷೇತ್ರಗಳಲ್ಲಿ ಪ್ರಗತಿಯ ಬೆಳಕು ಸ್ಪಷ್ಟವಾಯಿತು. ಈವರೆಗೆ ಸಹಕಾರ ಇಲಾಖೆಯ ಒಂದು ಭಾಗವಾಗಿದ್ದ ಕೃಷಿ ಮಾರಾಟ ವಿಭಾಗವನ್ನು ಸ್ವತಂತ್ರ ಭಾರತದ ರಜತೋತ್ಸವ ವರ್ಷವಾದ ೧೯೭೧ರಲ್ಲಿ ಸಹಕಾರ ಇಲಾಖೆಯಿಂದ ಬೇರ್ಪಡಿಸಿ ಸ್ವತಂತ್ರ ಕೃಷಿ ಮಾರಾಟ ಇಲಾಖೆಯಾಗಿ ಕಾರ್ಯನಿರ್ವಹಿಸುವ ಜವಾಬ್ದಾರಿಯನ್ನು ನೀಡಲಾಯಿತು. ಸ್ವತಂತ್ರ ಜವಾಬ್ದಾರಿಯನ್ನು ಹೊತ್ತು ಮುನ್ನಡೆಯುತ್ತಿರುವ ರಾಜ್ಯ ಕೃಷಿ ಮಾರಾಟ ಇಲಾಖೆ ಶೋಷಣಾ ಮುಕ್ತ ಮಾರಾಟ ವ್ಯವಸ್ಥೆಯನ್ನು ಬಲಪಡಿಸಿ ಉತ್ಪನ್ನಗಳಿಗೆ ಸರಿಯಾದ ತೂಕ, ಸ್ಪರ್ಧಾತ್ಮಕ ಬೆಲೆ, ತಕ್ಷಣ ಹಣ ಸಂದಾಯ, ಗುಣಮಟ್ಟಕ್ಕೆ ತಕ್ಕ ಬೆಲೆ ಪಡೆಯಲು ವರ್ಗೀಕರಣ ಅನುಷ್ಠಾನ, ಮಾರಾಟ ಜ್ಞಾನವನ್ನು ಹೆಚ್ಚಿಸಲು ಪೇಟೆ ಜ್ಞಾನ ಪ್ರಸಾರ ಹಾಗೂ ಅವಶ್ಯಕ ಸೌಕರ್ಯ ಸೌಲಭ್ಯಗಳೊಂದಿಗೆ ಮಾರುಕಟ್ಟೆ ಪ್ರಾಂಗಣವನ್ನು ಅಭಿವೃದ್ಧಿಪಡಿಸಲು ಅಗತ್ಯ ಕ್ರಮಗಳನ್ನು ಕೈಗೊಂಡಿದೆ. ಈ ದಿಸೆಯಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ) ಶಾಸನ, ೧೯೬೬ ಮತ್ತು ನಿಯಮಗಳು, ೧೯೬೮, ಕೃಷಿ ಉತ್ಪನ್ನ (ವರ್ಗೀಕರಣ ಹಾಗೂ ಗುರುತು ಹಾಕುವ) ಶಾಸನ, ೧೯೩೭ ಹಾಗೂ ಲೈಸೆನ್ಸ್ ನೀಡಿಕೆಗೆ ಸಂಬಂಧಿಸಿದಂತೆ ಕರ್ನಾಟಕ ರಾಜ್ಯ ಉಗ್ರಾಣ ಶಾಸನ, ೧೯೬೧ ಮತ್ತು ನಿಯಮಗಳು, ೧೯೬೯ನ್ನು ಕೃಷಿ ಮಾರಾಟ ಇಲಾಖೆ ಜಾರಿಗೊಳಿಸುತ್ತಿದೆ.

## ನಿಯಂತ್ರಿತ ಮಾರುಕಟ್ಟೆಗಳ ಸ್ಥಾಪನೆ :

ರೈತರು ತಮ್ಮ ಉತ್ಪಾದನಾ ಕ್ಷೇತ್ರದ ಹತ್ತಿರದಲ್ಲಿ ಮಾರುಕಟ್ಟೆ ಸೌಲಭ್ಯವನ್ನು ಹೊಂದಲು ಹಾಗೂ ಕೃಷಿ ಉತ್ಪನ್ನಗಳ ಮಾರಾಟದ ಯಶಸ್ವಿ ಮೇಲ್ವಿಚಾರಣೆ ಮಾಡಲು ಇಡೀ ರಾಜ್ಯವನ್ನು ನಿಯಂತ್ರಣ ಕ್ಷೇತ್ರದ ವ್ಯಾಪ್ತಿಗೆ ಒಳಪಡಿಸಿ ನಿಯಂತ್ರಿತ ಮಾರುಕಟ್ಟೆಗಳನ್ನು ಸ್ಥಾಪಿಸಲಾಗಿದೆ. ಇದರಿಂದಾಗಿ ಭಾರತದ ಸ್ವಾತಂತ್ರ್ಯ ಸಮಯದಲ್ಲಿ ರಾಜ್ಯದಲ್ಲಿದ್ದ ನಿಯಂತ್ರಿತ ಮುಖ್ಯ ಮಾರುಕಟ್ಟೆಗಳ ಸಂಖ್ಯೆ ಕೇವಲ ೧೧ ಇದ್ದುದು, ರಜತೋತ್ಸವ ವರ್ಷವಾದ ೧೯೭೧ರಲ್ಲಿ ೯೨ಕ್ಕೆ ಏರಿ, ಸುವರ್ಣಮಹೋತ್ಸವ ವರ್ಷವಾದ ೧೯೯೭ರಲ್ಲಿ ೧೩೫ ರಷ್ಟಾಯಿತು. ಈ ಮಾರುಕಟ್ಟೆಗಳ ಜೊತೆಗೆ ೩೩೨ ಉಪಮಾರುಕಟ್ಟೆಗಳು ಈಗ ಕಾರ್ಯನಿರ್ವಹಿಸುತ್ತಿದ್ದು ಇವುಗಳಲ್ಲಿ ಮಾರಾಟವಾಗುತ್ತಿರುವ ಕೃಷಿ ಉತ್ಪನ್ನಗಳ ಮೌಲ್ಯ ೫೦೦೦ ಕೋಟಿ ರೂಪಾಯಿಗಳಿಗೂ ಅಧಿಕವಾಗಿದೆ.

## ಮಾರುಕಟ್ಟೆಗಳ ಅಭಿವೃದ್ಧಿ :

ಮಾರುಕಟ್ಟೆಗಳ ಸೌಲಭ್ಯಗಳನ್ನು ರೈತರ ಹತ್ತಿರಕ್ಕೆ ಕೊಂಡೊಯ್ಯಲು ಮುಖ್ಯ ಮಾರುಕಟ್ಟೆಗಳ ಜೊತೆಗೆ ಉಪಮಾರುಕಟ್ಟೆಗಳು ಮತ್ತು ಗ್ರಾಮೀಣ ಮಾರುಕಟ್ಟೆಗಳನ್ನು ಕೃಷಿ ಮಾರಾಟ ಇಲಾಖೆ ಅಭಿವೃದ್ಧಿಪಡಿಸಿ ರೈತರ ಸೇವೆಗೆ ಸಮರ್ಪಿಸಿದೆ. ಮಾರುಕಟ್ಟೆ ಸಮಿತಿಗಳು ಸಂಗ್ರಹಿಸಿದ ಆದಾಯದಿಂದ ಮಾರುಕಟ್ಟೆಗಳನ್ನು ಅಭಿವೃದ್ಧಿಪಡಿಸಲಾಗಿದೆ. ಇದಲ್ಲದೆ ವಿಶ್ವ ಬ್ಯಾಂಕಿನಿಂದ ಸಾಲ, ಕೇಂದ್ರ ಸರ್ಕಾರದಿಂದ ನೆರವು ಹಾಗೂ ರಾಜ್ಯ ಸರ್ಕಾರದ ಸಹಾಯದೊಂದಿಗೆ ಮಾರುಕಟ್ಟೆಗಳ ಅಭಿವೃದ್ಧಿಗಾಗಿ ಈವರೆಗೆ ೧೨೫ ಕೋಟಿ ರೂಪಾಯಿಗಳಿಗೂ ಅಧಿಕ ಹಣವನ್ನು ವಿನಿಯೋಗಿಸಿ ಮಾರುಕಟ್ಟೆ ಪ್ರಾಂಗಣಗಳಲ್ಲಿ ಅಗತ್ಯ ಸೌಕರ್ಯ ಸೌಲಭ್ಯಗಳನ್ನು ಒದಗಿಸಲಾಗಿದೆ. ರಾಜ್ಯದ ಈ ಎಲ್ಲಾ ನಿಯಂತ್ರಿತ ಮಾರುಕಟ್ಟೆಗಳ ಅಭಿವೃದ್ಧಿಗಾಗಿ ಮಾರುಕಟ್ಟೆ ಅಭಿವೃದ್ಧಿ ಯೋಜನೆಯಲ್ಲಿ ಕೃಷಿ ಮಾರಾಟ ಇಲಾಖೆ ತನ್ನದೇ ಆದ ಪ್ರತ್ಯೇಕ ಇಂಜಿನಿಯರಿಂಗ್ ವಿಭಾಗವನ್ನು ಹೊಂದಿದೆ.

## ವಿಶ್ವ ಬ್ಯಾಂಕ್ ಯೋಜನೆಯಡಿಯಲ್ಲಿ ಮಾರುಕಟ್ಟೆಗಳ ಅಭಿವೃದ್ಧಿ :

ರಾಜ್ಯದ ಸಮಗ್ರ ಮಾರುಕಟ್ಟೆಗಳ ಅಭಿವೃದ್ಧಿ ಪಥದ ಪ್ರಾರಂಭದಲ್ಲಿ ೧೯೭೩ರಿಂದ ೧೯೮೩ರವರೆಗೆ ವಿಶ್ವಬ್ಯಾಂಕಿನಿಂದ ೯.೪೮ ಕೋಟಿ ರೂಪಾಯಿಗಳ ಸಾಲವನ್ನು ಪಡೆದು ಬೆಂಗಳೂರು, ಚಳ್ಳಕೆರೆ, ಶಿವಮೊಗ್ಗ, ತುಮಕೂರು, ಹಾಸನ, ಮೈಸೂರು, ಮಂಡ್ಯ, ಬೆಳಗಾಂ, ಬ್ಯಾಡಗಿ, ಬಳ್ಳಾರಿ, ಗುಲ್ಬರ್ಗಾ, ಗಂಗಾವತಿ ಮುಂತಾದ ೪೭ ಮುಖ್ಯ ಮಾರುಕಟ್ಟೆಗಳನ್ನು ಅಭಿವೃದ್ಧಿಪಡಿಸಲಾಗಿದೆ. ಇದಲ್ಲದೆ ವಿವಿಧ ಮಾರುಕಟ್ಟೆಗಳ ಕ್ಷೇತ್ರದಲ್ಲಿರುವ ೧೮ ಉಪಮಾರುಕಟ್ಟೆಗಳನ್ನು ಇದೇ ಆರ್ಥಿಕ ನೆರವಿನ ಮೂಲದಿಂದ ಅಭಿವೃದ್ಧಿಪಡಿಸಲಾಗಿದೆ.

## ಕೇಂದ್ರ ಸರ್ಕಾರದ ಯೋಜನೆಯನ್ವಯ ಅಭಿವೃದ್ಧಿ :

ಮಾರುಕಟ್ಟೆಗಳ ಅಭಿವೃದ್ಧಿಗಾಗಿ ರಾಷ್ಟ್ರಮಟ್ಟದಲ್ಲಿ ರೂಪಿಸಿದ ಯೋಜನೆಗಳ ಲಾಭವನ್ನು ರಾಜ್ಯ ಕೃಷಿ ಮಾರಾಟ ಇಲಾಖೆಯು ಪಡೆದುಕೊಂಡಿದೆ. ಕೇಂದ್ರ ಸರ್ಕಾರವು ಸಗಟು ಮಾರುಕಟ್ಟೆಗಳ ಹಾಗೂ ಗ್ರಾಮೀಣ ಮಾರುಕಟ್ಟೆಗಳ ಅಭಿವೃದ್ಧಿಗಾಗಿ ೪ ಲಕ್ಷದಿಂದ ೨೦ ಲಕ್ಷ ರೂಪಾಯಿಗಳವರೆಗೆ ಅನುದಾನ ನೀಡಲು ಪ್ರಕಟಿಸಿದ ಈ ಯೋಜನೆ ೧೯೭೫-೭೬ ರಿಂದ ೧೯೯೧-೯೨ರವರೆಗೆ ಜಾರಿಯಲ್ಲಿತ್ತು. ಈ ಯೋಜನೆಯ ನೆರವು ಪಡೆದು ರಾಜ್ಯದಲ್ಲಿ ೭.೧೭ ಕೋಟಿ ರೂಪಾಯಿ ವೆಚ್ಚದಲ್ಲಿ ೭೪ ಸಗಟು ಮಾರುಕಟ್ಟೆಗಳು, ೧೯ ಗ್ರಾಮೀಣ ಸಗಟು ಮಾರುಕಟ್ಟೆಗಳು ಹಾಗೂ ೧೧೫ ಪ್ರಾಥಮಿಕ ಗ್ರಾಮೀಣ ಮಾರುಕಟ್ಟೆಗಳನ್ನು ಅಭಿವೃದ್ಧಿಪಡಿಸಲಾಗಿದೆ.

## ರಾಜ್ಯ ಸರ್ಕಾರದ ಯೋಜನೆಯನ್ವಯ ಅಭಿವೃದ್ಧಿ :

ರಾಜ್ಯದ ಸರ್ವಾಂಗೀಣ ಅಭಿವೃದ್ಧಿಯ ಸಾಧನೆಗಾಗಿ ವಿವಿಧ ಯೋಜನೆಗಳನ್ನು ರೂಪಿಸಿ ವಿವಿಧ ಕ್ಷೇತ್ರಗಳಿಗೆ ನೆರವು ನೀಡಲು ರಾಜ್ಯ ಸರ್ಕಾರ ಪ್ರಾರಂಭಿಸಿತು. ೧೯೯೨-೯೩ರಿಂದ ಕೇಂದ್ರ ಸರ್ಕಾರದ ಬದಲು ರಾಜ್ಯ ಸರ್ಕಾರದಿಂದ ಅನುದಾನ ಪಡೆದು ಈವರೆಗೆ ೧೧ ಮುಖ್ಯ ಮಾರುಕಟ್ಟೆಗಳು, ೧೯ ಉಪ ಹಾಗೂ ಪ್ರಾಥಮಿಕ ಮಾರುಕಟ್ಟೆಗಳನ್ನು ೩೮ ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಅಭಿವೃದ್ಧಿಪಡಿಸಿ ಅವುಗಳಲ್ಲಿ ಮಾರಾಟಕ್ಕೆ ಅಗತ್ಯ ಸೌಕರ್ಯಗಳನ್ನು ಒದಗಿಸಲಾಗಿದೆ.

ಈ ಯೋಜನೆಗಳ ಮೂಲಕವಲ್ಲದೆ ಇನ್ನುಳಿದ ಅನೇಕ ಮಾರುಕಟ್ಟೆಗಳ ಉಳಿತಾಯದ ನಿಧಿಯಿಂದ ಆಯಾ ಕ್ಷೇತ್ರದಲ್ಲಿ ಬರುವ ಮಾರುಕಟ್ಟೆಗಳನ್ನು ಅಭಿವೃದ್ಧಿಪಡಿಸಿ ಅಗತ್ಯ ಸೌಲಭ್ಯಗಳನ್ನು ಮಾರುಕಟ್ಟೆ ಸಮಿತಿಗಳು ಕಲ್ಪಿಸಿವೆ.

## ಗ್ರಾಮೀಣ ಮಾರುಕಟ್ಟೆಗಳ ಅಭಿವೃದ್ಧಿ :

ದೂರದ ಮಾರುಕಟ್ಟೆಗಳ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗದ ಸಣ್ಣ ಮತ್ತು ಅತಿಸಣ್ಣ ರೈತರಿಗೆ ಅವರಿಗೆ ಹತ್ತಿರದ ಸ್ಥಳಗಳಲ್ಲಿಯೇ ಮಾರಾಟದ ಸೌಲಭ್ಯಗಳನ್ನು ಒದಗಿಸಲು ಗ್ರಾಮೀಣ ಮಾರುಕಟ್ಟೆಗಳನ್ನು ಅಭಿವೃದ್ಧಿಪಡಿಸಲಾಗುತ್ತಿದೆ. ಗೋದಾಮು, ಹರಾಜು ಕಟ್ಟೆಗಳು, ನೀರಿನ ಸೌಕರ್ಯ, ಶೌಚಾಲಯಗಳು ಮುಂತಾದ ಸೌಲಭ್ಯಗಳನ್ನು ನೀಡಿ ಮಾರುಕಟ್ಟೆಗಳನ್ನು ತಲಾ ಒಂದು ಲಕ್ಷ ರೂಪಾಯಿಗಳ ವೆಚ್ಚದಲ್ಲಿ ಅಭಿವೃದ್ಧಿಪಡಿಸಲು ಯೋಜನೆಯನ್ನು ತಯಾರಿಸಿ ಜಾರಿಗೆ ತರುತ್ತಿದೆ. ಈವರೆಗೆ ಈ ಯೋಜನೆಯಲ್ಲಿ ೧೩೬ ಗ್ರಾಮೀಣ ಮಾರುಕಟ್ಟೆಗಳನ್ನು ಅಭಿವೃದ್ಧಿಪಡಿಸಲಾಗಿದೆ.

## ವಿಶೇಷ ಉತ್ಪನ್ನಗಳ ಮಾರುಕಟ್ಟೆ :

ತೋಟಗಾರಿಕಾ ಬೆಳೆಗಳ ಉತ್ಪಾದನೆಗೆ ನೀಡಿದ ಪ್ರೋತ್ಸಾಹದ ಪರಿಣಾಮವಾಗಿ ಹಣ್ಣು, ತರಕಾರಿ ಮತ್ತು ಹೂವುಗಳು ಮಾರುಕಟ್ಟೆಗೆ ಹೆಚ್ಚಿನ ಪ್ರಮಾಣದಲ್ಲಿ ಬರಲು ಪ್ರಾರಂಭಿಸಿದಂತೆ, ಅವುಗಳ ಮಾರಾಟ ಸಂದರ್ಭದಲ್ಲಿ ಅಗತ್ಯ ಸೌಲಭ್ಯಗಳನ್ನು ಒದಗಿಸಲು ಬೆಂಗಳೂರಿನಲ್ಲಿ ಪ್ರತ್ಯೇಕವಾದ ಹಣ್ಣು ಮತ್ತು ತರಕಾರಿಗಳ ವಿಶೇಷ ಮಾರುಕಟ್ಟೆಯೊಂದನ್ನು ಸ್ಥಾಪಿಸಲಾಗಿದೆ. ಹೂವುಗಳ ಮಾರಾಟದಲ್ಲಿ ರೈತರ ಶೋಷಣೆಯನ್ನು ತಪ್ಪಿಸಲು ಮಾರುಕಟ್ಟೆ ಪ್ರಾಂಗಣದಲ್ಲಿ ಹೂವುಗಳ ಮಾರಾಟಕ್ಕೆ ವಿಶೇಷ ಸೌಕರ್ಯ ಸೌಲಭ್ಯಗಳನ್ನು ಚಿಕ್ಕಬಳ್ಳಾಪುರ ಮಾರುಕಟ್ಟೆಯಲ್ಲಿ ಒದಗಿಸಿ ಹೂವುಗಳ ಮಾರಾಟ ವ್ಯವಹಾರಗಳನ್ನು ನಿಯಂತ್ರಣದ ಕಕ್ಷೆಯಲ್ಲಿ ತರಲಾಗಿದೆ. ಅನೇಕ ಹೂವು ಬೆಳೆಗಾರರು ಇಂದು ಈ ವಿಶೇಷ ಸೌಲಭ್ಯದ ಪ್ರಯೋಜನ ಪಡೆದುಕೊಳ್ಳುತ್ತಿದ್ದಾರೆ. ಕೋಲಾರ ಮಾರುಕಟ್ಟೆಯಲ್ಲಿಯೂ ಹಣ್ಣು, ತರಕಾರಿಗಳ ಮಾರಾಟನ್ನು ಹೊಸ ಮಾರುಕಟ್ಟೆ ಪ್ರಾಂಗಣಕ್ಕೆ ಸ್ಥಳಾಂತರಿಸಲಾಗಿದೆ.

## ಮಾರಾಟ ಸಮಸ್ಯೆಗಳಿಗೆ ಸ್ಪಂದಿಸಿ ಒದಗಿಸಿರುವ ಸೌಲಭ್ಯಗಳು :

ಕೃಷಿ ಮಾರಾಟ ಕ್ಷೇತ್ರದಲ್ಲಿ ಸಮಸ್ಯೆಗಳು ಸೃಷ್ಟಿಯಾದಂತೆಲ್ಲ ಅವುಗಳ ನಿವಾರಣೆಗೆ ತ್ವರಿತ ಕ್ರಮ ಅಗತ್ಯ. ಕೃಷಿ ಉತ್ಪನ್ನಗಳ ತೂಕ, ವರ್ಗೀಕರಣ, ಸಾಗಾಣಿಕೆ, ಸಂಗ್ರಹಣೆ, ಮಾರಾಟ ಮುಂತಾದ ಹಂತಗಳಲ್ಲಿ ಉದ್ಭವಿಸುವ ಹಲವಾರು ಸಮಸ್ಯೆಗಳ ಪರಿಹಾರಕ್ಕೆ ಇಲಾಖೆಯು ತ್ವರಿತವಾಗಿ ಸ್ಪಂದಿಸುತ್ತಾ ಹಲವಾರು ವಿಶೇಷ ರೀತಿಯ ಸೌಲಭ್ಯಗಳನ್ನು ಒದಗಿಸಿದೆ.

## ಗ್ರಾಮೀಣ ದಾಸ್ತಾನು ಮಳಿಗೆಗಳ ನಿರ್ಮಾಣ :

ಕೃಷಿ ಉತ್ಪನ್ನಗಳನ್ನು ಗ್ರಾಮೀಣ ಪ್ರದೇಶದಲ್ಲಿ ರೈತರು ಸಾಂಪ್ರದಾಯಿಕ ವಿಧಾನಗಳನ್ನು ಅನುಸರಿಸಿ ಸಂಗ್ರಹಿಸುವುದರಿಂದ ಉಂಟಾಗುವ ನಷ್ಟವನ್ನು ತಗ್ಗಿಸಲು ಕೇಂದ್ರ ಸರ್ಕಾರ ಗ್ರಾಮೀಣ ದಾಸ್ತಾನು ಮಳಿಗೆ ನಿರ್ಮಾಣ ಯೋಜನೆಯನ್ನು ಹಮ್ಮಿಕೊಂಡು ರಾಜ್ಯ ಸರ್ಕಾರಗಳಿಗೆ ಅಂಶಿಕ ಸಹಾಯಧನ ನೀಡುತ್ತಿದೆ. ಈ ಯೋಜನೆಯಲ್ಲಿ ರಾಜ್ಯ ಕೃಷಿ ಮಾರಾಟ ಇಲಾಖೆ ಈವರೆಗೆ ೪.೦೪ ಕೋಟಿ ರೂಪಾಯಿ ವೆಚ್ಚದಲ್ಲಿ ೮೭ ಕೃಷಿ ಉತ್ಪನ್ನ ಮಾರುಕಟ್ಟೆಗಳ ವ್ಯಾಪ್ತಿಯಲ್ಲಿ ೨೮೧ ಗ್ರಾಮೀಣ ಮಳಿಗೆಗಳನ್ನು ನಿರ್ಮಿಸಿದೆ.

## ಗ್ರಾಮೀಣ ಸಂಪರ್ಕ ರಸ್ತೆಗಳ ನಿರ್ಮಾಣ :

ರೈತರು ತಮ್ಮ ಉತ್ಪನ್ನಗಳನ್ನು ಮನೆಯಿಂದ ಮಾರುಕಟ್ಟೆಗೆ ಇಲ್ಲವೆ ಕಣದಿಂದ ಪ್ರಾಂಗಣಕ್ಕೆ ಸಾಗಿಸಲು ಸರ್ವಋತು ರಸ್ತೆಗಳ ಕೊರತೆಯಿಂದಾಗಿ ಹಳ್ಳಿಯ ವ್ಯಾಪಾರಿಯ ಶೋಷಣೆಗೆ ಸಿಲುಕುವ ರೈತರನ್ನು ರಕ್ಷಿಸುವ ದೃಷ್ಟಿಯಿಂದ ಸೂಕ್ತ ಮಾರುಕಟ್ಟೆ ಸೌಲಭ್ಯಗಳು ಗ್ರಾಮೀಣ ರೈತರಿಗೆ ದೊರೆಯುವಂತೆ ಅನುಕೂಲತೆಯನ್ನು ಕಲ್ಪಿಸಲು ರಾಜ್ಯ ಕೃಷಿ ಮಾರಾಟ ಇಲಾಖೆ ಗ್ರಾಮೀಣ ಸಂಪರ್ಕ ರಸ್ತೆಗಳ ನಿರ್ಮಾಣ ಕಾರ್ಯ ಹಮ್ಮಿಕೊಂಡಿದೆ. ೧೯೯೫-೯೬ರಲ್ಲಿ ಈ ಯೋಜನೆಯನ್ನು ಪ್ರಾರಂಭಿಸಿ ಐದು ವರ್ಷಗಳ ಅವಧಿಯಲ್ಲಿ ಹತ್ತು ಸಾವಿರ ಕಿಲೋಮೀಟರ್ ಉದ್ದದ ಗ್ರಾಮೀಣ ರಸ್ತೆ ನಿರ್ಮಿಸಲು ಯೋಜಿಸಿದೆ. ಈವರೆಗೆ ರಾಜ್ಯದಾದ್ಯಂತ ಸುಮಾರು ೨೧.೧೮ ಕೋಟಿ ರೂಪಾಯಿ ವೆಚ್ಚದಲ್ಲಿ ಸುಮಾರು ೧೮೩೩ ಕಿಲೋಮೀಟರ್ ರಸ್ತೆಯನ್ನು ನಿರ್ಮಿಸಲಾಗಿದೆ.

## ಉತ್ಪನ್ನಗಳನ್ನು ಪ್ರಾಂಗಣಕ್ಕೆ ಸಾಗಿಸಲು ಸಾಗಾಣಿಕೆ ಸೌಲಭ್ಯ :

ಸಣ್ಣ, ಅತಿಸಣ್ಣ ಹಾಗೂ ಮಧ್ಯಮ ರೈತರು ಕೃಷಿ ಉತ್ಪನ್ನಗಳನ್ನು ಉತ್ಪಾದನಾ ಸ್ಥಳದಿಂದ ಮಾರುಕಟ್ಟೆಗಳಿಗೆ ಸಾಗಿಸಲು ಅನುಕೂಲವಾಗುವಂತೆ ರಿಯಾಯಿತಿ ದರದಲ್ಲಿ ಮಾರುಕಟ್ಟೆ ಸಮಿತಿಗಳು ಆಯಾ ಮಾರುಕಟ್ಟೆ ಕ್ಷೇತ್ರದಲ್ಲಿ ಸಾಗಾಣಿಕೆ ಸೌಲಭ್ಯಗಳನ್ನು ಒದಗಿಸುತ್ತಿವೆ. ಈ ಸೌಲಭ್ಯ ನೀಡಿಕೆಗಾಗಿ ೨೩ ಮಾರುಕಟ್ಟೆ ಸಮಿತಿಗಳು ಸಾಗಾಣಿಕ ವಾಹನಗಳನ್ನು ಹೊಂದಿದ್ದು ರೈತರಿಗೆ ನೆರವಾಗುತ್ತಿವೆ.

## ವರ್ಗೀಕರಣ ಸೌಲಭ್ಯ :

ಕೃಷಿ ಉತ್ಪನ್ನಗಳ ಮಾರಾಟ ಹಂತದಲ್ಲಿ ಕಲಬೆರಕೆಯನ್ನು ತಡೆಗಟ್ಟಲು ಹಾಗೂ ರೈತರ ಉತ್ಪನ್ನಗಳಿಗೆ ಅವುಗಳ ಗುಣಧರ್ಮಕ್ಕೆ ತಕ್ಕಂತೆ ಬೆಲೆ ದೊರೆಯುವಂತೆ ಮಾಡಲು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ವರ್ಗೀಕರಣಕ್ಕೆ ಹೆಚ್ಚಿನ ಉತ್ತೇಜನ ನೀಡಲಾಗುತ್ತಿದೆ. ರಾಜ್ಯದ ೪೪ ಮಾರುಕಟ್ಟೆ ಸಮಿತಿಗಳಲ್ಲಿ ಪ್ರಾಥಮಿಕ ವರ್ಗೀಕರಣ ಘಟಕಗಳನ್ನು ಸ್ಥಾಪಿಸಲಾಗಿದ್ದು, ವಾಣಿಜ್ಯ ರೀತಿಯ ವರ್ಗೀಕರಣವನ್ನು ಜಾರಿಗೆ ತರಲಾಗಿದೆ. ಕೃಷಿ ಉತ್ಪನ್ನ (ವರ್ಗೀಕರಣ ಹಾಗೂ ಗುರುತು ಹಾಕುವ) ಶಾಸನ, ೧೯೩೭ರನ್ವಯ ತುಪ್ಪ, ಬೆಣ್ಣೆ, ಜೇನುತುಪ್ಪ, ಖಾದ್ಯತೈಲ ಹಾಗೂ ಮಸಾಲೆ ಪದಾರ್ಥಗಳ ಅಗ್‌ಮಾರ್ಕ್ ವರ್ಗೀಕರಣಕ್ಕಾಗಿ ರಾಜ್ಯದ ವಿವಿಧ ಭಾಗಗಳಲ್ಲಿ ಹನ್ನೊಂದು ಪ್ರಯೋಗಾಲಯಗಳನ್ನು ತೆರೆಯಲಾಗಿದೆ. ವಾಣಿಜ್ಯ ವರ್ಗೀಕರಣ ಯೋಜನೆಯಡಿಯಲ್ಲಿ ೧೯೯೫-೯೬ರಲ್ಲಿ ೫೪೭ ಕೋಟಿ ರೂಪಾಯಿ ಮೌಲ್ಯದ ವಿವಿಧ ಉತ್ಪನ್ನಗಳನ್ನು ವರ್ಗೀಕರಿಸಲಾಗಿದ್ದು ಅಗ್‌ಮಾರ್ಕ್ ವರ್ಗೀಕರಣ ಕೇಂದ್ರಗಳು ಇದೇ ಅವಧಿಯಲ್ಲಿ ೩.೨ ಕೋಟಿ ರೂಪಾಯಿ ಮೌಲ್ಯದ ಉತ್ಪನ್ನಗಳನ್ನು ವರ್ಗೀಕರಿಸಿವೆ.

## ವಿದ್ಯುನ್ಮಾನಿತ ತೂಕದ ಯಂತ್ರಗಳ ಅಳವಡಿಕೆ :

ಕೃಷಿ ಉತ್ಪನ್ನ ಮಾರುಕಟ್ಟೆಗಳಲ್ಲಿ ಲೈಸೆನ್ಸ್ ಪಡೆದ ತೂಕದವರು ತೂಕದ ಕಾರ್ಯ ನಿರ್ವಹಿಸುತ್ತಿದ್ದು, ತ್ವರಿತ ಹಾಗೂ ಕರಾರುವಾಕ್ಕಾದ ತೂಕದ ವ್ಯವಸ್ಥೆಗಾಗಿ ವಿದ್ಯುನ್ಮಾನಿತ ತೂಕದ ಯಂತ್ರಗಳನ್ನು ಅಳವಡಿಸಲಾಗುತ್ತಿದೆ. ರಾಜ್ಯದ ವಿವಿಧ ಭಾಗಗಳಲ್ಲಿರುವ ೨೪ ಮಾರುಕಟ್ಟೆಗಳಲ್ಲಿ ಈ ರೀತಿಯ ಅತ್ಯಾಧುನಿಕ ತೂಕದ ವ್ಯವಸ್ಥೆಯನ್ನು ಜಾರಿಗೆ ತರಲು ಸುಮಾರು ೨೫ ಲಕ್ಷ ರೂಪಾಯಿಗಳನ್ನು ಈ ಸೌಲಭ್ಯಕ್ಕಾಗಿ ವೆಚ್ಚ ಮಾಡಲಾಗಿದೆ.

## ಶೈತ್ಯಾಗಾರಗಳ ಸೌಲಭ್ಯ :

ತೀವ್ರ ನಶಿಸಿಹೋಗುವ ಹಣ್ಣು ಮತ್ತು ತರಕಾರಿಗಳನ್ನು ದೀರ್ಘಾವಧಿಯವರೆಗೆ ಸುರಕ್ಷಿತವಾಗಿ ಸಂಗ್ರಹಿಸಿಡಲು ಮಾರುಕಟ್ಟೆಗಳ ಹಂತದಲ್ಲಿ ಶೈತ್ಯಾಗಾರಗಳ ನಿರ್ಮಾಣ ಕಾರ್ಯವನ್ನು ಕೃಷಿ ಮಾರಾಟ ಇಲಾಖೆ ಕೈಗೆತ್ತಿಕೊಂಡಿದೆ. ಮಾರುಕಟ್ಟೆಯಲ್ಲಿ ರೈತರಿಗೆ ನಿರೀಕ್ಷಿತ ಬೆಲೆ ದೊರೆಯದಿದ್ದಾಗ ಈ ಶೈತ್ಯಾಗಾರಗಳಲ್ಲಿ ತಮ್ಮ ಉತ್ಪನ್ನಗಳನ್ನು ಸಂಗ್ರಹಿಸಿಟ್ಟು ಬೆಲೆ ಏರಿದಾಗ ಮಾರಾಟ ಮಾಡಲು ಅನುಕೂಲತೆಯನ್ನು ಕಲ್ಪಿಸಲಾಗಿದೆ. ಪ್ರಥಮ ಪ್ರಯತ್ನವಾಗಿ ಚಿಕ್ಕಬಳ್ಳಾಪುರ ಮತ್ತು ಚಿಂತಾಮಣಿಯಲ್ಲಿ ಶೈತ್ಯಾಗಾರಗಳ ನಿರ್ಮಾಣ ಮಾಡಲಾಗಿದ್ದು, ರಾಷ್ಟ್ರೀಯ ತೋಟಗಾರಿಕಾ ಮಂಡಳಿ ಹಾಗೂ ಇತರೆ ಸಂಸ್ಥೆಗಳ ನೆರವಿನೊಂದಿಗೆ ಈ ರೀತಿಯ ಇನ್ನೂ ಹತ್ತು ಶೈತ್ಯಾಗಾರಗಳ ನಿರ್ಮಾಣದ ಗುರಿ ಹೊಂದಲಾಗಿದೆ.

## ಕೃಷಿ ಉತ್ಪನ್ನಗಳ ಅಡಮಾನಿನ ಮೇಲೆ ರೈತರಿಗೆ ಸಾಲ ಸೌಲಭ್ಯ :

ಸುಗ್ಗಿಯ ಕಾಲದಲ್ಲಿ ಬೆಲೆಗಳ ಕುಸಿತದಿಂದಾಗುವ ನಷ್ಟವನ್ನು ತಪ್ಪಿಸಲು, ಒತ್ತಡಾತ್ಮಕ ಮಾರಾಟವನ್ನು ತಗ್ಗಿಸಲು ಹಾಗೂ ಖಾಸಗಿ ವರ್ತಕರಿಂದ ಹಣಕಾಸಿನ ನೆರವು ಪಡೆದು ಅವರ ಮುಷ್ಟಿಗೆ ರೈತರು ಸಿಲುಕದಂತೆ ನೋಡಿಕೊಳ್ಳಲು ಕೃಷಿ ಉತ್ಪನ್ನಗಳ ಅಡಮಾನಿನ ಆಧಾರದ ಮೇಲೆ ರೈತರಿಗೆ ಅಲ್ಪಾವಧಿ ಸಾಲ ನೀಡುವ ಯೋಜನೆಯನ್ನು ೧೯೯೪ರಿಂದ ಜಾರಿಗೆ ತರಲಾಗಿದೆ. ರಾಜ್ಯದ ೨೦ ಕೃಷಿ ಉತ್ಪನ್ನ ಮಾರುಕಟ್ಟೆಗಳಲ್ಲಿ ಈಗ ಈ ಯೋಜನೆ ಜಾರಿಯಲ್ಲಿದ್ದು ರೈತರು ೫೦೦೦೦ ರೂಪಾಯಿಗಳಿಗೆ ಮೀರದಂತೆ ತಾವು ಅಡಮಾನಿಟ್ಟ ಉತ್ಪನ್ನದ ಶೇಕಡ ೬೦ರಷ್ಟು ಮೌಲ್ಯವನ್ನು ಮೂರು ತಿಂಗಳವರೆಗೆ ಅಲ್ಪಾವಧಿಯ ಸಾಲವನ್ನಾಗಿ ಪಡೆಯಬಹುದಾಗಿದೆ. ಈ ಸಾಲಕ್ಕೆ ಪ್ರಥಮ ಒಂದು ತಿಂಗಳಿಗೆ ಯಾವುದೇ ಬಡ್ಡಿ ಇರುವುದಿಲ್ಲ. ನಂತರದ ಅವಧಿಗೆ ಶೇಕಡ ೮ ರಿಂದ ೧೨.೫ ರವರೆಗೆ ಬಡ್ಡಿ ವಿಧಿಸಲಾಗುವುದು. ಈ ಯೋಜನೆಯನ್ನು ಸಮರ್ಪಕವಾಗಿ ಕಾರ್ಯರೂಪಕ್ಕೆ ತರಲು ಹೆಚ್ಚಿನ ಒತ್ತು ನೀಡಲಾಗಿದೆ.

## ಮುಂದಿನ ಯೋಜನೆಗಳು :

ಸ್ವಾತಂತ್ರ್ಯ ನಂತರದ ಅವಧಿಯಲ್ಲಿ ಕೃಷಿ ಉತ್ಪಾದನಾ ಕ್ಷೇತ್ರದಲ್ಲಿ ಪ್ರಗತಿಯಾದಂತೆ ಕೃಷಿ ಮಾರಾಟ ಕ್ಷೇತ್ರದಲ್ಲಿಯೂ ಸುಧಾರಣೆಗಳಾಗಿವೆಯಾದರೂ ಮುಕ್ತ ವ್ಯಾಪಾರದ ನೀತಿಯಿಂದಾಗುತ್ತಿರುವ ಬದಲಾವಣೆಯ ವೇಗಕ್ಕೆ ಸರಿಸಮವಾಗಿ ಇಲಾಖೆ ಸ್ಪಂದಿಸಬೇಕಾಗಿದೆ. ಈ ದಿಸೆಯಲ್ಲಿ ರಾಜ್ಯ ಕೃಷಿ ಮಾರಾಟ ಇಲಾಖೆ ಹಲವಾರು ವಿನೂತನ ಯೋಜನೆಗಳನ್ನು ಹಮ್ಮಿಕೊಂಡಿದೆ.

- ತ್ವರಿತಗತಿಯಲ್ಲಿ ಬೆಳೆಯುತ್ತಿರುವ ಬೆಂಗಳೂರು ನಗರದ ಬೇಡಿಕೆಯನ್ನು ಪೂರೈಸಲು ಈಗಿರುವ ಮಾರುಕಟ್ಟೆಗಳು ಕಿರಿದಾಗುತ್ತಿವೆ. ಈ ಕೊರತೆಯನ್ನು ನೀಗಿಸಲು ಬೆಂಗಳೂರಿನಲ್ಲಿ ಸುಮಾರು ೫೦೦ ಎಕರೆಯಲ್ಲಿ ಅತ್ಯಾಧುನಿಕ ಸೌಲಭ್ಯಗಳನ್ನು ಹೊಂದಿದ ಮೆಗಾ ಮಾರುಕಟ್ಟೆಯನ್ನು ಅಭಿವೃದ್ಧಿಪಡಿಸಲು ಯೋಜಿಸಲಾಗಿದೆ ಹಾಗೂ ನಗರದ ಹೊರವಲಯದಲ್ಲಿ ಏಳು ಸೆಟಲೈಟ್ ಮಾರುಕಟ್ಟೆಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದೆ.
- ರಾಜ್ಯದ ಪ್ರಮುಖ ಮಾರುಕಟ್ಟೆಗಳಾದ ಮಂಗಳೂರು, ಮೈಸೂರು, ರಾಯಚೂರು ಹಾಗೂ ಹುಬ್ಬಳ್ಳಿ ಮಾರುಕಟ್ಟೆಗಳನ್ನು ರಾಷ್ಟ್ರೀಯ ಮಟ್ಟದ ಮಾರುಕಟ್ಟೆಗಳನ್ನಾಗಿ ಅಭಿವೃದ್ಧಿಪಡಿಸಲು ಯೋಜಿಸಲಾಗಿದೆ.
- ಮಾರುಕಟ್ಟೆ ಪ್ರಾಂಗಣಗಳಲ್ಲಿ ಕೃಷಿ ಉತ್ಪನ್ನಗಳ ಕೊಯ್ಲು ನಂತರದ ಕಾರ್ಯಗಳಾದ ಸಂಸ್ಕರಣೆ, ಪ್ಯಾಕಿಂಗ್, ವರ್ಗೀಕರಣ, ಗುಣಸಂರಕ್ಷಣೆ ಮುಂತಾದ ವಿಷಯಗಳ ಬಗ್ಗೆ ರೈತರಿಗೆ ಮಾಹಿತಿ ನೀಡುವ ಯೋಜನೆಯೊಂದನ್ನು ರೂಪಿಸಲು ಉದ್ದೇಶಿಸಲಾಗಿದೆ.
- ಗ್ರಾಮಮಟ್ಟಕ್ಕೆ ಇನ್ನೂ ಪ್ರಗತಿಪರವಾದ ಮಾರುಕಟ್ಟೆ ಸೌಲಭ್ಯಗಳನ್ನು ಕೊಂಡೊಯ್ದು ರೈತರು ತಮ್ಮ ಉತ್ಪನ್ನಗಳ ಮಾರಾಟ ವೆಚ್ಚವನ್ನು ಪರಿಣಾಮಕಾರಿಯಾಗಿ ತಗ್ಗಿಸಲು ಗ್ರಾಮೀಣ ಮಾರುಕಟ್ಟೆಗಳನ್ನು ಸಂಪೂರ್ಣ ಅಭಿವೃದ್ಧಿಪಡಿಸಲು ಯೋಜಿಸಲಾಗಿದೆ.

* ಕೃಷಿ ಉತ್ಪನ್ನ ಮಾರುಕಟ್ಟೆಗಳಲ್ಲಿ ಪೇಟೆ ಮಾಹಿತಿ ಕೇಂದ್ರಗಳನ್ನು ಸ್ಥಾಪಿಸಿ ರಾಜ್ಯ, ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ ಮಾರುಕಟ್ಟೆಗಳ ಮಾಹಿತಿಯನ್ನು ಸಂಗ್ರಹಿಸಿ ರೈತರಿಗೆ ಹಾಗೂ ಪೇಟೆ ಕಾರ್ಯಕರ್ತರಿಗೆ ಪೂರೈಸಲು "ಮಾರ್ಕನೆಟ್" ಯೋಜನೆಯನ್ನು ಜಾರಿಗೆ ತರಲು ಯೋಜಿಸಲಾಗಿದೆ.
* ಮಾರಾಟ ಕಾರ್ಯ ತ್ವರಿತವಾಗಿ ಪೂರ್ಣಗೊಳ್ಳುವಂತೆ ಹಾಗೂ ನಿಖರವಾದ ಮಾಹಿತಿ ತಕ್ಷಣ ಲಭ್ಯವಾಗುವಂತೆ ಮಾಡಲು ಮಾರುಕಟ್ಟೆ ಸಮಿತಿಗಳಲ್ಲಿ ಗಣಕ ಯಂತ್ರಗಳ ಅಳವಡಿಕೆಗೆ ಕ್ರಮ ಕೈಗೊಳ್ಳಲಾಗುತ್ತಿದೆ.
* ರೈತರು ತಮ್ಮ ಉತ್ಪನ್ನಗಳ ಗುಣಧರ್ಮಕ್ಕೆ ತಕ್ಕಂತೆ ಬೆಲೆ ಪಡೆಯಲು ಹಾಗೂ ಅನಾವಶ್ಯಕ ಮಾರಾಟ ವೆಚ್ಚಗಳನ್ನು ತಗ್ಗಿಸಲು ಮಾರುಕಟ್ಟೆ ಪ್ರಾಂಗಣಗಳಲ್ಲಿ ಸ್ವಚ್ಛತಾ ಯಂತ್ರಗಳನ್ನು ಅಳವಡಿಸಲು ಯೋಜಿಸಲಾಗಿದೆ. ಈ ಯಂತ್ರಗಳ ಮೂಲಕ ಸ್ವಚ್ಛಗೊಳಿಸಿದ ಉತ್ಪನ್ನಗಳನ್ನು ನಿಗದಿತ ಪ್ರಮಾಣಗಳಲ್ಲಿ ತುಂಬಿ ಮಾರಾಟ ಮಾಡುವುದರಿಂದ ಶುದ್ಧೀಕರಿಸಿದ ಉತ್ಪನ್ನಗಳು ನೇರವಾಗಿ ಹೆಚ್ಚಿನ ವೆಚ್ಚವಿಲ್ಲದೆ ಗ್ರಾಹಕರನ್ನು ತಲುಪಲು ಅನುಕೂಲವಾಗುವುದು.
* ಗ್ರಾಮೀಣ ಪ್ರದೇಶಗಳಲ್ಲಿ ಅಗತ್ಯ ಮಾರಾಟ ಸೌಲಭ್ಯಗಳನ್ನು ನೀಡುವ ಉದ್ದೇಶದಿಂದ ಕೇಂದ್ರ ಸರ್ಕಾರದ ಆರ್.ಐ.ಡಿ.ಎಫ್. ಯೋಜನೆಯಡಿಯಲ್ಲಿ ರಾಷ್ಟ್ರೀಯ ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನಿಂದ ಸಾಲ ಪಡೆದು ೧೯ ಕೋಟಿ ರೂಪಾಯಿಗಳ ವೆಚ್ಚದಲ್ಲಿ ೧೪೯ ಗ್ರಾಮೀಣ ಮಾರುಕಟ್ಟೆಗಳಲ್ಲಿ ಅವಶ್ಯಕ ಸೌಕರ್ಯಗಳನ್ನು ಕಲ್ಪಿಸಲು ಉದ್ದೇಶಿಸಲಾಗಿದೆ.
* ಕೃಷಿ ಉತ್ಪನ್ನಗಳ ವಿನಿಮಯ ಕೇಂದ್ರವೊಂದನ್ನು ಬೆಂಗಳೂರಿನಲ್ಲಿ ಸ್ಥಾಪಿಸಲು ಯೋಜಿಸಲಾಗಿದೆ. ಇದಕ್ಕಾಗಿ ಕ್ರಿಸಲ್ ಸಂಸ್ಥೆಯನ್ನು ಸಂಪರ್ಕಿಸಿ ವಿನಿಮಯ ಕೇಂದ್ರದ ಸ್ಥಾಪನೆಯ ಬಗ್ಗೆ ಪೂರ್ವಭಾವಿ ವಿವರಗಳನ್ನೊಳಗೊಂಡ ವರದಿ ಪಡೆಯಲಾಗುತ್ತಿದೆ.

●




# ಕೃಷಿ ಕಾರ್ಮಿಕರ ಆರ್ಥಿಕ ಸ್ಥಿತಿಗತಿ

ಡಾ. ಎಂ. ವಿ. ಶ್ರೀನಿವಾಸಗೌಡ

ಯಾವುದೇ ದೇಶದ ಆರ್ಥಿಕ ವಿಕಾಸಕ್ಕೆ ಅಗತ್ಯವಾದ ಉತ್ಪಾದನಾಂಗಗಳಲ್ಲಿ ಶ್ರಮ ಶಕ್ತಿ, ಅದರಲ್ಲೂ ಮಾನವ ಶ್ರಮ ಶಕ್ತಿ, ಬಹಳ ಮಹತ್ತರವಾದದ್ದು. ಆರ್ಥಿಕ ಬೆಳವಣಿಗೆಯ ವೇಗ ಸಾಮಾನ್ಯವಾಗಿ ಬಂಡವಾಳ ಹೂಡಿಕೆ, ತಂತ್ರಜ್ಞಾನ ಹಾಗೂ ಶ್ರಮ ಶಕ್ತಿ ಕೂಡಿದ ಉತ್ಪಾದನಾಂಗಗಳ ಪೂರೈಕೆಯ ಮೇಲೆ ಅವಲಂಬಿಸಿರುತ್ತದೆ. ಭಾರತದಲ್ಲಿ ಶ್ರಮ ಶಕ್ತಿಯ ಪೂರೈಕೆಗೇನೂ ಮುಗ್ಗಟ್ಟಿಲ್ಲ. ನಿರಂತರ ಏರುತ್ತಿರುವ ಜನಸಂಖ್ಯೆಯಿಂದಾಗಿ ನಮ್ಮ ಕಾರ್ಮಿಕರ ಸಂಖ್ಯೆಯೂ ಏರುತ್ತಿದೆ. ಆದರೆ ಶ್ರಮಶಕ್ತಿಯ ಪೂರೈಕೆ ಏರುತ್ತಿರುವ ದರದಲ್ಲಿ ಅದರ ಬೇಡಿಕೆ ಏರುತ್ತಿಲ್ಲ. ತತ್ಪರಿಣಾಮ, ಆರ್ಥಿಕ ಬೆಳವಣಿಗೆಯ ನಡುವ ನಿರುದ್ಯೋಗವೂ ಉಲ್ಬಣಿಸುತ್ತಿದೆ. ನಮ್ಮ ಒಟ್ಟು ಕಾರ್ಮಿಕ ಸಂಖ್ಯೆಯಲ್ಲಿ ಶೇಕಡಾ ೯೦ ರಷ್ಟು ಪಾಲು ಅಸಂಘಟಿತ ಅಥವಾ ಅನೌಪಚಾರಿಕ ಆರ್ಥಿಕ ಕ್ಷೇತ್ರಕ್ಕೆ ಅಂಟಿಕೊಂಡಿದೆ. ಈ ಕ್ಷೇತ್ರವು ಬಹಳ ವ್ಯಾಪಕವಾಗಿದ್ದು, ಕೃಷಿರಂಗ, ಗುಡಿ ಕೈಗಾರಿಕೆಗಳು ಮತ್ತು ಸಾಂಪ್ರದಾಯಿಕ ಗ್ರಾಮೀಣ ಕೃಷಿಯೇತರ ಕಲೆಗಳೂ ಇದರ ವ್ಯಾಪ್ತಿಗೊಳಪಡುತ್ತವೆ. ಈ ಕ್ಷೇತ್ರದಲ್ಲಿ ಎದ್ದು ಕಾಣುವ ಲಕ್ಷಣಗಳೆಂದರೆ ಉತ್ಪಾದನಾ ಘಟ್ಟಗಳಲ್ಲಿ ಓಬೀರಾಯನ ಕಾಲದ ಅಪರಿಷ್ಕೃತ ತಂತ್ರಜ್ಞಾನದ ಬಳಕೆ, ಅದರಿಂದಾಗಿ ಅತಿ ಕೆಳಮಟ್ಟದಲ್ಲಿರುವ ಉತ್ಪಾದಕತೆ, ಬಂಡವಾಳ ಹೂಡಿಕೆಯ ಅಭಾವ, ಅಂತೂ ಇಂತೂ ಶ್ರಮಿಸಿ ತಯಾರಿಸಿದ ಉತ್ಪನ್ನಗಳಿಗೆ ಅಗತ್ಯವಾದ ವ್ಯವಸ್ಥಿತ ಮಾರುಕಟ್ಟೆಯ ಕೊರತೆ, ಉತ್ಪನ್ನಗಳಿಗೆ ತಕ್ಕ ಬೆಲೆ ಸಿಗದೆ ಇರುವುದು ಹಾಗೂ ಆ ಬೆಲೆಗಳಲ್ಲಿ ಕಂಡುಬರುವ ಅಸ್ಥಿರತೆ. ಈ ಎಲ್ಲವುಗಳ ಪರಿಣಾಮವಾಗಿ ಅಸಂಘಟಿತ ಗೃಹೋದ್ಯೋಗಗಳಲ್ಲಿ ಆದಾಯದ ಮಟ್ಟ ಅತಿ ಕಡಿಮೆಯಾಗಿದ್ದು, ಈ ಉದ್ದಿಮೆಗಳ ಒಡೆಯರಷ್ಟೇ ಅಲ್ಲದೇ ಇಲ್ಲಿ ಉದ್ಯೋಗ ಮಾಡುವ ದಿನಗೂಲಿಯ ಗುತ್ತಿಗೆ ಕೂಲಿಯ ಕಾರ್ಮಿಕರೂ ಬಡತನದಲ್ಲಿ ಬೇಯುತ್ತಾರೆ.

> ಬೇಸಾಯದ ಕೆಲಸದಲ್ಲಿ ಕಾರ್ಮಿಕರಿಗೆ ತಕ್ಕ ಕೂಲಿ ಸಿಗದಿರಲು ಬೇಸಾಯಗಾರರ ಆದಾಯ ಹೆಚ್ಚಿಲ್ಲದಿರುವುದು ಕಾರಣ. ಇಂತಹ ಪರಿಸ್ಥಿತಿಯಲ್ಲಿ ಕೃಷಿ ಕಾರ್ಮಿಕರಿಗೆ ಸರಿಯಾದ ವೇತನ ಕೊಡುತ್ತಿಲ್ಲವೆಂದು ರೈತರನ್ನು ದೂಷಿಸುವಂತಿಲ್ಲ.

ಭಾರತದಲ್ಲಿನ ಅನೌಪಚಾರಿಕ ಉದ್ದಿಮೆಗಳಲ್ಲಿ ಅತಿ ದೊಡ್ಡ ಉದ್ದಿಮೆ ಎಂದರೆ ಕೃಷಿ. ಭಾರತದ ಕೃಷಿ ರಂಗ ಬಹಳ ಕಾಲದಿಂದಲೂ ಒಂದು ಬೃಹತ್ ಅಸಂಘಟಿತ ಕ್ಷೇತ್ರವಾಗಿ ಮುಂದುವರಿದಿದೆ. ಕೃಷಿಕರು ಮತ್ತು ಕೃಷಿ ಕಾರ್ಮಿಕರು ಅಸಂಘಟಿತವಾಗಿ ಉಳಿಯಲು ನಾನಾ ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ, ಬೇಸಾಯ ಕಾರ್ಯಾಚರಣೆಗಳ ಅನಿಯತಕಾಲಿಕತೆ, ನಿರಂತರವಾಗಿ ಏರುತ್ತಿರುವ ಉತ್ಪಾದನಾಂಗಗಳ ಬೆಲೆಗಳು, ಆಗಿಂದಾಗ್ಗೆ ಉಂಟಾಗುವ ಕೃಷಿ ಉತ್ಪನ್ನಗಳ ಬೆಲೆಗಳ ಅಸ್ಥಿರತೆ ಮತ್ತು ಅದರಿಂದಾಗುವ ಕೃಷಿಕರ ಆದಾಯದ

ಅಸ್ಥಿರತೆ ಮತ್ತು ಗ್ರಾಮೀಣ ಕಾರ್ಮಿಕರ ಅನಕ್ಷರತೆ. ಗ್ರಾಮೀಣ ಕಾರ್ಮಿಕರು, ಅದರಲ್ಲೂ ಕೃಷಿ ಕಾರ್ಮಿಕರು, ದಿನಗೂಲಿ ಮತ್ತು ಗುತ್ತಿಗೆ ಕೆಲಸಗಾರರು, ಬಡ ಕುಟುಂಬಗಳ ಮಕ್ಕಳು ಮತ್ತು ಮಹಿಳಾ ಕಾರ್ಮಿಕರು ಹಾಗೂ ನಿಶ್ಚಿತ ಕೆಲಸ ಇಲ್ಲದವರು, ಬಡತನ ಮತ್ತು ಸಾಮಾಜಿಕ ಹಿಂದುಳಿಯುವಿಕೆಯ ಸ್ಥಿತಿಗೆ ಬೇಗ ಒಳಗಾಗುವಂತಹವರು. ಆಗಾಗ್ಗೆ ಬರಗಾಲ, ಪ್ರವಾಹ ಹಾಗೂ ಇತರ ನೈಸರ್ಗಿಕ ವಿಕೋಪಗಳಿಗೆ ಒಳಗಾಗುವಂತಹ ಪ್ರದೇಶದ ಕೃಷಿ ಕಾರ್ಮಿಕರಿಗೆ ತಮ್ಮ ಪ್ರಾಣ ಹಾಗೂ ಜೀವನಾಧಾರ ಕಳೆದುಕೊಳ್ಳುವ ಅಪಾಯ ಹೆಚ್ಚು. ಆದ್ದರಿಂದ ಇಂತಹ ಬಡ ಕೆಲಸಗಾರರನ್ನು ರಕ್ಷಿಸಲು ಹಾಗೂ ಅವರ ಜೀವನಮಟ್ಟ ಸುಧಾರಿಸಲು ಪರಿಣಾಮಕಾರಿ ಸಾಮಾಜಿಕ ಸುರಕ್ಷತಾ ಕಾರ್ಯಕ್ರಮಗಳನ್ನು ಮತ್ತು ಈ ಕಾರ್ಯಕ್ರಮಗಳನ್ನು ಪ್ರಾಮಾಣಿಕವಾಗಿ ಅನುಷ್ಠಾನಕ್ಕೆ ತರುವ ಸಾಂಸ್ಥಿಕ ವ್ಯವಸ್ಥೆಗಳನ್ನು ಸರಕಾರ ರೂಪಿಸಬೇಕು.

ಭಾರತದಲ್ಲಿ ಸಂಘಟಿತ ಕ್ಷೇತ್ರಗಳಿಗೆ ಅನ್ವಯಿಸುವಂತೆ ಹಲವಾರು ಸಾಮಾಜಿಕ ಭದ್ರತಾ ಕಾಯ್ದೆಗಳಿವೆ. ಉದಾಹರಣೆಗೆ ಕನಿಷ್ಠ ವೇತನ ಕಾಯ್ದೆ (೧೯೪೮), ಪ್ರಸವ ಭತ್ಯೆ ಕಾಯ್ದೆ (೧೯೪೧), ನೌಕರರ ರಾಜ್ಯ ವಿಮಾ ಕಾಯ್ದೆ (೧೯೪೮), ಬೋನಸ್ ಪಾವತಿ ಕಾಯ್ದೆ (೧೯೬೫), ನೌಕರರ ಭವಿಷ್ಯ ನಿಧಿ ಕಾಯ್ದೆ (೧೯೫೨), ಗ್ರಾಚುಯಿಟಿ ಕಾಯ್ದೆ (೧೯೭೯) ಮೊದಲಾದವು. ಆದರೆ ಈ ಎಲ್ಲ ಕಾಯ್ದೆಗಳ ಫಲ ದೊರೆಯುವುದು ಕೇವಲ ಸಂಘಟಿತ ಕ್ಷೇತ್ರದ ಕಾರ್ಮಿಕರಿಗೆ ಮಾತ್ರ. ದೇಶದ ಒಟ್ಟು ಕಾರ್ಮಿಕ ಸಂಖ್ಯೆಯಲ್ಲಿ ಶೇಕಡಾ ೯೨ರಷ್ಟಿರುವ ಅಸಂಘಟಿತ ಕ್ಷೇತ್ರದ ಕಾರ್ಮಿಕರು ರಾಷ್ಟ್ರೀಯ ಉತ್ಪಾದನೆಯ ಶೇಕಡಾ ೬೦ರಷ್ಟು ಭಾಗವನ್ನು ಉತ್ಪಾದಿಸುತ್ತಿದ್ದರೂ, ಇವರಾರಿಗೂ ಈ ಕಾಯ್ದೆಗಳ ಫಲ ಲಭಿಸುತ್ತಿಲ್ಲ.

ಕೃಷಿ ಕಾರ್ಮಿಕರು ಒಟ್ಟು ಗ್ರಾಮೀಣ ಕಾರ್ಮಿಕರ ಶೇ. ೭೦ ರಷ್ಟು ಇದ್ದಾರೆ. ಕೃಷಿ ಕಾರ್ಯಾಚರಣೆಗಳು ನಡೆಯುವಾಗ ಮಾತ್ರ ಇವರಿಗೆ ಉದ್ಯೋಗ ದೊರೆಯುತ್ತಿದ್ದು, ಮಿಕ್ಕ ವೇಳೆ ನಿರುದ್ಯೋಗದಿಂದ ಬಳಲುತ್ತಾರೆ. ಅನಿಶ್ಚಿತ ಹಾಗೂ ಅನಿಯತಕಾಲಿಕ ಉದ್ಯೋಗ, ಅಭದ್ರತೆ, ಬಡತನ, ಸಾಲ, ಜೀತ, ವಲಸೆ, ಕಾಯ್ದೆಯನ್ವಯ ಕನಿಷ್ಠ ವೇತನ ಪಡೆಯಲು ಅಸಮರ್ಥತೆ, ಅನಕ್ಷರತೆ, ಅಪೌಷ್ಟಿಕತೆ ಇತ್ಯಾದಿ ಪಿಡುಗುಗಳಿಗೆ ಕೃಷಿ ಕಾರ್ಮಿಕರು ನಿರಂತರ ತುತ್ತಾಗುತ್ತಾರೆ.

12090

ಬೇಸಾಯದ ಕೆಲಸಗಳಲ್ಲಿ ಕಾರ್ಮಿಕರಿಗೆ ತಮ್ಮ ಜೀವನದ ಅತ್ಯಗತ್ಯ ವಸ್ತುಗಳನ್ನು ಕೊಳ್ಳಲು ತಕ್ಕ ಕೂಲಿ ಸಿಗದಿರಲು ಮುಖ್ಯ ಕಾರಣ ಬೇಸಾಯಗಾರರ ಆದಾಯ ಹೆಚ್ಚಿಲ್ಲದಿರುವುದು. ಅನೇಕ ವೇಳೆ ಉಂಟಾಗುವ ಬೇಸಾಯ ಉತ್ಪನ್ನಗಳ ಬೆಲೆಗಳ ತೀವ್ರ ಇಳಿಕೆ ಹಾಗೂ ಬೆಲೆಗಳ ಅಸ್ಥಿರತೆ, ಬೇಸಾಯ ಉತ್ಪನ್ನ ಸಾಧನ / ಸಾಮಗ್ರಿಗಳ ದುಬಾರಿಯಿಂದಾಗಿ ಬೇಸಾಯ ಉತ್ಪಾದನೆ ವೆಚ್ಚಗಳ ತೀವ್ರ ಏರಿಕೆ, ಪರಿಣಾಮವಾಗಿ ಬೇಸಾಯವು ನಿರ್ಲಾಭ ಉದ್ದಿಮೆಯಾಗಿ ಪರಿಣಮಿಸುತ್ತಿದೆ. ಇಂತಹ ಪರಿಸ್ಥಿತಿಯಲ್ಲಿ ಕೃಷಿ ಕಾರ್ಮಿಕರಿಗೆ ಕನಿಷ್ಠ ವೇತನ ಕೊಡಲಾಗದ ರೈತರನ್ನು ದೂಷಿಸುವುದು ಸರಿಯಲ್ಲ. ಯಾವುದೇ ಖಾಸಗೀ ರಂಗದಲ್ಲಿ ಕಾರ್ಮಿಕರಿಗೆ ಸೂಕ್ತ ವೇತನ ಮತ್ತಿತರ ಸೌಲಭ್ಯ ಸಮರ್ಪಕವಾಗಿ ಲಭಿಸಬೇಕಾದರೆ, ಆ ರಂಗದ ಉದ್ದಿಮೆಗಳು ಲಾಭದಾಯಕವಾಗಿರಬೇಕು. ಜನಸಂಖ್ಯಾ ಸ್ಫೋಟದಿಂದಾಗಿ ಭಾರತದಲ್ಲಿ ಭೂಹಿಡುವಳಿಗಳ ಗಾತ್ರ ಕುಗ್ಗುತ್ತಿದ್ದು, ಸಣ್ಣ ಭೂಹಿಡುವಳಿಗಳ ಸಂಖ್ಯೆ ಏರುತ್ತಿದೆ. ಸಣ್ಣ ಭೂ ಹಿಡುವಳಿಗಳ ಆರ್ಥಿಕತೆ ಕ್ಷೀಣಿಸುತ್ತ, ರೈತ ಕುಟುಂಬಗಳ ಆದಾಯದ ಅಸ್ಥಿರತೆ ಹೆಚ್ಚುತ್ತಿದ್ದು, ಅಂಥ ಕುಟುಂಬಗಳ ಸದಸ್ಯರಿಗೆ ಪರ್ಯಾಯ ಉದ್ಯೋಗಾವಕಾಶಗಳಿಲ್ಲದೆ, ಅವರು ಕೃಷಿ ಕಾರ್ಮಿಕರ ವರ್ಗಕ್ಕೆ ಸೇರ್ಪಡೆಯಾಗುತ್ತಾರೆ. ಭಾರತದಲ್ಲಿ ಅನೇಕ ಪ್ರದೇಶಗಳಲ್ಲಿ ವಿಶೇಷವಾಗಿ ಒಣ ಬೇಸಾಯವಿರುವ ಕಡೆ ಸಣ್ಣ ಹಿಡುವಳಿಗಳಲ್ಲಿನ ಉತ್ಪಾದನೆಯು ವೆಚ್ಚಕ್ಕಿಂತ ಕಡಿಮೆಯಾಗಿದ್ದು, ಬಹಳಷ್ಟು ಸಣ್ಣ ರೈತ ಕುಟುಂಬಗಳು ಆರ್ಥಿಕವಾಗಿ, ರೈತ ಕಾರ್ಮಿಕ ಕುಟುಂಬಗಳಿಗಿಂತ ಕೀಳಾಗಿರುವುದು ಅಧ್ಯಯನಗಳಿಂದ ಕಂಡುಬಂದಿದೆ. ಹೀಗಾಗಿ ನಮ್ಮ ದೇಶದಲ್ಲಿ ಕೃಷಿ ಕಾರ್ಮಿಕರ ಜೀವನಮಟ್ಟ ಸುಧಾರಿಸಬೇಕಾದರೆ, ಕೃಷಿಕರ ಆದಾಯ ಮಟ್ಟ ಏರಬೇಕು. ಅಂದರೆ ಬೇಸಾಯದಲ್ಲಿ ಉತ್ಪಾದಕತೆಯನ್ನು ಸುಧಾರಿಸುವುದರ ಜೊತೆಗೆ ಕೃಷಿ ಉತ್ಪನ್ನಗಳಿಗೆ ಲಭಿಸುವ ಬೆಲೆಗಳು ಸಮರ್ಪಕವಾಗಿ ಏರಬೇಕು, ಅಲ್ಲದೆ ಬೆಳೆಗಳಲ್ಲಿ ಸ್ಥಿರತೆ ಸಾಧಿಸಬೇಕು.

ಕರ್ನಾಟಕದಲ್ಲಿ ಈಗ ಸುಮಾರು ೬೫ ಲಕ್ಷ ಕೃಷಿ ಕಾರ್ಮಿಕರಿದ್ದಾರೆ. ಅಂದರೆ, ರಾಜ್ಯದ ಒಟ್ಟು ಕಾರ್ಮಿಕ ಸಂಖ್ಯೆಯಲ್ಲಿ ಇವರ ಪ್ರಮಾಣ ಶೇ. ೨೬ರಷ್ಟಿದ್ದರೆ ಕೃಷಿಕರ ಸಂಖ್ಯೆ ಶೇಕಡಾ ೩೦ರಷ್ಟಿದೆ. ಈಗಾಗಲೇ ತಿಳಿಸಿದಂತೆ, ಈ ಕೃಷಿಕರಲ್ಲಿ ಬಹುಪಾಲು ಸಣ್ಣ ರೈತರು ಮತ್ತು ಈ ವರ್ಗದಲ್ಲೂ ದಿನಗೂಲಿಯನ್ನು ಆಧರಿಸಿರುವ ರೈತ ಕುಟುಂಬಗಳಿವೆ. ಹೀಗಾಗಿ, ಕೃಷಿ ಕಾರ್ಮಿಕ ಮತ್ತು ಸಣ್ಣ ರೈತ ಕುಟುಂಬಗಳ ಆರ್ಥಿಕ ಮಟ್ಟ ಸಂಪೂರ್ಣವಾಗಿ ಕೇವಲ ಸರಕಾರೀ ಪ್ರಾಯೋಜನೆಗಳಿಂದಲೇ ಸುಧಾರಿಸಬೇಕಾದರೆ ಸರಕಾರದ ಬೊಕ್ಕಸದ ಬಹುಪಾಲನ್ನು ಮೀಸಲಿರಿಸಬೇಕಾಗುತ್ತದೆ. ಇದು ಸಾಧ್ಯವೆ? ವಾಸ್ತವಿಕವಾಗಿ ಹೇಳುವುದಾದರೆ ಇದು ದುಸ್ಸಾಧ್ಯ. ಯಾವುದೇ

ಆರ್ಥಿಕ ವ್ಯವಸ್ಥೆಯಲ್ಲಿ ಒಂದು ವರ್ಗದ ಆರ್ಥಿಕ ಕಲ್ಯಾಣವನ್ನು ದೀರ್ಘಾವದಿಯಲ್ಲಿ ಸುಧಾರಿಸಬೇಕಾದರೆ, ಇಡೀ ಆರ್ಥಿಕ ವ್ಯವಸ್ಥೆಯಲ್ಲಿ ಸುಧಾರಣೆ ತರುವ ಅಗತ್ಯವಿದೆ. ನಮ್ಮಲ್ಲಿ ಈವರೆಗೆ ಹಮ್ಮಿಕೊಂಡಿರುವ ಅನೇಕ ಕೃಷಿ ಕಾರ್ಮಿಕ ಕಲ್ಯಾಣದ ಗುರಿಯಿಟ್ಟ ನೀತಿ / ಪ್ರಾಯೋಜನೆಗಳನ್ನು ಈ ಒಂದು ಕಟು ಸತ್ಯವನ್ನು ಗಮನದಲ್ಲಿಟ್ಟುಕೊಂಡು ರೂಪಿಸಲಾಗಿಲ್ಲ. ಆರ್ಥಿಕ ವ್ಯವಸ್ಥೆಯ ಎಲ್ಲ ರಂಗಗಳಲ್ಲಿ ಪರಸ್ಪರ ಸಂಬಂಧ ಕಲ್ಪಿಸಿದ ವಾತಾವರಣದಲ್ಲಿ ವಿಕಾಸ ಪ್ರಾಯೋಜನೆಗಳನ್ನು ಹಮ್ಮಿಕೊಂಡರೆ ಮಾತ್ರ ನಮ್ಮ ಮೂಲಭೂತ ಆರ್ಥಿಕ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯ.

ಗ್ರಾಮೀಣ ಕಾರ್ಮಿಕರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಬಹಳಷ್ಟು ಪ್ರಾಯೋಜನೆಗಳನ್ನು ಹಮ್ಮಿಕೊಳ್ಳಲಾಗಿದೆ. ಈ ಪ್ರಾಯೋಜನೆಗಳಲ್ಲಿ ಕೆಲವು ಸ್ವಯಂ ಉದ್ಯೋಗವನ್ನು ಕಲ್ಪಿಸುವ ಕಾರ್ಯಕ್ರಮಗಳಾದರೆ, ಇನ್ನು ಕೆಲವು ದಿನಗೂಲಿ ಆಧಾರಿತ ಉದ್ಯೋಗ ಕಾರ್ಯಕ್ರಮಗಳಾಗಿವೆ. ಉದಾಹರಣೆಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ. ಇದು ಸ್ವಯಂ ಉದ್ಯೋಗಾವಕಾಶಗಳನ್ನು ಕಲ್ಪಿಸುವ ಯೋಜನೆ. ಇದೇ ರೀತಿ ದಿನಗೂಲಿ ಅವಕಾಶ ಸೃಷ್ಟಿಸುವ ಇನ್ನೊಂದು ಯೋಜನೆ ಎಂದರೆ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ. ಸ್ವಯಂ ಉದ್ಯೋಗ ಸೃಷ್ಟಿಸುವ ಯೋಜನೆಯಡಿಯಲ್ಲಿ ಗ್ರಾಮೀಣ ಬಡ ಕುಟುಂಬಗಳಿಗೆ ತಮ್ಮ ಬಡತನವನ್ನು ಶಾಶ್ವತವಾಗಿ ನಿವಾರಿಸುವ ಸಲುವಾಗಿ ಉತ್ಪಾದಕ ಆಸ್ತಿಗಳನ್ನು ಹೊಂದಲು ಅನುವು ಮಾಡಿಕೊಡಲಾಗುತ್ತಿದೆ. ಆದರೆ ಈ ಪ್ರಾಯೋಜನೆಗಳಲ್ಲಿ ಹಲವಾರು ನ್ಯೂನತೆಗಳಿವೆ. ಅರ್ಹ ಫಲಾನುಭವಿಗಳನ್ನು ಗುರುತಿಸುವಲ್ಲಿ ಲೋಪದೋಷಗಳಿವೆ. ಫಲಾನುಭವಿಗಳಿಗೆ ನೀಡಲಾಗುವ ಸೌಲಭ್ಯಗಳ ಸಮರ್ಪಕ ಬಳಕೆಯ ಬಗ್ಗೆ ತಕ್ಕ ಉಸ್ತುವಾರಿಯ ಕೊರತೆ ಇದೆ. ಹೀಗಾಗಿ ನೀಡಿದ ಸೌಲಭ್ಯಗಳು ತಾಳಿಕೆ ಇಲ್ಲದ್ದಾಗುತ್ತವೆ. ಅವುಗಳ ಮೇಲೆ ಸರಕಾರ ಚೆಲ್ಲಿದ ಹಣ ಪೋಲಾಗುತ್ತಿದೆ. ಇದರಿಂದಾಗಿ ಬಡ ಕಾರ್ಮಿಕರ ಬವಣೆಯೂ ನೀಗುವುದಿಲ್ಲ. ವೈಯಕ್ತಿಕವಾಗಿ ಅಸಮರ್ಪಕ ಉತ್ಪಾದಕ ಸಲಕರಣೆಗಳನ್ನು ಅಥವಾ ಆಸ್ತಿಗಳನ್ನು ನೀಡಿ ಸರಕಾರೀ ಹಣ ಪೋಲುಮಾಡಿರುವ ನಿದರ್ಶನಗಳೂ ಇಲ್ಲದಿಲ್ಲ. ಈ ಕಾರಣಗಳಿಂದಾಗಿ, ದಿನಗೂಲಿ ಪ್ರಾಯೋಜನೆಗಳು ಸ್ವಯಂ ಉದ್ಯೋಗ ಪ್ರಾಯೋಜನೆಗಳಿಗಿಂತ ಲೇಸು ಎಂಬುದು ವ್ಯಕ್ತವಾಗಿದೆ. ಈ ನಿಟ್ಟಿನಲ್ಲಿ ಇತ್ತೀಚೆಗೆ ಪರಿಷ್ಕೃತ ರೀತಿಯಲ್ಲಿ ಹಮ್ಮಿಕೊಳ್ಳಲಾದ 'ಕೂಲಿಗಾಗಿ ಕಾಳು' (Food for work) ಯೋಜನೆಯಡಿಯಲ್ಲಿ ಕಾರ್ಮಿಕರಿಗೆ ತಮ್ಮ ಶ್ರಮಕ್ಕೆ ಪ್ರತಿಫಲವಾಗಿ ಭಾಗಶಃ ನಗದನ್ನು ಮತ್ತು ಭಾಗಶಃ ಕಾಳನ್ನು ನೀಡುವ ಯೋಜನೆಯು ಔಚಿತ್ಯಪೂರ್ಣ. ಈ ಪ್ರಾಯೋಜನೆಗಳನ್ನು ದಕ್ಷವಾಗಿ ರೂಪಿಸಿ ಹಾಗೂ ಪರಿಣಾಮಕಾರಿಯಾಗಿ ನೆರವೇರಿಸಿದರೆ ಗ್ರಾಮೀಣ ಕಾರ್ಮಿಕರಿಗೆ ಸತತ ಉದ್ಯೋಗ ದೊರಕುವುದಷ್ಟೇ ಅಲ್ಲದೆ ಗ್ರಾಮೀಣ ಪ್ರದೇಶಗಳಲ್ಲಿ ರಸ್ತೆ, ಶಾಲಾ ಕಟ್ಟಡ, ಕೆರೆ ಅಳವಡಿಸುವಿಕೆಯಂಥ ಮೂಲ ಸೌಲಭ್ಯಗಳನ್ನು ಒದಗಿಸಿದಂತೆಯೂ ಆಗುತ್ತದೆ.

ಭಾರತದಲ್ಲಿ ಕೃಷಿ ಆರ್ಥಿಕವಾಗಿ ಕ್ಷೀಣಿಸುತ್ತಿರುವ ಔದ್ಯೋಗಿಕ ರಂಗ. ದೇಶದ ಆರ್ಥಿಕತೆ ವಿಕಾಸಗೊಂಡಂತೆಲ್ಲ ಕೃಷಿರಂಗದ ಮಹತ್ವ ಕುಗ್ಗುವುದು ಸ್ವಾಭಾವಿಕ. ಐವತ್ತರ ದಶಕದಲ್ಲಿ ನಮ್ಮ ಕೃಷಿರಂಗವು ರಾಷ್ಟ್ರೀಯ ಆದಾಯಕ್ಕೆ ಸುಮಾರು ಶೇ. ೫೦ ರಷ್ಟು ಕೊಡುಗೆ ನೀಡುತ್ತಿತ್ತು ಮತ್ತು ಈ ರಂಗವನ್ನು ಸುಮಾರು ಶೇ. ೭೨ರಷ್ಟು ಜನಸಂಖ್ಯೆ ಅವಲಂಬಿಸಿತ್ತು. ಆದರೆ ಈಗ ಕೃಷಿಯ ಆದಾಯ ಕೊಡುಗೆ ಕೇವಲ ಶೇ. ೨೩ಕ್ಕೆ ಕುಸಿದಿದೆಯಾದರೂ ಇನ್ನೂ ಸುಮಾರು ಶೇ. ೬೫ರಷ್ಟು ಜನಸಂಖ್ಯೆ ಈ ರಂಗಕ್ಕೇ ಅಂಟಿಕೊಂಡಿದೆ. ರಾಷ್ಟ್ರೀಯ ಮಾದರಿ ಸರ್ವೇಕ್ಷಣಾ ಸಂಸ್ಥೆಯ ೫೫ನೇ ಸುತ್ತಿನ ಸರ್ವೇಕ್ಷಣೆಯ ಅಂಕಿ ಅಂಶಗಳ ಪ್ರಕಾರ ೧೯೯೩-೯೪ರಲ್ಲಿ ಗ್ರಾಮೀಣ ಪ್ರದೇಶದ ಪ್ರತಿ ೧೦೦೦ ಜನರಲ್ಲಿ ೪೪೪ ಜನಕ್ಕೆ ಕೆಲಸ ಸಿಗುತ್ತಿತ್ತು. ಆದರೆ ೧೯೯೯-೨೦೦೦ರಲ್ಲಿ ಈ ಸಂಖ್ಯೆ ೪೧೪ಕ್ಕೆ ಇಳಿದಿರುವುದು ಕೃಷಿರಂಗದಲ್ಲಿ ಉಲ್ಬಣಿಸುತ್ತಿರುವ ನಿರುದ್ಯೋಗಕ್ಕೆ ಸ್ಪಷ್ಟ ಪುರಾವೆಯಾಗಿದೆ. ಆದ್ದರಿಂದ ದೀರ್ಘಾವಧಿ ವಿಕಾಸದ ದೃಷ್ಟಿಯಿಂದ ಹೇಳುವುದಾದರೆ, ಕೃಷಿ ಕಾರ್ಮಿಕರಿಗೆ ಕೃಷಿಯಲ್ಲೇ ಉದ್ಯೋಗ ಒದಗಿಸಿಕೊಡಬೇಕು ಎನ್ನುವ ಧೋರಣೆಯಲ್ಲಿ ತಿರುಳಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗಾವಕಾಶಗಳನ್ನು ಸೃಷ್ಟಿಸಲು ಕೃಷಿಯೇತರ ಚಟುವಟಿಕೆಗಳಿಗೆ ಹೆಚ್ಚು ಹೆಚ್ಚು ಒತ್ತು ಕೊಡಬೇಕು. ಗುಡಿ ಕೈಗಾರಿಕೆ ಇತ್ಯಾದಿ ಕೃಷಿಯೇತರ ಉದ್ಯೋಗಗಳಿಗೆ ತಕ್ಕ ಅರ್ಹತೆ ಮತ್ತು ಕುಶಲತೆ ಸೃಷ್ಟಿಸಲು ಶಿಕ್ಷಣ ಮತ್ತು ತರಬೇತಿಗೆ ಆದ್ಯತೆ ನೀಡಬೇಕು.

ನಮ್ಮ ದೇಶದಲ್ಲಿ ಎಲ್ಲಾ ಆರ್ಥಿಕ ಸಮಸ್ಯೆಗಳಿಗೂ ಕಾನೂನು ಕಾಯ್ದೆಗಳಿಂದಲೇ ಪರಿಹಾರ ಸಾಧ್ಯ ಎನ್ನುವುದು ಅರ್ಥಹೀನ. ಕೃಷಿಕಾರ್ಮಿಕರ ಕಷ್ಟ ಕಾರ್ಪಣ್ಯಗಳು ಸಮಗ್ರ ಆರ್ಥಿಕ ದೃಷ್ಟಿಯಿಂದ ವಿವೇಚಿಸಬೇಕಾದವುಗಳು. ಆರ್ಥಿಕ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಎಲ್ಲ ಕ್ಷೇತ್ರಗಳೂ ಪರಸ್ಪರ ಅವಲಂಬಿತ ವಿಕಾಸ ಹೊಂದಿದರೆ ಮಾತ್ರ ಸಮಾಜದ ಎಲ್ಲ ವರ್ಗಗಳ ಆರ್ಥಿಕ ಕಲ್ಯಾಣ ಸಾಧ್ಯ.

ನಮ್ಮ ರಾಜ್ಯದ ಹಳ್ಳಿಗಳಲ್ಲಿ ಕೃಷಿ ಕಾರ್ಮಿಕರಿಗೆ, ಮತ್ತಿತರ ಬಡ ಜನತೆಗೆ ಅನ್ವಯಿಸುವಂತೆ ಅನೇಕ ಬಡತನ ನಿರ್ಮೂಲನ ಮತ್ತು ಸಾಮಾಜಿಕ ಸುರಕ್ಷತಾ ಪ್ರಾಯೋಜನೆಗಳನ್ನು ಕೇಂದ್ರ ಹಾಗೂ ರಾಜ್ಯ ಸರಕಾರಗಳು ಹಮ್ಮಿಕೊಂಡು ಬಂದಿವೆ. ಬಡತನ ನಿರ್ಮೂಲನ ಕಾರ್ಯಕ್ರಮಗಳಲ್ಲಿ ಎರಡು ವಿಧಗಳಿವೆ. ಉದ್ಯೋಗ ಸೃಷ್ಟಿಸುವುದರ ಮೂಲಕ ಕಾರ್ಮಿಕರ ಆರ್ಥಿಕ ಪರಿಸ್ಥಿತಿ ಸುಧಾರಿಸುವ ಪ್ರಾಯೋಜನೆಗಳು ಒಂದು ಕಡೆಯಾದರೆ, ಸಾರ್ವಜನಿಕ ಪಡಿತರ ವಿತರಣೆ ವ್ಯವಸ್ಥೆಯ ಮೂಲಕ ಬಡ ಕಾರ್ಮಿಕರ ಕುಟುಂಬಗಳಿಗೆ ಆಹಾರ ಭದ್ರತೆಯನ್ನು ನೀಡುವುದು ಇನ್ನೊಂದು ಕಡೆ. ಈಗಾಗಲೇ ತಿಳಿಸಿರುವಂತೆ, ಉದ್ಯೋಗ ಸೃಷ್ಟಿ ಪ್ರಾಯೋಜನೆಗಳಲ್ಲಿ ಎರಡು ವಿಧಗಳಿವೆ. ಸ್ವಯಂ ಉದ್ಯೋಗ ಕಲ್ಪಿಸುವ ಕಾರ್ಯಕ್ರಮಗಳು ಮತ್ತು ದಿನಗೂಲಿ ಒದಗಿಸುವ ಕಾರ್ಯಕ್ರಮಗಳು.

ಸಾಮಾಜಿಕ ಸುರಕ್ಷತಾ ಕಾರ್ಯಕ್ರಮಗಳಲ್ಲಿ ಹಲವಾರು ಆಯಾಮಗಳಿವೆ. ಬಡ ಮಕ್ಕಳಿಗೆ ಉಚಿತ ಶಿಕ್ಷಣ, ಬಡ ಜನರಿಗೆ ಉಚಿತ ವೈದ್ಯಕೀಯ ಸೇವೆ, ಗ್ರಾಮೀಣ ವಸತಿ ಸೌಲಭ್ಯ, ತಾಯ್ತನ ಮತ್ತು ಶಿಶು ಅಭಿವೃದ್ಧಿ ಇತ್ಯಾದಿ ಬಹಳ ದಶಕಗಳಿಂದ ಹಮ್ಮಿಕೊಂಡು ಬರಲಾಗಿರುವ ಸೌಕರ್ಯಗಳು. ಇವುಗಳ ಜತೆಗೆ ಇತ್ತೀಚಿಗೆ ರಾಷ್ಟ್ರೀಯ ಸಾಮಾಜಿಕ ನೆರವು ಕಾರ್ಯಕ್ರಮ (National Social Assistance Programme) ವನ್ನೂ ಸಹ ಜಾರಿಗೆ ತರಲಾಗಿದೆ. ಇದರಡಿಯಲ್ಲಿ ಹಳ್ಳಿಯ ಬಡಜನರಿಗೆ ನಾನಾತರದ ವಿಮಾ ಯೋಜನೆಗಳನ್ನು ಕಲ್ಪಿಸಲಾಗಿದೆ. ಉದಾಹರಣೆಗೆ, ಭೂರಹಿತ ಕೃಷಿ ಕಾರ್ಮಿಕ ಸಮೂಹ ವಿಮಾ ಯೋಜನೆಯಡಿ ಎಲ್ಲ ಭೂರಹಿತ ಕೃಷಿ ಕಾರ್ಮಿಕರು ೨೦೦೦ ರೂಪಾಯಿ ಪಡೆಯುವ ಸೌಲಭ್ಯ ಕಲ್ಪಿಸಲಾಗಿದ್ದು, ಇಡೀ ಪ್ರೀಮಿಯಂ ಮೊತ್ತವನ್ನು ಸಾಮಾಜಿಕ ಸುರಕ್ಷಾ ನಿಧಿಯಿಂದ ಭರಿಸಲಾಗುತ್ತಿದೆ.

ಇದೇ ರೀತಿ ರಾಷ್ಟ್ರೀಯ ವೃದ್ಧಾಪ್ಯ ಪಿಂಚಣಿ (Nationl Old Age Pension Scheme), ರಾಷ್ಟ್ರೀಯ ಕುಟುಂಬ ಲಾಭ ಯೋಜನೆ (Nationl Family Benefit Scheme) ಮತ್ತು ರಾಷ್ಟ್ರೀಯ ಪ್ರಸವ ಭತ್ಯೆ ಯೋಜನೆ (Nationl Maternity Benefit) ಇವುಗಳನ್ನು ಕೇಂದ್ರ ಸರಕಾರ ೧೯೯೫-೯೬ ರಿಂದ ಜಾರಿಗೆ ತಂದಿದೆ. ಈ ಯೋಜನೆಗಳಲ್ಲದೆ, ಕೃಷಿ ಕಾರ್ಮಿಕರಿಗಾಗಿ ಕೆಲವು ರಾಜ್ಯಗಳು ವಿವಿಧ ಕ್ಷೇಮಾಭಿವೃದ್ಧಿ ಯೋಜನೆಗಳನ್ನೂ ರೂಪಿಸಿವೆ. ಉದಾಹರಣೆಗೆ, ಕರ್ನಾಟಕದಲ್ಲಿ ಆಶಾಕಿರಣ ಯೋಜನೆ. ಮಹಿಳೆಯರಲ್ಲಿ ಆರ್ಥಿಕ ಸ್ವಾವಲಂಬನೆಯನ್ನು ಉಂಟು ಮಾಡಲು ಸರಕಾರ ಮತ್ತು ಸರಕಾರೇತರ ಸಂಸ್ಥೆಗಳು ವಿವಿಧ ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಿವೆ. ಉದಾಹರಣೆಗೆ, ಕರ್ನಾಟಕದಲ್ಲಿನ ಸ್ತ್ರೀ ಶಕ್ತಿ ಪ್ರಾಯೋಜನೆ ಬಡ ಕುಟುಂಬಗಳ ಮಹಿಳೆಯರ ಆರ್ಥಿಕ ಸಬಲೀಕರಣಕ್ಕೆ ಪೂರಕವಾಗಿದೆ. ಸ್ವಸಹಾಯ ಗುಂಪುಗಳನ್ನು ರಚಿಸುವುದರ ಮೂಲಕ ಗ್ರಾಮೀಣ ಮಹಿಳೆಯರಿಗೆ ಅಧಿಕಾರ ನೀಡುವ ಉದ್ದೇಶದಿಂದ ಈ ಯೋಜನೆಯನ್ನು ೨೦೦೦-೦೧ ರಲ್ಲಿ ಪ್ರಾರಂಭಿಸಲಾಯಿತು.

ಗ್ರಾಮೀಣ ಕಾರ್ಮಿಕರಿಗೆ, ಅದರಲ್ಲೂ ಕೃಷಿ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಒದಗಿಸುವ ನಿಟ್ಟಿನಲ್ಲಿ ಸದಸ್ಯ ಆಧರಿತ ಸಂಸ್ಥೆಗಳನ್ನು ಪ್ರೋತ್ಸಾಹಿಸುವ ಅಗತ್ಯವಿದೆ. ಇದಕ್ಕಾಗಿ ಗ್ರಾಮ ಪಂಚಾಯತಿ, ಜಿಲ್ಲಾ ಪಂಚಾಯತಿ ಇತ್ಯಾದಿ ಸ್ಥಳೀಯ ಸರಕಾರಗಳನ್ನು ಬಳಸಿಕೊಳ್ಳುತ್ತಿರುವುದು ಸಮಂಜಸವಾಗಿದೆ. ಈ ಸಂಸ್ಥೆಗಳ ಜೊತೆಗೆ, ಗ್ರಾಮೀಣ ಪ್ರದೇಶಗಳಲ್ಲಿ ಕಾರ್ಯನಿರತವಾಗಿರುವ ಕೃಷಿ ಕಾರ್ಮಿಕರ ಸ್ವಸಹಾಯ ಗುಂಪು (Self Help Group) ಗಳನ್ನು ಸಂಘಟಿಸುತ್ತಿರುವ ಸ್ವಯಂ ಸೇವಾ ಸಂಸ್ಥೆಗಳ ಪಾತ್ರ ಮುಖ್ಯವಾದುದು. ಏಕೆಂದರೆ ಜಮೀನುದಾರರ ಮನೆಯಲ್ಲೇ ಇದ್ದುಕೊಂಡು ಕೃಷಿ ಕೆಲಸ ಮಾಡುತ್ತಿದ್ದ ಆಳುಗಳ ಸಂಖ್ಯೆ ನಿರಂತರವಾಗಿ ಇಳಿಯುತ್ತಿದ್ದು, ಸಾಂದರ್ಭಿಕ ದಿನಗೂಲಿ ಮತ್ತು ಗುತ್ತಿಗೆ ಕೃಷಿ ಕಾರ್ಮಿಕರ ಸಂಖ್ಯೆ ಏರುತ್ತಿರುವ ಪ್ರಸ್ತುತ ಪರಿಸ್ಥಿತಿಯಲ್ಲಿ ಅವರ ಸರ್ವತೋಮುಖ ಅಭಿವೃದ್ಧಿಗೆ ಸ್ವಸಹಾಯ ಗುಂಪುಗಳಂತಹ ಸಂಘಟನೆಯ ರಚನೆ ಸಮಂಜಸ ಹಾಗೂ ಅಪೇಕ್ಷಣೀಯ.

●




# ಅಸಾಂಪ್ರದಾಯಕ ಇಂಧನಗಳು

ಕೆ. ಎನ್. ವಿಜಯಪ್ರಕಾಶ್

ಪ್ರಕೃತಿಯ ಸಾವಿರಾರು ವರ್ಷಗಳ ಪರಿವರ್ತನೆಯಿಂದ ರೂಪುಗೊಂಡ ಎಣ್ಣೆ, ಕಲ್ಲಿದ್ದಲು, ತೈಲ ಮತ್ತು ಪ್ರಕೃತಿ ಅನಿಲವನ್ನು ಮಾನವ ಹಾಗೂ ಸಮಾಜ ನಿರಂತರವಾಗಿ ವ್ಯಯಗೊಳಿಸುತ್ತಿದೆ. ಪರಿಸರ ಮಾಲಿನ್ಯ, ತಾಂತ್ರಿಕ, ಸಾಮಾಜಿಕ ಹಾಗೂ ಆರ್ಥಿಕ ಬದಲಾವಣೆಗಳ ಕಾರಣ ಪರಿಸ್ಥಿತಿಯು ಇನ್ನೂ ಹೆಚ್ಚು ಬಿಗಡಾಯಿಸಿದೆ. ಪ್ರಸ್ತುತವಾಗಿ ಅಸಂಪ್ರದಾಯಕ ಮತ್ತು ನವೀಕರಿಸಬಹುದಾದ ಇಂಧನ ಮೂಲಗಳನ್ನು ವೈಜ್ಞಾನಿಕವಾಗಿ ಮತ್ತು ಪರಿಪೂರ್ಣವಾಗಿ ಬಳಕೆಗೆ ತರುವುದು ಅತ್ಯವಶ್ಯ. ಅಸಾಂಪ್ರದಾಯಕ ಶಕ್ತಿಯ ವಾಣಿಜ್ಯೀಕರಣ ಪ್ರಕ್ರಿಯೆಯಿಂದ ಆರ್ಥಿಕ ಸುಸ್ಥಿತಿಯ ಮತ್ತು ಈ ಶಕ್ತಿಯ ಪ್ರಮಾಣ ಹೆಚ್ಚಿಸುವುದರಿಂದ ಭೂಮಂಡಲದ ಶಾಖ ಹೆಚ್ಚಿಸುವ ಅನಿಲಗಳ ದುಷ್ಪಪರಿಣಾಮಗಳನ್ನು ಇಳಿಮುಖಗೊಳಿಸುವುದು ಪ್ರಮುಖವಾಗಿದೆ.

ನಿರಂತರ ಮತ್ತು ವಿಪುಲವಾಗಿ ದೊರೆಯುವ ನವೀಕರಿಸಬಹುದಾದ ಇಂಧನಗಳು ಖಚಿತ, ಸುರಕ್ಷಿತ ಮತ್ತು ಬಾಳಿಕೆ ಬರುವಂತಹ ಹಾಗೂ ಕಡಿಮೆ ವೆಚ್ಚದಲ್ಲಿ ಎಲ್ಲರಿಗೂ ದೊರಕುವಂತಹ ಒಂದು ಶಕ್ತಿ. ನವೀಕರಿಸಬಹುದಾದ ಇಂಧನ ಮೂಲಗಳನ್ನು ಮಾನವನು ಸಂಪ್ರದಾಯ ಮತ್ತು ವಿಜ್ಞಾನಗಳ ಸಹಯೋಗದಲ್ಲಿ ಸೌಹಾರ್ದತೆಯಿಂದ ಮತ್ತು ಪರಿಸರ ಸ್ನೇಹಿಯಾಗಿ ಬಳಕೆಗೆ ಬರುವಂತಹ, ನವೀಕರಿಸಬಹುದಾದ ಇಂಧನ ಮೂಲಗಳು ಭವಿಷ್ಯದ ಪ್ರಧಾನ ಇಂಧನ ಶಕ್ತಿಯಾಗಿ ನಿಲ್ಲುತ್ತವೆ. ನೀರಾವರಿ,ಕೃಷಿ ಉತ್ಪನ್ನಗಳನ್ನು ಒಣಗಿಸುವುದು, ಮನೆ-ಬೀದಿ ದೀಪ, ಗ್ರಾಮೀಣ ಮಹಿಳೆಯರ ಮತ್ತು ಮಕ್ಕಳ ಆರೋಗ್ಯವನ್ನು ಉತ್ತಮಗೊಳಿಸುವ ಆಕಾಂಕ್ಷೆಗಳೊಂದಿಗೆ ಗ್ರಾಮೀಣ ಇಂಧನ ಕಾರ್ಯಕ್ರಮಗಳನ್ನು ಸಂಪ್ರದಾಯಬದ್ಧ ಇಂಧನ ಮೂಲಗಳೊಂದಿಗೆ ಪರಸ್ಪರ ಪೂರಕವಾಗಿ ತಲುಪದೇ ಇರುವ ಅತೀ ದುರ್ಗಮ ಪ್ರದೇಶಗಳಿಗೂ ಸಹ ತಲುಪಿಸಬೇಕಾಗಿದೆ.

> ನವೀಕರಿಸಬಹುದಾದ ಇಂಧನಗಳು ಪರಿಸರ ಸ್ನೇಹಿ ಯಾಗಿವೆ. ಬಾಳಿಕೆ ಬರುವಂತಹ ಮತ್ತು ನವೀಕರಿಸಬಹುದಾದ ಇಂಧನದ ಮೂಲಗಳು ಭವಿಷ್ಯದ ಪ್ರಧಾನ ಇಂಧನ ಶಕ್ತಿಯಾಗಿ ನಿಲ್ಲುತ್ತವೆ.

ಭಾರತ ದೇಶವು ಪ್ರಕೃತಿದತ್ತವಾದ ಇಂಧನ ಮೂಲಗಳಾದ ಸೌರ, ಗಾಳಿ, ಜಲ, ಜೈವಿಕ ಮತ್ತು ಸಸ್ಯ ಸಂಪತ್ತಿನ ಮೂಲಗಳಿಂದ ಸಂಪದ್ಭರಿತವಾಗಿದೆ. ಈ ಹಿನ್ನೆಲೆಯಲ್ಲಿ ಇಂಧನದ ಉತ್ಪಾದನೆ ಮತ್ತು ಬಳಕೆಯನ್ನು ಉತ್ತೇಜಿಸಿ ಅನುಷ್ಠಾನಗೊಳಿಸುವುದರಲ್ಲಿ ರಾಷ್ಟ್ರದ ಪ್ರಗತಿ ಹಾಗೂ ಅಭಿವೃದ್ಧಿಯ ಹಿತವಿದೆ.

## ಕರ್ನಾಟಕದಲ್ಲಿ ಗ್ರಾಮೀಣ ಇಂಧನ ಕಾರ್ಯಕ್ರಮಗಳು :

ರಾಜ್ಯದಲ್ಲಿ ಗ್ರಾಮೀಣ ಇಂಧನ ಕಾರ್ಯಕ್ರಮಗಳು ನವೀಕರಿಸಬಹುದಾದ ಶಕ್ತಿಮೂಲಗಳ ಗುಣಾತ್ಮಕ ಮತ್ತು ಪರಿಣಾಮಕಾರಿ ಬಳಕೆಯ ಮೂಲ ಉದ್ದೇಶವನ್ನು ಹೊಂದಿವೆ. ಬದಲಾದ ಪರಿಸ್ಥಿತಿಯಲ್ಲಿ ಶತಮಾನಗಳಿಂದ ಉಪಯೋಗಿಸುತ್ತ ಬಂದಿರುವ ಸಂಪ್ರದಾಯಬದ್ಧ ಇಂಧನ ಶಕ್ತಿಗಳ ಕೊರತೆಯಿಂದ ವಿಪುಲವಾಗಿ ದೊರೆಯುವ ಹಾಗೂ ನವೀಕರಿಸಬಹುದಾದ ಇಂಧನ ಮೂಲಗಳ ಉತ್ಪಾದನೆ ಕಡೆಗೆ ವಾಲುವುದು ಸಹಜ ಹಾಗೂ ಇದು ಗಾಳಿಯಲ್ಲಿ ಇಂಗಾಲಾಮ್ಲದ ಪ್ರಮಾಣ ಹೆಚ್ಚುವುದನ್ನು ತಡೆಗಟ್ಟುವಲ್ಲಿ ಹೆಚ್ಚು ಪರಿಣಾಮಕಾರಿಯಾಗುತ್ತದೆ.

ಈ ದಿಶೆಯಲ್ಲಿ ಕರ್ನಾಟಕ ರಾಜ್ಯವು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಮುಖಾಂತರ ಗ್ರಾಮೀಣ ಇಂಧನ ಕಾರ್ಯಕ್ರಮದಡಿ ಮೂರು ಪ್ರಮುಖವಾದ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ.

* ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಯೋಜನೆ
* ರಾಷ್ಟ್ರೀಯ ಸುಧಾರಿತ ಒಲೆ ಯೋಜನೆ
* ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮ

## ಗ್ರಾಮೀಣ ಇಂಧನ ಕಾರ್ಯಕ್ರಮಗಳು - ಪ್ರಮುಖ ಧ್ಯೇಯಗಳು :

* ನವೀಕರಿಸಬಹುದಾದ ಇಂಧನ ತಾಂತ್ರಿಕತೆಯು ಪರಿಸರ ಸ್ನೇಹಿಯಾಗಿದ್ದು, ಉಪಯುಕ್ತತೆಯು ಬಹಳವಾಗಿ ಅರಿವಿಗೆ ಬಂದಿರುವುದರಿಂದ ತಾಂತ್ರಿಕತೆಯನ್ನು ಪರಿಷ್ಕರಿಸಿ, ಹೆಚ್ಚು ಬಲಯುತವನ್ನಾಗಿ ಮಾಡುವುದು.
* ತ್ಯಾಜ್ಯ ವಸ್ತುಗಳು ಮತ್ತು ಸಗಣಿಯನ್ನು ಬಳಸಿ ಹೆಚ್ಚುಹೆಚ್ಚಾಗಿ ಜೈವಾನಿಲ ಸ್ಥಾವರಗಳನ್ನು ಹಳ್ಳಿಗಳಲ್ಲಿ ನಿರ್ಮಿಸುವುದರಿಂದ ಕಾರ್ಬನ್ ಡೈಆಕ್ಸೈಡ್ ಅಂಶವನ್ನು ಕಡಿಮೆ ಮಾಡಬಹುದು. ಹೆಚ್ಚಾಗಿ ಇಂಧನ ಸಾಮರ್ಥ್ಯಗಳನ್ನು ಹೊಂದಿರುವ ಜಿಲ್ಲೆಗಳಲ್ಲಿ ಮೈಕ್ರೋ ಎನರ್ಜಿ ಪ್ಲಾನ್ಸ್ ತಯಾರಿಸುವುದು ಮತ್ತು ಅನುಷ್ಠಾನಗೊಳಿಸುವುದು.
* ಹೆಣ್ಣು ಮಕ್ಕಳಿಗೆ ಕಾರ್ಯಕ್ರಮದ ಅರಿವು ಮೂಡಿಸಲು ಉಪಯೋಗದಾರರ ತರಬೇತಿ ಕಾರ್ಯಕ್ರಮ ಹಮ್ಮಿಕೊಳ್ಳುವುದು. ಟರ್ನ್‌ಕೀಯವರ ಮುಖಾಂತರ ಕಾರ್ಯಕ್ರಮವನ್ನು ಸಂಪೂರ್ಣವಾಗಿ ಅನುಷ್ಠಾನಗೊಳಿಸಿ ಉಚಿತ ಸೇವೆ ಮತ್ತು ದುರಸ್ತಿ ಸೌಲಭ್ಯವನ್ನು ಒದಗಿಸುವುದು. ಫೆರೋ ಸಿಮೆಂಟ್ ಮತ್ತು ಇನ್‌ಸೀಟೂ ನಿರ್ಮಾಣ ಮಾದರಿಯಿಂದ ನಿರ್ಮಿತವಾಗುವ ದೀನಬಂಧು ಜೈವಾನಿಲ ಮಾದರಿಯನ್ನು ಅಳವಡಿಸುವುದು.
* ಜಿಲ್ಲಾ ಮಟ್ಟದಲ್ಲಿ ಫಲಾನುಭವಿಗಳ ಸಮಗ್ರ ವಿವರಗಳನ್ನು ಗ್ರಾಮವಾರು ಗಣಕೀಕರಣಗೊಳಿಸುವುದು. ಸ್ವಚ್ಛ ಗ್ರಾಮ, ಇಂದಿರಾ ಆವಾಜ್ ಮತ್ತು ಇತರ ವಸತಿ ಯೋಜನೆಗಳೊಂದಿಗೆ ಸಮನ್ವಯ ಹೊಂದುವುದು.
* ಶೌಚಾಲಯ ಸಂಪರ್ಕಿತ ಕಾಂಪೋಸ್ಟ್ ಮತ್ತು ಹೆಚ್ಚು ಪೌಷ್ಟಿಕಾಂಶಗಳನ್ನು ಹೊಂದಿರುವ ಘಟಕಗಳನ್ನು ಹೆಚ್ಚಿಸುವುದು.
* ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮದಡಿ ಸ್ಥಳೀಯವಾಗಿ ಲಭ್ಯವಿರುವ ಇಂಧನವನ್ನು ಬಳಸಿ ಗ್ರಾಮದ ಅಭಿವೃದ್ಧಿ ಮತ್ತು ಜನಸಾಮಾನ್ಯರ ಬದುಕನ್ನು ಸುಧಾರಿಸುವುದು.

## ೧. ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಯೋಜನೆ :

ಜೈವಾನಿಲವು ಸ್ವಚ್ಛ, ಮಾಲಿನ್ಯ-ಹೊಗೆ ರಹಿತ ಹಾಗೂ ಸ್ಫೋಟಗೊಳ್ಳದ ಅಪಾಯರಹಿತ ಇಂಧನ. ತ್ಯಾಜ್ಯ ವಸ್ತುಗಳಾದ ಸಗಣಿ, ಪ್ರಾಣಿ ಮತ್ತು ಮಾನವ ಮಲಮೂತ್ರ ಮತ್ತು ಇತರೆ ಸಸ್ಯಜನ್ಯ ಪದಾರ್ಥಗಳಿಂದ ಆಮ್ಲಜನಕ ರಹಿತ ವಾತಾವರಣದಲ್ಲಿನ ಜೈವಿಕ ಕ್ರಿಯೆಯಿಂದ ದೊರೆಯುವ ಸಂಯುಕ್ತ ಅನಿಲವೇ ಜೈವಿಕ ಅನಿಲ. ಈ ಪ್ರಕ್ರಿಯೆಯಲ್ಲಿ ಜಾನುವಾರುಗಳ ಸಗಣಿ ಕ್ರೋಡೀಕರಿಸುವುದು, ಉತ್ಪಾದನೆ, ಸರಬರಾಜು ಮತ್ತು ಜೀರ್ಣವಾದ ಸಗಣಿಯ ಬಗ್ಗಡವನ್ನು ಕೃಷಿಗೆ ಉಪಯೋಗಿಸುವ ಅಂಶಗಳನ್ನು ಒಳಗೊಂಡಿರುತ್ತವೆ.

## ೧.೧ ಯೋಜನಾ ಉದ್ದೇಶಗಳು :

* ಗ್ರಾಮೀಣ ಜನತೆಗೆ ಸುಲಭ ಮತ್ತು ಸುರಕ್ಷಾ ಅಡುಗೆ ಅನಿಲವನ್ನು ಒದಗಿಸುವುದು ಮತ್ತು ಸಂಪ್ರದಾಯ ಇಂಧನಕ್ಕೆ ಪೂರಕವಾಗುವುದು.
* ಅರಣ್ಯ ನಾಶ ಮತ್ತು ಪರಿಸರ ಮಾಲಿನ್ಯವನ್ನು ತಪ್ಪಿಸುವುದು.
* ಅಡುಗೆ ಮನೆಯನ್ನು ಹೊಗೆರಹಿತವನ್ನಾಗಿ ಮಾಡಿ ಮಹಿಳೆಯರ ಮತ್ತು ಮಕ್ಕಳ ಆರೋಗ್ಯ ರಕ್ಷಣೆ ಮಾಡುವುದು.
* ಉರುವಲು ಆರಿಸಿಕೊಳ್ಳುವ ಸಮಯವನ್ನು ಉಳಿಸಿ ಉಳಿತಾಯವಾದ ಸಮಯವನ್ನು ಸೃಜನಾತ್ಮಕ ಕಾರ್ಯಕ್ರಮದಲ್ಲಿ ತೊಡಗಿಸುವುದು.
* ಜೈವಾನಿಲ ಸ್ಥಾವರಗಳಿಂದ ವಿಸರ್ಜಿತವಾದ ಸಸಾರಜನಕಯುಕ್ತವಾದ ಗೊಬ್ಬರವನ್ನು ಕೃಷಿಗೆ ಬಳಸುವುದು.
* ಹೆಚ್ಚುವರಿ ಜೈವಾನಿಲ ಸ್ಥಾವರಗಳ ನಿರ್ಮಾಣದ ಮುಖಾಂತರ ಉದ್ಯೋಗ ಸೃಷ್ಟಿಸುವುದು.
* ಎಲ್ಲಾ ಹಳ್ಳಿಗಳಲ್ಲಿ ಸ್ವಚ್ಛ, ಉದ್ಯೋಗಶೀಲ, ಆರೋಗ್ಯಯುಕ್ತ, ಮಾಲಿನ್ಯರಹಿತ ಪರಿಸರವನ್ನು ಸೃಷ್ಟಿಸುವುದು.

## ೧.೨ ಸಹಾಯಧನ :

**ಕೇಂದ್ರ ಸರ್ಕಾರದ ಸಹಾಯಧನ**

| ಅನಿಲ ಸ್ಥಾವರಗಳ ಗಾತ್ರ, ವೆಚ್ಚ | ಸಣ್ಣ ರೈತ, ಅತಿಸಣ್ಣ ರೈತ ಭೂ ರಹಿತ ಕಾರ್ಮಿಕ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಗುಡ್ಡಗಾಡು ಪ್ರದೇಶ | ಇತರರು |
|---|---|---|
| ೧ | ೨೩೦೦ | ೧೮೦೦ |
| ೨ | ೨೩೦೦ | ೧೮೦೦ |
| ೩ | ೨೩೦೦ | ೧೮೦೦ |
| ೪ | ೨೩೦೦ | ೧೮೦೦ |
| ೬ | ೨೩೦೦ | ೧೮೦೦ |
| ೮ | ೨೩೦೦ | ೧೮೦೦ |
| ೧೦ | ೨೩೦೦ | ೧೮೦೦ |

ಸಾಮಾನ್ಯವಾಗಿ ನಿರ್ಮಿಸುವ ೩ ಘ.ಮೀ. ಅನಿಲ ಸ್ಥಾವರಗಳ ಗಾತ್ರದಿಂದ ೧೦ ಘ.ಮೀ. ಅನಿಲ ಸ್ಥಾವರಗಳವರೆಗೆ ಕೇಂದ್ರ ಸರ್ಕಾರವು ರೂ. ೭೦೦ರಂತೆ ಟರ್ನ್‌ಕೀ ಫೀ ಮತ್ತು ಶೌಚಾಲಯ ಸಂಪರ್ಕಿತ ಅನಿಲ ಸ್ಥಾವರಗಳಿಗೆ ರೂ. ೫೦೦ ಗಳ ಪ್ರೋತ್ಸಾಹ ಧನವನ್ನು ನೀಡುತ್ತಾ ಕಾರ್ಯಕ್ರಮವನ್ನು ಹೆಚ್ಚಿನ ರೀತಿಯಲ್ಲಿ ಅನುಷ್ಠಾನಗೊಳಿಸಲು ಉತ್ತೇಜಿಸುತ್ತದೆ.

## ೧.೩ ಸಾಧನೆ ಮತ್ತು ಪ್ರಗತಿ :

(ರೂ.ಲಕ್ಷಗಳಲ್ಲಿ)

| ವರ್ಷ | ವಾರ್ಷಿಕ ಗುರಿ | | ಸಾಧನೆ | |
|---|---|---|---|---|
| | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| ೨೦೦೧-೦೨ | ೩೩೦೦೦ | ೮೨೪.೦೦ | ೨೭೧೭೬ | ೮೫೪.೭೨ |
| ೨೦೦೨-೦೩ | ೨೧೫೦೦ | ೪೩೫.೦೦ | ೧೭೧೬೯ | ೬೩೮.೬೮ |
| ೨೦೦೩-೦೪ | ೨೭೫೦೦ | ೧೬೦.೦೦ | ೧೨೦೧೪ | ೪೨೦.೫೦ |

ಕೆಳಗಿನ ಅಂಕಿ ಅಂಶಗಳು ೧ ಘ.ಮೀ. ಜೈವಾನಿಲ ಬಳಕೆಯಿಂದ ಬೇರೆ ಇಂಧನ ಮೂಲಗಳ ಉಳಿತಾಯದ ಪ್ರಮಾಣವನ್ನು ತೋರಿಸುತ್ತದೆ.

| | |
|---|---|
| ೧. ಘ. ಮೀ. ಜೈವಾನಿಲವು ಮುಂದಿನ ಕೋಷ್ಟಕದಲ್ಲಿ ತೋರಿಸಿದ ಇಂಧನಕ್ಕೆ ಸಮ | ೦.೬೨೦ಲೀ. ಸೀಮೆಎಣ್ಣೆ ಅಥವಾ<br>೩.೪೭ ಕೆ.ಜಿ.ಸೌದೆ ಅಥವಾ<br>೧೨ರಿಂದ ೩೦ಬೆರಣಿ ಅಥವಾ<br>೧.೪೬ಕೆ.ಜಿ. ಕಲ್ಲಿದ್ದಲು ಅಥವಾ<br>೦.೪೩ ಕೆ.ಜಿ.ಬ್ಯೂಟೇನ್<br>(ಎಲ್.ಪಿ.ಜಿ.) ಅಥವಾ<br>೪.೬೯ ಕಿಲೋವ್ಯಾಟ್ ವಿದ್ಯುತ್ |

ರಾಷ್ಟ್ರೀಯ ಜೈವಾನಿಲ ಅಭಿವೃದ್ಧಿ ಯೋಜನೆಯಡಿ ರಾಜ್ಯದಲ್ಲಿ ಜಾನುವಾರುಗಳ ಸಂಖ್ಯೆಯ ಆಧಾರದ ಮೇಲೆ ೬.೮೦ ಲಕ್ಷ ಜೈವಾನಿಲ ಸ್ಥಾವರಗಳನ್ನು ನಿರ್ಮಿಸಲು ಅವಕಾಶವಿದ್ದು, ಈ ಪೈಕಿ ೩೧-೦೩-೨೦೦೩ರ ಅಂತ್ಯಕ್ಕೆ ೩.೪೬ ಲಕ್ಷ ಅನಿಲ ಸ್ಥಾವರಗಳನ್ನು ನಿರ್ಮಿಸಲಾಗಿದೆ. ಸಾಮಾನ್ಯವಾಗಿ ಪ್ರತಿ ಘ.ಮೀ. ಸುಮಾರು ೩.೪೭ ಕೆ. ಜಿ. ಯಷ್ಟು ಸೌದೆಯನ್ನು ಉಳಿಸುತ್ತದೆ. ಸರಾಸರಿ ಪ್ರತಿವರ್ಷ ೨೫೦೦ ಅನಿಲ ಸ್ಥಾವರಗಳನ್ನು ನಿರ್ಮಿಸಿದಲ್ಲಿ ಮತ್ತು ೩೦೦ ಪರಿಣಾಮಕಾರಿ ಕಾರ್ಯನಿರತ ದಿನಗಳಂತೆ ಪರಿಗಣಿಸಿದಲ್ಲಿ ೨೦೦೧-೦೨ನೇ ಸಾಲಿನಲ್ಲಿ ನಡೆಸಿದ ಮೌಲ್ಯಮಾಪನ ವರದಿ ಆಧಾರದಂತೆ ೭೮೦೦೦ ಟನ್ ಸೌದೆಯನ್ನು ಉಳಿತಾಯ ಮಾಡಬಹುದು.

## ಬಹುಮಾನ :

೧೯೯೦-೯೧ರಿಂದ ಇತ್ತೀಚಿನವರೆಗೆ ಜೈವಾನಿಲ ಯೋಜನೆಗಳ ಅನುಷ್ಠಾನದಲ್ಲಿ ರಾಷ್ಟ್ರಮಟ್ಟದಲ್ಲಿ ಹಾಗೂ ಜಿಲ್ಲಾ ಮಟ್ಟದಲ್ಲಿ ಪ್ರಥಮ ಬಹುಮಾನವಾಗಿ ದೊರೆತ ಕೆಲವು ಚಿನ್ನದ ಪದಕಗಳು ರಾಜ್ಯಕ್ಕೆ ಸಂದ ಪುರಸ್ಕಾರಗಳಾಗಿದ್ದು, ಬರೀ ಗುರಿ ಮೀರಿ ಸಾಧನೆಗೆ ಮಾತ್ರ ರಾಜ್ಯವು ನಿರ್ಮಿಸಲಾದ ಸೀಮಿತ ಜೈವಾನಿಲ ಸ್ಥಾವರಗಳ ಸಂಖ್ಯೆ ಹಾಗೂ ಕಾರ್ಯಕ್ಷಮತೆಯ ಪ್ರತೀಕವಾಗಿದ್ದು, ಅನಿಲ ಸ್ಥಾವರಗಳ ಗುಣಮಟ್ಟವು ಬಹಳ ಉತ್ತಮವಾಗಿರುತ್ತವೆ ಎಂಬುದಕ್ಕೆ ನಿದರ್ಶನವಾಗಿದೆ.

## ೨. ರಾಷ್ಟ್ರೀಯ ಸುಧಾರಿತ ಒಲೆ ಯೋಜನೆ :

ದೇಶೀಯವಾಗಿ ಅಭಿವೃದ್ಧಿಪಡಿಸಲಾದ ಸುಧಾರಿತ ಒಲೆಯು ಶೇಕಡ ೨೦ರಿಂದ ೩೫ ರಷ್ಟು ಹೆಚ್ಚು ಶಾಖ ನೀಡಬಲ್ಲ ಸಾಮರ್ಥ್ಯವುಳ್ಳದ್ದಾಗಿದ್ದು, ಸಾಂಪ್ರದಾಯಕ ಒಲೆಗಳು ಕೇವಲ ಶೇಕಡಾ ೬-೮ರಷ್ಟು ಶಾಖ ನೀಡುತ್ತದೆ. ಈ ರೀತಿಯ ಒಲೆಗಳ ಬಳಕೆಯಿಂದ ಅರಣ್ಯನಾಶ, ಉರುವಲು ಉಳಿತಾಯ ಮತ್ತು ಆರ್ಥಿಕ ಸಾಮರ್ಥ್ಯ ಹೆಚ್ಚಿಸುವುದರ ಜೊತೆಗೆ ಗೃಹಗಳಲ್ಲಿ ಹೊಗೆ ಮತ್ತು ಮಾಲಿನ್ಯ ರಹಿತ ವಾತಾವರಣವನ್ನು ಸೃಷ್ಟಿಸುವುದರಿಂದ ಗ್ರಾಮೀಣ ಮಹಿಳೆಯರ ಮತ್ತು ಮಕ್ಕಳ ಆರೋಗ್ಯವನ್ನು ಸುಧಾರಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಿದೆ.

### ೨.೧ ಯೋಜನಾ ಉದ್ದೇಶಗಳು :

* ಶೇಕಡ ೨೦-೨೫ ರಷ್ಟು ಉರುವಲನ್ನು ಉಳಿತಾಯ ಮಾಡಬಲ್ಲ ಒಲೆಗಳನ್ನು ಅನುಷ್ಠಾನಕ್ಕೆ ತರುವುದು.
* ಪರಿಸರ ಮಾಲಿನ್ಯ, ಅರಣ್ಯ ನಾಶ ತಡೆಗಟ್ಟುವುದು.
* ಅಡುಗೆ ಮನೆಯನ್ನು ಹೊಗೆರಹಿತವನ್ನಾಗಿ ಮಾಡಿ ಮಹಿಳೆಯರ ಮತ್ತು ಮಕ್ಕಳ ಆರೋಗ್ಯ ರಕ್ಷಣೆ ಮಾಡುವುದು.
* ಉರುವಲು ಆರಿಸುವ ಸಮಯವನ್ನು ಉಳಿಸಿ ಉಳಿತಾಯದ ಸಮಯವನ್ನು ಸೃಜನಾತ್ಮಕವಾದ ಕಾರ್ಯಕ್ರಮದಲ್ಲಿ ತೊಡಗಿಸುವುದು.
* ಉದ್ಯೋಗ ಅವಕಾಶವನ್ನು ಕಲ್ಪಿಸುವುದು.

## ೨.೨ ಸಾಧನೆ ಮತ್ತು ಪ್ರಗತಿ :

ಪ್ರತಿ ಸುಧಾರಿತ ಒಲೆಯು ವರ್ಷಕ್ಕೆ ೩೦೦ ಕೆ.ಜಿ. ಉರುವಲನ್ನು ಉಳಿಸುತ್ತದೆ. ರಾಷ್ಟ್ರೀಯ ಸುಧಾರಿತ ಒಲೆ ಕಾರ್ಯಕ್ರಮದಡಿ ೬೦.೭೬ ಲಕ್ಷ ಸುಧಾರಿತ ಒಲೆ ಕಾರ್ಯಕ್ರಮದಡಿ ೬೦.೭೬ ಲಕ್ಷ ಸುಧಾರಿತ ಒಲೆಗಳನ್ನು ನಿರ್ಮಿಸಲಾಗಿದೆ. ಈ ಪೈಕಿ ೩೧-೩-೨೦೦೩ರ ಅಂತ್ಯಕ್ಕೆ ೧೫.೯೯ ಲಕ್ಷ ಸುಧಾರಿತ ಒಲೆಗಳನ್ನು ನಿರ್ಮಿಸಲಾಗಿದೆ. ಪ್ರತಿ ಸುಧಾರಿತ ಒಲೆ ವರ್ಷಕ್ಕೆ ಸುಮಾರು ೩೦೦ ಕೆ.ಜಿ. ಸೌದೆಯನ್ನು ಉಳಿತಾಯಗೊಳಿಸುವುದರಿಂದ ಹಾಗೂ ಸರಾಸರಿ ೫೦,೦೦೦ ಒಲೆಗಳ ನಿರ್ಮಾಣದ ಲೆಕ್ಕದಲ್ಲಿ ಪ್ರತಿವರ್ಷ ೧೫,೦೦೦ ಟನ್ ಸೌದೆಯನ್ನು ಉಳಿಸಬಹುದಾಗಿದೆ.

## ೩. ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮ :

ಸೂರ್ಯನಿಂದ ಬರುವ ಬೆಳಕು, ಅನೇಕ ಕ್ರಿಯಾತ್ಮಕ ಅಂಶಗಳನ್ನೊಳಗೊಂಡಿದ್ದು ಹೆಚ್ಚು ಉಪಯುಕ್ತವಾಗಿದೆ. ಇದರಲ್ಲಿ ಸಮಾನವಾದ ಹಂಚಿಕೆ, ಮಾಲಿನ್ಯರಹಿತ ಹಾಗೂ ನಿರಂತರ ಲಭ್ಯತೆ ಸೇರಿದೆ. ಭಾರತ ದೇಶವು ವರ್ಷಕ್ಕೆ ೫೦೦೦ ಟ್ರಿಲಿಯನ್ ಕಿಲೋವ್ಯಾಟ್ ಸೌರಶಕ್ತಿಯನ್ನು ಪಡೆಯುತ್ತಿದ್ದು, ಇದು ಬಳಸುವ ಪ್ರಮಾಣಕ್ಕಿಂತ ಹೆಚ್ಚಾಗಿರುತ್ತದೆ. ಪ್ರತಿ ದಿನ ನಿರ್ಮಲ ಆಕಾಶದಿಂದ ಪ್ರತಿ ಚದರ ಮೀ.ಗೆ ಲಭ್ಯವಾಗುವ ಸೌರಶಕ್ತಿಯು ೪.೭ ಕಿಲೋವ್ಯಾಟ್‌ಗಳು ಆಗಿದ್ದು ದೇಶದ ಹೆಚ್ಚಿನ ಪ್ರದೇಶಗಳಲ್ಲಿ ವರ್ಷಕ್ಕೆ ೨೫೦-೩೦೦ ದಿನಗಳಷ್ಟು ಸೂರ್ಯನ ತಾಪಮಾನವನ್ನು ಪಡೆಯುವ ಪ್ರದೇಶವಾಗಿದೆ.

## ೩.೧ ಯೋಜನಾ ಉದ್ದೇಶ :

* ಗ್ರಾಮೀಣ ಪ್ರದೇಶದಲ್ಲಿ ದೊರೆಯುವ ವಿವಿಧ ಇಂಧನ ಮೂಲಗಳನ್ನು ಕ್ರೋಢೀಕರಿಸುವ ಕ್ರಿಯಾ ಯೋಜನೆಯನ್ನು ತಯಾರಿಸುವುದು.
* ಸಂಪ್ರದಾಯವಲ್ಲದ ಇಂಧನ ಶಕ್ತಿಗಳ ಅಭಿವೃದ್ಧಿ ಮತ್ತು ಬಳಕೆ ತರುವುದು.
* ವೈಜ್ಞಾನಿಕ ಮಾದರಿಯಲ್ಲಿ ಲಭ್ಯವಿರುವ ಸೌದೆಯನ್ನು ಹೆಚ್ಚು ಪರಿಮಾಣಕಾರಿಯಾಗಿ ಉಪಯೋಗಿಸುವುದಕ್ಕೆ ಸೂಕ್ತ ಉಪಕರಣಗಳನ್ನು ಬಳಸುವುದು.
* ಇಂಧನ ಉಳಿತಾಯದ ಉಪಕರಣವನ್ನು ಹೆಚ್ಚು ಜನಪ್ರಿಯಗೊಳಿಸಲು ಅರಿವು ಮೂಡಿಸುವುದು.
* ಸಾಂಪ್ರದಾಯಕ ಇಂಧನ ಮೂಲಗಳನ್ನು ಸಂರಕ್ಷಿಸುವುದು ಮತ್ತು ಇಂಧನ ಉಳಿತಾಯ ಉಪಕರಣಗಳನ್ನು ಖರೀದಿಸಲು ವಿಶೇಷವಾಗಿ ಅರಣ್ಯ ಪ್ರದೇಶಗಳಲ್ಲಿ ಪರಿಸರ ಸಮತೋಲನವನ್ನು ಕಾಪಾಡುವುದು. ಸಂಪ್ರದಾಯವಲ್ಲದ ಇಂಧನ ಮೂಲಗಳನ್ನು ಬಳಸುವುದಕ್ಕೆ ಸಹಾಯಧನ ಮತ್ತು ಸಾಲಗಳನ್ನು ಒದಗಿಸುವುದು.

ಈ ಸೌರಶಕ್ತಿಯನ್ನು ಗೃಹಗಳಿಗೆ ಬೆಳಕು, ಲ್ಯಾಂಟರ್ನ್, ನೀರು ಕಾಯಿಸುವ ಉಪಕರಣ, ಅಡುಗೆ, ಬೀದಿ ದೀಪ ಮತ್ತು ಕೃಷಿಗೆ ನೀರೆತ್ತುವ ಪಂಪುಗಳಲ್ಲಿ ಉಪಯೋಗಿಸಲಾಗುತ್ತಿದೆ.

## ೩.೨ ಸಹಾಯಧನ :

ಸೌರಶಕ್ತಿಯ ಉಪಕರಣಗಳಿಗೆ ಸರ್ಕಾರದಿಂದ ಈ ಕೆಳಗಿನಂತೆ ಸಹಾಯಧನ ಲಭ್ಯವಿದೆ.

* ನೀರು ಕಾಯಿಸುವ ಯಂತ್ರಕ್ಕೆ ರೂ. ೪.೦೦೦ ಸಹಾಯಧನ.
* ಸೌರಶಕ್ತಿ ಕುಕ್ಕರ್ ರೂ. ೭೫೦ ಸಹಾಯಧನ.
* ಸೌರಶಕ್ತಿ ಲ್ಯಾಂಟರ್ನ್ ರೂ. ೨,೦೦೦ ಸಹಾಯಧನ.

ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮವು ಕೇವಲ ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರ ಅನುಷ್ಠಾನಗೊಳಿಸಲಾಗುತ್ತಿದ್ದು, ರಾಜ್ಯದ ಗ್ರಾಮೀಣ ಜನತೆಯ ಉಪಯೋಗಕ್ಕಾಗಿ, ಅದರಲ್ಲೂ ಪರಿಶಿಷ್ಟ ಜಾತಿ ಮತ್ತು ಪಂಗಡದ ವಿದ್ಯಾರ್ಥಿನಿಲಯ, ಕಾಲೋನಿ, ಹಿಂದುಳಿದ ವರ್ಗಗಳ ವಿದ್ಯಾರ್ಥಿನಿಲಯ, ಸಾರ್ವಜನಿಕ ಆಸ್ಪತ್ರೆ, ಸಾರ್ವಜನಿಕ ಸ್ಥಳಗಳಲ್ಲಿ ಸದರಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವುದರೊಂದಿಗೆ ಕಾರ್ಯಕ್ರಮದ ಅನುಷ್ಠಾನ ಮತ್ತು ಸಹಾಯಧನದ ಉಪಯೋಗದ ಬಗ್ಗೆ ಹೆಚ್ಚಿನ ಮಾಹಿತಿಗಳಿಗೆ ಸಂಬಂಧಪಟ್ಟ ಜಿಲ್ಲಾ ಪಂಚಾಯತ್‌ನಲ್ಲಿರುವ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮದ ಯೋಜನಾಧಿಕಾರಿಗಳನ್ನು ಸಂಪರ್ಕಿಸಬೇಕು.

## ೩.೩ ಸಾಧನೆ ಮತ್ತು ಪ್ರಗತಿ :

(ರೂ.ಲಕ್ಷಗಳಲ್ಲಿ)

| ವರ್ಷ | ವಾರ್ಷಿಕ ಗುರಿ | | ಸಾಧನೆ | |
|---|---|---|---|---|
| | ಭೌತಿಕ | ಆರ್ಥಿಕ | ಭೌತಿಕ | ಆರ್ಥಿಕ |
| ೨೦೦೧-೦೨ | ೫೩೮೧ | ೩೫೭.೬೦ | ೫೭೭೬ | ೪೧೩.೭೧ |
| ೨೦೦೨-೦೩ | ೪೧೪೮ | ೩೦೦.೧೬ | ೨೮೩೫ | ೨೧೯.೮೦ |

೨೦೦೩-೦೪ನೇ ಸಾಲಿನಲ್ಲಿ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮದಡಿ ರೂ. ೧೦೪.೪೧ ಲಕ್ಷಗಳ ಆರ್ಥಿಕ ಪ್ರಗತಿಯನ್ನು ಸಾಧಿಸಲಾಗಿದೆ.

ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮದಡಿ ಅವಶ್ಯವಿರುವ ಕೆಲವು ಜಿಲ್ಲೆಗಳಲ್ಲಿ ಹೆಚ್ಚುವರಿ ಅನುದಾನದಲ್ಲಿ ಕಾರ್ಯಕ್ರಮವನ್ನು ವಿಶೇಷವಾಗಿ ಅನುಷ್ಠಾನಗೊಳಿಸಿದೆ. ಇದರಲ್ಲಿ ಪ್ರಮುಖವಾದವುಗಳೆಂದರೆ,

* ೧೯೯೯-೦೦ರಲ್ಲಿ ಬಿಳಿಗಿರಿರಂಗನ ಬೆಟ್ಟದ ಸೋಲಿಗರ ಪೋಡುಗಳಲ್ಲಿ ೮೭ ಸೌರಶಕ್ತಿಬೀದಿ ದೀಪಗಳ ಅಳವಡಿಕೆ.
* ಗುಲ್ಬರ್ಗಾ ಜಿಲ್ಲೆಯ ಸೋನಿಯಾ ಗಾಂಧಿ ಆಶ್ರಯ ಕಾಲೋನಿಯಲ್ಲಿ ೩೦೦ ಬೀದಿ ದೀಪಗಳ ಅಳವಡಿಕೆ.
* ಬಳ್ಳಾರಿ ಜಿಲ್ಲೆಯಲ್ಲಿನ ನವನಗರದಲ್ಲಿ ಸೌರಶಕ್ತಿ ಬೀದಿ ದೀಪ ಅಳವಡಿಕೆ.
* ಗುಂಡ್ಲುಪೇಟೆ, ಮದ್ದೂರು, ಕೊಳ್ಳೇಗಾಲ ಮತ್ತು ಚಿಕ್ಕಮಗಳೂರಿನಲ್ಲಿ ಸೋಲಾರ್ ಜನರೇಟರ್ ಮತ್ತು ಸೌರವಾಟರ್ ಹೀಟರ್, ಸರ್ಕಾರಿ ವಿದ್ಯಾರ್ಥಿನಿಲಯಕ್ಕೆ ಸೌರ ಗೃಹದೀಪಗಳ ಅಳವಡಿಕೆ.
* ಕೋಲಾರ ಜಿಲ್ಲೆಯ ಕಂಬಾಲಪಲ್ಲಿ, ಹಾವೇರಿ, ಕೊಡಗು, ಬಾಗಲಕೋಟೆ, ಉತ್ತರ ಕನ್ನಡ ಮತ್ತು ಮೈಸೂರು ಜಿಲ್ಲೆಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಸೌರ ಬೀದಿದೀಪಗಳ ಅಳವಡಿಕೆ ಮುಂತಾದವುಗಳು.

ಇಂಧನ ಉಳಿತಾಯದ ಉಪಕರಣವನ್ನು ಹೆಚ್ಚು ಜನಪ್ರಿಯಗೊಳಿಸಲು ಅರಿವು ಮೂಡಿಸುವುದು.

## ಗ್ರಾಮೀಣ ಇಂಧನ ಕಾರ್ಯಕ್ರಮಗಳು - ಭವಿಷ್ಯದ ಚಿಂತನೆಗಳು :

ಪ್ರಸ್ತುತದಲ್ಲಿ ತಯಾರಾದ ಜೈವಾನಿಲವು ನೇರವಾಗಿ ಅಡುಗೆ ಮಾಡಲು ಉಪಯೋಗಿಸುತ್ತಿದ್ದು, ಉತ್ಪಾದಿಸಲಾದ ಹೆಚ್ಚಿನ ಅನಿಲವನ್ನು ಸಂಗ್ರಹ ಮಾಡುವ ತಾಂತ್ರಿಕತೆ ಲಭ್ಯವಿರುವುದಿಲ್ಲ. ಭಾರತ ಸರ್ಕಾರಕ್ಕೆ ಈ ಸಂಬಂಧವಾಗಿ ಒಂದು ಯೋಜನೆಯ ಪ್ರಸ್ತಾವನೆಯನ್ನು ಕಳುಹಿಸಲಾಗಿದ್ದು, ಈ ಪ್ರಸ್ತಾವನೆಯಲ್ಲಿ ತಯಾರಾದ ಹೆಚ್ಚಿನ ಅನಿಲವನ್ನು ಎಲ್.ಪಿ.ಜಿ. ಸಿಲಿಂಡರ್‌ನಲ್ಲಿ ಸಂಗ್ರಹಿಸಿಡುವ ತಾಂತ್ರಿಕತೆಯನ್ನು ಪ್ರಸ್ತಾವಿಸಿ ಆರ್ಥಿಕ ನೆರವನ್ನು ಕೋರಲಾಗಿದೆ.

ರಾಷ್ಟ್ರೀಯ ಸುಧಾರಿತ ಒಲೆ ಕಾರ್ಯಕ್ರಮದಡಿ ಪ್ರಾದೇಶಿಕ ಹವಾಮಾನ ಮತ್ತು ಅಡುಗೆ ಅಭ್ಯಾಸಗಳಿಗೆ ಹೊಂದಿಕೊಳ್ಳುವ ಒಲೆಯ ವಿನ್ಯಾಸವನ್ನು ಅಭಿವೃದ್ಧಿಪಡಿಸಬೇಕಾಗಿದೆ. ಈ ರಾಜ್ಯ ಸರ್ಕಾರದ ಕಾರ್ಯಕ್ರಮವನ್ನು ಖಾಸಗಿ ವಲಯದಲ್ಲಿ ಮತ್ತು ಸರ್ಕಾರೇತರ ಸಂಘ ಸಂಸ್ಥೆಗಳ ಮುಖಾಂತರ ಸಣ್ಣ ಉದ್ದಿಮೆದಾರರಿಗೆ ಹಾಗೂ ಗುಡಿ ಕೈಗಾರಿಕೆಗಳಿಗೆ ಸುಧಾರಿತ ಒಲೆಗಳನ್ನು ತಯಾರಿಸಿ ವಿತರಿಸುವುದು, ತಾಂತ್ರಿಕ ಸಹಾಯ, ಸಾಲ ಸೌಲಭ್ಯ ಮತ್ತು ತರಬೇತಿಯನ್ನು ನೀಡಿ ವಾಣಿಜ್ಯೀಕರಣ ಮಾಡಲು ಚಿಂತನೆ ನಡೆದಿದೆ.

ಸಂಪ್ರದಾಯವಲ್ಲದ ಇಂಧನ ಮೂಲಗಳ ಮಂತ್ರಾಲಯವು ಕರಡು ಪ್ರಸ್ತಾವನೆಯಲ್ಲಿ ೧೦೦ ಕುಟುಂಬಗಳನ್ನು ಹೊಂದಿರುವ ದುರ್ಗಮ ಮತ್ತು ವಿದ್ಯುತ್ ಸಂಪರ್ಕವಿಲ್ಲದ ಗ್ರಾಮಗಳಿಗೆ ಸರಾಸರಿ ರೂ. ೨೦.೦೦ ಲಕ್ಷಗಳ ವೆಚ್ಚದಲ್ಲಿ ಬಯೋಮಾಸ್ ತಾಂತ್ರಿಕತೆಯ ಮೂಲಕ ಗೃಹಗಳಿಗೆ ಮತ್ತು ನೀರಾವರಿಗಾಗಿ ವಿದ್ಯುತ್ ಒದಗಿಸುವ ಯೋಜನೆಯನ್ನು ಜಾರಿಗೆ ತರಲಿದೆ. ಇದರಿಂದ ಎರಡು ಲಕ್ಷ ಗ್ರಾಮಗಳು ಈ ಸೌಲಭ್ಯವನ್ನು ಪಡೆಯಲಿವೆ.

ಅಸಾಂಪ್ರದಾಯಿಕ ಇಂಧನ ಮೂಲಗಳಲ್ಲಿ ನಿರಂತರವಾದ ಅಗಣಿತ ಶಕ್ತಿಯಿದೆ. ಚಿರಂತನವಾದ ಈ ಶಕ್ತಿಯ ಸಮರ್ಥ ಸದ್ಬಳಕೆ ವರ್ತಮಾನದ ಮತ್ತು ಭವಿಷ್ಯದ ಇಂಧನ ಸಮಸ್ಯೆಗಳಿಗೆ ಪ್ರಬಲ ಪರ್ಯಾಯ ಹಾಗೂ ಅನಿವಾರ್ಯ. "ಸರ್ವರಿಗೂ ಇಂಧನ, ಸಾರ್ವಕಾಲಿಕ ಇಂಧನ" ನಮ್ಮೆಲ್ಲರ ಧ್ಯೇಯವಾಗಿರಲಿ.

●




# ನಿರ್ಮಲ ಕರ್ನಾಟಕ

ಡಾ. ಎಚ್. ಎಂ. ಮರುಳಸಿದ್ಧಯ್ಯ

ವಿಶ್ವವಿದ್ಯಾಲಯದ ಕಮ್ಮಟದಲ್ಲಿ ರೂಪುಗೊಂಡ 'ನಿರ್ಮಲ ಕರ್ನಾಟಕ'* ಪರಿಕಲ್ಪನೆಯು ರಾಜಕೀಯ ಪಕ್ಷದ ಆಶ್ವಾಸನೆಯ ಕೈಗೆ ಹೋಗಿ, ಸರಕಾರದ ದೃಢ ಸಂಕಲ್ಪದ ಅಧಿಕೃತ ಮುದ್ರೆಯನ್ನು ಪಡೆದು, ದೇಶ - ವಿದೇಶಗಳ ಮತ್ತು ಸಾರ್ವಜನಿಕ ನೆರವಿನಿಂದ, ಸ್ಥಳೀಯ ರಾಜ್ಯ ಸಂಸ್ಥೆಗಳ ಮತ್ತು ಸ್ವಯಂ ಸೇವಾ ಸಂಘಟನೆಗಳ ಪಾಲುದಾರಿಕೆಯಿಂದ ೧೯೯೫ರಿಂದ ಅನುಷ್ಠಾನಗೊಳಿಸತೊಡಗಿ, ೧೯೯೬ನೆಯ ಅಕ್ಟೋಬರ್‌ನಿಂದ ಅಯ್ದು ಹಳ್ಳಿಗಳನ್ನು 'ಸ್ವಸ್ತಿ ಗ್ರಾಮಗಳು' ಎಂದು ಕರೆದು ಅವುಗಳನ್ನು ಸಮಗ್ರವಾಗಿ ಅಭಿವೃದ್ಧಿಪಡಿಸುವ ಕಾರ್ಯಕ್ರಮವನ್ನು ಕರ್ನಾಟಕ ಸರಕಾರವು ಹಮ್ಮಿಕೊಂಡಿತು. ಅಂದರೆ, ನನ್ನಿಂದ ಪರಿಕಲ್ಪಿಸಲ್ಪಟ್ಟು, ಜನತಾ ದಳದ ಚುನಾವಣೆಯ ಪ್ರಣಾಳಿಕೆಯಲ್ಲಿ (೧೯೯೪) ಪ್ರವೇಶ ಪಡೆದು, ಹೊಸ ಸರಕಾರದ ಪರಿಷ್ಕೃತ ಆಜ್ಞೆಯ ಕವಚವನ್ನು ತೊಟ್ಟು, ಆಂತರಿಕ ಸಂಪನ್ಮೂಲಗಳನ್ನೂ, ವಿದೇಶಿ ಸಂಸ್ಥೆಗಳ ಕೊಡುಗೆಯನ್ನೂ, ವಿಶ್ವ ಬ್ಯಾಂಕಿನ ಮತ್ತು ಕೇಂದ್ರ ಸರಕಾರದ ನೆರವನ್ನೂ, ಸಾರ್ವಜನಿಕರ ಮತ್ತು ಸ್ವಯಂ ಸೇವಾ ಸಂಘಟನೆಗಳ ಸಹಕಾರವನ್ನೂ ಬಳಸಿಕೊಂಡು ಕರ್ನಾಟಕ ಸರ್ಕಾರವು, ಅದರಲ್ಲೂ ಗ್ರಾಮಾಭಿವೃದ್ಧಿ ಮತ್ತು ಪಂಚಾಯತಿ ರಾಜ್ಯ

> ***ಕರ್ನಾಟಕ ಸುಂದರವಾಗಿದೆ. ಆದರೆ ನಿರ್ಮಲವಾಗಿಲ್ಲ. ನಿರ್ಮಲ ಕರ್ನಾಟಕವು ಕೇವಲ ಬಹಿರಂಗದ ನೈರ್ಮಲ್ಯವನ್ನಷ್ಟೆ ಎತ್ತಿ ಹಿಡಿಯುವುದಿಲ್ಲ. ಇದು ಅಂತರಂಗದ ಶುದ್ಧಿಗೂ ಕೈ ಚಾಚುತ್ತದೆ. ಬಹಿರಂಗದ ಶುಭ್ರತೆಯು ಅಂತರಂಗದ ಶುಭ್ರತೆಯ ಬೆಲೆ ಹೆಚ್ಚಿಸುತ್ತದೆ.***

---

* ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಾನು ಸಮಾಜಶಾಸ್ತ್ರ ಮತ್ತು ಸಮಾಜಕಾರ್ಯದ ಅಧ್ಯಾಪನ-ಸಂಶೋಧನೆ- ಕಾರ್ಯಾಚರಣೆಯಲ್ಲಿ ತೊಡಗಿದ್ದಾಗ (೧೯೫೯-೭೩) ನಿರ್ಮಲ ಕರ್ನಾಟಕದ ಚಿಂತನೆಯು ಅಂಕುರಗೊಂಡಿತು. ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಸಮಾಜಕಾರ್ಯ ಪ್ರಶಿಕ್ಷಣದಲ್ಲಿ ನಿರತನಾಗಿದ್ದಾಗ ಈ ಚಿಂತನೆಯು ದಷ್ಟಪುಷ್ಟವಾಗಿ ಬೆಳೆಯಲು ಸಾಧ್ಯವಾಯಿತು. ಅದು ಬೆಳೆದದ್ದು ಚಿತ್ರದುರ್ಗ, ಕೊಟ್ಟೂರು, ಹಿರೇಕುಂಬಳಗುಂಟೆಗಳಲ್ಲಿ ಸ್ವಸ್ತಿ ಸಂಘಟನೆಯ ಆಶ್ರಯದಲ್ಲಿ ಪ್ರಯೋಗ ನಡೆಸಿದಾಗ (೧೯೭೩-೧೯೯೨), ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲಿ ಭಾರತ ಸಮಾಜಕಾರ್ಯ ವಿಶ್ವಕೋಶದ ನಿರ್ಮಾಣದಲ್ಲಿದ್ದಾಗ (೧೯೯೨-೯೪) ಹಂಪಿ, ಹೊಸಪೇಟೆಗಳ ಕೊಳೆಗೇರಿಗಳಲ್ಲಿ ಕೈಗೊಂಡ ಸಾಂಘಿಕ ಕೆಲಸವು ನನ್ನೀ ಚಿಂತನೆಯು ಪರಿಕಲ್ಪನೆಯಾಗಿ ರೂಪುಗೊಳ್ಳಲು ನೆರವಾಯಿತು. ಅದೇ ಲೇಖನಗಳ ರೂಪದಲ್ಲಿ ಪತ್ರಿಕೆಗಳಲ್ಲಿ ೧೯೯೨ರಲ್ಲಿ ಪ್ರಕಟಗೊಂಡಿತು. ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲಿ ಮಾತ್ರವೇ ಅಲ್ಲ, ಭಾರತದ ಇತರೆ ಮತ್ತು ಸ್ವೀಡನ್ನಿನ ಕೆಲವು ವಿಶ್ವವಿದ್ಯಾಲಯಗಳಲ್ಲೂ ಈ ಕುರಿತ ನನ್ನ ವಿಚಾರಗಳಿಗೆ ಮೆಚ್ಚುಗೆಯ ಪ್ರತಿಕ್ರಿಯೆ ದೊರೆಯಿತು. ಮುಂದೆ ೧೯೯೫ರಲ್ಲಿ ಕರ್ನಾಟಕ ಸರಕಾರವು ಈ ಪರಿಕಲ್ಪನೆಯನ್ನು ಕಾರ್ಯರೂಪಕ್ಕೆ ತರತೊಡಗಿದ್ದು ವರ್ತಮಾನದ ಇತಿಹಾಸ. ಸ್ವೀಡನ್ನಿನ ಮಿಡ್‌ಸ್ವೀಡನ್ ಯೂನಿವರ್ಸಿಟಿಯ ಸಮಾಜಕಾರ್ಯ ವಿದ್ಯಾರ್ಥಿಗಳು ನಿರ್ಮಲ ಕರ್ನಾಟಕದ ಬಗ್ಗೆ ಕರ್ನಾಟಕದಲ್ಲಿ ಸಂಶೋಧನೆಯನ್ನೂ ಕೈಗೊಂಡರು (೧೯೯೫). ಈ ಸಂಶೋಧನೆಯ ಸಾರಾಂಶವನ್ನು ಈ ಪುಸ್ತಕದ ಒಂದು ಲೇಖನದಲ್ಲಿ ಕೊಡಲಾಗಿದೆ.

ಸಚಿವಾಲಯವು ಈ ಕಾರ್ಯಕ್ರಮವನ್ನು ೧೯೯೫ ಜನವರಿಯಿಂದ ಅನುಷ್ಠಾನಕ್ಕೆ ತಂದಿದೆ. ೧೯೯೫ರ ಅಕ್ಟೋಬರ್ ಗಾಂಧೀ ಜಯಂತಿಯಂದು ಸಾರ್ವಜನಿಕವಾಗಿ 'ಅನುಷ್ಠಾನ ಪರ್ವವು' ಆರಂಭವಾಯಿತು. ಹಿಂದಿನ ಶರಣ - ಸಂತರಂತೆ ಗಾಂಧಿಯವರೂ ಅಂತರಂಗ -ಬಹಿರಂಗ ಶುದ್ಧಿಗೆ ದುಡಿದವರು. ಅವರ ಹುಟ್ಟು ಹಬ್ಬದ ಆಚರಣೆಯನ್ನು ನೆಪವನ್ನಾಗಿಟ್ಟುಕೊಂಡು ಈ ಕಾರ್ಯಕ್ರಮವು ಅನುಷ್ಠಾನಗೊಳ್ಳುತ್ತಲಿದೆ.

## ಪರಿಕಲ್ಪನೆಯ ಹರವು - ಆಶಯ :

ಕರ್ನಾಟಕವು ಸುಂದರವಾಗಿದೆ. ಆದರೆ ನಿರ್ಮಲವಾಗಿಲ್ಲ. ಸುಂದರವಾದದ್ದು ನಿರ್ಮಲವಾಗಿರದಿದ್ದರೆ ಅದರ ಸೌಂದರ್ಯವು ಪೂರ್ಣತ್ವವನ್ನು ಪಡೆದಿರುವುದಿಲ್ಲ. ಜನರು ಮಾನವರಾಗಿ ಬಾಳುತ್ತಿರುವುದರ ದ್ಯೋತಕವೆಂದರೆ ಅವರು ಸೌಂದರ್ಯದ ಉಪಾಸಕರಾಗಿರುತ್ತಾರೆ; ಇತಿಹಾಸದ ಬಗ್ಗೆ ಹೆಮ್ಮೆಯನ್ನು ತಳೆದಿರುತ್ತಾರೆ; ತಮ್ಮ ಸಂಸ್ಕೃತಿಯ ಪೋಷಕರಾಗಿರುತ್ತಾರೆ; ತಮಗಿರುವ ರಾಜಕೀಯ, ಆರ್ಥಿಕ, ಧಾರ್ಮಿಕ, ಶೈಕ್ಷಣಿಕ, ನೈತಿಕ, ಪಾರಿಸಾರಿಕ ಇತ್ಯಾದಿ ಸಮಸ್ಯೆಗಳನ್ನು ಬಹು ಕಾಳಜಿಯಿಂದ ವಿಶ್ಲೇಷಿಸುತ್ತಾರೆ; ಸರ್ವತೋಮುಖವಾಗಿ ಬೆಳೆದು ಬಾಳಬೇಕೆಂಬ ಹಂಬಲವನ್ನು ತಳೆಯುತ್ತಾರೆ; ತಮ್ಮ ಹಂಬಲಕ್ಕೆ ಸಶಕ್ತ ಬೆಂಬಲವಾಗಿ ಕರ್ತವ್ಯ ನಿರತರಾಗಿರುತ್ತಾರೆ; ಪ್ರಜಾತಂತ್ರಕ್ಕೆ, ಸಮಾಜವಾದಕ್ಕೆ, ಲೌಕಿಕ ಜೀವನಕ್ಕೆ ತಕ್ಕುದಾದ ಕ್ರಮಗಳನ್ನು ಕೈಗೊಂಡು ಅವುಗಳನ್ನು ಪರಿಪಾಲಿಸುತ್ತಾರೆ. ಇವೆಲ್ಲವೂ ನಿರ್ಮಲ ಕರ್ನಾಟಕದ ಅವಿಭಾಜ್ಯ ಅಂಶಗಳಾಗಿರುತ್ತವೆ.

'ನಿರ್ಮಲ ಕರ್ನಾಟಕ'ವು ಕೇವಲ ಬಹಿರಂಗದ ನೈರ್ಮಲ್ಯವನ್ನಷ್ಟೇ ಎತ್ತಿ ಹಿಡಿಯುವುದಿಲ್ಲ. ಇದು ಅಂತರಂಗದ ಶುದ್ಧಿಗೂ ಕೈ ಚಾಚುತ್ತದೆ. ಬಹಿರಂಗದ ಶುಭ್ರತೆಯು ಅಂತರಂಗದ ಶುಭ್ರತೆಯ ಬೆಲೆಯನ್ನು ಹೆಚ್ಚಿಸುತ್ತದೆ. ಬಸವಣ್ಣನ ಒಂದು ವಚನದ ಆಂತರ್ಯವನ್ನು ಗಮನಿಸಿದರೆ* 'ಮನೆಯ ಒಡೆಯನು' ಇಲ್ಲದಿದ್ದಾಗ 'ತನುವಿನಲ್ಲಿ ಹುಸಿ' ತುಂಬಿರುತ್ತದೆ, 'ಮನದಲ್ಲಿ ವಿಷಯ' ತುಂಬಿರುತ್ತದೆ. ಇದೇ ಬಹಿರಂಗದಲ್ಲಿ 'ಹೊಸತಿಲಲ್ಲಿ ಹುಲ್ಲಾಗಿ' ಹುಟ್ಟುತ್ತದೆ, 'ಮನೆಯಲ್ಲಿ ರಜವಾಗಿ' ತುಂಬಿರುತ್ತದೆ. ಪರಿಸರವನ್ನು ಶುಭ್ರವಾಗಿಡುವ ಸಂಕಲ್ಪವೆಂಬುದೇ ಒಳಗೆ ಇಲ್ಲದಿರುವಾಗ ಸಹಜವಾಗಿಯೇ ಮನೆ-ಮನೆಗಳಲ್ಲಿ, ಬೀದಿ-ಬೀದಿಗಳಲ್ಲಿ, ಸಂದು-ಗೊಂದುಗಳಲ್ಲಿ, ಶಾಲೆ-ಕಾಲೇಜುಗಳಲ್ಲಿ, ಗುಡಿ-ಗುಂಡಾರಗಳಲ್ಲಿ, ಬಸ್-ರೈಲು ನಿಲ್ದಾಣಗಳಲ್ಲಿ, ಆಸ್ಪತ್ರೆ-ಆರಾಮ ಧಾಮಗಳಲ್ಲಿ, ಒಟ್ಟಿನಲ್ಲಿ ಜನರು ಎಲ್ಲೆಲ್ಲಿ ನಡೆದಾಡುತ್ತಾರೋ, ಎಲ್ಲೆಲ್ಲಿ ಬದುಕುತ್ತಾರೋ ಅಲ್ಲೆಲ್ಲಾ ಕೊಳೆ ತುಂಬಿ ತುಳುಕುತ್ತದೆ. ಇದರಿಂದ ಕರ್ನಾಟಕದ ಹೊಳಪಿಗೆ ಮಸಿ ಬಳಿದಂತಾಗುತ್ತದೆ. ಇದು ಅಂತರಂಗದಲ್ಲಿರುವ ನಿರ್ಲಕ್ಷ್ಯಕ್ಕೆ, ಪರಾಙ್ಮುಖತೆಗೆ ಮತ್ತು ಅಜ್ಞಾನಕ್ಕೆ ಹಿಡಿದ ಕನ್ನಡಿಯಾಗಿರುತ್ತದೆ.**

## ಬಹಿರಂಗದ ನೈರ್ಮಲ್ಯ :

ಬಹಿರಂಗದ ನೈರ್ಮಲ್ಯಕ್ಕೆ ನಮ್ಮ ದೃಷ್ಟಿಯನ್ನು ಹರಿಸಿದರೆ ಅದು ಹೀಗಿರುತ್ತದೆ: ಪ್ರತಿಯೊಬ್ಬರೂ ದೈಹಿಕ ಆರೋಗ್ಯವನ್ನು ಕಾಪಾಡಿಕೊಂಡು ಬದುಕುತ್ತಾರೆ; ಶುಚಿರ್ಭೂತರಾಗಿರುತ್ತಾರೆ; ಮನೆಗಳ ಒಳ-ಹೊರಗೆ ಸ್ವಚ್ಛವಾಗಿರುತ್ತದೆ; ಹಾದಿ-ಬೀದಿಗಳು ತಗ್ಗು ದಿಣ್ಣೆಗಳಿರದೆ, ಧೂಳು-ಕಸವಿಲ್ಲದೆ ಸಮತಟ್ಟಾಗಿರುತ್ತವೆ; ಸರ್ವ ಋತು ರಸ್ತೆಗಳು ರಾಜ್ಯಾದ್ಯಂತ ಹಾಸಿಕೊಂಡಿರುತ್ತವೆ. ರಸ್ತೆ ಬದಿಗಳಲ್ಲಿ, ಮನೆಗಳ ಹಿಂದು-ಮುಂದು ಹೂ ಗಿಡಗಳು, ಫಲ ನೀಡುವ ಮರಗಳು, ಕಾಯಿ -ಹೂವು ಕೊಡುವ ಬಳ್ಳಿಗಳು ಸದಾ ನಗುತ್ತಿರುತ್ತವೆ; ಒಳ ಚರಂಡಿಗಳು ಕಟ್ಟಿಕೊಂಡಿರದೆ ಕೊಳೆ ನೀರನ್ನು ಸದಾ ಸಾಗಿಸುತ್ತಿರುತ್ತವೆ; ಹೊರ ಚರಂಡಿಗಳು ಕೆಸರು-ಕೊಳೆ ತುಂಬಿರದೆ, ಸಾಮಾನ್ಯವಾಗಿ ಒಣಗಿದಂತೆಯೇ ಇರುತ್ತವೆ; ಮನೆ-ಮನೆಗಳಲ್ಲೂ ಪಾಯಖಾನೆಗಳಿರುತ್ತವೆ; ಹೊಸಬರಿಗೆ, ಸಾರ್ವಜನಿಕರಿಗೆ, ಪ್ರಯಾಣಿಕರಿಗೆ

---

* "ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?
ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿ,
ಮನೆಯೊಳಗೆ ಮನೆಯೊಡೆಯನಿದ್ದಾನೊ, ಇಲ್ಲವೋ ?
ತನುವಿನಲ್ಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ
ಮನದೊಳಗೆ ಮನದೊಡೆಯನಿದ್ದಾನೊ, ಇಲ್ಲವೊ ?
ಇಲ್ಲ, ಕೂಡಲಸಂಗಮದೇವಾ."

** "Slums are in the minds of people". ಈ ಹೇಳಿಕೆಯನ್ನು ಗಮನಿಸಿರಿ.

ಸುಲಭ ಲಭ್ಯ ಸಾರ್ವಜನಿಕ ಶೌಚಾಲಗಳಿರುತ್ತವೆ; ಇಂದಿನಂತೆ ಮಹಿಳೆಯರು ತಮ್ಮ ದೇಹ ಬಾಧೆಯನ್ನು ತೀರಿಸಿಕೊಳ್ಳಲು ಕತ್ತಲು ಕವಿದಾಗಲೇ ರಸ್ತೆ ಬದಿಗಳಿಗೆ ಹೋಗುವ ಹೀನಾಯ ಸ್ಥಿತಿಯು ಇರುವುದಿಲ್ಲ; ಪಾಯಖಾನೆಗಳಿಗೂ, ಶೌಚಾಲಯಗಳಿಗೂ, ಚರಂಡಿ ಕೊಳೆಯ ಸಾಗಾಟಕ್ಕೂ, ಆಹಾರ ಸಿದ್ಧತೆಗೂ, ಕುಡಿಯಲೂ ಸಾಕಷ್ಟು ನೀರು ಸರಬರಾಜಾಗುತ್ತಿರುತ್ತದೆ; ಶಾಲೆ ಕಾಲೇಜುಗಳಲ್ಲಿ ಸದಾ ಶುಚಿಯಾಗಿರುವ ಪಾಯಖಾನೆ ಮೂತ್ರಾಲಯಗಳೂ ಇರುತ್ತವೆ; ಬಸ್-ರೈಲು ನಿಲ್ದಾಣಗಳಲ್ಲಿ, ಮಾರುಕಟ್ಟೆ ಜನಸಂದಣಿಯ ಸ್ಥಳಗಳಲ್ಲಿ ಶುಚಿಯಾದ ಶೌಚಾಲಯಗಳಿರುತ್ತವೆ; ರಾಜ್ಯ ಮತ್ತು ರಾಷ್ಟ್ರದ ಹೆದ್ದಾರಿಗಳಲ್ಲಿ ತಂಗುದಾಣಗಳೂ, ಸೂಕ್ತವಾದ ಕಡೆಗಳಲ್ಲೆಲ್ಲಾ ಶೌಚಾಲಯಗಳೂ ವ್ಯವಸ್ಥಿತಗೊಂಡಿರುತ್ತವೆ; ತಿಪ್ಪೆಗಳು ವ್ಯವಸ್ಥಿತವಾದ ಕಾಂಪೋಸ್ಟ್ ಗುಂಡಿಗಳಾಗಿ ಪರಿವರ್ತನೆಗೊಂಡಿರುತ್ತವೆ; ಗ್ರಾಮ ಪಂಚಾಯತಿಗಳೂ, ನಗರ ಪಾಲಿಕೆಗಳೂ, ಪುರಸಭೆಗಳೂ ತಮ್ಮ ತಮ್ಮ ಆಡಳಿತೆಯ ವ್ಯಾಪ್ತಿಗೆ ಒಳಪಟ್ಟಿರುವ ಸಮುದಾಯಗಳೂ ನಿರ್ಮಲವಾಗಿರುವಂತೆ ಕರ್ತವ್ಯನಿರತವಾಗಿರುತ್ತವೆ; ಕೊಳೆಗೇರಿಗಳು ಮೊಳಕೆದೋರದಂತೆ ನಗರ ಪಾಲಿಕೆಗಳು ಎಚ್ಚರ ವಹಿಸುತ್ತವೆ; ಇರುವ ಕೊಳೆಗೇರಿಗಳ ನಿರ್ಮೂಲನಕ್ಕೆ ಕ್ರಮ ಕೈಗೊಳ್ಳುತ್ತವೆ; ಎಲ್ಲೆಲ್ಲಿ ಅಗತ್ಯವೋ ಅಲ್ಲೆಲ್ಲಾ ಕಸದ ತೊಟ್ಟಿಗಳನ್ನು ಇರಿಸಲಾಗುತ್ತದೆ; ತುಂಬಿ ತುಳುಕಿ ಹೊರಚೆಲ್ಲುವ ಮುನ್ನವೇ ತೊಟ್ಟಿಗಳನ್ನು ಖಾಲಿ ಮಾಡಿ ತ್ಯಾಜ್ಯ ವಸ್ತುಗಳನ್ನು ದೂರ ಸಾಗಿಸಲಾಗುತ್ತದೆ; ತ್ಯಾಜ್ಯ ವಸ್ತುಗಳನ್ನು ಸಾಗಿಸುವ ಮತ್ತು ಅವನ್ನು ಗೊಬ್ಬರ ಉತ್ಪಾದನೆಗಾಗಿ ಉಪಯೋಗಿಸುವ ಏರ್ಪಾಟು ಮಾಡಲಾಗುತ್ತದೆ; ಬಟ್ಟೆ ತೊಳೆಯಲು ಸೂಕ್ತವಾದ ಕಡೆ ಮಡಿವಾಳರ ಕಾಯಕದ ನೆಲಗಟ್ಟುಗಳ ನಿರ್ಮಾಣವಾಗಿರುತ್ತವೆ; ಸಾರ್ವಜನಿಕರು ತಮ್ಮ ತಮ್ಮ ಮನೆಗಳ ಒಳಗನ್ನೂ ಹೊರಗನ್ನೂ ನಿರ್ಮಲವಾಗಿರಿಸಿಕೊಳ್ಳುವುದಲ್ಲದೆ ಪ್ರಾಧಿಕಾರದವರೊಡನೆ ಸ್ವಚ್ಛತಾ ಕಾರ್ಯದಲ್ಲಿ ನಿರತರಾಗಿರುತ್ತಾರೆ; ವಿದ್ಯಾರ್ಥಿ ಮತ್ತು ಯುವ ಸಮೂಹಗಳು ಪರಿಸರ ರಕ್ಷಣೆಯಲ್ಲಿ ತುಂಬಿದಾಸಕ್ತಿಯಿಂದ ಭಾಗವಹಿಸುತ್ತಾರೆ; ಜಲ-ವಾಯು-ಶಬ್ದ ಮಾಲಿನ್ಯಗಳ ಆಕರಗಳಿಗೆ ಅವಕಾಶವೇ ಇರುವುದಿಲ್ಲ; ಪರಿಸರ ಪ್ರಜ್ಞೆಯ ಜನರನ್ನು ನಿರ್ಮಿಸುವ ಕಾರ್ಯಕ್ರಮಗಳು ಶಾಲೆ-ಕಾಲೇಜುಗಳಲ್ಲಿ, ಸಾರ್ವಜನಿಕ ವೇದಿಕೆಗಳಲ್ಲಿ ವಿಚಾರ ಸಂಕಿರಣಗಳಲ್ಲಿ, ವಿಶೇಷೋಪನ್ಯಾಸಗಳಲ್ಲಿ, ಮೆರವಣಿಗೆ - ವಸ್ತುಪ್ರದರ್ಶಗಳಲ್ಲಿ, ಮನೋರಂಜಕ ಕಲಾಪಗಳಲ್ಲಿ ನಿರಂತರವಾಗಿ ನಡೆಯುತ್ತಲೇ ಇರುತ್ತವೆ; ಬುಡಕಟ್ಟು ಗ್ರಾಮೀಣ ಸಮುದಾಯಗಳೆಲ್ಲವೂ ನಿರ್ಮಲ ಪರಿಸರದಲ್ಲಿ ಆಹ್ಲಾದಕರವಾಗಿ ಉಸಿರಾಡುತ್ತಾ ಜೀವಂತಿಕೆಯನ್ನು ಮೆರೆಯುತ್ತವೆ. ಇಂತಹ ಸಮುದಾಯದ ನಿರ್ಮಾಣ ಮತ್ತು ಪೋಷಣೆಯಲ್ಲಿ ನಿರತರಾಗಿರುವ ಮನುಷ್ಯರಾಗಿ ಬಾಳಬೇಕು ಎಂಬ ಹಂಬಲವು ಎಲ್ಲರ ಕಾಳಜಿಯಾಗಿರುತ್ತದೆ.

## ಮುಮ್ಮೂಲೆಯ ಮಾರ್ಗದೃಷ್ಟಿಗಳು :

ನಿರ್ಮಲ ಕರ್ನಾಟಕ ಪರಿಕಲ್ಪನೆಯನ್ನು ಕಂಡರಿಸಲೂ, ಇದನ್ನು ಅನುಷ್ಠಾನಗೊಳಿಸಲೂ ಮುಮ್ಮೂಲೆಯ ಮಾರ್ಗದೃಷ್ಟಿಗಳು (Three -Pronged Approaches) ಅಗತ್ಯವಾಗುತ್ತವೆ. ಅಂದರೆ, ಪಾರಸ್ಪರಿಕ ಸಂಬಂಧವಿರುವ ಮೂರು ಮಾರ್ಗದೃಷ್ಟಿಗಳನ್ನು ನಾವು ಅಂಗೀಕರಿಸಿ, ಅವನ್ನು ಅಳವಡಿಸಿಕೊಳ್ಳಬೇಕು. ಅವೆಂದರೆ-

೧. ಸಮಗ್ರ ಮಾರ್ಗದೃಷ್ಟಿ (Comprehensive Approach)

೨. ಅಖಂಡ ಮಾರ್ಗದೃಷ್ಟಿ (Integrated Approach)

೩. ವಿಕೇಂದ್ರೀಕರಣ ಮಾರ್ಗದೃಷ್ಟಿ (Decentralization Approach)

## ಸಮಗ್ರ ಮಾರ್ಗದೃಷ್ಟಿ :

ಮಾನವ ಜೀವನವು ಒಂದು ಸಮಗ್ರ ಘಟಕ. ಕರ್ನಾಟಕದವರ ಜೀವನವು ಮಾನವರೆಲ್ಲರ ಜೀವನದ ಒಂದು ಭಾಗ. ನಿರ್ಮಲ ಕರ್ನಾಟಕವು ಕರ್ನಾಟಕದ ಒಳಗಿರುವ ಎಲ್ಲರ ಜೀವನದ ಒಂದು ಮಹತ್ವದ ಸಂಗತಿ. ಜೀವನದ ಎಲ್ಲ ರಂಗಗಳಿಗೂ ವಿಸ್ತಾರಗೊಂಡಿರುವ ನಿರ್ಮಲ ಕರ್ನಾಟಕದ ಸಂಗತಿಯನ್ನು ಸರಿಯಾಗಿ ಮತ್ತು ವಾಸ್ತವ ನೆಲೆಯಲ್ಲಿ ಅರ್ಥಮಾಡಿಕೊಳ್ಳಲು ಸಮಗ್ರ ಮಾರ್ಗದೃಷ್ಟಿಯು ಅತ್ಯಂತ ಅಗತ್ಯ. ಎಲ್ಲ ಭಾಗಗಳನ್ನೂ ನಾವು ಗಮನದಲ್ಲಿರಿಸಿಕೊಳ್ಳಬೇಕು. ಅಂದರೆ, ಯಾವುದೇ ಒಂದು ಭಾಗವನ್ನು ಮರೆತರೆ, ಅಥವಾ ಕಡೆಗಣಿಸಿದರೆ ಅಷ್ಟರಮಟ್ಟಿಗೆ ನಮ್ಮ ಅರ್ಥೈಸುವಿಕೆಯು ಅಪೂರ್ಣವಾಗಿರುತ್ತದೆ. ನಮ್ಮ ಹಂಬಲದ ನಿರ್ಮಲ ಕರ್ನಾಟಕವು ಪೂರ್ಣಗೊಳ್ಳದೆ ಊನ ಸಂಗತಿಯಾಗಿ, ದೋಷಯುಕ್ತವಾಗಿ ದುಷ್ಪರಿಣಾಮಕ್ಕೆ ಎಡೆ ಮಾಡಿಕೊಡುತ್ತದೆ.

## ಅಖಂಡ ಮಾರ್ಗದೃಷ್ಟಿ :

ಯಾವುದೇ ಭಾಗವನ್ನು ನಾವು ಯಾಕೆ ಮರೆಯಕೂಡದು ಅಥವಾ ಕಡೆಗಣಿಸಬಾರದು? ಎಂಬ ಪ್ರಶ್ನೆಗೆ ಉತ್ತರವನ್ನು ಎಡನೆಯ (ಅಖಂಡ) ಮಾರ್ಗದೃಷ್ಟಿಯು ಕೊಡುತ್ತದೆ. ಜೀವನದ ಎಲ್ಲ ಅಂಶಗಳೂ ಪಾರಸ್ಪರಿಕವಾಗಿ ಕ್ರಿಯಾತ್ಮಕ (Functional) ಸಂಬಂಧವನ್ನು ಹೊಂದಿರುತ್ತವೆ. ಅಂದರೆ ಎಲ್ಲವೂ ಪಾರಸ್ಪರಿಕವಾಗಿ ಕಾರಣ-ಪರಿಣಾಮಗಳ ಬಂಧನದಲ್ಲಿ ಸಿಕ್ಕಿಕೊಂಡಿರುತ್ತವೆ. ಆದುದರಿಂದಲೇ ಯಾವುದನ್ನಾದರೂ ಬಿಟ್ಟರೆ ಇತರ ಎಲ್ಲ ಅಂಶಗಳ ಮೇಲೂ ದುಷ್ಪರಿಣಾಮವು ಉಂಟಾಗುತ್ತದೆ. ಉದಾ : ಕುಡಿಯುವ ನೀರಿನ ಕೊಳವೆಗಳು ಒಡೆದುಹೋದರೆ ನೀರು ಲಭ್ಯವಾಗದೇ ಹೋಗುತ್ತದೆ; ಹೊಲಸು ನೀರು ಒಡೆದ ಕೊಳವೆಗಳಿಗೆ ಸೇರಿದರೆ ಸಾಂಕ್ರಾಮಿಕ ರೋಗಗಳು ಹರಡಲಿಕ್ಕೆ ತಡವೇನೂ ಆಗುವುದಿಲ್ಲ.

## ವಿಕೇಂದ್ರೀಕರಣ ಮಾರ್ಗದೃಷ್ಟಿ :

ಜೀವನವು ಸಮಗ್ರವಾಗಿರುವಾಗಲೂ, ವಿಶ್ವವನ್ನೇ ವ್ಯಾಪಿಸಿರುವುದು ನಿಜವಾದರೂ ಜನರು ಚಿಕ್ಕ ಚಿಕ್ಕ ಗುಂಪುಗಳಲ್ಲಿ ಜೀವಿಸುತ್ತಾರೆ. ಅವರವರೊಳಗೇ ಅವರು ಸಂಪರ್ಕ ಹೊಂದಿರುತ್ತಾರೆ. ದಿನ ದಿನದ ನಡವಳಿಕೆಯು ಸ್ಥಳೀಯ ಸಮುದಾಯದಲ್ಲಿಯೇ ನಡೆಯುತ್ತದೆ. ವ್ಯಕ್ತಿತ್ವದ ಬೆಳವಣಿಗೆಯು ಸಣ್ಣ ಗುಂಪಿನ ನಡುವೆಯೇ ಹೆಚ್ಚಾಗಿ ನಡೆಯುತ್ತದೆ. ಪಾತ್ರಾಭಿನಯವು ಆಗುವುದೂ ಹೆಚ್ಚಾಗಿ ಕಿರು ಸಮುದಾಯಲ್ಲಿಯೇ. ಹಕ್ಕು ಮತ್ತು ಹೊಣೆಗಾರಿಕೆಗೆ ತೀವ್ರತೆ ಹಾಗೂ ನಯಗಾರಿಕೆಯು ಬರುವುದು ಅಂತಹ ನೆಲೆಯಲ್ಲಿಯೇ. ನಿರ್ಮಲ ಕರ್ನಾಟಕವು ಇಡೀ ಕರ್ನಾಟಕಕ್ಕೆ ಅನ್ವಯಿಸುವುದು ನಿಜವಾದರೂ ಅದು ಫಲಿತವಾಗುವುದು ಜಿಲ್ಲೆಗಳ ಮೂಲಕ, ಗ್ರಾಮ ಪಂಚಾಯತಿಗಳ ಮೂಲಕ, ಗ್ರಾಮಗಳ ಮೂಲಕ, ವಠಾರ-ಓಣಿಗಳ ಮೂಲಕ, ಕೊಟ್ಟ ಕೊನೆಗೆ ನಿರ್ಮಲ ಗೃಹವು ನಿರ್ಮಲ ಕರ್ನಾಟಕದ ಸತ್ವಯುತ ನೆಲೆಯಾಗುತ್ತದೆ. ಈ ಕಾರಣದಿಂದಲೇ ವಿಕೇಂದ್ರೀಕರಣ ಮಾರ್ಗದೃಷ್ಟಿಯೆಂಬುದು ಅನಿವಾರ್ಯವಾಗುತ್ತದೆ. ತಾರ್ಕಿಕವಾಗಿಯೂ, ವಾಸ್ತವಿಕವಾಗಿಯೂ ವಿಕೇಂದ್ರೀಕರಣ ಮಾರ್ಗದೃಷ್ಟಿಯು ವ್ಯಕ್ತಿಯ, ಕಿರುಗುಂಪುಗಳ, ಚಿಕ್ಕ ಸಮುದಾಯಗಳ, ಸಣ್ಣ ಪ್ರದೇಶಗಳ ಕ್ರಿಯಾತ್ಮಕ ಪಾಲುದಾರಿಕೆಗೆ ಮಾರ್ಗದರ್ಶಿಯಾಗುತ್ತದೆ.

ಈ ಮೊದಲೇ ಸೂಚಿಸಿದ ಹಾಗೆ ಈ ಮೂರೂ ಮಾರ್ಗದೃಷ್ಟಿಗಳು ಐಕ್ಯ ಸಂಗತಿಯ ಮುಮ್ಮುಖಗಳು, ಮುಕ್ಕಣ್ಣುಗಳು. ನಿರ್ಮಲ ಕರ್ನಾಟಕವು ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳಬೇಕಾದರೆ ಈ ಪರಿಕಲ್ಪನೆಯು ನಿರ್ದುಷ್ಟವಾಗಿರಬೇಕು, ನಿರ್ದಿಷ್ಟವೂ ಆಗಿರಬೇಕು. ಆದುದರಿಂದಲೇ ಈ ಮುಮ್ಮೊಲೆಯ, ಮುಕ್ಕಣ್ಣ ಮಾರ್ಗದೃಷ್ಟಿಗಳು ಅನಿವಾರ್ಯ. ಇದನ್ನು ಎಲ್ಲರೂ ತಮ್ಮ ತಮ್ಮ ಗಮನದಲ್ಲಿ ನಿರಂತರವಾಗಿ ಇರಿಸಿಕೊಳ್ಳಲೇಬೇಕಾಗಿದೆ.

## ಅನುಷ್ಠಾನದ ಪ್ರಕ್ರಿಯೆ :

ಈ ಪ್ರಾಯೋಜನೆಯ ಆರಂಭದ (೧೯೯೫-೯೬) ವರ್ಷದಲ್ಲಿ ಸರಕಾರವು ೨೪ ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡಿತು. ಇನ್ನೂ ೨೦ ಕೋಟಿ ರೂಪಾಯಿಗಳ ಅಗತ್ಯವಿರುವುದನ್ನೂ ಕೇಂದ್ರ ಸರಕಾರಕ್ಕೆ ಮನವರಿಕೆ ಮಾಡಿಕೊಟ್ಟು, ನೆರವನ್ನು ಕೇಳಿತ್ತು. ಪ್ರತಿಯೊಂದು ಗ್ರಾಮ ಪಂಚಾಯತಿಯ ವ್ಯಾಪ್ತಿಯೊಳಗೆ ಕನಿಷ್ಠ ನೂರು ಶೌಚಾಲಯಗಳನ್ನು ಅದೇ ವರ್ಷವೇ ನಿರ್ಮಿಸುವ ಕಾರ್ಯ ಕೈಗೊಂಡಿತು. ಫಲಾನುಭವಿಗಳನ್ನು ಗುರುತಿಸುವ, ಅವರಿಗೆ ವಿವಿಧವಾಗಿ ನೆರವಾಗುವ ಸ್ವಯಂ ಸೇವಕರಿಗೆ ಪ್ರೋತ್ಸಾಹ ಧನ ನೀಡಲಾಗುವುದು. ಪಾಯಖಾನೆಯನ್ನು ಕಟ್ಟಿಕೊಳ್ಳಲು ಫಲಾನುಭವಿಗಳಿಗೆ ಧನಸಹಾಯವನ್ನು ಮಾಡಲಾಗುತ್ತಿದೆ. ನೈರ್ಮಲ್ಯಾಭಿವೃದ್ಧಿಗೆ ೧೨ ಜಿಲ್ಲೆಗಳಲ್ಲಿ ನೈರ್ಮಲ್ಯ ಕಾರ್ಯವನ್ನು ಭರದಿಂದ ಕೈಗೊಳ್ಳಲಾಗುತ್ತಿದೆ.* ಸಾಮಾಜಿಕ ಅರಣ್ಯದವರಿಂದ ಸಮುದಾಯಗಳನ್ನು ಹಸುರುಗೊಳಿಸಲಾಗುತ್ತಿದೆ. ಜಲಾನಯನ ಅಭಿವೃದ್ಧಿ ಮಂಡಲಿಯ ನೆರವಿನಿಂದ ನೀರಿನ ಸಂಗ್ರಹವನ್ನು ಹೆಚ್ಚಿಸುವ ಕಾರ್ಯವನ್ನು ಕೈಗೊಳ್ಳಲಾಗುತ್ತಿದೆ. ಹೀಗೆಯೇ ನಿರ್ಮಲ ಕರ್ನಾಟಕವು ಎಲ್ಲ ಆಶಯಗಳಿಗೆ ಸ್ಪಂದಿಸುವ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿದೆ. ಇದರ ಯಶಸ್ವಿ ಕಾರ್ಯ ಕೇವಲ ಸರಕಾರದಿಂದಲೇ ಸಾಧ್ಯವಿಲ್ಲವೆಂಬುದು ಸಂಬಂಧಪಟ್ಟ ಎಲ್ಲರಿಗೂ ಅರಿವಾಗಿದೆ. ಆದುದರಿಂದಲೇ ಸ್ವಯಂ ಸೇವಕ ಸಂಘಟನೆಗಳ ಮತ್ತು ಸಾರ್ವಜನಿಕರ ಸಹಕಾರ - ಸಹಾಯ- ಸಂಯೋಜಿತ ಕಾರ್ಯ ಅತ್ಯಗತ್ಯ.

---

* ಈ ಅಂಶವು ಇಪ್ಪತ್ತನೆಯ ಶತಮಾನದ ಕೊನೆಯ ದಶಕಕ್ಕೆ ಸಂಬಂಧಿಸಿದ್ದುದು.

## ಪರಿಮಳಯುಕ್ತ ಪುಷ್ಪ :

ನಿರ್ಮಲ ಕರ್ನಾಟಕವು ಸುಂದರ ಕರ್ನಾಟಕದ ಪರಿಮಳ. ಇದು ಇಪ್ಪತ್ತನೆಯ ಶತಮಾನವು ಕೊನೆಗೊಳ್ಳುವುದರ ಒಳಗೇ ಸಾಧ್ಯವಾಗಬೇಕು. ಇದನ್ನು ಸಾಧ್ಯವಾಗಿಸುವುದು ಕರ್ನಾಟಕವನ್ನು ಪ್ರೀತಿಸುವ ಎಲ್ಲರ ಹೊಣೆಯಾಗಿದೆ. ಹಕ್ಕನ್ನು ಸ್ಥಾಪಿಸಲು ಹೇಗೆ ಹೋರಾಡುತ್ತೇವೆಯೋ ಹಾಗೆಯೇ ಹೊಣೆಯನ್ನು ನಿರ್ವಹಿಸುವಲ್ಲಿಯೂ ಯುದ್ಧೋತ್ಸಾಹವನ್ನು ನಾವು ಮೆರೆಯಬೇಕಾಗಿದೆ. ಹೇಗೇ ಆಗಲಿ, ಪರಿಮಳಯುಕ್ತ ಸುಂದರ ಪುಷ್ಪದಂತೆ ಕರ್ನಾಟಕವು ವಿಕಸಿಸಲಿ. ಹಂಬಲವು ಹಣ್ಣಾಗಲಿ.*

## ಸಂಯೋಜಿತ ಕಾರ್ಯ :

ನಿರ್ಮಲ ಕರ್ನಾಟಕ ಪ್ರಯೋಜನೆಯನ್ನು ಕರ್ನಾಟಕ ಸರ್ಕಾರವು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತಿ ರಾಜ್ಯ ಸಚಿವ ಶಾಖೆಯ ಅಡಿಯಲ್ಲಿ ಅನುಷ್ಠಾನಗೊಳಿಸುತ್ತಿದೆ. ಆದರೆ ಈ ಪ್ರಾಯೋಜನೆಯು ಕೇವಲ ಗ್ರಾಮ ಸುಮದಾಯಗಳ ನೈರ್ಮಲ್ಯಕ್ಕೆ ಮಾತ್ರವೇ ಸೀಮಿತಗೊಂಡುದುದಲ್ಲ; ಹಾಗೆ ಸೀಮಿತಗೊಳ್ಳಲೂ ಬಾರದು. ಇಡೀ ಕರ್ನಾಟಕವನ್ನು ಈ ಪ್ರಾಯೋಜನೆಯು ವ್ಯಾಪಿಸಬೇಕಾದುದರಿಂದ ಪಟ್ಟಣ -ನಗರ ಸಮುದಾಯಗಳಿಗೂ ಇದು ವಿಸ್ತಾರಗೊಳ್ಳಬೇಕಾಗಿದೆ. 'ನಿರ್ಮಲ ಕರ್ನಾಟಕ' ಅಂದ ಕೂಡಲೇ ತಿಪ್ಪೆಯನ್ನು ತೆಗೆಯುವ, ಕಕ್ಕಸುಗಳನ್ನು ಕಟ್ಟಿಸುವ ಕಾರ್ಯಕ್ರಮ ಎಂಬ ತಪ್ಪು ತಿಳಿವಳಿಕೆ ಜನರಿಗೆ ಬರುತ್ತಲಿದೆ. ಆದ್ದರಿಂದ ಇದು ಸಮಗ್ರವಾದ ಕಾರ್ಯಕ್ರಮ ಎಂಬುದನ್ನು ಮನವರಿಕೆ ಮಾಡಿಕೊಡುವುದು ಅತೀ ಅಗತ್ಯ. ಇದು ಯಾವುದೇ ಒಂದು ನಿಟ್ಟಿನ ಮತ್ತು ಒಂದು ವಿಭಾಗದ ಕಾರ್ಯಕ್ರಮವಲ್ಲವಾದುದರಿಂದ ಮೂಲ ಸೌಲಭ್ಯಗಳನ್ನು ಒದಗಿಸುವ, ಸೇವೆಗಳನ್ನು ನಿರ್ವಹಿಸುವ ಮತ್ತು ಭವಿಷ್ಯದ ಉನ್ನತಿಯನ್ನು ಧ್ಯೇಯವಾಗಿ ಉಳ್ಳ ಸರಕಾರದ ಎಲ್ಲ ವಿಭಾಗಗಳೂ, ಸ್ವಯಂ ಸೇವಾ ಸಂಘಟನೆಗಳೂ, ಜನರೇ ಅನೌಪಚಾರಿಕವಾಗಿ ರೂಪಿಸಿಕೊಂಡಿರುವ ಸಮೂಹಗಳೂ ಈ ಕಾರ್ಯದಲ್ಲಿ ಪಾಲುಗೊಳ್ಳಬೇಕು. ಆರಂಭದಿಂದಲೂ ಇದರಲ್ಲಿ ಸಮಾವೇಶಗೊಂಡಿರುವ ಸಮಸ್ಯೆ, ಅವಶ್ಯಕತೆಗಳನ್ನು ಗುರುತಿಸಿ ವಿಶ್ಲೇಷಿಸುವ, ಅವುಗಳ ಪರಿಹಾರಗಳಿಗೆ ಅಗತ್ಯವಾದ ಸಂಪನ್ಮೂಲಗಳನ್ನು ಪತ್ತೆ ಹಚ್ಚುವ, ಪರಿಹಾರ - ಅಭಿವೃದ್ಧಿಪರ ಕಾರ್ಯಕ್ರಮಗಳನ್ನು ರೂಪಿಸುವ, ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ, ಅನುಷ್ಠಾನ ಪ್ರಕ್ರಿಯೆಗೆ ಅಗತ್ಯವಾಗಿರುವ ಸಂಪನ್ಮೂಲಗಳನ್ನು ಕ್ರೋಢೀಕರಿಸುವ, ಆರಂಭದಿಂದಲೂ ಮೌಲ್ಯಮಾಪನ ಮಾಡುವ ಕೆಲಸವನ್ನು ಸಮುದಾಯದ ಜನರೇ ಕೈಗೊಳ್ಳುವಂತೆ ಅವರನ್ನು ಸಿದ್ಧಗೊಳಿಸಬೇಕು. ಈ ಎಲ್ಲಾ ಕಾರ್ಯಕ್ಕೆ ಮಾಲಿನ್ಯ ನಿಯಂತ್ರಣ ಮಂಡಲಿಯಂಥ ಸಕಲ ವಿಭಾಗಗಳ ಪ್ರಾತಿನಿಧಿಕವೂ, ಸ್ವಾಯತ್ತವೂ ಆದ ಸಂಯೋಜಿತ ಮಂಡಲಿಯನ್ನು ಸ್ಥಾಪಿಸಿ, ಅದಕ್ಕೆ ಈ ನಿರ್ಮಲ ಕರ್ನಾಟಕದ ಪ್ರಾಯೋಜನೆಯನ್ನು ವಹಿಸಿಕೊಡಬೇಕು. ಈ ಮಂಡಲಿಗೆ ಶಾಸನಬದ್ಧ ಸ್ವಾಯತ್ತ ಸ್ಥಾನವಿರುವ ಅಗತ್ಯವಿದೆ. ಈ ಮಂಡಲಿಯು ನೇರವಾಗಿ ಮುಖ್ಯಮಂತ್ರಿಯವರ ನಿಯಂತ್ರಣದಲ್ಲಿ ಕಾರ್ಯಮಾಡಬೇಕಾಗುತ್ತದೆ. ಇದುವರೆಗೆ ಪಡೆದ ಅನುಭವದ ಬೆಳಕಿನಲ್ಲಿ ಈ ಮಂಡಲಿಯನ್ನು ಈ ರೀತಿಯಾಗಿ ರೂಪಿಸಬೇಕಾಗಿದೆ. ನಿರ್ಮಲ ಕರ್ನಾಟಕವು ಒಂದು ಆಂದೋಲನವಾಗಬೇಕು. ಇದನ್ನು ಈ ಮಂಡಲಿಯು ಸಾಧ್ಯವಾಗಿಸಬೇಕು.

●

---

* ಈ ಹಂಬಲವು ಈ ಇಪ್ಪತ್ತೊಂದನೆಯ ಶತಮಾನದಲ್ಲಾದರೂ ಬಹು ಬೇಗನೇ ಈಡೇರಲಿ.




# ಕುಡಿಯುವ ನೀರು

ಎಸ್. ಶಶಿರಂಜನ್ ದಾಸ್

ಮಾನವನ ಮುಲಭೂತ ಅವಶ್ಯಕತೆಗಳಲ್ಲಿ ನೀರೂ ಒಂದು. ನೀರಿಲ್ಲದೆ ಯಾವ ಜೀವರಾಶಿಯೂ ಬದುಕಲಾರದು. ನಾವು ಕುಡಿಯುವ ನೀರು ಶುದ್ಧವಾಗಿರಬೇಕು. ಹಿಂದಿನಿಂದಲೂ ನೀರು ಜೀವಜಲವೆಂಬ ಪೂಜ್ಯ ಭಾವನೆ ಜನರಲ್ಲಿದೆ. ಅಂದಮೇಲೆ ಕುಡಿಯುವ ನೀರು ಮನುಷ್ಯನಿಗೆ ಸುರಕ್ಷಿತವಾಗಿರಬೇಕು ಎಂಬುದನ್ನು ಎಲ್ಲರೂ ತಿಳಿದುಕೊಳ್ಳಬೇಕು. ಕುಡಿಯುವ ನೀರು ಕಲುಷಿತವಾದರೆ ಅನೇಕ ರೋಗಗಳು ಹರಡುತ್ತವೆಂಬುದು ಗ್ರಾಮಾಂತರ ಪ್ರದೇಶದಲ್ಲಿ ಬಹಳ ಜನರಿಗೆ ತಿಳಿದಿರುವುದಿಲ್ಲ.

ಶುದ್ಧ ಕುಡಿಯುವ ನೀರು ಹಾಗೂ ಉತ್ತಮ ನೈರ್ಮಲ್ಯ ಸೌಲಭ್ಯಗಳಿಂದ ಆರೋಗ್ಯವಂತ ಸಮಾಜದ ನಿರ್ಮಾಣ ಸಾಧ್ಯ ಎಂಬುದನ್ನು ಮನಗಂಡ ಸರ್ಕಾರ ಗ್ರಾಮೀಣ ಪ್ರದೇಶದಲ್ಲಿ ಭಾರತ ಸರ್ಕಾರದ ಯೋಜನೆಯಾದ ಸ್ವಜಲಧಾರ, ಡೆನ್ಮಾರ್ಕ್ ದೇಶದ ಸಹಾಯದ ಜಲನಿಧಿ ಯೋಜನೆ, ವಿಶ್ವಬ್ಯಾಂಕ್ ನೆರವಿನ ಜಲ ನಿರ್ಮಲ ಯೋಜನೆ ಹಾಗೂ ಅಗತ್ಯಕ್ಕೆ ತಕ್ಕಂತೆ ಇತರೆ ಯೋಜನೆಗಳನ್ನು ರಾಜ್ಯ ಸರ್ಕಾರ ಅನುಷ್ಠಾನಗೊಳಿಸುತ್ತಿದೆ.

> **ನೀರಿನ ಬಗ್ಗೆ ಹಿಂದಿನಿಂದಲೂ ಜನರಲ್ಲಿ ಪೂಜ್ಯ ಭಾವನೆಯಿದೆ. ಕುಡಿಯುವ ನೀರು ಕಲುಷಿತವಾದರೆ ರೋಗಗಳು ಹರಡುತ್ತವೆಂಬುದು ಬಹಳ ಜನರಿಗೆ ತಿಳಿದಿಲ್ಲ. ಶುದ್ಧ ಕುಡಿಯುವ ನೀರು ಮತ್ತು ಉತ್ತಮ ನೈರ್ಮಲ್ಯ ಸೌಲಭ್ಯದಿಂದ ಆರೋಗ್ಯವಂತ ಸಮಾಜ ನಿರ್ಮಾಣ ಸಾಧ್ಯ.**

ಕರ್ನಾಟಕ ಸರ್ಕಾರ ಗ್ರಾಮೀಣ ನೀರು ಸರಬರಾಜಿನ ವಲಯದಲ್ಲಿ ಶುದ್ದ ಕುಡಿಯುವ ನೀರಿಗೆ ಹೆಚ್ಚಿನ ಆದ್ಯತೆ ನೀಡಿದೆ. ಕರ್ನಾಟಕ ರಾಜ್ಯದ ೫೬,೬೮೫ ಜನವಸತಿಗಳಲ್ಲಿ ೩೦,೧೬೫ ಜನವಸತಿಗಳಿಗೆ ದಿನಕ್ಕೆ ಒಬ್ಬ ವ್ಯಕ್ತಿಗೆ ೫೫ ಲೀಟರ್ ಗಿಂತ ಹೆಚ್ಚಿನ ನೀರು ಸರಬರಾಜಾಗುತ್ತಿದೆ. ಕರ್ನಾಟಕದಲ್ಲಿ ಹೆಚ್ಚಿನ ಮಟ್ಟಿಗೆ ಎಲ್ಲಾ ಜನವಸತಿಗಳಿಗೆ ಸಮಾಧಾನಕರವಾದ ನೀರು ಸರಬರಾಜಿನ ವ್ಯವಸ್ಥೆಯನ್ನು ಮಾಡಲಾಗಿದ್ದು, ಅದರ ವಿವರಗಳು ಕೆಳಕಂಡಂತಿವೆ.

| ಕ್ರಮ ಸಂಖ್ಯೆ | ಜನವಸತಿಗಳು lpcd ಪ್ರಕಾರ | ಜನವಸತಿಗಳ ಸಂಖ್ಯೆ |
|---|---|---|
| ೧ | ೧೦ lpcd ಕಡಿಮೆ | ೧೧೪೬ |
| ೨ | ೧೦-೨೦ | ೪೪೧೨ |
| ೩ | ೨೦-೪೦ | ೧೨೪೨೩ |
| ೪ | ೪೦-೫೫ | ೮೫೩೬ |
| ೫ | ೫೫ಕ್ಕಿಂತ ಹೆಚ್ಚು | ೩೦೧೬೫ |
| | ಒಟ್ಟು | ೫೬೬೮೨ |

ಕೇವಲ ೫,೫೫೮ ಜನವಸತಿಗಳಿಗೆ ದಿನಕ್ಕೆ ಒಬ್ಬ ವ್ಯಕ್ತಿ ೨೦ಲೀಟರ್ ಪಡೆಯುತ್ತಿದ್ದು, ನೀರಿನ ಕೊರತೆಯನ್ನು ಅನುಭವಿಸುತ್ತಿದೆ. (೧,೧೪೬ ಜನವಸತಿಗಳಿಗೆ ದಿನಕ್ಕೆ ೧೦ ಲೀಟರ್ ಹಾಗೂ ೪೪೧೨ ಜನವಸತಿಗಳಿಗೆ ಒಬ್ಬ ವ್ಯಕ್ತಿಗೆ ಒಂದು ದಿನಕ್ಕೆ ೧೦ ರಿಂದ ೨೦ ಲೀಟರ್ ಸರಬರಾಜಾಗುತ್ತಿದೆ.) ಕರ್ನಾಟಕದಲ್ಲಿ ನೀರು ಸರಬರಾಜಿನ ವ್ಯವಸ್ಥೆಯು ಪ್ರಭಾವೋತ್ಪಕವಾಗಿದ್ದರೂ ಸಹ ಕೆಲವು ಪ್ರದೇಶಗಳಲ್ಲಿ ಗಂಭೀರ ಸ್ಥಿತಿಯಿದೆ. ಕರ್ನಾಟಕದಲ್ಲಿ ಹೆಚ್ಚಿನ ಮಟ್ಟಿಗೆ ಎಲ್ಲಾ ಜನವಸತಿಗಳಿಗೆ ನೀರು ಸರಬರಾಜು ಕನಿಷ್ಠ ಮಟ್ಟಕ್ಕೆ ಮುಟ್ಟಿದ್ದು, ಈ ಪ್ರದೇಶಗಳಲ್ಲಿ ಜೀವನದ ಗುಣಮಟ್ಟದ ಕಡೆ ಗಮನ ಹರಿಸುವುದು ಅಗತ್ಯವಾಗಿದೆ.

ಕೇಂದ್ರ ಸರ್ಕಾರದ ನಿಯಮದಂತೆ ಗ್ರಾಮಾಂತರ ಪ್ರದೇಶದ ವ್ಯಕ್ತಿಗೆ ಒಂದು ದಿನಕ್ಕೆ ೪೦ ಲೀಟರ್ ನೀರು ಒದಗಿಸಬೇಕಾಗಿದೆ.

| ಕ್ರಮ ಸಂಖ್ಯೆ | ಉದ್ದೇಶ | ಪ್ರಮಾಣ lpcd |
|---|---|---|
| ೧ | ಕುಡಿಯಲು | ೦೩ |
| ೨ | ಅಡುಗೆಗೆ | ೦೫ |
| ೩ | ಸ್ನಾನಕ್ಕೆ | ೧೫ |
| ೪ | ಪಾತ್ರೆಗಳು ಮತ್ತು ಸ್ವಚ್ಛತೆಗೆ | ೦೭ |
| ೫ | ಶೌಚಾಲಯಕ್ಕೆ | ೧೦ |
| | ಒಟ್ಟು | ೪೦ |



## ಶುದ್ದ ನೀರಿನ ಅಗತ್ಯತೆ :

ಆರೋಗ್ಯ, ಮಾನವ ಸಂಪನ್ಮೂಲ ಅಭಿವೃದ್ಧಿಗೆ ಅಗತ್ಯವಾದ ಕೊಡುಗೆಯಾಗಿದ್ದು, ನಡವಳಿಕೆಯಲ್ಲಿ ಪರಿವರ್ತನೆ ಹೊಂದಿ ಜೀವನದ ಗುಣಮಟ್ಟ ಮತ್ತು ಸಮಾಜದ ಮೇಲೆ ಸಕಾರಾತ್ಮಕವಾದ ಪ್ರಭಾವವನ್ನು ಬೀರುವುದಾಗಿದೆ. ಗ್ರಾಮೀಣ ಸಮುದಾಯದ ಆರೋಗ್ಯ ಬದುಕಿಗೆ ಶುದ್ದವಾದ ಕುಡಿಯುವ ನೀರು ಮತ್ತು ಉತ್ತಮ ನೈರ್ಮಲ್ಯ ಸೌಲಭ್ಯಗಳು ಎರಡೂ ಮುಖ್ಯವಾದ ಮತ್ತು ಅಗತ್ಯವಾದ ಅಂಶಗಳಾಗಿವೆ.

ರಾಜ್ಯದ ಜನಸಂಖ್ಯೆಯಲ್ಲಿ ಸುಮಾರು ಶೇಕಡ ೬೯ ರಷ್ಟು ಗ್ರಾಮೀಣ ಪ್ರದೇಶದಲ್ಲಿ ವಾಸಿಸುವವರಾಗಿದ್ದಾರೆ ಮತ್ತು ಶೇಕಡ ೯೦ರಷ್ಟು ಜನ ಮಲ ವಿಸರ್ಜನೆಗೆ ಬಯಲನ್ನು ಉಪಯೋಗಿಸುತ್ತಿದ್ದು, ಇದರಿಂದ ಪರಿಸರವನ್ನು ಮಲಿನಗೊಳಿಸುತ್ತಾ ಮಲದಿಂದ ಹರಡುವ ಕಾಯಿಲೆಗಳಿಂದ ಆರೋಗ್ಯದ ಮೇಲೆ ದುಷ್ಪರಿಣಾಮವಾಗುತ್ತಿದ್ದು, ಇದರಿಂದ ಬಡಕುಟುಂಬಗಳ ಮೇಲೆ ಹೆಚ್ಚಿನ ಆರ್ಥಿಕ ಸಮಸ್ಯೆಯನ್ನು ಉಂಟುಮಾಡುತ್ತಿದ್ದು, ಇದು ಬಡತನಕ್ಕೆ ಎಡೆಮಾಡಿಕೊಡುತ್ತಿದೆ.

ಗ್ರಾಮೀಣ ಸಮುದಾಯದ ಆರೋಗ್ಯ ಉತ್ತಮಪಡಿಸಬೇಕಾದರೆ ಶುದ್ಧವಾದ ಕುಡಿಯುವ ನೀರು ಅತ್ಯಗತ್ಯ. ಕುಡಿಯುವ ನೀರಿನ ಪ್ರಮಾಣ ಮತ್ತು ಗುಣಮಟ್ಟ ಪ್ರಾಮುಖ್ಯವಾದ ಅಂಶವೆಂದು ಎಲ್ಲರೂ ಗಮನಿಸಬೇಕು. ಆದರೆ ಕರ್ನಾಟಕ ಗ್ರಾಮೀಣ ಪ್ರದೇಶದಲ್ಲಿ ಸುಮಾರು ಶೇಕಡ ೩.೧೫ ರಿಂದ ೪೪.೫೮ ರಷ್ಟು ಗ್ರಾಮಗಳಲ್ಲಿ ನೀರಿನ ಗುಣಮಟ್ಟ ಕುಡಿಯಲು ಯೋಗ್ಯವಾಗಿಲ್ಲ.

### ಭಾರತ ಸರ್ಕಾರ ನಿರ್ದಿಷ್ಟಪಡಿಸಿರುವ ಕುಡಿಯುವ ನೀರಿನ ಮಾನತೆಗಳು

| ಕ್ರಮ ಸಂಖ್ಯೆ | ವಿವರಗಳು | ಭಾರತೀಯ ವೈದ್ಯಕೀಯ ಸಂಶೋಧನಾ ಪರಿಷತ್ತು | | ವಿಶ್ವ ಆರೋಗ್ಯ ಸಂಸ್ಥೆ | |
|---|---|---|---|---|---|
| | | ಗರಿಷ್ಠ ಅನುಮತೀಯ | ಗರಿಷ್ಠ ಅವಕಾಶ | ಗರಿಷ್ಠ ಅನುಮತೀಯ | ಗರಿಷ್ಠ ಅವಕಾಶ |
| ೧ | ಬಗ್ಗಡವಾಗಿರುವುದು | ೫.೦ | ೨೫ | ೫ | ೨೫ |
| ೨ | ಬಣ್ಣ =(ಪ್ಲಾಟಿನಂ ಕೋಬಾಲ್ಟ್ ಪ್ರಮಾಣದಲ್ಲಿ ಘಟಕಗಳು) | ೫.೦ | ೨೫ | ೫ | ೫೦ |

| | | | | | |
|---|---|---|---|---|---|
| ೩ | ಪಿ.ಎಚ್. | ೭.೦ರಿಂದ ೮.೫ | ೬.೫ರಿಂದ ೯.೨ | ೭.೦ರಿಂದ ೮.೫ | ೬.೫ರಿಂದ ೯.೨ |
| ೪ | ಪೂರ್ಣವಾಗಿ ಕರಗಿದ ಘನವಸ್ತುಗಳು (ಮಿ. ಗ್ರಾಂ/ಲೀ.) | - | - | ೫೦೦ | ೧೫೦೦ |
| ೫ | ಒಟ್ಟು ಗಡಸುತನ | ೩೦೦ | ೬೦೦ | ೧೦೦೦ದವರೆಗೆ ಸಡಿಲ ಗೊಳಿಸಬಹುದಾಗಿದೆ. | |
| ೬ | ಕ್ಯಾಲ್ಸಿಯಂ | ೭೫ | ೨೦೦ | ೭೫ | ೨೦೦ |
| ೭ | ಕಬ್ಬಿಣ(ಮಿ.ಗ್ರಾಂ/ಲೀಟರ್ | ೦.೩ | ೧.೦ | ೦.೧ | ೦.೫ |
| ೮ | ಕ್ಲೋರೈಡ್ | ೨೫೦ | ೧೦೦೦ | ೨೦೦ | ೬೦೦ |
| ೯ | ಸಲ್ಫೇಟ್ | ೨೦೦ | ೪೦೦ | ೨೦೦ | ೪೦೦ |
| ೧೦ | ಫ್ಲೋರೈಡ್ | ೧.೦ | ೨.೦ | ೦.೫ | ೧.೦ರಿಂದ ೧.೫ |
| ೧೧ | ನೈಟ್ರೇಟ್‌ಗಳು | ೨೦.೦ | ೫೦.೦ | - | ೫೦ರಿಂದ ೧೦೦ |
| ೧೨ | ಆಲ್‌ಕಲಿನಿಟಿ | ೪೦೦ | - | ೪೦೦ | - |
| ೧೩ | ಕನ್‌ಡಕ್ಟಿವಿಟಿ | ೧೫೦೦ | ೩೦೦೦ | ೧೫೦೦ | ೩೦೦೦ |

೧೪. ಏಕಾಣುಜೀವಿ ಗುಣಮಟ್ಟಕ್ಕೆ ಸಂಬಂಧಿಸಿದ ಮಾನದಂಡಗಳು

೧) ವಿತರಣಾ ವ್ಯವಸ್ಥೆಗೆ ಸೇರ್ಪಡೆಯಾದ ನೀರು ೧೦೦ ಮಿ.ಲೀ.ಗಳ ಯಾವುದೇ ಮಾದರಿಯಲ್ಲಿ ಕೊಲಿಫಾರಂ ಕೌಂಟ್ ಸೊನ್ನೆ ಇರಬೇಕು.

೨) ವಿತರಣಾ ವ್ಯವಸ್ಥೆಯಲ್ಲಿನ ನೀರು ಕೆಳಕಂಡ ಎಲ್ಲಾ ಮೂರು ಮಾನದಂಡಗಳನ್ನು ಪೂರೈಸಬೇಕು.

- ೧೦೦ಮಿಲಿಗಳ ಯಾವುದೇ ಮಾದರಿಯಲ್ಲಿ ಇ-ಕೊಲಿ ಕೌಂಟ್ ಸೊನ್ನೆ ಇರಬೇಕು.
- ಕೊಲಿಫಾರಂ ಜೀವಾಣುಗಳು ಯಾವುದೇ ಮಾದರಿಯಲ್ಲಿ ೧೦: ೧೦೦ ಮಿಲಿಗಳಿಗಿಂತ ಹೆಚ್ಚಿರಬಾರದು.

ಯಾವುದೇ ಅನುಕ್ರಮ ಮಾದರಿಯ ೧೦೦ಮಿಲಿ. ನೀರಿನಲ್ಲಿ ಅಥವಾ ವರ್ಷದಲ್ಲಿ ಸಂಗ್ರಹಿಸಿದ ಮಾದರಿಗಳ ಶೇಕಡ ೫೦ ಕ್ಕಿಂತ ಹೆಚ್ಚಿನ ಮಾದರಿಗಳಲ್ಲಿ ಕೊಲಿಫಾರಂ ಜೀವಿಗಳು ಕಂಡುಬರಬಾರದು.

೩) ಯಾವುದೇ ೧೦೦ಮಿಲಿ. ಮಾದರಿಯಲ್ಲಿ ಇ-ಕೊಲಿ ಕೌಂಟ್ ಸೊನ್ನೆಯಾಗಿರಬೇಕು ಮತ್ತು ಕೊಲಿಫಾರಂ ಜೀವಿಗಳು ೩: ೧೦೦ ಮಿಲಿ. ಮೀರಬಾರದು.

ಈ ಮೇಲ್ಕಂಡ ಮಾಪಕಗಳ ಪ್ರಕಾರ ರಾಜ್ಯದ ಎಲ್ಲಾ ಗ್ರಾಮಾಂತರ ಕುಡಿಯುವ ನೀರಿನ ಗುಣಮಟ್ಟವನ್ನು ಪರೀಕ್ಷಿಸಿದ ಪ್ರಕಾರ ಕಂಡುಬಂದಿರುವ ಫಲಿತಾಂಶಗಳು ಕೆಳಕಂಡಂತಿವೆ.

| ಪ್ರದೇಶ | ಕ್ರಮ ಸಂಖ್ಯೆ | ಜಿಲ್ಲೆ | ವಸತಿ ಸ್ಥಳಗಳ ಸಂಖ್ಯೆ | ಅಂದಾಜು ಮಾಡಲಾದ ಶೇಕಡಾವಾರು ಗುಣಮಟ್ಟ ಸಮಸ್ಯೆ ಜನವಸತಿ ಸ್ಥಳಗಳು. |
|---|---|---|---|---|
| ಕರಾವಳಿ | ೧ | ದಕ್ಷಿಣ ಕನ್ನಡ | ೩,೧೩೭ | ೬.೨೨% |
| | ೨ | ಉಡುಪಿ | ೩,೯೦೧ | ೧೮.೧೩% |
| | ೩ | ಉತ್ತರ ಕನ್ನಡ | ೫,೬೪೦ | ೧೮.೧೩% |
| | | **ಒಟ್ಟು** | **೧೨,೬೭೮** | |
| ಮಲೆನಾಡು | ೪ | ಕೊಡಗು | ೫೭೩ | ೧೧.೧೭% |
| | ೫ | ಹಾಸನ | ೩,೯೦೦ | ೩.೧೫% |
| | ೬ | ಚಿಕ್ಕಮಗಳೂರು | ೩,೩೬೬ | ೧೦.೧೬% |
| | ೭ | ಶಿವಮೊಗ್ಗ | ೪,೪೨೪ | ೧೮.೧೩% |
| | | **ಒಟ್ಟು** | **೧೨,೨೭೩** | |
| ಉತ್ತರಮೈದಾನ | ೮ | ಬೀದರ್ | ೮೧೨ | ೫೪.೮೦% |
| | ೯ | ಗುಲ್ಬರ್ಗಾ | ೨,೨೯೬ | ೧೮.೧೩% |
| | ೧೦ | ರಾಯಚೂರು | ೧,೨೧೯ | ೧೮.೧೩% |
| | ೧೧ | ಕೊಪ್ಪಳ | ೭೦೯ | ೭೦.೧೩% |
| | ೧೨ | ಬಳ್ಳಾರಿ | ೧,೧೬೮ | ೧೮.೧೩% |
| | ೧೩ | ಬಿಜಾಪುರ | ೯೨೮ | ೧೮.೧೩% |
| | ೧೪ | ಬಾಗಲಕೋಟೆ | ೬೩೪ | ೧೪.೫೧% |
| | ೧೫ | ಧಾರವಾಡ | ೪೯೪ | ೧೮.೧೩% |
| | ೧೬ | ಗದಗ್ | ೩೫೦ | ೧೮.೧೩% |
| | ೧೭ | ಹಾವೇರಿ | ೬೩೦ | ೧೮.೧೩% |
| | ೧೮ | ಬೆಳಗಾಂ | ೧,೫೦೬ | ೧೮.೧೩% |
| | | **ಒಟ್ಟು** | **೧೦,೭೪೬** | |
| ದಕ್ಷಿಣ ಮೈದಾನ | ೧೯ | ದಾವಣಗೆರೆ | ೧,೦೮೮ | ೧೮.೧೩% |
| | ೨೦ | ಚಿತ್ರದುರ್ಗ | ೧,೩೬೯ | ೧೮.೧೩% |

| | | | | |
|---|---|---|---|---|
| | ೨೧ | ತುಮಕೂರು | ೫,೪೭೮ | ೫.೪೨% |
| | ೨೨ | ಬೆಂಗಳೂರು ಗ್ರಾಮಾಂತರ | ೧,೨೮೫ | ೧೮.೧೩% |
| | ೨೩ | ಬೆಂಗಳೂರು ನಗರ | ೩,೩೯೧ | ೩೪.೧೫% |
| | ೨೪ | ಕೋಲಾರ | ೩,೭೪೨ | ೪೪.೫೮% |
| | ೨೫ | ಮಂಡ್ಯ | ೧,೮೭೮ | ೬.೭೧% |
| | ೨೬ | ಮೈಸೂರು | ೧,೯೩೪ | ೧೮.೧೩% |
| | ೨೭ | ಚಾಮರಾಜ ನಗರ | ೮೩೦ | ೧೮.೧೩% |
| | | ಒಟ್ಟು | ೨೦,೯೯೫ | |
| | | ರಾಜ್ಯ ಒಟ್ಟು | ೫೬,೬೮೨ | ೧೮.೧೩% |

ಒಂದು ಕಡೆ ಅಂತರ್ಜಲ ಗುಣಮಟ್ಟ ಸಮಸ್ಯೆಯಾದರೆ ಮತ್ತೊಂದು ಕಡೆ ವ್ಯಾಪಕವಾದ ಬಯಲು ಮಲವಿಸರ್ಜನೆಯಿಂದ ಸುರಕ್ಷಿತ ಕುಡಿಯುವ ನೀರು ಕಲುಷಿತಗೊಳ್ಳುತ್ತಿದ್ದು ಗ್ರಾಮೀಣ ಸಮುದಾಯ ಮಲ ಮತ್ತು ನೀರಿನಿಂದ ಹರಡುವ ಕಾಯಿಲೆಗಳಾದ ಅತಿಸಾರ, ಟೈಫಾಯ್ಡ್, ಕಾಮಾಲೆ, ಪೋಲಿಯೋ, ರಕ್ತಭೇದಿ, ಆಮಶಂಕೆ, ಜಂತುಹುಳು, ಕೊಕ್ಕೆಹುಳು ಕಾಯಿಲೆಗಳಿಂದ ನರಳುತ್ತಿದ್ದಾರೆ. ಇವುಗಳು ತಡೆಗಟ್ಟುವ ಕಾಯಿಲೆಗಳಾಗಿದ್ದರೂ ಸಹ ಸಮುದಾಯದಲ್ಲಿ ಅರಿವಿನ ಕೊರತೆಯಿಂದ ತಡೆಗಟ್ಟಲು ಸಾಧ್ಯವಾಗುತ್ತಿಲ್ಲ. ಈ ಕಾಯಿಲೆಗಳಿಂದ ಕುಟುಂಬದ ಮೇಲೆ ವೈದ್ಯಕೀಯ ಖರ್ಚಿನ ಹೊರೆ ಹೆಚ್ಚಾಗುವುದಲ್ಲದೆ ತಮ್ಮ ದಿನಗೂಲಿಯನ್ನು ಅಂಥಾ ಸಮಯದಲ್ಲಿ ಕಳೆದುಕೊಂಡು ಅವರ ಆರ್ಥಿಕ ಸಮಸ್ಯೆ ಇನ್ನೂ ಹೆಚ್ಚಾಗುತ್ತಿರುತ್ತದೆ.

ಈ ಎಲ್ಲಾ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಸರ್ಕಾರ ಗ್ರಾಮೀಣ ಬದುಕಿಗೆ ಶುದ್ಧ ಕುಡಿಯುವ ನೀರಿನ ಪೂರೈಕೆಯನ್ನು ಮಾಡುತ್ತಾ ಬರುತ್ತಿದೆ. ಆದರೆ ಸಾಮಾನ್ಯವಾಗಿ ಈ ಸೌಲಭ್ಯಗಳ ಸರಿಯಾದ ಕಾರ್ಯಾಚಾರಣೆ ಮತ್ತು ನಿರ್ವಹಣೆಯ ಕೊರತೆಯಿಂದ ಸೌಲಭ್ಯಗಳು ಹಾಳಾಗಿ ಹೋಗುತ್ತಿರುವ ದೃಶ್ಯ ಸರ್ವೆಸಾಮಾನ್ಯವಾಗಿದೆ. ಸಮುದಾಯದ ಮನಸ್ಸಿನಲ್ಲಿ ಇದು ಸರ್ಕಾರದ ಜವಾಬ್ದಾರಿಯೆಂಬ ಕಲ್ಪನೆ ಇರುವುದರಿಂದ ಇಂತಹ ಸ್ಥಿತಿಗೆ ಬಂದಿದೆ. ಸಮುದಾಯದಲ್ಲಿರುವ ಎಲ್ಲಾ ಬಳಕೆದಾರರು ಸರ್ಕಾರ ಒದಗಿಸುತ್ತಿರುವ ನೀರು ಮತ್ತು ನೈರ್ಮಲ್ಯದ ಸೌಲಭ್ಯಗಳು ಅವರ ಅನುಕೂಲಕ್ಕೆಂದು ತಿಳಿದು ಅವುಗಳು ತಮ್ಮ ಆಸ್ತಿ ಎಂದು ಪರಿಗಣಿಸುವುದು ಅನಿವಾರ್ಯವಾಗಿದೆ. ಈ ಸ್ಥಿತಿಗೆ ಬರಬೇಕಾದರೆ ಸರ್ಕಾರವು ನವೆಂಬರ್ ೨೦೦೨ರಲ್ಲಿ ಹೊರಡಿಸಿದ ಸುತ್ತೋಲೆಯ ಪ್ರಕಾರ ತಿಂಗಳಿಗೆ ಬೀದಿ ನಲ್ಲಿಯ ಬಳಕೆದಾರರು ರೂ.೧೦/- ಮತ್ತು ಮನೆಗೆ ಸಂಪರ್ಕ ಹೊಂದಿರುವವರು ರೂ.೨೫/- ಗಳನ್ನು ಗ್ರಾಮ ಪಂಚಾಯತಿಗೆ ತೆರಿಗೆಯನ್ನು ನೀಡಬೇಕಾಗಿರುತ್ತದೆ. ಆಗ ಮಾತ್ರ ಸರ್ಕಾರದ ಪಂಚಾಯತ್ ರಾಜ್ ಕೆಳಹಂತದ ಸಂಸ್ಥೆಯಾದ ಗ್ರಾಮ ಪಂಚಾಯತಿಯು ತಮ್ಮ ಗ್ರಾಹಕರಿಗೆ ನಿರಂತರವಾಗಿ ಶುದ್ಧ ಕುಡಿಯುವ ನೀರನ್ನು ಸರಬರಾಜು ಮಾಡಲು ಸಾಮರ್ಥ್ಯವನ್ನು ಹೊಂದಲು ಅನುಕೂಲವಾಗುತ್ತದೆ.

ಈ ದಿಸೆಯಲ್ಲಿ ಕರ್ನಾಟಕ ಸರ್ಕಾರ ಉತ್ತರ ಕರ್ನಾಟಕದ ೧೧ ಜಿಲ್ಲೆಗಳಾದ ಉತ್ತರ ಕನ್ನಡ, ಬೆಳಗಾಂ, ಬಿಜಾಪುರ, ಬಾಗಲಕೋಟೆ, ಧಾರವಾಡ, ಗದಗ್, ಹಾವೇರಿ, ಬೀದರ್, ಗುಲ್ಬರ್ಗಾ, ರಾಯಚೂರು, ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಜಲ ನಿರ್ಮಲ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿರುವ ೩೮೪ ಗ್ರಾಮಪಂಚಾಯತಿಗಳಲ್ಲಿ ೨೭೦ ಗ್ರಾಮಪಂಚಾಯತಿಗಳು ಪರಿಷ್ಕೃತಗೊಳಿಸಿದ ನೀರಿನ ದರವಾದ ರೂ.೧೦/- ಮತ್ತು ರೂ.೨೫/- ಗಳನ್ನು ಜಾರಿಗೊಳಿಸಿವೆ. ಇದು ಸ್ವಾವಲಂಬನೆಗೆ ಒಂದು ಮುಖ್ಯ ಹೆಜ್ಜೆಯಾಗಿದೆ ಎಂಬುದು ಗಮನಿಸುವ ವಿಷಯವಾಗಿದೆ. ಇದೇ ಪ್ರಕಾರ ರಾಜ್ಯದ ಎಲ್ಲಾ ಜನವಸತಿಗಳಲ್ಲಿ ಜಾರಿಗೆ ಬಂದಲ್ಲಿ ಗ್ರಾಮ ಪಂಚಾಯತಿಗಳು ತಮ್ಮ ಬಳಕೆದಾರಿಗೆ ಬಹುಮಟ್ಟಿಗೆ ನೀರು ಸರಬರಾಜಿನಲ್ಲಿ ಉತ್ತಮ ಸೇವೆಯನ್ನು ನೀಡಲು ಸಹಾಯಕವಾಗುತ್ತದೆ.

## ಜಲನಿರ್ಮಲ ಯೋಜನೆ :

ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ಸಮಗ್ರ ಗ್ರಾಮೀಣ ನೀರು ಸರಬರಾಜು ಮತ್ತು ಪರಿಸರ ನೈರ್ಮಲ್ಯ ಯೋಜನೆ - ೧ರ ಅನುಷ್ಠಾನ ರಾಜ್ಯದ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯದ ವಲಯ ಸುಧಾರಣೆಗೆ ಒಂದು ಪ್ರೋತ್ಸಾಹದಾಯಕ ಬಲವನ್ನು ಸ್ಥಾಪಿಸಿದೆ. ಕರ್ನಾಟಕ ಸರ್ಕಾರ ವಿಶ್ವ ಬ್ಯಾಂಕನ್ನು ಭಾರತ ಸರ್ಕಾರದ ಮುಖೇನ ಮುಂದುವರೆದ (ಫಾಲೋಆನ್) ಯೋಜನೆಯ ಸಹಾಯಕ್ಕೆ ಪ್ರಸ್ತಾಪಿಸಿತು. ಬ್ಯಾಂಕ್೨೦೦ ಮಿಲಿಯನ್ನು ಯು.ಎಸ್. ಡಾಲರ್‌ನ ಯೋಜನೆ ಗಾತ್ರವನ್ನು ಸೂಚಿಸಿ ಬ್ಯಾಂಕ್‌ನಿಂದ ೧೫೦ ಮಿಲಿಯನ್ ಯು.ಎಸ್.ಡಾಲರಿನ ಸಹಾಯ ನೀಡಲು ಒಪ್ಪಿತು. ಮೊದಲನೆಯ ಗ್ರಾಮೀಣ ನೀರು ಸರಬರಾಜು ಮತ್ತು ಪರಿಸರ ನೈರ್ಮಲ್ಯ ಯೋಜನೆಯಿಂದ ಕಲಿತಂಥ ಪಾಠಗಳಿಂದ ಮುಂದುವರೆದ ಯೋಜನೆಯನ್ನು ಸ್ಥಿರವಾದ ಆಧಾರದ ಮೇಲೆ ಪ್ರಾರಂಭಿಸುವ ಅಪೇಕ್ಷೆಯನ್ನು ಹೊಂದಿದ್ದು, ಇದರಿಂದ ರಾಜ್ಯದ ನೀರು ಸರಬರಾಜು ಮತ್ತು ನೈರ್ಮಲ್ಯದ ಕಾರ್ಯತಂತ್ರ ಪತ್ರ ೨೦೦೦-೨೦೦೫ರಲ್ಲಿ ಇರುವ ಧ್ಯೇಯೋದ್ದೇಶಗಳನ್ನು ಮುಟ್ಟುವುದಾಗಿದೆ. ಸರ್ಕಾರವು ಯೋಜನಾ ನೀತಿಗಳಿಗೆ ಅನುಮತಿ ನೀಡಿ, ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿಪಿ /೧೪೪೫/ಪಿಪಿಎಂ/೯೮, ದಿನಾಂಕ: ೧೯-೦೬-೨೦೦೧ ರಂದು ಹೊರಡಿಸಿ ಯೋಜನೆಗೆ "ಜಲ ನಿರ್ಮಲ ಯೋಜನೆ" ಎಂದು ಹೆಸರಿಲಾಯಿತು. ಜಲನಿರ್ಮಲ ಯೋಜನೆ ರಾಜ್ಯದಲ್ಲಿ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ವಲಯದಲ್ಲಿ ಒಂದು ಹೊಸ ಕಾಲಕ್ಕೆ ದ್ವಾರಪಾಲಕನಾಗಬೇಕಾಗಿದೆ.

## ಯೋಜನಾ ಮೊತ್ತ :

| ಕ್ರಮ ಸಂಖ್ಯೆ | ಮೂಲ | ಮೊತ್ತ (ಕೋಟಿ ರೂ.ಗಳಲ್ಲಿ) | ಮೊತ್ತ (ಮಿಲಿಯನ್ ಡಾಲರ್‌ಗಳಲ್ಲಿ) | ಒಟ್ಟುಮೊತ್ತದ ಶೇಕಡಾವಾರು |
|---|---|---|---|---|
| ೧ | ವಿಶ್ವ ಬ್ಯಾಂಕ್ | ೮೧೧.೭೭ | ೧೫೧.೬೦ | ೭೮.೩೭ |
| ೨ | ಕರ್ನಾಟಕ ಸರ್ಕಾರ | ೧೧೦.೭೬ | ೨೦.೭೫ | ೧೦.೭೩ |
| ೩ | ಗ್ರಾಮ ಪಂಚಾಯತಿ | ೫೪.೬೦ | ೧೦.೧೧ | ೫.೨೩ |
| ೪ | ಸಮುದಾಯ ಕೊಡುಗೆ | ೫೯.೨೪ | ೧೦.೯೮ | ೫.೬೭ |
| | ಒಟ್ಟು | ೧೦೩೫.೩೭ | ೧೯೩.೪೪ | ೧೦೦.೦೦ |

## ಯೋಜನೆಯ ಉದ್ದೇಶಗಳು :

(ಅ) ಸುಧಾರಿಸಲ್ಪಟ್ಟ ಮತ್ತು ಸುಸ್ಥಿರವಾದ ಕುಡಿಯುವ ನೀರು ಮತ್ತು ನೈರ್ಮಲ್ಯ ಸೇವೆಗಳನ್ನು ಗ್ರಾಮೀಣ ಸಮುದಾಯವು ಪಡೆಯುವ ಅವಕಾಶ ಹೆಚ್ಚಿಸುವುದು.

(ಆ) ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸೇವಾ ಸೌಲಭ್ಯಗಳನ್ನು ಗ್ರಾಮಪಂಚಾಯತಿಗಳು ಹಾಗೂ ಬಳಕೆದಾರರ ಗುಂಪುಗಳಿಗೆ ವಿಕೇಂದ್ರೀಕರಿಸಿ ಸಾಂಸ್ಥೀಕರಿಸುವುದು.

ಮೇಲ್ಕಂಡ ಉದ್ದೇಶಗಳಿಂದ ಕೆಳಕಂಡ ಉಪ ಉದ್ದೇಶಗಳನ್ನು ಸಾಧಿಸುವುದಾಗಿದೆ.

* ಸುಸ್ಥಿರ ಅಭಿವೃದ್ಧಿ.
* ಬಡತನ ಕಡಿಮೆ ಮಾಡುವುದು.
* ಸುಸ್ಥಿರವಾದ ಆರೋಗ್ಯ ಮತ್ತು ಶುಚಿತ್ವದ ಸೌಲಭ್ಯಗಳನ್ನು ಗ್ರಾಮೀಣ ಜನತೆಗೆ ಒದಗಿಸುವುದು.

* ಸಾಮಾನ್ಯವಾಗಿ ಸಮುದಾಯವನ್ನು ಮತ್ತು ವಿಶೇಷವಾಗಿ ಗ್ರಾಮೀಣ ಬಡಜನರು ಅದರಲ್ಲೂ ಮಹಿಳೆಯರನ್ನು ಒಳಗೊಳ್ಳುವಂತೆ ಮಾಡಿ ಶಕ್ತಗೊಳಿಸುವುದು.
* ಪ್ರಜಾಸತ್ತಾತ್ಮಕ ವಿಕೇಂದ್ರೀಕರಣದ ವಿಧಾನವನ್ನು ಬಲಪಡಿಸುವುದು.

ಸಮರ್ಥ ನೀತಿ ಚೌಕಟ್ಟಿನಲ್ಲಿ ದೀರ್ಘಕಾಲಿಕ ಹಾಗೂ ಸುಸ್ಥಿರ ಗ್ರಾಮೀಣ ನೀರು ಸರಬರಾಜು, ನೈರ್ಮಲ್ಯವಲಯದ ಅನುಷ್ಠಾನ ಮತ್ತು ಕಾರ್ಯತಂತ್ರದ ಸ್ವರೂಪವನ್ನು ಉತ್ತೇಜಿಸುವುದು.

**ಯೋಜನೆಯ ಅಂಗಗಳು :**

ಅ) ಗ್ರಾಮೀಣ ನೀರು ಸರಬರಾಜು ಯೋಜನೆಗಳು ನೀರಿನ ಮೂಲವನ್ನು ರಕ್ಷಿಸಲು ಅಂತರ್ಜಲ ಪುನಶ್ಚೇತನ ಕಾರ್ಯಕ್ರಮಗಳನ್ನೊಳಗೊಂಡಿವೆ.

ಆ) ಗ್ರಾಮೀಣ ನೈರ್ಮಲ್ಯ-ಸ್ವಚ್ಛ ಗ್ರಾಮದ ೫ ಅಂಗಗಳೆಂದರೆ-

* ಗ್ರಾಮಗಳ ಆಂತರಿಕ ರಸ್ತೆಗಳಿಗೆ ಹಾಸುಗಲ್ಲು ಹಾಕುವುದು.
* ಮಳೆ ನೀರು ಹಾಗೂ ಬಚ್ಚಲು ನೀರು ಹರಿದುಹೋಗಲು ಸಮರ್ಥ ಚರಂಡಿಗಳನ್ನು ನಿರ್ಮಿಸುವುದು.
* ಸಮುದಾಯ ಕಾಂಪೋಸ್ಟ್ ಗುಂಡಿಗಳನ್ನು ಒದಗಿಸಲು ಹಾಗೂ ಜನವಸತಿ ಪ್ರದೇಶಗಳಲ್ಲಿರುವ ತಿಪ್ಪೆಗುಂಡಿಗಳನ್ನು ಗ್ರಾಮದ ಹೊರಭಾಗಗಳಿಗೆ ಸ್ಥಳಾಂತರಿಸಲು ಅವಕಾಶ.
* ಎಲ್ಲಾ ಕುಟುಂಬಗಳಿಗೆ ಹೊಗೆರಹಿತ ಒಲೆ ಹಾಗು ಜೈವಿಕ ಅನಿಲ ಯಂತ್ರಗಳಿಗೆ ಅವಕಾಶ.
* ಎಲ್ಲಾ ವಸತಿಗಳಿಗೂ ವೈಯಕ್ತಿಕ ಶೌಚಾಲಯ, ವೈಯಕ್ತಿಕ ಒಡೆತನವುಳ್ಳ ಗುಂಪು ಶೌಚಾಲಯಗಳು.
* ಸಮುದಾಯ ಶೌಚಾಲಯಗಳ ಸಂಕೀರ್ಣಗಳು ಹಾಗೂ ಸಾಂಸ್ಥಿಕ ಶೌಚಾಲಯಗಳನ್ನು ನಿರ್ಮಿಸುವುದು.

ಇ) ನೈರ್ಮಲ್ಯ ಮತ್ತು ಶುಚಿತ್ವವನ್ನು ಉತ್ತೇಜಿಸುವುದು.

ಈ) ಸಾಮರ್ಥ್ಯ ವೃದ್ಧಿಗೊಳಿಸುವುದು ಮತ್ತು ತರಬೇತಿ.

ಉ) ರಾಜ್ಯಾದ್ಯಂತ ವಲಯಾಭಿವೃದ್ಧಿ - ಅಧ್ಯಯನ ಮತ್ತು ಕಾರ್ಯಕ್ರಮಗಳಿಂದ ರಾಜ್ಯಾದ್ಯಂತ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ವಲಯದಲ್ಲಿ ರಾಜ್ಯದ ಸಾಮರ್ಥ್ಯವನ್ನು ಹೆಚ್ಚಿಸಿ, ವಲಯ ಸುಧಾರಣೆಯನ್ನು ಮೇಲ್ದರ್ಜೆಗೇರಿಸಿ, ಸುಧಾರಿಸಲ್ಪಟ್ಟ ವ್ಯವಸ್ಥೆ ಹಾಗೂ ನಿಯಮಗಳನ್ವಯ ಮುಂದೊಯ್ಯುವಂತೆ ಮಾಡುವುದು.




# ಸಣ್ಣ ಪ್ರಮಾಣದ ಕೈಗಾರಿಕಾ ಕ್ಷೇತ್ರ

ಎಂ. ವಿಶ್ವನಾಥ್

ಕರ್ನಾಟಕದಲ್ಲಿ ೩೧-೩-೨೦೦೪ ರಂತೆ ೩,೧೦,೪೩೮ ಸಣ್ಣ ಪ್ರಮಾಣದ ಕೈಗಾರಿಕೆಗಳು ನೋಂದಾಯಿಸಲ್ಪಟ್ಟಿದ್ದು, ಅವುಗಳ ಹೂಡಿಕೆಯು ರೂ. ೬೬೩೪.೨೮ ಕೋಟಿಗಳು. ಈ ಸಣ್ಣ ಪ್ರಮಾಣದ ಕೈಗಾರಿಕೆಗಳು ೧೭.೭೮ ಲಕ್ಷ ಜನರಿಗೆ ಉದ್ಯೋಗ ಒದಗಿಸಿವೆ.

| ಕ್ರಮ ಸಂಖ್ಯೆ | ಅವಧಿ | ನೋಂದಾಯಿಸಿದ ಸಣ್ಣ ಪ್ರಮಾಣ ಕೈಗಾರಿಕೆ ಘಟಕಗಳ ಸಂಖ್ಯೆ | ಹೂಡಿಕೆ ಕೋಟಿ ರೂ.ಗಳಲ್ಲಿ | ಉದ್ಯೋಗ |
|---|---|---|---|---|
| ೧. | ೩೧-೩-೨೦೦೨ ರಂತೆ | ೨,೮೬,೧೮೯ | ೫,೭೫೫.೩೦ | ೧೬,೬೪,೮೧೯ |
| ೨. | ೨೦೦೨-೦೩ರಲ್ಲಿ | ೧೨,೦೨೯ | ೪೦೮.೩೬ | ೫೭,೩೭೧ |
| | ೩೧-೩-೦೩ರಂತೆ | ೨,೯೮,೨೧೮ | ೬೧೬೩.೭೫ | ೧೭,೨೨,೧೯೦ |
| ೩. | ೦೩-೦೪ರಲ್ಲಿ | ೧,೨೨೦ | ೩೭೦.೫೩ | ೫೬,೭೯೦ |
| | ೧-೪-೨೦೦೪ರಂತೆ | ೩,೧೦,೪೩೮ | ೬೫೪೩-೨೮ | ೧೭,೭೮,೯೮೦ |

ಕರ್ನಾಟಕದಲ್ಲಿ ಸಣ್ಣ ಪ್ರಮಾಣದ ಕೈಗಾರಿಕಾ ಕ್ಷೇತ್ರವು ವಿಸ್ತಾರವಾದ ಕೈಗಾರಿಕೆಗಳನ್ನು ಆವರಿಸಿಕೊಂಡಿದ್ದು, ಅವುಗಳಲ್ಲಿ ಆಹಾರ ಪರಿಷ್ಕರಣೆ, ಬಟ್ಟೆಗಳು ಮತ್ತು ಉಡುಪುಗಳು, ಸಾಮಾನ್ಯ ಇಂಜಿನಿಯರಿಂಗ್, ಎಲೆಕ್ಟ್ರಾನಿಕ್ಸ್, ಆಟೋಮೊಬೈಲ್ಸ್, ಮರ ಮತ್ತು ಮರಮುಟ್ಟುಗಳು, ಔಷಧಿಗಳು, ರಾಸಾಯನಿಕಗಳು ಮುಂತಾದವು ಸೇರಿವೆ. ಸಣ್ಣ ಪ್ರಮಾಣ ಕ್ಷೇತ್ರದಲ್ಲಿನ ಬಹಳ ಗಣನೀಯವಾದ ಅಂಶವೆಂದರೆ ತುಂಬಾ ಹೆಚ್ಚಿನ ಕಾರ್ಮಿಕ-ಬಂಡವಾಳ ಪ್ರಮಾಣ ಪ್ರತಿ ೧.೦೦ ಕೋಟಿ ರೂ.ಗಳ ಹೂಡಿಕೆಗೆ ಸಣ್ಣ ಪ್ರಮಾಣದ ಕ್ಷೇತ್ರವು ಸುಮಾರು ೨೮೦ ಜನರಿಗೆ ಉದ್ಯೋಗ ಒದಗಿಸುತ್ತದೆ. ಇದಕ್ಕೆ ವಿರುದ್ಧವಾಗಿ ದೊಡ್ಡ ಮತ್ತು ಮಧ್ಯಮ ಕೈಗಾರಿಕೆಗಳು ಪ್ರತಿ ೧.೦೦ ಕೋಟಿ ರೂ.ಗಳಿಗೆ ೧೫ ರಿಂದ ೨೦ ಜನರಿಗೆ ಉದ್ಯೋಗ ಒದಗಿಸುತ್ತವೆ.

ಜಾಗತೀಕರಣ, ಉದಾರೀಕರಣ ಮತ್ತು ಕೈಗಾರಿಕಾ ಹಿಂಜರಿತ/ಕೈಗಾರಿಕಾ ನಿಧಾನಗತಿಗಳು ಅನೇಕ ಸವಾಲುಗಳನ್ನು ಎದುರಿಸಬೇಕಾಯಿತು. ಅದೇ ಸಮಯದಲ್ಲಿ ವಿಶ್ವ ವ್ಯಾಪಾರ ಸಂಸ್ಥೆಯು ಸಣ್ಣ ಪ್ರಮಾಣದ ಕ್ಷೇತ್ರಕ್ಕೆ ಅನೇಕ ಅವಕಾಶಗಳನ್ನು ಕೂಡ ತೆರೆಯುತ್ತದೆ. ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಸಣ್ಣ ಪ್ರಮಾಣದ ಕೈಗಾರಿಕೆಗಳು ಮಧ್ಯಮ ಮತ್ತು ದೊಡ್ಡ ಪ್ರಮಾಣದ ಕೈಗಾರಿಕೆಗಳಿಂದ ಹಾಗೂ ಬಹುರಾಷ್ಟ್ರೀಯ ಕಂಪನಿಗಳಿಂದ ಅವುಗಳ ಉತ್ಪನ್ನದ ಗುಣಮಟ್ಟ ಮತ್ತು ಬೆಲೆಯಲ್ಲಿ ತೀವ್ರವಾದ ಪೈಪೋಟಿಯನ್ನು ಎದುರಿಸುತ್ತಿದೆ.

ಉದಾರೀಕರಣ ಮತ್ತು ಜಾಗತೀಕರಣವೆಂಬ ಅವಳಿ ಜವಳಿ ಶಕ್ತಿಗಳು ಮತ್ತು ಡಬ್ಲ್ಯುಟಿಓ ದ ಬಹುಮುಖ ವ್ಯಾಪಾರ ಆಡಳಿತವು ಸಣ್ಣ ಪ್ರಮಾಣದ ಕೈಗಾರಿಕಾ ಕ್ಷೇತ್ರಕ್ಕೆ ಅನೇಕ ಸವಾಲುಗಳನ್ನು ಒಡ್ಡುತ್ತದೆ. ಸಣ್ಣ ಕೈಗಾರಿಕೆಯು ಎದುರಿಸಬೇಕಾದುದೇನೆಂದರೆ

ಎ) ತಾಂತ್ರಿಕ ಮೇಲ್ದರ್ಜೆ ಮತ್ತು ಉತ್ತಮ ಪದ್ಧತಿಗಳ ಮೂಲಕ ಬೆಲೆ ಹೆಚ್ಚಳ ಮತ್ತು ಗುಣಮಟ್ಟದಲ್ಲಿ ಸ್ಪರ್ಧೆ.

ಬಿ) ಆಧುನೀಕರಣ ಮತ್ತು ವಿಸ್ತರಣೆಯ ಮೂಲಕ ಹೆಚ್ಚಿನ ಚುರುಕಾದ ಆರ್ಥಿಕತೆಗಳನ್ನು ಸಾಧಿಸುವುದು.

ಸಣ್ಣ ಪ್ರಮಾಣದ ಕ್ಷೇತ್ರವು ತನ್ನ ಬೆಳವಣಿಗೆಗೆ ಅನೇಕ ಅಡೆತಡೆಗಳಿಗೆ ಒಳಪಟ್ಟಿರುತ್ತದೆ. ಪೂರಕ ಸೌಲಭ್ಯಗಳು ಸಾಕಷ್ಟಿಲ್ಲದಿರುವುದು, ಒದಗಿಸಿರುವಲ್ಲಿ ಪೂರಕ ಸೌಲಭ್ಯಗಳ ವೆಚ್ಚ, ಕಡಿಮೆ ಮತ್ತು ಅಕಾಲಿಕ ಸಾಲ, ಸಾಲದ ಹೆಚ್ಚಿನ ವೆಚ್ಚ, ಕಡಿಮೆ ಉತ್ಪಾದಕತೆಯಲ್ಲಿ ಪರಿಣಾಮಗೊಳ್ಳುವ ಹಳತಾದ ತಂತ್ರಜ್ಞಾನ, ಉತ್ಪನ್ನಗಳ ಕಳಪೆ ಮಟ್ಟ, ವಿಶ್ವ ವ್ಯಾಪಾರ ಕೇಂದ್ರದ ಬಹುಮುಖ ವ್ಯಾಪಾರ ಆಡಳಿತದಿಂದ ಉಂಟಾಗುವ. ಉತ್ತಮ ಗುಣಮಟ್ಟದ ಮತ್ತು ಅಗ್ಗದ ಉತ್ಪನ್ನಗಳ ಒಳಪ್ರವಾಹ ಮುಂತಾದವು ಆಗಿವೆ.

ಸಣ್ಣ ಪ್ರಮಾಣ ಕ್ಷೇತ್ರದ ಮುಖ್ಯ ಸಮಸ್ಯೆಯೆಂದರೆ ಆಧುನೀಕರಣದ ಆರ್ಥಿಕತೆಯಿಂದ ಉಂಟಾಗಿರುವ ಬಹುರಾಷ್ಟ್ರೀಯ ಕಂಪೆನಿಗಳ ವಿದೇಶಿ ಕಂಪನಿಗಳು ಮತ್ತು ದೊಡ್ಡ ಮತ್ತು ಮಧ್ಯಮ ಕೈಗಾರಿಕೆಗಳ ಸರಕುಗಳ ಬೆಲೆ ಮತ್ತು ಗುಣಮಟ್ಟವನ್ನು ಸಣ್ಣ ಪ್ರಮಾಣದ ಕೈಗಾರಿಕೆಗಳು ಎದುರಿಸಬೇಕಾಗುತ್ತದೆ. ಒಳ್ಳೆಯ ಗುಣಮಟ್ಟದ ಪೂರಕ ಸೌಲಭ್ಯ, ಆರ್ಥಿಕ ತಂತ್ರಜ್ಞಾನ ಮತ್ತು ಅಗ್ಗವಾದ ಹಣಕಾಸು ಅವುಗಳಿಗೆ ಸಾಮೀಪ್ಯವಿರುವುದಿಲ್ಲ.

ಆದರೂ, ಸಣ್ಣ ಕೈಗಾರಿಕಾ ಕ್ಷೇತ್ರವು ರಾಜ್ಯದ ಆರ್ಥಿಕತೆಯ ಸ್ಪಂದಿಸುವ ಮತ್ತು ಸಕ್ರಿಯ ಅಂಶವಾಗಿ ಯಾವಾಗಲೂ ಇದೆ. ದೊಡ್ಡ ಮತ್ತು ಮಧ್ಯಮ ಕೈಗಾರಿಕೆಗಳ ಸಹಾಯಕ ಘಟಕಗಳಾಗಿ ಈಗ ಅವುಗಳಿಗೆ ಸಹಾಯಕವಾಗಿರುವ ಇವು ವಿಶೇಷವಾಗಿ ಕರ್ನಾಟಕದಲ್ಲಿ ವಿಸ್ತಾರವಾದ ಮತ್ತು ಚದುರಿದ ಕೈಗಾರಿಕಾ ಆಧಾರವಾಗುವುದಕ್ಕೆ ಇದು ಅವಕಾಶ ಮಾಡಿಕೊಟ್ಟಿದೆ.

ಈ ಕೈಗಾರಿಕೆಗಳು ಬಲವಾದ ಸ್ಪರ್ಧೆಯನ್ನು ಜಯಪ್ರದವಾಗಿ ಎದುರಿಸುವುದಕ್ಕೆ ಸಹಾಯವಾಗಿ ಮತ್ತು ಜಾಗತೀಕರಣ, ಆಧುನೀಕರಣ, ವಿಶ್ವ ವ್ಯಾಪಾರ ಸಂಸ್ಥೆಯ ಒಪ್ಪಂದಗಳ ಪರಿಣಾಮವಾಗಿ ಈ ಕೈಗಾರಿಕೆಗಳಿಗೆ ಸಹಾಯಕವಾಗಲು ೨೦೦೧-೨೦೦೬ರ ಕೈಗಾರಿಕಾ ನೀತಿಯಲ್ಲಿ ಅನೇಕ ಕ್ರಮಗಳನ್ನು ಕರ್ನಾಟಕ ಸರಕಾರವು ಕೈಗೊಂಡಿದೆ.

ನೀತಿಯ ಮುಖ್ಯ ದೃಷ್ಟಿ ಎಂದರೆ,

- ತಂತ್ರಜ್ಞಾನವನ್ನು ಮೇಲ್ದರ್ಜೆಗೇರಿಸುವುದು
- ಗುಣಮಟ್ಟವನ್ನು ಮೇಲ್ದರ್ಜೆಗೇರಿಸುವುದು
- ವ್ಯಾಪಾರದ ಪರಿಸರದ ಅನಿರ್ಬಂಧತೆ
- ಪೂರಕ ಸೌಲಭ್ಯಗಳ ಅಭಿವೃದ್ಧಿ
- ಮಾನವ ಸಂಪನ್ಮೂಲ ಅಭಿವೃದ್ಧಿ
- ವಿಶ್ವ ವ್ಯಾಪಾರ ಸಂಸ್ಥೆಯ ರಿಲೇ ಕೇಂದ್ರದ ಸ್ಥಾಪನೆ
- ಸಾರ್ವಜನಿಕ-ಖಾಸಗಿ ಸಹಭಾಗಿತ್ವ

**ಕರ್ನಾಟಕದಲ್ಲಿ ಸಣ್ಣ ಪ್ರಮಾಣದ ಕೈಗಾರಿಕಾ ಕ್ಷೇತ್ರ ವಿಸ್ತಾರವಾಗಿದೆ. ಉದಾರೀಕರಣ ಮತ್ತು ಜಾಗತೀಕರಣವೆಂಬ ಅವಳಿ ಜವಳಿ ಶಕ್ತಿಗಳು ಮತ್ತು ಡಬ್ಲ್ಯುಟಿಓದ ಬಹುಮುಖ ನಿಯಂತ್ರಣಗಳನ್ನು ಸಣ್ಣ ಪ್ರಮಾಣದ ಕೈಗಾರಿಕಾ ಕ್ಷೇತ್ರಕ್ಕೆ ಸವಾಲಾಗಿ ಎದುರಿಸಬೇಕಾಗಿದೆ.**

ಉತ್ತಮ ಗುಣಮಟ್ಟದ ಉತ್ಪನ್ನಗಳನ್ನು ಉತ್ಪಾದಿಸುವುದರಲ್ಲಿ ಕೈಗಾರಿಕೆಗಳು ಸ್ಪರ್ಧಾತ್ಮಕವಾಗಿರುವುದಕ್ಕೆ ಸಹಾಯ ಮಾಡಲು ಪ್ರೋತ್ಸಾಹಗಳನ್ನು ಒದಗಿಸಲಾಗಿದೆ. ಅವು ಯಾವುವೆಂದರೆ, ಅಂತರರಾಷ್ಟ್ರೀಯ ಅರ್ಹತಾ ಪತ್ರ ಐಎಸ್‌ಓ-೯೦೦೦, ೧೪೦೦೦ದಂತಹ ಗುಣಮಟ್ಟದ ಅರ್ಹತಾ ಪತ್ರ. ತಂತ್ರಜ್ಞಾನದ ಮೇಲ್ದರ್ಜೆಗೇರಿಸುವ ಪ್ರಯತ್ನಗಳಿಗೆ ಸರಕಾರವು ಶೇ. ೪ ಸಬ್ಸಿಡಿಯನ್ನು ಒದಗಿಸಿ ೮.೫% ರಿಯಾಯಿತಿ ಬಡ್ಡಿದರದಲ್ಲಿ ಸಾಲಗಳನ್ನು ಎಸ್‌ಎಂಇಗಳಿಗೆ ಒದಗಿಸಲಾಗುತ್ತದೆ. ಸಾರ್ವಜನಿಕ-ಖಾಸಗಿ ಸಹಭಾಗಿತ್ವವಾಗಿ ಇನ್‌ಕ್ಯುಬೇಟರ್‌ಗಳ ಸ್ಥಾಪನೆ, ವಸ್ತು ಪರೀಕ್ಷಾಕೇಂದ್ರಗಳು ಮತ್ತು ಗುಣಮಟ್ಟ ಭರವಸೆ ಕೇಂದ್ರಗಳ ಸ್ಥಾಪನೆಗೆ ಕೂಡ ಒತ್ತು ಕೊಡಲಾಗಿದೆ.

## ಉದಾರೀಕರಣ, ಜಾಗತೀಕರಣ ಮತ್ತು ವಿಕೇಂದ್ರೀಕರಣ :

**೧. ಕರ್ನಾಟಕ ರಾಜ್ಯದಲ್ಲಿ ವಿಶ್ವ ವಾಣಿಜ್ಯ ಸಂಸ್ಥೆಯ ಒಪ್ಪಂದಗಳು ಮತ್ತು ಕೈಗಾರಿಕೆಗಳ ಬಗ್ಗೆ ಉದಾರೀಕರಿಸಿದ ಆರ್ಥಿಕ ನೀತಿಯ ಪರಿಣಾಮವಾಗಿ ಸವಾಲುಗಳು :**

ಎ) ವಿಶ್ವ ವ್ಯಾಪಾರ ಸಂಸ್ಥೆಯ ಬಹುಮುಖ ವ್ಯಾಪಾರ ಆಡಳಿತವು ಪರಿಮಾಣಾತ್ಮಕ ನಿರ್ಬಂಧಗಳನ್ನು ತೆಗೆದುಹಾಕುವುದರಲ್ಲಿ, ಸುಂಕದ ಅಡ್ಡಿಗಳಲ್ಲಿ ಇಳಿಮುಖ, ರಾಷ್ಟ್ರೀಯ ನಡವಳಿಕೆ ಅಂದರೆ ಆಂತರಿಕ ಮತ್ತು ವಿದೇಶಿ ಸರಕುಗಳ ಬಗ್ಗೆ ಸಮನಾದ ನಡವಳಿಕೆ, ನೈರ್ಮಲ್ಯ ಮತ್ತು ನೈರ್ಮಲ್ಯಜನ್ಯಗಳಲ್ಲಿ ಗುಣಮಟ್ಟಗಳ ರೀತಿಯಿಂದ ಅಂತರರಾಷ್ಟ್ರೀಯ ಗುಣಮಟ್ಟ ನಿಯಂತ್ರಣ ಮಾನದಂಡಗಳ ಅನ್ವಯ, ಉತ್ಪನ್ನ ಮತ್ತು ಪರಿಷ್ಕರಣದ ವಿಧಾನಗಳು ಮುಂತಾದವುಗಳಿಂದ ಮಾನದಂಡಗಳ ನಿಯಂತ್ರಣ. ಹಾಗಾಗಿ ಆಂತರಿಕ ಕೈಗಾರಿಕೆಯು ಇನ್ನೂ ಹೆಚ್ಚು ಸ್ಪರ್ಧೆಯನ್ನು ಗುಣಮಟ್ಟ ಬೆಲೆಯ ಅರ್ಥದಲ್ಲಿ ಬಹುರಾಷ್ಟ್ರೀಯಗಳಿಂದ ಮತ್ತು ಸರಕುಗಳ ಆಮದಿನಿಂದ ಹೆಚ್ಚಾದ ಸ್ಪರ್ಧೆಯನ್ನು ಎದುರಿಸುತ್ತದೆ.

ಬಿ) ಆರ್ಥಿಕತೆಯ ಉದಾರೀಕರಣದಿಂದ ವಿದೇಶಿ ಕಂಪನಿಗಳು/ಬಹುರಾಷ್ಟ್ರೀಯ ಕಂಪನಿಗಳು ಹಾಗೂ ದೊಡ್ಡ ಮತ್ತು ಮಧ್ಯ ಆಂತರಿಕ ಕಂಪನಿಗಳಿಂದ ತಯಾರಿಸಲ್ಪಟ್ಟ ಸರಕುಗಳಿಗೆ ಭಾರತದ ಮಾರುಕಟ್ಟೆಗಳು ತೆರೆಯುವಂತಾಗಿದೆ. ಒಂದು ಕಡೆಯಲ್ಲಿ ಸಣ್ಣ ಪ್ರಮಾಣದ ಕ್ಷೇತ್ರಗಳಿಗೆ ಮೀಸಲಿಡಲಾಗಿರುವ ಸರಕುಗಳಲ್ಲಿ ಇಳಿಮುಖವಾಗಿದೆ ಮತ್ತು ಇನ್ನೊಂದು ಕಡೆಯಲ್ಲಿ ಸಣ್ಣ ಪ್ರಮಾಣದ ಕೈಗಾರಿಕೆಗಳು ಮಧ್ಯ ಮತ್ತು ದೊಡ್ಡ ಕೈಗಾರಿಕೆಗಳು ಹಾಗೂ ಬಹುರಾಷ್ಟ್ರೀಯ ಕಂಪನಿಗಳ ಜೊತೆಯಲ್ಲಿ ಸ್ಪರ್ಧಿಸಬೇಕಾಗಿದೆ.

**೨. ಉದಾರೀಕರಣವಾಗಿರುವ ಆರ್ಥಿಕ ನೀತಿಯ ಪ್ರಭಾವ ಮತ್ತು ವಿಶ್ವ ಮಾರುಕಟ್ಟೆ ಸಂಸ್ಥೆಯ ಪ್ರಭಾವ :**

ವಿಶ್ವ ವ್ಯಾಪಾರ ಸಂಸ್ಥೆ ಒಪ್ಪಂದದ ಪ್ರಭಾವ ಮತ್ತು ಉದಾರೀಕರಣದ ನೀತಿಯ ಪ್ರಭಾವವು ವಿಶೇಷವಾಗಿ ದೇಶದೊಳಗೆ ಉತ್ಪಾದನೆಯಾದ ಉತ್ಪನ್ನಗಳ ಗುಣಮಟ್ಟದ ಮೇಲೆ ಆಗುತ್ತದೆ; ಅದು ಈಗ ಅಂತರರಾಷ್ಟ್ರೀಯ ಸರಕುಗಳಿಗೆ ಗುಣಮಟ್ಟದ ಮಾನದಂಡಕ್ಕೆ ಹೊಂದಿಕೆಯಾಗಬೇಕು ಎಂದು ಭಾವಿಸಲಾಗಿದೆ. ಅಲ್ಲದೆ ಕಡಿಮೆ ಲಾಭ ಗಳಿಸುವಿಕೆಯಾಗುವ ಮಟ್ಟದಲ್ಲಿ ಬೆಲೆಗಳು ಸ್ಪರ್ಧಾತ್ಮಕವಾಗಿರಬೇಕು ಮತ್ತು ಪೈಪೋಟಿಯನ್ನು ಎದುರಿಸಲು ಉತ್ಪನ್ನದ ಪ್ರಮಾಣವನ್ನು ಹೆಚ್ಚಿಸಬೇಕಾಗುವ ಅಗತ್ಯವಿದೆ. ಇದರಿಂದ ದೇಶೀಯ ಕೈಗಾರಿಕೆಯೊಂದಿಗೆ ಆರ್ಥಿಕತೆಯು ಇರಬೇಕಾಗುತ್ತದೆ.

ಒಂದು ಕಡೆ ತೀವ್ರವಾದ ಪೈಪೋಟಿ, ಪೂರಕ ಸೌಲಭ್ಯಗಳಿಗೆ ಹೆಚ್ಚಿನ ವೆಚ್ಚ. ಇವುಗಳಿಂದ ದೇಶೀಯ ಹಣಕಾಸಿನ ಹೆಚ್ಚಿನ ವೆಚ್ಚ ಕೈಗಾರಿಕೆಯಲ್ಲಿ ಹೆಚ್ಚಿನ ರೋಗಗ್ರಸ್ತತೆಯು ಉಂಟಾಗುತ್ತದೆ.

**೩. ಪ್ರಭಾವವನ್ನು ಎದುರಿಸಲು ಕೈಗಾರಿಕೆಗಳು ತೆಗೆದುಕೊಳ್ಳಬಹುದಾದ ಕ್ರಮಗಳು :**

**ಕ್ರಮಗಳು** : ಅಂತರಿಕ ಕೈಗಾರಿಕೆಗಳು ಅದರಲ್ಲಿಯೂ ವಿಶೇಷವಾಗಿ ಸಣ್ಣ ಪ್ರಮಾಣದ ಕೈಗಾರಿಕೆಗಳು ಗುಣಮಟ್ಟ ಮತ್ತು ಬೆಲೆಗಳೆರಡರಲ್ಲಿಯೂ ಸ್ಪರ್ಧೆಯನ್ನು ಎದುರಿಸಬೇಕು. ಇದಕ್ಕೆ ಶೀಘ್ರವಾಗಿ ತಂತ್ರಜ್ಞಾನವನ್ನು ಮೇಲ್ದರ್ಜೆಗೆ ತರಬೇಕು, ಅಂತರರಾಷ್ಟ್ರೀಯ ಮಾನದಂಡದ ಗುಣಮಟ್ಟವನ್ನು ಅನ್ವಯಿಸಬೇಕು ಮತ್ತು ವಿಶ್ವವ್ಯಾಪಾರ ಸಂಸ್ಥೆಗೆ ಹೊಂದಿಕೆಯಾಗುವಂತೆ ಸಾಮರ್ಥ್ಯವನ್ನು ರಚಿಸುವುದು ಅಗತ್ಯವಾಗುವುದು. ಆಂತರಿಕ ಕೈಗಾರಿಕೆಯು ಅದರ ಉತ್ಪನ್ನಗಳು ಮತ್ತು ಕಾರ್ಯವಿಧಾನಗಳಲ್ಲಿ ಮೌಲ್ಯವರ್ಧನೆ, ಉತ್ಪಾದಕತೆ ಮಟ್ಟಗಳನ್ನು ಉತ್ತಮಪಡಿಸುವುದು, ವೆಚ್ಚವನ್ನು ಕಡಿಮೆ ಮಾಡುವುದು ಉತ್ಪನ್ನದ ವೈವಿಧ್ಯತೆಗೆ ಹೋಗುವುದು ಅಗತ್ಯ.

**೪. ನೀತಿ ಕರ್ತೃತ್ವ ಶಕ್ತಿ, ವಿಶ್ವವ್ಯಾಪಾರ ಸಂಸ್ಥೆ ಮತ್ತು ಉದಾರೀಕರಣದಿಂದಾಗಿ ಆಗಿರುವ ಸವಾಲುಗಳನ್ನು ಎದುರಿಸಲು ಕೈಗಾರಿಕೆಗಳಿಗೆ ಸಹಾಯಕವಾಗಲು ಸರಕಾರವು ಕೈಗೊಂಡಿರುವ ಕ್ರಮಗಳು :**

ಕರ್ನಾಟಕವು ಘೋಷಿಸಿರುವ ಹೊಸ ಕೈಗಾರಿಕಾ ನೀತಿಯಲ್ಲಿ ತಂತ್ರಜ್ಞಾನವನ್ನು ಮೇಲ್ದರ್ಜೆಗೇರಿಸುವಿಕೆ, ನಿರ್ಬಂಧವನ್ನು ತೆಗೆದು ಹಾಕುವುದು, ಪೂರಕ ಸೌಲಭ್ಯಗಳ ಬೆಂಬಲ, ಮಾನವಶಕ್ತಿ ಅಭಿವೃದ್ಧಿ, ಗುಣಮಟ್ಟದ ದರ್ಜೆ ಹೆಚ್ಚಿಸುವುದು ಮತ್ತು ರಫ್ತುಗಳಿಗೆ ಒತ್ತು ಕೊಡಲಾಗಿದೆ.

ಸರ್ಕಾರವು ೫೦-೦೦ ಕೋಟಿ ರೂ.ಗಳ ಒಂದು ಮೂಲನಿಧಿಯನ್ನು ತಂತ್ರಜ್ಞಾನ ಮೇಲ್ದರ್ಜೆಗೇರಿಸುವುದಕ್ಕೆ ಸ್ಥಾಪಿಸಿದೆ. ತಂತ್ರಜ್ಞಾನ ಮೇಲ್ದರ್ಜೆಗೇರಿಸುವಿಕೆಯ ಯೋಜನೆಯನ್ನು ಕೂಡ ಪ್ರಕಟಪಡಿಸಲಾಗಿದೆ. ತಂತ್ರಜ್ಞಾನ ಮೇಲ್ದರ್ಜೆಗೇರಿಸುವ ಪ್ರಯತ್ನಗಳಿಗೆ ಕೈಗಾರಿಕೆಗಳು ಕೆ.ಎಸ್.ಎಫ್.ಸಿ. ಅಥವಾ ಕೆ.ಎಸ್.ಐ.ಐ.ಡಿ.ಸಿ.ಯಿಂದ ಶೇ. ೮ರ ರಿಯಾಯಿತಿ ಬಡ್ಡಿ ದರದಲ್ಲಿ ಸಾಲವನ್ನು ಪಡೆಯಬಹುದು.

ತಂತ್ರಜ್ಞಾನ ಮೇಲ್ದರ್ಜೆಗೇರಿಸುವಿಕೆ, ಗುಣಮಟ್ಟ ಮೇಲ್ದರ್ಜೆಗೇರಿಸುವಿಕೆ, ಸಂಶೋಧನೆ ಮತ್ತು ಅಭಿವೃದ್ಧಿ ಪ್ರಯತ್ನಗಳಿಗೆ ಕರ್ತೃತ್ವಶಕ್ತಿ ಉಪಯೋಗಿಸುವ ಸಂಸ್ಥೆಗಳಿಗೆ ತಂತ್ರಜ್ಞಾನ ಮೇಲ್ದರ್ಜೆಗೇರಿಸುವಿಕೆಯ ನಿಧಿಯಡಿಯಲ್ಲಿ ಬೆಂಬಲ ನೀಡಲಾಗುತ್ತದೆ.

ಸರ್ಕಾರವು ಗುಣಮಟ್ಟವನ್ನು ಉತ್ತಮಪಡಿಸಲು ಪ್ರೋತ್ಸಾಹವನ್ನು ಒದಗಿಸುತ್ತದೆ. ಐಎಸ್‌ಓ-೯೦೦೦, ೧೪,೦೦೦ ಅಥವಾ ಅಂತಹುದೇ ಅಂತರರಾಷ್ಟ್ರೀಯ 'ಪ್ರಶಸ್ತೀಕರಣ' ಪಡೆದಿರುವ ಘಟಕಗಳು, ಕೈಗಾರಿಕೆಗಳಿಗೆ ಅನುದಾನವಾಗಿ ೭೫,೦೦೦ ರೂ. ಗರಿಷ್ಠ ಮಿತಿಗೊಳಪಟ್ಟು ವೆಚ್ಚದ ೫೦% ಅನ್ನು ಪಡೆಯುವುದಕ್ಕೆ ಅರ್ಹವಾಗಿದೆ.

ಸರ್ಕಾರವು ವಿಶ್ವ ವ್ಯಾಪಾರ ಸಂಸ್ಥೆ ರಿಲೇ ಕೇಂದ್ರಗಳನ್ನು ಸ್ಥಾಪಿಸಿದೆ. ವಿಶ್ವ ವ್ಯಾಪಾರ ಸಂಸ್ಥೆಯ ಯೋಗ್ಯತಾರ್ಹ ಮತ್ತು ವಿಸ್ತಾರವಾದ ಅಂಕಿಅಂಶಗಳನ್ನು, ಕ್ಷೇತ್ರಗಳು ಮತ್ತು ಉಪಕ್ಷೇತ್ರಗಳಿಗೆ ಅದರ ತೊಡಕುಗಳು ಹಾಗೂ ವಿಶ್ವ ವ್ಯಾಪಾರ ಸಂಸ್ಥೆಯಿಂದ ಪರಿಣಾಮ ಉಂಟಾಗಿರುವ ಉತ್ಪನ್ನಗಳು ಬೆಲೆಗಳ ಅಂಕಿಅಂಶಗಳನ್ನು ಸರ್ಕಾರವು ಒದಗಿಸುತ್ತದೆ. ವಿಶ್ವ ವ್ಯಾಪಾರ ಸಂಸ್ಥೆಯಿಂದ ಪರಿಣಾಮ ಹೊಂದಿರುವ, ಉಪಯೋಗಿಸಲ್ಪಡುತ್ತಿರುವ ಕೈಗಾರಿಕೆಗಳಿಗೆ ನ್ಯಾಯಿಕ, ತಾಂತ್ರಿಕ ಮತ್ತು ಆಡಳಿತದ ಬೆಂಬಲವನ್ನು ವಿಸ್ತರಿಸುತ್ತದೆ. ಗುಣಮಟ್ಟದ ಪರೀಕ್ಷೆಗೆ ವಿಶಿಷ್ಟವಾದ ಅಗತ್ಯಗಳನ್ನು ಪೂರೈಸಲು ಮತ್ತು ಈ ಮಾನದಂಡಗಳನ್ನು ಪೂರೈಸುವುದಕ್ಕೆ ಕರ್ನಾಟಕದ ಸಂಸ್ಥೆಗಳಲ್ಲಿ ಸಾಮರ್ಥ್ಯ ರಚನೆಗೆ ಈ ಕೇಂದ್ರವು ಸಹಾಯ ಮಾಡುತ್ತದೆ.

ಹೂಡಿಕೆ ಸಬ್ಸಿಡಿ, ಪ್ರವೇಶ ತೆರಿಗೆ ವಿನಾಯಿತಿ, ಮಾರಾಟ ತೆರಿಗೆ ವಿನಾಯಿತಿ ಮತ್ತು ವಿದ್ಯುತ್ ರಿಯಾಯಿತಿಯಂತಹ ಪ್ರೋತ್ಸಾಹಗಳನ್ನು ಒದಗಿಸಿ ರಫ್ತುಗಳನ್ನು ಹೆಚ್ಚಿಸುವುದಕ್ಕೆ ಕೂಡ ಸರಕಾರವು ತನ್ನ ಗಮನವನ್ನು ಕೇಂದ್ರೀಕರಿಸುತ್ತದೆ.

ಕೊಳ್ಳುವುದು ಮತ್ತು ಬೆಲೆ ಉಲ್ಲೇಖದಿಂದ ಮಾರುಕಟ್ಟೆ ಏಜೆನ್ಸಿಗಳು ಸಣ್ಣ ಪ್ರಮಾಣದ ಕೈಗಾರಿಕಾ ಘಟಕಗಳಿಗೆ ಸಹಾಯ ಒದಗಿಸುತ್ತದೆ. ಸಣ್ಣ ಪ್ರಮಾಣದ ಕೈಗಾರಿಕಾ ಕ್ಷೇತ್ರಕ್ಕೆ ಮೀಸಲಾಗಿರುವ ಸರಕುಗಳ ೭೫% ಅನ್ನು ಬಹಿರಂಗ ಟೆಂಡರ್ ಪದ್ಧತಿಯಿಂದ ರಾಜ್ಯದಲ್ಲಿ ಸ್ಥಾಪಿತವಾಗಿರುವ ಘಟಕಗಳಿಂದ ಕೊಂಡುಕೊಳ್ಳಲಾಗುತ್ತದೆ ಮತ್ತು ಸಣ್ಣ ಪ್ರಮಾಣದ ಕೈಗಾರಿಕಾ ಘಟಕಗಳಿಗೆ ಶೇ. ೧೫ ರಷ್ಟು ಬೆಲೆ ಆದ್ಯತೆಯನ್ನು ನೀಡಲಾಗುತ್ತದೆ. ಈ ಪ್ರಯೋಜನವನ್ನು ೨೦೦೧ರ ಏಪ್ರಿಲ್ ೧ ರಿಂದ ೫ ವರ್ಷಗಳವರೆಗೆ ವಿಸ್ತರಿಸಲಾಗಿದೆ.

ರಾಜ್ಯ ಸರಕಾರವು ಕೈಗಾರಿಕಾ ಅನುಕೂಲತೆಯ ಕಾಯ್ದೆಯನ್ನು ಜಾರಿಗೊಳಿಸಿದೆ. ಎಸ್‌ಎಸ್‌ಐಗಳು ಅನುಸರಿಸಬೇಕಾದ ಹಾಲಿ ಇರುವ ಅನೇಕ ನಿಯಮಗಳನ್ನು ಪಟ್ಟಿ ಮಾಡಿ ವ್ಯಾಪಾರ ಪರಿಸರದ ಅನಿರ್ಬಂಧತೆಗೆ ಒತ್ತನ್ನು ನೀಡಲಾಗಿದೆ. ಸ್ವಯಂ ಪ್ರಮಾಣೀಕರಿಸುವ, ಪ್ರಮಾಣಿಸಲಾದ ಮಂಜೂರಾತಿ ಪದ್ಧತಿಯನ್ನು ಅನೇಕ ವಿಧವಾದ ರಿಜಿಸ್ಟರುಗಳು ಮತ್ತು ದಾಖಲೆಗಳು ಜೋಡಿಸಲಾದ ಅರ್ಜಿ, ರಿಜಿಸ್ಟರುಗಳಿಗೆ ಮತ್ತು ದಾಖಲೆಗಳಿಗೆ ಬದಲಾಗಿ ಜಾರಿಗೊಳಿಸಲಾಗಿದೆ. (ಅಗತ್ಯವಾಗಿರುವೆಡೆಯಲ್ಲಿ) ತಪಾಸಣೆ ಬಾಹುಳ್ಯವನ್ನು ತಪ್ಪಿಸಲು, ಅಲ್ಲಿ ಇಲ್ಲಿ ವಾರ್ಷಿಕ ತಪಾಸಣೆಯನ್ನು ಜಾರಿಗೊಳಿಸಲಾಗಿದೆ.

೫ ಸ್ಥಳಗಳಲ್ಲಿ ಆಗ್ರೋ ಫುಡ್ ಪಾರ್ಕುಗಳು, ೨ ಅಪ್ಪರೆಲ್ ಪಾರ್ಕುಗಳು, ೩ ಆಟೋ ಪಾರ್ಕುಗಳು ಮತ್ತು ಹಾಸನದಲ್ಲಿ ಒಂದು ವಿಶೇಷ ಆರ್ಥಿಕ ವಲಯ, ಮಂಗಳೂರಿನಲ್ಲಿ ರಫ್ತು ಉತ್ತೇಜಕ ಕೈಗಾರಿಕಾ ಪಾರ್ಕುಗಳನ್ನು ಸ್ಪರ್ಧಾತ್ಮಕ ಬೆಲೆಗಳಲ್ಲಿ ಉತ್ತಮ ಗುಣಮಟ್ಟದ ಪೂರಕ ಸೌಲಭ್ಯಗಳ ಬೆಂಬಲವನ್ನು ಒದಗಿಸುವುದಕ್ಕೆ ಸ್ಥಾಪಿಸಲಾಗಿದೆ.

ಬಳ್ಳಾರಿಯಲ್ಲಿ ಸ್ಟೀಲ್ ಟೆಕ್ನಾಲಜಿ ಇನ್‌ಸ್ಟಿಟ್ಯೂಟ್, ಬಿಡದಿ, ಶಿವಮೊಗ್ಗ ಮತ್ತು ಧಾರವಾಡಗಳಲ್ಲಿರುವ ೩ ಆಟೋಮೊಬೈಲ್ ತರಬೇತಿ ಸಂಸ್ಥೆಗಳನ್ನು ಕುಶಲವಾದ ಮಾನವಶಕ್ತಿಗೆ ಪ್ರಚೋದನೆ ನೀಡಲು ಸ್ಥಾಪಿಸಲಾಗುತ್ತಿದೆ. ಸರಕಾರವು ಖಾಸಗಿ ಕ್ಷೇತ್ರ ಸಕ್ರಿಯ ತೊಡಗಿಸಿಕೊಳ್ಳಲು ತಂತ್ರಜ್ಞಾನ ವ್ಯಾಪಾರ ಇನ್‌ಕ್ಯುಬೇಟರ್‌ಗಳು/ಆಕ್ಸಲರೇಟರ್‌ಗಳನ್ನು ಪ್ರಚೋದಿಸುತ್ತದೆ.

ಸರಕಾರವು ಇಂಜಿನಿಯರಿಂಗ್ ಕಾಲೇಜುಗಳ ಜೊತೆಯಲ್ಲಿ ಇನ್ನೂ ೧೦ ವಿಜ್ಞಾನ ಮತ್ತು ತಂತ್ರಜ್ಞಾನ ಉದ್ಯಮಿಗಳ ಪಾರ್ಕುಗಳನ್ನು (ಎಸ್‌ಟಿಇಪಿಎಸ್) ಕೂಡ ಸ್ಥಾಪಿಸುತ್ತದೆ. ಮೂಲಭೂತ ಪೂರಕ ಸೌಲಭ್ಯಗಳನ್ನು ಸೃಷ್ಟಿಸುವುದಕ್ಕೆ ಗರಿಷ್ಠ ೨೫.೦೦ ಲಕ್ಷ ರೂ.ಗಳಿಗೆ ಒಳಪಟ್ಟು ಶೇ. ೨೫ರಷ್ಟನ್ನು ಒದಗಿಸುತ್ತದೆ.

ಸರಕಾರವು ದೇಶದ ವಿವಿಧ ಜಿಲ್ಲೆಗಳಲ್ಲಿ ವಸ್ತು ಮತ್ತು ಉತ್ಪನ್ನ ಪರೀಕ್ಷೆ ಹಾಗೂ ಗುಣಮಟ್ಟ ಭರವಸೆ ಪ್ರಯೋಗಾಲಯಗಳನ್ನು ಸ್ಥಾಪಿಸಲು ಕೂಡ ಖಾಸಗಿ ಕ್ಷೇತ್ರ/ಕೈಗಾರಿಕಾ ಸಂಘಗಳನ್ನು ಪ್ರೋತ್ಸಾಹಿಸುತ್ತದೆ. ಬಂಡವಾಳ ವೆಚ್ಚ ೧೦% ಅನ್ನು ೧೦.೦೦ ಲಕ್ಷ ರೂ.ಗಳಿಗೆ ಮಿತಗೊಳಿಸಿ ಅಂತಹ ಪ್ರೇರಕ ಶಕ್ತಿಗಳಿಗೆ ಒದಗಿಸಲಾಗುತ್ತದೆ.

ರಾಜ್ಯಮಟ್ಟ ಮತ್ತು ಜಿಲ್ಲಾಮಟ್ಟದ ಕೈಗಾರಿಕಾ ಸಂಘಗಳು ಕರ್ನಾಟಕ ಕೌನ್ಸಿಲ್ ಫಾರ್ ಟೆಕ್ನಾಲಜಿ ಅಪ್‌ಗ್ರೇಡೇಷನ್ (ಕೆ.ಸಿ.ಟಿ.ಎಲ್.)ನೊಂದಿಗೆ ಸೆಮಿನಾರುಗಳು, ಕಾರ್ಯಾಗಾರಗಳನ್ನು ಜಿಲ್ಲೆಗಳಲ್ಲಿ ವಿಶ್ವವ್ಯಾಪಾರ ಸಂಸ್ಥೆಯ ಪ್ರಭಾವದ ಮೇಲೆ ಕೈಗಾರಿಕೆಗಳಿಗೆ ಶಿಕ್ಷಣ ನೀಡಲು, ಸಜ್ಜುಗೊಳಿಸಲು ಹಾಗೂ ಸಫಲವಾಗಿ ವಿಶ್ವ ಸ್ಪರ್ಧೆಯನ್ನು ಎದುರಿಸಲು ಅಂತಹ ಘಟಕಗಳನ್ನು ಸಿದ್ಧಗೊಳಿಸಲು ನಡೆಸುತ್ತಾರೆ.




# ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ

**ಕೆ. ಎಸ್. ಸತ್ಯಮೂರ್ತಿ**

**ಪ್ರಸ್ತಾವನೆ :**

ಭಾರತದ ಶೇಕಡ ೮೦ರಷ್ಟು ಭಾಗ ಗ್ರಾಮೀಣ ಪ್ರದೇಶದಿಂದ ಕೂಡಿದೆ. ಗ್ರಾಮಗಳ ಆರ್ಥಿಕ ಹಾಗೂ ರಾಜಕೀಯ ಚಟುವಟಿಕೆಗಳಲ್ಲಿ ಸ್ವಾವಲಂಬನೆ ಮೂಡಿದರೆ ಅದೇ ನಿಜವಾದ ಗ್ರಾಮ ಸ್ವರಾಜ್ಯ. ೧೦೬ ಕೋಟಿಗೂ ಮೀರಿದ ನಮ್ಮ ದೇಶದ ಜನಸಂಖ್ಯೆಯಲ್ಲಿ ದುಡಿಯುವ ಕೈಗಳಿಗೆ ಸಾಕಷ್ಟು ಕೆಲಸವನ್ನು ನೀಡಿದರೆ ಮಾತ್ರ ನೆಮ್ಮದಿಯ ಬದುಕು ಸಾಧ್ಯ. ಇದರಿಂದ ಕಾನೂನು ಹಾಗೂ ಸುವ್ಯವಸ್ಥೆಯ ಪಾಲನೆ - ಆರ್ಥಿಕ ಅಭಿವೃದ್ಧಿ , ಸಾಮಾಜಿಕ ನೆಮ್ಮದಿಯನ್ನು ಕಂಡುಕೊಳ್ಳಲು ಸಾಧ್ಯ. ಈ ಅಂಶವನ್ನು ಆಳವಾಗಿ ಚಿಂತಿಸಿದಾಗ ಗ್ರಾಮೀಣ ಭಾಗದ ಜನತೆಯ ದುಡಿಮೆಗೆ ಅವಕಾಶ ನೀಡಬಲ್ಲ ಶಕ್ತಿ ಖಾದಿ ಮತ್ತು ಗ್ರಾಮೋದ್ಯೋಗ ಕ್ಷೇತ್ರದಲ್ಲಿದೆ.

ದೇಶದ ಖಾದಿ ಮತ್ತು ಗ್ರಾಮೋದ್ಯೋಗ ಚಟುವಟಿಕೆಗಳನ್ನು ರೂಪಿಸುವ, ಪಾಲಿಸುವ, ನಿಯಂತ್ರಿಸುವ -ದಿಕ್ಸೂಚಿಗಳನ್ನು ಗುರುತಿಸಿ ಮೌಲ್ಯಮಾಪನ ಮಾಡುವ ಹೊಣೆಗಾರಿಕೆ ಹೊತ್ತ ಕೇಂದ್ರ ಸರ್ಕಾರದ ಸಂಸ್ಥೆ ಖಾದಿ ಮತ್ತು ಗ್ರಾಮೋದ್ಯೋಗ ಆಯೋಗ, ಮುಂಬೈ.

ಕರ್ನಾಟಕ ರಾಜ್ಯದಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಮಂಡಲಿ ೧೯೫೭ನೇ ಸಾಲಿನಿಂದ ಕಾರ್ಯ ನಿರ್ವಹಿಸುತ್ತಿದೆ. ಈ ಸಂಸ್ಥೆಯ ಪ್ರಮುಖ ಉದ್ದೇಶ ನಮ್ಮ ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಚಟುವಟಿಕೆಗಳನ್ನು ಸ್ಥಾಪಿಸುವುದು - ಅಭಿವೃದ್ಧಿ ಪಡಿಸುವುದು ಹಾಗೂ ನಿಯಂತ್ರಿಸುವುದು.

ಜಾಗತೀಕರಣದ ಇಂದಿನ ಮಹತ್ತರ ಘಟ್ಟದಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಚಟುವಟಿಕೆಗಳು ಅಪ್ರಸ್ತುತವೇನೋ ಎಂಬ ಅಳುಕು ನಮ್ಮನ್ನು ಆವರಿಸುತ್ತದೆ. ನಗರೀಕರಣ ಹಾಗೂ ಅದರ ಕಾರ್ಯಚಟುವಟಿಕೆಗಳು - ಬೃಹತ್ ಉದ್ದಿಮೆಗಳು - ಸಮೂಹ ಸಂಪರ್ಕ-ಜನಜಂಗುಳಿ - ಪಾಶ್ಚಾತ್ಯ ಜೀವನ ಶೈಲಿಯ ನೇರ ಅನುಕರಣೆ - ಪಾಶ್ಚಾತ್ಯ ಉಡುಪು - ವಸ್ತ್ರ ಹಾಗೂ ವಸ್ತುಗಳ ಬಗ್ಗೆ ನಮಗಿರುವ ಅತ್ಯುತ್ಸಾಹಗಳನ್ನು ಅವಲೋಕಿಸಿದಾಗ ಮೇಲ್ನೋಟಕ್ಕೆ ಈ ಅಳುಕು ಸರಿ ಎನಿಸುತ್ತದೆ. ಆದರೆ, ನಮ್ಮ ಹಳ್ಳಿಗಳ ಶಕ್ತಿ, ಸಾಮರ್ಥ್ಯ, ಜನರ ದೈನಂದಿನ ಬೇಡಿಕೆಗಳು ಸ್ಥಳೀಯವಾಗಿ ಲಭ್ಯವಾಗುವ ಕಚ್ಚಾ ಸಾಮಗ್ರಿಗಳು, ಸಮೃದ್ಧ ಮಾನವ ಶಕ್ತಿ ಇವುಗಳನ್ನು ಅವಲೋಕಿಸಿದಾಗ ಜಾಗತೀಕರಣದ ಪರಿಣಾಮದಿಂದ ಉಂಟಾದ ಅಳುಕಿನ ಮನೋಭಾವ ನಮ್ಮಿಂದ ದೂರವಾಗುತ್ತದೆ ಎಂಬುದು ನಿರ್ವಿವಾದ.

***ಖಾದಿ ಗ್ರಾಮೋದ್ಯೋಗ ಇದೊಂದು ಬಟ್ಟೆ ಅಥವಾ ವಸ್ತುವನ್ನು ಉಪಯೋಗಿಸುವ ಸಂಸ್ಥೆ ಎಂದು ಅಂದಾಜು ಮಾಡಿದರೆ ತಪ್ಪಾದೀತು. ಎಲ್ಲ ನಿತ್ಯೋಪಯೋಗಿ ವಸ್ತುಗಳನ್ನೂ ಉತ್ಪಾದನೆ ಮಾಡಬಲ್ಲ, ಹೆಚ್ಚು ಮಂದಿಗೆ ಉದ್ಯೋಗ ದೊರಕಿಸಿ ಕೊಡುವ ಸಂಸ್ಥೆ ಇದಾಗಿದೆ.***

ಖಾದಿ ಗ್ರಾಮೋದ್ಯೋಗ ಎಂಬ ಹೆಸರಿನಿಂದ ಅನೇಕರು ಕೇವಲ ಇದೊಂದು ಬಟ್ಟೆ ಅಥವಾ ವಸ್ತ್ರವನ್ನು ತಯಾರಿಸಬಲ್ಲ ಸಂಸ್ಥೆ ಎಂದು ಅಂದಾಜು ಮಾಡಿದರೆ ಅದು ತಪ್ಪಾದೀತು. ಮನುಷ್ಯನ ಉತ್ತಮ ಜೀವನಕ್ಕೆ ಅಗತ್ಯವಾದ ಎಲ್ಲಾ ನಿತ್ಯೋಪಯೋಗಿ ವಸ್ತುಗಳನ್ನು ಉತ್ಪಾದನೆ ಮಾಡಬಲ್ಲ ಶಕ್ತಿ ಹಾಗೂ ಸಾಮರ್ಥ್ಯ ಈ ಕ್ಷೇತ್ರದಲ್ಲಿದೆ ಎಂದರೆ ಅದು ಅತಿಶಯೋಕ್ತಿಯಲ್ಲ.

## ೧. ಉದ್ದೇಶ :

**'ಹೆಚ್ಚು ಉತ್ಪಾದನೆಗಿಂತ, ಹೆಚ್ಚು ಮಂದಿಯಿಂದ ಉತ್ಪಾದನೆ'** ಎನ್ನುವುದೇ ಖಾದಿ ಮತ್ತು ಗ್ರಾಮೋದ್ಯೋಗ ಮಂಡಲಿಯ ಉದ್ದೇಶ ಹಾಗೂ ಮೂಲಮಂತ್ರವಾಗಿದೆ.

## ೨. ಹಣಕಾಸಿನ ಸೌಲಭ್ಯ :

ಕೇಂದ್ರ ಸರ್ಕಾರದ ಕೃಷಿ ಹಾಗೂ ಗ್ರಾಮೀಣ ಅಭಿವೃದ್ಧಿ ಇಲಾಖೆಯ ವ್ಯಾಪ್ತಿಗೆ ಒಳಪಡುವ ಖಾದಿ ಮತ್ತು ಗ್ರಾಮೋದ್ಯೋಗ ಆಯೋಗವು ಆಯಾ ರಾಜ್ಯಗಳ ಖಾದಿ ಮಂಡಲಿಗಳಿಗೆ ಖಾದಿ ಮತ್ತು ಗ್ರಾಮೋದ್ಯೋಗಗಳ ಅಭಿವೃದ್ಧಿಗಾಗಿ ವಿವಿಧ ಕಾರ್ಯಕ್ರಮಗಳನ್ನು, ಯೋಜನೆಗಳನ್ನು ರೂಪಿಸಿ, ಪ್ರತಿ ವರ್ಷ ಆರ್ಥಿಕ ಹಂಚಿಕೆ ಹಾಗೂ ಭೌತಿಕ ಗುರಿ ನಿಗದಿಪಡಿಸುತ್ತದೆ. ನಮ್ಮ ರಾಜ್ಯದಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಮಂಡಲಿಯು ಖಾದಿ ಮತ್ತು ಗ್ರಾಮೋದ್ಯೋಗಗಳ ಕೈಗಾರಿಕೆಗಳ ಅಭಿವೃದ್ಧಿಗಾಗಿ ೧೯೫೭ನೇ ಸಾಲಿನಿಂದಲೂ ಶ್ರಮಿಸುತ್ತಾ ಬಂದಿದೆ. ೧೯೫೭ನೇ ಸಾಲಿನಿಂದ ೧೯೯೫ನೇ ಸಾಲಿನ ಅಂತ್ಯದವರೆಗೆ ವಿವಿಧ ಉದ್ದಿಮೆಗಳಿಗೆ ಮಂಜೂರು ಮಾಡಲಾದ ಹಣಕಾಸಿನ ಚಿತ್ರಣ ಈ ಕೆಳಗಿನಂತಿದೆ:-

ಅ) ೧೯೫೭-೫೮ ರಿಂದ ೧೯೯೪-೯೫ ರವರೆಗೆ ನಿಗದಿತ ಧನಸಹಾಯ ಸ್ವರೂಪ ಯೋಜನೆಯಡಿ ಪ್ರಯೋಜನ ಪಡೆದ ಘಟಕಗಳು (Pattern Based Scheme)

೧. ೨೧,೦೦೦ ಘಟಕಗಳಿಗೆ ಆರ್ಥಿಕ ಸೌಲಭ್ಯ ನೀಡಲಾಗಿದೆ.

| | | |
|---|---|---|
| ೨. ಒಟ್ಟು ಮಂಜೂರಾತಿ | - | ೧೦೩.೦೩ ಕೋಟಿ |
| ೩. ಉತ್ಪಾದನೆ | - | ೬೨೦.೯೩ ಲಕ್ಷ |
| ೪. ಮಾರಾಟ | - | ೭೨೨.೪೨ ಲಕ್ಷ |
| ೫. ಉದ್ಯೋಗಾವಕಾಶ | - | ೧೮೩,೦೦೦ (ಮಂದಿಗೆ) |

೧೯೯೫-೯೬ ರಿಂದ ೧೯೯೮-೯೯ರವರೆಗೆ ಬ್ಯಾಂಕ್ ಸಮೂಹ (ಸಿ.ಬಿ.ಸಿ.)

೧. ೨೪೫೩ ಘಟಕಗಳಿಗೆ ಆರ್ಥಿಕ ಸೌಲಭ್ಯ ನೀಡಲಾಗಿದೆ.

| | | |
|---|---|---|
| ೨. ಒಟ್ಟು ಮಂಜೂರಾತಿ | - | ೧೧೭.೨೫ ಕೋಟಿ |
| ೩. ಉತ್ಪಾದನೆ | - | ೧೦೪.೭೦ಕೋಟಿ |
| ೪. ಮಾರಾಟ | - | ೧೧೮.೯೩ ಕೋಟಿ |
| ೫. ಉದ್ಯೋಗಾವಕಾಶ | - | ೨೬೦೦೦ (ಮಂದಿಗೆ) |

## ೩. ಖಾದಿ ಮಂಡಲಿಯ ಕಾರ್ಯಕ್ಷೇತ್ರ ವಿಸ್ತರಣೆ :

೧೯೫೭ ನೇ ಸಾಲಿನಿಂದ ೧೯೯೫ ರವರೆವಿಗೂ ನಿಗದಿತ ಉದ್ದಿಮೆಗೆ ಸ್ಥಿರವಾದ ಯೋಜನೆ ಆಧಾರಿತ ಸಾಲ ನೀಡುವ ವ್ಯವಸ್ಥೆ ಇತ್ತು (ಪ್ಯಾಟರ್ನ್ ಆಧಾರಿತ) ಇದರಲ್ಲಿ ಕುಶಲ ಕರ್ಮಿಗಳಗೆ ಉದ್ದಿಮೆಯನ್ನು ಯಶಸ್ವಿಯಾಗಿ ನಡೆಸಲು ಹಣಕಾಸಿನ ಮುಗ್ಗಟ್ಟಿನಿಂದಾಗಿ ತೊಂದರೆಯಾಗುತ್ತಿತ್ತು. ಇದರ ಬದಲಿಗೆ ಯೋಜನೆಗಳ ಆಧಾರಿತ ಸಾಲ ಮಂಜೂರು ಮಾಡುವ ವ್ಯವಸ್ಥೆಯನ್ನು ಖಾದಿ ಆಯೋಗವು ೧೯೯೫ನೇ ಸಾಲಿನಿಂದ ಜಾರಿಗೆ ತಂದಿತು. ಬ್ಯಾಂಕುಗಳ ಸಮೂಹ ಸಾಲ ಯೋಜನೆ (Consortium Bank Credit Scheme) ವ್ಯಾಪ್ತಿಯಲ್ಲಿ ಸಾಲ ಸೌಲಭ್ಯ ನೀಡಲಾಗುವ ಈ ಯೋಜನೆಯಡಿ ವೈಯಕ್ತಿಕ ಉದ್ದಿಮೆದಾರರಿಗೆ ಗರಿಷ್ಟ ೧೦.೦೦ ಲಕ್ಷ ರೂಪಾಯಿಗಳು ಹಾಗೂ ಸಂಘ ಸಂಸ್ಥೆಗಳಿಗೆ ೨೫.೦೦ ಲಕ್ಷ ರೂಪಾಯಿಗಳ ಸೌಲಭ್ಯ ನೀಡಲಾಯಿತು.

## ೪. ಗ್ರಾಮೀಣ ಉದ್ಯೋಗ ಸೃಷ್ಟಿ ಯೋಜನೆ (ಅಂಚು ಹಣ ಯೋಜನೆ) :

ಗ್ರಾಮೀಣ ನಿರುದ್ಯೋಗಿಗಳಿಗೆ ಉದ್ಯೋಗವನ್ನು ಕಲ್ಪಿಸುವ ನಿಟ್ಟಿನಲ್ಲಿ ಭಾರತ ಸರ್ಕಾರವು ಗ್ರಾಮೀಣ ಉದ್ಯೋಗ ಸೃಷ್ಟಿ ಯೋಜನೆ (ಅಂಚು ಹಣ ಯೋಜನೆ) ಯನ್ನು ಖಾದಿ ಆಯೋಗದ ಮೂಲಕ ಬೃಹತ್ ಪ್ರಮಾಣದಲ್ಲಿ ಕೈಗೊಳ್ಳಲು ೨೦೦೧ ನೇ ಸಾಲಿನಿಂದ ಜಾರಿಗೆ ತಂದಿತು. ಈ ಯೋಜನೆಯನ್ನು ರಾಷ್ಟ್ರೀಕೃತ ಬ್ಯಾಂಕ್‌ಗಳ, ಆಯ್ದ ಖಾಸಗಿ ಷೆಡ್ಯೂಲ್ಡ್ ಬ್ಯಾಂಕ್ ಹಾಗೂ ಸಹಕಾರಿ ಬ್ಯಾಂಕ್‌ಗಳ ಮೂಲಕ ಜಾರಿಗೊಳಿಸಲಾಗುತ್ತಿದೆ.

**ಅ) ಯೋಜನೆಯ ವಿವರ :**

ಗ್ರಾಮೀಣ ಪ್ರದೇಶದಲ್ಲಿ ಸ್ಥಾಪಿತವಾಗುವ ಎಲ್ಲಾ ಹೊಸ ಘಟಕಗಳು ಈ ಯೋಜನೆಯ ಸಾಲಸೌಲಭ್ಯ ಪಡೆಯಲು ಅರ್ಹವಾಗುತ್ತದೆ.

ಹಾಲಿ ಇರುವಂತಹ ಘಟಕಗಳ ವಿಸ್ತರಣೆಗಾಗಲಿ, ನವೀಕರಣಕ್ಕಾಗಲಿ ಈ ಯೋಜನೆಯಲ್ಲಿ ಅವಕಾಶವಿಲ್ಲ.

ಯೋಜನೆಯ ಗರಿಷ್ಠ ಸಾಲ ಸೌಲಭ್ಯ ಮಿತಿಯು ರೂ.೨೫.೦೦ ಲಕ್ಷಗಳು.

ಅಂಚು ಹಣವನ್ನು ರೂ. ೧೦.೦೦ ಲಕ್ಷ ಯೋಜನೆಗಳಿಗೆ ಮಾತ್ರ ಸೀಮಿತಗೊಳಿಸಲಾಗಿದ್ದು, ಗರಿಷ್ಟ ಅಂಚು ಹಣವನ್ನು ಸಾಮಾನ್ಯ ವರ್ಗಕ್ಕೆ ರೂ.೨.೫೦ ಲಕ್ಷ ಹಾಗೂ ವಿಶೇಷ ವರ್ಗಕ್ಕೆ ರೂ.೩.೦೦ ಲಕ್ಷಕ್ಕೆ ಸೀಮಿತಗೊಳಿಸಲಾಗಿದೆ.

ಖಾದಿ ಆಯೋಗದ (ಕೆ.ವಿ.ಐ.ಸಿ.) ಋಣಾತ್ಮಕ ಪಟ್ಟಿಯಲ್ಲಿ ಇಲ್ಲದಿರುವಂತಹ ಎಲ್ಲಾ ಕೈಗಾರಿಕಾ/ ಆರ್ಥಿಕ ಚಟುವಟಿಕೆಗಳು ಕೂಡ ಈ ಯೋಜನೆಗೆ ಹಣಕಾಸಿನ ನೆರವು ಪಡೆಯಲು ಅರ್ಹವಾಗಿದೆ.

ಉದ್ದಿಮೆದಾರರು ಸಾಮಾನ್ಯ ವರ್ಗದವರಾಗಿದ್ದಲ್ಲಿ ಯೋಜನಾ ವೆಚ್ಚದ ಶೇಕಡ ೧೦ ಭಾಗ ಸ್ವಂತ ವಂತಿಗೆಯಾಗಿ ಹೂಡಬೇಕು.

ವಿಶೇಷ ವರ್ಗದ ಉದ್ದಿಮೆದಾರರು ಯೋಜನಾ ವೆಚ್ಚದ ಶೇ.೫ ಭಾಗ ಸ್ವಂತ ವಂತಿಗೆಯಾಗಿ ಹೂಡಬೇಕು. ವಿಶೇಷ ವರ್ಗವೆಂದರೆ ಪರಿಶಿಷ್ಟ ಜಾತಿ : ಪರಿಶಿಷ್ಟಪಂಗಡ: ಹಿಂದುಳಿದ ವರ್ಗ : ಮಹಿಳೆ : ಅಂಗವಿಕಲರು : ಮಾಜಿ ಯೋಧರು ಹಾಗೂ ಅಲ್ಪ ಸಂಖ್ಯಾತರು.

ಉದ್ದಿಮೆದಾರನು ಸ್ಥಾಪಿಸುವ ಘಟಕಕ್ಕೆ ಬ್ಯಾಂಕ್‌ನಿಂದ ಸಾಲ ಮಂಜೂರು ಮಾಡಿದ ನಂತರ ಪ್ರಥಮ ಹಂತದ ಹಣ ಬಿಡುಗಡೆ ಪೂರ್ವ ಉದ್ದಿಮೆದಾರನು ಖಾದಿ ಆಯೋಗದಿಂದ ನೀಡುವ ಮೂರು ದಿನಗಳ ಉದ್ಯಮಶೀಲತಾ ತರಬೇತಿಯನ್ನು ಕಡ್ಡಾಯವಾಗಿ ಪಡೆಯತಕ್ಕದ್ದು.

ಯೋಜನಾ ವೆಚ್ಚದ ಪ್ರತಿ ೫೦೦೦೦= ೦೦ ರೂಪಾಯಿಗಳ ಬಂಡವಾಳ ಹೂಡಿಕೆ ಮೊತ್ತಕ್ಕೆ ಒಂದು ಉದ್ಯೋಗಾವಕಾಶ ಕೊಡಲೇಬೇಕು.

**ಆ) ಋಣಾತ್ಮಕ ಪಟ್ಟಿಯಲ್ಲಿ ಮಾಂಸದ ಸಂಸ್ಕರಣೆ, ಪ್ಯಾಕಿಂಗ್ ಹಾಗೂ ಭರಿಸುವ ವಸ್ತುಗಳ ಉತ್ಪಾದನೆ, ತಯಾರಿಕೆ ಮತ್ತು ಮಾರಾಟ.**

ಪ್ರಾಥಮಿಕ ಕೃಷಿ ಬೆಳೆಗಳು, ಪ್ಲಾಂಟೇಷನ್, ಪಶುಸಂಗೋಪನೆ, ಮೀನುಗಾರಿಕೆ, ಹಂದಿ ಸಾಕಣೆ, ಕುಕ್ಕುಟೋದ್ಯಮ ಇತ್ಯಾದಿ.

ಪರಿಸರ ಸಮಸ್ಯೆಗಳನ್ನು ಉಂಟುಮಾಡುವ ಯಾವುದೇ ಯೋಜನೆಗಳ ಹಾಗೂ ೨೦ ಮೈಕ್ರಾನ್‌ಗಳಿಗಿಂತ ಕಡಿಮೆ ಇರುವ ಪ್ಲಾಸ್ಟಿಕ್ ಪದಾರ್ಥಗಳು.

ಸಾರ್ವಜನಿಕ ಸಾಗಣೆಕೆ ವಾಹನಗಳು.

ಖಾದಿ : ರೇಷ್ಮೆ: ಪಾಲಿವಸ್ತ್ರ ಉತ್ಪಾದನಾ ಘಟಕಗಳು.

**ಇ) ಖಾದಿ ಮಂಡಲಿಯಿಂದ ದೊರಕುವ ಅಂಚುಹಣದ ವಿವರ :**

ಬ್ಯಾಂಕ್‌ನಿಂದ ಸಾಲ ಮಂಜೂರು ಮಾಡಿ ಪೂರ್ಣ ಹಣ ಬಿಡುಗಡೆಯಾಗಿ ಘಟಕ ಅನುಷ್ಠಾನಗೊಂಡ ನಂತರ, ಖಾದಿ ಮಂಡಲಿಯಿಂದ ಅಂಚುಹಣದ ಮಂಜೂರಾತಿಯನ್ನು ನೀಡಿ ಸದರಿ ಬ್ಯಾಂಕ್‌ಗೆ ಬಿಡುಗಡೆಗೊಳಿಸಲಾಗುವುದು.

ಉದ್ದಿಮೆದಾರನು ಉದ್ದಿಮೆಯನ್ನು ಸತತವಾಗಿ ೦೨ (ಎರಡು) ವರ್ಷಗಳ ಕಾಲ ನಡೆಸಿದ ನಂತರ ಸಾಲ ನೀಡಿದ ಬ್ಯಾಂಕಿನಲ್ಲಿನ ಉದ್ದಿಮೆದಾರನ ಖಾತೆಗೆ ಸದರಿ ಅಂಚು ಹಣದ ಮೊತ್ತವನ್ನು ಜಮಾ ಮಾಡಲಾಗುವುದು.

ಖಾದಿ ಮಂಡಲಿಯು ಆರ್.ಇ.ಜಿ.ಪಿ. ಯೋಜನೆಯನ್ನು ೨೦೦೧ನೇ ಸಾಲಿನಿಂದ ಜಾರಿಗೆ ತಂದಿರುತ್ತದೆ. ಈ ಯೋಜನೆಯನ್ನು ಖಾದಿ ಮಂಡಲಿಯಿಂದ ಅನುಮೋದಿಸಲ್ಪಟ್ಟ ೫೮ ಸಹಕಾರಿ ಬ್ಯಾಂಕ್‌ಗಳು, ೫ ಖಾಸಗಿ ಷೆಡ್ಯೂಲ್ಡ್ ಬ್ಯಾಂಕ್‌ಗಳು, ಗ್ರಾಮೀಣ ಬ್ಯಾಂಕ್‌ಗಳು ಹಾಗೂ ಆಯ್ದ ೧೨ ರಾಷ್ಟ್ರೀಕೃತ ಬ್ಯಾಂಕುಗಳಿಂದಲೂ ಅನುಷ್ಠಾನಗೊಳಿಸಲಾಗುತ್ತಿದೆ.

### ೫. ಖಾದಿ ಉದ್ಯಮ ಹಾಗೂ ಬೆಳವಣಿಗೆ :

ಖಾದಿ ಮಂಡಳಿಯ ಪ್ರಮುಖ ಕಾರ್ಯವೆಂದರೆ ನಮ್ಮ ರಾಜ್ಯದಲ್ಲಿ ಖಾದಿಯ ಉತ್ಪಾದನೆ. ಮಂಡಳಿಯು ಇಲ್ಲಿಯವರೆಗೆ ೩೧೭ ಖಾದಿ ಸಂಸ್ಥೆಗಳಿಗೆ ಹಣಕಾಸಿನ ನೆರವು ನೀಡಿದೆ. ಅವುಗಳಲ್ಲಿ ೧೦೭ ಸಂಸ್ಥೆಗಳು ಸಕ್ರಿಯವಾಗಿ ಕಾರ್ಯನಿರ್ವಹಿಸುತ್ತಿವೆ. ಇದರಲ್ಲಿ ಖಾದಿಯ ೩೬ ಸಂಸ್ಥೆಗಳು, ರೇಷ್ಮೆಯ ೨೩ ಸಂಸ್ಥೆಗಳು, ಉಣ್ಣೆಯ ೪೩ ಸಂಸ್ಥೆಗಳೂ ಹಾಗೂ ಪಾಲಿವಸ್ತ್ರದ ೫ ಸಂಸ್ಥೆಗಳು ಸೇರಿವೆ.

### ಖಾದಿ ಉದ್ಯಮ ಘಟಕಗಳ ವಿಶೇಷತೆಗಳು :

ಧಾರವಾಡದ ಕೋಟಿನ ಬಟ್ಟೆ, ಚಿತ್ರದುರ್ಗ ಹಾಗೂ ದಾವಣಗೆರೆಯ ಗೃಹಾಲಂಕಾರ ಬಟ್ಟೆಗಳು, ಬಾಗಲಕೋಟೆಯ ಕಂಬಳಿಗಳು, ಕೋಲಾರದ ರೇಷ್ಮೆ ವಸ್ತ್ರಗಳು ಹಾಗೂ ಧಾರವಾಡದಲ್ಲಿನ ಖಾದಿ ಸಂಸ್ಥೆಯು ತಯಾರಿಸುವ ರಾಷ್ಟ್ರ ಬಾವುಟಗಳು ಪ್ರಸಿದ್ಧವೂ ಜನಪ್ರಿಯವೂ ಆಗಿವೆ.

### ೬. ಗ್ರಾಮೋದ್ಯೋಗಗಳು :

ಖಾದಿ ಮಂಡಳಿಯು ಸುಮಾರು ೧೧೬ ವಿವಿಧ ಉದ್ದಿಮೆಯ ಗ್ರಾಮೋದ್ಯೋಗಗಳಿಗೆ ಆರ್ಥಿಕ ನೆರವು ನೀಡುತ್ತಿದೆ. ಖಾದಿ ಮತ್ತು ಗ್ರಾಮೋದ್ಯೋಗ ಆಯೋಗದ ವ್ಯಾಪ್ತಿಯಡಿ ೭ ಉದ್ದಿಮೆ ಆಧಾರಿತ ಕೈಗಾರಿಕೆಗಳ ವರ್ಗೀಕರಣವಾಗಿದೆ. ಅವುಗಳೆಂದರೆ :

೧. ಖನಿಜ ಆಧಾರಿತ ಉದ್ದಿಮೆಗಳು
೨. ಅರಣ್ಯ ಆಧಾರಿತ ಉದ್ದಿಮೆಗಳು
೩. ವ್ಯವಸಾಯ ಹಾಗೂ ಆಹಾರ ಉತ್ಪನ್ನಗಳ ಆಧಾರಿತ ಉದ್ದಿಮೆಗಳು
೪. ಪಾಲಿಮರ್ ಮತ್ತು ರಾಸಾಯನಿಕ ಆಧಾರಿತ ಉದ್ದಿಮೆಗಳು
೫. ಎಂಜಿನಿಯರಿಂಗ್ ಹಾಗೂ ಅಸಾಂಪ್ರದಾಯಿಕ ಶಕ್ತಿ ಆಧಾರಿತ ಉದ್ದಿಮೆಗಳು
೬. ವಸ್ತ್ರೋದ್ಯಮ (ಖಾದಿಯನ್ನು ಹೊರತುಪಡಿಸಿ)
೭. ಸೇವಾ ಉದ್ದಿಮೆಗಳು

### ಕರ್ನಾಟಕದಲ್ಲಿನ ಗ್ರಾಮೋದ್ಯೋಗಗಳ ವಿಶೇಷತೆಗಳು :

ಮಂಡಳಿಯಿಂದ ನೆರವು ಪಡೆದ ಗ್ರಾಮೋದ್ಯೋಗ ಘಟಕಗಳು ತಯಾರಿಸಿದ ವಸ್ತುಗಳು ಜನಪ್ರಿಯವಾಗಿವೆ. ಅಂತಹ ಕೆಲವು ಉತ್ಪನ್ನಗಳು ಮಾರುಕಟ್ಟೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದಿವೆ. ಅವುಗಳೆಂದರೆ :

೧. ಗುಲ್ಬರ್ಗಾ ಜಿಲ್ಲೆಯ ಬೇಳೆ ಹಾಗೂ ಷಹಾಬಾದಿನ ಕಲ್ಲುಗಳು.
೨. ಬಿಜಾಪುರ ಹಾಗೂ ಬಾಗಲಕೋಟೆ ಜಿಲ್ಲೆಯ ಖಾದ್ಯ ತೈಲಗಳು.
೩. ಮೈಸೂರು ಹಾಗೂ ಬೀದರ್ ಜಿಲ್ಲೆಯ ಕರಕುಶಲ ವಸ್ತುಗಳು.
೪. ಮೈಸೂರು ಹಾಗೂ ಉಡುಪಿ ಜಿಲ್ಲೆಯ ಆಯುರ್ವೇದದ ಹಾಗೂ ಗಿಡಮೂಲಿಕಾ ಉತ್ಪನ್ನಗಳು.
೫. ಮೈಸೂರು, ಮಂಡ್ಯ ಹಾಗೂ ಉತ್ತರ ಕನ್ನಡ ಜಿಲ್ಲೆಗಳ ಕೈ ಕಾಗದ ಉತ್ಪನ್ನಗಳು.
೬. ಮಂಗಳೂರು, ಉಡುಪಿ ಹಾಗೂ ಉತ್ತರ ಕನ್ನಡ ಜಿಲ್ಲೆಗಳ ಗೋಡಂಬಿ.

೭. ಮಡಿಕೇರಿ ಹಾಗೂ ಉತ್ತರ ಕನ್ನಡ ಜಿಲ್ಲೆಗಳ ಜೇನುತುಪ್ಪ.

೮. ಮೈಸೂರು, ಶಿವಮೊಗ್ಗ ಹಾಗೂ ಉಡುಪಿ ಜಿಲ್ಲೆಗಳ ಸಂಸ್ಕರಿಸಿದ ಆಹಾರ ವಸ್ತುಗಳು.

೯. ಬಳ್ಳಾರಿ, ಗುಲ್ಬರ್ಗಾ, ಚಿತ್ರದುರ್ಗ ಹಾಗೂ ಉಡುಪಿ ಜಿಲ್ಲೆಗಳ ಸಿದ್ಧ ಉಡುಪುಗಳು.

೧೦. ಮೈಸೂರು, ಮಂಡ್ಯ ಹಾಗೂ ಬೆಂಗಳೂರು ಜಿಲ್ಲೆಗಳ ಅಗರಬತ್ತಿ ಕರಕುಶಲ ವಸ್ತುಗಳು, ಗೋಡಂಬಿ, ಉಪ್ಪಿನಕಾಯಿ ಮುಂತಾದ ಉತ್ಪನ್ನಗಳನ್ನು ರಫ್ತು ಮಾಡಲಾಗುತ್ತಿದೆ.

## ೭. ಮಾರುಕಟ್ಟೆ ಕಾರ್ಯಕ್ರಮದಡಿಯಲ್ಲಿನ ಸಾಧನೆ :

ಗ್ರಾಮೀಣ ವಸ್ತುಗಳ ವ್ಯವಸ್ಥಿತ ಮಾರುಕಟ್ಟೆ ಮಾಡುವುದು ಬಹು ಮುಖ್ಯವಾದ ಅಂಶವಾಗಿದೆ. ಗ್ರಾಮೀಣ ಪ್ರದೇಶದ ವಸ್ತುಗಳನ್ನು ಪಟ್ಟಣ ಪ್ರದೇಶಗಳಲ್ಲಿ ಮಾರಾಟ ಮಾಡಲು ಆಧುನಿಕ ಜನಾಕರ್ಷಕ ಮಾರಾಟ ಮೇಳಗಳನ್ನು ನಡೆಸುತ್ತಿದೆ. ಬೆಂಗಳೂರಿನಲ್ಲಿ ರಾಷ್ಟ್ರ ಮಟ್ಟದ ವಸ್ತು ಪ್ರದರ್ಶನ ವಿಭಾಗೀಯ ಕೇಂದ್ರ ಹಾಗೂ ರಾಜ್ಯದ ಮುಖ್ಯವಾದ ಜಿಲ್ಲೆಗಳಲ್ಲಿ ರಾಜ್ಯ ಮಟ್ಟದ ಮತ್ತು ಇತರ ಜಿಲ್ಲೆಗಳಲ್ಲಿ ಜಿಲ್ಲಾ ಮಟ್ಟದ ವಸ್ತು ಪ್ರದರ್ಶನಗಳನ್ನು ಏರ್ಪಡಿಸಿ ಖಾದಿಯ ವೈವಿಧ್ಯತೆ, ನೈಜ, ಶುದ್ದ ಹಾಗೂ ನಿಸರ್ಗ ಗ್ರಾಮೋದ್ಯೋಗಗಳ ಪರಿಚಯವನ್ನು ನೀಡಲಾಗುತ್ತಿದೆಯಲ್ಲದೆ ಈ ವಸ್ತುಗಳ ತಯಾರಕರ ನೇರ ಪರಿಚಯ ಹಾಗೂ ಉತ್ಪಾದನೆಗಳನ್ನು ಗ್ರಾಹಕರು ಮಧ್ಯವರ್ತಿಗಳ ಕಾಟವಿಲ್ಲದೆ ಪಡೆಯುವಂತೆ ಕಾರ್ಯನಿರ್ವಹಿಸಲಾಗುತ್ತಿದೆ. ಈ ವಸ್ತು ಪ್ರದರ್ಶನಗಳಲ್ಲಿನ ಹೆಗ್ಗಳಿಕೆಯೇನೆಂದರೆ.

ಎ. ಖಾದಿ ಡಿಸೈನರ್ ಉಡುಗೆಗಳನ್ನು ತಯಾರಿಸಲು ಖಾದಿ ಸಂಸ್ಥೆಗಳಿಗೆ ಉತ್ತೇಜನ ನೀಡಲಾಗುತ್ತಿದೆ.

ಬಿ. ಗ್ರಾಹಕರ ಅವಶ್ಯಕತೆಗೆ ತಕ್ಕಂತೆ ನಾವೀನ್ಯತೆಯ ವಸ್ತುಗಳನ್ನು ತಯಾರಿಸಲು ಖಾದಿ ಗ್ರಾಮೋದ್ಯೋಗ ರಂಗದ ಸಂಸ್ಥೆಗಳಿಗೆ /ಕಸಬುದಾರರಿಗೆ ಉತ್ತೇಜನ ನೀಡಲಾಗುತ್ತಿದೆ.

## ೮. ಜೇನು ಪ್ರಚಾರ (Honey Mission) :

ನಮ್ಮ ದೇಶದಲ್ಲಿ ೨೦೦೫-೨೦೦೬ರ ವೇಳೆಗೆ ಜೇನು ತುಪ್ಪದ ವಾರ್ಷಿಕ ಉತ್ಪಾದನೆಯನ್ನು ೩೫೦೦೦ ಮೆಟ್ರಿಕ್‌ಟನ್‌ಗಳಿಂದ ೭೦೦೦೦ ಮೆಟ್ರಿಕ್‌ಟನ್‌ಗಳಿಗೆ ಹೆಚ್ಚಿಸುವ ಗುರಿಯನ್ನು ಹೊಂದಿರುವ ಜೇನು ಕೃಷಿ ಮಿಷನ್ (Honey Mission) ಎಂಬ ಹೆಸರಿನ ಮಹತ್ತರ ಕಾರ್ಯಕ್ರಮವನ್ನು ಖಾದಿ ಮತ್ತು ಗ್ರಾಮೋದ್ಯೋಗ ಆಯೋಗವು ಹಮ್ಮಿಕೊಂಡಿದೆ. ರಾಷ್ಟ್ರದ ಒಟ್ಟಾರೆ ಪುಷ್ಪ ಲಭ್ಯತಾ ಸಾಮರ್ಥ್ಯದಲ್ಲಿ ಶೇಕಡ ೩೦ ರಷ್ಟು ಕರ್ನಾಟಕದ ಪಾಲಿದೆ. ಆದ್ದರಿಂದ ಹೆಚ್ಚಿನ ಪಾಲನ್ನು ಜೇನುಕೃಷಿಯಲ್ಲಿ ಕರ್ನಾಟಕದಿಂದ ನಿರೀಕ್ಷಿಸಲಾಗಿದೆ.

ಕರ್ನಾಟಕ ರಾಜ್ಯದಲ್ಲಿ ಜೇನುಕೃಷಿ, ಸಾಕಣೆ ಹಾಗೂ ಚಟುವಟಿಕೆಗೆ ಅನುಕೂಲವಾಗಿ ಲಭ್ಯವಿರುವ ಪ್ರಾಕೃತಿಕ ಸಾಧನ-ಸಂಪತ್ತುಗಳನ್ನು ಹಾಗೂ ಈ ಕ್ಷೇತ್ರದಲ್ಲಿ ಗುರುತಿಸಿಕೊಂಡಿರುವ ಸಂಘ ಸಂಸ್ಥೆಗಳು / ಕಸುಬುದಾರರೆಲ್ಲರ ಸಹಾಯ, ಸೇವೆ, ಬೆಂಬಲ, ಸಹಕಾರ ಇವುಗಳನ್ನು ಬಳಸಿಕೊಂಡು ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯು ಯಶಸ್ಸು ಸಾಧಿಸಲು ಯೋಜಿಸಿದೆ.

ಖಾದಿ ಮತ್ತು ಗ್ರಾಮೋದ್ಯೋಗ ಬೆಳವಣಿಗೆಗೆ ಸರ್ಕಾರದ ಹಂತದಲ್ಲಿ ಈ ಕೆಳಕಂಡ ಸಹಾಯಹಸ್ತ ದೊರಕಿದರೆ ಇದರ ಬೆಳವಣಿಗೆ ವೃದ್ಧಿಯಾಗುವುದರಲ್ಲಿ ಸಂಶಯವಿಲ್ಲ.

೧. ಖಾದಿ ಮತ್ತು ಗ್ರಾಮೋದ್ಯೋಗ ವಸ್ತುಗಳನ್ನು ಲಾಭ ಹಾಗೂ ನಷ್ಟವಿಲ್ಲದೆ ನಡೆಸಲಾಗುವ ಉದ್ದಿಮೆಗಳು ಹಾಗೂ ಉದ್ಯೋಗಾವಕಾಶ ಕಲ್ಪಿಸುವ ಉದ್ದಿಮೆಗಳು ಎಂದು ಗುರುತಿಸಬೇಕು.

೨. ಗುಜರಾತ್ ಹಾಗೂ ತಮಿಳುನಾಡು ರಾಜ್ಯಗಳಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ವಸ್ತುಗಳಿಗೆ ತೆರಿಗೆಗಳಲ್ಲಿ ಸಾಕಷ್ಟು ರಿಯಾಯಿತಿ ನೀಡಿರುವ ಮಾದರಿಯಲ್ಲಿ ನಮ್ಮ ರಾಜ್ಯದಲ್ಲಿ ನೀಡಬೇಕಾದ ಅಗತ್ಯತೆಯಿದೆ.

೩. ಖಾದಿ ಮತ್ತು ಗ್ರಾಮೋದ್ಯೋಗ ವಸ್ತುಗಳಿಗೆ ನೋಂದಣಿ ಶುಲ್ಕ ರಿಯಾಯಿತಿ ಅಗತ್ಯವಿದೆ.

೪. ರಾಜ್ಯ ಸರ್ಕಾರದ ವಾಪ್ತಿಗೆ ಬರುವ ಕಂಪನಿಗಳು, ಶಾಲೆಗಳು ಹಾಗೂ ಇತರೇ ಸಂಸ್ಥೆಗಳಲ್ಲಿ ಖಾದಿ ಸಮವಸ್ತ್ರವನ್ನು ಕಡ್ಡಾಯವಾಗಿ ಧರಿಸಲು ಸೂಕ್ತ ಆದೇಶ ಹೊರಡಿಸುವುದು.

## ೯. ನಮ್ಮ ಭವಿಷ್ಯದ ದಿಕ್ಸೂಚಿ ಹಾಗೂ ಬೆಳವಣಿಗೆಯ ಗುರಿಗಳು :

ಜಾಗತೀಕರಣದಿಂದಾಗಿ ಖಾದಿ ಮತ್ತು ಗ್ರಾಮೋದ್ಯೋಗಗಳು ಪೈಪೋಟಿಯನ್ನು ಎದುರಿಸಲೇಬೇಕಾಗಿದೆ. ಈ ನಿಟ್ಟಿನಲ್ಲಿ ನಮ್ಮ ಭವಿಷ್ಯದ ಗುರಿ ಸೂರ್ಯನ ಬೆಳಕಿನಷ್ಟು ಪ್ರಖರವಾಗಿರಬೇಕು. ಆ ಗುರಿಗಳನ್ನು ಈ ಕೆಳಗಿನಂತೆ ದಾಖಲಿಸಲಾಗಿದೆ.

೧. ಖಾದಿ ಕೇವಲ ಸ್ವಾತಂತ್ರ್ಯ ಸಂಗ್ರಾಮದ ಅಸ್ತ್ರವಲ್ಲದೆ ಮಾನವನ ದೀರ್ಘಾಯುಷ್ಯಕ್ಕೆ ಉತ್ತಮ ವಸ್ತ್ರವೆಂತಲೂ, ಗ್ರಾಮೋದ್ಯೋಗ ವಸ್ತುಗಳು ನಿಸರ್ಗಪ್ರಿಯ ವಸ್ತುಗಳೆಂದು ಜಗತ್ತಿಗೆ ಸಾರಿ ತಿಳಿಸಬೇಕಾಗಿದೆ.

೨. ಖಾದಿಯ ಬೆಳವಣಿಗೆಯಲ್ಲಿ ಹೊಸ ತಾಂತ್ರಿಕತೆಯನ್ನು ಅಳವಡಿಸಿ, ೬ ಸ್ಪಿಂಡಲ್ ಚರಕಗಳಿಂದ ೮ ಸ್ಪಿಂಡಲ್ ಚರಕಗಳಿಗೆ ಪರಿವರ್ತಿಸಲಾಗುತ್ತಿದೆ. ಇದರಿಂದ ಗ್ರಾಮೀಣ ಪ್ರದೇಶದ ಮಹಿಳೆಯರ ದಿನಗೂಲಿ ಶೇ.೩೦ರಷ್ಟು ಹೆಚ್ಚಾಗುವದಲ್ಲದೆ ಖಾದಿಯ ಉತ್ಪಾದನೆಯೂ ಹೆಚ್ಚಾಗುತ್ತಿದೆ.

೩. ಖಾದಿಯಲ್ಲಿ ವೈವಿಧ್ಯತೆ ತರುವಲ್ಲಿ ಪೂರ್ಣ ಪ್ರಮಾಣದ ತಯಾರಿ ನಡೆದಿದೆ. ಪುರುಷರ, ಮಹಿಳೆಯರ ಹಾಗೂ ಮಕ್ಕಳ ಉಡುಪುಗಳು, ವಿವಿಧ ವಿನ್ಯಾಸದ ಬ್ಯಾಗುಗಳ ತಯಾರಿಕೆ, ಖಾದಿ ನೂಲಿನ ಜೊತೆಯಲ್ಲಿ ಮೊಡಾಲ್‌ನಂತಹ ನಿಸರ್ಗಪ್ರಿಯ ನೂಲಿನಿಂದ ತಯಾರಿಸಿದ ಬಟ್ಟೆಯು ಖಾದಿಯನ್ನು ಬಹು ಬೇಡಿಕೆಯ ವಸ್ತುವನ್ನಾಗಿ ಪರಿವರ್ತಿಸುತ್ತದೆ. ಆ ನಿಟ್ಟಿನಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಆದ್ಯತೆ ನೀಡಲಾಗುತ್ತಿದೆ.

೪. ವಿಶ್ವ ಮಾರುಕಟ್ಟೆಯಲ್ಲಿ ಪೈಪೋಟಿ ಎದುರಿಸಿ, ಅಳಿವಿನ ಅಂಚಿನಲ್ಲಿರುವ ಗ್ರಾಮೀಣ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಬೇಕಾಗಿದೆ. ಇದರಲ್ಲಿ ವಿಶೇಷವಾಗಿ ಕುಂಬಾರಿಕೆ ಉದ್ದಿಮೆಯಡಿಯಲ್ಲಿ ಗುಂಪುಗಳನ್ನು ಗುರುತಿಸಿ,ಇಂದಿನ ಬೇಡಿಕೆಗಳಿಗೆ ಸ್ಪಂದಿಸಿ ವಸ್ತುಗಳನ್ನು ತಯಾರಿಸುವುದು, ಕುಂಬಾರಿಕೆಯ ಕುಶಲಕರ್ಮಿಗಳಿಗೆ ತರಬೇತಿ ನೀಡುವುದು, ಆಧುನಿಕತೆಯನ್ನು ಅವರು ಅಳವಡಿಸಿಕೊಳ್ಳುವ ಬಗ್ಗೆ ಮಂಡಳಿಯು ಕಾರ್ಯಕ್ರಮ ರೂಪಿಸುತ್ತಿದೆ.

೫. ಗ್ರಾಮೀಣ ಕೈಗಾರಿಕಾ ಗುಂಪುಗಳನ್ನು ಗುರುತಿಸಿ ಗ್ರಾಮೀಣ ಕೈಗಾರಿಕಾ ಸಹಾಯ ಕೇಂದ್ರ (Rural Industries Service Centre) ಗಳನ್ನು ಸ್ಥಾಪಿಸುವ ಗುರಿ ಇದೆ. ಇದರಿಂದ ಗ್ರಾಮ ಕೈಗಾರಿಕೆಗಳ ಗುಣಮಟ್ಟ, ಬ್ರಾಂಡಿಂಗ್ ಹಾಗೂ ಪ್ಯಾಕಿಂಗ್ ಸುಧಾರಣೆಗೊಂಡು ಗ್ರಾಮೀಣ ವಸ್ತುಗಳಿಗೆ ಹೊಸ ರೂಪ ನೀಡಲಾಗುವುದು.

೬. ನಮ್ಮ ದೇಶದಲ್ಲಿ ಶೇಕಡಾ ೭೫ರಷ್ಟು ಜನರು ಬೇಸಾಯ ಚಟುವಟಿಕೆಗಳಲ್ಲಿ ನಿರತರಾಗಿದ್ದಾರೆ. ವ್ಯವಸಾಯ ಉತ್ಪನ್ನಗಳನ್ನು ಪರಿಷ್ಕರಿಸಿ ದೇಶದ ಉತ್ಪನ್ನವನ್ನು ಹೆಚ್ಚಿಸಲು ಉದ್ದೇಶಿಸಲಾಗಿದೆ. ಈ ನಿಟ್ಟಿನಲ್ಲಿ ದ್ವಿದಳ ದಾನ್ಯಗಳ ಪರಿಷ್ಕರಣೆ, ಮಿನಿರೈಸ್ ಮಿಲ್‌ಗಳು, ಬೆಲ್ಲ ತಯಾರಿಕಾ ಘಟಕಗಳು, ಹಣ್ಣುಗಳ ಪರಿಷ್ಕರಣೆ, ಹಾಲಿನಿಂದ ವಿವಿಧ ಪದಾರ್ಥಗಳ ಉತ್ಪಾದನೆ ಇಂತಹ ಅನೇಕ ನಮ್ಮಲ್ಲಿ ದೊರೆಯುವ ವ್ಯವಸಾಯಾಧಾರಿತ ಪದಾರ್ಥಗಳಲ್ಲಿ ಶೇಕಡ ೫ಕ್ಕಿಂತ ಕಡಿಮೆ ಅಂಶದಷ್ಟನ್ನು ಮಾತ್ರ ಇದೀಗ ಪರಿಷ್ಕರಿಸಲಾಗುತ್ತಿದೆ. ಇದರ ಪ್ರಮಾಣವನ್ನು ಹೆಚ್ಚಿಸಬೇಕಾಗಿದೆ.

೭. **ಸಾವಯವ ಕೃಷಿ** : ಇಂದು ಇಡೀ ಜಗತ್ತು ಸಾವಯುವ ಕೃಷಿಯತ್ತ ಗಮನ ಹರಿಸುತ್ತಿದೆ. ಇದರ ಮಹತ್ವವನ್ನು ಅರಿತು ಖಾದಿ ಮಂಡಳಿಯು ತನ್ನ ಪಾತ್ರವನ್ನು ನಿರ್ವಹಿಸುತ್ತಿದೆ. ಗ್ರಾಮೀಣ ಪ್ರದೇಶದಲ್ಲಿ ಎರೆಹುಳು ಗೊಬ್ಬರ ತಯಾರಿಕಾ ಘಟಕಗಳಿಗೆ ಆದ್ಯತೆಯ ಮೇಲೆ ಸಹಾಯ ಮಾಡುತ್ತಿದೆ. ಅದೇ ರೀತಿ ಬೇವಿನಬೀಜಗಳ ಪರಿಷ್ಕರಣೆ, ಬೇವಿನ ಎಣ್ಣೆ ಹಾಗೂ ಇತರ ಬೇವು ಆಧಾರಿತ ಉತ್ಪನ್ನಗಳ ತಯಾರಿಕೆಗೂ ಪ್ರೋತ್ಸಾಹ ನೀಡಲಾಗುತ್ತಿದೆ.

೮. ಕೇಂದ್ರ ಸರ್ಕಾರದ ಕೃಷಿ ಹಾಗೂ ಗ್ರಾಮೀಣಾಭಿವೃದ್ಧಿ ಸಚಿವಾಲಯದ ಸಹಾಯದಿಂದ ಕೈಗಾರಿಕಾ ಸಮೂಹಗಳಿರುವ ಪ್ರದೇಶಗಳಲ್ಲಿ ಸಾಮಾನ್ಯ ಸೌಲಭ್ಯ ಕೇಂದ್ರಗಳನ್ನು ಸ್ಥಾಪಿಸುವ ಗುರಿಯನ್ನು ಹೊಂದಿದೆ. ಇಂತಹ ಸಾಮಾನ್ಯ ಸೌಲಭ್ಯ ಕೇಂದ್ರಗಳಲ್ಲಿ ಕೈಗಾರಿಕಾ ಗೊಂಚಲುಗಳಲ್ಲಿ ತಯಾರಾಗುವ ವಸ್ತುಗಳ ಗುಣಮಟ್ಟ ಪರೀಕ್ಷೆ ಹಾಗೂ ಗುಣಮಟ್ಟ ವೃದ್ಧಿಪಡಿಸಲು ಹೊಸ ತಾಂತ್ರಿಕತೆಯ ಅಳವಡಿಕೆಯಲ್ಲಿ ಸಹಾಯ, ಒಳ್ಳೆಯ ಗುಣಮಟ್ಟದ ಕಚ್ಚಾ ವಸ್ತುಗಳ ಪೂರೈಕೆ, ಪೈಪೋಟಿಗೆ ಇಳಿಯುವಂತಹ ಬ್ರಾಂಡಿಂಗ್ ಹಾಗೂ ಪ್ಯಾಕಿಂಗ್ ಮತ್ತು ವ್ಯವಸ್ಥಿತ ರೀತಿಯಲ್ಲಿ ಮಾರಾಟಕ್ಕಾಗಿ ಈ ಸೌಲಭ್ಯ ಕಲ್ಪಿಸುವ ಗುರಿ ಹೊಂದಿದೆ. ಇದರಿಂದ ಇಂತಹ ಕೈಗಾರಿಕಾ ಸಮೂಹಗಳಿಗೆ ಪೂರ್ಣ ಮೂಲಸೌಲಭ್ಯ ಕಲ್ಪಿಸುವ ಉದ್ದೇಶವಿದೆ.




# ಪಾನನಿರೋಧದ ಮಹತ್ವ

ಎಂ. ಎಚ್. ನರಸಿಂಹಯ್ಯ

ಬೆಂಕಿ ದೇಹವನ್ನು ನಾಶ ಮಾಡಿದರೆ, ಕುಡಿತ ದೇಹ ಮತ್ತು ಆತ್ಮ ಎರಡನ್ನೂ ನಾಶ ಮಾಡುತ್ತದೆ ಎಂಬ ಮಹಾತ್ಮ ಗಾಂಧೀಜೀಯವರ ಮಾತೇ ಪಾನನಿರೋಧದ ಮಹತ್ವವನ್ನು ಹೇಳುತ್ತದೆ. ಮದ್ಯ ಸೇವನೆಯು ಅನಾದಿಕಾಲದಿಂದಲೂ ಆಚರಣೆಯಲ್ಲಿದ್ದು ಧಾರ್ಮಿಕ, ಸಾಮಾಜಿಕವಾಗಿಯೂ ತಿರಸ್ಕಾರಕ್ಕೆ ಒಳಗಾಗಿರುವ ವಿಷಯವಾಗಿದೆ. ಪೂರ್ವಕಾಲದಲ್ಲಿ ವಿರಳವಾಗಿ ಅದರಲ್ಲಿಯೂ ಕದ್ದುಮುಚ್ಚಿ ಸೇವನೆ ಮಾಡುತ್ತಿದ್ದು ಅಂತಹ ಜನರನ್ನು ಅಗೌರವದಿಂದ, ತಿರಸ್ಕಾರದಿಂದ ಕಾಣುತ್ತಿದ್ದುದು ಎಲ್ಲ ಹಿರಿಯರಿಗೂ ಅನುಭವವೇದ್ಯವಾಗಿದೆ. ಆದರೆ ಸ್ವಾತಂತ್ರ್ಯಾನಂತರದ ಕಾಲದಲ್ಲಿ ಕೆಲವು ರಾಜ್ಯಗಳು ಮದ್ಯಪಾನ ನಿಷೇಧವನ್ನು ತೆಗೆದುಹಾಕಿ ರಾಜ್ಯದ ಬೊಕ್ಕಸಕ್ಕೆ ಆದಾಯ ಮೂಲವಾಗಿ ಮಾಡಿಕೊಂಡಿದ್ದು ಮನುಕುಲಕ್ಕೆ ಕಂಟಕಪ್ರಾಯವಾಗಿದೆ. ಎಲ್ಲ ಧರ್ಮಗಳೂ ಮದ್ಯ ಸೇವನೆಯನ್ನು ಮಾನ್ಯ ಮಾಡಿರುವುದಿಲ್ಲ. ಆದರೂ ಕೂಡ ಬಹುತೇಕ ಜನರು ಒಂದಲ್ಲ ಒಂದು ರೀತಿಯಲ್ಲಿ ಮದ್ಯಪಾನ ಚಟದ ಗುಲಾಮರಾಗಿದ್ದಾರೆ. ಮದ್ಯಪಾನದ ವ್ಯಸನದಿಂದ ಎಲ್ಲವನ್ನು ಕಳೆದುಕೊಂಡು ನಿರ್ಗತಿಕರಾಗುತ್ತಿದ್ದಾರೆ. ಕುಡಿತದ ಚಟವಿರುವ ವ್ಯಕ್ತಿ ತಾನು ಹಾಳಾಗುವುದಲ್ಲದೇ ಇಡೀ ಕುಟುಂಬವನ್ನೂ ಹಾಳುಮಾಡುತ್ತಾನೆ. ಸಮಾಜ ಹಾಗೂ ಸರ್ಕಾರಕ್ಕೆ ಹೊರೆಯಾಗುತ್ತಾನೆ. ಇಂತಹ ಪೀಳಿಗೆಯು ರಕ್ತಬೀಜಾಸುರನ ತರಹ ಎಲ್ಲೆಡೆ ಹರಡುತ್ತಿದೆ. ಈಗಾಗಲೇ ಇನ್ನೂ ಮುಂದೆ ಹೋಗಿ ಅಮೆರಿಕಾ ದೇಶದಲ್ಲಿ ಮದ್ಯಪಾನದಿಂದ ಜನರು ಸಿಕ್ಕಾಪಟ್ಟೆ ಕುಡಿದು ಅನಾಹುತಕ್ಕೆ ಒಳಗಾಗಿದ್ದಾರೆ. ಅಲ್ಲಿನ ದೇಶಭಕ್ತರು ಒಂದೆಡೆ ಸೇರಿ ಜನರಿಗೆ ಮದ್ಯಪಾನವನ್ನು ಬಿಡಿಸಲು ಪ್ರಾಮಾಣಿಕ ಪ್ರಯತ್ನ ಮಾಡಿ ಆ ದೇಶದಲ್ಲಿ ಆಲ್ಕೋಹಾಲಿಕ್ಸ್ ಅನಾನಿಮಸ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ ಆ ಸಂಸ್ಥೆಗೆ ಕುಡಿಯುವವರನ್ನು ಸದಸ್ಯರನ್ನಾಗಿ ಮಾಡಿಕೊಂಡು ಪ್ರತಿ ದಿನ ಸಾಯಂಕಾಲ ೭ ಗಂಟೆಗೆ ಅವರಿಗೆಲ್ಲಾ ಅರಿವು ಮೂಡಿಸಿ ಲಕ್ಷಾಂತರ ಜನರನ್ನು ಮದ್ಯಪಾನದ ದುಶ್ಚಟದಿಂದ ಬಿಡಿಸಿ ಉತ್ತಮರನ್ನಾಗಿ ಮಾಡಿರುತ್ತಾರೆ. ಅಂತಹ ಸಂಸ್ಥೆಗಳು ಈಗಾಗಲೇ ಜಗತ್ತಿನ ಎಲ್ಲಾ ದೇಶದಲ್ಲೂ ಸುಮಾರು ೬೦ ಸಾವಿರ ಆಲ್ಕೋಹಾಲಿಕ್ ಅನಾನಿಮಸ್ ಸಂಸ್ಥೆಗಳು ಕೆಲಸ ಮಾಡಿ ಕೋಟ್ಯಾಂತರ ಜನರನ್ನು ಮದ್ಯಪಾನದಿಂದ ಪಾರುಮಾಡಿರುತ್ತಾರೆ.

**ಮದ್ಯ ಸೇವನೆಯ ಚಟಕ್ಕೆ ಬಡವರು, ಹಿಂದುಳಿದವರು ಮಾತ್ರವಲ್ಲದೆ ಎಲ್ಲ ಜಾತಿಯ ಜನ ಒಳಗಾಗಿದ್ದಾರೆ. ಮದ್ಯಪಾನ ಅವರ ಮನಸ್ಸನ್ನು ಗೆಲ್ಲುತ್ತಿರುವುದನ್ನು ನೋಡಿದರೆ ಅವರುಗಳ ಸುಭದ್ರ ಜೀವನದ ಬಗ್ಗೆ ಭಯ ಮೂಡುತ್ತದೆ.**

ಮದ್ಯ ಸೇವನೆಯ ಚಟಕ್ಕೆ ಬರೀ ಬಡವರು, ಹಿಂದುಳಿದ ಜಾತಿಯವರು ಮಾತ್ರವೇ ನಿಲುಕದೆ ಎಲ್ಲಾ ಜಾತಿಯ ಜನ ಲಿಂಗಭೇದವಿಲ್ಲದೆ ನರಳುತ್ತಿದ್ದಾರೆ. ಎಲ್ಲರ ಮನಸ್ಸನ್ನು ಮದ್ಯಪಾನ ಗೆಲ್ಲುತ್ತಿರುವುದನ್ನು

ಹಾಗೂ ಜೀವನದಲ್ಲಿ ಇದನ್ನು ಒಂದು ಹವ್ಯಾಸವನ್ನಾಗಿ ಮಾಡಿಕೊಂಡಿರುವುದನ್ನು ನೋಡಿದರೆ ಅವರ ಸುಭದ್ರ ಜೀವನದ ಬಗ್ಗೆ ಭಯ ಮೂಡುತ್ತದೆ.

ಮದ್ಯಪಾನವು ದೈಹಿಕವಾಗಿ ಹಲವಾರು ಖಾಯಿಲೆಗಳನ್ನು ಉಂಟುಮಾಡುವುದೆಂದು ನುರಿತ ತಜ್ಞ ವೈದ್ಯರೇ ಹೇಳುತ್ತಾರೆ. ಮದ್ಯಪಾನ ಮಾಡುತ್ತಿರುವವರ ಜೀವನ ಶೈಲಿಯನ್ನು ಗಮನಿಸಿದಲ್ಲಿ ಇದು ಸತ್ಯವಾಗಿದೆ. ಕುಡಿತವು ಕುಡಿಯುವವರನ್ನು ಹಿಂಡಿ ಹಿಪ್ಪೆ ಮಾಡಿ ಕೊನೆಗೆ ಸ್ಮಶಾನದ ದಾರಿ ತೋರುವುದು, ತನ್ನ ತೆಕ್ಕೆಗೆ ಬಂದವರನ್ನು ತಿಂದು ತೇಗಿ ಕೊಂದುಹಾಕುವುದು. ಇಷ್ಟೊಂದು ಅನಾಹುತವಾದರೂ ಕೂಡ ಅಸಂಖ್ಯಾತ ಜನರು ಇದರ ದಾಸರಾಗಿ ಜೀವನವನ್ನು ನರಕ ಸದೃಶವನ್ನಾಗಿ ಮಾಡಿಕೊಳ್ಳುತ್ತಿರುವರು. ಶ್ರೀಮಂತರು ಸೇವನೆ ಮಾಡಿದರೆ ಅದು ಅವರ ವೈಯಕ್ತಿಕ ಸಮಸ್ಯೆಯಾಗಬಹುದು, ಆದರೆ ಬಡವರು ಕುಡಿಯಲು ಕಲಿತರೆ ಇದು ಅವರ ಸಮಸ್ಯೆಯಲ್ಲದೆ ಸಮಾಜದ ಸಮಸ್ಯೆಯೂ ಆಗುತ್ತದೆ, ಸರ್ಕಾರದ ಸಮಸ್ಯೆಯೂ ಆಗುತ್ತದೆ.

ಕುಡಿತದ ವ್ಯಾಪ್ತಿಯೂ ಇತ್ತೀಚೆಗೆ ಮಿತಿ ಮೀರಿ ಬೆಳೆಯುತ್ತಿದೆ. ಇದಕ್ಕೆ ನಗರ, ಪಟ್ಟಣ, ಹಳ್ಳಿ ಎಂಬ ಭೇದವಿಲ್ಲದೆ ಎಲ್ಲಾ ಕಡೆಯೂ ಇದು ಪ್ರಭಾವವನ್ನು ಬೀರಿದೆ. ಗ್ರಾಮಾಂತರ ಪ್ರದೇಶದಲ್ಲಂತೂ ಹೇಳತೀರದಾಗಿದೆ. ಈ ಸಮಾಜದಲ್ಲಿ ಏನೆಲ್ಲಾ ಭಿನ್ನತೆಗಳಿದ್ದರೂ ಕುಡಿಯುವ ಸಂಧರ್ಭದಲ್ಲಿ ಒಂದುಗೂಡುವ ಜನರ ಒಗ್ಗಟ್ಟಿಗೆ ಶಹಬಾಸ್ ಹೇಳಬೇಕಾಗಿದೆ. ಹಳ್ಳಿಗಳಲ್ಲಿ ಕುಡಿತದ ಚಟ ಜಾಸ್ತಿಯಾಗಿ ಕುಟುಂಬಗಳಲ್ಲಿ ಕಲಹಗಳು, ಕೌಟುಂಬಿಕ ಸಮಸ್ಯೆಗಳು, ಆರ್ಥಿಕವಾಗಿ ಬಲಹೀನವಾಗಿ ನೆಲಕಚ್ಚಿದ್ದು, ಗೃಹ ಕಲಹಗಳು ಹೆಚ್ಚಿವೆ. ಕುಡಿತದಿಂದ ರಾಜಕೀಯ ವೈಷಮ್ಯ ಬೆಳೆದಿದ್ದು ಹಳ್ಳಿಗಳು ಛಿದ್ರ ಛಿದ್ರವಾಗಿವೆ. ಎಲ್ಲಿಯೂ ಶಾಂತಿ ಸಾಮರಸ್ಯ ನೆಮ್ಮದಿ ಕಂಡು ಬರುತ್ತಿಲ್ಲ. ಒಬ್ಬರನ್ನೊಬ್ಬರು ಕಂಡರೆ ತಿರಸ್ಕಾರ, ಜಗಳ, ಹೊಡೆದಾಟ, ಬಡಿದಾಟಗಳು ಹೆಚ್ಚಾಗಿವೆ. ಎಲ್ಲ ಸಮಸ್ಯೆಗಳಿಗೆ ಮೂಲಕಾರಣ ಮದ್ಯ ಸೇವನೆಯೇ ಆಗಿದೆ.

ಭಾರತೀಯ ಸಮಾಜದ ಒಳಿತು ಕೆಡಕುಗಳನ್ನು ಅರಿತಿದ್ದ ರಾಷ್ಟ್ರಪಿತ ಮಹಾತ್ಮ ಗಾಂಧೀಜಿರವರು ಅದಕ್ಕಾಗಿಯೇ ಪಾನ ನಿಷೇಧಕ್ಕೆ ಒತ್ತು ನೀಡಿದ್ದರು. ಅದರಂತೆಯೇ ಸಾವಿರಾರು ಜನ ಸ್ವಾತಂತ್ರ್ಯಯೋಧರೂ ಹಾಗೂ ಕಾಂಗ್ರೆಸ್ ಪಕ್ಷವೂ ಕೂಡ ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ಶೇಂದಿ, ಸಾರಾಯಿಯನ್ನು ನಿಷೇಧಿಸಬೇಕೆಂದು ಚಳವಳಿ ಮಾಡಿ, ಲಾಠಿ ಏಟು ತಿಂದಿದ್ದರು. ಆದರೆ ಸ್ವಾತಂತ್ರ್ಯಾನಂತರ ನಡೆದ ವಿಷಯವೇ ಬೇರೆ. ಕರ್ನಾಟಕದಲ್ಲೂ ಪಾನನಿರೋಧ ಜಾರಿಯಲ್ಲಿದ್ದು ನಿಜಲಿಂಗಪ್ಪನವರು ಮುಖ್ಯಮಂತ್ರಿಗಳಾಗಿದ್ದ ಸಮಯದಲ್ಲಿ ಕೋಲಾರದಲ್ಲಿ ಜನರು ಕಳ್ಳಭಟ್ಟಿ ಕುಡಿದು ಸತ್ತದ್ದನ್ನು ನೋಡಿ, ಕದ್ದು ಮುಚ್ಚಿ ಕುಡಿದು ಸಾಯುವುದಕ್ಕೆ ಅವಕಾಶ ಮಾಡಿಕೊಡುವ ಬದಲು ಜನರ ವಿವೇಚನೆಗೆ ಬಿಡುವುದು ಒಳ್ಳೆಯ ಮಾರ್ಗವೆಂದು ಭಾವಿಸಿ ಪಾನನಿರೋಧವನ್ನು ತೆಗೆದು ಹಾಕಿದರು. ಈ ವಿಷಯವಾಗಿ ಶ್ರೀಮತಿ ಯಶೋಧರಮ್ಮ ದಾಸಪ್ಪನವರು ಪಾನನಿರೋಧವನ್ನು ಸರ್ಕಾರವು ತೆಗೆದುಹಾಕಿದ್ದನ್ನು ವಿರೋಧಿಸಿ ತಮ್ಮ ಸಚಿವ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಎಷ್ಟೇ ಜನ ಸತ್ತರೂ ಪರವಾಗಿಲ್ಲ, ಪಾನನಿರೋಧವನ್ನು ತೆಗೆದು ಹಾಕಬಾರದೆಂಬುದು ಅವರ ದೃಢ ನಿಲುವಾಗಿತ್ತು. ಆದರೆ ಅವರ ಧ್ವನಿಯು ಒಂಟಿಧ್ವನಿಯಾದ್ದರಿಂದ ಏನೂ ಮಾಡಲು ಆಗಲಿಲ್ಲ. ಅಂದಿನಿಂದ ಕರ್ನಾಟಕದಲ್ಲಿಯೂ ಮದ್ಯ ವ್ಯವಹಾರ ಸರ್ಕಾರಕ್ಕೆ ಆದಾಯ ತರುವ ಪ್ರಮುಖ ಸಾಧನವಾಗಿದೆ.

ಮದ್ಯಪಾನ ನಿಷೇಧವು ಕಡು ಕಷ್ಟವೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಇದು ಆಲದಮರದ ಬಿಳಿಲು ಇದ್ದಂತೆ, ಕತ್ತರಿಸಿದಂತೆ ಅಧಿಕವಾಗಿ ಬೆಳೆಯುವ ಗುಣ ಹೊಂದಿದೆ. ಇಂತಹ ಸಾಮಾಜಿಕ ಪಿಡುಗನ್ನು ಕಾನೂನಿನ ಬಲದಿಂದಾಗಲಿ, ಬಲವಂತದಿಂದಾಗಲಿ ನಿರ್ಮೂಲನ ಮಾಡಲು ಸಾಧ್ಯವೇ ಇಲ್ಲ. ಇದಕ್ಕೆ ಒಂದೇ ಮದ್ದು ಎಂದರೆ ಇದರ ಸಹವಾಸ, ಹವ್ಯಾಸವಿಲ್ಲದಂತೆ ಬದುಕುವುದೇ ಆಗಿದೆ. ಕುಡಿತದ ಕೆಡಕುಗಳ ಬಗ್ಗೆ, ಇದು ಮಾಡುವ ಅವಾಂತರಗಳ ಬಗ್ಗೆ ಜನರಿಗೆ ಮನವರಿಕೆ ಮಾಡುವುದು ಮತ್ತು ಈ ದುಶ್ಚಟದಿಂದ ದೂರವಿರುವಂತೆ ಮನ ಒಲಿಸುವುದು ಪ್ರಮುಖ ಮಾರ್ಗವಾಗಿವೆ. ವಿಶ್ವವು ಒಂದು ಮನೆಯಂತಾಗಿರುವ ಸಂದರ್ಭದಲ್ಲಿ, ನವನಾಗರಿತೆಯ ತುತ್ತ ತುದಿಯಲ್ಲಿರುವ ಸನ್ನಿವೇಶದಲ್ಲಿ, ಈ ದುಶ್ಚಟವನ್ನು ಪರಿಣಾಮಕಾರಿಯಾಗಿ ನಿರ್ಬಂಧಿಸಲು ಸಾಧ್ಯವಿಲ್ಲ. ತಿಳುವಳಿಕೆಯಿಂದ, ಜನಜಾಗೃತಿಯಿಂದ ಮಾತ್ರ ಇದನ್ನು ನಿರ್ಬಂಧಿಸಬಹುದು. ಈ ಸತ್ಯವನ್ನು ಕಂಡ ಕರ್ನಾಟಕ ಸರ್ಕಾರವು ೧೯೭೬ರಲ್ಲಿಯೇ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿಯನ್ನು ರಚಿಸಿದ್ದು, ಮದ್ಯ ಮತ್ತು ಮಾದಕ ವಸ್ತುಗಳ ದುಷ್ಪರಿಣಾಮಗಳ ಬಗ್ಗೆ ಜನಜಾಗೃತಿ ಮೂಡಿಸುವ ನಿಟ್ಟಿನಲ್ಲಿ ದುಡಿಯುತ್ತಿದೆ. ಸ್ತ್ರೀಯರಲ್ಲಿ ಜಾಗೃತಿ ಮೂಡಿದ್ದು, ಸ್ತ್ರೀಶಕ್ತಿ

ಸಂಘಗಳು ಬಲಗೊಂಡಿದ್ದು ಮದ್ಯಪಾನ, ಕುಡಿತದ ದುಷ್ಪರಿಣಾಮಗಳನ್ನು ಕುರಿತಂತೆ ಚಳವಳಿ ಮಾಡುತ್ತಿದ್ದಾರೆ. ಅವರುಗಳು ತಮ್ಮನ್ನು ರಕ್ಷಿಸಿಕೊಳ್ಳುತ್ತಿರುವುದರ ಜೊತೆ ಜೊತೆಗೆ ತಮ್ಮ ಕುಟುಂಬಗಳನ್ನೂ ರಕ್ಷಿಸಿಕೊಳ್ಳುತ್ತಿದ್ದಾರೆ. ಅದುದರಿಂದ ಪಾನನಿರೋಧವು ಆಧುನಿಕ, ನವನಾಗರಿಕ ಕಾಲದಲ್ಲಿ ನಿರ್ಬಂಧಿಸಲು ಕಷ್ಟಸಾಧ್ಯವಾದರೂ, ಜನರೇ ಸ್ವಯಂ ನಿಯಂತ್ರಣ ಹೇರಿಕೊಳ್ಳಬೇಕಾದ ಅಗತ್ಯವಿದೆ. ಈ ಬಗ್ಗೆ ಸಮಾಜ ಸುಧಾರಕರೂ, ಸ್ವಯಂ ಸೇವಾ ಸಂಸ್ಥೆಗಳೂ ಹಾಗೂ ಸಮಾಜ ಚಿಂತಕರು ಸದಾ ಜಾಗೃತಿ ಮೂಡಿಸುವುದು ಅಷ್ಟೇ ಅವಶ್ಯಕ. ಜೊತೆಯಲ್ಲಿ ಸರ್ಕಾರವೂ ಕೂಡಿ ಮಿತವಾಗಿ ಮದ್ಯದಂಗಡಿಗಳಿಗೆ ಪರವಾನಗಿ ನೀಡಬೇಕು. ಶಾಲಾ ಕಾಲೇಜುಗಳು, ಪವಿತ್ರ ಸ್ಥಳಗಳು ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ವಾಸಿಸುವ ಸ್ಥಳಗಳಲ್ಲಿ ಪರವಾನಗಿ ನೀಡಬಾರದು. ಗ್ರಾಮಾಂತರ ಪ್ರದೇಶದಲ್ಲಿ ಸೇಂದಿ, ಸಾರಾಯಿ ಮಾರಾಟಕ್ಕೆ ಅವಕಾಶ ಮಾಡಿಕೊಡಬಾರದು.

ಗ್ರಾಮೀಣಾಭಿವೃದ್ಧಿಗೆ ಪಾನನಿರೋಧದ ಮಹತ್ವ ಹೆಚ್ಚು ಕಾರಣ, ಗ್ರಾಮಾಂತರ ಪ್ರದೇಶದ ಜನರು ಕೃಷಿಕರು ಮತ್ತು ಕೃಷಿ ಕಾರ್ಮಿಕರಾಗಿದ್ದು ಅಲ್ಪ ಆದಾಯ ಹಾಗೂ ಅನಿಶ್ಚಿತ ಆದಾಯ ವರ್ಗದವರಾಗಿದ್ದಾರೆ. ಇಂತಹ ವರ್ಗ ಕುಡಿತದ ಅಭ್ಯಾಸ ರೂಢಿಸಿಕೊಂಡಲ್ಲಿ ಸಂಪೂರ್ಣ ಆದಾಯ ಕುಡಿತಕ್ಕೆ ಹೋಗಿ ಕುಟುಂಬ ಪೂರಾ ಸರ್ವನಾಶವಾಗುತ್ತದೆ. ಕುಡಿತವಿಲ್ಲದಿದ್ದರೂ ಬರುವ ಆದಾಯದಲ್ಲಿ ತನ್ನ ಕುಟುಂಬವನ್ನು ಸಾಕಿ ಸಲಹುವುದು ಕಷ್ಟ. ಕುಟುಂಬದಲ್ಲಿ ಸಾಮರಸ್ಯ, ಸುಖ, ಸಂತೋಷ, ನೆಮ್ಮದಿ ಕಾಣುತ್ತಿದ್ದರೆ ಅವು ಆದರ್ಶ ಕುಟುಂಬಗಳಾಗುತ್ತವೆ. ಇಂತಹ ಆದರ್ಶ ಕುಟುಂಬಗಳು ಹೆಚ್ಚಿದರೆ ಗ್ರಾಮಗಳು ಕೂಡ ಆದರ್ಶ ಗ್ರಾಮಗಳಾಗುತ್ತವೆ. ಆದುದರಿಂದ ಪಾನ ನಿರೋಧವೇನೂ ಒಳ್ಳೆಯದೆ, ಅದರೆ ಬೆಕ್ಕಿಗೆ ಗಂಟೆ ಕಟ್ಟುವರ್‍ಯಾರು? ಭಾರತ ದೇಶವು ಹಳ್ಳಿಗಳಿಂದ ಕೂಡಿದ ದೇಶವಾಗಿದೆ. ಬಹುತೇಕ ಕೃಷಿಯೇ ಮೂಲಾಧಾರವಾಗಿದೆ. ಸದೃಢ ಮತ್ತು ಆರೋಗ್ಯವಂತ ವ್ಯಕ್ತಿ ಕುಟುಂಬವನ್ನು ಮಾತ್ರವಲ್ಲದೆ ಗ್ರಾಮ ಹಾಗೂ ರಾಷ್ಟ್ರವನ್ನೂ ಕಟ್ಟಬಲ್ಲ. ವ್ಯಸನಗಳ ದಾಸನಾದ ಮನುಷ್ಯ ರಾಷ್ಟ್ರಕ್ಕೆ ಹೊರೆಯಾಗುತ್ತಾನೆ. ಆದುದರಿಂದ ಎಲ್ಲಾ ವ್ಯಕ್ತಿಗಳು ದುಶ್ಚಟಗಳಿಂದ ದೂರವಿರುವುದೇ ಜಾಣತನವಾಗಿದೆ.

ಈ ಪ್ರಸ್ತುತ ಸಂದರ್ಭದಲ್ಲಿ ಯಾವ ರಾಜ್ಯವೂ ಪಾನ ನಿರೋಧವನ್ನು ತರಲು ಅಸಾಧ್ಯವಾದುದರಿಂದ ಜನರೇ ತಮ್ಮನ್ನು ತಾವೇ ರಕ್ಷಿಸಿಕೊಳ್ಳಬೇಕಾಗಿದೆ. ವಿವೇಚನೆಯಿಂದ ತನಗೆ, ತನ್ನ ಕುಟುಂಬಕ್ಕೆ ಶ್ರೇಯಸ್ಸನ್ನು ನೀಡುವ ಮಾರ್ಗವನ್ನು ಅನುಸರಿಸಿ ಬಾಳಬೇಕಾಗಿದೆ. ದುರ್ಮಾರ್ಗದಲ್ಲಿ ನಡೆದರೆ ಯಾರೂ ರಕ್ಷಿಸಲು ಆಗುವುದಿಲ್ಲ. ದೇವರೂ ಕೂಡ ಇಂತಹವರನ್ನು ರಕ್ಷಿಸಲಾರ. ಆದುದರಿಂದ ಮದ್ಯಪಾನ ಸಂಯಮ ಮಂಡಳಿಯ ಅಧ್ಯಕ್ಷನಾಗಿ ರಾಜ್ಯದ ನಾಗರಿಕರಿಗೆ ನನ್ನ ವಿನಂತಿ ಏನಂದರೆ ಮದ್ಯ ಮತ್ತು ಮಾದಕ ವಸ್ತುಗಳ ಸೇವನೆಯಿಂದ ದೂರವಿರಿ, ಈ ವ್ಯಸನಕ್ಕೆ ಒಳಗಾದವರನ್ನು ಸರಿ ದಾರಿಗೆ ತನ್ನಿ. ಕುಡಿತ ಒಂದು ರೋಗವಾಗಿದೆ. ಆದುದರಿಂದ ಇದರ ಅಭ್ಯಾಸವಿರುವವರು ನಾಚಿಕೆಗೊಳ್ಳದೆ ವೈದ್ಯರಿಗೆ ತೋರಿಸಿ, ಚಿಕಿತ್ಸೆ ಪಡೆಯಿರಿ. ಮದ್ಯಪಾನ ಬಿಡಿ, ಹೊಸ ಜೀವನ ಪ್ರಾರಂಭಿಸಿ.

●




# ಸಹಕಾರ ತತ್ವ

ಎಸ್. ಎಸ್. ಚಂದ್ರಶೇಖರಮಠ

ಭಾರತ ಸರಕಾರದ ಯೋಜನಾ ಸಚಿವಾಲಯದಲ್ಲಿ ರಾಜ್ಯ ಸಚಿವರಾಗಿರುವ ಎಂ.ವಿ. ರಾಜಶೇಖರನ್ ಅವರ ೭೫ನೇ ವರ್ಧಂತಿ ಆಚರಣೆಯ ಶುಭ ಸಂದರ್ಭದಲ್ಲಿ ಅವರಿಗೆ ಅಭಿನಂದನೆ ಗ್ರಂಥವನ್ನು ಹೊರತರಲು ಅಭಿನಂದನ ಸಮಿತಿ ತೀರ್ಮಾನಿಸಿರುವುದು ಸ್ತುತ್ಯರ್ಹ. ಎಂ.ವಿ. ಆರ್. ಅವರ ವ್ಯಕ್ತಿತ್ವ ವೈಶಿಷ್ಟ್ಯಪೂರ್ಣ. ಅವರು ಗ್ರಾಮಾಭಿವೃದ್ಧಿ ಕಾರ್ಯಗಳಿಗೆ ತಮ್ಮ ಜೀವನವನ್ನು ಮುಡಿಪಾಗಿಟ್ಟವರು. ರಾಜಕೀಯದಲ್ಲಿದ್ದರೂ ರಾಜಕೀಯಕ್ಕಿಂತ ರಚನಾತ್ಮಕ ಸೇವೆಗೆ ಹೆಚ್ಚು ಮಹತ್ವ ಕೊಟ್ಟವರು ಭಾರತಕ್ಕೆ ಸೀಮಿತವಾಗಿದ್ದ ಗ್ರಾಮೀಣಾಭಿವೃದ್ಧಿ ಆಂದೋಲನೆಗೆ ಅಂತರರಾಷ್ಟ್ರೀಯ ಸ್ವರೂಪ ಕೊಟ್ಟ ವಿರಳರಲ್ಲಿ ವಿರಳರು. ಬೆಂಗಳೂರಿನಲ್ಲಿ ಗ್ರಾಮೀಣಾಭಿವೃದ್ಧಿ ಕುರಿತ ಏಷ್ಯಾ ಸಂಸ್ಥೆ (Asian Institute of Rural Development) ಯನ್ನು ಸ್ಥಾಪಿಸಿ ತಮ್ಮ ಸೇವಾಕ್ಷೇತ್ರವನ್ನು ಏಶಿಯಾ ಮತ್ತು ಆಫ್ರಿಕಾ ಖಂಡಗಳಿಗೆ ವಿಸ್ತರಿಸಿದವರು. ನನಗೆ ಅವರ ಸಂಸ್ಥೆಯ ಸಂಕ್ಷಿಪ್ತ ಪರಿಚಯವಾದದ್ದು ೧೯೭೦ರ ದಶಕದಲ್ಲಿ. ಆಗ ನಾನು ಆ ಸಂಸ್ಥೆಯ ನೆರೆಹೊರೆಯಲ್ಲಿಯೇ ಇದ್ದ ಸಹಕಾರಿ ತರಬೇತಿ ಕಾಲೇಜಿನಲ್ಲಿ (ಈಗಿನ ಸಹಕಾರಿ ನಿರ್ವಹಣೆಯ ಪ್ರಾದೇಶಿಕ ಸಂಸ್ಥೆ) ರಾಜ್ಯದ ಸಹಕಾರ ಇಲಾಖೆಯಿಂದ ನಿಯೋಜಿಸಲ್ಪಟ್ಟು ಪ್ರಾಧ್ಯಾಪಕನಾಗಿದ್ದೆ. ಆದರೆ ವಿಲಕ್ಷಣವೆಂದರೆ, ಎ.ಐ.ಆರ್.ಡಿ.ಯ ಸ್ಥೂಲ ಪರಿಚಯವಾದದ್ದು ಆ ದಶಕದ ಕೊನೆಯಲ್ಲಿ - ಅದು ಕೂಡ ನಾನು ಮಾರಿಷಸ್‌ನಲ್ಲಿ ಅಲ್ಲಿಯ ಸಹಕಾರ ಸಚಿವಾಲಯದಲ್ಲಿ 'ಸಹಕಾರ ಶಿಕ್ಷಣ' ವಿಷಯದ ತಜ್ಞನಾಗಿ ಕಾರ್ಯ ಮಾಡುತ್ತಿದ್ದಾಗ ಎಂ. ವಿ. ಆರ್. ಅವರ ಸಂಸ್ಥೆಯು ಮಾರಿಷಸ್ ಸರಕಾರದ ಯೋಜನಾ ಸಚಿವರಿಗೆ ಬರೆದ ಪತ್ರದಲ್ಲಿ ತಮ್ಮ ಅಂತರರಾಷ್ಟ್ರೀಯ ತರಬೇತಿ ಕೇಂದ್ರದಲ್ಲಿ ಸಂಘಟಿಸುತ್ತಿದ್ದ ವಿವಿಧ ತರಬೇತಿ ಕಾರ್ಯಕ್ರಮಗಳ ಸ್ಥೂಲ ಪರಿಚಯ ಕೊಟ್ಟು ಅರ್ಹ ಅಭ್ಯರ್ಥಿಗಳನ್ನು ನಿಯೋಜಿಸಲು ಕೋರಲಾಗಿತ್ತು. ಅಲ್ಲಿಂದ ಮರಳಿ ಬಂದ ಮೇಲೆ ಏಶಿಯಾದ ಗ್ರಾಮೀಣ ಅಭಿವೃದ್ಧಿ ಸಂಸ್ಥೆ ನಡೆಸುತ್ತಿದ್ದ ಹಲವಾರು ಅಂತರರಾಷ್ಟ್ರೀಯ ತರಬೇತಿ ಕಾರ್ಯಕ್ರಮಗಳಲ್ಲಿ ಅತಿಥಿ ಉಪನ್ಯಾಸಕನಾಗಿ ಭಾಗವಹಿಸುವ ಸುಯೋಗವೂ ನನ್ನದಾಗಿತ್ತು. ಈಗ ಎಂ. ವಿ. ಆರ್. ಅವರ ಅಭಿನಂದನ ಗ್ರಂಥಕ್ಕಾಗಿ 'ಗ್ರಾಮೀಣ ಅಭಿವೃದ್ಧಿ ಮತ್ತು ಸಹಕಾರ' ಕುರಿತ ಈ ಲೇಖನ ಸಿದ್ಧಪಡಿಸುವ ಸಂದರ್ಭದಲ್ಲಿ ನನ್ನ ಕೆಲವು ನೆನಪುಗಳನ್ನು ಮೆಲುಕುಹಾಕಲು ಸದವಕಾಶ ಮಾಡಿಕೊಟ್ಟ ಅಭಿನಂದನ ಸಮಿತಿಗೆ ನನ್ನ ಕೃತಜ್ಞತೆಗಳು.

**ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣ ನೀತಿಯ ಪ್ರಸ್ತುತ ಸನ್ನಿವೇಶದಲ್ಲಿ ಗ್ರಾಮಾಭಿವೃದ್ಧಿ ಕುರಿತು ಮಾತನಾಡುವುದೆಂದರೆ ಕೆಲವರಿಗೆ ಅಪಥ್ಯವಾಗಿ ತೋರ ಬಹುದು. ಆದರೆ ಸುಮಾರು ಆರು ದಶಕಗಳ ರಾಜಕೀಯ ಸ್ವಾತಂತ್ರ್ಯದ ನಡುವೆ ಅಭಿವೃದ್ಧಿ ಕ್ಷೇತ್ರದಲ್ಲಿ ನಮ್ಮ ಸಾಧನೆ ಅಲ್ಲಗಳೆಯುವಂತಿಲ್ಲ.**

## ಅಪಥ್ಯ ಆದರೂ ಅನಿವಾರ್ಯ :

೨. ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣ ನೀತಿಯ ಪ್ರಸ್ತುತ ಸನ್ನಿವೇಶದಲ್ಲಿ, ಗ್ರಾಮಾಭಿವೃದ್ಧಿ ಕುರಿತು ಮಾತನಾಡುವುದೆಂದರೆ ಕೆಲವರಿಗೆ ಅಪಥ್ಯವಾಗಿ ತೋರಬಹುದು. ಆದರೆ ಸುಮಾರು ಆರು ದಶಕಗಳ ರಾಜಕೀಯ ಸ್ವಾತಂತ್ರ್ಯದ ಅವಧಿಯಲ್ಲಿ ಸಾಧಿಸಿದ ಪ್ರಗತಿ ಹಾಗೂ ಬಾಹ್ಯಾಕಾಶ ವಿಜ್ಞಾನ, ಮಾಹಿತಿ ತಂತ್ರಜ್ಞಾನ, ಜೈವಿಕ ಕ್ಷೇತ್ರಗಳಲ್ಲಿ ಇತ್ತೀಚೆಗೆ ಕಂಡುಬರುತ್ತಿರುವ ಕ್ರಾಂತಿಕಾರಿ ಬೆಳವಣಿಗೆಗಳ ನಂತರವೂ ನಮ್ಮ ಗ್ರಾಮಗಳು ಇಂದಿಗೂ ಕೂಡ ಭಾರತದ ಜೀವಾಳವಾಗಿ ಉಳಿದಿರುವ ಕಟು ಸತ್ಯವನ್ನು ಅಲ್ಲಗಳೆಯುವಂತಿಲ್ಲ. ಇತ್ತೀಚಿನ ವರ್ಷಗಳಲ್ಲಿ ಗ್ರಾಮಾಭಿವೃದ್ಧಿಯ ಪ್ರತಿಸ್ಪರ್ಧಿಯೇನೋ ಎಂಬಂತೆ -ನಗರಾಭಿವೃದ್ಧಿ, ನಗರೀಕರಣದಂತಹ ವಿಚಾರಗಳು ಹೆಚ್ಚು ಪ್ರಚಾರ ಪಡೆಯುತ್ತಿರುವುದು ಎಲ್ಲರಿಗೂ ತಿಳಿದ ಸಂಗತಿ. ಗ್ರಾಮಾಭಿವೃದ್ಧಿ ಸಚಿವರ ಜೊತೆ ಜೊತೆಗೇ ನಗರಾಭಿವೃದ್ಧಿ ಸಚಿವರೂ ಒಂದೇ ಸರಕಾರದಲ್ಲಿ ಕಾರ್ಯ ಮಾಡುತ್ತಿರುವುದನ್ನು ರಾಜ್ಯ ಸರಕಾರಗಳಲ್ಲಿ ಮಾತ್ರವಲ್ಲ-ಕೇಂದ್ರ ಸಚಿವ ಸಂಪುಟದಲ್ಲಿಯೂ ಇಂದು ಕಾಣುತ್ತಿದ್ದೇವೆ. ಆದರೆ ದೇಶದ ಬಹುಸಂಖ್ಯಾತ ಜನರು ಎಲ್ಲಿಯವರೆಗೆ ಗ್ರಾಮಗಳಲ್ಲಿ ತಮ್ಮ ಸುಖಜೀವನ ನಡೆಸುವರೊ ಅಲ್ಲಿಯವರೆಗೆ ಗ್ರಾಮಾಭಿವೃದ್ಧಿ ಕಲ್ಪನೆಯನ್ನು ಅಳಿಸಿಹಾಕುವ ಅಥವಾ ಮೂಲೆಗುಂಪು ಮಾಡುವ ಪ್ರಯತ್ನಗಳು ಯಶಸ್ವಿಯಾಗಲಾರವು. ಮೇಲಾಗಿ ಭಾರತದ ವಿಶಿಷ್ಟ ಭೌಗೋಳಿಕ, ಆರ್ಥಿಕ ಸ್ವರೂಪದ ಚೌಕಟ್ಟಿನಲ್ಲಿ ಕೃಷಿ ಪ್ರಧಾನ ಗ್ರಾಮಾಂತರ ಅರ್ಥವ್ಯವಸ್ಥೆ ಮತ್ತು ನಗರ ಪ್ರದೇಶದಲ್ಲಿ ಕಂಡುಬರುವ ಕೈಗಾರಿಕಾ ಅರ್ಥಿಕವ್ಯವಸ್ಥೆಗಳು ಇನ್ನೂ ಸುದೀರ್ಘ ಕಾಲದವರೆಗೆ ಪರಸ್ಪರಾವಲಂಬಿಗಳಾಗಿರಬೇಕಾದ ಅನಿವಾರ್ಯತೆ ಇದ್ದೇ ಇದೆ.

## ಗ್ರಾಮೀಣಾಭಿವೃದ್ಧಿ - ಸ್ವಾತಂತ್ರ್ಯ ಪೂರ್ವದಲ್ಲಿ ಮತ್ತು ಅನಂತರ :

೩. ಗ್ರಾಮಾಭಿವೃದ್ಧಿ ಚಟುವಟಿಕೆಗಳು ಆಂದೋಲನೆಯ ಸ್ವರೂಪ ತಾಳುವ ಮುನ್ನ ಸ್ವಾತಂತ್ರ್ಯ ಪೂರ್ವದ ವರ್ಷಗಳಲ್ಲಿ ಅಲ್ಲಲ್ಲಿ ಚದುರಿದಂತೆ ಗ್ರಾಮಾಭಿವೃದ್ಧಿ ಪ್ರಯತ್ನಗಳು ನಡೆದ ಸಾಕಷ್ಟು ನಿದರ್ಶನಗಳುಂಟು. ರಚನಾತ್ಮಕ ದೃಷ್ಟಿಯ ಸಾಮಾಜಿಕ ಕಳಕಳಿಯನ್ನು ಕಾರ್ಯಕರ್ತರು, ಕೆಲವರು ವಿದೇಶಿಯರು, ಕೆಲವು ಕೈಗಾರಿಕೆ ಮನೆತನಗಳು ಗ್ರಾಮಾಭಿವೃದ್ಧಿಯ ಪ್ರಯೋಗಗಳನ್ನು ಕೈಗೊಂಡಿದ್ದಾರೆ. ಅಂಥವರಲ್ಲಿ ಮಹಾತ್ಮಗಾಂಧೀಜಿ (ಸೇವಾಗ್ರಾಮ-ಸರ್ವೋದಯ), ಜೆ.ಸಿ. ಕುಮಾರಪ್ಪ, ಎಫ್.ಎಲ್. ಬ್ರೇಯ್ನ್ (ಹರಿಯಾಣದ ಗುರುಗಾಂವ್), ಸ್ಪೆನ್ಸರ್ ಹ್ಯಾಚ್ (ಮಾರ್ತಾಂಡಂ), ಹಿಂದುಸ್ಥಾನ್ ಲಿವರ್ ಲಿಮಿಟೆಡ್ (ಈಟಾ-ಉತ್ತರಪ್ರದೇಶ) ಮತ್ತು ರವೀಂದ್ರನಾಥ ಟಾಗೂರ್ (ಶ್ರೀನಿಕೇತನ) ಅವರ ಹೆಸರುಗಳು ಪ್ರಮುಖವಾಗಿವೆ. ಈ ಪ್ರಯೋಗಗಳು ಸ್ವಾತಂತ್ರ್ಯಾನಂತರ ರೂಪುಗೊಂಡ "ಸಮುದಾಯ ವಿಕಾಸ" ಕಾರ್ಯಕ್ರಮಕ್ಕೆ ನಾಂದಿಯಾಗಿ ಪರಿಣಮಿಸಿದವೆಂದರೆ ತಪ್ಪಲ್ಲ. ಆಚಾರ್ಯ ವಿನೋಬಾ ಭಾವೆ ಅವರ ಭೂದಾನ, ಗ್ರಾಮದಾನ ಆಂದೋಲನೆಗಳು ಗ್ರಾಮಾಭಿವೃದ್ಧಿಯ ಮಹತ್ವವನ್ನು ಜನರ ಮನಸ್ಸಿನ ಮೇಲೆ ಪ್ರಭಾವ ಬೀರಿದವು. ಆ ನಂತರ ೧೯೫೧ರಲ್ಲಿ ಯೋಜನಾಯುಗ ಆರಂಭವಾದ ಮೇಲೆ ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದ ಡಾ. ವಿ. ಟಿ. ಕೃಷ್ಣಮಾಚಾರಿಯವರ ಪ್ರಯತ್ನದ ಫಲವಾಗಿ ಗ್ರಾಮಾಭಿವೃದ್ಧಿ ಚಟುವಟಿಕೆಗಳು ಪಂಚವಾರ್ಷಿಕ ಯೋಜನೆಗಳ ಅಂತರ್ಗತ ಕಾರ್ಯಕ್ರಮಗಳೆಂದು ರೂಪುಗೊಂಡು ಕೇಂದ್ರ ಹಾಗೂ ರಾಜ್ಯ ಸರಕಾರಗಳಿಂದ ಅಧಿಕೃತ ಮನ್ನಣೆ ಪಡೆದುದು ಒಂದು ಮಹತ್ವದ ಹೆಜ್ಜೆಯೆನ್ನಬಹುದು. ನಮ್ಮ ದೇಶದ ಗ್ರಾಮಾಭಿವೃದ್ಧಿ ಕುರಿತು ಆಳವಾಗಿ ಅಭ್ಯಾಸ ಮಾಡಿರುವ ಪ್ರೊ. ವಸಂತ್ ದೇಸಾಯಿ ಅವರು ಹೇಳುವಂತೆ ೧೯೫೧ರಿಂದ ೧೯೮೫ರ ಅವಧಿಯಲ್ಲಿ ವಿವಿಧ ಪ್ರಕಾರಗಳ ಒಟ್ಟು ೬೬ ಗ್ರಾಮಾಬಿವೃದ್ಧಿ ಯೋಜನೆಗಳು ಜಾರಿಯಲ್ಲಿದ್ದವು. ಅವುಗಳಲ್ಲಿ ಸಮುದಾಯ ವಿಕಾಸ ಕಾರ್ಯಕ್ರಮ (೧೯೫೨), ರಾಷ್ಟ್ರೀಯ ವಿಸ್ತರಣಾ ಸೇವೆ (೧೯೫೨), ಪಂಚಾಯತ್ ರಾಜ್ಯ (೧೯೫೯), ಐ.ಎ.ಡಿ.ಪಿ. (೧೯೬೦), ಐಎಎಪಿ (೧೯೬೪), ಅಧಿಕ ಇಳುವರಿ ಉತ್ತೇಜನ ಕಾರ್ಯಕ್ರಮ, ಸಣ್ಣರೈತರ ಅಭಿವೃದ್ಧಿ ಸಂಸ್ಥೆ (೧೯೬೯), ಮಾರ್ಜಿನಲ್ ಕೃಷಿಕರು ಮತ್ತು ಕೃಷಿ ಕಾರ್ಮಿಕರ ಅಭಿವೃದ್ಧಿ ಸಂಸ್ಥೆ (ಎಮ್.ಇ.ಎ.ಎಲ್.) (೧೯೬೯), ಬರಗಾಲ ಪೀಡಿತ ಪ್ರದೇಶಗಳ ಅಭಿವೃದ್ಧಿ ಕಾರ್‍ಯಕ್ರಮ (೧೯೭೦), ಇಂದಿರಾ ಗಾಂಧಿ ಕಲ್ಪನೆಯ ೨೦-ಅಂಶಗಳ ಕಾರ್ಯಕ್ರಮ (೧೯೭೫), ಗ್ರಾಮೀಣ ಅಕ್ಷರ ಕಾರ್ಯಕ್ರಮ (೧೯೭೬), ಅಂತ್ಯೋದಯ ಕಾರ್ಯಕ್ರಮ (೧೯೭೭), ನೀರಾವರಿ ಪ್ರದೇಶಗಳಲ್ಲಿ ಕಮಾಂಡ್ ಏರಿಯಾ ಅಭಿವೃದ್ಧಿ ಸಂಸ್ಥೆ (೧೯೭೮), ವಿದ್ಯಾವಂತ ನಿರುದ್ಯೋಗಿ ಯುವಕರಿಗೆ ಸ್ವಯಂ-ಉದ್ಯೋಗ ಯೋಜನೆ (೧೯೮೩), ಗ್ರಾಮೀಣ ಯುವಕರಿಗೆ ಸ್ವಯಂ-ಉದ್ಯೋಗ ತರಬೇತಿ ಕಾರ್ಯಕ್ರಮ (೧೯೮೦), ಗ್ರಾಮೀಣ ಮಹಿಳಾ ಮತ್ತು ಮಕ್ಕಳ

ಅಭಿವೃದ್ಧಿ ಯೋಜನೆ ಮತ್ತು ಬಯೋಗ್ಯಾಸ್ ಕಾರ್ಯಕ್ರಮ, ಗ್ರಾಮೋದ್ಯೋಗ ಕಾರ್ಯಕ್ರಮ ಹಾಗೂ ಜವಾಹರ ರೋಜಗಾರ ಯೋಜನೆ ಮುಖ್ಯವಾಗಿದ್ದವು. ಕ್ರಮೇಣವಾಗಿ ಕೆಲವು ಕಾರ್ಯಕ್ರಮಗಳು ಹೊಸ ಅಭಿವೃದ್ಧಿ ಯೋಜನೆಗಳಲ್ಲಿ ವಿಲೀನಗೊಂಡರೆ ಇನ್ನು ಕೆಲವು ಇಂದಿಗೂ ಜಾರಿಯಲ್ಲಿವೆ. ಗ್ರಾಮೀಣ ಪ್ರದೇಶದ ಜನರನ್ನು ಬಡತನ-ಹಸಿವು-ಅನಕ್ಷರತೆ-ಕುಂದಿದ ಕಾರ್ಯಕ್ಷಮತೆ-ಅತ್ಯಲ್ಪ ಆದಾಯ-ಅನಾರೋಗ್ಯ-ಜನಸಂಖ್ಯಾ ನಿಯಂತ್ರಣದ ಬಗ್ಗೆ ಅಜ್ಞಾನ - ಬಡತನದ ವಿಷವರ್ತುಲದಿಂದ ಪಾರುಮಾಡುವುದೇ ಇವೆಲ್ಲ ಕಾರ್ಯಕ್ರಮಗಳ ಒಟ್ಟಾರೆ ಉದ್ದೇಶವಾಗಿತ್ತು ಮತ್ತು ಈ ಉದ್ದೇಶವನ್ನು ಎಲ್ಲ ಅಭಿವೃದ್ಧಿ ಕಾರ್ಯಕ್ರಮಗಳ ಎಲ್ಲ ಹಂತಗಳಲ್ಲಿ ಗ್ರಾಮಸ್ಥರ ಸ್ವಯಂ ಪ್ರೇರಿತ ಪಾಲುದಾರಿಕೆ ಹಾಗೂ ಮುಂದಾಳತ್ವವನ್ನು ಬೆಳೆಸಿ ಸ್ವಾವಲಂಬಿ ಗ್ರಾಮಸಮಾಜ ನಿರ್ಮಾಣ ಸಾಧಿಸುವ ಮಾರ್ಗೋಪಾಯಗಳನ್ನು ಅಳವಡಿಸಲಾಗಿತ್ತು.

## ಗ್ರಾಮಾಭಿವೃದ್ಧಿ ಶಿಕ್ಷಣ ಮತ್ತು ತರಬೇತಿ :

೪. ಇನ್ನು ಅಭಿವೃದ್ಧಿ ಕಾರ್ಯಕ್ರಮಗಳ ಯಶಸ್ಸಿಗೆ ಅತ್ಯಗತ್ಯವಾದ ಗ್ರಾಮಾಭಿವೃದ್ಧಿ ಶಿಕ್ಷಣ ಕ್ಷೇತ್ರದಲ್ಲಿ ಆಗಿರುವ ಬೆಳವಣಿಗೆಗಳನ್ನು ಪರಿಶೀಲಿಸೋಣ. ಮೊದಲನೆ ಪಂಚವಾರ್ಷಿಕ ಯೋಜನೆ ಆರಂಭವಾದ ಕೂಡಲೆ ಕೇಂದ್ರ ಸರಕಾರವು ಆಗಿನ ಶಿಕ್ಷಣ ಮಂತ್ರಿಯಾಗಿದ್ದ ಡಾ. ಕೆ. ಎಲ್. ಶ್ರೀಮಾಲಿ ಅವರ ನೇತೃತ್ವದಲ್ಲಿ ಒಂದು ತಜ್ಞ ಸಮಿತಿಯನ್ನು ನೇಮಿಸಿತು. ಈ ಸಮಿತಿಯ ಜನವರಿ ೧೯೫೫ರಲ್ಲಿ ತನ್ನ ವರದಿ ಸಲ್ಲಿಸಿ ಗ್ರಾಮಾಂತರ ಪ್ರದೇಶಗಳಲ್ಲಿ 'ಗ್ರಾಮೀಣ ಉಚ್ಚ ಶಿಕ್ಷಣ ಸಂಸ್ಥೆ' ಗಳನ್ನು ಸ್ಥಾಪಿಸಬೇಕೆಂದು ಶಿಫಾರಸು ಮಾಡಿತು. ಇದು ಈಗಾಗಲೇ ಜಾರಿಯಲ್ಲಿರುವ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಗೆ ಪೂರಕವಾಗಿ ಕೃಷಿ, ಗ್ರಾಮೀಣ ಎಂಜಿನಿಯರಿಂಗ್, ಗ್ರಾಮೀಣ ಆರೋಗ್ಯ ಮತ್ತು ನೈರ್ಮಲ್ಯ, ವಿಜ್ಞಾನ, ತಂತ್ರಜ್ಞಾನದಂತಹ ವಿಷಯಗಳಲ್ಲಿ ಅಲ್ಪಾವಧಿ ಶಿಕ್ಷಣ, ತರಬೇತಿ, ಸಂಶೋಧನೆ ಕಾರ್ಯ ಕೈಕೊಳ್ಳಬೇಕು ಮತ್ತು ಈ ವಿಷಯಗಳಲ್ಲಿ ಉನ್ನತ ನೈಪುಣ್ಯತೆ ಪಡೆಯಬಯಸುವ ಪ್ರತಿಯೊಬ್ಬ ಸ್ತ್ರೀ-ಪುರುಷರಿಗೆ ಅಂಥ ಅವಕಾಶಗಳನ್ನು ಈ ಸಂಸ್ಥೆಗಳು ಒದಗಿಸುವ ಉದ್ದೇಶ ಹೊಂದಿರಬೇಕೆಂಬುದು ಸಮಿತಿಯ ಶಿಫಾರಸುಗಳ ಸಾರಾಂಶ. ಆ ಮೇರೆಗೆ ನಮ್ಮ ರಾಜ್ಯದಲ್ಲಿ ಆಗಿನ ಧಾರವಾಡ ಜಿಲ್ಲೆಯ ಹನುಮನಮಟ್ಟಿಯಲ್ಲಿ, ತಮಿಳುನಾಡಿನ ಕೊಯಮತ್ತೂರು, ಮದುರೈ ಜಿಲ್ಲೆಯ ಗಾಂಧಿಗ್ರಾಮ ಮುಂತಾದ ಕಡೆಗಳಲ್ಲಿ ಗ್ರಾಮೀಣ ಉಚ್ಚ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಆದರೆ ಈ ಕಾರ್ಯಕ್ರಮ ಮಿಶ್ರ ಫಲ ನೀಡಿತು. ಕೆಲವು ಸಂಸ್ಥೆಗಳು ಅಲ್ಪಾಯುಷಿಗಳಾದರೆ, ಗಾಂಧಿಗ್ರಾಮದ ಸಂಸ್ಥೆಯು ಉತ್ತಮ ಫಲನೀಡಿ 'ಪರಿಗಣಿತ ವಿಶ್ವವಿದ್ಯಾಲಯ'ದ ಸ್ಥಾನಮಾನ ಪಡೆದಿದೆ.

## ಗ್ರಾಮೀಣಾಭಿವೃದ್ಧಿಯ ರಾಷ್ಟ್ರೀಯ ಸಂಸ್ಥೆ, ಹೈದರಾಬಾದು :

ನಂತರದ ಬೆಳವಣಿಗೆಗಳಲ್ಲಿ ಹೈದರಾಬಾದಿನ ಸಮೀಪ 'ಗ್ರಾಮೀಣ ಅಭಿವೃದ್ಧಿಯ ರಾಷ್ಟ್ರೀಯ ಸಂಸ್ಥೆ'ಯು ಕೇಂದ್ರ ಸರಕಾರದ ಆಶ್ರಯದಲ್ಲಿ ಸ್ಥಾಪಿತವಾದುದು ಪ್ರಮುಖವಾಗಿದೆ. ಇದು ಗ್ರಾಮೀಣ ಅಭಿವೃದ್ಧಿಗೆ ಸಂಬಂಧಪಟ್ಟ ಕೇಂದ್ರ ಮತ್ತು ರಾಜ್ಯ ಸರಕಾರಗಳಿಗೆ, ಬ್ಯಾಂಕಿಂಗ್ ಸಾರ್ವಜನಿಕ ಮತ್ತು ಖಾಸಗಿ ಕ್ಷೇತ್ರದ ಉದ್ದಿಮೆಗಳಿಗೆ, ಸರಕಾರೇತರ ಸ್ವಯಂ ಸೇವಾ ಸಂಸ್ಥೆಗಳಿಗೆ ಹಾಗೂ ಕೆಲವು ವಿದೇಶಿ ಸರಕಾರಗಳಿಗೆ ಕೂಡ ತರಬೇತಿ, ಸಂಶೋಧನೆ, ಕ್ಷೇತ್ರ ಕಾರ್ಯಕ್ರಮಗಳ ಅಧ್ಯಯನ, ಮೌಲ್ಯಮಾಪನ ಮತ್ತು ಸಲಹಾ ಸೇವೆಗಳನ್ನು ಒದಗಿಸುತ್ತಿದೆ. ಅಸ್ಸಾಮಿನ ಗುವಾಹಟಿಯಲ್ಲಿ ಪ್ರಾದೇಶಿಕ ಕೇಂದ್ರವನ್ನು ಮತ್ತು ವಿವಿಧ ರಾಜ್ಯಗಳಲ್ಲಿ ೨೩ ಸಂಪರ್ಕ ಕೇಂದ್ರಗಳನ್ನು ತೆರೆದು ತನ್ನ ಸೇವೆಗಳನ್ನು ವಿಕೇಂದ್ರೀಕರಿಸಿದೆ. ಈವರೆಗೆ ಇಲ್ಲಿ ತರಬೇತಿ ಪಡೆದವರಲ್ಲಿ ಸುಮಾರು ಶೇಕಡಾ ೬೦ ರಷ್ಟು ಸರಕಾರಿ ಅಧಿಕಾರಿಗಳಾಗಿದ್ದಾರೆ.

ಗ್ರಾಮೀಣ ಅಭಿವೃದ್ಧಿಯ ಏಶಿಯನ್ ಸಂಸ್ಥೆ, ಬೆಂಗಳೂರು : ಅಪಾರ ರಚನಾತ್ಮಕ, ಸಂಘಟನಾ ಶಕ್ತಿ ಹೊಂದಿರುವ ಎಂ. ವಿ. ರಾಜಶೇಖರನ್ ಅವರ ನೇತೃತ್ವದಲ್ಲಿ ೧೯೭೬ರಲ್ಲಿ ಈ ಸಂಸ್ಥೆ ಆರಂಭವಾದುದು ಗ್ರಾಮೀಣ ಅಭಿವೃದ್ಧಿ ಶಿಕ್ಷಣ ಕ್ಷೇತ್ರದಲ್ಲಿ ಒಂದು ಮಹತ್ವದ ಮೈಲಿಗಲ್ಲು. ಇದರ ಸೇವಾ ಕ್ಷೇತ್ರ ಏಶಿಯಾ ಖಂಡದ ಭಾರತ, ಬಾಂಗ್ಲಾದೇಶ, ನೇಪಾಳ, ಜಪಾನ್, ಫಿಲಿಫೈನ್ಸ್ ಮತ್ತು ಶ್ರೀಲಂಕಾ ದೇಶಗಳಲ್ಲದೆ ಆಫ್ರಿಕಾ ಖಂಡ ಮತ್ತು ಕೆನಡಾ ದೇಶಗಳಿಗೂ ವಿಸ್ತೃತವಾಗಿದೆ. ಸಂಸ್ಥೆಯು ಅಂತರರಾಷ್ಟ್ರೀಯ ತರಬೇತಿ ಕೇಂದ್ರವನ್ನು ಸ್ಥಾಪಿಸಿ ತನ್ಮೂಲಕ ಗ್ರಾಮೀಣ ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಭೂಸುಧಾರಣೆ, ಗುಡಿ ಕೈಗಾರಿಕೆ ಮುಂತಾದ ಹಲವಾರು

ವಿಷಯಗಳಲ್ಲಿ ತರಬೇತಿ, ಸಂಶೋಧನೆ, ಪ್ರಾತ್ಯಕ್ಷಿಕೆಗಳ ಸಂಘಟನೆ, ತಜ್ಞರಿಂದ ಸಲಹಾ ಸೇವೆ, ರೇಷ್ಮೆ ತಂತ್ರಜ್ಞಾನ ಪ್ರಸಾರ, ಸಂಯೋಜಿತ ಗ್ರಾಮೀಣ ಅಭಿವೃದ್ಧಿ, ಮಾನವ ಸಂಪನ್ಮೂಲ ಅಭಿವೃದ್ಧಿ ಮುಂತಾದ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ. ಪ್ರಯೋಗಾಲಯಗಳಿಂದ - ಕೃಷಿಕರಿಗೆ ಎಂಬ ಕಾರ್ಯಕ್ರಮ ಇದರ ವೈಶಿಷ್ಟ್ಯ. ಏಶಿಯಾ ಮತ್ತು ಆಫ್ರಿಕಾ ಖಂಡಗಳ ಸುಮಾರು ೩೨ ರಾಷ್ಟ್ರಗಳು ಈ ಸಂಸ್ಥೆಯ ವಿವಿಧ ಸೇವೆಗಳ ಪ್ರಯೋಜನ ಪಡೆದಿದೆ. ಆದರೆ ಇತ್ತೀಚಿನ ವರ್ಷಗಳಲ್ಲಿ ನೂತನ ಆರ್ಥಿಕ ನೀತಿಯ ಪರಿಸರದಲ್ಲಿ ಗ್ರಾಮೀಣ ಅಭಿವೃದ್ಧಿ ಚಟುವಟಿಕೆಗಳ ಮೇಲೆ ಕರಿನೆರಳು ಬಿದ್ದ ಪರಿಣಾಮವೇನೋ ಎಂಬಂತೆ ಸಂಸ್ಥೆಯ ಚಟುವಟಿಕೆಗಳ ಮೇಲೂ ಅದರ ಪ್ರತಿಬಿಂಬ ಮೂಡಿದಂತಾಗಿದೆ. ಸಂಸ್ಥೆಯ ಹಿತೈಷಿಗಳು ಅದು ಶೀಘ್ರದಲ್ಲಿ ಪುನಶ್ಚೇತನಗೊಳ್ಳುವ ವಿಶ್ವಾಸ ಹೊಂದಿದ್ದಾರೆ.

## ಗ್ರಾಮೀಣ ನಿರ್ವಹಣೆಯ ಸಂಸ್ಥೆ, ಆನಂದ್, ಗುಜರಾತ್ :

ಗ್ರಾಮೀಣ ಚಟುವಟಿಕೆಗಳ ನಿರ್ವಹಣೆಯ ಅಧ್ಯಯನಕ್ಕೆ ಮೀಸಲಾದ ಗ್ರಾಮಾಂತರ ಉಚ್ಚ ಶಿಕ್ಷಣ ಕ್ಷೇತ್ರದ ಇನ್ನೊಂದು ಪ್ರಮುಖ ಸಂಸ್ಥೆಯೆಂದರೆ - ಆನಂದ್‌ನಲ್ಲಿರುವ ಗ್ರಾಮಾಂತರ ನಿರ್ವಹಣಾ ಸಂಸ್ಥೆ (IRMA). ಗ್ರಾಮಾಂತರ ಅಭಿವೃದ್ಧಿಯಲ್ಲಿ ಆಸಕ್ತಿ ಹೊಂದಿರುವ ಯುವ ಪದವೀಧರರಿಗೆ ಇಲ್ಲಿ ಉನ್ನತ ಮಟ್ಟದ ಶಿಕ್ಷಣ, ತರಬೇತಿ, ಸಂಶೋಧನೆ ಸೌಕರ್ಯಗಳಿವೆ. ಅಲ್ಪಾವಧಿಯ ತರಬೇತಿಯಲ್ಲದೆ ಎರಡು ವರ್ಷಗಳ ಪದವಿಯೋತ್ತರ ಶಿಕ್ಷಣ ಕೊಡಲಾಗುತ್ತದೆ. ವಿಶೇಷವಾಗಿ, ಕೃಷಿ ಉತ್ಪನ್ನಗಳ ಮೌಲ್ಯ ವರ್ಧನೆಗೆ ನೆರವಾಗುವ ವಿವಿಧ ಪ್ರಕಾರದ ಸಹಕಾರಿ ಪರಿಷ್ಕರಣ ಸಂಸ್ಥೆಗಳ ನಿರ್ವಾಹಕ ಹುದ್ದೆಗಳಿಗೆ ಮತ್ತು ಗ್ರಾಮೀಣ ಮುಂದಾಳುಗಳನ್ನು ಸಿದ್ಧಪಡಿಸುವುದಕ್ಕೆ ಈ ಸಂಸ್ಥೆ ಪ್ರಾಮುಖ್ಯತೆ ಕೊಟ್ಟಿದೆ. ಈಗಾಗಲೆ ಇಲ್ಲಿ ಶಿಕ್ಷಣ ಪಡೆದ ಅನೇಕ ಯುವಕರು ಸಹಕಾರಿ ಸಂಸ್ಥೆಗಳಲ್ಲಿ ನಿರ್ವಾಹಕರಾಗಿ, ಸ್ವಯಂ ಸೇವಾ ಸಂಸ್ಥೆಗಳ ಮುಂದಾಳುಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ.

ಗ್ರಾಮೀಣ ಉಚ್ಚ ಶಿಕ್ಷಣದಲ್ಲಿ ಮೇಲಿನ ಸಂಸ್ಥೆಗಳಲ್ಲದೆ, ರಾಷ್ಟ್ರೀಯ ವಿಸ್ತರಣಾ ಸೇವೆ, ಸಮುದಾಯ ಅಭಿವೃದ್ಧಿ ಮೊದಲಾದ ಕಾರ್ಯಕ್ರಮಗಳಲ್ಲಿಯ ಸಿಬ್ಬಂದಿಗೆ ವಿಸ್ತರಣಾಧಿಕಾರಿಗಳು, ಗ್ರಾಮಸೇವಕರು, ಮಹಿಳಾ ಕಾರ್ಯಕರ್ತರಿಗೆ ತರಬೇತಿ ಕೊಡಲು ೧೯೫೦ರ ಮಧ್ಯಭಾಗದಲ್ಲಿಯೇ ಸ್ಥಾಪಿಸಲ್ಪಟ್ಟ ತರಬೇತಿ ಕೇಂದ್ರಗಳು ಕೆಲವು ಮಾರ್ಪಾಟುಗಳೊಂದಿಗೆ ಇಂದಿಗೂ ಕಾರ್ಯಮಾಡುತ್ತಿವೆ.

## ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಮಂದಪ್ರಗತಿ :

೫. ಸ್ವಾತಂತ್ರ್ಯ ನಂತರದ ಆರು ದಶಕಗಳ ಅವಧಿಯಲ್ಲಿ ಈವರೆಗೆ ಹತ್ತು ಪಂಚವಾರ್ಷಿಕ ಯೋಜನೆಗಳು ಅನುಷ್ಠಾನ ಗೊಂಡಿವೆಯಾದರೂ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಪ್ರಗತಿ ಸಮಾಧಾನಕರವಿಲ್ಲವೆಂಬುದು ದುರ್ದೈವದ ಸಂಗತಿ. ಬಡವ-ಶ್ರೀಮಂತರ ನಡುವಿನ ಅಂತರ ಹೆಚ್ಚುತ್ತಲೇ ಇದೆ. ಕೃಷಿ ವಿಜ್ಞಾನ, ಆಧುನಿಕ ತಂತ್ರಜ್ಞಾನದ ಫಲವಾಗಿ ಜನರ ಜೀವನ ಮಟ್ಟದಲ್ಲಿ ಅಲ್ಪ ಪ್ರಮಾಣದ ಸುಧಾರಣೆಯಾಗಿದ್ದರೂ ಅದು ಹೆಚ್ಚಾಗಿ ನಗರ ಪ್ರದೇಶಗಳಿಗೆ ಸೀಮಿತವಾಗಿದೆ. ಗ್ರಾಮಾಂತರದಲ್ಲಿ ಬಹುಮಟ್ಟಿಗೆ ಜನಜೀವನ ಇಂದಿಗೂ ಯಥಾಸ್ಥಿತಿಯಲ್ಲಿಯೇ ಇದೆ. ಆದ್ದರಿಂದ ಈ ಮಂದಪ್ರಗತಿಗೆ ಕಾರಣಗಳೇನು-ಎಂಬುದನ್ನು ವಿಶ್ಲೇಷಿಸುವ ಅಗತ್ಯವಿದೆ. ಅನೇಕ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳು ಸಾಮಾನ್ಯವಾಗಿ ಎರಡು ಪ್ರಕಾರದವುಗಳಿರುತ್ತವೆ. ವಿವಿಧ ಕ್ಷೇತ್ರಗಳಲ್ಲಿ ವಿಸ್ತರಣಾ ಸೇವೆಗಳನ್ನೊದಗಿಸುವುದೇ ಪ್ರಧಾನ ಉದ್ದೇಶವಾದ ಕಾರ್ಯಕ್ರಮಗಳು ಮತ್ತು ಎರಡನೆಯದಾಗಿ ಸರಕಾರ ಮತ್ತು ಇತರ ಸಂಸ್ಥೆಗಳು ಪ್ರಯೋಜನದಾರರಿಗೆ ನೀಡುವ ಸಹಾಯಧನದ ವಿತರಣಾ ಕಾರ್ಯ. ಅದಕ್ಕಾಗಿ ಸರಕಾರ ಮತ್ತು ಪ್ರಯೋಜನದಾರರ ನಡುವೆ ನಿಕಟ ಸಂಪರ್ಕ, ಪ್ರಯೋಜನದಾರರ ಸಹಕಾರ ಮತ್ತು ಪಾಲ್ಗೊಳ್ಳುವಿಕೆಯನ್ನು ಪರಿಣಾಮಕಾರಿಯಾಗಿ ಸಾಧಿಸಬಲ್ಲ ಉತ್ತಮ ಆಡಳಿತ ವ್ಯವಸ್ಥೆಯ ಗ್ರಾಮೀಣ ಅಭಿವೃದ್ಧಿ ಯೋಜನೆಗಳಿಗೆ ಮೂಲಭೂತ ಅಗತ್ಯವೆಂದು ಜೆ.ಕೆ. ಗಾಲ್‌ಬ್ರೆತ್ ಹೇಳಿದ್ದಾರೆ. ಅಂಥ ಆಡಳಿತ ವ್ಯವಸ್ಥೆಯು ನಾಲ್ಕು ಪ್ರಕಾರದ ಸೇವಾಘಟಕಗಳನ್ನು ಹೊಂದಿರಬೇಕು. ಅವೆಂದರೆ-

೧. ಗ್ರಾಮ, ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ಸರಕಾರದ ತಾಂತ್ರಿಕ ಮತ್ತು ವಿಸ್ತರಣಾ ಸೇವೆ

೨. ಈ ಮೂರು ಹಂತಗಳಲ್ಲಿ ಪಂಚಾಯತ್ ರಾಜ್ಯ ಸಂಸ್ಥೆಗಳು

೩. ವಿವಿಧ ಹಂತಗಳಲ್ಲಿ ಸಹಕಾರಿ ಸಂಸ್ಥೆಗಳು

## ೪. ಸ್ವಯಂ ಸೇವಾ ಸಂಸ್ಥೆಗಳು :

ಈ ಹಿನ್ನೆಲೆಯಲ್ಲಿ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ವೈಫಲ್ಯಕ್ಕೆ ಈ ಕೆಳಗಿನ ಕಾರಣಗಳನ್ನು ಗುರುತಿಸಬಹುದು.

೧. ಕಾರ್ಯಕ್ರಮಗಳ ರಚನೆ ಮತ್ತು ಅನುಷ್ಠಾನದ ಪ್ರಕ್ರಿಯೆಯಲ್ಲಿಯ ದೋಷಗಳು ಸ್ಥಳೀಯ ಜನರನ್ನು ಕಡೆಗಣಿಸಿ ಸ್ಥಾನಿಕ ಪರಿಸ್ಥಿತಿಯ ಸರಿಯಾದ ಕಲ್ಪನೆ ಇಲ್ಲದ ಹೊರಗಿನವರಿಂದ ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಗತಗೊಳಿಸಿದುದು.

೨. ಗಾಂಧೀಜಿಯ ಕನಸುಗಳಾದ ಪಾನ ನಿರೋಧ, ಅಸ್ಪೃಶ್ಯತೆ ನಿವಾರಣೆ. ಸಾಕ್ಷರತೆ, ವಿಕೇಂದ್ರೀಕರಣ, ಆರ್ಥಿಕ ಸ್ವಾವಲಂಬನೆಯ ಗ್ರಾಮ ಸ್ವರಾಜ್ಯದ ಕಲ್ಪನೆಗಳನ್ನು ಅಭಿವೃದ್ಧಿ ಕಾರ್ಯನೀತಿಯಲ್ಲಿ ಕಡೆಗಣಿಸಿದುದು.

೩. ಜನಪದರಲ್ಲಿ ಸ್ವಸಾಮರ್ಥ್ಯದಲ್ಲಿ ನಂಬಿಕೆ ಮತ್ತು ಮುಂದಾಳತ್ವವನ್ನು ಪ್ರೋತ್ಸಾಹಿಸುವ ಕಾರ್ಯಕ್ರಮಗಳನ್ನು ರೂಪಿಸುವ ಬದಲಾಗಿ ಪ್ರತಿಯೊಂದಕ್ಕೂ ಸರಕಾರದ ಮೇಲೆ ಅವಲಂಬಿಸುವ ಹಾಗೂ ಅಧಿಕಾರಶಾಹಿಯ ಬೆಳವಣಿಗೆಗೆ ಪೋಷಕವಾದ ಕಾರ್ಯಕ್ರಮಗಳಿಗೆ ಪ್ರಾಮುಖ್ಯತೆ ಕೊಟ್ಟಿದ್ದು.

೪. ಯೋಜನಾ ಯುಗ ಆರಂಭವಾದಾಗ ಇದ್ದ ಸಮಾಜವಾದಿ ಸ್ವರೂಪದ ಸಮಾಜ ರಚನೆಯೆ ಉದ್ದೇಶವನ್ನು ಕ್ರಮೇಣವಾಗಿ ಪಲ್ಲಟಗೊಳಿಸಿ ಖಾಸಗೀಕರಣದಂತಹ ಬಂಡವಾಳಶಾಹಿ ನೀತಿಗೆ ಸರಕಾರ ತಲೆಯೊಡ್ಡಿದುದು; ಇದರಿಂದ ಕೆಲವೇ ವರ್ಗದ ಜನರಿಗೆ ಪ್ರಯೋಜನವಾಗಿದೆಯಾದರೂ ಗ್ರಾಮಾಂತರ ಜನಪದದಲ್ಲಿದ್ದ ಅಂತಃಸತ್ವ ಬಹುಮಟ್ಟಿಗೆ ಕ್ಷೀಣಗೊಂಡಿದ್ದು; ಪರಿಣಾಮ-ನಗರಗಳಿಗೆ ವಲಸೆ; ನಗರೀಕರಣ.

೫. ವಿಕೇಂದ್ರೀಕರಣ ನೀತಿಗೆ ಕೇವಲ ಬಾಯಿಮಾತಿನ ಸಹಾನುಭೂತಿ; ಗ್ರಾಮೀಣ ಅಭಿವೃದ್ಧಿಗೆ ಪೂರಕವಾಗಿರುವ ಪಂಚಾಯತಿ ರಾಜ್ಯ ಮತ್ತು ಸಹಕಾರ ಆಂದೋಲನೆಯಂಥ ಸಂಸ್ಥೆಗಳನ್ನು ಸತ್ವಯುತವಾಗಿ ಬಲಪಡಿಸುವ ಬದಲಾಗಿ ಅವುಗಳನ್ನು ರಾಜಕೀಯ ಉದ್ದೇಶಕ್ಕಾಗಿ ಅದರ ಕೈವಾರಿಗಳೆಂದು ಪರಿವರ್ತಿಸಿದುದು. ಸಮ್ಮಿಶ್ರ ಸರಕಾರಗಳ ಯುಗ ಆರಂಭವಾದ ಮೇಲೆಯೂ ಇವೆರಡೂ ಪ್ರಕಾರದ ಸಂಸ್ಥೆಗಳ ಅಸ್ತಿತ್ವ ಮತ್ತು ಕಾರ್ಯವೈಖರಿ ಇನ್ನಷ್ಟು ಜಟಿಲವಾದದ್ದು.

೬. ಗ್ರಾಮಾಭಿವೃದ್ಧಿ ಕಾರ್ಯಕ್ರಮಗಳು ಹಲವಾರು ಸರಕಾರಿ ಇಲಾಖೆಗಳ ಮುಖಾಂತರ ಜಾರಿಗೊಳ್ಳುತ್ತಿದ್ದು ಅವುಗಳ ನಡುವೆ ಪರಸ್ಪರ ಸಮನ್ವಯ ಒಂದು ದೊಡ್ಡ ಸಮಸ್ಯೆಯಾಗಿದೆ. ಸಮನ್ವಯಗೊಳಿಸಲು ರಾಜ್ಯ ಮಟ್ಟದಲ್ಲಿ ಅಭಿವೃದ್ಧಿ ಆಯುಕ್ತರಿದ್ದರೂ ಅಭಿವೃದ್ಧಿ ಕಾರ್ಯಗಳು ಜಾರಿಯಾಗಬೇಕಾದ ಗ್ರಾಮ ಮಟ್ಟದಲ್ಲಿ ಆ ಸಮನ್ವಯ ಪರಿಣಾಮಕಾರಿಯಾಗಿಲ್ಲ.

೭. ಪಂಚಾಯತಿ ರಾಜ್ಯದ ಜಿಲ್ಲಾ ಪಂಚಾಯತಿಗಳಿಗೆ ನಿಯೋಜಿಸಲ್ಪಟ್ಟ ವಿವಿಧ ಸರಕಾರಿ ಇಲಾಖೆಯ ನೌಕರರು ಅಲ್ಲಿ ಕಾರ್ಯಮಾಡಲು ನಿರಾಸಕ್ತಿ, ವಿರೋಧ ವ್ಯಕ್ತ ಪಡಿಸುತ್ತಿರುವುದು. ಪಂಚಾಯತ್ ರಾಜ್ಯ ಕುರಿತ ಸರಕಾರದ ನೀತಿ ಅರೆಮನಸ್ಸಿನಿಂದ ಕಾರ್ಯರೂಪಕ್ಕೆ ಬರುತ್ತಿದೆ. ಅದಕ್ಕೆ ಅಗತ್ಯವಾದ ಶ್ರದ್ಧೆ, ಬದ್ಧತೆಯ ಅಭಾವ.

೮. ಪಂಚಾಯತಿ ರಾಜ್ಯ ಹಾಗೂ ಸಹಕಾರ ಸಂಸ್ಥೆಗಳ ಕಾರ್ಯಕರ್ತರು ಹಾಗೂ ಚುನಾಯಿತ ಪ್ರತಿನಿಧಿಗಳಲ್ಲಿ ವೃತ್ತಿಪರತೆಯನ್ನು ಬೆಳೆಸುವುದಕ್ಕೆ ಪ್ರಾಮುಖ್ಯತೆ ಕೊಡದಿರುವುದು.

೯. ಧನ, ತಾಂತ್ರಿಕ ಮತ್ತು ಆಡಳಿತಾತ್ಮಕ ಸಹಾಯ ನೀಡುವ ಸಂಸ್ಥೆಗಳು ಹೆಚ್ಚಾಗಿದ್ದು ಒಮ್ಮೊಮ್ಮೆ ಒಂದೇ ಉದ್ದೇಶಕ್ಕೆ ಒಂದಕ್ಕಿಂತ ಹೆಚ್ಚು ಸಂಸ್ಥೆಗಳಿಗೆ ಸಹಾಯ ಮಾಡುತ್ತಿವೆ. ಇದರಿಂದ ಅವುಗಳ ಲಾಭ ನ್ಯಾಯವಾಗಿ ಯಾರಿಗೆ ತಲುಪಬೇಕೋ ಅವರಿಗೆ ದೊರೆಯದೇ ಇರುವ ಸಾಧ್ಯತೆ ಹೆಚ್ಚು.

೧೦. ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗಾವಕಾಶ ಹೆಚ್ಚಿಸುವುದಕ್ಕಾಗಲಿ, ಗ್ರಾಮಾಂತರ ಸ್ವತ್ತುಗಳ ನಿರ್ಮಾಣಕ್ಕಾಗಲಿ ಸಾಕಷ್ಟು ಗಮನಕೊಟ್ಟಿಲ್ಲ. ಸ್ಥಳೀಯ ಜಲಸಂಪನ್ಮೂಲಗಳ ಬಲವರ್ಧನೆ ಮತ್ತು ರಕ್ಷಣೆಯನ್ನು ಕಡೆಗಣಿಸಿದ್ದು.

೧೧. ಗ್ರಾಮಾಭಿವೃದ್ಧಿಗಾಗಿ ಶ್ರಮಿಸುತ್ತಿರುವ ಸಹಕಾರ ಸಂಸ್ಥೆ ಮತ್ತು ಗ್ರಾಮ ಪಂಚಾಯತಿಗಳು ಗ್ರಾಮೀಣ ಅಭಿವೃದ್ಧಿ ಕಾರ್ಯಗಳಲ್ಲಿ ಕ್ರಿಯಾತ್ಮಕವಾಗಿ ಪಾಲುಗೊಳ್ಳುತ್ತಿಲ್ಲ. ಸರಕಾರಿ ಇಲಾಖೆಗಳ ಪ್ರಾಬಲ್ಯವೇ ಹೆಚ್ಚು.

೧೨. ಕಾರ್ಯಕ್ರಮಗಳ ಅನುಷ್ಠಾನದ ಪ್ರಯೋಜನವನ್ನು ಹೆಚ್ಚಾಗಿ ಮುಂದುವರಿದ ಗ್ರಾಮೀಣ ಶ್ರೀಮಂತರೇ ಪಡೆದುಕೊಳ್ಳುತ್ತಿರುವುದು ಸಾಮಾನ್ಯವಾಗಿದೆ. ಬಡವರ ಹಿತಕ್ಕೆ ವ್ಯತಿರಿಕ್ತವಾಗಿ ಸ್ವಾರ್ಥ ಹಿತಕ್ಕೆ ಕಾರ್ಯಕ್ರಮಗಳನ್ನು ಬಳಸಿಕೊಳ್ಳುತ್ತಿರುವುದರಿಂದ ಶ್ರೀಮಂತರ ಸ್ಥಿತಿ ಇನ್ನಷ್ಟು ಸುಧಾರಿಸಿದ್ದು ಬಡವರ ಸ್ಥಿತಿ ಕಷ್ಟಕರವಾದುದು.

ಇವೆಲ್ಲವುಗಳ ಒಟ್ಟಾರೆ ಪರಿಣಾಮವಾಗಿ ಗ್ರಾಮಾಂತರ ಪ್ರದೇಶದಲ್ಲಿ ಸಾರ್ವತ್ರಿಕವಾಗಿ 'ಪರಾವಲಂಬನದ ಸಂಸ್ಕೃತಿ' ಇನ್ನೂ ಹೆಚ್ಚುತ್ತಲೇ ಇದೆ. ಗಾಂಧೀಜಿಯ ಗ್ರಾಮ ಸ್ವರಾಜ್ಯ ಕನಸು ಕನಸಾಗಿಯೇ ಉಳಿದಿದೆ.

## ಗ್ರಾಮಾಭಿವೃದ್ಧಿ ಮತ್ತು ಸಹಕಾರ ಆಂದೋಲನ :

೬. ಗ್ರಾಮೀಣ ಅಭಿವೃದ್ಧಿಗೆ ಸಂಬಂಧಿಸಿದ ಪ್ರತಿ ಕಾರ್ಯಕ್ರಮದಲ್ಲಿ ತಾಂತ್ರಿಕ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮುಖಗಳು ಅಡಕವಾಗಿರುವುದನ್ನು ಗಮನಿಸಬಹುದು. ಉತ್ಪಾದನ ಸಾಮರ್ಥ್ಯ ಹೆಚ್ಚಿಸಲು ನೆರವಾಗುವ ಕೃಷಿ ಸಾಮಗ್ರಿ ಪೂರೈಕೆ, ಸಾಲ ವಿತರಣೆ, ಪರಿಷ್ಕರಣೆ, ಮಾರಾಟ, ಗ್ರಾಹಕ ವಸ್ತುಗಳ ವಿತರಣೆ, ಗುಡಿ ಕೈಗಾರಿಕೆಗಳಂತಹ ಚಟುವಟಿಕೆಗಳು ಆರ್ಥಿಕ ಸ್ವರೂಪವನ್ನು ಹೊಂದಿರುತ್ತವೆ. ಗ್ರಾಮಾಂತರದಲ್ಲಿ ಕಾರ್ಯಮಾಡುತ್ತಿರುವ ವಿವಿಧ ಪ್ರಕಾರದ ಸಹಕಾರ ಸಂಸ್ಥೆಗಳು ಈ ಚಟುವಟಿಕೆಗಳನ್ನು ಗ್ರಾಮಾಭಿವೃದ್ಧಿಗೆ ಪೂರಕವಾಗಿ ಕೈಗೊಳ್ಳಬಲ್ಲವು. ಸಹಕಾರ ಸಂಸ್ಥೆಯು ಸ್ವಯಂಪ್ರೇರಿತ, ಪ್ರಜಾಸತ್ತಾತ್ಮಕ ಸಂಘಟನೆಯಾಗಿರುವುದರಿಂದ ಮತ್ತು ಬಂಡವಾಳಕ್ಕಿಂತ ಮಾನವನ ಕಲ್ಯಾಣಕ್ಕೆ ಆದ್ಯತೆ ಕೊಟ್ಟಿರುವುದರಿಂದ ಗ್ರಾಮಾಭಿವೃದ್ಧಿ ಯೋಜನೆಗಳಿಗೆ ಕೈಜೋಡಿಸಲು ಸೂಕ್ತವಾದ ವ್ಯವಸ್ಥೆಯಾಗಿದೆ. ಮುಕ್ತ ಸದಸ್ಯತ್ವ, ಬಂಡವಾಳಕ್ಕೆ ಪರಿಮಿತ ಬಡ್ಡಿ, ಸದಸ್ಯ ಶಿಕ್ಷಣ, ಪೋಷಕ ಸದಸ್ಯರಿಗೆ ಉತ್ತೇಜನಕರ ಬೋನಸ್ಸು, ಲಾಭದ ನ್ಯಾಯಪೂರ್ಣ ಹಂಚಿಕೆ ಮತ್ತು ಸಾಮಾಜಿಕ ಕಳಕಳಿಯ ತತ್ವಗಳ ಆಧಾರದ ಮೇಲೆ ಈ ಸಹಕಾರಿ ಸಂಘಗಳು ರಚಿಸಲ್ಪಟ್ಟಿರುವುದರಿಂದ ಗ್ರಾಮಾಭಿವೃದ್ಧಿ ಮತ್ತು ಪಂಚಾಯತಿ ರಾಜ್ಯ ಸಂಸ್ಥೆಗಳಿಗೊಬ್ಬ ಉತ್ತಮ ಸ್ನೇಹಿತನಂತೆ ಕಾರ್ಯಮಾಡುತ್ತವೆ. ಸಹಕಾರಿ ಸಂಘಗಳು ತಮ್ಮ ಉಪ-ನಿಯಮಗಳನ್ನು ಸೂಕ್ತ ತಿದ್ದುಪಡಿ ಮಾಡಿ ಗ್ರಾಮಾಭಿವೃದ್ಧಿಯಲ್ಲಿ ನಿರತರಾದ ಪಂಚಾಯತಿ ಹಾಗೂ ಸ್ವಯಂಪ್ರೇರಿತ ಸಂಸ್ಥೆಗಳನ್ನು ಸದಸ್ಯರನ್ನಾಗಿ ಮಾಡಿಕೊಂಡು ಕ್ರಿಯಾತ್ಮಕವಾಗಿ ಭಾಗವಹಿಸಬಲ್ಲವು. ಈಗಾಗಲೆ ಗ್ರಾಮೀಣ ಕಸುಬುಗಳಾದ ಬೇಸಾಯ, ಸಾಲ ಪೂರೈಕೆ, ಮಾರಾಟ, ಹೈನುಗಾರಿಕೆ, ವಿವಿಧ ಪ್ರಕಾರದ ಗುಡಿ ಕೈಗಾರಿಕೆಗಳು, ಕಾರ್ಮಿಕ ಕಲ್ಯಾಣ, ಪಶುಸಂಗೋಪನೆ, ಮಹಿಳಾ ಸುಧಾರಣೆ, ಮೀನುಗಾರಿಕೆ ಮುಂತಾದ ಕ್ಷೇತ್ರಗಳಲ್ಲಿ ಸಹಕಾರಿ ಸಂಘಗಳು ಕಾರ್ಯಮಾಡುತ್ತಿದ್ದು ಅವುಗಳನ್ನು ಸಂಬಂಧಪಟ್ಟ ಗ್ರಾಮಾಭಿವೃದ್ಧಿ ಕಾರ್ಯಕ್ರಮಗಳೊಂದಿಗೆ ಸಂಯೋಜಿಸುವುದರಲ್ಲಿ ಹೆಚ್ಚಿನ ಪ್ರಯೋಜನವಿದೆ. ಅದಕ್ಕಾಗಿ ಪಂಚಾಯತಿ ಮತ್ತು ಸಹಕಾರ ಸಂಘಗಳ ಪ್ರತಿನಿಧಿಗಳನ್ನೊಳಗೊಂಡ ಒಂದು ಸಮನ್ವಯ ಸಮಿತಿಯ ರಚನೆ ಅಗತ್ಯ.

## ಗ್ರಾಮೀಣ ಅಭಿವೃದ್ಧಿ ಕ್ಷೇತ್ರದ ಸುಧಾರಣೆಗೆ ಅಗತ್ಯವಾದ ಕ್ರಮಗಳು :

೭. ಗ್ರಾಮೀಣ ಪ್ರದೇಶಗಳಲ್ಲಿ ಮೂಲ ವೃತ್ತಿಶಿಕ್ಷಣ ಸೌಕರ್ಯ, ಪಂಚಾಯತಿ ಮತ್ತು ಸಹಕಾರ ಸಂಘ-ಇವು ಮೂರು ಗ್ರಾಮೀಣಾಭಿವೃದ್ಧಿ ಮೂಲ ಆಧಾರ ಸ್ತಂಭವಾಗಿ, ಪರಸ್ಪರ ಹಾಸುಹೊಕ್ಕಾಗಿ ಕಾರ್ಯ ಮಾಡಬೇಕೆಂಬುದು ಗಾಂಧೀಜಿಯವರ ಕಲ್ಪನೆಯಾಗಿತ್ತು. ಆದರೆ ದುರ್ದೈವದಿಂದ ಈ ಚಟುವಟಿಕೆಗಳು ಪ್ರತ್ಯೇಕವಾಗಿ ಒಂದಕ್ಕೊಂದು ಸಂಬಂಧವಿಲ್ಲದಂತೆ ಕಾರ್ಯ ಮಾಡುತ್ತಿರುವುದು ವಾಸ್ತವಸ್ಥಿತಿ. ಇದಕ್ಕೆ ಕೆಲವು ಬಾಹ್ಯ ಶಕ್ತಿಗಳೂ ಕಾರಣವಾಗಿದ್ದು ಅವುಗಳನ್ನು ಗುರುತಿಸಿ ಸೂಕ್ತ ಪರಿಹಾರೋಪಾಯಗಳನ್ನು ಕಂಡುಹಿಡಿಯುವ ಅವಶ್ಯಕತೆ ಇದೆ. ಮೊದಲನೆಯದಾಗಿ, ಇತ್ತೀಚಿನ ವರ್ಷಗಳಲ್ಲಿ ಸಾರ್ವಜನಿಕ ಜನಜೀವನವು ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ರಾಜಕೀಯಮಯವಾಗುತ್ತಿರುವುದು ಒಂದು ಆತಂಕಕಾರಿ ಬೆಳವಣಿಗೆ. ಒಂದು ಚಿಕ್ಕ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಕೂಡ ರಾಜಕೀಯ ಬೆರೆಸುವುದು ಸರ್ವೇ ಸಾಮಾನ್ಯವಾಗಿದೆ. ರಾಜಕೀಯ ಪ್ರವೇಶ ಅನೇಕ ಯುವಕರಿಗೆ ಒಂದು ವೃತ್ತಿಯಾಗಿ ಪರಿಣಮಿಸಿರುವುದರಲ್ಲಿ ಆಶ್ಚರ್ಯವಿಲ್ಲ. ಆದ್ದರಿಂದ ಎಲ್ಲ ರಂಗಗಳಲ್ಲಿ ರಾಜಕೀಯ ರಹಿತ ಸ್ವಾವಲಂಬನೆ ಪ್ರಜ್ಞೆಯನ್ನು ಪ್ರೋತ್ಸಾಹಿಸುವ ಅವಶ್ಯಕತೆ ಇದೆ. ಎಂರಡನೇದಾಗಿ, ರಾಜಕೀಯ ಪಕ್ಷದಲ್ಲಿಯ ಒಲವು-ನಿಲುವುಗಳು ಪಂಚಾಯತಿ ರಾಜ್ಯ ಮತ್ತು ಸಹಕಾರದಂತಹ

ರಚನಾತ್ಮಕ ಕ್ಷೇತ್ರಗಳ ಮೇಲೂ ಪ್ರಭಾವ ಬೀರಲಾರಂಭಿಸಿದೆ. ಉದಾಹರಣೆಗೆ, ರಾಜಕೀಯ ಪಕ್ಷಗಳಲ್ಲಿ ಕಂಡುಬರುತ್ತಿರುವ ಅನುವಂಶಿಕ ಧುರೀಣತ್ವದ ಒಲವು ಪಂಚಾಯತಿ ರಾಜ್ಯ ಹಾಗೂ ಸಹಕಾರ ಆಂದೋಲನೆಯಲ್ಲಿಯೂ ಪ್ರತಿಬಿಂಬಿತವಾಗಿದೆ. ಮೂರನೆಯದಾಗಿ, ಪ್ರತಿಯೊಂದು ಸಮಸ್ಯೆ ಉದ್ಭವವಾದಾಗಲೆಲ್ಲ ಅದರ ಪ್ರಮುಖ ಕಾರಣಗಳನ್ನು ಗುರುತಿಸಿ ಸಮಾಲೋಚನೆ ಮಾರ್ಗದಿಂದ ಪರಿಹಾರ ಕಂಡುಹಿಡಿಯುವ ಬದಲಾಗಿ, ಹೊಸ ಶಾಸನ ಜಾರಿ ಅಥವಾ ತಿದ್ದುಪಡಿ ಮಾಡಿ ಪರಿಹಾರ ಹುಡುಕುವ ಪ್ರವೃತ್ತಿಯು ಇನ್ನೊಂದು ಆತಂಕಕಾರಿ ಬೆಳವಣಿಗೆಯಾಗಿದೆ. ಒಂದಿಲ್ಲೊಂದು ನೆಪ ಮಾಡಿ ಪ್ರಜಾಸತ್ತಾತ್ಮಕ ಸಂಸ್ಥೆಗಳ ಚುನಾವಣೆಗಳನ್ನು ಮುಂದೂಡುವುದು ಪ್ರಜಾಸತ್ತಾತ್ಮಕ ಮಾರ್ಗವಲ್ಲ, ಆದ್ದರಿಂದ ಪಂಚಾಯತಿ ರಾಜ್ಯ ಹಾಗೂ ಸಹಕಾರಿ ಸಂಸ್ಥೆಗಳನ್ನು ರಾಜಕೀಯ ಮುಕ್ತಗೊಳಿಸಬೇಕು. ನಾಲ್ಕನೆಯದಾಗಿ, ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು ಹೊರಗಿನವರಿಂದ ರೂಪಿಸಲ್ಪಟ್ಟು ಅನುಷ್ಠಾನಗೊಳ್ಳುವ ಬದಲಾಗಿ ಗ್ರಾಮಸ್ಥರಿಂದ ರೂಪಿಸಲ್ಪಟ್ಟು, ಗ್ರಾಮಸ್ಥರಿಗಾಗಿ ಗ್ರಾಮಸ್ಥರಿಂದಲೇ ಜಾರಿಯಾಗಲು ಸೂಕ್ತ ಅವಕಾಶ ಮಾಡಿಕೊಡಬೇಕು. ಐದನೆಯದಾಗಿ, ಗ್ರಾಮಾಭಿವೃದ್ಧಿ ಶಿಕ್ಷಣ ಕಾರ್ಯಕ್ರಮಗಳು ಈವರೆಗೆ ಬಹುತೇಕವಾಗಿ ವಿವಿಧ ಇಲಾಖೆಗಳ ಅಧಿಕಾರಿಗಳ ತರಬೇತಿಗೆ ಉಪಯೋಗವಾಗುತ್ತಿದ್ದು ಗ್ರಾಮಾಂತರ ಪ್ರದೇಶದಲ್ಲಿ ರಚನಾತ್ಮಕ ಧುರೀಣತ್ವ ಬೆಳೆಸುವುದಕ್ಕೆ ಇನ್ನು ಮುಂದಾದರೂ ಪ್ರಾಧಾನ್ಯತೆ ಕೊಡಬೇಕು. ಈ ಪ್ರಕ್ರಿಯೆ ಗ್ರಾಮಗಳ ಸಮೀಪದಲ್ಲಿ ವಿಕೇಂದ್ರೀಕೃತ ಕೇಂದ್ರಗಳಲ್ಲಿ ನಡೆಯಬೇಕು. ಆರನೆಯದಾಗಿ ಗ್ರಾಮಾಭಿವೃದ್ಧಿ ಶಿಕ್ಷಣ ಹಾಗೂ ಸಹಕಾರಿ ಶಿಕ್ಷಣ ಕಾರ್ಯಕ್ರಮಗಳನ್ನು ಹೆಚ್ಚು ಪರಿಣಾಮಕಾರಿಗೊಳಿಸುವ ಉದ್ದೇಶದಿಂದ ಎರಡೂ ಕಾರ್ಯಕ್ರಮಗಳನ್ನು ವೈಜ್ಞಾನಿಕವಾದ ರೀತಿಯಲ್ಲಿ ಸಂಯೋಜಿಸಿ ಏಕೀಭವಿಸಬೇಕು. (Internation). ಏಳನೆಯದಾಗಿ ಪಂಚಾಯತಿ ರಾಜ್ಯ ಹಾಗೂ ಸಹಕಾರ ಆಂದೋಲನದಲ್ಲಿ ಸಹಕಾರದ ಹಸ್ತಕ್ಷೇಪ ನಿವಾರಣೆಯಾಗಬೇಕು. ೧೯೯೦ರಲ್ಲಿ ಚೌಧರಿ ಬ್ರಹ್ಮಪ್ರಕಾಶ್ ಸಮಿತಿ ಶಿಫಾರಸಿನಂತೆ ಸ್ವಾಯತ್ತ ಸಹಕಾರಿ ಆಂದೋಲನೆಗೆ ಅವಕಾಶವಿರುವ ಶಾಸನವನ್ನು ಜಾರಿಗೆ ತರಬೇಕು. ಅಂಥ ಸ್ವಾಯತ್ತತೆಗೆ ಅವಕಾಶ ಮಾಡಿಕೊಟ್ಟಿದ್ದ ಸೌಹಾರ್ದ ಸಹಕಾರಿ ಕಾಯ್ದೆಗೆ ತಿದ್ದುಪಡಿ ಮಾಡಿ ಅದರ ಜೀವಾಳವನ್ನೆ ಕಸಿದುಕೊಳ್ಳುವ ಪ್ರಯತ್ನ ಮತ್ತೊಮ್ಮೆ ನಡೆಯದಂತೆ ನೋಡಿಕೊಳ್ಳಬೇಕು. ಕೊನೆಯದಾಗಿ, ಗ್ರಾಮಾಂತರದಲ್ಲಿ ಜನನ ಪ್ರಮಾಣವನ್ನು ಕಡಿಮೆ ಮಾಡುವ ಅಗತ್ಯದ ಬಗ್ಗೆ ಗ್ರಾಮಸ್ಥರಲ್ಲಿ ಜಾಗೃತಿ ಮೂಡಿಸುವ ಪ್ರಯತ್ನ ನಡೆಯಬೇಕು. ಇದು ಇಡೀ ದೇಶಕ್ಕೆ ಅನ್ವಯವಾಗಬೇಕಾದ ಕಾರ್ಯಕ್ರಮ. ಆದರೆ ಗ್ರಾಮಾಂತರ ಪ್ರದೇಶದಲ್ಲಿ ಉದ್ಯೋಗಾವಕಾಶ ಕಡಿಮೆ ಇರುವ ಹಿನ್ನೆಲೆಯಲ್ಲಿ ಕುಟುಂಬ ಯೋಜನೆಯಂತಹ ಕಾರ್ಯಕ್ರಮಗಳಿಗೆ ಹೆಚ್ಚು ಒತ್ತು ಕೊಡಬೇಕು.

೮. ಒಟ್ಟಿನಲ್ಲಿ ಗ್ರಾಮೀಣಾಭಿವೃದ್ಧಿಯ ಪ್ರಕ್ರಿಯೆ ಹಲವಾರು ಮುಖಗಳನ್ನು, ಉದ್ದೇಶಗಳನ್ನು, ದಿಕ್ಕುಗಳನ್ನು, ಪ್ರಕಾರಗಳನ್ನು ಹೊಂದಿದ ಕಾರ್ಯಕ್ರಮವಾಗಿರುವುದರಿಂದ ಅದು ಬಹು ಜಟಿಲ ಹಾಗೂ ಕ್ಲಿಷ್ಟಕರವೆಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಇವುಗಳ ಜೊತೆಗೆ ವಿದೇಶಿ ತಜ್ಞರು ಡೌಗ್ಲಾಸ್ ಎನ್‌ಸಿಮಿಂಜರ್ (Daouglas Ensiminger) ಹೇಳುವಂತೆ ಭಾರತದಲ್ಲಿಯ ಜಾತಿಪದ್ಧತಿಯು ಅಭಿವೃದ್ಧಿ ಕಾರ್ಯಕ್ರಮಗಳಿಗೊಂದು ತೊಡಕು. ಅಭಿವೃದ್ಧಿಗೆ ಅಗತ್ಯವಾದ ಸಮಾನ ಹಕ್ಕು - ಉದ್ಯೋಗಿ ವಂಶಗಳನ್ನೊಳಗೊಂಡ ಸಮಾಜವನ್ನು (Eghiterian Society) ರಚಿಸಲು ಸ್ವಾತಂತ್ರ್ಯಾನಂತರ ಕೈಗೊಂಡ ಎಲ್ಲ ಪ್ರಯತ್ನಗಳೂ ವಿಫಲವಾಗಿವೆ. ಭೂಸುಧಾರಣೆ, ಸುಧಾರಣೆಯಂತಹ ಅಭಿವೃದ್ಧಿ ಕಾರ್ಯಕ್ರಮಗಳಿಂದ ಶ್ರೀಮಂತರ ಸ್ಥಿತಿ ಇನ್ನಷ್ಟು ಸುಧಾರಿಸಿದೆ. ಅಸಮಾನತೆಯಿಂದ ತುಂಬಿರುವ ಸಮಾಜದಲ್ಲಿ ಹೆಚ್ಚಿನ ಸಮಾನತೆ ತರುವ ದಾರಿಯಲ್ಲಿರುವ ಸಾಂಸ್ಥಿಕ ಅಡ್ಡಿ-ಅಡಚಣೆಗಳನ್ನು ನಿವಾರಿಸುವುದಕ್ಕೆ ಪ್ರಾಧಾನ್ಯತೆ ಕೊಡದೇ ಅಭಿವೃದ್ಧಿ ಕಾರ್ಯಗಳಿಗೆ ಮಾತ್ರ ಗಮನ ಹರಿಸಿದ್ದು ಅವುಗಳ ವೈಫಲ್ಯಕ್ಕೆ ಕಾರಣವೆಂದು ಗುನ್ನಾರ್ ಮಿರ್ದಾಲ್ ಅವರು ವಿಶ್ಲೇಷಿಸಿದ್ದಾರೆ. ಈ ಹಿನ್ನೆಲೆಯಲ್ಲಿಯೆ ಯೋಜನಾಬದ್ಧ ಪ್ರಗತಿಯ ಪ್ರಯತ್ನಗಳನ್ನು ಅವರು 'ಏಶಿಯಾದ ನಾಟಕ' ಎಂದು ಬಣ್ಣಿಸಿದ್ದಾರೆ. ಈವರೆಗಿನ ತಪ್ಪುಗಳನ್ನು ತಿದ್ದಿಕೊಂಡು ಇನ್ನು ಮುಂದೆಯಾದರೂ ಯಾವುದೇ ಹೊಸ ಕಾರ್ಯಕ್ರಮ ರೂಪಿಸಿದಾಗ ಪ್ರಯೋಜನದಾರರಲ್ಲಿ ಎಲ್ಲ ಬಗೆಯ ಸ್ವ-ಸಹಾಯ, ಸ್ವಾವಲಂಬನೆಯ ಪ್ರವೃತ್ತಿ ಬೆಳೆಯುವಂತೆ ಜಾಗರೂಕತೆ ವಹಿಸಬೇಕು. ಸರಕಾರಿ ಆಡಳಿತ ಯಂತ್ರದ ಮೇಲೆ ಸಂಪೂರ್ಣವಾಗಿ ಅವಲಂಬಿಸುವ ಸ್ವಭಾವ ಹೋಗಬೇಕು. ಅದಕ್ಕಾಗಿ ಜನರ ಪಾಲ್ಗೊಳ್ಳುವಿಕೆ ಮತ್ತು ಮುಂದಾಳತ್ವಕ್ಕೆ ಹೆಚ್ಚು ಹೆಚ್ಚು ಸಮಾನ ಅವಕಾಶಗಳನ್ನು ಒದಗಿಸುವುದು ನೀತಿ-ನಿರೂಪಕರ ಹಾಗೂ ಎಲ್ಲ ಹಂತಗಳ ಕಾರ್ಯಕರ್ತರ ಜವಾಬ್ದಾರಿಯಾಗಿದೆ.

●




# ಪೌಷ್ಟಿಕಾಂಶಗಳ ಮಹತ್ವ

ಬಿ. ಗೋಪಾಲ್

ನಾಡ ಸಂಸ್ಕೃತಿ, ಕಲೆ, ಜಾನಪದ ಸೊಗಡು, ಜೀವನ ಮೌಲ್ಯಗಳನ್ನು ಎತ್ತಿ ಹಿಡಿಯುವ ಹಳ್ಳಿಗರ ಬದುಕು ಅವಿಸ್ಮರಣೀಯ ಹಾಗೂ ಅನುಕರಣೀಯ. ಆದರೂ ಇವರ ಜೀವನ ಮಟ್ಟ ನೆಮ್ಮದಿಯ ನೆಲೆಗಟ್ಟಿನ ಮೇಲೆ ನಿಲ್ಲದಿರುವುದು ನಿಜಕ್ಕೂ ವಿಷಾದನೀಯ. ಇವರ ಜೀವನ ಹಸನಾಗಿ ಹದವಾಗಲು ಹಲವು ಹತ್ತು ಹೊಸ ಮಾರ್ಗೋಪಾಯಗಳನ್ನು ಕಂಡುಕೊಳ್ಳುವ ಬಗ್ಗೆ ಚಿಂತನೆ ಅನಿವಾರ್ಯ.

ಪ್ರಕೃತಿಯ ಮುನಿಸು, ಪ್ರಕೋಪಗಳು ಪದೇಪದೇ ಕಾಡಿದಾಗ ಇವರ ಪರಿಶ್ರಮ ನಿರೀಕ್ಷಿತ ಫಲ ನೀಡುತ್ತಿಲ್ಲ, ಹಾಗಾಗಿ ಮೂಲ ಸೌಕರ್ಯಗಳಿಂದ ಇವರು ವಂಚಿತರಾಗುತ್ತಿದ್ದಾರೆ. ಆದರೂ ಪ್ರತಿಯೊಬ್ಬರೂ ಆರೋಗ್ಯಪೂರ್ಣ ಜೀವನ ನಡೆಸಬೇಕಾದುದು ಅತ್ಯವಶ್ಯಕ. ಕುಟುಂಬದ ಸಂಪನ್ಮೂಲಗಳು ಬೇಡಿಕೆಗೆ ಅನುಗುಣವಾಗಿಲ್ಲದಿದ್ದರೂ, ಸ್ಥಳೀಯವಾಗಿಯೇ ದೊರೆಯುವ ಹೆಚ್ಚು ವೆಚ್ಚವಿಲ್ಲದ ಉತ್ತಮ ಪೋಷಕಾಂಶಗಳನ್ನೊಳಗೊಂಡ ಆಹಾರ ಪಡೆಯಬಹುದಾಗಿದೆ. ಉತ್ತಮ ಆರೋಗ್ಯಕ್ಕೆ ಪೌಷ್ಟಿಕ ಆಹಾರ ಪೂರಕ.

ವ್ಯವಸಾಯ ಪ್ರಧಾನ ಜೀವನದಲ್ಲಿ ಬಹಳಷ್ಟು ರೈತರು ತಮ್ಮಲ್ಲಿಯೇ ಬೆಳೆಯುವ ಆಹಾರ ಪದಾರ್ಥಗಳು, ಹಸಿರು ಸೊಪ್ಪು, ತರಕಾರಿ, ಹಣ್ಣು ಹಂಪಲುಗಳನ್ನು ಸ್ವತಃ ಬಳಸಿಕೊಳ್ಳುವುದಿಲ್ಲ. ಬಹಳಷ್ಟು ಗ್ರಾಮೀಣ ಜನರಿಗೆ ಪೌಷ್ಟಿಕ ಆಹಾರ, ಸ್ಥಳೀಯವಾಗಿ ದೊರೆಯುವ ಆಹಾರ ಪದಾರ್ಥಗಳ ಮಹತ್ವ, ಆಹಾರ ಸಂಪನ್ಮೂಲಗಳ ಸಮರ್ಪಕ ಸದ್ಬಳಕೆಯ ಬಗ್ಗೆ ಇನ್ನೂ ಹೆಚ್ಚಿನ ಅರಿವು ಅವಶ್ಯಕವೆನ್ನಿಸುತ್ತದೆ. ಈ ಕುರಿತಂತೆ ಗ್ರಾಮೀಣ ಹಿನ್ನೆಲೆಯಲ್ಲಿ ಪೌಷ್ಟಿಕ ಆಹಾರ, ಪೋಷಕಾಂಶಗಳ ಮಹತ್ವದ ಬಗ್ಗೆ ಸಮಗ್ರ ರೀತಿಯಲ್ಲಿ ತಿಳಿದುಕೊಳ್ಳೋಣ.

> **ವ್ಯವಸಾಯ ಪ್ರಧಾನ ಜೀವನದಲ್ಲಿ ರೈತರು ಪೌಷ್ಟಿಕ ಅಂಶವುಳ್ಳ ಆಹಾರ ತೆಗೆದು ಕೊಳ್ಳುವುದಿಲ್ಲ. ಗ್ರಾಮೀಣ ಜನರಿಗೆ ಸ್ಥಳೀಯವಾಗಿ ದೊರೆಯುವ ಆಹಾರ ಪದಾರ್ಥ ಹಾಗೂ ಆಹಾರ ಸಂಪನ್ಮೂಲಗಳ ಸಮರ್ಪಕ ಬಳಕೆಯ ಬಗ್ಗೆ ಅರಿವು ಮೂಡಿಸುವುದು ಅವಶ್ಯಕ.**

## ಮುಖ್ಯ ಪೋಷಕಾಂಶಗಳು :

೧) ಶರ್ಕರ ಪಿಷ್ಟ (ಕಾರ್ಬೋಹೈಡ್ರೇಟ್ಸ್)
೨) ಸಸಾರಜನಕ (ಪ್ರೋಟೀನ್ಸ್)
೩) ಮೇದಸ್ಸು (ಫ್ಯಾಟ್ಸ್)
೪) ಖನಿಜಾಂಶಗಳು
೫) ಅನ್ನಾಂಗಗಳು
೬) ನೀರು

ಆಹಾರ ಪದಾರ್ಥಗಳನ್ನು ಅವುಗಳು ಒದಗಿಸುವ ಪೋಷಕಾಂಶಗಳ ಆಧಾರದ ಮೇಲೆ ಮೂರು ಗುಂಪುಗಳನ್ನಾಗಿ ವಿಂಗಡಿಸಬಹುದು.

**ಮೊದಲನೆಯ ಗುಂಪು :**

**ಶರೀರಕ್ಕೆ ಶಕ್ತಿಯನ್ನೊದಗಿಸುವ ಆಹಾರ ಪದಾರ್ಥಗಳು :**

ಈ ಆಹಾರ ಪದಾರ್ಥಗಳು ಶರ್ಕರ ಪಿಷ್ಟವನ್ನೊಳಗೊಂಡಿದ್ದು ನಮ್ಮ ಶರೀರಕ್ಕೆ ಶಕ್ತಿಯನ್ನೊದಗಿಸುತ್ತವೆ. ಶಕ್ತಿಯನ್ನು ಕ್ಯಾಲೋರಿಗಳ ಮೂಲಕ ಅಳೆಯಲಾಗುತ್ತದೆ.

ರಾಗಿ, ಅಕ್ಕಿ, ಗೋಧಿ, ಸಜ್ಜೆ, ಜೋಳ, ನವಣೆ ಮುಂತಾದ ಧಾನ್ಯಗಳು ಹಾಗೂ ಬೆಲ್ಲ, ಸಕ್ಕರೆ, ಗೆಡ್ಡೆ ಗೆಣಸುಗಳು, ತುಪ್ಪ, ಬೆಣ್ಣೆ, ಎಣ್ಣೆ ಇವು ಈ ಗುಂಪಿಗೆ ಸೇರಿದ ಆಹಾರ ಪದಾರ್ಥಗಳು.

**ಎರಡನೆಯ ಗುಂಪು :**

**ಶರೀರದ ಬೆಳವಣಿಗೆಗೆ ಬೇಕಾದ ಆಹಾರ ಪದಾರ್ಥಗಳು :**

ಈ ಆಹಾರ ಪದಾರ್ಥಗಳು ಹೆಚ್ಚು ಸಸಾರಜನಕವನ್ನೊಳಗೊಂಡಿದ್ದು ಶರೀರದ ಬೆಳವಣಿಗೆಗೆ ಅತ್ಯವಶ್ಯಕ.

ತೊಗರಿಬೇಳೆ, ಹೆಸರುಬೇಳೆ, ಕಡಲೆಬೇಳೆ, ಅವರೇಬೇಳೆ, ಸೋಯಾ ಅವರೇಬೇಳೆ, ಉದ್ದಿನಬೇಳೆ, ಮತ್ತಿತರ ಬೇಳೆಗಳು ಹಾಗೂ ಹುರುಳಿಕಾಳು, ಹೆಸರುಕಾಳು, ಕಡಲೆಕಾಳು, ಅವರೇಕಾಳು, ಹಲಸಂದೆ, ಕಡ್ಲೆಬೀಜ ಮುಂತಾದವು, ಹಾಲು, ಹಾಲಿನ ಪದಾರ್ಥಗಳು, ಮೊಟ್ಟೆ, ಮೀನು, ಮಾಂಸ ಈ ಗುಂಪಿಗೆ ಸೇರಿವೆ.

**ಮೂರನೆಯ ಗುಂಪು :**

**ರಕ್ಷಕ ಆಹಾರಗಳು :**

ನಮ್ಮ ಶರೀರಕ್ಕೆ ಅಗತ್ಯವಿರುವ ಅನ್ನಾಂಗಗಳನ್ನು ಮತ್ತು ಖನಿಜಾಂಶಗಳನ್ನು ಒದಗಿಸುವ ಆಹಾರ ಪದಾರ್ಥಗಳಿಗೆ 'ರಕ್ಷಕ ಆಹಾರ' ಎಂದು ಕರೆಯುತ್ತೇವೆ.

ಹಸಿರು ಸೊಪ್ಪು, ತರಕಾರಿಗಳು, ಹಣ್ಣು, ಹಾಲು, ಮೊಟ್ಟೆ, ಮೀನು, ಮಾಂಸ ಈ ಗುಂಪಿಗೆ ಸೇರಿದ ಆಹಾರ ಪದಾರ್ಥಗಳು.

ನಾವು ಸೇವಿಸುವ ಆಹಾರ ಈ ಮೇಲಿನ ಮೂರು ಗುಂಪುಗಳಿಂದ ಆಯ್ದ ಆಹಾರ ಪದಾರ್ಥಗಳನ್ನೊಳಗೊಂಡಿರಬೇಕು.

**ಸಮತೋಲನ ಆಹಾರ :**

ಆಹಾರದ ಮೂರು ಗುಂಪುಗಳಿಂದ ಆಯ್ದ ಆಹಾರ ಪದಾರ್ಥಗಳು ಅಗತ್ಯ ಪ್ರಮಾಣದಲ್ಲಿ ಶರೀರಕ್ಕೆ ಬೇಕಾಗುವ ಎಲ್ಲಾ ಪೋಷಕಾಂಶಗಳನ್ನು ಹಾಗೂ ರಕ್ಷಣೆಯನ್ನೊದಗಿಸುವ ಸಂಪೂರ್ಣ ಆಹಾರಕ್ಕೆ 'ಸಮತೋಲನ ಆಹಾರ' ಎನ್ನುತ್ತಾರೆ. ಆರೋಗ್ಯ ಕಾಪಾಡಿಕೊಳ್ಳಲು ಸಮತೋಲನ ಆಹಾರ ಎಲ್ಲರಿಗೂ ಅವಶ್ಯಕ. ಇದು ವ್ಯಕ್ತಿಯ ವಯಸ್ಸು, ಲಿಂಗ, ನಿರ್ವಹಿಸುವ ಕೆಲಸಕ್ಕೆ ಅನುಗುಣವಾಗಿರುತ್ತದೆ. ಶ್ರಮಜೀವಿಗಳಿಗೆ ಅಗತ್ಯವಿರುವ ಹೆಚ್ಚು ಶಕ್ತಿಗಾಗಿ ಸಮತೋಲನ ಆಹಾರದಲ್ಲಿ ಅಧಿಕ ಪ್ರಮಾಣದ ಧಾನ್ಯಗಳು ಮತ್ತು ಎಣ್ಣೆ ಪದಾರ್ಥಗಳನ್ನು ಸೇರಿಸಬೇಕಾಗುತ್ತದೆ. ಗರ್ಭಿಣಿಯರು, ಬಾಣಂತಿಯರು ಮತ್ತು ಮಕ್ಕಳು ಪೌಷ್ಟಿಕ ಆಹಾರ ಕೊರತೆಗೆ ಸುಲಭವಾಗಿ ತುತ್ತಾಗುತ್ತಾರೆ. ಆದುದರಿಂದ ಇವರಿಗೆ ಸಮತೋಲನ ಆಹಾರದ ಅವಶ್ಯಕತೆ ಹೆಚ್ಚಾಗಿ ಇರುತ್ತದೆ. ಗ್ರಾಮೀಣ ಪರಿಸರದಲ್ಲಿ ಸಮತೋಲನ ಆಹಾರ ಸ್ವಲ್ಪ ಕಷ್ಟ ಸಾಧ್ಯ. ಇದಕ್ಕೆ ಯೋಜನೆ, ಕಾಲಾವಕಾಶ ಅಗತ್ಯ.

**ಮಗುವಿನ ಆರೈಕೆ :**

ಮಗುವಿನ ಆರೈಕೆ ಹುಟ್ಟಿನಿಂದಲೇ ಪ್ರಾರಂಭವಾಗುತ್ತದೆ. ಹೆರಿಗೆಯಾದ ಅರ್ಧ ಗಂಟೆಯೊಳಗೆ ತಾಯಿ ಹಾಲು ಉಣಿಸಬೇಕು. "ಪ್ರಥಮ ಸ್ತನ್ಯ" ಅಥವಾ "ಮೊದಲ ಹಾಲು" ಬಹು ಶ್ರೇಷ್ಠ. ಹೆರಿಗೆಯ ನಂತರ ತಾಯಿಯ ಎದೆಯಲ್ಲಿ ಹಳದಿ ಬಣ್ಣದ, ದ್ರವ

ರೂಪದ ಗಟ್ಟಿ ಹಾಲು ಬರುತ್ತದೆ. ಇದಕ್ಕೆ "ಕೊಲಸ್ಟ್ರಮ್" ಅಥವಾ "ಗಿಣ್ಣುಹಾಲು" ಎನ್ನುತ್ತಾರೆ. ಈ ಹಾಲನ್ನು ಹೆರಿಗೆಯಾದ ಕೂಡಲೆ ಕುಡಿಸಬೇಕು. ಇದು ಶುದ್ಧ, ಸುರಕ್ಷಿತ, ಸೋಂಕುರಹಿತ, ಸಂಪೂರ್ಣ ಆಹಾರ. ಈ ಹಾಲಿನಲ್ಲಿ ಪೋಷಕಾಂಶಗಳು ಹೆಚ್ಚಾಗಿದ್ದು, ನವಜಾತ ಶಿಶುವಿಗೆ ಸುಲಭವಾಗಿ ಜೀರ್ಣವಾಗುತ್ತದೆ. ಈ ಹಾಲಿಗೆ ರೋಗ ನಿರೋಧಕ ಗುಣವಿರುವುದರಿಂದ ಕೆಲವು ಸೋಂಕು ರೋಗಗಳನ್ನು ತಡೆಗಟ್ಟುವ ಸಾಮರ್ಥ್ಯವಿದೆ. ಕಣ್ಣಿನ ಉತ್ತಮ ದೃಷ್ಟಿಗೆ ಅಗತ್ಯವಿರುವ 'ಎ' ಅನ್ನಾಂಗವು ಸಮೃದ್ಧವಾಗಿರುತ್ತದೆ.

## ಆರು ತಿಂಗಳವರೆಗೆ ತಾಯಿಹಾಲು ಮಾತ್ರ :

ಆರು ತಿಂಗಳವರೆಗೆ ಮಗುವಿಗೆ ತಾಯಿಹಾಲೇ ಸಾಕಾಗುತ್ತದೆ. ಮಗುವಿಗೆ ಅಗತ್ಯವಿರುವಷ್ಟು ಪೋಷಕಾಂಶಗಳು ಹಾಗೂ ರಕ್ಷಣೆ ದೊರೆಯುವುದರಿಂದ ಬೇರೆ ಆಹಾರ ಕೊಡುವ ಅಗತ್ಯವಿಲ್ಲ.

ಈ ಅವಧಿಯಲ್ಲಿ ತಾಯಿ ಹಾಲನ್ನು ನಿಯಮಿತವಾಗಿ ಕುಡಿಸುವುದರಿಂದ ಮಗುವಿನ ಬೆಳವಣಿಗೆ ಸಮರ್ಪಕವಾಗಿರುತ್ತದೆ. ತಾಯಿ ಮಗುವಿನ ನಡುವೆ ಮಧುರ ಬಾಂಧವ್ಯವು ಬೆಳೆಯುತ್ತದೆ.

ರಾಷ್ಟ್ರ ಕವಿ ಕುವೆಂಪುರವರು ಕನ್ನಡದ ಕಂಪನ್ನು ತಾಯಿಹಾಲಿಗೆ ಹೋಲಿಸುತ್ತಾ "ತಾಯಿಹಾಲೆಂತಂತೆ ಸವಿಜೇನು ಬಾಯ್ಗೆ, ತಾಯಿಯಪ್ಪುಗೆಯಂತೆ ಬಲು ಸೊಗಸು ಮೆಯ್ಗೆ" ಎನ್ನುತ್ತಾರೆ. ಇದರಿಂದ ತಾಯಿಹಾಲಿನ ಮಹತ್ವವನ್ನು ಅರಿಯಬಹುದಾಗಿದೆ.

## ಪೂರಕ ಆಹಾರ :

ತಾಯಿಹಾಲಿನ ಜೊತೆ ನೀಡುವ ಇತರ ಹಾಲು ಅಥವಾ ಮೃದು ಆಹಾರಕ್ಕೆ ಪೂರಕ ಆಹಾರವೆನ್ನುತ್ತಾರೆ. ಮಗುವಿನ ಬೆಳವಣಿಗೆ ಶೀಘ್ರವಾಗಿರುವುದರಿಂದ ಆರು ತಿಂಗಳ ನಂತರ ತಾಯಿಹಾಲು ಅಗತ್ಯವಿರುವಷ್ಟು ಪೋಷಕಾಂಶಗಳನ್ನು ಒದಗಿಸಲಾರದು. ಆದುದರಿಂದ ತಾಯಿಹಾಲಿನ ಜೊತೆ "ಪೂರಕ ಆಹಾರ" ಪ್ರಾರಂಭಿಸಬೇಕು.

ಮೊದಲು ದ್ರವರೂಪದ ಆಹಾರ - ಅಂದರೆ ಹಸುವಿನ ಹಾಲು, ಎಮ್ಮೆಯ ಹಾಲು, ಮೇಕೆ ಹಾಲು, ತಾಜಾ ಹಣ್ಣಿನ ರಸ, ಸೊಪ್ಪು ತರಕಾರಿಗಳನ್ನು ಬೇಯಿಸಿ ಶೋಧಿಸಿದ ನೀರು ಮುಂತಾದವುಗಳನ್ನು ಕೊಡಬೇಕು. ಕ್ರಮೇಣ ರಾಗಿ ಸರಿ, ರವೆ ಗಂಜಿ, ಪಾಯಸ, ಮೃದುವಾಗಿ ಬೇಯಿಸಿದ ಅನ್ನ, ಬೇಳೆ, ತರಕಾರಿ ಮುಂತಾದ ಅರೆಗಟ್ಟಿ ಆಹಾರವನ್ನು ಸ್ವಲ್ಪ ಸ್ವಲ್ಪವಾಗಿ ಕೊಡಬೇಕು. ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚು ಬಳಕೆ ಇರುವ "ವಡ್ಡರಾಗಿ ಹಿಟ್ಟು" ಮಗುವಿಗೆ ಒಳ್ಳೆಯದು. ರಾಗಿ ಮೊಳಕೆ ಕಟ್ಟಿ, ಹುರಿದು ಪುಡಿ ಮಾಡಿ, ಸೋಸಿರುವ ಪುಡಿಯನ್ನು ಬಿಸಿ ನೀರಿಗೆ ಬೆರೆಸಿ, ಬೆಲ್ಲ ಅಥವಾ ಸಕ್ಕರೆ ಹಾಕಿ ಮಗುವಿಗೆ ಕೊಡಬೇಕು. ಸ್ಥಳೀಯವಾಗಿ ದೊರೆಯುವ ಯಾವುದೇ ತಾಜಾ ಹಣ್ಣುಗಳನ್ನು ಸಿಪ್ಪೆ ಸುಲಿದು, ಬೀಜ, ನಾರು ತೆಗೆದು ಮೃದು ಭಾಗವನ್ನು ಸ್ವಲ್ಪ ಸ್ವಲ್ಪ ತಿನ್ನಿಸಬೇಕು.

ತಾಯಿಹಾಲು ಉಣಿಸುವುದನ್ನು ಮುಂದುವರೆಸುತ್ತಾ, ಕ್ರಮೇಣ ಇತರ ಆಹಾರ ಪದಾರ್ಥಗಳನ್ನು ಉಣಿಸುವುದನ್ನು ಅಭ್ಯಾಸಮಾಡಬೇಕು. ಆದಷ್ಟು ಹೆಚ್ಚು ಅವಧಿಯವರೆಗೆ ತಾಯಿಹಾಲು ಉಣಿಸಬೇಕು. ಇದರಿಂದ ಮಗುವಿನ ಬೆಳವಣಿಗೆ ಸಮರ್ಪಕವಾಗಿರುವುದಲ್ಲದೆ, ಮಗುವಿನ ಜ್ಞಾಪಕಶಕ್ತಿಯನ್ನು ಹೆಚ್ಚಿಸುತ್ತದೆ.

## ಗರ್ಭಿಣಿ ಮತ್ತು ಬಾಣಂತಿಯರ ಆಹಾರ :

ಗರ್ಭಿಣಿ ಮತ್ತು ಬಾಣಂತಿಯರಿಗೆ ಹೆಚ್ಚಿನ ಪೋಷಕಾಂಶಗಳು ಅಗತ್ಯವಾಗಿದ್ದು ಈ ಅವಧಿಯಲ್ಲಿ ಹೆಚ್ಚು ಪ್ರಮಾಣದ ಸತ್ವಯುತ ಆಹಾರ ಸೇವಿಸಬೇಕು. ಅಧಿಕ ಪ್ರಮಾಣದಲ್ಲಿ ದ್ವಿದಳ ಧಾನ್ಯಗಳು, ಹಸಿರು ಸೊಪ್ಪು, ತರಕಾರಿ, ಮೊಳಕೆ ಕಟ್ಟಿದ ಹುರುಳಿ, ಹೆಸರು ಮತ್ತು ಕಡಲೆಕಾಳು, ಸ್ಥಳೀಯವಾಗಿ ಆಯಾಕಾಲಕ್ಕೆ ದೊರೆಯುವ ಸೀಬೆ ಹಣ್ಣು, ಸೀತಾಫಲ, ಮಾವಿನಹಣ್ಣು, ಸಪೋಟಾ ಹಾಗೂ ಇನ್ನಿತರ ಹಣ್ಣುಗಳನ್ನು ಸೇವಿಸಬೇಕು. ಹಾಲು, ಹಾಲಿನ ಪದಾರ್ಥಗಳಾದ ಮೊಸರು, ಮಜ್ಜಿಗೆ, ಅನುಕೂಲವಿದ್ದಲ್ಲಿ ಬೆಣ್ಣೆ, ತುಪ್ಪ, ಮೊಟ್ಟೆ, ಮಾಂಸ, ಮೀನು ಮುಂತಾದವುಗಳನ್ನು ಬಳಸುವುದರಿಂದ ಮಗುವಿನ ಆರೋಗ್ಯ ಉತ್ತಮವಾಗಿರುತ್ತದೆ.

ಗರ್ಭಿಣಿ ಸಾಕಷ್ಟು ಪ್ರಮಾಣದ ಸಮರ್ಪಕ ಪೌಷ್ಟಿಕ ಆಹಾರ ಸೇವಿಸದಿದ್ದಲ್ಲಿ ಹುಟ್ಟುವ ಮಗು ಕಡಿಮೆ ತೂಕದಿಂದ ಜನಿಸುತ್ತದೆ. ಇದಕ್ಕೆ ಅವಕಾಶ ಕೊಡಬಾರದು.

## ಗ್ರಾಮೀಣ ಪರಿಸರದಲ್ಲಿ ಸ್ಥಳೀಯವಾಗಿ ದೊರೆಯುವ ಆಹಾರ ಪದಾರ್ಥಗಳು ಸದ್ಬಳಕೆ :

ಪೌಷ್ಟಿಕ ಆಹಾರಕ್ಕೆ ಸಂಬಂಧಿಸಿದಂತೆ ಗ್ರಾಮೀಣ ಪ್ರದೇಶಗಳಲ್ಲಿ ಪ್ರಕೃತಿಯ ಕೊಡುಗೆ ಅಪಾರ. ಹೊಲಗದ್ದೆ, ತೋಟಗಳಲ್ಲಿ ಸ್ಥಳೀಯವಾಗಿಯೇ ದೊರೆಯುವ ಸೊಪ್ಪು, ತರಕಾರಿ, ಹಣ್ಣುಗಳು ಸಾಕಷ್ಟು ಪೌಷ್ಟಿಕಾಂಶಗಳನ್ನು ಒಳಗೊಂಡಿದ್ದು ಇವುಗಳನ್ನು ಬಳಸುವ ಬಗ್ಗೆ ಅರಿವು ಮೂಡಿಸಬೇಕು. ಗುಡ್ಡಗಾಡು ಪ್ರದೇಶಗಳಲ್ಲಿ ಸೀತಾಫಲ, ಸೀಬೆಹಣ್ಣು, ನೇರಳೇಹಣ್ಣು, ಬೋರೆಹಣ್ಣು, ಬೇಲದಹಣ್ಣು, ನೆಲ್ಲಿಕಾಯಿ ಹೇರಳವಾಗಿ ದೊರೆಯುತ್ತವೆ.

ನಾವು ದಿನನಿತ್ಯ ಬಳಸುವ ರಾಗಿ, ಜೋಳ, ಸಜ್ಜೆ, ನವಣೆ, ಗೋಧಿ ಮುಂತಾದ ಧಾನ್ಯಗಳಲ್ಲಿ ಪೋಷಕಾಂಶಗಳು ಹೆಚ್ಚಾಗಿದ್ದು ಇವುಗಳನ್ನು ಅಧಿಕ ಪ್ರಮಾಣದಲ್ಲಿ ಕಾಳು, ಸೊಪ್ಪು ತರಕಾರಿಗಳೊಂದಿಗೆ ಉಪಯೋಗಿಸಬೇಕು.

ಕೆಲವು ಪ್ರದೇಶಗಳಲ್ಲಿ ಕಡ್ಲೆಕಾಯಿ, ಹಸಿ ಕಡಲೆ ಬೆಳೆಯುತ್ತಾರೆ. ಹಸುವಿನ ಹಾಲು, ಎಮ್ಮೆಹಾಲು, ಮೇಕೆ ಹಾಲು ದೊರೆಯುತ್ತವೆ. ಇವುಗಳಲ್ಲಿ ಪೋಷಾಕಾಂಶಗಳು ಹೆಚ್ಚಾಗಿರುತ್ತವೆ. ದೊರೆಯುವಂತಿದ್ದಲ್ಲಿ ಇವುಗಳನ್ನು ಬಳಸಬೇಕು. ಸ್ವತಃ ಗಾಂಧೀಜಿಯವರು ಕಡ್ಲೆ ಕಾಯಿ, ಮೇಕೆ ಹಾಲು ಸೇವಿಸುತ್ತಿದ್ದರು.

## ಪೋಷಕಾಂಶಗಳ ಸಂರಕ್ಷಣೆ :

ಹಸಿರು ಸೊಪ್ಪು, ತರಕಾರಿಗಳನ್ನು ಅಗತ್ಯಕ್ಕಿಂತ ಹೆಚ್ಚು ವೇಳೆ ಬೇಯಿಸದಿರುವುದು, ತರಕಾರಿಗಳನ್ನು ದಪ್ಪವಾಗಿ ಕತ್ತರಿಸುವುದು, ಹಸಿರು ಸೊಪ್ಪುಗಳನ್ನು ತೊಳೆದು ಕತ್ತರಿಸುವುದು, ಅಕ್ಕಿ ಹೆಚ್ಚು ಬಾರಿ ತೊಳೆಯದಿರುವುದು, ಅನ್ನದ ಗಂಜಿ ವ್ಯರ್ಥ ಮಾಡದಿರುವುದು ಮುಂತಾದ ಕ್ರಮಗಳನ್ನು ಅನುಸರಿಸುವುದರಿಂದ ಪೋಷಕಾಂಶಗಳನ್ನು ಸಂರಕ್ಷಿಸಬಹುದು.

## ಆಹಾರ ಪದಾರ್ಥಗಳ ಶೇಖರಣೆ, ಬಳಕೆ, ಅಡಿಗೆ ತಯಾರಿಕೆ ಮತ್ತು ಸೇವನೆ ಬಗ್ಗೆ ಕಾಪಾಡಬೇಕಾದ ಸ್ವಚ್ಚತೆ :

೧) ಅಡಿಗೆಗೆ ಬಳಸುವ ಎಲ್ಲಾ ಆಹಾರ ಪದಾರ್ಥಗಳು ಸ್ವಚ್ಛವಾಗಿರಬೇಕು.
೨) ಹಸಿರುಸೊಪ್ಪು, ತರಕಾರಿ, ಹಣ್ಣುಗಳನ್ನು ತೊಳೆದು ಉಪಯೋಗಿಸಬೇಕು.
೩) ಆಹಾರ ತಯಾರಿಕೆಗೆ ಬಳಸುವ ಪಾತ್ರೆಗಳು, ಆಹಾರ ಸೇವಿಸುವ ತಟ್ಟೆ, ಲೋಟ ಮುಂತಾದವು ಸ್ವಚ್ಛವಾಗಿರಬೇಕು.
೪) ಅಡಿಗೆ ತಯಾರಿಸುವಾಗ, ಆಹಾರ ಬಡಿಸುವಾಗ, ಸೇವಿಸುವಾಗ ಕೈಗಳನ್ನು ಸ್ವಚ್ಛವಾಗಿ ತೊಳೆದಿರಬೇಕು.
೫) ಆಹಾರ ಪದಾರ್ಥಗಳನ್ನು ನೊಣ ಮತ್ತಿತರ ಕೀಟಗಳು, ಜಿರಲೆ, ಹಲ್ಲಿ, ಇಲಿ ಮುಂತಾದವುಗಳಿಂದ ರಕ್ಷಿಸಬೇಕು.
೬) ಆಹಾರ ತಯಾರಿಸಿದ ಸ್ವಲ್ಪ ಸಮಯದಲ್ಲೇ ಸೇವಿಸುವುದು ಒಳಿತು. ಆಹಾರವನ್ನು ಸದಾ ಮುಚ್ಚಿಟ್ಟಿರಬೇಕು.
೭) ಯಾವಾಗಲೂ ಶುದ್ಧವಾದ ನೀರನ್ನು ಬಳಸಬೇಕು. ನೀರು ಸ್ವಚ್ಛವಿಲ್ಲವೆಂದಾದಲ್ಲಿ ಸೋಸಿ ಕಾಯಿಸಿ ಆರಿಸಿದ ನೀರನ್ನು ಬಳಸಬೇಕು.
೮) ಚಿಕ್ಕಮಕ್ಕಳಿಗೆ ಕುಡಿಸುವ ನೀರಿನ ಸ್ವಚ್ಛತೆ ಬಗ್ಗೆ ವಿಶೇಷ ಗಮನ ಅತ್ಯಗತ್ಯ.

## ಆಹಾರದ ಬಗ್ಗೆ ಮೂಢನಂಬಿಕೆಗಳು, ತಪ್ಪು ಕಲ್ಪನೆಗಳು :

೧) ತಾಯಿಹಾಲನ್ನು ಹೆರಿಗೆಯಾದ ಸ್ವಲ್ಪ ಸಮಯದಲ್ಲೇ ಮಗುವಿಗೆ ಕುಡಿಸಬೇಕು. ಕೆಲವು ಕುಟುಂಬಗಳಲ್ಲಿ ಹೆರಿಗೆಯಾದ ಮೂರು ದಿನಗಳವರೆಗೆ ತಾಯಿಹಾಲು ಕುಡಿಸದೇ ಹರಳೆಣ್ಣೆ, ಸಕ್ಕರೆ ನೀರು, ಜೇನುತುಪ್ಪ, ಇತರ ಹಾಲು ಮುಂತಾದವುಗಳನ್ನು ಕೊಡುತ್ತಾರೆ. ಇದರಿಂದ ಸೋಂಕುಂಟಾಗುವ ಸಂಭವವಿರುತ್ತದೆ. ಅಲ್ಲದೇ ತಾಯಿಯ ಮೊದಲ ಹಾಲು ಮಗುವಿಗೆ ಅತ್ಯುತ್ತಮ ಆಹಾರ.
೨) ಗರ್ಭಿಣಿ, ಬಾಣಂತಿಯರಿಗೆ ಕೆಲವು ಉತ್ತಮ ಪೋಷಕಾಂಶಗಳನ್ನೊಳಗೊಂಡ ಆಹಾರ ಪದಾರ್ಥಗಳನ್ನು ಕೊಡುವುದಿಲ್ಲ. ಉತ್ತಮ ಪೋಷಕಾಂಶಗಳಿರುವ ಪರಂಗಿಹಣ್ಣು, ನುಗ್ಗೆಸೊಪ್ಪನ್ನು ಗರ್ಭಿಣಿಯರಿಗೆ ಕೊಡುವುದಿಲ್ಲ. ಹಾಗೆಯೇ ಬಾಣಂತಿಯರಿಗೆ ಸೊಪ್ಪು, ಕೆಲವು ತರಕಾರಿಗಳನ್ನು ವರ್ಜಿಸುತ್ತಾರೆ. ಇದು ತಪ್ಪು.
೩) ಕೆಲವು ಗರ್ಭಿಣಿಯರು ಇಟ್ಟಿಗೆ ಚೂರು, ಮಣ್ಣಿನ ಚಿಕ್ಕ ಉಂಡೆ ತಿನ್ನುತ್ತಾರೆ. ಇದು ದುರಭ್ಯಾಸ. ಇದು ಮಗುವಿನ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುತ್ತದೆ.

೪) ಅಧಿಕ ಪೋಷಕಾಂಶಗಳನ್ನು ಹೊಂದಿರುವ ಹಸು ಮತ್ತು ಎಮ್ಮೆಯ ಗಿಣ್ಣು ಹಾಲನ್ನು ಸಹ ಗರ್ಭಿಣಿ ಮತ್ತು ಬಾಣಂತಿಯರಿಗೆ ಕೊಡುವುದಿಲ್ಲ. ಅಲ್ಲದೇ ಅನ್ನಾಂಗ ಮತ್ತು ಖನಿಜಾಂಶಗಳನ್ನು ಹೊಂದಿರುವ ನೇರಳೆ ಹಣ್ಣನ್ನು ಸಹ ಕೊಡುವುದಿಲ್ಲ. ಇದು ಸರಿಯಲ್ಲ.

೫) ಬಾಣಂತಿಯರಿಗೆ ಕೊಡುವ ಆಹಾರ ಸಾಕಷ್ಟು ಪೋಷಕಾಂಶಗಳನ್ನು ಹೊಂದಿರುವುದಿಲ್ಲ. ಏಕೆಂದರೆ ಅವರಿಗೆ ಬರಿ ಅನ್ನ ಮತ್ತು ಕಟ್ಟು, ತಿಳೀಸಾರು ನೀಡುತ್ತಾರೆ. ಇದು ಬೇಳೆ ಅಥವಾ ಕಾಳುಗಳಿಂದಲೂ ಸಹ ವರ್ಜಿತವಾಗಿರುತ್ತದೆ.

೬) ಬಾಣಂತಿಯರಿಗೆ ಸಾಕಾಗುವಷ್ಟು ನೀರನ್ನು ಸಹ ಕೊಡುವುದಿಲ್ಲ.

## ಮಕ್ಕಳಲ್ಲಿ ಪೋಷಕಾಂಶಗಳ ಕೊರತೆ :

ಮಕ್ಕಳ ಬೆಳವಣಿಗೆ ಶೀಘ್ರವಾಗಿರುವುದರಿಂದ ಉತ್ತಮ ಪೋಷಕಾಂಶಗಳನ್ನು ಹೊಂದಿರುವ ಆಹಾರ ಪದಾರ್ಥಗಳು ಅವಶ್ಯಕ. ಸಮರ್ಪಕ ಆಹಾರ ದೊರೆಯದಿದ್ದಲ್ಲಿ ಮಕ್ಕಳ ಬೆಳವಣಿಗೆ ಕುಂಠಿತವಾಗುವುದಲ್ಲದೆ ಪೋಷಕಾಂಶಗಳ ಕೊರತೆಗೆ ತುತ್ತಾಗುತ್ತಾರೆ. ಅರೆ ಹೊಟ್ಟೆ ಅಪಾಯಕಾರಿ.

## ೧) ಶಕ್ತಿ ಮತ್ತು ಸಸಾರಜನಕ ಕೊರತೆಯ ಅಪೌಷ್ಟಿಕತೆ :

ಮಕ್ಕಳಿಗೆ ಸಕಾಲದಲ್ಲಿ ಪೂರಕ ಆಹಾರ ಪ್ರಾರಂಭಿಸದೆ ಇರುವುದು, ಕಡಿಮೆ ಆಹಾರ ತಿನ್ನಿಸುವುದು ಹಾಗೂ ಸೋಂಕು ರೋಗಗಳು ಇದಕ್ಕೆ ಮುಖ್ಯ ಕಾರಣ. ಮಕ್ಕಳ ತೂಕ ಕಡಿಮೆಯಾಗಿ ಬೆಳವಣಿಗೆ ಕುಂಠಿತವಾಗುತ್ತದೆ. ತೀವ್ರ ರೀತಿಯ ಅಪೌಷ್ಟಿಕತೆ ಒಂದು 'ವಿಷವರ್ತುಲ'. ಅಪೌಷ್ಟಿಕತೆಯಿಂದ ಸೋಂಕು ರೋಗ, ಸೋಂಕು ರೋಗಗಳಿಂದ ಅಪೌಷ್ಟಿಕತೆ ಉಂಟಾಗುತ್ತದೆ. ಸ್ಥಳೀಯವಾಗಿ ದೊರೆಯುವ ಧಾನ್ಯಗಳು, ಸಸಾರಜನಕ ಹೆಚ್ಚು ಒದಗಿಸುವ ಬೇಳೆ, ಕಾಳು, ಕಡಲೆಬೀಜ ಮುಂತಾದವುಗಳಿಂದ ತಯಾರಿಸಿದ ಆಹಾರ ಕೊಡಬೇಕು. ಇದರಿಂದ ಅಪೌಷ್ಟಿಕತೆ ತಡೆಗಟ್ಟಬಹುದು. ಗ್ರಾಮೀಣ ಪ್ರದೇಶಗಳಲ್ಲಿ ಅಂಗನವಾಡಿ ಕೇಂದ್ರಗಳ ಮೂಲಕ ಆರು ವರ್ಷದೊಳಗಿನ ಮಕ್ಕಳಿಗೆ ಪೂರಕ ಪೌಷ್ಟಿಕ ಆಹಾರ ನೀಡುತ್ತಾರೆ. ತೀವ್ರ ಅಪೌಷ್ಟಿಕತೆ ಇರುವ ಮಕ್ಕಳಿಗೆ ಸಾಮಾನ್ಯವಾಗಿ ನೀಡುವ ಪೂರಕ ಪೌಷ್ಟಿಕ ಆಹಾರದ ಎರಡರಷ್ಟು ಪ್ರಮಾಣದಲ್ಲಿ ಆಹಾರ ನೀಡಲಾಗುತ್ತದೆ. ಈ ಸೌಲಭ್ಯವನ್ನು ಬಳಸಿಕೊಳ್ಳುವಂತೆ ಗ್ರಾಮೀಣ ಜನರಲ್ಲಿ ಅರಿವು ಮೂಡಿಸಬೇಕು.

## ೨) 'ಎ' ಅನ್ನಾಂಗ ಕೊರತೆ :

ಮಕ್ಕಳಿಗೆ ಕೊಡುವ ಆಹಾರದಲ್ಲಿ 'ಎ' ಅನ್ನಾಂಗ ಹೆಚ್ಚಾಗಿರುವ ಪದಾರ್ಥಗಳಾದ ಹಸಿರು ಸೊಪ್ಪು, ಕ್ಯಾರೆಟ್, ಕುಂಬಳ ಕಾಯಿಯಂತಹ ಹಳದಿ ತರಕಾರಿ ಮತ್ತು ಹಣ್ಣುಗಳಾದ ಪರಂಗಿಹಣ್ಣು, ಮಾವಿನಹಣ್ಣು, ಕಿತ್ತಳೆಹಣ್ಣು ಸೇವಿಸದಿದ್ದಲ್ಲಿ 'ಎ' ಅನ್ನಾಂಗ ಕೊರತೆಗೆ ತುತ್ತಾಗುತ್ತಾರೆ. ಮಗುವಿಗೆ ತಾಯಿಯ ಮೊದಲ ಹಾಲು ನೀಡದಿದ್ದಲ್ಲಿ ಸಹ 'ಎ' ಅನ್ನಾಂಗದ ಕೊರತೆ ಉಂಟಾಗುತ್ತದೆ. 'ಎ' ಅನ್ನಾಂಗ ಕೊರತೆ ತೀವ್ರವಾದಲ್ಲಿ ಅಂಧತ್ವ ಉಂಟಾಗುವ ಸಾಧ್ಯತೆ ಇರುತ್ತದೆ.

'ಎ' ಅನ್ನಾಂಗ ಕೊರತೆಯನ್ನು ತಡೆಗಟ್ಟಲು 'ಎ' ಅನ್ನಾಂಗ ಸಮೃದ್ಧವಾಗಿರುವ ಆಹಾರ ಪದಾರ್ಥಗಳನ್ನು ಕೊಡಬೇಕು. ಅಲ್ಲದೇ ಸರ್ಕಾರದಿಂದ 'ಎ' ಅನ್ನಾಂಗ ಕೊರತೆ ನಿವಾರಣೆ ಕಾರ್ಯಕ್ರಮ ರೂಪಿಸಲಾಗಿದ್ದು ಇದರ ಅನ್ವಯ ೯ ತಿಂಗಳ ಮಗುವಿಗೆ ಒಂದು ಮಿ.ಲೀ.ಯಷ್ಟು ಹಾಗೂ ೧½ ಇಂದ ೩ ವರ್ಷದವರೆಗಿನ ಮಕ್ಕಳಿಗೆ ಆರು ತಿಂಗಳಿಗೊಮ್ಮೆ ಎರಡು ಮಿ.ಲೀ.ಯಷ್ಟು 'ಎ' ಅನ್ನಾಂಗ ದ್ರಾವಣ ವಿತರಣೆ ಮಾಡಲಾಗುತ್ತದೆ. 'ಎ' ಅನ್ನಾಂಗ ದ್ರಾವಣವನ್ನು ಉಚಿತವಾಗಿ ಪೂರೈಕೆ ಮಾಡಲಾಗುತ್ತಿದೆ.

## ೩) ಆಹಾರದಲ್ಲಿ ಕಬ್ಬಿಣಾಂಶ ಕೊರತೆಯಿಂದ ರಕ್ತ ಹೀನತೆ :

ಕಬ್ಬಿಣಾಂಶವು ಶರೀರಕ್ಕೆ ಅಗತ್ಯವಾಗಿ ಬೇಕಾಗುವ ಒಂದು ಮುಖ್ಯ ಖನಿಜಾಂಶ. ಇದರ ಕೊರತೆಯಾದಲ್ಲಿ ರಕ್ತಹೀನತೆ ಉಂಟಾಗುತ್ತದೆ. ಆಹಾರದಲ್ಲಿ ಫೋಲಿಕ್ ಆಮ್ಲ ಮತ್ತು 'ಬಿ' ಅನ್ನಾಂಗದ ಕೊರತೆಯಾದರೂ ಸಹ ರಕ್ತಹೀನತೆ ಉಂಟಾಗುತ್ತದೆ. ಮಕ್ಕಳು, ಗರ್ಭಿಣಿಯರು, ಬಾಣಂತಿಯರು ರಕ್ತಹೀನತೆಗೆ ಸುಲಭವಾಗಿ ತುತ್ತಾಗುತ್ತಾರೆ.

ಹಸಿರು ಸೊಪ್ಪು, ರಾಗಿಯಂತಹ ಪೂರ್ಣ ಧಾನ್ಯ, ಕಾಳು, ಕಡಲೆಬೀಜ, ಎಳ್ಳು, ಬೆಲ್ಲ ಮುಂತಾದ ಆಹಾರ ಪದಾರ್ಥಗಳಲ್ಲಿ ಕಬ್ಬಿಣಾಂಶ ಹೆಚ್ಚಾಗಿರುತ್ತದೆ. ಈ ಆಹಾರ ಪದಾರ್ಥಗಳನ್ನು ದಿನನಿತ್ಯದ ಆಹಾರದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಸೇವಿಸುವುದರಿಂದ ರಕ್ತಹೀನತೆ ತಡೆಗಟ್ಟಬಹುದು.

ಸರ್ಕಾರದ ವತಿಯಿಂದ ಗರ್ಭಿಣಿಯರಿಗೆ ಮತ್ತು ಶಾಲಾಪೂರ್ವ ವಯಸ್ಸಿನ ಮಕ್ಕಳಿಗೆ ಉಚಿತವಾಗಿ ಕಬ್ಬಿಣಾಂಶ ಮತ್ತು ಫೋಲಿಕ್ ಆಮ್ಲ ಮಾತ್ರೆಗಳನ್ನು ವಿತರಿಸಲಾಗುತ್ತದೆ.

### ೪) ಅಯೋಡಿನ್ ಕೊರತೆಯ ನ್ಯೂನತೆಗಳ ನಿವಾರಣೆ :

ಮಕ್ಕಳಿಗೆ ಆಹಾರದಲ್ಲಿ ಅಯೋಡಿನ್ ಸಾಕಷ್ಟು ಪ್ರಮಾಣದಲ್ಲಿ ದೊರೆಯದೇ ಹೋದಲ್ಲಿ, ಅಯೋಡಿನ್ ಕೊರತೆಯುಂಟಾಗಿ ಬುದ್ಧಿ ಮಾಂದ್ಯತೆ, ಗಳಗಂಡ ರೋಗ, ಕಿವುಡು ಮೂಕತನ, ಕುಂಠಿತ ಬೆಳವಣಿಗೆ, ಕಲಿಕೆಯಲ್ಲಿ ಹಿಂದುಳಿಯುವಿಕೆಯಂತಹ ನ್ಯೂನತೆಗಳಿಗೆ ತುತ್ತಾಗುತ್ತಾರೆ. ಗರ್ಭಿಣಿಯರಲ್ಲಿ ಅಯೋಡಿನ್ ಕೊರತೆಯಿಂದ ಪದೇಪದೇ ಗರ್ಭಪಾತ ಹಾಗೂ ನಿರ್ಜೀವ ಶಿಶುವಿನ ಜನನ ಉಂಟಾಗುತ್ತದೆ.

* ಅಯೋಡಿನ್ ಕೊರತೆಯ ನಿವಾರಣೆಗಾಗಿ ಸಮುದ್ರದಲ್ಲಿ ದೊರೆಯುವ ಸೀಗಡಿ, ಮೀನು, ತರಕಾರಿಗಳನ್ನು ಉಪಯೋಗಿಸಬೇಕು.
* ಅಯೋಡಿನ್‌ಯುಕ್ತ ಉಪ್ಪನ್ನು ದಿನನಿತ್ಯದ ಆಹಾರದಲ್ಲಿ ಉಪಯೋಗಿಸುವುದರಿಂದ ನ್ಯೂನತೆಗಳನ್ನು ತಡೆಗಟ್ಟಬಹುದು.

### ಪೌಷ್ಟಿಕ ಆಹಾರಕ್ಕೆ ಸಂಬಂಧಿಸಿದಂತೆ ಸಮುದಾಯದಲ್ಲಿ ಕೈಗೊಳ್ಳಬಹುದಾದ ಕಾರ್ಯಚಟುವಟಿಕೆಗಳು :

ಗ್ರಾಮೀಣ ಪ್ರದೇಶದಲ್ಲಿ ಸ್ಥಳೀಯವಾಗಿಯೇ ದೊರೆಯುವ ಆಹಾರ ಪದಾರ್ಥಗಳ ಬಳಕೆ, ಸರಿಯಾದ ಅಡಿಗೆ ಕ್ರಮ, ಪೋಷಕಾಂಶಗಳ ಸಂರಕ್ಷಣೆ, ಆಹಾರ ಪದಾರ್ಥಗಳ ಸ್ವಚ್ಛತೆ ಮತ್ತು ಸೂಕ್ತ ಶೇಖರಣೆ ಬಗ್ಗೆ ಅರಿತು ಅನುಸರಿಸುವುದರಿಂದ ಸಾಕಷ್ಟು ಪೋಷಕಾಂಶಗಳನ್ನು ಹೊಂದಿರುವ ಉತ್ತಮ ಪೌಷ್ಟಿಕ ಆಹಾರ ಪಡೆಯಬಹುದು. ಈ ಕುರಿತಂತೆ ಆದಾಯಕ್ಕನುಗುಣವಾಗಿ ಚಿಕ್ಕ-ಚೊಕ್ಕ ಕುಟುಂಬವನ್ನು ಯೋಜಿಸಿ, ಅರ್ಹ ವಯಸ್ಸಿನಲ್ಲಿ ಮದುವೆ, ಹೆರಿಗೆಗಳಲ್ಲಿ ಸೂಕ್ತ ಅಂತರ ಅನುಸರಿಸುವುದರಿಂದ ಕುಟುಂಬದ ಎಲ್ಲಾ ಸದಸ್ಯರು ಉತ್ತಮ ಆರೋಗ್ಯ ಪಡೆಯಲು ಸಾಧ್ಯವಾಗುತ್ತದೆ.

ಗ್ರಾಮೀಣ ಪ್ರದೇಶದಲ್ಲಿ, ಮನೆಯ ಬಳಿಯಲ್ಲಿ ಕೈತೋಟ ಬೆಳೆಸುವುದು, ಹೈನುಗಾರಿಕೆ, ಕೋಳಿ- ಕುರಿ ಸಾಕಣೆ, ಮೀನು ಸಾಕಣೆ, ತೋಟಗಾರಿಕೆ ಮುಂತಾದವುಗಳನ್ನು ಅಭಿವೃದ್ಧಿಪಡಿಸುವುದರಿಂದ ಕುಟುಂಬದ ಆದಾಯ ಹೆಚ್ಚುವುದಲ್ಲದೆ, ಉತ್ತಮ ಪೋಷಕಾಂಶ ಉಳ್ಳ ಆಹಾರ ಪಡೆಯಬಹುದಾಗಿದೆ.

ಈ ದಿಸೆಯಲ್ಲಿ ಗ್ರಾಮೀಣ ಅಭಿವೃದ್ಧಿ ಇಲಾಖೆ, ಗ್ರಾಮ, ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯತಿ, ಸ್ಥಳೀಯ ಕೃಷಿ, ತೋಟಗಾರಿಕೆ, ಮೀನುಗಾರಿಕೆ, ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಸ್ವಯಂ ಸೇವಾ ಸಂಸ್ಥೆಗಳು, ಮಹಿಳಾ ಮಂಡಳಿಗಳು, ಯುವ ಮಂಡಳಿಗಳು, ಸಮುದಾಯ ಕೇಂದ್ರಗಳ ಸಹಾಯ, ಸಹಕಾರ ಪಡೆಯಬಹುದು. ಗುಂಪು ಸಭೆ, ತಾಯಂದಿರ ಸಭೆ, ಪೋಷಕರ ಸಭೆ, ಯುವಕ ಯುವತಿಯರ ಸಭೆಗಳನ್ನು ನಡೆಸಿ ಗ್ರಾಮ ಮಟ್ಟದಲ್ಲಿ ಪೌಷ್ಟಿಕ ಆಹಾರದ ಬಗ್ಗೆ ಅವರ ಸ್ಥಳೀಯ ಹಾಗೂ ಸರಳ ಭಾಷೆಯಲ್ಲಿ ವಿಚಾರ ವಿನಿಮಯ ನಡೆಸಬೇಕು. ಪೌಷ್ಟಿಕ ಆಹಾರ ಕುರಿತ ವಸ್ತು ಪ್ರದರ್ಶನ, ಚಲನಚಿತ್ರ ಪ್ರದರ್ಶನ, ಭಿತ್ತಿ ಪತ್ರಗಳ ಪ್ರದರ್ಶನ ಹಾಗೂ ಮಡಿಕೆ ಪತ್ರ , ಕರಪತ್ರವನ್ನು ಸರಳವಾಗಿ ಮುದ್ರಿಸಿ ಹಂಚಬೇಕು. ಇದಕ್ಕೆ ಸಂಬಂಧಪಟ್ಟ ಇಲಾಖೆಗಳ ಸಮನ್ವಯ, ಸಹಕಾರ, ಮಾರ್ಗದರ್ಶನ ಅತ್ಯಗತ್ಯ.

ಗ್ರಾಮೀಣ ಪರಿಸರದಲ್ಲಿ ಆಹಾರದಲ್ಲಿ ಉತ್ತಮ ಪೋಷಕಾಂಶಗಳನ್ನು ಪಡೆಯಲು ಜಾಣ್ಮೆಯಿಂದ ಕೆಲವು ಉಪಯುಕ್ತ ವಿಷಯಗಳನ್ನು ಅನುಸರಿಸುವಂತೆ ಅವರಲ್ಲಿ ಅರಿವು ಮೂಡಿಸಿದಲ್ಲಿ ಗ್ರಾಮೀಣ ಜನತೆಯ ಆರೋಗ್ಯ ಉತ್ತಮಪಡಿಸಲು ಸಾಧ್ಯವಾಗುತ್ತದೆ. ಈ ದೇಶ ಕಟ್ಟಿದ ಅನೇಕ ಮಹನೀಯರ ಗ್ರಾಮರಾಜ್ಯದ ಕನಸು ನನಸಾಗುತ್ತದೆ.

●




# ಜನಸಂಖ್ಯಾ ಸ್ಫೋಟ

ಬಿ. ಶಂಕರಪ್ಪ

ಗ್ರಾಮೀಣ ಅಭಿವೃದ್ಧಿ ಮತ್ತು ಜನಸಂಖ್ಯೆ ಬೆಳವಣಿಗೆ ಈ ಎರಡು ಅಂಶಗಳು ಅಭಿವೃದ್ಧಿ ಹೊಂದುತ್ತಿರುವ ದೇಶದ ಪ್ರಮುಖ ಲಕ್ಷಣಗಳಾಗಿವೆ. ಈ ಎರಡು ಅಂಶಗಳು ಒಂದಕ್ಕೊಂದು ಪೂರಕವಾಗಿದೆ. ಅತಿ ವೇಗದಲ್ಲಿ ಹೆಚ್ಚಾಗುತ್ತಿರುವ ಜನಸಂಖ್ಯೆ ದೇಶದ ಹಿಂದುಳಿಯುವಿಕೆಗೆ ಪ್ರಮುಖ ಕಾರಣವಾಗಿರುತ್ತದೆ. ನಮ್ಮ ದೇಶದಲ್ಲಿ ಜನಸಂಖ್ಯೆ ೧೦೦ ಕೋಟಿ ದಾಟಿದ್ದು, ಇದರಿಂದ ನಮ್ಮಲ್ಲಿ ಲಭ್ಯವಿರುವ ನೈಸರ್ಗಿಕ ಸಂಪನ್ಮೂಲದ ಸದುಪಯೋಗಕ್ಕೆ ಹಾಗೂ ಉತ್ತಮ ಜೀವನ ನಡೆಸಲು ಸಾಧ್ಯ. ಆದರೆ ಪ್ರಸ್ತುತ ಸುಮಾರು ೨೬ ಕೋಟಿ ಜನಸಂಖ್ಯೆ ಈ ದೇಶಕ್ಕೆ ಹೊರೆಯಾಗಿರುವುದಲ್ಲದೆ ಮುಖ್ಯವಾಗಿ ಗ್ರಾಮೀಣ ಅಭಿವೃದ್ಧಿಗೆ ತೊಡಕಾಗಿದೆ.

ವಿಶ್ವದ ಜನಸಂಖ್ಯೆ ಇಂದು ೬೩೯ ಕೋಟಿ ೮೩ ಲಕ್ಷದ ೫೨ ಸಾವಿರದ ೭೯೫ ಆಗಿದ್ದು. ಮುಂದೆ ೨೦೨೫ ನೇ ಇಸವಿಗೆ ೮೦೦ ಕೋಟಿ ಆಗಬಹುದೆಂದು ಅಂದಾಜಿಸಲಾಗಿದೆ. ವಿಶ್ವದಲ್ಲಿ ಚೀನ ೧೨೮ ಕೋಟಿ ೭ ಲಕ್ಷ ಹೊಂದಿದ್ದು, ಅದನ್ನು ಹೊರತುಪಡಿಸಿದಲ್ಲಿ ಭಾರತ ವಿಶ್ವದಲ್ಲಿಯೇ ಅತಿ ಹೆಚ್ಚು ಜನಸಂಖ್ಯೆ ಹೊಂದಿದ ಎರಡನೆಯ ರಾಷ್ಟ್ರವಾಗಿದೆ. ಭೂ ವಿಸ್ತೀರ್ಣದಲ್ಲಿ ಪ್ರಪಂಚದ ಒಟ್ಟು ವಿಸ್ತೀರ್ಣದಲ್ಲಿ ಶೇಕಡ ೨.೫ ರಷ್ಟು ವಿಸ್ತೀರ್ಣವನ್ನು ನಮ್ಮ ದೇಶ ಹೊಂದಿದೆ. ಜನಸಂಖ್ಯೆಯಲ್ಲಿ ವಿಶ್ವದ ಒಟ್ಟು ಜನಸಂಖ್ಯೆಯ ೧/೬ ಭಾಗದಷ್ಟು ಜನಸಂಖ್ಯೆ ನಮ್ಮ ದೇಶದಲ್ಲಿರುತ್ತದೆ. ೧೯೯೧ ನೇ ಜನಗಣತಿ ಪ್ರಕಾರ ಭಾರತದ ಜನಸಂಖ್ಯೆ ೮೪ ಕೋಟಿ ಇದ್ದದ್ದು ೨೦೦೧ ರ ಜನಗಣತಿ ಪ್ರಕಾರ ೧೦೨ ಕೋಟಿ ೭೫ ಲಕ್ಷ ಆಗಿರುತ್ತದೆ. ಕರ್ನಾಟಕದ ಜನಸಂಖ್ಯೆ ೧೯೯೧ರಲ್ಲಿ ೪ ಕೋಟಿ ೪೯ ಲಕ್ಷ ಇದ್ದದ್ದು, ೨೦೦೧ರ ಜನಗಣತಿ ಪ್ರಕಾರ ೫ ಕೋಟಿ ೨೭ ಲಕ್ಷಕ್ಕೆ ಏರಿದೆ. ಕೇವಲ ೧೦ ವರ್ಷದ ಅವಧಿಯಲ್ಲಿ ಭಾರತದ ಜನಸಂಖ್ಯೆ ೧೮ ಕೋಟಿ ೭೫ ಲಕ್ಷ, ಕರ್ನಾಟಕದ ಜನಸಂಖ್ಯೆ ೭೮ ಲಕ್ಷ ಹೆಚ್ಚಾಗಿದೆ.

> ***ವಿಶ್ವದ ಜನಸಂಖ್ಯೆ ಇಂದು ೬೩೯ ಕೋಟಿ ೮೩ ಲಕ್ಷದ ೫೨ ಸಾವಿರದ ೭೯೫ ಆಗಿದ್ದು. ಮುಂದೆ ೨೦೨೫ ನೇ ಇಸವಿಗೆ ೮೦೦ ಕೋಟಿ ಆಗಬಹುದೆಂದು ಅಂದಾಜಿಸಲಾಗಿದೆ. ವಿಶ್ವದಲ್ಲಿ ಚೀನ ೧೨೮ ಕೋಟಿ ೭ ಲಕ್ಷ ಹೊಂದಿದ್ದು, ಭಾರತ ವಿಶ್ವ ದಲ್ಲಿಯೇ ಅತಿ ಹೆಚ್ಚು ಜನಸಂಖ್ಯೆ ಹೊಂದಿದ ಎರಡನೆಯ ರಾಷ್ಟ್ರವಾಗಿದೆ.***

ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಸುಮಾರು ಶೇ. ೬೬.೦೨ ರಷ್ಟು ಜನಸಂಖ್ಯೆ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದೆ. ಗ್ರಾಮೀಣ ಪ್ರದೇಶದಲ್ಲಿ ನೆಲೆಸುವವರ ಶೇಕಡವಾರು ಜನಸಂಖ್ಯೆ ವರ್ಷದಿಂದ ವರ್ಷಕ್ಕೆ ಕಡಿಮೆ ಆಗುತ್ತಿದ್ದು, ನಗರದಲ್ಲಿ ಇದೇ ಪ್ರಮಾಣ ಹೆಚ್ಚಾಗುತ್ತಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಜನನ ದರವು ಹೆಚ್ಚಾಗಿದೆ ಹಾಗೂ ಮರಣ ದರವೂ ಹೆಚ್ಚಾಗಿದೆ ಮತ್ತು ನಗರ ಪ್ರದೇಶಗಳಿಗಿಂತ ೭.೫ ವರ್ಷಗಳ ಮುಂಚೆಯೇ ಅವುಗಳ ಜನಸಂಖ್ಯೆ ದ್ವಿಗುಣವಾಗಲಿದೆ.

ಪ್ರತಿ ವರ್ಷ ಭಾರತದಲ್ಲಿ ೧ ಕೋಟಿ ೫೬ ಲಕ್ಷ ಹಾಗೂ ಕರ್ನಾಟಕದಲ್ಲಿ ೭ ಲಕ್ಷ ೭೫ ಸಾವಿರದಷ್ಟು ಜನಸಂಖ್ಯೆ ಹೆಚ್ಚಾಗಿರುತ್ತದೆ. ಇದೇ ವೇಗದಲ್ಲಿ ಜನಸಂಖ್ಯೆ ಬೆಳೆದರೆ ೨೦೩೭ ರ ಹೊತ್ತಿಗೆ ೨೦೦ ಕೋಟಿಯನ್ನು ದಾಟಬಹುದೆಂದು ಅಂದಾಜಿಸಲಾಗಿದೆ.

ನಮ್ಮ ದೇಶದ ಜನನ ದರ (Birth Rate) ೨೫.೦ ಇದ್ದು ಕರ್ನಾಟಕದ ಜನನ ದರ ೨೨.೦ ಇದೆ. ಇದೇ ಭಾರತದ ಮರಣ ದರ ೮.೧ ರಷ್ಟು ಇದ್ದು ಕರ್ನಾಟಕದ ಮರಣ ದರ ೭.೨ ರಷ್ಟಿದೆ. ನಮ್ಮ ರಾಷ್ಟ್ರದ ಜನನ ಮತ್ತು ಮರಣ ದರದಲ್ಲಿ ೧೭ ರಷ್ಟು ವ್ಯತ್ಯಾಸವಿದೆ. ಈ ಒಂದು ಭಾರೀ ವ್ಯತ್ಯಾಸದಿಂದ ಹುಟ್ಟುವವರ ಪ್ರಮಾಣ ಜಾಸ್ತಿಯಾಗಿದ್ದು, ಮರಣ ಹೊಂದುವವರ ಪ್ರಮಾಣ ಕಡಿಮೆ ಇರುವುದರಿಂದ, ಜನಸಂಖ್ಯೆ ಬೃಹದಾಕಾರವಾಗಿ ಬೆಳೆಯಲು ಕಾರಣವಾಗಿದೆ.

೧೯೦೧ ರಿಂದ ೨೦೦೧ನೇ ಸಾಲಿನವರೆಗಿನ ಜನನ ದರ ಮತ್ತು ಮರಣ ದರದ ವಿವರವನ್ನು, ಜನಸಂಖ್ಯಾ ಬೆಳವಣಿಗೆಯ ಸ್ಥಿತಿಗತಿಯನ್ನು ಲೈನ್ ಗ್ರಾಫ್‌ನಲ್ಲಿ ನೋಡಬಹುದಾಗಿದೆ.

**BITRH & DEATH IN INDIA 1901 TO 2001**




**ಭಾರತ ಮತ್ತು ಕರ್ನಾಟಕ ರಾಜ್ಯದ ಜನನ ಮತ್ತು ಮರಣ ಪ್ರಮಾಣದ ಅಂಕಿ ಅಂಶಗಳು ಹೀಗಿವೆ:**

| | ಭಾರತ | | ಕರ್ನಾಟಕ | |
|---|---|---|---|---|
| ವರ್ಷ | ಜನನ ದರ | ಮರಣ ದರ | ಜನನ ದರ | ಮರಣ ದರ |
| ೧೯೮೧ | ೩೩.೯ | ೧೨.೫ | ೨೮.೨ | ೧೦.೨ |
| ೧೯೯೧ | ೨೯.೫ | ೯.೮ | ೨೬.೯ | ೯.೦ |
| ೨೦೦೨ | ೨೫.೦ | ೮.೧ | ೨.೦ | ೭.೨ |

ಆಧುನಿಕ ವೈದ್ಯಕೀಯ ವ್ಯವಸ್ಥೆ/ನೂತನ ತಂತ್ರಜ್ಞಾನದ ಆವಿಷ್ಕಾರ ಮತ್ತು ಹಲವಾರು ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟುವ ಕ್ರಮಗಳಿಂದ ಭಾರತೀಯ ಪುರುಷರ ಆಯುರ್ಮಾನ ೬೨.೪ ಇದ್ದು, ಕರ್ನಾಟಕದಲ್ಲಿ ೬೧.೭ ರಷ್ಟಿದ್ದು, ಭಾರತೀಯ ಮಹಿಳೆಯರ ಆಯುರ್ಮಾನ ೬೩.೪ ರಷ್ಟು ಇದ್ದು, ಕರ್ನಾಟಕದಲ್ಲಿ ೬೫.೪ ರಷ್ಟಿದೆ. ಆದುದರಿಂದ ಆಯುರ್ಮಾನ (Life Expectancy) ಹೆಚ್ಚಾಗಿದ್ದು, ಜನನದ ಪ್ರಮಾಣವನ್ನು ಕಡಿಮೆ ಮಾಡುವ ಕ್ರಮಗಳಲ್ಲಿ ಸಫಲರಾಗದೇ ಇರುವುದರಿಂದ ಜನಸಂಖ್ಯೆ ಬೃಹದಾಕಾರವಾಗಿ ಬೆಳೆಯುತ್ತಿದೆ.

೧೯೦೧ರಿಂದ ೨೦೦೧ ನೇ ಸಾಲಿನವರೆಗೆ ಭಾರತದ ಜನಸಂಖ್ಯೆಯ ಬೆಳವಣಿಗೆಯ ವಿವರವನ್ನು ಬಾರ್‌ಗ್ರಾಫ್‌ನಲ್ಲಿ ನೀಡಲಾಗಿದೆ.

ಇದೇ ಪ್ರಮಾಣದಲ್ಲಿ ಜನಸಂಖ್ಯೆ ಬೆಳವಣಿಗೆಯ ದರದಲ್ಲಿ ಹೆಚ್ಚಳವಾದರೆ ಮುಂದಿನ ದಿನಗಳಲ್ಲಿ ಜನಸಂಖ್ಯೆ ನಿಯಂತ್ರಿಸಲು ಅಸಾಧ್ಯವಾಗುವ ಸಂಭವವಿರುತ್ತದೆ. ೧೯೬೧ ರಿಂದ ೨೦೦೨ ರವರೆಗೆ ಹಾಲಿ ಇರುವ ಜನಸಂಖ್ಯಾ ಸ್ಥಿತಿ ಮತ್ತು ೨೦೧೦ ರಲ್ಲಿ ಬೆಳವಣಿಗೆಯಾಗಬಹುದಾದ ಜನಸಂಖ್ಯಾ ವಿವರವನ್ನು ಗಮನಿಸಬಹುದಾಗಿದೆ.

## POPULATION OF INDIA




## PROJECTED POPULATION OF INDIA




| Year | If current trends continue (Total Population-million) 2010 | If TFR 2.1 is achieved by (Total Population-million) |
|---|---|---|
| 1991 | 846.3 | 846.3 |
| 1996 | 934.2 | 934.2 |
| 1997 | 949.9 | 949.0 |
| 2000 | 996.9 | 991.0 |
| 2002 | 1027.6 | 1013.0 |
| 2010 | 1162.3 | 1107.0 |

## ಜನಸಂಖ್ಯಾ ಹೆಚ್ಚಳಕ್ಕೆ ಕಾರಣಗಳು

ಜನಸಂಖ್ಯಾ ಹೆಚ್ಚಳಕ್ಕೆ ಮುಖ್ಯವಾದ ಕಾರಣ ಜನನ-ಮರಣ ಪ್ರಮಾಣದ ಅಂತರ. ಬಡತನ, ಅಜ್ಞಾನ, ಮೂಢನಂಬಿಕೆ ಹಾಗೂ ಅಪ್ರಾಪ್ತ ವಯಸ್ಸಿನ ವಿವಾಹ ಇವೂ ಸಹ ಜನಸಂಖ್ಯಾ ಸ್ಫೋಟಕ್ಕೆ ಕಾರಣಗಳಾಗಿವೆ. ಉತ್ತಮ ಆರೋಗ್ಯ ಕಲ್ಪಿಸಿರುವುದರಿಂದ ಆಯುರ್ಮಾನವೂ ಹೆಚ್ಚಾಗಿದೆ. ಮರಣ ಪ್ರಮಾಣ ಕಡಿಮೆಯಾಗಿದ್ದು ತೀವ್ರಗತಿಯಲ್ಲಿ ಜನಸಂಖ್ಯೆ ನಮ್ಮ ದೇಶದಲ್ಲಿ ಬೆಳೆಯಲು ಕಾರಣವಾಗಿದೆ.

ಜನಸಂಖ್ಯಾ ಸ್ಫೋಟದಿಂದ ಅಭಿವೃದ್ಧಿ ಹೊಂದುತ್ತಿರುವ ಭಾರತದಂಥ ದೇಶದಲ್ಲಿ ಮುಖ್ಯವಾಗಿ ಈ ಕೆಳಕಂಡ ಸಮಸ್ಯೆಗಳು ಜೀವಂತವಾಗಿ ಉಳಿಯುವುದರ ಜೊತೆಗೆ ದಿನೇದಿನೇ ಕ್ಯಾನ್ಸರ್ ರೋಗದಂತೆ ಉಲ್ಬಣಿಸಿ ಇಡೀ ರಾಷ್ಟ್ರದ ಅಭಿವೃದ್ಧಿಗೆ ಕಾರಣವಾಗುತ್ತದೆ. ಅದರಲ್ಲೂ ಮುಖ್ಯವಾಗಿ ಗ್ರಾಮೀಣ ಅಭಿವೃದ್ಧಿಗೆ ಮಾರಕವಾಗಲು ಕಾರಣವಾಗಿರುತ್ತದೆ.

ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ಈ ದೇಶದಲ್ಲಿ ಶೇಕಡ ೬೬.೩ ಗ್ರಾಮೀಣ ಪ್ರದೇಶದಲ್ಲಿ ವಾಸಮಾಡುತ್ತಿದ್ದು, ಹಳ್ಳಿಗಳ ನಾಡಾದ ಈ ದೇಶದಲ್ಲಿ ಎಷ್ಟೇ ವಾರ್ಷಿಕ ಹಾಗೂ ಪಂಚವಾರ್ಷಿಕ ಯೋಜನೆಗಳನ್ನು ಹಮ್ಮಿಕೊಂಡರೂ ಮಹಾತ್ಮಾಜಿ ಕಂಡಂತಹ ಗ್ರಾಮರಾಜ್ಯ ಅರ್ಥಾತ್ ರಾಮರಾಜ್ಯದ ಕನಸು ನನಸು ಮಾಡಲು ಎಷ್ಟೇ ಭಗೀರಥ ಪ್ರಯತ್ನ ಮಾಡಿದರೂ ಸಾಧ್ಯವಾಗಿಲ್ಲದ ಅಂಶವನ್ನು ಕಾಣಬಹುದಾಗಿದೆ

ಗ್ರಾಮೀಣ ಪ್ರದೇಶದಲ್ಲಿ ಮುಖ್ಯವಾಗಿ ಜನಸಂಖ್ಯಾ ಸ್ಫೋಟದಿಂದ ಈ ಕೆಳಕಂಡ ಸಮಸ್ಯೆಗಳು ಉಂಟಾಗುತ್ತವೆ.

೧. ನೆಲ (ಭೂಮಿ), ಜಲ, ಅರಣ್ಯ, ಖನಿಜ ಹಾಗೂ ಇತರ ಸಂಪನ್ಮೂಲಗಳ ಕೊರತೆ ಉಂಟಾಗುವುದು.

೨. ಆಹಾರ, ಬಟ್ಟೆ, ಹಾಗೂ ವಸತಿಯ ಸಮಸ್ಯೆಗಳು ಉದ್ಭವಿಸುತ್ತವೆ.

೩. ಗ್ರಾಮೀಣ ಪ್ರದೇಶದಲ್ಲಿ ನಿರುದ್ಯೋಗ, ಅರೆ ನಿರುದ್ಯೋಗ ಉಂಟಾಗುತ್ತದೆ.

೪. ಬಡತನ ಹೆಚ್ಚಾಗಿ ಬಡತನ ರೇಖೆಗಿಂತ ಕೆಳಗಿರುವ ಜನಸಂಖ್ಯೆಯ ಪ್ರಮಾಣ ಹೆಚ್ಚಾಗುತ್ತದೆ.

೫. ಶಾಲೆಗಳು, ಆಸ್ಪತ್ರೆಗಳು ಹಾಗೂ ಇತರೆ ಮೂಲಭೂತ ಸೌಲಭ್ಯಗಳ ಕೊರತೆ ಉಂಟಾಗುತ್ತದೆ.

೬. ರಸ್ತೆ, ಸಾರಿಗೆ, ಇತರೆ ಮೂಲಭೂತ ಸೌಲಭ್ಯಗಳ ಮೇಲೆ ಒತ್ತಡ ಹೆಚ್ಚಾಗಿ ಕೊರತೆ ಉಂಟಾಗುತ್ತದೆ. ಭೂ ಮಾಲಿನ್ಯ, ವಾಯು ಮಾಲಿನ್ಯ, ಜಲ ಮಾಲಿನ್ಯ ಹಾಗೂ ಶಬ್ದ ಮಾಲಿನ್ಯ ಹೆಚ್ಚಾಗಿ ಇದರಿಂದ ಪರಿಸರದಲ್ಲಿ ಅಸಮತೋಲನ ಉಂಟಾಗುತ್ತದೆ. ಸಾಮಾಜಿಕ ಅಸಮಾನತೆ ಹೆಚ್ಚಾಗಿ ಸಮಾಜದಲ್ಲಿ ಪಾಪ, ಪಿಡುಗು ಹಾಗೂ ರೋಗ-ರುಜಿನಗಳು ಹೆಚ್ಚಾಗುವ ಸಂಭವವಿರುತ್ತದೆ.

೭. ಪ್ರಾಥಮಿಕ ಅಭಿವೃದ್ಧಿ ವಲಯದಲ್ಲಿನ (ಕೃಷಿ, ತೋಟಗಾರಿಕೆ ಇತ್ಯಾದಿ, ಕೃಷಿ ಸಂಬಂಧಿಸಿದ ವಲಯಗಳಲ್ಲಿ) ಹೆಚ್ಚು ಒತ್ತಡದಿಂದ ನಿರೀಕ್ಷಿಸಿದ ಉತ್ಪನ್ನವನ್ನು ಪಡೆಯಲು ಅಸಾಧ್ಯವಾಗುತ್ತದೆ.

೮. ಗ್ರಾಮೀಣ ಪ್ರದೇಶದಲ್ಲಿ ಜನಸಂಖ್ಯೆ ಹೆಚ್ಚಾದಲ್ಲಿ ಬಡತನ, ನಿರುದ್ಯೋಗ ಮತ್ತು ಇತರೆ ಗ್ರಾಮೀಣ ಕೈಗಾರಿಕೆಗಳಲ್ಲಿ ಉತ್ಪಾದನೆ ಕಡಿಮೆಯಾಗಿ ವಾರ್ಷಿಕ ವರಮಾನ ಕಡಿಮೆಯಾಗುವುದರ ಜೊತೆಗೆ ತಲಾ ವರಮಾನವು ಕಡಿಮೆಯಾಗುತ್ತದೆ. ಇದರಿಂದ ಒಟ್ಟಾರೆ ರಾಷ್ಟ್ರದ ಉತ್ಪನ್ನಕ್ಕೆ ಧಕ್ಕೆ ಉಂಟಾಗುತ್ತದೆ. ಅಂತಿಮವಾಗಿ ಗ್ರಾಮೀಣ ಜನರ ಜೀವನ ಅಸ್ತವ್ಯಸ್ತವಾಗಿ ಸಾಮಾಜಿಕ, ಆರ್ಥಿಕ ಹಾಗೂ ಧಾರ್ಮಿಕ ಜೀವನದಲ್ಲಿ ವೈಪರೀತ್ಯ ಉಂಟಾಗುತ್ತದೆ.

ಕೇಂದ್ರ ಮತ್ತು ರಾಜ್ಯ ಸರ್ಕಾರವು ಗ್ರಾಮೀಣ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ಕಾರ್ಯಾನುಷ್ಠಾನ ಕೈಗೊಂಡು ಕೋಟಿಗಟ್ಟಲೆ ಅನುದಾನ/ವೆಚ್ಚ ಭರಿಸಿದರೂ ಮತ್ತು ಬೇರೆ ದೇಶಗಳಿಂದ ಹಾಗೂ ವಿಶ್ವಬ್ಯಾಂಕಿನ ಸಹಾಯದೊಂದಿಗೆ ಎಷ್ಟೇ ಕಾರ್ಯಕ್ರಮಗಳನ್ನು ಹಮ್ಮಿಕೊಂಡರೂ ಸಹ ಗ್ರಾಮೀಣ ಅಭಿವೃದ್ಧಿಯ ಕನಸು ಪರಿಪೂರ್ಣವಾಗದೇ ಉಳಿಯಲು ಜನಸಂಖ್ಯಾ ಸ್ಫೋಟವು ಕಾರಣವಾಗಿರುತ್ತವೆ.

ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ತೊಡಗಿಸಿದ ಅನುದಾನ ಮತ್ತು ವೆಚ್ಚದ ವಿವರದ ಪಕ್ಷಿನೋಟದ ವಿವರ ಮತ್ತು ಜನಸಂಖ್ಯಾ ಬೆಳವಣಿಗೆಯಿಂದ ಉಂಟಾಗುವ ಪರಿಣಾಮಗಳನ್ನು ನೋಡಬಹುದಾಗಿದೆ.

ಕರ್ನಾಟಕವು ೨೭೬೮೩ ಜನವಸತಿ ಇರುವ ಕಂದಾಯ ಗ್ರಾಮಗಳನ್ನು ಒಳಗೊಂಡಂತೆ ಒಟ್ಟು ೫೬೬೮೨ ಗ್ರಾಮೀಣ ಜನ ವಸತಿ ಹೊಂದಿದೆ. ೨೦೦೧ರ ಜನಗಣತಿ ಪ್ರಕಾರ ಒಟ್ಟು ಜನಸಂಖ್ಯೆ ೫೨೯ ಲಕ್ಷ ಇದ್ದು ಅದರಲ್ಲಿ ಸುಮಾರು ೩೪೯ ಲಕ್ಷ ಜನರು ಗ್ರಾಮೀಣ ಪ್ರದೇಶದಲ್ಲಿ ವಾಸಮಾಡುತ್ತಿದ್ದಾರೆ. ಇವರಲ್ಲಿ  ಬಹಳಷ್ಟು ಜನರು ಕೃಷಿಯನ್ನೇ ಮೂಲ ಆಧಾರವನ್ನಾಗಿ ಇರಿಸಿಕೊಂಡು ಕೃಷಿಕರಾಗಿ ಜೀವನ ಸಾಗಿಸುತ್ತಿದ್ದಾರೆ.

ಕರ್ನಾಟಕ ರಾಜ್ಯವು ವಿಭಿನ್ನ ಲಕ್ಷಣಗಳನ್ನು ಹೊಂದಿದ್ದು ಅವುಗಳು ಈ ಕೆಳಕಂಡಂತೆ ಇವೆ.

೧. ಸಣ್ಣ ಜನವಸತಿಗಳು ಹೆಚ್ಚಿನ ಸಂಖ್ಯೆಯಲ್ಲಿ ಇರುವುದು.

೨. ಗ್ರಾಮೀಣ ಪ್ರದೇಶದ ಜನರು ಕೃಷಿ ಮತ್ತು ಅದಕ್ಕೆ ಸಂಬಂಧಿಸಿದ ಚಟುವಟಿಕೆಗಳನ್ನು ಅವಲಂಬಿಸಿರುತ್ತಾರೆ.

೩. ಪ್ರಸ್ತುತ ಜನಸಂಖ್ಯೆಗೆ ಹೋಲಿಸಿದರೆ ರಾಜ್ಯದ ದಿನಬಳಕೆ ವಸ್ತುಗಳ ಉತ್ಪಾದನೆಯಲ್ಲಿ ಗ್ರಾಮೀಣ ಪ್ರದೇಶದ ಜನರು ಕಡಿಮೆ ಇದ್ದಾರೆ.

೪. ಗ್ರಾಮೀಣ ಪ್ರದೇಶದ ಜನರ ತಲಾ ವರಮಾನವು ಕಡಿಮೆ ಇರುತ್ತದೆ.

೫. ಕುಡಿಯುವ ನೀರು, ವಸತಿ, ರಸ್ತೆ, ವಿದ್ಯುತ್ ಶಕ್ತಿ, ನೈರ್ಮಲ್ಯ ಇತ್ಯಾದಿ ಸೌಕರ್ಯವು ನಿರ್ದಿಷ್ಟ ಮಟ್ಟದಲ್ಲಿ ಇಲ್ಲದಿರುವುದು.

ಸಾಕ್ಷರತೆ, ಆರೋಗ್ಯ ಸೇವೆಗಳು ಹಾಗೂ ಸಹಜ ಕೌಶಲ್ಯಗಳತ್ತ ಮಾನವ ಸಂಪನ್ಮೂಲ ಅಭಿವೃದ್ಧಿ ಅಂಶಗಳಲ್ಲಿ ಗ್ರಾಮೀಣ ಪ್ರದೇಶವು ಅತೀ ಹಿಂದುಳಿದು ಪಟ್ಟಣಗಳಿಗೆ ಹೋಲಿಸಿದಾಗ ಅತೀ ಕಡಿಮೆ ಇರುತ್ತದೆ.

ರಾಜ್ಯದಲ್ಲಿನ ಗ್ರಾಮೀಣ ಪ್ರದೇಶದ ಅಭಿವೃದ್ಧಿಯು, ಗ್ರಾಮೀಣ ಪ್ರದೇಶಗಳ ಕೃಷಿ ಉತ್ಪಾದನೆ ಹಾಗೂ ಇತರೆ ಆರ್ಥಿಕ ಚಟುವಟಿಕೆಗಳ ಅಭಿವೃದ್ಧಿ, ಮೂಲಭೂತ ಸೌಕರ್ಯಗಳ ಲಭ್ಯತೆ, ಸುಧಾರಣೆ ಮತ್ತು ಸೇವೆಗಳ ಗುಣಮಟ್ಟಗಳ ಸುಧಾರಣೆಯನ್ನು ಅವಲಂಬಿಸಿದ್ದು ಮಾನವ ಸಂಪನ್ಮೂಲ ಹೆಚ್ಚಿಸುವಲ್ಲಿ ನೇರ ಕೊಡುಗೆಯಾಗಿರುತ್ತದೆ.

ಆದುದರಿಂದ ರಾಜ್ಯ ಮತ್ತು ರಾಷ್ಟ್ರದ ಗುಣಾತ್ಮಕ ಜನಸಂಖ್ಯೆಯು ಆ ರಾಜ್ಯದ, ರಾಷ್ಟ್ರದ ಅಭಿವೃದ್ಧಿಗೆ ಪೂರಕವಾಗಿರುತ್ತದೆ.

ಗ್ರಾಮೀಣ ಅಭಿವೃದ್ಧಿಯು ಮುಖ್ಯವಾಗಿ ಆ ಪ್ರದೇಶದ ಸಾಮಾನ್ಯ ಜನರ ದಿನ ನಿತ್ಯದ ಅಗತ್ಯತೆಗಳನ್ನು ಪೂರೈಸುವಂತಹ ಮತ್ತು ಕನಿಷ್ಠ ಸಾಮಾನ್ಯ ಸೌಲಭ್ಯವನ್ನು ಒದಗಿಸುವುದು ಹಾಗೂ ಉತ್ತಮ ಮೂಲಭೂತ ಸೌಕರ್ಯಗಳನ್ನು ಒದಗಿಸುವುದರೊಂದಿಗೆ, ಸರ್ವ ಜನರ ದೈನಂದಿನ ಜೀವನ ನಿರ್ವಹಣೆಗೆ ಬೇಕಾದಂತಹ ಆಹಾರ, ನೀರು, ಬಟ್ಟೆ ಮತ್ತು ವಸತಿಗಳನ್ನು ಪೂರೈಸುವ ದಿಸೆಯಲ್ಲಿ ಗ್ರಾಮೀಣ ಅಭಿವೃದ್ಧಿಯ ಕಲ್ಪನೆಯನ್ನು ಕಾಣಬಹುದಾಗಿರುತ್ತವೆ.

ಕರ್ನಾಟಕ ರಾಜ್ಯವು ದಿನೇ ದಿನೇ ಬೃಹದಾಕಾರವಾಗಿ ಬೆಳೆಯುತ್ತಿರುವ ಜನಸಂಖ್ಯೆಯ ಹಿನ್ನೆಲೆಯಲ್ಲಿ ವಾರ್ಷಿಕ ಹಾಗೂ ಮುಂಬರುವ ವರ್ಷಗಳಲ್ಲಿ ಹೆಚ್ಚಾಗಲಿರುವ ಜನಸಂಖ್ಯೆಯನ್ನು ಗಮನದಲ್ಲಿಟ್ಟುಕೊಂಡು ಪಂಚವಾರ್ಷಿಕ ಯೋಜನೆಗಳನ್ನು ಹಮ್ಮಿಕೊಂಡು ಆಶಾದಾಯಕ ಪ್ರತಿಫಲವನ್ನು ಪಡೆಯುವ ನಿಟ್ಟಿನಲ್ಲಿ ಹಲವಾರು ಗ್ರಾಮೀಣ ಅಭಿವೃದ್ಧಿ ಮತ್ತು ಇತರೆ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಲಾಗುತ್ತಿದೆ. ಅವುಗಳಲ್ಲಿ ಮುಖ್ಯವಾಗಿ

೧. ಗ್ರಾಮೀಣ ನೀರು ಸರಬರಾಜು.

೨. ಗ್ರಾಮೀಣ ರಸ್ತೆಗಳ ಅಭಿವೃದ್ಧಿ.

೩. ಗ್ರಾಮೀಣ ನೈರ್ಮಲ್ಯ.

೪. ನೀರಾವರಿ ಹಾಗೂ ಗ್ರಾಮೀಣ ಬಡತನ ನಿರ್ಮೂಲನೆಗಾಗಿ ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ, ಸ್ವರ್ಣ ಜಯಂತಿ ಸ್ವರೋಜ್‌ಗಾರ್ ಯೋಜನೆ, ಮತ್ತು ಜಲಾನಯನ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಗೂ ಕೃಷಿ ಉತ್ಪಾದನೆ ಹೆಚ್ಚಿಸುವ ಕಾರ್ಯಕ್ರಮಗಳನ್ನು ಕಾರ್ಯಾನುಷ್ಠಾನ ಮಾಡಲಾಗಿರುತ್ತದೆ.

ಬರಪೀಡಿತ ಪ್ರದೇಶ ಯೋಜನೆ, ಮರುಭೂಮಿ ಅಭಿವದ್ಧಿ ಯೋಜನೆ ಈ ಎರಡು ಯೋಜನೆಗಳನ್ನು ಸಮೀಕರಿಸಿ ಪ್ರಸ್ತುತ ವರ್ಷಗಳಿಂದ ಗ್ರಾಮ ಪಂಚಾಯತಿ ಮೂಲಕ ಕಾರ್ಯಗತಗೊಳಿಸಲಾಗುತ್ತಿದೆ.

ಕರ್ನಾಟಕ ರಾಜ್ಯವು ವರ್ಷವಾರು ಗ್ರಾಮೀಣ ಪ್ರದೇಶದ/ಜನರ ಅಭಿವೃದ್ಧಿಗೆ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಈ ಕೆಳಕಂಡಂತೆ ಅನುದಾನ ಮತ್ತು ವೆಚ್ಚವನ್ನು ಭರಿಸಲಾಗುತ್ತದೆ.

(ಲಕ್ಷಗಳಲ್ಲಿ)

| ವರ್ಷ | ಅನುದಾನ ಹಂಚಿಕೆ | ಅನುದಾನ ಲಭ್ಯತೆ | ವೆಚ್ಚ | ಶೇಕಡಾವಾರು ವೆಚ್ಚ ಅನುದಾನ ಹಂಚಿಕೆಗೆ | ಶೇಕಡಾವಾರು ವೆಚ್ಚ ಲಭ್ಯತೆಗೆ |
|---|---|---|---|---|---|
| ೧ | ೨ | ೩ | ೪ | ೫ | ೬ |
| ೧೯೯೬-೯೭ | ೮೯೨೫೭ | ೧೦೨೪೦೫ | ೮೧೨೧೦ | ೯೦ | ೭೯ |
| ೧೯೯೭-೯೮ | ೧೦೧೬೯೧ | ೧೦೩೩೩೦ | ೮೬೬೦೭ | ೮೫ | ೮೩ |
| ೧೯೯೮-೯೯ | ೯೭೬೬೯ | ೧೧೬೪೩೦ | ೮೫೯೬೯ | ೮೮ | ೭೩ |
| ೧೯೯೯-೨೦೦೦ | ೯೯೧೯೭ | ೧೧೦೨೩೦ | ೮೭೯೧೪ | ೮೮ | ೭೯ |
| ೨೦೦೦-೨೦೦೧ | ೯೭೬೫೧ | ೧೧೩೩೬೩ | ೯೧೮೬೬ | ೯೪ | ೮೧ |
| ೨೦೦೧-೨೦೦೨ | ೧೨೦೩೫೨ | ೧೩೫೬೩೨ | ೧೦೩೨೯೮ | ೮೫ | ೭೬ |
| ೨೦೦೨-೨೦೦೩ | ೧೦೬೩೭೬ | ೧೪೫೨೪೭ | ೧೧೫೪೯೨ | ೧೦೮ | ೭೯ |
| ೨೦೦೩-೨೦೦೪ | ೧೩೦೩೮೫ | ೧೬೦೪೦೧ | ೧೩೩೯೦೮ | ೧೦೨ | ೮೩ |

## ವರ್ಷಾವಾರು ಅನುದಾನ/ವೆಚ್ಚದ ವಿವರಗಳನ್ನು ಬಾರ್ ಗ್ರಾಫ್‌ನಲ್ಲಿ ತೋರಿಸಿದೆ

೧೯೯೬-೯೭ ಸಾಲಿನಿಂದ ೨೦೦೩-೨೦೦೪ನೇ ಸಾಲಿನ ವರೆಗೆ ಕರ್ನಾಟಕ ರಾಜ್ಯದ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಅಡಿಯ ಶೇಕಡಾವಾರು ವೆಚ್ಚ ಭರಿಸಿದ್ದು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿರುವ ಅಂಶವನ್ನು ಕಾಣಬಹುದಾಗಿದೆ. ಆದರೂ ಸಹ




ಜನಸಂಖ್ಯೆ ಬೆಳವಣಿಗೆಯ ಪ್ರಮಾಣಕ್ಕೆ ಹೋಲಿಸಿದಾಗ ಈ ವೆಚ್ಚವು ಪೂರ್ಣ ಪ್ರಮಾಣದ ಅಭಿವೃದ್ಧಿಯನ್ನು ನಿರೀಕ್ಷಿಸಲು ವಿಫಲವಾಗಿರುತ್ತದೆ. ಅರ್ಥಾತ್ ನಿರೀಕ್ಷಿಸಿರುವ ಫಲವನ್ನು ನಿಗದಿತ ಅವಧಿಯಲ್ಲಿ ಪಡೆಯಲು ಜನಸಂಖ್ಯೆ ಬೆಳವಣಿಗೆಯಿಂದ ಸಾಧ್ಯವಾಗುತ್ತಿಲ್ಲ.

ಗ್ರಾಮೀಣ ಅಭಿವೃದ್ಧಿ ಮತ್ತು ಇತರೆ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನದ ಜೊತೆಗೆ ಗ್ರಾಮೀಣ ಪ್ರದೇಶದ ಜನರ ವಿದ್ಯಾಭ್ಯಾಸ (ಸಾಕ್ಷರತೆ), ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಪಶುಪಾಲನೆ, ಕೃಷಿ, ತೋಟಗಾರಿಕೆ ಹಾಗೂ ರೇಷ್ಮೆ, ಸಣ್ಣ ಕೈಗಾರಿಕೆ ಮತ್ತು ಕೈಮಗ್ಗ ಇತ್ಯಾದಿ ಅಭಿವೃದ್ಧಿ ವಲಯಗಳಲ್ಲಿನ ವಿವಿಧ ಕಾರ್ಯಕ್ರಮಗಳ ಮೂಲಕ ಗ್ರಾಮೀಣ ಜನರ ಜೀವನ ಉತ್ತಮಪಡಿಸುವ ಹಾಗೂ ಅವರ ತಲಾ ವರಮಾನ ಹೆಚ್ಚಿಸುವ ಮೂಲಕ ಗ್ರಾಮೀಣ ಜನರ ವಾರ್ಷಿಕ ವರಮಾನವನ್ನು ಹೆಚ್ಚಿಸಲು ಅನೇಕ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಲಾಗುತ್ತಿದೆ. ಗ್ರಾಮೀಣ ಜನರ ಆರೋಗ್ಯವನ್ನು ಉತ್ತಮಪಡಿಸುವ ಮತ್ತು ಮಿತ ಸಂತಾನವನ್ನು ಪಡೆಯುವ ದಿಶೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಅನೇಕ ಕಾರ್ಯಕ್ರಮಗಳನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಜಾತಿ ಮತ್ತು ಜನಾಂಗದ ಅಭಿವೃದ್ಧಿಗೋಸ್ಕರವಾಗಿ ಕೇಂದ್ರ ಮತ್ತು ಕರ್ನಾಟಕ ಸರ್ಕಾರದಿಂದ ಹಲವಾರು ಕಾರ್ಯಕ್ರಮಗಳನ್ನು ಮತ್ತು ಮಹಿಳಾ ಮತ್ತು ಮಕ್ಕಳ ರಕ್ಷಣೆ ಮತ್ತು ಅಭಿವೃದ್ಧಿಗಾಗಿ ಹಾಗೂ ಸಾಮಾನ್ಯ ಜನರ ಮತ್ತು ಸಾರ್ವಜನಿಕರ ರಕ್ಷಣೆಗಾಗಿ ಆರಕ್ಷಕ ಇಲಾಖೆಯಿಂದ ರಕ್ಷಣಾ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಲಾಗುತ್ತಿದೆ. ಇದರಿಂದ ಗ್ರಾಮೀಣ ಪ್ರದೇಶದ ಜನತೆಯ ಸರ್ವತೋಮುಖ ಅಭಿವೃದ್ಧಿಗೋಸ್ಕರ ಕೇಂದ್ರ ಮತ್ತು ರಾಜ್ಯ ಸರಕಾರವು ಯೋಜನೆ ಮತ್ತು ಯೋಜನೇತರ ಕಾರ್ಯಕ್ರಮಗಳನ್ನು ವಾರ್ಷಿಕ ಮತ್ತು ಪಂಚವಾರ್ಷಿಕ ಯೋಜನೆಗಳ ಮೂಲಕ ಅನುಷ್ಠಾನ ಮಾಡಲು ಅಗತ್ಯ ಕ್ರಮಗಳನ್ನು ಕೈಗೊಳ್ಳುತ್ತಿದೆ.

ಅಭಿವೃದ್ಧಿ ಹೊಂದುತ್ತಿರುವ ನಮ್ಮ ರಾಷ್ಟ್ರ ಹಾಗೂ ರಾಜ್ಯದಲ್ಲಿ ಜನಸಂಖ್ಯಾ ಸ್ಫೋಟದಿಂದ ಈ ಕೆಳಕಂಡ ಸಮಸ್ಯೆಗಳು ಉದ್ಭವಿಸಲು ಹಾಗೂ ಜೀವಂತವಾಗಿ ಉಳಿಯಲು ಕಾರಣವಾಗುತ್ತವೆ. ಜನಸಂಖ್ಯೆ ಬೆಳೆದಂತೆ ಗ್ರಾಮೀಣ ಪ್ರದೇಶದಲ್ಲಿ ಭೂ ವಿಸ್ತೀರ್ಣ ಹೆಚ್ಚಾಗದಿರುವುದರಿಂದ ತುಂಡುಭೂಮಿಗಳ ಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದ್ದು ಇದರಲ್ಲಿ ವೈಜ್ಞಾನಿಕವಾಗಿ ಮತ್ತು ಆಧುನಿಕ ಪದ್ಧತಿಯಲ್ಲಿ ಕೃಷಿ ಮತ್ತು ತೋಟಗಾರಿಕೆ ಹಾಗೂ ಇತರ ಕೃಷಿಗೆ ಸಂಬಂಧಿಸಿದ ಕಾರ್ಯಗಳನ್ನು ನಿರ್ವಹಿಸಲು ಸಾಧ್ಯವಾಗದುದರಿಂದ ಕೃಷಿ, ತೋಟಗಾರಿಕೆ ಮುಂತಾದ ಕ್ಷೇತ್ರಗಳಲ್ಲಿ ಉತ್ಪಾದನೆ ಕಡಿಮೆಯಾಗಲು ಕಾರಣವಾಗುತ್ತದೆ.

ಗ್ರಾಮೀಣ ಪ್ರದೇಶದಲ್ಲಿ ಜನಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿರುವುದರಿಂದ ವಸತಿ ಸಮಸ್ಯೆ ಉಂಟಾಗುತ್ತದೆ. ಮುಂಬರುವ ವರ್ಷಗಳಲ್ಲಿ ರಾಜ್ಯದಲ್ಲಿರುವ ಎಲ್ಲಾ ಸರ್ಕಾರಿ ಜಮೀನನ್ನು/ಗೋಮಾಳವನ್ನು ಗ್ರಾಮೀಣ ಜನರ ವಸತಿ ಉದ್ದೇಶಕ್ಕೋಸ್ಕರ ನಿವೇಶನಗಳನ್ನಾಗಿ ಪರಿವರ್ತಿಸಿ ವಿತರಿಸಿದಲ್ಲಿ ಈ ಸಮಸ್ಯೆಯು ಸಂಪೂರ್ಣವಾಗಿ ಪರಿಹಾರವಾಗುತ್ತದೆ ಎಂದು ಹೇಳಲಾಗುತ್ತಿಲ್ಲ. ಅಲ್ಲದೆ ಈಗಾಗಲೇ ಗ್ರಾಮೀಣ ಪ್ರದೇಶದಲ್ಲಿನ ಜಮೀನುಗಳನ್ನು/ಗೋಮಾಳವನ್ನು ವಸತಿ ಉದ್ದೇಶಕ್ಕಾಗಿ ನೀಡಿರುವುದರಿಂದ ಆ ಪ್ರದೇಶದ ದನಕರುಗಳ ಸಾಕಾಣಿಕೆ ದುಸ್ತರವಾಗುತ್ತಿದೆ. ಮುಂದೊಂದು ದಿನ ದನಕರುಗಳ ಸಂಖ್ಯೆ ಕಡಿಮೆಯಾಗಿ ಅವುಗಳ ಬದಲಿಗೆ ಬರೀ ಜನರನ್ನೇ ನೋಡುವ ಸಮಯ ದೂರವಿಲ್ಲ.

ಅಂತರ್ ಜಲಮಟ್ಟ ದಿನೇ ದಿನೇ ಕುಸಿಯುತ್ತಿರುವುದರಿಂದ ಮತ್ತು ಅದಕ್ಕೆ ವ್ಯತಿರಿಕ್ತವಾಗಿ ಜನಸಂಖ್ಯೆ ಗ್ರಾಮೀಣ ಪ್ರದೇಶದಲ್ಲಿ ದಿನದಿಂದ ದಿನಕ್ಕೆ ಉಲ್ಬಣಿಸುತ್ತಿದೆ. ಕುಡಿಯುವ ನೀರಿನ ಸಮಸ್ಯೆಯು ಉಲ್ಬಣಿಸುತ್ತಿದೆ. ಕರ್ನಾಟಕ ರಾಜ್ಯವು ಕೇಂದ್ರ ಸರ್ಕಾರದ ಸಹಯೋಗದೊಂದಿಗೆ ೫೬೬೮೨ ಗ್ರಾಮೀಣ ಜನವಸತಿಗೆ ಸುರಕ್ಷಿತ ಕುಡಿಯುವ ನೀರು (Safe drinking water) ಒದಗಿಸಲು ಕುಡಿಯುವ ನೀರು ಸರಬರಾಜು ಯೋಜನೆ, ಕಿರುನೀರು ಸರಬರಾಜು ಯೋಜನೆ ಹಾಗೂ ಕೈ ಪಂಪು, ಕೊಳವೆಬಾವಿ ಯೋಜನೆ ಮೂಲಕ ಕುಡಿಯುವ ನೀರು ಸರಬರಾಜನ್ನು ಮಾಡಲಾಗುತ್ತಿದೆ. ಕೈಪಂಪು ಕೊಳವೆಬಾವಿ ಕಾರ್ಯಕ್ರಮದ ಅಡಿಯಲ್ಲಿ ೧೯೯೯-೨೦೦೦ನೇ ಸಾಲಿನಿಂದ ೨೦೦೩ನೇ ಸಾಲಿನವರೆಗೆ ೮೭.೫೭ ಕೋಟಿ ರೂ.ಗಳನ್ನು ವೆಚ್ಚ ಮಾಡಿದ್ದು, ೧೮೮೩೯ ಸಂಖ್ಯೆಯ ಕೈ ಪಂಪುಗಳನ್ನು ಅಳವಡಿಸಲಾಗುತ್ತದೆ. ಅದೇ ರೀತಿಯಲ್ಲಿ ಕಿರುನೀರು ಸರಬರಾಜು ಯೋಜನೆಯಡಿಯಲ್ಲಿ ೧೯೯೯-೨೦೦೦ರ ಸಾಲಿನಿಂದ ೨೦೦೩-೨೦೦೪ರ ಅಂತ್ಯದವರೆಗೆ ೧೭೦.೪೮ ಕೋಟಿರೂಗಳನ್ನು ವೆಚ್ಚ ಮಾಡಿ ೬೭೫೫ ಸಂಖ್ಯೆಯ ಕಿರುನೀರು ಸರಬರಾಜು ಯೋಜನೆಗಳ ಅಡಿಯಲ್ಲಿ ೨೬೨.೩೪ ಕೋಟಿ ರೂ.ಗಳನ್ನು ವೆಚ್ಚಮಾಡಿ ೩೭೮೮ ಸಂಖ್ಯೆಯ ಯೋಜನೆಗಳನ್ನು ಕಾರ್ಯಗತಗೊಳಿಸಲಾಗುತ್ತಿದೆ.

ಪ್ರಧಾನ ಮಂತ್ರಿ ಗ್ರಾಮೋದಯ ಗ್ರಾಮೀಣ ನೀರು ಸರಬರಾಜು ಯೋಜನೆಯನ್ನು ಕಾರ್ಯಗತಗೊಳಿಸಲಾಗುತ್ತಿದೆ. ಕೊಳವೆ ನೀರು ಸರಬರಾಜು ಯೋಜನೆಯಲ್ಲಿ ೪೮.೩೮ ಕೋಟಿ ರೂ.ಗಳನ್ನು ವೆಚ್ಚ ಮಾಡಿ ೪೨೪೨ ಸಂಖ್ಯೆಯ ನೀರು ಸರಬರಾಜು ಯೋಜನೆಯನ್ನು ಕಾರ್ಯಗತಗೊಳಿಸಲಾಗಿದೆ. ೩೧/೩/೨೦೦೪ರ ಅಂತ್ಯಕ್ಕೆ ರಾಜ್ಯದ ಗ್ರಾಮೀಣ ಜನವಸತಿಗಳಲ್ಲಿನ ನೀರು ಸರಬರಾಜು ಪ್ರಮಾಣ ಈ ಕೆಳಕಂಡಂತೆ ಇರುತ್ತದೆ.

| ನೀರು ಸರಬರಾಜಿನ ಪ್ರಮಾಣ | ಜನವಸತಿಗಳ ಸಂಖ್ಯೆ |
|---|---|
| ೦ ಎಲ್.ಪಿ.ಸಿ.ಡಿ. | ೦ |
| ೧-೧೦ ಎಲ್.ಪಿ.ಸಿ.ಡಿ. | ೫೩೬ |
| ೧೧-೪೦ ಎಲ್.ಪಿ.ಸಿ.ಡಿ. | ೭,೧೦೦ |
| ೪೧-೫೫ ಎಲ್.ಪಿ.ಸಿ.ಡಿ. | ೨೮,೩೪೦ |
| ೫೫ ಎಲ್.ಪಿ.ಸಿ.ಡಿ. ಮೇಲ್ಪಟ್ಟು | ೨೦,೭೦೬ |
| ಒಟ್ಟು | ೫೬,೬೮೨ |

ಕಳೆದ ಮೂರ್ನಾಲ್ಕು ವರ್ಷಗಳ ಬರಗಾಲದಿಂದ ಅಂತರ್ ಜಲಮಟ್ಟ ಕಡಿಮೆಯಾಗಿ ಉದ್ದೇಶಿತ ಯೋಜನೆಯನ್ನು ಆದ್ಯತೆ ಮೇಲೆ ಪೂರ್ಣಗೊಳಿಸಿದರೂ ಸಹ ಸುಮಾರು ೧೬,೦೦೮ ಜನ ವಸತಿಗಳಲ್ಲಿನ ನೀರು ಪೂರೈಕೆ ಪ್ರಮಾಣ ಇಳಿಮುಖವಾಗಿದೆ. ಆದಾಗ್ಯೂ ಅಂತರ್‌ಜಲ ಸಂರಕ್ಷಿಸುವ ಸಲುವಾಗಿ ಜಲಾನಯನ ಅಭಿವೃದ್ಧಿ ಕಾರ್ಯಕ್ರಮಗಳನ್ನು ಮತ್ತು ಮಳೆನೀರು ಸಂಗ್ರಹ ಕಾರ್ಯಕ್ರಮಗಳನ್ನು ಅನುಷ್ಠಾನ ಮಾಡಿರುವುದರಿಂದ ಸುಮಾರು ೬೦೦೨ ಗ್ರಾಮಗಳಲ್ಲಿ ನೀರಿನ ಪೂರೈಕೆ ಸುಧಾರಣೆಯಾಗಿರುತ್ತದೆ. ಆದರೆ ಮೇಲ್ಕಂಡ ಕಾರ್ಯಕ್ರಮಗಳ ಅಡಿಯಲ್ಲಿ ಕುಡಿಯುವ ನೀರು ಸರಬರಾಜು ಕೈಗೊಂಡರೂ ಸಹ ಮತ್ತು ಕಳೆದ ಮೂರು ವರ್ಷಗಳಿಂದ ರಾಜ್ಯದಲ್ಲಿನ ಬರಗಾಲದಿಂದ ಮತ್ತು ಗ್ರಾಮೀಣ ಪ್ರದೇಶ ಜನಸಂಖ್ಯೆಯ ಬೆಳವಣಿಗೆಯಿಂದ ಈ ಸಮಸ್ಯೆಯನ್ನು ಪೂರ್ಣವಾಗಿ ಪರಿಹರಿಸಲು ಸಾಧ್ಯವಾಗುತ್ತಿಲ್ಲ. ಬರಗಾಲ ಬಂದರೂ ಸಹ ಜನಸಂಖ್ಯೆ ಬೆಳವಣಿಗೆ ಸ್ಥಿರವಾಗಿರದೆ ಬೆಳೆಯುತ್ತಿರುವುದನ್ನು ನಾವೂ ನೀವೂ ಎಲ್ಲರೂ ಕಾಣುತ್ತಿದ್ದೇವೆ.

## ೧. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು :

ಜನಸಂಖ್ಯೆ ವರ್ಷದಿಂದ ವರ್ಷಕ್ಕೆ ದ್ವಿಗುಣಗೊಳ್ಳುತ್ತಿರುವುದರಿಂದ ಹಾಲಿ ಇರುವ ವೈದ್ಯಕೀಯ ಸಿಬ್ಬಂದಿ ಹಾಗೂ ಸಂಸ್ಥೆಗಳ ಮೂಲಕ ಗ್ರಾಮೀಣ ಜನತೆಗೆ ಉತ್ತಮ ಸೇವೆಯನ್ನು ಒದಗಿಸಲು ಕಷ್ಟವಾಗುತ್ತದೆ. ಕರ್ನಾಟಕದಲ್ಲಿ ೨೫೩ ಸಮುದಾಯ ಆರೋಗ್ಯ ಕೇಂದ್ರಗಳು, ೧೬೭೮ ಪ್ರಾಥಮಿಕ ಆರೋಗ್ಯ ಕೇಂದ್ರಗಳು, ೫೮೨ ಪ್ರಾಥಮಿಕ ಆರೋಗ್ಯ ಘಟಕಗಳು ಹಾಗೂ ೮೧೪೩ ಆರೋಗ್ಯ ಉಪ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದು, ಸರಾಸರಿ ಪ್ರತಿ ಆರೋಗ್ಯ ಉಪ ಕೇಂದ್ರಕ್ಕೆ ೪೨೭೫ ಗ್ರಾಮೀಣ ಜನಸಂಖ್ಯೆ ಹಾಗೂ ಪ್ರತಿ ಆರೋಗ್ಯ ಕೇಂದ್ರಕ್ಕೆ ೨೦೭೬೦ ಗ್ರಾಮೀಣ ಜನಸಂಖ್ಯೆ ಒಳಪಡುತ್ತದೆ. ಜನಸಂಖ್ಯೆ ಹೆಚ್ಚಿದಂತೆಲ್ಲಾ ಈ ಪ್ರಮಾಣ ಹೆಚ್ಚಾಗುತ್ತಿದ್ದು ಉತ್ತಮ ಸೇವೆಯನ್ನು ನೀಡಲು ಅಸಾಧ್ಯವಾಗುತ್ತದೆ ಹಾಗೂ ಇದಕ್ಕೆ ಮುಂದೊಂದು ದಿನ ದುಬಾರಿ ವೆಚ್ಚವನ್ನು ಭರಿಸಬೇಕಾಗುತ್ತದೆ.

## ೨. ಶಿಕ್ಷಣ ಸೌಲಭ್ಯ :

ಜನಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಿದಂತೆಲ್ಲಾ ಪೂರ್ಣ ಪ್ರಮಾಣದಲ್ಲಿ ಗ್ರಾಮೀಣ ಜನತೆಗೆ ಶಿಕ್ಷಣವನ್ನು ಒದಗಿಸಲು ಕಷ್ಟವಾಗುವುದರ ಜೊತೆಗೆ ಹೆಚ್ಚು ಹೆಚ್ಚು ವೆಚ್ಚವನ್ನು ಭರಿಸಬೇಕಾದ ಸಂದರ್ಭ ಬರುತ್ತದೆ. ಹೊಸ ಹೊಸ ಶಾಲೆಗಳನ್ನು ತೆರೆಯುವುದರಿಂದ ಶಿಕ್ಷಣ ವಲಯದಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಹಾಗೂ ಶಿಕ್ಷಕರ ನೇಮಕಾತಿ ಇತ್ಯಾದಿಗಳು ಗಣನೀಯವಾಗಿ ಹೆಚ್ಚುವುದರಿಂದ ರಾಜ್ಯ ಸರ್ಕಾರದ ಆಯ-ವ್ಯಯದ ಮೇಲೆ ಹೆಚ್ಚಿನ ಹೊರೆ ಬೀಳುವುದರ ಜೊತೆಗೆ ಶೈಕ್ಷಣಿಕ ಕ್ಷೇತ್ರವನ್ನು ನಿರೀಕ್ಷಿತ ಮಟ್ಟದಲ್ಲಿ ಸುಧಾರಿಸಲು ಹೆಚ್ಚಿನ ಪ್ರಯಾಸ ಪಡಬೇಕಾಗುತ್ತದೆ.

## ೩. ಗ್ರಾಮೀಣ ರಸ್ತೆ ಅಭಿವೃದ್ಧಿ :

ರಾಜ್ಯದ ಗ್ರಾಮೀಣ ಪ್ರದೇಶದಲ್ಲಿ ಶೇ ೬೬.೧೨ ರಷ್ಟು ಜನಸಂಖ್ಯೆ ವಾಸಿಸುತ್ತಿದ್ದು, ದಿನೇ ದಿನೇ ಬೆಳೆಯುತ್ತಿರುವ ಜನಸಂಖ್ಯೆ ಹಾಗೂ ಅದಕ್ಕೆ ಅನುಗುಣವಾಗಿ ವಾಹನಗಳ ಸಂಖ್ಯೆ ಹೆಚ್ಚಾಗುತ್ತಿದೆ. ಗ್ರಾಮೀಣ ಪ್ರದೇಶದಲ್ಲಿ ಹೊಸ ರಸ್ತೆಗಳ ನಿರ್ವಹಣೆಯು ಅತ್ಯಂತ ಕಷ್ಟದಾಯಕವಾಗಿರುತ್ತದೆ. ರಾಜ್ಯದಲ್ಲಿ ಗ್ರಾಮೀಣ ರಸ್ತೆಯ ಉದ್ದವು ೯೪೦೩೪ ಕಿ.ಮೀ. ಗಳಾಗಿದ್ದು, ಇದರಲ್ಲಿ ೧೩೫೧೧ ಕಿ.ಮೀ. ಡಾಂಬರೀಕರಣವಾಗಿದೆ. ೩೮೮೭೨ ಕಿ.ಮೀ. ಜಲ್ಲಿ ರಸ್ತೆಯಾಗಿದ್ದು, ಸರ್ವಋತು ರಸ್ತೆಯಾಗಿರುತ್ತದೆ. ಜಋಸಂಖ್ಯೆ ಹೆಚ್ಚಿದಂತೆಲ್ಲಾ ಈ ರಸ್ತೆಗಳ ವಾರ್ಷಿಕ ನಿರ್ವಹಣೆಗೆ ಕೋಟಿಗಟ್ಟಲೆ ಹಣ ನೀಡಿದರೂ ಸಹ ಕಡಿಮೆಯಾಗಿರುತ್ತದೆ. ಇಂದಿನ ಗ್ರಾಮೀಣ ರಸ್ತೆಗಳ ಪರಿಸ್ಥಿತಿ ಶೋಚನೀಯವಾಗಿದೆ. ಇದಕ್ಕೆ ಜನಸಂಖ್ಯಾ ಸ್ಫೋಟವೇ ಮೂಲ ಕಾರಣವಾಗಿರುತ್ತದೆ.

## ಬಡತನ ಮತ್ತು ನಿರುದ್ಯೋಗ :

ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಗ್ರಾಮೀಣ ಪ್ರದೇಶದ ಜನರ ನಿರುದ್ಯೋಗ ನಿವಾರಣೆಗಾಗಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ಆದರೂ ಸಹ ಗ್ರಾಮೀಣ ಜನರ ಶೇಕಡಾವಾರು ಉದ್ಯೋಗ ಸೃಷ್ಟಿಯನ್ನು ಹೆಚ್ಚಿಸಲು ಸಾಧ್ಯವಾಗುತ್ತಿಲ್ಲ. ಅರೆ ನಿರುದ್ಯೋಗ ತಾಂಡವವಾಡುತ್ತಿದ್ದು ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆ ಹಾಗೂ ಸ್ವರ್ಣ ಜಯಂತಿ ಗ್ರಾಮ ಸ್ವರಾಜ್‌ಗಾರ್ ಯೋಜನೆ ಮತ್ತು ಜಲಾನಯನ ಅಭಿವೃದ್ಧಿ ಕಾರ್ಯಕ್ರಮಗಳು ಇತ್ಯಾದಿ ಹಲವಾರು ಕಾರ್ಯಕ್ರಮಗಳನ್ನು ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಅನುಷ್ಠಾನಗೊಳಿಸಿದ್ದರೂ ಸಹ ಗ್ರಾಮೀಣ ಪ್ರದೇಶದಲ್ಲಿನ ಬೆಳೆಯುತ್ತಿರುವ ಕೈಗಳಿಗೆ ಪೂರ್ಣ ಪ್ರಮಾಣದ ಉದ್ಯೋಗಗಳನ್ನು ಕೊಡಲು ಸಾಧ್ಯವಾಗುತ್ತಿಲ್ಲ ಮತ್ತು ಗ್ರಾಮೀಣ ಸಾಮಾನ್ಯ ಜನರ ಬದುಕು ಉತ್ತಮವಾಗಲು ಸಾಧ್ಯವಾಗುತ್ತಿಲ್ಲ. ಇದರಿಂದ ಗ್ರಾಮೀಣ ಜನರ ವೈಯಕ್ತಿಕ ವರಮಾನಕ್ಕೂ ಪಟ್ಟಣ ಪ್ರದೇಶದ ಜನರ ವೈಯಕ್ತಿಕ ವರಮಾನಕ್ಕೂ ಅಗಾಧ ವ್ಯತ್ಯಾಸ ಉಂಟಾಗಿ ಗ್ರಾಮೀಣ ಹಾಗೂ ಪಟ್ಟಣ ಜನರ ಜೀವನ ಮಟ್ಟದಲ್ಲಿ ವ್ಯತ್ಯಾಸಗಳಿಗೆ ಕಾರಣವಾಗಿ ಒಟ್ಟಾರೆ ಆರ್ಥಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಅಸಮತೋಲನೆ ಉಂಟಾಗಿ ರಾಜ್ಯದ ಹಾಗೂ ದೇಶದ ಒಟ್ಟಾರೆ ಅಭಿವೃದ್ಧಿಗೆ ಧಕ್ಕೆ ಉಂಟಾಗುತ್ತದೆ.

## ಸರ್ಕಾರದ ಕ್ರಮಗಳು :

ಈ ಬೃಹತ್ ಸಮಸ್ಯೆಯನ್ನು ಎದುರಿಸಿ ಪರಿಹಾರವನ್ನು ಕಂಡುಕೊಳ್ಳುವುದು ಕೇಂದ್ರ ಮತ್ತು ರಾಜ್ಯ ಸರ್ಕಾರದ ಪ್ರತಿಯೊಬ್ಬ ಪ್ರಜೆಯ ಆದ್ಯಕರ್ತವ್ಯವಾಗಿದೆ.

ಈ ದಿಸೆಯಲ್ಲಿ ೧೯೩೦ರ ದಶಕದಲ್ಲಿ ಮೈಸೂರು ಮಹಾರಾಜರು ಜನಸಂಖ್ಯಾ ನಿಯಂತ್ರಣದ ಬಗ್ಗೆ ಮುನ್ನೆಚ್ಚರಿಕೆ ವಹಿಸಿ ಬೆಂಗಳೂರಿನ ವಾಣಿವಿಲಾಸ್ ಮತ್ತು ಮೈಸೂರಿನ ಚೆಲುವಾಂಬ ಆಸ್ಪತ್ರೆಗಳಲ್ಲಿ ಒಂದೊಂದು ಜನನ ನಿಯಂತ್ರಣ ಚಿಕಿತ್ಸಾಲಯವನ್ನು ಪ್ರಾರಂಭಿಸಿದ್ದರು. ಪರಿಣಾಮವಾಗಿ ಕುಟುಂಬ ಕಲ್ಯಾಣ ಚರಿತ್ರೆಯಲ್ಲಿ ರಾಜ್ಯವು ಮೈಲುಗಲ್ಲನ್ನೇ ಸ್ಥಾಪಿಸಿದಂತಾಗಿದೆ. ೧೯೫೨ರಲ್ಲಿ ಭಾರತ ಸರ್ಕಾರವು ಪ್ರಪಂಚದಲ್ಲೇ ಮೊದಲನೆಯದಾಗಿ ಕುಟುಂಬ ಯೋಜನಾ ಕಾರ್ಯಕ್ರಮವನ್ನು ರಾಷ್ಟ್ರೀಯ ಯೋಜನೆಯನ್ನಾಗಿ ಹಮ್ಮಿಕೊಂಡಿತ್ತು. ಇದರ ಪರಿಣಾಮವಾಗಿ ಜನನ ನಿಯಂತ್ರಣ ಕೇಂದ್ರಗಳ ಸ್ಥಾಪನೆಯ ಜೊತೆಗೆ ವಿಸ್ತರಣಾ ಕಾರ್ಯಕ್ರಮವನ್ನು ಹಮ್ಮಿಕೊಂಡು ಅರ್ಹ ದಂಪತಿಗಳನ್ನು ಗುರುತಿಸಿ ಕುಟುಂಬ ಯೋಜನೆಯನ್ನು ಅನುಸರಿಸಲು ಮನವೊಲಿಸುವ ಕಾರ್ಯಕ್ರಮವನ್ನು ಜಾರಿಗೆ ತರಲಾಯಿತು.

ರಾಷ್ಟ್ರದಲ್ಲಿ ಪ್ರಥಮ ಬಾರಿಗೆ ೧೬-೦೪-೧೯೭೬ರಂದು ರಾಷ್ಟ್ರೀಯ ಜನಸಂಖ್ಯಾ ನೀತಿಯನ್ನು ಸಂಸತ್ತಿನಲ್ಲಿ ಮಂಡಿಸಲಾಯಿತು. ಇದಕ್ಕೆ ಪೂರಕವಾಗಿ ದಿನಾಂಕ ೨೮-೦೩-೧೯೭೭ರಲ್ಲಿ ರಾಷ್ಟ್ರೀಯ ಆರೋಗ್ಯ ನೀತಿಯನ್ನು ಮಂಡಿಸಲಾಗಿತ್ತು. ಇವೆಲ್ಲದರ ಪರಿಣಾಮವಾಗಿ ೨೦೦೦ದ ಸಾಲಿನಲ್ಲಿ ರಾಷ್ಟ್ರೀಯ ಜನಸಂಖ್ಯಾ ನೀತಿಯನ್ನು ಅಂತಿಮಗೊಳಿಸಿ ಭಾರತ ಸರ್ಕಾರ ಅನುಷ್ಠಾನಕ್ಕೆ ತಂದಿತು ಹಾಗೂ ಎಲ್ಲಾ ರಾಜ್ಯಗಳು ರಾಷ್ಟ್ರೀಯ ಜನಸಂಖ್ಯಾ ನೀತಿಗೆ ಪೂರಕವಾಗಿ ರಾಜ್ಯ ಜನಸಂಖ್ಯಾ ನೀತಿಯನ್ನು ರೂಪಿಸಿಕೊಂಡು ಕಾರ್ಯನುಷ್ಠಾನಕ್ಕೆ ತರಲು, ಈ ದಿಶೆಯಲ್ಲಿ ರಾಜ್ಯದ ಜನಸಂಖ್ಯೆಯನ್ನು ನಿಯಂತ್ರಿಸಲು ನಿರ್ದೇಶನ ನೀಡಲಾಯಿತು.

ರಾಷ್ಟ್ರೀಯ ಜನಸಂಖ್ಯಾ ನೀತಿಯ ಹಾಗೂ ರಾಷ್ಟ್ರೀಯ ಆರೋಗ್ಯ ನೀತಿಯ ಗುರಿ ಮತ್ತು ಉದ್ದೇಶಗಳು ಈ ಕೆಳಕಂಡಂತಿವೆ.

೧. ಶಿಶುಮರಣ ದರವನ್ನು (I.M.R.) ಪ್ರತಿ ೧೦೦೦ ಜನನಕ್ಕೆ ೩೦ಕ್ಕಿಂತ ಕಡಿಮೆ ಮಾಡುವುದು.

೨. ತಾಯಂದಿರ ಮರಣವನ್ನು ಪ್ರತಿ ಲಕ್ಷ ಜನನಗಳಿಗೆ ೧೦೦ಕ್ಕಿಂತ ಕಡಿಮೆಮಾಡುವುದು.

೩. ಸಣ್ಣ ಕುಟುಂಬ ತತ್ವವನ್ನು ಹೆಚ್ಚಿನ ರೀತಿಯಲ್ಲಿ ಉತ್ತೇಜಿಸುವುದು.

೪. ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯದ ಕನಿಷ್ಟ ಆರೋಗ್ಯ ಸೇವೆಗಳನ್ನು ಗುರುತಿಸುವುದು, ಮೂಲಭೂತ ಸೌಕರ್ಯಗಳನ್ನು ಒದಗಿಸಿ ತಾಯಿ ಮತ್ತು ಮಕ್ಕಳ ಆರೋಗ್ಯವನ್ನು ಕಾಪಾಡುವುದು.

೧೯೬೧-೧೯೭೧ರ ಅವಧಿಯಲ್ಲಿ 'ಒಂದು-ಎರಡು ಬೇಕು, ಮೂರು ಸಾಕು' ಎಂಬ ಘೋಷಣೆಯನ್ನು ೧೯೮೦ರ ನಂತರ "ಆರತಿಗೊಂದು ಕೀರ್ತಿಗೊಂದು", "ನಾವಿಬ್ಬರು ನಮಗಿಬ್ಬರೇ" ಎಂಬ ಘೋಷಣೆಯನ್ನು ಹಾಗೂ ಪ್ರಸ್ತುತ 'ಹೆಣ್ಣಿರಲಿ ಗಂಡಿರಲಿ ಒಂದೇ ಮಗು ಸಾಕು' ಎಂಬ ಘೋಷಣೆಯನ್ನು, ೨೦೦೪ನೇ ಜನಸಂಖ್ಯಾ ವರ್ಷದಲ್ಲಿ 'ಮಗು ಹೆಣ್ಣಾಗಲಿ ಗಂಡಾಗಲೀ ಚಿಕ್ಕ ಕುಟುಂಬವೇ ಸುಖೀ ಕುಟುಂಬ' ಎಂಬ ಘೋಷಣೆಯೊಂದಿಗೆ ವಿಶ್ವ ಜನಸಂಖ್ಯಾ ದಿನಾಚರಣೆಯನ್ನು ದೇಶಾದ್ಯಂತ ಆಚರಿಸಿ ಸಾಮಾನ್ಯ ಜನರಲ್ಲಿ ಮಿತ ಸಂತಾನ ಹಾಗೂ ಚಿಕ್ಕ ಕುಟುಂಬದ ಅರಿವನ್ನು 'ಜನಸಂಖ್ಯಾ ಓಟ' ಕಾರ್ಯಕ್ರಮದ ಮೂಲಕ ಮೂಡಿಸಲಾಯಿತು.

ರಾಷ್ಟ್ರದಲ್ಲಿ ಜನಸಂಖ್ಯಾ ಆಸ್ಫೋಟನೆ ಹಾಗೂ ಅದರ ನಿಯಂತ್ರಣ ಕ್ರಮಗಳ ಬಗ್ಗೆ ಅರಿವು ಮೂಡಿಸುವ ಉದ್ದೇಶದಿಂದ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಇಲಾಖೆಗಳ ಸಹಕಾರ ಸಮನ್ವಯ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಸಹಕಾರದ ಮೂಲಕ ಈ ಕೆಳಕಂಡ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

೧. ಜನ ಪ್ರತಿನಿಧಿಗಳಿಗೆ ಮಿತ ಸಂತಾನದ ಅರಿವು ಮೂಡಿಸುವ ಬಗ್ಗೆ ಕಾರ್ಯಾಗಾರವನ್ನು ಹಮ್ಮಿಕೊಳ್ಳುವುದು.

೨. ಗ್ರಾಮೀಣ ಪ್ರದೇಶದಲ್ಲಿ ಸ್ತ್ರೀ ಶಕ್ತಿ/ಮಹಿಳಾ ಸಂಘಗಳ ಮೂಲಕ ಅರಿವು ಮೂಡಿಸುವುದು.

೩. ಕಾರ್ಮಿಕ ಮುಖಂಡರಿಗೆ, ಸ್ವಯಂ ಸೇವಾ/ ಸಹಕಾರಿ ಸಂಘ ಸಂಸ್ಥೆಗಳಿಗೆ ಹಾಗೂ ಶಾಲಾ ಕಾಲೇಜುಗಳಲ್ಲಿ ಅರಿವು ಮೂಡಿಸುವುದು.

ಉತ್ತೇಜನ ಕಾರ್ಯಕ್ರಮದಡಿಯಲ್ಲಿ ಸರ್ಕಾರವು ಅನೇಕ ರಚನಾತ್ಮಕ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಾರ್ಯಕ್ರಮವನ್ನು ಹಮ್ಮಿಕೊಂಡಿದೆ (೪ ಫೋಲ್ಡರ್ ಪ್ರೋಗ್ರಾಂ).

**೧ನೇ ಮಡಿಕೆ**

೧. ಕಡಿಮೆ ಮಕ್ಕಳನ್ನು ಪಡೆಯುವುದು.

೨. ಎಲ್ಲಾ ಮಕ್ಕಳ ಲಾಲನೆ ಪಾಲನೆ ಮಾಡುವುದು ಹಾಗೂ ಪೌಷ್ಟಿಕ ಆಹಾರ ಒದಗಿಸುವುದು.

೩. ಬಂಜೆತನ ನಿವಾರಣೆಗೆ ವಿಶೇಷ ವೈದ್ಯಕೀಯ ಸೇವಾ ಸೌಲಭ್ಯವನ್ನು ಒದಗಿಸುವುದು.

**೨ನೇ ಮಡಿಕೆ**

೧. ಆರು ಮಾರಕ ರೋಗಗಳಾದ ನಾಯಿಕೆಮ್ಮು, ಗಂಟಲುಮಾರಿ, ಧನುರ್ವಾಯು, ಬಾಲಕ್ಷಯ, ಪೋಲಿಯೋ ಮತ್ತು ದಡಾರ ಇವುಗಳಿಗೆ ಪ್ರತಿಬಂಧಕ ಹಾಗೂ ಲಸಿಕೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು.

೨. ಗರ್ಭಿಣಿ, ಬಾಣಂತಿಯರು ಹಾಗೂ ಮಕ್ಕಳಿಗೆ ಕಬ್ಬಿಣ ಅಂಶಗಳ ಮಾತ್ರೆಗಳನ್ನು ಒದಗಿಸಿ ರಕ್ತಹೀನತೆ ಕಡಿಮೆ ಮಾಡುವುದು.

**೩ನೇ ಮಡಿಕೆ**

೧. ಸಾಮಾನ್ಯ ಹಾಗೂ ಸಾಂಕ್ರಾಮಿಕ ರೋಗಗಳಿಗೆ ಪ್ರತಿಬಂಧಕ ಮತ್ತು ಲಸಿಕೆ ಹಾಕುವುದು.
ಉದಾಹರಣೆ: ವಾಂತಿ/ಭೇದಿ, ಪ್ಲೇಗು ಇತ್ಯಾದಿ.

**೪ನೇ ಮಡಿಕೆ**

೧. ಗ್ರಾಮೀಣ ಬಡವರಿಗೆ ಹಾಗೂ ಕೊಳಚೆ ವಾಸಿಗಳಿಗೆ ವೈದ್ಯಕೀಯ ಸೇವಾ ಸೌಲಭ್ಯವನ್ನು, ಆರೋಗ್ಯ ಉಪ ಕೇಂದ್ರಗಳನ್ನು, ಪ್ರಾಥಮಿಕ ಆರೋಗ್ಯ ಘಟಕಗಳು, ಸಮುದಾಯ ಆರೋಗ್ಯ ಕೇಂದ್ರಗಳು ಮತ್ತು ಜಿಲ್ಲಾ ಹಾಗೂ ರಾಜ್ಯಮಟ್ಟದ ಬೃಹತ್ ಆಸ್ಪತ್ರೆಗಳ ಮೂಲಕ ರೋಗಗಳನ್ನು ನೂತನ ತಂತ್ರಜ್ಞಾನದಿಂದ ಪತ್ತೆಹಚ್ಚಿ ಪರಿಹಾರ ನೀಡುವುದು ಹಾಗೂ ಉಚಿತ ಔಷಧೋಪಚಾರಗಳನ್ನು ನೀಡುವುದು.

ಈ ಮೇಲ್ಕಂಡ ನಾಲ್ಕು ಮಡಿಕೆಗಳ ಕಾರ್ಯಕ್ರಮಗಳ ಜೊತೆ ಸಂತಾನೋತ್ಪತ್ತಿ ಹಾಗೂ ಮಗುವಿನ ಆರೋಗ್ಯ (ಆರ್‌ಸಿಎಚ್) ಕಾರ್ಯಕ್ರಮವನ್ನು ರಾಜ್ಯದ ೭ ಜಿಲ್ಲೆಗಳಲ್ಲಿ ಅದರಲ್ಲೂ ಬಳ್ಳಾರಿ ಜಿಲ್ಲೆಯಲ್ಲಿ ವಿಶೇಷ ಉಪ ಯೋಜನೆಯನ್ನು ಅನುಷ್ಠಾನ ಮಾಡಿ ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ ಹಾಗೂ ಮಾರಕ ರೋಗಗಳಿಗೆ ಲಸಿಕೆ ಕಾರ್ಯಕ್ರಮವನ್ನು, ಜೊತೆಗೆ ಮದುವೆಯ ವಯಸ್ಸನ್ನು ಕಾಯಿದೆ ಮೂಲಕ ನಿಗದಿಪಡಿಸಿದೆ. ಮದುವೆ ವಯಸ್ಸನ್ನು ಮುಂದೂಡುವುದು, ಕುಟುಂಬ ಯೋಜನೆಯ ತಾತ್ಕಾಲಿಕ ವಿಧಾನವಾದ ನುಂಗುವ ಗುಳಿಗೆ (ಒರಲ್ ಪಿಲ್) ಕಾಪರ್-ಟಿ ಮತ್ತು ನಿರೋಧ್ ಉಪಯೋಗಿಸುವುದು ಮತ್ತು ಶಾಶ್ವತ ವಿಧಾನಗಳಾದ ವೆಸಕ್ಟಮಿ ಮತ್ತು ಟೂಬೆಕ್ಟಮಿ ಸಂತಾನ ಹರಣ ಶಸ್ತ್ರ ಚಿಕಿತ್ಸೆಯನ್ನು ಕೈಗೊಳ್ಳುವುದು.

**ಫಲಿತಾಂಶ ಸೂಚ್ಯಂಕಗಳು :**

ರಾಜ್ಯದಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮವನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುದುದರ ಪರಿಣಾಮವಾಗಿ ಇಲ್ಲಿಯವರೆಗೆ ಸುಮಾರು ೨.೨೭ ಕೋಟಿಗಿಂತ ಹೆಚ್ಚು ಜನನಗಳನ್ನು ತಡೆಗಟ್ಟಿದಂತಾಗಿದೆ ಮತ್ತು ಇತರೆ ಸಾಧನೆಗಳನ್ನು ಈ ಕೆಳಗೆ ಪಟ್ಟಿ ಮಾಡಲಾಗಿದೆ.

೧. ಸ್ಥೂಲ ಜನನ ಪ್ರಮಾಣ ೧೯೬೧ರಲ್ಲಿ ೪೧.೬ ಇದ್ದದ್ದು ೨೦೦೨ರಲ್ಲಿ ೨೨.೦ಕ್ಕೆ ಇಳಿದಿದೆ.

೨. ಸ್ಥೂಲ ಮರಣ ಪ್ರಮಾಣ ೧೯೬೧ರಲ್ಲಿ ೨೨.೨ ಇದ್ದದ್ದು ೨೦೦೨ರಲ್ಲಿ ೭.೨ ಕ್ಕೆ ಇಳಿದಿದೆ.

೩. ಶಿಶು ಮರಣ ಪ್ರಮಾಣ ೧೯೭೧ರ್ಲಲಿ ೯೫ ಇದ್ದದ್ದು ೨೦೦೨ರಲ್ಲಿ ೫೫ಕ್ಕೆ ಇಳಿದಿದೆ.

೪. ಸಾಮಾನ್ಯ ಫಲವತ್ತತೆಯ ಪ್ರಮಾಣವು ೧೯೭೨ರಲ್ಲಿ ಗ್ರಾಮೀಣ ಪ್ರದೇಶದಲ್ಲಿ ೧೫೪.೯ ಮತ್ತು ಪಟ್ಟಣ ಪ್ರದೇಶದಲ್ಲಿ ೧೨೪.೯ ಇದ್ದದ್ದು ೧೯೯೬ರಲ್ಲಿ ಇದು ಕ್ರಮವಾಗಿ ೯೪.೮ ಮತ್ತು ೭೨.೭ ಕ್ಕೆ ಇಳಿದಿದೆ.

೫. ದಶಕದ ಬೆಳವಣಿಗೆ ದರವನ್ನು ೨೧.೧೨ರಿಂದ (೧೯೯೧ ಜನಗಣತಿ) ೧೭.೨೫ ಕ್ಕೆ (೨೦೦೧ನೇ ಜನಗಣತಿ) ಇಳಿಸಲಾಗಿದೆ.

ಈ ಮೇಲ್ಕಂಡ ಎಲ್ಲಾ ಕ್ರಮಗಳ ಮೂಲಕ ಕೇಂದ್ರ ಸರ್ಕಾರವು ಜನಸಂಖ್ಯೆ ನೀತಿಯನ್ನು ಅನುಷ್ಠಾನಕ್ಕೆ ತಂದು ಮದುವೆಯ ವಯಸ್ಸನ್ನು ನಿಗದಿಪಡಿಸಿರುವುದರ ಜೊತೆಗೆ, ಅರ್ಹ ದಂಪತಿಗಳಿಗೆ ಕುಟುಂಬ ಕಲ್ಯಾಣ ಶಸ್ತ್ರ ಚಿಕಿತ್ಸೆಯನ್ನು ಕಡ್ಡಾಯವಾಗಿ ಅನುಷ್ಠಾನಕ್ಕೆ ತರುವುದರಿಂದ ಮತ್ತು ರಾಷ್ಟ್ರೀಯ ಜನಸಂಖ್ಯಾ ನೀತಿಗೆ ಅನುಗುಣವಾಗಿ ರಾಜ್ಯ ಜನಸಂಖ್ಯಾ ನೀತಿಯನ್ನು ರೂಪಿಸಬಹುದಾಗಿದೆ. ಈ ದಿಸೆಯಲ್ಲಿ ಪೂರಕವಾಗಿ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಎಲ್ಲಾ ಸಮುದಾಯದ ಸಹಭಾಗಿತ್ವದಿಂದ ಈ ಕಾರ್ಯಕ್ರಮ ಅನುಷ್ಠಾನ ಮಾಡುವುದರಿಂದ ಜನಸಂಖ್ಯಾ ಸ್ಫೋಟವನ್ನು ತಡೆಗಟ್ಟಿ ಸೃಷ್ಟಿಯಾಗುತ್ತಿರುವ ಜಟಿಲ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳಬಹುದಾಗಿದೆ. ಅಭಿವೃದ್ಧಿ ಹೊಂದುತ್ತಿರುವ ಮತ್ತು ಹಳ್ಳಿಗಳ ನಾಡಾದ ಈ ದೇಶದಲ್ಲಿ ಜನಸಂಖ್ಯಾ ಸ್ಫೋಟವನ್ನು ಈ ರೀತಿ ನಿಯಂತ್ರಿಸಬಹುದಾಗಿದೆ.

ಮುಂದುವರೆದು ಗ್ರಾಮೀಣ ಪ್ರದೇಶದಲ್ಲಿನ ಮೂಲಭೂತ ಸೌಕರ್ಯಗಳಿಗೆ ವ್ಯವಸ್ಥಿತವಾದ ಒತ್ತು ನೀಡುವುದು, ಗ್ರಾಮೀಣ ಜನರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಯನ್ನು ಉತ್ತಮಪಡಿಸುವ ದಿಶೆಯಲ್ಲಿ ಅಗತ್ಯ ಹಾಗೂ ವ್ಯವಸ್ಥಿತವಾದ ಕ್ರಮ ಕೈಗೊಂಡಲ್ಲಿ ಮಾತ್ರ, ಮಹಾತ್ಮಜಿ ಕಂಡಂತಹ ಗ್ರಾಮರಾಜ್ಯ/ರಾಮರಾಜ್ಯದ ಕನಸನ್ನು ನನಸು ಮಾಡಬಹುದಾಗಿರುತ್ತದೆ.

●




# ಕುಟುಂಬ ಕಲ್ಯಾಣ ಯೋಜನೆ

ಡಾ. ಬಿ. ಎಸ್. ಸ್ವಾಮಿ

ಸುಮಾರು ಮೂವತ್ತೈದು ವರ್ಷಗಳ ಹಿಂದೆ ಕುಟುಂಬ ಯೋಜನೆ ಎಂದರೆ ಮಕ್ಕಳಾಗದಂತೆ ಮಾಡುವ ಆಪರೇಷನ್ ಅಥವಾ ಸಂತಾನ ತಡೆಗಟ್ಟುವ ವಿಧಾನವೆಂಬ ಅರ್ಥವಿತ್ತು. ಆಮೇಲೆ ಅದರ ವ್ಯಾಪ್ತಿಯನ್ನು ಹೆಚ್ಚಿಸಲು ಕುಟುಂಬ ಕಲ್ಯಾಣ ಯೋಜನೆ ಜಾರಿಗೆ ಬಂತು. ಇದರಲ್ಲಿ ತಾಯಿ ಮಕ್ಕಳ ಆರೋಗ್ಯ, ಗರ್ಭಿಣಿ, ಬಾಣಂತಿಯರ ಆರೋಗ್ಯ, ಎದೆಹಾಲಿನ ಮಹತ್ವ, ಬಂಜೆತನದ ಚಿಕಿತ್ಸೆ, ವೈದ್ಯಕೀಯ ಗರ್ಭಪಾತ ಮುಂತಾದವುಗಳನ್ನು ಅಳವಡಿಸಲಾಯಿತು. ಹಿಂದೆ ಆಪರೇಷನ್‌ಗಾಗಲೀ, ಮಕ್ಕಳಾಗದಂತೆ ಇತರ ವಿಧಾನಗಳನ್ನು ಅನುಸರಿಸುವಂತೆ ಹೆಚ್ಚಿಗೆ ಮಕ್ಕಳಿರುವ ತಂದೆ-ತಾಯಿಯರಿಗೆ ಆರೋಗ್ಯದ ಬಗ್ಗೆ ಶಿಕ್ಷಕರು, ವೈದ್ಯರು ಬುದ್ಧಿವಾದ ಹೇಳಿ ಅವರನ್ನು ಒಪ್ಪಿಸುವುದು ಬಹಳ ಕಷ್ಟದ ಕೆಲಸವಾಗಿತ್ತು. ಅದಕ್ಕಾಗಿ ಅನೇಕ ಕಸರತ್ತುಗಳನ್ನು ಮಾಡಬೇಕಾಗಿತ್ತು. ಹರಿಕಥೆ, ಯಕ್ಷಗಾನ, ಹಾಡುಗಳು, ನಾಟಕಗಳು, ಪೌರಾಣಿಕ ಕಥೆಗಳ ಮೂಲಕ ಕಡಿಮೆ ಮಕ್ಕಳ ಅವಶ್ಯಕತೆಯನ್ನು ಎತ್ತಿಹಿಡಿಯಲಾಗುತ್ತಿತ್ತು. ಇದನ್ನು ಕುಟುಂಬ ಕಲ್ಯಾಣ ಇಲಾಖೆ, ಆಕಾಶವಾಣಿ, Song and Drama Division, Field Publicity ವಿಭಾಗಗಳು ಕುಟುಂಬ ಯೋಜನೆಯ ಅವಶ್ಯಕತೆಯ ಬಗೆಗೆ ಒತ್ತು ನೀಡಲಾರಂಭಿಸಿದವು; ಜನರನ್ನು ಎಚ್ಚರಿಸಲಾರಂಭಿಸಿದುವು. ಜನರನ್ನು ಪರಿವರ್ತಿಸುವುದು ಅಷ್ಟೊಂದು ಸುಲಭವಾಗಿರಲಿಲ್ಲ. ಹೆಂಗಸರೊಂದಿಗೆ ಈ ವಿಷಯದ ಮಾತಾಡುವುದೂ ಕಷ್ಟವಾಗಿತ್ತು. ಸೂಚ್ಯವಾಗಿ ಹೇಳಲಾಗುತ್ತಿತ್ತು. ತಾಯಿಯ ಆರೋಗ್ಯದ ದೃಷ್ಟಿಯಿಂದ, ಮಕ್ಕಳನ್ನು ಕಾಪಾಡುವ ದೃಷ್ಟಿಯಿಂದ ಕುಟುಂಬ ಕಲ್ಯಾಣ ಯೋಜನೆ ಯಾವುದಾದರೊಂದು ವಿಧಾನವನ್ನು ಅನುಸರಿಸುವಂತೆ ಶಿಕ್ಷಣ ಕೊಡಲಾಗುತ್ತಿತ್ತು. ಭಿತ್ತಿಪತ್ರಗಳನ್ನು ಅಂಟಿಸಲಾಯಿತು, ಕರಪತ್ರಗಳನ್ನು ಹಂಚಲಾಯಿತು, ಹಾಡು-ನಾಟಕಗಳನ್ನು ಬರೆದು ಪ್ರಕಟಿಸಲಾಯಿತು. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ 'ಕುಟುಂಬ' ಎಂಬ ಮಾಸಿಕ ಸಂಚಿಕೆಯನ್ನು ಪ್ರಕಟಿಸಿ ಎಲ್ಲ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ, ಎಲ್ಲ ಆಸ್ಪತ್ರೆಗಳಿಗೆ ಹಂಚಲಾಯಿತು. ಜನರನ್ನು ಜಾಗೃತಗೊಳಿಸತೊಡಗಿತು. ಹಳ್ಳಿಯ ಜನರನ್ನು ಒಪ್ಪಿಸುವುದು ಅಷ್ಟೊಂದು ಸುಲಭದ ಕೆಲಸವಾಗಿರಲಿಲ್ಲ. 'ಮಕ್ಕಳಾದ್ರೆ ಕೇಡೆ, ಮಳೆ ಬಿದ್ರೆ ಕೇಡೆ' ಎಂಬ ಗಾದೆ, 'ಹುಟ್ಟಿಸಿದ ದೇವರು ಹುಲ್ಲು ನೀರು ಕೊಡನೇ?' ಎಂದು ಮಾತಾಡುವ ಜನರಿಗೆ ನಿಜವಾದ ಅರಿವು ಮೂಡಿಸಲಾಯಿತು. ಇದರಲ್ಲಿ ವೈದ್ಯರ ಪಾತ್ರ ಬಹಳ ಮುಖ್ಯವಾಗಿತ್ತು. ತಾಯಿಯ ಆರೋಗ್ಯದ ದೃಷ್ಟಿಯಿಂದ, ಮಕ್ಕಳ ಲಾಲನೆ ಪಾಲನೆ-ಪೋಷಣೆ ದೃಷ್ಟಿಯಿಂದ ಮೂರೇ ಮಕ್ಕಳು ಸಾಕು. ಅವುಗಳಿಗೂ

---

***ತಾಯಿಯ ಆರೋಗ್ಯದ ದೃಷ್ಟಿಯಿಂದ, ಮಕ್ಕಳ ಲಾಲನೆ, ಪಾಲನೆ-ಪೋಷಣೆ ದೃಷ್ಟಿಯಿಂದ ಮೂರೇ ಮಕ್ಕಳು ಸಾಕು. ಅವುಗಳಿಗೂ ಒಂದಕ್ಕೊಂದು ಮೂರು ವರ್ಷಗಳಾದರೂ ಅಂತರವಿರಬೇಕು. ಇಲ್ಲದಿದ್ದರೆ ತಾಯಿ-ಮಕ್ಕಳ ಆರೋಗ್ಯ ಕೆಡುತ್ತದೆ.***

---

ಒಂದೊಂದರ ನಡುವೆ ಮೂರು ವರ್ಷಗಳಾದರೂ ಅಂತರವಿರಬೇಕು. ಇಲ್ಲದಿದ್ದರೆ ತಾಯಿ-ಮಕ್ಕಳ ಆರೋಗ್ಯ ಕೆಡುತ್ತದೆ ಎಂಬುದರ ಬಗ್ಗೆ ತಿಳಿವಳಿಕೆ ನೀಡಲಾಯಿತು. ಬರಬರುತ್ತಾ 'ಅಷ್ಟ ಪುತ್ರವತೀ ಭವ' ಎಂಬ ಆಶೀರ್ವಾದವೂ ಕಡಿಮೆ ಆಯಿತು.

ಆಪರೇಷನ್ ಎಂದು ಭಯ ಬೀಳುವವರಿಗೆ ವಂಕಿ, ಗಂಡಸರಿಗೆ ನಿರೋಧ್ ಬಳಸಲು ಹೇಳಲಾಯಿತು. ಆಪರೇಷನ್ ಆದವರು ಆರೋಗ್ಯವಾಗಿದ್ದು, ಎಲ್ಲ ಕೆಲಸ ಮಾಡಬಹುದು ಎಂದು ಆಕಾಶವಾಣಿ, ದೂರದರ್ಶನದಲ್ಲಿ ಫಲಾನುಭವಿಗಳ ಸಂದರ್ಶನಗಳನ್ನು ಪ್ರಸಾರ ಮಾಡಲಾಯಿತು. ಚಲನಚಿತ್ರ ಮಂದಿರಗಳಲ್ಲಿ ಕಿರುಚಿತ್ರಗಳನ್ನು ತೋರಿ ಜನರಲ್ಲಿ ಭಯವನ್ನು ಹೋಗುವಂತೆ ಮಾಡಲಾಯಿತು. ಮೊದಮೊದಲು ಯಾವುದಕ್ಕೂ ಒಪ್ಪದ ಜನರು ಬರಬರುತ್ತಾ ಒಂದೊಂದಾಗಿ ಒಪ್ಪತೊಡಗಿದರು. ಹೆರಿಗೆ ಸಮಯದಲ್ಲಿ ಆಪರೇಷನ್ ಮಾಡಲು ವೈದ್ಯರು ಸಲಹೆ ನೀಡಲಾರಂಭಿಸಿದರು. 'ಸಂಭೋಗ' ಎಂಬ ಪದವನ್ನು ಬಳಸಲು ಹೆದರುವ ಕಾಲವೊಂದಿತ್ತು. ಜನರಲ್ಲಿ ತಿಳುವಳಿಕೆ ಮೂಡಿದ ಮೇಲೆ ಧೈರ್ಯವಾಗಿ ಮಾತಾಡುವಂತಾಯಿತು. ಈಗ ಅದಾವುದರ ಅವಶ್ಯಕತೆಯೂ ಬೇಕಿಲ್ಲ. ಮಕ್ಕಳಿಗೆ ಚುಚ್ಚುಮದ್ದು ಹಾಕಿಸಲು ತಾಯಂದಿರೇ ಮುಂದಾಗಿ ಬರುತ್ತಾರೆ. ಗರ್ಭಿಣಿ ಸ್ತ್ರೀಯರು, ಬಾಣಂತಿಯರು ಆರೋಗ್ಯ ಕಾಪಾಡಿಕೊಳ್ಳಲು ಮುಂದಾಗಿ ಆಸ್ಪತ್ರೆಗೆ ಬರುತ್ತಿದ್ದಾರೆ.T.T. ಚುಚ್ಚುಮದ್ದು, ಕಬ್ಬಿಣಾಂಶ ಮಾತ್ರೆಗಳನ್ನು ತೆಗೆದುಕೊಳ್ಳುತ್ತಾರೆ. ಮೂರು ಮಕ್ಕಳ ಕಾಲ ಎರಡಾಯಿತು. ಈಗ ಒಂದೇ ಸಾಕೆಂಬ ಕಾಲ ಬಂದಿದೆ. ಯಾರೂ ಹೆಚ್ಚು ಮಕ್ಕಳನ್ನು ಬಯಸರು. ಒಂದೋ, ಎರಡೋ ಆದ ಮೇಲೆ ಶಾಶ್ವತವಾಗಿ ಆಪರೇಷನ್ ಮಾಡಿಸಿಕೊಳ್ಳಲು ಮುಂದಾಗುತ್ತಿದ್ದಾರೆ. ಇಷ್ಟಾದರೂ ಜನಸಂಖ್ಯೆ ಏರುತ್ತಲೇ ಇದೆ. ಆ ಕಾಲದಲ್ಲಿ ಬೇಂದ್ರೆಯವರು "ಮಕ್ಕಳಿವರೇನಮ್ಮ ಮೂವತ್ತಮೂರು ಕೋಟಿ" ಎಂಬುದು ಈಗ ನೂರೆರಡು ಕೋಟಿ ಮೀರಿದೆ ಎಂದಮೇಲೆ ಜನಸಂಖ್ಯೆ ಎಷ್ಟು ವೇಗವಾಗಿ ಬೆಳೆದಿದೆ ಎನ್ನಿಸದೇ ಇರದು.

ಇಂದು ಮಕ್ಕಳ ಮರಣ ಸಂಖ್ಯೆ ಕಡಿಮೆ ಆಗಿದೆ. ದೊಡ್ಡವರ ಆಯಸ್ಸು ಹೆಚ್ಚಿದೆ. ಹೀಗಾಗಿ ಜನಸಂಖ್ಯೆ ಹೆಚ್ಚುತ್ತಿದೆ. ಇನ್ನೂ ಎಷ್ಟೋ ಜನರು ಮೂಢನಂಬಿಕೆಗಳಿಂದ, ಧಾರ್ಮಿಕ ಮನೋಭಾವದಿಂದ ಹೆಚ್ಚು ಮಕ್ಕಳನ್ನು ಹಡೆದು ಸಮಾಜಕ್ಕೆ ಹೊರೆ ಮಾಡುತ್ತಿದ್ದಾರೆ. ಆರ್ಥಿಕವಾಗಿ ಮುಂದುವರಿಯದೆ ಮಕ್ಕಳ ಆಸೆ, ಆಕಾಂಕ್ಷೆಗಳನ್ನು ಪೂರೈಸದೆ ಬಾಲಾಪರಾಧ, ಕಳ್ಳತನ, ದರೋಡೆ ಮಾಡಲು ಕಾರಣರಾಗಿದ್ದಾರೆ. ಎಲ್ಲರಂತೆ ಸುಖ ಬಯಸಿ ಏನೆಲ್ಲ ಅನ್ಯಾಯ, ಅಕ್ರಮಗಳನ್ನು ಮಾಡಿ ಸಮಾಜಘಾತಕರಾಗುತ್ತಿದ್ದಾರೆ. ಇದಕ್ಕೆ ಕಾರಣ ಅತಿ ಮಕ್ಕಳು. ಕಷ್ಟಪಟ್ಟು ಸಂಪಾದನೆ ಮಾಡದೆ ಸುಲಭದ ದಾರಿಯಲ್ಲಿ ಸಂಪಾದನೆ ಬಯಸುತ್ತಾರೆ. 'ಕೈಕೆಸರಾದರೆ ಬಾಯಿ ಮೊಸರು' ಎಂಬುದನ್ನು ಮರೆತಿದ್ದಾರೆ. ತಂದೆ ತಾಯಿಯರೂ ಅಷ್ಟೇ 'ಹತ್ತು ಕಟ್ಟುವೆಡೆ ಒಂದು ಮುತ್ತು ಕಟ್ಟು' ಎಂಬುದನ್ನು ಮರೆತಿದ್ದಾರೆ ಹಳ್ಳಿಗಳಲ್ಲಿ.

ಜನಸಂಖ್ಯೆ ಹೆಚ್ಚಳದಲ್ಲಿ ಚೀನಾ ದೇಶ ಮೊದಲಾದರೆ, ನಮ್ಮ ದೇಶ ಎರಡನೆಯದು. ಚೀನಾದಲ್ಲಿ 'One child norm'ಗೆ ಪ್ರಾಶಸ್ತ್ಯ ನೀಡಿದ್ದಾರೆ. ಅದು ನಮ್ಮ ದೇಶದಲ್ಲೂ ಆಗಬೇಕಾಗಿದೆ. ಕೆಲವರು ಅದನ್ನು ಈಗ ಅನುಸರಿಸುತ್ತಲೂ ಇದ್ದಾರೆ. "ಆರತಿಗೊಬ್ಬ ಮಗಳು, ಕೀರುತಿಗೊಬ್ಬ ಮಗ" ಎಂಬುದನ್ನು ಅನುಸರಿಸಲು ಹೋಗಿ, ಗಂಡಿಗಾಗಿ ಪ್ರಯತ್ನ ಮಾಡಿ, ಅತಿ ಮಕ್ಕಳ ಹಡೆದು ತೊಂದರೆಪಡುತ್ತಿದ್ದ ಕಾಲವೊಂದಿತ್ತು. ಈಗ ಗಂಡಾದರೂ ಒಂದೇ, ಹೆಣ್ಣಾದರೂ ಒಂದೇ ಎಂಬ ಮನೋಭಾವ ಬೆಳೆಯುತ್ತಿದೆ. ಗಂಡು ಮಗ ಅಂತ್ಯ ಸಂಸ್ಕಾರಕ್ಕೆ ಬೇಕು ಎಂಬ ಅಂಧಶ್ರದ್ಧೆ ಅಳಿಯುತ್ತಿದೆ. ಹೆಣ್ಣಾದರೆ ಗರ್ಭಪಾತ ಮಾಡಿಸುತ್ತಿದ್ದುದರಿಂದ ಗರ್ಭದ ಭ್ರೂಣ ಪರೀಕ್ಷೆಯನ್ನು ಈಗ ನಿಲ್ಲಿಸಲಾಗಿದೆ. ಎಷ್ಟೋ ಜನ ಗಂಡು ಮಕ್ಕಳು ಮದುವೆಯಾದ ಮೇಲೆ ಹೆತ್ತ ತಂದೆ-ತಾಯಿಯರನ್ನು ವೃದ್ಧಾಶ್ರಮದಲ್ಲಿ ಅನಾಥರಾಗಿ ಮಾಡುತ್ತಿದ್ದಾರೆ. ಅನೇಕರು ದುಡಿಯಲು ಅಮೆರಿಕಾ, ಯುರೋಪ್ ದೇಶಗಳಿಗೆ ಹೋಗಿ ತಂದೆ-ತಾಯಿ ಸತ್ತರೂ ಬಂದು ನೋಡುವಂತಿಲ್ಲ, ಹಾಗಾಗಿದೆ ಇಂದಿನ ಪರಿಸ್ಥಿತಿ. ಇದಕ್ಕೆ ಗಂಡಾದರೇನು, ಹೆಣ್ಣಾದರೇನು? ಎಲ್ಲರೂ ಒಂದೇ ಅಲ್ಲವೇ?

ಹಳ್ಳಿಯ ಜನರ ಕಣ್ಣು ಪಟ್ಟಣಗಳ ಮೇಲೆ ಬಿದ್ದು, ಅಲ್ಲಿನ ಸೌಲಭ್ಯಗಳಿಗೆ, ಮನರಂಜನೆಗೆ ಸೋತು ಹಳ್ಳಿಯನ್ನು ತೊರೆಯುತ್ತಿದ್ದಾರೆ. ಕೃಷಿಯಲ್ಲಿ ತೊಡಗಿ ಬೆಳೆವ ಮನೋಭಾವವಿಲ್ಲ. ವ್ಯವಸಾಯದಲ್ಲಿ ಲಾಭವಿಲ್ಲ ಎಂದು ಹೇಳಿ ಯಾವುದಾದರೂ ಒಂದು ಕೆಲಸ ಹುಡುಕಿಕೊಂಡು ಪಟ್ಟಣವನ್ನು ಸೇರಬೇಕೆಂಬ ಮನೋಭಾವ ತಾಳುತ್ತಾರೆ. ಅಲ್ಲಿ ಕಷ್ಟಪಟ್ಟರೂ, ಬೇರೆಯವರ ಕೈಕೆಳಗೆ ಕೆಲಸ ಮಾಡಿ ಜೀವಿಸುತ್ತಾರೆ. ಸ್ವತಂತ್ರವಾಗಿ ಜೀವಿಸುವ ಪುಣ್ಯವಿದ್ದರೂ ಅದನ್ನು ಬಿಟ್ಟು ಬರುತ್ತಾರೆ. ಅದನ್ನು ಮಾಡಿ ಸಾಲ ತೀರಿಸಲಾರದೆ ರೈತರು ಆತ್ಮಹತ್ಯೆ ಮಾಡಿಕೊಳ್ಳುವ ಪ್ರಮೇಯವೇನಿಲ್ಲ. ಸರಿಯಾದ ಬೆಳೆ ಬೆಳೆಯಬೇಕು. ವ್ಯವಸಾಯ ಇಲಾಖೆಯವರ ಸಹಾಯದಿಂದ ಯಾವ ಬೀಜ, ಗೊಬ್ಬರ, ಬೆಳೆ ಬೆಳೆಯಬೇಕು. ಹಿಂದೆ ರೈತರೇ ಸಾಹುಕಾರರಾಗಿ ಮೆರೆಯುತ್ತಿರಲಿಲ್ಲವೇ? ಈಗೇಕೆ ಹಾಗಾಗಬಾರದು? ಅದೇ ಭೂಮಿ, ಅದೇ ಬೆಳೆ ಅಲ್ಲವೇ? ಕಷ್ಟಪಟ್ಟರಲ್ಲವೇ ಸುಖ, ನಮ್ಮ ಅಭಿವೃದ್ಧಿಗೆ ನಾವೇ ಕಾರಣರಾಗಬೇಕಲ್ಲವೇ? ಹಸಿರು ಕ್ರಾಂತಿಯಿಂದ ಹೆಚ್ಚು ಬೆಳೆಯುತ್ತಿದ್ದರೂ ಬೆಳೆವ ಜನಸಂಖ್ಯೆಗೆ ಸಾಕಾಗದಾಗಿದೆ.

ಇಂದು ಹಳ್ಳಿಗಳಲ್ಲಿ ನಗರೀಕರಣವನ್ನು ಕಾಣಬಹುದು. ಪಟ್ಟಣದಲ್ಲಿ ದೊರೆವ ಎಲ್ಲ ಸೌಲಭ್ಯಗಳಿದ್ದರೂ ಹಳ್ಳಿಯಲ್ಲಿ ಇರಲು ಬಯಸುತ್ತಿಲ್ಲ. ಹಳ್ಳಿಯ ಉದ್ಧಾರಕ್ಕೆ ವೈದ್ಯರು ಮುಂದೆ ಬರುತ್ತಿಲ್ಲ. ರೈತರ ಮಕ್ಕಳು ವ್ಯವಸಾಯ ಮಾಡಲು ಇಷ್ಟಪಡುತ್ತಿಲ್ಲ. ಭೂಮಿ ಮಾರಿ ಪಟ್ಟಣ ಸೇರುವ ಬಯಕೆಪಡುತ್ತಾರೆ. ಮಣ್ಣಿನಲ್ಲಿ ದುಡಿಯುವ ಮನೋಭಾವವಿಲ್ಲ. ಹಾಗಾದರೆ ನಾವು ಉದ್ಧಾರವಾಗುವುದು ಹೇಗೆ? ನಾವು ಉದ್ಧಾರವಾದರೆ ನಮ್ಮ ಮನೆ, ನಮ್ಮ ಹಳ್ಳಿ, ನಮ್ಮ ದೇಶ ಉದ್ಧಾರವಾಗುವುದು. ರೈತ ದೇಶದ ಬೆನ್ನು ಮೂಳೆ ಎಂದುದೇಕೆ? ಆತನೇ ಅನ್ನದಾತ. ಹಳ್ಳಿಯಲ್ಲಿ ಒಳ್ಳೆಯ ನೀರು, ಗಾಳಿ ಸಿಗುತ್ತದೆ. ಪಟ್ಟಣದ ಸೌಲಭ್ಯಗಳೆಲ್ಲ ಇವೆ. ಹಳ್ಳಿಯನ್ನು ಉದ್ಧಾರ ಮಾಡುವ ಮನೋಭಾವ ಇಂದಿನ ಯುವ ಪೀಳಿಗೆಗೆ ಬರಬೇಕು. ಗಾಂಧಿಯವರ ಕನಸನ್ನು ನನಸು ಮಾಡಬೇಕು. ಗ್ರಾಮೋದ್ಯೋಗಗಳನ್ನು ಮಾಡಬೇಕು. ಮಿತ ಮಕ್ಕಳನ್ನು ಪಡೆಯಬೇಕು. ಆಗಲೇ ಗ್ರಾಮೋದ್ಧಾರ. ಗ್ರಾಮೋದ್ಧಾರಕ್ಕೆ ಹಳ್ಳಿಗರು ದುಡಿಯಬೇಕು ಅಲ್ಲವೇ?

ಮನೆಯಲ್ಲಿ ಶಾಂತಿ, ನೆಮ್ಮದಿ, ಆರೋಗ್ಯ, ಐಶ್ವರ್ಯ ಇರಬೇಕಾದರೆ ಒಂದೋ ಅಥವಾ ಎರಡೋ ಮಕ್ಕಳಿರಬೇಕು. ಈ ಸಂಖ್ಯೆ ಹೆಚ್ಚಾದಾಗಲೇ ದೇಶದ ಅವನತಿ. ಅಭಿವೃದ್ಧಿ ದೇಶಗಳನ್ನು ನೋಡಿದಾಗ ವಿಶಾಲವಾದ ಮನೆಗಳು, ರಸ್ತೆಗಳು, ಜೀವನಕ್ಕೆ ಬೇಕಾದ ಸೌಲಭ್ಯಗಳನ್ನು ಕಂಡಾಗ ಅಲ್ಲಿನ ಜನಸಂಖ್ಯೆ ಕಡಿಮೆ. ಜನರನ್ನು ನೋಡಬೇಕೆಂದರೆ ಷಾಪಿಂಗ್‌ನಲ್ಲಿ, ವಾರದ ಕೊನೆಯಲ್ಲಿ ಪ್ರವಾಸಿ ಕೇಂದ್ರಗಳಲ್ಲಿ, ಆಫೀಸುಗಳಲ್ಲಿ ಮಾತ್ರ. ನಮ್ಮ ಬೆಂಗಳೂರನ್ನೇ ತೆಗೆದುಕೊಳ್ಳಿ. ನಗರದ ತುಂಬ ಮನೆಗಳು, ಜನಗಳು, ಬೇರೆಬೇರೆ ರಾಜ್ಯಗಳಿಂದ ಬಂದು ತುಂಬಿದ ಜನಸಾಗರವಾಗಿದೆ. ತಿರುಗಾಡಲೂ ಕಷ್ಟ, ರಸ್ತೆ ದಾಟಲು ಅಪಾಯ, ಉಸಿರಾಟಕ್ಕೆ ಅಶುದ್ಧ ಗಾಳಿ. ಈ ಜನಪ್ರಳಯ ತಡೆಯದಿದ್ದರೆ ನಮಗೆ ನಿಜಕ್ಕೂ ಉಳಿಗಾಲವಿಲ್ಲ. ನಮ್ಮ ಅಭಿವೃದ್ಧಿಯ ಮಾತು ಕನಸೇ. ಪ್ರತಿ ಪ್ರಜೆಯೂ ದೇಶಕ್ಕೆ ಮಿತ ಮಕ್ಕಳನ್ನು ನೀಡಿದಾಗಲೇ ದೇಶೋದ್ಧಾರ. ಯಾವ ಅಭಿವೃದ್ಧಿ ಕೆಲಸಕ್ಕೂ ತೊಡಕು. ಈ ಮಿತಿಮೀರಿದ ಜನಸಂಖ್ಯೆಯಿಂದ ಲಂಚ, ಭ್ರಷ್ಟಾಚಾರ, ಅನಾಚಾರಗಳು ನಡೆಯಲು ಕಾರಣವಾಗಿದೆ.

ಸರ್ಕಾರವೂ ಅಷ್ಟೇ. ಗ್ರಾಮೀಣ ಅಭಿವೃದ್ಧಿಯತ್ತ ತನ್ನ ಗಮನವನ್ನು ಹರಿಸಿದರೆ ಜನರು ಪಟ್ಟಣದತ್ತ ವಲಸೆ ಹೋಗುವುದನ್ನು ತಪ್ಪಿಸುತ್ತಾರೆ. ಕುಡಿಯಲು ಶುದ್ಧನೀರು, ರಸ್ತೆಗಳು, ಆಸ್ಪತ್ರೆ, ಶಾಲೆ ಮುಂತಾದವುಗಳು ಆಗಬೇಕು. ಈಗ ಇದ್ದರೂ ಸೌಲಭ್ಯಗಳಿಲ್ಲದೆ ನಿರುಪಯೋಗವಾಗಿವೆ. ಶಾಲೆ ಇದ್ದರೆ ಉಪಾಧ್ಯಾಯರಿಲ್ಲ, ಆಸ್ಪತ್ರೆ ಇದ್ದರೆ ಸಿಬ್ಬಂದಿ ಇಲ್ಲ, ವೈದ್ಯರಿಲ್ಲ, ಉತ್ತಮ ರಸ್ತೆ, ಚರಂಡಿಗಳಿಲ್ಲ. ರೈತನಿಗೆ ಬೇಕಾದ ಉತ್ತಮ ಬೀಜ, ಗೊಬ್ಬರ ಕಡಿಮೆ ಬೆಲೆಯಲ್ಲಿ ಸಿಗಬೇಕು. ಸಾಲಕ್ಕೆ ಬಡ್ಡಿ ದರ ಕಡಿಮೆಯಾಗಬೇಕು. ಬೋರ್‌ವೆಲ್ ತೆಗೆಸಲು ಸಾಲ ಸಿಗಬೇಕು. ರೈತ ಸಾಲ ತೀರಿಸಲು ಆಗದೆ ಆತ್ಮಹತ್ಯೆ ಮಾಡಿಕೊಳ್ಳುವಂತಾಗಬಾರದು. ಲಾಟರಿ ನಿಷೇಧ ಮಾಡಬೇಕು. ರೈತ ಸಿಗುವ ಸೌಲಭ್ಯಗಳನ್ನೆಲ್ಲ ಉಪಯೋಗಿಸಿಕೊಂಡು ಹಳ್ಳಿಯಲ್ಲಿ ಉತ್ತಮ ಜೀವನವನ್ನು ಮಾಡಬೇಕು.

ಹಿಂದೆ ಕುಟುಂಬ ಕಲ್ಯಾಣ ಯೋಜನೆಯ ಪ್ರೋತ್ಸಾಹಕ್ಕೆ ಪ್ರೋತ್ಸಾಹಧನ ನೀಡಲಾಗುತ್ತಿತ್ತು. ಸರಕಾರಿ ಕೆಲಸದವರಿಗೂ ಅನೇಕ ಸೌಲಭ್ಯಗಳನ್ನು ನೀಡಲಾಗುತ್ತಿತ್ತು. ಇಷ್ಟಾದರೂ ಇದರ ಉಪಯೋಗ ಸಂಪೂರ್ಣವಾಗಿ ದೇಶದ ಎಲ್ಲ ಕೋಮಿನ ಜನರೂ ಉಪಯೋಗಿಸಿಕೊಳ್ಳುತ್ತಿಲ್ಲ. ಯಾವ ಜಾತಿ, ಮತದವರೇ ಆಗಲೀ ತಮ್ಮ ಹಾಗೂ ತಮ್ಮ ಮಕ್ಕಳ, ದೇಶದ ಭವಿಷ್ಯದ ದೃಷ್ಟಿಯಿಂದ ಎರಡು ಮಕ್ಕಳಿಗಿಂತ ಹೆಚ್ಚು ಬಯಸಬಾರದು. ಅನೇಕ ಶಿಬಿರಗಳನ್ನು ಆಗಾಗ ಸರ್ಕಾರ, ಸ್ವಯಂ ಸೇವಾ ಸಂಸ್ಥೆಗಳು ನಡೆಸಿ ಕುಟುಂಬ ಕಲ್ಯಾಣ ಶಸ್ತ್ರಚಿಕಿತ್ಸೆ ಮಾಡುತ್ತಿದ್ದರು. ಈಗ ಅವರೇ ಸ್ವತಃ ಆಸ್ಪತ್ರೆಗೆ ಹೋಗುವ ಕಾಲವಾಗಿದೆ. ಇದರ ಉಪಯೋಗವನ್ನು ಪ್ರತಿಯೊಬ್ಬ ಹಳ್ಳಿಗನೂ ಪಡೆದುಕೊಳ್ಳಬೇಕು. ಇದು ಪಟ್ಟಣಿಗರ ಕರ್ತವ್ಯವೂ ಹೌದು. ಎರಡು ಕೈ ಸೇರಿದಾಗಲೇ ಚಪ್ಪಾಳೆ ಅಲ್ಲವೇ? ಧಾರ್ಮಿಕ ಗುರುಗಳೂ ಇದರ ಬಗೆಗೆ ಸಂದೇಶ ನೀಡುತ್ತಾ ಜನರ ಮನ ಒಲಿಸುತ್ತಲೇ ಬಂದಿದ್ದಾರೆ. ಆದರೆ ಅದರ ಅನುಷ್ಠಾನ ಪ್ರತಿಯೊಬ್ಬನ ಮೇಲೂ ಬಿದ್ದಿದೆ. ಅದು ಹೆಚ್ಚಿನ ಸಂಖ್ಯೆಯಲ್ಲಿ ಆಗಬೇಕು.

ಒಂದು ಕಾಲದಲ್ಲಿ ಪುರುಷರ ಸಂತಾನ ಶಸ್ತ್ರಚಿಕಿತ್ಸೆ (Vesectomy) ಹೆಚ್ಚು ನಡೆಯುತ್ತಿತ್ತು. ಆದರೆ ಬರಬರುತ್ತಾ ಆ ಸಂಖ್ಯೆ ಕಡಿಮೆ ಆಗಿ ಮಹಿಳಾ ಶಸ್ತ್ರಚಿಕಿತ್ಸೆ (Tubectomy) ಹೆಚ್ಚಾಗಿದೆ. ಇದು ಪ್ರಚಾರ ಯುಗ. ಪಲ್ಸ್ ಪೋಲಿಯೋ, ಏಡ್ಸ್, ಕುಟುಂಬ ಕಲ್ಯಾಣ ಪ್ರಚಾರ ಬಿರುಸಾಗಿ ಸಾಗಿದೆ. ಜನರು ಇವುಗಳಿಗೆ ಮುಂದಾಗಿ ಬರುತ್ತಿದ್ದಾರೆ ಜಾಗ್ರತರಾಗಿದ್ದಾರೆ. ಜನ ಇವುಗಳ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ಆದರೆ ಇಂದು ಆಗಬೇಕಾದುದು ವೈದ್ಯರಿಂದ, ಅವರ ಸಿಬ್ಬಂದಿಯಿಂದ ಉತ್ತಮ ಸೇವೆ. ಸರ್ಕಾರದ ಈ ಉಚಿತ

ಸೇವೆಯನ್ನು ಹಳ್ಳಿಯ ಜನರೆಲ್ಲ ಪಡೆಯಬೇಕು. ಹಳ್ಳಿಯ ಬಡ ಜನರು ವೈದ್ಯರನ್ನು ದೇವರೆಂದೇ ಭಾವಿಸುತ್ತಾರೆ. ಆದ್ದರಿಂದ ವೈದ್ಯರು ಹಣಕ್ಕೆ ಆಸೆಪಡದೆ ಅವರ ಸೇವೆಗೆ ತಮ್ಮನ್ನು ತೊಡಗಿಸಿಕೊಳ್ಳಬೇಕು. ಕುಟುಂಬ ಕಲ್ಯಾಣ ಕಾರ್ಯಕ್ರಮದ ಅನುಷ್ಠಾನವಿಲ್ಲದೆ ಅಭಿವೃದ್ಧಿ ಕಾರ್ಯವಿಲ್ಲ.

ಫ್ರೆಂಚ್ ಪತ್ರಿಕೆಯ ಪತ್ರಿಕಾಕರ್ತನೊಬ್ಬ ನಾಗತಿಹಳ್ಳಿ ಚಂದ್ರಶೇಖರ್ ಅವರನ್ನು ಭೇಟಿ ಮಾಡಿದಾಗ ಅಹಮದಾಬಾದ್, ಮುಂಬೈ ಜನಸಂಖ್ಯೆ ನೋಡಿ 'ಈ ಗುಜುಗುಟ್ಟುವ ಜನರು ಹೇಗೆ ಬದುಕುತ್ತಾರೆ?' ಎಂದು ಪ್ರಶ್ನಿಸಿದನಂತೆ. ಅದು ಒಂದು ರೀತಿಯಲ್ಲಿ ಸತ್ಯವೇ.

ಕುಟುಂಬ ಯೋಜನೆಯನ್ನು ಆರಂಭಿಸಿದ ಕಾಲದಲ್ಲಿ ಹಳ್ಳಿಯ ಜನರನ್ನು ಮಾತನಾಡಿಸಿದಾಗ 'ನಾಲ್ಕು ಮಕ್ಕಳಾದರೂ ಬೇಕು, ಎರಡು ಮೂರಕ್ಕೆ ಆಪರೇಷನ್ ಮಾಡಿಸಿದರೆ ದುಡಿಯುವ ರೈತರೆಲ್ಲಿ ಬರಬೇಕು? ಕಾರ್ಮಿಕರು ಎಲ್ಲಿ ಬರಬೇಕು?' ಎಂದವರೂ ಉಂಟು.

ಆದರೆ ಇಂದು ಎತ್ತಿನಿಂದ ಉಳಬೇಕಿಲ್ಲ,ಟ್ರ್ಯಾಕ್ಟರ್ ಇದೆ. ಬೇಕಾದಷ್ಟು ಆಧುನಿಕ ಸೌಲಭ್ಯಗಳಿವೆ. ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಕಡಿಮೆ ರೈತ ಕಾರ್ಮಿಕರಿಂದ, ಯಂತ್ರದಿಂದಲೇ ಹೆಚ್ಚು ಕೆಲಸ ಮಾಡಿಸುತ್ತಿಲ್ಲವೇ?

ಜನಸಂಖ್ಯೆ ಹೆಚ್ಚಳಕ್ಕೆ ಕಾರಣ ಜನನ ಪ್ರಮಾಣದ ಅಂತರ, ಬಡತನ, ಅಜ್ಞಾನ, ಮೂಢನಂಬಿಕೆ ಹಾಗೂ ಅಪ್ರಾಪ್ತ ವಯಸ್ಸಿನ ಮದುವೆ, ಉತ್ತಮವಾದ ಆರೋಗ್ಯ ಸೇವೆ, ಸಾಂಕ್ರಾಮಿಕ ರೋಗಗಳನ್ನು ಹತೋಟಿಯಲ್ಲಿಟ್ಟಿರುವುದು. ಮಕ್ಕಳ ಆರೋಗ್ಯ ಸೇವೆ ಕಲ್ಪಿಸಿರುವುದರಿಂದ ಆಯಸ್ಸಿನ ಪ್ರಮಾಣ ಹೆಚ್ಚಾಗಿದೆ. ಮರಣ ಸಂಖ್ಯೆಯ ಪ್ರಮಾಣ ಕಡಿಮೆಯಾಗಿದೆ. ೨೦೦೧ರಲ್ಲಿ ಭಾರತದಲ್ಲಿ ಜನನ ದರ ೨೫.೪, ಮರಣ ಸಂಖ್ಯೆ ೮.೪. ಕರ್ನಾಟಕದಲ್ಲಿ ಜನನ ದರ ೨೨.೨, ಮರಣ ದರ ೭.೬ ಇತ್ತು.

ಜನಸಂಖ್ಯೆ ಬೆಳೆಯುವುದರಿಂದ ಆಗುವ ಸಮಸ್ಯೆಗಳೆಂದರೆ ಆಹಾರ, ನೀರು, ಬಟ್ಟೆ, ನೆಲ, ವಸತಿ, ಖನಿಜಗಳ ಕೊರತೆ, ಅರಣ್ಯ ನಾಶ, ನಿರುದ್ಯೋಗ, ಬಡತನ, ಶಾಲೆಗಳು, ಆಸ್ಪತ್ರೆಗಳ ಹಾಗೂ ಸಂಪನ್ಮೂಲಗಳ ಅಭಾವ. ವಾಯು, ಜಲ, ಶಬ್ದ ಮಾಲಿನ್ಯಗಳಲ್ಲಿ ಹೆಚ್ಚಳ, ಸಾಮಾಜಿಕ ಅಸಮಾನತೆ, ಕೊಳಚೆ ಪ್ರದೇಶಗಳ ಉದ್ಭವ, ವಸತಿ ಹಾಗೂ ಸಾರಿಗೆ ವ್ಯವಸ್ಥೆಯ ಮೇಲೆ ಒತ್ತಡ.

ಜನಸಂಖ್ಯಾ ನಿಯಂತ್ರಣವಾಗಬೇಕಾದರೆ ತಡವಾಗಿ ಮದುವೆ ಆಗುವುದು, ಗಂಡು ೨೧ ವರ್ಷದ ಮೇಲೆ, ಹೆಣ್ಣು ೧೮ ವರ್ಷಗಳ ಮೇಲೆ ಆಗಬೇಕು. ಒಂದು ಮಗುವಿಗೂ ಮತ್ತೊಂದು ಮಗುವಿಗೂ ಕನಿಷ್ಟ ೩ ವರ್ಷಗಳ ಅಂತರವಿರಬೇಕು. ಎಲ್ಲ ಅರ್ಹ ದಂಪತಿಗಳು ಕುಟುಂಬ ಕಲ್ಯಾಣದ ಯಾವುದಾದರೊಂದು ವಿಧಾನ ಅನುಸರಿಸಿ ಚಿಕ್ಕ ಕುಟುಂಬ ಹೊಂದಬೇಕು. ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಒತ್ತು ಕೊಡಬೇಕು.

ಸಂತಾನೋತ್ಪತ್ತಿ ಮತ್ತು ಮಗುವಿನ ಆರೋಗ್ಯ ಕಾರ್ಯಕ್ರಮದಡಿಯಲ್ಲಿ ಕುಟುಂಬ ಕಲ್ಯಾಣ ಯೋಜನೆಯ ಗುರಿ ಸಾಧನೆ ಇಲ್ಲದಿದ್ದರೂ, ಯಾವುದಾದರೊಂದು ಕಾರ್ಯಕ್ರಮ ಯಶಸ್ವಿಯಾಗಬೇಕಾದರೆ ಗುರಿ ಸಾಧನೆ ಬೇಕೇಬೇಕು. ಕರ್ನಾಟಕಕ್ಕೆ ಸಂಬಂಧಿಸಿದಂತೆ ಅಂಕಿ-ಅಂಶಗಳನ್ನು ಗಮನಿಸಿದಾಗ ಸಾಧನೆ ಕಡಿಮೆಯೇ. ಆದುದರಿಂದ ಜನರ ಮನವೊಲಿಸುವ ಕಾರ್ಯಕ್ರಮವಾಗಲೇಬೇಕು. ಶೇಕಡಾ ೫೦ಕ್ಕಿಂತ ಕಡಿಮೆ ಇರುವುದನ್ನು ಶೇಕಡಾ ೧೦೦ರಷ್ಟು ಮಾಡಬೇಕು. ಆಗಲೇ ಈ ಯೋಜನೆ ಯಶಸ್ವಿಯಾದಂತೆ. ರಾಷ್ಟ್ರ ಮತ್ತು ರಾಜ್ಯದಲ್ಲಿ ವರ್ಷದಿಂದ ವರ್ಷಕ್ಕೆ ಜನಸಂಖ್ಯೆ ಬೆಳೆಯುತ್ತಿದೆ. ಇಂದಿನ ಜನಸಂಖ್ಯೆ ೬೨೦ ಕೋಟಿ ಎಂದು ಅಂದಾಜು ಮಾಡಲಾಗಿದೆ. ಜಗತ್ತಿನಲ್ಲಿ ಹೀಗೆ ಜನಸಂಖ್ಯೆ ಬೆಳೆಯುತ್ತಾ ಹೋದರೆ ವಿಶ್ವದಲ್ಲಿ ಕ್ರಿ.ಶ. ೨೦೨೫ಕ್ಕೆ ೮೦೦ ಕೋಟಿ ಆಗಬಹುದೆಂದು ಅಂದಾಜು ಮಾಡಲಾಗಿದೆ. ಭಾರತದಲ್ಲಿ ಇನ್ನು ೩೭ ವರ್ಷಗಳಲ್ಲಿ ೨೦೦ ಕೋಟಿಗೂ ಹೆಚ್ಚು ಜನಸಂಖ್ಯೆಯಾಗುವುದು. ಭಾರತದಲ್ಲಿ ಪ್ರತಿವರ್ಷ ೧ ಕೋಟಿ ೫೬ ಲಕ್ಷ ಜನರು ಸೇರ್ಪಡೆಯಾಗುತ್ತಿದ್ದಾರೆ. ಕರ್ನಾಟಕದಲ್ಲಿ ಪ್ರತಿವರ್ಷ ೭ ಲಕ್ಷ ೭೫ ಸಾವಿರ ಜನ

ಹೆಚ್ಚಾಗುತ್ತಾರೆ. ಭಾರತದಲ್ಲಿ ೨೦೦೩ರ ಜೂನ್‌ಗೆ ಅಂದಾಜು ೧೦೫ ಕೋಟಿ ೮೦ ಲಕ್ಷ ಜನಸಂಖ್ಯೆಯಾಗಿದೆ. ಕರ್ನಾಟಕದಲ್ಲಿ ೫ ಕೋಟಿ ೪೦ ಲಕ್ಷವಾಗಲಿದೆ.

ರಾಜ್ಯದಲ್ಲಿ ೨೦೦೩ರ ಏಪ್ರಿಲ್‌ನಿಂದ ಆಗಸ್ಟ್‌ವರೆಗಿನ ಕುಟುಂಬ ಕಲ್ಯಾಣ ಯೋಜನೆಯ ಗುರಿ ಸಾಧನೆ ಹೀಗಿದೆ.

| | ವಾರ್ಷಿಕ ಗುರಿ | ಸಾಧನೆ |
|---|---|---|
| ಶಸ್ತ್ರಚಿಕಿತ್ಸೆ | ೪.೧೩ ಲಕ್ಷ | ೧.೫೮ ಲಕ್ಷ<br>೩೮.೩೨% |
| ವಂಕಿ | ೩.೨೧ ಲಕ್ಷ | ೧.೨೬ಲಕ್ಷ<br>೩೯.೧೯% |
| ಗರ್ಭ ನಿರೋಧಕ ಸಾಧನದ ಉಪಯೋಗ | ೨.೯೧ ಲಕ್ಷ | ೨.೭೫ ಲಕ್ಷ<br>೯೫.೨% |
| ನುಂಗುವ ಮಾತ್ರೆಗಳು | ೨.೦೨ ಲಕ್ಷ | ೧೪.೯ ಲಕ್ಷ<br>೭೩.೮೩% |
| ಚುಚ್ಚುಮದ್ದು | ೧೦.೭೬ ಲಕ್ಷ | ೪.೨೧ ಲಕ್ಷ<br>೩೯.೧೨% |
| ಪೋಲಿಯೊ | ೧೦.೭೬ ಲಕ್ಷ | ೪.೨೧ ಲಕ್ಷ<br>೩೯.೧೨% |
| ಬಿ.ಸಿ.ಜಿ. ಲಸಿಕೆ | ೧೦.೭೬ ಲಕ್ಷ | ೪.೫ ಲಕ್ಷ<br>೪೧.೮೨% |
| ದಡಾರದ ಲಸಿಕೆ | ೧೦.೭೬ ಲಕ್ಷ | ೩.೯೫ ಲಕ್ಷ<br>೩೬.೭೬% |
| ಟೆಟನಸ್ ಟಾಕ್ಸೈಡ್ | ೧೦.೭೬ ಲಕ್ಷ | ೪.೫೫ ಲಕ್ಷ<br>೩೮.೯% |

೩೦-೪೦ ವರ್ಷಗಳಿಂದ ದೇಶದಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮ, ಶಸ್ತ್ರಚಿಕಿತ್ಸೆ, ವಂಕಿ ಅಳವಡಿಸುವಿಕೆ, ನುಂಗುವ ಮಾತ್ರೆ, ನಿರೋಧ್ ಎಂಬ ನಾಲ್ಕು ಗರ್ಭನಿರೋಧಕ ಪದ್ಧತಿಗಳಲ್ಲಿನ ಸಾಧನೆಯನ್ನು ವರದಿ ಮಾಡಿದ ಸಂಖ್ಯೆಯಿಂದ ಮಾತ್ರ ಪ್ರಗತಿ ಅಳೆಯಲಾಗುತ್ತಿತ್ತು. ೧೯೯೪ರಲ್ಲಿ ಈಜಿಪ್ಟ್ ದೇಶದ ಕೈರೋದಲ್ಲಿ ನಡೆದ ಜನಸಂಖ್ಯೆ ಮತ್ತು ಬೆಳವಣಿಗೆಯ ಬಗ್ಗೆ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಚರ್ಚಿಸಿ ಮಾನವ ಕಲ್ಯಾಣ ಅಭಿವೃದ್ಧಿಯಾಗಬೇಕಾದರೆ ಸಂತಾನೋತ್ಪತ್ತಿ ಆರೋಗ್ಯದಲ್ಲಿಯೂ ಸಹ ಅಭಿವೃದ್ಧಿ ಅವಶ್ಯಕ ಎಂಬ ಅಭಿಪ್ರಾಯಕ್ಕೆ ಬಂತು.

೧೯೯೫ನೇ ವಿಶ್ವ ಬ್ಯಾಂಕ್ ವರದಿಯ ಮೇರೆಗೆ ಕುಟುಂಬ ಕಲ್ಯಾಣ ಕಾರ್ಯಕ್ರಮಗಳಲ್ಲಿನ ಗುರಿಗಳ ಬದಲು ಕಾರ್ಯಕ್ರಮಗಳಲ್ಲಿನ ಧ್ಯೇಯಗಳು ಮತ್ತು ಪುರುಷರ ವ್ಯಾಸೆಕ್ಟಮಿ ಹಾಗೂ ನಿರೋಧ್ ಗರ್ಭನಿರೋಧಕ ಪದ್ಧತಿಗಳನ್ನು ಅನುಸರಿಸುವ ಅಂಶಗಳ ಮೇಲೆ ಒತ್ತಾಸೆ ನೀಡಬೇಕೆಂದು ಸಲಹೆ ಮಾಡಿತು. ಕುಟುಂಬ ಯೋಜನೆ, ಕುಟುಂಬ ಕಲ್ಯಾಣ ಯೋಜನೆಯ ಕಾರ್ಯಕ್ರಮವಾದ ಮೇಲೆ ಮತ್ತೊಂದು ಹೊಸ ಕಾರ್ಯಕ್ರಮ ಜಾರಿಗೆ ಬಂದಿದೆ. ಅದೇ "ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳು" "Reproduction & Child Health Services" (RCH) Programme.

ಹಿಂದೆ ಕುಟುಂಬ ಕಲ್ಯಾಣ ಶಿಶುವಿನ ಉಳಿವು ಮತ್ತು ಸುರಕ್ಷಿತ ತಾಯ್ತನ, ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ ಮುಂತಾದ ಕಾರ್ಯಕ್ರಮಗಳ ಜೊತೆಗೆ ಇತರ ಕಾರ್ಯಕ್ರಮಗಳನ್ನು ಜಾರಿಗೊಳಿಸಿತ್ತು. ಈ ಸೇವೆಗಳ ಜೊತೆಗೆ ಜನನಾಂಗ ಮಾರ್ಗದ ಸೋಂಕು ಮತ್ತು ಲೈಂಗಿಕ ಸಂಪರ್ಕದ ಸೋಂಕು ಸೇರಿಸಿ ಸಮಗ್ರ ಮಹಿಳಾ ಆರೋಗ್ಯ ರಕ್ಷಣೆ ಮಾಡುವುದೇ ಸಂತಾನೋತ್ಪತ್ತಿ ಮತ್ತು ಮಗುವಿನ ಆರೋಗ್ಯ ಕಾರ್ಯಕ್ರಮ, ಸಮುದಾಯದ ಅಗತ್ಯಗಳ ನಿಗದಿ ವಿಧಾನಗಳನ್ನು ಅನುಸರಿಸಿ ಪುರುಷರ ಸಹಭಾಗಿತ್ವದೊಂದಿಗೆ ಉನ್ನತ ಗುಣಾತ್ಮಕ ಸೇವೆಗಳ ಮೂಲಕ, ಸಮಗ್ರ ಮಹಿಳಾ ಆರೋಗ್ಯ ರಕ್ಷಣೆಯೇ ಈ ಕಾರ್ಯಕ್ರಮದ ಮುಖ್ಯ ಉದ್ದೇಶವಾಗಿದೆ.

೧. ಜನರ ಅಥವಾ ಸಮುದಾಯದ ಅವಶ್ಯ ಸೇವೆಗಳನ್ನು ಕಾರ್ಯಕ್ರಮದ ಅಪೇಕ್ಷಿತ ಪರಿಣಾಮ ಹಾಗೂ ಹಿಂದಿನ ಸಾಧನೆಗಳನ್ನು ಆಧರಿಸಿ ಯೋಜನೆ ರೂಪಿಸಿ ಕಾರ್ಯಕ್ರಮ ಹಮ್ಮಿಕೊಳ್ಳುವುದು ಮತ್ತು ಆ ಪ್ರಕಾರ ಸೇವೆಗಳನ್ನು ಒದಗಿಸುವುದು. ಕಾರ್ಯ ಯೋಜನೆ ರೂಪಿಸುವಾಗ ಹಾಗೂ ಸೇವೆಗಳನ್ನು ಒದಗಿಸುವಾಗ ಜನರನ್ನು ಸೇರಿಸಿ ಅವರಿಗೆ ಸೂಕ್ತ ಮಾಹಿತಿ ಒದಗಿಸಿ ಅವರಿಂದಲೇ ಬೇಡಿಕೆ ಬರುವಂತೆ ಮಾಡುವುದೇ ವಿಕೇಂದ್ರೀಕೃತ ಸಹಭಾಗಿತ್ವ ಯೋಜನೆ.

೨. ನೀಡಬೇಕಾದ ಸೇವೆಗಳ ಪೂರ್ತಿ ಅರಿವು ಮೂಡಿಸಿಕೊಂಡು ಅದಕ್ಕೆ ಬೇಕಾದ ಎಲ್ಲ ಸೌಲಭ್ಯಗಳನ್ನು ಜನರಿಗೆ ನೀಡುವುದೇ ಗುಣಾತ್ಮಕ ಸೇವೆ.

೩. ಕುಟುಂಬದ ಎಲ್ಲ ಸದಸ್ಯರ ಆರೋಗ್ಯ ರಕ್ಷಣೆ ತನ್ನ ಆದ್ಯ ಕರ್ತವ್ಯ ಎಂದು ಪುರುಷರು ಅರಿತು ಆ ರೀತಿ ಕ್ರಿಯಾತ್ಮಕವಾಗಿ ಭಾಗಿಯಾಗುವಂತೆ ನೋಡಿಕೊಳ್ಳುವುದು ಮತ್ತು ಕುಟುಂಬ ಯೋಜನೆ ಪದ್ಧತಿಯನ್ನು ಅನುಸರಿಸುವುದು.

ಈ ಮೇಲಿನ ತತ್ವಗಳ ಆಧಾರದ ಮೇಲೆ ಸಂತಾನೋತ್ಪತ್ತಿ ಮತ್ತು ಮಗುವಿನ ಆರೋಗ್ಯ ಸೇವೆಗಳು ಈ ರೀತಿ ಇವೆ.

### ೧. ಸಂತಾನ ನಿಯಂತ್ರಣ :

ಗರ್ಭಧಾರಣೆ ಆಕಸ್ಮಿಕ ಅಥವಾ ಅನಪೇಕ್ಷಿತವಾಗಿರಬಾರದು. ವೈದ್ಯಕೀಯ ಗರ್ಭಪಾತ ಸೌಲಭ್ಯ ಒದಗಿಸುವುದು, ಯೋಜಿತ ಮತ್ತು ಅಪೇಕ್ಷಿತ ಗರ್ಭಧಾರಣೆಗೆ ತಿಳುವಳಿಕೆ, ಮದುವೆ ವಯಸ್ಸು, ಲೈಂಗಿಕ ಆರೋಗ್ಯ, ಕುಟುಂಬ ಕಲ್ಯಾಣ ವಿಧಾನಗಳ ಬಗ್ಗೆ ಶಿಕ್ಷಣ ಮತ್ತು ಅವಶ್ಯ ಸೇವೆಗಳನ್ನು ಒದಗಿಸುವುದು.

### ೨. ಸುರಕ್ಷಿತ ತಾಯ್ತನ :

ಹೆರಿಗೆ ಮುಂಚೆ ನೀಡುವ ಸೇವೆಗಳು ಗರ್ಭಿಣಿಯರ ದಾಖಲಾತಿ, ಟಿ.ಟಿ. ಚುಚ್ಚುಮದ್ದು ನೀಡುವುದು, ಅಪಾಯದಲ್ಲಿರುವ ಗರ್ಭಿಣಿಯರ ಪತ್ತೆ ಮಾಡುವುದು, ರಕ್ತಹೀನತೆ ಪತ್ತೆ, ಉಪಚಾರ, ಬಸಿರಿನ ನಂಜು ಪತ್ತೆ, ಹೆಚ್ಚಿನ ಚಿಕಿತ್ಸೆಗೆ ಕಳುಹಿಸಿವುದು, ಪಂಚ ಶುಚಿತ್ವದ ಹೆರಿಗೆ ಸಿದ್ಧತೆಯ ಬಗ್ಗೆ ತಿಳುವಳಿಕೆ, ಪೌಷ್ಟಿಕ ಆಹಾರದ ಬಗ್ಗೆ ತಿಳಿಸುವುದು. ಸುರಕ್ಷಾ ಹೆರಿಗೆ ಚೀಲ ಒದಗಿಸುವುದು.

**ಹೆರಿಗೆ ಸಮಯದ ಸೇವೆಗಳು** : ಹೆರಿಗೆ ಚಿಹ್ನೆಗಳನ್ನು ಗುರುತಿಸುವುದು ಮತ್ತು ಸುರಕ್ಷಿತ ಹೆರಿಗೆ, ಅಪಾಯಕಾರಿ ಚಿಹ್ನೆಗಳನ್ನು ಗುರುತಿಸಿ ಹೆಚ್ಚಿನ ಚಿಕಿತ್ಸೆಗೆ ಕಳುಹಿಸುವ ವ್ಯವಸ್ಥೆ, ನವಜಾತ ಶಿಶುವಿಗೆ ಉಸಿರಾಟದ ತೊಂದರೆ ಉಂಟಾದರೆ ಪ್ರಥಮ ಚಿಕಿತ್ಸೆ, ಉಷ್ಣ ಕಡಿಮೆ ಆಗದಂತೆ ನಿರ್ವಹಣೆ ಮಾಡುವುದು.

**ಹೆರಿಗೆ ನಂತರ ಸೇವೆಗಳು** : ಎದೆಹಾಲು ಉಣಿಸುವ ಬಗ್ಗೆ ತಿಳುವಳಿಕೆ, ಬೆಂಬಲ ನೀಡುವುದು, ಬಾಣಂತಿ ನಂಜು ಪತ್ತೆ ಮಾಡಿ ಹೆಚ್ಚಿನ ಚಿಕಿತ್ಸೆಗೆ ಕಳುಹಿಸಿವುದು, ಸ್ತನಗಳ ಸ್ವಚ್ಛತೆ, ಮಕ್ಕಳಿಗೆ ಲಸಿಕೆ ಹಾಕಿಸುವುದು, ಅಂತರದ ಹೆರಿಗೆ ಮುಂತಾದವುಗಳ ಬಗ್ಗೆ ಶಿಕ್ಷಣ ನೀಡುವುದು.

### ೩. ಮಗುವಿನ ಆರೋಗ್ಯ :

ಎದೆಹಾಲಿನ ಮಹತ್ವದ ಬಗ್ಗೆ ತಾಯಿಗೆ ತಿಳುವಳಿಕೆ, ಮಕ್ಕಳಿಗೆ ಪೂರಕ ಆಹಾರ ನೀಡುವ ಬಗ್ಗೆ ಶಿಕ್ಷಣ, ಆರು ಮಾರಕ ರೋಗಗಳ ವಿರುದ್ಧ ಲಸಿಕೆ ನೀಡಿಕೆ, ಕಡಿಮೆ ತೂಕದ ಮಕ್ಕಳಲ್ಲಿ ಅಪಾಯಕಾರಿ ಚಿಹ್ನೆಗಳನ್ನು ಗುರುತಿಸಿ ಹೆಚ್ಚಿನ ಚಿಕಿತ್ಸೆಗೆ ಕಳುಹಿಸುವುದು,

ಅತಿಸಾರ ಭೇದಿ, ನ್ಯೂಮೋನಿಯಾ ಪ್ರಕರಣಗಳ ಪತ್ತೆ ಮತ್ತು ಉಪಚಾರ, 'ಎ' ಅನ್ನಾಂಗದ ವಿತರಣೆ, ಓ.ಆರ್.ಎಸ್. ಪಾಕೇಟುಗಳ ವಿತರಣೆ, ಸಲಹೆ ಇತ್ಯಾದಿ.

### ೪. ಜನನಾಂಗ ಮಾರ್ಗದ ಸೋಂಕು, ಲೈಂಗಿಕ ಸಂಪರ್ಕದ ಸೋಂಕು :

ಮಹಿಳೆ ಮತ್ತು ಪುರುಷರಲ್ಲಿ ಈ ಸೋಂಕುಗಳ ಬಗ್ಗೆ ತಿಳುವಳಿಕೆ ಮೂಡಿಸುವುದು. ಜನನಾಂಗ ಮಾರ್ಗದ ಸೋಂಕಿನಲ್ಲಿ ಮಹಿಳೆಯರಲ್ಲಿ ಯೋನಿಸ್ರಾವವಾಗುವುದು, ಕಿಬ್ಬೊಟ್ಟೆ ನೋವು, ಜನನ ಮಾರ್ಗದಲ್ಲಿ ಉರಿ, ಹುಣ್ಣುಗಳು ಇತ್ಯಾದಿಗಳನ್ನು ಗುರುತಿಸುವುದು. ಲೈಂಗಿಕ ಸಂಪರ್ಕದ ಸೋಂಕಿನಲ್ಲಿ ವಾಸನೆ ಸಹಿತ ಯೋನಿಸ್ರಾವ, ಜನನೇಂದ್ರಿಯದಲ್ಲಿ ಹುಣ್ಣು ಮತ್ತು ತೊಡೆ ಸಂದುಗಳಲ್ಲಿ ಊತ ಇತ್ಯಾದಿ ಪತ್ತೆ ಮಾಡುವುದು. ಲೈಂಗಿಕ ಸಂಪರ್ಕದ ಸೋಂಕುಗಳ ಬಗ್ಗೆ ಉದಾರಹಣೆಗೆ ಬಿಳಿಸೆರಗು, ಹೆಣ್ಣು ಮಕ್ಕಳಿಗೆ ಗುಂಪಿನಲ್ಲಿ ಶಿಕ್ಷಣ ನೀಡುವುದು, ಲೈಂಗಿಕ ಅಂಗಾಂಗಗಳ ಸ್ವಚ್ಛತೆ ಬಗ್ಗೆ ತಿಳುವಳಿಕೆ ನೀಡುವುದು.

ಅಲ್ಲದೆ ಯುವಕ-ಯುವತಿಯರಿಗೆ ಸಂತಾನೋತ್ಪತ್ತಿ ಅಂಗಾಂಗಗಳ ಪರಿಚಯ, ಜನನಾಂಗಗಳ ಸ್ವಚ್ಛತೆ, ಮುಟ್ಟಾಗುವಿಕೆ ಮತ್ತು ವೈಯಕ್ತಿಕ ಸ್ವಚ್ಛತೆ, ಗರ್ಭಧಾರಣೆ ಮತ್ತು ಗರ್ಭ ನಿರೋಧಕಗಳ ತಿಳುವಳಿಕೆ ಹಾಗೂ ಪೌಷ್ಟಿಕ ಆಹಾರ ಮತ್ತು ಶಿಕ್ಷಣ ನೀಡುವುದು ಅತ್ಯಾವಶ್ಯಕ. ಸಂತಾನೋತ್ಪತ್ತಿ ಮತ್ತು ಮಕ್ಕಳ ಆರೋಗ್ಯ ಸೇವೆಗಳು, ಸಮುದಾಯದ ಮಟ್ಟ, ಉಪಕೇಂದ್ರದ ಮಟ್ಟ, ಪ್ರಾಥಮಿಕ ಆರೋಗ್ಯ ಕೇಂದ್ರಗಳ ಮಟ್ಟ, ಪ್ರಥಮ ಮೇಲ್ಮಟ್ಟ ಘಟಕ ಅಥವಾ ಜಿಲ್ಲಾ ಆಸ್ಪತ್ರೆಯ ಮಟ್ಟಗಳಲ್ಲಿ ವಿವಿಧ ಸೇವೆಗಳನ್ನು ಒದಗಿಸುವುದು.

ಕೇವಲ ಕುಟುಂಬ ಯೋಜನ ಎಂಬ ಸಂಕುಚಿತವಾದ ಮಿತಿಗೆ ಒಳಪಡದೆ ಮಾನವ ಲೈಂಗಿಕ ಮತ್ತು ಜೀವನ ಚಕ್ರದ ವಿವಿಧ ಹಂತಗಳನ್ನು ಆರಿಸಿಕೊಳ್ಳುತ್ತದೆ ಈ RCH ಕಾರ್ಯಕ್ರಮ. ಗುರಿ ರಹಿತ ಕುಟುಂಬ ಕಲ್ಯಾಣ ಯೋಜನೆಯನ್ನು ಜಾರಿಗೆ ತಂದಿರುವುದು ಜನನ ನಿಯಂತ್ರಣದ ಕುಂಠಿತಕ್ಕೆ ಕಾರಣವಾಗುವ ಭಯವಾಗುವುದು. ಗುರಿ-ಸಾಧನೆ ಇಲ್ಲದಿದ್ದರೆ ಇದರ ಪ್ರಚಾರ ಹಳ್ಳಿಯ ಜನರಿಗೆ ತಿಳುವಳಿಕೆ ಶಿಕ್ಷಣ ನೀಡದಿದ್ದರೆ ಜನಸಂಖ್ಯೆ ಲಂಗುಲಗಾಮಿಲ್ಲದೆ ಬೆಳೆಯಲಾರಂಭಿಸುವುದು. ವೈದ್ಯರು, ಆರೋಗ್ಯ ಕಾರ್ಯಕರ್ತರು ನಿಷ್ಕ್ರಿಯೆ ತಾಳುವರು. ಇತ್ತೀಚಿನ ೨೦೦೩ರ ಅಂಕಿಅಂಶಗಳನ್ನು ಗಮನಿಸಿದಾಗ ಶಸ್ತ್ರಚಿಕಿತ್ಸೆ ಶೇ. ೪೦ಕ್ಕೂ ಕಡಿಮೆ ಇರುವುದು ಇದಕ್ಕೆ ಉದಾಹರಣೆಯಾಗಿದೆ. ಯಾವುದಕ್ಕೂ ಒತ್ತಡವಿಲ್ಲದಿದ್ದರೆ ಆ ಕೆಲಸ ಸುಸೂತ್ರವಾಗಿ ಸಾಗದು. ಕುಟುಂಬ ಯೋಜನಾ ಶಸ್ತ್ರಚಿಕಿತ್ಸಾ ಕಾರ್ಯಕ್ರಮ ಯಶಸ್ವಿಯಾಗದೇ ಹೋದರೆ, ಜನಪ್ರಳಯ ನಿಯಂತ್ರಿಸದಿದ್ದರೆ, ಹಳ್ಳಿಯೇನು ಪಟ್ಟಣಗಳ ಅಭಿವೃದ್ಧಿಯೂ ಅಸಾಧ್ಯ. ತಿಳುವಳಿಕೆ ಸಾಲದ, ಅವಿದ್ಯಾವಂತ, ಮೂಢನಂಬಿಕೆಯುಳ್ಳ ಹಳ್ಳಿಯ ಜನರಿಗೆ ಈ ಕಾರ್ಯಕ್ರಮದ ಅವಶ್ಯಕತೆಯನ್ನು ಒತ್ತಿ ಹೇಳಿದಾಗಲೇ ಈ ಜನನ ನಿಯಂತ್ರಣವಾಗುವುದು. ಹಳ್ಳಿ-ದೇಶ ಅಭಿವೃದ್ಧಿಯನ್ನು ಕಾಣಬಹುದು.

RCH ಕಾರ್ಯಕ್ರಮದಲ್ಲಿ ಹೊಸತೇನೂ ಇಲ್ಲ. ಈ ಎಲ್ಲ ಕಾರ್ಯಕ್ರಮಗಳೂ ಹಿಂದಿನಿಂದಲೂ ಇದ್ದುವು. ಹೆಸರಿಗೆ ಕುಟುಂಬ ಯೋಜನೆ, ಕುಟುಂಬ ಕಲ್ಯಾಣ ಕಾರ್ಯಕ್ರಮವೆಂದರೂ ಮಿಕ್ಕೆಲ್ಲವೂ ಅನುಷ್ಠಾನದಲ್ಲಿ ಇತ್ತು. ಈಗಲಾದರೂ ಏನು 'Old wine in a new bottle' ಎಂದಂತಾಗಿದೆ ಅಷ್ಟೇ. ಕಾರ್ಯಕ್ರಮದ ಹೆಸರು ಏನೇ ಆಗಲೀ, ಆರೋಗ್ಯ ಮತ್ತು ಕುಟುಂಬ ಕಲ್ಯಾಣದಿಂದ ಜನರ ಅಭಿವೃದ್ಧಿ, ದೇಶದ ಅಭಿವೃದ್ಧಿಯಾಗುವುದರಲ್ಲಿ ಯಾವ ಅನುಮಾನವೂ ಇಲ್ಲ.

●

(ಈ ಲೇಖನ ಸಿದ್ಧಪಡಿಸುವಾಗ ರಾಜ್ಯ ಕುಟುಂಬ ಕಲ್ಯಾಣ ಕಾರ್ಯಾಲಯದ ಮಾಹಿತಿ, ಶಿಕ್ಷಣ, ಸಂಪರ್ಕ ವಿಭಾಗದ ಸಾಹಿತ್ಯವನ್ನು ಬಳಸಿಕೊಳ್ಳಲಾಗಿದೆ.)




# ಭಾರತೀಯ ವೈದ್ಯ ಪದ್ಧತಿ

ಡಾ. ಎನ್. ಅನಂತರಾಮನ್

ಅನೇಕ ಹಳ್ಳಿಗಳು, ಗ್ರಾಮಗಳು ಸೇರಿ ಒಂದು ರಾಜ್ಯವಾಗುತ್ತದೆ. ಅಂತೆಯೇ ಅನೇಕ ರಾಜ್ಯಗಳು ಒಗ್ಗೂಡಿ ಒಂದು ದೇಶವಾಗುತ್ತದೆ. ಯಾವುದೇ ದೇಶದ ಮೂಲವೆಂದರೆ ಅದು ನಮ್ಮ ಹಳ್ಳಿಗಳಾಗಿವೆ. ಅದರಲ್ಲೂ ಭಾರತ ದೇಶದ ಬೆನ್ನೆಲುಬು ಹಳ್ಳಿಗಳಾಗಿವೆ. ಆದ್ದರಿಂದ ಒಂದು ಹಳ್ಳಿಯು ಸರ್ವತೋಮುಖವಾಗಿ ಅಭಿವೃದ್ಧಿಯಾದರೆ ತನ್ಮೂಲಕ ದೇಶವು ಮುಂದೆ ಬರುತ್ತದೆ. ಗ್ರಾಮೀಣಾಭಿವೃದ್ಧಿಯೆಂದರೆ ಕೃಷಿಯಲ್ಲಿ ಸಾಧನೆ, ಮೂಲಭೂತವಾದ ಸೌಕರ್ಯಗಳು, ರಸ್ತೆಗಳು, ವಿದ್ಯುತ್ತು, ಶುದ್ಧವಾದ ನೀರು, ಶೌಚಾಲಯಗಳನ್ನು ನಿರ್ಮಿಸುವುದು ಇತ್ಯಾದಿ. ಇವುಗಳೊಂದಿಗೆ ಗ್ರಾಮೀಣ ಜನರ ಆರೋಗ್ಯವನ್ನು ಕಾಪಾಡಲು ರೋಗ ನಿರೋಧಕ ಚುಚ್ಚುಮದ್ದುಗಳನ್ನು ನೀಡುವುದು ಮತ್ತು ರೋಗಗಳ ನಿವಾರಣೆಗೆ ಆಸ್ಪತ್ರೆಗಳ ನಿರ್ಮಾಣವು ನಡೆಯುತ್ತಿದೆ. ಹಳ್ಳಿಗಳಲ್ಲಿ ನೆಲೆಸಿರುವ ವಿವಿಧ ವೈದ್ಯ ಪದ್ಧತಿಯ ಖಾಸಗಿ ವೈದ್ಯರು ಹಳ್ಳಿಯ ಜನರ ಆರೋಗ್ಯ ಕಾಪಾಡುವ ಕೆಲಸ ಮಾಡುತ್ತಿದ್ದಾರೆ.ಈ ನಿಟ್ಟಿನಲ್ಲಿ ನಮ್ಮದೇ ದೇಶದ ವೈದ್ಯ ಪದ್ಧತಿಯಾದ ಆಯುರ್ವೇದವು ಯಾವ ರೀತಿಯಲ್ಲಿ ಗ್ರಾಮೀಣಾಭಿವೃದ್ಧಿಗೆ ಸಹಕಾರಿಯಾಗಬಲ್ಲದು? ಈ ವೈದ್ಯ ಪದ್ಧತಿಯನ್ನು ಗ್ರಾಮ ಗ್ರಾಮಕ್ಕೆ ತಲುಪಿಸಿದರೆ, ಈಗಿರುವ ಆಧುನಿಕ ವೈದ್ಯ ಪದ್ಧತಿಗಿಂತಲೂ ಹೇಗೆ ಉಪಯುಕ್ತವಾಗುತ್ತದೆ? ಎಂಬುದನ್ನು ಈ ಲೇಖನದಲ್ಲಿ ಚರ್ಚಿಸಲಾಗಿದೆ. ಆಯುರ್ವೇದ ಚಿಕಿತ್ಸಾ ಪದ್ಧತಿಯು ಯಾವುದೇ ಮತ, ಭಾಷೆ ಮತ್ತು ದೇಶಕ್ಕೆ ಸೀಮಿತವಾದದ್ದಲ್ಲ. ಇದು ಇಡೀ ಮಾನವ ಕುಲದ ಸರ್ವಾಂಗೀಣವಾದ ಆರೋಗ್ಯ ಅಭಿವೃದ್ಧಿಗೆ ಶ್ರಮಿಸುವ ದಾರಿದೀಪವಾಗಿದೆ. ಆದ್ದರಿಂದ ಪ್ರಾಚೀನವಾದ ಆಯುರ್ವೇದವು ಇಂದಿಗೂ ಇಡೀ ವಿಶ್ವದ ಜನರ ಆರೋಗ್ಯ ರಕ್ಷಣೆ ಮತ್ತು ರೋಗ ನಿವಾರಣೆಯಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಈ ವೈದ್ಯ ಪದ್ಧತಿಯಲ್ಲಿನ ಸರ್ವಕಾಲೀನವಾದ ನಿತ್ಯಸತ್ಯವಾದ ಸಿದ್ಧಾಂತಗಳು ಮುಂದೆ ಬರುವ ಕಾಲದಲ್ಲೂ ಗಟ್ಟಿಯಾಗಿ ಮತ್ತು ಜನರಿಗೆ ಉಪಯುಕ್ತವಾಗಿ ಉಳಿಯುತ್ತದೆ. ಇಂತಹ ಆಯುರ್ವೇದವನ್ನು ನಮ್ಮ ಪೂರ್ವಿಕರು ಗ್ರಾಮೀಣ ಅಭಿವೃದ್ಧಿಗೆ ಹೇಗೆ ಬಳಸುತ್ತಿದ್ದರು ಎಂಬುದನ್ನು ತಿಳಿಯೋಣ. ನಮ್ಮ ಪೂರ್ವಿಕರ ಜೀವನದ ಮುಖ್ಯವಾದ ತತ್ವಗಳೆಂದರೆ ಅದು ಸರಳತೆ ಮತ್ತು ಸ್ವಾತಂತ್ರ್ಯಪ್ರಿಯತೆ. ಉದಾಹರಣೆಗೆ, ಬೆಳಗ್ಗೆ ಎದ್ದೊಡನೆ ನಾವೆಲ್ಲರೂ ಹಲ್ಲುಗಳ ಆರೋಗ್ಯ ರಕ್ಷಣೆಗೆ ಮತ್ತು ಬಾಯಿ ದುರ್ಗಂಧ ನಿವಾರಣೆಗೆ ಹಲ್ಲುಗಳನ್ನು ಉಜ್ಜಿ, ನಾಲಿಗೆಯನ್ನು ತಿಕ್ಕಿಕೊಳ್ಳುತ್ತೇವೆ. ಇದು ಗ್ರಾಮೀಣ ಮತ್ತು ನಗರಗಳಲ್ಲಿರುವ ಎಲ್ಲಾ ಜನರೂ

**ಆಯುರ್ವೇದ ಚಿಕಿತ್ಸಾ ಪದ್ಧತಿ ಯಾವುದೇ ಮತ, ಭಾಷೆ ಮತ್ತು ದೇಶಕ್ಕೆ ಸೀಮಿತ ವಾದುದು ಅಲ್ಲ. ಇಡೀ ಮಾನವ ಕುಲದ ಸರ್ವಾಂಗೀಣ ಆರೋಗ್ಯ ಅಭಿವೃದ್ಧಿಗೆ ಶ್ರಮಿಸುವ ದಾರಿ ದೀಪವಾಗಿದೆ. ಇಂದಿಗೂ ವಿಶ್ವದ ಜನರಲ್ಲಿ ಆ ನಂಬಿಕೆ ಇದೆ.**

ಆಚರಿಸುವ ಕ್ರಮವಾಗಿದೆ. ಹಲ್ಲುಗಳನ್ನು ಉಜ್ಜಿಕೊಳ್ಳಲು ದುಬಾರಿ ಬೆಲೆಯ ಅನೇಕ ಟೂತ್ ಪೇಸ್ಟ್‌ಗಳು ಮತ್ತು ಟೂತ್‌ಬ್ರಷ್‌ಗಳು ಇಂದು ಲಭ್ಯವಿದೆ. ಮೇಲಿನ ಟೂತ್ ಪೇಸ್ಟ್‌ಗಳಿಗಿಂತ ಹೆಚ್ಚು ನಮ್ಮ ಹಲ್ಲು, ವಸಡುಗಳನ್ನು ರಕ್ಷಿಸುವ ಮತ್ತು ಖರ್ಚೇ ಇಲ್ಲದ ಉಪಾಯಗಳು ನಮ್ಮ ಪೂರ್ವಿಕರಿಗೆ ಗೊತ್ತಿತ್ತು. ಅದೇ ಹಳ್ಳಿಗಳಲ್ಲಿ ತಂತಾನೇ ಬೆಳೆಯುವ ಎಕ್ಕ, ಬೇವು, ಹೊಂಗೆ ಮುಂತಾದ ಸಸ್ಯಗಳ ಕಡ್ಡಿಗಳು. ಒಂದು ಗೇಣು ಉದ್ದವಿರುವ ಮೇಲಿನ ಔಷಧ ಮೂಲಿಕೆಗಳ ಕಡ್ಡಿಯನ್ನು ತಂದು ಒಂದು ತುದಿಯನ್ನು ಕಲ್ಲಿನಿಂದ ಜಜ್ಜಿ ಬ್ರಷ್‌ನಂತೆ ಮಾಡಿಕೊಂಡು ಹಲ್ಲುಗಳನ್ನು ಉಜ್ಜಿ ನಂತರ ಆ ಕಡ್ಡಿಯನ್ನು ಬಿಸಾಡಬೇಕು. ಮುಂದಿನ ಸಲ ಹಲ್ಲುಜ್ಜುವಾಗ ಮತ್ತೊಂದು ಹೊಸ ಕಡ್ಡಿಯನ್ನು ಹಿಂದೆ ತಿಳಿಸಿರುವಂತೆಯೇ ಬಳಸಬೇಕು. ಒಮ್ಮೆ ಯೋಚಿಸಿ, ಮೇಲಿನ ಕ್ರಮದಿಂದ ಎಷ್ಟು ಹಣವು ಉಳಿತಾಯವಾಗುತ್ತದೆ ಮತ್ತು ಪ್ರತಿಸಲ ಹೊಸಕಡ್ಡಿಗಳನ್ನು ಬಳಸುವುದರಿಂದ ಎಷ್ಟು ಸ್ವಚ್ಛತೆ ಉಳಿಯುತ್ತದೆ. ಈ ಕ್ರಮವನ್ನು ಈಗಲೂ ಗ್ರಾಮೀಣ ಜನರು ಮಾತ್ರವಲ್ಲದೇ ಎಲ್ಲರೂ ಅನುಸರಿಸಬಹುದು.

ನಮ್ಮ ಪೂರ್ವಿಕರು ಪ್ರತಿಯೊಂದು ಮನೆಯ ಮುಂದೆ ಹೆಚ್ಚು ತುಳಸಿ ಗಿಡಗಳನ್ನು ಬೆಳೆಸುತ್ತಿದ್ದರು. ಇದು ಧಾರ್ಮಿಕವಾಗಿ ಹೆಚ್ಚಿನ ಮಹತ್ವವನ್ನು ಹೊಂದಿದೆ. ಆರೋಗ್ಯದ ದೃಷ್ಟಿಯಿಂದಲೂ ಇದನ್ನು ಹೆಚ್ಚು ಹೆಚ್ಚು ಬೆಳೆಸುವುದು ಒಳ್ಳೆಯದು. ತುಳಸಿ ಗಿಡದ ಮೇಲೆ ಬೀಸುವ ಗಾಳಿಯಿಂದ ಅನೇಕ ಸಾಂಕ್ರಾಮಿಕ ರೋಗಗಳು ತಡೆಗಟ್ಟಲ್ಪಡುತ್ತವೆ ಮತ್ತು ತುಳಸಿಯ ರಸವನ್ನು ಸೇವಿಸುವುದರಿಂದ ಸಾಮಾನ್ಯ ರೋಗಗಳಾದ ನೆಗಡಿ, ಕೆಮ್ಮು, ಜ್ವರಗಳು ನಿವಾರಣೆಯಾಗುತ್ತವೆ. ಇಂದಿಗೂ ಗ್ರಾಮೀಣ ಜನರಿಗೆ ಪ್ರತಿಯೊಂದು ಮನೆಯ ಮುಂದೆ ಅನೇಕ ತುಳಸಿ ಗಿಡಗಳನ್ನು ಬೆಳೆಸಲು ಪ್ರೋತ್ಸಾಹಿಸಬೇಕು. ಇದೇ ಉದ್ದೇಶದಿಂದ ಹಿಂದೆ ಗ್ರಾಮೀಣ ಪ್ರದೇಶಗಳಲ್ಲಿ ಸಾಲು ಮರವಾಗಿ ಬೇವನ್ನು ಬೆಳೆಸುತ್ತಿದ್ದರು. ಇದರ ಮೇಲೆ ಬೀಸುವ ಗಾಳಿಯು ಇಡೀ ಗ್ರಾಮವನ್ನು ರೋಗರಹಿತವಾಗಿಡುತ್ತದೆ. ಹೆಚ್ಚು ಬೇವಿನಮರಗಳನ್ನು ಬೆಳೆಸಲಿ ಎಂಬ ಉದ್ದೇಶದಿಂದ ಹಿಂದೆ ಅರಳಿಮರಕ್ಕೆ (ಅಶ್ವತ್ಥನಾರಾಯಣ) ಮತ್ತು ಬೇವಿನಮರಕ್ಕೆ (ಅಶ್ವತ್ಥಲಕ್ಷ್ಮಿ) ಮದುವೆಯನ್ನು ಮಾಡಿಸುತ್ತಿದ್ದರು!! ಈ ನಂಬಿಕೆಯಿಂದ ಪ್ರತಿಯೊಂದು ಗ್ರಾಮದಲ್ಲೂ ಬೇವು ಮತ್ತು ನೆರಳು ಕೊಡುವ ಅರಳಿಮರಗಳು ಇದ್ದವು. ಮಾವಿನ ತೋಪುಗಳು, ಹಿಪ್ಪೆ ತೋಪುಗಳು ಇದ್ದವು. ಈಗಲೂ ಹೊಲ, ಗದ್ದೆಗಳ ಬದುವಿಗೆ ಮತ್ತು ಹಳ್ಳಿಗಳ ರಸ್ತೆಯಲ್ಲಿ ಸಾಲುಮರವಾಗಿ ಬೇವು, ಹೊಂಗೆ ಮರಗಳನ್ನು ಬೆಳೆಸಬೇಕು. ಗದ್ದೆಗಳ ಬದುವಿನಲ್ಲಿ ತಂತಿಯ ಬೇಲಿಯನ್ನು ಹಾಕುವ ಬದಲಾಗಿ ಆಡು ಸೋಗೆ ಗಿಡಗಳನ್ನು ಬೆಳೆಸಬಹುದು. ೬ ರಿಂದ ೮ ಅಡಿಗಳಷ್ಟು ಎತ್ತರವಾಗಿ ಪೊದೆಯಂತೆ ಬೆಳೆಯುವ ಈ ಗಿಡದ ಎಲೆಗಳು ಕಹಿಯಾದ್ದರಿಂದ ದನ ಮುಂತಾದ ಪ್ರಾಣಿಗಳು ತಿನ್ನುವುದಿಲ್ಲ. ಇದರ ಎಲೆಗಳನ್ನು ಒಂದು ಹಿಡಿಯಷ್ಟು ಕಿತ್ತು ಚೆನ್ನಾಗಿ ತೊಳೆದು ಕುಟ್ಟಿ ರಸವನ್ನು ತೆಗೆಯಬೇಕು. ಎರಡು ಚಮಚದಷ್ಟು ಇದರ ರಸವನ್ನು ಜೇನುತುಪ್ಪದೊಡನೆ ದಿನಕ್ಕೆ ಮೂರು, ನಾಲ್ಕು ವೇಳೆ ಸೇವಿಸಿದರೆ ಆಗಾಗ್ಗೆ ಕಾಡುವ ಕೆಮ್ಮು, ಉಬ್ಬಸ ಗುಣವಾಗುವುದು. ಬೀಡಿ, ಸಿಗರೇಟ್ ಸೇದುವುದರಿಂದ ಬರುವ ಕೆಮ್ಮು, ಕಫದಲ್ಲಿ ರಕ್ತ ಬೀಳುವುದನ್ನು ಇದು ತಡೆಗಟ್ಟುತ್ತದೆ.

ಇದೇ ರೀತಿಯಲ್ಲಿ ಗದ್ದೆಗಳ ಬದುವಿನಲ್ಲಿ ಲಕ್ಕಿ ಗಿಡವನ್ನು ಬೆಳೆಸಬಹುದು. ೨೦-೩೦ ಅಡಿ ಎತ್ತರ ಬೆಳೆಯುವ ಈ ಮರದ ಎಲೆಗಳು ಅಮೂಲ್ಯವಾದ ಔಷಧ ಗುಣಗಳನ್ನು ಪಡೆದಿವೆ. ಇದರ ಎಲೆಗಳನ್ನು ನೀರಿನಲ್ಲಿ ಕುದಿಸಿ ತಯಾರಿಸಿದ ಕಷಾಯವನ್ನು ಸೇವಿಸುವುದರಿಂದ ಸಂಧಿ ನೋವುಗಳು ಶಮನವಾಗುತ್ತದೆ. ಇದೇ ಕಷಾಯವನ್ನು ಹದವಾಗಿ ಬಿಸಿ ಮಾಡಿ ಮೈಮೇಲೆ ಸುರಿದರೆ ಮೂಗೇಟು, ಕೀಲುನೋವುಗಳು ಗುಣವಾಗುತ್ತವೆ. ಹಿಂದಿನ ಕಾಲದಲ್ಲಿ ಗ್ರಾಮೀಣ ಜನರಿಗೆ ತಮ್ಮ ಸುತ್ತಮುತ್ತ ಬೆಳೆಯುವ ಗಿಡಮೂಲಿಕೆಗಳ ಪರಿಚಯವು ಚೆನ್ನಾಗಿತ್ತು. ಅವುಗಳನ್ನು ಬಳಸಿ ತಾವೇ ಸಾಮಾನ್ಯ ಖಾಯಿಲೆಗಳಿಗೆ ಮನೆ ಔಷಧಗಳನ್ನು ಮಾಡಿಕೊಳ್ಳುತ್ತಿದ್ದರು. ಇಂದಿನ ಕಾಲದಲ್ಲಿ ಗ್ರಾಮೀಣ ಜನರಿಗೆ ಔಷಧೀಯ ಗಿಡ, ಮರಗಳ ಬಗ್ಗೆ ತರಬೇತಿಯನ್ನು ಕೊಡಬೇಕು ಮತ್ತು ಅವರೇ ತಯಾರಿಸಿ ಬಳಸಬಹುದಾದ ಮನೆಔಷಧಗಳ ಬಗ್ಗೆ ತಿಳುವಳಿಕೆಯನ್ನು ಕೊಡಬೇಕು. ಇದನ್ನು ಒಂದು ಪ್ರಮುಖವಾದ ಆಂದೋಲನದಂತೆ ಮಾಡಿದರೆ ಗ್ರಾಮೀಣ ಜನರಿಗೆ ಬಳಸುವ ದುಬಾರಿ ಔಷಧಗಳ ಖರ್ಚು ಉಳಿಯುತ್ತದೆ ಮತ್ತು ಗ್ರಾಮೀಣ ಜನರು ಆರೋಗ್ಯ ದೃಷ್ಟಿಯಿಂದ ಸ್ವಾವಲಂಬಿಗಳಾಗುತ್ತಾರೆ.

ಗ್ರಾಮೀಣ ಪ್ರದೇಶಗಳಲ್ಲಿ ಜನರ ಆರೋಗ್ಯ ಕೆಡುವ ಮುಖ್ಯವಾದ ಕಾರಣವೆಂದರೆ, ಅಲ್ಲಿನ ಕಲುಷಿತವಾದ ನೀರು. ಇಂತಹ ನೀರನ್ನು ಶುದ್ಧಿಪಡಿಸಲು ಪ್ರತಿ ಗ್ರಾಮದಲ್ಲೂ ಚಿಲ್ಲದ ಮರಗಳನ್ನು ಬೆಳೆಸಿ, ಇದರ ಬೀಜವನ್ನು ಒಂದು ಚಮಚದಷ್ಟು ಒಂದು ದೊಡ್ಡ

ಪಾತ್ರೆಗೆ ಹಾಕಿ, ಅದರಲ್ಲಿರುವ ನೀರನ್ನು ಕೆಲವು ಗಂಟೆಗಳ ನಂತರ ಬಳಸಿದರೆ, ನೀರು ಶುದ್ಧವಾಗಿ ರೋಗ ರಹಿತವಾಗುತ್ತದೆ. ವೆಚ್ಚವೇ ಇಲ್ಲದ ಈ ಸರಳ ವಿಧಾನವನ್ನು ಪ್ರತಿ ಗ್ರಾಮದಲ್ಲೂ ಅನುಷ್ಠಾನಕ್ಕೆ ತರಬೇಕು.

ಒಂದು ವರ್ಷದ ವಿವಿಧ ಋತುಗಳು ಬದಲಾವಣೆಯಾಗುವ ಸಂಧಿಕಾಲದಲ್ಲಿ, ವಿಶೇಷವಾಗಿ ಬೇಸಿಗೆಯ ಕಾಲದಲ್ಲಿ ಸಾಂಕ್ರಾಮಿಕ ರೋಗಗಳು ಹರಡುತ್ತವೆ. ಅಮ್ಮ, ದಡಾರ ಮುಂತಾದ ಸಾಂಕ್ರಾಮಿಕ ರೋಗಗಳು ಗಾಳಿಯ ಮೂಲಕ ತೊಂದರೆಗೆ ಈಡು ಮಾಡುತ್ತದೆ. ಇದಕ್ಕೆ ಪರಿಹಾರವಾಗಿ ಇಂದಿನ ಕಾಲದಲ್ಲಿ ರೋಗ ನಿರೋಧಕ ಚುಚ್ಚುಮದ್ದುಗಳನ್ನು ನೀಡುವ ಕ್ರಮ ಆಚರಣೆಯಲ್ಲಿದೆ. ನಮ್ಮ ಪೂರ್ವಿಕರು ಇಂತಹ ಅನೇಕ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಲು ವಿವಿಧ ಔಷಧೀಯ ಮೂಲಿಕೆಗಳನ್ನು ಬಳಸಿ ಹೋಮ, ಹವನಗಳನ್ನು ಆಚರಿಸುತ್ತಿದ್ದರು. ಇದರಿಂದ ಬರುವ ಔಷಧೀಯ ಮೂಲಿಕೆಗಳ ಹೊಗೆಯು ಗಾಳಿಯಲ್ಲಿನ ರೋಗಕಾರಕ ಕ್ರಿಮಿಗಳನ್ನು ನಾಶಪಡಿಸಿ ಜನರನ್ನು ಸಾಂಕ್ರಾಮಿಕ ರೋಗಗಳಿಂದ ರಕ್ಷಣೆ ಮಾಡುತ್ತದೆ. ಈಗಲೂ ಗ್ರಾಮೀಣ ಪ್ರದೇಶಗಳಲ್ಲಿ ಆಗಾಗ್ಗೆ ಹೋಮಗಳನ್ನು ಆಚರಿಸುವ ಪದ್ಧತಿಯನ್ನು ಪುನಃ ಅನುಷ್ಠಾನಕ್ಕೆ ಬರುವಂತೆ ಮಾಡಬೇಕು.

ನಮ್ಮ ದೇಶದ ಅನೇಕ ಔಷಧೀಯ ಮೂಲಿಕೆಗಳು ಬೇರೆಬೇರೆ ದೇಶಗಳಿಗೆ ರಫ್ತಾಗುತ್ತಿವೆ. ಹೋದವರ್ಷ ೫೦೦ ಕೋಟಿ ರೂಪಾಯಿ ಮೌಲ್ಯದ ಔಷಧೀಯ ಸಸ್ಯಗಳು ನಮ್ಮ ದೇಶದಿಂದ ಹೊರಗೆ ಹೋಗಿವೆ. ಇಂತಹ ಬೇಡಿಕೆ ಇರುವ ಔಷಧೀಯ ಮೂಲಿಕೆಗಳ ಬಗ್ಗೆ ಗ್ರಾಮೀಣ ಜನರಿಗೆ ತಿಳುವಳಿಕೆಯನ್ನು ಕೊಟ್ಟರೆ ಅವರು ತಮ್ಮ ಹೊಲಗದ್ದೆಗಳಲ್ಲಿ ಇವುಗಳನ್ನೇ ಪ್ರಮುಖವಾಗಿ ಬೆಳೆಯಬಹುದು ಅಥವಾ ಬದುಗಳಲ್ಲಿ ಬೆಳೆಸಬಹುದು. ಇದರಿಂದ ಗ್ರಾಮೀಣ ಜನರ ಆರ್ಥಿಕ ಸ್ಥಿತಿಯು ಉತ್ತಮವಾಗುತ್ತದೆ.

ಆಯುರ್ವೇದದ ಮೂಲಗ್ರಂಥಗಳಲ್ಲಿ ಒಂದಾದ 'ಧನ್ವಂತರಿ ನಿಘಂಟು'ವಿನಲ್ಲಿ ಔಷಧ ಮೂಲಿಕೆಗಳನ್ನು ಚೆನ್ನಾಗಿ ಪರಿಚಯ ಮಾಡಿಕೊಳ್ಳಲು, ದನಕುರಿ ಕಾಯುವ ಜನರಿಂದಾಗಲೀ ಕಾಡುಗಳಲ್ಲಿ ವಾಸಿಸುವ ಬುಡಕಟ್ಟು ಜನರಿಂದಾಗಲೀ ತಿಳುವಳಿಕೆ ಪಡೆಯಬೇಕು ಎಂದು ತಿಳಿಸಲಾಗಿದೆ. ಮೇಲಿನ ವರ್ಗದ ಜನರಿಗೆ ಶಿಕ್ಷಣವಿಲ್ಲದಿದ್ದರೂ, ಅವರಿಗೆ ಅನೇಕ ಗಿಡ, ಬಳ್ಳಿ, ಮರಗಳ ಪರಿಚಯವಿರುತ್ತದೆ. ಇಂದಿಗೂ ಸಹ ಇಂತಹ ಬುಡಕಟ್ಟು ಜನರು ಬಾಬಾಬುಡನ್‌ಗಿರಿ ಮುಂತಾದ ಕಡೆ ವಾಸಿಸುತ್ತಿದ್ದಾರೆ. ಇವರಿಗೆ ಅನೇಕ ಪರಿಣಾಮಕಾರಿಯಾದ ಔಷಧಮೂಲಿಕೆಗಳ ಪ್ರಯೋಗಗಳು ತಿಳಿದಿರುತ್ತದೆ. ಅವರಲ್ಲಿ ಸುಪ್ತವಾಗಿರುವ ಔಷಧ ಜ್ಞಾನವನ್ನು ದಾಖಲಿಸಬೇಕು ಮತ್ತು ಅವುಗಳನ್ನು ಪ್ರಯೋಗಕ್ಕೆ ಒಳಪಡಿಸಬೇಕು. ಇದರಿಂದ ಬುಡಕಟ್ಟು ಜನರಿಗೆ ಆರ್ಥಿಕವಾದ ಸಹಾಯವೂ ದೊರೆಯುತ್ತದೆ ಮತ್ತು ಅವರ ಅನುಭವದಿಂದ ವೈದ್ಯಕೀಯ ಶಾಸ್ತ್ರವೂ ಸಮೃದ್ಧವಾಗುತ್ತದೆ.

ಗ್ರಾಮೀಣ ಜನರ ರೋಗ ನಿವಾರಣೆಗೆ ದುಬಾರಿ ವೆಚ್ಚದ ಔಷಧಗಳ ಬಳಕೆಯಾಗುತ್ತಿದೆ. ಕೆಲವು ಸಲ ಇದು ಸರಿಯಾಗಿ ರೋಗಿಗಳಿಗೆ ತಲುಪುತ್ತಿಲ್ಲ ಎಂಬ ಆಪಾದನೆಯು ಕೇಳಿಬರುತ್ತಿದೆ. ಇದರ ಬದಲಾಗಿ ಆಯುರ್ವೇದದ ಶಾಸ್ತ್ರೀಯವಾದ ಸಸ್ಯೌಷಧಗಳನ್ನು ಆಯುರ್ವೇದ ವೈದ್ಯರ ಮೇಲ್ವಿಚಾರಣೆಯಲ್ಲಿ ತಯಾರಿಸಿ, ಇವನ್ನು ರೋಗಿಗಳಿಗೆ ಬಳಸಬೇಕು. ಈ ಔಷಧಗಳನ್ನು ತಯಾರಿಸಲು ಬೇಕಾದ ಕಚ್ಚಾ ಮೂಲಿಕೆಗಳನ್ನು ಮಾರುಕಟ್ಟೆಯಿಂದ ಕೊಂಡುಕೊಳ್ಳದೇ ಅದೇ ಗ್ರಾಮೀಣ ಪ್ರದೇಶಗಳಲ್ಲಿ ಬೆಳೆಸಬೇಕು. ಇದರಿಂದ ಒಂದು ಗ್ರಾಮ ಆರೋಗ್ಯ ರಕ್ಷಣೆಯ ದೃಷ್ಟಿಯಿಂದ ಮತ್ತು ರೋಗ ನಿವಾರಣೆ ಮಾಡುವುದರಲ್ಲಿ ಸಂಪೂರ್ಣವಾಗಿ ಸ್ವಾವಲಂಬಿಯಾಗುತ್ತದೆ.

ಈ ಲೇಖನದಲ್ಲಿ ತಿಳಿಸಿರುವ ಸಲಹೆಗಳನ್ನು ಪ್ರಾಮಾಣಿಕವಾಗಿ ಆಚರಣೆಗೆ ತಂದರೆ, ಖಂಡಿತವಾಗಿಯೂ ನಮ್ಮ ದೇಶದ ಪ್ರತಿಯೊಂದು ಗ್ರಾಮದ ಜನರ ಆರೋಗ್ಯದ ಮಟ್ಟವು ಸುಧಾರಿಸುತ್ತದೆ. ಗ್ರಾಮೀಣಾಭಿವೃದ್ಧಿಯಲ್ಲಿ ಭಾರತೀಯ ವೈದ್ಯ ಪದ್ಧತಿಯು ಎಂದೆಂದಿಗೂ ಮಹತ್ತರವಾದ ಪಾತ್ರವನ್ನು ವಹಿಸುತ್ತದೆ.

●




# ಯುನಾನಿ ವೈದ್ಯ ಪದ್ಧತಿ

**ಡಾ. ಮಹಮದ್ ಮುಜೀಬುರ್ ರೆಹಮಾನ್**

ಅವಿಸೆನ್ನಾರು ಟಿಬ್‌ಅನ್ನು (ಯುನಾನಿ ವೈದ್ಯ ಪದ್ಧತಿ) ಪ್ರಸಿದ್ಧವಾದ ಗುಣಪಡಿಸುವ ಕಲೆ ಹಾಗೂ ವಿಜ್ಞಾನವೆಂದು ವ್ಯಾಖ್ಯೆ ಮಾಡಿದ್ದಾರೆ. ಅದು ವ್ಯಕ್ತಿಯನ್ನು ಇಡಿಯಾಗಿ ಚಿಕಿತ್ಸಿಸುತ್ತದೆಯಲ್ಲದೆ ವೈಯಕ್ತಿಕ ಅಂಗಗಳ ಗುಂಪನ್ನಲ್ಲ. ಅದು ಶರೀರ, ಮನಸ್ಸು ಮತ್ತು ಆತ್ಮವನ್ನು ಚಿಕಿತ್ಸಿಸುವ ಶರೀರದ ವಿವಿಧ ಸ್ಥಿತಿಗಳನ್ನು, ಆರೋಗ್ಯವಿಲ್ಲದಿರುವಾಗಿನ ಸ್ಥಿತಿಗಳನ್ನು ಮತ್ತು ಆರೋಗ್ಯವು ನಷ್ಟವಾಗುವುದಕ್ಕೆ ಮತ್ತು ಹಾಗಾದಾಗ ಆರೋಗ್ಯವು ಸರಿಯಾಗುವಂತೆ ಮಾಡುವುದನ್ನು ಕಲಿಯುವ ಒಂದು ವಿಜ್ಞಾನ.

**ಐತಿಹಾಸಿಕ ವಿಷಯಗಳು :**

ಹೆಸರಿನಿಂದಲೇ ಸ್ಪಷ್ಟವಾಗುವಂತೆ, ಯುನಾನಿ ವೈದ್ಯಕೀಯ ಪದ್ಧತಿಯ ಮೂಲವು ಗ್ರೀಸಿನಲ್ಲಿದ್ದು ಬುಕ್ರಾತ್ (ಹಿಪ್ಪೊಕ್ರೇಟಿಸ್)ನ ಬೋಧನೆಗಳ ಮೇಲೆ ಆಧರಿಸಿದ ವಿಸ್ತಾರವಾದ ವಿಜ್ಞಾನವಾಗಿ ಅರಬ್ಬರು ಅಭಿವೃದ್ಧಿಪಡಿಸಿದರು. ಅನೇಕ ಗ್ರೀಕ್ ವಿದ್ವಾಂಸರು ಈ ಪದ್ಧತಿಯನ್ನು ಗಣನೀಯವಾಗಿ ಶ್ರೀಮಂತಗೊಳಿಸಿದರು. ಅವರಲ್ಲಿ ಜಾಲಿನಸ್ (ಗ್ಯಾಲೆನ್) ಎಂಬುವರು ಅದರ ಅಸ್ತಿಭಾರವನ್ನು ಸ್ಥಿರಗೊಳಿಸಿದವರಲ್ಲಿ ಒಬ್ಬರಾಗಿ ಎದ್ದುಕಾಣುತ್ತಾರೆ. ಅದರ ಮೇಲೆ ಅರಬ್‌ನ ವೈದ್ಯರಾದ ರ್‍ಹೆಜಸ್ ಮತ್ತು ಅವಿಸೆನ್ನಾರು ಭವ್ಯವಾದ ಭವನವನ್ನು ನಿರ್ಮಿಸಿದರು. ಅಲ್ಲಿಂದೀಚೆಗೆ ಇದನ್ನು ಗ್ರೀಕ್-ಓ-ಅರಬ್ ವೈದ್ಯ ಎಂದು ಕರೆಯಲಾಗಿದೆ. ಈಜಿಪ್ಟ್, ಸಿರಿಯಾ, ಇರಾಕ್, ಪರ್ಷಿಯಾ, ಚೀನಾ, ಭಾರತ ಮತ್ತು ಮಧ್ಯ ಏಷ್ಯಾದ ವಿವಿಧ ಭಾಗಗಳ ಸಮಕಾಲೀನ ಪದ್ಧತಿಗಳಲ್ಲಿರುವ ಅತ್ಯುತ್ತಮವಾದುದನ್ನು ಇದರೊಳಗೆ ಅಳವಡಿಸಿ ಇದನ್ನು ಶ್ರೀಮಂತಗೊಳಿಸಲಾಯಿತು. ಭಾರತದಲ್ಲಿ ಯುನಾನಿ ಪದ್ಧತಿಯನ್ನು ಅರಬ್ಬರು ಪರಿಚಯಿಸಿದರು ಮತ್ತು ಅದು ಬೇಗನೆ ಭಾರತದ ಮಣ್ಣಿನಲ್ಲಿ ದೃಢವಾಗಿ ಬೇರೂರಿತು ಮತ್ತು ದೇಶದಲ್ಲಿ ಬಹಳ ವಿಸ್ತಾರವಾಗಿರುವ ಪ್ರದೇಶದಲ್ಲಿರುವ ವಿವಿಧ ಭಾಗಗಳ ಜನರಿಗೆ ಸೇವೆ ಸಲ್ಲಿಸುತ್ತಿದೆ. ಯುನಾನಿ ವೈದ್ಯಪದ್ಧತಿಯು ಹೋದೆಡೆಯಲ್ಲೆಲ್ಲಾ ಸ್ಥಳೀಯ ಪದ್ಧತಿಗಳಲ್ಲಿರುವ ಅತ್ಯುತ್ತಮವಾದುದನ್ನು ಹೀರಿಕೊಂಡು ಅದರ ವಿಸ್ತಾರವಾದ ಭಂಡಾರಕ್ಕೆ ಸೇರಿಸಿಕೊಳ್ಳುತ್ತಿತ್ತು. ಈ ರೀತಿಯ ಶ್ರೀಮಂತಗೊಳಿಸುವ ಕಾರ್ಯವಿಧಾನವು ಇವತ್ತಿಗೂ ಮುಂದುವರಿಯುತ್ತಿದೆ. ಈಗ ಭಾರತದಲ್ಲಿ ನಡೆಸಲಾಗುತ್ತಿರುವ ಯುನಾನಿ ಪದ್ಧತಿಯು ಮೂಲ ಗ್ರೀಕ್ ವೈದ್ಯಕ್ಕಿಂತ ಭಿನ್ನವಾಗಿದೆ.

**ಯುನಾನಿ ವೈದ್ಯ ಪದ್ಧತಿ ಅರಬ್ಬರು ಪರಿಚಯಿಸಿದರು. ಅದು ಬಹುಬೇಗ ಭಾರತದ ಮಣ್ಣಿನಲ್ಲಿ ದೃಢವಾಗಿ ಬೇರೂರಿತು. ದೇಶದ ವಿವಿಧ ಕಡೆ ಜನರಿಗೆ ಸೇವೆ ಸಲ್ಲಿಸುತ್ತಿರುವ ಯುನಾನಿ ವೈದ್ಯ ಪದ್ದತಿಯು ತಾನು ಹೋದೆಡೆಯೆಲ್ಲಾ ಇರುವ ಸ್ಥಳೀಯ ಪದ್ದತಿಗಳನ್ನು ತನ್ನಲ್ಲಿ ಅಳವಡಿಸಿ ಕೊಂಡಿದೆ.**

ಯುನಾನಿ ವೈದ್ಯದ ಕೆಲವು ಇತರ ಪ್ರಸಿದ್ಧರು ಯಾರೆಂದರೆ ರ್‍ಹಾಜೆಸ್ (ಜಕಾರಿಯಾ ರಾಜಿ) ಅಲ್‌ರಾಜಿಯನ್ನು ಸಾಮಾನ್ಯವಾಗಿ ಒಬ್ಬ ಆದ್ಯ ಮತ್ತು ಅತ್ಯಂತ ಪ್ರಸಿದ್ಧ ವೈದ್ಯನೆಂದು ಗುರುತಿಸಲಾಗಿದ್ದು, ಅವನೊಬ್ಬ ಒಳ್ಳೆಯ ಲೇಖಕನಾಗಿದ್ದು, ವೈದ್ಯ ಮತ್ತು ತತ್ವಗಳ ಮೇಲೆ ೧೪೦ಕ್ಕೂ ಹೆಚ್ಚಾಗಿ ಪ್ರಬಂಧಗಳ ಕರ್ತೃವಾಗಿದ್ದಾನೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಹೇಳಿದೆ.

ಎ) ಅಲ್-ಹಾದಿ (ಕಾಮಟಿನೆನ್ಸ್) ಅನ್ನು ಯೂರೋಪಿನ ವಿಶ್ವವಿದ್ಯಾನಿಲಯಗಳ ವೈದ್ಯ ಉಪನ್ಯಾಸ ವರ್ಗದ ವೈದ್ಯರುಗಳು ಸಂಪೂರ್ಣವಾದ ಟಿಬ್‌ನ ವಿಷಯ ವಿಶ್ವಕೋಶವೆಂದು ಪರಿಗಣಿಸಿದರು.

ಬಿ) ಅಲ್-ಮನ್‌ಸೂರಿ ಫಿಲ್‌ಟಿಬ್ (ವೈದ್ಯದ ಮೇಲೆ ಮನ್ಸೂರಿ) ಈ ಎರಡು ಪುಸ್ತಕಗಳು ಶರೀರದಲ್ಲಿನ ರೋಗಗಳು ಮತ್ತು ಆತ್ಮದ ಜೊತೆಯಲ್ಲಿ ಅದರ ಸಂಬಂಧವನ್ನು ವಿವರಿಸುತ್ತಿದ್ದವು.

ಸಿ) ಕಿತಾಬುಲ್ ಜಿದ್ರಿ-ಒ-ಹಸ್ಬಬ್ ಎಂಬುದು ಸಿಡುಬು ಮತ್ತು ದಡಾರಗಳ ಮೇಲಿನ ಕೃತಿಗಳಾಗಿದ್ದು, ಈ ವಿಷಯದ ಮೇಲೆ ಅವುಗಳು ಶ್ರೇಷ್ಠ ಕೃತಿಗಳೆಂದಾಗಿದ್ದವು.

ಡಿ) ಅ-ಟಿಬ್-ಅಲ್-ಮುಲುಕಿ (ರಾಜ ವೈದ್ಯ) ಮಂತಾ ಯಹ್ ದುರಾಹ ಅಲ್-ತಬೀಬ್ (ಅವನನ್ನು ನೋಡಿಕೊಳ್ಳಲು ಯಾವ ವೈದ್ಯನೂ ಇಲ್ಲ) ಮತ್ತು ಟಿಬ್-ಅಲ್-ಫುಕಾರ (ಬಡವರಿಗೆ ಔಷಧ) ಎಂಬುದು ಅವನಿಗೆ ವೈದ್ಯದ ಮೇಲಿದ್ದ ಅಗಾಧವಾದ ಜ್ಞಾನದ ಬಗ್ಗೆ ಮತ್ತು ವಿವಿಧ ಜೀವನ ವರ್ಗಗಳನ್ನು ವಿವರಿಸುವ ಮಾರ್ಗದಲ್ಲಿ ಅವನಿಗಿದ್ದ ಅಗಾಧ ಜ್ಞಾನವನ್ನು ಪ್ರತಿಬಿಂಬಿಸುತ್ತದೆ. ರಾಜ್ಜಿಯು ವೈಜ್ಞಾನಿಕ ಜ್ಞಾನದಲ್ಲಿ ಪ್ರಗತಿಯು ಅನಿವಾರ್ಯವೆಂದು ಪರಿಗಣಿಸಿದ್ದನು ಮತ್ತು ರೋಗಗಳ ಬಗ್ಗೆ ಮೂಢನಂಬಿಕೆ ಮತ್ತು ಸ್ವಮತ ನಂಬಿಕೆಗಳನ್ನು ತಿರಸ್ಕರಿಸಿದನು. ಪುರಾತನ ಕಾಲದಿಂದ ದಕ್ಷತೆಗೆ ಹೆಸರಾಗಿರುವ ಎಲ್ಲಾ ಔಷಧಿಗಳನ್ನು ಒಪ್ಪಿಕೊಳ್ಳಬೇಕು ಅಥವಾ ಪ್ರಯೋಗಗಳನ್ನು ಮಾಡಿದ ನಂತರವೇ ತ್ಯಜಿಸಬೇಕು ಎಂದು ಕೂಡ ವಾದ ಮಾಡಿದನು. ಅವನು ಗೇಲಿನ್‌ನ ಕೆಲವು ಸಿದ್ಧಾಂತಗಳನ್ನು ಒಪ್ಪಿಕೊಂಡನು ಮತ್ತು ಅನುಸರಿಸಿದನು. ಆದರೆ ಸ್ವಂತ ಅವಲೋಕನದಿಂದಾಗಿ ಅವುಗಳಲ್ಲಿ ಹೆಚ್ಚಿನವುಗಳನ್ನು ತಿರಸ್ಕರಿಸಿದನು.

ಅಬು ಅಲಿ ಹುಸೇನ್ ಇಬು ಅಬ್ದುಲ್ಲಾ ಇಬ್ನ್‌ಸಿನಾ, ಅಲ್‌ರಾಜಿಗೆ ವ್ಯತಿರಿಕ್ತವಾಗಿ ಪರಿಗಣಿಸಿದ್ದರೂ ಒಬ್ಬ ವೈದ್ಯನಿಗಿಂತ ಹೆಚ್ಚಾಗಿ ವೇದಾಂತಿಯಾಗಿ ಇಬ್ನ್‌ಸಿನಾನ ವೈದ್ಯಕೀಯ ವಿಜ್ಞಾನದ ಅಭಿವೃದ್ಧಿಗೆ ಮತ್ತು ಪ್ರಸಿದ್ಧಿಗೊಳಿಸುವುದಕ್ಕೆ ಬಹಳ ಪ್ರಭಾವ ಬೀರಿದನು. ಅವನು ೨೫೦ ಗ್ರಂಥಗಳಿಗಿಂತ ಹೆಚ್ಚಾಗಿ ಬರೆದಿದ್ದು ಅದರಲ್ಲಿ "ಅಲ್‌ಖನೂನ್" ಎಂಬುದು ಪ್ರಪಂಚದ ಅತ್ಯಂತ ಪ್ರಸಿದ್ಧ ಪುಸ್ತಕವಾಗಿದೆ. ಬ್ರೈಪಾಲ್ಸ್‌ನು ಹೀಗೆ ಹೇಳಿದ್ದಾನೆ: "ಅವಿಸೆನ್ನಾನ ಸಿದ್ಧಾಂತದಷ್ಟು ಇನ್ನು ಯಾವುದೇ ಸಿದ್ಧಾಂತವನ್ನು ಓದಿಲ್ಲ ಮತ್ತು ಅಭ್ಯಸಿಸಿಲ್ಲ". ಅನೇಕ ಶತಮಾನಗಳವರೆಗೆ ಇದು ಏಷ್ಯಾ ಮತ್ತು ಯುರೋಪಿನ ನಾಗರಿಕತೆಗಳಿಗೆ ವೈದ್ಯಕೀಯ ಬೈಬಲ್ ಆಗಿದ್ದಿತು. ಕಿತಾಬ್ ಉಲ್ ಶಿಫಾ (ಗುಣವಾಗುವಿಕೆಯ ಪುಸ್ತಕ), ತಬಯ್ಯರ್ (ಸ್ವಾಭಾವಿಕ ತತ್ವ) ಮತ್ತು ಇಬ್ನ್‌ಸಿನಾನ ಹೆಚ್ಚುಕಡಿಮೆ ಎಲ್ಲಾ ಇತರ ಪುಸ್ತಕಗಳನ್ನು ವಿಶ್ವದಾದ್ಯಂತ ಮುಖ್ಯವಾದ ಭಾಷೆಗಳಿಗೆ ಭಾಷಾಂತರಿಸಲಾಗಿದೆ.

ಅಲ್-ಮಜೂಸಿಯು ಅರಬ್ ವಿದ್ವಾಂಸನಾಗಿದ್ದು, ಶಸ್ತ್ರಚಿಕಿತ್ಸೆಯ ಬಗ್ಗೆ ವಿಸ್ತಾರವಾಗಿ ಬರೆದಿದ್ದಾನೆ. ಅಬುಲ್ ಖಾಸಿಂ ಅಲ್ ಜಹ್ರಾದಿಯು ಒಬ್ಬ ಪ್ರಸಿದ್ಧ ಶಸ್ತ್ರವೈದ್ಯ. ಇಬ್ನ್-ಅಲ್-ಇಬೈಥಾಮ್ ಎಂಬುದನ್ನು ಸೂಕ್ಷ್ಮದರ್ಶಕ ಟೆಲಿಸ್ಕೋಪ್ ಮತ್ತು ಕ್ಯಾಮೆರಾದ ಜನಕನಾಗಿದ್ದನು. ಅಲಿಬಿನ್ ಇಸಾನು ಅವನ ನೇತ್ರಶಾಸ್ತ್ರ, ಮೇಲಿನ ಪುಸ್ತಕದಲ್ಲಿ ಕಣ್ಣಿನ ಒಂದನೂರ ಮೂವತ್ತು ರೋಗಗಳನ್ನು ಚರ್ಚಿಸಿದ್ದಾನೆ. ಅದಕಿಂಡಿ, ಅಬು-ರೆಹಾನ್-ಅಲ್-ಬೈರೂನಿ-ಇಬ್ನ್ ಜಾಸಲ್, ಇಬ್ನ್ ಮೈಮೂನ್, ಇಬ್ನ್-ಅಲ್-ಬೈಕಾರ್ ಮತ್ತು ಶೇಕ್ ದಾವೂದ್ ಅಂಟಕಿಯವರ ಕೊಡುಗೆಯು ವೈದ್ಯಶಾಸ್ತ್ರಕ್ಕೆ ಅದರಲ್ಲಿಯೂ ಔಷಧಶಾಸ್ತ್ರ ಬಗ್ಗೆ ಬಹಳ ಬೆಲೆಯುಳ್ಳದ್ದು. ರಬ್ಬಾನ್ ತಾಪ್ರಿ, ಅಲಿಬಿನ್ ಅಬ್ಬಾಸ, ಅಬುಸಹೇಲ್ ಮಾಸಿಹಿ, ಅಬ್ದುಲ್ ಹಸನ್ ತಾಬ್ರಿ ಮತ್ತು ಇನ್ನೂ ಅನೇಕರು ತಮ್ಮನ್ನು ತಾವು ವಿವಿಧ ಸಾಮರ್ಥ್ಯಗಳಲ್ಲಿ, ವಿವಿಧ ಹುದ್ದೆಗಳಲ್ಲಿ ತೊಡಗಿಸಿಕೊಂಡಿದ್ದು ಅನೇಕ ಕಾಯಿಲೆಗಳ ಬಗ್ಗೆ ಅವರ ಕೊಡುಗೆಗಳು ಅತ್ಯಮೂಲ್ಯವಾದುವು.

## ಯುನಾನಿ ವೈದ್ಯದ ಮೂಲಭೂತ ತತ್ವಗಳು :

ಅವಿಸೆನ್ನು ಮತ್ತು ಇತರ ಯುನಾನಿ ವೈದ್ಯರ ಗುರಿಯೇನೆಂದರೆ ಹಾಲಿ ಇರುವ ವ್ಯಕ್ತಿಯ ಆರೋಗ್ಯಕರ ಸ್ಥಿತಿಯನ್ನು ಕಾಪಾಡುವುದು ಮತ್ತು ಅದು ಇಲ್ಲದಾಗ ಅದನ್ನು ಪುನರ್ ಬರಿಸುವುದಾಗಿದೆ. ಇದಕ್ಕೆ ಅವರ ನಿರ್ವಹಣೆ ಮೂರು ತತ್ವಗಳಿದ್ದು, ಅದರಲ್ಲಿ ಒಬ್ಬ

ವ್ಯಕ್ತಿಯು, ವಿವಿಧ ವಯೋಮಿತಿಯಲ್ಲಿರುವ ಗಂಡಸರು ಮತ್ತು ಮಹಿಳೆಯರಿಗೆ ವಿವಿಧ ಕಾಲಗಳಲ್ಲಿ ಮತ್ತು ಹವಾಮಾನಗಳಲ್ಲಿ ಅವರ ಆರೋಗ್ಯದ ನಿರ್ವಹಣೆಯಾಗಿದೆ. ಆಹಾರ, ವ್ಯಾಯಾಮ, ನಿದ್ರೆ ಮತ್ತು ಇತರ ಅವಶ್ಯಕ ಅಂಶಗಳು ಪ್ರತಿ ಗುಂಪಿಗೆ ಮತ್ತು ಔಷಧಿಗಳಿಗೆ ಅವುಗಳ ಅಗತ್ಯಗಳ ಪ್ರಕಾರ ಪ್ರಾಮುಖ್ಯತೆಯನ್ನು ಕೊಡಲಾಗಿದೆ.

ಈ ಪದ್ಧತಿಯ ಮುಖ್ಯ ಉದ್ದೇಶವೇನೆಂದರೆ ಶರೀರದ ಅಂತರ್ಗತ ಹೊಂದಿಕೊಳ್ಳುವ ಶಕ್ತಿಯಾದ "ತಬಿಯತ್ ಮುಡಬ್ಬಿರ-ಇ-ಬದನ್"ಗೆ ಸಹಾಯ ಮಾಡುವುದು ಮತ್ತು ಬಲಗೊಳಿಸುವುದಾಗಿದ್ದು, ಇದರಿಂದ ಯಾಂತ್ರಿಕತೆಗಳನ್ನು ಸರಿಪಡಿಸುವುದು ಮತ್ತು ಆರೋಗ್ಯವು ಹಾಳಾದಾಗ ಅದನ್ನು ಪುನರ್ ಸ್ಥಾಪಿಸುವುದಾಗಿದೆ. ಈ ರೀತಿಯಲ್ಲಿ ಶರೀರ ರಸಧಾತುಗಳ ಅವ್ಯವಸ್ಥೆಯನ್ನು ಮತ್ತು ಜೀವದ್ರವ್ಯ ಕಾರ್ಯವಿಧಾನಗಳನ್ನು ಸರಿಪಡಿಸುತ್ತದೆ, ಶರೀರ ಮತ್ತು ಅಂಗಗಳ ಬೇರೆ ಬೇರೆ ವ್ಯವಸ್ಥೆಗಳನ್ನು ತಮ್ಮ ಸಾಮಾನ್ಯ ಕೆಲಸ ಮಾಡುವುದಕ್ಕೆ ಪ್ರಚೋದಿಸುತ್ತದೆ.

ಯುನಾನಿ ವೈದ್ಯ ಪದ್ಧತಿಯು ಶರೀರ ರಸಧಾತುಗಳ ಔಷಧಿಯ ವ್ಯವಸ್ಥೆಯ ಮೇಲೆ ಆಧರಿಸಿದೆ. ಅದು ರೋಗಗಳ ಕಾರಣಗಳು, ವಿವರಣೆಗಳು ಮತ್ತು ಚಿಕಿತ್ಸೆಗಳನ್ನು ಶರೀರದೊಳಗಿರುವ ನಾಲ್ಕು ಶರೀರ ರಸಧಾತುಗಳ (ಅಖ್ಲಾತ್) ಸಮತೋಲನ ಮತ್ತು ಅಸಮತೋಲನದ ಮೇಲೆ ಆಧರಿತವಾಗಿದೆ. ಅವು ಯಾವುವೆಂದರೆ ರಕ್ತ (ಖೂನ್), ಶ್ಲೇಷ್ಮ (ಬಲ್ಗಾಂ), ಹಳದಿಪಿತ್ತ (ಸಫ್ರ) ಮತ್ತು ಕಪ್ಪುಪಿತ್ತ (ಸೌದ). ಇವು ನಾಲ್ಕು ಮೂಲಭೂತ ಗುಣಗಳಿಂದ ಅಂದರೆ ಶಾಖ (ಗರ್ಮಿ), ಚಳಿ (ಸರ್ದಿ), ತೇವ (ರುಕಾಬತ್) ಮತ್ತು ಶುಷ್ಕತೆ(ಯಾಬಿಸ್)ಗಳಿಂದ ಕೂಡಿದೆ. ಶರೀರದಲ್ಲಿ ಒಂದು ರಸಧಾತುವು ಮೇಲುಗೈದಾದರೆ ಆಗ ಅದು ಅವನ ಅಥವಾ ಅವಳ ವೈಯಕ್ತಿಕ ಸ್ವಭಾವವನ್ನು (ಮಿಜಾಜ್) ತಿಳಿಸುತ್ತದೆ. ಬೇರೆ ಬೇರೆಯಾದ ಸ್ವಭಾವಗಳು ಈ ನಾಲ್ಕು ರಸಧಾತುಗಳ ಪ್ರಮಾಣದ ಮೇಲೆ ಅವಲಂಬಿಸಿದ್ದು, ಅವಕ್ಕೆ ಉಲ್ಲಾಸ (ಡಾಮ್ವಿ), ಕಫಮಯ (ಬಾಲಗಮಿ), ಕೋತ (ಸಪ್ ರಾವಿ) ಮತ್ತು ಖಿನ್ನತೆ (ಸಾದಾವಿ) ಎಂದು ಕರೆಯುತ್ತಾರೆ.

### ಚಿಕಿತ್ಸೆಯ ಮಾರ್ಗವನ್ನು ಈ ರೀತಿಯಾಗಿ ವಿಭಾಗಿಸಲಾಗಿದೆ :

ಎ) ಇಲಾಜ್ ಬಿಲ್ ತದ್‌ಬೀರ್ -ಗುಂಪು ವೈದ್ಯ

ಬಿ) ಇಲಾಲ್ ಬಿಲ್‌ಘಿಸಾ - ಆಹಾರ ವೈದ್ಯ

ಸಿ) ಇಲಾಜ್ ಬಿಲ್‌ದವಾ - ಔಷಧಿ ವೈದ್ಯ

ಡಿ) ಇಲಾಜ್ ಬಿಲ್‌ಯಾದ್ - ಶಸ್ತ್ರಚಿಕಿತ್ಸೆ



### ಗುಂಪು ವೈದ್ಯ - ಇಲಾಜ್ ಬಿಲ್ ತದ್‌ಬೀರ್ :

೧. ಕಾಯಿ - ಚಿಟಿಕೆ

೨. ಇದ್ರಾರ್ ಬೋಲೆ - ಮೂತ್ರ ವಿಸರ್ಜನೆ

೩. ಕ್ಷಾಯಿ - ವಾಂತಿ ಮಾಡುವುದು

೪. ಇಹಾಲ್ - ಭೇದಿ ಮಾಡುವುದು

೫. ಫಸದ್ - ರಕ್ತ ಹೊರಬಿಡುವುದು

೬. ಮೊಹಾಜಿಮ್ - ರಕ್ತ ಎಳೆಯುವುದು

೭. ತಾಲೀಕ್ - ರಕ್ತ ಹೀರುವುದು

೮. ದಲಕ್ - ಅಂಗಮರ್ದನ ಮತ್ತು ವ್ಯಾಯಾಮ ಚಿಕಿತ್ಸೆ

೯. ರಿಜಾಯತ್ - ಶಾರೀರಿಕ ವ್ಯಾಯಾಮ

೧೦. ತಕೂರ್ - ಶಾಖ ಕೊಡುವುದು

೧೧. ಹಮಾಮ್ - ಟರ್ಕಿಸ್ನಾನ ಮತ್ತು ಅನೇಕ ವಿಧದ ಔಷಧೀಯ ಸ್ನಾನಗಳು

ವಿಷಗಳು ಎಂದೂ ಕರೆಯಲ್ಪಟ್ಟಿರುವ, ಇವುಗಳ ಕಾರ್ಯವಿಧಾನಗಳು ಯುನಾನಿ ವೈದ್ಯಪದ್ಧತಿಯಲ್ಲಿ ಬಹಳ ಪ್ರಾಮುಖ್ಯತೆಯನ್ನು ಪಡೆದಿವೆ. ಈ ವೈದ್ಯಗಳನ್ನು ಗುಣಮಾಡುವುದು ಮಾತ್ರವಲ್ಲದೆ ರೋಗಗಳನ್ನು ತಡೆಯಲೂ ವ್ಯಾಪಕವಾಗಿ ಉಪಯೋಗಿಸಲಾಗುತ್ತದೆ.

## ಇಲಾಜ್ ಬಿಲ್ ಘಿಜಾ - ಆಹಾರ ವೈದ್ಯ :

ಎಲ್ಲಿಯವರೆಗೆ ಆಹಾರದ ಉಪಯೋಗದಿಂದ ಕಾಯಿಲೆಯನ್ನು ವಾಸಿಮಾಡಲು ಸಾಧ್ಯವಿದೆಯೋ ಅಲ್ಲಿಯವರೆಗೆ ಯಾವುದೇ ಔಷಧಿಯನ್ನು ಕೊಡಕೂಡದು.

## ಇಲಾಜ್ ಬಿಲ್ ದವಾ - ಔಷಧಿ ವೈದ್ಯ :

ಔಷಧ ವೈದ್ಯವು ಸಸ್ಯ, ಪ್ರಾಣಿ ಮತ್ತು ಖನಿಜ ಮೂಲದ ಔಷಧಿಗಳ ಉಪಯೋಗವನ್ನು ವಿವರಿಸುತ್ತದೆ. (ಮುಫ್ರದತ್ ಅಥವಾ ಏಕ ಔಷಧಿ ಹಾಗೂ ಮುರಾಖಾಬಾತ್ ಅಥವಾ ಸಂಯುಕ್ತ ರೂಪಗಳು).

ಯುನಾನಿ ವೈದ್ಯದ ಮೆಟೀರಿಯಾ ಮೆಡಿಕಾವು ತನ್ನ ಔಷಧಿಗಳನ್ನು ಬಹಳ ವಿಸ್ತಾರವಾಗಿ ಹೇಳಿದ್ದು, ಅವುಗಳನ್ನು ಪಡೆಯುವುದು ಸುಲಭ. ಅವುಗಳಲ್ಲಿ ಹೆಚ್ಚಿನವು ಸ್ಥಳೀಯವಾಗಿ ದೊರೆಯುತ್ತವೆ. ಸ್ವಾಭಾವಿಕವಾಗಿ ದೊರೆಯುವ ಔಷಧಿಗಳನ್ನು ಈ ಪದ್ಧತಿಯಲ್ಲಿ ಉಪಯೋಗಿಸಲಾಗುತ್ತಿದ್ದು, ಅದು ಜೀತ ಸಾಂಕೇತಿಕವಾಗಿರುತ್ತದೆ ಮತ್ತು ಇತರ ಪರಿಣಾಮಗಳಿಂದ ಸಾಮಾನ್ಯವಾಗಿ ಮುಕ್ತವಾಗಿರುತ್ತದೆ. ಅವುಗಳು ಸ್ವಾಭಾವಿಕ ಸ್ಥಿತಿಯಲ್ಲಿ ವಿಷಪೂರಿತವಾಗಿದೆ. ಉಪಯೋಗಕ್ಕೆ ಮುಂಚೆ ಅವುಗಳನ್ನು ಅನೇಕ ರೀತಿಯಲ್ಲಿ ಪರಿಷ್ಕರಿಸಿ ಶುದ್ಧಿಗೊಳಿಸಲಾಗುತ್ತದೆ.

ಯುನಾನಿ ಔಷಧಗಳನ್ನು ನಿರ್ದಿಷ್ಟ ಸ್ವಭಾವದ (ಉಷ್ಣ, ಶೀತ, ತೇವ ಮತ್ತು ಶುಷ್ಕ) ಆಧಾರದ ಮೇಲೆ ಗುರುತಿಸಲಾಗುತ್ತದೆ ಮತ್ತು ಸಂಬಂಧಪಟ್ಟ ಸ್ವಭಾವಕ್ಕೆ (ಮಿಜಾಜ್) ತಕ್ಕಂತೆ ಮತ್ತು ರೋಗಿಯ ಅಗತ್ಯಗಳಿಗೆ ತಕ್ಕಂತೆ ಕೊಡಲಾಗುತ್ತದೆ.

ಔಷಧಿಗಳು ಶರೀರದ ಪ್ರತಿರೋಧ ವ್ಯವಸ್ಥೆಯ ಕ್ರಿಯೆಯನ್ನು ಪ್ರಚೋದಿಸಿ ಬಲಪಡಿಸುತ್ತವೆ. ಬೇರೆ ರೀತಿಯಲ್ಲಿ ಹೇಳುವುದಾದರೆ ಔಷಧಿಗಳು ಹಾಲಿ ಇರುವ ಅಸಮತೋಲನವನ್ನು ಸರಿಪಡಿಸಲು ಉಪಯೋಗಿಸಲಾಗುತ್ತದೆಯಲ್ಲದೆ ಶರೀರದ ಸ್ವಾಭಾವಿಕ ರಕ್ಷಣೆಯನ್ನು ಉತ್ತಮಪಡಿಸುವುದು. ಅದರಿಂದಾಗಿ ಮುಂದಕ್ಕೆ ರೋಗ ಬರುವುದನ್ನು ತಪ್ಪಿಸುವುದು ಅಥವಾ ಕಡಿಮೆ ಮಾಡುವುದು.

## ಇಲಾಜ್ ಬಿಲ್ ಯಾದ್ - ಶಸ್ತ್ರಚಿಕಿತ್ಸೆ :

ಬಹಳ ಕಾಲದಿಂದ ಯುನಾನಿ ಪದ್ಧತಿಯಲ್ಲಿ ಶಸ್ತ್ರಚಿಕಿತ್ಸೆಯನ್ನು ಕೂಡ ಉಪಯೋಗಿಸಲಾಗುತ್ತಿದೆ. ಅಬುಲ್ ಖಾಸಿಂ-ಅಲ್-ಜಹ್ರಾದಿಯು ಯುನಾನಿ ಪದ್ಧತಿಯಲ್ಲಿ ಶಸ್ತ್ರಕ್ರಿಯೆಯನ್ನು ಪರಿಚ/, ಮಾಡಿದವರಲ್ಲಿ ಮೊದಲಿಗರು. ಅವರು ತಮ್ಮಷ್ಟಕ್ಕೆ ತಾವೇ ಅನೇಕ ಶಸ್ತ್ರಕ್ರಿಯೆ ಸಾಧನಗಳನ್ನು ತಯಾರಿಸಿದ್ದರು. ಅವರು ತಮ್ಮ ಶಸ್ತ್ರಕ್ರಿಯೆಯಲ್ಲಿ ಕಲ್ಲಿನಿಂದ ಮಾಡಿದ ಸ್ಕಾಲ್ಪೆಲ್ (ಸಣ್ಣಚೂರಿ)ಯನ್ನು ಉಪಯೋಗಿಸಿದ್ದರು. ವಾಸ್ತವವಾಗಿ ಪುರಾತನ ಯುನಾನಿ ಪದ್ಧತಿಯ ವೈದ್ಯರು ಈ ಕ್ಷೇತ್ರದಲ್ಲಿ ಮೊದಲಿಗರಾಗಿದ್ದರು ಮತ್ತು ತಮ್ಮದೇ ಆದ ಸಾಧನಗಳು ಮತ್ತು ತಂತ್ರಕುಶಲತೆಯನ್ನು ಅಭಿವೃದ್ಧಿಪಡಿಸಿದ್ದರು. ಆದರೆ ಈಗ ಈ ಪದ್ಧತಿಯಲ್ಲಿ ಚಿಕ್ಕ ಶಸ್ತ್ರಕ್ರಿಯೆ ಮಾತ್ರ ಜಾರಿಯಲ್ಲಿದೆ.

## ಆರೋಗ್ಯ ರಕ್ಷಣೆ ಪದ್ಧತಿಗಳಲ್ಲಿ ಯುನಾನಿ ವೈದ್ಯದ ಪಾತ್ರ :

ಸಾಮಾನ್ಯ ಕಾಯಿಲೆಗಳನ್ನು ಚಿಕಿತ್ಸಿಸುವುದಕ್ಕೆ ಔಷಧೀಯ ಸಸ್ಯಗಳ ಉಪಯೋಗವು ಹೆಚ್ಚಿನ ಸುಸಂಬದ್ಧತೆಯನ್ನು ಪಡೆದಿದೆ. ಏಕೆಂದರೆ ರಾಸಾಯನಿಕ ಔಷಧಿಗಳ ಇತರ ಪರಿಣಾಮಗಳಿಂದ, ಗ್ರಾಮೀಣ ಕುಟುಂಬದ ಎಲ್ಲಾ ಜನರಿಗೆ ಒದಗಿಸಲು ಪ್ರಾಥಮಿಕ ಆರೋಗ್ಯ ರಕ್ಷಣೆಯ ವಿಫಲತೆ, ಸಾರ್ವಜನಿಕ ಆಸ್ಪತ್ರೆಗಳ, ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸಾಮರ್ಥ್ಯದ ಕೊರತೆ ಮತ್ತು ಬೆಲೆ ಪ್ರಕಾರ ಸಾಮಾನ್ಯ ಔಷಧಿಗಳಿಗೂ ಕೂಡ ಹೆಚ್ಚಿನ ಬೆಲೆ. ಇದರಿಂದ ಇದು ಪ್ರಾಮುಖ್ಯತೆಗೆ ಬರುತ್ತಿದೆ. ಸಾರ್ವಜನಿಕ ಆರೋಗ್ಯ ರಕ್ಷಣೆಯಲ್ಲಿ ಸ್ವಾವಲಂಬನೆ ಮತ್ತು ಸ್ವಸಹಾಯವು ಮೂಲಭೂತ ಅಗತ್ಯವಾಗಿದ್ದು, ಅದನ್ನು ಪೂರೈಸಬೇಕು. ಇದರಿಂದ ನಾಗರಿಕರು ಆರೋಗ್ಯ ಜೀವನ ನಡೆಸಬಹುದು. ಅದು ಕಡಿಮೆ ವೆಚ್ಚದಲ್ಲಿ ಮತ್ತು ಇತರ ಪರಿಣಾಮಗಳಿಲ್ಲದಿರುವುದರಿಂದ ನಮ್ಮ ಸ್ವದೇಶ ವೈದ್ಯ ಜ್ಞಾನ ಪದ್ಧತಿಯ ಸಮಗ್ರ ಭಾಗವಾಗಿರುವ ಔಷಧಿ ಸಸ್ಯಗಳ ಉಪಯೋಗ ಆಧರಿಸಿ ಸಾಮಾನ್ಯ ರೋಗಗಳ ಚಿಕಿತ್ಸೆಗೆ ಸರಳವಾದ ಮತ್ತು ಪರಿಣಾಮಕಾರಿ ಯುನಾನಿ ವಿಧಗಳನ್ನು ಪ್ರಚಲಿತಗೊಳಿಸುವುದು ಅಗತ್ಯ.

**ಬೇಕಾಗಿರುವುದೇನೆಂದರೆ :**

೧) ಎಲ್ಲಾ ಗ್ರಾಮ ಮಟ್ಟಗಳಲ್ಲಿ ಸರಿಯಾಗಿ ಯುನಾನಿ ಔಷಧ ಪದ್ಧತಿಯನ್ನು ಜನಾದರಗೊಳಿಸಲು ಸಾಮಾನ್ಯ ಮನುಷ್ಯನಿಗೆ ತಲಪುವಂತೆ ಔಷಧಿಗಳ ಪ್ರಚಾರವನ್ನು ಮಾಧ್ಯಮಗಳ ಮೂಲಕ ಅನೇಕ ಪರಿಣಾಮಕಾರಿ ವಿಧಾನಗಳ ಉಪಯೋಗವನ್ನು ಸರಕಾರದ ಮಾರ್ಗದಿಂದ ಮಾಡಬೇಕು.

೨) ರಾಷ್ಟ್ರೀಯ ಆರೋಗ್ಯ ರಕ್ಷಣೆಯ ಮುಖ್ಯ ಪ್ರವಾಹದಲ್ಲಿ ಡಾಕ್ಟರುಗಳ ಸಮಗ್ರತೆ, ಸೇವೆಯಲ್ಲಿರುವ ವೈದ್ಯರಿಗೆ ನವಚೇತಕ ಅಭ್ಯಾಸ ಕ್ರಮ ನಡೆಸಬೇಕು.

೩) ಔಷಧೀಯ ಸಸ್ಯಗಳ ಕೃಷಿ, ಕಾಪಾಡುವಿಕೆ ಮತ್ತು ಪುನರ್ ಸೃಷ್ಟಿಗೆ ಬೆಂಬಲ ನೀಡಬೇಕು.

೪) ಸಂಶೋಧನೆ ಅಭಿವೃದ್ಧಿಗೆ, ಏಕಮಾನದಂಡದ ಉತ್ಪನ್ನದ ಅಭಿವೃದ್ಧಿ ಮತ್ತು ಔಷಧಿಗಳ ಗುಣಮಟ್ಟ ನಿಯಂತ್ರಣಕ್ಕೆ ಬೇಕಾಗಿರುವ ಸಾಕಷ್ಟು ಅನುದಾನಗಳು ಮತ್ತು ಸೌಕರ್ಯಗಳ ಬೆಂಬಲ.

೫) ವೈದ್ಯರಿಗೆ, ಉಪಾಧ್ಯಾಯರಿಗೆ, ಸಂಶೋಧಕರಿಗೆ ಮುಂತಾದವರಿಗೆ ಹೊಸದೃಷ್ಟಿ ಮತ್ತು ಮುಂದುವರಿಯುವ ವೈದ್ಯಕೀಯ ವಿದ್ಯಾಭ್ಯಾಸ ಕಾರ್ಯಕ್ರಮಗಳಡಿಯಲ್ಲಿ ತರಬೇತಿ ಕಾರ್ಯಕ್ರಮಗಳು.

೬) ಔಷಧಿಗಳ ಉತ್ಪಾದನೆಯಲ್ಲಿ ಫಾರ್ಮಸಿಸ್ಟ್‌ರು ಮತ್ತು ಸಂಬಂಧಪಟ್ಟ ಇತರರಿಗೆ ಸರಿಯಾದ ತರಬೇತಿಗಳು.

೭) ಯುನಾನಿ ವೈದ್ಯ ಆಸ್ಪತ್ರೆಗಳು ಮತ್ತು ಔಷಧಾಲಯಗಳನ್ನು ಪ್ರಾರಂಭಿಸುವುದು ಮತ್ತು ಕೇಂದ್ರ ಸರಕಾರದಿಂದ ಸಿದ್ಧವಾಗಿ ದೊರಕುವ ಆಯವ್ಯಯದಿಂದ ಕೇಂದ್ರ ಪ್ರಾಯೋಜಿತ ಯೋಜನೆಯಡಿಯಲ್ಲಿ ಹಾಲಿ ಇರುವ ಅಲೋಪತಿ ಆಸ್ಪತ್ರೆಗಳಲ್ಲಿ ಯುನಾನಿ ಹೊರರೋಗಿ ಮತ್ತು ಒಳರೋಗಿ ಇಲಾಖೆಗಳನ್ನು ಸ್ಥಾಪಿಸುವುದು.

೮) ಅಂತರ ಕ್ಷೇತ್ರ ಸಹಕಾರದಿಂದ ಯುನಾನಿ ಔಷಧಿಗಳ ಪ್ರಯೋಜನಕರ ಪರಿಣಾಮಗಳನ್ನು ಅನೇಕ ಇತರ ಇಲಾಖೆಗಳು, ಸಂಘಗಳು ಮತ್ತು ಮಂಡಳಿಗಳ ಜೊತೆಯಲ್ಲಿ ಜೋಡಿಸುವುದು.

೧೦) ಯುನಾನಿ ಔಷಧದ ಚಿಕಿತ್ಸಾ ವೆಚ್ಚಕ್ಕಾಗಿ ಸರಕಾರ ಮತ್ತು ಸಾರ್ವಜನಿಕ ಉದ್ಯಮಗಳ ನೌಕರರಿಗೆ ಮರುಪಾವತಿ ಸೌಕರ್ಯಗಳನ್ನು ಒದಗಿಸುವುದು.

೧೧) ರಾಷ್ಟ್ರೀಯ ಆರೋಗ್ಯ ರಕ್ಷಣೆ ಯೋಜನೆಗಳಡಿಯಲ್ಲಿ ವಿವಿಧ ಆರೋಗ್ಯ ರಕ್ಷಣೆ ಕಾರ್ಯಕ್ರಮಗಳಲ್ಲಿ ಮತ್ತು ಎಲ್ಲಾ ಸಾರ್ವಜನಿಕ ಆರೋಗ್ಯ ಘಟಕಗಳು ಮತ್ತು ಕೇಂದ್ರಗಳಲ್ಲಿ ಯುನಾನಿ ಔಷಧಿಗಳ ಉಪಯೋಗ.

**ಕರ್ನಾಟಕದಲ್ಲಿ ಯುನಾನಿ ಆಸ್ಪತೆಗಳು ಮತ್ತು ಔಷಧಾಲಯಗಳು :**

೧. ಬೆಂಗಳೂರಿನಲ್ಲಿ ಎಸ್‌ಜೆಐಎಂನಲ್ಲಿ ೧೦೦ ಹಾಸಿಗೆಗಳ ಆಸ್ಪತ್ರೆ.

೨. ಮೈಸೂರಿನಲ್ಲಿ ಜೆಸಿಐಎಂನಲ್ಲಿ ೨೫ ಹಾಸಿಗೆಗಳ ಆಸ್ಪತ್ರೆ.

೩. ೧೦ ಹಾಸಿಗೆಗಳ ಆಸ್ಪತ್ರೆಗಳು ಇಲ್ಲಿವೆ.

ಎ) ಶಿವಮೊಗ್ಗ, ಬಿ) ಬಿಜಾಪುರ, ಸಿ) ತುಮಕೂರು, ಡಿ) ರಾಯಚೂರು, ಇ) ರಾಮನಗರ.

೪. ೬ ಹಾಸಿಗೆಗಳ ಆಸ್ಪತ್ರೆಗಳು ಇಲ್ಲಿವೆ :

ಎ) ತಿಮ್ಮಾಪುರ ರಂಗಂಪೇಟೆ, ಬಿ) ಬೀದರ್, ಸಿ) ಮಾನ್ವಿ ರಾಜಲ್ ಬಾಂಡ

೫. ಕರ್ನಾಟಕದಲ್ಲಿ ಇರುವ ಔಷಧಾಲಯಗಳ ಸಂಖ್ಯೆ ೫೭.

ಮಾನವನ ಪ್ರಯೋಜನಕ್ಕಾಗಿ ವಿವಿಧ ಮಟ್ಟಗಳಲ್ಲಿ ಬೆಲೆ ಕಡಿಮೆ ಇರುವ ಮತ್ತು ಸುರಕ್ಷಿತವಾಗಿರುವ ಯುನಾನಿ ಔಷಧಿಗಳಿಂದ ಸಾರ್ವಜನಿಕ ಆರೋಗ್ಯ ರಕ್ಷಣೆಯಲ್ಲಿ ಉತ್ತಮ ಫಲಿತಾಂಶವನ್ನು ಪಡೆಯುವುದಕ್ಕೆ ಎಲ್ಲಾ ಜನರಿಗೆ ಆರೋಗ್ಯ ಪಡೆಯಲು ಆರೋಗ್ಯ ರಕ್ಷಣೆ ಯೋಜನೆಗಳಲ್ಲಿ ಯುನಾನಿ ಔಷಧದ ಅನುಷ್ಠಾನಕ್ಕೆ ಯುನಾನಿ ಔಷಧೀಯ ತಜ್ಞರ ಸಮಿತಿಯೊಂದನ್ನು ರಚಿಸಿ ಅವರ ಅಭಿಪ್ರಾಯಗಳು ಮತ್ತು ಸಲಹೆಗಳನ್ನು ಪಡೆಯುವುದು ಒಳ್ಳೆಯದು.

## ನಕ್ಷೆ-೧

## ಭಾರತದಲ್ಲಿ ಯುನಾನಿ ವೈದ್ಯ ಪದ್ಧತಿಯ ಪರಿಚಯ




ಅರಬ್ ದೇಶವು ಯುನಾನಿ ವೈದ್ಯ ಪದ್ಧತಿಯನ್ನು ಭಾರತದಲ್ಲಿ ಆಚರಣೆಗೆ ತಂದಿದ್ದು, ಇಲ್ಲಿ ಬಲವಾಗಿ ಬೇರೂರಿ ವೃದ್ಧಿಸುತ್ತಿದೆ ಸ್ಥಾಪಿತವಾಗಿದ್ದು ಏಳಿಗೆಯಲ್ಲಿದೆ.

ಕ್ವೂರ್ ಆಲ್ ಜರ್ನಲ್ ಆಫ್ ಇಂಡಿಯನ್ ಮೆಡಿಸಿನ್

## ನಕ್ಷೆ-೨

### ಯುನಾನಿ ಪದ್ಧತಿಯನ್ನು ಆಚರಣೆಗೆ ತಂದರೆ ಇತರ ದೇಶಗಳಲ್ಲಿ ಅಸ್ತಿತ್ವಕ್ಕೆ ಬರುತ್ತದೆ




ಕ್ಯೂರ್ ಆಲ್ ಜರ್ನಲ್ ಅಫ್ ಇಂಡಿಯನ್ ಮೆಡಿಸಿನ್

## ನಕ್ಷೆ-೩

## ಯುನಾನಿ ವೈದ್ಯ ಪದ್ಧತಿಯ ಮೂಲ ಸೌಕರ್ಯಗಳು

### ಅಲ್-ಉಮಾರ್-ಅಲ್-ತಬಿಯಾಹ್

| ಅಂಗ | ಕಾರ್ಯಗಳು | ಶಕ್ತಿ | ಚೈತನ್ಯ | | ಪ್ರಕೃತಿ ಸ್ವಭಾವ | ಶರೀರದಲ್ಲಿರುವ ಧಾತುಗಳು | ಮೂಲಾಂಶಗಳು |
|---|---|---|---|---|---|---|---|
| (೧) | (೨) | (೩) | (೪) | | (೫) | | |
| | | ಪ್ರಾಣಶಕ್ತಿ | ಪ್ರಾಣಚೈತನ್ಯ | ಸರಳವಾದುದು | ಬಿಸಿ | -ಶುದ್ಧರಕ್ತ | ಗಾಳಿ |
| | | ಶಾರೀರಿಕ ಶಕ್ತಿ | ಶಾರೀರಿಕ ಚೈತನ್ಯ | | ತಣ್ಣನೆ | -ಪಿತ್ತರಸ | (ಬಿಸಿ ಮತ್ತು |
| | | ಮಾನಸಿಕ ಶಕ್ತಿ | | | | -ಶ್ಲೇಷ್ಮ | ಒದ್ದೆ) |
| | | | ಮಾನಸಿಕ ಚೈತನ್ಯ | | ಒದ್ದೆ | | ಬೆಂಕಿ |
| (ಅಸಂಖ್ಯಾತ) | (ಅಸಂಖ್ಯಾತ) | | | | ಶುಷ್ಕ | -ಕಪ್ಪು | (ಬಿಸಿ ಮತ್ತು |
| | | | | | ಬಿಸಿ ಮತ್ತು | | ಶುಷ್ಕ) |
| | | | | | | ಪಿತ್ತ | -ನೀರು |
| | | | | ಸಂಯುಕ್ತ | ಒದ್ದೆ | | (ತಣ್ಣನೆ ಮತ್ತು |
| | | | | | ಬಿಸಿ ಮತ್ತು | | ಒದ್ದೆ) |
| | | | | | ಶುಷ್ಕ | | -ಭೂಮಿ |
| | | | | | ತಣ್ಣನೆ | | (ಒದ್ದೆ ಮತ್ತು |
| | | | | | ಮತ್ತು ಒದ್ದೆ | | ತಣ್ಣನೆ |
| | | | | | ತಣ್ಣನೆ ಮತ್ತು | | |
| | | | | | ಶುಷ್ಕ | | |

## ನಕ್ಷೆ-೪

## ಆರು ಅತ್ಯವಶ್ಯಕಗಳು



## ನಕ್ಷೆ-೫

## ಯುನಾನಿ ವೈದ್ಯ ಪದ್ಧತಿಯಲ್ಲಿ ಚಿಕಿತ್ಸೆಯ ವಿಧಗಳು




೧) ಬಾರೂದ್, ೨) ಹಾಬ್, ೩) ಇಟ್ರಿಫಾಲ್, ೪) ಜವಾರಿಶ್, ೫) ಖಮ್ಮೈರಾ, ೬), ಕುಶ್ತ, ೭), ಲಾವೂರ್, ೮), ಮರುಝುನ್, ೯) ಮರ್ಹಂ, ೧೦) ಮತ್ಬೂಕ್, ೧೧) ನುಕು, ೧೨) ಕುರ್ಸ್, ೧೩) ಶಾಗನ್, ೧೪) ಸಫೂಫ್, ೧೫) ಶರಬತ್, ೧೬) ಸುಮಾನ, ೧೭) ಟಿಲಾ, ೧೮) ಜಿಮದ್, ೧೯) ಜುಲಾಲ್.

## ಯುನಾನಿ ಪದ್ಧತಿಯಲ್ಲಿ ಬಳಸುವ ಸಾಮಾನ್ಯ ಗಿಡಮೂಲಿಕೆಗಳು

| ಕ್ರ.ಸಂ. | ಯುನಾನಿ ಹೆಸರು | ಕನ್ನಡದಲ್ಲಿ ಬಳಸುವ ಹೆಸರು | ಗುಣ ಮತ್ತು ಉಪಯೋಗ | ಪ್ರಮಾಣ ಪ್ರತಿ ದಿನ |
|---|---|---|---|---|
| ೧. | ಆಮಿಲಾ | ನಲ್ಲಿಕಾಯಿ | ಅತಿಸಾರ, ಬಾಯಾರಿಕೆ ದೃಷ್ಟಿಯ ತೊಂದರೆ ಮತ್ತು ಕೂದಲು ಬೀಳುವುದು. | ೩ ಗ್ರಾಂ. ಪುಡಿ (ಮೂರು ಬಾರಿ) |
| ೨. | ಅಫ್ಸಂತೀನ್ | ಉರುವಲು ಉರಿಗಟ್ಟಿಗೆ | ಮಲೇರಿಯಾ, ವೈರಲ್ ಜ್ವರ, ಇತರೆ ಜ್ವರಗಳು, ಹಸಿವಿನ ತೊಂದರೆ. | ೩ ಗ್ರಾಂ ಪುಡಿ ನೀರಲ್ಲಿ ಕುದಿಸಿ (ಎರಡು ಬಾರಿ) |
| ೩. | ಅಜ್ವಾಯೀನ್ | ಓಮು | ಹೊಟ್ಟೆನೋವು, ಅಜೀರ್ಣ, ಉದರ ಶೂಲೆ, ಅತಿಸಾರ, ಕಾಲರಾ, ನಾಯಿಕೆಮ್ಮು, ಉದರ ರೋಗ | ೨ ಗ್ರಾಂ ನೀರಲ್ಲಿ ಕುದಿಸಿ (ಮೂರು ಬಾರಿ) |
| ೪. | ಅಸ್‌ಗಂಧ್ | ಸೊಗಡೆ ಬೇರು | ವಾಯು ರೋಗ, ಬಿಳಿ ಬಟ್ಟೆ ಬೆನ್ನೋವು, ದೇಹದ ಆರೋಗ್ಯಕ್ಕಾಗಿ, | ೨ ಗ್ರಾಂ (ಎರಡು ಬಾರಿ) |
| ೫. | ಅಸ್‌ಲಸ್ಸೂಸ್ | ಜೇಷ್ಠಮಧು | ಕೆಮ್ಮು, ಗಂಟಲು ಬೇನೆಗಳ ರೋಗ, | ೩ ಗ್ರಾಂ (ಮೂರು ಬಾರಿ) |
| ೬. | ಅಸಫ್‌ಚೊಲ್ | ಇಸಬಗೋಲು | ಆಮಶಂಕೆ ಭೇದಿ, ಗಂಟಲು ಬೇನೆ, ಮಲಬದ್ಧತೆ | ೫ ಗ್ರಾಂ (ಎರಡು ಬಾರಿ) |
| ೭. | ಬಾದಿಯಾನ್ | ಸೋಂಪು | ಅಜೀರ್ಣ, ಆಮ್ಲಪಿತ್ತ, ಬಾಯಿಯ ತಾಜಾತನ ವಾಂತಿ, ಉದರರೋಗ | ೩ ಗ್ರಾಂ ಮೂರು ಬಾರಿ |
| ೮. | ಬಲೀಲ | ತವರಿಕಾಯಿ | ಅತಿಸಾರ, ಕೆಮ್ಮು, ಅಸ್ತಮಾ, ಶ್ವಾಸರೋಗ, ದೃಷ್ಟಿಯ ತೊಂದರೆ | ೨ ಗ್ರಾಂ ನೀರಲ್ಲಿ ಕುದಿಸಿ (೨ ಬಾರಿ) |
| ೯. | ಬನಪ್ಷಾ | | ಜ್ವರ, ಶೀತ, ಕೆಮ್ಮು, ಗಂಟಲು ಬೇನೆ, ಶ್ವಾಸರೋಗ | ೪ ಗ್ರಾಂ ನೀರಿನಲ್ಲಿ ಕುದಿಸಿ (ಮೂರು ಬಾರಿ) |
| ೧೦. | ಬೇಲ್‌ಗಿರಿ | ಬಿಲ್ವಪತ್ರ | ಅತಿಸಾರ, ಉದರ ರೋಗ ಹೃದಯ ರೋಗ | ಹಣ್ಣು ಎಲೆ ಮತ್ತು ಬೇರಿನ ಪುಡಿ ೨ ಗ್ರಾಂ (ಎರಡು ಬಾರಿ) |

| ಕ್ರ.ಸಂ. | ಯುನಾನಿ ಹೆಸರು | ಕನ್ನಡದಲ್ಲಿ ಬಳಸುವ ಹೆಸರು | ಗುಣ ಮತ್ತು ಉಪಯೋಗ | ಪ್ರಮಾಣ ಪ್ರತಿ ದಿನ |
|---|---|---|---|---|
| ೧೧. | ದಾರ್‌ಬೇನಿ | ಚಕ್ಕೆ | ಕೆಮ್ಮು, ಉಬ್ಬಸ, ಅತಿಸಾರ ಆಮಶಂಕೆ ಭೇದಿ, ಸ್ತ್ರೀರೋಗ, | ೧ ಗ್ರಾಂ, ಎರಡು ಬಾರಿ |
| ೧೨. | ಹಿಗಿಲು | ಅಮೃತಬಳ್ಳಿ | ಜ್ವರ, ಅತಿಸಾರ, ಜಂತು ಹುಳು ಚರ್ಮರೋಗ | ೬ ಗ್ರಾಂ, ಮೂರು ಬಾರಿ |
| ೧೩. | ಹಲೀಲಿ | ಹಳದಕಾಯಿ | ನಾಯಿಕೆಮ್ಮು, ಅಜೀರ್ಣ, ಮಲಬದ್ಧತೆ, ಗಂಟಲು ರೋಗ | ೩ ಗ್ರಾಂ, ಎರಡು ಬಾರಿ |
| ೧೪. | ಹಿಲ್‌ತೀತ್ | ಹಿಂಗು | ಆಮ್ಲ ಪಿತ್ಥ, ಅಜೀರ್ಣ ಹಿಸ್‌ಟೀರಿಯಾ | ೨೫೦ ಮಿ.ಗ್ರಾಂ. |
| ೧೫. | ಜಾಮೂನ್ | ನೇರಲೆ | ಮಧುಮೇಹ, ಅತಿಸಾರ ಹೊಟ್ಟೆ ಹಸಿವಿಗಾಗಿ | ೪ ಗ್ರಾಂ ಮೂರು ಬಾರಿ |
| ೧೬. | ಕಮೇಲ | ಚಂದ್ರಹಿಟ್ಟು | ಜಂತು ಹುಳು, ಕಜ್ಜಿ, ಗಾಯ ಹಾಗೂ ಚರ್ಮ. | ೨ ಗ್ರಾಂ ನೀರಿನ ಜೊತೆ. ಎರಡು ಬಾರಿ |
| ೧೭. | ಕರಂಜ್ವ | - | ವಾಯುರೋಗ, ಜ್ವರ | ೨ ಗ್ರಾಂ ಪುಡಿ ಎರಡು ಬಾರಿ |
| ೧೮. | ಖಾಕ್ಷಿ | - | ಚಿಕ್ಕ ಅಮ್ಮ ದೊಡ್ಡ ಅಮ್ಮ ಕೆಮ್ಮು, ನೆಗಡಿ, ಶೀತ, ಜ್ವರ | ೪ ಗ್ರಾಂ ನೀರಲ್ಲಿ ಕುದಿಸಿ, ಮೂರು ಬಾರಿ |
| ೧೯. | ಮಕೊ | ಕಕ್‌ಮುಂಚಿ | ಕಾಮಾಲೆ ರೋಗ, ಉದರ ಶೂಲೆ, ಗರ್ಭಕೋಶ ರೋಗ | ೫ ಗ್ರಾಂ ಎರಡು ಬಾರಿ |
| ೨೦. | ನೀಮ್ | ಬೇವು | ಮೂಲವ್ಯಾಧಿ, ಚರ್ಮರೋಗ ರಕ್ತಶೋಧನೆ, ಹಳೆಯ ಜ್ವರ | ಬೀಜ ಪುಡಿಮಾಡಿ ೧ ಗ್ರಾಂ ಅಥವಾ ಎಲೆ ಮತ್ತು ಚಕ್ಕೆ ೨ ಗ್ರಾಂ ಪುಡಿ ಎರಡು ಬಾರಿ |
| ೨೧. | ಕರನ್‌ಫಿಲ್ | ಲವಂಗ | ಉದರ ರೋಗ, ಹಲ್ಲು ನೋವು, ಬಾಯಿಯ ತಾಜಾತನ | ೧/೨ ಗ್ರಾಂ ಎರಡು ಬಾರಿ |

| ಕ್ರ.ಸಂ. | ಯುನಾನಿ ಹೆಸರು | ಕನ್ನಡದಲ್ಲಿ ಬಳಸುವ ಹೆಸರು | ಗುಣ ಮತ್ತು ಉಪಯೋಗ | ಪ್ರಮಾಣ ಪ್ರತಿ ದಿನ |
|---|---|---|---|---|
| ೨೨. | ರೆವಂದ್‌ಚಿನಿ | ರೆವತ್ ಚೀನಿ | ಚರ್ಮರೋಗ, ಮೈಊತ, ಕೆಮ್ಮು, ಉಬ್ಬಸ, ಜ್ವರ, ಮೂತ್ರಬದ್ಧತೆ, ಸ್ತ್ರೀರೋಗ | ೨ ಗ್ರಾಂ ಬಿಸಿ ನೀರಿನ ಜೊತೆ, ಎರಡು ಬಾರಿ |
| ೨೩. | ಸತಾವರ್ | ಹಳರ್ರು ಮಕ್ಕಳ್ | ಹಾಲಿನ ಉತ್ಪಾದನೆ ಹೆಚ್ಚಿಸುವುದು | ೫ ಗ್ರಾಂ ಪುಡಿ ಎರಡು ಬಾರಿ |
| ೨೪. | ಸೀರ್ | ಬೆಳ್ಳುಳ್ಳಿ | ರಕ್ತದ ಒತ್ತಡ, ಮೂತ್ರ ಬದ್ಧತೆ, ವಾಯು ರೋಗ, ತೊನ್ನು, ನರರೋಗ, ಬಲಪಾರ್ಶ್ವ ವಾಯು, ಬೆನ್ನೋವು | ೨ ಗ್ರಾಂ, ಎರಡು ಬಾರಿ |
| ೨೫. | ಷಾಹತ್ರ | - | ಕಜ್ಜಿ, ಲೈಂಗಿಕ ರೋಗ, ಚರ್ಮರೋಗ, ಜ್ವರ, ಮೊಡವೆ | ೫ ಗ್ರಾಂ, ನೀರಿನಲ್ಲಿ ಕುದಿಸಿ ೨ ಬಾರಿ |
| ೨೬. | ಪಾನ್ | ತಾಂಬೂಲ | ಬಾಯಿಯ ತಾಜಾತನ, ವಸಡಿಗಾಗಿ, ಗಲರೋಗ, ಕೆಮ್ಮು, ಅಜೀರ್ಣ | ೨ ಎಲೆ |
| ೨೭. | ಜಂಜಬೀಲ್ | ಶುಂಠಿ | ಅಜೀರ್ಣ, ಉದರಶೂಲೆ, ನರರೋಗ, ಹಸಿವೆಗಾಗಿ | ೪ ಗ್ರಾಂ, ೩ ಬಾರಿ |
| ೨೮. | ತುಲ್ಸಿ | ತುಳಸಿ | ನೆಗಡಿ, ಶೀತ, ಜ್ವರ, ಕಿವಿನೋವು, ಉದರ ರೋಗ | ೧/೨ ಗ್ರಾಂ ಎರಡು ಬಾರಿ |
| ೨೯. | ಹಲ್ದಿ / ಜರದ್ ಚೊಬ್ | ಅರಿಷಿಣ | ಕೆಮ್ಮು, ಉಸಿರಾಟದ ತೊಂದರೆ, ಉಬ್ಬಸ, ಎರಡು ಬಾರಿ ಗಾಯಗಳಿಗೆ, ಚರ್ಮ ರೋಗ, ಕಜ್ಜಿ | ೩ ಗ್ರಾಂ ಪುಡಿ |
| ೩೦. | ಅಡೊಸ | ವಾಸಕ | ಕೆಮ್ಮು, ಉಸಿರಾಟದ ತೊಂದರೆ ಉಬ್ಬಸ ಕಫ | ೫ ಗ್ರಾಂ ಎಲೆಯ ರಸವನ್ನು ಮುಂಜಾನೆ ಖಾಲಿ ಹೊಟ್ಟೆಯಲ್ಲಿ |




# ಹೋಮಿಯೋಪತಿ ವೈದ್ಯ ಪದ್ಧತಿ

ಡಾ. ಎನ್.ಎಂ. ಚಂದ್ರಶೇಖರ್

ಹೋಮಿಯೋಪತಿಯು ಈಗ ವೇಗವಾಗಿ ಬೆಳೆಯುತ್ತಿರುವ ವೈದ್ಯ ಪದ್ಧತಿಯಾಗಿದ್ದು ಪ್ರಪಂಚದಾದ್ಯಂತ ಅನುಸರಿಸಲಾಗುತ್ತಿದೆ. ಅದರ ಗುಳಿಗೆಗಳ ಸುರಕ್ಷತೆ ಮತ್ತು ಅದರಿಂದ ಗುಣಮುಖವಾಗುವಿಕೆಯು ಸೌಮ್ಯವಾಗಿರುವುದರಿಂದ ಭಾರತದಲ್ಲಿ ಇದು ಮನೆಮಾತಾಗಿದೆ. ಇದರ ಅಂದಾಜಿನ ಅಧ್ಯಯನದಂತೆ ಭಾರತದ ಶೇ. ೧೦ರಷ್ಟು ಜನರು ಹೋಮಿಯೋಪತಿಯ ಮೇಲೆ ಆರೋಗ್ಯ ರಕ್ಷಣೆ ಅಗತ್ಯಗಳಿಗೆ ಅವಲಂಬಿತವಾಗಿದ್ದಾರೆ.

ಭಾರತದಲ್ಲಿ ಹೋಮಿಯೋಪತಿಯು ಸುಮಾರು ೧೫೦ ವರ್ಷಗಳಿಂದ ರೂಢಿಯಲ್ಲಿದೆ. ಇದು ದೇಶದ ಬೇರುಗಳು ಮತ್ತು ಸಂಪ್ರದಾಯಗಳೊಂದಿಗೆ ಎಷ್ಟು ಚೆನ್ನಾಗಿ ಬೆಸೆದುಕೊಂಡಿದೆಯೆಂದರೆ ಇದನ್ನು ಒಂದು ರಾಷ್ಟ್ರೀಯ ವೈದ್ಯಕೀಯ ಪದ್ಧತಿ ಎಂದು ಪರಿಗಣಿಸಲಾಗಿದ್ದು ತುಂಬಾ ಜನರಿಗೆ ಆರೋಗ್ಯ ರಕ್ಷಣೆ ಒದಗಿಸುವುದರಲ್ಲಿ ಬಹಳ ಪ್ರಮುಖ ಪಾತ್ರವನ್ನು ವಹಿಸಿದೆ. ಇದರ ಬಲವು ಅದರ ಸ್ಪಷ್ಟವಾದ ಪರಿಣಾಮಕಾರತೆಯಲ್ಲಿವೆ. ಏಕೆಂದರೆ ಮಾನಸಿಕ, ಭಾವನಾತ್ಮಕ, ಧಾರ್ಮಿಕ ಮತ್ತು ಶಾರೀರಿಕ ಮಟ್ಟಗಳಲ್ಲಿ ಒಂದು ಆಂತರಿಕ ಸಮತೋಲನವನ್ನು ತರಲು ರೋಗಿಯ ಬಗ್ಗೆ ಇದು ಪೂರ್ಣತೆಯ ಮಾರ್ಗವನ್ನು ಅನುಸರಿಸುತ್ತದೆ.

**ಭಾರತದಲ್ಲಿ ಹೋಮಿಯೋ ವೈದ್ಯ ಪದ್ದತಿ ಸುಮಾರು ೧೫೦ ವರ್ಷಗಳಿಂದ ರೂಢಿಯಲ್ಲಿದೆ. ಇದು ದೇಶದ ಬೇರು ಹಾಗೂ ಸಂಪ್ರದಾಯಗಳೊಂದಿಗೆ ಎಷ್ಟು ಚೆನ್ನಾಗಿ ಬೆಸೆದುಕೊಂಡಿದೆ ಎಂದರೆ ಇದನ್ನು ಒಂದು ರಾಷ್ಟ್ರೀಯ ವೈದ್ಯಕೀಯ ಪದ್ಧತಿ ಎಂದು ಪರಿಗಣಿಸಲಾಗಿದೆ.**

'ಹೋಮಿಯೋಪತಿ' ಎಂಬ ಪದವನ್ನು ಎರಡು ಗ್ರೀಕ್ ಪದಗಳಾದ ಹೇಮಾಯಿಸ್ ಅಂದರೆ ಒಂದೇ ರೀತಿಯ ಮತ್ತು ಪ್ಯಾಥೋಸ್ ಎಂದರೆ ನರಳುವುದು ಎಂಬವುಗಳಿಂದ ಸೃಷ್ಟಿಸಲಾಗಿದೆ. ಹೋಮಿಯೋಪತಿಯ ಸರಳ ಅರ್ಥವೇನೆಂದರೆ, ಅತಿ ಸಣ್ಣ ಪ್ರಮಾಣದಲ್ಲಿ ಗುಣಮುಖ ಮಾಡುವುದಕ್ಕೆ ರೋಗಗಳಿಗೆ ಚಿಕಿತ್ಸೆ ನೀಡುವುದಾಗಿದ್ದು ಇವು ಆರೋಗ್ಯವಂತರಾಗಿರುವವರು ತೆಗೆದುಕೊಂಡಾಗ ರೋಗದಂತಹ ಲಕ್ಷಣವನ್ನುಂಟುಮಾಡುವ ಸಾಮರ್ಥ್ಯವುಳ್ಳದ್ದಾಗಿರುತ್ತದೆ. ಇದು ಸ್ವಾಭಾವಿಕ ಶಮನ ನಿಯಮವಾಗಿದೆ - ಅಂದರೆ "Similia Similibus Curantur" /ಯಾವುದು ರೋಗವನ್ನು ಉಂಟುಮಾಡಬಲ್ಲದೋ ಅದರಲ್ಲೇ ಚಿಕಿತ್ಸೆಯೂ ಅಡಗಿರುತ್ತದೆ ಎಂಬುದು ಇದರ ಮೂಲ ಸಿದ್ಧಾಂತ. ಸ್ಯಾಮ್ಯುಯೆಲ್ ಹ್ಯಾನ್ನೆಮನ್ (೧೭೫೫-೧೮೪೩) ೧೯ನೇ ಶತಮಾನದ ಪ್ರಾರಂಭದಲ್ಲಿ ಇದಕ್ಕೆ ವೈಜ್ಞಾನಿಕ ಆಧಾರವನ್ನು ಕೊಟ್ಟರು. ಇದು ನರಳುತ್ತಿರುವ ಮಾನವ ವರ್ಗಕ್ಕೆ ಎರಡು

ಶತಮಾನಗಳಿಗೂ ಮೀರಿ ಸೇವೆಸಲ್ಲಿಸುತ್ತಿದ್ದು ಕಾಲದ ಪರಿಳಿತಗಳನ್ನು ತಡೆದುಕೊಂಡಿದೆ ಮತ್ತು ಸಮಯ-ಪರೀಕ್ಷಿಸಲಾದ ಚಿಕಿತ್ಸೆಯಾಗಿ ಹೊರಬಂದಿದೆ. ಹ್ಯಾನ್ನೆಮನ್ ಪ್ರತಿಪಾದಿಸಿದ ವೈಜ್ಞಾನಿಕ ತತ್ವಗಳು ಸ್ವಾಭಾವಿಕವಾದುವು ಮತ್ತು ಚೆನ್ನಾಗಿ ಪರೀಕ್ಷಿಸಲಾಗಿದ್ದು ಜಯಪ್ರದವಾಗಿ ಅನುಸರಿಸಲ್ಪಡುತ್ತಾ ಮುಂದುವರಿಯುತ್ತಿದೆ.

ಹೋಮಿಯೋಪತಿಯು ಭಾರತಕ್ಕೆ ೧೮೩೯ರಲ್ಲಿ ಪ್ರವೇಶಿಸಿತು. ಆಗ ಪಂಜಾಬಿನ ಮಹಾರಾಜಾ ರಣಜಿತ್‌ಸಿಂಗ್ ಶಬ್ದ ಪೆಟ್ಟಿಗೆಗಳ ಪಾರ್ಶ್ವವಾಯು ಮತ್ತು ಇಡಿಯ (ಅಂಗ ಊತ) ದಿಂದ ನರಳುತ್ತಿದ್ದವರಿಗೆ ಚಿಕಿತ್ಸೆ ನೀಡಲು ಡಾ. ಜಾನ್ ಮಾರ್ಟಿನ್ ಹೋನಿಗ್ ಬರ್ಗರ್‌ಅನ್ನು ಕರೆಸಲಾಯಿತು. ಮಹಾರಾಜರಿಗೆ ಅವರ ಕಾಯಿಲೆಗಳಿಂದ ಗುಣಮುಖವಾಯಿತು. ಅದಕ್ಕೆ ಪ್ರತಿಯಾಗಿ ಅಮೂಲ್ಯ ಪ್ರತಿಫಲವನ್ನು ಪಡೆದರು. ನಂತರ ಅವರನ್ನು ಒಂದು ಆಸ್ಪತ್ರೆಯ ಪ್ರಭಾರ ಅಧಿಕಾರಿಯನ್ನಾಗಿ ಮಾಡಲಾಯಿತು. ಡಾ. ಹೋನಿಗ್ ಬರ್ಗರ್ ನಂತರ ಕಲ್ಕತ್ತಾಕ್ಕೆ ಹೋಗಿ ಅಲ್ಲಿ ವೈದ್ಯವೃತ್ತಿ ಪ್ರಾರಂಭಿಸಿದರು. ರಾಜಾಶ್ರಯದಿಂದ ಈ ಪದ್ಧತಿ ಭಾರತದಲ್ಲಿ ಬೇರೂರಲು ಸಹಾಯವಾಯಿತು. ತುಂಬಾ ಹೆಚ್ಚಿನ ಸಂಖ್ಯೆಯ ಮಿಶನರಿಗಳು, ಭಾರತ ಸರಕಾರದ ನಾಗರಿಕ ಮತ್ತು ಮಿಲಿಟರಿ ಸೇವೆಗಳ ಸಿಬ್ಬಂದಿಗಳು ವಿಸ್ತಾರವಾಗಿ ಹೋಮಿಯೋಪತಿಯನ್ನು ಬಳಸುತ್ತಿದ್ದರು ಮತ್ತು ಹೆಚ್ಚಾಗಿ ಬಂಗಾಳ ಮತ್ತು ದಕ್ಷಿಣ ಭಾರತದಲ್ಲಿ ಈ ಪದ್ಧತಿಯನ್ನು ಹರಡಿದರು.

ಸ್ವಾತಂತ್ರ್ಯಾನಂತರ ಭಾರತ ಸರಕಾರವು ಹೋಮಿಯೋಪತಿ ವೈದ್ಯಕೀಯ ಪದ್ಧತಿಯನ್ನು ಅಭಿವೃದ್ಧಿಪಡಿಸಲು ಸಮಯ ವ್ಯರ್ಥಮಾಡಲಿಲ್ಲ. ೧೯೪೮ರಲ್ಲಿ ಹೋಮಿಯೋಪತಿ ವಿಚಾರಣಾ ಸಮಿತಿ, ೧೯೫೧ರಲ್ಲಿ ಯೋಜನಾ ಆಯೋಗದ ಸಮಿತಿ ಮತ್ತು ೧೯೬೨ರಲ್ಲಿ ಹೋಮಿಯೋಪತಿಯ ಫಾರ್ಮಕೋಪಿಯಾ ಸಮಿತಿಯ ರಚನೆಗಳು ಇದಕ್ಕೆ ಉದಾಹರಣೆಗಳಾಗಿವೆ. ಈ ಸಮಿತಿಗಳ ಶಿಫಾರಸಿನಿಂದಾಗಿ, ಭಾರತ ಸರಕಾರವು ಹೋಮಿಯೋಪತಿಯನ್ನು ರಾಷ್ಟ್ರೀಯ ವೈದ್ಯಕೀಯ ಪದ್ಧತಿಯೆಂದು ಒಪ್ಪಿಕೊಂಡಿತು ಮತ್ತು ಎರಡನೆಯ ಪಂಚವಾರ್ಷಿಕ ಯೋಜನೆ ಕಾಲದಲ್ಲಿ ಅದರ ಅಭಿವೃದ್ಧಿಗೆ ಹಣ ಬಿಡುಗಡೆ ಮಾಡಲು ಪ್ರಾರಂಭಿಸಿದರು. ಕೆಲವು ರಾಜ್ಯಗಳು ಹೋಮಿಯೋಪತಿ ಶಿಕ್ಷಣಕ್ಕೆ ತಮ್ಮ ವಂತಿಗೆಯನ್ನು ನೀಡಿದವು ಮತ್ತು ಹೋಮಿಯೋಪತಿ ವೈದ್ಯರನ್ನು ಆರೋಗ್ಯ ಸೇವೆಗಳಲ್ಲಿ ನೇಮಕ ಮಾಡಿದವು. ರಾಜ್ಯಗಳ ಕಾಯ್ದೆ ಮತ್ತು ನಿಯಮಗಳು ಮುಂತಾದವುಗಳನ್ನು ಜಾರಿಗೊಳಿಸಿ ಈ ಪದ್ಧತಿಯನ್ನು ವ್ಯವಸ್ಥೆಗೊಳಿಸಿದವು.

ಭಾರತದ ಪಾರ್ಲಿಮೆಂಟು ಮಂಜೂರುಮಾಡಿದ ರಾಷ್ಟ್ರೀಯ ಆರೋಗ್ಯ ನೀತಿಯು ಭಾರತದ ವೈದ್ಯಕೀಯ ಪದ್ಧತಿಗಳಿಗೆ ಮೀಸಲಾಗಿದ್ದು ಅದರಲ್ಲಿ ಹೋಮಿಯೋಪತಿಯು ಪ್ರಾಥಮಿಕ ಆರೋಗ್ಯ ರಕ್ಷಣೆಯಲ್ಲಿ ಪ್ರಮುಖ ಪಾತ್ರ ಪಡೆದಿದ್ದು ಒಟ್ಟಾರೆ ಆರೋಗ್ಯ ರಕ್ಷಣೆ ಪದ್ಧತಿಗಳಲ್ಲಿ ಅದರ ಸಮಗ್ರತೆಯು ಅದರಲ್ಲಿಯೂ ವಿಶೇಷವಾಗಿ ಆರೋಗ್ಯರಕ್ಷಣೆಯ ತಡೆಯುವಿಕೆ ಮತ್ತು ನಿವಾರಣೆಯ ಅಂಶಗಳು 'ಕ್ರಿ.ಶ. ೨೦೦೦ದ ಹೊತ್ತಿಗೆ ಎಲ್ಲರಿಗೂ ಆರೋಗ್ಯ' ಸಾಧಿಸುವ ರಾಷ್ಟ್ರೀಯ ಗುರಿಯ ಸಂದರ್ಭದಲ್ಲಿ ಪ್ರಮುಖವಾಗಿದೆ.

ಹೋಮಿಯೋಪತಿಯು ಹರಡುತ್ತಾ ಹೋಯಿತು ಮತ್ತು ೨೦ನೇ ಶತಮಾನದ ಪ್ರಾರಂಭದಲ್ಲಿ ಭಾರತದ ಮುಖ್ಯವಾದ ನಗರಗಳಲ್ಲಿ ಹೋಮಿಯೋಪತಿ ವೈದ್ಯ ಶಾಲೆಗಳಿದ್ದವು. ಈ ಪದ್ಧತಿಯ ಪ್ರಸಿದ್ಧಿಯಿಂದಾಗಿ ಹೋಮಿಯೋಪತಿಯನ್ನು ಅಭ್ಯಸಿಸುತ್ತಿದ್ದ ಅಡ್ಡ ಕಸುಬಿನ ವೈದ್ಯರು ಅಸಂಖ್ಯಾತವಾಗಿ ಇದ್ದರು. ಈ ರೀತಿಯಾದ ಶೋಚನೀಯ ಸ್ಥಿತಿಯನ್ನು ನೋಡಿ ಸರಕಾರವು ಅದನ್ನು ಸರಿಪಡಿಸಲು ಪ್ರಯತ್ನಗಳನ್ನು ಮಾಡಿತು. ಅದು ಅನೇಕ ಕ್ರಮಗಳನ್ನು ತೆಗೆದುಕೊಂಡಿತು. ೧೯೪೮ರಲ್ಲಿ ಹೋಮಿಯೋಪತಿಯ ಬೋಧನೆ ಮತ್ತು ಅಭ್ಯಾಸವನ್ನು ಕ್ರಮಗೊಳಿಸಲು ಒಂದು ಸೂಕ್ತವಾದ ವ್ಯವಸ್ಥೆಯನ್ನು ಕಂಡುಹಿಡಿಯಲು ಒಂದು ಹೋಮಿಯೋಪತಿ ವಿಚಾರಣಾ ಸಮಿತಿಯನ್ನು ರಚಿಸಲಾಯಿತು. ೧೯೫೨ರಲ್ಲಿ ಒಂದು ಹೋಮಿಯೋಪತಿ ಸಲಹಾ ಸಮಿತಿಯನ್ನು ಭಾರತ ಸರಕಾರವು ನೇಮಿಸಿತು ಮತ್ತು ಈ ಸಮಿತಿಗಳ ಶಿಫಾರಸುಗಳು ಈ ವೈದ್ಯಕೀಯ ಪದ್ಧತಿಗೆ ಮನ್ನಣೆಕೊಡಲು, ೧೯೭೩ರಲ್ಲಿ ಕೇಂದ್ರ ಕಾಯ್ದೆಯೊಂದನ್ನು ಜಾರಿಗೊಳಿಸುವುದಕ್ಕೆ ಅವಕಾಶವಾಯಿತು. ಈಗ ಭಾರತದಲ್ಲಿ ಹೋಮಿಯೋಪತಿಯನ್ನು ರಾಷ್ಟ್ರೀಯ ವೈದ್ಯಕೀಯ ಪದ್ಧತಿಗಳಲ್ಲೊಂದೆಂದು ಒಪ್ಪಿಕೊಳ್ಳಲಾಗಿದೆ. ಹೋಮಿಯೋಪತಿಯು ಇತರ ವೈದ್ಯಕೀಯ ಪದ್ಧತಿಗಳ ಜೊತೆಯಲ್ಲಿ ಸರಕಾರದ ಬೆಂಬಲವನ್ನು ಪಡೆದಿದೆ. ಏಕೆಂದರೆ ಈ ಎಲ್ಲಾ ಪೂರಕ ಪರ್ಯಾಯ ಪದ್ಧತಿಗಳಿಂದ ಚಿಕಿತ್ಸೆಯಿದ್ದರೆ ಬೇರೆ ಯಾವುದೇ ದೇಶದಲ್ಲಿ ದೊರೆಯುವುದಕ್ಕಿಂತ ವಿಸ್ತಾರವಾದ ಪ್ರದೇಶದಲ್ಲಿ ಚಿಕಿತ್ಸೆ ದೊರೆಯುತ್ತದೆ.

## ಭಾರತದಲ್ಲಿ ಭೌತಿಕ ಮೂಲ ಸೌಲಭ್ಯಗಳು :

| ಸಂಖ್ಯೆ | ಮೂಲ ಸೌಲಭ್ಯಗಳು | ಸಂಖ್ಯೆ | |
|---|---|---|---|
| ೧ | ನೋಂದಾಯಿತ ವೈದ್ಯರ ಸಂಖ್ಯೆ | ೧,೯೭,೨೫೨ | (೦೧-೦೧-೨೦೦೧ರಲ್ಲಿ) |
| ೨ | ಸಾಂಸ್ಥಿಕವಾಗಿ ಅರ್ಹತೆ ಪಡೆದ ವೈದ್ಯರು | ೧,೨೮,೧೪೨ | (೦೧-೦೧-೨೦೦೧ರಲ್ಲಿ) |
| ೩ | ಸಾಂಸ್ಥಿಕೇತರವಾಗಿ ಅರ್ಹತೆ ಪಡೆದವರು | ೬೯.೧೧೦ | (೦೧-೦೧-೨೦೦೧ರಲ್ಲಿ) |
| ೪ | ಔಷಧಾಲಯಗಳ ಸಂಖ್ಯೆ | ೭೪೧೧ | (೧-೪-೨೦೦೨ರಲ್ಲಿ) |
| ೫ | ಆಸ್ಪತ್ರೆಗಳ ಸಂಖ್ಯೆ | ೩೦೭ | (೧-೪-೨೦೦೨ರಲ್ಲಿ) |
| ೬ | ಹಾಸಿಗೆಯ ಸಂಖ್ಯೆ | ೧೩,೬೯೩ | (೧-೪-೨೦೦೨ರಲ್ಲಿ) |
| ೭ | ಬೋಧನಾ ಸಂಸ್ಥೆಗಳ ಸಂಖ್ಯೆ (ಪದವಿ) | ೧೭೨ | (೧-೪-೨೦೦೨ರಲ್ಲಿ) |
| | ಪದವಿ ಕೋರ್ಸಿನ ಸಂಖ್ಯೆ | ೧೦೮೯೫ | (೧-೪-೨೦೦೨ರಲ್ಲಿ) |
| ೮ | ಸ್ನಾತಕೋತ್ತರ ಬೋಧಕವರ್ಗ | ೨೪(ಇವುಗಳಲ್ಲಿ ೨ ಪ್ರತ್ಯೇಕವಾಗಿ ಸ್ನಾತಕೋತ್ತರ ಕೋರ್ಸು ಗಳಿಗೆ ಮಾತ್ರ) | (೧-೪-೨೦೦೨ರಲ್ಲಿ) |
| ೯ | ಸ್ನಾತಕೋತ್ತರದಲ್ಲಿ ತಜ್ಞತೆಯ ಸಂಖ್ಯೆ | ೭ | (೧-೪-೨೦೦೨ರಲ್ಲಿ) |
| | ದೊರಕುತ್ತಿರುವ ಸ್ನಾತಕೋತ್ತರ ಸ್ಥಾಪನಾ ಸಂಖ್ಯೆ | ೫೪೩ | (೧-೪-೨೦೦೨ರಲ್ಲಿ) |

## ಕರ್ನಾಟಕದಲ್ಲಿ ಹೋಮಿಯೋಪತಿ ಇತಿಹಾಸ :

ಕರ್ನಾಟಕದಲ್ಲಿ ಹೋಮಿಯೋಪತಿಯ ಇತಿಹಾಸವು ಬೇರೆ ಕಡೆಯಲ್ಲಿರುವಂತೆ ತ್ಯಾಗ ಮತ್ತು ಹೋರಾಟಗಳ ಕುತೂಹಲಕರವಾದ ಕಥೆಯಾಗಿದೆ. ಮೊದಲನೇ ಹೋಮಿಯೋಪತಿ ಪದ್ಧತಿಯ ಅಭ್ಯಾಸವು ಮಂಗಳೂರಿನಲ್ಲಿ ದಾಖಲಾಗಿದೆ. ಫಾದರ್ ಮೂಲರ್‌ನ ಆಸ್ಥೆ, ಡಾ. ಹಾನ್ಹೆಮನ್‌ನ ಅಧ್ಯಯನಕ್ಕೆ ಸಹಾಯ ಮಾಡಿದರು. ಇವರನ್ನು ೧೯ನೇ ಶತಮಾನದ ಅಂತ್ಯದಲ್ಲಿ ಮಂಗಳೂರಿನ ಸೇಂಟ್ ಅಲೋಷಿಯಸ್ ಕಾಲೇಜಿಗೆ ಬೋಧಿಸಲು ಕಳುಹಿಸಿದರು. ಇವರು ಹೋಮಿಯೋಪತಿಯ ಮೂಲವಿಷಯಗಳನ್ನು ಕಲಿತಿದ್ದರು. ಇವರು ಹೋಮಿಯೋಪತಿಯಿಂದ ಚಿಕಿತ್ಸಿಸಲು ಪ್ರಾರಂಭಿಸಿದರು. ಅವರ ಸಣ್ಣಮಾತ್ರೆಗಳಿಗಾಗಿ ಬೇಗನೆ ಪ್ರಸಿದ್ಧರಾದರು. ಅಂತಿಮವಾಗಿ ತಮ್ಮ ಬೋಧನಾ ವೃತ್ತಿಯನ್ನು ಬಿಟ್ಟು ಪೂರ್ಣವಾಗಿ ಹೋಮಿಯೋಪತಿ ವೈದ್ಯ ಚಿಕಿತ್ಸೆಗೆ ತೊಡಗಬೇಕಾಯಿತು. ೧೮೮೦ರಲ್ಲಿ ಅವರು ಬಡವರಿಗಾಗಿ ಹೋಮಿಯೋಪತಿ ದವಾಖಾನೆಯನ್ನು ಕಂಕನಾಡಿಯಲ್ಲಿ ಪ್ರಾರಂಭಿಸಿದರು.

ಅಲ್ಲಿಂದಾಚೆಗೆ ಹೋಮಿಯೋಪತಿಯು ವಿದ್ಯಾವಂತರಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆಯಿತು. ಅದು ವಿದ್ಯಾವಂತರಿಗೂ ಹೆಚ್ಚು ಪ್ರಯೋಜನಾಕಾರಿಯೆಂದು ಕಂಡುಬಂದಿತು. ಬಡವರ ಮೇಲೆ ಈ ಪದ್ಧತಿಯು ಪ್ರಭಾವ ಬೀರಲಿಲ್ಲ. ಏಕೆಂದರೆ ಈ ಹೊಸ ಪದ್ಧತಿಯ ಬಗ್ಗೆ ಅರಿವಿರಲಿಲ್ಲವಾದ್ದರಿಂದ ಇದು ಶ್ರೀಮಂತರಲ್ಲಿಯೇ ಉಳಿಯಿತು.

ಬೆಂಗಳೂರಿನಲ್ಲಿ ಹೋಮಿಯೋಪತಿಯ ಅಭ್ಯಾಸ ಅತ್ಯಂತ ಹಳೆಯ ದಾಖಲೆಯನ್ನು ಒಬ್ಬ ಅಮೆರಿಕಾದ ದಂತವೈದ್ಯ ಮತ್ತು ಹೋಮಿಯೋಪತಿ ವೈದ್ಯ ಡಾ. ಡೆನ್ಮಾಂಡ್‌ರವರಿಗೆ ಹೆಸರಿಸಲಾಗಿದೆ. ಅವರು ತಮ್ಮ ವೃತ್ತಿಯನ್ನು ಈಗಿನ ಗ್ರಾಂಟ್ ರೋಡಿನಲ್ಲಿ

ನಡೆಸುತ್ತಿದ್ದರು. ಇವರು ಸುಮಾರು ೧೯೩೦ರ ಸಮೀಪ ವೃತ್ತಿ ನಡೆಸುತ್ತಿದ್ದು "ಗಾಲ್‌ಸ್ಟೋನ್ ಡಾಕ್ಟರ್" ಎಂದೇ ಪ್ರಸಿದ್ಧರಾಗಿದ್ದರು. ಇನ್ನೊಬ್ಬ ಜರ್ಮನ್ ಡಾಕ್ಟರ್ ಡಾ. ಮಾರ್ಟಿನ್ ಅವರು ತಮ್ಮ ವೃತ್ತಿಯನ್ನು ಕನ್ನಿಂಗ್‌ಹ್ಯಾಂ ರಸ್ತೆಯಲ್ಲಿ ನಡೆಸುತ್ತಿದ್ದರು. ಈ ಡಾಕ್ಟರುಗಳು ಹೋಮಿಯೋಪತಿಯಲ್ಲಿ ಆಸಕ್ತರಾಗಿರುವ ಹೆಚ್ಚಿನ ಸಂಖ್ಯೆಯವರಿಗೆ ಇದನ್ನು ಕಲಿಸಿದರು. ಅವರುಗಳು ನಂತರ ಗಣ್ಯಸ್ಥಾನವನ್ನು ಪಡೆದರು. ಹೋಮಿಯೋಪತಿಯನ್ನು ಕರ್ನಾಟಕದಲ್ಲಿ ವೃತ್ತಿಯಾಗಿಸಿಕೊಂಡಿದ್ದ ಭಾರತೀಯರಲ್ಲಿ ಮುಖ್ಯರಾದವರು-ಡಾ.ಟಿ.ಎಸ್. ಐಯ್ಯರ್, ಡಾ.ಎ.ಆರ್.ಎ. ಆಚಾರ್ಯ, ಡಾ.ಕೆ. ಇ. ಪಿಂಟರ್ಸ್, ಡಾ.ಕೆ.ಎಚ್. ಶ್ರೀನಿವಾಸರಾವ್, ಡಾ. ಎಚ್. ಎಸ್. ಎನ್. ರಾಯೆ, ಡಾ.ಎ.ವಿ. ಕೃಷ್ಣಮೂರ್ತಿ, ಡಾ. ಎ.ವೈ. ಶ್ರೀನಿವಾಸನ್, ಡಾ. ಎ.ಎಂ. ರತ್ನಂ, ಡಾ.ಎಂ. ಆರ್.ಡಿ. ನಾಯಿಡು, ಡಾ.ಎಂ. ಆರ್. ರಾಧಾಕೃಷ್ಣನ್, ಡಾ. ಎಲ್. ಪಿ. ಫರ್ನಾಂಡಿಸ್, ಡಾ. ವಿ.ಟಿ. ಡಿಸೋಜಾ, ಡಾ. ಭಾರದ್ವಾಜ್, ಶಿವರಾವ್, ಡಾ. ಕ್ರಿಶ್ಚಿಯನ್ ಮೇಡೆನ್ ಮತ್ತು ಪ್ರೊ. ಎಚ್ ಸಿ. ಐಯ್ಯಂಗಾರ್ ಆಗಿದ್ದರು.

## ಕರ್ನಾಟಕದಲ್ಲಿ ಹೋಮಿಯೋಪತಿ ಶಿಕ್ಷಣ :

ಕರ್ನಾಟಕದಲ್ಲಿ ಹೋಮಿಯೋಪತಿ ಶಿಕ್ಷಣವು ಇನ್ನೂ ಶೈಶವಾವಸ್ಥೆಯಲ್ಲಿದ್ದಿತು. ವ್ಯವಸ್ಥಿತವಾದ ಒಂದೇ ಒಂದು ಶಿಕ್ಷಣ ಪದ್ಧತಿಯು ಅಂಚೆ ಶಿಕ್ಷಣವಾಗಿದ್ದು, ಇಚ್ಛೆಯುಳ್ಳ ಯಾರಾದರೂ ಇದನ್ನು ಕಲಿತು ಡಾಕ್ಟರಾಗಬಹುದಿತ್ತು. ಅಂತಿಮವಾಗಿ ಆಸಕ್ತಿಯುಳ್ಳ ವ್ಯಕ್ತಿಗಳಿಗೆ ಸಾಂಸ್ಥಿಕ ತರಬೇತಿ ಕೊಡುವುದಕ್ಕೆ ಕೆಲವು ಉತ್ಸಾಹಿ ವ್ಯಕ್ತಿಗಳು ಪ್ರಾರಂಭಿಸಿದರು. ಡಾ. ಎಚ್.ಎಸ್.ಎನ್. ರಾಯೆಯವರು ಹಾನ್ನೆಮನ್ ಹೋಮಿಯೋಪತಿ ಕಾಲೇಜನ್ನು ೧೯೫೦ರ ದಶಕದಲ್ಲಿ ಬೆಂಗಳೂರಿನಲ್ಲಿ ಪ್ರಾರಂಭಿಸಿದರು. ಮಾಜಿ ರಾಷ್ಟ್ರಾಧ್ಯಕ್ಷರಾಗಿದ್ದ ದಿ.ವಿ.ವಿ. ಗಿರಿಯವರು ಇದರ ಪೋಷಕರಾಗಿದ್ದರು. ಈ ರಾಜ್ಯದ ವೈದ್ಯಕೀಯ ಕ್ಷಿತಿಜದಲ್ಲಿ ಸಾಂಸ್ಥಿಕವಾಗಿ ಅರ್ಹತೆ ಪಡೆದ ಹೋಮಿಯೋಪತಿ ವೈದ್ಯರ ಒಂದು ಹೊಸ ಪೀಳಿಗೆ ಪ್ರಾರಂಭವಾಯಿತು. ೧೯೫೦ರ ದಶಕದ ಅಂತ್ಯದಲ್ಲಿ ಬೆಂಗಳೂರಿನ ಕಂಟೋನ್ಮೆಂಟ್ ರೈಲ್ವೆ ನಿಲ್ದಾಣದ ಸಮೀಪ ಇನ್ನೊಂದು ಕಾಲೇಜು ಸ್ಥಾಪಿಸಲಾಯಿತು. ಇದನ್ನು ಮೈಸೂರು ಹೋಮಿಯೋಪತಿ ಸಹಕಾರ ಸಂಘವು ನಡೆಸುತ್ತಿದ್ದು ಡಾ.ಎಂ. ಆರ್. ಡಿ. ನಾಯ್ಡು ಅಧ್ಯಕ್ಷರಾಗಿ, ಡಾ. ಆದಿನಾರಾಯಣ್ ಅದರ ಕಾರ್ಯದರ್ಶಿಯಾಗಿ, ಡಾ. ಎಂ. ಆರ್. ರಾಧಾಕೃಷ್ಣನ್ ಅದರ ಖಜಾಂಜಿಯಾಗಿದ್ದರು. ಡಾ. ಎಂ. ಎಂ. ಶೇಖ್ ಬೆಳಗಾವಿಯಲ್ಲಿ ಮತ್ತು ಡಾ. ಕೆ.ಜೆ. ಮಣೂರ್ ಹುಬ್ಬಳ್ಳಿಯಲ್ಲಿ ವೃತ್ತಿ ನಡೆಸಿದರು. ಬೆಳಗಾವಿಯಲ್ಲಿನ ಹೋಮಿಯೋಪತಿ ಕಾಲೇಜು ೧೯೬೭ರಲ್ಲಿ ಪ್ರಾರಂಭಗೊಂಡಿತು. ಕರ್ನಾಟಕ ಹೋಮಿಯೋಪತಿ ವೈದ್ಯಕೀಯ ಕಾಲೇಜು ಹುಬ್ಬಳ್ಳಿಯಲ್ಲಿ ೧೯೬೮ರಲ್ಲಿ ಪ್ರಾರಂಭವಾಯಿತು.

ಎಪ್ಪತ್ತರ ದಶಕದಲ್ಲಿ ಹೋಮಿಯೋಪತಿ ಕಾಲೇಜುಗಳಿಗೆ ಪ್ರವೇಶವು ತುಂಬಾ ಹೆಚ್ಚಾಗಿ ರಾಜ್ಯದ ಉತ್ತರ ಮತ್ತು ದಕ್ಷಿಣ ಭಾಗದಲ್ಲೆಲ್ಲಾ ಕಾಲೇಜುಗಳ ಸಂಖ್ಯೆಯು ಹೆಚ್ಚಿತು. ಎಂಬತ್ತರ ದಶಕದಲ್ಲಿ ಹೋಮಿಯೋಪತಿ ವಿದ್ಯಾರ್ಥಿಗಳಲ್ಲಿ ಜಾಗೃತಿ ಮೂಡಿ ಹೆಚ್ಚಿನ ಮೂಲಸೌಲಭ್ಯಗಳು ಮತ್ತು ಕಲಿಕೆಯ ಅವಕಾಶಗಳಿರಬೇಕೆಂದು ಒತ್ತಾಯಿಸಿದರು. ಈ ಸಮಯದಲ್ಲಿ ಬೆಂಗಳೂರಿನಲ್ಲಿ ಖಾಸಗಿಯಾಗಿ ನಿರ್ವಹಿಸುತ್ತಿದ್ದ ಮೂರು ಕಾಲೇಜುಗಳಿದ್ದವು. ಬೆಂಗಳೂರು ಹೋಮಿಯೋಪತಿ ವೈದ್ಯಕೀಯ ಕಾಲೇಜನ್ನು ಬೆಂಗಳೂರಿನಲ್ಲಿಯೇ ಇದ್ದ ದಯಾಪರ ಅಬ್ದುಲ್ ರಹಮಾನ್ ಎಂಬುವರು ಮತ್ತು ಇಬ್ಬರು ಉತ್ಸಾಹಿ ಹೋಮಿಯೋಪತಿ ವೈದ್ಯರಾದ ಡಾ. ಎ. ವೈ. ಶ್ರೀನಿವಾಸನ್ ಮತ್ತು ಡಾ. ಸೈಯದ್ ನಿಸಾದುಲ್ಲಾರವರು ಪ್ರಾರಂಭಿಸಿದರು. ಇದು ಬೆಂಗಳೂರಿನ ಆರ್.ವಿ. ರಸ್ತೆಯಲ್ಲಿದ್ದಿತು. ೨ ವರ್ಷಗಳ ನಂತರ ಸಾಕಷ್ಟು ಮೂಲಸೌಕರ್ಯಗಳಿಲ್ಲವೆಂಬ ಕಾರಣದಿಂದ ಕರ್ನಾಟಕ ಸರ್ಕಾರವು ಅದನ್ನು ಮುಚ್ಚಿಬಿಟ್ಟಿತು. ಕರ್ನಾಟಕ ಹೋಮಿಯೋಪತಿ ವೈದ್ಯಕೀಯ ಕಾಲೇಜನ್ನು ನಡೆಸುತ್ತಿದ್ದವರಿಗೆ ಹುಬ್ಬಳ್ಳಿಯಲ್ಲಿ ಇನ್ನೊಂದು ಕಾಲೇಜು ಇತ್ತು. ಹಾನ್ನೆಮನ್ ಹೋಮಿಯೋಪತಿ ಕಾಲೇಜನ್ನು ಡಾ. ಎಚ್. ಎಸ್. ಎನ್. ರಾಯೆಯವರ ನಿಧನಾನಂತರ ಡಾ. ಎ. ನರಸಿಂಹನ್ ವಹಿಸಿಕೊಂಡರು. ಈ ಕಾಲೇಜುಗಳಲ್ಲಿ ಮೂಲಸೌಲಭ್ಯಗಳು ಚೆನ್ನಾಗಿರಲಿಲ್ಲ. ಆದ್ದರಿಂದ ವಿದ್ಯಾರ್ಥಿಗಳು ರಾಜ್ಯದ ರಾಜಧಾನಿಯಲ್ಲಿ ಸರಕಾರಿ ಕಾಲೇಜೊಂದು ಇರಬೇಕೆಂದು ತುಂಬಾ ಹೋರಾಟ ಮಾಡಿದರು.

ಎರಡು ವರ್ಷಗಳ ಕಾಲ ನಿರಂತರವಾಗಿ ಹೋರಾಟ ನಡೆಸಿದುದರಿಂದ ೧೯೮೬ರಲ್ಲಿ ಅಂದಿನ ಮುಖ್ಯಮಂತ್ರಿಯವರು ಬೆಂಗಳೂರಿನಲ್ಲಿ ಸರಕಾರಿ ಕಾಲೇಜೊಂದನ್ನು ಮಂಜೂರು ಮಾಡಿದರು. ಸಿ.ಸಿ.ಎಚ್. ಕಾಯ್ದೆಯನ್ನು ಜಾರಿಗೊಳಿಸಿ ನಂತರ ಸಿಸಿಎಚ್ ಅನ್ನು ರಚಿಸಲಾಯಿತು. ಅದರ ಪ್ರಕಾರ ಭಾರತದ ಎಲ್ಲಾ ಹೋಮಿಯೋಪತಿ ಕಾಲೇಜುಗಳಲ್ಲಿ ಏಕರೂಪವಾದ ಪಠ್ಯಕ್ರಮವಿರಬೇಕು

ಮತ್ತು ೫$^{1}/_{2}$ ವರ್ಷಗಳ ಸಫಲವಾದ ಅಧ್ಯಯನದ ನಂತರ ಬಿಎಚ್‌ಎಂಎಸ್ ಪದವಿಯನ್ನು ನೀಡಲಾಗುತ್ತದೆ. ಈ ಕಾಲೇಜನ್ನು ಅದಕ್ಕೆ ಸಂಬಂಧಪಟ್ಟ ವಿಶ್ವವಿದ್ಯಾನಿಲಯದ ವ್ಯಾಪ್ತಿಗೆ ಸೇರಿಸಲಾಗಿರುತ್ತದೆ. ಬೆಂಗಳೂರಿನಲ್ಲಿ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯವನ್ನು ಪ್ರಾರಂಭಿಸಿದ ಮೇಲೆ ಕರ್ನಾಟಕದಲ್ಲಿನ ಎಲ್ಲಾ ಹೋಮಿಯೋಪತಿ ಕಾಲೇಜುಗಳು ಈ ಆರೋಗ್ಯ ವಿಶ್ವವಿದ್ಯಾನಿಲಯದಡಿಯಲ್ಲಿ ಬಂದವು.

## ಹೋಮಿಯೋಪತಿಗೆ ರಾಜ್ಯ ಸರಕಾರದ ಬೆಂಬಲ :

ಸರ್ಕಾರಿ ಸೇವೆಯಲ್ಲಿ ಹೋಮಿಯೋಪತಿಗೆ ಮಾನ್ಯತೆ ಬಹಳ ಪ್ರಯತ್ನದಿಂದ ಬಂದಿತು. ಇದರಲ್ಲಿ ಮುಖ್ಯವಾದ ಹೆಜ್ಜೆಯೆಂದರೆ ಕರ್ನಾಟಕ ಹೋಮಿಯೋಪತಿ ವೈದ್ಯ ಪದ್ಧತಿಯ ಮಂಡಳಿಯ ರಚನೆ. ಇನ್ನೊಂದು ಗಣನೀಯವಾದ ಹೆಜ್ಜೆಯೆಂದರೆ ಔಷಧಾಲಯಗಳು/ ಆಸ್ಪತ್ರೆಗಳ ಸ್ಥಾಪನೆ ಮತ್ತು ಹೋಮಿಯೋಪತಿಗೆ ಒಂದು ಪ್ರತ್ಯೇಕವಾದ ಇಲಾಖೆಯನ್ನು ಪ್ರಾರಂಭಿಸಿದುದು. ಇನ್ನೊಂದು ಹೆಜ್ಜೆಯೆಂದರೆ ಆಯುರ್ವೇದ, ಹೋಮಿಯೋಪತಿ,ಯುನಾನಿ ಮುಂತಾದ ದೇಶೀಯ ವೈದ್ಯಕೀಯ ಪದ್ಧತಿಗಳನ್ನು ಉತ್ತಮಪಡಿಸಲು ಸರಕಾರಕ್ಕೆ ಸಲಹೆ ಮಾಡಲು ಡಾ. ಮೇಲ್ಕೋಟೆಯವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಲಾಯಿತು. ೧೯೭೫ರಲ್ಲಿ ಭಾರತದ ವೈದ್ಯಕೀಯ ಪದ್ಧತಿಗಳು ಮತ್ತು ಹೋಮಿಯೋಪತಿಯ ನಿರ್ದೇಶನಾಲಯವನ್ನು ಸ್ಥಾಪಿಸಿದರು. ಆಡಳಿತ ಮಟ್ಟದಲ್ಲಿ ಹೋಮಿಯೋಪತಿ ವೈದ್ಯರಿಗೆ ಪ್ರಾತಿನಿಧ್ಯವಿರಲಿಲ್ಲ. ಈ ಕೊರತೆಯನ್ನು ಡಾ.ಆರ್. ಶಾಂತಕುಮಾರ್‌ರವರಿಗೆ ಬಡ್ತಿ ನೀಡಿ ಹೋಮಿಯೋಪತಿಯ ಉಪನಿರ್ದೇಶಕರಾಗಿ ೧೯೯೬ರಲ್ಲಿ ನೇಮಕ ಮಾಡಲಾಯಿತು.

## ಕರ್ನಾಟಕದಲ್ಲಿ ಹೋಮಿಯೋಪತಿಯ ಮೂಲ ಸೌಲಭ್ಯಗಳು :

| | | |
|---|---|---|
| ಆಡಳಿತ ರಚನೆ | ಭಾರತದ ವೈದ್ಯಕೀಯ ಪದ್ಧತಿಗಳ ಮತ್ತು ಹೋಮಿಯೋಪತಿಯ ನಿರ್ದೇಶಕ, ಐಎಸ್‌ಎಂ ಮತ್ತು ಎಚ್ ನಿರ್ದೇಶನಾಲಯ, ಧನ್ವಂತರಿ ರಸ್ತೆ ಬೆಂಗಳೂರು-೫೬೦ ೦೦೯ | |
| ವೈದ್ಯರ ಸಂಖ್ಯೆ | ೬೫೧೪ | ೧-೧-೨೦೦೧ರಂತೆ |
| ಸಾಂಸ್ಥಿಕವಾಗಿ ಅರ್ಹತೆ ಪಡೆದವರು | ೪೯೭೩ | |
| ಸಾಂಸ್ಥಿಕೇತರ ಅರ್ಹತೆ ಪಡೆದವರು | ೧೫೪೧ | |
| ಔಷಧಾಲಯಗಳ ಸಂಖ್ಯೆ | ೪೨ | |
| ಆಸ್ಪತ್ರೆಗಳ ಸಂಖ್ಯೆ | ೨೧ | |
| ಹಾಸಿಗೆ ಸಂಖ್ಯೆ | ೮೮೨ | |
| ಕಾಲೇಜುಗಳ ಸಂಖ್ಯೆ | ೧೧ | |
| ಸ್ಥಾನಗಳ ಸಂಖ್ಯೆ | ೬೯೫ | |
| ಸ್ನಾತಕೋತ್ತರ ಕಾಲೇಜುಗಳು | ೪ | |
| ವಿದ್ಯಾರ್ಥಿಗಳ ಸಂಖ್ಯೆ | ೪೫ | |
| ಔಷಧ ತಯಾರಿಸುವ ಘಟಕಗಳ ಸಂಖ್ಯೆ | ೧೦ | |
| ಸಂಶೋಧನಾ ಇಲಾಖೆ | ೨ (ಒಂದು ಉಡುಪಿಯಲ್ಲಿ, ಇನ್ನೊಂದು ದಾಂಡೇಲಿಯಲ್ಲಿ) | |

## ಹೋಮಿಯೋಪತಿ ವೈದ್ಯಕೀಯ ಶಿಕ್ಷಣ :

ಹೋಮಿಯೋಪತಿ ಸೆಂಟ್ರಲ್ ಕೌನ್ಸಿಲ್ ಕಾಯ್ದೆ, ೧೯೭೩ ಎಂಬ ಪಾರ್ಲಿಮೆಂಟಿನ ಕಾಯ್ದೆಯಿಂದ ಸರಕಾರವು ಹೋಮಿಯೋಪತಿಯ ಕೇಂದ್ರ ಸಮಿತಿಯನ್ನು ೧೯೭೪ರಲ್ಲಿ ರಚಿಸಿ ಹೋಮಿಯೋಪತಿಯ ಕೇಂದ್ರ ರಿಜಿಸ್ಟರನ್ನು ಇಡುವುದಕ್ಕೆ ಮತ್ತು ಅದಕ್ಕೆ ಸಂಬಂಧಪಟ್ಟ ವಿಷಯಗಳ ಬಗ್ಗೆ ದಾಖಲೆ ಇಡುವುದಕ್ಕೆ ರಚಿಸಲಾಯಿತು. ಈ ಕಾಯ್ದೆಯು ದೇಶದಲ್ಲಿ ಹೋಮಿಯೋಪತಿ ವೃತ್ತಿ ಮತ್ತು ಶಿಕ್ಷಣದ ಬಗ್ಗೆ ಜಾಗರೂಕತೆ ವಹಿಸುತ್ತದೆ. ಭಾರತ ಸರಕಾರವು ಈ ಪದ್ಧತಿಯ ಶಿಕ್ಷಣ ಮತ್ತು ವೃತ್ತಿಯ ಗುಣಮಟ್ಟವನ್ನು ಉತ್ತಮಪಡಿಸಲು ಈ ಕೆಳಗಿನ ಕ್ರಮಗಳನ್ನು ಕೈಗೊಂಡಿದೆ.

## ಹೋಮಿಯೋಪತಿ ಶಿಕ್ಷಣ ಮತ್ತು ನಿಬಂಧನೆಗಳಲ್ಲಿ ಏಕರೂಪತೆ :

ಕೇಂದ್ರ ಸಮಿತಿಯು ೧೯೮೩ರಲ್ಲಿ ಶಿಕ್ಷಣದ ನಿಬಂಧನೆಗಳನ್ನು ಜಾರಿಗೊಳಿಸಿದೆ. ಅವುಗಳಲ್ಲಿ ಇವು ಇದೆ :

೧. ೪ ವರ್ಷ ಅವಧಿಯ ಡಿಪ್ಲೊಮಾ ಕೋರ್ಸು (ಡಿಹೆಚ್ಎಂಎಸ್). ಇತ್ತೀಚೆಗೆ ಸರಕಾರವು ಡಿಪ್ಲೊಮಾ ಕೋರ್ಸು ನಿಬಂಧನೆಗೆ ತಿದ್ದುಪಡಿಯನ್ನು ಮಾಡಿ ಈ ಶೈಕ್ಷಣಿಕ ಕಾಲದಿಂದ ಪ್ರವೇಶವನ್ನು ಅಂತ್ಯಗೊಳಿಸಿದೆ.

೨. ೫ ೧/₂ ವರ್ಷಗಳ ಅವಧಿಯ ಪದವಿ ಕೋರ್ಸು (ಬಿಎಚ್ಎಂಎಸ್).

೩. ಪದವಿಯಲ್ಲಿ ಹೆಚ್ಚಿನ ಶ್ರೇಷ್ಠತೆಯನ್ನು ಗಳಿಸುವುದಕ್ಕೆ ಡಿಪ್ಲೊಮಾ ಹೊಂದಿರುವವರೆಗೆ ಗ್ರೇಡೆಡ್ ಪದವಿ ಕೋರ್ಸು ಎಂದು ಕರೆದಿರುವ ಒಂದು ಬ್ರಿಡ್ಜು ಕೋರ್ಸು.

೪. ಸ್ನಾತಕೋತ್ತರ ಕೋರ್ಸುಗಳಿಗೆ ಗುಣಮಟ್ಟಗಳನ್ನು ನಿಗದಿಪಡಿಸುವ ಇನ್ನೂ ಒಂದು ನಿಬಂಧನೆಯನ್ನು ಕೇಂದ್ರ ಸಮಿತಿಯು ಪ್ರಕಟಪಡಿಸಿದೆ.

೫. ಮೇಲಿನ ಕೋರ್ಸುಗಳಲ್ಲಿ ಎಲ್ಲಾ ಹೋಮಿಯೋಪತಿ ಶಿಕ್ಷಣ ಸಂಸ್ಥೆಗಳಲ್ಲಿ ಕಾಪಾಡಬೇಕಾದ ಕನಿಷ್ಟ ಮಾನದಂಡಗಳನ್ನು ಸಮಿತಿಯು ಇನ್ನೊಂದು ನಿಬಂಧನೆಯಿಂದ ನಿಗದಿಪಡಿಸಿದೆ.

೬. ಈ ನಾಲ್ಕು ನಿಬಂಧನೆಗಳ ಉದ್ದೇಶವನ್ನು ಕಾರ್ಯಸಾಧ್ಯ ಮಾಡಲು ಕ್ರಮವಾದ ತಪಾಸಣೆಗೆ ಮತ್ತು ಶಿಕ್ಷಣ ನಿಬಂಧನೆಯ ಸರಿಯಾದ ಅನುಷ್ಠಾನಕ್ಕೆ ಹೋಮಿಯೋಪತಿ ಸಂಸ್ಥೆಗಳನ್ನು ಸಂದರ್ಶಿಸಲು ಸಮಿತಿಗೆ ಅಧಿಕಾರ ನೀಡುವ ಇನ್ನೊಂದು ನಿಬಂಧನೆಯನ್ನು ಜಾರಿಗೊಳಿಸಿತು.

೭. ವೃತ್ತಿ ನಡತೆ, ಶಿಷ್ಟಾಚಾರ ಮತ್ತು ನೀತಿಯ ನಿಬಂಧನೆಗೆ ಸಂಬಂಧಿಸಿದಂತೆ ಇನ್ನೊಂದು ನಿಬಂಧನೆಯನ್ನು ಸಮಿತಿಯು ಜಾರಿಗೊಳಿಸಿದೆ.

## ಎ. ಪದವಿ ಶಿಕ್ಷಣ :

ಮೇಲಿನ ನಿಬಂಧನೆಗಳ ಪ್ರಕಾರ ಪದವಿ ಮತ್ತು ಸ್ನಾತಕೋತರ ಮಟ್ಟಗಳ ಕೋರ್ಸುಗಳಲ್ಲಿ ತರಬೇತಿ ನೀಡುವುದಕ್ಕೆ ಈಗ ದೇಶದಲ್ಲಿ ಸುಮಾರಾಗಿ ೧೮೨ ಹೋಮಿಯೋಪತಿ ಸಂಸ್ಥೆಗಳಿವೆ. ಒಟ್ಟು ಪ್ರವೇಶ ಸಾಮರ್ಥ್ಯವು ವರ್ಷಕ್ಕೆ ೭೦೦೦ ಆಗಿದೆ. ವಿಶ್ವವಿದ್ಯಾಲಯಗಳು ಇಲಾಖೆ/ಹೋಮಿಯೋಪತಿ ವ್ಯಾಸಂಗ ವಿಭಾಗ/ತಾತ್ಪೂರ್ತಿಕ ಮಂಡಳಿ/ಸಮಿತಿಗಳನ್ನು ಸ್ಥಾಪಿಸಿವೆ. ಡಿಪ್ಲೊಮಾ ಕೋರ್ಸನ್ನು ಹಂತಗೊಳಿಸಲಾಗಿದ್ದು, ಸ್ನಾತಕೋತ್ತರ ಶಿಕ್ಷಣವನ್ನು ದೇಶದಲ್ಲಿ ಪ್ರೋತ್ಸಾಹಿಸಲಾಗುತ್ತಿದೆ.

## ಬಿ. ಹೋಮಿಯೋಪತಿಯಲ್ಲಿ ಸ್ನಾತಕೋತ್ತರ ಶಿಕ್ಷಣ :

ಹೋಮಿಯೋಪತಿಯಲ್ಲಿ ಸ್ನಾತಕೋತ್ತರ ಶಿಕ್ಷಣವನ್ನು ೧೯೮೯ರಲ್ಲಿ ಹೋಮಿಯೋಪತಿ (ಸ್ನಾತಕೋತ್ತರ ಕೋರ್ಸು) ಎಂ.ಡಿ. (ಹೋಮಿ) ನಿಬಂಧನೆ ೧೯೮೯ (ತಿದ್ದುಪಡಿ ೨೦೦೨)ರ ಮೂಲಕ ಜಾರಿಗೊಳಿಸಲಾಗಿದೆ. ತಜ್ಞತೆಯನ್ನ ಮೂರು ತಜ್ಞ ವಿಷಯಗಳಲ್ಲಿ ಅಂದರೆ ಮೆಟೀರಿಯಾಮೆಡಿಕಾ, ಹೋಮಿಯೋಪತಿ ತತ್ವಶಾಸ್ತ್ರ ಮತ್ತು ರೆಪರ್ಟರಿಯಲ್ಲಿ ನೀಡಲಾಗುತ್ತಿದೆ. ಹೋಮಿಯೋಪತಿಯಲ್ಲಿ

ಸ್ನಾತಕೋತ್ತರ ಕೋರ್ಸನ್ನು ಪ್ರಾರಂಭಿಸಲು ಕೇಂದ್ರ ಸಮಿತಿಯು ೧೫ ಸಂಸ್ಥೆಗಳಿಗೆ ಅನುಮತಿ ನೀಡಿದೆ. ನೀತಿ ವಿಷಯಗಳ ಬಗ್ಗೆ ವಿವಿಧ ಸಮ್ಮೇಳನಗಳು ಮತ್ತು ಸಭೆಗಳು ಯುಜಿ ಅಧ್ಯಯನಗಳ ಎಲ್ಲಾ ವಿಷಯಗಳಲ್ಲಿ ಸ್ನಾತಕೋತ್ತರ ಶಿಕ್ಷಣವನ್ನು ಜಾರಿಗೊಳಿಸಲು ಶಿಫಾರಸು ಮಾಡಿತ್ತು ಮತ್ತು ಅಧ್ಯಾಪಕರಿಗೆ ಸ್ನಾತಕೋತ್ತರ ಅರ್ಹತೆಯು ಅಗತ್ಯವಾದುದಾಗಿ ಮಾಡಲು ಶಿಫಾರಸು ಮಾಡುತ್ತಿದ್ದುವು. ಮೊದಲನೆಯ ಹೆಜ್ಜೆಯಾಗಿ ಕೇಂದ್ರ ಸರಕಾರವು ಇನ್ನೂ ನಾಲ್ಕು ವಿಷಯಗಳಲ್ಲಿ ಅಂದರೆ ಕೀಡಿಯಾಟ್ರಿಕ್ಸ್, ಔಷಧ, ಮನಶ್ಶಾಸ್ತ್ರ ಮತ್ತು ಫಾರ್ಮಸಿಗಳಲ್ಲಿ ಸ್ನಾತಕೋತ್ತರ ಕೋರ್ಸುಗಳನ್ನು ಇತ್ತೀಚೆಗೆ ಸ್ನಾತಕೋತ್ತರ ನಿಬಂಧನೆಯ ತಿದ್ದುಪಡಿಯ ಮೂಲಕ ಮಂಜೂರು ಮಾಡಿದೆ.

## ಮಾಧ್ಯಮದ ಪಾತ್ರ (ಹೋಮಿಯೋಪತಿ ಬಗ್ಗೆ ಜನಜಾಗೃತಿ) :

ಹೋಮಿಯೋಪತಿಯನ್ನು ಇನ್ನೂ ಹೆಚ್ಚು ಜನಾದರಗೊಳಿಸಲು ಅನೇಕ ಸಂಪರ್ಕ ಮಾಧ್ಯಮಗಳನ್ನು ಉಪಯೋಗಿಸಿಕೊಳ್ಳಲು ಇದು ಸಕಾಲ. ಅದರಲ್ಲಿಯೂ ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ಕೆಳವರ್ಗದ ಜನರಲ್ಲಿ ಪ್ರಚಾರ ಮಾಡುವುದಗತ್ಯ ಹೋಮಿಯೋಪತಿಯ ಕಡಿಮೆ ವೆಚ್ಚ ಮತ್ತು ಸರಳವಾದ ಔಷಧಿಗಳ ಬಗ್ಗೆ ಪ್ರಚಾರ ಮಾಡಬೇಕು. ಇದನ್ನು ಮಿಶನರಿಯಂತೆ ನಡೆಸಬೇಕು.

ಆಂಧ್ರ ಪ್ರದೇಶದಲ್ಲಿ ಮೆದುಳುಜ್ವರ ಬಂದಾಗ ಹೋಮಿಯೋಪತಿ ಔಷಧಿ 'ಬೆಲ್ ಟೋನ್' ಕೊಟ್ಟಾಗ ರೋಗ ಗುಣಮುಖವಾಯಿತು. ಸುಲಭ ವೆಚ್ಚದಲ್ಲಿ ಇದರ ಪರಿಹಾರ ಆಂಧ್ರಪ್ರದೇಶದಲ್ಲಿ ಈ ಕಾಯಿಲೆ ನಿರ್ಮೂಲನಕ್ಕೆ ಇದರ ವ್ಯಾಪಕ ಬಳಕೆ ಕಂಡುಕೊಂಡಿತು.

ಹೋಮಿಯೋಪತಿಯು ಇಂಗ್ಲೆಂಡ್ ಮತ್ತು ಅಮೆರಿಕಾದಲ್ಲಿ ಪಶುವೈದ್ಯರಲ್ಲಿ ಪ್ರಚಾರದಲ್ಲಿದೆ. ಭಾರತದಲ್ಲಿ ಪಶುವೈದ್ಯರು ಇದನ್ನು ಉಪಯೋಗಿಸುತ್ತಾರೆ. ಮುಂಬಯಿಯ ಬೊರಿವಿಲಿ ಸಂಜಯಗಾಂಧಿ ರಾಷ್ಟ್ರೀಯ ಉದ್ಯಾನವನದಲ್ಲಿ ಪ್ರಾಣಿಗಳಿಗೆ ಚಿಕಿತ್ಸೆ ನೀಡಲು ಉಪಯೋಗಿಸಲಾಗುತ್ತಿದೆ. ಫಲಿತಾಂಶ ದೊರಕಿದೆ.

ಕೆಲವು ವರ್ಷಗಳ ಹಿಂದೆ ನ್ಯಾಶನಲ್ ಕೌನ್ಸಿಲ್ ಆಫ್ ಅಪ್ಲೈಡ್ ಎಕನಾಮಿಕ್ ರಿಸರ್ಚ್ ಸಂಸ್ಥೆಯು ನಡೆಸಿದ ಅಖಿಲ ಭಾರತ ಸರ್ವೆಯು ನಗರ ಮತ್ತು ಗ್ರಾಮ ಪ್ರದೇಶಗಳಲ್ಲಿ ಹೋಮಿಯೋಪತಿಯು ಭಾರತದಲ್ಲಿ ಎರಡನೇ ಅತಿ ಪ್ರಸಿದ್ಧವಾದ ಪದ್ಧತಿಯೆಂದು ಸೂಚಿಸಿದೆ.

ಹೋಮಿಯೋಪತಿಯು ತನ್ನ ನೈಜವಾದ ಗಮನ ತಳೆಯಲು ಅನೇಕರು ತಮ್ಮ ಜೀವಮಾನವನ್ನೇ ಅದಕ್ಕಾಗಿ ಕಳೆದಿದ್ದಾರೆ. ಇದರ ಪೈಕಿ ಡಾ.ಬಿ. ಟಿ. ರುದ್ರೇಶ್ ಒಬ್ಬರು. ಇವರು ಈ ಪದ್ಧತಿಯ ಬಗ್ಗೆ ಇರುವ ತಪ್ಪು ಅಭಿಪ್ರಾಯಗಳನ್ನು ತೆಗೆಯಲು ನಿರಂತರವಾದ ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಇವರು ಹೋಮಿಯೋಪತಿ ಕುರಿತು ಅನೇಕ ಕೃತಿಗಳನ್ನು ರಚಿಸಿದ್ದಾರೆ ಮತ್ತು ನಾಲ್ಕು ಡಾಕ್ಯುಮೆಂಟರಿಗಳನ್ನು ತಯಾರಿಸಿದ್ದಾರೆ.

## ಆರೋಗ್ಯ ಸುಧಾರಣೆಯಲ್ಲಿ ಹೋಮಿಯೋಪತಿ ಪಾತ್ರ :

ಇಂದು ವಿಶ್ವಕ್ಕೆ ಹೋಲಿಸಿದಾಗ ಭಾರತದಲ್ಲಿ ಅತಿ ಹೆಚ್ಚಿನ ಸಂಖ್ಯೆಯ ಅಂದರೆ ಸುಮಾರು ಎರಡು ಲಕ್ಷ ಹೋಮಿಯೋ ವೈದ್ಯರಿದ್ದಾರೆ. ಅಲ್ಲದೆ ಕರ್ನಾಟಕವೊಂದರಲ್ಲೇ ಪ್ರತಿ ವರ್ಷ ೬೦೦ ಜನ ಹೋಮಿಯೋ ವೈದ್ಯರು ಹೊಸದಾಗಿ ಸೇರ್ಪಡೆಯಾಗುತ್ತಿದ್ದಾರೆ. ವಿಶ್ವ ಆರೋಗ್ಯ ಸಂಸ್ಥೆಯ (WHO) ಒಂದು ಸಮೀಕ್ಷೆ ಪ್ರಕಾರ ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ದೇಶಕ್ಕೆ ಅಂದರೆ ಇಂದಿಗೂ ಕೋಟ್ಯಾಂತರ ಭಾರತೀಯರು ಬಡತನ ರೇಖೆಗಿಂತ ಕೆಳಗಿರುವುದರಿಂದ ಈ ಹೋಮಿಯೋಪತಿ ಪದ್ಧತಿಯು ಅತ್ಯಂತ ಸೂಕ್ತ ಹಾಗೂ ಸುರಕ್ಷಿತ ಆಯ್ಕೆಯಾಗಿದೆ. ಏಕೆಂದರೆ ಈ ರೀತಿಯ ಬಡತನವಿರುವ ವಲಯಗಳಲ್ಲಿ ಸರ್ಕಾರಕ್ಕೆ ಇತರ ವೈದ್ಯಪದ್ಧತಿಗಳಿಗಾಗಿ ಬೇಕಾದ ಸಲಕರಣೆಗಳು, ಚಿಕಿತ್ಸಾ ಉಪಕರಣಗಳು, ಕೊಠಡಿಗಳನ್ನು ಒದಗಿಸುವುದು ಅತ್ಯಂತ ಕಠಿಣವಾಗುತ್ತದೆ. ಅಲ್ಲದೆ ಭಾರತವು ಈ ವೈದ್ಯಪದ್ಧತಿಯನ್ನು ರಾಷ್ಟ್ರೀಯ ಮಟ್ಟದಲ್ಲಿ ಮಾನ್ಯ ಕೂಡ ಮಾಡಿದೆ. ರಾಷ್ಟ್ರಪಿತ ಗಾಂಧೀಜಿ, ಭಾರತದ ಮೊಟ್ಟ ಮೊದಲ ರಾಷ್ಟ್ರಪತಿ

ಬಾಬು ರಾಜೇಂದ್ರ ಪ್ರಸಾದ್ ಅವರು ಕೂಡ ಈ ಪದ್ಧತಿಯನ್ನು ಬಹುವಾಗಿ ಮೆಚ್ಚಿಕೊಂಡಿದ್ದರು. ಅಲ್ಲದೆ ಪ್ರೋತ್ಸಾಹಿಸಬೇಕೆಂದು ಕೂಡ ತಿಳಿಸಿದ್ದರು.

ಹೀಗಾಗಿ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳೆರಡೂ ಸಹ ಈ ನಿಟ್ಟಿನಲ್ಲಿ ಈ ವೈದ್ಯ ಪದ್ಧತಿಗೆ ಬಹಳಷ್ಟು ಪ್ರೋತ್ಸಾಹ ನೀಡುವುದು ಅವಶ್ಯವಾಗಿದೆ. ಏಕೆಂದರೆ ಈಗ್ಗೆ ಕೆಲವು ವರ್ಷಗಳ ಹಿಂದೆ ನಡೆಸಲ್ಪಟ್ಟ ಒಂದು ರಾಷ್ಟ್ರೀಯ ಸಮೀಕ್ಷೆಯು ಹೋಮಿಯೋ ಪದ್ಧತಿಯು ಭಾರತದ ಎರಡನೆಯ ಅತಿ ಜನಪ್ರಿಯ ವೈದ್ಯ ಪದ್ಧತಿ ಎಂದು ಸಾರಿದೆ. ಈ ನಿಟ್ಟಿನಲ್ಲಿ ಹೋಮಿಯೋಪತಿ ವೈದ್ಯರ ಸೇವೆಯನ್ನು ಸರ್ಕಾರಗಳು ಸಮರ್ಪಕವಾಗಿ ಬಳಸಿಕೊಂಡಲ್ಲಿ ಭಾರತೀಯರ ಒಟ್ಟಾರೆ ಆರೋಗ್ಯ ಮಟ್ಟದಲ್ಲಿ ಸುಧಾರಣೆಯಾಗುವುದು ಖಚಿತವಾಗಿದೆ.

ನೆರೆ ರಾಜ್ಯಗಳಿಗೆ ಹೋಲಿಸಿದರೆ ಕರ್ನಾಟಕದಲ್ಲಿ ಹೋಮಿಯೋಪತಿ ಚಿಕಿತ್ಸಾಲಯಗಳ ಸಂಖ್ಯೆ ಕಡಿಮೆ ಎಂದೇ ಹೇಳಬೇಕು. ಏಕೆಂದರೆ ಕೇರಳದಲ್ಲಿ ೨೫೦, ಆಂಧ್ರದಲ್ಲಿ ೨೫೦. ಆದರೆ ಕರ್ನಾಟಕದಲ್ಲಿ ಕೇವಲ ೫೦ ಚಿಕಿತ್ಸಾಲಯಗಳಿವೆ. ಭಾರತದ ಎಲ್ಲ ರಾಜ್ಯಗಳಲ್ಲಿ ಗ್ರಾಮೀಣ ಜನರ ಜನಜೀವನ/ಆರೋಗ್ಯಮಟ್ಟ ಒಂದೇ ತೆರನಾಗಿದೆ. ಅಂದರೆ ಅಲ್ಲಿ ನೈರ್ಮಲ್ಯದ ಕೊರತೆಯಿಂದಾಗಿ ಸಾಂಕ್ರಾಮಿಕ ರೋಗಗಳು ಬರುವ ಸಾಧ್ಯತೆ (ಉದಾ : ಮಲೇರಿಯಾ, ಕಾಲರಾ, ಎಚ್‌ಐವಿ) ಮುಂತಾದವು ಹೆಚ್ಚಾಗಿದ್ದು ಈ ಎಲ್ಲ ರೋಗಗಳಿಗೆ ಹೋಮಿಯೋಪತಿ ಚಿಕಿತ್ಸೆ ಅತ್ಯಂತ ಕಡಿಮೆ ವೆಚ್ಚದಲ್ಲಿ ನೀಡಬಲ್ಲದಾಗಿದೆ.

ಹೋಮಿಯೋಪತಿಗೆ ಸಂಬಂಧಿಸಿದಂತೆ ಅನೇಕ ಸಂಘ ಸಂಸ್ಥೆಗಳು ಬಹಳಷ್ಟು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿವೆ. ಆಗಾಗ್ಗೆ ಸಮೀಕ್ಷೆಗಳನ್ನು ನಡೆಸಿವೆ. ಉಚಿತ ಆರೋಗ್ಯ ಶಿಬಿರಗಳನ್ನು ನಡೆಸಿ ಜನರಲ್ಲಿ ಈ ಪದ್ಧತಿಯ ಬಗ್ಗೆ ಅರಿವು ಮೂಡಿಸುತ್ತಿವೆ. ಆದರೂ ಸರ್ಕಾರವು ಈ ಪದ್ಧತಿಯ ಬಗ್ಗೆ ಗಮನಹರಿಸಿರುವುದು ಕಡಿಮೆ ಎಂದೇ ಹೇಳಬೇಕು. ಈ ನಿಟ್ಟಿನಲ್ಲಿ ಇನ್ನು ಮುಂದಾದರೂ ಪ್ರತಿ ತಾಲ್ಲೂಕು ಮಟ್ಟದಲ್ಲಿ ಹೋಮಿಯೋಪತಿ ಆಸ್ಪತ್ರೆಗಳನ್ನು/ಚಿಕಿತ್ಸಾಲಯಗಳನ್ನು ತೆರೆದು ಸಮಾಜದ ಎಲ್ಲ ವರ್ಗದವರಿಗೂ ಅಲ್ಲಿ ಚಿಕಿತ್ಸೆ ದೊರೆಯುವಂತೆ ಮಾಡಬೇಕಾಗಿದೆ. ಬೆಂಗಳೂರು ನಗರದಲ್ಲಿ ಅನೇಕ ಜನ ಹೋಮಿಯೋಪತಿ ವೈದ್ಯರು ಇದ್ದು ಕೆಲವರು ಈ ಪದ್ಧತಿಯನ್ನು ಜನಪ್ರಿಯಗೊಳಿಸಲು ಅತ್ಯಂತ ಕಾಳಜಿ ವಹಿಸುತ್ತಿದ್ದಾರೆ. ಈ ವೈದ್ಯಪದ್ಧತಿಯನ್ನು ಇನ್ನೂ ಹೆಚ್ಚು ಜನಪ್ರಿಯಗೊಳಿಸಲು ಪ್ರತಿ ಪ್ರಾಥಮಿಕ ಆರೋಗ್ಯ ಘಟಕದಲ್ಲಿ ಒಂದೊಂದು ಹೋಮಿಯೋಪತಿ ವಿಭಾಗವನ್ನು ತೆರೆದಲ್ಲಿ ಏಕಕಾಲಕ್ಕೆ ಬಹಳಷ್ಟು ಜನರನ್ನು ಇದು ತಲುಪಲು ಸಾಧ್ಯವಾಗುತ್ತದೆ. ಹೀಗೆ ಮಾಡುವುದರಿಂದ ಒಟ್ಟಾರೆ ಆರೋಗ್ಯ ಮಟ್ಟವನ್ನು ಸುಧಾರಿಸಬಹುದಾಗಿದೆ. ಭಾರತದಲ್ಲಷ್ಟೇ ಅಲ್ಲದೆ, ಇಡೀ ವಿಶ್ವದಲ್ಲಿ ಮಾನ್ಯತೆ ಪಡೆದಿರುವ ಇಂತಹ ಉತ್ತಮ ವೈದ್ಯಪದ್ಧತಿಯ ಬಗ್ಗೆ ಸರ್ಕಾರ ಗಮನಹರಿಸುವುದು ಲೇಸು.

●




# ಸ್ಥಳೀಯ ಆರೋಗ್ಯ ಸಂಪ್ರದಾಯಗಳ ಪುನಶ್ಚೇತನ

ಡಾ. ಎನ್. ದರ್ಶನ್ ಶಂಕರ್

## ೧. ಸ್ಥಳೀಯ ಆರೋಗ್ಯ ಸಂಪ್ರದಾಯಗಳ ಸ್ಥಳೀಯ ಮತ್ತು ಸ್ಥಳೀಯೇತರ ಸ್ವಭಾವ :

ಭಾರತದಾದ್ಯಂತ ಸಾವಿರಾರು ಸ್ಥಳೀಯ ಸಮುದಾಯಗಳ ಜೀವನಶೈಲಿ, ಆಹಾರ ಮತ್ತು ಆರೋಗ್ಯ ಅಭ್ಯಾಸಗಳಲ್ಲಿ ಈ ಸಂಪ್ರದಾಯಗಳು ಹುದುಗಿಕೊಂಡಿವೆ.

ಈ ಸಂಪ್ರದಾಯಗಳು ಸ್ಥಳೀಯವಾಗಿವೆಯೇ ? ಅವು ಕೇವಲ ಪರಿಸರ ಪದ್ಧತಿಗೆ ನಿರ್ದಿಷ್ಟವಾಗಿವೆಯೇ? ಆದ್ದರಿಂದ ದೇಶದ ವಿವಿಧ ಭಾಗಗಳಲ್ಲಿ ಬೇರೆಬೇರೆ ಸ್ಥಳೀಯ ಆರೋಗ್ಯ ಸಂಪ್ರದಾಯಗಳ ಬಗ್ಗೆ ಮಾತನಾಡುತ್ತಿದ್ದೇವೆಯೇ? ಈ ಪ್ರಶ್ನೆಗಳಿಗೆ ಉತ್ತರವು ಹೌದು ಮತ್ತು ಇಲ್ಲ.

ಸ್ಥಳೀಯ ಆರೋಗ್ಯ ಸಂಪ್ರದಾಯಗಳಲ್ಲಿ ಮೂರು ವಿಶಿಷ್ಟವಾದ ಸನ್ನಿವೇಶ ವರ್ಣನೆಗಳಿವೆ. ಖಂಡಿತವಾಗಿ ಸ್ಥಳೀಯ ಸನ್ನಿವೇಶ ವರ್ಣನೆಯಿದೆ. ಅಲ್ಲದೆ ಪ್ರಾಂತೀಯ ಸನ್ನಿವೇಶ ವರ್ಣನೆ ಕೂಡ ಇದೆ ಮತ್ತು ರಾಷ್ಟ್ರೀಯ ಅಥವಾ ವಿಶ್ವವ್ಯಾಪ್ತಿಯ ಸನ್ನಿವೇಶ ವರ್ಣನೆ ಇದ್ದು, ಅದನ್ನು ಹೆಚ್ಚಿನ ಸ್ಥಳಗಳಲ್ಲಿ ಕಾಣಬಹುದು. ಬೇರೆ ರೀತಿಯಲ್ಲಿ ಹೇಳುವುದಾದರೆ ಸ್ಥಳೀಯ ಆರೋಗ್ಯ ಸಂಪ್ರದಾಯಗಳು ಬೇರ್ಪಡಿಸಿದ ಜಾಗರೂಕತೆಯ ಸಂಪ್ರದಾಯಗಳಲ್ಲ. ಅವು ಪ್ರಸಿದ್ಧ ಭಾರತದ ವೈದ್ಯಕೀಯ ಸಂಪ್ರದಾಯದ ಅಂತರ್ಗತ ಭಾಗವಾಗಿವೆ. ಅವು ಹೆಚ್ಚಾಗಿ ಸ್ಥಳೀಯ ಮತ್ತು ಪ್ರಾಂತೀಯ ಸ್ವಾಭಾವಿಕ ಸಂಪನ್ಮೂಲಗಳನ್ನು ಉಪಯೋಗಿಸುತ್ತವೆಯಾದರೂ, ದೇಶದ ಅನೇಕ ಮೂಲೆಗಳಿಂದಲೂ ಕೂಡ ಸಂಪನ್ಮೂಲಗಳನ್ನು ಆಮದು ಮಾಡಿಕೊಂಡು ಉಪಯೋಗಿಸುತ್ತವೆ. ಹಿಮಾಲಯದಲ್ಲಿ ಸಿಗುವ Picorriza kurroa ವನ್ನು ಕೇರಳದ ತ್ರಿಶೂರಿನ ಚಿಕಿತ್ಸಕರು ಉಪಯೋಗಿಸುತ್ತಾರೆ ಮತ್ತು ಉಷ್ಣ ವಲಯ ಹವಾಗುಣದಲ್ಲಿ ಬೆಳೆಯುವ ಮೆಣಸು (Piper nigrum) ಹಿಮಾಲಯದಲ್ಲಿರುವ ಚಿಕಿತ್ಸಕರಿಗೆ ದೊರೆಯುತ್ತದೆ.

> *ಸ್ಥಳೀಯ ಆರೋಗ್ಯ ಸಂಪ್ರದಾಯ ಪ್ರಾಂತೀಯ ವಾಸನೆಯುಳ್ಳದ್ದು. ಆಯುರ್ವೇದ, ಸಿದ್ಧ, ಯುನಾನಿ ಹಾಗೂ ನಾಟಿ ಔಷಧಗಳನ್ನು ಕ್ರೋಢೀಕರಿಸಿದ ಪದ್ಧತಿಯಿದು. ಇದರಲ್ಲಿ ಭಾರತೀಯರ ಜೀವನ ಶೈಲಿ, ಆಹಾರ ಹಾಗೂ ಅಭ್ಯಾಸಗಳ ಸಂಪ್ರದಾಯ ಅಡಗಿದೆ.*

ಹಾಗೆಯೇ ಸ್ಥಳೀಯ ಆರೋಗ್ಯ ಸಂಪ್ರದಾಯಗಳ ಜ್ಞಾನದ ಮೂಲವು ಒಂದು ವಿಶಿಷ್ಟ ಸ್ಥಳೀಯ ಮತ್ತು ಪ್ರಾಂತೀಯ ವಾಸನೆಯುಳ್ಳದ್ದಾಗಿದ್ದು ಆಯುರ್ವೇದ, ಸಿದ್ಧ, ಯುನಾನಿ ಮತ್ತು ಸ್ವ-ರಿಗ್ಪ ಇವುಗಳನ್ನು

ಭಾರತದಾದ್ಯಂತ ಸಾರ್ವತ್ರಿಕವಾಗಿ ಅಭ್ಯಾಸ ಮಾಡುತ್ತಿದ್ದು, ಅವುಗಳ ಕ್ರೋಢೀಕರಿಸಿದ ಸಂಪ್ರದಾಯಗಳನ್ನು ಕೂಡ ಇದು ಪಡೆದುಕೊಂಡಿದೆ. ಹಾಗಾಗಿ ತ್ರಿದೇಶ ವಿಚಾರ ಅಥವಾ ಪಂಚಕರ್ಮ ವೈದ್ಯದ ಉಪಯೋಗ ಮತ್ತು ನಾಡಿಮಿಡಿತದ ಪರೀಕ್ಷಾ ವಿಧಾನಗಳನ್ನು ಆಯುರ್ವೇದ, ಯುನಾನಿ, ಸಿದ್ಧ ಮತ್ತು ಸ್ವ-ರಿಗ್ಪ (ಟಿಬೆಟ್ಟಿನದು)ದ ಸಂಪ್ರದಾಯಗಳ ಪ್ರಾಚೀನ ವೈದ್ಯ ಸಾಹಿತ್ಯಗಳಲ್ಲಿ ವಿವರಿಸಲಾಗಿರುವುದನ್ನು ಕೂಡ ಓದುಬರಹ ಬರದಿರುವ ಸ್ಥಳೀಯ ಗುಡ್ಡಗಾಡು ಚಿಕಿತ್ಸಕರು ಸ್ಥಳೀಯ ಸಸ್ಯ, ಖನಿಜ ಮತ್ತು ಪ್ರಾಣಿ ಸಂಪನ್ಮೂಲಗಳ ಮೇಲೆ ಆಧರಿಸಿದ ತಮ್ಮದೇ ಆದ ಸ್ಥಳೀಯ ಚಿಕಿತ್ಸೆಯಲ್ಲಿ ಉಪಯೋಗಿಸುವುದನ್ನು ಕಾಣಬಹುದು. ಅದು ಆ ಪ್ರದೇಶಕ್ಕೆ ಮಾತ್ರ ವಿಶಿಷ್ಟವಾಗಿರುತ್ತದೆ.

ಒಂದು ಅರ್ಥದಲ್ಲಿ ಸ್ಥಳೀಯ ಆರೋಗ್ಯ ಸಂಪ್ರದಾಯವು 'ವಿಶ್ವದಾದ್ಯಂತದಂತೆ ಚಿಂತಿಸು, ಆದರೆ ಸ್ಥಳೀಯವಾಗಿ ಕಾರ್ಯ ನಡೆಸು' ಎನ್ನುವ ತತ್ವವನ್ನು ಅನುಸರಿಸುತ್ತದೆ.

## ೨. ಸಂಪ್ರದಾಯದ ಅರ್ಥ :

ಒಂದು ಸಮುದಾಯದ ಆರೋಗ್ಯ "ಸಂಪ್ರದಾಯಗಳನ್ನು" ಅದರ ಇತರ ಆರೋಗ್ಯ ಪದ್ಧತಿಗಳಿಂದ ಪ್ರತ್ಯೇಕಿಸಿ ನೋಡಬೇಕು. ಒಂದು ಸಮುದಾಯದಲ್ಲಿ ಚಾಲ್ತಿಯಲ್ಲಿರುವ ಅನೇಕ ಆರೋಗ್ಯ ಪದ್ಧತಿಗಳಿರಬಹುದು. ಉದಾಹರಣೆಗೆ ತಲೆನೋವಿಗೆ 'ಆಸ್ಪ್ರೋ' ಮಾತ್ರೆಯನ್ನು ಉಪಯೋಗಿಸುವುದು, ಇದು ಸಂಪ್ರದಾಯದ ಒಂದು ಭಾಗ. ಒಂದು ಅಭ್ಯಾಸವನ್ನು 'ಸಂಪ್ರದಾಯ' ಎಂದು ಕರೆಯಬೇಕಾದರೆ ಎರಡು ಮಾನದಂಡಗಳಿವೆ. ಮೊದಲನೆಯದಾಗಿ ಸಂಪ್ರದಾಯಗಳು ತಮಗೆ ತಾವೇ ಮುಂದುವರಿಯುತ್ತಿರುವ ಅಭ್ಯಾಸಗಳಾಗಿರುತ್ತವೆ. ಯಾವುದೇ ಏಜೆನ್ಸಿ ಅಥವಾ ಸಂಸ್ಥೆಯ ಹಸ್ತಕ್ಷೇಪವಿಲ್ಲದೆ ಅವುಗಳು ಪ್ರಸರಣವಾಗುತ್ತಿರುವ ಪದ್ಧತಿಗಳಾಗಿವೆ. ಇನ್ನೂ ಹೆಚ್ಚಾಗಿ ಕನಿಷ್ಠ ಒಂದು ಶತಮಾನದಿಂದಲಾದರೂ ಸಂತತಿಯಿಂದ ಸಂತತಿಗೆ ಹರಿದು ಬಂದಿರುವ ಕೆಲವು ಅಭ್ಯಾಸಗಳಾಗಿರುತ್ತವೆ ಮತ್ತು ಅದನ್ನು ಈಗಲೂ ಮುಂದುವರಿಸಲಾಗುತ್ತಿದೆ. ಸಂಪ್ರದಾಯಗಳು ಬಾಯಿ ಮಾತಿನದಾಗಿರಬಹುದು ಅಥವಾ ಬರಹದ್ದಾಗಿರಬಹುದು.

ಸ್ಥಳೀಯ ಆರೋಗ್ಯ ಸಂಪ್ರದಾಯಗಳ ಬಗ್ಗೆ ಹೆಚ್ಚು ಆಕರ್ಷಕವಾಗಿರುವದೇನೆಂದರೆ ಅವುಗಳ ಸ್ವಯಂ ರಕ್ಷಿಸಿಕೊಳ್ಳುವ ಸ್ವಭಾವ. ಯಾವುದೇ ಸಂಸ್ಥೆಯ ಸಹಾಯವಿಲ್ಲದೆ ಲಕ್ಷಾಂತರ ಮನೆಗಳಲ್ಲಿ ಮತ್ತು ಸಾವಿರಾರು ಹಳ್ಳಿಗಳಲ್ಲಿ, ನಗರಗಳಲ್ಲಿ ಮತ್ತು ಪಟ್ಟಣಗಳಲ್ಲಿ ಅವು ಬದುಕಿವೆ ಮತ್ತು ಯಾವುದೇ ಬಾಹ್ಯ ಹಣದ ಸಹಾಯವಿಲ್ಲದೆ ಬದುಕಿವೆ. ಅವು ಕಾಲಕ್ಕೆ ತಕ್ಕಂತೆ ವಿಕಸನಗೊಂಡು, ಹೊಂದಿಕೊಂಡು ಮಾರ್ಪಾಡಾಗುತ್ತವೆ. ಮಾನವ ಶರೀರಶಾಸ್ತ್ರ, ಅಂಗಗಳ ಮತ್ತು ಮನಸ್ಸಿನ, ಆಹಾರ ಮತ್ತು ಪೌಷ್ಟಿಕತೆಯ ಸಸ್ಯಗಳು, ಪ್ರಾಣಿಗಳು, ಲೋಹಗಳು ಮತ್ತು ಖನಿಜಗಳ ಔಷಧೀಯ ಲಕ್ಷಣಗಳ ಜ್ಞಾನವನ್ನು ಅಳವಡಿಸಿಕೊಂಡಿವೆ.

ಜಾನಪದ ಸಂಪ್ರದಾಯಗಳನ್ನು ಒಯ್ಯುವವರ ಒಂದು ಗಮನಾರ್ಹ ಲಕ್ಷಣವೆಂದರೆ ಚಿಕಿತ್ಸಕರು ವೈದ್ಯ ಸೇವೆಯನ್ನು ಪೂರ್ಣಾವಧಿ ಉದ್ಯೋಗವಾಗಿ ಕೈಗೊಂಡಿರುವುದಿಲ್ಲ. ಚಿಕಿತ್ಸಕನು ಒಬ್ಬ ರೈತ, ಒಬ್ಬ ಕೂಲಿಕಾರ, ಒಬ್ಬ ಕ್ಷೌರಿಕ, ಅಂಗಡಿ ಇಟ್ಟಿರುವವ, ಕಮ್ಮಾರ, ಕುರುಬ ಅಥವಾ ತಿರುಗಾಡುತ್ತಿರುವ ಸನ್ಯಾಸಿಯಾಗಿರಬಹುದು. ವೈದ್ಯ ಸೇವೆಯು ಶುಲ್ಕದಿಂದ ಮುಕ್ತವಾಗಿಲ್ಲದಿದ್ದರೂ ಅದು ವಾಣಿಜ್ಯೇತರವಾಗಿದ್ದು, ಚಿಕಿತ್ಸಕನು ಜೀವನೋಪಾಯಕ್ಕೆ ಈ ಸೇವೆಯನ್ನು ಅವಲಂಬಿಸಿರುವುದಿಲ್ಲ. ಸಮುದಾಯವು (ರೋಗಿಯು) ಸ್ಥಳೀಯ ಸಾಂಸ್ಕೃತಿಕ ಮಾನದಂಡಗಳಿಗನುಸಾರವಾಗಿ ಚಿಕಿತ್ಸಕನಿಗೆ ಅವರ ಸೇವೆಗಳಿಗೆ ಪಾವತಿಸುತ್ತದೆ.

## ೩. ಸಂಪ್ರದಾಯಗಳ ಉದಾಹರಣೆಗಳು :

ಸಂಪೂರ್ಣವಾಗಿ 'ಬಾಯಿಮಾತಿನ' ಸಂಪ್ರದಾಯಗಳ ಮುಖ್ಯಉದಾಹರಣೆಗಳಿವೆ. ಅವುಗಳನ್ನು ಕುಟುಂಬ ಮತ್ತು ಸಮುದಾಯದ ಮಟ್ಟಗಳಲ್ಲಿ ಕಾಣಬಹುದು. ಲಕ್ಷಾಂತರ ಮನೆಗಳಲ್ಲಿ ಪ್ರಾಂತ ನಿರ್ದಿಷ್ಟ ಗೃಹ ಔಷಧಿಗಳ ಮತ್ತು ಆರೋಗ್ಯಕರ ಆಹಾರಗಳ ಜ್ಞಾನವು ಸಂಪ್ರದಾಯದಂತೆ ಬಂದಿದೆ. ಒಂದು ಸಾಮಾನ್ಯ ಉದಾಹರಣೆಯೆಂದರೆ ದಕ್ಷಿಣ ಭಾರತದಲ್ಲಿ ಪ್ರತಿಯೊಂದು ಮನೆಯಲ್ಲಿ ಕಾಮಾಲೆ ಚಿಕಿತ್ಸೆಗೆ ಹೊಂದಲಗನಸೊಪ್ಪನ್ನು ಶತಮಾನಗಳ ಹಿಂದಿನಿಂದ ಬಳಸುತ್ತಿದ್ದು ಪ್ರಸಿದ್ಧಿಯಾಗಿದೆ. ಜನರು ಈಗ ಈ ಸಂಪ್ರದಾಯವನ್ನು ಪುನರುಜ್ಜೀವನಗೊಳಿಸಲು ಪ್ರಾರಂಭಿಸಿದ್ದಾರೆ. ಏಕೆಂದರೆ ಕೆಲವು ವರ್ಷಗಳ ಹಿಂದೆ ಅಮೆರಿಕದ ಒಬ್ಬ ನೋಬೆಲ್ ಪ್ರಶಸ್ತಿ ವಿಜೇತ ಕಾಮಾಲೆ ಬಿ ಮತ್ತು ಸಿ ಯ ಚಿಕಿತ್ಸೆಗೆ ಈ ಸಸ್ಯದ ಉಪಯೋಗದ ಪೇಟೆಂಟನ್ನು ಪಡೆದುಕೊಂಡನು. ವಿವಿಧ ಪರಿಸರ-ಪದ್ಧತಿಗಳಲ್ಲಿ ೪೦,೦೦೦ದಷ್ಟು ಸಸ್ಯಗಳ ಸೂತ್ರಗಳ ರೀತಿಯಲ್ಲಿ ಸುಮಾರು ೪೦೦೦ ಸಮುದಾಯಗಳು ಉಪಯೋಗಿಸುವ ಸಸ್ಯ ಜಾತಿಗಳಿವೆ.

ಉತ್ತರಭಾರತದಲ್ಲಿ ಆರೋಗ್ಯ ಅಹಾರ ಪದ್ಧತಿಯ ಉದಾಹರಣೆ ಹೇಳುವುದಾದರೆ, ಆಲೂಗಡ್ಡೆ ಮತ್ತು ಮೆಂತ್ಯಸೊಪ್ಪು ಒಳಗೊಂಡಿರುವ ಸಾಂಪ್ರದಾಯಿಕವಾದ ಒಂದು ಬಗೆಯ ಆಹಾರವಿದೆ. ಈ ಆಹಾರವನ್ನು ಸಾವಿರಾರು ಮನೆಗಳಲ್ಲಿ ಸಾಂಪ್ರದಾಯಿಕವಾಗಿ

ತಯಾರಿಸಲಾಗುತ್ತಿದ್ದು, ಅದಕ್ಕೆ ಮೆಂತ್ಯದ ಆಲೂಗಡ್ಡೆ ಎನ್ನುತ್ತಾರೆಯೇ ಹೊರತು ಆಲೂಮೆಂತ್ಯವೆನ್ನುವುದಿಲ್ಲ. ಈ ಹೆಸರು ಕೊಟ್ಟಿರುವುದೇಕೆಂದರೆ ಇದರಲ್ಲಿ ಆಲೂಗಡ್ಡೆಗಿಂತ ಮೆಂತ್ಯದ ಪ್ರಮಾಣವು ಹೆಚ್ಚಾಗಿರುವುದನ್ನು ಒತ್ತಿ ಹೇಳುತ್ತದೆ. ಈ ಅಡುಗೆಯ ತರ್ಕ ಏನೆಂದರೆ ಮೆಂತ್ಯದ ಉಷ್ಣ ಸ್ವಭಾವವು ಆಲೂಗೆಡ್ಡೆಯ ವಾತ ಉತ್ಪಾದಿಸುವ ಪರಿಣಾಮಗಳನ್ನು ಸಮಗೊಳಿಸುತ್ತದೆ. ಸಾಂದರ್ಭಿಕವಾಗಿ ಕೂಡ ಈ ಉದಾಹರಣೆಯು ಸ್ಥಳೀಯ ಆರೋಗ್ಯ ಸಂಪ್ರದಾಯಗಳ ಕರ್ತೃತ್ವಶಕ್ತಿ ಮತ್ತು ಹೊಂದಿಕೊಳ್ಳುವ ಸ್ವಭಾವವನ್ನು ಸೂಚಿಸುತ್ತದೆ. ಆಲೂಗಡ್ಡೆ ಭಾರತಕ್ಕೆ ಪರಕೀಯವಾಗಿದ್ದು, ೧೬ನೇ ಶತಮಾನದ ಸಮಯದಲ್ಲಿ ಪೋರ್ಚುಗೀಸರು ಈ ದೇಶಕ್ಕೆ ತಂದರು. ಈ ವಸ್ತುವನ್ನು ಆಯುರ್ವೇದ ವೈದ್ಯರು ಅಧ್ಯಯನ ಮಾಡಿ ಅದು 'ವಾತ' ಉತ್ಪಾದಿಸುವಂತಹುದೆಂದು ಕಂಡುಹಿಡಿದಿದ್ದಾರೆ ಮತ್ತು ಅದನ್ನು ಮೆಂತ್ಯ, ಜೀರಿಗೆ, ಇಂಗಿನಂತಹ ಸಮತೋಲನ ಉಂಟುಮಾಡುವ ವಸ್ತುಗಳ ಜೊತೆಯಲ್ಲಿ ತಿನ್ನಬೇಕು ಎಂದು ಸಲಹೆ ಮಾಡಲಾಗಿದೆ. ಆರೋಗ್ಯ ಆಹಾರ ಸಂಪ್ರದಾಯವಿರುವ ಇನ್ನೊಂದು ಉದಾಹರಣೆಯನ್ನು ನೋಡೋಣ. ಬಹಳ ಪ್ರಸಿದ್ಧವಾದ ಮತ್ತು ತುಂಬಾ ಪೌಷ್ಟಿಕವಾಗಿರುವ ದಕ್ಷಿಣ ಭಾರತದ ಆಹಾರವಾದ 'ಇಡ್ಲಿ' ತಯಾರಿಕೆ. ಇದು ಅಕ್ಕಿ ಮತ್ತು ಉದ್ದು ಸೇರಿರುವ ಹಬೆಯಿಂದ ತಯಾರಿಸಿದ ಆಹಾರ. ಇಡ್ಲಿಯಲ್ಲಿ ಉಪಯೋಗಿಸಲಾದ ಒಂದು ವಸ್ತು ಉದ್ದು. ಈ ವಸ್ತುವು ಪ್ರೋಟೀನ್‌ನಲ್ಲಿ ತುಂಬಾ ಶ್ರೀಮಂತವಾಗಿದ್ದರೂ ಮಾಂಸವರ್ಧಕ, ಅದು ಉಷ್ಣ ಪದಾರ್ಥ ಮತ್ತು ಆಮ್ಲೀಯವಾದುದು (ಉಷ್ಣ ಮತ್ತು ಪಿತ್ಥಕಾರಕ). ಉತ್ತರ ಭಾರತದಲ್ಲಿ ಇದನ್ನು ಚಳಿಗಾಲದಲ್ಲಿ ಮಾತ್ರ ತಿನ್ನುತ್ತಾರೆ. ಏಕೆಂದರೆ ಬೇಸಿಗೆ ಕಾಲದಲ್ಲಿ ಕ್ರಮವಾಗಿ ತಿಂದರೆ ಹೆಚ್ಚಿನ ಆಮ್ಲೀಯತೆ ಮತ್ತು ಹೊಟ್ಟೆಯುಬ್ಬರವುಂಟುಮಾಡುತ್ತದೆ. ದಕ್ಷಿಣ ಭಾರತೀಯರು ಉದ್ದಿನ ಈ ಸಮಸ್ಯೆಯನ್ನು ಉದ್ದು ಮತ್ತು ಅಕ್ಕಿಯನ್ನು ಒಂದು ನಿರ್ದಿಷ್ಟ ಪ್ರಮಾಣದಲ್ಲಿ (೧:೩) ಬೆರೆಸಿ ಈ ಸಮಸ್ಯೆಯನ್ನು ಪರಿಹರಿಸಿದ್ದಾರೆ ಮತ್ತು ಈ ಆಹಾರವನ್ನು ಹಬೆಯಲ್ಲಿ ಬೇಯಿಸಿ ತಯಾರಿಸುತ್ತಾರೆ. ಈ ರೀತಿಯಲ್ಲಿ ಅದು ಉದ್ದಿನ ಪ್ರತಿಕೂಲ ಪರಿಣಾಮಗಳನ್ನು ತೊಡೆದುಹಾಕುತ್ತದೆ. ಅದನ್ನು ವರ್ಷವೆಲ್ಲಾ ತಿನ್ನಬಹುದು. ಇದರಲ್ಲಿ ಸಸಾರಜನಕ (ಪ್ರೋಟೀನು), ಶರ್ಕರ ಪಿಷ್ಟಾದಿಗಳು ಮತ್ತು ವಿಟಮಿನ್ನುಗಳು ಆರೋಗ್ಯಕರ ಪ್ರಮಾಣದಲ್ಲಿ ಸೇರಿರುತ್ತವೆ. ಇಡ್ಲಿಯು ಜೀರ್ಣಿಸುವುದು ಸುಲಭ. ಅದನ್ನು ವಯಸ್ಸಾದವರು, ಯುವಕರು ಮತ್ತು ಮಕ್ಕಳು ತಿನ್ನಬಹುದು. ಇದು ಒಂದು ಸರಿಯಾದ ಆರೋಗ್ಯ ಆಹಾರ. ಈ ಆರೋಗ್ಯ ಆಹಾರದ ತಯಾರಿಕೆಯು ಲಕ್ಷಾಂತರ ಜನರಿಗೆ ತಿಳಿದಿರುವ ಮತ್ತು ಅಭ್ಯಾಸದಲ್ಲಿರುವ ಆರೋಗ್ಯ ಸಂಪ್ರದಾಯದ ಒಂದು ಭಾಗ. ಈ ತರಹದ ಪ್ರಾಂತೀಯ ಆಹಾರ ಬೇಕಾದಷ್ಟಿವೆ ಮತ್ತು ಸ್ಥಳೀಯ ಆರೋಗ್ಯ ಸಂಪ್ರದಾಯಗಳಲ್ಲಿ ಅನೇಕ ಸಮುದಾಯಗಳು ಉಪಯೋಗಿಸುವ ಪರಿಸರ ಪದ್ಧತಿ ನಿರ್ದಿಷ್ಟ ಆಹಾರ ಸಂಪನ್ಮೂಲಗಳ ಜ್ಞಾನವೂ ಅಪಾರವಾಗಿದೆ. ಈ ಆಹಾರಗಳು ಮತ್ತು ಆಹಾರ ಸಂಪನ್ಮೂಲಗಳು ಬಹಳ ಹೆಚ್ಚು ಸಂಖ್ಯೆಯಲ್ಲಿದೆ. ಆಹಾರ ಮತ್ತು ಪೋಷಣೆ ಅಥವಾ ಗೃಹವಿಜ್ಞಾನದ ಪಠ್ಯಪುಸ್ತಕಗಳಲ್ಲಿ ವಿವರಿಸುವುದಕ್ಕಿಂತ ತುಂಬಾ ಹೆಚ್ಚು ಸಂಖ್ಯೆಯಲ್ಲಿದೆ.

ಗೃಹ ಮಟ್ಟದಲ್ಲಿ ಈ ಬಾಯಿಮಾತಿನ ಸಂಪ್ರದಾಯಗಳಲ್ಲದೆ ಸಮುದಾಯದ ಮಟ್ಟದಲ್ಲಿ ವ್ಯಾಪಕವಾಗಿ ಹರಡಿರುವ ಆಹಾರ ಸಂಪ್ರದಾಯಗಳಿವೆ. ಉದಾಹರಣೆಗೆ ಭಾರತದಲ್ಲಿ ಪ್ರತಿ ಹಳ್ಳಿಯಲ್ಲಿ ಕೆಲವು ಸಾಂಪ್ರದಾಯಿಕ ಸೂಲಗಿತ್ತಿಯರಿದ್ದಾರೆ. ಇವರು ಛಿದ್ರವಾದ ಹೆರಿಗೆ, ಗರ್ಭದ ಸ್ಥಾನ ಬದಲಾವಣೆ, ಕುತ್ತಿಗೆ ಸುತ್ತ ಇರುವ ಹೊಕ್ಕಳು ಬಳ್ಳಿ ಮತ್ತು ಸತ್ತು ಹುಟ್ಟುವ ಮಗುವನ್ನು ಕೂಡ ಹೆರಿಗೆ ಮಾಡುತ್ತಾರೆ. ಭಾರತದಲ್ಲಿ ಸುಮಾರು ೬,೦೦,೦೦೦ ಸೂಲಗಿತ್ತಿಯಾಗಿದ್ದಾರೆ. ಈ ಸೂಲಗಿತ್ತಿಯರು ವಂಶಪಾರಂಪರ್ಯವಾಗಿ ಹಳ್ಳಿಯಲ್ಲಿರುತ್ತಾರೆ.

ಆಶ್ಚರ್ಯಕರವಾಗಿ ಭಾರತದಲ್ಲಿ ಬರಿಗಾಲು ಅಂಗಹೀನ ಚಿಕಿತ್ಸೆಯ ಸಂಪ್ರದಾಯವಿದೆ. ೨೦-೨೫ ಹಳ್ಳಿಗಳಿಗೆ ಒಬ್ಬ ಮೂಳೆ ಸರಿಪಡಿಸುವವನಿದ್ದಾನೆ. ಈ ಮೂಳೆ ಸರಿಪಡಿಸುವವರು ಉಳುಕುಗಳು ಮತ್ತು ಸರಳವಾದ ಮೂಳೆ ಮುರಿತಗಳನ್ನು ಸರಿಪಡಿಸುತ್ತಾರೆ. ಮತ್ತು ದೇಶದ ಕೆಲವು ಭಾಗಗಳಲ್ಲಿ ತೆರೆದಿರುವ ಗಾಯದಿಂದ ಸಂಯುಕ್ತ ಮೂಳೆ ಮುರಿತಗಳನ್ನು ಸರಿಪಡಿಸುತ್ತಾರೆ. ಯಾರೂ ಕ್ರಮಾಗತವಾದ ಒಂದು ಅಧ್ಯಯನವನ್ನು ಮಾಡಿಲ್ಲ. ಆದರೆ ಗ್ರಾಮೀಣ ಭಾರತದಲ್ಲಿ ಶೇ.೫೦ರಷ್ಟು ಮೂಳೆ ಮುರಿತವನ್ನು ಸಾಂಪ್ರದಾಯಿಕ ಮೂಳೆ ಸರಿಪಡಿಸುವವರು ಸರಿಪಡಿಸುತ್ತಾರೆ ಎಂಬುದು ಒಂದು ಊಹೆಯ ಅಂದಾಜು.

ತುರ್ತು ವಿಷಯಗಳಿಗೆ ಸಂಬಂಧಿಸಿದ ಸಮುದಾಯ ಸಂಪ್ರದಾಯಗಳಿವೆ. ಜೀವಕ್ಕೆ ಅಪಾಯ ತರುವ ಹಾವು ಕಡಿತಗಳನ್ನು ಚಿಕಿತ್ಸಿಸಲು ೬,೦೦,೦೦ ಚಿಕಿತ್ಸಕರು ಇದ್ದಾರೆ ಎಂದು ಅಂದಾಜು ಮಾಡಲಾಗಿದೆ. ಸಾಂಪ್ರದಾಯಿಕ ವಿಷಚಿಕಿತ್ಸಕರು ವಿಷಪೂರಿತ ಹಾವು ಕಡಿತವನ್ನು ವಿಷಪೂರಿತವಲ್ಲದವುಗಳಿಂದ ಗುರುತಿಸಬಲ್ಲರು. ವಿಷಸರ್ಪ, ಮಂಡಲದಹಾವು, ರಸೆಲ್ಸ್ ಮಂಡಲದ ಹಾವು

ಅಥವಾ ನಾಗರಹಾವುಗಳ ಕಡಿತವನ್ನು ಗುರುತಿಸಬಲ್ಲರು ಮತ್ತು ಅವಕ್ಕೆ ಚಿಕಿತ್ಸೆಯನ್ನೂ ಮಾಡುತ್ತಾರೆ. ಕೆಲವು ಪ್ರದೇಶಗಳಲ್ಲಿ ಹುಚ್ಚು ಬರುವುದನ್ನು ತಪ್ಪಿಸುವುದಕ್ಕೆ ಹುಚ್ಚು ನಾಯಿಗಳ ಕಡಿತಕ್ಕೂ ಚಿಕಿತ್ಸೆ ನೀಡುತ್ತಾರೆ. ಲಿಖಿತ ರೂಪದಲ್ಲಿರುವ ಸಂಪ್ರದಾಯದಲ್ಲಿ ಶರೀರದೊಳಕ್ಕೆ ಎಷ್ಟು ಆಳಕ್ಕೆ ವಿಷ ಹೋಗಿದೆ ಎಂಬುದನ್ನು ಕಂಡು ಹಿಡಿಯುವ ಲಕ್ಷಣಗಳ ವಿವರವಾದ ವಿವರಣೆ ಇದೆ. ಸುಮಾರು ೧೦೦,೦೦೦ ಗಿಡ ಮೂಲಿಕೆ ಚಿಕಿತ್ಸಕರಿದ್ದು ಬಹಳಮಟ್ಟಿನ ಸಾಮಾನ್ಯ ಕಾಯಿಲೆಗಳನ್ನು ಗುಣಪಡಿಸುತ್ತಾರೆ. ಅಲ್ಲದೆ ಬಹಳ ತೀವ್ರತರವಾದ ಸ್ಥಿತಿಗಳನ್ನು ಮತ್ತು ಕಣ್ಣುಗಳು, ಕಿವಿಗಳು ಅಥವಾ ಚರ್ಮಕ್ಕೆ ಸಂಬಂಧಿಸಿದ ವಿಶೇಷವಾದ ಪರಿಸ್ಥಿತಿಗಳನ್ನು ಮತ್ತು ಮಾಂಸಖಂಡ ಮತ್ತು ನರಗಳ ರೋಗಕ್ಕೂ ಕೂಡ ಚಿಕಿತ್ಸೆ ನೀಡುತ್ತಾರೆ.

ಈ ಜಾನಪದ ಸಂಪ್ರದಾಯಗಳು ಹೆಚ್ಚಾಗಿ ಬಾಯಿಮಾತಿನವಾಗಿರುವುದಲ್ಲದೆ ಲಿಖಿತ ಸಂಪ್ರದಾಯಗಳೂ ಇದ್ದು ಯಾವುದೇ ಏಜೆನ್ಸಿ ಅಥವಾ ಸಂಸ್ಥೆಯ ಹಸ್ತಕ್ಷೇಪವಿಲ್ಲದೆ ಮುಂದಿನ ಪೀಳಿಗೆಗೆ ಹಸ್ತಾಂತರಿಸಲಾಗುತ್ತದೆ. ಈ ಲಿಖಿತ ಸಂಪ್ರದಾಯಗಳು ತಮ್ಮ ಜ್ಞಾನವನ್ನು ಆಯುರ್ವೇದ, ಸಿದ್ಧ, ಯುನಾನಿ, ಮತ್ತು ಸ್ವ-ರಿಗ್ಪ (ಟಿಬೆಟ್) ಸಂಪ್ರದಾಯಗಳಿಂದ ಪಡೆದುಕೊಂಡಿವೆ. ಈ ಲಿಖಿತ ಸಂಪ್ರದಾಯಗಳು ಅನೇಕ ಸಾವಿರ ವೈದ್ಯ ಹಸ್ತಪ್ರತಿಗಳಿಂದ ಬೆಂಬಲ ಪಡೆದಿವೆ. ಹೆಚ್ಚು ಸಂಖ್ಯೆಯ ಹಸ್ತಪ್ರತಿಗಳು (೨೫,೦೦೦ಕ್ಕೂ ಹೆಚ್ಚು) ಸಂಸ್ಕೃತದಲ್ಲಿವೆ ಮತ್ತು ಪ್ರಾಂತೀಯ ಭಾಷೆಗಳಲ್ಲಿ ವೈದ್ಯಕೀಯ ಹಸ್ತಪ್ರತಿಗಳು ಕೂಡ ಇವೆ. ಸಂಸ್ಕೃತದ ನಂತರ ಅತಿ ಹೆಚ್ಚಿನ ಹಸ್ತಪ್ರತಿಗಳು ಹಳೆ ತಮಿಳು ಲಿಪಿಗಳಲ್ಲಿ ಸಿದ್ಧ ಸಂಪ್ರದಾಯದಲ್ಲಿವೆ. (ಸುಮಾರು ೫೦೦೦ ಹಸ್ತಪ್ರತಿಗಳು) ಅಲ್ಲದೆ ಮಲಯಾಳಂ, ಕನ್ನಡ, ಹಿಂದಿ, ಬಂಗಾಳಿ, ಅಸ್ಸಾಮಿ, ತೆಲುಗು, ಮರಾಠಿ, ಒರಿಯಾ, ಕಾಶ್ಮೀರಿ, ಗುಜರಾತಿ ಮತ್ತು ಬೋಧಿ ಲಿಪಿಗಳಲ್ಲಿ ಕೂಡ ಪ್ರಾಂತೀಯ ಪುಸ್ತಕಗಳಿವೆ. ಈ ಹಸ್ತಪ್ರತಿಗಳು ಸಾಮಾನ್ಯ ಔಷಧಿ, ಶಸ್ತ್ರಕ್ರಿಯೆ, ಔಷಧಶಾಸ್ತ್ರ ಮತ್ತು ಔಷಧಗಳಿಗೆ ಸಂಬಂಧಿಸಿದಂತೆ ವೈದ್ಯಕೀಯ ಜ್ಞಾನವನ್ನು ಒಳಗೊಂಡಿವೆ. ಮಕ್ಕಳಶಾಸ್ತ್ರ, ಕಣ್ಣಿನಶಾಸ್ತ್ರ, ವಿಷಶಾಸ್ತ್ರ, ಔಷಧ, ಮುಪ್ಪುಶಾಸ್ತ್ರ, ಪತ್ತೆ ಮಾಡುವುದು, ಪುನಶ್ಶಕ್ತಿ ಬರುವಂತೆ ಮಾಡುವುದು, ಗರ್ಭಶಾಸ್ತ್ರ ಮತ್ತು ವೈದ್ಯಕೀಯ ಜ್ಯೋತಿಷ್ಯ ಶಾಸ್ತ್ರಗಳನ್ನು ವಿವರಿಸುವ ತಜ್ಞ ಪಠ್ಯಪುಸ್ತಕಗಳು ಕೂಡ ಇವೆ.

12090

ಇವೆಲ್ಲ "ಆರೋಗ್ಯ ಸಂಪ್ರದಾಯಗಳು". ಏಕೆಂದರೆ ಅವು ಶತಮಾನಗಳಿಂದ ಇಲ್ಲಿಯವರೆಗೆ ಬದುಕಿ ಉಳಿದಿವೆ, ವಿಕಸನಗೊಂಡಿವೆ ಮತ್ತು ಹೊಂದಿಕೊಂಡಿವೆ. ಈ ಜ್ಞಾನದ ಪ್ರಸರಣಕ್ಕೆ ಗೃಹಮಟ್ಟದಲ್ಲಿ ಅಥವಾ ತಜ್ಞ ಜನರಲ್ಲಿ ಅಥವಾ ಚಿಕಿತ್ಸೆಯಲ್ಲಿ ಜವಾಬ್ದಾರಿಯಾಗಿರುವುದಕ್ಕೆ ಯಾವುದೇ ಒಂದು ವೈದ್ಯಕೀಯ ಶಾಲೆ ಅಥವಾ ಯಾವುದೇ ಏಜೆನ್ಸಿ ಇಲ್ಲ. ಬಾಯಿಮಾತಿನ ಮತ್ತು ಲಿಖಿತ ಸಂಪ್ರದಾಯಗಳು ಭಾರತದ "ಸ್ಥಳೀಯ ಆರೋಗ್ಯ ಸಂಪ್ರದಾಯಗಳನ್ನು" ಒಳಗೊಂಡಿವೆ. ಇವು ಒಂದು ಸ್ಥಳದಲ್ಲಿ ದೊರೆಯುವ ಆರೋಗ್ಯ ಜ್ಞಾನದ ಪ್ರಸರಣದ ಆಳ, ಗುಣಮಟ್ಟ ಮತ್ತು ದಕ್ಷತೆಯನ್ನು ಪ್ರದರ್ಶಿಸುತ್ತವೆ.

## ೪. ಸ್ಥಳೀಯ ಆರೋಗ್ಯ ಸಂಪ್ರದಾಯಗಳ ಪ್ರಸರಣದ ವಿಕೇಂದ್ರೀಕರಣ ಮಾದರಿ :

ಈ ಜ್ಞಾನವನ್ನು ಪ್ರಸರಣ ಮಾಡಲು ಯಾವುದೇ ಏಜೆನ್ಸಿ ಇಲ್ಲದಿರುವುದರಿಂದ ಈ ಜ್ಞಾನವು ಹೇಗೆ ಪ್ರಸರಣಗೊಳ್ಳುತ್ತದೆ? ಇದು ಜ್ಞಾನಭಂಡಾರವುಳ್ಳ ವ್ಯಕ್ತಿಗಳಿಂದ ಯೋಗ್ಯ ವಿದ್ಯಾರ್ಥಿಗಳಿಗೆ ಪ್ರಸರಣಗೊಳ್ಳುತ್ತದೆ. ಉಪಾಧ್ಯಾಯರು ಮತ್ತು ವಿದ್ಯಾರ್ಥಿಯು ತಮ್ಮ ಸ್ವಂತ ಇಚ್ಛೆಯಿಂದ ಪರಸ್ಪರ ಸಂಬಂಧಪಡುತ್ತಾರೆ. ಇದನ್ನು ಗುರು-ಶಿಷ್ಯ ಪರಂಪರೆ ಎಂದು ಕರೆಯುತ್ತಾರೆ. ಆದ್ದರಿಂದ ವಾಸ್ತವವಾಗಿ ಅನೇಕ ಸಾವಿರ ಉಪಾಧ್ಯಾಯರು ಎಲ್ಲಾ ಸ್ಥಳಗಳಲ್ಲಿ ಹಂಚಿಹೋಗಿದ್ದಾರೆ ಮತ್ತು ಸಾವಿರಾರು ವಿದ್ಯಾರ್ಥಿಗಳು ಉಪಾಧ್ಯಾಯರಿಗೆ ಸಂಬಂಧಿಸಿರುತ್ತಾರೆ. ಜಾನಪದ ಸಂಪ್ರದಾಯದ ತಜ್ಞ ಚಿಕಿತ್ಸಕರ ಅಂದಾಜು ಸಂಖ್ಯೆಯು ಭಾರತದಲ್ಲಿ ಸುಮಾರು ೧೦ ಲಕ್ಷ ಇದೆ. ಲಿಖಿತ ಸಂಪ್ರದಾಯದ ಈಗಿನ ಸಂಖ್ಯೆಯು ೧,೦೦,೦೦೦ಕ್ಕಿಂತ ಕಡಿಮೆ ಮತ್ತು ಇನ್ನೂ ಕಡಿಮೆಯಾಗುತ್ತಿದೆ. ಏಕೆಂದರೆ ಈ ಲಿಖಿತ ಜ್ಞಾನದ ಪ್ರಸರಣಕ್ಕೆ ಸಂಸ್ಥೆಗಳನ್ನು ಸ್ಥಾಪಿಸುವುದರ ಮೂಲಕ ಮತ್ತು ನ್ಯಾಯಿಕ ಸಂಹಿತೆಯನ್ನು ಜಾರಿಗೊಳಿಸಿರುವುದರಿಂದ ವೈದ್ಯ ವೃತ್ತಿಯನ್ನು ಮಾಡಬೇಕಾದರೆ ಲಿಖಿತ ಜ್ಞಾನದ ಲಿಖಿತ ವೈದ್ಯರಾಗಿ ಸಂಸ್ಥೆಗಳಿಂದ ಹೊರಬಂದವರಾಗಿರಬೇಕೆಂಬ ಸರಕಾರದ ಹಸ್ತಕ್ಷೇಪದಿಂದ ಹಾಗಾಗಿದೆ.

ಗುರು-ಶಿಷ್ಯ ಪರಂಪರೆಯು ಬಹಳ ಮಿತವಾದ ಪ್ರಸರಣವಲ್ಲವೇ? ಏಕೆಂದರೆ ಒಬ್ಬ ನಿರ್ದಿಷ್ಟ ವಿದ್ಯಾರ್ಥಿಯು ಈ ಪದ್ಧತಿಯಡಿಯಲ್ಲಿ ಒಬ್ಬ ನಿರ್ದಿಷ್ಟ ಉಪಾಧ್ಯಾಯರಿಂದ ಕಲಿಯುವ ಅವಕಾಶವನ್ನು ಮಾತ್ರ ಹೊಂದಿರುತ್ತಾನೆ. ಹೆಚ್ಚಿನ ವಿದ್ಯಾರ್ಥಿಗಳು ಅವರ ನಿರ್ದಿಷ್ಟ ಉಪಾಧ್ಯಾಯರ ಅನುಭವದಿಂದ ಕಲಿಯುವ ಪ್ರಯೋಜನ ಹೊಂದಿರುತ್ತಾರೆ. ಆದರೂ ಸಂಪ್ರದಾಯಗಳು ಪರಿಣಾಮಕಾರಿ ಗುಣಮಟ್ಟವನ್ನು

ಕಾಪಾಡಿಕೊಂಡಿವೆ. ಏಕೆಂದರೆ ಅವರ ಪಠ್ಯವಿಷಯದ ಸ್ಥಳೀಯ ಸುಸಂಬದ್ಧತೆ. ಈ ಸಂಪ್ರದಾಯವು ವಿದ್ಯಾರ್ಥಿಗಳು ಬೇರೆ ಕಡೆ ಹೋಗಿ ಇತರ ಉಪಾಧ್ಯಾಯರುಗಳಿಂದ ಕಲಿಯಲು ಪ್ರೋತ್ಸಾಹಿಸುತ್ತದೆ ಮತ್ತು ಕೆಲವು ಉಪಾಧ್ಯಾಯರು ಚನ್ನಾಗಿ ಪ್ರವಾಸ ಮಾಡಿ ವಿಸ್ತಾರವಾದ ಅನುಭವ ಪಡೆದಿರುತ್ತಾರೆ ಎಂದು ಕೂಡ ನೋಡಲಾಗಿದೆ. ಪ್ರವಾಸಿಸುವ ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರು ಈಗಲೂ ಸಾಂಸ್ಥಿಕೇತರ ಮೂಲಗಳಿಂದ ಕಲಿಕೆಯನ್ನು ಮಾಡುತ್ತಾರೆ.

ಸ್ಪಷ್ಟವಾಗಿ, ಅಂತಹ ಆರೋಗ್ಯ ಸಂಪ್ರದಾಯಗಳು ಬಹಳಮಟ್ಟಿಗೆ ವಿಕೇಂದ್ರೀಕರಿಸಿದ ಮತ್ತು ಮಿತವೆಚ್ಚದ ಕಲಿಕೆಯಾಗಿವೆ. ಅಂತಹ ಸಂಪ್ರದಾಯಗಳು ವಿಷಯದ ವೈವಿಧ್ಯತೆಯನ್ನು ಒಂದು ಸಂಸ್ಥೆಯಲ್ಲಿ ದೊರೆಯುವಷ್ಟನ್ನು ಅಥವಾ ವಿಶ್ವವಿದ್ಯಾನಿಲಯದಲ್ಲಿ ದೊರಕುವಷ್ಟನ್ನು ಪಡೆಯಲಾಗುವುದಿಲ್ಲ ಎಂದು ವಾದ ಮಾಡಿದರೂ, ಒಬ್ಬ ಉಪಾಧ್ಯಾಯನಲ್ಲಿ ಅಂತಹ ವೈವಿಧ್ಯತೆ ದೊರೆಯದಿದ್ದರೂ ಸಮಾಜದಲ್ಲಿರುವ ಅಸಂಖ್ಯಾತ ಉಪಾಧ್ಯಾಯರುಗಳಲ್ಲಿರುವುದರಿಂದ ಆಗಲೂ ವಿವಿಧ ಉಪಾಧ್ಯಾಯರುಗಳಿಂದ ಅವನು ಕಲಿಯಬಹುದು ಎಂದು ಉತ್ತರಿಸಬಹುದು.

ಯಾರೊಬ್ಬರಾಗಲಿ ಒಂದು ಸಂಸ್ಥೆಯ ಜ್ಞಾನಪದ್ಧತಿ ಮತ್ತು ಅತಿಹೆಚ್ಚಾಗಿ ವಿಕೇಂದ್ರೀಕರಿಸಿದ ಗುರುಶಿಷ್ಯ ಪರಂಪರೆ ನಡುವೆ ಆಯ್ಕೆ ಮಾಡಬೇಕೆಂದು ಒತ್ತಾಯಿಸಬೇಕಾಗಿಲ್ಲ. ಕಲಿಯುತ್ತಿರುವ ಸಮಾಜದಲ್ಲಿ ಎರಡೂ ಕೂಡ ಸಮಾನಾಂತರವಾಗಿ ಕೆಲಸ ಮಾಡಬಹುದು. ಬಾಯಿಮಾತಿನ ಸಂಪ್ರದಾಯಗಳು ಪ್ರಬಲವಾದವು. ಏಕೆಂದರೆ ಅದರಲ್ಲಿ ಸ್ವಂತ ಅಭಿಪ್ರಾಯ ಮತ್ತು ಅನುಭವವಿದೆ. ಅಲ್ಲದೆ ಒಬ್ಬ ಸಮರ್ಥ ಉಪಾಧ್ಯಾಯರ ಚೈತನ್ಯ ಮತ್ತು ಸಂಸ್ಕೃತಿಯೂ ಇರುತ್ತದೆ. ಸಂಸ್ಥೆಯ ಕಲಿಕೆಯ ಪದ್ಧತಿಗಳು ವ್ಯಕ್ತಿಗತವಲ್ಲದ ಬೋಧನಾ ಕ್ರಮವಾಗಿದೆ. ಆದರೆ ಸಂಸ್ಥೆಯ ಮತ್ತು ತಂತ್ರಜ್ಞಾನದ ಪ್ರಯೋಜನಗಳನ್ನು ಸಂಸ್ಥೆಗಳು ಚೆನ್ನಾಗಿ ವ್ಯವಸ್ಥಿತವಾಗಿದ್ದರೆ ಪಡೆಯಬಹುದು.

ಸ್ಥಳೀಯ ಆರೋಗ್ಯ ಸಂಪ್ರದಾಯದ ಕೆಲವು ಪ್ರವಾಸಿಗರು (ಅವರು ಸಂಶೋಧಕರು ಅಥವಾ ಜೀವಿ-ಪ್ರತೀಕ್ಷಕರಾಗಿರಬಹುದು) ಸ್ಥಳೀಯ ಆರೋಗ್ಯ ಸಂಪ್ರದಾಯಗಳು ಗುಟ್ಟಿನವು ಎಂದು ದೂರುತ್ತಾರೆ. ಸ್ಥಳೀಯ ಆರೋಗ್ಯ ಸಂಪ್ರದಾಯಗಳಿಗೆ ನೀತಿ ಸಂಹಿತೆಯಿದೆ, ಈ ಸಂಹಿತೆಯು ಅವುಗಳ ಸಫಲ ಪ್ರಸರಣಕ್ಕೆ ಜವಾಬ್ದಾರವಾಗಿವೆ ಮತ್ತು ಇಲ್ಲಿಯವರೆಗಿನ ಉಳಿವಿಗೆ ಕಾರಣವಾಗಿದೆ. ಸ್ಥಳೀಯ ಆರೋಗ್ಯ ಸಂಪ್ರದಾಯದ ನೈತಿಕ ನಂಬುಗೆಗಳನ್ನು ಅವಹೇಳನ ಮಾಡುವುದು ಮತ್ತು ಅವುಗಳನ್ನು ಗುಟ್ಟಿನವು ಎಂದು ಅವಹೇಳನ ಮಾಡುವುದು ತುಂಬಾ ದೊಡ್ಡ ತಪ್ಪು. ಏಕೆಂದರೆ ಸ್ಥಳೀಯ ಆರೋಗ್ಯ ಸಂಪ್ರದಾಯಗಳು ತಮ್ಮ ನೀತಿಸಂಹಿತೆಗೆ ಬದ್ಧರಾಗಿಲ್ಲದಿರುವ ವ್ಯಕ್ತಿಗಳ ಜೊತೆಯಲ್ಲಿ ತಮ್ಮ ಜ್ಞಾನವನ್ನು ಹಂಚಿಕೊಳ್ಳಲು ನಿರಾಕರಿಸಬಹುದು. ಸ್ಥಳೀಯ ಆರೋಗ್ಯ ಸಂಪ್ರದಾಯಗಳು ಗುಟ್ಟಿನವಾಗಿದ್ದರೆ ಇವತ್ತಿಗೂ ಈ ಸಂಪ್ರದಾಯವನ್ನು ಮುಂದುವರಿಸಿಕೊಂಡು ಹೋಗುತ್ತಿರುವ ಲಕ್ಷಾಂತರ ಜನರಿದ್ದಾರೆ ಎಂಬುದನ್ನು ಹೇಗೆ ವಿವರಿಸುತ್ತಾರೆ.

## ೫. ಯಾವ ಆರೋಗ್ಯ ಅಭ್ಯಾಸಗಳು ಇನ್ನೂ ಸಾಂಪ್ರದಾಯಿಕವಲ್ಲ?

ಸ್ಥಳೀಯ ಆರೋಗ್ಯ ಸಂಪ್ರದಾಯಗಳ ಸ್ವಭಾವವನ್ನು ಸ್ಪಷ್ಟಪಡಿಸಲು ಒಂದು ಸಂದೇಶವನ್ನು ಉತ್ತರಿಸುವುದು ಉಪಯುಕ್ತ. ಸ್ಥಳೀಯ ಆರೋಗ್ಯ ಸಂಪ್ರದಾಯಗಳು ಅಲೋಪತಿ ಮತ್ತು ಹೋಮಿಯೋಪತಿಯನ್ನು ಒಳಗೊಂಡಿವೆಯೇ? ಇಲ್ಲ. ಏಕೆಂದರೆ ಹೆಚ್ಚಿನ ಸ್ಥಳಗಳಲ್ಲಿ ಆಧುನಿಕ ಪದ್ಧತಿಗಳನ್ನು ಉಪಯೋಗಿಸಲಾಗುತ್ತಿದೆ. ಅವು ಬಹಳ ಇತ್ತೀಚಿನವು. ಆದ್ದರಿಂದ ಅದು ಇನ್ನೂ ಸಾಮಾಜಿಕ ಸಂಪ್ರದಾಯದ ಒಂದು ಭಾಗವಾಗಿಲ್ಲ. ಈಗ ಇವುಗಳ ಜ್ಞಾನ ವರ್ಗಾವಣೆಯು ಸಂಸ್ಥೆಗಳ ಮೇಲೆ ಅವಲಂಬಿಸಿದೆ ಮತ್ತು ಮುಂಚೆ ಚರ್ಚಿಸಿದಂತೆ ಅವು ಸ್ವಯಂ ವೃದ್ಧಿಯಾಗುವಂತದ್ದಲ್ಲ. ವೈದ್ಯಕೀಯ ಶಾಲೆಗಳು ಮತ್ತು ಔಷಧಿ ಅಂಗಡಿಗಳನ್ನು ಮುಚ್ಚಿಬಿಟ್ಟರೆ ಈ ಪದ್ಧತಿಗಳು ನಿಂತುಹೋಗುತ್ತವೆ.

## ೬. ಸ್ಥಳೀಯ ಆರೋಗ್ಯ ಸಂಪ್ರದಾಯಗಳ ನಿರ್ಮೂಲನ :

ಹಳೆಯ ಸಂಪ್ರದಾಯಗಳ ಬಗ್ಗೆ ಈಗ ನೋಡಿದರೆ ಅವುಗಳ ನಿರ್ಮೂಲನದ ಲಕ್ಷಣಗಳನ್ನು ಖಂಡಿತವಾಗಿ ಕಾಣಬಹುದು. ಬಾಯಿಮಾತಿನ ಹಳೆಯ ಸಂಪ್ರದಾಯಗಳ ವಾಹಕರ ವಯಸ್ಸು ಸಾಮಾನ್ಯವಾಗಿ ೪೫ ವರ್ಷಕ್ಕಿಂತ ಹೆಚ್ಚಾಗಿರುತ್ತದೆ ಎಂಬುದು ಸ್ಪಷ್ಟ. ಇದರ ಅರ್ಥವೇನೆಂದರೆ ಈ ಸಂಪ್ರದಾಯಕ್ಕೆ ಹೊಸದಾಗಿ ಸೇರುವ ಸಂಖ್ಯೆಯು ಬಹಳ ಕಡಿಮೆ. ಆದರೂ ಇದನ್ನು ಸಾಮಾನ್ಯೀಕರಣ ಗೊಳಿಸಲಾಗುವುದಿಲ್ಲ. ಏಕೆಂದರೆ ಎಲ್ಲಾ ಬೇರೆಬೇರೆ ಹಳೆಯ ಸಂಪ್ರದಾಯಗಳು. ಉದಾಹರಣೆಗೆ ಸೂಲಗಿತ್ತಿಯರ ಸಂಪ್ರದಾಯವು ಈಗಲೂ ಸಾಕಷ್ಟು ತೀವ್ರವಾಗಿದೆ. ಆದರೆ ಹೆರಿಗೆ ಆಸ್ಪತ್ರೆಗಳ ರೂಪದಲ್ಲಿ ಸಾಂಸ್ಥಿಕ ಹಸ್ತಕ್ಷೇಪದಿಂದ ಕೆಲವು ರಾಜ್ಯಗಳಲ್ಲಿ ಈ ಸಂಪ್ರದಾಯಕ್ಕೆ ಧಕ್ಕೆ ಬಂದಿದೆ.

ಲಿಖಿತ ಸಂಪ್ರದಾಯದಲ್ಲಿ ಗುರುಶಿಷ್ಯ ಸಂಪ್ರದಾಯವು ಈಗ ಬಹಳ ಕೆಳಮಟ್ಟದಲ್ಲಿದೆ. ಏಕೆಂದರೆ ಸಾಂಸ್ಥಿಕ ತರಬೇತಿಗೆ ಕಾನೂನು ಪಾಲನೆ ಅಗತ್ಯವಾಗಿದೆ. ಇದು ಸಾಂಪ್ರದಾಯಿಕ ಕಲಿಕೆ ಪದ್ಧತಿಯನ್ನು ಕಾನೂನು ಬಾಹಿರ ಎಂದು ಮಾಡಿದೆ. ಈಗ ಕೆಲವೇ ವಿದ್ಯಾರ್ಥಿಗಳು ತಮ್ಮ ಸಾಂಸ್ಥಿಕ ಕಲಿಕೆಯನ್ನು ಹೆಚ್ಚಿಸಿಕೊಳ್ಳುವುದಕ್ಕೆ ಅವರ ಪದವಿಪೂರ್ವ ಅಧ್ಯಯನ ಕಾಲದಲ್ಲಿ ಅಥವಾ ತಮ್ಮ ಪದವಿಯನ್ನು ಪಡೆದ ಮೇಲೆ, ವೃತ್ತಿಗೆ ತೊಡಗುವುದಕ್ಕೆ ಮುಂಚೆ ಕಲಿಯುತ್ತಾರೆ.

ಹಳೆ ಸಂಪ್ರದಾಯದ ಸಮರ್ಥ ವಾಹಕರ ಸಂಖ್ಯೆಯು ಕಡಿಮೆಯಾಗುತ್ತಿದ್ದರೆ ಲಿಖಿತ ಸಂಪ್ರದಾಯದ ವಾಹಕರ ಸಂಖ್ಯೆಯೂ ಹೆಚ್ಚುತ್ತಿರಬಹುದು. (ಲೈಸೆನ್ಸ್ ಪಡೆದ ವೈದ್ಯರ ಈಗಿನ ಸಂಖ್ಯೆಯು ಸುಮಾರು ೬,೦೦,೦೦೦) ಇದಕ್ಕೆ ಕಾರಣವೆಂದರೆ ಸಾಂಪ್ರದಾಯಿಕ ವೈದ್ಯದ, ಸರ್ಕಾರ ಮಾನ್ಯ ಮಾಡಿದ ಕಾಲೇಜುಗಳು ಹೆಚ್ಚುತ್ತಿರುವುದು (೩೦೦ಕ್ಕೂ ಜಾಸ್ತಿ). ಸಾಂಸ್ಥೀಕರಿಸಿದ ಶಿಕ್ಷಣದ ಮಟ್ಟವು ವ್ಯಾಕುಲತೆಗೆ ಕಾರಣವಾಗಿದೆ.

ಆಧುನಿಕ ಭಾರತದ ಸಮಾಜದಿಂದ ಸಾಂಪ್ರದಾಯಿಕ ವೈದ್ಯ ಪದ್ಧತಿಯನ್ನು ಒಪ್ಪಿಕೊಳ್ಳುವ ಬಗೆಗಿನ ದೃಶ್ಯವು ಕುತೂಹಲಕರವಾಗಿದೆ. ಒಂದು ಶತಮಾನದ ಹಿಂದೆ ಇದ್ದ ದೃಶ್ಯಕ್ಕೆ ಹೋಲಿಸಿದರೆ ಸಾಂಪ್ರದಾಯಿಕ ಪದ್ಧತಿಗಳಲ್ಲಿ ಸಮಾಜದ ನಂಬಿಗೆಯು ಖಂಡಿತವಾಗಿ ಇಳಿಮುಖವಾಗುತ್ತಿರುವುದನ್ನು ಕಾಣಬಹುದು. ಗ್ರಾಮೀಣ ಪ್ರದೇಶಗಳಲ್ಲಿ ಸ್ಥಳೀಯ ಆರೋಗ್ಯ ಪದ್ಧತಿಯ ಸಾಮಾನ್ಯ ಅವಲಂಬನೆಯು ಹೆಚ್ಚಾಗಿದ್ದರೂ ಕಳೆದ ೩೦ ವರ್ಷಗಳಲ್ಲಿ ನಗರ ಪ್ರದೇಶಗಳಲ್ಲಿ ಮಧ್ಯಮ ಮತ್ತು ಶ್ರೀಮಂತ ವರ್ಗಗಳಲ್ಲಿ ನಿರ್ಮೂಲನವು ತೀವ್ರವಾಗಿದೆ. ಸ್ಥಳೀಯ ಆರೋಗ್ಯ ಸಂಪ್ರದಾಯಗಳ ಉಪಯೋಗದಲ್ಲಿ ಕಳೆದ ೫೦ ವರ್ಷಗಳಿಂದ ಇಳಿಮುಖವಾಗುತ್ತಿದ್ದಂತೆ ಸಾಂಪ್ರದಾಯಿಕ ಔಷಧಿಗಳು ಈಗ ಮೇಲೆ ಬರುತ್ತಿವೆ. ಸಾಮಾಜಿಕ ದೃಷ್ಟಿಕೋನದಿಂದ ಈ ಪ್ರವೃತ್ತಿಗಳ ಆಳವಾದ ವಿಶ್ಲೇಷಣೆಯು ಈ ಪ್ರಬಂಧದ ವ್ಯಾಪ್ತಿಗೆ ಮಿರಿದುದು. ಸಾಮಾನ್ಯ ವಿಶ್ಲೇಷಣೆಯನ್ನು ಈ ಕೆಳಗೆ ಕೊಡಲಾಗಿದೆ.

## ೭. ಸ್ಥಳೀಯ ಆರೋಗ್ಯ ಸಂಪ್ರದಾಯಗಳ ನಿರ್ಮೂಲನೆಗೆ ಕಾರಣಗಳು :

ಈ ಸಾಮಾನ್ಯ ಇಳಿಮುಖಕ್ಕೆ ಕಾರಣವೇನು? ಸಾಂಪ್ರದಾಯಿಕ ಜ್ಞಾನವು ಈಗ ಅಸಂಬದ್ಧವಾದುದೆ? ಸಾಂಪ್ರದಾಯಿಕವಾಗಿ ಆರೋಗ್ಯ ರಕ್ಷಣೆಗೆ ಉಪಯೋಗಿಸಲಾಗುತ್ತಿದ್ದ ಸಸ್ಯಗಳು ಮತ್ತು ಇತರ ಸ್ವಾಭಾವಿಕ ಸಂಪನ್ಮೂಲಗಳು ಈಗ ತಮ್ಮ ಗುಣಪಡಿಸುವ ಲಕ್ಷಣಗಳನ್ನು ಕಳೆದುಕೊಂಡಿವೆಯೇ? ನಿಜವಾಗಿ ಇದು ಕಾರಣವಲ್ಲ. ಏಕೆಂದರೆ ಈಗ ಸ್ವಾಭಾವಿಕ ಸಂಪನ್ಮೂಲಗಳು ಬಹಳ ಸಮರ್ಥವಾದ ಔಷಧಿಗಳ ಆಧಾರ ಎಂದು ಗುರುತಿಸಲಾಗಿದೆ.

ಹಾಗಾದರೆ ಸ್ವಾಭಾವಿಕ ಸಂಪನ್ಮೂಲಗಳನ್ನು ಸಾಂಪ್ರದಾಯಿಕವಾಗಿ ದ್ರವರೂಪದಲ್ಲಿ ಅಥವಾ ಒಣಗಿದ ಮೂಲಿಕೆಗಳ ಪುಡಿಯ ರೂಪದಲ್ಲಿ ಅಥವಾ ವೈದ್ಯಕೀಯ ವೈನ್ ರೂಪದಲ್ಲಿ, ವೈದ್ಯಕೀಯ ತೈಲಗಳ ರೂಪದಲ್ಲಿ ಉಪಯೋಗಿಸಲಾಗುತ್ತಿದ್ದು, ಅವುಗಳು ಪ್ರತಿಕ್ರಿಯಿಸಲು ನಿಧಾನ ಮತ್ತು ಆಧುನಿಕ ಯುಗಗಳಲ್ಲಿ ಪ್ರತಿಯೊಬ್ಬರಿಗೂ ಚುಚ್ಚುಮದ್ದಿನಂತಹ ಶೀಘ್ರವಾಗಿ ಪ್ರತಿಕ್ರಿಯಿಸುವ ಔಷಧಗಳು ಬೇಕಾಗಿರುತ್ತವೆ. ನಿರ್ಮೂಲನದ ಕಾರಣದ ಬಗ್ಗೆ ಈ ಊಹೆಯು ನಿಜವೆಂದು ಕಾಣುವುದಿಲ್ಲ. ಏಕೆಂದರೆ ಮೇಲಿನ ಔಷಧ ರೂಪಗಳ ವೈದ್ಯಶಾಸ್ತ್ರದಲ್ಲಿ ಹಾಗೇನೂ ಇಲ್ಲ. ಅವು ಸಾಕಷ್ಟು ಬೇಗನೆ ಪ್ರತಿಕ್ರಿಯಿಸುವುದಿಲ್ಲ ಅಥವಾ ಸಾಂಪ್ರದಾಯಿಕ ಔಷಧದಲ್ಲಿ ಜೀವಿ ದೊರಕುವಿಕೆಯು ನಿಧಾನ ಎಂದು ಸಲಹೆ ಮಾಡುತ್ತದೆ. ಆದರೂ ಅನೆಸ್ತೀಷಿಯಾದಂತಹ ಪರಿಸ್ಥಿತಿಗಳಲ್ಲಿ ಸ್ವಾಭಾವಿಕ ರೂಪಗಳು ಪರಿಣಾಮಕಾರಿಯಲ್ಲ ಎಂಬುದು ನಿಜ.

ಆಧುನಿಕ ಯುಗದಲ್ಲಿ, ಜಂಜಾಟದ ಔಷಧ ಸೇವಿಸಲು ಜನರಿಗೆ ಸಮಯವಿರುವುದಿಲ್ಲ. ಉದಾಹರಣೆಗೆ ಮೂಲಿಕೆಗಳು ದ್ರವರೂಪದಲ್ಲಿ ಸಾಂಪ್ರದಾಯಿಕ ಚಿಕಿತ್ಸಕನಿಂದ ಕೊಡಲಾಗುತ್ತದೆ. ಆದರೂ ತ್ವರಿತಗತಿಯ ಯೂರೋಪು, ಅಮೇರಿಕಾ ಮತ್ತು ಪಾಶ್ಚಿಮಾತ್ಯ ಪ್ರಪಂಚದಲ್ಲಿ ಹರ್ಬಲ್ ಟೀಗಳು ಪ್ರಸಿದ್ಧಿಗೆ ಬರುತ್ತಿವೆ. ಅದನ್ನು ಸಾವಿರಾರು ಚೈನಾ ಜನರು ಅವರ ಬಹಳ ಆಧುನಿಕ ಕಾರ್ಯಕ್ರಮಗಳಿದ್ದರೂ ಯಾವಾಗಲೂ ಉಪಯೋಗಿಸುತ್ತಾರೆ.

ಯುವಸಂತತಿಯ ರೋಗಿಗಳು ಸ್ವಾಭಾವಿಕ ರುಚಿಗಳನ್ನು ಸ್ವೀಕರಿಸಲು ತಿಳಿದಿಲ್ಲ. ಅದರಲ್ಲಿಯೂ ವಿಶೇಷವಾಗಿ ಮೂಲಿಕೆಗಳು ಕಹಿಯಾಗಿದ್ದರೆ ಅಥವಾ ಒಗಚಾಗಿದ್ದರೆ ಅಥವಾ ಮಣ್ಣಿನ ವಾಸನೆಯುಳ್ಳದ್ದಾಗಿದ್ದರೆ ಅವರಿಗೆ ಇಷ್ಟವಾಗುವುದಿಲ್ಲ. ಸ್ವಾಭಾವಿಕ ಸುವಾಸನೆಯು ವೈದ್ಯಕೀಯ ತೈಲಗಳಲ್ಲಿ ಸಾಮಾನ್ಯ. ಉದಾಹರಣೆಗೆ ಸಿಡಾಕಾರ್ಡಿಫೋಲಿಯಾದಿಂದ ಪರಿಷ್ಕೃತವಾದ ಎಳ್ಳೆಣ್ಣೆಯು ಒಂದು ವಿಧವಾದ

ಮಣ್ಣಿನ ವಾಸನೆಯುಳ್ಳದ್ದಾಗಿರುತ್ತದೆ ಮತ್ತು ಈ ವಾಸನೆಯು ಆಧುನಿಕ ಸುಗಂಧ ವಸ್ತುಗಳಿಗಿಂತ ಬಹಳ ಭಿನ್ನವಾಗಿರುತ್ತವೆ. ಆದರೂ, ನಿರ್ಮೂಲನಕ್ಕೆ ಇದು ಕಾರಣವಾದರೆ ಇದನ್ನು ಅನುಕೂಲವಾದ ಡೋಸೇಜ್ ರೂಪಗಳು ಮತ್ತು ರುಚಿಗಳು, ವಾಸನೆಗಳನ್ನು ಮುಚ್ಚಿ ಸರಿಪಡಿಸಬಹುದು.

ಪರಿಸ್ಥಿತಿಯ ಸಾಮಾನ್ಯ ಪರಾಮರ್ಶೆಯು ಸಲಹೆ ಮಾಡುವುದೇನೆಂದರೆ ರೂಪ ಮತ್ತು ರುಚಿಗಳು ಮುಂತಾದವುಗಳಿಗೆ ಸಂಬಂಧಿಸಿದಂತೆ ಗ್ರಾಹಕನ ಆದ್ಯತೆಗಳು ಮತ್ತು ಪಕ್ಷಪಾತಗಳಿಂದಲ್ಲ. ಸಾಂಪ್ರದಾಯಿಕ ಔಷಧಿಗೆ ಸ್ವಲ್ಪಮಟ್ಟಿನ ಗೌರವಸ್ಥಾನ ಕಡಿಮೆಯಾಗಿರುವುದು ಹೆಚ್ಚು ಸಂಭವನೀಯ ಕಾರಣವೆಂದು ತಿಳಿಯಬಹುದು. ಈ ನಷ್ಟವು ಏಕಾಯಿತೆಂದರೆ ಸಾಂಪ್ರದಾಯಿಕ ಚಿಕಿತ್ಸೆಗಳು ಶಾಸ್ತ್ರದ ಒಂದು ಭಾಗವೆಂಬ ಭಾವನೆಯು ಉಂಟಾಗಿರುವುದರಿಂದ ಆಗಿದೆ. ಯಾರಾದರೂ ಆಧುನಿಕವಾಗಿರಬೇಕಾದರೆ ಅವನು ಸಾಂಪ್ರದಾಯಿಕ ಮಾರ್ಗಗಳನ್ನು ತ್ಯಜಿಸಬೇಕು. ನಿರ್ಮೂಲನವು ಪ್ರಮುಖ ಸಾಂಸ್ಕೃತಿಕ ಸಿದ್ಧಾಂತದ್ದಾಗಿರಬಹುದು. ಅಲ್ಲಿ ಸಮುದಾಯಗಳು ತಮ್ಮ ಆತ್ಮಗೌರವವನ್ನು ಕಳೆದುಕೊಂಡಿವೆ (ತಮ್ಮದೇ ಆದ ಸಂಸ್ಕೃತಿ ಮತ್ತು ಸಂಪ್ರದಾಯಕ್ಕೆ). ಆದರೆ ಇದು ಹೇಗೆ ಅಯಿತು? ಇದು ಸಂಪ್ರದಾಯದೊಂದಿಗೆ ಆದ 'ಕೆಟ್ಟ ಅನುಭವ'ದಿಂದಾಯಿತೆ? ಅಂತಹ ಊಹೆಗಳನ್ನು ಬೆಂಬಲಿಸಲು ಯಾವುದೇ ಆಧಾರವಿಲ್ಲ.

ಸಮಕಾಲೀನ ಇತಿಹಾಸದಲ್ಲಿ ಸಂಸ್ಕೃತಿ ನಿರ್ಮೂಲನವು ವಿದೇಶಿ ಆಡಳಿತ ಮತ್ತು ಮಾರುಕಟ್ಟೆ ಶಕ್ತಿಗಳಿಂದಾಗಿವೆ ಎಂಬುದಕ್ಕೆ ಸಾಕ್ಷ್ಯಾಧಾರಗಳಿವೆ. ವಸಾಹತು ಕಾಲದಲ್ಲಿ ಸ್ವದೇಶಿ ಸಂಸ್ಕೃತಿ ಮತ್ತು ಸಂಪ್ರದಾಯಗಳನ್ನು ತುಳಿಯಲು ಒಂದು ರಾಜಕೀಯ ಅಗತ್ಯವಿತ್ತು. ಅದರಿಂದ ಅವರ ವಿತರಣೆ ವ್ಯವಸ್ಥೆಗಳು ಒಡೆದುಹೋದವು. ಇದರಿಂದ ಆಳಿಸಿಕೊಳ್ಳುತ್ತಿರುವವರನ್ನು ತುಳಿಯಬೇಕೆಂದಿರುವ ಆಳುವವರ ನೈತಿಕ ಅಧಃಪತನವು ಮುಖ್ಯಕಾರಣವಾಗಿದೆ.

## ೮. ಸ್ಥಳೀಯ ಆರೋಗ್ಯ ಸಂಪ್ರದಾಯಗಳನ್ನು ನಿರ್ಮೂಲ ಮಾಡಲು ಆಧುನಿಕ ವಿಜ್ಞಾನದ ಉಪೇಕ್ಷಿತ ಪಾತ್ರ :

ಪ್ರಭಾವಯುತವಾದ ವಿಜ್ಞಾನ ಜ್ಞಾನ ಪದ್ಧತಿಯನ್ನು ಸಾಂಪ್ರದಾಯಿಕ ಪದ್ಧತಿಯನ್ನು ಅದುಮಲು ಪರೋಕ್ಷವಾಗಿ ಉಪಯೋಗಿಸಲಾಯಿತು. ಉದಾಹರಣೆಗೆ, ಸಾಂಪ್ರದಾಯಿಕ ಜ್ಞಾನದಲ್ಲಿ ಆಧುನಿಕ ವಿಜ್ಞಾನ ಜ್ಞಾನದ ಅರ್ಥದಲ್ಲಿ ಸಿದ್ಧವಾದ ವಿವರಣೆಗಳಿಲ್ಲ ಎಂದು ತೋರಿಸಲಾಗಿದೆ. ಅದರ ಆಸ್ತಿಭಾರಗಳು, ಕಲ್ಪನೆಗಳು, ವರ್ಗಗಳು, ತತ್ವಗಳು ಮತ್ತು ತರ್ಕಗಳು ವಿಜ್ಞಾನಕ್ಕೆ ಅರ್ಥವಾಗುವಂತಿಲ್ಲ. ಹಾಗಾಗಿ ಇದನ್ನು ಅವೈಜ್ಞಾನಿಕ ಎಂದು ನಂಬಲಾಗದ್ದೆಂದು ಘೋಷಿಸಲಾಗಿದೆ. ಇದೇ ಆಧುನಿಕ ಕಾಲದಲ್ಲಿ ಬುದ್ಧಿವಂತ ವರ್ಗದಿಂದ ನಿರ್ಲಕ್ಷ್ಯದ ಕಾರಣ ಆದರೆ ಇದನ್ನು ಹೇಗೆ ಸಮರ್ಥಿಸಿಕೊಳ್ಳಬಹುದು.

ಸ್ಥಳೀಯ ಆರೋಗ್ಯ ಸಂಪ್ರದಾಯದ ಜ್ಞಾನದ ಸ್ವಭಾವ ಮತ್ತು ತಿಳಿದುಕೊಳ್ಳುವ ಮಾರ್ಗಗಳು ನಿಸ್ಸಂದೇಹವಾಗಿ ಪಾಶ್ಚಿಮಾತ್ಯ ಜ್ಞಾನಪದ್ಧತಿಗಳಿಗಿಂತ ಬೇರೆಯಾಗಿದೆ. ಇದೇನು ಆಶ್ಚರ್ಯದ ವಿಷಯವಲ್ಲ. ಏಕೆಂದರೆ ಈ ಜ್ಞಾನ ಪದ್ಧತಿಗಳು ಬೇರೆಯೇ ಆದ ಸಂಸ್ಕೃತಿಯಾದ ಪಾಶ್ಚಿಮಾತ್ಯ ಸಂಸ್ಕೃತಿಯಲ್ಲಿ ಅಭಿವೃದ್ಧಿಯಾದವು. ಜ್ಞಾನ ಪದ್ಧತಿಗಳ ಆಸ್ತಿಭಾರ ಮಟ್ಟದಿಂದಲೇ ಇದು ಸ್ಪಷ್ಟವಾಗಿದೆ. ಪಾಶ್ಚಿಮಾತ್ಯ ವೈಜ್ಞಾನಿಕ ಜ್ಞಾನವು ಪ್ರಕೃತಿಯ ಅನುಭವದಿಂದ ಆಧರಿತವಾಗಿದ್ದರೆ ಪಂಚಮಹಾಭೂತ ಸಿದ್ಧಾಂತವು ಬಾಯಿಮಾತಿನ ಮತ್ತು ಲಿಖಿತ ಭಾರತೀಯ ವೈದ್ಯಕೀಯ ಪದ್ಧತಿಯಲ್ಲಿ ಅಸ್ತಿಭಾರದ ಪ್ರಪಂಚವಾಗಿವೆ. ಈ ಸಿದ್ಧಾಂತವು ಪ್ರಕೃತಿಯನ್ನು ಹೇಗೆ ನೋಡುತ್ತದೆಯೆಂದರೆ ಐದು ಸ್ಥಿತಿಗಳ ರೂಪದಲ್ಲಿ ಅಂದರೆ ಆಕಾಶ, ಗಾಳಿ, ಬೆಂಕಿ, ನೀರು ಮತ್ತು ಭೂಮಿ ಎಂಬುದಾಗಿ ನೋಡುತ್ತದೆ.

ಈ ಐದು ಸ್ಥಿತಿಗಳು ಒಂದಕ್ಕೊಂದು ಸಂಬಂಧಿಸಿದಂತೆ ಕಾಣುತ್ತದೆ ಮತ್ತು ಒಂದು ಸ್ಥಿತಿಯು ಇನ್ನೊಂದರ ರೂಪಾಂತರ ಮಾತ್ರ. ಎಲ್ಲಾ ವಸ್ತು ರೂಪಗಳು ಜೀವಿಯಾಗಿರಲಿ ಅಥವಾ ನಿರ್ಜೀವಿಯಾಗಿರಲಿ ಅವು ಐದು ಸ್ಥಿತಿಗಳಿಂದಾಗಿವೆ ಎಂದು ನೋಡಲಾಗಿದೆ. ಅದೂ ಒಂದು ಪ್ರಮಾಣದಲ್ಲಿ ಆಗಿರುತ್ತದೆ. ಆಕಾಶ, ಗಾಳಿ, ಬೆಂಕಿ, ನೀರು ಮತ್ತು ಭೂಮಿಯ ಒಂದು ನಿರ್ದಿಷ್ಟ ಜೀವಿ ಅಥವಾ ನಿರ್ಜೀವ ರೂಪದಲ್ಲಿ ಒಂದು ಪ್ರಮಾಣದಲ್ಲಿ ಅದರ ರಚನೆ ಮತ್ತು ಲಕ್ಷಣಗಳನ್ನು ನಿರ್ಧರಿಸುತ್ತದೆ.

ಈ ಕೆಳಗಿನ ಚಿತ್ರವು ವಿಜ್ಞಾನ (ಪಾಶ್ಚಿಮಾತ್ಯ ಜ್ಞಾನ ಪದ್ಧತಿ) ಮತ್ತು ಶಾಸ್ತ್ರ (ಭಾರತೀಯ ಜ್ಞಾನ ಪದ್ಧತಿಯ) ನಡುವೆ ಎಪಿಸ್ಟೆಮಾಲಾಜಿಕಲ್ ವ್ಯತ್ಯಾಸಗಳನ್ನು ತೋರಿಸುತ್ತದೆ.




ಪ್ರಕೃತಿಯ ಯಾವುದಾದರೊಂದು ಸಂಸ್ಕೃತಿಯ ಅಭಿಪ್ರಾಯದ ಅರ್ಥದಲ್ಲಿ ಪ್ರಪಂಚಕ್ಕೆ ನೋಡುವುದಕ್ಕೆ ಮತ್ತು ವಿವರಿಸುವುದಕ್ಕೆ ಒತ್ತಾಯಿಸುವುದು ಸಾಂಸ್ಕೃತಿಕವಾಗಿ ಸೊಕ್ಕು ಮತ್ತು ನಿಷ್ಕಪಟವಾಗಿದೆ. ಇದು ಸ್ಪಷ್ಟವಾಗಿ ನರವಂಶವಿಜ್ಞಾನ ಕೇಂದ್ರೀಕೃತ ಅಭಿಪ್ರಾಯವಾಗುತ್ತದೆ. ಒಂದು ಜ್ಞಾನ ಪದ್ಧತಿಯು ಇನ್ನೊಂದಕ್ಕಿಂತ ಉತ್ತಮ ಅಥವಾ ಕೀಳು ಎಂದು ಮೌಲ್ಯಮಾಪನ ಮಾಡುವುದಕ್ಕೆ ಅಥವಾ ತೀರ್ಮಾನಿಸುವುದಕ್ಕೆ ಕೂಡ ಯಾವುದೇ ಆಧಾರವಿಲ್ಲ. ಇಲ್ಲಿ ಗುರುತಿಸಬೇಕಾದ ಅಂಶವೆಂದರೆ ವಿಶ್ವ ಅಭಿಪ್ರಾಯಗಳು ಮತ್ತು ಪರಿಣಾಮವಾಗಿ ಜ್ಞಾನ ಪದ್ಧತಿಗಳು ಬೇರೆಬೇರೆ ಸಂಸ್ಕೃತಿಗಳಲ್ಲಿ ಅಭಿವೃದ್ಧಿಯಾಗಿದ್ದು, ಅವು ಬೇರೆ ಬೇರೆಯಾಗಿವೆ. ಪ್ರಕೃತಿಯ ಕೆಲವು ಅಂಶಗಳನ್ನು ದಕ್ಷವಾಗಿ ವಿವರಿಸಲು ರೂಪಿಸಲಾಗಿದೆ ಮತ್ತು ಇನ್ನು ಕೆಲವು ಅಂಶಗಳಲ್ಲಿ ಕೊರತೆಯುಳ್ಳದ್ದಾಗಿದೆ. ಈ ಸಂದಿಗ್ಧ

ಸ್ಥಿತಿಯಲ್ಲಿ ಅವರ ದೃಷ್ಟಿಕೋನದಲ್ಲಿ ಸಮತೋಲನವಾಗಿರುವ ಜ್ಞಾನ ಪದ್ಧತಿಗಳ ಅಡ್ಡ-ಸಾಂಸ್ಕೃತಿಕ ತಿಳಿವಳಿಕೆಯು ಬಹಳ ಕಡಿಮೆ ಇದೆ. ವಿವಿಧ ಜ್ಞಾನ ಪದ್ಧತಿಗಳ 'ಅಸ್ತಿಭಾರಗಳ' ತುಲನಾತ್ಮಕ ಅಧ್ಯಯನ ಮಾಡಲು ಯಾವುದೇ ಮೀಸಲಾದ ಸಂಸ್ಥೆಗಳಿಲ್ಲ.

ಆದ್ದರಿಂದ ಸ್ಥಳೀಯ ಆರೋಗ್ಯ ಸಂಪ್ರದಾಯಗಳನ್ನು ತಿಳಿಸುವ ಜ್ಞಾನಪದ್ಧತಿಗಳನ್ನು ಅಧ್ಯಯನ ಮಾಡಿದ ಮತ್ತು ಅವುಗಳ ದೃಷ್ಟಿಯಲ್ಲಿಯೇ ತಿಳಿದುಕೊಳ್ಳುವುದು ಅಗತ್ಯ. ಆದರೆ ಪಾಶ್ಚಿಮಾತ್ಯ ಜ್ಞಾನ ಪದ್ಧತಿಗಳ ತತ್ವಗಳು, ಕಲ್ಪನೆಗಳು ಮತ್ತು ವರ್ಗಗಳಿಗೆ ಅವುಗಳು ಹೊಂದಿಕೊಳ್ಳದಿದ್ದರೆ ಅವು ಕೊರತೆಯುಳ್ಳವೆಂದು ಒತ್ತಾಯಿಸಬಾರದು (ಅಜ್ಞಾನಿಗಳು ಮಾಡುವಂತೆ).

## ೯. ಮಾರುಕಟ್ಟೆ ಶಕ್ತಿಗಳ ಪಾತ್ರ ಮತ್ತು ಸ್ಥಳೀಯ ಆರೋಗ್ಯ ಸಂಪ್ರದಾಯಗಳು ಎದುರಿಸುತ್ತಿರುವ ಸವಾಲುಗಳು :

ವಸಾಹತು ಕಾಲದ ನಂತರದಲ್ಲಿ ಮಾರುಕಟ್ಟೆ ಶಕ್ತಿಗಳು ಉತ್ಪಾದನೆ ಮತ್ತು ಹಂಚಿಕೆಯನ್ನು ಸ್ಪಷ್ಟಪಡಿಸಿವೆ ಮತ್ತು ಸಾಂಪ್ರದಾಯಿಕ ಆರೋಗ್ಯ ರಕ್ಷಣೆಯನ್ನು ಬದಲಾಯಿಸಲು ಪರಿಣಾಮಕಾರಿ ಶಿಕ್ಷಣ, ಸಂಶೋಧನೆ ಮತ್ತು ನೀತಿಪೂರಕ ಸೌಲಭ್ಯಗಳನ್ನು ಒದಗಿಸಿವೆ. ಪಾಶ್ಚಿಮಾತ್ಯ ಜೀವಿ-ಔಷಧಿಗಳ ಮೇಲೆ ಆಧರಿಸಿ ಉತ್ಪನ್ನಗಳ ಮತ್ತು ಸೇವೆಗಳ ಅನುಕೂಲಕರ ಬಿಂಬವನ್ನು ಪ್ರತಿಬಿಂಬಿಸಿವೆ. ಸಾಂಪ್ರದಾಯಿಕ ವೈದ್ಯ ಪದ್ದತಿಗಳು ಪ್ರಾಯಶಃ ಮಾರುಕಟ್ಟೆ ಆರ್ಥಿಕತೆಯಲ್ಲಿ ಶಿಕ್ಷಣ ಮತ್ತು ಆರ್ಥಿಕ ಅಂಶಗಳೆರಡೂ ಬೆಳೆಯಲು ಪೂರಕ ಸೌಲಭ್ಯಗಳ ಕೊರತೆ ಇರಬಹುದು.

ವಾಸ್ತವವಾದ ಮಟ್ಟದಲ್ಲಿ ಸ್ಥಳೀಯ ಆರೋಗ್ಯ ಸಂಪ್ರದಾಯಗಳ ನಿರ್ಮೂಲನವು ಸ್ವದೇಶಿ ಜ್ಞಾನಪದ್ಧತಿಯ ಸ್ವಭಾವದ ಬಗ್ಗೆ ನೀತಿ ವಲಯಗಳಲ್ಲಿ ಪ್ರಮಾಣ ಪ್ರಮೇಯ ವಿಚಾರದ ಗುಣಗ್ರಹಣ ಮಾಡುವುದರ ಕೊರತೆಯಿಂದಾಗಿರಬಹುದು. ಕಾರ್ಯತಃ ಮಟ್ಟದಲ್ಲಿ ಜ್ಞಾನ ಪ್ರಸರಣ ಮತ್ತು ವೈದ್ಯಕೀಯ ಸೇವೆಗಳ ಸಾಂಪ್ರದಾಯಿಕ ಪದ್ಧತಿಯು ಕುಸಿದುದರಿಂದ ಮತ್ತು ಈ ಪದ್ಧತಿಗೆ ಆರ್ಥಿಕ, ರಾಜಕೀಯ ಬೆಂಬಲವನ್ನು ಹಿಂತೆಗೆದುಕೊಂಡದ್ದು ಕಾರಣವಾಗಿರಬಹುದು. ನಗರ ಮಾರುಕಟ್ಟೆ ಆರ್ಥಿಕತೆಯಲ್ಲಿ ಸ್ಥಳೀಯ ಆರೋಗ್ಯ ಸಂಪ್ರದಾಯಗಳು ಉಳಿದು ಪ್ರವರ್ಧಮಾನಕ್ಕೆ ಬರಬೇಕಾದರೆ ಅವುಗಳನ್ನು ಗುರುತಿಸಬೇಕಾದ ಅಗತ್ಯವಿದೆ. ಆದರೆ ಗ್ರಾಮೀಣ ಭಾರತದಲ್ಲಿ ಗ್ರಾಮೀಣ ಸಂಪ್ರದಾಯಗಳು ಸಮುದಾಯದಲ್ಲಿ ಆಳವಾಗಿ ಬೇರೂರಿದ್ದು, ಸ್ವಾಯತ್ತವಾಗಿದ್ದು ಮತ್ತು ವಿಕೇಂದ್ರೀಕೃತ ಸ್ವಭಾವದ್ದಾಗಿದ್ದು ಮಾರುಕಟ್ಟೆ ಪದ್ಧತಿಯ ಹೊರಗಿರುವ ಇವನ್ನು ಬಲಪಡಿಸಬೇಕಾದ ಹಾಗೂ ಪುನಶ್ಚೇತನಗೊಳಿಸುವ ಅಗತ್ಯವಿದೆ. ಇದಕ್ಕೆ ಬಲವಾದ ಮತ್ತು ಸಕ್ರಿಯ ರಾಜಕೀಯ ನೀತಿಯ ಬೆಂಬಲವಿರಬೇಕು. ಸಮಕಾಲೀನ ಅಗತ್ಯಗಳ ಸೇವೆ ಮಾಡಲು ಸ್ಥಳೀಯ ಆರೋಗ್ಯ ಸಂಪ್ರದಾಯಗಳನ್ನು ಪುನರ್ ವ್ಯವಸ್ಥೆಗೊಳಿಸುವ ದೃಷ್ಟಿಕೋನವನ್ನು ಈ ಪ್ರಬಂಧವು ವಿವರಿಸಲು ಪ್ರಯತ್ನಿಸಿಲ್ಲ. ಸಮಕಾಲೀನ ಸಮಾಜದಲ್ಲಿ ಸ್ಥಳೀಯ ಆರೋಗ್ಯ ಸಂಪ್ರದಾಯಗಳ ವಿಕಸನ ಮತ್ತು ಅಭಿವೃದ್ಧಿಯನ್ನು ಪ್ರೋತ್ಸಾಹಿಸಬೇಕಾದರೆ ಈ ವಿಷಯಕ್ಕೆ 'ನಿಶಾನೆ' ತೋರಿಸುವುದು ಅತಿಮುಖ್ಯ. ಸ್ಥಳೀಯ ಆರೋಗ್ಯ ಸಂಪ್ರದಾಯಗಳ ಮುಂದಿರುವ ಸವಾಲೆಂದರೆ ಬದಲಾದ ಮತ್ತು ಬದಲಾಗುತ್ತಿರುವ ಸಮಾಜದ ಮೂಲಭೂತ ಅಸ್ತಿಭಾರಗಳು ಮತ್ತು ಅವುಗಳ ಸ್ವಾವಲಂಬನೆಯ ಸ್ವಭಾವಕ್ಕೆ ತೊಂದರೆಯುಂಟಾಗದಂತೆ ಆ ಸಮಾಜದ ಆರೋಗ್ಯ, ಅಗತ್ಯಗಳ ಸೇವೆ ಮಾಡಲು ಮಾರ್ಗಗಳನ್ನು ಕಂಡುಹಿಡಿಯುವುದಾಗಿದೆ.

●




# ಯಶಸ್ವಿನಿ ಯೋಜನೆ

ಎ. ರಾಮಸ್ವಾಮಿ

## ಮುನ್ನುಡಿ :

ಯಾವುದೇ ನಾಗರಿಕ ಸಮಾಜಕ್ಕೆ ಇರುವ ಅತಿ ದೊಡ್ಡ ಸವಾಲೆಂದರೆ ಅವಿದ್ಯೆ, ಸಾಮಾಜಿಕ ಅಪಹರಣದೊಂದಿಗೆ ಕೈ ಜೋಡಿಸಿರುವ ಆರ್ಥಿಕ ಅಪಹರಣ. ನಮ್ಮ ಮಧ್ಯದಿಂದ ಮಾನವ ಶೋಷಣೆಯನ್ನು ಹೊಡೆದಟ್ಟಲು ಸಾಮುದಾಯಿಕ ಯುದ್ಧ ಮಾಡುವುದನ್ನು ತಪ್ಪಿಸಿಕೊಳ್ಳಲಾಗುವುದಿಲ್ಲ. ಆದರಿಂದಾಗಿ ಸಹಕಾರ ಅಭಿವೃದ್ಧಿ ಕರ್ತೃತ್ವ ಶಕ್ತಿಯ ಮೂಲಕ ಶೋಷಿತರ ನಡುವೆ ಮಾನವ ಬಂಡವಾಳ ರಚಿಸುವುದಕ್ಕಿಂತ ಬೇರೆ ಯಾವುದೇ ಇತರ ವ್ಯವಸ್ಥಿತ ರಚನೆಯು ಅಷ್ಟೊಂದು ಬಲವಾಗಿರುವುದಿಲ್ಲ. ಮಾನವ ಸ್ವಭಾವದೊಂದಿಗೆ ಹೊಂದಿಕೆಯು ಅಂತಹ ಕರ್ತೃತ್ವ ಶಕ್ತಿಯ ಮೌಲ್ಯವನ್ನು ಇನ್ನೂ ಹೆಚ್ಚಿಸುತ್ತದೆ. ಈ ಕರ್ತೃತ್ವ, ದೇಶದಲ್ಲಿ ವಿಶೇಷವಾಗಿ ಕರ್ನಾಟಕದಲ್ಲಿ ಸಹಕಾರ ನಿರ್ವಹಣೆಗೆ ಅನುರೂಪವಾಗಿದೆ. ಇದು ಅದರ ತಿರುಳಾಗಿ ಮೂಲಭೂತ ಮಾನವ ಭಾವನೆಗಳ ಸ್ವಯಂ ಬೆಲೆಯನ್ನು ಆವರಿಸಿಕೊಳ್ಳುತ್ತದೆ. ಸಹಕಾರ ಕೌಶಲ್ಯವು ವಿಶೇಷವಾಗಿ ಗ್ರಾಮೀಣ ಜನರಲ್ಲಿ ಹಣಕಾಸಿನ ಸಾಮರ್ಥ್ಯಗಳನ್ನು ಮತ್ತು ಸ್ವನಂಬಿಕೆಯನ್ನು ಉಂಟುಮಾಡುವ ಕ್ಷೇತ್ರದೊಳಕ್ಕೆ ಆಳವಾಗಿ ಹೋಗುತ್ತದೆ.

> **ಪ್ರಾರಂಭಿಕವಾಗಿ ಸಣ್ಣದಾಗಿ ಯಶಸ್ವಿನಿ ಯೋಜನೆ ಕಂಡು ಬಂದರೂ ಸಾಮಾನ್ಯ ಜನರಲ್ಲಿ ಅರಿವಿನ ಅಲೆಯೆಬ್ಬಿಸಿದೆ. ಏನೇ ಆದರೂ ಆರೋಗ್ಯಭಾಗ್ಯ ಇರಬೇಕೆಂಬ ಸಾಮಾನ್ಯ ಅಭಿಪ್ರಾಯಕ್ಕೆ ಇದು ಪುಷ್ಟಿ ಕೊಡುವ ಯೋಜನೆಯಾಗಿದೆ.**

## ಸಮುದಾಯಕ್ಕೆ ವ್ಯಾಕುಲ :

ಸದಸ್ಯರ ಅವಶ್ಯಕತೆಗಳ ಕಡೆ ಕೇಂದ್ರೀಕರಿಸುತ್ತಾ, ಸಹಕಾರಿ ಸಂಸ್ಥೆಗಳು ಸದಸ್ಯರಿಂದ ಒಪ್ಪಿಕೊಳ್ಳಲಾದ ನೀತಿಗಳ ಮೂಲಕ ಸಮುದಾಯಗಳ ಜೀವನಾಧಾರ ಬೆಳವಣಿಗೆಗೆ ಕೆಲಸ ಮಾಡುತ್ತವೆ.

ಸಹಕಾರಿ ನೀತಿಯ ಉದ್ದೇಶವೆಂದರೆ ದೇಶದಲ್ಲಿ ಸಹಕಾರಿ ಸಂಘಗಳ ಸರ್ವತೋಮುಖ ಅಭಿವೃದ್ಧಿಗೆ ಅನುಕೂಲಿಸುವುದು. ಇದರಡಿಯಲ್ಲಿ ಸಹಕಾರ ಸಂಘಗಳಿಗೆ ಅಗತ್ಯವಾದ ಬೆಂಬಲ, ಪ್ರೋತ್ಸಾಹ ಮತ್ತು ಸಹಾಯವನ್ನು ಒದಗಿಸಿ ಅವು ತಮ್ಮ ಸದಸ್ಯರಿಗೆ ಉತ್ತರದಾಯಕತ್ವವಿರುವ ಸ್ವಾಯತ್ತ ಸ್ವಾವಲಂಬಿತ ಮತ್ತು ಪ್ರಜಾಪ್ರಭುತ್ವ ರೀತಿಯಲ್ಲಿ ನಿರ್ವಹಿಸಲಾದ ಸಂಸ್ಥೆಗಳಂತೆ ಕೆಲಸ ಮಾಡಲು ಅವುಗಳಿಗೆ ಅನುಕೂಲವಾಗುತ್ತವೆ.

ಸ್ವಾತಂತ್ರ್ಯ ಪೂರ್ವ ದಿನಗಳಲ್ಲಿ ಹೆಚ್ಚು ಕಡಿಮೆ ಸರಕಾರದ ನೀತಿಯು ಸಹಕಾರಿ ಸಂಸ್ಥೆಗಳ ಕಡೆಗೆ ಇದ್ದಂತೆಯೇ ಇಡುವುದಾಗಿತ್ತು. ಸರಕಾರವು ಅವುಗಳ ಉನ್ನತಿ ಮತ್ತು ಅಭಿವೃದ್ಧಿಯಲ್ಲಿ ಸಕ್ರಿಯ ಪಾತ್ರವಹಿಸಲಿಲ್ಲ. ಸ್ವಾತಂತ್ರ್ಯಾನಂತರ ಯೋಜಿತ ಆರ್ಥಿಕ ಅಭಿವೃದ್ಧಿಯ ಉನ್ನತಿಯಿಂದ ಸಹಕಾರ ಸಂಸ್ಥೆಗಳಿಗೆ ಒಂದು ಹೊಸಯುಗವು ಪ್ರಾರಂಭವಾಯಿತು. ಸಹಕಾರವು ಇಚ್ಛಿಸಲ್ಪಟ್ಟ ಸಾಧನವಾಗಿ ಪರಿಗಣಿಸಲಾಯಿತು. ರಾಷ್ಟ್ರೀಯ ಆರ್ಥಿಕತೆಯ ಒಂದು ನಿರ್ದಿಷ್ಟ ಕ್ಷೇತ್ರವಾಗಿ ಹೊರಹೊಮ್ಮಿತು. ಮೊದಲನೇ ಪಂಚವಾರ್ಷಿಕ ಯೋಜನೆಯ ದಾಖಲೆಯಲ್ಲಿ ಸ್ಪಷ್ಟವಾಗಿ ನಮೂದಿಸಿದುದೇನೆಂದರೆ ಇತರ ವಿಷಯಗಳ ಜೊತೆಯಲ್ಲಿ ಯೋಜನೆಯ ಸಫಲತೆಯನ್ನು ಸಹಕಾರಿ ಸಂಸ್ಥೆಗಳ ಮೂಲಕ ಎಷ್ಟರ ಮಟ್ಟಿಗೆ ಅನುಷ್ಠಾನಗೊಳಿಸಲಾಗಿದೆ ಎಂದು ಪರೀಕ್ಷಿಸಬೇಕು. ಅರವತ್ತರ ದಶಕದಲ್ಲಿ ಸಹಕಾರ ಸಂಸ್ಥೆಗಳ ಮೂಲಕ ಹೆಚ್ಚುವರಿ ಕೃಷಿ ಉತ್ಪಾದನೆ ಹಾಗೂ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವುದಕ್ಕೆ ವಿಶೇಷ ಪ್ರಾಮುಖ್ಯತೆಯನ್ನು ಕೊಡಲಾಯಿತು. ೧೯೬೬-೭೧ರಲ್ಲಿ ಕೃಷಿಕ್ಷೇತ್ರದಲ್ಲಿ ಒಂದು ಗಣನೀಯವಾದ ಅಭಿವೃದ್ಧಿಯೆಂದರೆ ಹೊಸಕೃಷಿ ಕೌಶಲ್ಯದ ಅನುಷ್ಠಾನ ಮಾಡಿ ಆಹಾರದಲ್ಲಿ ಸ್ವಸಂಪೂರ್ಣತೆಯನ್ನು ಸಾಧಿಸುವ ಗುರಿಯಿದ್ದಿತು. ಹೆಚ್ಚು ಉತ್ಪಾದನೆಯ ಮತ್ತು ಹೈಬ್ರಿಡ್ ಜಾತಿಯ ಬೀಜಗಳನ್ನು ಜಾರಿಗೊಳಿಸಿದುದು ಮತ್ತು ನೀರಾವರಿ ಸೌಕರ್ಯಗಳಿಗೆ ಹೆಚ್ಚಿನ ವೆಚ್ಚದ ಹಂಚಿಕೆ ಮತ್ತು ಕೃಷಿ ಒಳಹರಿವುಗಳ ಸಾಕಷ್ಟು ಅನ್ವಯವು ಸಹಕಾರಿ ಸಂಸ್ಥೆಗಳ ಪಾತ್ರದಲ್ಲಿ ಅಸಾಧಾರಣ ಹೆಚ್ಚಳಕ್ಕೆ ದಾರಿಮಾಡಿಕೊಟ್ಟಿತು. ಹಾಗಾಗಿ ಹಸಿರು ಕ್ರಾಂತಿಯು ಸಹಕಾರ ಸಂಸ್ಥೆಗಳ ಚಟುವಟಿಕೆಗಳಿಗೆ ಹೆಚ್ಚಿನ ಪ್ರಚೋದನೆಯನ್ನು ನೀಡಿತು. ಹೆಚ್ಚಾದ ಕೃಷಿ ಉತ್ಪಾದನೆ ಮತ್ತು ಹೆಚ್ಚಾದ ಉತ್ಪಾದಕತೆಯು ಕೃಷಿ ಉತ್ಪನ್ನದಲ್ಲಿ ಮೌಲ್ಯ ವರ್ಧನೆಗೆ ಒತ್ತುಕೊಟ್ಟು ಮಾರುಕಟ್ಟೆ ದಾಸ್ತಾನು ಮತ್ತು ಸಂಬಂಧಿಕ ಕ್ಷೇತ್ರಗಳ ಅಭಿವೃದ್ಧಿಯಲ್ಲೂ ಗಣನೀಯವಾದ ಸಾಧನೆಯಾಯಿತು. ಇದರ ಪರಿಣಾಮವಾಗಿ ಹಾಲು, ಎಣ್ಣೆಕಾಳುಗಳು, ಕಬ್ಬು, ಹತ್ತಿ, ಕೃಷಿ ಪರಿಷ್ಕರಣ ಮುಂತಾದ ಕ್ಷೇತ್ರಗಳಲ್ಲಿ ತಜ್ಞವಾದ ಸಹಕಾರಿ ಸಂಘಗಳನ್ನು ಸ್ಥಾಪಿಸಲಾಯಿತು. ಅನೇಕ ದೊಡ್ಡ ಸಹಕಾರ ಸಂಸ್ಥೆಗಳು ರಸಗೊಬ್ಬರ ತಯಾರಿಕೆ ಮತ್ತು ಕೃಷಿ ಉತ್ಪನ್ನಗಳ ಮಾರುಕಟ್ಟೆ ಕ್ಷೇತ್ರಗಳಲ್ಲಿ ಹುಟ್ಟಿಕೊಂಡವು. ಹಾಗಾಗಿ ಸಹಕಾರ ಸಂಸ್ಥೆಗಳ ಪಾತ್ರಗಳು ಅವುಗಳ ಸಾಂಪ್ರದಾಯಿಕ ಚಟುವಟಿಕೆಗಳಿಗೆ ಮಿತಿಗೊಳ್ಳಲಿಲ್ಲ. ಸಾರ್ವಜನಿಕ ಅಥವಾ ಖಾಸಗಿ ಕ್ಷೇತ್ರಗಳಲ್ಲಿನ ಇತರ ಉದ್ಯಮಗಳಲ್ಲಿರುವಂತೆ ಹೊಸ ಆರ್ಥಿಕ ಸಾಹಸಗಳು ವಿಸ್ತಾರಗೊಂಡವು.

## ಯಶಸ್ವಿನಿ :

ಭಾರತದಲ್ಲಿ ಆರೋಗ್ಯ ರಕ್ಷಣೆಯು ಕಳೆದ ದಶಕದಲ್ಲಿ ಅಗಾಧವಾದ ಬದಲಾವಣೆಯನ್ನು ಹೊಂದಿದೆ ಮತ್ತು ಈಗ ಯಶಸ್ವಿನಿಯನ್ನು ಪ್ರಾರಂಭಿಸಿದುದರಿಂದ ಅದು ಭಾರತದ ಗ್ರಾಮೀಣ ಜನರ ಹೃದಯಗಳನ್ನು ತಟ್ಟಿದೆ. ಕರ್ನಾಟಕ ರಾಜ್ಯ ಸರಕಾರದಿಂದ ಸ್ವಲ್ಪ ಮಟ್ಟಿನ ಕರ್ತೃತ್ವ ಶಕ್ತಿಯು, ಅದು ಕಾಣುವಂತೆ, ಅಂದರೆ ಯಶಸ್ವಿನಿಯು ಸಾಮಾನ್ಯ ಜನರಲ್ಲಿ ಅಲೆಯನ್ನು ಎಬ್ಬಿಸಿದೆ. ಏನೇ ಆದರೂ "ಆರೋಗ್ಯವೇ ಭಾಗ್ಯ" ಎಂಬ ನಾಣ್ನುಡಿಯಲ್ಲಿ ನಂಬಿಕೆ ಇರುವ ಮತ್ತು ಅದರಲ್ಲಿಯೇ ಬದುಕಬೇಕಾಗಿರುವ ವ್ಯಕ್ತಿಗೆ ಇದಕ್ಕಿಂತ ಒಳ್ಳೆಯ ಬಹುಮಾನ ಇನ್ನೊಂದಿಲ್ಲ.

ಯಶಸ್ವಿನಿಯು ತಿಂಗಳಿಗೆ ೫೦ ರೂ. ವಂತಿಗೆಯಿಂದ ಶಕ್ತಿ ಪಡೆದಿರುವ ಸ್ವಯಂ-ನಿಧಿಯ ಯೋಜನೆಯ ಕಥೆಯಾಗಿದೆ.

ಪ್ರಪಂಚದಲ್ಲೇ ಮೊಟ್ಟ ಮೊದಲಿಗೆ ಪ್ರಾರಂಭಿಸಲಾದ ಯಶಸ್ವಿನಿಯು ಒಂದು ವಿಶಿಷ್ಟವಾದ ಸಹಕಾರಿ ಆರೋಗ್ಯ ರಕ್ಷಣೆ ಯೋಜನೆಯಾಗಿದ್ದು, ರೈತರಿಗಾಗಿ ಇದ್ದು ಅವರು ಸಹಕಾರ ಸಂಘಗಳ ಸದಸ್ಯರುಗಳಾಗಿರುತ್ತಾರೆ. ಅದರ ಗುರಿಯು ಕರ್ನಾಟಕದಲ್ಲಿ ರೈತ ಸಹಕಾರಿಗಳಿಗೆ ಒಳ್ಳೆಯ ಆರೋಗ್ಯ ಸೌಲಭ್ಯ ನೀಡುವುದಾಗಿದೆ.

## ಉದ್ದೇಶ :

ಕರ್ನಾಟಕದ ಪ್ರತಿಯೊಬ್ಬ ಸಹಕಾರಿ ರೈತನಿಗೆ ಎಟಕುವಂತೆ ಅಂತರರಾಷ್ಟ್ರೀಯ ಮಾನದಂಡಗಳ ಆರೋಗ್ಯ ರಕ್ಷಣೆಯನ್ನು ಒದಗಿಸುವುದಾಗಿದೆ. ರೈತ ಸಹಕಾರಿಯ ಪ್ರಯೋಜನಕ್ಕಾಗಿ ಆರೋಗ್ಯ ರಕ್ಷಣೆಯಲ್ಲಿ ಶ್ರೇಷ್ಠತೆಯನ್ನು ಸಾಧಿಸುವುದು ಮತ್ತು ಕಾಪಾಡಿಕೊಂಡು ಬರುವುದಕ್ಕೆ ನಾವು ಬದ್ಧರಾಗಿದ್ದೇವೆ.

## ಅನೇಕ ಅದ್ಭುತಗಳು :

ಭಾರತ ಆರ್ಥಿಕತೆಯ ಬೆನ್ನಲುಬು ರೈತ ಸಮುದಾಯವಾಗಿದೆ. ಸರಿಯಾಗಿ ಹೇಳುವುದಾದರೆ ಅದನ್ನು ಸರಿಯಾಗಿ ನೋಡಿಕೊಳ್ಳುವ ಅಗತ್ಯವಿದೆ. ಈ ದಿಶೆಯಲ್ಲಿ **ಕರ್ನಾಟಕವು ಮಾರ್ಗವನ್ನು ತೋರಿಸಿದೆ.** ಬಡ ನಿಸ್ಸಹಾಯಕ ರೈತರು ಆರೋಗ್ಯಕರ ಜೀವನ ನಡೆಸಲು ಅವರ ಅಗತ್ಯಗಳ ನಡುವೆ ಒಂದು ಸೇತುವೆಯನ್ನು ನಿರ್ಮಿಸಿ ಕರ್ನಾಟಕದಲ್ಲಿ ಯಶಸ್ವಿನಿ ಯೋಜನೆಯು ಗುಣಮಟ್ಟದ ಆರೋಗ್ಯರಕ್ಷಣೆಯನ್ನು ರೈತರ ಮನೆ ಬಾಗಿಲಿಗೆ ತಂದಿದೆ. ವರ್ಷಕ್ಕೆ ಅತಿ ಕಡಿಮೆ ಹಣವಾದ ೬೦ರೂ.ಗಳಿಂದ ಕರ್ನಾಟಕದಲ್ಲಿ ಒಬ್ಬ ರೈತನು ಯಾವುದೇ ಸಂಕೀರ್ಣವಾದ ಆರೋಗ್ಯ ಸಂಬಂಧಿತ ಸವಾಲನ್ನು ನಂಬಿಕೆಯಿಂದ ಎದುರಿಸಬಲ್ಲನು, ಮೇಲುಮಟ್ಟದ ಚಿಕಿತ್ಸೆಯನ್ನು ಪಡೆಯಬಲ್ಲನು ಮತ್ತು ಹೆಚ್ಚು ವೆಚ್ಚದ ವೈದ್ಯಕೀಯ ಕಾರ್ಯವಿಧಾನಗಳಿಗೆ ಸಮೀಪವಾಗಬಲ್ಲನು.

ಒಂದು ಮೈಲುಗಲ್ಲಾದ ಕರ್ತೃತ್ವ ಶಕ್ತಿ 'ಯಶಸ್ವಿನಿ ಯೋಜನೆ' ಯು ರಾಜ್ಯದಲ್ಲಿನ ರೈತರಿಗೆ ಒಂದು ದೊಡ್ಡ ವರವಾಗಿ ಬಂದಿದೆ. ೨೦೦೩ರ ಜೂನ್ ೧ರಂದು ಪ್ರಾರಂಭವಾದ ಈ ಯೋಜನೆಯು ಗ್ರಾಮೀಣ ಆರೋಗ್ಯ ರಕ್ಷಣೆ ಮತ್ತು ಗುಣಪಡಿಸುವುದನ್ನು ಕ್ರಾಂತಿಗೊಳಿಸಲು ರಾಜ್ಯಕ್ಕೆ ಸಹಾಯ ಮಾಡಿದೆ.

ಕುಟುಂಬ ಆರೋಗ್ಯ ಯೋಜನೆ ನಿಯಮಿತ (ಎಫ್ ಹೆಚ್ ಪಿಎಲ್) ಅನ್ನು ಈ ಯೋಜನೆಯನ್ನು ಅನುಷ್ಠಾನಗೊಳಿಸುವ ಏಜೆನ್ಸಿಯಾಗಿ ನೇಮಕಮಾಡಲಾಗಿದೆ. ಎಫ್.ಹೆಚ್.ಪಿ.ಎಲ್. ಸಂಸ್ಥೆಯು ಗುರುತಿನ ಚೀಟಿಗಳನ್ನು ನೀಡುವುದರಲ್ಲಿ, ಜಾಲಬಂಧ ಆಸ್ಪತ್ರೆಗಳನ್ನು ಗುರುತಿಸುವಲ್ಲಿ (ಎನ್.ಡಬ್ಲ್ಯೂ.ಹೆಚ್.), ಬಿಲ್ಲುಗಳ ಪರಿಶಿಲನೆ ಮುಂತಾದವುಗಳಲ್ಲಿ ಯಶಸ್ವಿನಿ ಟ್ರಸ್ಟಿಗೆ ಸಹಾಯ ಮಾಡುತ್ತದೆ. ಅಪೋಲೊ ಗುಂಪಿನ ಆಸ್ಪತ್ರೆಗಳ ಅಧ್ಯಕ್ಷರಾದ ಡಾ. ಪ್ರತಾಪರೆಡ್ಡಿಯವರು ಮತ್ತು ಅವರ ಸಮರ್ಪಣಾಭಾವದ ಕಾರ್ಯಕರ್ತರ ತಂಡವು ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವುದರಲ್ಲಿ ಒಂದು ಆಸ್ತಿಯಾಗಿದ್ದಾರೆ.

## ಯಶಸ್ವಿನಿ :

**ಯಶಸ್ವಿನಿಯು 'ಎಲ್ಲರಿಗಾಗಿ ಒಬ್ಬ ಮತ್ತು ಒಬ್ಬನಿಗಾಗಿ ಎಲ್ಲ' ಎಂಬ ಸಹಕಾರಿ ತತ್ವದ ಮೂರ್ತರೂಪ ಮತ್ತು ವಿಶಿಷ್ಟವಾದ ಯೋಜನೆ.**

## ವಿಶೇಷ ಲಕ್ಷಣಗಳು :

ಈ ಯೋಜನೆಯ ಪ್ರಯೋಜನಗಳನ್ನು ಪಡೆಯಲು ಅತಿಗರಿಷ್ಠ ವಯಸ್ಸು ೭೫ ವರ್ಷಗಳು. ಈ ಯೋಜನೆಯ ಪ್ರಯೋಜನ ಪಡೆಯುವುದಕ್ಕೆ ಯಾವುದೇ ವಿಧವಾದ ಕಾಯಿಲೆಯಿಂದ ಮಾತ್ರ ನರಳಬೇಕಾದ ಅಗತ್ಯವಿಲ್ಲ. ಈ ಯೋಜನೆಯ ಪ್ರಯೋಜನ ಪಡೆಯುವುದಕ್ಕೆ ರೈತರು ಕನಿಷ್ಟ ಆರು ತಿಂಗಳವರೆಗೆ ಸಹಕಾರಿ ಸಂಘದ ಸದಸ್ಯರಾಗಿರಬೇಕು. ಸದಸ್ಯರು ೧ ಲಕ್ಷ ರೂ. ಮತ್ತು ೨ ಲಕ್ಷ ರೂ. ವೆಚ್ಚವಾಗುವ ಅನೇಕ ಶಸ್ತ್ರ ಚಿಕಿತ್ಸೆಗಳನ್ನು ಪುಕ್ಕಟೆಯಾಗಿ ಪಡೆಯಬಹುದು. ಯಶಸ್ವಿನಿ ಯೋಜನೆಯಲ್ಲಿ ೧೬೦೦ ವಿಧವಾದ ಶಸ್ತ್ರ ಚಿಕಿತ್ಸೆಗಳನ್ನು ಸೇರಿಸಲಾಗಿದೆ. ಇದನ್ನು ವೆಬ್‌ಸೈಟ್‌ನಲ್ಲಿ ಸೇರಿಸಲಾಗಿದೆ.

ಯಶಸ್ವಿನಿ ಟ್ರಸ್ಟಿನಿಂದ ನಿಗದಿಪಡಿಸಿದ ಮಾನದಂಡಗಳನ್ನು ಪೂರೈಸುವ ಆಸ್ಪತ್ರೆಗಳನ್ನು ಮಾತ್ರ ಜಾಲಬಂಧ ಆಸ್ಪತ್ರೆಗಳಾಗಿ ಗುರುತಿಸಲಾಗುತ್ತದೆ. ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳು ಅಧ್ಯಕ್ಷರಾಗಿ ಕೆಲಸ ಮಾಡುತ್ತಿದ್ದು ಜಿಲ್ಲೆಯಲ್ಲಿ ಕೆಲಸ ಮಾಡುತ್ತಿರುವ ಉಪ ರಿಜಿಸ್ಟ್ರಾರರು ಅವರ ಸದಸ್ಯ ಕಾರ್ಯದರ್ಶಿಯೊಂದಿಗೆ ಎಲ್ಲಾ ಚಟುವಟಿಕೆಗಳನ್ನು ಸಮನ್ವಯಗೊಳಿಸುತ್ತಾರೆ.

ನಗರ, ಜಿಲ್ಲೆ, ಉಪವಿಭಾಗ, ತಾಲ್ಲೂಕು ಮತ್ತು ತಾಲ್ಲೂಕು ಮಟ್ಟಗಳಿಂದ ಕೆಳಗೆ ಆಸ್ಪತ್ರೆಗಳು ಮತ್ತು ನರ್ಸಿಂಗ್ ಹೋಂಗಳೂ ಸೇರಿದಂತೆ ೧೧೪ ಜಾಲಬಂಧ ಆಸ್ಪತ್ರೆಗಳನ್ನು ಗುರುತಿಸಲಾಗಿದೆ.

## ೨೦೦೪-೦೫ಕ್ಕೆ ಕಾರ್ಯಕ್ರಮ :

* ೨೦ಲಕ್ಷಕ್ಕೂ ಮೀರಿ ರೈತರು ನೋಂದಾಯಿಸಲ್ಪಟ್ಟಿದ್ದಾರೆ (ಹಿಂದಿನ ವರ್ಷಕ್ಕೆ ಹೋಲಿಸಿದರೆ ಶೇ. ೨೫ ಬೆಳವಣಿಗೆ ದರ).
* ರೈತ ಸಹಕಾರಿಗಳು ೨ ಕೋಟಿ ರೂ.ಗಳನ್ನು ವಂತಿಗೆ ನೀಡಿದ್ದಾರೆ.

* ಮನೆಯ ಬಾಗಿಲಿನಲ್ಲಿ ಚಿಕಿತ್ಸೆ ಒದಗಿಸುವುದಕ್ಕೆ ತಾಲ್ಲೂಕು ಮಟ್ಟದ ಕೆಳಗೆ, ತಾಲ್ಲೂಕು ಮಟ್ಟದಲ್ಲಿ, ಉಪ ವಿಭಾಗದ ಮಟ್ಟದಲ್ಲಿ ಆಸ್ಪತ್ರೆಗಳನ್ನು ಮತ್ತು ನರ್ಸಿಂಗ್ ಹೋಂಗಳನ್ನು ಗುರುತಿಸಲು ನಿರ್ಧರಿಸಲಾಗಿದೆ.

* ವಿಸ್ತರಣಾ ಕಾರ್ಯವನ್ನು ಕೈಗೊಳ್ಳುವುದು ಮತ್ತು ಯೋಜನೆಯ ಬಗ್ಗೆ ರೈತ ಸಹಕಾರಿಗಳಲ್ಲಿ ಜಾಗೃತಿಯನ್ನು ಮೂಡಿಸುವುದು ಇವುಗಳನ್ನು ಇಲಾಖಾ ಸಿಬ್ಬಂದಿ, ಸಹಕಾರಿ ಸಂಸ್ಥೆಗಳು ಕರ್ನಾಟಕ ಸರ್ಕಾರದ ಸಂಬಂಧಪಟ್ಟ ಜಿಲ್ಲಾ ಅಧಿಕಾರಿಗಳು ಮತ್ತು ಜಿಲ್ಲಾ ಸಮನ್ವಯಕಾರರ ಮೂಲಕ ಈ ಕೆಲಸಗಳನ್ನು ಮಾಡಲಾಗುತ್ತಿದೆ.

## ಸ್ವಯಂ ನಿಧಿ ಯೋಜನೆ (ಎಸ್.ಎಫ್.ಎಸ್.) ಎಂದರೇನು?

ಸ್ವಯಂ ನಿಧಿಗೂಡಿಸಿದ ಆರೋಗ್ಯ ಯೋಜನೆಯು ಕಡಿಮೆ ವಂತಿಗೆಯಿಂದ ವಿಮೆ ಮಾಡಿದವರಿಗೆ ಪ್ರಯೋಜನವಿದೆ ಎಂದು ಭರವಸೆ ನೀಡುತ್ತದೆ. ಒಂದು ಮೂಲ ದ್ರವ್ಯನಿಧಿಯನ್ನು ಪ್ರಾರಂಭಿಸಲಾಗಿದ್ದು, ಸಂಘಗಳು ಅಥವಾ ಗುಂಪಿನಿಂದ ನಿರ್ವಹಿಸಲ್ಪಡುತ್ತಿದ್ದು ಪೂರ್ಣವಾಗಿ ಅಥವಾ ಭಾಗಶಃ ನೌಕರರು ಮಾಡಿದ ಎಲ್ಲಾ ವಂತಿಗೆಗಳು ಮತ್ತು ಉದ್ಯೋಗದಾತನಿಂದ ಕೂಡ ವಂತಿಗೆಗಳನ್ನು ನಿರ್ವಹಿಸುತ್ತಿವೆ. ನಿಧಿಯ ಸರಿಯಾದ ಪ್ರಮಾಣಾನುಕ್ರಮಸಾರ ಸೂಕ್ತದಿಂದ ನಿಧಿಯ ಕಾರ್ಯಚರಣೆಯನ್ನು ರೂಪಿಸಲಾಗಿದೆ ಮತ್ತು ಅನುಷ್ಠಾನಗೊಳಿಸಲಾಗುತ್ತಿದೆ. ಆಪತ್ತುಗಳನ್ನು, ಸೃಷ್ಟಿಸಿರುವ ಮೂಲದ್ರವ್ಯ ನಿಧಿಯಿಂದ ಭರಿಸಲಾಗುತ್ತದೆ.

## ಸ್ವಯಂ ನಿಧಿಗೂಡಿಸಿದ ಯೋಜನೆಯ ಪ್ರಯೋಜನಗಳು :

* ವರ್ಷದುದ್ದಕ್ಕೂ ಹರಡಿದ್ದು ಹಣಕಾಸಿನ ಹೊರೆಯನ್ನು ಕಡಿಮೆ ಮಾಡುವುದಕ್ಕೆ ಮಾಸಿಕ ವಂತಿಗೆಗಳು.

## ಯೋಜನೆಯ ಪ್ರಯೋಜನ :

* ವೈದ್ಯ ಸಹಾಯಕನ ಮೌಲ್ಯ ಅಥವಾ ಮೇಲಿನ ಮಿತಿಯನ್ನು ಸಂಸ್ಥೆಯು ಸಾಮಾನ್ಯವಾಗಿ ನಿಗದಿಪಡಿಸುತ್ತದೆ.
* ಸಂಸ್ಥೆಯ ಸಂಪೂರ್ಣ ವಿವೇಚನೆಯಿಂದ ಮಂಜೂರು ಮಾಡಿದುದು ಇಲ್ಲ ಅಥವಾ ಕೆಲವೇ ವಿನಾಯತಿಗಳಿವೆ.
* ಎಲ್ಲಾ ಜಾಲಬಂಧ ಆಸ್ಪತ್ರೆಗಳಲ್ಲಿ ಮಾತುಕತೆಯಿಂದಾದ ಮತ್ತು ಪ್ರಮಾಣೀಕರಿಸಿದ ಬೆಲೆಗಳ ಅನುಷ್ಠಾನ ನಿಧಿಯೂ ಬಡ್ಡಿಯನ್ನು ಸಂಪಾದಿಸುತ್ತಿದೆ ಮತ್ತು ಆಡಳಿತಗಾರರು ಸರಿಯಾದ ನಿಧಿ ನಿರ್ವಹಣೆಯ ಭರವಸೆ ನೀಡುತ್ತಾರೆ.
* ಎಷ್ಟಿದೆಯೋ ಅಷ್ಟರ ಹಕ್ಕುಗಳ ಪಾವತಿ.

## ಕುಟುಂಬ ಆರೋಗ್ಯ ಯೋಜನೆ ನಿಯಮಿತ ಮತ್ತು ಸ್ವಯಂ ನಿಧಿಗೊಳಿಸಿದ ಯೋಜನೆಗಳು :

ಎಫ್.ಹೆಚ್.ಪಿ.ಎಲ್.ಎ. ಸಂಸ್ಥೆಯು ಮೊದಲನೆಯ ಮೂರನೇ ಪಕ್ಷದ ಆಡಳಿತಗಾರ ಮತ್ತು ಆರೋಗ್ಯ ವಿಮೆ ಯೋಜನೆ ಆಡಳಿತದಲ್ಲಿ ಆಳವಾದ ವ್ಯಾಪಕವಾದ ಅನುಭವವುಳ್ಳದ್ದಾಗಿವೆ. ಎಫ್.ಎಚ್.ಪಿ.ಎಲ್. ಸಂಸ್ಥೆಯು ಭಾರತದಲ್ಲಿ ಸ್ವಯಂ ನಿಧಿಗೂಡಿಸಿದ ಯೋಜನೆಯನ್ನು ಕಲ್ಪಿಸಿ, ಅಕಾರಕೊಟ್ಟು, ಜಾರಿಗೊಳಿಸುತ್ತಿರುವ ಮೊದಲ ಸಂಸ್ಥೆಯಾಗಿದೆ.

## ಕುಟುಂಬ ಯೋಜನೆ ನಿಯಮಿತದ ಅಗತ್ಯ ಮತ್ತು ಪಾತ್ರ :

* ವೈದ್ಯಕೀಯ ಆರೋಗ್ಯ ಯೋಜನೆಯ ಆಡಳಿತ ನಡೆಸುವುದರಲ್ಲಿ ಒಂದು ದಶಕಕ್ಕೂ ಹೆಚ್ಚು ಅನುಭವವಿರುವ ಕ್ಷೇತ್ರದ ತಜ್ಞ ಸಂಸ್ಥೆ. ದುರುಪಯೋಗಗಳನ್ನು ತಡೆಯಲು ಯಶಸ್ವಿನಿ ನಿಧಿಗಳ ಪರಿಣಾಮಕಾರಿ ನಿರ್ವಹಣೆ ಮತ್ತು ನಿಯಂತ್ರಣ.
* ರಾಜ್ಯದಾದ್ಯಂತ ಜಾಲಬಂಧ ಆಸ್ಪತ್ರೆಗಳ ಸರಪಳಿಯ ಮೂಲಕ ನಿಷ್ಕರ್ಷೆಗೊಳಿಸಲಾದ ದರಪಟ್ಟಿ ಪ್ರಕಾರ ರೈತರಿಗೆ ನಗದು ರಹಿತ ಚಿಕಿತ್ಸೆ ವಿಸ್ತರಿಸುವುದು.
* ಪ್ರತಿಯೊಂದು ಆಸ್ಪತ್ರೆಯಲ್ಲಿ ಯಶಸ್ವಿನಿ ಸಹಾಯ ಡೆಸ್ಕು.
* ಶಸ್ತ್ರಚಿಕಿತ್ಸೆಗಳಿಗೆ ದರಪಟ್ಟಿಯನ್ನು ಗುರ್ತಿಸಿ ನಿಗದಿಪಡಿಸುವುದು.

* ಜಾಲಬಂಧ ಆಸ್ಪತ್ರೆಗಳಿಂದ ಕಳುಹಿಸಲಾದ ಅಧೀಕರಣ ಪೂರ್ವದ ಮಂಜೂರಾತಿಗಳು.
* ಜಾಲಬಂಧ ಆಸ್ಪತ್ರೆಗಳಿಗೆ ಹಕ್ಕುಗಳನ್ನು ಪರಿಷ್ಕರಿಸುವುದು ಮತ್ತು ಮರುಪಾವತಿಯ ವ್ಯವಸ್ಥೆ ಮಾಡುವುದು.
* ಯೋಜನೆಯ ಮೇಲ್ವಿಚಾರಣೆ, ನಿರ್ವಹಣೆ ಮತ್ತು ಕಾಪಾಡುವುದಕ್ಕೆ ಅಗತ್ಯವಾದ ಮಾನವಶಕ್ತಿಯನ್ನು ನೇಮಿಸುವುದು.
* ಜಾಲಬಂಧ ಆಸ್ಪತ್ರೆಗಳಿಂದ ಒದಗಿಸಲಾದ ಸೇವೆಗಳ ಮೇಲ್ವಿಚಾರಣೆ ಮಾಡುವುದಕ್ಕೆ ಎಫ್‌ಎಚ್‌ಪಿಎಲ್‌ನಿಂದ ಜಿಲ್ಲಾ ಮಟ್ಟದ ಪ್ರತಿನಿಧಿಗಳನ್ನು ನಾಮಕರಣ ಮಾಡುವುದು, ಜಿಲ್ಲಾ ಮಟ್ಟದ ಡಿಆರ್‌ಸಿಗಳನ್ನು ಮತ್ತು ಎಆರ್‌ಸಿಗಳನ್ನು ಭೇಟಿ ಮಾಡಿ ಅವರಿಗೆ ಬೇಕಾಗಿರುವ ಏನಾದರೂ ಸಹಾಯವನ್ನು ನೀಡುವುದು.
* ಹರಿಯುತ್ತಿರುವ ನಿಧಿಯ ಎಲ್ಲಾ ಲೆಕ್ಕಗಳ ನಿರ್ವಹಣೆ.
* ತೀರಿಸಲಾದ ಹಕ್ಕುಗಳು, ನಡೆಸಲಾದ ಶಸ್ತ್ರಕ್ರಿಯೆಗಳು, ಕೊಡಲಾದ ಅಧೀಕರಣ ಪೂರ್ವಕಗಳು ಮುಂತಾದವುಗಳಿಗೆ ಸಂಬಂಧಿಸಿದಂತೆ ವಿವರಗಳೊಂದಿಗೆ ಟ್ರಸ್ಟಿಗೆ ವಾರದ ಆಧಾರದ ಮೇಲೆ ವರದಿ ಸಲ್ಲಿಕೆ.
* ಯಶಸ್ವಿನಿ ಯೋಜನೆಯ ಮಾರ್ಗದರ್ಶನ ನೀಡಲು ಮತ್ತು ಸಹಾಯ ಮಾಡಲು ೨೪/೭ ಕಾಲ್‌ಸೆಂಟರ್.

## ಯಶಸ್ವಿನಿ ಯೋಜನೆಯ ಮೈಲಿಗಲ್ಲುಗಳು :

* ೨೦೦೨ರ ನವೆಂಬರ್ ೧೪ ಗೌರವಾನ್ವಿತ ಕರ್ನಾಟಕದ ಮುಖ್ಯಮಂತ್ರಿ ಎಸ್.ಎಂ. ಕೃಷ್ಣರವರ ಸಮ್ಮುಖದಲ್ಲಿ ಯಶಸ್ವಿನಿ ಆರೋಗ್ಯ ವಿಮಾ ಯೋಜನೆ ಪ್ರಾರಂಭಿಸಲಾಯಿತು.
* ೨೦೦೩ರ ಮೇ ೩೧ - ಸುಮಾರು ೧೭ ಲಕ್ಷ ರೈತರು ಈ ಯೋಜನೆಯಡಿಯಲ್ಲಿ ಪಟ್ಟಿಯಲ್ಲಿ ಭರ್ತಿಮಾಡಿಕೊಂಡರು.
* ೨೦೦೩ರ ಜೂನ್ ೧ ಹೊಸೂರಿನ ರೈತರಾದ ನಾರಾಯಣ ಹೆಗ್ಡೆಯವರ ಮೇಲೆ ಮೊದಲ ಶಸ್ತ್ರಚಿಕಿತ್ಸೆ (ಸಿಎಬಿಜಿ) ನಡೆಸಲಾಯಿತು.
* ೨೦೦೩ರ ಜೂನ್೧೦-ಈ ದಿನದ ಹೊತ್ತಿಗೆ ೧೦೦ ಶಸ್ತ್ರ ಚಿಕಿತ್ಸೆಗಳನ್ನು ನಡೆಸಲಾಯಿತು.
* ೨೦೦೩ರ ಜೂನ್ ೨೮ -೨೫೦ ಶಸ್ತ್ರಕ್ರಿಯೆಗಳನ್ನು ಪೂರ್ಣಗೊಳಿಸಲಾಯಿತು. ಮುಖ್ಯಮಂತ್ರಿ ಎಸ್.ಎಂ. ಕೃಷ್ಣರಿಂದ ಸ್ಮಾರಕ ಏರ್ಪಡಿಸಲಾಯಿತು.
* ೨೦೦೪ರ ಆಗಸ್ಟ್ ೮ - ಈ ಯೋಜನೆಯಡಿಯಲ್ಲಿ ೧೦೩೪೪ ಶಸ್ತ್ರಕ್ರಿಯೆಗಳನ್ನು ಮಾಡಲಾಯಿತು.

ಈ ಲೇಖನವನ್ನು ಆಲ್ಬರ್ಟ್ ಐನ್‌ಸ್ಟೀನ್‌ರವರಿಂದ ಉದಾಹರಿಸುತ್ತಾ ಮುಕ್ತಾಯಗೊಳಿಸುತ್ತೇನೆ :

**ಪ್ರತಿದಿನ ನೂರಾರು ಸಂದರ್ಭಗಳಲ್ಲಿ ನನ್ನ ಮಾನಸಿಕ ಮತ್ತು ಭೌತಿಕ ಜೀವನವು ಇತರ ಬದುಕಿರುವ ಮತ್ತು ಸತ್ತಿರುವ ವ್ಯಕ್ತಿಗಳ ದುಡಿಮೆಯ ಮೇಲೆ ಅವಲಂಬಿಸಿದೆ ಎಂದು ನನಗೆ ನಾನು ಜ್ಞಾಪಿಸಿಕೊಳ್ಳುತ್ತೇನೆ. ನನ್ನನ್ನು ಪೋಷಿಸುವ ಆಹಾರವು ಇತರ ಜನರಿಂದ ಬೆಳೆಯಲ್ಪಟ್ಟಿದ್ದು, ನನ್ನ ಉಡುಪುಗಳನ್ನು ಇತರ ಜನರು ತಯಾರಿಸುವರು, ನಾನು ವಾಸಮಾಡುವ ಮನೆಯನ್ನು ಇತರರು ಕಟ್ಟಿದ್ದಾರೆ, ಹಾಗೆಯೇ ನಾನು ಪಡೆದಿರುವ ಜ್ಞಾನವನ್ನು ನನ್ನ ಬಾಲ್ಯಾವಸ್ಥೆಯಿಂದ ಇತರರಿಂದ ಪಡೆದು ಸಂಗ್ರಹಿಸಿದ್ದೇನೆ. ಆದ್ದರಿಂದ ನಾನು ಪಡೆದಿರುವುದನ್ನು ಮತ್ತು ಪಡೆಯುತ್ತಿರುವುದನ್ನು ಹಿಂದಿರುಗಿಸಲು ನಾನು ಪ್ರಯತ್ನಿಸಬೇಕು.**

**- ಆಲ್ಬರ್ಟ್ ಐನ್‌ಸ್ಟೀನ್**

●




# ಆರೋಗ್ಯ ರಕ್ಷಣೆಯಲ್ಲಿ ಸ್ವಯಂ ಸೇವಾ ಸಂಸ್ಥೆಗಳು

ಸುಭದ್ರ ವೆಂಕಟಪ್ಪ

ಮನುಷ್ಯ ಹುಟ್ಟಿದರೆ ಸಾಲದು, ಬದುಕಬೇಕು. ಬದುಕಿದರೆ ಸಾಲದು, ಬಾಳಬೇಕು. ಅದಕ್ಕಾಗಿ ಉತ್ತಮ ಆರೋಗ್ಯ ಬಹಳ ಮುಖ್ಯ. ಆರೋಗ್ಯವೆಂದರೆ ಕೇವಲ ರೋಗಗಳಿಂದ ಬಿಡುಗಡೆಯಲ್ಲ. ಅದು ಉತ್ತಮ ದೇಹದಾರ್ಢ್ಯ, ಸುಸ್ಥಿತಿ, ದೈಹಿಕ, ಮಾನಸಿಕ, ಸಾಮಾಜಿಕ ಮತ್ತು ಆಧ್ಯಾತ್ಮಿಕ ಸ್ಥಿತಿಗತಿಗಳನ್ನೆಲ್ಲಾ ಒಳಗೊಂಡಿದೆ. ಆರೋಗ್ಯವಿಲ್ಲದೆ ಯಾರೂ ಶ್ರೀಮಂತರಲ್ಲ, ಅದಕ್ಕಾಗಿಯೇ ಹೇಳುವುದು **ಆರೋಗ್ಯವೇ ನಿಜವಾದ ಭಾಗ್ಯ.**

ಸಾಮಾಜಿಕ ಮತ್ತು ಆರ್ಥಿಕವಾಗಿ ಉತ್ತಮ ಜೀವನವನ್ನು ನಡೆಸುವ ಅವಕಾಶವು ಜಗತ್ತಿನ ಎಲ್ಲಾ ಜನರಿಗೂ ದೊರೆಯಬೇಕಾಗಿದೆ ಎಂದು **ವಿಶ್ವ ಆರೋಗ್ಯ ಸಂಸ್ಥೆ** (World Health Organisation) ಹಂಬಲಿಸಿದೆ. ಜಗತ್ತಿನ ಶೇಕಡ ೮೦ ರಷ್ಟು ಜನರಿಗೆ ಇಂದು ಲಭ್ಯವಿರುವ ಆರೋಗ್ಯ ಸೌಲಭ್ಯಗಳು ಸರಿಯಾದ ರೀತಿಯಲ್ಲಿ ದೊರೆತು ಜನರು ತಮ್ಮ ಆರೋಗ್ಯ ರಕ್ಷಣೆಗೆ ಯೋಗ್ಯ ಅವಕಾಶಗಳನ್ನು ಪಡೆಯುತ್ತಾರೆಂದು ಆಶಿಸಿದೆ. ಒಳ್ಳೆಯ ಆರೋಗ್ಯ ಏನನ್ನಾದರೂ ತಾಳಿಕೊಳ್ಳಬಲ್ಲದಾದುದರಿಂದ ಆರೋಗ್ಯ ಸಂವರ್ಧನೆಯ ಕಾಲದಲ್ಲಿ ಪ್ರಾಥಮಿಕ ಆರೋಗ್ಯ ಸೇವೆಯು ಬಹಳ ಮುಖ್ಯವಾದುದು. ಹಿತಮಿತ ಪೌಷ್ಟಿಕ ಆಹಾರ, ಪರಿಶುದ್ಧ ನೀರು, ಪರಿಸರ ನೈರ್ಮಲ್ಯ, ವೈಯಕ್ತಿಕ ಶುಚಿತ್ವ, ತಾಯಿ ಮಕ್ಕಳ ಆರೋಗ್ಯ, ರೋಗ ನಿರೋಧಕ ಲಸಿಕೆ ನೀಡಿಕೆ, ರೋಗಗಳ ಚಿಕಿತ್ಸೆ, ಆರೋಗ್ಯ ರಕ್ಷಣೆಯ ತಿಳುವಳಿಕೆ ಇವುಗಳು ಪ್ರಾಥಮಿಕ ಆರೋಗ್ಯ ಸೇವೆಯ ಕಾರ್ಯದಿಂದ ಲಭಿಸುತ್ತವೆ.

> ***ಕಡೆಗಣಿಸಲ್ಪಟ್ಟಿರುವ ಹಿಂದುಳಿದ ಗ್ರಾಮಗಳಲ್ಲಿ ತಜ್ಞ ವೈದ್ಯರ ಸಹಾಯದಿಂದ ಉಚಿತ ಆರೋಗ್ಯ ತಪಾಸಣೆ ಮತ್ತು ಚಿಕಿತ್ಸಾ ಶಿಬಿರಗಳನ್ನು ಏರ್ಪಡಿಸಬೇಕು. ಇದಕ್ಕೆ ಸ್ಥಳೀಯ ಸೇವಾ ಸಂಸ್ಥೆಗಳನ್ನು ಬಳಸಿಕೊಳ್ಳುವುದು ತುಂಬಾ ಒಳ್ಳೆಯದು.***

ಆದರೂ ಆರೋಗ್ಯ ಕಾರ್ಯವು ನಿರೀಕ್ಷಿಸಿದಷ್ಟು ಫಲವನ್ನು ನೀಡುತ್ತಿಲ್ಲ. ಇದಕ್ಕೆ ಕಾರಣ ಜನತೆಯ ಮೌಢ್ಯ, ನಿಷ್ಕಾಳಜಿ, ಬೇಜವಾಬ್ದಾರಿತನಗಳು. ಇವುಗಳನ್ನು ಹೋಗಲಾಡಿಸಲು ಸರ್ಕಾರ ಕೈಗೊಳ್ಳುವ ಆರೋಗ್ಯಾಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಸಕ್ರಿಯ ಪಾತ್ರವಹಿಸಬೇಕಾಗಿದೆ. ಈ ದಿಸೆಯಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಎರಡು ರೀತಿಯಲ್ಲಿ ಕೆಲಸ ಮಾಡಲು ಅವಕಾಶವಿದೆ. ಅವುಗಳೆಂದರೆ ಶಿಕ್ಷಣ ಮತ್ತು ಸೇವಾ ಕಾರ್ಯಗಳು.ಆರೋಗ್ಯ ಸಂರಕ್ಷಣೆಯ ಕಾರ್ಯಕ್ರಮಗಳು ಯಶಸ್ವಿಯಾಗಲು ಆರೋಗ್ಯ ಶಿಕ್ಷಣವು ಪ್ರಮುಖ ಪಾತ್ರವಹಿಸುತ್ತದೆ. ಆರೋಗ್ಯಕ್ಕೆ ಸಂಬಂಧಪಟ್ಟ ಸಮಾಚಾರವನ್ನು ಪ್ರಚಾರ ಮಾಡಿ ಜನರು ವಿಚಾರವಂತರಾದಾಗ ತಾವಾಗಿಯೇ ತಮ್ಮ ಆರೋಗ್ಯ

ಉತ್ತಮಗೊಳಿಸಿಕೊಳ್ಳಲು ಮುಂದಾಗುತ್ತಾರೆ. ಜನನ ಮರಣಗಳು, ಸಾವು ನೋವುಗಳು, ರೋಗ ರುಜಿನಗಳು, ಮಕ್ಕಳು ಇತ್ಯಾದಿ ದೇವರ ವಿಧಿಲಿಖಿತದಿಂದ ಉಂಟಾಗಿದೆ ಎಂಬುದು ಭಾರತೀಯರ ತಾತ್ವಿಕ ನಿಲುವಾಗಿದೆ. ಈ ಸೈದ್ಧಾಂತಿಕ, ತಾತ್ವಿಕ ದೃಷ್ಟಿಕೋನ ತುರ್ತಾಗಿ ಬದಲಾಗಬೇಕಾಗಿದೆ. ಇದಕ್ಕಾಗಿ ಶೈಕ್ಷಣಿಕ ಕಾರ್ಯಕ್ರಮಗಳಾದ ಸಾಮೂಹಿಕ ಸಭೆ, ಚಲನಚಿತ್ರ ಪ್ರದರ್ಶನ, ವಸ್ತು ಪ್ರದರ್ಶನ, ತಜ್ಞರಿಂದ ಉಪನ್ಯಾಸ, ಗುಂಪು ಚರ್ಚೆ ಇತ್ಯಾದಿಗಳನ್ನು ಸ್ವಯಂ ಸೇವಾ ಸಂಸ್ಥೆಗಳು ಗ್ರಾಮಗಳಲ್ಲಿ ಆಗಾಗ ಏರ್ಪಡಿಸಬೇಕು.

ಇಂದಿನ ಜನತೆಯ ಜೀವನ ಶೈಲಿ, ಜೀವನ ವಿಧಾನಗಳು ಜನಸಂಖ್ಯಾ ನಿಯಂತ್ರಣಕ್ಕೆ ಮತ್ತು ಆರೋಗ್ಯಕರ ಜೀವನಕ್ಕೆ ಪೂರಕವಾಗಿಲ್ಲ ಬದಲಿಗೆ ಮಾರಕವಾಗಿವೆ. ನಮ್ಮ ಸಾಮಾಜಿಕ ವ್ಯವಸ್ಥೆ ಕುಸಿದಿದೆ. ಪರಿಸರದ ಕಡೆಗಣೆಸುವಿಕೆಯಿಂದಾಗಿ ಸಾರ್ವಜನಿಕ ಆರೋಗ್ಯ ಹದಗೆಟ್ಟಿದೆ. ಇದರಿಂದ ಉತ್ತಮ ಗುಣಮಟ್ಟದ ಜೀವನ ದೊರೆಯದೆ ಜನರು ಅನೇಕ ಮಾರಕ ರೋಗಗಳನ್ನು ಎದುರಿಸುವಂತಾಗಿ ಶಿಶು ಮರಣ ಹೆಚ್ಚಾಗಿ ಆಯುರ್ಮಾನ ನಿರೀಕ್ಷೆ ಕುಸಿದಿದೆ. ಮರಗಳನ್ನು ಕಡಿಯುವುದನ್ನು ನಿಲ್ಲಿಸಿ, ಒಳ್ಳೆಯ ಗಾಳಿ, ವಾತಾವರಣಕ್ಕೆ ಗಿಡಮರಗಳನ್ನು ನೆಟ್ಟು, ಬೆಳೆಸಿ ಸಂರಕ್ಷಿಸುವ ಜವಾಬ್ದಾರಿ ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಬೇಕು.

ಸಮಗ್ರ ತಾಯಿ-ಮಗುವಿನ ಆರೋಗ್ಯ ರಕ್ಷಣೆ ಸಾರ್ವಜನಿಕ ಆರೋಗ್ಯ ಸೇವೆಯ ಅವಿಭಾಜ್ಯ ಅಂಗವಾಗಬೇಕು. ಮಿತಸಂತಾನ, ಸಾರ್ವಜನಿಕ ಆರೋಗ್ಯ ಪರಸ್ಪರ ಪೂರಕವಾಗಿದೆ ಎಂದು ಜನತೆಗೆ ತಿಳಿಸಬೇಕು. ಪ್ರತಿಯೊಬ್ಬ ವ್ಯಕ್ತಿಯು ಉತ್ತಮ ಆರೋಗ್ಯದಿಂದಿದ್ದು ಇಡೀ ಕುಟುಂಬ, ಸಮಾಜ ಆರೋಗ್ಯವಂತರಾಗಿದ್ದರೆ ಬಲಿಷ್ಠ ರಾಷ್ಟ್ರವಾಗಲು ಬುನಾದಿಯಾಗುತ್ತದೆ. ಶಾಲಾ ಕಾಲೇಜುಗಳಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಆರೋಗ್ಯ ವಿಷಯದ ಬಗ್ಗೆ ತಿಳಿವಳಿಕೆ ಮತ್ತು ಆರೋಗ್ಯ ತಪಾಸಣಾ ಶಿಬಿರಗಳನ್ನು ಏರ್ಪಡಿಸಿ ಉತ್ತಮ ಸೇವೆಯನ್ನು ನೀಡಬಹುದು. ಯುವಕ, ಮಹಿಳಾ ಮಂಡಳಿಗಳ ಸದಸ್ಯರುಗಳು ಶ್ರಮದಾನದ ಮೂಲಕ ಊರಿನ ಬೀದಿಗಳ ಚರಂಡಿಗಳ ಸ್ವಚ್ಛತೆ, ಕುಡಿಯುವ ನೀರಿನ ಶುದ್ಧೀಕರಣ, ಬೋರ್‌ವೆಲ್ಲುಗಳ ಸುತ್ತಮುತ್ತ ಶುಚಿಗೊಳಿಸುವ ಕಾರ್ಯಕ್ರಮಗಳನ್ನು ಆಗಾಗ ಕೈಗೊಳ್ಳುವುದರಿಂದ ಪರಿಸರ ನೈರ್ಮಲ್ಯ ಕೆಡದೆ ಒಳ್ಳೆಯ ಆರೋಗ್ಯ ಮತ್ತು ಆರೋಗ್ಯಕರ ಜೀವನಕ್ಕೆ ನಾಂದಿಯಾಗುತ್ತದೆ.

ಕಡೆಗಣೆಸಲ್ಪಟ್ಟ, ಹಿಂದುಳಿದ ಮತ್ತು ಆರೋಗ್ಯ ಸೇವೆಯು ಹೆಚ್ಚು ಅಗತ್ಯತೆ ಇರುವ ಗ್ರಾಮಗಳನ್ನು ಗುರುತಿಸಿ ಆ ಗ್ರಾಮಗಳಲ್ಲಿ ತಜ್ಞ ವೈದ್ಯರುಗಳ ಸಹಾಯದಿಂದ ಉಚಿತ ಆರೋಗ್ಯ ತಪಾಸಣೆ ಮತ್ತು ಚಿಕಿತ್ಸಾ ಶಿಬಿರಗಳನ್ನು ಏರ್ಪಡಿಸಿ ಜನತೆಗೆ ಉತ್ತಮ ಆರೋಗ್ಯ ಸೇವೆಯನ್ನು ಒದಗಿಸಬೇಕು. ಈ ಕಾರ್ಯದಲ್ಲಿ ಸ್ಥಳೀಯ ರೋಟರಿ, ಲಯನ್ಸ್, ಜೇಸಿಸ್, ಇನ್ನರ್‌ವೀಲ್ ಕ್ಲಬ್‌ಗಳ ಸಹಕಾರವನ್ನು ಪಡೆಯಬಹುದು. ಔಷಧಿ ತಯಾರಿಕೆ ಕಂಪನಿ ಮತ್ತು ದಾನಿಗಳಿಂದ ಔಷಧಿಗಳನ್ನು ಸಂಗ್ರಹಿಸಿ ಈ ರೀತಿಯ ಶಿಬಿರಗಳ ಮೂಲಕ ಅಗತ್ಯವಿರುವ ರೋಗಿಗಳಿಗೆ ಉಚಿತವಾಗಿ ನೀಡುವ ಕಾರ್ಯವನ್ನು ಗ್ರಾಮ ಪಂಚಾಯತಿ, ಯುವಕ, ಮಹಿಳಾ ಮಂಡಲಿಗಳು ಮಾಡಬಹುದು. ಗ್ರಾಮಗಳಿಗೆ ವೈದ್ಯರು, ಆರೋಗ್ಯ ಕಾರ್ಯಕರ್ತರು ಭೇಟಿ ನೀಡಿದಾಗ ಅವರಿಗೆ ಜನರು ಸಹಕರಿಸಲು ಮತ್ತು ಸೂಕ್ತ ಸಮಯದಲ್ಲಿ ಸೇವಾ ಸೌಲಭ್ಯಗಳನ್ನು ಜನರಿಗೆ ಸಮರ್ಪಕವಾಗಿ ಸಿಗಲು ಸ್ವಯಂ ಸೇವಾ ಸಂಸ್ಥೆಗಳು ಮಹತ್ತರ ಪಾತ್ರವಹಿಸಬೇಕಾಗಿದೆ.

ಕಾಲರಾ, ಮಲೇರಿಯಾ, ಮೆದುಳು ಜ್ವರ, ಡೆಂಗ್ಯೂ ಜ್ವರ ಇತ್ಯಾದಿ ರೋಗಗಳು ಬರದಂತೆ ಹರಡದಂತೆ ಮುನ್ನೆಚ್ಚರಿಕೆ ಹಾಗೂ ಖಾಯಿಲೆ ಹರಡಿದಾಗ ನಿಯಂತ್ರಿಸುವ ಕಾರ್ಯಕ್ರಮಗಳನ್ನು ಸ್ವಯಂ ಸೇವಾ ಸಂಸ್ಥೆಗಳು ಕೈಗೊಳ್ಳಬೇಕು. ಆಗಾಗ ಆರೋಗ್ಯವಂತ ಮಕ್ಕಳ ಪ್ರದರ್ಶನಗಳನ್ನು ಏರ್ಪಡಿಸಿ ಉತ್ತಮ ಆರೋಗ್ಯವಂತ ಮಕ್ಕಳಿಗೆ ಬಹುಮಾನಗಳನ್ನು ನೀಡಿ ಉತ್ತಮ ಆರೋಗ್ಯಕ್ಕೆ ಉತ್ತೇಜನವನ್ನು ಸ್ವಯಂ ಸೇವಾ ಸಂಸ್ಥೆಗಳು ನೀಡಬೇಕು. ಬಳಸಿದ ನೀರು ನಿಲ್ಲದಂತೆ ಹೀರಿಕೊಳ್ಳಲು ಬಚ್ಚಲು ನಿರ್ಮಾಣ, ಕಾಂಪೋಸ್ಟ್ ಗುಂಡಿಗಳ ರಚನೆ, ಕೈತೋಟಗಳ ನಿರ್ಮಾಣ ಇತ್ಯಾದಿಗಳ ಬಗ್ಗೆ ಜನರಿಗೆ ಅರಿವು ಮೂಡಿಸಿ ಕಾರ್ಯತತ್ಪರರಾಗಿರಲು ಸಮುದಾಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

ಏಡ್ಸ್ ವಿಶ್ವದಾದ್ಯಂತ ಮಾನವರನ್ನು ಕಾಡುತ್ತಿರುವ ಮಾರಕ ರೋಗ. ಇಂದು ತಂತ್ರಜ್ಞಾನ ನಾಗಾಲೋಟದಲ್ಲಿ ಅಭಿವೃದ್ಧಿಯಾದಂತೆ ಜನತೆಯ ಸಂಚಾರ, ಸಂಪರ್ಕವೂ ಹೆಚ್ಚಾಯಿತು. ಆದ್ದರಿಂದ ಏಡ್ಸ್ ರೋಗವು ನಿರೀಕ್ಷೆಗಿಂತಲೂ ಮುಂಚಿತವಾಗಿ ನಮ್ಮ ದೇಶಕ್ಕೆ ಹೆಜ್ಜೆ ಇಟ್ಟಿದೆ. ಆದುದರಿಂದ ಈ ರೋಗದ ಬಗ್ಗೆ ವ್ಯಾಪಕ ತಿಳುವಳಿಕೆಯ, ಸಮಾಲೋಚನೆಯ ಬಗ್ಗೆ ಕಾರ್ಯಕ್ರಮಗಳನ್ನು ಗ್ರಾಮಗಳಲ್ಲಿ ಸ್ವಯಂಸೇವಾ ಸಂಸ್ಥೆಗಳು ಏರ್ಪಡಿಸಬೇಕು. ಕೆಟ್ಟ ಚಟಗಳಾದ ಮದ್ಯಪಾನ, ಧೂಮಪಾನ ಮತ್ತು ಮಾದಕ ದ್ರವ್ಯಗಳ ಸೇವನೆಯಿಂದ

ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುವುದರಿಂದ ಈ ಚಟಗಳಿಂದ ಜನರು ದೂರವಿರಲು ವ್ಯಾಪಕ ತಿಳುವಳಿಕೆಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು.

ಬಡಜನರಿಗೆ, ನಿರ್ಗತಿಕರಿಗೆ, ಗುಡ್ಡಗಾಡು ಜನರಿಗೆ ಅತಿ ಸಮೀಪದ, ಸಮರ್ಪಕವಾದ ಕೈಗೆಟುಕುವ ಆರೋಗ್ಯ ಸೇವೆಗಳನ್ನು ಸ್ವಯಂ ಸೇವಾ ಸಂಸ್ಥೆಗಳು ಒದಗಿಸಬೇಕು. ಈ ದಿಸೆಯಲ್ಲಿ **ಸಂಚಾರಿ ವೈದ್ಯಕೀಯ ಸೇವೆಯನ್ನು** ಗ್ರಾಮಾಂತರ ಪ್ರದೇಶಗಳಲ್ಲಿ ತೆರೆಯಬೇಕು. ಸ್ವಯಂ ಪ್ರೇರಣೆಯ ಆಧಾರದ ಮೇಲೆ ಸಣ್ಣ ಕುಟುಂಬದ ಸೂತ್ರವನ್ನು ಸ್ವೀಕರಿಸುವಂತೆ ಜನರನ್ನು ಮನವೊಲಿಸಲು ತನ್ನ ಕಾರ್ಯಕ್ಷೇತ್ರಗಳಲ್ಲಿ ಜಾಥಾಗಳು, ಪ್ರಚಾರಾಂದೋಲನಗಳು ಮತ್ತು ಶಿಬಿರಗಳನ್ನು ನಡೆಸಬೇಕು. ಗರ್ಭಿಣಿ, ಬಾಣಂತಿಯರ ಆರೋಗ್ಯ ತಪಾಸಣೆ ಮತ್ತು ಆರೈಕೆಯಲ್ಲಿ ಉತ್ತಮ ಗುಣಮಟ್ಟದ ಸೇವೆಯನ್ನು ನೀಡಬೇಕು. ವಿವಾಹ ಪೂರ್ವ ಮತ್ತು ನಂತರದ ಸಮಸ್ಯೆಗಳ ಪರಿಹಾರಕ್ಕಾಗಿ ದಂಪತಿಗಳಿಗೆ ಸಮಾಲೋಚನೆಯ ಮೂಲಕ ತಿಳುವಳಿಕೆ ನೀಡುವುದಲ್ಲದೆ, ಲೈಂಗಿಕ ಆರೋಗ್ಯ ಶಿಕ್ಷಣವನ್ನು ವ್ಯಾಪಕವಾಗಿ ನೀಡಲು ಸ್ವಯಂ ಸೇವಾ ಸಂಸ್ಥೆಗಳು ಶ್ರಮಿಸಬೇಕು.

ಆರೋಗ್ಯವಂತ ಮನುಷ್ಯನಿಗೆ ಎಲ್ಲವೂ ಆರೋಗ್ಯಕರ. ಆರೋಗ್ಯ ಒಂದು ಅಮೂಲ್ಯ ಆಸ್ತಿ. ಅದಕ್ಕಾಗಿ ನಾವೆಲ್ಲರೂ ಶ್ರಮಿಸ ಬೇಕಾಗಿರುವುದು ನಮ್ಮ ಆದ್ಯ ಕರ್ತವ್ಯ. ಈ ನಿಟ್ಟಿನಲ್ಲಿ ಸರ್ಕಾರದೊಡನೆ ಸ್ವಯಂಸೇವಾ ಸಂಸ್ಥೆಗಳು ಸಹಕರಿಸಿ ಜನತೆಗೆ ಉತ್ತಮ ಆರೋಗ್ಯ ನೀಡಲು ಸಮರೋಪಾದಿಯಲ್ಲಿ ಸಹಕಾರ ನೀಡಬೇಕಾಗಿದೆ. **ಆಗ ಜನತೆಯ ಆರೋಗ್ಯ ಸಂಪತ್ತೇ ದೇಶದ ದೊಡ್ಡ ಆಸ್ತಿಯಂತೆ ಸಾಕಾರವಾಗುವುದರಲ್ಲಿ ಸಂಶಯವಿಲ್ಲ.**

●






# ವಸತಿ ಕ್ಷೇತ್ರದಲ್ಲಿ ಕ್ರಾಂತಿ

ಎನ್. ಶಿವಶೈಲಂ
ಸಿ. ವೀರಭದ್ರಯ್ಯ

ಕರ್ನಾಟಕ ರಾಜ್ಯವು ದೇಶದಲ್ಲಿಯೇ ಒಂದು ಪ್ರಗತಿಪರ ರಾಜ್ಯವಾಗಿದ್ದು ಸಾಮಾನ್ಯ ಜನರ ಜೀವನೋಪಾಯವನ್ನು ಹಸನುಗೊಳಿಸುವ ದೃಷ್ಟಿಯಿಂದ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಇದರಲ್ಲಿ ಅತಿ ಮುಖ್ಯವಾದ ಮತ್ತು ಕ್ರಾಂತಿಕಾರಕ ಹೆಜ್ಜೆ ಎಂದರೆ ಆರ್ಥಿಕವಾಗಿ ಹಿಂದುಳಿದ ಎಲ್ಲಾ ವರ್ಗಗಳ ವಸತಿ ರಹಿತರಿಗೆ ವಸತಿಯನ್ನು ಕಲ್ಪಿಸುವ ಆಶೋತ್ತರವನ್ನು ಹೊಂದಿರುವುದು. ೧೯೯೧ರ ಜನಗಣತಿಯ ಆಧಾರದ ಮೇಲೆ ಲಭ್ಯವಿರುವ ಅಂಕಿ ಅಂಶಗಳ ಪ್ರಕಾರ ಸುಮಾರು ೧೧ ಲಕ್ಷ ಜನರಿಗೆ ವಸತಿ ಯೋಗ್ಯವಾದ ಮನೆಗಳು ಇಲ್ಲವೆಂಬ ಅಂದಾಜಿದೆ. ಅದರಂತೆಯೇ ನೂತನ ಸರ್ಕಾರವು ಈ ಎಲ್ಲಾ ಜನರಿಗೆ ವಸತಿ ಕಲ್ಪಿಸುವ ದೂರದೃಷ್ಟಿಯನ್ನು ಹೊಂದಿದ್ದು ಅದರ ಅನುಷ್ಠಾನಕ್ಕಾಗಿ ಪ್ರಭಾವಿ ಕಾರ್ಯಕ್ರಮಗಳನ್ನು ರೂಪಿಸಿದೆ. ಮಾಜಿ ಮುಖ್ಯಮಂತ್ರಿಗಳಾದ ಎಸ್.ಎಂ. ಕೃಷ್ಣರವರು ಒಮ್ಮೆ ಹೇಳಿದಂತೆ "ಇದುವರೆವಿಗೂ ವಸತಿಯನ್ನು ಜನರ ಕಲ್ಯಾಣ ಕಾರ್ಯಕ್ರಮವೆಂದು ಭಾವಿಸಲಾಗಿತ್ತು. ಆದರೆ ನನ್ನ ಸರ್ಕಾರವು ಇದಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದು ಇದೊಂದು ಆರ್ಥಿಕ ಬೆಳವಣಿಗೆಯ ಸಾಧನ" ಎಂಬ ಅಂಶವು ದಾರಿದೀಪದಂತಿದೆ. ಇಷ್ಟೊಂದು ಮಹತ್ತರವಾದ, ಅಗಾಧವಾದ ಗುರಿಯನ್ನು ಇಟ್ಟುಕೊಂಡಿದ್ದು ಇದನ್ನು ಕಾಲಮಿತಿಯೊಳಗೆ ಸಾಕಾರಗೊಳಿಸುವ ಯೋಜನೆಗಳನ್ನು ರೂಪಿಸಿ ಅನುಷ್ಠಾನಗೊಳಿಸುವ ಕಾರ್ಯಗಳು ಈಗ ಎಡೆಬಿಡದೆ ಭರದಿಂದ ಕ್ರಾಂತಿಕಾರಕ ರೂಪದಲ್ಲಿ ರಾಜ್ಯದಾದ್ಯಂತ ನಡೆಯುತ್ತಿವೆ.

**ಇದುವರೆಗೆ ವಸತಿಯನ್ನು ಜನರ ಕಲ್ಯಾಣ ಕಾರ್ಯಕ್ರಮ ಎಂದು ಭಾವಿಸಲಾಗಿತ್ತು. ಆದರೆ ಸರ್ಕಾರ ಇನ್ನು ಮುಂದೆ ಅದಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಿ, ಅದನ್ನು ಆರ್ಥಿಕ ಬೆಳವಣಿಗೆಯ ಸಾಧನ ಎಂದು ಪರಿಗಣಿಸಿದೆ. 'ಎಲ್ಲರಿಗೂ ಸೂರು' ಎಂಬುದು ನಮ್ಮ ಧ್ಯೇಯ ವಾಕ್ಯ.**

ಸುಮಾರು ೧೫ ವರ್ಷಗಳಿಂದ ವಸತಿ ರಹಿತ ಬಡ ಜನರಿಗಾಗಿ ಮನೆಗಳನ್ನು ನಿರ್ಮಿಸಿಕೊಡುವ ಕಾರ್ಯವನ್ನು ವಿವಿಧ ಇಲಾಖೆಗಳ ಮೂಲಕ ನಡೆಸಿಕೊಂಡು ಬರಲಾಗುತ್ತಿದೆ. ಇಂತಹ ಎಲ್ಲಾ ಯೋಜನೆಗಳು ಫಲಪ್ರದವಾಗಿ ನಡೆದಿವೆಯಾದರೂ ಮೊದಲ ೧೦ ವರ್ಷಗಳಲ್ಲಿ ಸುಮಾರು ೨,೫೦,೦೦೦ ಜನರಿಗೆ ಮಾತ್ರ ವಸತಿ ಒದಗಿಸಲು ಸಾಧ್ಯವಾಗಿದೆ. ಆದರೆ ಪ್ರಸ್ತುತ ಸರ್ಕಾರವು ಕೇವಲ ೫ ವರ್ಷಗಳಲ್ಲಿ ೧೧ ಲಕ್ಷ ಮನೆಗಳನ್ನು ನಿರ್ಮಿಸುವ ಅಗಾಧವಾದ ಗುರಿಯನ್ನು ಹೊಂದಿರುವುದರಿಂದ, ಈ ಗುರಿಯ ಅನುಷ್ಠಾನವನ್ನು ಸಾಕಾರಗೊಳಿಸುವ ಸಲುವಾಗಿ ಒಂದು ಪ್ರತ್ಯೇಕ ಸಂಸ್ಥೆಯನ್ನು ಸ್ಥಾಪಿಸಲು ಉದ್ದೇಶಿಸಿ ಅದರಂತೆ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ಎಂಬ ಸಾರ್ವಜನಿಕ ಕಂಪನಿಯನ್ನು

೨೦.೦೪.೨೦೦೦ರಂದು ಹುಟ್ಟುಹಾಕಲಾಯಿತು. ಈ ಸಂಸ್ಥೆಯು ಸರ್ಕಾರದ ಧ್ಯೇಯೋದ್ದೇಶಗಳನ್ನು ಕಾಲಬದ್ಧವಾಗಿ, ವಸತಿರಹಿತ ಬಡ ಜನರಿಗಾಗಿ ವಸತಿ ನಿರ್ಮಿಸುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅದಕ್ಕೆ ಅವಶ್ಯಕವಾದ ಹಣಕಾಸನ್ನು ವಿವಿಧ ಸಂಸ್ಥೆಗಳು ಮತ್ತು ಸರ್ಕಾರದಿಂದ ಪಡೆದು ಕಾಲಕಾಲಕ್ಕೆ ಹಣಕಾಸು ಬಿಡುಗಡೆ ಮಾಡುವ ಮೂಲಕ ನಿಯಮಿತವಾಗಿ ಮನೆಗಳನ್ನು ನಿರ್ಮಿಸಿ ಮನೆಗಳಲ್ಲಿ ಜನರು ವಾಸವಾಗುವಂತೆ ಮಾಡುವುದಕ್ಕೆ ಕಾರ್ಯಕ್ರಮಗಳನ್ನು ರೂಪಿಸಿದೆ. ಇಷ್ಟೇ ಅಲ್ಲದೆ, ವಸತಿ ಕಾರ್ಯಕ್ರಮಗಳಲ್ಲಿ ಸಾಲ ಪಡೆದಿರುವ ಫಲಾನುಭವಿಗಳಿಂದ ಅವರಿಗೆ ಸಹಕಾರವಾಗುವ ಮಾದರಿಯಲ್ಲಿ ಸಾಲ ವಸೂಲಿ ವ್ಯವಸ್ಥೆಯನ್ನು ಅಣಿಗೊಳಿಸಿ ಸಾಲ ವಸೂಲಿ ಕಾರ್ಯಕ್ರಮಗಳನ್ನು ಸಹ ಪ್ರಾರಂಭಿಸಿದೆ. ಈ ನಿಗಮದ ಅತ್ಯಂತ ಪ್ರಮುಖ ಧ್ಯೇಯೋದ್ದೇಶಗಳಲ್ಲಿ ಇದು ಒಂದಾಗಿದೆ.

## ನಿಗಮದ ಕೆಲಸ ಕಾರ್ಯಗಳು :

ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಆರ್ಥಿಕವಾಗಿ ಹಿಂದುಳಿದ ಜನರಿಗಾಗಿ ಮತ್ತು ವಿಶೇಷ ಉದ್ಯೋಗ ಗುಂಪುಗಳಿಗೆ ಸೇರಿದ ನೇಕಾರರು, ಬೀಡಿ ಕಾರ್ಮಿಕರು, ಮೀನುಗಾರರು, ಹಮಾಲರು ಮುಂತಾದ ಜನರಿಗಾಗಿ ವಸತಿ ಕಾರ್ಯಕ್ರಮವನ್ನು ರೂಪಿಸಿ ಅನುಷ್ಠಾನಗೊಳಿಸುವುದು ಹಾಗೂ ಈ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಇತರೆ ಯಾವುದೇ ಪೂರಕ ವ್ಯವಸ್ಥೆಯನ್ನು ಮಾಡುವುದು ನಿಗಮದ ಕೆಲಸ ಕಾರ್ಯಗಳ ವ್ಯಾಪ್ತಿಯಲ್ಲಿ ಇರುತ್ತದೆ. ಸರ್ಕಾರದ ನಿರ್ದೇಶನದ ಮೇಲೆ ಈ ಕೆಳಗಿನ ವಸತಿ ಯೋಜನೆಗಳನ್ನು ವಸತಿ ರಹಿತ ಜನರಿಗಾಗಿ ಹಮ್ಮಿಕೊಳ್ಳಲಾಗಿದೆ.

**ಗ್ರಾಮೀಣ ಆಶ್ರಯ** : ಬಡತನ ರೇಖೆಗಿಂತ ಕೆಳಗಿನ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ವಸತಿ ರಹಿತ ಜನರಿಗಾಗಿ.

**ನವಗ್ರಾಮ ಆಶ್ರಯ ಯೋಜನೆ** : ಗ್ರಾಮೀಣ ಪ್ರದೇಶದಲ್ಲಿ ಜನಸಂದಣಿಯ ಸಮಸ್ಯೆ ನಿವಾರಿಸಿ ಆಧುನಿಕ ಮೂಲಭೂತ ಸೌಲಭ್ಯಗಳನ್ನು ಒದಗಿಸಿ ಸಣ್ಣ ಪಟ್ಟಣಗಳ ಮಾದರಿ ವ್ಯವಸ್ಥೆಯನ್ನು ಕಲ್ಪಿಸುವುದಕ್ಕಾಗಿ.

**ನಗರ ಆಶ್ರಯ** : ನಗರ ಪ್ರದೇಶಗಳಲ್ಲಿ ವಾಸಿಸುವ ಆರ್ಥಿಕವಾಗಿ ಹಿಂದುಳಿದ ವಸತಿ ರಹಿತ ಫಲಾನುಭವಿಗಳಿಗಾಗಿ.

**ಗ್ರಾಮೀಣ ಮತ್ತು ನಗರ ಆಶ್ರಯ ನಿವೇಶನಗಳು** : ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ವಾಸಿಸುವವರಿಗೆ ಮನೆ ಅಥವಾ ನಿವೇಶನ ಇಲ್ಲದವರಿಗೆ ಉಚಿತವಾಗಿ ನಿವೇಶನ ಒದಗಿಸುವ ಸಲುವಾಗಿ.

**ಅಂಬೇಡ್ಕರ್ ವಸತಿ ಯೋಜನೆ** : ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿರುವ ವಸತಿ ರಹಿತ ಜನರಿಗಾಗಿ ವಸತಿ ಕಲ್ಪಿಸುವ ಸಲುವಾಗಿ.

**ನೆರಳಿನ ಭಾಗ್ಯ** : ಗ್ರಾಮೀಣ ಪ್ರದೇಶದಲ್ಲಿ ಕಚ್ಚಾ ಛಾವಣಿ ಮನೆಗಳಲ್ಲಿ ವಾಸಿಸುವ ಜನರಿಗಾಗಿ ಪಕ್ಕಾ ಛಾವಣಿ ಒದಗಿಸುವ ಸಲುವಾಗಿ.

**ವಿಶೇಷ ಉದ್ಯೋಗ ಗುಂಪಿನ ಯೋಜನೆ** : ಕುಶಲ ಕರ್ಮಿಗಳು, ನೇಕಾರರು, ಚಮ್ಮಾರರು ಹಾಗೂ ಇತರೆ ಆಯ್ದ ಉದ್ಯೋಗ ಗುಂಪುಗಳಿಗೆ ಸೇರಿದ ಜನರ ವಿಶೇಷ ಅವಶ್ಯಕತೆಗಳಿಗೆ ಅನುಗುಣವಾಗಿ ಮನೆಗಳನ್ನು ನಿರ್ಮಿಸಿಕೊಡುವ ಸಲುವಾಗಿ.

ಮೇಲ್ಕಂಡ ಪ್ರಮುಖ ಯೋಜನೆಗಳ ಜೊತೆ ಜೊತೆಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರ ಆಗಿಂದಾಗ್ಗೆ ಮಂಜೂರು ಮಾಡಿರುವ ಸಾಲ ಮತ್ತು ಸಹಾಯಧನ ಯೋಜನೆ, ಕೇಂದ್ರ ಸರ್ಕಾರದ ವಿಶೇಷ ಅಧಿಕ ಧನಸಹಾಯದಿಂದ ಗ್ರಾಮೀಣ ಪ್ರದೇಶದಲ್ಲಿ ಮನೆಗಳ ನಿರ್ಮಾಣ ಯೋಜನೆ ಇತ್ಯಾದಿ ಯೋಜನೆಗಳನ್ನು ಹಮ್ಮಿಕೊಂಡಿದ್ದು ಈ ಯೋಜನೆಗಳು ಫಲಪ್ರದವಾಗಿ ಅನುಷ್ಠಾನಗೊಳ್ಳುವ ದೃಷ್ಟಿಯಿಂದ ವಿವಿಧ ಮತ್ತು ಸರಳವಾದ ನೀತಿ ನಿಯಮಗಳನ್ನು ರೂಪಿಸಿ ಕಾಲಬದ್ಧವಾಗಿ ಮನೆಗಳನ್ನು ನಿರ್ಮಿಸಿ ಜನರು ವಾಸಿಸುವಂತೆ ನೋಡಿಕೊಳ್ಳುವುದು ಈ ನಿಗಮದ ಪ್ರಮುಖ ಕಾರ್ಯವಾಗಿದೆ. ಈ ಮೇಲ್ಕಂಡ ಯೋಜನೆಗಳನ್ನು ಈಗಾಗಲೇ ವಿವಿಧ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಸರ್ಕಾರವು ಪ್ರತಿ ವರ್ಷ ಈ ಯೋಜನೆಗಳಡಿಯಲ್ಲಿ ಅಂದಾಜು ೨ ಲಕ್ಷ ಮನೆಗಳ ಗುರಿಯನ್ನು ನೀಡುತ್ತಿದ್ದು ವಿವಿಧ ವಿಧಾನಸಭಾ ಕ್ಷೇತ್ರಗಳಲ್ಲಿ ಹಾಗೂ ತಾಲ್ಲೂಕುಗಳಲ್ಲಿ ಆಶ್ರಯ ಸಮಿತಿಗಳ ಮೂಲಕ ಫಲಾನುಭವಿಗಳನ್ನು ಆಯ್ಕೆ ಮಾಡಿ ಅವರು ಮನೆಗಳನ್ನು ಸ್ವತಃ ನಿರ್ಮಿಸಿಕೊಳ್ಳಲು ಸಾಧ್ಯವಿಲ್ಲವೆಂದು ಲಿಖಿತವಾಗಿ ತಿಳಿಸಿದಲ್ಲಿ ಅವರಿಗೆ ನಿಗಮದ ಮೂಲಕ ಮನೆಗಳನ್ನು ನಿರ್ಮಿಸಿಕೊಡುವ ಕೆಲಸವನ್ನು ಮಾಡಲಾಗುತ್ತಿದೆ.

## ನಿಗಮದ ಹೊಸ ಹೆಜ್ಜೆಗಳು :

ಸರ್ಕಾರದ ಆಣತಿಯಂತೆ ೧೧ ಲಕ್ಷಗಳ ಮನೆಗಳನ್ನು ನಿರ್ಮಿಸಬೇಕಾದಲ್ಲಿ ನಿಗಮದ ಸ್ಥಾಪನೆಯ ಪೂರ್ವದಲ್ಲಿ ಅನುಸರಿಸಲಾಗುತ್ತಿದ್ದ ನಿಯಮಾವಳಿಗಳು ಸಾಕಷ್ಟು ಫಲಪ್ರದವಾಗದೆ ಇದ್ದುದರಿಂದ ಮತ್ತು ಪ್ರತಿ ವರ್ಷ ಕನಿಷ್ಟ ೨ ಲಕ್ಷಗಳ ಮನೆಗಳ ನಿರ್ಮಾಣ ಕಾರ್ಯದ ಹೊಣೆಯನ್ನು ನೆರವೇರಿಸಬೇಕಾಗಿರುವುದರಿಂದ ಸಂಸ್ಥೆಯು ವಿವಿಧ ನೂತನ ಕಾರ್ಯ ವಿಧಾನಗಳನ್ನು ಸೃಷ್ಟಿಸಿ ಅನುಷ್ಠಾನಗೊಳಿಸುತ್ತಿದೆ. ಅವುಗಳಲ್ಲಿ ಪ್ರಮುಖವಾದ ಹೆಜ್ಜೆಗಳೆಂದರೆ:

೧. ನಿಗಮವು ದಕ್ಷತೆ ಮತ್ತು ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸಲು ಅನುಕೂಲವಾಗುವಂತೆ ಮಾದರಿ ತಂತ್ರಜ್ಞಾನವನ್ನು ಬಳಕೆ ಮಾಡಿರುವುದು.

೨. ಫಲಾನುಭವಿಯು ತನ್ನ ಮನೆಯನ್ನು ತಾನೇ ಕಟ್ಟಿಕೊಳ್ಳಲು ಪ್ರೋತ್ಸಾಹ ನೀಡಲಾಗಿದೆ.

೩. ಮನೆಗಳನ್ನು ನಿರ್ಮಿಸಿಕೊಳ್ಳುವ ಹಂತದಲ್ಲಿ ಫೋಟೋ ದಾಖಲೀಕರಣವನ್ನು ಆಧರಿಸಿ ಹಂತ ಹಂತವಾಗಿ ಹಣಕಾಸು ಬಿಡುಗಡೆ ಮಾಡಲು ಏರ್ಪಾಡು ಮಾಡಿರುವುದು.

೪. ನಿಗಮವು ಬಿಡುಗಡೆ ಮಾಡಿದ ಹಣಕಾಸನ್ನು ಫಲಾನುಭವಿಗಳಿಗೆ ಅನಾಯಾಸವಾಗಿ ಮತ್ತು ಅವಶ್ಯಕತೆಗೆ ತಕ್ಕಂತೆ, ಸಮಯಕ್ಕೆ ಸರಿಯಾಗಿ ತಲುಪುವ ಸಲುವಾಗಿ ಹಣಕಾಸು ಬಿಡುಗಡೆ ವ್ಯವಸ್ಥೆಯನ್ನು ಮಾಡಿರುವುದು.

೫. ಫಲಾನುಭವಿಗಳಿಗೆ ತನ್ನ ಮನೆಯ ಹಕ್ಕನ್ನು ನೀಡುವ ಸಲುವಾಗಿ ಸೂಕ್ತ ದಾಖಲೀಕರಣ ವ್ಯವಸ್ಥೆಯನ್ನು ಮಾಡಿರುವುದು.

೬. ಮನೆಗಳು ಭೌತಿಕ ಗುರಿಗೆ ತಕ್ಕಂತೆ ಆರ್ಥಿಕ ಸಾಧನೆಗೆ ಸರಿಹೊಂದುವಂತೆ ನೋಡಿಕೊಳ್ಳುವ ಸಲುವಾಗಿ ಪ್ರಗತಿ ವರದಿಗಳನ್ನು ರೂಪಿಸಿ ಕ್ಷೇತ್ರ ಭೇಟಿಗಳ ಮೂಲಕ ಪ್ರಗತಿ ಪರಿಶೀಲನೆ ನಡೆಸಲಾಗುತ್ತಿದೆ.

೭. ಜಿಲ್ಲಾ ಮಟ್ಟದಲ್ಲಿ ನಿರ್ಮಿತ ಕೇಂದ್ರಗಳ ಮೂಲಕ ಹೊಸಹೊಸ ಕಾರ್ಯಸಾಧ್ಯವಾದ, ಮತ್ತು ವೆಚ್ಚದ ಮತ್ತು ಪರಿಣಾಮಕಾರಿಯಾದ ಕಟ್ಟಡ ನಿರ್ಮಾಣಕ್ಕಾಗಿ ಸಂಬಂಧಿಸಿದ ತಾಂತ್ರಿಕತೆಯನ್ನು ಫಲಾನುಭವಿಗಳಿಗೆ ಒದಗಿಸಲಾಗುತ್ತಿದೆ.

೮. ಸಂಮಿಶ್ರ ಕಟ್ಟಡ ಸಾಮಗ್ರಿಗಳ ಅಭಿವೃದ್ಧಿ- ಪ್ರಸಕ್ತ ವೈವಿಧ್ಯತೆಗಳನ್ನು ಗಮನದಲ್ಲಿಟ್ಟುಕೊಂಡು ವಿವಿಧ ತಂತ್ರಜ್ಞಾನಗಳ ಬಳಕೆಯಿಂದ ಸಂಮಿಶ್ರ ಕಟ್ಟಡ ಸಾಮಗ್ರಿಗಳನ್ನು ಅಭಿವೃದ್ಧಿಪಡಿಸಿ ಜನರಿಗೆ ಎಟುಕುವಂತೆ ಮಾಡಲಾಗುತ್ತಿದೆ.

ಮೇಲ್ಕಂಡ ಪ್ರಮುಖ ಅಂಶಗಳನ್ನು ನಿಗಮವು ರಾಜ್ಯ ಮಟ್ಟದಿಂದ ಜಿಲ್ಲಾ ಮಟ್ಟ, ತಾಲ್ಲೂಕು ಮಟ್ಟ ಹಾಗೂ ಗ್ರಾಮಪಂಚಾಯತಿಗಳವರೆಗೆ ಮಾಹಿತಿ ಹಾಗೂ ಮಾರ್ಗದರ್ಶನದ ರೂಪದಲ್ಲಿ ಈಗಾಗಲೇ ತಿಳಿವಳಿಕೆ ಮೂಲಕ ಮುಟ್ಟುವಂತೆ ಮಾಡಲಾಗಿದೆ.

## ಹೊಸ ಅನುಷ್ಠಾನ ವಿಧಾನಗಳ ಪ್ರಯೋಗ :

ಮೇಲಿನ ವಿನೂತನ ಹೆಜ್ಜೆಗಳನ್ನು ಕೇವಲ ಪ್ರಚಾರಕ್ಕಾಗಿ ಮಾತ್ರವಲ್ಲದೆ ಕಾರ್ಯರೂಪದಲ್ಲಿ ತರುವ ಸಲುವಾಗಿ ಗ್ರಾಮ ಪಂಚಾಯತಿ ವಸತಿ ಕಾರ್ಯಕ್ರಮ (GPHP) ಎಂಬ ಪ್ರಾಯೋಗಿಕ ಕಾರ್ಯಕ್ರಮದಲ್ಲಿ ೧೩೨ ಪಂಚಾಯತಿಗಳ ಅಡಿಯಲ್ಲಿ ಒಟ್ಟು ೩೮೦೦೦ ಮನೆಗಳ ನಿರ್ಮಾಣ ಕಾರ್ಯವನ್ನು ನೇರವಾಗಿ ನಿಗಮವು ಹಮ್ಮಿಕೊಂಡು, ಅದರಂತೆ ಯಶಸ್ವಿಯಾಗಿ ಮನೆಗಳ ನಿರ್ಮಾಣವನ್ನು ಮಾಡಿ, ಗ್ರಾಮ ಪಂಚಾಯತಿ ಮಟ್ಟದಲ್ಲಿ ಫಲಾನುಭವಿಗಳ ಮತ್ತು ವಿವಿಧ ಸಂಘ ಸಂಸ್ಥೆಗಳ ಸಹಯೋಗದೊಂದಿಗೆ ಫಲಪ್ರದವಾಗಿ ಮನೆಗಳ ನಿರ್ಮಾಣವನ್ನು ಮಾಡಿ, ಅನಂತರ ಸಾಲ ವಸೂಲಾತಿ ಕಾರ್ಯಕ್ರಮವನ್ನು ಸಹ ಗ್ರಾಮ ಪಂಚಾಯತಿಗಳ ಮೂಲಕವೇ ಪರಿಣಾಮಕಾರಿಯಾಗಿ ಮಾಡುವ ಕಾರ್ಯವನ್ನು ಯಶಸ್ವಿಯಾಗಿ ಪ್ರಾರಂಭಿಸಲಾಗಿದೆ. ಈ ಆಧಾರದ ಮೇಲೆಯೆ ಎಲ್ಲಾ ಜಿಲ್ಲೆಗಳಲ್ಲಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಸೂಕ್ತ ಕ್ರಮ ಕೈಗೊಳ್ಳಲಾಗಿದೆ. ಮೊದಲ ಹಂತದಲ್ಲಿ ೧೧ ಜಿಲ್ಲೆಗಳಿಗೆ ಸೇರಿದ ೨೫ ತಾಲ್ಲೂಕುಗಳ, ಗ್ರಾಮ ಪಂಚಾಯತಿಗಳ ಅಡಿಯಲ್ಲಿ ಈ ಕಾರ್ಯಕ್ರಮದ ಯಶಸ್ಸಿನ ಅನುಭವವನ್ನು ಇತರೆ ಎಲ್ಲಾ

ಗ್ರಾಮಪಂಚಾಯತಿಗಳಿಗೆ ಮತ್ತು ಇತರೆ ಎಲ್ಲಾ ತಾಲ್ಲೂಕುಗಳಿಗೆ ರಾಜ್ಯದಾದ್ಯಂತ ವಿಸ್ತರಿಸಲಾಗಿದೆ. ಪ್ರಸ್ತುತ ಅನುಷ್ಠಾನಗೊಳಿಸಲಾಗುತ್ತಿರುವ ಎಲ್ಲಾ ಕಾರ್ಯಕ್ರಮಗಳು ಬಹುತೇಕ ಈ ಮಾದರಿಯಲ್ಲಿಯೇ ಅನುಷ್ಠಾನಗೊಳ್ಳುತ್ತಿರುವುದು ಒಂದು ವಿಶೇಷವಾಗಿದೆ.

**ಮಹಿಳೆಯರ ಹೆಸರಿನಲ್ಲಿ ಮನೆಗಳ ಹಕ್ಕುಪತ್ರ ವಿತರಣೆ :**

ಸಾಮಾಜಿಕ ಭದ್ರತೆಯ ದೃಷ್ಟಿಯಿಂದ ಮನೆಗಳ ಹಕ್ಕುಪತ್ರಗಳನ್ನು ಮಹಿಳೆಯರ ಹೆಸರಿನಲ್ಲಿ ನೀಡಲಾಗುತ್ತಿದೆ. ಇದರಿಂದಾಗಿ ಅಬಲರಾದ ಮಹಿಳೆಯರಿಗೆ ಸಾಮಾಜಿಕ ಭದ್ರತೆ ನೀಡಿದಂತೆ ಆಗಿದೆ.

**ಸಾಲ ಮರುಪಾವತಿ :**

ಸರ್ಕಾರವು ಒದಗಿಸುತ್ತಿರುವ ಸಹಾಯಧನ ಹಾಗೂ ಸರ್ಕಾರದ ಖಾತರಿ ಆಧಾರದ ಮೇಲೆ ಹುಡ್ಕೋ ಮತ್ತು ಇತರೆ ಬ್ಯಾಂಕುಗಳಿಂದ ಸಾಲದ ಮೊತ್ತವನ್ನು ತಂದು ಗ್ರಾಮೀಣ ಪ್ರದೇಶಗಳಾದಲ್ಲಿ ರೂ. ೨೦೦೦೦/- ಹಾಗೂ ನಗರ ಪ್ರದೇಶಗಳಾದಲ್ಲಿ ರೂ. ೩೦೦೦೦-ದಲ್ಲಿ ಮನೆಗಳನ್ನು ನಿರ್ಮಿಸಲು ಹಣಕಾಸು ನೆರವು ನೀಡಲಾಗುತ್ತಿದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗಗಳಾದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಸಂಪೂರ್ಣ ಸಹಾಯಧನ ಒದಗಿಸಲಾಗುತ್ತಿದ್ದು, ಸಾಮಾನ್ಯ ವರ್ಗದ ಜನರಾದಲ್ಲಿ ರೂ. ೧೦೦೦೦/- ಸಾಲ, ನಗರ ಪ್ರದೇಶದಲ್ಲಿ ರೂ. ೨೫೦೦೦/- ಸಾಲವನ್ನು ಎಲ್ಲಾ ವರ್ಗದ ಫಲಾನುಭವಿಗಳಿಗೆ ನೀಡಲಾಗುತ್ತಿದೆ. ಈ ರೀತಿ ನೀಡಲಾಗುವ ಸಾಲವನ್ನು ಫಲಾನುಭವಿಗಳು ೧೫ ವರ್ಷಗಳ ಅಂತರದಲ್ಲಿ ಪ್ರತಿ ತಿಂಗಳು ಮಾಸಿಕ ಸಮಕಂತುಗಳ ಮೂಲಕ ಸಾಲ ಮರುಪಾವತಿ ಮಾಡಬೇಕಾಗುತ್ತದೆ. ಈ ಮರುಪಾವತಿಯನ್ನು ಆಧರಿಸಿ ಹುಡ್ಕೋ ಸಾಲವನ್ನು ನಿಗಮದ ವತಿಯಿಂದ ತೀರಿಸಬೇಕಾಗಿದೆ. ಈ ಜವಾಬ್ದಾರಿಯನ್ನು ಎಲ್ಲಾ ಸಾಲ ಪಡೆದಿರುವ ಫಲಾನುಭವಿಗಳಿಗೆ ದಾಖಲೀಕರಣದ ಮೂಲಕ ಮತ್ತು ವಸತಿಗಾಗಿ ಅರ್ಜಿ ನೀಡುವ ಸಂದರ್ಭದಲ್ಲಿ ಮನವರಿಕೆ ಮಾಡಿ ಈ ಮರುಪಾವತಿ ವ್ಯವಸ್ಥೆಯನ್ನು ರೂಪಿಸಲಾಗಿದೆ. ಫಲಾನುಭವಿಗಳಿಗೆ ಸಾಧ್ಯವಾಗುವಂತೆ ಸಾಲ ಮರುಪಾವತಿ ಮಾಡಲು ಪದ್ಧತಿಗಳನ್ನು ಅಳವಡಿಸಲಾಗಿದೆ. ಇದರಲ್ಲಿ ಪಿಗ್ಮಿ ಮಾದರಿ ಸಾಲ ವಸೂಲಾತಿ ವ್ಯವಸ್ಥೆಯು ಪ್ರಮುಖವಾದದ್ದು. ಈ ವ್ಯವಸ್ಥೆಯನ್ನು ರಾಜ್ಯಾದ್ಯಂತ ಎಲ್ಲಾ ಗ್ರಾಮಪಂಚಾಯತಿಗಳಲ್ಲಿ ಮತ್ತು ಸ್ಥಳೀಯ ನಗರ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಲಾಗಿದೆ. ಸಾಲ ವಸೂಲಾತಿ ಪ್ರಕ್ರಿಯೆ ಪ್ರಾರಂಭವಾಗಿದ್ದು ಅಷ್ಟೊಂದು ಆಶಾದಾಯಕವಾಗಿಲ್ಲದೇ ಇದ್ದರೂ ನಿರಾಶಾದಾಯಕವಾಗೇನೂ ಇಲ್ಲ. ಈ ಕಾರ್ಯ ನಿರಂತರವಾಗಿ ನಡೆಯುವ ದೃಷ್ಟಿಯಿಂದ ಪ್ರತಿ ಗ್ರಾಮಪಂಚಾಯತಿ ಮಟ್ಟದಲ್ಲಿ ಬಿಲ್ ಕಲೆಕ್ಟರ್ ಮೂಲಕ ವಸೂಲಾತಿ ಕಾರ್ಯಕ್ರಮವನ್ನು ಚುರುಕುಗೊಳಿಸಲಾಗುತ್ತಿದೆ. ಕಳೆದ ಸಾಲಿನಲ್ಲಿ ರೂ. ೨೫ ಕೋಟಿಗಿಂತ ಹೆಚ್ಚು ಸಾಲ ಮರುಪಾವತಿಯಾಗಿರುವುದು ಒಂದು ಸಂತಸದ ಸುದ್ದಿಯೇ ಸರಿ.

**ವಿನೂತನ ಕಾರ್ಯಕ್ರಮ : ನವಗ್ರಾಮ ವಸತಿ ಯೋಜನೆ :**

ಯಾವುದೇ ಸ್ಥಳದಲ್ಲಿ ಮನೆಗಳನ್ನು ಕಟ್ಟಬೇಕಾದಲ್ಲಿ ಪರಿಗಣಿಸಬೇಕಾದ ಪ್ರಮುಖ ಅಂಶಗಳೆಂದರೆ ಫಲಾನುಭವಿಗಳು ಮನೆಗಳನ್ನು ಕಟ್ಟಿದ ನಂತರ ಅಲ್ಲಿ ವಾಸಿಸುವರೇ ಎಂಬುದು. ಇದಕ್ಕೆ ಅನುಗುಣವಾಗಿ ಕುಡಿಯುವ ನೀರಿನ ವ್ಯವಸ್ಥೆ, ವಿದ್ಯುಚ್ಛಕ್ತಿ, ಒಳಚರಂಡಿ ಇತ್ಯಾದಿ ಕನಿಷ್ಟ ಮೂಲಭೂತ ಸೌಲಭ್ಯಗಳು ಇವೆಯೇ ಎಂಬುದು ಅತಿ ಮುಖ್ಯವಾದ ಅಂಶಗಳು. ಈ ಹಿಂದಿನ ಅನುಭವದಂತೆ ಮೂಲಭೂತ ಸೌಲಭ್ಯಗಳು ಇಲ್ಲದೇ ಇರುವ ಕಡೆಗಳಲ್ಲಿ ಮನೆಗಳನ್ನು ನಿರ್ಮಿಸಿದ್ದರೂ ಸಹ ಫಲಾನುಭವಿಗಳು ವಾಸಿಸದೇ ಇರುವುದು ಕಂಡುಬಂದಿದೆ. ಮೇಲೆ ತಿಳಿಸಿರುವ GPHP ಮೂಲಕ ಅನುಷ್ಠಾನಗೊಳಿಸಲಾದ ವಸತಿ ಯೋಜನೆಯ ಯಶಸ್ಸನ್ನು ಪರಿಗಣಿಸಿ ಅದರ ಮುಂದುವರಿಕೆಯಾಗಿ ಆಯ್ದ ಪ್ರಮುಖ ಗ್ರಾಮಗಳಲ್ಲಿ ಅವಶ್ಯಕತೆಗೆ ಅನುಗುಣವಾಗಿ ಒಂದೇ ಕಡೆ ನಿವೇಶನಗಳನ್ನು ಅಭಿವೃದ್ಧಿಗೊಳಿಸಿ ಅದಕ್ಕೆ ಅವಶ್ಯಕವಾದ ನೀರು, ವಿದ್ಯುಚ್ಛಕ್ತಿ, ಒಳಚರಂಡಿ ಇತ್ಯಾದಿ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಸರ್ಕಾರವು ತೀರ್ಮಾನಿಸಿದ್ದು 'ನವಗ್ರಾಮ ಆಶ್ರಯ' ಎಂಬ ನೂತನ ಯೋಜನೆ ಅಡಿಯಲ್ಲಿ ೩ ವರ್ಷಗಳಿಂದ ಸುಮಾರು ೧ ಲಕ್ಷ ಮನೆಗಳನ್ನು ಮಂಜೂರು ಮಾಡಲಾಗಿದೆ. ಇದರಿಂದಾಗಿ ಸುಮಾರು ೨೫೦೦ ಗ್ರಾಮಗಳಲ್ಲಿ ಒಂದೇ ಸ್ಥಳದಲ್ಲಿ ಕನಿಷ್ಟ ೨೦ಕ್ಕಿಂತ ಹೆಚ್ಚಿನ ಮನೆಗಳನ್ನು ನಿರ್ಮಿಸುವ ಗುರಿ ಹೊಂದಲಾಗಿದ್ದು ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುತ್ತಿದೆ. ಇದರಿಂದಾಗಿ ಪ್ರಮುಖ ಹಳ್ಳಿಗಳು ಸಣ್ಣ ಪಟ್ಟಣಗಳ ದರ್ಜೆಗೆ ಏರುವ ಸಾಧ್ಯತೆ ಇದೆ.

## ವಿಶೇಷ ಉದ್ಯೋಗ ಗುಂಪಿನವರಿಗಾಗಿ ಪ್ರತ್ಯೇಕ ಯೋಜನೆ :

ಗ್ರಾಮೀಣ ಪ್ರದೇಶಗಳಲ್ಲಿ ವಂಶಪಾರಂಪರ್ಯವಾಗಿ ಅನೇಕ ವೃತ್ತಿಗಳಿಗೆ ಸೇರಿದ ಬಡಗಿ, ನೇಯ್ಗೆ ಮುಂತಾದ ವೃತ್ತಿಗಳ ಜನರಿಗೆ ಅವರ ವೃತ್ತಿಗಳನ್ನು ನಿರಂತರವಾಗಿ ನಡೆಸುವ ಸಲುವಾಗಿ ಮನೆಗಳನ್ನು ಯೋಜಿಸಿ ನಿರ್ಮಿಸುವುದು ಅವಶ್ಯಕವಾಗಿದೆ. ಈ ಸಂಬಂಧವಾಗಿ ಕೈಮಗ್ಗ ಮತ್ತು ವಾಣಿಜ್ಯ ಇಲಾಖೆಯು ಹಲವಾರು ವರ್ಷಗಳಿಂದ ವಸತಿ ಕಾರ್ಯಾಗಾರಗಳನ್ನು ನಿರ್ಮಿಸಿಕೊಡುತ್ತಾ ಬಂದಿದೆ. ಇದರ ಮುಂದುವರಿಕೆಯಾಗಿ ನಮ್ಮ ನಿಗಮದ ವತಿಯಿಂದ ಸಂಬಂಧಪಟ್ಟ ಇಲಾಖೆಯಿಂದ ಆಯ್ಕೆಯಾದ ಫಲಾನುಭವಿಗಳಿಗೆ ಅವರವರ ವೃತ್ತಿಗೆ ಅನುಗುಣವಾಗಿ ಅವಶ್ಯಕತೆಗೆ ತಕ್ಕಂತೆ ಮನೆಗಳನ್ನು ನಿರ್ಮಿಸಿಕೊಡಲಾಗುತ್ತಿದೆ. ಈಗಾಗಲೇ ಸುಮಾರು ೧೧,೦೦೦ ಮನೆಗಳನ್ನು ನಿರ್ಮಿಸಿ ಅವುಗಳಲ್ಲಿ ಫಲಾನುಭವಿಗಳು ವಾಸಿಸುತ್ತಿದ್ದು ತಮ್ಮ ದೈನಂದಿನ ವೃತ್ತಿಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ.

## ದೇವದಾಸಿಯರಿಗೆ ವಿಶೇಷ ವಸತಿ ಯೋಜನೆ :

ಸಮಾಜದ ತುಳಿತಕ್ಕೆ ಒಳಗಾಗಿ ದೇವದಾಸಿ ಎಂಬ ಅನಿಷ್ಟ ಜೀವನೋಪಾಯ ರೀತಿಯನ್ನು ಅನುಸರಿಸುತ್ತಿರುವ ಮಹಿಳೆಯರಿಗಾಗಿ ಒಂದು ವಿಶೇಷ ವಸತಿ ಯೋಜನೆಯನ್ನು ಹಮ್ಮಿಕೊಳ್ಳಲಾಗಿದ್ದು ೫೦೦೦ ಮನೆಗಳನ್ನು ನಿರ್ಮಿಸಿಕೊಡಲಾಗುತ್ತಿದೆ. ಇದರಿಂದಾಗಿ ಅವರು ಸಮಾಜದಲ್ಲಿ ಕೀಳರಿಮೆಯನ್ನು ಬಿಟ್ಟು ಸ್ವತಃ ಗೌರವಯುತವಾಗಿ ಜೀವನವನ್ನು ನಡೆಸಲು ಅನುಕೂಲವಾಗುವಂತೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

## ಅತಿ ಹಿಂದುಳಿದ ತಾಲ್ಲೂಕುಗಳಿಗೆ ಪ್ರಾಧಾನ್ಯತೆ :

ಕರ್ನಾಟಕ ರಾಜ್ಯದಲ್ಲಿ ಬಹಳ ದಿನಗಳಿಂದ ಕೆಲವು ಜಿಲ್ಲೆಗಳಲ್ಲಿ ಅಭಿವೃದ್ಧಿಯಲ್ಲಿ ಅಸಮತೋಲನ ಉಂಟಾಗುತ್ತಿದೆ ಎಂಬ ಕೂಗು ಕೇಳಿಬರುತ್ತಿದೆ. ಈ ಸಂಬಂಧವಾಗಿ ಡಾ.ಡಿ.ಎಂ. ನಂಜುಂಡಪ್ಪ ಸಮಿತಿ ೩೯ ತಾಲ್ಲೂಕುಗಳನ್ನು ಅತಿ ಹಿಂದುಳಿದ ಪ್ರದೇಶವೆಂದು ಗುರುತಿಸಿದ್ದು ಈ ಪ್ರದೇಶದಲ್ಲಿ ಹೆಚ್ಚಿನ ಜನರಿಗೆ ವಸತಿ ಇಲ್ಲವೆಂದು ಕಂಡುಬಂದಿದೆ. ಅದಕ್ಕೆ ಅನುಗುಣವಾಗಿ ಕೇಂದ್ರ ಸರ್ಕಾರವು ಅಧಿಕ ಕೇಂದ್ರ ಸಹಾಯಧನ ಯೋಜನೆಯಡಿಯಲ್ಲಿ ರೂ. ೪೦ ಕೋಟಿ ಹಾಗೂ ಅದಕ್ಕೆ ಪೂರಕವಾಗಿ ರಾಜ್ಯ ಸರ್ಕಾರದಿಂದ ರೂ. ೧೫ ಕೋಟಿ ಸಾಲವನ್ನು ಒದಗಿಸಿದ್ದು ಒಟ್ಟು ರೂ. ೫೫ ಓಟಿಗಳ ವೆಚ್ಚದಲ್ಲಿ ಈ ಆಯ್ದ ತಾಲ್ಲೂಕುಗಳಲ್ಲಿ ೨೭,೦೦೦ ಮನೆಗಳನ್ನು ನಿರ್ಮಿಸಲಾಗುತ್ತಿದೆ. ಇದರಿಂದ ಈ ಹಿಂದುಳಿದ ತಾಲ್ಲೂಕುಗಳೂ ಸಹ ವಸತಿ ಕ್ಷೇತ್ರದಲ್ಲಿ ಮುಂದುವರಿದ ತಾಲ್ಲೂಕುಗಳ ಜೊತೆಗೆ ಹೋಲಿಸುವಂತೆ ಮಾಡಲು ಪ್ರಯತ್ನಗಳನ್ನು ನಡೆಸಲಾಗಿದೆ.

## ವಿವಿಧ ಜಿಲ್ಲೆಗಳಲ್ಲಿ ವಸತಿ ನಿರ್ಮಾಣದಲ್ಲಿ ಪ್ರಾದೇಶಿಕ ವೈವಿಧ್ಯತೆಗಳು :

ರಾಜ್ಯದ ೨೭ ಜಿಲ್ಲೆಗಳಲ್ಲಿ ಸ್ಥಳೀಯ ಮಾನದಂಡಗಳಿಗೆ ಅನುಗುಣವಾಗಿ ವಿವಿಧ ರೀತಿಯ, ವಿವಿಧ ಕಟ್ಟಡ ಸಾಮಗ್ರಿಗಳನ್ನು ಉಪಯೋಗಿಸಿ ಮನೆಗಳನ್ನು ಕಟ್ಟಲಾಗುತ್ತಿದೆ. ಆದರೂ ಸಹ ನಮ್ಮ ರಾಜ್ಯದ ಎಲ್ಲಾ ಜಿಲ್ಲೆಗಳನ್ನು ಮೈದಾನ ಪ್ರದೇಶ, ಮಲೆನಾಡು ಪ್ರದೇಶ ಮತ್ತು ಕಪ್ಪು ಮಣ್ಣು ಇರುವ ಪ್ರದೇಶಗಳೆಂದು ಪ್ರಮುಖವಾಗಿ ವಿಂಗಡಿಸಬಹುದು. ಮಲೆನಾಡು ಪ್ರದೇಶವಾದ ಬೆಳಗಾಂ, ಧಾರವಾಡ, ಶಿವಮೊಗ್ಗ, ಚಿಕ್ಕಮಗಳೂರು, ಉತ್ತರ ಕನ್ನಡ, ಉಡುಪಿ, ದಕ್ಷಿಣ ಕನ್ನಡ, ಕೊಡಗು ಮತ್ತು ಹಾಸನ ಜಿಲ್ಲೆಗಳಲ್ಲಿ ಹೆಚ್ಚಿನ ಮಳೆ ಬೀಳುವುದರಿಂದ ಮತ್ತು ಅಲ್ಲಿ ಗುಂಪು ಮನೆಗಳು ಲಭಿಸದೇ ಇರುವುದರಿಂದ ಅಲ್ಲಿನ ಜನರ ಅವಶ್ಯಕತೆ ಬೇರೆ ಪ್ರದೇಶಗಳಿಗಿಂತ ವಿಭಿನ್ನವಾಗಿದೆ. ಮಳೆ ನಿರಂತರವಾಗಿ ಬೀಳುವ ಪ್ರದೇಶವಾದ್ದರಿಂದ ಯಥೇಚ್ಛವಾಗಿ ಕಾಣುವುದೇನೆಂದರೆ ಹೆಂಚಿನ ಮನೆಗಳು ಹಾಗೂ ಕಾಡಿನ ಉತ್ಪನ್ನಗಳಾದ ಮರಮುಟ್ಟುಗಳನ್ನು ಬಳಸಿ ಕಟ್ಟಿರುವ ಮನೆಗಳು.

ಮೈದಾನ ಪ್ರದೇಶಗಳಲ್ಲಿ ಮನೆಗಳ ನಿರ್ಮಾಣದ ರೀತಿ ಬೇರೆಯೇ ಆಗಿರುತ್ತದೆ. ಗದಗ, ಬಳ್ಳಾರಿ, ಹುಬ್ಬಳ್ಳಿ, ದಾವಣಗೆರೆ, ಚಿತ್ರದುರ್ಗ, ತುಮಕೂರು, ಮಂಡ್ಯ, ಕೋಲಾರ, ಬೆಂಗಳೂರು, ಮೈಸೂರು, ಚಾಮರಾಜನಗರ ಪ್ರದೇಶಗಳನ್ನು ಬಯಲುಸೀಮೆಗಳೆಂದು ಪರಿಗಣಿಸಲಾಗಿದೆ. ಈ ಪ್ರದೇಶಗಳಲ್ಲಿ ಮಳೆಯ ಪ್ರಮಾಣ ಮಲೆನಾಡಿಗಿಂತ ಕಡಿಮೆ ಇರುವುದು ಗಮನಾರ್ಹವಾಗಿದೆ. ಈ ಪ್ರದೇಶದಲ್ಲಿಯೂ ಸಹ ಗುಂಪು ಮನೆಗಳನ್ನು ಕಾಣಬಹುದು. ಈ ಪ್ರದೇಶಗಳಲ್ಲಿ ಉಪಯೋಗಿಸುವ ಪ್ರಮುಖ ಕಟ್ಟಡ ಸಾಮಗ್ರಿಗಳೆಂದರೆ

ಸುಟ್ಟ ಇಟ್ಟಿಗೆಗಳು, ಸಿಮೆಂಟ್ ಇಟ್ಟಿಗೆಗಳು ಮತ್ತು ಕಬ್ಬಿಣ ಆಧಾರಿತ ಸಾಮಗ್ರಿಗಳು. ಈ ಮಾದರಿಗಳನ್ನು ಅತಿ ಸಣ್ಣ ಮನೆಗಳಿಂದ ಹಿಡಿದು ಭವ್ಯ ಕಟ್ಟಡಗಳಲ್ಲಿಯೂ ಬಳಸಿಕೊಳ್ಳುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಿ ಬಹುತೇಕ ಎಲ್ಲಾ ಫಲಾನುಭವಿಗಳು ತಾವೇ ಮನೆಗಳನ್ನು ಸ್ವತಃ ನಿರ್ಮಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

ಕಪ್ಪು ಮಣ್ಣಿನಿಂದ ಕೂಡಿದ ಪ್ರದೇಶಗಳಲ್ಲಿ ಮನೆಗಳನ್ನು ಕಟ್ಟುವವರು ತಳಪಾಯದ ಬಗ್ಗೆ ಹೆಚ್ಚು ನಿಗಾವಹಿಸಬೇಕಾಗುತ್ತದೆ. ಪ್ರಮುಖವಾಗಿ ಬೀದರ್, ಗುಲ್ಬರ್ಗಾ, ರಾಯಚೂರು, ಬಿಜಾಪುರ, ಗದಗ, ಬಳ್ಳಾರಿ, ಹಾವೇರಿ ಜಿಲ್ಲೆಗಳಲ್ಲಿ ಕಪ್ಪುಮಣ್ಣಿನ ಪ್ರಭಾವವನ್ನು ಕಾಣಬಹುದಾಗಿದೆ. ಈ ಪ್ರದೇಶದಲ್ಲಿ ಮನೆಯು ಸಾಮಾನ್ಯವಾಗಿ ಒಣಗಿ ಪಾಳುಬಿದ್ದು ಹೆಚ್ಚಿನ ಶಾಖ ಹೊಂದಿರುತ್ತದೆ. ಇಲ್ಲಿ ಮನೆ ಕಟ್ಟಬೇಕಾಗಿದ್ದಲ್ಲಿ ಪಾಯ ಹೇಗೆ ಇರಬೇಕೆಂಬುದನ್ನು ತೀರ್ಮಾನಿಸಬೇಕಾಗಿರುತ್ತದೆ. ಏಕೆಂದರೆ ಕಪ್ಪು ಮಣ್ಣಿನ ಕಟ್ಟಡ ಕಟ್ಟಲು ಸರಿಯಾದ ಪಾಯ ಹೊಂದಿಲ್ಲದೇ ಹೋದಲ್ಲಿ ಅಷ್ಟೊಂದು ಸೂಕ್ತವಾಗಿರುವುದಿಲ್ಲ. ಇದರಿಂದಾಗಿ ಪಾಯಕ್ಕೆ ತಗಲುವ ವೆಚ್ಚ ಮನೆ ನಿರ್ಮಾಣಕ್ಕಿಂತ ಹೆಚ್ಚಾಗಿ ಇರುವುದು ಕಾಣಬಹುದು. ಆದುದರಿಂದ ಇದಕ್ಕೆ ಪೈಲ್ ಫೌಂಡೇಶನ್ ಎಂಬ ಮಾದರಿಯ ತಳಪಾಯವನ್ನು ಹಾಕಿಕೊಳ್ಳಲು ಫಲಾನುಭವಿಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಲಾಗುತ್ತಿದೆ. ಇದರಿಂದ ಮನೆಗಳು ಸುಭದ್ರವಾಗಿ ಹೆಚ್ಚು ಬಾಳಿಕೆ ಬರಲು ಸಾಧ್ಯವಾಗುತ್ತದೆ.

ಮೇಲೆ ತಿಳಿಸಿರುವ ಪ್ರಾದೇಶಿಕ ವಿಭಿನ್ನತೆಗಳನ್ನು ಮತ್ತು ಕಟ್ಟಡ ಸಾಮಗ್ರಿಗಳ ಲಭ್ಯತೆಯನ್ನು ಆಧರಿಸಿ ಮನೆಗಳನ್ನು ನಿರ್ಮಿಸಲಾಗುತ್ತಿರುವುದರಿಂದ ಯಾವುದು ಹೆಚ್ಚು, ಯಾವುದು ಕಡಿಮೆ ಎಂಬುದಾಗಿ ವರ್ಗೀಕರಿಸುವುದು ಅಸಂಬದ್ಧ. ಮನೆಗಳ ನಿರ್ಮಾಣದಲ್ಲಿ ವಿವಿಧ ಸಾಂಪ್ರದಾಯಿಕ ವಿನ್ಯಾಸಗಳನ್ನು ಉಪಯೋಗಿಸಿರುವುದು ಸರ್ವೇಸಾಮಾನ್ಯವಾಗಿದೆ. ಈ ಎಲ್ಲಾ ಸಾಧನಗಳನ್ನು ಅವಶ್ಯಕತೆಗೆ ತಕ್ಕಂತೆ ಅಳವಡಿಸಿಕೊಂಡು ಜನರು ಮನೆಗಳನ್ನು ಕಟ್ಟಿ ಅದರಲ್ಲಿ ವಾಸಿಸುತ್ತಿದ್ದಾರೆ ಮತ್ತು ಆ ಮನೆಗಳನ್ನು ಕಟ್ಟಲು ಅವರಿಗೆ ಸಹಾಯಹಸ್ತ ನೀಡುವ ಕಾರ್ಯವನ್ನು ನಿಗಮವು ಮಾಡುತ್ತಿದ್ದು ಅದೇ ಒಂದು ಸಂತಸದ ಕೆಲಸವೆಂದು ಭಾವಿಸಲಾಗಿದೆ.

## ಆದ್ಯತೆ ಮೇಲೆ ಬಡಾವಣೆಗಳಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು :

ಸರ್ವೇ ಸಾಮಾನ್ಯವಾಗಿ ಫಲಾನುಭವಿಗಳು ತಾವೇ ಹೊಂದಿರುವ ನಿವೇಶನಗಳಲ್ಲಿ ಮನೆಗಳನ್ನು ಕಟ್ಟಿಕೊಳ್ಳುವುದು ವಾಡಿಕೆ. ಆದರೆ ಸರ್ಕಾರವು ಇಚ್ಚಿಸಿರುವಂತೆ ೧೧ ಲಕ್ಷ ಮನೆಗಳನ್ನು ಕಟ್ಟಲಾಗುತ್ತಿರುವುದರಿಂದ ಅನೇಕ ಫಲಾನುಭವಿಗಳ ಬಳಿ ವಸತಿಗಾಗಿ ಯೋಗ್ಯವಾದ ನಿವೇಶನಗಳೂ ಇರುವುದಿಲ್ಲ. ಇದರಿಂದಾಗಿ ಅನೇಕ ಸ್ಥಳಗಳಲ್ಲಿ ವಸತಿಗಾಗಿ ಯೋಗ್ಯವಾದ ಜಮೀನನ್ನು ಖರೀದಿಸಿ ಆ ಜಮೀನಿನಲ್ಲಿ ನೂತನ ಬಡಾವಣೆಗಳನ್ನು ಸೃಷ್ಟಿಸಿ ಅಲ್ಲಿ **ಕುಟೀರ ಜ್ಯೋತಿ** ಯೋಜನೆಯಡಿಯಲ್ಲಿ ವಿದ್ಯುಚ್ಛಕ್ತಿ ಹಾಗೂ ಸ್ಥಳೀಯ ಸಂಸ್ಥೆಗಳು ಹಾಗೂ ಗ್ರಾಮ ಪಂಚಾಯತಿಗಳ ಮೂಲಕ ಕುಡಿಯುವ ನೀರಿನ ವ್ಯವಸ್ಥೆ ಮತ್ತು ಎಸ್.ಜಿ.ಆರ್.ವೈ. ಯೋಜನೆ ಅನ್ವಯ ಇತರೆ ಮೂಲಭೂತ ಸೌಲಭ್ಯಗಳಾದ ಒಳಚರಂಡಿ, ರಸ್ತೆ ಮತ್ತು ಸಮುದಾಯ ಭವನ ಇತ್ಯಾದಿಗಳನ್ನು ಒದಗಿಸಲಾಗುತ್ತಿದೆ. ಇದಕ್ಕಾಗಿ ಈಗಾಗಲೇ ಸುಮಾರು ರೂ. ೫೦ ಕೋಟಿಗಳನ್ನು ಖರ್ಚುಮಾಡಲಾಗಿದೆ. ಮುಂಬರುವ ಎಲ್ಲಾ ವಸತಿ ಯೋಜನಗಳಲ್ಲಿ ಈ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಎಲ್ಲಾ ಪ್ರಯತ್ನಗಳನ್ನು ಮಾಡಲಾಗುತ್ತಿದೆ.

## ಜಿಲ್ಲಾ ನಿರ್ಮಿತಿ ಕೇಂದ್ರಗಳ ಪುನಶ್ಚೇತನ :

ನಿಗಮವು ಜಿಲ್ಲಾ ನಿರ್ಮಿತಿ ಕೇಂದ್ರಗಳನ್ನು ಪುನರುಜ್ಜೀವನಗೊಳಿಸಿ ಅವುಗಳ ಕೆಲಸ ಕಾರ್ಯಗಳು ಸಾಮಾನ್ಯ ಜನರ ಅವಶ್ಯಕತೆಗಳಿಗೆ ಅನುಗುಣವಾಗಿ ನೆರವೇರಿಸಲು ಅನುಷ್ಠಾನಗೊಳಿಸಲಾಗಿದೆ. ೨೭ ಜಿಲ್ಲಾ ನಿರ್ಮಿತಿ ಕೇಂದ್ರಗಳ ವಹಿವಾಟು ರೂ. ೧೦ ಕೋಟಿಗಳಿಂದ ರೂ. ೧೦೦ ಕೋಟಿಗೂ ಹೆಚ್ಚಾಗಿ ಆಗುವಂತೆ ಸಾಮರ್ಥ್ಯ ವೃದ್ಧಿ ಮಾಡಲಾಗಿದೆ. ಈ ಕೇಂದ್ರಗಳು ಉತ್ಕೃಷ್ಟವಾದ ಸಾಧನೆಯನ್ನು ಮಾಡಿದ್ದು, ರಾಷ್ಟ್ರೀಯ ಮಟ್ಟದಲ್ಲಿ ಉತ್ಕೃಷ್ಟತಾ ಪ್ರಶಸ್ತಿಯನ್ನು ಸಹ ಪಡೆದಿವೆ. ಅವುಗಳೆಂದರೆ ರಾಯಚೂರು, ಮೈಸೂರು, ಮಂಗಳೂರು, ಕೊಪ್ಪಳ, ಬಳ್ಳಾರಿ ಜಿಲ್ಲಾ ನಿರ್ಮಿತಿ ಕೇಂದ್ರಗಳು. ಇದು ನಿಗಮವು ವಸತಿಯ ಕ್ಷೇತ್ರದಲ್ಲಿ ಸಲ್ಲಿಸುತ್ತಿರುವ ಕಾರ್ಯಕ್ಕೆ ಮನ್ನಣೆ ದೊರೆತಿರುವುದಕ್ಕೆ ಒಂದು ನಿದರ್ಶನವಾಗಿದೆ.

## ನಮ್ಮ ರಾಜ್ಯದ ಮಾದರಿ :

ದೇಶದಾದ್ಯಂತ ವಸತಿ ರಹಿತ ಬಡ ಜನರಿಗಾಗಿ ಮನೆಗಳನ್ನು ಕಟ್ಟಿಸಿಕೊಡುವ ಕೆಲಸ ಕಾರ್ಯ ವಿವಿಧ ರೀತಿಯಲ್ಲಿ ವಿವಿಧ ಬಗೆಯಲ್ಲಿ ವಿವಿಧ ಪ್ರಮಾಣದಲ್ಲಿ ನಡೆಯುತ್ತಿದೆ. ನಮ್ಮ ನೆರೆಹೊರೆ ರಾಜ್ಯಗಳಲ್ಲಿ ಸಹ ವಸತಿ ಯೋಜನೆಗಳ ಅನುಷ್ಠಾನ ನೆರವೇರುತ್ತಿದೆ. ಕಾರ್ಯಕ್ರಮಗಳ ಅನುಷ್ಠಾನಕ್ಕೆ ಕೇಂದ್ರ ಸರ್ಕಾರ ಅಲ್ಪಸ್ವಲ್ಪ ಧನಸಹಾಯ ಮಾಡುತ್ತಿದೆ. ಆದರೆ ಈ ಯೋಜನೆಗಳು ಪ್ರಮುಖವಾಗಿ ರಾಜ್ಯ ಸರ್ಕಾರಗಳ ಒಡೆತನದಲ್ಲಿ ಮತ್ತು ಅವರ ಹಣಕಾಸಿನಿಂದ ನಡೆಯುತ್ತಿರುವುದು ಒಂದು ಗಮನಾರ್ಹ ಅಂಶ. ಕರ್ನಾಟಕ ರಾಜ್ಯದಲ್ಲಿಯೂ ಸಹ ಇದೇ ಮಾದರಿಯ ನಡೆಯುತ್ತಿದೆ ಎಂದು ಹೇಳಿದರೆ ತಪ್ಪಾಗಲಾರದು. ಆದರೆ ಕರ್ನಾಟಕ ರಾಜ್ಯದಲ್ಲಿ ವಸತಿ ರಹಿತ ಬಡ ಜನರಿಗಾಗಿ ನಿರ್ಮಿಸಲು ಉದ್ದೇಶಿಸಿರುವ ಮನೆಗಳ ಸಂಖ್ಯೆ ಅಗಾಧವಾದದ್ದು-೧೧ ಲಕ್ಷ! ಇದು ಕೇವಲ ೫ ವರ್ಷಗಳಲ್ಲಿ!! ಇದು ಊಹಿಸಲು ಸಾಧ್ಯವೇ? ೪ ವರ್ಷಗಳ ಹಿಂದೆ ಇದು ಅಸಾಧ್ಯವಾಗಿರಬಹುದು. ಆದರೆ ೪ ವರ್ಷಗಳು ಸಂದ ನಂತರ ಇದು ಅಸಾಧ್ಯವೇನಲ್ಲ, ಇದನ್ನು ಸಾಧಿಸಬಹುದು ಎಂಬುದನ್ನು ಸಾಬೀತುಪಡಿಸಲಾಗಿದೆ. ಈಗಾಗಲೇ ೯,೨೨,೪೯೮ ಮನೆಗಳನ್ನು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ವಸತಿ ರಹಿತ ಬಡ ಜನರಿಗಾಗಿ ಅವರ ಸಂಪೂರ್ಣ ಸಹಯೋಗದೊಂದಿಗೆ ನಿರ್ಮಿಸಿ ಪೂರ್ಣಗೊಳಿಸಿ ಅದರಲ್ಲಿ ಫಲಾನುಭವಿಗಳು ವಾಸಿಸುವಂತೆ ನೋಡಿಕೊಳ್ಳಲಾಗಿದೆ. ಇದೊಂದು ಅಪೂರ್ವ ಸಾಧನೆಯೇ ಸರಿ. ಇಂತಹ ಸಾಧನೆ ದೇಶದಾದ್ಯಂತ ಅದರಲ್ಲಿಯೂ ನಮ್ಮ ನೆರೆಹೊರೆ ರಾಜ್ಯಗಳಲ್ಲಿ ಎಲ್ಲಿಯೂ ಕಂಡುಬರುವುದಿಲ್ಲ. ಆದುದರಿಂದ ದೇಶದ ಮಟ್ಟದಲ್ಲಿ ನಮ್ಮ ವಸತಿ ಯೋಜನೆಗಳ ಬಗ್ಗೆ ಸಾಕಷ್ಟು ಪ್ರಚಾರ, ಪ್ರಶಂಸೆ ಮತ್ತು ಅನುಕರಣೆಯೂ ಸಹ ನಡೆದಿದೆ. ವಿವಿಧ ಪತ್ರಿಕೆಗಳು ಮತ್ತು ಸಂಘ ಸಂಸ್ಥೆಗಳು ನಮ್ಮ ಸಾಧನೆಯನ್ನು ಕುತೂಹಲದಿಂದ ನೋಡಿ ಪರಾಮರ್ಶಿಸಿ ಆ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿರುತ್ತಾರೆ. ಇಷ್ಟೇ ಅಲ್ಲದೆ ಪ್ರಸ್ತುತ ೧,೮೪,೩೨೬ ಮನೆಗಳ ನಿರ್ಮಾಣ ಕಾರ್ಯ ಪ್ರಗತಿಯಲ್ಲಿದ್ದು ವಿವಿಧ ಹಂತದಲ್ಲಿದೆ. ಇದರ ಜೊತೆಗೆ ೨,೧೦,೦೦೦ ಹೆಚ್ಚುವರಿ ಮನೆಗಳನ್ನು ಸಹ ಸರ್ಕಾರವು ಮಂಜೂರು ಮಾಡಿದ್ದು ಅದಕ್ಕೆ ಸಂಬಂಧಿಸಿದಂತೆ ಫಲಾನುಭವಿಗಳ ಆಯ್ಕೆಯ ನಡೆದಿದೆ. ಇದರೊಂದಿಗೆ ಸರ್ಕಾರವು ಕಂಡಿದ್ದ ಕನಿಷ್ಠ ೧೧ ಲಕ್ಷಗಳ ಬದಲಿಗೆ ಸುಮಾರು ೧೨ ಲಕ್ಷಗಳಿಗಿಂತ ಹೆಚ್ಚು ಮನೆಗಳು ೫ ವರ್ಷಗಳು ಮುಕ್ತಾಯವಾಗುವುದರೊಳಗೆ ನಿರ್ಮಾಣಗೊಳ್ಳುವ ಎಲ್ಲಾ ಸಾಧ್ಯತೆಗಳು ಈಗಾಗಲೇ ಗೋಚರಿಸಿದೆ. ಕರ್ನಾಟಕ ಸರ್ಕಾರವು ಈ ನಿಗಮವನ್ನು ಸ್ಥಾಪಿಸಿದ ಉದ್ದೇಶ ಪರಿಪೂರ್ಣವಾಗಿದೆ ಎಂದು ಭಾವಿಸಲಾಗಿದೆ.

## ವಸತಿ ಯೋಜನೆಗಳಲ್ಲಿ ನಿಗಮದ ಅಭೂತಪೂರ್ವ ಸಾಧನೆಗಾಗಿ ಪ್ರಶಸ್ತಿಗಳು :

ಅತ್ಯಲ್ಪ ಕಾಲದಲ್ಲಿಯೇ ಸರ್ಕಾರದ ಸದಿಚ್ಛೆಯನ್ನು ಸಾಕಾರಗೊಳಿಸಿ ಅಸಾಧ್ಯ ಪ್ರಗತಿಯನ್ನು ಸಾಧಿಸಿದ ನಿಗಮದ ಚಾತುರ್ಯವನ್ನು ಪರಿಗಣಿಸಿ ಭಾರತ ಸರ್ಕಾರದ ವತಿಯಿಂದ ಹಾಗೂ ಹುಡ್ಕೋ ಸಂಸ್ಥೆಯಿಂದ ಮೆಚ್ಚುಗೆ ವ್ಯಕ್ತವಾಗಿದೆ. ಮೊದಲ ವರ್ಷದಲ್ಲಿಯ ನಿಗಮದ ಸಾಧನೆಯನ್ನು ಮೆಚ್ಚಿ ಹುಡ್ಕೋ ಸಂಸ್ಥೆಯು 'ಮಹತ್ತರ ಸಾಧನೆ'ಗಾಗಿ ಪ್ರಶಸ್ತಿ ನೀಡಿದೆ. ಇದರಿಂದಾಗಿ ನಿಗಮ ಮತ್ತು ಸರ್ಕಾರಕ್ಕೆ ಹರ್ಷ ಉಂಟಾಗಿದ್ದು ಇದರಿಂದ ಇನ್ನೂ ಹೆಚ್ಚು ಹೆಚ್ಚಿನ ಸಾಧನೆ ಮಾಡಲು ಪ್ರೇರಣೆಯಾಗಿದೆ. ಇಷ್ಟೇ ಅಲ್ಲದೆ ಅನಂತರದ ವರ್ಷದಲ್ಲಿ ಅಸಾಧ್ಯ ಸಾಧನೆಯನ್ನು ಗೈದು ೨ ಲಕ್ಷಕ್ಕೂ ಹೆಚ್ಚು ಮನೆಗಳನ್ನು ಒಂದೇ ವರ್ಷದಲ್ಲಿ ನಿರ್ಮಿಸಲಾಗುವ ಅಂಶವು ದೇಶದಾದ್ಯಂತ ಪ್ರಶಂಸೆಗೆ ಒಳಪಟ್ಟಿದೆ. ಇದನ್ನು ಪರಿಗಣಿಸಿ ೨ನೇ ವರ್ಷವೂ ಸಹ ಹುಡ್ಕೋ ಸಂಸ್ಥೆಯು 'ಅಸಾಧ್ಯ ಸಾಧನೆಗಾಗಿ ಪ್ರಶಸ್ತಿ' ಯನ್ನು ನೀಡಿ ನಿಗಮವನ್ನು ಪುರಸ್ಕರಿಸಿದೆ. ಇದು ಸರ್ಕಾರದ ಆಣತಿಯನ್ನು ಸಾಕಾರಗೊಳಿಸಿರುವ ಸರ್ಕಾರಿ ಸಂಸ್ಥೆಯೊಂದಕ್ಕೆ ಸಿಗಬಹುದಾದ ಮಾನ್ಯತೆಯಾಗಿರುತ್ತದೆ. ಈ ಯಶಸ್ಸನ್ನು ಮುಂದುವರೆಸಿಕೊಂಡು ಬರಲಾಗುತ್ತಿದೆ.

## ಇನ್ನೂ ಸಾಧಿಸಬೇಕಾದದ್ದು ಬಹಳಷ್ಟಿದೆ :

ರಾಜ್ಯದ ವಸತಿ ರಹಿತ ಬಡ ಜನರಿಗಾಗಿ ವಸತಿಗಳನ್ನು ಕಟ್ಟುವ ಯೋಜನೆಗಳನ್ನು ಹಮ್ಮಿಕೊಂಡು ಅತ್ಯಂತ ದಕ್ಷತೆಯಿಂದ ಪ್ರಾಮಾಣಿಕವಾಗಿ ಕಾರ್ಯಕ್ರಮಗಳನ್ನು ಅನುಷ್ಠಾಗೊಳಿಸುತ್ತಿರುವುದು ಹಾಗೂ ಇದಕ್ಕೆ ಸಂದ ಪುರಸ್ಕಾರಗಳನ್ನು ನಾವು ನೋಡಿದ್ದೇವೆ. ಕರ್ನಾಟಕ ರಾಜ್ಯದಲ್ಲಿ ಆಗಿರುವ ಸಾಧನೆ ಒಂದು ದಾಖಲೆ ಎಂದರೆ ತಪ್ಪಾಗಲಾರದು. ಉದ್ದೇಶಿಸಲಾದ ೧೧ ಲಕ್ಷ ಮನೆಗಳ ಪೈಕಿ ೯,೨೨,೪೯೮ ಮನೆಗಳು ಈಗಾಗಲೇ ಪೂರ್ಣ ಪ್ರಮಾಣದಲ್ಲಿ ಸಾಕಾರಗೊಂಡು ಅಷ್ಟೇ ಪ್ರಮಾಣದ ಫಲಾನುಭವಿಗಳು ಹಾಗೂ

ಅವರ ಕುಟುಂಬಗಳಿಗೆ ಅಂದರೆ ಸುಮಾರು ೫೦ ಲಕ್ಷ ಜನರಿಗೆ ತಲೆ ಮೇಲೆ ಸೂರು ಇರುವಂತೆ ಮಾಡಲಾಗಿದೆ. ಇದರೊಂದಿಗೆ ಜನರಲ್ಲಿ ಒಂದು ದೃಢತೆ ನೆಲಸಿ ಅವರು ಸಾಮಾಜಿಕ ಭದ್ರತೆಯನ್ನು ಹೊಂದಲು ಸಾಧ್ಯವಾಗಿದೆ. ಮುಂಬರುವ ಕೆಲವು ತಿಂಗಳುಗಳಲ್ಲಿ ೩ ಲಕ್ಷಕ್ಕೂ ಹೆಚ್ಚು ಮನೆಗಳನ್ನು ಕಟ್ಟುವ ಕಾರ್ಯಕ್ರಮ ಈಗಾಗಲೇ ಅನುಷ್ಠಾನಗೊಳ್ಳುತ್ತಿದೆ. ಇದರೊಂದಿಗೆ ಸರ್ಕಾರವು ಉದ್ದೇಶಿಸಲಾದ ೧೧ ಲಕ್ಷಗಳ ಮನೆಗಳ ಗುರಿಯನ್ನು ಮೀರಿದಂತೆ ಆಗುತ್ತದೆ. ಇದರಿಂದ ಸರ್ಕಾರದ ವಚನವನ್ನು ನೆರವೇರಿಸಿದಂತೆ ಆಗಿರುವುದು ಸಂಬಂಧಪಟ್ಟ ಎಲ್ಲರಿಗೂ ಸಂತಸವನ್ನು ತಂದಿದೆ. ಇಲ್ಲಿಗೆ ಈ ಕಾರ್ಯಕ್ರಮವನ್ನು ನಿಲ್ಲಿಸಬಹುದೇ? ಬಹುಶಃ ಸಾಧ್ಯವಿಲ್ಲ. ಏಕೆಂದರೆ ಜನಸಂಖ್ಯೆಯ ಹೆಚ್ಚಳದಿಂದಾಗಿ ಪ್ರತಿ ವರ್ಷ ಈ ಕಾರ್ಯಕ್ರಮದಲ್ಲಿ ವಸತಿ ಅವಶ್ಯಕತೆ ಜಾಸ್ತಿಯಾಗುತ್ತಾ ಬರುತ್ತಿದೆ. ಜನಸಂದಣಿ ಜಾಸ್ತಿಯಾಗುತ್ತಿದೆ. ಕುಟುಂಬಗಳು ದ್ವಿಗುಣವಾಗುತ್ತಿವೆ. ಪ್ರಸ್ತುತ ಹಳ್ಳಿಕಡೆಯಲ್ಲಿ ಇರುವ ಮನೆಗಳಲ್ಲಿ ಹೆಚ್ಚಿನ ಜನ ವಾಸಿಸುತ್ತಿದ್ದು ಯೋಗ್ಯ ವಾತಾವರಣ ಇರುವುದಿಲ್ಲ. ಜನಗಳ ಜೀವನೋಪಾಯ ಹಸನುಗೊಳಿಸುವ ದೃಷ್ಟಿಯಿಂದ ಯಾವುದೇ ಜನಪರ ಸರ್ಕಾರ ಈ ಎಲ್ಲಾ ಅಂಶಗಳನ್ನು ಪರಿಗಣಿಸಬಹುದಾಗಿರುತ್ತದೆ. ಇದನ್ನು ಗಮನದಲ್ಲಿಟ್ಟುಕೊಂಡು ನಮ್ಮ ಸಂಸ್ಥೆಯು ಮುಂಬರುವ ದಿನಗಳಲ್ಲಿ ಅವಶ್ಯಕತೆಗೆ ತಕ್ಕಂತೆ, ಅವಶ್ಯಕತೆ ಇರುವವರೆವಿಗೂ ಬೇಡಿಕೆಗೆ ಅನುಗುಣವಾಗಿ ಎಲ್ಲರಿಗೂ ಮನೆಗಳನ್ನು ಒದಗಿಸುವ ಉದ್ದೇಶವನ್ನು ಹೊಂದಿದೆ. ಇದಕ್ಕಾಗಿ ಸ್ಥಳೀಯ ಬ್ಯಾಂಕುಗಳು ಮತ್ತು ಇತರೆ ಹಣಕಾಸು ಸಂಸ್ಥೆಗಳಿಂದ ಹಣವನ್ನು ಪಡೆಯಲಾಗುತ್ತಿದೆ. ಸಾಲ ಪಡೆದಿರುವ ಫಲಾನುಭವಿಗಳು ತಮ್ಮ ಜವಾಬ್ದಾರಿ ಅರಿತು ವಸತಿ ರಹಿತ ಸಮಾಜ ಬಾಂಧವರಿಗೆ ವಸತಿ ಒದಗಿಸಲು ಮರುಪಾವತಿ ಮಾಡಿದಲ್ಲಿ ಅದನ್ನು ಬಳಸಿ ಉಳಿದ ವಸತಿ ರಹಿತರಿಗೂ ಮನೆಗಳನ್ನು ಕಟ್ಟಿಕೊಡಲು ಅನುವಾಗುತ್ತದೆ. ಅಲ್ಲದೆ ಮರುಪಾವತಿ ಹೆಚ್ಚಾದಲ್ಲಿ ಹಣಕಾಸು ಸಂಸ್ಥೆಗಳು ಮುಂದೆ ಬಂದು ಮನೆಗಳಿಗೆ ಸಾಲವನ್ನು ಒದಗಿಸಲು ಸಕಾರಾತ್ಮಕ ದೃಷ್ಟಿಯಿಂದ ಪ್ರಯತ್ನಪಡುತ್ತವೆ. ಅನೇಕ ಸ್ಥಳಗಳಲ್ಲಿ ಸಂಸ್ಥೆಗಳು ಸಾಲ ಕೊಡಲು ಮುಂದೆ ಬಂದಿದ್ದು ಈಗಾಗಲೇ ಹಲವಾರು ರೀತಿಯ ಕಾರ್ಯಕ್ರಮಗಳು ನಡೆಯುತ್ತಿವೆ. ಇದನ್ನು ಮುಂದುವರೆಸುವುದು ನಮ್ಮ ಸಂಸ್ಥೆಯ ಉದ್ದೇಶವಾಗಿದೆ. ಅವಶ್ಯಕತೆ ಇದ್ದವರಿಗೆ ಸರ್ಕಾರದ ನೀತಿಯಂತೆ ಸಹಾಯ ಒದಗಿಸುವುದು ಹಾಗೂ ಅವಶ್ಯಕತೆಗೆ ತಕ್ಕಂತೆ ಸಾಲ ಸಂಸ್ಥೆಗಳಿಂದ ಸಾಲ ಒದಗಿಸುವಂತೆ ಮಾಡುವುದು ಮುಂದಿನ ದಿನಗಳಲ್ಲಿ ನಾವು ಹಾಕಿಕೊಂಡಿರುವ ಕಾರ್ಯಕ್ರಮದ ಒಂದ ಅಂಗವಾಗಿದೆ. ಇದರಿಂದಾಗಿ ರಾಜ್ಯದಲ್ಲಿ ಯಾವುದೇ ಪ್ರದೇಶದಲ್ಲಿ ವಾಸಿಸುತ್ತಿರುವ ವಸತಿ ರಹಿತ ಮತ್ತು ನಿವೇಶನ ರಹಿತ ಜನರಿಗೆ ತಮ್ಮ ಅವಶ್ಯಕತೆಗೆ ಅನುಗುಣವಾಗಿ ತಮಗೆ ಬೇಕೆಂದಾಗ ಮನೆಗಳನ್ನು ಪಡೆಯುವ ಸೌಲಭ್ಯಗಳನ್ನು ಒದಗಿಸುವ ನಿಟ್ಟಿನಲ್ಲಿ ನಾವೆಲ್ಲರೂ ಸಾಗುತ್ತಿದ್ದೇವೆ.

●




# ಯುವಕ-ಯುವತಿ ಮಂಡಲಿಗಳು

ಜಿ. ಶಿವಣ್ಣ

ಭಾರತದಂತಹ ಬೃಹತ್ ರಾಷ್ಟ್ರದ ಜನಸಂಖ್ಯೆ ೧೦೫ ಕೋಟಿಗೂ ಮೀರಿದೆ. ಜನಸಂಖ್ಯೆಯನ್ನು ಆಧಾರವಾಗಿಟ್ಟುಕೊಂಡು, ಜನರ ಅಭಿವೃದ್ಧಿಗಾಗಿ ಶ್ರಮಿಸಬೇಕಾದ ಕಾಲ ಇಂದು ಸನ್ನಿಹಿತವಾಗಿದೆ. ೧೯೨೭ರಿಂದ ೧೯೩೭ರ ದಶಕದಲ್ಲಿ ರಾಷ್ಟ್ರಪಿತ ಮಹಾತ್ಮಗಾಂಧೀಜಿ ರಾಷ್ಟ್ರದ ಔನ್ನತ್ಯ ಗ್ರಾಮಾಭಿವೃದ್ಧಿಯಲ್ಲಿದೆ, ಗೃಹಕೈಗಾರಿಕೆಯೊಂದೇ ಗ್ರಾಮಗಳನ್ನು ತನ್ನ ಕಾಲಮೇಲೆ ನಿಲ್ಲಿಸಲು ಸಮರ್ಥ ಎಂಬ ಘೋಷಣೆಯನ್ನು ಮೊಳಗಿಸಿದ್ದರು. ಸ್ವರಾಜ್ಯವೆಂದರೆ ಗ್ರಾಮ 'ಸ್ವಶಕ್ತಿ ಗ್ರಾಮ' ಎಂದೇ ಅರ್ಥ. ಹಳ್ಳಿಗಳು ಭಾರತದ ಬೆನ್ನುಮೂಳೆ. ಅವುಗಳನ್ನು ಸದೃಢಗೊಳಿಸಬೇಕು ಎಂಬ ಮಾತನ್ನು ಪದೇಪದೇ ಹೇಳುತ್ತಿದ್ದರು. ಭಾರತದಲ್ಲಿ ವಿಪುಲವಾಗಿ ದೊರಕುವ ಮಾನವ ಸಂಪನ್ಮೂಲವನ್ನು ಚಾಣಾಕ್ಷತೆಯಿಂದ ಉಪಯೋಗಿಸದೆ ನಿರ್ಲಕ್ಷಿಸಿದ್ದೇ ಆದರೆ ನಿರುದ್ಯೋಗ ಭುಗಿಲೇಳುತ್ತದೆ. ಹೊಟ್ಟೆಗೆ ಬಟ್ಟೆಗೆ ಹಾಹಾಕಾರ ಏಳುತ್ತದೆ. ಇದರ ದ್ಯೋತಕವಾಗಿ ಗುಡಿ ಕೈಗಾರಿಕೆಗಳನ್ನು ಸ್ಥಾಪಿಸಲು, ದೇಶೀಯತೆಯನ್ನು ನೆಲೆಗೊಳಿಸಲು ಚರಕದಲ್ಲಿ ನೂಲು ತೆಗೆದರು, ದೇಶೀಯ ಚಪ್ಪಲಿ ಮೆಟ್ಟಿದರು,ಖಾದಿ ಧರಿಸಿದರು, ದೇಶೀಯವಾಗಿ ಸಹಜ ದಾರ್ಶನಿಕ ಜೀವನ ಮಾಡಿದರು.

**ಜನಜೀವನದಲ್ಲಿ ಅವ್ಯವಸ್ಥೆ ಕೊನೆಗಾಣಬೇಕಾದರೆ ಶಿಸ್ತು ಪಾಲನೆ ಮುಖ್ಯ. ಹಳ್ಳಿಯಲ್ಲಿರುವ ನಿರುದ್ಯೋಗ ದೂರವಾಗಬೇಕಾದರೆ ಕೃಷಿ ಆಧಾರಿತ ಕೈಗಾರಿಕೆಗಳು ಎಲ್ಲೆಡೆ ಸ್ಥಾಪಿತವಾಗಬೇಕು. ಈ ಎರಡು ಕೆಲಸಗಳು ಸಮರ್ಪಕವಾಗಿ ನಡೆಯಲು ಯುವಶಕ್ತಿ ಒಂದಾಗಿ ಶ್ರಮಿಸಬೇಕು.**

ಈ ದೇಶದ ಜನರ ಉತ್ತಮ ಬದುಕು,ಭವಿಷ್ಯ ಸಂಪೂರ್ಣ ಗ್ರಾಮಗಳ ಅಭಿವೃದ್ಧಿಯಿಂದ ಸಾಧ್ಯಗೊಳ್ಳಬೇಕಿದೆ ಎಂಬ ಅಚಲವಾದ ನಂಬಿಕೆ ಹೊಂದಿದ್ದ ಮಹಾತ್ಮ ಗಾಂಧಿ ಅಪರೂಪದ ಆರ್ಥಿಕ ಚಿಂತಕರಾಗಿ ಭಾಸವಾಗುತ್ತಾರೆ. ತಮ್ಮನ್ನು ಎಲ್ಲೂ ಒಬ್ಬ ಅರ್ಥಶಾಸ್ತ್ರಜ್ಞನೆಂದು ಹೇಳಿಕೊಳ್ಳದೇ ತಮ್ಮದೇ ಅನುಭವ ಜನ್ಯ ಆರ್ಥಿಕ ವಿಚಾರಧಾರೆಗಳನ್ನು ನಮ್ಮ ಸರ್ವತೋಮುಖ ಆರ್ಥಿಕಾಭಿವೃದ್ಧಿಗೆ ಮಾರ್ಗಸೂಚಿಯಾಗಿ ನೀಡಿ ತಮ್ಮೊಳಗಿನ ನಿಗೂಢ ಅರ್ಥಶಾಸ್ತ್ರಜ್ಞನೊಬ್ಬನನ್ನು ಪರಿಚಯಿಸುತ್ತಾರೆ. ಯಾವ ಪಾಶ್ಚಿಮಾತ್ಯ ನೊಬೆಲ್ ಅರ್ಥಶಾಸ್ತ್ರಜ್ಞರಿಗೂ ಕಡಿಮೆ ಇಲ್ಲದ ಆರ್ಥಿಕ ತತ್ವಾಂಶಗಳಿಂದ ಗಾಂಧೀಜಿಯವರ ವಾದ 'ಗಾಂಧೀವಾದ' ಎಂದೇ ವಿಶ್ವ ರಾಷ್ಟ್ರಗಳ ಮನ್ನಣೆ ಗಳಿಸುವಲ್ಲಿ ಯಶಸ್ವಿಯಾಯಿತು. ಅರ್ಥಶಾಸ್ತ್ರಜ್ಞರಾಗಿ ಗಾಂಧಿಯ ಮತ್ತೊಂದು ಮುಖವನ್ನು ಪ್ರಸ್ತುತ ಆರ್ಥಿಕ ವ್ಯವಸ್ಥೆಯ ಹಿನ್ನೆಲೆಯಲ್ಲಿ ಪರಾಮರ್ಶಿಸಬೇಕಾದ ಅಗತ್ಯವಿದೆ.

ಲಿಯೋ ಟಾಲ್‌ಸ್ಟಾಯ್, ಜಾನ್ ರಸ್ಕಿನ್, ಹೆನ್ರಿ ಥೋರೋ ಮುಂತಾದ ಮಹಾನ್ ದಾರ್ಶನಿಕರ ಪ್ರಭಾವಕ್ಕೆ ಒಳಗಾದ ಗಾಂಧೀಜಿಯವರ ಮೇಲೆ ಸಂತ ಕಬೀರರ ವಿಚಾರಗಳು, ವೇದ ಉಪನಿಷತ್ತುಗಳೇ ಅಲ್ಲದೆ ನಮ್ಮ ಸಮಾಜದಲ್ಲಿ ಹಾಸುಹೊಕ್ಕಾದ ಅಸ್ಪೃಶ್ಯತೆ, ಬಡತನ, ದಾರಿದ್ರ್ಯ,

ಅನಕ್ಷರತೆ, ಎಲ್ಲಕ್ಕಿಂತ ಹೆಚ್ಚಾಗಿ ನಮ್ಮ ಗ್ರಾಮಗಳಲ್ಲಿನ ಜನಜೀವನದ ಹೀನಸ್ಥಿತಿಗಳು ಗಾಂಧೀಜಿ ಹೆಚ್ಚು ಹೆಚ್ಚು ಆರ್ಥಿಕ ಚಿಂತನೆಗೆ ತೊಡಗಿಸಿಕೊಳ್ಳಲು ಕಾರಣವಾದವು. ಅವರ ಆರ್ಥಿಕ ಚಿಂತನೆಗಳು ಅವರ ಅನುಭವ, ಕಾರ್ಯ ಹೊರ ಹೊಮ್ಮಿಸಿದ ತುಣುಕು ವಿಚಾರಗಳಿಂದ ಲಭ್ಯವಾಗುತ್ತವೆ. ಆಧ್ಯಾತ್ಮಿಕ ಹಿನ್ನೆಲೆಯ ಆರ್ಥಿಕ ಚಿಂತನೆ ಅವರದಾಗಿತ್ತು.

### ಆರ್ಥಿಕ ಕಲ್ಯಾಣ :

ಆರ್ಥಿಕತೆಯಲ್ಲಿ ಪಾಲ್ಗೊಳ್ಳುವ ಮಾನವನಿಗೆ ಹಣ ಗಳಿಕೆಯೇ ಪ್ರಧಾನವಾಗಬಾರದು. ಹಣ ಹೇಗೆ ಗಳಿಸಲ್ಪಟ್ಟಿತು, ಯಾವ ಸದಾಶಯಕ್ಕೆ ಬಳಕೆಯಾಯಿತು ಎನ್ನುವ ಅಂಶದ ಮೇಲೆ ನಮ್ಮ ಆರ್ಥಿಕ ಕಲ್ಯಾಣ ಅಡಗಿದೆ ಎಂದು ಗಾಂಧಿ ಭಾವಿಸಿದ್ದರು. ಯಾವ ರಾಷ್ಟ್ರ ಪರಮ ಸಂತೃಪ್ತ ನಾಗರಿಕರನ್ನು ಹೊಂದುತ್ತದೆಯೋ ಅದೇ ಸಂಪೂರ್ಣ ಕಲ್ಯಾಣ ರಾಷ್ಟ್ರ. ಆರ್ಥಿಕ ಚಟುವಟಿಕೆಗಳ ಹಿಂದೆ ನೈತಿಕತೆ ಇರಬೇಕು. 'ನೀತಿಯಿಲ್ಲದ ವಾಣಿಜ್ಯ ಮಹಾಪಾಪ' ಎಂದು ಅಭಿವೃದ್ಧಿಗೆ ನೈತಿಕತೆಯ ನೆಲೆಗಟ್ಟನ್ನು ಗಾಂಧಿ ಅರ್ಥೈಸಿದ್ದರು.

### ಸರ್ವೋದಯ :

ರಸ್ಕಿನ್‌ನ ಪುಸ್ತಕವನ್ನು ತಾವೇ ಗುಜರಾತಿ ಭಾಷೆಗೆ ತರ್ಜುಮೆ ಮಾಡಿ ಅದಕ್ಕೆ ಸರ್ವೋದಯ ಎಂದು ಹೆಸರಿಟ್ಟರು. ಸರ್ವೋದಯ ಎಂದರೆ ಸಕಲರ ಕಲ್ಯಾಣ. ಸಮಾನ ಕೂಲಿ, ಗ್ರಾಮೀಣ ಕೈಗಾರಿಕೆಗಳ ಅಭಿವೃದ್ಧಿ, ಕೃಷಿಕರಿಗೆ ಮೂಲ ಸೌಲಭ್ಯ, ಎಲ್ಲರಿಗೂ ಪ್ರಾಥಮಿಕ ತಾಂತ್ರಿಕ ಶಿಕ್ಷಣ, ಆರ್ಥಿಕ ಸಮಾನತೆ, ಸಾಮಾಜಿಕ ಸಾಮರಸ್ಯ ಇವು ಗಾಂಧಿ ಪ್ರತಿಪಾದಿಸಿದ ಸರ್ವೋದಯ ಮಂತ್ರಗಳು.

### ಶ್ರಮಯೇವ ಜಯತೆ :

ಇಂದು ನಾವೆಲ್ಲಿದ್ದೇವೆ? ಜಾಗತೀಕರಣ, ಉದಾರೀಕರಣ, ಧ್ರುವೀಕರಣದ ಛಾಯೆಯಲ್ಲಿ ನಮ್ಮನ್ನು ನಾವು ಮರೆತು ಕೂರುವುದರಿಂದ ದೇಶೀಯ ಕೈಗಾರಿಕೆಗಳು ಹಾಳಾಗುತ್ತವೆ. ದೇಶದ ಸದೃಢ, ಬಲಶಾಲಿ, ಸತ್ವಯುತ ಯುವಶಕ್ತಿಯನ್ನು ಕೈಕಟ್ಟಿ ಮೂಲೆಯಲ್ಲಿ ಕೂರಿಸುವುದೆ? ಇದರಿಂದ ಆಂತರಿಕ ಆರ್ಥಿಕ ಮುಗ್ಗಟ್ಟನ್ನು ಪರಿಹರಿಸಿದಂತಾಗುವುದೇ? ಇಂತಹವೇ ಕಗ್ಗಂಟುಗಳು ನಮ್ಮ ಮುಂದಿವೆ. ಜಾಗತೀಕರಣ, ಉದಾರೀಕರಣದ ನೀತಿಯಿಂದ ನಮ್ಮ ಗ್ರಾಮೀಣ ಪ್ರದೇಶದ ಸುಮಾರು ಶೇಕಡಾ ೭೮ ಜನರ ಕಸುಬಾದ ವ್ಯವಸಾಯ ಕ್ಷೇತ್ರದ ಗತಿಯೇನು? ಗ್ರಾಮೀಣ ಕೈಗಾರಿಕೆಗಳಿಂದ ಆರ್ಥಿಕ ಅಭಿವೃದ್ಧಿ ಸಾಧ್ಯವಾಗದೇ ವ್ಯವಸಾಯ ಪ್ರಧಾನ ಗ್ರಾಮೀಣ ಕುಟುಂಬಗಳಿಗೆ ಆರ್ಥಿಕ ನೆರವು ನೀಡದಿದ್ದರೆ ಅವರು ಅತಂತ್ರರಾಗುತ್ತಾರೆ. ನಮ್ಮ ಯೋಜನೆಗಳು ಶೇಕಡಾ ೮೨ಕ್ಕೂ ಮಿಕ್ಕ ಗ್ರಾಮೀಣ ಪ್ರದೇಶದ ಜನರಿಗೆ ನೇರವಾಗಿ ಮುಟ್ಟುವಂತಿರಬೇಕು.

ಕಠಿಣ ಶ್ರಮದ ದುಡಿಮೆ ಅಭಿವೃದ್ಧಿಗೆ ನಾಂದಿ. ದುಡಿಯದೇ ಉಣ್ಣುವವನು ಕೀಳು ಮನುಜ. ಬೌದ್ಧಿಕ ಶ್ರಮ ಕೇವಲ ಆತ್ಮ ಶಾಂತಿಗಾಗಿ. ಆದರೆ, ದೈಹಿಕ ಶ್ರಮ ಮಾತ್ರ ಜನರ ಬಯಕೆಗಳನ್ನು ಈಡೇರಿಸುತ್ತದೆ. ಎಲ್ಲರ ದುಡಿಮೆಯಿಂದ ಸಮಾಜ ಸದೃಢಗೊಳ್ಳುತ್ತದೆ. ನಮ್ಮೆಲ್ಲರ ದಾರಿದ್ರ್ಯಕ್ಕೆ ಶ್ರಮವೇ ಮೂಲ ಸಂಜೀವಿನಿ ಎಂದು ಅಭಿವೃದ್ಧಿಯಲ್ಲಿ ಕಠಿಣ ಶ್ರಮದ ಅಗತ್ಯವನ್ನು ಗಾಂಧಿ ದೃಢೀಕರಿಸಿದರು.

### ಆರ್ಥಿಕ ವಿಕೇಂದ್ರೀಕರಣ :

ಯಂತ್ರಗಳ ಬಳಕೆಯನ್ನು ವಿರೋಧಿಸಿದ ಗಾಂಧಿ ಅದರಿಂದ ಆರ್ಥಿಕತೆ ಕೇಂದ್ರೀಕೃತಗೊಳ್ಳುತ್ತದೆಂದು ಭಾವಿಸಿದರು. ಇದರಿಂದ ಆರ್ಥಿಕ ಚಟುವಟಿಕೆಗಳ ಹಿಂದ ಬಲಪ್ರಯೋಗ ಹಾಗೂ ಹಿಂಸಾಚಾರ ಉದ್ಭವಿಸುತ್ತದೆ. ಇದು ಆರ್ಥಿಕ ವಿಕೇಂದ್ರೀಕರಣದಿಂದ ಮಾತ್ರ ಪರಿಹಾರವಾಗಬೇಕು. ಸಣ್ಣ ಪ್ರಮಾಣದಲ್ಲಿ ಸಹಸ್ರಾರು ಸ್ಥಳಗಳಲ್ಲಿ ಉತ್ಪಾದನೆ ಮಾಡುವುದೇ ವಿಕೇಂದ್ರೀಕರಣ. ಇದರಿಂದ ಜನರು ವಾಸಿಸುವ ಮನೆಗಳೇ ಅವರ ಉತ್ಪಾದನಾ ಕೇಂದ್ರಗಳಾಗಿ ಮಾರ್ಪಾಟಾಗಿ ಆದರ್ಶವಾಗುತ್ತವೆ. ಗೃಹ ಕೈಗಾರಿಕೆಗಳಿಂದ ಮಾತ್ರ ನಮ್ಮ ಎಲ್ಲ ಜನರಿಗೂ ಉದ್ಯೋಗದ ಅವಕಾಶ ನೀಡಲು ಸಾಧ್ಯ ಎಂದು ಪ್ರತಿಪಾದಿಸಿದರು.

### ಆಹಾರದ ಸಮಸ್ಯೆ :

೧೯೪೨-೪೩ ರಲ್ಲಿ ಬಂಗಾಳದಲ್ಲಿ ಭೀಕರ ಬರಗಾಲ ಕಂಡು ಜರ್ಜರಿತರಾದ ಗಾಂಧಿ ದೇಶದ ಆಹಾರದ ಅಭಾವಕ್ಕೆ ಕೆಲವು ಅಮೂಲ್ಯ ಸಲಹೆಗಳನು ಇತ್ತರು. ಸಾಧ್ಯವಾದಷ್ಟೂ ಮಟ್ಟಿಗೆ ಉಳುಮೆಗೆ ಒಳಪಡುವ ಎಲ್ಲಾ ಭೂಮಿಯಲ್ಲೂ ಆಹಾರ ಪದಾರ್ಥಗಳನ್ನು

ಬೆಳೆಯಬೇಕು. ಆಹಾರ ಧಾನ್ಯಗಳ ಕಾಳಸಂತೆ ವ್ಯಾಪಾರವನ್ನು ಬಗ್ಗು ಬಡಿಯಬೇಕು. ಆಹಾರದ ರಫ್ತು ವ್ಯಾಪಾರವನ್ನು ಕಡ್ಡಾಯವಾಗಿ ನಿಷೇಧಿಸಬೇಕು. ಜನರು ಹಿತಮಿತವಾಗಿ ಆಹಾರ ಸೇವಿಸಿ ಲಭ್ಯವಿರುವ ಆಹಾರ ದಾಸ್ತಾನು ಎಲ್ಲರಿಗೂ ಸಮಾನವಾಗಿ ದೊರಕುವಂತೆ ಸಹಕರಿಸಬೇಕು. ಹೀಗೆ ದೇಶದ ಆಹಾರ ಸಮಸ್ಯೆಗೆ ತಮ್ಮದೇ ಅಮೂಲ್ಯ ಅಭಿಪ್ರಾಯಗಳನ್ನು ನೀಡಿ ಕ್ಲಿಷ್ಟವಾಗಿದ್ದ ಆಹಾರ ಸಮಸ್ಯೆಯನ್ನು ಬಗೆಹರಿಸಿದ್ದರು.

## ಜನಸಂಖ್ಯಾ ಸಮಸ್ಯೆ :

ದೇಶದ ಶೇಕಡಾ ೪೬ ರಷ್ಟಿರುವ ಯುವ ಜನಾಂಗ ಮುಕ್ತವಾಗಿ ಯೋಚಿಸಿ ಕಾರ್ಯಕ್ರಮ ರೂಪಿಸಬೇಕಾದ ದಿನಗಳಿವು. ನಮ್ಮ ಬಹುತೇಕ ವಿದ್ಯಾಭ್ಯಾಸದ ಪಠ್ಯ ಗುಮಾಸ್ತನಾಗಲಷ್ಟೇ ಸಹಕಾರಿಯಾಗಿದೆ. ಜಾಗತಿಕ ಸವಾಲುಗಳನ್ನು ಮೀರಿ ನಿಲ್ಲುವಂತೆ ಸ್ವಸ್ಥ ಬದುಕಿಗೆ ನೀರೆರೆಯುವ ವಿದ್ಯಾಭ್ಯಾಸ ಜನರಿಗೆ ಸಿಗುತ್ತಿಲ್ಲವೆಂಬ ವಾದವನ್ನು ಒಪ್ಪಲೇಬೇಕಾಗುತ್ತದೆ. ಜಾಗತಿಕ ಮಟ್ಟದಲ್ಲಿ ಬೌದ್ಧಿಕ ಸಮತೋಲನವನ್ನು ಕಾಯ್ದುಕೊಳ್ಳುವ, ವಿಶ್ವಮಟ್ಟದ ಎಲ್ಲಾ ಪರೀಕ್ಷೆಗಳಿಗೂ ತೆರೆದುಕೊಳ್ಳುವ ಶಿಕ್ಷಣ ನಮ್ಮದಾಗಬೇಕು. ವ್ಯವಸಾಯ ಮತ್ತು ಕೈಗಾರಿಕೆ ಕ್ಷೇತ್ರದಲ್ಲಿ ಏಕಕಾಲದಲ್ಲಿ ಸಾಧನೆ ಮಾಡಬೇಕಾದ ಮನ್ವಂತರ ಇದಾಗಿದೆ. ವಿಶ್ವ ಎಷ್ಟು ಚಿಕ್ಕದಾಗಿದೆಯೆಂದರೆ ಆಫ್ರಿಕಾದ ಸಮಸ್ಯೆ, ಚೈನಾದ ತೊಂದರೆ, ಅರ್ಜೆಂಟೈನಾದ ಕೊರತೆಗಳು ಈ ಪ್ರಪಂಚದ ಸಮಸ್ಯೆಗಳಾಗಿ ತೋರುವುದು ಸಾಮಾನ್ಯ ವಿಷಯವಾಗಿದೆ. ಭಾರತದಂತ ವಿಪುಲ ಜನಸಂಖ್ಯೆ ಹೊಂದಿರುವ ದೇಶದಲ್ಲಿ ಜನಸಂಖ್ಯೆ ಪ್ರಮಾಣ ಆಧರಿಸಿದ ಯೋಜನೆಗಳು ನಮಗೆ ಬೇಕಾಗಿವೆ. ಅಂತಹ ಶಿಕ್ಷಣದ ಅವಶ್ಯಕತೆಯೂ ಇಂದು ಯುವ ಜನತೆಗಿದೆ.

ಆಧುನಿಕ ಕೃತಕ ಗರ್ಭನಿರೋಧಕ ಕ್ರಮವನ್ನು ಗಾಂಧಿ ವಿರೋಧಿಸಿದರು. ಜನರು ಬ್ರಮ್ಹಚರ್ಯವನ್ನು ಪಾಲಿಸುವುದರ ಮೂಲಕ ಹಾಗೂ ವಿವಾಹಾನಂತರದ ಸಂಯಮದ ಸ್ವಯಂ ಪ್ರತಿಬಂಧಕ ಕ್ರಮಗಳ ಮೂಲಕ ಜನಸಂಖ್ಯೆಯನ್ನು ತಡೆಗಟ್ಟಬೇಕು, ಇರುವ ಎಲ್ಲಾ ಭೂಮಿಯಲ್ಲಿ ಬೆಳೆ ಪಡೆಯುವುದರ ಮೂಲಕ ಜನಿಸುವ ಎಲ್ಲರಿಗೂ ಆಹಾರ ದೊರಕಿಸಿಕೊಂಡು ಜನಸಂಖ್ಯಾ ಸಮಸ್ಯೆಯನ್ನು ಮೆಟ್ಟಿ ನಿಲ್ಲಬೇಕೆಂಬುದು ಗಾಂಧೀಜಿಯವರ ಆಶಯವಾಗಿತ್ತು.

## ಸಂಘೇ ಶಕ್ತಿ ಕತಾಯುಗೇ :

ರಾಜ್ಯದಲ್ಲಿನ ಯುವ ಕ್ರೀಡಾಚಟುವಟಿಕೆಗಳನ್ನು ಸಂಘಟಿಸಲು, ಯುವ ಚಟುವಟಿಕೆಗಳನ್ನು ಪ್ರೋತ್ಸಾಹಿಸಲು ಯುವಜನ ಸೇವಾ ಇಲಾಖೆ ಹಲವಾರು ಸಾಂಘಿಕ ಚಟುವಟಿಕೆಗಳನ್ನು ಹಮ್ಮಿಕೊಂಡು ನಿರ್ದೇಶಿಸುತ್ತಿದೆ. ೧೯೬೯ರಲ್ಲಿ ಕನಸುಗೊಂಡ ಅಂದಿನ ನೇತಾರರು ಯುವಕ ಸಂಘ, ಯುವತಿ ಮಂಡಳಿಗಳನ್ನು ಗ್ರಾಮೀಣ ಪ್ರದೇಶದಲ್ಲಿ ಸ್ಥಾಪಿಸುವುದರೊಂದಿಗೆ ಸಂಘಟನೆಗಳಿಗೆ 'ಓಂಕಾರ ಹಾಡಿದರು'. ಗ್ರಾಮೀಣ ಮತ್ತು ನಗರ ಪ್ರದೇಶದ ಯುವಕ-ಯುವತಿಯರು, ಶಾಲಾ-ಕಾಲೇಜುಗಳಲ್ಲಿ ಕಲಿಯುತ್ತಿರುವ ವಿದ್ಯಾರ್ಥಿಗಳು, ವಿದ್ಯಾರ್ಥಿಯೇತರ ಯುವ ಜನಾಂಗ ಸಂಘದ ಚಟುವಟಿಕೆಯ ಕೇಂದ್ರ ಬಿಂದುವಾದರು. ಗ್ರಾಮೀಣ ಪ್ರದೇಶದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳಲು, ತಮ್ಮ ಪ್ರತಿಭೆಗಳನ್ನು ಕುಶಲತೆಯನ್ನು ಅಭಿವೃದ್ಧಿಪಡಿಸಿಕೊಳ್ಳಲು ಸಂಘಗಳು ನೆರವಾಗುತ್ತಿವೆ. ಯುವಕ ಸಂಘ, ಯುವತಿ ಮಂಡಳಿಗಳು ಸ್ವಯಂ ಉದ್ಯೋಗ ಮಾರ್ಗದರ್ಶನ ನೀಡುತ್ತಿವೆ. ಅದಕ್ಕಾಗಿ ತರಬೇತಿ ಮಾರ್ಗದರ್ಶನ, ಪ್ರತ್ಯೇಕ ವಿಭಾಗ ತೆಗೆದು ಯುವ ಪ್ರೇರಣಾ, ಯುವ ಚೇತನಾ ಶಿಬಿರಗಳನ್ನು ನಡೆಸಲಾಗುತ್ತಿದೆ.

ರಾಜ್ಯಾದ್ಯಂತ ಜಿಲ್ಲೆ, ತಾಲ್ಲೂಕು ಮತ್ತು ಹೋಬಳಿ ಮಂಡಲ ಪಂಚಾಯತಿ ಮಟ್ಟದಲ್ಲಿ ಸಂಘಗಳನ್ನು ಸ್ಥಾಪಿಸಲಾಗಿದೆ. ಮೂವತ್ತಾರು ಸಾವಿರಕ್ಕೂ ಮಿಕ್ಕ ಸಂಘಗಳು, ಮಂಡಲಿಗಳು ರಾಜ್ಯಾದ್ಯಂತ ವಿಸ್ತೃತಗೊಂಡಿವೆ. ಜಿಲ್ಲಾ ಪಂಚಾಯತಿ, ಮಂಡಲ ಪಂಚಾಯತಿ ಅಡಿಯಲ್ಲಿ ಮಾರ್ಗದರ್ಶನ ನಿಯಂತ್ರಣವನ್ನು ನಿರ್ವಹಿಸುತ್ತಿವೆ. ಯುವ ಜನ ಸೇವಾ ಮತ್ತು ಕ್ರೀಡಾ ಇಲಾಖೆ ಯುವ ಕಾರ್ಯಕ್ರಮಗಳನ್ನು ಸಂಘದ ವತಿಯಿಂದಲೇ ಆಯೋಜಿಸುತ್ತಿದೆ. ತಾಲ್ಲೂಕು ಮಂಡಲ ಮತ್ತು ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಯುವಕ ಸಂಘಗಳು ಕಾರ್ಯನಿರ್ವಹಿಸುತ್ತಿವೆ. ಜಿಲ್ಲಾಧಿಕಾರಿಗಳು ಯುವಕ ಸಂಘಗಳ ನೋಂದಣಿ ಹೊತ್ತಿದ್ದಾರೆ. ಕಾರ್ಯ ಚಟುವಟಿಕೆಗಳ ಉಸ್ತುವಾರಿ ಹೊಣೆ ಹೊತ್ತಿದ್ದಾರೆ. ರಾಜ್ಯಮಟ್ಟದಲ್ಲಿ ಜಿಲ್ಲೆ, ವಿಭಾಗ, ತಾಲ್ಲೂಕು ಮತ್ತು ಮಂಡಲ ವ್ಯಾಪ್ತಿಯ ಸಂಘಗಳ ನೋಂದಣಿ ಮತ್ತು ನವೀಕರಣವನ್ನು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು ನೆರವೇರಿಸುತ್ತಾರೆ. ಜಿಲ್ಲಾ ಮಟ್ಟದಲ್ಲಿ ಜಿಲ್ಲೆಯ ಯುವಜನ ಸೇವಾ ಮತ್ತು

ಕ್ರೀಡಾ ಮಂಡಳಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕಾರ್ಯನಿರ್ವಹಿಸುತ್ತದೆ. ಸಂಘಗಳ ನೋಂದಾವಣೆ, ಅವುಗಳಿಗೆ ಧನಸಹಾಯ ಮಂಜೂರಾತಿ, ಕ್ರೀಡಾ ಸೌಲಭ್ಯ, ಸಾಂಘಿಕ ಸೌಲಭ್ಯ, ರಾಜ್ಯ ಸರ್ಕಾರದ ಸಹಾಯಧನ ಮುಂತಾದುವುಗಳನ್ನು ಜಿಲ್ಲೆ ಮಟ್ಟದಲ್ಲಿ ನಿರ್ವಹಿಸಲಾಗುತ್ತಿದೆ.

ಸಂಘಗಳ ತರಬೇತಿ ನಿರ್ವಹಣೆಗಾಗಿ ಜಂಟಿ ನಿರ್ದೇಶಕರನ್ನು ನೇಮಿಸಲಾಗಿದೆ. ಅವರಡಿಯಲ್ಲಿ ಇಬ್ಬರು ಉಪ ನಿರ್ದೇಶಕರು, ಸಹಾಯಕ ನಿರ್ದೇಶಕರು, ತರಬೇತುದಾರರು, ವಿಷಯ ಪರಿಣತರು ಕಾರ್ಯನಿರ್ವಹಿಸುತ್ತಾರೆ. ತರಬೇತಿ ಕಾರ್ಯಕ್ರಮದಲ್ಲಿ ರಾಷ್ಟ್ರೀಯ ಸೇವಾ ಯೋಜನೆಗಳು, ಕ್ರೀಡಾ ಯೋಜನೆಗಳು, ಕ್ರೀಡಾಂಗಣ ನಿರ್ಮಾಣದ ವಿವರ ಒಳಗೊಂಡಿರುತ್ತವೆ. ಗ್ರಾಮಮಟ್ಟದಲ್ಲಿ ರಚಿತಗೊಂಡಿರುವ ಯುವಕ ಸಂಘ, ಹವ್ಯಾಸಿ ತಂಡಗಳು, ಕ್ರೀಡಾ ಸಂಘಗಳು ಮತ್ತು ಯುವ ಜನರ ಕಲ್ಯಾಣ ಕಾರ್ಯಕ್ರಮಗಳನ್ನು ಗ್ರಾಮೀಣ ಮಟ್ಟದಲ್ಲಿ ನೆರವೇರಿಸಲಾಗುತ್ತಿದೆ.

## ಯುವಜನರ ಕಲ್ಯಾಣಕ್ಕಾಗಿ ಯುವಕ ಸಂಘಗಳ ಸ್ಥಾಪನೆ :

ಯುವಜನರು ಆಶೋತ್ತರಗಳನ್ನು ಈಡೇರಿಸಿಕೊಳ್ಳಲು, ತಮ್ಮಲ್ಲಿರುವ ಉತ್ತಮ ಪ್ರತಿಭೆಯ ಬೆಳವಣಿಗೆಗೆ ಹಾಗೂ ದೇಶಸೇವೆಯಲ್ಲಿ ಸಂಘಟಿತ ಶಕ್ತಿಯಿಂದ ಸೇವೆ ಸಲ್ಲಿಸಲು ಸಂಘಗಳ ಸ್ಥಾಪನೆ ಅವಶ್ಯಕವಾಗಿದೆ. ರಾಜ್ಯದ ಯುವಜನರ ನಿರ್ದೇಶನಾಲಯವು ಸಿದ್ಧಪಡಿಸಿರುವ ಯುವಕ ಸಂಘಗಳ ರಚನೆ ಕಾರ್ಯ ಚಟುವಟಿಕೆಗಳ ನಿಯಮಕ್ಕೆ ಬದ್ಧರಾಗಿ ಸಂಘಗಳನ್ನು ಸ್ಥಾಪಿಸಿದ ನಂತರ ಅದರ ನೋಂದಣಿಯನ್ನು ಆಯಾ ಜಿಲ್ಲೆಯ ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾಧಿಕಾರಿಗಳ ಮೂಲಕ ಮಾಡಿಸಬೇಕಾಗುತ್ತದೆ. ನೋಂದಣಿಗಾಗಿ ಪ್ರಸ್ತಾವನೆಯನ್ನು ಆಯಾ ತಾಲ್ಲೂಕು ಇಲಾಖಾಧಿಕಾರಿಗಳ ಅಥವಾ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಮೂಲಕ ಜಿಲ್ಲಾ ಇಲಾಖಾ ಕಚೇರಿಗೆ ಕಳುಹಿಸಬೇಕು. ರಾಜ್ಯಾದ್ಯಂತ ಪ್ರತಿ ಯುವಕ ಸಂಘ ನೋಂದಾವಣೆ ಶುಲ್ಕ ರೂ. ೫೦(ಐವತ್ತು ರೂಪಾಯಿ)ಗಳನ್ನು ಜಿಲ್ಲಾ ಇಲಾಖಾಧಿಕಾರಿಗಳಿಗೆ ಸಲ್ಲಿಸಿ ರಸೀತಿ ಮತ್ತು ನೋಂದಣಿ ಪತ್ರ ಪಡೆಯಬೇಕು. ನೋಂದಣಿಯಾಗದ ಸಂಘ ಸಂಸ್ಥೆಗಳಿಗೆ ಪ್ರೋತ್ಸಾಹ ನೀಡಲಾಗುವುದಿಲ್ಲ. ೧೫ ವರ್ಷದಿಂದ ೩೫ ವರ್ಷದೊಳಗಿರುವ ಯುವ ಜನರು ಸಂಘದ ಸದಸ್ಯರಾಗಲು ಅರ್ಹರಾಗಿರುತ್ತಾರೆ.

## ಸಂಘಗಳ ನವೀಕರಣ ಹೇಗೆ :

ಜಿಲ್ಲಾ ಯುವ ಜನ ಸೇವಾ ಮತ್ತು ಕ್ರೀಡಾ ಮಂಡಳಿಗೆ ನೋಂದಾಯಿಸಿರುವ ಸಂಘ ಸಂಸ್ಥೆಯವರು ಪ್ರತಿ ವರ್ಷ ನವೀಕರಣ ಮಾಡಿಸುವ ಕಾರ್ಯ ಕಡ್ಡಾಯವಾಗಿರುತ್ತದೆ. ನವೀಕರಣಕ್ಕಾಗಿ ಶುಲ್ಕ ರೂ.೧೦(ಹತ್ತು ರೂಪಾಯಿ) ಮಾತ್ರ ನೀಡಿ ಅಧಿಕೃತ ರಸೀತಿ ಪಡೆಯತಕ್ಕದ್ದು. ಸಂಘಗಳ ನೋಂದಣಿ, ನವೀಕರಣಗಳ ಕಾರ್ಯಗಳನ್ನು ಆಯಾ ಜಿಲ್ಲಾ ಯುವ ಜನ ಸೇವಾ ಮತ್ತು ಕ್ರೀಡಾ ಮಂಡಳಿ ಮೂಲಕ ಮಾಡಲಾಗುವುದು. ನೋಂದಣಿ ಹಾಗೂ ಪ್ರತಿವರ್ಷ ನವೀಕರಣವಾಗದ ಸಂಘ ಸಂಸ್ಥೆಗಳಿಗೆ ಪ್ರೋತ್ಸಾಹ ಮತ್ತು ಅನುದಾನಗಳನ್ನು ನೀಡಲಾಗುವುದಿಲ್ಲ.

## ಗ್ರಾಮೀಣ ಮಟ್ಟದಲ್ಲಿ ಸಂಘ ನಡೆಸಬೇಕಾದ ಚಟುವಟಿಕೆಗಳು :

ಸಂಘದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಯುವ ಜನರ ಹವ್ಯಾಸದ ಬಗ್ಗೆ ಮಾಹಿತಿ ಸಂಗ್ರಹಣೆ, ಗ್ರಾಮ-ನಗರ ಪ್ರದೇಶಗಳಲ್ಲಿ ಸೇವೆಯ ಮೂಲಕ ಅವಶ್ಯಕವಾಗಿ ಮಾಡಬೇಕಾಗಿರುವ ಕಲ್ಯಾಣ ಕಾರ್ಯಗಳ ವಿವರಣೆ ಪಟ್ಟಿ ಮಾಡುವುದು ಹಾಗೂ ಕಾರ್ಯಗತಗೊಳಿಸಲು ಯೋಜನೆ ತಯಾರಿಸುವುದು. ಗ್ರಾಮಸಭೆಗಳಲ್ಲಿ ಮಂಡಿಸುವುದು, ಶ್ರಮದಾನದ ಮೂಲಕ ಗ್ರಾಮ, ನಗರ ಪ್ರದೇಶಗಳ ಸ್ವಚ್ಛತೆ ಕಾಪಾಡುವುದು, ಪರಿಸರ ಅಭಿವೃದ್ಧಿ, ಅರಣ್ಯ ಅಭಿವೃದ್ಧಿ, ನೀರಿನ ಸ್ವಚ್ಛತೆಗಾಗಿ ಶ್ರಮಿಸುವುದು, ಆಧುನಿಕ ಬೇಸಾಯ ಪದ್ಧತಿಯನ್ನು ಅಳವಡಿಸಿ ಅವುಗಳ ಸದುಪಯೋಗದ ಬಗ್ಗೆ ತಿಳಿವಳಿಕೆ ನೀಡುವುದು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯು ನಡೆಸುವ ಎಲ್ಲಾ ಚಟುವಟಿಕೆಗಳಲ್ಲಿ ಭಾಗವಹಿಸುವುದು ಮತ್ತು ಮಾರ್ಗದರ್ಶನ ಪಡೆಯುವುದು ; ಆರೋಗ್ಯ, ಜನಸಂಖ್ಯಾ ಸ್ಫೋಟ, ಸಂತಾನ ನಿಯಂತ್ರಣ ಇತ್ಯಾದಿ ಅಭಿವೃದ್ಧಿ ಚಟುವಟಿಕೆಗಳ ಬಗ್ಗೆ ತಿಳುವಳಿಕೆ ನೀಡುವುದು ; ಸಮಾಜದ ಪಿಡುಗಾದ ನಿರುದ್ಯೋಗ ಸಮಸ್ಯೆ, ವರದಕ್ಷಿಣೆ, ಆರ್ಥಿಕ ಸಾಮಾಜಿಕ ಹಾಗೂ ವೈಯಕ್ತಿಕ ಸಮಸ್ಯೆ ಇವುಗಳ ನಿರ್ವಹಣೆ ಬಗ್ಗೆ ಜನಾಭಿಪ್ರಾಯ ರೂಢಿಸುವುದು; ದುರ್ಬಲ ಹಾಗೂ ಶೋಷಿತ ವರ್ಗದ ಜನಗಳಿಗೆ ಧೈರ್ಯ ಹಾಗೂ ಮಾರ್ಗದರ್ಶನ ನೀಡಿ

ಸಬಲರಾಗಿ ಬಾಳಲು ಅನುವು ಮಾಡುವುದು; ದೇಶಾಭಿಮಾನ ಬೆಳೆಸಿಕೊಂಡು ಭಾವೈಕ್ಯದಿಂದ ಬಾಳಲು ದಾರಿ ತೋರುವುದು; ಉತ್ತಮ ಹವ್ಯಾಸಗಳ ಅಭಿವೃದ್ಧಿಗಾಗಿ ತರಬೇತಿ, ಚರ್ಚಾಕೂಟ ನಡೆಸುವ ಮೂಲಕ ಸದಸ್ಯರ ಸರ್ವತೋಮುಖ ಏಳಿಗೆಗಾಗಿ ಶ್ರಮಿಸುವುದು. ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯು ೭ನೇ ತರಗತಿಯಲ್ಲಿ ತೇರ್ಗಡೆಯಾದ ಉತ್ತಮ ಕ್ರೀಡಾ ಪ್ರತಿಭೆಯುಳ್ಳ ಬಾಲಕ ಮತ್ತು ಬಾಲಕಿಯರಿಗಾಗಿ ಕ್ರೀಡಾ ಶಾಲೆ ಮತ್ತು ಕ್ರೀಡಾ ನಿಲಯಗಳನ್ನು ನಡೆಸುತ್ತಿದೆ. ಗ್ರಾಮದ ಪ್ರತಿಭಾವಂತ ಎಳೆಯರನ್ನು ಪಟ್ಟಿ ಮಾಡಿ, ಇಲಾಖೆಯು ಈ ಶಾಲೆಗಳ ಪ್ರವೇಶಕ್ಕಾಗಿ ನಡೆಸುವ ಆಯ್ಕೆ ಸ್ಪರ್ಧೆಗಳಿಗೆ ಕ್ರೀಡಾಪಟುಗಳನ್ನು ಕಳುಹಿಸುವುದು. ಒಗ್ಗಟ್ಟು ಹಾಗೂ ಸಹಕಾರದ ಮಹತ್ವ ಅರಿಯಲು ಕಾರ್ಯ ಹಮ್ಮಿಕೊಳ್ಳುವುದು. ವೃತ್ತಿ ಶಿಕ್ಷಣ, ಸ್ವಯಂ ಉದ್ಯೋಗಾವಕಾಶಗಳ ಬಗ್ಗೆ ಮಾಹಿತಿ ನೀಡುವುದು. ಜ್ಞಾನಾಭಿವೃದ್ಧಿಗಾಗಿ ವಾಚನಾಲಯ, ಪುಸ್ತಕ ಭಂಡಾರ ನಡೆಸುವುದು. ಕ್ರೀಡಾ ಚಟುವಟಿಕೆಗಳನ್ನು ನಡೆಸುವುದು ಮತ್ತು ಪ್ರೋತ್ಸಾಹಿಸುವುದು.

## ಗ್ರಾಮೀಣ ಸಂಘಗಳಿಗೆ ನೀಡಲಿರುವ ಅನುದಾನಗಳು :

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯು ರಾಜ್ಯದ ಯುವಕ ಸಂಘಗಳ ಕಲ್ಯಾಣ ಕಾರ್ಯಕ್ಕೆ ಪ್ರೋತ್ಸಾಹ ನೀಡಲು ಅನುದಾನವನ್ನು ನೀಡುತ್ತದೆ. ಅನುದಾನವನ್ನು ಆಯಾ ಜಿಲ್ಲಾ ಇಲಾಖಾಧಿಕಾರಿಗಳ ಮೂಲಕ ನೀಡಲಾಗುವುದು. ಸಂಘದ ಪದಾಧಿಕಾರಿಗಳು ಅನುದಾನ ಪಡೆಯಲು ನಿಗದಿತ ಅರ್ಜಿಗಳಲ್ಲಿ ಪ್ರಸ್ತಾವನೆಗಳನ್ನು ಸಂಬಂಧಪಟ್ಟ ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾಧಿಕಾರಿಗಳ ಕಚೇರಿಗೆ ತಲುಪಿಸಬೇಕು. ನವೀಕರಣ ಹೊಂದಿದ ಸಂಘಗಳಿಗೆ ಮಾತ್ರ ಅನುದಾನಗಳನ್ನು ಮಂಜೂರು ಮಾಡಲಾಗುವುದು. ಯುವಜನ ಸಂಘಗಳಿಗೆ ಕೇಂದ್ರ ಸರ್ಕಾರವು ಧನಸಹಾಯ ನೀಡುತ್ತಿದೆ. ಈ ಬಗ್ಗೆ ಅರ್ಜಿ ನಮೂನೆ ಮತ್ತು ಹೆಚ್ಚಿನ ವಿವರಗಳನ್ನು ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾಧಿಕಾರಿಗಳಿಂದ ಪಡೆಯಬಹುದು.

## ಅನುದಾನ ವಿವರ :

ಸಂಘದ ಚಟುವಟಿಕೆಗಳು ಸರಾಗವಾಗಿ ನಡೆಸಲು ಬೇಕಾಗುವ ಉಪಕರಣ ಖರೀದಿಗಾಗಿ ಮೌಲ್ಯದ ಶೇ.೫೦ ರಷ್ಟು ಅಥವಾ ಗರಿಷ್ಠವಾಗಿ ೫೦೦೦ ರೂ. ನೀಡಲಾಗುವುದು. ಸಂಘದ ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಸ್ವಂತ ನಿವೇಶನ ಹೊಂದಿದ ಸಂಘಗಳಿಗೆ ಅಂದಾಜು ವೆಚ್ಚದ ಶೇ.೫೦ ರಷ್ಟು ಅಥವಾ ೧೫,೦೦೦ ರೂ.ಗಳ ಗರಿಷ್ಠ ಅನುದಾನ ಮೌಲ್ಯಾಧಾರದ ಮೇಲೆ ಯಾವುದು ಕಡಿಮೆಯೋ ಆ ಮೊತ್ತವನ್ನು ನೀಡಲಾಗುವುದು. ಸ್ವಂತ ನಿವೇಶನ ಹೊಂದಿದ ಯುವಜನ ಸಂಘಗಳಿಗೆ ಗರಡಿ ಮನೆ ನಿರ್ಮಾಣಕ್ಕಾಗಿ ಇಲಾಖೆಯು ಅಂದಾಜು ವೆಚ್ಚದ ಶೇ. ೫೦ ರಷ್ಟು ಅಥವಾ ೧೦,೦೦೦ ರೂ.ಗಳು ಯಾವುದು ಕಡಿಮೆಯೋ ಆ ಮೊತ್ತವನ್ನು ಧನಸಹಾಯವಾಗಿ ನೀಡಲಿದೆ. ಸ್ವಂತ ನಿವೇಶನ ಹೊಂದಿದ ಸಂಸ್ಥೆಗೆ ಬಯಲು ರಂಗಮಂದಿರ ನಿರ್ಮಾಣಕ್ಕಾಗಿ ಇಲಾಖೆಯು ಅಂದಾಜು ವೆಚ್ಚದ ಶೇ.೫೦ ರಷ್ಟು ಅಥವಾ ೧೦,೦೦೦ರೂ.ಗಳು. ಯಾವುದು ಕಡಿಮೆಯೋ ಆ ಮೊತ್ತವನ್ನು ಧನಸಹಾಯವಾಗಿ ನೀಡಲಿದೆ.

## ಸಾಮಾಜಿಕ ಬದಲಾವಣೆ ಹರಿಕಾರರು ಯುವಜನರು :

ಯುವಜನರು ಎಂದೆಂದೂ ಪ್ರಗತಿಯ ಮತ್ತು ಸಾಮಾಜಿಕ ಬದಲಾವಣೆಯ ಹರಿಕಾರರು. ಸ್ವಾತಂತ್ರ್ಯ ದಾಹ, ಪ್ರಗತಿಪಥದಲ್ಲಿ ಪಯಣಿಸುವ ಆತುರ, ಹೊಸದನ್ನು ಹುಟ್ಟುಹಾಕುವ ಬಯಕೆ, ಜೊತೆಗೆ ಆದರ್ಶ ಮತ್ತು ಕರ್ತೃತ್ವ ಶಕ್ತಿ ಇವುಗಳು ನಮ್ಮ ಯುವ ಪೀಳಿಗೆಯನ್ನು ಸ್ವಾತಂತ್ರ್ಯ ಹೋರಾಟದ ಮುಂಚೂಣಿಯಲ್ಲಿ ನಿಲ್ಲಿಸಿದ್ದವು. ಸ್ವಾತಂತ್ರ್ಯ ಪೂರ್ವದ ಯುವಜನರು ರಾಷ್ಟ್ರಪಿತನ ಕರೆಗೆ ಓಗೊಟ್ಟು ಕ್ರಿಯಾಶೀಲರಾಗಿದ್ದಾರೆ. ಸ್ವಾತಂತ್ರ್ಯೋತ್ತರ ಯುವಕರಿಗೆ ಆರ್ಥಿಕ ಅಭಿವೃದ್ಧಿ, ತಾಂತ್ರಿಕ ಬೆಳವಣಿಗೆ, ಸಾಮಾಜಿಕ ನ್ಯಾಯ ಮುಂತಾದ ಸವಾಲುಗಳು ಮುಂದಿದೆ.

ಭಾರತದ ಜನಸಂಖ್ಯೆಯ ಮೂರನೇ ಒಂದು ಭಾಗವಾದ ಈ ಯುವಜನರು ದೇಶದ ಮಾನವ ಸಂಪನ್ಮೂಲದ ಬೆನ್ನೆಲುಬು. ದೇಶದ ಭವಿಷ್ಯ ರೂಪಿಸುವುದಕ್ಕೆ, ತನ್ಮೂಲಕ ತಮ್ಮ ಭವಿಷ್ಯ ಕಂಡುಕೊಳ್ಳುವುದಕ್ಕೆ, ರಾಷ್ಟ್ರದ ಅಭಿವೃದ್ಧಿಯಲ್ಲಿ ಭಾಗಿಗಳಾಗುವುದಕ್ಕೆ ಅವರಿಗೆ ವಿಶೇಷ ಹಕ್ಕಿದೆ ಹಾಗೂ ಜವಾಬ್ದಾರಿಯೂ ಇದೆ. ಭವ್ಯ ಭಾರತದ, ಉಜ್ವಲ ಭವಿಷ್ಯದ ಈ ದೇಶದಲ್ಲಿ ಅವರ ಸಮಸ್ಯೆಗಳು

ಹತ್ತು ಹಲವು ಹಾಗೂ ಬಹುಮುಖ. ಅವರ ಆಶೆ ಆಕಾಂಕ್ಷೆಗಳು ಆಗಸದೆತ್ತರ. ಆದುದರಿಂದ ಅವರ ವ್ಯಕ್ತಿತ್ವವನ್ನು ವಿಕಸನಗೊಳಿಸಿ ಕರ್ತೃತ್ವ ಶಕ್ತಿಯನ್ನು ಹೆಚ್ಚಿಸಿ ಅವರನ್ನು ಆರ್ಥಿಕವಾಗಿ ಉತ್ಪಾದಕರನ್ನಾಗಿ, ಸಾಮಾಜಿಕವಾಗಿ ಉಪಯುಕ್ತರನ್ನಾಗಿಸಲು ಬೇಕಾದ ಅವಕಾಶಗಳನ್ನು ಒದಗಿಸುವುದು ಇಂದಿನ ಅಗತ್ಯಗಳಲ್ಲೊಂದು.

ಸಮಾಜದ ಎಲ್ಲಾ ಯುವಜನರನ್ನು ಅದರಲ್ಲೂ ಮುಖ್ಯವಾಗಿ ಶೋಷಿತರಿಗೆ ಪುರುಷಪ್ರಯತ್ನದ ಎಲ್ಲಾ ಸ್ಥಾವರಗಳನ್ನು ಮುಟ್ಟಲು ಅನುಕೂಲವಾಗುವಂತೆ ಹೆಚ್ಚು ಹೆಚ್ಚು ಅವಕಾಶಗಳನ್ನು ಒದಗಿಸಿಕೊಡಬೇಕಾಗಿದೆ. ಎಲ್ಲಾ ರಾಷ್ಟ್ರೀಯ ಕಾರ್ಯಕ್ರಮಗಳು ಯುವಜನರನ್ನು ಉತ್ಪಾದಕರನ್ನಾಗಿ, ಆತ್ಮವಿಶ್ವಾಸವುಳ್ಳವರನ್ನಾಗಿ, ರಾಷ್ಟ್ರೀಯ ಅಭಿವೃದ್ಧಿಗಾಗಿ ಮುಡುಪಾಗಿಟ್ಟ ಪಡೆಯಾಗಿಸುವುದರೆಡೆ ನಿರ್ದೇಶಿತವಾಗಿರಬೇಕು. ಈ ಕಾರ್ಯಕ್ರಮಗಳು ಯುವಕರ ಸರ್ವಾಂಗೀಣ ಬೆಳವಣಿಗೆಗೆ ಮತ್ತು ಎಲ್ಲಾ ಕ್ಷೇತ್ರಗಳಲ್ಲೂ ವಿಶೇಷತೆಯನ್ನು ಹೊರತರುವುದಕ್ಕೆ ಸಾಕಷ್ಟು ಅವಕಾಶಗಳನ್ನು ನೀಡಬೇಕು. ಇದಾಗಬೇಕಾದರೆ ಸರ್ಕಾರಿ ಇಲಾಖೆಗಳ ಮತ್ತು ಸರ್ಕಾರೇತರ ಸಂಸ್ಥೆಗಳ ಕುಟುಂಬ, ಶಿಕ್ಷಕರು, ಮುಂದಾಳುಗಳು, ಸ್ವಯಂ ಸೇವಾ ಮಾಧ್ಯಮಗಳು ಹಾಗೂ ಯುವಕ ಸಂಘಗಳು ಒಂದು ಕ್ರೋಡೀಕೃತ ಕಾರ್ಯಕ್ರಮ ಹೊಂದುವ ಅಗತ್ಯವಿದೆ. ಇದಕ್ಕೆ ರಾಜ್ಯ ಸರ್ಕಾರ ಕೂಡ ಸಾಕಷ್ಟು ತಾಂತ್ರಿಕ ಸೌಲಭ್ಯ ಒದಗಿಸುವ ಹೊಣೆಗಾರಿಕೆ ಹೊರಬೇಕು. ಆದುದರಿಂದ ಯುವಕರನ್ನು ರಾಷ್ಟ್ರದ ಜೀವನ ಮತ್ತು ಏಳಿಗೆಯಲ್ಲಿ ಭಾಗಿಗಳಾಗಿಸುವುದು ಮಾತ್ರವಲ್ಲದೆ, ಆ ಜವಾಬ್ದಾರಿ ಹೊರಲು ಅವರನ್ನು ಸಿದ್ಧಪಡಿಸಬೇಕು. ಈ ಕೆಲಸ ಕಷ್ಟಸಾಧ್ಯವಾದರೂ ಅತ್ಯಂತ ಆಗತ್ಯ. ಸರ್ಕಾರ ಮಾತ್ರವಲ್ಲದೆ, ವ್ಯಕ್ತಿಗಳು ಸಂಸ್ಥೆಗಳನ್ನೊಳಗೊಂಡಂತೆ ಇಡೀ ದೇಶವನ್ನು ಸೃಜನಶೀಲ ಭಾವನೆಯ ತಳಹದಿಯಲ್ಲಿ ಒತ್ತಟ್ಟಿಗೆ ತರಬೇಕಾಗಿದೆ.

ನಮ್ಮ ರಾಜ್ಯಾಂಗದಲ್ಲಿ ನಿರೂಪಿಸಲ್ಪಟ್ಟ ಸಿದ್ಧಾಂತಗಳ ಮತ್ತು ಮೌಲ್ಯಗಳ ಬಗ್ಗೆ ಯುವಜನರಲ್ಲಿ ಆಳವಾದ ತಿಳುವಳಿಕೆ ಮತ್ತು ಗೌರವ ಮೂಡಿಸುವುದು, ಕಾನೂನುಗಳನ್ನು ಗೌರವಿಸುವುದರ ಜೊತೆಗೆ ಭಾವೈಕ್ಯತೆ, ಅಹಿಂಸೆ, ಜಾತ್ಯತೀತತೆ ಹಾಗೂ ಸಮಾಜವಾದತ್ವಗಳ ಬಗ್ಗೆ ಕಾಳಜಿ ವಹಿಸುವುದು. ನಮ್ಮ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಪರಂಪರೆ ಬಗ್ಗೆ ಯುವಜನರಲ್ಲಿ ತಿಳಿವಳಿಕೆ ಮೂಡಿಸಿ ಅವುಗಳನ್ನು ಅಭಿಮಾನದಿಂದ ಹಾಗೂ ರಾಷ್ಟ್ರೀಯ ಗುರುತಾಗಿ ತಮ್ಮಲ್ಲಿ ಅಳವಡಿಸಿಕೊಂಡು ಅವುಗಳನ್ನು ಉಳಿಸಿ ಬೆಳೆಸಿಕೊಂಡು ಹೋಗುವುದರ ಬಗ್ಗೆ ಶ್ರದ್ಧೆ ಮೂಡಿಸುವುದು ಹಾಗೂ ನಮ್ಮ ಪರಿಸರ ಮತ್ತು ಪ್ರಾಕೃತಿಕ ಸಂಪತ್ತನ್ನು ಅಭಿವೃದ್ಧಿಗೊಳಿಸುವುದು. ಯುವ ಜನರಲ್ಲಿ ಶಿಸ್ತು, ಸ್ವಾವಲಂಬನೆ, ನ್ಯಾಯ, ಸಾರ್ವಜನಿಕ ಹಿತರಕ್ಷಣೆ, ಕ್ರೀಡಾ ಮನೋಭಾವನೆ ಮೂಡಿಸಿ ಮೂಢನಂಬಿಕೆ ಹಾಗೂ ಸಾಮಾಜಿಕ ಪಿಡುಗುಗಳ ವಿರುದ್ಧ ಹೋರಾಡುವ ಗುಣಗಳನ್ನು ಬೆಳೆಸುವುದು. ಯುವಕರಿಗೆ ತಮ್ಮ ವ್ಯಕ್ತಿತ್ವ ಬೆಳೆಸಿಕೊಳ್ಳುವಂತಹ, ವ್ಯಕ್ತಿ ಮತ್ತು ಉದ್ಯೋಗ ತರಬೇತಿ ಸಿಗುವ, ಉದ್ಯೋಗ ಮತ್ತು ಸ್ವಯಂ ಉದ್ಯೋಗಕ್ಕೆ ಅನುಕೂಲವಾಗುವ, ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸುವ ಉತ್ತಮ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಡುವುದು. ಅಂತರ ರಾಷ್ಟ್ರೀಯ ವಿಚಾರಗಳು ಹಾಗೂ ವಿಶ್ವ ಶಾಂತಿ ಬಗ್ಗೆ ತಿಳಿವಳಿಕೆ, ನ್ಯಾಯಬದ್ಧವಾದ ವಿಶ್ವ ಆರ್ಥಿಕ ಧೋರಣೆ ಬಗ್ಗೆ ಯುವಕರಲ್ಲಿ ಅರಿವು ಮೂಡಿಸುವುದು.

**ಕಾರ್ಯಯೋಜನೆ :**

ಭಾರತೀಯ ಸಂವಿಧಾನದ ಬಗ್ಗೆ ಜ್ಞಾನ ಮತ್ತು ಗೌರವ, ರಾಷ್ಟ್ರೀಯ ಭಾವೈಕ್ಯತೆ, ಸಾಂಸ್ಕೃತಿಕ ಒಗ್ಗಟ್ಟು, ಪ್ರಜಾಪ್ರಭುತ್ವ ಮೌಲ್ಯಗಳು, ಸಮಾಜವಾದದಲ್ಲಿ ನಂಬಿಕೆ ಮತ್ತು ಜಾತ್ಯತೀತತೆ-ಇವುಗಳನ್ನು ಪ್ರತಿಬಿಂಬಿಸುವ ಯುವ ಚಟುವಟಿಕೆಗಳ ಕಾರ್ಯಕ್ರಮಗಳನ್ನು ರೂಪಿಸುವುದು. ನಮ್ಮ ಇತಿಹಾಸ, ಸ್ವಾತಂತ್ರ್ಯ ಹೋರಾಟ, ರಾಷ್ಟ್ರೀಯ ಅಭಿವೃದ್ಧಿ ಇವುಗಳ ಬಗ್ಗೆ ತಿಳುವಳಿಕೆ ನೀಡುವಂತಹ ಕಾರ್ಯಕ್ರಮಗಳನ್ನು ಹಾಕಿಕೊಳ್ಳುವುದು, ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನದಿಂದ ಆದ ಸಾಧನೆ ಮತ್ತು ಅವುಗಳಿಂದ ಸಾಮಾಜಿಕ ಆರ್ಥಿಕ ತಡೆಗಳನ್ನು ತೊಡೆದು ನಮ್ಮ ಆಧ್ಯಾತ್ಮಿಕ ಶಕ್ತಿ ಸಾಂಸ್ಕೃತಿಕ ಗುರುತುಗಳನ್ನು ಕಳೆದುಕೊಳ್ಳದೆ ತ್ವರಿತವಾಗಿ ಪ್ರಗತಿ ಸಾಧಿಸುವುದು. ದೇಶದ ಬೇರೆ ಬೇರೆ ಭಾಗದ ಯುವಕರೊಡನೆ ಸಂಪರ್ಕ ಬೆಳೆಯುವಂತೆ ಮಾಡಿ, ಅದನ್ನು ಪ್ರಾದೇಶಿಕತೆ, ಜಾತೀಯತೆ, ಭಾಷಾಂಧತೆ ಮುಂತಾದ ಕೆಟ್ಟ ಶಕ್ತಿಗಳ ವಿರುದ್ಧ ಹೋರಾಡಲು ಉತ್ತೇಜಿಸಲು ಅಂತರ ಭಾರತಿ ಕಾರ್ಯಕ್ರಮದಲ್ಲಿ ಪಾಲ್ಗೊಳ್ಳುವಂತೆ ಮಾಡುವುದು. ರಾಜ್ಯ ಯುವಕ ಯುವತಿಯರಿಗೆ ಅದರಲ್ಲೂ ಮುಖ್ಯವಾಗಿ ವಿದ್ಯಾರ್ಥಿಗಳಲ್ಲದೆ ಗ್ರಾಮೀಣ ಯುವ ಜನರಿಗೆ ಹಾಗೂ ವಂಚಿತ ಸಮಾಜಕ್ಕೆ ಅನುಕೂಲವಾಗುವಂತೆ ಸಮೂಹ ಶಿಕ್ಷಣ (ಔಪಚಾರಿಕ ಹಾಗೂ ಅನೌಪಚಾರಿಕ ಶಿಕ್ಷಣ) ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳುವುದು.

ಯುವಜನರಿಗೆ ಸ್ವಯಂ ಉದ್ಯೋಗ, ಔದ್ಯೋಗಿಕ ಅಭಿವೃದ್ಧಿ, ಉತ್ಪಾದಕತೆ ಇವುಗಳನ್ನು ಕಲಿಸುವ ಹಾಗೂ ಶ್ರಮ ಗೌರವ (ಡಿಗ್ನಿಟಿ ಆಫ್ ಲೇಬರ್) ವನ್ನು ಬೆಳೆಸುವ ತರಬೇತಿ ಕಾರ್ಯಕ್ರಮಗಳನ್ನು ಸಂಯೋಜಿಸುವುದು. ವ್ಯಕ್ತಿತ್ವ ವಿಕಸನ ಮತ್ತು ಚಾರಿತ್ರ್ಯ ವರ್ಧನೆ ಮಾಡುವ, ಸಾಮಾಜಿಕ ಸಮುದಾಯ ಸ್ವಯಂಸೇವಕರನ್ನು ರೂಪಿಸುವ ಮುಂದಾಳತ್ವ ತರಬೇತಿ ಪಡೆಯಲು ಕಾರ್ಯಕ್ರಮಗಳನ್ನು ರೂಪಿಸುವುದು. ಯೋಗದಲ್ಲಿ ಸಾಮೂಹಿಕವಾಗಿ ಪಾಲ್ಗೊಳ್ಳುವಿಕೆ, ದೇಶದ ಹಳೆಯ ಆಟಗಳು ಹಾಗೂ ಆಧುನಿಕ ಕ್ರೀಡೆಗಳನ್ನು ಯುವ ಕಾರ್ಯಕ್ರಮದ ಅವಿಭಕ್ತ ಅಂಗವನ್ನಾಗಿಸಿ, ಕಷ್ಟಸಹಿಷ್ಣುತೆ ಮತ್ತು ಸವಾಲು ಎದುರಿಸುವ ಕೆಚ್ಚು ಬೆಳೆಸಲು ಸಾಹಸ ಕಾರ್ಯಕ್ರಮಗಳನ್ನು ಒಳಗೊಂಡ ಶರೀರ ದಾರ್ಢ್ಯತಾ ಕಾರ್ಯಕ್ರಮಗಳನ್ನು ರೂಪಿಸುವುದು. ಸಾಮಾಜಿಕ ಪಿಡುಗುಗಳು, ಮೂಢನಂಬಿಕೆಗಳು, ಕುಟುಂಬ ಕಲ್ಯಾಣ ಯೋಜನೆ ಬಗ್ಗೆ ಚಳುವಳಿಗಳಲ್ಲಿ ಯುವಕರನ್ನು ಸೇರಿಸಿಕೊಂಡು ಸಾಮಾಜಿಕ ಬದಲಾವಣೆಗಳ ಬಗ್ಗೆ ಅವರ ಜವಾಬ್ದಾರಿಯನ್ನು ತಿಳಿಯಹೇಳುವುದು 'ವಸುದೈವ ಕುಟುಂಬಕಂ' ಎನ್ನುವ ನಮ್ಮ ಹಿರಿಯರ ನುಡಿಯಂತೆ ಭಾರತೀಯ ಯುವ ಜನರನ್ನು ಪ್ರಪಂಚದ ಇತರ ಯುವ ಜನರೊಡನೆ ಸಂಪರ್ಕ ಹಾಗೂ ನಿಕಟ ಸಂಬಂಧ ಬೆಳೆಸುವಂತೆ ಮಾಡಿ ಅಂತರರಾಷ್ಟ್ರೀಯ ತಿಳಿವಳಿಕೆ ಹಾಗೂ ವಿಶ್ವ ಶಾಂತಿಯನ್ನು ಬೆಳೆಸುವುದು, ವಿವಿಧ ಕ್ಷೇತ್ರಗಳಲ್ಲಿ ಉತ್ತಮ ಕೆಲಸ ಮಾಡಿದ ಯುವಜನರಿಗೆ ಹಾಗೂ ಸ್ವಯಂ ಸೇವಾ ಸಂಸ್ಥೆಗಳಿಗೆ ಪುರಸ್ಕಾರ, ಪ್ರತಿಭಾ ವೇತನ ಮುಂತಾದುವುಗಳನ್ನು ನೀಡಿ ಅವರ ಕಾರ್ಯವನ್ನು ಗುರುತಿಸುವುದು.

**ಕಾರ್ಯಸಾಧನೆ :**

ಮಾನವ ಸಂಪನ್ಮೂಲ ಖಾತೆಯ ವ್ಯಾಪ್ತಿಗೆ ಒಳಪಟ್ಟಿರುವ ಯುವಜನ ಚಟುವಟಿಕೆ ಮತ್ತು ಕ್ರೀಡಾ ಇಲಾಖೆಯು ಸರ್ಕಾರದ 'ರಾಷ್ಟ್ರೀಯ ಯುವ ನೀತಿ'ಯನ್ನು ಜಾರಿಗೊಳಿಸುವ ಮಾಧ್ಯಮವಾಗಿದ್ದು, ಅದು ಈ ದಿಸೆಯಲ್ಲಿ ಅಗತ್ಯ ಮಾರ್ಗದರ್ಶನ, ಸಹಾಯವನ್ನು ನೀಡುತ್ತದೆ. ಯುವ ನೀತಿಯನ್ನು ಜಾರಿಗೊಳಿಸುವಾಗ ವಿವಿಧ ಹಂತಗಳಲ್ಲಿ ಯುವ ಜನರ ಅಗತ್ಯ ಮತ್ತು ಆಶೆಗಳ ಬಗ್ಗೆ ಅವಲೋಕಿಸಿ ಕಾರ್ಯಕ್ರಮದ ಉಪಯುಕ್ತತೆ, ಖರ್ಚು ವೆಚ್ಚಗಳ ಅಂದಾಜು ಇವುಗಳ ಆಧಾರದ ಮೇಲೆ ವ್ಯವಸ್ಥಿತ ಹಾಗೂ ವೈಜ್ಞಾನಿಕ ಕಾರ್ಯಾಚರಣೆ ಹಾಗೂ ಮೌಲ್ಯಮಾಪನ ಮಾಡುವ ಜವಾಬ್ದಾರಿಯನ್ನು ಇದು ಹೊಂದಿದೆ. ಇಲಾಖೆಯು ಸಾರ್ವಜನಿಕ, ಖಾಸಗಿ ಹಾಗೂ ಸರ್ಕಾರೇತರ ಸಂಸ್ಥೆಗಳ ಸಹಕಾರಕ್ಕೆ ಅವಕಾಶ ನೀಡುವ ರಾಷ್ಟ್ರ ಪ್ರಗತಿ ಕಾರ್ಯದಲ್ಲಿ ನಿರ್ದಿಷ್ಟ ಕ್ಷೇತ್ರಗಳಲ್ಲಿ ಯುವಕರನ್ನು ಸಂಘಟಿಸಿ ಅವರ ಸಹಕಾರದಿಂದ ಕಾರ್ಯವೆಸಗಲು ಪ್ರಯತ್ನಿಸುವುದು. ಯುವ ಸಂಸ್ಥೆಗಳ ಕಾರ್ಯಕ್ರಮಗಳಿಗೆ ಆರ್ಥಿಕ ಹಾಗೂ ಸಾಂಸ್ಕೃತಿಕ ಸಹಾಯ ಒದಗಿಸುವುದರ ಮೂಲಕ ಅವುಗಳಿಗೆ ಉತ್ತೇಜನವನ್ನು ಸರ್ಕಾರ ನೀಡುವುದು.

**ಸಂಯೋಜನೆ :**

ಯುವ ಕಾರ್ಯಕ್ರಮಗಳ ಉದ್ದೇಶ ಗ್ರಾಮೀಣ ಹಾಗೂ ನಗರ ಪ್ರದೇಶಗಳಿಗೆ ಸೇರಿದ ವಿದ್ಯಾವಂತರ ಹಾಗೂ ಅವಿದ್ಯಾವಂತರ ನಿರುದ್ಯೋಗ ಸಮಸ್ಯೆಗಳನ್ನು ಹೋಗಲಾಡಿಸುವುದು. ಈ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರಗಳು, ಸರ್ಕಾರೇತರ ಮಾಧ್ಯಮಗಳು ಪರಸ್ಪರ ಸಮಾಲೋಚನೆಯಿಂದ ಕಾರ್ಯಕ್ರಮಗಳನ್ನು ರೂಪಿಸಿ ಸಂಯೋಜಿಸಿ ಗುರಿ ಸಾಧಿಸಬೇಕಾಗಿದೆ. ಮಾನವ ಸಂಪನ್ಮೂಲ ಖಾತೆಯ ಯುವಜನ ಚಟುವಟಿಕೆ ಮತ್ತು ಕ್ರೀಡಾ ಇಲಾಖೆಯು ಬೇಕಾದ ಮಾಹಿತಿ, ವಿಚಾರಗಳನ್ನು ಕ್ರೋಢೀಕರಿಸುವುದರ ಜೊತೆಗೆ ಪ್ರತಿಯೊಂದು ಮಾಧ್ಯಮಗಳು ಸ್ವತಂತ್ರ್ಯ ಕಾರ್ಯಾಚರಣೆಯ ಬಗ್ಗೆಯೂ ಗಮನಹರಿಸುವುದು. ರಾಜ್ಯ ಸರ್ಕಾರ ಮತ್ತು ಸ್ವಯಂ ಸೇವಾ ಸಂಸ್ಥೆಗಳು ಒಗ್ಗೂಡಿ ಈ ರಾಷ್ಟ್ರೀಯ ಯುವ ನೀತಿಯನ್ನು ಜಾರಿಗೆ ತರಬೇಕು. ಸ್ಥಳೀಯ ಮಟ್ಟದಲ್ಲಿ ಇದರ ಬಗ್ಗೆ ವಿವರವಾದ ಕಾರ್ಯವಿಧಾನ ರೂಪಿಸಿ, ರಾಜ್ಯ ಸರ್ಕಾರಗಳ ಕಾರ್ಯಕ್ರಮಗಳ ಪುನರಾವರ್ತನೆ ಆಗದಂತೆ ನೋಡಿಕೊಂಡು, ಅತಿ ಹೆಚ್ಚಿನ ಉಪಯೋಗಿ ಹಾಗೂ ಫಲಕಾರಿ ರೂಪದಲ್ಲಿ ಜವಾಬ್ದಾರಿಯುತವಾಗಿ ನವ ವಿಧಾನಗಳ ಬಳಕೆಯ ಮೂಲಕ ಕಾರ್ಯಗತಗೊಳಿಸಲು ರಾಷ್ಟ್ರೀಯ ಯುವ ಕಾರ್ಯಕ್ರಮ ಸಮಿತಿಯನ್ನು ಸರ್ಕಾರ ಸ್ಥಾಪಿಸಲಿದ್ದು, ಇದು ಸಂಬಂಧಪಟ್ಟ ಮಂತ್ರಿಗಳನ್ನು ಇಲಾಖೆಗಳನ್ನು ಹಾಗೂ ರಾಷ್ಟ್ರೀಯ ಯುವ ಸಂಸ್ಥೆಗಳನ್ನೊಳಗೊಂಡಿದ್ದು ಯುವಜನ ಚಟುವಟಿಕೆ ಹಾಗೂ ಕ್ರೀಡಾ ಇಲಾಖೆಗೆ ರಾಷ್ಟ್ರೀಯ ಯುವ ನೀತಿಯನ್ನು ಜಾರಿಗೆ ತರುವಲ್ಲಿ ಹಾಗೂ ಕಾರ್ಯನಿರ್ವಹಣೆಯಲ್ಲಿ ಸೂಕ್ತ ಸಲಹೆ ಸೂಚನೆಯನ್ನು ನೀಡಲಿರುವುದು.

## ಗ್ರಾಮೀಣ ಯುವಜನತೆಗಾಗಿ ರಾಷ್ಟ್ರೀಯ ಯುವನೀತಿ :

ಪಂಡಿತ್ ಜವಹರಲಾಲ್ ನೆಹರೂರವರ ಜನ್ಮ ಶತಾಬ್ದಿಯ ವರ್ಷದಂದು ಈ ರಾಷ್ಟ್ರೀಯ ಯುವನೀತಿಯನ್ನು ರೂಪಿಸಿರುವುದು ಅತ್ಯಂತ ವಿಶೇಷವಾದುದು. ಈ ನೀತಿಯನ್ನು ಜಾರಿಗೆ ತರುವಲ್ಲಿ ದೇಶ ಮತ್ತು ಸರ್ಕಾರ ಪಂಡಿತ ನೆಹರೂರವರು ದೇಶದ ಸ್ವಾತಂತ್ರ್ಯದ ಹೋರಾಟದ ಸಂದರ್ಭದಲ್ಲಿ ಯುವ ಚಟುವಟಿಕೆಗಳ ಕೇಂದ್ರಬಿಂದುವಾಗಿದ್ದುದು ಮಾತ್ರವಲ್ಲದೇ ಸ್ವಾತಂತ್ರ್ಯ ಪೂರ್ವದಲ್ಲಿಯೂ ಚೇತನದ ಪ್ರತೀಕವಾಗಿದ್ದರು. ಅವರ ಚಾರಿತ್ರಿಕ ದೃಷ್ಟಿಕೋನ, ಆಧುನಿಕ ಹಾಗೂ ವೈಜ್ಞಾನಿಕ ಮನೋಭಾವ ಇವುಗಳು ನಮ್ಮ ಸಂಸ್ಕೃತಿ ಹಾಗೂ ಪರಂಪರೆಗಳ ಆಧಾರದ ಮೇಲೆ ರೂಪುಗೊಂಡಿದ್ದವು. ಪ್ರಜಾಪ್ರಭುತ್ವ, ಸಮಾಜವಾದ ಹಾಗೂ ಜಾತ್ಯತೀತತೆಗಾಗಿ ಹೋರಾಡಿದ ಒಬ್ಬ ಅತ್ಯಂತ ದೊಡ್ಡ ಮಾನವತಾವಾದಿ ಜವಹರಲಾಲ್ ನೆಹರೂರವರ ಈ ಧ್ಯೇಯ ವಿಚಾರಗಳನ್ನೊಳಗೊಂಡ ಭಾರತೀಯ ಸಂವಿಧಾನ ಈ ನೀತಿಯನ್ನು ಜಾರಿಗೆ ತರುವಲ್ಲಿ ಎಲ್ಲಾ ಕಾರ್ಯವಿಧಾನಗಳನ್ನು ತಿಳಿಯಪಡಿಸುವುದಲ್ಲದೆ ಭಾರತೀಯ ಯುವ ಜನಾಂಗದಲ್ಲಿ ವಿಶ್ವಾಸ ಮೂಡಿಸಿ ಭವಿಷ್ಯದಲ್ಲಿ ನಂಬಿಕೆಯನ್ನು ಹುಟ್ಟಿಸುತ್ತದೆ. ನಮ್ಮ ಪ್ರಾಚೀನ ಪರಂಪರೆಯ ತಳಹದಿಯಲ್ಲಿ ಯುವಜನರ ಬದುಕನ್ನು ರೂಪಿಸಿ ಅವರಲ್ಲಿರುವ ಕರ್ತೃತ್ವ ಶಕ್ತಿಯನ್ನು ಉಪಯೋಗಿಸಿ ಜ್ಞಾನ, ಚೈತನ್ಯ ಆದರ್ಶಗಳನ್ನು ಹಾಯಿ ಬಿಟ್ಟು ಬಲಿಷ್ಠ ಭಾರತದ ನಿರ್ಮಾಣದಲ್ಲಿ ಸಾರ್ಥಕತೆ ಪಡೆಯಬೇಕು.

## ಗಾಂಧೀಜಿ ಕನಸಿನ ಗ್ರಾಮರಾಜ್ಯ :

ನಾವೀಗ ಇಪ್ಪತ್ತನೆಯ ಶತಮಾನದ ಕೊನೆಯ ದಶಕದಲ್ಲಿದ್ದೇವೆ. ನಾಳಿನ ಜಗತ್ತು ಮುಂದಿನ ಪೀಳಿಗೆಗಳಿಗೆ ಸ್ವರ್ಗವಾದೀತೋ ನರಕವಾದೀತೋ ಎಂಬ ಊಹಾಪೋಹ ಎಲ್ಲೆಡೆಗಳಲ್ಲಿ ಎದ್ದು ಕಾಣುತ್ತಿದೆ. ಭಾರತದಲ್ಲಿ ನಾವು ಗಾಂಧೀಜಿ ಕಲ್ಪನೆ ಮಾಡಿದ್ದ ರಾಮರಾಜ್ಯದ ಆದರ್ಶದಿಂದ ಬಹು ಹಿಂದೆ ಬಿದ್ದಿದ್ದೇವೆ. ನಮ್ಮ ದೇಶ ಗ್ರಾಮಾಭಿಮುಖವಾದೀತೋ ಅಥವಾ ಕೇಂದ್ರೀಕೃತ ನಗರ ವ್ಯವಸ್ಥೆಗಳಿಗೆ ಶರಣಾಗಿ ಅಸಂಖ್ಯಾತ ಹಳ್ಳಿಗಳನ್ನು ಇನ್ನೂ ಹೆಚ್ಚಿನ ಶೋಷಣೆಗೆ ಈಡುಮಾಡುವ ಭಯಾನಕ ಪರಿಸ್ಥಿತಿಗೆ ಕೊಂಡೊಯ್ಯುತ್ತಿದೆ ಎಂಬ ಜಿಜ್ಞಾಸೆ ಯುವ ಚಿಂತಕರಲ್ಲಿ ಈಗ ಜ್ವಲಂತವಾಗಿ ಏಳುತ್ತಿದೆ. ಈ ಶತಮಾನದಲ್ಲಾದಷ್ಟು ವೈಜ್ಞಾನಿಕ ಮತ್ತು ತಾಂತ್ರಿಕ ಸಂಶೋಧನೆಗಳು, ಸಾಮಾಜಿಕ ಬದಲಾವಣೆಗಳು, ಸಂಪರ್ಕ ಸಾಧನಗಳ ವಿಪುಲ ಬೆಳವಣಿಗೆಯನ್ನು ಹಿಂದಿನ ಮಾನವ ಇತಿಹಾಸ ಎಂದೂ ಕಂಡಿರಲಿಲ್ಲ. ಅದರ ಜೊತೆಯಲ್ಲೇ ಈಗಿನಷ್ಟು ದಾಸ್ಯ, ದಾರಿದ್ರ್ಯ, ಶೋಷಣೆ, ವರ್ಗ-ವರ್ಣ ದ್ವೇಷಗಳು, ಯುದ್ಧಗಳು, ರಕ್ತಕ್ರಾಂತಿಗಳು ಎಂದೂ ಇರಲಿಲ್ಲ. ಈ ವಿಪರ್ಯಾಸವೇ ಈ ಯುಗದ ಸವಾಲಾಗಿ ಪರಿಣಮಿಸಿದೆ. ಆದರೆ ಕಟ್ಟ ಕಡೆಯ ಮಾನವನ ಸಮಗ್ರ ಏಳಿಗೆಯನ್ನು ಮುಖ್ಯವೆಂದು ಪರಿಗಣಿಸಿ ಮಾನವೀಯ ಮೌಲ್ಯಗಳಿಗೂ ನೀತಿ ಧರ್ಮಕ್ಕೂ ವಿಶೇಷ ಗಮನ ಕೊಟ್ಟು ಜಗತ್ತನ್ನು ಮುನ್ನಡೆಸುವ ಯಾವ ನಿರ್ದಿಷ್ಟ ತತ್ವ ಪ್ರಣಾಲಿಯೂ ಕರಗತವಾಗಿಲ್ಲ. ಈ ದಿಸೆಯಲ್ಲಿ ಮಹಾತ್ಮ ಗಾಂಧಿ ತಮ್ಮ ಅಭೂತಪೂರ್ವ ಜೀವನ ಪ್ರಯೋಗಗಳಿಂದ ಹೊಸ ಅಹಿಂಸಾತ್ಮಕ ಮಾರ್ಗವೊಂದನ್ನು ಅನಾವರಣ ಮಾಡಿದರು. ಮಾನವನ ಸರ್ವಶಕ್ತಿಗಳ ಮತ್ತು ಸಮಾಜದ ಸರ್ವವರ್ಗಗಳ ಸಮಗ್ರವಾದ ಸಂಪೂರ್ಣ ವಿಕಾಸವನ್ನೇ ತಮ್ಮ ಅಂತಿಮ ಗುರಿ ಎಂದು ಪರಿಗಣಿಸಿ ಸರ್ವೋದಯ ಸಾಮ್ರಾಜ್ಯದ ಆದರ್ಶವನ್ನು ರೂಪಿಸಿದರು. ಅದಕ್ಕೆ ಅವರಿಟ್ಟ ಹೆಸರು 'ರಾಮರಾಜ್ಯ'.

ಆಚಾರ್ಯ ವಿನೋಬಾ ಭಾವೆ ಇದನ್ನು ಹೀಗೆ ಬಣ್ಣಿಸಿದ್ದಾರೆ :

"ವಿದೇಶಿ ಅಧಿಕಾರ ಹೋಗುವುದು ಸ್ವರಾಜ್ಯ, ಪ್ರತಿಯೊಂದು ಗ್ರಾಮದಲ್ಲೂ ಸ್ವಯಮಾಡಳಿತ ಪ್ರತಿಷ್ಠಿತವಾದರೆ ಗ್ರಾಮ ರಾಜ್ಯ. ಗ್ರಾಮದ ಜನರೆಲ್ಲ ಬುದ್ಧಿವಂತರಾಗಿ ಅವರ ಮೇಲೆ ಯಾರೂ ಅಧಿಕಾರ ದರ್ಪ ಚಲಾಯಿಸುವ ಅಗತ್ಯ ಇಲ್ಲದಾಗ ಅದು ರಾಮ ರಾಜ್ಯ". ಗ್ರಾಮದ ಜಗಳ ಪಟ್ಟಣದವರಲ್ಲಿ ತೀರ್ಪಿಗಾಗಿ ಹೋಗುವುದು ಪಾರತಂತ್ರ್ಯ. ಗ್ರಾಮದಲ್ಲೇ ತೀರ್ಮಾನವಾಗುವುದು ಸ್ವಾತಂತ್ರ್ಯ. ಜಗಳವೇ ಆಗದಿದ್ದರೆ ರಾಮರಾಜ್ಯ. ಗ್ರಾಮದಲ್ಲೇ ನೆಲಸಿ ಜನತೆಯ ಸಂಸ್ಕೃತಿಯನ್ನು ಮೈಗೂಡಿಸಿಕೊಂಡ ರಾಜ್ಯಶಾಸ್ತ್ರಜ್ಞರು, ಆರ್ಥಿಕ ತಜ್ಞರು, ಬುದ್ಧಿಜೀವಿಗಳು ಶ್ರಮಜೀವನದ ಗೌರವವನ್ನೆತ್ತಿ ಹಿಡಿದಾಗ ಅದು ಗ್ರಾಮ ಸ್ವರಾಜ್ಯ ಎನಿಸುತ್ತದೆ.

ಸರ್ವೋದಯ ರಾಜ್ಯಶಾಸ್ತ್ರ, ಆರ್ಥಿಕ ರಚನೆ ಮತ್ತು ಸಾಮಾಜಿಕ ನ್ಯಾಯ ಮೂಲಭೂತವಾಗಿ ಸತ್ಯ ಮತ್ತು ಅಹಿಂಸೆಗಳ ಆಧಾರದ ಮೇಲೆಯೇ ನಿರ್ಣಯವಾಗಬೇಕೆಂದು ಗಾಂಧೀಜಿ ಆಶಿಸಿದ್ದರು. ಆ ತಳಹದಿಯ ಮೇಲೆ ಒಂದು ಪೂರ್ಣರೂಪದ ಜೀವನ

ನಕ್ಷೆಯನ್ನು ಅವರು ಸಿದ್ಧಮಾಡಿ ತಾವೇ ತಮ್ಮ ಸಿದ್ಧಾಂತಗಳಿಗನುಗುಣವಾಗಿ ಪ್ರಯೋಗಗಳನ್ನು ನಡೆಸಿಕೊಟ್ಟಿದ್ದಾರೆ. ವ್ಯಕ್ತಿ ಜೀವನದಲ್ಲಿ ಮತ್ತು ಸಾಮಾಜಿಕ ಬಾಂಧವ್ಯಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ರೂಢಿಸಿಕೊಳ್ಳದೆ ಆಧುನಿಕ ನಾಗರಿಕತೆಯ ಜಟಿಲ ಸಮಸ್ಯೆಗಳನ್ನು ನಿವಾರಿಸುವುದು ಅಸಾಧ್ಯ ಎಂದವರ ನಂಬಿಕೆ. ಆದರ್ಶ ಗ್ರಾಮರಾಜ್ಯದ ರೂಪರೇಷೆಗಳನ್ನು ಗಾಂಧೀಜಿ ಹೀಗೆ ಚಿತ್ರಿಸಿದ್ದಾರೆ :

೧. ರಾಜಕೀಯ ಮತ್ತು ಆರ್ಥಿಕ ಶಕ್ತಿಗಳು ಸಂಪೂರ್ಣ ವಿಕೇಂದ್ರಿತವಾಗಿ ಜನತೆಯ ಕೈಯಲ್ಲಿ ಅಧಿಕಾರ ಹಂಚಿರಬೇಕು. ಶಕ್ತಿ ಬಲದಿಂದಾಗಲಿ ಶಾಸನಶಕ್ತಿಯಿಂದಾಗಲಿ ಸಮಾಜ ಪರಿವರ್ತನೆ ಸಂಭವಿಸಲಾರದು. ಪ್ರಜಾತಂತ್ರ ಮತ್ತು ಸಮಾನತೆಯ ಸಾರ್ವತ್ರಿಕ ಅಂಗೀಕಾರವಾಗಬೇಕು. ಅಂತರಂಗದಿಂದ ಹೊಮ್ಮುವ ಸಹಕಾರ, ಸರ್ವರಿಗೂ ಸಮಬಾಳು ಎಂಬ ತತ್ವದ ಅಂಗೀಕಾರ, ಕಟ್ಟ ಕಡೆಯವನಿಗೆ ಆರ್ಥಿಕ ಮತ್ತು ಸಾಮಾಜಿಕ ನ್ಯಾಯ ಇವುಗಳೇ ಅಹಿಂಸಕ ಆಂದೋಳನದ ಪ್ರೇರಕ ಶಕ್ತಿಗಳು.

೨. ವಿಚಾರ ಪರಿವರ್ತನೆ, ವೈಜ್ಞಾನಿಕ ಸಾಮಾಜಿಕ ಪ್ರಜ್ಞೆ ಮತ್ತು ವ್ಯಾವಹಾರಿಕ ಅಹಿಂಸೆ ಇವುಗಳ ಆಧಾರದ ಮೇಲೆ ಬಾಳಿನ ಸಮಗ್ರ ವಿಕಾಸಕ್ಕಾಗಿ ಯೋಜನೆಗಳು ಸಿದ್ಧವಾಗಬೇಕು. ಗ್ರಾಮ ಸಮಾಜದ ಪ್ರತಿ ಪ್ರಜೆಗೂ ಜವಾಬ್ದಾರಿಗಳು ನಿರ್ದಿಷ್ಟವಾಗಿ ಅರಿವಾಗಿರುವಂತೆ ಸ್ವಯಮಾಡಳಿತ ಸಂಸ್ಥೆ ರಚಿತವಾಗಬೇಕು.

೧೯೪೫ರಲ್ಲಿ ಪಂಡಿತ ಜವಹರಲಾಲರು ಗಾಂಧೀಜಿಯೊಡನೆ ತೀವ್ರವಾಗಿ ಚರ್ಚಿಸುತ್ತ ಪಾಶ್ಚಾತ್ಯ ನಾಗರಿಕತೆಯ ದಾರಿಯಲ್ಲಿ ಭಾರತ ಮುನ್ನಡೆಯುವುದು ಹೆಚ್ಚು ಲಾಭಕರ ಎಂದಾಗ ಗಾಂಧೀಜಿ ಒಂದು ದೀರ್ಘ ಪತ್ರ ಬರೆದು ತಮ್ಮ ನಿಲುವನ್ನು ವಿವರಿಸಿದ್ದಾರೆ. ಅವರ ಮಾತುಗಳಲ್ಲಿ-

"ಹಳ್ಳಿ ನಾಶವಾದರೆ, ಭಾರತವೂ ನಾಶವಾಗುತ್ತದೆ. ಆಗ ಅದೆಂದೂ ಭಾರತ ಎನಿಸಿಕೊಳ್ಳಲಾರದು. ತೊಳಲುತ್ತಿರುವ ಜಗತ್ತಿಗೆ ಭಾರತ ನೀಡಬೇಕಾದ ಸಂದೇಶವೂ ಅದರೊಡನೆ ಅಳಿಸಿಹೋಗುತ್ತದೆ. ನನ್ನ ಆದರ್ಶ ಗ್ರಾಮದಲ್ಲಿ ಅತ್ಯಂತ ವಿವೇಕಿಗಳು ವಾಸಿಸುತ್ತಾರೆ. ಕೊಳಗೇರಿಗಳಂತಿರುವ ಇಂದಿನ ಗ್ರಾಮಸ್ಥರ ಸ್ಥಿತಿಯಲ್ಲಿ ಅವರು ನೆಲೆಸಿರುವುದಿಲ್ಲ. ಪ್ರಾಣಿಸದೃಶ ಜೀವನ ವನ್ನವರು ನಿರಾಕರಿಸುತ್ತಾರೆ. ಜಗತ್ತಿನ ಮಾನವರೊಡನೆ ಸಮಾನಸ್ಕಂಧರಾಗಿ ನಿಂತು ನೆಮ್ಮದಿಯಿಂದ ತಲೆಯೆತ್ತಿ ಬಾಳುವ ಸಮಾಜ ರಚಿಸುತ್ತಾರೆ. ಅದೊಂದು ಪರಿಪೂರ್ಣ ಪ್ರಜಾರಾಜ್ಯ. ಮೂಲಭೂತ ಜೀವನಾವಶ್ಯಕತೆಗಳಲ್ಲಿ ಅದು ಸ್ವಾವಲಂಬಿ. ಇತರ ಅನೇಕ ವಸ್ತುಗಳಿಗಾಗಿ ಪರಸ್ಪರಾವಲಂಬನೆ ಮತ್ತು ವಿಶ್ವವ್ಯಾಪಿ ಸಹಕಾರವನ್ನು ರೂಢಿಸಿಕೊಳ್ಳುತ್ತದೆ. ಪ್ರತಿಯೊಬ್ಬರೂ ಶ್ರಮಜೀವನದಲ್ಲಿ ಪಾಲ್ಗೊಂಡು ತಮ್ಮ ಸೇವೆ ಸಲ್ಲಿಸುತ್ತಾರೆ. ಇತರರನ್ನು ಶೋಷಿಸದೆ ಸಾಮೂಹಿಕ ಜೀವನಕ್ಕೆ ಪೋಷಕವಾದ ಆಧುನಿಕ ಸೌಲಭ್ಯಗಳನ್ನೆಲ್ಲಾ ಗ್ರಾಮಸ್ಥರು ಪಡೆಯುವಂತಾಗಬೇಕು."

ಸಂಯಮ ಪೂರ್ಣ ಸರಳ ಜೀವನವನ್ನು ಸ್ವಪ್ರೇರಣೆಯಿಂದ ಅಂಗೀಕರಿಸುವುದು ಬೇರೆ, ಬಲಾತ್ಕಾರದ ಬಡತನ ಬೇರೆ. ಆಧುನಿಕ ಭೋಗಜೀವನವನ್ನು ನಿರಾಕರಿಸಿದರೆ ಬಾಳನ್ನು ಬರಡು ಮಾಡುತ್ತೇವೆ ಎನ್ನುವುದು ಸುಳ್ಳು. ಭೋಗ ಜೀವನವೇ ಬಾಳಿನ ಏಕೈಕ ಆದರ್ಶ ಎಂದು ಯಾವ ಸುಸಂಸ್ಕೃತ ವಿಕಾಸಶೀಲ ಸಮಾಜವೂ ಒಪ್ಪುವುದಿಲ್ಲ. ಸ್ವಾರ್ಥ ಭೋಗದ ಕೀಳು ಲಾಲಸೆಗಳನ್ನು ವಿಜೃಂಭಿಸಿ ಮಾನವ ಕುಲವನ್ನು ನೈತಿಕ ಅಧೋಗತಿಗೆಳೆಯುವ ನಾಗರಿಕತೆಯನ್ನು ಗಾಂಧೀಜಿ ಪ್ರಬಲವಾಗಿ ವಿರೋಧಿಸಿದರು. ಪ್ರಸಿದ್ಧ ಆರ್ಥಿಕ ತಜ್ಞ ಮತ್ತು ಕೈಗಾರಿಕೋದ್ಯಮಿ ಜರ್ಮನಿಯ ಷ್ಯೂಮಾಕರ್ "ಸ್ಮಾಲ್ ಈಸ್ ಬ್ಯೂಟಿಫುಲ್" ಎಂಬ ತಮ್ಮ ಪ್ರಸಿದ್ಧ ಗ್ರಂಥದಲ್ಲಿ ಗಾಂಧೀವಾದವನ್ನು ಸಮರ್ಥಿಸಿದ್ದಾರೆ. "ಇಂದಿನ ಗೊಂದಲಮಯ ಸಂಘರ್ಷಗಳ ಪ್ರಪಂಚದಿಂದ ಮೇಲೇರಲು ಮಾನವನ ವಿವೇಕ ದಾರಿದೀಪವಾಗಬೇಕು. ಈಗಿನ ರಾಕ್ಷಸ ರೂಪದ ಅರ್ಥವ್ಯವಸ್ಥೆ ಸರ್ವನಾಶದ ಯುದ್ಧಗಳೆಡೆಗೋ ಚಂದ್ರಲೋಕಕ್ಕೆ ವಿಚಿತ್ರ ಮಹತ್ವಕಾಂಕ್ಷೆಗಳೆಡೆಗೋ ನಮ್ಮನ್ನು ನೂಕುತ್ತಾ ಧನ, ಅಧಿಕಾರ, ವಿಜ್ಞಾನ, ಸಂಪನ್ಮೂಲಗಳು ಎಲ್ಲವನ್ನು ಅದಕ್ಕೆ ಬಳಸಿಕೊಳ್ಳುತ್ತದೆ. ದುರಾಸೆ ಮತ್ತು ಈರ್ಷ್ಯೆಗಳನ್ನು ದ್ವೇಷಿಸುವ ಆರ್ಥಿಕ ತಳಹದಿಯಿಂದ ಶಾಂತಿ ನೆಮ್ಮದಿಗಳ ಸಮಾಜ ನಿರ್ಮಿಸಲಾಗದು. ವಿಶ್ವ ಶಾಂತಿಯ ಶಾಶ್ವತ ಆರ್ಥಿಕ ರಚನೆಗೆ ಅಡಿಗಲ್ಲು ನಿರ್ಮಿಸಲು ಅಗಾಧ ತ್ಯಾಗ ಬೇಕಾದೀತು. ಅದಕ್ಕಿಂತ ಹೆಚ್ಚಾಗಿ ಈಗಿನ ದುರಾಸೆಯ ಪ್ರಬಲ ಹಿಂಸಾ ಮಾರ್ಗವನ್ನು ಎದುರಿಸಲು ಆತ್ಮಶಕ್ತಿ ಬೆಳೆದು ನಿಲ್ಲಬೇಕಾದೀತು. ಈ ಪ್ರಶ್ನೆಗಳಿಗೆ ಉತ್ತರಿಸಿದವರೆಂದರೆ ನಮ್ಮ ಕಾಲಕ್ಕೆ ಭಾರತದ ಮಹಾತ್ಮಗಾಂಧಿ. ಪ್ರೇಮವೇ ದಿವ್ಯಶಕ್ತಿ, ಭಗವಂತನ ಸ್ವರೂಪವೇ ಶುದ್ಧ ಪ್ರೇಮ ಎಂಬ ಶ್ರದ್ಧೆಯಿಲ್ಲದೆ ಏನನ್ನೂ ಸಾಧಿಸಲಾರಿರಿ ಎಂದು ಗಾಂಧಿ ತಿಳಿಸಿದ್ದಾರೆ" ಎಂದಿದ್ದಾರೆ ಷ್ಯೂಮಾಕರ್.

ನಾಳಿನ ಜಗತ್ತು ಮಾನವ ಕಲ್ಯಾಣವನ್ನು ಸಮಗ್ರ ರೀತಿಯಲ್ಲಿ ಸಾಧಿಸಲು ಈಗಿನ ಅಧಿಕಾರ, ಹಣ, ಭೂಸಂಪತ್ತು ಎಲ್ಲವೂ ಸಣ್ಣ ಸಣ್ಣ ಸುವ್ಯವಸ್ಥಿತ ಪ್ರಗತಿಪರ ನ್ಯಾಯ ನಿಷ್ಠೆ ಸಮಾಜಗಳಲ್ಲಿ ವಿಕೇಂದ್ರಿತವಾಗಿ ಹಂಚಿಹೋಗಬೇಕು. ಇಂಥ ರಚನೆಯನ್ನೇ

ಗಾಂಧೀಜಿ ಗ್ರಾಮಭಾರತ ಎಂದು ಚಿತ್ರಿಸಿದರು. ಮಾನವೀಯ ಮೌಲ್ಯಗಳು, ಶ್ರಮಜೀವನ ಪ್ರತಿಷ್ಠೆ, ವರ್ಗನಿರಸನ, ಸಮಾನತೆ ಜೀವನದಲ್ಲಿ ಸಹಜವಾಗಿ ನೆಲೆಗೊಳ್ಳಲು ಒಂದು ಸೀಮಿತ ಪರಸ್ಪರಾವಲಂಬಿ ನೇರ ಬಾಂಧವ್ಯಗಳುಳ್ಳ ಗ್ರಾಮ ಸಮಾಜಗಳಲ್ಲಿ ಮಾತ್ರ ಸಾಧ್ಯ. ಎಲ್ಲಾ ಆಧುನಿಕ ವಿಕಾಸ ಸಾಧನಗಳೂ ಆ ತಳಹದಿಯ ಮೇಲೆ ಸುಭದ್ರವಾಗಿ ನಿಲ್ಲಬಲ್ಲವು. ವ್ಯಾಪಾರೀ ಸಾಮ್ರಾಜ್ಯಗಳ ಸೃಷ್ಟಿಯಾಗಿರುವ ನಗರಗಳಲ್ಲಿನ ಕೃತಕ ನಾಗರಿಕತೆಯಲ್ಲಿ ಮಾನವನ ವ್ಯಕ್ತಿತ್ವವೇ ವಕ್ರವಾಗುತ್ತಿದೆ. ವಿಶ್ವದ ಸಂಪತ್ಸಮೃದ್ಧಿಯಲ್ಲಿನ ಶೇ. ೭೫ ಭಾಗವನ್ನು ಕೇವಲ ಶೇ. ೧೮ ರಷ್ಟು ಜನ ಭೋಗಿಸುವ ಭಯಂಕರ ಪರಿಸ್ಥಿತಿ ನಿರ್ಮಾಣವಾಗಿಬಿಟ್ಟಿದೆ. ನಿಸ್ಸಹಾಯಕತೆ, ಬಡತನ, ಎಗ್ಗಿಲ್ಲದ ಶೋಷಣೆಗಳಿಂದ ದುಡಿಮೆಗಾರರಾದ ಬಹು ಸಂಖ್ಯಾತರು ನಿರಾಶರಾಗುತ್ತಿದ್ದಾರೆ. ಪ್ರಕೃತಿ ದತ್ತವಾದ ಆಧಾರ ಮೂಲಗಳನ್ನು ವಿಪರೀತವಾಗಿ ಶೋಷಿಸದೆ ಸಮಸ್ತ ಜೀವರಾಶಿಗಳಲ್ಲಿ ಅನುಕಂಪದಿಂದ ಇಡೀ ಮಾನವ ಸಮಾಜದ ಸಮಗ್ರ ಒಳಿತನ್ನು ರಕ್ಷಿಸಿಕೊಂಡು ಬಾಳುವಂತೆ ನಮ್ಮ ಜೀವನ ವಿಧಾನಗಳನ್ನು ಪರಿಷ್ಕರಿಸಿಕೊಳ್ಳಬೇಕೆಂದು ಗಾಂಧೀಜಿ ಪ್ರಚಂಡ ಪ್ರಯೋಗಗಳನ್ನು ಮಾಡಿ ಮಾರ್ಗದರ್ಶನ ಮಾಡಿದ್ದಾರೆ. ಅವರು ಯಾವ ಹೊಸ ಸಿದ್ಧಾಂತವನ್ನೂ ಪ್ರತಿಪಾದಿಸಲಿಲ್ಲ. ಪ್ರಗತಿಯ ಹೆಸರಿನಲ್ಲಿ ನಾವು ದಾರಿ ತಪ್ಪಿದ್ದೇವೆ ಎಂದು ತೋರಿಸಿಕೊಟ್ಟರು. ಭಾರತದ ಇತಿಹಾಸ, ಕಲೆ, ಸಂಸ್ಕೃತಿಗಳಲ್ಲಿ ಸ್ವಾಭಿಮಾನ ಬೆಳೆಸಿಕೊಂಡು ಆ ಪರಂಪರೆಯನ್ನು ವೈಜ್ಞಾನಿಕ ಯೋಜನೆಗಳಿಂದ ಅರಳಿಸಿ ಒಂದೊಂದು ತಲೆಮಾರಿನವರೂ ತಮ್ಮ ತಮ್ಮ ಜೀವನ ಕಲೆಯನ್ನು ಉನ್ನತ ವಿಕಾಸ ಮಾರ್ಗದಲ್ಲಿ ನಡೆಸಿಕೊಳ್ಳುವ ಚಿರಂತನ ಪಥವನ್ನು ಗಾಂಧೀಜಿ ಉದ್ಧರಿಸಿಕೊಟ್ಟಿದ್ದಾರೆ. ಅವರು ಬಾಳಿದ ಬಾಳು, ಅದರ ಸರಳತೆ, ಅದರ ಚೆಲುವು, ಅಚ್ಚುಕಟ್ಟು, ನೈತಿಕ ನಿಷ್ಠೆ ಅತ್ಯಂತ ಸಾಮಾನ್ಯರಿಗೂ ಸಾಧ್ಯ ಎನ್ನುವ ರೀತಿಯಲ್ಲಿ ಅವರು ಮಾರ್ಗದರ್ಶನ ಮಾಡಿದ್ದಾರೆ.

೨.೧.೧೯೩೭ರ 'ಹರಿಜನ' ಪತ್ರಿಕೆಯಲ್ಲಿ ಬರೆಯುತ್ತಾ ಗಾಂಧೀಜಿ ಹೀಗೆ ಹೇಳಿದ್ದಾರೆ: "ಸ್ವರಾಜ್ಯ ಎಂದರೆ ಬ್ರಿಟಿಷರ ರಾಜ್ಯ ಪದ್ಧತಿಯ ಅನುಕರಣೆ ಎಂದು ನಾನು ಭಾವಿಸಿಲ್ಲ. ಹಾಗೆಯೇ ಅದು ರಷ್ಯದ ಸೋವಿಯಟ್ ರೀತಿ ಅಥವಾ ಜರ್ಮನಿಯ ನಾಜಿ ರಾಜ್ಯ, ಇಟಲಿಯ ರಾಜ್ಯ ಪದ್ಧತಿಗಳ ಪಡಿಯಚ್ಚುಗಳೂ ಖಂಡಿತ ಅಲ್ಲ. ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ಅವರವರ ರಾಜಕೀಯ ರಚನೆ. ನಮ್ಮ ಸ್ವಸಾಮರ್ಥ್ಯಕ್ಕನುಗುಣವಾದ ರಾಜ್ಯ ಪದ್ಧತಿಯನ್ನು ನಾವು ರಚಿಸಬೇಕು. ಅಂಥ ಭಾರತೀಯ ಸ್ವರಾಜ್ಯ ಹೇಗಿರಬಹುದೆಂದು ನಾನು ಪೂರ್ಣವಾಗಿ ವಿವರಿಸಲಾರೆ. ಆದ್ದರಿಂದ ನಾನು ಅದನ್ನು ರಾಮರಾಜ್ಯ ಎಂದು ಬಣ್ಣಿಸಿದ್ದೇನೆ. ಹಾಗೆಂದರೆ ಪರಿಶುದ್ಧವಾದ ನೈತಿಕ ಅಧಿಕಾರದ ಮೇಲೆ ಆಧರಿತವಾದ ಜನತಾ ಶಕ್ತಿಯ ಸಾರ್ವಭೌಮ ರಾಜ್ಯ ಅಥವಾ ಭೂಮಿಯ ಮೇಲಿನ ಭಗವಂತನ ರಾಜ್ಯ".

ಇದನ್ನು ವಿವರಿಸುತ್ತಾ "ನನ್ನ ಕಲ್ಪನೆಯ ರಾಮ ಐತಿಹಾಸಿಕ ವ್ಯಕ್ತಿಯಲ್ಲ. ಆದರೆ ರಾಮರಾಜ್ಯ ಎನ್ನುವುದು ಪ್ರಾಚೀನ ಭಾರತೀಯರು ಕಲ್ಪಿಸಿದ್ದ ನಿಜವಾದ ಪ್ರಜಾಪ್ರಭುತ್ವ. ಅಲ್ಲಿ ಕಟ್ಟ ಕಡೆಯ ಪ್ರಜೆಗೂ ಕ್ಷಿಪ್ರವಾಗಿ ನ್ಯಾಯ ದೊರಕುವಂತಿತ್ತು. ಈಗಿನಂತೆ ಬಳಸಿಕೊಂಡಿರುವ ಅಗಾಧ ವೆಚ್ಚದ ನ್ಯಾಯ ಪದ್ಧತಿಯಲ್ಲ. ಕವಿ ಪುಂಗವರ ಕಲ್ಪನೆಯಲ್ಲಿ ರಾಮರಾಜ್ಯದಲ್ಲಿ ಒಂದು ಕ್ಷುದ್ರ ಪ್ರಾಣಿಗೂ ನ್ಯಾಯ ದೊರಕುವ ಸಾಧ್ಯತೆ ಇತ್ತು" ಎಂದಿದ್ದಾರೆ.

## ಗ್ರಾಮೀಣ ಯುವ ಶಕ್ತಿಯ ಪುರೋಭಿವೃದ್ಧಿಗೆ ರಾಜೀವ್ ಗಾಂಧಿ ಯುವ ಶಕ್ತಿ ಸಂಘ :

**ರಾಜೀವ್ ಗಾಂಧಿ ಯುವಶಕ್ತಿ ಸಂಘ** : ಈ ಕಾರ್ಯಕ್ರಮದನ್ವಯ ರಾಜ್ಯದಲ್ಲಿನ ಎಲ್ಲಾ ೫೬೫೯ ಗ್ರಾಮ ಪಂಚಾಯತಿಗಳಲ್ಲಿ ಯುವಶಕ್ತಿ ಸಂಘಗಳನ್ನು ರಚಿಸಲಾಗುವುದು. ಈ ಯುವಶಕ್ತಿ ಸಂಘಗಳು ಕ್ರೀಡೆ, ಸಾಂಸ್ಕೃತಿಕ ಮತ್ತು ಸಮುದಾಯ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಳ್ಳಲು ಅನುವಾಗುವಂತೆ ಪ್ರತಿ ಸಂಘಕ್ಕೆ ಹತ್ತು ಸಾವಿರ ರೂ.ಗಳನ್ನು ನೀಡಲಾಗುವುದು. ಈ ಉದ್ದೇಶಕ್ಕಾಗಿ **೬.೦೦ಕೋಟಿ** ರೂ.ಗಳನ್ನು ಸರ್ಕಾರ ನಿಗದಿಪಡಿಸಿದೆ.

ರಾಜ್ಯದಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರವು ಮಾನ್ಯ ನಗರಾಭಿವೃದ್ಧಿ ಸಚಿವರ ಅಧ್ಯಕ್ಷತೆಯಲ್ಲಿ ಸಚಿವ ಸಮಿತಿಯು ರಚನೆಗೊಂಡು ಈ ಯೋಜನೆಯ ಕಾರ್ಯಕ್ರಮಗಳ ರೂಪುರೇಷೆಗಳ ಬಗ್ಗೆ ಸುದೀರ್ಘ ಚರ್ಚೆ ನಡೆಸಿ ಮಾನ್ಯ ಮುಖ್ಯಮಂತ್ರಿಗಳ ಒಪ್ಪಿಗೆಯನ್ನು ಪಡೆಯಲಾಗಿದೆ. ಈ ಯೋಜನೆ ಅಡಿಯಲ್ಲಿ ಪ್ರತಿ ಗ್ರಾಮ ಪಂಚಾಯತಿಗಳಲ್ಲಿ ಒಂದು "ರಾಜೀವ್ ಗಾಂಧಿ ಯುವಶಕ್ತಿ ಸಂಘ" ರಚಿಸಲು ನಿರ್ಧರಿಸಲಾಗಿದೆ. ಅಂತೆಯೇ ರಾಜ್ಯದಲ್ಲಿ ಒಟ್ಟು ೫೬೫೯ ಗ್ರಾಮ ಪಂಚಾಯತಿಗಳಲ್ಲಿ ಹಾಗೂ ನಗರ ಪ್ರದೇಶಗಳಲ್ಲಿ ೨೭೫೩ ಸಂಘಗಳನ್ನು ಸ್ಥಾಪಿಸಲು ನಿರ್ಧರಿಸಲಾಗಿದೆ.

## ಉದ್ದೇಶ :

ಕರ್ನಾಟಕದ ಯುವಕರು ಚೈತನ್ಯಶೀಲರು, ಉತ್ಸಾಹಿಗಳು ಹಾಗೂ ಶಕ್ತಿವಾಹಿನಿಗಳು. ಸಂಘಟಿತ ಯುವಶಕ್ತಿಯಿಂದ ಸಾಧಿಸಲಾಗದ್ದು ಯಾವುದೂ ಇಲ್ಲ. ಸುಸಂಘಟಿತ ಯುವಶಕ್ತಿಯನ್ನು ಬಲಗೊಳಿಸಿ ವ್ಯವಸ್ಥಿತ ಮಾರ್ಗದರ್ಶನ ನೀಡುವ ದೃಷ್ಟಿ ನಮ್ಮದು. ಈ ದಿಶೆಯಲ್ಲಿ ಯುವಕರಲ್ಲಿ ಅಡಗಿರುವ ಅದಮ್ಯ ಚೇತನವನ್ನು ಒಗ್ಗೂಡಿಸಿ ಕ್ರೀಡೆ, ಸಂಸ್ಕೃತಿ ಮತ್ತು ಸಮುದಾಯ ಅಭಿವೃದ್ಧಿಯ ಚಟುವಟಿಕೆಗಳಲ್ಲಿ ತೊಡಗಿಸುವುದೇ ಈ ಸಂಘಗಳ ಮುಖ್ಯ ಉದ್ದೇಶ.

## ಅರ್ಹತೆಗಳು :

ಸಂಘದ ಸದಸ್ಯರಾಗಬಯಸುವ ಪ್ರತಿಯೊಬ್ಬರೂ ೧೬ ರಿಂದ ೨೮ ವರ್ಷಗಳ ವಯೋಮಿತಿಯೊಳಗಿನವರಾಗಬೇಕು, ಯಾವುದೇ ರಾಜಕೀಯ ಪಕ್ಷದ ಸದಸ್ಯರಾಗಿರಬಾರದು, ಕ್ರಿಮಿನಲ್ ಚಟುವಟಿಕೆಯಲ್ಲಿ ತೊಡಗಿರಬಾರದು, ಅಕ್ಷರಸ್ಥರಾಗಿರಬೇಕು ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ನಡೆಸುವ **ಮರಳಿ ಬಾ ಶಾಲೆಗೆ** ಯೋಜನೆಯಲ್ಲಿ ನೋಂದಾಯಿತರಾಗಿರಬೇಕು.

ಪಂಚಾಯತ್ ರಾಜ್ಯ ಸಂಸ್ಥೆಯ ಸದಸ್ಯರಾಗಿರಬಾರದು.

ಜನ್ಮದಿನಾಂಕದ ಬಗ್ಗೆ ಪ್ರಮಾಣ ಪತ್ರವನ್ನು ಸದಸ್ಯತ್ವದ ಅರ್ಜಿಯೊಂದಿಗೆ ಲಗತ್ತಿಸಬೇಕು.

ಭರ್ತಿಮಾಡಿದ ಸದಸ್ಯತ್ವದ ಅರ್ಜಿಯನ್ನು ರೂ. ೧೫.೦೦ಗಳ ಸದಸ್ಯತ್ವ ಶುಲ್ಕ ಹಾಗು ೩ ಭಾವಚಿತ್ರಗಳೊಂದಿಗೆ ಸಂಯೋಜಕರು ಅಥವಾ ಸಂಘದ ಸದಸ್ಯರಿಂದ ಆಯ್ಕೆಯಾದ ಮೂರು ಪ್ರತಿನಿಧಿಗಳಲ್ಲಿ ಯಾರಿಗಾದರೂ ಸಲ್ಲಿಸಬಹುದು.

ಕ್ರೀಡೆ ಸಾಂಸ್ಕೃತಿಕ ಚಟುವಟಿಕೆಗಳ ಮತ್ತು ಸಮುದಾಯ ಅಭಿವೃದ್ಧಿ ಕಾರ್ಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಆಸಕ್ತಿ ಇರಬೇಕು.

ಮೇಲ್ಕಂಡ ಅರ್ಹತೆಗಳನ್ನು ಪೂರೈಸುವ ಪ್ರತಿಯೊಬ್ಬ ಯುವಕ ಯುವತಿಯರಿಗೆ ಸದಸ್ಯತ್ವವು ಮುಕ್ತ. ರಾಜೀವ್‌ಗಾಂಧಿ ಯುವಶಕ್ತಿ ಸಂಘದ ಸದಸ್ಯರ ಅರ್ಹತೆಗಳು, ಸಂಘ ಸ್ಥಾಪನೆ, ನೋಂದಾವಣೆ ಚಟುವಟಿಕೆ, ಸಂಯೋಜನೆ, ತರಬೇತಿ ಮತ್ತಿತರ ವಿವರಗಳ ಬಗ್ಗೆ ಆಯಾ ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾಧಿಕಾರಿಗಳನ್ನು ಸಂಪರ್ಕಿಸಿ ವಿವರ ಪಡೆಯಬಹುದು.

## ಗ್ರಾಮೀಣ ಸದೃಢ ಯುವಕರಿಂದ ನವಸಮಾಜ ನಿರ್ಮಾಣ ಸಾಧ್ಯ :

ರಾಜ್ಯದಲ್ಲಿ ಯುವ ಶಕ್ತಿಯನ್ನು ಸಂಘಟಿಸುವ ಮೂಲಕ ಅವರನ್ನು ರಚನಾತ್ಮಕ ಚಟುವಟಿಕೆಗಳ ದಿಕ್ಕಿನಲ್ಲಿ ನಡೆಸಲು ರಾಜೀವ್ ಗಾಂಧಿ ಯುವ ಶಕ್ತಿ ಸಂಘಗಳನ್ನು ಅಸ್ತಿತ್ವಕ್ಕೆ ತರುವ ಬಗೆಗೆ ಈ ವರ್ಷದ ಆಯವ್ಯಯ ಭಾಷಣದಲ್ಲಿ **ರಾಜೀವ್ ಗಾಂಧಿ ಯುವಶಕ್ತಿ** ಎಂಬ ಯೋಜನೆಯನ್ನು ಪ್ರಕಟಿಸಲಾಗಿತ್ತು. ಈ ಮೊದಲು ನಮ್ಮ ಯುವಕರು ಸಂಘಟಿತರಾಗಿರಲಿಲ್ಲ ಅಥವಾ ರಚನಾತ್ಮಕ ಚಟುವಟಿಕೆಗಳಲ್ಲಿ ತೊಡಗಿರಲಿಲ್ಲ ಎಂದು ಅರ್ಥವಲ್ಲ. ಯುವಕರ ಕ್ರಿಯಾಶೀಲತೆ ಮತ್ತು ಕೊಡುಗೆಗಳಿಂದಲೇ ನಮ್ಮ ನಾಡು ಸದೃಢಗೊಂಡಿದೆ. ಆದರೆ ಅವರಿಗೆ ಸೂಕ್ತ ಅವಕಾಶ ಮತ್ತು ಮಾರ್ಗದರ್ಶನ ಕಲ್ಪಿಸುವ ದಿಸೆಯಲ್ಲಿ ರಾಜೀವ್ ಗಾಂಧಿ ಯುವ ಶಕ್ತಿ ಯೋಜನೆಯನ್ನು ಚಾಲನೆಗೆ ತರಲಾಗಿದೆ.

ಕ್ರೀಡೆ ಸಂಸ್ಕೃತಿ ಮತ್ತು ಸಮುದಾಯ ಅಭಿವೃದ್ಧಿ ಚಟುವಟಿಕೆಗಳಲ್ಲಿ ಅವರನ್ನು ಪೂರ್ಣವಾಗಿ ತೊಡಗಿಸಿಕೊಂಡು ಒಟ್ಟಾರೆ ಸಮಾಜದ ಅಭ್ಯುದಯಕ್ಕೆ ಪೂರಕವಾದ ಭದ್ರ ಭೂಮಿಕೆಯನ್ನು ಸಿದ್ಧ ಪಡಿಸುವುದು ಈ ಯೋಜನೆಯ ಇಂದಿನ ಗುರಿ.

ಎರಡು ವರ್ಷಗಳ ಹಿಂದೆ ರಾಜ್ಯದಲ್ಲಿ ಸ್ತ್ರೀಶಕ್ತಿ ಎಂಬ ಯೋಜನೆಯನ್ನು ನಮ್ಮ ಸರ್ಕಾರ ಜಾರಿಗೆ ತಂದಿತ್ತು. ಅದರ ಫಲವನ್ನು ನಾವಿಂದು ಕಾಣುತ್ತಿದ್ದೇವೆ. ಸುಮಾರು ೭೬,೦೦೦ಸ್ತ್ರೀಶಕ್ತಿ ತಂಡಗಳಲ್ಲಿ ೧೧ ಲಕ್ಷ ಮಹಿಳೆಯರು ಸದಸ್ಯರಾಗಿದ್ದಾರೆ. ಸ್ವಾವಲಂಬನೆಯ ಹಾದಿಯಲ್ಲಿ ಮಹತ್ವದ ಹೆಜ್ಜೆಯನ್ನಿರಿಸಿದ್ದಾರೆ. ಸೂಕ್ತ ಮಾರ್ಗದರ್ಶನ ಸಿಕ್ಕರೆ ಮಹಿಳೆಯರು ಹೇಗೆ ಸ್ವಾವಲಂಬನೆಯ ಪಾಠ ಕಲಿಯಬಲ್ಲರು ಹಾಗೂ ತಮ್ಮ ನೆರೆಹೊರೆಯಲ್ಲಿ ನಡೆಯುವ ಅನ್ಯಾಯವನ್ನು ಪ್ರಶ್ನಿಸಿ ಅವುಗಳನ್ನು ಹತ್ತಿಕ್ಕುವ ನಾಯಕತ್ವದ ಗುಣಗಳನ್ನು ಮೈಗೂಡಿಸಿಕೊಳ್ಳಬಲ್ಲರು ಎಂಬುದಕ್ಕೆ ಸ್ತ್ರೀಶಕ್ತಿ ಯೋಜನೆ ಜೀವಂತ ಉದಾಹರಣೆಯಾಗಿದೆ. ಹಾಗೆಯೇ ನಮ್ಮ ಯುವ ಶಕ್ತಿಗೆ ಸೂಕ್ತ

ಪ್ರೋತ್ಸಾಹ ಮತ್ತು ಮಾರ್ಗದರ್ಶನ ದೊರೆತರೆ ಸಮಾಜದಲ್ಲಿ ಕ್ರಾಂತಿಕಾರಿ ರೂಪಾಂತರಗಳನ್ನು ನಾವು ಕಾಣಬಹುದಾಗಿದೆ. ಉತ್ಸಾಹಶೀಲ, ಚೈತನ್ಯಶೀಲ ಯುವಕರು ಸಂಘಟನೆಯ ಲೇಪನದಿಂದ ಮತ್ತು ಸೂಕ್ತ ಮಾರ್ಗದರ್ಶನದಿಂದ ಬದಲಾವಣೆಯ ದಿಕ್ಕಿನಲ್ಲಿ ಮುನ್ನಡೆದಾಗ ಅಸಾಧ್ಯವೆಂಬ ಮಾತೇ ಎದುರಾಗದು. ಅಪಾರವಾದ ಯುವಶಕ್ತಿಯನ್ನು ಪೂರ್ಣ ಪ್ರಮಾಣದಲ್ಲಿ ಸಕಾರಾತ್ಮಕವಾದ ಮತ್ತು ರಚನಾತ್ಮಕವಾದ ಚಟುವಟಿಕೆಗಳತ್ತ ತಿರುಗಿಸುವುದು ರಾಜೀವ್‌ಗಾಂಧಿ ಯುವ ಶಕ್ತಿ ಸಂಘಗಳ ಉದ್ದೇಶ. ಕೇವಲ ಸಂಘಗಳನ್ನು ಸ್ಥಾಪಿಸಿದರೆ ಸಾಲದು ಅವುಗಳಿಗೆ ಸೂಕ್ತವಾದ ಬೆಂಬಲ ಹಣಕಾಸಿನ ರೂಪದಲ್ಲಿ ಹಾಗೂ ಕಾರ್ಯಕ್ರಮಗಳ ರೂಪದಲ್ಲಿ ದೊರೆಯುವಂತಾಗಬೇಕು. ಈ ಹಿನ್ನೆಲೆಯಲ್ಲಿ ಸಂಘಗಳಿಗೆ ವಾರ್ಷಿಕ ೧೦ ಸಾವಿರ ರೂ ಅನುದಾನ, ತರಬೇತಿ ಉಸ್ತುವಾರಿ ವ್ಯವಸ್ಥೆ ಇವೆಲ್ಲವನ್ನು ಕಲ್ಪಿಸಿಕೊಡಲಾಗಿದೆ. ಸಂಘದ ಸದಸ್ಯರಾಗುವ ಮೂಲಕ ಸ್ವತಃ ತಮ್ಮ ವ್ಯಕ್ತಿತ್ವ ವಿಕಸನಕ್ಕೆ ಯುವಕರು ದಾರಿ ಮಾಡಿಕೊಳ್ಳುವುದಲ್ಲದೆ ಸಮುದಾಯದ ಅಭಿವೃದ್ಧಿ, ಕ್ರೀಡೆ, ಸಂಸ್ಕೃತಿ, ಶೈಕ್ಷಣಿಕ ಅಭಿವೃದ್ಧಿ, ಸಾಮಾಜಿಕ ಮತ್ತು ಆರೋಗ್ಯ ಕಾರ್ಯಕ್ರಮಗಳು ಮೊದಲಾದವುಗಳ ಜಾರಿಗೆ ಪೂರ್ಣ ಬದ್ಧತೆಯಿಂದ ಯುವ ಪಡೆ ಸಜ್ಜಾಗಿದೆ.

ರಾಜೀವ್ ಗಾಂಧಿ ಈ ರಾಷ್ಟ್ರದ ಪ್ರಧಾನಿಯಾಗಿದ್ದಾಗ ಯುವಕರಾಗಿ ಭಾರತವನ್ನು ಸಮೃದ್ಧ ಹಾಗೂ ಸದೃಢ ಭಾರತವನ್ನಾಗಿ ರೂಪಿಸುವ ಕನಸನ್ನು ಕಂಡಿದ್ದರು. ಆ ಕನಸನ್ನು ಸಾಕಾರಗೊಳಿಸುವ ಹೊಣೆಯನ್ನು ನಮ್ಮ ಯುವಜನ ಹೊರುವಲ್ಲಿ ಸಮರ್ಥರಿದ್ದಾರೆ. ನೂತನ ಸಂಘಟನೆಗಳು ಯುವಕರಲ್ಲಿ ಸುಪ್ತವಾಗಿರುವ ಪ್ರತಿಭೆಯ ಪ್ರಕಾಶಕ್ಕೆ ಸೂಕ್ತ ಭರವಸೆಯಾಗಿವೆ.

## ಸಶಕ್ತ ಯುವಜನರಿಂದ ಸುಭದ್ರ ರಾಷ್ಟ್ರ ನಿರ್ಮಾಣ ಸಾಧ್ಯ :

ನಾಡಿನ ಯುವಜನರು ಇಂದು ಎದುರಿಸುತ್ತಿರುವ ಬಹು ದೊಡ್ಡ ಸಮಸ್ಯೆ ನಿರುದ್ಯೋಗ ಹಾಗೂ ಮಾರ್ಗದರ್ಶನದ ಕೊರತೆ. ಈ ದಿಶೆಯಲ್ಲಿ ರಾಜ್ಯದ ಗ್ರಾಮೀಣ ಪ್ರದೇಶದ ಮತ್ತು ನಗರ ಪ್ರದೇಶದ ಯುವ ಶಕ್ತಿಗಳನ್ನು ಗುರುತಿಸಿ ಬೆಳೆಸುವ, ತನ್ಮೂಲಕ ನಾಡಿನ ಪ್ರಗತಿಗೆ ಪೂರಕವಾಗುವಂತೆ ತಯಾರುಮಾಡುವ ಉದ್ದೇಶ ರಾಜೀವ್ ಗಾಂಧಿ ಯುವಶಕ್ತಿ ಸಂಘಗಳದ್ದು. ರಾಜ್ಯದಾದ್ಯಂತ ೮೪೧೨ ಸಂಘಗಳ ಮೂಲಕ ಸುಮಾರು ೫೦ ಲಕ್ಷ ಯುವಕ ಯುವತಿಯರು ಸಂಘಟಿತರಾಗುವ ಒಂದು ಅಪೂರ್ವ ಅವಕಾಶ. ಯುವ ಪ್ರತಿಭೆಗಳು ವಿವಿಧ ಆಕರ್ಷಣೆಗಳಿಂದ ವಿಚಲಿತರಾಗದಂತೆ ಅವರಲ್ಲಿ ಸುಪ್ತವಾಗಿರುವ ಪ್ರತಿಭೆಗಳನ್ನು ಪ್ರೋತ್ಸಾಹಿಸುವುದು ನಾಡಿನ ಜನರೆಲ್ಲರ ಆದ್ಯ ಕರ್ತವ್ಯ. ಯುವ ಶಕ್ತಿಯ ಸದುಪಯೋಗ ಮತ್ತು ಅವರಲ್ಲಿನ ನಾಯಕತ್ವದ ಬೆಳವಣಿಗೆಯ ನಿಟ್ಟಿನಲ್ಲಿ ತರಬೇತುಗೊಳಿಸುವುದು ಸಂಘದ ಉದ್ದೇಶ. ಬಾನಿನೆತ್ತರಕ್ಕೆ ಪಸರಿಸಿರುವ ಯುವಜನಾಂಗದಲ್ಲಿ ಅರ್ಹತೆ, ಪ್ರತಿಭೆಗಳಿಗೆ ಕೊರತೆ ಇಲ್ಲ. ಅವರು ಕೊರತೆ ಅನುಭವಿಸುತ್ತಿರುವುದು ಸೂಕ್ತ ಮಾರ್ಗದರ್ಶನ, ತರಬೇತಿ, ಉದ್ಯೋಗ ಮತ್ತು ಅನುಕೂಲತೆಗಳನ್ನು ಕಲ್ಪಿಸುವಲ್ಲಿ ಮಾತ್ರ.

ಯುವ ಜನಾಂಗದ ಬಗ್ಗೆ ಅಪೂರ್ವ ಕಾಳಜಿ, ಗೌರವವನ್ನು ಹೊಂದಿದ್ದ ರಾಜೀವ್ ಗಾಂಧಿಯವರು ಪ್ರಧಾನಿ ಆಗಿದ್ದಾಗ ಕೈಗೊಂಡ ಕ್ರಾಂತಿಕಾರಿ ತೀರ್ಮಾನಗಳು ಹಲವಾರು. ಯುವ ಜನಾಂಗದ ಬಗ್ಗೆ ಗಂಭೀರವಾಗಿ ಯೋಚಿಸಿ ಉಪಯುಕ್ತ ಯೋಜನೆಗಳನ್ನು ರೂಪಿಸುವುದರೊಂದಿಗೆ ಅವು ಯುವಜನರ ಮೇಲೆ ಪರಿಣಾಮ ಬೀರಿದ್ದವು. ಹಣವಿದ್ದವನಿಗೆ ಮಾತ್ರ ವಿದ್ಯೆ ಎಂಬುದನ್ನು ಅರ್ಹ ವ್ಯಕ್ತಿಗೆ ಸೂಕ್ತ ವಿದ್ಯೆ ಎಂದು ಬದಲಾಯಿಸಿದ ಕೀರ್ತಿ ಅವರದು. ಆರ್ಥಿಕವಾಗಿ ದುರ್ಬಲವಾದ ಮಕ್ಕಳಿಗೆ ಉಚಿತವಾದ ಊಟ, ವಸತಿ ಶಾಲೆಗಳನ್ನು ೧೯೮೬ರಲ್ಲಿ ಪ್ರತಿ ಜಿಲ್ಲೆಯಲ್ಲಿ ಪ್ರಾರಂಭಿಸಿದ ಕೀರ್ತಿಯೂ ಅವರದೇ. ಇದರಿಂದ ಹಲವಾರು ಪ್ರತಿಭಾನ್ವಿತ ಬಡ ಮಕ್ಕಳಿಗೆ ಉನ್ನತ ವ್ಯಾಸಂಗ ಪಡೆಯಲು ಸಾಧ್ಯವಾಯಿತು. ಹದಿಹರೆಯದ ಯುವ ಜನಾಂಗ ಯಾವುದೋ ಕಾರಣಗಳಿಂದ ಮಾದಕ ವಸ್ತು ಸೇವನೆ ಚಟಕ್ಕೆ ಬಿದ್ದು ತಮ್ಮ ಜೀವನವನ್ನು ಸರ್ವನಾಶ ಮಾಡಿಕೊಳ್ಳುತ್ತಿದ್ದುದನ್ನು ನಿಲ್ಲಿಸಲು ಉಗ್ರ ಕಾನೂನನ್ನು ಜಾರಿಗೆ ತಂದು ಮಾದಕ ವಸ್ತು ಸರಬರಾಜು ಮಾಡುವವರಿಗೆ ಮರಣದಂಡನೆ ಶಿಕ್ಷೆ ಜಾರಿ ಮಾಡಿದರು. ಮತದಾನದ ಹಕ್ಕಿನ ವಯೋಮಿತಿಯನ್ನು ೨೧ ರಿಂದ ೧೮ ಕ್ಕೆ ಇಳಿಸಿದವರು ರಾಜೀವ್ ಗಾಂಧಿ. ೧೮ ವರ್ಷ ವಯಸ್ಸಿನ ಒಬ್ಬ ತರುಣ ಸೈನಿಕನಾಗಿ ದೇಶದ ರಕ್ಷಣೆಗಾಗಿ ಬಲಿದಾನ ಮಾಡಬಹುದಾದರೆ, ಈ ದೇಶದ ಭವಿಷ್ಯವನ್ನು ನಿರ್ಧರಿಸುವ ಚುನಾವಣೆಯಲ್ಲಿ ಯುವಕರು ಮತದಾನ ಮಾಡಬಾರದೆ ಎಂದು ಹಲವು ವಿರೋಧಿಗಳ ಬಾಯಿ ಮುಚ್ಚಿಸಿದ್ದರು. ಪಂಚಾಯತ್ ರಾಜ್ ವ್ಯವಸ್ಥೆಯನ್ನು ಸಂವಿಧಾನ ಬದ್ಧವಾಗಿ ಜಾರಿಗೆ ತಂದ ರಾಜೀವ್ ಗಾಂಧಿ ಅವರ ಕ್ರಾಂತಿಕಾರಕ ನಿರ್ಧಾರದಿಂದಾಗಿ ಲಕ್ಷಾಂತರ ಯುವಕ ಯುವತಿಯರು ಗ್ರಾಮೀಣ ಪ್ರದೇಶಗಳಲ್ಲಿ ಸ್ಥಳೀಯ ಸಂಸ್ಥೆಗಳಲ್ಲಿ... ಸಂಸ್ಕೃತಿಯ ಪ್ರತಿನಿಧಿಗಳಾಗಿ ಚುನಾಯಿತರಾಗಿ ಅಧಿಕಾರದ ನಾಯಕತ್ವವನ್ನು ವಹಿಸಿಕೊಂಡಿದ್ದಾರೆ. ರಾಜ್ಯಾಂಗವು ತಮಗೆ ಒದಗಿಸಿರುವ

ಹಕ್ಕುಗಳ ಬಗ್ಗೆ ಅರಿತುಕೊಂಡಿದ್ದಾರೆ. ಭಾರತದಲ್ಲಿ ಯುವ ಜನಾಂಗ ಎದುರಿಸುತ್ತಿರುವ ಬಹು ದೊಡ್ಡ ಸಮಸ್ಯೆ ನಿರುದ್ಯೋಗ. ಇದರ ಪರಿಹಾರಕ್ಕಾಗಿ ಜವಹರ್ ರೋಜ್‌ಗಾರ್ ಯೋಜನೆಯನ್ನು ಜಾರಿಗೆ ತಂದರು. ೨೧ ನೇ ಶತಮಾನ ಹೇಗಿರಬೇಕೆಂಬ ಅವರ ಕನಸಿನಂತೆ ಆಧುನಿಕ ಭಾರತದ ಯುವಜನರ ನೆರವಿಗಾಗಿ ಎಲೆಕ್ಟ್ರಾನಿಕ್ಸ್, ಕಂಪ್ಯೂಟರ್, ದೂರದರ್ಶನ, ದೂರವಾಣಿ, ಮಾಹಿತಿ ತಂತ್ರಜ್ಞಾನ ಮುಂತಾದ ಎಲ್ಲಾ ಆಧುನಿಕ ಪರಿಣತಿಗಳು ಸಿಕ್ಕುವಂತೆ ಮಾಡಿದರು. ಈ ವಿಷಯಗಳಲ್ಲಿ ಪರಿಣತಿ ಪಡೆದ ಲಕ್ಷಾಂತರ ಯುವಕರು ಇಂದು ಉತ್ತಮ ಆದಾಯದ ಉದ್ಯೋಗಗಳಲ್ಲಿ ದುಡಿಯುತ್ತಿದ್ದಾರೆ. ನಾಡಿನ ಯುವ ಶಕ್ತಿ ಹರಿಯುವ ನದಿ ನೀರಿನಂತೆ ಅದು ಕೊಳಚೆ ಚರಂಡಿಗೆ ಹರಿದರೆ ಕೊಚ್ಚೆಯಾಗುತ್ತದೆ. ಅದೇ ನೀರು ಗಂಗಾ ನದಿಯೊಡನೆ ಬೆರೆತರ ಪಾವನವಾಗುತ್ತದೆ. ಯುವ ಶಕಿಯನ್ನು ಸದ್ಬಳಕೆಯತ್ತ, ಉತ್ತಮ ಮಾರ್ಗದರ್ಶನದತ್ತ ಕೊಂಡೊಯ್ಯುವುದು ನಮ್ಮ ನಿಮ್ಮೆಲ್ಲರ ಆದ್ಯ ಕರ್ತವ್ಯ. ಇಂದು ನಮ್ಮ ಸಮಾಜದಲ್ಲಿ ವಕೀಲರನ್ನು, ವೈದ್ಯರನ್ನು, ತಂತ್ರಜ್ಞರನ್ನು, ವಿಜ್ಞಾನಿಗಳನ್ನು, ಐ.ಎ.ಎಸ್., ಐ.ಪಿ.ಎಸ್., ಅಧಿಕಾರಿಗಳನ್ನು ತಯಾರಿಸುವ ಸಂಸ್ಥೆಗಳಿವೆ. ಆದರೆ ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಯುವಜನರಲ್ಲಿ ನಾಯಕತ್ವ ರೂಪಿಸುವ ಸಂಸ್ಥೆಗಳು ನಮ್ಮಲ್ಲಿಲ್ಲ ಎಂಬುದು ವಿಷಾದನೀಯ.

ಭವ್ಯ ಭಾರತದ ಭಾವೀ ನಾಯಕರನ್ನು ತಯಾರುಮಾಡುವ ಸಂಸ್ಥೆ ರಾಜೀವ್ ಗಾಂಧಿ ಯುವ ಶಕ್ತಿ ಸಂಘ ಆಗಬೇಕೆನ್ನುವುದೇ ನಮ್ಮೆಲ್ಲರ ಅಭಿಲಾಷೆ ಹಾಗೂ ಗುರಿ. ಸಂಘದ ಸದಸ್ಯರು ಸ್ವಾರ್ಥರಹಿತ, ಸೇವಾಮನೋಭಾವದವರಾಗಿರಬೇಕು. ಸಮಾಜ ಸಂಘಟನೆಯರಿತು, ಉತ್ತಮ ಗುರಿಯತ್ತ ಕೆಲಸ ಮಾಡುವ ಕಾಳಜಿ ಹೊಂದಿರಬೇಕು. ಉತ್ಸಾಹೀ ನಾಯಕತ್ವದ ಸಾಕಾರವೇ ಅವರಾಗಬೇಕು. ಸರ್ಕಾರ ಕೈಗೊಂಡಿರುವ, ಕೈಗೊಳ್ಳುತ್ತಿರುವ ಯೋಜನೆಗಳು ಹಲವಾರು. ಅವು ಯುವ ಜನರ ಸಕ್ರಿಯ ಭಾಗವಹಿಸುವಿಕೆಯಿಂದ ಅನುಷ್ಠಾನಗೊಳ್ಳಬೇಕಾಗಿದೆ. ಸಂಘದ ಸದಸ್ಯರು ಪರಸ್ಪರ ಅರಿತು, ಅವರ ಭಾವನೆಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳಲು ಒಂದು ವೇದಿಕೆ ದೊರೆಯುತ್ತದೆ. ಪರಸ್ಪರರಲ್ಲಿ ನಂಬಿಕೆ, ವಿಶ್ವಾಸ, ಪ್ರೀತಿಗಳನ್ನು ಬೆಳೆಸುವುದರ ಮೂಲಕ ಪ್ರಾದೇಶಿಕ ಅಸಮತೋಲನವನ್ನು ನಿವಾರಿಸಬಹುದು. ಹದಿಹರೆಯದ ವಯಸ್ಸಿನಲ್ಲೇ ಸಾಧನೆಯ ಕುರುಹು, ಚಿಂತನೆಯ ತುಮುಲ ಕಂಡುಬರುತ್ತದೆ. ಗಟ್ಟಿಮುಟ್ಟಾಗಿದ್ದಾಗ, ಯೌವ್ವನದ ಹುರುಪು ತುಂಬಿದ್ದಾಗ, ದುಡಿಯುವ ಸಾಮರ್ಥ್ಯ ನಿಮ್ಮಲ್ಲಿದ್ದಾಗ, ದೈಹಿಕ, ಮಾನಸಿಕ ದೃಢಶಕ್ತಿ ನಿಮ್ಮಲ್ಲಿದ್ದಾಗ ಬನ್ನಿ, ಎಲ್ಲಾ ಒಟ್ಟಾಗಿ ನಾಡ ಕಟ್ಟುವ ಕೆಲಸಕ್ಕೆ ಮುಂದಾಗೋಣ.

**ಗ್ರಾಮೀಣ ಯುವಜನರ ಆಶಾಕಿರಣ ನೆಹರು ಯುವ ಕೇಂದ್ರ :**

ಯುವ ಜನರ ಕಲ್ಯಾಣ ಕಾರ್ಯಕ್ರಮಗಳಲ್ಲಿ ನೆಹರು ಯುವ ಕೇಂದ್ರವೂ ಸಮಾನವಾಗಿ ಹೆಗಲು ಕೊಟ್ಟು ದುಡಿಯುತ್ತಿರುವುದು ಕಂಡುಬರುತ್ತದೆ. ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಹಾಗೂ ನೆಹರು ಯುವ ಕೇಂದ್ರ ಒಟ್ಟಿಗೆ ಸೇರಿ ಯುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಜಿಲ್ಲೆಯಲ್ಲಿನ ಯುವಜನ ಸಮುದಾಯಕ್ಕೆ ಮುಖ್ಯವಾಗಿ ಗ್ರಾಮೀಣ ಯುವಕರಿಗೆ ಹೆಚ್ಚಿನ ಲಾಭವಾಗುತ್ತಿದೆ. ರಾಜ್ಯಾದ್ಯಂತ ತಾಲ್ಲೂಕು ಹಾಗೂ ಜಿಲ್ಲಾ ಕೇಂದ್ರಗಳಲ್ಲಿ, ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಸುಮಾರು ೬೫೦೦ ಯುವಕ ಸಂಘ-ಯುವತಿ ಮಂಡಳಿ ಸಂಘಟನೆಗಳು ನೆಹರು ಯುವ ಕೇಂದ್ರದಡಿ ಯುವಜನರ ವ್ಯಾಪಕ ಚಟುವಟಿಕೆಯಲ್ಲಿ ನಿರತವಾಗಿದೆ.

ಭಾರತ ಗ್ರಾಮಗಳ ರಾಷ್ಟ್ರ. ಬಹುತೇಕ ಜನರು ಗ್ರಾಮೀಣ ನಿವಾಸಿಗಳಾಗಿದ್ದಾರೆ. ಯುವ ಜನತೆ ಗ್ರಾಮೀಣ ಅಭಿವೃದ್ಧಿಯಲ್ಲಿ ಬಹು ಮಹತ್ತರವಾದ ಪಾತ್ರ ವಹಿಸಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಯುವಕರ ಸಂಘಟನೆಯ ಮೂಲಕ ಯುವಕ ಯುವತಿ ಮಂಡಳಿಗಳನ್ನು ಸ್ಥಾಪಿಸಿ ಪಕ್ಷ, ಜಾತಿ, ಮತ, ಭೇದ ಭಾವನೆಗಳನ್ನು ಮರೆತು ಗ್ರಾಮದ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಲು ನೆಹರು ಯುವ ಕೇಂದ್ರವು ದಿಟ್ಟ ಹೆಜ್ಜೆ ಇಟ್ಟಿದೆ. ನೆಹರು ಯುವ ಕೇಂದ್ರವು ಭಾರತ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯದ ಯುವ ಹಾಗೂ ಕ್ರೀಡಾ ಇಲಾಖೆಯಲ್ಲಿ ಬರುವ ಸ್ವಾಯತ್ತ ಸಂಸ್ಥೆಯಾಗಿದೆ. ಗ್ರಾಮೀಣ ಯುವ ಜನಾಂಗದೊಡನೆ ಸಂಪರ್ಕವಿಟ್ಟುಕೊಂಡು ಅಲ್ಲಿಯ ಅನಕ್ಷರತೆ, ಬಡತನ, ಅನಾರೋಗ್ಯ, ಮೂಢನಂಬಿಕೆ, ಜಾತೀಯತೆ, ಅಸ್ಪೃಶ್ಯತೆ, ಬಾಲ್ಯ ವಿವಾಹ, ಜನಸಂಖ್ಯಾ ಸ್ಫೋಟ, ಏಡ್ಸ್‌ನಂತಹ ಮಾರಕ ರೋಗಗಳ ಬಗ್ಗೆ ಅರಿವು ಮೂಡಿಸುವ ಮೂಲ ಉದ್ದೇಶ ಈ ಕೇಂದ್ರದ್ದು. ಇಂತಹ ನೂರಾರು ಸಾಮಾಜಿಕ ಸಮಸ್ಯೆಗಳಿಗೆ ಪರಿಣಾಮಕಾರಿ ಪರಿಹಾರ ಕಂಡುಕೊಳ್ಳಲು ಯುವ ಸಂಘಗಳಿಂದ ಮಾತ್ರ ಸಾಧ್ಯ. ಈ ಪ್ರಮುಖ ಸಮಸ್ಯೆಗಳ ವಿರುದ್ಧ ಹೋರಾಡುವ ಸಲುವಾಗಿ ಯುವಕ ಯುವತಿಯರಿಗೆ ಮಾರ್ಗದರ್ಶನ ನೀಡಲು ನೆಹರು ಯುವ

ಕೇಂದ್ರ ಗ್ರಾಮೀಣ ಯುವ ಜನತೆಗೆ ಆಶಾಕಿರಣ ಹಾಗೂ ದಾರಿದೀಪವಾಗಿದೆ. ಯುವ ಶಕ್ತಿಯನ್ನು ರಾಷ್ಟ್ರ ಶಕ್ತಿಯನ್ನಾಗಿ ಮಾರ್ಪಡಿಸಲು ಶ್ರಮಿಸುತ್ತಿದೆ. ರಾಷ್ಟ್ರದ ಭವಿಷ್ಯವು ಯುವಕರ ಕೈಯಲ್ಲಿದೆ. ಇಂದಿನ ಮಕ್ಕಳೇ ನಾಳಿನ ಪ್ರಜೆಗಳು. ಆದ್ದರಿಂದ ಅವರಲ್ಲಿ ಉತ್ಸಾಹ, ಧೈರ್ಯ,ದಿಟ್ಟತನ, ಸಾಹಸ ಹಾಗೂ ಕ್ರಿಯಾಶೀಲತೆಯನ್ನು ತುಂಬುವುದು ನೆಹರು ಯುವ ಕೇಂದ್ರದ ಉದ್ದೇಶಗಳಲ್ಲಿ ಒಂದಾಗಿದೆ. ಯುವಕ ಸಂಘಗಳನ್ನು ಕ್ರಿಯಾಶೀಲಗೊಳಿಸಲು ಯುವ ಮುಂದಾಳತ್ವ ತರಬೇತಿ, ಯುವ ಶ್ರಮದಾನ ಶಿಬಿರ, ಪಂಚಾಯತ್ ರಾಜ್ ತರಬೇತಿ, ಸ್ವಯಂ ಉದ್ಯೋಗ ತರಬೇತಿ, ವೃತ್ತಿ ತರಬೇತಿ, ಯುವ ಪ್ರಚಾರ ಆಂದೋಲನ, ವನ ಮಹೋತ್ಸವ ಭಾವೈಕ್ಯತಾ ಶಿಬಿರ ಹಾಗೂ ಸಾಹಸಮಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿವೆ.

ಕೇಂದ್ರ ಸರ್ಕಾರದ ಆರೋಗ್ಯ ಹಾಗೂ ಕುಟುಂಬ ಕಲ್ಯಾಣ ಸಚಿವಾಲಯದಿಂದ ಜಿಲ್ಲೆಗೆ ೫೦ ಆರೋಗ್ಯ ಜಾಗೃತಾ ಘಟಕಗಳನ್ನು ತೆರೆಯಲಾಗಿದ್ದು ಪ್ರಸ್ತುತ ಸಾಲಿನಲ್ಲಿ ಉಚಿತ ನೇತ್ರ ಚಿಕಿತ್ಸಾ ಶಿಬಿರ, ಏಡ್ಸ್ ಜಾಗೃತಾ ಕಾರ್ಯಕ್ರಮ, ಉಚಿತ ಆರೋಗ್ಯ ತಪಾಸಣಾ ಶಿಬಿರಗಳು, ಗರ್ಭ ನಿರೋಧಕಗಳ ಮಾಹಿತಿ ಕಾರ್ಯಾಗಾರ, ದಾದಿಯರಿಗೆ ಸುರಕ್ಷಿತ ಹೆರಿಗೆ ಬಗ್ಗೆ ಕಾರ್ಯಾಗಾರ,ಆರೋಗ್ಯವಂತ ಮಕ್ಕಳ ಸ್ಪರ್ಧೆ, ಕುಟುಂಬ ಕಲ್ಯಾಣ ಶಸ್ತ್ರ ಚಿಕಿತ್ಸಾ ಶಿಬಿರ,ಸ್ತನ್ಯಪಾನ ಸಪ್ತಾಹ, ವಿಶ್ವ ಜನಸಂಖ್ಯಾ ಸಪ್ತಾಹ, ಲೈಂಗಿಕ ಶಿಕ್ಷಣದಂತಹ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿವೆ. ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆಯ ಅಂಗವಾಗಿ ರಾಷ್ಟ್ರೀಯ ಯುವ ಸಪ್ತಾಹ ಕಾರ್ಯಕ್ರಮವನ್ನು ಪ್ರತಿ ವರುಷ ಹಮ್ಮಿಕೊಳ್ಳಲಾಗುತ್ತಿದೆ. ಈ ಕಾರ್ಯಕ್ರಮದ ಅಡಿಯಲ್ಲಿ ಜಿಲ್ಲೆಯ ಅತ್ಯುತ್ತಮ ಯುವ ಸಂಘ ಪ್ರಶಸ್ತಿ ಹಾಗೂ ವೈಯಕ್ತಿಕ ಯುವ ಪ್ರಶಸ್ತಿಗಳನ್ನು ಪ್ರದಾನ ಮಾಡಲಾಗುತ್ತದೆ. ರಾಷ್ಟ್ರೀಯ ಐಕ್ಯತಾ ಸಪ್ತಾಹ, ಸದ್ಭಾವನಾ ದಿನಾಚರಣೆ, ಅಂತರ ರಾಷ್ಟ್ರೀಯ ಮಹಿಳಾ ದಿನಾಚರಣೆ, ಕೋಮು ಸೌಹಾರ್ದ ದಿನಾಚರಣೆ, ಗಾಂಧಿ ಜಯಂತಿ, ಸಂಕಲ್ಪ ದಿನಾಚರಣೆಯಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.

ನೆಹರು ಯುವ ಕೇಂದ್ರದಡಿ ಬರುವ ಯುವ ಸಂಘಟನೆಗಳಿಗೆ ಪ್ರಾಥಮಿಕ ಬೆಳವಣಿಗೆಗಾಗಿ ಆರ್ಥಿಕ ಸಹಾಯವನ್ನು ಪ್ರತಿ ವರ್ಷ ಕೊಡಲಾಗುತ್ತಿದೆ. ಅಲ್ಲದೆ ನಾಯಕತ್ವ ತರಬೇತಿಯನ್ನು ಹಮ್ಮಿಕೊಂಡು ಸಂಘ ನಡೆಸಿಕೊಂಡು ಹೋಗುವುದರ ಬಗ್ಗೆ ತಿಳುವಳಿಕೆ ನೀಡಿ ತಮ್ಮ ಗ್ರಾಮಗಳಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅಳವಡಿಸಿಕೊಳ್ಳಲು ಪ್ರೇರೇಪಿಸಲಾಗುತ್ತದೆ. ಉತ್ತಮವಾಗಿ ಕಾರ್ಯನಿರ್ವಹಿಸುತ್ತಿರುವ ಯುವ ಸಂಘಗಳನ್ನು ಗುರುತಿಸಿ ಅವುಗಳಿಗೆ ಯುವ ವಿಕಾಸ ಕೇಂದ್ರವನ್ನು ವಹಿಸಿಕೊಟ್ಟು ಗ್ರಾಮಗಳಿಗೆ ಮಾಹಿತಿ ಕೇಂದ್ರವಾಗಿ ಕೆಲಸ ನಿರ್ವಹಿಸುವಂತೆ ಮಾಡಲಾಗಿದೆ. ಜಿಲ್ಲಾ ಕೇಂದ್ರದಲ್ಲಿ ಜಿಲ್ಲಾ ಸಲಹಾ ಸಮಿತಿಯನ್ನು ಹೊಂದಿದ್ದು, ಇದಕ್ಕೆ ಜಿಲ್ಲಾಧಿಕಾರಿಗಳು ಅಧ್ಯಕ್ಷರಾಗಿರುತ್ತಾರೆ. ಪ್ರತಿ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ಕೇಂದ್ರ ಚಟುವಟಿಕೆಯನ್ನು ಪರಿಶೀಲಿಸಿ ಜಿಲ್ಲೆಯಲ್ಲಿ ಯುವ ಚಟುವಟಿಕೆಯನ್ನು ಸಕ್ರಿಯವಾಗಿ ಹಮ್ಮಿಕೊಳ್ಳಲು ಸಲಹೆಗಳನ್ನು ಪಡೆಯಲಾಗುತ್ತಿದ. ಕೇಂದ್ರವು ತನ್ನದೇ ಆದ ಖಾಯಂ ಕಾರ್ಯಕ್ರಮಗಳನ್ನು ಮಾಡುವುದೇ ಅಲ್ಲದೆ ಇತರ ಅಭಿವೃದ್ಧಿ ಇಲಾಖೆಗಳ ಮತ್ತು ಸಂಸ್ಥೆಗಳ ಸಹಯೋಗ ಪಡೆದುಕೊಂಡು ಆಯಾ ಗ್ರಾಮಗಳಿಗೆ ಹೊಂದಾಣಿಕೆಯಾಗುವ ಕಾರ್ಯಕ್ರಮಗಳನ್ನು ರೂಪಿಸುತ್ತದೆ. ಯುವಜನ ರಾಷ್ಟ್ರಾಭಿಮಾನ, ಆತ್ಮವಿಶ್ವಾಸ, ಪ್ರಾಮಾಣಿಕತೆ, ಧೈರ್ಯ, ಸಾಹಸಗಳಿಂದ ದೇಶದ ಏಕತೆಯನ್ನು ಕಾಪಾಡಿಕೊಂಡು ಹೋಗುವಲ್ಲಿ ಯಶಸ್ವಿಯಾದರೆ ಮಾತ್ರ ನಮ್ಮ ಗುರಿ ಸಾರ್ಥಕ.

## ಗ್ರಾಮೀಣ ಯುವಜನರ ಸಂಜೀವಿನಿ ರಾಜೀವ್ ಗಾಂಧಿ ಯುವಶಕ್ತಿ ಸಂಘ :

ಕರ್ನಾಟಕ ಸರ್ಕಾರ ರಾಜ್ಯದ ಯುವ ಶಕ್ತಿಯನ್ನು ಸೃಜನಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸಲು ರಾಜ್ಯದ ಎಲ್ಲಾ ೫,೬೫೯ ಗ್ರಾಮ ಪಂಚಾಯತಿಗಳಲ್ಲಿ ಹಾಗೂ ನಗರ, ಮುನಿಸಿಪಾಲಿಟಿ ಮತ್ತು ಪಟ್ಟಣ ಪಂಚಾಯತಿ ಪ್ರದೇಶಗಳಲ್ಲಿ ರಾಜೀವ್ ಗಾಂಧಿ ಯುವ ಶಕ್ತಿ ಸಂಘಗಳನ್ನು ರಚಿಸಲು ಕ್ರಮ ಕೈಗೊಂಡಿದೆ. ಈ ಯುವಶಕ್ತಿ ಸಂಘಗಳು ಕ್ರೀಡೆ, ಸಾಂಸ್ಕೃತಿಕ ಹಾಗೂ ಸಮುದಾಯ ಅಭಿವೃದ್ಧಿ ಚಟುವಟಿಕೆಗಳನ್ನು ಕೈಗೊಳ್ಳಬೇಕಾಗುತ್ತದೆ. ಸಂಘಟಿತ ಯುವ ಶಕ್ತಿಯಿಂದ ಸಾಧಿಸಲಾಗದಂತಹುದು ಯಾವುದೂ ಇಲ್ಲ. ಸುಸಂಘಟಿತ ಯುವ ಶಕ್ತಿಯನ್ನು ಸುವ್ಯವಸ್ಥಿತ ಮಾರ್ಗದರ್ಶನ ನೀಡುವಲ್ಲಿ ಕಾರ್ಯೋನ್ಮುಖವಾಗಿಸಬೇಕೆನ್ನುವುದು ಈ ಯೋಜನೆಯ ಮುಖ್ಯ ಉದ್ದೇಶ. ಯುವಕರಲ್ಲಿ ಅಡಗಿರುವ ಅದಮ್ಯ ಚೇತನವನ್ನು ಬಡಿದೆಬ್ಬಿಸಿ ಅವರನ್ನು ಒಂದು ಕ್ರಿಯಾಶೀಲ ಶಕ್ತಿಯನ್ನಾಗಿ ಪರಿವರ್ತಿಸುವುದು ಎಲ್ಲರ ಆದ್ಯ ಕರ್ತವ್ಯ. ರಾಜ್ಯದಲ್ಲಿ ಸ್ಥಾಪಿತವಾಗಿರುವ ರಾಜೀವ್ ಗಾಂಧಿ ಯುವ ಶಕ್ತಿ ಸಂಘಗಳ ಚಟುವಟಿಕೆಗಳ ಸಂಕ್ಷಿಪ್ತ ಸ್ವರೂಪವನ್ನು ಈ ಕೆಳಗಡೆ ಕಾಣಬಹುದಾಗಿದೆ.

## ಸಮುದಾಯ ಅಭಿವೃದ್ಧಿ ಚಟುವಟಿಕೆಗಳು :

೧) ಪರಿಸರ ಸಂರಕ್ಷಣೆ ೨) ಅರಣ್ಯೀಕರಣ ೩) ಗ್ರಾಮ ನೈರ್ಮಲ್ಯೀಕರಣ ೪) ಸಾರ್ವಜನಿಕ ಸ್ವತ್ತುಗಳ ರಕ್ಷಣೆ ಬಗ್ಗೆ ಅರಿವು ಮೂಡಿಸುವುದು.

ಯುವಕರು ಸಮುದಾಯ ಅಭಿವೃದ್ಧಿ ಕಾರ್ಯಗಳಾದ ಪರಿಸರ ಸಂರಕ್ಷಣೆ, ಅರಣ್ಯೀಕರಣ, ಗ್ರಾಮ ನೈರ್ಮಲ್ಯೀಕರಣ, ಸಾರ್ವಜನಿಕ ಸ್ವತ್ತುಗಳ ರಕ್ಷಣೆ ಬಗ್ಗೆ ಅರಿವು ಮೂಡಿಸುವುದು ಹಾಗೂ ಇನ್ನೂ ಮುಂತಾದ ಕಾರ್ಯಕ್ರಮಗಳಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸಲು ಪ್ರೇರಣೆ ನೀಡುವುದು ಈ ಯೋಜನೆಯ ಸಮನ್ವಯಾಧಿಕಾರಿಗಳ ಮುಖ್ಯ ಕರ್ತವ್ಯವಾಗಿರುತ್ತದೆ. ಈ ಪರಿಸರ ಸಂರಕ್ಷಣೆ ಹಾಗೂ ಗ್ರಾಮ ನೈರ್ಮಲ್ಯೀಕರಣ ಕಾರ್ಯಗಳಿಗಾಗಿ ರಾಜೀವ್ ಗಾಂಧಿ ಯುವಶಕ್ತಿ ಸಂಘದ ಸದಸ್ಯರಿಂದ ಅಭಿರುಚಿಯುಳ್ಳ ೫ ಜನ ಸದಸ್ಯರನ್ನು ಆಯ್ಕೆ ಮಾಡಿ ಸಮುದಾಯ ಅಭಿವೃದ್ಧಿ ಕಾರ್ಯಗಳನ್ನು ನಡೆಸಲು ಹಾಗೂ ಅವರನ್ನು ಪ್ರೇರೇಪಿಸಲು ಒಂದು ಸಮಿತಿಯನ್ನು ಸಮನ್ವಯಾಧಿಕಾರಿಗಳು ಮಾಡತಕ್ಕದ್ದು. ಈ ಸದಸ್ಯರು ಅರಣ್ಯ ಇಲಾಖೆಯ ಸಹಯೋಗದೊಂದಿಗೆ ರಾಜೀವ್ ಗಾಂಧಿ ಯುವಶಕ್ತಿ ಸಂಘದ ಮೂಲಕ ಅರಣ್ಯೀಕರಣ ಹಾಗೂ ಗ್ರಾಮ ಪರಿಸರ ಸಂರಕ್ಷಣೆ ಯೋಜನೆಯನ್ನು ಹಮ್ಮಿಕೊಳ್ಳಲು ಅಗತ್ಯವಾದ ಕಾರ್ಯಕ್ರಮಗಳನ್ನು ರೂಪಿಸಬಹುದು. ಗ್ರಾಮ ನೈರ್ಮಲ್ಯದ ಬಗ್ಗೆ ಯುವ ಶಕ್ತಿ ಸಂಘವು ಪ್ರತಿ ಹಳ್ಳಿಯ ಎಲ್ಲಾ ಯುವಕರನ್ನು ಒಂದುಗೂಡಿಸಿ ಶ್ರಮದಾನದ ಮೂಲಕ ಗ್ರಾಮ ನೈರ್ಮಲ್ಯೀಕರಣವನ್ನು ಕೈಗೊಳ್ಳಬಹುದು.

ಇಂದಿನ ಯುವ ಪೀಳಿಗೆಯಲ್ಲಿ ಸಾರ್ವಜನಿಕ ಸ್ವತ್ತುಗಳ ಬಗ್ಗೆ ಅರಿವು ಮೂಡಿಸುವುದು ಬಹಳ ಮುಖ್ಯ ಕರ್ತವ್ಯ. ರಾಜ್ಯದಲ್ಲಿ ಯಾವುದೇ ಮುಷ್ಕರವಾಗಲೀ ಅಥವಾ ಯಾವುದೇ ಕಾನೂನು ವ್ಯವಸ್ಥೆಗೆ ತೊಂದರೆ ಆದ ಸಂದರ್ಭದಲ್ಲಿ ಅನೇಕ ಬಾರಿ ಸಾರ್ವಜನಿಕ ಸ್ವತ್ತುಗಳಿಗೆ ಹಾನಿ ಉಂಟಾಗುವುದನ್ನು ನಾವು ದಿನನಿತ್ಯ ಕಾಣುತ್ತಲೇ ಇದ್ದೇವೆ. ಆದುದರಿಂದ ಸಾರ್ವಜನಿಕ ಸ್ವತ್ತು ಎಲ್ಲಾ ಪ್ರಜೆಗಳ ಸ್ವತ್ತು ಎಂಬ ಅರಿವನ್ನು ಯುವ ಜನರು ಪ್ರತಿ ಹಳ್ಳಿಗಳಲ್ಲಿ ಮೂಡಿಸುವಂತಾಗಬೇಕು. ಇದನ್ನು ರಾಜೀವ್ ಗಾಂಧಿ ಯುವಶಕ್ತಿ ಸಂಘ ತಮ್ಮ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಹಳ್ಳಿಗಳಲ್ಲಿ ಒಂದು ದಿನ ಅಥವಾ ಎರಡು ದಿನದ ತರಬೇತಿ ಕಾರ್ಯಕ್ರಮಗಳನ್ನು ಹಳ್ಳಿಯ ಶಾಲೆಗಳ ಆವರಣದಲ್ಲಿ ನಡೆಸಬಹುದು. ಸಾರ್ವಜನಿಕ ಸ್ವತ್ತು ತಮ್ಮ ಸ್ವತ್ತು ಎಂಬ ಅರಿವು ಉಂಟಾದಾಗ ಮಾತ್ರ ಸಾರ್ವಜನಿಕ ಸ್ವತ್ತುಗಳ ರಕ್ಷಣೆ ಸಾಧ್ಯ.

## ಕ್ರೀಡಾಭಿವೃದ್ಧಿ :

೧) ಆಟದ ಬಯಲುಗಳ ಅಭಿವೃದ್ಧಿ, ೨)ಪ್ರತಿಭಾನ್ವಿತ ಕ್ರೀಡಾಪಟುಗಳ ಶೋಧನೆ, ೩) ಕ್ರೀಡಾ ತರಬೇತಿ, ೪) ಕ್ರೀಡಾಸಕ್ತಿ ಮೂಡಿಸುವುದು, ೫)ಸ್ಥಳೀಯ ಮಟ್ಟದಲ್ಲಿ ಕ್ರೀಡಾ ಸ್ಪರ್ಧೆಗಳು, ೬)ಮನರಂಜನಾ ಕ್ರೀಡೆಗಳು.

ಕ್ರೀಡೆಗಳಲ್ಲಿ ಆಸಕ್ತಿ ಯುವಕರಲ್ಲಿ ಸಹಜವಾಗಿರುತ್ತದೆ. ಕ್ರೀಡೆಗಳ ಅಭಿವೃದ್ಧಿ ಯಾವುದೇ ಪ್ರದೇಶಗಳಲ್ಲಿ ಆಗಬೇಕಾದರೆ ಆಟದ ಮೈದಾನಗಳ ಅವಶ್ಯಕತೆ ಇರುತ್ತದೆ. ಆದುದರಿಂದ ಪ್ರತಿ ರಾಜೀವ್‌ಗಾಂಧಿ ಯುವ ಶಕ್ತಿ ಸಂಘವು ಹಳ್ಳಿಯಲ್ಲಿಯ ಯಾವುದಾದರೊಂದು ಆಟದ ಮೈದಾನದ ಅಭಿವೃದ್ಧಿ ಕಾರ್ಯವನ್ನು ಕೈಗೊಳ್ಳಬಹುದು ಹಾಗೂ ಹೆಚ್ಚಿನ ಹಣದ ವೆಚ್ಚವಿರದಂತಹ ಕ್ರೀಡೆಗಳಾದ ಖೋ-ಖೋ, ಕಬಡ್ಡಿ, ವಾಲಿಬಾಲ್ ಕ್ರೀಡೆಗಳಿಗೆ ಪ್ರಾಮುಖ್ಯತೆ ಕೊಡಬಹುದು. ಈ ಆಟದ ಮೈದಾನಗಳ ಅಭಿವೃದ್ಧಿಯನ್ನು ಗ್ರಾಮ ಪಂಚಾಯತಿ ಅಥವಾ ತಾಲ್ಲೂಕು ಪಂಚಾಯತಿಯ ಸಹಯೋಗದೊಂದಿಗೆ ರಾಜೀವ್ ಗಾಂಧಿ ಯುವ ಶಕ್ತಿ ಸಂಘವು ಕೈಗೊಳ್ಳಬಹುದು. ಹಳ್ಳಿಗಳಲ್ಲಿರುವ ಶಾಲೆಯ ಮೈದಾನ, ಪದವಿಪೂರ್ವ ಕಾಲೇಜುಗಳ ಮೈದಾನಗಳನ್ನು ಶ್ರಮದಾನದ ಮೂಲಕ ಅಭಿವೃದ್ಧಿಪಡಿಸಿಕೊಂಡು ಕ್ರೀಡಾ ಚಟುವಟಿಕೆಗಳಿಗಾಗಿ ಉಪಯೋಗಿಸಿಕೊಳ್ಳಬಹುದು.

## ಪ್ರತಿಭಾನ್ವಿತ ಕ್ರೀಡಾಪಟುಗಳ ಶೋಧನೆ :

ಗ್ರಾಮಗಳಲ್ಲಿ ಕ್ರೀಡಾ ಚಟುವಟಿಕೆಗಳು ಅಂದರೆ ಕ್ರೀಡಾ ಸ್ಪರ್ಧೆಗಳು ನಡೆಯುವ ಸಂದರ್ಭದಲ್ಲಿ ಪ್ರತಿಭಾನ್ವಿತ ಕ್ರೀಡಾ ಪಟುಗಳನ್ನು ಆರಿಸಿ ಆ ಹಳ್ಳಿಯಲ್ಲಿರುವ ದೈಹಿಕ ಶಿಕ್ಷಣ ಶಿಕ್ಷಕರಿಂದ ತರಬೇತಿಯನ್ನು ಕೊಡಿಸುವುದು. ಈ ತರಬೇತಿಯನ್ನು ತಾಲ್ಲೂಕು

ಹಾಗೂ ಜಿಲ್ಲಾ ಮಟ್ಟದಲ್ಲಿರುವ ಕ್ರೀಡಾ ಪಟುಗಳನ್ನು ಕ್ರೀಡಾ ಪ್ರತಿಭಾನ್ವೇಷಣೆ ನಡೆಯುವ ಸಂದರ್ಭದಲ್ಲಿ ಭಾಗವಹಿಸಲು ಪ್ರೇರೇಪಿಸುವುದು. ರಾಜೀವ್ ಗಾಂಧಿ ಯುವ ಶಕ್ತಿ ಸಂಘವು ಹಳ್ಳಿಯ ಜನಪದ ಕ್ರೀಡೆಗಳಲ್ಲಿ ಸ್ಪರ್ಧೆಗಳನ್ನು ಏರ್ಪಡಿಸುವುದು ಹಾಗೂ ಮನೋರಂಜನಾ ಕ್ರೀಡೆಗಳಲ್ಲಿ (ಫನ್ ಗೇಮ್ಸ್) ತರಬೇತಿ ಶಿಬಿರಗಳನ್ನು ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ದೈಹಿಕ ಶಿಕ್ಷಣ ಶಿಕ್ಷಕರ ಸಹಯೋಗದೊಂದಿಗೆ ಏರ್ಪಡಿಸುವುದು. ಪ್ರತಿ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಯುವಕ ಸಂಘಗಳ ಸದಸ್ಯರಿಗೆ ಮನೋರಂಜನಾ ಕ್ರೀಡೆಗಳಲ್ಲಿ ಹಾಗೂ ಇತರೆ ಜನಪ್ರಿಯ ಆಟಗಳಾದ ಖೋ-ಖೋ, ಕಬಡ್ಡಿ, ಹಾಗೂ ವಾಲಿಬಾಲ್ ಕ್ರೀಡೆಗಳಲ್ಲಿ ಸ್ಥಳೀಯವಾಗಿ ಸ್ಪರ್ಧೆಗಳನ್ನು ಏರ್ಪಡಿಸುವುದು. ಗ್ರಾಮೀಣ ಪ್ರದೇಶದಲ್ಲಿರುವ ಹಿರಿಯ ನಾಗರಿಕರಿಗಾಗಿ ದೈಹಿಕ ಸಾಮರ್ಥ್ಯ ಹಾಗೂ ಆರೋಗ್ಯದ ಬಗ್ಗೆ ಅರಿವು ಮೂಡಿಸಲು ರಾಜೀವ್ ಗಾಂಧಿ ಯುವ ಶಕ್ತಿ ಸಂಘ ಆರೋಗ್ಯ ಇಲಾಖೆಯ ಅಧಿಕಾರಿಗಳನ್ನು ಸಂಪರ್ಕಿಸಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು. ಜನಪದ ಕ್ರೀಡೆಗಳಾದ ಕೋಲಾಟ, ಚಿಣ್ಣಿದಾಂಡು, ಮರಕೋತಿ ಮುಂತಾದ ಕ್ರೀಡೆಗಳಲ್ಲಿ ಸ್ಪರ್ಧೆಗಳನ್ನು ಏರ್ಪಡಿಸಿ ಹಳ್ಳಿಯ ಮಟ್ಟದ ಜನರಲ್ಲಿ ಕ್ರೀಡಾ ಮನೋಭಾವ ಮೂಡಿಸಲು ಸಾಧ್ಯವಾಗುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು. ಗ್ರಾಮ ಮಟ್ಟದಲ್ಲಿ ಅಥವಾ ತಾಲ್ಲೂಕಿನ ಎಲ್ಲಾ ರಾಜೀವ್ ಗಾಂಧಿ ಯುವಶಕ್ತಿ ಸಂಘಗಳು ಸೇರಿದಂತೆ ತಾಲ್ಲೂಕು ಮಟ್ಟದಲ್ಲಿಯೂ ಸಹ ಕರ್ನಾಟಕ ಕ್ರೀಡಾ ಪ್ರಾಧಿಕಾರದ ತರಬೇತಿದಾರರ ಸೇವೆಯನ್ನು ಉಪಯೋಗಿಸಿಕೊಂಡು ವಿವಿಧ ಕ್ರೀಡೆಗಳಲ್ಲಿ ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು.

**ಸಾಂಸ್ಕೃತಿಕ :**

೧) ಜನಪದ ಕಲೆಗಳನ್ನು ಜನಪ್ರಿಯಗೊಳಿಸುವುದು, ೨) ಸ್ಥಳೀಯ ಮಟ್ಟದಲ್ಲಿ ಕಲೆ ಮತ್ತು ಸಾಂಸ್ಕೃತಿಕ ಚಟುವಟಿಕೆಗಳನ್ನು ನಡೆಸುವುದು.

ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಅನೇಕ ವರ್ಷಗಳಿಂದ ಕರ್ನಾಟಕದ ಜನಪದ ಕಲೆಗಳಲ್ಲಿ ಯುವಕರಿಗೆ ಅಸಕ್ತಿ ಮೂಡಿಸಲು ಹಾಗೂ ಯುವಜನಾಂಗವು ಜನಪದ ಕಲೆಗಳಲ್ಲಿ ಆಸಕ್ತಿ ವಹಿಸುವಂತೆ ಪ್ರೇರೇಪಿಸಲು ತಾಲ್ಲೂಕು ಮಟ್ಟದಿಂದ ರಾಜ್ಯ ಮಟ್ಟದವರೆಗೆ ಯುವಜನ ಮೇಳಗಳನ್ನು ಸಂಘಟಿಸುತ್ತಿವೆ. ಈ ಯುವಜನ ಮೇಳಗಳಲ್ಲಿ ಭಾಗವಹಿಸುವವರು ಮುಖ್ಯವಾಗಿ ಯುವಕ ಸಂಘದ ಸದಸ್ಯರುಗಳು. ಕರ್ನಾಟಕದ ಗ್ರಾಮೀಣ ಪ್ರದೇಶಗಳಲ್ಲಿ ಅನೇಕ ಜನಪದ ಕಲೆಗಳು ನಶಿಸಿ ಹೋಗುತ್ತಿದ್ದು, ಯುವಜನರಿಗೆ ಜನಪದ ಕಲೆಗಳಲ್ಲಿ ಆಸಕ್ತಿ ಮೂಡಿಸಲು ಹಾಗೂ ಜನಪ್ರಿಯಗೊಳಿಸಲು ಗ್ರಾಮ, ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದಲ್ಲಿ ಈ ಜನಪದ ಕಲೆಗಳ ತರಬೇತಿ ಶಿಬಿರಗಳನ್ನು ಮತ್ತು ಸ್ಪರ್ಧೆಗಳನ್ನು ಏರ್ಪಡಿಸುವುದು. ಈ ತರಬೇತಿ ಶಿಬಿರಗಳನ್ನು ಹಾಗೂ ಸ್ಪರ್ಧೆಗಳನ್ನು ಜಿಲ್ಲಾ ಪಂಚಾಯತ್ ಯುವಕ ಸಂಘಗಳಿಗೆ ಮೀಸಲಿಟ್ಟಿರುವ ಅನುದಾನ ಬಳಸಿಕೊಂಡು ಕಾರ್ಯಕ್ರಮಗಳನ್ನು ನಡೆಸುವುದು. ಗ್ರಾಮ ಪ್ರದೇಶಗಳಲ್ಲಿ ಜನಪ್ರಿಯವಾಗಿರುವ ಜನಪದ ಗೀತೆ, ಗೀಗೀ ಪದಗಳು, ಕೋಲಾಟ, ಯಕ್ಷಗಾನ, ನಾಟಕ, ಭಜನೆ ಮುಂತಾದುವುಗಳನ್ನು ರಾಜೀವ್ ಗಾಂಧಿ ಯುವಶಕ್ತಿ ಸಂಘ ಸ್ಥಳೀಯವಾಗಿ ಲಭ್ಯವಿರುವ ಸಂಪನ್ಮೂಲಗಳನ್ನೇ ಉಪಯೋಗಿಸಿಕೊಂಡು ಸಂಘಟಿಸುವುದು.

**ಶೈಕ್ಷಣಿಕ :**

೧) ವಯಸ್ಕರ ಶಿಕ್ಷಣ ೨) ಶಾಲೆ ಬಿಟ್ಟಿರುವ ಬಾಲಕ:ಬಾಲಕಿಯರನ್ನು ಶಾಲೆಗೆ ಸೇರಿಸುವುದಲ್ಲದೆ ರಾಜೀವ್ ಗಾಂಧಿ ಯುವ ಶಕ್ತಿ ಸಂಘಗಳು ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿ ಈ ಕೆಳಕಂಡ ಚಟುವಟಿಕೆಗಳನ್ನು ಕೈಗೊಳ್ಳಬಹುದು. ಎ) ಗ್ರಾಮೀಣ ಪ್ರದೇಶದ ಹಿರಿಯರಿಗೆ, ಶಾಲೆಯಿಂದ ಹೊರಗಿರುವ ಮಕ್ಕಳಿಗೆ, ಅನಕ್ಷರಸ್ಥ ಯುವಕರಿಗೆ ಅಕ್ಷರ ತರಬೇತಿ ಕಾರ್ಯಕ್ರಮಗಳನ್ನು ನಡೆಸುವುದು. ಬಿ) ಯುವ ಶಕ್ತಿ ಸಂಘದ ವತಿಯಿಂದ ವಾಚನಾಲಯವನ್ನು ನಡೆಸುವುದು. ಸಿ) ಈ ಗ್ರಾಮ ಪಂಚಾಯತಿಯ ವ್ಯಾಪ್ತಿಯಲ್ಲಿ ಬರುವ ಶಾಲೆಗಳ ಮಕ್ಕಳಿಗಾಗಿ 'ಅರಳುವ ಪ್ರತಿಭೆ' ಕಾರ್ಯಕ್ರಮವನ್ನು ರೂಪಿಸಿ ಚರ್ಚಾ ಸ್ಪರ್ಧೆ, ರಸಪ್ರಶ್ನೆ ಕಾರ್ಯಕ್ರಮಗಳನ್ನು ನಡೆಸುವುದು. ರಾಜೀವ್ ಗಾಂಧಿ ಯುವಶಕ್ತಿ ಸಂಘ ವಾಚನಾಲಯವನ್ನು ನಡೆಸಲು ಸಾರ್ವಜನಿಕ ಗ್ರಂಥಾಲಯ ಇಲಾಖೆ, ವಯಸ್ಕರ ಶಿಕ್ಷಣ ಇಲಾಖೆಗಳನ್ನು ಸಂಪರ್ಕಿಸಿ ಅನುದಾನವನ್ನು ಪಡೆಯಬಹುದು. ಶಾಲೆ ಬಿಟ್ಟಿರುವ ಬಾಲಕ ಬಾಲಕಿಯರನ್ನು ಶಾಲೆಗೆ ಸೇರಿಸಲು

ಪ್ರೇರೇಪಿಸುವ ಕಾರ್ಯಕ್ರಮವನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಸಹಯೋಗದೊಂದಿಗೆ 'ಮರಳಿ ಬಾ ಶಾಲೆಗೆ' ಯೋಜನೆ ಅಡಿಯಲ್ಲಿ ರಾಜೀವ್ ಗಾಂಧಿ ಯುವಶಕ್ತಿ ಸಂಘವು ನಿರ್ವಹಿಸಬಹುದು.

**ಸಾಮಾಜಿಕ ಆರೋಗ್ಯ ಕಾರ್ಯಕ್ರಮ :**

೧) ಆರೋಗ್ಯ ಕಾರ್ಯಕ್ರಮ ಶಿಬಿರಗಳನ್ನು ನಡೆಸುವುದು, ೨) ಏಡ್ಸ್ ಕಾಯಿಲೆಯ ಬಗ್ಗೆ ಜಾಗೃತಿ ಮೂಡಿಸುವುದು, ೩) ರಾಷ್ಟ್ರೀಯ ಭಾವೈಕ್ಯತಾ ಶಿಬಿರಗಳ ಯೋಜನೆ, ೪) ಸಾಮಾಜಿಕ ಪಿಡುಗುಗಳ ನಿವಾರಣೆ ಅಲ್ಲದೆ, ಆರೋಗ್ಯ ಇಲಾಖೆಯ ಸಹಯೋಗದೊಂದಿಗೆ ಈ ಕೆಳಕಂಡ ಕಾರ್ಯಕ್ರಮಗಳನ್ನು ರಾಜೀವ್ ಗಾಂಧಿ ಯುವ ಶಕ್ತಿ ಸಂಘವು ನಡೆಸಬಹುದು. ಎ) ಉಚಿತ ಆರೋಗ್ಯ ತಪಾಸಣಾ ಶಿಬಿರಗಳು, ಬಿ) ರಕ್ತದಾನ ಶಿಬಿರಗಳು, ಸಿ) ಏಡ್ಸ್ ಬಗ್ಗೆ ಅರಿವು ಮೂಡಿಸುವ ಶಿಬಿರಗಳು, ಡಿ) ಗ್ರಾಮೀಣ ನೈರ್ಮಲ್ಯೀಕರಣದ ಬಗ್ಗೆ ಅರಿವು ಮೂಡಿಸಲು ತರಬೇತಿ ಶಿಬಿರಗಳು.

ಮೇಲ್ಕಂಡ ಕಾರ್ಯಕ್ರಮಗಳನ್ನು ಆರೋಗ್ಯ ಇಲಾಖೆ ಹಾಗೂ ಸ್ಥಳೀಯ ಸಂಸ್ಥೆಗಳಾದ ರೋಟರಿ, ರೋಟ್ರಾಕ್, ಲಯನ್ಸ್ ಸಂಸ್ಥೆಗಳ ಸಹಯೋಗದೊಂದಿಗೆ ಏರ್ಪಡಿಸುವುದು. ಯುವಜನರಲ್ಲಿ ರಾಷ್ಟ್ರೀಯ ಪ್ರಜ್ಞೆ ಮೂಡಿಸಲು ರಾಷ್ಟ್ರೀಯ ಭಾವೈಕ್ಯತಾ ಶಿಬಿರಗಳನ್ನು ಏರ್ಪಡಿಸುವುದು. ಈ ರಾಷ್ಟ್ರೀಯ ಭಾವೈಕ್ಯತಾ ಶಿಬಿರಗಳ ಯೋಜನೆ ಸದ್ಯಕ್ಕೆ ಕೇಂದ್ರ ಸರ್ಕಾರದಲ್ಲಿದ್ದು, ಇದಕ್ಕಾಗಿ ರಾಜೀವ್ ಗಾಂಧಿ ಯುವಶಕ್ತಿ ಸಂಘಗಳು ಹಾಗೂ ಇತರೆ ಯುವಕ ಸಂಘ-ಸಂಸ್ಥೆಗಳು ಕೇಂದ್ರ ಸರ್ಕಾರದ ಧನಸಹಾಯಕ್ಕಾಗಿ ಅನುದಾನವನ್ನು ಕೋರಬಹುದು. ರಾಜೀವ್ ಗಾಂಧಿ ಯುವ ಶಕ್ತಿ ಸಂಘದ ಸದಸ್ಯರು ಗ್ರಾಮೀಣ ಪ್ರದೇಶದ ಪ್ರಬಲ ಸಾಮಾಜಿಕ ಪಿಡುಗುಗಳಾದ ಅಸ್ಪೃಶ್ಯತೆ, ಮೂಢನಂಬಿಕೆ, ವರದಕ್ಷಿಣೆ, ಜಾತೀಯತೆ ಮುಂತಾದವುಗಳ ನಿವಾರಣೆಗಾಗಿ ಹಾಗೂ ಅವುಗಳು ಸಮಾಜದ ಮೇಲೆ ಬೀರುವ ದುಷ್ಪರಿಣಾಮಗಳನ್ನು ಹೋಗಲಾಡಿಸಲು ಯುವಕ ಯುವತಿಯರಿಗೆ ತರಬೇತಿ ಶಿಬಿರಗಳನ್ನು, ಬೀದಿ ನಾಟಕ ಹಾಗೂ ಲಾವಣಿಗಳ ಕಾರ್ಯಕ್ರಮಗಳನ್ನು ಏರ್ಪಡಿಸುವುದು.

**ವ್ಯಕ್ತಿತ್ವ ವಿಕಸನ :**

೧) ವ್ಯಕ್ತಿತ್ವ ವಿಕಸನ ತರಬೇತಿ ಶಿಬಿರಗಳನ್ನು ಆಯೋಜಿಸುವುದು, ೨) ಯುವ ಮುಂದಾಳತ್ವ ತರಬೇತಿ ಶಿಬಿರಗಳನ್ನು ನಡೆಸುವುದು, ೩) ಸ್ವಯಂ ಉದ್ಯೋಗಕ್ಕೆ ಪ್ರೇರಣೆ ನೀಡುವ ತರಬೇತಿ ಶಿಬಿರ ನಡೆಸುವುದು. ಇಂದಿನ ಯುವ ಜನಾಂಗ ಸಾಮಾಜಿಕ ರಂಗದಲ್ಲಿ ಸಕ್ರಿಯ ಪಾತ್ರ ವಹಿಸಲು ಸೂಕ್ತ ವ್ಯಕ್ತಿತ್ವವನ್ನು ಹೊಂದಿರಬೇಕಾಗುತ್ತದೆ. ಅನೇಕ ಬಾರಿ ಯುವಕರು ಸರಿಯಾಗಿ ಮಾರ್ಗದರ್ಶನವಿಲ್ಲದೇ ಅಥವಾ ಪ್ರೇರಣೆ ಇಲ್ಲದೆ ನಿಷ್ಕ್ರಿಯವಾಗುವ ಹಾಗೂ ಸಮಾಜಘಾತುಕ ಚಟುವಟಿಕೆಗಳಲ್ಲಿ ತೊಡಗುವ ಸಾಧ್ಯತೆ ಇದೆ. ಈ ಮನೋಭಾವವನ್ನು ತೊಡೆದು ಹಾಕಲು ಹಾಗೂ ಯುವಕ ಯುವತಿಯರ ವ್ಯಕ್ತಿತ್ವ ಸೂಕ್ತ ದಿಕ್ಕಿನಲ್ಲಿ ವಿಕಸನ ಹೊಂದಲು ಅವರಿಗೆ ವ್ಯಕ್ತಿತ್ವ ವಿಕಸನ ತರಬೇತಿ ಶಿಬಿರಗಳು ಅತ್ಯಗತ್ಯವಾಗಿವೆ. ಸಾಮಾಜಿಕ ಬೆಳವಣಿಗೆಗಾಗಿ ಯುವ ಮುಂದಾಳುಗಳ ತರಬೇತಿ ಶಿಬಿರಗಳ ಅವಶ್ಯಕತೆ ಬಹಳ ಮುಖ್ಯವಾಗಿದೆ. ಯುವಕರಲ್ಲಿ ವ್ಯಕ್ತಿತ್ವ ವಿಕಸನಗೊಳಿಸಲು ಹಾಗೂ ಯುವ ಮುಂದಾಳುಗಳನ್ನು ರೂಪಿಸಲು ಯುವಶಕ್ತಿ ಸಂಘಗಳು ಸ್ಥಳೀಯ ಸಂಸ್ಥೆಗಳ ಮೂಲಕ ಅಥವಾ ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿ ಯೋಜನೆಗಳ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿವೆ.

**ಸುಖೀರಾಜ್ಯ- ಗ್ರಾಮರಾಜ್ಯ :**

ಗ್ರಾಮೀಣ ಸಂಸ್ಕೃತಿಯೇ ಈ ದೇಶದ ಪ್ರಗತಿಗೆ ಅಡಿಗಲ್ಲು ಎಂದು ಬಲವಾಗಿ ನಂಬಿದ್ದ ಗಾಂಧೀಜಿಯವರು ಆಧುನಿಕ ಕೈಗಾರಿಕೆಗಳು ನಮ್ಮ ಗ್ರಾಮೀಣ ಸಂಸ್ಕೃತಿಯನ್ನು ವಿರೂಪಗೊಳಿಸುತ್ತವೆ ಎಂದು ಕೊರಗಿದರು. ಹಳ್ಳಿಗಳು ವ್ಯವಸ್ಥಿತ ರಚನಾ ಸ್ವರೂಪ ಹೊಂದಬೇಕು. ಪ್ರತಿ ಗ್ರಾಮವೂ ಧರ್ಮಶಾಲೆ, ಔಷಧಾಲಯಗಳನ್ನು ಹೊಂದಬೇಕು. ಅನ್ನ ಬಟ್ಟೆ ಇತ್ಯಾದಿ ಪ್ರಾಥಮಿಕ ಅಗತ್ಯಗಳಲ್ಲಿ ಸ್ವಾವಲಂಬನೆ ಸಾಧಿಸಬೇಕು. ಮಕ್ಕಳಿಗೆ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯವಾಗಿ ಸರಕಾರಗಳು ದೊರಕಿಸಿಕೊಡಬೇಕು. ಜಾತಿ ಪದ್ಧತಿಯನ್ನು

ಆಮೂಲಾಗ್ರವಾಗಿ ಗ್ರಾಮಗಳಿಂದ ತೊರದಬ್ಬಬೇಕು. ಬಡತನ, ನಿರುದ್ಯೋಗದ ನಿವಾರಣೆಗೆ ಗ್ರಾಮೀಣ ಕೈಗಾರಿಕೆಗಳನ್ನು ಅವಲಂಬಿಸಬೇಕು. ಇಂತಹ ಕಾರ್ಯಕ್ರಮಗಳು ಸುಖೀ ಗ್ರಾಮರಾಜ್ಯ ಹೊಂದಲು ಹಾದಿಗಳು ಎಂದು ಗಾಂಧಿ ತಮ್ಮ ಗ್ರಾಮರಾಜ್ಯದ ಕನಸು ನನಸಾಗಲು ಆಶಿಸಿದರು. ಅರ್ಥಶಾಸ್ತ್ರಜ್ಞರಂತೆ ಗಾಂಧಿ ನಮ್ಮ ಆರ್ಥಿಕಾಭಿವೃದ್ಧಿಗೆ ನೀಡಿದ ಅಭಿಪ್ರಾಯಗಳನ್ನು ಆಧುನಿಕ ಅರ್ಥಶಾಸ್ತ್ರಜ್ಞರು ಒಪ್ಪಿಕೊಳ್ಳಲಾರರು. ಜಾಗತೀಕರಣ, ಖಾಸಗೀಕರಣದಲ್ಲಿ ಗಾಂಧಿಸ್ಮೃತಿ ಅಪ್ರಸ್ತುತ ಎಂದೇ ಹಲವರ ಅಭಿಪ್ರಾಯ. ಆದರೆ ದೇಶೀಯ ಸಂಸ್ಕೃತಿಯೊಂದು ಅಳಿಯದೆ ಉಳಿದುಕೊಳ್ಳಲು, ಕಟ್ಟಕಡೆಯ ಶ್ರೀಸಾಮಾನ್ಯನ ಬದುಕು ಹಸನಾಗಲು ಗಾಂಧೀವಾದ ಒಂದು ಅಡಿಪಾಯ ಎನ್ನುವುದು ವಾಸ್ತವ.

ನಗರೀಕರಣದೊಂದಿಗೆ ಆಯ್ದ ನಗರಗಳನ್ನು ಅಭಿವೃದ್ಧಿಗೊಳಿಸಿ, ಹಳ್ಳಿಗಳನ್ನು ನಿರ್ಲಕ್ಷಿಸುವುದರಿಂದ ಜನಸಂಖ್ಯೆಯ ಅ ಸಮತೋಲನ ಉಂಟಾಗುತ್ತದೆ. ಇದರೊಂದಿಗೆ ಜೈವಿಕ ಅಸಮತೋಲನದ ಜೊತೆಗೆ ಉದ್ಯೋಗದ ಏರುಪೇರು, ಜನಜೀವನ ಅವ್ಯವಸ್ಥೆ, ಕಾನೂನು ಶಿಸ್ತು ಪರಿಪಾಲಿಸುವಲ್ಲಿ ಹಿನ್ನಡೆ ಉಂಟಾಗುತ್ತದೆ. ಶೇಕಡಾ ೮೨ ರಷ್ಟು ಹಳ್ಳಿಯಲ್ಲಿನ ಜನರ ಕೈಗೆ ಕೆಲಸ ಒದಗಿಸಿ ಉತ್ಪಾದನೆಯನ್ನು ಉನ್ನತೀಕರಿಸಿದ ಹೊರತು ಆರ್ಥಿಕ ಕ್ರಾಂತಿ ಬರೀ ಬೊಗಳೆ ಮಾತಾದೀತು. ಭಾರತದಂತಹ ಅಭಿವೃದ್ಧಿಶೀಲ ದೇಶದಲ್ಲಿನ ಕಟ್ಟಕಡೆಯ ನಾಗರಿಕನ ಬದುಕು ಹಸನಾಗಲು, ಸರ್ವರ ಕೈಗೆ ಕೆಲಸ, ಎಲ್ಲರಿಗೆ ಅನ್ನ, ವಸ್ತ್ರ, ವಸತಿ ಒದಗಿಸಿ ಸುಖೀರಾಜ್ಯ ನಿರ್ಮಿಸಲು, ಗ್ರಾಮೀಣ ಬದುಕಿನ ಉದ್ಧಾರಗೊಳ್ಳಲು ಹಳ್ಳಿಯ ಆರ್ಥಿಕ ಸ್ಥಿತಿ ಅಭಿವೃದ್ಧಿಯಾಗಲು ಗಾಂಧಿ ಕಂಡ ಗ್ರಾಮೋದ್ಧಾರ ಒಂದೇ ದಾರಿ ಎನ್ನದೇ ಬೇರೆ ಗತ್ಯಂತರವಿಲ್ಲ.

●




# ಯುವಶಕ್ತಿ

ಡಾ. ಎ. ಆರ್. ಮಂಜುನಾಥ್

ಯುವಕರು ಸಮಾಜದ ಶಕ್ತಿಯುತ ಪಂಗಡವಾಗಿ ಹೊರ ಹೊಮ್ಮಿರುವುದು ಭಾರತದ ಇತ್ತೀಚಿನ ಬೆಳವಣಿಗೆಗಳಲ್ಲೊಂದು. ಸಾಹಿತ್ಯ, ಸಂಸ್ಕೃತಿ, ಕ್ರೀಡೆ, ವಿಜ್ಞಾನ, ತಾಂತ್ರಿಕ, ರಾಜಕೀಯ ಕ್ಷೇತ್ರಗಳಲ್ಲಿ ಅವರ ಪಾತ್ರ ಗಣನೀಯವಾದುದು. ಆದುದರಿಂದ ಯುವಶಕ್ತಿಯನ್ನು ಕ್ರೋಡೀಕರಿಸಿ ಸರಿಹಾದಿಯಲ್ಲಿ ಹರಿಬಿಡುವ ಪ್ರಯತ್ನ ಸತ್ವಯುತವಾಗಿ ಇಂದು ನಡೆಯಬೇಕಾಗಿದೆ. ಎಚ್ಚೆತ್ತ ಯುವಕ ಹೊಸ ಕ್ಷಿತಿಜದತ್ತ ಹೆಜ್ಜೆ ಹಾಕಿ ಸಮಸ್ಯೆಗಳನ್ನು ಸವಾಲಾಗಿ ಸ್ವೀಕರಿಸಿ ಧೀಮಂತ ಯೋಧನಂತೆ ಮುನ್ನಡೆ ಸಾಧಿಸಬೇಕಾಗಿದೆ. ಇದಕ್ಕಾಗಿ ಯುವ ಚಟುವಟಿಕೆಗಳಿಗೆ ಹೊಸ ರೂಪ ನೀಡಲು ಅವರನ್ನು ಒಳಗೊಂಡ ಒಂದು ಬೃಹತ್ ಕಾರ್ಯಕ್ರಮ ರೂಪಿಸಬೇಕಾಗಿದೆ. ಇದು ಯುವ ಕಲ್ಯಾಣ ಮತ್ತು ಅಭಿವೃದ್ಧಿಯ ಜೊತೆಗೆ ದೇಶವನ್ನು ೨೧ ನೇ ಶತಮಾನದತ್ತ ಒಯ್ಯಲು ಸಹಕಾರಿಯಾಗಲಿದೆ. ಯುವ ಶಕ್ತಿಗೆ ಸರಿ ದಿಕ್ಕು ತೋರಿದಲ್ಲಿ ಅದು ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಬದಲಾವಣೆಯ ಸಂಕೇತವಾಗಬಲ್ಲದು.

**ಎಚ್ಚೆತ್ತ ಯುವಶಕ್ತಿ ಹೊಸ ಕ್ಷಿತಿಜದತ್ತ ನಡೆದು ಸಮಸ್ಯೆಗಳನ್ನು ಸವಾಲಾಗಿ ಸ್ವೀಕರಿಸಬೇಕಾಗಿದೆ. ಆತನಿಗೆ ಸರಿಯಾದ ದಿಕ್ಕು ತೋರಿದರೆ ದೇಶದ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಕ್ಷೇತ್ರದಲ್ಲಿ ಮಹತ್ವದ ಬದಲಾವಣೆಯಾಗುವುದರಲ್ಲಿ ಸಂಶಯವಿಲ್ಲ.**

ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಯುವ ಜನರನ್ನು ತೊಡಗಿಸಲು ಅವರಲ್ಲಿರುವ ಪ್ರತಿಭೆಯನ್ನು ಬೆಳಸಿ, ಕ್ರೋಡೀಕರಿಸಿ, ಸಂಯೋಜಿಸಿ ಉಪಯೋಗಿಸಬೇಕಾಗಿದೆ. ಆದುದರಿಂದ ಯುವ ಜನರ ಬೆಳವಣಿಗೆಯನ್ನು ವಿಚಾರಿಸುವಾಗ ಕೇವಲ ವಿದ್ಯಾಕ್ಷೇತ್ರದಲ್ಲಿ ಬದಲಾವಣೆ ತರುವುದನ್ನು ಮಾತ್ರ ಯೋಜಿಸಿದರೆ ಸಾಲದು. ಯುವ ಸಮಸ್ಯೆಗಳನ್ನು ಕೂಡ ಗಮನದಲ್ಲಿಟ್ಟುಕೊಳ್ಳಬೇಕಾಗಿದೆ. ವ್ಯಕ್ತಿತ್ವ ವಿಕಸನ, ಕೌಮಾರ್ಯದಿಂದ ಯೌವನಕ್ಕೆ ಹೆಜ್ಜೆ ಇಡುವಾಗ ಆಗುವ ದೈಹಿಕ ಮಾನಸಿಕ ಬದಲಾವಣೆ, ಬದುಕನ್ನು ತೂಗಿಸಿಕೊಂಡು ಹೋಗಬಲ್ಲ ನೌಕರರಿಗೆ ಅವಕಾಶ, ಸಾಹಸ ಪ್ರವೃತ್ತಿಗೆ ಇಂಬು ನೀಡುವುದು, ಸಮಾಜ ಸೇವೆ, ಸಾಂಸ್ಕೃತಿಕ ಮೌಲ್ಯಗಳನ್ನು ಎತ್ತಿ ಹಿಡಿದು ಭೂತಕ್ಕೂ ಭವಿಷ್ಯತ್ತಿಗೂ ಸೇತುವೆಯಾಗುವುದು ಮತ್ತು ವೈಜ್ಞಾನಿಕ ಮನೋಭಾವನೆ ಬೆಳೆಸುವುದು ಇವುಗಳನ್ನು ಯುವ ಶಕ್ತಿ ಸಮರ್ಪಕವಾಗಿ ಬೆಳೆಸಿಕೊಳ್ಳುವಂತೆ ನೋಡಿಕೊಳ್ಳುವುದು ನಾವು ತರಬೇಕಾದ ಬದಲಾವಣೆ.

ಯುವಶಕ್ತಿಗೆ ಹೊಸ ಚಾಲನೆ ನೀಡುವ ದೃಷ್ಟಿಯಿಂದ ೧೯೮೫ನ್ನು ಅಂತರರಾಷ್ಟ್ರೀಯ ಯುವ ವರ್ಷವೆಂದು ಪರಿಗಣಿಸಿ ಹೊಸ ಹೊಸ ಕಾರ್ಯಕ್ರಮ ಹಾಕಿಕೊಳ್ಳಲಾಯ್ತು. ರಾಷ್ಟ್ರೀಯ ಯುವ ಲಾಂಛನವನ್ನು

ಗೊತ್ತುಪಡಿಸಲಾಗಿದ್ದು ಅದರಲ್ಲಿರುವ ಚಿತ್ರ ಯುವಜನರ ಅದಮ್ಯ ಶಕ್ತಿ, ಉತ್ಕೃಷ್ಟತೆ, ಚಾರಿತ್ರ್ಯ, ಇಚ್ಛಾಶಕ್ತಿ, ಸವಾಲನ್ನು ಎದುರಿಸುವ, ಒಗ್ಗಟ್ಟಿನಿಂದ, ಸಹಕಾರದಿಂದ ಕೆಲಸ ಮಾಡುವ ಪ್ರವೃತ್ತಿಯನ್ನು ವ್ಯಕ್ತಪಡಿಸುತ್ತದೆ. ಅದರಲ್ಲಿರುವ ಪಾರಿವಾಳ ಶಾಂತಿಯ ಸಂಕೇತವಾಣೆ, ವೃತ್ತವು ವಿಶ್ವ ವೈಶಾಲ್ಯತೆ, ಪರಿಪೂರ್ಣ ಬದುಕನ್ನು ಪ್ರತಿನಿಧಿಸುತ್ತದೆ. ಅಡ್ಡಗೆರೆಗಳು ಚಾಲನ ಶಕ್ತಿಯ ಪ್ರತೀಕವಾಗಿವೆ.

ಭಾರತದಲ್ಲಿ ೧೫ ರಿಂದ ೩೫ ವರ್ಷದ ವಯೋಮಿತಿಯಲ್ಲಿ ಬರುವ ಪ್ರತಿಯೊಬ್ಬರನ್ನೂ ಯುವಜನರೆಂದು ಪರಿಗಣಿಸಲಾಗಿದ್ದು ಜನಗಣತಿಯ ಪ್ರಕಾರ ೧೬೧ ಮಿಲಿಯ ಯುವಜನರು ಹಳ್ಳಿಗಳಲ್ಲೂ, ೬೦ ಮಿಲಿಯ ಯುವಜನರು ನಗರ ಪ್ರದೇಶಗಳಲ್ಲೂ ಇರುವರು. ಇದರಲ್ಲಿ ಸುಮಾರು ೧೦೯ ಮಿಲಿಯ ಯುವಜನರು ಉದ್ಯೋಗಿಗಳೂ ಮತ್ತು ಸುಮಾರು ೧೧.೭ ಮಿಲಿಯ ಅರೆ ಉದ್ಯೋಗಿಗಳು ಮತ್ತು ಉಳಿದವರು ನಿರುದ್ಯೋಗಿಗಳು.

**ಭಾರತೀಯ ಯುವಜನರಲ್ಲಿ ಈ ಕೆಳಕಂಡ ಮುಖ್ಯ ಲಕ್ಷಣಗಳನ್ನು ನಾವು ಗಮನಿಸಬಹುದು :**

೧) ಬದುಕಿಗೆ ಸ್ಪಂದಿಸದ ಶಿಕ್ಷಣ ಕ್ರಮದಿಂದ ಬೇಸತ್ತ ಯುವ ಜನಾಂಗ.

೨) ನಿರುದ್ಯೋಗ, ನಿಮ್ನ ಉದ್ಯೋಗದಿಂದ ಯುವ ಜನಾಂಗದ ಶಿಕ್ಷಣ ಮತ್ತು ಕಾರ್ಯವೈಖರಿ ಮೇಲೆ ಪರಿಣಾಮ.

೩) ವಿದ್ಯಾವಂತ ಯುವಕರಿಗೆ ಬಿಳಿಪಟ್ಟಿ ಕೆಲಸದ ಮೇಲಿರುವ ವ್ಯಾಮೋಹ ಹಾಗೂ ದೈಹಿಕ ಶ್ರಮದ ಕೆಲಸದ ಬಗ್ಗೆ ಇರುವ ತಿರಸ್ಕಾರ.

೪) ಹೆಚ್ಚಿನ ಯುವಕರ ಮೇಲೆ ಸಾಂಪ್ರದಾಯಕ ಸಮಾಜದ ಮತ್ತು ಅದರ ಮೌಲ್ಯಗಳ ಹಿಡಿತ.

೫) ಯುವ ಜನಾಂಗಕ್ಕೆ ಅಭಿವೃದ್ಧಿಯಲ್ಲಿ ಮತ್ತು ಸಾಮೂಹಿಕ ಕಾರ್ಯಕ್ರಮಗಳಲ್ಲಿ ಇರುವ ಆಸಕ್ತಿ ಹಾಗೂ ಸಾಮಾಜಿಕ ಮತ್ತು ಸಾರ್ವಜನಿಕ ಸಮಸ್ಯೆಗಳ ಬಗ್ಗೆ ಇರುವ ಕಾಳಜಿ.

೬) ಜೀವನದ ಗುರಿಯ ಬಗ್ಗೆ ಜಾಗೃತರಾಗಿ ಆಧುನಿಕ ಸೌಲಭ್ಯಗಳ ಉಪಯೋಗದಿಂದ ಬದಲಾವಣೆಯ ಮತ್ತು ಅಭಿವೃದ್ಧಿಯ ಪ್ರತೀಕವಾಗಿ ಬದಲಾಗುತ್ತಿರುವುದು.

ಯುವ ಜನರು ಈ ದೇಶದ ದೊಡ್ಡ ಆಸ್ತಿ ಆಗಿರುವುದರಿಂದ ಅವರನ್ನು ಪೋಷಿಸಿ, "ಉತ್ತಮ ನಾಗರಿಕರನ್ನಾಗಿಸುವಲ್ಲಿ, ಅವರ ವ್ಯಕ್ತಿತ್ವವನ್ನು ರೂಪಿಸಿ ದೇಶದ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸುವಂತೆ ಮಾಡಬೇಕಾದುದು ಎಲ್ಲರ ಕರ್ತವ್ಯ. ಅದಕ್ಕಾಗಿ ಯುವಕರ ಕಾರ್ಯ ವೈಖರಿಯನ್ನು ಅಭಿವೃದ್ಧಿಗೊಳಿಸುವಲ್ಲಿ", ಅವರನ್ನು ಸಾಮಾಜಿಕವಾಗಿ ಉಪಯುಕ್ತರನ್ನಾಗಿ ಮತ್ತು ಆರ್ಥಿಕವಾಗಿ ಉತ್ಪತ್ತಿ ಕಾರ್ಯದಲ್ಲಿ ತೊಡಗಿಸಲು ಹೊಸಹೊಸ ಅವಕಾಶಗಳನ್ನು ನೀಡಬೇಕಾಗಿದೆ. ಈ ದಿಸೆಯಲ್ಲಿ ಈ ಕೆಳಕಂಡ ಕಾರ್ಯಕ್ರಮವನ್ನು ಯೋಜಿಸಲಾಗಿದೆ.

೧) ಸ್ವಯಂ ಉದ್ಯೋಗ ಯೋಜನೆ ಮತ್ತು ಸಮಾಜಸೇವೆಯ ಮೂಲಕ ಯುವಜನರನ್ನು ಉತ್ತಮ ವ್ಯಕ್ತಿಗಳನ್ನಾಗಿ ರೂಪಿಸುವುದು.

೨) ಭಾರತೀಯ ಸಂಸ್ಕೃತಿಯ ಮತ್ತು ಸಂಪ್ರದಾಯದ ಮೂಲ ಐಕ್ಯತೆ ಮತ್ತು ಬಾಹ್ಯ ವೈವಿಧ್ಯತೆ, ತೊಡಕುಗಳು ಮತ್ತು ಸಿರಿವಂತಿಕೆ ಬಗ್ಗೆ ಪ್ರಜ್ಞೆ ಮೂಡಿಸಿ, ಅವನ್ನು ಉಳಿಸಿಕೊಳ್ಳುವಲ್ಲಿ, ಬೆಳೆಸುವುದರಲ್ಲಿ ಯುವಜನರಲ್ಲಿ ಜಾಗೃತಿ ಮೂಡಿಸುವುದು.

೩) ಔದ್ಯೋಗಿಕ ಅವಕಾಶ ನೀಡುವ ಅರ್ಥವತ್ತಾದ ಶಿಕ್ಷಣ ಪದ್ಧತಿಯ ಜಾರಿ.

೪) ಹೊಸ ತಾಂತ್ರಿಕ ಜ್ಞಾನವನ್ನು ಎಲ್ಲಾ ಕಡೆ, ಅದರಲ್ಲೂ ಮುಖ್ಯವಾಗಿ ವ್ಯವಸಾಯ ಕ್ಷೇತ್ರದಲ್ಲಿ ಉಪಯೋಗಿಸಿಕೊಳ್ಳುವಂತೆ ತರಬೇತಿ ನೀಡುವುದು.

೫) 'ಯುವತಿಯರಿಗೆ ಹೆಚ್ಚಿನ ಗಮನ ನೀಡಿ ಸಮಾನ ಶಿಕ್ಷಣ, ಸಮಾನ ವೇತನ', ಉಳಿದ ಸವಲತ್ತುಗಳನ್ನು ನೀಡಿ ಅವರ ಸಾಮಾಜಿಕ ಸ್ಥಾನಮಾನಗಳನ್ನು ಹೆಚ್ಚಿಸುವುದು.

೬) ಯುವಜನತೆಗೆ ಶಿಕ್ಷಣ ನೀಡಿ ದೈಹಿಕ, ಮಾನಸಿಕ ಹಾಗೂ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುವಂತೆ ಹಾಗೂ ಕುಟುಂಬ ಕಲ್ಯಾಣ ಯೋಜನೆ ಬಗ್ಗೆ ಹೆಚ್ಚು ಗಮನಹರಿಸುವಂತೆ ಮಾಡುವುದು.

೭) ಯುವಜನರನ್ನು ಉತ್ತಮ ನಾಗರಿಕರನ್ನಾಗಿ ಮಾಡಿ ತಮ್ಮ ಬಗ್ಗೆ, ಸಮಾಜದ ಬಗ್ಗೆ ಮತ್ತು ದೇಶದ ಬಗ್ಗೆ ಅವರ ಕರ್ತವ್ಯ ಮತ್ತು ಜವಾಬ್ಧಾರಿಯ ಬಗ್ಗೆ ಅರಿವು ಮೂಡಿಸುವುದು.

ಯುವಜನಾಂಗಕ್ಕೆ ಹೊಸ ಚಾಲನೆ ನೀಡುವ ದೃಷ್ಟಿಯಿಂದ ಹೊಸ ಶಿಕ್ಷಣ ಪದ್ಧತಿ ಜಾರಿಗೆ ತಂದಿದ್ದು ಇದು ಯುವಕರ ವ್ಯಕ್ತಿತ್ವವನ್ನು ದೈಹಿಕ, ಬೌದ್ಧಿಕ ಮತ್ತು ಸೌಂದರ್ಯ ರೀತ್ಯ ಬೆಳವಣಿಗೆಗೆ ಸಹಕರಿಸುವಂತೆಯೂ ನೈತಿಕ, ವೈಜ್ಞಾನಿಕ, ಆಧ್ಯಾತ್ಮಿಕ ಹಾಗೂ ಪ್ರಜಾಪ್ರಭುತ್ವ ಮೌಲ್ಯಗಳನ್ನು ಸೇರಿಸಿ, ಸವಾಲುಗಳನ್ನು ಎದುರಿಸಲು ಬೇಕಾದ ನೈತಿಕ ಸ್ಥೈರ್ಯವನ್ನು ಬೆಳೆಸುವಂತೆ ಭೌತಿಕ, ಸಾಮಾಜಿಕ, ತಾಂತ್ರಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಪರಿಸರವನ್ನು ಸೃಷ್ಟಿಸಿ ಅದರ ಬಗ್ಗೆ ತಿಳುವಳಿಕೆ ಮೂಡಿಸುವಂತೆ ಕೆಲಸ ಕಾರ್ಯಗಳ ಬಗ್ಗೆ ಆರೋಗ್ಯಕರವಾದ ಭಾವನೆ ಹುಟ್ಟಿಸುವಂತೆಯೂ ದೇಶದ ಗೌರವ, ಐಕ್ಯತೆ ಮತ್ತು ಬೆಳವಣಿಗೆಗೆ ಸಮರ್ಪಿಸುವಂತೆಯೂ, ಅಂತರರಾಷ್ಟ್ರೀಯ ತಿಳುವಳಿಕೆ ಬೆಳೆಸುವಂತೆಯೂ, ಹವ್ಯಾಸಗಳ ಮತ್ತು ಆಟೋಟಗಳ ಬಗ್ಗೆ ಆಸಕ್ತಿಯನ್ನು ತಳೆಯುವಂತೆಯೂ ಮಾಡುವುದರಲ್ಲಿ ಸಹಕಾರಿಯಾಗಿದೆ.

ಯುವಜನರ ಉದ್ಯೋಗ ಸಮಸ್ಯೆ ನಿವಾರಣೆ ಮಾಡುವ ದೃಷ್ಟಿಯಿಂದ ಸುಮಾರು ೭೦೦ಕ್ಕೂ ಮೇಲ್ಪಟ್ಟು ಉದ್ಯೋಗ ವಿನಿಮಯ ಕೇಂದ್ರಗಳು ದೇಶದ ವಿವಿಧ ವಿಭಾಗಗಳಲ್ಲಿ ಕೆಲಸ ಮಾಡುತ್ತಿದ್ದು, ಇವು ಯುವಕರಿಗೆ ಉದ್ಯೋಗ ಕೊಡಿಸುವುದರ ಜೊತೆಗೆ ಉದ್ಯೋಗದ ಬಗ್ಗೆ ಮಾರ್ಗದರ್ಶನವನ್ನು ನೀಡುತ್ತಿವೆ. ನಮ್ಮ ಶಿಕ್ಷಣ ಯೋಜನೆ ಮತ್ತು ಮಾನವ ಸಂಪನ್ಮೂಲ ಯೋಜನೆಯಲ್ಲಿ ಸಮತೂಕವನ್ನು ನಾವು ತರದಿದ್ದಲ್ಲಿ ಮತ್ತು ಇವತ್ತಿನ ಸಮಾಜದ ಸಮಸ್ಯೆಗಳಿಗೆ ಸ್ಪಂದಿಸುವ ಮಟ್ಟದಲ್ಲಿ ನಮ್ಮ ಯೋಜನೆಗಳು, ತರಬೇತಿಗಳು ಬರದಿದ್ದಲ್ಲಿ ನಮ್ಮ ಎಲ್ಲಾ ಶ್ರಮವೂ ವ್ಯರ್ಥವಾಗುವುದರಲ್ಲಿ ಸಂಶಯವಿಲ್ಲ. ಈ ಎಲ್ಲಾ ಹಂತಗಳಲ್ಲೂ ಯುವಕರನ್ನು ನಾವು ಸಹಭಾಗಿಗಳಾಗಿಸಿ ಅವರನ್ನು ಎಲ್ಲಾ ಕ್ಷೇತ್ರಗಳಲ್ಲೂ ಸದೃಢರನ್ನಾಗಿಸುವುದಲ್ಲದೆ ಅವರ ಉದ್ಯೋಗದ ಪರಿಧಿಯನ್ನು ವಿಸ್ತರಿಸಬೇಕಾಗಿದೆ.

ಭಾರತೀಯ ಸಾಮಾಜಿಕ ಪದ್ಧತಿಗಳು ಯುವಕರ ಮಾನಸಿಕ ಬೆಳವಣಿಗೆಯ ಮೇಲೆ ಸಾಕಷ್ಟು ಪ್ರಭಾವ ಬೀರಿವೆ. ಭಾರತೀಯ ತಂದೆ ತಾಯಿಯರು ತಮ್ಮ ಮಕ್ಕಳನ್ನು ಬಹಳ ಕಾಲ ಶಿಕ್ಷಣ ಮತ್ತು ತರಬೇತಿಯಲ್ಲಿಡಬಯಸುವುದರಿಂದ ಯುವಕರು ತಮ್ಮ ಯುವಾವಸ್ಥೆಯ ಆರಂಭದ ದಿನಗಳಲ್ಲಿ ಹೆಚ್ಚಾಗಿ ಹೆತ್ತವರನ್ನು ಅವಲಂಬಿಸಬೇಕಾಗಿರುತ್ತದೆ. ಇದರಿಂದಾಗಿ ಅವರು ಸ್ವಂತ ತೀರ್ಮಾನಗಳನ್ನು ತೆಗೆದುಕೊಳ್ಳಲು ಅಸಮರ್ಥರಾಗಿರುತ್ತಾರೆ. ಯುವಕರಿಗೆ ತಮ್ಮ ಭವಿಷ್ಯದ ಬಗ್ಗೆ ವಿಚಾರ ಮಾಡಲು ಹೆಚ್ಚು ಅವಕಾಶಗಳನ್ನು ಕೊಟ್ಟು ಅವರ ಗೊಂದಲವನ್ನು ಕಡಿಮೆ ಮಾಡಬೇಕಾಗಿದೆ. ಸಂಸಾರ ಮತ್ತು ಸಮಾಜದಲ್ಲಿ ಅರ್ಥಪೂರ್ಣ ಸಂಬಂಧಗಳನ್ನು ಹುಡುಕಲು ಅವಕಾಶ ನೀಡಿ, ಫಲಪ್ರದ ಉದ್ಯೋಗ ಪಡೆಯುವಂತೆ ಮಾಡಿ ಅವರ ಬುದ್ಧಿಗೆ, ಭಾವನೆಗೆ ಮತ್ತು ದೇಹಕ್ಕೆ ಸ್ವಂತ ಅಸ್ತಿತ್ವ ದೊರಕುವಂತೆ ಪರಿಸರವನ್ನು ವ್ಯವಸ್ಥೆಗೊಳಿಸಬೇಕಾಗಿದೆ. ಹಳೆ ಮೌಲ್ಯಗಳ ಜಾಗದಲ್ಲಿ ಹೊಸ ಮೌಲ್ಯಗಳು ಹುಟ್ಟಿಕೊಂಡಿದ್ದು ಅವುಗಳಿಗೆ ಯುವಕರು ಸ್ಪಂದಿಸಬೇಕಾಗಿದೆ. ಇಂದಿನ ಯುವಕರಲ್ಲಿ ಕಾಣುವ ಕ್ರೌರ್ಯಕ್ಕೆ, ಅಮಲು ಪದಾರ್ಥಗಳ ಸೇವನೆಗೆ, ಧೂಮಪಾನ ಮತ್ತು ಕುಡಿತದ ಹಾವಳಿಗೆ ಅವರ ಸಾಮಾಜಿಕ ಮೌಲ್ಯಗಳ ಗೊಂದಲವೇ ಕಾರಣ.

ಭಾರತೀಯ ಯುವತಿಯು ಎಚ್ಚೆತ್ತ ಸ್ತ್ರೀ. ತನ್ನ ಹಕ್ಕುಗಳಿಗಾಗಿ ಹೋರಾಡಿ ಪುರುಷರಿಗೆ ಸರಿಸಮಾನವಾಗಿ ಬಾಳಲು ಪ್ರಯತ್ನಿಸುವ ಛಲ ಇಂದು ಅವಳಲ್ಲಿರುವುದನ್ನು ನಾವು ಕಾಣಬಹುದು. ಮನೆಯ ಹೊಸ್ತಿಲು ದಾಟಿ ಹೊರಬಂದು ಎಲ್ಲಾ ಕ್ಷೇತ್ರಗಳಲ್ಲೂ ಪುರುಷರಿಗಿಂತ ಕಡಿಮೆ ಇಲ್ಲವೆಂದು ಸಾಬೀತುಪಡಿಸಿದ್ದಾರೆ. ಇಂದಿನ ಯುವತಿಯರ ಈ ಹೋರಾಟಕ್ಕೆ ಎಲ್ಲಾ ರೀತಿಯ ಪ್ರೋತ್ಸಾಹ ಅಗತ್ಯ. ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನ, ಅವಳು ಮಗಳಾಗಿ, ಹೆಂಡತಿಯಾಗಿ,ವಿದ್ಯಾರ್ಥಿಯಾಗಿ, ತಾಯಿಯಾಗಿ, ಉದ್ಯೋಗಸ್ಥೆಯಾಗಿ, ಮನೆಯ ಮುಖ್ಯಸ್ಥೆಯಾಗಿ ಸಮಾಜದ ಮತ್ತು ರಾಜಕೀಯ ಸ್ಥಾನಗಳಲ್ಲಿ ಜವಾಬ್ದಾರಿ ತೆಗೆದುಕೊಂಡು ಕಾರ್ಯವೆಸಗುವುದರ ಮೇಲೆ ಅವಲಂಬಿಸಿರುತ್ತದೆ. ಹಳೆಯ ಕಂದಾಚಾರಕ್ಕೆ ಬಲಿಬಿದ್ದ ಸಾಮಾಜಿಕ ವ್ಯವಸ್ಥೆಯ ಮಧ್ಯದಲ್ಲೂ ಭಾರತೀಯ ಯುವತಿ ಮುನ್ನಡೆ ಸಾಧಿಸಿದ್ದಾಳೆ. ಇದಕ್ಕಾಗಿ ಸರ್ಕಾರ ಹಲವಾರು ಯೋಜನೆಗಳನ್ನು ಹಾಕಿಕೊಂಡು ಯುವತಿಯರು ಸಕ್ರಿಯವಾಗಿ ಪಾಲ್ಗೊಳ್ಳುವಂತೆ ನೋಡಿಕೊಳ್ಳಲಾಗುತ್ತಿದೆ.

ಮಾನವ ಸಂಪನ್ಮೂಲ ಅಭಿವೃದ್ಧಿಯಲ್ಲಿ ಭಾರತೀಯ ಯುವಕನ ಆರೋಗ್ಯವನ್ನು ಮತ್ತು ಆರೋಗ್ಯಮಟ್ಟವನ್ನು ಸುಧಾರಿಸುವುದೂ ಒಂದು. ಪ್ರಾಥಮಿಕ ಆರೋಗ್ಯ ಸೇವೆಯಲ್ಲಿ ಮತ್ತು ಕುಟುಂಬ ಕಲ್ಯಾಣ ಯೋಜನೆಯಲ್ಲಿ ಯುವಜನರು ಸಕ್ರಿಯವಾಗಿ ಪಾಲ್ಗೊಳ್ಳುವಂತೆ ನೋಡಿಕೊಳ್ಳಲಾಗುತ್ತಿದೆ. '೨೦೦೦ನೆಯ ಇಸವಿಯಲ್ಲಿ ಎಲ್ಲರೂ ಆರೋಗ್ಯ' ಎನ್ನುವ ಸರ್ಕಾರದ ಆಕಾಂಕ್ಷೆಯಂತೆ ಎಲ್ಲರಿಗೂ ಸಾಮಾನ್ಯ ಆರೋಗ್ಯ ಸೇವೆ ಮತ್ತು ರಕ್ಷಣೆ ಮುಟ್ಟುವಂತ ನೋಡಿಕೊಳ್ಳಲು ೧೯೮೩ರಲ್ಲಿ ರಾಷ್ಟ್ರೀಯ ಆರೋಗ್ಯ ನೀತಿಯನ್ನು ಅಂಗೀಕರಿಸಲಾಗಿದೆ.

ಯುವಜನರ ಅಭಿವೃದ್ಧಿಗಾಗಿ ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಖಾತೆಯಲ್ಲಿ ಯುವಜನ ಚಟುವಟಿಕೆ ಮತ್ತು ಕ್ರೀಡಾ ಇಲಾಖೆ ಇದ್ದು, ಅದರಂತೆ ರಾಜ್ಯಗಳಲ್ಲಿ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಗಳು ಕಾರ್ಯನಿರ್ವಹಿಸುತ್ತವೆ. ಕೇಂದ್ರ ಸರ್ಕಾರ ಇತ್ತೀಚೆಗೆ ಸ್ವಯಂ ಆಡಳಿತ ವ್ಯವಸ್ಥೆಯ ನೆಹರು ಯುವ ಕೇಂದ್ರ ಸಂಘಟನೆಯನ್ನು ಸ್ಥಾಪಿಸಿದ್ದು, ಜಿಲ್ಲೆಗಳಲ್ಲಿರುವ ನೆಹರೂ ಯುವ ಕೇಂದ್ರಗಳು ಇದರ ಉಸ್ತುವಾರಿಯಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡು ಕಾರ್ಯವೆಸಗಿಕೊಂಡು ಬರುತ್ತಿವೆ. ಅದೇ ರೀತಿ ರಾಜ್ಯಗಳ ಯುವಜನ ಸೇವಾ ಇಲಾಖೆ ಕೂಡ ಯುವ ಜನರಿಗಾಗಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಜಾರಿಗೊಳಿಸಿವೆ. ಎನ್.ಸಿ.ಸಿ, ಎನ್.ಎಸ್.ಎಸ್. ಕೂಡ ವಿದ್ಯಾರ್ಥಿ-ಯುವಜನರಿಗಾಗಿ ಮೀಸಲಾಗಿದ್ದು, ಸ್ಕೌಟ್ ಮತ್ತು ಗೈಡ್ ಹಾಗೂ ಇನ್ನಿತರ ಯುವ ಸಂಘ ಸಂಸ್ಥೆಗಳು ಅನೇಕ ಉಪಯುಕ್ತ ಕಾರ್ಯಕ್ರಮಗಳನ್ನು ಮಾಡುತ್ತಿವೆ. ಉದ್ಯೋಗ ತರಬೇತಿಯ ರಾಷ್ಟ್ರೀಯ ಸಮಿತಿ (N.C.V.T.) ಮತ್ತು ಕೇಂದ್ರೀಯ ಸಮಿತಿ (C.A.C.) ಇವುಗಳು ಕುಶಲ ಕರ್ಮಿ ತರಬೇತಿ ಯೋಜನೆ, ಅಪ್ರೆಂಟೈಸ್ ತರಬೇತಿ ಯೋಜನೆ, ಮಹಿಳೆಯರ ತರಬೇತಿ ಯೋಜನೆ, ಕುಶಲಕರ್ಮಿ ತರಬೇತಿ ಯೋಜನೆ, ಬೋಧಕರ ತರಬೇತಿ ಇತ್ಯಾದಿ ಯೋಜನೆಗಳಡಿಯಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ಗ್ರಾಮೀಣ ಯುವಜನರಿಗಾಗಿ 'ಸ್ವಯಂ ಉದ್ಯೋಗಕ್ಕೆ ಗ್ರಾಮೀಣ ಯುವಜನರ ತರಬೇತಿ ಕಾರ್ಯಕ್ರಮ' (TRYSEM)ರೂಪಗೊಂಡಿದ್ದು ಇದರಡಿಯಲ್ಲಿ ಪ್ರತಿ ವರ್ಷ ಸುಮಾರು ೨ ಲಕ್ಷ ಯುವಜನರನ್ನು ಸ್ವಯಂ-ಉದ್ಯೋಗಕ್ಕೆ ಅಳವಡಿಸುವ ಪ್ರಯತ್ನ ಮಾಡಲಾಗಿದೆ. ಸಾಂಸ್ಕೃತಿಕ ಕ್ಷೇತ್ರದಲ್ಲೂ ಯುವಜನರಲ್ಲಿರುವ ಸುಪ್ತ ಕಲೆಗಳನ್ನು ಬಿಂಬಿಸಲು ಅವಕಾಶಗಳನ್ನು ನೀಡಿ ತರಬೇತಿಗೆ ಅನುಕೂಲತೆಗಳನ್ನು ಕಲ್ಪಿಸಲಾಗಿದೆ.

ಭಾರತೀಯ ಯುವ ಜನಾಂಗದ ಸರ್ವಾಂಗೀಣ ಅಭಿವೃದ್ಧಿಗಾಗಿ ಹೀಗೆ ಅನೇಕ ಕಾರ್ಯಕ್ರಮಗಳು ಹೊರಹೊಮ್ಮಿದ್ದು ಅದರ ಸದುಪಯೋಗ ಮಾಡಿಕೊಳ್ಳುವುದು ಯುವಜನರ ಕರ್ತವ್ಯವಾಗಿದೆ. 'ರಾಷ್ಟ್ರೀಯ ಯುವ ನೀತಿ' ಭಾರತೀಯ ಯುವಕನಿಗೆ ದಾರಿದೀಪ. ಯುವಜನರಿಗೆ ಸಿಗುವ ಅವಕಾಶಗಳಲ್ಲಿ ಹೆಚ್ಚು ಸಮಾನತೆ ನೀಡುವುದು, ಅವರ ಸುಪ್ತ ಪ್ರತಿಭೆಯನ್ನು ಹೊರಹಾಕುವುದು, ಕೆಲಸ ಮತ್ತು ಸೇವೆಯಲ್ಲಿ ಹೆಚ್ಚಿನ ಶಿಕ್ಷಣ ಮತ್ತು ಕುಶಲತೆ ವ್ಯಕ್ತಪಡಿಸುವಂತೆ ಮಾಡುವುದು, ಕೌಮಾರ್ಯಾವಸ್ಥೆಯಿಂದ ಯೌವನಾವಸ್ಥೆಯಾಗೆ ಸುಲಲಿತವಾಗಿ ಬದಲಾವಣೆ ಹೊಂದುವುದು, ಅವರಲ್ಲಿರುವ ಚೈತನ್ಯವನ್ನು ಸಂಸ್ಕೃತಿಯ ಆದರ್ಶವನ್ನು ಆರೋಗ್ಯಕರ ಬಯಕೆಗಳನ್ನು ಭಾರತೀಯ ಇತಿಹಾಸ ಮತ್ತು ಸಂಸ್ಕೃತಿಯ ತಳಹದಿಯಲ್ಲಿ ಭವ್ಯ ಮತ್ತು ಆಧುನಿಕ ಭಾರತದ ನಿರ್ಮಾಣದೆಡೆ ಹರಿಬಿಡುವುದು ಇವು ಇಂದಿನ 'ರಾಷ್ಟ್ರೀಯ ಯುವ ನೀತಿ'ಯ ಉದ್ದೇಶ.

## ಯುವಸಂಸ್ಥೆಗಳ ಗುರಿ :

ಭವ್ಯ ಭಾರತದ ತಳಪಾಯವನ್ನು ಯುವಜನಾಂಗ ಇಂದಿನ ಕಲುಷಿತ ವಾತಾವರಣದಲ್ಲಿ ಬಾಳುತ್ತಿರುವ ಯುವಜನರನ್ನು ಸೌಜನ್ಯ, ಶಾಂತಿ, ಶಿಸ್ತಿನತ್ತ ಕೊಂಡೊಯ್ದು ಧೀಮಂತ ವ್ಯಕ್ತಿಗಳನ್ನಾಗಿ ಬೆಳೆಸಬೇಕಾಗಿದೆ. ಸುಮಧುರ, ಸುಂದರ ವಾತಾವರಣ ಸೃಷ್ಟಿಸಿ ಯುವ ಶಕ್ತಿಯನ್ನು ಒಗ್ಗೂಡಿಸಿ, ಭಾವೈಕ್ಯತಾ ಮನೋಭಾವನೆಯ ಸಾಕಾರ ಮೂರ್ತಿಗಳಾಗಿ ಪರಿವರ್ತಿಸಬೇಕಾಗಿದೆ. ಯುವ ಜನರಲ್ಲಿ ಹುದುಗಿರುವ ಕಲಾವಂತಿಕೆ, ಕರ್ತೃತ್ವ ಶಕ್ತಿಯನ್ನು ಹೊರತರುವುದರ ಜೊತೆಗೆ ಸಹಬಾಳ್ವೆ,ಸಂಘಟನೆ, ಸೃಜನಶೀಲತೆಯನ್ನು ಬೆಳೆಸಬೇಕಾಗಿದೆ. ಕಲೆ ಮತ್ತು ಕ್ರೀಡಾ ಕ್ಷೇತ್ರದಲ್ಲಿ ತಮ್ಮ ಕೌಶಲ ತೋರಿಸುವುದರ ಜೊತೆಗೆ ಯುವಜನರು ಸಮಾಜದ ಜನರ ಕಷ್ಟ ಸುಖಗಳಿಗೆ ಸ್ಪಂದಿಸಿ ಸಮಾಜದ ಆಸ್ತಿ ಆಗಬೇಕು. ಅಂಧಕಾರದ ಕೂಪ ಮಂಡೂಕಗಳಂತೆ ಇದ್ದು, ತುಳಿತಕ್ಕೆ ಒಳಗಾಗಿರುವ ಸಮಾಜದ ಪ್ರತಿಯೊಬ್ಬರನ್ನು ಮೇಲೆತ್ತುವ ಸೌಜನ್ಯವನ್ನು ಯುವಜನ ತೋರಿಸಬೇಕು. ಜಟಿಲ ಸಮಸ್ಯೆಗಳತ್ತ ಗಮನಹರಿಸಿ, ಕ್ಷುದ್ರ ವಿಚಾರದೆಡೆ ಜ್ಞಾನದ ಬೆಳಕು

ಬೀರಬೇಕು. ಉದಾತ್ತ ಧೀರೋದಾತ್ತ ಭಾವನೆಗಳ, ವಿಚಾರಗಳ ಪ್ರತೀಕವಾಗಬೇಕು. ದಿವ್ಯ, ಭವ್ಯ, ವಿಶಾಲ ಮನೋಭಾವನೆಯಿಂದ ದೇಶಸೇವೆಗೆ ಯುವಕರು ಮುಂದಾಗಬೇಕು. ಇವು ಇಂದು ಯುವಸಂಸ್ಥೆಗಳು ಮಾಡಲೇಬೇಕಾದ ಕಾರ್ಯಗಳು.

ಇಂದಿನ ಯುವ ಜನಾಂಗದ ಸ್ಥಿತಿ ನೋಡಲು ಸರಳ, ಸುಂದರ. ಆದರೆ ಮನಸ್ಸಿನಾಳದಲ್ಲಿ ಕದಡಿದ ಅನುಭವ. ಸಂವೇದನಾ ಶೀಲ ಆದರೆ ಪರಕೀಯ ಭಾವನೆಗಳಿಂದ ಹುಟ್ಟಿದ ಕೃತಕತೆ. ಹಳೆಯದನ್ನೆಲ್ಲಾ ತೊರೆಯುವ ಉಲ್ಲಾಸ ಆದರೆ ಹೊಸದೇನೂ ಕಾಣದ ಅತಂತ್ರ ಸ್ಥಿತಿ. ಸ್ಪರ್ಧಾತ್ಮಕ ಬದುಕಿನ ಜೊತೆ ಸುಲಭವಾಗಿ ಕೈಗೂಡದ ಗೆಲುವು. ಆದರೆ ಮಧ್ಯದಲ್ಲಿ ಎಲ್ಲೋ ಕಳೆದುಹೋದ ಅನುಭವ. ಇಂತಹ ಸ್ಥಿತಿಯಲ್ಲಿ ಯುವ ಸಂಸ್ಕೃತಿಯಲ್ಲಾಗುವ ಯಾವುದೇ ರೀತಿಯ ಬೆಳವಣಿಗೆ ಅಸಕ್ತಿದಾಯಕ. ನಮ್ಮ ಶ್ರೇಣೀಕೃತ ಸಮಾಜ ವ್ಯವಸ್ಥೆಯಲ್ಲಿನ ನಿರೀಕ್ಷೆ ಮತ್ತು ಸಾಧನೆ ನಡುವಿನ ವಿರೋಧಾಭಾಸ ಯುವ ಜನಾಂಗದಲ್ಲಿ ಹತಾಶ ಮನೋಭಾವಕ್ಕೆ ಕಾರಣವಾಗಿದೆ. ಆದರ್ಶಗಳನ್ನು, ಭ್ರಮೆಗಳನ್ನು ಬಿಟ್ಟು ವಾಸ್ತವದ ತಳಹದಿಯ ಮೇಲೆ ತಮ್ಮ ಬದುಕನ್ನು ರೂಪಿಸಿಕೊಳ್ಳಬಯಸುವ ಇಂದಿನ ಯುವಜನಾಂಗಕ್ಕೆ ಮೌಲ್ಯಗಳಿಗಿಂತ ಬದುಕುವ ದಾರಿ ಕಂಡುಕೊಳ್ಳಬೇಕು. ಇದಕ್ಕೆ ಯುವ ಸಂಸ್ಥೆಗಳು ದಾರಿದೀಪ.

ಯುವಕರು ಸಮಾಜದ ಶಕ್ತಿಯುತ ಪಂಗಡವಾಗಿ ಹೊರಹೊಮ್ಮಿರುವುದು ಭಾರತದ ಇತ್ತೀಚಿನ ಬೆಳವಣಿಗೆಗಳಲ್ಲೊಂದು. ಸಾಹಿತ್ಯ, ಸಂಸ್ಕೃತಿ, ಕ್ರೀಡಾ,ವಿಜ್ಞಾನ, ತಾಂತ್ರಿಕ, ರಾಜಕೀಯ ಕ್ಷೇತ್ರಗಳಲ್ಲಿ ಅವರ ಪಾತ್ರ ಗಣನೀಯವಾದುದು. ಆದುದರಿಂದ ಯುವ ಶಕ್ತಿಯನ್ನು ಕ್ರೋಡೀಕರಿಸಿ ಸರಿಹಾದಿಯಲ್ಲಿ ಹರಿ ಬಿಡುವ ಪ್ರಯತ್ನ ಸತ್ವಯುತವಾಗಿ ಇಂದು ನಡೆಯಬೇಕಾಗಿದೆ. ಅದು ಸದಾ ಸುಂದರವಾಗಿ ಸುಲಲಿತವಾಗಿ ಸ್ವಚ್ಛಂದವಾಗಿ ಹರಿಯುವ ತೊರೆಯಿದ್ದಂತೆ. ಹಾಗೆಯೇ ಹರಿಯಲು ಬಿಟ್ಟರೆ ತಗ್ಗನ್ನು ಹುಡುಕಿಕೊಂಡು ಕಲ್ಲುಬಂಡೆಗಳ ಮಧ್ಯ ನುಸುಳಿಕೊಂಡು ತನ್ನ ಶಕ್ತಿಯ ಅರಿವಿಲ್ಲದೇ ಸರಾಗವಾಗಿ ಸಾಗರ ಸೇರುತ್ತದೆ. ಅದನ್ನು ವಿವೇಚನೆಯ ಅಣೆಕಟ್ಟಿನಲ್ಲಿ ತಡೆಹಿಡಿದಲ್ಲಿ ಉತ್ಸಾಹ, ವಿಚಾರಗಳ ವಿದ್ಯುತ್ ಪಡೆಯಬಹುದು. ಸೇವೆ, ಸಾಹಸಗಳ ಕಾಲುವೆಯಲ್ಲಿ ಹರಿಸಿ ಉತ್ತಮ ಬೆಳೆ ಪಡೆಯಬಹುದು. ಈ ದಿಸೆಯಲ್ಲಿ ಯುವ ಸಂಸ್ಥೆಗಳು ಒಂದು ಸಾಧನ. ನಮ್ಮ ರಾಷ್ಟ್ರೀಯ ಯುವಲಾಂಛನ ಯುವಜನರ ಅದಮ್ಯ ಶಕ್ತಿ, ಉತ್ಕೃಷ್ಟತೆ, ಚಾರಿತ್ರ್ಯ, ಇಚ್ಛಾಶಕ್ತಿ, ಸವಾಲನ್ನು ಎದುರಿಸುವ ಒಗ್ಗಟ್ಟಿನಿಂದ ಹೆಣ್ಣು ಗಂಡು ಎಂಬ ಭೇದವಿಲ್ಲದೆ ಕೆಲಸ ಮಾಡುವ ಪ್ರವೃತ್ತಿಯನ್ನು ವ್ಯಕ್ತಪಡಿಸುತ್ತದೆ. ಅದರಲ್ಲಿರುವ ಪಾರಿವಾಳ ಶಾಂತಿಯ ಸಂಕೇತವಾದರೆ, ವೃತ್ತವು ವಿಶ್ವ ವೈಶಾಲ್ಯತೆ ಪರಿಪೂರ್ಣ ಬದುಕನ್ನು ಅಡ್ಡಗೆರೆ ಚಾಲನಾ ಶಕ್ತಿಯನ್ನು ಪ್ರತಿನಿಧಿಸುತ್ತವೆ. ಎಚ್ಚೆತ್ತ ಯುವಕ ಹೊಸ ಕ್ಷಿತಿಜದತ್ತ ಹೆಜ್ಜೆ ಹಾಕಿ ಸಮಸ್ಯೆಗಳನ್ನು ಸವಾಲಾಗಿ ಸ್ವೀಕರಿಸಿ ಧೀಮಂತ ಯೋಧನಂತೆ ಸಾಂಸ್ಕೃತಿಕ ಮತ್ತು ಆರ್ಥಿಕ ಬದಲಾವಣೆಗೆ ಬುನಾದಿಯಾಗುತ್ತದೆ. ಇದಕ್ಕಾಗಿ ಯುವ ಚಟುವಟಿಕೆಗಳಿಗೆ ಒಂದು ತಾಣ ಅಗತ್ಯ. ಆ ತಾಣವೇ ಯುವ ಸಂಸ್ಥೆ.

ವ್ಯಕ್ತಿತ್ವ ವಿಕಸನ ಯುವಸಂಸ್ಥೆಗಳು ಮಾಡಬೇಕಾದ ಒಂದು ಮುಖ್ಯ ಕಾರ್ಯ-ಯುವ ಜನರಲ್ಲಿರುವ ಪ್ರಭೆಯನ್ನು ಬೆಳೆಸಿ ಕ್ರೋಡೀಕರಿಸಿ, ಸಂಯೋಜಿಸಿ,ಉಪಯುಕ್ತಗೊಳಿಸಬೇಕಾಗಿದೆ. ಯುವ ಸಮಸ್ಯೆಗಳತ್ತ ಗಮನಹರಿಸಿ ಅವಕ್ಕೆ ಪರಿಹಾರ ಕಂಡುಕೊಳ್ಳಬೇಕು. ವ್ಯಕ್ತಿತ್ವ ವಿಕಸನ ಕೌಮಾರ್ಯದಿಂದ ಯೌವನಕ್ಕೆ ಹೆಜ್ಜೆ ಇಡುವಾಗ ಆಗುವ ದೈಹಿಕ, ಮಾನಸಿಕ ಬದಲಾವಣೆ ಬಗ್ಗೆ ಅರಿವು ಮೂಡಿಸುವುದು; ಬದುಕನ್ನು ತೂಗಿಸಿಕೊಂಡು ಹೋಗಬಲ್ಲ ನೌಕರರಿಗೆ ಅವಕಾಶ ಕಲ್ಪಿಸಿಕೊಡುವುದ;, ಸಾಹಸ ಪ್ರವೃತಿಗೆ ಇಂಬು ನೀಡುವುದು; ಸಮಾಜ ಸೇವೆಯಲ್ಲಿ ತೊಡಗಿಸುವುದು ಹಾಗೂ ಸಾಂಸ್ಕೃತಿಕ ಮೌಲ್ಯಗಳನ್ನು ಎತ್ತಿಹಿಡಿದು ಭೂತಕ್ಕೂ ಭವಿಷ್ಯತ್ತಿಗೂ ಸೇತುವೆಯಾಗಲು ಸಹಕರಿಸುವುದು ಮತ್ತು ಅವರಲ್ಲಿ ವೈಜ್ಞಾನಿಕ ಮನೋಭಾವನೆಯನ್ನು ಬೆಳೆಸುವುದು-ಇವು ಒಂದು ಯುವ ಸಂಸ್ಥೆ ಮಾಡಬೇಕಾದ ಮುಖ್ಯ ಕಾರ್ಯಗಳು. ದೇಶದ ಆಸ್ತಿಯಾದ ಯುವ ಜನಾಂಗವನ್ನು ಪೋಷಿಸಿ, ಉತ್ತಮ ನಾಗರಿಕರನ್ನಾಗಿಸುವಲ್ಲಿ ಅವರ ವ್ಯತ್ತಿತ್ವವನ್ನು ರೂಪಿಸಿ ದೇಶದ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸುವಂತೆ ಮಾಡಬೇಕಾಗಿದೆ. ಅವರ ಕಾರ್ಯ ವೈಖರಿಯನ್ನು ಅಭಿವೃದ್ಧಿಗೊಳಿಸಿ ಸಾಮಾಜಿಕವಾಗಿ ಉಪಯುಕ್ತರನ್ನಾಗಿ ಮಾಡಿ ಆರ್ಥಿಕವಾಗಿ ಉತ್ಪಾದಕರನ್ನಾಗಿ ಮಾಡಬೇಕಾದುದು ಯುವ ಸಂಸ್ಥೆಗಳ ಆದ್ಯ ಕರ್ತವ್ಯ. ಈ ದಿಸೆಯಲ್ಲಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಯೋಜಿಸಬಹುದಾಗಿದೆ.

೧) ಸ್ವಯಂ ಉದ್ಯೋಗ ಯೋಜನೆಯ ಮೂಲಕ ವ್ಯಕ್ತಿಯ ಆರ್ಥಿಕ ಸ್ಥಿತಿ ಉತ್ತಮಗೊಳಿಸುವುದು.

೨) ಸಮಾಜಸೇವೆಯ ಮೂಲಕ ವ್ಯಕ್ತಿಯ ಸದಾ ಪುಟಿದೇಳುವ ಉತ್ಸಾಹ ಚಿಲುಮೆಗೆ ಇಂಬು ನೀಡುವುದು.

೩) ಭಾರತೀಯ ಸಂಸ್ಕೃತಿ ಹಾಗೂ ಸಂಪ್ರದಾಯ ಮೂಲ ಐಕ್ಯತೆ, ಬಾಹ್ಯ ವೈವಿಧ್ಯತೆ ಹಾಗೂ ಅದರ ಸಿರಿವಂತಿಕೆ, ಶ್ರೇಷ್ಠತೆ ಮತ್ತು ಸೌಂದರ್ಯದತ್ತ ಅರಿವು ಮೂಡಿಸಿ ಅದನ್ನು ಉಳಿಸಿ ಬೆಳಸಲು ಜನಜಾಗೃತಿ ಮೂಡಿಸುವುದು.

೪) ಔದ್ಯೋಗಿಕ ಅವಕಾಶ ಸಿಗುವ ಅರ್ಥವತ್ತಾದ ಶಿಕ್ಷಣ ನೀಡುವುದು.

೫) ಹೊಸ ತಾಂತ್ರಿಕ ಜ್ಞಾನವನ್ನು ಎಲ್ಲಾ ಕ್ಷೇತ್ರದಲ್ಲಿ ಅದರಲ್ಲೂ ಮುಖ್ಯವಾಗಿ ಕೃಷಿ ಕ್ಷೇತ್ರದಲ್ಲಿ ಪಡೆಯಲು ಸಹಕರಿಸುವುದು.

೬) ಯುವತಿಯರಿಗೆ ಸಮಾನ ಅವಕಾಶ, ಶಿಕ್ಷಣ, ವೇತನ, ಸ್ಥಾನಮಾನ ನೀಡಿ, ಸಾಮಾಜಿಕವಾಗಿ ಮೇಲೆತ್ತುವುದು.

೭) ದೈಹಿಕ, ಮಾನಸಿಕ, ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳನ್ನು ಎದುರಿಸಲು ಬೇಕಾದ ಮನೋದಾರ್ಢ್ಯ ಬೆಳೆಸಲು ಶಿಕ್ಷಣ ನೀಡುವುದು.

೮) ಸಮಾಜ ಮತ್ತು ದೇಶದ ಬಗ್ಗೆ ಚಿಂತನೆ ಮಾಡುವ ಹಾಗೂ ಕರ್ತವ್ಯ, ಜವಾಬ್ದಾರಿಗಳ ಅರಿವಿರುವ ಉತ್ತಮ ನಾಗರಿಕರನ್ನು ರೂಪಿಸುವುದು.

೯) ಕುಟುಂಬ ಕಲ್ಯಾಣ, ಪರಿಸರ ಜಾಗೃತಿ, ವನಮಹೋತ್ಸವ, ಸಣ್ಣ ಉಳಿತಾಯ, ವಯಸ್ಕರ ಶಿಕ್ಷಣ ಮುಂತಾದ ಜನಹಿತ ಕಾರ್ಯಗಳಲ್ಲಿ ಕಾರ್ಯವೆಸಗುವುದು.

೧೦) ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸಂಯೋಜಿಸುವುದು ಮತ್ತು ತರಬೇತಿ ನೀಡುವುದರ ಮೂಲಕ ಯುವಪ್ರತಿಭೆಯನ್ನು ಬೆಳೆಸುವುದು ಹಾಗೂ ಪ್ರವಾಸ ಕಾರ್ಯಕ್ರಮ ಏರ್ಪಡಿಸುವುದು.

೧೧) ಕ್ರೀಡಾಕೂಟಗಳನ್ನು ಸಂಯೋಜಿಸುವುದರ ಜೊತೆಗೆ ಕ್ರೀಡಾ, ಯೋಗ, ಕುಸ್ತಿ ಮುಂತಾದ ತರಬೇತಿ ವ್ಯವಸ್ಥೆ ಮಾಡಿ ಸಾಹಸ ಯಾತ್ರೆ ಏರ್ಪಡಿಸಿ ಯುವಕರನ್ನು ದೈಹಿಕವಾಗಿ ಸದೃಢರನ್ನಾಗಿಸುವುದು.

೧೨) ಶ್ರಮದಾನ ಶಿಬಿರಗಳನ್ನು ನಡೆಸುವುದು ಹಾಗೂ ಪರಿಸರ ಸ್ವಚ್ಛತೆಗೆ ಸಹಕರಿಸುವುದು.

೧೩) ಯುವಜನ ಶಿಬಿರ, ಮೇಳ, ಮುಂದಾಳತ್ವ ತರಬೇತಿ, ವಸ್ತು ಪ್ರದರ್ಶನ, ವಿಚಾರಗೋಷ್ಠಿಗಳನ್ನು ಸಂಯೋಜಿಸುವುದು. ವರದಕ್ಷಿಣೆ, ಲಂಚಗುಳಿತನ, ಜಾತಿ ಪದ್ಧತಿ ಮುಂತಾದ ಸಾಮಾಜಿಕ ಪಿಡುಗುಗಳನ್ನು ನಿರ್ಮೂಲನ ಮಾಡುವುದಕ್ಕೆ ಸಹಕರಿಸುವುದು.

೧೪) ಉತ್ತಮ ವ್ಯವಸಾಯ ಪದ್ಧತಿ ಮತ್ತು ತೋಟಗಾರಿಕೆ, ಪಶು ಸಂಗೋಪನೆ, ಮೀನುಗಾರಿಕೆ ಮುಂತಾದುವುಗಳ ಬಗ್ಗೆ ತಿಳುವಳಿಕೆ ಕೊಡುವುದು.

೧೫) ಯುವತಿಯರಿಗೆ ಗೃಹ ಸುಧಾರಣೆ, ಗೃಹ ಜೋಡಣೆ, ಗೃಹಾಡಳಿತ, ಗೃಹಕೃತ್ಯ, ಕೈತೋಟ, ಹೊಲಿಗೆ, ಕಸೂತಿ, ಗುಡಿ ಕೈಗಾರಿಕೆಗಳು, ತಿಂಡಿ ತಿನಿಸುಗಳ ತಯಾರಿ ಮುಂತಾದ ಉಪಯುಕ್ತ ಕಾರ್ಯಕ್ರಮಗಳಿಗೆ ತರಬೇತಿ ನೀಡುವುದು.

೧೬) ಕೇಂದ್ರ, ರಾಜ್ಯ, ಜಿಲ್ಲಾ ಪರಿಷತ್ ಹಾಗೂ ಮಂಡಲ ಪಂಚಾಯತಿಯಿಂದ ದೊರಕುವ ಅನುದಾನ ಪಡೆದು ಗ್ರಾಮಾಭ್ಯುದಯಕ್ಕೆ ಶ್ರಮಿಸುವುದು.

ಮೇಲ್ಕಂಡ ಕಾರ್ಯಕ್ರಮಗಳು ಯುವಜನರ ವ್ಯಕ್ತಿತ್ವ ವಿಕಸನದ ಜೊತೆಗೆ ಸಮಾಜಜೀವಿಯನ್ನಾಗಿಸುವಲ್ಲಿ ಸಹಕರಿಸುವುವು. ಇವು ವ್ಯವಸ್ಥಿತವಾಗಿ ಕಾರ್ಯರೂಪಕ್ಕೆ ಬಂದಲ್ಲಿ ಯುವ ಜನಾಂಗಕ್ಕೆ ಹೊಸ ಚಾಲನೆ ನೀಡಿದಂತಾಗುವುದು. ಇವು ಇವರ ವ್ಯಕ್ತಿತ್ವವನ್ನು ದೈಹಿಕ, ಬೌದ್ಧಿಕ ಹಾಗೂ ಮಾನಸಿಕವಾಗಿ ಬೆಳೆಸುವುದರ ಜೊತೆಗೆ ನೈತಿಕ, ವೈಜ್ಞಾನಿಕ, ಆಧ್ಯಾತ್ಮಿಕ ಹಾಗೂ ಪ್ರಜಾಪ್ರಭುತ್ವ ಮೌಲ್ಯಗಳನ್ನು ಅಳವಡಿಸಿಕೊಂಡು ಸಾಮಾಜಿಕ, ತಾಂತ್ರಿಕ, ಅರ್ಥಿಕ ಹಾಗೂ ಸಾಂಸ್ಕೃತಿಕ ಪರಿಸರವನ್ನು ಸೃಷ್ಟಿಸಿ ಅವರನ್ನು ಆರೋಗ್ಯಕರವಾದ ವಾತಾವರಣದಲ್ಲಿ ನವಸಮಾಜದ ಸೃಷ್ಟಿಕರ್ತನನ್ನಾಗಿಸಿ ದೇಶದ ಗೌರವ, ಐಕ್ಯತೆ ಮತ್ತು ಬೆಳವಣಿಗೆಗೆ ಸಹಕಾರಿಗಳನ್ನಾಗಿ ಮಾಡಿ ಅಂತರರಾಷ್ಟ್ರೀಯ ತಿಳಿವಳಿಕೆ ಮೂಡಿಸಿ, ಉತ್ತಮ ಹವ್ಯಾಸಗಳು, ಸದಭಿರುಚಿಯ ಕ್ರೀಡೆ, ಕಲೆ, ಸಂಸ್ಕೃತಿಗಳನ್ನು ತಮ್ಮದನ್ನಾಗಿಸಲು ಸಹಕಾರಿಯಾಗುತ್ತವೆ.

ಮಾನವ ಜೀವಿತದಲ್ಲಿ ಯೌವನವು ಒಂದು ಪರಮಾದ್ಭುತ ಸ್ಥಿತಿ. ಇದರಲ್ಲಿ ಶಕ್ತಿ, ಬಲ, ಉತ್ಸಾಹ, ಭರವಸೆ, ರಭಸ, ಸಾಹಸ, ತೇಜಸ್ಸು, ಓಜಸ್ಸು, ಹುಮ್ಮಸ್ಸು, ಧೀಶಕ್ತಿ, ಕ್ರತುಶಕ್ತಿ, ಭಾವನಾ ಶಕ್ತಿ, ಕಲ್ಪನಾ ಶಕ್ತಿ-ಎಲ್ಲವೂ ಇದೆ ಆದರೆ ಒಂದನ್ನುಳಿದು-ಅದೇ ವಿವೇಕ. ಆದುದರಿಂದ ಯೌವನದ ಪವಾಡ ಶಕ್ತಿಯು ಸಾರ್ಥಕವಾಗಬೇಕಾದರೆ ವಿವೇಕ ಶಕ್ತಿಯು ಅದರೊಂದಿಗೆ ಸಮ್ಮಿಳಿತಗೊಳ್ಳಬೇಕು. ಭವ್ಯ ಭಾರತದ ಹಿರಿಮೆ-ಗರಿಮೆ ಸಾಧಿಸುವುದರ ರಹಸ್ಯವಿರುವುದು ಸಂಘಟನೆಯಲ್ಲಿ, ಶಕ್ತಿ ಸಂಚಯದಲ್ಲಿ, ಇಚ್ಛಾಶಕ್ತಿಯ ಹೊಂದಾಣಿಕೆಯಲ್ಲಿ. ಶಿಕ್ಷಣವೆಂದರೆ ಮಾಹಿತಿಗಳ ಸಂಗ್ರಹವಲ್ಲ. ಅದು ಶೀಲ ಮತ್ತು ವ್ಯಕ್ತಿತ್ವ ನಿರ್ಮಾಣದ ಚೈತನ್ಯದಾಯಕ ಸಾಹಸ. ಒಬ್ಬ ಮಹಾಪುರುಷರು ಹೇಳಿದ್ದಾರೆ: "Education is not for agitation, education is not only giving information. Education is transformation of the heart, head and hands. A heart full of love and compassion . A head of noble ideals. The hands which are ready to serve the society and arrange the pain." ಇಂತಹ ಶಿಕ್ಷಣ ಪಡೆಯುವಲ್ಲಿ ಶ್ರಮಿಸುವ ಸದುದ್ದೇಶ ಹೊಂದಿದ ಯುವಸಂಸ್ಥೆಗಳಲ್ಲಿ ವ್ಯಕ್ತಿ ಹೆಚ್ಚು ದಕ್ಷ, ಆಲೋಚನಾಶೀಲನಾಗುತ್ತಾನೆ. ಸಂಘ ಮತ್ತು ಸಂಘಟನೆ ವ್ಯಕ್ತಿತ್ವ ವಿಕಸನಕ್ಕೆ ನಾಂದಿಯಾಗುತ್ತದೆ. ವಿಕಾಸ ಹೊಂದುವುದು ತುಂಬಾ ಸಾವಕಾಶ. ಸಂಘದಲ್ಲಿ ನಿರಂತರ ದೊರಕುವ ಪ್ರೇರಣೆ, ಪ್ರಚೋದನೆ, ಸೂಚನೆ ಹಾಗೂ ಅಲ್ಲಿ ನಡೆಯುವ ಪರಸ್ಪರ ವಿಚಾರ ವಿನಿಮಯ, ಪರಸ್ಪರ ಭಾವೋತ್ಕರ್ಷ ಹಾಗೂ ರಚನಾತ್ಮಕ ಚಟುವಟಿಕೆಗಳ ಮೂಲಕ ನಡೆಯುವ ವ್ಯಕ್ತಿ ವಿಕಾಸ ಹೆಚ್ಚು ಶೀಘ್ರ ಮತ್ತು ಹೆಚ್ಚು ಪರಿಣಾಮಕಾರಿ. ಸರ್ವತೋಮುಖ ಪರಿಪೂರ್ಣ ವ್ಯಕ್ತಿತ್ವದಲ್ಲಿ ದೈಹಿಕ ಶಕ್ತಿ, ಬೌದ್ಧಿಕ ಶಕ್ತಿ, ನೈತಿಕ ಶಕ್ತಿ ಹಾಗೂ ಆಧ್ಯಾತ್ಮಿಕ ಶಕ್ತಿ ಪ್ರಮುಖವಾದವು. 'ಆತ್ಮನೋ ಮೋಕ್ಷಾರ್ಥಂ ಜಗತೇ ಹಿತಾಯಚ' ಎಂಬ ಮಾತಿನಂತೆ ನಮ್ಮ ಸ್ವಂತ ಮುಕ್ತಿಯ ಗುರಿಯ ಜೊತೆಗೆ ಜಗತ್ತಿನ ಹಿತಕ್ಕೂ ನಾವು ಶ್ರಮಿಸಬೇಕು. 'ನ ಕರ್ಮನಾ ನಪ್ರಜಯಾಧನೇನ ತ್ಯಾಗೇ ನೈಕ ಅಮೃತತ್ವ ಮಾನುಷ್ಯ' ಅಂದರೆ ಮನುಷ್ಯನಿಗೆ ಅಮರತ್ವವು ಕರ್ಮದಿಂದ ಬರುವುದಿಲ್ಲ, ಪ್ರಜಾಭಿವೃದ್ಧಿಯಿಂದ ಬರುವುದಿಲ್ಲ. ಕೇವಲ ತ್ಯಾಗದಿಂದ ಸೇವೆಯಿಂದ ಮಾತ್ರ ಬರುತ್ತದೆ ಎಂದರ್ಥ. ಸೇವೆಗೆ ಮನಶುದ್ಧಿ-ಹಾಗೂ ಚಿತ್ತ ಶುದ್ಧಿ ಇರಬೇಕು. ನಿಸ್ವಾರ್ಥತೆ ಹಾಗೂ ನಿಷ್ಕಾಮ ಭಾವ ಬೆಳೆಸಿಕೊಳ್ಳಬೇಕು. Unity ಯಿಂದ Divinity ಬೆಳೆಯುತ್ತದೆ, Culture ನಿಂದ Character ಹುಟ್ಟುತ್ತದೆ.

ಈ ಎಲ್ಲದರ ಹಿನ್ನೆಲೆಯಲ್ಲಿ ನಾವು ವಿಚಾರ ಮಾಡಿದಾಗ ಯುವ ಸಂಸ್ಥೆಗಳು ವ್ಯಕ್ತಿತ್ವ ವಿಕಸನಕ್ಕೆ ಹಾಗೂ ಸಾಮಾಜಿಕ ಚಟುವಟಿಕೆಗಳಿಗೆ ಹೇಗೆ ಒಂದಕ್ಕೊಂದು ಪೂರಕವಾಗಿವೆ ಎಂದು ಅರ್ಥವಾಗುತ್ತದೆ. ವ್ಯಕ್ತಿತ್ವ ವಿಕಸನವಾಗದೇ ಸಮಾಜಸೇವೆ ಸಾಧ್ಯವಿಲ್ಲ. ಸಮಾಜಸೇವೆಗೆ ಇಳಿಯದೇ ವ್ಯಕ್ತಿತ್ವ ವಿಕಸನವಾಗುವುದಿಲ್ಲ. ಈ ಮಹಾಕಾರ್ಯಕ್ಕೆ ಗರಡಿಮನೆ ನಮ್ಮ ಯುವಸಂಸ್ಥೆಗಳು. "ಸಂಘೇ ಶಕ್ತಿ ಕಲಿಯುಗೇ" ಅಂದಂತೆ, ಕಲಿಯುಗದಲ್ಲಿ ಸಂಘಗಳು ಶಕ್ತಿಯ ಮೂಲ ಆವಾಸಸ್ಥಾನ. ಪ್ರಸ್ತುತ ನಮಲ್ಲಿರುವ ಯುವಸಂಸ್ಥೆಗಳು ಯಾವುದೋ ಒಂದು ಕಾರಣಕ್ಕಾಗಿ ಹುಟ್ಟಿಕೊಂಡು ದುರ್ಬಲವಾಗಿ ಬೆಳೆದಿರುವುದು ನಮಗೆ ಕಂಡುಬರುತ್ತಿದೆ. ಅಧಿಕಾರ ವಿಕೇಂದ್ರೀಕರಣದ ಹಾದಿಯಲ್ಲಿ ಮಂಡಲ ಪಂಚಾಯಿತ್ತಿಯ ನಂತರದ ಸತ್ವಪೂರ್ಣ ಘಟಕ ಯುವ ಸಂಸ್ಥೆಗಳು. ಇವು ಸದೃಢವಾಗಿ ಬೆಳೆದು ಬೇರುಬಿಟ್ಟಲ್ಲಿ ಮಾತ್ರ ಯುವಜನಾಂಗಕ್ಕೆ ಬೆಳಕು ನೀಡಲು ಸಮರ್ಥವಾಗಬಲ್ಲದು. ಗಾಂಧೀಜಿಯ ಗ್ರಾಮರಾಜ್ಯದ ಕನಸು ನನಸಾಗಬಲ್ಲದು.

●




# ಸ್ಥಳೀಯ ಸಂಸ್ಥೆಗಳ ಆಡಳಿತದಲ್ಲಿ ಮಹಿಳೆಯರು

ಮೋಟಮ್ಮ

ಸ್ವತಂತ್ರ ಭಾರತದಲ್ಲಿ ಪಂಚಾಯತ್‌ರಾಜ್ ವ್ಯವಸ್ಥೆಯು ಒಂದು ಪ್ರಮುಖ ರಾಜಕೀಯ ಆವಿಷ್ಕಾರವೆನ್ನಬಹುದು. ಇದು ದೇಶದ ಅಭಿವೃದ್ಧಿಯ ಹಂತದಲ್ಲಿ ಜನರ ಭಾಗವಹಿಸುವಿಕೆಗೆ ಮುಖ್ಯ ವಾಹಿನಿ ಎಂದರೆ ತಪ್ಪಾಗಲಾರದು. ಇಂತಹ ಆವಿಷ್ಕಾರಗಳ ಮೂಲ ಉದ್ದೇಶ ಜನರ ಜೀವನಮಟ್ಟ ಸುಧಾರಿಸುವುದೇ ಆಗಿದೆ. ಆದರೆ ಉದ್ದೇಶ ಈಡೇರದಿದ್ದಲ್ಲಿ ಅನುಷ್ಠಾನಕ್ಕೆ ಅರ್ಥವೇ ಉಳಿಯುವುದಿಲ್ಲ. ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಕೆಳಹಂತದಿಂದಲೂ ಜನರ ಭಾಗವಹಿಸುವಿಕೆಯ ಪ್ರಾಧ್ಯಾನ್ಯತೆ ಇದೆ. ಯಾವುದೇ ಸಮಸ್ಯೆಯಾಗಲೀ ಅದನ್ನು ಗುರುತಿಸಿ, ಅಧ್ಯಯನ ಮಾಡಿ ಪರಿಹಾರಕ್ಕೆ ಕಾರ್ಯತಂತ್ರ ರೂಪಿಸಿ, ಅನುಷ್ಠಾನಗೊಳಿಸಿ, ಅದರ ಮೌಲ್ಯ ಮಾಪನ ಮಾಡುವುದೇ ಈ ಭಾಗವಹಿಸುವಿಕೆಯ ಮುಖ್ಯತಂತ್ರ. ಆದರೆ, ಈ ಭಾಗವಹಿಸುವಿಕೆದಾರರಿಗೆ ಈ ವ್ಯವಸ್ಥೆಯ ಮೂಲತತ್ವ ಹಾಗೂ ಅದರ ಪ್ರಾಮುಖ್ಯತೆ ಬಗ್ಗೆ ಅರಿವಿರದಿದ್ದರೆ, ಆತ / ಆಕೆ ಉತ್ತಮವಾಗಿ ಕೆಲಸ ಮಾಡಲು ಸಾಧ್ಯವಿಲ್ಲ.

**ಸ್ಥಳೀಯ ಮಟ್ಟದಲ್ಲಿ ಅಧಿಕ ಸಂಖ್ಯೆಯಲ್ಲಿ ಮಹಿಳೆಯರು ಸಮರ್ಪಕವಾಗಿ ಆಡಳಿತದಲ್ಲಿ ಭಾಗವಹಿಸಿದರೆ ಮಾತ್ರ ರಾಷ್ಟ್ರ ಮತ್ತು ರಾಜ್ಯಮಟ್ಟದಲ್ಲಿ ಅವರ ಪ್ರಾತಿನಿಧ್ಯ ಹೆಚ್ಚಾಗುತ್ತದೆ. ತಮಗೆ ದೊರೆತ ಮೀಸಲಾತಿಯನ್ನು ಹೊರತುಪಡಿಸಿ ಅವರು ಕ್ರಿಯಾಶೀಲರಾಗಬೇಕು.**

ದೇಶದ ಜನಸಂಖ್ಯೆಯಲ್ಲಿ ಸರಿಸುಮಾರು ಅರ್ಧದಷ್ಟಿರುವ ಮಹಿಳೆಯರನ್ನು ಅವರ ಪ್ರತಿಭೆ ಹಾಗೂ ಕೊಡುಗೆಯನ್ನು ಕಡೆಗಣಿಸಿ, ಪಕ್ಕಕ್ಕೆ ಸರಿಸಿ ಬಿಟ್ಟರೆ ಭಾರತ ಮುನ್ನಡೆಯಲಾರದು. ಅವರನ್ನು ಬಿಟ್ಟು ಕೈಗೊಳ್ಳುವ ಯಾವುದೇ ಯೋಜನೆಯು ಪೂರ್ಣಫಲ ನೀಡುವುದಿಲ್ಲ. ಎಲ್ಲಾ ಕಾರ್ಯಗಳಲ್ಲೂ ಕೈಜೋಡಿಸಬೇಕಾದ ಮಹಿಳೆಯರನ್ನು ನಿರ್ಧಾರ ಮಟ್ಟದಲ್ಲಿ ಸೇರಿಸಿಕೊಳ್ಳುವುದು ಮತ್ತು ಸಮಾನ ಅವಕಾಶಗಳನ್ನು ಕಲ್ಪಿಸುವುದು ಈಗ ಅತ್ಯಂತ ತ್ವರಿತವಾಗಿ ಆಗಬೇಕಾಗಿದ್ದು ಸರ್ಕಾರ ಈ ನಿಟ್ಟಿನಲ್ಲಿ ಕ್ರಮಕೈಗೊಂಡಿದೆ. ೭೩ನೇ ಸಂವಿಧಾನದ ತಿದ್ದುಪಡಿಯನ್ನು ಅನುಷ್ಠಾನಗೊಳಿಸುವ ಮೂಲಕ ಮೂರು ಹಂತಗಳ ಸ್ಥಳೀಯ ಸರ್ಕಾರವನ್ನು ಜಾರಿಗೆ ತರಲಾಗಿದ್ದು, ಈ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಮೀಸಲಾತಿ ಮುಖಾಂತರ ೧/೩ ಸ್ಥಾನಗಳನ್ನು ಮೀಸಲಿಡಲಾಗಿದೆ ಹಾಗೂ ಅಧ್ಯಕ್ಷ ಹಾಗೂ ಉಪಾಧ್ಯಕ್ಷ ಸ್ಥಾನಗಳಿಗೂ ಸಹ ಈ ಮೀಸಲಾತಿ ಮುಂದುವರೆದಿದೆ. ಈ ವ್ಯವಸ್ಥೆಯಲ್ಲಿ ಪರಿಶಿಷ್ಟ ಜಾತಿ/ವರ್ಗ ಹಾಗೂ ಹಿಂದುಳಿದ ಮಹಿಳೆಯರು ಸಹ ಸೇರಿರುತ್ತಾರೆ. ಈ ಮಹಿಳೆಯರು ವಿವಿಧ ಸಾಮಾಜಿಕ ಗುಂಪುಗಳನ್ನು ಪ್ರತಿನಿಧಿಸುವುದರಿಂದ, ಎಲ್ಲಾ ವರ್ಗದ ಮಹಿಳೆಯರ ಸಮಸ್ಯೆಯನ್ನು ಪರಿಹರಿಸಲು ಈ ವ್ಯವಸ್ಥೆಯಿಂದ

ಸಾಧ್ಯ ಎಂದು ಮನಗಾಣಬಹುದಾಗಿದೆ. ಇತ್ತೀಚಿನ ಚುನಾವಣೆಯ ಅಂಕಿಅಂಶಗಳಂತೆ ಕರ್ನಾಟಕದಲ್ಲಿ ಮೀಸಲಾತಿಯ ಮಟ್ಟವನ್ನು ಮೀರಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ತಮ್ಮನ್ನು ರಾಜಕೀಯ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಗ್ರಾಮ ಪಂಚಾಯತಿ ಮಟ್ಟದಲ್ಲಿ ಶೇ. ೪೬.೭ ಮಹಿಳೆಯರು, ತಾಲ್ಲೂಕು ಪಂಚಾಯತಿ ಮಟ್ಟದಲ್ಲಿ ಶೇ. ೪೦.೭ ಮಹಿಳೆಯರು, ಜಿಲ್ಲಾ ಮಟ್ಟದಲ್ಲಿ ಶೇ. ೩೬.೪೫ ಮಹಿಳೆಯರು ಆಡಳಿತದ ಚುಕ್ಕಾಣಿ ಹಿಡಿದಿದ್ದಾರೆ. ಇಡೀ ದೇಶದಲ್ಲಿ ಜನಾದೇಶ ಪಡೆದ ಪಂಚಾಯತಿಗಳಲ್ಲಿ ಒಟ್ಟು ಹತ್ತು ಲಕ್ಷಕ್ಕೂ ಮೀರಿ ಮಹಿಳೆಯರು ರಾಜಕೀಯ ಕ್ಷೇತ್ರಕ್ಕೆ ಕಾಲಿರಿಸಿ, ಜನಪ್ರತಿನಿಧಿಗಳಾಗಿ ಕೆಲಸ ನಿರ್ವಹಿಸುತ್ತಿದ್ದಾರೆ.

ಸ್ವಾಭಾವಿಕವಾಗಿ ಮಹಿಳೆಯರು ಮೃದು ಸ್ವಭಾವದವರಾಗಿದ್ದು, ರಾಜಕೀಯದಲ್ಲಿ ಅಂತಹ ಆಸಕ್ತಿ ಹೊಂದಿಲ್ಲದ ಕಾರಣ ಹೆಸರಿಗೆ ಮಾತ್ರ ಪಂಚಾಯತಿ ಸದಸ್ಯರಾಗಿರುವ ಹಲವಾರು ಪ್ರಕರಣಗಳು ನಮ್ಮ ಕಣ್ಣು ಮುಂದಿದೆ. ಯಾವ ಮಹಿಳೆ ರಾಜಕೀಯ ಕ್ಷೇತ್ರಕ್ಕೆ ಕಾಲಿಟ್ಟಳೋ ಅದು ಅವಳ ಗಂಡನ ಇಚ್ಛೆಯಂತೆ ಆತನಿಗೆ ಆ ಕ್ಷೇತ್ರದ ಮೇಲಿರುವ ಅಧಿಕಾರವನ್ನು ಬಿಟ್ಟುಕೊಡಲು ಇಷ್ಟವಿಲ್ಲದೆ ಮಹಿಳೆಯನ್ನು ಉಪಯೋಗಿಸುತ್ತಿರುವುದು ಕಾಣಬಹುದು. ಇನ್ನು ಕೆಲವು ಕಡೆ ಮೀಸಲಾತಿ ವ್ಯವಸ್ಥೆಯಲ್ಲಿ ದುರ್ಬಲ ಮಹಿಳೆಯರನ್ನು ಆರಿಸಿ, ಅವರ ಹಕ್ಕುಗಳನ್ನು ಕಸಿದುಕೊಂಡು ಅವರನ್ನು ನಿತ್ರಾಣಗೊಳಿಸಿ, ಅವರ ಪರವಾಗಿ ಇತರರು ಅಧಿಕಾರ ಚಲಾಯಿಸುತ್ತಿರುವುದು ನೋವಿನ ಸಂಗತಿಯಾಗಿದೆ.

ಈ ರೀತಿ ಮಹಿಳಾ ಸದಸ್ಯರ ಪರವಾಗಿ ಪುರುಷ ಸದಸ್ಯರು ಕೆಲಸ ಮಾಡಿದರೆ, ಸಾರ್ವಜನಿಕ ವಲಯದಲ್ಲಿ ಮಹಿಳೆಯರ ಬಗ್ಗೆ ನಕಾರಾತ್ಮಕ ಭಾವನೆಗೆ ಕಾರಣವಾಗುತ್ತದೆ. ಮಹಿಳಾ ಪ್ರತಿನಿಧಿಗಳ ಕೆಲಸ ಕಾರ್ಯಗಳ ಬಗ್ಗೆ ಅವರ ಕುಟುಂಬದ ಪುರುಷ ಸದಸ್ಯರು ಹತೋಟಿ ಇಟ್ಟುಕೊಳ್ಳುವ ಬದಲು ಮಹಿಳೆಯರಿಗೆ ವಿಷಯಗಳನ್ನು ಕಲಿಯಲು ಆಸ್ಪದ ಕೊಟ್ಟು, ಅವರ ವಿವೇಚನಾ ಶಕ್ತಿಯನ್ನು ಬೆಳೆಸಿ ಕೊಂಡು ಕೆಲಸ ನಿರ್ವಹಿಸಲು ಅವಕಾಶ ನೀಡದರೆ, ಮಹಿಳೆಯರು ಇನ್ನೂ ಹೆಚ್ಚಿನ ಆತ್ಮವಿಶ್ವಾಸದಿಂದ, ಜಾಗ್ರತಿಯಿಂದ ಕೆಲಸ ಮಾಡಲು ಸಾಧ್ಯವಾಗುವುದು. ಇಷ್ಟಾದರೂ ನಿರ್ಧಾರ ಕೈಗೊಳ್ಳುವ ಎಲ್ಲಾ ಹಂತಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರಿರಬೇಕು ಎಂಬುದನ್ನು ಎಲ್ಲರೂ ಒಪ್ಪತಕ್ಕದ್ದು. ಮಹಿಳೆಯರ ವಿಶಿಷ್ಟವಾದ ಅನುಭವಗಳು ಹಾಗೂ ಸಮಸ್ಯೆಗಳನ್ನು ನೋಡುವ ದೃಷ್ಟಿಕೋನ ತನ್ನದೇ ರೀತಿಯಲ್ಲಿ ಪರಿಹಾರವನ್ನು ಕಂಡುಕೊಳ್ಳುವುದಲ್ಲದೆ, ಮಹಿಳೆಯರು ಸಬಲೀಕರಣರಾಗಲು ಸಾಧ್ಯವಾಗಿದೆ. ನಿರ್ಧಾರ ಕೈಗೊಳ್ಳುವ ಹಂತದಲ್ಲಿ ಮಹಿಳೆಯರ ಸಂಖ್ಯೆ ಹೆಚ್ಚಾದರೆ, ಈಗಿರುವ ಸ್ಥಿತಿಯಲ್ಲಿ ಬದಲಾವಣೆ ತರಬಹುದು ಎಂದು ನಿರೀಕ್ಷಿಸಲಾಗಿದೆ. ಹೀಗೆ ವಿವಿಧ ಹಂತಗಳಲ್ಲಿ ಮಹಿಳೆಯರ ಸಂಖ್ಯೆ ಸೇರ್ಪಡೆಯಾದರೆ ಸಾರ್ವಜನಿಕ ನೀತಿಯ ಮೇಲೆ ಪ್ರಭಾವ ಬೀರಬಹುದಾಗಿದೆ. ಆಗ ಮಹಿಳೆಯರ ವಿಷಯಗಳು ಸಾಮಾಜಿಕ ವಿಷಯಗಳಾಗಿ ಪರಿವರ್ತನೆಗೊಂಡು ಅದಕ್ಕೆ ವಿಶೇಷ ಮಹತ್ವ ದೊರೆಯಲು ಸಾಧ್ಯವಾಗುತ್ತದೆ.

ಸ್ಥಳೀಯ ಮಟ್ಟದಲ್ಲಿ ಅಧಿಕ ಸಂಖ್ಯೆಯಲ್ಲಿ ಮಹಿಳೆಯರು ಸಮರ್ಪಕವಾಗಿ ಭಾಗವಹಿಸಿದರೆ ಮಾತ್ರ ರಾಷ್ಟ್ರ ಹಾಗೂ ರಾಜ್ಯಮಟ್ಟದಲ್ಲಿ ನಿರ್ಧಾರ ಕೈಗೊಳ್ಳುವ ಹಂತದಲ್ಲಿ ಮಹಿಳೆಯರ ಸಂಖ್ಯೆ ಹೆಚ್ಚಿಸಬಹುದು. ಈ ಹಂತದಲ್ಲಿ ಯಾರಿಗೆ ಅವಶ್ಯಕತೆ ಇದೆಯೋ ಅವರಿಗೆ ನೇರವಾಗಿ ಸೌಲಭ್ಯವನ್ನು ಕೊಡಬಹುದಾದ್ದರಿಂದ ಸಮಸ್ಯೆಗಳ ನಿವಾರಣೆಯನ್ನು ಸುಲಭವಾಗಿ ಮಾಡಬಹುದು.

ಮಹಿಳೆಯರು ತಮಗೆ ನೀಡಿರುವ ಮೀಸಲಾತಿ ಸೌಲಭ್ಯದ ಚೌಕಟ್ಟಿನೊಳಗೆ ತಮ್ಮ ಅಗತ್ಯಗಳನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸಬೇಕಿದೆ. ಮೀಸಲಾತಿ ವ್ಯವಸ್ಥೆಯ ಮಹತ್ವವನ್ನು ಮನಗಂಡು ಮಹಿಳೆಯರು ಇನ್ನಾದರೂ ರಾಜಕೀಯವಾಗಿ ಸಕ್ರಿಯಗೊಳ್ಳಬೇಕಾದುದು ಅತ್ಯವಶ್ಯಕ. ಬಯಸಿಯೋ, ಬಯಸದೆಯೋ ಒದಗಿಬಂದ ಈ ಅವಕಾಶವನ್ನು "ಸೌಭಾಗ್ಯ" ವೆಂದು ಅರಿಯಬೇಕಿದೆ. ಈ ಹುದ್ದೆಯು ತಮಗೆ ಅವಶ್ಯಕವಾಗಿ ಹೊರೆಸಲ್ಪಟ್ಟ ಹೊರೆಯೆಂದು ಭಾವಿಸದೆ, ಸಬಲೀಕರಣದ ಹಾದಿಯಲ್ಲಿ ಮುನ್ನಡೆಯಬೇಕಾಗಿದೆ. ನಡೆಯುವಾಗ ಈ ಕೆಳಕಂಡ ಅಂಶಗಳನ್ನು ಊರುಗೋಲೆಂದು ಪರಿಗಣಿಸಿ ಅದರ ಸಹಾಯದಿಂದ ಎಡವದೆ ಮುಂದಡಿ ಇಡಬೇಕು.

೧. ರಾಜಕೀಯ ವ್ಯವಸ್ಥೆ ಮಹಿಳೆಯರಿಗಲ್ಲ ಎಂಬ ಭಾವನೆ ಕಿತ್ತೊಗೆದು, ಇಲ್ಲಿಯೂ ಕೂಡ ಮಹಿಳೆ ಸಕ್ರಿಯವಾಗಿ ಪಾಲ್ಗೊಂಡು ಗ್ರಾಮೀಣ ಅಭಿವೃದ್ಧಿ ಮಾಡಬಲ್ಲಳು, ಸಮಾಜವನ್ನು ಮುನ್ನಡೆಸಬಲ್ಲಳು ಎಂಬ ಅಂಶಗಳನ್ನು ಮನಗಂಡು ಆಸಕ್ತಿವಹಿಸಿ ಸ್ವಪ್ರಯತ್ನದಿಂದ, ನಂಬಿಕಸ್ಥರಿಂದ, ವಿಶ್ವಾಸನೀಯ ಸಲಹೆಗಾರರಿಂದ, ಸಹೋದ್ಯೋಗಿಗಳ ಮೂಲಕ ಅವರ ಕರ್ತವ್ಯ ಅರಿತು ಜವಾಬ್ದಾರಿಯಿಂದ ಕೆಲಸ ನಿರ್ವಹಿಸುವುದನ್ನು ಕಲಿತುಕೊಳ್ಳಬೇಕು.

೨. ಅವರ ಕಾರ್ಯಕ್ಷೇತ್ರದಲ್ಲಿರುವ ಸ್ವಯಂ ಸೇವಾ ಸಂಸ್ಥೆಯವರನ್ನಾಗಲೀ, ಸ್ವಸಹಾಯ ಗುಂಪುಗಳನ್ನಾಗಲೀ, ವಿವಿಧ ಇಲಾಖೆಯ ಕ್ಷೇತ್ರ ಸಿಬ್ಬಂದಿಯವರನ್ನಾಗಲೀ ಅವರೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡು ವಿಷಯಗಳನ್ನು ಕಲಿತು/ ಕಲಿಸಿ ಅವರ ಪ್ರಭಾವ ಹೆಚ್ಚಿಸಿಕೊಳ್ಳಬೇಕು.

೩. ಕುಟುಂಬದ ಜವಾಬ್ದಾರಿ ಎಷ್ಟೇ ಇದ್ದರೂ, ಅವರ ತಿಳಿವಳಿಕೆ ಮಟ್ಟವನ್ನು ವಿಸ್ತರಿಸುವ ಸಲುವಾಗಿ, ಅವರ ಜ್ಞಾನದ ಮಟ್ಟವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಸರ್ಕಾರದಿಂದಾಗಲೀ, ಇಲಾಖೆಯಿಂದಾಗಲೀ, ಪಕ್ಷದಿಂದಾಗಲೀ ನಡೆಸುವ ಸಭೆ ಸಮಾರಂಭಗಳು, ವಿಚಾರ ಸಂಕಿರಣಗಳು, ತರಬೇತಿ ಕಾರ್ಯಕ್ರಮಗಳಲ್ಲಿ ತಪ್ಪದೇ ಪಾಲ್ಗೊಂಡು ಹಾಗೂ ಚರ್ಚೆಯಲ್ಲಿ ಭಾಗವಹಿಸಲು ಪ್ರಯತ್ನಿಸಬೇಕು.

೪. ಜನ ಪ್ರತಿನಿಧಿಯಾದ ಅವರು ಅವರ ಕ್ಷೇತ್ರಗಳ ಗ್ರಾಮಗಳಿಗೆ ಭೇಟಿ ನೀಡಿ, ಜನರೊಂದಿಗೆ ಮುಕ್ತವಾಗಿ ಬೆರೆತು ಸಮಸ್ಯೆಗಳನ್ನು ಗುರುತಿಸಿ, ಟಿಪ್ಪಣಿ ಮಾಡಿಕೊಂಡು ಸಂಬಂಧಿಸಿದ ಇಲಾಖೆಯ ಅಧಿಕಾರಿ/ ಸಿಬ್ಬಂದಿ ವರ್ಗದವರನ್ನು ದೂರವಾಣಿ/ ವೈಯಕ್ತಿಕವಾಗಿ ಭೇಟಿ ಮಾಡಿ, ಸಮಸ್ಯೆಗಳನ್ನು ಪರಿಹರಿಸಲು ಕ್ರಮ ತೆಗೆದುಕೊಳ್ಳಬೇಕು.

೫. ಜನ ಪ್ರತಿನಿಧಿಯಾದ ಅವರು ಅವರ ಅವಧಿಯನ್ನು ಕೇವಲ ಸಭೆಗಳಲ್ಲಿ ಪಾಲ್ಗೊಳ್ಳಲು ಮಾತ್ರ ಮೀಸಲಿಡದೆ. ಸಭೆ ನಡೆಯದಿದ್ದಾಗ್ಯೂ ಸಹ ತಾಲ್ಲೂಕು/ಜಿಲ್ಲಾ ಕೇಂದ್ರಗಳ ಕಛೇರಿಗೆ ಭೇಟಿ ನೀಡಿ, ಅವರ ಸಮಸ್ಯೆಗಳ ಪರಿಹಾರಕ್ಕಾಗಿ ಸಂಬಂಧಿಸಿದವರೊಂದಿಗೆ ಚರ್ಚಿಸಿ, ಕೆಲಸವನ್ನು ಬೆಂಬತ್ತಿ, ಕೆಲಸ ಮಾಡಿಸಿ, ಜನರ ವಿಶ್ವಾಸ ಗಳಿಸಲು ಪ್ರಯತ್ನಿಸಬೇಕು.

೬. ಸಾಧ್ಯವಾದಷ್ಟೂ ಮಾಧ್ಯಮದವರನ್ನು ಅವರ ಕಾರ್ಯಕ್ಷೇತ್ರಗಳಲ್ಲಿ ನಡೆಯುವ ಕಾರ್ಯಕ್ರಮಗಳಿಗೆ ಆಹ್ವಾನಿಸಿ, ಇದರ ಮೂಲಕ ಅವರ ಸಾಧನೆ ಇತರರ ಗಮನಸೆಳೆಯುವಂತೆ ಮಾಡಬೇಕು.

೭. ರಾಜಕೀಯ ಕ್ಷೇತ್ರದ ಅನುಭವ ಅವರಿಗೆ ಹೊಸದಿರಬಹುದು. ಆದರೆ, ಯಾವುದೇ ಕಾರಣಕ್ಕೂ ಎಂದಿಗೂ ಸಾರ್ವಜನಿಕರ ಎದುರಾಗಲಿ ಕಛೇರಿಗಳಲ್ಲಾಗಲೀ ಜನರ ಸಮಸ್ಯೆಗಳಿಗೆ ಅವರ ಪತಿ/ಮಕ್ಕಳಿಂದ ಉತ್ತರಕೊಡಿಸಲು ಪ್ರಯತ್ನಿಸಬಾರದು. ಸಮಸ್ಯೆಗೆ ತಕ್ಕ ಉತ್ತರ ಅವರ ಬಳಿಯಲ್ಲಿ ಇಲ್ಲದಿದ್ದರೆ, ಕಾಲಾವಕಾಶ ಪಡೆದು ವಿಷಯವನ್ನು ಅರ್ಥೈಸಿಕೊಂಡು ಅವರೇ ಉತ್ತರ ಕೊಡುವುದು ಉತ್ತಮ. ಇಲ್ಲದಿದ್ದಲ್ಲಿ ಅವರ ವರ್ಚಸ್ಸು ಕಳೆಗುಂದುತ್ತದೆ.

೮. ಸಭೆಯಲ್ಲಿ ಏನೂ ಮಾತನಾಡದೆ ಸುಮ್ಮನಿರಬಾರದು. ಏನಾದರೂ ಮಾತನಾಡಿದ ಮಹಿಳೆ ಏನೂ ಮಾತನಾಡದಿದ್ದ ಮಹಿಳೆಗಿಂತ ಪ್ರಶಂಸೆಗೆ ಒಳಗಾಗುವುದರಿಂದ ಮಾತನಾಡಲು ಪ್ರಯತ್ನಿಸಬೇಕು.

೯. ಸಭೆಗಳಲ್ಲಿ ಪಾಲ್ಗೊಳ್ಳುವಾಗ ಸಭಾಧ್ಯಕ್ಷರ ಗಮನ ಸೆಳೆಯುವಂತಹ ಆಯಕಟ್ಟಿನ ಸೀಟುಗಳಲ್ಲಿ ಆಸೀನರಾಗಿ, ಅವರ ಕ್ಷೇತ್ರದ ಸಮಸ್ಯೆಗಳ ಬಗ್ಗೆ ಸಭಾಧ್ಯಕ್ಷರ ಗಮನ ಸೆಳೆಯಲು ಗಟ್ಟಿಯಾಗಿ, ಸ್ಪುಟವಾಗಿ ಅಗತ್ಯಕ್ಕೆ ತಕ್ಕಷ್ಟು ಪದಗಳನ್ನು ಉಪಯೋಗಿಸಿ ಚರ್ಚಿಸಬೇಕು.

೧೦. ಅವರಿಗೆ ಹೊಸದು ಎನ್ನುವ ವಿಷಯಗಳು ಸಭೆಯಲ್ಲಿ ಚರ್ಚೆಯಾಗುತ್ತಿದ್ದರೆ ಈ ಬಗ್ಗೆ ಏನೂ ಗೊತ್ತಿಲ್ಲವೆಂದು ಸುಮ್ಮನಿರದೆ ಆದಷ್ಟು ವಿಷಯಗಳ ಬಗ್ಗೆ ಪ್ರಶ್ನೆಗಳನ್ನು ಕೇಳಿ ಉತ್ತರಗಳನ್ನು ಪಡೆದುಕೊಂಡು ಅವರ ಅನಿಸಿಕೆಗಳನ್ನು ಮುಕ್ತವಾಗಿ ಹೇಳುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು.

೧೧. ಮಹಿಳೆಯರು/ಮಕ್ಕಳ ಸಮಸ್ಯೆಗಳೇನಾದರೂ ಸಭೆಯಲ್ಲಿ ಚರ್ಚೆಗೆ ಬಂದಲ್ಲಿ ಪಕ್ಷಭೇದ ಮರೆತು ಎಲ್ಲಾ ಮಹಿಳೆಯರು ಒಂದಾಗಿ, ಸಮಸ್ಯೆ ಬಗೆಹರಿಸಲು ಕ್ರಮ ಕೈಗೊಳ್ಳಬೇಕು. ಏಕೆಂದರೆ, ಸಭೆಯಾಚೆಯ ಸಂಘಟನೆಯ ಧ್ವನಿಗಿಂತ ಸಭೆಯೊಳಗಿನ ಕೂಗಿಗೆ ಸರ್ಕಾರದ ಪ್ರತಿಕ್ರಿಯೆ ತೀವ್ರವಾಗಿರುವುದರಿಂದ ಮಹಿಳೆಯರ ಪರ ನಿಲುವುಗಳನ್ನು ಹೊಂದಲು ಇದು ಸಕಾಲವಾಗಿರುತ್ತದೆ.

೧೨. ಕ್ಷೇತ್ರದಲ್ಲಿ ಪ್ರವಾಸ ಮಾಡುವಾಗ ಮಹಿಳೆಯರ ಸಂಘಟನೆಯತ್ತ ಹೆಚ್ಚಿನ ಒಲವು ತೋರಿಸಿ ಅವಶ್ಯವಿದ್ದಾಗ ಒಬ್ಬರೇ ಪ್ರವಾಸ ಮಾಡಲು ಧೈರ್ಯವಹಿಸಿ ಭೇಟಿ ನೀಡಿದ ಕಡೆಗಳಲ್ಲಿ ಆದಷ್ಟು ಸ್ವಸಹಾಯ ಗುಂಪುಗಳಿಗೆ/ಸ್ವಯಂ ಸೇವಾ ಸಂಸ್ಥೆಗಳಿಗೆ ಭೇಟಿ ನೀಡಿ ಮಹಿಳೆಯರಿಗೆ ಹೆಚ್ಚಿನ ಸವಲತ್ತು ಸಿಗುವ ರೀತಿಯಲ್ಲಿ ಅವರ ಪ್ರಯತ್ನವಿರಬೇಕು.

೧೩. ಸಭೆ ಸಮಾರಂಭಗಳಲ್ಲಿ ಭಾಗವಹಿಸುವಾಗ ಮುಜುಗರಪಟ್ಟುಕೊಳ್ಳದೆ, ಮುಂಚಿತವಾಗಿಯೇ ಇಲಾಖೆಯಿಂದ ಕಾರ್ಯಕ್ರಮದ ಮಾಹಿತಿ ಪಡೆದು, ಒಂದೆರಡು ವಾಕ್ಯಗಳಲ್ಲಿ ಮಾತನಾಡಲು ಪ್ರಯತ್ನಿಸಬೇಕು.

೧೪. ಯೋಜನೆ ತಯಾರಿಕೆ,ಆಯವ್ಯಯ ರಚನೆ, ಅನುದಾನ ಹಂಚಿಕೆ ಇತ್ಯಾದಿ ಬಗ್ಗೆ ಕಡಿಮೆ ಜ್ಞಾನ ಹೊಂದಿದ್ದರೂ ಪರವಾಗಿಲ್ಲ, ಅದನ್ನು ನಿಯಮಿತವಾಗಿ ಲಕ್ಷ್ಯಕೊಟ್ಟು ತಿಳಿಯುವುದರ ಮೂಲಕ ಅವರ ಕ್ಷೇತ್ರಕ್ಕೆ ಬೇಕಾಗಿರುವ ಮೂಲಭೂತ ಸೌಕರ್ಯ ಬರುವಲ್ಲಿ ಪರಿಶ್ರಮಪಡಬೇಕು.

೧೫. ಸಾಧ್ಯವಾದಷ್ಟು ಪತ್ರಿಕೆಗಳನ್ನು ಓದುವ ಅಭ್ಯಾಸ ಮಾಡಿಕೊಳ್ಳಬೇಕು. ಏಕೆಂದರೆ, ಇದರಿಂದಾಗಿಯೇ ಮಹತ್ವಪೂರ್ಣ ಸುದ್ದಿಗಳು, ದಿನನಿತ್ಯದ ಆಗುಹೋಗುಗಳ ಬಗ್ಗೆ ಮನವರಿಕೆಯಾಗುವುದು. ಟಿ.ವಿ. ವೀಕ್ಷಣೆಯ ಸಮಯದಲ್ಲಿ ಧಾರವಾಹಿಗಳಿಗೆ ಬದಲು ಸುದ್ದಿ ವಿವರಗಳಿಗೆ ಹೆಚ್ಚಿನ ಆದ್ಯತೆ ಕೊಡಬೇಕು.

೧೬. ಪಂಚಾಯತಿಯ ಲೆಕ್ಕಪತ್ರ ವಿವರಣೆಯನ್ನು ಕೇಳಬೇಕು. ಹಿಂದಿನ ಹಣಕಾಸು ವರ್ಷದ ಆಡಳಿತ ವರದಿ ಪರಿಶೀಲಿಸಬೇಕು. ಕಳೆದ ಸಲದ ಲೆಕ್ಕಪರಿಶೋಧನಾ ಟಿಪ್ಪಣಿ ಹಾಗೂ ಅದಕ್ಕೆ ನೀಡಿದ್ದ ಉತ್ತರವಿದ್ದಲ್ಲಿ ಅದನ್ನು ಕೇಳಬೇಕು. ಹಿಂದಿನ ವರ್ಷಕ್ಕೆ ಸಂಬಂಧಿಸಿದ ಅಭಿವೃದ್ಧಿ ಕಾರ್ಯಕ್ರಮಗಳ ವರದಿ ಪರಿಶೀಲಿಸಬೇಕು. ಪ್ರಸಕ್ತ ವರ್ಷದಲ್ಲಿ ಕೈಗೊಳ್ಳಬೇಕೆಂದು ಉದ್ದೇಶಿಸಿದ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸೂಕ್ತ ಸಲಹೆ ನೀಡಬೇಕು. ಸಮಾಜದ ಎಲ್ಲಾ ವರ್ಗದ ಜನರಲ್ಲಿ ಏಕತೆ, ಸೌಹಾರ್ದತೆಯನ್ನು ಬೆಳೆಸಬೇಕು. ಗ್ರಾಮಗಳಿಗೆ ವಯಸ್ಕರ ಶಿಕ್ಷಣ ಕಾರ್ಯಕ್ರಮಕ್ಕೆ ಸಲಹೆ ಸಹಕಾರ ಒದಗಿಸಬೇಕು. ಗ್ರಾಮಾಭಿವೃದ್ಧಿ ಯೋಜನೆಗಳಿಗೆ ಫಲಾನುಭವಿಗಳನ್ನು ಗುರುತಿಸಬೇಕು. ಗ್ರಾಮದ ಅಭಿವೃದ್ಧಿ ಯೋಜನೆಗಳನ್ನು ಜಾರಿಗೊಳಿಸುವಲ್ಲಿ ನೆರವಾಗಬೇಕು.

ಸ್ಥಳೀಯ ಸಂಸ್ಥೆಯ ಮಹಿಳಾ ಸದಸ್ಯರು ಕೆಳಕಂಡ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಸಕ್ರಿಯವಾಗಿ ಭಾಗವಹಿಸಬೇಕಾಗುತ್ತದೆ.

೧. ಕೃಷಿ ಅಭಿವೃದ್ಧಿ ಮತ್ತು ವಿಸ್ತರಣೆ.

೨. ಕೃಷಿ ಮತ್ತು ತೋಟಗಾರಿಕೆ ಉತ್ತೇಜನ, ಬಂಜರು ಭೂಮಿ ಮತ್ತು ಹುಲ್ಲುಗಾವಲುಗಳ ಅಭಿವೃದ್ಧಿ.

೩. ಪಶುಸಂಗೋಪನೆ, ಹೈನುಗಾರಿಕೆ ಮತ್ತು ಕೋಳಿ ಸಾಕಣೆಗೆ ಉತ್ತೇಜನ ನೀಡುವುದು.

೪. ಮೀನುಗಾರಿಕೆ.

೫. ಸಾಮಾಜಿಕ ಅರಣ್ಯ ಮತ್ತು ಹೊಲಗದ್ದೆ ಅರಣ್ಯ ನಿರ್ಮಾಣ, ಸಣ್ಣ ಅರಣ್ಯ ಉತ್ಪನ್ನ, ಸೌದೆ ಮತ್ತು ಮೇವು ಅಭಿವೃದ್ಧಿ.

೬. ಖಾದಿ ಗ್ರಾಮ ಮತ್ತು ಗುಡಿಕೈಗಾರಿಕೆಗಳ ಅಭಿವೃದ್ಧಿ.

೭. ಗ್ರಾಮೀಣ ಗೃಹ ನಿರ್ಮಾಣ.

೮. ಕುಡಿಯುವ ನೀರು.

೯. ರಸ್ತೆಗಳು, ಕಟ್ಟಡಗಳು, ಅಡಿಗಾಲುವೆಗಳು, ಹಾಯ್ಗಡ ಜಲಮಾರ್ಗಗಳ ನಿರ್ಮಾಣ ಮತ್ತು ನಿರ್ವಹಣೆ.

೧೦. ಗ್ರಾವಿಮೀಣ ವಿದ್ಯುದೀಕರಣ - ಸಾರ್ವಜನಿಕ ಮತ್ತು ಇತರ ಸ್ಥಳಗಳಲ್ಲಿ ದೀಪಗಳನ್ನು ಒದಗಿಸುವುದು ಮತ್ತು ಅವುಗಳ ನಿರ್ವಹಣೆ.

೧೧. ಸಾಂಪ್ರದಾಯಿಕವಲ್ಲದ ಶಕ್ತಿಮೂಲ, ಜೈವಿಕ ಅನಿಲ ಸ್ಥಾವರ ನಿರ್ಮಾಣ, ಸುಧಾರಿತ ಒಲೆಗಳ ಮತ್ತು ಇತರ ಪರಿಣಾಮಕಾರಿ ಶಕ್ತಿ ಸಾಧನಗಳ ಪ್ರಸಾರ ನಿರ್ವಹಣೆ.

೧೨. ಬಡತನ ನಿವಾರಣಾ ಕಾರ್ಯಕ್ರಮಗಳು.

೧೩. ಪ್ರಾಥಮಿಕ ಮತ್ತು ಸೆಕಂಡರಿ ಶಿಕ್ಷಣದ ಬಗ್ಗೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವುದು, ಶಾಲೆಗಳಲ್ಲಿ ಪೂರ್ಣ ಪ್ರಮಾಣದ ಪ್ರವೇಶ ಮತ್ತು ಹಾಜರಾತಿಯನ್ನು ಖಚಿತಪಡಿಸುವುದು.

೧೪. ವಯಸ್ಕರ ಸಾಕ್ಷರತೆಗೆ ಉತ್ತೇಜನ.

೧೫. ಗ್ರಂಥಾಲಯಗಳ ಸ್ಥಾಪನೆ ಹಾಗೂ ನಿರ್ವಹಣೆ.

೧೬. ಸಾಂಸ್ಕೃತಿಕ ಚಟುವಟಿಕೆಗಳು.

೧೭. ಮಾರುಕಟ್ಟೆಗಳು, ಜಾತ್ರೆಗಳು, ಹಬ್ಬ ಹರಿದಿನಗಳ ನಿಯಂತ್ರಣ.

೧೮. ಗ್ರಾಮೀಣ ನೈರ್ಮಲ್ಯ.

೧೯. ಜನಾರೋಗ್ಯ ಮತ್ತು ಕುಟುಂಬ ಕಲ್ಯಾಣ.

೨೦. ಕುಟುಂಬ ಕಲ್ಯಾಣ ಯೋಜನೆಯ ಕಾರ್ಯಕ್ರಮ : ಸಾಂಕ್ರಾಮಿಕ ರೋಗ ತಡೆಯುವಿಕೆ, ಕೆಟ್ಟುಹೋಗುವ ಆಹಾರ ವಸ್ತುಗಳ ಮಾರಾಟ ನಿಯಂತ್ರಣ, ಲಸಿಕೆ ನೀಡುವ ಕಾರ್ಯಕ್ರಮ, ತಿನ್ನುವ ಮತ್ತು ಮನರಂಜನೆ ನೀಡುವ ಸ್ಥಳಗಳಿಗೆ ಅನುಮತಿ, ನಿಯಂತ್ರಣ ಇತ್ಯಾದಿ ಕಾರ್ಯಕ್ರಮಗಳ ಜೊತೆ ಬೀದಿನಾಯಿಗಳ ನಾಶ, ಚರ್ಮೋದ್ಯಮದ ನಿಯಂತ್ರಣ ಮೊದಲಾದ ಉಪದ್ರವಕಾರಿ ಮತ್ತು ಅಪಾಯಕಾರಿ ವಿಷಯಗಳನ್ನು ತಡೆಗಟ್ಟುವ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು.

೨೧. ಅಂಗವಿಕಲ ಮತ್ತು ಮಾನಸಿಕ ಅಸ್ವಸ್ಥತೆಯುಳ್ಳ ವ್ಯಕ್ತಿಗಳ ಕಲ್ಯಾಣವೂ ಸೇರಿದಂತೆ ಸಮಾಜ ಕಲ್ಯಾಣ.

೨೨. ದುರ್ಬಲ ವರ್ಗಗಳ ಅದರಲ್ಲೂ ವಿಶೇಷವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕಲ್ಯಾಣ.

೨೩. ಸಾರ್ವಜನಿಕ ವಿತರಣಾ ವ್ಯವಸ್ಥೆ.

೨೪. ಸಮುದಾಯ ಸ್ವತ್ತುಗಳ ನಿರ್ವಹಣೆ.

೨೫. ಧರ್ಮಶಾಲೆಗಳು, ಛತ್ರಗಳು ಮತ್ತು ಇಂತಹ ಸಂಸ್ಥೆಗಳ ನಿರ್ಮಾಣ ಮತ್ತು ನಿರ್ವಹಣೆ .

೨೬. ಕಸಾಯಿಖಾನೆಗಳ ನಿರ್ಮಾಣ ಮತ್ತು ನಿರ್ವಹಣೆ.

೨೭. ಸಾರ್ವಜನಿಕ ಉದ್ಯಾನವನ, ಆಟದ ಮೈದಾನಗಳ ನಿರ್ವಹಣೆ.

೨೮. ಗೊಬ್ಬರದ ಗುಂಡಿಗಳ ನಿಯಂತ್ರಣ.

೨೯. ಸಂತೆಗಳನ್ನು ಏರ್ಪಡಿಸುವುದು ಮತ್ತು ನಿಯಂತ್ರಿಸುವುದು.

೩೦. ಇನ್ನಿತರ ಕಾರ್ಯಗಳು.

೨೦೦೧ರ ಜನಗಣತಿಯ ಪ್ರಕಾರ, ರಾಜ್ಯದಲ್ಲಿ ಒಟ್ಟು ಜನಸಂಖ್ಯೆ : ೫,೨೭,೩೩,೯೫೮ ಇದ್ದು, ಪುರುಷರ ಸಂಖ್ಯೆ ೨,೬೮,೫೬,೩೪೩ ಮತ್ತು ಸ್ತ್ರೀಯರ ಸಂಖ್ಯೆ ೨,೫೮,೭೭,೬೧೫ ಇರುತ್ತದೆ. ಅಂದರೆ ರಾಜ್ಯದಲ್ಲಿ ೯,೭೮,೭೧೮ ಮಹಿಳೆಯರ ಸಂಖ್ಯೆ ಕಡಿಮೆ ಇದ್ದು, ಪುರುಷರ ಮತ್ತು ಮಹಿಳೆಯರ ಸಂಖ್ಯೆಗಳ ನಡುವಿನ ಅಂತರ ಪ್ರತಿಬಿಂಬಿಸುತ್ತದೆ. ಡಾ. ಅಮರ್ತ್ಯ ಸೇನ್‌ರವರು ಇದನ್ನು 'ಕಾಣದ ಮಹಿಳೆಯೆಂದು ವ್ಯಾಖ್ಯಾನಿಸಿದ್ದಾರೆ'. ೨೦೦೧ರ ಜನಗಣತಿಯ ಪ್ರಕಾರ, ಪ್ರತೀ ೧೦೦೦ ಪುರುಷರಿಗೆ ೯೬೪ ಮಹಿಳೆಯರಿದ್ದಾರೆ. ಆರು ವರ್ಷಕ್ಕಿಂತ ಕಡಿಮೆ ವಯಸ್ಸಿನ ಜನಸಂಖ್ಯೆಯಲ್ಲಿ ಲಿಂಗ ಪ್ರಮಾಣವು (೯೪೯) ಗಣನೀಯವಾಗಿ ಕಡಿಮೆಯಾಗಿರುವುದು ಆತಂಕಪಡಬೇಕಾದ ವಿಷಯವಾಗಿದೆ. ಬರೀ ಲಿಂಗ ಪ್ರಮಾಣ ವ್ಯತ್ಯಾಸವಾಗಿರದೆ, ಹೆಣ್ಣು ಭ್ರೂಣಹತ್ಯೆ, ಹೆಣ್ಣು ಶಿಶುಹತ್ಯೆ ಹಾಗೂ ಹೆಣ್ಣು ಮಗುವಿನ ಬಗ್ಗೆ ಕುಟುಂಬದಲ್ಲಿ ಹಾಗೂ ಸಮಾಜದಲ್ಲಿ ಇರುವ ಅಸಡ್ಡೆಯ ಮನೋಭಾವನೆಯ ಬಗ್ಗೆ ಕೈಗನ್ನಡಿಯಾಗಿದೆ. ಅನಧಿಕೃತವಾಗಿ ನಡೆಯುವ ಲಿಂಗ ಪರೀಕ್ಷೆಗಳನ್ನು ತಡೆಯುವಲ್ಲಿ ಸ್ಥಳೀಯ ಸಂಸ್ಥೆಯ ಮಹಿಳಾ ಸದಸ್ಯರು ಮಧ್ಯ ಪ್ರವೇಶಿಸಿ, ಇಂತಹ ಸಾಮಾಜಿಕ ಪಿಡುಗುಗಳನ್ನು ತಡೆಗಟ್ಟುವುದು ಅತ್ಯವಶ್ಯಕವಾಗಿದೆ.

೨೦೦೧ರ ಜನಗಣತಿಯ ಪ್ರಕಾರ, ರಾಜ್ಯದಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ಶೇ. ೫೭.೪೫ ಮತ್ತು ಪುರುಷರ ಸಾಕ್ಷರತಾ ಪ್ರಮಾಣ ೭೬.೨೯ ಇದ್ದು, ಸಾಕ್ಷರತಾ ಪ್ರಮಾಣದಲ್ಲಿರುವ ಲಿಂಗ ಅಸಮಾನತೆಯನ್ನು ತೋರಿಸುತ್ತದೆ. ಗ್ರಾಮೀಣ ಕರ್ನಾಟಕದಲ್ಲಿ ಮಹಿಳೆಯರ ಸಾಕ್ಷರತಾ ದರ ೪೮.೫೦ ಆಗಿದ್ದು, ಪುರುಷರ ಸಾಕ್ಷರತಾ ದರ (೭೦.೬೩) ಕ್ಕಿಂತ ಬಹಳ ಕಡಿಮೆ ಇದೆ. ಸಾರ್ವಜನಿಕ ಶಿಕ್ಷಣ ಇಲಾಖೆಯ ಒಂದು ವರದಿಯಂತೆ (೯೯-೨೦೦೦) ೧ ರಿಂದ ೪ನೇ ತರಗತಿ ಶೇ. ೧೧.೫೫ ಮತ್ತು ೧ ರಿಂದ ೭ನೇ ತರಗತಿಯವರೆಗೆ ಶಾಲೆಯನ್ನು ಬಿಟ್ಟು ಹೆಣ್ಣುಮಕ್ಕಳ ಸಂಖ್ಯೆ ಶೇ. ೫೮.೨೫ ಇರುತ್ತದೆ.

ಹೆಣ್ಣುಮಕ್ಕಳ ಶಾಲಾ ನೋಂದಣಿ, ಶಾಲೆಯಲ್ಲಿ ದಾಖಲಾತಿ ಮತ್ತು ಹಾಜರಾತಿ ಕಡಿಮೆ ಇರುವುದಕ್ಕೆ ಹಾಗೂ ಶಾಲೆ ಬಿಡಲು ಕಾರಣ ತಿಳಿದು, ಗ್ರಾಮೀಣ ಹೆಣ್ಣುಮಕ್ಕಳ ಶಿಕ್ಷಣವನ್ನು ಉತ್ತಮಪಡಿಸುವ ದಿಸೆಯಲ್ಲಿ ಸ್ಥಳೀಯ ಸಂಸ್ಥೆಯ ಮಹಿಳಾ ಸದಸ್ಯರು ಜವಾಬ್ದಾರಿ ವಹಿಸುವುದು ಅವಶ್ಯಕವಾಗಿದೆ.

ಮಹಿಳೆಯರಿಗೆ ಉಪಯುಕ್ತವಾಗುವ ಅನೇಕ ಕಾರ್ಯಕ್ರಮಗಳನ್ನು ರಾಜ್ಯ ಸರ್ಕಾರ ಹಮ್ಮಿಕೊಂಡಿದೆ. ಈ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಬೇಕಾದರೆ, ವಿವಿಧ ಯೋಜನೆಗಳಡಿ ಫಲಾನುಭವಿಗಳನ್ನು ಗ್ರಾಮಸಭೆಗಳಲ್ಲಿ ಆಯ್ಕೆಮಾಡಲಾಗುತ್ತದೆ. ಇಂತಹ ಸಂದರ್ಭದಲ್ಲಿ ಸ್ಥಳೀಯ ಸಂಸ್ಥೆಯ ಮಹಿಳಾ ಸದಸ್ಯರು ವಿಧವೆಯರು, ಗಂಡನಿಂದ ಬೇರೆಯಾದವರು, ಮದುವೆಯಾಗದೆ ಇರುವವರು ಮುಂತಾದ ಮಹಿಳೆಯರೇ ಮುಖ್ಯಸ್ಥರಾಗಿರುವ ಕುಟುಂಬವನ್ನು ಆಯ್ಕೆ ಮಾಡಿ, ಸರ್ಕಾರ ಸೌಲಭ್ಯವನ್ನು ಕಲ್ಪಿಸುವಲ್ಲಿ ಮಹತ್ತರ ಪಾತ್ರವನ್ನು ವಹಿಸಬೇಕಾಗಿದೆ. ಅನೇಕ ಹಳ್ಳಿಗಳಲ್ಲಿ ಶೌಚಾಲಯವಿಲ್ಲದಿರುವುದರಿಂದ, ಮಹಿಳೆಯರಿಗೆ ತಮ್ಮ ನೈಸರ್ಗಿಕ ಕ್ರಿಯೆಯನ್ನು ಪೂರೈಸಲು ತೊಂದರೆಯಾಗುತ್ತಿದೆ. ಸರ್ಕಾರದಿಂದ ಶೌಚಾಲಯ ನಿರ್ಮಾಣಕ್ಕೆ ಹಣ ಮಂಜೂರಾಗಿದ್ದರೂ ನಿಗದಿತ ಸಮಯಕ್ಕೆ ಶೌಚಾಲಯಗಳು ನಿರ್ಮಾಣವಾಗದೆ ಇದ್ದ ಕಾರಣ, ಹೆಚ್ಚು ತೊಂದರೆಗೊಳಗಾದವರು ಮಹಿಳೆಯರೇ. ಶೌಚಾಲಯ ಕಟ್ಟಿಸುವ ಕಡೆ ಸರಿಯಾದ ನೀರಿನ ವ್ಯವಸ್ಥೆಯಿಲ್ಲದೆ ಶೌಚಾಲಯಗಳು ಬಳಕೆಯಾಗದಿರುವ ದೂರುಗಳು ಸಹ ಇವೆ. ಇಂತಹ ಕಡೆ ಸ್ಥಳೀಯ ಸಂಸ್ಥೆ ಮಹಿಳಾ ಸದಸ್ಯರು ಕಾಮಗಾರಿಗಳ ಮೇಲ್ವಿಚಾರಣೆ ವಹಿಸಿದಲ್ಲಿ, ಈಗ ಆಗುತ್ತಿರುವ ತಪ್ಪುಗಳನ್ನು ತಡೆಯಬಹುದಾಗಿದೆ.

ಹಳ್ಳಿಗಳಲ್ಲಿ ಕುಡಿಯುವ ನೀರಿನ ಪೂರೈಕೆಗಾಗಿ ಕರ್ನಾಟಕ ಸರ್ಕಾರ ಅನೇಕ ಯೋಜನೆಗಳನ್ನು ಹಮ್ಮಿಕೊಂಡಿದ್ದರೂ, ಹೆಚ್ಚಿನ ಹಳ್ಳಿಗಳಲ್ಲಿ ಅದರಲ್ಲೂ ಹಿಂದುಳಿದ ವರ್ಗದ ಜನರು ವಾಸಿಸುವ ಕೇರಿಗಳಲ್ಲಿ ಕುಡಿಯುವ ನೀರಿನ ಸಮಸ್ಯೆ ಇನ್ನೂ ಅಗಾಧವಾಗಿದೆ. ಇದರ ಪರಿಣಾಮವಾಗಿ ಮಹಿಳೆಯರು ಕುಡಿಯುವ ನೀರನ್ನು ಸಂಗ್ರಹಿಸಲು ಬಹಳ ದೂರ ಹೋಗಬೇಕಾಗಿರುವುದರಿಂದ ಅವರ ಮೇಲೆ ಶ್ರಮ ಜಾಸ್ತಿಯಾಗಿದೆ ಹಾಗೂ ಕೆಲವೆಡೆ ಕಲುಷಿತ ನೀರನ್ನು ಸೇವಿಸುವುದರಿಂದ ವಿವಿಧ ರೀತಿಯ ರೋಗಗಳಿಂದ ನರಳುತ್ತಿದ್ದಾರೆ.

ಎಲ್ಲಾ ಕುಟುಂಬಗಳಲ್ಲಿ ಕುಡಿಯುವ ನೀರನ್ನು ಶೇಖರಿಸುವ ಹೊಣೆ ಮಹಿಳೆಯರದಾಗಿದೆ. ಕುಡಿಯುವ ನೀರನ್ನು ದೊರಕಿಸಿಕೊಡುವ ಸಲುವಾಗಿ ಪ್ರಮುಖವಾಗಿ ಕೈ ಪಂಪು ಮತ್ತು ಕೊಳವೆ ಬಾವಿ, ಕಿರುನೀರು ಸರಬರಾಜು ಹಾಗೂ ನಲ್ಲಿ ನೀರು ಸರಬರಾಜು ಎಂಬ ಪ್ರಮುಖ ಯೋಜನೆಗಳನ್ನು ಕರ್ನಾಟಕ ರಾಜ್ಯ ಹಮ್ಮಿಕೊಂಡಿದ್ದರೂ, ಈ ಯೋಜನೆಗಳಲ್ಲಿ ಸಾಕಷ್ಟು ಹಣ ಲಭ್ಯವಿದ್ದರೂ, ಕೈ ಪಂಪು ಕೊಳವೆಬಾವಿ ಮತ್ತು ನಲ್ಲಿ ನೀರು ಸರಬರಾಜು ಯೋಜನೆಯಡಿ ನಿಗದಿಪಡಿಸಿದ ಹಣ ಸಂಪೂರ್ಣವಾಗಿ ಖರ್ಚಾಗದೆ ಇರುವುದರಿಂದ, ಗ್ರಾಮೀಣ ಪ್ರಗತಿ ಇದಕ್ಕೆ ಅನುಗುಣವಾಗಿ ಕುಂಠಿತವಾಗಿರುವುದಲ್ಲದೆ, ಗ್ರಾಮೀಣ ಮಹಿಳೆಯರಿಗೆ ದೊರೆಯಬೇಕಾದ ಸೌಲಭ್ಯಗಳ ವಂಚನೆಯಾಗಿದೆ. ರಾಜ್ಯಾದ್ಯಂತ ಅನೇಕ ಕಡೆಗಳಲ್ಲಿ ಕಂಡುಬಂದಿರುವ ನೀರಿನ ಬವಣೆ ಮಹಿಳೆಯರ ದೈಹಿಕ ಮತ್ತು ಮಾನಸಿಕ ಆರೋಗ್ಯದ ಮೇಲೆ ಬಹಳ ಒತ್ತಡ ತರುತ್ತಿರುವುದರಿಂದ, ಕುಡಿಯುವ ನೀರಿನ ಸಮಸ್ಯೆಗೆ ಶಾಶ್ವತ ಪರಿಹಾರವನ್ನು ಕಂಡುಕೊಳ್ಳುವ ವ್ಯವಸ್ಥೆಯಾಗಬೇಕಾಗಿದೆ. ಗ್ರಾಮೀಣ ಮಟ್ಟದಲ್ಲಿ ಕುಡಿಯುವ ನೀರಿನ ಯೋಜನೆ ತಯಾರಿಸುವ ಹಂತದಲ್ಲಿ, ವಿತರಣೆ ಮತ್ತು ಇತರ ವ್ಯವಸ್ಥಾಪಕ ಕಾರ್ಯಗಳನ್ನು ನಡೆಸುವ ಸಲುವಾಗಿ ಪ್ರತಿ ಸ್ಥಳೀಯ ಸಂಸ್ಥೆಯ ಮಹಿಳಾ ಸದಸ್ಯರು ಪರಿಣಾಮಕಾರಿಯಾಗಿ ಭಾಗವಹಿಸಿದಲ್ಲಿ, ಗ್ರಾಮಗಳಲ್ಲಿ ಕುಡಿಯುವ ನೀರು ಎಲ್ಲರಿಗೂ ಸಿಗುವಂತಾಗುತ್ತದೆ.

ಬಹುತೇಕ ಗ್ರಾಮೀಣ ಮಹಿಳೆಯರು ಸೌದೆಗಳಿಂದಲೇ ಅಡಿಗೆ ಮಾಡುತ್ತಾರೆ. ಇದರಿಂದ ಕಣ್ಣಿನ ಬಾಧೆಗೊಳಗಾಗುತ್ತಾರೆ. ಅವರ ಕಣ್ಣಿನ ರೋಗಗಳನ್ನು ತಡೆಯಲು ಹೊಗೆರಹಿತ ಒಲೆಗಳು, ಸೂಕ್ತ ಅಡಿಗೆಮನೆಯನ್ನು ಹೊಗೆರಹಿತವನ್ನಾಗಿ ಇರಿಸಿಕೊಂಡು ತಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳಲು ಮಹಿಳೆಯರಿಗೆ ಸಹಾಯ ಮಾಡುವ ಸಲುವಾಗಿ ಸಮಗ್ರ ಗ್ರಾಮೀಣ ಇಂಧನ ಕಾರ್ಯಕ್ರಮ,

ರಾಷ್ಟ್ರೀಯ ಸುಧಾರಿತ ಒಲೆ ಹಾಗೂ ಜೈವಾನಿಲ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಗುತ್ತಿದೆ. ಈ ಸೌಲಭ್ಯಗಳನ್ನು ಪರಿಣಾಮಕಾರಿಯಾಗಿ ಉಯೋಗಿಸಿಕೊಳ್ಳುವ ಬಗ್ಗೆ ಗ್ರಾಮೀಣ ಮಹಿಳೆಯರಿಗೆ ಸ್ಥಳೀಯ ಸಂಸ್ಥೆಯ ಮಹಿಳಾ ಸದಸ್ಯರು ಜಾಗೃತಿ ಮೂಡಿಸಬೇಕಾಗಿದೆ.

ಬಾಲ್ಯವಿವಾಹವು ಗ್ರಾಮೀಣ ಪ್ರದೇಶಗಳ ಒಂದು ಪ್ರಮುಖ ಸಮಸ್ಯೆಯಾಗಿದ್ದು, ಇದು ಗಂಡು ಮತ್ತು ಹೆಣ್ಣುಮಕ್ಕಳಿಬ್ಬರ ಮೇಲೆ ದುಷ್ಪರಿಣಾಮ ಬೀರುತ್ತಿದೆ. ಅದರಲ್ಲೂ ವಿಶೇಷವಾಗಿ ಹೆಣ್ಣುಮಕ್ಕಳ ಮೇಲೆ ಹೆಚ್ಚು ದುಷ್ಪರಿಣಾಮ ಬೀರುತ್ತಿದೆ. ಅವಳ ವಿದ್ಯಾಭ್ಯಾಸ ನಿಲ್ಲುವುದಲ್ಲದೆ, ಚಿಕ್ಕ ವಯಸ್ಸಿನಲ್ಲೇ ಅವಳ ಮೇಲೆ ಮನೆ ಮತ್ತು ಮಕ್ಕಳ ಜವಾಬ್ದಾರಿ ಬೀಳುತ್ತಿದೆ. ಅಪೌಷ್ಟಿಕತೆಯೊಂದಿಗೆ ಶ್ರೀಘ್ರ ಗರ್ಭಧಾರಣೆಯು ಅನಾರೋಗ್ಯಕರ ಶಿಶುವಿಗೆ ಜನನ ಕೊಡಲು ಕಾರಣವಾಗುತ್ತದೆ. ಇದನ್ನು ಪರಿಗಣಿಸಿ, ಬಾಲ್ಯ ವಿವಾಹಕ್ಕೆ ಇರುವ ಕಾನೂನನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವಲ್ಲಿ ಸ್ಥಳೀಯ ಸಂಸ್ಥೆಯ ಮಹಿಳಾ ಸದಸ್ಯರು ಸಕ್ರಿಯವಾಗಿ ಭಾಗವಹಿಸಿದರೆ, ಕಡಿಮೆ ವಯಸ್ಸಿನ ಮಹಿಳೆಯರು ತಮ್ಮ ಶಿಕ್ಷಣವನ್ನು ಮುಂದುವರೆಸಲು ಸಹಾಯವಾಗುವುದಲ್ಲದೆ, ಅವರ ಆರೋಗ್ಯವೂ ಸುಧಾರಿಸುತ್ತದೆ. ಮಹಿಳಾ ಶಿಕ್ಷಣ ಮತ್ತು ಆರೋಗ್ಯದಲ್ಲಾಗುವ ಪ್ರಗತಿ ಗ್ರಾಮೀಣಾಭಿವೃದ್ಧಿಗೆ ಇಂಬು ಕೊಡುತ್ತದೆ. ಇದರ ಜೊತೆಗೆ ಗ್ರಾಮೀಣ ರಸ್ತೆಗಳು ಹಾಗೂ ವಾಹನ ವ್ಯವಸ್ಥೆಗಳ ಸುಧಾರಣೆಯತ್ತ ಶ್ರಮಿಸಿದಲ್ಲಿ, ಬಾಲಕಿಯರು ಶಾಲಾ ಕಾಲೇಜುಗಳಿಗೆ ಹೋಗಲು ಹಾಗೂ ಮಹಿಳೆಯರು ಆರೋಗ್ಯ ಕೇಂದ್ರಗಳ ಸಂಪೂರ್ಣ ಪ್ರಯೋಜನ ಪಡೆಯಲು ಆಸ್ಪದವಾಗುತ್ತದೆ.

ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಶೇ.೩೩.೩೩ ರಷ್ಟು ಸ್ಥಾನಗಳನ್ನು ಮಹಿಳೆಯರಿಗೆ ಮೀಸಲಿಡಲಾಗಿದೆ. ಈ ಮೀಸಲಾತಿಯ ಸದುಪಯೋಗವನ್ನು ಗ್ರಾಮೀಣ ಮಹಿಳೆಯರು ಪಡೆದುಕೊಳ್ಳಬೇಕು. ಮಹಿಳೆಯರು ತಮ್ಮ ಹಕ್ಕು ಜವಾಬ್ದಾರಿಗಳನ್ನು ಅರಿತು ವಿಕೇಂದ್ರೀಕೃತ ಆಡಳಿತ ವ್ಯವಸ್ಥೆಯಲ್ಲಿ ಪಾಲ್ಗೊಳ್ಳಬೇಕು. ಮುಖ್ಯವಾಗಿ ವಿದ್ಯಾವಂತ ಮಹಿಳೆಯರು, ಯುವತಿಯರು ಪಂಚಾಯತ್ ರಾಜ್ ವ್ಯವಸ್ಥೆಯ ಮುಖೇನ ಗ್ರಾಮಾಭಿವೃದ್ಧಿ ಕಾರ್ಯಗಳನ್ನು ಕೈಗೆತ್ತಿಕೊಳ್ಳಬೇಕು. ಸದ್ಯದ ಪರಿಸ್ಥಿಯಲ್ಲಿ ಮೀಸಲಾತಿ ಇದ್ದರೂ, ಮಹಿಳೆಯರನ್ನು ಒತ್ತಾಯಪೂರ್ವಕವಾಗಿ ಚುನಾವಣೆಗೆ ನಿಲ್ಲಿಸಬೇಕಾಗಿದೆ. ಈ ಪರಿಸ್ಥಿತಿ ಬದಲಾಗಿ, ಮಹಿಳೆಯರು ಮುಂದೆ ಬಂದು, ಪಂಚಾಯತ್ ಚುನಾವಣೆಗಳಲ್ಲಿ ಸ್ಪರ್ಧಿಸಿ, ಆಯ್ಕೆಯಾಗಿ, ಉತ್ತಮ ಕೆಲಸಗಳನ್ನು ಮಾಡಬೇಕಿದೆ. ಮೀಸಲಾತಿಯಿಂದ ಇಷ್ಟೆಲ್ಲಾ ಅವಕಾಶಗಳಿದ್ದರೂ ರಾಜಕೀಯ ಅನುಭವದ ಕೊರತೆ ಮತ್ತು ಅವಿದ್ಯಾವಂತಿಕೆಯಿಂದ ಮಹಿಳೆಯರಿಂದ ದಕ್ಷ ಆಡಳಿತ ನಡೆಸಲು ಸಾಧ್ಯವಿಲ್ಲವೆಂಬ ಮಾತು ಕೇಳಿಬರುತ್ತಿದೆ. ಆದರೆ, ಮಹಿಳೆಯರು ಹೆಚ್ಚಿನ ಕಾಳಜಿವಹಿಸಿ ಉತ್ತಮ ರೀತಿಯಲ್ಲಿ ತರಬೇತಿಗಳನ್ನು ಪಡೆದು, ಪಂಚಾಯತ್ ವ್ಯವಸ್ಥೆ ಬಗ್ಗೆ ಅರಿವನ್ನು ಪಡೆದು, ಅವಕಾಶವನ್ನು ಸದುಪಯೋಗಿಸಿಕೊಳ್ಳಬೇಕು. ಕರ್ನಾಟಕದಲ್ಲಿ ಕಳೆದ ಅವಧಿಯಲ್ಲಿ ಶಿವಮೊಗ್ಗ ಜಿಲ್ಲೆಯ ಮೈದೂಳು ಗ್ರಾಮಪಂಚಾಯತ್ ಮಹಿಳಾ ಪಂಚಾಯತ್ ಆಗಿತ್ತು. ಈಗ ಬೀದರ್ ಜಿಲ್ಲೆಯ ವಾಂಜರಬೇಡ ಮತ್ತು ಗುಲ್ಬರ್ಗಾ ಜಿಲ್ಲೆಯ ಅಥನೂರು ಗ್ರಾಮಪಂಚಾಯತ್‌ಗಳು ಮಹಿಳಾ ಪಂಚಾಯತ್ (ಪೂರ್ತಿ ಮಹಿಳಾ ಸದಸ್ಯರೆ) ಗಳೇ ಆಗಿದ್ದು, ಮದ್ಯಪಾನ ನಿಷೇಧ, ಕುಡಿಯುವ ನೀರಿನ ಸೌಲಭ್ಯ ಕಲ್ಪಿಸುವ ಮಹತ್ವದ ಯೋಜನೆಗಳನ್ನು ಯಶಸ್ವಿಯಾಗಿ ಜಾರಿಗೆ ತಂದು ಗ್ರಾಮೀಣ ಮಹಿಳೆಯರು ಸಮರ್ಥವಾಗಿ ಆಡಳಿತ ನಡೆಸಬಲ್ಲರು ಎಂದು ನಾಡಿಗೆ ಸಾರಿ ತೋರಿಸಿದ್ದಾರೆ. ಇಂತಹ ಪಂಚಾಯತ್‌ಗಳು ಮತ್ತು ಅವರ ಕಾರ್ಯಸಾಧನೆಗಳು ನಾಡಿನ ಎಲ್ಲಾ ಮಹಿಳೆಯರಿಗೂ ಪ್ರೇರಣೆಯಾಗಬೇಕು. ಇಂತಹ ಅಂಶಗಳಿಂದ ಸ್ಫೂರ್ತಿ ಪಡೆಯಲು ಎಲ್ಲಾ ಮಹಿಳೆಯರು ಸಂಪೂರ್ಣವಾಗಿ ಸದೃಢರಾಗಿರಬೇಕು.

●




# ಅಭಿವೃದ್ಧಿಯಲ್ಲಿ ಮಹಿಳೆಯರು

ಕೆ. ಎಂ. ವಿಜಯಲಕ್ಷ್ಮಿ

ಗ್ರಾಮೀಣ ಅಭಿವೃದ್ಧಿಗೆ ಮಹಿಳೆಯರು ವಿವಿಧ ರೀತಿಯಲ್ಲಿ ಸೇರ್ಪಡೆಗೊಂಡಿದ್ದು ಎರಡು ಕಾರಣಗಳಿಂದ. ಒಂದು, ಸಮಾಜಕ್ಕೊಂದು ಸ್ವರೂಪ ಬರುವುದು ಪುರುಷ ಒಬ್ಬನಿಂದಲೇ ಅಲ್ಲ, ಸ್ತ್ರೀಯೂ ಅದರಲ್ಲಿ ಸೇರಿದ್ದಾಳೆ. ದೇಶ ಮತ್ತು ಸಮಾಜದ ಪ್ರಗತಿಯ ಕಾರ್ಯದಲ್ಲಿ ಸ್ತ್ರೀಯ ಪ್ರಗತಿಯೂ ಸೇರಿರುವುದರಿಂದ ಮಹಿಳೆಯರಿಗೂ ಪುರುಷ-ಸಮಾನ ಗೌರವ ಹಾಗೂ ಅವಕಾಶಗಳು ದೊರೆಯಬೇಕೆಂಬ ಬೇಡಿಕೆಯನ್ನು ಮಂಡಿಸಿ ಮಹಿಳೆಯರು ದೇಶಾದ್ಯಂತ ನಡೆಸಿದ ಮಹಿಳಾ ಚಳವಳಿ ಮತ್ತು ಆ ಮೂಲಕ ಸರ್ಕಾರ ಹಾಗೂ ಸರ್ಕಾರೇತರ ವಲಯಗಳಲ್ಲಿ ಗ್ರಾಮೀಣ ಮಹಿಳೆಯರನ್ನೊಳಗೊಳಿಸಿ ಹಾಕಿಕೊಂಡ ಯೋಜನೆಗಳು. ಎರಡನೆಯದು, ಜಿಲ್ಲಾ ಮತ್ತು ಗ್ರಾಮ ಪಂಚಾಯತಿಗಳಲ್ಲಿ ಸ್ತ್ರೀಯರಿಗೆ ಮೀಸಲಾತಿ ದೊರೆತುದರಿಂದ. ವೈಯಕ್ತಿಕ ಆಸಕ್ತಿ ಮತ್ತು ಪ್ರತಿಭೆಗಳಿಂದ ಗ್ರಾಮೀಣ ಪರಿಸರ ಹಾಗೂ ಕರಕುಶಲ ಕಲೆಗಳ ಉನ್ನತಿಗೆ ಕೈ ಜೋಡಿಸಿದ ಮಹಿಳೆಯರೂ ಇಲ್ಲದೇನಿಲ್ಲ.

***ದೇಶದಲ್ಲಿ ಸಾಮಾನ್ಯರಿಂದ ಅಸಾಮಾನ್ಯರವರೆಗೆ ಹಲವು ಮಹಿಳೆಯರು ಅಭಿವೃದ್ಧಿಗೆ ತಮ್ಮದೇ ಆದ ಕೊಡುಗೆ ನೀಡಿದ್ದಾರೆ. ಅದರಲ್ಲೂ ಗ್ರಾಮೀಣ ಸ್ತ್ರೀಯರು ಶ್ರಮಿಸಿದರೆ ಬಡತನ, ಅನಕ್ಷರತೆ, ಮದ್ಯವ್ಯಸನ ಮುಂತಾದ ಸಾಮಾಜಿಕ ಪಿಡುಗುಗಳು ಇಲ್ಲದಂತಾಗುತ್ತವೆ.***

ಮಹಿಳಾ ಚಳವಳಿಯ ಕಾರಣದಿಂದ, ತಾವೂ ಆರ್ಥಿಕವಾಗಿ ಸ್ವಾವಲಂಬಿಗಳಾಗಬೇಕೆಂಬ ಮನೋಭಾವನೆಯಿಂದ ನಗರ ಮತ್ತು ಗ್ರಾಮೀಣ ಪ್ರದೇಶಗಳ ಮಹಿಳೆಯರು ವಿವಿಧ ರೀತಿಯ ದುಡಿಮೆಗೆ ತೊಡಗಿಕೊಳ್ಳತೊಡಗಿದರು. ಅವರ ಈ ಆದಾಯ ಗಳಿಸುವ ಆಲೋಚನೆಗೆ, ಉತ್ಪಾದನಾ ಕಾರ್ಯದಲ್ಲಿ ತೊಡಗುವುದಕ್ಕೆ ಕೇಂದ್ರ ಸರ್ಕಾರದ ಸ್ವಸಹಾಯ ಗುಂಪುಗಳ ಯೋಜನೆ ಮತ್ತು ರಾಜ್ಯ ಸರ್ಕಾರದ ಸ್ತ್ರೀ ಶಕ್ತಿ ಯೋಜನೆಗಳು ಆಧಾರ ಹಾಗೂ ನೆರವು ನೀಡಿದವು. ಆಲೋಚನೆಗೆ, ಗಳಿಕೆಗೆ, ಮಾತಿಗೆ ಮತ್ತು ಸಂಘಟನೆಗೆ ಅವಕಾಶವನ್ನು ಒದಗಿಸಿಕೊಟ್ಟು ಸ್ವಸಹಾಯ ಗುಂಪುಗಳನ್ನು ರಚಿಸುವ ಯೋಜನೆಯಿಂದ ಮಹಿಳೆಯರು ವಿವಿಧ ರೀತಿಯಲ್ಲಿ ಜಾಗೃತಿಗೊಂಡರು. ಇಂದು ಈ ಸ್ವಸಹಾಯ ಗುಂಪುಗಳು, ಗ್ರಾಮೀಣ ಪ್ರದೇಶದಲ್ಲಿ ಅರಿವು ಮೂಡಿಸುವ ಗುರುವಾಗಿ, ಸಂಘಟನೆಯ ಮಾರ್ಗವಾಗಿ, ಹಕ್ಕುಗಳನ್ನು ರಕ್ಷಿಸುವ ಬಹು ದೊಡ್ಡ ಶಕ್ತಿಯಾಗಿ ಬೆಳೆಯುತ್ತಿವೆ. ಮಹಿಳೆಯರ ಆರ್ಥಿಕ ಪ್ರಗತಿ ಸಾಧಿಸುವಂತಹ ಹಾಗೂ ಸಾಮಾಜಿಕ ಬದಲಾವಣೆಗೆ ಸೂಕ್ತ ವಾತಾವರಣವನ್ನು ಕಲ್ಪಿಸುವುದು, ಮಹಿಳೆಯರಲ್ಲಿ ಆತ್ಮವಿಶ್ವಾಸ ಮತ್ತು ಸ್ವಾವಲಂಬನೆಗೆ ಪ್ರೇರಣೆ ನೀಡುವುದು, ಆದಾಯೋತ್ಪನ್ನ ಚಟುವಟಿಕೆಗಳಲ್ಲಿ ಮಹಿಳೆಯರನ್ನು ತೊಡಗಿಸುವುದರ ಮೂಲಕ

ಅವರ ಆದಾಯ ಹೆಚ್ಚಿಸಿ, ಆರ್ಥಿಕ ಸ್ಥಿರತೆಯನ್ನು ತಂದು ಕೊಡುವುದು, ಹಾಗೂ ವಿವಿಧ ಇಲಾಖೆಗಳಿಂದ ಮಹಿಳಾ ಗುಂಪಿನ ಸದಸ್ಯೆಯರಿಗೆ ಅಭಿವೃದ್ಧಿ ಕಾರ್ಯಕ್ರಮಗಳ ಫಲ ಸಿಗುವಂತೆ ಮಾಡುವುದು ಮುಂತಾದ ಮುಖ್ಯ ಧ್ಯೇಯೋದ್ದೇಶಗಳನ್ನು ಈ ಸ್ವಸಹಾಯ ಸಂಘಗಳು ಒಳಗೊಂಡಿವೆ. ಕೇಂದ್ರದಲ್ಲಿ ಇಂದಿರಾ ಗ್ರಾಮೀಣ ಯೋಜನೆಯ ರೂಪದಲ್ಲೇ ರಾಜ್ಯದಲ್ಲಿ 'ಸ್ತ್ರೀ ಶಕ್ತಿ ಯೋಜನೆ'ಯು, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಮೂಲಕ, ೨೦೦೦ನೇ ಸಾಲಿನ ಅಕ್ಟೋಬರ್ ತಿಂಗಳಲ್ಲಿ ಆರಂಭಗೊಂಡಿದ್ದು, ಈಗ ಇದರಡಿ ೭೯೪೬೨ ಗುಂಪುಗಳಿವೆ. ೧೧.೮೩ ಲಕ್ಷ ಸದಸ್ಯೆಯರಿದ್ದು, ನೂರಾಮೂವತ್ತೊಂದು ಕೋಟಿ ಹಣ ಉಳಿತಾಯವಾಗಿರುವುದು ಬೆಳವಣಿಗೆಯ ದ್ಯೋತಕವೇ.

ರಾಜ್ಯದಲ್ಲಿ ಇತರ ಖಾಸಗಿ ಸ್ವಸಹಾಯ ಗುಂಪುಗಳೂ ಇದ್ದು, ಅವನ್ನೂ ಪರಿಗಣಿಸಿದರೆ ಒಂದು ಲಕ್ಷಕ್ಕೂ ಹೆಚ್ಚು ಗುಂಪುಗಳೂ ಇಪ್ಪತ್ತು ಲಕ್ಷಕ್ಕೂ ಹೆಚ್ಚು ಮಹಿಳೆಯರೂ ಇದರ ಮೂಲಕ ಸಂಘಟಿತರಾಗಿದ್ದಾರೆಂದು ತಿಳಿದುಬಂದಿದೆ. ಕನಿಷ್ಠ ಆರು ತಿಂಗಳ ಕಾಲ ಉಳಿತಾಯ ನಿರ್ವಹಿಸಿರುವ ಸ್ವಸಹಾಯ ಗುಂಪುಗಳಿಗೆ ತಲಾ ೫೦೦೦ ರೂಪಾಯಿಗಳಂತೆ ಸುತ್ತು ನಿಧಿಯನ್ನು ಉಪಯೋಗಿಸಿಕೊಂಡು ಸದಸ್ಯರು ಸಾಲದ ಚಟುವಟಿಕೆಗಳನ್ನು ಆರಂಭಿಸುತ್ತಾರೆ. ಪಡೆದ ಸಾಲವನ್ನು ಸಕಾಲದಲ್ಲಿ ಮರುಪಾವತಿ ಮಾಡುವುದಕ್ಕೆ ಹಾಗೂ ಇನ್ನಿತರ ಹಣಕಾಸು ಬಳಕೆಗೆ ಸಂಬಂಧಿಸಿದಂತೆ ಆಯಾ ತಾಲ್ಲೂಕಿನ ಸಹಾಯ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ಮೇಲ್ವಿಚಾರಣೆ ನಡೆಸುತ್ತಾರೆ. ಇದು ಯೋಜನೆಯ ಸ್ವರೂಪ. ಸ್ವಸಹಾಯ ಸಂಘಗಳ ರಚನೆಯ ನಂತರ, ಗ್ರಾಮ ಮಟ್ಟದಲ್ಲಿ ಹೊಸ ಉತ್ಸಾಹದ ಅಲೆ ಎದ್ದಿದೆ. ಹಣ ಉಳಿತಾಯಕ್ಕೆ, ಸ್ವಂತ ಅಗತ್ಯದ ಖರ್ಚಿಗೆ, ಕುಡುಕ ಗಂಡನಿಂದ ಹಣ ಸಂರಕ್ಷಣೆಗೆ ಪರದಾಡುತ್ತಿದ್ದ ಹಳ್ಳಿ ಹೆಂಗಸರಿಗೆ ಹಣ ಕೂಡಿಡಲು ಸಿಕ್ಕಿರುವ ಒಳ್ಳೆಯ ಮಾರ್ಗ ಇದು. ಎಷ್ಟೇ ದುಡಿದರೂ ಸಂಬಳ ಕೊಡುವವರಿಲ್ಲದೆ, ಸಣ್ಣ ಪುಟ್ಟ ಖರ್ಚಿಗೂ ಪುರುಷರನ್ನು ಅವಲಂಬಿಸುತ್ತಿದ್ದ ಮಹಿಳೆಯರು ಈಗ ಸ್ವಂತ ಉದ್ಯೋಗ, ಮಕ್ಕಳ ವಿದ್ಯಾಭ್ಯಾಸ, ಹೈನುಗಾರಿಕೆ, ಸಣ್ಣ ಪುಟ್ಟ ಸಮಾರಂಭಗಳು ಮುಂತಾದುವುಗಳಿಗೆ ಸ್ವಸಹಾಯ ಸಂಘಗಳಿಂದ ನಿರಾಯಾಸವಾಗಿ ಹಣ ಪಡೆದು, ತಮ್ಮ ಮತ್ತು ಕುಟುಂಬದ ಏಳಿಗೆಗೆ, ಆ ಮೂಲಕ ಗ್ರಾಮಗಳ ಏಳಿಗೆಗೆ ಬಾಧ್ಯರಾಗುತ್ತಿದ್ದಾರೆ. ಬ್ಯಾಂಕಿನ ಮೂಲಕ ಸಾಲ ವ್ಯವಹಾರ ಮಾಡುವುದು, ವಾರಕ್ಕೊಮ್ಮೆ ಸಭೆ ಸೇರಿ ಚರ್ಚಿಸುವುದು, ಮುಂದಿನ ಯೋಜನೆ ರೂಪಿಸುವುದು, ಮುಂತಾದ ಕ್ರಮದಿಂದ ವ್ಯಕ್ತಿತ್ವದಿಂದ ವಿಕಸನಗೊಳಿಸಿಕೊಳ್ಳುತ್ತಿರುವುದಲ್ಲದೇ, ಬ್ಯಾಂಕಿನ ವ್ಯವಹಾರ, ಉಳಿತಾಯದ ಸಫಲತೆ ಮತ್ತು ಜಗತ್ತಿನ ಹಲವಾರು ವಿಷಯಗಳ ಬಗ್ಗೆ ಅರಿವು ಪಡೆದುಕೊಂಡು ಜ್ಞಾನವೃದ್ಧಿಸಿಕೊಳ್ಳುತ್ತಿದ್ದಾರೆ. ಒಬ್ಬೊಬ್ಬ ವ್ಯಕ್ತಿಯೂ ಈ ಅರಿವು, ಜ್ಞಾನ, ಶಕ್ತಿ, ಆದಾಯ ಮತ್ತು ಒಗ್ಗಟ್ಟುಗಳನ್ನು ವಿಸ್ತರಿಸಿಕೊಂಡರೆ ತಮ್ಮ ಮೂಲಕ ಉಳಿದವರಿಗೂ ಇದೇ ಅರಿವು, ಜ್ಞಾನ, ಶಕ್ತಿ ಆದಾಯಗಳನ್ನು ಹೆಚ್ಚಿಸುತ್ತ ಹೋದರೆ ಅದಕ್ಕಿಂತ ಹೆಚ್ಚಿನ ಪ್ರಗತಿ ಇನ್ನೇನಿದೆ? ಇಂಥ ಹೆಂಗಸರು, ತಮ್ಮ ಈ ಅರಿವು ಮತ್ತು ಶಕ್ತಿಗಳಿಂದ ಸಮಾಜದಲ್ಲಿನ ದುಶ್ಚಟಗಳನ್ನು ಹೇಗೆ ನಿವಾರಿಸಬಹುದು ಎಂಬುದಕ್ಕೆ ಒಂದೆರಡು ಘಟನೆಗಳನ್ನು ಇಲ್ಲಿ ಉದಾಹರಿಸಬಹುದು.

ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ ನೇರಳಕುಪ್ಪೆ ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿ ಬರುವ ಆರು ಗ್ರಾಮಗಳಾದ ಕೆಚುವಿನಹಳ್ಳಿ, ನೇರಳೆಕುಪ್ಪೆ, ಕಾಳಬೂತನಹಳ್ಳಿ, ಉಡುವೀಪುರ, ಬಿಲ್ಲೇನಹೊಸಳ್ಳಿ ಮತ್ತು ಹನಗೂರು ಗ್ರಾಮಗಳ ಹದಿಮೂರು ಸ್ತ್ರೀಶಕ್ತಿ ಗುಂಪಿನ ಸ್ತ್ರೀಯರು, ತಮ್ಮ ವ್ಯಾಪ್ತಿಯ ಗ್ರಾಮಗಳಲ್ಲಿನ ಸುಮಾರು ಏಳುನೂರು ಸ್ತ್ರೀಯರನ್ನು ಒಟ್ಟುಗೂಡಿಸಿ ಬೀದಿಬೀದಿಗಳಲ್ಲಿ ಪ್ರತಿಭಟನೆಯ ಜಾಥಾ ನಡೆಸಿ ಸಾರಾಯಿ ಅಂಗಡಿಗಳನ್ನು ಮುಚ್ಚಿಸಿದ್ದು ಒಂದು ಪ್ರಗತಿಪರ ಸಂಗತಿ. ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ ಮಳಲಿ ಗ್ರಾಮವನ್ನೂ ವ್ಯಸನಮುಕ್ತವಾಗಿಸಿದ ಹಿರಿಮೆ ಆ ಗ್ರಾಮದ ಹತ್ತು ಸ್ತ್ರೀ ಶಕ್ತಿ ಗುಂಪಿನ ಸ್ತ್ರೀಯರಿಗೆ ಸೇರಿದ್ದು. ಪ್ರತಿ ಬೆಳಗು ಮತ್ತು ಸಂಜೆಗಳಲ್ಲಿ ಸರಬರಾಜಾಗುತ್ತಿದ್ದ ಸಾರಾಯಿ ಪ್ಯಾಕೆಟುಗಳ ಹಾಳು ದಾಳಿ ನಿಲ್ಲಿಸಲು ಆ ಗ್ರಾಮದಲ್ಲಿದ್ದ ನಾಲ್ಕು ಸಾವಿರ ಹೆಂಗಸರು ಒಂದುಗೂಡಿದರು. ಊರಿನಲ್ಲಿ ಡಂಗೂರ ಸಾರಿಸಿ, ಜಾಥಾ ಹೊರಡಿಸಿ, ಸಾರಾಯಿ ಮಾರಿದವರಿಗೆ ಐದುಸಾವಿರದಂತೆ ಮತ್ತು ಗುಟಕಾ ಮಾರಿದವರಿಗೆ ಒಂದು ಸಾವಿರ ರೂಪಾಯಿಗಳಂತೆ, ಆ ನಂತರವೂ ಕದ್ದು ಮುಚ್ಚಿ ಚಹಾದಂಗಡಿಯಲ್ಲಿ ಸಾರಾಯಿ ಕೊಡುತ್ತಿದ್ದವರಿಗೆ ಆರುಸಾವಿರ ರೂಪಾಯಿಗಳಂತೆ, ಗ್ರಾಮಪಂಚಾಯತ್ ಅಧ್ಯಕ್ಷರು ಹಾಗೂ ಸದಸ್ಯರ ಮುಂದೆಯೇ ದಂಡ ವಿಧಿಸಿದರು. ಮತ್ತೆ ಮತ್ತೆ ಕಾಣಿಸಿಕೊಂಡ ಸಾರಾಯಿ ಸರಬರಾಜಿಗೆ ಸಂಬಂಧಿಸಿದವರನ್ನು ಪೋಲೀಸರ ವಶಕ್ಕೊಪ್ಪಿಸಿ, ಗುಟಕಾ ಮತ್ತೆ ಹಳ್ಳಿಗೆ ಬಾರದಂತೆ ನೋಡಿಕೊಂಡರು. ಈ ಸ್ತ್ರೀಯರ ಸತತ ಪ್ರಯತ್ನ ತಮ್ಮ ಗ್ರಾಮವನ್ನು 'ಗುಟಕಾ ಹಾಗೂ ಮದ್ಯಪಾನಮುಕ್ತ

ಗ್ರಾಮ' ವೆಂಬ ಘೋಷಣೆ ಹೊರಡಿಸಲು ಜಿಲ್ಲಾಧಿಕಾರಿಗಳಿಗೆ ಒಡ್ಡಿದ ಆಗ್ರಹ, ಅದಕ್ಕೆ ಸಿಕ್ಕ ಯಶಸ್ಸು ಎಲ್ಲವೂ ಉಲ್ಲೇಖನೀಯ. ಇದೇ ರೀತಿ, ಹಾಸನ ಜಿಲ್ಲೆಯ ಪ್ರತಿ ಹಳ್ಳಿಗಳಲ್ಲಿ ಸಾರಾಯಿ ವಿರೋಧಿ ಧ್ವನಿ ಎದ್ದಿದ್ದು ಸ್ತ್ರೀಯರ ಮೂಲಕವೇ. ಸಾರಾಯಿ ಪಿಡುಗನ್ನು ತೊಡೆಯಲು ಸಿಡಿದೆದ್ದವರಲ್ಲಿ ಮಳವಳ್ಳಿ ಬಳಿಯ ಕೊನಗಪುರದ 'ಜೈ ಭಾರತ ಮಹಿಳಾ ಸ್ವಸಹಾಯ ಸಂಘ'ವೂ ಒಂದು. ಇಲ್ಲಿಯ ಸದಸ್ಯೆಯರು ಸುತ್ತಲಿನ ನಾಲ್ಕು ಹಳ್ಳಿಯ ಸಂಘಗಳೊಂದಿಗೆ ಸೇರಿ ಸಾರಾಯಿ ಪಿಡುಗನ್ನು ತೊಡೆದಿದ್ದಾರೆ. ಕುಡುಕರಿಂದ ಹಿಂಸೆ ಪಟ್ಟವರು, ಗಂಡಂದಿರಿಂದ ಹೊಡೆತ ತಿಂದವರು, ಗಂಡಸರ ಕುಡಿತದಿಂದ ಹಣ ಕಳೆದುಕೊಂಡವರು-ಎಲ್ಲ ಮಾರಿಗುಡಿಯಲ್ಲಿ ಸಭೆ ಸೇರಿ ಸಾರಾಯಿ ಸಮಸ್ಯೆಗೆ ಪರಿಹಾರ ಹುಡುಕಿದರು. ಒಟ್ಟಾಗಿ ಹೋಗಿ ಸಾರಾಯಿ ಅಂಗಡಿ ಮುಚ್ಚಲು ನಿರ್ಧರಿಸಿದರು. ಸಾರಾಯಿ ಪ್ಯಾಕೆಟ್‌ನ ಲಾರಿಗೇ ಅಡ್ಡ ನಿಂತು ಲಾರಿಯಿಂದ ಪ್ಯಾಕೆಟ್‌ಗಳನ್ನು ಕೆಳಗಿಳಿಸಿಕೊಳ್ಳಲು ಬಿಡದೇ ಲಾರಿಯನ್ನು ಹಿಂದಕ್ಕೋಡಿಸಿದರು. ಈ ಕಾರಣಕ್ಕೆ ಮನೆಯ ಕುಡುಕ-ಪುರುಷರು ಸ್ವಸಹಾಯ ಗುಂಪಿಗೆ ಹೋಗದಂತೆ ಮನೆಯಲ್ಲಿ ಹಾಕಿದ ಅಡ್ಡಬೇಲಿಗಳನ್ನು ಹಾರಿ ಹೋಗಿ ಸಾರಾಯಿ ಅಂಗಡಿ ಮುಚ್ಚುವಂತೆ ನೋಡಿಕೊಳ್ಳುವಲ್ಲಿ ಸಫಲರಾದರು.

ಇಪ್ಪತ್ತೇಳು ಜನ ಕಾರ್ಯಕರ್ತರ ನೆರವಿನೊಂದಿಗೆ ೧೯೯೩ ರಲ್ಲಿ ಆರಂಭಗೊಂಡ ವಿಜಾಪುರದ 'ಉಜ್ವಲ ಸಂಸ್ಥೆ' ಮತ್ತು 'ಸಬಲಾ' ಸಂಸ್ಥೆಗಳು ಲಂಬಾಣಿಗಳ ಕಸೂತಿ ಕಲೆಯ ನೈಪುಣ್ಯತೆಯನ್ನೇ ಅವರ ಪ್ರಗತಿಗೆ ಸೋಪಾನವಾಗಿಸಿದ ಸೇವಾ ಸಂಸ್ಥೆಗಳು. 'ಉಜ್ವಲ ಸಂಸ್ಥೆ' ದುರ್ಬಲರ ಸೇವೆಯ ಉದ್ದೇಶದಿಂದ ಆರಂಭಗೊಂಡರೂ ಬಾಲ್ಯ ವಿವಾಹ, ಅಸಮ ವಿವಾಹಗಳನ್ನು ನಿಲ್ಲಿಸುವ ಕೆಲಸ ಮಾಡಿದೆ. ಹೊಟ್ಟೆ ಹೊರೆಯಲು ಬೇರೆ ಊರುಗಳಿಗೆ ವಲಸೆ ಹೋಗುತ್ತಿದ್ದ ತಾಂಡಾಗಳಲ್ಲಿನ ಎಂಬತ್ತೈದು ಮಹಿಳೆಯರನ್ನು ಗುರುತಿಸಿ, ಕಸೂತಿಯ ತಾಂತ್ರಿಕ ತರಬೇತಿ ನೀಡಿ, ಲಂಬಾಣಿಗರ ಸಿದ್ಧ ಉಡುಪುಗಳನ್ನು ತಯಾರಿಸುವ ಕಾರ್ಯ ಪ್ರಾರಂಭಿಸಿದೆ. ಮಲ್ಲಮ್ಮಾ ಳವಾರರು ಇದರ ನಿರ್ದೇಶಕಿ. ವಿಜಾಪುರ, ಇಂಡಿ, ಸಿಂದಗಿಯ ಆಯ್ದ ಹನ್ನೆರಡು ತಾಂಡಾಗಳಲ್ಲಿ, ಆ ನಂತರ ಮದಬಾಂವಿಯ ಎರಡು ತಾಂಡಾಗಳಲ್ಲಿ; ಮಹಾಲ, ಐನಾಪುರ, ಮಿಂಚನಾಳ, ಪಡಗಾನೂರ, ಜಾಲಾದಿ ಮುಂತಾಗಿ ಹದಿನೈದು ತಾಂಡಾಗಳ ಮಹಿಳೆಯರನ್ನು ಸಂಘಟಿಸಿ, ಅವರ ಅರಿವಿನ ವಿಸ್ತಾರಕ್ಕೆ ಜಾಗೃತಿ ಶಿಬಿರಗಳನ್ನು ನಡೆಸಿತು. ಈ ಶಿಬಿರಗಳಲ್ಲಿ ಅವರು ನೀಡಿದ್ದು, ಇಂದಿನ ಪ್ರಮುಖ ಸಮಸ್ಯೆಗಳಾದ ವರದಕ್ಷಿಣೆ, ಬಾಲ್ಯ ವಿವಾಹ, ಮದ್ಯಪಾನ, ಕುಟುಂಬ ಯೋಜನೆ, ಸಣ್ಣ ಉಳಿತಾಯ, ಮಕ್ಕಳ ಶಿಕ್ಷಣ ಇತ್ಯಾದಿಗಳನ್ನು ಕುರಿತು ತಿಳುವಳಿಕೆ. ಆ ನಂತರ ಹೊಸ ಮಾದರಿಯ ವಸ್ತ್ರ ವಿನ್ಯಾಸ, ಆಧುನಿಕತೆಗೆ ಸೂಕ್ತ ಹೆಣಿಗೆ, ಹೆಣಿಗೆಯ ವೇಗವನ್ನು ಹೆಚ್ಚಿಸುವ ಬಗೆ ಮುಂತಾದುವುಗಳ ಬಗ್ಗೆ ತರಬೇತಿ, ಲಂಬಾಣಿ ಹೆಂಗಸರ ಸಾಂಪ್ರದಾಯಿಕ ಕಲೆಯನ್ನು ಆಧುನಿಕತೆಗೆ ಬಳಸಿಕೊಳ್ಳುವ ಮಾರ್ಗ ಮತ್ತು ಇವುಗಳ ಬಗ್ಗೆ ಜ್ಞಾನ. ಈ ತಿಳಿವಳಿಕೆಯಿಂದಾಗಿ ಲಂಬಾಣಿ ಜನರು ತಮ್ಮ ಮಕ್ಕಳಿಗೆ ಶಿಕ್ಷಣ ನೀಡಲು ಆರಂಭಿಸಿದರು. ಲಂಬಾಣಿ ಮಹಿಳೆಯರು ಗುಳೇ ಹೋಗುವುದನ್ನು ನಿಲ್ಲಿಸಿದರು. ಇದ್ದ ಅಲ್ಪ ಸ್ವಲ್ಪ ಜಮೀನಿನ ಸ್ಥಿತಿ ಸುಧಾರಣೆಗೆ ಮತ್ತು ಉತ್ಪಾದನಾ ಕಾರ್ಯಕ್ಕಾಗಿ ಈ ಸಂಸ್ಥೆ ಸಾಲಸೌಲಭ್ಯವನ್ನೂ ನೀಡಿ, ಮಹಿಳೆಯರು ಈ ಉತ್ಪಾದನೆಯಲ್ಲಿ ಉತ್ಸಾಹದಿಂದ ನಿರಂತರ ತೊಡಗಿಕೊಳ್ಳುವಂತೆ ಮಾಡಿದೆ. ಕನ್ನಡಿ ಕಸೂತಿ ಮತ್ತು ಹೆಣಿಗೆಯ ಬ್ಯಾಗ್‌ಗಳು, ಪರ್ಸ್‌ಗಳು, ಮಕ್ಕಳ ಬಟ್ಟೆ, ಮೇಜು ಕುರ್ಚಿಗಳ ಹೊದಿಕೆ, ಕುಷನ್ ಕವರ್ಸ್ ಇತ್ಯಾದಿ ಈ ಲಂಬಾಣಿ ಮಹಿಳೆಯರ ಮೂಲಕ ಸಿದ್ಧಗೊಳ್ಳುತ್ತಿವೆ. 'ಹಸ್ತ ಕಲಾ' ಈ ಸಿದ್ಧ ವಸ್ತುಗಳ ಮಾರಾಟಕ್ಕಾಗಿ ಆರಂಭಗೊಂಡ ಒಂದು ಉಪಸಂಸ್ಥೆ. ಮುಂಬೈ, ತ್ರಿವೆಂಡ್ರಂ, ಕೊಲ್ಕತ, ಬೆಂಗಳೂರು, ಚೆನ್ನೈ, ಮೈಸೂರು, ಮುಂತಾದ ನಗರಗಳಲ್ಲಿ; ದೆಹಲಿಯ ದಸ್ತಕಾರ್, ಇಂಟರ್‌ನ್ಯಾಷನಲ್ ಟ್ರೇಡ್ ಫೇರ್‌ನಲ್ಲಿ, ಕಾವೇರಿ ಶೋರೂಂನಲ್ಲಿ, ಹೈದರಾಬಾದಿನ ಕಲಾಂಜಲಿಯಲ್ಲಿ ಲಂಬಾಣಿಗಳು ಉತ್ಪಾದಿಸುವ ವಸ್ತುಗಳ ಪ್ರದರ್ಶನಕ್ಕೆ ಮತ್ತು ಮಾರಾಟಕ್ಕೆ ವ್ಯವಸ್ಥೆ ಮಾಡಿ, ಉನ್ನತ ದರ್ಜೆಯ ಮಾರುಕಟ್ಟೆಯನ್ನೂ ತೋರಿಸಿಕೊಟ್ಟಿದೆ. ಈ ಸಂಸ್ಥೆಯಿಂದ ಲಂಬಾಣಿಗಳಿಗೆ ಹಣ ಗಳಿಕೆಯ ಮಾರ್ಗ ಮಾತ್ರವಲ್ಲ, ಈ ಊರುಗಳಿಗೆ ಹೋಗಿ ತಮ್ಮ ವಸ್ತುಗಳ ಬಗ್ಗೆ ವಿವರ ನೀಡುವ ಕಲೆ, ಮಾತುಗಾರಿಕೆ, ವ್ಯವಹಾರ ಜ್ಞಾನ, ಹಿಂದಿ ಮತ್ತು ಉತ್ತಮ ಕನ್ನಡ ಭಾಷೆಗಳ ಜ್ಞಾನವನ್ನೂ ಬೆಳೆಸಿಕೊಳ್ಳಲು ಅನುಕೂಲವಾಗಿದೆ. ಮೊದಮೊದಲು ಜನರನ್ನು ಮತ್ತು ಪೋಲೀಸರನ್ನು ಕಂಡರೇ ಭಯ ಪಡುತ್ತಿದ್ದ ಈ ಹೆಂಗಸರು, ತಾವು ಎಲ್ಲಿಗೆ ಬೇಕಾದರೂ ಹೋಗಬಲ್ಲೆವು, ಎಂಥ ಜನರೊಂದಿಗೂ ವ್ಯವಹರಿಸಬಲ್ಲೆವು, ಗ್ರಾಮ ಪಂಚಾಯತಿಗಳಿಗೆ, ಬ್ಯಾಂಕುಗಳಿಗೆ ಸಾಲ ಪಡೆಯಲು ಓಡಾಡಬಲ್ಲೆವು ಎಂಬ ಆತ್ಮವಿಶ್ವಾಸ ಮೂಡಿಸಿಕೊಂಡಿದ್ದಾರೆ. ಈ ಆತ್ಮ ವಿಶ್ವಾಸ, ವ್ಯವಹಾರದ ಅರಿವು, ಭಾಷಾ ಬೆಳವಣಿಗೆ ಸಾಧ್ಯವಾಗಿರುವುದು ಮಲಮ್ಮ ಆಳವಾರರ ನಿರ್ದೇಶನದಲ್ಲಿ ನಡೆಯುವ 'ಸಬಲಾ' ಸಂಸ್ಥೆಯಿಂದ.

ಹಿನಕಲ್ (ಮೈಸೂರಿನ) ಗ್ರಾಮಾಭಿವೃದ್ಧಿ ಮತ್ತು ಸ್ವಉದ್ಯೋಗ ಕೇಂದ್ರ ಹಲವಾರು ಅಬಲೆಯರನ್ನು ವಿವಿಧ ತರಬೇತಿಗಳ ಮೂಲಕ ಸ್ವ ಉದ್ಯೋಗಕ್ಕೆ ತೊಡಗಿಸಿದಂತಹ ಒಂದು ಸಂಸ್ಥೆ. ಬೆಳಗಾವಿಯ ಹಿಡಕಲ್‌ನಲ್ಲಿರುವ 'ಆಶ್ರಯ' ಎಂಬ ತಾತ್ಕಾಲಿಕ ವಸತಿ ಗೃಹ, ಕೇಂದ್ರ ಸಮಾಜ ಕಲ್ಯಾಣ ಮಂಡಲಿಯ ಅನುದಾನದಲ್ಲಿ ನಡೆಯುತ್ತಿರುವ ಒಂದು ಪುಟ್ಟ ಮನೆ. ಇಲ್ಲಿ ಸಂಕಷ್ಟಕ್ಕೀಡಾದ, ದಿಕ್ಕಿಲ್ಲದೆ ಕಂಗಾಲಾದ ಮಹಿಳೆಯರಿಗೆ ಆಶ್ರಯ ನೀಡಲಾಗುವುದಲ್ಲದೆ, ಅಂಥವರ ಶಿಕ್ಷಣಕ್ಕೂ ಅವಕಾಶ ಕಲ್ಪಿಸುತ್ತದೆ. ಜೊತೆಗೆ ಹೊಲಿಗೆ, ಬೆರಳಚ್ಚು, ಗಣಕಯಂತ್ರ, ಮಡಕೆಗೆ ಪೇಂಟಿಂಗ್, ಸಿದ್ಧ ಉಡುಪು, ಪುಸ್ತಕ ಬೈಂಡಿಂಗ್, ಕಂಪೋಸಿಂಗ್, ಮುದ್ರಣ, ಕೈ ತೋಟ ಮುಂತಾದ ಹಲವಾರು ಕ್ಷೇತ್ರಗಳಲ್ಲಿ ತರಬೇತಿ ಕೊಟ್ಟು, ಈ ವೃತ್ತಿಗಳಲ್ಲಿ ಮಹಿಳೆಯರನ್ನು ತೊಡಗಿಸುವ ಕೆಲಸ ಮಾಡುತ್ತಿದೆ.

ಮನೆಯಲ್ಲಿ ಪ್ರತಿದಿನ, ನಾಲ್ಕು ಹೊತ್ತಿನ ತಿಂಡಿ ಅಡಿಗೆಗಳ ಜವಾಬ್ದಾರಿ ಸ್ತ್ರೀಯರದೇ ಆದರೂ, ದೊಡ್ಡ ದೊಡ್ಡ ಕಾರ್ಯಕ್ರಮಗಳಲ್ಲಿ, ಮದುವೆ ಮುಂಜಿಯ ಸಮಾರಂಭಗಳಲ್ಲಿ, ಹೆಚ್ಚುಗಟ್ಟಲೆಯ ಕೆಲಸಗಳಲ್ಲಿ ಮತ್ತು ಪಾರ್ಟಿಗಳಲ್ಲಿ, ಕಾಫಿ, ಉಪಹಾರ ಅಥವಾ ಅಡುಗೆಯ ತಯಾರಿಕೆ ಮತ್ತು ಸರಬರಾಜಿನ ಹೊಣೆ ಪುರುಷರಿಗೆ ಮಾತ್ರ ಸಾಧ್ಯ ಎನ್ನುವುದು ಬರೀ ಭಾವನೆ ಮಾತ್ರವಲ್ಲ, ಅದು ನಿಜವೂ ಆಗಿತ್ತು. ರುಚಿಯಾದ ಅಡುಗೆಗೆ 'ನಳಪಾಕ' ಎಂದೇ ಹೆಸರು ಬರುವಂತೆ ಕಥೆ ಕಟ್ಟಿದ್ದರು ಹಿಂದಿನವರು. ಹೆಂಗಸರು ಇಂಥ ಹೊಣೆ ಹೊರಲಾರರು ಎಂಬಂತಿದ್ದ ಸಮಾಜದಲ್ಲಿ ಈಗ ಬದಲಾವಣೆಗಳಾಗಿವೆ. ಈ ವಿಷಯದಲ್ಲಿ ಕೊಡಗಿನ 'ಸ್ಫೂರ್ತಿ' ಸಂಸ್ಥೆ ಹೆಸರು ಮಾಡಲು ಹೊರಟಿದೆ. ನಾಪೋಕ್ಲು ಬಳಿಯ ಕಕ್ಕಬ್ಬೆ ಗ್ರಾಮದ ಮಹಿಳಾ ಸಮಾಜದಲ್ಲಿ ಆಗಾಗ ಸೇರುತ್ತಿದ್ದ ಕಕ್ಕಬ್ಬೆಯ ಸ್ವಸಹಾಯ ಗುಂಪಿನ ಮಹಿಳೆಯರು ಹೆಚ್ಚಿನ ಬೇಡಿಕೆ ಇದ್ದ ಕೊಡವರ ಸಾಂಪ್ರದಾಯಿಕ ತಿನಿಸುಗಳನ್ನು ತಯಾರಿಸುವ ಯೋಜನೆ ಹಾಕಿದರು. ಚಿಕ್ಕಲುಂಡೆ, ಚಕ್ಕುಲಿ, ರವಾ ಲಾಡು, ರೋಸ್ ಬಡ್ಸ್, ಚಾಕೋಲೇಟ್ ಫಡ್ಜ್, ಕೊಕೊನಟ್ ಟಾಫಿ, ಚೂಡಾ, ಬಾದಾಮಿ ಲಾಡು ಮುಂತಾಗಿ ಒಬ್ಬೊಬ್ಬರು ಒಂದೊಂದು ತಿನಿಸು ತಯಾರಿಸಿ, ಪ್ಲಾಸ್ಟಿಕ್ ಚೀಲಗಳಲ್ಲಿ ಪ್ಯಾಕ್ ಮಾಡಿ, ಸುತ್ತಮುತ್ತಲ ಹಳ್ಳಿಗಳಲ್ಲಿ ಸರಬರಾಜು ಮಾಡತೊಡಗಿದ್ದೇ 'ಸ್ಫೂರ್ತಿ'ಯ ಆರಂಭ. ಈ ತಿನಿಸುಗಳಿಗೆ ಅತಿಯಾದ ಬೇಡಿಕೆ ಬರತೊಡಗಿತು. ಗ್ರಾಮದಲ್ಲಿ ನಡೆದ ಮೂರು ದಿನಗಳ ಎನ್.ಸಿ.ಸಿ.ಶಿಬಿರಕ್ಕೆ 'ಸ್ಫೂರ್ತಿ' ಯಿಂದಲೇ ಆಹಾರ ಸರಬರಾಜು. ಆಹಾರ ಮಾತ್ರವಲ್ಲ, ಉತ್ಸಾಹದಿಂದ ಫಿನಾಯಿಲ್, ವಾಷಿಂಗ್ ಪೌಡರ್, ಗಾಜು ತೊಳೆಯುವ ಪುಡಿ, ಸೋಪಿನ ಎಣ್ಣೆ ಮುಂತಾಗಿ ಹಲವಾರು ಸಾಮಗ್ರಿಗಳನ್ನು ಸ್ವತಃ ತಯಾರಿಸುವ ಉದ್ಯೋಗಕ್ಕೆ 'ಸ್ಫೂರ್ತಿ' ಕೈ ಹಾಕಿ, 'ಸ್ಫೂರ್ತಿ ಸ್ವಸಹಾಯ ಸಂಘದ ತಯಾರಿಕೆ' ಎಂಬ ಲೇಬಲ್‌ನಲ್ಲಿ ಈ ವಸ್ತುಗಳು ಸಿದ್ಧಗೊಂಡು ವಿವಿಧ ಊರುಗಳ ಅಂಗಡಿಗಳಲ್ಲಿ, ವ್ಯವಸಾಯೋತ್ಪನ್ನ ಸಂಘಗಳಲ್ಲಿ, ನಗರಗಳ ವಸ್ತು ಪ್ರದರ್ಶನಗಳಲ್ಲಿ, ಜಿಲ್ಲೆಯ ಮೋಟಾರ್ ವರ್ಕ್‌ಶಾಪ್‌ಗಳಲ್ಲಿ ಕಡಿಮೆ ಬೆಲೆಯ ಕಲಬೆರಕೆ ರಹಿತ ವಸ್ತುಗಳೆಂಬ ಪ್ರಖ್ಯಾತಿಯೊಂದಿಗೆ ಹೇರಳವಾಗಿ ಮಾರಾಟಗೊಳ್ಳುತ್ತಿವೆ. ಚಿಕ್ಕಮಗಳೂರು ಜಿಲ್ಲೆಯಲ್ಲಿ ಗ್ರಾಮೀಣ ಪ್ರದೇಶದ ಪ್ರಾಥಮಿಕ ಶಾಲೆಯ ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟ ಸರಬರಾಜಿಗೆ ಅಡುಗೆ ತಯಾರಿಸಿ ಸರಬರಾಜು ಮಾಡುವ ಹೊಣೆ ಸಂಪೂರ್ಣ ಸ್ತ್ರೀ ಶಕ್ತಿ ಗುಂಪಿನ ಸ್ತ್ರೀಯರದ್ದೇ.

ಈ ಸ್ವಸಹಾಯ ಗುಂಪುಗಳ ಸ್ತ್ರೀಯರು ಕೈಗೊಳ್ಳುತ್ತಿರುವ ದುಡಿಮೆಯ ದಾರಿಗಳು ಒಂದು ರೀತಿಯಲ್ಲಿ ತಮ್ಮ ಪ್ರದೇಶದಲ್ಲಿ ಅಧಿಕ ಲಭ್ಯತೆ ಇರುವ ಸಾಮಗ್ರಿಗಳನ್ನು ಬಳಸಿ, ದೊಡ್ಡ ಪ್ರಮಾಣದಲ್ಲಿ ಹಣ್ಣಿನ ರಸ, ಮಸಾಲೆ ಪುಡಿ, ಉಪ್ಪಿನಕಾಯಿ, ಹಪ್ಪಳ, ಸಂಡಿಗೆ, ಸಿಹಿ ತಿಂಡಿ, ಶಾವಿಗೆ ತಯಾರಿಕೆ, ಸೋಪ್, ಮೇಣದ ಬತ್ತಿ ಮತ್ತು ಇಟ್ಟಿಗೆ ತಯಾರಿಕೆ, ಹೂವು ಕಟ್ಟುವಿಕೆ, ರೇಷ್ಮೆ ಹುಳು ಸಾಕಾಣಿಕೆ, ಹೈನುಗಾರಿಕೆ, ಸಿದ್ಧ ಉಡುಪು ತಯಾರಿಕೆ ಮತ್ತು ಈ ಎಲ್ಲದರ ಮಾರಾಟ ಇತ್ಯಾದಿಗಳಿಂದ ಆರ್ಥಿಕ ಅಭಿವೃದ್ಧಿಗೆ ತಮ್ಮ ಕೈ ಸೇರಿಸಿದ್ದಾರೆ. ತಂತಮ್ಮ ಗ್ರಾಮಗಳಲ್ಲಿ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತಿರುವುದು ಆಧುನಿಕತೆಗೆ ಮತ್ತು ಹೊಸ ಹೊಸ ವಿಚಾರಗಳ ವಿನಿಮಯಕ್ಕೆ ಕಲ್ಪಿಸಿಕೊಂಡಿರುವ ಹೊಸ ದಾರಿ. ರಾಯಚೂರು ಜಿಲ್ಲೆಯ ಚಿಕ್ಕಮಂಚಲಿ ಗ್ರಾಮದ ಸ್ತ್ರೀ ಶಕ್ತಿ ಗುಂಪಿನ ಅರವತ್ತು ಸ್ತ್ರೀಯರು, ಸರ್ಕಾರದ ಅಥವಾ ಯಾರ ನೆರವಿಗೂ ಕಾಯದೆ, ತಾವೇ ತಮ್ಮ ಗ್ರಾಮದಲ್ಲಿ ರಸ್ತೆ ನಿರ್ಮಾಣ ಮಾಡಿ, ತಮ್ಮ ಗ್ರಾಮಕ್ಕೆ ಬಸ್ ಸೌಲಭ್ಯ ಒದಗಿಸಿಕೊಂಡು ನಗರದೊಂದಿಗಿನ ಸಂಪರ್ಕಕ್ಕೆ ಮಾರ್ಗ ಮಾಡಿಕೊಂಡಿರುವುದು ಗಮನಾರ್ಹ.

ಮಹಿಳಾ ಡೈರಿ ಸಹಕಾರ ಸಂಘಗಳ ಸದಸ್ಯೆಯರ ಸಂಖ್ಯೆಯೂ ಗಮನಾರ್ಹವಾಗಿ ಹೆಚ್ಚಿದೆ. ಬಡತನದ ರೇಖೆಗಿಂತ ಕೆಳಗಿರುವ ಐವತ್ತು ಕುಟುಂಬಗಳಿಂದ ಹಲವಾರು ಗ್ರಾಮೀಣ ಮಟ್ಟದ ಸಭೆಗಳನ್ನು ನಡೆಸಿ ಆಯ್ಕೆ ಮಾಡಲಾಗುವ ಐವತ್ತು ಮಹಿಳಾ ಸದಸ್ಯರು

ಮತ್ತು ಒಂಬತ್ತು ನಿರ್ದೇಶಕರು ಇರುವಂಥದು ಒಂದು ಹಳ್ಳಿಯ ಡೈರಿ ಸಂಘದ ಸ್ವರೂಪ. ದೇಶದಲ್ಲಿ ಪ್ರಸ್ತುತ ಇಂಥ ಸುಮಾರು ೧೮,೦೦೦ ಮಹಿಳಾ ಗ್ರಾಮೀಣ ಡೈರಿ ಸಹಕಾರ ಸಂಘಗಳಿವೆ. ರಾಜ್ಯದಲ್ಲಿರುವುದು ೧೨೫೪ ಸಂಘಗಳು. ೨೬.೨ ಲಕ್ಷ ಮಹಿಳಾ ಸದಸ್ಯೆಯರು, ಡೈರಿ ಸಹಕಾರ ಸಂಘಗಳನ್ನು ತಮ್ಮ ಜೀವನದ ಮಾರ್ಗವಾಗಿಸಿಕೊಂಡಿದ್ದಾರೆ. ಮಹಿಳೆಯರು ಈ ಸಂಘಗಳಿಗೆ ಸದಸ್ಯತ್ವ ಪಡೆಯಲು ಕೊಡಬೇಕಾದ ಶುಲ್ಕ ಕೇವಲ ರೂ. ೧೦೦/-. ಈ ಸದಸ್ಯೆಯರು ವರ್ಷಕ್ಕೆ ಕನಿಷ್ಠ ೧೮೦ ದಿನಗಳ ಕಾಲವಾದರೂ ಹಾಲು ನೀಡಬೇಕಾದುದು ಅಗತ್ಯ. ಈ ಮಹಿಳೆಯರಿಂದ ದೇಶದ ಜನತೆಗೆ ಹಾಲು ದೊರೆತು ಹೈನುಗಾರಿಕೆ ಅಭಿವೃದ್ಧಿಗೊಳ್ಳುತ್ತಿರುವುದಲ್ಲದೆ, ಈ ಮಹಿಳೆಯರಿಗೂ ಆದಾಯದಲ್ಲಿ ಅಭಿವೃದ್ಧಿ. ಕರ್ನಾಟಕದಲ್ಲಿ ಈಗಿರುವ ಸ್ವಸಹಾಯ ಗುಂಪುಗಳು ಸುಮಾರು ಎಂಟು ನೂರಕ್ಕೂ ಹೆಚ್ಚು.

ಗ್ರಾಮ ಪರಿಸರ, ಪ್ರಕೃತಿ ಸಂರಕ್ಷಣೆ ಮತ್ತು ನೆಲ-ಜಲಗಳ ಸಂರಕ್ಷಣೆಗೆ ಮಹಿಳೆಯರು ಸ್ವಯಂ ಸ್ಫೂರ್ತಿಯಿಂದ ಸಂಘಟನೆಗೊಂಡು ಉತ್ಸಾಹದಿಂದ ಕಾರ್ಯೋನ್ಮುಖರಾಗುತ್ತಿರುವುದೂ ಇಂದಿನ ದಿನಗಳಲ್ಲಿ ಕಾಣಬರುತ್ತಿದೆ. ೨೦೦೪ ರ ಆರಂಭದಲ್ಲಿ ಉತ್ತರ ಕನ್ನಡ ಜಿಲ್ಲೆಯ ಸ್ವರ್ಣವಲ್ಲೀ ಮಠದ ಪರಿಸರದಲ್ಲಿ ಸ್ವಸಹಾಯ ಸಂಘಗಳ, ಅರಣ್ಯ ಸಮಿತಿಗಳ ಸಮ್ಮೇಳನ ನಡೆದಿದ್ದು, ಅದರಲ್ಲಿ ಭಾಗವಹಿಸಿದ ೧೯೨೦ ಪ್ರತಿನಿಧಿಗಳಲ್ಲಿ ೧೪೫೦ ಮಹಿಳೆಯರೇ ಇದ್ದರೆಂಬುದು ಮಾತ್ರವಲ್ಲ, ಈ ಸಮ್ಮೇಳನವನ್ನು ಉದ್ಘಾಟಿಸಲು ಬನವಾಸಿ ಕ್ಷೇತ್ರದಿಂದ ಬಂದ ವಾನಳ್ಳಿಯ ಪಂಚಾಯತಿ ಸದಸ್ಯೆಯಾದ ಲಕ್ಷ್ಮೀಸಿದ್ದಿಯವರು ಬೇಡ್ತಿ ಕಣಿವೆಯ ಕಕ್ಕಳ್ಳಿ ಹಳ್ಳಿಯವರು ಎಂಬುದೂ ಒಂದು ವಿಶೇಷ ಸಂಗತಿ. ಈ ಸಮ್ಮೇಳನದಲ್ಲಿ ಸಸ್ಯ ಶ್ಯಾಮಲಾಂ ವಂದೇ ಮಾತರಂ, ಜಂಗಲ್ ಬಚಾವ್, ಮಾನವ್ ಬಚಾವ್ ಇತ್ಯಾದಿ ಘೋಷಣೆಗಳನ್ನು ಕೂಗಿದ್ದು; ಪಾಳಾ ಮಳಗಿ ಎಂಬಲ್ಲಿಂದ ಬಂದ ಸ್ತ್ರೀಯರು ಪ್ರತಿವರ್ಷ ಹಸಿರು ಹಬ್ಬ ಆಚರಿಸುತ್ತಿರುವುದು; ಶಿರಸಿಯಿಂದ ಬಂದ ನಲವತ್ತಕ್ಕೂ ಹೆಚ್ಚು ಸಂಖ್ಯೆಯ ಮಹಿಳಾ ಸಂಘಗಳ ಸ್ತ್ರೀಯರು ತಾವು ಅತಿ ಕಡಿಮೆ ಪ್ಲಾಸ್ಟಿಕ್ ಬಳಸುತ್ತೇವೆ ಎಂದಿದ್ದು; ವನೌಷಧಿ ಶಿಬಿರಗಳನ್ನು ಸಂಘಟಿಸುತ್ತೇವೆ ಎಂದುದು; ದಾಂಡೇಲಿ ಕಾಡಿನ ಮಹಿಳೆಯರು ಕ್ರೀಡಾ ಸ್ಪರ್ಧೆಗಳಲ್ಲಿ ಭಾಗವಹಿಸುತ್ತಿದ್ದೇವೆ ಎಂದದ್ದು; ಎಲ್ಲರೂ ಒಕ್ಕೊರಲಿನಿಂದ ಚಿಕ್ಕ ಚಿಕ್ಕ ಕೆರೆಗಳ ಹೂಳು ತೆಗೆಯಲು ಪ್ರಯತ್ನಿಸುತ್ತೇವೆ ಎಂದು ನಿರ್ಣಯಿಸಿದ್ದು-ಇವೆಲ್ಲ ಪ್ರಗತಿಯ ಅಂಶಗಳೇ ಸರಿ.

ಪರಿಸರ ಸಂರಕ್ಷಣೆಯಲ್ಲಿ ರಸ್ತೆಯುದ್ದಕ್ಕೂ ಸಾಲು ಸಾಲು ಮರಗಳನ್ನು ನೆಟ್ಟು ರಾಜ್ಯೋತ್ಸವ ವೃಕ್ಷಶ್ರೀ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರಶಸ್ತಿಗಳನ್ನು ಪಡೆದ ಸಾಲುಮರದ ತಿಮ್ಮಕ್ಕನ ಶ್ರದ್ಧೆಯ ಕೊಡುಗೆ ಮರೆಯಲಾರದ್ದು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕುದೂರು ಬಳಿಯ ಹುಲಿಕಲ್ ಗ್ರಾಮದ ತಿಮ್ಮಕ್ಕ ರಸ್ತೆಯಲ್ಲಿ ಸಂಚರಿಸುವವರಿಗೆ ನೆರಳು ನೀಡುವ ಹಾಗೂ ಪ್ರಾಣಿ ಪಕ್ಷಿಗಳಿಗೆ ಆಶ್ರಯ ಒದಗಿಸುವ ಆಶಯದಿಂದ, ಕುದೂರಿನಿಂದ ಹುಲಿಕಲ್‌ಗೆ ಹೋಗುವ ೩-೪ ಕಿ.ಮೀ. ಮಾರ್ಗದ ಬೆಂಗಾಡಿನಲ್ಲಿ ೨೮೪ ಗಿಡಗಳನ್ನು ನೆಟ್ಟು, ನೀರೆರೆದು ಹೆಮ್ಮರವಾಗಿ ಬೆಳೆಸಿದ್ದು ಒಂದು ಮಹತ್ತರ ಕಾಣಿಕೆ.

ವೃತ್ತಿಯಲ್ಲಿ ವೈದ್ಯೆಯಾದ ಹೊನ್ನಾವರದ ಬಳಿಯ ಕೆರವಳ್ಳಿಯ ಡಾ. ಕುಸುಮಾ ಸೊರಬರವರು, ಪರಿಸರದ ಉಳಿವಿಗಾಗಿ ತಮ್ಮ ಜೀವನವನ್ನೇ ಮುಡುಪಿಟ್ಟರು. ಕಾಸರಗೋಡನ್ನು ಕೇಂದ್ರವಾಗಿಟ್ಟುಕೊಂಡು, ವೈದ್ಯ ವೃತ್ತಿಗಾಗಿ ಗಿಡಮೂಲಿಕೆಗಳ ಒಂದು ಮೂಲವನವನ್ನು ಬೆಳೆಸಿ, ಅಗ್ಗದಲ್ಲಿ ಔಷಧಿ ಮತ್ತು ಚಿಕಿತ್ಸೆಗಳು ದೊರೆಯುವಂತೆ ಮಾಡಿದ್ದಲ್ಲದೆ, ಪಶ್ಚಿಮ ಘಟ್ಟಗಳ ಪರಿಸರದ ಸಂರಕ್ಷಣೆ ಕೋರಿ, ಶರಾವತಿ ಜಲಾಶಯ ಯೋಜನೆಗಳ ವಿರುದ್ಧ, ಸಹ್ಯಾದ್ರಿ ಶ್ರೇಣಿಯ ರಕ್ಷಣೆಗೆ ಕೇರಳದಿಂದ ಮಹಾರಾಷ್ಟ್ರದವರೆಗೆ ಪಾದಯಾತ್ರೆ, ಹೆಂಡ ಸಾರಾಯಿಗಳ ವಿರುದ್ಧ, ಅರಣ್ಯ ನಾಶದ ವಿರುದ್ದ, ಕಾಡು-ನದಿ-ತೀರಗಳನ್ನು ವಾಣಿಜ್ಯಲಾಭಕ್ಕಾಗಿ ಅಕ್ರಮವಾಗಿ ಆಕ್ರಮಿಸುವುದರ ವಿರುದ್ಧ, ಅಘನಾಶಿನಿ-ಕೈಗಾ-ಶರಾವತಿ ತುದಿಕಟ್ಟು ಮುಂತಾದವಲ್ಲದೆ ಇದೇ ರೀತಿಯ ಹಲವು ಪರಿಸರ ವಿನಾಶೀ ಕ್ರಮಗಳ ವಿರುದ್ಧ ಚಳವಳಿ, ಪ್ರತಿಭಟನೆ, ಜನ ಜಾಗೃತಿ, ಮುಂತಾದವನ್ನು ನಡೆಸಿದ್ದು, ಗ್ರಾಮ ಮತ್ತು ಪ್ರಕೃತಿ ಸುಧಾರಣೆಗೆ ಸಹಾಯಿಸುವ ಸಂಗತಿಗಳು. ಇಂತಹ ಯಾವುದೇ ಹೋರಾಟದಲ್ಲಿ ಸಫಲತೆ ಸಿಗಲಿ ಬಿಡಲಿ, ಪರಿಸರ ವಿನಾಶಕ ಶಕ್ತಿಗಳು ಇಂಥ ಕೃತ್ಯಗಳಲ್ಲಿ ತೊಡಗಲು ಹಿಂದೇಟು ಹಾಕುವಂತೆ ಗ್ರಾಮೀಣ ಜನರು ಮತ್ತು ಇತರರು ಹೆಚ್ಚಿನ ಹುಮ್ಮಸ್ಸು ಹಾಗೂ ಹುರುಪಿನಿಂದ ಹೋರಾಟಕ್ಕೆ ತೊಡಗಲು ಉತ್ತೇಜನ ನೀಡಿದವರು ಕುಸುಮಾ. ಹಲವು ಪರಿಸರ ವಿನಾಶ ಕ್ರಮಗಳ ವಿರುದ್ಧ ರಾಷ್ಟ್ರಮಟ್ಟದಲ್ಲಿ ಮೊದಲು ಆರಂಭಗೊಂಡ ಮಹಿಳಾ ಚಳವಳಿಯು ೧೯೭೦ರಲ್ಲಿ ಹೊಸ ಮತ್ತು ಹೆಚ್ಚು ಮಹತ್ವದ (ರ್‍ಯಾಡಿಕಲ್) ತಿರುವು ಪಡೆದಾಗ, ಮಹಿಳೆಯರು ಉತ್ಸಾಹದಿಂದ

ಸಾಮಾಜಿಕ ಚಳವಳಿಗಳಲ್ಲಿ ಭಾಗವಹಿಸಿ ಜೀವನದ ಎಲ್ಲ ಕ್ಷೇತ್ರಗಳಲ್ಲಿ ಪುರುಷ ಸಮಾನ ಅವಕಾಶ ಪಡೆಯಬೇಕೆಂಬ ತೀರ್ಮಾನದಿಂದ ಅದಕ್ಕಾಗಿ ಶ್ರಮಿಸಿದರು, ವೇದಿಕೆ ಇಟ್ಟರು. ಗುಜರಾತ್ ರಾಜ್ಯದಲ್ಲಿ ಆ ಸಮಯದಲ್ಲೇ ಅಂದರೆ ೧೯೭೧ ರಲ್ಲಿ ಕಾರ್ಮಿಕ ಚಳವಳಿ, ಸಹಕಾರಿ ಚಳವಳಿ ಮತ್ತು ಮಹಿಳಾ ಚಳವಳಿಗಳ ಸಂಗಮವಾಗಿ ಆರಂಭಗೊಂಡಿದ್ದು ಸೇವಾ ಇಂಡಿಯಾ (SEWA-The Self Employed Womens Association, India). ಇದರ ಮೂಲಕ ನೇಕಾರಿಕೆ, ಬೀಡಿ ಕಟ್ಟುವಿಕೆ, ಮಡಕೆ, ಅಗರಬತ್ತಿ, ಹಪ್ಪಳ ಇತ್ಯಾದಿ ತಯಾರಿಕೆಗಳ ಸ್ವಉದ್ಯೋಗ ಮಾಡುವ ಬಡ ಮಹಿಳಾ ಕೆಲಸಗಾರರಿಗಾಗಿ ೧೯೭೪ ರಲ್ಲಿ ಸ್ಥಾಪನೆಗೊಂಡಿದ್ದು ಸ್ತ್ರೀ ಸೇವಾ ಸಹಕಾರಿ ಬ್ಯಾಂಕ್. ಇದು ೪೦೦೦ ಸ್ವಉದ್ಯೋಗಿ ಮಹಿಳೆಯರಿಂದ ಆರಂಭಗೊಂಡಿದ್ದು, ಇಂದು ೫೧,೦೦೦ ಉಳಿತಾಯ ಖಾತೆದಾರರನ್ನೂ (ಡೆಪಾಸಿಟರ್ಸ್), ಹತ್ತುಸಾವಿರ (ವರ್ಕಿಂಗ್ ಕ್ಯಾಪಿಟಲ್) ಕಾರ್ಯನಿರತ ಬಂಡವಾಳವನ್ನೂ ಉಳ್ಳಂತಹ ಸಂಸ್ಥೆಯಾಗಿದೆ. ಹಣಕಾಸಿಗೆ ಸಂಬಂಧಿಸಿದಂತಹ ಎಲ್ಲ ಪೋಷಕ ಸೇವೆಗಳನ್ನೂ ಈ ಸೇವಾ ಬ್ಯಾಂಕ್ ಮಹಿಳೆಯರಿಗೆ ಒದಗಿಸುತ್ತದೆ. ಸ್ವಉದ್ಯೋಗ ನಿರತ ಸ್ತ್ರೀಯರು ಈ ಬ್ಯಾಂಕಿನ ಹಣ ಸಹಾಯದಿಂದಾಗಿ ಸ್ವಂತ ಗಾಡಿಗಳು, ಹೊಲಿಗೆ ಯಂತ್ರಗಳು, ಪವರ್ ಲೂಮ್‌ಗಳು, ಬಡಗಿ ಹಾಗೂ ಕಮ್ಮಾರಿಕೆಗೆ ಅಗತ್ಯ ಸಾಮಾನುಗಳನ್ನು ಹೊಂದಲು ಹಾಗೂ ತಮ್ಮ ಉದ್ಯೋಗವನ್ನು ಕ್ರಮೇಣ ದೊಡ್ಡ ಉದ್ದಿಮೆಗಳಾಗಿ ಮೇಲ್ದರ್ಜೆಗೇರಿಸಿಕೊಳ್ಳಲು ಸಾಧ್ಯವಾಗಿದ್ದು ಬೆಳವಣಿಗೆಯ ಚಿಹ್ನೆ. ಉದ್ದಿಮೆ ಜನರ ಜೀವನಮಟ್ಟವನ್ನು ಮೇಲೇರಿಸುವಲ್ಲಿ ಇದು ಕಾರಣವಾಗಿದೆ. ಸಂಘಟಕ, ಸಾಂಸ್ಥಿಕ ಮತ್ತು ಆರ್ಥಿಕ ವಲಯಗಳಲ್ಲಿ ಗ್ರಾಮೀಣ ಮಹಿಳೆಯರೂ ಉಳಿತಾಯ, ಲೇವಾದೇವಿ ಹಾಗೂ ಬ್ಯಾಂಕಿಂಗ್ ಚಟುವಟಿಕೆಗಳಿಗೆ ತೊಡಗಿಕೊಳ್ಳಲು ಈ ಸಂಸ್ಥೆ ಪ್ರೇರೇಪಿಸಿದೆ. ವುಮನ್ ವರ್ಲ್ಡ್ ಬ್ಯಾಂಕಿಂಗ್‌ಗೆ ಈ ಸಂಸ್ಥೆಯೇ ಪ್ರೇರಕ ಶಕ್ತಿ. ಸೇವಾ ಬ್ಯಾಂಕಿನ ಅಧ್ಯಕ್ಷೆ ಶ್ರೀಮತಿ ಇಳಾ ಭಟ್‌ರವರೇ ಈ ಅಂತರರಾಷ್ಟ್ರೀಯ ಸಂಸ್ಥೆಗೂ ಅಧ್ಯಕ್ಷೆ. ಇನ್ನೂರು ಮಿಲಿಯನ್ ಡಾಲರುಗಳ ಬೆಲೆಯ ಆಸ್ತಿಯನ್ನು ಅರವತ್ತು ಸಾವಿರ ಬಡ ಮಹಿಳೆಯರು ಹೊಂದಲು ಸಾಧ್ಯವಾಗಿರುವುದು ಮಹಿಳೆಯರ ಈ ಸಂಸ್ಥೆಯ ಪ್ರಭಾವ, ಪ್ರೇರಣೆ, ಪ್ರೋತ್ಸಾಹಗಳ ಪರಿಣಾಮವೇ.

ಗುಜರಾತಿನ ಸೌರಾಷ್ಟ್ರ ಮತ್ತು ಪಂಚಮಹಾಳ ಜಿಲ್ಲೆಗಳಲ್ಲಿ ಆನಂದಿ ಎಂಬ ಮಹಿಳೆ ಆಹಾರ ಮತ್ತು ಅಗತ್ಯ ಗ್ರಾಮೀಣ ಬೆಳವಣಿಗೆಗೆ ಮಹಿಳೆಯರನ್ನು ಸಜ್ಜುಗೊಳಿಸಿದವರು. ಇಲ್ಲಿಯ ಮಹಿಳೆಯರು ಕಂಪನದಿಂದ ಜಖಂಗೊಂಡ ೭೦೦ ಮನೆಗಳನ್ನು ಪುನರ್ ನಿರ್ಮಾಣ ಮಾಡಿದ್ದಾರೆ. ಇತರ ರೀತಿಯ ಹಲವಾರು ಸಹಾಯಗಳೊಂದಿಗೆ, ಆಪತ್ತು ಪ್ರಮಾಣಿತ (ಡಿಸಾಸ್ಟರ್-ಪ್ರೂಫ್) ಮತ್ತು ಭೂಕಂಪ ಪ್ರಮಾಣಿತ (ಅರ್ತ್‌ಕ್ವೇಕ್ ಪ್ರೂಫ್) ಕಟ್ಟಡಗಳ ನಿರ್ಮಾಣ, ನೀರಿನ ಟ್ಯಾಂಕ್‌ಗಳ ನಿರ್ಮಾಣ, ಕೈಪಂಪುಗಳ ದುರಸ್ತಿ ಮತ್ತು ಬಾವಿ ತೋಡಿಕೆಯಂತಹ ಕಠಿಣ ಶ್ರಮದ ಕೆಲಸಗಳಲ್ಲಿ ಸ್ತ್ರೀಯರು ತರಬೇತಿ ಪಡೆದು, ಅವಶ್ಯಕ ಸಂದರ್ಭಗಳಲ್ಲಿ ಇವುಗಳ ನಿರ್ಮಾಣವನ್ನೂ ಜಸ್‌ದನ್, ಕಲ್ಯಾಣಪುರ, ಗಢವ ತಾಲೂಕುಗಳಲ್ಲಿ ಗೋಧ್ರ, ಹಲೋಲ್, ಕಾಲೋಲ್, ರಾಜಗಢ್, ನಪಾಸಿಯ, ಲೂನವಾಡ ಮತ್ತು ಸುತ್ತಮುತ್ತಲ ಪ್ರದೇಶಗಳಲ್ಲಿ ಮಾಡಿರುವುದು ಉಲ್ಲೇಖನೀಯ. ಪಂಚಮಹಾಳ ಜಿಲ್ಲೆಯ ಗೋಘಂಬ ಎಂಬ ಕುಗ್ರಾಮದ ಬುಡಕಟ್ಟು ಜನಾಂಗದ ಹೆಂಗಸರು ಮನೆಯೊಳಗಿನ ದುಡಿಮೆಗೇ ಸೀಮಿತಗೊಂಡಂಥವರು. ತರಬೇತಿ, ಜಾಗೃತಿ ಶಿಬಿರಗಳ ಮೂಲಕ ಒಬ್ಬ ಬುಡಕಟ್ಟಿನ ಮಹಿಳೆಯೂ ಆಲೋಚನೆಯ ಮಟ್ಟವನ್ನು ಎಷ್ಟು ಸುಧಾರಿಸಿಕೊಂಡಿದ್ದರೆಂಬುದಕ್ಕೆ ಮುಂದಿನ ಒಂದು ಸಣ್ಣ ಉದಾಹರಣೆ ಸಾಕು. ಆ ತಾಲ್ಲೂಕಿನ ಪಂಚಾಯತ್ ಅಧ್ಯಕ್ಷರೊಬ್ಬರು ಸಮಾವೇಶವೊಂದರಲ್ಲಿ, "ಮಹಿಳೆಯರೆಂದರೆ, ಗೃಹ ಮಾತೆ, ಮಾತ್ರವಲ್ಲ ಆಕೆ ಗೃಹ ಮಂತ್ರಿಯೂ ಹೌದು" ಎಂದು ಹೇಳಿದ್ದನ್ನು ಕೇಳಿದ ನಂತರ, 'ಸ್ವಾಮಿ ನೀವು ನಮ್ಮನ್ನು ಕೇವಲ ಗೃಹಮಂತ್ರಿಯಾಗಬೇಕೆಂದು ಬಯಸುತ್ತೀರಿ, ಆದರೆ ನಾವು ಹಣಕಾಸಿನ ಮಂತ್ರಿಗಳೂ ಆಗಬಯಸುವವರು' ಎಂದು ಬುಡಕಟ್ಟಿನ ತೀರಾ ಸಾಮಾನ್ಯ ಸ್ತ್ರೀಯೊಬ್ಬಳು ಹೇಳಿದ್ದು ತಿಳಿದುಬರುತ್ತದೆ. ಈ ಸುಧಾರಣೆಯನ್ನು ತಂದವರು ಆನಂದಿ. ಗ್ರಾಮೀಣ ಪ್ರದೇಶದ ಅಭಿವೃದ್ಧಿಯ ಕಾರ್ಯಗಳಲ್ಲಿ ಅನುಭವ ಹೊಂದಿದ ಸುಮಿತ್ರಾ ಠಾಕೂರ್, ಜಾಹ್ನವಿ ಅಂಧೇರಿಯಾ, ಸೇಜಲ್ ದಂಡ್, ನೀತಾ ಹರ್ದೀಕರ್ ಮತ್ತು ಪ್ರೀತಿ ಶೇಠ್-ಇವರು ವಿವಿಧ ಸ್ವಯಂ ಸೇವಾ ಸಂಸ್ಥೆಗಳೊಂದಿಗೆ ಓಡಾಡಿ ಸಮಾಲೋಚಿಸಿದ ನಂತರ, ಮಹಿಳೆಯರು ಪ್ರಧಾನ ಪಾತ್ರ ವಹಿಸಿದಾಗ ಮಾತ್ರವೇ ಆರ್ಥಿಕ ಬೆಳವಣಿಗೆ ಸಾಧ್ಯ ಎಂಬುದನ್ನು ಕಂಡುಕೊಂಡು, ಗ್ರಾಮೀಣ ಪ್ರದೇಶದಲ್ಲಿ ಈ ಹೊಸ ವಿಧಾನದಿಂದ ಬದಲಾವಣೆ ತರಬಹುದೆಂದು ಆಲೋಚಿಸಿದ ಐದು ಪ್ರಮುಖ ಮಹಿಳೆಯರು. ಇದೇ ರೀತಿ ದೇಶಾದ್ಯಂತ ಅನೇಕ ಸ್ವಸಹಾಯ ಗುಂಪುಗಳಿದ್ದು, ಈ ಗುಂಪುಗಳ ಸ್ತ್ರೀಯರು ಗ್ರಾಮೀಣಾಭಿವೃದ್ಧಿಗೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಕಾರಣರಾಗಿದ್ದಾರೆ.

ದೇಶದ ಗ್ರಾಮೀಣ ಕುಶಲ ಕರ್ಮಿಗಳ ಕಸುಬು ಮತ್ತು ಕಲೆಗಳನ್ನು ತಮ್ಮ ವೈಯಕ್ತಿಕ ಬುದ್ಧಿಮತ್ತೆ, ಆಸಕ್ತಿ ಹಾಗೂ ಅಧಿಕಾರಗಳ ಬಲದಿಂದ ಉನ್ನತೀಕರಿಸಲು ಕಾಯಾ ವಾಚಾ ಮನಸಾ ಶ್ರಮಿಸಿದ ಮಹಿಳೆಯರಲ್ಲಿ ಮಂಗಳೂರಿನ ಕಮಲಾದೇವಿ ಚಟ್ಟೋಪಾಧ್ಯಾಯರ ಹೆಸರು ಬಹು ದೊಡ್ಡದು. ಶತಮಾನಗಳ ಹಿಂದೆಯೇ ಗ್ರಾಮೀಣ ಕಲೆ, ಕಸುಬು, ಕೃತಿ ಕಲ್ಪಗಳಿಗೆ ಯಾರೂ ಹೆಚ್ಚು ಗಮನ ಹರಿಸದಿದ್ದಂತಹ ಕಾಲವದು. ಈ ಬಗ್ಗೆ ಅತೀವ ಆಸಕ್ತಿ, ಕುತೂಹಲಗಳಿದ್ದ ಕಮಲಾದೇವಿಯವರು, ದೇಶದ ಮೂಲೆ ಮೂಲೆಗಳಲ್ಲೂ, ಕುಗ್ರಾಮಗಳಲ್ಲೂ ಸಂಚರಿಸಿ ವಿಶೇಷ ಸಾಂಪ್ರದಾಯಿಕ ಕಲಾಕೃತಿಗಳ ಹಾಗೂ ಕೈಗಾರಿಕೆಯ ವಸ್ತುಗಳ ಹುಡುಕಾಟ ನಡೆಸಿ, ಅವನ್ನೆಲ್ಲ ನಗರ, ಪಟ್ಟಣಗಳ ಪರಿಸರದಲ್ಲಿ ಪ್ರದರ್ಶನಗೊಳ್ಳುವುದಕ್ಕೆ ಶ್ರಮಿಸಿದರು. ಅಣುವಿನಂಥ ಆಭರಣ (Tiniest trinkets) ಗಳಿಂದ ಹಿಡಿದು ದೇವಸ್ಥಾನದ ಪ್ರತಿಮೆಗಳವರೆಗಿನ ಎಲ್ಲ ರೀತಿಯ ಬೊಂಬೆಗಳು, ಕೆತ್ತನೆಯ ಕೃತಿಗಳು, ಮತ್ತಿತರ ರೀತಿಯ ಕೋಟ್ಯಾನುಕೋಟಿ ಕಲಾಸಾಮಗ್ರಿಗಳನ್ನು ಸಂಗ್ರಹಿಸಿ, ಅವುಗಳಿಗೆ ಮ್ಯೂಸಿಯಂಗಳನ್ನು ತೆರೆಯುವ ವ್ಯವಸ್ಥೆ ಮಾಡಿದರು. ಬುಡಕಟ್ಟು ಜನಾಂಗದ ನುರಿತ ಕಲಾಕಾರರೊಂದಿಗೆ ಕುಳಿತು ಚರ್ಚಿಸಿ, ಅವರನ್ನು ರಾಜಧಾನಿಗೆ ಕರೆಸಿ, ಅವರನ್ನು ಆಧುನಿಕ ರೀತಿಗೆ, ಹೊಸ ಸೃಷ್ಟಿಗೆ, ಅವುಗಳ ಪ್ರದರ್ಶನಕ್ಕೆ ಒಗ್ಗಿಸಿದರು. ರಾಷ್ಟ್ರೀಯ ಮಟ್ಟದ ಪ್ರಶಸ್ತಿಗಳನ್ನು ಕರಕುಶಲ ಕಲಾಕಾರರಿಗಾಗಿ ಸ್ಥಾಪಿಸುವಂತೆ ಮಾಡಿ, ಇಂಟರ್ ನ್ಯಾಷನಲ್ ಪಪೆಟ್ರಿ ಆರ್ಗನೈಸೇಷನ್‌ಗೆ ಉಪಾಧ್ಯಕ್ಷೆಯಾಗಿ, ಸಾಂಪ್ರದಾಯಿಕ ಮಾದರಿಗಳನ್ನು ಆಧುನಿಕತೆಗೆ ಅನ್ವಯವಾಗುವ ಮಾದರಿಗಳನ್ನು ಮಾಡಿಕೊಟ್ಟರು. ಆಲ್ ಇಂಡಿಯಾ ಹ್ಯಾಂಡಿಕ್ರಾಫ್ಟ್ ಬೋರ್ಡ್‌ನ ಮೊದಲ ಇಪ್ಪತ್ತು ವರ್ಷಗಳ ಅಧ್ಯಕ್ಷೆಯಾಗಿ ಗ್ರಾಮೀಣ ಜನಾಂಗದ ಕೃತಿಗಳ ಪ್ರದರ್ಶನಕ್ಕೆ ಗುಡಿ ಕೈಗಾರಿಕಾ ಎಂಪೋರಿಯಂಗಳನ್ನು ವಿವಿಧ ನಗರಗಳಲ್ಲಿ ಸ್ಥಾಪಿಸಿ, ಪ್ರದರ್ಶನ ಹಾಗೂ ಮಾರಾಟಕ್ಕೆ ವ್ಯವಸ್ಥೆ ಮಾಡಿದ್ದು; ಕೈಮಗ್ಗ ಮತ್ತು ಕರಕುಶಲ ವಸ್ತುಗಳ ಬೆಳವಣಿಗೆಯ ಕ್ಷೇತ್ರ ಕಾರ್ಯಕ್ಕಾಗಿ 'ಅಭಿವೃದ್ಧಿ ಆಯುಕ್ತರು' (ಡೆವಲಪ್‌ಮೆಂಟ್ ಕಮಿಷನರ್ಸ್) ಗಳ ಹುದ್ದೆಗಳನ್ನು ಸೃಜಿಸಿದ್ದು; ತರಬೇತಿ ವ್ಯವಸ್ಥೆ ಮಾಡಿದ್ದು; ಪ್ರತಿವರ್ಷ ನಿಯತಕಾಲಿಕವಾಗಿ ಪ್ರದರ್ಶನಗಳಿಟ್ಟು ಜನಪ್ರಿಯಗೊಳಿಸಿದ್ದು; ೧೯೫೬ ರಲ್ಲಿ ಕಡಲಾಚೆಯ ಖರೀದಿದಾರರಿಂದ ಐನೂರು ಕೋಟಿ ರೂಪಾಯಿಗಳ ವಸ್ತುಗಳಿಗೆ ಆದೇಶ ಸಿಗುವಂತೆ ಮಾಡಿದ್ದು-ಇವೆಲ್ಲ ಕಮಲಾದೇವಿಯವರ ಕೈವಾಡದಿಂದಾಗಿಯೇ. ಇವೆಲ್ಲ ಚರಿತ್ರಾರ್ಹ ವಿಷಯಗಳೇ.

ಗುಜರಾತಿನ ಬಾಂಧನಿ, ಕರ್ನಾಟಕದ ಇಳಕಲ್, ತಮಿಳುನಾಡಿನ ಲೋಹಕಲೆ, ಒರಿಸ್ಸಾದ ಕಲ್ಲು ಕೆತ್ತನೆ ಮತ್ತು ಬೆಳ್ಳಿಕುಸುರಿ, ಕೇರಳದ ಬೀಟೆಮರದ ವಸ್ತುಗಳು, ಪಂಜಾಬಿನ ಫೂಲ್‌ಕಾರಿ, ಮಣಿಪುರ ಮತ್ತು ನಾಗಾಲ್ಯಾಂಡ್‌ಗಳ ಬೂಟೇದಾರ ವಸ್ತ್ರ(ಚಿತ್ರ ಯವನಿಕೆ-tapestry), ಅಸ್ಸಾಮಿನ ಬಿದಿರು ವಸ್ತು ಮತ್ತು ಬುಟ್ಟಿಗಳು; ಉತ್ತರ ಪ್ರದೇಶದ ಅಮೃತಶಿಲೆ ಹಾಗೂ ಸೋಪ್ ಸ್ಟೋನ್; ರಾಜಾಸ್ಥಾನದ ಮಣಿ ಕುಸುರಿ ಕಸೂತಿ; ಕಾಶ್ಮೀರದ Papier mache ಮುಂತಾದ ಮೂಲೆಗುಂಪಾಗುತ್ತಿದ್ದ ಕೈ-ಕೃತಿಗಳಿಗೆ ರಾಷ್ಟ್ರೀಯ ಮಟ್ಟದ ಮಹತ್ವ ದೊರೆಯುವಂತೆ ಮಾಡಿದ ಕೀರ್ತಿ ಕಮಲಾದೇವಿಯವರಿಗೆ ಸಲ್ಲಬೇಕು. ಇವರೊಂದಿಗಿದ್ದ ಮುಂಬಯಿಯ ಮೋಹನಾ ಅಯ್ಯಂಗಾರ್ ಮತ್ತು ಕುಸುಮಾ ಛತ್ರಪತಿ ಇವರುಗಳೂ ಕಮಲಾರವರ ಜೊತೆಯಲ್ಲಿದ್ದು ಗ್ರಾಮೀಣ ಕುಶಲ ಕರ್ಮಿಗಳ ಕಸುಬಿನ ಅಭಿವೃದ್ಧಿಗೆ ತಮ್ಮಿಂದಾದಷ್ಟು ನೆರವಾಗಿದ್ದಾರೆ.

ಹೀಗೆ ಈ ದೇಶದಲ್ಲಿ, ಸಾಮಾನ್ಯರಿಂದ ಅಸಾಮಾನ್ಯರವರೆಗೂ ಹಲವು ಮಹಿಳೆಯರು ಗ್ರಾಮಗಳ ಪ್ರಗತಿಗೆ ವಿವಿಧ ರೀತಿಯಲ್ಲಿ ತಮ್ಮದೇ ಆದ ಕೊಡುಗೆ ನೀಡಿದ್ದಾರೆ, ನೀಡುತ್ತಿದ್ದಾರೆ. ಗ್ರಾಮೀಣ ಸ್ತ್ರೀಯರು ಇಂದಿರುವ ಆಸಕ್ತಿ ಮತ್ತು ಉತ್ಸಾಹಗಳನ್ನೇ ಮುಂದುವರಿಸಿ ಶ್ರಮಿಸಿದರೆ ಬಡತನ, ಅನಕ್ಷರತೆ, ಅವಿದ್ಯೆ, ಮದ್ಯವ್ಯಸನ ಮುಂತಾದ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳು ಇಲ್ಲದಂತಾಗುವುದರಲ್ಲಿ ಸಂಶಯವಿಲ್ಲ.




# ಬುಡಕಟ್ಟು ಮಹಿಳೆ

ಬಿ. ಟಿ. ಲಲಿತಾನಾಯಕ್

ಕಾಲ ಓಡುತ್ತದೆ. ಜಗತ್ತು ಅದರೊಟ್ಟಿಗೆ ಹೆಜ್ಜೆ ಹಾಕುತ್ತದೆ. ಬುಡಕಟ್ಟು ಜನಾಂಗಗಳೂ ಈ ಮಾತಿಗೆ ಹೊರತಲ್ಲ. ಭೂತ ಕಳಚಿ ವರ್ತಮಾನದ ಮಡಿಲಿಗೆ ಜಾರುತ್ತದೆ. ಕಾಡಿನಿಂದ ನಾಡಿಗೆ, ಮರದ ಆಸರೆಯಿಂದ ಮನೆಯೆಂಬ ಗೂಡು ಸೇರಿಕೊಳ್ಳುತ್ತವೆ.

ಅನಾಗರಿಕತೆಯಿಂದ ನಾಗರಿಕ ಜಗತ್ತಿಗೆ ಪ್ರವೇಶ ಪಡೆಯುವ ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿರುವ ಈ ಜನಾಂಗಗಳು, ಆಧುನಿಕ ಸಮಾಜ ಸೇರ್ಪಡೆಯಿಂದ ಪಡೆದುಕೊಳ್ಳುವುದೆಷ್ಟು? ಕಳೆದುಕೊಳ್ಳುವುದೆಷ್ಟು? ಎಂಬುದರ ಬಗ್ಗೆ ಚರ್ಚಿಸಬಹುದಾಗಿದೆ.

ಸಾಮಾನ್ಯವಾಗಿ ಎಲ್ಲಾ ಬುಡಕಟ್ಟು ಜನಗಳ ಬದುಕಿನ ರೀತಿ-ರಿವಾಜುಗಳು ಪರಸ್ಪರ ಹೋಲುತ್ತವಾದ್ದರಿಂದ,ನಾನು ಹುಟ್ಟಿಬೆಳೆದ ಲಂಬಾಣಿ(ಬಂಜಾರ) ಜನಾಂಗದ ಮಹಿಳೆಯರನ್ನು ಕುರಿತು ಇಲ್ಲಿ ಪ್ರಸ್ತಾಪಿಸುತ್ತಿದ್ದೇನೆ.

ಜನಾಂಗೀಯ ಅಭ್ಯಾಸಿ ದಿ. ರಾಮಸಿಂಗ್ ಭಾನಾವತ್ ಎಂಬ ಮಹಾರಾಷ್ಟ್ರದ ಲಂಬಾಣಿ ಸಂಶೋಧಕರ ಪ್ರಕಾರ, ಜಗತ್ತಿನ ೫೬ ದೇಶಗಳಲ್ಲಿ ಈ ಜನ ವಾಸಿಸುತ್ತಾರೆ. ಯುಗೋಸ್ಲಾವಿಯಾದಲ್ಲಿ ಈ ಜನ 'ಜಿಪ್ಸಿ' ಎಂದು ಕರೆಯಲ್ಪಟ್ಟರೆ ಬಲ್ಗೇರಿಯಾ, ರುಮೇನಿಯಾ, ಹಂಗೆರಿ, ಸ್ವಿಟ್ಜರ್‌ಲ್ಯಾಂಡ್, ಫ್ರಾನ್ಸ್, ಲಂಡನ್, ಜರ್ಮನ್, ಸ್ಪೇನ್, ಗ್ರೀಸ್ ಮುಂತಾದ ದೇಶಗಳಲ್ಲಿ 'ಸಿಂಧಿ' 'ರೋಮಾನೋ' ಎಂಬ ಹೆಸರುಗಳಿಂದ ಗುರುತಿಸಿಕೊಳ್ಳುತ್ತಾರೆ.

ಅಸ್ಸಾಂ, ಮೇಘಾಲಯ, ಮಣಿಪುರ, ಕೇರಳ ಮತ್ತು ಪಾಂಡಿಚೇರಿಗಳಲ್ಲಿ ಲಂಬಾಣಿಗಳು ವಿರಳ. ಉಳಿದಂತೆ ಭಾರತವೊಂದರಲ್ಲೇ ೨೦೦೧ ರ ಜನಗಣತಿ ಪ್ರಕಾರ ಸುಮಾರು ೬ ಕೋಟಿ ಲಂಬಾಣಿಗಳು ನೆಲೆಸಿದ್ದಾರೆ. ಕರ್ನಾಟಕ ರಾಜ್ಯದಲ್ಲಿ ೪೦೦೦ ತಾಂಡಗಳಿದ್ದು, ೨೦ ಲಕ್ಷ ಜನ ವಾಸಿಸುತ್ತಾರೆ.

೧೯೩೪ ರಲ್ಲಿ ಶ್ರೀ ಎಸ್. ಆರ್. ಕಾಂತಿಕರ್ ಎಂಬುವವರು 'ಭಾರತದ ಇತಿಹಾಸ' ಎಂಬ ಗ್ರಂಥದಲ್ಲಿ -ಕ್ರಿ. ಪೂ. ೬೦೦ರಿಂದ ೩೫೦ ರ ನಡುವಿನ ಸಂದರ್ಭದಲ್ಲಿ ಲಂಬಾಣಿ ಜನಗಳು ಎತ್ತು ಹಾಗೂ ಒಂಟೆಗಳ ಮೇಲೆ ಸರಕುಗಳನ್ನು ಹೇರಿಕೊಂಡು ದೂರದೂರದ ಪ್ರದೇಶಗಳಿಗೆ ಮಾರಾಟ ಮಾಡತ್ತಿದ್ದರು ಎಂಬುದಾಗಿ ದಾಖಲಿಸಿದ್ದಾರೆ.

> *ಅನಾಗರಿಕತೆಯಿಂದ ನಾಗರಿಕ ಜಗತ್ತಿಗೆ ಪ್ರವೇಶ ಪಡೆಯುವ, ತಮ್ಮದೇ ಆದ ಸಂಸ್ಕೃತಿಯನ್ನು ಹೊಂದಿರುವ ಬುಡಕಟ್ಟು ಸಮಾಜ ಆಧುನಿಕ ಸಮಾಜಕ್ಕೆ ಸೇರ್ಪಡೆಗೊಳ್ಳುವುದರಿಂದ ಪಡೆದುಕೊಳ್ಳುವುದು ಎಷ್ಟು? ಕಳೆದುಕೊಳ್ಳುವುದು ಎಷ್ಟು? ಚರ್ಚಿಸಬೇಕಾದ ವಿಷಯ.*

ಅಲೆಮಾರಿಗಳಾದ ಲಂಬಾಣಿಗಳು ನೂರಾರು ಜನಗಳ ಗುಂಪಿನೊಂದಿಗೆ ಅಷ್ಟೇ ಸಂಖ್ಯೆಯ ದನಕರುಗಳ ಮೇಲೆ ಉಪ್ಪು-ಮೆಣಸು, ಕೆಲವೊಮ್ಮೆ ರಾಜ-ಮಹಾರಾಜರ ದಂಡುಗಳಿಗೆ ಮದ್ದು ಗುಂಡುಗಳನ್ನು ಹೇರಿಕೊಂಡು ದುರ್ಗಮವಾದ ಅರಣ್ಯ, ಗಿರಿ-ಗೊಂಡಾರಗಳನ್ನು ದಾಟಿ ಊರೂರುಗಳಿಗೆ ತಲುಪಿಸುತ್ತಿದ್ದರು. ಒಂದೊಂದು ತಂಡಕ್ಕೂ ಒಬ್ಬೊಬ್ಬ ನಾಯಕ. ಕಾರಭಾರಿ, ಡಾವೋ (ಹಿರಿಯ) ಇರುತ್ತಿದ್ದರು. ಆದ್ದರಿಂದಲೇ ಈವತ್ತಿಗೂ ಸಹ ಅವರು ವಾಸಿಸುವ ತಾಣವನ್ನು 'ತಾಂಡ' ಎಂದು ಕರೆಯಲಾಗುತ್ತದೆ. ವಿಷಾದದ ಸಂಗತಿಯೆಂದರೆ ತಾಂಡಗಳು ಇನ್ನಾದರೂ ಕಂದಾಯ ಗ್ರಾಮಗಳೆಂದು ಗುರುತಿಸಲ್ಪಟ್ಟಿಲ್ಲ !

ದೇಶದಲ್ಲಿ ರೈಲು ಸಂಚಾರ ಪ್ರಾರಂಭಗೊಂಡಾಗ ಈ ಜನರ ವ್ಯಾಪಾರ-ವ್ಯವಹಾರ ಸಂಪೂರ್ಣವಾಗಿ ನಿಂತುಹೋಯಿತು. ತಮ್ಮ ದನಕರುಗಳಿಗೆ ಮೇವು-ನೀರು ಸಿಗುವಂತಹ ಗುಡ್ಡಗಾಡುಗಳಲ್ಲಿ ಮನೆ ಕಟ್ಟಿಕೊಂಡು ವ್ಯವಸಾಯ ವೃತ್ತಿ ಕೈಗೊಂಡರು. ಜೊತೆಗೆ ಪ್ರಾಣಿ ಸಾಕಣೆ, ಭಟ್ಟಿ ಸಾರಾಯಿ ಇಳಿಸುವ ದಂಧೆಯಲ್ಲಿಯೂ ತೊಡಗಿದರು.

ಈ ರೀತಿಯಾಗಿ ಅವರು ಪ್ರತ್ಯೇಕ ತಾಂಡಗಳಲ್ಲಿ ನೆಲೆಸಿದ್ದರಿಂದ ಇತರ ಜನಗಳ ಸಂಪರ್ಕ ಇಲ್ಲವಾಯಿತು. ಲಿಪಿಯೇ ಇಲ್ಲದ ತಮ್ಮ ಲಂಬಾಣಿ ಭಾಷೆಯ ಹೊರತು, ಬೇರೆ ಭಾಷೆ ಕಲಿಯದಾದರು. ಶಿಕ್ಷಣ ಇಲ್ಲವಾಯಿತು. ಪ್ರಜಾಸತ್ತೆಯ ಅರ್ಥವಾಗಲಿ, ಕಾಯ್ದೆ-ಕಾನೂನಿನ ಅರಿವಾಗಲಿ ಅವರಿಗೆ ದಕ್ಕದೇ ಹೋಯಿತು.

ಕಿತ್ತುತಿನ್ನುವ ಬಡತನ, ಮೂಢನಂಬಿಕೆ, ಹಸಿವು, ಅನಕ್ಷರತೆ, ಮುಗ್ಧತೆಗಳ ಮತ್ತೊಂದು ಹೆಸರೇ 'ಲಂಬಾಣಿತಾಂಡ' ಎನ್ನುವಂತಾಯಿತು. ಒಂದು ಕಾಲಕ್ಕೆ ಊರಿಂದೂರಿಗೆ ತಿರುಗಾಡಿ ಧೈರ್ಯ, ಸಾಹಸ ಚಾಣಾಕ್ಷತನದಿಂದ ವ್ಯಾಪಾರಮಾಡಿ, ಕೈತುಂಬ ಗಳಿಸಿ ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಶ್ರೀಮಂತರಾಗಿದ್ದ ಈ ಜನ ಈಗ ಆರ್ಥಿಕವಾಗಿ ನೆಲ ಕಚ್ಚಿದ್ದಾರೆ. ಈ ವಿಷಯದಲ್ಲಿ ಪುರುಷನ ಸಮಸ್ಯೆ ಮತ್ತು ಮಹಿಳೆಯ ಸಮಸ್ಯೆಯ ನಡುವೆ ಹೆಚ್ಚಿನ ಅಂತರವಿಲ್ಲ. ಆದರೆ ಲಿಖಿತ ಸಂಸ್ಕೃತಿಯಿಂದ ಗಾವುದ ದೂರ ಉಳಿದರೂ ತಮ್ಮ ಹಾಡು, ಕಥೆ, ಗಾದೆ, ಒಡಪು, ಕಥನ ಕವನ, ಲಾವಣಿ ಇತ್ಯಾದಿಗಳನ್ನು ಒಳಗೊಂಡ ಮೌಖಿಕ ಸಂಸ್ಕೃತಿಯ ಅಗಾಧ ಸಂಪತ್ತನ್ನು ತಲೆಮಾರಿನಿಂದ ತಲೆಮಾರಿಗೆ ಕೊಡುತ್ತಲೇ ಬಂದಿದ್ದಾರೆ.

ಇವರು ವೇಷ-ಭೂಷಣಗಳಲ್ಲಿ ಹಿಂದು ಜನಗಳಿಗಿಂತ ಭಿನ್ನವಾಗಿ ಕಂಡು ಬಂದರೂ, ಅದರ ಪ್ರಭಾವಳಿಯಿಂದ ಮುಕ್ತರಾದವರೇನೂ ಅಲ್ಲ. ಹೆಣ್ಣು 'ದೇವತೆ' ಎಂದು ಪೂಜಿಸಲ್ಪಟ್ಟರೂ, ಅವಳ ಸ್ಥಾನಮಾನ ಅಧೋಗತಿಗೆ ಇಳಿದಿರುವಂತೆ, ಈ ಜನಗಳೂ ಸಹ ಮಹಿಳೆಯನ್ನು ಪುರುಷನಿಗಿಂತ ಕೆಳದರ್ಜೆಯವಳೆಂದೇ ಪರಿಗಣಿಸುತ್ತಾರೆ.

ಗಂಡು ಮಗು ಹುಟ್ಟಿದೊಡನೆ ಸಂತೋಷ ಸೂಚಕವಾಗಿ ನಗಾರಿ, ಕಂಚಿನತಟ್ಟೆ ಬಾರಿಸಿ ತಾಂಡಕ್ಕೆಲ್ಲಾ ಸುದ್ದಿ ಬಿತ್ತರಿಸುವುದು ಇವರ ಪದ್ಧತಿ. ಆದರೆ ಹೆಣ್ಣು ಮಗು ಹುಟ್ಟಿದಾಗ ಅದರ ಅಳುವಿನ ಹೊರತು ಯಾವ ಧ್ವನಿಯೂ ಕೇಳಿಬರುವುದಿಲ್ಲ. ನಾಯಕ, ಕಾರಭಾರಿ, ಹಿರಿಯ ಮುಖಂಡರುಗಳಂತಹ 'ಪುರುಷಸಿಂಹ'ಗಳು ಒತ್ತಟ್ಟಿಗೆ ಕುಳಿತು ಪಂಚಾಯತಿ ನಡೆಸುವಾಗ ಹೆಣ್ಣು ಹೆಂಗಸು ಅತ್ತ ಸುಳಿಯಬಾರದೆಂಬ ಕಟ್ಟಳೆ ಇದೆ.

ಇಂತಹ ಕಡ್ಡಾಯದ ಸಂಕೋಲೆಯಲ್ಲಿ ಬಂಧಿತಳಾಗಿದ್ದರೂ ಸಹ ಲಂಬಾಣಿ ಮಹಿಳೆಗೆ ಮನಸಾರೆ ಹಾಡಲು ಕುಣಿಯಲು ಸ್ವಾತಂತ್ರ್ಯವಿದೆ. ತಮ್ಮ ದಿನದ ದಣಿವನ್ನು ಮಾನಸಿಕ ಕ್ಲೇಶವನ್ನು ಮರೆಯಲು ಅವರು ನೃತ್ಯದ ಮೊರೆ ಹೋಗುತ್ತಾರೆ. ಹಾಡು-ಕುಣಿತದ ಜೊತೆಗೆ ಕಸೂತಿ ಕಲೆ ಇವರ ಬದುಕಿನ ಅವಿಭಾಜ್ಯ ಅಂಗ. ಯಾವ ಕಲಾಶಾಲೆಯಲ್ಲಿಯೂ ತರಬೇತಿ ಪಡೆಯದೆ ಹುಟ್ಟು ಕಲಾವಿದೆಯರಾಗಿ ರೂಪುಗೊಳ್ಳುವುದು ಲಂಬಾಣಿ ಮಹಿಳೆಯರ ವೈಶಿಷ್ಟ್ಯ.

ಇವರ ಮದುವೆಗಳು ಮಹಿಳೆಯರ ಸಮೂಹಗಾನದಿಂದ ಶುಭಾರಂಭವಾಗಿ ಆ ಮೂಲಕವೇ ಸುಸೂತ್ರವಾಗಿ ನೆರವೇರುತ್ತವೆ. ಹೊರಗಿನವರನ್ನು ಕರೆಯಿಸುವ ತಾಪತ್ರಯವಿಲ್ಲ. ವರದಕ್ಷಿಣೆಯಂತಹ ಹಿಂಸೆ ಇಲ್ಲ. ವಿಧವಾ ವಿವಾಹಕ್ಕೆ ಮಾನ್ಯತೆ ಇದೆ. ಅತ್ಯಂತ ಶ್ರಮಜೀವಿಗಳಾದ ಈ ಮಹಿಳೆಯರು ಎಂತಹ ಕಷ್ಟದ ಕೆಲಸವನ್ನಾದರೂ ಅತ್ಯಂತ ಶ್ರದ್ಧೆ-ಪ್ರಾಮಾಣಿಕತೆಯಿಂದ ಸಂತೋಷದಿಂದ ಮಾಡುತ್ತಾರೆ.

ದಿನ ಬೆಳಗಾದರೆ ಯಾವುದೋ ಮಂದಿರ-ಮಸೀದಿ-ಚರ್ಚಿಗೆ ಹೋಗಲೇಬೇಕೆನ್ನುವ ಕಟ್ಟಳೆ ಇವರಿಗಿಲ್ಲ. ಬಸವಣ್ಣನ ಹೆಸರು ಹೇಳಿಕೊಳ್ಳದೆಯೇ ಮಾನಸಿಕವಾಗಿ 'ಬಸವತತ್ವಿ' ಗಳಾದ ಈ ಜನ ಕಾಯಕದಲ್ಲಿ ಕೈಲಾಸ ಕಾಣುವವರು.

ತಮ್ಮ ಜನಾಂಗದ ಆರಾಧ್ಯ ದೈವ ಸೇವಾಲಾಲನ ಪೂಜೆಯನ್ನು ತಮತಮಗೆ ಅನುಕೂಲವಾದಾಗ ಮಾಡಿಕೊಳ್ಳಬಹುದಾದ ಧಾರ್ಮಿಕ ಸ್ವಾತಂತ್ರ್ಯ ಅವರಿಗಿದೆ. ೧೭೩೯ ರಲ್ಲಿ ಜನಿಸಿ ೬೭ ವರ್ಷಗಳ ಕಾಲ ಬಾಳಿ ಬದುಕಿದ ಸೇವಾಲಾಲ್ ಈ ಜನಾಂಗದ ಆದರ್ಶ. ಲಂಬಾಣಿ ಜನಗಳು ಎಲ್ಲಿ ಇರುತ್ತಾರೋ ಅಲ್ಲಿ ಈ ಸಂತನ ಮಠ ಇರಲೇಬೇಕು. ಕೇವಲ ಇನ್ನೂರು ವರುಷಗಳ ಹಿಂದೆ ಜೀವಂತವಾಗಿದ್ದ ಈ ವ್ಯಕ್ತಿ ಕೋಟಿ ಕೋಟಿ ಲಂಬಾಣಿಗಳ ಪ್ರೀತಿಯ 'ಭಾಯ್' (ಅಣ್ಣ) ಆಗಿ ಮನೆ ಮನಗಳಲ್ಲಿ ನೆಲೆಯೂರಿದ್ದು ತನ್ನ ಸೇವಾ ಮನೋಭಾವದಿಂದ. ಸಸ್ಯಾಹಾರಿ, ಬ್ರಹ್ಮಚಾರಿ, ಗೋಪಾಲಕ, ತನ್ನ ಜನಗಳ ಮಧ್ಯೆ ಬೆರೆತು ಅವರ ರೋಗರುಜಿನ ಕಷ್ಟ-ಸುಖಗಳಲ್ಲಿ ಭಾಗಿಯಾದವನು. ಜನಾಂಗದ ಏಳಿಗೆಗಾಗಿ ಹೋರಾಟ ಮಾಡಿದವನು. ಮದ್ಯ, ಮಾಂಸ, ಧೂಮ ವ್ಯಸನಗಳಿಂದ ದೂರವಿದ್ದವನು. ಎಲ್ಲದಕ್ಕಿಂತ ಹೆಚ್ಚಾಗಿ ನುಡಿದಂತೆ ನಡೆದವನು.

ಆತನ ಸದ್ಗುಣಗಳಿಗೆ ಮಾರುಹೋದ ಮರಿಯಮ್ಮ ಎಂಬ ಮಹಿಳೆ ಮದುವೆಯಾಗಲು ಹಾತೊರೆದು, ಆತ ಅದಕ್ಕೆ ಒಪ್ಪದಿದ್ದಾಗ ಒಳ್ಳೆಯ ಗೆಳತಿಯಾಗಿ, ಮಾರ್ಗದರ್ಶಕಳಾಗಿ ಕೊನೆವರೆಗೂ ಜೊತೆಗೂಡಿ ಸೇವೆಯಲ್ಲಿ ತೊಡಗುತ್ತಾಳೆ. ಆ ಕಾರಣದಿಂದಾಗಿ ಸೇವಾಲಾಲನಷ್ಟೇ ಮರಿಯಮ್ಮ ಸಹ ಲಂಬಾಣಿಗಳ ಆರಾಧ್ಯ ದೈವ. ರಾಜಸ್ಥಾನಿ ಮೂಲದವರಾದ ಈ ಜನ, ಪತಿಯೊಡನೆ ಸಹಗಮನ ಮಾಡಿದ ಜನಾಂಗದ ಏಳು ಜನ 'ಸತಿ'ಯರನ್ನು ಸಹ ಗ್ರಾಮದೇವತೆಯರೆಂದು ಆರಾಧಿಸುತ್ತಾರೆ.

ಇದುವರೆಗೂ ನಾನು ಪ್ರಸ್ತಾಪಿಸಿದ ಕೆಲವು ನಂಬಿಕೆ- ನಡವಳಿಕೆಗಳಂತಹ ಜೀವನ ಮೌಲ್ಯಗಳು ಆ ಜನರ ಬದುಕನ್ನು ಸರಳವಾಗಿ, ಸುಗಮವಾಗಿ, ಸಂತೋಷಕರವಾಗಿ ಮುನ್ನಡೆಸಲು ಕಾರಣವಾಗುತ್ತವೆ. ಆದರೆ ರೋಗ-ರುಜಿನಗಳು ಕಾಡಿದಾಗ ಮಾಟ, ಮಂತ್ರ, ಬೂದಿ, ತಾಯತಗಳಿಗೆ ಶರಣು ಹೋಗುವ ಮೂಢನಂಬಿಕೆ ಅವರಲ್ಲಿ ಇನ್ನೂ ಹಾಗೇ ಬೇರೂರಿದೆ. ಆಧುನಿಕತೆಯ ಗಾಳಿ ತಾಂಡಗಳಿಗೂ ಬೀಸಿದೆ ನಿಜ. ಅಷ್ಟಿಷ್ಟು ವಿದ್ಯೆ ಕಲಿತು ಉಡುಪು ತೊಡುಪುಗಳಲ್ಲಿ ಬದಲಾವಣೆಯನ್ನು ಕಂಡಿದ್ದಾರೆ. ಕೆಲವರು ಭಟ್ಟಿ ಸಾರಾಯಿಯಿಂದ ಬ್ರಾಂದಿ ವಿಸ್ಕಿಗೆ ಬಡ್ತಿ ಹೊಂದಿರಬಹುದು, ಸರಳ ಮದುವೆಯಿಂದ ಆಡಂಬರದ ಮದುವೆಗೆ ಮುಂದಾಗಿರಬಹುದು, ಪೈಪೋಟಿಯ ಮೇಲೆ (ಅವಕಾಶವಿದ್ದಾಗ) ಭ್ರಷ್ಟಾಚಾರದಲ್ಲಿ ತೊಡಗಿರಬಹುದು.

ಆದರೆ ಇವೆಲ್ಲವೂ ಯಾವುದೇ ಒಂದು ಜನಾಂಗದ ಅಭಿವೃದ್ಧಿಯಂತೂ ಖಂಡಿತ ಅಲ್ಲ; ಅಧಃಪತನ. ನಾಗರಿಕತೆ ಎಂದರೆ-ಚಾಣಾಕ್ಷತನದಿಂದ ಮೋಸ-ವಂಚನೆ ಮಾಡಿ ದಕ್ಕಿಸಿಕೊಳ್ಳುವುದಲ್ಲ. ವಿದ್ಯೆ ಕಲಿತವರು ಅವಿದ್ಯಾವಂತರನ್ನು ನಾನಾ ರೀತಿಯಿಂದ ಶೋಷಿಸುವುದು ಸಲ್ಲ ಎಂಬ ಅರಿವನ್ನು ಮೂಡಿಸುವುದು ಕೂಡ ಕೇಂದ್ರ-ರಾಜ್ಯ ಸರಕಾರದ ಕಾರ್ಯಕ್ರಮಗಳ ಒಂದು ಪ್ರಮುಖ ಅಂಶವಾಗಬೇಕು.

'ಹೇಗೆ ರಾಜನೋ ಹಾಗೆ ಪ್ರಜೆ' ಎನ್ನುವ ಮಾತು ಇಲ್ಲಿ ಬಲು ಮುಖ್ಯ. ಸರಕಾರವನ್ನು ನಡೆಸುವ ಪ್ರಮುಖರು, ಬೇಲಿಯೇ ಎದ್ದು ಹೊಲ ಮೇಯುವ ರೀತಿಯಲ್ಲಿ ಹಲವು ನೂರು ಹಗರಣಗಳಲ್ಲಿ ಮುಳುಗಿದರೆ, ಜನಸಾಮಾನ್ಯರಿಗೆ ಮೌಲ್ಯಗಳ ಬಗ್ಗೆ ತಿಳಿ ಹೇಳುವವರ್‍ಯಾರು?

ಒಂದು ಬುಡಕಟ್ಟು ಸಂಸ್ಕೃತಿಯನ್ನು ಉಳಿಸುವುದೆಂದರೆ, ಅವರ ಆಚರಣೆಯಲ್ಲಿರಬಹುದಾದ ಮಾನವೀಯತೆ, ಮುಗ್ಧತೆಗಳು ನಾಶವಾಗದಂತೆ ಕಾಯ್ದುಕೊಳ್ಳುವುದು. ಜನವಿರೋಧಿ ಧೋರಣೆ, ಮೂಢನಂಬಿಕೆ, ಕಂದಾಚಾರ ಪದ್ಧತಿಗಳನ್ನು ಕಿತ್ತುಹಾಕಲು ಶ್ರಮಿಸುವುದು.

ಉಚಿತ ಶಿಕ್ಷಣಕ್ಕೆ ಆದ್ಯತೆ, ಹೆಣ್ಣುಮಕ್ಕಳಿಗೇಕೆ ಕಲಿಕೆ? ಎಂಬ ಅವರ ಧೋರಣೆಯನ್ನು ಬದಲಿಸಿ, ವಿದ್ಯೆಗೆ ಲಿಂಗಭೇದವಿಲ್ಲ ಎಂಬುದನ್ನು ಮನದಟ್ಟು ಮಾಡಿಕೊಡುವಂತಹ ಕಾರ್ಯಕ್ರಮಗಳ ಮೂಲಕ, ಅವರ ಆಂತರಿಕ ಬೆಳವಣಿಗೆಗೆ ಸರಕಾರ ಸ್ಪಂದಿಸಬೇಕು.

ಕೃಷಿಕರಾಗಿ ಕೈ ತುಂಬ ದುಡಿಯುವ ಹಂಬಲ ಹೊತ್ತ ಜನಕ್ಕೆ ಅಷ್ಟಿಷ್ಟು ಸಾಗುವಳಿ ಜಮೀನು ಲಭ್ಯವಾದರೆ ಸಾಕು, ಮನೆಮಂದಿಯೆಲ್ಲಾ ಆಸ್ಥೆಯಿಂದ ದುಡಿದುಣ್ಣುತ್ತಾರೆ. ಅಕ್ರಮ ಜಮೀನನ್ನು ಸಕ್ರಮಗೊಳಿಸುವ ಕಾಯ್ದೆ ಜಾರಿಗೆ ಬರಬೇಕಾದುದು ಇಂತಹ ಮಣ್ಣಿನ ಮಕ್ಕಳಿಗೇ ಹೊರತು, ಸಾವಿರಾರು ಎಕರೆ ಜಮೀನು ಹೊಂದಿರುವ ಶ್ರೀಮಂತರಿಗಲ್ಲ ಎಂಬುದನ್ನು ಸರಕಾರ ಅರಿಯಬೇಕು.

ಗೌಡರ ಲೆಕ್ಕದಾಗಿಲ್ಲ, ಶ್ಯಾನುಭೋಗರ ಬುಕ್ಕಿನಾಗಿಲ್ಲ ಎಂಬಂತಾಗಿ ಬದುಕುತ್ತಿರುವ ಬುಡಕಟ್ಟು ಜನರನ್ನು ಅತಂತ್ರದಿಂದ ಅಭಿವೃದ್ಧಿಯತ್ತ ಒಯ್ಯಬೇಕಾದರೆ, ರಾಷ್ಟ್ರಮಟ್ಟದಲ್ಲಿ ಒಂದು ಸಮಿತಿ ರಚನೆಯಾಗಬೇಕು. ಎಲ್ಲಾ ರಾಜ್ಯಗಳ ಬುಡಕಟ್ಟು ಪ್ರತಿನಿಧಿಗಳು ಅದರಲ್ಲಿ ಸದಸ್ಯರಾಗಿರಬೇಕು.

ಸಾಮಾನ್ಯವಾಗಿ ಬುಡಕಟ್ಟು ಜನರಲ್ಲಿ (ಸ್ತ್ರೀಯೂ ಸೇರಿದಂತೆ)ಕುಡಿತದ ಚಟ ಹೆಚ್ಚು. ಅದಕ್ಕೆ ಹಲವು ಕಾರಣಗಳಿವೆ. ಜೀತಪದ್ಧತಿ ಇನ್ನೂ ಜಾರಿಯಲ್ಲಿದೆ. ಇವರ ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿ ಬಾಲಕಾರ್ಮಿಕರಾಗಿ ದುಡಿಯುತ್ತಾರೆ. ಇದಕ್ಕೆಲ್ಲಾ ಕಡುಬಡತನವೇ ಕಾರಣ. "ಒಕ್ಕಲ ಕೇರ್‍ಯಾಗ ಮಳಿರಾಜ, ಅವರು ಮಕ್ಕಳ ಮಾರ್‍ಯಾರೋ ಮಳಿರಾಜ, ಮಕ್ಕಳ ಮಾರಿ ರೂಕ್ಕ ಹಿಡಕೊಂಡು, ಭತ್ತಂತ ತಿರುಗ್ಯಾರೋ ಮಳಿರಾಜ" ಎನ್ನುವ ಜಾನಪದ ಹಾಡು ಬಹುಶಃ ಈ ಜನಗಳ ಸ್ಥಿತಿಯನ್ನು ಕಂಡೇ ರಚನೆಯಾಗಿರಬೇಕು.

ಸಮಿತಿ ಬುಡಕಟ್ಟು ಜನರ ಜೀವನ ವಿಧಾನವನ್ನು ಅಧ್ಯಯನ ಮಾಡಿ ಸೂಕ್ತ ಸಹಕಾರ, ಸೌಲಭ್ಯಗಳನ್ನು ಒದಗಿಸಬೇಕು. ಪ್ರಾದೇಶಿಕವಾಗಿ ಬುಡಕಟ್ಟು ಮಹಿಳೆಯರು ನಾನಾ ರೀತಿಯ ಕೈ ಕಸುಬು ಮಾಡುತ್ತಾರೆ. ಕಸೂತಿ, ಹೆಣಿಗೆ,ಕರಕುಶಲ ವಸ್ತುಗಳ ನಿರ್ಮಿತಿ, ಸಮೀಪವಿರಬಹುದಾದ ಕಾಡಿನಿಂದ ಹುಲ್ಲು , ಸೌದೆ, ನಾರು, ಬೇರು, ಹಣ್ಣು, ಹಂಪಲು ತಂದು ಮಾರುವುದು, ಪ್ರಾಣಿ ಸಾಕಣೆ ಇತ್ಯಾದಿ.

ಇವರುಗಳಿಗೆ ಸಹಾಯ ಮಾಡುವುದೆಂದರೆ-ಬಡ್ಡಿ, ಚಕ್ರಬಡ್ಡಿ ಹಾಕಿ ಸಾಲಗಾರರನ್ನಾಗಿಸುವುದಾಗಲಿ, ಮಾಸಾಶನ, ಅನುದಾನಗಳಂತಹ ಆಮಿಷಕ್ಕೆ ಒಳಗಾಗಿಸಿ, ಅವರುಗಳು ಸರಕಾರದೆದುರು ಬೊಗಸೆಯೊಡ್ಡಿ ದೈನೇಸಿಯಾಗಿ ನಿಲ್ಲುವಂತೆ ಮಾಡುವ ವಿಧಾನವನ್ನಾಗಲಿ ಸರಕಾರ ಕೈಗೊಳ್ಳಬಾರದು. ಅವರುಗಳು ತಮ್ಮ ಮಾನವ ಶ್ರಮವನ್ನು ಸಂಪೂರ್ಣವಾಗಿ ಬಳಕೆ ಮಾಡಿಕೊಂಡು ಆರ್ಥಿಕ ಸ್ವಾವಲಂಬಿಗಳಾಗಿ, ಸ್ವಾಭಿಮಾನದಿಂದ ಬದುಕುವಂತಹ ವಾತಾವರಣ ನಿರ್ಮಾಣಗೊಳ್ಳಬೇಕು. ಇದೇ ಸರಕಾರದ ಸ್ಪಷ್ಟ ಗುರಿಯಾಗಬೇಕು.

●




# ಆದಿವಾಸಿಗಳು

ಡಾ. ಎಂ. ಬಿ. ರಾಜಾಮಣಿ

ಮಾನವ ವಿಜ್ಞಾನಿಗಳು ದಕ್ಷಿಣ ಭಾರತದ ಮನುಕುಲವನ್ನು ಆದಿವಾಸಿಗಳು, ದ್ರಾವಿಡರು ಮತ್ತು ಆರ್ಯರು ಎಂಬ ಮೂರು ಪಂಗಡಗಳಾಗಿ ವಿಭಾಗಿಸಿದ್ದಾರೆ. ಮೂಲ ನಿವಾಸಿಗಳು ಎಂಬುದಾಗಿ ಅರ್ಥೈಸಲಾಗಿರುವ ಆದಿವಾಸಿ ಎಂಬ ಪದವು ಭಾರತೀಯ ಮೂಲಶಬ್ದ. ಅಂದರೆ, ಒಂದು ಪ್ರದೇಶದ ಮೂಲ ನಿವಾಸಿಗಳೇ ಆದಿವಾಸಿಗಳು. ಅವರು ಮನುಕುಲದ ಲಿಖಿತ - ಇತಿಹಾಸ ಕಾಲದ ಅರುಣೋದಯ ಆಗುವುದಕ್ಕೆ ಮೊದಲಿನಿಂದ ಇರುವವರು. ಅವರು ಅಕ್ಷರ - ಪೂರ್ವ ಸಂಸ್ಕೃತಿಯ ಪ್ರತಿನಿಧಿಗಳು. ಅವರು ಇಂದು ನಾಗರಿಕರು, ಆಧುನಿಕರು ಎಂಬುದಾಗಿ ಗುರುತಿಸಿಕೊಳ್ಳುವ ಜನರ ಪೂರ್ವೇತಿಹಾಸದ ಪ್ರತೀಕವಾಗಿದ್ದಾರೆ. ಮೊದಮೊದಲು ಹೊರ ದೇಶಗಳಿಂದ ಬಂದಿದ್ದ ಜನರು ಈ ಮೂಲನಿವಾಸಿಗಳ ಮೇಲೆ ದಾಳಿ ಮಾಡಿ ಅವರಲ್ಲಿ ಅನೇಕರನ್ನು ಹೇಳಹೆಸರಿಲ್ಲದಂತೆ ಅಳಿಸಿ ಹಾಕಿ ಬಿಟ್ಟರು. ಈ ದಾಳಿಯಲ್ಲಿ ಅಳಿಯದೇ ಉಳಿದಿದ್ದ ಹಲವರು ಬೆಟ್ಟ-ಗುಡ್ಡ, ಕಾಡು-ಮೆಡು, ಕಾನನ-ಕಣಿವೆ, ಗುಹೆ-ಗುಹ್ವರ, ದಟ್ಟಡವಿ ಪ್ರದೇಶಗಳಿಗೆ ಓಡಿ ಹೋಗಿ ಅಲ್ಲಿ ಬಾಳುವೆ ನಡೆಸಲು ಆರಂಭಿಸಿದರು. ಇಂತಹ ಸ್ಥಳಗಳಲ್ಲಿ ವಾಸಿಸುತ್ತಿರುವವವರನ್ನು ವನ್ಯಜಾತಿ ಜನರು, ವನವಾಸಿಗಳು, ಅರಣ್ಯ ನಿವಾಸಿಗಳು, ಕಾಡು ಜನಾಂಗ, ಗಿರಿ-ಪರ್ವತ ನೆಲಸಿಗರು ಮುಂತಾದ ಹೆಸರುಗಳಿಂದ ಕರೆಯಲಾಗಿದೆ. ರಿಸ್ಲೆ ಹಾಗೂ ಎಲ್ವಿನ್, ಸರ್ ಬೈನ್ಸ್, ಹಟ್ಟನ್, ಠಕ್ಕರ್ ಬಾಪಾ, ಡಾ. ಘುರ್ಯೆ ಮತ್ತು ಅಂತರರಾಷ್ಟ್ರೀಯ ಕಾರ್ಮಿಕ ಸಂಘವು ಈ ಆದಿವಾಸಿಗಳನ್ನು ಕ್ರಮವಾಗಿ ಆ್ಯಬೋರಿಜಿನಲ್ಸ್ (ಮೂಲ ನಿವಾಸಿಗಳು), ಹಿಲ್ ಟ್ರೈಬ್ಸ್ (ಗಿರಿನಿವಾಸಿ ಬುಡಕಟ್ಟುಗಳು), ಪ್ರಿಮಿಟಿವ್ ಟ್ರೈಬ್ಸ್ (ಮೂಲ ಅಸಂಸ್ಕೃತ ಬುಡಕಟ್ಟು), ಆದಿಪ್ರಜಾ, ಹಿಂದುಳಿದ ಹಿಂದುಗಳು ಮತ್ತು ಇಂಡಿಜಿನಸ್ ಪೀಪ್‌ಲ್ಸ್ (ಸ್ಥಳೀಯ ಜನಾಂಗ) ಎಂಬುದಾಗಿ ಕರೆದಿದ್ದಾರೆ. ಮಹಾತ್ಮ ಗಾಂಧಿಯವರು ಈ ಪರ್ವತ ಹಾಗೂ ಕಾನನ ವಸತಿಗಾರಿಗೆ ಗಿರಿಜನರು ಎಂಬುದಾಗಿ ನಾಮಕರಣ ಮಾಡಿ, ಆ ಹೆಸರು ಜನಪ್ರಿಯವಾಗುವಂತೆ ಮಾಡಿದರು.

> **ನರ ವಿಜ್ಞಾನಿಗಳು ಆದಿವಾಸಿಗಳನ್ನು ದೇಹ ರಚನೆಯ ಮೇಲೆ ವಿಂಗಡಿಸುವಾಗ ಅವರು ದ್ರಾವಿಡರಿಗಿಂತ ಬಹು ಮೊದಲೇ ಇಲ್ಲಿ ವಾಸ ಮಾಡುತ್ತಿದ್ದ ನಿವಾಸಿಗಳೆಂದು ಅಭಿಪ್ರಾಯಪಟ್ಟಿದ್ದಾರೆ. ಆದಿವಾಸಿಗಳು ಈ ನೆಲದಲ್ಲಿ ಮೊದಲು ಬಾಳಿದ ನಿಜವಾದ ಸ್ವದೇಶಿಯರು.**

ಬ್ರಿಟಿಷರ ಆಡಳಿತದ ಕಾಲದಲ್ಲಿ ರಚಿತವಾಗಿದ್ದ ಸೈಮನ್ ಸಮಿತಿಯು ಈ ಆದಿವಾಸಿಗಳನ್ನು ಗುರುತಿಸಲು ಷೆಡ್ಯೂಲ್ಡ್ ಟ್ರೈಬ್ಸ್ ಎಂಬ ಪಾರಿಭಾಷಿಕ ಪದವನ್ನು ಬಳಸಿದ್ದಿತು. ಭಾರತ ದೇಶದಲ್ಲಿ ಸ್ವಾತಂತ್ರ್ಯ ಸೂರ್ಯನ ಉದಯವಾದ ಮೇಲೆ ರಚಿಸಲಾಗಿದ್ದ ಸಂವಿಧಾನವು ಕೆಲವು ವಿಶೇಷ ಸವಲತ್ತು ಸೌಲಭ್ಯಗಳನ್ನು ಪಡೆಯುವುದಕ್ಕೆ ಅರ್ಹವಾಗಿದ್ದ ಬಡುಕಟ್ಟುಗಳನ್ನು ಷೆಡ್ಯೂಲ್ಡ್

ಟ್ರೈಬ್ಸ್ ಎಂಬುದಾಗಿಯೇ ಗುರುತಿಸಿತು. ಸಂವಿಧಾನಾತ್ಮಕ ಪಟ್ಟಿಗೆ ಸೇರದಿರುವ ಹಲವು ಆದಿವಾಸಿ ಸಮುದಾಯಗಳು ಟ್ರೈಬ್ಸ್ ಎಂಬ ಸಾಮಾನ್ಯ ಪಟ್ಟಿಗೆ ಸೇರಿಕೊಳ್ಳುತ್ತವೆ. ಟ್ರೈಬ್ಸ್ ಎಂಬ ಮೂಲಶಬ್ದದಿಂದ ಉತ್ಪತ್ತಿಗೊಂಡಿರುವ ಟ್ರೈಬ್ಸ್ ಎಂಬ ಪದಕ್ಕೆ ಮೊದಲು ಪ್ರಾಚೀನ ರೋಮ್ ದೇಶದ ರಾಜಕೀಯ ವಿಭಾಗ ಅಥವಾ ಆಡಳಿತ ಪ್ರಾಂತ ಎಂಬ ಅರ್ಥವಿದ್ದಿತು. ಅನಂತರ ಪಾಶ್ಚಾತ್ಯ ಪ್ರಪಂಚದಲ್ಲಿ ಸಮುದಾಯವಾಗಿ ರೂಪಿತವಾದ ಕುಟುಂಬಗಳ ಸಂಕಲನಕ್ಕೆ ಈ ಪದವನ್ನು ಬಳಸಲಾಯಿತು. ಈಗ ಆದಿವಾಸಿ ಹಾಗೂ ಪರಿಶಿಷ್ಟ ಪಂಗಡ ಅಥವಾ ಬುಡಕಟ್ಟುಗಳು ಎಂಬ ಪದಗಳನ್ನು ಪರ್ಯಾಯ ಹೆಸರುಗಳಾಗಿ ಬಳಸಲಾಗುತ್ತದೆ.

ಆದಿವಾಸಿ ಎಂಬ ಪದಕ್ಕೆ ನಿರ್ದಿಷ್ಟವಾದ ವ್ಯಾಖ್ಯೆ ಕಂಡುಬರುವುದಿಲ್ಲ. ಮಾನವ ವಿಜ್ಞಾನಿಗಳು, ಸಮಾಜಶಾಸ್ತ್ರಜ್ಞರು ಮೊದಲಾದವರು ತಮ್ಮ ತಮ್ಮ ದೃಷ್ಟಿಕೋನಗಳಿಂದ ವಿಭಿನ್ನವಾದ ಬಗೆಗಳಲ್ಲಿ ಪದರಂಗುಗಳನ್ನು ಬಳಸಿ ಆದಿವಾಸಿಗಳ ಬಗ್ಗೆ ವಿವಿಧವಾದ ಚಿತ್ರಗಳನ್ನು ರೇಖಿಸಿದ್ದಾರೆ.

ಡಬ್ಲ್ಯೂ. ಎಚ್. ಆರ್. ರಿಸ್ಲೆ ಅವರು ಒಂದು ಸರಳ ಜನಾಂಗದ ಸದಸ್ಯರಾಗಿರುವ, ಒಂದೇ ಸಾಮಾನ್ಯ ಭಾಷೆಯನ್ನಾಡುವ, ಒಂದೇ ಬಗೆಯ ಸರ್ಕಾರವನ್ನು ರಚಿಸಿಕೊಂಡಿರುವ ಮತ್ತು ಕಾದಾಡಬೇಕಾದ ಸಂದರ್ಭ ಒದಗಿಬಂದಾಗ ಒಟ್ಟಾಗಿ ಕೂಡಿ ಹೋರಾಡುವ ಜನರೇ ಆದಿವಾಸಿಗಳು ಎಂಬುದಾಗಿ ವಿವರಿಸಿದ್ದಾರೆ.

ಜೆ.ಎಲ್.ಗಿಲಿನ್ ಮತ್ತು ಜೆ.ಪಿ.ಗಿಲಿನ್ ಅವರ ಮಾತಿನಲ್ಲಿ ಹೇಳಬೇಕಾದರೆ ಒಂದೇ ನೆಲೆಯಲ್ಲಿ ವಾಸಿಸುವ, ಒಂದೇ ಬಗೆಯ ಭಾಷೆಯನ್ನು ಬಳಸುವ, ಒಂದೇ ವಿಧವಾದ ಸಂಸ್ಕೃತಿಯನ್ನು ಒಳಗೊಂಡಿರುವ ಸ್ಥಳೀಯ ಸಮುದಾಯಗಳ ಸಂಘಟಿತ ಸಮೂಹಕ್ಕೆ ಸೇರಿರುವವರೇ ಆದಿವಾಸಿಗಳು ಎಂದೆನಿಸಿಕೊಳ್ಳುತ್ತಾರೆ.

ಫೇರ್‌ಚೈಲ್ಡ್ ಅವರ ಪ್ರಕಾರ ಸಾಮಾನ್ಯವಾಗಿ ಹಲವು ರಕ್ತ ಸಂಬಂಧಿಗಳನ್ನು, ತಂಡಗಳನ್ನು, ಉಪಸಮೂಹಗಳನ್ನು, ಒಂದು ನಿರ್ದಿಷ್ಟ ಭೂಪ್ರದೇಶವನ್ನು, ತನ್ನದೇ ಆದ ಖಚಿತ ಆಡುಭಾಷೆಯನ್ನು ವಿಶಿಷ್ಟವಾದ ಒಂದೇ ತರದ ಸಂಸ್ಕೃತಿಯನ್ನು ಮತ್ತು ಏಕ ರೂಪವಾದ ರಾಜಕೀಯ ವ್ಯವಸ್ಥೆಯನ್ನು ಹೊಂದಿ, ತಾವು ಇತರರಿಗಿಂತ ವಿಭಿನ್ನವಾಗಿರುವವರು ಎಂಬ ಭಾವನೆಯನ್ನು ಬೆಳಸಿಕೊಂಡಿರುವ ಸಾಮಾಜಿಕ ಸಮೂಹವು ಆದಿವಾಸಿ ಸಮಾಜವೆಂದೆನಿಸಿಕೊಳ್ಳುತ್ತದೆ.

ಡಿ.ಎಸ್. ಮಜುಂದಾರ್ ಅವರ ಅಭಿಪ್ರಾಯದಲ್ಲಿ ಒಂದು ನಿಶ್ಚಿತ ಪ್ರದೇಶದಲ್ಲಿ ಜೀವನವನ್ನು ನಡೆಸುವ, ಒಂದೇ ತರದ ಭಾಷೆಯನ್ನು ಆಡುವ, ವಿವಾಹ ಹಾಗೂ ವೃತ್ತಿಗಳಿಗೆ ಸಂಬಂಧಪಟ್ಟ ನಿಷೇಧಗಳನ್ನು ನಿಕೃಷ್ಟವಾಗಿ ಪರಿಪಾಲಿಸುವ ಮತ್ತು ಪರಸ್ಪರ ಸಂಬಂಧ ಹಾಗೂ ಅವಶ್ಯ ಕರ್ತವ್ಯಗಳನ್ನು ಹೊಂದಿರುವ ಸದಸ್ಯರಿಂದ ಕೂಡಿರುವ ಮತ್ತು ಒಂದೇ ಹೆಸರನ್ನು ಪಡೆದಿರುವ ಕುಟುಂಬಗಳ ಸಮೂಹವೇ ಆದಿವಾಸಿ ಸಮಾಜ.

ಡಬ್ಲ್ಯೂ.ಜೆ.ಪೆರ್ರಿ ಅವರು ಒಂದು ಸ್ಥಳದಲ್ಲಿ ನೆಲಸಿ ಒಂದೇ ಭಾಷೆಯನ್ನು ಆಡುವ ಜನಸಮೂಹವನ್ನು ಆದಿವಾಸಿ ಸಮೂಹ ಎಂಬುದಾಗಿ ಕರೆಯಬಹುದು ಎಂಬುದಾಗಿ ಹೇಳಿದರೆ, ಬೋಗಾರ್ಡಸ್ ಅವರು ರಕ್ಷಣೆಯ ಅನಿವಾರ್ಯತೆ, ರಕ್ತ ಸಂಬಂಧ, ಒಂದೇ ಮತ ಧರ್ಮದ ನೆಲೆ ಇವುಗಳ ಆಧಾರದ ಮೇಲೆ ಅವಲಂಬಿತವಾಗಿರುವ ಸಮೂಹವೇ ಆದಿವಾಸಿ ಪಂಗಡ ಎಂದು ಸರಳವಾಗಿ ವ್ಯಾಖ್ಯಾನಿಸಿದ್ದಾರೆ.

ಆಂದ್ರೆ ಬಟೇಲಿಯವರು ಅತ್ಯಂತ ವ್ಯಾಪಕವಾಗಿ ಮಾನವ ಶಾಸ್ತ್ರೀಯ ದೃಷ್ಟಿಯಲ್ಲಿ, "ಬುಡಕಟ್ಟು ಎಂಬ ಪದವು ಒಂದು ವಿಶಿಷ್ಟ ಸಮಾಜದ ಸದಸ್ಯನಾಗಿ ಒಬ್ಬ ವ್ಯಕ್ತಿಯು ಪಡೆದುಕೊಳ್ಳುವ ಸಾಂಪ್ರದಾಯಿಕ ನಂಬಿಕೆ, ಕಲೆ ಮತ್ತು ಆಚರಣೆಗಳನ್ನು ಸೂಚಿಸುತ್ತದೆ. ಬುಡಕಟ್ಟು ತನಗೆ ಸಾಮಾನ್ಯ ಭಾಷೆ ಹಾಗೂ ಸಂಸ್ಕೃತಿಯ ಮೇಲೆ ಆಧಾರಿತವಾಗಿರುವ ಒಂದು ನಿರ್ದಿಷ್ಟ ಗುರುತು, ವ್ಯಕ್ತಿತ್ವವಿದೆ ಎಂಬ ಭಾವನೆಯನ್ನು ಹೊಂದಿರುವ ಒಂದು ಸಮೈಕ್ಯವಾದ ಜನಾಂಗೀಯ ಸಮೂಹವಾಗಿರುತ್ತದೆ. ಅದು ಪ್ರಮಾಣದಲ್ಲಿ ನಿಷ್ಕೃಷ್ಟವಾದ ಪ್ರಾಕೃತಿಕ ವಾತಾರವಣ, ಇನ್ನಿತರ ಪರಿಸರ ಮುಂತಾದವುಗಳಲ್ಲಿ ಜೀವಿಸಿ ಬಾಳ್ವೆ ನಡೆಸಬಲ್ಲ ಸಮೂಹವಾಗಿರುವುದಕ್ಕೆ ಸಾಕಷ್ಟು ದೊಡ್ಡದಾಗಿರುತ್ತದೆ ಹಾಗೂ ಎಲ್ಲರಿಗೂ ಸಾಮಾನ್ಯವಾಗಿರುವ ಕಾರ್ಯಾಚರಣೆಯಲ್ಲಿ ತೊಡಗುವುದಕ್ಕೆ ಸಾಕಷ್ಟು ಚಿಕ್ಕದಾಗಿರುತ್ತದೆ" ಎಂಬುದಾಗಿ ಅಭಿಪ್ರಾಯಪಡುತ್ತಾರೆ.

೨

ದೇವೆಂದ್ರ ಠಾಕೂರ್ ಹಾಗೂ ಡಿ.ಎನ್.ಠಾಕೂರ್ ಅವರುಗಳು ಸಂಪಾದಕರಾಗಿ ಹೊರತಂದಿರುವ 'ಟ್ರೈಬಲ್ ಲೈಫ್ ಇನ್ ಇಂಡಿಯ' ಎಂಬ ಗ್ರಂಥದ ಪ್ರಥಮ ಸಂಚಿಕೆಯಲ್ಲಿ ಮತ್ತು ಕರ್ನಾಟಕ ಸರ್ಕಾರದ ಕೈಪಿಡಿಯಲ್ಲಿ ಈ ರಾಜ್ಯದ ಪರಿಶಿಷ್ಟ ಬುಡಕಟ್ಟುಗಳನ್ನು ಈ ಕೆಳಕಂಡಂತೆ ಪಟ್ಟಿ ಮಾಡಿದ್ದಾರೆ.

೧) ಅಡಿಯನ್

೨) ಬಾರ್ಡ್ಡಾ

೩) ಬಾವಚ, ಬಾಮ್ಟ, ಬಾಮಚ

೪) ಭಿಲ್, ಭಿಲ್ ಗ್ರಾರ್ಸಿಯ, ಧೋಳಿ ಭಿಲ್, ಡುಂಗ್ರಿ ಭಿಲ್, ಡುಂಗ್ರಿ ಗರಸಿಯ, ಮೇವಾಸಿ ಭಿಲ್, ರಾವಲ್ ಭಿಲ್, ತಾಡ್ವಿ ಭಿಲ್, ಬಾಗಾಲಿಯ, ಭಿಲಾಲ, ಪಾವ್‌ರಾ, ವಾಸವ, ವಾಸವ್, ಮಸವೆ.

೫) ಚೆಂಚು, ಚೆಂಚವಾರ್

೬) ಭೋಧಾರ

೭) ಡುಬ್ಲ, ತಲವಿಯ, ಹಲ್ಪತಿ

೮) ಗಮಿಟ್, ಗಾಮ್ಟ, ಗವಿಟ್, ಮಾವ್ಚಿ, ಪಡ್ವಿ, ವಾಳ್ವಿ

೯) ಗೊಂಡ್, ನಾಯಕ್ ಪೋಡ್, ರಾಜಗೊಂಡ್

೧೦) ಗೌಡಲು

೧೧) ಹಕ್ಕಿಪಿಕ್ಕಿ

೧೨) ಹಸಲರು

೧೩) ಇರುಳರ್

೧೪) ಇರುಳಿಗ

೧೫) ಜೇನುಕುರುಬ

೧೬) ಕಾಡುಕುರುಬ

೧೭) ಕಮ್ಮಾರ (ದಕ್ಷಿಣ ಕನ್ನಡ ಜಿಲ್ಲೆ ಮತ್ತು ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನಲ್ಲಿ ಮಾತ್ರ).

೧೮) ಕಣಿಯನ್, ಕಣ್ಯನ್ (ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನಲ್ಲಿ ಮಾತ್ರ).

೧೯) ಕಥೋಡಿ, ಕಟ್‌ಕಾರಿ, ಧಾರ್ ಕಥೋಡಿ, ಧಾರ್ ಕಟ್‌ಕಾರಿ, ಸೋನ್ ಕಥೋಡಿ, ಸೋನ್ ಕಟ್‌ಕಾರಿ.

೨೦) ಕಾಟ್ಟುನಾಯಕನ್

೨೧) ಕೊಕ್ನೆ, ಕೋಕ್ನಿ, ಕುಕ್ನ.

೨೨) ಕೋಳಿಧೋರ್, ಠೋಕ್ರೆ ಕೋಳಿ, ಕೊಲ್ಚಾ- ಕೊಲ್ಗ.

೨೩) ಕೊಂಡಕಾಪುಗಳು

೨೪) ಕೊರಗ

೨೫) ಕೋಟ

೨೬) ಕೋಯ, ಭೀನೆ ಕೋಯ, ರಜ್ ಕೋಯ

೨೭) ಕುಡಿಯ, ಮೆಲಕುಡಿ

೨೮) ಕುರುಬ (ಕೊಡಗು ಜಿಲ್ಲೆಯಲ್ಲಿ ಮಾತ್ರ).
೨೯) ಕುರುಮನ್‌ರು
೩೦) ಮಹಾಮಲಸರ್
೩೧) ಮಲೈಕುಡಿ
೩೨) ಮಲಸರ್
೩೩) ಮಲಯಕಂಡಿ
೩೪) ಮಲೇರು
೩೫) ಮರಾಠ (ಕೊಡಗು ಜಿಲ್ಲೆಯಲ್ಲಿ ಮಾತ್ರ)
೩೬) ಮರಾಟ (ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾತ್ರ)
೩೭) ಮೇದ
೩೮) ನಾಯಕಡ, ನಾಯಕ, ಚೋಳಿನಾಲ ನಾಯಕ, ಕಪಾಡಿಯ ನಾಯಕ, ಮೋಟಾ ನಾಯಕ, ನಾನಾ ನಾಯಕ, ನಾಯಕ್.
೩೯) ನಾಯಿಕ್ ಬೇಡ, ಬೇಡರ್, ವಾಲ್ಮೀಕಿ.
೪೦) ಪಳ್ಳಿಯನ್
೪೧) ಪಣಿಯನ್
೪೨) ಪಾರ್ಧಿ, ಅಡ್ವಿ ಚಿಂಚೇರ್, ಪಾನ್ಸೆ ಪಾರ್ಧಿ
೪೩) ಪಟೇಲಿಯ
೪೪) ರಠಾವ
೪೫) ಷೋಲಗ
೪೬) ಸೋಲಿಗರು
೪೭) ತೋಡ
೪೮) ವಾರ್ಲಿ
೪೯) ವಿಟೋಲಿಯ, ಕೊಟ್ವಾಲಿಯ, ಬರೋಡಿಯ.
೫೦) ಯೆರವ
೫೧) ಕಾಡುಗೊಲ್ಲರು
೫೨) ಬಡಗರು
೫೩) ಮುರಿಯರು-ಇತ್ಯಾದಿ.

೩

ಈ ಆದಿವಾಸಿಗಳ ಮೂಲವನ್ನು ನಿರ್ಧರಿಸುವುದಕ್ಕೆ ನಂಬಲರ್ಹವಾದ ಆಧಾರಗಳಿಲ್ಲವಾದರೂ ವಿಜ್ಞಾನಿಗಳು ಇವರಿಗೆ ವಂಶಪಾರಂಪರ್ಯವಾಗಿ ಬಂದಿರುವ ಕೆಲವು ಕರಟುಕಥೆಗಳನ್ನು ಮತ್ತು ಬುಡಕಟ್ಟು ಹಿರಿಯರಿಂದ ಕೆಲವು ಪರಂಪರೆಯಗಳ ವಿಷಯಗಳನ್ನು ಸಂಗ್ರಹಿಸಿ ದಾಖಲು ಮಾಡಿದ್ದಾರೆ. ಇವುಗಳನ್ನೇ ಮೂಲಾಧಾರಗಳಾಗಿ ಬಳಸಿಕೊಳ್ಳಲಾಗುತ್ತದೆ. ಉದಾಹರಣೆಗೆ ಅರೆ ಚರಿತ್ರೆ ಹಾಗೂ ಐತಿಹ್ಯಗಳ ಪ್ರಕಾರ, ಕೊರಗರ ಮುಖ್ಯಸ್ಥನಾಗಿದ್ದ ಹುಬಾಸಿಗ ಎಂಬಾತನು ಕದಂಬರ ರಾಜ ಮಯೂರವರ್ಮನನ್ನು ಮಾತ್ರವಲ್ಲದೆ, ಮಂಗಳೂರಿನ ಸಮೀಪದಲ್ಲಿ ಅಂಗಾರವರ್ಮನೆಂಬ ಇನ್ನೊಬ್ಬ ಅರಸನ್ನು ಕಾದಾಟದಲ್ಲಿ ಸೋಲಿಸಿದನು. ಅಳುಪರು ಪ್ರಬಲರಾಗುವುದಕ್ಕೆ

ಮೊದಲು ಕರಾವಳಿ ಪ್ರದೇಶ ಕೊರಗರ ಅಧೀನದಲ್ಲಿ ಇದ್ದಿರಬೇಕು. ಆದರೆ ಹುಬಾಸಿಗನ ಅನಂತರ ಕೊರಗರನ್ನು ಕಾಡಿಗೆ ಓಡಿ ಹೋಗುವಂತೆ ಮಾಡಲಾಯಿತು. ಜೊತೆಗೆ ಅವರನ್ನು ಗುಲಾಮರನ್ನಾಗಿಸಿ ಬಹಿರಂಗವಾಗಿ ವಸ್ತುಗಳಂತೆ ಮಾರಲಾಗುತ್ತಿದ್ದಿತು. ಭೂಮಾಲೀಕರು ಹೊಲ ಗದ್ದೆ, ತೋಟಗಳಲ್ಲಿ ಕೊರಗರಿಂದ ಬಿಟ್ಟಿ ಕೆಲಸಗಳನ್ನು ಮಾಡಿಸುತ್ತಿದ್ದರು. ಮಾತೃವಂಶೀಯ ಕುಟುಂಬ ವ್ಯವಸ್ಥೆ ಇದ್ದಿದ್ದರಿಂದ, ಮಕ್ಕಳೆಲ್ಲಾ ತಾಯಿಯ ಆಸ್ತಿಯಾಗಿದ್ದರಿಂದ ಮಾರುಕಟ್ಟೆಯಲ್ಲಿ ಹೆಣ್ಣಿಗೆ ಹೆಚ್ಚಿನ ಬೆಲೆ ಸಿಗುತ್ತಿದ್ದಿತು. ಅವಳು ತನ್ನನ್ನು ಕೊಂಡುಕೊಂಡಿದ್ದ ಧಣಿಗೆ ಬಿಟ್ಟಿ ಸೇವೆಗಳನ್ನು ಮಾಡಬೇಕಾಗಿದ್ದಿತು. ಹಾಗೆಯೇ ಕುರುಬ ಪರಿಶಿಷ್ಟ ವರ್ಗದವರು ದಕ್ಷಿಣ ಭಾರತದಲ್ಲಿ ಹಿಂದೆ ಅತಿ ಪ್ರಬಲರಾಗಿದ್ದ ಪಲ್ಲವ ಅಥವಾ ಪ್ರಾಚೀನ ಕುರುಬ ರಾಜಮನೆತನಕ್ಕೆ ಸೇರಿದ್ದವರು. ಸುಮಾರು ೭ ಅಥವಾ ೮ನೆಯ ಶತಮಾನದಲ್ಲಿ ಅಂದೋಡಿ ಎಂಬ ಚೋಳ ಅರಸನು ಕುರುಬರ ಪರಮಾಧಿಕಾರದ ಅಸ್ತಮಕ್ಕೆ ಕಾರಣನಾದನು. ಆಗ ಕುರುಬರು ದಿಕ್ಕಾಪಾಲಾಗಿ ಓಡಿ ಹೋಗಿ ಬೆಟ್ಟ - ಗುಡ್ಡ- ಅರಣ್ಯಗಳಲ್ಲಿ ಅಡಗಿಕೊಂಡಿದ್ದು ಗಿರಿಜನ ವನವಾಸಿಗಳಾದರು ಎಂಬುದಾಗಿ ಹೇಳಲಾಗುತ್ತದೆ.

ನರ ವಿಜ್ಞಾನಿಗಳು ಈ ಆದಿವಾಸಿಗಳನ್ನು ವಿಂಗಡಿಸುವಾಗ ಅವರ ದೇಹದ ಬಣ್ಣ, ಕೂದಲಿನ ಬಣ್ಣ ಹಾಗೂ ಸ್ವರೂಪ, ಎತ್ತರ, ತಲೆಯ ಆಕಾರ, ಮೂಗಿನ ಹಾಗೂ ತಲೆಯ ಅಳತೆ ಇತ್ಯಾದಿ ಲಕ್ಷಣಗಳನ್ನು ಪರಿಗಣಿಸಿ, ಅವರ ಚರ್ಮದ ಕಪ್ಪು ಬಣ್ಣ, ಉದ್ದವಾದ ತಲೆ, ಚಪ್ಪಟೆ ಮೂಗು, ಗಿಡ್ಡವಾದ ದೇಹ ಮುಂತಾದ ಕುರುಹುಗಳ ಆಧಾರದ ಮೇಲೆ ಅವರು ದ್ರಾವಿಡರಿಗಿಂತ ಬಹು ಮೊದಲೇ ಇಲ್ಲಿ ವಾಸ ಮಾಡುತ್ತಿದ್ದ ಮೂಲನಿವಾಸಿಗಳು ಎಂಬುದಾಗಿ ಅಭಿಪ್ರಾಯಪಟ್ಟಿದ್ದಾರೆ.

೪

ಆದಿವಾಸಿಗಳು ಸಾಮಾನ್ಯವಾಗಿ ಬೆಟ್ಟ ಗುಡ್ಡಗಳ ಇಳಿಜಾರು ಪ್ರದೇಶಗಳಲ್ಲಿ ಒಂದು ತೊರೆ ಅಥವಾ ನೀರಿನ ಸೌಕರ್ಯವಿರುವ ಸ್ಥಳದಲ್ಲಿ ಸಣ್ಣ ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸುತ್ತಾರೆ. ಉದ್ದವಾದ ಬಿದಿರು ದಬ್ಬೆಗಳ ತುದಿಗಳನ್ನು ನೆಲಕ್ಕೆ ಭದ್ರವಾಗಿ ನಾಟಿ ಬಂಡಿಯ ಕಮಾನಿನಂತೆ ಬಗ್ಗಿಸಿ, ಮೇಲುಗಡೆ ಹುಲ್ಲು, ಸೊಪ್ಪು ಇತ್ಯಾದಿಗಳನ್ನು ಹೊದ್ದಿಸಿರುತ್ತಾರೆ. ಕಾಡುಕುರುಬರು ಗುಡಿಸಲ ಹೊರಗೋಡೆಗಳನ್ನು ಮಣ್ಣಿನಿಂದ ಕಟ್ಟದೆ ಬಿದಿರಿನ ತೆಳುವಾದ ದಬ್ಬೆಗಳನ್ನು ಚಾಪೆಯಂತೆ ಹೆಣೆದು ಚೌಕಾಕಾರದ ಆಯಕಟ್ಟಿನ ನಾಲ್ಕು ಮೂಲೆ ಕಂಬಗಳಿಗೆ ಬಿಗಿದು ಕಟ್ಟಿರುತ್ತಾರೆ. ಮೂಲೆ ಮತ್ತು ತಮ್ಮ ಗುಡಿಸಲ ಗುಂಪಿಗೆ ಹಾಡಿ ಎಂದೆನ್ನುತ್ತಾರೆ. ಸಾಧಾರಣವಾಗಿ ಆದಿವಾಸಿಗಳು ಸಾಂಕ್ರಾಮಿಕ ರೋಗ ಹರಡಿದಾಗ ತಮ್ಮ ಗುಡಿಸಲುಗಳನ್ನು ಸುಟ್ಟುಹಾಕಿ ಬೇರೆ ಕಡೆಗಳಿಗೆ ಹೋಗಿ ನೆಲಸುವರು. ಹಾಡಿ ಎಂಬ ಹೆಸರಿನೊಂದಿಗೆ ಪೋಡು, ಮುಡ ಎಂಬ ಪದಗಳನ್ನು ಬಳಸಲಾಗುತ್ತದೆ.

ಆದಿವಾಸಿಗಳ ಉಡುಪು, ಪಥ್ಯವಿಧಿಗಳು ಸರಳವಾದುವೇ. ಆದಿವಾಸಿ ಪುರುಷರು ನಡುವಿಗೊಂದು ತುಂಡು ಪಂಚೆಯನ್ನು ಸುತ್ತಿ ಸಾಮಾನ್ಯವಾಗಿ ಅದು ಮಂಡಿಯವರೆಗೆ ಬರುವ ರೀತಿಯಲ್ಲಿ ಉಡುತ್ತಾರೆ. ತಲೆಗೊಂದು ತುಂಡನ್ನು ಬಿಗಿದುಕೊಂಡಿರುತ್ತಾರೆ. ಕೆಲವರು ಅರೆದೋಳು ಅಂಗಿಯನ್ನು ಹಾಕಿಕೊಂಡಿರುತ್ತಾರೆ. ಜೇನುಕುರುಬರಲ್ಲಿ ವಯಸ್ಸಾಗಿರುವ ಗಂಡಸರು ಮಂಡಿಯವರೆಗೆ ಬರುವ ರೀತಿಯಲ್ಲಿ ಗಿಡ್ಡ ಪಂಚೆಯನ್ನು ಉಟ್ಟು, ಮೇಲೆ ಅರೆದೋಳಿನ ಅಂಗಿಯನ್ನು ಧರಿಸುತ್ತಾರೆ. ಕೆಲವು ಸಲ ಮೇಲು ಹೊದಿಕೆಗಾಗಿ ದುಪ್ಪಟಿಯನ್ನು ಸುತ್ತಿಕೊಂಡಿರುತ್ತಾರೆ. ಹೆಂಗಸರು ಸೀರೆಯನ್ನು ಉಡುತ್ತಾರೆ. ಈ ಉಡುವ ರೀತಿಯಲ್ಲಿ ಬುಡಕಟ್ಟಿನಿಂದ ಬುಡಕಟ್ಟಿಗೆ ಸ್ವಲ್ಪ ವ್ಯತ್ಯಾಸಗಳಿರುವುದು ಕಂಡು ಬರುತ್ತದೆ. ಉದಾಹರಣೆಗೆ, ಕಾಡುಕುರುಬರಲ್ಲಿ ಸ್ತ್ರೀಯರು ಸೀರೆಗಳನ್ನು ಭುಜಗಳಿಂದ ಕೆಳಕ್ಕೆ ಎರಡು ಕಂಕುಳುಗಳಿಂದ ಮಂಡಿಯವರೆಗೆ ಬರುವಂತೆ ಸುತ್ತಿ ಬೆನ್ನಿನ ಹಿಂದಕ್ಕೆ ಬಿಗಿದು ಕಟ್ಟಿಕೊಳ್ಳುತ್ತಾರೆ. ಆದರೆ ಜೇನುಕುರುಬ ಸ್ತ್ರೀಯರು ಕೊಡಗು ಜಿಲ್ಲೆಯ ಒಕ್ಕಲು ಮಹಿಳೆಯರು ಸೀರೆ ಉಡುವ ರೀತಿಯಲ್ಲಿ ಸೀರೆಗಳನ್ನು ಧರಿಸುತ್ತಾರೆ. ಆದಿವಾಸಿ ಸ್ತ್ರೀಯರು, ಸಾಮಾನ್ಯವಾಗಿ ಕಿವಿಯೋಲೆ, ಮೂಗುಬೊಟ್ಟು, ಗಾಜಿನ ಬಳೆ, ಕೈಕಡಗ, ಕರಿಮಣಿಸರ, ಬಗೆಬಗೆಯ ಮಣಿಸರಗಳನ್ನು ಮತ್ತು ವಿವಾಹಿತ ಮಹಿಳೆಯರು ತಾಳಿಯ ಸಂಗಡ ಕರಿಮಣಿ ಸರ, ಕಾಲುಂಗುರ, ಮೇಲೆ ಹಚ್ಚೆ ಹಾಕಿಸಿಕೊಂಡಿರುತ್ತಾರೆ. ಕೂದಲನ್ನು ಸೇರಿಸಿ ಹಿಂದಕ್ಕೆ ವಿವಿಧ ಬಗೆಯಲ್ಲಿ ಗಂಟು ಹಾಕಿಕೊಂಡಿರುತ್ತಾರೆ. ಕಾಡು ಕುರುಬರಲ್ಲಿ ಹಲವು ಗಂಡಸರು ತಮ್ಮ ಉದ್ದವಾದ ಕೂದಲನ್ನು ಹಿಂದಕ್ಕೆ ಬಾಚಿ ತುರುಬು ಕಟ್ಟಿಕೊಂಡು, ಕಿವಿಯಲ್ಲಿ ಒಂಟಿ, ಮುಂದೋಳಿನಲ್ಲಿ ಕೈಬಂದಿ, ಎಡಗೈ ಬೆರಳುಗಳಲ್ಲಿ ರಾಜನಮುದ್ರೆ ಇರುವ ನಾಣ್ಯಗಳ ಅಥವಾ ಲೋಹದ ಸುರುಳಿಯ ಉಂಗುರಗಳನ್ನು ಧರಿಸಿದರೆ, ಜೇನುಕುರುಬ ಪುರುಷರು ತಮ್ಮ ಉದ್ದವಾದ ಕೂದಲನ್ನು ಬಾಚದೇ ಹಾಗೆಯೇ ಬಿಡುವುದರಿಂದ ಕೆದರಿಕೊಂಡ ಕೂದಲು, ಜಡೆ ಕಟ್ಟಿಕೊಂಡು ತಲೆಯು ದಪ್ಪವಾಗಿ ಕಾಣುವಂತೆ ಮಾಡುತ್ತದೆ.

ಸಾಮಾನ್ಯವಾಗಿ ಆದಿವಾಸಿಗಳು ಮಾಂಸಾಹಾರಿಗಳು. ರಾಗಿಹಿಟ್ಟು, ಅಂಬಲಿ, ಕೆಲವು ಸಲ ಅಕ್ಕಿ, ಕಾಡಿನಲ್ಲಿ ಸಿಗುವ ಗಡ್ಡೆ-ಗೆಣಸು, ನಾರು-ಬೇರು, ಹಣ್ಣು-ಹಂಪಲು, ಜೇನು, ಸೊಪ್ಪು, ತೊಗರಿ, ಅವರೆ, ಮುಸುಕಿನ ಜೋಳ, ಇನ್ನಿತರ ದ್ವಿದಳ ಧಾನ್ಯಗಳನ್ನು ಊಟಕ್ಕಾಗಿ ಬಳಸುತ್ತಾರೆ. ಕಡವೆ, ಸಾರಂಗ, ಮೀನು, ಹಂದಿ, ಹಕ್ಕಿ, ಕಾಡುಕೋಳಿ, ವಿವಿಧ ಪ್ರಾಣಿ ಪಕ್ಷಿಗಳ ಮೊಟ್ಟೆಗಳನ್ನು ತಿನ್ನುತ್ತಾರೆ. ಆಹಾರ ಸಿಗುವ ಸಾಧ್ಯತೆ ಮತ್ತು ತಮ್ಮ ಆರ್ಥಿಕ ಪರಿಸ್ಥಿತಿಗೆ ಅನುಗುಣವಾಗಿ ಅವರು ದಿನಕ್ಕೆ ಒಂದು ಅಥವಾ ಎರಡು ಸಲ ಊಟ ಮಾಡುತ್ತಾರೆ. ಮದ್ಯಪಾನ ಮಾಡುವ ಅಭ್ಯಾಸವೂ ಅವರಲ್ಲಿದೆ. ಕಾಡುಕುರುಬರಲ್ಲಿ ಎಲೆ, ಅಡಿಕೆ ಬಳಕೆ ಸಾಮಾನ್ಯವಾಗಿದೆ.

ಆದಿವಾಸಿಗಳಲ್ಲಿ ಹೆಚ್ಚಾಗಿ ಕುಟುಂಬಗಳು ಪತಿ, ಪತ್ನಿ ಹಾಗೂ ಅವರ ಮಕ್ಕಳನ್ನು ಒಳಗೊಂಡಿರುತ್ತವೆ ಲಿಂಗಾಧಾರಿತ ಶ್ರಮ ವಿಭಜನೆ ವ್ಯವಸ್ಥೆ ಇರುತ್ತದೆ. ಕೆಲವು ಆದಿವಾಸಿ ಸಮಾಜಗಳಲ್ಲಿ ವಿಭಾಗಗಳು ಹಾಗೂ ಕುಲಗಳನ್ನು ವಿಜ್ಞಾನಿಗಳು ಗುರುತಿಸಿದ್ದಾರೆ. ಉದಾಹರಣೆಗೆ ಕಾಡುಕುರುಬರಲ್ಲಿ ಆನೆ, ಬೇವಿನ ಮತ್ತು ಕೊಳ್ಳಿ ಎಂಬ ಮೂರು ವಿಭಾಗಗಳಿವೆ. ಮತ್ತೀರ್ ಮಕ್, ತೋಪೆಟ್ಟಿಮಕ್, ಖಿಂದೀರ್ ಮಕ್, ಕಮ್‌ಸಲ್‌ಮಕ್, ಕಮಟಿ ಮಕ್, ತಿರ್‌ಮಲ್‌ಮಕ್, ಕೋಟುಮ್ ಮಕ್, ಬಳ್‌ಗುರ್ ಮಕ್, ಕೂಡೇರ್‌ಮಕ್ ಮುಂತಾದ ಕುಲಗಳಿವೆ ಎಂದು ಹೇಳಲಾಗಿದೆ. ರಕ್ತ ಸಂಬಂಧಕ್ಕೆ ಪ್ರಾಮುಖ್ಯತೆ ಇದೆ. ಒಂದು ಬುಡಕಟ್ಟಿಗೆ ಸೇರಿರುವ ವ್ಯಕ್ತಿಗಳು ತಮಗೆಲ್ಲ ಒಬ್ಬಳೇ ಸ್ತ್ರೀ ಅಥವಾ ಒಬ್ಬನೇ ಪುರುಷ ಕ್ರಮವಾಗಿ ಪೂರ್ವಜಳು ಅಥವಾ ಪೂರ್ವಜ ಎಂಬ ನಂಬಿಕೆಯನ್ನು ಹೊಂದಿರುತ್ತಾರೆ. ವ್ಯಕ್ತಿಗಳು, ತಾಯಿಯ ಇಲ್ಲವೇ ತಂದೆಯ ವಂಶಕ್ಕೆ ಸೇರಿರುತ್ತಾರೆ ಮತ್ತು ಅದಕ್ಕೆ ಅನುಗುಣವಾಗಿ ಮಾತೃಪ್ರಧಾನ ಅಥವಾ ಪಿತೃಪ್ರಧಾನ ಕುಟುಂಬದ ಬಗೆ ಇರುತ್ತದೆ. ಒಬ್ಬ ವ್ಯಕ್ತಿಯ ಸ್ಥಾನಮಾನ, ಹಕ್ಕುಗಳನ್ನು ಕುಟುಂಬ ನಿರ್ಧರಿಸಿದರೆ, ಯಾರು ಯಾರನ್ನು ಎಷ್ಟು ಜನರನ್ನು ಮದುವೆಯಾಗಬೇಕು ಎಂಬುದನ್ನು ಬುಡಕಟ್ಟು ನಿರ್ಣಯಿಸುತ್ತದೆ.

ಆದಿವಾಸಿಗಳಲ್ಲಿ ಏಕಸಂಗಾತಿ ವಿವಾಹ, ಬಹುಪತ್ನಿ ವಿವಾಹ, ಅತ್ತಿಗೆ ಮೈದುನರ ವಿವಾಹ, ಪಲಾಯನ ವಿವಾಹ, ವಿನಿಮಯ ವಿವಾಹ ಮುಂತಾದ ವಿವಾಹ ಬಗೆಗಳಿವೆ. ಒಳ ಹಾಗೂ ಹೊರ ವಿವಾಹ ಮತ್ತು ಬಾಂಧವ್ಯಗಳ ನಿಯಮಗಳಿರುತ್ತವೆ. ಸಾಧಾರಣವಾಗಿ ವಿಲ್ಲಿಂಗ ಸಹೋದರ -ಸೋದರಿಯರ ಮಕ್ಕಳು ಹಾಗೂ ರಕ್ತ ಸಂಬಂಧಿಗಳು ಮದುವೆಯಾಗಬಹುದು. ಸಲ್ಲಿಂಗ ಸಹೋದರ - ಸೋದರಿಯರ ಮಕ್ಕಳನ್ನು ಸಹೋದರ - ಸಹೋದರಿಯರು ಎಂಬುದಾಗಿ ಭಾವಿಸುವುದರಿಂದ ಅವರ ವಿವಾಹವನ್ನು ನಿಷೇಧಿಸಲಾಗಿದೆ. ಒಬ್ಬ ಹುಡುಗಿ ತನ್ನ ತಾಯಿಯ ತಮ್ಮ ಅಂದರೆ ಸೋದರಮಾವನೊಂದಿಗೆ ಮದುವೆಯಾಗಬಹುದು. ಹಲವಾರು ಆದಿವಾಸಿಗಳಲ್ಲಿ ಪ್ರೌಢ ವಿವಾಹ ಪದ್ಧತಿ, ವಿವಾಹ ವಿಚ್ಛೇದನಕ್ಕೆ ಅವಕಾಶಗಳು ಹಾಗೂ ವಿಧವಾ ವಿವಾಹಗಳು ಕಂಡುಬರುತ್ತವೆ. ಸ್ವಕುಲ ವಿವಾಹ ನಿಷೇಧಗಳಿವೆ. ಆದಿವಾಸಿಗಳು ಮಗುವಿನ ಜನನಕಾಲ, ಹೆಣ್ಣು ಮಗಳು ಋತುಮತಿಯಾದಾಗ ಕೆಲವು ನಿರ್ದಿಷ್ಟ ಪದ್ಧತಿಗಳನ್ನು ಅನುಸರಿಸುತ್ತಾರೆ. ಕೆಲವು ಬುಡಕಟ್ಟುಗಳಲ್ಲಿ ಮಗುವಿನ ಜನನವಾದಾಗ ಅದರ ದೃಢಕಾಯನಾದ ತಂದೆಯನ್ನು ಕತ್ತಲೆ ಕೋಣೆಯಲ್ಲಿ ಇರಿಸಿ ಬಾಣಂತಿಯಂತೆ ಉಪಚಾರಮಾಡುವ ವಿಜಾತೀಯ ಪದ್ಧತಿ ಕಂಡುಬರುತ್ತದೆ.

ಸತ್ತವರನ್ನು ಹೂಳುವ ಪದ್ಧತಿ ಆದಿವಾಸಿಗಳಲ್ಲಿ ಸಾಮಾನ್ಯವಾದುದು. ಒಂದೆರಡು ಬುಡಕಟ್ಟುಗಳಲ್ಲಿ ಮೃತ್ಯುವಶರಾದವರನ್ನು ಸುಡುವ ಪದ್ಧತಿ ಕಂಡುಬರುತ್ತದೆ. ಹೂಳುವ ಪದ್ಧತಿಯನ್ನು ಅನುಸರಿಸುವ ಆದಿವಾಸಿಗಳು ನಿರ್ದಿಷ್ಟ ನೆಲವನ್ನು ಅಗೆದು ಗುಂಡಿ ತೆಗೆದು, ಶವದ ತಲೆ ದಕ್ಷಿಣ ದಿಕ್ಕಿಗೆ ಇರುವಂತೆ ಮಲಗಿಸಿ, ಎಡದ ಮಗ್ಗುಲಾಗಿ ಮಾಡಿ ಹೂಳುತ್ತಾರೆ. ಗುಂಡಿಗೆ ಮಣ್ಣು ತುಂಬುತ್ತಾರೆ. ಅನಂತರ ಅವರು ಕಲ್ಲುಗಳನ್ನು ಜೋಡಿಸುವುದು ಕಂಡುಬರುತ್ತದೆ. ಇದನ್ನು ಕಲ್ಲುಸೇವೆ ಎಂದೆನ್ನುತ್ತಾರೆ. ಕುಷ್ಠರೋಗಿ, ದುಷ್ಟಪ್ರಾಣಿಗಳಿಂದ ಸಾಯಿಸಲ್ಪಟ್ಟ ವ್ಯಕ್ತಿ ಮೊದಲಾವರ ಶವಗಳನ್ನು ಹೂಳಿ, ಕಲ್ಲುಗಳನ್ನು ಕಡ್ಡಾಯವಾಗಿ ಜೋಡಿಸಿಡುತ್ತಾರೆ. ಆ ಪದ್ಧತಿಗೆ ಕಲ್ಲು ಮಲ್ಲಯ್ಯ ಎಂಬ ಹೆಸರನ್ನು ನೀಡಿದ್ದಾರೆ. ಮೃತ್ಯುವಿನ ಅತಿಥಿಗಳಾದವರ ಆತ್ಮಶಾಂತಿಗಾಗಿ ಪ್ರಾಣಿ ಬಲಿ ನೀಡುವ ಪದ್ಧತಿ ಇದೆ. ಅವರಿಗಾಗಿ ಸೂತಕವಿದ್ದು, ಅದಾದ ನಂತರ ಕುಲ ಬಾಂಧವರಿಗೆಲ್ಲ ಊಟ ನೀಡುತ್ತಾರೆ. ಕಾಡು ಕುರುಬರಲ್ಲಿ ಸತ್ತ ಮಕ್ಕಳನ್ನು ಹೂಳುತ್ತಾರೆ. ಕೆಲವು ದೊಡ್ಡವರ ಶವಗಳನ್ನು ಸುಡುತ್ತಾರೆ. ಒಳ್ಳೆಯವರು ಉಪಕಾರ ಮಾಡುವ ದೇವತೆಗಳಾಗಿ, ಕೆಟ್ಟವರು ಅನಿಷ್ಟ ಶಕ್ತಿಗಳಾಗಿ ಆಗುತ್ತಾರೆ ಎಂಬ ನಂಬಿಕೆ ಅವರಲ್ಲಿದೆ.

೫

ಆದಿವಾಸಿಗಳ ಜೀವನ ಸರಳವಾದುದು, ಸುಲಭವಾದುದು. ಕೆಲವರು ಕೃಷಿ ಕಾರ್ಯ ಮಾಡುತ್ತಾರೆ. ಸರದಿ ಬೇಸಾಯ ಕ್ರಮ ಸಾಮಾನ್ಯವಾದುದು. ಅಂದರೆ ಆದಿವಾಸಿಗಳು ಕಾಡಿನಲ್ಲಿ ಒಂದು ಭಾಗವನ್ನು ಸ್ವಚ್ಛ ಪಡಿಸಿಕೊಂಡು ಉತ್ತು ಬೆಳೆ ಬೆಳೆಯುತ್ತಾರೆ. ನಂತರ ಇನ್ನೊಂದು ಸ್ಥಳಕ್ಕೆ ಹೋಗುತ್ತಾರೆ. ಇದಕ್ಕೆ ಕುಮರಿ ಕೃಷಿ ಪದ್ಧತಿ ಎಂಬುದಾಗಿಯೂ ಹೇಳಲಾಗುತ್ತದೆ. ಅವರು ಕೇವಲ

ಕೊಡಲಿ, ಕೊಕ್ಕೆ, ಕಳೆಗುದ್ದಲಿಗಳನ್ನು ಬಳಸುತ್ತಾರೆ. ಅವರು ಕಾಡಿನಲ್ಲಿ ಅಲೆದಾಡಿ ಅಲ್ಲಿ ದೊರಕುವ ಪದಾರ್ಥಗಳನ್ನು ಸಂಗ್ರಹಿಸಿ ತಂದು ಸುತ್ತಮುತ್ತಲ ಹಳ್ಳಿಗಳಿಗೆ ಹೋಗಿ ಪದಾರ್ಥ ವಿನಿಮಯ ಪದ್ಧತಿಯ ಪ್ರಕಾರ ತಾವು ಸಂಗ್ರಹಿಸಿ ತಂದಿರುವ ಪದಾರ್ಥಗಳನ್ನು ಗ್ರಾಮವಾಸಿಗಳಿಗೆ ನೀಡಿ, ಅವರಿಂದ ಧಾನ್ಯ, ಎಣ್ಣೆ, ಉಪ್ಪು, ಬೀಡಿ ಇತ್ಯಾದಿಗಳನ್ನು ಪಡೆದುಕೊಳ್ಳುತ್ತಾರೆ. ಬೇಟೆಗಾರಿಕೆ, ಮೀನು ಹಿಡಿಯುವುದು ಅವರ ಇತರ ಜೀವನೋಪಾಯಗಳು. ಕಾಡು ಕುರುಬರು ಆನೆಗಳನ್ನು ಹಿಡಿಯುವುದರಲ್ಲಿ ಪರಿಣತರು. ಜೇನು ಸಂಗ್ರಹಣೆ ಜೇನುಕುರುಬರ ಮುಖ್ಯ ಕಸಬು. ಅವರು ಕ್ರೂರಮೃಗಗಳು ಬರುವುದನ್ನು ವಾಸನೆಯ ಮೂಲಕ ಗ್ರಹಿಸಿ ಮುಂಜಾಗ್ರತೆ ವಹಿಸುತ್ತಾರೆ. ಒಂಟಿ ಸಲಗ ಬಂದರೆ ಮರ ಏರುವುದರಲ್ಲಿ ಪ್ರವೀಣರಾದ ಅವರು ಮರದ ತುತ್ತತುದಿಗೆ ಏರಿ ತಮ್ಮನ್ನು ರಕ್ಷಿಸಿಕೊಳ್ಳುತ್ತಾರೆ. ಮತ್ತು 'ಕೂ' ಎಂದು ಕೂಗಿ ಇತರರಿಗೆ ಅಪಾಯದ ಮುನ್ಸೂಚನೆಯನ್ನು ನೀಡುತ್ತಾರೆ. ಕಾಡು ಕುರುಬರು ಕಾಡಿನಲ್ಲಿ ಸಿಗುವ ಬೆತ್ತವನ್ನು ಬಳಸಿ ಚಾಪೆ, ಬುಟ್ಟಿ, ಕುಕ್ಕೆ, ಮೊರ, ತೊಟ್ಟಿಲು ಇತ್ಯಾದಿಗಳನ್ನು ತಯಾರಿಸುತ್ತಾರೆ. ಬಿದಿರಿನಿಂದಲೂ ಅವರು ದಿನಬಳಕೆಗೆ ಬೇಕಾದ ವಸ್ತುಗಳನ್ನಲ್ಲದೆ ದವಸಧಾನ್ಯಗಳನ್ನು ಸಂಗ್ರಹಿಸಿಡುವುದಕ್ಕೆ ಬೇಕಾದ ದೊಡ್ಡ -ದೊಡ್ಡ ಕೊಮ್ಮೆಗಳನ್ನು ತಯಾರಿಸಿ ಅಕ್ಕಪಕ್ಕದ ಗ್ರಾಮಗಳ ರೈತರಿಗೆ ಹಾಗೂ ಇತರ ಬಳಕೆದಾರರಿಗೆ ಮಾರುತ್ತಾರೆ. ಕೆಲವರು ಬೇಸಾಯಗಾರರಲ್ಲಿ ಕೂಲಿಕಾರರಾಗಿ ದುಡಿದು, ಮಾಸಿಕ ಕೂಲಿ ಪಡೆದರೆ, ಇನ್ನು ಕೆಲವರು ಬೆಳೆಗಳ ಕೊಯ್ಲಿನ ಕಾಲದಲ್ಲಿ ಕಾಡಾನೆ ಮತ್ತಿತರ ಪ್ರಾಣಿಗಳಿಂದ ಪಯಿರನ್ನು ರಕ್ಷಿಸಲು ಕಾವಲುಗಾರರಾಗಿ ಕೆಲಸ ಮಾಡುತ್ತಾರೆ. ಇತ್ತೀಚೆಗೆ ಅನೇಕರು ಬೀಡಿ ಸುರುಳಿ ಸುತ್ತುವ ಉದ್ಯೋಗದಲ್ಲಿ ತೊಡಗಿದ್ದಾರೆ. ಹಾಗೂ ಒಂದೆಡೆ ನೆಲೆಯಾಗಿ ನಿಂತ ಬೇಸಾಯಗಾರರೂ ಕಾರ್ಮಿಕರೂ ಆಗಿದ್ದಾರೆ. ಹಲವರು ಅರಣ್ಯ ಹಾಗೂ ತೋಟಗಾರಿಕೆ ಇಲಾಖೆಗಳಲ್ಲಿ ಅನಿಯತ ಕೂಲಿಕಾರರಾಗಿ ನೇಮಕಗೊಂಡಿದ್ದಾರೆ. ತಮ್ಮ ಬೇಡಿಕೆಗಳು ಅತ್ಯಲ್ಪವಾಗಿರುವುದಿರಂದ ಆದಿವಾಸಿಗಳೇ ಅವುಗಳನ್ನು ಈಡೇರಿಸಿಕೊಳ್ಳಬಲ್ಲರು. ಬಹುಮಟ್ಟಿಗೆ ಸ್ವಾವಲಂಬನೆಯನ್ನು ಸಾಧಿಸಬಲ್ಲರು. ಅವರ ಬದುಕು ಗತಕಾಲದ ಋಷಿಗಳ ಬಾಳಿಗಿಂತಲೂ ಹೆಚ್ಚು ಸರಳವಾಗಿದೆ. ಅವರು ಪಕ್ಷಿಗಳಂತೆ ನಾಳಿನ ದಿನಗಳ ಬಗ್ಗೆ ಚಿಂತಿಸದೇ ಬಾಳುವವರು. ಆದ್ದರಿಂದ ಅವರು ಭವಿಷ್ಯಕ್ಕಾಗಿ ಏನನ್ನೂ ಹೆಚ್ಚಾಗಿ ಸಂಗ್ರಹಿಸಲು ಬಯಸುವುದಿಲ್ಲ ಎಂಬುದಾಗಿ ಹೇಳಲಾಗುತ್ತದೆಯಾದರೂ, ಇತ್ತೀಚಿನ ದಿನಗಳಲ್ಲಿ ಅವರ ಜೀವನಕ್ರಮದಲ್ಲೂ ಗಮನಾರ್ಹ ಬದಲಾವಣೆಗಳು ಉಂಟಾಗಿ ಸ್ವಲ್ಪಮಟ್ಟಿನ ಸಂಕೀರ್ಣತೆ ತಲೆದೋರುತ್ತಿದೆ ಎಂಬುದಾಗಿಯೂ ಸಹ ಅಭಿಪ್ರಾಯಪಡಲಾಗಿದೆ.

ಆದಿವಾಸಿಗಳಲ್ಲಿ ಅವರದೇ ಆದ ಸಾಂಪ್ರದಾಯಿಕ ನಿಯಂತ್ರಣದ ಮಾಧ್ಯಮಗಳಿವೆ. ಅವರಲ್ಲಿ ಸಾಂಪ್ರದಾಯಿಕವಾದ ಪಂಚಾಯಿತಿ ವ್ಯವಸ್ಥೆ ಇರುತ್ತದೆ. ಉದಾರಣೆಗೆ ಬೆಟ್ಟ ಕುರುಬರ ಪಂಚಾಯಿತಿ ಪದ್ಧತಿಯಲ್ಲಿ ಹಾಡಿಯ ಮುಖಂಡ ಮುಖ್ಯ. ಅವನನ್ನು ಯಜಮಾನ, ಮೂಪ ಎಂದು ಕರೆಯುತ್ತಾರೆ. ಅವನ ಸ್ಥಾನ ಅನುವಂಶಿಕವಾದುದು. ಹಾಡಿಯ ನಿವಾಸಿಗಳ ರಕ್ಷಣೆ, ಕಲಹಗಳು ಹಾಗೂ ವ್ಯಾಜ್ಯಗಳು ಸಂಭವಿಸಿದಾಗ ಅವುಗಳನ್ನು ನಿಷ್ಪಕ್ಷಪಾತವಾಗಿ ಪರಿಶೀಲಿಸಿ ಬಗೆಹರಿಸುವುದು, ತಪ್ಪು ಮಾಡಿದವರಿಗೆ ಹಾಗೂ ಹಾಡಿಯ ನಿಯಮಗಳನ್ನು ಉಲ್ಲಂಘಿಸಿದವರಿಗೆ ಶಿಕ್ಷೆ ನೀಡುವುದು ಇತ್ಯಾದಿಗಳು ಅವನ ಕರ್ತವ್ಯಗಳು. ಅವನು ನ್ಯಾಯಪೀಠದಲ್ಲಿರುವಾಗ ಎಲ್ಲರೂ ಅವನಿಗೆ ಕಡ್ಡಾಯವಾಗಿ ಗೌರವ ಸಲ್ಲಿಸಲೇಬೇಕು. ಈ ಸಮಿತಿಗೆ ಇತ್ಯರ್ಥ ಮಾಡಲು ಸಾಧ್ಯವಾಗದಿರುವ ವ್ಯಾಜ್ಯಗಳನ್ನು ತೀರ್ಮಾನಿಸುವುದಕ್ಕಾಗಿ ಔಪಚಾರಿಕವಾದ ಗ್ರಾಮ ಪಂಚಾಯತಿಯ ಸಹಾಯವನ್ನು ಕೋರಿ, ಆ ಕಾರ್ಯವನ್ನು ಅದಕ್ಕೆ ವಹಿಸಲಾಗುತ್ತದೆ. ಗ್ರಾಮ ಪಂಚಾಯತಿಯಲ್ಲಿ ಕಾಡು ಕುರುಬರ ಪ್ರತಿನಿಧಿ ಇರುತ್ತಾನೆ. ಬಣಗಳ ನಡುವೆ ವಿವಾದಗಳು ತಲೆದೋರಿದಾಗ, ಅವುಗಳನ್ನು ಸಾಮಾನ್ಯ ಪಂಚಾಯತಿಯ ಮುಂದೆ ಇಟ್ಟು ಬಗೆಹರಿಸಲು ಪ್ರಯತ್ನಿಸಲಾಗುತ್ತದೆ. ಜೇನುಕುರುಬರ ನಿವೇಶನದಲ್ಲಿ ಮಧ್ಯಭಾಗದಲ್ಲಿ ಅಗ್ನಿಕುಂಡ ಇರುತ್ತದೆ. ಅಲ್ಲಿ ಸದಾ ಅಗ್ನಿ ಉರಿಯುತ್ತಿರುತ್ತದೆ. ಮುಖಂಡನ ಆದೇಶದ ಮೇರೆಗೆ ಸಾಯಂಕಾಲ ಎಲ್ಲರೂ ಅಲ್ಲಿ ಸೇರಿ ಮಾರನೆಯ ದಿನ ಮಾಡಬೇಕಾದ ಕೆಲಸಗಳ ಬಗ್ಗೆ ಚರ್ಚಿಸುತ್ತಾರೆ. ಅಲ್ಲಿ ಮೊಕದ್ದಮೆಗಳನ್ನು ನಡೆಸುತ್ತಾರೆ. ಅಪರಾಧಿ, ಫಿರ್ಯಾದಿ, ಸಾಕ್ಷಿಗಳು ಹಾಗೂ ಪ್ರೇಕ್ಷಕರು ಎಲ್ಲರೂ ನೇರವಾಗಿ ಮುಖಂಡನನ್ನು ಉದ್ದೇಶಿಸಿಯೇ ವಾದ ಮಾಡಬೇಕು. ಮಹಿಳೆಯರು ಪುರುಷರಿಗಿಂತ ೫-೧೦ ಅಡಿ ಅಂತರದಲ್ಲಿ ಬೇರೆಯಾಗಿ ಕುಳಿತುಕೊಳ್ಳಬೇಕು. ಮುಖಂಡನ ತೀರ್ಪಿಗೆ ಎಲ್ಲರೂ ತಲೆಬಾಗಬೇಕು. ಬೇರೆ ಬಣದವರು ಅತಿಕ್ರಮಣ ಪ್ರವೇಶ ಮಾಡಿದರೆ ಆ ಅಪರಾಧಕ್ಕೆ ದಂಡವನ್ನು ವಿಧಿಸಲಾಗುತ್ತದೆ ಮತ್ತು ಈ ಬಗೆಯ ಪ್ರವೇಶದಿಂದ ನಿವೇಶನಕ್ಕೆ ಮೈಲಿಗೆಯಾಯಿತೆಂಬುದಾಗಿ ಭಾವಿಸಿ ಪುರೋಹಿತರ ಮೂಲಕ ಅದನ್ನು ಶುದ್ಧಿಪಡಿಸಲಾಗುತ್ತದೆ. ವಿವಿಧ ನಿವೇಶನಗಳು ನಿವಾಸಿಗಳಾಗಿರುವ ಜೇನು ಕುರುಬರು ಕಾಡನ್ನು ಸಹ ವಿಭಾಗಿಸಿಕೊಂಡಿರುತ್ತಾರೆ ಮತ್ತು ಒಂದು ನಿವೇಶನದ ನಿವಾಸಿಗಳು ಇನ್ನೊಂದು ನಿವೇಶನದವರಿಗೆ ಸೇರಿರುವ ಅರಣ್ಯ ಪ್ರದೇಶವನ್ನು ಪ್ರವೇಶಿಸಿಬಿಟ್ಟರೆ, ಅದು ದಂಡನಾರ್ಹವಾದ ಅತಿಕ್ರಮ ಪ್ರವೇಶದ ಅಪರಾಧವಾಗುತ್ತದೆ.

ಆದಿವಾಸಿಗಳಲ್ಲಿ ವಿಶಿಷ್ಟ ಮತಧರ್ಮದ ಭಾವನೆಗಳು, ಆಚರಣೆಗಳು ಇವೆ. ಅವರಲ್ಲಿ ಪ್ರಕೃತಿ ಪೂಜೆ, ಪಿತೃ ಪೂಜೆ, ಕುಲದೇವತಾರಾಧನೆ ಮುಖ್ಯವಾಗಿರುತ್ತವೆ. ಸಜೀವವಾದ ಅಂದರೆ ಗಿಡ, ಮರ, ಬಳ್ಳಿ, ಗಾಳಿ ಇತ್ಯಾದಿಗಳಲ್ಲೂ ಜೀವವಿರುತ್ತದೆ ಎಂಬ ನಂಬಿಕೆ ಅವರಲ್ಲಿದೆ ಎಂಬುದು ಹಲವು ವಿದ್ವಾಂಸರ ಅಭಿಪ್ರಾಯ. ಹೀಗೆ ಅವರು ಸರ್ವಚೇತನವಾದಿಗಳು. ಭೂತ ಪ್ರೇತ, ಮಾಟ-ಮಂತ್ರ, ಯಕ್ಷಿಣಿವಿದ್ಯೆಯಲ್ಲಿ ಬಲವಾದ ನಂಬಿಕೆ ಇದೆ ಅವರಿಗೆ. ರೋಗಗಳು ಬಂದಾಗ ವೈದ್ಯರ ಬಳಿಗೆ ಹೋಗದೆ, ದೆವ್ವ ಅಥವಾ ಭೂತ ಹಿಡಿದಿದೆ ಎಂಬ ಮೂಢನಂಬಿಕೆಯಿಂದ ಮಾಂತ್ರಿಕನನ್ನು ಕರೆಯಿಸಿ ಪೂಜೆ ಮಾಡಿಸುತ್ತಾರೆ. ಅವರು ತಾಯಿತಗಳನ್ನು ಧರಿಸಿಕೊಂಡರೆ ದುಷ್ಟಶಕ್ತಿಗಳ ಅನಿಷ್ಟ ಪ್ರಭಾವದಿಂದ ಮುಕ್ತರಾಗಬಹುದು ಎಂಬ ವಿಶ್ವಾಸವನ್ನು ಮೈಗೂಡಿಸಿಕೊಂಡಿರುತ್ತಾರೆ. ಕಾಡುಕುರುಬರಿಗೆ ಸಿಡುಬುರೋಗ ಕಂಡರೆ ಬಲು ಭಯ. ಆ ಕಾಯಿಲೆಗೆ ಸಂಬಂಧಿಸಿರುವ ದೇವತೆಯನ್ನು ದೊಡ್ಡಮ್ಮ ಎಂದು ಕರೆದು ಅವಳಿಗೆ ಬಲಿಕೊಡುವುದರ ಮೂಲಕ ಅವಳನ್ನು ಸಂತುಷ್ಟಪಡಿಸಲು ಯತ್ನಿಸುತ್ತಾರೆ. ಆದಿವಾಸಿಗಳಲ್ಲಿ ಕುಟುಂಬ ಹಾಗೂ ಸಮುದಾಯ ದೇವತೆಗಳು ಇರುವುದನ್ನು ಕಾಣಬಹುದು. ಕಾಡು ಕುರುಬರಲ್ಲಿ ಮೂಗಪ್ಪಾಜಿ, ಬೊಮ್ಮ ದೇವರು ಹಾಗೂ ಮಾದಪ್ಪ ಕುಟುಂಬದ ದೇವರುಗಳಾದರೆ, ಅಜ್ಜಮ್ಮ ಇದೇ ಸಮುದಾಯದ ದೇವತೆ. ಕೆಲವು ಆದಿವಾಸಿಗಳು ಭೂತಾರಾಧಕರೂ ಆಗಿರುತ್ತಾರೆ. ಜೇನುಕುರುಬರು ಸೂರ್ಯ ಹಾಗೂ ಚಂದ್ರರಿಗೆ ಸಣ್ಣ ಜೋಪಡಿಗಳನ್ನು ನಿರ್ಮಿಸಿ, ಸೋಮವಾರ ಹಾಗೂ ಶುಕ್ರವಾರಗಳಲ್ಲಿ ಪೂಜಾದಿಗಳನ್ನು ಮಾಡುತ್ತಾರೆ. ಈ ಎರಡು ವಾರಗಳು ಶುಭ ಎಂಬುದಾಗಿ ಎಣಿಸುವ ಅವರು ಹೊಸದಾಗಿ ಹಾಡಿಗಳನ್ನು ನಿರ್ಮಿಸುವಾಗ ಸೂರ್ಯ-ಚಂದ್ರರನ್ನು ಪ್ರಾರ್ಥಿಸುತ್ತಾರೆ. ಆದಿವಾಸಿಗಳು ಒಂದು ಪ್ರಾಣಿ, ಒಂದು ಪಕ್ಷಿ, ಒಂದು ಮರ ಅಥವಾ ಗಿಡವನ್ನು ತಮ್ಮ ಪೂಜ್ಯ ಪೂರ್ವಜನೆಂಬುದಾಗಿ ಭಾವಿಸಿ, ಅದನ್ನು ಬಹು ಭಯ-ಭಕ್ತಿಯಿಂದ ಪೂಜಿಸುತ್ತಾರೆ, ಅದನ್ನು ತಿನ್ನುವುದಿಲ್ಲ. ಅದಕ್ಕೆ ಯಾವ ರೀತಿಯ ತೊಂದರೆಯನ್ನು ಕೊಡುವುದಿಲ್ಲ. ಅದನ್ನೇ ಟೋಟೆಂ ಅಥವಾ ಕುಲದೇವತೆ ಎನ್ನಲಾಗುತ್ತದೆ. ಅವರು ಅದನ್ನು ರಕ್ಷಕ ದೇವತೆ ಎಂಬುದಾಗಿ ಎಣಿಸಿ, ಅದರ ಚಿತ್ರವನ್ನು ತಮ್ಮ ಮನೆಗಳ ಬಾಗಿಲುಗಳ ಮೇಲೆ ಕೆತ್ತುತ್ತಾರೆ. ಅದರ ಚಿಹ್ನೆಯನ್ನು ಪೀಡ ನಿವಾರಕ ತಾಯಿಯಾಗಿ ಧರಿಸುತ್ತಾರೆ. ಒಂದೇ ಕುಲದೇವತೆಯನ್ನು ಪೂಜಿಸುವ ವ್ಯಕ್ತಿಗಳೆಲ್ಲಾ ಸೋದರ, ಸೋದರಿಯರು. ಆದ್ದರಿಂದ ಅವರಲ್ಲಿ ಪರಸ್ಪರ ವಿವಾಹಗಳನ್ನು ನಿಷೇಧಿಸಲಾಗಿರುತ್ತದೆ. ಆ ತರಹದ ನಿಷೇಧಿತ ವಿವಾಹ ಸಂಬಂಧಗಳನ್ನು ಅಗಮ್ಯಗಮನ ಪಾತಕ ಎಂಬುದಾಗಿ ಕರೆದು ಅಪರಾಧಿಗಳನ್ನು ದಂಡಿಸಲಾಗುತ್ತದೆ. ಉದಾಹರಣೆಗೆ, ಜೇನುಕುರುಬರು ಜೇನುನೊಣಗಳನ್ನು ಕುಲದೇವರು ಎಂಬುದಾಗಿ ಬಲವಾಗಿ ನಂಬಿಕೊಂಡಿರುವುದರಿಂದ ಅವುಗಳ ಬಗ್ಗೆ ಪೂಜ್ಯ ಭಾವವನ್ನು ಹೊಂದಿರುತ್ತಾರೆ. ಕುಲದ ಕಟ್ಟಳೆಗಳನ್ನು ಮೀರಿದರೆ ಜೇನು ಕಚ್ಚಿ ಹಿಂಸಿಸುತ್ತದೆ ಎಂಬುದಾಗಿ ನಂಬುತ್ತಾರೆ. ಮೈಲಿಗೆ ಆದಾಗಲೆಲ್ಲ ಅವರು ಜೇನು ನೊಣಗಳ ಸಮೀಪ ಹೋಗವುದಿಲ್ಲ ಹಾಗೂ ಜೇನು ಸಂಗ್ರಹಣೆ ಮಾಡುವುದಿಲ್ಲ. ಇಂದಿನ ದಿನಗಳಲ್ಲಿ ಇತರ ಹಿಂದೂ ಸಮುದಾಯಗಳ ಸಂಪರ್ಕದ ಕಾರಣ ಹಲವಾರು ಹಿಂದೂ ದೇವರುಗಳನ್ನು ಪೂಜಿಸುವ, ಹಬ್ಬ-ಹರಿದಿನಗಳನ್ನು ಆಚರಿಸುವ ಕ್ರಮಗಳು ಆದಿವಾಸಿಗಳಲ್ಲಿ ಕಂಡುಬರುತ್ತಿದೆ.

ಆದಿವಾಸಿ ಪಂಗಡಗಳು ನಾನಾ ಬಗೆಯ ನೃತ್ಯ, ಗಾಯನ, ಕುಶಲಕಲೆ ಮುಂತಾದ ಕಲಾಪ್ರಕಾರಗಳನ್ನು ಬೆಳೆಸಿಕೊಂಡು ಬಂದಿವೆ. ಕೆಲವರು ಬಂಡೆಗಲ್ಲುಗಳನ್ನು ವಿವಿಧ ಚಿತ್ರಗಳಿಂದ ಅಲಂಕರಿಸಿದರೆ ಮತ್ತೆ ಹಲವರು ಬೇಟೆ, ಪ್ರಾಣಿ, ಪಕ್ಷಿಗಳ ಚಿತ್ರಗಳನ್ನು ಬಿಡಿಸುತ್ತಾರೆ. ಮತ್ತೆ ಕೆಲವರು ವಿಲಕ್ಷಣವಾದ ಉಡಿಗೆ-ತೊಡಿಗೆಗಳನ್ನು ತಯಾರಿಸುತ್ತಾರೆ. ತಲೆಬುರುಡೆಗಳ ಮೇಲೆ ನಾನಾ ಬಗೆಯ ವರ್ಣಚಿತ್ರಗಳನ್ನು ಮೂಡಿಸುತ್ತಾರೆ. ಅಂದವಾದ ಬುಟ್ಟಿಗಳನ್ನು ಹೆಣೆಯುತ್ತಾರೆ. ಆದಿವಾಸಿ ಸ್ತ್ರೀ ಪುರುಷರಲ್ಲಿ ಅಂಗಾಂಗಗಳ ಮೇಲೆ ಹಚ್ಚೆ ಹೊಯ್ಯಿಸಿಕೊಳ್ಳುತ್ತಾರೆ. ಚಿತ್ರಗಳನ್ನು ಕೊರೆಯಿಸಿಕೊಳ್ಳುವುದು ಬಹುಮಟ್ಟಿಗೆ ಸಾಮಾನ್ಯವಾಗಿರುತ್ತದೆ. ಈ ರೀತಿ ಮಾಡಿಸಿಕೊಂಡರೆ ತಮಗೆ ಯಾವ ದುಷ್ಟಶಕ್ತಿಯೂ ಏನೂ ಮಾಡಲಾರದು, ಯಾವ ಕೇಡಕೂ ಉಂಟಾಗುವುದಿಲ್ಲ ಮತ್ತು ಯಾವ ಸೋಂಕೂ ತಗುಲುವುದಿಲ್ಲ ಎಂಬುದಾಗಿ ನಂಬುತ್ತಾರೆ. ಹುತ್ತರಿ ಮುಂತಾದ ಹಬ್ಬಗಳನ್ನು ಆಚರಿಸುವ ಜೇನುಕುರುಬರಲ್ಲಿ ಮುಖ್ಯವಾದುದು ಕೊಂಟ್ ಪೂಜೆ. ಕೊಂಟ್ ಎಂದರೆ ಒನಕೆ ಎಂಬುದು ಸಾಮಾನ್ಯಾರ್ಥವಾದರೆ, ಸೃಷ್ಟಿ ಶಕ್ತಿ ಚಿಹ್ನೆ ಎಂಬುದು ಸಾಂಕೇತಿಕಾರ್ಥ. ಇದೊಂದು ನಾಟಕ ಚಟುವಟಿಕೆ. ಎಲ್ಲರೂ ಭಾಗವಹಿಸುವ ಇದು ನಾಟಕ ಕಲೆ ಮಾತ್ರವಾಗಿರದೆ, ಸಂದೇಶಗಳನ್ನು ತಿಳಿಸಲು ಬಹು ಪರಿಣಾಮಕಾರಿಯಾದ ಮಾಧ್ಯಮವೂ, ಸಮೂಹ ಜೀವನದಲ್ಲಿ ಐತಿಹಾಸಿಕವಾಗಿ ಮುಖ್ಯವಾಗಿದ್ದ ಸಂಗತಿಗಳ ಸ್ಮಾರಕೋತ್ಸವವೂ ಆಗಿರುತ್ತದೆ. ಇಷ್ಟು ಮಾತ್ರವಲ್ಲದೆ, ಆದಿವಾಸಿಗಳಲ್ಲಿ ಹಲವಾರು ಐತಿಹ್ಯಗಳೂ ಇವೆ. ಉದಾಹರಣೆಗೆ, ತೊದವರ ಮುಖ್ಯ ದೇವರಾದ "ಟಿಯಿಕಿರ್ಜಿ"ಯ ಮಗ ಕೊರಾಟೊ ಬ್ರಹ್ಮಚಾರಿ. ಅವನು ಯಾವಾಗಲೂ ಕೈಯಲ್ಲಿ ಒಂದು ಕಬ್ಬಿಣದ ಕೋಲನ್ನು ಹಿಡಿದುಕೊಂಡಿರುತ್ತಿದ್ದನಂತೆ. ಒಂದು ದಿನ ಅವನು ತನ್ನ ಕೋಲನ್ನು ಒಬ್ಬ ಕಾಡುಕುರುಬ ಯುವತಿಯ ತಲೆಗೆ ತಾಕಿಸಿದನಂತೆ. ಅವಳು ಗರ್ಭವತಿಯಾಗಿ ಒಂದು

ಹೆಣ್ಣುಮಗುವಿಗೆ ಜನ್ಮವಿತ್ತಳಂತೆ. ಕೊರಾಟೊ ಆ ಮಗುವನ್ನು ತಾನೇ ಎತ್ತಿಕೊಂಡು ಬಂದು ಸಾಕಲು ಅದನ್ನು ತನ್ನ ತಾಯಿಯ ಬಳಿಗೆ ಕಳುಹಿಸಿಬಿಟ್ಟನಂತೆ. ಇಂತಹ ಅನೇಕ ಕಥೆಗಳು ಆದಿವಾಸಿ ಜೀವನ ಭಂಡಾರದಲ್ಲಿ ಅಡಗಿವೆ. ಆದಿವಾಸಿಗಳ ಹಲವಾರು ಪ್ರಾರ್ಥನಾ ಹಾಡುಗಳು ಸೊಗಸಾಗಿವೆ. ಅವರು ದೇವರ ಪ್ರಾರ್ಥನೆ ಮಾಡುವಾಗ ತಮಟೆ, ಮದ್ದಳೆ, ಕೊಳಲು ಇತ್ಯಾದಿಗಳನ್ನು ಹಾಗೂ ಓಲಗದಂತಹ ಒಂದು ವಾದ್ಯವನ್ನು ಸಹ ಬಳಸಿ, ಹಲವು ಹಬ್ಬಗಳಲ್ಲಿ ರಾತ್ರಿಯೆಲ್ಲ ಒಟ್ಟಾಗಿ ಕುಳಿತು ಪ್ರಾರ್ಥನೆ ಮಾಡುತ್ತಾರೆ.

ಹೀಗೆ ಆದಿವಾಸಿಗಳು ನಾಟಕ, ಚಿತ್ರ ಅಥವಾ ಪ್ರತಿನಿಧಿ ಕಲೆ, ನಕಾಶೆ ಕೆಲಸ, ಲೋಹ, ಮೂಳೆ, ಮರ ಹಾಗೂ ಶಿಲ್ಪಕಲೆ, ಜೇಡಿಮಣ್ಣಿನಲ್ಲಿ ಆಕೃತಿ ರೂಪಿಸುವ ಕಲೆ, ಚಿತ್ರಕಲೆ, ವೈಯಕ್ತಿಕ ಅಲಂಕಾರಗಳನ್ನು ಒಳಗೊಂಡ ಆಕೃತಿ ಶಿಲ್ಪ ಹಾಗೂ ವರ್ಣ ಅಥವಾ ರೇಖಾ ಚಿತ್ರಕಲೆ, ವಾಚಿಕ ಸಾಹಿತ್ಯ, ಹಾಡು, ಕಥೆ, ಸಂಗೀತ, ನೃತ್ಯಗಳಿಂದ ಕೂಡಿರುವ ಸಾಹಿತ್ಯಾತ್ಮಕ ಕಲೆ, ಅಲಂಕರಣಕಲೆ, ಇತ್ಯಾದಿ ಕಲೆಗಳು ಮತ್ತು ಕಲ್ಲಿನ ಸಲಕರಣೆ, ಮರ ಮತ್ತು ಮೂಳೆ, ಕಪ್ಪೆಚಿಪ್ಪು ಉಪಕರಣಗಳು; ಬಲೆ, ಬುಟ್ಟಿ ಹಾಗೂ ಚೀಲಗಳನ್ನು ಹೆಣೆಯುವುದು; ಕುಂಬಾರಿಕೆ, ನೇಯ್ಗೆ; ಜಡೆಗಟ್ಟಿಸುವುದು, ಲೋಹ ಕೆಲಸ ಮುಂತಾದ ಕಸಬುಗಳ ಮೂಲಕ ಭಾರತ ಸಂಸ್ಕೃತಿಯ ಸಿರಿವಂತಿಕೆಗೆ ಕಾರಣರಾಗಿದ್ದಾರೆ.

೬

ದಾಪುಗಾಲು ಹಾಕಿ ಸಾಗುತ್ತಿರುವ ವಿಜ್ಞಾನ ಹಾಗೂ ಔದ್ಯೋಗಿಕ ತಂತ್ರಗಳ ಕಾರಣ ಉಂಟಾಗಿರುವ ನೂತನ ಪರಿಸ್ಥಿತಿಗಳ ಕಾರಣ ಆದಿವಾಸಿಗಳೆಲ್ಲರು ಸಮಸ್ಯೆಗಳ ಸುಳಿಗೆ ಸಿಕ್ಕಿ ಹಾಕಿಕೊಂಡಿದ್ದಾರೆ. ಇದಕ್ಕೆ ಕರ್ನಾಟಕದ ಆದಿವಾಸಿಗಳೂ ಹೊರತಾಗಿಲ್ಲ. ಪ್ರಗತಿಪರ ಪರಿವರ್ತನೆಗೆ ಸಂಪರ್ಕ ಹಾಗೂ ಸಂವಹನ ಬಹು ಅನಿವಾರ್ಯ. ಆದರೆ ಬೆಟ್ಟ-ಗಿರಿ ನಿವಾಸಿಗಳಾಗಿರುವ ಆದಿವಾಸಿಗಳು ಇದರಿಂದ ವಂಚಿತರಾಗಿ ಭೌಗೋಳಿಕ ಪ್ರತ್ಯೇಕತೆಯ ಸಮಸ್ಯೆಯ ಜೊತೆಗೆ ಗುತ್ತಿಗೆದಾರರು, ಅರಣ್ಯಗಳ ಅಧಿಕಾರಿಗಳು ಮೊದಲಾದವರ ಶೋಷಣೆಗಳಿಗೆ ಗುರಿಯಾಗಿ ಕಡುಬಡತನ, ನಿರುದ್ಯೋಗ, ಹಸಿವು ಮುಂತಾದ ಆರ್ಥಿಕ ಸಮಸ್ಯೆ, ಅನಕ್ಷರತೆ, ಅಜ್ಞಾನ ಇತ್ಯಾದಿ ಶೈಕ್ಷಣಿಕ ಸಮಸ್ಯೆಗಳು, ಹಲವಾರು ರೋಗ-ರುಜಿನ, ಅನಾರೋಗ್ಯ ಸಮಸ್ಯೆಗಳನ್ನು ಎದುರಿಸಬೇಕಾಗಿದೆ. ಇಷ್ಟು ಅನಿಷ್ಟಗಳು ಸಾಲದೋ ಎಂಬಂತೆ, ಕ್ರೈಸ್ತ ಪಾದ್ರಿಗಳು ಹಾಗೂ ಮತ್ತಿತರ ಮತಾನುಯಾಯಿಗಳು ಅವರ ಮೇಲೆ ತಮ್ಮ ಜೀವನ ಕ್ರಮಗಳನ್ನು ಬಲವಂತವಾಗಿ ಹೇರಿ ಮತಾಂತರಗೊಳಿಸಲು ಪ್ರಯತ್ನಗಳನ್ನು ಮಾಡುತ್ತಾ ಬಂದಿರುವುದರಿಂದ, ಅವರ ಬದುಕಿನಲ್ಲಿ ಸಾಂಸ್ಕೃತಿಕ ಹಾಗೂ ಸಾಮಾಜಿಕ ಗೊಂದಲಗಳು ತಲೆದೋರಿ ಅಸ್ತವ್ಯಸ್ತೆ ಉಂಟಾಗಿದೆ. ಇತ್ತೀಚಿನ ದಿನಗಳಲ್ಲಿ ನೆರೆಹೊರೆ ದೇಶಗಳ ಬಡಾವಣೆಯಿಂದ ಆದಿವಾಸಿಗಳಲ್ಲಿ ಅಪಾಯಕಾರಿಯಿಂದ ಪ್ರತ್ಯೇಕತಾ ಭಾವನೆ ಬಲವಾಗಿ ಬೇರೂರಿ ತಮ್ಮದೇ ಆದ ರಾಜ್ಯ ಬೇಕೆಂಬ ಆಸೆ ಪ್ರಬಲವಾಗುತ್ತಿದೆ. ಅವರನ್ನು ಸಮಾಜವಿರೋಧಿ ಶಕ್ತಿಗಳು ಬಳಸಿಕೊಂಡು ಅವರ ಮೂಲಕ ಶಸ್ತ್ರಾಸ್ತ್ರ, ಮಾದಕ ವಸ್ತುಗಳನ್ನು ಕಳ್ಳತನದಿಂದ ಒಳಕ್ಕೂ-ಹೊರಕ್ಕೂ ಸಾಗಿಸುತ್ತಿವೆ.

ಸ್ವತಂತ್ರ ಭಾರತ ಸರ್ಕಾರ ಹಾಗೂ ಸಮಾಜ ಆದಿವಾಸಿಗಳ ಎಲ್ಲಾ ಸಮಸ್ಯೆಗಳ ಪರಿಹಾರ ಹಾಗೂ ಕಲ್ಯಾಣ ಸಾಧನೆಯಲ್ಲಿ ವಿಶೇಷವಾದ ಆಸಕ್ತಿಯನ್ನು ವಹಿಸಿ ಸಂವಿಧಾನಾತ್ಮಕವಾದ ಮತ್ತು ಇನ್ನಿತರ ಕ್ರಮಗಳನ್ನು ಕೈಗೊಳ್ಳುತ್ತಾ ಬಂದಿದೆ. ಸಂವಿಧಾನದ ೧೫; ೧೬ (೪) ಹಾಗೂ ೩೨೦ (೪) ೩೩೩೦; ೩೩೨ ಹಾಗೂ ೩೩೪; ೧೫ (೪) ಮತ್ತು ೨೯ (೨); ೧೯ (೫) ; ೨೭೫ ; ೩೪೦; ೪೬ ; ೧೬೪; ೨೨೪ (೩) ; ೩೩೮ ; ೩೩೯ ; ೩೪೨ ನೆಯ ವಿಧಿಗಳು ಕ್ರಮವಾಗಿ ಅವರಿಗೆ ಸಮಾನಾವಕಾಶ; ಉದ್ಯೋಗಗಳಲ್ಲಿ ಸ್ಥಳಾವಕಾಶ ಕಾಯ್ದಿರಿಸುವುದು; ಶಾಸನಗಳಲ್ಲಿ ಕೆಲವು ಸ್ಥಾನಗಳ ಮೀಸಲಾತಿ; ರಾಜ್ಯವು ಶೈಕ್ಷಣಿಕ ಅಭಿವೃದ್ಧಿ ದೃಷ್ಟಿಯಿಂದ ಯಾವುದೇ ಅವಕಾಶ ನೀಡುವ ಸೌಲಭ್ಯ; ಆಸ್ತಿ ಮಾಡುವ ಹಕ್ಕು; ಭಾರತ ಸಂಚಿತ ನಿಧಿಯಿಂದ ಅವರ ಅಭಿವೃದ್ಧಿಗಾಗಿ ರಾಜ್ಯಗಳಿಗೆ ಆರ್ಥಿಕ ನೆರವನ್ನು ಒದಗಿಸುವುದು; ಅವರ ಹಿತಸಂರಕ್ಷಣೆಗೆ ಕಮೀಷನರ್ ನೇಮಕಾತಿ; ಅವರ ಆರ್ಥಿಕ-ಶೈಕ್ಷಣಿಕ ಸಂರಕ್ಷಣೆ ; ಅವರ ಹಿತಾಸಕ್ತಿ ಪೋಷಣೆಗಾಗಿ ಪ್ರತ್ಯೇಕ ಮಂತ್ರಿಗಳ ನೇಮಕಾತಿ. ಆಡಳಿತ ದೃಷ್ಟಿಯಿಂದ ಅವರ ಹಿತಕ್ಕಾಗಿ ಆದಿವಾಸಿ ಪ್ರದೇಶಗಳ ಒಳಿತಿಗಾಗಿ ಸೂಚನೆ ಸಲಹೆಗಳನ್ನು ನೀಡುವುದು; ಅವರ ಯೋಗಕ್ಷೇಮಕ್ಕಾಗಿ ವಿಶೇಷ ಅಧಿಕಾರಿಗಳ ನೇಮಕಾತಿ; ಅವರ ಕಲ್ಯಾಣ ಸಾಧನೆಯ ವಿಷಯಗಳ ಬಗ್ಗೆ ಕೇಂದ್ರ ಸರ್ಕಾರದ ನಿಯಂತ್ರಣ ಸ್ವರೂಪದ ನಿರೂಪಣೆ; ಯಾವ ಪ್ರಮಾಣಗಳ ಆಧಾರದ ಮೇಲೆ ಹೊಸ ಹೊಸ ಆದಿವಾಸಿ ಸಮೂಹಗಳನ್ನು, ಸೌಲಭ್ಯಗಳನ್ನು ಪಡೆಯಲು ಅರ್ಹವಾದ ಪರಿಶಿಷ್ಟ ಬುಡಕಟ್ಟುಗಳ ಪಟ್ಟಿಗೆ ಸೇರಿಸಬೇಕೆಂದು ತಿಳಿಸುವುದೇ ಮುಂತಾದ ಸೌಲಭ್ಯ ಸವಲತ್ತುಗಳನ್ನು ಎಲ್ಲಾ ಆದಿವಾಸಿಗಳಿಗೆ ಒದಗಿಸಬೇಕೆಂಬುದಾಗಿ ಕಡ್ಡಾಯಪಡಿಸಿವೆ. ಇದರೊಂದಿಗೆ ಆದಿವಾಸಿಗಳ

ಕಲ್ಯಾಣಾಭಿವೃದ್ಧಿ ಸಾಧನೆಗಾಗಿ ಅನೇಕ ಆಯೋಗ, ಸಮಿತಿ, ಕಾರ್ಯಶೀಲ ತಂಡ, ಅಧ್ಯಯನ ಸಮೂಹ ಇತ್ಯಾದಿಗಳನ್ನು ರಚಿಸಲಾಗಿದೆ. ೧೯೫೨ರಲ್ಲಿ ಮೈಸೂರು ಸಂಸ್ಥಾನದ ಆದಿವಾಸಿ ಸೇವಕ ಸಂಘ ಎಂಬ ಸಂಸ್ಥೆ ಸ್ಥಾಪಿತವಾಯಿತು; ಆದಿವಾಸಿಗಳು ಯೋಗಕ್ಷೇಮಾಭಿವೃದ್ಧಿಯನ್ನೇ ಮುಖ್ಯ ಉದ್ದೇಶವಾಗಿ ಹೊಂದಿದ್ದ ಈ ಸಂಸ್ಥೆಯ ಕಾರ್ಯ ಮೊದಲು ಆರಂಭವಾದುದು ಬಿಳಿಗಿರಿರಂಗನ ಬೆಟ್ಟದ ಒಂದು ಸಣ್ಣ ಗುಡಿಸಿಲಿನಲ್ಲಿ ಎಂಬುದು ಗಮನಾರ್ಹವಾದ ಸಂಗತಿ.

ಕರ್ನಾಟಕದಲ್ಲಿ ಆದಿವಾಸಿಗಳಿಗೆ ಸಂಬಂಧಪಟ್ಟ ನಿರ್ದಿಷ್ಟ ಅಧಿಕಾರಿಗಳು ಕಾರ್ಯ ನಿರ್ವಹಿಸುತ್ತಿದ್ದಾರೆ. ರಾಜ್ಯಮಟ್ಟದಲ್ಲಿ ಸಮಾಜಕಲ್ಯಾಣ ನಿರ್ದೇಶಕರು, ಜಂಟಿ ನಿರ್ದೇಶಕರು, ಉಪ ನಿರ್ದೇಶಕರು, ಸಂಶೋಧನಾಧಿಕಾರಿ; ಜಿಲ್ಲಾಮಟ್ಟದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆಗೆ ಸಂಬಂಧಿಸಿರುವ ಯೋಜನಾ ಸಮನ್ವಯಾಧಿಕಾರಿ ಮತ್ತು ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಣಾಧಿಕಾರಿ, ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ ಮತ್ತು ಗಿರಿಜನ/ಸಮಾಜ ಕಲ್ಯಾಣ ವಿಸ್ತರಣಾಧಿಕಾರಿಗಳಿದ್ದಾರೆ ಎಂಬುದಾಗಿ ಕರ್ನಾಟಕ ಸರ್ಕಾರ ನೀಡಿರುವ ಕೈಪಿಡಿ ತಿಳಿಸುತ್ತದೆ. ಆದಿವಾಸಿಗಳಿಗೆ ಉಚಿತ ಶಿಕ್ಷಣ, ಎಲ್ಲಾ ಹಂತಗಳಲ್ಲಿ ವಿದ್ಯಾರ್ಥಿವೇತನ, ವಿದ್ಯಾರ್ಥಿ ನಿಲಯಗಳು, ಪ್ರತಿಭಾ ವಿದ್ಯಾರ್ಥಿ ವೇತನ, ವಿವಿಧ ವಿದ್ಯಾರ್ಥಿ ವೇತನಗಳು, ಹೆಚ್ಚಿನ ಊಟ ಹಾಗೂ ವಸತಿ ವೆಚ್ಚಗಳಿಗಾಗಿ ಧನಸಹಾಯ, ಎಲ್ಲಾ ತಾಂತ್ರಿಕ ಹಾಗೂ ಔದ್ಯೋಗಿಕ ತರಬೇತಿ, ಆಶ್ರಮ ಹಾಗೂ ನವೋದಯ ಶಾಲೆಗಳ ಅಧ್ಯಯನ ಪ್ರವಾಸ ವೆಚ್ಚ, ಹೆಣ್ಣುಮಕ್ಕಳಿಗೆ ಟಿ.ಸಿ.ಎಚ್. ತರಬೇತಿ, ವೈದ್ಯಕೀಯ ಹಾಗೂ ತಾಂತ್ರಿಕ ಕಾಲೇಜುಗಳಲ್ಲಿ, ಶಾಲಾ-ಕಾಲೇಜುಗಳಲ್ಲಿ ಸ್ಥಳ ಕಾಯ್ದಿರಿಸುವಿಕೆ, ಬುಕ್‌ಬ್ಯಾಂಕ್ ಸ್ಥಾಪನೆ, ನರ್ಸರಿ ಹಾಗೂ ಮಹಿಳಾ ಕೇಂದ್ರಗಳು, ಉಚಿತ ಸಮವಸ್ತ್ರ ಹಾಗೂ ಮಧ್ಯಾಹ್ನದ ಊಟ ಮುಂತಾದ ಅನೇಕಾನೇಕ ಶೈಕ್ಷಣಿಕ ಸೌಲಭ್ಯಗಳು; ಕಾನೂನು ಪದವೀಧರರಿಗೆ ಸಹಾಯಧನ ಹಾಗೂ ಹೆಚ್ಚಿನ ತರಬೇತಿ; ಸ್ವಯಂ ಉದ್ಯೋಗ ತರಬೇತಿ; ಯುವಕರಿಗೆ ಸಾರ್ವಜನಿಕ ಉದ್ದಿಮೆಗಳಲ್ಲಿ ತರಬೇತಿ; ಬೆರಳಚ್ಚು, ಶೀಘ್ರಲಿಪಿ ಮತ್ತು ಇತ್ತೀಚಿನ ಕಂಪ್ಯೂಟರ್ ಇತ್ಯಾದಿಗಳಲ್ಲಿ ಉಚಿತ ತರಬೇತಿ; ನೀರಾವರಿ ವ್ಯವಸ್ಥೆ; ಭೂಮಿಯನ್ನು ಕೃಷಿಯೋಗ್ಯಮಾಡಿ ನೀಡುವುದು, ಗಣಿ ಕೆಲಸಗಾರರ ಹಾಗೂ ತೋಟಗಳ ಆದಿವಾಸಿ ಕಾರ್ಮಿಕರ ಹಿತರಕ್ಷಣೆ; ಗೃಹ ಕೈಗಾರಿಕೆಗಳಿಗೆ ಪ್ರೋತ್ಸಾಹ; ವಿವಿಧೋದ್ದೇಶ ಸಹಕಾರಿ ಸಂಘಗಳ ಸ್ಥಾಪನೆ; ಪಶುಪಾಲನೆಗೆ ಬೇಕಾದ ಸೌಲಭ್ಯ; ವ್ಯಾಪಾರಾಭಿವೃದ್ಧಿಗೆ ಧನಸಹಾಯ; ಮಾರುಕಟ್ಟೆ, ತಾಂತ್ರಿಕ ನೆರವು, ಉತ್ಪಾದಕ ಹಾಗೂ ತರಬೇತು ಕೇಂದ್ರಗಳ ಸೌಲಭ್ಯಗಳು; ಉತ್ಪಾದಕ ಹಾಗೂ ತರಬೇತು ಕೇಂದ್ರಗಳ ಸೌಲಭ್ಯಗಳು; ಅರಣ್ಯ ಜೀತಗಾರರ ಸಹಕಾರಿ ಸಂಘಗಳ ಸ್ಥಾಪನೆ; ಶೋಷಣೆಗಾರರಿಂದ ಸಂರಕ್ಷಿಸುವುದು; ಆದಿವಾಸಿ ಅಭಿವೃದ್ಧಿವಲಯಗಳನ್ನು ಬೆಳೆಸುವುದು; ವಿವಿಧ ಆರ್ಥಿಕಾಭಿವೃದ್ಧಿ ಕ್ರಮಗಳು; ಉಚಿತವಾಗಿ ಅಥವಾ ಅತ್ಯಲ್ಪ ಬೆಲೆಯಲ್ಲಿ ನಿವೇಶನಗಳನ್ನು ನೀಡಿ ಗೃಹ ನಿರ್ಮಾಣಕ್ಕೆ ಸಹಾಯ ಮಾಡುವುದು; ಆದಿವಾಸಿ ಪ್ರದೇಶಗಳಲ್ಲಿ ರಸ್ತೆಗಳನ್ನು ನಿರ್ಮಿಸುವುದು; ಆರೋಗ್ಯ ಕೇಂದ್ರಗಳನ್ನು ಸ್ಥಾಪಿಸಿ, ಎಲ್ಲಾ ಬಗೆಯ ಉಚಿತ ವೈದ್ಯಕೀಯ ನೆರವನ್ನು ಔಷಧಿಗಳನ್ನು ಒದಗಿಸುವುದು; ಆದಿವಾಸಿಗಳ ಜೀವನ ಕ್ರಮಗಳನ್ನು ಕುರಿತು ವಸ್ತುನಿಷ್ಠವಾಗಿ ಆಳವಾದ ಅಧ್ಯಯನಗಳನ್ನು ನಡೆಸಲು ಸಂಶೋಧನಾ ಸಂಸ್ಥೆಗಳನ್ನು ಸ್ಥಾಪಿಸಿ, ಆ ಮೂಲಕವಾಗಿ ಆದಿವಾಸಿಗಳ ಪಂಗಡಗಳಿಗೆ ವಿಶಿಷ್ಟವಾಗಿರುವ ಹಾಗೂ ಸಾಮಾನ್ಯವಾಗಿರುವ ಎಲ್ಲಾ ಸಮಸ್ಯೆಗಳನ್ನು ಎಲ್ಲಾ ದೃಷ್ಟಿಕೋನಗಳಿಂದ ವೀಕ್ಷಿಸಿ ಸರಿಯಾಗಿ ಅರಿತು ಆಮೂಲಾಗ್ರ ಪರಿಹಾರ ಕ್ರಮಗಳನ್ನು ಕೈಗೊಳ್ಳುವುದು; ಅಭಿವೃದ್ಧಿ ನಿಧಿಯನ್ನು ಬೆಳಸಿ ಆಯಾಯ ಆದಿವಾಸಿ ವಲಯಗಳಲ್ಲಿ ಶಾಲೆಗಳನ್ನು ನಿರ್ಮಿಸುವುದು; ಗಂಗಾಕಲ್ಯಾಣ, ಸಫಾಯಿ ಕರ್ಮಚಾರಿಗಳಿಗೆ ನೆರವು, ವೈಯಕ್ತಿಕ ಕೊಳವೆ ಬಾವಿಗಳನ್ನು ಒದಗಿಸುವುದು ಇತ್ಯಾದಿ ಆದಿವಾಸಿ ಅಭಿವೃದ್ಧಿ ಹಾಗೂ ಅಭ್ಯುದಯ ಕಾರ್ಯಕ್ರಮಗಳನ್ನು ಕೈಗೊಂಡು ಕೋಟ್ಯಾಂತರ ರೂಪಾಯಿಗಳನ್ನು ವೆಚ್ಚ ಮಾಡಲಾಗುತ್ತಿದೆ.

೭

ಆದರೆ ಈ ಸದುದ್ದೇಶದಿಂದ ಕೂಡಿರುವ ಕಾರ್ಯಕ್ರಮಗಳಿಂದ ಆದಿವಾಸಿಗಳಿಗೆ ನಿರೀಕ್ಷಿತ ಅಭಿವೃದ್ಧಿ ಹಾಗೂ ಅಭ್ಯುದಯದ ಫಲಗಳು ದೊರಕಿಲ್ಲ ಎಂಬುದು ನಿರಾಶೆಯ ಹಾಗೂ ದುಃಖದಾಯಕವಾದ ವಸ್ತುಸ್ಥಿತಿ. ಇದಕ್ಕೆ ರಾಜಕೀಯ ಸಂಕಲ್ಪಶಕ್ತಿ ಹಾಗೂ ನೌಕರಶಾಹಿಯ ಬದ್ಧತೆಯ ಅಭಾವ, ನೌಕರಶಾಹಿಯ ಅಲಕ್ಷತೆ ಹಾಗೂ ಆಲಸ್ಯ, ಆದಿವಾಸಿಗಳ ವೈಶಿಷ್ಟ್ಯಗಳನ್ನು ಗಮನಿಸದೆ ಎಲ್ಲಾ ಪಂಗಡಗಳನ್ನು ಒಂದು ಅಖಂಡವಾದ ಸಮಷ್ಟಿಯಾಗಿ ತಪ್ಪಾಗಿ ಭಾವಿಸಿ, ಮಹಾನಗರಗಳಲ್ಲಿ ಹವಾನಿಯಂತ್ರಿತ ಕೊಠಡಿಗಳಲ್ಲಿ ಕುಳಿತು, ತಾವೇ ಸ್ವತಃ ಕ್ಷೇತ್ರ ಅಧ್ಯಯನ ಮಾಡದೆ, ದಂತಗೋಪುರದಲ್ಲಿ ಎಲ್ಲಾ ಸುಖಭೋಗಗಳನ್ನು ಅನುಭವಿಸುತ್ತಾ ಪರಿಣಿತರುಗಳ

ಆದಿವಾಸಿಗಳ ಕ್ಷೇಮಾಭಿವೃದ್ಧಿಗಾಗಿ ವ್ಯಾವಹಾರಿಕ ಉಪಯುಕ್ತತೆ ಬಗ್ಗೆ ಅರಿವಿಲ್ಲದೆ ಮಾಡುತ್ತಾ ಬಂದಿರುವ ಬೃಹತ್ ಯೋಜನೆಗಳು, ಅವುಗಳಿಂದ ಲಾಭಕ್ಕಿಂತ ನಷ್ಟವೇ ಅಧಿಕವಾಗಿರುವುದು, ಯೋಜನೆಗಳಿಗಾಗಿ ನೀಡಲಾಗಿರುವ ಭಾರೀ ಪ್ರಮಾಣದ ಹಣದ ದುರ್ವಿನಿಯೋಗ, ಅಧಿಕಾರಿಗಳ ಭ್ರಷ್ಟಾಚಾರ, ಆ ಕಾರಣ ಆದಿವಾಸಿಗಳಿಗೆ ಸಲ್ಲಬೇಕಾಗಿರುವ ಹಣ ಹಾಗೂ ಮತ್ತಿತರ ಸವಲತ್ತು - ಸೌಲಭ್ಯಗಳು ಸಂಬಂಧಪಟ್ಟ ಅಧಿಕಾರಿಗಳ ಸ್ವತ್ತಾಗುತ್ತಿರುವ ದುರಂತ; ಅವರು ತಮ್ಮ ನಿರ್ಲಕ್ಷತೆ ಹಾಗೂ ಅಮಾನವೀಯತೆಯ ಕಾರಣ ಸರ್ಕಾರ ನೀಡಿರುವ ಹಣದ ಸದುಪಯೋಗ ಮಾಡದೆ ಆ ಹಣವನ್ನು ಪುನಃ ಹಿಂದಕ್ಕೆ ವರ್ಗಾಯಿಸುತ್ತಿರುವುದು; ಕೆಳಮಟ್ಟದ ಕಲ್ಯಾಣ ಸೇವಾಕಾರ್ಯಗಳು, ಆದಿವಾಸಿಗಳ ಪ್ರಾಥಮಿಕ ಅಗತ್ಯಗಳ ಬಗ್ಗೆ ಅಧಿಕಾರಿಗಳು ತೋರುತ್ತಿರುವ ಉದಾಸೀನ. ಶೈಕ್ಷಣಿಕ, ವೈದ್ಯಕೀಯ, ಆರ್ಥಿಕ, ಆರೋಗ್ಯ ಇತ್ಯಾದಿ ಕಲ್ಯಾಣಕಾರ್ಯಗಳ ಹೆಸರಿನಲ್ಲಿ ಆದಿವಾಸಿಗಳಿಗೆ ಒದಗಿಸಲಾಗುತ್ತಿರುವ ಅತ್ಯಂತ ಕೆಳದರ್ಜೆಯ ಸೇವಾ ಸೌಲಭ್ಯಗಳು, ಆದಿವಾಸಿಗಳನ್ನು ಕೇವಲ ಪ್ರದರ್ಶನ ವಸ್ತುಗಳೋ ಅಥವಾ ಮತಗಳ ಬ್ಯಾಂಕೋ ಎಂಬಂತೆ ಎಣಿಸಿ, ಅವರ ವಿಚಾರದಲ್ಲಿ ರಾಜಕಾರಣಿಗಳು, ಇನ್ನಿತರ ಅಧಿಕಾರಿಗಳು ಮತ್ತು ಪಟ್ಟಭದ್ರ ಹಿತಾಸಕ್ತಿಗಳು ನಡೆದುಕೊಳ್ಳುತ್ತಿರುವ ಖಂಡನಾರ್ಹವಾದ ವರ್ತನಾ ರೀತಿಗಳು ಮುಂತಾದ ಹಲವಾರು ಮಾನವನಿರ್ಮಿತ ಕಾರಣಗಳಿಂದಾಗಿ ಈ ಎಲ್ಲಾ ಆದಿವಾಸಿಗಳ ಅಭಿವೃದ್ಧಿ -ಅಭ್ಯುದಯ ಕಾರ್ಯಕ್ರಮಗಳು ಪೂರ್ಣ ಪ್ರಮಾಣದಲ್ಲಿ ಫಲಪ್ರದವಾಗಿಲ್ಲ.

ಇಂದು ಆದಿವಾಸಿಗಳಲ್ಲಿ ತಮ್ಮ ಹಕ್ಕು - ಬದ್ಧತೆಗಳ ಬಗ್ಗೆ ಅರಿವು ಮೂಡಿದೆ ಎಂಬುದು ಸಂತಸದಾಯಕವಾದ ಸಂಗತಿ. ಸರ್ಕಾರದ ಕಾರ್ಯಕ್ರಮಗಳಲ್ಲದೆ, ಸ್ವಯಂ ಸೇವಾಸಂಘಗಳು, ಮಾನವೀಯ ಮೌಲ್ಯಗಳ ಸಾಕಾರವೋ ಎಂಬಂತಿರುವ ಡಾ. ಸುದರ್ಶನ್, ಡಾ. ಬಾಲಸುಬ್ರಹ್ಮಣ್ಯ ಮೊದಲಾದ ಅತ್ಯುತ್ತಮ ವ್ಯಕ್ತಿಗಳ ನಿಸ್ವಾರ್ಥ ಸೇವೆಗಳ ಫಲವಾಗಿ ಇಂದು ಅನೇಕ ಆದಿವಾಸಿಗಳ ಬದುಕಿನಲ್ಲಿ ಅಭಿವೃದ್ಧಿ ಅಭ್ಯುದಯದ ಬೆಳಕು ಪ್ರಕಾಶಮಾನವಾಗಿದೆ.

೮

ನಿಜವಾದ ಅರ್ಥದಲ್ಲಿ ಆದಿವಾಸಿ ಅಭಿವೃದ್ಧಿ - ಅಭ್ಯುದಯವೆಂದರೆ ಎಲ್ಲರಿಗೂ ಭೂಮಿ, ಸೂರು, ಶಿಕ್ಷಣ, ಔಷಧಿ ನೀಡುವುದಲ್ಲ. ಇಲ್ಲಿ ಆರ್ಥಿಕತೆಯಾಚೆಯ ಆದಿವಾಸಿ ಬದುಕನ್ನು ಸಂಪನ್ನಗೊಳಿಸುವ ಸಾಂಸ್ಕೃತಿಕ ಗುರಿ ಬಹುಮುಖ್ಯವಾದುದು. ಕೆಲವರು ಆದಿವಾಸಿಗಳನ್ನು ಪರಿವರ್ತಿಸಿ ನಾಗರಿಕ ಸಮುದಾಯದೊಂದಿಗೆ ಸಮೀಕರಿಸುವುದೇ ಸರಿಯಾದ ಪರಿಹಾರ ಎಂದರೆ, ಇನ್ನೂ ಕೆಲವರು ಆದಿವಾಸಿಗಳನ್ನು ನಾಗರಿಕ ಸಮುದಾಯದಿಂದ ಪ್ರತ್ಯೇಕವಾಗಿರಿಸಿ, ಅವರು ವಾಸಿಸುತ್ತಿರುವ ಪ್ರದೇಶಗಳನ್ನು ಮೀಸಲು ಸ್ಥಳಗಳೆಂಬುದಾಗಿ ಮಾಡಿ ಅವರನ್ನು ಶೋಷಣೆಗಳಿಂದ ಕಾಪಾಡಬಹುದು ಮತ್ತು ಮಂದಗತಿಯಿಂದ ಅವರಲ್ಲಿ ಬದಲಾವಣೆಗಳನ್ನು ತರಬೇಕು ಎಂಬುದಾಗಿ ಸಲಹೆಮಾಡುತ್ತಾರೆ. ಇನ್ನೂ ಹಲವು ಚಿಂತಕರು ಆದಿವಾಸಿಗಳನ್ನು ಪರ್ವತ ಹಾಗೂ ಅರಣ್ಯ ಪ್ರದೇಶಗಳಿಂದ ಬಯಲುಪ್ರದೇಶಗಳಿಗೆ ಕರೆತಂದು ಅವರಿಗೆ ನಾಗರಿಕತೆಯನ್ನು ಕಲಿಸಿಕೊಡುವುದು ಸರಿಯಾದ ಕ್ರಮ ಎಂಬುದಾಗಿ ಅಭಿಪ್ರಾಯಪಡುತ್ತಾರೆ.

ಆದರೆ ಭಾರತೀಯ ಸಂಸ್ಕೃತಿ ಬಹು ಆಯಾಮವುಳ್ಳದ್ದು. ಒಂದು ಬುಡಕಟ್ಟಿನ ಸಾಮಾಜಿಕ-ಸಾಂಸ್ಕೃತಿಕ ಅನುಭವ ನಿಧಿ, ಅಗತ್ಯಗಳು ಇನ್ನೊಂದರದಕ್ಕಿಂತ ವಿಭಿನ್ನವಾಗಿರುತ್ತವೆ. ಆದಿವಾಸಿಗಳ ಅಭಿವೃದ್ಧಿ-ಅಭ್ಯುದಯ ಕ್ರಿಯಾಯೋಜನೆಗಳನ್ನು ಅವರ ಸಂಸ್ಕೃತಿಗಳ ಒಳಗೆ, ಅವರ ವಿಶಿಷ್ಟ ಬದುಕಿನ ವಿನ್ಯಾಸಗಳ ನೆಲೆಗಳಲ್ಲೇ ರೂಪಿಸಿ ಜಾರಿಗೆ ತರಬೇಕೇ ಹೊರತು ಏಕರೂಪಿಯಾಗಿ ಅನ್ವಯಗೊಳಿಸುವುದು ಮೂರ್ಖತನವಾದೀತು. ಭಾರತದ ಅನೇಕ ಜನಾಂಗ ಹಾಗೂ ಸಾಂಸ್ಕೃತಿಕ ವರ್ಗಗಳೊಂದಿಗೆ ಆದಿವಾಸಿಗಳನ್ನು ವಿಭಿನ್ನ ವರ್ಣ, ರೂಪ ಹಾಗೂ ಮಾದರಿಯ ಭಾಗಗಳಾಗಿರುವ ಸುಂದರ, ಶಬಲಖಚಿತ ಚಿತ್ರವಾಗುವ ರೀತಿಯಲ್ಲಿ ರಾಷ್ಟ್ರೀಯ ಪ್ರಜಾಸತ್ತಾತ್ಮಕ ಚೌಕಟ್ಟಿನಲ್ಲಿ ಸಂಯೋಜಿಸುವುದೇ ಸಮರ್ಪಕವಾದ ವ್ಯಾವಹಾರಿಕ ಪರಿಹಾರ. ಈ ಸಂಯೋಜನೆಯು ಸಮೀಕರಣ ಅಥವಾ ಪ್ರತ್ಯೇಕತೆಯನ್ನು ವಿರೋಧಿಸುತ್ತದೆ. ಇದು ಭಾರತ ಸಂಸ್ಕೃತಿಯ ವೈವಿಧ್ಯಮಯ ಸೊಬಗಿಗೆ ಅನುಗುಣವಾಗಿದೆ. ಈ ಬಗೆಯ ಸಂಯೋಜನಾ ಪ್ರಕ್ರಿಯೆಯ ಮೂಲಕ ಆದಿವಾಸಿಗಳು ತಮ್ಮತನವನ್ನು ಉಳಿಸಿಕೊಂಡು ತಮ್ಮ ಸಾಂಸ್ಕೃತಿಕ ನಿಧಿಗಳನ್ನು ಸಂರಕ್ಷಿಸಿಡುವುದಕ್ಕೆ ಹಾಗೂ ಭಾರತ ಸಮಾಜದ ಅವಿಭಾಜ್ಯ ಅಂಗಗಳಾಗಿರಲು ಶಕ್ತರಾಗುತ್ತಾರೆ. ಆದಿವಾಸಿಗಳ ಕಲ್ಯಾಣವಾಗದೆ ಭಾರತದಲ್ಲಿ ನಿಜವಾದ ಪ್ರಗತಿಯ ಅರುಣೋದಯ ಖಂಡಿತ ಉಂಟಾಗುವುದಿಲ್ಲ. ಆದಿವಾಸಿ ಸಮಾಜ-ಸಂಸ್ಕೃತಿಗಳಲ್ಲಿರುವ ಉತ್ತಮಾಂಶಗಳನ್ನು ಸಂರಕ್ಷಿಸಿ, ಬಲಪಡಿಸಿ, ಬೆಳಸಬೇಕಾದುದು, ಅವರು ಇತರ ಎಲ್ಲಾ ಪ್ರಜೆಗಳೊಂದಿಗೆ ಸಮಾನಾವಕಾಶಗಳನ್ನು ಹೊಂದುವ ತೆರದಲ್ಲಿ ಅನುಕೂಲ ಮಾಡಿಕೊಡುವುದು ಮತ್ತು ಅವರ ಎಲ್ಲಾ ಹಕ್ಕುಗಳನ್ನು ರಕ್ಷಿಸಿಡಬೇಕಾದುದು ಅತ್ಯವಶ್ಯಕ.

ಸಂಕ್ಷೇಪದಲ್ಲಿ, ಆದಿವಾಸಿಗಳು ಇಲ್ಲಿ ಮೊಟ್ಟಮೊದಲು ಬಾಳಿದವರು, ನಿಜವಾದ ಸ್ವದೇಶಿಯರು. ಅವರ ಸಹಜಗುಣ, ಅಂತಃ ಪ್ರವೃತ್ತಿ ಹಾಗೂ ಸಂಪ್ರದಾಯಕ್ಕನುಗುಣವಾಗಿ ಅವರವರ ಸಂಸ್ಥೆಗಳನ್ನು ಬೆಳೆಸಲು, ಜೀವನ ಕ್ರಮಗಳನ್ನು ಅನುಸರಿಸಲು ಅವರಿಗೆ ಸಹಾಯ ಮಾಡಬೇಕು. ಒಂದು ಸುಂದರವಾದ ಹೂದೋಟ ಉಂಟಾಗಲು ಪ್ರತಿಯೊಂದು ಪುಷ್ಪವೂ ಕಾರಣವಾಗುವಂತೆ, ನಮ್ಮ ಸಮಾಜದ ಪ್ರಗತಿಯ ಕಾರ್ಯದಲ್ಲಿ ಪ್ರತಿಯೊಂದು ವರ್ಗವೂ ಮುಖ್ಯ. ಅದು ನೀಡುವ ಕೊಡುಗೆಗಳು ಅತ್ಯಾವಶ್ಯಕವಾದುವು ಎಂಬುದನ್ನು ನೆನಪಿನಲ್ಲಿಡಬೇಕು. ತನ್ನ ಬೆಳವಣಿಗೆಯ ನಿಯಮದ ಪ್ರಕಾರ ಅರಳಿ, ತನ್ನ ವೈವಿಧ್ಯಮಯ ಬಣ್ಣ ಹಾಗೂ ಸುಂದರ ಆಕಾರದ ಮೂಲಕ ತನ್ನ ಸಿರಿವಂತಿಕೆಯನ್ನು, ಸೊಬಗನ್ನು ತೋರಿ, ತನ್ನ ಸುಗಂಧವನ್ನು ಹೊರಹೊಮ್ಮಿಸಿ ಸುತ್ತಲಿನ ವಾತಾವರಣವನ್ನು ಮಧುರಮಯವಾಗುವಂತೆ ಮಾಡಿ ಪುಷ್ಪೋದ್ಯಾನದ ಸಮಗ್ರ ಸೌಂದರ್ಯ ಇಮ್ಮಡಿಯಾಗುವಂತೆ ಮಾಡಲು ಪ್ರತಿಯೊಂದು ಸುಮಕ್ಕೂ ಹಕ್ಕಿದೆ, ಕರ್ತವ್ಯವಿದೆ. ರೋಜಾ ಹೂವನ್ನು ಮಲ್ಲಿಗೆಯನ್ನಾಗಿಸಿ ಅಥವಾ ಮಲ್ಲಿಗೆಯನ್ನು ಸಂಪಿಗೆಯನ್ನಾಗಿ ಪರಿವರ್ತಿಸಿ ಆ ಮೂಲಕ ಆ ಹೂವುಗಳ ಹಾಗೂ ಹೂದೋಟದ ಸಹಜ ಸೌಂದರ್ಯವನ್ನು ಹಾಳುಮಾಡುವುದು ಶುದ್ಧ ಅವಿವೇಕ. ಒಂದು ಸುಂದರವಾಗಿ ನೆಯ್ದ ಬಟ್ಟೆಯಂತೆ ಈ ವಿವಿಧ ಆದಿವಾಸಿ ಸಮಾಜ-ಸಂಸ್ಕೃತಿಗಳಲ್ಲಿ ಯಾವುದೂ ಅಳಿಸಿಹೋಗದ ರೀತಿಯಲ್ಲಿ, ಎಲ್ಲವೂ ತಮ್ಮ-ತಮ್ಮ ವಿಶಿಷ್ಟ ವರ್ಣ ಹಾಗೂ ಮನೋಹರತೆಯಿಂದ ಕೂಡಿ ಬೆಳೆಯುವ ಬಗೆಯಲ್ಲಿ ಮತ್ತು ಒಂದು ಹೊಸ ಕಾಂತಿ, ಒಂದು ನೂತನ ಸೊಗಸು, ಒಂದು ನವೀನ ರಮ್ಯತೆ ತೋರುವ ತೆರದಲ್ಲಿ ಇವುಗಳನ್ನು ಸಂಯೋಜಿಸಬೇಕು. ಇದೇ ಆದಿವಾಸಿ ಅಭಿವೃದ್ಧಿ - ಅಭ್ಯುದಯಕ್ಕಾಗಿ ಯೋಜಿಸುವ ಎಲ್ಲ ರಾಜನೀತಿ ಹಾಗೂ ಕೈಗೊಳ್ಳುವ ಎಲ್ಲ ಕಾರ್ಯಕ್ರಮಗಳ ಮುಖ್ಯಲಕ್ಷಣವಾಗಿರಬೇಕು.

●




# ಬುಡಕಟ್ಟು-ಗ್ರಾಮ-ನಗರ ಅವಿರಳ ಸರಪಳಿ

ಡಾ. ಎಚ್. ಎಂ. ಮರುಳಸಿದ್ಧಯ್ಯ

ಅಮೂರ್ತವಾದ ಮಾನವ ಸಮಾಜವು ಮೂರ್ತರೂಪದಲ್ಲಿ ವ್ಯಕ್ತವಾಗುವುದು ಮಾನವ ಸಮುದಾಯಗಳಲ್ಲಿ. ಸಮಾಜವು ಒಂದು ರೀತಿಯಲ್ಲಿ ಬಯಲು ಅಥವಾ ಶೂನ್ಯ. ಇದರ ಸ್ವರೂಪವನ್ನು ಮತ್ತು ಪರಿಮಾಣವನ್ನು ಗ್ರಹಿಸಲು ಸಾಧ್ಯವಾಗುವುದು ಆಲಯ ಅಥವಾ ಘನರೂಪದಲ್ಲಿ. ಕನಕದಾಸನು ಹೇಳುವ ಬಯಲು ಆಲಯದೊಳಗೊ, ಆಲಯವು ಬಯಲೊಳಗೊ? ಎಂಬ ಪ್ರಶ್ನೆಯಂತೆ ಸಮಾಜವು ಸಮುದಾಯದೊಳಗೋ, ಸಮುದಾಯವು ಸಮಾಜದೊಳಗೋ? ಎಂಬ ಪ್ರಶ್ನೆಯನ್ನು ಸಮಾಜವಿಜ್ಞಾನಿಯು ಕೇಳಿಕೊಳ್ಳುವುದುಂಟು. ಆಲಯಕ್ಕಿರುವ ಗೋಡೆಗಳನ್ನು ಒಡೆದರೆ ಬರಿಯ ಬಯಲು, ಆಕಾರವಿಲ್ಲದ ಬಯಲು. ಸಮುದಾಯಕ್ಕಿರುವ ಭೌಗೋಲಿಕ ನಿವೇಶನದ ಚೌಕಟ್ಟನ್ನು ತೆಗೆದುಹಾಕಿದರೆ ಸಮಾಜವೆಂಬ ಬಯಲೇ ಕಾಣುತ್ತದೆ. ಆದರೆ, ಆಲಯದೊಳಗೆ ಬಯಲು ಇರುವಂತೆ ಸಮುದಾಯದೊಳಗೆ ಸಮಾಜವಿರುತ್ತದೆ. ಕೇವಲ ಸಮುದಾಯದಲ್ಲಿ ಮಾತ್ರವಲ್ಲ, ವ್ಯಕ್ತಿಯ ವ್ಯಕ್ತಿತ್ವದಲ್ಲೂ, ವೃಂದದ ಸ್ವರೂಪದಲ್ಲೂ ಸಮಾಜವು 'ಕಾಣದಂತೆ' ಅಡಗಿಕೊಂಡಿರುತ್ತದೆ. ವ್ಯಕ್ತಿ-ವೃಂದ-ಸಮುದಾಯಗಳಲ್ಲಿ ಆಗುವ ಬದಲಾವಣೆಗಳು ಸಮಾಜದಲ್ಲೂ ಆಗುತ್ತವೆ. ಹಾಗೆಯೇ ಸಮಾಜದಲ್ಲಾದ ಬದಲಾವಣೆಗಳು ವ್ಯಕ್ತಿ-ವೃಂದ-ಸಮುದಾಯಗಳಲ್ಲೂ ಪ್ರತಿಫಲಿಸುತ್ತವೆ. ಹೀಗೆಯೇ ವ್ಯಕ್ತಿಗಳು ತಮ್ಮ ತಮ್ಮ ವೃಂದಗಳಲ್ಲೂ, ವೃಂದಗಳು ತಮ್ಮ ತಮ್ಮ ಸಮುದಾಯಗಳಲ್ಲೂ, ಸಮುದಾಯಗಳು ತಮ್ಮ ತಮ್ಮ ಪ್ರಾದೇಶಿಕ ಸಮುದಾಯಗಳಲ್ಲೂ ಅಡಗಿರುತ್ತವೆ. ಯಾಕೆಂದರೆ, ಮಾನವನಿಗಿರುವ ವಿಶಿಷ್ಟವಾದ ಸಂಸ್ಕೃತಿಯು ಈ ಎಲ್ಲವುಗಳಿಗೆ ಅಸ್ಮಿತೆಯನ್ನು [Identity] ನೀಡುವಂತೆ, ಇವೆಲ್ಲವೂ ಒಂದರೊಳಗೊಂದು ಸೇರಿಕೊಂಡಿರುವಂತೆ, ಅಂಟಿಕೊಂಡಿರುವಂತೆ ಮಾಡುತ್ತದೆ. ಹೀಗಾಗಿ (ನಮ್ಮ ದೃಷ್ಟಿಯನ್ನು ಸಮುದಾಯಕ್ಕೇ ಸೀಮಿತಗೊಳಿಸಿದರೆ) ವಿವಿಧ ಪ್ರಕಾರದ ಸಮುದಾಯಗಳು ಒಂದರೊಳಗೊಂದು ಸೇರಿಕೊಂಡಿರುವಂತೆ, ಅಂಟಿಕೊಂಡು ಅವಿರಳ ಸರಪಳಿ (Continuum) ಆಗಿರುವುದನ್ನು ಅರಿತುಕೊಳ್ಳಬಹುದು. ಈ ಪ್ರಕಾರಗಳು ಹೇಗೆ ಮತ್ತು ಯಾಕೆ ಅಂಟಿಕೊಂಡಿವೆ ಹಾಗೂ ಹೇಗೆ ಮತ್ತು ಯಾಕೆ ತಮ್ಮ ಸಂಬಂಧಗಳಲ್ಲಿ ಬದಲಾವಣೆಯನ್ನು ಕಾಣುತ್ತವೆ ಮತ್ತು ಕಂಡು ಅನುಭವಿಸುತ್ತವೆ ಎಂಬುದನ್ನು ಈ ಲೇಖನದಲ್ಲಿ ಸ್ಥೂಲವಾಗಿ ವಿವರಿಸಲಾಗುವುದು.

*ಘಟಕಗಳು ಒಂದರೊಳಗೊಂದು ಸೇರಿಕೊಂಡಿರುವುದನ್ನು, ಒಂದಕ್ಕೊಂದು ಅಂಟಿಕೊಂಡಿರುವುದನ್ನು, ಅವು ಪರಸ್ಪರ ಕ್ರಿಯಾತ್ಮಕವಾಗಿರುವುದನ್ನು ಈ ಪರಿಕಲ್ಪನೆಯು ತೋರಿಸುತ್ತದೆ. ಹೀಗಾಗಿ (ನಮ್ಮ ದೃಷ್ಟಿಯನ್ನು ಸಮುದಾಯಕ್ಕೇ ಸೀಮಿತಗೊಳಿಸಿದರೆ) ವಿವಿಧ ಪ್ರಕಾರದ ಸಮುದಾಯಗಳು ಒಂದರೊಳಗೊಂದು ಸೇರಿಕೊಂಡಿರುವುದನ್ನು, ಅಂಟಿಕೊಂಡು ಅವಿರಳ ಸರಪಳಿಯಾಗಿರುವುದನ್ನು ಅರಿತುಕೊಳ್ಳಬಹುದು.*

ಸಮಾಜ ಮತ್ತು ಸಮಾಜಕ್ಕೆ ಸಂಬಂಧಿಸಿದ ಎಲ್ಲ ಸಂವೈಧಾನಿಕ ಘಟಕಗಳು ಮತ್ತು ಘಟಕಾಂಶಗಳು ಒಂದು ಸೈದ್ಧಾಂತಿಕ ಚೌಕಟ್ಟಿಗೆ ಬದ್ಧವಾಗಿರುತ್ತವೆ. ಇವೆಲ್ಲವುಗಳಿಗೂ ಅವುಗಳಿಗೇ ವಿಶಿಷ್ಟವಾದ ರಾಚನಿಕತೆ [Structure] ಇರುತ್ತದೆ; ಆ ರಾಚನಿಕತೆಯು ಸದಾ ಕ್ರಿಯಾತ್ಮಕವಾಗಿರುತ್ತದೆ [Function]. (ರಾಚನಿಕತೆಯು ಅಸ್ತಿತ್ವದಲ್ಲಿರುವುದು ಅದರ ಕ್ರಿಯಾತ್ಮಕತೆಯ ಕಾರಣದಿಂದಲೇ.) ರಾಚನಿಕತೆಯು ಸಾಧ್ಯವಾಗುವುದು ರಾಚನಿಕತೆಯಲ್ಲಿರುವ ಸಂಚಲನಾತ್ಮಕತೆಯಿಂದಲೇ [Dynamism]; ಯಾವಾಗ ಸಂಚಲನಾತ್ಮಕತೆಯು ಜಾಗೃತವಾಗಿರುತ್ತದೊ ಆಗ ಕ್ರಿಯಾತ್ಮಕತೆಯೂ, ಪರಿವರ್ತನೆಯೂ ಪರಿಣಮಿಸುತ್ತವೆ; ಪರಿವರ್ತನೆಯು ಯಾವಾಗ ಎಂದಿನಂತೆ ನಿಧಾನಗತಿಯಲ್ಲಿರುತ್ತದೊ ಆಗ ಸಮಾಜದ ಅಂಗಾಂಶಗಳು ಹೊಂದಾಣಿಕೆಯಿಂದಿದ್ದು ಸಹಜ ಸರಳ ಜೀವನ ನಿರ್ವಹಣೆ ಸಾಗುತ್ತಿರುತ್ತದೆ; ಆದರೆ ಪರಿವರ್ತನೆಯು ವಿಪ್ಲವಕಾರಕವಾದರೆ ಅಪಹೊಂದಾಣಿಕೆಯು ಪರಿಣಮಿಸಿ, ಅಸ್ವಸ್ಥ ಸ್ಥಿತಿಗೆ ಕಾರಕಗಳಾದ ರೋಗಾಣುಗಳು ಜಾಗೃತಗೊಂಡು ತೀವ್ರಗತಿಯಲ್ಲಿ ಕಾರ್ಯ ನಿರತವಾಗಿರುತ್ತವೆ; ಸಮಾಜದಲ್ಲಿ ಸಂಪನ್ಮೂಲಗಳು ಸುಪ್ತವಾಗಿಯೂ ಪ್ರಕಟವಾಗಿಯೂ ಇರುತ್ತಿರುವುದರಿಂದ ಧೀಶಕ್ತಿಯುಳ್ಳ ಜನರು ನಿವಾರಣಾತ್ಮಕ ಅಥವಾ ಪರಿಹಾರಾತ್ಮಕ ಕ್ರಮಗಳನ್ನು ಕೈಗೊಂಡು ಅಸ್ವಸ್ಥ ಸ್ಥಿತಿಯನ್ನು ಸ್ವಸ್ಥ ಸ್ಥಿತಿಯನ್ನಾಗಿ ಪರಿವರ್ತಿಸುತ್ತಾರೆ.

ಅಂದರೆ, ಸಮಾಜದ ರಾಚನಿಕತೆಯಿಂದ ಹಿಡಿದು ಪರಿಹಾರಾತ್ಮಕ ಕ್ರಿಯೆಯವರೆಗೂ ಮಾನವ ಜೀವನ ಪದ್ಧತಿಯು ಒಂದು ತೆರನ ಸೈದ್ಧಾಂತಿಕ ಚೌಕಟ್ಟಿಗೆ ಬದ್ಧವಾಗಿರುತ್ತದೆ. ಈ ಸ್ಥಿತಿಯು ಸಮಾಜಕ್ಕೂ, ಸಂಸ್ಕೃತಿಗೂ, ಸಮುದಾಯಕ್ಕೂ ಇತರ ಅಂಗಾಂಶಗಳಿಗೂ ಅನ್ವಯಿಸುತ್ತದೆ. ಅಂದರೆ, 'ಸಮುದಾಯಗಳ ಅವಿರಳ ಸರಪಳಿಗೂ' ಅನ್ವಯಿಸುತ್ತದೆ. ಇದನ್ನು ನಾವು ಗಮನದಲ್ಲಿರಿಸಿಕೊಳ್ಳಬೇಕು. ಹಾಗಾದರೇನೆ 'ಅವಿರಳ ಸರಪಳಿಯ' ಗತಿಬಿಂಬದ ಪರಿಚಯವು ನಮಗೆ ಸರಿಯಾಗಿ ಆಗುತ್ತದೆ.

## ಮಾನವ ಸಮಾಜ :

ಮಾನವ ಸಮಾಜವು 'ಮಾನವ ಸಂಬಂಧಗಳ, ಸದಾ ಬದಲಾಗುತ್ತಲಿರುವ ಸಂಕೀರ್ಣ ಬಲೆ' ಎಂದು ಸ್ಥೂಲವಾಗಿ ವರ್ಣಿಸಲಾಗುತ್ತದೆ. ಮಾನವ ಸಂಬಂಧಗಳು ಮಾನವರು ಆಡುತ್ತಿರುವ ಪಾತ್ರಗಳನ್ನು ಆಧರಿಸಿಕೊಂಡಿರುತ್ತವೆ. ಈ ಪಾತ್ರಗಳು ಜನರು ಹೊಂದಿರುವ ಪರಂಪರಾನುಗತವಾದ ಗಳಿಸಿಕೊಂಡಿರುವ ಸ್ಥಾನಗಳಿಂದ ಒಡಮೂಡಿರುತ್ತವೆ. ಸ್ಥಾನಗಳೂ, ಪಾತ್ರಗಳೂ ಸಂಕೀರ್ಣ ಮತ್ತು ಸಾಪೇಕ್ಷ ಸ್ವರೂಪದವುಗಳು. ಇವುಗಳ ಅಂತರಾಳದಲ್ಲಿ ಚೋದನಕಾರಿಯಾಗಿ ಆಸೆ-ಅಪೇಕ್ಷೆ-ಆಕಾಂಕ್ಷೆಗಳು, ಮನೋದೃಷ್ಟಿಗಳು, ಭಾವನೆ-ಕಲ್ಪನೆಗಳು, ಮೌಲ್ಯ-ಸಂಕಲ್ಪಗಳು, ಪರಂಪರೆಯ ಮತ್ತು ವೈಯಕ್ತಿಕ ಅನುಭವಗಳು, ಅರಿಷಡ್ವರ್ಗಗಳು, ಪುರುಷಾರ್ಥಗಳು, ಸಮಾಜದ ವಿವಿಧ ಅಂಗಾಂಶಗಳ ಆಶಯ-ಧ್ಯೇಯಗಳು ಮತ್ತು ವ್ಯಾಪ್ತಿಗಳು, ಇತ್ಯಾದಿ ಪುಂಖಾನುಪುಂಖಗಳಾಗಿ ಚೈತನ್ಯ ರೂಪದಲ್ಲಿರುತ್ತವೆ. ಇವೆಲ್ಲವೂ ಈ ಹಿಂದೆ ಸೂಚಿಸಿದ ಹಾಗೆ, ಬಯಲು ; ಕರ್ಮೇಂದ್ರಿಯಗಳ ಹಿಡಿತಕ್ಕೆ ಬಹುಸುಲಭವಾಗಿ ಸಿಗದೆ, ಜ್ಞಾನೇಂದ್ರಿಯಗಳ ಅಳವಿಗೆ ಸ್ಥೂಲವಾಗಿ ಸಿಕ್ಕಬಹುದೇನೊ! ಅಮೂರ್ತವಾದ, ಬಯಲಂತಿರುವ ಈ ಇವುಗಳನ್ನು ಮೂರ್ತ ಸ್ವರೂಪದಲ್ಲಿರುವ, ಆಲಯದಂತಿರುವ ವ್ಯಕ್ತಿಗಳ, ವೃಂದಗಳ, ಸಮುದಾಯಗಳ ಮೂಲಕ ಅರ್ಥೈಸಲು ಸಾಧ್ಯವಾಗುತ್ತವೆ. ಈ ವ್ಯಕ್ತಿಗಳು (ಯಾಕೆಂದರೆ ಇವು ಸಾಮಾಜಿಕ ವ್ಯಕ್ತಿಗಳು), ಈ ವೃಂದಗಳು ಮತ್ತು ಈ ಸಮುದಾಯಗಳು ಮೂರ್ತಸ್ವರೂಪದವುಗಳಾದರೂ ಇವು ಜಡವಲ್ಲ, ಸಂಚಲನಾತ್ಮಕವಾದವುಗಳು. ಆದುದರಿಂದಲೇ ಇವುಗಳ ಮೂಲಕ ನಾವು ಸಮಾಜದ ವೈವಿಧ್ಯಮಯ ಆಯಾಮಗಳನ್ನು ತಿಳಿದುಕೊಳ್ಳಲು ಸಾಧ್ಯವಾಗುತ್ತದೆ.

## ಮುಮ್ಮೂಲೆಯ ಮಾರ್ಗದೃಷ್ಟಿ :

ಅಮೂರ್ತ ಸ್ಥಿತಿಗಳಾಗಲಿ, ಮೂರ್ತ ಸ್ಥಿತಿಗಳಾಗಲಿ ಇವು 'ಕೇವಲ' (Absolute) ಸ್ಥಿತಿಯಲ್ಲಿರದೆ ಸಾಪೇಕ್ಷ (Relative) ಸ್ಥಿತಿಯಲ್ಲಿರುತ್ತವೆ. ಈ ಸಾಪೇಕ್ಷ ಸ್ಥಿತಿಯೇ ಸಮಾಜದ ಸಂಗತಿಗಳನ್ನು ಸಂಕೀರ್ಣಗೊಳಿಸುತ್ತದೆ, ಕ್ಲಿಷ್ಟಗೊಳಿಸುತ್ತದೆ. ಜೊತೆಗೆ, ಈ ಸಂಗತಿಗಳೆಲ್ಲವೂ ಪರಸ್ಪರಾವಲಂಬನೆ ಪ್ರಕ್ರಿಯೆಗೆ ಒಳಗಾಗಿರುವುದರಿಂದ ಇವೆಲ್ಲವನ್ನೂ ಬಿಡಿಬಿಡಿಯಾಗಿಯೂ, ಇಡಿಯಾಗಿಯೂ ಅರಿತುಕೊಳ್ಳಲು ಪ್ರಯತ್ನಿಸಬೇಕು. ಇವುಗಳನ್ನು ಯಥಾವತ್ತಾಗಿ ತಿಳಿದುಕೊಳ್ಳಲು ಸಮಗ್ರ (Comprehensive), ಅಖಂಡ (Integrated)

ಮತ್ತು ವಿಕೇಂದ್ರೀಕರಣ (Decentralization) ಮಾರ್ಗದೃಷ್ಟಿ (Approach)ಯನ್ನು ನಮ್ಮ ಅಧ್ಯಯನದಲ್ಲಿ ಅಳವಡಿಸಿಕೊಳ್ಳಬೇಕು.* ಬುಡಕಟ್ಟು-ಗ್ರಾಮ-ನಗರ ಸಮುದಾಯಗಳು ಹೇಗೆ ಮತ್ತು ಏಕೆ 'ಅವಿರಳ ಸರಪಳಿಯ' ಕ್ರಿಯಾತ್ಮಕ ಭಾಗಗಳಾಗಿವೆ ಎಂಬುದನ್ನೂ ಈ ಮಾರ್ಗದೃಷ್ಟಿಯಿಂದ ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. ಆದುದರಿಂದ ಈ ಎಲ್ಲ ಪ್ರಕಾರದ ಸಮುದಾಯಗಳನ್ನು ಇಡಿಯಾಗಿ, ಅಂದರೆ ಸಮಗ್ರವಾಗಿ, ತಿಳಿದುಕೊಳ್ಳುತ್ತಿರುವಂತೆಯೇ ಇವು ಇಡೀ ಪ್ರಾದೇಶಿಕ ಸಮದಾಯದ ಅವಿಭಾಜ್ಯ ಅಥವಾ ಅಖಂಡ ಭಾಗಗಳಾಗಿವೆ ಎಂಬುದು ಅರಿವಾಗುತ್ತದೆ. ಆದರೂ ಪ್ರತಿಯೊಂದು ಸಮುದಾಯದ ಪ್ರಕಾರಕ್ಕೆ ಸೀಮಿತ ಅಂದುಕೊಂಡರೂ, ಅದಕ್ಕೆ ಅದರದ್ದೇ ಆದ ಒಂದು ನಿಶ್ಚಿತ ಅಸ್ಮಿತೆ ಇರುತ್ತದೆ. ಈ ಅಸ್ಮಿತೆಯನ್ನು ನಾವು ನಮ್ಮ ಅಧ್ಯಯನದ ಸಂದರ್ಭದಲ್ಲಿ ಮರೆಯುವಂತಿಲ್ಲ.

ಮಾನವ ಸಮಾಜದ ಮೂರ್ತಸ್ವರೂಪದ ಅಂಗಗಳಾದ ಈ (ಬುಡಕಟ್ಟು-ಗ್ರಾಮ-ನಗರ) ಸಮುದಾಯಗಳು ತಮ್ಮ ತಮ್ಮ ಸಂಸ್ಕೃತಿಯ ಕಾರಣದಿಂದ ಅಸ್ಮಿತೆಯನ್ನೂ ಪಡೆದಿರುತ್ತವೆ, ಸಾಪೇಕ್ಷತೆಯನ್ನೂ ಹೊಂದಿರುತ್ತವೆ. ಅಂದರೆ, ಯಾವುದೇ ಸಮುದಾಯದ ಅಸ್ಮಿತೆಯು 'ಕೇವಲ' ಆಗಿರದೆ, ಇತರ ಪ್ರಕಾರದ ಸಮುದಾಯಗಳ ಅಂಗಾಂಶಗಳನ್ನು ಹೊಂದಿರುವುದರಿಂದ ಅಸ್ಮಿತೆಯು ಸಾಪೇಕ್ಷತೆಯ ಕಾರಣದಿಂದ ಅನಂತವಾಗಿರದೆ ಸಾಂತವಾಗಿರುತ್ತದೆ. ಈ ಸಾಂತ ಸ್ಥಿತಿಯೇ 'ಅವಿರಳ ಸರಪಳಿಯ' ಜೀವಜೀವಾಳ.

## ಸಂಸ್ಕೃತಿ :

ಸಂಸ್ಕೃತಿಯು ಎಲ್ಲ ಮಾನವರಿಗೆ, ಇಡೀ ಮಾನವ ಸಮಾಜಕ್ಕೆ, ವಿಶಿಷ್ಟವಾದ ವೈಲಕ್ಷಣ್ಯ. ಸಂಸ್ಕೃತಿಯಿಂದಲೇ ಮಾನವ ಸಮಾಜವು ಇತರ ಪ್ರಾಣಿಗಳ ಸಮಾಜದಿಂದ ಭಿನ್ನವಾಗಿರುವುದು. ಈ ಸಂಸ್ಕೃತಿಯೇ ವಿವಿಧ ತೆರನ ಸಮುದಾಯಗಳಿಗೆ ಅಸ್ಮಿತೆಯನ್ನು ನೀಡುತ್ತದೆ. ಇದು ಅನುಭವಿಸುವ ಬದಲಾವಣೆಯಿಂದಲೇ ಸಮುದಾಯಗಳನ್ನು ವಿಂಗಡಿಸುವ ಗಡಿರೇಖೆಗಳಲ್ಲಿ ಬದಲಾವಣೆಯು ಕಾಣಿಸುವುದು. ಇಂತಹ ವಿಶಿಷ್ಟವಾದ ಸಮಾಜದ ಸಂಗತಿಯ ಬಗ್ಗೆ ಒಂದು ಸ್ಥೂಲ ಅವಲೋಕನ ಅಗತ್ಯವೆನ್ನಿಸುತ್ತದೆ.

ಜೈವಿಕವಲ್ಲದ ಸಾಮಾಜಿಕವಾಗಿ ಪ್ರಸರಣಗೊಳ್ಳುವ ಮಾನವರು ಗಳಿಸಿಕೊಳ್ಳುವ, ಸಮಾಜದಲ್ಲಿನ ಎಲ್ಲ ವಿಷಯಗಳು ಸಂಸ್ಕೃತಿಯ ಭಾಗಗಳು. ಕಲಾತ್ಮಕ, ತತ್ತ್ವಾದರ್ಶಾತ್ಮಕ, ಧಾರ್ಮಿಕ ವರ್ತನೆಯ ರೂಪಣಿಕೆಗಳು, ಪರಿಸರವನ್ನೂ ತನ್ನ ಅಳವಿಗೆ ತೆಗೆದುಕೊಳ್ಳಲು ಶಕ್ತವಾದ ಎಲ್ಲ ತಂತ್ರೋಪಾಯಗಳು ಸಂಸ್ಕೃತಿಯಲ್ಲಿ ಅಡಕವಾಗಿರುತ್ತವೆ. ಜೊತೆಗೆ ರೂಢಿಗಳು, ಸುದ್ದಿ ವಿಶೇಷಗಳು, ಕೌಶಲ್ಯಗಳು, ಕೌಟುಂಬಿಕ ಮತ್ತು ಸಾರ್ವಜನಿಕ ಜೀವನ ಪದ್ಧತಿಗಳು, ಧರ್ಮ, ವಿಜ್ಞಾನ ಮತ್ತು ಕಲೆ ಇವೂ ಸೇರುತ್ತವೆ. ಹಳೆಯ ತಲೆಮಾರುಗಳ ಅನುಭವಗಳು ಹೊಸತಲೆಮಾರುಗಳಿಗೆ ವರ್ಗಾವಣೆಯಾಗುವ ವಿಶಿಷ್ಟ ಪ್ರಕ್ರಿಯೆಗಳಲ್ಲಿ ಸಂಸ್ಕೃತಿಯು ಹಾಸುಹೊಕ್ಕಾಗಿರುತ್ತದೆ. ಮನುಷ್ಯನು ಸಮಾಜದ ಸದಸ್ಯನಾಗಿ ಗಳಿಸುವ ಎಲ್ಲ ಶಕ್ತಿಸಾಮರ್ಥ್ಯಗಳೂ, ವಾಡಿಕೆಗಳೂ, ಸಂಸ್ಕೃತಿಯಲ್ಲಿ ಸಮಾವೇಶಗೊಂಡಿರುತ್ತವೆ.

---

* ವಿಶ್ವದಲ್ಲಿನ ವಸ್ತುಗಳು ಪ್ರತ್ಯೇಕ ಪ್ರತ್ಯೇಕವಾಗಿ ಕಂಡರೂ ಅವು ಅಭಿನ್ನವಾಗಿವೆ ಎಂಬುದಕ್ಕೆ ಅಲ್ಲಮಪ್ರಭುವಿನ ಈ ವಚನವು ಅಪೂರ್ವವಾದ, ಸಮರ್ಥವಾದ ನೆಲೆಯಾಗಿದೆ :

"ಪೃಥ್ವಿಯನತಿಗಳೆದು ಅಪ್ಪುವಿಲ್ಲ ;
ಅಪ್ಪುವನತಿಗಳೆದು ಅಗ್ನಿಯಿಲ್ಲ ;
ಅಗ್ನಿಯನತಿಗಳೆದು ವಾಯುವಿಲ್ಲ ;
ವಾಯುವನತಿಗಳೆದು ನಾದವಿಲ್ಲ ;
ನಾದವನತಿಗಳೆದು ಬಿಂದುವಿಲ್ಲ ;
ಬಿಂದುವನತಿಗಳೆದು ಕಳೆಯಿಲ್ಲ ;
ಕಳೆಯನತಿಗಳೆದು ಆತ್ಮವಿಲ್ಲ ;
ಆತ್ಮವನತಿಗಳೆದು ಗೊಹೇಶ್ವರನೆಂಬ ಲಿಂಗವಿಲ್ಲ.

ಅಂದರೆ, ಪೃಥ್ವಿ (ನೆಲ), ಅಪ್ಪು (ನೀರು), ಅಗ್ನಿ (ಬೆಂಕಿ), ವಾಯು (ಗಾಳಿ), ನಾದ (ಶಿವ), ಬಿಂದು (ಶಕ್ತಿ) ಮತ್ತು ಕಳೆ (ಶಿವ + ಶಕ್ತಿಯರ ಸಂಯೋಗ), ಆತ್ಮ (ವಾಙ್ಮನಕ್ಕೆ ಗೋಚರವಾದ ಸತ್ತ್ವ), ಗೊಹೇಶ್ವರಲಿಂಗ (ಅಲ್ಲಮಪ್ರಭುವಿನ ಇಷ್ಟದೈವ)-ಈ ಎಲ್ಲ ನವ ಅಂಶಗಳು ಒಂದು ಇಡಿಯಾದ ಸಂಯುಕ್ತ ವಿಶೇಷ. ಇಲ್ಲಿ ನಮೂದಾದ ಅಂಶಗಳೆಲ್ಲವೂ ಈ ವಿಶೇಷದ ಬೇರಾಗದ ಬಿಡಿಭಾಗಗಳು. ಅಲ್ಲಮನ ಪ್ರಕಾರ ಗೊಹೇಶ್ವರ ಲಿಂಗದಲ್ಲಿ ಈ ಎಲ್ಲವೂ ಐಕ್ಯವಾಗಿವೆ. ಇವೆಲವೂ ಸಾರುತ್ತಿರುವುದು ಅಖಂಡತ್ವವನ್ನು. ಈ ವಚನವು ಆಧ್ಯಾತ್ಮಕ್ಕೆ, ಅನುಭಾವಕ್ಕೆ ಅನ್ವಯವಾದರೂ ಲೌಕಿಕ ವ್ಯವಹಾರವನ್ನು ಅವಲೋಕಿಸಿ, ವಿಶ್ಲೇಷಿಸುವಲ್ಲಿಯೂ ಇದು ನಮಗೆ ಪರಿಕಲ್ಪನೆಯಾಗಿ, ಸಿದ್ಧಾಂತವಾಗಿ ನೆರವಾಗುತ್ತದೆ ಎಂಬುದನ್ನು ನಾವು ಗಮನಿಸಬೇಕು.

ಮನುಷ್ಯನು ಸಮಾಜದಲ್ಲಿ ವಾಸಿಸುತ್ತಿರುವ ಎಲ್ಲ ರೀತಿ-ರಿವಾಜುಗಳೂ ಸಂಸ್ಕೃತಿಯೇ. ಸಂಸ್ಕೃತಿಯು ಕಲಿತು ಗಳಿಸುವಂತಹದ್ದು. ಆಡುವ ಮಾತು, ಆಡುವ ರೀತಿ, ಜೀವನೋಪಾಯಕ್ಕಾಗಿ ಅನುಸರಿಸುವ ಆರ್ಥಿಕ ಚಟುವಟಿಕೆಗಳು ಮತ್ತು ಅವುಗಳ ಪ್ರಕಾರಗಳು; ಧಾರ್ಮಿಕ, ರಾಜಕೀಯ, ಕೌಟುಂಬಿಕ, ಬಳಗೀಯ ಪದ್ಧತಿಗಳು; ಕಲೆ, ಸಾಹಿತ್ಯ, ಸಂಗೀತ ಉತ್ಪಾದಿಸುವ ವಸ್ತುಗಳಿಗೆ ಕಾರಣವಾದ ಭಾವನೆಗಳು-ಕಲ್ಪನೆಗಳು- ಚಿಂತನೆಗಳು-ಕೌಶಲ್ಯಗಳು-ಯೋಜನೆಗಳು-ತೊಡಗಿಕೊಂಡ ರೀತಿಗಳು; ಇತ್ಯಾದಿಗಳೆಲ್ಲವೂ ಸೇರುತ್ತವೆ. ಸಂಸ್ಕೃತಿಯು ಎಲ್ಲ ಕಾಲಗಳಲ್ಲೂ, ಎಲ್ಲ ದೇಶಗಳಲ್ಲೂ ಮಾನವ ಜೀವನ ಪದ್ಧತಿಯ ರೂವಾರಿ; ಹಾಗೆಯೇ ಅದರ ಶಿಶುವೂ ಆಗಿದೆ. ಆದರೆ, ಕಾಲ-ದೇಶಗಳಿಗೆ, ಗುಂಪು-ಸಮುದಾಯಗಳಿಗೆ ಅನುಗುಣವಾಗಿ ವಿಶಿಷ್ಟ ರೂಪುಗಳನ್ನು ತಳೆಯುತ್ತದೆ. ಹೀಗಾಗಿ ಬುಡಕಟ್ಟು ಸಮುದಾಯದ ಸಂಸ್ಕೃತಿಗೂ, ಗ್ರಾಮೀಣ ಸಮುದಾಯದ ಸಂಸ್ಕೃತಿಗೂ ಅಂತರವಿರುತ್ತದೆ. ಅದರಂತೆಯೇ ಈ ಎರಡೂ ತೆರನ ಸಂಸ್ಕೃತಿ ಪ್ರಕಾರಗಳು ನಗರ ಸಂಸ್ಕೃತಿಯಿಂದ ಭಿನ್ನವಾಗಿರುತ್ತವೆ. ಇಷ್ಟೇ ಅಲ್ಲ, ಪ್ರಾಚ್ಯ-ಪಾಶ್ಚಾತ್ಯ ಸಂಸ್ಕೃತಿಗಳೂ, ಪುರಾತನ-ಆಧುನಿಕ ಸಂಸ್ಕೃತಿಗಳೂ ಭಿನ್ನಸ್ವರೂಪದವುಗಳಾಗಿರುತ್ತವೆ. ಸ್ಥಳೀಯ, ಪ್ರಾದೇಶಿಕ, ರಾಷ್ಟ್ರೀಯ ಸಂಸ್ಕೃತಿಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿಯೇ ಗುರುತಿಸಬಹುದು.

ಒಂದು ಸಂಸ್ಕೃತಿಯ ಒಡಲಿನೊಳಗೆ ವಿಶಿಷ್ಟ ಸಂಸ್ಕೃತಿಗಳಿರುತ್ತವೆ. ಇವುಗಳನ್ನು ಉಪ ಸಂಸ್ಕೃತಿಗಳು ಎಂದು ಕರೆಯುವುದೂ ಉಂಟು. ಒಂದೊಂದು ವಸ್ತುವಿನ ಸುತ್ತ, ಒಂದೊಂದು ಗುಂಪಿನ ಸುತ್ತ, ಒಂದೊಂದು ತತ್ವಾದರ್ಶದ ಸುತ್ತ, ಒಂದೊಂದು ಮಹತ್ವದ ಕ್ರಿಯೆ/ಕೃತಿಯ ಸುತ್ತ, ಹೀಗೆಯೇ ಗುರುತಿಸಬಹುದಾದ ಅಸ್ಮಿತೆಯನ್ನುಳ್ಳ ಎಲ್ಲ ರೀತಿಯ ಸಂಗತಿಗಳಿಗೇ ವಿಶಿಷ್ಟವಾದ ಸಾಂಸ್ಕೃತಿಕ ಸಂಪ್ರದಾಯಗಳಿರುತ್ತವೆ. ಹೀಗಾಗಿ ಸಂಸ್ಕೃತಿಯು ಒಂದು ಅತ್ಯಂತ ಸಂಕೀರ್ಣವಾದ, ಸದಾ ಬದಲಾಗುತ್ತಲೇ ಸಂಘಟಿತಗೊಳ್ಳುವ ಮಾನವನ ಜೀವನ ಪದ್ಧತಿಗೇ ವಿಶಿಷ್ಟವಾದ ಸಂಗತಿಯಾಗಿದೆ.

'ಸಂಸ್ಕೃತಿ' ಶಬ್ದವು ಆಂಗ್ಲಭಾಷೆಯ 'ಕಲ್‌ಚರ್' (Culture) ಶಬ್ದದಿಂದ ವ್ಯುತ್ಪತ್ತಿಯಾಗಿದೆ ಎಂದು ಹೇಳುವುದುಂಟು. 'ಕಲ್‌ಚರ್'ಗೆ ಸಂವಾದಿಯಾದದ್ದು 'ಕೃಷಿ'. ಮಾನವನು ತನ್ನ ಸಮಾಜದಲ್ಲಿ ಬಾಳಬೇಕಾದಾಗ ಜೀವನ ಪದ್ಧತಿಯ ವಿನ್ಯಾಸಗಳನ್ನು 'ಕೃಷಿ' ಮಾಡಿ ಗಳಿಸಬೇಕಾಗುತ್ತದೆ. ಸಂಸ್ಕೃತಿಯು ಸಾಮಾಜೀಕರಣದ ಮೂಲಕ ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುತ್ತಾ ಅವನ ವರ್ತನೆಗಳ ಮೂಲಕ ಅಭಿವ್ಯಕ್ತವಾಗುತ್ತದೆ. ಆದರೆ, ಭಾರತೀಯ ಭಾಷೆಗಳಲ್ಲಿರುವ 'ಸಂಸ್ಕೃತಿ' ಶಬ್ದವು 'ಸಂಸ್ಕೃತ' ಶಬ್ದದಿಂದ ವ್ಯುತ್ಪತ್ತಿಯಾಗಿರಬೇಕು ಎಂಬ ಸಂದೇಹವೂ ಇದೆ. ಜೊತೆಗೆ, ಸಂಸ್ಕೃತ ಭಾಷೆಯ 'ಸಂಸ್ಕಾರ' ಶಬ್ದದಿಂದ 'ಸಂಸ್ಕೃತಿಯು' ವ್ಯುತ್ಪತ್ತಿಯಾಗಿರಬೇಕೆಂಬ ಅನುಮಾನವೂ ಇದೆ. ಸಂಸ್ಕಾರವು ದಿನದಿನವೂ ಕೃಷಿ ಮಾಡುವುದರ ಮೂಲಕ, ಅಭ್ಯಾಸ ಮಾಡುವುದರ ಮೂಲಕ, ಬಾಹ್ಯವೆಂದೆಂದುಕೊಳ್ಳುವ ವಿಶೇಷಗಳನ್ನು ಆಂತರಿಕಗೊಳಿಸಿಕೊಳ್ಳುವುದರ ಮೂಲಕ ವ್ಯಕ್ತಿಗೆ ಅಳವಡುತ್ತದೆ. ವ್ಯಕ್ತಿಯೂ ಒಂದು ವೃಂದದ, ಒಂದು ಸಮುದಾಯದ ಸದಸ್ಯನಾಗಿರುವುದರಿಂದ ಅವನು ಪಡೆಯುವ ಸಂಸ್ಕಾರವು ಸಾಮಾಜಿಕ ಪ್ರಕ್ರಿಯೆಗಳ ಮೂಲಕವೇ ಆಗಿರುತ್ತದೆ. ಇದು ಅವನು ನೋಡಿ, ಆಲಿಸಿ, ಅರಿತುಕೊಂಡು ವಿಷಯಗಳನ್ನು ಅಂತರ್ಗತ ಮಾಡಿಕೊಳ್ಳುವುದೆಂದರೆ ಕಲಿಯುವುದೆಂದೇ ಅರ್ಥ. ಕಲಿಯುವುದು ಅಕ್ಷರದ ಮೂಲಕ, ಔಪಚಾರಿಕ ಶಿಕ್ಷಣದ ಮೂಲಕ ಎಂದು ಹೇಳಿದರೆ ಸಂಗತಿಯನ್ನು ಆಕುಂಚನಗೊಳಿಸಿದಂತಾಗುತ್ತದೆ. ಹಾಗೇನಾದರೂ ಸಂಸ್ಕೃತಿಯನ್ನು ಗಳಿಸುವ ಪದ್ಧತಿಯನ್ನು ಸೀಮಿತಗೊಳಿಸಿದರೆ, ಬುಡಕಟ್ಟಿನವರಿಗೆ, ಗ್ರಾಮೀಣರಿಗೆ, ನಗರದ ಕೊಳೆಗೇರಿಯವರಿಗೆ, ಅನಕ್ಷರಸ್ಥರಿಗೆ, ಅಕ್ಷರಪೂರ್ವ ಜನಸಮುದಾಯದವರಿಗೆ 'ಸಂಸ್ಕೃತಿ' ಇರಲಿಲ್ಲ, ಇರುವುದಿಲ್ಲ, ದೊರೆಯುವುದಿಲ್ಲ ಎಂದೆಲ್ಲಾ ಭಾವಿಸಬೇಕಾಗುತ್ತದೆ. ಇಂಥ ತೀರ್ಮಾನವು ಅವೈಜ್ಞಾನಿಕ, ಅವಾಸ್ತವ. ಅಂದರೆ, ಇನ್ನೂ ಸೂಕ್ಷ್ಮವಾಗಿ ನೋಡಿದರೆ ಸಂಸ್ಕೃತಿಯನ್ನು ಕೆಲವು ವಿಶೇಷಣಗಳನ್ನೂ ಹಚ್ಚಿ ಪಂಜರದೊಳಗೆ ಇರಿಸುವುದುಂಟು. 'ಸಂಸ್ಕೃತಿ ವಿಹೀನ' ಎಂದು ಹೇಳಿದಾಗ ಆತ ಅನಕ್ಷರಸ್ಥ, ಅಜ್ಞಾನಿ, ಅನಾಗರಿಕ, ಅಸಭ್ಯ, ಅಶ್ಲೀಲ ವರ್ತನೆಯವ, ದುಷ್ಟ, ಒರಟ, ವಂಚಕ, ದ್ರೋಹಿ, ಹೀಗೆಯೇ ಧರ್ಮ-ನೀತಿಶಾಸ್ತ್ರಗಳ ಎಲ್ಲ ಲಕ್ಷಣಗಳಿಗೆ ಒರೆಹಚ್ಚಿ, ವ್ಯಕ್ತಿಗೆ, ಗುಂಪಿಗೆ, ಸಮುದಾಯಕ್ಕೆ 'ಸಂಸ್ಕೃತಿ ವಿಹೀನ' ಪಟ್ಟಗಟ್ಟಿದರೆ ತುಂಬಾ ಅನಾಹುತವಾಗುತ್ತದೆ. ಇಂಥ ಮೌಲ್ಯಮಾಪನವೇ ತುಂಬಾ 'ಅಸಂಸ್ಕೃತಿ' ಜನ್ಯವಾದದ್ದು. ಸಂಸ್ಕೃತ ಭಾಷೆ ಬಾರದವರು, ಅಕ್ಷರಸ್ಥರಲ್ಲದವರು, ನಯವಿನಯ, ಸೌಜನ್ಯ ಸಜ್ಜನಿಕೆ, ಅನುಕಂಪ-ಔದಾರ್ಯ ಇತ್ಯಾದಿ ನಯಗಾರಿಕೆ ಇಲ್ಲದವರನ್ನು ಸಂಸ್ಕೃತಿವಿಹೀನರು ಎನ್ನುವುದಾದರೆ, ಜಾನಪದೀಯವಾಗಿಯೇ ಹೇಳಿರಲಿ, ಹಿಂದೆ ಹೇಳಿದ ಹಾಗೆ ಬುಡಕಟ್ಟಿನವರು, ಗ್ರಾಮೀಣರು, ನಗರದ ಕೊಳೆಗೇರಿಯವರು, ಇಂಥವರೆಲ್ಲಾ ಈ ಪಟ್ಟಿಗೆ ಸೇರಿಬಿಡುತ್ತಾರೆ. ಈ ಮೇಲೆ ಮಾಡಿದ ಪಟ್ಟಿಯಲ್ಲಿರುವ ಸಂಗತಿಗಳೆಲ್ಲಾ ತೋರಿಕೆಯವಾಗಿರಬಹುದು. ಒಳಗೆಲ್ಲವೂ ಇವುಗಳಿಗೆ ವಿರುದ್ಧವಾದ ಗುಣಗಳನ್ನು ಹೊಂದಿರಬಹುದು. 'ಒಳಗೆ ಶೋಧಿಸಿದರೆ ಏನೂ ಹುರುಳಿಲ್ಲವಯ್ಯಾ' ಎಂತಾದರೆ ಗತಿಯೇನು! ಮನುಷ್ಯನ ಎಲ್ಲಾ ವರ್ತನೆಗಳೂ, ಇವುಗಳ ಹಿಂದಿರುವ ಪ್ರೇರಣಾಂಶಗಳೂ, ಇವುಗಳಿಂದ ಹೊರಹೊಮ್ಮುವ ಮತ್ತು

ಸಂಪೋಷಿಸಿಕೊಂಡು ಹೋಗುವ ಸಂಬಂಧಗಳು, ವಸ್ತು ನಿರ್ಮಾಣದ ಕಲಾಕೌಶಲ್ಯಗಳು, ಆಚರಣೆಯ ಪದ್ಧತಿಗಳು, ಇತ್ಯಾದಿಗಳೆಲ್ಲವೂ ಸಂಸ್ಕೃತಿಯ ಭಾಗಗಳೇ ಆಗಿರುವುದರಿಂದ ಇವುಗಳನ್ನು ಕೆಲವು ಆಯ್ದ ಗುಣ-ಮೌಲ್ಯಗಳಿಂದ ಪರೀಕ್ಷಿಸಿ ಸಂಸ್ಕೃತಿ-ಸಂಸ್ಕೃತಿವಿಹೀನ ಎನ್ನುವುದು ಅವಾಸ್ತವ, ಅವೈಜ್ಞಾನಿಕ. ಸಂಸ್ಕೃತಿಯಲ್ಲಿ ಪ್ರಕಾರಗಳಿರಬಹುದೇ ಹೊರತು ಇತ್ಯಾತ್ಮಕ-ನೇತ್ಯಾತ್ಮಕ ವರ್ಗಗಳು ಇರುವುದಿಲ್ಲ.

ಸಂಸ್ಕೃತಿಯ ಇಂತಹ ವ್ಯಾಖ್ಯಾನದಿಂದ ಬುಡಕಟ್ಟು-ಗ್ರಾಮ-ನಗರ ಸಮುದಾಯಗಳ ಸಂಸ್ಕೃತಿ ವಿಶೇಷವನ್ನು ಅವಲೋಕಿಸಿದಾಗ ವಿಭಿನ್ನ ಪ್ರಕಾರಗಳನ್ನು ಕಾಣಬಹುದು. ಬಹುಶಃ ಬುಡಕಟ್ಟಿನವರ ಜೀವನ ಪದ್ಧತಿಯನ್ನು ಹೊರತುಪಡಿಸಿದರೆ ಉಳಿದ ಗ್ರಾಮ-ನಗರಗಳ ಜೀವನ ಪದ್ಧತಿಗಳಲ್ಲಿ ಉಪಸಂಸ್ಕೃತಿಗಳು ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಸಹಜವಾದ, ಒತ್ತಾಯದಿಂದಾದ, ಉದ್ದೇಶಪೂರ್ವಕವಾಗಿ ತಂದ ಬದಲಾವಣೆಗಳಿಂದ ಸಂಸ್ಕೃತಿಯ ಪ್ರಕಾರಗಳಲ್ಲಿ ಮಾರ್ಪಾಟುಗಳಾಗುತ್ತಲೇ ಸಾಗುತ್ತದೆ ಎಂಬುದನ್ನೂ ನಾವು ಗಮನಿಸಬಹುದು. ಆಧುನಿಕ ಜೀವನ ಶೈಲಿಗಳು, ಮೌಲ್ಯಗಳು ಪ್ರಸರಣಗೊಂಡಂತೆಲ್ಲಾ ಪರಕೀಯವೆನ್ನುವ ಸಾಂಸ್ಕೃತಿಕ ವಿಷಯಗಳು ಸ್ಥಳೀಯ ಸಾಂಸ್ಕೃತಿಕ ವಿನ್ಯಾಸಗಳನ್ನು ಸ್ಥಿತ್ಯಂತರಗೊಳಿಸುತ್ತವೆ. ಇದರಿಂದ ಸಮುದಾಯಗಳ 'ಶುದ್ಧ ಅಸ್ಮಿತೆ'ಗೆ ಭಂಗ ಬರುವ ಸಾಧ್ಯತೆಯೂ ಇರುತ್ತದೆ; ಸಮುದಾಯಗಳ ಗಡಿರೇಖೆಗಳನ್ನು ಅಳಿಸಿಹಾಕುವ, ಅಥವಾ ಕೊನೆಗೆ ಮಸುಳಿಸುವ ಸಾಧ್ಯತೆಗಳಿರುತ್ತವೆ.

**ಸಮುದಾಯಗಳ ಭಿನ್ನತೆ :**

ನಾವು ನಮ್ಮ ಅಧ್ಯಯನದ ಸಂದರ್ಭದಲ್ಲಿ ಈ ವಿಷಯವನ್ನು ಮರೆಯುವಂತಿಲ್ಲ. ಮಾನವ ಸಮಾಜದ ಮೂರ್ತ ಸ್ವರೂಪದ ಅಂಗಗಳಾದ ಈ (ಬುಡಕಟ್ಟು-ಗ್ರಾಮ-ನಗರ) ಸಮುದಾಯಗಳು ತಮ್ಮ ತಮ್ಮ ಸಂಸ್ಕೃತಿಯ ಕಾರಣದಿಂದ ವೈವಿಧ್ಯವಾದ ಅಸ್ಮಿತೆಯನ್ನು ಪಡೆದಿರುತ್ತವೆ. ಆದರೂ ಯಾವುದೇ ಸಮುದಾಯದ ಅಸ್ಮಿತೆಯು 'ಕೇವಲ' (Absolute) ಆಗಿರದೆ, ಇತರ ಪ್ರಕಾರದ ಸಮುದಾಯಗಳ ಅಂಗಾಂಶಗಳನ್ನು ಹೊಂದಿರುವುದರಿಂದ ಅಸ್ಮಿತೆಯು ಸಾಪೇಕ್ಷತೆಯ ಕಾರಣದಿಂದ ಅನಂತವಾಗಿರದೆ ಸಾಂತವಾಗಿರುತ್ತದೆ. ಈ ಸಾಂತಸ್ಥಿತಿಯೇ 'ಅವಿರಳ ಸರಪಳಿಯ' ಜೀವಜೀವಾಳ.

ಈ ಹಿನ್ನೆಲೆಯಲ್ಲಿ ನಾವು ಬುಡಕಟ್ಟು-ಗ್ರಾಮ-ನಗರ ಅವಿರಳ ಸರಪಳಿಯನ್ನು ಅರ್ಥೈಸಬೇಕಾಗುತ್ತದೆ. ಮೇಲ್ನೋಟಕ್ಕೆ ಈ ಮೂರೂ ಸಮುದಾಯಗಳು ಪ್ರತ್ಯಪ್ರತ್ಯೇಕವಾದ ಸಮುದಾಯ-ಪ್ರಕಾರಗಳು ಎನ್ನಿಸುವುದರಲ್ಲಿ ಸಂಶಯವಿಲ್ಲ. ಇದಕ್ಕೆ ಕಾರಣಗಳು ಮುಖ್ಯವಾಗಿ ಎರಡು: ಇವುಳಿಗೆ ಇರುವ ಪ್ರತ್ಯೇಕವಾದ ವಿಶಿಷ್ಟ ರಾಚನಿಕತೆ ಮತ್ತು ಸಂಸ್ಕೃತಿ ; ಜನಸಂಖ್ಯೆ-ಆರ್ಥಿಕ-ಧರ್ಮೋನೈತಿಕ-ರಾಜಕೀಯ-ನ್ಯಾಯಿಕ-ಕಲಾತ್ಮಕ ಸ್ವರೂಪ, ಪರಿವರ್ತನೆಯ ಮತ್ತು ಅಸ್ವಸ್ಥತೆಯ ಪ್ರಮಾಣ, ಉದ್ಭವಿಸಿದ ತೊಂದರೆಗಳನ್ನು ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಪರಿಹರಿಸುವ ಮಾರ್ಗೋಪಾಯಗಳ ಜ್ಞಾನದ ಪರಿಮಾಣ ಸಮುದಾಯದವರಲ್ಲಿ ಎಷ್ಟಿದೆ ಎಂಬುವ ಸಂಗತಿ. ಆದರೂ ಈ ಎಲ್ಲವುಗಳಲ್ಲೂ ಅನೇಕ ಸಾಮಾನ್ಯ ಅಂಶಗಳು ಇರುವುದರಿಂದ ಆ ಎಲ್ಲ ಸಮುದಾಯದ ಪ್ರಕಾರಗಳು ಒಂದರೊಳಗೊಂದು ಸೇರಿಕೊಂಡು ಭೌಗೋಳಿಕವಲ್ಲದ ಸಾಮಾನ್ಯ ಸಂಗತಿಗಳ ಕಾರಣದಿಂದ ಅಂಟಿಕೊಂಡು ಅವಿರಳ ಸರಪಳಿಯನ್ನು ನಿರ್ಮಿಸಿಕೊಳ್ಳುತ್ತವೆ.

ಮುಖ್ಯವಾದ ಈ ಮೂರು ಸಮುದಾಯ ಪ್ರಕಾರಗಳಲ್ಲಿ ಉಪಪ್ರಕಾರಗಳಿರುತ್ತವೆ. ಇವುಗಳು ಹೊಂದಿರುವ ಅಸ್ಮಿತೆಯು (Identity) ಅವುಗಳ ಭೌಗೋಲಿಕ ನಿವೇಶನ, ಅವು ಹೊಂದಿರುವ ಸಂಸ್ಕೃತಿ ಇತ್ಯಾದಿಗಳ ವೈಶಿಷ್ಟ್ಯದಿಂದ ನಿರ್ಮಾಣವಾಗಿರುತ್ತದೆ. ಇವುಗಳಲ್ಲಿ ಮಹತ್ವದ ರೂಪಾಂತರವಾಗದೆ ಇವುಗಳ ಅಸ್ಮಿತೆಯಲ್ಲೂ ಪರಿವರ್ತನೆ ಕಾಣುತ್ತದೆ. ಬುಡಕಟ್ಟಿನ ಜನರು ಸಾಮಾನ್ಯವಾಗಿ ಗುಡ್ಡ-ಅರಣ್ಯಗಳಲ್ಲಿ ವಾಸಮಾಡುತ್ತಿರುತ್ತಾರೆ. ಅವರ ಜೀವನ ನಿರ್ವಹಣೆಯು ಸಾಧ್ಯವಾದಷ್ಟು ಮಟ್ಟಿಗೆ ಪ್ರಕೃತಿಗೆ ತೀರಾ ನಿಕಟವಾಗಿರುತ್ತದೆ, ಸರಳವಾಗಿರುತ್ತದೆ. ಪರಂಪರೆಯ ಹಿಡಿತವು ಅವರ ಮೇಲೆ ಬಲಿಷ್ಠವಾಗಿರುತ್ತದೆ. ಅನ್ಯ ಸಮುದಾಯಗಳವರೊಡನೆ ನಿಕಟವಾದ ಸಂಪರ್ಕವನ್ನು ಇರಿಸಿಕೊಳ್ಳಲು ಹೆಚ್ಚು ಅಪೇಕ್ಷೆಯನ್ನು ಹೊಂದಿರುವುದಿಲ್ಲ, ಅದಕ್ಕೆ ಆತುರವನ್ನೂ ತೋರುವುದಿಲ್ಲ, ಅನ್ಯರ ಜೀವನಕ್ರಮಗಳನ್ನು ಅಂಗೀಕರಿಸಲು ಸಿದ್ಧವಾಗಿರುವುದಿಲ್ಲ. ಸಾಮಾನ್ಯಾಗಿ ಗುಂಪುಗಳಲ್ಲಿ ವಲಸೆ ಹೋಗುತ್ತಾರೆ ಮತ್ತು ಹೋದಂತೆ ದ್ವೀಪಗಳಂತೆ ಜೀವಿಸುತ್ತಾ ತಮ್ಮ ಅಸ್ಮಿತೆಯನ್ನು ಕಾಪಾಡಿಕೊಂಡು ಬರುತ್ತಾರೆ. ಅನ್ಯ ಸಾಂಸ್ಕೃತಿಕ ವಲಯದಲ್ಲಿ ನೆಲಸಿದಾಗಲಂತೂ ಅವರ ಪರಂಪರೆಯು ಇನ್ನೂ ಬಲಿಷ್ಠವಾಗುವುದಂಟು. ಹೀಗಾಗಿ ಅವರು ಗ್ರಾಮಗಳಿಗೊ, ನಗರಗಳಿಗೊ ವಲಸೆ ಹೋದರೆ ಅವರು ಅಲ್ಲಿನ ಜೀವನ ಪ್ರವಾಹದಲ್ಲಿ ಬೆರೆಯದೆ ನಡುಗುಡ್ಡೆಗಳಾಗಿ ಉಳಿದುಬಿಡುತ್ತಾರೆ. ಅವರು 'ಅಲ್ಲಿ ಇರುತ್ತಾರೆ' ಅಷ್ಟೆ, 'ಅಲ್ಲಿನವರಲ್ಲಿ ಒಂದಾಗಿ ಇರುವುದಿಲ್ಲ' (They are in and they are not of the that community).

ಗ್ರಾಮೀಣರಿಗೂ ಈ ಎಲ್ಲ ಲಕ್ಷಣಗಳು ಅನ್ವಯಿಸಿದರೂ ಅವರಷ್ಟು ಕಠಿಣ ನಿಲುವನ್ನು ಇವರು ತಳೆದಿರುವುದಿಲ್ಲ. ಗ್ರಾಮೀಣರು ನಗರ ಸಮುದಾಯದವರೊಡನೆ ಹೆಚ್ಚು ಸಂಪರ್ಕವನ್ನು ಹೊಂದಿರುವುದರಿಂದಲೂ ದಿನೇದಿನೇ ಇದು ಹೆಚ್ಚು ಹೆಚ್ಚಾಗುತ್ತಿರುವುದರಿಂದಲೂ ನಗರ ಜೀವನ ಪದ್ಧತಿಯ ಛಾಯೆಗಳು ಗ್ರಾಮೀಣರ ಜೀವನ ಪದ್ಧತಿಯ ಮೇಲೆ ಹರಡುತ್ತಿವೆ, ಅವರ ಮೌಲ್ಯಗಳು ಇವರ ಮೌಲ್ಯಗಳನ್ನು ಪ್ರಭಾವಗೊಳಿಸುತ್ತವೆ. ಇದೇ ಸಂದರ್ಭದಲ್ಲಿ ಗ್ರಾಮೀಣರೂ ವಿವಿಧ ಕಾರಣ ಪುಂಜಗಳ ಒತ್ತಡದಿಂದ ನಗರಗಳಿಗೆ ವಲಸೆಹೋಗಿ 'ಸ್ಥಳೀಕರಣದ ಪ್ರಕ್ರಿಯೆಗೆ'* ಒಳಗಾಗಿ ದ್ವೀಪಗಳಾಗಿ ಜೀವಿಸುತ್ತಾ ನಗರ ಜೀವನದಲ್ಲಿ ಪರಿವರ್ತನೆಗಳನ್ನು ತರುತ್ತಲಿರುವುದೂ ಉಂಟು.

ಹೀಗೆ ನಡೆಯುವ ಪ್ರಕ್ರಿಯೆಗಳಿಗೆ ತಿರುಗುಮುರುಗಾಗಿ ತೀವ್ರಗತಿಯಲ್ಲಿ ಆಗತ್ತಲಿರುವ ಬದಲಾವಣೆಗಳ, ವಾಣಿಜ್ಯ ಚಟುವಟಿಕೆಗಳ ವಿಸ್ತರಣೆ ಸಂವಹನ-ಸಂಪರ್ಕಗಳ ಹೆಚ್ಚಳದ, ಸರಕಾರಗಳು ಕೈಗೊಳ್ಳುವ ನವೀನ ಕಾರ್ಯಕ್ರಮಗಳ, ಮುಂತಾದ ಕಾರಣಗಳಿಂದ ನಗರ ಸಮುದಾಯದ ಹಲವರು ಬುಡಕಟ್ಟು - ಗ್ರಾಮ ಸಮುದಾಯಗಳಿಗೆ ಹೋಗಿ, ಸಂಪರ್ಕವನ್ನು ಸ್ಥಾಪಿಸಿ, ತಮ್ಮ ಜೀವನ ಮೌಲ್ಯಗಳನ್ನು ಬಿತ್ತತೊಡಗುವುದುಂಟು. ಹೀಗಾಗಿ ಬುಡಕಟ್ಟುಗಳು ಗ್ರಾಮಗಳು ನಗರೀಕರಣದ ಪ್ರಭಾವಕ್ಕೆ ಒಳಗಾಗುತ್ತವೆ ; ಬುಡಕಟ್ಟಿನವರು ಮತ್ತು ಗ್ರಾಮದವರು ವಲಸೆ ಹೋಗಿ ನಗರ ಜೀವನದ ಮೇಲೆ ತಮ್ಮ ಪ್ರಭಾವವನ್ನು, ಅಲ್ಪ ಪ್ರಮಾಣದಲ್ಲಾದರೂ ಬೀರುವುದುಂಟು.

**ಜಾಗತೀಕರಣ :**

ಮಾನವ ಸಮಾಜವು ಆರಂಭದಿಂದಲೂ ಬದಲಾವಣೆಯ ಪ್ರಕ್ರಿಯೆಯನ್ನು ತನ್ನ ರಾಚನಿಕತೆಯಲ್ಲೇ ಅಡಗಿಸಿಕೊಂಡಿದ್ದರೂ ಅದು ನಿಧಾನಗತಿಯ, ಸರಳವಾದ, ಮಿತವಲಯದ ಪ್ರಭಾವಗಳಿಗೆ ಒಳಗಾಗಿ ಸಂಪ್ರದಾಯ-ಪರಂಪರೆಯ ಅವಿಭಾಜ್ಯ ಭಾಗವಾಗಿ ಇದ್ದೂ ಇಲ್ಲದಂತೆ ಕ್ರಿಯಾ ನಿರತವಾಗಿತ್ತು. ಆದರೆ ಆರ್ಥಿಕ, ರಾಜಕೀಯ ವಲಯಗಳಲ್ಲಿ ಆಗುತ್ತಲಿರುವ ತೀವ್ರತಮ ಬದಲಾವಣೆಯ ಕಾರಣದಿಂದ ಸ್ಥಳೀಯ ಗಡಿರೇಖೆಗಳನ್ನು ಮೀರಿ (ಸೀಮೋಲ್ಲಂಘನ ಮಾಡಿ) ಕೆಲವು ಶಕ್ತ್ಯಂಶಗಳು ವಿಶ್ವವ್ಯಾಪಿಯಾಗುತ್ತಲಿರುವುದರಿಂದ ಬುಡಕಟ್ಟು-ಗ್ರಾಮ ಸಮುದಾಯಗಳನ್ನೂ ಅವು ಕ್ರಾಂತಗೊಳಿಸತೊಡಗಿದವು. ತನ್ನ ರಾಚನಿಕತೆಯಲ್ಲಿ ತೆರೆದ ರಂಧ್ರಗಳಿರುವುದರಿಂದ ನವೀನ ಪದ್ಧತಿಗಳು ನಗರ ಸಮುದಾಯದ ಒಡಲನ್ನು ಬಹು ಸುಲಭವಾಗಿ ನುಸುಳುವುದು ಸಾಧ್ಯವಾಗಿದೆ. ಈ ಜಾಗತಿಕ ಜೀವನ ಪದ್ಧತಿಯು ನಗರ ಮುಖೇಣ ಗ್ರಾಮ-ಬುಡಕಟ್ಟು ಸಮುದಾಯಗಳನ್ನು ಪ್ರವೇಶಿಸಿ ಅವುಗಳನ್ನೂ ಕ್ರಾಂತಗೊಳಿಸುತ್ತಿರುವುದು ಖೆಡ್ಡದ** ಕಾರ್ಯಾಚರಣೆಗೆ ಸಮಾನವಾದ ಪ್ರಕ್ರಿಯೆಯಾಗಿದೆ.

**ಅಸ್ಮಿತೆಗೆ ಹೋರಾಟ :**

ಈ ಮೂರು ಪ್ರಕಾರದ ಸಮುದಾಯಗಳ ನಡುವಣ ಸಂವಹನ-ಸಂಪರ್ಕಗಳು ಹೆಚ್ಚಾದಂತೆಲ್ಲಾ ಅವರವರ ಜೀವನ ಶೈಲಿಗಳಲ್ಲಿ, ಮೌಲ್ಯಗಳಲ್ಲಿ, ಆದರ್ಶಗಳಲ್ಲಿ, ಆಸೆ-ಆಕಾಂಕ್ಷೆಗಳಲ್ಲಿ, ಸಂಬಂಧಗಳಲ್ಲಿ, ಮನೋದೃಷ್ಟಿಗಳಲ್ಲಿ ಸ್ಥಿತ್ಯಂತರವು ತೀವ್ರಗೊಳ್ಳುತ್ತದೆ. ಇದರಿಂದಾಗಿ ಅಭೌಗೋಳಿಕವಾದ ಸಮಾಜದ ಅಂಶಗಳಲ್ಲಿ ಮಹತ್ತರವಾದ ಬದಲಾವಣೆಗಳಾಗಿ ಈ ಸಮುದಾಯಗಳ ನಡುವಿನ ಗಡಿರೇಖೆಗಳು ಢಾಳವಾಗಿರದೆ ಮಸಕು ಮಸಕಾಗುತ್ತವೆ. ಅವಿರಳ ಸರಪಳಿಯು ಕೊನೆ ಕೊನೆಗೆ ಸರಳ ರೇಖೆಯೇ ಆಗುವ ಸಾಧ್ಯತೆಯಿದೆ. ಆದರೂ ಆಳವಾಗಿ ಬೇರು ಬಿಟ್ಟಿರುವ ಜೀವನ ಪದ್ಧತಿಗಳು ಅಳಿದುಹೋಗದೆ, ಕೆಲವು ಸಲ ನವೀನ ಸಲಕರಣೆಗಳನ್ನು ಉಪಯೋಗಿಸಿಕೊಂಡು ಬಲಿಷ್ಠವಾಗುವ ಸಾಧ್ಯತೆಯೂ ಇರುತ್ತದೆ. ಸಂಪ್ರದಾಯವು ಸಡಿಲಾಗದೆ ಗಟ್ಟಿಗೊಳ್ಳುವುದುಂಟು. ಉದಾಹರಣೆಗೆ, ಬುಡಕಟ್ಟು-ಗ್ರಾಮ

---

* 'ಸ್ಥಳೀಕರಣ ಪ್ರಕ್ರಿಯೆ' (Localization Process) ಅಂದರೆ, ನಗರಕ್ಕೆ ಅನ್ಯಕಡೆಯಿಂದ ವಲಸೆ ಹೋದವರು ತಮ್ಮ ತಮ್ಮ ಪ್ರದೇಶ, ಭಾಷೆ, ಮತ-ಧರ್ಮ, ಜಾತಿ, ಇತ್ಯಾದಿಗಳಿಗೆ ಅನುಗುಣವಾಗಿ ನಗರದಲ್ಲಿ ಅವರವರ ಪ್ರಕಾರಗಳಿಗೆ ಸೇರಿದವರ ನಿವೇಶನಗಳಲ್ಲಿ ಬೀಡುಬಿಟ್ಟು ಉಂಟಾಗಬಹುದಾದ ಗೊಂದಲದ ಹೊಂದಾಣಿಕೆಯ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುತ್ತಾರೆ.

** ಖೆಡ್ಡಾದ ಕಾರ್ಯಾಚರಣೆಯಲ್ಲಿ ಕಾಡಾನೆಗಳನ್ನು ಕೃತಕ ಹಳ್ಳದೊಳಗೆ ಕೆಡವಿ, ಪಳಗಿದ ಆನೆಗಳನ್ನು ಅವುಗಳೆಡೆಗೆ ಕಳಿಸಿ, ಅವುಗಳನ್ನೂ ಪರಿವರ್ತಿಸಲಾಗುತ್ತದೆ. ಹೀಗೆಯೇ ಬುಡಕಟ್ಟು-ಗ್ರಾಮೀಣ ಜನರು ನಗರೀಕರಣಗೊಂಡ 'ತಮ್ಮವರ'ಮೂಲಕ ಪರಿವರ್ತನೆಗೊಳ್ಳುತ್ತಾರೆ.

ಸಮುದಾಯಗಳಲ್ಲಿ ಕುಲ-ಜಾತಿ ಪದ್ಧತಿಯು ಘನೀಭೂತಗೊಂಡಿರುತ್ತದೆ; ನಗರಗಳಲ್ಲಿ ಅದು ಅಸ್ಮಿತೆಯನ್ನು ಕಳೆದುಕೊಳ್ಳುತ್ತಾ ಸಾಗಿರುತ್ತದೆ. ಆದರೆ, ಆರ್ಥಿಕ ಮತ್ತು ರಾಜಕೀಯ ಲಾಭ ಗಳಿಕೆಗಾಗಿ ಸಂಘಟನೆಯಾಗುವುದು ಅಗತ್ಯವೆಂದು ಭಾವಿಸಿದ ಜಾತಿಗಳು ನಗರ ವಾತಾವರಣದಲ್ಲೂ ಒಗ್ಗಟ್ಟಾಗುತ್ತವೆ, ತಮ್ಮ ತಮ್ಮ ಅಸ್ಮಿತೆಯನ್ನು ಮೆರೆಯತೊಡಗುತ್ತವೆ. ಹೀಗಾಗಿ ನಗರದ ವಿವಿಧ ಕಡೆಗಳಲ್ಲಿ ವಾಸಿಸುತ್ತಿರುವ, ವಲಸೆ ಬಂದ, ಬುಡಕಟ್ಟಿನವರು ಮತ್ತು ಗ್ರಾಮೀಣರು ಕುಲ-ಜಾತಿಗಳ ಆಧಾರದ ಮೇಲೆ ಸಭೆ ಸೇರಿ, ಸಮ್ಮೇಳನಗಳನ್ನು ನಡೆಸಿ, ಅತಿರಂಜಿತವಾಗಿ ತಮ್ಮ ಐತಿಹಾಸಿಕ ಅಂಶಗಳನ್ನು ವರ್ಣಿಸಿ ಪ್ರಕಟಿಸುತ್ತಾರೆ. ಇವರ ಇಂಥ ಚಟುವಟಿಕೆಗಳಿಗೆ ರೇಡಿಯೋ, ದೂರದರ್ಶನ, ಪತ್ರಿಕಾ ಮಾಧ್ಯಮಗಳು, ಸಾರಿಗೆ ಸಂಪರ್ಕ, ದೂರವಾಣಿ ಮತ್ತಿತರ ಸೌಲಭ್ಯಗಳು ಅಗಾಧವಾದ ರೀತಿಯಲ್ಲಿ ನೆರವಿಗೆ ಬರುತ್ತವೆ.

ಹೀಗಾಗಿ ಬದಲಾಗುತ್ತಲೇ ಬದಲಾಗದ ರೀತಿಯಲ್ಲಿ, ಬದಲಾಗಿಯೇ ಇಲ್ಲವೆಂಬಂತೆ ಇವರೆಲ್ಲರೂ ವರ್ತಿಸುತ್ತಿರುವುದನ್ನು ಬಹು ಸುಲಭವಾಗಿ ಗುರುತಿಸಬಹುದು. ಆರ್ಥಿಕ-ರಾಜಕೀಯ ಚಟುವಟಿಕೆಗಳಲ್ಲಿ, ಶಿಕ್ಷಣ-ಮನೋರಂಜನೆಯ ವಲಯಗಳಲ್ಲಿ ತೀವ್ರತರವಾದ ಬದಲಾವಣೆ ಕಂಡುಬಂದರೂ ಪರಂಪರೆಯ ಕಪಿಮುಷ್ಟಿಯಲ್ಲಿ ಈ ಪಂಗಡಗಳು ಸಿಕ್ಕಿರುತ್ತವೆ ; ಸಮಾನಾಂತರ ಒಗ್ಗಟ್ಟಿನ ಪ್ರಕ್ರಿಯೆಗೆ (Horizontal unity process) ತಮ್ಮನ್ನು ತಾವು ಒಡ್ಡಿಕೊಳ್ಳುತ್ತವೆ. ಈ ಎಲ್ಲ ಕಾರಣಗಳಿಂದ ಈ ಹಿಂದೆಯೇ ಹೇಳಿದ ಹಾಗೆ ನಗರೀಕರಣಗೊಳ್ಳುತ್ತಲೇ ಬುಡಕಟ್ಟು-ಗ್ರಾಮ ಸಮುದಾಯಗಳ ಮೂಲ ವೈಲಕ್ಷಣ್ಯಗಳು ಹರಳುಗೊಂಡು ಸರಳರೇಖೆಯಾಗಬೇಕಾದ ಸಮುದಾಯ ಘಟಕಗಳು ಬೇರೊಂದು ರೀತಿಯಲ್ಲಿ (ಅಂದರೆ ಚದುರಿದ ರೀತಿಯಲ್ಲಿ, ಕರಗಿಹೋಗದೆ ಗಟ್ಟಿಯಾಗಿ ಉಳಿದುಕೊಂಡು) ಅವಿರಳ ಸರಪಳಿಯ ಗೊಣಸುಗಳಾಗಿರುತ್ತವೆ.

ಬುಡಕಟ್ಟು-ಗ್ರಾಮ-ನಗರ ಅವಿರಳ ಸರಪಳಿ

(Tribal-Rural-Urban-Continuum)






# ಪರಿಶಿಷ್ಟ ಜಾತಿ ಜನರ ಕಲ್ಯಾಣ

**ಕೆ. ಶಿವರಾಮು**

ಭಾರತ ದೇಶವು ಹಳ್ಳಿಗಳಿಂದ ಕೂಡಿದ ದೇಶವಾಗಿದೆ. ಈ ಹಳ್ಳಿಗಳಲ್ಲಿನ ಜನರ ವೈವಿಧ್ಯಮಯ ಬದುಕು, ಕಲೆ, ಸಂಸ್ಕೃತಿ, ಭಾಷೆಗಳು, ದೇಶದ ಸಾಂಸ್ಕೃತಿಕ ಹಿರಿಮೆಯನ್ನು ಹೆಚ್ಚಿಸಿವೆ. ದೇಶದ ವಿವಿಧ ಬಗೆಯ ಜನಾಂಗಗಳು ಹೇಗೆ ಒಟ್ಟಿಗೆ ಸೇರಿ ಜೀವಿಸಬಹುದು, ದೇಶ ಪ್ರೇಮವನ್ನು ಬೆಳಸಿಕೊಳ್ಳಬಹುದು ಎಂಬುದಕ್ಕೆ ಒಂದು ಮಾದರಿಯಾಗಿವೆ. ಆದರೆ ದೇಶವು ಜಾತಿ ವ್ಯವಸ್ಥೆಯಿಂದ, ಧರ್ಮಗಳ ನಡುವಿನ ಸಂಘರ್ಷದಿಂದ ನರಳುತ್ತಿರುವುದೂ ಸತ್ಯ. ಈ ದೇಶದಲ್ಲಿ ವಾಸಿಸುತ್ತಿರುವ ಬಹುಪಾಲು ಜನರು ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿ - ಪರಿಶಿಷ್ಟ ವರ್ಗಗಳಿಗೆ ಸೇರಿದ ಜನರಾದರೂ ಸಮಾಜದಲ್ಲಿ ಅವರುಗಳಿಗೆ ಸಿಗಬೇಕಾದ ಸ್ಥಾನಮಾನಗಳು ಸಿಕ್ಕಿರುವುದಿಲ್ಲ. ದೇಶದ ಜನಸಂಖ್ಯೆಯಲ್ಲಿ ಶೇ. ೨೫ ರಷ್ಟಿರುವ ಪರಿಶಿಷ್ಟ ಜಾತಿ - ಪರಿಶಿಷ್ಟ ವರ್ಗದ ಜನರ ಪಾಡಂತೂ ತೀರ ಶೋಚನೀಯವಾದುದಾಗಿದೆ. ಗ್ರಾಮೀಣ ಭಾಗದ ವೈಶಿಷ್ಟ್ಯಪೂರ್ಣ ಕಲೆ, ಸಂಸ್ಕೃತಿಯಲ್ಲಿ ಪ.ಜಾತಿಯವರ ಕೊಡುಗೆ ಅಪಾರವಾದುದು. ಈ ಕಲೆಯು ಗ್ರಾಮೀಣ ಜನರ ಒಂದು ಭಾಗವಾಗಿ ಬೆರೆತುಹೋಗಿದೆ. ಗ್ರಾಮೀಣ ಭಾಗದ ಪರಿಶಿಷ್ಟ ಜಾತಿಯ ಈ ಜನರ ಕಲೆ, ಸಂಸ್ಕೃತಿ ಅವರ ವೈವಿಧ್ಯಮಯ ಬದುಕು, ಅವರಲ್ಲಿನ ಬೌದ್ಧಿಕತೆ, ಅವರದೇ ಆದ ವಿಚಾರಧಾರೆ-ಇವುಗಳನ್ನೆಲ್ಲಾ ಪೋಷಿಸಿ, ಸಂರಕ್ಷಿಸಿ ಬೆಳೆಸಬೇಕಾದರೆ ಸಮಾಜದ ಪಾತ್ರ ಬಹಳ ದೊಡ್ಡದು. ಸಮಾಜವು ಪೂರ್ವಾಗ್ರಹ ಪೀಡಿತವಾಗದೆ ಪರಿಶಿಷ್ಟ ಜನರ ಈ ಸಂಪತ್ತನ್ನು ತಮ್ಮದು, ತಮ್ಮ ಸಂಸ್ಕೃತಿಯ ಒಂದು ಭಾಗ ಎಂದು ಪರಿಗಣಿಸಬೇಕು. ಆದರೆ ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಪರಿಶಿಷ್ಟ ಜಾತಿ ಜನರ ಈ ಸಂಪತ್ತು ಸರಿಯಾದ ಪೋಷಣೆ ಇಲ್ಲದೆ ನಶಿಸಿಹೋಗುತ್ತಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಭಾರತವು ಜಾತ್ಯತೀತ ದೇಶವಾಗಿದ್ದರೂ, ಹಲವಾರು ಸಂತರು, ದೈವಪುರುಷರು, ದಾರ್ಶನಿಕರು, ಸಮಾಜ ಸುಧಾರಕರು ಜನಿಸಿದ್ದರೂ ಸಮಾಜದಲ್ಲಿ ಬೇರೂರಿರುವ ಜಾತಿ ಪದ್ಧತಿಯನ್ನು ತೊಡದುಹಾಕಲು ಸಾಧ್ಯವಾಗಿರುವುದಿಲ್ಲ. ಸಮಾಜದ ಕಟ್ಟಕಡೆಯ ಮನುಷ್ಯನೂ ಜೀವಿಸಿರದ ಜೀವನವನ್ನು ಪರಿಶಿಷ್ಟ ಜಾತಿಯ ಜನರು ಜೀವಿಸುತ್ತಿರುವುದು ದುರ್ದೈವ. ಪ್ರತಿಯೊಂದು ಹಂತದಲ್ಲೂ ಜಾತಿ ವ್ಯವಸ್ಥೆ, ಅಸ್ಪೃಶ್ಯತೆ ಆಚರಣೆ, ತಾರತಮ್ಯತೆ,ಭೇದ-ಭಾವ ಇರುವುದನ್ನು ಕಾಣಬಹುದು. ಪರಿಶಿಷ್ಟ ಜಾತಿಯ ಜನರು ಸ್ವಾಭಿಮಾನದಿಂದ ಜೀವನ ಸಾಗಿಸುವ ವ್ಯವಸ್ಥೆ ಇನ್ನೂ ಸಮಾಜದಲ್ಲಿ ನಿರ್ಮಾಣವಾಗಬೇಕಾಗಿದೆ. ಪರಿಶಿಷ್ಟ ಜಾತಿ ಎಂಬ

> ***ಸಮಾಜದ ಕಟ್ಟ ಕಡೆಯ ಮನುಷ್ಯನೂ ಜೀವಿಸಿರದ ಜೀವನವನ್ನು ಪರಿಶಿಷ್ಟ ಜಾತಿಯ ಜನರು ಜೀವಿಸುತ್ತಿರುವುದು ದುರ್ದೈವ. ಪ್ರತಿಯೊಂದು ಹಂತದಲ್ಲೂ ಜಾತಿ ವ್ಯವಸ್ಥೆ, ಅಸ್ಪೃಶ್ಯತಾ ಆಚರಣೆ ಹಾಗೂ ಭೇದ ಭಾವ ಕಾಣಬಹುದು. ಇವರು ಸ್ವಾಭಿಮಾನದಿಂದ ಜೀವನ ಸಾಗಿಸುವ ವ್ಯವಸ್ಥೆ ನಿರ್ಮಾಣವಾಗಬೇಕಾಗಿದೆ.***

ಹಣೆ ಪಟ್ಟಿಯಿದ್ದರೆ ಸಾಕು, ಆತ/ಆಕೆ ಎಷ್ಟೇ ಪ್ರತಿಭಾನ್ವಿತರಾಗಿದ್ದರೂ ಅರ್ಹತೆ, ಯೋಗ್ಯತೆ ಇದ್ದರೂ ಸರಿಯಾದ ಸ್ಥಾನಮಾನ ಸಿಗುವುದಿಲ್ಲ. ಜಾತಿ ವ್ಯವಸ್ಥೆಯಿಂದ ಅಸ್ಪೃಶ್ಯತೆಯಿಂದ ಅನಾದಿಕಾಲದಿಂದ ನರಳಿದ ಈ ಜಾತಿಯ ಜನ ತಮ್ಮ ಹಕ್ಕಿಗಾಗಿ ಹೋರಾಡುವ ಕಾಲ ಬಂದದ್ದು ಡಾ. ಬಿ.ಆರ್. ಅಂಬೇಡ್ಕರ್‌ರವರ ಆಗಮನವಾದಾಗ. ಡಾ. ಅಂಬೇಡ್ಕರ್‌ರವರ ಹೋರಾಟದ, ತ್ಯಾಗ - ಶ್ರಮಗಳ ಫಲವಾಗಿ ಭಾರತದ ಸಂವಿಧಾನದಲ್ಲಿ ಪ.ಜಾತಿಯವರಿಗೆ ಶಿಕ್ಷಣ ಹಾಗೂ ಉದ್ಯೋಗ ಕ್ಷೇತ್ರಗಳಲ್ಲಿ ಮೀಸಲಾತಿ ಕಲ್ಪಿಸುವ ವ್ಯವಸ್ಥೆಯಾಯಿತು. ಆ ಪ್ರಕಾರ ಸಂವಿಧಾನದ ಅನುಚ್ಛೇದ ೧೫(೪) ರನ್ವಯ ಶಿಕ್ಷಣ ಕ್ಷೇತ್ರದಲ್ಲಿ ಮೀಸಲಾತಿಯನ್ನು ಮತ್ತು ಅನುಚ್ಛೇದ ೧೬ (೪)ರನ್ವಯ ಉದ್ಯೋಗದಲ್ಲಿ ಮೀಸಲಾತಿಯನ್ನು ಕಲ್ಪಿಸಿ ಅವರುಗಳ ಅಭಿವೃದ್ಧಿಗೆ ಸಹಾಯ ಕಲ್ಪಿಸಿದೆ. ಈ ಎರಡೂ ಅನುಚ್ಛೇದಗಳಲ್ಲಿನ ಸವಲತ್ತುಗಳು ಸಂವಿಧಾನಾತ್ಮಕವಾಗಿದ್ದರೂ ಅಲ್ಲಲ್ಲಿ ಇನ್ನೂ ಅಸಮಾನತೆ, ಭೇದಗಳನ್ನು ಕಾಣಬಹುದಾಗಿದೆ. ಅಸ್ಪೃಶ್ಯತೆ ಆಚರಣೆಯು ಪ್ರತಿಯೊಂದು ಗ್ರಾಮದಲ್ಲಿ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಇನ್ನೂ ಜಾರಿಯಲ್ಲಿರುವುದನ್ನು ನಾವು ಅಲ್ಲಲ್ಲಿ ಕಾಣಬಹುದು. ಜಾತಿ ನಿಂದನೆ, ಅಸಹಿಷ್ಣುತೆ ಸಾಮಾನ್ಯವಾಗಿದೆ. ಇವುಗಳೆಲ್ಲ ದೇಶದ ಅಭಿವೃದ್ಧಿಗೆ ಮಾರಕವಾಗಿವೆ. ಗ್ರಾಮೀಣ ಪ್ರದೇಶ ಅಭಿವೃದ್ಧಿ ಹೊಂದಬೇಕು. ದೇಶ ಪ್ರಗತಿ ಪಥದಲ್ಲಿ ಸಾಗಬೇಕು ಎಂದಾದರೆ ಪರಿಶಿಷ್ಟ ಜಾತಿ ಜನರ ಅಭಿವೃದ್ಧಿಯಾಗಲೇಬೇಕು. ಸಮಾಜದ ಮುಖ್ಯವಾಹಿನಿಯಲ್ಲಿ ಇವರು ಬೆರೆಯುವವರೆಗೆ ಸಮಾಜದ ಆರೋಗ್ಯಕಾರಿ ಬೆಳವಣಿಗೆ ಸಾಧ್ಯವಿಲ್ಲ ಎಂಬುದನ್ನು ನಾವು ಮನಗಾಣಬೇಕಾಗಿದೆ.

ಗ್ರಾಮೀಣಾಭಿವೃದ್ಧಿಯಲ್ಲಿ ತಮ್ಮದೇ ಆದ ವಿಶಿಷ್ಟತೆಯನ್ನು ರೂಢಿಸಿಕೊಂಡಿರುವ ಪ.ಜಾತಿಯ ಜನರು ಸಮಾಜದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿರುತ್ತಾರೆ. ಈ ಎಲ್ಲದರ ಸಂರಕ್ಷಣೆಗೆ, ಪರಂಪರೆ ಮುಂದುವರಿಕೆಗೆ, ಪ.ಜಾತಿಯ ಜನರ ಸರ್ವತೋಮುಖ ಬೆಳವಣಿಗೆಗೆ ಸರ್ಕಾರ ಕಂಕಣಬದ್ಧವಾಗಿದ್ದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಸಾಕಷ್ಟು ಯೋಜನೆಗಳನ್ನು ರೂಪಿಸಿವೆ. ಈ ಯೋಜನೆಗಳ ಅನುಷ್ಠಾನದಿಂದ ಪರಿಶಿಷ್ಟ ಜಾತಿಯವರಿಗೆ ಮಾತ್ರವಲ್ಲ, ಅವರು ವಾಸಿಸುವ ಗ್ರಾಮದ ಬೆಳವಣಿಗೆಗೂ ಪೂರಕವಾಗಿರುತ್ತದೆ. ಈ ಎಲ್ಲಾ ಯೋಜನೆಗಳನ್ನು ಮೂರು ಕ್ಷೇತ್ರಗಳಲ್ಲಿ ನಾವು ಗುರುತಿಸಬಹುದಾಗಿದೆ.

೧) ಶೈಕ್ಷಣಿಕ ಕಾರ್ಯಕ್ರಮ ೨) ಸಾಮಾಜಿಕ ಕಾರ್ಯಕ್ರಮ ೩) ಆರ್ಥಿಕ ಕಾರ್ಯಕ್ರಮ.

ಕರ್ನಾಟಕ ರಾಜ್ಯದಲ್ಲಿ ಸಾಕ್ಷರತೆ ಮಟ್ಟ ಶೇಕಡ ೫೬ ರಷ್ಟು ಇದ್ದು ಇದರಲ್ಲಿ ಪರಿಶಿಷ್ಟ ಜಾತಿಯ ಜನರ ಸಾಕ್ಷರತೆಯ ಮಟ್ಟವು ಬಹಳ ಕಡಿಮೆ, ಅಂದರೆ ಶೇಕಡ ೩೮ ಆಗಿದೆ. ಸಮಾಜದ ಎಲ್ಲಾ ಅನಿಷ್ಟಗಳಿಗೂ ಮೂಲ ಕಾರಣ ಅವಿದ್ಯೆ. ಇತರರು ಶೋಷಣೆ ಮಾಡುವುದು ಶೋಷಣೆಗೊಳಪಟ್ಟವರು ವಿದ್ಯಾವಂತರಾಗುವವರೆಗೂ, ತಿಳುವಳಿಕೆ ಮೂಡುವವರೆಗೂ ಮುಂದುವರೆದಿರುತ್ತದೆ. ತಿಳುವಳಿಕೆ ಮೂಡಬೇಕಾದರೆ ವಿದ್ಯೆ ಅವಶ್ಯಕ. ಬೇರೆಯವರಿಗೆ ವಿದ್ಯೆ ಬೇಡವಾಗಿರಬಹುದು. ಆದರೆ ಪರಿಶಿಷ್ಟ ಜಾತಿ ಜನರಿಗೆ ಇದು ತೀರ ಅವಶ್ಯಕ. ಹಾಗಾಗಿ ಸರ್ಕಾರ ಈ ಜನರ ಶೈಕ್ಷಣಿಕ ಅಭಿವೃದ್ಧಿಗಾಗಿ ರಾಜ್ಯದಾದ್ಯಂತ ಹಲವಾರು ವಿದ್ಯಾರ್ಥಿ ನಿಲಯಗಳು / ಮೊರಾರ್ಜಿ ದೇಸಾಯಿ ವಸತಿ ಶಾಲೆ / ನವೋದಯ ಶಾಲೆ / ವಸತಿ ಶಾಲೆಗಳನ್ನು ನಡೆಸುತ್ತಿದೆ. ಗ್ರಾಮೀಣ ಪ್ರದೇಶದಿಂದ ಬಂದಂಥ ಬಡ ಪರಿಶಿಷ್ಟ ಜಾತಿಯ ಮಕ್ಕಳು ಸ್ವಂತವಾಗಿ ವಿದ್ಯಾಭ್ಯಾಸ ಮುಂದುವರಿಸಲು ಆಗದಿದ್ದರೆ ಅವರು ಈ ನಿಲಯಗಳಲ್ಲಿ ದಾಖಲಾಗಿ ವಿದ್ಯಾಭ್ಯಾಸ ಮುಂದುವರಿಸಬಹುದು. ಗ್ರಾಮೀಣ ಪ್ರದೇಶದಲ್ಲಿ ಅಥವಾ ಹೋಬಳಿ ಮಟ್ಟದಲ್ಲಿ ಕಾರ್ಯನಿರ್ವಹಿಸುವ ಈ ರೀತಿಯ ನಿಲಯಗಳಿಂದ ಇತರೇ ಜನಾಂಗದ ಮಕ್ಕಳು ಸಹ ಪ್ರಯೋಜನ ಪಡೆಯುತ್ತಾರೆ ಮತ್ತು ಇವುಗಳು ಜನರಲ್ಲಿ ವಿದ್ಯಾಭ್ಯಾಸ ರೂಢಿಸುವುದರಲ್ಲಿ ತಮ್ಮದೇ ಆದ ಪ್ರಭಾವವನ್ನು ಬೀರುತ್ತವೆ. ಶಾಲಾ ಕಾಲೇಜುಗಳಲ್ಲಿ ವ್ಯಾಸಂಗ ಮಾಡುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಅವರುಗಳ ವಿದ್ಯಾಭ್ಯಾಸದ ಮಟ್ಟ/ ತರಗತಿಗೆ ಅನುಗುಣವಾಗಿ ವಿದ್ಯಾರ್ಥಿವೇತನ ನೀಡಲಾಗುತ್ತಿದೆ. ಶೈಕ್ಷಣಿಕ ಸಂಸ್ಥೆಗಳಲ್ಲಿನ ಬೋಧನಾ ಶುಲ್ಕ ಭರಿಸುವುದು, ಪ್ರತಿಭಾವಂತ ವಿದ್ಯಾರ್ಥಿಗಳಿಗೆ ಮೆರಿಟ್ ವಿದ್ಯಾರ್ಥಿವೇತನ ನೀಡುವುದು, ಹೆಚ್ಚಿನ ವ್ಯಾಸಂಗಕ್ಕೆ ಹೊರದೇಶಗಳಿಗೆ ಹೋಗಬಯಸುವವರಿಗೆ ಧನಸಹಾಯ ನೀಡುವುದು ಇತ್ಯಾದಿ ಕಾರ್ಯಕ್ರಮಗಳು ಮುಖ್ಯವಾಗಿವೆ. ಇವೆಲ್ಲಾ ಪರಿಶಿಷ್ಟ ಜಾತಿ ಜನರನ್ನು ವಿದ್ಯಾವಂತರನ್ನಾಗಿ ಮಾಡಲು ಸಹಕಾರಿಯಾಗಿವೆ.

ಕರ್ನಾಟಕ ರಾಜ್ಯದಲ್ಲಿ ದಲಿತರ ಮೇಲಿನ ದೌರ್ಜನ್ಯಗಳು ಅಲ್ಲಲ್ಲಿ ಮರುಕಳಿಸುತ್ತಲೇ ಇವೆ. ಸ್ವಾತಂತ್ರ್ಯ ಬಂದು ೫೭ ವರ್ಷಗಳು ಕಳೆದಿದ್ದರೂ ಕೂಡ ಇನ್ನೂ ಪರಿಶಿಷ್ಟ ಜನಾಂಗದವರಿಗೆ ಹೊಟೇಲುಗಳಲ್ಲಿ ಪ್ರತ್ಯೇಕ ತಟ್ಟೆ ಲೋಟಗಳನ್ನಿಡುವ ಪದ್ಧತಿ ಮುಂದುವರೆದಿದೆ. ದೇವಸ್ಥಾನಗಳಿಗೆ ಪ್ರವೇಶ ನಿಷಿದ್ಧ, ಸಾರ್ವಜನಿಕ ಕೆರೆ-ಬಾವಿಗಳಲ್ಲಿ ಕುಡಿಯುವ ನೀರನ್ನು ತೆಗೆದುಕೊಳ್ಳಲು ಅವಕಾಶವಿಲ್ಲ. ಮತ್ತೊಂದೆಡೆ ಜಾತಿ ನಿಂದನೆ, ಜೀತಪದ್ಧತಿ, ಸವರ್ಣೀಯರುಗಳಿಂದ ಸಾಮೂಹಿಕ ಬಹಿಷ್ಕಾರ ಇಂತಹ ಕಾನೂನುಬಾಹಿರ ಪದ್ಧತಿಗಳು ಇನ್ನೂ ಕೂಡ ಗ್ರಾಮಾಂತರ ಪ್ರದೇಶಗಳಲ್ಲಿ ನಡೆಯುತ್ತಿವೆ. ಇಂತಹ ಪ್ರಕರಣಗಳನ್ನು ತಡೆಗಟ್ಟಲು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು

೧೯೫೫ ಮತ್ತು ೧೯೮೯ರ ಪಿಸಿಆರ್ - ಪಿಓಎ ದೌರ್ಜನ್ಯ ನಿಯಂತ್ರಣ ಕಾಯ್ದೆಗಳನ್ನು ಜಾರಿಗೆ ತಂದಿದ್ದರೂ ಕೂಡ ಪೂರ್ತಿಯಾಗಿ ಅಸ್ಪೃಶ್ಯತೆಯನ್ನು ತಡೆಗಟ್ಟಲು ಸಾಧ್ಯವಾಗುತ್ತಿಲ್ಲ. ಇದರ ನಿವಾರಣೆಗಾಗಿ ಅಂತರಜಾತಿ ವಿವಾಹವಾದವರಿಗೆ ಪ್ರೋತ್ಸಾಹಧನ ನೀಡುವ ವ್ಯವಸ್ಥೆಯನ್ನು ಕೂಡ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳು ಜಾರಿಗೆ ತಂದಿರುತ್ತವೆ. ಅಸ್ಪೃಶ್ಯತೆಯ ವಿರುದ್ಧ ಅರಿವು ಮೂಡಿಸಲು, ಅಸ್ಪೃಶ್ಯತೆಯ ಬಗ್ಗೆ ತಿಳುವಳಿಕೆ ಮೂಡಿಸುವಂತಹ ಪ್ರಕಟಣೆಗಳನ್ನು ಹೊರಡಿಸಲಾಗಿರುತ್ತದೆ. ಟಿ.ವಿ. ಸ್ಪಾಟ್ಸ್ ಮತ್ತು ಡಾಕ್ಯುಮೆಂಟರಿಗಳನ್ನು ದೂರದರ್ಶನದ ಮೂಲಕ ಬಿತ್ತರಿಸಲಾಗುತ್ತಿದೆ. ಬೀದಿ ನಾಟಕಗಳು ಮತ್ತು ಕಲಾ ಜಾಥಾಗಳ ಮೂಲಕ ಅರಿವು ಮೂಡಿಸುವ ಕಾರ್ಯಕ್ರಮಗಳನ್ನು ಮಾಡಿಸಲಾಗುತ್ತಿದೆ. ಪಿಸಿಆರ್,ಪಿಓಎ ಕಾಯ್ದೆಗಳನ್ವಯ ಜಾತಿ ನಿಂದನೆ, ಪರಿಶಿಷ್ಟರ ಮೇಲೆ ದೌರ್ಜನ್ಯ ಮತ್ತು ಅತ್ಯಾಚಾರ, ಸಾಮೂಹಿಕ ಬಹಿಷ್ಕಾರ ಇಂತಹ ಪ್ರಕರಣಗಳ ವಿರುದ್ಧ ಕ್ರಮ ಕೈಗೊಳ್ಳಲಾಗುತ್ತಿದ್ದರೂ ಕೂಡ ಪೂರ್ತಿಯಾಗಿ ಅಸ್ಪೃಶ್ಯತೆಯನ್ನು ತೊಡೆದುಹಾಕಲು ಸಾಧ್ಯವಾಗುತ್ತಿಲ್ಲ. ಇದು ಬಹುಶಃ ಕೆಲ ಸವರ್ಣೀಯ ಸಮಾಜದ ಬಾಂಧವರಲ್ಲಿ ಅಸ್ಪೃಶ್ಯತೆಯ ಬಗ್ಗೆ ಅರಿವು ಇಲ್ಲದಿರುವುದೇ ಕಾರಣವಾಗಿರುತ್ತದೆ. ಈ ಕಾನೂನುಗಳನ್ನು ಕೆಲ ಸಂದರ್ಭಗಳಲ್ಲಿ ಉಪಯೋಗಿಸಿಕೊಂಡು ಸುಳ್ಳು ಮೊಕದ್ದಮೆಗಳನ್ನು ದಾಖಲು ಮಾಡಿರುವ ಪ್ರಕರಣಗಳು ಕೂಡ ಇವೆ. ಒಂದೇ ಹಳ್ಳಿಯಲ್ಲಿ ಎರಡು ಸವರ್ಣೀಯ ಗುಂಪುಗಳ ನಡುವೆ ವೈಷಮ್ಯ ಇದ್ದಂತಹ ಸಂದರ್ಭದಲ್ಲಿ ಒಂದು ಗುಂಪು ಮತ್ತೊಂದು ಗುಂಪಿನ ಮೇಲೆ ಕ್ಷುಲ್ಲಕ ಕಾರಣಗಳಿಗಾಗಿ ಮೇಲ್ಕಂಡ ಕಾಯ್ದೆಗಳನ್ವಯ ಸುಳ್ಳು ಮೊಕದ್ದಮೆಗಳನ್ನು ದಾಖಲು ಮಾಡಿಸುವಂತಹ ಪ್ರಕರಣಗಳು ಅನೇಕ ಇವೆ. ಇಂತಹ ಕೆಲವು ಕಾರಣಗಳಿಂದ ಈ ಕಾನೂನಿನನ್ವಯ ದಾಖಲಾದ ಪ್ರಕರಣಗಳು ಖುಲಾಸೆಯಲ್ಲೇ ಮುಕ್ತಾಯವಾಗುತ್ತವೆ. ಸರ್ಕಾರ ಈ ಮೊಕದ್ದಮೆಗಳನ್ನು ನಡೆಸಲು ಕರ್ನಾಟಕ ರಾಜ್ಯದಲ್ಲಿ ಏಳು ಜಿಲ್ಲೆಗಳಲ್ಲಿ ಪ್ರತ್ಯೇಕವಾಗಿ ವಿಶೇಷ ನ್ಯಾಯಾಲಯಗಳನ್ನು ಕೂಡ ಸೃಷ್ಟಿಸಿರುತ್ತದೆ.

ದೌರ್ಜನ್ಯ ಎಸಗಿದಂತಹ ಸಂದರ್ಭದಲ್ಲಿ ಜಿಲ್ಲಾಡಳಿತ ತಕ್ಷಣ ಕ್ರಮ ಕೈಗೊಂಡು, ದೌರ್ಜನ್ಯ ಎಸಗಿರುವವರ ಮೇಲೆ ಮೊಕದ್ದಮೆಗಳನ್ನು ದಾಖಲು ಮಾಡುವುದು, ನೊಂದವರಿಗೆ ಪರಿಹಾರ ನೀಡುವುದು ಮತ್ತು ಪುನರ್‌ವಸತಿ ಕಲ್ಪಿಸುವುದು, ಸವರ್ಣೀಯರು ಮತ್ತು ದಲಿತರ ನಡುವೆ ಸಾಮರಸ್ಯ ಉಂಟುಮಾಡಲು ಶಾಂತಿಸಭೆಗಳನ್ನು ನಡೆಸಿ, ಎರಡೂ ಗುಂಪುಗಳ ನಡುವೆ ಸೌಹಾರ್ದಯುತವಾದ ವಾತಾವರಣ ನಿರ್ಮಿಸಲು ದುಡಿಯುತ್ತಿರುವುದು ಶ್ಲಾಘನೀಯ. ಇತ್ತೀಚೆಗೆ ಸಮಾಜ ಕಲ್ಯಾಣ ಇಲಾಖೆಯು ಏಕಕಾಲದಲ್ಲಿ ರಾಜ್ಯಾದ್ಯಂತ ಎಲ್ಲ ಜಿಲ್ಲೆಗಳಲ್ಲಿಯೂ ಒಂದು ದಿನ ದೌರ್ಜನ್ಯದಲ್ಲಿ ನೊಂದವರಿಗೆ ನೇರ ಸಂವಾದ ಕಾರ್ಯಕ್ರಮವನ್ನು ಏರ್ಪಡಿಸಿ ಅವರ ಅಹವಾಲುಗಳನ್ನು ಕೇಳಿ, ಪರಿಹಾರವನ್ನು ಸ್ಥಳದಲ್ಲೇ ನೀಡುವಂತಹ ಅಪರೂಪದ ಕಾರ್ಯಕ್ರಮವನ್ನು ಏರ್ಪಡಿಸಿ, ದೌರ್ಜನ್ಯದಲ್ಲಿ ನೊಂದವರಿಗೆ ಸರ್ಕಾರವು ಅವರ ಪರವಾಗಿ ಇದೆ ಎನ್ನುವುದನ್ನು ಸಾಬೀತುಪಡಿಸಿದೆ.

ಸರ್ಕಾರ ಎಷ್ಟೇ ಕಾನೂನು-ಕಟ್ಟಳೆಗಳನ್ನು ತಂದು ಅಸ್ಪೃಶ್ಯತೆ ನಿವಾರಣೆ ಮಾಡಲು ಪ್ರಯತ್ನ ಮಾಡಿದರೂ ಕೂಡ, ಸವರ್ಣೀಯ ಬಾಂಧವರಲ್ಲಿ ಅಸ್ಪೃಶ್ಯತೆಯ ಬಗ್ಗೆ ಅರಿವು ಮೂಡಿಸುವಂಥ, ದಲಿತರನ್ನು ತಮ್ಮ ಸಮಾಜದಲ್ಲಿ ಒಂದು ಭಾಗವೆಂದು ಮನುಷ್ಯರನ್ನಾಗಿ ಕಾಣುವಂತಹ ವಾತಾವರಣ ನಿರ್ಮಾಣವಾಗಬೇಕಿದೆ.

ಸರ್ಕಾರವು ಸಂವಿಧಾನಾತ್ಮಕವಾಗಿ ಉದ್ಯೋಗಗಳಲ್ಲಿ ಮೀಸಲಾತಿ ಕಲ್ಪಿಸಿದ್ದರೂ, ಬಹಳಷ್ಟು ಸಂಸ್ಥೆಗಳಲ್ಲಿ ಪರಿಶಿಷ್ಟ ಜಾತಿ ಜನರ ಸಂಖ್ಯೆಗನುಗುಣವಾಗಿ ಇರಬೇಕಾದ ಮೀಸಲಾತಿ ಪ್ರಮಾಣಕ್ಕನುಗುಣವಾಗಿ ಪ್ರಾತಿನಿಧ್ಯತೆ ಇರುವುದಿಲ್ಲ ಎಂಬುದನ್ನು ಸರ್ಕಾರವು ಬ್ಯಾಕ್‌ಲಾಗ್ ಹುದ್ದೆಗಳನ್ನು ಭರ್ತಿ ಮಾಡುತ್ತಿರುವ ಪ್ರಕ್ರಿಯೆಯು ತೋರಿಸುತ್ತದೆ. ಶಿಕ್ಷಣ ಸಂಸ್ಥೆಗಳಲ್ಲಿ ಹಾಗೂ ಉದ್ಯೋಗ ಕ್ಷೇತ್ರಗಳಲ್ಲಿ ಮೀಸಲಾತಿ ಕಡ್ಡಾಯವಾಗಿ ಜಾರಿಗೊಳಿಸಬೇಕೆಂಬ ದೃಷ್ಟಿಯಿಂದ ಸರ್ಕಾರವು ಕರ್ನಾಟಕ ಅನುಸೂಚಿತ ಜಾತಿ, ಅನುಸೂಚಿತ ಬಡಕಟ್ಟು ಮತ್ತು ಇತರೆ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾವುಗಳ ಮೀಸಲಾತಿ) ಅಧಿನಿಯಮ ೧೯೯೦ನ್ನು ಜಾರಿಗೊಳಿಸಿದೆ. ಈ ಅಧಿನಿಯಮ ಜಾರಿಯಲ್ಲಿದ್ದರೂ, ಮೀಸಲಾತಿ ನಿಯಮ ಉಲ್ಲಂಘನೆ ಪ್ರಕರಣಗಳು ವರದಿಯಾಗುತ್ತಿವೆ.

## ವಿಶೇಷ ಘಟಕ ಯೋಜನೆ :

ಬಡತನ ಎಂಬುದು ಒಂದು ಶಾಪ. ಈ ಶಾಪದ ಸುಳಿಯಲ್ಲಿ ಸಿಕ್ಕಿ ಹಾಕಿಕೊಂಡಿರುವವರಲ್ಲಿ ಪರಿಶಿಷ್ಟ ಜಾತಿ ಜನರೇ ಜಾಸ್ತಿ. ಆರ್ಥಿಕ ಸ್ವಾವಲಂಬನೆ ಇಲ್ಲದಿದ್ದಾಗ ಅಸಹಾಯಕತೆಗೆ ದೂಡಲ್ಪಡುತ್ತಾರೆ. ಇದರ ಪರಿಣಾಮವೇ ಜೀತ ಪದ್ಧತಿ, ಕೃಷಿ ಕೂಲಿಗಾಗಿ ಬೇರೆಯವರನ್ನು ಅವಲಂಬಿಸುವುದು ಇತ್ಯಾದಿಗಳ ಬೆಳವಣಿಗೆ. ಇದರಿಂದ ಪರಿಶಿಷ್ಟ ಜಾತಿ ಜನರು ಇತರರ ಮೇಲೆ ತೀರಾ ಅವಲಂಬಿತರಾಗಲು ಕಾರಣವಾಗಿ ಒಂದು ರೀತಿಯ ದಾಸ್ಯ ನಿರ್ಮಾಣವಾಗುತ್ತದೆ. ಈ ಸಂಕೋಲೆಗಳಿಂದ ಈ ಜನರನ್ನು ಬಿಡಿಸಲೆಂದೇ

ಕೆಲವು ಆರ್ಥಿಕ ಪ್ರಯೋಜನ ನೀಡುವ ಕಾರ್ಯಕ್ರಗಳನ್ನು ಸರ್ಕಾರ ರೂಪಿಸಿದೆ. ಆ ಯೋಜನೆಯೆಂದರೆ ವಿಶೇಷ ಘಟಕ ಯೋಜನೆ. ರಾಜ್ಯದ ಪ್ರತಿಯೊಂದು ಇಲಾಖೆಯಲ್ಲಿಯೂ ಕೂಡ, ಪ್ರತಿ ಇಲಾಖೆಯೂ ವೆಚ್ಚ ಮಾಡುವ ಹಣದಲ್ಲಿ ಶೇಕಡ ೧೮ ರಷ್ಟು ಹಣ ಪರಿಶಿಷ್ಟರ ಅಭಿವೃದ್ಧಿಗಾಗಿ ವೆಚ್ಚ ಮಾಡಿ, ಈ ಜನಾಂಗವನ್ನು ಬಡತನ ರೇಖೆಯಿಂದ ಮೇಲೆತ್ತುವ ಕೆಲಸವನ್ನು ಇಲಾಖೆಯು ನಿರ್ವಹಿಸುತ್ತದೆ. ಪ್ರತಿ ವರ್ಷ ಸುಮಾರು ರೂ. ೬೦೦ ಕೋಟಿಗಳನ್ನು ಪರಿಶಿಷ್ಟರ ಅಭಿವೃದ್ಧಿಗಾಗಿ ಸರ್ಕಾರ ವೆಚ್ಚ ಮಾಡುತ್ತಿದೆ. ಇದಲ್ಲದೆ, ಕೇಂದ್ರ ಸರ್ಕಾರ ವಿಶೇಷ ಕೇಂದ್ರೀಯ ನೆರವನ್ನು ನೀಡುವುದರಿಂದ ಈ ಹಣವನ್ನು ಕೂಡ ವಿಶೇಷ ಘಟಕ ಯೋಜನೆಯಡಿ ವೆಚ್ಚ ಮಾಡಲಾಗುತ್ತಿದೆ.

ವಿಶೇಷ ಘಟಕ ಯೋಜನೆಯಡಿಯಲ್ಲಿ ಪಶುಸಂಗೋಪನಾ ಕಾರ್ಯಕ್ರಮ ಬಹುಮುಖ್ಯವಾದ ಕಾರ್ಯಕ್ರಮ. ಪರಿಶಿಷ್ಟ ಜನಾಂಗದ ಹೆಚ್ಚಿನ ಭಾಗ ಕೂಲಿ ಕಾರ್ಮಿಕರೇ ಆಗಿರುವುದರಿಂದ ಇವರಿಗೆ ಸೀಮೆಹಸು, ಎಮ್ಮೆ ಅಥವಾ ಕುರಿಗಳನ್ನು ಸಹಾಯಧನ ಅಥವಾ ಸಾಲದ ರೂಪದಲ್ಲಿ ನೀಡುತ್ತಿರುವುದರಿಂದ ಇವರ ಆರ್ಥಿಕ ಮಟ್ಟ ಹೆಚ್ಚುತ್ತದೆ. ಇತ್ತೀಚಿನ ದಿನಗಳಲ್ಲಿ ಸೀಮೆಹಸು, ಎಮ್ಮೆ ಇವುಗಳನ್ನು ಸರ್ಕಾರದ ಮೂಲಕ ಪಡೆದು, ಪ್ರತಿ ಹಳ್ಳಿಯಲ್ಲಿ ತಮ್ಮ ಆರ್ಥಿಕ ಮಟ್ಟ ಹೆಚ್ಚಿಸಿಕೊಂಡಿರುವ ಉದಾಹರಣೆಗಳು ಬಹಳ ಇವೆ. ಜಮೀನು ಇಲ್ಲದವರಿಗೆ ಭೂಮಿ ಕೊಡಿಸುವ ಯೋಜನೆ, ಜಮೀನು ಇರುವವರ ಜಮೀನಿಗೆ ನೀರಾವರಿ ಬಾವಿಗಳನ್ನು ನಿರ್ಮಾಣ ಮಾಡುವ ಕಾರ್ಯಕ್ರಮಗಳು ಕ್ರಾಂತಿಕಾರಕಗಳಾಗಿದ್ದು ಆರ್ಥಿಕ ಸ್ವಾವಲಂಬನೆಗೆ ಬಹಳ ಸಹಕಾರಿಯಾಗಿವೆ.

ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ಇತ್ತೀಚಿನ ದಿನಗಳಲ್ಲಿ ಗ್ರಾಮೀಣ ಪ್ರದೇಶದಲ್ಲಿ ವಸತಿ ಕ್ಷೇತ್ರದಲ್ಲಿ ಹೊಸ ಯುಗವನ್ನೇ ಸೃಷ್ಟಿ ಮಾಡಿದೆ. ಪ್ರತಿ ವರ್ಷ ಎಷ್ಟು ಮನೆಗಳನ್ನು ವಸತಿ ನಿಗಮ ಬಡ ಜನರಿಗೆ ಕೊಡುತ್ತದೆಯೋ, ಅವುಗಳಲ್ಲಿ ಶೇಕಡ ೫೦ ರಷ್ಟು ಮನೆಗಳು ಪರಿಶಿಷ್ಟ ಜನಾಂಗಕ್ಕೆ ಮೀಸಲಿರುತ್ತವೆ. ಅಂದರೆ, ವರ್ಷೇ ವರ್ಷೇ ಸುಮಾರು ೬೫೦೦೦ ಮನೆಗಳನ್ನು ರೂ. ೨೦,೦೦೦/- ಗಳ ಘಟಕ ವೆಚ್ಚದಲ್ಲಿ ನಿರ್ಮಾಣ ಮಾಡಲಾಗುತ್ತಿದೆ. ಇದುವರೆಗೂ ಗುಡಿಸಲುಗಳಲ್ಲಿ ವಾಸಿಸುತ್ತಿದ್ದ, ಬಡತನ ರೇಖೆಗಿಂತ ಕೆಳಗಿರುವ ಪರಿಶಿಷ್ಟ ಜನಾಂಗದವರು, ತಾವೂ ಕೂಡ ಬೇರೆಯವರ ರೀತಿ ಸರ್ಕಾರಿ ನಿವೇಶನಗಳಲ್ಲಿ ಮನೆಗಳನ್ನು ನಿರ್ಮಾಣ ಮಾಡಿಕೊಂಡು ಒಳ್ಳೆಯ ಜೀವನ ನಡೆಸುವಂತಾಗಿರುತ್ತದೆ. ವರ್ಷೇ ವರ್ಷೇ ಲಕ್ಷಾಂತರ ಮನೆಗಳನ್ನು ಸರ್ಕಾರದ ವತಿಯಿಂದ ನಿರ್ಮಾಣ ಮಾಡುತ್ತಿದ್ದರೂ, ಗುಡಿಸಲುಗಳ ಸಂಖ್ಯೆ ಕಡಿಮೆ ಆಗುತ್ತಿಲ್ಲ. ಆಶ್ರಯ ಸಮಿತಿ ಅಧ್ಯಕ್ಷರು ವಿಧಾನಸಭಾ ಸದಸ್ಯರಾಗಿದ್ದು, ಸರ್ಕಾರದ ನಿಯಮದಂತೆ ಗ್ರಾಮಸಭೆಗಳಲ್ಲಿ ವಸತಿರಹಿತ ಮತ್ತು ನಿವೇಶನರಹಿತರೆಂದು ಗುರುತಿಸಿರುವವರನ್ನು ಈ ಯೋಜನೆಯಡಿ ಆಯ್ಕೆ ಮಾಡುವ ಬದಲು ಯಾರು ವಿಧಾನಸಭಾ ಸದಸ್ಯರಿಗೆ ಹತ್ತಿರದವರಾಗಿರುತ್ತಾರೋ ಅಂಥವರು ನೀಡಿದ ಹೆಸರುಗಳನ್ನು ಗುರುತಿಸಿ, ಇದ್ದವರಿಗೇ ಮನೆ ನೀಡುವಂತಹ ಪ್ರಕರಣಗಳು ಕೆಲವು ಕಡೆ ಇರುವುದರಿಂದ, ಗುಡಿಸಲುಗಳ ಸಂಖ್ಯೆ ಕಡಿಮೆಯಾಗಿರುವುದಿಲ್ಲ. ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡದೇ ಸರ್ಕಾರದ ನೀತಿ ವಿಫಲವಾಗಿರುತ್ತದೆ. ಕೆಲವು ಕಡೆಗಳಲ್ಲಿ ಈಗಾಗಲೇ ಮನೆಯನ್ನು ಹೊಂದಿರುವವರೇ ತಮ್ಮ ಮನೆಯ ಪಕ್ಕದಲ್ಲಿ ದನಗಳಿಗೋಸ್ಕರ ಕೊಟ್ಟಿಗೆಗಳನ್ನು ಅಥವಾ ಮತ್ತೊಂದು ಕೊಠಡಿಯನ್ನು ನಿರ್ಮಾಣ ಮಾಡುವುದಕ್ಕೋಸ್ಕರ ಆಶ್ರಯ ಫಲಾನುಭವಿಗಳಾಗಿ ಗುರುತಿಸಲ್ಪಟ್ಟಿರುತ್ತಾರೆ. ಸರ್ಕಾರ ಕಟ್ಟುನಿಟ್ಟಾದ ನಿಯಮವನ್ನು ರೂಪಿಸಿ, ಗುಡಿಸಲುಗಳಲ್ಲಿ ವಾಸವಾಗಿರುವವರನ್ನು ಮಾತ್ರ ಫಲಾನುಭವಿಗಳಾಗಿ ಆಯ್ಕೆ ಮಾಡಬೇಕು ಎಂಬ ಷರತ್ತನ್ನು ವಿಧಿಸಿದಾಗ ಗುಡಿಸಲುಗಳು ನಿರ್ನಾಮವಾಗಿ, ಗುಡಿಸಲುರಹಿತ ಗ್ರಾಮಗಳನ್ನು ನಿರ್ಮಿಸಲು ಸಾಧ್ಯವಾಗುತ್ತದೆ. ವಿಧಾನಸಭಾ ಸದಸ್ಯರಾಗಲೀ, ಲೋಕಸಭಾ ಸದಸ್ಯರಾಗಲೀ, ಸರ್ಕಾರಗಳ ಮಂತ್ರಿಗಳಾಗಲೀ ಹಳ್ಳಿಗಳಿಗೆ ಪ್ರವಾಸ ಮಾಡುವ ಸಂದರ್ಭದಲ್ಲಿ ಹೆಚ್ಚಿನ ಬೇಡಿಕೆ ಬರುವ ನಿವೇಶನ ಅಥವಾ ಮನೆಗಳಿಗೋಸ್ಕರ ಬರುವಂಥ ಬೇಡಿಕೆಗಳು ಕಡಿಮೆಯಾಗಬೇಕಾದರೆ, ನಿಜವಾಗಿಯೂ ವಸತಿರಹಿತ ಅಥವಾ ನಿವೇಶನರಹಿತ ಪರಿಶಿಷ್ಟರನ್ನು ಗುರುತಿಸುವಂತಹ ಪದ್ಧತಿ ನಿರ್ಮಾಣವಾದಾಗ ಇಡೀ ಪರಿಶಿಷ್ಟ ಜನಾಂಗದ ಅಭಿವೃದ್ಧಿ ಸಾಧ್ಯವಾಗುತ್ತದೆ.

ಸರ್ಕಾರದ ಇಲಾಖೆಗಳು ವಿಶೇಷ ಘಟಕ ಯೋಜನೆಯಡಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಿದ್ದರೂ ಕೂಡ ನೂರಕ್ಕೆ ನೂರರಷ್ಟು ಅನುಷ್ಠಾನ ಸರಿಯಾದ ರೀತಿಯಲ್ಲಿ ಆಗದೇ ಪರಿಶಿಷ್ಟ ಜನಾಂಗದ ಅಭಿವೃದ್ಧಿ ಕುಂಠಿತವಾಗುತ್ತಿದೆ. ಎಷ್ಟೋ ಇಲಾಖೆಗಳು ಪರಿಶಿಷ್ಟರಿಗೆ ಅಗತ್ಯವಾಗಿರುವ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ವಿಫಲವಾಗಿವೆ.

ಪ್ರತಿ ವರ್ಷ ಇಷ್ಟೊಂದು ಹಣವನ್ನು ರಾಜ್ಯ ಸರ್ಕಾರ ವಿವಿಧ ಇಲಾಖೆಗಳಿಗೆ ನೀಡುತ್ತಿದ್ದರೂ ಪರಿಣಾಮಕಾರಿಯಾಗಿ ಕಾರ್ಯಕ್ರಮವನ್ನು ರೂಪಿಸುವಲ್ಲಿ ಮತ್ತು ಅನುಷ್ಠಾನಗೊಳಿಸುವಲ್ಲಿ ಆಸಕ್ತಿ ವಹಿಸದೇ ಸರಿಯಾದ ರೀತಿಯಲ್ಲಿ ವಿಶೇಷ ಘಟಕ

ಯೋಜನೆಯ ಹಣ ಪ.ಜಾತಿ-ಪ.ವರ್ಗದವರಿಗೆ ಬೇಕಾಗಿರುವಂಥ ಸವಲತ್ತುಗಳನ್ನು ನೀಡಲು ಕ್ರಮ ಕೈಗೊಳ್ಳುತ್ತಿಲ್ಲ. ಆದುದರಿಂದ ಮಹಾರಾಷ್ಟ್ರ ಮಾದರಿಯ ಅನುಷ್ಠಾನ ಕರ್ನಾಟಕ ರಾಜ್ಯದಲ್ಲಿ ಜಾರಿಗೆ ಬಂದಲ್ಲಿ, ಈ ಯೋಜನೆಯ ಫಲ ಪರಿಶಿಷ್ಟ ಜನರಿಗೆ ಸಿಗುತ್ತದೆ.

ಇತ್ತೀಚಿನ ದಿನಗಳವರೆಗೆ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗಗಳನ್ನು ಕೇಂದ್ರೀಕರಿಸಿ ಅವರುಗಳನ್ನು ಸಮಾಜದ ಮುಖ್ಯವಾಹಿನಿಯಲ್ಲಿ ತರುವುದರ ಕಡೆ ಇದ್ದ ಗುರಿ ಹಿಂದುಳಿದ ವರ್ಗಗಳ ಅಭಿವೃದ್ಧಿಯತ್ತ ಸಾಗಿದೆ ಎನ್ನುವ ಅಭಿಪ್ರಾಯ ಜನರಲ್ಲಿ ಬಂದಿದೆ. ಈಗ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಹಿಂದುಳಿದ ವರ್ಗ ಹಾಗೂ ಅಲ್ಪಸಂಖ್ಯಾತರುಗಳ ಅಭಿವೃದ್ಧಿಯ ಕಡೆ ಸರ್ಕಾರ ಗಮನಹರಿಸಿರುವುದರಿಂದ ಪರಿಶಿಷ್ಟ ಜಾತಿ ಜನರ ಅಭಿವೃದ್ಧಿ ಕೆಲಸಗಳು ಕುಂಠಿತವಾಗಿವೆ ಎನ್ನುವ ಭಾವನೆ ಬರುವುದು ಸಹಜ. ಇದನ್ನು ಹೋಗಲಾಡಿಸಬೇಕು. ಪರಿಶಿಷ್ಟ ಜಾತಿ ಜನರ ಅಭಿವೃದ್ಧಿಯ ಕೇಂದ್ರೀಕೃತ ಗುರಿ ಮುಂದುವರೆಯಬೇಕು. ಏಕೆಂದರೆ ಈಗಲೂ ಪರಿಶಿಷ್ಟ ಜಾತಿ ಜನರ ಸ್ಥಾನಮಾನ ಸಮಾಜದಲ್ಲಿ ಸುಧಾರಿಸಿರುವುದಿಲ್ಲ. ಬಹಳ ವರ್ಷಗಳಿಂದ ಸರ್ಕಾರಗಳು ಪರಿಶಿಷ್ಟ ಜಾತಿ ಜನರ ಜೀವನ ಸುಧಾರಣೆಗೆ ಹತ್ತು ಹಲವು ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿದ್ದರೂ ಅವರುಗಳ ಜೀವನಮಟ್ಟ ನಿರೀಕ್ಷಿಸಿದ ರೀತಿಯಲ್ಲಿ ಸುಧಾರಿಸಿರುವುದಿಲ್ಲವೆಂಬುದು ಸತ್ಯಸಂಗತಿ. ಇದಕ್ಕೆ ಕಾರ್ಯಕ್ರಮಗಳ ಅನುಷ್ಠಾನದಲ್ಲಿನ ಲೋಪದೋಷಗಳು, ಕಟಿಬದ್ಧತೆಯ ಕೊರತೆ, ಸಾಮಾಜಿಕ ಕಳಕಳಿ ಇಲ್ಲದಿರುವುದು ಇವೆಲ್ಲಾ ಕಾರಣಗಳೆಂದು ಗುರುತಿಸಬಹುದು. ಆದರೂ ಸರ್ಕಾರ ಪ್ರತಿ ವರ್ಷ ಪರಿಶಿಷ್ಟ ಜಾತಿ ಜನರ ಏಳಿಗೆಗಾಗಿ ಹಾಕಿಕೊಳ್ಳುವ ಕಾರ್ಯಕ್ರಮಗಳು, ಕಾದಿರಿಸುವ ಮೊತ್ತ ಇವುಗಳ ಬಗ್ಗೆ ಜನರಲ್ಲಿ ತಪ್ಪು ಭಾವನೆಯಿದೆ. ಎಲ್ಲಿಯವರೆಗೆ ಇದು ಮುಂದುವರೆಯಬೇಕು, ಎಲ್ಲಿಯವರೆಗೆ ಮೀಸಲಾತಿ ನೀತಿ ಮುಂದುವರೆಯಬೇಕು ಎಂಬ ವಿಚಾರಗಳು ಜನರಲ್ಲಿ ಮೂಡಿವೆ. ಈ ವಿಚಾರಗಳು ಸರಿಯೋ ತಪ್ಪೋ ಎಂಬುದನ್ನು ವಿಚಾರವಂತರು ನಿರ್ಧರಿಸಬೇಕು. ಸಮಾಜದಲ್ಲಿನ ತಪ್ಪು ಕಲ್ಪನೆ, ಭಾವನೆಗಳಿಗೆ ಕಡಿವಾಣ ಹಾಕಬೇಕು. ಸಮಾಜದ ಒಂದು ಭಾಗವಾಗಿರುವ ಪರಿಶಿಷ್ಟ ಜಾತಿ ಜನರ ಸಹ ಮನುಷ್ಯರ ಗೌರವಯುತವಾದ ಜೀವನ ನಡೆಸುವುದಕ್ಕೆ ಹಕ್ಕಿದೆ ಎಂಬುದು ಅರಿವಾದಾಗ, ಅವರಿಗೆ ಸಿಗಬೇಕಾದ ಸ್ಥಾನಮಾನಗಳು ಸರಿಯಾಗಿ ಸಿಗಬೇಕಾಗಿದೆ ಎಂದೆನಿಸಿದಾಗ, ಅವರ ನೋವು ಕಷ್ಟಗಳಿಗೆ ಸ್ಪಂದಿಸಿದಾಗ ಪರಿಶಿಷ್ಟ ಜಾತಿಯ ಜನರಿಗೆ ಸರ್ಕಾರದ ಸೌಲಭ್ಯಗಳ ಅಗತ್ಯತೆ ಇದೆ ಎಂದೆನಿಸುವುದಿಲ್ಲ. ಎಲ್ಲಿಯವರೆಗೆ ಈ ಅಸಮಾನತೆಗಳು ಹಾಗೇ ಮುಂದುವರೆಯುವವೋ, ಎಲ್ಲಿಯವರೆಗೆ ಆರ್ಥಿಕ ಸಂಪತ್ತು ಸರಿಯಾಗಿ ಹಂಚಿಕೆಯಾಗುವುದಿಲ್ಲವೋ, ಎಲ್ಲಿಯವರೆಗೆ ಅಸ್ಪೃಶ್ಯತೆ ಮುಂದುವರೆದಿರುತ್ತದೋ ಅಲ್ಲಿಯವರೆಗೂ ಸರ್ಕಾರದ ಈ ಎಲ್ಲಾ ಕಾರ್ಯಕ್ರಮಗಳು ಮುಂದುವರೆಯಬೇಕಾಗುತ್ತದೆ. ಇದು ಸಮಾಜದ ಆರೋಗ್ಯಕಾರಿ ಬೆಳವಣಿಗೆಗೆ ಸಹಕಾರಿಯಾಗಲಿದ್ದು ಗ್ರಾಮೀಣ ಅಭಿವೃದ್ಧಿ ಹಾಗೂ ಸೌಹಾರ್ದಯುತ ಜೀವನಕ್ಕೆ ದಾರಿ ಮಾಡಿಕೊಡುತ್ತದೆ.






# ರಸ್ತೆ ಅಭಿವೃದ್ಧಿ ಯೋಜನೆಗಳು

ಜಿ. ಎನ್. ಚಂದ್ರಶೇಖರಯ್ಯ

ಕರ್ನಾಟಕ ರಾಜ್ಯದಲ್ಲಿ ೯೪೩೩೪ ಕಿ.ಮೀ ಗ್ರಾಮೀಣ ರಸ್ತೆ ಜಾಲವಿದ್ದು, ಈ ರಸ್ತೆಗಳು ಗ್ರಾಮೀಣ ಪ್ರದೇಶದ ಜನಗಳಿಗೆ ಸಂಪರ್ಕ ಕಲ್ಪಿಸುವ ವ್ಯವಸ್ಥೆಯಾಗಿರುತ್ತದೆ. ಈ ರಸ್ತೆಗಳ ಪೈಕಿ ಡಾಂಬರೀಕರಣಗೊಂಡ ರಸ್ತೆ ಉದ್ದ ೧೩೫೬೦ ಕಿ.ಮೀ. ಜಲ್ಲಿ ರಸ್ತೆ ೩೯೧೭೩ ಕಿ.ಮೀ. ಹಾಗೂ ಮಣ್ಣಿನ ರಸ್ತೆಯ ೪೧೬೫೧ಕಿ.ಮೀ.ಗಳಾಗಿರುತ್ತದೆ. ಈ ರಸ್ತೆ ಅಂಕಿ ಅಂಶಗಳನ್ನು ಗಮನಿಸಿದಾಗ ಶೇಕಡಾ ೧೪.೩೮ ರಷ್ಟು ಮಾತ್ರ ಡಾಂಬರೀಕರಣಗೊಂಡ ರಸ್ತೆಗಳಾಗಿದ್ದು, ಶೇಕಡಾ ೪೧.೪೭ ರಷ್ಟು ಜಲ್ಲಿ ರಸ್ತೆಗಳು ಹಾಗೂ ಶೇಕಡಾ ೪೪.೧೫ರಷ್ಟು ಮಣ್ಣಿನ ರಸ್ತೆಗಳಾಗಿರುತ್ತವೆ.

ಗ್ರಾಮೀಣ ರಸ್ತೆ ಸಂಪರ್ಕ ಒಂದು ಮಹತ್ತರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮವಾಗಿದ್ದು, ಈ ಕಾರ್ಯಕ್ರಮದಿಂದ ಗ್ರಾಮೀಣ ಜನತೆಗೆ ಆರ್ಥಿಕ ಹಾಗೂ ಸಾಮಾಜಿಕವಾಗಿ ಅಭಿವೃದ್ಧಿ ಹೊಂದಲು ಬಹಳಷ್ಟು ಉಪಯೋಗವಾಗಿದ್ದು, ವ್ಯವಸಾಯೋತ್ಪನ್ನ ಮಾರಾಟ ಹಾಗೂ ಉದ್ಯೋಗ ಕಲ್ಪಿಸಲು ಬಹಳಷ್ಟು ಪರಿಣಾಮಕಾರಿಯಾಗಿರುತ್ತದೆ. ಆದರೆ ಗ್ರಾಮೀಣ ರಸ್ತೆಗಳ ಸ್ಥಿತಿಯನ್ನು ಸರ್ವಋತು ರಸ್ತೆಯನ್ನಾಗಿ ಪರಿವರ್ತಿಸಿದಲ್ಲಿ ಮಾತ್ರ ಈ ಧ್ಯೇಯ ಮತ್ತು ಗುರಿಯನ್ನು ಸಾಧಿಸಲು ಸಾಧ್ಯವಾಗುವುದು. ಈ ಪ್ರಮುಖ ಅಂಶ ಬಹಳ ಹಿಂದಿನಿಂದಲೂ ಗುರುತಿಸಲ್ಪಟ್ಟಿದ್ದರೂ ಅನೇಕ ವರ್ಷಗಳಿಂದ ಸಮರ್ಪಕವಾಗಿ ಗ್ರಾಮೀಣ ರಸ್ತೆಗಳ ಅಭಿವೃದ್ಧಿಗೆ ಸಾಕಷ್ಟು ಪ್ರಾಶಸ್ತ್ಯ ದೊರಕಿಸಲು ಸಾಧ್ಯವಾಗಿರುವುದಿಲ್ಲ. ಗ್ರಾಮೀಣ ರಸ್ತೆಗಳ ನಿರ್ಮಾಣ ಮತ್ತು ನಿರ್ವಹಣೆಗಾಗಿ ಗಣನೀಯ ಪ್ರಮಾಣದ ಬಂಡವಾಳ ಹೂಡಬೇಕಾದ ಅವಶ್ಯಕತೆ ಇದ್ದು, ಈ ದಿಸೆಯಲ್ಲಿ ರಾಜ್ಯ ಸರ್ಕಾರವು ಹಲವಾರು ದಿಟ್ಟ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ.

> ***ಗ್ರಾಮೀಣ ರಸ್ತೆಗಳು ಆ ಜನತೆಯ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಗೆ ಬಹಳಷ್ಟು ಉಪಯುಕ್ತ. ವ್ಯವಸಾಯೋತ್ಪನ್ನಗಳ ಮಾರಾಟ ಹಾಗೂ ಉದ್ಯೋಗ ಸೃಷ್ಟಿಸುವಲ್ಲೂ ಇದು ಪ್ರಮುಖ ಪಾತ್ರ ವಹಿಸುತ್ತಿದೆ.***

ಗ್ರಾಮೀಣ ರಸ್ತೆಗಳನ್ನು ಸರ್ವಋತು ರಸ್ತೆಗಳನ್ನಾಗಿ ಮಾಡಲು ಸರ್ಕಾರ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿಕೊಂಡಿದ್ದು, ಈ ಕೆಳಕಂಡ ಯೋಜನೆಗಳನ್ನು ಕಾರ್ಯರೂಪಕ್ಕೆ ತರಲಾಗುತ್ತಿದೆ.

(ಅ) ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ

(ಆ) ನಬಾರ್ಡ್ ಯೋಜನೆಯಡಿ ರಸ್ತೆ ಅಭಿವೃದ್ಧಿ

(ಇ) ಮುಖ್ಯಮಂತ್ರಿ ಗ್ರಾಮೀಣ ರಸ್ತೆ ಅಭಿವೃದ್ಧಿ
(ಈ) ರಾಜ್ಯ ಸರ್ಕಾರದ ೩೦೫೪/೫೦೫೪ ಯೋಜನೆ.

## ಅ) ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ :

ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯು ಕೇಂದ್ರ ಸರ್ಕಾರದ ಶೇ.೧೦೦ ರಷ್ಟು ನೆರವಿನ ಗ್ರಾಮೀಣ ರಸ್ತೆಗಳನ್ನು ಸರ್ವಋತು ರಸ್ತೆಯನ್ನಾಗಿ ಮಾಡುವ ಕಾರ್ಯಕ್ರಮವಾಗಿದೆ. ಈ ಯೋಜನೆಯ ಮಾರ್ಗಸೂಚಿಯನ್ವಯ ೧೦ನೇ ಪಂಚವಾರ್ಷಿಕ ಯೋಜನೆ ಅವಧಿಯೊಳಗಾಗಿ ಅಂದರೆ ೨೦೦೭ರ ಅಂತ್ಯದೊಳಗಾಗಿ ೫೦೦ಕ್ಕೂ ಹೆಚ್ಚು ಜನಸಂಖ್ಯೆ ಇರುವ ಜನವಸತಿಗಳಿಗೆ ಸರ್ವಋತು ರಸ್ತೆಯನ್ನು ಕಲ್ಪಿಸಬೇಕಾಗಿರುತ್ತದೆ. ಕೇಂದ್ರ ಸರ್ಕಾರವು ಈ ಯೋಜನೆಯ ಅನುಷ್ಠಾನಕ್ಕಾಗಿ ಮಾರ್ಗಸೂಚಿಗಳನ್ನು ಹೊರತಂದಿದ್ದು, ಕಾಮಗಾರಿಗಳ ಆಯ್ಕೆಗಳನ್ನು ಮಾರ್ಗಸೂಚಿಯನ್ವಯವಾಗಿ ಕೈಗೊಳ್ಳಲಾಗಿದೆ.

ಈ ಯೋಜನೆಯಡಿ ವಿವಿಧ ಹಂತದಲ್ಲಿ ಕೈಗೊಂಡಿರುವ ವಿವರಗಳು ಈ ಕೆಳಕಂಡಂತಿವೆ.

(ರೂ. ಕೋಟಿಗಳಲ್ಲಿ)

| ವಿವರ | ೧ನೇ ಹಂತ | ೨ನೇ ಹಂತ | ೩ನೇ ಹಂತ | ೪ನೇ ಹಂತ |
|---|---|---|---|---|
| | ೨೦೦೦-೨೦೦೧ | ೨೦೦೧-೨೦೦೩ | ೨೦೦೩-೨೦೦೪ | ೨೦೦೪-೨೦೦೫ |
| ಕಾಮಗಾರಿಗಳ ಸಂಖ್ಯೆ | ೪೦೬ | ೯೦೩ | ೩೫೯ | ೪೪೮ |
| ಅಂದಾಜು ವೆಚ್ಚ | ೧೦೩.೫೨ | ೨೧೯.೬೬ | ೧೧೮.೪೧ | ೧೪೭.೪೧ |
| ರಸ್ತೆಯ ಉದ್ದ | ೧೬೩೯.೮೯ ಕಿ.ಮೀ. | ೨೭೦೫.೬ ಕಿ.ಮೀ. | ೧೦೯೬ ಕಿ.ಮೀ. | ೧೧೫೨ ಕಿ.ಮೀ. |
| ಬಿಡುಗಡೆಯಾದ ಹಣ | ೧೦೦.೫೭ | ೨೦೬.೧೧ | ೫೯.೦೦ | |
| ಖರ್ಚಾಗಿರುವ ಹಣ | ೧೦೩.೬೭ | ೨೦೪.೨೮ | | ಪ್ರಸ್ತಾವನೆಗಳನ್ನು |
| ಪೂರ್ಣಗೊಂಡಿರುವ ಕಾಮಗಾರಿಗಳು | ೪೦೬ | ೭೮೮ | ಕಾಮಗಾರಿಗಳನ್ನು ಇತ್ತೀಚೆಗಷ್ಟೆ | ಕೇಂದ್ರ ಸರ್ಕಾರಕ್ಕೆ ಅನುಮೋದನೆಗಾಗಿ |
| ಪೂರ್ಣಗೊಂಡಿರುವ ರಸ್ತೆ ಉದ್ದ | ೧೬೩೯.೮೯ಕಿಮೀ | ೨೨೮೧ಕಿ.ಮೀ. | ಪ್ರಾರಂಭಿಸಲಾಗಿದೆ | ಸಲ್ಲಿಸಲಾಗಿದೆ |

ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ ೩ನೇ ಹಂತದಲ್ಲಿ ಹೆಚ್ಚುವರಿ ಪ್ರಸ್ತಾವನೆಗಳನ್ನು ತಯಾರಿಸಿ ಸ್ಲಲಿಸುವಂತೆ ಕೇಂದ್ರ ಸರ್ಕಾರವು ಸೂಚಿಸಿದ್ದು, ಈ ಬಗ್ಗೆ ಹೆಚ್ಚುವರಿ ಪ್ರಸ್ತಾವನೆಗಳ ವಿವರ ಈ ಕೆಳಕಂಡಂತಿರುತ್ತದೆ.

| | |
|---|---|
| ಕಾಮಗಾರಿಗಳ ಸಂಖ್ಯೆ | ೩೯೫ |
| ಅಂದಾಜು | ರೂ.೧೧೬.೦೭ಕೋಟಿ |
| ರಸ್ತೆಯ ಉದ್ದ | ೧೧೨೦ಕಿ.ಮೀ. |

## ಆ) ಪ್ರಧಾನಮಂತ್ರಿ ಗ್ರಾಮ ಸಡಕ್ ಯೋಜನೆ ಕಾರ್ಯಕ್ರಮವನ್ನು ತ್ವರಿತಗೊಳಿಸುವ ಬಗ್ಗೆ :

ಕೇಂದ್ರ ಸರ್ಕಾರದ ನಿರ್ದೇಶನದಂತೆ ಈ ಯೋಜನೆಯ ಅನುಷ್ಠಾನವನ್ನು ತ್ವರಿತಗೊಳಿಸಲು ಹಾಗೂ ೫೦೦ ಜನಸಂಖ್ಯೆಯುಳ್ಳ ಜನವಸತಿಗಳಿಗೆ ೨೦೦೭ರ ಅಂತ್ಯದೊಳಗೆ ಸರ್ವಋತು ರಸ್ತೆ ಸಂಪರ್ಕ ಕಲ್ಪಿಸಬೇಕಾದಲ್ಲಿ ರೂ.೧೨೦೦ ಕೋಟಿಗಳು ಬೇಕಾಗಿದ್ದು, ಈ ಹಣ ಲಭ್ಯವಾದಲ್ಲಿ ೧೦೮೭೬ ಕಿ.ಮೀ. ಸರ್ವಋತು ರಸ್ತೆ ಜಾಲ ಕಲ್ಪಿಸಬಹುದಾಗಿರುತ್ತದೆ. ಈ ನಿಟ್ಟಿನಲ್ಲಿ ಕೇಂದ್ರ ಸರ್ಕಾರವು

ಯೋಜನೆಯನ್ನು ತ್ವರಿತಗೊಳಿಸಲು ರೂ. ೫೦೦ ಕೋಟಿಗಳ ಹಣಕಾಸು ಸೌಲಭ್ಯವನ್ನು ಸಾಲದ ಮೂಲಕ ರಾಜ್ಯದಲ್ಲಿರುವ ಹಣಕಾಸು ಸಂಸ್ಥೆಗಳು ಹಾಗೂ ಬ್ಯಾಂಕ್‌ಗಳ ಮೂಲಕ ಪಡೆಯಲು ಸೂಚಿಸಿದ್ದು, ಈ ಬಗ್ಗೆ ಈಗಾಗಲೇ ಹಣಕಾಸು ಸಂಸ್ಥೆ ಹಾಗೂ ಬ್ಯಾಂಕರುಗಳೊಂದಿಗೆ ಎರಡು ಸಭೆಗಳನ್ನು ನಡೆಸಲಾಗಿದ್ದು, ಅವರುಗಳು ಹಣವನ್ನು ಒದಗಿಸುವುದಾಗಿ ತಿಳಿಸಿರುತ್ತಾರೆ. ಈ ಹಣ ಲಭ್ಯವಾದಲ್ಲಿ ಸುಮಾರು ೪೫೦೦ ಕಿ.ಮೀ. ರಸ್ತೆ ನಿರ್ಮಾಣ ಮಾಡಬಹುದಾಗಿದ್ದು ಈ ಕಾರ್ಯಕ್ರಮದ ವಿವರ ಈ ಕೆಳಕಂಡಂತಿರುತ್ತದೆ.

ಕೇಂದ್ರ ಸರ್ಕಾರವು ಕರ್ನಾಟಕಕ್ಕೆ ಈ ಯೋಜನೆಯಲ್ಲಿ ವರ್ಷಕ್ಕೆ ಸುಮಾರು ರೂ. ೯೫ ಕೋಟಿ ಅನುದಾನವನ್ನು ಒದಗಿಸುತ್ತಿದ್ದು, ಈ ಯೋಜನೆಯನ್ನು ತ್ವರಿತಗೊಳಿಸಲು ರಾಜ್ಯ ಸರ್ಕಾರವು ಹಣಕಾಸು ಸಂಸ್ಥೆಗಳನ್ನು ಸಂಪರ್ಕಿಸಿ ನೆರವು ಪಡೆಯುವ ಬಗ್ಗೆ ಕೇಂದ್ರ ಸರ್ಕಾರವು ಪತ್ರ ಸಂಖ್ಯೆ : ಪಿ-೧೭೦೨೫/೧/೨೦೦೩, ದಿನಾಂಕ೨೧-೪-೨೦೦೩ರಲ್ಲಿ ಹಾಗೂ ಪಿ-೧೭೦೨೫/೪/೨೦೦೪-RC, ದಿನಾಂಕ : ೨೭-೪-೨೦೦೪ದಲ್ಲಿ ಸೂಚಿಸಿರುತ್ತದೆ. ಈ ದಿಶೆಯಲ್ಲಿ ಯೋಜನೆಯನ್ನು ತ್ವರಿತಗೊಳಿಸಿ ವಾರ್ಷಿಕ ಅನುದಾನದಲ್ಲಿ ಲಿವರೇಜ್ ಮಾಡುವ ಬಗ್ಗೆ ಆರ್ಥಿಕ ಸಂಸ್ಥೆಗಳು ಹಾಗೂ ಬ್ಯಾಂಕರುಗಳ ಜೊತೆ ದಿನಾಂಕ :೩೦-೧೨-೨೦೦೩ ರಂದು ಹಾಗೂ ೪-೨-೨೦೦೪ರಂದು ದೀರ್ಘವಾಗಿ ಚರ್ಚೆ ನಡೆಸಲಾಯಿತು.

ಸದರಿ ಸಭೆಯಲ್ಲಿ ಆರ್ಥಿಕ ಸಂಸ್ಥೆಗಳು ಹಣ ಒದಗಿಸುವುದಾಗಿ ಆಶ್ವಾಸನೆ ನೀಡಿದ್ದು, ಈ ಹಣಕ್ಕೆ ೭-೮% ರಷ್ಟು ಬಡ್ಡಿ ದರ ಸೂಚಿಸಿದ್ದು, ಈ ಮೊತ್ತವನ್ನು ಬಡ್ಡಿ ಸಮೇತ ೧೫ರಿಂದ ೨೦ ವರ್ಷದೊಳಗಾಗಿ ಪಾವತಿಸಲು ತಿಳಿಸಿರುತ್ತಾರೆ.

ಗ್ರಾಮೀಣ ಅಭಿವೃದ್ಧಿಯ ಮಂತ್ರಾಲಯದ ಕಛೇರಿ ಅಧಿಕೃತ ಜ್ಞಾಪನಾ ಪತ್ರದಂತೆ ಸಾಲ ಮೊತ್ತದ ನಿಬಂಧನೆಗಳು ಹಾಗೂ ಮರುಪಾವತಿಯು ಕೆಳಕಂಡಂತೆ ಇರುತ್ತದೆ.

೧. **ಸಾಲದ ಮೊತ್ತ** : ಈ ಯೋಜನೆಯಡಿ ಲಿವರೇಜ್ ಮಾಡುವ ಸಾಲದ ಮೊತ್ತವು ಒಟ್ಟು ೫ (ಐದು) ಆರ್ಥಿಕ ಹಣಕಾಸು ವರ್ಷಗಳಲ್ಲಿ ರಾಜ್ಯಕ್ಕೆ ಹಂಚಿಕೆ ಮಾಡುವಷ್ಟು ಇರುತ್ತದೆ. ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯಡಿಯಲ್ಲಿ ರಾಜ್ಯಕ್ಕೆ ಹಂಚಿಕೆಯಾಗುವ ಹಣದಲ್ಲಿ ಶೇಕಡಾ ೭೫ ರೊಳಗಿನ ಮಿತಿಯಲ್ಲಿ ಅಸಲು ಹಾಗೂ ಬಡ್ಡಿ ಹಣದ ವಾರ್ಷಿಕ ಪಾವತಿಯನ್ನು ಈ ಉದ್ದೇಶಕ್ಕೆ ಅನುಗುಣವಾಗಿ ರೂಪಿಸಲಾಗುವುದು.

೨. **ಮರುಪಾವತಿ** : ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯಡಿಯಲ್ಲಿ ರಾಜ್ಯಕ್ಕೆ ಹಂಚಿಕೆ ಮಾಡುವ ವಾರ್ಷಿಕ ಅನುದಾನದಲ್ಲಿ ಅಸಲು ಮತ್ತು ಬಡ್ಡಿ ಮರುಪಾವತಿಸಲು ಸಾಕಷ್ಟು ಹಣವನ್ನು ಪ್ರತ್ಯೇಕವಾಗಿ ತೆಗೆದಿರಿಸಲಾಗುವುದು. ಈ ಉದ್ದೇಶಿತ ಹಣವನ್ನು ಪ್ರತ್ಯೇಕವಾದ ESCROW ಬ್ಯಾಂಕ್ ಖಾತೆಯಲ್ಲಿ ತೆಗೆದಿರಿಸಲಾಗುವುದು. ಸಾಲದ ಬಡ್ಡಿ ಹಣದ ತೀರುವಳಿಗೆ ನೇರ ಒಪ್ಪಂದದ ನಿಂಬಧನೆಗಳಂತೆ ESCROW ಖಾತೆಗೆ ವರ್ಗಾಯಿಸಿದ ಹಣವನ್ನು ಬಳಸಲಾಗುವುದು. ಅನಂತರ ಅಸಲು ಹಣದ ಮರುಪಾವತಿ ಬಾಕಿಯಾದಲ್ಲಿ, ಈ ನಿಧಿಯಲ್ಲಿನ ಹಣವನ್ನು ಅಸಲು ಮರುಪಾವತಿಸಲು ಉಪಯೋಗಿಸಲಾಗುವುದು. ಹೀಗೆ ಪೂರ್ಣವಾಗಿ ಸಾಲವನ್ನು ಹಿಂತಿರುಗಿಸಿದ ಮೇಲೆ ESCROW ಖಾತೆಗೆ ಗ್ರಾಮೀಣ ಅಭಿವೃದ್ಧಿಯ ಮಂತ್ರಾಲಯದ ಕೊಡುಗೆಯು ಮುಕ್ತಾಯಗೊಳ್ಳುವುದು.

೩. ಕೇಂದ್ರ ಸರ್ಕಾರದ ಸೂಚನೆಯ ಪ್ರಕಾರ ತ್ರಿಪಕ್ಷೀಯ ಒಪ್ಪಂದ (ಟ್ರೈಪಾರ್ಟೈಟ್ ಅಗ್ರಿಮೆಂಟ್) ಮಾಡಬೇಕಾಗುವುದು. ಕೇಂದ್ರ ಸರ್ಕಾರವು ಒಂದು ಅಂಗವಾಗಿದ್ದು, ಬ್ಯಾಂಕರುಗಳು ಎರಡನೇ ಅಂಗವಾಗಿದ್ದು, ರಾಜ್ಯ ಸರ್ಕಾರವು ಮೂರನೇ ಅಂಗವಾಗಿದ್ದು ಕರಾರು ಮಾಡಿಕೊಳ್ಳಬೇಕಾಗಿರುತ್ತದೆ. ಕರ್ನಾಟಕ ಭೂ ಸೇನಾ ನಿಗಮ ರಾಜ್ಯ ಮಟ್ಟದ ಸ್ವಾಯತ್ತ ಸಂಸ್ಥೆಯಾಗಿದ್ದು, ರಾಜ್ಯ ಸರ್ಕಾರದ ಪರವಾಗಿ ಈ ನಿಗಮ ಸಾಲ ಪಡೆಯುತ್ತದೆ. ಅಸಲು ಮತ್ತು ಬಡ್ಡಿಯನ್ನು ಕೇಂದ್ರ ಸರ್ಕಾರದವರು ಬ್ಯಾಂಕರುಗಳಿಗೆ ನೇರವಾಗಿ ಪಾವತಿಸುತ್ತಾರೆ. ಈ ನಿಟ್ಟಿನಲ್ಲಿ ರಾಜ್ಯ ಸರ್ಕಾರಕ್ಕೆ ಯಾವುದೇ ಹಣಕಾಸಿನ ಹೊರೆಯಾಗುವುದಿಲ್ಲ. ಜೊತೆಗೆ ಇದರಿಂದಾಗಿ ರಾಜ್ಯ ಸರ್ಕಾರದ ಗ್ಯಾರಂಟಿ ಬೇಕಾಗಿಲ್ಲ. ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆಯ ಮಾರ್ಗಸೂಚಿಯಂತೆ ಬಾಕಿ ಉಳಿದಿರುವ ೫೦೦ಕ್ಕೂ ಹೆಚ್ಚು ಜನಸಂಖ್ಯೆ ಇರುವ ಜನವಸತಿಗಳಿಗೆ ಸರ್ವಋತು ರಸ್ತೆ ಸಂಪರ್ಕವನ್ನು ಎರಡು ವರ್ಷದೊಳಗಾಗಿ ಕಲ್ಪಿಸಬಹುದಾಗಿರುತ್ತದೆ.

ಈ ಮೇಲಿನ ಅಂಶಗಳನ್ನು ಪರಿಗಣಿಸಿ ಈ ಪ್ರಸ್ತಾವನೆಗೆ ಸಚಿವ ಸಂಪುಟದ ತಾತ್ವಿಕ ಅನುಮೋದನೆಗಾಗಿ ಕ್ರಮ ಕೈಗೊಂಡಿದ್ದು ಕರಡು ಸಚಿವ ಸಂಪುಟ ಟಿಪ್ಪಣಿಯನ್ನು ತಯಾರಿಸಿ ಕ್ರಮ ಕೈಗೊಳ್ಳಲಾಗಿದೆ. ಸಚಿವ ಸಂಪುಟದ ಅನುಮೋದನೆಯ ನಂತರ ಯೋಜನೆ ಕಾರ್ಯಕ್ರಮವನ್ನು ತ್ವರಿತಗೊಳಿಸಲು ಕೇಂದ್ರ ಸರ್ಕಾರಕ್ಕೆ ಅಗತ್ಯವಾದ ಮಾಹಿತಿಗಳನ್ನು ಒದಗಿಸಲು ಕ್ರಮ ಕೈಗೊಳ್ಳಲಾಗುವುದು.

ಗ್ರಾಮೀಣ ರಸ್ತೆ ಅಭಿವೃದ್ಧಿಗೆ ಪ್ರಧಾನಮಂತ್ರಿ ಗ್ರಾಮ ಸಡಕ್ ಯೋಜನೆಯು ಒಂದು ಪ್ರಮುಖ ಕಾರ್ಯಕ್ರಮವಾಗಿದ್ದರೂ ಸಹಿತ ಈ ಯೋಜನೆಯು ೫೦೦ಕ್ಕೂ ಹೆಚ್ಚು ಜನಸಂಖ್ಯೆಯುಳ್ಳ ಜನವಸತಿ ಪ್ರದೇಶಗಳಿಗೆ ರಸ್ತೆ ಸೌಲಭ್ಯ ಕಲ್ಪಿಸಬಹುದಾಗಿರುತ್ತದೆ. ರಾಜ್ಯದಲ್ಲಿರುವ ೫೦೦ಕ್ಕೂ ಕಡಿಮೆ ಜನಸಂಖ್ಯೆ ಇರುವ ಜನವಸತಿ ಪ್ರದೇಶಗಳಿಗೆ ಗ್ರಾಮೀಣ ರಸ್ತೆ ಸಂಪರ್ಕ ಜಾಲವು ಬಹಳಷ್ಟಿದ್ದು, ಈ ರಸ್ತೆಗಳನ್ನು ಸರ್ವಋತು ರಸ್ತೆಯನ್ನಾಗಿ ಮಾಡುವ ಕಾರ್ಯಕ್ಕಾಗಿ ರಾಜ್ಯ ಸರ್ಕಾರವು ಹಲವಾರು ವಿವಿಧ ಯೋಜನೆಗಳನ್ನು ಕೈಗೊಂಡಿದ್ದು ಅವುಗಳು ಈ ಕೆಳಕಂಡಂತಿವೆ.

### ಇ) ನಬಾರ್ಡ್ ಸಂಸ್ಥೆ ನೆರವಿನಡಿ ರಸ್ತೆ ಅಭಿವೃದ್ಧಿ ಕಾರ್ಯಕ್ರಮ :

ನಬಾರ್ಡ್ ಸಂಸ್ಥೆಯು ಗ್ರಾಮೀಣ ರಸ್ತೆ ಅಭಿವೃದ್ಧಿಗಾಗಿ ಆರ್.ಐ.ಡಿ.ಎಫ್- VIII ಹಾಗೂ IX ರಡಿಯಲ್ಲಿ ಹಣಕಾಸು ಸೌಲಭ್ಯ ಒದಗಿಸಿದ್ದು ಈ ಕಾರ್ಯಕ್ರಮಗಳನ್ನು ೨೦೦೩-೦೪ ರಿಂದ ಅನುಷ್ಠಾನ ಮಾಡಲಾಗುತ್ತಿದೆ. ಈ ಯೋಜನೆಯಡಿ ಕೈಗೊಂಡ ಕಾಮಗಾರಿಗಳ ವಿವರಗಳು ಈ ಕೆಳಕಂಡಂತಿವೆ.

12090

ರೂ. ಕೋಟಿಗಳಲ್ಲಿ

| ವಿವರ | ಆರ್.ಐ.ಡಿ.ಎಫ್-VIII | ಆರ್.ಐ.ಡಿ.ಎಫ್-IX |
|---|---|---|
| ಕಾಮಗಾರಿಗಳ ಸಂಖ್ಯೆ | ೩೬೫ | ೨೨೪ |
| ಅಂದಾಜು ವೆಚ್ಚ | ೮೮.೩೧ | ೪೯.೭೩ |
| ರಸ್ತೆಯ ಉದ್ದ | ೧೨೧೯ಕಿ.ಮೀ. | ೫೮೭.೭೨ಕಿ.ಮೀ. |
| ಬಿಡುಗಡೆಯಾದ ಹಣ | ೪೮.೧೬ | |
| ಖರ್ಚಾಗಿರುವ ಹಣ | ೩೫.೩೮ | ಕಾಮಗಾರಿಗಳನ್ನು |
| ಪೂರ್ಣಗೊಂಡಿರುವ ಕಾಮಗಾರಿಗಳು | ೯೧ | ಇತ್ತೀಚೆಗಷ್ಟೆ |
| ಪೂರ್ಣಗೊಂಡಿರುವ ರಸ್ತೆ ಉದ್ದ | ೩೧೮ ಕಿ.ಮೀ. | ಪ್ರಾರಂಭಿಸಲಾಗಿದೆ |

ಗ್ರಾಮೀಣ ರಸ್ತೆ ಸುಧಾರಣೆಗಾಗಿ ಆರ್.ಐ.ಡಿ.ಎಫ್-IX ರಡಿಯಲ್ಲಿ ಸಚಿವ ಸಂಪುಟದ ಉಪ ಸಮಿತಿಯು ೪೫೫ ಕಾಮಗಾರಿಗಳನ್ನು ಅಂದಾಜು ಮೊತ್ತ ರೂ. ೯೮.೧೩ ಕೋಟಿಗಳಲ್ಲಿ ೧೪೮೮೪ ಕಿ.ಮೀ. ರಸ್ತೆ ಅಭಿವೃದ್ಧಿಪಡಿಸಲು ಅನುಮೋದನೆ ನೀಡಿದ್ದು ಈ ಪ್ರಸ್ತಾವನೆಗಳನ್ನು ನಬಾರ್ಡ್ ಸಂಸ್ಥೆಗೆ ಸಲ್ಲಿಸಿದ್ದು ಇವುಗಳ ಪೈಕಿ ಮೇಲೆ ತಿಳಿಸಿದಂತೆ ೨೨೪ ಕಾಮಗಾರಿಗಳು ರೂ. ೪೯.೭೩ ಕೋಟಿಗಳಿಗೆ ಅನುಮೋದನೆಯಾಗಿದೆ. ಬಾಕಿ ಉಳಿದ ೧೩೧ ಕಾಮಗಾರಿಗಳು ರೂ.೫೦.೪೦ ಕೋಟಿ ಅಂದಾಜು ವೆಚ್ಚದಲ್ಲಿ ನಬಾರ್ಡ್ ಸಂಸ್ಥೆಯಿಂದ ಅನುಮೋದನೆಯಾಗಬೇಕಾಗಿರುತ್ತದೆ. ನಬಾರ್ಡ್ ಸಂಸ್ಥೆಯ ಮಾಹಿತಿ ಪ್ರಕಾರ ಬಾಕಿ ಉಳಿದ ಕಾಮಗಾರಿಗಳನ್ನು ಆರ್.ಐ.ಡಿ.ಎಫ್-X ರಡಿಯಲ್ಲಿ ೨೦೦೪-೨೦೦೫ ನೇ ಸಾಲಿನಲ್ಲಿ ಅನುಮೋದನೆ ಮಾಡುವುದಾಗಿ ತಿಳಿಸಿರುತ್ತಾರೆ.

### ಈ) ಆರ್.ಐ.ಡಿ.ಎಫ್-X ರಡಿಯಲ್ಲಿ ೨೦೦೪-೨೦೦೫ ನೇ ಸಾಲಿಗೆ ಪ್ರಸ್ತಾವನೆಗಳು :

ಆರ್.ಐ.ಡಿ.ಎಫ್-X ರಡಿಯಲ್ಲಿ ೨೦೦೪-೨೦೦೫ ನೇ ಸಾಲಿಗಾಗಿ ಪ್ರಸ್ತಾವನೆಗಳನ್ನು ಸಚಿವ ಸಂಪುಟದ ಉಪ ಸಮಿತಿಯ ಮುಂದೆ ತರಲು ಕ್ರಮ ಕೈಗೊಳ್ಳುಲಾಗಿರುತ್ತದೆ. ಎಲ್ಲಾ ಜಿಲ್ಲೆಗಳಿಂದ ಪ್ರಸ್ತಾವನೆಗಳನ್ನು ಸಲ್ಲಿಸುವಂತೆ ಆದೇಶ ನೀಡಲಾಗಿರುತ್ತದೆ.

## ಉ) ಮುಖ್ಯಮಂತ್ರಿಗಳ ಗ್ರಾಮೀಣ ರಸ್ತೆ ಅಭಿವೃದ್ಧಿ ಯೋಜನೆ :

ಗ್ರಾಮೀಣ ರಸ್ತೆ ಅಭಿವೃದ್ಧಿ ಹಾಗೂ ನಿರ್ವಹಣೆಗಾಗಿ ೨೦೦೩-೨೦೦೪ ರಲ್ಲಿ ಪ್ರಾರಂಭಿಸಲಾಗಿದ್ದು, ಈ ಯೋಜನೆಗೆ ರೂ. ೧೦೦ ಕೋಟಿಗಳ ಒಂದು ನಿಧಿಯನ್ನು ಸ್ಥಾಪಿಸಿ ಈ ನಿಧಿಯಡಿ ಯೋಜನೆ ಅನುಷ್ಠಾನಗೊಳಿಸಬೇಕಾಗಿರುತ್ತದೆ. ಈ ನಿಟ್ಟಿನಲ್ಲಿ ಜಿಲ್ಲಾ ಮಟ್ಟದ ರಸ್ತೆ ಅಭಿವೃದ್ಧಿ ಆಯ್ಕೆ ಸಮಿತಿಯು ಆ ವರ್ಷದಲ್ಲಿ ಕೈಗೊಳ್ಳಬೇಕಾಗಿರುವ ರಸ್ತೆ ನಿರ್ಮಾಣ ಹಾಗೂ ನಿರ್ವಹಣೆಗಳ ಕ್ರಿಯಾ ಯೋಜನೆಯನ್ನು ತಯಾರಿಸಿ ಕ್ರಮ ಕೈಗೊಳ್ಳಬೇಕಾಗಿರುತ್ತದೆ.

ಜಿಲ್ಲಾ ರಸ್ತೆ ಆಯ್ಕೆ ಸಮಿತಿ ಅನುಮೋದಿಸುವ ರಸ್ತೆ ನಿರ್ಮಾಣ ಹಾಗೂ ನಿರ್ವಹಣೆ ಪ್ರಸ್ತಾವನೆಗಳಿಗೆ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗಗಳು ಸ್ಥಳೀಯ ಸಾಮಗ್ರಿ ಹಾಗೂ ವೃತ್ತಗಳ ದರಪಟ್ಟಿ ಪ್ರಕಾರ ಅಂದಾಜು ಪಟ್ಟಿಗಳನ್ನು ತಯಾರಿಸಿ, ಜಿಲ್ಲಾ ಮಟ್ಟದ ರಸ್ತೆ ಆಯ್ಕೆ ಸಮಿತಿ ಅನುಮೋದನೆ ಪಡೆದು, ಸರ್ಕಾರಕ್ಕೆ ತಾತ್ವಿಕ ಅನುಮೋದನೆ ಹಾಗೂ ಹಣ ಬಿಡುಗಡೆಗಾಗಿ ಸಲ್ಲಿಸಬೇಕಾಗಿರುತ್ತದೆ. ಅಂದಾಜು ಪಟ್ಟಿಗಳನ್ನು ತಯಾರಿಸುವಲ್ಲಿ ಇಂಡಿಯನ್ ರೋಡ್ ಕಾಂಗ್ರೆಸ್ ಮ್ಯಾನ್ಯುಯಲ್ ಎಸ್‌ಪಿ ೨೦/ ೨೦೦೨ ಹಾಗೂ ಲೋಕೋಪಯೋಗಿ ಇಲಾಖೆ ಕಾಲಕಾಲಕ್ಕೆ ಸೂಚಿಸುವ ಮಾರ್ಗಸೂಚಿಯನ್ವಯ ತಯಾರಿಸಬೇಕಾಗಿರುತ್ತದೆ. ಆಡಳಿತ ವೆಚ್ಚಕ್ಕಾಗಿ ಶೇ. ೧ರಷ್ಟು ಮೊಬಲಗನ್ನು ಗುಣ ನಿಯಂತ್ರಣ ಹಾಗೂ ತರಬೇತಿಗಾಗಿ ನಿಗದಿಪಡಿಸಬೇಕಾಗಿರುತ್ತವೆ. ಒಟ್ಟಾರೆ ಅನುದಾನದಲ್ಲಿ ಹಾಗೂ ದುರಸ್ತಿ ಅನುದಾನವನ್ನು ಜಿಲ್ಲಾ ಸಮಿತಿ ನಿರ್ಮಾಮದ ಅವಶ್ಯಕತೆಗನುಗುಣವಾಗಿ ನಿಗದಿಪಡಿಸಬೇಕು.

ಈ ದಿಸೆಯಲ್ಲಿ ಕಾಮಗಾರಿಗಳ ಆಯ್ಕೆ ಯೋಜನೆಯ ರೂಪುರೇಖೆ, ಕಾರ್ಯನಿರ್ವಹಣೆ, ಗುಣ ನಿಯಂತ್ರಣ ವ್ಯವಸ್ಥೆ, ಉಸ್ತುವಾರಿ ಹಾಗೂ ಲೆಕ್ಕ ತಪಾಸಣೆಗಾಗಿ ಮಾರ್ಗಸೂಚಿಯನ್ನು ಸಹ ತಯಾರಿಸಲಾಗಿದ್ದು ಕ್ರಮ ಕೈಗೊಳ್ಳಲಾಗಿದೆ.

ಜಿಲ್ಲಾ ಮಟ್ಟದ ಪ್ರಸ್ತಾವನೆಗಳನ್ನು ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿರುವ ರಾಜ್ಯ ಮಟ್ಟದ ಸ್ಥಾಯಿ ಸಮಿತಿ ಅನುಮೋದನೆ ನೀಡಿ ಪ್ರತಿ ಜಿಲ್ಲೆಗೆ ಆ ಜಿಲ್ಲೆಯ ಯೋಜನೆಯ ಕಾರ್ಯಕ್ರಮಕ್ಕನುಗುಣವಾಗಿ ಆರ್ಥಿಕ ಇಲಾಖೆಯ ಮೂಲಕ ಹಣ ಬಿಡುಗಡೆ ಮಾಡಲಾಗುವುದು. ರಾಜ್ಯ ಸಮಿತಿ ಅನುಮೋದನೆ ನೀಡಿದ ಕಾಮಗಾರಿಗಳನ್ನು ಟೆಂಡರ್ ಮುಖಾಂತರ ಕೈಗೊಳ್ಳಬೇಕಾಗಿದ್ದು,ಈ ಕಾಮಗಾರಿಗಳನ್ನು ೬ರಿಂದ ೯ ತಿಂಗಳವರೆಗೆ ಪೂರ್ಣಗೊಳಿಸಿ ರಸ್ತೆಗಳ ಗುಣಮಟ್ಟವನ್ನು ಅತ್ಯುತ್ತಮ ಮಟ್ಟದಲ್ಲಿ ಕಾಪಾಡಬೇಕಾಗಿರುತ್ತದೆ. ಗುಣಮಟ್ಟ ಪರಿವೀಕ್ಷಣೆಗಾಗಿ ರಾಜ್ಯ ಸರ್ಕಾರ ನೇಮಿಸಿರುವ ಗುಣಮಟ್ಟ ಪರೀಕ್ಷಕರ ವರದಿಯನ್ನನುಸರಿಸಿ ಗುತ್ತಿಗೆದಾರರಿಗೆ ಬಿಲ್ಲನ್ನು ಪಾವತಿ ಮಾಡಬೇಕಾಗಿರುತ್ತದೆ.

## ಊ) ರಾಜ್ಯ ಸರ್ಕಾರದ ೩೦೫೪/೫೦೫೪ ಯೋಜನೆ :

೨೦೦೪-೨೦೦೫ನೇ ಸಾಲಿಗಾಗಿ ಗ್ರಾಮೀಣ ರಸ್ತೆ ನಿರ್ಮಾಣಕ್ಕಾಗಿ ರಾಜ್ಯ ಸರ್ಕಾರವು ಲೆಕ್ಕಶೀರ್ಷಿಕೆ ೩೦೫೪/೫೦೫೪ ರ ಅಡಿಯಲ್ಲಿ ರೂ. ೨೪.೬೮ ಕೋಟಿಗಳನ್ನು ಜಿಲ್ಲಾ ಪಂಚಾಯತಿಗಳಿಗೆ ಒದಗಿಸಲಾಗಿದ್ದು, ಜಿಲ್ಲಾ ಪಂಚಾಯತಿಗಳು ಕ್ರಿಯಾ ಯೋಜನೆ ತಯಾರಿಸಿ ಕಾರ್ಯಕ್ರಮವನ್ನು ಅನುಷ್ಠಾನ ಮಾಡಬೇಕಾಗಿರುತ್ತದೆ.

## ಋ) ರಸ್ತೆ ನಿರ್ವಹಣೆಗಾಗಿ ಅನುದಾನ :

ಗ್ರಾಮೀಣ ರಸ್ತೆಗಳ ದುರಸ್ತಿ ಹಾಗೂ ನಿರ್ವಹಣೆಗಾಗಿ ೨೦೦೪-೨೦೦೫ ನೇ ಸಾಲಿನಲ್ಲಿ ಯೋಜನೇತರ ಲೆಕ್ಕಶೀರ್ಷಿಕೆಯಲ್ಲಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ರಾಜ್ಯ ಸರ್ಕಾರವು ವಿವಿಧ ಕಾರ್ಯಕ್ರಮಗಳಡಿಯಲ್ಲಿ ಸರ್ವಋತು ರಸ್ತೆಗಳನ್ನು ನಿರ್ಮಾಣ ಮಾಡಲು ಕ್ರಮ ಕೈಗೊಂಡಿದ್ದು ಈ ರಸ್ತೆಗಳ ನಿರ್ವಹಣೆಗಾಗಿ ಅಗತ್ಯವಾದ ಹಣವನ್ನು ಒದಗಿಸುವುದು ಅತ್ಯವಶ್ಯಕವಾಗಿರುತ್ತದೆ.




# ರಸ್ತೆ ಸಾರಿಗೆ

**ಉಪೇಂದ್ರ ತ್ರಿಪಾಠಿ**

ಗ್ರಾಮೀಣಾಭಿವೃದ್ಧಿಯಲ್ಲಿ ಅತ್ಯಂತ ಪ್ರಮುಖ ಪಾತ್ರ ವಹಿಸುತ್ತಿರುವ ಕ್ಷೇತ್ರ ರಸ್ತೆ ಸಾರಿಗೆ. ಕರ್ನಾಟಕದಲ್ಲಿ ರಾಜ್ಯ ರಸ್ತೆ ಸಾರಿಗೆ ನಿಗಮ ಬಹುದೊಡ್ಡ ಸಾರ್ವಜನಿಕ ಉದ್ಯಮವಾಗಿದೆ, ನಗರ ಹಾಗೂ ಗ್ರಾಮಾಂತರ ಪ್ರದೇಶದ ಲಕ್ಷಾಂತರ ಪ್ರಯಾಣಿಕರ ಆಸರೆಯ ಸಂಸ್ಥೆಯಾಗಿದೆ.

ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಯು ರಾಷ್ಟ್ರೀಕೃತ ವಲಯದಲ್ಲಿ ಓಡಾಟಕ್ಕೆ ಯೋಗ್ಯವಾಗಿರುವ ಎಲ್ಲಾ ರಸ್ತೆಗಳಲ್ಲೂ ಬಸ್ಸನ್ನು ಓಡಿಸುತ್ತಿದೆ. ಒಂದು ಅಂದಾಜಿನ ಪ್ರಕಾರ ೫೨೦೦ ಗ್ರಾಮಗಳಿಗೆ ಸಂಪರ್ಕ ಕಲ್ಪಿಸಿರುವ ಹೆಮ್ಮೆ ಇದರದು. ದೊಡ್ಡ ಬಸ್ಸುಗಳ ಜೊತೆ ಗ್ರಾಮ ಸಂಚಾರದ ಒತ್ತಡ, ಪ್ರಯಾಣಿಕರ ಸರಕು ಸಾಗಾಣಿಕೆ ಹಾಗೂ ಗ್ರಾಮಗಳ ಕಿರಿದಾದ ರಸ್ತೆಯನ್ನು ಗಮನದಲ್ಲಿಟ್ಟುಕೊಂಡು ವಿಶೇಷವಾಗಿ ೧೫೦ ಮಿನಿ ಬಸ್ಸುಗಳನ್ನು ಓಡಿಸುತ್ತಿದೆ.

**ಕರ್ನಾಟಕ ರಾಜ್ಯದ ಐದು ಸಾವಿರ ಹಳ್ಳಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಸಾರಿಗೆ ಸಂಸ್ಥೆ ದುಡಿಯಬೇಕಾಗಿದೆ. ಇದೊಂದು ಸವಾಲು ಹೌದು. ವಿದ್ಯಾಭ್ಯಾಸ, ವೃತ್ತಿ, ವ್ಯಾಪಾರ, ಕೃಷಿ ಮೊದಲಾದ ಕೆಲಸಗಳಿಗೆ ಹಳ್ಳಿಗರು ರಾಜಧಾನಿಯತ್ತ ಪ್ರತಿನಿತ್ಯ ಪ್ರಯಾಣಿಸುತ್ತಾರೆ.**

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಬೆಳವಣಿಗೆ-ಸ್ವಾರಸ್ಯಕರವಾದುದೆ. ೧೨-೦೯-೧೯೪೮ರಂದು ಅಂದಿನ ಮೈಸೂರು ಸರ್ಕಾರವು ಮೈಸೂರು ರಸ್ತೆ ಸಾರಿಗೆ ಇಲಾಖೆಯನ್ನು ಸ್ಥಾಪಿಸಿ ಕೆಲವು ಬಸ್ಸುಗಳ ಓಡಾಟವನ್ನು ಪ್ರಾರಂಭಿಸಿತು. ಪ್ರಾರಂಭದಲ್ಲೇ ಇದು ೮೧ ಮಾರ್ಗಗಳಲ್ಲಿ ೧೨೦ ಬಸ್ಸುಗಳನ್ನು ಓಡಿಸುತ್ತಿತ್ತು. ಏಕೀಕರಣದ ನಂತರ ಅಂದರೆ ೧೯೫೬ರ ನಂತರ ಮೈಸೂರು ರಾಜ್ಯ ರಸ್ತೆ ಸಾರಿಗೆಗೆ ೫೩೦ ಬಸ್ಸು, ಮುಂಬೈ ರಾಜ್ಯ ಹಾಗೂ ಹೈದ್ರಾಬಾದ್ ರಾಜ್ಯದಿಂದ ತಲಾ ೨೧೫ ಬಸ್ಸುಗಳು ಸೇರ್ಪಡೆಯಾದವು. ೧೯೫೭ ಜನವರಿ ೧ರ ಹೊತ್ತಿಗೆ ಈ ಸಂಸ್ಥೆಯ ಬಸ್ಸಿನ ಸಂಖ್ಯೆ: ೧,೧೦೦ಕ್ಕೆ ಏರಿತ್ತು. ವ್ಯಾಪಕತೆಯಲ್ಲಿ ಇದು ದೇಶದ ನಾಲ್ಕನೆಯ ಸಂಸ್ಥೆಯೆಂದು ಮನ್ನಣೆ ಪಡೆಯಿತು. ೧-೧-೧೯೬೧ರ ಕೇಂದ್ರ ಶಾಸನದ ಪ್ರಕಾರ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮವು ಶಾಸನದನ್ವಯ ಸ್ಥಾಪಿಸಲ್ಪಟ್ಟ ಸಂಸ್ಥೆಯಾಗಿತ್ತು. ಹದಿಮೂರು ವರ್ಷಗಳ ಕಾಲ ಈ ಸಂಸ್ಥೆ ಸರ್ಕಾರದ ಇಲಾಖೆಯೆಂದೇ ಪರಿಗಣಿತವಾಗಿತ್ತು. ರಸ್ತೆ ಸಾರಿಗೆಯ ಪ್ರಮುಖ ಉದ್ದೇಶವೆಂದರೆ :

- ಶ್ರೀ ಸಾಮಾನ್ಯರಿಗೆ ರಸ್ತೆ ಸೌಕರ್ಯವನ್ನು ವಿಶ್ವಾಸನೀಯವಾಗಿ ಹಾಗೂ ಸಮಂಜಸ ದರದಲ್ಲಿ ಒದಗಿಸುವುದು.

- ರಸ್ತೆ ಸಾರಿಗೆ ಬೆಳವಣಿಗೆಗೆ ಸತತವಾಗಿ ಹೊಸ ಮತ್ತು ಅತ್ಯಾಧುನಿಕ ತಂತ್ರಜ್ಞಾನವನ್ನು ಪರಿಶೋಧಿಸುವುದು.
- ಸತತವಾಗಿ ಬೆಳೆಯುತ್ತಿರುವ ಬಸ್ಸುಗಳ ಸಮೂಹವನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳುವುದು.

ನಿಗಮವು ಸರ್ಕಾರದ ಮಾರ್ಗದರ್ಶಿಸೂಚಿಯಾಗಿ ಪ್ರಯಾಣಿಕರ ಹಿತವನ್ನು ಕಾಯ್ದುಕೊಂಡು ಬಂದಿದೆ. ಸಾವಿರಾರು ನೌಕರರು ಇದರಲ್ಲಿ ದುಡಿದು ಜೀವನ ನಿರ್ವಹಿಸುತ್ತಿದ್ದಾರೆ. ರಸ್ತೆ ರಾಜ್ಯ ಸಾರಿಗೆ ನಿಗಮವು ಅಗತ್ಯವಿದ್ದೆಡೆ ಬಸ್ಸುನಿಲ್ದಾಣ, ತಂಗುದಾಣ, ಪ್ರಯಾಣಿಕರ ದಾರಿ ಆಸರೆಗಳನ್ನು ನಿರ್ಮಿಸುತ್ತದೆ. ತನ್ನ ನೌಕರರಿಗೆ ಸೂಕ್ತ ತರಬೇತಿಯನ್ನು ಕೊಟ್ಟು ಅವರ ಕೌಶಲವನ್ನು ಹೆಚ್ಚಿಸುತ್ತದೆ. ಉತ್ತಮವಾಗಿ ಕೆಲಸ ಮಾಡಿದ ನೌಕರರಿಗೆ ಪ್ರಶಸ್ತಿಗಳನ್ನು ನೀಡಿ ಗೌರವಿಸುವುದುಂಟು. ಪ್ರಯಾಣಿಕರ, ನೌಕರರ ಹಾಗೂ ಸಂಸ್ಥೆಯ ಹಿತ ಕಾಯುವ ಜವಾಬ್ದಾರಿ ರಸ್ತೆ ಸಾರಿಗೆ ನಿಗಮಕ್ಕಿದೆ.

ಕರ್ನಾಟಕ ರಾಜ್ಯ ಸಾರಿಗೆ ಸಂಸ್ಥೆಯಲ್ಲಿ ೪ ಸಂಸ್ಥೆಗಳು ಸ್ವತಂತ್ರವಾಗಿ ಕಾರ್ಯ ನಿರ್ವಹಿಸುತ್ತಿವೆ. ಅಧಿಕಾರ ವಿಕೇಂದ್ರೀಕರಣದ ಹಿನ್ನೆಲೆಯಲ್ಲಿ ಇದು ಮಹತ್ವದ ವಿಚಾರ. ಕರ್ನಾಟಕ ರಾಜ್ಯ ಸಾರಿಗೆ ಸಂಸ್ಥೆ, ಮೂಲ ಸಂಸ್ಥೆ; ೧೫-೦೮-೧೯೯೭ರಲ್ಲಿ ಬೆಂಗಳೂರು ಮಹಾನಗರ ಸಂಸ್ಥೆಯಾಗಿ ರೂಪುಗೊಂಡ ಸಾರಿಗೆ ಸಂಸ್ಥೆಯು ಬೆಂಗಳೂರು ಮಹಾನಗರದ ಪ್ರಯಾಣಿಕರ ಹಿತರಕ್ಷಣೆಯ ಹೊಣೆ ಹೊತ್ತಿದೆ. ೨೦೦೩-೦೪ನೇ ಸಾಲಿನಲ್ಲಿ ಅದು ೮೧೧೪,೧೫ ಲಕ್ಷ ರೂ ಲಾಭ ಗಳಸಿದೆ. ಅದೇ ರೀತಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ೨೬.೨೧.೭೩ ಲಕ್ಷ ರೂ. ಲಾಭ ಗಳಿಸಿದೆ. ಇದರ ವ್ಯಾಪ್ತಿಗೆ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಮೈಸೂರು, ಚಾಮರಾಜನಗರ, ಕೊಡಗು, ಚಿತ್ರದುರ್ಗ, ಚಿಕ್ಕಮಗಳೂರು, ಮಂಗಳೂರು, ದಾವಣಗೆರೆ, ಜಿಲ್ಲೆಗಳು ಸೇರುತ್ತವೆ.

ವಾಯುವ್ಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ೨೦೦೩-೦೪ರಲ್ಲಿ ರೂ. ೩೬೫.೩೯ಲಕ್ಷಗಳ ಲಾಭ ಗಳಿಸಿದೆ. ಇದರ ವ್ಯಾಪ್ತಿಗೆ ಹುಬ್ಬಳ್ಳಿ, ಹಾವೇರಿ, ಬೆಳಗಾಂ, ಚಿಕ್ಕೋಡಿ, ಬಿಜಾಪುರ, ಶಿರಸಿ, ಬಾಗಲಕೋಟೆ, ಗದಗ ಜಿಲ್ಲೆಗಳು ಬರುತ್ತವೆ.

ಈಶಾನ್ಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ೨೦೦೩-೦೪ರಲ್ಲಿ ೯೩೩.೦೭ ಲಕ್ಷ ರೂ ನಷ್ಟ ಹೊಂದಿದೆ. ಇದರ ವ್ಯಾಪ್ತಿಗೆ ಗುಲ್ಬರ್ಗ, ಯಾದಗಿರಿ, ಬೀದರ್, ರಾಯಚೂರು, ಕೊಪ್ಪಳ ಹಾಗೂ ಬಳ್ಳಾರಿ ಜಿಲ್ಲೆಗಳು ಬರುತ್ತವೆ.

ಒಟ್ಟಾರೆ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯು ೨೦೦೩-೦೪ರಲ್ಲಿ ೧೦,೦೬೮.೨೦ ಲಕ್ಷ ರೂ.ಗಳಷ್ಟು ಲಾಭ ಗಳಿಸಿದೆ. ಇದರಲ್ಲಿ ಸ್ವಲ್ಪ ಭಾಗ ಗ್ರಾಮೀಣ ಪ್ರದೇಶದ ಸಾರಿಗೆ ಅಭಿವೃದ್ಧಿಗೆ ಮೀಸಲಿಡಬೇಕೆಂಬುದು ಕೆಲವು ಸಮಾಜ ಸೇವಕರ ಅಭಿಮತ.

ಕರ್ನಾಟಕ ರಾಜ್ಯದ ೫೦೦೦೦ ಹಳ್ಳಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಸಾರಿಗೆ ಸಂಸ್ಥೆ ದುಡಿಯಬೇಕಾಗಿದೆ. ಇದೊಂದು ದೊಡ್ಡ ಸವಾಲೇ ಹೌದು. ವಿದ್ಯಾಭ್ಯಾಸ, ವೃತ್ತಿ, ವ್ಯಾಪಾರ, ಕೃಷಿ ಮೊದಲಾದ ಹತ್ತು ಹಲವು ಕೆಲಸಗಳಿಗೆ ಹಳ್ಳಿಗರು ಹೋಬಳಿ, ತಾಲ್ಲೂಕು, ಜಿಲ್ಲೆ ಹಾಗೂ ರಾಜಧಾನಿಯತ್ತ ಪ್ರಯಾಣ ಬೆಳೆಸುತ್ತಾರೆ. ಜನಸಂಖ್ಯೆ ಹಾಗೂ ಆರ್ಥಿಕ ದೃಷ್ಟಿಯಿಂದ ಎಲ್ಲಾ ಹಳ್ಳಿಗಳಿಗೂ ಬಸ್ಸಿನ ಸೌಲಭ್ಯ ಕೊಡುವುದು ಅಸಾಧ್ಯವಾದ ಮಾತು. ಆದರೆ ರಸ್ತೆ ಸಾರಿಗೆ ನಿಗಮ ಎಲ್ಲಾ ಗ್ರಾಮೀಣ ಪ್ರದೇಶದವರಿಗೂ ತನ್ನ ಸೌಲಭ್ಯವನ್ನು ತಲುಪಿಸಲು ಪ್ರಾಮಾಣಿಕ ಪ್ರಯತ್ನ ಮಾಡುತ್ತಿದೆ. ಹಳ್ಳಿಗಳ ಆರ್ಥಿಕ ಸ್ಥಿತಿ, ಸುವ್ಯವಸ್ಥಿತವಾದ ರಸ್ತೆಗಳ ಅಭಾವ, ಮೂಲಭೂತ ಸೌಕರ್ಯಗಳ ಕೊರತೆಯಿಂದಾಗಿ ಕೆಲವು ಮಾರ್ಗಗಳಲ್ಲಿನ ಬಸ್ಸುಗಳ ಓಡಾಟವು ಆರ್ಥಿಕವಾಗಿ ದುಬಾರಿಯಾಗುವುದು. ಅಗತ್ಯ ಪ್ರಯಾಣಿಕರ ಕೊರತೆ ಮೊದಲಾದ ಕಾರಣಗಳಿಂದ ರಸ್ತೆ ಸಾರಿಗೆ ನಿಗಮವು ಎಲ್ಲಾ ಗ್ರಾಮೀಣ ಭಾಗಗಳಿಗೂ ತನ್ನ ಬಸ್ಸಿನ ಜಾಲವನ್ನು ವಿಸ್ತರಿಸಲು ಸಾಧ್ಯವಾಗಿಲ್ಲ. ಅನೇಕ ಕಡೆ ಮ್ಯಾಕ್ಸಿಕ್ಯಾಬ್, ಟೆಂಪೋ, ಸರಕು ಸಾಗಾಣಿಕೆ ವಾಹನಗಳು ಪ್ರಯಾಣಿಕರನ್ನು ಸಾಗಿಸುವ ದೃಶ್ಯವನ್ನು ಕಾಣಬಹುದು. ಇದಕ್ಕೆ ಮುಖ್ಯ ಕಾರಣ ಗ್ರಾಮೀಣ ಪ್ರದೇಶದ ಜನರೇ ಸ್ವಯಂ ಪ್ರೇರಿತರಾಗಿ ಈ ವಾಹನಗಳನ್ನು ಬಯಸುವುದು. ಅವರು ಬಸ್ಸುಗಳಿಗೆ ಪ್ರಯಾಣ ದರ ಕೂಡುವಷ್ಟು ಆರ್ಥಿಕ ಚೈತನ್ಯವನ್ನು ಪಡೆದಿರುವುದಿಲ್ಲ.ಅನೇಕ ಸಂದರ್ಭಗಳಲ್ಲಿ ಅವರ ಬಳಿಯಿರುವ ಲಗೇಜುಗಳನ್ನು ಸಾಗಿಸಲು ರಸ್ತೆ ಸಾರಿಗೆಗಳು ಅಸಹಾಯಕವಾಗಿರುತ್ತವೆ. ಹಾಗಾಗಿ ಶೇ.೧೦ರಷ್ಟು ಭಾಗದ ಗ್ರಾಮೀಣ ಪ್ರದೇಶದ ಪ್ರಯಾಣಿಕರು ತಮ್ಮ ಓಡಾಟಕ್ಕೆ ಸರಕು ಸಾಗಣೆಯ ವಾಹನವನ್ನು ಅವಲಂಬಿಸಿದ್ದಾರೆ. ಮಲೆನಾಡು ಹಾಗೂ ಅರೆಮಲೆನಾಡು ಪ್ರದೇಶಗಳಲ್ಲಿ ರಸ್ತೆ ಸಾರಿಗೆ ಬಸ್ಸುಗಳು ಸಂಚರಿಸದಷ್ಟು ರಸ್ತೆಗಳು ದುಸ್ಥಿತಿಯಲ್ಲಿವೆ. ಗ್ರಾಮೀಣ ರಸ್ತೆಗಳನ್ನು ಸುಧಾರಿಸಲು ಸ್ಥಳೀಯ ಸಂಸ್ಥೆಗಳು ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕು. ವಿಶೇಷವಾಗಿ ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಹಾಗೂ

ಜಿಲ್ಲಾ ಪಂಚಾಯತಿಗಳು ಕಿರು ಸೇತುವೆ, ಸಣ್ಣ ರಸ್ತೆ ಹಾಗೂ ಪ್ರಯಾಣಿಕರ ತಂಗುದಾಣ ನಿರ್ಮಿಸಲು ಮುಂದಾಗಬೇಕು. ಕೆಲವು ಗ್ರಾಮಗಳಲ್ಲಿನ ಜನ ಪ್ರಯಾಣಿಕರ ವೇದಿಕೆಯನ್ನು ರಚಿಸಿಕೊಂಡು ಸ್ವಯಂ ಪ್ರೇರಿತವಾಗಿ ಮಳೆಗಾಲ ಮುಂತಾದ ಋತುಗಳಲ್ಲಿ ಬಸ್ಸು ಓಡಾಡುವ ರಸ್ತೆಗಳು ಕೆಟ್ಟಿದ್ದರೆ ತಾವೇ ನಿಂತು ರಿಪೇರಿ ಮಾಡಬೇಕು. ಯಾವುದೇ ಯೋಜನೆ ಯಶಸ್ವಿಯಾಗ ಬೇಕಾದರೆ ಸಾರ್ವಜನಿಕ ಪಾಲುದಾರಿಕೆ ಅತ್ಯಂತ ಪ್ರಮುಖ ಎಂಬುದನ್ನು ಮರೆಯುವಂತಿಲ್ಲ. ಹಾಲು, ತರಕಾರಿ, ದಿನಸಿ ಮೊದಲಾದ ಅನೇಕ ಪದಾರ್ಥಗಳನ್ನು ರೈತರು ಸಂತೆ, ಮಾರುಕಟ್ಟೆಗೆ ಸಾಗಿಸುತ್ತಾರೆ. ಪ್ರಸ್ತುತ ಸಂತೆ ನಡೆಯುವ ವಾರದಲ್ಲಿ ವಿಶೇಷ ಬಸ್ಸು ಸಂಚಾರವನ್ನು ರಸ್ತೆ ಸಾರಿಗೆ ನಿಗಮ ಕೈಗೊಂಡಿದೆ. ಅದು ಎಲ್ಲಾ ಕಾಲದಲ್ಲೂ ಸ್ಥಿರವಾಗಿರಬೇಕು. ಜಾತ್ರೆ, ದೊಡ್ಡ ಹಬ್ಬ, ವಿಶೇಷ ದಿನಗಳಂದು ಗ್ರಾಮೀಣ ಜನ ಒಂದೂರಿನಿಂದ ಮತ್ತೊಂದೂರಿಗೆ ಪ್ರಯಾಣಿಸುತ್ತಾರೆ. ಅವರ ಪ್ರಯಾಣದ ಸಮಯವನ್ನು ಸುಖಕರವಾಗಿ ಮಾಡುವ ಮಹತ್ವದ ಗುರಿಯನ್ನು ಸಂಸ್ಥೆ ಹೊಂದಬೇಕು.

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮವು ತನ್ನ ಪ್ರಯಾಣಿಕರ ಹಿತದೃಷ್ಟಿಯಿಂದ ಕೆಲಸ ಮಾಡಿರುವುದಲ್ಲದೆ ತನ್ನ ಸಾಮಾಜಿಕ ಜವಾಬ್ದಾರಿಯನ್ನು ಸದಾಕಾಲ ಪ್ರದರ್ಶಿಸಿದೆ. ಸಂಸ್ಥೆಯು ೧,೯೬,೯೧೬ ವಿದ್ಯಾರ್ಥಿ ಪಾಸುಗಳನ್ನು ವಿತರಿಸಿದೆ. ಇದು ಗ್ರಾಮೀಣ ವಿದ್ಯಾರ್ಥಿಗಳಿಗೆ ವರಪ್ರದಾಯಕವಾದ ಯೋಜನೆ. ಸಾಮಾಜಿಕ ಕಳಕಳಿಯಿಂದ ಸಂಸ್ಥೆಯು ೧೫,೨೯೪ ಅಂಗವಿಕಲರಿಗೆ, ೪,೭೫೫ ಅಂಧರಿಗೆ ಮತ್ತು ೨,೨೩೧ ಸ್ವಾತಂತ್ರ್ಯ ಹೋರಾಟಗಾರರಿಗೆ ಬಸ್ಸು ಪಾಸು ವಿತರಣೆ ಮಾಡಿದೆ. ೧೬ ದಿನಗಳ ಪ್ರಯಾಣ ದರವನ್ನು ಮುಂಗಡವಾಗಿ ಪಾವತಿ ಮಾಡಿ ಒಂದು ತಿಂಗಳು ಓಡಾಡುವ ಅವಕಾಶವನ್ನು ಅದು ಕಲ್ಪಿಸಿದೆ. ಮಹಿಳೆಯರಿಗೆ ಹಾಗೂ ಹಿರಿಯ ನಾಗರಿಕರಿಗೆ ತನ್ನ ಬಸ್ಸುಗಳಲ್ಲಿ ಆಸನಗಳನ್ನು ಕಾಯ್ದಿರಿಸುವ ಪ್ರಯತ್ನವನ್ನು ಅದು ಮಾಡಿದೆ. ಸಾರಿಗೆ ಸಂಸ್ಥೆಯು ಬಹುದೊಡ್ಡ ವಿಸ್ತಾರತೆಯನ್ನು ಪಡೆದಿದ್ದು ಸುಧಾರಣಾ ಮನೋಭಾವದ ಸಾರ್ವಜನಿಕರು ಹಾಗೂ ಪ್ರಜ್ಞಾವಂತರು ಈ ಸಂಸ್ಥೆಗೆ ಮಾರ್ಗದರ್ಶನ ಮಾಡಬೇಕು. ಸರ್ಕಾರದ ಸಹಾಯ, ಸಹಕಾರ, ಮಾರ್ಗದರ್ಶನ ಕೂಡಾ ಅಗತ್ಯ. ಗ್ರಾಮೀಣ ಪ್ರದೇಶದ ಜನರನ್ನು ದೃಷ್ಟಿಯಲ್ಲಿಟ್ಟುಕೊಂಡು ಹೊಸ ಯೋಜನಗಳನ್ನು ರೂಪಿಸುವುದು ಇಂದಿನ ಅಗತ್ಯ ಕೂಡ ಹೌದು.






# ಹಿಂದುಳಿದ ವರ್ಗಗಳ ಪ್ರಗತಿ

ವಿಜಯಲಕ್ಷ್ಮಿ ಕೊಪ್ಪುಮನೆ

**ಪೀಠಿಕೆ :**

ಯಾವುದೇ ಜಾತಿ ಅಥವಾ ಜನಾಂಗಗಳ ಅಭಿವೃದ್ಧಿಗೆ ಕೇವಲ ಬುದ್ಧಿವಂತಿಕೆ ಮಾತ್ರ ಕಾರಣವಾಗುವುದಿಲ್ಲ. ಬುದ್ಧಿವಂತಿಕೆಗೆ ತಕ್ಕಂತೆ ಅವಕಾಶಗಳು ದೊರೆತು, ತಮ್ಮ ತಮ್ಮವರ ಏಳಿಗೆಗೆ ಅವಕಾಶ ಪಡೆದವರೂ ನೆರವಾದರೆ ಮಾತ್ರ ಆ ಸಮೂಹದ ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಸುಧಾರಣೆ ಸಾಧ್ಯ. ಈ ಮೂರು ರೀತಿಯಲ್ಲಿ ಸುಧಾರಿಸಿದವರು ಉನ್ನತ ಅಥವಾ ಆಧುನಿಕ ರೀತಿಯ ಆಲೋಚನೆಗಳನ್ನು ಹೊಂದುವಲ್ಲಿಯೂ ತನ್ನಿಂತಾನೇ ಬೆಳವಣಿಗೆ ಹೊಂದುವುದು ಸಹಜ. ನಮ್ಮ ಸಮಾಜದಲ್ಲಿ ಇಂಥ ಅವಕಾಶಗಳನ್ನು ಪಡೆದು ಬೆಳೆದವರಲ್ಲಿ ಬ್ರಾಹ್ಮಣರು ಪ್ರಧಾನರು. ಪರ್ಷಿಯನ್ ಭಾಷೆ ಕಲಿತವರಿಗೆ ಮುಸ್ಲಿಂ ರಾಜ್ಯದಲ್ಲಿ ಮೇಲ್ದರ್ಜೆಯ ಹುದ್ದೆಗಳಲ್ಲಿ ನೇಮಕ ಹೊಂದುವ ಅವಕಾಶವಿದ್ದುದರಿಂದ, ಬ್ರಿಟಿಷರು ಅಧಿಕಾರಕ್ಕೆ ಬರುವವರೆಗೆ, ಪರ್ಷಿಯನ್ ಭಾಷೆಯನ್ನು ಬಲ್ಲವರಾಗಿದ್ದ ಬ್ರಾಹ್ಮಣರೇ ಹೆಚ್ಚಿನ ಸಂಖ್ಯೆಯಲ್ಲಿ ರಾಜರ ಆಸ್ಥಾನದ ಹುದ್ದೆಗಳಲ್ಲಿ ನೇಮಕಗೊಂಡಿದ್ದರು. ಹಿಂದುಳಿದ ವರ್ಗಗಳ ಜನಾಂಗದವರು ಶಿಕ್ಷಣ, ನೇಮಕಾತಿ, ಅಧಿಕಾರ ಹಾಗೂ ಆರ್ಥಿಕ ಸ್ವಾತಂತ್ರ್ಯ ಈ ಯಾವುದೂ ಇಲ್ಲದೆ ಈ ಎಲ್ಲ ಅಂಶಗಳಿಂದ ವಂಚಿತರಾಗಿದ್ದರು. ಸ್ವಾತಂತ್ರ್ಯ ಪೂರ್ವದಲ್ಲಿ ಸಮಾಜ ಸುಧಾರಕರಾದ ರಾಜಾರಾಮ ಮೋಹನರಾಯರು (೧೭೭೪-೧೮೩೩) ನ್ಯಾಯಾಲಯದ ಭಾಷೆಯಾಗಿದ್ದ ಪರ್ಷಿಯನ್ ಭಾಷೆಯನ್ನು ರದ್ದುಗೊಳಿಸಿ, ಇಂಗ್ಲಿಷ್ ಭಾಷೆಯನ್ನು ೧೮೩೦ರಲ್ಲಿ ಜಾರಿಗೆ ತಂದಿದ್ದು ಕೆಳವರ್ಗದ ಜನರೂ ಮತ್ತು ಹೆಣ್ಣು ಮಕ್ಕಳೂ ಸೇರಿದಂತೆ ಭಾರತದ ಎಲ್ಲ ಜನಾಂಗಗಳಿಗೆ ಅನುಕೂಲ ಮಾಡಿಕೊಟ್ಟಂತಾಯಿತು. ಬ್ರಿಟಿಷರು (೧೮೪೪ರಲ್ಲಿ) ಆರಂಭಿಸಿದ ಶಾಲೆಗಳಲ್ಲಿ ಶಿಕ್ಷಣ ಪಡೆದವರಿಗೆ ಸರ್ಕಾರದ ಉದ್ಯೋಗಕ್ಕೆ ಆಯ್ಕೆ ಮಾಡಲು ಕಲ್ಪಿಸಿಕೊಟ್ಟ ಅವಕಾಶವನ್ನು ಹೆಣ್ಣುಮಕ್ಕಳು ಮತ್ತು ಕೆಳವರ್ಗದವರು ಬಳಸಿಕೊಳ್ಳಲು ಸಾಧ್ಯವಾಯಿತು ಮತ್ತು ವಿದ್ಯಾಭ್ಯಾಸದ ಮೂಲಕ ತಮ್ಮ ಪರಿಸ್ಥಿತಿಗಳ ಬಗ್ಗೆ ಅರಿವು ಮೂಡಿಸಿಕೊಂಡು ಪ್ರಗತಿಗೆ, ಸಮಾನತೆಗೆ ಬೇಕಾದ ಸವಲತ್ತುಗಳನ್ನು ಹೊಂದುವ ಬಗ್ಗೆ ಯೋಚಿಸಲು ಅನುವಾಯಿತು.

***ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳ ಪ್ರಗತಿಗೆ ಕಟ್ಟಿದ ಮೊದಲ ಮೆಟ್ಟಿಲು ಮೀಸಲಾತಿ. ಗ್ರಾಮಾಭಿವೃದ್ಧಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ನಡೆದ ಹೋರಾಟವಲ್ಲವಾದರೂ ಮೀಸಲಾತಿಯಿಂದ ಗ್ರಾಮಸ್ಥರ ಪ್ರಗತಿಗೆ ಸಹಾಯಕವಾಗಿರುವುದು ಸತ್ಯದ ಸಂಗತಿ.***

ಪೂನಾ ಚಳವಳಿಗೆ ಕಾರಣಕರ್ತರಾದ ತೋಟಮಾಲಿಯೂ ಶೂದ್ರರೂ ಆದ ಪುಣೆಯ ಜ್ಯೋತಿಬಾ ಫುಲೆಯವರು ಕೆಳವರ್ಗಗಳ ಸುಧಾರಣೆಗಾಗಿ ಪುಸ್ತಕಗಳನ್ನು ಬರೆದುದು ; ಅಸ್ಪೃಶ್ಯರಿಗಾಗಿ ತಮ್ಮ ಬಾವಿಯನ್ನು ಬಳಸಲು ನೀಡಿದುದು; ಜ್ಯೋತಿ ಬಸುರವರು ಹಿಂದೂ ಜಾತೀಯ ಪದ್ಧತಿಗಳನ್ನು ಕಡಿಮೆಗೊಳಿಸಲು ಬೋಧನೆ ಮತ್ತು 'Espirit-de-Corps' ಸಂಸ್ಥೆಯನ್ನು ಕಟ್ಟಿದುದು ; ಹಿಂದುಳಿದ ವರ್ಗದವರನ್ನು ಸಂಘಟಿಸಲು ಬ್ರಹ್ಮ ನೇತ್ರ ಚಳವಳಿ ಎಂದು ಕರೆಯಲಾದ ಸತ್ಯ ಶೋಧಕ ಮಂಡಳಿಯನ್ನು ಸ್ಥಾಪಿಸಿದುದು ; ಮಹಾರಾಷ್ಟ್ರದ ಒಂದು ರಾಜ್ಯವಾದ ಕೊಲ್ಲಾಪುರದಲ್ಲಿ ಛತ್ರಪತಿ ಶಾಹು ತಂದೆಯ ಮರಣಾನಂತರ ತಾನೇ ರಾಜನಾಗಿ ತನ್ನ ರಾಜ್ಯದ ಕನಿಷ್ಠ ಅರ್ಧದಷ್ಟು ಹುದ್ದೆಗಳನ್ನು ಬ್ರಾಹ್ಮಣೇತರರಿಗೆ ಮೀಸಲಿಡುವ ಕುರಿತಾಗಿ ಘೋಷಿಸಿದುದು ; ಎಲ್ಲ ಕೋಮಿನವರಿಗೆ ಸಮಾನತೆ ನೀಡಲು ಮರಾಠ, ಮುಸಲ್ಮಾನ ಮತ್ತು ಜೈನ ಜಾತಿಗೆ ಸೇರಿದ ಗ್ರಾಮೀಣ ವಿದ್ಯಾರ್ಥಿಗಳಿಗಾಗಿ, ಕೊಲ್ಲಾಪುರದಲ್ಲಿ ಒಂದು ವಿದ್ಯಾರ್ಥಿ ನಿಲಯವನ್ನು ಆರಂಭಿಸಿದ್ದು ಇವೆಲ್ಲ ಹಿಂದುಳಿದ ವರ್ಗಗಳ ಏಳಿಗೆಯ ಮೂಲಕ ಗ್ರಾಮೀಣ ಅಭಿವೃದ್ಧಿಗೂ ಹಿನ್ನೆಲೆಯಾದ ಕೆಲವು ಪ್ರಮುಖ ಘಟನೆಗಳು.

### ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳಿಗಾಗಿ ಮೀಸಲಾತಿ :

ಕರ್ನಾಟಕದಲ್ಲಿ ಹಿಂದುಳಿದ ವರ್ಗಗಳ ಪ್ರಗತಿಗಾಗಿ ಕಟ್ಟಿದ ಮೊದಲ ಮೆಟ್ಟಿಲು ಮೀಸಲಾತಿಯದು. ಗ್ರಾಮಾಭಿವೃದ್ಧಿಯೊಂದನ್ನೇ ದೃಷ್ಟಿಯಲ್ಲಿಟ್ಟುಕೊಂಡು ನಡೆದ ಹೋರಾಟ ಇದಲ್ಲವಾದರೂ, ಈ ಮೀಸಲಾತಿ ಕ್ರಮಗಳಿಂದ ಪರೋಕ್ಷವಾಗಿ ಗ್ರಾಮೀಣ ಪ್ರದೇಶಗಳ ಮತ್ತು ಗ್ರಾಮಸ್ಥರ ಪ್ರಗತಿಗೆ ಸಹಾಯವಾಗಿರುವುದು ಸತ್ಯ. ಸ್ವಾತಂತ್ರ್ಯ ಪೂರ್ವದಲ್ಲಿಯೇ ಹಿಂದುಳಿದ ವರ್ಗಗಳಿಗೆ ಮೀಸಲಾತಿಯನ್ನು ನೀಡಿರುವುದು ಕಂಡುಬರುತ್ತದೆ. ೧೮೭೫ರಲ್ಲಿ ಪೊಲೀಸ್ ಇಲಾಖೆಯ ನೇಮಕಾತಿಗಳಲ್ಲಿ ಬ್ರಾಹ್ಮಣೇತರರಿಗೂ ನಿಗದಿತ ಪ್ರಮಾಣದಲ್ಲಿ ನೇಮಕಾತಿಗೆ ಮೀಸಲಾತಿ ನೀಡಿದ ಮೇಲೆ, ಹಿಂದುಳಿದ ವರ್ಗಗಳಿಗೆ ಕೆಲವು ಹುದ್ದೆಗಳನ್ನು ಮೀಸಲಿರಿಸಿದ ಕುರಿತು ಒಂದು ಸುತ್ತೋಲೆಯನ್ನು ಮೈಸೂರು ಸರ್ಕಾರ ಹೊರಡಿಸಿತು. ಈ ಸಮಯದಲ್ಲಿ, ಬ್ರಿಟಿಷ್ ಸರ್ಕಾರವು ಸರ್ಕಾರದ ಹುದ್ದೆಗಳಿಗೆ ಮದ್ರಾಸ್ ಬ್ರಾಹ್ಮಣರನ್ನೇ ನೇಮಕಗೊಳಿಸುತ್ತಿದ್ದು, 'ಮೈಸೂರು ಮೈಸೂರಿನವರಿಗೆ' ಎಂಬ ಮದ್ರಾಸ್ ಬ್ರಾಹ್ಮಣರ ನೇಮಕಾತಿ ವಿರೋಧಿ ಕೂಗು ಎದ್ದು, ಮದ್ರಾಸ್ ಬ್ರಾಹ್ಮಣರ ನೇಮಕಾತಿ ನಿಂತುಹೋಯಿತು. ಆದರೆ ಶಿಕ್ಷಣದ ಕೊರತೆಯಿಂದಾಗಿ ಹಿಂದುಳಿದವರಿಗೆ ಸರ್ಕಾರಿ ಹುದ್ದೆಗಳು ದುರ್ಲಭವಾಗಿ, ಈ ಬಗ್ಗೆ ಪ್ರಜಾಪ್ರತಿನಿಧಿ ಸಭೆಗಳಲ್ಲಿ ಪ್ರಮುಖ ಚರ್ಚಾಸ್ಪದ ವಿಷಯವಾಯಿತು. ಮೈಸೂರಿನ ಬ್ರಾಹ್ಮಣರ ನೇಮಕಾತಿಯ ವಿರುದ್ಧ ಒಕ್ಕಲಿಗರು ಮತ್ತು ಲಿಂಗಾಯಿತರ ಪ್ರತಿಭಟನೆ ಆರಂಭಗೊಂಡಿತು. ಒಕ್ಕಲಿಗರ ಸಂಘ (೧೯೦೬), ವೀರಶೈವ ಮಹಾಸಭಾ (೧೯೦೯)ಗಳು, ಸೆಂಟ್ರಲ್ ಮಹಮಡನ್ ಅಸೋಸಿಯೇಷನ್ (೧೯೦೯) ಆರಂಭಗೊಂಡು ಹಿಂದುಳಿದ ವರ್ಗಗಳ ಚಟುವಟಿಕೆಗಳಿಗೆ ತಳಪಾಯ ಹಾಕಿಕೊಟ್ಟವು. ೧೯೧೭ರಲ್ಲಿ ಸ್ಥಾಪನೆಗೊಂಡಿದ್ದು 'ಪ್ರಜಾಮಿತ್ರ ಮಂಡಲಿ'.

### 'ಮಿಲ್ಲರ್ಸ್ ಕಮಿಟಿ' :

ಆಗಿನ ದಿವಾನರಾದ ಸರ್. ಎಂ. ವಿಶ್ವೇಶ್ವರಯ್ಯನವರು ಹೆಚ್ಚಿನ ಜನಸಂಖ್ಯೆಯು ಹಿಂದುಳಿದಿರುವುದಕ್ಕೆ ಅವಿದ್ಯೆಯೇ ಕಾರಣವೆಂದು ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಗಳನ್ನೂ, ಬಡ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಹಣದ ನೆರವಾಗಿ ವಿದ್ಯಾರ್ಥಿವೇತನ ನೀಡುವುದನ್ನೂ ಆರಂಭಿಸಿದ್ದರು. ಗ್ರಾಮೀಣ ಕೈಗಾರಿಕೆಗಳು ಹಾಗೂ ಆಧುನಿಕ ರೀತಿಯ ಕೃಷಿ ಪದ್ಧತಿಯನ್ನು ಅನುಸರಿಸಲು ಪ್ರೋತ್ಸಾಹ ನೀಡಿ, ಈ ಜನರ ಕ್ಷೇಮಾಭಿವೃದ್ಧಿಗೆಂದು ಅನೇಕ ಯೋಜನೆಗಳನ್ನು ತಯಾರಿಸಿದ್ದರು. ಆದರೆ ಸರ್ಕಾರಿ ಹುದ್ದೆಗಳ ವಿಷಯದಲ್ಲಿ ಮಾತ್ರ 'ಸರ್ವೋತ್ತಮ ವ್ಯಕ್ತಿಗೇ ನೌಕರಿ' ಎಂಬ ನೀತಿಯನ್ನು ಅನುಸರಿಸಬೇಕೆಂಬುದೇ ಅವರ ಗಟ್ಟಿ ಅಭಿಪ್ರಾಯವಾಗಿತ್ತು.

ವಿಶ್ವೇಶ್ವರಯ್ಯನವರ ಈ ನೀತಿಯನ್ನು ಅಲ್ಲಗಳೆದು, ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು, ರಾಜ್ಯದ ಇತರ ಜನಾಂಗದವರಿಗೆ ಹೆಚ್ಚಿನ ಪ್ರಾತಿನಿಧ್ಯ ನೀಡುವ ಉತ್ತಮ ಉದ್ದೇಶದಿಂದ, ಮುಖ್ಯ ನ್ಯಾಯಾಲಯದ ಆಗಿನ ಮುಖ್ಯ ನ್ಯಾಯಾಧೀಶರಾದ ಸರ್ ಲೆಸ್ಲಿ ಮಿಲ್ಲರ್‌ರವರ ಅಧ್ಯಕ್ಷತೆಯಲ್ಲಿ ೨೩ನೇ ಆಗಸ್ಟ್ ೧೯೧೮ರಲ್ಲಿ ಒಂದು ಸಮಿತಿಯನ್ನು ರಚಿಸಿದರು. ವಿಶ್ವೇಶ್ವರಯ್ಯನವರಿಗೂ ಮಹಾರಾಜರಿಗೂ ಈ ವಿಷಯದಲ್ಲಿ ಬಂದ ಭಿನ್ನಾಭಿಪ್ರಾಯದಿಂದಾಗಿ ವಿಶ್ವೇಶ್ವರಯ್ಯನವರು ದಿವಾನ ಹುದ್ದೆಗೆ ರಾಜೀನಾಮೆ ಕೊಟ್ಟಿದ್ದು, ಅವರ ಸ್ಥಾನಕ್ಕೆ

ಎಂ. ಕಾಂತರಾಜ ಅರಸ್‌ರವರು ನೇಮಕಗೊಂಡರು. ಪ್ರಥಮ ಬ್ರಾಹ್ಮಣೇತರ ದಿವಾನರಾಗಿದ್ದ ಇವರು, ಹಿಂದುಳಿದ ವರ್ಗಗಳ ಪ್ರಗತಿಗಾಗಿ ಹೆಚ್ಚಿನ ಗಮನ ನೀಡಿದ್ದು, ಸರ್ಕಾರಿ ಸೇವೆಗಳಲ್ಲಿ ಹಿಂದುಳಿದ ಜಾತಿಗಳ ಪ್ರಾತಿನಿಧ್ಯಕ್ಕೆ ಅವಕಾಶವಾಯಿತು.

ನೇಮಕಾತಿಯಲ್ಲಿ ಪ್ರಾತಿನಿಧ್ಯ ಹೆಚ್ಚಿಸುವ ಮೂಲಕ ರಾಜ್ಯದಲ್ಲಿ ಹಿಂದುಳಿದವರ ಕಲ್ಯಾಣಕ್ಕಾಗಿ ರಚಿತವಾದ ಮೊಟ್ಟ ಮೊದಲ ಸಮಿತಿಯೇ ಈ 'ಮಿಲ್ಲರ್ಸ್ ಕಮಿಟಿ'. ಇತರ ಶಿಫಾರಸ್ಸುಗಳೊಂದಿಗೆ, ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗಾಗಿ ವಿಶೇಷ ಶಾಲೆಗಳ ಆರಂಭ, ಈ ವಿದ್ಯಾರ್ಥಿಗಳ ವಯೋಮಿತಿಯು ೨೫ರಿಂದ ೨೮ಕ್ಕೆ ಏರಿಕೆ, ಹಿಂದುಳಿದ ವರ್ಗದವರಿಂದ ಶಿಕ್ಷಕರ ನೇಮಕ, ಇಂಗ್ಲಿಷ್ ಕಡ್ಡಾಯ, ನಾಮ ನಿರ್ದೇಶನದ ಮೂಲಕ ಹಿಂದುಳಿದ ವರ್ಗದ ಅಭ್ಯರ್ಥಿಗಳ ಭರ್ತಿ-ಇವು ಈ ಸಮಿತಿಯ ಶಿಫಾರಸ್ಸುಗಳು. ಈ ಸಮಿತಿಯ ವರದಿಯನ್ನು ಅಂಗೀಕರಿಸಿದ ಸರ್ಕಾರವು, ೧೯೨೭ ರಿಂದ ೧೯೫೫ರವರೆಗೆ, ನೇಮಕಾತಿಯಲ್ಲಿ ಜಾತಿಯ ಆಧಾರದ ಮೇಲೆ, ಹಿಂದುಳಿದ ವರ್ಗದವರಿಗೆ ಶೇಕಡಾ ೭೫ರಷ್ಟು ಮೀಸಲಾತಿ ನಿಗದಿಪಡಿಸಿತು.

### 'ಬ್ಯಾಕ್‌ವರ್ಡ್ ಕ್ಲಾಸಸ್ ಕಮಿಟಿ' :

೧೯೫೬ನೇ ಇಸವಿ ಎಂದರೆ ರಾಜ್ಯದ ಏಕೀಕರಣದ ಸಂದರ್ಭ. ವಿವಿಧ ರಾಜ್ಯಗಳ ಭಾಗಗಳನ್ನೊಳಗೊಂಡ ಹೊಸ ಮೈಸೂರು ರಾಜ್ಯದ ರಚನೆಯಾದ ಕಾಲ. ಹೊಸ ರಾಜ್ಯದಲ್ಲಿ ಯಾವ ಭಾಗದವರು ಯಾವ ರಾಜ್ಯದ ಮೀಸಲಾತಿ ನಿಯಮವನ್ನನುಸರಿಸಬೇಕು? ಒಂದು ಪ್ರಾಂತ್ಯದ ಹಿಂದುಳಿದ ಜಾತಿ ಇನ್ನೊಂದೆಡೆ ಮುಂದುವರಿದವರೆಂಬ ನೀತಿ, ಒಂದು ಪ್ರಾಂತ್ಯದ ಕೆಲ ಹಿಂದುಳಿದ ಜಾತಿ ಇನ್ನೊಂದೆಡೆ ಪರಿಶಿಷ್ಟ ಜಾತಿ ಎಂಬ ಪರಿಗಣನೆ. ಇದರಿಂದ ಮೀಸಲಾತಿ ನಿಯಮ ಪಾಲನೆಯಲ್ಲಿ ಸಂಪೂರ್ಣ ತೊಡಕಿನ ವಾತಾವರಣ. ಇದರ ನಿವಾರಣೆಗೆಂದು, ಬ್ರಾಹ್ಮಣರನ್ನು ಬಿಟ್ಟು ಇತರ ಎಲ್ಲ ಜಾತಿ ಮತ್ತು ಕೋಮಿನ ಜನಾಂಗಗಳನ್ನು ಹಿಂದುಳಿದವರೆಂದು ೧೯೫೮ರಲ್ಲಿ ಸರ್ಕಾರವು ಒಂದು ಆದೇಶವನ್ನು ಹೊರಡಿಸಿತು. ಆ ನಂತರ ಸಾಮಾಜಿಕ ಮತ್ತು ಶೈಕ್ಷಣಿಕ ಹಾಗೂ ರಾಜ್ಯ ನೇಮಕಾತಿ ವಿಷಯದಲ್ಲಿ ಹಿಂದುಳಿದವರನ್ನು ಗುರುತಿಸುವ ದೃಷ್ಟಿಯಿಂದ ಎಸ್. ನಿಜಲಿಂಗಪ್ಪನವರು ರಾಜ್ಯದ ಮುಖ್ಯಮಂತ್ರಿಯಾಗಿದ್ದ ಸಮಯದಲ್ಲಿ ಶಾಸಕರಾದ ಡಾ. ನಾಗನಗೌಡರವರ ಅಧ್ಯಕ್ಷತೆಯಲ್ಲಿ 'ಬ್ಯಾಕ್‌ವರ್ಡ್ ಕ್ಲಾಸಸ್ ಕಮಿಟಿ'ಯೊಂದರ ರಚನೆ. ಈ ಸಮಿತಿಯು ೧೯೬೧ರಲ್ಲಿ ಸಲ್ಲಿಸಿದ ವರದಿಯಲ್ಲಿ ಸರ್ಕಾರಿ ಸೇವೆಗಳಲ್ಲಿ ಪ್ರಾತಿನಿಧ್ಯ, ಪ್ರೌಢಶಾಲೆಗಳಲ್ಲಿನ ವಿದ್ಯಾರ್ಥಿಗಳ ಸಂಖ್ಯೆ ಮತ್ತು ಸಾಮಾಜಿಕ ಪರಿಸ್ಥಿತಿಗಳನ್ನು ಆಧರಿಸಿ ಕೆಲವು ಜಾತಿಗಳನ್ನು ಹಿಂದುಳಿದವರೆಂದೂ, ಇನ್ನು ಕೆಲವು ಜಾತಿಗಳನ್ನು ಅತ್ಯಂತ ಹಿಂದುಳಿದವರೆಂದೂ ಪಟ್ಟಿ ಮಾಡಿತು. ಅದರಂತೆ ಶೇ. ಇಪ್ಪತ್ತೊಂದರಷ್ಟು ಹಿಂದುಳಿದ ವರ್ಗಗಳಿಗೂ ಮತ್ತು ಶೇ. ಇಪ್ಪತ್ತನಾಲ್ಕರಷ್ಟು ಅತ್ಯಂತ ಹಿಂದುಳಿದ ವರ್ಗಕ್ಕೂ, ಒಟ್ಟು ಶೇಕಡ ನಲವತ್ತೈದು ಪ್ರಮಾಣದ ನೇಮಕಾತಿಯನ್ನು ನಿಗದಿಪಡಿಸಿ, ೧೯೬೨ರಲ್ಲಿ ಸರ್ಕಾರವು ಆದೇಶ ಹೊರಡಿಸಿತು. ಆದರೆ ಬಾಲಾಜಿ ಮೊಕದ್ದಮೆಯಲ್ಲಿ ಸರ್ವೋಚ್ಚ ನ್ಯಾಯಾಲಯವು ಸರ್ಕಾರದ ೧೯೬೨ರ ಆದೇಶವನ್ನು ೧೯೬೩ರಲ್ಲಿ ರದ್ದುಗೊಳಿಸಿದ ಮೇಲೆ ಜಾತಿಯ ಅಂಶವನ್ನೇ ಗಣಿಸದೇ ಕೇವಲ ಆರ್ಥಿಕ ಸ್ಥಿತಿಯ ಆಧಾರದ ಮೇಲೆ, ಹೆತ್ತವರ ವಾರ್ಷಿಕ ಆದಾಯ ೧೨೦೦/- ರೂಪಾಯಿಯೊಳಗೆ ಇರುವ ಅಭ್ಯರ್ಥಿಗಳೆಲ್ಲ ಹಿಂದುಳಿದವರೆಂದು ಆದೇಶ ಹೊರಡಿಸಲಾಯಿತು. ಇದು ಮೇಲ್ವರ್ಗದವರಿಗೆ ನೆರವಾಗುವ ಆದೇಶವೆಂದು ಕೆಲವರಿಗೆ ಅನಿಸಿದರೂ, ಅಂಥವರ ಅತೃಪ್ತಿ ಹಾಗೂ ಅಸಮಾಧಾನಗಳ ಜೊತೆಯಲ್ಲಿಯೇ ೧೯೬೩ರಿಂದ ೧೯೭೭ರವರೆಗೆ ಈ ಆದೇಶವೇ ಜಾರಿಯಲ್ಲಿತ್ತು.

### ಮೊದಲನೇ ಹಿಂದುಳಿದ ವರ್ಗಗಳ ಆಯೋಗ :

೧೯೬೯ರಿಂದ ೧೯೮೦ರವರೆಗೆ ರಾಜ್ಯದ ೮ನೇ ಮುಖ್ಯಮಂತ್ರಿಯಾಗಿ ದೇವರಾಜ ಅರಸುರವರು ತಮ್ಮ ಅಧಿಕಾರಾವಧಿಯಲ್ಲಿ ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರ ಏಳಿಗೆಗಾಗಿ ಮಾಡಿದ ಕಾರ್ಯಗಳು ಗಣನೀಯ. ಹಿಂದುಳಿದ ಜನರಿಗೆ ಮೀಸಲಾತಿ ಬಗ್ಗೆ ಇದ್ದ ಅತೃಪ್ತಿ, ಅಸಮಾಧಾನಗಳನ್ನು ತೊಡೆಯಲು ದಿ. ದೇವರಾಜ ಅರಸುರವರು ಕೈಗೊಂಡ ಕ್ರಮಗಳಲ್ಲಿ ಪ್ರಮುಖವಾದುದು ಎಲ್.ಜಿ. ಹಾವನೂರುರವರ ಅಧ್ಯಕ್ಷತೆಯಲ್ಲಿ ೧೯೭೨ರಲ್ಲಿ ಮೊದಲನೇ ಹಿಂದುಳಿದ ವರ್ಗಗಳ ಆಯೋಗಗಳನ್ನು ರಚಿಸಿದ್ದು. ಈ ಆಯೋಗವು ಮೂರು ವರ್ಷಗಳವರೆಗೆ ನಾಲ್ಕು ನೂರು ಸಾಕ್ಷಿಗಳಿಂದ ಅಭಿಪ್ರಾಯಗಳನ್ನೂ ಇನ್ನೂರು ಜಾತಿಗಳಿಗೆ ಸಂಬಂಧಿಸಿದ ವಿವರಗಳನ್ನೂ, ೪೨೫ ಪರಿಶೀಲಕರ ಮೂಲಕ ೩,೫೫,೦೦೦ ವ್ಯಕ್ತಿಗಳಿಂದ ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದ ಅಂಕಿ

ಅಂಶಗಳನ್ನೂ ಸಂಗ್ರಹಿಸಿತು. ರಾಜ್ಯದ ಜಾತಿ-ಜನಾಂಗಗಳ ಕುರಿತು ಇಂಥ ವ್ಯಾಪಕ ಅಧ್ಯಯನ ನಡೆಸಿದ್ದರಲ್ಲಿ ಈ ಆಯೋಗವೇ ಪ್ರಥಮ.

ಸುಮಾರು ಇನ್ನೂರಾಐದು ಜಾತಿ-ಉಪಜಾತಿಗಳನ್ನು ಅನುಚ್ಛೇದ ೧೫(೪)ರ ಶೈಕ್ಷಣಿಕ ಉದ್ದೇಶಕ್ಕಾಗಿಯೂ, ನೂರಾ ಎಂಬತ್ತೈದು ಜಾತಿ-ಉಪಜಾತಿಗಳನ್ನು ಅನುಚ್ಛೇದ ೧೬(೪)ರ ಉದ್ಯೋಗ ಸೌಲಭ್ಯದ ಉದ್ದೇಶಕ್ಕಾಗಿಯೂ ಗುರುತಿಸಿತು. ಈ ಆಯೋಗವು, ೧೯೭೫ರ ನವೆಂಬರ್‌ನಲ್ಲಿ ಸಲ್ಲಿಸಿದ ನಾಲ್ಕು ಸಂಪುಟಗಳ ಬೃಹತ್ ಗಾತ್ರದ ತನ್ನ ವರದಿಯಲ್ಲಿ ರಾಜ್ಯದ ಎಲ್ಲ ಹಿಂದುಳಿದ ಜನಾಂಗಗಳನ್ನು ೧) ಹಿಂದುಳಿದ ಸಮುದಾಯ (ಬಿ.ಸಿ.ಎಂ.) ೨) ಹಿಂದುಳಿದ ಜಾತಿಗಳು (ಬಿ.ಸಿ.ಟಿ.) ಮತ್ತು ೩) ಹಿಂದುಳಿದ ಬುಡಕಟ್ಟು (ಬಿ.ಟಿ.)ಗಳೆಂದು ಮೂರು ಭಾಗಗಳಾಗಿ ವಿಂಗಡಿಸಿ ಶೇಕಡ ೩೨ರಷ್ಟು ಮೀಸಲಾತಿಯನ್ನು ಶಿಕ್ಷಣ ಹಾಗೂ ನೇಮಕಾತಿಗಾಗಿ ನಿಗದಿಪಡಿಸಲು ಶಿಫಾರಸು ಮಾಡಿತು.

## ಎರಡನೇ ಹಿಂದುಳಿದ ವರ್ಗಗಳ ಆಯೋಗ :

ಜಾತಿಯಿಂದಲ್ಲದೇ ಆರ್ಥಿಕವಾಗಿ ಹಿಂದುಳಿದ ಎಲ್ಲ ಜನಾಂಗವನ್ನು ಪ್ರತ್ಯೇಕವಾದ ಒಂದು ವಿಶೇಷ ಗುಂಪಾಗಿ ಪರಿಗಣಿಸಲು ಯೋಚಿಸಿದ ದೇವರಾಜ ಅರಸುರವರ ಸರ್ಕಾರ ಈ ಬಗ್ಗೆ ೧೯೭೭ರ ೨೨ನೇ ಫೆಬ್ರವರಿಯಲ್ಲಿ ಆದೇಶ ಹೊರಡಿಸಿತು. ಈ ಆದೇಶದಲ್ಲಿ ಹಲವು ಬದಲಾವಣೆಗಳನ್ನು ಮಾಡಿ ಆ ನಂತರ ಕೆಲವು ಆದೇಶಗಳಾದವಾದರೂ, ಕೆಲವು ರಿಟ್ ಅರ್ಜಿಗಳಲ್ಲಿ ಈ ಮೀಸಲಾತಿ ನೀತಿಯನ್ನು ಪ್ರಶ್ನಿಸಿದ್ದರಿಂದ, ಇದರಲ್ಲಿನ ಕೊರತೆಗಳನ್ನು ಪರಿಶೀಲಿಸಲು ಸರ್ಕಾರವು ನ್ಯಾಯಾಲಯಕ್ಕೆ ನೀಡಿದ ವಾಗ್ದಾನದಂತೆ, ಎರಡನೇ ಆಯೋಗವನ್ನು ೧೯೮೩ರ ಏಪ್ರಿಲ್ ೧೮ರಲ್ಲಿ ರಚಿಸಲಾಯಿತು.

ಟಿ. ವೆಂಕಟಸ್ವಾಮಿಯವರ ಅಧ್ಯಕ್ಷತೆಯಲ್ಲಿ ಸ್ಥಾಪನೆಗೊಂಡ ಎರಡನೇ ಹಿಂದುಳಿದ ವರ್ಗಗಳ ಆಯೋಗವು, ಹಿಂದುಳಿದಿರುವಿಕೆಯನ್ನು ಗುರುತಿಸಲು ತನ್ನದೇ ಆದ ಹದಿನೇಳು ಸೂಚಕಗಳನ್ನು ನಿರ್ಣಾಯಕ ಸೂತ್ರವಾಗಿಟ್ಟುಕೊಂಡು, ರಾಜ್ಯಾದ್ಯಂತ ಎಲ್ಲ ಜಾತಿ ಮತ್ತು ಕೋಮುಗಳ ಸಾಮಾಜಿಕ, ಆರ್ಥಿಕ ಹಾಗೂ ಶೈಕ್ಷಣಿಕ ಸಮೀಕ್ಷೆ ನಡೆಸಿತು. ಸಮಾಜದಲ್ಲಿನ ಜಾತಿ ಶ್ರೇಣೀಕರಣ, ಎಸ್.ಎಸ್.ಎಲ್.ಸಿ.ಯಲ್ಲಿ ಉತ್ತೀರ್ಣತೆ, ವೃತ್ತಿಪರ ಕೋರ್ಸ್‌ಗಳಲ್ಲಿ, ಸರ್ಕಾರಿ ಉದ್ಯೋಗಗಳಲ್ಲಿ ಪ್ರತಿ ಜಾತಿಯ ಪ್ರಾತಿನಿಧ್ಯತೆ, ವಾಸಿಸುವ ಸ್ಥಳ, ಹೊಂದಿರುವ ಮನೆ, ಆದಾಯ, ಗ್ರಾಮೀಣ ಅಥವಾ ನಾಗರಿಕ ವಾತಾವರಣ, ವಾಸದ ಪರಿಸರ ಇತ್ಯಾದಿ ಅಂಶಗಳ ಆಧಾರದ ಮೇಲೆ ರಾಜ್ಯದ ಹಿಂದುಳಿದ ಜಾತಿಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಿದ ಪಟ್ಟಿಯನ್ನು ಒಳಗೊಂಡ ಮೂರು ಸಂಪುಟಗಳ ವರದಿಯನ್ನು ೧೯೮೬ರ ಮಾರ್ಚ್‌ನಲ್ಲಿ ಈ ಆಯೋಗ ಸಲ್ಲಿಸಿತು. ಈ ಆಯೋಗವು ಅತೀವ ಕಾಳಜಿಯಿಂದ ಸಂಗ್ರಹಿಸಿದ ಹಲವಾರು ಉಪಯುಕ್ತ ಮಾಹಿತಿಗಳಿದ್ದು, ಜನಸಂಖ್ಯಾ ಮಾಹಿತಿಯನ್ನು ಸರ್ಕಾರವು ಒಪ್ಪಿತಾದರೂ, ಕೆಲವು ಜಾತಿಗಳನ್ನು ನೇಮಕಾತಿ ಮತ್ತು ಶಿಕ್ಷಣ ಈ ಎರಡೂ ಉದ್ದೇಶಗಳಿಗೆ ಹಿಂದುಳಿದವರೆಂದು ಪರಿಗಣಿಸದ ಕಾರಣ ಈ ವರದಿಯ ಬಗ್ಗೆ ಚಳುವಳಿಗಳೂ ತಕ್ಷಣದ ಪ್ರತಿಭಟನೆಗಳೂ ಆಕ್ಷೇಪಣೆಗಳೂ ಆಗಿ ಸರ್ಕಾರ ಈ ವರದಿಯನ್ವಯ ಕ್ರಮ ಕೈಗೊಳ್ಳುವುದು ಅಸಾಧ್ಯವಾಯಿತು. ಹಲವಾರು ಕಾರಣಗಳಿಗಾಗಿ, ಈ ಆಯೋಗದ ವರದಿಯನ್ನು ಸಂಪೂರ್ಣವಾಗಿ ತಿರಸ್ಕರಿಸಿ, ಶಿಕ್ಷಣ ಹಾಗೂ ಉದ್ಯೋಗದಲ್ಲಿ ಮೀಸಲಾತಿಗೆ ಸಂಬಂಧಿಸಿದಂತೆ ಮುಂದಿನ ಆಯೋಗದ ರಚನೆಯಾಗಿ, ಆಯೋಗದ ವರದಿ ಸ್ವೀಕೃತವಾಗುವವರೆಗೆ ಅನ್ವಯವಾಗುವಂತೆ ಒಂದು ಮಧ್ಯಂತರ ಮೀಸಲಾತಿ ಆದೇಶವನ್ನು ಸರ್ಕಾರವು ೧೩-೧೦-೧೯೮೬ರಲ್ಲಿ ಹೊರಡಿಸಿ, ೧೯೯೪ರವರೆಗೆ ಜಾರಿಯಲ್ಲಿಟ್ಟಿತ್ತು.

## ಮೂರನೇ ಹಿಂದುಳಿದ ವರ್ಗಗಳ ಆಯೋಗ :

ಮೂರನೇ ಹಿಂದುಳಿದ ವರ್ಗಗಳ ಆಯೋಗವು ೧೯೮೮ರ ಮೇನಲ್ಲಿ ಓ. ಚಿನ್ನಪ್ಪರೆಡ್ಡಿಯವರ ಅಧ್ಯಕ್ಷತೆಯಲ್ಲಿ ರಚನೆಯಾಯಿತು. ವೆಂಕಟಸ್ವಾಮಿಯವರ ಜನಸಂಖ್ಯಾ ಮಾಹಿತಿ ಹಾಗೂ ನ್ಯಾಯಾಲಯದ ನಿರ್ದೇಶನಗಳನ್ವಯ ಹಿಂದುಳಿದಿರುವಿಕೆಯನ್ನು ಗುರುತಿಸುವ ಮಾನದಂಡಗಳ ಮೇಲೆ, ಈ ಆಯೋಗ ೧೯೯೦ರ ಏಪ್ರಿಲ್ ೭ರಂದು ತನ್ನ ವರದಿ ಸಲ್ಲಿಸಿತು. ಈ ವರದಿಯನ್ನು ಸರ್ಕಾರವು ಅಂಗೀಕರಿಸಿ ಮೊದಲು ೨೦-೪-೧೯೯೪ರಲ್ಲಿ, ಆ ನಂತರ ೧೯-೯-೧೯೯೪ರಲ್ಲಿ ಉಪಜಾತಿಗಳೂ ಸೇರಿದಂತೆ ರಾಜ್ಯದಲ್ಲಿ ಒಟ್ಟು

೧೮೬ ಜಾತಿಗಳನ್ನು ಹಿಂದುಳಿದವರೆಂದು ಪರಿಗಣಿಸಿರುವ ಬಗ್ಗೆ ಘೋಷಿಸಲಾಯಿತು. ಹಿಂದುಳಿದವರಲ್ಲಿ ಮುಂದುವರಿದವರನ್ನು ಗುರುತಿಸಲು ಕೆನೆಪದರ ನೀತಿಯನ್ನು ಹೊಸದಾಗಿ ಅಳವಡಿಸಿದ್ದು ಈ ಆದೇಶದ ವಿಶೇಷ.

## ಶಾಶ್ವತ ಹಿಂದುಳಿದ ವರ್ಗಗಳ ಆಯೋಗ :

ಮಂಡಲ್ ಮೊಕದ್ದಮೆಯಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯವು ೧೯೯೨ರ ನವೆಂಬರ್ ೧೬ರಂದು ತೀರ್ಪು ನೀಡಿ, ಹಿಂದುಳಿದ ವರ್ಗಗಳ ಪಟ್ಟಿಗೆ ಹೆಚ್ಚುವರಿಯಾಗಿ ಮತ್ತು ಇಳುವರಿಯಾಗಿ ಸೇರ್ಪಡೆಯಾಗಿರುವ ವಿವಿಧ ಜಾತಿ, ಉಪಜಾತಿಗಳ ಕುರಿತಂತೆ ಪರಿಶೀಲಿಸಿ ಸೂಕ್ತ ಶಿಫಾರಸ್ಸುಗಳನ್ನು ನೀಡುವುದಕ್ಕಾಗಿ, ಕೇಂದ್ರದಲ್ಲಿ ಹಾಗೂ ಪ್ರತಿಯೊಂದು ರಾಜ್ಯದಲ್ಲಿ ಒಂದೊಂದು ಶಾಶ್ವತ ಹಿಂದುಳಿದ ವರ್ಗಗಳ ಆಯೋಗವನ್ನು ರಚಿಸುವಂತೆ ನಿರ್ದೇಶನ ನೀಡಿದ ಮೇಲೆ ಕರ್ನಾಟಕ ರಾಜ್ಯದಲ್ಲಿ ೧೯೯೩ರ ಫೆಬ್ರವರಿ ೨೨ರಲ್ಲಿ ಶಾಶ್ವತವಾಗಿ ಒಂದು ಹಿಂದುಳಿದ ವರ್ಗಗಳ ಆಯೋಗವನ್ನು ಸ್ಥಾಪಿಸಲಾಯಿತು. ಏಪ್ರಿಲ್ ೧೯೯೪ರಲ್ಲಿ ಕುದೂರು ನಾರಾಯಣ ರೈ ೯-೨-೯೫ರಲ್ಲಿ ರದ್ದುಗೊಳ್ಳುವವರೆಗೆ); ಡಿಸೆಂಬರ್ ೧೯೯೭ರಲ್ಲಿ ಪ್ರೊ. ರವಿವರ್ಮ ಕುಮಾರ್; ಜೂನ್ ೨೦೦೧ರಲ್ಲಿ ಮುನಿರಾಜು ಹಾಗೂ ಅಕ್ಟೋಬರ್ ೨೦೦೪ರಲ್ಲಿ ಎಸ್. ಸಿದ್ದಗಂಗಯ್ಯ ಇವರುಗಳು ಒಬ್ಬರಾದ ನಂತರ ಒಬ್ಬರಂತೆ ಈವರೆಗೆ ಈ ಆಯೋಗಕ್ಕೆ ನೇಮಕಗೊಂಡಂತಹ ಅಧ್ಯಕ್ಷರುಗಳು.

ಪ್ರೊ. ರವಿವರ್ಮ ಕುಮಾರ್‌ರವರು ಒಂದು ವಿಶೇಷ ವರದಿ ಹಾಗೂ ಎಪ್ಪತ್ತೊಂದು ಸಲಹೆಗಳನ್ನು ಡಿಸೆಂಬರ್ ೨೦೦೦ದಲ್ಲಿ ಸರ್ಕಾರಕ್ಕೆ ಸಲ್ಲಿಸಿದರು. ಸರ್ಕಾರವು ಸಂಪೂರ್ಣ ವರದಿಯನ್ನು ಪರಿಶೀಲಿಸುವುದನ್ನು ಬಾಕಿ ಇಟ್ಟು, ಕಾಗುಣಿತ ದೋಷ, ಪರ್ಯಾಯ ಪದಗಳ ಸೇರ್ಪಡೆ ಮುಂತಾದ ಅಂಶಗಳ ಕುರಿತಾಗಿದ್ದ ಎಪ್ಪತ್ತೊಂದು ಸಲಹೆಗಳನ್ನು ಸವಿವರವಾಗಿ ಪರಿಶೀಲಿಸಿ ಅದರಲ್ಲಿ ಎಪ್ಪತ್ತು ಸಲಹೆಗಳನ್ನು ಒಪ್ಪಿಕೊಂಡಿತು. ೧೭-೯-೧೯೯೪ರ ಆದೇಶದಲ್ಲಿ ಇಲ್ಲದಿದ್ದ ಹನ್ನೊಂದು ಜಾತಿಗಳ ಹೊಸ ಸೇರ್ಪಡೆ, ನಾಲ್ಕು ಜಾತಿಗಳ ಸ್ಥಳಾಂತರ, ಮುವ್ವತ್ತಾರು ಪರ್ಯಾಯ ಜಾತಿಗಳ ಸೇರ್ಪಡೆ, ಎರಡು ಜಾತಿಗಳ ಕಾಗುಣಿತ ತಿದ್ದುಪಡಿಗೆ ಈ ಆಯೋಗ ಪ್ರತ್ಯೇಕವಾದ ಸಲಹೆಗಳನ್ನು ಸಲ್ಲಿಸಿತು. ಈ ಬಗೆಗಿನ ಸಲಹೆಗಳು ಸರ್ಕಾರದ ಅನುಮೋದನೆ ಪಡೆದು, ೩೦-೩-೨೦೦೨ರಲ್ಲಿ ಹೊರಡಿಸಲಾದ ರಾಜ್ಯದ ಹಿಂದುಳಿದ ಜಾತಿ, ಉಪಜಾತಿಗಳ ಪಟ್ಟಿಯಲ್ಲಿ ಸೇರಿಸಲ್ಪಟ್ಟವು. ಅದರಂತೆ ಈಗ ರಾಜ್ಯದಲ್ಲಿ ಇನ್ನೂರಕ್ಕೂ ಹೆಚ್ಚು ಪ್ರಧಾನ ಜಾತಿಗಳು ಮತ್ತು ಸುಮಾರು ೫೯೨ ಉಪಜಾತಿಗಳು ಹಿಂದುಳಿದವೆಂಬ ವರ್ಗಕ್ಕೆ ಸೇರಿವೆ. ಈ ಜಾತಿಗಳ ಪ್ರವರ್ಗ ವಿಂಗಡಣೆ ಮತ್ತು ಶೇಕಡಾ ಮೀಸಲಾತಿ ಕೆಳಗಿನಂತಿದೆ.

| ಪ್ರವರ್ಗ | ಪ್ರಧಾನ ಜಾತಿಗಳು | ಉಪ ಜಾತಿಗಳು | ಮೀಸಲಾತಿ ಪ್ರಮಾಣ | |
|---|---|---|---|---|
| ೧ | ೯೫ | ೨೮೫ | ೪% | |
| ೨ಎ | ೧೦೨ | ೨೬೩ | ೧೫% | |
| ೨ಬಿ | ೧ | - | ೪% | |
| ೩ಎ | ೦೩ | ೩೧ | ೪% | |
| ೩ಬಿ | ೦೬ | ೧೩ | ೫% | |
| ಒಟ್ಟು | ೨೦೭ | ೫೯೨ | ೩೨% | |

## ಹಿಂದುಳಿದ ವರ್ಗದವರ ಪ್ರಗತಿಯಲ್ಲಿ ದೇವರಾಜ ಅರಸುರವರ ಪಾತ್ರ :

ರಾಜ್ಯದಲ್ಲಿ ದೀರ್ಘ ಎನ್ನಬಹುದಾದ ಅವಧಿಗೆ ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ದಿ. ದೇವರಾಜ ಅರಸುರವರು ಹಿಂದುಳಿದವರ ಬಗ್ಗೆ ನಿಜವಾದ ಕಾಳಜಿ ಹೊಂದಿದ್ದಂತಹ ವ್ಯಕ್ತಿ. ಗ್ರಾಮ, ನಗರ, ಪಟ್ಟಣ ಮುಂತಾಗಿ ಎಲ್ಲೇ ಹೋದರೂ, ಯಾವುದೇ ಸಭೆ-ಸಮಾರಂಭಗಳಲ್ಲಿ ಭಾಗಿಯಾದರೂ, ತಮ್ಮ ಕಾರ್ಯ ಮುಗಿದ ಮೇಲೆ ಅರಸುರವರ ಮನಸ್ಸು ಹೊರಳುತ್ತಿದ್ದುದು ಕೆಳವರ್ಗದವರ

ಕಡೆಗೆ. 'ಎಲ್ಲರ ನಡುವೆ ಈ ಜನರು ಕಾಣಿಸಿಕೊಳ್ಳುವುದಿಲ್ಲ. ತಮ್ಮ ಸಮಸ್ಯೆ ಹೇಳಿಕೊಳ್ಳುವುದಿಲ್ಲ' ಎಂಬ ಭಾವನೆ ಇದ್ದ ಅವರು, ಹಿಂದುಳಿದ ಜನರು ಇದ್ದಲ್ಲಿಗೇ ಹೋಗಿ ಅವರನ್ನು ಮಾತಾಡಿಸಿ, ಅವರ ತೊಂದರೆ-ತಾಪತ್ರಯಗಳ ಬಗ್ಗೆ ವಿಚಾರಿಸಿ, ಅದರ ನಿವಾರಣೆಗೆ ಆಲೋಚಿಸುತ್ತಿದ್ದಂಥವರು.

"ಸ್ತ್ರೀವಾತಃ ಪುರುಷಃ ಶಂಡಷ್ಚಂಡಾಲೋ ದ್ವಿಜ ವಂಶಜಃ । ನ ಜಾತಿ ಭೇದೋ ಲಿಂಗಾರ್ಚೆ ಸರ್ವೆ ಸರ್ವೇ ರುದ್ರ ಗಣಾಃ ಸ್ಮೃತಾಃ" ಎಂದು ಪದ್ಮರಸನ ದೀಕ್ಷಾ ಬೋಧೆಯಲ್ಲಿ ಧಾರ್ಮಿಕ ಸಮಾನತೆಯ ಒಂದು ತತ್ತ್ವವಿದೆ. ಅಂದರೆ ಶ್ವಪಚರು, ಚಂಡಾಲರು, ಸ್ತ್ರೀಯರು, ಪುರುಷರು, ಮೇಲ್ವರ್ಗದವರು, ಕೆಳವರ್ಗದವರು, ಜಾತಿ ಭೇದವಿಲ್ಲದೇ ಯಾರೇ ಇರಲಿ ಶುದ್ಧ ಮನಸ್ಸಿನಿಂದ ಲಿಂಗಾರ್ಚನೆಯನ್ನು ಮಾಡಿದರೆ ಅವರೆಲ್ಲರೂ ರುದ್ರಗಣದಲ್ಲಿ ಒಂದಾಗುವರು, ಎಂದರೆ ಯಾವುದೇ ತಾರತಮ್ಯವಿಲ್ಲದೇ ಶಿವೈಕ್ಯರಾಗುವರು ಎಂಬುದು ಈ ಉಕ್ತಿಯ ಅರ್ಥ. ದೇವರಾಜ ಅರಸುರವರು ಇಂಥದೇ ಒಂದು ಸಮಾನತೆಯ ನೀತಿಯನ್ನಿಟ್ಟುಕೊಂಡು ಹಿಂದುಳಿದವರನ್ನು ಆರ್ಥಿಕವಾಗಿ ಹಾಗೂ ಶೈಕ್ಷಣಿಕವಾಗಿ ಮೇಲ್ದರ್ಜೆಗೇರಿಸಿದರೆ ಸಮಾಜದಲ್ಲಿ ಸಮಾನತೆಯನ್ನು ತರಬಹುದೆಂಬ ನಂಬಿಕೆಯಿಂದ ಅದಕ್ಕಾಗಿ ಹಲವು ರೀತಿಯಲ್ಲಿ ಪ್ರಯತ್ನಿಸಿದರು, ಶ್ರಮಿಸಿದರು. ಡಾ. ಅಂಬೇಡ್ಕರ್‌ರವರು ಹರಿಜನ, ಗಿರಿಜನರನ್ನು ಮೇಲೆತ್ತಲು ಶ್ರಮಿಸಿದ ಹಾಗೆಯೇ ಅರಸುರವರು ಹಿಂದುಳಿದವರನ್ನು ಮೇಲೆತ್ತಲು ಸದಾ ಪ್ರಯತ್ನಿಸಿದವರು. ಆದ್ದರಿಂದಲೇ ಅಸ್ಪೃಶ್ಯರ ಉದ್ಧಾರದ ವಿಷಯದಲ್ಲಿ ಡಾ. ಅಂಬೇಡ್ಕರ್‌ರವರನ್ನು ಪ್ರಮುಖ ಪಾತ್ರವಾಗಿ ಉಲ್ಲೇಖಿಸುವ ಹಾಗೆ, ಹಿಂದುಳಿದವರ ಅಭ್ಯುದ್ಧಿಯ ಕ್ಷೇತ್ರದಲ್ಲಿ ಅರಸುರವರನ್ನು ಪ್ರಧಾನ ಪಾತ್ರವಾಗಿ ಉಲ್ಲೇಖಿಸಲಾಗುತ್ತದೆ.

ಹಿಂದುಳಿದ ವರ್ಗದ ಜನರನ್ನು, ಗ್ರಾಮೀಣ ಕೃಷಿಗಾರರ ಸ್ಥಿತಿಯನ್ನು ಸುಧಾರಿಸಿದುದರಲ್ಲಿ ಅರಸುರವರ ಕಾಣಿಕೆ ಬಹುದೊಡ್ಡದು. ಇವರು ಕೈಗೊಂಡಿದ್ದು ಚರಿತ್ರೆಯ ಪುಟಗಳಲ್ಲಿ ದಪ್ಪಕ್ಷರಗಳಲ್ಲಿ ದಾಖಲಾಗುವಂತಹ ಕ್ರಮಗಳು. ಒಡೆಯನ ಹೊಲವನ್ನು ಉತ್ತಿ ಬಿತ್ತಿ ಸಂಪೂರ್ಣವಾಗಿ ನೋಡಿಕೊಂಡರೂ ಹೊಟ್ಟೆ ತುಂಬ ತಿನ್ನಲೂ ಸಿಗದೇ ಹೋಗುತ್ತಿದ್ದ ಗೇಣಿಯ ಮೇಲೆ ಕೆಲಸ ಮಾಡುವವರ ಸಂಕಷ್ಟಗಳನ್ನು ಅರಿತು, 'ಉಳುವವನೇ ಹೊಲದ ಒಡೆಯ' ಎಂಬ ಮಾತನ್ನು ನಿಜವಾಗಿಸಿದರು. ಅವರು ರಾಜ್ಯದ ಮುಖ್ಯಮಂತ್ರಿಯಾಗಿದ್ದ ಸಮಯದಲ್ಲಿ ಕರ್ನಾಟಕ ಭೂ ಸುಧಾರಣೆಗಳ ಕಾಯಿದೆಯ ರಚನೆಯಾಯಿತು. ಭೂ ಸುಧಾರಣೆ ಮಂಡಳಿ ಗ್ರಾಮಗಳ ಪ್ರಬಲ ಕೋಮುಗಳಿಂದ ಗೇಣಿದಾರರನ್ನು ರಕ್ಷಿಸಿತು. ಸಂಘಟಿತರಲ್ಲದ ಅಮಾಯಕ, ಅವಿದ್ಯಾವಂತ ಇದರಿಂದ ಮತ್ತು ದುರ್ಬಲ ವರ್ಗಕ್ಕೆ ನ್ಯಾಯ ದೊರಕುವಂತಾಯಿತು. ಇದರಿಂದ ಈ ವರ್ಗಕ್ಕೆ ಇವರು ಇನ್ನಿತರರೊಂದಿಗೆ ಸೇರಿ ಸಂಘಟನೆ, ಚರ್ಚೆ, ಸಾಧನೆಗಳಿಗೆ, ಪರೋಕ್ಷವಾಗಿ ಅನುಕೂಲವೂ ಆಯಿತು.

ಅರಸುರವರು ಮುಖ್ಯಮಂತ್ರಿಯಾಗಿದ್ದ ಕಾಲದಲ್ಲಿ ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರ ಸರ್ವತೋಮುಖ ಬೆಳವಣಿಗೆಗಾಗಿ, ಅವರ ಜೀವನ ಮಟ್ಟವನ್ನು ಉತ್ತಮಗೊಳಿಸುವ ದೃಷ್ಟಿಯಿಂದ, ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರ ಇಲಾಖೆ ಮತ್ತು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಗಳನ್ನು ೧೯೭೭ರಲ್ಲಿ ಸ್ಥಾಪಿಸಿದ್ದು ಹಿಂದುಳಿದ ಜನಾಂಗಕ್ಕೆ ಅವರು ನೀಡಿದ ಒಂದು ವರ. ಪ್ರತ್ಯೇಕ ಇಲಾಖೆಯ ಸ್ಥಾಪನೆಗೆ ಮುನ್ನ ಹಿಂದುಳಿದ ವರ್ಗ ಮತ್ತು ಅಲ್ಪಸಂಖ್ಯಾತರಿಗೆ ಸಂಬಂಧಿಸಿದಂತೆ ಸಮಾಜ ಕಲ್ಯಾಣ ಇಲಾಖೆಯಿಂದ ಜಾರಿಗೊಳ್ಳುತ್ತಿದ್ದ ಕಾರ್ಯಕ್ರಮಗಳು, ಆ ನಂತರ ಈ ಇಲಾಖೆ ಮತ್ತು ನಿಗಮಗಳಿಗೆ ವರ್ಗಾವಣೆಗೊಂಡವು. ಹೊಸ ಹೊಸ ಕಾರ್ಯಕ್ರಮಗಳು ರೂಪುಗೊಂಡು ಕಾರ್ಯಕ್ರಮಗಳು, ಯೋಜನೆಗಳು, ಒದಗಿಸುವ ಆಯವ್ಯಯಗಳು ಹೆಚ್ಚಿದವು. ಈ ಎಲ್ಲದರ ಜೊತೆಗೆ ಹಿಂದುಳಿದವರಿಗೆ ಕಲ್ಪಿಸಿದ ಸೌಲಭ್ಯಗಳು ಹಾಗೂ ಅವಕಾಶಗಳು ಹೆಚ್ಚಿ, ಗ್ರಾಮೀಣ ವಿದ್ಯಾರ್ಥಿಗಳಿಗೆ ವಿದ್ಯೆ, ನೇಮಕಾತಿ, ವೃತ್ತಿಪರ ಕೋರ್ಸುಗಳ ಪ್ರವೇಶ, ಸ್ವಂತ ಉದ್ಯೋಗ ಇತ್ಯಾದಿ ಹಲವು ರೀತಿಯ ಬೆಳವಣಿಗೆ ಸಾಧ್ಯವಾಯಿತು. ದೇವರಾಜ ಅರಸುರವರು ರಚಿಸಿದ ಹಿಂದುಳಿದ ವರ್ಗಗಳ ಆಯೋಗ, ಹಿಂದುಳಿದ ವರ್ಗಗಳ ಇಲಾಖೆ ಮತ್ತು ಅಭಿವೃದ್ಧಿ ನಿಗಮ ಮುಂತಾದವುಗಳು ಹಿಂದುಳಿದ ಗ್ರಾಮೀಣ ವರ್ಗದ ಜನರಿಗಾಗಿ ಒದಗಿಸುತ್ತಿರುವ ಸೌಲಭ್ಯಗಳು, ಹಾಕಿಕೊಂಡಿರುವ ಕಾರ್ಯಕ್ರಮಗಳು, ಸಾಲ ಯೋಜನೆಗಳು, ಇತ್ಯಾದಿಗಳ ಕುರಿತು ಒಂದು ಸಂಕ್ಷಿಪ್ತ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ.

**ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆಗಳಿಂದ ಹಿಂದುಳಿದ ವರ್ಗದವರಿಗೆ ಸಿಗುವ ಸೌಲಭ್ಯಗಳು :**

೧. **ಐ.ಎ.ಎಸ್. / ಐ.ಪಿ.ಎಸ್.ಗೆ ಪೂರ್ವ ಸಿದ್ಧತೆಗೆ ತರಬೇತಿ:** ಐ.ಎ.ಎಸ್. / ಐ.ಪಿ.ಎಸ್. ಮುಂತಾದ ನಾಗರಿಕ ಸೇವೆಗಳ ನೇಮಕಾತಿಗಾಗಿ, ಕೇಂದ್ರ ಲೋಕ ಸೇವಾ ಆಯೋಗದಿಂದ ನಡೆಸಲಾಗುವ ಸ್ಪರ್ಧಾತ್ಮಕ ಪರೀಕ್ಷೆಗೆ ಹಾಜರಾಗುವ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಿ ಪ್ರತಿಷ್ಠಿತ ಖಾಸಗಿ ಬೋಧನಾ ಕೇಂದ್ರಗಳ ಮೂಲಕ ಪರೀಕ್ಷಾ ಪೂರ್ವ ತರಬೇತಿ ನೀಡಿ, ವಿದ್ಯಾರ್ಥಿಗಳನ್ನು ಉನ್ನತ ಮಟ್ಟದ ಈ ಪರೀಕ್ಷೆಗಳಿಗೆ ಹಾಜರಾಗುವ ಮೇಲುವರ್ಗದವರ ಜೊತೆ ಸಮಾನವಾಗಿ ಸ್ಪರ್ಧಿಸುವ ಬೌದ್ಧಿಕ ಸಾಮರ್ಥ್ಯವನ್ನು ತುಂಬಿ ಕೊಡುವುದು ಈ ಕಾರ್ಯಕ್ರಮದ ಉದ್ದೇಶ. ಬೋಧನಾ ಕೇಂದ್ರಗಳು ವಿಧಿಸುವ ಬೋಧನಾ ಶುಲ್ಕವನ್ನು ಇಲಾಖೆಯ ವತಿಯಿಂದ ಭರಿಸುವುದಲ್ಲದೇ ಪ್ರತಿ ವಿದ್ಯಾರ್ಥಿಗೆ ತಿಂಗಳಿಗೆ ಒಂದು ಸಾವಿರ ರೂಪಾಯಿಗಳ ಶಿಷ್ಯವೇತನ ನೀಡುವ ಸೌಲಭ್ಯವೂ ಉಂಟು.

೨. **ಮಾರ್ಗದರ್ಶನ ಕೇಂದ್ರ ಹಾಗೂ ಉದ್ಯೋಗ ಜಾರಿ ಕೋಶ** : ರಾಜ್ಯ ಸರ್ಕಾರವು ಹಿಂದುಳಿದವರನ್ನು ಮೇಲೆತ್ತಿ ಸಮಾನತೆಯ ಸಾಮ್ರಾಜ್ಯವನ್ನು ಕಟ್ಟಲು ನೇಮಕಾತಿಯಲ್ಲಿ ಮೀಸಲಾತಿಯ ಪ್ರಮಾಣವನ್ನು ನಿಗದಿಪಡಿಸಿರುವುದು ಸರಿ. ಆದರೆ ಈ ಆದೇಶವನ್ನು ನೇಮಕಾತಿ ಸಂಸ್ಥೆಗಳು ಎಷ್ಟರ ಮಟ್ಟಿಗೆ ಪಾಲಿಸುತ್ತಿವೆ ಎಂಬುದನ್ನು ಗಮನಿಸಬೇಕಲ್ಲ? ಈ ಪರಿಶೀಲನೆಗಾಗಿ ಹಿಂದುಳಿದ ವರ್ಗಗಳ ಇಲಾಖೆಯಲ್ಲಿ ಸ್ಥಾಪಿಸಲಾಗಿರುವ ಒಂದು ಪುಟ್ಟ ವಿಭಾಗವೇ 'ಮಾರ್ಗದರ್ಶನ ಕೇಂದ್ರ ಹಾಗೂ ಉದ್ಯೋಗ ಜಾರಿ ಕೋಶ'. ರಾಜ್ಯ ಸರ್ಕಾರವು ಹೊರಡಿಸಿರುವ ಮೀಸಲಾತಿ ನಿಯಮಗಳನ್ವಯ ಹಾಗೂ ಸಂವಿಧಾನದ ಅನುಚ್ಛೇದ ೧೬(೪)ರ ಪ್ರಕಾರ, ಹಿಂದುಳಿದ ವರ್ಗಗಳ ಅಭ್ಯರ್ಥಿಗಳಿಗೆ ಮೀಸಲಾತಿಯನ್ನು, ನೀಡಬೇಕಾದ ಪ್ರಾತಿನಿಧ್ಯವನ್ನು ನೀಡಲಾಗಿರುವ ಬಗ್ಗೆ ಪರಿಶೀಲನೆಯ ಮೂಲಕ ಖಚಿತಪಡಿಸಿಕೊಳ್ಳುವುದು ಈ ಕೋಶದ ಕರ್ತವ್ಯ. ರಾಜ್ಯ ಸರ್ಕಾರದ ಇಲಾಖೆಗಳು, ನಿಗಮಗಳು, ಸಹಕಾರ ಸಂಸ್ಥೆಗಳು, ಕಂಪನಿಗಳು, ಘೋಷಿತ ಸಂಸ್ಥೆಗಳು ಮತ್ತು ಬೆಂಗಳೂರು ಹಾಗೂ ಜಿಲ್ಲಾ ಸ್ಥಳಗಳಲ್ಲಿರುವಂತಹ ರಾಜ್ಯ ಸರ್ಕಾರದ ಉದ್ಯಮಗಳು-- ಇವುಗಳಲ್ಲಿ ಪರಿಶೀಲನೆ ನಡೆಸಲು, ಈ ಉದ್ಯೋಗ ಜಾರಿಕೋಶಕ್ಕೆ ಅಧಿಕಾರವಿದೆ. ಮೀಸಲಾತಿ ಉಲ್ಲಂಘನೆ ಮಾಡಿದ ಪ್ರಕರಣಗಳಲ್ಲಿ, ಸಂಬಂಧಿತರ ಮೇಲೆ ನಿಗದಿತ ದಂಡ ಅಥವಾ ಜೈಲು ಶಿಕ್ಷೆಗೆ ಈ ಕೋಶವು ಸೂಕ್ತ ಕ್ರಮ ಕೈಗೊಳ್ಳಬಹುದಾಗಿದೆ.

೩. **ಗ್ರಾಮೀಣ ಪ್ರತಿಭಾವಂತ ವಿದ್ಯಾರ್ಥಿಗಳಿಗೆ ನವೋದಯ/ಮೊರಾರ್ಜಿದೇಸಾಯಿ ಮಾದರಿ ವಸತಿ ಶಾಲೆಗಳು** : ಹಿಂದುಳಿದ ವರ್ಗಗಳ ಇಲಾಖೆಗೆ ಸೇರಿದ ಎಂಟು ನವೋದಯ ಹಾಗೂ ಹದಿನಾಲ್ಕು ಮೊರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆಗಳನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವತಿಯಿಂದ ನಿರ್ವಹಿಸಲಾಗುತ್ತಿದ್ದು, ಈ ಶಾಲೆಗಳಲ್ಲಿ ಆರನೇ ತರಗತಿಯಿಂದ ಹತ್ತನೇ ತರಗತಿವರೆಗಿನ ಗ್ರಾಮೀಣ ಪ್ರತಿಭಾವಂತ ವಿದ್ಯಾರ್ಥಿಗಳು ವ್ಯಾಸಂಗ ಮಾಡಲು ಅವಕಾಶ ಕಲ್ಪಿಸಲಾಗಿದೆ.

೪. **ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯಗಳು** : ಐದು ಕಿಲೋಮೀಟರ್‌ಗಳಿಗಿಂತ ಹೆಚ್ಚು ದೂರದ ಗ್ರಾಮಾಂತರ ಪ್ರದೇಶಗಳಿಂದ ಬರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸವನ್ನು ಮುಂದುವರೆಸಲು ಅನುಕೂಲ ಕಲ್ಪಿಸುವ ಉದ್ದೇಶದಿಂದ, ಹಿಂದುಳಿದ ವರ್ಗಗಳ ಇಲಾಖೆ ಮತ್ತು ಅಲ್ಪ ಸಂಖ್ಯಾತರ ಇಲಾಖೆಗಳ ಮೂಲಕ ಮೆಟ್ರಿಕ್‌ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳನ್ನು ನಡೆಸಲಾಗುತ್ತಿದೆ. ಐದು ಕಿಲೋಮೀಟರ್‌ಗಿಂತ ಹೆಚ್ಚಿನ ದೂರದಿಂದ ಬರುವ ವಿದ್ಯಾರ್ಥಿಗಳಿಗೆ ಶೇಕಡ ತೊಂಬತ್ತರಷ್ಟು ಮತ್ತು ಈ ಅಂತರದೊಳಗಿನವರಿಗೆ ಶೇ. ಹತ್ತರಷ್ಟು ಪ್ರವೇಶಾವಕಾಶ ಕಲ್ಪಿಸಿದೆ. ಹಿಂದುಳಿದ ವರ್ಗಗಳ ಇಲಾಖೆಯೊಂದರಿಂದಲೇ ಸುಮಾರು ೧೩೦೦ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳನ್ನೂ ೨೦೦ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳನ್ನೂ ನಿರ್ವಹಿಸಲಾಗುತ್ತಿದ್ದು, ಲಭ್ಯವಿರುವ ಎಲ್ಲ ಸೌಲಭ್ಯಗಳನ್ನು ಪಡೆಯುತ್ತಿರುವವರ ಗ್ರಾಮೀಣ ವಿದ್ಯಾರ್ಥಿಗಳ ಸಂಖ್ಯೆ ಕ್ರಮವಾಗಿ ಸುಮಾರು ೫೪೦೦೦ ಹಾಗೂ ೧೩೦೦೦. ಗ್ರಾಮೀಣ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಈ ನಿಲಯಗಳು ನೀಡುವ ಆಹಾರ, ಆಸರೆಗಳು ಉಲ್ಲೇಖನೀಯ. ಈ ನಿಲಯಗಳಲ್ಲಿ ಪ್ರವೇಶಕ್ಕೆ

ಆಯ್ಕೆಯಾದ ವಿದ್ಯಾರ್ಥಿಗಳಿಗೆ ವಸತಿ, ಹಾಸುವ ಮತ್ತು ಹೊದೆಯುವ ಸಾಮಗ್ರಿಗಳು, ವರ್ಷಕ್ಕೆರಡು ಜೊತೆ ಸಮವಸ್ತ್ರಗಳು ಇತ್ಯಾದಿಗಳ ಪೂರೈಕೆ ಇದೆ. ಸರ್ಕಾರ ನಿಗದಿಪಡಿಸಿದಷ್ಟು ಹಣದಲ್ಲಿ ಎಣ್ಣೆ, ಸೋಪು, ಪಠ್ಯಪುಸ್ತಕಗಳು, ನಿಲಯದಲ್ಲಿರುವ ಕ್ರೀಡಾ ಸಾಮಗ್ರಿಗಳು, ನಿಗದಿತ ಪ್ರಮಾಣದ ಭೋಜನೋಪಹಾರ, ಗ್ರಂಥಾಲಯ ಸೌಕರ್ಯ ಎಲ್ಲವೂ ಮೆಟ್ರಿಕ್ ಪೂರ್ವದಲ್ಲಿರುವ ನಿಲಯಾರ್ಥಿಗಳಿಗೆ ಉಚಿತ. ಆದರೆ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ನಿಲಯಾರ್ಥಿಗಳಿಗೆ ತಿಂಗಳಿಗೆ ೪೫೦/- ರೂಪಾಯಿಗಳ ದರದಲ್ಲಿ ಊಟ ಮತ್ತು ವಸತಿ ವ್ಯವಸ್ಥೆ, ಗ್ರಂಥಾಲಯ, ಕ್ರೀಡಾ ಸಾಮಗ್ರಿಗಳ ಸೌಲಭ್ಯ ಮಾತ್ರ ಲಭ್ಯ.

೫. **ಪ್ರೋತ್ಸಾಹ ಧನ** : ಇಷ್ಟು ಮಾತ್ರವಲ್ಲ, ಈ ನಿಲಯಾರ್ಥಿಗಳಿಗೆ ವಾರ್ಷಿಕ ಪಬ್ಲಿಕ್ ಪರೀಕ್ಷೆಗಳಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದವರಿಗೆ ಪ್ರೋತ್ಸಾಹ ಧನವನ್ನೂ ರೂ. ೭೫ ರಿಂದ ರೂ. ೫೦೦ರವರೆಗೆ ನೀಡುವ ಒಂದು ಕಾರ್ಯಕ್ರಮವಿದ್ದು, ಮಕ್ಕಳಲ್ಲಿ ಓದುವ ಆಸಕ್ತಿಯನ್ನೂ, ಸ್ಪರ್ಧಾ ಮನೋಭಾವವನ್ನೂ ಹೆಚ್ಚಿಸುವ ಉತ್ತಮ ದೃಷ್ಟಿಯೇ ಇದರ ಅನುಷ್ಠಾನಕ್ಕೆ ಕಾರಣ.

೬. **ಅನಾಥಾಲಯ ಮತ್ತು ಸಾಕುಮನೆಗಳಿಗೆ ಸಹಾಯಾನುದಾನ** : ಇಲಾಖೆಯಿಂದ ನಡೆಸುವ ನಿಲಯಗಳಲ್ಲದೇ, ಖಾಸಗಿಯಾಗಿ ಹಿಂದುಳಿದವರ ಅನುಕೂಲಕ್ಕಾಗಿ ಅನಾಥಾಲಯ ಮತ್ತು ಸಾಕುಮನೆಗಳನ್ನು ನಡೆಸುವುದನ್ನು ಇಲಾಖೆಯ ಗಮನಕ್ಕೆ ತಂದರೆ, ಅಂಥವುಗಳಿಗೆ ತಿಂಗಳಿಗೆ ಪ್ರತಿ ವಿದ್ಯಾರ್ಥಿಗೆ ೧೫೦/- ರೂಪಾಯಿಗಳಂತೆ ವರ್ಷಪೂರ್ತಿಯ ಅವಧಿಗೆ ಊಟದ ಖರ್ಚಿಗೆಂದು ಸಹಾಯಾನುದಾನವನ್ನು ನೀಡುವ ಅನುಕೂಲವೂ ಈ ಇಲಾಖೆಯಲ್ಲಿದೆ.

೭. **ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ** : ಸರ್ಕಾರದ ಹಾಗೂ ಅನುದಾನಿತದ ಯಾವುದೇ ನಿಲಯಗಳ ನಿಲಯಾರ್ಥಿಗಳಾಗಿರದ, ವಾರ್ಷಿಕ ಪರೀಕ್ಷೆಗಳಲ್ಲಿ ಉತ್ತೀರ್ಣರಾದ, ಕುಟುಂಬದ ವರಮಾನ ವರ್ಷಕ್ಕೆ ಹದಿನೈದು ಸಾವಿರ ರೂಪಾಯಿಗಳೊಳಗಿರುವ, ಮಾಧ್ಯಮಿಕ ಮತ್ತು ಪ್ರೌಢಶಾಲೆಯ ವಿದ್ಯಾರ್ಥಿಗಳಿಗೆ ಅವರು ಪಡೆದ ಅಂಕದ ಆಧಾರದ ಮೇಲೆ ಕ್ರಮವಾಗಿ ಎಪ್ಪತ್ತೈದು ಮತ್ತು ನೂರು ರೂಪಾಯಿಗಳ ವಿದ್ಯಾರ್ಥಿ ವೇತನವನ್ನೂ; ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಕೋರ್ಸ್‌ಗೆ ತಕ್ಕಂತೆ ಮುನ್ನೂರರಿಂದ ಐನೂರು ರೂಪಾಯಿಗಳವರೆಗೆ ವಿದ್ಯಾರ್ಥಿ ವೇತನವನ್ನೂ; ಮಂಜೂರು ಮಾಡಿಸಿಕೊಳ್ಳಲು ಅವಕಾಶ ಮಾಡಿರುವುದು ಅತಿ ಹಿಂದುಳಿದ ಕುಟುಂಬದ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ಒಂದು ಸಣ್ಣ ಪ್ರಮಾಣದ ಸಹಾಯ.

೮. **ಪ್ರವರ್ಗ ೧ಕ್ಕೆ ಸೇರಿದವರಿಗೆ ಊಟ ಮತ್ತು ವಸತಿ ಸೌಲಭ್ಯ** : ವಿದ್ಯಾರ್ಥಿ ವೇತನಕ್ಕಿಂತ ಭಿನ್ನವಾದ ಈ ಯೋಜನೆ ಗ್ರಾಮೀಣ ಪ್ರದೇಶದ ಯಾವುದೇ ಜಾತಿಯ ಮೆಟ್ರಿಕ್ ನಂತರದ ವಿದ್ಯಾರ್ಥಿಗಳು ತಮ್ಮ ಶಿಕ್ಷಣವನ್ನು ನಿಶ್ಚಿಂತೆಯಿಂದ ಮುಂದುವರಿಸುವ ಸಲುವಾಗಿ ಯೋಜಿಸಲಾಗಿರುವ ಒಂದು ಕಾರ್ಯಕ್ರಮ. ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಿಗೆ ಮಾಸಿಕ ಹಾಜರಾತಿ ಶೇಕಡ ೭೫ರಷ್ಟಿದ್ದರೆ, ಅವರ ಶಿಕ್ಷಣ ಸಂಸ್ಥೆಗಳು ನೀಡುವ ಹಾಜರಾತಿಯನುಗುಣ, ಭೋಜನ ವೆಚ್ಚಕ್ಕಾಗಿ, ಮಾಸಿಕ ತಲಾ ರೂ. ೨೦೦ರಂತೆ ನೀಡಲಾಗುವುದು. ಸರ್ಕಾರ ಅಥವಾ ಅನುದಾನಿತ ಶಿಕ್ಷಣ ಸಂಸ್ಥೆಗಳಿಂದಲೇ ನಡೆಸಲಾಗುವ ನಿಲಯಗಳಲ್ಲಿ ಹಣ ಪಾವತಿಸಿ ವಾಸಿಸುತ್ತಿರಬೇಕು ಅಥವಾ ಅವರ ವಾಸ್ತವ್ಯಕ್ಕೆ ಯಾವುದೇ ರೀತಿಯ ಸ್ವಯಂ ವ್ಯವಸ್ಥೆ ಮಾಡಿಕೊಂಡಿರಬೇಕು ಎಂಬುದು ಈ ನೆರವಿಗೆ ಹಾಕಲಾಗುವ ಇನ್ನೆರಡು ಕಡ್ಡಾಯ ನಿಯಮಗಳು. ಈ ನೆರವು ಪ್ರವರ್ಗ ಒಂದರಡಿಯ ಜನಾಂಗಕ್ಕೆ ಮಾತ್ರ ಇರುವುದರಿಂದ ಅವರಿಗೆ ಯಾವುದೇ ಆದಾಯ ಮಿತಿ ಇಲ್ಲ. ಈ ನೆರವು ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ಮಾತ್ರ.

೯. **ಶುಲ್ಕ ವಿನಾಯಿತಿ** : ವಿದ್ಯಾರ್ಥಿಗಳು ಯಾವುದೇ ಜಾತಿಗೆ ಸೇರಿರಲಿ, ಅವರ ಕುಟುಂಬದ ವಾರ್ಷಿಕ ವರಮಾನ ಹನ್ನೊಂದು ಸಾವಿರ ರೂಪಾಯಿಗಳ ಒಳಗಿದ್ದರೆ, ಅಂತಹ ವಿದ್ಯಾರ್ಥಿಗಳು ಬೋಧನ ಶುಲ್ಕ, ಪ್ರಯೋಗಾಲಯ ಶುಲ್ಕ ಮತ್ತು ಪರೀಕ್ಷಾ ಶುಲ್ಕಗಳಿಂದ ವಿನಾಯಿತಿ ಪಡೆಯಲು ಅರ್ಹರು. ಆದರೆ ಈ ಆದಾಯ ಮಿತಿ ಪ್ರವರ್ಗ ಒಂದರಡಿಯ ವಿದ್ಯಾರ್ಥಿಗಳಿಗೆ ಅನ್ವಯಿಸುವುದಿಲ್ಲ. ಜೊತೆಗೆ ಇವರು ಸರ್ಕಾರದಿಂದ ಅನುಮೋದನೆಗೊಂಡ ಇತರೆ ಶುಲ್ಕಗಳನ್ನೂ ಪಡೆಯಲು ಅರ್ಹರು.

೧೦. **ಕಾನೂನು ಪದವೀಧರರಿಗೆ ಶಿಷ್ಯ ವೇತನ ಹಾಗೂ ತರಬೇತಿ** : ಕಾನೂನು ಪದವಿಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ಹಿಂದುಳಿದ ವರ್ಗಗಳ ಇಲಾಖೆ, ಅಲ್ಪಸಂಖ್ಯಾತರ ಇಲಾಖೆಗಳ ಮೂಲಕ ತರಬೇತಿದಾರರಿಗೆ ಪ್ರತಿ ತಿಂಗಳು ಒಂದು ಸಾವಿರ

ರೂಪಾಯಿಗಳ ಶಿಷ್ಯ ವೇತನವನ್ನೂ ಕೊಟ್ಟು, ಹಿರಿಯ ವಕೀಲರು ಇಲ್ಲವೇ ಸರ್ಕಾರಿ ವಕೀಲರ ಅಧೀನದಲ್ಲಿ ನಾಲ್ಕು ವರ್ಷಗಳ ದೀರ್ಘ ಕಾಲ ತರಬೇತಿ ಪಡೆಯಲು ಹಾಗೂ ವಕೀಲಿ ವೃತ್ತಿಯಲ್ಲಿ ಪರಿಣತಿ ಪಡೆಯಲು ಒಳ್ಳೆಯ ಅವಕಾಶವನ್ನೂ ಕಲ್ಪಿಸಿಕೊಡಲಾಗುತ್ತದೆ. ಕಳೆದ ವರ್ಷ (೨೦೦೩-೦೪) ಸುಮಾರು ಇನ್ನೂರ ಇಪ್ಪತ್ತು ಅಭ್ಯರ್ಥಿಗಳು ಈ ತರಬೇತಿ ಪಡೆದಿದ್ದಾರೆ.

೧೧. **ಹೊಲಿಗೆ ತರಬೇತಿ ಕೇಂದ್ರಗಳು** : ಹೊಲಿಗೆ ಕೆಲಸವನ್ನು ಕಲಿತು ತಮ್ಮ ಜೀವನೋಪಾಯವನ್ನು ನೆಮ್ಮದಿಯಾಗಿ ನಡೆಸಲು ನೆರವಾಗುವ ಉದ್ದೇಶದಿಂದ ಅಧಿಸೂಚನೆಯಿಂದ ತೆಗೆದುಹಾಕಲ್ಪಟ್ಟ ಬುಡಕಟ್ಟು ಜನಾಂಗದ ಮಹಿಳೆಯರು ಹಾಗೂ ಹದಿನೈದು ಸಾವಿರದೊಳಗಿನ ವಾರ್ಷಿಕ ವರಮಾನವಿರುವ ಹಿಂದುಳಿದ ವರ್ಗದ ಮಹಿಳೆಯರಿಗೆ ಹೊಲಿಗೆ ತರಬೇತಿ ನೀಡುವ ನಲವತ್ತೆಂಟು ಹೊಲಿಗೆ ತರಬೇತಿ ಕೇಂದ್ರಗಳಿವೆ. ಹಲವಾರು ಗ್ರಾಮ ಮತ್ತು ಪಟ್ಟಣದ ಬುಡಕಟ್ಟು ಮಹಿಳೆಯರು, ಹಿಂದುಳಿದವರು, ಶೇಕಡ ಇಪ್ಪತ್ತೈದರಷ್ಟು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ಈ ಕೇಂದ್ರಗಳಲ್ಲಿ ತರಬೇತಿ ಪಡೆಯುತ್ತಾರೆ. ತರಬೇತಿಗೆ ಆಯ್ಕೆ ಮಾಡುವಾಗ ವಿಧವೆಯರು ಮತ್ತು ನಿರಾಶ್ರಿತ ಮಹಿಳೆಯರಿಗೆ ಆದ್ಯತೆ ನೀಡುವ ನಿಯಮವಿಟ್ಟುಕೊಂಡಿರುವುದು ಮಾನವೀಯ ಅಂಶ. ಹನ್ನೆರಡು ತಿಂಗಳ ತರಬೇತಿ ಅವಧಿಯಲ್ಲಿ ತಿಂಗಳಿಗೆ ಮುನ್ನೂರು ರೂಪಾಯಿಗಳ ತರಬೇತಿ ಭತ್ಯೆ ಹಾಗೂ ಕೊನೆಯ ಪರೀಕ್ಷೆಯಲ್ಲಿ ಉತ್ತೀರ್ಣರಾದ ಪ್ರತಿಯೊಬ್ಬರಿಗೂ ಒಂದೊಂದು ಉಚಿತ ಹೊಲಿಗೆ ಯಂತ್ರದ ಸರಬರಾಜಿನ ವ್ಯವಸ್ಥೆ ಇರುವುದು ದುಡಿಯ ಬಯಸುವ ಮಹಿಳೆಯರಿಗೆ, ನಿಶ್ಚಿಂತ ದುಡಿಮೆಗೆ ಮತ್ತು ಮುಂದಿನ ಜೀವನಕ್ಕೆ ಆಧಾರವಾಗುವ ಸಂಗತಿ.

೧೨. **ಕ್ರೀಡಾಳುಗಳಿಗೆ ನಿರ್ವಹಣಾ ವೆಚ್ಚ** : ಕ್ರೀಡಾಸಕ್ತಿ ಇರುವ ಎಷ್ಟೋ ಮಕ್ಕಳಿಗೆ, ಅಗತ್ಯ ಉತ್ತೇಜನ ಇಲ್ಲದೇ ಹೋಗಬಹುದು. ಉತ್ತೇಜಿಸುವವರಿದ್ದರೂ ಅವರ ವ್ಯಾಯಾಮಕ್ಕೆ ಮತ್ತು ಅಭ್ಯಾಸಕ್ಕೆ ಅಗತ್ಯ ಸೌಲಭ್ಯಗಳು, ಆಹಾರ, ಬಟ್ಟೆ, ಸಾಮಗ್ರಿ ಇತ್ಯಾದಿಗಳನ್ನು ಒದಗಿಸುವ ಶಕ್ತಿ ಇಲ್ಲದೇ ಆಸಕ್ತಿಯನ್ನೇ ಕೈಬಿಡುವ ಸಂದರ್ಭಗಳೂ ಉಂಟು. ಇಂಥ ಆಸಕ್ತರನ್ನು ಒಳ್ಳೆಯ ಕ್ರೀಡಾಳುಗಳಾಗಿ ಮೇಲೆ ತರಲು ಹಾಗೂ ಉತ್ತಮ ವಿದ್ಯಾರ್ಹತೆಯ ಗಳಿಕೆಗೆ ಉತ್ತೇಜಿಸಲು ಕ್ರೀಡಾಶಾಲೆಯಲ್ಲಿ ಪ್ರವೇಶ ಪಡೆದ ಹಿಂದುಳಿದ ವರ್ಗಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ನಿರ್ವಹಣಾ ವೆಚ್ಚವನ್ನು ಭರಿಸುವಂತಹ ಒಂದು ಕಾರ್ಯಕ್ರಮ ಹಿಂದುಳಿದ ವರ್ಗಗಳ ಇಲಾಖೆಯಲ್ಲಿದೆ.

೧೩. **ಆಶ್ರಮ ಶಾಲೆಗಳು** : ಒಂದರಿಂದ ನಾಲ್ಕನೇ ತರಗತಿಯವರೆಗೆ ಆಶ್ರಮ ಶಾಲೆಗಳಲ್ಲಿ ಓದುತ್ತಿರುವ ಮಕ್ಕಳಿಗೆ ಶಾಲೆಯ ಪಾಠಗಳ ಬೋಧನೆಯಲ್ಲದೆ, ತಿಂಗಳಿಗೆ ತಲಾ ರೂಪಾಯಿ ಮುನ್ನೂರ ಐವತ್ತರ ಖರ್ಚಿನಲ್ಲಿ ಆಹಾರ, ವಸತಿ ಸೌಕರ್ಯ, ಸರ್ಕಾರ ನಿಗದಿಸಿದ ಮೊತ್ತದೊಳಗಿನ ಮಿತಿಯೊಳಗೆ ಬಟ್ಟೆಗಳು, ಪುಸ್ತಕ ಮತ್ತು ಲೇಖನ ಸಾಮಗ್ರಿಗಳು ಇತ್ಯಾದಿಗಳನ್ನು ಒದಗಿಸಲು ಸರ್ಕಾರ ಅನುವು ಮಾಡಿಕೊಟ್ಟಿದೆ. ಹಿಂದುಳಿದ ವರ್ಗಗಳ ಇಲಾಖೆಯಲ್ಲಿರುವ ಎಂಬತ್ತು ಆಶ್ರಮ ಶಾಲೆಗಳೂ ಗ್ರಾಮೀಣ ಪ್ರದೇಶಗಳಲ್ಲಿ ಮತ್ತು ತಾಲ್ಲೂಕು ಕೇಂದ್ರಗಳಲ್ಲಿವೆ.

೧೪. **ಕೌಶಲ್ಯ ಕಾರ್ಯಕ್ರಮ** : ಹಿಂದುಳಿದ ವರ್ಗದ ನಿರುದ್ಯೋಗಿ ಮಹಿಳೆಯರು ಸ್ವಯಂ ಉದ್ಯೋಗ ಕೈಗೊಳ್ಳಲು ಆಸಕ್ತಿಯನ್ನೂ ಜೊತೆಗೆ ಅನುಕೂಲವನ್ನೂ ತುಂಬಿಕೊಡಲು ಮಹಿಳೆಯರಿಗೆಂದೇ ನಿಗದಿಗೊಂಡಿರುವ ಅಂದ, ಅಲಂಕಾರ, ಅಚ್ಚಿನ ಕೆಲಸಗಳಿಗೆ ಸಂಬಂಧಿಸಿದಂತಹ ಆಟೋಕ್ಯಾಡ್ ಇನ್ ಫ್ಯಾಷನ್ ಡಿಸೈನಿಂಗ್, ಡಿಪ್ಲೊಮ ಇನ್ ಫ್ಯಾಷನ್ ಟೆಕ್ನಾಲಜಿ, ಡಿಪ್ಲೊಮ ಇನ್ ಮಲ್ಟಿಮೀಡಿಯಾ, ಅಡ್ವಾನ್ಸ್‌ಡ್ ಡಿಪ್ಲೊಮ ಇನ್ ಡಿಜಿಟಲ್ ಪ್ರಿಂಟಿಂಗ್ ಇಮೇಜಿಂಗ್, ಪಬ್ಲಿಷಿಂಗ್, ಸ್ಕ್ರೀನ್ ಪ್ರಿಂಟಿಂಗ್, ಇಂಟೀರಿಯರ್ ಡೆಕೋರೇಷನ್, ಡಿಸೈನಿಂಗ್, ಬ್ಯೂಟಿಷಿಯನ್ ಕೋರ್ಸ್, ಡಿ.ಟಿ.ಪಿ. ಕೋರ್ಸ್‌ಗಳಲ್ಲಿ ವೃತ್ತಿಪರ ತರಬೇತಿ ನೀಡಲು 'ಕೌಶಲ್ಯ' ಎಂಬ ಹೊಸ ಕಾರ್ಯಕ್ರಮವೊಂದು ಹಿಂದಿನ ವರ್ಷದ ಹಣಕಾಸು ಮಂಜೂರಾತಿಯೊಂದಿಗೆ ಅನುಷ್ಠಾನಗೊಳ್ಳಲು ರೂಪುಗೊಳ್ಳುತ್ತಿದೆ.

೧೫. **ಬೆಳ್ಳಿ ಬೆಳಕು ಕಾರ್ಯಕ್ರಮ** : ಬಡತನ, ರೋಗ ರುಜಿನಗಳ ವಾತಾವರಣ, ನೀರಿಲ್ಲದ ಅವಸ್ಥೆ, ದೀಪವಿಲ್ಲದ ಕತ್ತಲ ಗುಡಿಸಲು, ಅಲ್ಯೂಮಿನಿಯಂ ಪಾತ್ರೆಗಳಲ್ಲಿ ಅಡುಗೆ ಇವೆಲ್ಲವೂ ಈಗಲೂ ಗ್ರಾಮೀಣ ಪ್ರದೇಶದ ಬಡ, ಹಿಂದುಳಿದ ಜನಾಂಗಗಳು ವಾಸಿಸುವ ಸ್ಥಳಗಳಲ್ಲಿ ಕಾಣ ಬರುವ ಅಂಶಗಳು. ಇಂಥ ಕೆಳಮಟ್ಟದಿಂದ ಅವರ ಜೀವನವನ್ನು ಮೇಲ್ಮಟ್ಟಕೇರಿಸ ಬೇಕೆಂದರೆ

ಶೈಕ್ಷಣಿಕವಾಗಿ, ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಅವರ ಜೀವನಶೈಲಿಯಲ್ಲಿ ಸುಧಾರಣೆಯಾಗಬೇಕು. ಈ ಜನಾಂಗದವರ ಇಂಥ ಸರ್ವತೋಮುಖ ಸುಧಾರಣೆಗಾಗಿ ರೂಪುಗೊಂಡಿರುವ ಕಾರ್ಯಕ್ರಮವೇ ಬೆಳ್ಳಿ ಬೆಳಕು. ಗೃಹ ನಿರ್ಮಾಣ, ಕುಡಿಯುವ ನೀರಿನ ಪೂರೈಕೆ, ಚರಂಡಿ ವ್ಯವಸ್ಥೆ, ಸಂಪರ್ಕ ರಸ್ತೆ, ವಿದ್ಯುದೀಕರಣ ಮುಂತಾದ ಎಲ್ಲ ಮೂಲಭೂತ ಅಗತ್ಯಗಳನ್ನು ಪೂರೈಸಿ ನೂತನ ವಸಾಹತು ಸ್ಥಾಪನೆ-ಈ ಕಾರ್ಯಕ್ರಮದಡಿ ನಡೆಯುವ ಅತ್ಯುತ್ತಮ ಕಾರ್ಯಗಳು.

೧೬. **ದೇವರಾಜ ಅರಸು ಸಂಶೋಧನಾ ಸಂಸ್ಥೆ** : ೧೯೯೩ ರಿಂದ ಕಾರ್ಯಾರಂಭ ಮಾಡಿರುವ ಈ ಸಂಸ್ಥೆಯು ಕೆಳ ವರ್ಗದ ಮತ್ತು ಹಿಂದುಳಿದ ವರ್ಗದ ಕುರಿತಾದ ಅಧ್ಯಯನ, ಹಿಂದುಳಿದ ವರ್ಗಗಳಿಗಾಗಿ ಕೈಗೊಂಡಿರುವ ಯೋಜನೆಗಳ ಬಗ್ಗೆ ಪ್ಲ್ಯಾನ್ ಮಾನಿಟರಿಂಗ್, ಸಿಂಪೋಸಿಯಂ, ಜನರ ವೃತ್ತಿಯಲ್ಲಿನ ಸಮಸ್ಯೆಗಳು, ದೇವರಾಜ ಅರಸುರವರ ಸಾಧನೆಯ ಪರಿಚಯ, ಅವರ ಜನ್ಮದಿನಾಚರಣೆ, ಸಮೀಕ್ಷೆ ಹಾಗೂ ಮೌಲ್ಯಮಾಪನ, ಪ್ರಧಾನ ಮಂತ್ರಿಗಳ ಹದಿನೈದು ಅಂಶಗಳ ಕಾರ್ಯಕ್ರಮಗಳ ಕುರಿತು ಹಾಗೂ ಹಿಂದುಳಿದ ವರ್ಗದವರ ಅರಿವಿನ ವಿಸ್ತಾರಕ್ಕೆ ವಿಚಾರ ಸಂಕಿರಣಗಳು ಮತ್ತು ಗೋಷ್ಠಿಗಳ ವ್ಯವಸ್ಥೆ ಮುಂತಾದ ಕಾರ್ಯಗಳನ್ನು ಈ ಸಂಸ್ಥೆ ಮಾಡುತ್ತಿದೆ.

ಮತೀಯ ಅಲ್ಪಸಂಖ್ಯಾತರ ಇಲಾಖೆಯು ಇತ್ತೀಚೆಗೆ ಹಿಂದುಳಿದ ವರ್ಗಗಳ ಇಲಾಖೆಯಿಂದ ಪ್ರತ್ಯೇಕಗೊಂಡು ಅಲ್ಪಸಂಖ್ಯಾತರ ಏಳಿಗೆಗೆ ಸಂಬಂಧಿಸಿದ ಎಲ್ಲ ಕಾರ್ಯಕ್ರಮಗಳನ್ನು ತನ್ನ ವ್ಯಾಪ್ತಿಗೆ ಒಳಪಡಿಸಿಕೊಂಡಿದೆ. ಮೆಟ್ರಿಕ್‌ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳು, ಮೆಟ್ರಿಕ್‌ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನಗಳು, ಕಾನೂನು ಪದವೀಧರರಿಗೆ ತರಬೇತಿ, ಐ.ಟಿ.ಐ. / ಡಿಪ್ಲೊಮ ವಿದ್ಯಾರ್ಥಿಗಳಿಗೆ ಶಿಷ್ಯ ವೇತನ, ಸರಿಯಾಗಿ ನಡೆಸುವ ನಿಲಯಗಳಿಗೆ ಮತ್ತು ಅನಾಥಾಲಯಗಳಿಗೆ ಸಹಾಯಾನುದಾನ, ವೃತ್ತಿ ತರಬೇತಿ, ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು. ಇವು ಪ್ರಸ್ತುತ ಈ ಇಲಾಖೆಯಿಂದ ಅಲ್ಪಸಂಖ್ಯಾತರ ನೆರವಿಗಾಗಿ ನಡೆಸಲಾಗುತ್ತಿದ್ದು, ಗ್ರಾಮಾಂತರ ಹಾಗೂ ಒಳ ಕುಗ್ರಾಮಗಳಲ್ಲಿನ ಅಲ್ಪಸಂಖ್ಯಾತರಿಗೆ ಈ ಸೌಲಭ್ಯಗಳನ್ನು ತಲುಪಿಸಲು ಇಲಾಖೆಯ ಬೆಳವಣಿಗೆಯೊಂದಿಗೆ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಇತರ ಕಾರ್ಯಕ್ರಮಗಳ ಸೇರ್ಪಡೆ ಹಾಗೂ ವಿಸ್ತರಣೆ ಎರಡೂ ಆಗಬೇಕಾಗಿದೆ.

**ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ** : ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘವು ೧೯೯೯ರಲ್ಲಿ ಸರ್ಕಾರದಿಂದ ಸ್ಥಾಪನೆಗೊಂಡಿದ್ದು ಸಮಾಜ ಕಲ್ಯಾಣ ಇಲಾಖೆ, ಹಿಂದುಳಿದ ವರ್ಗಗಳು ಮತ್ತು ಅಲ್ಪಸಂಖ್ಯಾತರ ಇಲಾಖೆಗಳು ನಿರ್ವಹಿಸುತ್ತಿರುವ ಎಲ್ಲ ವಸತಿ ಶಾಲೆಗಳನ್ನು ಈ ಸಂಘದ ಕಾರ್ಯ ವ್ಯಾಪ್ತಿಗೆ ವರ್ಗಾಯಿಸಲಾಗಿದೆ. ಒಟ್ಟು ನೂರ ಆರು ನವೋದಯ/ಮೊರಾರ್ಜಿ ದೇಸಾಯಿ ಮಾದರಿ ವಸತಿ ಶಾಲೆಗಳು ಈ ಸಂಘದ ನಿಯಂತ್ರಣದಲ್ಲಿದ್ದು, ಕಳೆದ ವರ್ಷ ಪರಿಶಿಷ್ಟ ಜಾತಿ/ಪಂಗಡವೂ ಸೇರಿದಂತೆ ಒಟ್ಟು ಇಪ್ಪತ್ತೊಂದು ಸಾವಿರದ ಐದುನೂರಾ ಏಳು ವಿದ್ಯಾರ್ಥಿಗಳು ಇಲ್ಲಿ ವ್ಯಾಸಂಗ ಮಾಡಿದ್ದಾರೆ. ಕಳೆದ ವರ್ಷ ಎಸ್.ಎಸ್.ಎಲ್.ಸಿ. ಪರೀಕ್ಷೆಗೆ ಹಾಜರಾದ ೧೫೫೪ ವಿದ್ಯಾರ್ಥಿಗಳಲ್ಲಿ ಹತ್ತೊಂಬತ್ತು ವಿದ್ಯಾರ್ಥಿಗಳು ಡಿಸ್ಟಿಂಕ್ಷನ್ ತೆಗೆದುಕೊಂಡಿರುವುದು, ಐದು ನೂರಾ ಎಪ್ಪತ್ತೇಳು ವಿದ್ಯಾರ್ಥಿಗಳು ಪ್ರಥಮ ದರ್ಜೆಯಲ್ಲಿ ತೇರ್ಗಡೆಗೊಂಡಿರುವುದು, ಕೆಲವು ಶಾಲೆಗಳಲ್ಲಿ ನೂರಕ್ಕೆ ನೂರು ಉತ್ತಮ ಫಲಿತಾಂಶ ಗಳಿಸಿರುವುದು ಸಂಘದ ಬೋಧನೆಯ ವಿಧಾನವೊಂದನ್ನು ಮಾತ್ರವಲ್ಲ, ಹಿಂದುಳಿದ ವರ್ಗಕ್ಕೆ ಸೇರಿದ ಮಕ್ಕಳ ಬೆಳವಣಿಗೆಯ ಪ್ರಮಾಣವನ್ನೂ ತಿಳಿಸುವಂಥ ಸಂಗತಿ.

೧೭. **ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ** : ಹಿಂದುಳಿದವರಿಗೆ ಹೆಚ್ಚಿನ ಪ್ರಮಾಣದ ಹಾಗೂ ಈ ಜನಾಂಗವು ಬಯಸುವ ರೀತಿಯಲ್ಲಿ ಸಹಾಯವಾಗುತ್ತಿರುವುದು ಈ ನಿಗಮದಿಂದ. ಸ್ವಾವಲಂಬನ ಸಾಲ ಯೋಜನೆ, ಸಂಯುಕ್ತ ಸಾಲ ಯೋಜನೆ, ಅವಧಿ ಸಾಲ ಯೋಜನೆ ಮುಂತಾಗಿ ಹಲವು ರೀತಿಯ ಸಾಲ ಯೋಜನೆಗಳ ಅನುಷ್ಠಾನದ ಮೂಲಕ ಹಿಂದುಳಿದ ವರ್ಗದ ಜನರಿಗೆ ಸಾಲ ಹಾಗೂ ಹಣಕಾಸಿನ ಸಹಾಯ ನೀಡಿ, ಸ್ವಉದ್ಯೋಗಕ್ಕೆ ವೃತ್ತಿಪರ ತರಬೇತಿಯನ್ನು ನೀಡಿ, ಈ ಜನರು ಸ್ವಯಂ ಉದ್ಯೋಗದಲ್ಲಿ ಬೆಳೆದು ನಿಲ್ಲಲು ನೆರವಾಗುತ್ತಿದೆ.

೧. **ಚೈತನ್ಯ ಸಬ್ಸಿಡಿ ಕಂ ಸಾಫ್ಟ್ ಲೋನ್ ಯೋಜನೆ** : ವಾರ್ಷಿಕ ವರಮಾನ ಇಪ್ಪತ್ತೆರಡು ಸಾವಿರಗಳ ಒಳಗಿರುವ ಹಿಂದುಳಿದ ವರ್ಗದ ಜನಾಂಗಕ್ಕೆ ಸಹಕಾರ ಸಂಘಗಳ ಸಹಯೋಗದೊಂದಿಗೆ ಸಾಲ ಸೌಲಭ್ಯವನ್ನು ಸರ್ಕಾರ ಕೊಡುವ

ಶೇರು ಬಂಡವಾಳದಿಂದ ನೀಡಿ ವ್ಯಾಪಾರ, ಕೃಷಿ ಮತ್ತು ಕೈಗಾರಿಕೆಗಳ ಚಟುವಟಿಕೆಗಳಲ್ಲಿ ತೊಡಗಿಸುವ ಉಪಕಾರ ಈ ಯೋಜನೆಯದು.

೨. **ವೃತ್ತಿಪರ ತರಬೇತಿ ಕಾರ್ಯಕ್ರಮಗಳು** : ವೃತ್ತಿ ಕುಶಲತೆ ಹೆಚ್ಚಿಸುವ ಉದ್ದೇಶದಿಂದ ವಾಹನ ಚಾಲನ ತರಬೇತಿ, ಕಂಪ್ಯೂಟರ್ ತರಬೇತಿ, ಫೋರ್‌ಮನ್‌ಶಿಪ್ ಮುಂತಾದ ವೃತ್ತಿಪರ ತರಬೇತಿ ಕಾರ್ಯಕ್ರಮಗಳನ್ನು ವಿವಿಧ ಹೆಸರಾಂತ ವೃತ್ತಿ ಕುಶಲ ಸಂಸ್ಥೆಗಳ ಮೂಲಕ ನಿಗಮವು ನೀಡುತ್ತಿರುವುದು ಗ್ರಾಮಸ್ಥರನ್ನೂ ಒಳಗೊಂಡಂತೆ ಹಲವರಿಗೆ ಪ್ರಯೋಜನಕಾರಿಯಾಗಿದೆ. ಎಲೆಕ್ಟ್ರಿಕ್ ವೈರಿಂಗ್, ಟಿ.ವಿ., ವಿ.ಸಿ.ಪಿ., ರೇಡಿಯೋ, ವೆಲ್ಡಿಂಗ್ ಟೆಕ್ನಾಲಜಿ, ಜರಿ ಮತ್ತು ಎಂಬ್ರಾಯಿಡರಿ ತರಬೇತಿ, ಕಾರ್ಪೆಂಟರಿ ತರಬೇತಿ ಒಂದು ರೀತಿಯದಾದರೆ, ಭಾರಿ ಸಾರಿಗೆ, ಲಘು ವಾಹನ, ಆಟೋ ರಿಕ್ಷಾ ಮೊದಲಾದ ವಾಹನಗಳ ತರಬೇತಿಯನ್ನು ಸರ್ಕಾರದಿಂದ ಮಾನ್ಯತೆ ಪಡೆದ ಡ್ರೈವಿಂಗ್ ಸ್ಕೂಲ್‌ಗಳ ಮೂಲಕ ಕೊಡಿಸುವುದು ಇನ್ನೊಂದು ರೀತಿಯ ವೃತ್ತಿಪರ ತರಬೇತಿ. ಈ ತರಬೇತುದಾರರಿಗೆ ಬ್ಯಾಡ್ಜ್, ಲೈಸೆನ್ಸ್, ಶುಲ್ಕ ಹಾಗೂ ಶಿಷ್ಯವೇತನ ನೀಡುವುದು ಈ ಯೋಜನೆಯ ಸ್ವರೂಪ.

೩. **ಗಂಗಾ ಕಲ್ಯಾಣ ಯೋಜನೆ** : ಒಂದೇ ಕಡೆ ಕನಿಷ್ಠ ೮ ಎಕರೆ ಜಮೀನು ಹೊಂದಿರುವ ಕನಿಷ್ಠ ಮೂರು ಜನ ಮತ್ತು ಅದಕ್ಕಿಂತ ಹೆಚ್ಚು ರೈತರು ಹೊಂದಿರುವ ಜಮೀನುಗಳಿಗೆ ನಿಗದಿತ ಮೊತ್ತದಲ್ಲಿ ಕೊಳವೆ ಬಾವಿಗಳನ್ನು ಕೊರೆಯಿಸಿ ಪಂಪ್‌ಸೆಟ್ ಅಳವಡಿಸಿ, ವಿದ್ಯುದೀಕರಣ ಸೌಲಭ್ಯವನ್ನೊದಗಿಸಿ, ನೀರಾವರಿ ಸೌಲಭ್ಯ ಮಾಡಿಕೊಡುವುದು ಈ ಯೋಜನೆಯ ಕ್ರಮ. ಇದು ಹಿಂದುಳಿದ ವರ್ಗಗಳ ಸಣ್ಣ ಹಾಗೂ ಅತಿ ಸಣ್ಣ ರೈತರ ಒಣಭೂಮಿಗೆ ನೀರಾವರಿ ಕಲ್ಪಿಸುವ ಉದ್ದೇಶದಿಂದ ರೂಪಿತವಾದ ಕಾರ್ಯಕ್ರಮ.

೪. **ರಾಷ್ಟ್ರೀಯ ನಿಗಮದ ಸಾಲ ಯೋಜನೆಗಳು** : ಕೆಲವು ಹಿಂದುಳಿದ ವರ್ಗದ ಜನರ ಕುಲ ಕಸುಬುಗಳಾದ ಕ್ಷೌರಿಕೆ, ಕಮ್ಮಾರಿಕೆ, ಹೇರ್‌ಕಟಿಂಗ್ ಸಲೂನ್, ಕುರಿ ಸಾಕಾಣಿಕೆ, ಮೀನು ವ್ಯಾಪಾರ ಮತ್ತು ಇತರ ವೃತ್ತಿಗಳಾದ ಹಣ್ಣು, ತರಕಾರಿ ಅಂಗಡಿ, ಜನರಲ್ ಸ್ಟೋರ್ಸ್, ಟಾಟಾ ಸುಮೋ, ಅಂಬಾಸಿಡರ್ ಇತ್ಯಾದಿ ವಿವಿಧ ವಾಹನಗಳ ಓಡಿಸುವಿಕೆ ಮುಂತಾದವುಗಳಿಗಾಗಿ ೧೯೯೨ರಲ್ಲಿ ರಾಷ್ಟ್ರಮಟ್ಟದಲ್ಲಿ ರಚನೆಗೊಂಡಿರುವ ರಾಷ್ಟ್ರೀಯ ಹಿಂದುಳಿದ ವರ್ಗಗಳ ಹಣಕಾಸು ಮತ್ತು ಅಭಿವೃದ್ಧಿ ನಿಗಮದ ಮೂಲಕ ಸಾಲ ಸೌಲಭ್ಯವನ್ನು ನೀಡುವ ಕಾರ್ಯವನ್ನು ಮಾಡುತ್ತದೆ. ಈ ಸಾಲ ಯೋಜನೆ, ಸಣ್ಣ ವೃತ್ತಿಯ ಜನರ ನೆಮ್ಮದಿಗೆ ನೆರವಾಗುವ ಒಂದು ಊರುಗೋಲು.

೫. **ಶ್ರಮಶಕ್ತಿ ಯೋಜನೆ** : ಲಂಬಾಣಿಗಳು ಲಂಗ ಕುಪ್ಪಸಗಳಿಗೆ ಹಾಕುವ ಕಸೂತಿ ಎಷ್ಟು ಚೆನ್ನ! ತೆಂಗಿನ ಚಿಪ್ಪಿನಲ್ಲಿ ತಯಾರಿಸುವ ಬೊಂಬೆಗಳು ಎಷ್ಟು ಆಕರ್ಷಕ! ಆದರೆ ಇದನ್ನು ಹಳ್ಳಿಗಳಲ್ಲಿ ಕೊಳ್ಳುವವರಿಲ್ಲ. ನಗರದಲ್ಲಿ ಇವುಗಳ ಲಭ್ಯತೆ ಇಲ್ಲ. ತಯಾರಿಸಿದ್ದನ್ನು ನಗರಕ್ಕೆ ತರಲು ಅವರು ಮಾಡಬೇಕಾದ ಖರ್ಚು, ಈ ಬೊಂಬೆ ಕಸೂತಿಗೆ ಮಾಡಿದ್ದಕ್ಕಿಂತ ಹೆಚ್ಚಾಗಬಹುದು. ಈ ಸಮಸ್ಯೆಯ ಪರಿಹಾರಕ್ಕಾಗಿ ನಿಗಮದ ಮೂಲಕ ಜಾರಿಗೊಳ್ಳಲು ಈ ವರ್ಷದಿಂದ ಆರಂಭವಾಗಲಿರುವ ಯೋಜನೆ 'ಶ್ರಮಶಕ್ತಿ'. ಗ್ರಾಮೀಣ ಜನರ ಕೌಶಲ್ಯಪೂರ್ಣ ತಯಾರಿಕೆಗಳ ಮಹತ್ವ ಕಡಿಮೆಯಾಗದಂತೆ ನೋಡಿಕೊಳ್ಳಲು, ಅವುಗಳ ಮಾರಾಟಕ್ಕೆ ಸೂಕ್ತ ವ್ಯವಸ್ಥೆ ಮಾಡಲು ಮತ್ತು ಅವರ ಶ್ರಮಕ್ಕೆ ತಕ್ಕ ಪ್ರತಿಫಲ ಸಿಗುವಂತಹ ಮಾರಾಟ ಜಾಲವನ್ನು ನೇಯಲು ರೂಪಿಸಲಾಗುತ್ತಿರುವ ಈ ಹೊಸ ಯೋಜನೆಯಿಂದ ಗ್ರಾಮೀಣ ಕುಶಲಕರ್ಮಿಗಳಿಗೆ ಹಣ ಹಾಗೂ ಮಾರಾಟ- ಈ ಎರಡೂ ರೀತಿಯ ನೆರವು ಸಿಗಲಿದೆ.

ಹಿಂದುಳಿದ ವರ್ಗದವರಿಗಾಗಿ ಮಿಲ್ಲರ್ಸ್ ಸಮಿತಿಯಿಂದ ಹಿಡಿದು ಈವರೆಗಿನ ಆಯೋಗಗಳು ಅಧ್ಯಯನ ಮಾಡಿ, ಉದ್ಯೋಗ ಮತ್ತು ಶಿಕ್ಷಣದಲ್ಲಿ ಮೀಸಲಾತಿ ಕೊಡುವಂತೆ ಮಾಡಿದ ಶಿಫಾರಸುಗಳ ಆಧಾರದ ಮೇಲೆ, ಇಂದಿನ ಸರ್ಕಾರ ನಿಗದಿಸಿರುವ ಮೀಸಲಾತಿ ಮತ್ತು ನೀಡುತ್ತಿರುವ ಮೇಲಿನ ಹಲವು ರೀತಿಯ ನೆರವಿನ ಕಾರ್ಯಕ್ರಮಗಳಿಂದ ಏನಾದರೂ ಪ್ರಯೋಜನವಾಗಿದೆಯೇ? ಎಂದೊಮ್ಮೆ ಅವಲೋಕಿಸಿದರೆ, ಮೇಲ್ನೋಟಕ್ಕಂತೂ ಬಹಳವಾದ ಬದಲಾವಣೆ ಆದಂತೆಯೇ ಅನಿಸುತ್ತದೆ. ಗ್ರಾಮ ಪ್ರದೇಶಗಳಲ್ಲೂ ಹಿಂದುಳಿದ

ಜಾತಿಯವರಲ್ಲಿದ್ದ ಕೀಳರಿಮೆ, ಮುಗ್ಧತೆ, ಮೂಢನಂಬಿಕೆಗಳು ಸಾಕಷ್ಟು ಕಡಿಮೆಯಾಗಿ, ವಿದ್ಯೆ, ನೌಕರಿ, ಸ್ವಯಂ ಉದ್ಯೋಗ, ಕೃಷಿ ಇತ್ಯಾದಿ ಎಲ್ಲ ಕ್ಷೇತ್ರಗಳಲ್ಲಿಯೂ ಹಿಂದುಳಿದ ಜಾತಿಯವರ ಪ್ರಾತಿನಿಧ್ಯ ಹೆಚ್ಚಿದೆ ಎಂದೇ ಎನಿಸುತ್ತದೆ. ಮೇಲ್ವರ್ಗದವರ ಮನೆಗಳಿಗೆ ಕೆಳ ವರ್ಗವೆಂದು ಹೇಳಲಾಗುತ್ತಿದ್ದ ಜನರೂ, ಕೆಳವರ್ಗವೆಂದು ದೂರವಿಡಲಾಗುತ್ತಿದ್ದ ಜಾತಿಗಳ ಮನೆಗಳಿಗೆ ಮೇಲ್ವರ್ಗದ ಜನರೂ, ಯಾವುದೇ ಸಂಕೋಚ ಮುಜುಗರಗಳಿಲ್ಲದೇ ಸ್ನೇಹ-ಸಂಪರ್ಕಗಳನ್ನು ಬೆಳೆಸುವುದು ಕಂಡುಬರುತ್ತದೆ. ಆದರೆ ಉನ್ನತ ಪದವಿ, ನೌಕರಿ, ಕೀರ್ತಿ ತರುವ ಕಾರ್ಯಪ್ರಭಾರಗಳ ಮೂಲಕ ಯಾರನ್ನಾದರೂ ಮೇಲೆತ್ತುವ ಪ್ರಶ್ನೆ ಬಂದಾಗ ಮಾತ್ರ ಜಾತಿ ಭೇದ ಹಿಂದೆಂದಿಗಿಂತಲೂ ಈಗ ಹೆಚ್ಚಾಗಿದೆ. ಹೆಜ್ಜೆ ಹೆಜ್ಜೆಗೂ ಜಾತಿಯ ಪ್ರಶ್ನೆ ಅಡ್ಡ ಬರುವಂತಾಗಿದೆ. ಪರಸ್ಪರ ದೂಷಣೆ, ಶೋಷಣೆಗಳ ವಿಧಾನಗಳಷ್ಟೇ ಬದಲಾದಂತಾಗಿದೆ. ಎಲ್ಲ ಜಾತಿ ಜನಾಂಗದವರೂ ತಮ್ಮನ್ನು ಹಿಂದುಳಿದ ಪಟ್ಟಿಯಲ್ಲಿ ಸೇರಿಸಬೇಕೆಂಬ ಅಹವಾಲು ಒಡ್ಡುತ್ತಿರುವುದು, ಒಂದು ಜಾತಿ ಸ್ವಲ್ಪ ಮುಂದುವರಿದರೆ ಅವರ ಮೇಲೆ ಪೈಪೋಟಿ ನಡೆಸಿ ಹಿಂದೆ ತಳ್ಳಲು ಪ್ರಯತ್ನಿಸುವುದು, ಸಣ್ಣ ಕಾರಣ ಸಿಕ್ಕರೂ ಸಾಕು ಕಿಚ್ಚು, ರೋಷ, ಸೇಡುಗಳು ದೊಡ್ಡ ರೂಪ ಪಡೆದು ಒಬ್ಬರನ್ನೊಬ್ಬರು ತುಳಿಯುವುದು- ಇವೆಲ್ಲ ಹೆಚ್ಚಾಗುತ್ತಿವೆ.

ಹೀಗೆ ಜಾತಿ-ವಿಜಾತಿಗಳಲ್ಲಿ ಬೆಳೆಯುತ್ತಿರುವ ವೈರದ ಹೊಗೆಯನ್ನು ನಂದಿಸುವುದು ಹೇಗೆ? ನಿಜವಾದ ಹಿಂದುಳಿದ ಜನಾಂಗದವರ ಬಗ್ಗೆ ಕಾಳಜಿ ವಹಿಸುವುದು ಹೇಗೆ? ಮೇಲಿನ ಸರ್ಕಾರದ ಸೌಲಭ್ಯಗಳು ನಿಜವಾಗಿಯೂ ಹಿಂದುಳಿದವರಿಗೇ ತಲುಪುತ್ತಿವೆಯೇ? ಈ ನೆರವು, ಮೀಸಲಾತಿಗಳಿಂದ ಹಿಂದುಳಿದ ವರ್ಗದ ಜನಾಂಗದವರು ಸ್ವಲ್ಪವಾದರೂ ಮುಂದುವರಿದಿದ್ದಾರೆಯೇ? ನಿಜವಾಗಿ ಮುಂದುವರಿದಿದ್ದರೆ ಅವರಿಗೆ ಮೀಸಲಾತಿಯನ್ನು ಈಗಲೂ ಮುಂದುವರಿಸುತ್ತಲೇ ಹೋಗುವ ಅಗತ್ಯವಿದೆಯೇ? ಮುಂದುವರಿಸಿದರೆ ಇನ್ನೂ ಎಲ್ಲಿಯವರೆಗೆ? ಹಿಂದುಳಿದವರಲ್ಲಿ ಮುಂದುವರಿದಿರುವವರನ್ನು ಗುರುತಿಸುವುದು ಹೇಗೆ? ಎಂಬಿತ್ಯಾದಿ ಪ್ರಶ್ನೆಗಳು ಈಗ ನಮ್ಮ ಮುಂದಿವೆ. "ಎಷ್ಟೆಷ್ಟು ಉತ್ತರಗಳನ್ನು ಕೊಟ್ಟು ಮುಗಿಸಿದರೂ, ಏಳುತ್ತವೆ ಪ್ರಶ್ನೆಗಳು ಮತ್ತೆ ಹಲವಾರು" ಎಂಬಂತೆ ಈಗ ಎದ್ದಿರುವ ಪ್ರಶ್ನೆಗಳಿಗೆ ಸರ್ಕಾರ ಉತ್ತರಗಳನ್ನು ಕಂಡುಕೊಳ್ಳಬೇಕಾಗಿದೆ. ಈಗಾಗಲೇ ಸರ್ವೋಚ್ಚ ನ್ಯಾಯಾಲಯವು ಇಂದಿರಾ ಸಾಹ್ನಿ ಪ್ರಕರಣದಲ್ಲಿ ಈ ಪ್ರಶ್ನೆಗಳ ಪರಿಹಾರಕ್ಕೆ ಮಾರ್ಗವೊಂದನ್ನು ಸೂಚಿಸಿದೆ. ಅದೆಂದರೆ ಹತ್ತು ವರ್ಷಗಳಿಗೊಮ್ಮೆ ಅಥವಾ ಅಷ್ಟರೊಳಗೆ ಇಡೀ ರಾಜ್ಯದ ಹಿಂದುಳಿದ ಜನಾಂಗಗಳ ಸಮಗ್ರ ಸಮೀಕ್ಷೆ ನಡೆಸಬೇಕು ಎಂಬುದು.

ಮೇಲಿನ ಎಲ್ಲ ಪ್ರಶ್ನೆಗಳಿಗೆ ಅಗತ್ಯ ಮಾಹಿತಿಗಳನ್ನು ಸರಿಯಾದ ಹಾಗೂ ಅರ್ಥಬದ್ಧವಾದ ಸಮೀಕ್ಷೆಯ ಮೂಲಕ ಸಂಗ್ರಹಿಸಿ, ಸಂಗ್ರಹಿತ ಮಾಹಿತಿಯ ಆಧಾರದ ಮೇಲೆ, ಹಿಂದುಳಿದ ಗುಂಪಿನಿಂದ ಮುಂದೆ ಬಂದ ಜಾತಿಗಳನ್ನು ಮೀಸಲಾತಿಯಿಂದ ಹೊರಗಿಟ್ಟು, ಇನ್ನೂ ಹೆಚ್ಚು ಹಿಂದುಳಿದ ಜಾತಿಗಳನ್ನು ಮೀಸಲಾತಿಯಡಿ ಸೇರಿಸಬೇಕು. ನಿಜವಾದ ಹಿಂದುಳಿದವರಿಗೆ ಸರ್ಕಾರದ ಸೌಲಭ್ಯಗಳು ಯಾವ ಕಾರಣಕ್ಕೆ ದೊರಕುತ್ತಿಲ್ಲ ಎಂಬ ಬಗ್ಗೆ ತಿಳಿದು ಅದಕ್ಕೆ ತಕ್ಕಂತಹ ಹೊಸ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. ಹಿಂದುಳಿದವರನ್ನು ಮತ್ತು ಅವರಲ್ಲಿ ಮುಂದುವರಿದವರನ್ನು ಗುರುತಿಸಲು ಕಂಡುಕೊಳ್ಳಬೇಕಾದ ಮಾನದಂಡಗಳನ್ನು, ಸಮೀಕ್ಷಾ ವಿಧಾನವನ್ನು, ಸಮೀಕ್ಷೆಯ ನಂತರದ ಪರಿಹಾರ ಮಾರ್ಗಗಳನ್ನು ಮತ್ತು ಸರ್ಕಾರಕ್ಕೆ ಮಾಡಬೇಕಾದ ಶಿಫಾರಸುಗಳನ್ನು ಆರಂಭದಲ್ಲೇ ಆಲೋಚಿಸಿ ಸರಿಯಾದ ಕ್ರಮದಿಂದ ಈ ಮಹತ್ತಾದ ಹಾಗೂ ಬೃಹತ್ತಾದ ಕಾರ್ಯವನ್ನು ಆರಂಭಿಸುವ ಬಹುದೊಡ್ಡ ಹೊಣೆ ಇಂದಿನ ಶಾಶ್ವತ ಹಿಂದುಳಿದ ವರ್ಗಗಳ ಆಯೋಗದ ಮೇಲಿದೆ. ಈಗಿರುವ ಎಲ್ಲ ಯೋಜನೆಗಳನ್ನು, ಕಾರ್ಯಕ್ರಮಗಳನ್ನು ಪುನರಾವರ್ತಿಸಿ, ಗ್ರಾಮ ಮಟ್ಟದಲ್ಲಿಯೂ ಹೊಸ ಸಮಾಜವನ್ನು ಕಟ್ಟುವ ಈ ಗುರುತರ ಜವಾಬ್ದಾರಿಯನ್ನು ಇಂದಿನ ಆಯೋಗ ಹೇಗೆ ನಿಭಾಯಿಸುತ್ತದೆ ಎಂಬುದನ್ನು ಕಾಲವೇ ತಿಳಿಸಬೇಕು. ಅದುವರೆಗೆ ಕಾದು ನೋಡುವುದಷ್ಟೇ ಸಾಮಾನ್ಯ ಸ್ಥಿತಿಯಲ್ಲಿರುವವರಿಗೆ ಸಾಧ್ಯ.

●




# ಹಿಂದುಳಿದವರ ಹೋರಾಟ

ಪ್ರೊ. ಬರಗೂರು ರಾಮಚಂದ್ರಪ್ಪ

ದೇಶದ ವಿವಿಧ ದಿನಪತ್ರಿಕೆಗಳಲ್ಲಿ ೨೧-೨-೧೯೯೪ರಂದು ಚಿತ್ರಸಹಿತ ಸುದ್ದಿಯೊಂದು ಪ್ರಕಟಗೊಂಡಿತು. 'ಮಂಡಲ್ ಆಯೋಗದ ಶಿಫಾರಸ್ಸಿನನ್ವಯ ನೇಮಕಗೊಂಡ ಪ್ರಥಮ ಅಭ್ಯರ್ಥಿ ಆಂಧ್ರದ ವಿ. ರಾಜಶೇಖರಾಚಾರಿ ಅವರಿಗೆ ಭಾನುವಾರ ನವದೆಹಲಿಯಲ್ಲಿ ಕೇಂದ್ರ ಕಲ್ಯಾಣ ಸಚಿವ ಸೀತಾರಾಮ ಕೇಸರಿ ಅವರು ನೇಮಕಾತಿ ಪತ್ರ ನೀಡಿದರು' ಎಂದು ಪ್ರಚಾರಪಡಿಸಲಾಯಿತು. ಆದೇಶಪತ್ರವನ್ನು ಕ್ಯಾಮರಾಕ್ಕಾಗಿಯೇ ಹಿಡಿದಂತಿದ್ದ ಕೋನವನ್ನು ಗಮನಿಸಿದಾಗ ಇದು ಸಾಂಕೇತಿಕವಾಗಿದೆಯಲ್ಲವೆ ಎಂಬ ಪ್ರಶ್ನೆಯೆದ್ದಿತು. ಆದೇಶದ ಪ್ರತಿಯು ಅಭ್ಯರ್ಥಿಗೆ ಕಾಣದಿದ್ದರೂ ಕ್ಯಾಮರಕ್ಕೆ ಕಾಣಬೇಕು. ಅಭ್ಯರ್ಥಿಯೂ ಕ್ಯಾಮರಕ್ಕಾಗಿಯೇ ಕೋಟು ತೊಟ್ಟು ಬಂದಿರಬೇಕು. ಸಚಿವರು ಆದೇಶದ ಪ್ರತಿಯನ್ನು ದಯಪಾಲಿಸುತ್ತಿರುವಾಗ ಜೂನಿಯರ್ ಸಚಿವರು ಅದನ್ನೇ ನೆಟ್ಟನೋಟದಲ್ಲಿ ತುಂಬಿಕೊಳ್ಳಬೇಕು. ಛೆ! ಹೀಗೆ ಬರೆಯುತ್ತಿರುವಾಗ ನಾನು ಸಿನಿಕನಾಗುತ್ತಿದ್ದೇನೆಯೆ? ಇಲ್ಲ, ಖಂಡಿತ ಇಲ್ಲ, ಸಂಕಟಪಡುತ್ತಿದ್ದೇನೆ.

ನನ್ನ ಈ ಸಂಕಟ-ಮಂಡಲ್ ವರದಿಯ ಪರವಾದ ಕಾಳಜಿಯ ಕೇಂದ್ರದಲ್ಲಿ ಹುಟ್ಟಿದ ಸಂಕಟ. ಹಿಂದುಳಿದ ವರ್ಗದ ಅಭಿವೃದ್ಧಿಯ ಆಶಯವು ಪ್ರದರ್ಶನದ ಪ್ರತಿಯ ಮಟಕ್ಕೆ ಇಳಿದುಬಿಡುತ್ತಿದೆಯೇನೊ ಎಂಬ ಅನುಮಾನ ಮತ್ತು ಆತಂಕದಲ್ಲಿ ಹುಟ್ಟಿದ ಸಂಕಟ. ಮಂಡಲ್ ವರದಿಯ ಅನುಷ್ಠಾನ ಕಡೆಗೂ ಪ್ರಾರಂಭವಾದ ಸಂತೋಷದಲ್ಲೇ, ಒಬ್ಬ ವ್ಯಕ್ತಿಗೆ ಕೊಟ್ಟ ಸಾಂಕೇತಿಕ ನೇಮಕಾತಿ ಪತ್ರಕ್ಕೆ ಹಿಗ್ಗಿಹೀರೆಕಾಯಿ ಆಗಬೇಕಾದ ಸನ್ನಿವೇಶದಲ್ಲಿ ನಾವು ನಿಂತಿದ್ದೇವಲ್ಲ ಎಂಬ ಸಂಕಟ. ಇದಕ್ಕಿಂತ ಇನ್ನೇನು ಹೇಳಲಿ? ಕೇಂದ್ರ ಸರ್ಕಾರದ ನೇಮಕಾತಿಗಳಲ್ಲಿ ಹಿಂದುಳಿದ ವರ್ಗಗಳಿಗೆ ಮೀಸಲಾತಿಯೇ ಇಲ್ಲದಿದ್ದಾಗ ಮಂಡಲ್ ವರದಿಯ ಅನುಷ್ಠಾನ ಪ್ರಾಮಾಣಿಕವಾಗಿ ಆಗುತ್ತಾ ಬಂದರೆ ಸಾಮಾಜಿಕ ಶೋಷಣೆಗೀಡಾದ ಸಮುದಾಯದಿಂದ ಬಂದ ಕೆಲವರಿಗಾದರೂ ಮುಖ್ಯಸ್ಥಾನಗಳು ಸಿಗಬಹುದು. ಕಡೇಪಕ್ಷ ಉದ್ಯೋಗಾವಕಾಶ ಹೆಚ್ಚಬಹುದು ಎಂಬ ಸಂತೋಷ ಖಂಡಿತ ಇದೆ. ಆದರೆ ಸ್ವಾಭಾವಿಕವಾದ ಸಾಮಾಜಿಕ ನ್ಯಾಯಕ್ಕೂ ಇಲ್ಲಿ ಬೆಟ್ಟಕಡಿದು ಇಲಿ ಹಿಡಿಯುವ ಕೆಲಸ ನಡೆಯುತ್ತಿರುವುದನ್ನು ಕಂಡಾಗ, ಹಿಂದುಳಿದ ವರ್ಗಗಳ ಹಿಂದುಳಿದಿರುವಿಕೆಗೆ ವ್ಯಥೆಯಾಗುತ್ತದೆ.

***ಅತ್ಯಂತ ಅನಾಯಕತ್ವದ ಅರಾಜಕತೆ ಹಾಗೂ ಅಭದ್ರತೆಯ ವರ್ಗವೆಂದರೆ ಹಿಂದುಳಿದ ವರ್ಗವೆಂದು ಧಾರಾಳವಾಗಿ ಹೇಳಬಹುದು. ಅಸ್ಪೃಶ್ಯರ ಸಂಘಟನೆಯಲ್ಲಿರುವ ಸೌಲಭ್ಯವು ಹಿಂದುಳಿದ ವರ್ಗಗಳಲ್ಲಿಲ್ಲ. ಅಸ್ಪೃಶ್ಯರಲ್ಲಿ ಅಸ್ಪೃತೆಯೇ ಸಂಘಟನೆಯ ಕೇಂದ್ರಶಕ್ತಿಯಾಗಿರುವುದು.***

ನಿಜ ಹೇಳಬೇಕಾದರೆ ಅತ್ಯಂತ ಅನಾಯಕತ್ವದ, ಅರಾಜಕತೆಯ ಹಾಗೂ ಅಭದ್ರತೆಯ ವರ್ಗವೆಂದರೆ ಹಿಂದುಳಿದ ವರ್ಗವೆಂದು ಧಾರಾಳವಾಗಿ ಹೇಳಬಹುದು. ಅಸ್ಪೃಶ್ಯರ ಸಂಘಟನೆಗಿರುವ ಸೌಲಭ್ಯ ಹಿಂದುಳಿದ ವರ್ಗಗಳಿಗಿಲ್ಲ. ಅಸ್ಪೃಶ್ಯರಲ್ಲಿ ಅಸ್ಪೃಶ್ಯತೆಯೇ ಸಂಘಟನೆಯ ಕೇಂದ್ರಶಕ್ತಿಯಾಗಬಲ್ಲದು. ಪ್ರಾಥಮಿಕ ಹಂತದಲ್ಲಾದರೂ ಒಳಪಂಗಡಗಳ ಪ್ರತ್ಯೇಕತಾ ಭಾವನೆಗಳನ್ನು ಮರೆಸಬಲ್ಲದು. ಆದರೆ 'ಹಿಂದುಳಿದ ವರ್ಗ'ವೆನ್ನುವುದು ನೂರೆಂಟು ಜಾತಿಗಳ ನಂಟಿನಿಂದ ಮೂಡುವ ಪರಿಕಲ್ಪನೆ. ಇಲ್ಲಿ ಎಲ್ಲಾ ಜಾತಿಗಳನ್ನು ಒಂದುಗೂಡಿಸುವ ಕೇಂದ್ರನೆಲೆ 'ಹಿಂದುಳಿದಿರುವಿಕೆ'ಯಾದರೂ ಹಿಂದುಳಿದಿರುವಿಕೆಯಲ್ಲಿ ಸಮಾನತೆಯಿಲ್ಲ. ಈ ಕಾರಣದಿಂದ ಸಮಾನತೆಗಾಗಿ ಹೂಡುವ ಒತ್ತಾಯದಲ್ಲೂ ಸಮಾನತೆ ಮೂಡುವುದು ಕಷ್ಟವಾಗುತ್ತದೆ; ಹಿಂದುಳಿದ ವರ್ಗದಲ್ಲೇ ಶ್ರೇಣಿಗಳನ್ನು ಹುಡುಕಲು ಸಾಧ್ಯವಿರುವುದರಿಂದ ಒಳವೈರುಧ್ಯಗಳು ನಿಜಹೋರಾಟದ ತೀವ್ರತೆಯನ್ನು ತಣ್ಣಗಾಗಿಸುವ ಅಪಾಯವಿದೆ. ಸವಲತ್ತುಗಳಲ್ಲಿ ಸಮಾನತೆ ಕಾಣುವ ಕಣ್ಣುಪಟ್ಟಿಯ ನೋಟಕ್ಕೆ ಒಗ್ಗಿದ ಹಿಂದುಳಿದ ವರ್ಗವನ್ನು ರೂಪಿಸುತ್ತಿರುವ ನಮ್ಮ ಸಂದರ್ಭದ ವೈರುಧ್ಯವನ್ನು ಇಲ್ಲಿ ಗಮನಿಸಬೇಕು. ದಲಿತರ (ಅಸ್ಪೃಶ್ಯರ) ಹೋರಾಟಕ್ಕೂ ಹಿಂದುಳಿದವರ ವರ್ಗಗಳ ಹೋರಾಟಕ್ಕೂ ಇಲ್ಲಿ ವ್ಯತ್ಯಾಸ ಕಾಣಬಹುದು. ದಲಿತರಿಗೆ ಸಂವಿಧಾನಾತ್ಮಕ ರಕ್ಷಣೆಯ ಜೊತೆಗೆ ಅಸ್ಪೃಶ್ಯತೆಯ ವಿರುದ್ಧ ಹೋರಾಟಕ್ಕೆ ಅಣಿಗೊಳಿಸುವಾಗ, ಸವಲತ್ತಿನ ಒತ್ತಾಯವೊಂದೇ ಪ್ರಧಾನವಾಗುವುದಿಲ್ಲ. ಸವಲತ್ತುಗಳಿಗಾಗಿ ಒತ್ತಾಯಿಸುತ್ತ ಬಂದರೂ ಅಸ್ಪೃಶ್ಯತೆಯ ತೀವ್ರತೆಯಿಂದಾಗಿ, ಇದು ತಾನಾಗಿಯೇ ವ್ಯವಸ್ಥೆಯ ವಿರೋಧದ ಪ್ರಶ್ನೆಯಾಗಿಬಿಡುತ್ತದೆ. ಶತಮಾನದ ಇತಿಹಾಸವನ್ನು ಪ್ರಶ್ನಿಸುತ್ತಲೇ ಪ್ರಾರಂಭವಾಗುವ ದಲಿತರ ಪ್ರತಿಭಟನೆಯಲ್ಲಿ ಸಹಜವಾಗಿ ಮೂಡುವ ಸಾಮಾಜಿಕ ತೀವ್ರತೆ, ವಿವಿಧ ಜಾತಿ ಸಮೂಹದ ಹಿಂದುಳಿದ ವರ್ಗಗಳಲ್ಲಿ ಮೂಡುವುದಿಲ್ಲ. ಈ ವರ್ಗದಲ್ಲಿ ದೊಡ್ಡ ಮೀನುಗಳೂ ಸಣ್ಣ ಮೀನುಗಳೂ ಒಟ್ಟಿಗೇ ಇರುವುದರಿಂದ ಪರಸ್ಪರ ಅಪನಂಬಿಕೆಯ ವಾತಾವರಣ ಮೂಡುವ ಅಪಾಯವಿದ್ದೇ ಇದೆ. ಅಧಿಕಾರ ಹಾಗೂ ಸವಲತ್ತುಗಳನ್ನು ನ್ಯಾಯವಾಗಿ ಕೇಳಬೇಕಾದಾಗಲೂ ಯಾರಿಗೆ ಎಷ್ಟು ಎಂಬ ಪ್ರಶ್ನೆ ಸಹಜವಾಗಿಯೇ ವ್ಯಾವಹಾರಿಕವಾಗುತ್ತದೆ. ದಲಿತರಲ್ಲಿ ಒಳಪಂಗಡಗಳ ಪ್ರಶ್ನೆ ಇದೆಯಾದರೂ ಅದು ಎಡಗೈ ಮತ್ತು ಬಲಗೈಗೆ ಮಾತ್ರ ಮೀಸಲಾಗಿದ್ದು ಬೂದಿಮುಚ್ಚಿದ ಕೆಂಡದಂತೆ ಒಳಗೆ ಬಿಸಿಯಾಗುತ್ತ, ಬೂದಿಯಾಗುತ್ತ, ಮತ್ತೆ ಹದಗೊಳ್ಳುತ್ತ ಹೋರಾಟವನ್ನು ಉಳಿಸಿಕೊಳ್ಳುತ್ತ ಬರುತ್ತಿದೆ.

ಇಂದು ದಲಿತರಂತೆ ಸಂಘಟಿತರಾಗಿ ಸಮಗ್ರ, ಸಮರ್ಥ ಹೋರಾಟವೊಂದನ್ನು ಕಟ್ಟುವುದು ಹಿಂದುಳಿದ ವರ್ಗಕ್ಕೆ ಇನ್ನೂ ಸಾಧ್ಯವಾಗದಿರುವುದರಿಂದಲೇ ಮಂಡಲ್ ವರದಿಯ ಅನುಷ್ಠಾನದ ಅಂಗವಾಗಿ ಒಬ್ಬರಿಗೆ ಕೆಲಸ ಸಿಕ್ಕಿದರೂ ಹಿಂದುಳಿದ ವರ್ಗಕ್ಕೆ ಸಂಭ್ರಮವಾಗಿಬಿಡುತ್ತದೆ! ಮಂಡಲ್ ಪ್ರಸಿದ್ಧ ಮಾಜಿ ಪ್ರಧಾನಿ ವಿ.ಪಿ.ಸಿಂಗ್ ಅವರು ಲಂಡನ್ನಿನಲ್ಲೇ ಸಂಭ್ರಮಿಸಿ ಸ್ವದೇಶಕ್ಕೆ ಬಂದಕೂಡಲೇ ಪ್ರಥಮ ನೇಮಕಾತಿಯ ಅಭ್ಯರ್ಥಿಗೆ ಅಭಿನಂದನೆ ಸಲ್ಲಿಸುವುದಾಗಿ ಸಂದೇಶ ಕಳಿಸಿರುವಾಗ ಸಾಮಾನ್ಯ ಹಿಂದುಳಿದ ವರ್ಗದರಿಗೆ ಸಂಭ್ರಮವಾಗುವುದು ಸ್ವಾಭಾವಿಕವೇ ಆಗಿದೆ. ಆದರೆ ಹಿಂದುಳಿದ ವರ್ಗದವರ ಒಳಮನಸ್ಸು ಸಂಕಟವನ್ನುಳಿಸಿಕೊಂಡು ಸಂತೋಷಪಡುವುದಾದರೆ ಹೋರಾಟದ ಹುರುಪು ಉಳಿದೀತೆಂದು ನನ್ನ ಭಾವನೆ. ಯಾಕೆಂದರೆ ನಮ್ಮದು ಭ್ರಮೆ ಮತ್ತು ವಾಸ್ತವಗಳ ನಡುವಿನ ಸಂಘರ್ಷವಾಗಬೇಕು. ಭ್ರಮೆ ಬಿತ್ತುವ ಭಾವಚಿತ್ರಗಳು ನಮ್ಮ ದೃಷ್ಟಿಯನ್ನು ಮಂದಗೊಳಿಸಿ, ದರ್ಶನವನ್ನು ಪ್ರದರ್ಶನ ಮಾತ್ರವಾಗಿಸುವ ಅಪಾಯವನ್ನು ಅರಿತಾಗ ಸಂತೋಷದ ಗೆರೆಗಳನ್ನು ಗುರುತಿಸಿಕೊಳ್ಳಲು ಸಾಧ್ಯ.

ಹಿಂದೆ ಒಂದು ಮಾತು ಹೇಳಿದೆ: ಹಿಂದುಳಿದ ವರ್ಗವೆಂದರೆ ಅನಾಯಕತ್ವ, ಅರಾಜಕತೆ ಹಾಗೂ ಅಭದ್ರತೆಯ ವರ್ಗ-ಎಂದು. ಈಗ ಇನ್ನೊಂದು ವಿಶೇಷಣವನ್ನು ಸೇರಿಸಬಹುದು: ಹಿಂದುಳಿದ ವರ್ಗ 'ಅನಾಥ' ವರ್ಗವೂ ಹೌದು. ನನ್ನ ಮಾತುಗಳನ್ನು ಈಗ ವಿವರಿಸುತ್ತೇನೆ.

ನಮ್ಮ ದೇಶದಲ್ಲಿ ಹಿಂದುಳಿದ ವರ್ಗಕ್ಕೆ ಸಮರ್ಥ ನಾಯಕತ್ವ ದೊರಕಿಯೇ ಇಲ್ಲ. ಇದರರ್ಥ- ಹಿಂದುಳಿದ ವರ್ಗದ ನಾಯಕರು ಹುಟ್ಟಿಯೇ ಇಲ್ಲ, ಹೋರಾಟ ನಡೆಸಿಯೇ ಇಲ್ಲ ಎಂದಲ್ಲ. ಹಿಂದುಳಿದ ವರ್ಗದ ವಿವಿಧ ನೆಲೆಗಳಿಂದ ಪ್ರತಿಭಾನ್ವಿತ ನಾಯಕರು ಮುಂಚೂಣಿಗೆ ಬಂದಿದ್ದಾರೆ. ಆದರೆ ಎಲ್ಲ ಒಳನೆಲೆಗಳನ್ನು ಒಂದಾಗಿಸುವ ವಾತಾವರಣವೊಂದು ಮೂಡಿತೆ? ಮೂಡುವ ಭಾವನೆಯನ್ನು ಮೂಡಿಸಿದರೂ ಅದು ಅಧಿಕಾರ ಹಂಚಿಕೆಯ ಹಂತದಲ್ಲೇ ನಿಂತಿದೆಯಲ್ಲವೆ? ದಲಿತರು ಸಾಮಾಜಿಕ ವ್ಯವಸ್ಥೆಯನ್ನೇ ಪ್ರಶ್ನಿಸುತ್ತಾ ಸವಲತ್ತುಗಳನ್ನು ಕೇಳುವ ಹಕ್ಕನ್ನು ಸ್ಥಾಪಿಸಿದ ರೀತಿಯಲ್ಲಿ ಹಿಂದುಳಿದ ವರ್ಗದವರು ಮಾಡಲು ಸಾಧ್ಯವಾಗದಿರುವುದಕ್ಕೆ ಇವರು

ದಲಿತರಿಗಿಂತ ಮುಂದುವರೆದವರೆಂಬುದು ಒಂದು ಕಾರಣವಾದರೆ, ನೂರೆಂಟು ಜಾತಿಗಳ ಒಕ್ಕೂಟಕವೇ ಹಿಂದುಳಿದ ವರ್ಗವೆಂಬುದು ಇನ್ನೊಂದು ಕಾರಣ. ಇಂಥ ಒಕ್ಕೂಟವನ್ನು ಗಟ್ಟಿಗೊಳಿಸುವ ಪ್ರಬುದ್ಧಗೊಳಿಸುವ ನಾಯಕತ್ವ ಮೂಡಿಬಾರದೆ ಇರುವ ಸತ್ಯ ಮತ್ತೊಂದು ಕಾರಣ. ಹೀಗಾಗಿ ಹಿಂದುಳಿದ ವರ್ಗದ ಒಡಲಲ್ಲೇ ಇರುವ ಅರಾಜಕತ್ವ ಅಳಿಯುವ ಬದಲು ಅರಳತೊಡಗುತ್ತದೆ; ಆದರಲ್ಲೂ ಅರಿವಾಗದಂತೆ ಅರಳುವ ಈ ಅರಾಜಕತ್ವ ಅಭದ್ರನೆಲೆಯನ್ನೂ ನಿರ್ಮಿಸಿಬಿಡುತ್ತದೆ. ಕಡೆಗೇ ಇಡೀ ಹಿಂದುಳಿದ ವರ್ಗ ಅಪನಂಬಿಕೆಯಲ್ಲಿ ನರಳುತ್ತ ಅನಾಥವರ್ಗವಾಗುತ್ತದೆ. ಮುಳುಗುವವನಿಗೆ ಹುಲ್ಲುಕಡ್ಡಿ ಸಿಕ್ಕಿದರೂ ಸಂತೋಷಪಡುವಂತೆ ಸೀತಾರಾಮ ಕೇಸರಿಯವರ ಕೈಯಲ್ಲಿರುವ ಪ್ರಥಮ ಅಭ್ಯರ್ಥಿಯ ನೇಮಕಾತಿ ಆದೇಶವನ್ನು ಕಂಡು ಸಂಭ್ರಮಗೊಳ್ಳುತ್ತದೆ. ಈ ಸಂಭ್ರಮಕ್ಕೆ ವಿ.ಪಿ. ಸಿಂಗ್ ಅವರ ರೋಮಾಂಚನವೂ ಸೇರಿ ಅಭ್ಯರ್ಥಿಗೆ ನೇಮಕಾತಿ ಆದೇಶ ಕೊಡುವ ಚಿತ್ರ ಪ್ರಕಟಗೊಂಡದ್ದು, ಪ್ರಚಾರ ಪಡೆದದ್ದು ಪಾರ್ಲಿಮೆಂಟ್ ಪ್ರಾರಂಭವಾಗುವ ದಿನವೆಂಬುದನ್ನು ಮರೆಸಿಬಿಡುತ್ತದೆ. ಇದು ಕಾಕತಾಳೀಯವೆಂದು ನನಗನ್ನಿಸದು. ಯಾಕೆಂದರೆ ಆಜ್ಞೆಯೊಂದನ್ನು ಪತ್ರಿಕಾಗೋಷ್ಠಿಯಲ್ಲಿ ಅದೂ ರಜಾದಿನವಾದ ಭಾನುವಾದಂದು ಕೊಡುವ ತುರ್ತು ಏನಿತ್ತು? ಪಾರ್ಲಿಮೆಂಟ್ ಪ್ರಾರಂಭವಾಗುವ ದಿನವೇ ಹಿಂದುಳಿದ ವರ್ಗವು ಪ್ರಚಾರದ 'ಬಲಿಪಶು 'ವಾದದ್ದು ಇತಿಹಾಸದ ವಾಸ್ತವವೇ ಇರಬಹುದು.

ಇಲ್ಲಿ ಇನ್ನೊಂದು ಅಂಶವನ್ನೂ ಹೇಳಬೇಕು; ದಲಿತರಿಗೆ ಮೀಸಲಾತಿಯ ಹಕ್ಕು ಸಂವಿಧಾನಾತ್ಮಕವಾಗಿದ್ದುದರಿಂದ, ಅವರು ಸೂಕ್ತ ಅನುಷ್ಠಾನಕ್ಕೆ ಮಾತ್ರ ಒತ್ತಾಯಿಸಬೇಕಿತ್ತು. ಹಿಂದಿನ ಹೋರಾಟ ಮತ್ತು ವಿಧಾನಗಳು ಮುಂದಿನ ಹೋರಾಟಕ್ಕೆ ಅಣಿಯಾಗುವ ಹಂತಕ್ಕೆ ಅವರನ್ನು ಕರೆತಂದಿದ್ದವು. ಆದ್ದರಿಂದ ದಲಿತ ಹೋರಾಟಗಳು ಸಾಮಾಜಿಕ ಬದಲಾವಣೆಯ ವ್ಯಾಪಕ ಹೋರಾಟದ ಆಶಯವನ್ನು ಅಭಿವ್ಯಕ್ತಿಸತೊಡಗಿದವು. ಆದರೆ ಹಿಂದುಳಿದ ವರ್ಗಕ್ಕೆ ಮೀಸಲಾತಿಯ ಬಗ್ಗೆ ಸಂವಿಧಾನಾತ್ಮಕ ರಕ್ಷಣೆ ಇರಲಿಲ್ಲ. ದೇವರಾಜ ಅರಸು ಕಾಲದ ಕರ್ನಾಟಕದಂಥ ಕೆಲವು ರಾಜ್ಯಗಳನ್ನು ಹೊರತುಪಡಿಸಿದರೆ, ಹಿಂದುಳಿದ ವರ್ಗದ ಮೀಸಲಾತಿ ಪ್ರಯತ್ನ ಪ್ರಾರಂಭವಾಗಿಯೇ ಇರಲಿಲ್ಲ. ಹೀಗಾಗಿ ಹಿಂದುಳಿದ ವರ್ಗಕ್ಕೆ ಮೊದಲು ಮೀಸಲಾತಿ ಸೌಲಭ್ಯದ ಕಡೆ ಗಮನ. ಅದು ಪೂರ್ಣಗೊಳ್ಳದ ಅಭದ್ರ ಸ್ಥಿತಿಯಲ್ಲಿ ಸಮಗ್ರ ಸಾಮಾಜಿಕ ಬದಲಾವಣೆಯ ಆಶಯಕ್ಕೆ ಅಣಿಯಾಗುವ ಸನ್ನಿವೇಶ ಈ ವರ್ಗದಲ್ಲಿ ಸೃಷ್ಟಿಯಾಗುತ್ತಿರಲಿಲ್ಲ. ಸಮಗ್ರ ಸಾಮಾಜಿಕ ಬದಲಾವಣೆಯ ಒಂದು ಸಾಧನ ಮಾತ್ರವಾಗಿ ಮೀಸಲಾತಿಯ ಮಿತಿಯನ್ನು ತಿಳಿಯಪಡಿಸುವ ಪ್ರಬುದ್ಧ ನಾಯಕತ್ವವೂ ರೂಪುಗೊಂಡಿಲ್ಲ. ಬಿಡಿ ಉದಾಹರಣೆಗಳನ್ನು ಬಿಟ್ಟರೆ ಸಮಗ್ರ ಹೋರಾಟವೂ ಹುಟ್ಟಿಲ್ಲ. ಇಂಥ ಸಂದರ್ಭದಲ್ಲಿಟ್ಟು ಹಿಂದುಳಿದ ವರ್ಗವನ್ನು ನಾವು ಅರ್ಥಮಾಡಿಕೊಳ್ಳಬೇಕು. ಹಿಂದುಳಿದ ವರ್ಗವೂ ತನ್ನನ್ನು ತಾನು ಈ ಹಿನ್ನೆಲೆಯಲ್ಲೇ ಅರ್ಥಮಾಡಿಕೊಳ್ಳಬೇಕು. ಆಗ ತನ್ನ 'ಹೋರಾಟ'ದ ಮಿತಿಗಳು ಮನವರಿಕೆಯಾಗುತ್ತವೆ. ಹಾಗೆ ನೋಡಿದರೆ ಹಿಂದುಳಿದ ವರ್ಗದ ಹೋರಾಟಕ್ಕೆ ವರದಿಗಳ ಅನುಷ್ಠಾನಕ್ಕಾಗಿ ಮಾತ್ರ ಒತ್ತಾಯಿಸುವ ಮಿತಿ ಒದಗಿದೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳುವುದಾದರೆ, ಈಗ ಲಭ್ಯವಾಗುತ್ತಿರುವ ಸವಲತ್ತುಗಳು ಹೋರಾಟದ ಫಲವೆನ್ನುವುದಕ್ಕಿಂತ ಅಧಿಕಾರದ ನೆಲೆಯಿಂದ ಒದಗಿಸಿದ ಅವಕಾಶಗಳು. ಕರ್ನಾಟಕದಲ್ಲಿ ದೇವರಾಜ ಅರಸರು ಹಿಂದುಳಿದ ವರ್ಗದ ತೀವ್ರ ಹೋರಾಟವಿಲ್ಲದೆಯೂ ಹಾವನೂರು ವರದಿಯನ್ನು ಅನುಷ್ಠಾನಕ್ಕೆ ತಂದು ಅವಕಾಶಗಳನ್ನು ಒದಗಿಸಿದರು. ವಿ.ಪಿ. ಸಿಂಗ್ ಅವರು ಶಕ್ತಿರಾಜಕೀಯದ ಫಲವಾಗಿ, ದೇವಿಲಾಲ್ ವಿರುದ್ಧದ ಶಕ್ತಿ ಸಂಚಯದ ಉಪಾಯವಾಗಿ ಮಂಡಲ್ ವರದಿಯ ಅನುಷ್ಠಾನವನ್ನು ಮೊದಲು ಘೋಷಿಸಿ, ಆಮೇಲೆ ಅದಕ್ಕೆ ಬದ್ಧವಾಗುತ್ತ ಬಂದರು.

ಒಟ್ಟಿನಲ್ಲಿ ಹಿಂದುಳಿದ ವರ್ಗದವರಿಗೆ ಸಂಬಂಧಿಸಿದ ವರದಿಗಳು ಈ ವರ್ಗಕ್ಕೆ ವರವಾಗಿ ಕಾಣಿಸುತ್ತಿವೆ; ಕಾಡಿಸುತ್ತಿವೆ. ಆದರೆ ಒಂದು ಮಾತು ನೆನಪಿರಬೇಕು: ಹಿಂದುಳಿದ ವರ್ಗಗಳಿಗೆ ಸಂಬಂಧಿಸಿದ ವರದಿಗಳು 'ಹೋರಾಟ'ದ ಹಾದಿಯಲ್ಲಿ ಹುಟ್ಟಿದ ಸಾಂತ್ವನ ಸತ್ಯಗಳು. ಹಿಂದುಳಿದ ವರ್ಗವು ಈ ಸಾಂತ್ವನ ಸತ್ಯಗಳನ್ನೇ ಅಂತಿಮ ಸತ್ಯಗಳೆಂದು ಭ್ರಮಿಸಿ ವರದಿಗಳ ಅನುಷ್ಠಾನಕ್ಕೆ ಜೀವವನ್ನು ಒತ್ತೆಯಿಡುವ ಸ್ಥಿತಿಗೆ ಮುಟ್ಟುತ್ತಿರುವುದು ಆತಂಕಕಾರಿಯಾಗಿದೆ. ವರದಿಗಳಾಚೆಗೆ ಒಂದು ಹೋರಾಟವಿದೆಯೆಂಬ ಸತ್ಯವು ವರದಿಗಳ ವಿವಾದದಲ್ಲಿ, ಆಸೆ-ನಿರಾಸೆಗಳಲ್ಲಿ ಹೂತು ಹೋಗುತ್ತಿದೆ.

ಹೀಗೆ, ವರದಿಗಳಲ್ಲಿ ಉಸಿರಾಡುತ್ತಿರುವ ಹಿಂದುಳಿದ ವರ್ಗ ಅಲ್ಲೇ ಅಂತ್ಯವಾಗಬಾರದು. ಇದು ನನ್ನಂಥವರ ಅಭೀಪ್ಸೆ.

●




# ಕಾನೂನು ನೆರವು

ಅರಳಿ ನಾಗರಾಜ್

ಭಾರತವು ಗ್ರಾಮಗಳ ದೇಶ. ಆದರ ಎಲ್ಲಾ ಗ್ರಾಮಗಳು ಸರ್ವಾಂಗೀಣ ಅಭಿವೃದ್ಧಿಯಾದಾಗಲೇ ಒಟ್ಟಾರೆ ಭಾರತದ ಅಭಿವೃದ್ಧಿಯಾಗುವುದು ಸಾಧ್ಯ. ನಮ್ಮ ಸಂವಿಧಾನದಲ್ಲಿ ಘೋಷಿತವಾಗಿರುವ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ 'ನ್ಯಾಯ' ಗ್ರಾಮಸ್ಥರೆಲ್ಲರಿಗೂ ದೊರೆತಾಗಲೇ ಗ್ರಾಮದ ಸರ್ವಾಂಗೀಣ ಅಭಿವೃದ್ಧಿಯಾಗಲು ಸಾಧ್ಯ. ಆದರೆ, ಅನಕ್ಷರಸ್ಥರೇ ಹೆಚ್ಚಿನ ಸಂಖ್ಯೆಯಲ್ಲಿರುವ ಗ್ರಾಮಸ್ಥರಲ್ಲಿ ತಮ್ಮ ಹಕ್ಕು ಬಾಧ್ಯತೆಗಳ ಬಗ್ಗೆ, ಸೌಲಭ್ಯಗಳ ಬಗ್ಗೆ ತಮ್ಮ ನಿತ್ಯ ಜೀವನಕ್ಕೆ ಅನ್ವಯವಾಗುವ ಕಾನೂನುಗಳ ಬಗ್ಗೆ ಸಮರ್ಪಕವಾದ ಅರಿವಿಲ್ಲದಿರುವುದರಿಂದ ಅವರು ತಮಗೆ ಸಂವಿಧಾನ ಕೊಡಮಾಡಿರುವ ಈ ತ್ರಿವಿಧ ನ್ಯಾಯದಿಂದ ವಂಚಿತರಾಗಿದ್ದಾರೆ. ಹೀಗಿರುವುದರಿಂದ ನಮ್ಮ ದೇಶದ ಗ್ರಾಮೀಣ ಪ್ರದೇಶಗಳಲ್ಲಿಯ ನಾಗರಿಕರಲ್ಲಿ, ಅದರಲ್ಲೂ ಆರ್ಥಿಕವಾಗಿ ದುರ್ಬಲವಾದವರು, ಸಮಾಜದ ಕೆಳಸ್ತರದಲ್ಲಿರುವವರು, ಮಹಿಳೆಯರು ಮುಂತಾದವರಲ್ಲಿ ನಮ್ಮ ನೆಲದ ಕಾನೂನುಗಳ ಬಗ್ಗೆ ಅರಿವನ್ನುಂಟುಮಾಡಿ, ಆ ಮೂಲಕ ಅವರು ತಮ್ಮ ಹಕ್ಕು ಸೌಲಭ್ಯಗಳ ಬಗ್ಗೆ ಜಾಗೃತರಾಗಿ ಅವುಗಳನ್ನು ಪಡೆದುಕೊಳ್ಳುವಂತೆ ಮಾಡುವುದು; ತಮ್ಮ ಬಾಧ್ಯತೆಗಳನ್ನು, ಕರ್ತವ್ಯಗಳನ್ನು ಅರಿತುಕೊಂಡು ಅವುಗಳನ್ನು ನಿರ್ವಹಿಸುವಂತೆ ಮಾಡುವುದು; ಅವರು ಅನ್ಯಾಯಕ್ಕೊಳಗಾದಾಗ ನ್ಯಾಯ ದೊರಕಿಸಿಕೊಳ್ಳುವ ಅವಕಾಶವನ್ನು ಸುಲಭವಾಗಿ ದೊರಕಿಸಿಕೊಂಡುವುದು ಗ್ರಾಮಗಳ ಅಭಿವೃದ್ಧಿಯ ದೃಷ್ಟಿಯಿಂದ ತೀರಾ ಅವಶ್ಯಕ. ಆದ್ದರಿಂದ ಗ್ರಾಮಸ್ಥರಲ್ಲಿ ಕಾನೂನಿನ ಬಗ್ಗೆ ಅರಿವನ್ನುಂಟುಮಾಡುವುದಲ್ಲದೆ, ಅವರು ತಮಗೆ ದತ್ತವಾದ ಹಕ್ಕು ಸೌಲಭ್ಯಗಳನ್ನು ಪಡೆದುಕೊಳ್ಳುವಲ್ಲಿ ಅವರಿಗೆ ಉಚಿತ ಕಾನೂನು ಸಲಹೆ ಮತ್ತು ನೆರವನ್ನು ಒದಗಿಸುವುದು ಕಾನೂನು ಸೇವೆಗಳ ಪ್ರಾಧಿಕಾರಗಳ ಅಧಿನಿಯಮ ೧೯೮೭ ರಡಿಯಲ್ಲಿ ಸ್ಥಾಪಿತಗೊಂಡಿರುವ ರಾಷ್ಟ್ರಮಟ್ಟದಲ್ಲಿಯ ರಾಷ್ಟ್ರೀಯ ಕಾನೂನು ಸೇವಾ ಪ್ರಾಧಿಕಾರ ಸುಪ್ರೀಂ ಕೋರ್ಟ್ ಕಾನೂನು ಸೇವಾ ಸಮಿತಿ, ರಾಜ್ಯಮಟ್ಟದಲ್ಲಿಯ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ, ಹೈಕೋರ್ಟ್ ಕಾನೂನು ಸೇವಾ ಸಮಿತಿ ಅಲ್ಲದೆ ಪ್ರತಿ ಜಿಲ್ಲೆಯಲ್ಲಿರುವ ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ ಹಾಗೂ ಪ್ರತಿ ತಾಲ್ಲೂಕದಲ್ಲಿರುವ ತಾಲ್ಲೂಕು ಕಾನೂನು ಸೇವಾ ಸಮಿತಿ ಇವುಗಳ ಮುಖ್ಯ ಧ್ಯೇಯೋದ್ದೇಶಗಳಲ್ಲಿ ಪ್ರಾಮುಖ್ಯವಾದವುಗಳು.

***ಅನಕ್ಷರಸ್ಥರೇ ಹೆಚ್ಚಿನ ಸಂಖ್ಯೆಯಲ್ಲಿರುವ ಗ್ರಾಮಸ್ಥರಲ್ಲಿ ತಮ್ಮ ಹಕ್ಕು ಬಾಧ್ಯತೆ ಹಾಗೂ ಸೌಲಭ್ಯ ಮತ್ತು ನಿತ್ಯ ಜೀವನಕ್ಕೆ ಅನ್ವಯವಾಗುವ ಕಾನೂನುಗಳ ಬಗ್ಗೆ ಸಮರ್ಪಕವಾದ ತಿಳುವಳಿಕೆಯಿಲ್ಲದಿರುವುದರಿಂದ ಅವರು ಸಂವಿಧಾನ ಕೊಡ ಮಾಡಿರುವ ನ್ಯಾಯದಿಂದ ವಂಚಿತರಾಗಿದ್ದಾರೆ.***

ಈ ಧ್ಯೇಯೋದ್ದೇಶಗಳ ಸಾಧನೆಯಲ್ಲಿ ಈ ಎಲ್ಲಾ ಸಂಸ್ಥೆಗಳು ಶ್ರಮಿಸುತ್ತಲಿವೆ. ೧೯೯೭ನೇ ಏಪ್ರಿಲ್ ತಿಂಗಳಲ್ಲಿ ನಮ್ಮ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ, ಹೈಕೋರ್ಟ್ ಕಾನೂನು ಸೇವಾ ಸಮಿತಿ, ಜಿಲ್ಲೆಗೊಂದರಂತೆ ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ ಮತ್ತು ತಾಲ್ಲೂಕಿಗೊಂದರಂತೆ ತಾಲ್ಲೂಕು ಕಾನೂನು ಸೇವಾ ಸಮಿತಿ ಇವುಗಳು ಅಸ್ತಿತ್ವಕ್ಕೆ ಬಂದವು. ರಾಜ್ಯ ಪ್ರಾಧಿಕಾರಕ್ಕೆ ಕರ್ನಾಟಕ ಉಚ್ಚ ನ್ಯಾಯಾಲಯದ ಗೌರವಾನ್ವಿತ ಮುಖ್ಯ ನ್ಯಾಯಮೂರ್ತಿಗಳು ಪ್ರಧಾನ ಪೋಷಕರಾಗಿ ಹಾಗೂ ಅದೇ ಉಚ್ಚ ನ್ಯಾಯಾಲಯದ ಮತ್ತೋರ್ವ ಗೌರವಾನ್ವಿತ ನ್ಯಾಯಾಧೀಶರು ಕಾರ್ಯನಿರ್ವಾಹಕ ಅಧ್ಯಕ್ಷರಾಗಿ ಈ ಎಲ್ಲಾ ಸಂಸ್ಥೆಗಳಿಗೆ ಮಾರ್ಗದರ್ಶನ ನೀಡುತ್ತಲಿದ್ದಾರೆ. ಹೈಕೋರ್ಟ್ ಕಾನೂನು ಸೇವಾ ಸಮಿತಿಯು ಹೈಕೋರ್ಟ್ ನ್ಯಾಯಾಧೀಶರೊಬ್ಬರ ಅಧ್ಯಕ್ಷತೆಯಲ್ಲಿ ಕಾರ್ಯ ನಿರ್ವಹಿಸುತ್ತಲಿದೆಯಾದರೆ, ಪ್ರತಿ ಜಿಲ್ಲಾ ಪ್ರಾಧಿಕಾರ ಆಯಾ ಜಿಲ್ಲೆಯ ಪ್ರಧಾನ ಜಿಲ್ಲಾ ನ್ಯಾಯಾಧೀಶರ ಅಧ್ಯಕ್ಷತೆಯಲ್ಲಿ ಮತ್ತು ಪ್ರಧಾನ ಮುಖ್ಯ ನ್ಯಾಯಿಕ ದಂಡಾಧಿಕಾರಿಗಳವರ ಕಾರ್ಯದರ್ಶಿತ್ವದಲ್ಲಿ; ಪ್ರತಿ ತಾಲ್ಲೂಕು ಕಾನೂನು ಸೇವಾ ಸಮಿತಿ ಹಿರಿಯ ಶ್ರೇಣಿಯ ಸಿವಿಲ್ ನ್ಯಾಯಾಧೀಶರ ಅಧ್ಯಕ್ಷತೆಯಲ್ಲಿ ಹಾಗೂ ಕಿರಿಯ ಶ್ರೇಣಿಯ ಸಿವಿಲ್ ನ್ಯಾಯಧೀಶರ ಕಾರ್ಯದರ್ಶಿತ್ವದಲ್ಲಿ ಪದನಿಮಿತ್ತ ಹಾಗೂ ಅಧಿಕಾರೇತರ ಸದಸ್ಯರುಗಳ ಸಲಹೆ ಸಹಕಾರಗಳೊಂದಿಗೆ ಕಾರ್ಯ ನಿರ್ವಹಿಸುತ್ತಲಿವೆ.

ಸಾರ್ವಜನಿಕರಲ್ಲಿ ಕಾನೂನುಗಳ ಬಗ್ಗೆ ಅರಿವನ್ನು ಮೂಡಿಸಲು ಪ್ರತಿ ತಾಲ್ಲೂಕು ಸಮಿತಿ, ಜಿಲ್ಲಾ ಪ್ರಾಧಿಕಾರ, ಹೈಕೋರ್ಟ್ ಸಮಿತಿ ಮತ್ತು ರಾಜ್ಯ ಪ್ರಾಧಿಕಾರ ಇವುಗಳ ಆಶ್ರಯದಲ್ಲಿ ಗ್ರಾಮ, ತಾಲ್ಲೂಕ, ಜಿಲ್ಲಾ ಮತ್ತು ರಾಜ್ಯ ಮಟ್ಟದಲ್ಲಿ ಅನೇಕ ಕಾರ್ಯಕ್ರಮಗಳನ್ನು ಜರುಗಿಸುತ್ತಾ ಬರಲಾಗಿದೆ. ಅಕ್ಷರಸ್ಥರಲ್ಲಿ ಕಾನೂನುಗಳ ಬಗ್ಗೆ ತಿಳುವಳಿಕೆ ಮೂಡಿಸಲು ಕರಪತ್ರಗಳನ್ನು, ಭಿತ್ತಿಪತ್ರಗಳನ್ನು, ಕಿರು ಹೊತ್ತಿಗೆಗಳನ್ನು ಹಾಗೂ ಪುಸ್ತಕಗಳನ್ನು ಪ್ರಕಟಣೆಗೊಳಿಸಿ ಉಚಿತವಾಗಿ ಮತ್ತು ಅತ್ಯಂತ ಬಡವರಿಗೂ ನಿಲುಕಬಹುದಾದ ರಿಯಾಯಿತಿ ದರದಲ್ಲಿ ಸಾರ್ವಜನಿಕರಿಗೆ ಒದಗಿಸುತ್ತಾ ಬರಲಾಗಿದೆ. ಈ ನಿಟ್ಟಿನಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವಾ ಪ್ರಾಧಿಕಾರದಿಂದ ಪ್ರಕಟಣೆಗೊಳಿಸಲಾದ "ಜನಸಾಮಾನ್ಯರಿಗಾಗಿ ಕಾನೂನು ಮಾಹಿತಿ" ಎಂಬ ಪುಸ್ತಕದಲ್ಲಿ ಒಟ್ಟಾರೆ ೩೦ಕ್ಕೂ ಹೆಚ್ಚು ಕಾನೂನು ವಿಷಯಗಳ ಸಂಬಂಧ ಲೇಖನಗಳನ್ನು ಅಲ್ಪ ಅಕ್ಷರ ಜ್ಞಾನ ಉಳ್ಳವರಿಗೂ ಕೂಡ ಅರ್ಥವಾಗುವ ಸರಳ ಕನ್ನಡ ಭಾಷೆಯಲ್ಲಿ ಸಂಕಲಿಸಲಾಗಿದೆ. ೧/೮ ಡೆಮಿ ಆಕಾರದ ೧೮೬ ಪುಟಗಳ ಪಠ್ಯವನ್ನೊಳಗೊಂಡ ಈ ಪುಸ್ತಕದಲ್ಲಿ ಉಚಿತ ಕಾನೂನು ನೆರವು ಮತ್ತು ಜನತಾ ನ್ಯಾಯಾಲಯ; ಮೂಲಭೂತ ಹಕ್ಕುಗಳು ಮತ್ತು ಕರ್ತವ್ಯಗಳು; ಹಿಂದು ಮುಸ್ಲಿಂ ಮತ್ತು ಕ್ರೈಸ್ತ ಧರ್ಮೀಯರಲ್ಲಿ ವಿವಾಹ, ವಿಚ್ಛೇದನ, ಜೀವನಾಂಶ, ವಾರಸಾ ಮತ್ತು ಉತ್ತಾರಾಧಿಕಾರ; ವರದಕ್ಷಿಣೆ, ಮಹಿಳೆಯರ ಮೇಲಿನ ಅತ್ಯಾಚಾರ, ದೌರ್ಜನ್ಯ; ದುಡಿಯುವ ಮಹಿಳೆ ಮತ್ತು ಬಾಲ ಕಾರ್ಮಿಕರ ಹಕ್ಕು ಸೌಲಭ್ಯಗಳು; ಸಾರ್ವಜನಿಕರಿಗೆ ಸರ್ಕಾರದಿಂದ ದೊರೆಯುವ ಸೌಲಭ್ಯಗಳು; ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳವರಿಗೆ ಸಂಬಂಧಿಸಿದ ಅಸ್ಪೃಶ್ಯತೆ ಹಾಗೂ ದೌರ್ಜನ್ಯ ತಡೆ, ಸರ್ಕಾರದ ಸೌಲಭ್ಯ ಮತ್ತು ಮೀಸಲಾತಿ, ಮುಂತಾದವುಗಳಲ್ಲದೆ ದತ್ತಕ ಉಯಿಲು (ಮೃತ್ಯಪತ್ರ), ಜನನ ಮರಣ ನೋಂದಣಿ, ಗ್ರಾಹಕರ ಹಿತರಕ್ಷಣೆ, ಮೋಟಾರು ವಾಹನ ಅಪಘಾತ ನಷ್ಟ ಪರಿಹಾರ, ಮೋಟಾರು ವಾಹನಗಳ ಚಾಲನೆ, ನೋಂದಣಿ ಮತ್ತು ವಿಮೆ, ಪ್ರಥಮ ಮಾಹಿತಿ ವರದಿ, ದಸ್ತಗಿರಿಯಾದ ವ್ಯಕ್ತಿಯ ಹಕ್ಕುಗಳು, ಅಪರಾಧ ಕೃತ್ಯಕ್ಕೊಳಗಾದ ವ್ಯಕ್ತಿಗೆ ಪರಿಹಾರ, ಬಾಲಲಾಪರಾಧಿಗಳ ವಿಚಾರಣೆ, ಮುಂತಾದ ವಿಷಯಗಳಿಗೆ ಸಂಬಂಧಿಸಿದ ಕಾನೂನುಗಳ ಬಗ್ಗೆ ಮಾಹಿತಿ ನೀಡುವ ಲೇಖನಗಳನ್ನು ಸಂಕಲಿಸಲಾಗಿದೆ.

ಸದರಿ ಪುಸ್ತಕದ ೪೦.೦೦೦ ಪ್ರತಿಗಳನ್ನು ಇದೇ ವರ್ಷದಲ್ಲಿ ಮುದ್ರಿಸಿ ಕರ್ನಾಟಕ ರಾಜ್ಯದಾದ್ಯಂತ ಎಲ್ಲ ಶಾಸಕರಿಗೆ, ಜಿಲ್ಲಾ ಪಂಚಾಯತ್ ಸದಸ್ಯರುಗಳಿಗೆ, ಜಿಲ್ಲಾಧಿಕಾರಿಗಳವರ, ಜಿಲ್ಲಾ ಪಂಚಾಯತ್‌ಗಳ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪ ನಿರ್ದೇಶಕರ ಕಛೇರಿಗಳ ಮತ್ತು ನ್ಯಾಯಾಲಯಗಳ, ವಕೀಲರ ಸಂಘಗಳ ಹಾಗೂ ಕಾನೂನು ಮಹಾವಿದ್ಯಾಲಯಗಳ ಗ್ರಂಥಾಲಯಗಳಿಗೆ ಮತ್ತು ಮಹಿಳಾ ಸಂಘಸಂಸ್ಥೆಗಳಿಗೆ ಉಚಿತವಾಗಿ ಕೊಡಮಾಡಲಾಯಿತು. ರಾಜ್ಯ ಪ್ರಾಧಿಕಾರಕ್ಕೆ ಘನ ಸರ್ಕಾರದಿಂದ ಕೊಡಮಾಡುವ ಅನುದಾನದ ಇತಿಮಿತಿಯಲ್ಲಿ ರಾಜ್ಯದ ಎಲ್ಲರಿಗೂ ಈ ಪುಸ್ತಕದ ಪ್ರತಿಗಳನ್ನು ಉಚಿತವಾಗಿ ಒದಗಿಸುವುದು ಸಾಧ್ಯವಿಲ್ಲವಾದ್ದರಿಂದ ಈ ಪುಸ್ತಕದ ಒಂದು ಪ್ರತಿಯನ್ನು ಅತ್ಯಂತ ರಿಯಾಯತಿ ಬೆಲೆ ರೂ.೧೦ ಕ್ಕೆ ಒದಗಿಸುವ ಉದ್ದೇಶದಿಂದ ಇದರ ಪರಿಷ್ಕೃತ ದ್ವಿತೀಯ ಆವೃತ್ತಿಯ ೬೦,೦೦೦ ಪ್ರತಿಗಳನ್ನು ಕಾನೂನು ಸೇವಾ ದಿನಾಚರಣೆಯ ಅಂಗವಾಗಿ ೯-೧೧-೨೦೦೩ ರಂದು ರಾಜ್ಯ ಪ್ರಾಧಿಕಾರದಿಂದ ಬಿಡುಗಡೆಗೊಳಿಸಿ ರಾಜ್ಯದಾದ್ಯಂತ ತಾಲ್ಲೂಕು ಕಾನೂನು ಸೇವಾ ಸಮಿತಿ ಹಾಗೂ ಜಿಲ್ಲಾ ಪ್ರಾಧಿಕಾರಗಳ ಮೂಲಕ ಸಾರ್ವಜನಿಕರಿಗೆ ಒದಗಿಸಲಾಗುತ್ತಿದೆ.

ಗ್ರಾಮೀಣ ಜನರಲ್ಲಿ ಅವರ ನಿತ್ಯಜೀವನಕ್ಕೆ ಅನ್ವಯವಾಗುವ ಕಾನೂನುಗಳ ಬಗ್ಗೆ ಅರಿವನ್ನುಂಟುಮಾಡುವ ಸಲುವಾಗಿ ತಾಲ್ಲೂಕು ಕಾನೂನು ಸೇವಾ ಸಮಿತಿ ಹಾಗೂ ಜಿಲ್ಲಾ ಪ್ರಾಧಿಕಾರ ಇವುಗಳು ವಕೀಲರ ಸಂಘಗಳ ಹಾಗೂ ಇತರ ಸೇವಾ ಸಂಸ್ಥೆಗಳ ಸಹಯೋಗದೊಂದಿಗೆ ಗ್ರಾಮಗಳಲ್ಲಿ "ಕಾನೂನು ಅರಿವು - ನೆರವು " ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾ ಬಂದಿವೆ. ಈ ಕಾರ್ಯಕ್ರಮಗಳಲ್ಲಿ ಗ್ರಾಮಸ್ಥರಿಗೆ ಕಾನೂನುಗಳ ಬಗ್ಗೆ ಮಾಹಿತಿ ಕೊಡುವುದಲ್ಲದೆ ಅವರ ಸಮಸ್ಯೆಗಳನ್ನು ಆಲಿಸಿ, ಪರಿಹಾರೋಪಾಯಗಳನ್ನೂ ಕೂಡ ಸೂಚಿಸಲಾಗುತ್ತದೆ. ಅಲ್ಲದೆ, ಉಚಿತ ಕಾನೂನು ಸಲಹೆ ಮತ್ತು ನೆರವು ಪಡೆಯಲು ಅರ್ಹರಾದವರನ್ನು ಗುರುತಿಸಿ ಅವರಿಗೆ ಅದನ್ನು ಕೊಡಮಾಡಲಾಗುತ್ತದೆ.

ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್‌ಗಳಲ್ಲಿ ಶೇಕಡ ೩೦ ರಷ್ಟು ಚುನಾಯಿತ ಸದಸ್ಯರು ಮಹಿಳೆಯರೇ ಆಗಿದ್ದು ಈ ಮಹಿಳೆಯರಲ್ಲಿ ಗಣನೀಯ ಸಂಖ್ಯೆಯವರು ಅನಕ್ಷರಸ್ಥರಾಗಿದ್ದಾರೆ. ಇಂಥವರನ್ನೊಳಗೊಂಡಂತೆ ಇತರ ಸ್ಥಳೀಯ ಸಂಸ್ಥೆಗಳ ಚುನಾಯಿತ ಮಹಿಳಾ ಪ್ರತಿನಿಧಿಗಳಿಗಾಗಿ, ಶಾಲಾಕಾಲೇಜುಗಳ ಉಪನ್ಯಾಸಕಿಯರಿಗಾಗಿ, ಅಂಗನವಾಡಿ ಕಾರ್ಯಕರ್ತೆಯರಿಗಾಗಿ, ಮಹಿಳಾ ಆರೋಗ್ಯ ಸೇವಕಿಯರಿಗಾಗಿ, ಸರ್ಕಾರೇತರ ಮಹಿಳಾ ಸಂಘಸಂಸ್ಥೆಗಳ ಪದಾಧಿಕಾರಿಗಳಿಗಾಗಿ ಒಂದು ದಿನ ಮತ್ತು ಎರಡು ದಿನಗಳ "ಕಾನೂನು ಕಮ್ಮಟ"ಗಳನ್ನು "ವಿಚಾರ ಸಂಕಿರಣ"ಗಳನ್ನು ತಾಲ್ಲೂಕು ಸಮಿತಿ ಮತ್ತು ಜಿಲ್ಲಾ ಪ್ರಾಧಿಕಾರಿಗಳ ಆಶ್ರಯದಲ್ಲಿ ಜರುಗಿಸುತ್ತಾ ಬರಲಾಗಿದೆ. ಈ ವರ್ಷದ ನವಂಬರ್ ೯ನೇ ದಿನಾಂಕದಂದು ಕಾನೂನು ಸೇವಾ ದಿನಾಚರಣೆಯ ಅಂಗವಾಗಿ ಇಡೀ ರಾಜ್ಯಾದ್ಯಂತ ಪ್ರತಿ ತಾಲ್ಲೂಕಿಗೆ ಒಂದರಂತೆ ಇಂತಹ ಆಯ್ದ ವರ್ಗಗಳ ಮಹಿಳೆಯರಿಗಾಗಿ "ಕಾನೂನು ಕಮ್ಮಟ"ಗಳನ್ನು ಜರುಗಿಸಲಾಯಿತು. ಈ ಕಾನೂನು ಕಮ್ಮಟಗಳಲ್ಲಿ ಜನಸಾಮಾನ್ಯರಿಗಾಗಿ ಕಾನೂನು ಮಾಹಿತಿ ಪುಸ್ತಕದ ಪರಿಷ್ಕೃತ ದ್ವಿತೀಯ ಆವೃತ್ತಿಯ ಒಂದು ಪ್ರತಿಯನ್ನು ರಿಯಾಯಿತಿ ದರ ೧೦ ರೂಪಾಯಿಗೆ ಮಹಿಳಾ ಪದಾಧಿಕಾರಿಗಳಿಗೆ ರಾಜ್ಯಾದ್ಯಂತ ೬೦,೦೦೦ ಪ್ರತಿಗಳನ್ನು ಒದಗಿಸಲಾಯಿತು.

ಗ್ರಾಮವೊಂದರ ಸರ್ವಾಂಗೀಣ ಅಭಿವೃದ್ಧಿಗೆ ಕಾರಣರಾಗಬಹುದಾದ ಗ್ರಾಮ ಪಂಚಾಯತಿಯ ಹಾಗೂ ತಾಲ್ಲೂಕು ಪಂಚಾಯತಿಯ ಮತ್ತು ಜಿಲ್ಲಾ ಪಂಚಾಯತಿಗಳ ಚುನಾಯಿತ ಸದಸ್ಯರು ತಮಗೆ ದತ್ತವಾದ ಅಧಿಕಾರ ಹಾಗೂ ಕರ್ತವ್ಯಗಳ ಬಗ್ಗೆ ತಿಳಿದುಕೊಳ್ಳುವಂತೆ ಮಾಡಿದಲ್ಲಿ ಗ್ರಾಮದ ಅಭಿವೃದ್ಧಿ ಸುಲಭಸಾಧ್ಯ ಎನ್ನುವುದನ್ನು ಮನಗಂಡು ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ ಅಂದಿನ ಗೌರವಾನ್ವಿತ ಕಾರ್ಯನಿರ್ವಾಹಕ ಅಧ್ಯಕ್ಷರಾದ ನ್ಯಾಯಮೂರ್ತಿ ಎ.ಜೆ.ಸದಾಶಿವರವರ ಮಾರ್ಗದರ್ಶನದಲ್ಲಿ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಜಿಲ್ಲಾ ಪಂಚಾಯತ್‌ಗಳಿಗೆ ಸಂಬಂಧಿಸಿದ ಕಾನೂನುಗಳ ಬಗ್ಗೆ ತಿಳುವಳಿಕೆಯನ್ನು ಕೊಡಲು ೨೦೦೦ ನೇ ವರ್ಷದ ನವೆಂಬರ್ ತಿಂಗಳಿನಲ್ಲಿ ಜಿಲ್ಲಾ ಪಂಚಾಯತಿಯ ಚುನಾಯಿತ ಸದಸ್ಯರಿಗಾಗಿ, ೨೦೦೧ನೇ ವರ್ಷದ ನವಂಬರ್ ತಿಂಗಳಿನಲ್ಲಿ ತಾಲ್ಲೂಕು ಪಂಚಾಯತಿಯ ಹಾಗೂ ಗ್ರಾಮ ಪಂಚಾಯತಿಯ ಚುನಾಯಿತ ಸದಸ್ಯರಿಗಾಗಿ, ರಾಜ್ಯದಾದ್ಯಂತ ಕಾನೂನು ಕಮ್ಮಟಗಳನ್ನು ತಾಲ್ಲೂಕು ಕಾನೂನು ಸೇವಾ ಸಮಿತಿ ಹಾಗೂ ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರಗಳ ಮೂಲಕ ಏರ್ಪಡಿಸಲಾಯಿತು.

ಅನಕ್ಷರಸ್ಥರಲ್ಲಿ ಕಾನೂನಿನ ಬಗ್ಗೆ ಅರಿವನ್ನುಂಟುಮಾಡುವ ಉದ್ದೇಶದಿಂದ ಸಾರ್ವಜನಿಕರ ನಿತ್ಯ ಜೀವನಕ್ಕೆ ಅನ್ವಯವಾಗುವ ವಿವಾಹ ವಿಚ್ಛೇದನ, ಜೀವನಾಂಶ, ವಾರಸಾ ಮತ್ತು ಉತ್ತರಾಧಿಕಾರತ್ವ ಮುಂತಾದ ೧೨ ವಿಷಯಗಳ ಮೇಲೆ ಕಿರು ನಾಟಕಗಳನ್ನು ರಚಿಸಿ ರಾಜ್ಯ ಪ್ರಾಧಿಕಾರದ ವತಿಯಿಂದ ಆಕಾಶವಾಣಿಯ ಮೂಲಕ ಪ್ರತಿ ಕಿರು ನಾಟಕವನ್ನು ನಾಡಿನಾದ್ಯಂತ ವಾರದಲ್ಲಿ ೨ ದಿನ ೧೫-೪-೨೦೦೩ ರಿಂದ ದಿನಾಂಕ ೧೫-೦೭-೨೦೦೩ ರ ಅವಧಿಯಲ್ಲಿ ಪ್ರಸಾರಗೊಳಿಸಲಾಯಿತು. ಈ ಕಿರು ನಾಟಕಗಳನ್ನು ಆಲಿಸಿದ ಶ್ರೋತೃಗಳಿಂದ ಬಂದ ಉತ್ತಮ ಪ್ರತಿಕ್ರಿಯೆಯಿಂದ ಪ್ರೋತ್ಸಾಹಗೊಂಡ ರಾಜ್ಯ ಪ್ರಾಧಿಕಾರ ಈ ೧೨ ಕಿರು ನಾಟಕಗಳನ್ನು ೩ ಧ್ವನಿಸುರುಳಿಗಳಲ್ಲಿ ಸಂಕಲಿಸಿ ಅವುಗಳನ್ನು ಸಾರ್ವಜನಿಕರ ಕೈಗೆ ಎಟುಕುವ ಅತ್ಯಂತ ರಿಯಾಯತಿ ಬೆಲೆ ರೂ.೧೦ ಕ್ಕೆ ಒಂದರಂತೆ ಒದಗಿಸುವ ಉದ್ದೇಶದಿಂದ ೯-೧೧-೨೦೦೩ ರಂದೇ ಅವುಗಳನ್ನು ಬಿಡುಗಡೆಗೊಳಿಸಲಾಗಿದೆ. ಈ ಧ್ವನಿಸುರುಳಿಯಲ್ಲಿಯ ರೇಡಿಯೋ ಕಿರು ನಾಟಕಗಳನ್ನು ರಂಗ ನಾಟಕಗಳನ್ನಾಗಿ ಪರಿವರ್ತಿಸಿ ಅವುಗಳನ್ನು ನಾಡಿನಾದ್ಯಂತ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರದರ್ಶಿಸುವ ಯೋಜನೆಯನ್ನು ಹಮ್ಮಿಕೊಂಡಿದ್ದು ಈ ದಿಸೆಯಲ್ಲಿ ೪ ನಾಟಕಗಳನ್ನು ೯-೧೧-೨೦೦೩ರಂದು ಬೆಂಗಳೂರಿನ ಪುರಭವನದಲ್ಲಿ ಸಾರ್ವಜನಿಕರಿಗೆ ಪ್ರದರ್ಶಿಸಲಾಯಿತು. ಈ ಎಲ್ಲಾ ಕಿರು ನಾಟಕಗಳ ಸಾಹಿತ್ಯವನ್ನು ಒಂದು ಪುಸ್ತಕದಲ್ಲಿ ಸಂಕಲಿಸಿ ಆ ಪುಸ್ತಕವನ್ನು ಉಚಿತವಾಗಿ ಅಥವಾ ರಿಯಾಯತಿ ಬೆಲೆಗೆ ನಾಡಿನಾದ್ಯಂತ ಎಲ್ಲಾ ಸಾರ್ವಜನಿಕರಿಗೆ, ಸಂಘಸಂಸ್ಥೆಗಳಿಗೆ ಒದಗಿಸುವ ಯೋಜನೆಯಿದೆ.

೨೦೦೧ನೇ ವರ್ಷದಿಂದ ಈವರೆವಿಗೂ ದೂರದರ್ಶನದ ಚಂದನ ವಾಹಿನಿಯಲ್ಲಿ ರಾಜ್ಯ ಪ್ರಾಧಿಕಾರದ ಸದಸ್ಯ ಕಾರ್ಯದರ್ಶಿಯವರು 'ಹಲೋ ಗೆಳೆಯರೇ' ಕಾರ್ಯಕ್ರಮದಲ್ಲಿ ಭಾಗವಹಿಸಿ ಒಟ್ಟು ೧೫ ಕ್ಕೂ ಹೆಚ್ಚಿನ ಕಾರ್ಯಕ್ರಮಗಳನ್ನು ನೀಡಿ, ಜನರಿಗೆ ಅನೇಕ ಕಾನೂನು ವಿಷಯಗಳ ಬಗ್ಗೆ ಮತ್ತು ಕಾನೂನು ಪ್ರಾಧಿಕಾರಗಳ ಧ್ಯೇಯೋದ್ದೇಶಗಳ ಬಗ್ಗೆ ಮಾಹಿತಿ ಕೊಡಲಾಗಿದೆ. ಅಲ್ಲದೆ ಈ ಟಿವಿ ಕನ್ನಡ ವಾಹಿನಿಯಲ್ಲಿ ಸುಮಾರು ೧೦ ಕಾರ್ಯಕ್ರಮಗಳನ್ನು ಪ್ರಸಾರಗೊಳಿಸಿದ್ದು ಅವುಗಳ ಮೂಲಕ ಗ್ರಾಮಾಂತರ ಪ್ರದೇಶಗಳ ಜನರನ್ನೊಳಗೊಂಡಂತೆ ಸಾರ್ವಜನಿಕರೆಲ್ಲರಿಗೆ ಅನೇಕ ಕಾನೂನು ವಿಷಯಗಳ ಬಗ್ಗೆ ಮಾಹಿತಿಯನ್ನು ಕೊಡಲಾಗಿದೆ.

ದೂರದರ್ಶನದಲ್ಲಿ ೧೨ ಅಥವಾ ೧೫ ಕಂತುಗಳ ಕಾನೂನು ಅರಿವು ನೆರವು ಸರಣಿ ಕಾರ್ಯಕ್ರಮವನ್ನು ಹಮ್ಮಿಕೊಂಡು ಆ ಮೂಲಕ ಜನರಿಗೆ ನಿತ್ಯ ಜೀವನಕ್ಕೆ ಬೇಕಾಗುವ ಕಾನೂನು ವಿಷಯಗಳ ಸಂಬಂಧ ಮಾಹಿತಿ ಒದಗಿಸುವ ಪ್ರಯತ್ನ ನಡೆದಿದೆ.

**ಉಚಿತ ಕಾನೂನು ನೆರವು** : ಜನರಿಗೆ ಕಾನೂನುಗಳ ಬಗ್ಗೆ, ಅವರ ಹಕ್ಕು ಸೌಲಭ್ಯಗಳ ಬಗ್ಗೆ ಅರಿವನ್ನುಂಟುಮಾಡಿದರೆ ಮಾತ್ರ ಸಾಲದು, ಅವರು ತಮ್ಮ ಹಕ್ಕು ಸೌಲಭ್ಯಗಳಿಂದ ವಂಚಿತರಾದಾಗ ಅನ್ಯಾಯಕ್ಕೊಳಗಾಗುತ್ತಾರೆ. ಆಗ ಅವರಿಗೆ ನ್ಯಾಯ ದೊರಕಿಸಿಕೊಳ್ಳುವ ಅವಕಾಶವನ್ನು ಒದಗಿಸುವುದು ಬಹಳ ಮುಖ್ಯ. ಗಂಡನಿಂದ ಪರಿತ್ಯಜಿತಳಾದ ಮಹಿಳೆಯೊಬ್ಬಳು ಆತನಿಂದ ತಾನು ಜೀವನಾಂಶ ಪಡೆಯುವ ಹಕ್ಕುಳ್ಳವಳಾಗಿದ್ದಾಳೆ ಎನ್ನುವ ಅರಿವೇ ಇಲ್ಲದೆ ಕಷ್ಟಪಟ್ಟು ತನ್ನ ಜೀವನವನ್ನು ತಾನು ಹೇಗೋ ನಡೆಸಿಕೊಂಡಿರುವಾಗ ಆಕೆಗೆ 'ನಿನ್ನ **ಗಂಡನಿಂದ ಜೀವನಾಂಶ ಪಡೆಯುವ ಹಕ್ಕು ನಿನಗಿದೆ. ನೀನು ನ್ಯಾಯಾಲಯದ ಮೊರೆ ಹೊಕ್ಕು ಅದನ್ನು ಪಡೆದುಕೋ**' ಎಂಬುದಾಗಿ ತಿಳಿಸಿದಲ್ಲಿ ಆಕೆಗೆ ತನ್ನ ಹಕ್ಕಿನ ಬಗ್ಗೆ ಅರಿವನ್ನುಂಟು ಮಾಡಿದಂತಾಗುತ್ತದೆಯಾದರೂ, ಅಷ್ಟು ಮಾತ್ರ ಸಾಲದು, ಆ ಹಕ್ಕನ್ನು ಪಡೆದುಕೊಳ್ಳಲು ಅಸಮರ್ಥಳಾದ ಆಕೆಗೆ ಎಲ್ಲ ನೆರವನ್ನು ನೀಡಿ ಅದನ್ನು ದೊರಕಿಸಿಕೊಡುವುದು ಬಹಳ ಮುಖ್ಯ. ಇಲ್ಲವಾದಲ್ಲಿ, ಆಕೆಗೆ ತನ್ನ ಹಕ್ಕಿನ ಬಗ್ಗೆ ಅರಿವನ್ನುಂಟುಮಾಡುವುದರಲ್ಲಿ ಯಾವುದೇ ಸಾರ್ಥಕತೆ ಇರುವುದಿಲ್ಲ. ಆದ್ದರಿಂದ, ಜನಸಾಮಾನ್ಯರಲ್ಲಿ ಅವರ ಹಕ್ಕು ಸೌಲಭ್ಯಗಳ ಬಗ್ಗೆ ಅರಿವನ್ನು ತರುವುದರ ಜೊತೆಗೆ ಅವುಗಳನ್ನು ಪಡೆದುಕೊಳ್ಳುವ ಸಾಮರ್ಥ್ಯವನ್ನು ಕೂಡ ಅವರಿಗೆ ತಂದುಕೊಡುವುದೇ ಕಾನೂನು ಸೇವೆಗಳ ಪ್ರಾಧಿಕಾರದ ಎರಡನೆಯ ಉದ್ದೇಶ. ಇದುವೇ "ಉಚಿತ ಕಾನೂನು ಸಲಹೆ ಮತ್ತು ನೆರವು ನೀಡುವುದು".

'ಉಚಿತ ಕಾನೂನು ನೆರವು' ನೀಡುವುದು ಎಂದರೆ, ವ್ಯಕ್ತಿಯೊಬ್ಬ ಅನ್ಯಾಯಕ್ಕೊಳಗಾಗಿದ್ದು ನ್ಯಾಯ ದೊರಕಿಸಿಕೊಳ್ಳಬೇಕಾದಲ್ಲಿ ಅಥವಾ ತನ್ನ ಕಾನೂನು ಸಂಬಂಧ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಬೇಕಾದಲ್ಲಿ ನ್ಯಾಯಾಲಯ ಅಥವಾ ಯಾವುದೇ ಕಚೇರಿಯ ಮೊರೆಹೋಗಬೇಕಾದ ಸಂದರ್ಭ ಬಂದಾಗ ಅಥವಾ ತನ್ನ ವಿರುದ್ಧ ಬೇರೊಬ್ಬರು ನ್ಯಾಯಾಲಯಕ್ಕೆ ಹೋದಾಗ ತನ್ನ ಹಕ್ಕನ್ನು ರಕ್ಷಿಸಿಕೊಳ್ಳಬೇಕಾದಾಗ ನ್ಯಾಯಾಲಯದಲ್ಲಿ ಅಥವಾ ಯಾವುದೇ ಕಚೇರಿಯಲ್ಲಿ ಈ ಸಂಬಂಧವಾಗಿ ಆತನು ಪಾವತಿಸಬೇಕಾದ ನ್ಯಾಯಾಲಯ ಶುಲ್ಕ ಹಾಗೂ ಮತ್ತಿತರ ಖರ್ಚುಗಳನ್ನು ಹಾಗೂ ವಕೀಲರ ಮಾರ್ಗದರ್ಶನ ಪಡೆದುಕೊಳ್ಳಬೇಕಾದಾಗ ವಕೀಲರ ಫೀಸನ್ನು ಸಂಪೂರ್ಣವಾಗಿ ಕಾನೂನು ಸೇವಾ ಸಮಿತಿ ಅಥವಾ ಪ್ರಾಧಿಕಾರಗಳಿಂದ ಕೊಡಲಾಗುವುದು. ಈ ನೆರವನ್ನು ಅರ್ಹರಾದ ವ್ಯಕ್ತಿಗಳಿಗೆ ಮಾತ್ರ ಕೊಡಮಾಡಲಾಗುತ್ತದೆ. ಇದನ್ನು ಪಡೆಯಲು ಅರ್ಹರಾದ ವ್ಯಕ್ತಿಗಳೆಂದರೆ -

- ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದವರು;
- ಮಾನಸಿಕ ಅಥವಾ ಬೇರಾವುದೇ ನ್ಯೂನತೆಯನ್ನು ಹೊಂದಿರುವವರು;
- ಮಹಿಳೆ ಮತ್ತು ಮಗು;
- ಗುಂಪು ಘರ್ಷಣೆ, ಗಲಭೆ, ಪ್ರವಾಹ, ಕ್ಷಾಮ, ಭೂಕಂಪ, ಕೈಗಾರಿಕಾ ವಿನಾಶ ಮುಂತಾದವುಗಳಿಗೆ ತುತ್ತಾದವರು;
- ದೈಹಿಕ ವ್ಯಾಪಾರ ಅಥವಾ ಜೀತಕ್ಕೊಳಗಾದವರು ;
- ರಕ್ಷಣಾ ಗೃಹ, ಮನೋರೋಗಿಗಳ ಆಸ್ಪತ್ರೆ ಮುಂತಾದವುಗಳಲ್ಲಿ ಅಭಿರಕ್ಷೆಯಲ್ಲಿರುವವರು;
- ಕಾರ್ಖಾನೆಯ ಕಾರ್ಮಿಕರು;
- ಮತೀಯ ಕಾರಣದಿಂದ ದೌರ್ಜನ್ಯಕ್ಕೆ ಬಲಿಯಾದವರು;
- ವಾರ್ಷಿಕ ಆದಾಯ ೨೫,೦೦೦ ರೂಪಾಯಿಗಳಿಗಿಂತ ಕಡಿಮೆ ಇರುವ ಎಲ್ಲಾ ವರ್ಗದ ಜಾತಿಯ ಜನರು.

ವಾರ್ಷಿಕ ಆದಾಯದ ಮಿತಿಯನ್ನು ರೂ. ೨೫,೦೦೦ ಗಳಿಂದ ರೂ.೫೦,೦೦೦ ಗಳಿಗೆ ಹೆಚ್ಚಿಸಲು ರಾಜ್ಯ ಪ್ರಾಧಿಕಾರವು ಸರ್ಕಾರಕ್ಕೆ ಮನವಿ ಮಾಡಿಕೊಂಡಿದೆ.

ಉಚಿತ ಕಾನೂನು ನೆರವನ್ನು ನಮ್ಮ ರಾಷ್ಟ್ರದ ತಾಲ್ಲೂಕು ಮಟ್ಟದಲ್ಲಿಯ ಅತ್ಯಂತ ಕೆಳಹಂತದ ನ್ಯಾಯಾಲಯದಿಂದ ಸರ್ವೋಚ್ಚ ನ್ಯಾಯಾಲಯದವರೆಗೆ (ಸುಪ್ರೀಂ ಕೋರ್ಟ್‌ವರೆಗೆ) ಎಲ್ಲಾ ಹಂತಗಳಲ್ಲಿ ಕೊಡಮಾಡಲಾಗುತ್ತದೆ. ಈ ನೆರವನ್ನು ಪಡೆಯಬಯಸುವ ವ್ಯಕ್ತಿ ತನ್ನ ವಾಸಸ್ಥಳಕ್ಕೆ ಸಮೀಪವಿರುವ ತಾಲ್ಲೂಕು ಕೇಂದ್ರದಲ್ಲಿಯ ನ್ಯಾಯಾಲಯದ ಆವರಣದಲ್ಲಿರುವ ತಾಲ್ಲೂಕು ಕಾನೂನು ಸೇವಾ ಸಮಿತಿಯನ್ನಾಗಲೀ ಅಥವಾ ಜಿಲ್ಲಾ ಕೇಂದ್ರದಲ್ಲಿಯ ಜಿಲ್ಲಾ ನ್ಯಾಯಾಲಯದ ಆವರಣದಲ್ಲಿರುವ ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರವನ್ನಾಗಲೀ ಅಥವಾ ಹೈಕೋರ್ಟ್ ಕಟ್ಟಡದಲ್ಲಿರುವ ಹೈಕೋರ್ಟ್ ಕಾನೂನು ಸೇವಾ ಸಮಿತಿಯನ್ನಾಗಲೀ ಸಂಪರ್ಕಿಸಬೇಕು. ಉಚಿತ ಕಾನೂನು ನೆರವು ಪಡೆಯಲು ಜಾತಿ ದೃಢೀಕರಣ ಪತ್ರವನ್ನಾಗಲೀ (ಕ್ಯಾಸ್ಟ್ ಸರ್ಟಿಫಿಕೇಟ್) ಅಥವಾ ಆದಾಯ ದೃಢೀಕರಣ ಪತ್ರವನ್ನಾಗಲೀ (ಇನ್‌ಕಂ ಸರ್ಟಿಫಿಕೇಟ್) ಸಲ್ಲಿಸುವ ಅಗತ್ಯವಿಲ್ಲ. ತಮ್ಮ ಜಾತಿ ಅಥವಾ ಆದಾಯದ ಬಗ್ಗೆ ಒಂದು ಪ್ರಮಾಣ ಪತ್ರವನ್ನು (ಅಫಿಡವಿಟ್ಟನ್ನು) ಅರ್ಜಿಯೊಂದಿಗೆ ಸಲ್ಲಿಸಿದರೆ ಸಾಕು.

ಗ್ರಾಮೀಣ ಪ್ರದೇಶದಲ್ಲಿಯ ಜನರಿಗೆ, ಅದರಲ್ಲೂ ಆರ್ಥಿಕವಾಗಿ ದುರ್ಬಲರಾದವರಿಗೆ, ಹಿಂದುಳಿದವರಿಗೆ, ಸಮಾಜದ ಕೆಳಸ್ತರದಲ್ಲಿರುವವರಿಗೆ, ಮಹಿಳೆಯರಿಗೆ ಮುಂತಾದವರಿಗೆಲ್ಲಾ ಉಚಿತ ಕಾನೂನು ನೆರವನ್ನು ಕಾನೂನು ಸೇವಾ ಸಮಿತಿ ಮತ್ತು ಪ್ರಾಧಿಕಾರಗಳ ಮುಖಾಂತರ ಕೊಡಮಾಡಲಾಗುತ್ತದೆ ಎಂಬ ಬಗ್ಗೆ ತಿಳುವಳಿಕೆಯನ್ನು ಜನಸಾಮಾನ್ಯರಲ್ಲಿ ಮೂಡಿಸಲು ಎಲ್ಲ ರೀತಿಯ ಪ್ರಯತ್ನ ನಡೆದಿದೆ. ಈ ಸಂಬಂಧವಾಗಿ ಗ್ರಾಮೀಣ ಪ್ರದೇಶದ ಜನರನ್ನು ಪುಸ್ತಕಗಳ ಮೂಲಕ, ಸಭೆ ಸಮಾರಂಭಗಳನ್ನು ಏರ್ಪಡಿಸುವ ಮೂಲಕ, ರೇಡಿಯೋ ನಾಟಕಗಳನ್ನು ಬಿತ್ತರಿಸುವ ಮೂಲಕ, ರಂಗ ನಾಟಕಗಳನ್ನು ಆಡಿಸುವ ಮೂಲಕ, ದೂರದರ್ಶನದ ಮೂಲಕ, ಪತ್ರಿಕಾ ಮಾಧ್ಯಮಗಳ ಮೂಲಕ ತಲುಪುವ ಪ್ರಯತ್ನವನ್ನು ರಾಜ್ಯದಾದ್ಯಂತ ಕಾನೂನು ಸೇವಾ ಸಮಿತಿಗಳು ಮತ್ತು ಪ್ರಾಧಿಕಾರಗಳು ನಡೆಸುತ್ತಲೇ ಬಂದಿವೆ.

## ಜನತಾ ನ್ಯಾಯಾಲಯಗಳು :

ಸಾರ್ವಜನಿಕರಲ್ಲಿ ಕಾನೂನುಗಳ ಬಗ್ಗೆ ತಿಳುವಳಿಕೆಯನ್ನು ಉಂಟುಮಾಡುವ ಮೂಲಕ ಅವರು ತಮ್ಮ ಹಕ್ಕು, ಸೌಲಭ್ಯಗಳ ಬಗ್ಗೆ ಜಾಗೃತರಾಗುವಂತೆ ಮಾಡುವುದರೊಂದಿಗೆ ಅವುಗಳನ್ನು ಪಡೆದುಕೊಳ್ಳುವಲ್ಲಿ ಅವರಿಗೆ ಉಚಿತ ಕಾನೂನು ಸಲಹೆ ಮತ್ತು ನೆರವನ್ನು ಒದಗಿಸಿದಾಗ ಅವರು ನ್ಯಾಯ ದೊರಕಿಸಿಕೊಳ್ಳಲು ನ್ಯಾಯಾಲಯಗಳಲ್ಲಿ ವ್ಯಾಜ್ಯಗಳನ್ನು ಹೂಡುವುದು ಸಹಜ. ಹೀಗಿರುವುದರಿಂದ, ನ್ಯಾಯಾಲಯಗಳಲ್ಲಿ ವ್ಯಾಜ್ಯಗಳ ಸಂಖ್ಯೆ ಹೆಚ್ಚಾಗುತ್ತಾ ಹೋಗುತ್ತದೆ. ಹೆಚ್ಚುತ್ತಲಿರುವ ಜನಸಂಖ್ಯೆ ಹಾಗೂ ವ್ಯಾಜ್ಯಗಳ ಸಂಖ್ಯೆಗೆ ಅನುಗುಣವಾಗಿ ಅವಶ್ಯ ಸಂಖ್ಯೆಯಲ್ಲಿ ನ್ಯಾಯಾಲಯಗಳನ್ನು ಹೆಚ್ಚಿಸುತ್ತಾ ಹೋಗುವುದು ಸಾಧ್ಯವಾಗಿಲ್ಲ. ಆದ್ದರಿಂದ, ನ್ಯಾಯಾಲಯಗಳ ಮೇಲಿನ ಒತ್ತಡವನ್ನು ಕಡಿಮೆ ಮಾಡುವುದರೊಂದಿಗೆ ನ್ಯಾಯಾಕಾಂಕ್ಷಿಗಳಿಗೆ ಶೀಘ್ರವಾಗಿ, ಸುಲಭದಲ್ಲಿ ಮತ್ತು ಅತ್ಯಂತ ಕಡಿಮೆ ಖರ್ಚಿನಲ್ಲಿ ನ್ಯಾಯವನ್ನು ಒದಗಿಸುವ ಉದ್ದೇಶದಿಂದ ಪ್ರತಿ ತಾಲ್ಲೂಕು ಕಾನೂನು ಸೇವಾ ಸಮಿತಿ, ಜಿಲ್ಲಾ ಪ್ರಾಧಿಕಾರ ಹಾಗೂ ಹೈಕೋರ್ಟ್ ಕಾನೂನು ಸೇವಾ ಸಮಿತಿ ಇವುಗಳು ಜನತಾ ನ್ಯಾಯಾಲಯಗಳನ್ನು ರಚಿಸಿ ಅವುಗಳ ಮೂಲಕ ವಿವಿಧ ನ್ಯಾಯಾಲಯಗಳಲ್ಲಿ ಇತ್ಯರ್ಥಕ್ಕಾಗಿ ಬಾಕಿ ಇರುವ, ರಾಜಿಗೆ ಯೋಗ್ಯವಾದ ಪ್ರಕರಣಗಳಲ್ಲಿಯ ಉಭಯ ಪಕ್ಷದವರಲ್ಲಿ ರಾಜಿ ಸಂಧಾನವನ್ನು ಏರ್ಪಡಿಸಿ ಅವುಗಳನ್ನು ಇತ್ಯರ್ಥಗೊಳಿಸುತ್ತಾ ಬಂದಿದೆ.

ಪ್ರಕರಣವೊಂದು ಜನತಾ ನ್ಯಾಯಾಲಯದಲ್ಲಿ ರಾಜಿ ಸಂಧಾನದ ಮೂಲಕ ಇತ್ಯರ್ಥಗೊಳ್ಳುವುದರಿಂದ ಆ ಪ್ರಕರಣ ಉಭಯ ಬಣಗಳವರಲ್ಲಿ ಪ್ರೀತಿ, ವಿಶ್ವಾಸ ಹೆಚ್ಚಿ ಅವರು ಸೇಡಿನ ಮನೋಭಾವನೆಯನ್ನು ಮರೆತು ಸೌಹಾರ್ದಯುತವಾಗಿ ಸಹಬಾಳ್ವೆ ನಡೆಸುವಂತಾಗುತ್ತದೆ. ಇಲ್ಲಿ ಪ್ರಕರಣ ಇತ್ಯರ್ಥವಾದ ಮೇಲೆ ಯಾವುದೇ ಮೇಲ್ಮನವಿಗೆ ಅವಕಾಶ ಇಲ್ಲದಿರುವುದರಿಂದ, ಮೇಲು ಹಂತದ ನ್ಯಾಯಾಲಯಗಳ ಮೇಲೆ ಒತ್ತಡವೂ ಕಡಿಮೆಯಾಗುತ್ತದೆ. ಜನತಾ ನ್ಯಾಯಾಲಯಗಳಲ್ಲಿ ಯಾವುದೇ ನ್ಯಾಯಾಲಯ ಶುಲ್ಕ ಕೊಡಬೇಕಾಗಿಲ್ಲದಿರುವುದರಿಂದ ಇಲ್ಲಿ ನ್ಯಾಯ ಅತ್ಯಂತ ಕಡಿಮೆ ಖರ್ಚಿನಲ್ಲಿ ದೊರೆಯುತ್ತದೆ.

ಕಾನೂನು ಸೇವಾ ಸಮಿತಿ ಮತ್ತು ಪ್ರಾಧಿಕಾರಗಳು ಗ್ರಾಮಾಂತರ ಪ್ರದೇಶದಲ್ಲಿ ಹಮ್ಮಿಕೊಳ್ಳಲಾಗುವ **"ಕಾನೂನು ಅರಿವು-ನೆರವು"** ಕಾರ್ಯಕ್ರಮಗಳಲ್ಲಿ ಕಾರ್ಯಕ್ರಮ ಜರುಗಲಿರುವ ಗ್ರಾಮದ ಹಾಗೂ ಅದರ ಆಸುಪಾಸಿನ ಗ್ರಾಮಗಳ ಗ್ರಾಮಸ್ಥರಲ್ಲಿಯ ವ್ಯಾಜ್ಯಗಳನ್ನು, ವಿವಾದಗಳನ್ನು ಗುರುತಿಸಿ, ಆ ಕಾರ್ಯಕ್ರಮದ ಭಾಗವಾಗಿ ಅಲ್ಲಿಯೇ ಸಂಧಾನಕಾರರನ್ನು ಕರೆದುಕೊಂಡು ಹೋಗಿ

ಸಂಬಂಧಿಸಿದ ಪ್ರಕರಣಗಳ ಕಡತಗಳನ್ನೂ ಸಹ ನ್ಯಾಯಾಲಯದಿಂದ ತೆಗೆದುಕೊಂಡು ಹೋಗಿ ಗ್ರಾಮಸ್ಥರ ಸಮಕ್ಷಮದಲ್ಲಿಯೇ ಜನತಾ ನ್ಯಾಯಾಲಯಗಳ ಬೈಠಕ್‌ಗಳನ್ನು ಜರುಗಿಸಿ ಪ್ರಕರಣಗಳನ್ನು ಇತ್ಯರ್ಥಗೊಳಿಸುವ ಪ್ರಯತ್ನವೂ ನಡೆದಿದೆ.

ಹೀಗೆ, ಗ್ರಾಮೀಣ ಜನರಲ್ಲಿ ಕಾನೂನಿನ ಬಗ್ಗೆ ಅರಿವನ್ನುಂಟುಮಾಡುವ ಮೂಲಕ ಹಾಗೂ ಅವರಿಗೆ ಉಚಿತ ಕಾನೂನು ಸಲಹೆ ಮತ್ತು ನೆರವು ಒದಗಿಸುವ ಮೂಲಕ ಗ್ರಾಮೀಣ ಅಭಿವೃದ್ಧಿಯಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರವು ನಾಡಿನಾದ್ಯಂತ ತನ್ನದೇ ಆದ ವಿಶಿಷ್ಟ ಪಾತ್ರವನ್ನು ವಹಿಸುತ್ತಾ ಬಂದಿದೆ. ೧೯೯೭ನೇ ಏಪ್ರಿಲ್ ತಿಂಗಳಿನಿಂದ ಅಸ್ತಿತ್ವಕ್ಕೆ ಬಂದಿರುವ ಕಾನೂನು ಸೇವಾ ಸಮಿತಿ ಮತ್ತು ಪ್ರಾಧಿಕಾರಗಳ ಮೂಲಕ ೧೯೯೭ನೇ ವರ್ಷದಿಂದ ೨೦೦೩ನೇ ವರ್ಷದ ಮಾರ್ಚ್ ಅಂತ್ಯದವರೆಗೆ ಇಡೀ ರಾಜ್ಯದಲ್ಲಿ ಒಟ್ಟಾರೆ ೯೫೧೫ ಜನರಿಗೆ ಉಚಿತ ಕಾನೂನು ನೆರವನ್ನು ಒದಗಿಸಿದೆ. ೪೭೨೭ ಜನತಾ ನ್ಯಾಯಾಲಯಗಳ ಬೈಠಕ್‌ಗಳನ್ನು ಏರ್ಪಡಿಸುವ ಮೂಲಕ ೨,೨೧,೭೫೭ ಪ್ರಕರಣಗಳನ್ನು ಇತ್ಯರ್ಥಗೊಳಿಸಲಾಗಿದೆ. ಅಲ್ಲದೆ, ಜನಸಾಮಾನ್ಯರಲ್ಲಿ ಕಾನೂನಿನ ಬಗ್ಗೆ ತಿಳಿವಳಿಕೆಯನ್ನು ಮೂಡಿಸಲು ೧೬೧೧ ಕಾನೂನು ಅರಿವು ನೆರವು ಕಾರ್ಯಕ್ರಮಗಳನ್ನು ಜರುಗಿಸಲಾಗಿದ್ದು ಅವುಗಳ ಪ್ರಯೋಜನವನ್ನು ೫,೨೭,೩೭೭ ಜನರು ಪಡೆದಿರುತ್ತಾರೆ. ಈ ಅವಧಿಯಲ್ಲಿ ಗರಿಷ್ಠ ಸಂಖ್ಯೆಯಲ್ಲಿ ಉಚಿತ ಕಾನೂನು ಸಲಹೆ ಮತ್ತು ನೆರವು ಪಡೆದ ಸಾರ್ವಜನಿಕರು ಎಂದರೆ ಬೆಂಗಳೂರು ನಗರ ಜಿಲ್ಲೆಯವರು.

ಮೇಲಿನ ಅಂಕಿಸಂಖ್ಯೆಗಳ ಆಧಾರದಿಂದ ರಾಜ್ಯದಾದ್ಯಂತ ಕಾನೂನು ಸೇವಾ ಸಮಿತಿಗಳು ಮತ್ತು ಪ್ರಾಧಿಕಾರಗಳು ಈ ಚಿಕ್ಕ ಅವಧಿಯಲ್ಲಿ ಗಣನೀಯವಾದ ಸಾಧನೆಗೈದಿವೆ ಎಂಬುದಾಗಿ ಹೇಳಬಹುದಾದರೂ, ಇಡೀ ರಾಜ್ಯದ ಒಟ್ಟಾರೆ ಸಾಧನೆಯನ್ನು ಗಮನದಲ್ಲಿರಿಸಿಕೊಂಡು ನೋಡಿದಲ್ಲಿ, ಇನ್ನೂ ಸಾಧಿಸಬೇಕಾದದ್ದು ಬಹಳಷ್ಟು ಇದೆ ಎನ್ನುವುದು ನಿರ್ವಿವಾದ. ವಕೀಲರ, ಸೇವಾ ಸಂಸ್ಥೆಗಳ ಹಾಗೂ ಸಾರ್ವಜನಿಕರ ಸಹಾಯ, ಸಹಕಾರ, ಪ್ರೋತ್ಸಾಹದೊಂದಿಗೆ ಗ್ರಾಮೀಣ ಅಭಿವೃದ್ಧಿಯಲ್ಲಿ ನಮ್ಮ ಪ್ರಾಧಿಕಾರ ಇನ್ನೂ ಹೆಚ್ಚಿನದನ್ನು ಸಾಧಿಸುವ ಭರವಸೆಯನ್ನು ಹೊಂದಿದೆ.

### ೧೯೯೭ರಿಂದ೨೦೦೩ನೇ ವರ್ಷದ ಸೆಪ್ಟೆಂಬರ್ ಅಂತ್ಯದವರೆಗಿನ ಅವಧಿಯಲ್ಲಿ ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರದ ಸಾಧನೆಯ ಒಂದು ಪಕ್ಷಿನೋಟ

| | | |
|---|---|---|
| ೧. | ಉಚಿತ ಕಾನೂನು ನೆರವು ಪಡೆದವರು | ೯೫೧೫ ಜನರು |
| ೨. | ಉಚಿತ ಕಾನೂನು ಸಲಹೆ ಪಡೆದವರು | ೧೧೯೧೫ ಜನರು |
| ೩. | ಜರುಗಿಸಲಾದ ಕಾನೂನು ಸಾಕ್ಷರತಾ ಕಾರ್ಯಕ್ರಮಗಳು | ೧೬೧೧ ಕಾರ್ಯಕ್ರಮಗಳು |
| ೪. | ಕಾನೂನು ಸಾಕ್ಷರತಾ ಕಾರ್ಯಕ್ರಮಗಳ ಫಲಾನುಭವಿಗಳು | ೫,೨೭,೩೭೭ ಜನರು |
| ೫. | ಪ್ರಕಟಣೆಗೊಳಿಸಲಾದ ಕಿರುಹೊತ್ತಿಗೆಗಳು | ೧೯ |
| ೬. | ಆಕಾಶವಾಣಿ ಕಾನೂನು ಅರಿವು ನೆರವು ಸರಣಿ ಮೂಲಕ ಪ್ರಸಾರಗೊಳಿಸಲಾದ ಕಿರುನಾಟಕಗಳು | ೧೨ |
| ೭. | ಆಕಾಶವಾಣಿ ಮೂಲಕ ಪ್ರಸಾರಗೊಳಿಸಿದ ಇತರ ಕಾರ್ಯಕ್ರಮಗಳು | ೧೭ |
| ೮. | ದೂರದರ್ಶನ ಮೂಲಕ ಪ್ರಸಾರಗೊಂಡ ಕಾರ್ಯಕ್ರಮಗಳು | ೨೭ |
| ೯. | ಜರುಗಿಸಲಾದ ಜನತಾ ನ್ಯಾಯಾಲಯಗಳ ಒಟ್ಟು ಬೈಠಕ್‌ಗಳು | ೪೭೨೭ |
| ೧೦. | ಜನತಾ ನ್ಯಾಯಾಲಯಗಳಲ್ಲಿ ಇತ್ಯರ್ಥಗೊಂಡ ಒಟ್ಟು ಪ್ರಕರಣಗಳು | ೨,೨೧,೭೫೭ |




# ಮೂಲ ಶಿಕ್ಷಣ

ಡಾ. ದೇ. ಜವರೇಗೌಡ

ಗ್ರಾಮ ಸ್ವರಾಜ್ಯ ಮತ್ತು ವಿಕೇಂದ್ರೀಕರಣ ಪ್ರಜಾತಂತ್ರದ ಮೂಲಮಂತ್ರಗಳೆಂದು, ರಾಷ್ಟ್ರಾಭ್ಯುದಯದ ಚಾಲಕ ಶಕ್ತಿಗಳೆಂದು ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಜನನಾಯಕರಿಗೆ ಸ್ಪಷ್ಟಪಡಿಸಿದ್ದುಂಟು. ಭಾರತ ಹಳ್ಳಿಗಳಲ್ಲಿ ನೆಲೆಸಿರುವುದರಿಂದ ಹಳ್ಳಿಗಳೇ ರಕ್ತನಾಳಗಳಿಂದೊಡಗೂಡಿದ ಅದರ ಹೃದಯವಾದ್ದರಿಂದ, ಹಳ್ಳಿಗಳ ಅಭ್ಯುದಯವೇ ಭಾರತದ ಅಭ್ಯುದಯವಾದ್ದರಿಂದ, ಗಾಂಧೀಜಿ ಹಳ್ಳಿಗಳ ಬಗ್ಗೆ ಒತ್ತುಕೊಟ್ಟದ್ದು ಸರಿಯೇ ಸರಿ. ನಗರ ಹಾಗೂ ಗ್ರಾಮಗಳ ಜೀವನದಲ್ಲಿ ನಡುವೆ ದೊಡ್ಡ ಕಂದರವಿರುವುದರಿಂದ ನಗರಜೀವನ ಸಕಲ ಸೌಲಭ್ಯಯುತವಾಗಿ ಸುಖಮಯವಾದದ್ದೆಂಬ ತಿಳಿವಳಿಕೆ ಗ್ರಾಮೀಣರ ಮನಸ್ಸಿನಲ್ಲಿ ಬೇರೂರಿರುವುದರಿಂದ, ತಮ್ಮ ಶ್ರಮದಿಂದ ನಗರದ ಜನ ವಿಲಾಸ ಜೀವನ ನಡೆಸುತ್ತಾರೆಂಬ ಭಾವನೆ ಹಳ್ಳಿಯ ಮುಖಂಡರ ಗಮನದಲ್ಲಿದೆ. ನಗರ ಹಾಗೂ ಗ್ರಾಮ ಭಾರತಗಳ ನಡುವಣ ಅಂತರ ಕೊನೆಗೊಳ್ಳಬೇಕೆಂಬುದು ಗಾಂಧೀಜಿಯ ಕಾತರ.

> *ಶಿಕ್ಷಣದಿಂದ ವಂಚಿತವಾದ ಗ್ರಾಮಜೀವನ ನೆಲ ಕಚ್ಚುತ್ತದೆ. ತತ್ಪರಿಣಾಮವಾಗಿ ದೇಶ ಚೈತನ್ಯ ಹೀನ ನಿಸ್ತೇಜದ ಎಲುಬು ಗೂಡಾಗಿ ಹೇಗೋ ಉಸಿರಾಡುತ್ತದೆ. ಗಾಂಧೀಜಿ ಕಲ್ಪನೆಯ ಸ್ವರಾಜ್ಯ ಅಸ್ತಿತ್ವಕ್ಕೆ ಬಂದು ಸರ್ವಾಂಗ ಸುಂದರವಾಗಿ ಓಜಸ್ವಿಯಾಗಿ ದಷ್ಟಪುಷ್ಟವಾಗಿ ಬೆಳೆಯಬೇಕಾದರೆ ಶಿಸ್ತುಬದ್ಧ ಔಚಿತ್ಯಪೂರ್ಣ ಶಿಕ್ಷಣ ಅಗತ್ಯ.*

ಪ್ರಜಾತಂತ್ರದ ಮೂಲಘಟಕ ಗ್ರಾಮಸ್ವರಾಜ್ಯವಾಗಬೇಕು; ಗ್ರಾಮದ ವ್ಯವಹಾರಗಳು ಗ್ರಾಮದ ಗಡಿಯಿಂದ ಹೊರಗೆ ಹೋಗದೆ ಗ್ರಾಮ ಪಂಚಾಯಿತಿಯಲ್ಲಿ ತೀರ್ಮಾನವಾಗಬೇಕು; ಗ್ರಾಮ ಜೀವನದ ಅವಶ್ಯಕತೆಗಳೆಲ್ಲ ಅಲ್ಲಿಯೇ ಪೂರೈಕೆಗೊಳ್ಳಬೇಕು; ಉತ್ಪನ್ನಗಳು ಅಲ್ಲಿಯೇ ಹಂಚಿಕೆಯಾಗಿ, ಹೆಚ್ಚುವರಿ ಹುಟ್ಟುವಳಿಯನ್ನು ಮಾತ್ರ ಹೊರಗೆ ಬಿಡಬೇಕು; ಹಳ್ಳಿಯ ಜನ ಪರರ ಕೈ ಕಾಯದೆ ತಮ್ಮೂರಿನ ಎಲ್ಲ ಅಗತ್ಯಗಳನ್ನು ಒದಗಿಸಿಕೊಳ್ಳಬೇಕು-ಗಾಂಧೀಜಿ ಕಲ್ಪನೆಯ ಗ್ರಾಮ ಸ್ವರಾಜ್ಯ ಇಂಥದು.

ವಸತಿ, ಆರೋಗ್ಯ, ಶಿಕ್ಷಣ, ಉದ್ಯೋಗ ಇವು ಮಾನವ ನಿರೀಕ್ಷಿಸುವ ಕನಿಷ್ಠ ಸೌಕರ್ಯಗಳು. ಇವುಗಳ ಜತೆಗೆ ಸ್ಥಳ, ಉಡುಪು, ಸರಳ ಆಹಾರ, ಸ್ವಚ್ಛವಾದ ನೀರು, ಒಳ್ಳೆಯ ಗಾಳಿ ಬೇಕೇಬೇಕು. ಮಕ್ಕಳಿಗೆ ಪೌಷ್ಟಿಕ ಆಹಾರ ಬೇಕು. ನಾನಾ ಕಾರಣಗಳಿಂದಾಗಿ ಪರಿಸರ ಮಾಲಿನ್ಯ ಆರೋಗ್ಯಕ್ಕೆ ಕಂಟಕವಾಗದಂತೆ ಎಚ್ಚರಿಕೆ ವಹಿಸಬೇಕು. ಹಳ್ಳಿಗರು ಯಾವ ಬಗೆಯ ಶೋಷಣೆಗೂ ಬಲಿಯಾಗದಂತೆ ಸದಾ ಜಾಗ್ರತರಾಗಿರಬೇಕು. ಕೃಷಿ, ವಿಜ್ಞಾನ, ಗುಡಿ ಕೈಗಾರಿಕೆಗಳ ಮೂಲಕ ಎಲ್ಲರೂ ಸ್ವಾವಲಂಬನ ಶಕ್ತಿಯನ್ನು ಸಂಪಾದಿಸಬೇಕು.

ಸಹಕಾರ ತತ್ವದ ಮೂಲಕ ಅವರು ಎಲ್ಲ ಕೊರತೆಗಳನ್ನು ಪೂರೈಸಿಕೊಳ್ಳಬೇಕು. ಸ್ವಾತಂತ್ರ್ಯಪೂರ್ವದಲ್ಲಿ ಸೀಮಿತ ಗ್ರಾಮ ಸ್ವರಾಜ್ಯ ಅನುಷ್ಠಾನದಲ್ಲಿತ್ತೆನ್ನುವುದನ್ನು ಗಾಂಧೀಜಿ ಸಹ ಒಪ್ಪಿಕೊಳ್ಳುತ್ತಾರೆ.

ಮೇಲೆ ಸೀಮಿತ ಎಂದು ಹೇಳಿದ್ದಕ್ಕೆ ಕಾರಣವಿದೆ. ಹಳ್ಳಿಗರು ವಿದ್ಯೆಯಿಂದ ವಂಚಿತರಾಗಿದ್ದರು; ಶಿಕ್ಷಣ ಸೌಲಭ್ಯಗಳೇ ಇರಲಿಲ್ಲ. ಮಕ್ಕಳ ಸಮಸ್ತ ಶಕ್ತಿಗಳನ್ನು ಉದ್ದೀಪನಗೊಳಿಸುವುದೇ ಶಿಕ್ಷಣದ ಗುರಿ. ಹಿಂದಿನ ಕಾಲದಲ್ಲಿ ಒಂದು ರೀತಿಯ, ಅಷ್ಟೇನೂ ಸಮರ್ಪಕವಲ್ಲದ ಅನೌಪಚಾರಿಕ ಶಿಕ್ಷಣ ಜಾರಿಯಲ್ಲಿತ್ತು. ಕೃಷಿ ವಿಜ್ಞಾನವಾಗಲಿ, ಗುಡಿ ಕೈಗಾರಿಕೆಗಳ ತಂತ್ರಜ್ಞಾನವಾಗಲಿ ಅಥವಾ ಸಾಮಾನ್ಯ ಜ್ಞಾನವಾಗಲಿ, ಕಲೆಯಾಗಲಿ ತಂದೆಯಿಂದ ಮಕ್ಕಳಿಗೆ ಮೌಖಿಕ ವಿಧಾನದಲ್ಲಿ ವರ್ಗಾವಣೆಯಾಗುತ್ತಿತ್ತು. ಅಂತರಿಂದ್ರಿಯ ಸ್ಫೂರ್ತಿ, ಪ್ರಯೋಗ, ಸ್ವಾನುಭವ, ಅನ್ವೇಷಣಾ ಕುತೂಹಲದ ಮೂಲಕ ಪ್ರತಿಯೊಂದು ಕುಟುಂಬವೂ ವೃತ್ತಿ ಜ್ಞಾನವನ್ನು ಬಲಪಡಿಸಿಕೊಳ್ಳುತ್ತಿತ್ತು. ಪ್ರಶ್ನೆ, ಆಶ್ಚರ್ಯ, ಕುತೂಹಲ, ಅನ್ವೇಷಣೆ, ಚಿಂತನೆ, ಅರಿವು, ಕ್ರಿಯೆ ಮಾನವನ ಮಾನಸಿಕ ಹಾಗೂ ವೈಜ್ಞಾನಿಕ ಪ್ರಗತಿಗೆ ಕಾರಣ ಎಂದು ತಿಳಿಯಬೇಕಾಗಿದೆ.

'ಕ್ರಿಯೆ ಮರೆದಲ್ಲಿ ಅರಿವು ಹೀನವಾಗಿಪ್ಪುದು, ಅರಿವ ಮರೆದಲ್ಲಿ ಜ್ಞಾನ ಹೀನವಾಗಿಪ್ಪುದು'; 'ಜ್ಞಾನವಿಲ್ಲದಿರ್ದ ಶ್ರೀ ಜಡನು, ಶ್ರೀಯಿಲ್ಲದ ಜ್ಞಾನ ವಾಗ್ಜಾಲ, ಭ್ರಾಂತು'; 'ಕ್ರಿಯಾಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ?' 'ಅರಿವನರಿದೆನೆಂದು ಕ್ರಿಯೆಯ ಬಿಡಲಾಗದು'; 'ಸಂಸ್ಕೃತಿಯೆಂಬುದೇ ಜ್ಞಾನ, ಜ್ಞಾನದೊಡಲೇ ಕ್ರಿಯೆ'; 'ಜ್ಞಾನವಿರಹಿತನಾಗಿ ಕ್ರಿಯೆ ಏನೆಷ್ಟು ಮಾಡಿದಡೇನು, ಅದು ಕಣ್ಣಿಲ್ಲದವನ ನಡತೆಯಂತೆ. ಕ್ರಿಯಾವಿರಹಿತನಾಗಿ ಜ್ಞಾನಿಯಾದಡೇನು, ಅದು ಕಾಲಿಲ್ಲದವನ ಇರವಿನಂತೆ ಹೀಗೆ ಶರಣರು ಕ್ರಿಯೆ-ಜ್ಞಾನಗಳಿಗೆ ಸಮಾನ ಸ್ಥಾನ ನೀಡಿದ್ದಾರೆ. ಸತ್ಕ್ರಿಯೆ, ಸಮ್ಯಗ್ ಜ್ಞಾನಗಳು ಪರಸ್ಪರಾವಲಂಬಿ; ಅವೆರಡೂ ಹರಿವ ರಥದ ಗಾಲಿಗಳು, ಹಾರುವ ಹಕ್ಕಿಯ ರೆಕ್ಕೆಗಳು. ಮಾನವನ ಅಂತೆಯೇ ಜಗತ್ತಿನ ಇತಿಹಾಸವೆಂದರೆ ಈ ಎರಡೂ ಶಕ್ತಿಗಳ ಇತಿಹಾಸವೆಂದೇ ಹೇಳಬೇಕು. ಕ್ರಿಯೆ ಮತ್ತು ಜ್ಞಾನ ಅಪ್ರತ್ಯೇಕ ವಾಹಿನಿಗಳೇ ಹೊರತು ಪ್ರತ್ಯೇಕ ಘಟಕಗಳಲ್ಲ. ಶಿಸ್ತುಗಳನ್ನೊಳಗೊಂಡ ಶಿಕ್ಷಣದಿಂದ ಮಾತ್ರ ಇವೆರಡೂ ಓಜೋನ್ವಿತವಾಗಿ, ಊರ್ಧ್ವಮುಖವಾಗಿ ಮುಂದುವರಿಯಲು ಸಾಧ್ಯ.

ಈ ಮೊದಲೇ ತಿಳಿಸಿದಂತೆ ಶಿಸ್ತಿನ ಸಕ್ರಮ ಶಿಕ್ಷಣ ರೂಢಿಗೆ ಬರುವ ಮುನ್ನ ಸೀಮಿತ ಅನೌಪಚಾರಿಕ ಶಿಕ್ಷಣದ ಮೂಲಕ ಅರಿವು ಮಾಟಗಳು ಪರಸ್ಪರಾವಲಂಬಿಯಾಗಿ ಮುಂದುವರಿಯುತ್ತಿದ್ದವು. ಸಕ್ರಮ ಶಿಕ್ಷಣ ವಿಕಾಸಗೊಂಡಂತೆ ಮಾನವನ ಧೀಶಕ್ತಿ ಸೃಷ್ಟಿಯ ಮೂಲಶಕ್ತಿಗೆ ಸವಾಲೆನ್ನುವಂತೆ ಬೆಳೆಯುತ್ತದೆ. ಆಗ ಓದಿದವರ ಮತ್ತು ಓದದವರ ನಡುವೆ ಕಂದಕ ಅಗಲವಾಗುತ್ತ ಹೋಗುತ್ತದೆ. ವಿದ್ಯೆ ಹಿಡಿಮಂದಿಯ ಏಕಸ್ವಾಮ್ಯಕ್ಕೆ ಒಳಗಾದ ನಂತರ, ಜ್ಞಾನ ಕೆಲವರ ಸ್ವತ್ತಾಗಿ, ದುಡಿಮೆ ಹಲವರ ಬದುಕಾಗಿ, ಕ್ರಿಯೆ-ಜ್ಞಾನಗಳ ನಡುವೆ ಬಿರುಕು ತಲೆದೋರಿದಾಗ ಜ್ಞಾನದ ಬೆಳವಣಿಗೆ ಮಾತ್ರವಲ್ಲ, ಮಾನವನ ವಿಕಾಸವೇ ಕುಂಠಿತವಾಗುತ್ತದೆ. ಆಗ ಸಮಾಜ ದೇಶಗಳು ದುರ್ಬಲವಾಗುತ್ತವೆ. ಶಿಕ್ಷಣ ಕ್ಷೇತ್ರದ ಅರ್ಥಾತ್ ಜ್ಞಾನವಲಯದ ಏಕಸ್ವಾಮ್ಯದಿಂದಾಗಿ ಅಜ್ಞಾನ, ಮೌಢ್ಯ, ದಾರಿದ್ರ್ಯಗಳು ಮಾರಕ ಶಕ್ತಿಗಳಾಗಿ, ದೇಶವನ್ನು ಅಧೋಗತಿಗೆ ನೂಕುತ್ತವೆ. ಪರಾಕ್ರಮಣಕ್ಕೆ ಸುಲಭವಾಗಿ ಹಾದಿಮಾಡಿಕೊಡುತ್ತವೆ. ಇದು ಭಾರತದ ನಿಜವಾದ ಇತಿಹಾಸ, ಗ್ರಾಮೀಣ ಜೀವನದ ದುರಂತದ ಕಥೆ, ಇಂದಿನ ಸಕಲ ಅನಿಷ್ಟಗಳ ಸಂತತಿಗೆ ಮೂಲ.

ಶಿಕ್ಷಣದಿಂದ ವಂಚಿತವಾದ ಗ್ರಾಮಜೀವನ ನೆಲಕಚ್ಚುತ್ತದೆ; ತತ್ಪರಿಣಾಮವಾಗಿ ದೇಶ ಚೈತನ್ಯಹೀನ ನಿಸ್ತೇಜದ ಎಲುಬುಗೂಡಾಗಿ ಹೇಗೋ ಉಸಿರಾಡುತ್ತದೆ. ಗಾಂಧೀಜಿ ಕಲ್ಪನೆಯ ಸ್ವರಾಜ್ಯ ಅಸ್ತಿತ್ವಕ್ಕೆ ಬಂದು, ಸರ್ವಾಂಗ ಸುಂದರವಾಗಿ, ಓಜಸ್ವಿಯಾಗಿ, ಸುಪುಷ್ಟವಾಗಿ ಬೆಳೆಯಬೇಕಾದರೆ ಶಿಸ್ತುಬದ್ಧ ಔಚಿತ್ಯಪೂರ್ಣ ಶಿಕ್ಷಣ ಅತ್ಯಗತ್ಯ ಎಂಬುದನ್ನು ನಿಜವಾದ ತಜ್ಞರು ಮತ್ತು ನಾಯಕರು ಮರೆಯಬಾರದು. ಸಕಲ ವ್ಯವಹಾರಗಳಿಗೆ, ಯೋಜನೆಗಳಿಗೆ ಔಚಿತ್ಯ ತಳಹದಿಯಾದಾಗ ಮಾತ್ರ ಜೀವನ ಶೋಭಾಯಮಾನವಾಗಿ, ಸುಸೂತ್ರವಾಗಿ, ಸಾರ್ಥಕವಾಗಿ ಸಾಗುತ್ತದೆಂಬ ಸತ್ಯಸಂಗತಿಯನ್ನು ವಿವೇಕಿಗಳು ಅರಿಯಬೇಕು. ಔಚಿತ್ಯ ಅಲಂಕಾರಶಾಸ್ತ್ರದ ಪಾರಿಭಾಷಿಕ ಪದ ಮಾತ್ರವಲ್ಲ, ಸಾರ್ಥಕ ಸಫಲ ಜೀವನದ ಮೂಲಮಂತ್ರ, ಜೀವನ ಮೀಮಾಂಸೆಯ ಮೂಲಭೂತ ನಿತ್ಯಸತ್ಯವೆಂಬುದನ್ನು ಪ್ರಾಜ್ಞರು ಮರೆಯಬಾರದು.

ಈ ಸೂತ್ರದ ಹಿನ್ನೆಲೆಯಲ್ಲಿ, ಗ್ರಾಮೀಣ ಜೀವನದ ನೆಲಗಟ್ಟಿನ ದೃಷ್ಟಿಯಿಂದ, ಶಿಕ್ಷಣದ ಸ್ವರೂಪ ಲಕ್ಷಣಗಳನ್ನು ಕ್ರೋಡೀಕರಿಸಬೇಕಾಗುತ್ತದೆ. ಆಯಾಯ ಸಮಾಜದ ಸ್ವಭಾವ, ಜಾಯಮಾನ, ಪರಿಸರ, ಜೀವನಾವಶ್ಯಕತೆ, ಹಿನ್ನೆಲೆ-ಮುನ್ನೆಲೆ, ಶಕ್ತಿ ಸಾಮರ್ಥ್ಯ ಹಾಗೂ ವ್ಯವಹಾರ ವಲಯದ ಇತಿಮಿತಿ ವ್ಯಾಪ್ತಿಗಳನ್ನು ಗಮನದಲ್ಲಿರಿಸಿಕೊಂಡು ಶಿಕ್ಷಣದ ರೀತಿನೀತಿ ವಿಧಾನಗಳನ್ನು ರೂಪಿಸಬೇಕಾಗುತ್ತದೆ. ಶಿಕ್ಷಣ ಸಂಸ್ಥೆಗಳು ಹೆಂಚಿನ ಅಥವಾ ಇಟ್ಟಿಗೆಯ ಕಾರ್ಖಾನೆಗಳಾಗಬಾರದೆಂಬ ಅಂದರೆ ಸೃಜನಶೀಲ ಕಲಾವಂತಿಕೆಯನ್ನು ಗಮನದಲ್ಲಿರಿಸಿಕೊಳ್ಳಬೇಕೆಂಬ ಮಹಾಕವಿವಾಣಿಯನ್ನು ನೀತಿ ನಿರ್ಮಾಪಕರು ಮರೆಯಬಾರದು. ಔಚಿತ್ಯಪ್ರಜ್ಞೆ ಮತ್ತು ಸೃಜನಶೀಲ ಕಲಾವಂತಿಕೆ ಶೈಕ್ಷಣಿಕ ನೀತಿಯ ನಿರ್ಣಾಯಕ ಸೂತ್ರಗಳಾಗಬೇಕಾಗಿದೆ. ಶೀಲ ನಿರ್ಮಾಣ, ವೃತ್ತಿ ಗೌರವ ಮತ್ತು ಶ್ರಮಜೀವನ ಶಿಕ್ಷಣ ನೀತಿಯ ಪ್ರಧಾನ ಲಕ್ಷಣವಾಗಬೇಕು.

ಪಠ್ಯಕ್ರಮವನ್ನು ರೂಪಿಸುವ ಮೊದಲು ಗ್ರಾಮೀಣ ಸಮಸ್ಯೆಗಳ ಮತ್ತು ಆದ್ಯತೆಗಳ ಕಡೆ ಗಮನಹರಿಸಬೇಕಾದ್ದು ಅತ್ಯಗತ್ಯ. ಸಸ್ಯಕಾಶಿ ನಿರ್ಮಾಣ ಮತ್ತು ಸ್ವಚ್ಛತಾ ಯೋಜನೆಗಳನ್ನೊಳಗೊಂಡ ಪರಿಸರ ರಕ್ಷಣೆಗೆ ಆದ್ಯತೆ ನೀಡಬೇಕು. ವಿವಿಧ ಕೃಷಿ ಸಂಬಂಧವಾದ ಮೂಲಭೂತ ಹಾಗೂ ಪ್ರಾಥಮಿಕ ಪಾಠಗಳ ಜ್ಞಾನ ಹಳ್ಳಿಗರಿಗೆ ಅತ್ಯಗತ್ಯ. ಉದ್ಯೋಗವಿಲ್ಲದ ಪ್ರಯುಕ್ತ ಮಾನವಶಕ್ತಿ ಹಾಳಾಗದಂತೆ, ಕಾಲ ಪೋಲಾಗದಂತೆ ಕೃಷಿಯೇತರ ತಂತ್ರಜ್ಞಾನದ ಕಲಿಕೆ ಅವರಿಗೆ ಅವಶ್ಯಕ. ಗುಡಿಕೈಗಾರಿಕೆ, ಪಶುಪಾಲನೆ, ಆಡು ಕುರಿ ಸಾಕಾಣಿಕೆ, ಕೃಷ್ಯುತ್ಪನ್ನಗಳ ಮಾರಾಟದ ಬಗ್ಗೆ ಅವರಿಗೆ ಮಾಹಿತಿಯೊದಗಿಸಬೇಕು. ಮೌಢ್ಯಗಳ ಮೂಲಕ ಪುರೋಹಿತಶಾಹಿಯ ಕ್ರೌರ್ಯದಿಂದಾಗಿ ಅವರು ಸಾಂಸ್ಕೃತಿಕ ಆರ್ಥಿಕ ಶೋಷಣೆಗೊಳಗಾಗದಂತೆ ಅವರು ಸದಾ ಜಾಗರೂಕರಾಗಿರಬೇಕು. ಪ್ರತಿಯೊಂದು ಮಗುವಿಗೂ ಕಡ್ಡಾಯ ಶಿಕ್ಷಣ ನೀಡುವುವುದರ ಜತೆಗೆ ಪೌಷ್ಠಿಕ ಆಹಾರವೊದಗಿಸುವ ಏರ್ಪಾಡಾಗಬೇಕು. ಸರ್ವಧರ್ಮಗಳ ಬಗ್ಗೆ ಏಕೋಭಾವ ಮೂಡುವಂಥ ಮೌಲಿಕ ಹಾಗೂ ನೈತಿಕ ಪ್ರೇರಣೆ ಅನಿವಾರ್ಯ. ನೆರೆಹೊರೆಯವರಲ್ಲಿ ಪ್ರೇಮೌದಾರ್ಯಗಳನ್ನು ಮೂಡಿಸುವಂಥ, ನೊಂದವರ ಮತ್ತು ಬಿದ್ದವರ ಬಗ್ಗೆ ಅನುಕಂಪವುಂಟುಮಾಡುವ ಕಾರ್ಯಕ್ರಮಗಳನ್ನು ರೂಪಿಸಬೇಕು. ವಾತಾವರಣವನ್ನು ಮಲಿನಗೊಳಿಸುವ ಎಲ್ಲ ಕುಕೃತ್ಯಗಳನ್ನು ನಿಷೇಧಿಸಿ, ಸ್ವಚ್ಛವಾದ ಕುಡಿಯುವ ನೀರನ್ನೊದಗಿಸುವ ಮೂಲಕ ಊರಿನ ಆರೋಗ್ಯವನ್ನು ರಕ್ಷಿಸಬೇಕು. ರಸ್ತೆ ರಿಪೇರಿ, ಕೆರೆಗಳ ಹೂಳೆತ್ತುವಿಕೆ, ಹಬ್ಬಹರಿದಿನಗಳ ಆಚರಣೆಗಳು ಹಿಂದಿನಂತೆ ಊರೊಟ್ಟಿನ ಕೆಲಸಗಳಾಗಬೇಕು. ಇಂದಿನ ಸಂಕೀರ್ಣ ಯುಗದಲ್ಲಿ ಸಮಸ್ಯೆಗಳು ಬಗೆಹರಿದು, ಶಾಂತಿ ನೆಲೆಸಬೇಕಾದರೆ ಸಹಕಾರ ತತ್ತ್ವದ ಪರಿಜ್ಞಾನ ಹಾಗೂ ಪೌರಪ್ರಜ್ಞೆ ಅನಿವಾರ್ಯ. ಜಾಗತೀಕರಣ, ಕೈಗಾರಿಕೀಕರಣ, ಮೌಢ್ಯೀಕರಣ, ಆ ಕರಣ ಈ ಕರಣಗಳ ಗೊಂದಲದಲ್ಲಿ ವೈಚಾರಿಕ ಬುದ್ಧಿ, ವೈಜ್ಞಾನಿಕ ಮನೋಧರ್ಮ ಮರೆಯಾಗದಂತೆ ಅತ್ಯಗತ್ಯ ಮಾಹಿತಿಗಳನ್ನು ವಿದ್ಯುದ್ವೇಗದಲ್ಲಿ ಜನರಿಗೊದಗಿಸಬೇಕು. ಆತ್ಮಗೌರವ ದೇಶಾಭಿಮಾನಗಳನ್ನು ಪ್ರೇರೇಪಿಸುವ, ಸ್ವಾವಲಂಬನಕ್ಕನುಗುಣವಾಗುವ ತರಬೇತಿ ಅತ್ಯಗತ್ಯ. ಬೋಧನೆ ಮತ್ತು ಕಲಿಕೆಗಳೆರಡೂ ಮಕ್ಕಳಿಗೆ ಆನಂದದಾಯಕ ಅನುಭವವಾದಾಗ ಶಿಕ್ಷಣ ಯಶಸ್ವಿಯಾಗುತ್ತದೆ.

ಪೂರ್ವೋಕ್ತ ಸಂಗತಿಗಳನ್ನು ದೃಷ್ಟಿಯಲ್ಲಿಕೊಂಡು ತಜ್ಞರು ಪಠ್ಯಗ್ರಂಥಗಳನ್ನು ರಚಿಸಬೇಕು; ಶಿಕ್ಷಣ ವಿಧಾನವನ್ನು ರೂಪಿಸಬೇಕು. ಜಗತ್ತಿನ ಪೈಪೋಟಿಯನ್ನೆದುರಿಸಲು, ಗ್ರಾಮಾಭ್ಯುದಯವನ್ನು ಸಾಧಿಸಲು ಗ್ರಾಮೀಣ ಜನರಿಗೆ ಇಷ್ಟೆಲ್ಲ ಮಾಹಿತಿಜ್ಞಾನ ಅತ್ಯಗತ್ಯ. ಇಷ್ಟೆಲ್ಲ ಮಾಹಿತಿಯನ್ನು ಪುಸ್ತಕಗಳಿಂದಲೇ ನಿರೀಕ್ಷಿಸುವಂತಿಲ್ಲ. ಅವು ನೆಪ ಮಾತ್ರ. ಇಂಥ ಶಿಕ್ಷಣದ ಅಭಿಯಾನದ ಯಶಸ್ಸು ಉಪಾಧ್ಯಾಯರನ್ನು ಅವಲಂಬಿಸಿದೆ ಎಂಬುದನ್ನು ಮರೆಯಲಾಗದು. ಕರ್ತವ್ಯಪ್ರಜ್ಞೆಯ, ಸಮರ್ಪಣ ಮನೋಭಾವದ ಯೋಗ್ಯ ಉಪಾಧ್ಯಾಯರ ಆಯ್ಕೆ ಈ ಅಭಿಯಾನದ ಯಶಸ್ಸಿನ ಪ್ರಥಮ ಹಂತವಾಗಬೇಕು.

ಈ ಅಭಿಯಾನದ ಸರ್ವ ಯಶಸ್ಸಿಗೆ ಮಾತೃಭಾಷಾ ಅರ್ಥಾತ್ ಪ್ರಾದೇಶಿಕ ಭಾಷೆಯ ಮಧ್ಯಮ ಅತ್ಯಗತ್ಯವೆನ್ನುವುದನ್ನು ನಾಡಿನ ಜವಾಬ್ದಾರಿ ಹೊತ್ತ ಮಹನೀಯರು ಮರೆಯಬಾರದು. ಇಷ್ಟೆಲ್ಲ ಮಾಹಿತಿಗಳನ್ನು, ಸಂಗತಿಗಳನ್ನು ಜೀರ್ಣಿಸಿಕೊಳ್ಳುವ ಶಕ್ತಿ ಮಾತೃಭಾಷೆಯಿಂದಲೇ ಒದಗಬೇಕಾಗಿದೆ. ಜಗತ್ತಿನ ಮನೋವಿಜ್ಞಾನಿಗಳು, ಗಾಂಧೀಜಿ, ಟ್ಯಾಗೋರ್ ಮೊದಲುಗೊಂಡು ಹಲವು ಮಹಾಪುರುಷರು ಈ ಸತ್ಯವನ್ನೊಪ್ಪಿಕೊಂಡಿದ್ದಾರೆ. ನಮ್ಮ ಗ್ರಾಮೀಣ ಮಕ್ಕಳಿಗೆ ಮೊದಲು ಬೇಕಾದ್ದು ಜ್ಞಾನ. ಅನಂತರ ಅನ್ಯಭಾಷೆಗಳ

ಕಲಿವು. ಮೊದಲ ತರಗತಿಯಿಂದಲೇ ಅನ್ಯ ಭಾಷೆಗಳನ್ನು ಕಲಿಸಲು ದುಷ್ಪ್ರಯತ್ನ ಮಾಡಿದ್ದಾದರೆ, ತುಂಟ ದನಗಳ ಕಾಲಿಗೆ ಗುದ್ದಿಗೆ ಕಟ್ಟಿ ಕಾಡಿಗೆ ಬಿಟ್ಟಂತಾಗುತ್ತದೆ. ಮಾತೃಭಾಷೆಯಲ್ಲಿ ಅವಶ್ಯಜ್ಞಾನವನ್ನು ಸಂಪಾದಿಸಿದ ನಂತರ, ಎಷ್ಟು ಭಾಷೆಗಳನ್ನಾದರೂ ಕಲಿಸಲಿ, ಬೇಡವೆನ್ನುವವರಾರು? ಮೂರ್ಖರಿಗೆ ನೂರ್ಕಾಲ ಹೇಳಿದ ಬುದ್ಧಿ ಗೋರ್ಕಲ್ಲ ಮೇಲೆ ಮಳೆ ಸುರಿದಂತಾಗಿದೆ. ಭಾಷಾ ಸಮಸ್ಯೆಯ ಪರಿಹಾರ ವಿಷಯದಲ್ಲಿ ಔಚಿತ್ಯಪ್ರಜ್ಞೆಗೆ ಸರಿಯಾದ ಸ್ಥಾನವಿರಬೇಕೇ ಹೊರತು ಮೂರ್ಖತನಕ್ಕಲ್ಲ.

ಸ್ವರಾಜ್ಯದ ಅಧಿಕಾರಕೇಂದ್ರ ಗ್ರಾಮಪಂಚಾಯತಿ ತಾನೆ. ಪಂಚಾಯತಿ ನಿರ್ವಹಣೆಯ ಬಗ್ಗೆಯೂ ಗ್ರಾಮಸ್ಥರಿಗೆ ಉಚಿತ ತರಬೇತಿ ನೀಡಬೇಕಾಗುತ್ತದೆ, ಮಾತ್ರವಲ್ಲ ಪೂರ್ವೋಕ್ತ ಮಾಹಿತಿಯನ್ನು ಸಂಗ್ರಹಿಸುವ ಅವಕಾಶವನ್ನವರಿಗೆ ಕಲ್ಪಿಸಬೇಕಾಗುತ್ತದೆ. ಅಷ್ಟೇ ಅಲ್ಲ ಕಾನೂನಿನ ಬಾಲಪಾಠಗಳನ್ನಾದರೂ ಅವರಿಗೆ ಕಲಿಸಬೇಕಾಗುತ್ತದೆ. ಇದೆಲ್ಲ ಮಾತೃಭಾಷೆಯ ಮೂಲಕ ಮಾತ್ರ ಸಾಧ್ಯ.

ಪ್ರತಿಯೊಂದು ಹಳ್ಳಿಯಲ್ಲಿಯೂ ಸಮುದಾಯ ಭವನದ ಅವಶ್ಯಕತೆಯಿದೆ. ಗ್ರಂಥಾಲಯ, ವಾಚನಾಲಯಗಳಿಗಲ್ಲಿ ಅವಕಾಶವಿರಬೇಕು. ಅದು ಮಾಹಿತಿ ಕೇಂದ್ರವೂ ಆಗಿರಬೇಕು. ಜ್ಞಾನ ಆಸ್ಫೋಟನೆಗೊಳ್ಳುತ್ತಿರುವ ಈ ಕಾಲದಲ್ಲಿ ಜಗತ್ತಿನ ಮೂಲೆಮೂಲೆಯ ಅಂದಂದಿನ ಸುದ್ದಿಗಳ ವಿವರ ಗ್ರಾಮೀಣ ಜನರಿಗೆ ತಿಳಿಯುವುದು ಒಳ್ಳೆಯದು. ತಮಗೆ ಬೇಕಾದ್ದನ್ನು ನೆನಪಿನ ಕೋಶದಲ್ಲಿ ದಾಖಲಿಸಿಕೊಂಡು, ಉಳಿದುದನ್ನು ಮರೆಯಬಹುದು. ಈ ಭವನ ಪಂಚಾಯತಿಯ ಕೇಂದ್ರವೆಂತೋ, ಸಾಂಸ್ಕೃತಿಕ ಕೇಂದ್ರವೂ ಆಗಬೇಕು.

ಒಟ್ಟಿನಲ್ಲಿ ಗ್ರಾಮಸ್ವರಾಜ್ಯದ ಯಶಸ್ಸಿಗೆ ಉತ್ತಮ ಶಿಕ್ಷಣ ವಿನಾ ಅನ್ಯಮಾರ್ಗವಿಲ್ಲ. ಸಾಮಾಜಿಕಾರ್ಥಿಕ ಪ್ರಗತಿಗೆ ಸಾಮಾಜಿಕ ಅನ್ಯಾಯಗಳ ರೋಗರುಜಿನಗಳ ಪರಿಹಾರಕ್ಕೆ ಮೌಲಿಕ ಶಿಕ್ಷಣದಿಂದ ಮಾತ್ರ ಸಾಧ್ಯ. ಗ್ರಾಮೀಣ ಜೀವನದ ಉದ್ದೇಶ ಗುರಿಗಳಿಗೆ ತಕ್ಕಂತೆ, ಜ್ಞಾನ-ವಿಜ್ಞಾನ-ತಂತ್ರಜ್ಞಾನಗಳನ್ನು ಗಮನಿಸಿ, ಪಠ್ಯಗ್ರಂಥ ಮತ್ತು ವಿಧಾನಗಳನ್ನು ಆಗಾಗ್ಗೆ ಬದಲಾಯಿಸಿಕೊಳ್ಳುವುದಾದರೆ ಉಪಾಧ್ಯಾಯರಿಗೆ ಐದು ವರ್ಷಕ್ಕೊಮ್ಮೆಯಾದರೂ ಆಂತರಿಕ ತರಬೇತಿಯ ಮೂಲಕ ಅವರ ಜ್ಞಾನವನ್ನು ನವೀಕರಿಸುವುದಾದರೆ, ಮಕ್ಕಳಿಗೆ ಉತ್ತಮ ಮೌಲಿಕ ವಿದ್ಯೆ ಲಭ್ಯವಾಗುತ್ತದೆ; ಅವರ ಸೃಜನಶೀಲ ಸಾಮರ್ಥ್ಯ ದಿನದಿಂದ ದಿನಕ್ಕೆ ಅಧಿಕವಾಗುತ್ತದೆ. ಆ ವಿದ್ಯೆ ಹಾಗೂ ಅವರ ಆ ಸಾಮರ್ಥ್ಯದಿಂದ ಗ್ರಾಮಜೀವನ ವೈಭವಪೂರ್ಣವಾಗುತ್ತದೆ ಮತ್ತು ಗ್ರಾಮೀಣಾಭಿವೃದ್ಧಿಯಿಂದ ಎರಡು ಭಾರತಗಳ ಭ್ರಮೆ ನಿರಸನಗೊಂಡು, ರಾಷ್ಟ್ರಾಭ್ಯುದಯ ಶಿಖರಸ್ಪರ್ಶಿಯಾಗುತ್ತದೆ.

●

# ಪ್ರಾಥಮಿಕ ಶಿಕ್ಷಣ

ಕೆಂಪಯ್ಯ




ಗ್ರಾಮೀಣ ಪ್ರದೇಶಗಳಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ (Elementary Education) ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಸರ್ಕಾರದ ಕರ್ತವ್ಯವಾಗಿದ್ದು ಈ ದಿಸೆಯಲ್ಲಿ ಸಮುದಾಯ, ಸಮಾಜ, ಸ್ವಯಂ - ಸೇವಾ ಸಂಸ್ಥೆಗಳ ಸಹಕಾರವನ್ನು ಪಡೆಯುತ್ತಿದೆ. ಗ್ರಾಮೀಣ ಪ್ರದೇಶಗಳಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಸಂಬಂಧಿಸಿದಂತೆ ಈ ಕೆಳಗಿನ ಸಮಸ್ಯೆಗಳನ್ನು ಗುರುತಿಸಲಾಗಿದೆ.

೧) ೧ ರಿಂದ ೫ನೇ ತರಗತಿಗಳಿರುವ ಪ್ರಾಥಮಿಕ ಶಾಲೆಗಳಿಗೆ ಕೊಠಡಿಗಳ ಅವಶ್ಯಕತೆ ಇರುತ್ತದೆ

೨) ಸುತ್ತ ಮನೆಗಳಿದ್ದು ಮಧ್ಯೆ ಶಾಲೆ ಇರುವುದರಿಂದ ಹಲವು ಕಡೆ ಪಾಠಬೋಧನೆಗೆ ಅಡಚಣೆ ಇರುತ್ತದೆ

೩) ಆಟದ ಮೈದಾನ, ಗ್ರಂಥಾಲಯದ ಕೊರತೆ

೪) ಶಬ್ದ ಮಾಲಿನ್ಯದಿಂದ ಪಾಠ ಬೋಧನೆಗೆ ತೊಂದರೆ

೫) ಅನೇಕ ಗ್ರಾಮಗಳಲ್ಲಿ ತಂದೆ, ತಾಯಿ ಮತ್ತು ಪೋಷಕರ ನಿರ್ಲಕ್ಷ್ಯದಿಂದ ಮಕ್ಕಳನ್ನು ಶಾಲೆಗೆ ಸೇರಿಸದಿರುವುದು

೬) ಮಕ್ಕಳನ್ನು ಹೊಲ, ತೋಟದ ಕೆಲಸಗಳಲ್ಲಿ ತೊಡಗಿಸುವುದು. (ದಾಖಲಾದ ಹಾಗೂ ಶಾಲೆ ಬಿಟ್ಟ ಮಕ್ಕಳು)

೭) ಕುರಿ, ಮೇಕೆ, ಹಸು, ಎಮ್ಮೆ ಮೇಯಿಸಲು ಕಳುಹಿಸುವುದು

೮) ಮನೆಯಲ್ಲಿ ಸಣ್ಣ ಮಕ್ಕಳನ್ನು ನೋಡಿಕೊಳ್ಳಲು ಮಕ್ಕಳನ್ನು ಶಾಲೆ ಬಿಡಿಸುವುದು

೯) ಪ್ರಾಥಮಿಕ ಶಾಲೆಗಳಿಗೆ ಮೂಲಭೂತ ಸೌಲಭ್ಯಗಳಾದ ಕೊಠಡಿ, ಆಟದ ಮೈದಾನ, ಬೋಧನೋಪಕರಣಗಳು, ಪೀಠೋಪಕರಣಗಳ ಕೊರತೆ

೧೦) ತಂದೆ, ತಾಯಿಗಳ ಬಡತನ, ನಿರುದ್ಯೋಗ, ಅನಕ್ಷರತೆ

೧೧) ಪ್ರಕೃತಿ ವಿಕೋಪದಿಂದ, ಮಳೆ - ಬೆಳೆ ಆಗದಿದ್ದಾಗ, ಬರಪೀಡಿತ ಪ್ರದೇಶಗಳಲ್ಲಿ ಪೋಷಕರಿಗೆ ಕೂಲಿಯೂ ಸಿಗದಿರುವುದು

೧೨) ತಂದೆ - ತಾಯಿಗಳು ರೋಗ ರುಜಿನಗಳಿಂದ ಬಳಲುತ್ತಿದ್ದು ಕುಟುಂಬ ನಿರ್ವಹಣೆ ಸಾಧ್ಯವಾಗದಿದ್ದಾಗ ಶಾಲೆ ಬಿಡಿಸಿ ಮಕ್ಕಳನ್ನು ದುಡಿಮೆಗೆ ಸೇರಿಸಿರುವುದು

*'ಸರ್ವರಿಗೂ ಶಿಕ್ಷಣ' ಸರ್ಕಾರದ ನೀತಿಯಾಗಿದೆ. ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಶಾಲೆಯಿಂದ ಹೊರಗಿರುವ ಶಾಲಾ ವಯಸ್ಸಿನ ಮಕ್ಕಳನ್ನು ಶಾಲೆಗೆ ದಾಖಲಿಸುವಂತೆ ಮಾಡುವುದೇ ನಮ್ಮ ಗುರಿ. ಈ ನಿಟ್ಟಿನಲ್ಲಿ ಸಮೀಕ್ಷೆ ನಡೆಸಿದ್ದು, ಮಕ್ಕಳನ್ನು ಗುರುತಿಸಲಾಗಿದೆ.*

೧೩) ಪೋಷಕರು ಹೊಟ್ಟೆ ಹೊರೆಯಲು ಗ್ರಾಮಾಂತರ ಪ್ರದೇಶಗಳಿಂದ ವಲಸೆ ಹೋಗುವುದು

೧೪) ಸರ್ಕಾರಿ ಮತ್ತು ಖಾಸಗಿ ಶಿಕ್ಷಣ ಸಂಸ್ಥೆಗಳ ತಾರತಮ್ಯ ಮನೋಭಾವನೆ

೧೫) ಗ್ರಾಮಾಂತರ ಪ್ರದೇಶದಲ್ಲಿ ದೂರದ ಶಾಲೆಗಳಿಗೆ ಹೋಗಿಬರಲು ಸಾರಿಗೆ ವ್ಯವಸ್ಥೆ ಇಲ್ಲದಿರುವುದು

೧೬) ವಲಸೆ ಬರುತ್ತಿರುವ ಮಕ್ಕಳಿಗೆ ಭಾಷಾ ಕಲಿಕೆಯಲ್ಲಿ ತೊಡಕು ಉಂಟಾಗುತ್ತಿರುವುದು

**ಪರಿಹಾರ ಕ್ರಮಗಳು :**

೧) ಸರ್ಕಾರ, ಸಮಾಜ, ಸಮುದಾಯ, ಸ್ವಯಂ ಸೇವಾಸಂಸ್ಥೆಗಳ ನೆರವಿನೊಂದಿಗೆ ಕೊರತೆ ಇರುವ ಶಾಲಾ ಕೊಠಡಿಗಳನ್ನು ನಿರ್ಮಿಸುವುದು

೨) ಗ್ರಾಮದಿಂದ ದೂರಕ್ಕೆ ಸ್ಥಳ (ನಿವೇಶನ) ಆಯ್ಕೆ ಮಾಡಿ ಶಾಲೆಗಳನ್ನು ನಿರ್ಮಾಣ ಮಾಡುವುದು

೩) ಆಟದ ಮೈದಾನ, ಗ್ರಂಥಾಲಯ ವ್ಯವಸ್ಥೆ ಮಾಡುವುದು

೪) ಶಿಕ್ಷಣದ ಮಹತ್ವವನ್ನು ಸಂಪನ್ಮೂಲ ವ್ಯಕ್ತಿಗಳಿಂದ, ಶಿಕ್ಷಕರಿಂದ, ಕಲಾಜಾಥಾ, ಶೈಕ್ಷಣಿಕ ಕಾರ್ಯಾಗಾರ, ಬೀದಿ ನಾಟಕಗಳನ್ನು ಏರ್ಪಡಿಸುವ ಮೂಲಕ ಕೊಡಿಸುವುದು

೫) ಹೊಲ ತೋಟಗಳಲ್ಲಿ ದುಡಿಯುವ ಮಕ್ಕಳಿಗೆ ಸಂಚಾರಿ ಶಾಲೆ, ಸದಾ ಶಾಲೆಗಳನ್ನು ಪ್ರಾರಂಭಿಸುವುದು

೬) ೧ರಿಂದ ೮ನೇ ತರಗತಿಯವರೆಗಿನ ಎಲಿಮೆಂಟರಿ ಶಿಕ್ಷಣ ಮಕ್ಕಳಿಗೆ ಕಡ್ಡಾಯವಾಗಿಸುವುದು ಮತ್ತು ಉಚಿತ ಶಿಕ್ಷಣ ಕೊಡುವ ಏರ್ಪಾಡು ಮಾಡುವುದು

೭) ಗಾದೆ ಮಾತುಗಳು, ವಚನಗಳು, ಕ್ಯಾಸೆಟ್ ಹಾಡುಗಳು, ನಾಟಕಗಳ ಮೂಲಕ ಶಿಕ್ಷಣದ ಅರಿವನ್ನು ಮೂಡಿಸುವುದು

೮) ಹೆಚ್ಚು ಶಿಕ್ಷಕರಿರುವ ಶಾಲೆಗಳಿಂದ ಕೊರತೆ ಇರುವ ಶಾಲೆಗಳಿಗೆ ನಿಯೋಜಿಸುವುದು

೯) ದಾನಿಗಳಿಂದ, ಸ್ವಯಂ ಸೇವಾ ಸಂಸ್ಥೆಗಳ ನೆರವಿನಿಂದ ಬೋಧನೋಪಕರಣಗಳು ಮತ್ತು ಪೀಠೋಪಕರಣಗಳನ್ನು ಒದಗಿಸುವುದು

೧೦) ಹತ್ತಿರದ ಆಸ್ಪತ್ರೆಗಳಲ್ಲಿ ವೈದ್ಯರ ಸಲಹೆ ಪಡೆದು ವೈದ್ಯಕೀಯ ತಪಾಸಣೆ ಹಾಗೂ ಔಷಧಿ ಕೊಡಿಸುವುದು

೧೧) ೧ರಿಂದ ೫ನೇ ತರಗತಿಯವರೆಗೂ ಬಿಸಿಯೂಟದ ವ್ಯವಸ್ಥೆ ಏರ್ಪಡಿಸುವುದು

೧೨) ಶಾಲೆಯ ಸುತ್ತ ಗಿಡಮರಗಳನ್ನು ನೆಟ್ಟು ಪರಿಸರ ನೈರ್ಮಲ್ಯ ಕಾಪಾಡುವುದು

೧೩) ಸಂಗೀತ, ನೃತ್ಯ, ನಾಟಕ, ಯೋಗ ಶಿಕ್ಷಣ, ಕಂಪ್ಯೂಟರ್ ಶಿಕ್ಷಣವನ್ನು ಗ್ರಾಮಾಂತರ ಪ್ರದೇಶದ ಎಲ್ಲಾ ಶಾಲೆಗಳಿಗೆ ಕೊಡುವುದು

**ನೂತನ ಯೋಜನೆಗಳು :**

ಸಾರ್ವಜನಿಕ ಶಿಕ್ಷಣ ಇಲಾಖೆಯು ಗ್ರಾಮಾಂತರ ಪ್ರದೇಶಗಳಲ್ಲಿ ಶಾಲೆಗೆ ದಾಖಲಾಗದ ಮತ್ತು ಶಾಲೆಯಿಂದ ಹೊರಗುಳಿದ ಮಕ್ಕಳನ್ನು ಮುಖ್ಯವಾಹಿನಿಗೆ ತರಲು ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡು ಕಾರ್ಯಗತ ಮಾಡಿದೆ. ಉತ್ತಮ ಫಲಿತಾಂಶವನ್ನೂ ಪಡೆದಿದೆ. ಈ ಕೆಳಗಿನ ಕೆಲವು ಕಾರ್ಯತಂತ್ರಗಳು ಉಲ್ಲೇಖನೀಯವಾಗಿವೆ.

**ದಾಖಲಾತಿ ಆಂದೋಲನ :**

ಸಮುದಾಯದ ಒತ್ತಾಸೆ ಮತ್ತು ಜನಜಾಗೃತಿ ಕಾರ್ಯಕ್ರಮಗಳಿಂದ ಪ್ರೇರೇಪಿಸಿ ಹೆಚ್ಚು ಸಂಖ್ಯೆಯಲ್ಲಿ ಮಕ್ಕಳನ್ನು ಶಾಲೆಗೆ ದಾಖಲು ಮಾಡುವ ಕಾರ್ಯಾಚರಣೆಯೇ ದಾಖಲಾತಿ ಆಂದೋಲನ.

**ಬಾ ಮರಳಿ ಶಾಲೆಗೆ :**

ಶಾಲೆಗಳಿಗೆ ದಾಖಲಾಗದೆ ಉಳಿದ ಮತ್ತು ದಾಖಲಾಗಿಯೂ ಶಾಲೆ ತೊರೆದ ಮಕ್ಕಳನ್ನು ಶಾಲಾ ಮಕ್ಕಳಿಂದಲೇ ಪ್ರೇರೇಪಿಸಿ ಶಾಲೆಗೆ ಕರೆತರುವ ಕಾರ್ಯತಂತ್ರವು "ಬಾ ಮರಳಿ ಶಾಲೆಗೆ" ಕಾರ್ಯಕ್ರಮವಾಗಿದೆ.

### ಕೂಲಿಯಿಂದ ಶಾಲೆಗೆ :

ಮಕ್ಕಳನ್ನು ಬಾಲಕಾರ್ಮಿಕತನದಿಂದ ಶಾಲಾ ಬಾಲಕತನಕ್ಕೆ ಪರಿವರ್ತನೆಗೊಳಿಸುವ ಉದ್ದೇಶದಿಂದ ಮಧ್ಯಂತರ ಶಾಲೆಗಳನ್ನು (Transit school) ನಡೆಸಲಾಗಿದೆ. ಸುಮಾರು ೫೦ ಸಾವಿರಕ್ಕಿಂತಲೂ ಹೆಚ್ಚು ಮಕ್ಕಳು ಬೇಸಿಗೆಯಲ್ಲಿ ನಡೆಸಿದ ಚಿಣ್ಣರ ಅಂಗಳಕ್ಕೆ ಬಂದಿರುತ್ತಾರೆ.

### ಚಿಣ್ಣರ ಅಂಗಳ :

೨೦೦೩ರ ಏಪ್ರಿಲ್ ೭ ರಿಂದ ಜೂನ್ ೫ ರ ಅವಧಿಯಲ್ಲಿ ೪೮೬೦ ಚಿಣ್ಣರ ಅಂಗಳ ಕೇಂದ್ರಗಳನ್ನು (Bridge course) ರಾಜ್ಯಾದ್ಯಂತ ನಡೆಸಲಾಗಿದೆ. ಈ ಪೈಕಿ ಕೂಲಿ ಮಾಡುತ್ತಿದ್ದ ಸುಮಾರು ೫೦ ಸಾವಿರ ಮಕ್ಕಳು ಶಾಲೆಗಳಿಗೆ ಸೇರ್ಪಡೆಯಾಗಿರುತ್ತಾರೆ.

### ಅಕ್ಷರ ದಾಸೋಹ :

ಬಿಸಿಯೂಟದ ಸೌಲಭ್ಯವು ಮಕ್ಕಳನ್ನು ಸೆಳೆಯುವಲ್ಲಿ ಒಂದು ಮಹತ್ವದ ಉತ್ತೇಜಕವಾಗಿದೆ. ಇದರಿಂದ ಸುಮಾರು ೯೦ ಸಾವಿರ ಮಕ್ಕಳು ಹೆಚ್ಚುವರಿಯಾಗಿ ಶಾಲೆಗೆ ಬಂದಿರುತ್ತಾರೆ.

### ಮಕ್ಕಳ ಹಕ್ಕುಗಳ ಸಂರಕ್ಷಣಾ ಕ್ರಮಗಳು :

೬-೧೪ ವಯೋಮಾನದ ಮಕ್ಕಳ ನಿರಾಕರಿಸಲಾದ ಹಕ್ಕನ್ನು ಪುನರ್ಸ್ಥಾಪನೆ ಮಾಡಬೇಕಾಗುತ್ತದೆ.

### ರಾಜ್ಯಮಟ್ಟದ ಮಕ್ಕಳ ಹಕ್ಕುಗಳ ಕೋಶ :

ಬಸವನಗುಡಿಯ ಹಳೆಯ ಡಿ.ಎಸ್.ಇ.ಆರ್.ಟಿ. ಕಟ್ಟಡದಲ್ಲಿ ಈ ಕೋಶವನ್ನು ರಚಿಸಲಾಗಿದೆ. ದೂರವಾಣಿ ಸಂಖ್ಯೆ ೨೬೬೦೯೧೮. ಹಕ್ಕುಗಳಿಂದ ವಂಚಿತವಾದ ಯಾವುದೇ ಮಗು ಅಥವಾ ಆದರ ಹಿತೈಷಿಗಳು ಈ ದೂರವಾಣಿಗೆ ದೂರು ಕೊಡಬಹುದಾಗಿದೆ ಮತ್ತು ಅಂತಹ ದೂರಿಗೆ ೭೨ ಗಂಟೆಯೊಳಗೆ ಸ್ಪಂದಿಸಿ, ಪರಿಹಾರ ಕ್ರಮಕೈಗೊಳ್ಳಲಾಗುವುದು.

### ಕ್ಷೇತ್ರ ಶಿಕ್ಷಣಾಧಿಕಾರಿಗಳ ತರಬೇತಿ :

ರಾಜ್ಯದ ಎಲ್ಲಾ ೨೦೨ ಬ್ಲಾಕ್ ಶಿಕ್ಷಣಾಧಿಕಾರಿಗಳಿಗೆ ಒಂದು ದಿನದ ತರಬೇತಿ / ಕಾರ್ಯಾಗಾರವನ್ನು ಎಸ್.ಎಸ್.ಎ., ಎ.ಪಿ.ಎಫ್ ಮತ್ತು ಜನಶಾಲಾ ಕಾರ್ಯಕ್ರಮದ ಸಹಯೋಗದಲ್ಲಿ ನಡೆಸಲಾಗಿದೆ. ಬಾಲ ಕಾರ್ಮಿಕರನ್ನು ನೇಮಿಸಿಕೊಳ್ಳುವ ಬಗ್ಗೆ ಬಿಗಿ ಧೋರಣೆಯನ್ನು ತಳೆದು, ಅವರ ವಿರುದ್ಧ ಪ್ರಕರಣಗಳನ್ನು ದಾಖಲು ಮಾಡುವಂತೆ ಈ ಕಾರ್ಯಾಗಾರದಲ್ಲಿ ಬಿ.ಇ.ಓ.ಗಳಿಗೆ ಒತ್ತಾಸೆ ನೀಡಲಾಗಿದೆ.

ಹೀಗೆ ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಗೆ ದಾಖಲಾಗದ ಹಾಗೂ ಶಾಲೆಯಿಂದ ಹೊರಗುಳಿದ ೬-೧೪ ರವರೆಗಿನ ವಯಸ್ಸಿನ ಮಕ್ಕಳು ಶಾಲಾ ಆವರಣಕ್ಕೆ ಬರುವವರೆಗೆ ಈ ಎಲ್ಲಾ ಕಾಯಕ್ರಮಗಳನ್ನು ಮುಂದುವರಿಸಲಾಗಿದೆ.

### ಇತ್ತೀಚಿನ ಸಾಧನೆ :

ಮೇಲಿನ ಕಾರ್ಯತಂತ್ರಗಳ ಅನುಷ್ಠಾನದಿಂದ ಶಾಲೆಗೆ ದಾಖಲಾಗದ ಮತ್ತು ಹೊರಗುಳಿದ ಮಕ್ಕಳನ್ನು ಮುಖ್ಯವಾಹಿನಿಗೆ ತರುವಲ್ಲಿ ಉತ್ತಮ ಫಲಿತಾಂಶವನ್ನು ಕಂಡಿದೆ. ರಾಜ್ಯದಲ್ಲಿ 'ಕೂಲಿಯಿಂದ ಶಾಲೆಗೆ' ಕಾರ್ಯಕ್ರಮದಡಿಯಲ್ಲಿ ರಾಜ್ಯಾದ್ಯಂತ ಸುಮಾರು ೫೦ ಸಾವಿರಕ್ಕೂ ಹೆಚ್ಚು ಮಕ್ಕಳು ಕೂಲಿ ಬಿಟ್ಟು ಬೇಸಿಗೆಯಲ್ಲಿ ನಡೆಸಿದ ಚಿಣ್ಣರ ಅಂಗಳಕ್ಕೆ ಬಂದಿರುತ್ತಾರೆ.

ಮಕ್ಕಳ ಹಕ್ಕುಗಳ ಕೋಶದ ವಿಭಾಗಕ್ಕೆ ರಾಜ್ಯದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಬಂದ ವರದಿ ಪ್ರಕಾರ ೭೮ ಮಕ್ಕಳು ಶಾಲೆಗೆ ದಾಖಲಾಗಿದ್ದಾರೆ.

ಅಕ್ಷರ ದಾಸೋಹ-ಬಿಸಿಯೂಟದ ಕಾರ್ಯಕ್ರಮದಿಂದ ಗಣನೀಯವಾಗಿ ಹೊರಗುಳಿದ ಮಕ್ಕಳು ಹೆಚ್ಚು ಸಂಖ್ಯೆಯಲ್ಲಿ ಮುಖ್ಯವಾಹಿನಿಗೆ ಬಂದು ಸೇರಿದ್ದಾರೆ. ಉಳಿದ ಶಾಲೆ ಬಿಟ್ಟ ಮಕ್ಕಳನ್ನು ಹಾಗೂ ದಾಖಲಾಗದ ಮಕ್ಕಳನ್ನು ಶಾಲೆಗೆ ದಾಖಲಿಸುವಲ್ಲಿ ಶಿಕ್ಷಕರು, ಅಧಿಕಾರಿಗಳು, ತಂದೆ ತಾಯಿ ಹಾಗೂ ಪೋಷಕರು, ಸ್ವಯಂಸೇವಾ ಸಂಸ್ಥೆಗಳು, ಎಸ್.ಡಿ.ಎಂ.ಸಿ. ಗಳು, ಎನ್.ಜಿ.ಓ.ಗಳು ಸತತ

ಶ್ರಮಿಸುತ್ತಿವೆ. ಜೂನ್ ೧೨ರಂದು ಆಚರಿಸಲಾದ ಬಾಲ ಕಾರ್ಮಿಕತೆ ವಿರೋಧಿ ದಿನಾಚರಣೆಯ ಸಂದರ್ಭದಲ್ಲಿ ಶಿಕ್ಷಣ ಇಲಾಖೆಯು ತನ್ನನ್ನು ಈ ಸಂಗ್ರಾಮಕ್ಕೆ ಮರು ಸಮರ್ಪಣೆ ಮಾಡಿಕೊಂಡಿದೆ.

**ಶಿಕ್ಷಣ ಸಾರ್ವತ್ರೀಕರಣ :**

"ಸರ್ವರಿಗೂ ಶಿಕ್ಷಣ" ಸರ್ಕಾರದ ನೀತಿಯಾಗಿದೆ. ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಶಾಲೆಯಿಂದ ಹೊರಗಿರುವ ಶಾಲಾ ವಯಸ್ಸಿನ ಮಕ್ಕಳನ್ನು ಶಾಲೆಗೆ ದಾಖಲಿಸುವಂತೆ ಮಾಡುವುದು ಇದರ ಯೋಜನೆಯಾಗಿರುತ್ತದೆ. ಈ ನಿಟ್ಟಿನಲ್ಲಿ ಸಮೀಕ್ಷೆ ನಡೆಸಿ, ಮಕ್ಕಳನ್ನು ಗುರುತಿಸಲಾಗಿದ್ದು, ಈ ಮಕ್ಕಳನ್ನು ಹೇಗಾದರೂ ಶಾಲೆಗೆ ಕರೆತರುವುದಕ್ಕೆ ಸರ್ಕಾರ ಬದ್ಧವಾಗಿದೆ.

ನಿರ್ಗತಿಕರು, ಚಿಂದಿ ಆಯುವವರು, ಬೀದಿ ಮಕ್ಕಳು, ಬಾಲಾಪರಾಧಿಗಳು, ಅತ್ಯಂತ ಸಂಕಷ್ಟದಲ್ಲಿರುವ ಮಕ್ಕಳು, ಕಾನೂನಿನ ಜೊತೆ ಸಂಘರ್ಷದಲ್ಲಿರುವ ಮಕ್ಕಳು, ಬಾಲಕಾರ್ಮಿಕರು ಇಂದು ಶಾಲೆಯಿಂದ ಹೊರಗಿರುವ ಶಾಲಾ ವಯಸ್ಸಿನ ಮಕ್ಕಳಾಗಿದ್ದಾರೆ. ಸಂತೋಷದ ಬಾಲ್ಯ ಮತ್ತು ಗುಣಮಟ್ಟದ ಶಿಕ್ಷಣಕ್ಕಾಗಿ ಎದುರು ನೋಡುತ್ತಿರುವ ಈ ಮಕ್ಕಳು ನಮ್ಮ ಶಿಕ್ಷಣ ಸಾರ್ವತ್ರೀಕರಣದ ಪ್ರಮುಖ ಗುರಿಯಾಗ (Target) ಬೇಕು. ಈ ಮಕ್ಕಳ ಬದುಕಿಗೆ ಶಿಕ್ಷಣ ಆಶಾಕಿರಣವಾಗಬೇಕು. ಶಾಲೆಯಿಂದ ಹೊರಗಿರುವ ಈ ಮಕ್ಕಳು ಪುನಃ ಶಾಲಾ ಶಿಕ್ಷಣದ ಮುಖ್ಯವಾಹಿನಿಗೆ ಬಂದು, ಅಲ್ಲಿಯೇ ಉಳಿದು ೮ ವರ್ಷಗಳ ಗುಣಮಟ್ಟದ ಶಾಲಾ ಶಿಕ್ಷಣವನ್ನು ಮುಗಿಸಿ ತಮ್ಮ ಜೀವನವನ್ನು ಹೊಸ ರೀತಿಯಲ್ಲಿ ರೂಪಿಸಿಕೊಳ್ಳಬೇಕು. ಶಾಲಾ ಶಿಕ್ಷಣದ ಸಾರ್ವತ್ರೀಕರಣ ಈ ಮಕ್ಕಳಲ್ಲಿ ಹೊಸ ಭರವಸೆಯನ್ನು ಮೂಡಿಸಬೇಕು. "ಸರ್ವಶಿಕ್ಷಣ ಅಭಿಯಾನ" ಯೋಜನೆಯ ಜಾರಿಯ ಫಲವಾಗಿ ನಮ್ಮ ಸರ್ಕಾರಿ ಶಾಲೆಗಳು ಗುಣಮಟ್ಟದ ಶಿಕ್ಷಣವನ್ನು ಒದಗಿಸುವ ಆದರ್ಶ ಶಾಲೆಗಳಾಗಬೇಕು.

**ನಿರೀಕ್ಷೆ :**

ಎಲಿಮೆಂಟರಿ ಶಿಕ್ಷಣ ಮೂಲಭೂತ ಹಕ್ಕಾಗಿ ಪರಿಗಣಿಸಲ್ಪಟ್ಟಿದೆ. ೧೪ ವಯೋಮಾನದವರೆಗಿನ ಎಲ್ಲಾ ಮಕ್ಕಳಿಗೂ ಗುಣಾತ್ಮಕ ಎಲಿಮೆಂಟರಿ ಶಿಕ್ಷಣ ಒದಗಿಸುವುದು ಸರ್ಕಾರದ ಅತ್ಯಾದ್ಯತೆಗಳಲ್ಲಿ ಒಂದಾಗಿದೆ. ಗುಣಾತ್ಮಕ ಎಲಿಮೆಂಟರಿ ಶಿಕ್ಷಣ ಒದಗಿಸಲು ಕರ್ನಾಟಕ ಸರ್ಕಾರವು ಕೆಳಕಂಡ ನೀತಿಯನ್ನು ಹೊಂದಿದೆ.

೧) ಪ್ರತಿ ಮಗುವೂ ಶಾಲೆಯಲ್ಲಿರಬೇಕು
೨) ಪ್ರತಿ ಮಗುವೂ ನಿರೀಕ್ಷಿತ ಕಲಿಕೆಯ ಮಟ್ಟವನ್ನು ಸಾಧಿಸಬೇಕು
೩) ಪ್ರತಿ ಶಿಕ್ಷಕರೂ ಅಗತ್ಯ ಸಾಮರ್ಥ್ಯಗಳನ್ನು ಹೊಂದಿ ಕಲಿಸುವಿಕೆಯಲ್ಲಿ ತೊಡಗಬೇಕು
೪) ಸಮುದಾಯವು ಶಿಕ್ಷಣದ ಪ್ರಕ್ರಿಯೆಯಲ್ಲಿ ಪಾಲ್ಗೊಂಡು ಶಿಕ್ಷಣ ಒಂದು ಜನಾಂದೋಲನವಾಗಬೇಕು. ವಿಶೇಷವಾಗಿ ೬-೧೪ ವಯೋಮಾನದ ಪ್ರತಿಯೊಂದು ಮಗುವನ್ನೂ ಕಡ್ಡಾಯವಾಗಿ ಶಾಲೆಗೆ ದಾಖಲಿಸುವುದು
೫) ೨೦೦೭ನೇ ಇಸವಿ ವೇಳೆಗೆ ಎಲ್ಲಾ ಮಕ್ಕಳೂ ೫ ವರ್ಷದ ಗುಣಾತ್ಮಕ ಶಿಕ್ಷಣವನ್ನು ಪೂರೈಸುವಂತೆ ಕ್ರಮಕೈಗೊಳ್ಳುವುದು
೬) ೨೦೧೦ರ ವೇಳೆಗೆ ಎಲ್ಲಾ ಮಕ್ಕಳೂ ೮ ವರ್ಷದ ಶಿಕ್ಷಣವನ್ನು ಪೂರೈಸುವಂತೆ ಕ್ರಮಕೈಗೊಳ್ಳುವುದು

ಶಾಲೆಯಿಂದ ಹೊರಗುಳಿದ ಮಕ್ಕಳನ್ನು ಗುರುತಿಸಿ ಅವರನ್ನು ವಿವಿಧ ಕಾರ್ಯಕ್ರಮ ಪ್ರೇರಣೆಯ ಮೂಲಕ ಮುಖ್ಯವಾಹಿನಿಗೆ ತರುವ ಪ್ರಯತ್ನಗಳು ಆಶಾದಾಯಕ ಪ್ರತಿಫಲ ನೀಡುವ ನಿರೀಕ್ಷೆಯಲ್ಲಿವೆ.

ಶಿಕ್ಷಣದ ಸಾರ್ವತ್ರೀಕರಣಕ್ಕಾಗಿ ಕೇಂದ್ರ ಸರ್ಕಾರದ ಸರ್ವಶಿಕ್ಷಣ ಅಭಿಯಾನದ ಯೋಜನೆ ರಾಜ್ಯ ಸರ್ಕಾರದ ವಿವಿಧ ಕಾರ್ಯಕ್ರಮಗಳು ಒತ್ತುನೀಡಿವೆ. ಕಾಯಾ, ವಾಚಾ, ಮನಸಾ ಎಲ್ಲರೂ ಮನಸ್ಸು ಮಾಡಿದಲ್ಲಿ ಸಂಪೂರ್ಣ ಸಾಕ್ಷರತೆಯನ್ನು ಸಾಧಿಸಬಹುದಾಗಿದೆ. ಒಟ್ಟು ೨,೮೧,೯೬೩ ಮಕ್ಕಳನ್ನು ಮುಖ್ಯವಾಹಿನಿಗೆ ತಂದೇತರುತ್ತೇವೆಂಬ ಸಂಪೂರ್ಣ ವಿಶ್ವಾಸ ಇಟ್ಟುಕೊಂಡಿದ್ದೇವೆ. ಆಗ ಶಿಕ್ಷಣ ಸಾರ್ವತ್ರೀಕರಣಕ್ಕೆ ಅತ್ಯಂತ ಮಹತ್ವ ಸಿಕ್ಕಂತಾಗುತ್ತದೆ.

ಶಾಲೆಗೆ ದಾಖಲಾಗದ ಮತ್ತು ಶಾಲೆಯಿಂದ ಹೊರಗುಳಿದ ಶಾಲಾ ವಯಸ್ಸಿನ ಮಕ್ಕಳ ಸಮೀಕ್ಷೆಯನ್ನು ೨೦೦೪ರಲ್ಲಿ ನಡೆಸಿದಾಗ ರಾಜ್ಯದಲ್ಲಿ ಬಹಳ ಮಕ್ಕಳು ಶಿಕ್ಷಣದಿಂದ ವಂಚಿತರಾಗಿರುತ್ತಾರೆ. ಈ ಅಂಕಿ ಅಂಶದಂತೆ ರಾಜ್ಯದ ಉಡುಪಿ ಜಿಲ್ಲೆಯಲ್ಲಿ ಈ ಸಂಬಂಧ ಅತ್ಯಂತ ಕಡಿಮೆ ಅಂದರೆ ೨೫೦ ಮಕ್ಕಳು ಮಾತ್ರ ಶಿಕ್ಷಣದಿಂದ ವಂಚಿತರಾಗಿದ್ದಾರೆ. ಯಾದಗಿರಿ ಶೈಕ್ಷಣಿಕ ಜಿಲ್ಲೆಯಲ್ಲಿ ಈ ಸಂಖ್ಯೆ ಅತ್ಯಂತ ಹೆಚ್ಚು ಅಂದರೆ ಸುಮಾರು ೧೦,೦೮೭ ಮಕ್ಕಳು ಶಾಲಾ ಶಿಕ್ಷಣದಿಂದ ಹೊರಗುಳಿದಿದ್ದಾರೆ. ಈ ಎಲ್ಲಾ ಮಕ್ಕಳು ಶಾಲೆಗೆ ಬರುವಂತೆ ಮಾಡುವುದು ಸರ್ಕಾರದ ಆಶಯವಾಗಿದೆ. ಈ ದಿಸೆಯಲ್ಲಿ ನಮ್ಮ ನಿಮ್ಮ ಪ್ರಯತ್ನ ಮುಂದುವರಿಯಬೇಕಾಗಿದೆ.

●




# ಹೆಣ್ಣುಮಕ್ಕಳ ಶಿಕ್ಷಣ

ಎನ್. ರವೀಂದ್ರನಾಥ್

೧೯೯೦ರ ದಶಕದಲ್ಲಿ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಪ್ರಮುಖ ಗಮನ ನೀಡಿದುದಕ್ಕೆ ಮಾನವ ಹಕ್ಕುಗಳ ಬಗ್ಗೆ ಸರಿಸುಮಾರು ಒಂದೇ ಅವಧಿಯಲ್ಲಿ ನಡೆದ ಎರಡು ಪ್ರಮುಖ ಆಂದೋಲನಗಳೇ ಕಾರಣವೆನ್ನಬಹುದು. ಅವೆಂದರೆ, ೧೯೮೯ರಲ್ಲಿ ಮಕ್ಕಳ ಹಕ್ಕುಗಳ ಮೇಲಿನ ಒಡಂಬಡಿಕೆಯನ್ನು ಅಂಗೀಕರಿಸಿದುದರ ಪರಿಣಾಮವಾಗಿ ಚಾಲನೆ ಪಡೆದ ಮಕ್ಕಳ ಹಕ್ಕುಗಳ ಆಂದೋಲನ ಮತ್ತು ಹೆಣ್ಣುಮಕ್ಕಳ ಅಗತ್ಯಗಳು ಹಾಗೂ ಹಕ್ಕುಗಳ ಬಗ್ಗೆ ವಿಚಾರ ವಿನಿಮಯಕ್ಕೆ ಒಂದು ವೇದಿಕೆಯಾಗಿದ್ದ ೧೯೯೫ರಲ್ಲಿ ಬೀಜಿಂಗ್‌ನಲ್ಲಿ ನಡೆದ ಮಹಿಳೆಯರ ನಾಲ್ಕನೇ ಜಾಗತಿಕ ಸಮ್ಮೇಳನದ ಕ್ರಿಯಾವೇದಿಕೆಯಿಂದ ಸಿಕ್ಕ ಸ್ಫೂರ್ತಿಯಿಂದ ರೂಪುಗೊಂಡ ಮಹಿಳಾ ಆಂದೋಲನ.

ಹೀಗಾಗಿ, ಹೆಣ್ಣಮಕ್ಕಳ ಶಿಕ್ಷಣಕ್ಕೆ ಸೂಕ್ತ ಪ್ರಾಮುಖ್ಯತೆ ಸಿಗಲು ೨೧ನೇ ಶತಮಾನದವರೆಗೆ ಕಾಯಬೇಕಾಯಿತು.

## ಹೆಣ್ಣುಮಕ್ಕಳ ಶಿಕ್ಷಣವನ್ನು ಕುರಿತು ರಾಷ್ಟ್ರೀಯ ಮನೋಭಾವವನ್ನು ಬೆಳೆಸುವುದು :

"ಶಾಲೆಯಿಂದ ಯಾವ ಹೆಣ್ಣುಮಗುವೂ ಹೊರಗಿರಬಾರದು" ಎಂಬ ಮನೋಭಾವವನ್ನು ಮೂಡಿಸಬೇಕು. ಇದರಿಂದ ಕೆಲಸದ ಸ್ಥಳಗಳಲ್ಲಿ ಶೋಷಣೆಗೊಳಗಾಗುವ ಬಾಲಕ-ಬಾಲಕಿಯರ ಬಗ್ಗೆ ಸಮುದಾಯ ವ್ಯಕ್ತಪಡಿಸುವಂಥ ತೀವ್ರ ಕಾಳಜಿ ಮನೋಭಾವವನ್ನೇ ಮನೆಯಲ್ಲಿರುವ ಮತ್ತು ಶಾಲೆಯಿಂದ ಹೊರಗುಳಿದ ಹೆಣ್ಣುಮಕ್ಕಳ ಬಗ್ಗೆಯೂ ವ್ಯಕ್ತಪಡಿಸುವಂಥ ಸಾಮಾಜಿಕ ಮನೋಭಾವ ಉಂಟಾಗುತ್ತದೆ. ಈ ಮನೋಭಾವನೆಯನ್ನು ಬೆಳೆಸಲು ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡುವುದರಿಂದ ಈ ಕುಟುಂಬ ಮತ್ತು ಸಮಾಜಕ್ಕೆ ದೊರಕಬಹುದಾದ ಪ್ರಯೋಜನಗಳನ್ನು ಕುರಿತು ತಿಳುವಳಿಕೆ ನೀಡುವಂಥ ವ್ಯಾಪಕವಾದ ನಾಗರಿಕ ಶಿಕ್ಷಣ ಆಂದೋಲನದ ಅಗತ್ಯವಿದೆ. ಇದರಲ್ಲಿ ಎಲ್ಲರೂ ಪಾಲ್ಗೊಳ್ಳುವಂತೆ ಮಾಡಬೇಕು. ಹೆಣ್ಣುಮಕ್ಕಳನ್ನು ಶಾಲೆಗೆ ಸೇರಿಸುವಂತೆ ಮತ್ತು ಶಾಲೆಯಲ್ಲಿ ಮುಂದುವರಿಯುವಂತೆ ಮಾಡುವುದರ ಜವಾಬ್ದಾರಿಯನ್ನು ಸರ್ಕಾರಗಳೇ ವಹಿಸಿಕೊಳ್ಳಬೇಕು. ಹಾಗಾಗುವಂತೆ ನೋಡಿಕೊಳ್ಳಲು ಈ ಮುಂದಿನ ಕ್ರಮಗಳನ್ನು ಕೈಗೊಳ್ಳಬಹುದು.

> *ಶಾಲೆಯಿಂದ ಯಾವ ಹೆಣ್ಣುಮಗುವೂ ಹೊರಗಿರಬಾರದು ಎಂಬ ಮನೋಭಾವ ಮೂಡಿಸಬೇಕು. ಶಾಲೆ ಬಿಟ್ಟ ಹೆಣ್ಣುಮಗುವನ್ನು ಪುನಃ ಶಾಲೆಗೆ ದಾಖಲಿಸಿ ಶಿಕ್ಷಣದ ಮುಖ್ಯ ವಾಹಿನಿಗೆ ತರುವ ಕಾರ್ಯಕ್ರಮ 'ಬಾ ಬಾಲೆ ಶಾಲೆಗೆ'.*

ಶಾಲೆಯಿಂದ ಹೊರಗುಳಿಯುವ ಹೆಣ್ಣುಮಕ್ಕಳ ಸಂಖ್ಯೆಯನ್ನು ನಿಯತವಾಗಿ ಮತ್ತು ಸಾರ್ವಜನಿಕವಾಗಿ ವರದಿ ಮಾಡಬೇಕು ಹಾಗೂ ನಿರುದ್ಯೋಗದ ಪ್ರಮಾಣ ಹೆಚ್ಚುತ್ತಿರುವುದಕ್ಕೆ ತುರ್ತು ಗಮನಹರಿಸುವ ರೀತಿಯಲ್ಲಿಯೇ ಈ ವಿಷಯವನ್ನು ದೇಶದ ಪ್ರಮುಖ ಕಾಳಜಿಯ ವಿಷಯವೆಂದು ಪರಿಗಣಿಸಬೇಕು.

- ರಾಷ್ಟ್ರಗಳು ಶಿಕ್ಷಣ ತೆರಿಗೆ ಅಥವಾ ಸರಕುಗಳ ಮೇಲೆ ಸರ್‌ಚಾರ್ಜ್ ವಿಧಿಸುವ ಸಾಧ್ಯಾಸಾಧ್ಯತೆಯನ್ನು ಪರಿಗಣಿಸಬೇಕು. ಅಲ್ಲದೆ ಹೆಣ್ಣು-ಗಂಡು ಮಕ್ಕಳ ದಾಖಲಾತಿ ಸಂಖ್ಯೆ ಸಮಸಮ ಆಗುವವರೆಗೆ ಹೆಣ್ಣುಮಕ್ಕಳು ಅಥವಾ ಗಂಡುಮಕ್ಕಳು ಶಾಲೆಗೆ ಬರುವಂತೆ ಮಾಡಲು ಮಾತ್ರವೇ ಇಂಥ ಹಣ ಉಪಯೋಗಿಸಬೇಕು.
- ಸರ್ಕಾರಗಳು ತಮ್ಮ ರಾಷ್ಟ್ರಗಳಲ್ಲಿ ಹಮ್ಮಿಕೊಂಡಿದ್ದ ಯಶಸ್ವೀ ಯೋಜನೆಗಳ ಪಟ್ಟಿಯನ್ನು ತಯಾರಿಸಬೇಕು. ಇವುಗಳನ್ನು ರಾಷ್ಟ್ರೀಯ ಮಟ್ಟದಲ್ಲಿ ಪ್ರಚಾರಕ್ಕೆ ತರಬೇಕು ಹಾಗೂ ಹೆಣ್ಣುಮಕ್ಕಳು ಮೂಲಭೂತ ಶಿಕ್ಷಣ ಹೊಂದುವಲ್ಲಿ ಇವುಗಳು ಪರಿಣಾಮಕಾರಿಯಾಗಿವೆಯೇ ಎಂಬುದನ್ನು ಪರಿಶೀಲಿಸಬೇಕು.

ಕರ್ನಾಟಕದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಈ ಎಲ್ಲಾ ಆಂದೋಲನಗಳ ಪರಿಣಾಮವಾಗಿ ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಸಮುದಾಯದಲ್ಲಿ ಅರಿವು ಮೂಡಿಸಲಾಗಿದೆ. ಈ ದೃಷ್ಟಿಯಿಂದ ಕೈಗೊಳ್ಳಲಾದ ಮಹತ್ವದ ಯೋಜನೆ 'ಬಾ ಬಾಲೆ ಶಾಲೆಗೆ'.

### ಬಾ ಬಾಲೆ ಶಾಲೆಗೆ :

ಶಾಲೆ ಬಿಟ್ಟ ಹೆಣ್ಣುಮಕ್ಕಳು ಮತ್ತು ಶಾಲೆಯಿಂದ ಹೊರಗುಳಿದ ಹೆಣ್ಣುಮಕ್ಕಳನ್ನು ಪುನಃ ಶಾಲೆಯ ಮುಖ್ಯ ವಾಹಿನಿಗೆ ದಾಖಲಿಸುವುದೇ '**ಬಾ ಬಾಲೆ ಶಾಲೆಗೆ**' ಎಂಬ ಕಾರ್ಯಕ್ರಮದ ಉದ್ದೇಶವಾಗಿದೆ. ಶಿಕ್ಷಣದಿಂದ ವಂಚಿತರಾಗಿರುವ ೬-೧೪ ವಯೋಮಾನದ ಹೆಣ್ಣುಮಕ್ಕಳನ್ನು ಶಾಲೆಗೆ ಕರೆತರಲು, ಅವರಿಗೆ ಕನಿಷ್ಟ ೮ ವರ್ಷಗಳ ವಿದ್ಯೆ ಸಿಗುವಂತೆ ಮಾಡಲು ಹಾಗೂ ಲಿಂಗ ತಾರತಮ್ಯ ಹೋಗಲಾಡಿಸಲು ರೂಪಿಸಿರುವ ಒಂದು ವಿಶೇಷ ಕಾರ್ಯಕ್ರಮವಾಗಿದೆ. ದಾಖಲೆಯಾದ ಹೆಣ್ಣುಮಕ್ಕಳು ಶಾಲೆಯಲ್ಲಿಯೇ ಉಳಿದುಕೊಳ್ಳುವಂತೆ ಮಾಡಿ ೮ನೇ ತರಗತಿಯವರೆವಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣವನ್ನು ಕಲ್ಪಿಸುವುದು.

## ಗ್ರಾಮೀಣ ಪ್ರದೇಶಗಳಲ್ಲಿ ಶಾಲೆ ಬಿಟ್ಟ ಹಾಗೂ ಶಾಲೆಗೆ ದಾಖಲಾಗದ ಹೆಣ್ಣುಮಕ್ಕಳಿಗೆ ಸರ್ಕಾರದ ಕಾರ್ಯತಂತ್ರಗಳು (ಕಾರ್ಯಕ್ರಮಗಳು) :

### ೧) ದಾಖಲಾತಿ ಆಂದೋಲನ :

ಪ್ರಜ್ಞಾವಂತ ಪೋಷಕರು ಸ್ವಯಂಪ್ರೇರಣೆಯಿಂದ ತಮ್ಮ ಹೆಣ್ಣುಮಕ್ಕಳನ್ನು ಶಾಲೆಗೆ ದಾಖಲಿಸುವುದು. ಸಮುದಾಯದ ಒತ್ತಾಸೆಯಿಂದ ಮತ್ತು ಜನಜಾಗೃತಿ ಕಾರ್ಯಕ್ರಮಗಳಿಂದ ಪ್ರೇರೇಪಿಸಿ ಹೆಚ್ಚು ಸಂಖ್ಯೆಯಲ್ಲಿ ಮಕ್ಕಳನ್ನು ಶಾಲೆಗೆ ದಾಖಲು ಮಾಡುವ ಕಾರ್ಯಾಚರಣೆಯೇ ದಾಖಲಾತಿ ಆಂದೋಲನ. ಪ್ರತಿ ವರ್ಷ ಜೂನ್ ತಿಂಗಳಲ್ಲಿ ದಾಖಲಾತಿ ಆಂದೋಲನವನ್ನು ರಾಜ್ಯಾದ್ಯಂತ ಪುನಃ ಹಮ್ಮಿಕೊಳ್ಳಲಾಗಿದೆ.

### ೨) ಬಾ ಮರಳಿ ಶಾಲೆಗೆ :

ಶಾಲೆಗಳಿಗೆ ದಾಖಲಾಗದೆ ಉಳಿದ ಮತ್ತು ದಾಖಲಾಗಿಯೂ ಶಾಲೆ ತೊರೆದ ಹೆಣ್ಣುಮಕ್ಕಳನ್ನು ಶಾಲಾ ಮಕ್ಕಳಿಂದಲೇ ಪ್ರೇರೇಪಿಸಿ ಶಾಲೆಗೆ ಕರೆತರುವ ಕಾರ್ಯತಂತ್ರವು 'ಬಾ ಮರಳಿ ಶಾಲೆಗೆ'. ಪ್ರತಿ ಸೋಮವಾರದ ಮೊದಲ ಒಂದು ಗಂಟೆ ಶಾಲಾ ಹೆಣ್ಣುಮಕ್ಕಳು, ಶಿಕ್ಷಕರು, ಎಸ್.ಡಿ.ಎಂ.ಸಿ.ಯವರು ಮತ್ತು ಶಿಕ್ಷಣ ಪ್ರೇಮಿಗಳು ಮೆರವಣಿಗೆಯಲ್ಲಿ ತೆರಳಿ ಶಂಖ, ಗಂಟೆ ಮತ್ತು ತಮಟೆಗಳ ನಾದದೊಂದಿಗೆ ಶಾಲೆಯಿಂದ ಹೊರಗಿರುವ ಹೆಣ್ಣುಮಕ್ಕಳ ಮನೆಯವರನ್ನು 'ಶಾಲೆಗೆ ಮರಳಿ ಬಾ' ಎಂದು ಆಹ್ವಾನಿಸುತ್ತಾರೆ. ಇದಕ್ಕೆ ಒಪ್ಪಿ ಬಂದ ಮಗುವನ್ನು ಮೆರಮಣಿಗೆಯಲ್ಲಿ ಕರೆತಂದು ಶಾಲಾ ಆವರಣದ ವಾತ್ಸಲ್ಯ ಬಂಧನಕ್ಕೆ ಸಿಲುಕಿಸುತ್ತಾರೆ. ೨೦೦೪ರ ಫೆಬ್ರವರಿ ತಿಂಗಳ ಸಮೀಕ್ಷೆ ಪ್ರಕಾರ ರಾಜ್ಯಾದ್ಯಂತ ೬-೧೪ ವಯೋಮಾನದ ೧೩೭೭೨೮ ಹೆಣ್ಣುಮಕ್ಕಳನ್ನು ಶಾಲೆಗೆ ಆಕರ್ಷಿಸಲಾಗಿದೆ.

### ೩) ಕೂಲಿಯಿಂದ ಶಾಲೆಗೆ :

ಹೆಣ್ಣುಮಕ್ಕಳನ್ನು ಬಾಲ ಕಾರ್ಮಿಕತನದಿಂದ ಶಾಲಾ ಬಾಲಕಿತನಕ್ಕೆ ಪರಿವರ್ತನೆಗೊಳಿಸುವ ಉದ್ದೇಶದಿಂದ ಜನವರಿ ೨೦೦೩ ರಿಂದ ಬೆಂಗಳೂರು ನಗರದಲ್ಲಿ ೭ ಪರ್ಯಾಯ ಶಾಲೆಗಳನ್ನು (Transit Schools) ನಡೆಸಲಾಗುತ್ತಿದೆ. ಊದುಬತ್ತಿ, ಮನೆಕೆಲಸ ಮತ್ತಿತರ ಸಂಸ್ಥೆಗಳಲ್ಲಿ ದುಡಿಯುವ ಹೆಣ್ಣುಮಕ್ಕಳು ಈ ಶಾಲೆಗಳಿಗೆ ಸೇರಿರುತ್ತಾರೆ. ಇವರು ಆ ಬಳಿಕ ಸಾಂಪ್ರದಾಯಿಕ ಶಾಲೆಗಳ ಮುಖ್ಯವಾಹಿನಿಗೆ ಬಂದಿರುವರು.

### ೪) ಚಿಣ್ಣರ ಅಂಗಳ :

ಸಕಲ ಪ್ರಯತ್ನಗಳ ಮತ್ತು ಬಹುವಿಧ ಕಾರ್ಯತಂತ್ರಗಳ ಬಳಕೆಯ ಹೊರತಾಗಿಯೂ ಶಾಲೆಯಿಂದ ಹೊರಗುಳಿದ ಹೆಣ್ಣುಮಕ್ಕಳಲ್ಲಿ ಶಾಲಾ ಸನ್ನದ್ಧತೆಯನ್ನು ಮೂಡಿಸುವ ಸಲುವಾಗಿ ೨೦೦೩ರ ಏಪ್ರಿಲ್ ೭ರಿಂದ ಜೂನ್ ೫ರ ಅವಧಿಯಲ್ಲಿ ೪೮೬೦ ಚಿಣ್ಣರ ಅಂಗಳ Bridge course ಕೇಂದ್ರಗಳನ್ನು ರಾಜ್ಯಾದ್ಯಂತ ನಡೆಸಲಾಗಿದೆ. ಈ ಕೇಂದ್ರಗಳಲ್ಲಿ ೧.೨೭ ಲಕ್ಷ ಮಕ್ಕಳು ಭಾಗವಹಿಸಿದ್ದರು. ಈ ಪೈಕಿ ಸುಮಾರು ೫೦,೦೦೦ ಮಕ್ಕಳು ಕೂಲಿ ಮಾಡುತ್ತಿದ್ದ ಮಕ್ಕಳು.

### ೫) ಅಕ್ಷರ ದಾಸೋಹ :

ಕರ್ನಾಟಕ ಸರ್ಕಾರ ಮಕ್ಕಳಿಗೆ ಬಿಸಿಯೂಟದ ಸೌಲಭ್ಯವು ಬಾಲಕಾರ್ಮಿಕ ಹೆಣ್ಣುಮಕ್ಕಳನ್ನು ಶಾಲೆಗೆ ಸೆಳೆಯುವಲ್ಲಿ ಒಂದು ಮಹತ್ವದ ಉತ್ತೇಜಕವಾಗಿದೆ. ಇದರಿಂದ ಸುಮಾರು ೯೦,೦೦೦ ಮಕ್ಕಳು ಹೆಚ್ಚುವರಿಯಾಗಿ ಶಾಲೆಗೆ ಬಂದಿರುತ್ತಾರೆ.

### ೬) ಮಕ್ಕಳ ಹಕ್ಕುಗಳ ಸಂರಕ್ಷಣಾ ಕ್ರಮಗಳು :

ಭಾರತದ ಸಂವಿಧಾನದ ೯೩ನೇ ತಿದ್ದುಪಡಿಯು ಶಿಕ್ಷಣವನ್ನು ಮಗುವಿನ ಮೂಲಭೂತ ಹಕ್ಕನ್ನಾಗಿ ಮಾಡಿದೆ. ಈ ಹಿನ್ನೆಲೆಯಲ್ಲಿ ಯಾವ ಮಗುವೂ ವಿಶೇಷತಃ ೬-೧೪ರ ವಯೋಮಾನ ಹೆಣ್ಣುಮಗು ಶಾಲಾ ಶಿಕ್ಷಣದಿಂದ ವಂಚಿತವಾಗಿದೆಯೋ ಆ ಮಗುವಿನ ಮೂಲಭೂತ ಹಕ್ಕನ್ನು ಕಸಿದುಕೊಳ್ಳಲಾಗಿದೆಯೆಂದು ಪರಿಗಣಿಸಬೇಕಿದೆ. ಈ ಹೆಣ್ಣುಮಕ್ಕಳನ್ನು ಒಂದಲ್ಲಾ ಒಂದು ಬಗೆಯ ಬಾಲ ಕಾರ್ಮಿಕರೆಂದೇ ಪರಿಗಣಿಸಿ ಅವರಿಗೆ ನಿರಾಕರಿಸಲಾದ ಹಕ್ಕನ್ನು ಪುನರ್ಸ್ಥಾಪನೆ ಮಾಡಬೇಕಾಗುತ್ತದೆ. ಇದನ್ನು ಈ ಶೈಕ್ಷಣಿಕ ವರ್ಷದಿಂದ ಹೆಣ್ಣುಮಕ್ಕಳಿಗೆ ಅದರಲ್ಲೂ ವಿಶೇಷವಾಗಿ ಗ್ರಾಮೀಣ ಪ್ರದೇಶಗಳಿಗೆ ಅನ್ವಯಿಸಬಹುದಾಗಿದೆ. ಇದಕ್ಕಾಗಿ ಮಕ್ಕಳ ಹಕ್ಕುಗಳ ಕೋಶವನ್ನು ತೆರೆಯಲಾಗಿದೆ.

### ೭) ಸರ್ಕಾರಿ ಶಾಲೆಗಳಲ್ಲಿ :

೧ ರಿಂದ ೧೧ನೇ ತರಗತಿಯವರಿಗೆ ಪ್ರೋತ್ಸಾಹದ ನಿಟ್ಟಿನಲ್ಲಿ ಸಮವಸ್ತ್ರಗಳು, ಶುಲ್ಕ ವಿನಾಯ್ತಿ, ಉಚಿತ ಪಠ್ಯಪುಸ್ತಕ, ಶಾಲಾ ಬ್ಯಾಗುಗಳು, ವಿದ್ಯಾರ್ಥಿ ವೇತನಗಳನ್ನು ನೀಡಲು ಪ್ರೋತ್ಸಾಹಿಸುತ್ತಿದೆ.

### ಗ್ರಾಮೀಣ ಪ್ರದೇಶಗಳ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಆಗುತ್ತಿರುವ ತೊಡಕುಗಳು :

೧) ಮನೆಗಳಲ್ಲಿ ಪುಟ್ಟ ಮಕ್ಕಳನ್ನು ನೋಡಿಕೊಳ್ಳುವುದು.

೨) ಹೊಲ, ತೋಟ, ಗದ್ದೆಗಳಲ್ಲಿ ದುಡಿಸಿಕೊಳ್ಳುವುದು.

೩) ಹೆಣ್ಣುಮಕ್ಕಳು ದೊಡ್ಡವರಾದರೆಂದರೆ ಶಾಲೆ ಬಿಡಿಸಿ ವಿವಾಹ ಮಾಡಿಬಿಡುವುದು.

೪) ಹಿಂದಿನ ಕಾಲದಿಂದಲೂ ಹೆಣ್ಣುಮಕ್ಕಳು ಎಂಬ ತಾತ್ಸಾರ ಮನೋಭಾವನೆ ಬೇರೂರಿಬಿಟ್ಟಿರುವುದು. ಆದರ್ಶ ಮಹಿಳೆಯರ ದೇಶಭಕ್ತಿ, ಆಧ್ಯಾತ್ಮಿಕ ಶಕ್ತಿಗಳ ಪರಿಚಯ ಹಾಗೂ ವಿದ್ಯಾರ್ಥಿಗಳ ಮನವೊಲಿಸುವ ಶಿಕ್ಷಣದ ಅರಿವಿನ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಏರ್ಪಡಿಸದೇ ಇರುವುದು.

೫) ಸಮಾಜದಲ್ಲಿ ಹೆಣ್ಣುಮಕ್ಕಳ ಲೈಂಗಿಕ ಶೋಷಣೆ ಆಗುತ್ತಿರುವುದು.

೬) ಶಾಲಾ ಕಾಲೇಜುಗಳಲ್ಲಿ ಶೌಚಾಲಯ ವ್ಯವಸ್ಥೆ ಇಲ್ಲದಿರುವುದು.

೭) ಹೆಣ್ಣು - ಗಂಡು ಮಕ್ಕಳ ಸಮಾನ ಶಿಕ್ಷಣದ ಅವಕಾಶವನ್ನು ಕಲ್ಪಿಸದೇ ಇರುವುದು.

೮) ಹೆಣ್ಣು - ಗಂಡೆಂಬ ಭೇದ ಭಾವ ಕಾಣುತ್ತಿರುವುದು.

೯) ಬಡತನ, ಆರ್ಥಿಕ ಮುಗ್ಗಟ್ಟು ಹೆಣ್ಣುಮಕ್ಕಳ ಶಿಕ್ಷಣಕ್ಕೆ ಅಡ್ಡಿ ಉಂಟುಮಾಡುತ್ತಿದೆ. (ತಂದೆ, ತಾಯಿ, ಪೋಷಕರ ನಿರ್ಲಕ್ಷ್ಯ ಮತ್ತು ಅನಕ್ಷರತೆಯ ಕಾರಣ)

೧೦) ತಂದೆ ತಾಯಿಗಳು ತೀರ ಬಡತನ ಹಾಗೂ ಕೂಲಿ ಮಾಡುವ ಸಂದರ್ಭದಲ್ಲಿ ತಮ್ಮ ಹೆಣ್ಣುಮಕ್ಕಳನ್ನು ಊದುಬತ್ತಿ ಹೊಸೆಯುವುದು, ಮನೆ ಕೆಲಸದಲ್ಲಿ ತೊಡಗಿಸಿಕೊಳ್ಳುವುದು ಸಾಮಾನ್ಯವಾಗಿದೆ.

೧೧) ಸಮುದಾಯ ಮತ್ತು ಸಮಾಜಗಳಲ್ಲಿ "ಹೆಣ್ಣು ಮಗು" ಎಂಬ ಸಾಮಾನ್ಯ ಮನೋಭಾವ ಜನರಲ್ಲಿ ಬೇರೂರಿರುವುದನ್ನು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಗಿ ಕಾಣುತ್ತೇವೆ.

೧೨) ಇಂದಿನ ಎಲೆಕ್ಟ್ರಾನಿಕ್ಸ್ ಮತ್ತು ಗಣಕಯಂತ್ರ ಯುಗದಲ್ಲಿ ಬೆಟ್ಟಗುಡ್ಡ ಪ್ರದೇಶಗಳ ಹೆಣ್ಣುಮಕ್ಕಳಿಗೆ ಶಿಕ್ಷಣದ ಅರಿವನ್ನು ಮೂಡಿಸದಿರುವುದು.

೧೩) ಎಲಿಮೆಂಟರಿ ಶಿಕ್ಷಣದ ಹಂತದಲ್ಲಿ ಹೆಣ್ಣುಮಕ್ಕಳಿಗೆ ಸಂಪೂರ್ಣ ಫಲಕಾರಿಯಾದ ಶಿಕ್ಷಣದ ಕೊರತೆ (ಸರ್ವಾಂಗೀಣ ಅಭಿವೃದ್ಧಿಯ ಶಿಕ್ಷಣದ ಕೊರತೆ).

೧೪) ಶಿಕ್ಷಕಿಯರಿಗೆ ಗ್ರಾಮೀಣ ಪ್ರದೇಶದ ಪರಿಸರ ಶಿಕ್ಷಣದ ಕೊರತೆ ಹಾಗೂ ತರಬೇತಿ ಕಾರ್ಯಾಗಾರದ ಅವಶ್ಯಕತೆಯ ಕೊರತೆ.

೧೫) ಹೆಣ್ಣುಮಕ್ಕಳ ವ್ಯಕ್ತಿತ್ವ ರೂಪಿಸಲು ವಿಶೇಷ ತರಬೇತಿ.

೧೬) ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಬೋಧಿಸುವ ಶಿಕ್ಷಕರಿಗೆ ಮೂಲಭೂತ ಸೌಲಭ್ಯದ ಕೊರತೆ.

## ಗ್ರಾಮೀಣ ಪ್ರದೇಶದ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಒದಗಿಸಬೇಕಾದ ಸೌಲಭ್ಯಗಳು :

ಹೆಣ್ಣುಮಕ್ಕಳಿಗೆ ಪ್ರತ್ಯೇಕ ಶೌಚಾಲಯಗಳನ್ನು ನಿರ್ಮಿಸುವುದು. ಆಗಿಂದಾಗ್ಗೆ ವೈದ್ಯಕೀಯ ತಪಾಸಣಾ ಕೇಂದ್ರ (ಶಿಬಿರ)ಗಳನ್ನು ಏರ್ಪಡಿಸುವುದು. ಶಿಕ್ಷಕರು ಮತ್ತು ಎಸ್.ಡಿ.ಎಂ.ಸಿ. ಸರ್ವಸದಸ್ಯರು ಹೆಣ್ಣುಮಕ್ಕಳ ಶಿಕ್ಷಣಕ್ಕೆ ಹೆಚ್ಚು ಮಹತ್ವವನ್ನು ರೂಪಿಸುವುದು ಹಾಗೂ ಪ್ರೇರೇಪಿಸುವುದು. ನಾಚಿಕೆ, ಸಂಕೋಚ, ಬಿಗುಮಾನಗಳ ಸ್ವಭಾವವನ್ನು ಕಂಡು ಹಿಡಿದು ಚರ್ಚಾಸ್ಪರ್ಧೆಗಳಲ್ಲಿ ಭಾಗವಹಿಸುವಂತೆ ಹಾಗೂ ಸ್ವಂತ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಪ್ರೇರೇಪಿಸುವುದು. ಹೆಣ್ಣುಮಕ್ಕಳು ತಮ್ಮ ಮನೋಭಾವನೆಗಳನ್ನು ವ್ಯಕ್ತಪಡಿಸಲು ಶಿಕ್ಷಕರು ಅವಕಾಶ ಮಾಡಿಕೊಡಬೇಕು. ಶಿಶು ಕೇಂದ್ರಿತ ಶಿಕ್ಷಣ ಇರುವುದರಿಂದ ೫ ರಿಂದ ೧೦ ಹೆಣ್ಣುಮಕ್ಕಳನ್ನು ಗುಂಪು ಗುಂಪಾಗಿ ಮಾಡಿ ಪ್ರತಿಭೆ ವ್ಯಕ್ತಪಡಿಸಲು ಅವಕಾಶ ನೀಡಬೇಕು. ಕಥೆ, ಹಾಡು, ಅಭಿನಯ, ನೃತ್ಯ, ಸಂಗೀತ ಪಾಠಗಳಿಗೆ ಅವಕಾಶ ಮಾಡಿಕೊಡಬೇಕು. ಪ್ರತಿ ಶುಕ್ರವಾರ ತರಗತಿಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಬೇಕು. ಕ್ವಿಜ್ ಕಾರ್ಯಕ್ರಮ ಏರ್ಪಡಿಸುವುದು ಹಾಗೂ ಶಿಕ್ಷಣಾಧಿಕಾರಿಗಳನ್ನು ಆಹ್ವಾನಿಸಿ ಭಾಷೆ, ವಿಜ್ಞಾನ, ಗಣಿತ ವಿಷಯಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಗೋಷ್ಠಿಗಳನ್ನು ಏರ್ಪಡಿಸುವುದು . ಗಂಡು - ಹೆಣ್ಣು ಭೇದ ತೋರದೆ ಸಮಾನ ಶಿಕ್ಷಣಕ್ಕೆ ಅವಕಾಶ ನೀಡುವುದು.

ಬಡ ಹೆಣ್ಣುಮಕ್ಕಳಿಗೆ ಸಮವಸ್ತ್ರ, ನೋಟ್‌ಪುಸ್ತಕಗಳು, ಬ್ಯಾಗುಗಳ ಪೂರೈಕೆಯನ್ನು ರೋಟರಿ, ಇನ್ಫೋಸಿಸ್ ಸಮುದಾಯಗಳ ಹಾಗೂ ಸ್ವಯಂಸೇವಾ ಸಂಸ್ಥೆಗಳಿಂದ ಸಹಾಯ ಪಡೆಯುವುದು. ೧ರಿಂದ ೧೦ನೇ ತರಗತಿಯವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣಕ್ಕೆ ಸರ್ಕಾರ ಸಂಪೂರ್ಣ ನೆರವನ್ನು ನೀಡುತ್ತಾ ಬಂದಿದೆ. ಕೊಠಡಿಗಳ ವ್ಯವಸ್ಥೆ ಮಾಡಿ ಗ್ರಂಥಾಲಯ, ಪ್ರಯೋಗಾಲಯ, ಕ್ರೀಡೆ ಹಾಗೂ ವಸತಿ ನಿಲಯಗಳ ನಿರ್ಮಾಣ ಸೌಲಭ್ಯಗಳನ್ನು ಒದಗಿಸುವುದು.

## ಸರ್ವಶಿಕ್ಷಣ ಅಭಿಯಾನ ಸಮಿತಿ - ಕರ್ನಾಟಕ : ೨೦೦೪ ಫೆಬ್ರವರಿ ಮನೆಪಟ್ಟಿ ಸಮೀಕ್ಷೆ ಪ್ರಕಾರ ಶಾಲೆಯಿಂದ ಹೊರಗುಳಿದ ಹೆಣ್ಣುಮಕ್ಕಳ ಮತ್ತು ಶಾಲೆಗೆ ದಾಖಲಾಗದ ಹೆಣ್ಣುಮಕ್ಕಳ ವಿವರ (ಅಂಕಿ ಅಂಶ)

| ಕ್ರ.ಸಂ | ಜಿಲ್ಲೆ | ದಾಖಲಾಗದ ಹೆಣ್ಣುಮಕ್ಕಳು (Non-Enrolled) | ೬-೧೪ ವಯೋಮಾನದ ಶಾಲೆಯಿಂದ ಹೊರಗುಳಿದ ಹೆಣ್ಣುಮಕ್ಕಳು (Drop-out Children) |
|---|---|---|---|
| ೧ | ಬೆಂಗಳೂರು ದಕ್ಷಿಣ | ೧೦೨೫ | ೫೮೮ |
| ೨ | ಬೆಂಗಳೂರು ಉತ್ತರ | ೫೬೧ | ೬೨೫ |
| ೩ | ಬೆಂಗಳೂರು ಗ್ರಾಮಾಂತರ | ೧೬೩೭ | ೨೩೫ |
| ೪ | ಕೋಲಾರ | ೧೨೦೮ | ೫೬೮ |
| ೫ | ಚಿಕ್ಕಬಳ್ಳಾಪುರ | ೧೮೭೨ | ೬೩೦ |
| ೬ | ತುಮಕೂರು | ೧೫೬೭ | ೧೬೮ |
| ೭ | ಮಧುಗಿರಿ | ೯೫೪ | ೧೪೮ |
| ೮ | ಶಿವಮೊಗ್ಗ | ೨೧೨೫ | ೪೨೩ |
| ೯ | ಚಿತ್ರದುರ್ಗ | ೨೦೪೧ | ೬೦೦ |
| ೧೦ | ದಾವಣಗೆರೆ | ೨೯೧೧ | ೬೨೨ |
| ೧೧ | ಮೈಸೂರು | ೧೪೫೯ | ೬೧೮ |
| ೧೨ | ಚಾಮರಾಜನಗರ | ೧೦೮೧ | ೬೦೬ |
| ೧೩ | ಮಂಡ್ಯ | ೪೩೭ | ೨೦೯ |
| ೧೪ | ಹಾಸನ | ೪೭೬ | ೧೬೧ |
| ೧೫ | ಚಿಕ್ಕಮಗಳೂರು | ೯೯೫ | ೩೫೮ |
| ೧೬ | ಕೊಡಗು | ೧೭೩ | ೪೬ |
| ೧೭ | ದಕ್ಷಿಣ ಕನ್ನಡ | ೧೮೬೮ | ೮೮ |
| ೧೮ | ಉಡುಪಿ | ೫೯೩ | ೧೮ |
| ೧೯ | ಬೆಳಗಾಂ | ೯೭೯೯ | ೧೭೨ |
| ೨೦ | ಚಿಕ್ಕೋಡಿ | ೯೪೩೭ | ೨೦೪ |
| ೨೧ | ಬಿಜಾಪುರ | ೧೦೪೧೭ | ೧೫೯೬ |
| ೨೨ | ಬಾಗಲಕೋಟೆ | ೭೫೭೬ | ೮೨೮ |
| ೨೩ | ಧಾರವಾಡ | ೪೫೦೨ | ೨೮೮ |
| ೨೪ | ಗದಗ್ | ೨೯೨೦ | ೫೧೫ |

| | | | |
|---|---|---|---|
| ೨೫ | ಹಾವೇರಿ | ೬೬೩೭ | ೩೫೫ |
| ೨೬ | ಉತ್ತರ ಕನ್ನಡ | ೪೪೮೪ | ೪೩೧ |
| ೨೭ | ಗುಲ್ಬರ್ಗ | ೭೨೧೧ | ೩೯೪೫ |
| ೨೮ | ಯಾದಗಿರಿ | ೬೯೪೦ | ೩೯೪೫ |
| ೨೯ | ಬಳ್ಳಾರಿ | ೯೭೫೪ | ೮೫೭ |
| ೩೦ | ರಾಯಚೂರು | ೪೪೨೬ | ೬೫೯ |
| ೩೧ | ಬೀದರ್ | ೧೭೩೩ | ೭೭೮ |
| ೩೨ | ಕೊಪ್ಪಳ | ೬೫೯೩ | ೧೦೮೩ |
| | ಒಟ್ಟು | ೧೧೫೪೧೨ | ೨೨೩೧೬ |

**ಶಾಲೆಯಿಂದ ಹೊರಗಿರುವ ಒಟ್ಟು ಹೆಣ್ಣುಮಕ್ಕಳ ಸಂಖ್ಯೆ : ೧,೩೭,೭೨೮**

ಶಾಲೆಯಿಂದ ಹೊರಗಿರುವ ೬-೧೪ ರ ವಯೋಮಾನದ ಎಲ್ಲಾ ೧,೩೭,೭೨೮ ಹೆಣ್ಣುಮಕ್ಕಳು ಮುಖ್ಯವಾಹಿನಿಗೆ ಬರುವವರೆಗೆ ಈ ಅಭಿಯಾನ (ಆಂದೋಲನ) ಮುಂದುವರಿಯಲಿದೆ. ಜೂನ್ ೧೨ ರಂದು ಆಚರಿಸಲಾಗುವ ಬಾಲ ಕಾರ್ಮಿಕತನ ವಿರೋಧಿ ದಿನಾಚರಣೆಯ ಸಂದರ್ಭದಲ್ಲಿ ಶಿಕ್ಷಣ ಇಲಾಖೆಯು ತನ್ನನ್ನು ಈ ಸಂಗ್ರಾಮಕ್ಕೆ ಮರುಸಮರ್ಪಣೆ ಮಾಡಿಕೊಂಡಿದೆ.

ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುತ್ತಿರುವ ಮೇಲೆ ಕಾಣಿಸಿದ ೧,೩೭,೭೨೮ ಹೆಣ್ಣುಮಕ್ಕಳನ್ನು ಮುಖ್ಯವಾಹಿನಿಗೆ ತರುವಲ್ಲಿ ಶಿಕ್ಷಣಾಧಿಕಾರಿಗಳು, ಮುಖ್ಯ ಶಿಕ್ಷಕರು, ಶಿಕ್ಷಕರುಗಳು, ಎಸ್.ಡಿ.ಎಂ.ಸಿ. ಸಮುದಾಯ, ಸಮಾಜ, ಸ್ವಯಂಸೇವಾ ಸಂಸ್ಥೆಗಳು ಸಂಪೂರ್ಣವಾಗಿ ತೊಡಗಿಸಿಕೊಂಡು ಕರ್ನಾಟಕದಲ್ಲಿ ಹೆಣ್ಣುಮಕ್ಕಳನ್ನು ಮುಖ್ಯವಾಹಿನಿಗೆ ತರುವರೆಂದು ಆಶಿಸೋಣವೇ ?

●




# ಅಕ್ಷರ ದಾಸೋಹ

ಕೆ. ಜಿ. ಕಲಾವತಿ

"ಹಸಿದೊಡಲಿಗೆ ಬಿಸಿಯೂಟ" ನೀಡಿದರೆ "ಕಸುವಿನಿಂದ ಖುಷಿಯೂಟ ಸಾಧ್ಯ ಹೊಸ ಪಾಠವೂ ಸಾಧ್ಯ" ಎಂಬುದು ಶಿಕ್ಷಣ ಇಲಾಖೆ ಕಂಡುಕೊಂಡ ಸತ್ಯ. ರಾಜ್ಯದ ೪೨೮೦೫ ಶಾಲೆಗಳಲ್ಲಿ ಅಕ್ಷರ ದಾಸೋಹದ ಅಮೃತ ವಾಹಿನಿಗೆ ಈ ಸತ್ಯ ಪ್ರೇರಣೆಯಾಗಿದೆ. ಶಾಲಾ ಶಿಕ್ಷಣದೆಡೆಗೆ ಮಕ್ಕಳನ್ನು ಆಕರ್ಷಿಸಲು ಹಾಗೂ ನಿರಂತರ ಶಿಕ್ಷಣ ಪಡೆಯಲು ಮಧ್ಯಾಹ್ನದ ಬಿಸಿಯೂಟ ಪ್ರೋತ್ಸಾಹಕ ಕಾರ್ಯಕ್ರಮವಾಗಿದೆ. ಅಕ್ಷರ ದಾಸೋಹವನ್ನು ಮೊಟ್ಟಮೊದಲು ಕರ್ನಾಟಕದ ಈಶಾನ್ಯ ವಲಯದಲ್ಲಿ ಜಾರಿಗೆ ತರಲಾಯಿತು. (ಆದೇಶ ಸಂಖ್ಯೆ ಇಡಿ ೨೦ ಎಂ.ಎಂ.ಎಸ್. ೨೦೦೦ (ಭಾ ೧) ಬೆಂಗಳೂರು ೧-೧೦-೨೦೦೧) ಈ ಯೋಜನೆಯನ್ನು ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಎಸ್.ಎಂ. ಕೃಷ್ಣರವರು ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅರಕೇರಿಯಲ್ಲಿ ದಿನಾಂಕ ೯-೧೧-೨೦೦೧ರಂದು ಉದ್ಘಾಟಿಸಿದರು. ೦೧-೦೬-೨೦೦೨ ಈಶಾನ್ಯ ವಲಯದ ಹಿಂದುಳಿದ ಜಿಲ್ಲೆಗಳಲ್ಲಿ (ರಾಯಚೂರು, ಕೊಪ್ಪಳ, ಗುಲ್ಬರ್ಗಾ, ಬೀದರ್, ಬಿಜಾಪುರ ಹಾಗೂ ಬಾಗಲಕೋಟೆ) ಪ್ರಾರಂಭವಾಯಿತು. ೦೧-೦೭-೨೦೦೩ ರಿಂದ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಪ್ರಾರಂಭಿಸಲಾಗಿದೆ. ಈ ಯೋಜನೆಯನ್ನು ಸಾರ್ವಜನಿಕ ಶಿಕ್ಷಣ ಇಲಾಖೆಯ ಅನುದಾನದಲ್ಲಿ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಉಪ ಆಯುಕ್ತರು ಹಾಗೂ ತಹಸೀಲ್ದಾರ್‌ರವರ ಮೂಲಕ ಗ್ರಾಮ ಪಂಚಾಯತಿಗಳ ವತಿಯಿಂದ ಜಾರಿಗೊಳಿಸಲಾಗಿದೆ. ಈ ಕಾರ್ಯಕ್ರಮದಲ್ಲಿ ಕೇಂದ್ರ ಸರ್ಕಾರವು ಮಧ್ಯಾಹ್ನದ ಉಪಾಹಾರ ಯೋಜನೆಯಡಿಯಲ್ಲಿ ಮಕ್ಕಳಿಗೆ ಉಚಿತವಾಗಿ ನೀಡುತ್ತಿರುವ ಅಕ್ಕಿ/ ಗೋಧಿಯನ್ನು ಬಳಸಿಕೊಳ್ಳಲಾಗುತ್ತದೆ. ರಾಜ್ಯ ಸರ್ಕಾರದಿಂದ ಇತರೆ ಎಲ್ಲಾ ವೆಚ್ಚಗಳನ್ನು ಭರಿಸಲಾಗುತ್ತಿದೆ.

**ಅಕ್ಷರ ದಾಸೋಹ ಕಾರ್ಯಕ್ರಮದ ಅನುಷ್ಠಾನದಿಂದ ಮಕ್ಕಳ ಕಲಿಕೆಯಲ್ಲಿ ಗುಣಾತ್ಮಕ ಬದಲಾವಣೆಯಾಗಿದೆ. ಕಲಿಕೆಯಲ್ಲಿ ಪ್ರಗತಿ ಕಾಣುವುದರ ಜೊತೆ ಮಕ್ಕಳ ಆರೋಗ್ಯದಲ್ಲಿ ಸುಧಾರಣೆ ಕಂಡುಬಂದಿದೆ. ದಾಖಲಾತಿ ಪ್ರಮಾಣ ನಿರೀಕ್ಷೆಗೆ ಮೀರಿ ಹೆಚ್ಚಿದೆ.**

## ಮುಖ್ಯವಾದ ಉದ್ದೇಶ :

೧. ಆರ್ಥಿಕವಾಗಿ ಹಿಂದುಳಿದ ಮಕ್ಕಳಲ್ಲಿ ಅಪೌಷ್ಠಿಕತೆಯನ್ನು ಹೋಗಲಾಡಿಸುವುದು.

೨. ದಾಖಲಾತಿ - ಹಾಜರಾತಿಯನ್ನು ಉತ್ತಮಪಡಿಸುವುದು.

೩. ಮಕ್ಕಳು ಶಾಲೆ ತೊರೆಯುವುದನ್ನು ಕಡಿಮೆ ಮಾಡುವುದು.

**ಪರಿಣಾಮ :**

ಅಕ್ಷರ ದಾಸೋಹ ಕಾರ್ಯಕ್ರಮದ ಅನುಷ್ಠಾನದಿಂದ ಮಕ್ಕಳ ಕಲಿಕೆಯಲ್ಲಿ ಆಗಿರುವ ಗುಣಾತ್ಮಕ ಬದಲಾವಣೆ ಮಹತ್ವದ್ದಾಗಿದೆ. ಕೆಲವು ತಾಲ್ಲೂಕುಗಳನ್ನು ಆಯ್ದು, ಅಧ್ಯಯನ ಮಾಡಿದಾಗ ಈ ಬಗ್ಗೆ ನಿಖರವಾದ ಮಾಹಿತಿ ಲಭ್ಯವಾಗಿದೆ. ಲಭ್ಯ ಮಾಹಿತಿಯಂತೆ ಅತಿ ಹೆಚ್ಚು ಮಕ್ಕಳು "ಅಕ್ಷರ ದಾಸೋಹ"ದ ಪ್ರಯೋಜನ ಪಡೆಯುತ್ತಿದ್ದಾರೆ; ದಾಖಲಾತಿಯಲ್ಲಿ ಹೆಚ್ಚಳ ಕಂಡುಬಂದರೆ ಕಲಿಕೆಯ ವಿಷಯಗಳಲ್ಲೂ ಪ್ರಗತಿ ಕಂಡುಬಂದಿದೆ. ಮಕ್ಕಳ ಆರೋಗ್ಯದಲ್ಲಿ ಸುಧಾರಣೆ ಕಂಡುಬಂದಿದೆ. ಪೋಷಕರಲ್ಲಿ ಜಾಗೃತಿ ಮೂಡಿದೆ. ಸಮುದಾಯ ಸಕ್ರಿಯವಾಗಿ ಪಾಲ್ಗೊಂಡು ಯೋಜನೆಯನ್ನು ಯಶಸ್ವಿಗೊಳಿಸಲು ಉತ್ಸಾಹದಿಂದ ಮುಂದೆ ಬರುತ್ತಿದೆ. ಈ ಬಗ್ಗೆ ಕೈಗೊಂಡ ಅಧ್ಯಯನ ವರದಿ ಸಹ ಧನಾತ್ಮಕ ಫಲಿತಾಂಶದಿಂದ ಕೂಡಿದೆ.

**ಯೋಜನೆಯ ಫಲಾನುಭವಿಗಳು :**

ವಾರ್ಷಿಕ ರೂ. ೨೦೨ ಕೋಟಿ ವೆಚ್ಚದಲ್ಲಿ ಸುಮಾರು ೫೩ ಲಕ್ಷಕ್ಕೂ ಅಧಿಕ ವಿದ್ಯಾರ್ಥಿಗಳಿಗೆ ಪ್ರಯೋಜನವಾಗಿದೆ. ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ೧ ರಿಂದ ೫ನೇ ತರಗತಿಯ ಮಕ್ಕಳು ಈಗ ಯೋಜನೆಯ ಲಾಭ ಪಡೆಯುತ್ತಿದ್ದಾರೆ.

ಪ್ರತಿ ಮಗುವಿಗೆ ಪ್ರತಿ ದಿವಸಕ್ಕೆ ನೀಡಬೇಕಾಗಿರುವ ಆಹಾರ ಪದಾರ್ಥ ಎಲ್ಲ ಸೇರಿ ಒಟ್ಟು ೧೫೨ ಗ್ರಾಂ. ಪ್ರತಿ ಮಗುವಿಗೆ ಒಂದು ದಿನಕ್ಕೆ ದೊರೆಯುವ ಇತರೆ ಖರ್ಚು ರೂ. ೧-೦೦. ಮಕ್ಕಳಿಗೆ ನೀಡುವ ಬಿಸಿಯೂಟದ ಜೊತೆಗೆ ಮಕ್ಕಳ ಪೌಷ್ಟಿಕತೆ ಹೆಚ್ಚಿಸಲು ಆರೋಗ್ಯ ಇಲಾಖೆಯ ವತಿಯಿಂದ ಜಂತು ನಿವಾರಕ ಮಾತ್ರೆಗಳು, ವಿಟಮಿನ್ "ಎ" ಅನ್ನಾಂಗದ ಮಾತ್ರೆಗಳು, ಕಬ್ಬಿಣಾಂಶ ಮತ್ತು ಫೋಲಿಕ್ ಆಸಿಡ್ ಮಾತ್ರೆಗಳನ್ನು ವಿತರಿಸಲಾಗುತ್ತಿದೆ.

**ವರದಾನ :**

ಅಕ್ಷರ ದಾಸೋಹ ಕಾರ್ಯಕ್ರಮ ಗ್ರಾಮೀಣ ಮಕ್ಕಳಿಗೆ ವರದಾನವಾಗಿದೆ. ಒಪ್ಪತ್ತಿಗೆ ಊಟವಿಲ್ಲದೆ ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳಿಗೆ ಈಗ ಅನುಕೂಲವಾಗಿದೆ. ಅಧಿಕಾರಿಗಳು, ಅಡಿಗೆ ಸಿಬ್ಬಂದಿ, ಶಾಲಾ ಮುಖ್ಯ ಶಿಕ್ಷಕರು, ಶಿಕ್ಷಕರು, ದಾನಿಗಳು, ಪೋಷಕರು, ಎಸ್.ಡಿ.ಎಂ.ಸಿ. ಗ್ರಾಮ ಪಂಚಾಯತಿಗಳು ಈ ಯೋಜನೆಯ ಯಶಸ್ಸಿಗೆ ಶ್ರಮಿಸುತ್ತಿದ್ದಾರೆ. ಪ್ರಾರಂಭದಲ್ಲಿ ಅಲ್ಲಲ್ಲಿ ಪೂರ್ವಸಿದ್ಧತೆಯ ಅಪೂರ್ಣತೆಯಲ್ಲಿ ಸ್ವಲ್ಪ ಹಿನ್ನಡೆ ಕಂಡರೂ, ಈಗ ಅಕ್ಷರ ದಾಸೋಹ ಕಾರ್ಯಕ್ರಮ ಯಶಸ್ವಿಯಾಗಿ ನಡೆದು, ಇಡೀ ದೇಶಕ್ಕೆ ಮಾದರಿಯಾಗಿದೆ.

**ಕೊಡುಗೆಗಳು :**

ಅಕ್ಷರ ದಾಸೋಹ ಯಶಸ್ವಿಯಾಗಿ ನಡೆಯಲು ಸಂಘ ಸಂಸ್ಥೆಗಳು, ಮಠಮಾನ್ಯಗಳು, ದೇವಾಲಯಗಳು. ದಾನಿಗಳು ಸಹಕಾರ ನೀಡುತ್ತಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಸಾಕಷ್ಟು ದೇಣಿಗೆಗಳು, ಕೊಡುಗೆಗಳು ಅಕ್ಷರ ದಾಸೋಹದ ಯಶಸ್ಸಿಗೆ ಕಾರಣವಾಗಿದೆ. ಸುಮಾರು ೨೪ ಸ್ವಯಂಸೇವಾ ಸಂಸ್ಥೆಗಳು ಅಕ್ಷರ ದಾಸೋಹ ಯೋಜನೆಯಲ್ಲಿ ಪಾಲ್ಗೊಂಡಿದ್ದು, ಸುಮಾರು ೧.೭೫ ಲಕ್ಷ ಮಕ್ಕಳು ಈ ಸಂಸ್ಥೆಗಳಿಂದ ಬಿಸಿಯೂಟದ ಫಲಾನುಭವಿಗಳಾಗಿದ್ದಾರೆ.

**ಇಸ್ಕಾನ್ ದೇವಾಲಯದ "ಅಕ್ಷಯ ಪಾತ್ರೆ" :**

ಬೆಂಗಳೂರಿನ ಇಸ್ಕಾನ್ ದೇವಾಲಯ "ಅಕ್ಷಯ ಪಾತ್ರೆ" ಎಂಬ ಯೋಜನೆಯೊಂದಿಗೆ ಸರ್ಕಾರದ "ಅಕ್ಷರ ದಾಸೋಹ" ದೊಂದಿಗೆ ಕೈಜೋಡಿಸಿದೆ. ಬೆಂಗಳೂರು ನಗರದ ಹೊರವಲಯದ ಸುಮಾರು ೫೩,೦೦೦ ಗ್ರಾಮೀಣ ಮಕ್ಕಳಿಗೆ "ಅಕ್ಷಯ ಪಾತ್ರೆ"ಯನ್ನು ಹೊತ್ತ ವಾಹನಗಳು ಪ್ರತಿ ನಿತ್ಯ ಬಿಸಿಯೂಟವನ್ನು ತಲುಪಿಸುವ ಸುಸಜ್ಜಿತ ವ್ಯವಸ್ಥೆಯನ್ನು ಇಸ್ಕಾನ್ ಸಂಸ್ಥೆ ರೂಪಿಸಿದೆ. ಅಷ್ಟೇ ಅಲ್ಲ, ಇದೀಗ ಹುಬ್ಬಳ್ಳಿ ಮತ್ತು ಸುತ್ತಮುತ್ತಲಿನ ಸುಮಾರು ೧೫೦೦೦ ಮಕ್ಕಳಿಗೆ ಜುಲೈ ತಿಂಗಳಿನಿಂದ ಬಿಸಿಯೂಟದ ವ್ಯವಸ್ಥೆಯನ್ನು ದಾನಿಗಳ ಸಹಕಾರದೊಂದಿಗೆ ವಹಿಸಿಕೊಳ್ಳಲಿದೆ.

## ಅದಮ್ಯ ಚೇತನದ ಅನ್ನಪೂರ್ಣ :

ಅದಮ್ಯ ಚೇತನದ ಗಿರಿಜಾಶಾಸ್ತ್ರಿ ಮೆಮೋರಿಯಲ್ ಟ್ರಸ್ಟ್ ಇದೀಗ ಅನ್ನಪೂರ್ಣ ಯೋಜನೆಯೊಂದಿಗೆ ಮತ್ತೊಂದು ದೃಢ ಹೆಜ್ಜೆಯನ್ನಿರಿಸಿದೆ. ೬೭ ಸರ್ಕಾರಿ ಶಾಲೆಗಳ ೧೧,೦೦೦ ಮಕ್ಕಳಿಗೆ ಮಧ್ಯಾಹ್ನ ಬಿಸಿಯೂಟ ನೀಡುವ ಈ ಯೋಜನೆಯನ್ನು ಕರ್ನಾಟಕ ಸರ್ಕಾರದ ಅಕ್ಷರ ದಾಸೋಹದ ಸಹಕಾರದೊಂದಿಗೆ ಕೈಗೊಂಡಿದೆ. ಟ್ರಸ್ಟ್ ನ ಅಧ್ಯಕ್ಷೆ ತೇಜಸ್ವಿನಿ ಅನಂತಕುಮಾರ್‌ರವರ ಉಸ್ತುವಾರಿಯಲ್ಲಿ ಯೋಜನೆ ಉತ್ತಮ ರೀತಿಯಲ್ಲಿ ನಡೆಯುತ್ತಿದೆ.

## ಯಳಂದೂರಿನ ಭಾಗ್ಯ :

ಮೈಸೂರಿನ ಜೆ.ಎಸ್.ಎಸ್. ಮಹಾವಿದ್ಯಾಪೀಠವೂ ಗ್ರಾಮೀಣ ಪ್ರದೇಶದ ಶೈಕ್ಷಣಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ರಂಗದಲ್ಲಿ ಅತ್ಯುತ್ತಮ ಸೇವೆ ಸಲ್ಲಿಸುತ್ತಿರುವ ಒಂದು ಪ್ರತಿಷ್ಠಿತ ಸೇವಾ ಸಂಸ್ಥೆ. ಇದರ ಸಹಯೋಗದಲ್ಲಿ ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲ್ಲೂಕಿನ ಎಲ್ಲಾ ಶಾಲೆಯ ವಿದ್ಯಾರ್ಥಿಗಳಿಗೆ ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮ ಯಶಸ್ವಿಯಾಗಿ ನಡೆಯುತ್ತಿದೆ. ಸೋನಿಯಾ ಗಾಂಧಿಯವರು ದಿನಾಂಕ:೦೨-೦೯-೨೦೦೩ ರಂದು ಇದಕ್ಕೆ ಚಾಲನೆ ನೀಡಿದರು.

ಇದೇ ರೀತಿಯ ಉಡುಪಿಯ ಶ್ರೀಕೃಷ್ಣಮಠ, ಹೊರನಾಡು ಅನ್ನಪೂರ್ಣೇಶ್ವರಿ ದೇವಸ್ಥಾನ, ಹಲವಾರು ಸಂಘ ಸಂಸ್ಥೆಗಳು, ದಾನಿಗಳು ಗ್ರಾಮೀಣ ಪ್ರದೇಶದಲ್ಲಿ ಅಕ್ಷರ ದಾಸೋಹ ಕಾರ್ಯಕ್ರಮದ ಯಶಸ್ಸಿಗೆ ಶ್ರಮಿಸುತ್ತಿದ್ದಾರೆ.

ಎಸ್.ಡಿ.ಎಂ.ಸಿ. ಹಾಗೂ ಪಾಲಕರು, ಪೋಷಕರು ಇದು ತಮ್ಮ ಕಾರ್ಯಕ್ರಮವೆಂಬಂತೆ ಶ್ರಮಿಸುತ್ತಿದ್ದಾರೆ.

ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲೂ ಸಾರ್ವಜನಿಕ ಸಹಕಾರ ಉತ್ತಮವಾಗಿದೆ. ಹಲವು ರೀತಿಯಲ್ಲಿ ಅಕ್ಷರ ದಾಸೋಹಕ್ಕೆ ನೆರವು ಹರಿದುಬರುತ್ತದೆ. ಸ್ಥಳಾವಕಾಶ, ಸ್ವಯಂಸೇವಕರ ನೆರವು, ಅಡುಗೆ ತಯಾರಿ, ಅಗತ್ಯ ಪಾತ್ರೆ, ಗ್ಯಾಸ್, ಕುಕ್ಕರ್, ತಟ್ಟೆ, ಲೋಟಗಳ ಕೊಡುಗೆಯ ಮಹಾಪೂರ ಅಕ್ಷರ ದಾಸೋಹವನ್ನು ಯಶಸ್ವಿಗೊಳಿಸುತ್ತಿವೆ.

## ಅಕ್ಷರ ದಾಸೋಹದ ಬಗ್ಗೆ ಮೆಚ್ಚಿಗೆ :

ಕೇರಳ ಶೈಕ್ಷಣಿಕ ತಂಡ ಆಗಸ್ಟ್‌ನಲ್ಲಿ ಕರ್ನಾಟಕಕ್ಕೆ ಭೇಟಿ ನೀಡಿತ್ತು. ಆಗ ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಸಾಹಿತಿ ಯು.ಆರ್. ಅನಂತಮೂರ್ತಿರವರು ಅವರ ಜೊತೆಗೆ ಬೆಂಗಳೂರು ದಕ್ಷಿಣ ವಲಯ -೧ ರಲ್ಲಿಯ ಸರ್ಕಾರಿ ಪ್ರಾಥಮಿಕ ಶಾಲೆ ಅಗರಕ್ಕೆ ಭೇಟಿ ನೀಡಿದ್ದರು. ಅಲ್ಲಿ ಮಕ್ಕಳ ಜೊತೆ ಊಟ ಮಾಡಿದರು. "ಇವತ್ತು ಮಕ್ಕಳ ಜೊತೆ ಕೂತು ಊಟ ಮಾಡಿದೆ. ಅನ್ನ ಸಾಂಬಾರು ನಮ್ಮ ಮನೆಯಲ್ಲಿ ಮಾಡುವಷ್ಟೆ ರುಚಿಯಾಗಿತ್ತು. ಹಳ್ಳಿಯ ಮಕ್ಕಳ ಜೊತೆ ಕೂತು ಊಟ ಮಾಡುವ ಸುಯೋಗದಿಂದಾಗಿ ಮನೆಯ ಊಟಕ್ಕಿಂತ ಹೆಚ್ಚು ರುಚಿಸಿತು" ಎಂದು ತಮ್ಮ ಸಂದರ್ಶನ ವರದಿಯಲ್ಲಿ ಬರೆದಿರುತ್ತಾರೆ.

ಗ್ರಾಮೀಣ ಪ್ರದೇಶದಲ್ಲಿ ರುಚಿಕರವಾದ ಊಟ ಮಕ್ಕಳಿಗೆ ದೊರೆಯುತ್ತಿದೆ ಎನ್ನುವುದಕ್ಕೆ ಅನಂತಮೂರ್ತಿಯವರ ಮಾತುಗಳಿಗಿಂತ ಬೇರೆ ಸಾಕ್ಷಿ ಬೇಕೇ? ಮಾನ್ಯ ಮುಖ್ಯಮಂತ್ರಿಗಳು ಒಂದು ಕಡೆ ಹೀಗೆ ಹೇಳಿದ್ದರು "ಅಕ್ಷರ ದಾಸೋಹ ಯೋಜನೆಯಡಿ ೫೦ ಲಕ್ಷ ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟ ಹಾಕುತ್ತಿದ್ದೇವೆ. ಇದನ್ನು ಕ್ರಾಂತಿ ಎನ್ನಲಾಗದಿದ್ದರೆ ಕ್ರಾಂತಿಗೆ ಅರ್ಥವಿಲ್ಲ."

ಈ ಮಾತು ಕಟುವಾದ ಸತ್ಯವನ್ನು ತಿಳಿಸುತ್ತದೆ. ಶಾಲಾ ಮಕ್ಕಳ ಮಧ್ಯಾಹ್ನದ ಬಿಸಿಯೂಟ ರಾಷ್ಟ್ರೀಯ ಕಾರ್ಯಕ್ರಮವಾಗಬೇಕು ಎಂದು ಮಾನ್ಯ ಶಿಕ್ಷಣ ಸಚಿವರು ಅಭಿಪ್ರಾಯಪಟ್ಟಿದ್ದಾರೆ. ಅಲ್ಲದೆ ಅಕ್ಷರ ದಾಸೋಹದಿಂದಾಗಿ ಮಕ್ಕಳ ಹಾಜರಾತಿ ಪ್ರಮಾಣವು ಗಣನೀಯ ಪ್ರಮಾಣದಲ್ಲಿ ಏರಿಕೆಯಾದ ಬಗ್ಗೆ ಸಂತಸ ವ್ಯಕ್ತಪಡಿಸಿದ್ದಾರೆ.

●




# ಉನ್ನತ ಶಿಕ್ಷಣ

ಪ್ರೊ. ಬೋನಂತಾಯ ಹರಿಶ್ಚಂದ್ರ ಭಟ್

ಸರ್ಕಾರದ ಪರಿಭಾಷೆಯಲ್ಲಿ ಶಿಕ್ಷಣಕ್ಕಾಗಿ ಮಾಡುವ ವೆಚ್ಚವನ್ನು "ಅನುತ್ಪಾದಕ ವೆಚ್ಚ" ವೆಂದು ಪರಿಗಣಿಸಲಾಗುತ್ತದೆ. ಅದೇ ಕಂದಾಯ, ತೆರಿಗೆ, ರಸ್ತೆ ಸಾರಿಗೆ ಮುಂತಾದ ಇಲಾಖೆಗಳನ್ನು "ಉತ್ಪಾದಕ" ಇಲಾಖೆಗಳೆಂದು ಕರೆಯಲಾಗುತ್ತದೆ. ಶಿಕ್ಷಣಕ್ಕೆ ಹೂಡಿದ ಬಂಡವಾಳ ಅನುತ್ಪಾದಕವಾದರೆ ಗೃಹ, ಕಂದಾಯ ಮುಂತಾದವು ಉತ್ಪಾದಕಗಳಾಗುತ್ತವೆಯೆಂಬುದೇ ಅಭಿವೃದ್ಧಿ ರಾಷ್ಟ್ರಗಳ ಕಲ್ಪನೆಗೆ ವ್ಯತಿರಿಕ್ತವಲ್ಲವೆ ? ನಾಡಿನ ಅಭಿವೃದ್ಧಿಗೆ ಅತ್ಯಂತ ಪ್ರಮುಖ ಬುನಾದಿಯಾದ ಶಿಕ್ಷಣವನ್ನು ಪ್ರಜೆಗಳಿಗೂ ಎಟಕುವಂತೆ ಒದಗಿಸುವುದು ಸರ್ಕಾರದ ಆದ್ಯ ಕರ್ತವ್ಯವೆಂಬುದನ್ನು ಆಡಳಿತಗಾರರು ಅನುಕೂಲವಾಗಿ ಮರೆತುಬಿಟ್ಟಿದ್ದಾರೆ!

ಶಿಕ್ಷಣದಲ್ಲಿ ತೊಡಗಿಸಿದ ಹಣವು ಹಲವು ಪಟ್ಟಾಗಿ ಹಿಂದಿರುಗುವುದನ್ನು ಅಳೆಯಲು ಸಾಧ್ಯವಿಲ್ಲವಾದರೂ, ನಾಡಿನ ಅಭಿವೃದ್ಧಿಯ ಮೂಲಕ ಈ ವಿಚಾರವನ್ನು ಗ್ರಹಿಸಬಹುದು. ಈ ಮಾತು ಉನ್ನತ ಶಿಕ್ಷಣಕ್ಕೆ ಹೆಚ್ಚು ಅನ್ವಯಿಸುತ್ತದೆ. ಗ್ರಾಮೀಣ ಪ್ರದೇಶದಲ್ಲಿ ಉನ್ನತ ಶಿಕ್ಷಣಕ್ಕೆ ಅವಕಾಶವೇ ನೀಡಲಾಗುತ್ತಿಲ್ಲ. ಜಿಲ್ಲೆಗೆ ಒಂದೇ ಸರ್ಕಾರೀ ಪದವಿ ಕಾಲೇಜು ಎಂಬ ನೀತಿಯನ್ನು ಅನುಸರಿಸುವ ಮೂಲಕ ಸರ್ಕಾರವು ಉನ್ನತ ಶಿಕ್ಷಣವನ್ನು ಗ್ರಾಮೀಣ ಅರ್ಹ ವಿದ್ಯಾರ್ಥಿಗಳ ವ್ಯಾಪ್ತಿಯಿಂದ ದೂರವಿಟ್ಟಿದೆ. ದೂರದ ಊರುಗಳಿಗೆ ತೆರಳಿ ವಿದ್ಯಾಭ್ಯಾಸ ಪೂರೈಸುವ ಶಕ್ತಿಯಿಲ್ಲದ ಪ್ರತಿಭಾವಂತನಿಗೆ ಉನ್ನತ ಶಿಕ್ಷಣ ದೊರಕದಂತಾಗಿದೆ. ಈ ರೀತಿ ಅವಕಾಶ ವಂಚಿತರಾಗಿರುವವರಲ್ಲಿ ಉತ್ತಮ ವಿಜ್ಞಾನಿಗಳಾಗಬಹುದಾದವರೂ ಇರಲೇಬೇಕಷ್ಟೆ?

> **ಗ್ರಾಮೀಣ ಪ್ರದೇಶದಲ್ಲಿ ಉನ್ನತ ಶಿಕ್ಷಣಕ್ಕೆ ಅವಕಾಶವೇ ನೀಡಲಾಗುತ್ತಿಲ್ಲ. ಜಿಲ್ಲೆಗೆ ಒಂದು ಸರ್ಕಾರಿ ವಿಜ್ಞಾನ ಪದವಿ ಕಾಲೇಜು ಎಂಬ ನೀತಿಯನ್ನು ಅನುಸರಿಸುವ ಮೂಲಕ ಸರ್ಕಾರವು ಉನ್ನತ ಶಿಕ್ಷಣವನ್ನು ಗ್ರಾಮೀಣ ಮಕ್ಕಳ ವ್ಯಾಪ್ತಿಯಿಂದ ದೂರವಿಟ್ಟಿದೆ.**

ಉನ್ನತ ಶಿಕ್ಷಣದಲ್ಲೂ ಉತ್ಪಾದಕತೆಯನ್ನು ಅನುಸರಿಸಿ ವೃತ್ತಿಪರ ಶಿಕ್ಷಣ ಹಾಗೂ ಸಂಶೋಧನೆಗಳನ್ನು ಪ್ರತ್ಯೇಕಿಸಬಹುದು. ವೃತ್ತಿಪರ ಶಿಕ್ಷಣವೆಂದರೆ ಮುಖ್ಯವಾಗಿ ವೈದ್ಯಕೀಯ, ಇಂಜಿನಿಯರಿಂಗ್ ಮುಂತಾದ ತಂತ್ರಜ್ಞಾನವನ್ನು ಬಳಸಿಕೊಳ್ಳಲು ಮಾಡಿಕೊಳ್ಳುವ ಸಿದ್ಧತೆ ಎಂದಾಗಬಹುದಾದರೆ, ವಿಶೇಷ - ಜ್ಞಾನವನ್ನು ಅರಿತು, ಅಭ್ಯಸಿಸಿ ಅದನ್ನು ಆವಿಷ್ಕಾರಗಳ ಮೂಲಕ ಬೆಳೆಸುವ ಸುದೀರ್ಘ ತಪಸ್ಸನ್ನು ಅನುತ್ಪಾದಕವೆನ್ನುವುದು ಸರಿಯಲ್ಲ. ಸಂಶೋಧನೆಯನ್ನು "ಸೃಷ್ಟಿ" ಎನ್ನಬಹುದಾದರೆ, ವೃತ್ತಿಪರ ಶಿಕ್ಷಣವು "ಸ್ಥಿತಿ" ಎನಿಸಬಹುದು. 'ಸೃಷ್ಟಿಗೆ' ಹೆಚ್ಚಿನ ಒತ್ತು ಕೊಟ್ಟು "ಸ್ಥಿತಿ"ಯನ್ನು ಕಾಯ್ದುಕೊಳ್ಳುವುದು ಸಮತೂಕದ ನೀತಿಯಾದೀತು. ಆದರೆ ಭಾರತದ, ಅದರಲ್ಲೂ ಪ್ರಮುಖವಾಗಿ ಕನ್ನಡನಾಡಿನ ಇಂದಿನ

ಆದ್ಯತೆಗಳನ್ನು ನೋಡಿದಾಗ ಕಾಣುವ ನೋಟವೇ ಬೇರೆ-ವೃತ್ತಿ ಶಿಕ್ಷಣವೇ ಸರ್ವಸ್ವ ಎಂಬ ಭಾವನೆ ಶಿಕ್ಷಣಾರ್ಥಿಗಳಲ್ಲೂ, ಅವರ ಪೋಷಕರಲ್ಲೂ ಮನೆಮಾಡಿದೆ. ಸಂಶೋಧನೆಗೆ ಆದ್ಯತೆ ನೀಡದಿದ್ದರೆ ಅಧಃಪತನದ ಹಾದಿ ನಿಶ್ಚಿತ. ಲಾಭ, ನಷ್ಟಗಳ ಲೆಕ್ಕಾಚಾರದಿಂದ ಶಿಕ್ಷಣವನ್ನು ನಿರ್ವಹಿಸುವ ಪ್ರವೃತ್ತಿಯನ್ನು ಸರ್ಕಾರವೇ ಪೋಷಿಸಬಾರದು.

ಇಂದು ಸರ್ಕಾರ ನಡೆಸಲು ಅಗತ್ಯವಾದ ನೌಕರಶಾಹಿಯಿರಬಹುದು, ಕಾರ್ಖಾನೆಗಳ ಪರಿಣತ ಉದ್ಯೋಗಿಗಳಿರಬಹುದು, ವ್ಯಾಪಾರೀ ಸಂಸ್ಥೆಗಳ ಸಿಬ್ಬಂದಿಯಿರಬಹುದು, ಇವರೆಲ್ಲರೂ ಸಿದ್ಧಗೊಂಡಿರುವುದು ಶಿಕ್ಷಣದ ಮೂಸೆಯಲ್ಲಿ. ಈ ಸಿದ್ಧತೆಗಾಗಿ ಸರ್ಕಾರ, ಕಾರ್ಖಾನೆ ಮತ್ತು ವ್ಯಾಪಾರೀ ಸಂಸ್ಥೆಗಳು ತೊಡಗಿಸಿರುವ ಬಂಡವಾಳ ಎಷ್ಟು ?!

ಕೃಷಿ, ಕೈಗಾರಿಕೆಗಳಲ್ಲಿ ಅಭಿವೃದ್ಧಿಯಾಗಬೇಕಾದರೆ ಹೊಸ ಹೊಸ ಆವಿಷ್ಕಾರಗಳು, ತಂತ್ರಜ್ಞಾನಗಳು ಅಗತ್ಯ. ಈ ಸಂಶೋಧನೆಗಳು ನಡೆಯುವುದು ಪ್ರಯೋಗಾಲಯಗಳಲ್ಲಿ. ಈ ಪ್ರಯೋಗಾಲಯಗಳಿಗೆ ಹಾಗೂ ಸಂಶೋಧಕರಿಗಾಗಿ ಕೃಷಿಕರಾಗಲೀ, ಕೈಗಾರಿಕೋದ್ಯಮಿಗಳಾಗಲೀ, ಒಂದೇ ಮಾತಿನಲ್ಲಿ ಹೇಳುವುದಾದರೆ ಸಮಾಜವಾಗಲೀ ಹೂಡಿದ ಬಂಡವಾಳ ಎಷ್ಟು ? ಮಾಡಿದ ಅಡುಗೆಯ ವೆಚ್ಚವನ್ನು ಉಣ್ಣುವವನು ಕೊಡಬಾರದೇ ?

ಸರ್ಕಾರಕ್ಕೆ ಒಂದು ಸ್ಪಷ್ಟ ಶಿಕ್ಷಣ ನೀತಿ ಅಗತ್ಯ. ಶಿಕ್ಷಣಕ್ಕಾಗಿ ಹೂಡುವ ಬಂಡವಾಳವನ್ನು ಎಗ್ಗಿಲ್ಲದೇ ನೀಡಿದರೆ ಮಾತ್ರ ಅಭಿವೃದ್ಧಿಯ ಫಲವುಣ್ಣಲು ಸಾಧ್ಯವೆಂಬುದನ್ನು ಬಿಂಬಿಸುವ ನೀತಿ ಅದಾಗಿರಬೇಕು. ಶಿಕ್ಷಣದಲ್ಲಿ ವ್ಯಾಪಾರ, ವ್ಯವಹಾರ ಮತ್ತು ರಾಜಕೀಯವನ್ನು ಪ್ರವೇಶಿಸಲು ಬಿಡಬಾರದು. ವಿಶ್ವವಿದ್ಯಾಲಯಗಳ ಸ್ವಾಯತ್ತತೆ ಸಂಪೂರ್ಣವಾಗಿರಬೇಕು. ಶಿಕ್ಷಣ ಇಲಾಖೆಯಲ್ಲಿ ಕೆಂಪು ಪಟ್ಟಿಯ ಅಡೆತಡೆಗಳನ್ನು ನಿವಾರಿಸುವ ಆಡಳಿತವಿರಬೇಕು, ಇವು ಕನಿಷ್ಟ ಅಗತ್ಯ.

ಕರ್ನಾಟಕ ವಿಶ್ವವಿದ್ಯಾನಿಲಯಗಳ ಕಾನೂನು ವಿಶ್ವವಿದ್ಯಾನಿಲಯಗಳ ಸ್ವಾಯತ್ತೆಯನ್ನು ನಾಶಗೊಳಿಸಿದೆ. ಕುಲಪತಿ, ಕುಲಸಚಿವರನ್ನು ನೇಮಿಸುವ ಅಧಿಕಾರವನ್ನು ಸರ್ಕಾರವೇ ವಹಿಸಿಕೊಂಡಿದೆ. ಶಿಕ್ಷಕರನ್ನು ಮತ್ತು ಸಿಬ್ಬಂದಿಯನ್ನು ಅಗತ್ಯವಿದ್ದರೂ ನೇಮಿಸಿಕೊಳ್ಳುವ ಸ್ವಾತಂತ್ರ್ಯ ವಿಶ್ವವಿದ್ಯಾನಿಲಯಕ್ಕಿಲ್ಲ. ಕಾಲೇಜುಗಳಲ್ಲಿ ಹೊಸ ವಿಷಯಗಳನ್ನು, ಪಠ್ಯಕ್ರಮವನ್ನು ಪ್ರಾರಂಭಿಸಲು ಸರ್ಕಾರದ ಅನುಮತಿ ಬೇಕು. ಕುಲಪತಿಗಳು ರಬ್ಬರ್ ಸ್ಟಾಂಪ್ ಆಗಿದ್ದಾರೆ. ಸರ್ಕಾರದಿಂದ ನೇಮಕವಾದ ಐ.ಎ.ಎಸ್., ಐ.ಪಿ.ಎಸ್. ಅಥವಾ ಐ.ಎಫ್.ಎಸ್. ಅಧಿಕಾರಿಗಳು ಆಡಳಿತ ನಿರ್ವಹಿಸುತ್ತಾರೆ. ವಿಶ್ವವಿದ್ಯಾಲಯಗಳ ಸಿಂಡಿಕೇಟ್‌ಗಳಿಗೆ ಸರ್ಕಾರವೇ ಸದಸ್ಯರನ್ನು ನೇಮಿಸುತ್ತದೆ; ಅವರಲ್ಲಿ ಶಿಕ್ಷಣ ತಜ್ಞರಿರುವುದೇ ಇಲ್ಲ. ಚುನಾಯಿತ ಸೆನೆಟ್‌ಗಳನ್ನು ರದ್ದುಗೊಳಿಸಲಾಗಿದೆ. ಸ್ವತಃ ಸ್ವಾಯತ್ತವಾಗಿರದ ವಿಶ್ವವಿದ್ಯಾಲಯಗಳು "ಸ್ವಾಯತ್ತ" ಕಾಲೇಜುಗಳಿಗೆ ಅನುಮತಿ ನೀಡಬೇಕಂತೆ ! "ಸ್ವಾಯತ್ತ" ಕಾಲೇಜುಗಳು ಪದವಿಗಳ ವ್ಯಾಪಾರ ಮಾಡಲಿವೆ.

ರಬ್ಬರ್ ಸ್ಟಾಂಪ್ ಕುಲಪತಿಗಳು ಕೋಟಾ ಆಧಾರದ ಮೇಲೆ ನೇಮಕಗೊಳ್ಳುತ್ತಾರೆ. ಶ್ರೀಮಾಲಿ, ಎಚ್. ನರಸಿಂಹಯ್ಯ, ದೇಜಗೌ, ಕಂಬಾರ, ಚಿದಾನಂದಗೌಡ ಮುಂತಾದವರಂತಹ ಘನತೆವೆತ್ತ ಕುಲಪತಿಗಳು ಇನ್ನು ಬರೇ ಕಲ್ಪನೆಯಾದೀತು.

ಉನ್ನತ ಶಿಕ್ಷಣ ವ್ಯವಸ್ಥೆಯಲ್ಲಿ ಸುಧಾರಣೆಗಳೇ ಕಾಣುತ್ತಿಲ್ಲ. ಅತ್ಯಾಧುನಿಕ ಕೈಗಾರಿಕೆಗಳು, ಕಾರ್ಖಾನೆಗಳು ಜಾಗತೀಕರಣದ ಹಿನ್ನೆಲೆಯಲ್ಲಿ ದೇಶವನ್ನು ಪ್ರವೇಶಿಸುತ್ತಿರುವಾಗ ಸನ್ನದ್ಧರಾದ, ತರಬೇತಿ ಹೊಂದಿದ ನಿಪುಣ ಕಾರ್ಯಪಡೆಯನ್ನು ನಿರ್ಮಾಣ ಮಾಡುವ ಸುಧಾರಣೆಗಳು ವಿಶ್ವವಿದ್ಯಾಲಯಗಳಲ್ಲಿ ಆಗುತ್ತಿಲ್ಲ. ಈ ಕೆಲಸ ಮಾಡಬೇಕಾಗಿರುವ ಶಿಕ್ಷಣ ವರ್ಗವೇ ನಿರ್ವೀರ್ಯಗೊಂಡು ಕೂತಿದೆ. ಕೆಲಸಕ್ಕೆ ಬಾರದ ಡಾಕ್ಟರೇಟ್ ಪದವಿಗಳನ್ನು ಕೊಡುವುದು, ಪಡೆಯುವುದಷ್ಟೇ ಇವರ ಹವ್ಯಾಸವಾಗಿದೆ. ಜಾಗತೀಕರಣದ ಸ್ಪರ್ಧೆಯಲ್ಲಿ ನಮ್ಮ ವಿಶ್ವವಿದ್ಯಾಲಯಗಳು ಎಷ್ಟು ಪೇಟೆಂಟ್‌ಗಳನ್ನು ಪಡೆದಿವೆಯೆಂಬ ಆತ್ಮಶೋಧನೆ ಅಗತ್ಯವಾಗಿದೆ. ಸನಿಹದ ೨೦೦೫ರಲ್ಲೇ ಜಾಗತೀಕರಣದ ಹೆಬ್ಬಾಗಿಲು ಭಾರತದಲ್ಲಿ ತೆರೆದುಕೊಳ್ಳಲಿದ್ದು, ಜಗತ್ತಿನ ಉತ್ಕೃಷ್ಟ ಮತ್ತು ನಿಕೃಷ್ಟ ವಿಶ್ವವಿದ್ಯಾಲಯಗಳು ನಮ್ಮ ನಾಡಿನಲ್ಲೇ ಅಂಗಡಿ ತೆರೆದು ವ್ಯಾಪಾರ ಮಾಡಲು ಪ್ರಾರಂಭಿಸಿದಾಗ ನಮ್ಮ ಶಿಕ್ಷಣ ವ್ಯವಸ್ಥೆ ಬುಡಮೇಲಾಗಿ ಶೈಕ್ಷಣಿಕ ಅರಾಜಕತೆ ಉಂಟಾಗಬಹುದು.

ನಾವು ನಿರಾಶಾವಾದಿಗಳಾಗಬೇಕಿಲ್ಲ. ಈಗಲೇ ನಮ್ಮ ಮನೆಯನ್ನು ಭದ್ರಗೊಳಿಸಬೇಕು. ನಮ್ಮ ನೌಕರಿ ಭದ್ರತೆಗಿಂತ ಕಾರ್ಯಕ್ಷಮತೆ ಹೆಚ್ಚಿಸಿಕೊಳ್ಳಬೇಕು. ಉಪಯುಕ್ತ ತಂತ್ರಜ್ಞಾನ, ವಿಜ್ಞಾನಗಳನ್ನು ಪಠ್ಯಕ್ರಮದಲ್ಲಿ ಅಳವಡಿಸಿಕೊಳ್ಳಬೇಕು. ದುಬಾರಿಯಾಗಿರುವ ಉನ್ನತ

ಶಿಕ್ಷಣವನ್ನು ಬಡ, ಅರ್ಹವಿದ್ಯಾರ್ಥಿಗಳ ಕೈಗೆಟಕುವಂತೆ ಮಾಡಬೇಕು. ಪರೀಕ್ಷೆ, ಮೌಲ್ಯಮಾಪನಗಳನ್ನು ನಿಷ್ಠೆಯಿಂದ ನೆರವೇರಿಸಬೇಕು. ವಿದ್ಯಾರ್ಥಿಗಳು ಹತಾಶರಾಗದಂತೆ ಶಿಕ್ಷಣ ವ್ಯವಸ್ಥೆಯನ್ನು ರೂಪಿಸಬೇಕು.

ವಿಶ್ವವಿದ್ಯಾಲಯಗಳನ್ನು ನಿಜವಾಗಿಯೂ ಸ್ವಾಯತ್ತಗೊಳಿಸದಿದ್ದರೆ, ಹೊರದೇಶಗಳ ಆಘಾತವನ್ನು ತಡೆದುಕೊಳ್ಳುವ ಶಕ್ತಿ ಅವುಗಳಿಗಿರಲಾರದು. ಸ್ಪರ್ಧೆಯಲ್ಲಿ ಸಮಾನಾವಕಾಶ ಮುಖ್ಯ. ಸರ್ಕಾರದ ಕೈಗೊಂಬೆಯಾದ ವಿಶ್ವವಿದ್ಯಾಲಯ ಜಾಗತೀಕರಣದ ಹೊಡೆತ ಸಹಿಸಲಾರದು.

ಸಮರ್ಥ, ಕನಸುಗಾರ, ಆಡಳಿತಗಾರರನ್ನು ಕುಲಪತಿಗಳಾಗಿ ನೇಮಿಸಿ ಅವರಿಗೆ ಸಂಪೂರ್ಣ ಅಧಿಕಾರ ನೀಡಬೇಕು.

ಕಾಲೇಜು ಶಿಕ್ಷಣ ಇಲಾಖೆ ನಿಷ್ಕ್ರಿಯತೆಯ ಬೀಡಾಗಿದೆ. ತರಬೇತಿಯಿಲ್ಲದ ಶಿಕ್ಷಕರು ನೌಕರಶಾಹಿಯ ಕೈಗೊಂಬೆಯಾಗಿ ಆಡಳಿತ ಸ್ಥಾನಗಳಲ್ಲಿರುವುದು ಅನವಶ್ಯಕ. ಕಾಲೇಜುಗಳ ಶೈಕ್ಷಣಿಕ ಉಸ್ತುವಾರಿ ವಿಶ್ವವಿದ್ಯಾಲಯಗಳಿಂದಾಗಲಿ. ಅದಕ್ಕೆ ನೌಕರಶಾಹಿಯ ಅಡ್ಡಿಯಿರಬಾರದು. ಶಿಕ್ಷಕರ ಕರ್ತವ್ಯ ಪ್ರಜ್ಞೆಯನ್ನು ಎಚ್ಚರಿಸುವ ಕೆಲಸವನ್ನು ಯು.ಜಿ.ಸಿ.ಯಂತಹ ಸಂಸ್ಥೆಗಳು ಮಾಡಬೇಕು.

ಈ ಲೇಖನದಲ್ಲಿ ಮೂಡಿಸಿರುವ "ಬೇಡ" ಮತ್ತು "ಬೇಕು"ಗಳನ್ನು ಮುಕ್ತ ಮನಸ್ಸಿನಿಂದ ನೋಡುವ ಶಿಕ್ಷಣ ತಜ್ಞರೊಬ್ಬರು ಸಚಿವರಾಗಿ ಬರಲಿ ಎಂದೇ ನನ್ನ ಕೊನೆಯ ಬೇಡಿಕೆ.

●




# ರಾಷ್ಟ್ರೀಯ ಸಾಕ್ಷರತಾ ಮಿಶನ್

ಡಾ. ನಾಗಾಂಬಿಕಾದೇವಿ

**ಅನಕ್ಷರತೆಯು ಪಾಪ ಮತ್ತು ಅವಮಾನ. ಅದನ್ನು ತೊಡೆದು ಹಾಕಬೇಕು. ಮಹಾತ್ಮಾ ಗಾಂಧೀಜಿಯವರ ಕನಸನ್ನು ನನಸು ಮಾಡಲು ನಾವು ಹೇಗೆ ಕೆಲಸ ಮಾಡಬಹುದು. ಒಂದು ಉಪಾಯ.**

ಈಗಿರುವ ರಾಷ್ಟ್ರೀಯ ವಯಸ್ಕರ ಶಿಕ್ಷಣ ಕಾರ್ಯಕ್ರಮವು ೨೦ ವರ್ಷಗಳಷ್ಟು ಹಳೆಯದಾಗಿದೆ. ಹಾಗೆಯೇ ದೇಶಕ್ಕೆ ಸ್ವಾತಂತ್ರ್ಯ ಬರುವುದಕ್ಕೆ ಪೂರ್ವ ಸಾಕ್ಷರತಾ ಕಾರ್ಯಕ್ರಮಗಳನ್ನು ಪ್ರಪ್ರಥಮವಾಗಿ ಪ್ರಾರಂಭಿಸಿದ ರಾಜ್ಯಗಳಲ್ಲಿ ಕರ್ನಾಟಕವು ಒಂದಾಗಿದೆ. ಸರ್ ಎಂ. ವಿಶ್ವೇಶ್ವರಯ್ಯನವರು ದಿವಾನರಾಗಿದ್ದಾಗ ೧೯೧೨ರಲ್ಲಿ ಅನಕ್ಷರತೆಯನ್ನು ಹೋಗಲಾಡಿಸಲು ರಾತ್ರಿಶಾಲೆಗಳನ್ನು ಪ್ರಾರಂಭಿಸಲಾಯಿತು. ೧೯೪೧ರಲ್ಲಿ ಬಿ.ಎಂ.ಶ್ರೀ.ಯವರ ಅಧ್ಯಕ್ಷತೆಯಲ್ಲಿ ಅಕ್ಷರ ಪ್ರಚಾರ ಸಾಕ್ಷರತಾ ಸಮಿತಿಯು ಅಸ್ತಿತ್ವಕ್ಕೆ ಬಂದು ವಯಸ್ಕರ ಶಿಕ್ಷಣ ಕಾರ್ಯಕ್ರಮವನ್ನು ಪ್ರಾರಂಭಿಸಿತು.

> **ಹಳೆಯ ಅನುಭವದಿಂದ ನಮಗೆ ಸ್ಪಷ್ಟವಾಗಿರುವುದೆಂದರೆ ವ್ಯಕ್ತಿ ಕುಟುಂಬ, ಸಮುದಾಯದ ಸಾಕ್ಷರತೆ ಮತ್ತು ಸಮಗ್ರ ಅಭಿವೃದ್ಧಿಯ ಗುರಿ ಜನರ ಸಹ ಭಾಗಿತ್ವದ ಮೇಲೆ ಅವಲಂಬಿತವಾಗಿದೆ. ಅಭಿವೃದ್ಧಿಯ ಫಲಗಳನ್ನು ಜನತೆ ಅವಲಂಬಿಸಲು ಸಾಕ್ಷರತಾ ಸಮುದಾಯ ನಿರ್ಮಾಣವಾಗಬೇಕಾಗಿದೆ.**

ಭಾರತವು ಬಹುಸಂಖ್ಯಾ ಗೊಂದಲಗಳು, ಸಾಮಾಜಿಕ ರಚನೆಗಳು, ಸಾಂಸ್ಕೃತಿಕ ಪದ್ಧತಿಗಳ ತೊಡಕಿನ ಜೊತೆಯಲ್ಲಿ ಬಡತನ, ಹಿಂದುಳಿದಿರುವಿಕೆಯನ್ನು ಎದುರಿಸುತ್ತಿದ್ದಾಗ ೧೯೭೮ರಲ್ಲಿ ರಾಷ್ಟ್ರೀಯ ವಯಸ್ಕರ ಶಿಕ್ಷಣ ಕಾರ್ಯಕ್ರಮ ಜಾರಿಗೆ ಬಂದ ತರುವಾಯ ಗ್ರಾಮೀಣ ಕ್ರಿಯಾತ್ಮಕ ಸಾಕ್ಷರತಾ ಯೋಜನೆ, ಅಕ್ಷರ ದೀಪ, ಸಾಮಾಜಿಕ ಕ್ರಿಯಾತ್ಮಕ ಸಾಕ್ಷರತೆ, ಅಕ್ಷರ ಸೇನಾ ಕಾರ್ಯಕ್ರಮಗಳ ಮೂಲಕ ೧೫-೩೫ ವರ್ಷ ವಯೋಮಿತಿಯ ಅನಕ್ಷರಸ್ಥರಿಗೆ ಕ್ರಿಯಾತ್ಮಕ ಸಾಕ್ಷರತೆ ಕಲ್ಪಿಸಿಕೊಡಲಾಯಿತು. ೧೯೮೮ರಲ್ಲಿ ರಾಷ್ಟ್ರೀಯ ಸಾಕ್ಷರತಾ ಮಿಷನ್ ಪ್ರಾಧಿಕಾರ ಸ್ಥಾಪನೆಯಾದ ಮೇಲೆ ರಾಜ್ಯಗಳಲ್ಲಿ ಜಿಲ್ಲಾವಾರು ಸಂಪೂರ್ಣ ಸಾಕ್ಷರತಾ ಆಂದೋಲನ ಕಾರ್ಯಕ್ರಮವು ಭಾರತದ ವಿವಿಧ ಭಾಗಗಳಲ್ಲಿ ನಿಶ್ಶೇಷ್ಟ ಕ್ರಾಂತಿಯನ್ನು ತಂದಿತು.

ಪ್ರಸಕ್ತ ಸಂದರ್ಭದಲ್ಲಿ ವಿಶೇಷವಾಗಿ ಜಾಗತೀಕರಣವು ಒಂದು ಸತ್ಯವಾಗುತ್ತಿರುವಾಗ ವಯಸ್ಕರ ಶಿಕ್ಷಣಕ್ಕೆ ಹೊಸ ದೃಷ್ಟಿಕೋನ ಅಗತ್ಯವಾಗಿದೆ. ಜಾಗತೀಕರಣಕ್ಕೆ ಅಕ್ಷರಸ್ಥ, ಬುದ್ಧಿವಂತರಾದ ಮತ್ತು ಜಾಗತೀಕರಣದ ಭಾಷೆಯನ್ನು ತಿಳಿದ ಮತ್ತು ಅರ್ಥಮಾಡಿಕೊಳ್ಳುವ ಮಾನವಶಕ್ತಿ ಅಗತ್ಯವಾಗಿದೆ. ಈಗಿನ ವಿಧಿವಿಧಾನದಲ್ಲಿ ಅನಕ್ಷರಸ್ಥರು, ತರಬೇತಾಗದವರನ್ನು "ಆಧುನಿಕ ಪೂರ್ವ" ಮತ್ತು "ಅನಾಗರಿಕ"ರೆಂದು ಪರಿಗಣಿಸಲಾಗುತ್ತದೆ. ಪಾಶ್ಚಿಮಾತ್ಯ

ದೇಶದ ಒಂದೇ ರೀತಿಯ ಪಡಿಯಚ್ಚುಗಳ ಪ್ರಭಾವದಿಂದ ಬಿಡಿಸಿ ಭಾರತವನ್ನು ಪುನರ್‌ರಚಿಸಬೇಕಾದ ತುರ್ತು ಅವಶ್ಯಕತೆಯಿದೆ. ಇದು ಸಾಧ್ಯವಾಗುವುದು ಹೇಗೆಂದರೆ ಹೆಚ್ಚಿನ ಸಂಖ್ಯೆಯ ಜನರು ಅಗತ್ಯವಾದ ಕುಶಲತೆ ಮತ್ತು ತರಬೇತಿಯನ್ನು ಪಡೆದುಕೊಳ್ಳಬೇಕು. ಈ ಕುಶಲತೆ ಮತ್ತು ತರಬೇತಿಯಲ್ಲಿ ಭಾರತದಲ್ಲಿ ಬೇರೆಲ್ಲಿಯೂ ತಮ್ಮ ಸ್ವಂತಿಕೆಯನ್ನು ಸ್ಥಾಪಿಸಲಾಗದಿರುವಂತಹ ಅಂಚಿನಲ್ಲಿರುವಂತಹವರಿಗೆ ತರಬೇತಿ ಒಳಗೊಂಡಿರಬೇಕು. ಐತಿಹಾಸಿಕವಾಗಿ, ಅಕ್ಷರತೆಯ ಮಟ್ಟವು ಅಂತಿಮವಾಗಿ ಜೀವನಮಟ್ಟ ಮತ್ತು ಜೀವನದ ಗುಣಮಟ್ಟದ ಮೇಲೆ ಪ್ರಭಾವ ಬೀರುತ್ತದೆ ಎಂದು ಸಾಧಿಸಲ್ಪಟ್ಟಿದೆ. ಆರ್ಥಿಕವಾಗಿ ಅಭಿವೃದ್ಧಿ ಹೊಂದಿದ ದೇಶಗಳು ಹೆಚ್ಚಿನ ಸಾಕ್ಷರತಾ ಮಟ್ಟವನ್ನು ಹೊಂದಿವೆ ಎಂಬುದನ್ನು ಗಮನಿಸುವುದು ಮುಖ್ಯ.

೫೦೦೦ ವರ್ಷಗಳಿಗಿಂತ ಹೆಚ್ಚಿನ ಇತಿಹಾಸದಿಂದ ಮತ್ತು ಶ್ರೀಮಂತವಾದ ಸಾಂಸ್ಕೃತಿಕ ಪರಂಪರೆಯಿಂದ ಉತ್ತಮವಾದ ಭವಿಷ್ಯವನ್ನು ನಿರ್ಧರಿಸಲು ನಮಗೆ ಸಾಧ್ಯ. ಇದಕ್ಕೆ ಎಲ್ಲಾ ಮಟ್ಟದಲ್ಲಿ, ಎಲ್ಲಾ ಜನರ ತೊಡಗಿಕೊಳ್ಳುವಿಕೆ ಮತ್ತು ಸಹಭಾಗಿತ್ವ ಅಗತ್ಯ. ಆಗ ಮಾತ್ರ ಭಾರತವನ್ನು ಬಲಯುತವಾಗಿ, ಸ್ವಾವಲಂಬಿಯಾಗಿ ಮತ್ತು ಅನುರಣನವಾಗುವ ಪ್ರಜಾಪ್ರಭುತ್ವವನ್ನಾಗಿ ಮಾಡಬಹುದು.

ಆದರೆ ಸಾಮಾಜಿಕ ಮತ್ತು ಆರ್ಥಿಕವಾಗಿ ಭಾರತದಂತಹ ಸ್ಥಿತಿಯಲ್ಲಿರುವ ದೇಶಗಳನ್ನು ಅಭ್ಯಸಿಸಿದರೆ, ಸಾಮಾನ್ಯ ಜನರ ಅನಕ್ಷರತೆಯ ನಿರ್ಮೂಲನದಲ್ಲಿ ಅವರ ಅನುಭವಗಳು ಗಮನಾರ್ಹವಾದುದು. ಹಾಗೆ ಈಗ ನಾವು ಮಾಡಬಹುದಾದ ಊಹೆಗಳಿಂದ ನಮ್ಮ ದೇಶದ ಪಿತಾಮಹರ ಕನಸನ್ನು ನನಸು ಮಾಡುವ ಸೂಕ್ತವಾದ ಕೌಶಲ್ಯಗಳ ಯೋಜನೆಯನ್ನು ರೂಪಿಸಲು ಮತ್ತು ಅಭಿವೃದ್ಧಿ ಫಲಗಳನ್ನು ಅನುಭವಿಸಲು ತಿಳಿವಳಿಕೆಯುಳ್ಳ ಸಾಮಾನ್ಯ ಜನರಿಂದ ಬಲವಾದ ದೇಶವಾಗಿ ಹೊರಹೊಮ್ಮಲು ಸಹಾಯವಾಗುತ್ತದೆ.

ದಕ್ಷಿಣ ಅಮೇರಿಕಾ, ಏಷ್ಯಾ ಮತ್ತು ಆಫ್ರಿಕಾಗಳಲ್ಲಿನ ಕೆಲವು ದೇಶಗಳ ಪ್ರಯತ್ನಗಳನ್ನು ಈ ಕೆಳಗೆ ಪ್ರಕಟಿಸಲಾಗಿದೆ.

| ಕ್ರಮ ಸಂಖ್ಯೆ | ದೇಶಗಳ ಆದ್ಯತೆಯ ಜೀವನ | ಸ್ವಾತಂತ್ರ್ಯದ ೧೯೫೯ | ಸಾಧನೆ ೧೯೬೦ | ಪ್ರಮುಖ ಅಂಶಗಳು ಸಾಕ್ಷರತೆಯ ದರ |
|---|---|---|---|---|
| ೧. | ಕ್ಯೂಬಾ | ಶೇ. ೨೬ | ೭೨ | ಫಿಡೆಲ್‌ಕ್ಯಾಸ್ಟ್ರೋ ಕ್ಯೂಬಾವನ್ನು ಸಾಕ್ಷರವನ್ನಾಗಿ ಮಾಡಲು ಎಲ್ಲಾ ಸಂಸ್ಥೆಗಳನ್ನೊಳಗೊಂಡಿರುವ ಸಾಂಸ್ಕೃತಿಕ ಕ್ರಾಂತಿ |
| ೨. | ನಿಕರಾಗುವಾ | ೧೯೭೯ ಶೇ ೫೦ | ೧೯೮೦ ಶೇ ೮೫ | ದೇಶವು ಸ್ವಾತಂತ್ರ್ಯವನ್ನು ಪಡೆದ ೧೫ದಿನಗಳೊಳಗೆ ಸಾಕ್ಷರತಾ ಆಂದೋಳನವನ್ನು ಬಡತನ ಮತ್ತು ಅಂತರ್ಯುದ್ಧವಿದ್ದಾಗ್ಯೂ ಆದ್ಯತೆಯ ಮೇರೆಗೆ ಕೈಗೊಳ್ಳಲಾಯಿತು. ಶಾಲಾ ಮತ್ತು ಕಾಲೇಜುಗಳನ್ನು ಸಾಕ್ಷರತಾ ಆಂದೋಳನ ಕೈಗೊಳ್ಳಲು ೫ ತಿಂಗಳವರೆಗೆ ಮುಚ್ಚಲಾಯಿತು. |
| ೩. | ಬರ್ಮ | ೧೯೪೮ ಶೇ ೫೫ | ೧೯೭೩ ಶೇ ೭೩ | ಸಾಕ್ಷರತೆಯನ್ನು ಸಾಂಸ್ಕೃತಿಕ ಪುನರುತ್ಥಾನ ಕಾರ್ಯಕ್ರಮಗಳಲ್ಲಿ ಜೋಡಿಸಲಾಯಿತು. |
| ೪. | ರಷ್ಯಾ | ೧೯೨೦ ಶೇ ೨೦ | ೧೯೩೭ ಶೇ ೯೦ | ರಾಜಕೀಯ ಮುಂದಾಳತ್ವ-ಲೆನಿನ್ ೧೯೧೯ರ ಡಿಸೆಂಬರಿನಲ್ಲಿ ಅನಕ್ಷರಕ್ಷತೆಯನ್ನು ನಿರ್ಮೂಲ ಮಾಡಲು ಒಂದು ಶಾಸನಕ್ಕೆ ಸಹಿ ಹಾಕಿದನು. |

| | | | | |
|---|---|---|---|---|
| ೫. | ಚೀನಾ | ೧೯೫೦<br>ಶೇ ೨೦ | ೧೯೭೮<br>ಶೇ ೮೦ | ೧೯೭೮ರಲ್ಲಿ ರಾಷ್ಟ್ರೀಯ ನೀತಿಯನ್ನು ರೂಪಿಸಲಾಯಿತು ಮತ್ತು ಸಾಕ್ಷರತೆಯನ್ನು ರಾಷ್ಟ್ರೀಯ ಕಾರ್ಯಕ್ರಮವಾಗಿ ಕೈಗೊಳ್ಳಲಾಯಿತು ಮತ್ತು ಸಾಂಸ್ಕೃತಿಕ ಕ್ರಾಂತಿಯ ಮೂಲಕ ಗುರಿಯನ್ನು ಸಾಧಿಸಲಾಯಿತು. |
| | ಭಾರತ | ೧೯೪೭<br>ಶೇ. ೧೮.೩೩<br>(೧೯೫೧) | ೨೦೦೧<br>ಶೇ. ೬೫.೩೮ | ೧೯೭೮ರಲ್ಲಿ ಎನ್‌ಎಇಪಿ ಮತ್ತು ೧೯೮೮ರಲ್ಲಿ ಎನ್‌ಎಲ್‌ಎಂಎಯಿಂದ ಟಿಎಲ್‌ಸಿ/ಐಎಲ್ ಮತ್ತು (೧೯೫೧) ಸಿಇ ಮಾರ್ಗವನ್ನು ರೂಪಿಸಲಾಯಿತು. |

ಈ ದೇಶಗಳು ಜನಸಾಮಾನ್ಯರ ಅನಕ್ಷರತೆಯನ್ನು ತೊಡೆದುಹಾಕುವಂತಹ ಅಗಾಧವಾದ ಕೆಲಸವನ್ನು ಹೇಗೆ ಸಾಧಿಸಿದವು ಎಂಬುದು ಗಮನಾರ್ಹ. ಅವುಗಳಲ್ಲಿರುವ ಅತ್ಯಂತ ಸಾಮಾನ್ಯ ಅಂಶವೆಂದರೆ ಸಂಬಂಧಪಟ್ಟ ದೇಶಗಳು ಖಂಡಿತವಾಗಿ ತೋರಿಸಿದ 'ರಾಜಕೀಯ ನಿರ್ಧಾರ'. ಇತರ ಪ್ರಧಾನ ಅಂಶಗಳು ಯಾವುವೆಂದರೆ :

ಎ) ಈ ಆಂದೋಲನದಲ್ಲಿ ಎಲ್ಲಾ ವಿದ್ಯಾಸಂಸ್ಥೆಗಳನ್ನು ತೊಡಗಿಸುವುದು ಅಥವಾ ಗುರಿಯನ್ನು ಸಾಧಿಸಲು ಕೆಲವು ಸಲ ಕಾಲೇಜುಗಳು ಮತ್ತು ಸಂಬಂಧಿತ ಸಂಸ್ಥೆಗಳನ್ನು ಮುಚ್ಚಿಬಿಡುವುದು.

ಬಿ) ಅಧಿಕಾರ ವಹಿಸಿಕೊಡುವ ಕಾರ್ಯವಿಧಾನ, ಸಾಂಸ್ಕೃತಿಕ ಕ್ರಾಂತಿ ಮತ್ತು ಮಾನವ ಅಭಿವೃದ್ಧಿಯ ಜೊತೆಯಲ್ಲಿ ಕೊಂಡಿಯಾಗಿರುವ ಸಾಕ್ಷರತೆ.

ಸಿ) ಒಂದು ನಿರ್ದಿಷ್ಟ ಸಮಯದ ಚೌಕಟ್ಟಿನಲ್ಲಿ ಅನಕ್ಷರತೆಯನ್ನು ತೊಡೆದುಹಾಕಲು ನಿರ್ಧರಿಸಿದ ನೇತಾರರಿಂದ ಹೊರಬಂದ ಬಲವಾದ ರಾಜಕೀಯ ಪ್ರಜ್ಞೆ, ಸಾಮಾಜಿಕ, ಆರ್ಥಿಕ ಮತ್ತು ಜನಸಂಖ್ಯಾ ಲಕ್ಷಣಗಳಲ್ಲಿ ಏಕರೀತಿಯಾದ ಪರಿಸ್ಥಿತಿಯಲ್ಲಿರುವ ದೇಶಗಳಿಗೆ ಅಂದರೆ ಚೀನಾ ಮತ್ತು ರಷ್ಯಾದಂತಹ ದೇಶಗಳಿಗೆ ಭಾರತದ ಸಾಧನೆಯನ್ನು ಹೋಲಿಸಿದರೆ, ಬೆಳವಣಿಗೆಯು ಬಹಳ ಕೆಳಮಟ್ಟದಲ್ಲಿದೆಯೆಂದು ಅಂಕಿ ಅಂಶಗಳು ಸೂಚಿಸುತ್ತದೆ. ತಕ್ಷಣವೇ ಸರಿಪಡಿಸುವ ಕ್ರಮಗಳನ್ನು ಕೈಗೊಳ್ಳಲು ಈ ಅಂಶವು ಲೋಪಗಳನ್ನು ಆತ್ಮಚಿಂತನೆ ಮಾಡಿಕೊಳ್ಳುವಂತೆ ಖಂಡಿತವಾಗಿ ಮಾಡುತ್ತದೆ.

ವಯಸ್ಕರ ಶಿಕ್ಷಣ ಕಾರ್ಯಕ್ರಮಗಳಿಗೆ ಹಣದ ಹಂಚಿಕೆಯು ಬಹಳ ಕಡಿಮೆ. (ಕೇಂದ್ರ ಮತ್ತು ರಾಜ್ಯವೆರಡರಲ್ಲಿಯೂ)

೧. ೧೯೫೦-೧೯೮೮ರ ವರೆಗೆ ಒಟ್ಟಾರೆ ಹಂಚಿಕೆಯು ಶಿಕ್ಷಣದ ಒಟ್ಟು ವೆಚ್ಚದ ಕೇವಲ ಶೇ. ೧.೫ ಆಗಿತ್ತು.

೨. ೧೯೮೮ರಲ್ಲಿ ಎನ್‌ಎಲ್‌ಎಮ್‌ಅನ್ನು ಸ್ಥಾಪಿಸಿದಾಗಿನಿಂದ ಒಟ್ಟು ಶಿಕ್ಷಣ ವೆಚ್ಚದ ಸುಮಾರು ಶೇ. ೨.೫ಕ್ಕೆ ಏರಿದೆ.

ಅಲ್ಲದೆ, ವಯಸ್ಕರ ಶಿಕ್ಷಣ ಕಾರ್ಯಕ್ರಮಗಳು ಹೆಚ್ಚು ಕಡಿಮೆ ಕೇಂದ್ರ ಪ್ರಾಯೋಜನೆಯಾಗಿಯೇ ಉಳಿದಿವೆ. (ಎಸ್. ವೈ. ಶಾ, ಐಜೆಎಇ ಸಂಪುಟ ೬೧೫, ಸಂಖ್ಯೆ ೭ ಏಪ್ರಿಲ್ -ಜೂನ್ ೨೦೦೦). ಅದೂ ಅಲ್ಲದೆ ವಯಸ್ಕರ ಶಿಕ್ಷಣಕ್ಕೆ ಹಣದ ಕೊರತೆಯಿಲ್ಲವೆಂಬುದು ಗಮನಾರ್ಹ. ವಯಸ್ಕರ ಶಿಕ್ಷಣದ ವೆಚ್ಚವು ಮೊದಲನೇ ಯೋಜನೆಯಲ್ಲಿ ೫ ಕೋಟಿ ರೂ. ಗಳಿದ್ದದ್ದು ೮ನೇ ಯೋಜನೆಯ ಹೊತ್ತಿಗೆ ೧೮೦೭.೬೪ ಕೋಟಿ ರೂ. ಗಳಿಗೆ ಹೆಚ್ಚಾಗಿದೆ. ಮೊದಲೇ ಸೂಚಿಸಿದಂತೆ ೫ನೇ ಯೋಜನೆಯಿಂದ ಹಣದ ವಿನಿಯೋಗವು ಗಣನೀಯವಾಗಿ ಹೆಚ್ಚಿದೆ. ಆದರೂ, ವಯಸ್ಕರ ಶಿಕ್ಷಣ ಕಾರ್ಯಕ್ರಮಗಳು ಪರಿಣಾಮಕಾರಿಯಾಗದಿರುವುದಕ್ಕೆ ಒಂದು ಕಾರಣವೆಂದರೆ ಕಾರ್ಯಕ್ರಮ ಪ್ರಕಾರದ ಹಂಚಿಕೆಯಲ್ಲಿ ಕೊರತೆಯೇ ಹೊರತು ಹಣದ ವೆಚ್ಚಗಳ ಹಂಚಿಕೆಯಲ್ಲ ಎಂದು ಕಂಡುಹಿಡಿಯಬಹುದು. ಜೆ. ಪಿ. ನಾಯಕ್ ಹೇಳಿರುವಂತೆ 'ನಾವು ಒಳ್ಳೆಯ ಯೋಜನಾಕಾರರಾದರೂ ಒಳ್ಳೆಯ ನಡೆಸುವವರಲ್ಲ".

೧೧೦೦ ಮಿಲಿಯ ಜನಸಂಖ್ಯೆಯಿರುವ ೨೦೦೧ರ ಜನಗಣತಿ ಭಾರತವು ಪ್ರಪಂಚದಲ್ಲಿ ಎರಡನೇ ಅತಿದೊಡ್ಡ ಜನಸಂಖ್ಯೆಯಿರುವ ದೇಶ ಮತ್ತು ಈ ದೇಶದಲ್ಲಿ ಅತಿಹೆಚ್ಚಿನ ಸಂಖ್ಯೆಯಲ್ಲಿ ಅನಕ್ಷರಸ್ಥರು (೩೦೦ ಮಿಲಿಯ) ಇದ್ದಾರೆ. ಅವರನ್ನು

ತಲುಪುವ ನಮ್ಮ ಕಾರ್ಯವು ತ್ವರಿತ ಆದ್ಯತೆಯದ್ದಾಗಿರಬೇಕು. ಈ ಸಮಸ್ಯೆಯು ಇನ್ನೂ ತೀವ್ರವಾಗಿರುವುದಕ್ಕೆ ಕಾರಣವೆಂದರೆ ಶೇ. ೨೯.೯ರಷ್ಟು ಜನರು ಬಡತನ ರೇಖೆಯ ಕೆಳಗಿರುವುದು ಮತ್ತು ಹೆಚ್ಚಾದ ಲಿಂಗ ಮತ್ತು ಪ್ರಾಂತೀಯ ಅಸಮಾನತೆಗಳು.

ರಾಷ್ಟ್ರೀಯ ಸಾಕ್ಷರತಾ ಮಿಶನ್ (ಎನ್. ಎಎಲ್.ಎಂ.) ೨೦೦೫ರ ವರ್ಷದ ಹೊತ್ತಿಗೆ ಶೇ. ೭೫ರ ಗಣನೀಯವಾದ ಹಂತಕ್ಕೆ ಸಾಕ್ಷರತೆಯ ಸಾಧನೆಯ ಗುರಿಯನ್ನು ಹೊಂದಿದೆ. ಆದರೆ ಈ ಗುರಿಯು ಬಹಳ ದೂರದ್ದರಂತೆ ಕಾಣುತ್ತದೆ. ಆದರೆ. ಎನ್.ಎಲ್.ಎಂ. ಪ್ರಾರಂಭಿಸಿದುದರಿಂದ ಕೆಲವು ರಾಜ್ಯಗಳಲ್ಲಿ ಕಾರ್ಯವೈಖರಿಯು ಅಪೇಕ್ಷಿತ ಮಟ್ಟಕ್ಕೆ ಬರದಿದ್ದರೂ ಇನ್ನು ಕೆಲವು ರಾಜ್ಯಗಳು ಬಹಳ ಚೆನ್ನಾಗಿ ಕೆಲಸ ಮಾಡಿವೆ. ಎನ್.ಎಲ್.ಎಮ್. ಪ್ರಾರಂಭವಾದ ಮೇಲೆ (೧೯೮೮) ಕೆಲವು ಆಯ್ದ ರಾಜ್ಯಗಳಲ್ಲಿ ಸಾಕ್ಷರರಾದವರ ರಾಜ್ಯವಾರು ವಿವರ ಕೆಳಗಿನ ಪಟ್ಟಿಯಲ್ಲಿ ಕೊಡಲಾಗಿದೆ.

| ಕ್ರಮ ಸಂಖ್ಯೆ | ರಾಜ್ಯ | ಸಾಕ್ಷರತಾ (TLC) ಆಂದೋಲನ ಪ್ರಗತಿ ೧೯೮೯-೯೦ | ಸಾಕ್ಷರತಾ ಕಾರ್ಯಕ್ರಮದ ಪ್ರಗತಿ ಅಂಕಿಗಳು ಲಕ್ಷಗಳಲ್ಲಿ |
|---|---|---|---|
| ೧. | ಆಂಧ್ರ ಪ್ರದೇಶ | ೭೨.೯೦ | ೯.೯೭ |
| ೨. | ಬಿಹಾರ | ೨೨.೫೯ | ೯.೯೭ |
| ೩. | ಗುಜರಾತ್ | ೪೧.೧೦ | ೨೦.೦೭ |
| ೪. | ಕರ್ನಾಟಕ | ೩೮.೨೭ | ೫.೮೬ |
| ೫. | ಕೇರಳ | ೧೩.೪೫ | ೨.೧೫ |
| ೬. | ಮಧ್ಯ ಪ್ರದೇಶ | ೪೨.೩೮ | ೧೫.೪೦ |
| ೭. | ಮಹಾರಾಷ್ಟ್ರ | ೩೮.೦೭ | ೨೦.೪೪ |
| ೮. | ಒರಿಸ್ಸಾ | ೨೦.೯೭ | ೩.೪೩ |
| ೯. | ರಾಜಸ್ತಾನ | ೨೮.೬೨ | ೧೨.೩೧ |
| ೧೦ | ತಮಿಳುನಾಡು | ೫೭.೭೩ | ೯.೩೨ |
| ೧೧. | ಉತ್ತರ ಪ್ರದೇಶ | ೪೬.೨೬ | ೪೦.೧೨ |
| ೧೨. | ಪಶ್ಚಿಮ ಬಂಗಾಳ | ೮೨.೫೩ | ೭.೧೯ |

ಇತರೆ ಕಾರ್ಯಕ್ರಮ : RFLP, SAEP, VGL, NYK & Vol. Ageney & others

Ref. Literacy Compaigns in India, Annual Report 1997-98, PP-30. DAE, New Delhi.

ಅಂತಹ ರಾಜ್ಯಗಳ ಪ್ರಯತ್ನಗಳು ಅನುಕರಿಸಲು ಯೋಗ್ಯ. ಆರ್ಥಿಕ ಅಭಿವೃದ್ಧಿಯ ಮೇಲೆ ಸಾಕ್ಷರತೆಯ ಸಕಾರಾತ್ಮಕ ಪ್ರಭಾವವನ್ನು ಕಾಣಬಹುದು. ನವ ಅಕ್ಷರಸ್ಥರಿಂದ ಸ್ವಸಹಾಯ ಗುಂಪುಗಳ ರಚನೆಯು ಅವರ ಸ್ವಯಂ ಸಂರಕ್ಷಣೆಗೆ ಮತ್ತು ಲಾಭದಾಯಕ ಉದ್ಯೋಗಕ್ಕೆ ಕೂಡ ಸಹಾಯ ಮಾಡುತ್ತದೆ. ಸಾಕ್ಷರತೆ ಕಾರ್ಯವಿಧಾನವು 'ಅಂಚಿನಲ್ಲಿರುವವರಿಗೆ' ಬಡತನದಿಂದ ಮತ್ತು ಸಾಲದ ಬಲೆಯಿಂದ ಹೊರಬರಲು ಅವಕಾಶ ನೀಡುತ್ತದೆ. ಒಂದು ರೀತಿಯಲ್ಲಿ ಸಾಕ್ಷರತೆಗೆ ಕೇಂದ್ರೀಕರಿಸಿದ ವಿಕೇಂದ್ರೀಕರಣದ ಮಾರ್ಗವು ಸಾಮಾಜಿಕ ದೋಷಗಳನ್ನು ನಿವಾರಿಸುವುದು ಮಾತ್ರವಲ್ಲದೆ ಸರಕಾರದ ಕನಿಷ್ಠ ಹಸ್ತಕ್ಷೇಪದಿಂದ ಜನರ ಜೀವನಾಧಾರ ಅಭಿವೃದ್ಧಿಗೆ ಸಕಾರಾತ್ಮಕವಾಗಿ ಸಹಾಯ ಮಾಡುತ್ತದೆ. ಸಾಕ್ಷರತೆಯಿಂದ ಕೂಡಿದ ಗ್ರಾಮೀಣ ಅಭಿವೃದ್ಧಿ ಯೋಜನೆಗಳಲ್ಲಿ ಸರಕಾರ ಮತ್ತು ಸರಕಾರೇತರ ಸಂಸ್ಥೆಗಳ ಪಾಲುದಾರಿಕೆಯು ಕುಟುಂಬದ ವರಮಾನ ಹೆಚ್ಚಳ, ಆಸ್ತಿಯ ಸೃಷ್ಟಿ ಮತ್ತು ಗುಣಮಟ್ಟದ ಜೀವನದ ವಿಷಯದಲ್ಲಿ ಹೆಚ್ಚಳವಾಗುವ ನಿಟ್ಟಿನಲ್ಲಿ ಒಳ್ಳೆಯ ಫಲಿತಾಂಶಗಳನ್ನು ನೀಡುತ್ತವೆ.

**ಜಾಗತೀಕರಣ ಮತ್ತು ಹೊಸ ಕೌಶಲ್ಯದ ಅಗತ್ಯ :**

ಜಾಗತೀಕರಣದ ಯುಗದಲ್ಲಿ ವಿಶೇಷವಾಗಿ ಸಾಕ್ಷರತೆ ನೀಡಿರುವ ಪ್ರಾಮುಖ್ಯತೆಯು ಹೆಚ್ಚುತ್ತಾ ಇದೆ. ಜಾಗತೀಕರಣದ ನಿಜವಾದ ಪ್ರಯೋಜನಗಳು ಸವಾಲನ್ನು ಎದುರಿಸಲು ನಾವು ಸಿದ್ಧವಾದಾಗ ಮಾತ್ರ ಹೆಚ್ಚು ಫಲಿಸುತ್ತವೆ. ಈಗ ಭೂಮಂಡಲದಲ್ಲಿ ಇರುವ ಪ್ರವೃತ್ತಿಯೇನೆಂದರೆ ಜ್ಞಾನದ ಆರ್ಥಿಕತೆಯಾಗಿದೆ. ಜ್ಞಾನ ಮತ್ತು ಕುಶಲತೆಯನ್ನು ಪಡೆದಿರುವವರು ಆಳುತ್ತಾರೆ ಮತ್ತು ಷರತ್ತುಗಳನ್ನು ವಿಧಿಸುತ್ತಾರೆ. ಈ ಪ್ರಭಾವವನ್ನು ತಪ್ಪಿಸಲು ಬೌದ್ಧಿಕ ಸಾಮರ್ಥ್ಯಗಳನ್ನು ಹೆಚ್ಚಿಸುವುದು ಮತ್ತು ಹೊಸ ಸವಾಲನ್ನು ಎದುರಿಸಲು ಸಮರ್ಥವಾದ ಮಾನವ ಸಂಪನ್ಮೂಲ ಆಧಾರವನ್ನು ಸೃಷ್ಟಿಸುವುದು ಅಗತ್ಯವಾಗಿದೆ.

ನೀತಿ ರೂಪಗಳು ತಮ್ಮ ಶಕ್ತಿ ಕೆಳಗಿನ ಮಟ್ಟಗಳಲ್ಲಿ ಕೆಲಸ ಮಾಡುವುದರಿಂದ ಪಡೆಯುತ್ತದೆ. ಇಲ್ಲಿ ರೂಪಿಸಿದ ನೀತಿಯ ತೊಡಕುಗಳನ್ನು ಪೂರ್ಣವಾಗಿ ಅರಿತು, ಜ್ಞಾನಕ್ಕೆ ಸಾಮೀಪ್ಯವು ಸಾಕ್ಷರತೆಯಿಂದ ಪ್ರಾರಂಭವಾಗುತ್ತದೆ ಎಂದು ನಾವು ತಿಳಿಯುತ್ತೇವೆ. ಆದ್ದರಿಂದ ಎಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳಿಗಿಂತ ಮಿಗಿಲಾಗಿ ಸಾಕ್ಷರತೆಗೆ ಆದ್ಯತೆ ನೀಡುವ ರಾಜಕೀಯ ಮನೋಭಾವ ಸ್ಪಷ್ಟವಾಗಿದೆ.

ಅದೂ ಅಲ್ಲದೆ ಆಡಳಿತದ ಇಲಾಖೀಕರಣ ಮತ್ತು ಕಟ್ಟುನಿಟ್ಟಾದ ವಿಭಾಗೀಕರಣದ ಕಲ್ಪನೆಯನ್ನು ನಿಲ್ಲಿಸುವ ಸಮಯ ಬಂದಿದೆ. ಸಾಕ್ಷರತೆ, ಶಿಕ್ಷಣ ಮತ್ತು ಜ್ಞಾನ ಸಂಪಾದನೆಯನ್ನು ಸತತವಾಗಿ ನೋಡಬೇಕು. ಆದ್ದರಿಂದ ಈ ಸಂತಸದ ಒಂದು ಭಾಗವಾಗಿರುವ ಇಲಾಖೆಗಳ ಅಗತ್ಯವು ಸಾಕ್ಷರತೆಯ ಗುರಿಯನ್ನು ಸಾಧಿಸಲು ಈ ವಿಶೇಷ ಶಕ್ತಿಯ ಕಡೆಗೆ ಒಂದೇ ಸಮೂಹದಲ್ಲಿ ಕೆಲಸ ಮಾಡಬೇಕಾದ ಅಗತ್ಯವಿದೆ.

ನಾವು ಪೂರ್ಣತೆಯ ಮಾರ್ಗವನ್ನು ರೂಪಿಸಿ ಅದರಲ್ಲಿ ಪ್ರತಿಯೊಂದು ಇಲಾಖೆಯು ನಿರಂತರತೆಗೆ ಸಹಾಯ ಮಾಡಬೇಕು. ಅದು ಸಾಂಪ್ರದಾಯಿಕ ಶಿಕ್ಷಣವಾಗಿರಲಿ ಅಥವಾ ಅಸಾಂಪ್ರದಾಯಿಕ ಶಿಕ್ಷಣವಾಗಿರಲಿ ನಮ್ಮ ಉದ್ದೇಶವು ಎಲ್ಲರಿಗೂ ಪೂರ್ಣ ಶಿಕ್ಷಣವಾಗಿರಬೇಕು. ಇದನ್ನು ಸಾಧಿಸಲು ಹಾಲಿ ಇರುವ ಕಾರ್ಯನಿರತ ಇಲಾಖೆಗಳ ನಡುವೆ ಏಕಾಗ್ರಮುಖತೆಯ ಅಗತ್ಯವಿದೆ. ಈ ಇಲಾಖೆಗಳು ತಮ್ಮದೇ ಆದ ಗಡಿಗಳನ್ನು ಸೃಷ್ಟಿಸಿಕೊಂಡಿದ್ದು, ಆ ಗಡಿಯಿಂದಾಚೆಗೆ ನೋಡುವುದಿಲ್ಲ. ಅವುಗಳು ಅಂತಿಮ ಫಲಿತಾಂಶವನ್ನು ಪರಿಗಣಿಸದೆ ಕೆಲಸ ಮಾಡುತ್ತವೆ. ಅಸಾಂಪ್ರದಾಯಿಕ ಶಿಕ್ಷಣವನ್ನು ಮುಗಿಸಿದ ಮೇಲೆ ಫಲಾನುಭವಿಯು ಹೋಗುವುದೆಲ್ಲಿಗೆ? ಈ ಉತ್ತರಿಸಲಾದ ಪ್ರಶ್ನೆಯು ನಿಜವಾಗಿ ಅದ್ಭುತಗಳನ್ನು ವಾಸ್ತವವಾಗಿ ಸಾಧಿಸಬಲ್ಲ ಸಮಾಜದ ಬುದ್ಧಿವಂತರಲ್ಲಿ ಅನಿಶ್ಚಿತತೆಯನ್ನು ಉಂಟುಮಾಡುತ್ತದೆ. ಈಗ ಅವರು ಸುಮ್ಮನಿದ್ದಾರೆ. ಅವರ ಸಹಭಾಗಿತ್ವವಿಲ್ಲದಿರುವಿಕೆ ಮತ್ತು ಆಡಳಿತಶಾಹಿಯ ಗಡುಸಾದ ಮನೋಭಾವದಿಂದ ಸಾಕ್ಷರತಾ ಪ್ರಯತ್ನವೂ ಜೂಜಾಟವಾಗಿದೆ. ಆದ್ದರಿಂದ ರಾಷ್ಟ್ರಮಟ್ಟದಲ್ಲಿ ಜಾರಿಗೆ ತಂದ ಯೋಜನೆಗಳೂ, ಅನುಷ್ಠಾನಗೊಳಿಸಿದ ಯೋಜನೆಗಳೂ ಮತ್ತು ಅಂತಿಮವಾಗಿ ಗುರಿ ಇರುವ ಜನರಿಗೆ ದೊರಕುವ ಪ್ರಯೋಜನಗಳಲ್ಲಿ ಅಸಮಾನತೆ ಇರುವುದನ್ನು ನೋಡಬಹುದು.

ಹಾಗೆಯೇ, ಅಕ್ಷರತೆ ಹರಡುವ ಉದ್ದೇಶದಲ್ಲಿ ಕೇಂದ್ರದಿಂದ ಬೆಂಬಲಿತವಾದ ಏಜೆನ್ಸಿಗಳ ಜೊತೆಯಲ್ಲಿ ಸಂಸ್ಥೆಗಳ ಕ್ಷೇತ್ರವು ಕೈ ಜೋಡಿಸಿದರೆ ಫಲಿತಾಂಶವು ದ್ವಿಗುಣಗೊಳ್ಳುತ್ತದೆ. ಆದ್ದರಿಂದ ಸಾಕ್ಷರತೆಯು ಸಾಮಾಜಿಕ ನ್ಯಾಯ ಸಾಧಿಸುವಲ್ಲಿ ಸಂಸ್ಥೆಗಳ ಕ್ಷೇತ್ರದ ಸಾಮಾಜಿಕ ಜವಾಬ್ದಾರಿಯು ಪಾಲುದಾರರಂತಿರಬೇಕು.

ಈ ಬೃಹತ್ ಕಾರ್ಯದಲ್ಲಿ ಯುವಕರು ಜವಾಬ್ದಾರಿಯನ್ನು ಹೊರಬೇಕು. ಸಹಕಾರ ನೀಡುವ ಮನೋಭಾವದಿಂದಿರುವ ಜವಾಬ್ದಾರಿಯು ಜನರಿಗೆ ಎಚ್ಚರದಿಂದಿರುವಂತೆ ಮಾಡುತ್ತದೆ. ಜಾಗರೂಕರಾಗಿರುವ ಜನರು ಸಮಾಜವನ್ನು ಬದಲಾಯಿಸಲು ಸಹಾಯ ಮಾಡುತ್ತಾರೆ.

ಅಂತಿಮವಾಗಿ, ಸಾಕ್ಷರತಾ ಕಾರ್ಯಕ್ರಮದ ಜಯವು ಸಮುದಾಯದಿಂದ ಜವಾಬ್ದಾರಿ ವಹಿಸಿಕೊಳ್ಳಲ್ಪಟ್ಟಾಗ ಮತ್ತು ಬೇಡಿಕೆಗಳಿಂದ ಕೂಡಿದಾಗ ಮಾತ್ರ ಅದರ ಗುರಿಯನ್ನು ಸಾಧಿಸಲು ಅವರ ಸಂರಕ್ಷಣೆಯ ಮೇಲೆ ಅವಲಂಬಿಸಿರುತ್ತದೆ. ವಯಸ್ಕರ ಸಾಕ್ಷರತೆಯು ಸಾಂದರ್ಭಿಕ, ಅವಲಂಬಿತ, ಉದ್ದೇಶಪೂರ್ವಕ ಮತ್ತು ನಿರಂತರವಾಗಿ ಬದಲಾಗುವ ಸಿದ್ಧಾಂತದಿಂದ ಕೂಡಿರುತ್ತದೆ. ೨೦ನೇ ಶತಮಾನದ ಅಂತ್ಯದಲ್ಲಿ ಸಾಕ್ಷರತೆಗೆ ಬೇಕಾಗಿರುವುದು ಶತಮಾನದ ಪ್ರಾರಂಭದಲ್ಲಿ ಎಣಿಕೆ ಮಾಡಿರದಂತಿರಬೇಕು. ಪಂಚಾಯಿತಿ ರಾಜ್ಯ ಕಾಯ್ದೆಯ ೭೩ನೇ ತಿದ್ದುಪಡಿಯಿಂದ ಮತ್ತು ಸ್ಥಳೀಯ ಸಂಸ್ಥೆಗಳಿಗೆ ಅಧಿಕಾರ ವಹಿಸಿಕೊಟ್ಟಿರುವುದರಿಂದ ಅಂತಿಮವಾಗಿ

ಕಾರ್ಯತಃ ಸಾಕ್ಷರತೆಯನ್ನು ಒದಗಿಸುವ ಜವಾಬ್ದಾರಿ ಮತ್ತು ಅನಕ್ಷರಸ್ಥ ಸಾಮಾನ್ಯ ಜನರಿಗೆ ಮುಂದುವರಿಯುವ ಶಿಕ್ಷಣವನ್ನು ಒದಗಿಸುವ ನಿರ್ವಹಣೆಯನ್ನು ಪಂಚಾಯಿತಿ ರಾಜ್ಯ ಸಂಸ್ಥೆಗಳ ವ್ಯಾಪ್ತಿಯೊಳಕ್ಕೆ ತರಬೇಕು.

**ಕರ್ನಾಟಕ ರಾಜ್ಯ ಸಾಕ್ಷರತಾ ಮಿಷನ್ ಪ್ರಾಧಿಕಾರ : ಸಾಕ್ಷರತಾ ಗುರಿಯನ್ನು ಸಾಧಿಸುವುದರ ಕಡೆಗೆ ಒಂದು ಹೊಸ ತಂತ್ರಕೌಶಲ್ಯ :**

ನಮ್ಮ ಸಮಾಜದ ಸಾಮಾಜಿಕ-ಆರ್ಥಿಕ ಮತ್ತು ಸಾಂಸ್ಕೃತಿಕ ವೈವಿಧ್ಯತೆಯಿಂದ ಅನಕ್ಷರಸ್ಥ ಸಾಮಾನ್ಯ ಜನರು ಯಾವಾಗಲೂ ಅಭಿವೃದ್ಧಿ ಕಾರ್ಯವಿಧಾನದ ತಟಸ್ಥ ಭಾಗಿದಾರರು ಅಥವಾ ಮಾತುಬಾರದ ಅವಲೋಕನಕಾರರಾಗಿದ್ದಾರೆ. ಆದ್ದರಿಂದ ಸಾಮಾನ್ಯ ಜನರ ನಿರಕ್ಷರತೆ ನಿರ್ಮೂಲನ ಆಂದೋಳನಗಳು ಹೆಚ್ಚು ಕಡಿಮೆ ಕಾರ್ಯಕ್ರಮ ಗುರಿಯುಳ್ಳವಾಗಿವೆ. ಟಿಎಲ್‌ಸಿ/ಪಿಲ್ ಮತ್ತು ಸಿಇ ಗಳಡಿಯಲ್ಲಿ ಸ್ವಯಂ ಸೇವಕತೆಯ ಭರವು ತನ್ನ ಚೈತನ್ಯ ಕಳೆದುಕೊಂಡಿದೆ. ಈ ಪರಿಸ್ಥಿತಿಗಳಲ್ಲಿ ರಾಜ್ಯದಲ್ಲಿ ಸಾಕ್ಷರತೆಯನ್ನು ಹೆಚ್ಚಿಸಲು ಸ್ಥಾಪಿತವಾದ ಶೃಂಗ ಸಂಸ್ಥೆ **ಕರ್ನಾಟಕ ರಾಜ್ಯ ಸಾಕ್ಷರತಾ ಮಿಷನ್ ಪ್ರಾಧಿಕಾರವು** ಈ ಸಮಸ್ಯೆಯನ್ನು ಎದುರಿಸಲು ಬಹುಮುಖವಾದ ಮಾರ್ಗವನ್ನು ಸಲಹೆ ಮಾಡಿದ್ದು ಅದನ್ನು "ಸಣ್ಣ ಯೋಜನೆ ಮಾರ್ಗ" ಅಥವಾ "ಸಮೂಹ ಮಾರ್ಗ" ಎಂದು ಕರೆಯಬಹುದು. ಈ ತಂತ್ರಕೌಶಲ್ಯದ ಮೂಲಕ ಕ.ರಾ.ಸಾ.ಮಿ. ಪ್ರಾಧಿಕಾರವು ಕರ್ನಾಟಕದಲ್ಲಿ ಸಾಕ್ಷರತೆಯನ್ನು ೨೦೦೭ರ ಹೊತ್ತಿಗೆ ಇನ್ನೂ ಸರಿಯಾಗಿ ಹೇಳುವುದಾದರೆ ೧೧ನೇ ಯೋಜನೆಯ ಅಂತ್ಯದ ಹೊತ್ತಿಗೆ ಶೇ. ೮೫ರ ಸಾಕ್ಷರತೆಯನ್ನು ಸಾಧಿಸುವ ಗುರಿ ಹಾಕಿಕೊಂಡಿದೆ. ೨೦೦೭ರ ಹೊತ್ತಿಗೆ ಈ ಗುರಿಯನ್ನು ಸಾಧಿಸಲು ತಂತ್ರಕೌಶಲ್ಯಗಳಲ್ಲಿ ನಾಲ್ಕು ಹಂತಗಳನ್ನು ಅನ್ವಯಿಸಬೇಕು.

೧. ಮಹಿಳಾ ಸಾಕ್ಷರತಾ ಸ್ಥಾನವನ್ನು ಆಧರಿಸಿ ಜಿಲ್ಲೆಗಳ ವರ್ಗೀಕರಣ.

೨. ನೋಡಲ್ ಏಜೆನ್ಸಿಗಳಿಂದ ಸೂಕ್ಷ್ಮ ಯೋಜನೆಗಳ ಅನ್ವಯ.

೩. ರಾಜ್ಯದ ಅನುಕೂಲಕರ ಪಾತ್ರ; ಕೆಎಸ್‌ಎಲ್‌ಎಂಎ/ಜೆಡ್‌ಎಸ್‌ಎಸ್/ಜೆಎಸ್‌ಎಸ್/ಎಸ್‌ಆರ್‌ಸಿ

**೧. ಮಹಿಳಾ ಸಾಕ್ಷರತಾ ದರದ ಮೇಲೆ ಆಧರಿಸಿ ಜಿಲ್ಲೆಗಳ ವರ್ಗೀಕರಣ (ಜನಗಣನೆ ೨೦೦೧)** : ಯಾವುದೇ ರಾಜ್ಯ, ಪ್ರಾಂತ್ಯ ಅಥವಾ ಜಿಲ್ಲೆಯ ಮಹಿಳಾ ಸಾಕ್ಷರತಾ ಸ್ಥಾನವು ಮಾನವ ಅಭಿವೃದ್ಧಿ ಸೂಚಿಯ ಬಹಳ ಮುಖ್ಯವಾದ ಸೂಚ್ಯಂಕಗಳಲ್ಲಿ ಒಂದು. ರಾಜ್ಯದಲ್ಲಿ ಜಿಲ್ಲೆಗಳ ವರ್ಗೀಕರಣದಲ್ಲಿ ಇದನ್ನು ಮುಖ್ಯವಾದ ನಿಯತಾಂಕವಾಗಿ ಪರಿಗಣಿಸಲಾಗಿದೆ. ಆದ್ದರಿಂದ ೨೭ ಜಿಲ್ಲೆಗಳನ್ನು ಈ ಕೆಳಗಿನ ವರ್ಗಗಳಾಗಿ ವರ್ಗೀಕರಿಸಲಾಗಿದೆ. ೧) ಜಿಲ್ಲೆಯ ಆದ್ಯತೆ, ೨) ಎ ವರ್ಗ, ೩) ಬಿ ವರ್ಗ, ೪) ಮಹಿಳಾ ಸಾಕ್ಷರತಾ ಸ್ಥಾನದ ಮೇಲೆ ಆಧರಿಸಿ ಜಿಲ್ಲೆಗಳ ವರ್ಗೀಕರಣ. ಈ ಪಟ್ಟಿಯು ಕರ್ನಾಟಕದಲ್ಲಿ ಜಿಲ್ಲೆಗಳ ವರ್ಗೀಕರಣವನ್ನು ಕೊಡುತ್ತದೆ.

| ಕ್ರಮ ಸಂಖ್ಯೆ | ಆದ್ಯತೆಯ ಜಿಲ್ಲೆಗಳು 'ಪಿ' ವರ್ಗ | ಶೇ. ೫೧ಕ್ಕಿಂತ ಕಡಿಮೆ ಮಹಿಳಾ ಸಾಕ್ಷರತೆ |
|---|---|---|
| ೧ | ರಾಯಚೂರು | ೩೭.೫೪% |
| ೨ | ಗುಲ್ಬರ್ಗ | ೩೮.೪೦% |
| ೩ | ಚಾಮರಾಜನಗರ | ೪೩% |
| ೪ | ಬೀದರ್ | ೫೮% |

ಬೀದರ್ ಜಿಲ್ಲೆಯಲ್ಲಿ ಮಹಿಳಾ ಜನಸಂಖ್ಯೆಯ ಶೇ. ೫೮ ರಷ್ಟು ಮಹಿಳೆಯರು ಅಕ್ಷರಸ್ಥರಾಗಿದ್ದರೂ ಅವರನ್ನು 'ಪಿ' ವರ್ಗದಲ್ಲಿ ವರ್ಗೀಕರಿಸಲಾಗಿದೆ. ಏಕೆಂದರೆ ಇದನ್ನು ಉಲ್ಲೇಖಿತ ಜಿಲ್ಲೆಯಾಗಿ ಇತರ ಹಿಂದುಳಿದ ಜಿಲ್ಲೆಗಳಿಗಿಂತ ಚೆನ್ನಾದ ಸ್ಥಾನದಲ್ಲಿರುವುದರಿಂದ ಮತ್ತು ಅದೇ ರೀತಿಯ ಸಾಮಾಜಿಕ ಆರ್ಥಿಕ ಸ್ಥಾನದಲ್ಲಿ ಅದರ ಸಾಧನೆಗಾಗಿ ಈ ರೀತಿಯಾಗಿ ವರ್ಗೀಕರಿಸಲಾಗಿದೆ.

| ಕ್ರಮ ಸಂಖ್ಯೆ | 'ಎ' ವರ್ಗದ ಜಿಲ್ಲೆಗಳು | ಶೇ. ೫೪.೧೬ಕ್ಕಿಂತ ಕಡಿಮೆ ಇರುವ ಮಹಿಳಾ ಸಾಕ್ಷರತೆ |
|---|---|---|
| ೫ | ಕೊಪ್ಪಳ | ೪೧% |
| ೬ | ಚಾಮರಾಜನಗರ | ೪೩% |
| ೭ | ಬಾಗಲಕೋಟೆ | ೪೪% |
| ೮ | ಬಳ್ಳಾರಿ | ೪೬% |
| ೯ | ಬಿಜಾಪುರ | ೪೬% |
| ೧೦ | ಮಂಡ್ಯ | ೫೨% |
| ೧೧ | ಬೆಳಗಾಂ | ೫೨% |
| ೧೨ | ಗದಗ | ೫೩% |
| ೧೩ | ಕೋಲಾರ | ೫೩% |
| ಕ್ರಮ ಸಂಖ್ಯೆ | 'ಬಿ' ವರ್ಗದ ಜಿಲ್ಲೆಗಳು | ಶೇ. ೬೫ಕ್ಕಿಂತ ಕಡಿಮೆ ಇರುವ ಮಹಿಳಾ ಸಾಕ್ಷರತೆ |
| ೧೪ | ಚಿತ್ರದುರ್ಗ | ೫೫% |
| ೧೫ | ಬೆಂಗಳೂರು (ಗ್ರಾ) | ೫೫% |
| ೧೬ | ಮೈಸೂರು | ೫೬% |
| ೧೭ | ತುಮಕೂರು | ೫೭% |
| ೧೮ | ಹಾವೇರಿ | ೫೮% |
| ೧೯ | ದಾವಣಗೆರೆ | ೫೮% |
| ೨೦ | ಹಾಸನ | ೫೯% |
| ೨೧ | ಧಾರವಾಡ | ೬೨% |
| ೨೨ | ಚಿಕ್ಕಮಗಳೂರು | ೬೪% |
| ಕ್ರಮ ಸಂಖ್ಯೆ | 'ಸಿ' ವರ್ಗದ ಜಿಲ್ಲೆಗಳು | ಶೇ. ೬೫ಕ್ಕಿಂತ ಮೇಲಿರುವ ಮಹಿಳಾ ಸಾಕ್ಷರತೆ |
| ೨೩ | ಶಿವಮೊಗ್ಗ | ೬೭% |
| ೨೪ | ಉತ್ತರ ಕನ್ನಡ | ೬೮% |
| ೨೫ | ಕೊಡಗು | ೭೩% |
| ೨೬ | ದಕ್ಷಿಣ ಕನ್ನಡ | ೭೭% |
| ೨೭ | ಬೆಂಗಳೂರು (ನಗರ ಜಿಲ್ಲೆ) | ೭೯% |

## ಬಿ) ಸಣ್ಣ ಯೋಜನೆ/ಗುಂಪು ಅಥವಾ ಪೂರ್ಣವುಳ್ಳ ಮಾರ್ಗ :

ಒಟ್ಟಾರೆ ಗುರಿಯು ೨೦೦೭ನೇ ವರ್ಷದ ಹೊತ್ತಿಗೆ ಶೇ. ೮೫ರ ಸಾಕ್ಷರತೆಯನ್ನು ಪಡೆಯುವ ಗುರಿಯನ್ನು ಮುಟ್ಟುವುದಾಗಿದೆ. ಈ ಗುರಿಯನ್ನು ನಿರ್ದಿಷ್ಟ ಅವಧಿಯ ಹೊತ್ತಿಗೆ ಸಾಧಿಸಬೇಕಾದರೆ ಗುರಿಯನ್ನು ಸಣ್ಣ ಯೋಜನೆಗಳಾಗಿ ಅಥವಾ ಜಿಲ್ಲೆಗಳೊಳಗೆ ೫ ರಿಂದ ೭ ಗ್ರಾಮ ಪಂಚಾಯತಿಗಳ ಗುಂಪುಗಳಾಗಿ ಹಂಚಬೇಕು. ೨ ಚಕ್ರದೊಳಗೆ ಈ ಗುರಿಯನ್ನು ಸಾಧಿಸುವುದು ಅಗತ್ಯ. (ಒಂದು

ಚಕ್ರದ ಅವಧಿ ೬ ತಿಂಗಳು) ಅಂದರೆ ರಾಷ್ಟ್ರೀಯ ಸಾಕ್ಷರತಾ ಮಿಶನ್‌ನ ಮಾನದಂಡದ ಪ್ರಕಾರ ಓದುವುದು, ಬರೆಯುವುದು ಮತ್ತು ಗಣಿತದಲ್ಲಿ ಸಾಕ್ಷರನನ್ನಾಗಿ ಮಾಡುವುದಕ್ಕೆ ಬೇಕಾದ ಜಿಲ್ಲೆ.

ಎರಡನೆಯದಾಗಿ, ಕೆ.ಎಸ್.ಎಲ್.ಎಂ.ಎ.ಯ ವ್ಯೂಹವು ನಿರ್ದಿಷ್ಟವಾಗಿ ಪ್ರತಿಪಾದಿಸುವುದೇನೆಂದರೆ ಸಣ್ಣ ಯೋಜನೆಗಳನ್ನು ಪೂರ್ಣ ಯೋಜನೆ ಮಾರ್ಗವೆಂದು ಪರಿಗಣಿಸಿ ಈ ನಾಲ್ಕು "ಆದ್ಯತೆ ಜಿಲ್ಲೆಗಳಲ್ಲಿ (ಪಿ)" ಅನ್ವಯಿಸಿ ಸಣ್ಣ ಯೋಜನೆಗಳ ಒಟ್ಟು ಸಂಖ್ಯೆಯನ್ನು ಈ ಕೆಳಗೆ ಕೊಟ್ಟಿದೆ.

| ಕ್ರಮ ಸಂಖ್ಯೆ | ಜಿಲ್ಲೆಗಳು | ಚಿಕ್ಕ ಯೋಜನೆಗಳು |
|---|---|---|
| ೧ | ರಾಯಚೂರು | ೩೭ |
| ೨ | ಗುಲ್ಬರ್ಗ | ೮೬ |
| ೩ | ಚಾಮರಾಜನಗರ | ೨೬ |
| ೪ | ಬೀದರ್ | ೩೬ |

ಜಿಲ್ಲಾ ಅನುಷ್ಠಾನ ಘಟಕವನ್ನು ಜಿಲ್ಲಾ ಸಾಕ್ಷರತಾ ಸಮಿತಿ ಎಂದು (ಜೆಡ್‌ಎಸ್‌ಎಸ್) ಎಂದು ಕರೆಯಲಾಗಿದ್ದು ಜಿಲ್ಲಾಧಿಕಾರಿಯ ನೇತೃತ್ವದಲ್ಲಿರುತ್ತದೆ ಮತ್ತು ಇದರ ಕಾರ್ಯದರ್ಶಿಯು (ಡಿಎಇಒ) ಒಂದು ತಂಡದ ಸಹಾಯದಿಂದ ನೋಡೆಲ್ ಏಜೆನ್ಸಿಗಳು ಅನ್ವಯಿಸುವುದಕ್ಕಾಗಿ ಸಣ್ಣ ಯೋಜನೆಗಳು/ಗುಂಪುಗಳನ್ನು ಸರಿಹೊಂದಿಸಲು ಮತ್ತು ತಂಡಗಳನ್ನಾಗಿ ಮಾಡಲು ಸೂಕ್ತ ಮಾದರಿಗಳನ್ನು ರಚಿಸಿ (ಸರಕಾರೇತರ ಸಂಸ್ಥೆಗಳು, ಸೇವಾ ಸಂಸ್ಥೆಗಳು, ಕೈಗಾರಿಕಾ ಗೃಹಗಳು, ಕಾರ್ಪೊರೇಟ್ ಕ್ಷೇತ್ರ, ಧಾರ್ಮಿಕ ಮತ್ತು ಲೋಕೋಪಕಾರ ಗುಂಪುಗಳಂತಹವು ಏಜೆನ್ಸಿಗಳು) ಸಾಕ್ಷರತೆಯ ಕಾರ್ಯಕ್ರಮವನ್ನು ವಾಸ್ತವವಾಗಿ ಅನುಷ್ಠಾನಕ್ಕೆ ತರುವುದಕ್ಕೆ ಮತ್ತು ಯೋಜನಾ ಪ್ರದೇಶದಲ್ಲಿ ನಿರ್ದಿಷ್ಟ ಅವಧಿಯಲ್ಲಿ ಗುರಿಯನ್ನು ಸಾಧಿಸಲಾಗುತ್ತದೆ. ನೋಡಲ್ ಏಜೆನ್ಸಿಗಳ ಜೊತೆಯಲ್ಲಿ ಗುರುತಿಸುವಿಕೆ ಮತ್ತು ಸಮನ್ವಯಿಕೆಗೆ ಪಿಆರ್‌ಐ ಗಳನ್ನು ತೊಡಗಿಸಿಕೊಳ್ಳುವಾಗ ಜಾಗರೂಕರಾಗಿರಬೇಕು.

ನೋಡಲ್ ಏಜೆನ್ಸಿಯನ್ನು ತೊಡಗಿಸುವ ಕಲ್ಪನೆಯ ಇಡೀ ಅಭಿಪ್ರಾಯವು ಈ ಕಾರ್ಯಕ್ರಮವನ್ನು ಸಮುದಾಯ ಆಧರಿತವಾಗಿ ಮತ್ತು ಪೋಷಕವಾಗಿ ಮಾಡುವುದಾಗಿದೆ. ಕೆ.ಎಸ್.ಎಲ್.ಎಂ.ಎ/ಜೆಡ್‌ಎಎಸ್‌ಎಸ್‌ಗಳು ಅತಿ ಕಡಿಮೆ ಹಸ್ತಕ್ಷೇಪದಿಂದ ಗುರಿಗಳನ್ನು ಸಾಧಿಸಲು ಕೇವಲ ಅನುಕೂಲಕಾರರ ಪಾತ್ರವನ್ನು ವಹಿಸುತ್ತವೆ.

ಆದರೂ ಎ, ಬಿ ಮತ್ತು ಸಿ ವರ್ಗಗಳಲ್ಲಿನ ಜಿಲ್ಲೆಗಳ ಕಾರ್ಯಕೌಶಲ್ಯವೇನೆಂದರೆ ಪ್ರತಿಜಿಲ್ಲೆಗೆ ಒಂದೇ ಒಂದು ಸಣ್ಣ ಯೋಜನೆಯನ್ನು ತೆಗೆದುಕೊಳ್ಳುವುದು. ಅದರಿಂದಾಗಿ ಈ ಯೋಜನೆಗಳ ಜಯವನ್ನು ಆ ಜಿಲ್ಲೆಗಳಲ್ಲಿ ಅತಿ ಹೆಚ್ಚಿನ ಅನಕ್ಷರತೆಯಿರುವ ಭಾಗಗಳಲ್ಲಿ ಇನ್ನೂ ಹೆಚ್ಚಾಗಿ ಈ ಕಾರ್ಯವನ್ನು ಕೈಗೊಳ್ಳುವುದಾಗಿದೆ. ಈ ಮಾರ್ಗಕ್ಕೆ "ಸಣ್ಣ ಯೋಜನೆ ಮಾರ್ಗ" ಎಂದು ಕರೆಯಲಾಗಿದೆ.

## ಸಿ) ಗುರಿಯನ್ನು ಸಾಧಿಸುವುದರಲ್ಲಿ ರಾಜ್ಯದ ಡಿಎಂಇ/ಕೆಎಸ್‌ಎಲ್‌ಎಂಎಯ ಅನುಕೂಲಕಾರನ ಪಾತ್ರ :

ಈ ಮಾರ್ಗದಲ್ಲಿ ರಾಜ್ಯ ಮತ್ತು ಜಿಲ್ಲೆಯ ಪಾತ್ರವು ಹೆಚ್ಚು ಅನುಕೂಲಕಾರಕವಾಗಿರುತ್ತದೆಯೇ ಹೊರತು, ಮೇಲ್ವಿಚಾರಣೆಯದಲ್ಲ ಎಂಬುದನ್ನು ಗಮನಿಸಬೇಕು. ಸಾಮಾನ್ಯ ಜನರ ಅನಕ್ಷರತೆಯನ್ನು ನಿವಾರಿಸುವ ಬೃಹತ್ ಕಾರ್ಯವು ಆ ಎಲ್ಲಾ ವ್ಯಕ್ತಿಗಳ ಮತ್ತು ಸಂಸ್ಥೆಗಳ ಸಾಮಾಜಿಕ ಮತ್ತು ನೈತಿಕ ಜವಾಬ್ದಾರಿಯೆಂದು ಸ್ಪಷ್ಟವಾಗಿ ಸೂಚಿಸಿ ಯೋಜನೆಯ ವಿವಿಧ ಪಾಲುದಾರರುಗಳ ನಡುವೆ ಸಂಪರ್ಕಿಸುವ ಕಾರ್ಯಕ್ಕೆ ಸರಕಾರವು ಅನುಕೂಲ ಕಲ್ಪಿಸುತ್ತದೆ. ನೋಡಲ್ ಏಜೆನ್ಸಿಗಳನ್ನು ವಿವಿಧ ಮಟ್ಟಗಳಲ್ಲಿ ಅವುಗಳ ಸಾಮರ್ಥ್ಯಕ್ಕನುಗುಣವಾಗಿನ ಮಟ್ಟದಲ್ಲಿ ಕೆಲಸವನ್ನು ತೆಗೆದುಕೊಳ್ಳುವಂತೆ ಕೇಳಿಕೊಳ್ಳಲಾಗುತ್ತದೆ.

ಸರಕಾರವು ಮೂಲವಸ್ತುಗಳನ್ನು, ತರಬೇತಿ ಅಂಶಗಳ ಸರಬರಾಜಿಗೆ ಅನುಕೂಲ ಮಾಡುತ್ತವೆ ಮತ್ತು ಆಂತರಿಕ ಹಾಗೂ ಬಾಹ್ಯ ಮೌಲ್ಯಮಾಪನ ಮಾಡಿ ಅದರಿಂದ ಕಂಡುಹಿಡಿಯಲಾದ ಯೋಜನಾ ಕಾರ್ಯಕ್ಷಮತೆಯ ಆಧಾರದ ಮೇಲೆ ಪ್ರಮಾಣಿಕಗಳನ್ನು ಮಾಡಲಾಗುತ್ತದೆ.

ಕಾರ್ಯಕ್ರಮದ ಮೇಲ್ವಿಚಾರಣೆ ನಡೆಸಲು ಮತ್ತು ಅದರಿಂದ ಇದರಲ್ಲಿನ ಅತ್ಯುತ್ತಮ ಪದ್ಧತಿಗಳನ್ನು ಬೇರೆ ಎಲ್ಲಿಯಾದರೂ ಪುನಃ ಮಾಡಲು ತನ್ನ ಅತ್ಯುತ್ತಮ ಅಧಿಕಾರಿಗಳನ್ನು ಅಲ್ಲಿ ಹಾಕಿ ಸರಕಾರವು ಅನುಕೂಲ ಕಲ್ಪಿಸುತ್ತದೆ.

**ಡಿ) ಪಿಆರ್‌ಐಗಳ ವ್ಯಾಪ್ತಿಯಲ್ಲಿ ಸಾಕ್ಷರತಾ ಕಾರ್ಯಕ್ರಮಗಳನ್ನು ತರುವುದು :**

ಹಳೆಯ ಅನುಭವದಿಂದ ನಮಗೆ ಸ್ಪಷ್ಟವಾಗಿರುವುದೇನೆಂದರೆ ವ್ಯಕ್ತಿ, ಕುಟುಂಬ ಅಥವಾ ಸಮುದಾಯದ ಸಾಕ್ಷರತೆ ಮತ್ತು ಸಮಗ್ರ ಅಭಿವೃದ್ಧಿಯು ಗುರಿಯಿರುವ ಜನಸಂಖ್ಯೆಯ ಸಹಭಾಗಿತ್ವದ ಮೇಲೆ ಅವಲಂಬಿಸಿದೆ. ಅಭಿವೃದ್ಧಿ ಫಲಗಳನ್ನು ಅನುಭವಿಸಲು ಸಾಕ್ಷರತಾ ಸಮುದಾಯಕ್ಕೆ ಅನುಕೂಲ ಮಾಡುವುದು ಸ್ಥಳೀಯ ಮಟ್ಟದಲ್ಲಿ ಪಂಚಾಯತಿ ರಾಜ್ಯ ಸಂಸ್ಥೆಗಳ ಜವಾಬ್ದಾರಿಯಾಗಿರಬೇಕು. ಸಾಕ್ಷರತೆಯ ಕಾರ್ಯಕ್ರಮಗಳು, ಚಟುವಟಿಕೆಗಳು ಅಥವಾ ಸಾಕ್ಷರತೆಯನ್ನು ಮತ್ತು ಮುಂದುವರಿಸುವ ಶಿಕ್ಷಣವನ್ನು ಪ್ರಚೋದಿಸುವುದನ್ನು ಪಿಆರ್‌ಐಗಳ ವ್ಯಾಪ್ತಿಯಲ್ಲಿ ತರಬೇಕು. ಅದರಿಂದ ನಿರಂತರವಾಗಿ ಬದಲಾಗುತ್ತಿರುವ ಸಾಮಾಜಿಕ-ಆರ್ಥಿಕ ಸಂದರ್ಭದಲ್ಲಿ ಸ್ಥಳೀಯ ಅಗತ್ಯಗಳನ್ನು ಒದಗಿಸಬಹುದು. ಅಂತಹ ಕಾರ್ಯಕ್ರಮಗಳ ಯೋಜನೆಗಳು ಮತ್ತು ಹಣವನ್ನು ಅವುಗಳ ಸಾಮರ್ಥ್ಯದ ಬಗ್ಗೆ ಸಂದೇಹವಿದ್ದರೂ ಈ ಸಂಸ್ಥೆಗಳ ಮೂಲಕ ಒದಗಿಸಬೇಕು. ಆದರೂ ಪಿಆರ್‌ಐಗಳನ್ನು ಬಲಪಡಿಸುವುದು ಕಾರ್ಯಕ್ರಮ ಅನುಷ್ಠಾನದ ಜವಾಬ್ದಾರಿಯನ್ನು ಅವುಗಳ ಮೂಲಕ ವಹಿಸುವುದರಿಂದ ಮಾತ್ರ ಸಾಧ್ಯವಾಗುತ್ತದೆ. ಅಧಿಕಾರ ವಹಿಸಿ ಕೊಡುವುದರಲ್ಲಿ ಸಾಕ್ಷರತೆಯು ಮೊದಲನೆಯ ಹೆಜ್ಜೆ.

●




# ಸಾರ್ವಜನಿಕ ಗ್ರಂಥಾಲಯ

ರು. ಫ. ದೇಸಾಯಿ

ಸಾರ್ವಜನಿಕ ಗ್ರಂಥಾಲಯ ಒಂದು ಮುಕ್ತವಾದ ಸಾರ್ವಜನಿಕ ಸಂಸ್ಥೆ ಸರ್ಕಾರ ಸಾರ್ವಜನಿಕರಲ್ಲಿ ವಿದ್ಯಾಭ್ಯಾಸ ಓದಿನ ಬಗ್ಗೆ ಅಭಿರುಚಿ ಮುಂತಾದವುಗಳನ್ನು ಬೆಳೆಸಲು ಉದ್ದೇಶಿಸಿ ಸ್ಥಾಪಿಸಿದ ಮುಕ್ತ ಸಾರ್ವಜನಿಕ ವ್ಯವಸ್ಥೆಯೇ ಈ ಗ್ರಂಥಾಲಯಗಳು.

ಓದು ಮನುಷ್ಯನನ್ನು ಪರಿಪೂರ್ಣ ಮಾನವನನ್ನಾಗಿಸುತ್ತದೆ ಎಂದಿದ್ದಾರೆ ಫ್ರಾನ್ಸಿಸ್ ಬೇಕನ್. ಓದುವ ಶಕ್ತಿ ಒಂದು ಪ್ರಬಲವಾದ ಅಸ್ತ್ರ. ಇದರಿಂದ ವ್ಯಕ್ತಿಯ ಪ್ರಜ್ಞಾವಲಯ ವಿಸ್ತರಣೆಗೊಳ್ಳುತ್ತದೆ. ಸಹಸ್ರಾರು ಮೇಧಾವಿಗಳ ಅನುಭವದ ಸಾರವನ್ನು ಮುಂದಿನ ಪೀಳಿಗೆಗೆ ಕಾದಿಟ್ಟು, ಹಂಚಿ, ಸ್ಪಂದನಕ್ಕೆ ಗುರಿಮಾಡುವ ಸಾಧನಗಳೆಂದು ಗ್ರಂಥಗಳನ್ನು ಗುರುತಿಸಲಾಗುತ್ತಿದೆ. ಓದಿನಿಂದ ಮಾನಸಿಕ, ಚಾರಿತ್ರಿಕ ಪರಿವರ್ತನೆಯಾಗಿ ಜನರು ಹೆಚ್ಚು ಸಂವೇದನಾಶೀಲರಾಗಿ ತಮ್ಮ ಅರಿವನ್ನು ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ.

## ಕರ್ನಾಟಕದಲ್ಲಿ ಗ್ರಂಥಾಲಯಗಳು :

**ಓದು ಮನುಷ್ಯನನ್ನು ಪರಿಪೂರ್ಣ ಮಾನವನನ್ನಾಗಿಸುತ್ತದೆ. ಅದೊಂದು ಪ್ರಬಲವಾದ ಅಸ್ತ್ರ. ಓದಿನಿಂದ ಮಾನಸಿಕವಾಗಿ ಪರಿವರ್ತನೆಯಾದ ಜನ ಹೆಚ್ಚು ಸಂವೇದನಾಶೀಲರಾಗುತ್ತಾರೆ, ಹೆಚ್ಚು ಅರಿವನ್ನು ಬೆಳೆಸಿಕೊಳ್ಳುತ್ತಾರೆ.**

ಕರ್ನಾಟಕವು ಭಾರತದಲ್ಲಿ ವಿಸ್ತೀರ್ಣ ಮತ್ತು ಜನಸಂಖ್ಯೆ ಎರಡೂ ದೃಷ್ಟಿಗಳಿಂದ ಒಂಬತ್ತನೆಯ ಅತಿದೊಡ್ಡ ರಾಜ್ಯ. ಭವ್ಯವಾದ ಐತಿಹಾಸಿಕ ಪರಂಪರೆಯಿಂದ ಕೂಡಿ ಅಸಾಧಾರಣ ಸಾಮಾಜಿಕ ರಾಜಕೀಯ ಹಾಗೂ ಧಾರ್ಮಿಕ ಮುನ್ನಡೆಗಳನ್ನು ನಾಡು ಕಂಡಿದೆ. ೨೦೦೧ರ ಜನಗಣತಿಯಲ್ಲಿ ನಮ್ಮ ಜನಸಂಖ್ಯೆ ೫,೨೭,೩೩,೯೫೮, (೨,೬೮,೫೬.೩೪೩ ಗಂಡು ಮತ್ತು ೨,೫೮,೭೭,೬೧೫ ಹೆಣ್ಣು) ಇದರಲ್ಲಿ ಸಾಕ್ಷರತೆ ಪ್ರಮಾಣ ಶೇಕಡಾ ೬೭.೦೪ರಷ್ಟಿದ್ದು, ಪ್ರಗತಿಪರ ರಾಜ್ಯಗಳಲ್ಲಿ ಒಂದಾಗಿದೆ.

೧,೯೧,೭೯೧ ಚದರ ಕಿಲೋಮೀಟರುಗಳಷ್ಟು ಭೂ ವಿಸ್ತಾರ ಹೊಂದಿದ ರಾಜ್ಯದಲ್ಲಿ ೨೭ಜಿಲ್ಲೆಗಳು, ೧೭೬ ತಾಲ್ಲೂಕುಗಳು. ೭೪೫ ಹೋಬಳಿಗಳು. ೨೦,೧೯೩ ಗ್ರಾಮಗಳು, ೬ ಮಹಾನಗರ ಪಾಲಿಕೆಗಳು, ೪೧ ನಗರ ಸಭೆಗಳು, ೮೦ ಪುರಸಭೆಗಳು, ೯೧ಪಟ್ಟಣ ಪಂಚಾಯತಿಗಳು, ೫ ಅಧಿಸೂಚಿತ ಪ್ರದೇಶಗಳು ಮತ್ತು ೫೬೫೬ಗ್ರಾಮ ಪಂಚಾಯತಿ ಕೇಂದ್ರಗಳಿವೆ.

ಸಾರ್ವಜನಿಕ ಗ್ರಂಥಾಲಯ ವ್ಯವಸ್ಥೆಯ ದೃಷ್ಟಿಯಿಂದ ಕರ್ನಾಟಕ ಸಾಕಷ್ಟು ಮುಂದುವರಿದ ರಾಜ್ಯವಾಗಿದೆ. ೧೯೬೫ರಲ್ಲಿ ಜಾರಿಗೆ ಬಂದ ಕರ್ನಾಟಕ ಸಾರ್ವಜನಿಕ ಗ್ರಂಥಾಲಯ ಕಾಯ್ದೆಯು ಗ್ರಂಥಾಲಯಗಳ ವಿಸ್ತೃತ

ಜಾಲ ನಿರ್ಮಾಣಕ್ಕೆ ಕಾರಣವಾಗಿದೆ. ಸದ್ಯ ರಾಜ್ಯದಲ್ಲಿ ೨೭ ಜಿಲ್ಲಾ ಕೇಂದ್ರ ಗ್ರಂಥಾಲಯ, ೧೯ ನಗರ ಕೇಂದ್ರ ಗ್ರಂಥಾಲಯಗಳು ಹಾಗೂ ಅವುಗಳ ೪೦೪ ಶಾಖಾ ಗ್ರಂಥಾಲಯಗಳು, ರಾಜ್ಯ ಕೇಂದ್ರ ಗ್ರಂಥಾಲಯ, ೧೫ ಸಂಚಾರಿ ಗ್ರಂಥಾಲಯಗಳು ಹಾಗೂ ೩.೨೫೧ ಗ್ರಾಮ ಪಂಚಾಯತಿ ಗ್ರಂಥಾಲಯಗಳು ಕಾರ್ಯನಿರ್ವಹಿಸುತ್ತಿವೆ. ದೇಶದಲ್ಲಿಯೇ ಗ್ರಾಮ ಪಂಚಾಯತಿ ಗ್ರಂಥಾಲಯಗಳನ್ನು ಪ್ರಾರಂಭಿಸಿದ ಕೀರ್ತಿ ಕರ್ನಾಟಕ ರಾಜ್ಯದ್ದಾಗಿದೆ. ಈ ಗ್ರಂಥಾಲಯಗಳು ವ್ಯವಸ್ಥಿತವಾಗಿ ರೂಪುಗೊಂಡಂತೆ ಮೇಲುನೋಟಕ್ಕೆ ಕಂಡರೂ, ವಾಸ್ತವ ಚಿತ್ರಣವು ಭಿನ್ನ ಎಂದರೂ ತಪ್ಪಾಗಲಾರದು. ಕರ್ನಾಟಕದಲ್ಲಿ ಗ್ರಾಮೀಣ ಗ್ರಂಥಾಲಯಗಳಿಗೆ ಮೂಲಭೂತ ಸೌಕರ್ಯಗಳಿಲ್ಲದೆಯೇ ಸೊರಗುತ್ತಿವೆ.

## ಗ್ರಾಮಪಂಚಾಯತಿ ಗ್ರಂಥಾಲಯಗಳು :

ಪಂಡಿತ ಜವಾಹರಲಾಲ್ ನೆಹರುರವರು ೧೯೫೫ರ ಜನವರಿ ೬ರಂದು ಗುಜರಾತ್ ವಿದ್ಯಾಪೀಠದ ಗ್ರಂಥಾಲಯವನ್ನು ಉದ್ಘಾಟಿಸುವಾಗ ಈ ಮಾತನ್ನು ಹೇಳಿದರು: "ನಮ್ಮ ದೇಶದಲ್ಲಿ ಪ್ರತಿಯೊಂದು ಹಳ್ಳಿಯಲ್ಲಿಯೂ ಕನಿಷ್ಟ ಒಂದು ಗ್ರಂಥಾಲಯವಿರುವಂತೆಸಗುವುದೇ ನಮ್ಮ ಪ್ರಯತ್ನವಾಗಬೇಕು. ಕೈ ಬೆರಳ ಮೇಲೆಣಿಸುವಷ್ಟೇ ವಿದ್ವಾಂಸರು ಅಥವಾ ಪಂಡಿತರಿಗೆ ಮಾತ್ರ ಗ್ರಂಥಾಲಯ ಸೇವೆಯು ಪರಿಮಿತವಾಗಿರದೇ, ಸಾರ್ವಜನಿಕರೂ ಓದಲು ಪ್ರಾರಂಭಿಸಬೇಕು. ನಿಜವಾಗಿಯೂ ಪ್ರತಿಯೊಂದು ಗ್ರಂಥಾಲಯು ಸ್ವತಃ ಒಂದು ವಿಶ್ವವಿದ್ಯಾಲಯವೇ ಆಗಬೇಕು". ನೆಹರೂರವರ ಈ ನುಡಿಯನ್ನು ಗಮನದಲ್ಲಿಟ್ಟುಕೊಂಡು, ೧೯೮೫ರಲ್ಲಿ ಕರ್ನಾಟಕ ರಾಜ್ಯವು ಅಧಿಕಾರ ವಿಕೇಂದ್ರಿಕರಣದತ್ತ ದಾಪುಗಾಲು ಹಾಕಿ ಜಿಲ್ಲಾ ಪರಿಷತ್ ಮಸೂದೆ ಜಾರಿಗೆ ತಂದ ನಿಮಿತ್ತ ೧೯೮೭-೮೮ರಲ್ಲಿ ಸರ್ಕಾರ ಪ್ರಾರಂಭಿಸಿದ ಯೋಜನೆ ಪ್ರಕಾರ ಗ್ರಾಮ ಪಂಚಾಯತಿ ಕೇಂದ್ರ ಸ್ಥಾನದಲ್ಲಿ ಇಂದು ೩.೨೫೧ ಗ್ರಾಮ ಪಂಚಾಯತಿ ಗ್ರಂಥಾಲಯಗಳು ಕಾರ್ಯನಿರ್ವಹಿಸುತ್ತಿವೆ.

ಗ್ರಾಮ ಪಂಚಾಯತಿ ಗ್ರಂಥಾಲಯಗಳು ಸಾಂಪ್ರದಾಯಕವಾಗಿ ಪುಸ್ತಕಗಳನ್ನು, ಒಂದೆರಡು ನಿಯತಕಾಲಿಕೆಗಳನ್ನು ಹಾಗೂ ದಿನಪ್ರತಿಕೆಗಳನ್ನು ಒದಗಿಸುವ ಕೇಂದ್ರಗಳಾಗಿವೆ. ಗ್ರಾಮೀಣ ಜನರಿಗೆ ಬೇಕಾಗುವ ಪುಸ್ತಕಗಳನ್ನಾಗಲೀ ಮಾಹಿತಗಳನ್ನಾಗಲಿ ಒದಗಿಸುವ ಶಕ್ತಿಯನ್ನು ಹೊಂದಿರುವುದಿಲ್ಲ.

## ಗ್ರಾಮೀಣಾಭಿವೃದ್ಧಿಯಲ್ಲಿ ಗ್ರಂಥಾಲಯಗಳ ಪಾತ್ರ :

ಗ್ರಾಮಾಂತರ ಪ್ರದೇಶದ ಜನರಿಗೆ ಸರಕಾರವು ಅನೇಕ ಯೋಜನೆಗಳನ್ನು ರೂಪಿಸಿದರೂ ಅದು ಅವರಿಗೆ ತಲುಪುವುದಿಲ್ಲ. ಏಕೆಂದರೆ, ಅವರಿಗೆ ಗ್ರಂಥಾಲಯಗಳಿಗೆ ಹೋಗಿ ಅವುಗಳ ಬಗ್ಗೆ ಮಾಹಿತಿ ತಿಳಿದುಕೊಳ್ಳುವ ಮನೋಭಾವ ಇರುವುದಿಲ್ಲ.

ಕರ್ನಾಟಕದಲ್ಲಿ ಸಾಕ್ಷರತೆ ಪ್ರಮಾಣವು ಪ್ರತಿ ಶತ ೬೭.೦೪ ಇದ್ದರೂ ಗ್ರಾಮಾಂತರ ಪ್ರದೇಶದಲ್ಲಿ ಸಾಕ್ಷರತೆ ಪ್ರಮಾಣ ಪ್ರತಿ ಶತ ೧೫-೨೦ ಮಾತ್ರ ಇದೆ. ಅವರಿಗೆ ಓದಲು ಸಮಯದ ಅಭಾವವಿರುವುದರಿಂದ, ಅಲ್ಲದೇ ಪುಸ್ತಕಗಳು, ದಿನಪತ್ರಿಕೆಗಳು ದೊರೆಯದೇ ಇರುವುದರಿಂದ ಅವರು ಬೇಗನೆ ನಿರಕ್ಷರಕುಕ್ಷಿಗಳಾಗಿಬಿಡುತ್ತಾರೆ. ಗ್ರಾಮಾಂತರ ಪ್ರದೇಶಗಳಲ್ಲಿ ಮಹಿಳೆಯರಿಗಂತೂ ಓದು ಕನಸಿನಲ್ಲಿಯೂ ನೆನಸದ ಮಾತಾಗಿದೆ. ಮೊದಲನೆಯದಾಗಿ ಅಕ್ಷರಸ್ಥರ ಸಂಖ್ಯೆಯೂ ಕಡಿಮೆ. ಓದು ಬರಹ ಬಲ್ಲವರೂ ಕೂಡ ಓದಲು ಪುಸ್ತಕ ದೊರೆಯದೇ ಇರುವುದರಿಂದ ಹಾಗೂ ಪರಿಸರದ ಪ್ರಭಾವದಿಂದ ಓದುವ ರೂಢಿಯನ್ನು ಹೊಂದಿರುವುದಿಲ್ಲ. ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡುತ್ತಿರುವ ಸರಕಾರ ಅಕ್ಷರಸ್ಥರು ಅನಕ್ಷರಸ್ಥರಾಗುತ್ತಿರುವುದನ್ನು ಗಮನಿಸಬೇಕಾಗಿದೆ, ಮತ್ತು ನಿರಂತರ ಕಲಿಕೆಗೆ ಶಾಶ್ವತ ವ್ಯವಸ್ಥೆ ಮಾಡಬೇಕಿದೆ.

ಗ್ರಾಮೀಣಾಭಿವೃದ್ಧಿಯಲ್ಲಿ ಗ್ರಂಥಾಲಯಗಳು ಮಹತ್ವದ ಪಾತ್ರ ವಹಿಸುತ್ತವೆ. ಕರ್ನಾಟಕದಲ್ಲಿ ಪ್ರತಿ ಶತ ೭೦ರಷ್ಟು ಜನರು ಹಳ್ಳಿಗಳಲ್ಲಿ ವಾಸಿಸುತ್ತಿರುವುದರಿಂದ ಅವರ ಮುಖ್ಯ ಉದ್ಯೋಗಗಳು-ಕೃಷಿ, ಹೈನುಗಾರಿಕೆ, ಸಣ್ಣ ಕೈಗಾರಿಕೆ, ರೇಷ್ಮೆ ಮುಂತಾದವುಗಳಾಗಿರುತ್ತವೆ. ಇಂತಹ ಸಂದರ್ಭಗಳಲ್ಲಿ ಗ್ರಂಥಾಲಯಗಳು ಮಾಹಿತಿ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತವೆ. ಗ್ರಂಥಾಲಯಗಳು ಜನರಿಗೆ ಬೇಕಾಗುವ ಈ ಕೆಳಗೆ ತಿಳಿಸಿದ ವಿಷಯಗಳ ಬಗ್ಗೆ ಮಾಹಿತಿಯನ್ನು ಸರಕಾರದಿಂದ, ಜಿಲ್ಲಾ ಪಂಚಾಯ್ತಿಗಳಿಂದ, ರಾಜ್ಯಪತ್ರದಿಂದ, ದಿನಪತ್ರಿಕೆಗಳಿಂದ, ಬ್ಯಾಂಕ್‌ಗಳಿಂದ ಪಡೆದು ಒದಗಿಸುತ್ತವೆ.

೧. ಕೃಷಿ ಮತ್ತು ನೀರಾವರಿ.
೨. ಹೈನುಗಾರಿಕೆ ಹಾಗೂ ರೇಷ್ಮೆ.
೩. ಸಣ್ಣ ಕೈಗಾರಿಕೆ.
೪. ಆರೋಗ್ಯ ಮತ್ತು ಕುಟುಂಬ ಕಲ್ಯಾಣ.
೫. ಶಿಕ್ಷಣ ಹಾಗೂ ಸಾಕ್ಷರತೆ.
೬. ಸಹಕಾರ, ಮಾರುಕಟ್ಟೆ ಹಾಗೂ ಸಾಲ ಸೌಲಭ್ಯಗಳ ಬಗ್ಗೆ.
೭. ಉದ್ಯೋಗ ಮಾಹಿತಿ.
೮. ವಸತಿ ಹಾಗೂ ಸಂಪರ್ಕ.
೯. ಮಾಹಿತಿಗಳನ್ನು ಸರಿಯಾಗಿ ಉಪಯೋಗಿಸುವುದರಿಂದ ಜನರ ಜೀವನದ ಗುಣಮಟ್ಟ ಹಾಗೂ ರಚನಾತ್ಮಕ ಕ್ರಿಯೆಗಳು ಹೆಚ್ಚುತ್ತವೆ. ಗ್ರಾಮೀಣ ಗ್ರಂಥಾಲಯಗಳು ಸಾಂಸ್ಕೃತಿಕ ಹಾಗೂ ಸಮುದಾಯ ಕೇಂದ್ರಗಳಾಗಿರುತ್ತವೆ.

**ಗ್ರಾಮ ಪಂಚಾಯಿತಿ ಗ್ರಂಥಾಲಯಗಳ ಅಭಿವೃದ್ಧಿಗೆ ಕೆಲವು ಸಲಹೆಗಳು :**

೧. ಸರಕಾರದ ಎಲ್ಲ ಪ್ರಕಟಣೆಗಳು, ಭಿತ್ತಿ ಪತ್ರಗಳು, ಯೋಜನೆಗಳು, ಕ್ರಿಯಾ ಯೋಜನೆಗಳು, ರಾಜ್ಯಪತ್ರ, ಪ್ರತಿಯೊಂದು ಇಲಾಖೆಯ ಆಯವ್ಯಯ ಗ್ರಂಥಾಲಯಗಳಲ್ಲಿರಬೇಕು.
೨. ಆಡಳಿತಗಾರರು ಹಾಗೂ ಶಿಕ್ಷಣ ತಜ್ಞರ ಮಾಹಿತಿಯು ಜನರಿಗೆ ತಲುಪುವುದು ಅತೀ ಅವಶ್ಯವೆಂದು ತಿಳಿದು ಗ್ರಂಥಾಲಯಗಳಿಗೆ ಮೂಲಭೂತ ಸೌಕರ್ಯ ಒದಗಿಸಬೇಕು.
೩. ಪ್ರತಿಯೊಂದು ಗ್ರಾಮ ಪಂಚಾಯತಿಗೆ ಒಂದು ಗ್ರಂಥಾಲಯ ಒದಗಿಸಬೇಕು.
೪. ಸರಿಯಾದ ಮಾಹಿತಿಯನ್ನು, ಸರಿಯಾದ ವೇಳೆಯಲ್ಲಿ, ಸರಿಯಾದ ಓದುಗರಿಗೆ ಒದಗಿಸಬೇಕಾಗಿರುವುದರಿಂದ ಗ್ರಂಥಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿ ತರಬೇತಿ ಹೊಂದಿರಬೇಕು. ಅವರಿಗೆ ಪುನರ್‌ಚೇತನ ಶಿಬಿರಗಳನ್ನು ಏರ್ಪಡಿಸುತ್ತಿರಬೇಕು.
೫. ಕೇಂದ್ರ ಸರಕಾರವು ಗ್ರಾಮೀಣ ಜನರಿಗೆ ಓದುವ ಸೌಕರ್ಯ ಹಾಗೂ ಸಾಮಗ್ರಿಗಳನ್ನು ರಾಜಾರಾಮ್ ಮೋಹನ್‌ರಾಯ್ ಪ್ರತಿಷ್ಠಾನ ಕೋಲ್ಕತ್ತಾ ಮೂಲಕ ಒದಗಿಸುತ್ತಿರುವುದನ್ನು, ಇನ್ನೂ ಅಭಿವೃದ್ಧಿಪಡಿಸಲು ಹೆಚ್ಚಿನ ಹಣಕಾಸು ನೆರವನ್ನು ರಾಜ್ಯಗಳಿಗೆ ನೀಡಬೇಕು ಅಥವಾ ಸಾರ್ವಜನಿಕ ಗ್ರಂಥಾಲಯಗಳನ್ನು ಕೇಂದ್ರ ಪಟ್ಟಿಯಲ್ಲಿ ಸೇರಿಸಿ ನೇರವಾಗಿ ಗ್ರಂಥಾಲಯಗಳ ಅಭಿವೃದ್ಧಿಪಡಿಸಬೇಕು ಅಥವಾ ದೇಶದಾದ್ಯಂತ ಏಕರೂಪತೆಯ ಸಮರ್ಪಕವಾದ ಸಾರ್ವಜನಿಕ ಗ್ರಂಥಾಲಯ ಸೇವೆ ನೀಡುವ ನಿಟ್ಟಿನಲ್ಲಿ ಕೇಂದ್ರ ಸರ್ಕಾರವು ಗಮನ ಹರಿಸಿ ಸಂವಿಧಾನವನ್ನು ತಿದ್ದುಪಡಿ ಮಾಡಿ ಸಾರ್ವಜನಿಕ ಗ್ರಂಥಾಲಯಗಳ ರಾಷ್ಟ್ರೀಯ ನೀತಿಯನ್ನು ರೂಪುಗೊಳಿಸಬೇಕು.
೬. ಗ್ರಾಮ ಪಂಚಾಯತಿ ಗ್ರಂಥಾಲಯಗಳು ಜಿಲ್ಲಾ ಪಂಚಾಯತಿಗಳ ಅಡಿಯಲ್ಲಿ ಕಾರ್ಯನಿರ್ವಹಿಸಬೇಕು ಮತ್ತು ಅವುಗಳ ಮೇಲ್ವಿಚಾರಣೆ ಸಾರ್ವಜನಿಕ ಗ್ರಂಥಾಲಯ ಇಲಾಖೆಯ ಅಧೀನದಲ್ಲಿರಬೇಕು.
೭. ಗ್ರಂಥಾಲಯಗಳಲ್ಲಿ ಸ್ಥಳೀಯ ದಿನಪತ್ರಿಕೆಗಳು, ಪಠ್ಯ ಪುಸ್ತಕಗಳು ಹಾಗೂ ಸಂದರ್ಭ ಸೇವಾ ಪುಸ್ತಕಗಳು ಲಭ್ಯವಿರಬೇಕು. ಇದಕ್ಕಾಗಿ ಹೆಚ್ಚಿನ ಆರ್ಥಿಕ ನೆರವು ನೀಡಬೇಕು.
೮. ಗ್ರಂಥಾಲಯಗಳನ್ನು ನಿರಂತರ ಕಲಿಕಾ ಕೇಂದ್ರಗಳನ್ನಾಗಿ ಮಾಡಬೇಕು.

ಗ್ರಾಮೀಣ ಗ್ರಂಥಾಲಯಗಳು ಗ್ರಾಮೀಣ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರವಹಿಸುವುದರಿಂದ ಇವುಗಳ ಅಭಿವೃದ್ಧಿ ಇಂದಿನ ಅವಶ್ಯಕತೆಯಾಗಿದೆ. ಕರ್ನಾಟಕ ಸರ್ಕಾರ, ಕೇಂದ್ರ ಸರ್ಕಾರ ಈ ಯೋಜನೆಗೆ ಮಹತ್ವ ನೀಡಿ ಹಣಕಾಸಿನ ವ್ಯವಸ್ಥೆ ಕಲ್ಪಿಸುವುದರ ಮೂಲಕ ಅಭಿವೃದ್ಧಿಯತ್ತ ಗಮನ ಹರಿಸಬೇಕಾಗಿದೆ.

●




# ಜಾನಪದ ಲೋಕ

ಗೊ. ರು. ಚನ್ನಬಸಪ್ಪ

ಹೊಳೆಸಾಲು, ಹೊಂಗೆತಂಪು, ಹೊಲದ ಹಸಿರು, ಆಲಜಾಲದ ನೆರಳು, ಮಾಯದ ಮಳೆ, ಭೋಗದ ಬೆಳೆ, ಹಂಚಿನ ಮನೆ, ಕಂಚಿನ ಕದ, ಹಾದಿಯ ಅರಮನೆ, ಬೀದಿಯ ಪಡಸಾಲೆ, ಅಲ್ಲದಂಥ ಅತ್ತೆ, ಬೆಲ್ಲದಂಥ ಮಾವ, ಗಂಧದ ಗಂಡ, ಪರಿಮಳದ ಹೆಂಡತಿ, ತೊಟ್ಟಿಲ ಕಂದ, ಹಟ್ಟಿಯ ಆಕಳು, ಹಸನಾದ ಹೆಣ್ಣು, ಗೌಡ ಗೆಣೆಕಾರ, ಸಂಪನ್ನಸಂಗಾತಿ, ಮಲ್ಲಿಗೆಯ ವನ, ಬಾಳೆಯ ತೋಟ, ಮಾದಯ್ಯನ ಬೆಟ್ಟ, ಮಾರಮ್ಮನ ಗುಡಿ, ಮುಂಜಾನೆ ಮುಂಗೋಳಿ, ಸಂಜೆ ಕೆಂಧೂಳಿ, ಹಾಡು ಹಗಲು, ಸಪ್ಪನ್ನ ಸರಿರಾತ್ರಿ - ಇದು ನಮ್ಮ ಜಾನಪದಲೋಕದ ಬೆಡಗಿನ ಭಂಡಾರ.

ಕರ್ನಾಟಕದ ಸಾಂಸ್ಕೃತಿಕ ಪರಂಪರೆ ವೈಭವಪೂರ್ಣ. ಜಗತ್ತಿನ ಯಾವುದೇ ಪ್ರದೇಶದಲ್ಲಿರುವಂತೆ ಇಲ್ಲಿನ ಜನಾಂಗ ಸಂಸ್ಕೃತಿಗೂ ಜಾನಪದವೇ ತಾಯಿಬೇರು. ಆದರೂ ನಮ್ಮ ನಾಡಿನ ಜಾನಪದ ಸಾಕಷ್ಟು ವೈವಿಧ್ಯಪೂರ್ಣವಾದುದು, ವೈಶಿಷ್ಟ್ಯಪೂರ್ಣವಾದುದು. ನಮ್ಮ ಜನಪದರು 'ಹೊಳೆ ಸಾಲಿನಲ್ಲಿ ಹೊನ್ನ' ಬಿತ್ತುವವರು; 'ಭೂದೇವಿಗೆ ಬಾಸಿಂಗ' ಮುಡಿಸುವವರು, ದುಡಿಮೆಯಲ್ಲೇ ಸಡಗರ ಕಂಡ ಸಂಪನ್ನರು!

**ಜಾನಪದವೆಂದರೆ ನಮ್ಮ ಹಳ್ಳಿ ಮತ್ತು ಗುಡ್ಡಗಾಡು ಬದುಕಿನ ವಿಶ್ವರೂಪ. ಇಲ್ಲಿನ ಹಾಡು, ಕುಣಿತ, ಮಾತು-ಕಥೆ, ಉಡುಗೆ-ತೊಡುಗೆ, ಊಟ-ಉಪಚಾರ, ದೇವರು-ದಿಂಡರು, ಮಾಟ-ಮಂತ್ರ, ಮದುವೆ-ಮುಂಜಿ, ಹಬ್ಬ-ಹರಿದಿನ, ಹುಟ್ಟು - ಸಾವು ಹೀಗೆ ನಿತ್ಯ ಬದುಕಿನ ಸಮಸ್ತವೂ ಕುತೂಹಲಕಾರಿ.**

ಈ ನೆಲದಲ್ಲಿ ಸ್ವಲ್ಪ ಅಡ್ಡಾಡಿದರೆ ಸಾಕು, ಜಾನಪದ ಜೇಂಗೊಡ ನಮಗೆ ತೃಪ್ತಿಯಾಗುವಷ್ಟು ತುಪ್ಪ ನೀಡುತ್ತದೆ. ಜಾನಪದ ಲೋಕದ ವಿಸ್ತಾರ ಅಳತೆಗೆ ನಿಲುಕದ ವಿಚಾರ. ಅದರ ಗಡಿ - ಬಾಂದುಗಳನ್ನು ಗುರುತಿಸಲು ಬಹಳ ಜನ ಪ್ರಯತ್ನಿಸಿದ್ದಾರೆ. ಒಬ್ಬೊಬ್ಬರದು ಒಂದೊಂದು ಅಳತೆಗೋಲು . ಕೆಲವರು ಹಳೆಯದೆಲ್ಲ ಜಾನಪದ ಎಂದರೆ, ಕೆಲವರು ಹಳ್ಳಿಯದೆಲ್ಲ ಜಾನಪದ ಎನ್ನುತ್ತಾರೆ. ಇನ್ನು ಕೆಲವರು 'ನಗರ ಜಾನಪದ'ವನ್ನೂ ಗುರುತಿಸಿದ್ದಾರೆ. 'ಗುಡ್ಡಗಾಡಿನ ಜಾನಪದ' ವಂತೂ ಇದ್ದೇ ಇದೆ. 'ನಿನ್ನೆ' ಇಂದಿನ ಜಾನಪದ, 'ಇಂದು' ನಾಳಿನ ಜಾನಪದ ಎಂದೂ ಹೇಳುತ್ತಾರೆ.

ಜಾನಪದದ ಬಗ್ಗೆ ಅರ್ಥ ವಿವರಣೆ ಪ್ರಸ್ತುತ ಸರ್ವಾಧ್ಯಕ್ಷ ಭಾಷಣದ ಉದ್ದೇಶವಲ್ಲ. ಆದರೂ ಒಂದು ಮಾತಿನಲ್ಲಿ ಸ್ಥೂಲವಾಗಿ ಹೇಳವುದಾದರೆ ನಂಬಿಕೆ ಮತ್ತು ಅನುಭವಗಳ ಆಧಾರದ ಮೇಲೆ ನಡೆದುಕೊಂಡು ಬಂದ ಮುಗ್ಧ, ಆದರೆ ಪ್ರಜ್ಞಾವಂತ ಪರಂಪರೆ ಜಾನಪದ. ಇದಕ್ಕೆ ಅರ್ಥಪೂರ್ಣ ಸಾಕ್ಷಿಯೆಂದರೆ ನಮ್ಮ ಹಳ್ಳಿಗಾಡು ಮತ್ತು ಗುಡ್ಡಗಾಡು.

## ನಮ್ಮ ಜಾನಪದ :

ಜಾನಪದವೆಂದರೆ ನಮ್ಮ ಹಳ್ಳಿ ಮತ್ತು ಗುಡ್ಡಗಾಡು ಬದುಕಿನ ವಿಶ್ವರೂಪ. ಇಲ್ಲಿನ ಹಾಡು-ಕುಣಿತ, ಮಾತು-ಕತೆ, ಉಡುಗೆ-ತೊಡುಗೆ, ಊಟ-ಉಪಚಾರ, ದೇವರು-ದಿಂಡಿರು, ಮಾಟ-ಮಂತ್ರ, ಮದುವೆ-ಮುಂಜಿ, ಹಬ್ಬ-ಹರಿದಿನ, ಹುಟ್ಟು-ಸಾವು, ತೇರು-ಜಾತ್ರೆ, ನಂಬಿಕೆ-ಸಂಪ್ರದಾಯ, ಆಚಾರ-ವ್ಯವಹಾರ, ನ್ಯಾಯ-ನಿಯತ್ತು, ಗಂಟು-ನಂಟು, ಮನೆ-ಮಠ. ಸುಖ-ದುಃಖ ಹೀಗೆ ನಿತ್ಯ ಬದುಕಿಗೆ ಸಂಬಂಧಿಸಿದ ಸಮಸ್ತವೂ ಕುತೂಹಲಕಾರಿ, ಸ್ವಾರಸ್ಯಪೂರ್ಣ. ಅಲ್ಲಿನ ಸೊಬಗನ್ನು ಅನುಭವಿಸುವ ಆಸಕ್ತಿಯುಳ್ಳವರು ಆ ಲೋಕದ ಒಳಾಂಗಣಕ್ಕೆ ಸ್ವತಃ ಹೋಗಬೇಕು. ಇದಕ್ಕೆ ಪ್ರವೇಶಧನ-ಪ್ರಾಮಾಣಿಕತೆ; ಮಹಾದ್ವಾರ -ಸಜ್ಜನಿಕೆ; ವಾಹನ-ಕಾಲ್ನಡಿಗೆ; ದಾರಿ-ಶ್ರದ್ಧೆ!

ಮನೆಯ ಬಾಗಿಲಿಗೆ ಬಂದ ಬಳೆಗಾರನಿಗೆ ಓರ್ವ ಹೆಣ್ಣು ತನ್ನ ತವರು ಮನೆಯ ಗುರುತನ್ನು ಹೀಗೆ ಹೇಳುತ್ತಾಳೆ-"ಹಂಚಿನ ಮನೆ ಕಾಣೋ, ಕಂಚಿನ ಕದ ಕಾಣೋ, ಇಂತಾಡುವೆರಡು ಗಿಣಿ ಕಾಣೋ ಬಳೆಗಾರ, ಅದೆ ಕಾಣೋ ನನ್ನ ತೌರೂರು". ಅಂತೆಯೇ, ಕರ್ನಾಟಕ ಜಾನಪದ ಲೋಕವನ್ನು ನೋಡಬಯಸುವವರಿಗೆ ಕೊಟ್ಟಿರುವ ವಿಳಾಸ-ಈ ಭಾಷಣ.

ಇದು ನೋಡಿ ನಮ್ಮ ಜಾನಪದ ಲೋಕ !

## ಹಾಡು ಕುಣಿತ :

"ಕಲ್ಲೊಡಿ ನೆನೆದೇವು, ಕಲ್ಯಾಣದಯ್ಯನ ಕಲ್ಲುಗುಡಿಯಾಗಿರುವೋನ -ಹನುಮಯ್ನ ಸೊಲ್ಲು ಸೊಲ್ಲಿಗೆ ನೆನೆದೇವು."

ಇದು ಜಾನಪದ ಲೋಕಾಲಯದ ಓಂಕಾರ ನಾದ! ಜನಪದ ಬದುಕಿನ ರಕ್ಷಾಚಕ್ರ ಬೀಸುವ ಕಲ್ಲು. ಆ ಕಲ್ಲಿನ ದನಿಯೊಡನೆ ಓದು ಬರಹ ಬಾರದ ಜನಪದ ನಾದಬ್ರಹ್ಮರ ಸಾಹಿತ್ಯದ ಸೊಲ್ಲು ಕೇಳಿಬರುತ್ತದೆ. ಬೀಸುವ ಕಾಯಕದೊಂದಿಗೇ ಮೂಡಿಬರುವ ಹಾಡುಗಳು ಬೀಸುವ ಕಲ್ಲಿನ ಸುತ್ತ ಕೂಡುವ ಹಿಟ್ಟಿನಂತೆ ರಾಶಿಗೂಡುತ್ತವೆ.

ಜನಪದ ಸಾಹಿತ್ಯ ಜಗತ್ತು ನಾದ ಮಾಧುರ್ಯದ, ಅನುಭವ ರಸಪಾಕದ, ಶೃಂಗಾರ ಸ್ವಾರಸ್ಯದ, ಗಂಭೀರ ಸಂದೇಶದ ಒಂದು ಸುಂದರ ಕಲಾಭವನ. ಇಲ್ಲಿ ಕಿವಿಗೊಟ್ಟು ಆಲಿಸಿದ ಕಡೆ ಗ್ರಾಮಗೀತೆಗಳ ಗಾನಲಹರಿ ಕೇಳಿ ಬರುತ್ತದೆ.

ಈ ಕಲಾಭವನದಲ್ಲಿ ನಿಮಗೆ ಎಂತೆಂತಹ ಹಾಡು ಬೇಕು? ಬೀಸುವ ಪದ, ದೇವರ ಪದ, ತೊಟ್ಟಿಲ ಪದ, ಸೋಬಾನೆ ಪದ, ಹಾಸ್ಯಗೀತೆ, ಶೋಕಗೀತೆ, ವೃತ್ತಿ ಗೀತ, ನೀತಿಗೀತೆ, ಯುದ್ಧಗೀತೆ, ಸಂಸಾರಗೀತೆ, ಸಂವಾದಗೀತೆ, ಕಥನಗೀತೆ, ಪ್ರಣಯಗೀತೆ, ಹಬ್ಬದಹಾಡು, ಆಚರಣೆಯ ಪದ, ಒಗಟಿನ ಪದ, ಉತ್ಸವದ ಪದ, ವರ್ಣನೆಯ ಹಾಡು-ಹೀಗೆ ಒಂದೇ ಎರಡೇ ? ಸಂದರ್ಭಕ್ಕೆ ಸಾವಿರ ! ಇವುಗಳಲ್ಲಿ ಹೆಂಗಸರ ಹಾಡುಗಳದೇ ಒಂದು ರಾಶಿ; ಗಂಡಸರ ಹಾಡುಗಳದೇ ಒಂದು ರಾಶಿ. ಯಾರ ಹಾಡುಗಳದೇ ಇರಲಿ, ಯಾವ ಹಾಡೇ ಇರಲಿ, ಈ ಸಾಹಿತ್ಯದ ವಿಶೇಷವೆಂದರೆ ಅಲ್ಲಿ ನಮಗೆ ಕಂಡುಬರುವ ಸರಳ ಸತ್ಯ, ಸಹಜ ಅಭಿವ್ಯಕ್ತಿ, ಸೂಕ್ಷ್ಮ ವಿಚಾರ, ಸಮೃದ್ಧಿ ರಸಾಭಿರುಚಿ!

ಇನ್ನು ಜನಪದ ಕತೆಗಳದಂತೂ ಗುಡ್ಡದ ರಾಶಿ.'ಚಿಟಿಕೆ ಕತೆ' ಯಿಂದ ಹಿಡಿದು 'ದಿನ ಮಧ್ಯಾಹ್ನ ನಡುರಾತ್ರಿ'ಯವರೆಗೆ, 'ಒಂದು ಹಗಲು ಒಂದು ರಾತ್ರಿ' ಯಿಂದ 'ಹತ್ತು ಹಗಲು ಹತ್ತು ರಾತ್ರಿ 'ಯವರೆಗೆ, ಹೇಳುವ ಕತೆಗಳು ನಮ್ಮ ಹಳ್ಳಿಗರ ನೆನಪಿನ ಬುಟ್ಟಿಯಲ್ಲಿವೆ. "ಒಂದಾನೊಂದೂರು, ಅಲ್ಲೊಬ್ಬ ರಾಜ" ಎಂದು ಆರಂಭಿಸಿ, "ಆಮ್ಯಾಲೆ ರಾಜಕುಮಾರಿ ಮದುವ್ಯಾತು. ಗಂಡ ಹೆಂಡ್ತಿ ಅವರಲ್ಲಿ ಸುಖವಾಗಿದ್ರು, ನಾವಿಲ್ಲಿ ಸುಖವಾಗಿದಿವಿ" ಎಂದು ಮುಗಿಸುವ ಸಾವಿರಾರು ಕತೆಗಳಿವೆ. ದೇವರು - ದಿಂಡಿರ ಕತೆಗಳು, ಪವಾಡದ ಕತೆಗಳು, ಮೋಸದ ಕತೆಗಳು, ಭಕ್ತಿಯ ಕತೆಗಳು, ಸಮಸ್ಯೆಯ ಕತೆಗಳು, ಸಮರದ ಕತೆಗಳು, ಧರ್ಮದ ಕತೆಗಳು, ನ್ಯಾಯದ ಕತೆಗಳು, ರಾಜಕುಮಾರ-ರಾಜಕುಮಾರಿಯರ ಕತೆಗಳು, ಮಾಟ ಮದ್ದಿನ ಕತೆಗಳು, ಪುರಾಣದ ಕತೆಗಳು, ಸ್ತ್ರೀ ನೀತಿಕತೆಗಳು, ಹಾಸ್ಯದ ಕತೆಗಳು, ಸಾಹಸದ ಕತೆಗಳು, ಶರಣರ ಕತೆಗಳು -ಹೀಗೆ ಅಗೆದಷ್ಟೂ ಸಿಗುವ ಭಂಡಾರ, ಎಣಿಸಿದಷ್ಟೂ ಉಳಿಯುವ ನಕ್ಷತ್ರ -ನಮ್ಮ ಜನಪದ ಕತೆಗಳು.

ನಮ್ಮ ಜನರು ಕುಳಿತು ಹಾಡುವಂತೆ ಕುಣಿಯುತ್ತಲೂ ಹಾಡುತ್ತಾರೆ. ಹಾಡುತ್ತಲೇ ಕುಣಿಯುತ್ತಾರೆ. ಹಾಡು-ಕುಣಿತಗಳು ಅವರಿಗೆ ಅನಿವಾರ್ಯ ಕಲೆಗಳು, ಅವಿಭಾಜ್ಯ ಅಭ್ಯಾಸಗಳು, ಅವರ ಹಾಡುಗಳಂತೆ ಕುಣಿತಗಳೂ ನೂರಾರು ವಿಧ. ಕೆಲವು ದೈವೀ ಆರಾಧನೆಯ ಕುಣಿತಗಳಾದರೆ, ಮತ್ತೆ ಕೆಲವು ಮನರಂಜನೆಯ ಕುಣಿತಗಳು. ಹಿನ್ನೆಲೆಯಲ್ಲಿ ಕೆಲವಕ್ಕೆ ವಾದ್ಯ ಪ್ರಾಧಾನ್ಯವಾದರೆ, ಕೆಲವಕ್ಕೆ ಗೀತೆಗಳು ಪ್ರಾಧಾನ್ಯ. ಕೆಲವು ಕುಣಿತಗಳಂತೂ ಅಭಿನಯ ಪ್ರಧಾನ.

ಜನಪದ ಕಲಾವಿದನಿಗೆ ನಿಸರ್ಗವೇ ಗುರು. ಆನೆಯ ನಡಿಗೆ, ಜಿಂಕೆಯ ನೆಗೆತ, ಕಪ್ಪೆಯ ಕುಪ್ಪಳಿಕೆ, ಮೀನಿನ ಬಳುಕು ಅವರ ಕುಣಿತಕ್ಕೆ ವಿನ್ಯಾಸ ಒದಗಿಸಿವೆ. ಉಲಿಯುವ ಹಕ್ಕಿ, ಮಲೆಯುವ ಮೃಗ, ಜೇನಿನ ಝೇಂಕಾರ ಅವರ ಹಾಡಿಗೆ ಹದ ನೀಡಿವೆ. ಹರಿಯುವ ನೀರು, ಬೀಸುವ ಗಾಳಿ, ಉರಿಯುವ ಬೆಂಕಿ, ಬೆಳೆಯುವ ಗಿಡಮರಬಳ್ಳಿ, ಅಚಲವಾಗಿರುವ ಗುಡ್ಡ ಬೆಟ್ಟ, ಬೆಳಗುವ ಚಂದ್ರ ಸೂರ್ಯ, ಎಲ್ಲಕ್ಕಿಂತ ಹೆಚ್ಚಾಗಿ ತಮ್ಮ ಬದುಕಿಗೆ ಆಶ್ರಯದ ತೊಟ್ಟಿಲಾಗಿರುವ ಮಣ್ಣು - ಇವು ನಮ್ಮ ಕಲಾವಿದರಿಗೆ ಸ್ಫೂರ್ತಿಯಾಗಿವೆ.

**ಕುಣಿತಗಳು :**

ಭೂತಾರಾಧನೆ, ನಾಗಮಂಡಲ, ಹರಿಗೆ ಸೇವೆ, ಬಾಣದೇವರು, ವೀರಗಾಸೆ, ಪುರವಂತಿಕೆ, ನಂದೀಧ್ವಜ, ಮೊಹರಂ, ಸೋಮ, ಕಂಸಾಳೆ, ಕರಗ, ಭಾಗವಂತಿಕೆ, ಪೂಜಾ, ಗೊರವ, ಮಾರಿ, ಸುಗ್ಗಿ, ರಂಗ, ಉಮ್ಮತ್ತಾಟ, ತುಳಸೀಪೂಜೆ, ತೊಂಡಲ ದೇವರು, ಪಂಡರಿ, ಹೂವಿನ ಮಕ್ಕಳು ಮೊದಲಾದ ಧಾರ್ಮಿಕ ಹಿನ್ನೆಲೆಯ ಕುಣಿತಗಳಿವೆ.

ಗೀತ - ನೃತ್ಯಗಳ ಮೂಲಕ ನೀತಿ, ಪುರಾಣ-ಪುಣ್ಯ ಕತೆಗಳನ್ನು ಹೇಳುವ ಜೋಗಿ, ದೊಂಬಿದಾಸ, ಸಾರುವಯ್ಯ, ಚೌಡಿಕೆ, ಕರಪಾಲ, ಗೊಂದಲಿಗ, ಏಕತಾರಿ, ಲಾವಣಿಕಾರ, ನೀಲಗಾರ, ಹೆಳವ ಮೊದಲಾದ ವೃತ್ತಿ ಮೇಳಗಳಿವೆ.

ಸಂತೋಷ ಸಂಭ್ರಮಗಳಲ್ಲಿ ಮನರಂಜನೆಗಾಗಿ ಕುಣಿಯುವ ಡಿಕಾಂಬರಿ, ವಾಲಗತ್ತಾಟ, ಪಟ, ದುಮ್ಮಾಲಿ, ಗಾರುಡಿ, ದೊಂಬ, ಕೊಡ, ಹೆಜ್ಜೆ, ಪಂಜು, ಅಲಗು, ಕಾವಲಿ, ಕೋಲಾಟ, ಜೋಗಿ ಅರಸು, ಡಮಾಯಿ, ದಪ್ಪು, ಪುಗಡಿ, ಪ್ರೇತ, ಬೇಡ, ಬೊಳಕಾಟ, ಮರಗಾಲು, ರಿವಾಯತ್, ವಾಘೆಮುರಳಿ, ಸಂಗ್ರಾಮ, ಸಿಂಡೀರ, ಹೋಳಿ ಮೊದಲಾದ ಕುಣಿತಗಳಿವೆ.

ಡೊಳ್ಳು, ಹಲಗೆ, ಕರಡಿ, ಚಿಟ್‌ಮೇಳ, ಉರುಮೆ, ಪಳ, ದುಡಿ, ನಗಾರಿ, ದುಮ್ಮಾಲಿ, ಕೊಂಬು, ಕಹಳೆ, ಗಣೆ - ಮುಂತಾದ ವಾದ್ಯ ಮೇಳಗಳಿವೆ.

ತೊಗಲು ಬೊಂಬೆ, ಸೂತ್ರದ ಬೊಂಬೆ, ಕೀಲು ಬೊಂಬೆ, ದೊಡ್ಡಾಟ, ಸಣ್ಣಾಟ, ಯಕ್ಷಗಾನ ಮೊದಲಾದ ಬಯಲಾಟಗಳಿವೆ.

ಎರವರು, ಬೇಡರು, ಕಾಪಾಲರು, ಲಂಬಾಣಿಗಳು, ಸೋಲಿಗರು, ತೋಡರು, ಕೊರಗರು-ಮೊದಲಾದ ಗುಡ್ಡಗಾಡು ಜನಾಂಗದವರ ಕುಣಿತಗಳಿವೆ.

ಹಾವಾಡಿಗರು, ಕೋಲೆ ಬಸವನವರು, ಊರ ಮಾರಮ್ಮನವರು, ಶಕುನ ಹೇಳುವವರು, ದೊಂಬರಾಟದವರು, ಹಗಲು ವೇಷದವರು, ಮೋಡಿಯವರು, ಕರಡಿ-ಕೋತಿ ಕುಣಿಸುವವರು, ಬುಡಬುಡಿಕೆಯವರು, ಹಚ್ಚೆಹುಯ್ಯುವವರು, ಮೊಂಡರು, ಸುಡಗಾಡು ಸಿದ್ಧರು ಮೊದಲಾದ ಭಿಕ್ಷಾವೃತ್ತಿಯ ಕಲಾ ತಂಡಗಳಿವೆ.

ಪೋಟಿ, ಪಾಳೇಗಾರ, ಕರಡಿ, ಆಂಜನೇಯ, ಗುಜ್ಜಾರಿ, ಜಂಗೀ, ಜೋಡಿ, ಹುಲಿ, ಸಿಂಹ ಇತ್ಯಾದಿ ವೇಷಗಳಿವೆ.

ಈ ಒಂದೊಂದು ಕಲೆಯೂ ವರ್ಣಮಯ. ಒಂದೊಂದಕ್ಕೂ ಒಂದೊಂದು ವೇಷಭೂಷಣ; ವಾದ್ಯ ವಿಶೇಷ. ಕೆಲವು ನಿರ್ದಿಷ್ಟ ಸಂದರ್ಭದವು. ಕೆಲವು ಯಾವಾಗ ಬೇಕಾದರೂ ಪ್ರದರ್ಶಿಸುವಂತಹವು. ನಿರ್ದಿಷ್ಟ ಗುಂಪಿಗೇ ಮೀಸಲಾದ ಕೆಲವು ಕಲೆಗಳಿದ್ದರೆ, ಕೆಲವು ಕಲೆಗಳಲ್ಲಿ ಜಾತಿ ಅಂತಸ್ತುಗಳ ಭೇದವಿಲ್ಲದೆ ಎಲ್ಲ ಜನ ಪಾಲುಗೊಳ್ಳುತ್ತಾರೆ. ತೇರು- ಜಾತ್ರೆ ಮತ್ತಿತರ ಉತ್ಸವ ಸಂದರ್ಭಗಳಲ್ಲಂತೂ ಜನಪದ ಹಾಡು ಕುಣಿತಗಳಿಗೆ ಸುಗ್ಗಿ !

ನಮ್ಮ ಜನರ ಜದುಕಿನ ಸಾಮರಸ್ಯ, ಸ್ವಾರಸ್ಯಗಳಿಗೆ ಈ ಕಲೆಗಳು ನೀಡಿರುವ ಕಾಣಿಕೆ ಅಸಾಧಾರಣವಾದುದು. ಪರಂಪರೆಯ ಸಂಸ್ಕೃತಿಯ ಪ್ರತಿಬಿಂಬವಾಗಿ ಬೆಳೆದುಕೊಂಡು ಬಂದ ಈ ಕಲೆಗಳೆಲ್ಲ ಕ್ರಮೇಣ ತಮ್ಮ ಸ್ವರೂಪವನ್ನು ಕಳೆದುಕೊಂಡಿವೆ. ಈಚೆಗಂತೂ ಅವು ಅಪರೂಪವಾಗುತ್ತಿವೆ.

**ಮಾತು-ಕತೆ :**

ನಮ್ಮ ಜನ ತಮ್ಮ ಜೀವನದಲ್ಲಿ ಸಭ್ಯತೆಯನ್ನು ನಟಿಸಿದವರಲ್ಲ; ಸಭ್ಯರಾಗಿ ನಡೆದುಕೊಂಡವರು. 'ನಡೆ-ನುಡಿಯೊಂದಾದರೆ ಇದೇ ಜನ್ಮ ಕಡೆ' ಎಂದವರು. ಅವರ ಮಾತುಗಳಲ್ಲಿ ನಾವು ಕಾಣುವುದು ಶಬ್ದದ ಆಡಂಬರವನ್ನಲ್ಲ ; ಅಕೃತಿಮ ಸರಳತೆಯನ್ನು. ಮುಚ್ಚುಮರೆಯನ್ನಲ್ಲ, ಬಿಚ್ಚು ಮನಸ್ಸನ್ನು. ಮಾತು-ಕೃತಿಗಳ ಅಂತರವನ್ನು ಕಡಿಮೆಮಾಡಲು ಅವರು ಪ್ರಾಮಾಣಿಕ ಪ್ರಯತ್ನ ನಡೆಸುತ್ತಾರೆ. ಬಿದ್ದರೆ 'ಬಿದ್ದೆ' ಎನ್ನುತ್ತಾರಲ್ಲದೆ 'ಎಡವಿದೆ' ಎಂದು ಹುಸಿಯಾಡುವುದಿಲ್ಲ.

ಜನಪದರ ಮಾತೇ ಮಾತು. ಅನುಭವದ ಒಲೆಯಲ್ಲಿ ಅಟ್ಟ ಅಡುಗೆ ಅವು. ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿ. ಬದುಕನ್ನು ತಿದ್ದುವ ಸಿದ್ಧೌಷಧ. ಕರ್ನಾಟಕ ಜನಪದ ಭಾಷೆಗೆ ಒಂದೊಂದು ಪ್ರದೇಶದಲ್ಲಿ ಒಂದೊಂದು ಶೈಲಿ; ಒಂದೊಂದು ಧ್ವನಿ.

ಕೊಡವ ಭಾಷೆಯ ಸಹವಾಸದ ಕೊಡಗಿನ ಕನ್ನಡ; ತುಳು ಸಹವಾಸದ ದಕ್ಷಿಣ ಕನ್ನಡ; ಕೊಂಕಣಿ ಸಹವಾಸದ ಉತ್ತರ ಕನ್ನಡ; ಮರಾಠಿ ಸಹವಾಸದ 'ಬೆಳಗಾಂ-ಬಿಜಾಪುರ- ಧಾರವಾಡ ಕನ್ನಡ; ಉರ್ದು ಸಹವಾಸದ ಗುಲ್ಬರ್ಗ, ಬೀದರ್, ರಾಯಚೂರು ಕನ್ನಡ; ತೆಲುಗು ಸಹವಾಸದ ಬಳ್ಳಾರಿ, ಕೋಲಾರ, ಚಿತ್ರದುರ್ಗ, ಬೆಂಗಳೂರು ಕನ್ನಡ; ಹಾಸನ, ಮಂಡ್ಯ, ಮೈಸೂರು, ಚಿಕ್ಕಮಗಳೂರು, ಶಿವಮೊಗ್ಗ, ತುಮಕೂರು ಜಿಲ್ಲೆಗಳಲ್ಲಿ ಕಂಡುಬರುವ 'ಸಹವಾಸ ದೋಷ'ವಿಲ್ಲದ ಕನ್ನಡ. ಜನಪದರು ಮಾತು ಮಾತಿಗೆ ಗಾದೆಗಳನ್ನು ಜೋಡಿಸಿ ನಡೆಸುವ ಸಂಭಾಷಣೆ ನಿಜಕ್ಕೂ ಸ್ವಾರಸ್ಯಪೂರ್ಣ. ಅವರ ಭಾಷೆಯ ಬೆಡಗನ್ನು ಕೇಳಿಯೇ ಅನುಭವಿಸಬೇಕು.

ನಮ್ಮ ಜಾನಪದ ಲೋಕದಲ್ಲಿ ಕನ್ನಡ ಶಬ್ದಕೋಶಕ್ಕೆ ಸೇರಬೇಕಾದ ಇನ್ನೂ ಸಹಸ್ರಾರು ಶಬ್ದಗಳಿವೆ. ಅವು ಸೇರಿಕೊಂಡರೆ ನಮ್ಮ ಶಬ್ದಕೋಶ ಮತ್ತಷ್ಟು ಶ್ರೀಮಂತವಾಗುತ್ತದೆ. ವಾಸ್ತವವಾಗಿ ಹೇಳುವುದಾದರೆ, ಜನಪದರ ಮಾತು-ಕತೆಗಳೇ ಒಂದು ವಿಶ್ವಕೋಶ ! ಇನ್ನು ಅವರ ಉಡಿಗೆ ತೊಡಿಗೆಗಳೇನೂ ಕಡಿಮೆಯಲ್ಲ.

## ಉಡುಗೆ-ತೊಡುಗೆ :

ಉಡುಗೆ-ತೊಡುಗೆಗಳೆಂದರೆ ಸಾಮಾನ್ಯವಾಗಿ ಧಾರ್ಮಿಕ ಸಂಪ್ರದಾಯ, ಸಾಮಾಜಿಕ ಸ್ಥಾನಮಾನ, ಆರ್ಥಿಕ ಸ್ಥಿತಿಗತಿ, ಪ್ರಾದೇಶಿಕ ಹವಾಮಾನ, ಮನೆತನದ ಪರಂಪರೆ, ಸಂದರ್ಭ ಸನ್ನಿವೇಶ -ಇವುಗಳನ್ನೆಲ್ಲ ಅವಲಂಬಿಸಿರುವುದುಂಟು. ಜನಪದರ ಉಡುಗೆ-ತೊಡುಗೆಗಳಲ್ಲಿ ಕೆಲವೊಂದು ನಿರ್ದಿಷ್ಟ ಪ್ರದೇಶಗಳಲ್ಲಿ ಗಮನಾರ್ಹ ಬದಲಾವಣೆಗಳು ಕಂಡುಬಂದರೂ, ಕನಿಷ್ಟ ಉಡುಗೆ- ತೊಡುಗೆಗಳಲ್ಲಿ ಅಷ್ಟೊಂದು ವ್ಯತ್ಯಾಸವಿರುವುದಿಲ್ಲ. ಕೆಲವು ಕಡೆ ಗಡಿಪ್ರದೇಶಗಳ ಪ್ರಭಾವವನ್ನು, ಮತ್ತೆ ಕೆಲವು ಕಡೆ ಪರಂಪರೆಯ ಪದ್ಧತಿಗಳನ್ನು ಈ ಉಡುಗೆ - ತೊಡುಗೆಗಳಲ್ಲಿ ಗಮನಿಸಬಹುದು.

ಹಳ್ಳಿಗಾಡು ಹೆಂಗಸಿನ ಉಡುಗೆ ಸರಳ; ರವಕೆ, ಸೀರೆ ಅಷ್ಟೆ . ಆದರೆ ಸೀರೆ ಉಡುವ ರೀತಿಯಲ್ಲಿ ಪ್ರಾದೇಶಿಕ ವ್ಯತ್ಯಾಸಗಳನ್ನು ಕಾಣುತ್ತೇವೆ. ಉತ್ತರ-ದಕ್ಷಿಣ ಕರ್ನಾಟಕದಲ್ಲಿ ಒಂದೇ ರೀತಿ ಸೀರೆ ಉಟ್ಟರೂ, ಉತ್ತರ ಕರ್ನಾಟಕದ ಹೆಂಗಸರ ತಲೆಮೇಲೆ ಸೆರಗು ಇರಲೇಬೇಕು. ಸೆರಗು ಅವರ ದೃಷ್ಟಿಯಲ್ಲಿ ಸಭ್ಯತೆಯ ಲಕ್ಷಣ. ಅದೇ ದಕ್ಷಿಣ ಕರ್ನಾಟಕದಲ್ಲಿ ವಯಸ್ಸಾದ ಮಹಿಳೆಯರಷ್ಟೇ ತಲೆಮೇಲೆ ಸೆರಗು ಹಾಕುವುದನ್ನು ಕಾಣಬಹುದು. ಮಲೆನಾಡಿನ ಹೆಂಗಸರು ಎಡ ಸೆರಗನ್ನು ಒಂದು ರೀತಿಯಲ್ಲಿ ಕಟ್ಟಿಕೊಂಡರೆ, ಕೊಡಗಿನ ಹೆಂಗಸರು ಸೀರೆ ಉಡುವ ರೀತಿಯೇ ಬೇರೆ. ಅವರ ಸೀರೆಯ ನಿರಿಗೆಗಳು ಹಿಂಭಾಗಕ್ಕಿದ್ದು, ಉಳಿದವರು ಎಡಭುಜದ ಮೇಲೆ ಹಾಯಿಸುವ ಸೆರಗನ್ನು ಇವರು ಎಡಭುಜದ ಕೆಳಗಿಂದ ಹಿಂಭಾಗದ ಮೂಲಕ ಬಲಭುಜದ ಮೇಲೆ ಹಾಯಿಸಿ ಕಟ್ಟಿರುತ್ತಾರೆ. ಕೊಡವ ಮಹಿಳೆಯರು ತಲೆವಸ್ತ್ರ ಕಟ್ಟುವುದೂ ಉಂಟು. ಹಾಲಕ್ಕಿ ಒಕ್ಕಲು, ಒಡ್ಡಲು, ಕೆಲವು ಅಲೆಮಾರಿಗಳು, ಆದಿವಾಸಿಗಳು ಮತ್ತು ಗುಡ್ಡಗಾಡಿನ ಹೆಂಗಸರು ರವಕೆ ತೊಡುವುದಿಲ್ಲ. ಅವರಿಗೆ ಸೀರೆಯ ಸೆರಗೇ ರವಕೆಯಾಗುತ್ತದೆ. (ಈಗ ಅವರಲ್ಲೂ ರವಕೆಯ ಬಳಕೆ ಆರಂಭವಾಗಿದೆ.)

ಇನ್ನು ನಮ್ಮ ಜನಪದ ಗಂಡಸರ ಉಡುಗೆಯಲ್ಲಿ ಅಂತಹ ಗಮನಾರ್ಹ ವ್ಯತ್ಯಾಸಗಳಿರುವುದಿಲ್ಲ.ಅಂಗಿ, ಒಳಂಗಿ, ಚಡ್ಡಿ (ನಿಕ್ಕರು), ದಟ್ಟಿ, ಕಾಸೆಪಂಚೆ, ಶಲ್ಯ, ರುಮಾಲು, ಕೋಟು ಇಷ್ಟೆ. ಪೇಟದಲ್ಲಿ ಮೈಸೂರು ಪೇಟಕ್ಕೂ, ಉತ್ತರ ಕರ್ನಾಟಕದ ರುಮಾಲಿಗೂ ವ್ಯತ್ಯಾಸವಿದೆ. ಗಾಂಧಿ ಚಳುವಳಿ ಪ್ರಭಾವದಿಂದಾಗಿ ಉತ್ತರ ಕರ್ನಾಟಕದಲ್ಲಿ ಬಿಳಿ ಖಾದಿ ಟೊಪ್ಪಿಗೆ ಬಳಕೆ ಹೆಚ್ಚು. ಮಲೆನಾಡಿನಲ್ಲಿ ಚಡ್ಡಿ ಧರಿಸುವುದು ರೂಢಿ (ಬಹುಶಃ ಅಲ್ಲಿನ ಮಳೆಗಾಲ ಇದಕ್ಕೆ ಕಾರಣ). ಉತ್ತರ ಕರ್ನಾಟಕದಲ್ಲಿ ಹುಡುಗರಿಂದ ದೊಡ್ಡವರವರೆಗೆ ಕಾಸೆಪಂಚೆ ಜನಪ್ರಿಯ. ದಕ್ಷಿಣ ಭಾಗದಲ್ಲಿ ಹುಡುಗರು ಹೆಚ್ಚಾಗಿ ದಟ್ಟಿಯುಡುತ್ತಾರೆ. ಗುಡ್ಡಗಾಡಿನ ಮತ್ತು ಹಾಲಕ್ಕಿ ಒಕ್ಕಲಿನ ಕೆಲವು ಗಂಡಸರು ಬರೀ ಲಂಗೋಟಿಯಲ್ಲೇ ಇರುವುದುಂಟು.

ಗ್ರಾಮಾಂತರ ಪ್ರದೇಶದಲ್ಲಿ ಯಾರೇ ಇರಲಿ, ಯಾವ ಪ್ರದೇಶವೇ ಇರಲಿ, ಕೆಲಸದಲ್ಲಿದ್ದಾಗ ಬಟ್ಟೆಬರೆ ಕಡೆ ಅವರು ಅಷ್ಟಾಗಿ ಗಮನ ಕೊಡುವುದಿಲ್ಲ. ದೇವರ ಕೆಲಸ ಅಥವಾ ಮದುವೆ ಮುಂತಾದ ಶುಭ ಕೆಲಸಕ್ಕೆ ಹೋಗುವಾಗ, ತೇರು-ಜಾತ್ರೆಗಳಿಗೆ ಹೊರಟಾಗ ಬೆಲೆಯುಳ್ಳ ಮಡಿಬಟ್ಟೆ ಉಡುವುದು ರೂಢಿ. 'ಹೋಗಿ ಬರುವ ಕಡೆ' ಉಡಲಿಕ್ಕೆಂದೇ ಅಂತಹ ಬಟ್ಟೆಗಳನ್ನು 'ಗಳಿಗೆ' ಮಾಡಿ ಬೇರೆ ಇಟ್ಟಿರುತ್ತಾರೆ.

ನಮ್ಮ ಜನರ ತೊಡುಗೆಗಳದಂತೂ ದೊಡ್ಡ ಪಟ್ಟಿಯೇ ಆಗುತ್ತದೆ. ಹೆಂಗಸರ ಆಭರಣಗಳ ವೈಯಾರವಂತೂ ಹೇಳತೀರದು. ಮೂಗು, ಕಿವಿ, ಕೊರಳು, ತಲೆ, ಸೊಂಟ, ಕೈ, ಕಾಲು -ಹೀಗೆ ಒಂದೊಂದು ಭಾಗಕ್ಕೂ ಹೊಂದಿಕೊಳ್ಳುವ ಹತ್ತಾರು ಒಡವೆಗಳು ಅವರ ಸರಕಿನಲ್ಲಿರುತ್ತವೆ. ಮೂಗಿಗೆ ಧರಿಸುವ ಒಡವೆಗೆ ನತ್ತು, ಮೂಗುತಿ, ಬುಲಾಕು, ಬೊಟ್ಟು, ಮುರಿ, ಬೇಸರಿ, ಮುತ್ತು ಮೊದಲಾದ ನಾಮ ರೂಪಗಳು. ಪಟ್ಟೆಮುರಿ, ಅಂಚಿನ ಮುರಿ, ವಾಲೆ, ಬುಗುಡಿ, ಗುಪ್ಪಿಡಾಲ, ಕೆನ್ನೆ ಸರಪಳಿ, ಕಳಾವರ, ಲವಂಗ ಮುರಿ, ಮೇಟಿಕೊಳವೆ, ತಟ್ಟು, ಇಳಿಬಳೆ, ಜುಮುಕಿ, ಅಂಚಿನವಾಲೆ- ಇಂಥವು ಕಿವಿಯ ಅಲಂಕಾರಗಳು. ಕೈಗೆ ಕಡಗ, ಕಪ್ಪು, ಕಾಪು, ಬಳೆ, ಬಂದಿ, ಉಂಗುರ, ಸಲಿಗೆ, ಕಂಕಣ, ಬದ್ದು, ಚೈನುಗಳನ್ನಿಟ್ಟರೆ, ಕಾಲಿಗೆ ರುಳಿ, ಕಾಲಂದುಗೆ, ಕಾಲುಂಗುರ, ಕಾಲ್ಚೈನು, ಗೆಜ್ಜೆಸರ, ಕಾಲ್ಕಡಗ, ಗೊಬ್ಬಳಿ ಕಾಯಿ - ಇತ್ಯಾದಿಗಳನ್ನು ಧರಿಸುತ್ತಾರೆ. ಹೆಂಗಸರ ಕೊರಳು ಮತ್ತು ಕುರುಳುಗಳಂತೂ ಒಡವೆಗಳಿಗೆ ಸಡಗರದ ಸ್ಥಳಗಳು. ಅಡ್ಡಿಕೆ, ಕಾಸಿನಸರ, ಎಳೆಸರ, ಜೋಮಾಲೆ, ಮಣಿಸರ, ದೊಡ್ಡಗುಂಡು, ಸಣ್ಣಗುಂಡು, ಚೈನು, ಕಂಠಿಸರ, ಚಿಂತಾಕು, ತಾಳಿ, ಕರಿಮಣಿ, ತಾಯತ, ತುಳಸಿಮಣಿ, ಪದಕ - ಮೊದಲಾದವು ಕೊರಳನ್ನು ಅಲಂಕರಿಸಿದರೆ ನಾಗರು, ಜಡೆಬಿಲ್ಲೆ, ಚಂದ್ರಬಿಲ್ಲೆ, ಕಮಲದ ಹೂ, ರಾಗ್ಟೆ, ಚವರಿ, ತುಂಬು, ಸುತ್ತುಮಿಂಚು, ಪಿಲ್ಲಿ, ಮೇಟಿ, ಬೈತಲೆಬಳ್ಳಿ - ಇವು ಕುರುಳಿಗೆ ಭೂಷಣವಾಗುತ್ತವೆ. ಹಾಗೆಯೇ ಸೊಂಟಕ್ಕೆ ಗೆಜ್ಜೆಪಟ್ಟಿ, ಸಾದಾ ಪಟ್ಟಿ, ಡಾಬು, ತೋಳಿಗೆ ವಂಕಿ ಇರುತ್ತವೆ.

ಉಡುಗೆ ತೊಡುಗೆಗಳಲ್ಲಿ ಪ್ರತ್ಯೇಕವಾಗಿ ಎದ್ದು ಕಾಣುವವರೆಂದರೆ ಲಂಬಾಣಿ ಮಹಿಳೆಯರು. ಬಣ್ಣ ಬಣ್ಣದ ಬಟ್ಟೆಯ ಮೇಲೆ ಗಾಜಿನ ಬಿಲ್ಲೆ ಮತ್ತು ಕವಡೆಗಳ ಕಲಾತ್ಮಕ ಹೆಣಿಗೆಯಿರುತ್ತದೆ. ಅವರು ಉಡುವ ಲಂಗ (ಪೇಟಿಯಾ), ಕುಪ್ಪಸ (ಕಾಂಚೋಳಿ) ಮತ್ತು ತಲೆಯಮೇಲೆ ಸೆರಗಿನಂತೆ ಧರಿಸುವ ಮೇಲುವಸ್ತ್ರ (ಜಾಂಟ್ಯ)ಗಳು ವಿಶಿಷ್ಟ. ದಂತದ ಬಳೆ, ಬೆಳ್ಳಿಯುಂಗರ, ಕಡವೆ ಮತ್ತು ಬೆಳ್ಳಿಯ ಸರಮಾಲೆಗಳ ಕುಚ್ಚುಗಳು ಅವರ ಮೈ ತುಂಬಿಕೊಂಡಿರುತ್ತವೆ. ಅವರ ಒಡವೆಗಳಿಗೆಲ್ಲ ಅವರದೇ ಆದ ಹೆಸರುಗಳಿವೆ.

ಜನಪದ ಹೆಂಗಸರಲ್ಲಿ ಇಷ್ಟೊಂದು ಒಡವೆಗಳಿದ್ದರೆ ಅವರ ಶ್ರೀಮಂತಿಕೆ ಎಷ್ಟಿರಬೇಕು ಎನಿಸುವುದಲ್ಲವೆ? ಹಳ್ಳಿಯ ಹೆಣ್ಣಿನ ಮಾತಿನಲ್ಲಿ ಹೇಳುವುದಾದರೆ - "ಬಂಗಾರ ಬಳೆನಾಲ್ಕು, ಸಾಕು ನನ್ನ ಬಲಗೈಗೆ, ನಾಲ್ಕ್ವರಹದ್ವಾಲೆ ಹೂಬುಗುಡಿ- ಗೆಜ್ಜೆಟೀಕೆ ಸಾಕು ತವರವರು ಬಡವಾರು!" ತೌರಿನಿಂದ ಆಕೆ ನಿರೀಕ್ಷಿಸುವುದು ಇಷ್ಟೆ. ಏಕೆಂದರೆ ತೌರವರು ಬಡವರಂತೆ !

ಏನೇ ಇರಲಿ, ನಮ್ಮ ಜನರ ಎಲ್ಲ ಒಡವೆಗಳೂ ಚಿನ್ನದಿಂದ ಮಾಡಿದವೇನಲ್ಲ. ಉಳ್ಳವರು ಚಿನ್ನದ ಒಡವೆ ಮಾಡಿಸಿದರೆ, ಇಲ್ಲದವರಿಗೆ ಮಣ್ಣಿನ ಬಳೆ, ಬೆಳ್ಳಿಯುಂಗುರ, ಹಿತ್ತಾಳೆಯ ನತ್ತಾದರೂ ಆದೀತು. ಆದಿವಾಸಿಗಳು ಮತ್ತು ಗುಡ್ಡಗಾಡಿನ ಜನರಿಗೆಲ್ಲಿ ಬರಬೇಕು ಚಿನ್ನ ಬೆಳ್ಳಿ? ಕಾಡಿನ ಬಿದಿರಕಡ್ಡಿ, ಪ್ರಾಣಿಗಳ ಹಲ್ಲು, ಕೊಂಬು, ಕೂದಲಾದರೆ, ಕಡಲತೀರದ ಬಡವರಿಗೆ ದಡದಲ್ಲಿ ಸಿಗುವ ಶಂಕು, ಕಪ್ಪೆಚಿಪ್ಪು, ಮಣಿ ಮುಂತಾದವು ತೊಡುಗೆಗಳಾಗುತ್ತವೆ. ಉತ್ತರ ಕನ್ನಡದ ಹಾಲಕ್ಕಿ ಒಕ್ಕಲಿನ ಹೆಣ್ಣು ಮಕ್ಕಳು ಕೊರಳಿನ ತುಂಬ ಧರಿಸುವ ಬಣ್ಣಬಣ್ಣದ ಮಣಿಗಳ ಸರಮಾಲೆ ಬೇರೆಲ್ಲೂ ಕಾಣಿಸದ ತೊಡುಗೆ.

ಗಂಡಸರ ತೊಡುಗೆಗಳಲ್ಲಿ ಕೈಚೈನು, ಕೊರಳಚೈನು, ಬೆರಳುಂಗುರ ಇವಿಷ್ಟೆ ಮುಖ್ಯ. ಕೆಲವರು ಕಿವಿಗೆ ಹರಳು- ಕಡಕುಗಳನ್ನೂ, ಕೈಗೆ ಬೆಳ್ಳಿ -ಬಂಗಾರದ ಸಲಿಗೆಯನ್ನೂ ಇಡುವುದುಂಟು.

ಧಾರ್ಮಿಕವಾಗಿ ಜನಪದರು ತಮ್ಮತಮ್ಮ ಜನಾಂಗ ಪದ್ಧತಿಯಂತೆ ವಿಭೂತಿ, ಅರಿಸಿನ, ಗಂಧ, ನಾಮ, ಕುಂಕುಮ, ಸಾದು ಮೊದಲಾದವನ್ನು ಧರಿಸಿರುತ್ತಾರೆ. ಗಂಡಸರಿಗೆ ಉಡಿದಾರ ಸಾಮಾನ್ಯ ತೊಡುಗೆ. ರುದ್ರಾಕ್ಷಿ, ಜಪಮಣಿ ಸರ, ಕಂಬಳಿ ಎಳೆ -ಇವು ಅವರವರ ಸಂಪ್ರದಾಯದ ಕೊರಳ ಧಾರಣೆಗಳು.

## ಊಟ – ಉಪಚಾರ :

ಉಡುಗೆ-ತೊಡುಗೆಗಳ ಸಡಗರದೊಂದಿಗೆ ಜನಪದ ಊಟ- ಉಪಚಾರದ ಬೆಡಗನ್ನೂ ನೋಡಬೇಕು. ನಮ್ಮ ಜನಪದರ ಅಡಿಗೆಗಳು ಪಟ್ಟಣದ ಪಂಚಭಕ್ಷ್ಯಗಳೇನಲ್ಲ. ಕಷ್ಟ ಜೀವಿಗಳಾದ ಅವರಿಗೆ ಅವು ಸರಿಹೋಗುವುದೂ ಇಲ್ಲ. ನಿತ್ಯದ ಹಿಟ್ಟು-ರೊಟ್ಟಿ,ಸಾರು, ಮಜ್ಜಿಗೆ ಇಷ್ಟಾದರೆ ಸಾಕು. 'ಅಂಬಲಿಯಂತ ಊಟ ಇಲ್ಲ; ಕಂಬಳಿಯಂತಹ ಹೊದಿಕೆ ಇಲ್ಲ' ಎನ್ನುವುದು ಅವರ ಅನುಭವದ ಮಾತು. ಆದರೂ ಹಬ್ಬ ಹುಣ್ಣಿಮೆಗಳಲ್ಲಿ, ನಂಟರಿಷ್ಟರು ಬಂದಾಗ ಇದ್ದ ಪದಾರ್ಥಗಳಲ್ಲಿ ಬಗೆಬಗೆಯ ಅಡಿಗೆ ಮಾಡಿ, ಕೂಡಿ ಉಂಡು ನಲಿಯುತ್ತಾರೆ.

ರೊಟ್ಟಿ, ಹಿಂಡಿ (ಚಟ್ನಿ), ಹಿಟ್ಟು, ಹೆಸರು (ಸಾರು), ಹುಳ್ಳಿನುಚ್ಚು, ಹುಳಿಬಾನ, ಕಾರಬ್ಯಾಳಿ, ಮಜ್ಜಿಗಾಂಬ್ರ, ಕಟ್ಟಂಬಲಿ, ಹುಳಿಸೊಪ್ಪು, ಬಸ್ತಹೆಸರು, ಸಪ್ಪನ್ನ - ಇವು ನಿತ್ಯದ ಸರ್ವಸಾಮಾನ್ಯ ಊಟ. ವಿಶೇಷ ಸಂದರ್ಭಗಳಲ್ಲಿ -ಕಿಚಿಡಿ, ಸಜ್ಜಕ, ಬೆಲ್ಲಕ್ಕಿ, ಗುಳಿಗಿಗಾಲಿ, ಸೌತಬೀಜ, ಉಗುರೊತ್ತು, ಹೋಳಿಗೆ, ಎಳ್ಳು ಹೋಳಿಗೆ, ಕರ್ಜಿಕಾಯಿ, ಅಕ್ಕಿಹುಗ್ಗಿ, ಗೋಧಿ ಹುಗ್ಗಿ, ಶ್ಯಾವಿಗೆ, ಮಾಲ್ದಿ, ಉಸುಳಿ, ಕಡಬು, ಪರಂಗಿ ಕಡುಬು, ಉಸಿರು ಕಡುಬು, ಕುಚ್ಚುಕಡುಬು, ಕಾಯ್ಕಡುಬು, ತೊಗೆ, ಭಜಿ, ಗಜ್ಜರಿ, ಪಾಯಸ, ಕೀಲಸ, ಗಿಣ್ಣ, ಹುರಿಹುಗ್ಗಿ, ಕಣಕ, ಕಾಯಿ ದೋಸೆ, ಅಳ್ಳಿಟ್ಟು, ಬೆಲ್ಲದನ್ನ, ಎಣ್ಣೆಗಾಯಿ, ಭರ್ತ, ನಾಮತಳಿಗೆ, ತಂಬಿಟ್ಟು, ಸೂಸಲು, ಚಕ್ಕಲಿ, ವಡೆ ಇತ್ಯಾದಿ. ಜೊತೆಗೆ ಬಗೆಬಗೆಯ ಚಟ್ನಿ, ಪಲ್ಯೆ, ಉಪ್ಪಿನಕಾಯಿಯಂತಹ ಬಾಯಿ ರುಚಿಗಳು. ಒಂದೊಂದು ಭಾಗದಲ್ಲಿ ಒಂದೊಂದು ಅಡಿಗೆ ಜನಪ್ರಿಯ. ಒಂದೇ ಅಡಿಗೆಗೆ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಹೆಸರೂ ಇರಬಹುದು.

ಜನಪದ ಅಡಿಗೆಗಳು ಪೌಷ್ಟಕತೆ ದೃಷ್ಟಿಯಿಂದ ಅತ್ಯಂತ ಮಹತ್ವವುಳ್ಳವೆಂದು ಹೇಳಬಹುದು. ರಾಗಿ ಮುದ್ದೆ, ಸೊಪ್ಪಿನ ಸಂಚಿಕೆ, ಹುರುಳಿ ಸಾರು, ಮೇಲೆ ಗಟ್ಟಿ ಮಜ್ಜಿಗೆ- ಇದಕ್ಕಿಂತ ಪೌಷ್ಟಿಕಾಹಾರ ಬೇಕೆ? ನಮ್ಮ ಹಳ್ಳಿಯಲ್ಲಿ ನನ್ನ ತಾಯಿ 'ಮುದ್ದೆಗಡಬು' ಮಾಡುತ್ತಿದ್ದರು. ಅಕ್ಕಿಯ ತೌಡಿಗೆ ಕಡಲೆಬೀಜ,ಕೊತ್ತಂಬರಿ ಸೊಪ್ಪು, ಕರಿಬೇವು-ಮೊದಲಾದವನ್ನು ಬೆರೆಸಿ ಮುದ್ದೆಯಂತೆ ಉಂಡೆ ಕಟ್ಟಿ ಉಸಿರು ಕಡುಬಿನಂತೆ ಬೇಯಿಸುವುದೇ 'ಮುದ್ದೆಗಡುಬು'. ಅದರ ರುಚಿ ಬರೆದರೆ, ಓದಿದರೆ ತಿಳಿಯುವುದಿಲ್ಲ; ತಿಂದೇ ನೋಡಬೇಕು!

ಜನಪದ ಮಾಂಸಾಹಾರವೂ ಅಷ್ಟೇ ರುಚಿಕರವಂತೆ !"ಬಾಡಿನ ಆಸೆಗೆ ಬಳ್ಳೇಕೆರೆಗೆ ಹೋದ್ರು" ಎಂಬ ಗಾದೆಮಾತೇ ಇದೆ. "ಕೋಳಿಬಾಡೆಸ್ರು, ಕೋಲಮ್ಯಾಗಳ ಹಿಟ್ಟು, ಹೊಂಗೆ ನೆಳ್ಳು, ತೊರೆ ಮಳ್ಳು,", ಇಷ್ಟಿದ್ದರೆ ಅವರಿಗೆ 'ಸಗ್ಗವೂ ಸುಳ್ಳು'! ನಮ್ಮ ಜನ ಉಂಡು ಎಲೆ ಅಡಿಕೆ ಹಾಕಿಕೊಂಡು ಮಾತಿಗೆ ಕುಳಿತರೆ ಅದರ ಮೋಜೇ ಬೇರೆ!

ಮನೆಗೆ ಬಂದವರ ಉಪಚಾರದಲ್ಲಿ ಹಳ್ಳಿಗರು ತಮ್ಮದೇ ಆದ ಪದ್ಧತಿ ಇಟ್ಟುಕೊಂಡಿದ್ದಾರೆ. ಯಾರೇ ಮನೆಗೆ ಬರಲಿ, ಬಂದ ಕೂಡಲೇ ಚಾಪೆ ಹಾಸಿ, ಅವರನ್ನು ಕೂರಿಸಿ, 'ಕ್ಷೇಮ ಸಮಾಚಾರ, ಮಳೆ ಬೆಳೆ' ಬಗ್ಗೆ ವಿಚಾರಿಸಿ, 'ಕೈಕಾಲು ತೊಳೀರಿ ಊಟ ಮಾಡ್ರಿ' ಎನ್ನದೆ ಬಿಡುವುದಿಲ್ಲ. ಮಲೆನಾಡಿನಲ್ಲಂತೂ ಬೇಸಿಗೆಯಲ್ಲಿ ಬಂದವರ ಆಯಾಸ ಪರಿಹಾರಕ್ಕೆ ಮೊದಲು 'ಬೆಲ್ಲ-ನೀರು' ದೊರಕುವುದು ಖಂಡಿತ. ವಿಶೇಷ ಸಂದರ್ಭಗಳಲ್ಲಿ ತಮ್ಮ ನೆಂಟರಿಷ್ಟರ ಮನೆಗೆ ಹೋಗಿ ಊಟಕ್ಕೆ ಆಹ್ವಾನ ಕೊಟ್ಟು ಬರುವುದು ಹಳ್ಳಿಗರಲ್ಲಿ ಸಾಮಾನ್ಯ ಪದ್ಧತಿ. 'ಈ ಹೊತ್ತು ಒಲೆಗೆ ಬೆಂಕಿ ಹಾಕ್ಬೇಡಿ', ಎನ್ನುವುದು, 'ಇಡೀ ಮನೆಯವರು ಊಟಕ್ಕೆ ಬರಬೇಕು' ಎಂದು ಕೊಡುವ ಆಮಂತ್ರಣ. ಎಂತಹ ಬಡವರಿದ್ದರೂ ಮನೆಗೆ ಬಂದವರಿಗೆ ಎಲೆ ಅಡಿಕೆ ಕೊಡದೆ ಕಳುಹಿಸುವುದು ಜನಪದರಲ್ಲಿ ಅಪರೂಪ.

## ಮರ-ಮುಟ್ಟು :

ಹಳ್ಳಿಯ ಜೀವನಾಡಿ ರೈತ. ಹಳ್ಳಿಯಷ್ಟೇ ಏಕೆ, ದಿಳ್ಳಿಯ ಜೀವನಾಡಿಯೂ ಅವನೇ. ಆತ 'ರಾಜ್ಯಗಳಳಿಯಲಿ ರಾಜ್ಯಗಳುದಿಸಲಿ,ಬಿತ್ತುಳುವುದನು ಬಿಡದ' ಕಾಯಕಯೋಗಿ. ಆತ ತನ್ನ ಕಾಯಕವನ್ನು ಕೈಬಿಟ್ಟರೆ ಲೋಕದ ಕತೆ ಮುಗಿದಂತೆ. ಅವನ ಕಾಯಕದ ಫಲ ಸಕಲ ಜೀವರಾಶಿಗೂ ಬೇಕು. 'ಅತಿಸುಖಕೆಳಸದ' ಈ ಶ್ರಮಜೀವಿ ತಾನೂ ಬದುಕಿ ತನ್ನ ನೆರೆಹೊರೆಯವರ ಕಷ್ಟಕ್ಕೂ ಆಗುತ್ತಾನೆ. 'ಹದ ನೋಡಿ ಹರಗಿ ಬೆದೆ ನೋಡಿ ಬಿತ್ತುವ' ಅವನ ಶ್ರಮಕ್ಕೆ ತಕ್ಕಂತೆ 'ಮುಂಗಾರಿ ಬೆಳೆ ಮದವೇರಿ' ಬರುತ್ತದೆ. ಕಾಳಿನ ಹಾಲುಂಡ ಹಕ್ಕಿಗಳು 'ಎದೆ ತೆರೆದು' ಹಾಡಿ ಹರಸುತ್ತವೆ.

ರೈತನ ಬಾಳೇ ಒಂದು ಕಿರು ಪ್ರಪಂಚ. ಅವನು ತನ್ನ ಕಾಯಕದಲ್ಲಿ ಬಳಸುವ ಸಾಧನ ಸಲಕರಣೆಗಳು ಮತ್ತು ಉಳುಮೆಯ ಉಪಕರಣಗಳನ್ನು ನೋಡಿ-ಎಷ್ಟು ವಿಧ, ಎಷ್ಟು ಹೆಸರು ? ಇದೆಲ್ಲ ತಯಾರಾಗುವುದು ಜನಪದ ಕಾರ್ಖಾನೆಯಲ್ಲೇ. ಅವಕ್ಕೆ 'ಟ್ರೇಡ್‌ಮಾರ್ಕ್' ಇಲ್ಲ. 'ಸ್ಪೇರ್ ಪಾರ್ಟ್'ಗಾಗಿ ಕಾಯಬೇಕಾಗಿಲ್ಲ. ಈಗ ಏನೆಲ್ಲ ಯಂತ್ರ ಸಾಧನಗಳು ಬಂದಿದ್ದರೂ ರೈತ ತನ್ನ ಪರಂಪರೆಯ ಸಾಧನ-ಸಲಕರಣೆಗಳನ್ನು ಬಳಸಲೇ ಬೇಕು. ಆಧುನಿಕ ಯಂತ್ರ ಸಾಧನಗಳು ಲೋಹದ 'ಸ್ಪೂನ್' ಇದ್ದಂತೆ, ನಮ್ಮ ಹಳ್ಳಿಯ ಉಪಕರಣಗಳು 'ಕೈಬೆರಳಿದ್ದಂತೆ' ಎನ್ನುತ್ತಾನೆ, ನಮ್ಮ ರೈತ. ಅವನ ಉಪಕರಣಗಳಿಗೆ ಅವನ ಕೆಲಸಕ್ಕೆ ತಕ್ಕಂತೆ ಮಾಡಿದ ವಿನ್ಯಾಸವಿರುತ್ತದೆ. ಕೆಲವನ್ನು ತಾನೇ ಸ್ವತಃ ತಯಾರುಮಾಡಿಕೊಂಡರೆ, ಇನ್ನು ಕೆಲವಕ್ಕೆ ಊರಿನ ಬಡಗಿ, ಕಮ್ಮಾರ, ಕುಶಲಕರ್ಮಿಗಳ ನೆರವು ಪಡೆಯುತ್ತಾನೆ. ಆ ನೆರವಿಗೆ ಪ್ರತಿಯಾಗಿ ಕಾಳು ಕಡ್ಡಿ ರೂಪದಲ್ಲಿ ಬೆಲೆ ತೆರುತ್ತಾನೆ. ಹಳ್ಳಿಯ ಸಾಧನ ಸಲಕರಣೆಗಳೆಲ್ಲ 'ಮರ ಮುಟ್ಟು' ಎನಿಸಿಕೊಳ್ಳುತ್ತವೆ.

ನೇಗಿಲು (ಈಚು, ಮೇಣಿ,ಮುಂಡು, ಜಿಗಣಿ, ಕುಳ ಎಲ್ಲ ಸೇರಿ), ನೊಗ, ಕಣ್ಣಿ, ಅಗಡು, ಹೂಡಗ್ಗ, ಗಣೆಯಗ್ಗ, ಬಾಯಿಕುಕ್ಕೆ, ಕಿಚಡಿ ಕೀಲು, ಬಡಿಚಕ್ಕೆ, ಕೂರಿಗೆ, ಕುಂಟೆ, ಹಲುಬೆ, ಸಡ್ಡೆ, ಹೆಗ್ಗುಂಟೆ, ಮುಳುಗುಂಟೆ, ಕೊರಡು, ಎಡಕುಂಟೆ, ಹೆಳವು, ಕಬ್ಬಿಣದ ನೇಗಿಲು, ಬಂಡಿ, ಕಿರುಬಂಡಿ, ಕೋಲು, ಬಾರುಕೋಲು- ಮೊದಲಾಗಿ ಉಳುಮೆಗೆ ಬೇಕಾದ ಸಾಧನ ಸಲಕರಣೆಗಳು. ಗುದ್ದಲಿ, ಹಾರೆ, ಎಲೆಗುದ್ದಲಿ, ಕೊಡಲಿ, ಬಾಚಿ, ರಂಪ, ಗರಗಸ, ಉಳಿ, ಆಗ್ರ, ಬೈರಿಗೆ, ಕೊಡತಿ, ಸುತ್ತಿಗೆ, ತೋಪಡ ಕುಡ್ಲು, ಕಂದ್ಲಿ, ಪಿಕಾಸಿ, ಮಚ್ಚು, ಆರುವಳ್ಳಿ, ಕುರುಜಿಗೆ ಇತ್ಯಾದಿ ಅಗೆತ, ಕೊಯ್ತ ಮತ್ತು ಕಡಿತದ ಸಾಧನಗಳು. ಬರಲು, ಕಟ್ಟಿಗೆ, ಉಬ್ಬರಲು, ಮೊರ, ಜರಡಿ, ಅಟ್ಟಣೆ, ಕುದುರೆಮಣಿ, ಗೋರುಮಣಿ, ಮೇಣಿ, ರೋಣಗಲ್ಲು, ದಿಂಡು ಇತ್ಯಾದಿ ಕಣಗೆಲಸದ ಉಪಕರಣಗಳು; ಹಗೇವು, ವಾಡೆ, ಕೊಮ್ಮು, ಹರವಿ, ಗುಡಾಣ, ಗಳಿಗೆ, ಗೆರಸಿ, ತಿತ್ತಿ ಮೂಡೆ, ಪೆಂಡೆ, ಜಲ್ಲೆ, ಕುಕ್ಕೆ, ಚೀಲ ಮೊದಲಾದ ಕಾಳುಕಡ್ಡಿ ತುಂಬುವ ವ್ಯವಸ್ಥೆಗಳು; ಗದ್ದೆ ತೋಟಗಳಿಗೆ ನೀರು ಬಿಡುವ ಕಪಿಲೆ, ಏತ ಇತ್ಯಾದಿಗಳಿವೆ. ಇಷ್ಟೇ ಅಲ್ಲ. ಇನ್ನೂ ಎಷ್ಟೋ ಇವೆ.

ಇನ್ನು ಜನಪದರ ಜಗತ್ತಿನಲ್ಲಿ ದನಕರು, ಎತ್ತು, ಕೋಳಿ, ಕುರಿ, ಆಡು, ಹಂದಿ ಇವುಗಳ ಪಾತ್ರವಂತೂ ಅವಿಭಾಜ್ಯ. ಕೆಲವು ಉಳುಮೆಗೆ, ಗೊಬ್ಬರಕ್ಕೆ, ಹಾಲು ಹೈನಕ್ಕಾದರೆ, ಇನ್ನು ಕೆಲವು ಮಾಂಸಕ್ಕೆ ಮತ್ತು ಅನುವು ಆಪತ್ತಿನಲ್ಲಿ ಮಾರಿ ಹಣ ಗಳಿಸುವುದಕ್ಕೆ ಆಗುತ್ತವೆ. ಹಳ್ಳಿಗಳಲ್ಲಿ ನಾಯಿ ಬೆಕ್ಕುಗಳಂತೂ ಯಾರು ಸಾಕದಿದ್ದರೂ ಇರುತ್ತವೆ. ಇಲಿಗಳಿಗೆ ನಗರಗಳಿಗಿಂತ ಹಳ್ಳಿಗಳಲ್ಲೇ ಹಬ್ಬ ! ಹಕ್ಕಿ-ಪಕ್ಷಿಗಳಿಗಂತೂ ಹಳ್ಳಿ ಮತ್ತು ಗುಡ್ಡಗಾಡು ಸ್ವರ್ಗಸೀಮೆ !

## ದೇವರು-ದಿಂಡರು :

ಜನಪದ ಬದುಕಿನ ಸರ್ವಾಧಾರ- ದೇವರ ಬಗೆಗೆ ಇರುವ ಭಯ, ಭಕ್ತಿ ಮತ್ತು ಶ್ರದ್ಧೆ. "ದೇವರ ನೆನೆದಾರೆ ಹುಟ್ಟು, ಸಾವು ನಮಗಿಲ್ಲ" ಎನ್ನುವ ನಿಶ್ಚಲ ನಂಬಿಕೆ ನಮ್ಮ ಜನಪದರದು. ಅವರ ಬದುಕಿಗೆ ಆಗಿರುವ ಗಾಳಿ, ನೀರು, ಬೆಂಕಿ, ಮಣ್ಣು, ಮುಗಿಲು-ಎಲ್ಲವೂ ಅವರಿಗೆ ದೈವ ಸ್ವರೂಪವೇ. ಅವು ಒಲಿದರೆ ಅವರಿಗೆ ಗೆಲುವು, ಮುನಿದರೆ ಸೋಲು, ಸಾವು. ಆದ್ದರಿಂದಲೇ ಸದಾ ತಾವು ನಂಬಿದ ದೈವಕ್ಕೆ ಒಳ್ಳೆಯವರಾಗಿರಲು ಪ್ರಯತ್ನಿಸುತ್ತಾರೆ. ಏಕೆಂದರೆ 'ಉಚ್ಚಂಗಿ ಕೆಂಚವ್ವ ಉಟ್ಟಾಳ ಉಡುಗೀಯ, ತೊಟ್ಟಾಳ ನಾಗಭರಣೀಯ ಕೆಟ್ಟವಗೆ ಬಿಟ್ಟಾಳ ತನ್ನ ಉರಿಗಣ್ಣು !' ಎಂಬ ಹೆದರಿಕೆ ಅವರಿಗೆ.

ಜನಪದರಿಗೆ ಪಂಚಭೂತಗಳು ಒಲಿದಾಗ ದೇವರಾಗುತ್ತವೆ. ಮುನಿದಾಗ ದೆವ್ವಗಳಾಗುತ್ತವೆ. ಅಂತೇ ಅವುಗಳ ಪ್ರೀತ್ಯರ್ಥವಾಗಿ ತಮಗೆ ಹತ್ತಿರವಿರುವ ಒಂದು ಕಲ್ಲನ್ನೋ, ಮರವನ್ನೋ, ಹುತ್ತವನ್ನೋ ದೇವರ ಸಂಕೇತ ಮಾಡಿಕೊಂಡು ಅವುಗಳ ಮೂಲಕ ತಮ್ಮ ಭಕ್ತಿ ಕಾಣಿಕೆಗಳನ್ನು ಅರ್ಪಿಸುತ್ತಾರೆ. ಅವರು ಕಲ್ಪಿಸಿಕೊಂಡ ದೇವರುಗಳಲ್ಲಿ ರಾಜಸ, ತಾಮಸ, ಸಾತ್ವಿಕ ಕಳೆಯ ದೇವರೆಲ್ಲ ಇವೆ. ಸಾತ್ವಿಕ ಕಳೆಯ ದೈವಕ್ಕೆ ಭಕ್ತಿ ಕಾಣಿಕೆಯಾದರೆ, ತಾಮಸ ಕಳೆಯ ದೈವಕ್ಕೆ ಭಯ ಕಾಣಿಕೆಯಾಗುತ್ತದೆ. ರಾಜಸ ದೈವಕ್ಕೆ ಶ್ರದ್ಧೆ ಮುಡಿಪು.

ಪ್ರಕೃತಿಯ ವ್ಯಾಪಾರ ನೋಡಿ ಸೋಜಿಗಗೊಂಡಿರುವ ಗ್ರಾಮೀಣರಿಗೆ ಅನೇಕ ವೇಳೆ ಎಡವಿದ ಕಲ್ಲು, ಕೆಡವಿದ ಮರ, ತೊಡರಿದ ಗಿಡಬಳ್ಳಿಗಳೂ ದೈವಗಳಾಗುತ್ತವೆ. ತಾವು ಆರಾಧಿಸುವ ದೈವಗಳಿಗೆ ತಾವೇ ನಾಮಕರಣ ಮಾಡುತ್ತಾರೆ. ಹೀಗಾಗಿ ಒಂದೊಂದು ಊರಿನಲ್ಲಿ ಒಂದೊಂದು ದೈವ. ಒಂದೊಂದು ಸ್ಥಳ ಮಹತ್ವ.

ಜನಪದರು ಏನನ್ನು ಉದಾಸೀನ ಮಾಡಿದರೂ ದೇವರು - ದಿಂಡರ ಬಗ್ಗೆ ಮಾತ್ರ ಬಹು ಎಚ್ಚರ ವಹಿಸುತ್ತಾರೆ. ಅವು "ಮರೆತರೆ ಮನೆ ಮುರಿದಾವು" ಎಂಬ ಭಯ ಅವರಿಗೆ. ಜನಪದ ದೈವಗಳಲ್ಲಿ ಹಲವು ಗಂಡು ದೈವಗಳು, ಉಳಿದವು ಹೆಣ್ಣು ದೈವಗಳು.

ಗಂಡು ದೇವರುಗಳ ಕೆಲವು ಹೆಸರು ಹೇಳಬೇಕೆಂದರೆ - ಹಂಪಿಯ ವಿರೂಪಾಕ್ಷ, ಬಿಳಿಗಿರಿ ರಂಗನಾಥ, ಮೇಲುಕೋಟೆ ಚೆಲುವಯ್ಯ, ಮಲೆಯ ಮಾದೇಶ್ವರ, ಚುಂಚನಗಿರಿ ಭೈರವ, ನಿಂಬರಗಿ ಬಲಭೀಮ, ಸೊನ್ನಲಿಗೆ ಸಿದ್ಧರಾಮ, ಕಲ್ಯಾಣದ ಬಸವಯ್ಯ, ಬಂಥನಾಳದ ಸಂಗಯ್ಯ, ಬಾಣಾವರದ ಬೆನವಣ್ಣ, ಗುಡ್ಡದ ಜಂಬಯ್ಯ, ಹಾಗಲವಾಡಿ ಜುಂಜಪ್ಪ, ಪಂಢರಾಪುರದ ವಿಠೋಬಾ, ಎಡೆಯೂರ ವೀರಭದ್ರ, ನರಗುಂದದ ವೆಂಕೋಬಾ, ಯಮನೂರ ಪೀರ, ಗೊಡಚಿ ಈರಣ್ಣ, ಹುಲಕುಂದ ರಾಮಪ್ಪ, ಮುಡುಕುತೊರೆ ಮಲ್ಲೇಶ, ಚಿಲುಕೋಡಿ ಶಂಭುಲಿಂಗ, ಭೂತಾಳ ಸಿದ್ಧಯ್ಯ, ಗುತ್ತಲ ಕರಿಮಯ್ಯ, ಕೊಟ್ಟೂರು ಬಸವ, ಬೆಟ್ಟದ ತಿಮ್ಮಪ್ಪ,

ನಂಜನಗೂಡು ನಂಜುಂಡ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಕೋಡಿ ಭರಮಪ್ಪ, ಚಿಗಟೇರಿ ನಾರಪ್ಪ, ಮೈಲಾರಲಿಂಗ, ಉಜ್ಜನಿ ಮರುಳಯ್ಯ, ಪರ್ವತದ ಮಲ್ಲಯ್ಯ, ನಾಗಮಂಗಲದ ನರಸಿಂಹ, ಕರವೀರ, ಕಲ್ಲೇಶ, ಪಾರೀಸನಾಥ, ಆರುಕಯ್ಯ, ಹನುಮಪ್ಪ, ಹುಲಿಜಂತಿ ಮಾಳಪ್ಪ-ಹೀಗೆ ಒಂದೊಂದು ಪ್ರದೇಶದಲ್ಲಿ ಒಂದೊಂದು ದೇವರು ಪ್ರಸಿದ್ಧ. ಇಂತಹ ಪ್ರಸಿದ್ಧ ದೇವರುಗಳಿಗೆ ಹತ್ತಿರದವರು ಸುತ್ತಮುತ್ತಿನವರಷ್ಟೇ ಅಲ್ಲ, ದೂರದ ಊರುಗಳಿಂದಲೂ ಭಕ್ತರು ಬಂದು ಪೂಜೆ ಹರಕೆ ಸಲ್ಲಿಸುತ್ತಾರೆ.

ಇನ್ನು ಹೆಣ್ಣು ದೇವರುಗಳೆಂದರೆ-ಬೆಟ್ಟದ ಚಾಮುಂಡಿ, ಹೇಮರೆಡ್ಡಿ ಮಲ್ಲಮ್ಮ, ಏಳುಕೊಳ್ಳದ ಯಲ್ಲಮ್ಮ, ದಂಡಿನ ಮಾರಮ್ಮ, ಬಾಡದಮ್ಮ, ಚೌಡಮ್ಮ, ದೊಡ್ಡಮ್ಮ, ದೇವೀರಮ್ಮ, ತೊಳಸಮ್ಮ, ತಿಪ್ಪವ್ವ, ಬ್ಯಾಲಕಮ್ಮ, ಕ್ಯಾತಮ್ಮ, ಮಾಸಮ್ಮ, ದ್ಯಾಮವ್ವ, ಬನಶಂಕರಿ, ಉಡುಸಲವ್ವ, ಹೊನ್ನಾವರಮ್ಮ, ಎಂಕಮ್ಮ, ಮಾದೇವಿ, ಸೀವಮ್ಮ, ಭಸ್ಮಮ್ಮ, ಕರಿಯಮ್ಮ, ಸತ್ಯವ್ವ, ಕಾಳವ್ವ, ಜಕ್ಕವ್ವ, ಬಬಲಾದಿ ಕೊಂತ್ಯವ್ವ, ಪಾತಾಳ ಗಂಗವ್ವ, ಅಂತರಗಟ್ಟೆ ಮಾರಮ್ಮ, ಕದಿರೆಮ್ಮ, ಹಲಸಂಗಿ ಕೆಂಚವ್ವ, ಕೊಂಡಳ್ಳಿ ಲಕ್ಕವ್ವ ಇತ್ಯಾದಿ. ಸಾಮಾನ್ಯವಾಗಿ ಜನಪದರ ಮೇಲೆ ಗಂಡು ದೈವಗಳಿಗಿಂತ ಹೆಣ್ಣು ದೈವಗಳ ಪ್ರಭಾವವೇ ಹೆಚ್ಚೆಂದು ಹೇಳಬಹುದು.

ಎಷ್ಟೋ ಕಡೆ, ಈ ದೇವ ದೇವತೆಗಳ ಮಧ್ಯೆ ಮದುವಣಿಗ - ಮದುವಣಗಿತ್ತಿ, ಗಂಡ-ಹೆಂಡತಿ, ಮಿಂಡ-ಸೂಳೆಯರ ಸಂಬಂಧವಿರುವುದೂ ಉಂಟು ! ಕೆಲವು ದೈವಗಳಿಗೆ ಭದ್ರವಾದ ಆಲಯಗಳಿದ್ದರೆ, ಕೆಲವಕ್ಕೆ ಕಲ್ಲುಮಣ್ಣಿನ ಸಣ್ಣ ಗುಡಿಗಳಿರುತ್ತವೆ. ಮತ್ತೆ ಕೆಲವು ಬಯಲಿನಲ್ಲೇ ಮಳೆ, ಗಾಳಿ, ಛಳಿ, ಬಿಸಿಲುಗಳನ್ನು ಅನುಭವಿಸುತ್ತವೆ. ಹಬ್ಬ-ತೇರು-ಜಾತ್ರೆಗಳು ಬಂದಾಗ ಈ ದೈವಗಳಿಗೆಲ್ಲ ವಿಶೇಷ ಸ್ನಾನ, ಪೂಜೆ, ಪ್ರಸಾದಗಳು ಮತ್ತು ಮೆರಣಿಗೆಯ ಮನ್ನಣೆಗಳು ದೊರಕುತ್ತವೆ.

ಜನಪದ ದೈವಗಳ ವಿಶೇಷವೆಂದರೆ, ಊರಿನ ಯಾವುದೇ ದೈವವಿರಲಿ, ಸಾಮಾನ್ಯವಾಗಿ ಜಾತಿಭೇದವಿಲ್ಲದೆ ಎಲ್ಲರೂ ನಡೆದುಕೊಳ್ಳುವುದು. ಈಗ ಕಾಲ ಬದಲಾಯಿಸಿದೆ. ನಾನಾ ಕಾರಣಗಳಿಂದಾಗಿ ಜನ ತಮ್ಮ ಜಾತಿ ಅಂತಸ್ತುಗಳನ್ನು ಹೆಚ್ಚು ಹೆಚ್ಚಾಗಿ ಗುರುತಿಸಿಕೊಳ್ಳತೊಡಗಿದ್ದಾರೆ. ಪರಿಣಾಮವಾಗಿ ದೈವಗಳಲ್ಲೂ ಮೇಲು ಕೀಳುಗಳ ವರ್ಗೀಕರಣವಾಗುತ್ತಿದೆ. ಏನೇ ಇದ್ದರೂ ಗ್ರಾಮೀಣ ಜೀವನದಲ್ಲಿ ದೇವ-ದೇವತೆಗಳು ಇನ್ನೂ ತಮ್ಮ ಹಿಡಿತವನ್ನು ಬಿಟ್ಟುಕೊಟ್ಟಿಲ್ಲವೆಂದೇ ಹೇಳಬೇಕು.

## ಊರು-ಕೇರಿ :

ಜನಪದರ ಊರು-ಕೇರಿಗಳ ಹೆಸರುಗಳದೇ ಒಂದು ಸೊಗಸು. ಕರ್ನಾಟಕದಲ್ಲಿ ಸುಮಾರು ಇಪ್ಪತ್ತಾರು ಸಾವಿರದಷ್ಟು ಗ್ರಾಮಗಳಿವೆ. ಇವುಗಳಲ್ಲಿ ಒಂದೇ ಹೆಸರಿನ ಹಲವಾರು ಗ್ರಾಮಗಳಿರಬಹುದು. ಸಾಮಾನ್ಯವಾಗಿ ಈ ಗ್ರಾಮಗಳ ಹೆಸರುಗಳಿಗೆ ಊರು, ಹಳ್ಳಿ, ಪುರ, ಕೆರೆ, ಘಟ್ಟ, ಹಟ್ಟಿ, ಕೇರಿ, ಹಾಳು, ಕೋಟೆ, ಪೇಟೆ, ದೊಡ್ಡಿ, ಕಲ್ಲು, ಗುಡ್ಡ, ದುರ್ಗ, ದಿನ್ನಿ, ಮರಡಿ, ಕಟ್ಟೆ, ಕೊಪ್ಪ, ಕೊಪ್ಪಲು, ಬೈಲು, ವಾಡಿ, ಕುಪ್ಪೆ, ಬೀಡು, ಗಾವಲು, ಪಾಳ್ಯ, ಗೋಡು, ಮನೆ, ಸಾಲು, ಗುತ್ತಿ, ಕೊಂಡ, ಮಲೆ, ಏರಿ, ಆರು, ಬಾರ್, ಬಾಗ, ಸಂದ್ರ, ಕೊಳ್ಳ, ಗುಂಡಿ, ಗೊಂಡಿ, ಆಡಿ, ಆಲಿ, ಜಾಲಿ, ಗುಂಜೆ, ಗದ್ದೆ, ಗುಂದಿ, ಕಾಡು, ತೊರೆ, ಕುರ್ಕಿ, ಕುಂಟೆ, ಮಣೆ, ವರ, ಹಡ್ಲು, ಸರ, ಹುಂಡಿ, ಹೊಳೆ, ಬಾವಿ, ಸಾಗರ- ಇಂತಹ ಪ್ರತ್ಯಯಗಳು ಹತ್ತಿಕೊಂಡೇ ಇರುತ್ತವೆ. ಈ ಪ್ರತ್ಯಯಗಳ ಹಂಗಿಲ್ಲದ ಗ್ರಾಮಗಳೂ ಸಾಕಷ್ಟು ಸಂಖ್ಯೆಯಲ್ಲಿವೆ.

ಒಂದೊಂದು ಗ್ರಾಮದ ನಾಮಕರಣಕ್ಕೂ ತನ್ನದೇ ಆದ ಆಡಳಿತಾತ್ಮಕ, ಭೌಗೋಳಿಕ, ಧಾರ್ಮಿಕ, ಚಾರಿತ್ರಿಕ, ರಾಜಕೀಯ, ಸಾಮಾಜಿಕ - ಹೀಗೆ ಹಲವಾರು ಹಿನ್ನೆಲೆಗಳಿರುತ್ತವೆ. ಹಲವು ಗ್ರಾಮಗಳಿಗೆ ಆಕಸ್ಮಿಕ ಅಥವಾ ಸಾಂದರ್ಭಿಕ ಕಾರಣಗಳಿಂದಲೂ ಆಯಾ ಹೆಸರು ಬಂದಿರಬಹುದು. ಆರಂಭದ ಹೆಸರುಗಳು ಬರಬರುತ್ತ ಜನರ ಬಾಯಲ್ಲಿ ಪರಿವರ್ತನೆ ಹೊಂದಿರುವ ಉದಾಹರಣೆಗಳಿಗೂ ಕೊರತೆಯಿಲ್ಲ.

ನಮ್ಮ ನಾಡಿನ ಹಳ್ಳಿಗಳ ಹೆಸರುಗಳ ಮೇಲೆಯೇ ಅವು ಯಾವ ಪ್ರದೇಶಕ್ಕೆ ಸೇರಿರಬಹುದೆಂಬುದನ್ನು ಸ್ಥೂಲವಾಗಿ ಹೇಳಬಹುದು. ಊರು, ಹಳ್ಳಿ, ಪುರ, ಕೆರೆ, ಕಟ್ಟೆ, ಸಂದ್ರ, ಕೊಪ್ಪಲು, ಹುಂಡಿ, ಪಾಳ್ಯ ಮೊದಲಾದ ಪ್ರತ್ಯಯಗಳಿರುವ ಗ್ರಾಮಗಳು ಸಾಮಾನ್ಯವಾಗಿ ಹಳೆಯ ಮೈಸೂರು ಭಾಗದಲ್ಲಿ ಕಂಡುಬಂದರೆ, ಗುಡ್ಡ, ದಿನ್ನಿ, ಹಾಳು, ವಾಡಿ, ಬೈಲು, ಬಾರ್, ಗುಂದ, ಗೊಂಡು ಮೊದಲಾದ ಪ್ರತ್ಯಯಗಳ ಊರುಗಳು ಹೆಚ್ಚಾಗಿ ಉತ್ತರ ಕರ್ನಾಟಕದ ಭಾಗದಲ್ಲಿ ಕಂಡುಬರುತ್ತವೆ. ದಕ್ಷಿಣ,ಉತ್ತರ ಕನ್ನಡ ಜಿಲ್ಲೆಗಳು ಮತ್ತು

ಕೊಡಗು ಜಿಲ್ಲೆಯಲ್ಲಿ ಹರಗ, ಉಲುಗಲಿ, ಪೆರಾಜಿ, ಬೆಟ್ಟ, ಬಾಳೆಲೆ, ಕುಟ್ಟು, ಕುರ್ಚಿ, ನಡ, ಉಜ್ರೆ, ಹೆಗ್ರ, ತೆಂಕ, ಶಿರ್ವ, ನೆರಿಯ, ಬಜ್ಪೆ, ಕೊಣಾಜೆ, ಕೊಯ್ಲ, ಕಿತ್ರೆ, ಬೆಲ್ನ, ಬೆಲ್ಕೆ, ಮುಗಳಿ, ಅಜ್ಜಿ, ಬಣಗೆ, ಲಂಡೆ, ದಿವಿಗೆ, ಕುಂಟೆ- ಮೊದಲಾದ ವಿಶಿಷ್ಟ ಹೆಸರಿನ ಊರುಗಳಿವೆ.

ನಮ್ಮ ಜನಪದರಿಗೆ ತಮ್ಮ ತಮ್ಮ ಸ್ಥಳಗಳ ಬಗೆಗೆ ಅಪಾರ ಅಭಿಮಾನ. ತಮ್ಮ ಸ್ಥಳದ ಹಿರಿಮೆಯನ್ನು ಸಾರಲು ಅವರದೇ ಆದ ಪೌರಾಣಿಕ, ಐತಿಹಾಸಿಕ, ಅಥವಾ ಧಾರ್ಮಿಕ 'ದಾಖಲೆ' ಒದಗಿಸುತ್ತಾರೆ. ಕೆಲವು ಹಳ್ಳಿಗಳ ಹೆಸರುಗಳಿಗೆ ಹೊಂದಿಕೊಂಡಂತೆ ಇರುವ ಜನಪದ ಕತೆಗಳಂತೂ ಅತ್ಯಂತ ಸ್ವಾರಸ್ಯಕರವಾಗಿರುತ್ತವೆ.

ಇನ್ನು ಊರಿನಂತೆ ಕೇರಿ, ಹಳ್ಳಿಯ ಕೇರಿಕೇರಿಗೂ ಒಂದೊಂದು ಹೆಸರು. ಈ ಹೆಸರುಗಳು ಹೆಚ್ಚಾಗಿ ಆ ಕೇರಿಯಲ್ಲಿರುವ ಜನರ ಕಸುಬಿಗೆ ಸಂಬಂಧಿಸಿರುತ್ತವೆ. ಇಲ್ಲವೇ ಅಲ್ಲಿನ ನಿವಾಸಿಗಳ ಜಾತಿ-ಜನಾಂಗದ ಹೆಸರುಗಳನ್ನು ಹೇಳುತ್ತವೆ. ಕುಂಬಾರರ ಕೇರಿ, ಅಗಸರ ಬೀದಿ, ಅಂಗಡಿಯವರ ಸಾಲು, ಮ್ಯಾದರ ಕೇರಿ - ಇತ್ಯಾದಿ ಹೆಸರುಗಳು ಕಸುಬಿನ ಸಂಕೇತವಾಗಿದ್ದರೆ, ಗೌಡರ ಬೀದಿ, ಒಕ್ಕಲಿಗರ ಹಟ್ಟಿ, ಗೊಲ್ಲರಹಟ್ಟಿ, ಲಿಂಗಾಯತರ ಕೇರಿ, ಕುರುಬರ ಹಟ್ಟಿ, ಬಣಜಿಗರ ಹಟ್ಟಿ, ದೇವಾಂಗದವರ ಹಟ್ಟಿ- ಮೊದಲಾದವು ಜಾತಿ-ಜನಾಂಗದ ಹೆಸರು ಹೇಳುತ್ತವೆ.

ಹಾಗೆಯೇ ಗುಡಿಬೀದಿ, ತೇರುಬೀದಿ, ಹಿತ್ತಲಸಾಲು, ಮೇಗಳ ಹಟ್ಟಿ, ಕೆಳಗಳ ಹಟ್ಟಿಗಳು ಬೇರೆ ಇರುತ್ತವೆ.

**ಇಷ್ಟು ಸಾಕು :**

ಹೀಗೆ ಜಾನಪದ ಲೋಕದಲ್ಲಿ ಯಾವುದನ್ನು ಹೇಳಿ, ಯಾವುದನ್ನು ಬಿಡುವುದು? ಇಷ್ಟು ಸಾಕು. ನಾನು ಮೊದಲೇ ಹೇಳಿದಂತೆ ಈ ಲೇಖನ ಕೇವಲ ಆ ಲೋಕದತ್ತ ಹಿಡಿದ ತೋರುಬೆರಳು, ಕೈಮರ!

ಜನಪದ ಪ್ರಪಂಚದ ಆಚಾರ-ವಿಚಾರ, ಹಬ್ಬ-ಹರಿದಿನ, ಮದುವೆ-ಮುಂಜಿ, ಹುಟ್ಟು-ಸಾವು, ತೇರು-ಜಾತ್ರೆ, ಮನೆ-ಮಠ, ಹೊಲ-ಗದ್ದೆ, ತೋಟ-ತುಡಿಕೆ, ಆಟ-ಬೇಟ, ವೈದ್ಯ-ಪತ್ಯ, ಸಾಲ-ಸೋಲ, ನೆಂಟು-ಸಂಬಂಧ, ಗಳಿಕೆ-ಉಳಿಕೆ, ಅಳತೆ-ತೂಕ ಹೀಗೆ ಎಷ್ಟೋ ವಿಷಯಗಳಿವೆ. ಅವೆಲ್ಲವುಗಳ ಬಗ್ಗೆ ಕೇವಲ ಪ್ರಸ್ತಾಪ ಮಾಡುವುದೆಂದರೂ ಮತ್ತೆಷ್ಟೋ ಹೊತ್ತು ಬೇಕಾಗುತ್ತದೆ. ಹೆಚ್ಚಿನ ಸೌಂದರ್ಯವನ್ನು ಆ ಅಂಗಳಕ್ಕೇ ಹೋಗಿ ಸವಿಯುವುದು ಲೇಸು. ಜಾನಪದ ಪ್ರಪಂಚದ ಸೌಂದರ್ಯವನ್ನು ಕಂಡು ಆನಂದಿಸಲೂ ಅದೃಷ್ಟವಿರಬೇಕು, ಹೃದಯವಿರಬೇಕು.

ಇದುವರೆಗೆ ನಾನು ಕೊಟ್ಟುದು ಗ್ರಾಮೀಣ ಮತ್ತು ಗುಡ್ಡಗಾಡು ಜನಾಂಗದ ಸಾಂಸ್ಕೃತಿಕ ಬದುಕಿನ ಒಂದು ಸ್ಥೂಲ ನೋಟ. ಆದರೆ ಅದು ಈಗ ಭೂತಕಾಲದ್ದೆನಿಸಿದೆ. ನಮ್ಮ ಗ್ರಾಮೀಣರು ಮತ್ತು ಗುಡ್ಡಗಾಡಿನ ಜನ ತಮ್ಮದೇ ಆದ ಹಾಡು-ಕುಣಿತಗಳಿಂದ, ನಿಷ್ಠೆ-ನಂಬಿಕೆಗಳಿಂದ ತಮ್ಮಷ್ಟಕ್ಕೆ ತಾವು ಆಡಿ, ಹಾಡಿ, ಕೂಡಿ, ನಕ್ಕು, ನಲಿದು ಒಂದು ರೀತಿಯ ನೆಮ್ಮದಿಯನ್ನು ಕಂಡಿದ್ದರು. ಆದರೆ ಕಾಲಮಾನದ ಪ್ರಭಾವದಿಂದ, ಆಧುನಿಕತೆಯ ಆಕ್ರಮಣದಿಂದ ಅವರ ಬದುಕು ಈಗ ಹದಗೆಟ್ಟಿದೆ. ಯಂತ್ರಯುಗದ ಪರಿಣಾಮವೊಂದೆಡೆಯಾದರೆ, ಆಧುನಿಕ ರಾಜಕೀಯ ವ್ಯವಸ್ಥೆಯ ಅವಜ್ಞೆ ಇನ್ನೊಂದು ಕಡೆ. ಇದರಿಂದಾಗಿ, ಹಳ್ಳಿಗರ ಬದುಕಿನ ಬೇಸರ ಪರಿಹರಿಸುತ್ತಿದ್ದ, ಅವರ ದುಡಿಮೆಗೆ ಉತ್ಸಾಹ ತುಂಬುತ್ತಿದ್ದ, ಕೂಡು ಬದುಕಿಗೆ ಸ್ಫೂರ್ತಿ ನೀಡುತ್ತಿದ್ದ, ಸಾತ್ವಿಕ ನಡವಳಿಕೆಗೆ ನೆರವಾಗುತ್ತಿದ್ದ ಅಮೂಲ್ಯ ಜನಪದ ಸಾಹಿತ್ಯ ಮತ್ತು ಕಲೆಗಳು ನಮ್ಮ ಕಣ್ಣ ಮುಂದೆಯೇ ಸೊರಗಿ ಕರಗಿ ಹೋಗುತ್ತಿರುವುದು ಒಂದು ವಿಷಾದದ ಸ್ಥಿತಿ.

ಈ ಸಂದರ್ಭದಲ್ಲಿ ಈಗ ಭಾರತ ಸರ್ಕಾರದ ಯೋಜನಾ ಖಾತೆಯ ರಾಜ್ಯಸಚಿವರಾದ ಎಂ. ವಿ. ರಾಜಶೇಖರನ್ ಅವರು ಪ್ರದೇಶ ಯುವಕ ರೈತ ಸಮಾಜದ ಪ್ರಧಾನ ಕಾರ್ಯದರ್ಶಿಗಳಾಗಿದ್ದಾಗ, ಈ ಗ್ರಾಮೀಣ ಕಲೆ ಮತ್ತು ಸಂಸ್ಕೃತಿಗಳ ಸಂರಕ್ಷಣೆಗಾಗಿ, ವಿಶೇಷವಾಗಿ ಇಂದಿನ ತಲೆಮಾರಿನ ಯುವಜನಾಂಗದಲ್ಲಿ ಪರಂಪರೆಯ ಜನಪದ ಬದುಕಿನಲ್ಲಿ ವಿಶ್ವಾಸ ಮತ್ತು ಶ್ರದ್ಧಾಸಕ್ತಿಗಳನ್ನು ಬೆಳೆಸಲು ಕೆಲವು ಒಳ್ಳೆಯ ಚಟುವಟಿಕೆಗಳನ್ನು ಕೈಗೊಂಡಿದ್ದು ನನಗೆ ನೆನಪಾಗುತ್ತದೆ. ಅಂತಹ ಚಟುವಟಿಕೆಗಳಲ್ಲಿ ಅವರು ನಡೆಸಿದ ರಾಜ್ಯಮಟ್ಟದ ಯುವಜನ ಜನಪದ ಕಲಾಮೇಳವೂ ಒಂದು. ಆಗ ನಮ್ಮ ನಾಡಿನ ಹಿರಿಯ ಸಮರ್ಥ ಅಧಿಕಾರಿಗಳೆನಿಸಿದ್ದ ಜೆ.ಬಿ. ಮಲ್ಲಾರಾಧ್ಯರು ರಾಜ್ಯ ಕ್ರೀಡಾ ಮಂಡಳಿ ಅಧ್ಯಕ್ಷರಾಗಿದ್ದರು. ರಾಜಶೇಖರನ್ ಅವರು ಕ್ರೀಡಾ ಮಂಡಳಿಯ ನೆರವು ಪಡೆದು

ಏರ್ಪಡಿಸಿದ್ದ ಆ ಜನಪದ ಕಲಾಮೇಳದಲ್ಲಿ ರಾಜ್ಯದ ನಾನಾ ಭಾಗಗಳಿಂದ ಬಂದಿದ್ದ ಸಹಸ್ರಾರು ಯುವಜನರು ಪಾಲುಗೊಂಡಿದ್ದರು. ಆ ಕಾರ್ಯಕ್ರಮ ಗ್ರಾಮೀಣ ಯುವಜನರ ಸಂಘಟನೆಗೆ ಅತ್ಯಂತ ಪೂರಕವಾಗಿತ್ತು. ಆದರೆ ಆ ಸಂಘಟನೆ ನಂತರದ ದಿನಗಳಲ್ಲಿ ಮುಂದುವರೆಯಲಿಲ್ಲ.

ನಮ್ಮದು ಪ್ರಜಾಸತ್ತಾತ್ಮಕ ವ್ಯವಸ್ಥೆ. ಈ ವ್ಯವಸ್ಥೆಯಲ್ಲಿ ಭಾರತದ ಗ್ರಾಮೀಣರು ಉಪೇಕ್ಷೆಗೆ ಒಳಗಾಗಬಾರದು. ದೇಶಕ್ಕೆ ಅನ್ನಕೊಡುವ ಮತ್ತು ನಿಜವಾದ ಮಾನವೀಯ ಮೌಲ್ಯಗಳನ್ನು ಕಾಪಾಡಿಕೊಂಡು ಬಂದಿರುವ ನಮ್ಮ ಹಳ್ಳಿಗರ ಜೀವನ ಸಂಸ್ಕೃತಿಯ ಸಂರಕ್ಷಣೆ ಎಂದರೆ ಅವರ ಹಾಡು - ಕುಣಿತಗಳು ಮತ್ತು ತೇರು - ಉತ್ಸವಗಳಂತಹ ಸಾಂಸ್ಕೃತಿಕ ಸಂದರ್ಭಗಳಿಗೆ ಉತ್ತೇಜನ ನೀಡುವುದು ಒಂದು ದೃಷ್ಟಿಯಿಂದ ಜನಪದರಿಗೆ 'ರಾಜಮನ್ನಣೆ'ಯಾಗುತ್ತದೆ. ಇದರಿಂದ ಅವರು ಆಡಳಿತ ವ್ಯವಸ್ಥೆಯ ಬಗಗೆ ಅಭಿಮಾನ ಬೆಳೆಸಿಕೊಳ್ಳುತ್ತಾರೆ. ಆಡಳಿತವು ಕೈಗೊಳ್ಳುವ ಅಭಿವೃದ್ಧಿಪರ ಯೋಜನೆಗಳಲ್ಲಿ ಕ್ರಿಯಾಶೀಲ ಪಾಲುದಾರರಾಗುತ್ತಾರೆ. ಆದುದರಿಂದ ಅವರ ಜೀವನ ವಿಧಾನಗಳನ್ನು ಅರ್ಥಮಾಡಿಕೊಂಡು ಅದಕ್ಕೆ ಪೂರಕವಾದ ಸಾಂಸ್ಕೃತಿಕ ವಾತಾವಾರಣವನ್ನು ಮೂಡಿಸುವುದು ಸರ್ಕಾರದ ಕರ್ತವ್ಯವೆಂದು ನಾನು ತಿಳಿಯುತ್ತೇನೆ.

ಜನಪದ ಸಾಹಿತ್ಯ ಮತ್ತು ಕಲೆಗಳನ್ನು ಪ್ರಚಲಿತ ಕಾಲದ ಸಾಕ್ಷರತೆ, ಕುಟುಂಬ ಯೋಜನೆ, ಸಣ್ಣ ಉಳಿತಾಯ, ಸಹಕಾರ ಚಳುವಳಿ, ಪೌಷ್ಟಿಕ ಆಹಾರ, ವೈಯಕ್ತಿಕ ಆರೋಗ್ಯ, ಪರಿಸರ ನೈರ್ಮಲ್ಯ, ತಾಯಿ-ಮಕ್ಕಳ ಆರೋಗ್ಯ, ರೋಗ ನಿರೋಧ, ಅಧಿಕ ಬೆಳೆ, ಶಿಕ್ಷಣ ಪ್ರಸಾರ, ಕೋಮು ಸಾಮರಸ್ಯ, ರಾಸಾಯನಿಕಗಳ ಬಳಕೆ, ಜೈವಿಕ ಕೃಷಿ ಇತ್ಯಾದಿ ಪ್ರಚಾರಾಂದೋಲನಗಳಿಗೆ ಆಧುನಿಕ ಮಾಧ್ಯಮಗಳಲ್ಲಿ ಬಳಸಿಕೊಳ್ಳಲು ಸಮೃದ್ಧ ಅವಕಾಶವಿದೆ. ಈ ಸಂಬಂಧ ಅನೇಕ ಪ್ರಯೋಗಗಳು ನಡೆದಿವೆ. ಈ ಬಗೆಗೆ ಆಡಳಿತ ನಡೆಸುವವರು ಗಮನ ಹರಿಸಬೇಕು.

ಈ ಎಲ್ಲಾ ಹಿನ್ನೆಲೆಯಲ್ಲಿ ಗ್ರಾಮ ಕಲೆಗಳಿಗೂ, ಗ್ರಾಮಾಭಿವೃದ್ಧಿ ಕಾರ್ಯಗಳಿಗೂ ಪರಸ್ಪರ ಪೂರಕ ಸಂಬಂಧವಿರುವುದನ್ನು ನಾವು ಕಂಡುಕೊಳ್ಳಬೇಕು.

ನನ್ನ ಈ ಲೇಖನವನ್ನು ಮುಗಿಸುವ ಮುನ್ನ ಒಂದು ಮಾತು. ಜಾನಪದ ನಮ್ಮ ಹಳ್ಳಿಗಾಡು ಮತ್ತು ಗುಡ್ಡಗಾಡಿನ ಬಹುಸಂಖ್ಯಾತ ಜನಸಮುದಾಯಕ್ಕೆ ಸೇರಿದ್ದು. ಅವರ ಜೀವನದ ರೀತಿ-ನೀತಿಗಳ ಅಧ್ಯಯನಕ್ಕೆ, ಅವರ ಸಾಹಿತ್ಯ-ಕಲೆಗಳ ಉತ್ತೇಜನಕ್ಕೆ ರಾಜ್ಯಾಡಳಿತದ ಹೊಣೆ ಹೊತ್ತವರು ಧಾರಾಳ ಅವಕಾಶವನ್ನು ಕಲ್ಪಿಸಬೇಕು; ಉದಾರ ಆರ್ಥಿಕ ನೆರವು ನೀಡಬೇಕು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಮತ್ತು ಜಿಲ್ಲಾ ಪರಿಷತ್ತುಗಳು ಇತ್ತ ಗಮನ ಹರಿಸಬೇಕು. ಜಿಲ್ಲಾ ಪರಿಷತ್ತುಗಳು ಇರುವುದೇ ಜನಪದರ ಕ್ಷೇಮಾಭ್ಯುದಯ ಸಾಧನೆಗೆ ಜಾನಪದದ ಕೆಲಸ ಜನಸಮುದಾಯದ ಒಂದು ಸಾಂಸ್ಕೃತಿಕ ಸಂಬಂಧದ ಕೆಲಸವಾಗಿರುವುದರಿಂದ ಅದು ವಾಸ್ತವವಾಗಿ ಜನಕ್ಷೇಮದ ಕಾರ್ಯವೇ ಆಗಿದೆ. ಜನಸಮುದಾಯದ ಸಾಂಸ್ಕೃತಿಕ ಬದುಕಿನ ಹಿತವನ್ನು ಕಾಪಾಡದ ಯಾವ ಆಡಳಿತವೂ ಯಶಸ್ವಿಯಾಗಲು ಸಾಧ್ಯವಿಲ್ಲ ಎಂಬುದನ್ನು ಆಡಳಿತಗಾರರು ನೆನಪಿನಲ್ಲಿಡಬೇಕು. ಹಾಗೆಯೇ ಜಾನಪದ ಕ್ಷೇತ್ರದಲ್ಲಿ ಕೆಲಸ ಮಾಡುವ ಕಾರ್ಯಕರ್ತರು ಮತ್ತು ತಜ್ಞರಲ್ಲೂ ಒಂದು ಮನವಿ. ಈಗ ನಮಗೆ ತಿಳಿದೋ ತಿಳಿಯದಂತೆಯೊ ಹಳ್ಳಿಗಾಡಿನ ನಿಸರ್ಗ ಸುಂದರ ಹಳ್ಳಕೊಳ್ಳದ ನೀರಿಗೆ ನಗರ ಗಟಾರದ ಕೊಳಚೆ ನೀರು ಬಂದು ಸೇರುತ್ತಿದೆ. ಹಳ್ಳಿಯ ಮಣ್ಣು ಧೂಳಿಗೆ ನಗರದ ವಿಷದ ಹೊಗೆ ಕೂಡಿಕೊಳ್ಳುತ್ತಿದೆ. ಇದನ್ನು ತಪ್ಪಿಸಲು ಸಾಧ್ಯವೇ ಎಂಬುದನ್ನು ಅವರು ವಿಚಾರ ಮಾಡಬೇಕು.

●




# ಜನಪದ ಕಲೆಗಳು

ಡಾ. ಮಂಜುಳಾ ಹುಲ್ಲಹಳ್ಳಿ

ಸಮಾಜದ ಮೂಲಭೂತ ಘಟಕಗಳಾದ ಗ್ರಾಮಗಳ ಅಭಿವೃದ್ಧಿಯಲ್ಲಿ ರಾಷ್ಟ್ರದ ಅಭಿವೃದ್ಧಿ ಹುದುಗಿದೆ ಎಂಬ ಮಾತು ಸುಳ್ಳಲ್ಲ. ಹಳ್ಳಿಗಳ ನಾಡಾದ ಭಾರತದಲ್ಲಿ ಶೇ. ೭೦ ಜನ ಹಳ್ಳಿಗಳಲ್ಲಿ ವಾಸಿಸುತ್ತಿದ್ದಾರೆ. ಹೈಟೆಕ್ ಯುಗದ ಉಡ್ಡಯನಕ್ಕೆ ಜಿಗಿಮಣೆಯ ತುದಿಯಲ್ಲಿ ನಿಂತು ಕಾತರಿಸುತ್ತಿರುವ ರಾಜಕಾರಣಿ ಜನರು ಇಂದಿಗೂ ಬಹುತೇಕ ಹಳ್ಳಿಗಳು ಬಡತನ, ನಿರುದ್ಯೋಗ, ರೋಗರುಜಿನ ಮುಂತಾದ ಸಮಸ್ಯೆಗಳ ಆಗರವಾಗಿರುವ ಗ್ರಾಮಗಳತ್ತ ಕಡೆಗಣ್ಣಿನ ನೋಟವನ್ನೂ ಹರಿಸುತ್ತಿಲ್ಲ. ಇಂಥ ಗ್ರಾಮೀಣ ಸಮಸ್ಯೆಗಳನ್ನು ಪರಿಹಾರ ಮಾಡಿ ಗ್ರಾಮೀಣ ಬದುಕನ್ನು ಪುನರ್ನಿರ್ಮಾಣ ಮಾಡುವ ಮಹೋನ್ನತ ಕನಸುಗಳನ್ನು ಕಂಡ ದಾರ್ಶನಿಕರ ಕಾಣ್ಕೆ ಇನ್ನೂ ನನಸಾಗಬೇಕಾಗಿದೆ.

ಕಡಿಮೆ ವರಮಾನ, ವ್ಯವಸಾಯದ ಮೇಲೆ ಅತಿಯಾದ ಅವಲಂಬನೆ, ಅರೆ ನಿರುದ್ಯೋಗ, ಬಂಡವಾಳದ ಕೊರತೆ, ತಂತ್ರಜ್ಞಾನದ ಕೊರತೆ, ನಿಕೃಷ್ಟ ಜೀವನ ಮಟ್ಟ, ನೀರಾವರಿ ಸೌಲಭ್ಯದ ಕೊರತೆ, ಉತ್ತಮ ಬೀಜ ಗೊಬ್ಬರಗಳ ಕೊರತೆ, ಬೆಳೆ ಸಂರಕ್ಷಣೆಯ ಬಗೆಗಿನ ಅಜ್ಞಾನ, ಮೂಢನಂಬಿಕೆ, ಪಟ್ಟಭದ್ರ ಹಿತಾಸಕ್ತಿಗಳಿಂದ ರೈತರ ಶೋಷಣೆ, ಶಿಕ್ಷಣ ಸೌಲಭ್ಯದ ಕೊರತೆ, ಸಾಂಪ್ರದಾಯಿಕ ಕುಶಲತೆಗಳ ಅವನತಿ- ಇಂಥ ಹಲವು ನೂರು ಸಮಸ್ಯೆಗಳು ಪರಿಹಾರ ಕಾಣದಿರುವುದಕ್ಕೆ, ದಿನದಿನವೂ ಉಲ್ಬಣವಾಗುತ್ತಿರುವುದಕ್ಕೆ ರಾಜಕೀಯ ಇಚ್ಛಾಶಕ್ತಿಯ ಕೊರತೆಯೇ ಪ್ರಮುಖ ಕಾರಣವೆನ್ನಬಹುದು. ಇಂಥ ಕಾರಣಗಳಿಂದ ಗ್ರಾಮೀಣ ಬದುಕು ನಲುಗಿಹೋಗುತ್ತಿದೆ, ಪಟ್ಟಣದ ಕಡೆಗೆ ಉದ್ಯೋಗವನ್ನರಸಿ ಗುಳೇ ಏಳುವವರ ಸಂಖ್ಯೆ ಹೆಚ್ಚುತ್ತಿದೆ. ಹೀಗಾಗಿ ಗ್ರಾಮೀಣ ಪ್ರದೇಶಗಳು ಪಾಳುಪಾಳಾದರೆ ಪಟ್ಟಣಗಳಲ್ಲಿ ಅನಪೇಕ್ಷಿತ ಕೊಳೆಗೇರಿಗಳು ತಲೆಯೆತ್ತುತ್ತಿವೆ. "ಭಾರತ ಎಂದಾಕ್ಷಣ ಬಡತನ, ದುರ್ಬಲತೆ, ಅರೆಹೊಟ್ಟೆ, ಅರೆಬೆತ್ತಲೆಯಲ್ಲಿ ಜೀವನ ಸಾಗಿಸಲು ಹೋರಾಡುತ್ತಿರುವ ಜನರ ಚಿತ್ರಣ ಕಣ್ಮುಂದೆ ಮೂಡುತ್ತದೆ" ಎಂದು ಶ್ರೀಮತಿ ಗಾಡ್‌ವಾಯ್ ಅವರು ಹೇಳಿ ದಶಕಗಳೇ ಕಳೆದುಹೋದರೂ ಇಂದಿಗೂ ಈ ಪರಿಸ್ಥಿತಿ ಹಾಗೆಯೇ ಮುಂದುವರಿದಿದೆ.

*ಭಾಷೆ ಹಾಗೂ ಪ್ರದೇಶಗಳ ಮೂಲಸಂಸ್ಕೃತಿಯು ಕುರುಹುಗಳು ಆ ಜನಪದರ ಜಾನಪದದಲ್ಲಿ ಅಭಿವ್ಯಕ್ತವಾಗುವಷ್ಟು ಸಹಜ ಸುಂದರವಾಗಿ ಬೇರೆ ಯಾವ ಮಾಧ್ಯಮದಿಂದಲೂ ಆಗಲು ಸಾಧ್ಯವಿಲ್ಲ. ಶಿಕ್ಷಣ ವ್ಯವಸ್ಥೆಯಿಂದ ಬಹುತೇಕ ವಂಚಿತರಾಗಿದ್ದರೂ ತಮ್ಮನ್ನು ತೊಡಗಿಸಿಕೊಳ್ಳುವ ವೃತ್ತಿಗಳಲ್ಲಿ ಪರಿಣತಿಯನ್ನು ಸಾಧಿಸುವ ತಾದಾತ್ಮ್ಯ ಮನೋಭಾವ ಜನಪದರದ್ದೇ ಆದ ವಿಶಿಷ್ಟ ಗುಣ.*

ಈ ಪರಿಸ್ಥಿತಿಯನ್ನು ಬದಲಾವಣೆ ಮಾಡಿ ಗ್ರಾಮೀಣ ಸಮಸ್ಯೆಗಳನ್ನು ಬುಡಮಟ್ಟ ನಿವಾರಿಸಿ ಆರೋಗ್ಯವಂತ, ಸುಪುಷ್ಟ ಗ್ರಾಮೀಣ ಸಮುದಾಯವನ್ನು ಪುನರ್ನಿರ್ಮಾಣ ಮಾಡಲೇಬೇಕೆಂದು ಛಲ

ತೋಟ್ಟ ಮಹನೀಯರ ಭಗೀರಥ ಪ್ರಯತ್ನಗಳು ಅಲ್ಲಲ್ಲಿ ನಡೆದಿವೆ, ನಡೆಯುತ್ತಿವೆ. ಇವರ ಜೊತೆಗೆ ಸಾಮುದಾಯಿಕ ಅಭಿವೃದ್ಧಿ ಯೋಜನೆ, ರಾಷ್ಟ್ರೀಯ ವಿಸ್ತರಣಾ ಯೋಜನೆ, ಸಹಕಾರ ಚಳುವಳಿ, ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಇಂಥ ಹಲವಾರು ಯೋಜನೆಗಳೂ ಕಾರ್ಯಪ್ರವೃತ್ತವಾಗಿವೆ.

ಈ ಹಿನ್ನೆಲೆಯಲ್ಲಿ ಹೇಳುವುದಾದರೆ, ಗ್ರಾಮೀಣಾಭಿವೃದ್ಧಿಯೆಂದರೆ ಹಳ್ಳಿಗಳಿಗೆ ಉತ್ತಮ ರಸ್ತೆ ಸಂಪರ್ಕ, ಕುಡಿಯುವ ನೀರಿನ ಸೌಲಭ್ಯ, ವ್ಯವಸಾಯ ಸಂಬಂಧಿ ಸೌಲಭ್ಯಗಳ ವಿಸ್ತರಣೆ, ಉತ್ತಮ ಶಿಕ್ಷಣ ವ್ಯವಸ್ಥೆಯ ಕೊಡುಗೆ, ಶಾಲಾಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟದ ವ್ಯವಸ್ಥೆ, ಗುಡಿಕೈಗಾರಿಕೆಗಳಿಗೆ ಕಾಯಕಲ್ಪ ಈ ಎಲ್ಲವೂ ಹೌದು. ಇವುಗಳ ಜೊತೆಗೆ ಆಧುನಿಕತೆಯ ಹೊಡೆತದಿಂದ ತತ್ತರಿಸುತ್ತಿರುವ ಗ್ರಾಮೀಣ ಸೊಬಗಿಗೆ ಅದರ ಅಂತರಾಳದಿಂದಲೇ ಮೂಡಿದ ಆಂತರಂಗಿಕ ಸಂಸ್ಕೃತಿಯ ಉದ್ದೀಪನವೂ ಅಷ್ಟೇ ಮುಖ್ಯವಾಗುತ್ತವೆ.

ಗ್ರಾಮೀಣ ಜೀವನದಲ್ಲಿ ಏಕರೂಪತೆ ಪ್ರಧಾನ ಅಂಶ. ಉಡುಪು, ಆಹಾರ, ನಡವಳಿಕೆ, ಮನೋಧರ್ಮ, ಅಭಿರುಚಿ, ಅಭ್ಯಾಸ- ಈ ಎಲ್ಲದರಲ್ಲೂ ಅದರ ಛಾಪನ್ನು ಕಾಣಬಹುದು. ನಗರ ಪಟ್ಟಣಗಳಲ್ಲಿ ತುಂಬಾ ಅಪರೂಪ ಅನ್ನಿಸುವ ವೈಯಕ್ತಿಕ ಮುಖಾಮುಖಿ, ಆತ್ಮೀಯ ಸಂಬಂಧ, ಸಾಮುದಾಯಿಕ ಭಾವನೆಗಳು ಗ್ರಾಮೀಣ ಜನಜೀವನದ ಉಸಿರು. ಪರಿಪೂರ್ಣತೆಗಾಗಿ ಮಿಡಿಯುವ ಗ್ರಾಮೀಣ ಸಮುದಾಯದಲ್ಲಿ ಧಾರ್ಮಿಕತೆ, ಸಂಪ್ರದಾಯಬದ್ಧತೆ, ಸಾಮಾಜಿಕ ಐಕ್ಯತೆಯ ಭಾವನೆಗಳ ಜತೆಗೆ ಪ್ರಬಲ ಸಾಮಾಜಿಕ ನಿಯಂತ್ರಣವೂ ಇದೆ.

ಈ ರೀತಿಯ ಸಮೃದ್ಧ ಜನಜೀವನವನ್ನು ಈಗ ಕಾಡುತ್ತಿರುವ ಹಲವಾರು ಸಮಸ್ಯೆಗಳ ನಿವಾರಣೆಗೆ, ಉತ್ತಮ ಜೀವನ ವ್ಯವಸ್ಥೆಗೆ, ಸಾಮಾಜಿಕ, ಸಾಂಸ್ಕೃತಿಕ ಐಕ್ಯತೆಗೆ, ಆ ಮೂಲಕ ಸಮಗ್ರ ಗ್ರಾಮೀಣಾಭಿವೃದ್ಧಿಗೆ ಇತರ ಯೋಜನೆಗಳೊಂದಿಗೆ ಜನಪದ ಕಲೆಗಳನ್ನೂ ಹೇಗೆ ಉಪಯೋಗಿಸಿಕೊಳ್ಳಬಹುದೆಂಬ ಸಣ್ಣ ಚಿಂತನೆ ಇಲ್ಲಿದೆ.

ವಿಶ್ವದಷ್ಟೇ ವಿಶಾಲವಾದ ಜಾನಪದ ಮಾನವನಷ್ಟೇ ಪುರಾತನ, ಅಪೂರ್ವ ವರ್ಣಮಯತೆ, ಅನಂತ ಬಹುಮುಖತೆ ಅದರ ವೈಶಿಷ್ಟ್ಯ. ಜಾನಪದದ ವೈವಿಧ್ಯತೆ, ವ್ಯಾಪಕತೆಗಳು ಸುಲಭವಾಗಿ ಹಿಡಿತಕ್ಕೆ ನಿಲುಕುವಂಥವಲ್ಲ. ಆದರೆ ಪ್ರಾದೇಶಿಕ ಅನನ್ಯತೆಯಿಂದ ಸರಳವೂ ನಿತ್ಯನೂತನವೂ ಆಗಿ ಕಾಣಿಸುವುದು ಇದರದ್ದೇ ಆದ ಹೆಚ್ಚುಗಾರಿಕೆ. ಒಂದು ಭಾಷೆಯ ಅಥವಾ ಪ್ರದೇಶದ ನಿರ್ಬಗ್ಗಡವೂ, ಮಿಶ್ರಣರಹಿತವೂ, ಚೊಕ್ಕವೂ ಆದ ಮೂಲಸಂಸ್ಕೃತಿಯ ಕುರುಹುಗಳನ್ನು ಗುರುತಿಸುವ ಅಪೇಕ್ಷೆ ಇದ್ದರೆ ಜನಪದ ಸಾಹಿತ್ಯ ಸಂಗೀತ ಸಾಮಗ್ರಿಗಳಿಗೆ ಶರಣು ಹೋಗಬೇಕು ಎಂಬ ದೇಜಗೌ ಅವರ ನುಡಿಗಳನ್ನು ಮನನ ಮಾಡುತ್ತಾ ಹೋದಷ್ಟೂ ಜಾನಪದದ ಅರ್ಥವ್ಯಾಪ್ತಿ ಹಿಗ್ಗುತ್ತಾ ಸಾಗುತ್ತದೆ.

ಭಾಷೆ ಹಾಗೂ ಪ್ರದೇಶಗಳ ಮೂಲಸಂಸ್ಕೃತಿಯ ಕುರುಹುಗಳು ಆ ಜನಪದರ ಜಾನಪದದಲ್ಲಿ ಅಭಿವ್ಯಕ್ತವಾಗುವಷ್ಟು ಸಹಜ ಸುಂದರವಾಗಿ ಬೇರೆ ಯಾವ ಮಾಧ್ಯಮದಿಂದಲೂ ಆಗಲು ಸಾಧ್ಯವಿಲ್ಲ. ಶಿಕ್ಷಣ ವ್ಯವಸ್ಥೆಯಿಂದ ಬಹುತೇಕ ವಂಚಿತರಾಗಿದ್ದರೂ ತಮ್ಮನ್ನು ತೊಡಗಿಸಿಕೊಳ್ಳುವ ವೃತ್ತಿಗಳಲ್ಲಿ ಪರಿಣತಿಯನ್ನು ಸಾಧಿಸುವ ತಾದಾತ್ಮ್ಯ ಮನೋಭಾವ ಜನಪದರದೇ ಆದ ವಿಶಿಷ್ಟ ಗುಣ. ನಿನ್ನೆಯ ಹಂಗಿಲ್ಲದೆ, ನಾಳೆಯ ಚಿಂತೆಯಿಲ್ಲದೆ, ವರ್ತಮಾನದಲ್ಲಿ ಬದುಕು ಸಾಗಿಸುವ ಹುನ್ನಾರ ಜನಪದರದು. ತಮ್ಮ ದುಡಿಮೆಯಲ್ಲಿಯೇ ದೇವರನ್ನು ಕಾಣುವ ಮನೋಭಾವ. ದುಡಿಮೆಯನ್ನು ಶಿವಾರ್ಪಿತ ಮಾಡಿದಾಗ ದುಡಿಯುವ ಕೈಗಳಿಗೆ ಹೊಸ ಹುಮ್ಮಸ್ಸು ದೊರೆಯುತ್ತದೆ. ಮನ ಹಾಡುತ್ತದೆ, ತನು ಕುಣಿಯುತ್ತದೆ. ಹಾಗೆಯೇ ಪ್ರಾಕೃತಿಕ ಬದಲಾವಣೆಗಳನ್ನು ಭಯ, ವಿಸ್ಮಯ, ಭಕ್ತಿಗಳಿಂದ ಅವಲೋಕಿಸುತ್ತಾ ತನಗಿಂತ ಮಿಗಿಲಾದ ಶಕ್ತಿಗಳೆಡೆಗೆ ಗೌರವ ಬೆಳೆಸಿಕೊಳ್ಳುತ್ತಾ ಅವುಗಳನ್ನು ಆರಾಧಿಸುವ ಜನಪದ ಮನಸ್ಸು ಆ 'ದೈವ' ಗಳನ್ನು ತಣಿಸಿ ತೃಪ್ತಿಪಡಿಸಲು ಹಲವಾರು ವಿಧಾನಗಳನ್ನು ಆಲೋಚಿಸುತ್ತದೆ. ವೈಯಕ್ತಿಕ ನೆಲೆಯ ಇಂಥ ಹಾಡು, ಕುಣಿತ, ಯೋಚನೆ, ಆಲೋಚನೆಗಳನ್ನು ವಿರಾಮ ಕಾಲದಲ್ಲಿ ಕ್ರಿಯಾತ್ಮಕವಾಗಿ ದುಡಿಸಿಕೊಂಡು ಸಾಮೂಹಿಕ ಅಭಿಪ್ರಾಯದ ಹಿನ್ನೆಲೆಯಲ್ಲಿ ವಿನ್ಯಾಸ ನೀಡಿ ಸಮೂಹಕ್ಕೆ ಸಮರ್ಪಿಸಿದಾಗ ನೂತನ ಕಲೆಯೊಂದು ರೂಪುಗೊಳ್ಳುತ್ತದೆ. ಹೀಗೆ ಒಂದು ಜನಾಂಗದ ಸಾಂಸ್ಕೃತಿಕ ಅಭೀಪ್ಸೆಯ ಒತ್ತಡವೇ ಜನಪದ ಕಲೆ ಮತ್ತಿತರ ರೂಪುಗಳ ಹುಟ್ಟುವಿಕೆಗೆ ಕಾರಣವಾಗುತ್ತದೆ. ಹೀಗೆ ಹುಟ್ಟುವ ಜಾನಪದ ರೂಪಗಳು ಪರಿಸರಕ್ಕೆ ತಕ್ಕ ಹಾಗೆ ಬೆಳೆಯುತ್ತವೆ, ಬದಲಾಗುತ್ತದೆ, ಕಣ್ಮರೆಯಾಗುತ್ತವೆ, ಪುನರ್‌ಪ್ರವೇಶ ಪಡೆಯುತ್ತವೆ. ಒಟ್ಟಿನಲ್ಲಿ ಇವು ಮಾನವನ ಬದುಕಿನೊಂದಿಗೆ ಹಾಸುಹೊಕ್ಕಾಗಿ

ಬೆಳೆಯುತ್ತವೆ. ಇಂಥ ಜಾನಪದ ರೂಪವೈವಿಧ್ಯಗಳನ್ನು ಹಬ್ಬ, ಜಾತ್ರೆ, ವಿವಾಹ, ವಿನೋದ ಇತ್ಯಾದಿ ಸಂದರ್ಭಗಳಲ್ಲಿ ಹದವರಿತು ಬಳಸಿಕೊಳ್ಳತೊಡಗಿದಾಗ ದೈವಾರಾಧನೆ, ಧರ್ಮ ಪ್ರಚಾರ, ನೀತಿಬೋಧನೆ, ಜ್ಞಾನ ನೀಡಿಕೆಯ ಜತೆಗೆ ಮನರಂಜನೆಯ ಲಾಭವೂ ಸೇರಿಕೊಳ್ಳುತ್ತದೆ. ಜನಪದ ಸಮೂಹಕ್ಕೆ ಜನಪದ ಸಮೂಹ ನೀಡುವ ಅಪೂರ್ವ ಕೊಡುಗೆಯಾಗುತ್ತದೆ.

ಈ ರೀತಿಯ ಜನಪದ ಸಾಹಿತ್ಯ ಸಂಸ್ಕೃತಿ ಕಲೆಗಳ ಆಳವಾದ ಅಧ್ಯಯನದಿಂದ ಜನಪದರ ಪ್ರತಿಭೆ, ಸಾಮಾಜಿಕ ಚಿಂತನೆಯ ಸ್ವರೂಪ, ಧಾರ್ಮಿಕ ಪ್ರವೃತ್ತಿ, ನೈತಿಕ ವಿಚಾರ ಮೊದಲಾದವುಗಳ ಸಮಗ್ರ ಚಿತ್ರಣ ದೊರೆಯುತ್ತದೆ. ಅದರಲ್ಲೂ ಜನಪದರ ಬದುಕಿನ ಅತ್ಯಂತ ವರ್ಣರಂಜಿತ ಹಾಗೂ ಸ್ವಾರಸ್ಯಪೂರ್ಣ ಅಂಶವಾದ ಜನಪದ ಕಲೆಗಳು ಜನಪದರ ರಸಿಕತೆ, ಸೌಂದರ್ಯೋಪಾಸನೆ, ಜೀವನಮೌಲ್ಯಗಳಿಗೆ ಕನ್ನಡಿ ಹಿಡಿಯುತ್ತವೆ. ಹೀಗಾಗಿ ಉಳಿದೆಲ್ಲ ಜನಪದ ಸಾಹಿತ್ಯ ಸಾಮಗ್ರಿಗಳ ಜತೆಗೆ ಜನಪದ ಕಲೆಗಳೂ ಸೇರಿ ಆ ಜನಾಂಗದ ಸಾರ ಸಂಪತ್ತಿನ ಸಂಸ್ಕೃತಿಯ ಭಂಡಾರದ ತೆರವಿಗೆ ಕೀಲಿಕೈಯಾಗುತ್ತವೆ. ಕರ್ನಾಟಕದ ಮೂಲೆ ಮೊಡಕು ಗ್ರಾಮಗಳನ್ನು ಬಿಡದೇ ಹುಡುಕಿದರೆ ಹಲವು ನೂರು ಬಗೆಯ ಜನಪದ ಕಲೆಗಳ ವೈವಿಧ್ಯ ಗರಿಗೆದರಿಕೊಳ್ಳುತ್ತದೆ.

ನಾಗರಿಕತೆಗೆ ಮೊದಲಿನ ಬುಡಕಟ್ಟು ಜನಾಂಗದ ಭಾವಾನುಭಾವಗಳು, ಕಲಾಭಿಜ್ಞತೆ, ಅಭಿರುಚಿ, ರಸಿಕತೆಗಳು ಕೊಡವರ ಉಮ್ಮತ್ತಾಟ, ಕುಡುಬಿ ಕುಣಿತ, ಸಿದ್ದಿ ಕುಣಿತ, ಕೊರಗ ಡೋಲು ಕುಣಿತ, ಗೌಳಿಗರ ಕುಣಿತ, ಗೊಂಡರ ಕುಣಿತ, ಲಂಬಾಣಿ ಕುಣಿತ, ಗೊರವರ ಕುಣಿತ ಮುಂತಾದ ಪ್ರದರ್ಶನಾತ್ಮಕ ಕಲೆಗಳಲ್ಲಿ ಅಭಿವ್ಯಕ್ತಿಗೊಂಡರೆ ಕಂಸಾಳೆ ಮೇಳ, ವೀರಗಾಸೆ ಕುಣಿತ, ನಂದೀಧ್ವಜ ಕುಣಿತ, ಚೌಡಿಕೆ ಮೇಳ, ಪೂಜಾ ಕುಣಿತ, ಪಟ ಕುಣಿತ, ಭೂತಕೋಲ, ಭಾಗವಂತಿಕೆ ಮೇಳ, ಅಲಾವಿ ಕುಣಿತ, ಕರಗ ಮುಂತಾದ ಜನಪದ ಕಲೆಗಳಲ್ಲಿ ಗ್ರಾಮೀಣ ಜನರ ದೈವಭಕ್ತಿ, ಭಯ, ಗೌರವಗಳು ವ್ಯಕ್ತವಾಗುತ್ತವೆ.

ಅಂಟಿಕೆ ಪಂಟಿಕೆ ಪದಗಳು, ಮಾನ್ಸೋರ್ಮಿ ಪದಗಳು, ಸೋಬಾನೆ ಪದಗಳು, ನೀಲಗಾರರ ಪದಗಳು, ಕೊಂತಿ ಪದಗಳು, ತಿಂಗಳುಮಾವನ ಪೂಜೆ ಪದಗಳು,ಅರಳೆಲೆ ಬಸವನ ಹಾಡು - ಹೀಗೆ ಕುಣಿತವಿಲ್ಲದೆ ಕೇವಲ ಹಾಡು ಆಚರಣೆಗಳನ್ನೇ ಪ್ರಧಾನವಾಗಿಸಿಕೊಂಡ, ಗ್ರಾಮೀಣ ಮುಗ್ಧ ಜೀವನ ಪ್ರೀತಿಯನ್ನು ಪ್ರತಿಬಿಂಬಿಸುವ ಸಾಂಪ್ರದಾಯಿಕ ಕಲೆಗಳು ಒಂದೆಡೆಯಲ್ಲಿದ್ದರೆ ಸೂತ್ರದ ಗೊಂಬೆ ಆಟ, ತೊಗಲುಗೊಂಬೆ ಕುಣಿತ, ಯಕ್ಷಗಾನ, ಬಯಲಾಟ, ಮೂಡಲಪಾಯ, ದೊಡ್ಡಾಟ, ಸಣ್ಣಾಟ, ದಾಸರಾಟ ಇತ್ಯಾದಿ ರಂಗಕಲೆಗಳು ಮನರಂಜನೆಯ ಜತೆಗೆ ಗ್ರಾಮೀಣ ಜನತೆಯ ಆಂತರಂಗಿಕ ಸಂಸ್ಕೃತಿಯನ್ನು ಇಮ್ಮಡಿಸುತ್ತವೆ.

ಕೋಲಾಟ, ಹೆಜ್ಜೆ ಮೇಳ, ಮರಗಾಲು ಕುಣಿತ, ಗಾರುಡಿ ಕುಣಿತ, ನವಿಲು ಕುಣಿತ, ಕೀಲುಕುದುರೆ ಕುಣಿತ, ಬೇಟೆ ಕುಣಿತ, ಕರಪಾಲ ಮೇಳ, ಡೊಳ್ಳು ಮೇಳ, ಚಿಟ್ ಮೇಳ, ಜಗ್ಗಲಿಗೆ ಮೇಳ, ದೊಣ್ಣೆವರಸೆ, ಕತ್ತಿವರಸೆ, ಸಮರಕಲೆ ಮುಂತಾದ ಕಲೆಗಳು ಮನರಂಜನೆಯ ಅಂಶವನ್ನು ಪ್ರಧಾನವಾಗಿರಿಸಿಕೊಂಡರೆ ಗಮಕ ವಾಚನ, ಹರಿಕಥಾ ವಾಚನಗಳಲ್ಲಿ ಗ್ರಾಮೀಣ ಜನತೆಯ ಅರಿವಿನ ಮಟ್ಟವನ್ನು ಹಿಗ್ಗಿಸುವ ಅವರಲ್ಲಿನ ಸಾಂಸ್ಕೃತಿಕ ಚೈತನ್ಯವನ್ನು ಒರೆಗೆ ಹಚ್ಚುವ ಪ್ರಯತ್ನ ಇದೆ.

ಈ ರೀತಿಯ ಪಾರಂಪರಿಕ ಕೊಡುಗೆಯಾಗಿ ಬಂದು ಈಗ ಬದಲಾಗುತ್ತಿರುವ ಕಾಲ, ಮನೋಭಾವ ಪರಿಸರಗಳಿಂದ ಅವನತಿಯ ಅಂಚಿನಲ್ಲಿ ತತ್ತರಿಸುತ್ತ ನಿಂತಿರುವ ಜನಪದ ಕಲೆಗಳನ್ನು ಯೋಜನಾಬದ್ಧವಾಗಿ ಉಪಯೋಗಿಸಿಕೊಂಡದ್ದಾದರೆ ಆ ಕಲೆಗಳು ಹಾಗೂ ಕಲಾವಿದರಲ್ಲಿ ನವಚೈತನ್ಯ ಮೂಡುವುದರ ಜತೆಗೆ ಸಮಗ್ರ ಗ್ರಾಮೀಣಾಭಿವೃದ್ಧಿಯಲ್ಲಿ ಇವು ಮಹತ್ವದ ಪಾತ್ರವನ್ನೇ ವಹಿಸುತ್ತವೆ ಎಂಬುದರಲ್ಲಿ ಅನುಮಾನವಿಲ್ಲ.

ಈ ನಿಟ್ಟಿನಲ್ಲಿ ಗ್ರಾಮೀಣ ಬದುಕಿನ ಸಾಂಸ್ಕೃತಿಕ ವಿಕಾಸಕ್ಕೆ, ಶೈಕ್ಷಣಿಕ ಅಭಿವೃದ್ಧಿಗೆ, ಸಾಮಾಜಿಕ ಅನುಬಂಧಕ್ಕೆ, ಆರ್ಥಿಕ ಪುನಶ್ಚೇತನಕ್ಕೆ, ಮನರಂಜನೆಯ ಲಾಭಕ್ಕೆ ಜನಪದ ಕಲೆಗಳು ನೀಡಬಹುದಾದ ಕೊಡುಗೆಗಳನ್ನು ಇಲ್ಲಿ ಅವಲೋಕಿಸಬಹುದು.

### ಸಾಂಸ್ಕೃತಿಕ ವಿಕಾಸ :

ಹಿಂದೆ ಹಳ್ಳಿಯ ಗೌಡ ಪಟೇಲರಾದಿಯಾಗಿ ಗ್ರಾಮದ ಸಮಸ್ತ ಜನತೆಗೂ ತಮ್ಮ ಗ್ರಾಮಗಳಲ್ಲಿನ ಜನಪದ ಕಲಾವಿದರ ಬಗೆಗೆ ಅಪಾರ ಗೌರವ ಅಭಿಮಾನಗಳಿರುತ್ತಿದ್ದವು. ರೈತರು ತಾವು ಬೆಳೆದ ದವಸ ಧಾನ್ಯಗಳಲ್ಲಿ ಕಲಾವಿದರಿಗಾಗಿ ಒಂದು ಪಾಲು ತೆಗೆದಿರಿಸುತ್ತಿದ್ದರು. ಕಲಾವಿದರೂ ತಮ್ಮ ಕಲೆಗಳನ್ನು ಪ್ರೀತಿ, ಭಕ್ತಿ, ಗೌರವಗಳಿಂದ ಆರಾಧಿಸುತ್ತಾ ಹಳ್ಳಿಹಳ್ಳಿ ತಿರುಗಿ ಕಲಾಪ್ರದರ್ಶನ ನೀಡುತ್ತಾ

ಜನಮನಗಳನ್ನು ತಣಿಸುತ್ತಿದ್ದರು. ಬದುಕಿನ ಭಾರವನ್ನು ಮರೆಯಲು, ಸಮೂಹ ಜೀವನ ಚೈತನ್ಯವನ್ನು ಅರಿಯಲು ಆಗ ಬಹುಶಃ ಏಕೈಕ ಮಾಧ್ಯಮವಾಗಿದ್ದ ಜನಪದ ಕಲೆಗಳನ್ನು ಗ್ರಾಮೀಣ ಜನತೆಯೂ ಅಷ್ಟೇ ಹೃದ್ಯವಾಗಿ ಆಸ್ವಾದಿಸುತ್ತಿದ್ದರು. 'ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂ' ಎಂಬ ಸೌಂದರ್ಯಾಭಿರುಚಿಯ ಜನಪದ ಸಂಸ್ಕೃತಿಯ ಮೋಡಿ ವ್ಯಾಪಕವಾಗಿ ಹರಡಿತ್ತು. ಕಲಾವಿದರು ತುಂಬ ಹೆಮ್ಮೆಯಿಂದ ತಮ್ಮ ಕಲೆಯನ್ನು ತಲೆಮಾರಿನಿಂದ ತಲೆಮಾರಿಗೆ ವರ್ಗಾಯಿಸುತ್ತಿದ್ದರು.

ಆದರೆ ಇಂದು ಜನಪದ ಜೀವನದಲ್ಲಿ ರಸಿಕತೆ, ಜೀವನ ಪ್ರೀತಿ, ಸೌಂದರ್ಯಾರಾಧನೆಯ ಭಾವಗಳು ಯಾಂತ್ರಿಕ ಬದುಕಿನ ಯಂತ್ರವಾಹಿನಿಯ ಒತ್ತಡಕ್ಕೆ ಸಿಲುಕಿ ಕುಗ್ಗಿಹೋಗುತ್ತಿವೆ. ಇವುಗಳನ್ನು ಪುನಶ್ಚೇತನಗೊಳಿಸಲು, ಜನಜೀವನದಲ್ಲಿ ಸೌಹಾರ್ದವನ್ನು ಬೆಳೆಸಲು ಜನಪದ ಕಲೆಗಳಿಗೆ ಕಾಯಕಲ್ಪ ನೀಡುವುದು ಇಂದಿನ ಅತ್ಯಗತ್ಯ ತುರ್ತುಗಳಲ್ಲಿ ಒಂದಾಗಿದೆ. ಇದರಿಂದ ಹಳ್ಳಿಯ ಸಾಂಸ್ಕೃತಿಕ ಬದುಕಿಗೆ ಹೊಸ ರೂಪ ದೊರೆಯುವುದರಲ್ಲಿ ಅನುಮಾನವಿಲ್ಲ.

ರಾಮಾಯಣ, ಮಹಾಭಾರತ, ಭಾಗವತ ಇತ್ಯಾದಿ ಮಹಾಕಾವ್ಯಗಳು ಜನಪದ ಮೂಲದಿಂದಲೇ ಸಂರಚನೆಗೊಂಡುವು ಎಂಬುದಕ್ಕೆ ಹೇರಳವಾದ ಸಾಕ್ಷಿಗಳು ದೊರೆಯುತ್ತವೆ. ಈ ಕಥಾ ಸಂಸ್ಕೃತಿಯನ್ನು ಅನಾದಿಯಿಂದ ಇಂದಿನವರೆಗೂ ಉಳಿಸಿಕೊಂಡು ಬಂದಿರುವಲ್ಲಿ ಜನಪದ ಕಲೆಗಳ ಪಾತ್ರ ಮಹತ್ವದ್ದು. ಯಕ್ಷಗಾನ, ಬಯಲಾಟ, ಸೂತ್ರದ ಗೊಂಬೆ ಆಟ, ತೊಗಲು ಗೊಂಬೆ ಆಟ, ದೊಡ್ಡಾಟ, ಸಣ್ಣಾಟ, ಹಗಲು ವೇಷ, ಬಹುರೂಪ ಇತ್ಯಾದಿ ಪ್ರದರ್ಶನ ಕಲೆಗಳು ಇಂಥ ಸಾಂಸ್ಕೃತಿಕ ವಾಹಕಗಳಾಗಿ ಅತ್ಯುತ್ತಮ ಕೆಲಸ ಮಾಡುತ್ತವೆ. ಸಾಮಾನ್ಯ ಜನತೆಯಲ್ಲಿಯೂ ತಮ್ಮ ಪರಂಪರೆಯ ಅರಿವನ್ನು ಮೂಡಿಸಿ ಅವರ ಚಿತ್ತಭಿತ್ತಿಯಲ್ಲಿ ಉದಾತ್ತ ಗುಣಗಳನ್ನು ತುಂಬುತ್ತವೆ. ಹೀಗಾಗಿ ಇಂದಿನ ಪ್ರಧಾನಮಂತ್ರಿ, ಮುಖ್ಯಮಂತ್ರಿಗಳ ಬಗೆಗೆ ಅರಿವೂ ಇಲ್ಲದ ಸಾಧಾರಣ ಗ್ರಾಮೀಣ ವ್ಯಕ್ತಿಯೂ ತನ್ನ ಪರಂಪರೆ ಸಂಸ್ಕೃತಿಯ ಬಗೆಗೆ ಆಳವಾದ ಜ್ಞಾನ ಹೊಂದಿರುತ್ತಾನೆ.

ಬುಡಕಟ್ಟು ಸಂಸ್ಕೃತಿಯ ಬಗ್ಗೆ ಸಮಗ್ರ ಮಾಹಿತಿಯನ್ನು ಒದಗಿಸಿಕೊಡುವಲ್ಲಿ ಜನಪದ ಕಲೆಗಳು ಪ್ರಧಾನ ಪಾತ್ರ ವಹಿಸುತ್ತವೆ. ಕೊಡವರ ಉಮ್ಮತ್ತಾಟ, ಕುಡುಬಿ ಕುಣಿತ, ಸಿದ್ಧಿ ಕುಣಿತ, ಕೊರಗ ಡೋಲು ಕುಣಿತ ಇತ್ಯಾದಿ ಕಲೆಗಳು ಆಯಾ ಬುಡಕಟ್ಟುಗಳಿಗೆ ವಿಶೇಷವಾದ ಭಾವ ಸಂವಹನ, ಆಂಗಿಕ ಚಲನೆ, ಪದವಿನ್ಯಾಸಗಳನ್ನು ಹೊಂದಿರುವುದರಿಂದ ಆಯಾ ಬುಡಕಟ್ಟುಗಳ ಆಶಯ, ಜೀವನ ಸಿದ್ಧಾಂತ, ಔದ್ಯೋಗಿಕ ಲಕ್ಷಣ, ಸಾಧನೆ, ಸಿದ್ಧಿಗಳನ್ನು ಈ ಕಲೆಗಳ ಮೂಲಕ ಊಹಿಸಿಕೊಳ್ಳುವುದು ಸಾಧ್ಯ. ಉಮ್ಮತ್ತಾಟದಂಥ ಜನಪದ ಕಲೆ ಶಿಷ್ಟ ಮೆರುಗನ್ನು ಪಡೆದುಕೊಂಡೂ ಸಾಂಪ್ರದಾಯಿಕ ನಿಟ್ಟಿನಲ್ಲಿ ಸಾಗುತ್ತಿರುವುದು 'ಹಳೆ ಬೇರು ಹೊಸ ಚಿಗುರಿನ' ಸಮನ್ವಯದ ಸಂಕೇತವೂ ಆಗುತ್ತದೆ.

ರಾಷ್ಟ್ರೀಯ ಪ್ರಜ್ಞೆಯನ್ನು ಉದ್ದೀಪನಗೊಳಿಸುವಲ್ಲಿ ರಾಷ್ಟ್ರ ಗೌರವವನ್ನು, ರಾಷ್ಟ್ರಾಭಿಮಾನವನ್ನು, ಏಕತಾಭಾವನೆಯನ್ನು ಕುದುರಿಸುವಲ್ಲಿ ಕೂಡ ಜನಪದ ಕಲೆಗಳು ಮಹತ್ವಪೂರ್ಣ ಪಾತ್ರ ವಹಿಸುತ್ತವೆ. ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ಉಳಿದೆಲ್ಲಾ ಸಂವಹನ ಮಾಧ್ಯಮಗಳು ಬ್ರಿಟಿಷರ ಕಪಿಮುಷ್ಟಿಯಲ್ಲಿ ನಿಷ್ಕ್ರಿಯಗೊಂಡಾಗ ಬ್ರಿಟಿಷರ ವಿರುದ್ಧದ ಬಂಡಾಯಕ್ಕೆ ಸಾರ್ವಜನಿಕರನ್ನು ಹುರಿದುಂಬಿಸಲು ಗೀಗೀಪದಗಳು, ಲಾವಣಿ, ಹರಿಕಥೆ, ಗೊಂಬೆಯಾಟ, ಬಯಲಾಟ ಮುಂತಾದ ಜನಪದ ಕಲೆಗಳನ್ನು ಸಮರ್ಥವಾಗಿ ಉಪಯೋಗಿಸಿಕೊಂಡ ಜ್ವಲಂತ ಉದಾಹರಣೆ ಮರೆಯುವಂಥದ್ದಲ್ಲ. ಇದೇ ರೀತಿಯಲ್ಲಿ ದೇಶದ ಹಲವು ಆಂತರಿಕ ಸಮಸ್ಯೆಗಳ ವಿರುದ್ಧ ಹೋರಾಡಲು ಜನಸಮುದಾಯಕ್ಕೆ ಸರಿಯಾದ ರೀತಿಯಲ್ಲಿ ಸೂಚನೆಗಳನ್ನು ನೀಡಲು ಇಂದಿಗೂ ಜನಪದ ಕಲೆಗಳ ನೆರವನ್ನು ಪಡೆಯಬಹುದಾಗಿದೆ.

## ಶೈಕ್ಷಣಿಕ ಅಭಿವೃದ್ಧಿ :

ಪಟ್ಟಣದ ಮಕ್ಕಳು ಹಳ್ಳಿಯ ಮಕ್ಕಳಿಗಿಂತ ಬುದ್ಧಿವಂತರು ಎಂಬ ಅಭಿಪ್ರಾಯವಿದೆ. ಆದರೆ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ತೂಗಿ ನೋಡಿದಾಗ ಹಳ್ಳಿಯ ಮಕ್ಕಳು ವಿಶೇಷ ಪ್ರತಿಭೆಯನ್ನು ಪಡೆದಿರುತ್ತಾರೆ. ಅದು ತಮ್ಮ ಜಾನಪದ ಪರಿಸರದಿಂದ ಗಳಿಸಿಕೊಂಡ ಪ್ರತಿಭೆ. ಈ ಪ್ರತಿಭೆಗಳಿಗೆ ಸರಿಯಾದ ಆತ್ಮವಿಶ್ವಾಸವನ್ನು ಬಾಲ್ಯದಿಂದಲೇ ತುಂಬಿದ್ದಾದಲ್ಲಿ ಹಳ್ಳಿಯ ಮಕ್ಕಳು ಯಾವುದೇ ಕಾರಣದಿಂದ ಹಿಂದುಳಿಯಬೇಕಾಗಿಲ್ಲ. ಇದ್ದಕ್ಕೆ ಜನಪದ ಕಲೆಗಳಿಂದಲೂ ಪೂರಕ ಪ್ರೋತ್ಸಾಹವನ್ನು ಪಡೆದುಕೊಳ್ಳಲು ಖಂಡಿತಾ ಸಾಧ್ಯವಿದೆ.

ಯಕ್ಷಗಾನ, ಬಯಲಾಟ, ಗೊಂಬೆಯಾಟಗಳಂಥವು ಪರಂಪರೆಯ ಬಗೆಗಿನ ಜ್ಞಾನವನ್ನು ಬೆಳೆಸಿದರೆ ಕತ್ತಿವರಸೆ, ದೊಣ್ಣೆವರಸೆ, ಸಮರಕಲೆಗಳ ವೀಕ್ಷಣೆ ಮತ್ತು ತರಬೇತಿಗಳಿಂದ ದೈಹಿಕ ದೃಢತೆ ಲಭಿಸುತ್ತದೆ. ಹಳ್ಳಿಯ ಮಕ್ಕಳಿಗೆ ಅತ್ಯಾಧುನಿಕ ಶಿಕ್ಷಣ ಅಗತ್ಯವಿಲ್ಲ ಎಂದು ಇದರರ್ಥವಲ್ಲ. ಆದರೆ ಆ ಶಿಕ್ಷಣವನ್ನು ಒದಗಿಸಬೇಕೆಂಬ ಆತುರದಲ್ಲಿ ಪರಂಪರೆಯ ಬಗೆಗೆ ನಿರ್ಲಕ್ಷ್ಯ ಸಲ್ಲದು ಎಂದಷ್ಟೇ. ಕಂಪ್ಯೂಟರ್ ಶಿಕ್ಷಣಕ್ಕೆ ಒಂದು ಗಂಟೆ ನಿಗದಿ ಮಾಡಿದರೆ ಜನಪದ ಕಲೆ, ಸಾಹಿತ್ಯ, ಸಂಸ್ಕೃತಿಯ ಶಿಕ್ಷಣಕ್ಕೂ ಒಂದು ಗಂಟೆ ನಿಗದಿ ಮಾಡಿದಲ್ಲಿ 'ಹಳೇ ಬೇರು ಹೊಸ ಚಿಗುರಿನ' ಹಸುರು ಗ್ರಾಮಜೀವನಕ್ಕೆ ಹೊಸ ಹುರುಪು ತುಂಬುವುದರಲ್ಲಿ ಆ ಮೂಲಕ ಗ್ರಾಮೀಣ ಶಿಕ್ಷಣದ ಅಭಿವೃದ್ಧಿಗೆ ನೆರವಾಗುವುದರಲ್ಲಿ ಸಂಶಯವಿಲ್ಲ.

ದೇಶದ ಅನಕ್ಷರತೆಯಲ್ಲಿ ಗ್ರಾಮಗಳದು ಸಿಂಹಪಾಲು ನಿಜ. ಆದರೆ ಅನಕ್ಷರಸ್ಥರೆಲ್ಲ ಅಜ್ಞಾನಿಗಳಲ್ಲ ಎಂಬ ಸತ್ಯವನ್ನು ಮನಗಾಣಬೇಕಾಗಿದೆ. ಒಬ್ಬೊಬ್ಬ ಅನಕ್ಷರಸ್ಥ ಗ್ರಾಮೀಣ ವ್ಯಕ್ತಿ ಕೂಡ ಅಪಾರ ಸಾಂಸ್ಕೃತಿಕ ತಿಳಿವನ್ನು ಮೈಗೂಡಿಸಿಕೊಂಡಿರುತ್ತಾನೆ/ಳೆ. ಅಕ್ಷರಜ್ಞಾನವೊಂದೇ ಶಿಕ್ಷಣವಲ್ಲ. 'ಶಿಕ್ಷಣ'ದ ಹಲವಾರು ಆಶಯಗಳಲ್ಲಿ ಅಕ್ಷರಜ್ಞಾನ ಕಲಿಕೆ ಒಂದು ಅಂಶ ಮಾತ್ರ ಎಂಬುದು ಇಂಥವರನ್ನು ಸಂದರ್ಶಿಸಿದಾಗ ಉಂಟಾಗುತ್ತದೆ. ಇವರ ಈ ತಿಳಿವಳಿಕೆಗೆ ಜನಪದ ಕಲೆಗಳ ಕೊಡುಗೆ ಅನನ್ಯ ಎನ್ನುವುದೂ ಮನದಟ್ಟಾಗುತ್ತದೆ.

ಗಮಕ ವಾಚನ ಮತ್ತು ಹರಿಕಥಾ ವಾಚನಗಳು ಗ್ರಾಮೀಣ ಶಿಕ್ಷಣದಲ್ಲಿ ವಹಿಸಿರುವ ಪಾತ್ರ ಅಮೂಲ್ಯವಾದುದು. ಆಧುನಿಕ ಶಿಕ್ಷಣದ ಪರಿಕಲ್ಪನೆಯೇ ಇರದಿದ್ದ ಕಾಲದಲ್ಲಿ ಕುಮಾರವ್ಯಾಸ, ಲಕ್ಷ್ಮೀಶ, ರತ್ನಾಕರವರ್ಣಿಯರು ಗಮಕದ ಮೂಲಕ ಮನೆಮನೆಗೂ ಲಗ್ಗೆ ಹಾಕಿದ್ದರು. ಹರಿಕಥಾ ವಾಚನದ ಬಹುತೇಕ ಉಪಕಥೆಗಳು ಜನಪದರ ಬದುಕಿನಿಂದ ನೇರವಾಗಿ ತೆಗೆದುಕೊಂಡು ಜನಪದರಿಗೆ ಬದುಕಿನ ಬಗೆಗೆ ಅಮೂಲ್ಯ ತಿಳುವಳಿಕೆಯನ್ನು ನೀಡುತ್ತಿದ್ದವು. ಆಧುನಿಕ ತಂತ್ರಜ್ಞಾನದ ಹಾವಳಿಯಿಂದ ಮೂಲೆಗುಂಪಾಗುತ್ತಿರುವ ಈ ಕಲೆಗಳಿಗೆ ಪುನಶ್ಚೇತನ ಕೊಟ್ಟು ಗ್ರಾಮೀಣಾಭಿವೃದ್ಧಿಗೆ ಪೂರಕವಾಗಿ ಬಳಸಿಕೊಳ್ಳಬೇಕಾದ ಅನಿವಾರ್ಯತೆ ಇದೆ.

## ಸಾಮಾಜಿಕ ಅನುಬಂಧ :

ಹಳ್ಳಿ ಹಳ್ಳಿಯ ನಡುವಿನ, ಧರ್ಮ ಧರ್ಮದ ನಡುವಿನ ಸೌಹಾರ್ದವನ್ನು ಹೆಚ್ಚಿಸುವಲ್ಲಿ, ಅರ್ಥಪೂರ್ಣವಾಗಿ ಮುಂದುವರೆಸಿಕೊಂಡು ಹೋಗುವಲ್ಲಿ ಜನಪದ ಕಲೆಗಳದು ಮಹತ್ತರವಾದ ಪಾತ್ರವೇ ಇದೆ. ಕೋಮು ಗಲಭೆಗಳಿಂದ ಸಾಮಾಜಿಕ ಕೇಡಿನ ಘಟನೆಗಳು ಹಳ್ಳಿಗಳಲ್ಲಿ ಇಲ್ಲವೇ ಇಲ್ಲವೆನ್ನುವಷ್ಟು ವಿರಳ. ಇದಕ್ಕೆ ಮುಖ್ಯ ಕಾರಣ ಹಳ್ಳಿಯ ಜನರಲ್ಲಿ ಎಲ್ಲರೂ ಒಂದು ಎಂಬ ಭಾವ ಗಟ್ಟಿಯಾಗಿರುವುದು. ಊರೊಟ್ಟಿನ ಕೆಲಸಗಳಲ್ಲಿ ಪರಸ್ಪರ ಸಹಕಾರ ನೀಡವುದು. ಇಂಥ ಭಾವ, ಸಹಕಾರಗಳು ಜನಪದ ಕಲೆಗಳ ಮೂಲಕ ಮತ್ತಷ್ಟು ದಟ್ಟಗೊಳ್ಳುತ್ತವೆ. ಹಬ್ಬ, ಜಾತ್ರೆಗಳು ಸಾಮಾಜಿಕ ಅನುಬಂಧಗಳನ್ನು ಕುದುರಿಸುವಲ್ಲಿ ಒಂದು ಹಂತದ ಪಾಲು ತೆಗೆದುಕೊಂಡರೆ ಅಲಾವಿ ಕುಣಿತ, ರಿವಾಯತ್ ಮೇಳ, ಕರ್ಬಾಲ ಮೇಳ ಹೀಗೆ ವಿವಿಧೆಡೆಗಳಲ್ಲಿ ವಿವಿಧ ನಾಮರೂಪ ಪಡೆದಿರುವ ಮೊಹರಂ ಕುಣಿತ ಈ ನಿಟ್ಟಿನಲ್ಲಿ ಮತ್ತೊಂದು ಹೆಜ್ಜೆ ಮುಂದೆ ಹೋಗುತ್ತದೆ. ಹಿಂದೂ ಮುಸ್ಲಿಂ ಭಾವೈಕ್ಯತಾ ಸಾಧನೆಗೆ ಇಂಥ ಕಲೆಗಳದು ಅನನ್ಯ ಕೊಡುಗೆ.

ಜನಪದ ಕಲೆಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವ ಮೂಲಕ ಹಳ್ಳಿಗಳಲ್ಲಿ ಆಳವಾಗಿ ಬೇರೂರಿರುವ ಜಾತೀಯತೆಯನ್ನು ಹೋಗಲಾಡಿಸುವ ಪ್ರಯತ್ನ ಮಾಡಬಹುದಾಗಿದೆ. ಜನಪದ ಕಲೆಗಳನ್ನು ಜಾತೀವಾರು ಗುರುತಿಸುವುದನ್ನು ಬಿಟ್ಟು ಅವು ಇಡೀ ಗ್ರಾಮದ, ಸಮೂಹದ ಸ್ವತ್ತು ಎಂಬ ಭಾವನೆಯನ್ನು ಬೆಳೆಸಬೇಕಾಗಿದೆ.

ಔಚಿತ್ಯಪೂರ್ಣವಾಗಿ ಜನಪದ ಕಲೆಗಳನ್ನು ಬಳಸಿಕೊಂಡದ್ದೇ ಆದರೆ ಅದು ಅತ್ಯುತ್ತಮ ಸಂವಹನ ಮಾಧ್ಯಮವೂ ಆಗಬಲ್ಲುದು. ಕುಟುಂಬ ಕಲ್ಯಾಣ ಯೋಜನೆಗಳಂಥ ಅತಿ ವೈಯಕ್ತಿಕವಾದ ಆದರೆ ಸಮಾಜದ ಒಳಿತಿಗಾಗಿ ಸಾರ್ವಜನಿಕರ ಮುಂದೆ ಇಡಲೇಬೇಕಾದ ವಿಷಯಗಳನ್ನು ಜನಮನಕ್ಕೆ ಮುಟ್ಟಿಸಲು ಯಕ್ಷಗಾನ, ಬಯಲಾಟ, ಗೊಂಬೆ ಆಟ, ಗೀಗೀ ಮೇಳ, ಲಾವಣಿ, ಹರಿಕಥೆ ಇತ್ಯಾದಿಗಳನ್ನು ಸಮರ್ಥವಾಗಿ ಉಪಯೋಗಿಸಿಕೊಳ್ಳಬಹುದು. ಗ್ರಾಮೀಣ ಜಗತ್ತಿಗೆ ಏಡ್ಸ್‌ನಂಥ ಭೀಕರ ರೋಗದ ಮುನ್ನೆಚ್ಚರಿಕೆ ನೀಡಲು ಜನಪದ ಕಲೆಗಳನ್ನು ಆಶ್ರಯಿಸುವುದು ಒಳ್ಳೆಯದು. ಈ ಸಂಬಂಧ ಯಾವುದೇ ರೀತಿಯ ಜಾಹೀರಾತುಗಳು ಪ್ರಭು ಸಂಹಿತೆ, ಮಿತ್ರ ಸಂಹಿತೆಗಳಂತೆ ಕೆಲಸ ಮಾಡಿದರೆ ಜನಪದ ಕಲೆಗಳು ಕಾಂತಾ ಸಂಹಿತೆಯಂತೆ ಮನದಾಳವನ್ನು ಮುಟ್ಟುತ್ತವೆ. ತಾನು ಸಾರಬೇಕಾದ ಹೊಸ ವಿಷಯಗಳ

ಬಗೆಗೆ ನಂಬಿಕೆ ಇಟ್ಟು ಅದನ್ನು ಮೊದಲು ತಾನು ಅರಗಿಸಿಕೊಂಡ ಕಲಾವಿದ ಜನರ ಮನಸ್ಸನ್ನು ಬಹುಸುಲಭವಾಗಿ ಅಪ್ರಯತ್ನಪೂರ್ವಕವಾಗಿ ತಟ್ಟಬಲ್ಲ.

ಉದಾಹರಣೆಗೆ, ಕರಪಾಲ ಮೇಳದಂಥ ಜನಪದ ಕಲೆಯು ಸಂಗೀತ, ಸಾಹಿತ್ಯ, ನೃತ್ಯಗಳಿಂದ ಕೂಡಿದ್ದು ಕಥಾಪ್ರಧಾನ ಕಲೆಯಾಗಿದ್ದರೂ ಪೂರ್ವ ಸಿದ್ಧವಾದ ಸಾಹಿತ್ಯವೇನೂ ಇರುವುದಿಲ್ಲ. ನಿರೂಪಕನ ಜಾಣ್ಮೆ,ಕೌಶಲ, ಕಲ್ಪನಾ ಶಕ್ತಿಗಳಿಗೆ ತಕ್ಕಂತೆ ಕತೆಗಳು ರೂಪ ಪಡೆಯುತ್ತವೆ. ಸನ್ನಿವೇಶಕ್ಕೆ ತಕ್ಕ ಹಾಗೆ ಕಥೆಗಳನ್ನು ದುಡಿಸಿಕೊಳ್ಳುವ ಕಲೆ ಇವರಿಗೆ ಕರಗತವಾಗಿರುತ್ತದೆ. ಇಂಥ ಕಲಾವಿದರು ಯಾವುದೇ ರೀತಿಯ ಸಂದೇಶವನ್ನಾದರೂ ಜನತೆಗೆ ಹೃದ್ಯವಾಗಿ ಮುಟ್ಟಿಸಬಲ್ಲರು. ಅಂತೆಯೇ ಹಾವಾಡಿಗರು, ದೊಂಬರು ಇಂಥ ಕಲಾವಿದರನ್ನು ಒಂದುಗೂಡಿಸಿ ಅವರ ಅನುಭವ ಸಾಂದ್ರತೆ, ವ್ಯಾವಹಾರಿಕ ಸೂಕ್ಷ್ಮತೆ, ಆಕರ್ಷಕ ಹಾವಭಾವಗಳನ್ನು ಅಧ್ಯಯನ ಮಾಡಿದ್ದೇ ಆದಲ್ಲಿ ಸಂವಹನ ಕಲೆಗೆ ಹೊಸ ಆಯಾಮವನ್ನು ಕೊಡಲೂ ಸಾಧ್ಯವಿದೆ.

## ಆರ್ಥಿಕ ಪುನಶ್ಚೇತನ :

ಶಿಷ್ಟ ಕಲೆಗಳಾದ ಭರತನಾಟ್ಯ, ಶಾಸ್ತ್ರೀಯ ಸಂಗೀತ ಇತ್ಯಾದಿಗಳನ್ನು ವೇದಿಕೆಯ ಮೂಲಕ ಪ್ರದರ್ಶಿಸುವಂತೆ ಜನಪದ ಕಲೆಗಳಿಗೂ ಸೂಕ್ತ ವೇದಿಕೆ ಒದಗಿಸಿದಲ್ಲಿ ಕಲಾವಿದರು, ವಾದ್ಯ ಮೇಳದವರು, ವಾದ್ಯ ತಯಾರಕರು ಮುಂತಾದವರಿಗೆ ಜೀವನೋಪಾಯದ ನಿಶ್ಚಿತ ಹಾದಿ ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಹಾಗೆಯೇ ಈ ಕಲೆಗಳಿಗೆ ಕೊಡುವ ಪ್ರೋತ್ಸಾಹ ಪರ್ಯಾಯವಾಗಿ ಕಲಾವಿದರಿಗೂ ಸಂದು ಅವರ ಜೀವನ ಭರವಸೆ ಹಿಗ್ಗುತ್ತದೆ. ದೇಶವಿದೇಶಗಳಲ್ಲಿ ಕಲೆಯ ಕಂಪು ಹರಿದಾಗ ಗ್ರಾಮೀಣ ಬದುಕಿಗೆ ಹೊಸ ವರ್ಣ ದೊರೆಯುತ್ತದೆ.

## ಮನರಂಜನೆಯ ಲಾಭ :

ಜನಪದ ಕಲೆಗಳು ಯಾವ ಹಿನ್ನೆಲೆಯಿಂದ ಮೂಡಿಬಂದಿದ್ದರೂ ವೀಕ್ಷಕರಿಗೆ ಮನರಂಜನೆ ನೀಡುವುದು ಅವುಗಳ ಪ್ರಧಾನ ಉದ್ದೇಶ ಎಂಬುದರಲ್ಲಿ ಅನುಮಾನವಿಲ್ಲ. ಪಟಾ ಕುಣಿತ, ಪೂಜಾ ಕುಣಿತ, ನಂದೀಧ್ವಜ ಕುಣಿತಗಳಂಥ ಶುದ್ಧ ಧಾರ್ಮಿಕ ಕಲೆಗಳಲ್ಲೂ ಅನೇಕ ಚಮತ್ಕಾರಯುತ ಪ್ರದರ್ಶನಗಳನ್ನು ('ಪೂಜಾ' ಕುಣಿತದ ಸಂದರ್ಭದಲ್ಲಿ 'ಪೂಜಾ'ವನ್ನು ತಲೆಯ ಮೇಲೆ ಹೊತ್ತುಕೊಂಡಂತೆಯೇ ಕೆಳಗೆ ಬಿದ್ದ ರೂಪಾಯಿಯ ನೋಟನ್ನು ಕಣ್ಣಿನ ರೆಪ್ಪೆಯ ಮೂಲಕ ಹೆಕ್ಕಿಕೊಳ್ಳುವುದು, ವೀರಗಾಸೆ ಕುಣಿತದಲ್ಲಿ ತೆಂಗಿನಕಾಯಿಯನ್ನು ಎಸೆದು ಅದು ಗಾಳಿಯಲ್ಲಿರುವಂತೆಯೇ ಕತ್ತಿಯ ಮೂಲಕ ತುಂಡರಿಸುವುದು, ಹೀಗೆ) ಸಹಜವಾಗಿಯೇ ನೀಡುತ್ತಾರೆ. ಇನ್ನು ಗ್ರಾಮೀಣ ಮನಸ್ಸುಗಳಿಗೆ ಶುದ್ಧ ಮನರಂಜನೆ ನೀಡಲೆಂದೇ ಆಯೋಜಿಸಿಕೊಂಡ ಕರಪಾಲ ಮೇಳಗಳಂಥ ಜನಪದ ಕಲೆಗಳಲ್ಲಿ ಮನರಂಜನೆಯ ಮೋಡಿ ಮುಗಿಲು ಮುಟ್ಟುತ್ತದೆ. ಇಂಥ ಕಲೆಗಳನ್ನು ವ್ಯಾಪಕ ನೆಲೆಯಲ್ಲಿ ದುಡಿಸಿಕೊಂಡರೆ ಸಿನಿಮಾ ದೂರದರ್ಶನಗಳಿಗಿಂತಲೂ ಪ್ರಭಾವಿ ಮಾಧ್ಯಮವಾಗಿ ಇವು ಬೆಳೆಯಬಲ್ಲವು.

ಜನಪದ ಕಲೆಗಳು ಗ್ರಾಮೀಣ ಬದುಕಿಗೆ ಅಗತ್ಯವಿರುವ ಮನರಂಜನೆ ನೀಡುವುದಷ್ಟೇ ಅಲ್ಲ, ಮನೋಚಿಕಿತ್ಸಕಗಳಾಗಿ ಕೂಡ ಕೆಲಸ ಮಾಡಬಲ್ಲವು. ಮಳೆಯ ವೈಪರೀತ್ಯ ಪ್ರಧಾನ ಕಾರಣವಾಗಿ ಗ್ರಾಮೀಣ ರೈತರ ಜೀವನ ಭರವಸೆಗಳು ಕುಗ್ಗಿ ಆತ್ಮಹತ್ಯೆಗೆ ಗುರಿಯಾಗುತ್ತಿರುವುದು ಇಂದಿನ ನಾಗರಿಕ ಜಗತ್ತಿನ ಅತ್ಯಂತ ಭೀಕರತೆಗಳಲ್ಲಿ ಒಂದು. ಹೀಗೆ ಹತಾಶೆಯ ಅಂಚಿಗೆ ಬಂದು ನಿಂತ ಗ್ರಾಮೀಣ ಸಮುದಾಯಕ್ಕೆ ಪಾಂಡವರನ್ನು ನೆನಪಿಸಿ, ಅಂಥವರಿಗೇ ವನವಾಸ ತಪ್ಪಿದ್ದಲ್ಲ ಇನ್ನು ಸಾಮಾನ್ಯರ ಪಾಡೇನು? ಎಂದು ಬಂದ ಪರಿಸ್ಥಿತಿಗೆ ಒಗ್ಗಿಕೊಳ್ಳುವಂತೆ ಮಾಡುವ, ಅವರಂಥವರೂ ಒಳ್ಳೆಯ ಕಾಲ ಪಡೆದರು, ಉಳಿದವರಿಗೂ ಬಾರದಿದ್ದೀತೆ? ಎಂದು ಸುಭಿಕ್ಷ ಪರಿಸರ ಆಗಮನದ ಭರವಸೆ ತುಂಬಿ ಆ ಮೂಲಕ ಆತ್ಮವಿಶ್ವಾಸದ ದುಡಿತಕ್ಕೆ ಪ್ರೇರೇಪಿಸುವ ಚೈತನ್ಯ ಜನಪದ ಕಲೆಗಳಿಗೆ ಇದೆ.

●

# ಜನಪದ ಕ್ರೀಡೆಗಳು

ಡಾ. ಪದ್ಮಾ ಶೇಖರ್




ಗ್ರಾಮೀಣ ಆಟಗಳು ಎಂದರೆ ಜನಪದ ಆಟಗಳೇ ಆಗಿವೆ. ಆಧುನಿಕ ಸಂದರ್ಭದಲ್ಲಿ ನಾವು ಕ್ರಿಕೆಟ್ ಮತ್ತು ಬೇಸ್‌ಬಾಲ್‌ನಂಥ ಆಟಗಳನ್ನು ನೋಡುತ್ತಿದ್ದೇವೆ. ಅವುಗಳು ನಮ್ಮ ಗ್ರಾಮೀಣರಿಗೆ ಪರಿಚಿತವಾಗಿರುವ ಚಿನ್ನಿದಾಂಡು ಹಾಗೂ ಪಣೆಚೆಂಡು (= ಚಂಡಾಟ) ಆಟಗಳ ವಿಕಾಸ ಸ್ವರೂಪಗಳು ಎಂಬುದು ಆಶ್ಚರ್ಯ ಹುಟ್ಟಿಸುವ ಅಂಶವಾದರೂ, ನಿಜ. ಈ ಮಾತಿನ ಉದ್ದೇಶ ಇಷ್ಟೆ-ಜನಪದ ಆಟಗಳ ಅಧ್ಯಯನದ ಮಹತ್ವ ಇಡಿಯಾಗಿ ಭಾರತದ ಆಟದ ಚರಿತ್ರೆಯನ್ನು ಬಯಲುಗೊಳಿಸುತ್ತದೆ ಎಂಬುದಕ್ಕೆ ಮತ್ತು ಆ ಆಟಗಳ ಪ್ರಾಮುಖ್ಯತೆಯನ್ನು ಗ್ರಹಿಸಲೇಬೇಕು ಎಂಬುದಕ್ಕೆ.

ಜನಪದ ಆಟಗಳು ಬಹುತೇಕವಾಗಿ ಅನುಕರಣೆಯಿಂದ ಪೀಳಿಗೆಯಿಂದ ಪೀಳಿಗೆಗೆ ಉಳಿದುಕೊಂಡು ಬಂದಂಥವು ಮತ್ತು ಸಾಮಾಜಿಕ ಅಗತ್ಯಗಳನ್ನು ಪೂರೈಸುವ ಕಾರಣದಿಂದ ಕಲಿಕೆಯಾಗಿ ಮೈಗೂಡಿಸಿಕೊಂಡಂಥವು. ಉದಾಹರಣೆಗೆ, ಮಣ್ಣಾಟ ಮಕ್ಕಳಿಗೆ ಪ್ರಿಯ. ಆ ಮಣ್ಣಿನಲ್ಲಿ ಮಡಿಕೆ-ಕುಡಿಕೆ ಮಾಡುವ ಕುಂಬಾರನನ್ನು ಗಮನಿಸುವವರು ಅದೇ ರೀತಿಯಲ್ಲಿ ಮಣ್ಣನ್ನು ಹದಗೊಳಿಸಿ ಆಟಿಕೆಗಳನ್ನು ಆ ಜನಾಂಗದ ಮಕ್ಕಳು ಸೃಷ್ಟಿಸಿಬಿಡುತ್ತವೆ. ಹಾಗೇ ಬಿಲ್ಲುಗಾರಿಕೆ, ಗುರಿಕಾರಿಕೆ ಇತ್ಯಾದಿಗಳು ಅಗತ್ಯವನ್ನು ಪೂರೈಸಲು ಬೆಳೆದುಬಂದ ಗ್ರಾಮೀಣ ಆಟಗಳೇ ಆಗಿವೆ.

> *ಜನಪದ ಆಟಗಳು ಬಹುತೇಕವಾಗಿ ಅನುಕರಣೆಯಿಂದ ಪೀಳಿಗೆಯಿಂದ ಪೀಳಿಗೆಗೆ ಉಳಿದುಕೊಂಡು ಬಂದಂಥ ಸಾಮಾಜಿಕ ಅಗತ್ಯಗಳನ್ನು ಪೂರೈಸುವ ಕಾರಣದಿಂದ ಕಲೆಯಾಗಿ ರೂಪುಗೊಂಡಂಥವು.*

ಆಟ ಎಂದಾಗ ಏಕಘಟಕ ಕ್ರಿಯೆಯಲ್ಲ ಎಂಬುದೇ ಅದರ ಪ್ರಮುಖ ಲಕ್ಷಣ. ಅಂದರೆ ಇಲ್ಲಿ ನಿರ್ದಿಷ್ಟವಾಗಿ ಇಬ್ಬರು ಅಥವಾ ಮುಖಾಮುಖಿಯಾಗಿ ಎರಡು ತಂಡವಿರುತ್ತವೆ. ಇಬ್ಬರಲ್ಲೂ ಸ್ಪರ್ಧೆ ಇರುತ್ತದೆ. ಸೋಲು ಗೆಲುವು ಎಂಬುದೇ ಇಲ್ಲಿ ನಿರ್ಣಾಯಕವಾಗಿರುತ್ತದೆ. ಚೆನ್ನೆಮಣೆಯಲ್ಲಿ (= ಹಳ್ಳುಗುಳಿಮಣೆಯಲ್ಲಿ) ಬರುವ ಸೀತೆಯಾಟ ಹೊರನೋಟಕ್ಕೆ ಒಬ್ಬರೇ ಆಡುವುದೆಂದು ಕಾಣುತ್ತಿದ್ದರೂ, ಭ್ರಮಾತ್ಮಕವಾಗಿ ಇನ್ನೊಬ್ಬ ಸ್ಪರ್ಧಿ ಎದುರಾಳಿಯಾಗಿ ಇದ್ದೇ ಇರುತ್ತಾರೆ. ಹೀಗಾಗಿ ಯಾವುದೇ ಗ್ರಾಮೀಣ ಆಟದಲ್ಲಿ ಸಂವಹನ ಮತ್ತು ಕ್ರಿಯೆಗಳ ಸಾಹಚರ್ಯ ಇದ್ದೇ ಇರುತ್ತದೆ. ಈ ಸಂವಹನ ಕ್ರಿಯಾತ್ಮಕವಾಗಿ ಆಟಗಾರರ ಚಾತುರ್ಯ ಬುದ್ಧಿ, ಸಾಂಘಿಕತೆ, ಶಿಸ್ತು, ನೀತಿ ನಿಯಮಾವಳಿಗಳನ್ನು ಪ್ರಚೋದಿಸುತ್ತದೆ. ಸಮಾಜದಲ್ಲಿ ಸಮಚಿತ್ತತೆಯ ಮನೋಭಾವವನ್ನು ರೂಪಿಸಿಕೊಳ್ಳಬೇಕೆಂಬ ಪಾಠವನ್ನು ಪರೋಕ್ಷವಾಗಿ ವರ್ಧಿಸುವಂತೆ ಮಾಡುತ್ತದೆ. ಅಂದರೆ ಮನಸ್ಸನ್ನು

ಹವಗೊಳಿಸುವ ಮಾಧ್ಯಮವಾಗಿ ಜನಪದ ಆಟಗಳು ಕೆಲಸ ಮಾಡುತ್ತವೆ. ಹಾಗೆಂದುಕೊಂಡಾಗ ಜನಪದ ಆಟಗಳು ಕೇವಲ ಮನೋರಂಜನಾತ್ಮಕವಾದುವು ಎಂಬ ಧೋರಣೆ ಸತ್ಯದೂರವೆಂಬುದು ಖಾತರಿಯಾಗುತ್ತದೆ.

ಗ್ರಾಮೀಣ ಆಟಗಳು ಮಾನವನ ಮಾನಸಿಕ ಬೆಳವಣಿಗೆಗೆ, ಆಂತರಿಕ ವಿಕಾಸಕ್ಕೆ ಕಾರಣವಾಗುತ್ತವೆ ಎಂಬುದು ಎಷ್ಟು ಸತ್ಯವೋ ಅಷ್ಟೇ ಸತ್ಯ ಅವು ಸಾಂದರ್ಭಿಕ ಅಗತ್ಯಕ್ಕಾಗಿ ಅನೇಕ ಮಾರ್ಪಾಟುಗಳನ್ನು ಪಡೆದವು ಎಂಬುದು. ಉದಾರಹಣೆಗೆ "ಕೋಟೆಕಾಳಗ" ಎಂಬುದು ಯುದ್ಧ ಸಂದರ್ಭದಲ್ಲಿ ಬಳಕೆಯಾಗಿರುವ ಯುದ್ಧ ವಿಧಾನಗಳಲ್ಲಿ ಒಂದು. ಕೋಟೆಯ ಮೇಲಿನ ಸೈನಿಕರು ದೊಡ್ಡ ಕಲ್ಲುಗಳನ್ನು ಎಸೆಯುವ ಮೂಲಕ ಕೆಳಗಿರುವ ಎದುರಾಳಿ ಸೈನಿಕರನ್ನು ಹಿಮ್ಮೆಟ್ಟಿಸುತ್ತಿದ್ದರು. ಇಲ್ಲಿನ ಕಲ್ಲು ಬೀಸುವ ಕ್ರಿಯೆಯ ಹಿಂದೆ, ಗುರಿ ಹೊಡೆಯುವ ತಂತ್ರಗಾರಿಕೆಯನ್ನು ಗುರುತಿಸಬಹುದು. ಇದು ಕವಣೆ ಕಲ್ಲಾಟ, ಕಲ್ಲುಬೀಸುವಾಟ, ಗುರಿಯಿಟ್ಟು ತೆಂಗಿನಕಾಯಿ ಒಡೆದಾಟ ಇತ್ಯಾದಿಗಳಲ್ಲಿ ಇದೇ ತಂತ್ರಗಾರಿಕೆಯನ್ನು ಬಳಸುವುದನ್ನು ಕಾಣಬಹುದು. ಹಾಗೆ ನೋಡಿದರೆ ಜನಪದ ಆಟಗಳು ಮೂಲಸ್ವರೂಪದಲ್ಲಿ, ಅವರವರ ಜೀವನವನ್ನು ಪೊರೆವ ಮಾಧ್ಯಮವಾಗಿ ಬೆಳಕಿಗೆ ಬಂದು ಕ್ರಮೇಣ ವಿಕಾಸ ಸ್ವರೂಪವನ್ನು ಪಡೆದುಕೊಂಡಿರುವ ಸಾಧ್ಯತೆ ಹೆಚ್ಚಿದೆ. ಬಿಲ್ಲುಗಾರಿಕೆ ಇಂಥದೇ ಪ್ರಯತ್ನದ ಫಲವೇ ಆಗಿದೆ. ಪ್ರಾಣಿಯನ್ನು ಕೊಲ್ಲುವುದಕ್ಕಾಗಿ ಬಿಲ್ಲುಗಾರಿಕೆ ಕಲಿಕೆ ಆರಂಭವಾಯಿತಾದರೂ ಕ್ರಮೇಣ ರಕ್ಷಣೆಯ ತಂತ್ರವಾಗಿಯೂ ಬಳಕೆಗೆ ಬಂದಿತು ಎಂಬುದನ್ನು ಗಮನಿಸಬೇಕು. ಈ ಹೊತ್ತು ಅದೇ ಬಿಲ್ಲುಗಾರಿಕೆ ಅಂತರರಾಷ್ಟ್ರೀಯ ಆಟಗಳಲ್ಲಿ ಒಂದಾಗಿದೆ.

ಜನಪದ ಆಟಗಳು ವೈವಿಧ್ಯಮಯವಾಗಿರುತ್ತವೆ. ಆಟಕ್ಕೆ ಬಳಸುವ ವಸ್ತುಗಳನ್ನೇ ಆಧರಿಸಿ ಹೇಳುವುದಾದರೆ ಹರಳಾಟ,ಬೆರಳಾಟ, ತುಳಿದಾಟ, ಸುತ್ತಾಟ, ಹುಡುಕಾಟ, ಕುಂಟಾಟ, ಎಳೆದಾಟ, ಗುರಿಯಾಟ, ಬೆನ್ನೆಟ್ಟುವಾಟ, ಅನುಕರಣ ಆಟಗಳು ಇತ್ಯಾದಿಯಾಗಿ (ನೋಡಿ'ಜನಪದ ಆಟಗಳು' ಶಾಂತಿನಾಯಕ, ಎನ್.ಆರ್. ನಾಯಕ್) ವಿಭಾಗೀಕರಣಗೊಳಿಸಬಹುದು. ಆದರೆ ನಿರ್ದಿಷ್ಟವಾಗಿ ಇಷ್ಟೇ ಎಂದು ಹೇಳಲಾಗದು. ಇದನ್ನು ಬುದ್ಧಿಯಾಟ, ಭಾವದಾಟಗಳೆಂದು ಸ್ಥೂಲವಾಗಿ ಒಟ್ಟು ನೋಟದಲ್ಲಿ ನೋಡಲು ಸಾಧ್ಯವಿದೆ. ಹಾಗೇ ವಿಧಿಕ್ರಿಯೆಗ ಸಂಬಂಧಿಸಿದಂತ, ಸಂಪ್ರದಾಯ ಆಚರಣೆಗೆ ಸಂಬಂಧಿಸಿದಂತೆಯೂ ಬೇರೆ ಬೇರೆಯಾಗಿ ವೈವಿಧ್ಯತೆಯನ್ನು ಗುರುತಿಸಲು ಸಾಧ್ಯ. ವಿಂಗಡಣೆ ಏನಿದ್ದರೂ ಅದು ಲೇಖಕನ ಗ್ರಹಿಕೆಗೆ ಸಂಬಂಧಿಸಿದ್ದು ಎನ್ನುತ್ತಾರೆ ಜನಪದ ಆಟಗಳನ್ನು ಕುರಿತೇ ಪಿಎಚ್.ಡಿ. ಪಡೆದಿರುವ ಡಾ. ಅರವಿಂದ ಮಾಲಗತ್ತಿಯವರು. ಅಂದರೆ ಅರ್ಥವೈವಿಧ್ಯತೆ ಎನ್ನುವುದು ಜನಪದ ಆಟಗಳ ವರ್ಗೀಕರಣದಲ್ಲಿ ಶಿಷ್ಟಾಚಾರದ ಮಾತಲ್ಲ, ಯಾದೃಚ್ಛಿಕವಾದುದು. ಈ ಮಾತು ಕೇವಲ ಆಟಗಳ ಸ್ವರೂಪಕ್ಕೆ ಮಾತ್ರ ಅನ್ವಯವಾಗುವಂಥದ್ದಲ್ಲ. ಅದರ ಅಭಿವ್ಯಕ್ತಿಯ ಸ್ವರೂಪಕ್ಕೂ ಕೂಡ. ಉದಾಹರಣೆ, ಚೆನ್ನಮಣೆಯಂಥ ಆಟದಲ್ಲಿ ಕಟ್ಟಾಟ, ಹಸುಕರುವಾಟ, ಸೀತೆಯಾಟ, ಹಣ್ಣಾಟ, ಅರಸಾಟ, ದೇವರಾಟ ಇತ್ಯಾದಿಯನ್ನು ನೋಡುತ್ತೇವೆ. ಹರಳಾಟದಲ್ಲಿ ಪ್ರತಿಯಾಟಕ್ಕೂ ಹರಳುಗಳ ಸಂಖ್ಯೆಯೂ ಏರುಪೇರಾಗುತ್ತದೆ. ಕೆಲವೊಮ್ಮೆ ಹರಳುಗಳು ಸಮನಾಗಿದ್ದರೂ ಆಡುವ ಕ್ರಮ ಬೇರೆಯಾಗಿರುವುದುಂಟು. ಹೀಗಾಗಿ ಜನಪದ ಆಟಗಳನ್ನು ಸಮಗ್ರವಾಗಿ ಒಂದು ಶಿಸ್ತಿನ ವಿಭಾಗ ಕ್ರಮದಲ್ಲಿಟ್ಟು ನೋಡುವುದು ಕಷ್ಟ.

ನಮ್ಮ ಸಮಾಜ ವ್ಯವಸ್ಥೆಯಲ್ಲಿ ಲಿಂಗ ತರತಮಭಾವ ಇದೆ. ಇದು ಅತ್ಯಂತ ಸಹಜ ಎಂದೇ ಸ್ವೀಕರಿಸುತ್ತಿದ್ದೇವೆ. ಜನಪದ ಆಟಗಳಲ್ಲೂ ಸಹ ಹೆಣ್ಣು ಆಟಗಳು, ಗಂಡು ಆಟಗಳು ಎಂದೇ ಇದೆ. ಹೆಣ್ಣುಮಕ್ಕಳು ಆಡುವುದನ್ನು ಗಂಡುಮಕ್ಕಳು, ಗಂಡುಮಕ್ಕಳಾಡುವುದನ್ನು ಹೆಣ್ಣುಮಕ್ಕಳಾಡಿದರೆ ಗೇಲಿ, ಅಪಹಾಸ್ಯಕ್ಕೆ ತುತ್ತಾಗುತ್ತಾರೆ. ಗಂಡುಬೀರಿ ಇಲ್ಲವೆ ಹೆಣ್‌ಪೆಕ್ರು, ಪಿಲ್ಲಿ ಇತ್ಯಾದಿ ನಿಷೇಧಾತ್ಮಕ ಪದಗಳ ನೆಲೆಯ ದೃಷ್ಟಿಕೋನ ಖಂಡಿತ ಅದಾಗಿರಲಿಲ್ಲ. ಹೆಣ್ಣು - ಗಂಡುಗಳ ಶಾರೀಕ ರಚನೆ ಮತ್ತು ದುಡಿಮೆಯ ನಿರೀಕ್ಷೆಗೆ ತಕ್ಕಂತೆ ಆಟಗಳು ಸೃಷ್ಟಿಯಾದವು ಅಥವಾ ಬಳಕೆಯಾದುವು ಎಂಬುದೇ ಹೆಚ್ಚು ಸರಿ. ಸಾಮಾನ್ಯವಾಗಿ ಭಾರತೀಯರು ಕುಟುಂಬ ವ್ಯವಸ್ಥೆಯನ್ನು ಒಪ್ಪುವ, ಪ್ರೀತಿಸುವ, ನಂಬುವ ಜನ. ಕುಟುಂಬದ ಸುವ್ಯವಸ್ಥೆಯಲ್ಲಿ ಪ್ರಧಾನಪಾಲು ಸಲ್ಲುವುದು ಸಲ್ಲಬೇಕಾದ್ದು ತಾಯಿಗೆ. ಆದರೆ ಆಕೆಯ ಮನಸ್ಸು ಮೃದುವೂ, ಕೋಮಲವೂ ಆಗಿರಬೇಕು. ನಡವಳಿಕೆಯಲ್ಲಿ ನಯ ನಾಜೂಕು ಇರಬೇಕು. ಆಲೋಚನಾಕ್ರಮದಲ್ಲೂ ತಾಯ್ತನದ ಸ್ವಭಾವ ಇರಬೇಕು ಎಂದು ವ್ಯವಸ್ಥೆ ಸಹಜವಾಗಿ ನಿರೀಕ್ಷಿಸುತ್ತದೆ. ಮನೆಯೊಳಗಿನ ಕಸುಬು, ಅಚ್ಚುಕಟ್ಟು ಹೆಣ್ಣಿಗೆ ಸೇರುವುದರಿಂದ ಅವಳ ಆಟಗಳ ಸ್ವರೂಪ ಮತ್ತು ಆಟವಾಡುವ ಪರಿವೇಶವೂ ಒಳಾಂಗಣಕ್ಕೆ ಸಹಜವಾಗಿಯೇ ಮೀಸಲಾಯಿತು. ಕುಂಟೆಬಿಲ್ಲೆಯಂಥ ಆಟವೂ ಮನೆಯ ಮುಂದಿನ ಅಂಗಳವಾಯ್ತೆ ಹೊರತು ಬೀದಿಯಾಗಲಿಲ್ಲ. ಆಕೆಯ ಸ್ವತಂತ್ರವಾದ ಹೊರಗಿನ ಕೆಲಸ ಹೆಚ್ಚು ಎಂದರೆ

ಗದ್ದೆ ಕೆಲಸ. ಹೀಗಾಗಿ ಅವಳ ಆಟಗಳು ಹೆಚ್ಚು ಶ್ರಮದಾಯಕವಲ್ಲದ, ಬೌದ್ಧಿಕ ಕಸರತ್ತಿಲ್ಲದ ಆಟಗಳೇ ಆದುವು. ಅಂದರೆ ಹೆಣ್ಣುಮಕ್ಕಳ ಜನಪದ ಆಟಗಳು ಆಕೆಯ ಬದುಕಿನ ಶೈಲಿಯನ್ನೇ (Life style) ರೂಪಿಸುವಂತವಾದುವು. ಮದುವೆಯಾಟ, ತೊಟ್ಟಿಲಾಟ ಅತ್ತೆ ಸೊಸೆಯಾಟದಂಥವು ಆಕೆಯನ್ನು ಭಾವನಾತ್ಮಕವಾಗಿ ರೂಪಿಸಿದರೆ, ಆಣೆಕಲ್ಲು, ಅಡಿಗೆಯಾಟ ಅಂಬಟ್ಟೆಯಾಟದಂಥವು ಆಕೆಗೆ ದುಡಿಮೆಯನ್ನು ಕಲಿಸಿದವು. ಪೌಜಿಪೌದಂಥ ಆಟಗಳು (=ಒಂದು ಬಗೆಯ ಕಪ್ಪೆಯಾಟ, ಕಪ್ಪೆಯಂತ ಕುಕ್ಕರಗಾಲಿನಲ್ಲಿ ಕುಪ್ಪಿಕೊಂಡು ನಿರ್ದಿಷ್ಟ ಜಾಗದಲ್ಲಿ ಮಣ್ಣುಗುಪ್ಪೆ ಹಾಕಿ ಬರುವುದು) ಆಕೆಯ ಮಕ್ಕಳು ಹೆರುವ ಕ್ರಿಯೆಗೆ ಪೂರಕವಾಗಿ ಶರೀರ ಸಂರಚನೆಯನ್ನು ಹದಗೊಳಿಸುವಂಥವು. ಉದಾಹರಣೆಗೆ ಆಣಿಕಲ್ಲಾಜದಲ್ಲಿ ಕೌಟುಂಬಿಕ ಹೆಣ್ಣು ಮಾಡಬೇಕಾದ ತೂರುವ ಕ್ರಿಯೆಯಿದೆ; ದೃಷ್ಟಿಯನ್ನು ಕೇಂದ್ರೀಕರಿಸುವ ಕ್ರಿಯೆಯಿದೆ; ಸಮತೋಲನವನ್ನು ಕಾಯ್ದುಕೊಳ್ಳುವ ಅಗತ್ಯವಿದೆ. ಅಂಬಟ್ಟೆಯಾಟದಲ್ಲೂ ಮಾತು, ಕ್ರಿಯೆ, ಏಕಾಗ್ರತೆ- ಇತ್ಯಾದಿಯಾಗಿ ಅನೇಕ ಅಂಶಗಳು ಏಕಕಾಲದಲ್ಲಿ ಕೆಲಸ ಮಾಡುತ್ತವೆ.

ಗಂಡಸರ ಆಟಗಳಲ್ಲಿ ಶಾರೀರಕ ಶ್ರಮ ಹೆಚ್ಚಿರುತ್ತದೆ. ಹಾಗೇ ಬೌದ್ಧಿಕ ಕಸರತ್ತೂ ಪ್ರಧಾನವಾಗಿರುತ್ತದೆ. ಗಂಡಸು ನಮ್ಮಲ್ಲಿ ದುಡಿದು ತಂದುಹಾಕುವವ. ಅವನು ಬಲಾಢ್ಯನಾಗಿ ಇರಲೇಬೇಕು. ಹೀಗಾಗಿ ಜಾಣ್ಮೆ, ತಂತ್ರಗಾರಿಕೆ, ಸಾಹಸ, ಶಕ್ತಿ ಪ್ರಧಾನವಾದ ಆಟಗಳೆಲ್ಲ ಗಂಡಸರ ಆಟಗಳಾಗುತ್ತವೆ. ಗೋಲಿ, ಗಜ್ಜುಗದಾಟ, ಕಬಡ್ಡಿಯಾಟ, ಕಂದುಕದಾಟ, ಗೂಳಿಕಾಳಗ, ಕಂಬಳ, ಬೆಣ್ಣೆಕೋಲು, ಪಗಡೆಯಾಟ, ಚದುರಂಗ, ಬಿಲ್ಲುಗಾರಿಕೆ, ಗುಂಡುಕಲ್ಲು ಎತ್ತುವುದು, ಹಗ್ಗದಾಟ ಮುಂತಾದ ಆಟಗಳನ್ನು ಗಮನಿಸಬೇಕು. ಇಲ್ಲೆಲ್ಲ ಶಕ್ತಿ-ತಂತ್ರ-ಬುದ್ಧಿ ಪ್ರಧಾನವಾಗಿ ಕೆಲಸ ಮಾಡುತ್ತದೆ. ಹಾಗೆಯೇ ಇವೆಲ್ಲವೂ ಬೀದಿ, ಬಯಲಾಟಗಳೇ ಆಗಿವೆ. ಹೊರಕ್ಕೆ ವರ್ಗಾಯಿಸುವುದರಿಂದ ಹೊರಾಂಗಣದ ಆಟಗಳು ಎನಿಸುತ್ತವೆ.

ಹೊರಾಂಗಣದ ಆಟಗಳನ್ನು ಗಮನದಲ್ಲಿಟ್ಟುಕೊಂಡೇ ವಿವರಣೆಯನ್ನು ಮುಂದುವರಿಸುವುದಾದರೆ ಆಟಗಳ ಸ್ಥಾಯಿ ನೆಲೆಯನ್ನು ಗ್ರಹಿಸಿದಂತೆ ಶಕ್ತಿ ಅಥವಾ ಸಾಹಸ ಪ್ರಧಾನವಾದ ಆಟಗಳು (ಕುಸ್ತಿ, ಗುಂಡುಕಲ್ಲು ಎತ್ತುವುದು, ಕಾಲಿಗೆ ಕಲ್ಲನ್ನು ಕಟ್ಟಿಕೊಂಡು ಎತ್ತುವುದು, ಮರಳಿನ ಚೀಲವನ್ನು ಬೆನ್ನಮೇಲೆ ಹೊರುವುದು, ಬಿಲ್ಲುಗಾರಿಕೆ ಇತ್ಯಾದಿ), ಬುದ್ದಿ ಪ್ರಧಾನವಾದ ಆಟಗಳು, ತಂತ್ರಪ್ರಧಾನ ಆಟಗಳು, ಜೂಜಿನ ಆಟಗಳು ಎಂದೂ ವಿಂಗಡಿಸಲು ಸಾಧ್ಯವಿದೆ. ಇದರಲ್ಲಿ ತಂತ್ರ ಪ್ರಧಾನ ಆಟಗಳಲ್ಲಿ ಒಬ್ಬ ಸ್ಪರ್ಧಿ ಮತ್ತೊಬ್ಬ ಸ್ಪರ್ಧಿಯನ್ನು ಮುಟ್ಟುವುದೇ ಒಂದು ತಂತ್ರವಾಗಿ, ಕುಂಟಾಟದಲ್ಲಿ ಕುಂಟುವಿದೇ ಒಂದು ತಂತ್ರವಾಗಿ, ಕಣ್ಣುಮುಚ್ಚಾಲೆಯಲ್ಲಿ ಅಡಗಿಕೊಳ್ಳುವುದೇ ತಂತ್ರವಾಗಿಸಿಕೊಂಡು - ಹಾಗೆ ಎಷ್ಟು ಆಟಗಳು ಈ ವರ್ಗಕ್ಕೆ ಬರುತ್ತವೋ ಅಷ್ಟಕ್ಕೂ ಕ್ರಿಯೆಯ ತಂತ್ರ ಬೇರೆಯದೇ ಆಗಿರುತ್ತದೆ. ತಂತ್ರ ಪ್ರಧಾನವಾದ ಆಟಗಳಲ್ಲಿ ಕಬಡ್ಡಿಯಂಥವು ಗಂಡಸರದೇ ಆದ ಆಟ. ಆದರೆ ಕಣ್ಣುಮುಚ್ಚಾಲೆ, ಹಿಡಿಯಾಟದಂಥವು ಮಕ್ಕಳಾಟ. ಇಲ್ಲಿ ಲಿಂಗಭೇದವಿಲ್ಲ, ಆದರೆ ಹೆಂಗಸರಾಟವಲ್ಲ ಎಂಬುದನ್ನು ಗಮನಿಸಬೇಕು. ಅಂದರೆ ಕೆಲವು ಮಕ್ಕಳ ಆಟಗಳನ್ನು ಹೆಣ್ಣು ಮಕ್ಕಳೂ ಆಡಬಹುದಾದಷ್ಟು ಕೊಂಚ ರಿಯಾಯಿತಿ ಇದೆ. ಆದರೆ ಮರಕೋತಿಯಂಥ ಆಟ ಸಹಭಾಗಿತ್ವವನ್ನು ನಿರೀಕ್ಷಿಸುವುದಾದರೆ, ಶರೀರ ರಚನೆ ಮತ್ತು ತೊಡುವ ಉಡುಗೆಯ ಕಾರಣಕ್ಕಾಗಿ ಅದು ಗಂಡುಮಕ್ಕಳದ್ದು ಮಾತ್ರವೇ ಆಗಿದೆ. ಇದೇ ತಿಳಿವಳಿಕೆಯನ್ನು ಬುದ್ಧಿ ಪ್ರಧಾನ ಆಟಗಳಿಗೂ ವಿಸ್ತರಿಬಹುದು. ಉದಾ: ಚದುರಂಗ, ಕಟ್ಟೇಮಣೆಯಲ್ಲಿ ಚದುರಂಗ ಗಂಡಸರ ಬುದ್ಧಿಯನ್ನು ಪ್ರತಿನಿಧಿಸುವಂಥದು. ಅದೇ ಕಟ್ಟೇಮಣೆ ಬುದ್ಧಿಪ್ರಧಾನವಾಗಿದ್ದರೂ, ಅದು ದಾಳವನ್ನು ಅನುಸರಿಸಿ ಆಡುವಂತದ್ದಾಗಿದ್ದು, ಅದು ಹೆಂಗಸರ ಆಟವಾಗುತ್ತದೆ. ಪಗಡೆಯನ್ನು ಹೆಂಗಸರು ಮುಟ್ಟುವಂತೆಯೇ ಇಲ್ಲ. ಇದನ್ನು ಗಮನಿಸಿದಾಗ ಅಂದಿನ ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಂಗಸರು ಬುದ್ಧಿಹೀನರು ಎಂಬುದು ಇಂಥ ಆಟಗಳ ನಿಷೇಧದಲ್ಲೂ ವ್ಯಕ್ತವಾಗುವುದನ್ನು ಗಮನಿಸಬಹುದು. ಇವೆಲ್ಲದರೊಂದಿಗೆ ಜೂಜಾಟ ಎಂಬುದಕ್ಕೂ ಎಲ್ಲಾ ಕಾಲಕ್ಕೂ ಗಣಿಸುವಂಥದು. ಇದು ಮೂಲತಃ ಆರೋಗ್ಯಕರ ಸ್ಪರ್ಧೆಯನ್ನು ಉಂಟುಮಾಡುವುದರ ಸಂಕೇತವಾಗಿದ್ದರೂ ಕ್ರಮೇಣ ಪ್ರತಿಷ್ಠೆಯ ಅಂಕವಾಗಿ ಪರಿಣಮಿಸಿತೆಂದು ತೋರುತ್ತದೆ. ಉದಾಹರಣೆಗೆ ಟಗರುಕಾಳಗ, ಕೋಳಿಅಂಕಗಳನ್ನು ಗಮನಿಸಬೇಕು. ಇತಿಹಾಸದಲ್ಲಿ ಇವುಗಳಿಂದ ಗ್ರಾಮ ಗ್ರಾಮಗಳೇ ಹೊತ್ತಿ ಉರಿದಿದ್ದನ್ನೂ ನೋಡುತ್ತೇವೆ. ಗೂಳಿಕಾಳಗವನ್ನೂ ಇಲ್ಲಿಗೇ ಸೇರಿಸಬಹುದೇನೋ? ಏಕೆಂದರೆ ಇಲ್ಲಿ ಗೆದ್ದವರಿಗೆ ಗೌರವ, ಧನ ಎಲ್ಲ ಸಿಗುತ್ತದೆ. ಕೆಲವೊಮ್ಮೆ ಗೂಳಿಕಾಳಗದಲ್ಲಿ ಗೆದ್ದವರಿಗೆ ರಾಜಕುಮಾರಿಯನ್ನೋ ರಾಜ್ಯವನ್ನೋ ಪಣವಾಗಿ ಕೊಟ್ಟ ಉಲ್ಲೇಖಗಳು ನಮಗೆ ಸಿಗುತ್ತವೆ. ಇವನ್ನೆಲ್ಲ ಗಮನಿಸುತ್ತಾ ಹೋದರೆ ನಮ್ಮಲ್ಲಿ ಪ್ರಾಚೀನವಾಗಿ ಕಾಣಸಿಗುವ ಮಲ್ಲಯುದ್ಧ, ದೃಷ್ಟಿಯುದ್ಧ, ಅಂಗಸಾಧನೆ, ಕತ್ತಿವರಸೆ, ಮುಷ್ಟಿಯುದ್ಧ, ದೊಣ್ಣೆವರಸೆ - ಮುಂತಾದ ರಣರಂಗ ಸಿದ್ಧ

ಸಾಧನೆಗಳು ಏನಿವೆಯೋ ಅವೆಲ್ಲವೂ ಆ ಪೂರ್ವದಲ್ಲಿ ಜನಪದರ ಆಟವೇ ಆಗಿರುವ ಸಾಧ್ಯತೆಗಳಿವೆ. ಹೊರನೋಟಕ್ಕೆ ಇವು ಸಮರ ಶಿಕ್ಷಣವನ್ನು ಪ್ರತಿನಿಧಿಸುತ್ತವೆಯಾದರೂ, ಸೂಕ್ಷ್ಮದೃಷ್ಟಿಯಲ್ಲಿ ಮನುಷ್ಯನು ತನ್ನ ಅಸ್ತಿತ್ವಕ್ಕಾಗಿ ಹೋರಾಟ ನಡೆಸಿದ್ದರ ಸಂಕೇತವೂ ಆಗಿವೆ.

ಹಾಗೆ ನೋಡಿದರೆ ನಮ್ಮ ಜನಪದ ಆಟಗಳು ಬೌದ್ಧಿಕತೆಯನ್ನು ಹೆಚ್ಚಿಸುವ ಸಂವಹನ ರೂಪದಲ್ಲೂ ಕೆಲಸ ಮಾಡಿವೆ. ಅದರಲ್ಲೂ ವಿಶೇಷವಾಗಿ ನಾಟಕೀಯ ಆಟಗಳನ್ನು ನಾವಿಲ್ಲಿ ನೋಡಬೇಕು. ಹಿಂದೆ ಈಗಿನ ಸ್ವರೂಪದಲ್ಲಿ ಶಿಕ್ಷಣ ವ್ಯವಸ್ಥೆ ಇರಲಿಲ್ಲ. ಆಟಗಳ ಮೂಲಕವೇ ಶಿಕ್ಷಣವನ್ನು ಬೋಧಿಸುತ್ತಿದ್ದಿರಬೇಕು. ಉದಾಹರಣೆಗೆ ಕಲ್ಲಾಟ ಮತ್ತು ಚೆಂಡಾಟವನ್ನು ತೆಗೆದುಕೊಂಡರೆ, ಚೆಂಡು ಪುಟಿಯುತ್ತದೆ, ಕಲ್ಲು ಪುಟಿಯುವುದಿಲ್ಲ. ಮಗುವಿನ  ಕುತೂಹಲಕಾರಿ ಮನಸ್ಸಿನಲ್ಲಿ ಅನೇಕ ಪ್ರಶ್ನೆಗಳು ಏಳುವುದು ಸಹಜ. ಅದಕ್ಕೆ ಉತ್ತರವಾಗಿ ಹಿರಿಯರು ವಸ್ತುವಿನ ಸ್ಥಿತಿಸ್ಥಾಪಕ ಗುಣವನ್ನು, ಗಾಳಿಯ ಹಗುರತ್ವ, ಇತ್ಯಾದಿಗಳನ್ನು ಹೇಳುವ ಮೂಲಕ ಮಗುವಿನ ಪ್ರಶ್ನೆಗಳಿಗೆ ಉತ್ತರ ಕೊಟ್ಟಿರಬೇಕು. 'ಚುಕ್ಕಿಮಾಮ ಚಂದಮಾಮ' ದಂಥ ಪದ್ಯಬಂಧದ ಆಟದಲ್ಲಿ, ಚಂದ್ರನು ಓಡುತ್ತಾನೋ, ನಾವು ಓಡುತ್ತೇವೋ ಎಂಬುದನ್ನು ವಿವರಿಸುತ್ತಲೇ ಜನಪದ ತಾಯಿ ಮಗುವಿಗೆ ಚಂದ್ರ, ನಕ್ಷತ್ರಗಳ ಪರಿಚಯ ಮಾಡಿಕೊಡುತ್ತಾಳೆ. ಅಂದರೆ ಜನಪದರಿಗೆ ಆಟ ಅಷ್ಟೇ ಇಲ್ಲಿ ಮುಖ್ಯವಲ್ಲ. ಮಗುವಿನ ಬುದ್ಧಿ ವಿಸ್ತಾರವೂ ಅಷ್ಟೇ ಮುಖ್ಯ; ಪಾಠವೂ ಮುಖ್ಯ. ಆಟಗಳ ಮೂಲಕವೇ ಗಣಿತವನ್ನು, ಮಾಪಕ ಮಾದರಿಗಳನ್ನು ಜನಪದರು ರೂಪಿಸಿದ್ದುಂಟು. ಉದಾಹಣೆಗೆ "ಏಕಪಾವು, ದೋನಾಚಿಟ್ಟಿ, ತೀನಿಮುಷ್ಟಿ ಇತ್ಯಾದಿ ಶಬ್ದಾಟದಲ್ಲಿ ಒಂದು ಎರಡು ಸಂಖ್ಯೆಯನ್ನು ದಶಕದವರೆಗೆ ಕಲಿಸಲಾಗುತ್ತದೆ. ಇದನ್ನು ಉತ್ತರ ಕರ್ನಾಟಕದ ಕಡೆ 'ಅಂಡೆಳ್ಳಾಟ' ಅಥವಾ ಚುಕ್ಕೋಳಪದ ಎನ್ನುತ್ತಾರೆ (ನೋಡಿ : ಡಾ. ದೇವೇಂದ್ರಕುಮಾರ ಹಕಾರಿ ಅವರ ಲೇಖನ, ಜಾನಪದ ಅಕಾಡೆಮಿ ಪ್ರಕಟಣೆ, ಜನಪದ ಆಟಗಳು, ೧೯೯೦). ಇಂಥ ಆಟಗಳು ಎಲ್ಲಾ ಕಡೆಗಳಲ್ಲೂ ಕಂಡುಬರುತ್ತವೆಯಾದರೂ, ಆಶಯದ ಉದ್ದೇಶ ಒಂದೇ ಆಗಿದ್ದರೂ, ಸ್ವರೂಪದಲ್ಲಿ ವ್ಯತ್ಯಾಸವಿರುವುದನ್ನು ಕಾಣುತ್ತೇವೆ. ಅಂದರೆ ಪ್ರಾದೇಶಿಕ ಭಿನ್ನತೆ ಎನ್ನುವುದು ಕೇವಲ ಸಂಸ್ಕೃತಿಗೆ ಮಾತ್ರವಲ್ಲ, ಆಟಕ್ಕೂ ಅನ್ವಯವಾಗುತ್ತದೆ. ಉದಾಹರಣೆಗೆ, 'ಕಂಬಳ' ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಸಿದ್ಧವಾಗಿರುವಂತೆ ಉತ್ತರ ಭಾಗದಲ್ಲಿ ಇಲ್ಲ. ಮಲೆನಾಡಿನ ಕಡೆ ಕಂಬಳಕ್ಕೆ ಪರ್ಯಾಯವಾಗಿ ಎತ್ತಿನಗಾಡಿ ಓಟ ನೋಡಬಹುದು. ಮಕ್ಕಳಾಟದ ವಿಶೇಷತೆ ಎಂದರೆ ಅವು ಋತುಮಾನವನ್ನೋ, ವರ್ಷದ ಹಬ್ಬದ ಅವಧಿಯನ್ನೋ ಅವಲಂಬಿಸಿ ಆಟಗಳನ್ನು ಆಡುತ್ತವೆ. ಅಂದರೆ ಆಡುವ ಆಟದಲ್ಲೂ ಒಂದು ಕಾಲಘಟ್ಟವನ್ನು ರೂಪಿಸಿಕೊಂಡಿರುವಂತೆ ತೋರುತ್ತದೆ. ಇದನ್ನು ಡಾ. ಚಿದಾನಂದಮೂರ್ತಿಯವರು 'ಕ್ರೀಡಾಘಟಕಗಳು' ಎಂದು ಕರೆಯುತ್ತಾರೆ. ಅಂದರೆ ಮಕ್ಕಳು ಸುಗ್ಗಿಯ ಕಾಲದಲ್ಲಿ ಬುಗುರಿ, ಚಿನ್ನಿದಾಂಡು ಆಡುವಂತೆ, ಸಂಕ್ರಾಂತಿ ಸುಮಾರಿಗೆ ಗಾಳಿಪಟದಾಟವಾಡುತ್ತವೆ. ದೀಪಾವಳಿ ಯುಗಾದಿಯ ನಡುವೆ ಚೆಂಡಾಟವಾಡುತ್ತವೆ.

ಗ್ರಾಮೀಣ ಆಟಗಳು ದೇಸೀಯ ನೆಲೆಯವು. ಏಕೆಂದರೆ ಬಹುತೇಕ ಆಟಗಳು ಧಾರ್ಮಿಕ ಉತ್ಸವದ ಅಂಗವಾಗಿಯೋ,ಪುರಾತನರ ಮತಾಚರಣೆ, ವಿವಾಹಾದಿ ವಿಧಿ ಕ್ರಿಯೆಗಳು, ಅಲೌಕಿಕ ಶಕ್ತಿಗಳ ಸಂಬಂಧವಾದ ನಂಬಿಕೆಗಳು ಹಾಗೂ ಕೃಷಿ ಸಂಬಂಧವಾದ ಆಚರಣೆಗಳೊಂದಿಗೋ ತಳುಕುಹಾಕಿಕೊಂಡಿರುವುದನ್ನು ನೋಡಬಹುದು. (ಡಾ.ಅಂಬಳಿಕೆ ಹಿರಿಯಣ್ಣ ಅವರ ಲೇಖನ, ಜಾನಪದ ಅಕಾಡೆಮಿ ಪ್ರಕಟಣೆ, ಪೂರ್ವೋಕ್ತ) ಉದಾಹರಣೆಗೆ ಓಕುಳಿಯಾಟ ಹೋಳಿಹಬ್ಬದ ಜೊತೆಯಲ್ಲೇ ಬರುತ್ತದೆ. ಎತ್ತಿನಗಾಡಿಯಾಟ ಸಂಕ್ರಾಂತಿ ಹಬ್ಬದಂದೇ ಹೆಚ್ಚಾಗಿ ಜರುಗುತ್ತದೆ. ಇಷ್ಟಕ್ಕೂ ಓಕುಳಿಯಾಟ ಶೃಂಗಾರದ ಸಂಕೇತವೇ ಆಗಿದ್ದರೂ ಶುಭದ ಸಂಕೇತವಾಗಿಯೂ ದೇವಾಲಯದಲ್ಲಿ ಇಂದಿಗೂ ಬಳಕೆಯಾಗುತ್ತಿದೆ.

ಗ್ರಾಮೀಣ ಆಟಗಳಲ್ಲಿ ಕೆಲವಡೆ ವಿಧಿಬಂಧಗಳಿರುವುದನ್ನು ಕಾಣಬಹುದು. ಅದೇ ಸಂದರ್ಭಗಳಲ್ಲಿ ಆಟಗಳು ವಿಧಿಬಂಧಗಳನ್ನು ಮೀರುವುದೂ ಉಂಟು. ಅಂದರೆ ಸಂಕೀರ್ಣವಾದ ಬದುಕಿನ ಚಿತ್ರಣವನ್ನು ನಾವು ಗ್ರಾಮೀಣ ಆಟಗಳಲ್ಲಿ ಗಮನಿಸಬಹುದು. ಮನುಷ್ಯನ ಕ್ರಿಯಾಶೀಲತೆಯೂ ಹಾಗೆ, ನಿಂತು ನಿಲ್ಲದ ನಿರಂತರ ಕ್ರಿಯೆ. ಉದಾಹರಣೆಗೆ ಹರಳಾಟದಲ್ಲಿ ನಾವು ಐದು ಮತ್ತು ಏಳು ಕಾಯಿಗಳನ್ನು ವಿಶೇಷವಾಗಿ ಬಳಸುತ್ತೇವೆ. ಭಾರತೀಯ ಪರಂಪರೆಯಲ್ಲಿ ಇವೆರಡು ಸಂಖ್ಯೆಗಳಿಗೆ ಹೆಚ್ಚಿನ ಮಹತ್ವವಿದೆ. ಸಪ್ತ ಸಾಗರ, ಸಪ್ತ ಪರ್ವತ, ಸಪ್ತಪದಿ ಇತ್ಯಾದಿಯಾಗಿ, ಪಂಚ ಲಕ್ಷಣ, ಪಂಚ ಕಜ್ಜಾಯ, ಪಂಚ ಕಲ್ಯಾಣ ಇತ್ಯಾದಿಯಾಗಿ ಅನೇಕ ಧಾರ್ಮಿಕ ಆಚರಣಾತ್ಮಕ ನಿಲವನ್ನವು ಸೂಚಿಸುತ್ತವೆ. ಹಾಗೆಯೇ ಕುಂಟೇ ಬಿಲ್ಲೆಯಂಥ ಆಟದಲ್ಲಿ ಮನೆಗಳ ಸಂಖ್ಯೆ ಒಂಬತ್ತು ಇರುತ್ತದೆ. ಇದು

ನವಗ್ರಹಗಳ ಸಂಕೇತ. ಈ ನಕ್ಷೆಯ ಸೃಷ್ಟಿಗೆ ಪುರಾತನ ಚರಿತ್ರೆಯಿದೆ. ಪ್ರಾಚೀನಕಾಲದಲ್ಲಿ 'ದಿವ್ಯ'ದ ಮೂಲಕ ನ್ಯಾಯ ನಿಷ್ಕರ್ಷೆಯಾಗುತ್ತಿತ್ತು. ಕಾದ ಸೀಸದ ಗುಂಡನ್ನು ಹಿಡಿದುಕೊಂಡು ಕೆಳಗೆ ಬೀಳಿಸದಂತೆ ಆ ಒಂಬತ್ತು ಅಂಕಗಳನ್ನು ಸುತ್ತಿಬಂದರೆ ಅವನನ್ನು ಅಪರಾಧಿಯಲ್ಲ ಎಂದು ಘೋಷಿಸಲಾಗುತ್ತಿತ್ತು. ಆ ದಿವ್ಯಕ್ಕೆ ಬದಲಾಗಿ ಆ ಆಟದಲ್ಲಿ ಬಿಲ್ಲೆಯನ್ನು (=ಪಜ್ಜಿ) ಬಳಸಲಾಗುತ್ತದೆ. ನವಗ್ರಹ ಆರಾಧನೆ, ದೇವಾಲಯ ನಿರ್ಮಾಣದಲ್ಲಿ ನವಕಲ್ಲನ್ನು ಸುತ್ತಲೂ ನೆಡುವುದು ಇತ್ಯಾದಿ ಕ್ರಿಯೆಯಲ್ಲಿ 'ವಿಧಿ'ಯ ಪರಿಕಲ್ಪನೆಯಿದೆ. ನಮ್ಮಲ್ಲಿ ಹುಟ್ಟು ಸಾವನ್ನು ನಂಬುವಂತೆ ಪುನರ್ಜನ್ಮವನ್ನು ನಂಬುವುದುಂಟು. ಕಬಡ್ಡಿ ಆಟದಲ್ಲಿ ಈ ಮೂರು ಪರಿಕಲ್ಪನೆಗಳ ಸಮ್ಮೇಳವಿದೆ. 'ಸಾವು' ಕೇವಲ ಸಾವಲ್ಲ, ದೇಹಕ್ಕೆ ಮಾತ್ರ, ಆತ್ಮ ಶಾಶ್ವತ, ಮತ್ತೊಂದು ಮಾತಾಪಿತೃಗಳ ಹುಡುಕಾಟದಲ್ಲಿರುತ್ತದೆ; ಎಂಬ ಆತ್ಮವಾದ ಕಬಡ್ಡಿ ಆಟದಲ್ಲಿರುವುದನ್ನು ಗ್ರಹಿಸಬಹುದು. ಇಲ್ಲೆಲ್ಲ ಪ್ರಜ್ಞಾಪೂರ್ವಕವಾಗೋ ಅಪ್ರಜ್ಞಾಪೂರ್ವಕವಾಗೋ ಮತ್ತೆ ದೇವರ ಪರಿಭಾವನೆ ಇದ್ದೇ ಇರುತ್ತದೆ ಎಂಬುದನ್ನು ವಿಶೇಷವಾಗಿ ಗಮನಿಸಬೇಕು.

ಚೆನ್ನೆಮಣೆಯ ಸೀತೆಯಾಟ ನೋಡಿ. ಇಲ್ಲಿ ಎದುರಾಳಿ ಸಾಮಾನ್ಯವಾಗಿ ಇರುವುದಿಲ್ಲ (ಕೆಲವಡೆ ಇರುತ್ತಾರೆ). ಆದರೆ ಇಲ್ಲ ಎಂದು ಭಾವಿಸುವುದಿಲ್ಲ. ಸೀತೆಯಾಟ ದೇವರಾಟ. ಆದ್ದರಿಂದ ಎದುರಾಳಿ ದೇವರಿರುತ್ತಾನೆ ಎಂಬ ಕಲ್ಪನೆಯಿಂದ ಸುಳ್ಳನ್ನು ನಡೆಸುವುದಿಲ್ಲ. ಹೀಗೆಯೇ ನಾಗಮಂಡಲ, ಕೋಲ ಕಟ್ಟುವಿಕೆ, ಸ್ವಸ್ತಿಕ್ ಚಿಹ್ನೆ ಸೂಚಕ ಆಟಗಳನ್ನು - ವಿಶೇಷವಾಗಿ ಚೌಕಾಬಾರ ಆಟದಲ್ಲಿ ಗಮನಿಸಬಹುದು. ನಮ್ಮ ಜನಪದ ಆಟಗಳಲ್ಲಿ ಕಂಡುಬರುವ ಈ ಬಗೆಯ ವಿಧಿಕ್ರಿಯೆ ನಮ್ಮಲ್ಲಿದ್ದ ಧಾರ್ಮಿಕ ಪರಂಪರೆಗೆ ಒತ್ತುಕೊಡುವಂಥವೇ ಆಗಿವೆ. ಜಾತ್ರೆ ರಥೋತ್ಸವ ಸಂದರ್ಭಗಳಲ್ಲಿ ಕೋಲಾಟ, ಹಗರಣದಾಟ, ಓಕುಳಿಯಾಟಗಳು ಬಹುತೇಕ ಎಲ್ಲಾಕಡೆ ಸಾಮಾನ್ಯವಾಗಿರುತ್ತವೆ. ಇದು ಆಟಗಳ ಪಾವಿತ್ರ್ಯವನ್ನು ಕಾಪಾಡುವ ಸೂಚಕವಾಗಿರುವಂತೆಯೇ ಅವನ್ನು ರಕ್ಷಿಸುವ ಕಾರ್ಯಸೂಚಕವೂ ಆಗಿದೆ.

ಜನಪದ ಆಟಗಳಲ್ಲಿ ವಿಧಿಕ್ರಿಯೆ ಇರುವಂತೆಯೇ ನಿಷೇಧಾತ್ಮಕ ನಿಲುವೂ ಇದೆ. ಏಕೆಂದರೆ ಕೆಲವು ಆಟಗಳನ್ನು ರಾತ್ರಿ ಹೊತ್ತಿನಲ್ಲಿ ಆಡುವಂತಿಲ್ಲ. ಉದಾಹರಣೆಗೆ ಪಗಡೆ, ಕವಡೆ, ಕಟ್ಟೆಮಣೆ ಇತ್ಯಾದಿ. ಗ್ರಾಮೀಣರ ತಿಳುವಳಿಕೆಯಲ್ಲಿ ಇವೆಲ್ಲ ದೇವರು ಆಡುವಂಥವು. ಹಗಲೆಲ್ಲ ಲೋಕ ಸುತ್ತುವ ದೇವಾನ್ ದೇವತೆಗಳು ರಾತ್ರಿವೇಳೆ ವಿಶ್ರಾಂತಿ ತೆಗೆದುಕೊಳ್ಳುತ್ತಾರೆ. ಆಗ ಈ ಆಟಗಳನ್ನು ಆಡುತ್ತಾರೆ. ಹುಲುಮಾನವರಾದ ನಾವು ಆ ವೇಳೆಯಲ್ಲಿ ಆಡುವಂತಿಲ್ಲ ಎಂಬ ದೈವ ಭಯ. ಇನ್ನೊಂದೆಡೆ ಪಗಡೆಯಾಡಿ ಪಾಂಡವರು ಕೆಟ್ಟದ್ದರ ಪ್ರತೀಕವೂ ಹೌದು. ಕಟ್ಟೆಮಣೆಯಲ್ಲಿ - ತ್ರಿಕೋನಾಟದಲ್ಲಿ ಮನೆ ಮಠವನ್ನು ಕಳೆದುಕೊಂಡ ಎಷ್ಟೋ ಮನೆಗಳನ್ನು ನಾವು ಹಳ್ಳಿಗಳಲ್ಲಿ ನೋಡಬಹುದು. ಹೀಗಾಗಿ ಜೂಜಿನಾಟಗಳಾಗಿ ಇವಕ್ಕೆ ನಿಷೇಧ ಹೆಚ್ಚಿರುವಂತೆ ತೋರುತ್ತದೆ.

ಇಷ್ಟಾದರೂ ಒಟ್ಟು ನೆಲೆಯಲ್ಲಿ ಜನಪದ ಆಟಗಳು ಮನರಂಜನೆಯ ಜೊತೆಗೆ ವ್ಯಕ್ತಿಯ ಶಾರೀರಿಕ, ಮಾನಸಿಕ ಮತ್ತು ಬೌದ್ಧಿಕ ವಿಕಾಸವನ್ನು ರೂಪಿಸುವಂಥವು. ಕೃಷಿಪ್ರಧಾನ ದೇಶವಾದ ಭಾರತದ ರೂಪುರೇಖೆಗೆ ತಕ್ಕಂತೆ ಗ್ರಾಮೀಣ ಆಟಗಳಿವೆ ಎಂಬದನ್ನು ಮರೆಯಬಾರದು. ಹೀಗಾಗಿ ಜನಪದ ಆಟಗಳನ್ನು ಉಳಿಸುವ ತುರ್ತು ನಮ್ಮ ಮುಂದಿದೆ. ಗ್ರಾಮೀಣ ಅಭಿವೃದ್ಧಿಯ ಪ್ರಯತ್ನ ಮಾಡಬೇಕು. ಏಕೆಂದರೆ ಹಿಂದೆಲ್ಲ ಗ್ರಾಮೀಣ ಪ್ರದೇಶದಲ್ಲಿ ಹಬ್ಬ ಹರಿದಿನಗಳನ್ನು ಅತ್ಯಂತ ಪ್ರೀತಿಯಿಂದ ಆಚರಿಸುತ್ತಿದ್ದರು. ಮನೆಮಂದಿ ಸಕುಟುಂಬ ಪರಿವಾರ ಸಮೇತರಾಗಿ ಊರಿಂದೂರಿಗೆ ಜನ ತಂಡೋಪತಂಡವಾಗಿ ಭಾಗವಹಿಸುತ್ತಿದ್ದರು. ಎರಡು ಗ್ರಾಮಗಳ ಸೇತುವೆಯಂತೆ ಗ್ರಾಮೀಣ ಆಟಗಳನ್ನು ಅಂಥ ದಿನಗಳಲ್ಲಿ ನಡೆಸಲಾಗುತ್ತಿತ್ತು. ಗುರಿಕಾರ ಆಟ, ಲಗೋರಿಯಾಟ, ಕಬಡ್ಡಿಯಾಟ, ಎತ್ತಿನಗಾಡಿ ಓಟ, ಕಂಬಳದಾಟ, ಗಾಳಿಪಟದಾಟ, ಓಕುಳಿಯಾಟ, ಕಂದುಕದಾಟ, ಹಗ್ಗದಾಟ, - ಇವೆಲ್ಲವನ್ನು ಆಡುತ್ತಿದ್ದರು. ಜನರು ಅತ್ಯಂತ ಖುಷಿಯಿಂದ ಸಂಭ್ರಮದಿಂದ ಪಾಲ್ಗೊಳ್ಳುತ್ತಿದ್ದರು. ಇದರಿಂದ ಪರಸ್ಪರ ಪರಿಚಯ ಬೆಳೆಯುತ್ತಿತ್ತು. ಹೊಯ್ದಾಟದ ಬದುಕಿಗೊಂದು ವಿರಾಮ ಸಿಗುತ್ತಿತ್ತು. ಮರುದುಡಿಮೆಗೆ ಉತ್ಸಾಹವನ್ನು ತುಂಬಿಕೊಡುತ್ತಿತ್ತು. ಗ್ರಾಮದಲ್ಲಿ ಸೌಹಾರ್ದತೆ ಸಹಜವಾಗಿ ಬೆಳೆಯುತ್ತಿತ್ತು. ಆದರೆ ಈಗ ಅವೆಲ್ಲ ಮರೀಚಿಕೆಯಾಗುತ್ತಿವೆ. ಅದು ತಪ್ಪಬೇಕು. ಅದಕ್ಕಾಗಿ ಗ್ರಾಮೀಣ ಆಟಗಳಿಗೆ ಮರುಜೀವ ನೀಡಬೇಕಾದ ತುರ್ತು ನಮ್ಮೆದುರು ಇದೆ.

ಎಲ್ಲಾ ಗ್ರಾಮೀಣ ಆಟಗಳನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಳ್ಳಬೇಕೆಂಬ ಹಟ ನಮಗೆ ಬೇಕಿಲ್ಲ. ಆದರೆ ಯಾವುದು ಭಾವೈಕ್ಯತೆಯನ್ನು ಸಾಧಿಸಬಲ್ಲದೋ, ಯಾವುದು ತಂಡೋಪತಂಡಗಳನ್ನು ಒಳಗೊಳ್ಳುವಂತೆ ಮಾಡತ್ತದೋ ಅಂಥ ಆಟಗಳನ್ನು ಉಳಿಸಿ ಬೆಳೆಸಬೇಕಾದ

ಜವಾಬ್ದಾರಿ ನಮ್ಮ ಮೇಲಿದೆ. ತಣ್ಣಗೆ ಯೋಚಿಸಿದರ ಸಾಕು, ಆಟಗಳನ್ನು ಜೀವಂತವಾಗಿ ಉಳಿಸಿಕೊಳ್ಳುವುದು ಹೇಗೆ? ಎಂಬ ಪ್ರಶ್ನೆಗೆ ಉತ್ತರ ಸಿಗುತ್ತದೆ. ನಮ್ಮಲ್ಲಿ ಜನಪದ ತಜ್ಞರಿದ್ದಾರೆ. ಆಟಗಳನ್ನು ಬಲ್ಲ, ಸ್ವರೂಪಾದಿ ಗುಣವಿಶೇಷಗಳನ್ನು ಅಧ್ಯಯನ - ಅಭ್ಯಾಸ ಮಾಡಿದವರಿದ್ದಾರೆ. ಅಂಥ ತಂಡವೊಂದನ್ನು ಮೊದಲು ಗಟ್ಟಿಮಾಡಿಕೊಳ್ಳಬೇಕು. ಅವರಿಂದ ಗ್ರಾಮೀಣ ಪರಿಸರದಲ್ಲಿರುವ ಶಾಲೆಯ ದೈಹಿಕ ಶಿಕ್ಷಕರಿಗೆ ತರಬೇತಿಯನ್ನು ಕೊಡಬೇಕು. ತರಬೇತಿ ಪಡೆದುಕೊಂಡವರು ಎಷ್ಟರ ಮಟ್ಟಿಗೆ ಕಾರ್ಯರೂಪಕ್ಕೆ ತಂದಿದ್ದಾರೆಂಬುದನ್ನು ತಿಳಿಯಲು ತಾಲ್ಲೂಕು, ಜಿಲ್ಲಾ, ರಾಜ್ಯ ಮಟ್ಟದಲ್ಲಿ ಸ್ಪರ್ಧೆ ನಡೆಸಬೇಕು. ಇಲ್ಲವೇ ಬಿಪಿಎಡ್, ಎಂಪಿಎಡ್ ಕೋರ್ಸುಗಳಲ್ಲಿ ಗ್ರಾಮೀಣ ಆಟಗಳನ್ನು ಕುರಿತು ಪಠ್ಯವನ್ನು ಸೇರಿಸಬೇಕು. ಇದರೊಂದಿಗೆ ಕ್ರೀಡೆಯನ್ನು ಅಭಿವೃದ್ಧಿಪಡಿಸುವ ಕ್ರೀಡಾ ಸಂಸ್ಥೆಗಳಿವೆ. ಸರ್ಕಾರಿ, ಅರೆಸರ್ಕಾರಿ ಯುವ ಸೇವಾಕೇಂದ್ರಗಳಿವೆ. ಅಂಥ ಸಂಸ್ಥೆಗಳಿಗೆ ಗ್ರಾಮೀಣ ಆಟಗಳ ಜವಾಬ್ದಾರಿಯನ್ನು ಕೊಟ್ಟು, ಸ್ವತಂತ್ರ ಕಾರ್ಯರೂಪಣೆಗೆ ಅವಕಾಶ ಕಲ್ಪಿಸಬೇಕು. ಹೀಗೆ ಮಾಡುವಾಗ ಪ್ರಾದೇಶಿಕವಾದ ವಿಶೇಷ ಆಟಗಳನ್ನು ಗಮನಿಸಿ, ಪರಸ್ಪರ ತಂಡಗಳ ಕಲಿಕೆಗೆ ಅವಕಾಶವಾಗುವಂತೆ ಮಾಡಬೇಕು. ಆಗಿಂದಾಗ್ಗೆ ಇಂಥ ಗ್ರಾಮೀಣ ಆಟೋಟ ಸ್ಪರ್ಧೆಗಳನ್ನು ಏರ್ಪಡಿಸುವ ಮೂಲಕ ಜಾತಿ ವರ್ಗ ವಲಯ ರಾಜಕೀಯ ಪಕ್ಷಭೇದ - ಎಲ್ಲಾ ಮನುಷ್ಯ ಸಹಜ ಮಿತಿಗಳನ್ನು ಮೀರಿ ಮನುಷ್ಯರಾಗಿ ವ್ಯಕ್ತಿತ್ವ ರೂಪಿಸಿಕೊಳ್ಳಲು ಒಂದು ಮುಕ್ತವೇದಿಕೆಯನ್ನು ನಿರ್ಮಿಸಿದಂತಾಗುತ್ತದೆ. ಇದರಿಂದ ಗ್ರಾಮ ಬಿಟ್ಟು ನಗರದ ಕಡೆ ಮುಖ ಮಾಡುವ ಎಷ್ಟೋ ಯುವ ಪೀಳಿಗೆ ಮತ್ತೆ ಗ್ರಾಮದ ಕಡೆಗೆ ಚಲಿಸಲು ಗ್ರಾಮೀಣ ಆಟಗಳು ಮಾಧ್ಯಮವಾಗಿ ನಿಲ್ಲಬಲ್ಲವು.

●




# ಸಾಂಸ್ಕೃತಿಕ ಸಂಸ್ಥೆಗಳ ಜವಾಬ್ದಾರಿ

ಪ್ರೊ. ಎಲ್. ಎಸ್. ಶೇಷಗಿರಿರಾವ್

ಇಂದು ನಮ್ಮ ಸಂಸ್ಕೃತಿ ಬಿಕ್ಕಟ್ಟಿನ ಸ್ಥಿತಿಯನ್ನು ಎದುರಿಸುತ್ತಿದೆ. ಇಂಗ್ಲಿಷರು ಈ ದೇಶವನ್ನು ಗೆದ್ದ ಹೊಸದರಲ್ಲಿ ತರುಣ ಜನಾಂಗದ ದೊಡ್ಡ ಭಾಗ ಅವರ ಸಂಸ್ಕೃತಿಗೆ ಮಾರು ಹೋದದ್ದುಂಟು. ಅವರ ಭಾಷೆ, ಅವರ ಸಾಹಿತ್ಯ, ಅವರ ಉಡುಪು, ಅವರ ಶಿಷ್ಟಾಚಾರ, ಅವರ ಕಟ್ಟುನಿಟ್ಟುಗಳು ಈ ತರುಣ ವರ್ಗದ ಕಣ್ಣುಗಳನ್ನು ಕೋರೈಸಿದವು. ಇದನ್ನು ರವೀಂದ್ರನಾಥ ಠಾಕೂರರು ವರ್ಣಿಸಿದ್ದಾರೆ. ಸ್ವಾತಂತ್ರ್ಯ ಹೋರಾಟವು ಚೈತನ್ಯ ಪಡೆದುಕೊಂಡಂತೆ ಈ ಪಾಶ್ಚಾತ್ಯ ಸಂಸ್ಕೃತಿಯ ಮೋಹ ಇಳಿದು, ನಮ್ಮ ಸಂಸ್ಕೃತಿ, ನಡೆ, ನುಡಿ, ವಿಚಾರ, ರೀತಿಗಳಲ್ಲಿ ಆಸಕ್ತಿ ಮತ್ತು ಅಭಿಮಾನ ಬೆಳೆದವು. ಈಚೆಗಿನ ವರ್ಷಗಳಲ್ಲಿ ಮತ್ತೆ ತರುಣ ವರ್ಗದ ಮನಸ್ಸು ಪಶ್ಚಿಮದತ್ತ ತಿರುಗುತ್ತಿದೆ. ಅವರ ನಡೆ, ನುಡಿ, ಉಡುಪು, ಭಾಷೆ, ವಿಚಾರ, ರೀತಿ ಎಲ್ಲ ಪಾಶ್ಚಾತ್ಯರ ಅನುಕರಣೆಯ ದಾರಿಯನ್ನು ಹಿಡಿದಿವೆ. ತರುಣರು, ತರುಣಿಯರು ಇಬ್ಬರೂ ಪಾಶ್ಚಾತ್ಯರ ಉಡುಪನ್ನು ಅನುಸರಿಸುತ್ತಾರೆ. ಒಬ್ಬರನ್ನೊಬ್ಬರು ಕಂಡಾಗ ಎದುರುಗೊಳ್ಳಲು ಬಳಸುವ ಮಾತುಗಳು ಇಂಗ್ಲೆಂಡ್ ಅಮೆರಿಕಾದವು. ಅವರು ಕೇಳುವ ಸಂಗೀತ ಪಾಶ್ಚಾತ್ಯ ಸಂಗೀತ, ಅವರ ತಿಂಡಿ ತಿನಿಸುಗಳು ಪಾಶ್ಚಾತ್ಯರವು. ಅವರು ನೋಡಬಯಸುವ, ಭಾಗವಹಿಸಬಯಸುವ ನೃತ್ಯ ಪಾಶ್ಚಾತ್ಯರವು. ಅವರು ಓದುವ ಕಾದಂಬರಿಗಳು ಪಾಶ್ಚಾತ್ಯರವು. ನಮ್ಮ ಪುಣ್ಯ, ಇವರಲ್ಲಿ ಬಹು ಮಂದಿ ತಮ್ಮ ತಂದೆ ತಾಯಿ ಇಟ್ಟ ಭಾರತೀಯ ಹೆಸರುಗಳನ್ನು ಉಳಿಸಿಕೊಂಡಿದ್ದಾರೆ!

> **ಪಶ್ಚಿಮದ ವ್ಯಾಮೋಹ ಹಳ್ಳಿಗಿಂತ ನಗರಗಳಲ್ಲಿ ಹೆಚ್ಚು. ಹಳ್ಳಿಗಳಲ್ಲೂ ನಗರ ಜೀವನ ರೀತಿ ನಡೆ ನುಡಿಗಳು ಹೆಚ್ಚುತ್ತಿದ್ದರೂ ನಮ್ಮ ಗ್ರಾಮಾಂತರ ಜನರು ಇನ್ನೂ ನಮ್ಮ ಸಂಸ್ಕೃತಿಗೆ ಹತ್ತಿರವಾಗಿ ಇದ್ದಾರೆ. ಆದರೆ ಎಷ್ಟು ಕಾಲ ಈ ಸ್ಥಿತಿ ಹೀಗೇ ಇರುತ್ತದೆ ಎಂದು ಹೇಳುವಂತಿಲ್ಲ.**

ಈ 'ಪಶ್ಚಿಮ ಮೋಹ' ಹಳ್ಳಿಗಳಿಗಿಂತ ನಗರಗಳಲ್ಲಿ ಹೆಚ್ಚು. ಹಳ್ಳಿಗಳಿಗೂ ನಗರದ ಜೀವನ ರೀತಿ ನಡೆ ನುಡಿಗಳು ಹಬ್ಬುತ್ತಿದ್ದರೂ ನಮ್ಮ ಗ್ರಾಮಾಂತರ ಜನರು ಇನ್ನೂ ನಮ್ಮ ಸಂಸ್ಕೃತಿಗೆ ಹತ್ತಿರವಾಗಿಯೇ ಇದ್ದಾರೆ. ಆದರೆ ಎಷ್ಟು ಕಾಲ ಸ್ಥಿತಿ ಹಾಗಿರುತ್ತದೆ ಎಂದು ಹೇಳುವಂತಿಲ್ಲ. ನಮ್ಮ ಗ್ರಾಮಗಳ ಬಂಧುಗಳಲ್ಲಿ ಅದರಲ್ಲಿಯೂ ಯುವ ಪೀಳಿಗೆಗಳಲ್ಲಿ ನಮ್ಮ ಸಂಸ್ಕೃತಿಯ ಅಭಿಮಾನವನ್ನು ಉಳಿಸಿಕೊಳ್ಳಲು ಶ್ರಮಪಡಬೇಕಾಗಿದೆ. ನಗರದಲ್ಲಿ ಈ ಕಾರ್ಯ ಇನ್ನೂ ದೊಡ್ಡ ಪ್ರಮಾಣದಲ್ಲಿ ನಡೆಯಬೇಕಾಗಿದೆ.

ಈ ಮಹತ್ವದ ಕಾರ್ಯವನ್ನು ಗ್ರಾಮ ಪ್ರದೇಶದಲ್ಲಿರುವ ಸಂಘ ಸಂಸ್ಥೆಗಳು ಪ್ರಧಾನ ಆದ್ಯತೆಯನ್ನು ನೀಡಿ ಕೈಗೊಳ್ಳಬೇಕಾಗಿದೆ. ಗ್ರಾಮ ಪ್ರದೇಶದಲ್ಲಿ ಗ್ರಾಮ ಪಂಚಾಯತಿಗಳಿವೆ. ಕನ್ನಡ ಸಾಹಿತ್ಯ ಪರಿಷತ್ತಿನ ತಾಲ್ಲೂಕು ಶಾಖೆಗಳಿವೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವ್ಯಾಪ್ತಿಗೆ ಇವು ಒಳಪಟ್ಟಿರುತ್ತವೆ. ಗ್ರಾಮ ಪಂಚಾಯತಿಯ ಆದಾಯದಲ್ಲಿ ಒಂದು ಭಾಗವನ್ನು ಭಾಷೆ-ಸಂಸ್ಕೃತಿಗಳ ಕೆಲಸಕ್ಕೆಂದು ಮೀಸಲಿಡುವಂತೆ ಕಾನೂನಿರುವುದರಿಂದ ಈ ಕೆಲಸಕ್ಕೆ ಹಣದ ಕೊರತೆ ಇರುವುದಿಲ್ಲ. ಜೊತೆಗೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕನ್ನಡ ಪುಸ್ತಕ ಪ್ರಾಧಿಕಾರದಂಥ ಇಲಾಖೆಗಳ ಮತ್ತು ಸಂಸ್ಥೆಗಳ ನೆರವನ್ನೂ ಪಡೆದುಕೊಳ್ಳಬಹುದು.

ನಮ್ಮ ಭಾಷೆ, ಸಂಸ್ಕೃತಿಗಳ ಉಳಿವಿಗಾಗಿ ಕೆಲಸ ಎರಡು ದಿಕ್ಕುಗಳಲ್ಲಿ ನಡೆಯಬೇಕಾಗಿದೆ. ಮೊದಲನೆಯದಾಗಿ, ಇವುಗಳಲ್ಲಿ ಅಭಿಮಾನವನ್ನು ಎಳೆಯ ಮನಸ್ಸುಗಳಲ್ಲಿ ಬಿತ್ತಬೇಕಾಗಿದೆ. ಎಷ್ಟೋ ಬಾರಿ ಇದಕ್ಕೆ ವಿರದ್ಧವಾದ ಕೆಲಸವನ್ನು ಮಕ್ಕಳ ಹಿರಿಯರೇ ಉದ್ದೇಶಪೂರ್ವಕವಾಗಿ ಅಲ್ಲದಿದ್ದರೂ ಮಾಡಿರುತ್ತಾರೆ. ಎಷ್ಟೋ ಜನ ಎಳೆಯರು ಧರಿಸಿರುವ (ಅವರ ಹಿರಿಯರು ಕೊಡಿಸಿದ) ಬಟ್ಟೆಗಳ ಮೇಲೂ ಇಂಗ್ಲಿಷ್ ಭಾಷೆಯಲ್ಲಿ ಯಾವುದೋ ದೇಶದ ಸಂಸ್ಥೆಯ ಹೆಸರು, ಯಾವುದೋ ಮಾತುಗಳು ರಾರಾಜಿಸುತ್ತಿರುತ್ತವೆ! ಎಳೆಯರ ಹೃದಯಕ್ಕೆ ಈ ಮೂಲಕ ತಲುಪುವುದು ಇಂಗ್ಲಿಷ್ ಭಾಷೆ, ಅನ್ಯ ದೇಶಗಳ ಫುಟ್‌ಬಾಲ್ ಸಂಸ್ಥೆ ಅಥವಾ ಕ್ಲಬ್ಬಿನ ಹೆಸರು. ಹಿರಿಯರು ಮಗುವಿಗೆ 'ಡ್ಯಾಡಿ' 'ಮಮ್ಮಿ' ಎನ್ನುವ 'ಗುಡ್‌ಮಾರ್ನಿಂಗ್' 'ಗುಡ್‌ನೈಟ್' ಎನ್ನುವ ಮತ್ತು ಇತರ ಇಂಗ್ಲಿಷ್ ಶಬ್ದಗಳನ್ನು ಕಲಿಸಿ, ಅವು ಆ ಮಾತುಗಳನ್ನು ಪುನರುಚ್ಚರಿಸಿದಾಗ ಸಂಭ್ರಮಪಡುತ್ತಾರೆ. ಮಗುವಿಗೆ, ತನ್ನ ಭಾಷೆಯನ್ನಾಡುವುದು ತೀರಾ ಸಾಮಾನ್ಯ ಸಂಗತಿ, ಇಂಗ್ಲಿಷ್ ಮಾತುಗಳನ್ನಾಡುವುದು ಮಹತ್ಸಾಧನೆ ಎನ್ನುವ ಭಾವನೆ ಬರುತ್ತದೆ. ಇಂಗ್ಲಿಷ್ ಹಾಡುಗಳ ರಿಕಾರ್ಡ್‌ಗಳನ್ನೋ, ಟೇಪ್‌ಗಳನ್ನೋ ಹಾಕಿ ಅದಕ್ಕನುಗುಣವಾಗಿ ಮಕ್ಕಳನ್ನು ಕುಣಿಸುವುದೊಂದು ಸಂಭ್ರಮ. ನಾವು ಇಂಥ ಪ್ರಭಾವಗಳಿಗೆ ವಿರುದ್ಧವಾಗಿ ಸೆಣಸಬೇಕಾಗುತ್ತದೆ.

ಸಂಘ ಸಂಸ್ಥೆಗಳು ಮಕ್ಕಳ ಸೃಜನ ಸಾಮರ್ಥ್ಯಕ್ಕೆ ಅವಕಾಶಗಳನ್ನು ಕಲ್ಪಿಸಿ ಅವರಿಗೆ ಭಾಷೆಯನ್ನು, ಸಂಸ್ಕೃತಿಯನ್ನು ಪರಿಚಯ ಮಾಡಿಕೊಡಬೇಕು. ಒಂದು ವಿಧಾನವೆಂದರೆ, ಅವರಿಗೆ ಕನ್ನಡದಲ್ಲಿ ಕನ್ನಡ ನಾಡು ಮತ್ತು ಭಾರತದ ಮಹಾನ್ ವ್ಯಕ್ತಿಗಳ ಮತ್ತು ಜೀವನ ವಿಧಾನ ಪರಿಚಯವಾಗುವ ಕಥೆಗಳನ್ನು ಹೇಳುವುದು, ಅವರಿಂದ ಕಥೆ ಹೇಳಿಸುವುದು. (ಮಕ್ಕಳಿಗೆ ಹೇಳಲು ಅಥವಾ ಅವರು ಓದಲು ಕಥೆಗಳನ್ನು ಆರಿಸುವಾಗ ವಿಶೇಷ ಎಚ್ಚರಿಕೆ ಅಗತ್ಯ. ೮-೧೦ ವರ್ಷ ವಯಸ್ಸಿನ ಮಕ್ಕಳಿಗೆ ಷೇಕ್ಸ್‌ಪಿಯರ್‌ನ ಮಹಾ ಟ್ರ್ಯಾಜಡಿಗಳ ಕಥೆಗಳನ್ನು ಹೇಳುವ ಪ್ರಯತ್ನವನ್ನೂ ಕಂಡಿದ್ದೇನೆ. ಪಠ್ಯಪುಸ್ತಕಗಳಲ್ಲಿ- ಇವನ್ನು ಸರಳಭಾಷೆಯಲ್ಲಿ ನಿರೂಪಿಸಿ-ಸೇರಿಸಿರುವುದನ್ನು ನೋಡಿದ್ದೇನೆ. ಇದು ದೂರಾಲೋಚನೆ ಇಲ್ಲದ ತಪ್ಪು ಪ್ರಯತ್ನ. ಮೂಢನಂಬಿಕೆಗಳನ್ನು ಬೆಳೆಸದಿರುವ ಪೌರಾಣಿಕ ಕಥೆಗಳು, ನಮ್ಮ ಜಾತ್ರೆಯ ಘಟನೆಗಳು, ಸ್ವಾತಂತ್ರ್ಯ ಹೋರಾಟದ ಕಥೆಗಳು,ಈಚೆಗಿನ ಧೀಮಂತರ ಬದುಕಿನ ಕಥೆಗಳು ಇವನ್ನೆಲ್ಲ ಬಳಸಿಕೊಳ್ಳಬಹುದು. ಜಾನಪದ ಕಥೆಗಳಿವೆ. ಆಯಾ ತಾಲ್ಲೂಕು ಮತ್ತು ಜಿಲ್ಲೆಗಳಲ್ಲಿ ಜನರು ಕೃತಜ್ಞತೆಯಿಂದ ನೆನೆಯುವ ಜನರ ಬದುಕನ್ನು ಸಾಮಗ್ರಿಯಾಗಿ ಬಳಸಬಹುದು.

ಇದರ ಮುಂದಿನ ಹೆಜ್ಜೆ ತಮ್ಮ ಪ್ರದೇಶ, ಕನ್ನಡನಾಡು, ಭಾರತಗಳಿಗೆ ಸಂಬಂಧಿಸಿದ ಸರಳ ಹಾಡುಗಳನ್ನು ಹೇಳಿಕೊಟ್ಟು ಹಾಡಿಸುವುದು. ಇದಕ್ಕಾಗಿ ಬಹುಮಾನಗಳನ್ನು ಕೊಟ್ಟು ಮಕ್ಕಳನ್ನು ಆಕರ್ಷಿಸಬಹುದು. ಇದಕ್ಕಾಗಿ ಹೆಚ್ಚು ವೆಚ್ಚ ಮಾಡಬೇಕಾಗಿಲ್ಲ. ಆದರೆ ತಾಲ್ಲೂಕಿನ ಒಂದೊಂದು ಶಾಲೆಯಲ್ಲಿ ಒಂದೊಂದು ತಿಂಗಳು ಈ ಕಾರ್ಯಕ್ರಮವನ್ನು ನಡೆಸಬಹುದು. ತಕ್ಕ ವಯಸ್ಸಿನ ಎಳೆಯರನ್ನು ಆರಿಸಿ ನಾಟಕಗಳನ್ನು ಓದಿಸುವುದು, ಆಡಿಸುವುದು ಇಂಥ ಕಾರ್ಯಕ್ರಮಗಳನ್ನು ಸರದಿಯ ಮೇಲೆ ಶಾಲೆಗಳಲ್ಲಿ ಏರ್ಪಡಿಸಬಹುದು. ಇಂಥ ಕಾರ್ಯಕ್ರಮಗಳಿಗೆ ದೊಡ್ಡವರು ಹೋಗುವುದು, ಪ್ರೋತ್ಸಾಹದ ಮಾತುಗಳನ್ನಾಡುವುದು, ಬಹುಮಾನಗಳನ್ನು ನೀಡುವುದು ಮುಖ್ಯ. ಹಿಂದಿನ ಮತ್ತು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ ಕಾರ್ಯಕ್ರಮಗಳ ವಿಷಯವಾಗಿ ಇನ್ನೊಂದು ಮಾತು: ಇವನ್ನು ನಿರ್ವಹಿಸಲು ಶಾಲೆಗಳ ಸಹಕಾರ ಮುಖ್ಯ. ತಾಲ್ಲೂಕಿನ ಮತ್ತು ಜಿಲ್ಲೆಯ ಶಿಕ್ಷಣಾಧಿಕಾರಿಗಳು, ಮುಖ್ಯೋಪಾಧ್ಯಾಯರು/ ಮುಖ್ಯೋಪಾಧ್ಯಾಯಿನಿಯರು, ಶಿಕ್ಷಕರು ಇವರ ಒಂದು ಸಮಿತಿಯನ್ನು ಮಾಡಿ, ಸಮಿತಿಗೆ ಸಾಕಷ್ಟು ಸ್ವಾತಂತ್ರ್ಯವನ್ನೂ ಹೊಣೆಯನ್ನೂ ಹಣವನ್ನೂ ಕೊಡುವುದು ಮುಖ್ಯ. ಹಾಗೆಯೇ ಭಾಗವಹಿಸಿದವರಿಗೆಲ್ಲ ಅಂದವಾದ, ಹೊಳೆಯುವ ಅಕ್ಷರಗಳ ಸರ್ಟಿಫಿಕೇಟ್‌ಗಳನ್ನು ಕೊಡಬಹುದು.

ಸ್ವಾತಂತ್ರ್ಯೋತ್ಸವ, ರಾಜ್ಯೋತ್ಸವಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳಬೇಕಾಗಿದೆ. ಈ ದೇಶಕ್ಕೆ ಸ್ವಾತಂತ್ರ್ಯ ಬರಲು ದೇಶದ ಎಲ್ಲಾ ಭಾಗಗಳವರು, ಧರ್ಮಗಳವರು, ಹಳ್ಳಿಯವರು, ನಗರಗಳವರು, ಸ್ತ್ರೀಯರು, ಪುರುಷರು ಹೋರಾಡಿದ್ದಾರೆ. ಕ್ರಾಂತಿವೀರರಿದ್ದಾರೆ. ಅಹಿಂಸಾನಿಷ್ಠರಿದ್ದಾರೆ. ತಾಲ್ಲೂಕು ಮಟ್ಟದಲ್ಲಿ, ಜಿಲ್ಲಾ ಮಟ್ಟದಲ್ಲಿ ಸ್ವಾತಂತ್ರ್ಯ ವೀರರ ಕಥೆಗಳನ್ನು ಹೇಳುವ ಸ್ಪರ್ಧೆಗಳನ್ನೇರ್ಪಡಿಸಬಹುದು. ಅಧಿಕ ಸಂಖ್ಯೆಯ ಆಕರ್ಷಕ ಬಹುಮಾನಗಳನ್ನು ಕೊಡಬೇಕು. ಈಗ ಈ ಎರಡು ಉತ್ಸವಗಳನ್ನು ಸಾಂಪ್ರದಾಯಿಕವಾಗಿ ಒಂದು ದಿನ ಆಚರಿಸುವುದಾಗುತ್ತಿದೆ. ಪ್ರತಿಯೊಂದು ಜಿಲ್ಲೆಯಲ್ಲಿ ಈ ಆಚರಣೆಗಳು ಆಗಸ್ಟ್ ೧೫ ಮತ್ತು ನವೆಂಬರ್ ೧ಕ್ಕೆ ಎಷ್ಟೋ ಮೊದಲೇ ಸಿದ್ಧತೆ ಪ್ರಾರಂಭವಾಗಬೇಕು. ಉತ್ಸಾಹದ, ಸಂಭ್ರಮದ ಒಂದು ವಾತಾವರಣವೇ ಮೂಡಬೇಕು. ಶಾಲಾಕಾಲೇಜುಗಳ ವಿದ್ಯಾರ್ಥಿಗಳಿಗೆ, ಸಾರ್ವಜನಿಕರಿಗೆ 'ದೇಶಕ್ಕೆ ಸ್ವಾತಂತ್ರ ಏಕೆ ಬೇಕು ?' 'ಸ್ವಾತಂತ್ರ್ಯದ ಫಲಗಳು ಎಲ್ಲರಿಗೆ ತಲುಪುವಂತೆ ಮಾಡುವುದು ಹೇಗೆ?' ಇಂಥ ವಿಷಯಗಳನ್ನು ಕುರಿತು ಮಾತನಾಡಲು, ಬರೆಯಲು, ಚರ್ಚಿಸಲು, ಅವಕಾಶಗಳನ್ನು ಕಲ್ಪಿಸಬೇಕು. ರಾಜ್ಯೋತ್ಸವ ಹಲವು ಶಾಲೆಗಳು ಅಥವಾ ೩-೪ ತಾಲ್ಲೂಕುಗಳು ಸೇರಿ ಆಚರಿಸುವ ಕಾರ್ಯಕ್ರಮಗಳನ್ನು ಒಳಗೊಳ್ಳಬೇಕು. ಛಾಯಾಚಿತ್ರಗಳು, ಚಿತ್ರಗಳು, ವಸ್ತುಗಳ ಪ್ರದರ್ಶನಗಳು ಪ್ರತಿಯೊಂದು ತಾಲ್ಲೂಕು ಕೇಂದ್ರಕ್ಕೆ ಸಾಗಬೇಕು. ಸಾಕ್ಷ್ಯಚಿತ್ರಗಳ ಪ್ರದರ್ಶನಗಳಾಗಬೇಕು.

ಇಂಥ ಆಚರಣೆಗಳಲ್ಲಿ ನಾವು ಸಾರ್ವಜನಿಕ ಭಾಷಣಗಳನ್ನು ಕಡಿಮೆ ಮಾಡಿದಷ್ಟೂ ಒಳ್ಳೆಯದು. ಸರ್ಕಾರಿ ಸಮಾರಂಭಗಳು ಅನಿವಾರ್ಯವಾಗಿ ಒಂದು ಚೌಕಟ್ಟಿನಲ್ಲಿ, ಒಂದು ಮಾದರಿಯಲ್ಲಿ ನಡೆಯುತ್ತವೆ. ಆದರೆ ಇತರ ಕಾರ್ಯಕ್ರಮಗಳಲ್ಲಿಯಾದರೂ ವಿದ್ಯಾರ್ಥಿಗಳು ಮತ್ತು ಸಾಮಾನ್ಯ ಜನತೆ ಪ್ರೇಕ್ಷಕರಾಗದೆ ಭಾಗವಹಿಸುವಂತಾಗಬೇಕು. ಬೀದಿ ನಾಟಕಗಳನ್ನು ನಮ್ಮ ಸಂಸ್ಕೃತಿಯ ಪ್ರಭಾವಕ್ಕೆ ಪರಿಣಾಮಕಾರಿಯಾಗಿ ಬಳಸಿಕೊಳ್ಳಬಹುದು. ಸ್ವಾತಂತ್ರ್ಯದ ಹೋರಾಟದಲ್ಲಿ ಆಯಾ ಗ್ರಾಮಗಳ ಮತ್ತು ಜಿಲ್ಲೆಗಳ ಪಾತ್ರವನ್ನು ನೂತನವಾಗಿ, ಉದಾಹರಣೆಗಳೊಡನೆ ವಿವರಿಸುವ, ದೊಡ್ಡವಲ್ಲದ ಪುಸ್ತಕಗಳನ್ನು ಬರೆಸಿ, ಶಾಲಾ-ಕಾಲೇಜುಗಳಲ್ಲಿ ಬಹುಮಾನಗಳೊಡನೆ ಕೊಡಬಹುದು. (ಇವುಗಳನ್ನಷ್ಟೇ ಬಹುಮಾನವಾಗಿ ಕೊಟ್ಟರೆ ಇವುಗಳ ವಿಷಯದಲ್ಲಿ ಅಸಡ್ಡೆ ಮೂಡುತ್ತದೆ) ಹೆಂಗಸರು ಮತ್ತು ಜನಸಾಮಾನ್ಯರು ಪಟ್ಟ ಪಾಡು, ಮನೆ ಸಾಮಾನುಗಳ ಹರಾಜು, ಲಾಠಿ ಛಾರ್ಜು, ಸೆರೆಮನೆವಾಸ, ಇವೆಲ್ಲವುಗಳ ನೆನಪು ಜಾರಿಹೋಗಲು ನಾವು ಅವಕಾಶವನ್ನು ನೀಡಬಾರದು. ಸ್ಫೂರ್ತಿಯ ಗಣಿಯನ್ನೇ ನಾವು ಕಳೆದುಕೊಳ್ಳುತ್ತಿದ್ದೇವೆ. ಭಾರತೀಯ ಸಂಸ್ಕೃತಿ, ಕನ್ನಡ ಸಂಸ್ಕೃತಿ ಎಂದರೇನು ಎಂಬ ಕಲ್ಪನೆ ದೊಡ್ಡವರಿಗೇ ಸ್ಪಷ್ಟವಾಗಿಲ್ಲ. ಭಾರತೀಯರು ಕರ್ಮಸಿದ್ಧಾಂತಕ್ಕೆ ಕಟ್ಟುಬಿದ್ದು ಹಿಂದಿನ ಜನ್ಮದಲ್ಲಿ ನಾವು ಮಾಡಿದುದನ್ನು ಈ ಜನ್ಮದಲ್ಲಿ ಅನುಭವಿಸುತ್ತೇವೆ ಎಂದು ನಂಬಿ ನಿಷ್ಕ್ರಿಯರಾಗುತ್ತಾರೆ. ಯಾವ ಬದಲಾವಣೆಯನ್ನು ಮಾಡಲೂ ಪ್ರಯತ್ನಿಸುವುದಿಲ್ಲ. ಇಂಥ ತಪ್ಪುಗ್ರಹಿಕೆಗಳು ವ್ಯಾಪಕವಾಗಿವೆ. ನೂರು ವರ್ಷ ಸಂತೋಷವಾಗಿ ಬದುಕೋಣ ಎಂಬುದು ನಿಷ್ಕ್ರಿಯತೆಯ ಮಾತಲ್ಲ. ಶ್ರೀ ಕೃಷ್ಣ ಪಾರ್ಥನಿಗೆ ಭಗವದ್ಗೀತೆಯನ್ನು ಬೋಧಿಸಿದ್ದು ಬದುಕಿಗೆ ಬೆನ್ನು ತಿರುಗಿಸು ಎಂದು ಉಪದೇಶಿಸುವುದಕ್ಕಲ್ಲ. ನಮ್ಮ ಯುವಜನರ ಮನಸ್ಸಿನಲ್ಲಿರುವ ಸಂದೇಹಗಳನ್ನು ಟೀಕೆಗಳನ್ನು ವ್ಯಕ್ತಪಡಿಸಲು ಅವಕಾಶವಿರಬೇಕು. ನ್ಯಾಯವಾದ ಆಕರ್ಷಣೆಗಳಿದ್ದರೆ ಒಪ್ಪಿಕೊಳ್ಳಬೇಕು. ಆದರೆ ಒಬ್ಬರನ್ನೊಬ್ಬರು ಕಂಡಾಗ 'ಹಾಯ್' ಎಂದು ಕೈಬೀಸಬೇಕೆ? ಕ್ರಿಕೆಟ್ ಮ್ಯಾಚಿನಲ್ಲಿ ಗೆದ್ದರೆ ತಲೆಯ ಮೇಲೆ ಷ್ಯಾಂಪೇನ್ ಸುರಿದುಕೊಂಡೇ ಖುಷಿಪಡಬೇಕೆ? ಬೇರೆ ದೇಶದವರ ಭಾಷೆ, ಸಂಸ್ಥೆಗಳ ಹೆಸರುಗಳು ಇವುಗಳಿರುವ ಅಂಗಿಯನ್ನೇ ತೊಡಬೇಕೆ? ಹುಟ್ಟುಹಬ್ಬದ ಆಚರಣೆಯಲ್ಲಿ ಮೋಂಬತ್ತಿಗಳನ್ನು ಆರಿಸಿ,'ಹ್ಯಾಪಿನೆಸ್ ಟು ಯು'ವನ್ನೇ ಹಾಡಬೇಕೆ? ನಾವು ಆತ್ಮಗೌರವವನ್ನು ಮತ್ತೆ ನಮ್ಮ ಯುವಜನತೆಯ ಹೃದಯಗಳಲ್ಲಿ ಸ್ಥಾಪಿಸಬೇಕಾಗಿದೆ.

ಈಗ ಪ್ರತಿ ಜಿಲ್ಲೆಯಲ್ಲಿ ಮತ್ತು ತಾಲ್ಲೂಕಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನಗಳು ನಡೆಯುತ್ತಿವೆ. ಇದು ಒಳ್ಳೆಯದೇ. ಆದರೆ ಇವುಗಳ ಸ್ವರೂಪ ಬದಲಾಗಬೇಕು. ರಾಜಕಾರಣಿಗಳನ್ನೂ ಸಮುದಾಯದ ಪ್ರಮುಖರನ್ನೂ ಆಹ್ವಾನಿಸುವುದರಲ್ಲಿ ತಪ್ಪಿಲ್ಲ. ಆದರೆ ಕಾರ್ಯಕ್ರಮವನ್ನು ಅವರೇ ಆವರಿಸಿಬಿಡಬಾರದು. ಅಲ್ಲದೆ ಕಾರ್ಯಕ್ರಮವು ಹೊರೆಯಾಗಬಾರದು. ನಾನು ನೋಡುತ್ತಿರುವಂತೆ, ಈ ದಿನದ ಕಾರ್ಯಕ್ರಮದಲ್ಲಿ ಐದು ಗೋಷ್ಠಿಗಳು (ಅನಂತರ ಸಂಜೆ ಸಾಂಸ್ಕೃತಿಕ ಕಾರ್ಯಕ್ರಮಗಳು), ಒಂದೊಂದು ಗೋಷ್ಠಿಯಲ್ಲಿ ನಾಲ್ವರು ಭಾಷಣಕಾರರು ಮತ್ತು ಅಧ್ಯಕ್ಷರು. ಇದರ ಪರಿಣಾಮವೆಂದರೆ ಎರಡನೆಯ ಗೋಷ್ಠಿಯಿಂದಲೇ ಭಾಷಣಕಾರರಿಗೆ, 'ಹತ್ತು ನಿಮಿಷಗಳಲ್ಲಿ ಮುಗಿಸಿ, ಏಳು ನಿಮಿಷಗಳಲ್ಲಿ ಮುಗಿಸಿ' ಎಂದು ವಿನಂತಿ ಪ್ರಾರಂಭ. ಭಾಷಣಗಳ ಭಾರಕ್ಕೆ ಸಭಿಕರು ನರಳುವಂತೆ

ಮಾಡುವುದರಿಂದ ಯಾವ ಫಲವೂ ಇಲ್ಲ. ಮೂರು ಗೋಷ್ಠಿಗಳು, ಒಂದೊಂದು ಗೋಷ್ಠಿಯಲ್ಲಿ ಇಬ್ಬರು ಭಾಷಣಕಾರರು ಮತ್ತು ಒಬ್ಬ ಅಧ್ಯಕ್ಷರು ಹೀಗೆ ನಿರ್ಧರಿಸಿ, ಭಾಷಣಕಾರರಿಗೆ ೨೦-೨೫ ನಿಮಿಷಗಳನ್ನು ನಿಗದಿ ಮಾಡಿ ಆ ಮಿತಿಗೆ ಅವರು ಬದ್ಧರಾಗಬೇಕೆಂದು ಮೊದಲೇ ತಿಳಿಸಿ, ಅಧ್ಯಕ್ಷರಿಗೂ ಈ ಮಿತಿಯನ್ನು ಮೀರದಂತೆ ಕಾರ್ಯಕ್ರಮ ನಿರ್ವಹಣೆ ಮಾಡಿ, ಪ್ರಶ್ನೋತ್ತರಕ್ಕೆ ಅವಕಾಶ ಮಾಡಿಕೊಡಬೇಕು. ಒಂದು ಗೋಷ್ಠಿಯಾದರೂ ಭಾರತೀಯ ಸಂಸ್ಕೃತಿ, ಕನ್ನಡ ಸಂಸ್ಕೃತಿಗಳಿಗೆ ಮೀಸಲಾಗಬೇಕು. ಸಾಂಸ್ಕೃತಿಕ ಕಾರ್ಯಕ್ರಮ ಎನ್ನುವುದನ್ನು ವ್ಯವಸ್ಥೆ ಮಾಡುವಾಗ ಎಚ್ಚರ ವಹಿಸಬೇಕು. ಕನ್ನಡ ಕವನಗಳನ್ನು ಹಾಡುವಾಗ, ವಾದ್ಯಗಳ ಗದ್ದಲದಲ್ಲಿ ಧ್ವನಿವರ್ಧಕದ ಆರ್ಭಟದಲ್ಲಿ ಕವನವು ಹಿಂದುಳಿದು ಝಗಮಗಿಸುವ ದೀಪಗಳು, ಬಣ್ಣ ಬಣ್ಣದ ಉಡುಪುಗಳು, ಕಸರತ್ತುಗಳೇ ವಿಜೃಂಭಿಸುವ ಹಾಗಾಗಬಾರದು. ಕವನವು ಸ್ಪಷ್ಟವಾಗಿ ಕೇಳಿಸಿ, ಕೇಳುವವರ ಮನಸ್ಸಿನಲ್ಲಿ ನಿಲ್ಲುವಂತಾಗಬೇಕು. ಸಾಹಿತ್ಯ ಸಮ್ಮೇಳನಗಳು ನಿಜವಾಗಿ ಕನ್ನಡ ಸಾಹಿತ್ಯ, ಸಂಸ್ಕೃತಿಗಳಿಗೆ ಮುಡಿಪಾಗಬೇಕು.

ಕನ್ನಡ ಪುಸ್ತಕಗಳ ಮಾರಾಟ ಕಷ್ಟ ಎಂಬ ಮಾತನ್ನು ಹಲವು ದಶಕಗಳಿಂದ ಕೇಳುತ್ತಿದ್ದೇವೆ. ಇಂದೂ ಅದೇ ಪರಿಸ್ಥಿತಿ ಇದೆ. ಪುಸ್ತಕ ಸಂಸ್ಕೃತಿಯನ್ನು ಉಳಿಸಿಕೊಂಡು ಬೆಳೆಸಿಕೊಳ್ಳುವ ಅಗತ್ಯ ಬಹುವಾಗಿದೆ. ನಮ್ಮ ಗ್ರಾಮೀಣ ಸಂಸ್ಥೆಗಳು ಮನಸ್ಸು ಮಾಡಿದರೆ ಇದನ್ನು ಸಾಕಷ್ಟು ಮಟ್ಟಿಗೆ ಸಾಧಿಸಬಹುದು. ಈ ಎಲ್ಲ ಸಂಸ್ಥೆಗಳು ಒಟ್ಟಾಗಿ ಸೇರಿದರೆ ತಮ್ಮ ಜನತೆಗೆ ಉಪಯುಕ್ತವಾಗುವ ಪುಸ್ತಕಗಳನ್ನು ಕೊಳ್ಳಬಹುದು. ಎಲ್ಲ ಜಿಲ್ಲೆಗಳ ಸಂಸ್ಥೆಗಳೂ ಈ ಕ್ರಮವನ್ನು ಕೈಗೊಂಡರೆ ಕನ್ನಡ ಪುಸ್ತಕ ಉದ್ಯಮಕ್ಕೆ ನೆರವಾಗುತ್ತದೆ. ಕೊಳ್ಳುವಾಗ, ಸಾಹಿತ್ಯದ ಪುಸ್ತಕಗಳನ್ನಷ್ಟೇ ಕೊಳ್ಳಬೇಕಾಗಿಲ್ಲ, ಕೊಳ್ಳಬಾರದು. ನಮ್ಮ ಜನ, ಓದುಬಲ್ಲವರು, ಓದುವ ಶಕ್ತಿಯನ್ನು ತಮ್ಮ ತಿಳುವಳಿಕೆಯನ್ನು ಬೆಳೆಸಿಕೊಳ್ಳುವುದಕ್ಕೂ, ವಿಚಾರಶಕ್ತಿಯನ್ನು ಬೆಳೆಸಿಕೊಳ್ಳುವುದಕ್ಕೂ ಬಳಸಬೇಕು. ಹೊಣೆಗಾರಿಕೆಯಿಂದ ಪ್ರಶ್ನಿಸುವ ಮನೋಧರ್ಮವನ್ನು ಬೆಳೆಸಿಕೊಳ್ಳಬೇಕು. ಆದುದರಿಂದ ಕೃಷಿ, ವೈದ್ಯಕೀಯ ಮೊದಲಾದ ಕ್ಷೇತ್ರಗಳ ಪುಸ್ತಕಗಳು ಅವರಿಗೆ ಅಗತ್ಯ. ಅನಂತರ ವಿಜ್ಞಾನ, ವೈಚಾರಿಕತೆ, ಪ್ರಜಾಪ್ರಭುತ್ವ ಇವುಗಳಿಗೆ ಗಮನ ನೀಡಬೇಕು. ಆದರೆ ಅಗತ್ಯವಾಗಿ ಒಳ್ಳೆಯ ಸಾಹಿತ್ಯ ಕೃತಿಗಳನ್ನು, ಕನ್ನಡ ನಾಡಿನ ಇತಿಹಾಸ-ಸಂಸ್ಕೃತಿಗಳಿಗೆ ಸಂಬಂಧಿಸಿದ ಕೃತಿಗಳನ್ನು ಕೊಳ್ಳಬೇಕು. ಗ್ರಂಥಾಲಯದಲ್ಲಿ ಸುಲಭವಾಗಿ ಪುಸ್ತಕಗಳನ್ನು ಬೇಕಾದವರು ಎರವಲು ಪಡೆಯಲು ವ್ಯವಸ್ಥೆ ಇರಬೇಕು. ಹೊಸ ಪುಸ್ತಕಗಳ ಸೇರ್ಪಡೆಯಾದಾಗ ಅವುಗಳ ಪಟ್ಟಿಯ ಒಂದು ಪ್ರತಿಯನ್ನು ನೋಟೀಸ್ ಬೋರ್ಡಿನ ಮೇಲೆ ಹಾಕಿ ಬಂದವರ ಕೈಗೆ ಸಿಕ್ಕುವಂತೆ ಎರಡು-ಮೂರು ಪ್ರತಿಗಳನ್ನು ಇಡಬೇಕು.

ಇನ್ನೊಂದು ಮಾತು-ನಮ್ಮ ಗ್ರಾಮೀಣ ಸಂಸ್ಕೃತಿಯ ಭಾಗಗಳಾದ ಹಾಡುಗಳು, ನೃತ್ಯಗಳು ಮೊದಲಾದವು ನಮ್ಮಿಂದ ದೂರವಾಗುತ್ತಿವೆ. ಕೆಲವು ಸಂದರ್ಭಗಳಲ್ಲಿ ಅವು ಬೆಳಕಿಗೆ ಬರುತ್ತವೆ. ಈ ಕಲೆಗಳು 'ಷೋಕೇಸ್'ನಲ್ಲಿ ಪ್ರದರ್ಶನಕ್ಕೆ ಅಂತ ಉಳಿಯಬಾರದು. ಅವು ಸಹಜವಾಗಿ ಉಳಿಯಲು ಸಾಧ್ಯವಾಗುವುದು ಹಳ್ಳಿಯ ಆವರಣದಲ್ಲಿ. ನಮ್ಮ ಗ್ರಾಮಗಳ ಜನತೆ ಇವನ್ನು ನಮ್ಮ ಬದುಕಿನ ಭಾಗವನ್ನಾಗಿ ಮಾಡಿಕೊಳ್ಳಬೇಕಾಗಿದೆ.

●




# ಸಾಹಿತ್ಯ ಪ್ರೇಮ

ಪ್ರೊ. ಹಿ. ಶಿ. ರಾಮಚಂದ್ರೇಗೌಡ

ಸಾಹಿತ್ಯ ಸಮಾಜದ ಉತ್ಪನ್ನಗಳಲ್ಲಿ ಒಂದು. ಇದು ಮುಖ್ಯ ಉತ್ಪನ್ನವೊ ಅಥವಾ ಉಪ ಉತ್ಪನ್ನವೊ ಎಂಬ ಪ್ರಶ್ನೆ ಕೇಳುವವರುಂಟು. ಈ ಪ್ರಶ್ನೆ ಯಾಕೆ ಹುಟ್ಟುತ್ತವೆ ಎಂದರೆ ಸಮಾಜ ಯಾವುದೋ ಒಂದು ಅಂಶದ ಮೇಲೆ ಒತ್ತುಕೊಟ್ಟಿದೆ ಎಂದು ತಿಳಿಯಬೇಕು. ಒಂದು ಸುಸಂಘಟಿತ ಮತ್ತು ಸಮಾಜಶೀಲ ಸಮೂಹದಲ್ಲಿ ಅದರ ಪ್ರತಿಯೊಂದು ಉತ್ಪನ್ನವೂ ಮುಖ್ಯವೆ. ರೊಟ್ಟಿ ಮಾಡಲು ಏನು ಮುಖ್ಯ ಎಂಬ ಪ್ರಶ್ನೆ ಕೇಳಿದರೆ ಗಾತ್ರಕ್ಕೆ ಮಹತ್ವ ಕೊಡುವವನಿಗೆ ಹಿಟ್ಟು ಮುಖ್ಯ ಎನಿಸುತ್ತದೆ. ನೀರಿಲ್ಲದೆ ರೊಟ್ಟಿ ಆಗಲು ಸಾಧ್ಯವಿಲ್ಲ ಆದ್ದರಿಂದ ಅದೇ ಮುಖ್ಯ, ಎನ್ನುವವನೂ ಇದ್ದಾನೆ. ರೊಟ್ಟಿಗೆ ಬಹಳ ಮುಖ್ಯವಾದುದು ಉಪ್ಪು ಎಂದು ಮತ್ತೊಬ್ಬ ಉಪ್ಪಿನ ಮಹತ್ವವನ್ನು ಎತ್ತಿ ಹಿಡಿಯುತ್ತಾನೆ. ಹಿಟ್ಟು, ನೀರು ಅಥವಾ ಉಪ್ಪು ಪ್ರತ್ಯೇಕವಾಗಿ ರೊಟ್ಟಿ ಎನಿಸಿಕೊಳ್ಳುವುದಿಲ್ಲ. ಅವು ಪ್ರತ್ಯೇಕವಾಗಿ ತಮ್ಮ ನೆಲೆಯಲ್ಲಿ ಮುಖ್ಯ ಆದರೆ ರೊಟ್ಟಿಯೊಳಗೆ ಸೇರಿಕೊಂಡಾಗ ಮುಖ್ಯದ ಪ್ರಶ್ನೆ ಬರುವುದಿಲ್ಲ. ನಿಸರ್ಗಜನ್ಯವಾದ ಈ ಅಂಗಗಳು ಪ್ರತ್ಯೇಕವಾಗಿ ತಮ್ಮ ಅಸ್ತಿತ್ವವನ್ನು ಪ್ರತಿಪಾದಿಸಿಕೊಳ್ಳಬಹುದು. ಸಂಸ್ಕೃತಿ ವಿಷಯ ಬಂದಾಗ ಅವು ಪ್ರತ್ಯೇಕ ನಿಲ್ಲಲಾರವು. ರೊಟ್ಟಿ ಎಂಬುದು ಸಂಸ್ಕೃತಿ ನಿರ್ಮಾಣ. ಇದೇ ಹಿಟ್ಟು, ನೀರು ಮತ್ತು ಉಪ್ಪಿನ ಸಂಯೋಗದಿಂದ ಮುದ್ದೆ, ಶ್ಯಾವಿಗೆ ಮೊದಲಾದ ಆಹಾರಗಳು ತಯಾರಾಗುತ್ತವೆ. ಅಲ್ಲಿಯೂ ತಯಾರಾದ ಆಹಾರ ರೂಪಗಳಿಗೆ ಮಾನ್ಯತೆಯೆ ಹೊರತು ಅದರೊಳಗೆ ಇರುವ ಘಟಕಗಳಿಗಲ್ಲ.

ಸಾಹಿತ್ಯ ಸಮಾಜದ ಇಂಥದೊಂದು ಸಂಘಟಿತ ರೂಪ. ರೊಟ್ಟಿ ಸಂಸ್ಕೃತಿ ಕಂಡುಕೊಂಡ ಒಂದು ಭೌತಿಕ ಮಾದರಿ. ಸಾಹಿತ್ಯ ಸಂಸ್ಕೃತಿ ಕಂಡುಕೊಂಡ ಒಂದು ಭಾವರೂಪ. ಸಂಸ್ಕೃತಿ ನಿರ್ಮಾಣದಲ್ಲಿ ಭಾವ ರೂಪಗಳಿಗೆ ವಿಶೇಷ ಮಾನ್ಯತೆ. ಈ ಭಾವ ವೃದ್ಧಿಗೊಂಡು ಅನೇಕ ಭಾವನೆಯ ರೂಪಗಳನ್ನು ನಿರ್ಮಿಸುತ್ತದೆ. ಸಂಸ್ಕೃತಿ ನೆಲೆ ನಿಂತಿರುವುದೆ ಭಾವನೆಗಳ ವಿವಿಧ ರೂಪ ಅಥವಾ ಮಾದರಿಗಳಲ್ಲಿ. ಸಾಹಿತ್ಯ ಸಂಸ್ಕೃತಿಯ ಅಂಥ ಭಾವನಾರೂಪಗಳಲ್ಲಿ ಹುಟ್ಟುತ್ತದೆ. ಅದು ಮಾತಿನ ಭಾಷೆ ಹಾಗೂ ಬರಹದ ಭಾಷೆ ಆಗಿರಬಹುದು. ಮಾತಿನ ಭಾಷೆ ಆಡುವ ರೀತಿಯಲ್ಲೂ ಬರಹದ ಭಾಷೆ ಬರೆವ ಚೌಕಟ್ಟಿನಲ್ಲೂ ತಮ್ಮನ್ನು ತೋರಿಸಿಕೊಳ್ಳುತ್ತವೆ.

> **ಯಾವುದೇ ಸಾಂಸ್ಕೃತಿಕ ಚಟುವಟಿಕೆಯಂತೆ ಸಾಹಿತ್ಯ ಕೂಡಾ ಸಮಾಜದ ಒಂದು ಚಟುವಟಿಕೆ. ಸಮಾಜದ ಒಂದು ಮಾದರಿಯ ಕ್ರಿಯಾಶೀಲತೆ ಸಾಹಿತ್ಯದ ಮೂಲಕ ಮಾನವನ ನಡವಳಿಕೆಯಾಗುತ್ತದೆ. ಆದುದರಿಂದ ಆರೋಗ್ಯವಂತ ಸಮಾಜ ಸಾಹಿತ್ಯ-ಸಂಸ್ಕೃತಿಯನ್ನು ಅವಿಭಾಜ್ಯ ಅಂಗವೆಂದು ಗಣಿಸಬೇಕು.**

ಹೀಗೆ ಇತರ ಯಾವುದೋ ಸಾಂಸ್ಕೃತಿಕ ಚಟುವಟಿಕೆಯಂತೆ ಸಾಹಿತ್ಯ ಕೂಡ ಸಮಾಜದ ಒಂದು ಚಟುವಟಿಕೆ. ಸಮಾಜದ ಒಂದು ಮಾದರಿಯ ಕ್ರಿಯಾಶೀಲತೆ ಸಾಹಿತ್ಯದ ಮೂಲಕ ಮಾನವನ ನಡವಳಿಕೆಯಾಗುತ್ತದೆ. ಆದ್ದರಿಂದ ಒಂದು ಆರೋಗ್ಯವಂತ ಸಮಾಜ ಸಾಹಿತ್ಯವನ್ನು ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ಗಣಿಸಬೇಕು. ಸಾಹಿತ್ಯ ಬರಹಕ್ಕೆ ಬಂದಾಗ ಸಂಕೋಚಗೊಳ್ಳುತ್ತದೆ. ಹಾಗೆಯೇ ಒಂದು ಸಮಾಜದಲ್ಲಿ ವಸ್ತುಗಳನ್ನು ಕೊಳ್ಳುವ ಮತ್ತು

ಮಾರುವ ಚಟುವಟಿಕೆಯ ಅಭಿವೃದ್ಧಿ ಎನಿಸಿದಾಗ ಅದು ಉಪ್ಪಿಲ್ಲದ ರೊಟ್ಟಿಯಂತಾಗುತ್ತದೆ. ಆಧುನಿಕ ಜಗತ್ತು ಹೀಗೆ ಸಾಹಿತ್ಯದ ರುಚಿಯನ್ನು ಕಳೆದುಕೊಂಡು ಬೆಂಡಾಗುತ್ತದೆ.

ಗ್ರಾಮೀಣ ಪ್ರದೇಶದ ಸಾಹಿತ್ಯ ಗ್ರಾಮಸಾಹಿತ್ಯವೇ ಆಗಿತ್ತು. ಅದು ಸದಾ ಅವರ ಜೀವನ ಚಟುವಟಿಕೆಯ ಭಾಗವಾಗಿತ್ತು. ಈಗಲೂ ಜನಪದ ಸಾಹಿತ್ಯ ಅವರ ಜೀವನವನ್ನು ಒಂದಲ್ಲ ಒಂದು ದೃಷ್ಟಿಯಲ್ಲಿ ನಿರ್ವಹಿಸುತ್ತಿದೆ. ಜನಪದ ಸಾಹಿತ್ಯ ಪ್ರಕಾರಗಳನ್ನು ಗಮನಿಸಿದರೆ ಅವು ನಿರ್ವಹಿಸಿರುವ ಸಾಮಾಜಿಕ ಹೊಣೆಗಾರಿಕೆ ಅಪರಿಮಿತವಾದುದು ಎಂಬುದು ಗೊತ್ತಾಗುತ್ತದೆ. ಇದೆಲ್ಲ ಒಂದೊಂದು ಕಾಲದ ಸಾಮಾಜಿಕ ಚಟುವಟಿಕೆಯ ಒಂದೊಂದು ಪ್ರಮುಖ ದಾಖಲೆ ಎನ್ನಬಹುದು.

ಗ್ರಾಮೀಣ ಸಾಹಿತ್ಯ ತನಗೆ ತಾನೇ ಪ್ರಗತಿಪರ ಅಲ್ಲ. ಪ್ರಗತಿಪರ ಮತ್ತು ಅಭಿವೃದ್ಧಿ ಎಂಬ ಈ ಹೊತ್ತಿನ ಪರಿಕಲ್ಪನೆಗಳು ಸಮತೂಕದ ಯೋಜನೆಗಳಲ್ಲ. ಅವು ಮನುಷ್ಯನ ಬೌದ್ಧಿಕ ಸುಖವನ್ನು ಹೆಚ್ಚಿಸುವ ಯೋಜನೆಗಳೇ ಹೊರತು ಮಾನವನ ಸರ್ವಾಂಗೀಣ ಅಭಿವೃದ್ಧಿಯ ಯೋಜನೆಗಳಲ್ಲ. ಗ್ರಾಮೀಣ ಸಾಹಿತ್ಯದಿಂದ ಈ ಬಗೆಯ ಕಾರ್ಯವನ್ನು ನಿರೀಕ್ಷಿಸಲಾಗದು. ಈಗಿನ ಅಭಿವೃದ್ಧಿ ಚಿಂತನೆ ಪ್ರತಿಯೊಂದು ಸಾಂಸ್ಕೃತಿಕ ಭಾವನೆಯ ಪಕ್ಕಕ್ಕೆ ಒಂದು ವಸ್ತುವನ್ನು ಇಟ್ಟು ಭಾವನೆಯನ್ನು ನಾಶಮಾಡುತ್ತಿದೆ. ಅಥವಾ ಭಾವನೆಗೆ ವಸ್ತುವನ್ನು ಪರ್ಯಾಯಗೊಳಿಸುತ್ತಿದೆ ಎನ್ನಬಹುದು. ರಾವಣನಿಗೆ ತಲೆನೋವು ಬಂದು ಕಂಪನಿಯೊಂದರ ನಿರ್ದಿಷ್ಟ ಮಾತ್ರೆಯನ್ನು ತೆಗೆದುಕೊಂಡು ಖುಷಿಯಾಗುವುದನ್ನು ಇಲ್ಲಿ ಹೆಸರಿಸಬಹುದು.

ಸಾಹಿತ್ಯದಲ್ಲಿ ಅಭಿವೃದ್ಧಿಗಾಗಿ ಇರುವ ಸಾಹಿತ್ಯ ಬಹಳ ತಾತ್ಕಾಲಿಕವಾದುದು. ಈ ಸಾಹಿತ್ಯ ಮಧ್ಯವರ್ತಿ ಸಾಹಿತ್ಯವೇ ಹೊರತು ನೆಲೆನಿಂತ ಸಾಹಿತ್ಯ ಅಲ್ಲ. ಸಾಹಿತ್ಯ ಸಾಂಸ್ಕೃತಿಕ ಜವಾಬ್ದಾರಿಯನ್ನು ಇಟ್ಟುಕೊಂಡು ಸಮಕಾಲೀನ ಸಮಾಜದ ಜೊತೆಗೆ ಮುಖಾಮುಖಿಯಾಗುತ್ತಾ ಹೋಗುತ್ತದೆ. ಒಟ್ಟು ಸಮಾಜದಲ್ಲಿ ಆದ ಬದಲಾವಣೆಯ ಜೊತೆಗೆ ಅದರ ಅಭಿವ್ಯಕ್ತಿ ಮತ್ತು ರೂಪದಲ್ಲಿ ಹೊಸ ನೆಲೆಯನ್ನು ಕಂಡುಕೊಳ್ಳುತ್ತದೆ. ನನಗೆ ಅನಿಸುವ ಹಾಗೆ ಸಾಹಿತ್ಯ ಸಾಮಾಜಿಕದ ಸ್ವಾರ್ಥವನ್ನು ಉಳಿಸಿಕೊಡುವ ಒಂದು ಕ್ರಿಯಾಶೀಲ ಚಿಂತನೆ.

ಗ್ರಾಮೀಣ ಸಾಹಿತ್ಯ ಬಹುಕಾಲದಿಂದ ಆ ಸಮಾಜದ ರಕ್ಷಣೆ ಮಾಡಿಕೊಂಡು ಬಂದಿದೆ. ಅನಪೇಕ್ಷಿತವಾದುದರ ಬಗ್ಗೆ ಸಿಟ್ಟು ಮತ್ತು ಆಕ್ರೋಶವನ್ನು ವ್ಯಕ್ತ ಪಡಿಸಿದೆ. ಒಂದು ರೀತಿಯಲ್ಲಿ ಅದರದು ಸಾತ್ವಿಕ ಪ್ರತಿಭಟನೆ. ನಮ್ಮ ಬಹುತೇಕ ಕಥನ ಗೀತೆಗಳು ಇದಕ್ಕೆ ಸಾಕ್ಷಿ. ಆದರೆ ಬಿಡಿ ಜನಪದ ಸಾಹಿತ್ಯದಲ್ಲಿ ಹೆಚ್ಚಿನದು ವ್ಯವಸ್ಥೆಯನ್ನು ಸಮರ್ಥಿಸುತ್ತದೆ. ಇರುವುದನ್ನು ಮತ್ತು ಬರುವುದನ್ನು ಹೇಗೆ ಸಹಿಸಿಕೊಳ್ಳಬೇಕು ಎಂದು ತೋರಿಸಿಕೊಡುತ್ತದೆ. ಬಹುಶಃ ಮುಂದೆ ಬರಬಹುದಾದ ಜಾಗತೀಕರಣದ ದುರಂತಗಳಿಗೆ ಪರಿಹಾರಗಳನ್ನು ಅದು ಸೂಚಿಸಬಹುದು. ನಮ್ಮ ಗ್ರಾಮೀಣ ಸಮಾಜದ ಹೆಣ್ಣುಮಕ್ಕಳು ಜೀವನದಲ್ಲಿ ಆಸೆ ಇಟ್ಟುಕೊಂಡು ಉಳಿದಿದ್ದರೆ ಅದು ಅವರೇ ಹುಟ್ಟಿಸಿ-ಕಟ್ಟಿಕೊಂಡ ಸಾಹಿತ್ಯದಿಂದ. ಇಲ್ಲದಿದ್ದ ಪಕ್ಷದಲ್ಲಿ ಸಾಮಂತಶಾಹಿ ಸಾಂಸ್ಕೃತಿಕ ಮೌಲ್ಯಗಳಿಗೆ ಪ್ರತಿರೋಧ ವ್ಯಕ್ತಪಡಿಸಿದ್ದರೆ ಅವರೆಲ್ಲ ಜೀವಂತ ಸಮಾಧಿಯಲ್ಲಿ ಇರುತ್ತಿದ್ದರು. ಜನಪದ ಸಾಹಿತ್ಯ ಮತ್ತು ಅದರೊಡನೆ ಅವಿಭಾಜ್ಯವಾಗಿ ಸೇರಿಕೊಂಡಿರುವ ಸಂಗೀತ ಅವರ ಮನಸ್ಸನ್ನು ಉಳಿಸಿಕೊಟ್ಟಿವೆ.

ಈಗ ಜನಪದ ಸಾಹಿತ್ಯ ಮತ್ತು ಸಂಗೀತವನ್ನು ವಿಶೇಷವಾಗಿ ನಗರ ಸಂಸ್ಕೃತಿಗೆ ತಂದು ಬೆಳೆಸಿಕೊಳ್ಳಬಹುದು. ಮಾನಸಿಕವಾಗಿ ಅನೇಕ ರೀತಿಯ ಒತ್ತಡಗಳಿಗೆ ಒಳಗಾಗಿರುವ ಜನರು ಜನಪದ ಗೀತೆ ಮತ್ತು ಸಂಗೀತವನ್ನು ಕಲಿಯುವ ಮತ್ತು ಪ್ರಯೋಗಿಸುವ ಮೂಲಕ ತಮ್ಮ ಒತ್ತಡಗಳನ್ನು ತಹಬಂದಿಗೆ ತರಬಹುದು. ಮಾನವ ಸಂಬಂಧಗಳ ಅರಿವಿನ ದೃಷ್ಟಿಯಿಂದಲೂ ಈ ಗೀತೆಗಳು ಅನುಕೂಲಕ್ಕೆ ಬರುತ್ತವೆ.

ಜನಪದ ಸಾಹಿತ್ಯ ಎಲ್ಲರ ಸಾಹಿತ್ಯ. ಎಲ್ಲ ಜಾತಿ, ಮತ, ಪಂಗಡ, ಪಂಥ ಹಾಗೂ ಧರ್ಮಗಳಲ್ಲಿ ಜನಪದ ಸಾಹಿತ್ಯವಿದೆ. ಈ ಸಾಹಿತ್ಯದ ಒಳಗೆ ಒಂದು ನಿರಂತರ ಸಂಸ್ಕೃತಿ ಇದೆ. ಇದನ್ನು ಮಾನವ ಅಭಿವೃದ್ಧಿಯಲ್ಲಿ ಎಂದರೆ, ಸಹಬಾಳ್ವೆಗಾಗಿ ಸಂಸ್ಕೃತಿ ಎಂಬ ತತ್ವದ ನೆಲೆಯಲ್ಲಿ ತಿಳಿಯಬಹುದಾಗಿದೆ. ಈ ಸಾಹಿತ್ಯದ ಒಳಗೆ ಜಾತಿಯ ತಾರತಮ್ಯ ತತ್ವಗಳು ಮತ್ತು ಪ್ರಗತಿಯನ್ನು ಹತ್ತಿಕ್ಕುವ ಸ್ತಬ್ಧತೆಗಳು ಇವೆ ಎಂದು ಹೇಳುವವರಿದ್ದಾರೆ. ಅಂಥವನ್ನು ಬದಿರಿಗಿಸಬಹುದು. ಮೂಲದಲ್ಲಿ ಜನರ ಮಧ್ಯೆ ಸಾಹಿತ್ಯ ಹುಟ್ಟಿದ್ದೇ ಮನುಷ್ಯನ ರಾಕ್ಷಸತ್ವವನ್ನು ಕಡಿಮೆ ಮಾಡಲು. ಹಾಗೆಯೇ ಸಮಾಜದ ಅಸ್ತಿತ್ವ ಸಾಧ್ಯವಾಗುವುದೇ ಜನಪದ ನಂಬಿಕೆಯೊಂದರಿಂದ. ಒಂದಾಗುವ ತತ್ವವಿದ್ದರೆ ಅದು ಜನಪದ ಸಂಸ್ಕೃತಿಯೊಳಗೆ. ಒಡೆದುಕೊಳ್ಳುವ ತತ್ವವಾದರೆ ಅದು ನಗರದ ಸಂಸ್ಕೃತಿಯಲ್ಲಿ.

ಜನರನ್ನು ಸಹಜೀವನ, ಹೊಂದಾಣಿಕೆ, ವ್ಯವಹಾರ, ಮನೋವಿಕಾಸ ಜೀವನಕ್ಕೆ ಒಳಪಡಿಸಲು ಜನಪದ ಸಂಸ್ಕೃತಿಯ ಅನೇಕ ಅಂಶಗಳನ್ನು ಬಳಸಿಕೊಳ್ಳಬಹುದು. ಇದಕ್ಕಾಗಿ ಸಂಘ ಸಂಸ್ಥೆಗಳು ಅದರಲ್ಲೂ ಮುಖ್ಯವಾಗಿ ಈ ಸಮಾಜ ಸಮಸಂಸ್ಕೃತಿ ಮತ್ತು ಸಹಬಾಳ್ವೆಯ ನೆಲೆಯಲ್ಲಿ ಹೋಗಲೇಬೇಕೆಂದು ಬಯಸುವ ತತ್ವ ಚಿಂತಕರು, ರಾಜಕೀಯ ಧುರೀಣರು ಜನಪದ ಸಾಹಿತ್ಯ ಸಂಗೀತದ ಮೂಲಕ ಜೀವ-ಜೀವನಪರವಾದ ಹೊಸ ಸಮಾಜದ ನಿರ್ಮಾಣಕ್ಕೆ ಪ್ರಯತ್ನಿಸಬಹುದು.

●




# ವೈಜ್ಞಾನಿಕ ಚಿಂತನೆ

ಜಿ. ಟಿ. ನಾರಾಯಣರಾವ್

## ವೈಜ್ಞಾನಿಕ ಚಿಂತನೆ ಎಂದರೇನು?

ವಿಜ್ಞಾನದ ಯಾವುದೇ ಪ್ರಕಾರ ಬೆಳೆದುಬಂದಿರುವ ಪರಿಯನ್ನು ಚಿಕಿತ್ಸಕವಾಗಿ ಪರಿಶೀಲಿಸೋಣ. 'ಕುತೂಹಲ' ಅದನ್ನು ಪ್ರೇರಿಸುತ್ತದೆ ಮತ್ತು 'ಕಾರ್ಯ-ಕಾರಣ' ಸಂಬಂಧಸ್ಥಾಪನೆಯ ಹಂಬಲ ಅದರ ಪಥವನ್ನು ನಿರ್ಧರಿಸುತ್ತದೆ ಎಂಬ ಮೂಲಭೂತ ಸೂತ್ರ ತಿಳಿಯುವುದು. ಉದಾಹರಣೆಗೆ ತೊಟ್ಟು ಕಳಚಿದ ಹಣ್ಣು ಮರದಿಂದ ಕೆಳಕ್ಕೆ ಬೀಳುವ 'ಕಾರ್ಯ' ನಮಗೆ ಕಾಣುತ್ತದೆ ಮತ್ತು ನಮ್ಮಲ್ಲಿ ಕುತೂಹಲವನ್ನು ಕುದುರಿಸುತ್ತದೆ. ಈ ವಿಶಿಷ್ಟ 'ಕಾರ್ಯ'ದ ಹಿನ್ನೆಲೆ 'ಕಾರಣ' ಏನೆಂದು ಮನಸ್ಸು ಯೋಚಿಸತೊಡಗುವುದು. ಶತಮಾನ ಪರ್ಯಂತ ಮಹಾಮಹಾ ಧೀಮಂತರು ಮಾಡಿದ ವೀಕ್ಷಣೆ, ಗಣನೆ, ತಪಾಸಣೆ ಮತ್ತು ಚಿಂತನೆಗಳ ಫಲವಾಗಿ ಅದು ('ಕಾರಣ') ವಿಶ್ವಗುರುತ್ವಾಕರ್ಷಣ ಬಲ (ಸಂಕ್ಷೇಪವಾಗಿ 'ಗುರುತ್ವ') ಎಂಬ ನೈಸರ್ಗಿಕ ತಥ್ಯ ಬೆಳಕಿಗೆ ಬಂದಿತು. (೧೬೬೫-೬೬) ಈ ಮೂಲಭೂತ ತತ್ತ್ವವನ್ನು ಆವಿಷ್ಕರಿಸಿದಾತ ಐಸಾಕ್ ನ್ಯೂಟನ್ (೧೬೪೨-೧೭೦೭).

ವಿಶ್ವದ ಸಮಸ್ತ ವಸ್ತುಗಳೂ ಗುರುತ್ವಬಂಧಿತವಾಗಿವೆ. ವಸ್ತುವಿನ ಸಹಜ ಗುಣ ಗುರುತ್ವಾಕರ್ಷಣೆ - ಇತರ ವಸ್ತುಗಳನ್ನು ತನ್ನತ್ತ ಸೆಳೆಯುವ ಭೌತಬಲ. ಪ್ರತಿ ಎರಡು ವಸ್ತುಗಳ ನಡುವೆ ವರ್ತಿಸುವ ಇದರ ಪ್ರಮಾಣವನ್ನು ಅಳೆಯಲು ಗಣಿತಸೂತ್ರವಿದೆ. ತೊಟ್ಟು ತುಂಡಾದ ಹಣ್ಣು ಮತ್ತು ಕೆಳಗಿನ ಭೂಮಿ ಪರಸ್ಪರ ಆಕರ್ಷಿಸುತ್ತವೆ. ಇದೊಂದು ಹಗ್ಗಜಗ್ಗಾಟ. ಇದರಲ್ಲಿ 'ಅಲ್ಪಬಲಿ' ಹಣ್ಣು 'ಅತಿಬಲಿ' ಭೂಮಿಗೆ ಶರಣಾಗಿ ಇದರತ್ತ ಕೆಡೆಯುತ್ತದೆ. ಹೀಗಾಗಬೇಕಾದದ್ದು ನಿಸರ್ಗದ ಒಂದು ವಿಧಿ-ಅತಿಬಲಿಗೆ ಅಲ್ಪಬಲಿಯ ಶರಣಾಗತಿ!

> **ಇಂದು ವೈಜ್ಞಾನಿಕತೆಯ ಅಭಾವದಲ್ಲಿ ಹಳ್ಳಿಗಳು ಮೌಢ್ಯ, ಅವೈಚಾರಿಕತೆ, ಅಂಧಾನುಕರಣೆ, ಮುಂತಾದವುಗಳಿಂದ ನಶಿಸುತ್ತಿವೆ. ಗ್ರಾಮಾಭಿವೃದ್ಧಿಯ ಯೋಜನೆಗಳು ಗ್ರಾಮೀಣ ಜೀವನದ ವಿನಾಶಕಗಳಾಗಿ ಸಮಗ್ರ ರಾಷ್ಟ್ರವನ್ನು ಶೋಷಿಸುತ್ತಿವೆ.**

ಉದಾಹರಣೆಗೆ ಸೂರ್ಯ-ಭೂಮಿ ಸಂಬಂಧ. ಇಲ್ಲಿ ಸೂರ್ಯ ಅತಿಬಲಿ, ಭೂಮಿ ಅಲ್ಪಬಲಿ. ಆದ್ದರಿಂದ ನಿಜಕ್ಕೂ ಭೂಮಿ ಸೂರ್ಯನ ಮೇಲೆ ಬಿದ್ದುಹೋಗಬೇಕು. ಆದರೆ ವಾಸ್ತವದಲ್ಲಿ ಹೀಗಾಗುವುದಿಲ್ಲ. ಸೂರ್ಯ-ಭೂಮಿ ಅಂತರ ಅಗಾಧವಾಗಿರುವುದೇ ಇದರ ಕಾರಣ. ಹೀಗಾಗಿ ಭೂಮಿ ಸದಾ ಸೂರ್ಯನ ಸುತ್ತ ಪರಿಭ್ರಮಿಸುತ್ತಿರಬೇಕಾಗಿದೆ- ಕೆಳಕ್ಕೆ ಬೀಳಲಾರದು, ಹೊರಕ್ಕೆ ಸಿಡಿಯಲೂ ಆರದು! ಈ ಎಲ್ಲ ವಿವರಗಳನ್ನೂ ನ್ಯೂಟನ್ ನೀಡಿದ ಗಣಿತ ಸೂತ್ರಗಳ ನೆರವಿನಿಂದ ಶೋಧಿಸಿ ಪ್ರತ್ಯಕ್ಷ ಪರಿಶೀಲಿಸುವುದು ಸಾಧ್ಯವಿದೆ.

ಆದ್ದರಿಂದ ಆಧಾರರಹಿತ ವಸ್ತು ಕೆಳಕ್ಕೆ ಬೀಳುವುದರ (ಇದು 'ಕಾರ್ಯ') 'ಕಾರಣ' ಗುರುತ್ವವೆಂದಾಯಿತು. ಮುಂದಿನ ಪ್ರಶ್ನೆ: ಯಾವುದೇ 'ಕಾರಣ'ದ ಫಲವಾಗಿ ಒಂದು 'ಕಾರ್ಯ' ಜರಗುವುದೇ? ಉತ್ತರ ಹೌದು. ಉದಾಹರಣೆಗೆ ಸೋಂಕಿನ 'ಕಾರಣ'ವಾಗಿ ರೋಗ (ಇದು 'ಕಾರ್ಯ') ಉಂಟಾಗುತ್ತದೆ. ಬೀಜ ಎಂಬ 'ಕಾರಣ'ದ 'ಕಾರ್ಯ' ಮೊಳಕೆಯೊಡೆವ ಸಸಿ. ಒಟ್ಟಾಗಿ ಹೇಳುವುದಾದರೆ ಪ್ರತಿಯೊಂದು ನೈಸರ್ಗಿಕ ಘಟನೆ ಅಥವಾ ಕ್ರಿಯೆಯ ತಳದಲ್ಲಿ ಕಾರ್ಯ-ಕಾರಣ ಸಂಬಂಧವನ್ನು ಗುರುತಿಸಬಹುದು. ಆದ್ದರಿಂದ ಕಾರ್ಯರಹಿತ ಕಾರಣವಿಲ್ಲ. ಕಾರಣರಹಿತ ಕಾರ್ಯವೂ ಇಲ್ಲ.

ಯಾವುದೇ ಘಟನೆ ಕುರಿತಂತೆ ಕಾರ್ಯ-ಕಾರಣ ಕೊಂಡಿಯನ್ನು ಪತ್ತೆ ಹಚ್ಚಿದಾಗ ನಮ್ಮೊಳಗೆ ಮಿನುಗುವ ಅರಿವಿಗೆ ವಿಜ್ಞಾನ ಎಂದು ಹೆಸರು. ವಿಶೇಷವಾದ ಜ್ಞಾನ ಎಂದರ್ಥ. ಇದರ ಮೂಲ ನಿಸರ್ಗ. ಮಾನವಮತಿಯಲ್ಲಿ ಏಳುವ ಕುತೂಹಲವೇ ಪ್ರೇರಕ. ಫಲವಾಗಿ ವಿಜ್ಞಾನಕಾರ್ಯ ಜರುಗುತ್ತದೆ. ಈ ಪ್ರಕ್ರಿಯೆಯಲ್ಲಿ ಆರು ನಿರ್ದಿಷ್ಟ ಉತ್ತರೋತ್ತರ ಹಂತಗಳನ್ನು ಗುರುತಿಸಬಹುದು.

೧. ಸಮಸ್ಯಾ ನಿರೂಪಣೆ: ಏನನ್ನು ಶೋಧಿಸುವುದು ನಮ್ಮ ಉದ್ದೇಶ ಎಂಬುದರ ಬಗ್ಗೆ ಸ್ಪಷ್ಟ ಕಲ್ಪನೆ ಇರಬೇಕು.

೨. ಮಾಹಿತಿ ಸಂಗ್ರಹಣೆ: ಸಮಸ್ಯೆ ಕುರಿತಂತೆ ಉಪಯುಕ್ತವೆಂದು ತೋರುವ ಮಾಹಿತಿಗಳನ್ನು ಕಲೆಹಾಕಬೇಕು.

೩. ಮಾಹಿತಿ ವಿಶ್ಲೇಷಣೆ: ಸಂಗ್ರಹಿತ ಮಾಹಿತಿಗಳನ್ನು ವ್ಯವಸ್ಥಿತವಾಗಿ ಅಳವಡಿಸಬೇಕು. ಇಲ್ಲಿ ಅನುಸರಿಸಬೇಕಾದ ವಿಧಾನವನ್ನು ಸಮಸ್ಯೆ-ಮಾಹಿತಿ ಸಂಬಂಧವೇ ಸೂಚಿಸುತ್ತದೆ.

೪. ವಾದರೂಪಣೆ: ಸಮಸ್ಯೆ-ವಿಶ್ಲೇಷಿತ ಮಾಹಿತಿ ಸಂಬಂಧದೊಳಗೆ ಹುದುಗಿರಬಹುದಾದ ಒಂದು ಅಮೂರ್ತ ಅಸ್ಪಷ್ಟ ಚಿತ್ರವಿದು -ಅನ್ವೇಷಕನ ಪ್ರತಿಭೆಯ ಅಥವಾ ಕಲ್ಪನೆಯ ಶಿಶು.

೫. ಪ್ರಾಯೋಗಿಕ ತಪಾಸಣೆ: ಈ 'ವಾದ'ವನ್ನು 'ಸಮಸ್ಯೆ'ಗೆ ಪ್ರಾಯೋಗಿಕವಾಗಿ ಅನ್ವಯಿಸಿ ಇವುಗಳ ಕೀಲಿ-ಬೀಗ ನಿಕಟತೆಯನ್ನು ಸ್ಥಾಪಿಸಬೇಕು. ಅಂದರೆ 'ವಾದ'ದ ಸಾಧುತ್ವವನ್ನು ದೃಢೀಕರಿಸಬೇಕು. ಇದು ಸಿದ್ಧಿಸುವ ತನಕವೂ ಮೇಲಿನ ನಾಲ್ಕು ಹಂತಗಳನ್ನೂ ಪುನರಾವರ್ತಿಸುತ್ತ, ವಿವಿಧ ಸಾಧ್ಯ ವಾದಗಳನ್ನು ರೂಪಿಸುತ್ತ, ಮುನ್ನಡೆಯಬೇಕು. ಪ್ರಯೋಗದ ನಿಕಷದಲ್ಲಿ ಉತ್ತೀರ್ಣವಾದದ್ದನ್ನು 'ಸಿದ್ಧಾಂತ' ಎನ್ನುತ್ತೇವೆ. ವಿಫಲ ವಾದಗಳೆಲ್ಲವೂ ಸಫಲ ಸಿದ್ಧಾಂತದೆಡೆಗಿನ ಸೋಪಾನಗಳು.

೬. ಸಿದ್ಧಾಂತ ಮಂಡನೆ: ನಾವು ಎತ್ತಿಕೊಂಡ ಸಮಸ್ಯೆಗೆ ಇಂದಿನ ತಿಳಿವಳಿಕೆ ಪ್ರಕಾರ ನಮಗೆ ಲಭಿಸಿರುವ ಪರಿಹಾರವಿದು.

ಸಮಸ್ಯೆಯಿಂದ ಸಿದ್ದಾಂತದೆಡೆಗಿನ ಪಥಗಮನದಲ್ಲಿ ವರ್ತಮಾನ ಜ್ಞಾನದ ಪಾತ್ರ ನಿರ್ಣಾಯಕ:

ಸಂದೇಹವೀ ಕೃತಿಯೊಳಿನ್ನಿಲ್ಲವೆಂದಲ್ಲ
ಇಂದು ನಂಬಿದುದೆ ಮುಂದೆಂದುಮೆಂದಲ್ಲ
ಕುಂದು ತೋರ್ದಂದದನು ತಿದ್ದಿಕೊಳೆ ಮನವುಂಟು
ಇಂದಿಗೀ ಮತವುಚಿತ ಮಂಕುತಿಮ್ಮ

ಸಮಸ್ಯೆ-ಸಿದ್ಧಾಂತ ಅಥವಾ ಬೀಗ-ಕೀಲಿ ಅನ್ಯೋನ್ಯತೆ ಸ್ಥಾಪಿತವಾದಾಗ ನಾವು ವಿಜ್ಞಾನಕಾರ್ಯ ಮಾಡಿರುತ್ತೇವೆ. ಆದ್ದರಿಂದ ವಿಜ್ಞಾನ ಎಂದರೆ ಭೌತವಿಶ್ವದೊಂದಿಗೆ ಮಾನವನ ಕುತೂಹಲಾವಿಷ್ಟ ಮತಿ ಕಾರ್ಯ-ಕಾರಣ ಪಾತಳಿಯಲ್ಲಿ ನಡೆಸುವ ಅಂತರಕ್ರಿಯೆಯ ಫಲವಾಗಿ ಸಿದ್ಧಿಸುವ ಅರಿವು. ವಿಶ್ವದ ಅಸಂಖ್ಯ ವೈವಿಧ್ಯಗಳ ಪೈಕಿ ಯಾವ ನಿರ್ದಿಷ್ಟ ವಿಷಯ ನಮ್ಮ ಅನ್ವೇಷಣೆಗೆ ವಸ್ತು ಎಂಬುದನ್ನು ಅವಲಂಬಿಸಿ ವಿಜ್ಞಾನದ ಶಾಖೆಗಳು ಮೈದಳೆಯುತ್ತವೆ. ಮೂಲ ಒಂದೇ. ನಿರ್ದಿಷ್ಟ ಹಂತವೊಂದರವರೆಗೆ ಕಾಂಡವೂ ಒಂದೇ. ಅಲ್ಲಿಂದ ಮುಂದೆ ಕೊಂಬೆರೆಂಬೆಗಳು ಟಿಸಿಲೊಡೆದು ವಿಜ್ಞಾನದ ವಿಭಾಗಗಳು ಆಗಮಿಸಿ ಪ್ರವರ್ಧಿಸುತ್ತವೆ ಮತ್ತು ಪರಸ್ಪರ ಪೂರಕಪೋಷಕಗಳಾಗಿ ಅಭಿವರ್ಧಿಸುತ್ತವೆ.

ಅನ್ವೇಷಕ ತುಳಿಯುವ ಹಾದಿಗೆ ವೈಜ್ಞಾನಿಕ ವಿಧಾನ ಅಥವಾ ಪಥ ಎಂದು ಹೆಸರು. ಈ ಪಥ ಗಮಿಸುತ್ತಿರುವಾಗ ಆತ ವೈಜ್ಞಾನಿಕ ಚಿಂತನೆಯಲ್ಲಿ ಮಗ್ನನಾಗಿರುತ್ತಾನೆ. ಆಗ ಆತನ ಮನಸ್ಸು ತಳೆಯುವ ಸ್ಥಿತಿಗೆ ವೈಜ್ಞಾನಿಕ ಮನೋಧರ್ಮ (ಸಂಕ್ಷೇಪವಾಗಿ ವೈಜ್ಞಾನಿಕತೆ)

ಎಂದು ಹೆಸರು. ಪೂರ್ವಭಾವೀ ನಿರ್ಧರಿತ ಪಥವಿದೆಯೇ? ಚಂದ್ರಲೋಕಕ್ಕೆ ಸಿದ್ಧ ಮಾರ್ಗವಿರಲಿಲ್ಲ, ತನ್ನ ಸತತ ಪ್ರಯತ್ನದಿಂದ ಅದನ್ನು ನಿರ್ಮಿಸುವುದರಲ್ಲಿ ಮಾನವ ಕೊನೆಗೂ ಯಶಸ್ವಿಯಾದ (೧೯೬೯).

ದಾರಿಗಾ! ಪಥ ದತ್ತವಾಗಿಲ್ಲ, ನೀ ನಡೆದು
ದೂರ ಗಮಿಸಲುಬೇಕು, ಗುರಿ-ನಡಿಗೆ ನೇರವಿರೆ
ಬಾರಿಬಾರಿಗು ಪೀಡಿಸುವ ಕಂಟಕಗಳನು ನಿ-
ವಾರಿಸುತ ಸಾಗುತಿರ್ಪೆಯೊ ಸದಾ ಅತ್ರಿಸೂನು

## ವೈಜ್ಞಾನಿಕತೆಯ ವ್ಯಾಪ್ತಿ :

ಜೀವನ ಸರ್ವಂಕಷವಾದದ್ದು. ಕಲೆ, ವಿಜ್ಞಾನ, ಸಾಹಿತ್ಯ, ವೇದಾಂತ ಮುಂತಾದ ಸಮಸ್ತ ಮಾನವ ಚಿಂತನ ಪ್ರಕಾರಗಳ ಮೊತ್ತವಿದು. ಈ ಒಂದೊಂದರಲ್ಲಿಯೂ ಜ್ಞಾನ ದಿಗಂತವನ್ನು ವಿಸ್ತರಿಸಲು ಮಾನವ ಆಯಾ ಪ್ರಕಾರಕ್ಕೆ ವಿಶಿಷ್ಟವಾಗುವ ವಿಧಾನವನ್ನು ರೂಪಿಸುತ್ತ ಬಂದಿದ್ದಾನೆ. ಇದೊಂದು ನಿರಂತರ ಪರಿವ್ರಜನ. ಇಂಥ ಎಲ್ಲ ವಿಧಾನಗಳ ತಳರೂಪಿಕೆಗಳಲ್ಲಿಯೂ ವೈಜ್ಞಾನಿಕ ವಿಧಾನ, ಆದ್ದರಿಂದ ವೈಜ್ಞಾನಿಕತೆ ಅನುರಣಿಸುತ್ತಿರಬೇಕಾದದ್ದು ಅಗತ್ಯ. ಜ್ಞಾನ ವಿಜ್ಞಾನ ಪ್ರಕಾರಗಳೆಲ್ಲವೂ ಏಕ ಮೂಲದಿಂದ ಜನಿಸಿದವಾಗಿರುವುದೇ ಇದರ ಕಾರಣ.

ಗುರಿ ಯಾವುದೇ ಇರಲಿ-ಭೌತವಿಶ್ವದ ಒಂದು ಸಮಸ್ಯಾ ಪರಿಹಾರ, ಕಲಾ ಪ್ರಪಂಚದಲ್ಲಿ ನವಶೈಲಿಯ ಆವಿಷ್ಕಾರ, ಆಧ್ಯಾತ್ಮಿಕ ಔನ್ನತ್ಯಗಳಲ್ಲಿ ಭಾವ-ಜೀವ ಅನ್ಯೋನ್ಯತೆ ಕುರಿತ ಜಿಜ್ಞಾಸೆ, ವೇದಾಂತ ಮಾರ್ಗದಲ್ಲಿ ನಶ್ವರೇಶ್ವರ ಸಂಬಂಧದ ಬಗೆಗಿನ ಅಧ್ಯಯನ, ಇತ್ಯಾದಿ-ಅದನ್ನು ಅರಸಲು ನಾವು ವೈಜ್ಞಾನಿಕ ವಿಧಾನ ಅನುಸರಿಸಿದ್ದಾದರೆ ನಮ್ಮ ಎಲ್ಲ ಧೋರಣೆಗಳೂ ಜ್ಞೇಯನಿಷ್ಠ (ವಸ್ತುನಿಷ್ಠ) ಆಗಿರುವುವು, ಎಂದೂ ಜ್ಞಾತೃನಿಷ್ಠ (ವ್ಯಕ್ತಿನಿಷ್ಠ) ಅಲ್ಲ. ಹೀಗೆ ಕಾರ್ಯನಿರತನಾಗಿರುವ ವ್ಯಕ್ತಿಯ (ಜ್ಞಾತೃ) ದೃಷ್ಟಿ ಸಾಕ್ಷಾತ್ ಗುರಿಯೇ (ಜ್ಞೇಯ) ಆಗಿರಬೇಕು. ಸಹಜವಾಗಿ ಆತನ ಮನಃಸ್ಥಿತಿ ಆಗ ವೈಜ್ಞಾನಿಕತೆಗೆ ಉತ್ತಾರಣೆಗೊಂಡಿರುವುದು. ಆದ್ದರಿಂದ ದಾರಿ ಯಾವುದೇ ಇರಲಿ, ನಡಿಗೆ ಜ್ಞೇಯನಿಷ್ಠವಾಗಿದ್ದರೆ ವ್ಯಕ್ತಿ ವೈಜ್ಞಾನಿಕ ಮನೋಧರ್ಮಪೂರಿತನಾಗಿರುತ್ತಾನೆ. 'ಪದ್ಮಪತ್ರಮಿವಾಂಭಸಿ' (ತಾವರೆ ಎಲೆ ನೀರೊಳಗಿದ್ದರೂ ಒದ್ದೆ ಆಗದು) ಎಂಬ ಸೂಕ್ತಿಯ ಧ್ವನಿ ಇದು. ಎಂದೇ 'ವೈಜ್ಞಾನಿಕತೆ' ಎಂಬ ಪದ ಮೂಲದಲ್ಲಿ 'ವಿಜ್ಞಾನ' ಪ್ರಕ್ರಿಯೆಯಿಂದ ಉಗಮಿಸಿದ್ದಾದರೂ ಸರ್ವ ರಂಗಗಳಲ್ಲಿಯೂ ಅನುಸರಣ ಯೋಗ್ಯವಾಗಿದೆ.

ಉದಾಹರಣೆಗೆ ಧಾರ್ಮಿಕ ಚಿಂತಕನೊಬ್ಬ ತನ್ನ ಅಧ್ಯಯನ ಕ್ಷೇತ್ರ ವಿಜ್ಞಾನಾತೀತವಾದದ್ದು, ಆದ್ದರಿಂದ ವೈಜ್ಞಾನಿಕ ವಿಧಾನ ಹಾಗೂ ಮನೋಧರ್ಮ ತನಗೆ ಅನಾವಶ್ಯಕ ಎಂದು ನಿರ್ಧರಿಸಿ, ಸ್ವಂತ ಲಹರಿ (ಊಹಾಪೋಹಗಳು ಮತ್ತು ಕಲ್ಪನಾ ವಿಲಾಸಗಳು) ಒಯ್ಯುವ ಹಾದಿಯಲ್ಲಿ ಮುನ್ನಡೆದದ್ದಾದರೆ ಆತನ ಬದುಕು, ಬೋಧನೆ, ಬರೆಹ ಎಲ್ಲವೂ ಶುಷ್ಕ ಮತ್ತು ವಿಫಲ ವಾಗುತ್ತವೆ. ಏಕೆಂದರೆ ಅಲ್ಲಿ ಜ್ಞಾತೃನಿಷ್ಠ ಚಿಂತನೆ ಮತ್ತು ತೀರ್ಮಾನಗಳೇ ಅಂತಿಮ ಫಲಗಳು. ಇವನ್ನು ಲೋಕ ಸ್ವೀಕರಿಸದು. ನಮ್ಮ ಅಸಂಖ್ಯ ಮತಧರ್ಮಗಳು ವರ್ತಮಾನಕ್ಕೆ ಸ್ಪಂದಿಸದೇ ಅವುಗಳ ಆಚರಣೆಯಲ್ಲಿ ವ್ಯಾಘಾತ ಅಥವಾ ವಿರೋಧಾಭಾಸಗಳು ಹಣುಕುವುದರ ಕಾರಣವೇ ಇದು. ವೈಜ್ಞಾನಿಕತೆಯ ಗೈರುಹಾಜರಿ ವಾಸ್ತವವಾಗಿ ನಿಸರ್ಗಾಧಾರಿತ ಧರ್ಮವೊಂದೇ ತತ್ತ್ವತಃ ವ್ಯಾಘಾತ ರಹಿತವಾದದ್ದು, ಸಂತ ಗ್ರಂಥ ಪ್ರವಾದಿಪ್ರಣೀತವಾದದ್ದು ಎಂದೂ ಅಲ್ಲ. ಈ ಎರಡನೆಯದು ತರ್ಕ ಮತ್ತು ಪ್ರಯೋಗ ರಹಿತ ಭರವಸೆಯನ್ನು (ನಂಬಿಕೆ) ಮಾತ್ರ ಅವಲಂಬಿಸಿ ಅಸಂಖ್ಯ ವಿಧಿ ನಿಷೇಧಗಳ ಬಂದಿ ಆಗಿರುವುದು-ಇಲ್ಲಿ ಆಚರಣೆ ಯನ್ನು ಆದೇಶಿಸುವುದು ನೈಸರ್ಗಿಕ 'ಮಂತ್ರ'ವಲ್ಲ, ಬದಲು, ಯಾಂತ್ರಿಕ 'ತಂತ್ರ'. ಮತಾಂಧತೆಯ ಮೂಲವೇ ಇದು. ತನ್ನ ಧರ್ಮ ವೊಂದೇ ಸರ್ವಶ್ರೇಷ್ಠ ಎಂಬ ಮೂರ್ಖವಿಶ್ವಾಸ. ಅಂದರೆ ವೈಜ್ಞಾನಿಕ ಮನೋಧರ್ಮಧಾರಿತವಲ್ಲದ ಭರವಸೆಗೆ ಶರಣಾಗುವುದು. ದಾರ್ಶನಿಕ ವಿಜ್ಞಾನಿ ಐನ್‌ಸ್ಟೈನ್ ಹೇಳಿದ್ದಾರೆ. 'ಧರ್ಮರಹಿತ ವಿಜ್ಞಾನ ಕುಂಟು, ವಿಜ್ಞಾನರಹಿತ ಧರ್ಮ ಕುರುಡು." ಆದ್ದರಿಂದ ಧರ್ಮ-ವಿಜ್ಞಾನ ಸಾಮರಸ್ಯವೇ ಸುಖಜೀವನದ ಮೂಲ.

## ಗ್ರಾಮೀಣಾಭಿವೃದ್ಧಿ :

"ಭಾರತದ ಆತ್ಮ ಗ್ರಾಮಗಳಲ್ಲಿವೆ," "ನಿಜಕ್ಕೂ ಹಳ್ಳಿಗಳೇ ಪೇಟೆಗಳಿಗೆ ಅಶನ ಒದಗಿಸುವ ಕಣಜಗಳು," "ಗ್ರಾಮೋದ್ಧಾರವಾದ ಹೊರತು ದೇಶೋದ್ಧಾರವಾಗದು" ಮುಂತಾದ ಮಾತುಗಳು ರಾಜಕಾರಣಿಗಳು ಸದಾ ಗಳಹುತ್ತಿರುವ ಚರ್ವಿತಚರ್ವಣಗಳು ಅಥವಾ ಎಸೆಯುತ್ತಿರುವ ಸವಕಲು ನಾಣ್ಯಗಳು. ಇವರು ಕಷ್ಟಪಡದೇ ಐಶಾರಾಮವಾಗಿ ಬದುಕುವವರು ಮತ್ತು ಮಾತೊಂದೇ ಬಂಡವಾಳವಾಗಿ ಉಳ್ಳವರು. ಈ ಮಂದಿ ಗ್ರಾಮೀಣಾಭಿವೃದ್ಧಿಯ ಕನಸು ಕಂಡು ಅದರ ನನಸಿಗೆ ರಂಗುರಂಗಿನ ಯೋಜನೆಗಳನ್ನು ರೂಪಿಸುತ್ತಾರೆ. ವೈಜ್ಞಾನಿಕ ವಿಧಾನದ ಮೊದಲ ಹೆಜ್ಜೆ -ಸಮಸ್ಯಾನಿರೂಪಣೆ -ಇಡುವಲ್ಲಿಯೇ ಇವರು ಸೋತಿರುತ್ತಾರೆ. ಘನ ಕೃತಿಯ ಬದಲು ಒಣ ಮಾತು ಏಕೆ? ಗ್ರಾಮ ಜೀವನದ ಪ್ರತ್ಯಕ್ಷಾನುಭವದಿಂದ (ಇದು ನಿಜಕ್ಕೂ ಇವರಿಗಿದ್ದರೆ) ಈ ಸಮಸ್ಯೆ ನಿರೂಪಿತವಾಗಬೇಕು. ಪರಿಸ್ಥಿತಿಯ ಅವಶ್ಯಕತೆಯನ್ನು ಲೆಕ್ಕಿಸದೇ ಕಲ್ಪನೆ ಅಥವಾ ವಿದೇಶೀ ಗ್ರಂಥಸ್ಥ ಜ್ಞಾನ ಅವಲಂಬಿಸಿ ಸಿದ್ಧಗೊಳಿಸುವ ಯೋಜನೆ ಭವ್ಯ ಕಡತವಾದೀತು ಮಾತ್ರ, ಎಂದೂ ವ್ಯಾವಹಾರಿಕ ವಿಧಾನವಾಗದು. ಒಡಲಿಗೊಪ್ಪುವ ಉಡುಪು ಸರಿ, ಹೀಗಲ್ಲದೇ ಉಡುಪಿಗೊಪ್ಪುವಂತೆ ಒಡಲನ್ನು ನೇರ್ಪುಗೊಳಿಸಿದರೇನಾದೀತು? ಇಂಥ ತಿರುಗಾಮುರುಗಾ ಪರಿಸ್ಥಿತಿಗೆ ಪ್ರೋಕ್ರಸ್ಟಿಯನ್ ಶಯ್ಯಾ ಪರಿಣಾಮವೆಂದು ಹೆಸರು. ಇದರ ಪರಿಣಾಮ ವ್ಯಕ್ತಿಯ ಸಾವು. ನಮ್ಮ ಬಹುತೇಕ ಗ್ರಾಮೀಣಾಭಿವೃದ್ಧಿ ಯೋಜನೆಗಳಿಗೆ ಬಡಿದಿರುವ ಉಲ್ಬಣ ವ್ಯಾಧಿ ಇದು ಗ್ರಾಮಸ್ಥರಿಗೆ ಉಪಯುಕ್ತವಲ್ಲದ, ಹೆಚ್ಚಿನ ಸಂದರ್ಭಗಳಲ್ಲಿ ಹಾನಿಕರವಾಗುವ ಅಭಿವೃದ್ಧಿ ಕಾರ್ಯಗಳ ಹೇರಿಕೆ, ಇವುಗಳ ಅನುಷ್ಠಾನಕ್ಕೆ ಸಾಕಷ್ಟು ಮೊಬಲಗು ಮಂಜೂರುಮಾಡಿದರೆ ಸಾಕೆಂಬ ಹುಸಿ ನಂಬಿಕೆ ಮತ್ತು ಕಡತಗಳು ಸರಿಯಾಗಿದ್ದರೆ ಕೆಲಸ ಯಶಸ್ವಿ ಎಂಬ ಮಿಥ್ಯಾ ತಿಳಿವಳಿಕೆ! ಕೆಲಸದ ಪ್ರತಿಬಿಂಬ ಕಡತ ಆಗಬೇಕು, ಆದರೆ ಈಗ ಆಗುತ್ತಿರುವುದು ಕಡತದ ಅನುಸಾರ ಕೆಲಸದ 'ಪ್ರಗತಿ'. ಭ್ರಷ್ಟಾಚಾರ, ನೈತಿಕತೆಯ ಅಧಃಪತನ ಮತ್ತು ಗ್ರಾಮಜೀವನದ ಅವನತಿ ಇದರ ದುಷ್ಫಲ. ಇದನ್ನು 'ಜಡಭರತ ಪ್ರವೃತ್ತಿ' ಎಂಬ ಶೀರ್ಷಿಕೆಯಡಿ 'ಪ್ರಜಾವಾಣಿ' ಸಂಪಾದಕೀಯ (ನವಂಬರ್ ೨೬, ೨೦೦೩) ಸ್ಫುಟವಾಗಿ ವಿಶ್ಲೇಷಿಸಿದೆ. "ಗ್ರಾಮೀಣ ಅಭಿವೃದ್ಧಿ ಯೋಜನೆಗಳಲ್ಲಿ ಕೇಂದ್ರ ಸರ್ಕಾರದ ನೆರವನ್ನು ಸಂಪೂರ್ಣವಾಗಿ ಬಳಸಿಕೊಳ್ಳುವಲ್ಲಿ ರಾಜ್ಯ ಸರ್ಕಾರ ವಿಫಲವಾಗಿದೆ ಎಂದು ಕೇಂದ್ರ ಗ್ರಾಮೀಣ ಅಭಿವೃದ್ಧಿ ಸಚಿವ ಕಾಸೀರಾಂ ರಾಣಾ ಅವರು ಗುರುತರವಾದ ಆರೋಪ ಮಾಡಿದ್ದಾರೆ. ಈ ಸಂದರ್ಭದಲ್ಲಿ ಹಾಜರಿದ್ದ ರಾಜ್ಯ ಗ್ರಾಮೀಣ ಅಭಿವೃದ್ಧಿ ಸಚಿವ ಕೆ. ಬಿ. ಕೋಳಿವಾಡ ಅವರಿಗೆ ಈ ಕುರಿತು ರಾಜ್ಯ ಸರ್ಕಾರವನ್ನು ಸಮರ್ಥಿಸಿಕೊಳ್ಳುವುದಕ್ಕಾಗಲಿ ಸ್ಪಷ್ಟನೆ ನೀಡುವುದಕ್ಕಾಗಲಿ ಸಾಧ್ಯವಾಗಲಿಲ್ಲ. ರಾಜ್ಯ ಸರ್ಕಾರದ ಸಾಧನೆ ನೋಡಿದರೆ ಅದು ಯಾರಿಗೂ ಸಾಧ್ಯವಾಗದು."

ವರ್ತಮಾನ ಭಾರತದ ಹಳ್ಳಿಗಳಲ್ಲಿ ಅಲೆದಾಡಿದಾಗ ಕಾಣುವುದೇನು? ಅಭಿವೃದ್ಧಿಯ ಹೆಸರಿನಲ್ಲಿ ಪ್ರಕೃತಿಯ ಅನಿರ್ಬಂಧಿತ ನಾಶ. ಶರಾವತಿ ಪ್ರಕರಣವಾಗಲೀ, ಕುದುರೆಮುಖ ಗಣಿಗಾರಿಕೆಯಾಗಲೀ, ಕಾರ್ಯಶೀಲವಾಗದ ಕುಖ್ಯಾತ ಎನ್ರಾನ್ ಉದ್ಯಮವಾಗಲೀ, ಸದ್ಯ ಕಡತಗಳಲ್ಲೇ ಇದ್ದರೂ ಈಗಾಗಲೇ ಲಕ್ಷಾಂತರ ರೂಪಾಯಿಗಳನ್ನು ಸ್ವಾಹಾಕರಿಸಿರುವ ನೇತ್ರಾವತಿ ಪಾತ್ರಪಲ್ಲಟನ ದುಸ್ಸಾಹಸವಾಗಲೀ, ಅಂತೆಯೇ ಭಾರತದ ನದಿಗಳ ಸಂಯೋಜನೆ ಎಂಬ ತಿರುಕನ ಕನಸಾಗಲೀ ದೀರ್ಘ ಕಾಲದಲ್ಲಿ ಸಾಧಿಸಿರುವುದು ಅಥವಾ ಸಾಧಿಸಲಿರುವುದು ಏನು? ಬಡವ-ಸಿರಿವಂತ ಮತ್ತು ಹಳ್ಳಿ-ನಗರ ಕಮರಿಗಳ ಅತಿಶಯ ಲಂಬನ, ನಿಸರ್ಗದ ವ್ಯವಸ್ಥಿತ ದರೋಡೆ ಮತ್ತು ಪರಿಸರ ಮಾಲಿನ್ಯದ ತೀವ್ರ ಏರಿಕೆ. 'ಸರಳ ಜೀವನ, ಗಹನ ಚಿಂತನ' ಎಂಬ ಭಾರತೀಯ ಪರಂಪರಾಗತ ಆದರ್ಶ ಇಂದು 'ಸಂಕೀರ್ಣ ಜೀವನ, ಶೂನ್ಯ ಅಥವಾ ನಿಷೇಧಾತ್ಮಕ ಚಿಂತನ' ಎಂಬುದಾಗಿ ವಿರೂಪಿತವಾಗಿದೆ. ಈ ವಿಕೃತಿಯ ಮೂಲ ಕಾರಣ ಯೋಜನೆಯ ಸಿದ್ಧತೆಯಿಂದ ತೊಡಗಿ ಅನುಷ್ಠಾನದವರೆಗಿನ ಎಲ್ಲ ಹಂತಗಳಲ್ಲಿ ವೈಜ್ಞಾನಿಕ ಚಿಂತನೆಯ ಉಪೇಕ್ಷೆ ಎಂಬುದು ಸ್ಪಷ್ಟ. ಉಪೇಕ್ಷೆ ಏಕೆಂದರೆ ಆ ಚಿಂತನೆಯನ್ನು ಮೈಗೂಡಿಸಿಕೊಂಡದ್ದಾದರೆ ಸ್ವಾರ್ಥಸಾಧನೆಗೆ ಅವಕಾಶವೇ ಇರುವುದಿಲ್ಲ. ನಿಜಕ್ಕೂ ವೈಜ್ಞಾನಿಕ ಚಿಂತನೆ ಎಂಬ ಸೂರ್ಯನಿರುವಲ್ಲಿ ಸ್ವಾರ್ಥಸಾಧನೆ ಎಂಬ ಅಂಧಕಾರಕ್ಕೆ ನೆಲೆಯಿಲ್ಲ.

ನಮ್ಮ ಹಳ್ಳಿಗಾಡುಗಳ ಸ್ಥಿತಿ ಇಂದೇನಾಗಿದೆ ಎಂಬುದಕ್ಕೆ ೧೯೬೨ರಷ್ಟು ಹಿಂದೆಯೇ ರೇಶಲ್ ಕಾರ್ಸನ್ ಎಂಬ ಲೇಖಕ (ಅಮೆರಿಕದಲ್ಲಿಯ ಗ್ರಾಮೀಣಾಭಿವೃದ್ಧಿಯನ್ನು ವೈಜ್ಞಾನಿಕವಾಗಿ ಪರಿಶೀಲಿಸಿ) ಬರೆದಿರುವ 'ಸೈಲೆಂಟ್ ಸ್ಪ್ರಿಂಗ್ಸ್' (ಮೂಕ ನಿರ್ಝರಿಣಿಗಳು) ಎಂಬ ಉದ್ಬೋಧಕ ಕೃತಿಯನ್ನು ಓದಬೇಕು. ಉದ್ಧೃತಾಂಶ:

"ಬಲು ಹಿಂದಿನ ಕತೆಯೇನೂ ಅಲ್ಲವಿದು. ಅದೊಂದು ದೊಡ್ಡ ದೇಶ. ಅದರ ವಕ್ಷಸ್ಥಳದಲ್ಲಿ ಪುಟ್ಟದೊಂದು ಹಳ್ಳಿ. ಉಲ್ಲಾಸವೇ ಅದರ ಉಸಿರು. ಅಲ್ಲಿಯ ಬದುಕು ಪರಿಸರದೊಡನೆ ಸಂಗತವಾಗಿಯೂ ಮಧುರವಾಗಿಯೂ ಹೊಂದಿಕೊಂಡಿದ್ದು ಸಂತೋಷ ಸಂಭ್ರಮ ಸರ್ವವ್ಯಾಪಿ ಆಗಿದ್ದುವು. ಬೇಸಾಯದಿಂದ ಬಂದ ಗಳಿಕೆ ಆಶ್ರಯಿಸಿ, ನೆಮ್ಮದಿಯ ಬದುಕು ಬಾಳುತ್ತಿದ್ದ ಆರೋಗ್ಯವಂತ ಜನ, ಶ್ರಾಯಾನುಸಾರ ಕಂಗೊಳಿಸುತ್ತಿದ್ದ ಹಲಬಗೆಯ ಪೈರುಪಚ್ಚೆ, ಎಲ್ಲೆಲ್ಲಿಯೂ ಗಗನನಿವೇದಿತವಾಗಿ ನೆಟ್ಟಗೆ ನಿಂತಿದ್ದ ವೃಕ್ಷಸಮೂಹ, ಇವುಗಳಿಗೆ ರಕ್ಷಣೆ ನೀಡಲೋ ಎಂಬಂತೆ ಹಳ್ಳಿಯನ್ನು ಬಳಸಿ ಹರಡಿಹೋಗಿದ್ದ ಬೆಟ್ಟ ಕಣಿವೆಗಳ ಸಾಲು, ಬೆಟ್ಟಗಳ ಒಡಲಿನಿಂದ ನಿರಂತರವಾಗಿ ಸ್ರವಿಸುತ್ತಿದ್ದ ಸಲಿಲ ಧಾರೆ, ಹಸುರು ಹಚ್ಚಡದ ಮೇಲೆ ಹಾದಿ ಬಿಡಿಸಿ ಸಾಗುತ್ತಿದ್ದ ನೀರಿನ ಹರಿವು ನೇಯ್ದ ಬೆಳ್ಳಿ ಚಿತ್ತಾರ, ಸಮೃದ್ಧ ನೆಲ ಬನ ಬಾನುಗಳಲ್ಲಿ ವಿಹರಿಸುತ್ತಿದ್ದ ಭೂಚರ ಖೇಚರ ಮತ್ತು ಜಲಚರ ಪ್ರಾಣಿ ಸಂಕುಲ ಅಲ್ಲಿಯ ಜೀವಿ-ಪರಿಸರ ಅಖಂಡತೆಯ ಅವಿಭಾಜ್ಯ ಅಂಗಗಳಾಗಿ ಎರಕಗೊಂಡಿದ್ದುವು. ಅಲ್ಲಿ ನಿಸರ್ಗ ಹಾಡುತ್ತಿತ್ತು. ಕೊಳಲೂದುತ್ತಿತ್ತು. ಚೆಲುವು ಸೂಸುತ್ತಿತ್ತು. ಪರಿಮಳ ಸರ್ವವ್ಯಾಪಿಯಾಗಿತ್ತು. ಸೌಂದರ್ಯದ ಸೀಮೆಯೇ ಅದಾಗಿತ್ತು."

"ಹೀಗಿರುವಾಗ ಅಲ್ಲೊಂದು ವಿಚಿತ್ರ ಸನ್ನಿವೇಶ ತಲೆದೋರಿತು: ಆ ಹಳ್ಳಿಯ ಮೇಲೆ ದುಷ್ಟ ಗ್ರಹದ ವಕ್ರ ದೃಷ್ಟಿ ಕೆಡೆಯಿತೋ ಮಾಟಗಾರನ ಭೂಮಂತ್ರಗಾಳಿ ಮಂಕು ಎರಚಿತೋ ಪೂತನೀ ಸ್ತನ್ಯಪಾನದಿಂದ ವಿಷ ಸರ್ವತ್ರ ವ್ಯಾಪಿಸಿತೋ ಎಂಬಂತೆ ಆ ತನಕ ಕಂಡು ಕೇಳಿ ಅರಿತಿರದಿದ್ದ 'ಭೂತಚೇಷ್ಟೆ'ಗಳು ಹಳ್ಳಿಗಳನ್ನು ಪೀಡಿಸಲಾರಂಭಿಸಿದುವು. ಕೋಳಿಮರಿಗಳು ಮೈಮುದುಡಿ ಹಿಪ್ಪೆಯಾಗಿ ಸತ್ತವು. ಹಸುರು ಕಡಲಿನಲ್ಲಿ ಸಾವಿನ ನೀರ್ಗಲ್ಲ ಬೆಟ್ಟ ಗುಟ್ಟಾಗಿ, ಆದರೆ ಖಚಿತವಾಗಿ, ಮುನ್ನಡಿಯಿಡುತ್ತ ಬರುತ್ತಿರುವಂತೆ ತೋರಿತು. ಶಾಂತಿವನದಲ್ಲಿ ತೀವ್ರ ಅಶಾಂತಿ, ಮೂಕ ಶೋಕ, ಹೊಸ ಬೇನೆಯಿಂದ ಜನ ಸತ್ತರು, ಮಕ್ಕಳು ಮರಗಟ್ಟಿದುವು. ವೈದ್ಯರಿಗೆ ಸವಾಲಾಗಿ ಕಾಲನ ಕೋಣದ ಆರ್ಭಟ ಎದುರಾದಂಥ ಪರಿಸ್ಥಿತಿ.

ಮುಂಜಾವಿನ ಮಬ್ಬನ್ನು ಸೀಳಿ ನೇಸರು ಆಗಮಿಸುತ್ತಿದೆಯೆಂದು ಕಣಿ ನುಡಿಯುತ್ತಿದ್ದ ಶಕುನದ ಹಕ್ಕಿಯ ಸೊಲ್ಲು ಇಲ್ಲವಾಗಿತ್ತು. ಕೊಳದ ಬಳಿಯ ಟಿಸಿಲಿನಲ್ಲಿ ಮರಸು ಕುಳಿತು ಸ್ಫಟಿಕ ಶುಭ್ರ ನೀರ ಮೇಲೆ ಫಕ್ಕನೆರಗಿ ಬೆಳ್ಳಿ ಮೀನನ್ನು ಗಬಕ್ಕನೆ ಕಚ್ಚಿ ಚಿಮ್ಮುವ ಮೀಂಚುಳ್ಳಿಯ ಕಾಮನಬಿಲ್ಲಿನ ಓಕುಳಿ ಕೈದಾಗಿತ್ತು. ತೋಟ ಹೊಲಗಳೂ ಕಾಡುಗುಡ್ಡಗಳೂ ಬೆಂಗಾಡಿನ ಬಕಾಸುರಾಪೋಶನಕ್ಕೆ ಗ್ರಾಸವಾಗಲು ಕಾಲ ಸನ್ನಿಹಿತವಾಗಿತ್ತು. ಹಳ್ಳಿಗರ ಉಸಿರೇ ಕಟ್ಟಿಹೋಗುವಂಥ ಈ ದುರ್ಭರ ಪರಿಸ್ಥಿತಿಯ ಕಾರಣವೇನು?"

"ಕಾರಣವೇನು ಗೊತ್ತೆ? ಸರ್ವಕೀಟನಾಶಕ ಸಕಲ ಸಮೃದ್ಧಿದಾಯಕ ಅನುದಾಮೃತಕರ್ಷಿಣಿ ಡಿಡಿಟಿಯ ಸಾರ್ವತ್ರಿಕೋಪಯೋಗ ಹಳ್ಳಿಗರು ನಿಸರ್ಗದ ಎದುರು ಅರಿಯದೆ, ಭೂರಿ ಉತ್ಪಾದಕರ ಜಾಹೀರಾತುಗಳಿಗೆ ಮರುಳಾಗಿ ದಿಢೀರ್ ಕುಬೇರರಾಗುವ ಆಸೆಯಿಂದ, ಹೂಡಿದ ಕಾಳಗದ ಹಿಂದೊದೆತ, ಎದುರು ಹೊಡೆತ, ಯಮಪ್ರಹಾರ."

ಈ ವಿವರಣೆ ಇಂದು ನಿಮ್ಮ ಹಳ್ಳಿಯ ಸುತ್ತಮುತ್ತಲೂ ಎದ್ದು ಕಾಣುವ ದೃಶ್ಯಕ್ಕೆ ಹಿಡಿದ ಕನ್ನಡಿಯಂತಿದೆಯಲ್ಲವೇ? ಭಾರತದಲ್ಲಿ ಅವಿದ್ಯಾವಂತರ ಮತ್ತು ಬಡವರ ಸಂಖ್ಯೆ ಬಲು ಹೆಚ್ಚು. ಇಲ್ಲಿ ರಾಸಾಯನಿಕಗಳ ಪ್ರಚಾರ ಅಬ್ಬರಸಹಿತ ನಡೆಯುತ್ತಲೇ ಇದೆ ಮತ್ತು ಗ್ರಾಮಸ್ಥರಿಗೆ ಇರುಳು ಬೆಳಗಾಗುವ ಮೊದಲು ಮಹಾ ಶ್ರೀಮಂತರಾಗುವ ಆಮಿಷ ತೋರಿಸುತ್ತಲೇ ಇದೆ. ಅಂದು ಡಿಡಿಟಿ, ಇಂದು ಎಂಡೊಸಲ್ಫಾನ್, ಮುಂದೆ ಬಹುರಾಷ್ಟ್ರೀಯ ಉದ್ಯಮಗಳು ಆಸೆ ತೋರಿಸುವ 'ರೌಂಡಪ್' ಎಂಬ ನೂತನ ರಾಸಾಯನಿಕ. ಕೊನೆ ಎಲ್ಲಿ? ಉಂಟೇ? ಹೇಗೆ? ಏಕಿಂಥ ಚಿತ್ತದಾಸ್ಯವೆಂದರೆ ಯೋಜಕರಿಂದ ಪ್ರಯೋಜಕರವರೆಗೆ ಸರ್ವತ್ರ ವೈಜ್ಞಾನಿಕತೆಯ ಅಭಾವ ಮತ್ತು ಸ್ವಾರ್ಥಲಾಲಸೆಯ ಅತ್ಯಾಸೆ. ಮೊದಲ ವರ್ಗದವರಿಗೆ ಸುಖಜೀವನ, ಎರಡನೆಯ ವರ್ಗದವರಿಗೆ ನಿರಂತರ ಕ್ಷೋಭೆ, ನಿಸರ್ಗಕ್ಕೋ ಸರ್ವನಾಶ.

**ಪ್ರಾಚೀನ ತತ್ತ್ವಶಾಸ್ತ್ರಕೋವಿದ ಕನ್ಫೂಶಿಯಸ್ ಬರೆದಿದ್ದಾನೆ :**

"ನಮ್ಮ ಜಗದ್ಭವ ಪ್ರಾಚೀನರು ಅತ್ಯುನ್ನತ ಸದ್ಗುಣಗಳನ್ನು ಸ್ಪಷ್ಟಪಡಿಸಿಕೊಳ್ಳಲು ಮತ್ತು ಪ್ರಪಂಚಾದ್ಯಂತ ಪ್ರಸಾರಗೈಯ್ಯಲು ಬಯಸಿದಾಗ ತಮ್ಮ ರಾಜ್ಯಗಳಿಗೆ ಯುಕ್ತ ವ್ಯವಸ್ಥೆಯನ್ನು ಆವಾಹಿಸಿದರು. ಆ ಮೊದಲು ತಮ್ಮ ಕುಟುಂಬಗಳನ್ನು ನಿಯಂತ್ರಿಸಿದರು.

ತತ್ಪೂರ್ವ ತಮ್ಮ ಕುಟುಂಬಗಳನ್ನು ನಿಯಂತ್ರಿಸಿದರು. ಇದಕ್ಕೆ ಮೊದಲು ತಮ್ಮನ್ನು ತಿದ್ದಿಕೊಂಡರು. ಹೀಗೆ ಮಾಡುವ ಮೊದಲು ಸ್ವಂತ ಆತ್ಮಗಳನ್ನು ಪರಿಪೂರ್ಣಗೊಳಿಸಿದರು. ಆ ಮೊದಲು ತಮ್ಮ ಚಿಂತನೆಗಳಲ್ಲಿ ನೈಷ್ಠಿಕರಾಗಿರಲು ಪ್ರಯತ್ನಿಸಿದರು. ತತ್ಪೂರ್ವ ತಮ್ಮ ಜ್ಞಾನವನ್ನು ಗರಿಷ್ಠತೆಗೆ ವಿಸ್ತರಿಸಿದರು. ಜ್ಞಾನದ ಇಂಥ ಶೋಧನೆ ಎಂದರೆ ವಸ್ತುಗಳ ಶೋಧನೆ ಮತ್ತು ಅವು ವಾಸ್ತವವಾಗಿ ಹೇಗಿರುವುವೋ ಹಾಗೆಯೇ ಅವನ್ನು ನೋಡುವುದು ಎಂದರ್ಥ. ವಸ್ತುಗಳನ್ನು ಹೀಗೆ ಶೋಧಿಸಿದಾಗ ಜ್ಞಾನ ಪರಿಪೂರ್ಣವಾಯಿತು. ಒಡನೆ ಚಿಂತನೆಗಳು ನೈಷ್ಠಿಕವಾದುವು. ಆಗ ಆತ್ಮಗಳು ಪರಿಪೂರ್ಣವಾದುವು. ಸಹಜವಾಗಿ ವ್ಯಕ್ತಿಗಳು ನೇರ್ಪುಗೊಂಡರು. ತತ್‌ಕ್ಷಣ ಕುಟುಂಬಗಳು ನಿಯಂತ್ರಿತವಾದುವು. ಆಗ ರಾಜ್ಯಗಳು ಯುಕ್ತ ವ್ಯವಸ್ಥೆ ಪಡೆದುವು. ತತ್ಪರಿಣಾಮವಾಗಿ ಸಮಸ್ತ ಪ್ರಪಂಚ ಸುಖಶಾಂತಿಮಯವಾಯಿತು."

ಇದರ ಸಾರಾಂಶ: ವೈಯಕ್ತಿಕ ಮಟ್ಟದಲ್ಲಿ ವೈಜ್ಞಾನಿಕತೆ ಅನುಷ್ಠಾನಕ್ಕೆ ಬಂದಾಗ ಮಾತ್ರ ಗ್ರಾಮಾಭಿವೃದ್ಧಿಯೂ, ಮುಂದೆ ರಾಷ್ಟ್ರಾಭಿವೃದ್ಧಿಯೂ ಸಾಧಿತವಾಗುವುವು.

## ಬೋಧನೆ-ಆಚರಣೆ ಅಸಾಂಗತ್ಯ :

ಇಂದು ವೈಜ್ಞಾನಿಕತೆಯ ಅಭಾವದಲ್ಲಿ ಹಳ್ಳಿಗಳು ಮೌಢ್ಯ, ಅವೈಚಾರಿಕತೆ, ಅಂಧಾಚರಣೆ ಮುಂತಾದವುಗಳಿಂದ ನಶಿಸುತ್ತಿವೆ. ಪಟ್ಟಣಗಳಾದರೋ ಅತಿರೇಕ ಭೋಗಜೀವನ, ಕೊಳ್ಳುಬಾಕತನ, ಪರಿಸರ ಮಾಲಿನ್ಯ ಇತ್ಯಾದಿಗಳಿಂದ ಮಡಿಯುತ್ತಿವೆ. ನಮ್ಮ ಯೋಜನೆಗಳು ಗ್ರಾಮೀಣ ಪ್ರದೇಶಗಳ ವಾಸ್ತವ ಸ್ಥಿತಿಗತಿಗಳನ್ನು ಆಧರಿಸಿ ಅರಳಿದವಲ್ಲ. ಬದಲು, ರಾಜಕಾರಣಿ- ಆಡಳಿತದಾರ ಇವರ ನಡುವಿನ ಅಪವಿತ್ರ ಮೈತ್ರಿಯಿಂದ ಮೈದಳೆದಿರುವ ಗಾಳಿಗೋಪುರಗಳು. ಎಂದೇ ಅಗ್ಗದ ಜಾಹೀರಾತುಗಳು, ಶುಷ್ಕ ಬೋಧನೆಗಳು, ಉತ್ಪ್ರೇಕ್ಷಿತ ಅಂಕಿಅಂಶಗಳು ಮುಂತಾದ ಹೊರತೋರಿಕೆಗಳಿಗೆ ಇಲ್ಲಿ ಪ್ರಾಶಸ್ತ್ಯ, ಪ್ರಾಮಾಣಿಕ ಆಚರಣೆಗೆ ಅಲ್ಲ. ಪೊಳ್ಳು ಹೂರಣಕ್ಕೆ ಮಿನುಗು ತೋರಣ ತೊಡಿಸಿದಂತಾಗಿದೆ ಪರಿಸ್ಥಿತಿ. ಲಾಂಗೂಲಶ್ವಾನಚಾಲನೆಗೆ (ಬಾಲವೇ ನಾಯಿಯನ್ನು ಅಲ್ಲಾಡಿಸುವುದು) ಇದೊಂದು ನಿದರ್ಶನ. ಇದರ ದುಷ್ಫಲವಾಗಿ ಗ್ರಾಮೀಣಾಭಿವೃದ್ಧಿ ಯೋಜನೆಗಳು ಗ್ರಾಮೀಣ ಜೀವನ ವಿನಾಶಕಗಳಾಗಿ ಸಮಗ್ರ ರಾಷ್ಟ್ರವನ್ನು ಶೋಷಿಸುತ್ತಿವೆ. ಎಂದೇ ಇಂದು ಪರಿಸರ ನಾಶ, ಅಂತರರಾಜ್ಯ ಅಶಾಂತಿ, ನಗರಗಳಿಗೆ ಹಳ್ಳಿಗರ ವಲಸೆ, ಕೊಳೆಗೇರಿಗಳ ಅತಿವ್ಯಾಪನೆ ಮತ್ತು ಸಮಗ್ರ ರಾಷ್ಟ್ರದ ನೈತಿಕ ಅಧಃಪತನ ಸರ್ವಸಾಮಾನ್ಯವಾಗಿವೆ.

ಹಾಗಾದರೆ ಏನು ಮಾಡಬೇಕು? ಕೆಲವು ಮುಖ್ಯಾಂಶಗಳನ್ನು ಮಾತ್ರ ಈ ಕಿರುಬರಹದಲ್ಲಿ ಸೂಚಿಸಬಹುದಷ್ಟೆ:

೧. ಮಾತೃಭಾಷೆಯಲ್ಲಿ ಕಡ್ಡಾಯ ಶಿಕ್ಷಣ ಪದ್ಧತಿ ಜಾರಿಗೆ ಬರಬೇಕು.

೨. ವೈಜ್ಞಾನಿಕ ಚಿಂತನೆ ಮತ್ತು ಮನೋಧರ್ಮ ವ್ಯಕ್ತಿ ಜೀವನದ ಅವಿಭಾಜ್ಯ ಅಂಗಗಳಾಗಬೇಕು-ಧರ್ಮಾಚರಣೆ, ಇತಿಹಾಸ ಬೋಧನೆ, ಸಾಹಿತ್ಯ ರಂಗ, ಕಲಾ ಪ್ರಪಂಚ ಮುಂತಾದವುಗಳ ತಳದಲ್ಲಿಯೂ ವೈಜ್ಞಾನಿಕ ಚಿಂತನೆ ಇರಲೇಬೇಕು. ಅಂದರೆ ಶೀಲ ಸಂವರ್ಧನೆಗೆ ಸರ್ವತ್ರ ಪ್ರಾಶಸ್ತ್ಯ ನೀಡಬೇಕು.

೩. ವೈಜ್ಞಾನಿಕತೆಯ ಪರೀಕ್ಷೆಯಲ್ಲಿ ಪ್ರತಿಯೊಂದು ಯೋಜನೆಯೂ ಉತ್ತೀರ್ಣವಾಗಬೇಕು.

೪. ಇಂಥ ಯೋಜನೆಗಳು ಜನರ -ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಗ್ರಾಮೀಣ ಮಂದಿಯ -ಮಟ್ಟದಿಂದ ಉಗಮಿಸಿ ಸರ್ಕಾರದ ನೇತೃತ್ವದಲ್ಲಿ ಚಾಲೂ ಆಗಬೇಕು.

೫. ವೈಜ್ಞಾನಿಕ ಚಿಂತನೆ, ಪರಿಸರ ರಕ್ಷಣೆ ಮತ್ತು ವೃತ್ತಿ ಘನತೆ ಇವು ಮೂರೂ ಮಧುರವಾಗಿ ಎರಕಗೊಂಡಿರುವಂತೆ ಸದಾ ಸಕಲರೂ ಜಾಗರೂಕರಾಗಿರಬೇಕು.

●




# ವೈಜ್ಞಾನಿಕ ದೃಷ್ಟಿಕೋನ

ಪ್ರೊ. ಎಚ್. ವಿ. ನಾಗೇಶ್

೧

ವಿಶ್ವಬ್ಯಾಂಕಿನ ಅಧಿಕೃತ ಅಭಿಪ್ರಾಯದಂತೆ ಗ್ರಾಮೀಣ ಅಭಿವೃದ್ಧಿಯೆಂದರೆ ಒಂದು ವಿಶಿಷ್ಟ ಜನಸಮೂಹದ - ಅಂದರೆ ಗ್ರಾಮೀಣ ಬಡಜನರ - ಆರ್ಥಿಕ ಹಾಗೂ ಸಾಮಾಜಿಕ ಜೀವನವನ್ನು ಸುಧಾರಿಸುವ ಉದ್ದೇಶಹೊಂದಿದ ಒಂದು ಕಾರ್ಯತಂತ್ರ ಎನ್ನಬಹುದು. ಗ್ರಾಮೀಣ ಪ್ರದೇಶಗಳಲ್ಲಿ ತಮ್ಮ ಜೀವನೋಪಾಯವನ್ನು ಹುಡುಕುತ್ತಿರುವ ಕಡುಬಡವರಾದ ಜನರಿಗೆ ಅಭಿವೃದ್ಧಿಯ ಲಾಭಗಳನ್ನು ಮುಟ್ಟಿಸುವುದು ಅದರ ಗುರಿ. ಇಂಥ ಕಡುಬಡವರಲ್ಲಿ ಸಣ್ಣ ಪ್ರಮಾಣದ ರೈತಾಪಿ ಜನರು, ಗೇಣಿದಾರರು ಮತ್ತು ಭೂರಹಿತರು ಸೇರುತ್ತಾರೆ.

ಬೇರೆ ಮಾತಿನಲ್ಲಿ ಹೇಳುವುದಾದರೆ ಗ್ರಾಮೀಣ ಬಡಜನರ ಉತ್ಪಾದನೆ ಹಾಗೂ ಜೀವನ ಮಟ್ಟವನ್ನು ನಿರಂತರವಾಗಿ ಉತ್ತಮಪಡಿಸುವುದೇ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಉದ್ದೇಶ ಎಂದು ವಿಶ್ವ ಬ್ಯಾಂಕ್ ಹೇಳುತ್ತದೆ. ರಾಬರ್ಟ್ ಚೇಂಬರ್ಸ್ ಅವರ ಪ್ರಕಾರ ಬಡವರಾದ ಗ್ರಾಮೀಣ ಸ್ತ್ರೀ-ಪುರುಷರು ತಮಗೂ ತಮ್ಮ ಮಕ್ಕಳಿಗೂ ಬೇಕಾದುದನ್ನು ಹಿಂದೆ ಇದ್ದುದಕ್ಕಿಂತ ಹೆಚ್ಚಾಗಿ ಪಡೆಯಲು ಸಮರ್ಥರನ್ನಾಗಿ ಮಾಡುವ ಕಾರ್ಯತಂತ್ರವೇ ಗ್ರಾಮೀಣ ಅಭಿವೃದ್ಧಿ. ಇದೇ ಅಭಿಪ್ರಾಯವನ್ನು ಇತರ ಅನೇಕ ಪಾಶ್ಚಿಮಾತ್ಯ ಗ್ರಾಮೀಣ ಅಭಿವೃದ್ಧಿಶಾಸ್ತ್ರಜ್ಞರು ಹಾಗೂ ಅವರ ಭಾರತೀಯ ಬೆಂಬಲಿಗರು ಹೊಂದಿರುವುದನ್ನು ಕಾಣುತ್ತೇವೆ. ಇಂಥ ಅಭಿಪ್ರಾಯಗಳೊಡನೆ ಹೋಲಿಸಿ ನೋಡಿದರೆ ಹೆಚ್ಚಿನ ಭಾರತೀಯ ಚಿಂತಕರು ಗ್ರಾಮೀಣ ಅಭಿವೃದ್ಧಿ ಪರಿಕಲ್ಪನೆಯನ್ನು ಹೆಚ್ಚು ವ್ಯಾಪಕವಾದ ಅರ್ಥದಲ್ಲಿ ಬಳಸುತ್ತಾರೆ. ಗ್ರಾಮೀಣ ಅಭಿವೃದ್ಧಿಯೆಂದರೆ ಗ್ರಾಮೀಣರ ಭೌತಿಕ, ತಾಂತ್ರಿಕ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಬದುಕಿನ ನಿರಂತರ ಅಭಿವೃದ್ಧಿಯೆನ್ನುವುದು ಅವರ ಅಭಿಪ್ರಾಯ. ಇಲ್ಲಿಯ ಸರಕಾರಗಳೂ ಅಭಿವೃದ್ಧಿ ಸಂಸ್ಥೆಗಳೂ ಆಸಕ್ತ ವ್ಯಕ್ತಿಗಳೂ ಇಂಥ ವಿಚಾರಗಳಿಂದಲೇ ಪ್ರೇರಿತರಾಗಿರುವುದನ್ನು ನಾವು ಕಾಣಬಹುದು.

***ವೈಜ್ಞಾನಿಕ ಚಿಂತನೆ ಆಧುನಿಕ ನಗರ ಜೀವನದಲ್ಲಿ ಅಗತ್ಯ ಎಂದು ಎಲ್ಲರೂ ಒಪ್ಪುತ್ತಾರೆ. ಆದರೆ ಗ್ರಾಮೀಣ ಬದುಕಿಗೆ ಸಾಂಪ್ರದಾಯಿಕ ಜ್ಞಾನ, ಜನಾಂಗಾಂತರ್ಗತ ವಿವೇಕ, ಪ್ರಾಕೃತಿಕ ಸಂಪತ್ತು ಮತ್ತು ದೈವಬಲ ಸಾಕೆಂದು ನಂಬುವ ಜನರಿದ್ದಾರೆ.***

ತೃತೀಯ ಜಗತ್ತಿನ ರಾಷ್ಟ್ರಗಳು ಹೆಚ್ಚೂ ಕಡಿಮೆ ಸಾರ್ವತ್ರಿಕವಾಗಿ ಗ್ರಾಮೀಣ ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತಂದಿವೆ ಅಥವಾ ತರುತ್ತಿವೆ. ಬೇರೆಬೇರೆ ದೇಶಗಳಲ್ಲಿ ಅಭಿವೃದ್ಧಿ ಯೋಜನೆಗಳ ರೀತಿಗಳು ಹಾಗೂ

ಅವುಗಳನ್ನು ಕಾರ್ಯಗತಗೊಳಿಸಲು ಇರುವ ವ್ಯವಸ್ಥೆಗಳು ಭಿನ್ನಭಿನ್ನವಾಗಿವೆ ಎಂಬ ವಿಷಯ ಕೂಡ ಎಲ್ಲರಿಗೆ ತಿಳಿದಿವೆ. ಉದಾಹರಣೆಗೆ ನಮ್ಮಲ್ಲಿ ಪಂಚವಾರ್ಷಿಕ ಯೋಜನೆಗಳಿದ್ದರೆ ಇತರ ದೇಶಗಳಲ್ಲಿ ಒಂದು, ಮೂರು, ಆರು ಅಥವಾ ಹತ್ತು ವರ್ಷಗಳ ಯೋಜನೆಗಳಿರಬಹುದು. ನಮ್ಮಲ್ಲಿದ್ದಂತೆ ಯೋಜನಾ ಆಯೋಗ ಮತ್ತು ಅಭಿವೃದ್ಧಿ ಮಂಡಳಿಗಳು ಇತರ ದೇಶಗಳಲ್ಲಿ ಇಲ್ಲದೇ ಇರಬಹುದು. ಆದರೆ ಈ ಎಲ್ಲ ರಾಷ್ಟ್ರಗಳಲ್ಲಿ ಗ್ರಾಮೀಣ ಅಭಿವೃದ್ಧಿಯ ಬಗೆಗೆ ಇರುವ ಕಾಳಜಿಯೂ ವೈಜ್ಞಾನಿಕ ಅರಿವೂ ಹೆಚ್ಚುತ್ತಿದೆ ಎಂದರೆ ತಪ್ಪಿಲ್ಲ.

ಅಭಿವೃದ್ಧಿ ಪ್ರಯತ್ನಗಳ ಜೊತೆಜೊತೆಗೆ ಜಗತ್ತಿನ ಹಲವಾರು ದೇಶಗಳಲ್ಲಿ ಗ್ರಾಮೀಣ ಅಭಿವೃದ್ಧಿಯ ಬಗೆಗಿನ ವೈಜ್ಞಾನಿಕ ಚಿಂತನೆಗೆ ಈಗ ಹೆಚ್ಚಿನ ಮಹತ್ವ ಕೊಡಲಾಗುತ್ತಿದೆ. ಅಭಿವೃದ್ಧಿ ಯಾವುದೋ ಒಂದು ಅಜ್ಞಾತವಾದ, ಅದ್ಭುತವಾದ ಶಕ್ತಿಯ ಆಶೀರ್ವಾದದಿಂದ ಲಭಿಸುವ ವರಪ್ರಸಾದವಲ್ಲ; ಅದು ಮಾನವನ ಇಚ್ಛಾಶಕ್ತಿ, ನಿರಂತರ ಪ್ರಯತ್ನ ಮತ್ತು ವೈಜ್ಞಾನಿಕ ಚಿಂತನೆಯ ಫಲ ಎಂಬ ವಿಚಾರಕ್ಕೆ ಈಗ ಮನ್ನಣೆ ದೊರಕಿದೆ. ಇದು ಸಹಜವಾದ ಬೆಳವಣಿಗೆ. ಏಕೆಂದರೆ ಜನರ ಅಭಿವೃದ್ಧಿ ಅಗತ್ಯಗಳ ಅರಿವು ಅತ್ಯಗತ್ಯವಾಗಿದೆ. ಜನರಿಗೇನು ಬೇಕು? ಅವರಿಗೆ ಅಗತ್ಯವಿರುವುದನ್ನೆಲ್ಲ ದೇಶ ಕೊಡಬಲ್ಲದೆ? ದೇಶದ ಸಂಪನ್ಮೂಲಗಳು ಯಾವ ಮಟ್ಟದಲ್ಲಿವೆ? ಅವುಗಳನ್ನು ಲಾಭಕರವಾಗಿ ಬಳಸಿಕೊಳ್ಳುವ ರೀತಿ ಯಾವುದು? ಇದನ್ನೆಲ್ಲ ತಿಳಿಸಿಹೇಳುವ ಅಭಿವೃದ್ಧಿ ಜ್ಞಾನದ ಅಗತ್ಯ ಅತಿಶಯವಾಗಿದೆ. ಆದರೆ ದುರದೃಷ್ಟದಿಂದ ನಮ್ಮ ಅಭಿವೃದ್ಧಿ ಚಿಂತನೆಯಲ್ಲಿ ವೈಜ್ಞಾನಿಕ ದೃಷ್ಟಿಕೋನದ ಅಭಾವವಿದೆ. ಇದರಿಂದಾಗಿ ಅನೇಕ ಸಲ ಜನೋಪಯೋಗಿ ಕಾರ್ಯಗಳು ಸಮರ್ಪಕವಾಗಿ ಅನುಷ್ಠಾನವಾಗುತ್ತಿಲ್ಲ ಅಥವಾ ಬಯಸಿದ್ದು ಒಂದು, ಆಗುವುದು ಮತ್ತೊಂದು ಎಂಬ ಕಹಿ ಅನುಭವ ಆಗುತ್ತದೆ. ಪರಂಪರಾಗತ ಜಡತ್ವ ಹಾಗೂ ನಿರಾಶಾಭಾವದಿಂದ ಪರ್ಯಾಯ ಮಾರ್ಗಗಳನ್ನೂ ಕಾಣದೆ, ಅಭಿವೃದ್ಧಿಯು ಕನಸಿನ ಗಂಟಾಗಿಯೇ ಉಳಿದುಬಿಡುತ್ತದೆ. ಇದು ನಮ್ಮ ಕಳೆದ ಏಳೆಂಟು ದಶಕಗಳ ಅಭಿವೃದ್ಧಿ ಪ್ರಯತ್ನಗಳ ಅನುಭವ ಎನ್ನಬಹುದು.

೨ 12090

ವೈಜ್ಞಾನಿಕ ಚಿಂತನೆ ಆಧುನಿಕ ನಗರ ಜೀವನದಲ್ಲಿ, ಯಂತ್ರತಂತ್ರಗಳ ಬಳಕೆಯಲ್ಲಿ, ಕೈಗಾರಿಕೋದ್ಯಮಗಳಲ್ಲಿ, ಆಧುನಿಕ ಶಿಕ್ಷಣ, ಸಾರಿಗೆ ಸಂಪರ್ಕ, ಮಾಹಿತಿ ಸೇವೆಗಳಲ್ಲಿ ಅಗತ್ಯ ಎಂದು ಎಲ್ಲರೂ ಒಪ್ಪುತ್ತಾರೆ. ಆದರೆ ಗ್ರಾಮೀಣ ಬದುಕಿಗೆ ಸಾಂಪ್ರದಾಯಿಕ ಜ್ಞಾನ, ಜನಾಂಗಾಂತರ್ಗತ ವಿವೇಕ, ಸಾಂಸ್ಕೃತಿಕ ಸಂಪತ್ತು ಮತ್ತು ದೈವಬಲ ಇವಿಷ್ಟೇ ಸಾಕು ಎಂದು ನಂಬುವ ಜನರಿದ್ದಾರೆ. ವೈಜ್ಞಾನಿಕ ಚಿಂತನೆಯ ಅಗತ್ಯದ ಬಗೆಗೆ ಅವರಿಗೆ ಸುಲಭವಾಗಿ ಮನವರಿಕೆಯಾಗುವುದಿಲ್ಲ. ಅಂಥ ಚಿಂತನೆ ತಮಗೆ ಬೇಕಾಗಿಲ್ಲ ಎಂದೋ ಅಥವಾ ಅದು ತಮಗೆ ದಕ್ಕುವಂತಿಲ್ಲ ಎಂದೋ ಅವರ ಭಾವನೆ. ಆರೋಗ್ಯ-ಅನಾರೋಗ್ಯ, ಸಂತಾನ-ಕುಟುಂಬ, ಕಸಬು-ಕಲೆ, ವ್ಯಾಪಾರ-ವಾಣಿಜ್ಯ, ಬೀಜ, ಗೊಬ್ಬರ, ಫಲವತ್ತತೆ, ಕೃಷಿ ಉಪಕರಣಗಳು ಮತ್ತು ಕೃಷಿ ಪದ್ಧತಿಗಳು, ಜಾತಿ ವರ್ಗ ಇತ್ಯಾದಿ ಎಲ್ಲ ವಿಷಯಗಳಲ್ಲೂ ಸಂಪ್ರದಾಯಗಳೇ ಗ್ರಾಮೀಣರ ಮಾರ್ಗದರ್ಶಿ ಸೂತ್ರಗಳಾಗಿರುವ ಸಂಭವ ಹೆಚ್ಚು; ಹೀಗಾಗಿ ಸಾಮಾನ್ಯ ರೈತರೂ ಕೂಲಿಕಾರರೂ, ಊರಗೌಡರೂ ಊಳಿಗದವರೂ ಪಂಚಾಯತಿದಾರರೂ ಬದಲಾಗುತ್ತಿರುವ ಕಾಲದ ಅವಶ್ಯಕತೆಗಳನ್ನು ಸುಲಭವಾಗಿ ಗುರುತಿಸಲು ಅಸಮರ್ಥರಾಗುತ್ತಾರೆ. ಇವರಿಗೆ ನಾವು ವೈಜ್ಞಾನಿಕ ಚಿಂತನೆಯ ಅಗತ್ಯವನ್ನು ಮನಗಾಣಿಸಿ ಕೊಡಬೇಕು. ಅಂಥ ಚಿಂತನೆ ಅನುಭವದಿಂದ ಬರುತ್ತದೆ. ಸಾಕ್ಷ್ಯಾಧಾರಗಳ ಮೇಲೆ ಅವಲಂಬಿತವಾಗಿರುತ್ತದೆ. ವಸ್ತುನಿಷ್ಠನಾಗಿ ಯೋಚಿಸುವುದರಿಂದ - ಅಂದರೆ ಇದ್ದುದನ್ನು ಇದ್ದಂತೆ ನೋಡುವುದರಿಂದ ಮತ್ತು ನಾವು ಸಂಗ್ರಹಿಸಿದ ಆಧಾರಾಂಶಗಳನ್ನು ವಿಶ್ಲೇಷಿಸಿ ನೋಡಿ ನಿರ್ಣಯಕ್ಕೆ ಬರುವುದರಿಂದ ಸಾಧ್ಯವಾಗುತ್ತದೆ. ನೈತಿಕವಾಗಿ ತಟಸ್ಥವಾಗಿರುವುದು ಅದರ ಲಕ್ಷಣ. ಕಾರ್ಯ-ಕಾರಣ ಸಂಬಂಧಗಳನ್ನು ಕಾಣುವುದು ಅದರ ಉದ್ದೇಶ. ಇವೆಲ್ಲವನ್ನು ಗ್ರಾಮೀಣರಿಗೆ ಅವರಿಗೆ ನಿಲುಕುವ ರೀತಿಯಲ್ಲಿ ಹೇಳಿಕೊಡುವುದು ಸುಲಭದ ಕೆಲಸವಲ್ಲ. ಆದರೆ ಅದು ಅವರ ಅಭಿವೃದ್ಧಿಗೆ ಅಗತ್ಯ ಎಂಬುದು ಸುಳ್ಳಲ್ಲ.

ಹಿಂದೆ ಗ್ರಾಮೀಣರು ತಮ್ಮ ಬದುಕಿನ ಸಮಸ್ಯೆಗಳನ್ನೆಲ್ಲ ಸಾಂಪ್ರದಾಯಿಕ ಚಿಂತನೆಯಿಂದಲೇ ಬಗೆಹರಿಸಿಕೊಳ್ಳುತ್ತಿದ್ದರು. ಆದರೆ ಜನಸಂಖ್ಯೆ ಹೆಚ್ಚಿ, ಸಂಪನ್ಮೂಲಗಳು ಬರಿದಾದಂತೆ, ಗ್ರಾಮೀಣ ಬಡತನ ಹಾಗೂ ನಿರುದ್ಯೋಗ ಹೆಚ್ಚಿ ನಗರಾಭಿಮುಖ ವಲಸೆ ತೀವ್ರವಾದಂತೆ, ನಗರದ ವಿಲಾಸೀ ಜೀವನದ ಆಕರ್ಷಣೆಗಳು ಗ್ರಾಮೀಣ ಜನರನ್ನು ತಮ್ಮತ್ತ ಸೆಳೆದಂತೆ, ಹಣಗಳಿಸಿ ಉಪಭೋಗ

ಹೆಚ್ಚಿಸಿಕೊಳ್ಳುವುದು ಗ್ರಾಮೀಣರಿಗೆ ಪ್ರತಿಷ್ಠೆಯ ವಿಷಯವಾಗತೊಡಗಿದಂತೆ ಗ್ರಾಮೀಣ ಬದುಕು ಕೂಡ ಸಂಕೀರ್ಣವಾಗುತ್ತ ಹೋಗಿದೆ, ಅವರ ಗುರಿಗಮ್ಯಗಳು ಮಾರ್ಪಾಟು ಹೊಂದಿವೆ. ದುರ್ದೈವದ ಸಂಗತಿಯೆಂದರೆ ಈ ಪ್ರಕ್ರಿಯೆಯಲ್ಲಿ ಗ್ರಾಮಗಳು ನಿರ್ವಿಣ್ಣವಾಗುತ್ತ ಹೋಗಿವೆ. ವಿವೇಕಿಗಳು ಹೇಳುವಂತೆ ಗ್ರಾಮೀಣ ಜನರು ಪ್ರಜ್ಞಾವಂತರಾಗಿ ತಮ್ಮ ಬದುಕಿನ ಬಗೆಗೆ ಚಿಂತಿಸದೆ, ಬೆಳೆಯುತ್ತಿರುವ ಜನಸಂಖ್ಯೆಯನ್ನು ಬರಿದಾಗುತ್ತಿರುವ ಸಂಪನ್ಮೂಲಗಳನ್ನು ನಿಯಂತ್ರಿಸದೆ, ತಮ್ಮಲ್ಲಿ ಅಭಿವೃದ್ಧಿ ಸಂಸ್ಕೃತಿಯೊಂದನ್ನು ಮೈಗೂಡಿಸಿಕೊಳ್ಳದೇ ಹೋದರೆ ಮುಂದಿನ ದಿನಗಳಲ್ಲಿ ಗ್ರಾಮೀಣ ಬದುಕು ಇನ್ನಷ್ಟು ಅಸಹನೀಯವಾಗುವುದು ಖಂಡಿತ.

೩

ಗ್ರಾಮೀಣ ಅಭಿವೃದ್ಧಿಯೆ? ಅದೊಂದು ಮುಗಿದುಹೋದ ಕಥೆ. ಅದರ ಬಗೆಗೆ ವೈಜ್ಞಾನಿಕವಾಗಿ ಚಿಂತಿಸುವುದು ಏನಿದೆ? ಎನ್ನುವ ಸಿನಿಕರಿದ್ದಾರೆ. ಅವರಿಗೆ ನಮ್ಮ ಉತ್ತರವೊಂದೇ: ಭಾರತದಲ್ಲಿ ಗ್ರಾಮೀಣ ಅಭಿವೃದ್ಧಿ ಒಂದಿಷ್ಟು ಸೋತಿರಬಹುದು, ಆದರೆ ಅದು ಗೆಲ್ಲಲೇಬೇಕು. 'ಮರಳಿ ಯತ್ನವ ಮಾಡು' ಕಥೆಯಲ್ಲಿ ಬರುವ ಜೇಡರಹುಳುದಂತೆ ಮತ್ತೆಮತ್ತೆ ಮೇಲೇರುವ ಪ್ರಯತ್ನ ಆಗಲೇ ಬೇಕು. ಸರಕಾರಗಳೂ ಸಂಸ್ಥೆಗಳೂ ವ್ಯಕ್ತಿಗಳೂ ಮತ್ತೆಮತ್ತೆ ಆ ಬಗೆಗೆ ಪ್ರಯತ್ನಮಾಡುತ್ತಲೇ ಇದ್ದಾರೆ. ಕೇಂದ್ರ ಮತ್ತು ರಾಜ್ಯ ಸರಕಾರಗಳು ಗುರುಗಾಂವ್ ಯೋಜನೆ (೧೯೨೭), ಎಟಾವಾ ಯೋಜನೆ (೧೯೪೮), ಸಾಮುದಾಯಿಕ ಅಭಿವೃದ್ಧಿ ಯೋಜನೆ (ಸಿ.ಡಿ.ಪಿ.) ೧೯೫೨, ಸಮಗ್ರ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮ (ಐ.ಆರ್.ಡಿ.ಪಿ.), ಜವಾಹರ ರೋಜಗಾರ್ ಯೋಜನೆ ಮುಂತಾದ ಹೆಸರುಗಳಲ್ಲಿ ಅಭಿವೃದ್ಧಿ ಕಾರ್ಯಚಟುವಟಿಕೆಗಳನ್ನು ನಡೆಸಿರುವುದು ಎಲ್ಲರಿಗೂ ತಿಳಿದ ವಿಷಯ. ಹಾಗೆಯೇ ಸರಕಾರೇತರ ಕಾರ್ಯಕ್ರಮಗಳಾದ ರವೀಂದ್ರನಾಥ ಠಾಕೂರರ ಶ್ರೀನಿಕೇತನ ಯೋಜನೆ, ಕನ್ಯಾಕುಮಾರಿಯ ವೈ. ಎಂ. ಸಿ.ಎ. ಹಮ್ಮಿಕೊಂಡಿದ್ದ ಮಾರ್ತಾಂಥಮ್ ಯೋಜನೆ, ಗಾಂಧೀಜಿಯವರ ಸೇವಾಗಾಂವ್ (ಸೇವಾ ಗ್ರಾಮ) ಯೋಜನೆ, ತೀರ ಇತ್ತೀಚಿನ ಅಣ್ಣಾ ಹಜಾರೆ ನೇತೃತ್ವದ ಹಳೇಗಾಂವ್-ಸಿದ್ದಿ ಗ್ರಾಮಾಭಿವೃದ್ಧಿ ಯೋಜನೆ ಇವುಗಳಂಥ ಹಲವನ್ನು ಹೆಸರಿಸಬಹುದು.

ಕರ್ನಾಟಕದಲ್ಲಿಯೇ ಇಂಥ ಒಂದು ಪ್ರಯತ್ನವನ್ನು ನಾವೀಗ ಕಣ್ಣಾರೆ ಕಾಣಬಹುದು. ದಕ್ಷಿಣ ಕನ್ನಡ ಜಿಲ್ಲೆಯ ಹಿಂದುಳಿದ ಬೆಳ್ತಂಗಡಿ ತಾಲ್ಲೂಕಿನ ಎಂಬತ್ತೊಂದು ಹಳ್ಳಿಗಳಲ್ಲಿ ಗ್ರಾಮಾಭಿವೃದ್ಧಿಯ ಯಶಸ್ವಿ ಪ್ರಯೋಗವೊಂದು ಧರ್ಮಸ್ಥಳದ ಧರ್ಮಾಧಿಕಾರಿ ಡಾ. ಡಿ. ವೀರೇಂದ್ರ ಹೆಗ್ಗಡೆಯವರ ನೇತೃತ್ವದಲ್ಲಿ ನಡೆದಿದೆ. ಚಿಕಿತ್ಸಕ ಬುದ್ಧಿಯ ಅವರು ೧೯೮೨ರಲ್ಲಿ ಪ್ರಾರಂಭಗೊಂಡ ತಮ್ಮ ಗ್ರಾಮಾಭಿವೃದ್ಧಿ ಯೋಜನೆಯಲ್ಲಿ ಕಂಡುಬಂದ ನ್ಯೂನತೆ ದೌರ್ಬಲ್ಯಗಳನ್ನು ಕಾಲಕಾಲಕ್ಕೆ ನಿವಾರಿಸಿಕೊಳ್ಳುತ್ತ, ಸೂಕ್ತ ಬದಲಾವಣೆಗಳನ್ನು ಅಳವಡಿಸಿಕೊಳ್ಳುತ್ತ, ಅಭಿವೃದ್ಧಿಯ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತ, ಅನುಭವಗಳಿಂದ ತಾವು ಕಲಿಯುವ ಜೊತೆಗೆ ಇತರರಿಗೆ ಅಭಿವೃದ್ಧಿಯ ವೈಜ್ಞಾನಿಕ ಚಿಂತನೆಯ ಹಾಗೂ ಅನುಷ್ಠಾನದ ಮಾದರಿಗಳನ್ನು ಒದಗಿಸುತ್ತ ಬಂದಿದ್ದಾರೆ. ಆ ಬಗೆಗೆ ಮುಂದೆ ಹೆಚ್ಚು ವಿವರವಾಗಿ ತಿಳಿಯೋಣ.

೪

ಗ್ರಾಮೀಣ ಅಭಿವೃದ್ಧಿಯಲ್ಲಿ ವೈಜ್ಞಾನಿಕ ಚಿಂತನೆ ಮತ್ತು ಅನುಷ್ಠಾನದ ಅಗತ್ಯದ ಬಗೆಗೆ ಕೆಲವು ಅಂಶಗಳನ್ನೀಗ ಗಮನಿಸಬಹುದು.

೧. ಗ್ರಾಮೀಣ ಅಭಿವೃದ್ಧಿಯ ಬಗೆಗೆ ಪರಂಪರೆಯಿಂದ ಬಳುವಳಿಯಾಗಿ ಬಂದ ಹಲವು ವಿಷಯ-ವಸ್ತುಗಳು, ದೃಷ್ಟಿ-ಧೋರಣೆಗಳು ಈಗ ನಿರುಪಯುಕ್ತವೋ ಹಾನಿಕಾರಕವೋ ಆಗಿವೆ. ಉದಾಹರಣೆಗೆ ಮಳೆಯ ನಕ್ಷತ್ರಗಳನ್ನೇ ನಂಬಿ ಬೇಸಾಯ ಮಾಡುವುದು, ಮಕ್ಕಳಿರಲಮ್ಮ ಮನೆ ತುಂಬಾ ಎಂದು ಮಿತಿ ಮೀರಿದ ಸಂಖ್ಯೆಯಲ್ಲಿ ಮಕ್ಕಳನ್ನು ಹೆರುವುದು, ಹೆಣ್ಣಿಗೇಕೆ ಶಿಕ್ಷಣ ಎಂದು ಮನೆಯಲ್ಲಿ ಕೂಡಿಹಾಕುವುದು, ಚಿಕ್ಕ ವಯಸ್ಸಿನಲ್ಲೇ ಹೆಣ್ಣುಗಂಡುಗಳ ಮದುವೆ ನಡೆಸುವುದು, ವರದಕ್ಷಿಣೆ ಕೊಡುವುದು ಅಥವಾ ತೆಗೆದುಕೊಳ್ಳುವುದು, ಜಾತಿಗಳ ಪರಂಪರಾಗತ ಕಸುಬಿಗೆ ಅಂಟಿಕೊಳ್ಳುವುದು, ಮದುವೆ-ಮುಂಜಿ-ಮನೆತುಂಬುವ ನೆಪದಲ್ಲಿ ದುಂದುಮಾಡುವುದು, ವಿಪರೀತ ಸಾಲ ಮಾಡುವುದು, ಭೂಮಿಯ ಸಾರ ಪರೀಕ್ಷೆ ಮಾಡದೆ ಬೆಳೆ ತೆಗೆಯುವುದು, ಮಾರುಕಟ್ಟೆಯಲ್ಲಿನ ಬೇಡಿಕೆಯನ್ನು ಗಮನಿಸದೆ ವಿವಿಧ ಕೃಷಿ ಬೆಳೆ ತೆಗೆಯುವುದು ಇತ್ಯಾದಿ ಹಿಂದೊಂದು ಕಾಲದ ನಡವಳಿಕೆಗಳು ಇಂದು ಗ್ರಾಮೀಣ ಸಮಾಜದಲ್ಲಿ ಸಂಕಷ್ಟಗಳನ್ನು ತರುತ್ತವೆ. ಇವುಗಳು ಅವೈಜ್ಞಾನಿಕವೂ ಅಪಾಯಕರವೂ ಎಂದು ಗ್ರಹಿಸಿ, ಅವುಗಳನ್ನು ನಿವಾರಿಸುವ ಮಾರ್ಗೋಪಾಯಗಳನ್ನು ಕಂಡುಹಿಡಿಯುವುದು ಹಾಗೂ ಪ್ರಚಾರ ಮಾಡುವುದು ಈ ಕಾಲದ ಅಗತ್ಯ. ವೈಜ್ಞಾನಿಕ ಚಿಂತನೆಯಿಂದ ಮಾತ್ರ ಇದು ಸಾಧ್ಯವಾದೀತು.

೨. ಗ್ರಾಮೀಣ ಭಾರತ ತ್ವರಿತವಾದ ಪರಿವರ್ತನೆಯ ಹಾದಿಯಲ್ಲಿದೆ. ಇಂಥ ಪರಿವರ್ತನೆಯ ದಿಕ್ಕುದೆಸೆಗಳನ್ನು ಅರ್ಥಮಾಡಿಕೊಳ್ಳುವುದು ಅಗತ್ಯ. ಹಾಗೆಯೇ ಪರಿವರ್ತನೆಯ ಕಾರಣಗಳನ್ನು ಹಾಗೂ ಪರಿಣಾಮಗಳನ್ನು ಎಲ್ಲ ಗ್ರಾಮೀಣರೂ, ಗ್ರಾಮೀಣ ಅಭಿವೃದ್ಧಿಯಲ್ಲಿ ಆಸಕ್ತಿಯುಳ್ಳ ಎಲ್ಲರೂ ಅರ್ಥಮಾಡಿಕೊಳ್ಳಬೇಕು. ಇದು ಅಭಿವೃದ್ಧಿಯ ವೈಜ್ಞಾನಿಕ ಚಿಂತನೆಯಿಂದ ಸಾಧ್ಯ.

೩. ಗ್ರಾಮೀಣ ಪರಿವರ್ತನೆ ಮತ್ತು ಅಭಿವೃದ್ಧಿ ಪ್ರಯತ್ನಗಳು ಯಾವಾಗಲೂ ಇಚ್ಛಿತ ಪರಿಣಾಮಗಳನ್ನು ಕೊಡುತ್ತವೆ ಎನ್ನಲು ಸಾಧ್ಯವಿಲ್ಲ. ಅವುಗಳು ಕೆಲವೊಮ್ಮೆ ಸಮುದಾಯ ಜೀವನಕ್ಕೆ ಹಾನಿಕಾರವೂ ಆಗಬಹುದು. ಉದಾಹರಣೆಗೆ, ನೀರಾವರಿ ಅನುಕೂಲವಿರುವ ರೈತರಿಗೆ ಕೈತುಂಬ ಆದಾಯ ಬರುವುದರ ಜೊತೆಗೆ ಕುಡಿತ, ಜೂಜು, ಶೋಕಿಗಳ ವ್ಯಸನಗಳು ಹೆಚ್ಚಿ ಕುಟುಂಬಗಳ - ಕೆಲವೊಮ್ಮೆ ಇಡೀ ಗ್ರಾಮಗಳ ಅಭಿವೃದ್ಧಿಯ ಲಾಭಗಳು ಕೇವಲ ದುಷ್ಫಲಗಳನ್ನು ಮಾತ್ರ ಉಣ್ಣುವುದನ್ನು ವಸ್ತುನಿಷ್ಠ ಅಧ್ಯಯನಗಳು ಹೇಳಿವೆ. ಸಾಮಾಜಿಕ ಪರಿವರ್ತನೆಯನ್ನು ಬಯಸುವವರು ಹಾಗೂ ಅಭಿವೃದ್ಧಿಯ ಕಾರ್ಯಭಾರಿಗಳು ವೈಜ್ಞಾನಿಕ ಚಿಂತನೆಯಿಂದ ದುಷ್ಫಲಗಳನ್ನು ತಡೆಯಬಹುದಾಗಿದೆ.

೪. ಗ್ರಾಮೀಣ ಸಂದರ್ಭದಲ್ಲಿ ಹಲವಾರು ಸಾಮಾಜಿಕ ಅನಿಷ್ಟಗಳು ಅಭಿವೃದ್ಧಿಯ ದಾರಿಯಲ್ಲಿ ಮುಳ್ಳಿನಂತಿವೆ ಹಾಗೂ ಗ್ರಾಮೀಣರನ್ನು ಈವರೆಗೆ ಅಧಿಕಾರ ವಂಚಿತರನ್ನಾಗಿ ಮಾಡಿದೆ ಎಂಬುದನ್ನು ವೈಜ್ಞಾನಿಕ ಚಿಂತನೆ ತೋರಿಸಿಕೊಟ್ಟಿದೆ. ಅನಕ್ಷರತೆ, ಒಕ್ಕಲೆಬ್ಬಿಸುವುದು, ದುಬಾರಿ ಗೇಣಿ, ಸಂಪ್ರದಾಯ ಶರಣತೆ ಇವೆಲ್ಲ ಗ್ರಾಮೀಣ ಅಭಿವೃದ್ಧಿಯ ವೈರಿಗಳು. ಇವುಗಳ ನಿರ್ಮೂಲನೆಗೆ ಜನರ ಮನಸ್ಸನ್ನು ಒಲಿಸುವ ಮೂಲಕ ಇಂಥ ಚಿಂತನೆ ಜನಸಮುದಾಯದ ಪ್ರಜಾಪ್ರಭುತ್ವ ಮಾರ್ಗವನ್ನು ಬಲಪಡಿಸುತ್ತದೆ. ಸಮುದಾಯ ಜೀವನಕ್ಕೆ ಅತ್ಯಗತ್ಯವಾದ ಸಹಕಾರ ಚಟುವಟಿಕೆಗಳ ಶಕ್ತಿಸಾಮರ್ಥ್ಯವನ್ನೂ ದೋಷ ನ್ಯೂನತೆಗಳನ್ನೂ ಅದು ಸೂಚಿಸಬಲ್ಲದು.

೫. ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವ ಅನೇಕ ದೇಶಗಳ ಒಂದು ದೊಡ್ಡ ಸಮಸ್ಯೆಯೆಂದರೆ ಯಾವ ಜನವರ್ಗಗಳ ಸಲುವಾಗಿ ಬಹುಸಹಸ್ರ ಕೋಟಿ ಹಣವನ್ನು ಖರ್ಚುಮಾಡಲಾಗುತ್ತಯೋ ಆ ಜನರಿಗೆ ಅಭಿವೃದ್ಧಿಯ ಲಾಭ ಮುಟ್ಟದೇ ಹೋಗಬಹುದು. ಬಡವರಿಗೆ, ಬುಡಕಟ್ಟುಗಳಿಗೆ, ಹಿಂದುಳಿದ ಜನವರ್ಗಗಳಿಗೆ, ಹಿಂದುಳಿದ ಪ್ರದೇಶಗಳಿಗೆ ಸರಕಾರ ಖರ್ಚುಮಾಡುವ ಹಣದಲ್ಲಿ ಒಂದು ದೊಡ್ಡ ಪಾಲು ಅವರಿಗೆ ಲಾಭ ತರದೇ ಪುಢಾರಿಗಳಿಗೆ, ಗುತ್ತಿಗೆದಾರರಿಗೆ, ದಲ್ಲಾಲಿಗಳಿಗೆ, ಆರ್ಥಿಕವಾಗಿ ಅಥವಾ ಸಾಮಾಜಿಕವಾಗಿ ಅನುಕೂಲವಂತರಿಗೆ ಲಾಭ ತರಬಹುದು. ಶ್ಯಾಮಚರಣ ದುಬೆಯವರಂಥ ಸಮಾಜವಿಜ್ಞಾನಿಗಳು ಮೂವತ್ತು ವರ್ಷಗಳಷ್ಟು ಹಿಂದೆಯೇ ವೈಜ್ಞಾನಿಕವಾಗಿ ತೋರಿಸಿಕೊಟ್ಟ ನಂತರವೂ ಇಂಥ ಹಣ ಸೋರುವಿಕೆ ನಿಂತಿಲ್ಲ.

೬. ನಮ್ಮ ಅಭಿವೃದ್ಧಿಯ ಮೂಲಾಧಾರ ಕೃಷಿ. ಆದುದರಿಂದ ಕೃಷಿ ಮತ್ತು ಕೃಷಿ ಆಧಾರಿತ ಉದ್ಯೋಗಗಳು ಸುಧಾರಿಸಿದರೆ ಮಾತ್ರ ರಾಷ್ಟ್ರೀಯ ಉತ್ಪನ್ನದಲ್ಲಿ ಹೆಚ್ಚಳ ಸಾಧ್ಯ. ಇದನ್ನು ಸಾಧಿಸಬೇಕಾದರೆ ಯೋಜಿತ ಅಭಿವೃದ್ಧಿಯ ಪರಿಪೂರ್ಣ ಜ್ಞಾನ ಅವಶ್ಯಕ ವೆಂದು ಬೇರೆ ಹೇಳಬೇಕಾಗಿಲ್ಲ. ಹಾಗೆಯೇ ಈ ಚಿಂತನೆ ಈಗ ಗ್ರಾಮೀಣ ಪ್ರದೇಶವನ್ನು ಎದುರಿಸುತ್ತಿರುವ ಒಂದು ಮುಖ್ಯ ಸಮಸ್ಯೆಯಾದ ಗ್ರಾಮ-ನಗರ ಮುಖಾಮುಖಿ ಮತ್ತು ನಗರಾಭಿಮುಖಿ ವಲಸೆಯನ್ನು ಅರ್ಥಮಾಡಿಕೊಳ್ಳಲು ಸಹಕಾರಿಯಾಗಿದೆ. ಹೆಚ್ಚು ಸಮರ್ಥರೂ ಉದ್ಯಮಶೀಲರೂ ಆದ ಗ್ರಾಮೀಣರನ್ನು ನಗರಗಳತ್ತ ರವಾನಿಸುವ ಈ ಒಂದು ರೀತಿಯ "ಗ್ರಾಮೀಣ ಪ್ರತಿಭಾ ಪಲಾಯನ" ಗ್ರಾಮಗಳನ್ನು ಇನ್ನಷ್ಟು ಅಸಹಾಯಕಸ್ಥಿತಿಗೆ ನೂಕಿದೆ. ಗ್ರಾಮೀಣರಲ್ಲಿ ವೈಜ್ಞಾನಿಕ ಚಿಂತನೆಯನ್ನು ಕುದುರಿಸುವುದು ಈ ಸಮಸ್ಯೆಯನ್ನು ಬಗೆಹರಿಸಲಿರುವ ಒಂದು ಉತ್ತಮ ಮಾರ್ಗ.

೭. ಗ್ರಾಮೀಣ ಅಭಿವೃದ್ಧಿ ಚಿಂತನೆ ಇನ್ನೂ ಹಲವು ರೀತಿಗಳಲ್ಲಿ ಮಹತ್ವ ಪಡೆದಿದೆ. ಈಗ ಸರಕಾರ ಪೋಷಿತವಾದ ರೀತಿಯ ಗ್ರಾಮಾಭಿವೃದ್ಧಿ ಯೋಜನೆಗಳು ಅಸ್ತಿತ್ವಕ್ಕೆ ಬಂದಿವೆ. ಮಕ್ಕಳು, ಮಹಿಳೆಯರು, ಹಿಂದುಳಿದ ವರ್ಗಗಳು, ಊನ ಶಕ್ತರು, ಆದಿವಾಸಿಗಳು, ಅಲ್ಪ ಸಂಖ್ಯಾತರು, ನಿರಾಶ್ರಿತರು, ನೈಸರ್ಗಿಕ ವಿಪತ್ತಿಗೆ ಒಳಗಾದವರು, ಸಣ್ಣ ಕೃಷಿಕರು, ಕೃಷಿ ಕೂಲಿಕಾರರು, ಜೀತ ವಿಮುಕ್ತರು - ಹೀಗೆ ವಿಭಿನ್ನ ವರ್ಗಗಳಿಗೆ ಸಂಬಂಧಪಟ್ಟ ಅಭಿವೃದ್ಧಿ ಯೋಜನೆಗಳನ್ನು ನಿರ್ವಹಿಸಲು ನೇಮಕವಾದ ಕಾರ್ಯಕರ್ತರ ಹಾಗೂ ಅಧಿಕಾರಿಗಳ ತರಬೇತಿಯಲ್ಲಿ ವೈಜ್ಞಾನಿಕ ಚಿಂತನೆಯನ್ನು ಅಳವಡಿಸಿಕೊಳ್ಳಲು ಪ್ರೋತ್ಸಾಹಿಸುವುದು ಅತ್ಯಗತ್ಯವಾಗಿದೆ. ಹಾಗೆಯೇ ಇದರ ಲಾಭವನ್ನು ಯೋಜಕರು, ಆಡಳಿತಗಾರರು, ಸಾರ್ವಜನಿಕ ಸಂಸ್ಥೆಗಳು, ಸ್ವಯಂಸೇವಾ ಘಟಕಗಳು, ಸಮಾಜ ಕಾರ್ಯಕರ್ತರು

ಇತ್ಯಾದಿ ಎಲ್ಲ ಆಸಕ್ತರು ಪಡೆದುಕೊಳ್ಳಬಹುದಾಗಿದೆ. ಹೀಗಾಗಿ ಯೋಜಿತ ಅಭಿವೃದ್ಧಿಯನ್ನು ಬಯಸುವ ರಾಷ್ಟ್ರಗಳು ಗ್ರಾಮೀಣ ಅಭಿವೃದ್ಧಿಯಲ್ಲಿ ವೈಜ್ಞಾನಿಕ ಚಿಂತನೆಗೆ ಹೆಚ್ಚುಹೆಚ್ಚಾಗಿ ಪ್ರಾಧಾನ್ಯತೆ ಕೊಡುತ್ತಿವೆ.

೫

ಈ ಲೇಖನದ ಮೊದಲನೆಯ ಭಾಗದಲ್ಲಿ ವೈಜ್ಞಾನಿಕ ಚಿಂತನೆಯನ್ನು ವ್ಯಾಖ್ಯಾನಿಸಿದ ಮೇಲೆ, ಮುಂದಿನ ಎರಡು ಭಾಗಗಳಲ್ಲಿ ಗ್ರಾಮೀಣ ಅಭಿವೃದ್ಧಿಯಲ್ಲಿ ವೈಜ್ಞಾನಿಕ ಚಿಂತನೆಯ ಅನ್ವಯದ ಬಗೆಗೆ ಹೇಳಿದೆ. ನಾಲ್ಕನೆಯ ಗ್ರಾಮೀಣಾಭಿವೃದ್ಧಿಯಲ್ಲಿ ಎಷ್ಟು ಅಗತ್ಯ ಎಂಬುದನ್ನು ಎತ್ತಿಹೇಳಲಾಗಿದೆ. ಪ್ರಸ್ತುತ ಭಾಗದಲ್ಲಿ ಈ ಲೇಖಕನಿಗೆ ಸುಪರಿಚಿತವಾದ ಕರ್ನಾಟಕದ ಮಾದರಿ ಗ್ರಾಮಾಭಿವೃದ್ಧಿ ಸಂದರ್ಭವೊಂದರಲ್ಲಿ ವೈಜ್ಞಾನಿಕ ಚಿಂತನೆಯನ್ನು ಹೇಗೆ ಬಳಸಿಕೊಳ್ಳಲಾಗಿದೆಯೆಂದು ತೋರಿಸಿಕೊಡುವ ಉದ್ದೇಶವಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಹಿಂದುಳಿದ ತಾಲ್ಲೂಕು ಬೆಳ್ತಂಗಡಿಗೆ ಸೇರಿದ, ಬಡಜನರ, ಗುಡ್ಡಗಾಡು ವಾಸಿಗಳ ನೆಲೆಯಾದ ಎಂಬತ್ತೊಂದು ಹಳ್ಳಿಗಳಲ್ಲಿ ೧೯೮೨ರಲ್ಲಿ ಗ್ರಾಮಾಭಿವೃದ್ಧಿ ಸಾಧಿಸುವ ಉದ್ದೇಶದಿಂದ ಗ್ರಾಮಾಭಿವೃದ್ಧಿ ಮತ್ತು ಸ್ವ-ಉದ್ಯೋಗ ತರಬೇತಿ ಕೇಂದ್ರ (ರುಡ್‌ಸೆಟ್) ಹಾಗೂ ಶ್ರೀಕ್ಷೇತ್ರ ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆ (ಎಸ್‌ಕೆಡಿ ಆರ್‌ಡಿಪಿ) ಎಂಬ ಎರಡು ಯೋಜನೆಗಳಿಗೆ ಶ್ರೀಕಾರಹಾಕಲಾಯಿತು. ಇದರ ಹಿಂದೆ ಸಾಕಷ್ಟು ದೀರ್ಘಕಾಲದ, ವೈಜ್ಞಾನಿಕವೆನ್ನಬಹುದಾದ ಚಿಂತನೆಯಿದೆ. ಯೋಜನೆಯ ರೂವಾರಿಗಳಾದ ಡಾ. ಡಿ. ವೀರೇಂದ್ರ ಹೆಗ್ಗಡೆಯವರು ಈ ವಿಷಯದಲ್ಲಿ ಪಾಶ್ಚಿಮಾತ್ಯ ರೀತಿಯಲ್ಲಿ ತರಬೇತಿ ಪಡೆದವರಲ್ಲ ಹಾಗೂ ಅಭಿವೃದ್ಧಿಯ ಬಗೆಗಿನ ಉದ್ಗ್ರಂಥಗಳನ್ನು ಆಗ ಓದಿರಲಿಲ್ಲ ಅಥವಾ ಡಜನುಗಟ್ಟಲೆ ಸರ್ವೇಕ್ಷಣೆಗಳನ್ನು ನಡೆಸಿರಲಿಲ್ಲ. ಅವರ ಅಭಿವೃದ್ಧಿ ಚಿಂತನೆಯೇನಿದ್ದರೂ ಅದು 'ಸ್ಥಳೀಯ'ವಾಗಿತ್ತು. ಆದರೆ ಇತರರಿಗಿಲ್ಲದ ಒಂದು ಅನುಕೂಲ ಅವರಿಗೆ ಒದಗಿಬಂದಿತ್ತು. ಅದೇನೆಂದರೆ ಪ್ರತಿದಿನ ಧರ್ಮಸ್ಥಳ ಕ್ಷೇತ್ರಕ್ಕೆ ಬರುವ ಹಲವು ನೂರು ಜನರು ತಮ್ಮ ಕುಟುಂಬದ ಮತ್ತು ಗ್ರಾಮದ ವಿವಿಧ ಸಮಸ್ಯೆಗಳ ಬಗೆಗೆ ಹೇಳಿಕೊಳ್ಳುತ್ತಿದ್ದರು. ವರ್ಷಾನುಕಾಲ ಇವುಗಳನ್ನು ಕೇಳುತ್ತಿದ್ದ ಅವರು ತಮ್ಮ ಕಂಪ್ಯೂಟರ್ - ಸದೃಶ ಮನಸ್ಸಿನಲ್ಲಿ ಎಲ್ಲವನ್ನೂ ದಾಖಲಿಸಿಕೊಂಡರು ಹಾಗೂ ಚಿಕಿತ್ಸಕ ಬುದ್ಧಿಯಿಂದ ವಿಶ್ಲೇಷಿಸಿದರು. ಅವರ ಮನಸ್ಸಿನಲ್ಲಿ ನಿಧಾನವಾಗಿ ಗ್ರಾಮಾಭಿವೃದ್ಧಿಯ ಯೋಜನೆಯೊಂದು ರೂಪುಗೊಂಡಿತು.

ಆ ಹೊತ್ತಿನಲ್ಲಿ ಬೆಳ್ತಂಗಡಿ ತಾಲ್ಲೂಕಿನ ಬಡತನರೇಖೆಯ ಕೆಳಗೆ ಬದುಕುತ್ತಿದ್ದ ಸುಮಾರು ೧೮,೦೦೦ ಸಣ್ಣ ಅಥವಾ ಅತಿಸಣ್ಣ ರೈತ ಕುಟುಂಬಗಳಿದ್ದವು. ಈ ರೈತರ ಹೆಸರಿನಲ್ಲಿ ಚಿಕ್ಕಗಾತ್ರದ ಸ್ವಂತ ಜಮೀನೇನೋ ಇತ್ತು, ಆದರೆ ಅದರಿಂದ ಬರುವ ಆದಾಯ ಕುಟುಂಬವನ್ನು ಸಾಕುವಷ್ಟು ಇರಲಿಲ್ಲ. ಹೀಗಾಗಿ ಅವರು ಬೇರೆಯವರ ಹೊಲದಲ್ಲಿ ಕೃಷಿ ಕಾರ್ಮಿಕರಾಗಿ ಗೇಯುತ್ತಿದ್ದರು. ಇಂಥವರಿಗಾಗಿಯೇ ಒಂದು ವ್ಯವಸ್ಥಿತ ಯೋಜನೆ ರೂಪುಗೊಂಡಿತು. ಆ ಬಡರೈತರ ಕೃಷಿ ಭೂಮಿಯನ್ನು ಸುಧಾರಿಸಿ ಅವರಿಗಾಗಿ ಸಂಪತ್ತು ಸೃಷ್ಟಿಸುವುದು ಮೊದಲ ಆದ್ಯತೆಯ ಕೆಲಸವಾಯಿತು. ಹೆಗ್ಗಡೆಯವರ ಮಾರ್ಗದರ್ಶನದಲ್ಲಿ ಹಾಗೂ ಶ್ರೀಕ್ಷೇತ್ರ ಯೋಜನೆಯಿಂದ ನೇಮಕಗೊಂಡ ಸೇವಾನಿರತರೆಂಬ ಕಾರ್ಯಕರ್ತರ ಸಹಕಾರದೊಂದಿಗೆ ಕೃಷಿಕರು ವಾರಕ್ಕೆ ಒಂದು ದಿನ ಪಾಳುಬಿಟ್ಟ ತಮ್ಮ ಸ್ವಂತ ಭೂಮಿಯಲ್ಲಿ ಕೃಷಿಗೆ ಸಂಬಂಧಿಸಿದ ಕೆಲಸ ಮಾಡುತ್ತಿದ್ದರು. ಯೋಜನೆಯ ವತಿಯಿಂದ ಅವರಿಗೆ ಹಾರೆ ಪಿಕ್ಕಾಸಿ ಬುಟ್ಟಿಗಳಂಥ ಸಲಕರಣೆಗಳನ್ನು ಒದಗಿಸುವುದಲ್ಲದೆ ಕೆಲಸದ ದಿನದಂದು ಊಟಕ್ಕೆ ಬೇಕಾದ ಅಕ್ಕಿಯನ್ನು ಕೂಲಿಯಾಗಿ ಕೊಡಲಾಯಿತು. ಜಮೀನಿಗೆ ಬೇಲಿ ಹಾಕುವುದು, ನೆಲ ಸಮತಟ್ಟು ಮಾಡುವುದು, ಬಾವಿ ತೋಡುವುದು, ನಾಟಿಗೆ ತಯಾರುಮಾಡುವುದು ಮುಂತಾದ ಕೆಲಸಗಳು ಕ್ರಮಕ್ರಮವಾಗಿ ಪ್ರಾರಂಭವಾಗಿ ಅವರ ೩೦ ಸಾವಿರ ಎಕರೆ ಬಂಜರು ಭೂಮಿ ಕೃಷಿಯೋಗ್ಯ ಭೂಮಿಯಾಗಿ, ಸಂಪತ್ತಾಗಿ ಪರಿವರ್ತನೆಗೊಂಡಿತು. ಇದು ನಡೆದದ್ದು ಸರಕಾರದ ಸದೃಶ ಯೋಜನೆಗಳಿಗಿಂತ ತುಸು ಮೊದಲೇ ಎಂಬುದನ್ನೂ ಹಾಗೂ ಸರಕಾರದ ಧನಸಹಾಯ, ನಿರ್ಬಂಧ, ಕಚೇರಿಶಾಹಿ, ಶಿಕ್ಷೆಗಳ ಗೊಂದಲವಿಲ್ಲದೇ ಎಂಬುದನ್ನೂ ಗಮನಿಸಬಹುದು.

ಹೀಗೆ ಕೃಷಿಗೆ ಬೇಕಾದ ಉಪಕರಣ, ಕೂಲಿರೂಪದ ಅಕ್ಕಿ, ಬಿತ್ತಲು ಬೇಕಾದ ಬೀಜ, ಸೇವಾನಿರತರ ಸಹಕಾರ, ಹೆಗ್ಗಡೆಯವರ ಮಾರ್ಗದರ್ಶನ ಮತ್ತು ಸಹಾಯಗಳಿಂದ ಪ್ರಾರಂಭಗೊಂಡ ಅಭಿವೃದ್ಧಿ ಯೋಜನೆ ಕಾಲಕಾಲದಲ್ಲಿ ವಿಸ್ತಾರಗೊಳ್ಳುತ್ತ ಹೋಯಿತು. ಇದೇ ಹೊತ್ತಿಗೆ ಹೆಗ್ಗಡೆಯವರ ಅಭಿವೃದ್ಧಿ ಚಿಂತನೆಯ ಪರಿಧಿಯೂ ವಿಸ್ತರಿಸಿತು. ರೈತರು ತಮ್ಮ ಬಂಜರು ಭೂಮಿಯನ್ನು ಹಸಿರುಗೊಳಿಸುವುದು

ಸಂಪತ್ತಿನ ಸೃಷ್ಟಿಯ ಮೊದಲ ಹೆಜ್ಜೆಯೇನೋ ಸರಿ, ಆದರೆ ಕೆಲಸ ಅಲ್ಲಿಗೇ ಮುಗಿಯಬಾರದು ಎಂದು ಅವರಿಗೆ ಮನವರಿಕೆಯಾಯಿತು. ಜನರಿಗೆ ಸ್ವ-ಸಹಾಯದ ಅವಶ್ಯಕತೆಯಿದೆ; ಗ್ರಾಮೀಣ ಮಹಿಳೆಯರ ಸಬಲೀಕರಣ ಕಾರ್ಯ ತ್ವರಿತವಾಗಿ ಆಗಬೇಕು; ಜನರಲ್ಲಿ ಉಳಿತಾಯ ಮನೋಭಾವ ಬೆಳೆಸದೇ ಇದ್ದರೆ ಹೆಚ್ಚಿಗೆ ಬಂದ ಆದಾಯವೆಲ್ಲ ಕುಡಿತ ಜೂಜೂಗಳಂಥ ವ್ಯಸನಗಳಲ್ಲಿ ಪೋಲಾಗುತ್ತ ಹೋಗುತ್ತದೆ; ಗ್ರಾಮೀಣ ಪ್ರದೇಶಗಳಲ್ಲಿ ಸಹಕಾರಿ ತತ್ವದ ಮೇಲೆ ಸಂಘಟನೆಗಳು ಬೆಳೆಯಬೇಕು. ಶಾಲೆಗಳ ಸಂಖ್ಯೆ ತೀವ್ರವಾಗಿ ಹೆಚ್ಚಬೇಕು. ಅಲ್ಲಿಯ ಪೀಠೋಪಕರಣ, ಆಟದ ಸಾಮಾನುಗಳು, ಕುಡಿಯುವ ನೀರಿನ ವ್ಯವಸ್ಥೆ, ಶೌಚಾಲಯ, ಆಟದ ಮೈದಾನ, ಶಾಲಾತೋಟ ಇವೆಲ್ಲ ವೃದ್ಧಿಯಾಗಬೇಕು. ಶಾಲೆಗಳಲ್ಲಿ ವೃತ್ತಿಶಿಕ್ಷಣ ಹಾಗೂ ಯೋಗಶಿಕ್ಷಣ ಸಿಗಬೇಕು. ಗ್ರಾಮೀಣ ದುಂದುವೆಚ್ಚ ಮತ್ತು ಸಾಲದ ಹೊರೆಯನ್ನು ತಗ್ಗಿಸಲು ಶ್ರೀಕ್ಷೇತ್ರ ನಡೆಸುತ್ತ ಬಂದ ಸಾಮೂಹಿಕ ವಿವಾಹವನ್ನು ಮುಂದುವರಿಸಿಕೊಂಡು ಹೋಗಬೇಕು. ಮೂರರಿಂದ ಐದು ವರ್ಷಗಳ ಕಾಲೇಜು ವಿದ್ಯಾಭ್ಯಾಸ ಮುಗಿಸಿ, ಇನ್ನೊಬ್ಬರ ಲೆಕ್ಕ ಬರೆಯುವುದಕ್ಕಿಂತ ಏನಾದರೊಂದು ಸ್ವ ಉದ್ಯೋಗ ಆರಂಭಿಸಿ, ನಮ್ಮ ಸ್ವಂತ ಲೆಕ್ಕ ಬರೆಯುವುದು ಹೆಚ್ಚು ಅರ್ಥಪೂರ್ಣ. ಕೇವಲ ದಾನ ಅನುದಾನಗಳಿಂದ ಒಬ್ಬ ದುರ್ಬಲ ಮನುಷ್ಯ ತನ್ನ ಕಾಲಮೇಲೆ ತಾನು ನಿಲ್ಲಲಾರ, ದಿನಾಲೂ ಆತನಿಗೆ ಊಟಕ್ಕೆ ಮೀನು ಬಡಿಸುವ ಬದಲು ಮೀನು ಹಿಡಿಯುವ ಕಲೆಯನ್ನೇ ಅವನಿಗೆ ಕಲಿಸಿದರೆ ಆತ ಯಾರ ಹಂಗೂ ಇಲ್ಲದೆ ತನ್ನ ಊಟವನ್ನೂ ತಾನೇ ಗಳಿಸಿಕೊಂಡು ಸ್ವಾಭಿಮಾನದಿಂದ ಬದುಕಿಯಾನು. ಗ್ರಾಮಾಭಿವೃದ್ಧಿ ಯೋಜನೆ ಕೇವಲ ಆರ್ಥಿಕ ಅಭಿವೃದ್ಧಿ ಯೋಜನೆಯಾಗದೆ ಗ್ರಾಮಗಳ ಸರ್ವಾಂಗೀಣ ಅಭಿವೃದ್ಧಿಯ ಎಲ್ಲ ಪರಿಕರಗಳನ್ನು ಒದಗಿಸಬೇಕು - ಈ ಮೊದಲಾದ ವಿಚಾರಗಳು ತರ್ಕಕ್ಕೆ ನಿಲ್ಲುವ, ಜನೋಪಯೋಗಿಯಾದ, ಪರಿಶ್ರಮದಿಂದ ಆಚರಣೆಗೆ ತರಬಲ್ಲ, ಅಪ್ಪಟ ವೈಜ್ಞಾನಿಕ ಚಿಂತನೆಯಲ್ಲದೆ ಮತ್ತೇನು?

ಇವೆಲ್ಲ ಚಿಂತನೆಗಳನ್ನು ಧರ್ಮಸ್ಥಳ ಗ್ರಾಮಾಭಿವೃದ್ಧಿ ಯೋಜನೆಯಲ್ಲಿ ಅಳವಡಿಸಿಕೊಳ್ಳಲಾಯಿತೆ ಎಂಬ ಪ್ರಶ್ನೆಗೆ ಯೋಜನೆಯ ಸದ್ಯದ ಕಾರ್ಯನಿರ್ವಾಹಕ ನಿರ್ದೇಶಕರು ಹೀಗೆ ಉತ್ತರಿಸಿದ್ದಾರೆ;

"ಈಗ ಯೋಜನೆ ವಿಸ್ತಾರವಾಗಿದೆ. ಪ್ರಾರಂಭದಲ್ಲಿದ್ದಂತೆ ಕೇವಲ ಕೃಷಿಕರ ಅಭಿವೃದ್ಧಿಯನ್ನು ಮಾತ್ರ ಗುರಿಯಾಗಿಟ್ಟುಕೊಂಡಿಲ್ಲ. ಮೂಲಸ್ಥಾನದಿಂದ ಹೊರಟ ತೊರೆಯೊಂದು ಹರಿಯುತ್ತಾ ಇತರ ಜಲಧಾರೆಗಳನ್ನು ಸೇರಿಸಿಕೊಂಡು ಸಮೃದ್ಧ ನದಿಯಾಗುವಂತೆ ಯೋಜನೆಯ ಹಲವಾರು ಕಾರ್ಯಕ್ರಮಗಳನ್ನು ತನ್ನಳವಿನಲ್ಲಿ ಸೇರಿಸಿಕೊಂಡು ಜೀವನ ಶಿಕ್ಷಣದ ಮಾದರಿಯಾಗಿ ಬೆಳೆದಿದೆ. ಇದೀಗ ಧರ್ಮಸ್ಥಳ ಮಾದರಿಯೆಂದು ಹೆಸರು ಪಡೆದಿದೆ. ಕೃಷಿ ಕಾರ್ಮಿಕರಿಗೆ ಪ್ರಗತಿಬಂಧು ಕಾರ್ಯಕ್ರಮ, ಭೂಹೀನ ಮಹಿಳೆಯರನ್ನೊಳಗೊಂಡ ಜ್ಞಾನವಿಕಾಸ ಕಾರ್ಯಕ್ರಮ, ಮದ್ಯಪಾನದ ವಿರುದ್ಧ ಜನಜಾಗೃತಿ ಕಾರ್ಯಕ್ರಮ, ಶಿಕ್ಷಣಕ್ಕಾಗಿ ಜ್ಞಾನದೀಪ, ಗೃಹನಿರ್ಮಾಣಕ್ಕಾಗಿ ಜೀವನಧಾಮ, ಆರೋಗ್ಯಕ್ಕಾಗಿ ಸುರಕ್ಷಾ, ಬದಲಿ ಇಂಧನಕ್ಕಾಗಿ ಸೌರ ವಿದ್ಯುತ್ ಮತ್ತು ಗೋಬರ್ ಗ್ಯಾಸ್ ಕಾರ್ಯಕ್ರಮ, ಆರ್ಥಿಕ ಸಹಾಯವನ್ನೊದಗಿಸಲು ಪ್ರಗತಿನಿಧಿ, ಗ್ರಾಮ ಸಂಪನ್ಮೂಲ ವೃದ್ಧಿಗಾಗಿ ಸಮುದಾಯ ಅಭಿವೃದ್ಧಿ ಹೀಗೆ ದಿನಕಳೆದಂತೆ ಅಗತ್ಯಕ್ಕನುಗುಣವಾಗಿ ಹೊಸ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುತ್ತಾ ಯೋಜನೆಯು ಬೆಳೆದಿದೆ. ಎಲ್ಲ ಕಾರ್ಯಕ್ರಮಗಳೂ ಜನರ ಪಾಲ್ಗೊಳ್ಳುವಿಕೆಯಿಂದಲೇ ನಡೆದಿವೆ."

ಇಂಥ ವೈಜ್ಞಾನಿಕ ಚಿಂತನೆ ವೃದ್ಧಿಸಲಿ ಹಾಗೂ ಇಂಥ ಮಾದರಿ ಅಭಿವೃದ್ಧಿ ಕಾರ್ಯಕ್ರಮಗಳ ಸಂತಾನ ಹೆಚ್ಚಲಿ ಎಂದು ಹಾರೈಸುತ್ತ ಈ ಲೇಖನ ಮುಗಿಸೋಣ.

●




# ಜಾಗತೀಕರಣದ ಪ್ರಭಾವ

ಪ್ರೊ. ಚಂದ್ರಶೇಖರ ಪಾಟೀಲ

ಕಳೆದ ಶತಮಾನದ ಉತ್ತರಾರ್ಧದಿಂದಲೇ ಪ್ರಾರಂಭವಾಗಿ ತೊಂಬತ್ತರ ದಶಕದಲ್ಲಿ ಮೂರು ರೂಪ ಪಡೆದು ಸದ್ಯದ ಶತಮಾನದ ಪ್ರಾರಂಭದಲ್ಲಿ ಇನ್ನೂ ಪ್ರಖರವಾಗಿ ಇಡೀ ಜಗತ್ತನ್ನು ಕಾಡುತ್ತಿರುವ ಒಂದು ಪ್ರಕ್ರಿಯೆ: ಜಾಗತೀಕರಣ. ಈ ಪ್ರಕ್ರಿಯೆಯ ಎರಡು ಆಯಾಮಗಳು-ಉದಾರೀಕರಣ ಮತ್ತು ಖಾಸಗೀಕರಣ. (ಇಂಗ್ಲಿಷ್‌ನಲ್ಲಿ LPG:Liberalisation, Privatisation, Globalisation) ಜ್ಞಾನ-ವಿಜ್ಞಾನ-ತಂತ್ರಜ್ಞಾನದ ಅಗಾಧ ಮುನ್ನಡೆಯಿಂದಾಗಿ ಇಂದು ಇಡೀ ಜಗತ್ತೇ ಒಂದಾಗಿದೆ ಎಂಬ ವಾತಾವರಣ ನಿರ್ಮಿತಿಯ ಹಿನ್ನೆಲೆಯಲ್ಲಿ 'ಜಾಗತೀಕರಣ'ದ ಪರಿಕಲ್ಪನೆ ನಮ್ಮ ಎಲ್ಲಾ ಚಿಂತನೆ ಹಾಗೂ ಕ್ರಿಯೆಗಳನ್ನು ರೂಪಿಸುವ ಮತ್ತು ನಿಯಂತ್ರಿಸುವ ಮಂತ್ರವಾಗಿದೆ. ಉದಾಹರಣೆಗೆ; ನಮ್ಮ ಇವತ್ತಿನ ಇಂಡಿಯಾ ದೇಶದ ರಾಜಕೀಯ ಸ್ವರೂಪ, ಆರ್ಥಿಕ ರೀತಿ-ನೀತಿ, ಶಿಕ್ಷಣ ಹಾಗೂ ಸಂಸ್ಕೃತಿಗಳ ಮೌಲ್ಯಗಳು,ಧಾರ್ಮಿಕ ಸ್ಥಿತ್ಯಂತರಗಳು, ಕೃಷಿ-ಕೈಗಾರಿಕೆಗಳು, ಜನಪರ ಅಂದೋಲನಗಳು- ಹೀಗೆ ಯಾವ ವಿಷಯದ ಚರ್ಚೆ ನಡೆದರೂ ವೇದಿಕೆಯ ಹಿಂಭಾಗದ ಭಿತ್ತಿಯಲ್ಲಿ ಬೃಹದಾಕಾರವಾಗಿ ಕಣ್ಣಿಗೆ ಹೊಡೆಯುವ ಚಿತ್ರ: ಜಾಗತೀಕರಣ ಎಂಬ ದೈತ್ಯನದು.

> **ಜ್ಞಾನ ವಿಜ್ಞಾನ, ತಂತ್ರಜ್ಞಾನದ ಅಗಾಧ ಮುನ್ನಡೆಯಿಂದಾಗಿ ಇಂದು ಇಡೀ ಜಗತ್ತೇ ಒಂದಾಗಿದೆ ಎಂಬ ವಾತಾವರಣದ ನಿರ್ಮಿತಿಯ ಹಿನ್ನೆಲೆಯಲ್ಲಿ ಜಾಗತೀಕರಣದ ಕಲ್ಪನೆ ನಮ್ಮ ಎಲ್ಲ ಚಿಂತನೆ ಹಾಗೂ ಕ್ರಿಯೆಗಳನ್ನು ರೂಪಿಸುವ ಮತ್ತು ನಿಯಂತ್ರಿಸುವ ಮಂತ್ರವಾಗಿದೆ.**

ಮಾನವನೆಂಬ ಪ್ರಾಣಿಯ ಸಹಜವಾದ ವಿಕಾಸ ಕ್ರಮಕ್ಕೆ ಅನುಗುಣವಾಗಿ ಇಂದಿನ ಈ ಹಂತದಲ್ಲಿ 'ಜಾಗತೀಕರಣ' ಬಂದಿದ್ದರೆ ತಲೆ ಕೆಡಿಸಿಕೊಳ್ಳುವ ಪ್ರಮೇಯವಿರುತ್ತಿರಲಿಲ್ಲವೇನೋ. ಆದರೆ ಕಳೆದ ಮೂರು ನಾಲ್ಕು ಶತಕಗಳಲ್ಲೂ ಜಾಗತಿಕ ನೆಲೆಯಲ್ಲಿ ತಲೆದೋರಿದ ವಸಾಹತೀಕರಣ, ಔದ್ಯೋಗೀಕರಣ, ಬಂಡವಾಳಶಾಹಿ, ಸಾಮ್ರಾಜ್ಯಶಾಹಿಗಳ ಸರಣಿಯಲ್ಲಿ ಇವೆಲ್ಲದರ ಮುಂದುವರಿಕೆ ಎಂಬಂತೆ 'ಜಾಗತೀಕರಣ' ಬಂದಿರುವುದರಿಂದ ಅದನ್ನು ಭಾವನಾತ್ಮಕ ಶೈಲಿಯಲ್ಲಿ 'ವಸುಧೈವ ಕುಟುಂಬಕಂ' 'ಸರ್ವೇ ಜನಾಃ ಸುಖಿನೋ ಭವಂತು', 'ಮನುಷ್ಯ ಜಾತಿ ತಾನೊಂದೆ ವಲಂ', 'ಮನುಜ ಮತ-ವಿಶ್ವಪಥ'- ಇತ್ಯಾದಿ ಮನುಕುಲದ ಸಹಜ ಸದಾಶಯವೆಂಬಂತೆ ಸ್ವೀಕರಿಸುವುದು ಸಾಧ್ಯವಿಲ್ಲ.

ಇಪ್ಪತ್ತನೆಯ ಶತಮಾನದುದ್ದಕ್ಕೂ 'ಪ್ರಥಮ ಜಗತ್ತು', ದ್ವಿತೀಯ ಜಗತ್ತು' ಎಂಬ ಅಗ್ಗಳಿಕೆಗೆ ಪಾತ್ರವಾದ ಅಮೆರಿಕಾ, ಯು.ಎಸ್.ಎಸ್.ಆರ್. ಗಳದೇ ದರಬಾರು. ಜಗತ್ತಿನ ಇತರ ಹಿಂದುಳಿದ ರಾಷ್ಟ್ರಗಳಿಗೆ

'ತೃತೀಯ ಜಗತ್ತು', ಎಂಬ ನಾಮಧೇಯ. ಇಬ್ಬರು ಜಟ್ಟಿಗಳ ಶೀತಲ ಯುದ್ಧದ ಹಂತ ಮುಗಿದು, ಸೋವಿಯತ್ ರಶಿಯಾ, ಪತನಗೊಂಡಾಗ ಪ್ರಾರಂಭವಾದದ್ದು ಏಕಮೇವ ದೈತ್ಯ ಅಮೇರಿಕಾ ನೇತೃತ್ವದ ಬಲಾಢ್ಯ ರಾಷ್ಟ್ರಗಳ ದಬ್ಬಾಳಿಕೆ. ಮತ್ತೊಮ್ಮೆ ಇಡೀ ಪ್ರಪಂಚವೇ ತಮ್ಮ ಗುಲಾಮಗಿರಿಗೆ ಒಳಪಡಲಿ ಎಂಬ ಹುನ್ನಾರ. ಮೇಲು ಮೇಲೆ ಮಾತ್ರ ಜಾಗತಿಕ ಶಾಂತಿ, ಪ್ರಜಾಪ್ರಭುತ್ವ, ಮಾನವ ಹಕ್ಕುಗಳು ಮುಂತಾದ ಮಂತ್ರಘೋಷಣೆ.

ನಮ್ಮೆದುರು ಇರುವ ಪ್ರಶ್ನೆ: ಗ್ರಾಮಗಳೇ ಬಹುಸಂಖ್ಯೆಯಲ್ಲಿರುವ, ಕೃಷಿಯೇ ಪ್ರಧಾನವಾಗಿರುವ 'ಅಭಿವೃದ್ಧಿಶೀಲ'- (ಅಂದರೆ ತೃತೀಯ ಜಗತ್ತಿನ ಭಾಗವಾಗಿರುವ) ರಾಷ್ಟ್ರವಾಗಿರುವ ಇಂಡಿಯಾ ದೇಶದ ಮೇಲೆ ಇವತ್ತಿನ ಕೋಲಾಹಲಕಾರಿ ಜಾಗತಿಕ ವಿದ್ಯಮಾನದ ಪರಿಣಾಮಗಳೇನು? ಇದನ್ನು ಅರ್ಥ ಮಾಡಿಕೊಳ್ಳುವುದು ಹೇಗೆ? ಈ ಸವಾಲನ್ನು ಎದುರಿಸುವುದು ಹೇಗೆ?

ನಮ್ಮ ಸ್ವಾತಂತ್ರ್ಯಾಂದೋಲನಕ್ಕೆ ಒಂದು ನಿರ್ಣಾಯಕ ಘಟ್ಟದಲ್ಲಿ ಸಮರ್ಥ ನಾಯಕತ್ವವನ್ನು ನೀಡಿ ೧೯೪೭ ಆಗಸ್ಟ್ ಹದಿನೈದರಂದು ದಿಲ್ಲಿಯ ಕೆಂಪು ಕೋಟೆಯ ಮೇಲೆ ತ್ರಿವರ್ಣ ಧ್ವಜ ಹಾರಾಡುವಂತೆ ಮಾಡಿದವರು ಮಹಾತ್ಮಗಾಂಧೀಜಿ. ಈ ನೆಲದ ಗಾಢ ನಂಟು ಅವರಿಗಿತ್ತು. ಯಾವ ಬಗೆಯ ರಾಜಕೀಯ-ಆರ್ಥಿಕ-ಸಾಮಾಜಿಕ ವ್ಯವಸ್ಥೆ ಇಂಡಿಯಾದಂಥ ದೇಶಕ್ಕೆ ಹೊಂದಿಕೆಯಾದೀತು ಎಂಬುದರ ಬಗ್ಗೆ ಅವರಿಗೆ ಸ್ಪಷ್ಟ ಸೈದ್ಧಾಂತಿಕ ದರ್ಶನವಿತ್ತು. 'ಗ್ರಾಮ ಸ್ವರಾಜ್ಯ'- ಎಂಬುದು ಗಾಂಧೀಜಿಯ ದರ್ಶನದ ಮೂಲ ಜೀವನಾಡಿಯಾಗಿತ್ತು. ಈ ದೇಶದ ಭೌಗೋಳಿಕ ವ್ಯಾಪ್ತಿ, ಸಾಂಸ್ಕೃತಿಕ ವೈವಿಧ್ಯ, ಜನಸಂಖ್ಯೆ, ಲಭ್ಯವಿರುವ ಸಂಪನ್ಮೂಲಗಳು-ಇವಕ್ಕೆಲ್ಲ ಅನುಗುಣವಾಗಿ ಗಾಂಧೀಜಿ ರೂಪಿಸಿಕೊಂಡಿದ್ದ ಆಶಯಗಳು ಸ್ವತಂತ್ರ ಭಾರತದ ಮೊದಲ ಅರ್ಧ ಶತಕದಲ್ಲಿ ಸಾಕಾರಗೊಂಡಿದ್ದರೆ ನಮ್ಮ ಕತೆಯೇ ಬೇರೆಯಾಗುತ್ತಿತ್ತು. ಆದರೆ ಇಂಡಿಯಾದ ಪ್ರಥಮ ಪ್ರಧಾನಿ ಜವಾಹರಲಾಲ ನೆಹರೂ ಅವರ 'ಆಳುವ ವರ್ಗ' ಕೈಕೊಂಡ ನಿರ್ಧಾರಗಳಿಂದಾಗಿ ನಾವಿಂದು ಗಾಂಧೀಜಿಯ ಕನಸುಗಳಿಂದ ಸಾವಿರ ಮೈಲು ದೂರ ಸಾಗಿದ್ದೇವೆ. ನಮ್ಮ ಸಾರ್ವಭೌಮತ್ವಕ್ಕೇ ಸಂಚಕಾರ ಬರುತ್ತಿರುವ ಈ ಗಳಿಗೆಯಲ್ಲಿ ಮತ್ತೆ ಗಾಂಧೀಜಿಯ ಚಿಂತನೆಗಳ ಬಗ್ಗೆ ಮರುಚಿಂತನೆ ನಡೆಸುವ ಅನಿವಾರ್ಯತೆ ನಮ್ಮದಾಗಿದೆ.

'ಜಾಗತೀಕರಣ'ದ ವಿದ್ಯಮಾನ ಕುರಿತಂತೆ ನಡೆದಿರುವ ಸಮರ್ಥನೆಗಳು, ಪ್ರತಿರೋಧಕಗಳು, ಹೊಂದಾಣಿಕೆಗಳು ಕೂಡ 'ಜಾಗತಿಕ' ಮಟ್ಟದಲ್ಲಿಯೇ ನಡೆಯುತ್ತಿರುವುದು ಸಹಜವೇ. ಅದಕ್ಕನುಗುಣವಾಗಿ ಚರ್ಚೆಗಳಲ್ಲಿ ಚಾಲ್ತಿಗೆ ಬಂದಿರುವ ಪದಪುಂಜಗಳೂ ವಿಶಿಷ್ಟವಾಗಿವೆ. ಈಗ 'ಜಾಗತೀಕರಣ'(Globalisation) ಕ್ಕೆ ಪರ್ಯಾಯ/ ವಿರುದ್ಧವಾಗಿ ಬಳಸುವ ಶಬ್ದ 'ಸ್ಥಳೀಕರಣ' (Localisation), ನಮ್ಮ ಇವತ್ತಿನ ಹೈಬ್ರಿಡ್ ಯುಗದಲ್ಲಿ ಚಲಾವಣೆಗೆ ಬರುತ್ತಿರುವ ಮತ್ತೊಂದು ಪರಿಕಲ್ಪನೆ: (GLOCALISATION) (ಕನ್ನಡದಲ್ಲಿ 'ಜಗತ್-ಸ್ಥಳೀಕರಣ' ಎನ್ನಬಹುದೇನೋ!). ಗಾಂಧೀಜಿಯ ಗ್ರಾಮಸ್ವರಾಜ್ಯ, ಗ್ರಾಮೀಣಾಭಿವೃದ್ಧಿ ಮುಂತಾದವನ್ನು 'ಸ್ಥಳೀಕರಣ'ದ ಚೌಕಟ್ಟಿನಲ್ಲಿ ತಂದು ಚರ್ಚಿಸಲು ಅವಕಾಶ ಇದೆ.

ಮೂರು ರೀತಿಯ ಪ್ರತಿಕ್ರಿಯೆಗಳಿವೆ ತೃತೀಯ ಜಗತ್ತಿನ ರಾಷ್ಟ್ರಗಳ ನೆಲೆಯಿಂದ-

೧) ಜಾಗತೀಕರಣ ಇರುವುದು 'ಸಕಲ ಜನ ಸುಖಾಯ, ಸಕಲ ಜನ ಹಿತಾಯ', ಇದು ಜಗತ್ತಿನ ವಿಕಾಸದ ಅನಿವಾರ್ಯ ಹೆಜ್ಜೆ. ನಮ್ಮ ಎಲ್ಲ ಸಮಸ್ಯೆಗಳಿಗೆ ಇದು ರಾಮಬಾಣ. ನಮ್ಮ ಸ್ವಂತ ಹಿತಕ್ಕಾಗಿ ತೆರೆದ ತೋಳಿನಿಂದ ಬರಮಾಡಿಕೊಂಡ ಅಭಿವೃದ್ಧಿಯಲ್ಲಿ ಪಾಲು ಪಡೆಯುವುದು ನಮ್ಮ ಕರ್ತವ್ಯ.

೨) ಅಮೇರಿಕಾ-ಪ್ರಣೀತ ಜಾಗತೀಕರಣವು ಇನ್ನೊಂದು ದೃಷ್ಟಿಯಿಂದ ಅಮೆರಿಕೀಕರಣ. ಶಕ್ತಿ ರಾಜಕಾರಣದಲ್ಲಿ ಅಮೇರಿಕೆಯ ಅಪರಾವತಾರಗಳನ್ನು ನಾವೆಲ್ಲ ಕಂಡವರು. ಹಿಂದುಳಿದ ಮತ್ತು ಬಡ ರಾಷ್ಟ್ರಗಳ ಸ್ವಾತಂತ್ರ್ಯ ಸಾರ್ವಭೌಮತ್ವಗಳನ್ನು ಧ್ವಂಸ ಮಾಡುವುದೇ ಬಂಡವಾಳಶಾಹಿಗಳ ನೀತಿ. ಇಂಥ ಸಾಮ್ರಾಜ್ಯಶಾಹಿ ಹುನ್ನಾರಗಳನ್ನೂ ನಖಶಿಖಾಂತವಾಗಿ ವಿರೋಧಿಸುವುದು ನಮ್ಮ ಕರ್ತವ್ಯ.

೩.) ಈ ಜಾಗತೀಕರಣ ಅನಿವಾರ್ಯ. ನಮ್ಮ ಕರ್ಮ, ವಿಧಿಲಿಖಿತ, ಹಣೆಬರಹವೆಂಬಂತೆ ಇದನ್ನು ಸ್ವೀಕರಿಸುವುದೇ ಕ್ಷೇಮ. ಆದ್ದರಿಂದ ವಾಸ್ತವದೊಂದಿಗೆ ಹೊಂದಾಣಿಕೆ ಮಾಡಿಕೊಳ್ಳುವುದೇ ಜಾಣತನ. ಅಭಿವೃದ್ಧಿಯ ಜೊತೆಜೊತೆಗೇ ಮಾನವ ಕಲ್ಯಾಣದ ಮೇಲೂ ಒತ್ತು ಕೊಡುವಂತೆ ಮುಂಚೂಣಿ ನಾಯಕರ ಮೇಲೆ ಒತ್ತಡ ಹೇರಬೇಕು. ಇದಕ್ಕೆ 'ಅಭಿವೃದ್ಧಿಯ

ಮಾನವ ಮುಖ' (Reforms with a human face) ಅನ್ನುತ್ತಾರೆ. ಅಭಿವೃದ್ಧಿಯಲ್ಲಿ ಎಲ್ಲ ರಾಷ್ಟ್ರಗಳಿಗೂ ಪಾಲು ಸಿಗುವಂತಾಗಬೇಕು.

ನಮ್ಮ ಸ್ವಾತಂತ್ರ್ಯಾನಂತರದ ಮೊದಲ ಹಂತದಲ್ಲಿ ಮಿಶ್ರ-ಆರ್ಥಿಕ ನೀತಿಯಿಂದಾಗಿ ಸಾರ್ವಜನಿಕ ಮತ್ತು ಖಾಸಗಿ ವಲಯಗಳು, ಪರಸ್ಪರ ಪೂರಕವೆಂಬಂತೆಯೇ ಬೆಳೆದವು. ಆದರೆ ಬರುಬರುತ್ತ ಕೇಂದ್ರ ಹಾಗೂ ರಾಜ್ಯಗಳಲ್ಲಿ ಅಧಿಕಾರಕ್ಕೆ ಬಂದ ಆಳುವ ಪಕ್ಷಗಳ 'ವರ್ಗ-ಲಕ್ಷಣ'ಗಳು ನಿಚ್ಚಳವಾಗತೊಡಗಿದವು. ಎಡ-ಬಲಗಳ ನಡುವಿನ ಹಾದಿ ಕ್ರಮೇಣವಾಗಿ ಬಲಕ್ಕೆಯೇ ವಾಲುತ್ತ ಕೊನೆಯ ದಶಕಗಳಲ್ಲಿ 'ಆರ್ಥಿಕ ಉದಾರೀಕರಣ'ದ ಹೆಸರಿನಲ್ಲಿ ನವ ಬಡವಾಳಶಾಹಿಯೇ ಇಂಡಿಯಾದ ಆರ್ಥಿಕ ನೀತಿಯೇನೋ ಎಂಬ ಅನುಮಾನ ಬರುವಂತಾಯಿತು. ಮೊದಲು ಕಾಂಗ್ರೆಸ್, ನಂತರ ಬಿಜೆಪಿ ನೇತೃತ್ವದ ಎನ್‌ಡಿಎ, ಈಗ ಕಾಂಗ್ರೆಸ್ ನೇತೃತ್ವದ ಯುಪಿಎ-ಎಲ್ಲವೂ ಉದಾರೀಕರಣ ಮತ್ತು ಖಾಸಗೀಕರಣಗಳನ್ನು ಕಟ್ಟಿಕೊಂಡೇ ಮುಂದುವರೆಯುತ್ತಿವೆ.

ಒಂದು ಮಾತ್ರ ನಿಜ: ನಮ್ಮನ್ನಾಳುವ ವರ್ಗಗಳು ತಮ್ಮ ಬಂಡವಾಳಶಾಹಿ ಪರವಾದ ಶಕ್ತಿಯನ್ನು ವರ್ಷದಿಂದ ವರ್ಷಕ್ಕೆ ಕ್ರೋಡೀಕರಿಸಿಕೊಳ್ಳುತ್ತಿದ್ದರೂ ಪ್ರಜಾಸತ್ತೆಯ ಚೌಕಟ್ಟಿನಲ್ಲಿ ಜರುಗುವ ಸಾರ್ವತ್ರಿಕ ಚುನಾವಣೆಗಳ ಮೂಲಕ ನಮ್ಮ 'ಮೂಕ' ಪ್ರಜೆಗಳು ಸ್ಫೋಟಿಸುವ 'ಆಘಾತ'ಗಳು ಮಾತ್ರ ಆಳುವ ಶಕ್ತಿಗಳ ಕಾಲುಬುಡದ ನೆಲವನ್ನು ಅಭದ್ರಗೊಳಿಸುತ್ತಿವೆ. ಹೀಗಾಗಿ ತಮ್ಮ ರಾಜಕೀಯ ಅಸ್ತಿತ್ವಕ್ಕಾಗಿ ನಮ್ಮ ದೇಶದ ರಾಜಕೀಯ ಪಕ್ಷಗಳು ಮತ್ತೆ ಮತ್ತೆ ಗ್ರಾಮಗಳ ಕಡೆಗೆ, ಗ್ರಾಮಾಭಿವೃದ್ಧಿಯ ಕಡೆಗೆ ಲಕ್ಷ್ಯ ಹರಿಸುವಂತಾಗಿದೆ. ಹುಸಿ ರಾಷ್ಟ್ರಾಭಿಮಾನವನ್ನೇ ನೆಚ್ಚಿರುವ ಕೋಮುವಾದಿ ಶಕ್ತಿಗಳು, ರಾಜಕೀಯವಾಗಿ ಹಿನ್ನಡೆಯನ್ನು ಅನುಭವಿಸುತ್ತಿರುವುದನ್ನು ನಾವು ಕಾಣುತ್ತಿದ್ದೇವೆ.

ಇಂಡಿಯಾದ ಅಭಿವೃದ್ಧಿಯ ಮೂಲ ಘಟಕ: ಗ್ರಾಮವೇ. ಬಹುಸಂಖ್ಯಾತ ಸಮುದಾಯಗಳ ತಾಣಗಳಾಗಿರುವ ಗ್ರಾಮಗಳು ಸಬಲೀಕರಣಗೊಂಡಾಗಲೇ ನಮ್ಮ ಪ್ರಜಾಸತ್ತೆಗೊಂದು ಅರ್ಥ. ನಮ್ಮ 'ಜನಪ್ರಿಯ' ಸರಕಾರಗಳು 'ಜನಪರ' ಸರಕಾರಗಳೇ ಆಗಬೇಕು. ಕೃಷಿ, ಕೃಷಿಯಾಧಾರಿತ ಕಸುಬುಗಳು, ಸಣ್ಣ ಮತ್ತು ಮಧ್ಯಮ ದರ್ಜೆಯ ಕೈಗಾರಿಕೆಗಳು ವಿಕೇಂದ್ರೀಕರಣದ ನೆಲೆಯಲ್ಲಿ ಪರಸ್ಪರ ಪೂರಕ ಶೈಲಿಯಲ್ಲಿ ಬೆಳೆಯಬೇಕು. ವಿದೇಶೀ ಬಂಡವಾಳ ಮುಕ್ತವಾಗಿ ಹರಿಯುವಂತೆ ಮಾಡಿದರೆ ಸ್ಥಳೀಕರಣವೆಂಬುದು ಕೊಚ್ಚಿಹೋಗಿ ಮುಂದೊಂದು ದಿನ ಇಂಡಿಯಾ ಎಂಬುದು ಅಮೇರಿಕಾದ 'ಕಾಲನಿ' (ವಸಾಹತು) ಆಗುವುದರಲ್ಲಿ ಸಂದೇಹವಿಲ್ಲ.

'ಸಿಂಗಾಪುರ': ಜಗತ್ತಿನ ಪ್ರೇಕ್ಷಣೀಯ ನಗರ; ಆಧುನಿಕ ಬಂಡವಾಳಶಾಹಿಯ ಅಟ್ಟಹಾಸದ ಸಂಕೇತ. ಉಳ್ಳವರು ಉಳ್ಳವರಿಗಾಗಿಯೇ ನಿರ್ಮಿಸಿದ ಭವ್ಯ ದೇವಾಲಯ. ಇದೇ ಹೆಸರಿನ ಮತ್ತೊಂದು 'ಸಿಂಗಾಪುರ' ನಮ್ಮ ರಾಜ್ಯದ ಒಂದು ಕುಗ್ರಾಮ. ನಮ್ಮೆದುರು ಇರುವ ಆಯ್ಕೆ: ನಾವು ಆ ಸಿಂಗಾಪುರದ ಶೃಂಗಾರದ ಮೋಹಕ್ಕೆ ಸಿಕ್ಕು ಜಾಗತಿಕ ಗುಲಾಮರಾಗಬೇಕೇ? ಅಥವಾ ನಮ್ಮ ಈ ಸಿಂಗಾಪುರವನ್ನೇ ಸುಗ್ರಾಮವನ್ನಾಗಿ ಮಾಡಿಕೊಂಡು ಸ್ಥಳೀಯ ಯಜಮಾನರಾಗಿ ಸುಖದಿಂದಿರಬೇಕೆ ?

●




# ಹಬ್ಬ-ಹರಿದಿನ

ಎನ್. ಭಾರತಿ

ಭಾರತೀಯ ಸಂಸ್ಕೃತಿಯಲ್ಲಿ ಹಬ್ಬಗಳು ಹಾಸು ಹೊಕ್ಕಾಗಿವೆ. ಮಾನವ ಭುವಿಗೆ ಅವತರಿಸಿದಂದಿನಿಂದಲೂ ಅನೇಕ ಆಚರಣೆಗಳು ಜನ್ಮ ತಳೆದಿವೆ. ಅವುಗಳಲ್ಲಿ ಹಬ್ಬಗಳು ಪ್ರಾಮುಖ್ಯತೆ ಪಡೆದಿವೆ. ಹಬ್ಬಗಳು ವ್ಯಕ್ತಿಯ ಅಂತರಂಗ ಶುದ್ಧತೆ ಹಾಗೂ ಸಮಾಜದ ಸ್ವಾಸ್ಥ್ಯಕ್ಕೆ ಅಗತ್ಯ ಎಂದು ಸಮಾಜಶಾಸ್ತ್ರಜ್ಞರು ಹೇಳುತ್ತಾರೆ. ಪ್ರಾಚೀನ ಸಮಾಜಗಳಲ್ಲಿ ಪ್ರಕೃತಿ ಪೂಜೆಗೆ ಹೆಚ್ಚಿನ ಪ್ರಾಧಾನ್ಯತೆಯಿತ್ತು. ಹಬ್ಬಗಳಲ್ಲಿ ಸಂಪ್ರದಾಯ, ಪರಂಪರೆ, ಐತಿಹಾಸಿಕತೆ, ಸಮಕಾಲೀನ ವಿಚಾರ ಹಾಗೂ ಜಾನಪದ ಅಂಶಗಳು ಅಡಕವಾಗಿರುತ್ತವೆ. ಜೊತೆಗೆ ತಮ್ಮವೇ ಆದ ಸಾಂಸ್ಕೃತಿಕ ಹಿನ್ನೆಲೆಯನ್ನೂ ಹೊಂದಿವೆ. ಇಂದಿಗೂ ಅವುಗಳು ತಮ್ಮ ವೈಭವವನ್ನು ಉಳಿಸಿಕೊಂಡು ಬರುತ್ತಿವೆ. ಸಮಾಜದಲ್ಲಿ ಒಗ್ಗಟ್ಟನ್ನು ಪ್ರತಿನಿಧಿಸುವ ದ್ಯೋತಕಗಳಾಗಿವೆ.

ಹಬ್ಬಗಳ ಆಚರಣೆ ವಿಜಯೋತ್ಸವದ ಸಂಕೇತವಾಗಿರಬಹುದು ಅಥವಾ ದುಷ್ಟ ಶಕ್ತಿಗಳ ದಮನದ ಸಂಕೇತವಾಗಿರಬಹುದು, ಕೆಲವೊಂದು ಹಬ್ಬಗಳಲ್ಲಿ ಮಹಾತ್ಮರ ಸ್ಮರಣೆ ಮಾಡಬಹುದು, ಕೆಲವು ಅನುಕರಣೆಯಿಂದ ಬಂದಿರಬಹುದು. ಏನೇ ಆಗಲಿ ಅವುಗಳ ಹಿಂದಿರುವ ಐತಿಹ್ಯ ಹೇಳುವುದು ಅಷ್ಟು ಸುಲಭವಾದ ವಿಚಾರವಲ್ಲ. ಇವುಗಳ ಆಚರಣೆಯ ವಿಧಿವಿಧಾನಗಳು ಬೇರೆ ಬೇರೆ ಆದರೂ ಉದ್ದೇಶ ಒಂದೇ ಆಗಿರುವುದು ಗಮನಾರ್ಹ.

***ಹಬ್ಬಗಳ ಆಚರಣೆ ವಿಜಯೋತ್ಸವದ ಸಂಕೇತವಾಗಿರಬಹುದು ಅಥವಾ ದುಷ್ಟ ಶಕ್ತಿಗಳ ದಮನವಾಗಿರಬಹುದು. ಇಲ್ಲ ಮಹಾತ್ಮರ ಸ್ಮರಣೆಯಾಗಿರಬಹುದು. ಕೆಲವು ಅನುಕರಣೆಯಿಂದಲೂ ಬಂದಿರ ಬಹುದು. ಏನೇ ಆಗಲಿ ಅವುಗಳ ಹಿಂದಿರುವ ಐತಿಹ್ಯ ಹೇಳುವುದು ಅಷ್ಟು ಸುಲಭದ ವಿಚಾರವಲ್ಲ.***

ಸಮಾಜದ ಒಳಿತಿಗಾಗಿ ಪ್ರತಿಯೊಂದು ಹಳ್ಳಿಗಳಲ್ಲಿಯೂ ಇದನ್ನು ಸಾರ್ವತ್ರಿಕವಾಗಿ ಆಚರಿಸಲಾಗುತ್ತದೆ. ಇದು ದೇವರು ಮತ್ತು ಮಾನವನ ನಡುವಣ ಸಂಬಂಧವನ್ನು ಪ್ರತಿನಿಧಿಸುತ್ತದೆ. ಅವರೀರ್ವರ ನಡುವಣ ನಂಬಿಕೆಯೇ ಇಲ್ಲಿ ಪ್ರಧಾನವಾಗಿರುತ್ತದೆ. ಭಕ್ತಿ ಮಾರ್ಗದಲ್ಲಿ ನಡೆದ ಎಲ್ಲರಿಗೂ ಒಳಿತನ್ನು ಬಯಸುವುದೇ ಈ ಹಬ್ಬಗಳ ಉಗಮಕ್ಕೆ ಕಾರಣೀಭೂತವಾಗಿರಬಹುದು. ಯಾವುದೋ ಒಂದು ಅಗೋಚರ ಶಕ್ತಿ ತನ್ನನ್ನು ನಿಯಂತ್ರಿಸುತ್ತಿದೆ ಎಂದು ತಿಳಿದು ಮಾನವ ಅದಕ್ಕೆ ಭಯ, ಭಕ್ತಿ, ಗೌರವಗಳನ್ನು ಸಮರ್ಪಿಸಿ ಸಮಾಜದ ಏಳಿಗೆಗಾಗಿ ಶ್ರಮಿಸುತ್ತಾನೆ.

ಮಾವಿನ ತಳಿರು ತೋರಣಗಳಿಂದ ಮನೆಯನ್ನು ಅಲಂಕರಿಸುವುದು, ಮನೆಗೆ ಸುಣ್ಣ-ಬಣ್ಣ ಮಾಡುವುದು, ವಿಶೇಷವಾದ ಹಬ್ಬದ ಅಡುಗೆಗಳ ತಯಾರಿ ಇವು ಹಬ್ಬದ ಆಚರಣೆಯ ಕುರುಹುಗಳಾಗಿವೆ. "ಸಾಲ

ಮಾಡಿಯಾದರೂ ಹೋಳಿಗೆ ತಿನ್ನು" ಎಂಬ ಜನಪ್ರಿಯ ಗಾದೆ ಮಾತೊಂದಿದೆ. ಇದರಿಂದ ಹಬ್ಬದ ಆಚರಣೆಯ ಸಂಭ್ರಮ ಸಂತೋಷ ಯಾವ ರೀತಿಯದು ಎಂಬುದು ತಿಳಿಯುತ್ತದೆ.

ಪ್ರತಿಯೊಂದು ಹಬ್ಬವೂ ತನ್ನದೇ ಆದ ಹಿನ್ನೆಲೆಯನ್ನು ಹೊಂದಿದೆ. 'ನಾಗಾರಾಧನೆ' ಇದು ಸಂತಾನೋತ್ಪತ್ತಿಯ ಸಂಕೇತವೆನಿಸಿದೆ.

ಚೈತ್ರ ಮಾಸದಲ್ಲಿ ಬರುವ ಯುಗಾದಿ ಹೊಸ ವರ್ಷದ ಆಚರಣೆಯ ಸಂಕೇತವಾಗಿದೆ. ಇದನ್ನು ಚಾಂದ್ರಮಾನ ರೀತಿಯಿಂದ ಆಚರಿಸಲಾಗುತ್ತದೆ. ಈ ದಿನ ಪ್ರಾತಃಕಾಲದ ಅಭ್ಯಂಜನದ ಜೊತೆಗೆ ಬೇವು-ಬೆಲ್ಲದ ಸೇವನೆಗೆ ಪ್ರಾಮುಖ್ಯತೆ ನೀಡಲಾಗುತ್ತದೆ. ಈ ದಿನ ರೈತರು ಹೊಸದಾಗಿ ಸಿದ್ಧಪಡಿಸಿದ ಮರದ ನೇಗಿಲುಗಳನ್ನು ಪೂಜಿಸಿ ಎಲ್ಲ ರೀತಿ ಬಿತ್ತನೆ ಬೀಜಗಳನ್ನು ಹೊಲಗಳಲ್ಲಿ ಬಿತ್ತುತ್ತಾರೆ. ಈ ಮಾದರಿ ಬಿತ್ತನೆ ಬೀಜಗಳಲ್ಲಿ ಯಾವ ಫಸಲು ಹುಲುಸಾಗಿ ಬೆಳೆಯುತ್ತದೆಯೋ ಆ ಧಾನ್ಯವನ್ನು ಆ ವರ್ಷ ಬಿತ್ತನೆ ಮಾಡುತ್ತಾರೆ. ಹುಲುಸಾಗಿ ಬಂದ ಬೆಳೆ ಸಮೃದ್ಧವಾಗಿ ಬರುತ್ತದೆ ಎಂಬ ನಂಬಿಕೆ ನಮ್ಮ ರೈತ ಬಾಂಧವರಲ್ಲಿದೆ. ಪ್ರಕೃತಿ ಮಾತೆ ಸಹ ಚಿಗುರಿನ ಹಸಿರುಡುಗೆಯನ್ನುಟ್ಟು ವಸಂತ ಋತುವಿನ ಆಗಮನಕ್ಕೆ ಕಾತರಳಾಗಿರುತ್ತಾಳೆ. ಇದು ಹಿಂದುಗಳಿಗೆ ವರ್ಷಾರಂಭದ ದಿನವಾಗಿದೆ. ವರಕವಿ ಬೇಂದ್ರೆ ಅವರು "ಯುಗ ಯುಗಾದಿ ಕಳೆದರೂ ಯುಗಾದಿ ಮರಳಿ ಬರುತಿದೆ"ಎಂದು ಈ ಹಬ್ಬದ ವೈಭವವನ್ನು ವರ್ಣಿಸಿದ್ದಾರೆ.

ಮಣ್ಣೆತ್ತಿನ ಅಮಾವಾಸ್ಯೆಯನ್ನು ರೈತರ ಹಬ್ಬವೆಂದು ಕರೆಯಲಾಗಿದೆ. ರೈತರು ಈ ದಿನ ಮಣ್ಣಿನಿಂದ ಬಸವನನ್ನು ತಯಾರಿಸಿ ಪೂಜೆ ಮಾಡಿ ಹೊಲಗಳಲ್ಲಿ ಅದನ್ನು ವಿಸರ್ಜಿಸುತ್ತಾರೆ. ಈ ದಿನ ಶ್ರಮದಿಂದ ಉತ್ತು ಬಿತ್ತನೆ ಮಾಡುವ ಬಸವನನ್ನು ಕೃತಜ್ಞತೆಯಿಂದ ಪೂಜಿಸುವರು. ಭೀಮನ ಅಮವಾಸ್ಯೆಯಂದು ಸುಮಂಗಲಿಯರು ಜ್ಞಾನದ ಸಂಕೇತವಾದ ಜ್ಯೋತಿಯನ್ನು ಪೂಜಿಸುವರು.

ಉತ್ತರ ಕರ್ನಾಟಕದಲ್ಲಿ ನಾಗರಪಂಚಮಿ ಹಬ್ಬವನ್ನು ಬಹು ವಿಜೃಂಭಣೆಯಿಂದ ಆಚರಿಸುವರು. ಇದನ್ನು ಒಡಹುಟ್ಟಿದವರ ಹಬ್ಬ ಎಂದು ಕರೆಯುವರು. ಅಣ್ಣ ತಮ್ಮಂದಿರು, ಅಕ್ಕ ತಂಗಿಯರು ಎಲ್ಲರೂ ಸೇರಿ ಆಚರಿಸುವ ಹಬ್ಬವಿದು. ಈ ದಿನ ಸಹೋದರಿಯರು ತಮ್ಮ ಅಣ್ಣ ತಮ್ಮಂದಿರ ಬೆನ್ನು ಹುರಿಗೆ ಹಾಲಿನಿಂದ ಪೂಜಿಸುವರು. ತಂಬಿಟ್ಟಿನ ಬಾಗಿನವನ್ನು ಅವರಿಗೆ ನೀಡುತ್ತಾರೆ. ನಾಗದೇವನಲ್ಲಿ ತಮ್ಮ ಒಡಹುಟ್ಟಿದವರನ್ನು ಅಪಮೃತ್ಯುವಿನಿಂದ ಪಾರು ಮಾಡುವಂತೆ ಪ್ರಾರ್ಥಿಸುತ್ತಾರೆ.

ಶ್ರೀಕೃಷ್ಣನ ಜನ್ಮದಿನವನ್ನು ಜನ್ಮಾಷ್ಟಮಿ ಅಥವಾ ಗೋಕುಲಾಷ್ಟಮಿ ಎಂದು ವಿವಿಧ ಬಗೆಯ ಭಕ್ಷ್ಯಗಳನ್ನು ತಯಾರಿಸಿ ಶ್ರೀಕೃಷ್ಣನಿಗೆ ಈ ದಿನ ಅರ್ಪಿಸುತ್ತಾರೆ.

ಭಾದ್ರಪದ ತದಿಗೆಯಲ್ಲಿ ಬರುವ ಗೌರಿ ಹಬ್ಬ ಹೆಣ್ಣುಮಕ್ಕಳ ಸಂಭ್ರಮದ ಹಬ್ಬ. ಸುಮಂಗಲಿಯರು ಸ್ವರ್ಣಗೌರಿಯನ್ನು ಪೂಜಿಸುತ್ತಾರೆ. ಮರುದಿನದ ಹಬ್ಬವೇ ಗಣೇಶನ ಹಬ್ಬ. ಈ ದಿನ ಮಣ್ಣಿನಿಂದ ಗಣೇಶನನ್ನು ತಯಾರಿಸಿ ಪೂಜಿಸುತ್ತಾರೆ. ಇದನ್ನು ಸಾರ್ವತ್ರಿಕವಾಗಿಯೂ ಆಚರಿಸಲಾಗುತ್ತದೆ. ಈ ದಿನ ಊರಿನವರೆಲ್ಲಾ ತುಂಬಿದ ಕೆರೆಗೆ ಹೋಗಿ ಮರಳು ತಂದು ಪೂಜೆ ಮಾಡುತ್ತಾರೆ. ಮುಂದೆ ಮಳೆ ಬೆಳೆ ಹೇಗೆ ಆಗುತ್ತದೆ ಎಂಬುದು ಇದರಿಂದ ಅವರಿಗೆ ತಿಳಿಯುತ್ತದೆ.

ರಾಮಾಯಣ ಮಹಾಭಾರತಗಳ ಕಾಲದಿಂದಲೂ 'ನವರಾತ್ರಿ' ಹಬ್ಬನ್ನು ಆಚರಿಸಲಾಗುತ್ತಿದೆ. ಮೊದಲ ದಿನ ವಿದ್ಯಾಮಾತೆ ಸರಸ್ವತಿಯ ಪೂಜೆಯಿಂದ ಆರಂಭಗೊಳ್ಳುತ್ತದೆ. ಒಟ್ಟು ಒಂಬತ್ತು ದಿನಗಳು ಈ ಹಬ್ಬವನ್ನು ಮಾಡುತ್ತಾರೆ. ಕೊನೆಯ ಮೂರು ದಿವಸಗಳನ್ನು ಮಹಾನವಮಿ, ದುರ್ಗಾಷ್ಟಮಿ ಮತ್ತು ವಿಜಯದಶಮಿ ಎಂದು ಕರೆಯುತ್ತಾರೆ. ಮಹಾನವಮಿ ಹಳ್ಳಿಗರ ಪಾಲಿಗೆ ಬಹು ದೊಡ್ಡ ಹಬ್ಬವೆನಿಸಿದೆ.

ನಂತರ ಬರುವ ಸೀಗೇಹುಣ್ಣಿಮೆ ಇದು ರೈತರ ಹಬ್ಬ. ಮಹಿಳೆಯರು ಹಸಿರು ಸೀರೆಗಳನ್ನುಟ್ಟು ಹೊಸದಾಗಿ ಬೆಳೆದ ಬೆಳೆಯನ್ನು ತಲೆಮೇಲೆ ಹೊತ್ತುಕೊಂಡು ಹಾಡುಗಳನ್ನು ಹಾಡುತ್ತಾ ಹೊಲಕ್ಕೆ ಹೋಗಿ ಗೌರಿಪೂಜೆಯನ್ನು ಮಾಡುತ್ತಾರೆ. ಮಳೆ ಬೆಳೆಯನ್ನು ಕೊಡುವ ಇಂದ್ರನ ತೃಪ್ತಿಗಾಗಿ ಈ ಹಬ್ಬ ಮಾಡುತ್ತಾರೆ. ಉತ್ತರ ಕರ್ನಾಟಕದಲ್ಲಿ ಈ ಹಬ್ಬ ಪ್ರಚಲಿತದಲ್ಲಿದೆ.

ದೀಪಾವಳಿ ದೀಪಗಳ ಹಬ್ಬ. ನರಕ ಚತುರ್ದಶಿ, ಅಮಾವಾಸ್ಯೆ ಹಾಗೂ ಬಲಿಪಾಡ್ಯಮಿ ಎಂದು ಮೂರು ದಿನಗಳು ಈ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬದಲ್ಲಿ ಮಾಡುವ ಧಾನ್ಯಗಳ ಪೂಜೆ ರೈತನ ಶ್ರಮಕ್ಕೆ ತಕ್ಕ ಮನ್ನಣೆಯೆನಿಸಿದೆ.

ಮಕರ ಸಂಕ್ರಾಂತಿ ಇದು ಸುಗ್ಗಿ ಹಬ್ಬ. ಆಗ ಋತು ಬದಲಾವಣೆಯಾಗುತ್ತದೆ. ರೈತ ತನ್ನ ದನಕರುಗಳನ್ನು ಮೈತೊಳೆದು ಅವುಗಳಲ್ಲಿ ಮತ್ತೆ ಚೈತನ್ಯ ಮೂಡುವಂತೆ ಮಾಡುತ್ತಾನೆ. ಆ ದಿನ ಅವುಗಳಿಗೆ ಬಿಡುವು. ಸೂರ್ಯ ಮಕರರಾಶಿಗೆ ಸಂಚರಿಸುವ ದಿನ

ಸ್ವರ್ಗದ ಬಾಗಿಲು ತೆಗೆದಿರುತ್ತದೆ ಎಂಬ ನಂಬಿಕೆ ಶ್ರೀಸಾಮಾನ್ಯರಲ್ಲಿದೆ. ರಥಸಪ್ತಮಿಯಂದು ಸೂರ್ಯನಾರಾಯಣನ ಪೂಜೆಗೆ ಆದ್ಯತೆ. ಆ ದಿನ ಹಾಲು ಕಾಯಿಸಿದಾಗ ಅದು ಉಕ್ಕಿ ಹರಿಯಬೇಕೆಂಬುದು ಪ್ರತೀತಿ.

ಮಹಾಶಿವರಾತ್ರಿಯಂದು ಉಪವಾಸಕ್ಕೆ ಹೆಚ್ಚಿನ ಆದ್ಯತೆ. ಶಿವಪೂಜೆಗೆ ಆದ್ಯತೆ ನೀಡುವರು. ಜಾಗರಣೆಗೆ ಹೆಚ್ಚಿನ ಮಹತ್ವವಿದೆ. ಇವುಗಳಲ್ಲದೆ ಬೇರೆ ಕೆಲವು ಹಬ್ಬಗಳನ್ನು ಆಚರಿಸಲಾಗುತ್ತದೆ. ಗ್ರಾಮದೇವತೆಗಳ ಹಬ್ಬ, ಬಂಡಿಹಬ್ಬ, ಬನಶಂಕರಿ ಹಬ್ಬ, ಇವುಗಳ ಜೊತೆಗೆ ಅನೇಕ ಜನಪದ ಹಬ್ಬಗಳ ಆಚರಣೆಯೂ ಕಂಡುಬರುತ್ತದೆ.

ಹಬ್ಬಗಳ ಸಂದರ್ಭದಲ್ಲಿ ಮಾತ್ರ ರೈತ ವಿಶ್ರಾಂತಿ ಪಡೆಯುತ್ತಾನೆ. ಉದಾಹರಣೆಗೆ: ಸೋಮವಾರ- ಬಸವಣ್ಣನ ಆರಾಧನೆಯ ದಿನವೆಂದು ಆ ದಿನ ಎತ್ತಿಗೂ ವಿಶ್ರಾಂತಿ ನೀಡಿ, ತಾನೂ ವಿಶ್ರಾಂತಿ ಪಡೆಯುತ್ತಾನೆ. ಅಂದು ರೈತ ಎತ್ತುಗಳನ್ನು ಕಟ್ಟುವುದಿಲ್ಲ. ಅದೇ ರೀತಿ ಕರು ಹಾಕಿದ ಮೂರು ನಾಲ್ಕು ದಿವಸಗಳು ಹಾಲನ್ನು ಉಪಯೋಗಿಸುವುದಿಲ್ಲ. ಆ ಹಾಲನ್ನು ಬಸವಣ್ಣನ ಗುಡಿಗೆ ಕೊಡುತ್ತಾನೆ. ಎಳೆಯ ಕರು ತಾಯಿಹಾಲನ್ನು ಕುಡಿದು ದಷ್ಟಪುಷ್ಟವಾಗಿ ಬೆಳೆಯಲಿ ಎಂಬುದೇ ಅವನ ಉದ್ದೇಶವಾಗಿರುತ್ತದೆ.

ವ್ಯವಸಾಯದ ಆರಂಭದ ದಿನ ಅವನು ಮೊದಲು ಭೂಮಿ, ನೇಗಿಲು ಹಾಗೂ ಎತ್ತಿಗೆ ಪೂಜೆ ಮಾಡಿ ಉಳುವ ಕಾರ್ಯವನ್ನು ಪ್ರಾರಂಭಿಸುತ್ತಾನೆ. ಅದೇ ರೀತಿ ಹೊಲದಲ್ಲಿ, 'ಮುನಿಯಪ್ಪನ ಪೂಜೆ'ಯನ್ನು ಮಾಡುವುದನ್ನು ತಪ್ಪಿಸುವುದಿಲ್ಲ. ಕಣ ಮಾಡಿ ರಾಶಿ ಹಾಕಿಕೊಂಡ ಮೇಲೆಯೂ 'ರಾಶಿ ಪೂಜೆ' ಮಾಡದೆ ಬೆಳೆದ ಧಾನ್ಯವನ್ನು ಮನೆಗೆ ಕೊಂಡೊಯ್ಯುವುದಿಲ್ಲ. ಅವನ ಪ್ರತಿಯೊಂದು ಕಾರ್ಯದ ಹಿಂದೆಯೂ ತನ್ನನ್ನು ಪೋಷಿಸುತ್ತಿರುವ ಪ್ರಕೃತಿ ಮಾತೆಗೆ ಅಪಾರವಾದ ಕೃತಜ್ಞತೆಯನ್ನು ಅರ್ಪಿಸುವಂತಹ ಮನೋಭಾವವಿದೆ. ಪ್ರಕೃತಿಯನ್ನು ಪೂಜಿಸಿ, ಒಲಿಸಿಕೊಳ್ಳುತ್ತಲೇ ಆತನು ಬದುಕಬೇಕಾಗಿದೆ.

ಬರಗಾಲದಂತಹ ಪರಿಸ್ಥಿತಿಯಲ್ಲಿ ಮಳೆರಾಯನಿಗೆ, ಸಾಂಕ್ರಾಮಿಕ ರೋಗಗಳಿಂದ ಪಾರು ಮಾಡಲು, ತನ್ನ ವಸ್ತುಗಳನ್ನು ಕಳ್ಳಕಾಕರಿಂದ ರಕ್ಷಿಸಿಕೊಳ್ಳಲು ಹೊಲದಲ್ಲಿರುವ ಕ್ಷುದ್ರ ದೇವತೆಗಳಿಂದ ಹಿಡಿದು ಬೆಟ್ಟದ ಮೇಲಿರುವ ದೇವರುಗಳ ತನಕ ರೈತ ಹರಕೆ ಕಟ್ಟಿ ಕೊಳ್ಳುತ್ತಾನೆ. ಶ್ರಾವಣ ಮಾಸದ ಸೋಮವಾರ ಮತ್ತು ಶನಿವಾರಗಳು ಆತನಿಗೆ ಬಹಳ ಪವಿತ್ರವಾದ ದಿನಗಳಾಗಿವೆ.

ಈ ಹಬ್ಬಗಳ ಆಚರಣೆಯಿಂದಾಗಿ ಮನೆಯ ರಿಪೇರಿ ಕೆಲಸವಾಗುತ್ತದೆ. ಸುಣ್ಣ ಬಣ್ಣಗಳ ಲೇಪನದಿಂದಾಗಿ ಕ್ರಿಮಿಕೀಟಗಳಿಂದ ರಕ್ಷಿಸಿಕೊಂಡಂತಾಗುತ್ತದೆ. ಇದರಿಂದ ಮುಂದೆ ಬರುವ ಮಳೆಗಾಲಕ್ಕೆ ಮನೆಯನ್ನು ಭದ್ರ ಮಾಡಿಕೊಂಡಂತಾಗುತ್ತದೆ. ಹುಳ ಹುಪ್ಪಟೆಗಳಿಂದಲೂ ಮನೆಯನ್ನು ರಕ್ಷಿಸಿಕೊಳ್ಳಬಹುದು. ಎಷ್ಟೋ ದಿವಸಗಳಿಂದ ತೊಟ್ಟ ಬಟ್ಟೆಗಳನ್ನು ತೆಗೆದುಹಾಕಿ ಹೊಸ ಬಟ್ಟೆಗಳನ್ನು ತೊಡುವಂತಾಗುತ್ತದೆ. ಹಿಂದಿನ ಕಾಲದಲ್ಲಿ ಸಾಂಕ್ರಾಮಿಕ ರೋಗಗಳಿಂದ ಅನೇಕರು ಮರಣ ಹೊಂದುತ್ತಿದ್ದರು. ಶುಚಿತ್ವಕ್ಕೆ ಹೆಚ್ಚಿನ ಆದ್ಯತೆ ನೀಡುವುದಕ್ಕಾಗಿ ಹಿರಿಯರು ಸಂಪ್ರದಾಯದ ಕಟ್ಟುಕಟ್ಟಳೆಗಳಿಂದ ಹಬ್ಬಗಳ ಆಚರಣೆಯನ್ನು ಜಾರಿಗೆ ತಂದಿರಬಹುದು.

ಗ್ರಾಮದೇವತೆಗಳ ಹಬ್ಬ ಮಾಡುವುದರಿಂದ ಗ್ರಾಮ ಗ್ರಾಮಗಳ ನಡುವಣ ಬಾಂಧವ್ಯ ಗಟ್ಟಿಗೊಳ್ಳುತ್ತದೆ. ಎಲ್ಲರೂ ಒಂದೆಡೆ ಕಲೆತು ತಮ್ಮ ಸುಖದುಃಖಗಳನ್ನು ಹಂಚಿಕೊಳ್ಳಬಹುದು. ಇದರಿಂದ ಊಟ ಉಪಚಾರಗಳಲ್ಲೂ ಹೆಚ್ಚಿನ ಪೌಷ್ಟಿಕಾಂಶಗಳನ್ನು ಬಳಸಿಕೊಳಲು ಸಹಾಯಕವಾಗುತ್ತದೆ. ವಿವಾಹಗಳು ಎಷ್ಟೋ ಸಂದರ್ಭಗಳಲ್ಲಿ ಕೌಟುಂಬಿಕ ಪರಿಸರದಲ್ಲಿ ಜರುಗುತ್ತವೆ. ಆದರೆ ಹಬ್ಬ ಸಾರ್ವತ್ರಿಕವಾದ ಕಾರಣ ಇಡೀ ಗ್ರಾಮವೇ ಹರ್ಷದ ಹೊನಲಿನಲ್ಲಿರುತ್ತದೆ.

ಪುರುಷಪ್ರಧಾನವಾದ ಈ ಸಮಾಜದಲ್ಲಿ ಹೆಣ್ಣು ಮಕ್ಕಳು ಸೀಮಿತವಾದ ಪರಿಧಿಯಲ್ಲಿ ಬೆಳೆದಿರುತ್ತಾರೆ. ಹಬ್ಬಗಳ ಆಚರಣೆಯಿಂದಾಗಿ ಎಲ್ಲರೊಂದಿಗೆ ಕಲೆತು ಬೆರೆಯಲು ಅವಕಾಶವಾಗುತ್ತದೆ. ಜಾತಿ ಜಾತಿಗಳ ನಡುವೆ, ಗ್ರಾಮ ಗ್ರಾಮಗಳ ನಡುವೆ ಎಷ್ಟೇ ದ್ವೇಷವಿದ್ದರೂ ಎಲ್ಲರೂ ಒಂದೆಡೆ ಸೇರಿ ಅನ್ಯೋನ್ಯತೆಯಿಂದ ಹಬ್ಬವನ್ನು ಆಚರಿಸುತ್ತಾರೆ. ಇದರಿಂದ ಮೇಲುಕೀಳೆಂಬ ಭಾವನೆ ಯಾರಲ್ಲೂ ಉದ್ಭವಿಸದೆ ಎಲ್ಲರೂ ಸಮನಾಗಿ ದುಡಿದು ತಮ್ಮ ಕರ್ತವ್ಯಗಳನ್ನು ನೆರವೇರಿಸಿಕೊಳ್ಳುತ್ತಾರೆ. ಭಾವೈಕ್ಯತೆ ಹಾಗೂ ಸಾಮರಸ್ಯವೇ ಈ ಹಬ್ಬಗಳ ಆಚರಣೆಗೆ ತಳಹದಿಯಾಗುತ್ತದೆ.

೧೯ನೆಯ ಶತಮಾನದ ತನಕ ಅಂದರೆ ಅಕ್ಷರಾಭ್ಯಾಸ ಸಾರ್ವತ್ರಿಕವಾಗುವ ತನಕ ಮೌಢ್ಯಗಳೇ ಮಾನವನನ್ನು ಆಳುತ್ತಿದ್ದವು. ಹಬ್ಬ ಹರಿದಿನಗಳ ಹಿಂದಿರುವ ಸಾಂಸ್ಕೃತಿಕ ವೈಶಿಷ್ಟ್ಯಕ್ಕಿಂತ 'ಭೀತಿ' ಅವನನ್ನು ಅನುಸರಿಸುವಂತೆ ಮಾಡಿತು. ವಿದ್ಯಾಭ್ಯಾಸದ ಪ್ರಭಾವ

ಗ್ರಾಮೀಣ ಪರಸರದ ಕಡೆ ಹರಡುತ್ತಿದ್ದಂತೆ ಇಂತಹ ಆಚರಣೆಯ ಅವಶ್ಯಕತೆ ಏನು? ಎಂದು ಪ್ರಶ್ನಿಸುವವರ ಸಂಖ್ಯೆ ಹೆಚ್ಚಾಯಿತು. ತಾನೇ ಶೋಷಣೆಗೆ ಒಳಗಾಗುತ್ತಿರುವ ವಿಚಾರ ಅವನಿಗೆ ನಿಧಾನವಾಗಿ ತಿಳಿಯತೊಡಗಿತು. ಪಟ್ಟಭದ್ರ ಹಿತಾಸಕ್ತಿಗಳು ಹಬ್ಬಗಳ ಮೂಲಕ ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಿರುವುದು ಗೊತ್ತಾಯಿತು. ಇದರಿಂದಾಗಿ ಕೆಳವರ್ಗದವರು ಮೇಲಿನವರ ತೆವಲಿಗಾಗಿ ಹಬ್ಬದ ಹೆಸರಿನಲ್ಲಿ ಕುಣಿಯುವ ಪರಿಪಾಠ ನಿಂತುಹೋಯಿತು. ವರ್ಷವೆಲ್ಲಾ ಕಷ್ಟಪಟ್ಟು ಉತ್ತುಬಿತ್ತು ಬೆಳೆದ ದವಸ ಧಾನ್ಯಗಳನ್ನು ಹಬ್ಬಗಳ ಹೆಸರಿನಲ್ಲಿ ಪೋಲಾಗದಂತೆ ಆತ ಎಚ್ಚರವಹಿಸತೊಡಗಿದ. ಇದರ ಜೊತೆಗೆ ಗ್ರಾಮೀಣರು ನಗರವಾಸಿಗಳ ಪ್ರಭಾವಕ್ಕೊಳಗಾದರು. ಮಾರಮ್ಮನ ಹಬ್ಬ ಮರೆಯಾಗಿ ಸಾರ್ವತ್ರಿಕವಾಗಿ ಗಣೇಶನನ್ನು ಕೂಡಿಸುವ ಕಡೆ ಒಲವು ಹೆಚ್ಚಿತು. ಮೊಹರಂ ದಿನ ಎಲ್ಲಾ ಪಂಗಡದವರು 'ಹುಲಿವೇಷ' ಧಾರಿಗಳಾಗುವುದು ಮರೆಯಾಯಿತು. ಹಿಂದೂಗಳ ಹಬ್ಬವಾದ ರಾಮನವಮಿ, ಶಿವರಾತ್ರಿಗೆ ಚಪ್ಪರ ಹಾಕುವ ಪದ್ಧತಿ ಮುಸ್ಲಿಂ ಬಾಂಧವರಲ್ಲಿ ಕಡಿಮೆಯಾಯಿತು. ಕಾಣದ ಕೈಗಳಿಂದಾಗಿ ಗ್ರಾಮೀಣ ಸಮುದಾಯಗಳ ನಡುವೆಯೇ ಬಿರುಕು ಮೂಡುವಂತಾಯಿತು.

ಹಬ್ಬಗಳು ಭಾವೈಕ್ಯತೆಯನ್ನು ಪ್ರತಿಬಿಂಬಿಸುವಂತಿರಬೇಕು. ಮನುಷ್ಯರಲ್ಲಿ ಮಾನವೀಯ ಗುಣಗಳು ಬೆಳೆಯುವಂತೆ ಮಾಡಬೇಕು. ಇಡೀ ಗ್ರಾಮದ ಸಂಭ್ರಮ ಸಡಗರಗಳು ಏಕದೇಹಿಯಾಗಿ ಎದ್ದು ನಿಲ್ಲಬೇಕು. ಹಳ್ಳಿಗಳಲ್ಲಿ ನಡೆಯುವ ರಥೋತ್ಸವದಲ್ಲಿ ರಥದ ಗಾಲಿ ಹೇಗೆ ಸಾಗುತ್ತದೆ? ನೂರಾರು-ಸಾವಿರಾರು ಕೈಗಳು ದೇವರ ಸ್ಮರಣೆ ಮಾಡುತ್ತಾ ರಥದ ಹಗ್ಗವನ್ನು ಮುಟ್ಟಿದರೆ ಸಾಕು, ಅದು ತಾನಾಗೇ ಮುಂದಕ್ಕೆ ಹೋಗುತ್ತಿತ್ತು. ಇನ್ನು ಮುಂದೆ ರಥ ಎಳೆಯಲು ಜನರನ್ನು ಹಣ ಕೊಟ್ಟು ನೇಮಿಸಿಕೊಳ್ಳಬೇಕಾದ ಪರಿಸ್ಥಿತಿ ಬಂದರೆ ಅಚ್ಚರಿಯೇನಲ್ಲ.

ಎಲ್ಲಾ ಹಬ್ಬಗಳ ಆಚರಣೆಗೂ ಸಾಂಸ್ಕೃತಿಕ ಹಿನ್ನೆಲೆಯಿದೆ. ನಮ್ಮ ಪೂರ್ವಿಕರು ಪರಂಪರೆಯನ್ನು ಶ್ರದ್ಧಾಭಕ್ತಿಗಳಿಂದ ಅನುಸರಿಸುತ್ತಿದ್ದರು. ಮಧ್ಯದಲ್ಲಿ ಈ ವ್ಯವಸ್ಥೆಯ ಪಾರಂಪರಿಕತೆಯಲ್ಲಿ ಏಕಾಗ್ರತೆ ಕಾಣಬಂದು ಜಡತ್ವ ಉಂಟಾಯಿತು. ವಿಚಾರಶೀಲತೆಯಿಂದಾಗಿ ಶುಷ್ಕ ಪದ್ಧತಿಗಳಿಗೆ ಜೀವಂತಿಕೆ ಕೊಡಲಾಯಿತು. ಗ್ರಾಮೀಣ ಭಾಗದ ಜನರು ಕೂಡಾ ಅತಿಯಾದ ಯಾಂತ್ರಿಕತೆಯಿಂದಾಗಿ ಜೀವನದ ಪ್ರಾಧಾನ್ಯತೆಯನ್ನು ಕಳೆದುಕೊಳ್ಳುತ್ತಿದ್ದಾರೆ. ಇವುಗಳೆಲ್ಲಕ್ಕಿಂತಲೂ ಹಿರಿದಾದುದು ಹಬ್ಬಗಳ ಆಚರಣೆಯ ಹಿಂದಿರುವ ಚಿರನೂತನವಾದ ಸತ್ಯ ಎಂಬುದನ್ನು ಮರೆಯಬಾರದು.

ಪ್ರತಿಯೊಂದು ಹಬ್ಬವೂ ಮಾನವೀಯ ಗುಣಗಳ ಪ್ರತಿಪಾದನೆಗೆ ಇರುವ ಸದವಕಾಶ. ಸಹನೆ, ಪ್ರೀತಿ, ಪ್ರಾಣಿದಯೆ, ಪರೋಪಕಾರ, ದಾನ, ಸಹಬಾಳ್ವೆ, ಸೃಜನಶೀಲತೆ ಮೊದಲಾದ ಗುಣಗಳನ್ನು ಹಬ್ಬ ಸಮರ್ಥವಾಗಿ ಪ್ರತಿಪಾದಿಸುತ್ತದೆ. ಕೆಲವು ದೊಡ್ಡ ನಗರಗಳಲ್ಲಿ ಹಬ್ಬದ ಹಿಂದುಮುಂದಿನ ದಿನಗಳು ಸಡಗರದಿಂದ ಕೂಡಿರುತ್ತವೆ. ಗ್ರಾಮಗಳು ಇದಕ್ಕೆ ಹೊರತಾಗಿವೆ. ಜಮೀನ್ದಾರರು ಹಾಗೂ ನಿಶ್ಚಿತ ಆದಾಯವಿರುವವರು ಗ್ರಾಮಗಳಲ್ಲಿ ಸಾಕಷ್ಟು ಜನರಿರುತ್ತಾರೆ. ಬಹುಸಂಖ್ಯಾತ ಗ್ರಾಮೀಣರು ಬದುಕಿಗಾಗಿ ನಿರಂತರವಾದ ಹೋರಾಟ ನಡೆಸುತ್ತಲೇ ಇರುತ್ತಾರೆ. ಎಲ್ಲರೂ ಸೇರಿ ಒಗ್ಗಟ್ಟಿನಿಂದ, ಸಂತೋಷದಿಂದ ಕೂಡಿ ಆಚರಿಸುವುದೇ ಹಬ್ಬ. ಇಷ್ಟೆಲ್ಲಾ ಇದ್ದರೂ ಗ್ರಾಮೀಣ ಪ್ರದೇಶಗಳಲ್ಲಿ ಹಬ್ಬಕ್ಕೆ ಹಿರಿದಾದ ಸ್ಥಾನವಿದೆ. ಎಷ್ಟೇ ಕಷ್ಟವಾದರೂ ಸಹ ಯಾವ ಗ್ರಾಮಗಳೂ ಹಬ್ಬವನ್ನು ಆಚರಿಸದೇ ಇರಲಾರವು.

ನಮ್ಮ ಜನಪದ ಸಂಪತ್ತುಗಳಾದ ಬೀಸೋ ಕಲ್ಲಿನ ಪದ, ಕೋಲಾಟ, ಸೋಮನ ಕುಣಿತ, ಪಟದ ಕುಣಿತ, ಹುಲಿವೇಷ ಇವುಗಳ ಜೊತೆಗೆ ಜನಪದ ಕ್ರೀಡೆಗಳೂ ಈ ಹಬ್ಬಗಳ ಆಚರಣೆಯಿಂದ ಬೆಳಕಿಗೆ ಬರುತ್ತವೆ.

ಒಟ್ಟಾರೆ ಹೇಳುವುದಾದರೆ ಇಂತಹ ಹಬ್ಬಗಳ ಆಚರಣೆಗಳಿಂದ ನಶಿಸಿಹೋಗುತ್ತಿರುವ ಜನಪದ ಕಲೆಗಳ ಪರಿಚಯ ನಮಗಾಗಿ ಅವುಗಳ ಸಂಶೋಧನೆ, ವಿಶ್ಲೇಷಣೆಗೆ ಅವಕಾಶವಾಗುತ್ತದೆ. ಸಾರ್ವತ್ರಿಕವಾಗಿ ಭಕ್ತಿಯ ಹೆಸರಿನಲ್ಲಿ ರೋಷ-ದ್ವೇಷಗಳು ಮರೆಯಾಗಿ ಸಂತೋಷಸಂಭ್ರಮಗಳು ಅಲ್ಲಿ ವಿಜೃಂಭಿಸಿ, ಶಾಂತಿ ನೆಮ್ಮದಿಯ ಬಾಳ್ವೆಗೆ ಹಬ್ಬಗಳು ಅನುವು ಮಾಡಿಕೊಡುತ್ತವೆ.

●




# ಸ್ಮಾರಕಗಳ ರಕ್ಷಣೆ

ಕೆ. ಪ್ರಕಾಶ್

ನಮ್ಮ ಪೂರ್ವಜರ ಬದುಕು, ಅವರ ಆಶಯ, ಆದರ್ಶಗಳು, ಅನುಭವಗಳು, ಕಂಡುಕೊಂಡ ಸತ್ಯಗಳು ನಮಗೆ ಸದಾ ದಾರಿದೀಪವಾಗಿರುತ್ತವೆ. ಇಂದಿನ ನಮ್ಮ ಬಹಳಷ್ಟು ಸಮಸ್ಯೆಗಳಿಗೆ ಇತಿಹಾಸದಲ್ಲಿ ಉತ್ತರವನ್ನು ಕಂಡುಕೊಳ್ಳಬಹುದು. ಇತಿಹಾಸದಲ್ಲಿ ಘಟಿಸಿದ ಏಳು-ಬೀಳುಗಳು, ನಮ್ಮ ಸಂಸ್ಕೃತಿ ಮತ್ತು ಪರಂಪರೆಯ ಪ್ರತೀಕವಾಗಿ ಉಳಿದರುವ ಸ್ಮಾರಕಗಳು ನಮ್ಮ ಸುತ್ತ ಅಗಾಧ ಸಂಖ್ಯೆಯಲ್ಲಿವೆ.

ಯಾವುದೇ ಒಂದು ಕಟ್ಟಡವು ಐತಿಹಾಸಿಕ ಸ್ಮಾರಕವೆನಿಕೊಳ್ಳಬೇಕಾದರೆ ಕನಿಷ್ಟ ೧೦೦ ವರ್ಷ ಹಳೆಯದಾಗಿರಬೇಕು ಮತ್ತು ಅದಕ್ಕೆ ಐತಿಹಾಸಿಕ ಮೌಲ್ಯವಿರಬೇಕು. ಕರ್ನಾಟಕ ರಾಜ್ಯದಲ್ಲಿ ಇಂಥ ಐತಿಹಾಸಿಕ ಮತ್ತು ಪಾರಂಪರಿಕ ಮಹತ್ವವುಳ್ಳ ೧೦೦೦೦ಕ್ಕೂ ಹೆಚ್ಚಿನ ದೇವಾಲಯಗಳಿವೆ. ಈ ದೇವಾಲಯಗಳಲ್ಲಿ ಕೆಲವು ಗಂಗರ ಮತ್ತು ಚಾಲುಕ್ಯರ ಕಾಲದವುಗಳಾಗಿದ್ದು, ಸುಮಾರು ೧೨೦೦ ವರ್ಷಕ್ಕೂ ಹಳೆಯದಾಗಿವೆ. ಇಂಥ ನೂರಾರು ಘೋಷಿತ ಮತ್ತು ಸಂರಕ್ಷಿತ ಸ್ಮಾರಕಗಳು ಇಂದು ಜನರ ಮತ್ತು ಆಡಳಿತದ ದಿವ್ಯ ನಿರ್ಲಕ್ಷ್ಯಕ್ಕೊಳಗಾಗಿವೆ.

> **ಸ್ಮಾರಕಗಳು ನಮ್ಮ ದೇಶದ ಅಮೂಲ್ಯ ಸಂಪತ್ತು. ಇವುಗಳನ್ನು ಮುಂದಿನ ಪೀಳಿಗೆ ಉಳಿಸಿ ಕೊಂಡು ಹೋಗುವುದು ನಾಗರಿಕರೆಲ್ಲರ ಆದ್ಯ ಕರ್ತವ್ಯ. ಜನಜಾಗೃತಿ ಮೂಡಿದಂತೆಲ್ಲ ಐತಿಹಾಸಿಕ ಸ್ಮಾರಕಗಳ ಬಗ್ಗೆ ಭಾವನಾತ್ಮಕ ಒಲವು ಮೂಡುವುದು ಸಾಧ್ಯ.**

ಒಂದು ವಾಸದ ಕಟ್ಟಡವನ್ನು ಪ್ರತಿವರ್ಷವೂ ಗಮನಿಸುವಂತೆ ಈ ಸ್ಮಾರಕಗಳನ್ನು ಗಮನಿಸದಿದ್ದರೆ, ಸಹಜವಾಗಿಯೇ ಅವು ನಶಿಸುತ್ತಾ ಕಾಲಕ್ರಮೇಣ ಕಣ್ಮರೆಯಾಗುತ್ತವೆ.

ಸ್ಮಾರಕಗಳಲ್ಲಿ ಪ್ರಮುಖವಾದವುಗಳೆಂದರೆ ದೇವಾಲಯಗಳು, ಮಸೀದಿಗಳು, ಅರಸರ ಗೋರಿಗಳು, ಜೈನಬಸದಿಗಳು, ಇಗರ್ಜಿಗಳು, ಗುಹಾಂತರ ದೇವಾಲಯಗಳು, ಚೈತ್ಯಾಲಯಗಳು, ಕಲ್ಯಾಣಿಗಳು, ಕೆರೆಗಳು, ಕೋಟೆಗಳು, ಮೂರ್ತಿಶಿಲ್ಪಗಳು, ಕಾಲುವೆಗಳು, ಮಾಸ್ತಿಕಲ್ಲು - ವೀರಗಲ್ಲುಗಳು, ವಿಜಯಸ್ತಂಭಗಳು, ಮಿನಾರುಗಳು, ಗೋಪುರಗಳು, ಧರ್ಮಛತ್ರಗಳು, ಸ್ನಾನಘಟ್ಟಗಳು, ಶಿಲಾಮಂಟಪಗಳು, ವೃಂದಾವನಗಳು, ಸಮಾಧಿ ಸಮುಚ್ಚಯಗಳು ಇತ್ಯಾದಿ.

ಜನಹಿತಕಾರಿ ಸಂಸ್ಥೆಗಳು ಹಾಗೂ ಧಾರ್ಮಿಕ ಕ್ಷೇತ್ರಗಳಿಗೆ ಸಾಗುವಳಿ ಭೂಮಿಯನ್ನು ಉಂಬಳಿಯಾಗಿ ನೀಡುವುದರ ಮೂಲಕ ರಾಜರು, ನಾಯಕರು, ಮಾಂಡಲಿಕರು ಅವು ಜ್ಞಾನದಾಸೋಹ ಮತ್ತು ಅನ್ನದಾಸೋಹ ಕೈಗೊಳ್ಳುವಂತೆ ಮಾಡಿದ್ದರು. ಅವರು ಸಾಗುವಳಿ ಭೂಮಿಯ ಉಂಬಳಿಯನ್ನು 'ಇನಾಮು' ಎಂತಲೂ ಹಣದ ರೂಪದ ಅನುದಾನವನ್ನು 'ಮುಜರಾಯಿ' ಎಂತಲೂ ಕರೆಯುತ್ತಿದ್ದರು. ಮೈಸೂರು ಸಂಸ್ಥಾನವೊಂದರಲ್ಲೇ ೧೯೨೩ರಲ್ಲಿ ೩೬ ಛತ್ರಗಳು,

೮೭ ದೇವಾಲಯಗಳು, ೨೪ ವಿಶ್ರಾಂತಿಗೃಹಗಳು, ೭ ಮಹಮದೀಯ ಸಂಸ್ಥೆಗಳು ಮತ್ತು ೧೩೭೧೬ ಸಣ್ಣ ಧಾರ್ಮಿಕ ಸಂಸ್ಥೆಗಳು ರಾಜಾಶ್ರಯ ಪಡೆದಿದ್ದವು. ಇವುಗಳಲ್ಲದೆ, ತಿರುಪತಿ ಮತ್ತು ಬನಾರಸ್‌ಗಳಲ್ಲಿನ ಛತ್ರಗಳನ್ನೊಳಗೊಂಡಂತೆ ೩೫ ದೇವಾಲಯ ಮತ್ತು ಧಾರ್ಮಿಕ ಸಂಸ್ಥೆಗಳಿಗೆ ಇನಾಮ್ ಮತ್ತು ಅನುದಾನವನ್ನು ನೀಡಿದ ಉದಾಹರಣೆಗಳಿವೆ. ರಾಜಬೊಕ್ಕಸದಿಂದಲ್ಲದೆ, ಅರಮನೆಯಿಂದಲೂ ಹಲವಾರು ದೇವಾಲಯಗಳಿಗೆ, ಅನಾಥಾಲಯಗಳಿಗೆ, ಸೇವಾಸಂಸ್ಥೆಗಳಿಗೆ ದಾನ ನೀಡಲಾಗುತ್ತಿತ್ತು. ಹೀಗಾಗಿ ಇಂಥ ಸಂಸ್ಥೆಗಳು ಯಶಸ್ವಿಯಾಗಿ ಮತ್ತು ಸಮರ್ಪಕವಾಗಿ ಧರ್ಮಕಾರ್ಯ ಮಾಡಲು ಅನುವಾಗಿತ್ತು. ಇನಾಮ್ ರದ್ದಿಯಾತಿ ಕಾಯ್ದೆಯಿಂದ ದೇವಸ್ಥಾನಗಳಿಗೆ ಬರುತ್ತಿದ್ದ ನಿಗದಿತ ಆದಾಯವು ನಿಂತುಹೋಗಿದ್ದರಿಂದ ದೇವಾಲಯಗಳು ಮತ್ತು ಸೇವಾಸಂಸ್ಥೆಗಳು ಅವನತಿಯತ್ತ ನಡೆದವು.

ವಾಸ್ತುಶಿಲ್ಪದ ಚರಿತ್ರೆಯೆಂದರೆ, ಅದೊಂದು ಮನುಕುಲದ ಅಭಿರುಚಿಯ ಚರಿತ್ರೆಯಾಗುತ್ತದೆ. ಪಾಶ್ಚಿಮಾತ್ಯ ಜಗತ್ತಿನೊಡನೆ ಸಂಬಂಧ ಬೆಳೆದ ನಂತರ ಭಾರತದ ಸಾಂಸ್ಕೃತಿಕ ಬೆಳವಣಿಗೆಯು ಒಂದು ಹೊಸ ತಿರುವನ್ನು ಪಡೆದುಕೊಂಡಿದ್ದನ್ನು ನಾವು ಕಾಣುತ್ತೇವೆ.

ಪುರಾತನ ಅವಶೇಷಗಳನ್ನು ಸಂರಕ್ಷಣೆ ಮಾಡುವ ದಿಸೆಯಲ್ಲಿ ಕ್ರಿ.ಶ.೧೬೭೨ರಲ್ಲಿ ಮೈಸೂರು ಸಂಸ್ಥಾನದಲ್ಲಿ ಆಳ್ವಿಕೆ ನಡೆಸಿದ ಚಿಕದೇವರಾಯ ಒಡೆಯರ ಕೊಡುಗೆ ಬಹು ದೊಡ್ಡದು. ಎಲ್.ಬಿ. ಬೌರಿಂಗ್, ಮೆಕೆಂಜಿ, ಮೇಜರ್ ಡಿಕ್ಸನ್, ಲೂಯಿಸ್ ರೈಸ್ -ಮುಂತಾದ ವಿದೇಶಿ ಅಧಿಕಾರಿಗಳ ದೂರದರ್ಶಿತ್ವ, ಸುದೀರ್ಘ ಅಧ್ಯಯನ ಮತ್ತು ಕರ್ತೃತ್ವಶಕ್ತಿಯಿಂದ ಶಾಸನಶಾಸ್ತ್ರ, ನಾಣ್ಯಶಾಸ್ತ್ರ ಮುಂತಾದ ಕ್ಷೇತ್ರದಲ್ಲಿ ಅಗಾಧ ಬೆಳವಣಿಗೆಯಾಗಿ, ಭಾರತದ ಭವ್ಯ ಇತಿಹಾಸ ಮತ್ತು ಪರಂಪರೆಯನ್ನು ಅರಿಯಲು ಸಹಾಯಕವಾಯಿತು. ಸಾವಿರಾರು ಶಿಲಾಶಾಸನಗಳು ತಮ್ಮೊಳಗಿನ ಅಗಾಧ ಜ್ಞಾನಭಂಡಾರವನ್ನು ಹೊರಜಗತ್ತಿಗೆ ತೆರೆದುಕೊಂಡವು. ನಮ್ಮ ಭವ್ಯ ಪರಂಪರೆಯನ್ನು ಸಾರಿಹೇಳಿದವು. ಇಂಪೀರಿಯಲ್ ಸರ್ಕಾರವು ಪ್ರಾಚೀನ ದೇಗುಲಗಳನ್ನು ಸಂರಕ್ಷಿಸುವ ಉದ್ದೇಶದಿಂದ ೧೯೦೬ರಲ್ಲಿ "A List of European Tombs & Monuments in Mysore" ಎಂಬ ಸಂಪುಟವನ್ನು ಪ್ರಕಟಿಸಿತು. ಹಳೇಬೀಡಿನ ಕೇದಾರೇಶ್ವರ ದೇವಾಲಯದ ಜೀರ್ಣೋದ್ಧಾರ; ಬೆಂಗಳೂರಿನ ನಾಲ್ಕು ದಿಕ್ಕುಗಳಲ್ಲಿ ಕೆಂಪೇಗೌಡರು ಪ್ರತಿಷ್ಠಾಪಿಸಿದ್ದ ಕಾವಲು ಗೋಪುರಗಳ ದುರಸ್ತಿ ಕಾರ್ಯ, ಮೊಳಕಾಲ್ಮೂರಿನಲ್ಲಿ ಚಕ್ರವರ್ತಿ ಅಶೋಕನ ಶಿಲಾಶಾಸನಗಳ ಸಂರಕ್ಷಣೆಯನ್ನು ಪ್ರಾಯೋಗಿಕವಾಗಿ ಈ ಯೋಜನೆಯಲ್ಲಿ ಕೈಗೆತ್ತಿಕೊಳ್ಳಲಾಯಿತು. ಸ್ಮಾರಕಗಳ ಸರ್ವೇಕ್ಷಣೆ, ಉತ್ಖನನ ಮತ್ತು ರಕ್ಷಣೆಯ ಹೊಣೆ ಹೊತ್ತ ಪ್ರಾಚ್ಯವಸ್ತು ಇಲಾಖೆಯು ಅಸ್ತಿತ್ವಕ್ಕೆ ಬಂದಿತು.

ನಮ್ಮ ಸಂವಿಧಾನದ ರಾಜ್ಯ ನಿರ್ದೇಶಕ ತತ್ವಗಳಲ್ಲಿ ಐತಿಹಾಸಿಕ ಮತ್ತು ರಾಷ್ಟ್ರೀಯ ಸ್ಮಾರಕಗಳನ್ನು ರಕ್ಷಣೆ ಮಾಡಲು ಸೂಚಿಸಲಾಗಿದೆ. ಇದರ ಹಿಂದಿನ ಆಶಯಗಳನ್ನು ಅರಿತ ಕೇಂದ್ರ ಸರ್ಕಾರವು ೧೯೫೧ರಲ್ಲಿ ಕಾಯಿದೆಯನ್ನು ಜಾರಿಗೆ ತಂದಿದೆ. ಈ ಕಾಯಿದೆಯ ಪ್ರಕಾರ ಐತಿಹಾಸಿಕ ಸ್ಮಾರಕಕ್ಕೆ ಹಾನಿ ಮಾಡುವುದು, ಅದರ ಜಾಗವನ್ನು ಒತ್ತುವರಿ ಮಾಡುವುದು ಶಿಕ್ಷಾರ್ಹ ಅಪರಾಧವಾಗಿರುತ್ತದೆ. ಕರ್ನಾಟಕದಲ್ಲಿರುವ ಐತಿಹಾಸಿಕ ಸ್ಮಾರಕಗಳ ರಕ್ಷಣೆಗಾಗಿ ನಿರ್ದೇಶನಾಲಯವು ಹಂಪಿಯಲ್ಲಿ ಕಾರ್ಯನಿರ್ವಹಿಸುತ್ತಿದೆ.

ಒಂದು ದೇವಾಲಯದ ಸೇವಕರಾಗಿರಬಹುದು, ಅರ್ಚಕರಾಗಿರಬಹುದು ಅಥವಾ ದೇವಾಲಯದ ಪರಿಸರದಲ್ಲಿನ ಊರಿನ ಗಣ್ಯರು ದೇವಾಲಯದ ಪರಿಸರವನ್ನು ಅಥವಾ ದೇವಾಲಯದ ಕಟ್ಟಡದ ಭಾಗವನ್ನು ಒತ್ತುವರಿ ಮಾಡುತ್ತಾರೆ. ದನಗಳನ್ನು ಕಟ್ಟಲು, ವಾಸ ಮಾಡಲು, ಶಾಲೆ, ಕಛೇರಿ ಅಥವಾ ಇನ್ಯಾವುದೋ ಸಾರ್ವಜನಿಕ ಉದ್ದೇಶಕ್ಕೆ ಅವುಗಳನ್ನು ಬಳಸುತ್ತಾರೆ. ಸಾರ್ವಜನಿಕ ಉದ್ದೇಶಕ್ಕೆ ಬಳಸಿದಾಗ ಕಟ್ಟಡದ ಗೋಡೆಗಳಿಗೆ ಮೊಳೆ ಹೊಡೆಯುವುದು, ಕಟ್ಟಡದಲ್ಲಿ ಬದಲಾವಣೆ ಮಾಡುವುದು, ದೇವಾಲಯದ ಅಥವಾ ಸ್ಮಾರಕದ ಪ್ರಾಕಾರದಲ್ಲಿನ ಕಲ್ಲುಗಳನ್ನು ಕೀಳುವುದು, ಬಿದ್ದುಹೋದ ಕಟ್ಟಡಗಳ ಕಲ್ಲುಚಪ್ಪಡಿಗಳನ್ನು ದುರುಪಯೋಗ ಮಾಡುವುದು, ಮಾಸ್ತಿಕಲ್ಲು - ವೀರಗಲ್ಲುಗಳನ್ನು ಕಿತ್ತು ಬಟ್ಟೆ ಒಗೆಯುವ ಕಲ್ಲುಗಳಾಗಿ ಉಪಯೋಗಿಸುವುದು, ಕೆಲವು ಕಡೆ ಕೊಡಲಿ, ಕತ್ತಿ, ಚೂರಿಗಳನ್ನು ಹರಿತಗೊಳಿಸುವ ಕಲ್ಲುಗಳಾಗಿ ಉಪಯೋಗಿಸುವ ಮೂಲಕ ಅವುಗಳನ್ನು ವಿರೂಪಗೊಳಿಸಿರುವುದನ್ನು ನಾವು ಕಾಣುತ್ತೇವೆ. ಮಾನವನ ಈ ರೀತಿಯ ಸತತ ಆಘಾತದಿಂದ ಮತ್ತು ನೈಸರ್ಗಿಕ ಪ್ರಕೋಪಗಳಿಂದ ಸ್ಮಾರಕಗಳು ಸಾಕಷ್ಟು ಹಾನಿಗೊಳಗಾಗುತ್ತವೆ. ಇತಿಹಾಸದ ಬಗೆಗಿನ ಅಜ್ಞಾನ, ಧಾರ್ಮಿಕ ಅಂಧಶ್ರದ್ಧೆ, ಕಿಡಿಗೇಡಿತನ ಮತ್ತು ಸಾಮಾಜಿಕ ಆಸ್ತಿಯನ್ನು ರಕ್ಷಿಸಿಕೊಳ್ಳುವಲ್ಲಿ ಜನರಲ್ಲಿ ಸಾಂಘಿಕ ಜವಾಬ್ದಾರಿತನ ಮತ್ತು ಬದ್ಧತೆಯ ಕೊರತೆಯೂ ಸಹ ಇದಕ್ಕೆ ಬಹುಮಟ್ಟಿಗೆ ಕಾರಣವಾಗಿದೆ.

ದೇವಾಲಯವು ಪೂಜಾಕೇಂದ್ರವಾಗಿದ್ದರೆ, ಸ್ಥಳೀಯರು ತಮ್ಮ ಅನುಕೂಲಕ್ಕೆ ತಕ್ಕಂತೆ ಬಿದ್ದ ಕಟ್ಟಿಗೆ, ಮಣ್ಣು, ಇಟ್ಟಿಗೆ ಅಥವಾ ಕಲ್ಲನ್ನು ಬಳಸಿ ದುರಸ್ತಿ ಮಾಡುವ ಭಕ್ತಿಯನ್ನು ತೋರಿಸಿದರೂ, ದೇವಾಲಯದ ಮೂಲ ಸ್ವರೂಪವನ್ನು ಕೆಡಿಸುತ್ತಾರೆ. ಕೆಲವು ಸಲ

ಇರುವ ದೇವಾಲಯವನ್ನೇ ಕೆಡವಿ, ಅದರ ಆಕರ್ಷಕ ಕಂಬಗಳನ್ನು, ಕಲಾಕೃತಿಗಳನ್ನು ಅಲಕ್ಷಿಸಿ ಆಧುನಿಕ ಕಟ್ಟಡವನ್ನು ರಚಿಸಿ, ಪ್ರಾಚೀನ ಪಾರಂಪರಿಕ ಕಟ್ಟಡದ ವಸ್ತುಗಳನ್ನು ನಾಶಮಾಡುತ್ತಾರೆ. ಉದಾ: ಉಗಾರಖುರ್ದದಲ್ಲಿ ಇದ್ದ ಒಂದು ಪ್ರಾಚೀನ ಚಾಲುಕ್ಯರ ದೇವಾಲಯವನ್ನು ಪೂರ್ತಿ ಕೆಡವಿ, ಅದರಲ್ಲಿದ್ದ ಆಕರ್ಷಕ ಕಂಬಗಳನ್ನು ದೂರಕ್ಕೆ ಎಸೆದು, ಅಲ್ಲಿ ಹೊಸ ವಿಧಾನದ ಅಂದರೆ ಇಟ್ಟಿಗೆ ಮತ್ತು ಆರ್‌ಸಿಸಿ ದೇವಾಲಯವನ್ನು ರಚಿಸಿದ್ದಾರೆ.

ದೇವಾಲಯಗಳಲ್ಲಿ ಪೂಜೆ-ಪುನಸ್ಕಾರ ನಿಂತು ಹೋದಾಗ, ಅವು ಸಂಪೂರ್ಣವಾಗಿ ನಶಿಸುವ ಹಾದಿ ಹಿಡಿಯುತ್ತವೆ. ಮೈಸೂರು ಜಿಲ್ಲೆಯ ತ್ರಯಂಬಕಪುರದಲ್ಲಿ ವಿಜಯನಗರ ಕಾಲದ ದೇವಾಲಯದ ಸುಂದರವಾದ ಗೋಪುರಗಳನ್ನು ಕೆಡವಿದ್ದಾರೆ. ಶಿವಾಲಯದಲ್ಲಿ ಪೂಜೆ ನಿಂತಿದೆ. ಪಾರ್ವತಿಯ ಮಂದಿರದಲ್ಲಿ ಮಾತ್ರ ಪೂಜೆ ನಡೆಯುತ್ತಿದೆ.ಇಡೀ ದೇವಾಲಯ ಒಂದು ಹಾಳುಮಂಟಪವಾಗಿದೆ. ಆದರೆ ಇದರ ವಿಶಾಲವಾದ ಕಲ್ಯಾಣ ಮಂಟಪವು ಇಂದಿಗೂ ಬಳಕೆಗೆ ಯೋಗ್ಯವಾದ ಸ್ಥಿತಿಯಲ್ಲಿದೆ. ಹಳೇಬೀಡಿನ ನಂತರ ಅತಿ ಸುಂದರವಾದ ಹಾಗೂ ಹಳೇಬೀಡಿನ ದೇವಾಲಯಕ್ಕೂ ವ್ಯಾಪಕ ಸಂಖ್ಯೆಯಲ್ಲಿರುವ ಪರಿವಾರ ದೇವಾಲಯಗಳನ್ನು ಹೊಂದಿದ ೬ನೆಯ ವಿಕ್ರಮಾದಿತ್ಯನ ಕಾಲದ ಇಟಗಿ (ಯಲಬುರ್ಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ) ಯ ಮಹಾದೇವ ದೇವಾಲಯವು ಅತ್ಯಂತ ದುಸ್ಥಿತಿಯಲ್ಲಿದೆ. ಗದಗಿನಿಂದ ೩೫ ಕಿಲೋಮೀಟರ್ ದೂರದಲ್ಲಿರುವ ಈ ದೇವಾಲಯವನ್ನು ನೋಡಲು ಸಂದರ್ಶಕರು ಹೋದಲ್ಲಿ, ಹಗಲು ಹೊತ್ತಿನಲ್ಲಿಯೇ ನೂರಾರು ಜನ ಅಲ್ಲಿ ಮಲಗಿ, ವಿಶ್ರಾಂತಿ ಪಡೆಯುವ ಮತ್ತು ಸಲ್ಲದ ಚಟುವಟಿಕೆಯಲ್ಲಿ ತೊಡಗಿರುವ ವಾತಾವರಣವನ್ನು ನೋಡಬಹುದು. ಈ ದೇವಾಲಯದ ನಗರಖಾನೆಯಲ್ಲಿ ಗ್ರಾಮ ಛಾವಡಿಯೋ ಇನ್ನಾವುದೋ ಕಛೇರಿಯೋ ನಡೆಯುತ್ತಿದೆ. ಇದರ ಮುಂದಿನ ವಿಶಾಲ ಕೆರೆ ಒಣಗಿಹೋಗುತ್ತಿದೆ. ಹಳೇಬೀಡಿನಷ್ಟೇ ಮಹತ್ವದ ಈ ದೇವಾಲಯದ ರಕ್ಷಣೆಗೆ ಸರ್ಕಾರ ಮತ್ತು ಜನರು ಮನಸ್ಸು ಕೊಡದಿದ್ದರೆ, ಕಲ್ಯಾಣಿ ಚಾಲುಕ್ಯರ ಈ ಶ್ರೇಷ್ಠ ದೇವಾಲಯ ಇನ್ನಷ್ಟು ದುಸ್ಥಿತಿ ತಲುಪಬಹುದು.

ಇಂದು ನಾವು ಕಾಣುವ ಪ್ರತಿಯೊಂದು ಸ್ಮಾರಕಕ್ಕೂ ತನ್ನದೇ ಆದ ಐತಿಹ್ಯವಿದೆ, ಸ್ಥಳ ಪುರಾಣವಿದೆ. ವರ್ಷಗಟ್ಟಲೆ ಮುತ್ತಿಗೆ ಹಾಕಿದರೂ ಜಗ್ಗದೆ ಜನರ ರಕ್ಷಣೆ ಮಾಡಿದ **ಕರ್ನಾಟಕ ಬಲ** ಎಂಬ ಅನ್ವರ್ಥವನ್ನು ಪಡೆದಿದ್ದ ಭದ್ರಕೋಟೆಗಳು, ಜನಕಲ್ಯಾಣಕ್ಕಾಗಿ ತೋಡಿಸಲಾದ ಕೆರೆ-ಕಾಲುವೆಗಳು, ಜೀವನಪೂರ್ತಿ ವೇಶ್ಯೆಯಾಗಿ ಜೀವನ ಸವೆಸಿ ಕೂಡಿಟ್ಟ ಹಣದಲ್ಲಿ ಊರ ಉಪಕಾರಕ್ಕಾಗಿ ನಿರ್ಮಿಸಿದ ಕಲ್ಯಾಣಿಗಳು ಹಾಗೂ ಧರ್ಮಛತ್ರಗಳು, ಧರ್ಮವೀರತ್ವವನ್ನು ತೋರಿಸುವ ವೀರಗಲ್ಲುಗಳು -ಹೀಗೆ ಸ್ಮಾರಕಗಳ ಹಿಂದೆ ಒಂದಿಲ್ಲೊಂದು ಸದಾಶಯವಿರುವುದನ್ನು ನಾವು ಕಾಣುತ್ತೇವೆ. ಅದೇ ರೀತಿ ದಂತಕತೆಗಳಿಗೇನೂ ಕೊರತೆ ಇಲ್ಲ. ಅಪವಾದಗಳೇನೇ ಇದ್ದರೂ ಸ್ಮಾರಕಗಳು ಆಯಾಯ ಕಾಲಘಟ್ಟದಲ್ಲಾದ ಬದಲಾವಣೆಗಳನ್ನು ತಿಳಿಸುತ್ತವೆ. ಸಂಪದಭಿವೃದ್ಧಿ, ಸಂಸ್ಕೃತಿಯ ಉನ್ನತಿ ಮತ್ತು ವಿನಾಶಕ್ಕೂ ಇವುಗಳು ಮೂಕಸಾಕ್ಷಿಗಳಾಗಿವೆ. ಹೀಗಾಗಿ ಅವು ನಮ್ಮ ದೇಶದ ಅಮೂಲ್ಯ ಸಂಪತ್ತು. ಇವುಗಳನ್ನು ಮುಂದಿನ ಪೀಳಿಗೆಗೆ ಉಳಿಸಿಕೊಂಡು ಹೋಗುವುದು ಇಂದಿನ ನಾಗರಿಕರೆಲ್ಲರ ಆದ್ಯಕರ್ತವ್ಯ. ಇತಿಹಾಸದ ಬಗ್ಗೆ ಜನಜಾಗೃತಿ ಮೂಡಿಸಲು ಕರ್ನಾಟಕ ಇತಿಹಾಸ ಅಕಾಡೆಮಿಯು ಪ್ರತಿವರ್ಷ ಹಮ್ಮಿಕೊಳ್ಳುವ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹವು ಸ್ತುತ್ಯರ್ಹವಾಗಿದೆ.

ವಿವಿಧ ಭಾಷೆ, ಜನಾಂಗ, ವೈವಿಧ್ಯಮಯ ಪ್ರಾದೇಶಿಕತೆಗಳಿಂದ ಕೂಡಿದ ನಮ್ಮ ದೇಶದಲ್ಲಿ ಐತಿಹಾಸಿಕ ಸ್ಮಾರಕಗಳು ರಾಷ್ಟ್ರೀಯ ಭಾವೈಕ್ಯವನ್ನು ಮೂಡಿಸುವಲ್ಲಿಯೂ ಸಹ ಪ್ರಸಿದ್ಧಿ ಪಡೆದಿವೆ. ಧರ್ಮ ಸಮನ್ವಯವನ್ನು ಪ್ರತಿಪಾದಿಸಿದ, ಭಕ್ತಿಪಂಥದ ಸಂತರುಗಳ ಸಮಾಧಿಗಳನ್ನು ಈ ನಿಟ್ಟಿನಲ್ಲಿ ಇಲ್ಲಿ ಹೆಸರಿಸಬಹುದು. ಜಾತಿಯ ಮಿತಿಯನ್ನು ಮೆಟ್ಟಿ ನಿಂತ ಇವರ ಆದರ್ಶ ಮತ್ತು ಬೋಧನೆಗಳು ಇಂದಿಗೂ ಪ್ರಸ್ತುತ.

ಕೇಂದ್ರ ಸರ್ಕಾರವು ಯುನೆಸ್ಕೊದಂತಹ ಅಂತಾರಾಷ್ಟ್ರೀಯ ಸಂಸ್ಥೆಗಳಿಂದ ಧನಸಹಾಯ ಪಡೆದು ನೂರಾರು ಸ್ಮಾರಕಗಳನ್ನು ಪುನರುಜ್ಜೀವನಗೊಳಿಸಿದೆ. ಸಾಂಸ್ಕೃತಿಕ ಪ್ರವಾಸೋದ್ಯಮ ಯೋಜನೆಯಲ್ಲಿ ಇಂಥ ಸ್ಮಾರಕಗಳನ್ನು ಸಂರಕ್ಷಣೆ ಮಾಡುವ ವಿವಿಧ ರಾಜ್ಯಗಳಿಗೆ ಧನಸಹಾಯ ನೀಡುತ್ತಿದೆ. ನಮ್ಮ ರಾಜ್ಯದಲ್ಲಿ ಧರ್ಮಸ್ಥಳದ ಧರ್ಮೋತ್ಥಾನ ಪ್ರತಿಷ್ಠಾನದ ಸಹಭಾಗಿತ್ವದಲ್ಲಿ ರಾಜ್ಯ ಪುರಾತತ್ವ ಸಂಗ್ರಹಾಲಯ ಇಲಾಖೆಯು ಹಲವಾರು ದೇವಾಲಯಗಳನ್ನು ಅತ್ಯಂತ ಅಚ್ಚುಕಟ್ಟಾಗಿ ಸಂರಕ್ಷಣೆ ಮಾಡಿದೆ.

ಪ್ರವಾಸೋದ್ಯಮದಲ್ಲಿ ಪ್ರಮುಖಸ್ಥಾನವನ್ನು ಪಡೆದಿರುವ ಪ್ರಾಚೀನ ದೇವಾಲಯಗಳ ಪಾತ್ರವನ್ನು ಮನಗಂಡ ಕೇಂದ್ರ ಸರ್ಕಾರದ ಮಾನ್ಯ ಯೋಜನಾ ರಾಜ್ಯ ಸಚಿವರಾದ ಎಂ.ವಿ.ರಾಜಶೇಖರನ್ ಅವರು ಕೂಡಲ ಸಂಗಮ ಅಭಿವೃದ್ಧಿ ಪ್ರಾಧಿಕಾರ ಮಾದರಿಯಲ್ಲಿ ಕರ್ನಾಟಕದಲ್ಲಿರುವ ಪ್ರಾಚೀನ ದೇವಾಲಯಗಳ ಅಭಿವೃದ್ಧಿ ಪ್ರಾಧಿಕಾರವನ್ನು ರಚಿಸಿ, ಆ ಮೂಲಕ ಅವುಗಳ ಜೀರ್ಣೋದ್ಧಾರವನ್ನು

ಕೈಗೊಳ್ಳಬೇಕೆಂಬ ಹೊಸ ಪರಿಕಲ್ಪನೆಯನ್ನು ಕರ್ನಾಟಕ ಸರ್ಕಾರದ ಮುಂದೆ ಇಟ್ಟಿರುವುದಾಗಿ ತಿಳಿದುಬಂದಿದೆ. ಇದೊಂದು ವಿನೂತನ ಯೋಜನೆಯಾಗಿದ್ದು, ಇಡೀ ರಾಷ್ಟ್ರದಲ್ಲಿಯೇ ಇಂಥ ಯೋಜನೆ ಮೊದಲನೆಯದಾಗಲಿದೆ.

ಭಾರತದ ಕೆಲವು ರಾಜ್ಯಗಳ ಆರ್ಥಿಕತೆಯು ಬಹುಮಟ್ಟಿಗೆ ಪ್ರವಾಸೋದ್ಯಮವನ್ನೇ ಅವಲಂಬಿಸಿದೆ. ಉದಾ: ಗೋವಾ, ಜಮ್ಮು ಮತ್ತು ಕಾಶ್ಮೀರ, ಉತ್ತರಾಂಚಲ, ಪಶ್ಚಿಮ ಬಂಗಾಳ, ಮಹಾರಾಷ್ಟ್ರ, ರಾಜಾಸ್ತಾನ ಹೀಗೆ ಕೆಲವನ್ನು ಇಲ್ಲಿ ಉಲ್ಲೇಖಿಸಬಹುದು. ವಿವಿಧ ಕಾರಣಗಳಿಂದ ಪ್ರವಾಸೋದ್ಯಮವು ಇಂದು ಕ್ಷೀಣಿಸುತ್ತಿದೆ. ಪ್ರವಾಸೋದ್ಯಮದಲ್ಲಿ ಧಾರ್ಮಿಕ ದೇವಾಲಯಗಳು ಮತ್ತು ಸಂತರ ಸಮಾಧಿಗಳು, ಕೋಟೆ- ಕೊತ್ತಲಗಳು ಪ್ರಮುಖ ಪ್ರೇಕ್ಷಣೀಯ ಸ್ಥಳವಾಗಿವೆ. ಇಂಥವುಗಳ ರಕ್ಷಣೆಯಿಂದ ಪ್ರವಾಸೋದ್ಯಮ ಅಭಿವೃದ್ಧಿಪಡಿಸುವ ಮೂಲಕ ರಾಜ್ಯ ಮತ್ತು ರಾಷ್ಟ್ರದ ಆರ್ಥಿಕ ಪ್ರಗತಿ ಸಾಧಿಸಲು ಸಾಧ್ಯ.

ಕರ್ನಾಟಕದಲ್ಲಿ ಇಂಥ ಸಾವಿರಾರು ಸ್ಮಾರಕಗಳು ಇಂದಿಗೂ ಛಿದ್ರಗೊಂಡ ಸ್ಥಿತಿಯಲ್ಲಿಯೇ ಇವೆ. ಗ್ರಾಮಗಳಲ್ಲಂತೂ ಹಲವಾರು ಸ್ಮಾರಕಗಳು ಶಿಥಿಲಾವಸ್ಥೆಯಲ್ಲಿದ್ದು, ಅವುಗಳ ಜೀರ್ಣೋದ್ಧಾರ ಇಂದು ಅಗತ್ಯವಾಗಿ ಆಗಬೇಕಾಗಿದೆ. ಅವುಗಳಲ್ಲಿ ಹೆಸರಿಸಬಹುದಾದ ಕೆಲವೆಂದರೆ :- ಬನವಾಸಿಯ ಮಧುಕೇಶ್ವರ ದೇವಾಲಯ ಸಂಕೀರ್ಣ, ಅವರ್ಸಾದ (ಅಂಕೋಲಾ ತಾಲ್ಲೂಕು) ಕಾತ್ಯಾಯಿನಿ ಬನೇಶ್ವರ ದೇವಾಲಯ (ಗೌಡಸಾರಸ್ವತ ಬ್ರಾಹ್ಮಣರ ಕುಲದೇವತೆ), ಭಟ್ಕಳದ ಕೇತಪ್ಪೈ ನಾರಾಯಣ ಮತ್ತು ಶಂಕರನಾರಾಯಣ ದೇವಾಲಯ (ಕಲ್ಯಾಣಿ ಚಾಳುಕ್ಯರ ದೇವಾಲಯ), ಮುರುಡೇಶ್ವರದ ಮುರುಡೇಶ್ವರ ದೇವಾಲಯ, ಇಡಗುಂಜಿಯ ಗಣಪತಿ ದೇವಾಲಯ, ಹೊನ್ನಾವರದ ಕ್ಯಾಥೋಲಿಕ್ ಚರ್ಚ್, ಬಾಗಲಕೋಟೆ ಜಿಲ್ಲೆಯ ಐಹೊಳೆಯ ದುರ್ಗಾ ದೇವಾಲಯ, ತ್ರಯಂಬಕೇಶ್ವರ ಸಮೂಹ ದೇವಾಲಯಗಳು, ಹುಚ್ಚಮಲ್ಲಿ ಗುಡಿ, ಬದಾಮಿಯ ಗವಿದೇವಾಲಯಗಳು, ಜಮಖಂಡಿ ತಾಲ್ಲೂಕಿನ ತೇರದಾಳ ಗ್ರಾಮದ ನೇಮಿನಾಥ ಜೈನ ಬಸದಿ, ಚೊಳಚಗುಡ್ಡದ ಶಾಕಾಂಬರಿ (ಬನಶಂಕರಿ) ದೇವಾಲಯ, ಮಹಾಕೂಟದ ನಂದಿಕೇಶ್ವರ ದೇವಾಲಯ ಸಮೂಹ, ಪಟ್ಟದಕಲ್ಲಿನ ಪಾಪನಾಥ ಮತ್ತು ಗಳಗನಾಥ ದೇವಾಲಯಗಳು, ಸಿದ್ಧನಕೊಳ್ಳದ ಸಂಗಮೇಶ್ವರ ದೇವಾಲಯ, ಬಸವನ ಬಾಗೇವಾಡಿಯ ಬಸವೇಶ್ವರ ದೇವಾಲಯ, ಬೊಂತೇಶ್ವರ ದೇವಾಲಯ, ಸಿದ್ದರಾಮೇಶ್ವರ ಮಠ, ಸಾಲೋಟಗಿಯ ಶಿವಯೋಗೀಶ್ವರ ದೇವಾಲಯ (ರಾಷ್ಟ್ರಕೂಟ ಶಿಕ್ಷಣ ಕೇಂದ್ರ), ಪಂಪನ ತವರೂರಾದ ಅಣ್ಣಿಗೇರಿಯ ಅಮೃತೇಶ್ವರ ದೇವಾಲಯ, ಗದಗಿನ ತ್ರಿಕೂಟೇಶ್ವರ ದೇವಾಲಯ, ಹೊಂಬಳ (ಗದಗ ಜಿಲ್ಲೆ)ದ ಕಲ್ಯಾಣಿ ಚಾಳುಕ್ಯರ ಶಿವದೇವಾಲಯ ಇತ್ಯಾದಿ.

ಇಂಥ ನೂರಾರು ಸುಂದರವಾದ, ಪ್ರವಾಸಿಗರಿಗೆ ಆಕರ್ಷಕವೆನಿಸುವ, ತಕ್ಷಣ ಗಮನವನ್ನು ಸೆಳೆಯುವ ದೇವಾಲಯಗಳು, ಸ್ಮಾರಕಗಳು ಕರ್ನಾಟಕದ ಉದ್ದಗಲಕ್ಕೂ ಇವೆ. ಪ್ರಾಮಾಣಿಕ ತಜ್ಞರ ನೆರವು ಪಡೆದು ಇವುಗಳ ರಕ್ಷಣೆಗೆ ಒಂದು ಸಮಿತಿಯನ್ನು ನೇಮಿಸಬಹುದು ಮತ್ತು ಪ್ರಾಚ್ಯವಸ್ತು ವಿಷಯದಲ್ಲಿ ನುರಿತ ಹಾಗೂ ನಿವೃತ್ತಿ ಹೊಂದಿದ ಇಂಜಿನಿಯರುಗಳ ಸೇವೆಯನ್ನು ಪಡೆದುಕೊಳ್ಳಬಹುದು.

ಕರ್ನಾಟಕ ಇತಿಹಾಸ ಅಕಾಡೆಮಿಯ ಕಳೆದ ೧೮ ವರ್ಷಗಳಿಂದ 'ಐತಿಹಾಸಿಕ ಪರಂಪರೆ ಉಳಿಸಿ' ಎಂಬ ಕಾರ್ಯಕ್ರಮವನ್ನು ಹಮ್ಮಿಕೊಂಡು ಜನಜಾಗೃತಿಗಾಗಿ ಶ್ರಮಿಸುತ್ತಿದೆ. ಇದರ ೯೦೦ಕ್ಕೂ ಮೇಲ್ಪಟ್ಟ ಸದಸ್ಯರು ಮತ್ತು ಕಾರ್ಯಕರ್ತರು ರಾಜ್ಯದ ಎಲ್ಲ ಜಿಲ್ಲೆಗಳಲ್ಲೂ ಇದ್ದಾರೆ. ಮಂಗಳೂರಿನ ಸುಲ್ತಾನ್ ಬತ್ತೇರಿಯನ್ನು ಸ್ವಚ್ಛಗೊಳಿಸಿರುವುದು, ಉಳ್ಳಾಲದ ರಾಣಿ ಅಬ್ಬಕ್ಕನ ಬಸದಿಯನ್ನು ರಕ್ಷಿಸಿರುವುದು - ಹೀಗೆ ಹಲವಾರು ಚಟುವಟಿಕೆಗಳನ್ನು ಸ್ವಯಂ ಪ್ರೇರಣೆಯಿಂದ ಮತ್ತು ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದೆ ಮಾಡಿರುತ್ತಾರೆ. ಪ್ರಾಚ್ಯವಸ್ತು ಇಲಾಖೆಯು ಪ್ರತಿವರ್ಷ ನೀಡುವ ಕೇವಲ ೨೫ ಸಾವಿರ ರೂಪಾಯಿಗಳ ನೆರವಿನಿಂದ ಇತಿಹಾಸ ಅಕಾಡೆಮಿ 'ಐತಿಹಾಸಿಕ ಪರಂಪರೆ ಉಳಿಸಿ' ಎಂಬ ಸಪ್ತಾಹವನ್ನು ಏರ್ಪಡಿಸುತ್ತಿದೆ. ಈ ಹಣದಲ್ಲಿ ಇತಿಹಾಸ ಮತ್ತು ಪರಂಪರೆಯನ್ನು ಬಿಂಬಿಸುವ ಆಕರ್ಷಕ ಭಿತ್ತಿಪತ್ರ ಮತ್ತು ಕರಪತ್ರಗಳನ್ನು ಮುದ್ರಿಸಿ, ಅವುಗಳನ್ನು ನಾಡಿನ ಉದ್ದಗಲಕ್ಕೂ ಹಂಚುವ ಕಾರ್ಯ ನಡೆಯುತ್ತಿದೆ. ಇದೊಂದು ನೋಂದಾಯಿತ ಖಾಸಗಿ ಸಂಸ್ಥೆಯಾಗಿದ್ದು, ಸ್ಮಾರಕಗಳ ಜೀರ್ಣೋದ್ಧಾರ ಮತ್ತು ಪುನರುತ್ಥಾನದ ಯಾವುದೇ ಯೋಜನೆಯಲ್ಲಿ ಕರ್ನಾಟಕ ಇತಿಹಾಸ ಅಕಾಡೆಮಿಯು ಯಾವುದೇ ರೀತಿಯ ನೆರವು ನೀಡಲು ಸಿದ್ಧವಿದೆಯೆಂದು ಅದರ ಅಧ್ಯಕ್ಷರಾದ ಡಾ. ಸೂರ್ಯನಾಥ ಕಾಮತ್ ಅವರು ತಿಳಿಸಿದ್ದಾರೆ.

ಅಗಾಧ ಪ್ರಮಾಣದಲ್ಲಿರುವ ಸ್ಮಾರಕಗಳನ್ನು ಏಕಕಾಲದಲ್ಲಿ ಸರ್ವೇಕ್ಷಣೆ ನಡೆಸಿ, ಅವುಗಳ ರಕ್ಷಣೆಗೆ ಕ್ರಮ ಕೈಗೊಳ್ಳುವುದು ಅಸಾಧ್ಯವಾದ ಮಾತು. ಹೀಗಾಗಿ ಈ ಕಾರ್ಯಕ್ಕೆ ತನ್ನದೇ ಆದ ಇತಿ-ಮಿತಿಗಳಿವೆ, ಸಾಕಷ್ಟು ಹಣವೂ ಬೇಕಾಗುತ್ತದೆ ಮತ್ತು ಅವುಗಳ

ರಕ್ಷಣೆಗೆ ಹಲವಾರು ರೀತಿಯ ಕಾನೂನು ತೊಡಕುಗಳು ಮತ್ತು ಸ್ಥಳೀಯ ಜನರ ವಿರೋಧ ಎದುರಾಗಬಹುದು. ಪ್ರತಿವರ್ಷ ನಿಗದಿತ ಪ್ರಮಾಣದ ಸ್ಮಾರಕಗಳನ್ನು ಆಯ್ಕೆ ಮಾಡಿಕೊಂಡು ಕಾಲಮಿತಿಯೊಳಗೆ ಇವುಗಳ ರಕ್ಷಣೆಯಾಗಬೇಕಾಗಿದೆ.

ಸಂಪನ್ಮೂಲ ಕ್ರೋಡೀಕರಣ ಇಲ್ಲಿ ಬಹಳ ಮುಖ್ಯವಾದ ಕಾರ್ಯವಾಗುತ್ತದೆ. ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳ ವಾರ್ಷಿಕ ಆಯವ್ಯಯದ ಶೇಕಡ ೫ ರಷ್ಟು ಹಣವನ್ನು ಸ್ಮಾರಕಗಳ ರಕ್ಷಣಾ ಕಾರ್ಯಕ್ಕೆ ಮೀಸಲಿಟ್ಟರೆ ಸರ್ಕಾರವು ಸಹ ತನ್ನ ಪಾಲಿನ ಹಣವನ್ನು ವಾರ್ಷಿಕ ಅನುದಾನವಾಗಿ ಬಿಡುಗಡೆ ಮಾಡಬೇಕು. ಹಲವಾರು ಶಿಕ್ಷಣ ಸಂಸ್ಥೆಗಳು ಮತ್ತು ಮಠಗಳು ಇಂತಹ ಸಾಮಾಜಿಕ ಕಾರ್ಯಗಳಿಗೆ ಉದಾರವಾಗಿ ದೇಣಿಗೆ ನೀಡುತ್ತವೆ. ಅಲ್ಲದೆ, ಸಾರ್ವಜನಿಕರು ಮತ್ತು ಕಲಾಪ್ರಿಯರು ನೀಡುವ ದೇಣಿಗೆಯನ್ನೂ ಬಳಸಿಕೊಳ್ಳಬಹುದು.

ಈ ರೀತಿಯಾಗಿ ರಕ್ಷಣೆ ಮಾಡಿದ ಸ್ಮಾರಕಗಳನ್ನು ನಿರ್ವಹಣೆ ಮಾಡುವಲ್ಲಿ ಸ್ಥಳೀಯ ಯುವಕ ಮತ್ತು ಯುವತಿ ಮಂಡಳಿಗಳು, ಸ್ತ್ರೀಶಕ್ತಿ ಸ್ವಸಹಾಯ ಗುಂಪುಗಳು ಮತ್ತು ಗ್ರಾಮ ಪಂಚಾಯತಿಗಳ ಸದಸ್ಯರುಗಳನ್ನೊಳಗೊಂಡ ಒಂದು ಮೇಲುಸ್ತುವಾರಿ ಸಮಿತಿಗೆ ವಹಿಸುವುದು ಉಚಿತವೆನಿಸುತ್ತದೆ. ಈ ಸಮಿತಿಗಳು ಕಾಲಕಾಲಕ್ಕೆ ಸಭೆ ಸೇರಿ, ಸ್ಮಾರಕಗಳ ಇತಿಹಾಸ ಮತ್ತು ಭವ್ಯತೆಯನ್ನು ಜನರಿಗೆ ತಿಳಿಸುವ ಮತ್ತು ಅದರ ಬಗ್ಗೆ ಗೌರವ ಮೂಡಿಸುವ ಪ್ರಯತ್ನ ಮಾಡಬೇಕು. ಶಾಲಾ ಕಾಲೇಜುಗಳಲ್ಲಿ ನಡೆಯುವ ಎನ್.ಸಿ.ಸಿ. ಮತ್ತು ಎನ್.ಎಸ್.ಎಸ್. ಶಿಬಿರಗಳಲ್ಲಿ ಈ ವಿಷಯವನ್ನು ಚರ್ಚಿಸಿ ಯುವ ಪೀಳಿಗೆಗೆ ಮನದಟ್ಟಾಗುವಂತೆ ಮಾಡಬೇಕು.

ನಮ್ಮ ಸಂವಿಧಾನದ ರಾಜ್ಯ ನಿರ್ದೇಶಕ ತತ್ವಗಳಲ್ಲಿ ವಿವರಿಸಿರುವಂತೆ ನಮ್ಮ ಇತಿಹಾಸ ಮತ್ತು ಪರಂಪರೆಯ ಬಗ್ಗೆ ಅಭಿಮಾನ ಮತ್ತು ಗೌರವವನ್ನು ಹೊಂದುವುದು ಪ್ರತಿಯೊಬ್ಬ ಭಾರತೀಯನ ಧ್ಯೇಯವಾಗಬೇಕು.



(ಲೇಖನವನ್ನು ಸಿದ್ಧಪಡಿಸುವಲ್ಲಿ ಸಲಹೆ ಸೂಚನೆ ನೀಡಿದ ಡಾ. ಸೂರ್ಯನಾಥ ಕಾಮತ್, ಎಸ್.ಎ. ಜಗನ್ನಾಥ, ಡಾ. ನಾಗರಾಜು ಹಾಗೂ ಕೆ.ಆರ್, ಕಮಲೇಶ್ ಅವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.)




# ಸಮೂಹ ಮಾಧ್ಯಮ

ಖಾದ್ರಿ ಎಸ್. ಅಚ್ಯುತನ್

**ಕಾನ್‌ಫ್ಯೂಷಿಯಸ್‌ಗೆ ಶಿಷ್ಯ ಪ್ರಶ್ನೆ ಹಾಕಿದ : 'ಆದರ್ಶ ರಾಜ್ಯ' ಯಾವುದು? ಎಂದು**

ಅದಕ್ಕೆ ಆ ಮಹಾನ್ ಚಿಂತಕ-ದಾರ್ಶನಿಕ ಉತ್ತರ ಹೀಗೆ ನೀಡುತ್ತಾನೆ :

'ಸಾಕಷ್ಟು ಆಹಾರ, ರಕ್ಷಣೆಗೆ ಸೈನ್ಯ ಹಾಗೂ ಜನರ ವಿಶ್ವಾಸಕ್ಕೆ ಪಾತ್ರವಾದ ಸರ್ಕಾರ. ಮೊದಲೆರಡು ಇಲ್ಲದಿದ್ದರೂ ನಡೆಯುತ್ತೆ. ಆದರೆ ಜನರ ವಿಶ್ವಾಸವಿಲ್ಲದೆ ಯಾವ ಸರಕಾರವೂ ಉಳಿಯಲಾರದು. ಪ್ರಜೆಗಳ ವಿಶ್ವಾಸವೇ ಒಳ್ಳೆಯ ಸರಕಾರದ ಉಸಿರು'.

ಜನರ ವಿಶ್ವಾಸ ತನಗಿದೆಯೇ ಅಥವಾ ಇಲ್ಲವೇ ಎಂಬುದನ್ನು ತಿಳಿದುಕೊಳ್ಳುವ, ಜನರ ನಾಡಿಮಿಡಿತ ಅರಿಯುವ ಆಧುನಿಕ ಕಾಲದ ಸಾಧನಗಳೇ ಸಮೂಹ ಮಾಧ್ಯಮ. ಈ ಮನುಷ್ಯ ಸಂಪರ್ಕದ ಸುದೀರ್ಘ ಕತೆಯ ಆರಂಭ ಸಂಕೇತ -ಚಿಹ್ನೆಗಳ ಯುಗದಿಂದ. ಅದು ನಮ್ಮ ಪ್ರಾಚೀನ ಹಿರಿಯರ ಕಾಲ. ಮಿಲಿಯನ್‌ಗಟ್ಟಲೆ ವರುಷಗಳು ಉರುಳಿದಂತೆ ಅದು ಚಿತ್ರ-ಶಬ್ದ-ಧ್ವನಿ ಸಂಕೇತ ಬಳಕೆಗೆ ದಾರಿ ಮಾಡಿತು. ಮನುಜಬುದ್ಧಿ ವಿಕಾಸವಾದಂತೆ ಇದು ಹೆಚ್ಚು ಹೆಚ್ಚು ಪರಿಣಾಮಕಾರಿ - ಪ್ರಭಾವಶಾಲಿ. ಮಾತು -ಭಾಷೆಯ ಯುಗಕ್ಕೆ ಕಾಲಿಟ್ಟಂತೆ ಮನುಷ್ಯ ಸಂಪರ್ಕ ಬೆಳವಣಿಗೆಯಲ್ಲಿ ಕ್ರಾಂತಿಕಾರಿ ಮಾರ್ಪಾಡು ಕಾಣುತ್ತೇವೆ. ನಮ್ಮ ಅತಿ ಸಮೀಪದ ಪೂರ್ವಜರು ಮಾತನಾಡಲು ಆರಂಭಿಸಿದ್ದು, ಸುಮಾರು ೯೦ ಸಾವಿರ ಹಾಗೂ ೪೦ ಸಾವಿರ ವರ್ಷಗಳ ನಡುವೆ ಎಂದು ಒಂದು ಜಿಜ್ಞಾಸೆ. ಮನುಷ್ಯನ ಮೂಲ ಸಂಪರ್ಕ ಪ್ರಕ್ರಿಯೆ -ಭಾಷೆ ಬಳಕೆಗೆ ಬಂದದ್ದು ಸುಮಾರು ೩೫ ಸಾವಿರ ವರ್ಷಗಳಷ್ಟು ಹಿಂದೆ. ಆದರೂ ಭಾಷೆಯಿಲ್ಲದ ಮನುಷ್ಯ ಸಮಾಜಗಳು ಇಂದಿಗೂ ನಮ್ಮೊಡನೆ ಇದ್ದಾವೆ. ಸಾಕ್ಷರ ಸಮಾಜಗಳಾಗದೇ ಅವು ಇನ್ನೂ ಮೌಖಿಕ ಪರಂಪರೆಯಲ್ಲೇ ಜೀವಂತ. ನಮ್ಮದೂ ಕೂಡ ಒಂದು ಬಗೆಯ ಮೌಖಿಕ ಸಮಾಜವೇ. ಆದರೆ ಈ ಮೌಖಿಕ ಸೀಮೆಯನ್ನು ದಾಟಿದ್ದೇವೆ. ಬರಹ - ಮುದ್ರಣ ಹಾಗೂ ಆಧುನಿಕ ಮಾಧ್ಯಮಗಳ ಸೇರ್ಪಡೆಯಿಂದ ಇದು ಸಾಧ್ಯವಾಗಿದೆ. ಮನುಷ್ಯ ಬರವಣಿಗೆಯ ಯುಗಕ್ಕೆ ಕಾಲಿಟ್ಟದ್ದು ಸುಮಾರು ಈಗಷ್ಟೇ - ಐದು ಸಾವಿರ ವರ್ಷಗಳ ಹಿಂದೆ.

> ***ಸಮೂಹ ಮಾಧ್ಯಮದ ಮೊದಲನೆಯ ಕೆಲಸ ಮನರಂಜನೆ. ಎರಡನೆಯ ಹೊಣೆ ಮಾಹಿತಿ, ಶಿಕ್ಷಣ ಮತ್ತು ಕರ್ತವ್ಯದ ಬಗ್ಗೆ ಅರಿವು ಮೂಡಿಸುವುದು ಅದರ ಹಿಂದಿನ ಪ್ರಮುಖ ಉದ್ದೇಶ. ಮಹಾತ್ಮಗಾಂಧಿ ಅವರು ಮನುಕುಲ ಕಂಡ ಮಹಾನ್ ಸಂವಹನಕಾರ.***

ಬರವಣಿಗೆ - ಮನುಷ್ಯ ವಿಕಾಸದ ಅತ್ಯಂತ ಶ್ರೇಷ್ಠ ಸಾಧನ. ಜಗತ್ತಿನ ಒಂದಕ್ಕಿಂತ ಹೆಚ್ಚು ಕಡೆ ಜನ್ಮ ತಾಳಿತು. ಮುದ್ರಣಶಕೆಗೆ ಮನುಷ್ಯ ಕಾಲಿಟ್ಟದ್ದು ತೀರ ಇತ್ತೀಚೆಗೆ. ಕೊಲಂಬಸ್‌ನ ಚಾರಿತ್ರಿಕ ಯಾತ್ರೆಗೆ ಕೆಲವು

ದಶಕಗಳಿಗೆ ಮುಂಚೆ ಮುದ್ರಣ ಯಂತ್ರದ ಸಹಾಯದಿಂದ ವಿಶ್ವದ ಮೊಟ್ಟಮೊದಲ ಪುಸ್ತಕ ಅಚ್ಚಾಯಿತು. ಈಗ ಪುಸ್ತಕ, ನಂಸಮ್ಮ ಸಂಸ್ಕೃತಿ ಸಂರಕ್ಷಣೆಯ ಜೀವಂತ ಸಾಧನವಾಗಿ ವಿಶ್ವದೆಲ್ಲೆಡೆ ರಾರಾಜಿಸುತ್ತಿದೆ.

ಆಖೈರಾಗಿ, ೧೯ನೆಯ ಶತಮಾನದ ಆರಂಭದಲ್ಲಿ ಮನುಷ್ಯ ಸಮೂಹ ಸಂಪರ್ಕ ಯುಗಕ್ಕೆ ಕಾಲಿಟ್ಟ. ಅದರ ವಿರಾಟ್ರೂಪ ಈಗ ನಮ್ಮ-ನಿಮ್ಮ ಎದುರಿಗಿನ ವೃತ್ತಪತ್ರಿಕೆಗಳು. ನಿಜವಾಗಿ, ಮುದ್ರಣ ಯುಗದ ಮುಂದುವರೆದ ತಂತ್ರಜ್ಞಾನ ಮನುಷ್ಯನ ಕುತೂಹಲ ತಣಿಸುವ ಸಾಧನ. ಆಮೇಲೆ -ತಂತಿ- ದೂರವಾಣಿಗಳಂಥ ಸಾಧನ ರೇಡಿಯೋಗೆ ಮೂಲ. ವಾಸ್ತವವಾಗಿ, ೨೦ನೆಯ ಶತಮಾನದ ಆರಂಭಕ್ಕೆ ಸಮೂಹ ಸಂಪರ್ಕ ಶಕೆಯ ಉಗಮವಾಯಿತೆನ್ನಬಹುದು. ಸಿನೆಮಾ, ರೇಡಿಯೋ, ಟೆಲಿವಿಷನ್ ಬಳಕೆ ಜನಸಂಖ್ಯೆಯಲ್ಲಿ ವೃದ್ಧಿಯಾದಂತೆ ಈ ಮಾಧ್ಯಮದ ರೆಕ್ಕೆ - ಪುಕ್ಕಗಳು ಗರಿಗೆದರಿಕೊಳ್ಳಲು ಸಹಾಯಕ. ಈ ಮಾಧ್ಯಮಗಳ ಮಹಾಪೂರವನ್ನೆ ಈಗ ನಾವು ಕಾಣುತ್ತಿರುವುದು. ಇನ್ನು ಕಂಪ್ಯೂಟರ್, ಇಂಟರ್‌ನೆಟ್, ವೆಬ್‌ಜಾಲಗಳು, ಮೊಬೈಲ್ ಫೋನುಗಳಿಂದ ಮನುಷ್ಯ ೨೧ನೇ ಶತಮಾನಕ್ಕೆ ಈಗ ಕಾಲಿಡುತ್ತಿದ್ದಂತೆ, ಈ ಯುಗಕ್ಕೆ ಮಾಹಿತಿಯುಗ ಎಂಬ ಹೆಸರಿನ ಪಟ್ಟ.

ಈ ಎಲ್ಲ ಮಜಲುಗಳೂ ಮಾಹಿತಿ ದಾಖಲೆ, ವಿನಿಮಯ, ಅಭಿವ್ಯಕ್ತಿಯ ಮನುಷ್ಯ ಸಾಮರ್ಥ್ಯ ವಿಕಾಸದ ಹೆಜ್ಜೆ ಗುರುತುಗಳು. ಅದರಲ್ಲೂ ಟೆಲಿವಿಷನ್ ವಿಶ್ವಗ್ರಾಮ ಕಲ್ಪನೆಯನ್ನು ಸಾಕಾರ ಮಾಡಿದೆ. ಇದಕ್ಕೆ ಕಲ್ಪನೆಗೂ ನಿಲುಕದ ಚಾಲನೆ ಕಂಪ್ಯೂಟರ್ ಆವಿಷ್ಕಾರದಿಂದ ದೊರಕಿದೆ. ವಿಶ್ವದ ಯಾವುದೇ ಮೂಲೆಯಲ್ಲಾದರೂ ನಡೆಯುವ ಫುಟ್‌ಬಾಲ್- ಟೆನ್ನಿಸ್, ಕ್ರಿಕೆಟ್, ಭೂಕಂಪ, ಚಂಡಮಾರುತ, ಚುನಾವಣೆ, ಸೈನಿಕ ಕಾರ್ಯಾಚರಣೆ, ಮನುಷ್ಯ ವೇದನೆ, ಮನುಜೋಲ್ಲಾಸ ಈಗ ನಮ್ಮ ಮುಂದೆ. ಧುತ್ತೆಂದು ಉಪಗ್ರಹಗಳು, ಟೆಲಿವಿಷನ್ ಮೂಲಕ ಮಾಹಿತಿ ಪ್ರಸಾರವೇ ಈಗ ಸೂಕ್ತ - ಉಪಯುಕ್ತ ಮಾಹಿತಿ ಆಯ್ಕೆ ಮನುಷ್ಯ ವಿವೇಕಕ್ಕೆ ಬಿಟ್ಟದ್ದು.

ಮಹಾತ್ಮ ಗಾಂಧಿ ಅವರನ್ನು ಮನುಕುಲ ಕಂಡ ಮಹಾನ್ ಸಾಂಸ್ಕೃತಿಕ ನಾಯಕ - ಸಂವಹನಕಾರ ಎಂದು ಬಣ್ಣಿಸಲಾಗಿದೆ. ಆಧುನಿಕ ಯುಗದಲ್ಲಿ ವೃತ್ತಪತ್ರಿಕೆಗಳು ಶಾಸ್ತ್ರಗಳ ಸ್ಥಾನ ಆಕ್ರಮಿಸಿಕೊಂಡಿವೆ ಎಂದು ಗಾಂಧೀಜಿ ಒಂದು ಕಡೆ ಹೇಳಿದ್ದಾರೆ.

ನಮ್ಮದು ದೈನಂದಿನ ಬದುಕು ಆರಂಭವಾಗುವುದು ಬೆಳಗ್ಗಿನ ಕಾಫಿ ಹಾಗೂ ದಿನಪತ್ರಿಕೆಗಳಿಂದಲೇ ಅಲ್ಲವೆ? ಆದರೆ ಬಾಪು ಈಗೇನಾದರೂ ಜೀವಿಸಿದ್ದರೆ, ಅವರು ಇಂದಿನ ಸಮೂಹ ಸಮಾಜದಲ್ಲಿ ರೇಡಿಯೋ ಮತ್ತು ಟಿಲಿವಿಷನ್ ಪ್ರಬಲ ಸಾಧನಗಳು ಎಂದು ಖಂಡಿತ ಹೇಳುತ್ತಿದ್ದರು.

ಸಮೂಹ ಮಾಧ್ಯಮದ ಮೊದಲ ಕೆಲಸ ಮನರಂಜನೆ. ಮಾಹಿತಿ ಎರಡನೇ ಹೊಣೆ, ಶಿಕ್ಷಣ ಕಡೆಯ ಹಾಗೂ ಗುರುತರ ಕರ್ತವ್ಯ. ಇವೆಲ್ಲವೂ ಒಮ್ಮೆಲೇ ಏಕಕಾಲದಲ್ಲಿ ಸಾಗಬೇಕು. ಈಗಿನ ಕಾಲ ಮಾಧ್ಯಮ ಸಂಗಮದ ಪರ್ವಕಾಲ. ICE - ಐಸ್‌ಯುಗ. (Information - ಮಾಹಿತಿ, Communication - ಸಂಪರ್ಕ, Entertainment-ಮನರಂಜನೆ.)

೧೯೦೪ ರಲ್ಲಿ ದಕ್ಷಿಣ ಆಫ್ರಿಕಾದಲ್ಲಿ 'ಇಂಡಿಯನ್ ಒಪಿನಿಯನ್' ಪತ್ರಿಕೆ ಆರಂಭಿಸಿದಾಗ ಬಾಪೂ ಅವರಿಗಾದ ಅನುಭವಗಳನ್ನು, ಅನಿಸಿಕೆಗಳನ್ನು ನಮಗೆ ಬಿಟ್ಟುಹೋಗಿದ್ದಾರೆ. ಬಾಪು ಹೇಳುತ್ತಾರೆ- "ನಾನು ಹಣ ಸುರಿಯುತ್ತಲೇ ಇರಬೇಕಾಗಿತ್ತು - ನನ್ನ ಉಳಿತಾಯವನ್ನೆಲ್ಲಾ ಅದು ನುಂಗುತ್ತಿತ್ತು; ತಿಂಗಳಿಗೆ ೭೧ ಪೌಂಡ್ ಅದಕ್ಕೆ ಸುರಿಯಬೇಕಾಗುತ್ತಿತ್ತು. ಪತ್ರಿಕೆ ನಮ್ಮ ಜನತೆಯ ಸೇವೆಯನ್ನು ಚೆನ್ನಾಗಿ ಮಾಡಿದೆ- ಹಣ ಗಳಿಸುವ ವ್ಯಾಪಾರೋದ್ಯಮಕ್ಕಾಗಿ ಅಲ್ಲ - ಪತ್ರಿಕೆ ನನ್ನ ಹತೋಟಿಯಲ್ಲಿರುವವರೆಗೆ ಪತ್ರಿಕೆಯಲ್ಲಿ ಉಂಟಾದ ಬದಲಾವಣೆಗಳು ನನ್ನ ಜೀವನದಲ್ಲಿ ಉಂಟಾದ ಬದಲಾವಣೆಗಳ ಸೂಚಕಗಳಾಗಿದ್ದವು - ಇಂಡಿಯನ್ ಒಪಿನಿಯನ್,ಯಂಗ್ ಇಂಡಿಯಾ ಮತ್ತು ನವಜೀವನ ನನ್ನ ಜೀವನದ ಒಂದು ಅಂಶದ ಕನ್ನಡಿಯಾಗಿದ್ದವು - ನಮ್ಮ ಜನ, ನನ್ನ ಜತೆಯಲ್ಲಿ, ನನ್ನ ಪತ್ರಿಕೆಗಳಲ್ಲಿ ನಡೆಸಿದ ಪತ್ರ ವ್ಯವಹಾರದ ಮೂಲಕ ಗಟ್ಟಿಯಾಗಿ ಆಲೋಚಿಸುತ್ತಿರುವಂತೆ ತೋರಿತು. ಇದರಿಂದ ನನಗೆ ಪತ್ರಕರ್ತನ ಜವಾಬ್ದಾರಿ ಚೆನ್ನಾಗಿ ಅರ್ಥವಾಯಿತು" ಹೀಗೆ ಸಾಗುತ್ತದೆ ಬಾಪು ವಿಚಾರ ಲಹರಿ.

ಬಾಪು ಅವರು ಸಾಯುವವರೆಗೆ ಅವರ ಲೇಖನಿಗೆ ಬಿಡುವಿರಲಿಲ್ಲ, ಸತ್ಯಾಗ್ರಹ, ವಿಧಾಯಕ ಕಾರ್ಯ, ಅಹಿಂಸೆ, ಆಹಾರ, ಪ್ರಕೃತಿ ಚಿಕಿತ್ಸೆ, ಸ್ವದೇಶಿ, ಖಾದಿ, ಪಾನ ನಿರೋಧ, ಅಸ್ಪೃಶ್ಯತಾ ನಿವಾರಣೆ ಕುರಿತು ಬಾಪು ಲೇಖನಿಯಿಂದ ಮೂಡಿದ ಮಹಾನ್ ಮೌಲ್ಯ ನೀತಿ, ಸ್ವಾತಂತ್ರ್ಯ ನಂತರ ಸಮೂಹ ಮಾಧ್ಯಮಗಳಿಗೆ ಒಂದು ಹೊಸ ದಿಕ್ಕು ಒದಗಿಸಿದ ಮೂಲ ಸ್ಫೂರ್ತಿಯಾಯಿತು.

ಆರಂಭದಲ್ಲಿ ಹೋರಾಟ, ಸಂಘರ್ಷದ ಹಾದಿಯಲ್ಲೇ ಬಂದ ಭಾರತೀಯ ಪತ್ರಕರ್ತರಿಗೆ ಸ್ವಾತಂತ್ರ್ಯ ಬಂದ ಮೇಲೆ ಆಧುನಿಕ ಭಾರತ ನಿರ್ಮಾಣದ ಹೊಸ ಮಾರ್ಗ, ಸ್ವಲ್ಪ ಮಾನಸಿಕ ಕಸಿವಿಸಿ ಉಂಟುಮಾಡಿತು. ತಾವೇ ಬಯಸಿ ಪಡೆದ ಸರ್ಕಾರವನ್ನು ಅವರ

ಕಾರ್ಯಕ್ರಮಗಳನ್ನು ಟೀಕಿಸುವುದಾದರೂ ಹೇಗೆ ಎಂಬ ತುಮುಲ ಭಾರತೀಯ ಪತ್ರಕರ್ತರಲ್ಲಿ ಮೂಡಿತು. ಅಂತಹ ಸಂದರ್ಭದಲ್ಲಿ ಅಭಿವೃದ್ಧಿ ಪತ್ರಿಕೋದ್ಯಮ, ವಿಕಾಸ ಪತ್ರಿಕೋದ್ಯಮ, ಒಂದು ರೀತಿಯ ಸರ್ಕಾರಿ ಪತ್ರಿಕೋದ್ಯಮ ಅದು ಗಾಳಿಗೆ ಮೆತ್ತಗಾದ ಹಪ್ಪಳದಂತೆ ; ಸ್ವತಂತ್ರ ಪತ್ರಿಕೋದ್ಯಮದ ಗರುಗಾದ ಹಪ್ಪಳದ ಸವಿ ಇಲ್ಲ ಎಂದು ೫೦ರ ದಶಕದಲ್ಲಿ ಸ್ವತಂತ್ರ ಪತ್ರಿಕೋದ್ಯಮದಿಂದ ಸರ್ಕಾರ ಸೇರಿದ ಹಿರಿಯರೊಬ್ಬರು ಹಳಹಳಿಸಿದ್ದರು.

ಆದರೆ ಹೊಸ ಶತಮಾನಕ್ಕೆ ಕಾಲಿಟ್ಟಿರುವ ನಾವು ಈಗ ಅಭ್ಯುದಯ ಪತ್ರಿಕೋದ್ಯಮ ತಂಗಳು ಹಪ್ಪಳವಲ್ಲ,ಅದರಲ್ಲೂ Crispness ಇದೆ ಎಂದು ಹೇಳುವ ಹಂತಕ್ಕೆ ಬಂದಿದ್ದೇವೆ. ಅಂದಿನ ಸರ್ಕಾರಿ ಪತ್ರಿಕೋದ್ಯಮವೇ ಇಂದಿನ ವಿಕಾಸ ಪತ್ರಿಕೋದ್ಯಮ ಹಾಗೂ ಸಾರ್ವಜನಿಕ ಪ್ರಸಾರ ಸೇವೆ. ನಮ್ಮ ಸುದ್ದಿ ಮಾಧ್ಯಮದಲ್ಲಿ ಮಂತ್ರಿಗಳ ಹೇಳಿಕೆ, ಅಭಿವೃದ್ಧಿ ಯೋಜನೆಗಳ ವಿವರ, ರಾಜಕೀಯ ಸುದ್ದಿಗಳ ಜತೆಗೆ ಈಗ ಪ್ರಾಮುಖ್ಯತೆ ಪಡೆಯುತ್ತಿವೆ. ೬೦ರ ದಶಕದಲ್ಲಿ ಪತ್ರಿಕೆಗಳ ನಡುವೆ ಪೈಪೋಟಿ ತೀವ್ರವಾದಾಗ ರಾಜಕೀಯ ಸುದ್ದಿಗಳ ಜತೆಗೆ ಕೃಷಿ., ಆರೋಗ್ಯ, ಮಹಿಳೆಯರು, ಯುವಜನ ಹೀಗೆ ಬೇರೆ ವಿಷಯಗಳ ಕಡೆ ಆದ್ಯತೆ ನೀಡಲು ಆರಂಭಿಸಿದವು. ಅದೇ ಕಾಲಕ್ಕೆ ವಿದ್ಯುನ್ಮಾನ ಮಾಧ್ಯಮ ಅಭಿವೃದ್ಧಿ ಯೋಜನೆಗಳ ಕಡೆಗೆ ನಿರಂತರ ಗಮನ ನೀಡಿತು. ಜನಪದಕ್ಕೆ ಅಭಿವೃದ್ಧಿ ಯೋಜನೆಗಳ ಮಾಹಿತಿ ಒದಗಿಸುವ ಕೆಲಸವನ್ನು ಬಾನುಲಿ ಅತ್ಯಂತ ಯಶಸ್ವಿಯಾಗಿ ನಡೆಸಿತು, ನಡೆಸುತ್ತಾ ಬಂದಿದೆ.

೧೯೭೬ ರಷ್ಟು ಹಿಂದೆಯೇ ಕೃಷಿ ಬಾನುಲಿ ಪಾಠಶಾಲೆ ಒಂದು ದೊಡ್ಡ ಪ್ರಯೋಜವಾಗಿತ್ತು. ಜನಬೋಧನೆಯ ಕೆಲಸ ರೇಡಿಯೋದಿಂದ ಅತಿ ಸಮರ್ಪಕವಾಗಿ ನಡೆಯಿತು. ಇದಕ್ಕೆ ಪೂರಕವಾಗಿ ಕ್ಷೇತ್ರ ಪ್ರಚಾರ ವ್ಯವಸ್ಥೆಯ ಮೂಲಕ ಹಳ್ಳಿಗಳಿಗೆ ಅಭಿವೃದ್ಧಿ ಸಂದೇಶ ರವಾನೆ. ಸರ್ಕಾರ ಹಾಗೂ ಜನರ ನಡುವೆ ಕಂದರ ಕಡಿಮೆ ಮಾಡಿತು. ಆ ಕಾಲದಲ್ಲಿ ಭಾರತ ಸರಕಾರ ಚಲನಚಿತ್ರ ವಿಭಾಗ ತಯಾರಿಸುತ್ತಿದ್ದ ಸುದ್ದಿ Magazine ದೊಡ್ಡ ಆಕರ್ಷಣೆ.

೧೯೬೨- ೬೫, ೭೧ರ ಯುದ್ಧ ಕಾಲಗಳಲ್ಲಿ ಈ ಸರ್ಕಾರ ವ್ಯವಸ್ಥೆ ಮಾಡಿದ ಕೆಲಸ - ಅಂತರ ವೈಯಕ್ತಿಕ ಸಂವಹನ ಪ್ರಕ್ರಿಯೆ -Inter Personal Communication ದಲ್ಲಿ ವಿಶಿಷ್ಟ, ಸಮೂಹ ಮಾಧ್ಯಮ ವಿದ್ಯಾರ್ಥಿಗಳಿಗೆ ಒಂದು ಸಂಶೋಧನೆಗೆ ಅರ್ಹ ಅಮೂಲ್ಯ ಮಾಹಿತಿ ಮೂಲ.

ಸಮೂಹ ಮಾಧ್ಯಮಗಳು ಜನ ಯುಗಕ್ಕೆ ಅಗತ್ಯವಾಗಿ ಆಡಳಿತ, ಶಾಸನ, ವಿಜ್ಞಾನ, ವ್ಯವಹಾರ, ವ್ಯಾಪಾರಗಳ ವಿಷಯ ಕುರಿತಂತೆ ಭಾಷೆಯ ಬಳಕೆ, ಸಾಹಿತ್ಯ ಕ್ಷೇತ್ರಕ್ಕೂ ಒಂದು ಅಮೂಲ್ಯ ಕೊಡುಗೆಯಾಯಿತು. ರಾಜಕೀಯ, ಸಾಮಾಜಿಕ, ಆರ್ಥಿಕ ವಿಚಾರಗಳ ನಿರೂಪಣೆಗಳಿಗೆ ಪಾರಿಭಾಷಿಕ ಪದಗಳನ್ನು ಹೊಸದಾಗಿ ಟಂಕಿಸಿ, ಹಳೆಯ ಮಾತುಗಳ ಹೊಸ ಪರಿಸ್ಥಿತಿಗೆ ಹೊಂದಿಸಿ ಕೊಡುವ ನಿರಂತರ ಪ್ರಯೋಗ ಸಮೂಹ ಮಾಧ್ಯಮಗಳಿಂದ ಇನ್ನೂ ನಡೆದೇ ಇದೆ.

ವಿದ್ಯುನ್ಮಾನ ಮಾಧ್ಯಮಗಳಲ್ಲಿ ಅತ್ಯಂತ ಪ್ರಭಾವಶಾಲಿ ಹಾಗೂ ಹೆಚ್ಚಿನ ವ್ಯಾಪ್ತಿಯೊಂದಿರುವ ರೇಡಿಯೋ ಮಾಧ್ಯಮಕ್ಕೆ ಈಗ ಟೆಲಿವಿಷನ್ ಸವಾಲಾಗಿದೆ. ಆದರೂ ಪ್ರತಿಶತ ೯೬ ರಷ್ಟು ಭಾರತೀಯರನ್ನು ತಲುಪತ್ತಿರುವ ಬಾನುಲಿ ತರಂಗಗಳು ದೇಶದ ಮೂಲೆ ಮೂಲೆಗೆ ಶಿಕ್ಷಣ, ವಾರ್ತೆ, ಮನರಂಜನೆ ನೀಡುವುದರಲ್ಲಿ ಯಶ ಕಂಡಿವೆ.

೧೯೮೦ರ ದಶಕದಲ್ಲಿ ವಿದ್ಯುನ್ಮಾನ ಕ್ರಾಂತಿಯಿಂದಾಗಿ ಒಮ್ಮೆಗೆ ಹೊಸ ಮಾಧ್ಯಮಗಳ ಆವಿಷ್ಕಾರವಾಗುತ್ತದೆ-INSAT ಉಪಗ್ರಹದ ಯಶಸ್ವಿ ಉಡಾವಣೆ - ಜನ ಸಾಮಾನ್ಯರ ಮಾಧ್ಯಮವಾಗಿ ದೂರದರ್ಶನ-VCR, VCPಗಳಿಂದ ಮೂಲೆ ಮೂಲೆಗಳಿಗೂ ಚಲನಚಿತ್ರ ; ಬಾನುಲಿ ತರಂಗಗಳ ಪ್ರವೇಶಕ್ಕೆ ದೃಶ್ಯ ಮಾಧ್ಯಮ ಪ್ರವೇಶ; ದೃಶ್ಯ ಮಾಧ್ಯಮದ ಥಳಕು ಬೆಳಕು ರೇಡಿಯೋ ಕೇಳುಗರನ್ನು ತನ್ನತ್ತ ಸೆಳೆದಿದೆ ಎಂಬ ವದಂತಿ ಪ್ರಚಲಿತವಾಗಲು ಕಾರಣವಾಗಿದೆ. ಆದರೆ ಯಾವುದೇ ಸಮೂಹ ಮಾಧ್ಯಮಕ್ಕೆ ಪ್ರೌಢಾವಸ್ಥೆಯಿಲ್ಲ, ಅದರ ಕಾಲ ಮುಗಿಯಿತು ಎಂದು ಹೇಳಲು ಬರುವುದಿಲ್ಲ. ಅದು ಒಂದು ರೀತಿಯಲ್ಲಿ ನಿರಂತರ ಕೂಸು, ಪ್ರತಿ ಕ್ಷಣವೂ ಅದಕ್ಕೆ ಹೊಸ ಅನುಭವ.

ಇನ್ನು ೯೦ರ ದಶಕದ ಆರಂಭದಲ್ಲಿ ಶುರುವಾದ ಜಾಗತೀಕರಣ, ಉದಾರೀಕರಣಗಳಿಂದಾಗಿ ಪತ್ರಿಕೆಗಳೂ ಸೇರಿದಂತೆ ಮಾಧ್ಯಮದ ಸುದ್ದಿ ಸತ್ವದಲ್ಲಿ ಅಪಾರ ಮಾರ್ಪಾಡು ಉಂಟಾಗಿದೆ. ಪಂಚವಾರ್ಷಿಕ ಯೋಜನೆ, ಬಡತನ ನಿರ್ಮೂಲನೆ ಮುಂತಾದ ವಿಷಯಗಳು ಮರೆಯಾಗಿವೆ. ವಿದೇಶಿ ನೇರ ಬಂಡವಾಳ, ಶ್ರೀಮಂತ ಭಾರತೀಯರು, ಹೊಸ ತಂತ್ರಜ್ಞಾನ, ಮಾಹಿತಿ ತಂತ್ರಜ್ಞಾನ ಹೀಗೆ ಹೊಸ

ಹೊಸ ವಿಷಯಗಳು ಪ್ರಮುಖವಾಗಿವೆ. ಮಹತ್ವ ಪಡೆದಿವೆ. ಭಾರತ ಇಂದು Agriculture ನಿಂದ Techniculture ಗೆ ಹಾರಿದೆ. ಗ್ರಾಮೀಣ ಕೃಷಿ ಪ್ರಧಾನ ಅರ್ಥ ವ್ಯವಸ್ಥೆಯಿಂದ ದೇಶ ಪೂರ್ಣ ಕೈಗಾರಿಕೀಕರಣವಾಗದೆಯೆ, ತಂತ್ರಜ್ಞಾನ ಪ್ರಧಾನ ಸೇವಾ ಅರ್ಥ ವ್ಯವಸ್ಥೆಯ ಕಡೆ ಜಾರುತ್ತಿದೆ. ಸರ್ಕಾರಿ ಪತ್ರಿಕೋದ್ಯಮ ಈಗ ಸಾರ್ವಜನಿಕ ಪ್ರಸಾರ ಸೇವೆಯಾಗಿದೆ. Internet ಗಡಿಗಳ ಗೆರೆ ಅಳಿಸಿದೆ. ಭಾರತೀಯ ಮಾಧ್ಯಮಕ್ಕೆ ಮಾಹಿತಿ ತಂತ್ರಜ್ಞಾನ ಜಪವಾಗಿದೆ. ಈಗಂತೂ ಎಲ್ಲೆಲ್ಲೂ ವಿದ್ಯುನ್ಮಾನ ಆಡಳಿತೆಯ ಮಾತೇ ನಡೆದಿದೆ. ಇಂದು Cabel- ಉಪಗ್ರಹ T V ಮತ್ತು F M ರೇಡಿಯೋ ಗ್ರಾಮೀಣ ಭಾರತದ ಸಾಮಾಜಿಕ ಆರ್ಥಿಕ ಹಂದರದ ಮೇಲೆ ಗಾಢವಾದ ಪರಿಣಾಮ ಬೀರುತ್ತಿವೆ.

ಆಶೆ - ಹತಾಶೆಗಳೆರಡೂ ಚಿಗುರೊಡೆಯುತ್ತಿವೆ. ತಂತ್ರಜ್ಞಾನದ ಸತ್ಯ ಸ್ವರೂಪ ಅರಿವಾಗದಿದ್ದರೆ, ತಂತ್ರಜ್ಞಾನ ಪಟ್ಟಣ-ಹಳ್ಳಿಗಳ ಮಧ್ಯೆ ಅಂತರ ಕಡಿಮೆ ಮಾಡುವ ಬದಲು ಹೆಚ್ಚಿಸುತ್ತದೆ. ಆಗ ಉಳ್ಳವರು ಇಲ್ಲದವರ ನಡುವೆ ಕಂದರ ಇನ್ನಷ್ಟು ವ್ಯಾಪಕವಾದೀತು.

ಇತ್ತೀಚಿನ ಸಾರ್ವತ್ರಿಕ ಚುನಾವಣೆಗಳು ಈ ಮಾತನ್ನು ನಿಚ್ಚಳಗೊಳಿಸಿವೆ. ಭಾರತೀಯ ಜನತೆ ಹಾಗೂ ಭಾರತೀಯ ಪ್ರತಿಷ್ಠಿತ ವರ್ಗದ ಸಂಪರ್ಕ ಕಡಿದಿರುವ ಸೂಚನೆ ಚುನಾವಣೆಗಳಿಂದ ಲಭ್ಯ. ಮಾಧ್ಯಮಗಳು, ರಾಜಕಾರಣಿಗಳು, ರಾಜಕೀಯ ಪಕ್ಷಗಳು ಹೊಂದಿದ್ದ ಧೋರಣೆಯೇ ಬೇರೆ, ಮತದಾರನ ಚಿಂತನೆಯೇ ಬೇರೆಯಾಗಿತ್ತು, ಸಮೂಹ ಮಾಧ್ಯಮ, ಸಮೂಹ ವಾಸ್ತವಿಕತೆಯಿಂದ ದೂರವಾಗಿದ್ದು ಇದರಿಂದ ವ್ಯಕ್ತ. ಅದುದರಿಂದಲೇ ಒಬ್ಬ ಅಂಕಣಕಾರ, ಪತ್ರಿಕೋದ್ಯಮ ಸೋತ ಕಡೆ ಚುನಾವಣೆ ಗೆದ್ದಿದೆ ; ಶ್ರೀಸಾಮಾನ್ಯನ ವಿಷಯಗಳು, ಹಿತಾಸಕ್ತಿಗಳು ಈಗ ಪುನಃ ಮಹತ್ವ ಪಡೆದುಕೊಂಡಿವೆ ಎಂದಿದ್ದಾರೆ.

ಭಾರತೀಯ ಸಮೂಹ ಮಾಧ್ಯಮಕ್ಕೆ ಈಗ ಆತ್ಮಾವಲೋಕನ ಮಾಡಿಕೊಳ್ಳಲು ಸಕಾಲ. ಶ್ರೀಸಾಮಾನ್ಯನ ಬಗ್ಗೆ ಮಾತನಾಡುವುದನ್ನು ಮಾಧ್ಯಮ ನಿಲ್ಲಿಸಿದೆ. ಶ್ರೀಸಾಮಾನ್ಯ ಒಂದು ಬಳಕೆಯ ವಸ್ತುವಾಗಿಬಿಟ್ಟಿದ್ದಾನೆ. ಸೌಂದರ್ಯ ಸ್ಪರ್ಧೆ ವರದಿ ಮಾಡಲು ವರದಿಗಾರರ ದಂಡೇ ಇರುತ್ತದೆ. ಚಾನಲ್‌ಗಳು ದೌಡಾಯಿಸುತ್ತವೆ. ಆದರೆ ರೈತನ ಆತ್ಮಹತ್ಯೆ, ಕೃಷಿ ಕ್ಷೇತ್ರದಲ್ಲಿ ಬಿಕ್ಕಟ್ಟಿನ ಆಳವಾದ ಅಧ್ಯಯನಕ್ಕೆ ಮಾಧ್ಯಮದವರಿಗೆ ಪುರುಸೋತ್ತೇ ಇಲ್ಲ. ಶೇಕಡ ೭೦ ರಷ್ಟು ಜನಸಂಖ್ಯೆ ಮಾಧ್ಯಮಕ್ಕೆ ಸುದ್ದಿ ಮಾಡುವುದಿಲ್ಲ. ಮಾಹಿತಿ ಪ್ರಸಾರ ಹಿಂದಿನ ಸೀಟು ಪಡೆದಿದೆ. ಆದರೆ ಸಾರ್ವತ್ರಿಕ ಚುನಾವಣೆಗಳಲ್ಲಿ ಮತದಾರ ಬೇರೆಯೇ ತೀರ್ಪು ನೀಡಿದ್ದಾನೆ.

ಈ ಹಿನ್ನೆಲೆಯಲ್ಲಿ ಹೊಸ ತಂತ್ರಜ್ಞಾನ, ಸುದ್ದಿಯ ಜತೆ ಮನರಂಜನೆಯ ಮಿಶ್ರಣ, ತೀವ್ರ ಪೈಪೋಟಿ, ಯುವ ಜನಾಂಗದ ಹವ್ಯಾಸದಲ್ಲಿ ವ್ಯತ್ಯಾಸ ಆರೋಗ್ಯಪೂರ್ಣ ಪತ್ರಿಕೋದ್ಯಮಕ್ಕಷ್ಟೇ ಅಲ್ಲ ಆರೋಗ್ಯಪೂರ್ಣ ಸಮಾಜಕ್ಕೂ ಕುತ್ತು ಆಗಬಾರದು. ಇಲ್ಲದಿದ್ದರೆ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಅಂತಹ ವೈಭವದ ಸಾಮ್ರಾಜ್ಯವನ್ನೇ ಪುರಂದರದಾಸರು ಉತ್ತಮ ಪ್ರಭುತ್ವ ಲೊಳಲೊಟ್ಟೆ ಎಂದು ಹೇಳಿದ ಮಾತು ಸಾರ್ವಕಾಲಿಕ ಸತ್ಯವಾದೀತು.

●




# ಕ್ಷೇತ್ರ ಪ್ರಚಾರ ಆಂದೋಲನ

ಮೈ. ಸಿ. ಪಾಟೀಲ್

ಗ್ರಾಮೀಣಾಭಿವೃದ್ಧಿ ಇಂದು ಜಾಗತೀಕರಣದ ಹಿನ್ನೆಲೆಯಲ್ಲಿ ವಿಭಿನ್ನ ಸ್ತರಗಳಲ್ಲಿ ನಡೆಯಬೇಕಾಗಿದೆ. ಹಲವಾರು ಸರ್ಕಾರಿ ಇಲಾಖೆಗಳು ಹಾಗೂ ಸರ್ಕಾರೇತರ ಸ್ವಯಂ ಸೇವಾ ಸಂಸ್ಥೆಗಳು ಈಗ ವ್ಯಾಪಕವಾಗಿ ಈ ಕಾರ್ಯದಲ್ಲಿ ತೊಡಗಿಕೊಂಡಿವೆ. ಆಯ್ದ ಕೆಲ ಗ್ರಾಮಗಳನ್ನು ಮಾದರಿ ಗ್ರಾಮಗಳಾಗಿ ರೂಪಿಸುವಷ್ಟಕ್ಕೆ ಮಾತ್ರ ಇವುಗಳ ಚಟುವಟಿಕೆ ಸೀಮಿತಗೊಂಡಂತಿದ್ದು ಒಟ್ಟಾರೆ ಗ್ರಾಮೀಣಾಭಿವೃದ್ಧಿ ಇನ್ನೂ ಕನಸಿನ ಮಾತಾಗಿದೆ. ಸರ್ಕಾರ ಗ್ರಾಮೀಣಾಭಿವೃದ್ಧಿಗೆ ವೆಚ್ಚ ಮಾಡುವ ಹಣದಲ್ಲಿ ಬಹುಪಾಲು ಸೋರಿ ಹೋಗಿ ಆ ಯೋಜನೆಗಳೆಲ್ಲ ಕಾಗದದ ಮೇಲೆ ಯಶಸ್ವಿಯಾಗಿ ಜಾರಿಕೊಂಡಿರುವ ಸತ್ಯದ ಬಗ್ಗೆ ಹೇಳದಿರುವುದೇ ವಾಸಿ.

**ಕ್ಷೇತ್ರ ಪ್ರಚಾರ ಆಂದೋಲನ ವ್ಯವಸ್ಥೆ ದಿನದಿನಕ್ಕೆ ವಿಸ್ತಾರ ಗೊಳ್ಳುತ್ತಿರುವ ಮಾಧ್ಯಮ ಪೈಪೋಟಿಯಿಂದ ತನ್ನ ಅರ್ಥ ಕಳೆದುಕೊಳ್ಳುತ್ತಿದೆ. ಪ್ರಚಾರ ಮತ್ತು ಅನುಷ್ಠಾನದ ನಡುವೆ ಭಾರೀ ವ್ಯತ್ಯಾಸವಿರುವುದು ಇದಕ್ಕೆ ಕಾರಣ. ದೇಶದ ಯಾವುದೇ ಮೂಲೆಯಲ್ಲಿರುವ ರೈತನಿಗೂ ಸಮಾಜ ಎತ್ತ ನಡೆಯುತ್ತಿದೆ ಎಂಬ ಮಾಹಿತಿ ಮಾಧ್ಯಮದ ಮೂಲಕ ತಿಳಿಯುತ್ತಿದೆ.**

ಕ್ಷೇತ್ರ ಪ್ರಚಾರ ಆಂದೋಲನ ಸಹ ಈ ವ್ಯವಸ್ಥೆಯಿಂದ ಹಾಗೂ ದಿನದಿನಕ್ಕೆ ವಿಸ್ತಾರಗೊಳ್ಳುತ್ತಿರುವ ಮಾಧ್ಯಮ ಪೈಪೋಟಿಯಿಂದ ಅರ್ಥ ಕಳೆದುಕೊಳ್ಳುತ್ತಿದೆ. ಪ್ರಚಾರ ಮತ್ತು ಅನುಷ್ಠಾನದ ನಡುವೆ ಬಾರಿ ವ್ಯತ್ಯಾಸಗಳಿರುವುದು ಇದಕ್ಕೆ ಕಾರಣ. ಬರಗಾಲದ ಬವಣೆಗೆ ತುತ್ತಾಗಿ, ವಿಪರೀತ ಬೆಲೆ ಕುಸಿತದ ಹಾಗೂ ರೋಗ ರುಜಿನಗಳ ಹಾವಳಿಯಿಂದ ಕೃಷಿ ಪದ್ಧತಿ ಅವನತಿಯ ಹಾದಿಯಲ್ಲಿದೆ. ಬಡ ರೈತರಿಗೆ ರಸಗೊಬ್ಬರ, ಕೀಟ ಕ್ರಿಮಿನಾಶಕ,ಉತ್ತಮ ಬಿತ್ತನೆ, ನೀರಾವರಿ ಸೌಲಭ್ಯ ಸಾಧ್ಯವಾಗದ ಮಾತಾಗಿದೆ. ಜಲಾಶಯಗಳ, ನದಿಪಾತ್ರದ, ಶ್ರೀಮಂತ ರೈತರ ಹೊರತಾಗಿ ಒಣಭೂಮಿ ಬೇಸಾಯ ಇನ್ನೂ ರೈತರನ್ನು ಸಾಲದ ಕೂಪಕ್ಕೆ ತಳ್ಳುತ್ತಿದೆ. ಆತ್ಮಹತ್ಯೆಯ ಹೊರತು ಪರ್ಯಾಯ ದಾರಿಗಳಾವುದೂ ಕಾಣಿಸುತ್ತಿಲ್ಲ. ಕ್ಷೇತ್ರ ಪ್ರಚಾರ ಕಾರ್ಯ ಸರ್ಕಾರಿ ಇಲಾಖೆಗಳ ಕಾರ್ಯವೇ ಆಗಿದ್ದು, ಸ್ವಯಂ ಸೇವಾ ಸಂಸ್ಥೆಗಳು ಒಂದಿಷ್ಟು ಸಹಕಾರಕ್ಕೆ ಮಾತ್ರ ನಿಲ್ಲುತ್ತಿವೆ. ಈ ವಿಧಾನ ಬದಲಾಗಬೇಕು, ಸ್ವಯಂ ಸೇವಾ ಸಂಸ್ಥೆಗಳೇ ಕ್ಷೇತ್ರ ಪ್ರಚಾರದ ಮುಂಚೂಣಿಯಲ್ಲಿರಬೇಕು. ಸರ್ಕಾರದ ಅಭಿವೃದ್ಧಿ ಇಲಾಖೆಗಳು ಮತ್ತು ಗ್ರಾಮೀಣ ಜನರ ನಡುವೆ ಸೇತುವೆಯಂತೆ ಅವು ಕೆಲಸ ಮಾಡಬೇಕು.

ಇಂದು ದೇಶದ ಮೂಲೆಯಲ್ಲಿರುವ ರೈತನಿಗೂ ಸಮಾಜ ಎತ್ತ ನಡೆಯುತ್ತಿದೆ ಎಂಬ ಮಾಹಿತಿ ಮಾಧ್ಯಮಗಳ ಮೂಲಕ ತಿಳಿಯುತ್ತಲೇ ಇದೆ. ಆದ್ದರಿಂದ ಕ್ಷೇತ್ರ ಪ್ರಚಾರ ಆಂದೋಲನ ಇಂದು ಸಮಾಜಕ್ಕೆ ಅಗತ್ಯವಿಲ್ಲ. ಪಂಚವಾರ್ಷಿಕ ಯೋಜನೆಗಳು ಆರಂಭಗೊಂಡಾಗ ಮತ್ತು ಮಾಧ್ಯಮಗಳ

ಮೂಲಕ ಜನರಿಗೆ ಮಾಹಿತಿ ದೊರೆಯುವುದು ದುರ್ಲಭವಾಗಿದ್ದಾಗ ಮಾತ್ರ ಈ ವ್ಯವಸ್ಥೆಯ ಅಗತ್ಯವಿತ್ತು. ಆದರೆ ಇಂದಿನ ಆರ್ಥಿಕ, ವೈಜ್ಞಾನಿಕ ಸಮಾಜದಲ್ಲಿ ಎಲ್ಲವೂ ಬದಲಾಗಿದೆ. ಹಳ್ಳಿಗಳಲ್ಲಿನ ಸಾಮುದಾಯಿಕ ಸಮಸ್ಯೆಗಳನ್ನು ಹೇಗೆ ಪರಿಹರಿಸಿಕೊಳ್ಳಬೇಕೆಂದು ಇಂದು ಬಹುತೇಕ ಗ್ರಾಮವಾಸಿಗಳಿಗೆ ಅದರಲ್ಲೂ ಯುವ ಜನಾಂಗಕ್ಕೆ ಸಮರ್ಪಕವಾಗಿ ತಿಳಿದಿದೆ. ಆದ್ದರಿಂದ ಗ್ರಾಮಸ್ಥರು ಈಗ ಪ್ರಚಾರ ಆಂದೋಲನದ ಮೂಲಕ ಅಭಿವೃದ್ಧಿಯ ಅರಿವು ಗಳಿಸಿಕೊಳ್ಳಬೇಕು ಎಂಬ ಮಾತಿನಲ್ಲಿ ಅರ್ಥವಿಲ್ಲ, ಅದು ಅನಿವಾರ್ಯವೂ ಅಲ್ಲ.

ಗ್ರಾಮೀಣಾಭಿವೃದ್ಧಿಗೆ ಇಂದು ಬೇಕಾಗಿರುವುದು ಒಂದು ರಾಜಕೀಯ ಇಚ್ಛಾಶಕ್ತಿ ಹಾಗೂ ಅಗತ್ಯ ಸಂಪನ್ಮೂಲಗಳು. ಬರಿ ಮಾತಿನ ಅಥವಾ ಕಾಗದದ ಮೇಲಿನ ಗ್ರಾಮೀಣಾಭಿವೃದ್ಧಿಯನ್ನು ಬಿಟ್ಟು ವಾಸ್ತವವಾಗಿ ಹಳ್ಳಿಗಳ ಜನರಿಗೆ ಕುಡಿಯುವ ನೀರು, ನೈರ್ಮಲ್ಯ, ಆರೋಗ್ಯ, ವಿದ್ಯುತ್, ಶಿಕ್ಷಣ, ಉತ್ತಮ ರಸ್ತೆ, ಅಗತ್ಯ ಸಂಚಾರ - ಸಂಪರ್ಕ ಸಾಧನ, ಉದ್ಯೋಗ, ಕೃಷಿ ಉತ್ಪನ್ನಗಳಿಗೆ ಯೋಗ್ಯ ಮಾರುಕಟ್ಟೆ ಇವು ದೊರಕುವಂತಾಗಬೇಕು. ಆದರೆ ಜಾಗತೀಕರಣದ ಸವಾಲಿಗೆ ನಮ್ಮ ಹಳ್ಳಿಗಳು ಸಿದ್ಧವಾಗುವ ಮುನ್ನವೇ ಅದು ಬೆನ್ನು ಹತ್ತಿದ ಬೇತಾಳದಂತೆ ಎದುರಾಗಿದೆ. ನಮ್ಮ ಹಳ್ಳಿಗಾಡಿನ ಜನ ಜಾಗತಿಕ ಮಟ್ಟದಲ್ಲಿ ಗುಣಾತ್ಮಕ ಸುಧಾರಣೆಯೊಂದಿಗೆ ಉತ್ಪಾದನೆ ಅಧಿಕಗೊಳಿಸಿಕೊಳ್ಳಬೇಕು. ಜತೆಗೆ ಮಾರುಕಟ್ಟೆಯಲ್ಲಿ ತನ್ನ ಉತ್ಪಾದನೆಗಳನ್ನು ಲೀಲಾಜಾಲವಾಗಿ ಮಾರಾಟ ಮಾಡಲು ಬೇಕಾದಂತಹ ಮೌಲ್ಯಗಳನ್ನು ರೂಢಿಸಿಕೊಳ್ಳಬೇಕು. ಸ್ವಾತಂತ್ರ್ಯಾನಂತರದ ೫೫ ವರ್ಷಗಳಲ್ಲಿ ಗ್ರಾಮೀಣಾಭಿವೃದ್ಧಿ ಸತತವಾಗಿ ಏರುಮುಖವನ್ನೇ ಕಾಣುತ್ತಿದೆ. ಆದರೆ ಸಾಧಿಸಬೇಕಾಗಿದ್ದಷ್ಟು ಅಭಿವೃದ್ಧಿ ಆಗಿಲ್ಲವೆನ್ನುವುದು ಕೇವಲ ಆತಂಕದ ವಿಚಾರ ಮಾತ್ರವಲ್ಲ; ಆತ್ಮವಿಮರ್ಶೆಯೂ ಆಗಬೇಕಾಗಿದೆ. ಈಗಾಗಲೇ ವಿವರಿಸಿದಂತೆ ಗ್ರಾಮೀಣಾಭಿವೃದ್ಧಿಯ ಯಶಸ್ಸಿನ ಏಳುಬೀಳಿಗೆ ಹಲವಾರು ಕಾರಣಗಳಿವೆ. ಕಳೆದ ಎರಡು ಮೂರು ದಶಕಗಳ ಹಿಂದೆ ಕ್ಷೇತ್ರ ಪ್ರಚಾರದ ಪ್ರಮಾಣವೇ ಹೆಚ್ಚಿ ಗುರಿ ಮತ್ತು ಸಾಧನೆಯ ನಡುವೆ ಉಂಟಾದ ಭಾರಿ ಕಂದಕವನ್ನು ಮುಚ್ಚಲು ಸಾಧ್ಯವಾಗಲೇ ಇಲ್ಲ. ಏಕೆಂದರೆ ಮಾಡಿದ ಪ್ರಚಾರಕ್ಕೆ ಅನುಷ್ಠಾನದ ಮುಹೂರ್ತ ಲಭಿಸಲೇ ಇಲ್ಲ. ಹೀಗಾಗಿ ಹಳ್ಳಿಗಾಡಿನ ಜನರಲ್ಲಿ ಭ್ರಮನಿರಸನ ಉಂಟಾಗಿ ಕ್ಷೇತ್ರ ಪ್ರಚಾರದಲ್ಲಿ ತೊಡಗಿದವರ ಮೇಲೆ ಯಾವ ನಂಬಿಕೆಯೂ ಉಳಿಯಲಿಲ್ಲ. ಅಲ್ಲೊಂದು ಇಲ್ಲೊಂದು ಪ್ರಕರಣಗಳು ಇದಕ್ಕೆ ಹೊರತಾಗಿರಬಹುದಾದರೂ ಇಡೀ ದೇಶದಲ್ಲಿಯೇ ಕ್ರಮೇಣ ಕ್ಷೇತ್ರ ಪ್ರಚಾರದ ಆರ್ಭಟ ಕೆಳಗಿಳಿಯತೊಡಗಿತು. ಹೇಳುವುದು ಮತ್ತು ಮಾಡುವುದರ ನಡುವೆ ಭಾರಿ ಅಂತರ ಉಂಟಾಗಿದ್ದರಿಂದ ಹಾಗೂ ಈ ಹಿನ್ನಡೆತದಿಂದ ಕ್ಷೇತ್ರ ಪ್ರಚಾರ ಗ್ರಾಮೀಣಾಭಿವೃದ್ಧಿಗೆ ಪೂರಕವಾಗಿ ಸ್ಪಂದಿಸುವುದು ಸಾಧ್ಯವಾಗದೆ ಹೋಗಿದೆ.

ಈ ವಿಚಾರಗಳನ್ನು ಪರಿಶೀಲಿಸಿದಾಗ ಎರಡು ಅಂಶಗಳು ಸ್ಪಷ್ಟವಾಗುತ್ತವೆ.

೧. ಗ್ರಾಮೀಣಾಭಿವೃದ್ಧಿಗೆ ಕ್ಷೇತ್ರ ಪ್ರಚಾರ ಆಂದೋಲನ ಸ್ವಲ್ಪ ಮಟ್ಟಿಗೆ ನೆರವಾಗಬಹುದಾದರೂ ಅದರಿಂದಲೇ ಎಲ್ಲವೂ ಸಾಧ್ಯವೆಂಬ ಭ್ರಮೆ ನಿವಾರಣೆ ಆಗಿರುವುದು.

೨. ಗ್ರಾಮೀಣಾಭಿವೃದ್ಧಿ ಯೋಜನೆಗಳು ಇನ್ನಾದರೂ ಸಮರ್ಪಕ ರೀತಿಯಲ್ಲಿ ಅನುಷ್ಠಾನವಾಗಬೇಕು. ಜನರಿಗೆ ಅದರ ಪ್ರಯೋಜನ ನೇರವಾಗಿ ಮುಟ್ಟಬೇಕು.

ಒಟ್ಟಾರೆ ಹಳ್ಳಿಗಳು ಆರ್ಥಿಕವಾಗಿ ಬಲಗೊಳ್ಳಬೇಕು; ಅಲ್ಲಿನ ಜನರಿಗೆ ಉದ್ಯೋಗ ಹೆಚ್ಚು ಪ್ರಮಾಣದಲ್ಲಿ ದೊರಕುವ ವಿಪುಲ ಅವಕಾಶವನ್ನು ಸೃಷ್ಟಿಸಬೇಕು. ಸಾಲದ, ಬಡತನದ, ಕೀಳರಿಮೆಯ ಸಂಕೋಲೆಯಿಂದ ಹಳ್ಳಿಗರು ಹೊರಬರಬೇಕು. ನಗರದ ಜನರಿಗೆ ಎಲ್ಲಾ ರೀತಿಯಲ್ಲೂ ಸರಿಸಮಾನರಾಗಿ ನಿಲ್ಲುವುದು ಅವರಿಗೆ ಸಾಧ್ಯವಾಗಬೇಕು. ಇದಾಗದ ಹೊರತು ಹಳ್ಳಿಗಳ ಯುವಕರು ಅರ್ಥಂಬರ್ಧ ಕಲಿತು ಯಾವ ಅಭಿವೃದ್ಧಿಯನ್ನೂ ನೀಡದ ಕ್ಷುಲ್ಲಕ ರಾಜಕಾರಣದಲ್ಲಿ ತೊಡಗುವುದು ತಪ್ಪಬೇಕು. ಅದರಲ್ಲೂ ಮುಖ್ಯವಾಗಿ ಯುವ ಜನಾಂಗವೊಂದು ನಾಶದ ಅಂಚಿಗೆ ತಲುಪಿ ಗ್ರಾಮೀಣ ಬದುಕನ್ನು ಅಸಹನೀಯವಾಗುವಂತೆ ಮಾಡುವುದು ನಿಲ್ಲಬೇಕು. ಅದಕ್ಕಾಗಿ ಪ್ರಚಾರ ಮತ್ತು ಅನುಷ್ಠಾನದ ಎರಡೂ ಏಜನ್ಸಿಗಳೂ ಜತೆಯಲ್ಲಿ ನಡೆದು ಸುಗಮ ಗ್ರಾಮೀಣಾಭಿವೃದ್ಧಿಗೆ ಇನ್ನಾದರೂ ನಾಂದಿ ಹಾಡಬೇಕು.

●




# ರಾಜ್ಯ ವಾರ್ತಾ ಇಲಾಖೆ

ಎಚ್. ಬಿ. ದಿನೇಶ್

ವಾರ್ತೆ ಯಾವಾಗಲೂ ಎರಡು ಮುಖಗಳನ್ನು ಒಳಗೊಂಡಿದ್ದು ಮಾಹಿತಿಯನ್ನು ಒದಗಿಸುವುದು ಮತ್ತು ಪ್ರಲೋಭನೆಯನ್ನುಂಟುಮಾಡುವಂತದ್ದು. ಈ ಎರಡೂ ಮುಖಗಳಿಗೆ ಬಹು ವಿಸ್ತೃತ ಹರಹು. ಜನ ಜಾಗೃತಿ, ಅದರ ಅರಿವಿನ ವಿಸ್ತಾರ, ಅಭಿವೃದ್ಧಿಪರ ವಾರ್ತೆ ನೀಡುವುದು ಮೊದಲ ವಿಭಾಗದ ಬಹುಮುಖ್ಯ ಆಯಾಮಗಳಾದರೆ ಜನಾಭಿಪ್ರಾಯ ರೂಪಿಸುವುದು, ಲಾಭ ಪಡೆಯುವುದು ಮತ್ತು ಕೆಲ ನಿರ್ದಿಷ್ಟ ಉದ್ದೇಶಗಳನ್ನು ಸಾಧಿಸಿ ಸ್ವಾರ್ಥವಾಗುವುದು ಪ್ರಲೋಭನೆಯ ಮುಖಗಳನ್ನೆಬಹುದು.

ಅಭಿವೃದ್ಧಿ ಪರ ವಾರ್ತೆಯನ್ನು ನೀಡುವ ಮೂಲಕ ಜನರ ಅರಿವಿನ ಮಟ್ಟ ಹೆಚ್ಚಿಸುವುದು ಮತ್ತು ಜನಕಲ್ಯಾಣ ಸಾಧಿಸುವುದೇ ವಾರ್ತಾ ಇಲಾಖೆಯ ಪರಮ ಉದ್ದೇಶ.

ಜನ ಕಲ್ಯಾಣವನ್ನು ಸಾಧಿಸುವ ರೀತಿ ಹೇಗೆ ಎಂಬುದು ಬಹು ಮುಖ್ಯ ವಿಚಾರ. ಬಹುಶಃ ಈವರೆಗೆ ವಾರ್ತಾ ಇಲಾಖೆ ಈ ಉದ್ದೇಶ ಸಾಧನೆಯ ನಿಟ್ಟಿನಲ್ಲಿ ನಡೆದು ಬಂದ ದಾರಿಯನ್ನು ವಿಶ್ಲೇಷಿಸುವುದು ಇಲ್ಲಿ ತುಂಬಾ ಪ್ರಸ್ತುತವಾಗಬಹುದು.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಕೇಂದ್ರ ಸರ್ಕಾರದ ಕ್ಷೇತ್ರ ಪ್ರಚಾರ ಇಲಾಖೆಯ ಮಾದರಿಯಲ್ಲಿ ರೂಪಿತವಾದ ರಾಜ್ಯ ವಾರ್ತಾ ಇಲಾಖೆ ಮೊದಲು ಪ್ರವಾಸೋದ್ಯಮ ಇಲಾಖೆಯನ್ನು ತನ್ನ ಜೊತೆಗಾರನನ್ನಾಗಿಸಿಕೊಂಡಿತ್ತು. ಅನಂತರ ವಾರ್ತಾ ಮತ್ತು ಪ್ರಚಾರ ಇಲಾಖೆಯಾಗಿ ಈಗ ವಾರ್ತಾ ಇಲಾಖೆಯಾಗಿದೆ. ಪತ್ರಿಕೆ ಮತ್ತು ಸುದ್ದಿ, ಕ್ಷೇತ್ರ ಪ್ರಚಾರ, ವಾಣಿಜ್ಯ ಪ್ರಚಾರ, ಪ್ರಕಟಣೆ, ಫೋಟೋ ವಿಭಾಗ, ಚಲನಚಿತ್ರ ವಿಭಾಗ, ಸಂಶೋಧನೆ ಮತ್ತು ಪರಾಮರ್ಶೆ ವಿಭಾಗ, ಸಂಗೀತ ನಾಟಕ ವಿಭಾಗಗಳೆಂದು ಹಲವಾರು ವಿಭಾಗಗಳನ್ನು ಹೊಂದಿರುವ ವಾರ್ತಾ ಇಲಾಖೆ ಅಭಿವೃದ್ಧಿ ಪರ ವಾರ್ತಾ ಪ್ರಸಾರದ ತನ್ನ ಮೂಲ ಉದ್ದೇಶವನ್ನು ಈ ಎಲ್ಲಾ ಶಾಖೆಗಳ ಮೂಲಕ ಸಾಧಿಸುತ್ತಿದೆ.

**ಅಭಿವೃದ್ಧಿಪರ ವಾರ್ತೆ ನೀಡುವ ಮೂಲಕ ಜನರ ಅರಿವಿನ ಮಟ್ಟ ಹೆಚ್ಚಿಸುವುದು ಹಾಗೂ ಜನರ ಕಲ್ಯಾಣ ಸಾಧಿಸುವುದು ವಾರ್ತಾ ಇಲಾಖೆಯ ಪರಮ ಉದ್ದೇಶ. ಜನರನ್ನು ಅಭಿವೃದ್ಧಿ ಕೆಲಸದಲ್ಲಿ ಪಾಲ್ಗೊಳ್ಳುವಂತೆ ಪ್ರಚೋದಿಸುವುದೂ ಇದರ ಉದ್ದೇಶವಾಗಿದೆ.**

## ಸ್ಥೂಲವಾಗಿ ಶಾಖೆಗಳ ಪರಿಚಯ ಮಾಡುವುದಾದರೆ :

ಪತ್ರಿಕೆ ಮತ್ತು ಸುದ್ದಿ ವಿಭಾಗವು ಅಭಿವೃದ್ಧಿ ಪರ ವಾರ್ತೆಗಳನ್ನು ಪತ್ರಿಕೆಗಳಿಗೆ ಬಿಡುಗಡೆ ಮಾಡಿ ಅವುಗಳಿಗೆ ಸೂಕ್ತ ಪ್ರಚಾರ ಸಿಗುವಂತೆ ನೋಡಿಕೊಳುತ್ತದೆ. ಪತ್ರಕರ್ತರನ್ನು ಅಭಿವೃದ್ಧಿ ಸ್ಥಳಗಳಿಗೆ - ಯೋಜನೆಗಳಿಗೆ ಕರೆದೊಯ್ದು ಈ ಯೋಜನೆಗಳ ಪರಿಚಯ ರಾಜ್ಯದ ಎಲ್ಲ ಮೂಲೆಗಳಲ್ಲೂ

ಆಗುವಂತೆ ನೋಡಿಕೊಳ್ಳುವುದು ಕೂಡ ಈ ಶಾಖೆಯ ಕಾರ್ಯ. ಕೆಲವರ್ಷಗಳ ಹಿಂದೆ ವಿಶೇಷ ಘಟಕ ಯೋಜನೆಯಲ್ಲಿ ರಾಜ್ಯದ ರೈತರನ್ನು ಕರ್ನಾಟಕ ದರ್ಶನ, ಭಾರತ ದರ್ಶನ ಪ್ರವಾಸಗಳಿಗೆ ಕರೆದೊಯ್ದು ರಾಜ್ಯದ ಮತ್ತು ದೇಶದ ವಿವಿಧ ಕೃಷಿ ಪದ್ಧತಿಗಳನ್ನು ನಮ್ಮ ರೈತರಿಗೆ ಪರಿಚಯಿಸುವ ಕಾರ್ಯವನ್ನು ಕೂಡ ಈ ಶಾಖೆ ನಿರ್ವಹಿಸಿತ್ತು. ಇದರಂತೆಯೇ ಗ್ರಾಮೀಣ ಭಾಗದ ಪ.ಜಾ ಪ. ಪಂಗಡದ ವಿದ್ಯಾರ್ಥಿಗಳಿಗೂ ಕರ್ನಾಟಕ ದರ್ಶನ ಪ್ರವಾಸವನ್ನು ಏರ್ಪಡಿಸಲಾಗುತ್ತಿತ್ತು.

ಕ್ಷೇತ್ರ ಪ್ರಚಾರ ಘಟಕವು ವಾರ್ತಾ ಇಲಾಖೆಯ ಬಹು ಮುಖ್ಯ ಅಂಗ. ವಾರ್ತಾ ಇಲಾಖೆಯ ಸಂಪೂರ್ಣ ಅಸ್ತಿತ್ವವೇ ಈ ಘಟಕದ ಕಾರ್ಯನಿರ್ವಹಣೆಯನ್ನು ಆಧರಿಸಿರುವಂತಹದು.

ಗ್ರಾಮೀಣ ಭಾಗಗಳಲ್ಲಿ ಸರ್ಕಾರದ ಅಭಿವೃದ್ಧಿ ಯೋಜನೆಗಳ ಕುರಿತು ವಸ್ತು ಪ್ರದರ್ಶನಗಳನ್ನು ಏರ್ಪಡಿಸುವುದು, ಚಲನಚಿತ್ರ ಪ್ರದರ್ಶನಗಳನ್ನು ಏರ್ಪಡಿಸುವುದು, ರಾಜ್ಯದಾದ್ಯಂತ ಜಿಲ್ಲಾ ವಾರ್ತಾ ಘಟಕಗಳ ಮೂಲಕ ಪ್ರಚಾರಾಂದೋಲನಗಳನ್ನು ನಡೆಸಿ ಸರ್ಕಾರದ ವಿವಿಧ ಇಲಾಖೆಗಳ ಸೌಲಭ್ಯಗಳು ಸಾರ್ವಜನಕರಿಗೆ ಸಿಗುವಲ್ಲಿ ಒಂದು ಸಾಮಾನ್ಯ ವೇದಿಕೆಯನ್ನು ಸೃಜಿಸುವುದು ಮತ್ತು ಇದೇ ವೇದಿಕೆಯ ಮೂಲಕ ಸರ್ಕಾರದ ಅಭಿವೃದ್ಧಿ ಯೋಜನೆಗಳ ಪ್ರಸಾರ ಮಾಡುವುದು ಈ ಘಟಕದ ಬಹು ಮುಖ್ಯ ಜವಾಬ್ದಾರಿಯಾಗಿದೆ.

ಇನ್ನು ವಾಣಿಜ್ಯ ಪ್ರಚಾರ. ಜಾಹೀರಾತು ಮಾಧ್ಯಮದ ಮೂಲಕ ಸರ್ಕಾರದ ಅಭಿವೃದ್ಧಿ ಯೋಜನೆಗಳ ಪ್ರಚಾರ ಈ ಘಟಕದ ಕಾರ್ಯ. ಇದು ಪತ್ರಿಕೆಗಳಿಗೆ ಸರ್ಕಾರದ ವಿವಿಧ ಇಲಾಖೆಗಳ ಟೆಂಡರುಗಳನ್ನೂ ಬಿಡುಗಡೆ ಮಾಡುತ್ತದೆ.

ಫೋಟೋ ವಿಭಾಗ, ನ್ಯೂಸ್ ರೀಲುಗಳು, ಸಾಕ್ಷ್ಯ ಚಿತ್ರಗಳ ತಯಾರಿಕೆಯ ಮೂಲಕ ಅಭಿವೃದ್ಧಿ ಯೋಜನೆಗಳನ್ನು ಜನತೆಗೆ ತಲುಪಿಸುತ್ತಿದೆ. ಈ ಸಂಬಂಧಿತ ಛಾಯಾಚಿತ್ರಗಳನ್ನು ಕೂಡ ಅದು ಪತ್ರಿಕೆಗಳಿಗೆ ಬಿಡುಗಡೆ ಮಾಡುತ್ತದೆ.

ಚಲನಚಿತ್ರ ವಿಭಾಗವು ಕನ್ನಡ ಚಲನಚಿತ್ರಗಳಿಗೆ ಸಹಾಯಧನ ನೀಡುವುದು, ಚಲನಚಿತ್ರಗಳ ಚಿತ್ರೀಕರಣಕ್ಕೆ ಅನುಮತಿ ನೀಡುವುದು ಮೊದಲಾದ ಕಾರ್ಯಗಳನ್ನು ನಿರ್ವಹಿಸುತ್ತದೆ.

ಸಂಶೋಧನಾ ಮತ್ತು ಪರಾಮರ್ಶೆ ವಿಭಾಗ ಹೆಸರೇ ತಿಳಿಸುವಂತೆ ಪತ್ರಿಕೋದ್ಯಮ ಅಭಿವೃದ್ಧಿ, ಸಾಹಿತ್ಯ ಸುದ್ದಿ ಸಂಶ್ಲೇಷಣೆ ಇತ್ಯಾದಿ ಕ್ಷೇತ್ರಗಳಲ್ಲಿ ಸಂಶೋಧನಾ ಕಾರ್ಯನಿರತವಾಗಿದೆ.

ಸಂಗೀತ ನಾಟಕ ವಿಭಾಗವು ಸಂಗೀತ ಮತ್ತು ನಾಟಕಗಳಲ್ಲದೆ ಇತರ Performing ಮಾಧ್ಯಮಗಳ ಮೂಲಕ ಅಭಿವೃದ್ಧಿ ಯೋಜನೆಗಳ ಪ್ರಚಾರ ಮಾಡುತ್ತಿದೆ.

ಇದಿಷ್ಟು ವಾರ್ತಾ ಇಲಾಖೆಯ ಕಾರ್ಯನಿರ್ವಹಣೆಯ ಕುರಿತಾದ ಸ್ಥೂಲಚಿತ್ರ.

## ಗ್ರಾಮೀಣಾಭಿವೃದ್ಧಿ ಇಲಾಖೆಯ ಪಾತ್ರ :

"Welfare State - ಕಲ್ಯಾಣ ಸರ್ಕಾರಗಳು ಎಂಬ ಪರಿಕಲ್ಪನೆಯನ್ನು ಕುರಿತ ನಂಬುಗೆಯನ್ನೇ ನಾನು ಕಳೆದುಕೊಂಡಿದ್ದೇನೆ" ಎನ್ನುವುದು ಖ್ಯಾತ ಲೇಖಕ ವಿ.ಎಸ್. ನೈಪಾಲ್ ಅವರ ವೈಯಕ್ತಿಕ ಅಭಿಪ್ರಾಯವಾಗಿರಬಹುದು. ಆದರೆ ಮನುಕುಲದ ಇತಿಹಾಸದ ಪ್ರಾರಂಭದಿಂದಲೂ ಎಲ್ಲ ಆಡಳಿತ ಸಂಸ್ಥೆ ವಿಧಾನಗಳ ಅಭಿವ್ಯಕ್ತ ಉದ್ದೇಶ ಮಾತ್ರ ಸಮುದಾಯ ಕಲ್ಯಾಣವೇ ಆಗಿರುವುದಂತೂ ನಿಜ. ಅದು ಇಂದಿಗೂ ಮುಂದುವರೆದು ಬಂದಿರುವುದೂ ಅಷ್ಟೇ ಸತ್ಯ. ವೈಯಕ್ತಿಕ ಅಥವಾ ಸಾಂಘಿಕ ಕಾರಣಗಳಿಂದಾಗಿ ಈ ಮೂಲಭೂತ ಉದ್ದೇಶಕ್ಕೆ ಲೋಪವಾಗಿರುವ ಉದಾರಹಣೆಗಳು ಸಾಕಷ್ಟಿವೆ ಎಂಬುದನ್ನೂ ನಾವು ಒಪ್ಪಲೇಬೇಕು.

ಪ್ರಸ್ತುತ ನಮ್ಮ ಪ್ರಜಾಪ್ರಭುತ್ವವಾದಿ ಆಳ್ವಿಕೆಯ ವ್ಯವಸ್ಥೆ 'ಬಹುಜನ ಹಿತಾಯ ಬಹುಜನ ಸುಖಾಯ' ಎಂಬ ತತ್ವದ ಮೇಲೆಯೇ ಆಧಾರಿತವಾದಂತಹುದು. ಬಹುಜನ ಹಿತವನ್ನು ಹೇಗೆ ಮುಂದುವರಿಸಿದ್ದೇವೆ ಎನ್ನುವುದಷ್ಟೇ ನಮಗೆ ಮುಖ್ಯ.

೧೯೪೮ರಷ್ಟು ಹಿಂದೆಯೇ ಅಸ್ತಿತ್ವಕ್ಕೆ ಬಂದ ವಾರ್ತಾ ಇಲಾಖೆ ನಮ್ಮ ರಾಜ್ಯದಲ್ಲಿ ಆಡಳಿತ ನಡೆಸಿದ ಸರ್ಕಾರಗಳು ಬಹುಜನ ಹಿತಕ್ಕಾಗಿ ಕೈಗೊಂಡ ಕಾರ್ಯಕ್ರಮಗಳನ್ನು ಜನತೆಯೆದುರು ತಂದು ನಿಲ್ಲಿಸುವ ಕಾಯಕವನ್ನೇ ಮಾಡುತ್ತಾ ಬಂದಿದೆ. ವಾರ್ತಾ ಇಲಾಖೆಯ ಉದ್ದೇಶವೇ ಅದು.

ಈ ಕಾರ್ಯದಲ್ಲಿ ಸಾಧ್ಯವಿರುವ ಎಲ್ಲ ಸಾಧನಗಳನ್ನೂ ಬಳಸಿಕೊಳ್ಳುವತ್ತ ನಾವು ಯಶಸ್ವಿಯಾಗಿದ್ದೇವೆಯೇ ಎಂಬುದಷ್ಟೆ ಪ್ರಶ್ನೆ.

ಆಧುನಿಕ ಕೃಷಿ ಪದ್ಧತಿಗಳ ಅಳವಡಿಕೆಯಲ್ಲಿ ನೆರವು ನೀಡುವುದು, ಸಾಮಾಜಿಕ ಮೌಢ್ಯದ ವಿರುದ್ಧ ಸಮರ ಸಾರುವುದು ಮತ್ತು ಮಹಿಳಾ ವರ್ಗದಲ್ಲಿ ಜಾಗೃತಿ ಮೂಡಿಸುವ ಬಹುಮುಖ್ಯ ಉದ್ದೇಶದಿಂದ ರೈತ (ಮೈಸೂರು) ರಾಜ್ಯ ಎಂಬ ಪ್ರಕಟಣೆಯನ್ನು ವಾರ್ತಾ ಇಲಾಖೆ ಹೊರತರುತ್ತಿತ್ತು. ಈ ಪ್ರಕಟಣೆಗೆ ರಾಜ್ಯದಾದ್ಯಂತ ಉತ್ತಮ ಪ್ರಚಾರವೂ ಇತ್ತು. ಅಂತೆಯೇ ಸಾಕ್ಷರತಾ ಚಳವಳಿ ಬಲಗೊಂಡ ದಿನಗಳಲ್ಲಿ ವಾರ್ತಾ ಇಲಾಖೆಯ ಪ್ರತಿಯೊಂದು ಜಿಲ್ಲಾ ಘಟಕಗಳೂ 'ಕರ್ನಾಟಕದ ಮುನ್ನಡೆ' ಎಂಬ ಪಾಕ್ಷಿಕವನ್ನು ಹೊರತರುತ್ತಿದ್ದವು. ನವಸಾಕ್ಷರರಿಗೆ ಅನುಕೂಲವಾಗಲೆಂದು ದೊಡ್ಡ ಅಕ್ಷರಗಳಲ್ಲಿ ಮುದ್ರಿತವಾಗುತ್ತಿದ್ದ ೪-೬ ಪುಟಗಳ ಈ ಪಾಕ್ಷಿಕ ಜಿಲ್ಲಾ ಮಟ್ಟದಲ್ಲಿ ತುಂಬ ಜನಪ್ರಿಯವಾಗಿದ್ದ, ಅಭಿವೃದ್ಧಿಪರ ಪ್ರಕಟಣೆಯಾಗಿತ್ತು. ಈಗ ವಾರ್ತಾ ಇಲಾಖೆ ಅಭಿವೃದ್ಧಿಪರ ಸಾಹಿತ್ಯ ಮತ್ತು ಸರ್ಕಾರದ ಯೋಜನೆ ಸಾಧನೆಗಳ ಪರಿಚಯದ ಪ್ರಕಟಣೆಗಾಗಿಯೇ 'ಜನಪದ' ಎಂಬ ಕನ್ನಡ ಮಾಸಿಕವನ್ನು ಪ್ರಕಟಿಸುತ್ತಿದೆ. ೬೦ ಸಾವಿರಕ್ಕೂ ಹೆಚ್ಚು ಪ್ರಸಾರ ಸಂಖ್ಯೆ ಇರುವ ಈ ಮಾಸಿಕ ರಾಜ್ಯದ ನಗಣ್ಯ ಮೂಲೆಗಳನ್ನೂ ತಲುಪಿ ತನ್ನ ಉದ್ದೇಶ ಸಾಧನೆಯ ಹಾದಿಯಲ್ಲಿ ಬಹುದೂರ ಸಾಗಿಬಂದಿದೆ. ಕೃಷಿ ಸಂಬಂಧಿತ ಲೇಖನಗಳು, ಸಾಮಾಜಿಕ ಪ್ರಗತಿಗೆ ಅನುವಾಗುವ ಲೇಖನಗಳು, ಪ್ರಬಂಧಗಳು, ಯಶೋಗಾಥೆಗಳು, ಸಂದರ್ಶನಗಳು, ರಾಜ್ಯದ ಪ್ರಮುಖ ಪ್ರವಾಸಿ ತಾಣಗಳ ಪರಿಚಯಗಳು, ಇತರ ಅಭಿವೃದ್ಧಿ ಇಲಾಖೆಗಳ ಸಾಧನೆಗಳ ಅಚ್ಚುಕಟ್ಟಾದ ಚಿತ್ರಗಳ ಪ್ರಕಟಣೆಯೊಂದಿಗೆ ಜನಪದ' ಇಂದು ಜನಪ್ರಿಯ ಮಾಸಪತ್ರಿಕೆಗಳ ಸಾಲಿನಲ್ಲಿ ನಿಂತಿರುವುದಷ್ಟೇ ಅಲ್ಲ ಗ್ರಾಮೀಣಾಭಿವೃದ್ಧಿಯ ಕಾರಣಕ್ಕೆ ಗಮನಾರ್ಹ ಕೊಡುಗೆ ನೀಡುತ್ತಲೂ ನಡೆದಿದೆ.

ಇನ್ನೊಂದು ಪ್ರಕಟಣೆಯಾದ ಇಂಗ್ಲಿಷ್ ಮಾಸಿಕ 'ಮಾರ್ಚ್ ಆಫ್ ಕರ್ನಾಟಕ' ರಾಜ್ಯದ ಇತಿಹಾಸ, ಸಂಸ್ಕೃತಿ-ಪರಂಪರೆಗಳನ್ನು ಹೊರಜಗತ್ತಿಗೆ ಪರಿಚಯಿಸುವಲ್ಲಿ ಪ್ರಮುಖ ಪಾತ್ರವಹಿಸುತ್ತಿರುವ ಸಾಧನ.

ಪ್ರಕಟಣೆಗಳ ವಿಚಾರ ಬಂದಾಗ ವಾರ್ತಾ ಇಲಾಖೆ ಹೊರತಂದಿರುವ ಅನೇಕ ಅಭಿವೃದ್ಧಿ ಪರ ಪ್ರಕಟಣೆಗಳು ನಿಜಕ್ಕೂ ಅತ್ಯಂತ ಮೌಲಿಕವಾಗಿದ್ದವು. ಅಷ್ಟೇ ಅಲ್ಲ ಅವು ಜನಸಾಮಾನ್ಯರಿಗೆ ಅತ್ಯಂತ ಸಮರ್ಥ ಮಾರ್ಗದರ್ಶನ ನೀಡಬಲ್ಲ ಸಾಮರ್ಥ್ಯವನ್ನು ಪಡೆದಿದ್ದವು. 'ದಾರಿದೀಪ' ಎಂಬುದೊಂದು ಪ್ರಕಟಣೆ ರಾಜ್ಯ ಸರ್ಕಾರದ ಎಲ್ಲ ಇಲಾಖೆಗಳ ಬಗೆಗೆ ಪರಿಚಯವನ್ನು ಒಳಗೊಂಡಿದ್ದಲ್ಲದೆ, ಅನೇಕ ಜನಪರ ಸರ್ಕಾರಿ ಆದೇಶಗಳನ್ನೂ, ಜನರು ಸರ್ಕಾರಿ ಸೌಲಭ್ಯ ಪಡೆಯಬಹುದಾದ ರೀತಿಯನ್ನೂ ಒಳಗೊಂಡ ಅತ್ಯುಪಯುಕ್ತ ಪ್ರಕಟಣೆಯಾಗಿತ್ತು.

ಕಾಲಕ್ರಮೇಣ, ರಾಜ್ಯದ ಹಲವಾರು ವಿಶಿಷ್ಟ ಮತ್ತು ಜನಪರ ಯೋಜನೆಗಳ ಕುರಿತ ಮಾಹಿತಿಯನ್ನು ಮತ್ತು ಈ ಯೋಜನೆಗಳ ಉಪಯೋಗ ಹೇಗೆ ಮಾಡಿಕೊಳ್ಳಬಹುದು ಎಂಬ ಮಾರ್ಗದರ್ಶಿ ವಿವರಗಳನ್ನು ಒಳಗೊಂಡ ಪ್ರಕಟಣೆಗಳು ಈ ಯೋಜನೆಗಳ ಯಶಸ್ಸಿಗೆ, ತನ್ಮೂಲಕ ಗ್ರಾಮಾಭ್ಯುದಯಕ್ಕೆ ಸಾಕಷ್ಟು ಗಹನವಾದ ಕಾಣಿಕೆ ಸಲ್ಲಿಸಿದ್ದವು.

ಸ್ತ್ರೀಶಕ್ತಿ, ಯಶಸ್ವಿನಿ, ಭೂಮಿ, ಅಕ್ಷಯ ಮೊದಲಾದ ಅತ್ಯಂತ ಯಶಸ್ವಿ ಯೋಜನೆಗಳ, ಜಲ ಸಂವರ್ಧನೆ, ರಸ್ತೆ ಅಭಿವೃದ್ಧಿ, ಅಕ್ಷರ ದಾಸೋಹ ಇತ್ಯಾದಿ ಸಮಾಜೋಪಯೋಗಿ ಯೋಜನೆಗಳ ಪ್ರಚಾರ ಕಾರ್ಯ ತುಂಬ ಯಶಸ್ವಿಯಾಗಿ ಈ ಸಾಧನೆಗಳು, ಯೋಜನೆಗಳು ಸಾಮಾನ್ಯರನ್ನು ಮುಟ್ಟುವಲ್ಲಿ ವಾರ್ತಾ ಇಲಾಖೆಯ ಪ್ರಕಟಣೆಗಳು ವಹಿಸಿದ ಪಾತ್ರ ನಗಣ್ಯವಂತೂ ಆಗಿರಲಿಲ್ಲ.

"ಜನ ಜಾಗೃತರಾದರೆ, ತಿಳಿವಳಿಕಸ್ಥರಾದರೆ ಮತ್ತು ಪ್ರಶ್ನಿಸಬಲ್ಲ ಸಾಮರ್ಥ್ಯ ಪಡೆದರೆ ಆಡಳಿತ ವ್ಯವಸ್ಥೆ ಅಥವಾ ಕಾರ್ಯಾಂಗವು ಅವರನ್ನು ಮೋಸ ಮಾಡುವುದು ಸಾಧ್ಯವಿಲ್ಲ. ಯಾವುದೇ ಆಡಳಿತ ವ್ಯವಸ್ಥೆಯ ಬದ್ಧತೆ ತನ್ನ ಪ್ರಜೆಗಳ ಅರಿವಿನ ಮಟ್ಟವನ್ನು ಹೆಚ್ಚಿಸುವ ನಿಟ್ಟಿನಲ್ಲಿರುತ್ತದೆ ಮತ್ತು ಹೀಗಿರಬೇಕಾದುದು ತುಂಬ ಗರಿಷ್ಠ ಪ್ರಮಾಣದ ಅನಿವಾರ್ಯತೆ ಕೂಡ" ಎಂಬ ತತ್ವದ ಹಿನ್ನೆಲೆಯನ್ನು ವಾರ್ತಾ ಇಲಾಖೆಯ ಪ್ರಕಟಣೆಗಳಲ್ಲಿ ಕಾಣಬಹುದಾಗಿದೆ.

'ವಾರ್ತಾ ಇಲಾಖೆಯ ಪ್ರಕಟಣೆಗಳು ಕೇವಲ ಸರ್ಕಾರದ ಮುಖವಾಣಿ' ಮಾತ್ರ ಎಂಬ ಸೀಮಿತ ಪರಿಧಿಯನ್ನೂ ದಾಟಿ 'ಪ್ರಚಾರದ ಮೂಲ ಕಲ್ಪನೆಯೇ ಜನಜಾಗೃತಿ' ಎಂಬ ನಿಜಾಂಶವನ್ನು ಸಾಧ್ಯ ಮಾಡಿದ ಹೆಗ್ಗಳಿಕೆ ವಾರ್ತಾ ಇಲಾಖೆಯ ಪ್ರಕಟಣೆಗಳದ್ದಾಗಿದೆ.

ಕರ್ನಾಟಕ ಜಾರಿಗೊಳಿಸಿದ ಕ್ರಾಂತಿಕಾರಕ ಯೋಜನೆಗಳಲ್ಲಿ ಅಗ್ರಗಣ್ಯವಾದುದು ಎಂದೆನ್ನಲಾದ 'ಭೂ ಸುಧಾರಣೆ ಕಾಯ್ದೆ' ಅಭೂತಪೂರ್ವ ಯಶ ಪಡೆಯಲು ಅದಕ್ಕೆ ಸಿಕ್ಕ ಪ್ರಚಾರವೇ ಮೂಲ ಕಾರಣ. ಈ ಪ್ರಚಾರವನ್ನು ತುಂಬ ಸಮರ್ಥವಾಗಿ ನಿರ್ವಹಿಸಿದ್ದು ವಾರ್ತಾ ಇಲಾಖೆ ಎನ್ನುವುದು ನಾಡಿನ ಅಭ್ಯುದಯದಲ್ಲಿ ಅದು ವಹಿಸಿದ ಪಾತ್ರಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ.

ಇಡೀ ರಾಷ್ಟ್ರದಲ್ಲಿಯೇ ಮೊದಲ ಬಾರಿಗೆ ಸಾಮಾನ್ಯ ಆಡಳಿತದಲ್ಲಿ 'ಪಾರದರ್ಶಕತೆ ಕಾಯ್ದೆ' ಮತ್ತು 'ಮಾಹಿತಿ ಕಾಯ್ದೆ' ಗಳನ್ನು ಜಾರಿಗೆ ತಂದ ರಾಜ್ಯ ಕರ್ನಾಟಕ. ಸಾಮಾನ್ಯ ಮನುಷ್ಯ ಕೂಡ ಸರ್ಕಾರಿ ದಾಖಲೆಗಳನ್ನು ಪಡೆಯಬಲ್ಲಂತಹ ಅವಕಾಶ ಕಲ್ಪಿಸಿ ಅವನಿಗೆ ಪ್ರಶ್ನಿಸುವ ಸಾಮರ್ಥ್ಯ ತಂದುಕೊಟ್ಟ ಸರ್ಕಾರದ ಕಾರ್ಯಕ್ರಮವನ್ನು ಸಾಮಾನ್ಯ ಮನುಷ್ಯನಿಗೆ ತಿಳಿಹೇಳುವ ಕೆಲಸವಾದಾಗ ಮಾತ್ರ ಈ ಕಾಯ್ದೆಗಳ ಸಾರ್ಥಕತೆ ಸಾಧ್ಯವಾಗತ್ತದೆ. ಇದನ್ನು ತುಂಬ ಸಮರ್ಥವಾಗಿ ವಾರ್ತಾ ಇಲಾಖೆ ನಿರ್ವಹಿಸಿದೆ.

ಈಚಿನ ದಿನಗಳಲ್ಲಿ ಅಂತರರಾಷ್ಟ್ರೀಯ ಮಾನ್ಯತೆ ಪಡೆದ 'ಭೂಮಿ' ಯೋಜನೆಯ ಯಶಸ್ಸು ಕೂಡ ವಾರ್ತಾ ಇಲಾಖೆಯ ಪ್ರಕಟಣೆ ಮತ್ತು ಪ್ರಚಾರದ ಫಲವಾಗಿದೆ.

ಸಂಗೀತ ನಾಟಕ ವಿಭಾಗವನ್ನು ರಾಷ್ಟ್ರದಲ್ಲಿಯೇ ಮೊದಲ ಬಾರಿಗೆ ವಾರ್ತಾ ಇಲಾಖೆಯ ಭಾಗವನ್ನಾಗಿಸಿ, ಬಹು ಜನಪ್ರಿಯವಾದ ಸಂಗೀತ - ನಾಟಕಗಳ ಮೂಲಕ ಪ್ರಚಾರಕ್ಕೆ ತೊಡಗಿಸಿದ್ದು ಕರ್ನಾಟಕದ ವಾರ್ತಾ ಇಲಾಖೆ.

ಜನಪದ ಕಲೆಗಳಿಗೆ ಈ ವಿಭಾಗ ಯಾವ ರೀತಿಯ ಅಭಿವ್ಯಕ್ತ ವೇದಿಕೆಯಾಯಿತೆಂದರೆ, ಪ್ರಸಾರ ಮತ್ತು ಜನಪದ ಮಾಧ್ಯಮದ ಬೆಳವಣಿಗೆ ಇವೆರಡನ್ನೂ ಒಟ್ಟಿಗೇ ಸಾಧಿಸುವಂತಹ ಕೆಲಸವು ಇಲ್ಲಾಯಿತು. ತುಮಕೂರು ಜಿಲ್ಲೆಯ ತುರುವೇಕೆರೆ ತಾಲ್ಲೂಕಿನ ಸೋಮನ ಕುಣಿತಕ್ಕೆ ರಾಜ್ಯವ್ಯಾಪಿ ಮಾನ್ಯತೆಯನ್ನು ಗಳಿಸಿಕೊಟ್ಟಂತೆಯೇ ನಾಡಿನ ಇತರ ಜನಪದ ಪ್ರಕಾರಗಳಾದ ಲಾವಣಿ, ಹರಿಕಥೆ, ಗಮಕ ಇತ್ಯಾದಿಗಳಿಗೂ ಮನ್ನಣೆ ಸಿಗುವಂತಾಯಿತು. ಜನರ ನಡುವೆ ಅರಳುವ ಈ ಮಾಧ್ಯಮಗಳು ಮತ್ತು ಜನರ ಮೇಲೆ ಗಾಢ ಪ್ರಭಾವ ಬೀರಬಲ್ಲ ನಾಟಕದಂತಹ ಮಾಧ್ಯಮವನ್ನೂ ವಾರ್ತಾ ಪ್ರಚಾರಕ್ಕಾಗಿ ಬಳಸಿಕೊಂಡದ್ದು ವಾರ್ತಾ ಇಲಾಖೆ. ಇಲಾಖೆಗೆಂದೇ ಅನೇಕ ಸಾಹಿತಿಗಳು ನಾಟಕಗಳನ್ನು ರಚಿಸಿಕೊಟ್ಟರು. ಯಮುನಾ ಮೂರ್ತಿ, ಟಿ. ಸುನಂದಮ್ಮ, ದಾಶರಥಿ ದೀಕ್ಷಿತ್, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಗೊ.ರು.ಚ. ಹೀಗೆ ಇನ್ನೂ ಅನೇಕ ಕನ್ನಡ ಸಾಹಿತ್ಯ ದಿಗ್ಗಜರು ವಾರ್ತಾ ಇಲಾಖೆಯ ನಾಟಕಗಳನ್ನು ಬರೆದರು. ಅವು ನಾಡಿನ ಎಲ್ಲ ಮೂಲೆಗಳಿಗೂ ತಲುಪುವಂತಾಯಿತು. ವಾರ್ತಾ ಇಲಾಖೆಯ ಸಂಗೀತ ನಾಟಕ ವಿಭಾಗ ಲೋಕೇಶ್, ಸಿ.ಆರ್. ಸಿಂಹ, ಉಮಾ ಶಿವಕುಮಾರ್, ಆರ್. ನಾಗೇಶ್, ಶ್ರೀನಿವಾಸ ಕಪ್ಪಣ್ಣ, ಮೊದಲಾದ ಹೆಸರಾಂತ ಕಲಾವಿದರ ಚಿಮ್ಮುವೇದಿಕೆಯಾದುದಷ್ಟೇ ಅಲ್ಲ, ಈ ವಿಭಾಗ ವಾರ್ತಾ ಪ್ರಚಾರದ ಹಾದಿಯಲ್ಲಿ ಅದ್ವಿತೀಯ ದಾಖಲೆಗಳನ್ನು ಸೃಜಿಸುವಲ್ಲಿಯೂ ಯಶಸ್ವಿಯಾಯಿತು. ಅನೇಕ ಹಿರಿಯ ಅಧಿಕಾರಿಗಳು ವಾರ್ತಾ ಇಲಾಖೆಯ ಮುನ್ನಡೆ ಮತ್ತು ಮಹತ್ವದ ಕಾಣಿಕೆಗೆ ಕಾರಣಕರ್ತರಾದರು. ವಾರ್ತಾ ಇಲಾಖೆ ಜನಪದ ಕಲಾವಿದರ ಸಮ್ಮೇಳನಗಳನ್ನೇ ಆಯೋಜಿಸುತ್ತಿತ್ತು.

ಸಂಗೀತ ನಾಟಕ ವಿಭಾಗ ರಾಷ್ಟ್ರದ ವಿವಿಧ ರಾಜಧಾನಿಗಳಲ್ಲಿ ಏರ್ಪಡಿಸುತ್ತಿದ್ದ ನಾಟಕೋತ್ಸವಗಳು ಕರ್ನಾಟಕವನ್ನು ದೇಶದ ವಿವಿಧ ಮೂಲೆಗಳಿಗೆ ಪರಿಚಯಿಸಲು ಕಾರಣವಾದರೆ, ಸ್ಥಳೀಯವಾಗಿ ಸಂಘಟಿಸುತ್ತಿದ್ದ ನಾಟಕ ಪ್ರದರ್ಶನಗಳು ಅಸ್ಪೃಶ್ಯತೆ, ವರದಕ್ಷಿಣೆ, ಅನಕ್ಷರತೆ, ಮೂಢನಂಬಿಕೆಗಳು ಮೊದಲಾದ ಸಾಮಾಜಿಕ ಪಿಡುಗುಗಳ ವಿರುದ್ಧ ತುಂಬ ಪ್ರಬಲವಾದ ಸಮರವನ್ನೇ ಸಾರಿ ಜಯಗಳಿಸುವಲ್ಲಿ ಯಶಸ್ವಿಯಾಗಿದ್ದವು.

ಕ್ಷೇತ್ರಪ್ರಚಾರ ಘಟಕದ ವತಿಯಿಂದ ಜಿಲ್ಲಾ ಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟಗಳಲ್ಲಿ ಏರ್ಪಡಿಸಲಾಗುತ್ತಿದ್ದ ವಿಶೇಷ ಪ್ರಚಾರಾಂದೋಲನಗಳು, ಸರ್ಕಾರದ ಸಾಧನೆಗಳನ್ನು ತಳಮಟ್ಟದ ಜನರಿಗೂ ಮುಟ್ಟಿಸಬಲ್ಲ ಮಾಧ್ಯಮಗಳಾಗಿದ್ದುವು, ಜನಜಾಗೃತಿ ಉಂಟುಮಾಡುವ ಪರಿಕರಗಳಾಗಿದ್ದವು. ಇಲಾಖೆ ನಿರ್ಮಿಸಿ ಪ್ರದರ್ಶಿಸುತ್ತಿದ್ದ ಚಲನಚಿತ್ರಗಳು ಗ್ರಾಮೀಣ ಪ್ರದೇಶಗಳಲ್ಲಿ ಸಾಮಾಜಿಕ ಜಾಗೃತಿಯ ಕೆಲಸ ನಿರ್ವಹಿಸುತ್ತಿದ್ದವು.

ವಾರ್ತಾ ಇಲಾಖೆ ಹೀಗೆ ಲಭ್ಯವಿರುವ ಎಲ್ಲ ಮಾಧ್ಯಮಗಳನ್ನು ನಾಡಿನಭ್ಯುದಯದ ನಿಟ್ಟಿನಲ್ಲಿ ಸಮರ್ಥವಾಗಿ ದುಡಿಸಿಕೊಂಡ ಒಂದು ಮಾದರಿ ಇಲಾಖೆಯಾಗಿದೆ. ಮುಂದುವರೆದ ತಾಂತ್ರಿಕತೆಯಾದ ಟೆಲಿವಿಷನ್ ಮತ್ತು ವಿಡಿಯೋವನ್ನು ಕೂಡ ವಾರ್ತಾ

ಇಲಾಖೆ ಸಮರ್ಥವಾಗಿ ಬಳಸಿಕೊಂಡಿದೆ. ರೇಡಿಯೋದೊಡನೆ ಪ್ರಾರಂಭವಾದ ಎಲೆಕ್ಟ್ರಾನಿಕ್ ಮಾಧ್ಯಮದೊಡನೆ ಅದರ ನಂಟು ಇದೀಗ ಅಷ್ಟು ಪ್ರಬಲವಾಗಿರದಿದ್ದರೂ-ವಾರ್ತಾ ಇಲಾಖೆಯ CORRF ಗಳು ಅಂದರೆ ಕಮ್ಯುನಿಟಿ ರೇಡಿಯೋ ರೂರಲ್ ಫೋರಂಗಳು ಹಾಗೂ ಗ್ರಾಮೀಣ ರೇಡಿಯೋ ವಿಭಾಗ ಸ್ವಾತಂತ್ರ್ಯೋತ್ತರ ನಾಡ ಪ್ರಗತಿಯಲ್ಲಿ ವಹಿಸಿದ ಪಾತ್ರ ತುಂಬ ಮಹತ್ವದ್ದು. ಆದರೀಗ ವಾರ್ತಾ ಇಲಾಖೆಯ ಗ್ರಾಮಾಂತರ ರೇಡಿಯೋ ವಿಭಾಗ ಮುಚ್ಚಿದೆ-ಮಹತ್ವದ್ದಂತೂ ಆಗಿದ್ದುದು ನಿಜ.

## ಒಂದು ಪುನರಾವಲೋಕನ :

ವಾರ್ತಾ ಇಲಾಖೆಯ ಮಹತ್ವ ಇಂದಿನ ದಿನಗಳಲ್ಲಿ ಕಡಿಮೆಯಾಗಿದೆಯೇ? ಗ್ರಾಮೀಣಾಭಿವೃದ್ಧಿ ಕ್ಲೀಷೆಯಾಗುತ್ತ ನಡೆದಿದೆಯೇ? ವಾರ್ತಾ ಇಲಾಖೆಯ ಪೂರ್ಣ ಸಾಮರ್ಥ್ಯ ಬಳಕೆಯಾಗುತ್ತಿಲ್ಲವೆ? ಎಂಬ ಪ್ರಶ್ನೆಗಳು ಏಳುವುದು ಸಹಜ.

ಅಧಿಕಾರ ವಿಕೇಂದ್ರೀಕರಣ ಗಹನವಾಗುತ್ತ ನಡೆದಿರುವ ಈ ಸಮಯದಲ್ಲಿ ವಾರ್ತಾ ಇಲಾಖೆಯ ಪ್ರಾಮುಖ್ಯತೆ ಇಂದು ಹಿಂದೆಂದಿಗಿಂತಲೂ ಹೆಚ್ಚಿರುವುದಂತೂ ನಿಜ. ಈಗ ಜನಜಾಗೃತಿಯ ವ್ಯಾಖ್ಯೆ ಮತ್ತು ವ್ಯಾಪ್ತಿ ಇನ್ನಷ್ಟು ವಿಸ್ತೃತವಾಗಿದೆ. ಅನೇಕ ಹೊಸ ವಿಷಯಗಳ ಪರಿಕಲ್ಪನೆ - ಪಡಿಮೂಡುತ್ತಾ ಬಂದಿದೆ. ಮಳೆಕುಯ್ಲು, ಸಾವಯವ ಕೃಷಿ, ಪರಿಸರ ಸಂರಕ್ಷಣೆ, ಅಂತರ್ಜಲ ಸಂಪತ್ತಿನ ರಕ್ಷಣೆ, ಪಶುಸಂಗೋಪನೆ, ಪುಷ್ಪ ಕೃಷಿ, ಆಹಾರ ಸಂರಕ್ಷಣೆ, ಕೂಡು ಮಾರಾಟ ಪದ್ಧತಿ ಮೊದಲಾದ ಕ್ಷೇತ್ರಗಳಲ್ಲಿ ಪ್ರಚಾರ ಮತ್ತು ವಾರ್ತಾ ಸಂವಹನದ ಕೆಲಸ ಗಣನೀಯ ಅವಶ್ಯಕತೆಗಳಾಗಿವೆ. ಅತ್ಯಂತ ಪ್ರಭಾವಿ ಹಾಗೂ ಪ್ರಬಲ ಮಾಧ್ಯಮವಾದ ಟಿ.ವಿ. ಇಂದು ನಮ್ಮ ಅಳವಿನಲ್ಲಿದೆ. ನಮ್ಮ ಸಾಂಘಿಕ ವ್ಯವಸ್ಥೆಯನ್ನು ಜನಪ್ರಗತಿಗೆಂದು ಇನ್ನೂ ಪರಿಣಾಮಕಾರಿಯಾಗಿ ಹೇಗೆ ದುಡಿಸಿಕೊಳ್ಳಬಹುದು ಎನ್ನುವ ಅರಿವು ನಮಗಿದೆ.

ಸೀಮಿತ ಜ್ಞಾನದ ಪರಿಧಿಯಲ್ಲೇ ಅಸಾಮಾನ್ಯ ಸಾಧನೆಗೈದ ವಾರ್ತಾ ಇಲಾಖೆ ಇಂದು ನಮಗೆ ಲಭ್ಯವಿರುವ ಅಪರಿಮಿತ ಅವಕಾಶಗಳನ್ನು ಮತ್ತಷ್ಟು ಹೆಚ್ಚು ಪರಿಣಾಮಕಾರಿಯಾಗಿ ಬಳಸಿಕೊಳ್ಳಬೇಕಾದ ಅಗತ್ಯವಿದೆ.

ಎಲೆಕ್ಟ್ರಾನಿಕ್ ಮೀಡಿಯಾದ ಕೈಗೆ ಜನವನ್ನು, ಜನಹಿತವನ್ನು ಒಪ್ಪಿಸಿದಂತಾಗಿರುವ ಈ ದಿನಗಳಲ್ಲಿ ಈ ಮಾಧ್ಯಮವನ್ನು ವಿಚಕ್ಷಣೆಯಿಂದ ನಡೆಸಿಕೊಂಡು ದುಡಿಸಿಕೊಳ್ಳಬೇಕಾದ ಅವಶ್ಯಕತೆ ಸೃಷ್ಟಿಯಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಬದಲಿಸುತ್ತಿರುವ ಕಾಲಮಾನಕ್ಕೆ ತಕ್ಕಂತೆ, ಗ್ರಾಮೀಣರನ್ನು ಒಳಗೊಂಡು ಅವರುಗಳ ಅಸ್ತಿತ್ವದ ಸಂಕೇತಗಳನ್ನು ಬಳಸಿಕೊಂಡ ಪ್ರಗತಿಯತ್ತ ಮುನ್ನಡೆಯಬೇಕಾದ್ದು ಅಗತ್ಯವಾಗಿದೆ.

ಈ ಹಿನ್ನೆಲೆಯಲ್ಲಿ 'ವಾರ್ತಾ ಇಲಾಖೆ' ತುಂಬ ಗುರುತರವಾದ, ಜವಾಬ್ದಾರಿಯುತ ಪಾತ್ರ ವಹಿಸಲೇಬೇಕಾಗಿದೆ. ಇದಕ್ಕಾಗಿ ಇಲಾಖೆಯನ್ನು ಸಜ್ಜುಗೊಳಿಸಬೇಕು. ತಾಂತ್ರಿಕ ಕೌಶಲ್ಯ, ಸಿಬ್ಬಂದಿ ಶಕ್ತಿ ಇವುಗಳನ್ನು ವೃದ್ಧಿಸಿ ಇಲಾಖೆಯನ್ನು ಬಲಪಡಿಸಬೇಕಾಗಿದೆ. ಮಾಹಿತಿ ಪ್ರಸರಣ ಕೇವಲ ಕೇಂದ್ರೀಕೃತ ವ್ಯವಸ್ಥೆಯಿಂದ ಸಾಧ್ಯವಾಗಲಾರದು. ಅದಕ್ಕೆ ರಾಜ್ಯದ ತುಂಬ ಹರಡಿದ ವಿಶಾಲ ಆದರೆ ದೃಢವಾದ ಚೌಕಟ್ಟಿನದೊಂದು ಅಗತ್ಯವಿದೆ. ಇದನ್ನು ನಾವು ಮನಗಾಣಬೇಕಾಗಿದೆ.

ಪ್ರತಿ ತಾಲ್ಲೂಕು ಮಟ್ಟದಲ್ಲಿಯೂ ಸುಸಜ್ಜಿತವಾದ ವಾರ್ತಾ ಘಟಕ, ತರಬೇತಿ ಪಡೆದ ವಾರ್ತಾಧಿಕಾರಿ ಮತ್ತು ಸೂಕ್ತ ಸಿಬ್ಬಂದಿಯಿಂದ ವಾರ್ತಾ ಜಾಲವನ್ನು ರಾಜ್ಯದಾದ್ಯಂತ ಬಲಪಡಿಸಬೇಕಾದ್ದು ಇಂದಿನ ಅನಿವಾರ್ಯತೆಯಾಗಿದೆ.

(ನೆರವು : ರಮೇಶ ಎನ್., ವಾರ್ತಾ ಇಲಾಖೆ)

●




# ಕನ್ನಡ ಚಲನಚಿತ್ರರಂಗ

ಎನ್. ಜಗನ್ನಾಥ ಪ್ರಕಾಶ್

## ಕನ್ನಡ ಚಿತ್ರಗಳಲ್ಲಿ ಪಚ್ಚೆಪೈರು :

ಚಲಿಸುವ ಚಿತ್ರ ಚಲನಚಿತ್ರ ಕಲೆ ಹಾಗೂ ವಿಜ್ಞಾನಗಳ ಸಂಗಮ. ವಾಕ್ಚಿತ್ರದ ಆವಿಷ್ಕಾರವಂತೂ ೨೦ನೇ ಶತಮಾನದ ವಿಸ್ಮಯಾದ್ಭುತ. ಜಗತ್ತಿನ ಅತ್ಯಂತ ಪ್ರಭಾವಶಾಲಿ ಸಂವಹನ ಮಾಧ್ಯಮವಾದ ಚಲನಚಿತ್ರ ಇಂದು ಸಮಾಜದ ಅವಿಭಾಜ್ಯ ಅಂಗ.

ಆರಂಭದಲ್ಲಿ ರಂಜನೆಗಾಗಿ ಸಿದ್ಧಗೊಳ್ಳುತ್ತಿದ್ದ ಚಲನಚಿತ್ರ ಕ್ರಮೇಣ ಕಲಾತ್ಮಕವಾಗಿ, ಶೈಕ್ಷಣಿಕವಾಗಿ ಉಪಯೋಗಿಸಲಾಗುತ್ತಿದೆ. ಒಂದು ನೂರು ವರ್ಷಗಳಿಗೂ ಹೆಚ್ಚು ಕಾಲದಿಂದ ಜಾಗತಿಕ ಏಳುಬೀಳುಗಳಲ್ಲಿ ಸಾಗಿ ಬಂದಿರುವ ಚಲನಚಿತ್ರ ಕಂಡುಕೊಂಡ ವೈಜ್ಞಾನಿಕ ಮುನ್ನಡೆ ನಿರಂತರ.

ಮನರಂಜನೆಯ ಮಾಧ್ಯಮವೆನ್ನಿಸಿಕೊಂಡ ಚಲನಚಿತ್ರ ಇದೀಗ ಬೃಹತ್ ಉದ್ಯಮಗಳಲ್ಲೊಂದು. ಅಪಾರ ಬಂಡವಾಳ ಬೇಡುವ ಈ ಉದ್ದಿಮೆ ಸೃಷ್ಟಿಸಿರುವ ಉದ್ಯೋಗಾವಕಾಶಗಳು ಅಪರಿಮಿತ.

> *ಗ್ರಾಮೀಣಾಭಿವೃದ್ಧಿಯ ಕನಸು ಪ್ರಧಾನವಾಹಿನಿಯ ಚಿತ್ರಗಳ ನಡುವೆ ಕಾಣಿಸಿಕೊಂಡಿದ್ದು ಅಪರೂಪ. ಗ್ರಾಮದ ಒಳಪದರುಗಳಿಗೆ ಇಳಿದ ಚಿತ್ರಗಳಂತೂ ಬಹಳ ಕಡಿಮೆ. ಗ್ರಾಮದ ಏಳಿಗೆ ಬಹುತೇಕ ಚಿತ್ರಗಳ ಆದರ್ಶವಾದರೂ ಅವುಗಳನ್ನು ಪೂರ್ಣವಾಗಿ ಪೋಷಿಸುವ ಕೆಲಸ ಕನ್ನಡ ಚಿತ್ರರಂಗದಲ್ಲಿ ಆಗಿಲ್ಲ.*

## ಉಗಮ :

ಪ್ರಪ್ರಥಮವಾಗಿ ಚಲನಚಿತ್ರದ ಉದಯವಾಗಿದ್ದು ೧೮೯೫ರಲ್ಲಿ. ಅದು ಮಾತಿಲ್ಲದ ಚಲನಚಿತ್ರ. ಇದಾಗಿ ಒಂದು ದಶಕದ ನಂತರ ಚಲಿಸುವ ಚಿತ್ರದೊಂದಿಗೆ ಮಾತೂ ಸೇರಿತು. ಹಾಡು ಸಂಗೀತವೂ ಅದರೊಂದಿಗೆ ಸೇರಿಕೊಂಡಿತು. ಈ ವಿಶ್ವದ ವಿದ್ಯಮಾನಗಳಿಗೆ ಎಲ್ಲ ದೇಶಗಳಂತೆ ಭಾರತವೂ ಸ್ಪಂದಿಸಿತು. ಆಗ ಚಲನಚಿತ್ರ ಜನರ ಬಾಯಲ್ಲಿ ಬಯಾಸ್ಕೋಪ್ ಎಂದೇ ಪ್ರಚಲಿತ. ಮೂಕಿ ಯುಗ ಮುಗಿದು ಮಾತಿನ ಯುಗ ಪ್ರಾರಂಭವಾದಾಗ ಅದರಲ್ಲಿ ಮೂಡಿಬಂದಿದ್ದು ಆಗಿನ ಕಾಲದ ನಾಟಕಗಳೇ.

ಭಾರತದೆಲ್ಲೆಡೆಯಂತೆ ಕರ್ನಾಟಕದಲ್ಲೂ ನಾಟಕಗಳೇ ಮನರಂಜನೆಯ ಮಾಧ್ಯಮ. ೧೯೨೧ರ ಸುಮಾರಿಗೆ ಕನ್ನಡ ನಾಡಲ್ಲೂ ಕಾಲಿಟ್ಟ ಬಯಾಸ್ಕೋಪ್ ಮೊದಮೊದಲಿಗೆ ಒಳಗೊಂಡಿದ್ದೂ ಜನಪ್ರಿಯ ನಾಟಕಗಳನ್ನೇ. ಬಹುತೇಕ ಆ ನಾಟಕಗಳಿಗೆಲ್ಲ ಆಧಾರ ಪೌರಾಣಿಕ, ಜಾನಪದ ಹಾಗೂ ಐತಿಹಾಸಿಕ ಅಂಶಗಳೇ. ಜೊತೆಗೆ ಆಂಗ್ಲ ನಾಟಕಗಳಿಂದ ಅನುವಾದಗೊಂಡ ವಿಷಯಗಳು. ಇದೇ ನಾಟಕಗಳೇ ಬಯಾಸ್ಕೋಪ್‌ನಲ್ಲಿ ಮೂಡಿಬಂದವು.

## ಮೊದಲ ಚಿತ್ರ :

'ಸತಿ ಸುಲೋಚನ' ಕನ್ನಡದಲ್ಲಿ ಬಿಡುಗಡೆಗೊಂಡ ಮೊಟ್ಟಮೊದಲ ವಾಕ್ಚಿತ್ರ. ಆದರೆ ಕನ್ನಡದಲ್ಲಿ ಪ್ರಪ್ರಥಮವಾಗಿ ಚಿತ್ರೀಕರಣ ಆರಂಭಿಸಿದ ವಾಕ್ಚಿತ್ರ 'ಭಕ್ತ ಧ್ರುವ' (ಧ್ರುವಕುಮಾರ). ೧೯೩೪ರಲ್ಲಿ ವಾಕ್ಚಿತ್ರ ಇತಿಹಾಸಕ್ಕೆ ಸೇರ್ಪಡೆಯಾದ ಕನ್ನಡ ಚಿತ್ರರಂಗದ ಆರಂಭಿಕ ಹೆಜ್ಜೆಗಳು ಮಂದಗತಿಯಲ್ಲೇ ಸಾಗಿದವು. ಇದಾದ ಹತ್ತು ವರ್ಷಗಳಲ್ಲಿ ತಯಾರಾದ ಚಿತ್ರಗಳು ಕೇವಲ ೧೬ ಮಾತ್ರ. (ಸತಿ ಸುಲೋಚನ, ಭಕ್ತ ಧ್ರುವ, ಸದಾರಮೆ, ಸಂಸಾರನೌಕೆ, ಚಿರಂಜೀವಿ, ಪುರಂದರದಾಸ, ರಾಜಸೂಯಯಾಗ, ಸುಭದ್ರಾ, ವಸಂತಸೇನಾ, ಜೀವನ ನಾಟಕ, ಪ್ರಹ್ಲಾದ, ಹರಿಶ್ಚಂದ್ರ, ಕೃಷ್ಣಸುಧಾಮ, ರಾಧಾರಮಣ, ವಾಣಿ, ಹೇಮರೆಡ್ಡಿ ಮಲ್ಲಮ್ಮ). ಈ ಮಧ್ಯೆ ಮೂರು ವರ್ಷ(೧೯೩೮-೩೯ ಹಾಗೂ ೪೦)ಗಳಲ್ಲಿ ಒಂದು ಕನ್ನಡ ಚಿತ್ರವೂ ಬಿಡುಗಡೆಯಾಗಲಿಲ್ಲ.

ನಾಟಕಗಳು ಬದುಕಿನ ಪ್ರತಿಬಿಂಬ ಎನ್ನುವುದಿದೆ. ಪೌರಾಣಿಕ, ಜಾನಪದ, ಕಥನಗಳನ್ನು ಆಧರಿಸಿದ ನಾಟಕಗಳೇ ಚಲನಚಿತ್ರಗಳಲ್ಲಿ ಕಾಣಿಸಿಕೊಂಡವು. ಇವುಗಳೊಂದಿಗೆ ಭಕ್ತಿಪ್ರಧಾನ ವಿಷಯಗಳೂ ಕ್ರಮೇಣ ಸೇರಿಕೊಂಡವು. ಇವುಗಳ ನಡುವೆ ಸಾಮಾಜಿಕ ವಿಷಯಾಧಾರಿತ 'ಸಂಸಾರ ನೌಕೆ' ತೆರೆ ಕಂಡಿತು. ಇದು ಕನ್ನಡ ಚಿತ್ರರಂಗದ ಮೊದಲ ಸಾಂಸಾರಿಕ ಚಿತ್ರ. ಇದು ಕೂಡ ಜನಪ್ರಿಯ ನಾಟಕವೇ.

## ನಾಡಿನ ದಿಕ್ಸೂಚಿ :

ಭಾರತ ಹಳ್ಳಿಗಳ ರಾಷ್ಟ್ರ. ಗ್ರಾಮಗಳೇ ನಮ್ಮ ದೇಶದ ಪ್ರಮುಖ ಆರ್ಥಿಕ ಕೇಂದ್ರ. ಬೇಸಾಯವೇ ನಮ್ಮೀ ನಾಡಿನ ಪ್ರಧಾನ ಕಸುಬು. ಹಳ್ಳಿಗಾಡಿನ ನೋವು ನಲಿವುಗಳೇ ನಾಡಿನ ದಿಕ್ಸೂಚಿ. ಆದರೂ ಗ್ರಾಮಘಟನೆಗಳನ್ನು ಆಧರಿಸಿದ ಯಾವ ಚಿತ್ರವೂ ಕನ್ನಡದಲ್ಲಾಗ ತಯಾರಾಗಲಿಲ್ಲ.

ಚಲನಚಿತ್ರಗಳು ಕನಸುಗಳನ್ನು ಮಾರಾಟ ಮಾಡುವ ಸಾಧನಗಳೆಂದು ಹೇಳುವುದುಂಟು. ಹಾಗೆಂದ ಮಾತ್ರಕ್ಕೆ ನಿಜಜೀವನದ ಸಂಗತಿಗಳು ಅದರಲ್ಲಿ ಪ್ರತಿಬಿಂಬಿತವಾಗುವುದಿಲ್ಲವೆನ್ನುವಂತಿಲ್ಲ. ಆದರೆ ಅಂತಹ ಸನ್ನಿವೇಶಗಳು ಬಹಳ ಅಪರೂಪ. ರಂಜನೆಯೇ ಪ್ರಧಾನವಾಗಿದ್ದ ನಾಟಕಗಳಂತೆ ಚಲನಚಿತ್ರಗಳೂ ಅದೇ ಜಾಡು ಹಿಡಿದು ತಾಂತ್ರಿಕತೆಯೊಂದಿಗೆ ನಡೆದವು. ಹೀಗಾದರೂ ಗ್ರಾಮೀಣ ಅಂಶಗಳಿಗೆ ಒತ್ತುಕೊಡುವ ಹೂರಣವಿರುವ ಚಲನಚಿತ್ರಗಳು ತೀರಾ ಕಡಿಮೆ ಎಂದೇ ಹೇಳಬೇಕು.

## ಗ್ರಾಮಮುಖಿ :

ಕನ್ನಡ ಚಿತ್ರರಂಗ ಗ್ರಾಮಮುಖಿಯಾಗಿ ಮೊದಲ ಬಾರಿ ನಿಂತಿದ್ದು ೧೯೫೩ರಲ್ಲಿ. ಅದೂ 'ಸೌಭಾಗ್ಯಲಕ್ಷ್ಮಿ' ಚಿತ್ರದ ಮೂಲಕ. ಬಿ. ವಿಠಲಾಚಾರ್ಯ ಅವರ ನಿರ್ದೇಶನವಿದ್ದ ಸೌಭಾಗ್ಯಲಕ್ಷ್ಮಿ ಚಿತ್ರದಲ್ಲಿ ಪಟ್ಟಣದ ಹುಡುಗ ಹಳ್ಳಿಗೆ ಬಂದು, ಹಳ್ಳಿಯ ಬಡ ಯುವತಿಯನ್ನು ಪ್ರೇಮಿಸಿ ಮದುವೆಯಾಗುತ್ತಾನೆ. ಹಳ್ಳಿ-ಪಟ್ಟಣ ನಡುವೆ ಇಂತಹದ್ದೊಂದು ಪುಟ್ಟ ಎಳೆ ಬಿಟ್ಟರೆ ಉಳಿದಂತೆ ಎಲ್ಲವೂ ಸಾಮಾನ್ಯ ಚಿತ್ರಗಳಂತಿದೆ.

ಹಳ್ಳಿಗಳ ಅಭ್ಯುದಯವಾದರೆ ಈ ನಾಡು ಸಮೃದ್ಧಿಯಾಗುತ್ತದೆ ಎನ್ನುವುದು ಪೂಜ್ಯ ಗಾಂಧೀಜಿ ಅವರ ಸ್ಪಷ್ಟ ಅಭಿಪ್ರಾಯ. ಗ್ರಾಮಗಳ ಏಳಿಗೆಗೆ ಬಾಪು ತೋರಿದ ಹಾದಿಯನ್ನು ಸಮರ್ಥವಾಗಿ ಚಲನಚಿತ್ರಗಳಲ್ಲಿ ಬಿಂಬಿಸಿದ ಉದಾಹರಣೆಗಳು ಬಹಳ ವಿರಳ. ಆದರೆ ಚಿತ್ರಕಥೆಗೆ, ಆಯಾ ಸನ್ನಿವೇಶಗಳಿಗೆ ತಕ್ಕಂತೆ ಗ್ರಾಮೀಣಾಭಿವೃದ್ಧಿ ಅಂಶಗಳನ್ನು ಅಳವಡಿಸಿಕೊಂಡ ಅಂಶಗಳು ಸಾಕಷ್ಟಿವೆ. ರೈತನನ್ನು ಆದರ್ಶವಾಗಿ ಉಪಯೋಗಿಸಿಕೊಂಡ ಚಿತ್ರಗಳೂ ಇವೆ.

## ಆದರ್ಶಪ್ರಾಯ :

ಗಾಳಿಗೋಪುರ (೧೯೬೨) ಚಿತ್ರದಲ್ಲಿ ಗೋವಿಂದಯ್ಯನ ಪಾತ್ರಧಾರಿ ಗೆಳೆಯನ ಹಣದಿಂದ ತನ್ನ ಮಗನಿಗೆ ವಿದ್ಯೆ ಕಲಿಸುತ್ತಾನೆ. ಗೆಳೆಯನ ಮಗನನ್ನು ರೈತನನ್ನಾಗಿ ಬೆಳೆಸುತ್ತಾನೆ. ಆದರೆ ರೈತನಾಗಿದ್ದ ಸಾಕು ಮಗನೇ ಗೋವಿಂದಯ್ಯನ ನೆರವಿಗೆ ಬಂದು ಆದರ್ಶಪ್ರಾಯನಾಗಿ ನಿಲ್ಲುತ್ತಾನೆ.

ಗ್ರಾಮ ಬದುಕಿನ ಒಳಿತು ಕೆಡುಕಿನ ವಿಷಯಗಳನ್ನು ಚಿತ್ರಗಳಲ್ಲಿ ಅಳವಡಿಸಿ ಒರೆಗಲ್ಲಿಗೆ ಹಚ್ಚುವ ಪ್ರಯತ್ನಗಳು ಆಗೀಗ ಕನ್ನಡ ಚಿತ್ರರಂಗದಲ್ಲಿ ನಡೆದಿವೆ. ೧೯೫೦-೬೦ರ ದಶಕಗಳು ವಿನೋಬಾ ಭಾವೆ ಅವರ ಭೂದಾನ ಚಳವಳಿ ದೇಶದ ತುಂಬಾ ಪ್ರತಿಧ್ವನಿಸುತ್ತಿದ್ದ ಕಾಲ. ಈ ಚಳವಳಿಯ ಪ್ರೇರಣೆಯಿಂದ ಸಿದ್ಧಗೊಂಡ ಭೂದಾನ (ನಿರ್ದೇಶನ ಪಿ.ಎಸ್. ಗೋಪಾಲಕೃಷ್ಣ, ಜಿ.ವಿ. ಅಯ್ಯರ್) ಕನ್ನಡದ ಖ್ಯಾತ ನಾಯಕ ನಟರಾದ ರಾಜ್‌ಕುಮಾರ್, ಉದಯಕುಮಾರ್ ಹಾಗೂ ಕಲ್ಯಾಣ್‌ಕುಮಾರ್ ಅವರುಗಳು ಒಟ್ಟಾಗಿ ಅಭಿನಯಿಸಿದ್ದ ಏಕೈಕ ಚಿತ್ರ. ಜೀತ ಸಮಸ್ಯೆಯ ಮೇಲೆ ಬೆಳಕು ಚೆಲ್ಲುವ 'ಭೂದಾನ' ಚಿತ್ರ ವಿನೋಬಾ ಅವರ ಆಶಯಗಳಿಗೆ ಪೂರಕವಾಗಿ ರೂಪುಗೊಂಡಿದೆ.

## ಬಾಪು ತತ್ತ್ವ :

ನಿಜವಾದ ಸುಖ ಇರುವುದು ಹಳ್ಳಿಗಳಲ್ಲೇ ಎಂದು ಪ್ರತಿಪಾದಿಸುವ 'ನಮ್ಮಊರು' (೧೯೬೮) ಗಾಂಧೀಜಿಯವರ ತತ್ತ್ವಗಳ ಮೇಲೆ ತಯಾರಾದ ಚಿತ್ರ. ಸಿ.ವಿ. ಶಿವಶಂಕರ್ ನಿರ್ದೇಶಿಸಿದ ನಮ್ಮಊರು ಗ್ರಾಮಾಂತರ ಪ್ರದೇಶಗಳಲ್ಲಿ ವಿದ್ಯಾವಂತರು ಸಮಾಜ ಸೇವೆಯಲ್ಲಿ ತೊಡಗಬೇಕೆಂದು ಪ್ರೇರೇಪಿಸುವ ಉತ್ತಮ ಸಂದರ್ಭಗಳನ್ನು ಒಳಗೊಂಡಿದೆ. ಗ್ರಾಮ ಕಲ್ಯಾಣಕ್ಕೆ ಒತ್ತುಕೊಡುವ ಅರ್ಥಪೂರ್ಣ ಹಾಡುಗಳು ಈ ಚಿತ್ರದ ಮತ್ತೊಂದು ವಿಶೇಷ

## ಮಣ್ಣಿನ ಮಗ :

ಸಿನಿಮೀಯ ಅಂಶಗಳೊಂದಿಗೆ ಅಪ್ಪಟ ಗ್ರಾಮವಿಕಾಸ ಚಿತ್ರ ತೆರೆಗಿತ್ತವರು ಗೀತಪ್ರಿಯ. ಅವರ 'ಮಣ್ಣಿನ ಮಗ' (೧೯೬೮) ತಾನು ಮಾಡದ ತಪ್ಪಿಗಾಗಿ ಜೈಲುವಾಸ ಅನುಭವಿಸುವ ರಾಜ ಬಿಡುಗಡೆಯ ನಂತರವೂ ಹಳ್ಳಿಯವರ ಅವಕೃಪೆಗೆ ಒಳಗಾಗುವ ಕಥೆಯುಳ್ಳ ಚಿತ್ರ. ರಾಜ ತನ್ನ ಭಾಗಕ್ಕೆ ಬಂದ ಬಂಜರು ಭೂಮಿಯಲ್ಲಿ ಬೆವರು ಸುರಿಸಿ ನಳನಳಿಸುವ ಬೆಳೆ ತೆಗೆದು ನೆರೆಹೊರೆಯವರು ಹುಬ್ಬೇರಿಸುವಂತೆ ಮಾಡುತ್ತಾನೆ. ಕಷ್ಟಪಟ್ಟರೆ ಫಲ ಖಂಡಿತ ಎನ್ನುವ ಧ್ಯೇಯದ ಮಣ್ಣಿನ ಮಗ ಚಿತ್ರ ಆದರ್ಶಪ್ರಾಯ ರೈತನೊಬ್ಬನನ್ನು ಕಣ್ಮುಂದೆ ನಿಲ್ಲಿಸುತ್ತದೆ. ಕೃಷಿ ಜೀವನಕ್ಕೆ ಒತ್ತು ಕೊಡುವ ಹಾಡುಗಳು ಮಣ್ಣಿನ ಮಗನನ್ನು ಇನ್ನಷ್ಟು ಶ್ರೀಮಂತಗೊಳಿಸಿವೆ.

ಹಳ್ಳಿಯಲ್ಲೇ ಹುಟ್ಟಿದ ಯುವಕನೊಬ್ಬ ಕೃಷಿ ಕಾಲೇಜಿನಲ್ಲಿ ಪದವಿ ಗಳಿಸಿ ಮತ್ತೆ ತನ್ನ ಹಳ್ಳಿಗೆ ವಾಪಸ್ಸಾಗಿ ತಾನು ಕಾಲೇಜಿನಲ್ಲಿ ಕಲಿತಿದ್ದನ್ನು ತನ್ನ ಭೂಮಿಯಲ್ಲೇ ಪ್ರಯೋಗಿಸಿ ಯಶಸ್ಸು ಪಡೆಯುವ ಚಿತ್ರ ೧೯೭೦ರಲ್ಲಿ ತೆರೆಕಂಡ 'ನಾಡಿನ ಭಾಗ್ಯ'. ಕನ್ನಡ ಚಿತ್ರರಂಗದ ದಿಗ್ಗಜರಲ್ಲಿ ಒಬ್ಬರಾದ ಆರ್. ನಾಗೇಂದ್ರರಾವ್ ಅವರು ನಿರ್ದೇಶಿಸಿದ ಈ ಚಿತ್ರದಲ್ಲಿ ನಾಯಕ ಕೃಷಿ ಕಾಲೇಜಿನಲ್ಲಿ ಪಡೆದ ಪರಿಣತಿಯನ್ನು ಇಡೀ ಹಳ್ಳಿಯ ಅಭಿವೃದ್ಧಿಗೆ ಧಾರೆ ಎರೆಯುತ್ತಾನೆ. ಕೃಷಿ ಕ್ಷೇತ್ರದಲ್ಲಿ ನಡೆಯುತ್ತಿರುವ ಆವಿಷ್ಕಾರಗಳನ್ನು ಹಳ್ಳಿಯಲ್ಲಿ ಜಾರಿಗೆ ತಂದು ಇಡೀ ಹಳ್ಳಿಯನ್ನು ಮಾದರಿ ಹಳ್ಳಿಯನ್ನಾಗಿ ರೂಪಿಸುತ್ತಾನೆ.

'ನಾಡಿನ ಭಾಗ್ಯ' ಚಿತ್ರದಲ್ಲಿ 'ಹನಿಹನಿಗೂಡಿದರೆ ಹಳ್ಳ' ನಾಡಿನ ಭಾಗ್ಯವೇ ಹಳ್ಳಿಯ ಮಕ್ಕಳು ಮೊದಲಾದ ಅರ್ಥಗರ್ಭಿತ ಹಾಡುಗಳೂ ಇವೆ. ನಾಯಕ ನಟರಾಗಿ ಹೆಸರಾದ ರಾಜ್‌ಕುಮಾರ್ ಮೊದಲ ಬಾರಿಗೆ ಈ ಚಿತ್ರದಲ್ಲಿ ವಿಶೇಷ ಗೌರವ ಪಾತ್ರಧಾರಿಯಾಗಿ ಕಾಣಿಸಿಕೊಂಡರು.

## ರೈತ ಜೀವನ :

ಆದರ್ಶಪ್ರಾಯ ರೈತನೊಬ್ಬನನ್ನು ಕಟ್ಟಿಕೊಟ್ಟ ಜನಪ್ರಿಯ ಚಿತ್ರ 'ಬಂಗಾರದ ಮನುಷ್ಯ' (೧೯೭೨). ಸಿದ್ಧಲಿಂಗಯ್ಯನವರ ದಿಗ್ದರ್ಶನದಲ್ಲಿ ಸಿದ್ಧಗೊಂಡ 'ಬಂಗಾರದ ಮನುಷ್ಯ' ರೈತ ಜೀವನವನ್ನು ಕೊಂಡಾಡುವ ಹಲವಾರು ಅಂಶಗಳನ್ನು ಒಳಗೊಂಡ ಚಿತ್ರ.

ಟಿ.ಕೆ. ರಾಮರಾವ್ ಅವರ ಕಾದಂಬರಿಯನ್ನು ಆಧರಿಸಿದ ಬಂಗಾರದ ಮನುಷ್ಯ 'ಆಗದು ಎಂದು ಕೈಲಾಗದು ಎಂದು ಕೈಕಟ್ಟಿ ಕುಳಿತರೆ...', 'ಹನಿಹನಿಗೂಡಿದ್ರೆ ಹಳ್ಳ...' ಮುಂತಾದ ಬೇಸಾಯ ಪ್ರೇರಣೆಯ ಗೀತೆಗಳನ್ನು ನಾಡೆಲ್ಲ ಪಸರಿಸಿತು. ಇದ್ದುದ್ದನ್ನು ಧಾರೆಯೆರೆದು ಕೊಟ್ಟು ಕೃಷಿಯಿಂದಲೇ ಮತ್ತೆ ಮೇಲೇರುವುದನ್ನು ಅಚ್ಚುಕಟ್ಟಾಗಿ ನಿರೂಪಿಸುವ ಬಂಗಾರದ ಮನುಷ್ಯದ ಮಾತುಗಳು ನೇರವಾಗಿ

ಮನಸ್ಸನ್ನು ತಟ್ಟುವಂಥದ್ದು (ಮಾತುಗಳು-ಹುಣಸೂರು ಕೃಷ್ಣಮೂರ್ತಿ). ಈ ಚಿತ್ರದ ರಾಜೀವಪ್ಪ, ರಾಚೂಟಪ್ಪನ ಪಾತ್ರಗಳು ಬಹುಕಾಲ ಮನಸ್ಸಿನಲ್ಲಿ ಉಳಿಯುವಂತದ್ದು. ಹಳ್ಳಿ ಅಭಿವೃದ್ಧಿಗೆ ಒತ್ತಾಸೆ ನೀಡುವಂಥದ್ದು.

**ಪರಿಣಾಮಕಾರಿ :**

ಗೀತಪ್ರಿಯ, ಸಿದ್ಧಲಿಂಗಯ್ಯ, ಸಿ.ವಿ. ಶಿವಶಂಕರ್ ಮೊದಲಾದವರು ತಮ್ಮ ಬಹಳಷ್ಟು ಚಿತ್ರಗಳಲ್ಲಿ ಗ್ರಾಮೀಣಾಭಿವೃದ್ಧಿಗೆ ಪೂರಕವಾದ ಅಂಶಗಳನ್ನು ಪ್ರತಿಬಿಂಬಿಸಿದ್ದಾರೆ. ನಾಯಕ-ನಾಯಕಿಯರ ಕಥನದ ಜೊತೆಗೆ ಕೃಷಿ, ಪಶುಸಂಗೋಪನೆ ಮೊದಲಾದ ಅಭಿವೃದ್ಧಿ ಚಟುವಟಿಕೆಗಳನ್ನು ಅಳವಡಿಸಿದರೆ ಪ್ರೇಕ್ಷಕರ ಮೇಲಾಗುವ ಪರಿಣಾಮ ಹೆಚ್ಚಿನದು ಎಂಬುದು ಇವರ ಭಾವನೆ.

ಹಿರಿಯ ನಿರ್ದೇಶಕ ಟಿ.ವಿ. ಸಿಂಗ್ ಠಾಕೂರ್ ಅವರು ೧೯೭೩ರಲ್ಲಿ ನಿರ್ದೇಶಿಸಿ ಬಿಡುಗಡೆ ಮಾಡಿದ 'ಭಾರತದ ರತ್ನ' ಗ್ರಾಮ ಸುಧಾರಣೆಗೆ ಒತ್ತುಕೊಟ್ಟ ಚಿತ್ರ. ಹಳ್ಳಿಗಳ ಸರ್ವತೋಮುಖ ಏಳಿಗೆಯನ್ನು ಬಿಂಬಿಸುವ ಹಾಡುಗಳನ್ನು ಒಳಗೊಂಡ 'ಭಾರತದ ರತ್ನ' ದುರ್ಬಲ ವರ್ಗಗಳ ಕಲ್ಯಾಣಕ್ಕೆ ಸರ್ಕಾರ ನೀಡುವ ಸವಲತ್ತುಗಳ ಸಂಕ್ಷಿಪ್ತ ವಿವರಗಳನ್ನು ಕೊಡುವ ಯತ್ನವನ್ನು ಮಾಡಿತು.

**ಗ್ರಾಮಾಭಿವೃದ್ಧಿ ಅಂಶಗಳು :**

ಹಳ್ಳಿಗರ ಬಾಳು ಹಸನಾಗಿಸುವ ಉದ್ದೇಶದಿಂದಲೇ ಸಿದ್ಧಗೊಂಡ ಚಿತ್ರ 'ಕೂಡಿ ಬಾಳೋಣ' (೧೯೭೫). ಸಚಿವರಾಗಿದ್ದ ಕೆ.ವಿ. ಶಂಕರಗೌಡರು ಕಥೆ ಹಾಗೂ ಸಂಭಾಷಣೆ ಬರೆದಿದ್ದ 'ಕೂಡಿ ಬಾಳೋಣ' ಗಾಂಧಿ ತತ್ವಗಳನ್ನು ಆಧರಿಸಿ ರೂಪುಗೊಂಡಿತ್ತು. ವಿದ್ಯಾವಂತ ತರುಣನೊಬ್ಬ ಗ್ರಾಮಾಭಿವೃದ್ಧಿಗೆ ಮುಂದಾದಾಗ ಎದುರಿಸಬೇಕಾದ ಸವಾಲುಗಳನ್ನು ನಿರೂಪಿಸುವ ಈ ಚಿತ್ರ ಹಳ್ಳಿಯ ಯುವಜನರ ನೆರವಿನಿಂದ ಉದ್ದೇಶಿತ ಗುರಿ ತಲುಪುತ್ತದೆ. ಅನಕ್ಷರತೆ, ನಿರುದ್ಯೋಗ, ಅನಾವೃಷ್ಟಿ ಮೊದಲಾದವುಗಳು ಗ್ರಾಮೀಣ ಬದುಕನ್ನು ಹೇಗೆ ಕಂಗಾಲು ಮಾಡುತ್ತಿವೆ ಎಂಬುದರ ವಿವರಗಳು ಇಲ್ಲಿವೆ.

ಹಿರಿಯ ನಿರ್ದೇಶಕ ಎಂ.ಆರ್. ವಿಠಲ್ ಅವರು ನಿರ್ದೇಶಿಸಿದ 'ಕೂಡಿ ಬಾಳೋಣ' ಗ್ರಾಮಾಭಿವೃದ್ಧಿಯ ಆದರ್ಶಗಳನ್ನು ಗಟ್ಟಿಯಾಗಿ ಧ್ವನಿಸುವ ಚಿತ್ರ. ಇದರ ಆಶಯಗಳಿಗೆ ಒತ್ತುಕೊಡುವಂತೆ ಹಾಡುಗಳೂ ಮೂಡಿಬಂದಿವೆ.

**ಮಹಿಳೆಯರ ಹಿರಿಮೆ :**

ಮಣ್ಣಿನ ಮಗಳ ಹಿರಿಮೆಯನ್ನು ಸಾರುವ ಚಿತ್ರ 'ಮಣ್ಣಿನ ಮಗಳು' ತೆರೆಗೆ ಬಂದಿದ್ದು ೧೯೭೪ರಲ್ಲಿ. ಬಿ.ಎಸ್. ರಂಗಾ ಅವರು ನಿರ್ದೇಶಿಸಿದ ಈ ಚಿತ್ರದಲ್ಲಿ ಹಳ್ಳಿಗಳ ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರವನ್ನು ಅನಾವರಣಗೊಳಿಸುವುದರ ಜೊತೆಗೆ ಮಣ್ಣಿನೊಂದಿಗೆ ಸ್ತ್ರೀಯರಿಗೆ ಇರುವ ಅವಿನಾಭಾವ ಸಂಬಂಧವನ್ನು ಬಿಂಬಿಸಲಾಗಿದೆ. ತ್ರಿಪಾತ್ರದಲ್ಲಿ ಕಾಣಿಸಿಕೊಂಡಿರುವ ಹಿರಿಯ ನಟಿ ಜಯಂತಿ ಅವರು ಹಳ್ಳಿಯ ಹೆಂಗಸಾಗಿ ಹೊಲದಲ್ಲಿ ದುಡಿಯುವ ಪಾತ್ರ ವಹಿಸಿದ್ದಾರೆ. ನಿರ್ಗತಿಕಳಾದರೂ ತನ್ನ ತಾಳಿ ಮಾರಿ ಇರುವ ತುಂಡು ಭೂಮಿಯಲ್ಲಿ ಬೇಸಾಯ ಮಾಡಿ ಮಕ್ಕಳನ್ನು ಸಾಕಿ ಸಲಹುವ ಪಾತ್ರ ಅವರದು.

ಗಾಂಧಿ ತತ್ತ್ವಗಳಿಗೆ ಮಾರುಹೋದ ಸುಶಿಕ್ಷಿತ ಯುವಕನೊಬ್ಬ ಹಳ್ಳಿಯೊಂದರ ಶಿಕ್ಷಕನಾಗಿ ಗ್ರಾಮದ ಉದ್ಧಾರಕ್ಕೆ ಶ್ರಮಿಸುವ ಕತೆಯುಳ್ಳ ಚಿತ್ರ 'ನಮ್ಮ ಊರ ದೇವರು' (೧೯೭೫). ಎನ್.ಟಿ. ಜಯರಾಮರೆಡ್ಡಿ ನಿರ್ದೇಶನದ ಈ ಚಿತ್ರದಲ್ಲಿ ಕೃಷಿಕನ ಬದುಕಿನ ವಿವಿಧ ಮಜಲುಗಳನ್ನು ಚಿತ್ರಿಸಲಾಗಿದೆ. ಮಾದರಿ ಗ್ರಾಮ ಮಾಡಲು ಯುವಕ ಪ್ರಯತ್ನಿಸಿದಾಗ ಉಂಟಾಗುವ ಎಡರು ತೊಡರುಗಳ ಚಿತ್ರಣವೂ ಇಲ್ಲಿದೆ.

'ನಂಜುಂಡ ನಕ್ಕಾಗ' (೧೯೭೫) ಜಾತಿ ಪದ್ಧತಿಯನ್ನು ಪ್ರತಿಭಟಿಸಿ ಹಳ್ಳಿಯ ಬದುಕನ್ನು ಉತ್ತಮಗೊಳಿಸುವ ಅಂಶಗಳನ್ನು ಹೊತ್ತ ಚಿತ್ರ. ಬಸವರಾಜ ಕೆಸ್ತೂರ್ ಅವರು ನಿರ್ದೇಶಿಸಿದ ಈ ಚಿತ್ರದಲ್ಲಿ ಗ್ರಾಮೀಣಾಭಿವೃದ್ಧಿಗೆ ಪೂರಕವಾದ ಹಲವು ಅಂಶಗಳಿವೆ.

## ಕುಟುಂಬಕ್ಕೆ ಆರ್ಥಿಕ ಭದ್ರತೆ :

ಗೀತ ರಚನಕಾರ ಹಾಗೂ ನಿರ್ದೇಶಕ ಗೀತಪ್ರಿಯ ತಮ್ಮ ನಿರ್ದೇಶನದ ಬಹಳಷ್ಟು ಚಿತ್ರಗಳನ್ನು ಸಮಾಜಮುಖಿಯಾಗಿ, ವಿಶೇಷವಾಗಿ ಗ್ರಾಮಮುಖಿಯಾಗಿ ಚಿತ್ರಿಸಿದ್ದಾರೆ. ಸಿನಿಮಾಕ್ಕೆ ಬೇಕಾದ ಅಂಶಗಳನ್ನು ಇಟ್ಟುಕೊಂಡು ತಮ್ಮ ಆದರ್ಶಗಳನ್ನು ಅರ್ಥವತ್ತಾಗಿ ನಿರೂಪಿಸುವ ಗೀತಪ್ರಿಯರ ಶೈಲಿ ಎಲ್ಲ ಸ್ತರದ ಜನರಿಗೂ ಹಿಡಿಸುವಂಥದ್ದು. ೧೯೭೫ರಲ್ಲಿ ಬಿಡುಗಡೆಯಾದ ಗೀತಪ್ರಿಯರ 'ಬೆಳುವಲದ ಮಡಿಲಲ್ಲಿ' ಚಿತ್ರ ಕೂಡ ಇದೇ ಆಶಯವನ್ನು ಹೊಂದಿದೆ. ಸರ್ಕಾರ ನೀಡಿದ ಬಂಜರು ಭೂಮಿಯನ್ನು ಬೆವರು ಸುರಿಸಿ ಫಲವತ್ತಾದ ಹೊಲ ತೋಟ ಮಾಡುವ ನಾಯಕ ತನ್ನ ಕುಟುಂಬಕ್ಕೆ ಆರ್ಥಿಕ ಭದ್ರತೆ ಒದಗಿಸುತ್ತಾನೆ. ನಾಯಕನ ಹೆಂಡತಿ ಕೂಡ ಇದರಲ್ಲಿ ಕೈಜೋಡಿಸುತ್ತಾಳೆ. ಕಷ್ಟಪಟ್ಟು ದುಡಿದು ಭೂಮಿಯನ್ನು ಅಭಿವೃದ್ಧಿಪಡಿಸಿ ನೆಮ್ಮದಿಯಿಂದಿರಬೇಕಾದ ಸಮಯದಲ್ಲಿ ಸ್ವಂತ ಮಕ್ಕಳೇ ಕೈಕೊಡುತ್ತಾರೆ. ಆದರೆ ನಾಯಕ ಎದೆಗುಂದುವುದಿಲ್ಲ. ಹೊಲವನ್ನೇ ನಂಬಿ ಆದರ್ಶ ರೈತನೆನ್ನಿಸಿಕೊಳ್ಳುವನು. ಗ್ರಾಮೀಣಾಭಿವೃದ್ಧಿಯಲ್ಲಿ ಹೆಣ್ಣಿನ ಪಾತ್ರ ಗಂಡಸಿನಷ್ಟೇ ಪ್ರಾಮುಖ್ಯವಾದುದು. ಇದನ್ನು ಕನ್ನಡದ ಕೆಲವು ಚಿತ್ರಗಳು ಸಮರ್ಥವಾಗಿ ನಿರೂಪಿಸಿವೆ. ಮಣ್ಣಿನಮಗ, ಬೆಳುವಲದ ಮಡಿಲಲ್ಲಿ, ಬಂಗಾರದ ಮನುಷ್ಯ, ಅಮರಜೀವಿ, ಭಲೇಬಸವ, ಬಾಳುವೆ ನಿನಗಾಗಿ-ಹೀಗೆ ಹಲವು ಚಿತ್ರಗಳಲ್ಲಿ ಹಳ್ಳಿ ಸಂಸಾರದ ಏಳಿಗೆಗೆ ಹೆಣ್ಣಿನ ಪಾಲು ಮುಖ್ಯವೆಂಬುದನ್ನು ಎತ್ತಿಹಿಡಿಯಲಾಗಿದೆ. 'ಮುಗ್ಧಮಾನವ' ಚಿತ್ರದಲ್ಲಿ ಗ್ರಾಮದ ಉದ್ಧಾರಕ್ಕಾಗಿ ಪಟ್ಟಣದ ಹೆಣ್ಣು ಬಂದು ಯಶಸ್ವಿಯಾಗುತ್ತಾಳೆ. ಸಿದ್ಧಲಿಂಗಯ್ಯನವರ 'ಭೂತಯ್ಯನ ಮಗ ಅಯ್ಯು', 'ಹೇಮಾವತಿ' ಚಿತ್ರಗಳಲ್ಲೂ ಗ್ರಾಮ ಮಹಿಳೆಗೆ ಪ್ರಾಧಾನ್ಯದ ಪಾತ್ರಗಳಿವೆ.

## ಅಭಿವೃದ್ಧಿಗೆ ಪೂರಕ :

ಗ್ರಾಮದ ಅಭಿವೃದ್ಧಿಗೆ ಪೂರಕವಾದ ಕಥಾ ಹಂದರವಿರುವ ಕೆಲವು ಚಿತ್ರಗಳೊಟ್ಟಿಗೆ ಗ್ರಾಮೀಣ ಜನತೆಯನ್ನು ಮೌಢ್ಯ ಕಂದಾಚಾರಗಳ ವಿರುದ್ಧ ಎಚ್ಚರಿಸುವ ಅನೇಕ ಚಿತ್ರಗಳೂ ನಿರ್ಮಾಣವಾಗಿವೆ. ಬರಗೂರು ರಾಮಚಂದ್ರಪ್ಪ, ಶ್ರೀಕೃಷ್ಣ ಆಲನಹಳ್ಳಿ ಅವರ ಕಥೆಗಳನ್ನು ಆಧರಿಸಿದ ಚಿತ್ರಗಳಲ್ಲಿ ಹಳ್ಳಿ ಉದ್ಧಾರಕ್ಕೆ ಅಡ್ಡವಾಗುವ ಅಂಶಗಳನ್ನು ಪ್ರಸ್ತಾಪಿಸಲಾಗಿದೆ. ವರ್ಗ ಸಂಘರ್ಷವನ್ನು ಪ್ರತಿಪಾದಿಸುವ ಸನ್ನಿವೇಶಗಳೂ ಇವೆ.

ಹಳ್ಳಿಯವರೆಲ್ಲ ಕೂಡಿ ಬದುಕು ಸಾಗಿಸಿದರೆ ಅಭಿವೃದ್ಧಿ ಸಾಧ್ಯ ಎಂಬ ಕಥೆಯನ್ನು ಇಟ್ಟುಕೊಂಡ ಸಿದ್ಧಲಿಂಗಯ್ಯನವರು 'ಕೂಡಿ ಬಾಳಿದರೆ ಸ್ವರ್ಗ ಸುಖ' (೧೯೮೧) ಚಿತ್ರವನ್ನು ನಿರ್ದೇಶಿಸಿದರು. ಹಳ್ಳಿಯಲ್ಲೇ ಪೂರ್ಣವಾಗಿ ನಡೆಯುವ ಈ ಚಿತ್ರದಲ್ಲಿ ಗ್ರಾಮ ಜೀವನದ ಏಳುಬೀಳುಗಳನ್ನು ಸಹಜವಾಗಿ ಚಿತ್ರಿಸಲಾಗಿದೆ.

ಒಕ್ಕಲುತನವೇ ಪ್ರಧಾನವಾದ ಗ್ರಾಮಜೀವನದಲ್ಲಿ ನೆಮ್ಮದಿಯ ಬದುಕಿಗೆ ಕೃಷಿ ಹಾಗೂ ಉಪಕಸುಬುಗಳು ಹೇಗೆ ಸಹಾಯಕವಾಗುತ್ತದೆ, ಹಾಗೆಯೇ ಹಳ್ಳಿಯ ಏರಿಳಿತಗಳಿಂದ ಹೇಗೆ ತೊಂದರೆಗಳು ಎದುರಾಗುತ್ತವೆ ಎಂಬುದನ್ನು ಪ್ರತಿಬಿಂಬಿಸುವ 'ರೈತನ ಮಕ್ಕಳು' ಚಿತ್ರ ಉತ್ತರ ಕರ್ನಾಟಕದ ಗ್ರಾಮೀಣ ಸೊಗಡನ್ನು ಹೊತ್ತುತಂದಿದೆ. ಚಿಂದೋಡಿ ಬಂಗಾರೇಶ್ ನಿರ್ದೇಶಿಸಿ ೧೯೮೧ರಲ್ಲಿ ಬಿಡುಗಡೆಯಾದ ಈ ಚಿತ್ರ ಆಧುನಿಕತೆಯಿಂದ ಗ್ರಾಮಗಳಿಗಾಗುವ ಒಳಿತು ಕೆಡುಕುಗಳನ್ನು ಪ್ರಚುರಗೊಳಿಸುತ್ತದೆ.

ಶ್ರಮದಾನ, ಸಮಾಜಸೇವೆಯಿಂದ ಗ್ರಾಮಶುದ್ಧಿಗೆ, ಬೆಳವಣಿಗೆಗೆ ಅನುಕೂಲವಾಗುವ ಅಂಶಗಳು 'ಕಳಸಾಪುರದ ಹುಡುಗರು' ಚಿತ್ರದಲ್ಲಿವೆ. (೧೯೮೨, ನಿರ್ದೇಶನ: ಗುರುದಾಸ್ ವಿ.ಎಲ್ ಆಚಾರ್ಯ). ಸಾಹಸವಂತ ಹುಡುಗರು ಗ್ರಾಮೀಣಾಭಿವೃದ್ಧಿ ಬಗೆಗಿನ ವಿಷಯಗಳನ್ನು ಚಿತ್ರದ ಕೆಲವೆಡೆ ಪ್ರಸ್ತಾಪಿಸುತ್ತಾರೆ.

**ಕೇವಲ ಪಾತ್ರಗಳು** : ಹಳ್ಳಿಗಾಡಿನಲ್ಲಿ ಸೇವೆ ಸಲ್ಲಿಸಲು ಬರುವ ವೈದ್ಯರು, ಶಿಕ್ಷಕರು, ಕೃಷಿ ಅಧಿಕಾರಿ, ಸಮಾಜ ಕಲ್ಯಾಣಾಧಿಕಾರಿಗಳು ಇಂಥ ಪಾತ್ರಗಳು ಅನೇಕ ಚಿತ್ರಗಳಲ್ಲಿದ್ದರೂ ಅವು ಕಥಾಹಂದರಕ್ಕೆ ಹೊಂದಿಕೊಂಡ ಪಾತ್ರಗಳು ಮಾತ್ರ. ಅವರು ತಮ್ಮ ಕರ್ತವ್ಯ ನಿರ್ವಹಿಸುವುದಷ್ಟೇ ಚಿತ್ರಣವಾಗುತ್ತದೆ. ಒಟ್ಟಾರೆ ಗ್ರಾಮೀಣ ಅಭಿವೃದ್ಧಿಗೆ ತೊಡಗಿಕೊಳ್ಳುವ ಪಾತ್ರಗಳು ಬಹಳ ವಿರಳ.

'ಚುಕ್ಕಿಚಂದ್ರಮ' (ನಿರ್ದೇಶನ: ನಂಜುಂಡೇಗೌಡ) ಚಿತ್ರದಲ್ಲಿ ಗ್ರಾಮೀಣ ಮಕ್ಕಳನ್ನು ಶಾಲೆಗೆ ಕಳುಹಿಸುವ ಆಶಯ ವ್ಯಕ್ತವಾಗಿದ್ದರೆ, 'ಕರಿಮಲೆಯ ಕಗ್ಗತ್ತಲು' (ನಿರ್ದೇಶನ ಈ. ಚೆನ್ನಗಂಗಪ್ಪ) ಗ್ರಾಮೀಣ ಸಾಕ್ಷರತೆಯನ್ನು ಸಾರುವ ಚಿತ್ರ.

'ಕೊಟ್ರೇಶಿ ಕನಸು' (ನಿರ್ದೇಶನ: ನಾಗತಿಹಳ್ಳಿ ಚಂದ್ರಶೇಖರ್) ಚಿತ್ರ ಕೂಡ ಹಳ್ಳಿ ಹುಡುಗನಿಗೆ ವಿದ್ಯಾಭ್ಯಾಸ ದಕ್ಕಿದ ಕಥಾ ಹಂದರವನ್ನು ಹೊಂದಿದೆ.

## ಪ್ರಗತಿಯತ್ತ :

ಹಳ್ಳಿಯಲ್ಲಿ ನಡೆಯುವ ಪ್ರಗತಿಪರ ಬದಲಾವಣೆಗಳಿಗೆ ಸ್ಪಂದಿಸಿ ಗ್ರಾಮದ ಏಳಿಗೆಗೆ ನೆರವಾಗುವ ಕಥೆಯುಳ್ಳ 'ನೋಡುಬಾ ನಮ್ಮೂರ' (೧೯೯೭, ನಿರ್ದೇಶನ: ಎಸ್.ಆರ್. ನಂಜುಂಡೇಗೌಡ) ಚಿತ್ರದಲ್ಲಿ ಗ್ರಾಮೀಣ ಪರಿಸರ ಸ್ಪಷ್ಟವಾಗಿ ಎದ್ದು ಕಾಣುತ್ತದೆ. 'ರಾಜೀವಪ್ಪ' (೧೯೯೮, ನಿರ್ದೇಶನ: ಜಯಸಿಂಹ ಮುಸುರಿ) ಗ್ರಾಮೀಣ ಬದುಕಿನತ್ತ ಒಲವಿದ್ದ ವಿದ್ಯಾವಂತನೊಬ್ಬ ಹಳ್ಳಿಯಲ್ಲಿ ನೆಲಸಿ, ಶೋಷಣೆ ನಿಲ್ಲಿಸಿ ಗ್ರಾಮೀಣ ಉದ್ಧಾರಕ್ಕೆ ನೆರವಾಗುವ ಕಥೆ ಇರುವ ಚಿತ್ರ.

ಸಹಕಾರಿ ತತ್ತ್ವವನ್ನು ಆಧರಿಸಿದ ಅನೇಕ ಚಿತ್ರಗಳು ತೆರೆಕಂಡಿವೆ. ಅಸಂಘಟಿತ ಮೀನುಗಾರರನ್ನು ಸಂಘಟಿಸಿ ಗ್ರಾಮೀಣ ಅಭಿವೃದ್ಧಿಗೆ ಯತ್ನಿಸುವ 'ಸಾಗರದೀಪ' (೧೯೯೪, ನಿರ್ದೇಶಕ : ಟಿ.ಎಸ್. ನಾಗಾಭರಣ) ಮಾಜಿ ಮುಖ್ಯಮಂತ್ರಿ ವೀರಪ್ಪ ಮೊಯ್ಲಿ ಅವರ ಕೃತಿಯನ್ನು ಆಧರಿಸಿದ ಚಿತ್ರ.

ಬುಡಕಟ್ಟು ಜನಾಂಗಗಳು, ಅಲೆಮಾರಿ ಜನಾಂಗಗಳನ್ನು ಗ್ರಾಮೀಣಾಭಿವೃದ್ಧಿಯತ್ತ ಸೆಳೆಯುವ ಪ್ರಯತ್ನಗಳಿರುವ ಅಂಶಗಳನ್ನು ಅನೇಕ ಚಿತ್ರಗಳು ಒಳಗೊಂಡಿವೆ. ಇಷ್ಟೆಲ್ಲ ಆದರೂ ಇದೆಲ್ಲ ಆದರ್ಶದ ಹಂತದಲ್ಲೇ ನಿಲ್ಲುತ್ತವೆ. ಅನುಷ್ಠಾನದ ನೆಲೆಗೆ ಬರುವುದು ಬಹಳ ವಿರಳ.

ಎಪ್ಪತ್ತು ವರ್ಷಗಳ ಚಿತ್ರ ಚರಿತ್ರೆಯಲ್ಲಿ ಸುಮಾರು ೨೦೦೦ಕ್ಕೂ ಹೆಚ್ಚು ಚಿತ್ರಗಳು ತೆರೆಕಂಡಿವೆ. ಆರಂಭದ ವರ್ಷಗಳಲ್ಲಿ ಪೌರಾಣಿಕ, ಭಕ್ತಿ ಪ್ರಧಾನ, ಜಾನಪದ ಚಿತ್ರಗಳೇ ಹೆಚ್ಚಿದ್ದವು. ೧೯೫೦-೬೦ ದಶಕದಲ್ಲಿ ಅಲ್ಲೊಂದು ಇಲ್ಲೊಂದು ಗ್ರಾಮೀಣ ಬದುಕಿನ ಚಿತ್ರಗಳು ತೆರೆಕಂಡವು. ಗ್ರಾಮೀಣ ಪರಿಸರವನ್ನು ಚಿತ್ರಗಳು ಒಳಗೊಂಡರೂ ಗ್ರಾಮ್ಯ ಬದುಕು ಹೆಚ್ಚು ಬಿಂಬಿತವಾಗಲಿಲ್ಲ. ಗ್ರಾಮೀಣ ಅಭಿವೃದ್ಧಿಯ ಕನಸು ಪ್ರಧಾನ ವಾಹಿನಿ ಚಿತ್ರಗಳ ನಡುವೆ ಕಾಣಿಸಿಕೊಂಡಿದ್ದು ಅಪರೂಪ. ಗ್ರಾಮದ ಒಳಪದರುಗಳಿಗೆ ಇಳಿದ ಚಿತ್ರಗಳಂತೂ ಬಹಳ ಕಡಿಮೆ. ವಾಸ್ತವತೆ ಇರುವುದೂ ವಿರಳ. ರೈತ, ಗ್ರಾಮಗಳ ಏಳಿಗೆ ಬಹುತೇಕ ಚಿತ್ರಗಳ ಆದರ್ಶವಾದರೂ ಅವುಗಳನ್ನು ಪೂರ್ಣವಾಗಿ ಪೋಷಿಸುವ ಕೆಲಸ ಹಲವು ಚಿತ್ರಗಳಲ್ಲಿ ಆಗಲಿಲ್ಲ. ಈಗೀಗ ಗ್ರಾಮಾಭಿವೃದ್ಧಿ ಕುರಿತ ಚಿತ್ರಗಳು ಇಲ್ಲವೇ ಇಲ್ಲ ಎನ್ನುವಷ್ಟು ವಿರಳವಾಗಿವೆ.

(ನೆರವು : ಆರ್. ಲಕ್ಷ್ಮಣ್ ಹಾಗೂ ಜಯಮಾಲ ರಾಮಚಂದ್ರ)

●




# ಗ್ರಾಮೀಣ ಸಂಸ್ಕೃತಿ

ಡಾ. ಸಿ. ಸೋಮಶೇಖರ್

ಮಾನವ ಸಮಾಜದ ಇತಿಹಾಸದಲ್ಲಿ ಗ್ರಾಮಗಳ ಪಾತ್ರ ವಿಶಿಷ್ಟವಾದುದು. ನಗರಗಳ ಬೆಳವಣಿಗೆಯನ್ನು ಕ್ರಿ.ಶ. ೧೮೦೦ರಿಂದಲೇ ಗುರುತಿಸಬಹುದಾದರೂ ಇಂದಿಗೂ ವಿಶ್ವದ ಅತಿ ಹೆಚ್ಚಿನ ಜನ ವಾಸಿಸುತ್ತಿರುವುದು ಗ್ರಾಮಗಳಲ್ಲಿಯೇ. ನಗರಗಳ ಬದುಕಿನ ಮೂಲ ಆಧಾರವೇ ಗ್ರಾಮಗಳು. ನಗರದ ಜನರ ಅನೇಕ ಭೌತಿಕ ಅವಶ್ಯಕತೆಗಳನ್ನು ಪೂರೈಸುವ ಗ್ರಾಮಗಳು ನಿಸರ್ಗಕ್ಕೆ ಹತ್ತಿರವಾದವು, ನಿಸರ್ಗದ ಸಂಪನ್ಮೂಲಗಳನ್ನೇ ಆಧರಿಸಿದವು. ಯಾವುದೇ ನಾಡಿನ ಸಾಂಸ್ಕೃತಿಕ ಸಂದರ್ಭವನ್ನು ನಿಗದಿಪಡಿಸಿ ನಾಡಿನ ಸಂಸ್ಕೃತಿಗೆ ಹೊಸ ಹೊಸ ವ್ಯಾಖ್ಯೆಯನ್ನು ನೀಡಿ ಪ್ರಸ್ತುತಪಡಿಸಬೇಕಾಗಿ ಬಂದಾಗ ನಮಗೆ ಸಿಗುವ ಮೂಲದ್ರವ್ಯವೇ ಗ್ರಾಮ ಸಂಸ್ಕೃತಿ. ನಾಡಿನ ಸಾಂಸ್ಕೃತಿಕ ಜೀವನಕ್ಕೆ, ಪುನರುಜ್ಜೀವನಕ್ಕೆ ಅದರಲ್ಲಿಯೂ ವಿಶೇಷವಾಗಿ ಭಾರತದಂಥ ವ್ಯವಸಾಯ ಪ್ರಧಾನ ರಾಷ್ಟ್ರದಲ್ಲಿ ಸಮಾಜದ ಎಲ್ಲಾ ಆಯಾಮಗಳ ಬೇರು ಸಿಕ್ಕುವುದೇ ಗ್ರಾಮಗಳಲ್ಲಿ. ಮೂಲತಃ ನಮ್ಮ ರಾಷ್ಟ್ರದ ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಜೀವಾಳವೇ ಗ್ರಾಮಗಳಾಗಿರುವುದರಿಂದ ರಾಷ್ಟ್ರ ಸಂಸ್ಕೃತಿಯ ಆವಿಷ್ಕಾರದಲ್ಲಿ ಗ್ರಾಮೀಣ ಸಂಸ್ಕೃತಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ.

**ಬದುಕು, ಬದುಕುವ ರೀತಿ, ನೀತಿ, ಸಹಬಾಳ್ವೆ, ಸಹ ಜೀವನ ಒಂದು ನಾಡಿನ ಸಂಸ್ಕೃತಿಯೆನಿಸುತ್ತದೆ. ಈ ನಿಟ್ಟಿನಲ್ಲಿ ನಮ್ಮ ಗ್ರಾಮಸಂಸ್ಕೃತಿ ವಿಶ್ವವಂದ್ಯವೂ, ವಿಶ್ವಮಾನ್ಯವೂ ಆಗಿರುವುದು ವಿಶೇಷ. ಗ್ರಾಮ ಸಂಸ್ಕೃತಿ ರಾಷ್ಟ್ರದ ಸಮಗ್ರ ಸಂಸ್ಕೃತಿಯ ಹೆಬ್ಬಾಗಿಲು.**

ಬದುಕು, ಬದುಕುವ ರೀತಿ, ಬದುಕಿನ ನೀತಿ, ಸಹಬಾಳ್ವೆ, ಸಹಜೀವನಗಳ ಮೂಲತತ್ವವೇ ಒಂದು ನಾಡಿನ ಸಂಸ್ಕೃತಿಯೆನಿಸಿಕೊಳ್ಳುವ ವಾಸ್ತವದ ಹಿಂದೆ ಆ ನಾಡಿನ ಸಾಹಿತ್ಯ, ಸಂಗೀತ ಕಲೆಗಳ ಪ್ರತ್ಯಕ್ಷ ಪರೋಕ್ಷ ಪ್ರೇರಣೆಯ ಸಾಂಸ್ಕೃತಿಕ ಜೀವನವನ್ನು ರೂಪಿಸುವುದರಲ್ಲಿ ಬಹಳ ಅಗತ್ಯ. ಈ ನಿಟ್ಟಿನಲ್ಲಿ ನಮ್ಮ ಗ್ರಾಮ ಸಂಸ್ಕೃತಿ ವಿಶ್ವವಂದ್ಯವೂ, ವಿಶ್ವಮಾನ್ಯವೂ ಆಗಿರುವುದು ವಿಶೇಷ. ಅಷ್ಟರಮಟ್ಟಿಗೆ ಗ್ರಾಮ ಸಂಸ್ಕೃತಿ ನಾಡಿನ ಹಾಗೂ ರಾಷ್ಟ್ರದ ಸಮಗ್ರ ಸಂಸ್ಕೃತಿ ದರ್ಶನದ ಹೆಬ್ಬಾಗಿಲೆಂದರೆ ಅತಿಶಯೋಕ್ತಿಯಾಗದು.

ಬದುಕಿನ ಎಲ್ಲಾ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾ, ಶಾಂತಿ-ಸೌಖ್ಯ-ಸಮಾಧಾನಗಳಿಂದ ಸಮಸ್ಯೆಗಳನ್ನು ಪರಿಹರಿಸಿಕೊಂಡು ಸಹಕಾರಿ ಸೂತ್ರದ ಮೇಲೆ ಸರ್ವಸಮ್ಮತ ನೀತಿಯನ್ನು ರೂಪಿಸಿಕೊಂಡು ಆರೋಗ್ಯಕರ ಸಮಾಜವನ್ನು ರೂಪಿಸುವ ನಿಟ್ಟಿನಲ್ಲಿ ಸಂಸ್ಕೃತಿಯು ಮಹತ್ವದ ಪಾತ್ರವಹಿಸುತ್ತದೆ. ವ್ಯಕ್ತಿ, ಕುಟುಂಬ, ಗ್ರಾಮ, ಸಮಾಜದ ಸಂಸ್ಕೃತಿಗಳು ಆಯಾ ಪ್ರದೇಶದ ಸಮೃದ್ಧ ಬದುಕಿಗೆ ನೇರವಾಗಿ ಪೂರಕವಾಗುತ್ತವೆ. ಮಾನವೀಯ ಸಂಬಂಧಗಳು ಬಲಿತು

ನಾಡಿನ ಪ್ರಗತಿಗೆ ಪೂರಕವಾಗಿ ದುಡಿಯುವುದಕ್ಕೆ ಬೇಕಾದ ಶಕ್ತಿಯನ್ನು ನಮ್ಮ ಸಂಸ್ಕೃತಿ ಮೂಲಗಳು ಸಮರ್ಥವಾಗಿ ವೃದ್ಧಿಸುತ್ತವೆ. ಇದೇ ನಾಗರಿಕ - ಅನಾಗರಿಕ ಸಮಾಜಗಳ ನಡುವೆ ಇರುವ ವ್ಯತ್ಯಾಸ.

ನೂರಾರು ಜಾತಿ, ಮತ, ದೇವರು, ಧರ್ಮಗಳ ನಡುವೆ ಜೀವಿಸುತ್ತಿರುವ ಭಾರತೀಯರ ನಡುವೆ ವೈವಿಧ್ಯಮಯತೆಯಲ್ಲಿ ಏಕತೆ ಸಾಧಿಸಲು ನೆರವಾಗಿರುವುದೇ ನಮ್ಮ ಸಂಸ್ಕೃತಿ ಎಂದಾಗ ಇದರ ಹಿಂದೆ ಕಾಲಾನುಕಾಲದಿಂದ ನಮ್ಮ ಗ್ರಾಮ ಸಂಸ್ಕೃತಿ ವಹಿಸಿರುವ ಪಾತ್ರ ಸ್ಪಷ್ಟವಾಗುತ್ತದೆ. ಆಧುನೀಕರಣ ಸೋಂಕು, ಪಾಶ್ಚಾತ್ಯೀಕರಣದ ವ್ಯಾಧಿಗಳಿಂದ ಮುಕ್ತವಾಗಿರುವ ಗ್ರಾಮ ಸಂಸ್ಕೃತಿಯನ್ನು ನಾವು ರಕ್ಷಿಸಿದಷ್ಟೂ ಅದು ನಮ್ಮನ್ನು ರಕ್ಷಿಸುತ್ತದೆ ಎಂಬುದರಲ್ಲಿ ಅನುಮಾನವಿಲ್ಲ. ಬದುಕಿಗೆ ಪೂರಕವಾಗಬೇಕಾದ ಸಂಸ್ಕೃತಿಯ ಪಾವಿತ್ರ್ಯತೆ ಕಾಪಾಡಬೇಕಾದ ಹೊಣೆ ಇಂದು ನಮ್ಮ ಮೇಲಿದೆ. ಇಂದು ನಮ್ಮ ಮೂಲ ಅಸ್ತಿತ್ವವನ್ನೇ ಗುಡಿಸಿ ಹಾಕುವಷ್ಟರ ಮಟ್ಟಿಗೆ ಹೊರಗಿನ ಪ್ರಭಾವ ಬಲಿಷ್ಠವಾಗುತ್ತಿದೆ. ಸಂಸ್ಕೃತಿಯ ನಾಶದಿಂದ ನೇರವಾಗಿ ಮಾನವೀಯತೆಯ ನಾಶವಾಗುತ್ತದೆ. ಆದುದರಿಂದ ನಮ್ಮದೇ ಆದ ನಮ್ಮ ಮಣ್ಣಿನೊಂದಿಗೆ ಭಾವನಾತ್ಮಕ ಸಂಬಂಧವಿರುವ ನಮ್ಮ ಗ್ರಾಮಸಂಸ್ಕೃತಿಯ ಉಳಿವು ನಮ್ಮೆಲ್ಲರ ನೈತಿಕ ಕರ್ತವ್ಯವಾಗಿದೆ.

India lives in villages ಎಂಬ ನಾಣ್ಣುಡಿಯಂತೆ ಭಾರತದ ಜೀವಾಳವೇ ಹಳ್ಳಿಗಳು. ಇದು ನಮ್ಮ ನಾಡಿಗೂ ಅನ್ವಯವಾಗುತ್ತದೆ. ಗ್ರಾಮೀಣ ಸಂಸ್ಕೃತಿ ರಕ್ಷಣೆ ಎಂದರೆ ನಮ್ಮ ನಾಡಿನ ಮತ್ತು ರಾಷ್ಟ್ರದ ಸಂಸ್ಕೃತಿಯ ಸಂರಕ್ಷಣೆ ಎಂದೇ ಅರ್ಥ. ನಮ್ಮ ನಾಡಿನ ಗ್ರಾಮೀಣ ಪ್ರದೇಶದಲ್ಲಿ ಅನಕ್ಷರತೆ, ಬಡತನ, ಮೂಢನಂಬಿಕೆಗಳು ವ್ಯಾಪಕವಾಗಿ ಇದ್ದರೂ ಗ್ರಾಮೀಣ ಜನರು ತಮ್ಮ ಹೃದಯವಂತಿಕೆ ಮತ್ತು ಮಾನವೀಯತೆಯಿಂದ ತಮ್ಮ ಬದುಕನ್ನು ಒಂದು ಆಧ್ಯಾತ್ಮಿಕ ಯೋಗವೆಂದೇ ಸ್ವೀಕರಿಸಿರುವುದು ಒಂದು ವಿಸ್ಮಯವೇ ಸರಿ.

ಪ್ರಖ್ಯಾತ ಸಮಾಜನೀತಿಜ್ಞ ಹೇಳುವಂತೆ,

"Rural areas where illiteracy is a rule are backwaters of civilization centers of Superstitions, Social Taboos & Conservatism".

ನಮ್ಮ ಗ್ರಾಮೀಣ ಪ್ರದೇಶದ ಮೂಢನಂಬಿಕೆ, ಸಾಮಾಜಿಕ ಅನಿಷ್ಟಗಳಿಗೆ ಅನಕ್ಷರತೆಯೇ ಬಹುಮುಖ್ಯ ಕಾರಣವಾಗಿದೆ.

"ಜಯ ಭಾರತ ಜನನಿಯ ತನುಜಾತೆ
ಜಯ ಹೇ ಕರ್ನಾಟಕ ಮಾತೆ"

ಎನ್ನುವ ರಾಷ್ಟ್ರಕವಿ ಕುವೆಂಪುರವರ ಸಂದೇಶದಂತೆ ಕರ್ನಾಟಕವು ಭಾರತಾಂಬೆಯ ಹೆಮ್ಮೆಯ ಪುತ್ರಿಯಾಗಿ ರಾಷ್ಟ್ರ ಸಂಸ್ಕೃತಿಗೆ ಒಂದು ವಿಶೇಷ ಕೊಡುಗೆ ನೀಡಿದ, ಸಾಂಸ್ಕೃತಿಕವಾಗಿ ಸಂಪದ್ಭರಿತವಾದ ರಾಜ್ಯವಾಗಿದೆ.

ನಮ್ಮ ನಾಡಿನ ಗ್ರಾಮಗಳಲ್ಲಿ ಗ್ರಾಮೀಣ ಜನತೆ ಹಲವಾರು ಭೌತಿಕ ಸಮಸ್ಯೆಗಳಿದ್ದರೂ ಅವುಗಳೆಲ್ಲವನ್ನು ಮೆಟ್ಟಿ ನಿಲ್ಲುವ ಒಂದು ಹೃದಯ ಸಂಸ್ಕೃತಿಯನ್ನು ಬೆಳೆಸಿಕೊಂಡಿರುವುದು ವಿಶ್ವಕ್ಕೆ ಮಾದರಿಯಾಗಿದೆ. ಏಕತೆಯಲ್ಲಿ ಅನೇಕತೆಯನ್ನು ಸಾಧಿಸಿರುವುದು ನಮ್ಮ ಗ್ರಾಮಸಂಸ್ಕೃತಿಯ ವೈಶಿಷ್ಟ್ಯವಾಗಿದೆ. ಜನಪದ ಸಾಹಿತ್ಯದಲ್ಲಿ ಒಂದು ಅನಾಮಿಕ ದಾರ್ಶನಿಕ ಕವಿ ಹೇಳುವಂತೆ,

"ಆಚಾರಕ್ಕೆ ಅರಸಾಗು ನೀತಿಗೆ ಪ್ರಭುವಾಗು, ಮಾತಿನಲಿ ಚೂಡಾಮಣಿಯಾಗು
ಎನ ಕಂದ ಜ್ಯೋತಿಯೇ ಆಗು ಜಗಕೆಲ್ಲ"

ಎಂಬಂತೆ ಪ್ರತಿ ವ್ಯಕ್ತಿಯು ಇಡೀ ಜಗತ್ತಿಗೆ ಜ್ಯೋತಿಯಾಗಿ ಬೆಳಕು ನೀಡಬೇಕೆಂಬುದು ಜನಪದ ಕವಿಯ ಆಶಯ.

"ಬೆಳಗಾಗಿ ನಾನೆದ್ದು ಯಾರ್‍ಯಾರ ನೆನೆಯಲಿ, ಎಳ್ಳು ಜೀರಿಗೆ ಬೆಳಿಯೋಳ ಭೂಮಿ ತಾಯಿ ಎದ್ದೊಂದು ಗಳಿಗೆ ನೆನೆದೇನ."

ಎಂಬ ಜನಪದರ ಮಾತಿನಂತೆ ಭೂಮಿತಾಯಿಯನ್ನೇ ಆಶ್ರಯಿಸಿಕೊಂಡು ಬದುಕುತ್ತಿರುವ ನಮ್ಮ ಗ್ರಾಮೀಣ ಜನರು ಭೂಮಿ ತಾಯಿಯನ್ನು ತಮ್ಮ ಸರ್ವಸ್ವವೆಂದೇ ಭಾವಿಸಿದವರು. ಗ್ರಾಮ ಸಂಸ್ಕೃತಿಯಲ್ಲಿ ಭೂಮಿ ಮತ್ತು ಭೂಮಿ ಜೊತೆಗಿನ ಭಾವನಾತ್ಮಕ ಸಂಬಂಧ ಬಹಳ ಮುಖ್ಯವಾದುದು. ಏಕೆಂದರೆ, ನಮ್ಮ ನಾಡಿನ ಗ್ರಾಮೀಣ ಜನತೆಯ ಬದುಕಿನ ಉಸಿರೇ ಕೃಷಿ ಮತ್ತು ಅದಕ್ಕೆ

ಸಂಬಂಧಿಸಿದ ಕಸುಬುಗಳೇ ಗ್ರಾಮೀಣ ಅರ್ಥವ್ಯವಸ್ಥೆಯ ಬೇರುಗಳು. ಗ್ರಾಮೀಣ ಗುಡಿ ಕೈಗಾರಿಕೆಗಳ ವಿಕಾಸವನ್ನು ಬಲವಾಗಿ ಪ್ರತಿಪಾದಿಸಿದವರು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರು. ಗ್ರಾಮೀಣ ಗುಡಿ ಕೈಗಾರಿಕೆಗಳಿಗೆ, ಖಾದಿ ಗ್ರಾಮೋದ್ಯೋಗಗಳಿಗೆ ಹೆಚ್ಚಿನ ಒತ್ತನ್ನು ನೀಡಬೇಕಾದುದು ಬಹಳ ಅವಶ್ಯಕ. ಉದ್ದೇಶಪೂರ್ವಕವಾಗಿ ಹಳ್ಳಿಗಳಿಂದ ಪಟ್ಟಣಗಳಿಗೆ ವಲಸೆ ಹೋಗುವುದನ್ನು ತಡೆಗಟ್ಟಬೇಕಾದರೆ ಗ್ರಾಮೀಣ ಜನತೆಯ ಬದುಕನ್ನು ಸಮೃದ್ಧಗೊಳಿಸಬೇಕಾದುದು ಸಮುದಾಯದ ಜವಾಬ್ದಾರಿಯಾಗಿದೆ. ಗ್ರಾಮ ಸ್ವರಾಜ್ಯದ ಪರಿಕಲ್ಪನೆ ನನಸಾಗುವಲ್ಲಿ ಹಿರಿಯ ಯೋಜಕರ, ಚಿಂತಕರ ಪಾತ್ರ ವಿಶಿಷ್ಟವಾದುದು.

ಇಂದು ಅನೇಕ ವೈಜ್ಞಾನಿಕ ಸಂಶೋಧನೆಗಳ ಮತ್ತು ಆಧುನಿಕ ತಂತ್ರಜ್ಞಾನಗಳ ಮೂಲಕ ಗ್ರಾಮೀಣ ಬದುಕನ್ನು ಹೆಚ್ಚು ಸುಂದರಗೊಳಿಸಲು ಭೂಮಿತಾಯಿಯ ಜೊತೆಯಲ್ಲಿ ಗ್ರಾಮೀಣ ಕೃಷಿಕರು ನಡೆಸುತ್ತಿರುವ ಅನುಸಂಧಾನ ಒಂದು ಹೊಸ ಚೈತನ್ಯವನ್ನೇ ನೀಡಿದೆ. ಗ್ರಾಮೀಣ ಜೀವನದ ಪರಿಸರವನ್ನು ಸಂರಕ್ಷಿಸುವುದು, ನಿಸರ್ಗದ ಮೇಲಿನ ದೌರ್ಜನ್ಯವನ್ನು ತಡೆಗಟ್ಟುವುದು ಗ್ರಾಮ ಸಂಸ್ಕೃತಿಯ ಬಹುಮುಖ್ಯ ಆಶಯ.

ಇಂದು ಗ್ರಾಮೀಣ ಪ್ರದೇಶದಲ್ಲಿನ ಅರಣ್ಯಗಳ ನಾಶ, ಕುಡಿಯುವ ನೀರಿನ ಮೂಲಗಳ ದುರ್ಬಳಕೆ ಮತ್ತು ಅತಿಯಾದ ಆಸೆಯಿಂದ ಪ್ರಕೃತಿಯ ಮೇಲೆ ನಡೆಸುತ್ತಿರುವ ದೌರ್ಜನ್ಯವನ್ನು ದೂರ ಮಾಡುವುದು ಗ್ರಾಮ ಸಂಸ್ಕೃತಿಯ ಪ್ರಮುಖ ಉದ್ದೇಶವಾಗಬೇಕಾಗಿದೆ. ಇದರ ಜೊತೆಗೆ ಪರಸ್ಪರ ಸಹಬಾಳ್ವೆ, ಸಹಕಾರ ಸ್ವಾವಲಂಬನೆಯಂತಹ ಮಾನವೀಯ ಗುಣಗಳನ್ನು ರೂಢಿಸಿಕೊಳ್ಳಬೇಕಾದುದು ಸಹ ಬಹಳ ಅವಶ್ಯಕ. ವಿಶೇಷವಾಗಿ ಅಧಿಕಾರ ವಿಕೇಂದ್ರೀಕರಣದ ಸೂತ್ರದಡಿಯಲ್ಲಿ ಇಂದು ಗ್ರಾಮಗಳಿಗೆ ವಿಶೇಷವಾದ ಮಹತ್ವ ಬಂದಿದೆ. ಗ್ರಾಮಪಂಚಾಯತಿಗಳು ಈಗ ಅತ್ಯಂತ ಸತ್ವಯುತವಾದ ಸಂಸ್ಥೆಗಳಾಗಿ ರೂಪುಗೊಳ್ಳುತ್ತಿವೆ. ಜಿಲ್ಲಾ ಪಂಚಾಯತಿಗಳ ಹಲವಾರು ಪ್ರಮುಖ ಕರ್ತವ್ಯಗಳನ್ನು, ಅಧಿಕಾರಗಳನ್ನು ಗ್ರಾಮಪಂಚಾಯತಿಗಳಿಗೆ ವರ್ಗಾಯಿಸಲಾಗುತ್ತಿದೆ. ಇಡೀ ಪಂಚಾಯತ್ ಆಡಳಿತ ವ್ಯವಸ್ಥೆಯಲ್ಲಿ ಗ್ರಾಮ ಪಂಚಾಯತಿಗಳು ಒಂದು ಮುಖ್ಯವಾದ ಆಡಳಿತಾತ್ಮಕ ಘಟಕವಾಗಿವೆ. ಗ್ರಾಮಮಟ್ಟದಲ್ಲಿನ ಅವಶ್ಯಕತೆಗಳ ನಿರ್ಧಾರ, ಅದಕ್ಕೆ ಬೇಕಾದ ಸಂಪನ್ಮೂಲಗಳ ಕ್ರೋಡೀಕರಣ, ಗ್ರಾಮಮಟ್ಟದ ಯೋಜನೆಯ ಕಲ್ಪನೆ, ಯೋಜನೆಗಳ ಜಾರಿಯ ಅನುಷ್ಠಾನ, ಆದರ ಮೇಲ್ವಿಚಾರಣೆ ಹೀಗೆ ಇಡೀ ಗ್ರಾಮ ವಿಕಾಸದ ಸರ್ವಸ್ವವನ್ನು ನಿರ್ಧರಿಸುವ ಮಹತ್ವದ ಜವಾಬ್ದಾರಿ ಗ್ರಾಮ ಪಂಚಾಯತಿಗಳ ಮೇಲಿದೆ.

ಗ್ರಾಮ ಪಂಚಾಯತಿಗಳು ಚುನಾಯಿತ ಸಂಸ್ಥೆಗಳಾಗಿದ್ದು, ಇಲ್ಲಿ ಅಧಿಕೃತವಾಗಿ ರಾಜಕೀಯ ಪಕ್ಷಗಳ ಪ್ರವೇಶ ಇಲ್ಲದಿದ್ದರೂ, ಪರೋಕ್ಷವಾಗಿ ರಾಜಕೀಯ ಹಸ್ತಕ್ಷೇಪ ಕಾಣುತ್ತಿರುವುದು ತೀರಾ ವಿಷಾದನೀಯ. ಇದನ್ನು ತಪ್ಪಿಸುವ ಮೂಲಕ ಒಂದು ಹೊಸ ಗ್ರಾಮೀಣ ಜನತಂತ್ರದ ಸಂಸ್ಕೃತಿಯನ್ನು ಬೆಳೆಸಬೇಕಾದದು ನಮ್ಮೆಲ್ಲರ ಕರ್ತವ್ಯವಾಗಿದೆ. ಈ ಮಾತು ಗ್ರಾಮೀಣ ಸಹಕಾರ ಸಂಘಗಳಿಗೂ ಅನ್ವಯವಾಗುತ್ತದೆ. ಗ್ರಾಮೀಣ ಪ್ರದೇಶದ ಸಹಕಾರ ಸಂಘಗಳಲ್ಲಿಯೂ ರಾಜಕೀಯ ಪ್ರವೇಶ ಆಗಿರುವುದು ಸಹಕಾರ ತತ್ವದ ಮೂಲ ಆಶಯವನ್ನು ಭಗ್ನಗೊಳಿಸಿದಂತಾಗಿದೆ.

ಗ್ರಾಮೀಣ ಕಲೆಗಳ ಸಂರಕ್ಷಣೆ ಕೂಡಾ ಗ್ರಾಮೀಣ ಸಂಸ್ಕೃತಿಯನ್ನು ಶಕ್ತಿಯುತಗೊಳಿಸುವಲ್ಲಿ ಬಹಳ ಪ್ರಮುಖವಾದ ಪಾತ್ರವಹಿಸುತ್ತದೆ. ಇಂದು ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವ ಹಾಗೂ ಸಮೂಹ ಮಾಧ್ಯಮಗಳ ದುರ್ಬಳಕೆಗಳಿಂದಾಗಿ ಗ್ರಾಮಗಳ ಮೇಲೆ ಸಾಂಸ್ಕೃತಿಕವಾಗಿ ಒಂದು ರೀತಿಯ ಆಕ್ರಮಣವಾಗುತ್ತಿದೆ.ಇದನ್ನು ತಪ್ಪಿಸುವುದು ನಮ್ಮೆಲ್ಲರ ಕರ್ತವ್ಯ. ಕರ್ನಾಟಕ ಸರ್ಕಾರ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಮೂಲಕ ಗ್ರಾಮಕಲೆಗಳ ವಿಕಾಸಕ್ಕಾಗಿ ಹಲವಾರು ಯೋಜನೆಗಳನ್ನು ಹಮ್ಮಿಕೊಂಡಿದೆ. ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯು ಹಲವಾರು ಯೋಜನೆಯನ್ನು ಹಮ್ಮಿಕೊಂಡು ನಶಿಸಿಹೋಗುತ್ತಿರುವ ಗ್ರಾಮೀಣ ಕಲೆಗಳ ಪುನಶ್ಚೇತನಕ್ಕೆ ಶ್ರಮಿಸುತ್ತಿದೆ. ವಿಶೇಷವಾಗಿ ಕೀರ್ತನ ಕಲೆಯ ಬಗ್ಗೆ ಹೆಚ್ಚಿನ ಮಹತ್ವ ನೀಡಿ, ಹಲವಾರು ಕೀರ್ತನ ಕಲೆಗಳ ಕಮ್ಮಟಗಳನ್ನು ಏರ್ಪಡಿಸಲಾಗುತ್ತಿದೆ. ಗ್ರಾಮೀಣ ಕಲೆಗಳು, ಗ್ರಾಮ ಬದುಕಿನ ಉಸಿರೆಂಬ ಭಾವನೆ ಗ್ರಾಮ ಸಮುದಾಯದಲ್ಲಿ ಮೂಡಬೇಕಾಗಿದೆ.

ಗ್ರಾಮ ಸಂಸ್ಕೃತಿಯ ಸಂರಕ್ಷಣೆಯಲ್ಲಿ ಯುವಕರ ಪಾತ್ರ ವಿಶಿಷ್ಟವಾದದು. ಇತ್ತೀಚೆಗೆ ಕರ್ನಾಟಕ ಸರ್ಕಾರ ಸ್ಥಾಪಿಸಿರುವ ರಾಜೀವ್ ಗಾಂಧಿ ಯವಕರ ಸಂಘವು ಸಂಸ್ಕೃತಿಯ ರಕ್ಷಣೆಯಲ್ಲಿ ಒಂದು ವಿಶಿಷ್ಟ ಪಾತ್ರವನ್ನು ವಹಿಸುವ ಜವಾಬ್ದಾರಿ ಹೊಂದಿದೆ.

ಕರ್ನಾಟಕದ ಒಂದು ಮಹಿಳಾ ಆಂದೋಲನವೇ ಸ್ತ್ರೀಶಕ್ತಿ ಯೋಜನೆ. ಈ ಯೋಜನೆಯಡಿಯಲ್ಲಿ ಇಂದು ಕರ್ನಾಟಕದಲ್ಲಿ ಸಹಸ್ರಾರು ಸ್ತ್ರೀಶಕ್ತಿ ಸಂಘಗಳು ಅಸ್ತಿತ್ವಕ್ಕೆ ಬಂದು ಲಕ್ಷಾಂತರ ಮಹಿಳೆಯರ ಬಾಳಿಗೆ ಒಂದು ಆಶಾಕಿರಣವಾಗಿದೆ. ಸಹಕಾರ, ಸಹಬಾಳ್ವೆ ಮತ್ತು ಸ್ವಾವಲಂಬನೆಯ ಸೂತ್ರಗಳ ಮೇಲೆ ಸ್ಥಾಪಿತವಾಗಿರುವ ಸ್ತ್ರೀಶಕ್ತಿ ಕೇಂದ್ರಗಳು ಗ್ರಾಮಾಂತರ ಪ್ರದೇಶಗಳಲ್ಲಿ ಒಂದು ಕ್ರಾಂತಿಯನ್ನೇ ಮಾಡಿವೆ ಎಂದರೆ ಅತಿಶಯೋಕ್ತಿ ಇಲ್ಲ. ಈ ಸ್ತ್ರೀಶಕ್ತಿ ಸಂಘಗಳು ಗ್ರಾಮೀಣ ಪ್ರದೇಶಗಳಲ್ಲಿ ಅನಕ್ಷರತೆ ನಿವಾರಣೆ, ಅಸ್ಪೃಶ್ಯತೆಯ ನಿರ್ಮೂಲನೆ, ಮದ್ಯಪಾನ ಮತ್ತು ಮಾದಕ ದ್ರವ್ಯಗಳ ಸೇವನೆಯಂತಹ ದುಶ್ಚಟಗಳ ನಿರ್ಮೂಲನೆ ಮುಂತಾದ ಹಲವಾರು ಸೃಜನಶೀಲ ಯೋಜನೆಗಳನ್ನು ಕೈಗೆತ್ತಿಕೊಂಡಿವೆ. ಇದಲ್ಲದೇ ಸ್ತ್ರೀಶಕ್ತಿ ಸಂಘಗಳಿಗೆ ಸರ್ಕಾರ ಸಹ ವಿಶೇಷವಾದ ಪುಸಸ್ಕಾರ ನೀಡಿ ಅಕ್ಷರ ದಾಸೋಹ ಯೋಜನೆ ಮತ್ತು ನ್ಯಾಯ ಬೆಲೆ ಅಂಗಡಿಗಳ ನಿರ್ವಹಣೆ ಮುಂತಾದ ಹಲವಾರು ಸರ್ಕಾರದ ಯೋಜನೆಗಳ ಜವಾಬ್ದಾರಿಗಳನ್ನು ವಹಿಸಿಕೊಟ್ಟಿದೆ. ಗ್ರಾಮ ಸಂಸ್ಕೃತಿಯ ಅತ್ಯಂತ ಪ್ರಮುಖವಾದ ಶಕ್ತಿಯಾದ ಸ್ತ್ರೀಸಮೂಹದ ಜಾಗೃತಿಯಾಗದೆ ಗ್ರಾಮಸಂಸ್ಕೃತಿಯ ರಕ್ಷಣೆ ದುಸ್ಸಾಧ್ಯವಾದ ಮಾತು. ಗ್ರಾಮಗಳಲ್ಲಿನ ಮೂಢನಂಬಿಕೆಗಳ ಉಚ್ಚಾಟನೆ ಒಂದು ದೊಡ್ಡ ಸವಾಲಾಗಿದೆ. ಈ ಸವಾಲನ್ನು ಸಮರ್ಥವಾಗಿ ಎದುರಿಸಬೇಕಾದಲ್ಲಿ ಗ್ರಾಮೀಣ ಜನರಲ್ಲಿ ರಾಷ್ಟ್ರ ಪ್ರೇಮ ಮತ್ತು ಜಾತ್ಯತೀತ ಭಾವನೆಗಳನ್ನು ಮೂಡಿಸುವುದು ತುಂಬಾ ಅವಶ್ಯಕ. ರಾಷ್ಟ್ರ ಕವಿ ಕುವೆಂಪು ಹೇಳಿರುವಂತೆ-

"ಗುಡಿ ಚರ್ಚು ಮಸೀದಿಗಳ ಬಿಟ್ಟು ಹೊರಬನ್ನಿ, ಬಡತನವ ಬುಡಮಟ್ಟ ಕೀಳ ಬನ್ನಿ, ಮತ ಮಾಢ್ಯಗಳ ಮಾರಿಯನು ಹೊರದೂಡಲೈತನ್ನಿ. ಓ ಬನ್ನಿ, ಸೋದರರೇ, ಬೇಗ ಬನ್ನಿ, ವಿಜ್ಞಾನ ದೀವಿಗೆಯ ಹಿಡಿಯ ಬನ್ನಿ," ಮೌಢ್ಯತೆ, ಮೂಢನಂಬಿಕೆಗಳ ಭಾವನೆಗಳನ್ನು ಗ್ರಾಮೀಣ ಬದುಕಿನಿಂದ ಉಚ್ಚಾಟಿಸಬೇಕಾದುದು ಬಹಳ ಅತ್ಯಗತ್ಯವಾಗಿದೆ. ಗ್ರಾಮೀಣ ಬದುಕಿನಲ್ಲಿ ತುಂಬಾ ದಟ್ಟವಾಗಿರುವ ಜಾತಿ ವ್ಯವಸ್ಥೆಯ ಬಗ್ಗೆ ಗ್ರಾಮೀಣ ಜನರು ಎಚ್ಚರವಹಿಸಬೇಕಾಗಿದೆ.

ಗ್ರಾಮಗಳಲ್ಲಿ ಪ್ರತಿ ವಾರದಲ್ಲಿ ಒಂದು ದಿವಸ ಗ್ರಾಮದ ಒಂದು ನಿರ್ದಿಷ್ಟ ಕೆಲಸಕ್ಕಾಗಿ ಗ್ರಾಮದ ಜನರೆಲ್ಲರೂ ಕೂಡಿ ಸಹಕಾರ ತತ್ವದಡಿ ಶ್ರಮದಾನ ಮಾಡುತ್ತಿದ್ದ ಸಂಪ್ರದಾಯ ಇಂದು ಕ್ರಮೇಣ ಮಾಯವಾಗುತ್ತಿದೆ. ಯಾವುದೇ ಸಾಮಾಜಿಕ ಅಗತ್ಯಗಳನ್ನು, ಸೌಲಭ್ಯಗಳನ್ನು ರೂಢಿಸಿಕೊಳ್ಳುವಲ್ಲಿ ಗ್ರಾಮೀಣ ಜನರೆಲ್ಲರು ಭಾವನಾತ್ಮಕವಾಗಿ ಕೈ ಜೋಡಿಸುತ್ತಿದ್ದ ಚಿತ್ರ ಇಂದು ಅಪರೂಪವಾಗುತ್ತಿದೆ. ಗ್ರಾಮೀಣ ಪ್ರದೇಶವಲ್ಲಿ ಪರಸ್ಪರ ಸಹಬಾಳ್ವೆ ಗ್ರಾಮ ಸಂಸ್ಕೃತಿಯ ಆಧಾರ ಸ್ತಂಭ ಎಂಬ ಅರಿವನ್ನು ಗ್ರಾಮೀಣ ಸಮುದಾಯದಲ್ಲಿ ನಾವು ಮೂಡಿಸಬೇಕಾಗಿದೆ.

ಎಲ್ಲಾ ಧರ್ಮಗಳ, ದಾರ್ಶನಿಕರ ವಿಚಾರಧಾರೆಗಳ ಮೂಲ ಧ್ಯೇಯವೇ ಮಾನವನ ವಿಕಾಸ ಎಂಬ ಸಂದೇಶದ ಮೂಲಕ ಭಾವನಾತ್ಮಕ ಸಾಮರಸ್ಯ ಕಾಪಾಡಿಕೊಳ್ಳುವ ಕಡೆ ಹೆಚ್ಚಿನ ಗಮನ ಹರಿಸಬೇಕಾದುದು ಗ್ರಾಮೀಣ ಬದುಕು ಹಸನಾಗಲು ತೀರಾ ಅವಶ್ಯಕ. ನಾಡಪ್ರೇಮ ಹಾಗೂ ರಾಷ್ಟ್ರಪ್ರೇಮವನ್ನು ಬೆಳೆಸಿಕೊಳ್ಳುವುದರ ಜೊತೆಗೆ ನಮ್ಮ ನಾಡಿನ ಸರ್ವಾಂಗೀಣ ವಿಕಾಸಕ್ಕಾಗಿ ದುಡಿಯುವುದೇ ನಾವು ಮಾಡುವ ಪೂಜೆ ಎಂಬ ಭಾವನೆಯನ್ನು ಗ್ರಾಮೀಣ ಜನರಲ್ಲಿ ಮೂಡಿಸಬೇಕಾದುದು ಗ್ರಾಮೀಣ ಸಮುದಾಯದ ನೇತಾರರ ಕರ್ತವ್ಯವಾಗಿದೆ.

ಹಲವಾರು ದೇವರುಗಳನ್ನು ಸೃಷ್ಟಿ ಮಾಡಿಕೊಂಡು ಅವುಗಳ ಹೆಸರಿನಲ್ಲಿ ಮೌಢ್ಯಾಚರಣೆಯನ್ನು ನಡೆಸುತ್ತಿರುವ ಗ್ರಾಮೀಣ ಜನರ ಕಣ್ಣನ್ನು ತೆರೆಸಬೇಕಾದದು ನಮ್ಮೆಲ್ಲರ ಪ್ರಮುಖ ಕರ್ತವ್ಯ. ಈ ದಿಸೆಯಲ್ಲಿ ವಯಸ್ಕರ ಶಿಕ್ಷಣ ಆಂದೋಲನ ಮಹತ್ತರ ಪಾತ್ರ ವಹಿಸಬೇಕಾಗಿದೆ. ಗ್ರಾಮೀಣ ಪ್ರದೇಶದಲ್ಲಿನ ಸಾಕ್ಷರತಾ ಆಂದೋಲನ ಒಂದು ಬೃಹತ್ ಚಳುವಳಿಯಾಗಿ ಗ್ರಾಮೀಣ ಜನತೆಯ ಪಾಲಿಗೆ ಒಂದು ಆಶಾಕಿರಣವಾಗಬೇಕಾಗಿದೆ. ಸಾಕ್ಷರತಾ ಆಂದೋಲನವು ಗ್ರಾಮೀಣ ಜನರ ಜ್ಞಾನದ ಬಾಗಿಲನ್ನು ತೆಗೆಯುವ ಸಾಧನವಾಗಬೇಕಾಗಿದೆ. ಗ್ರಾಮದ ಸಮಸ್ಯೆಗಳ ಬಗ್ಗೆ ಗ್ರಾಮೀಣ ಜನರನ್ನು ಸಂಘಟಿಸುವುದು ಸಾಕ್ಷರತಾ ಆಂದೋಲನದ ಗುರಿಯಾಗಬೇಕಾಗಿದೆ. ಅಲ್ಲದೆ ಗ್ರಾಮೀಣ ಜನರಿಗಾಗಿ ರೂಪಿಸಲ್ಪಟ್ಟ ಹಲವಾರು ರಾಷ್ಟ್ರ ಹಾಗೂ ರಾಜ್ಯದ ಅಭಿವೃದ್ಧಿ ಯೋಜನೆಗಳ ಬಗ್ಗೆ ಗ್ರಾಮೀಣ ಜನರಿಗೆ ಮಾಹಿತಿ ನೀಡಿ ಆ ದಿಸೆಯಲ್ಲಿ ಅವರು ಕಾರ್ಯಪ್ರವೃತ್ತರಾಗಲು ಅವರಿಗೆ ಸ್ಫೂರ್ತಿ ಹಾಗೂ ಮಾರ್ಗದರ್ಶನ ನೀಡುವ ಜವಾಬ್ದಾರಿಯನ್ನು ಸಾಕ್ಷರತಾ ಆಂದೋಲನ ನಿರ್ವಹಿಸಬೇಕಾಗಿದೆ.

ಆಧುನಿಕ ನಾಗರಿಕ ವ್ಯವಸ್ಥೆಯು ಗ್ರಾಮೀಣ ಸಂಸ್ಕೃತಿಯ ಮೇಲೆ ಅಪಾರವಾದ ಪರಿಣಾಮವನ್ನು ಬೀರಿದೆ. ಗ್ರಾಮಗಳಲ್ಲಿ ನಿರ್ದಿಷ್ಟ ದಿನದಂದು ನಡೆಯುತ್ತಿದ್ದ ಸಂತೆಗಳು ಗ್ರಾಮೀಣ ಜನರ ಉತ್ಪನ್ನಗಳ ಮಾರಾಟಕ್ಕೆ ಒಂದು ದೊಡ್ಡ ಸಾಂಸ್ಥಿಕ ವ್ಯವಸ್ಥೆಯಾಗಿತ್ತು. ಆದರೆ ನಗರೀಕರಣದ ಪ್ರಭಾವದಿಂದಾಗಿ ವಾರಕ್ಕೊಮ್ಮೆ ಗ್ರಾಮಗಳಲ್ಲಿ ನಡೆಯುತ್ತಿದ್ದ ಸಂತೆಗಳು ಕ್ರಮೇಣ ಕಣ್ಮರೆಯಾಗುತ್ತಿವೆ. ಇದು ನಿಜವಾಗಲೂ ಆತಂಕಕಾರಿಯಾದ ಬೆಳವಣಿಗೆಯಾಗಿದೆ. ಗ್ರಾಮೀಣ ಸಂಸ್ಕೃತಿಯ ಅತ್ಯಂತ ಪ್ರಮುಖವಾದ ಅಂಶ ಎಂದರೆ ಜಾತ್ರೆಗಳು. ಜಾತ್ರೆಗಳು ಜನಪದ ಸಂಪ್ರದಾಯಗಳಲ್ಲಿ ಒಂದು. ಊರಿನ ಹಬ್ಬ, ಊರದೇವತೆಯ ಆರಾಧನೆ - ಈ ಹೆಸರಿನಲ್ಲಿ ಸುತ್ತಮುತ್ತಲಿನ ಗ್ರಾಮಗಳ ಜನರನ್ನು ಆಕರ್ಷಿಸುತ್ತಿದ್ದ ಜಾತ್ರೆಗಳು ತುಂಬಾ ಪ್ರಖ್ಯಾತವಾಗಿದ್ದವು. ಜಾತ್ರೆಗಳ ಹೆಸರಿನಲ್ಲಿ ನಡೆಯುತ್ತಿದ್ದ ಸಾಂಸ್ಕತಿಕ ಸಂಗತಿಗಳು ಜನರನ್ನು ಮನರಂಜನೆಯತ್ತ ಆಕರ್ಷಿಸುತ್ತಿದ್ದವು. ಜಾತ್ರೆಗಳಿಗೆ ಹೊಂದಿಕೊಂಡಂತೆ ಗ್ರಾಮೀಣ ಆಟಗಳು, ನಾಟಕಗಳು, ಸಂಗೀತ, ಹರಿಕಥೆ, ರಥೋತ್ಸವ, ಓಕುಳಿಯಾಟ, ಹಾಡು, ಕುಣಿತ ಇವುಗಳು ಗ್ರಾಮೀಣ ಜನರ ಇಡೀ ವರ್ಷದ ನೋವುಗಳನ್ನು ಪರಿಹರಿಸುವ, ಮನಸ್ಸಿಗೆ ಮುದಕೊಡುವ ಒಂದು ಸಾಧನಗಳಾಗಿದ್ದವು.

ಊರ ಹಬ್ಬಗಳಲ್ಲಿ ಗ್ರಾಮೀಣ ಜನರ ಸಹಕಾರ, ಸಹಬಾಳ್ವೆ ಎದ್ದು ಕಾಣುವ ಅಂಶ. ಗ್ರಾಮೀಣ ಜನರ ಪರಿಸ್ಪರ ಸಹಬಾಳ್ವೆಯ ತತ್ವವೇ ಗ್ರಾಮೀಣ ಸಂಸ್ಕೃತಿಯ ಮೂಲ ಧ್ಯೇಯ. ಊರಹಬ್ಬಕ್ಕೆ ಧಾರ್ಮಿಕ ಭಾವನೆ ಮೂಲ ಪ್ರೇರಕ ಶಕ್ತಿ. ಗ್ರಾಮದ ಜನರ ಉತ್ಸಾಹ ಉಲ್ಲಾಸದ ಅಭಿವ್ಯಕ್ತಿಗೆ ಇದೊಂದು ಸಾಧನವಾಗಿದ್ದುದರಿಂದ ಎಷ್ಟೇ ಪರಸ್ಪರ ದ್ವೇಷ ಇದ್ದರೂ ಊರ ಹಬ್ಬ ಗ್ರಾಮೀಣ ಜನರೆಲ್ಲರನ್ನು ಭಾವನಾತ್ಮಕವಾಗಿ ಬೆಸೆಯುವ ಒಂದು ಸಾಧನವಾಗಿತ್ತು. ಕ್ರಮೇಣ ಊರ ಜಾತ್ರೆಗಳು ಮಾಯವಾಗುತ್ತಿರುವುದು ಸಹ ಒಂದು ಆತಂಕದ ವಿಷಯವೇ ಆಗಿದೆ.

ಈ ನಾಡಿನ ದಾರ್ಶನಿಕ ಅನುಭಾವಿಗಳಾದ ಶರಣರು, ಹರಾದಾಸರು ಮತ್ತು ಜನಪದ ಸಾಹಿತ್ಯದ ಹರಿಕಾರರು ಮೂಲತಃ ಗ್ರಾಮ ಸಂಸ್ಕೃತಿಯನ್ನೇ ಪ್ರತಿಪಾದಿಸಿದವರು. ಎಲ್ಲ ದಾರ್ಶನಿಕರ ಮೂಲ ಜೀವದ್ರವ್ಯವೇ ಸಂಸ್ಕೃತಿ.

"ನಾವೆಲ್ಲರೂ ಒಂದೇ ಜಾತಿ ಒಂದೇ ಮತ ಒಂದೇ ಕುಲ ನಾವು ಮನುಜರು, ನರರ ನಡುವಿನ ಅಡ್ಡಗೋಡೆಗಳನ್ನು ಕುಟ್ಟಿ ಕೆಡಹುವೆವು, ನಾವು ಪ್ರಳಯರುದ್ರರು" ಎನ್ನುವ ಕವಿವಾಣಿಯಂತೆ ಜಾತ್ಯತೀತ ಸಮಾಜದ, ಪರಸ್ಪರ ಸಹಬಾಳ್ವೆಯ ಒಂದು ವಿಶಿಷ್ಟವಾದ ಗ್ರಾಮಸಂಸ್ಕೃತಿಯ ಆವಿಷ್ಕಾರ ಇಂದಿನ ಅತ್ಯಂತ ಅನಿವಾರ್ಯವಾದ ಅಗತ್ಯತೆಯಾಗಿದೆ.

ನಮ್ಮ ನಾಡಿನ ಮತ್ತು ರಾಷ್ಟ್ರದ ಅನೇಕ ಕ್ಷೇತ್ರಗಳಲ್ಲಿನ ಪ್ರತಿಭೆಗಳು ಮೂಡಿಬಂದಿರುವುದೇ ಗ್ರಾಮಗಳಿಂದ. ಗ್ರಾಮಗಳಿಂದ ಮೂಡಿಬಂದಂತಹ ಪ್ರತಿಭೆಗಳು ನಾಡನ್ನು ಮತ್ತು ರಾಷ್ಟ್ರವನ್ನು ಆಳಬಲ್ಲವು ಎಂಬುದಕ್ಕೆ ಅನೇಕ ಉದಾಹರಣೆಗಳನ್ನು ನೀಡಬಹುದು. ಗ್ರಾಮೀಣ ಪ್ರದೇಶದಲ್ಲಿ ಗ್ರಾಮೀಣ ಸಂಸ್ಕೃತಿಯ ನಡುವೆ ರೂಪಿತವಾದ ನಾಡಿನ ಹಾಗೂ ರಾಷ್ಟ್ರದ ನಾಯಕತ್ವ ದೇಶದಲ್ಲಿ ಹೆಚ್ಚು ಕ್ರಿಯಾಶೀಲವಾಗಿ, ಮಾನವೀಯ ಸ್ಪಂದನದ ಜೊತೆಗೆ ಜನಪ್ರಿಯತೆ ಪಡೆದಿರುವುದನ್ನು ನಾವು ಕಾಣಬಹುದು.

ವೈಶಾಲ್ಯದಿಂ ಬಾಳು, ವಿಸ್ತಾರದಲ್ಲಿ ಬಾಳು,
ಕತ್ತಲೆಯ ಮೊಡಕು ಮೂಲೆಗಳ ಸೇರದಿರು
ಭಾಸ್ಕರನನುಗ್ರಹವೇ ನೂತನ ಜೀವಸತ್ವ
ಮೃತ್ಯು ನಿನಗಲ್ಪತೆಯೋ ಮಂಕುತಿಮ್ಮ

ಎಂಬ ಕವಿವಾಣಿಯಂತೆ, ವಿಶಾಲ ಭಾವನೆಯ ಜಾತ್ಯತೀತ ಕಲ್ಪನೆಯೊಂದಿಗೆ ಮೂಢನಂಬಿಕೆಗಳು, ಪರಸ್ಪರ ದ್ವೇಷ, ಅಸೂಯೆಗಳ ವಿರುದ್ಧ ಸಮರ ಸಾರುವ ಮೂಲಕ ಸಾಮರಸ್ಯ, ಸ್ವಾವಲಂಬನೆ, ಸಹಬಾಳ್ವೆಯ ಉನ್ನತಾದರ್ಶಗಳ ಒಂದು ಸಮಗ್ರವಾದ ಸುಂದರ ಗ್ರಾಮೀಣ ಬದುಕನ್ನು ರೂಪಿಸುವ ಗ್ರಾಮೀಣ ಸಂಸ್ಕೃತಿ ನಮ್ಮೆಲ್ಲರ ಆದರ್ಶವಾಗಬೇಕು. ಅಂತಹ ಗ್ರಾಮೀಣ ಸಂಸ್ಕೃತಿಯ ಸಂರಕ್ಷಣೆ ನಮ್ಮೆಲ್ಲರ ಕರ್ತವ್ಯ ಆಗಬೇಕು.

ಅಂತಹ ಕರ್ತವ್ಯ ನಿರ್ವಹಣೆ ನಮ್ಮ ಪವಿತ್ರವಾದ ಕಾಯಕ ಎಂಬ ಭಾವನೆ ಸರ್ವರಲ್ಲೂ ಮೂಡಲಿ ಎಂಬುದೇ ನಮ್ಮೆಲ್ಲರ ಆಶಯ.




# ಹಿಂದುಳಿದ ತಾಲ್ಲೂಕು ಕನಕಪುರ : ಒಂದು ಅಧ್ಯಯನ

ಡಾ. ಎಸ್. ಆರ್. ಕೇಶವ್
ಪ್ರೊ. ಆರ್. ವೀರಚಾಮಿ

ಪ್ರೊ. ಡಿ.ಎಂ. ನಂಜುಂಡಪ್ಪನವರ ನೇತೃತ್ವದಲ್ಲಿ ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರ ಸಮಿತಿಯನ್ನು ಕರ್ನಾಟಕ ರಾಜ್ಯ ಸರ್ಕಾರವು ನೇಮಿಸಿತು. ಈ ಸಮಿತಿಯು ಕರ್ನಾಟಕದ ಶೇ. ೬೫ರಷ್ಟು ತಾಲ್ಲೂಕುಗಳನ್ನು ಅತ್ಯಂತ ಹೆಚ್ಚು ಹಿಂದುಳಿದ ತಾಲ್ಲೂಕುಗಳೆಂದು, ೩೯ ತಾಲ್ಲೂಕುಗಳನ್ನು (೨೨%) ಹೆಚ್ಚು ಹಿಂದುಳಿದ ತಾಲ್ಲೂಕುಗಳೆಂದು, ೪೦ ತಾಲ್ಲೂಕುಗಳನ್ನು (೨೩%) ಹಿಂದುಳಿದ ತಾಲ್ಲೂಕುಗಳೆಂದು ವಿಭಾಗಿಸಿದ್ದಾರೆ. ಉಳಿದ ೬೧ ತಾಲ್ಲೂಕುಗಳನ್ನು ಸಾಪೇಕ್ಷ ಅಭಿವೃದ್ಧಿ ಹೊಂದಿರುವ ತಾಲ್ಲೂಕುಗಳೆಂದು ತನ್ನ ಅಧ್ಯಯನದಲ್ಲಿ ತಿಳಿಸಿತು.

ಬುದ್ಧಿಜೀವಿಗಳಲ್ಲಿ ಹಾಗೂ ಜನಸಾಮಾನ್ಯರಲ್ಲಿ ಸಮಾನವಾಗಿ ಚರ್ಚಿತವಾದ ಈ ಸಮಿತಿಯ ವರದಿಯಲ್ಲಿ ಅತ್ಯಂತ ಅಚ್ಚರಿ ಹುಟ್ಟಿಸಿದ ಕಠೋರ ಸತ್ಯಗಳು ಹಲವು. ಅವುಗಳಲ್ಲಿ ರಾಜ್ಯದ ಹೃದಯ ಭಾಗವಾದ ರಾಜಧಾನಿಯಿಂದ ಕೇವಲ ೫೫ ಕಿ.ಮೀ. ದೂರದಲ್ಲಿರುವ, ಹೇರಳವಾದ ನೈಸರ್ಗಿಕ ಸಂಪನ್ಮೂಲ ಹೊಂದಿರುವ, ನಿಸರ್ಗದತ್ತ ಚೆಲುವನ್ನು ಮೈದುಂಬಿರುವ, ಭಾರತದ ಅತ್ಯಂತ ದೊಡ್ಡ ಲೋಕಸಭಾಕ್ಷೇತ್ರವೆಂಬ ಹೆಗ್ಗಳಿಕೆಗೆ ಪಾತ್ರವಾದ ಕರ್ನಾಟಕದ ಎರಡನೇ ದೊಡ್ಡ ತಾಲ್ಲೂಕು ಎಂಬ ಹಿರಿಮೆಗೆ ಪಾತ್ರವಾದ ಕನಕಪುರವನ್ನು ಅತ್ಯಂತ ಹೆಚ್ಚು ಹಿಂದುಳಿದ ತಾಲ್ಲೂಕು ಎಂದು ನಿರ್ಧರಿಸಿದ್ದು ಒಂದು.

> *ಹೇರಳವಾದ ನೈಸರ್ಗಿಕ ಸಂಪನ್ಮೂಲ ಹೊಂದಿರುವ, ನಿಸರ್ಗದತ್ತ ಚೆಲುವನ್ನು ಮೈದುಂಬಿರುವ, ಭಾರತದ ಅತ್ಯಂತ ದೊಡ್ಡ ಲೋಕಸಭಾ ಕ್ಷೇತ್ರವೆಂಬ ಹೆಗ್ಗಳಿಕೆಗೆ ಪಾತ್ರವಾದ ಕರ್ನಾಟಕದ ಎರಡನೇ ದೊಡ್ಡ ತಾಲ್ಲೂಕು ಎಂಬ ಹಿರಿಮೆ ಹೊಂದಿರುವ ಕನಕಪುರವನ್ನು ಅತ್ಯಂತ ಹೆಚ್ಚು ಹಿಂದುಳಿದ ತಾಲ್ಲೂಕು ಎಂದು ನಿರ್ಧರಿಸಿದ್ದು ಒಂದು ವಿಪರ್ಯಾಸ.*

ಈ ವಿಚಾರದಲ್ಲಿ ಎದ್ದ ವಾದ-ವಿವಾದಗಳು ಹಲವು. ಹಾಗಾಗಿ ಸತ್ಯ ಶೋಧಿಸಲು ಕೈಗೊಂಡ ಸಂಶೋಧನೆಯ ಫಲವೇ ಈ ಲೇಖನ.

## ಈ ಅಧ್ಯಯನದ ಗುರಿಗಳು :

೧) ತಾಲ್ಲೂಕಿನ ವಿವಿಧ ಶೈಕ್ಷಣಿಕ, ಆರ್ಥಿಕ ಮತ್ತು ಸಾಮಾಜಿಕ ವಲಯಗಳ ಬಗ್ಗೆ ಅಧ್ಯಯನ ಮಾಡುವುದು.

೨) ಹೋಬಳಿವಾರು ಪ್ರಾದೇಶಿಕ ಅಸಮಾನತೆಯನ್ನು ಗುರುತಿಸುವುದು.

೩) ತಾಲ್ಲೂಕಿನ ಹಿಂದುಳಿದಿರುವಿಕೆಗೆ ಕಾರಣಗಳನ್ನು ಗುರುತಿಸುವುದು.

೪) ತಾಲ್ಲೂಕಿನ ಅಭಿವೃದ್ಧಿಗೆ ಸೂಕ್ತ ಸಲಹೆ ಸೂಚನೆ ನೀಡುವುದು.

ಪಟ್ಟಿ ೧

| | **1991** | **2001** |
|---|---|---|
| ಕರ್ನಾಟಕ ಜನಸಂಖ್ಯೆ | 44977201 | 52733958 |
| ಬೆಂಗಳೂರು ಗ್ರಾಮಾಂತರ ಜನಸಂಖ್ಯೆ | | 1881514 |
| ಕನಕಪುರ ತಾಲ್ಲೂಕಿನ ಒಟ್ಟು ಜನಸಂಖ್ಯೆ | 316468 | 337208 |
| ಹೋಬಳಿವಾರು | **1991** | **2001** |
| ಹಾರೋಹಳ್ಳಿ | 40583 | 45385 |
| ಮರಳವಾಡಿ | 40957 | 44861 |
| ಕೋಡಿಹಳ್ಳಿ | 49034 | 49602 |
| ಉಯ್ಯಂಬಳ್ಳಿ | 42891 | 45062 |
| ಸಾತನೂರು | 43987 | 44350 |
| ಕಸಬಾ ಗ್ರಾಮಾಂತರ | 61133 | 60888 |
| ಕಸಬಾ ಪಟ್ಟಣ | 37873 | 47060 |
| ಒಟ್ಟು ಜನಸಂಖ್ಯೆ | **316458** | **337208** |
| ಪುರುಷರ ಜನಸಂಖ್ಯೆ ಕನಕಪುರ | 164728 | 173720 |
| ಮಹಿಳೆಯರ ಜನಸಂಖ್ಯೆ ಕನಕಪುರ | 151740 | 163488 |
| ಪ.ಜಾ, ಪ.ಪ. ಜನಸಂಖ್ಯೆ ಕನಕಪುರ | | 69861 |
| ಎಸ್‌ಸಿ ಜನಸಂಖ್ಯೆ ಕನಕಪುರ | | 64089 |
| ಎಸ್‌ಟಿ ಜನಸಂಖ್ಯೆ ಕನಕಪುರ | | 5772 |
| ಲಿಂಗಾನುಪಾತ ಕನಕಪುರ | 921 | 941 |
| ಲಿಂಗಾನುಪಾತ ಕರ್ನಾಟಕ | 960 | 964 |
| ಲಿಂಗ ಅಂತರ | 79 | 59 |
| ಜೀವಾವಧಿ | | 63 |
| ಕನಕಪುರ ತಾಲ್ಲೂಕಿನಲ್ಲಿ ಸಾಕ್ಷರ ಜನಸಂಖ್ಯೆ | | 169817.95 |



## ಜನಸಂಖ್ಯೆ :

ಕನಕಪುರದ ಜನಸಂಖ್ಯೆಯು ೨೦೦೧ರ ಜನಗಣತಿಯಂತೆ ೩೩೭೨೦೮ರಷ್ಟಿದೆ. ಕಳೆದ ದಶಕಕ್ಕೆ ಹೋಲಿಸಿದರೆ ಇದರ ಬೆಳವಣಿಗೆಯ ದರ ೬.೫ರಷ್ಟಿದೆ. ಹೋಬಳಿವಾರು ಜನಸಂಖ್ಯೆ ವಿಂಗಡಣೆಯನ್ನು ಗಮನಿಸಿದಾಗ ಹಾರೋಹಳ್ಳಿ ಶೇ. ೧೩.೪೬, ಮರಳವಾಡಿ ಶೇ. ೧೩.೩೦, ಕೋಡಿಹಳ್ಳಿ ಶೇ. ೧೪.೭೧, ಉಯ್ಯಂಬಳ್ಳಿ ಶೇ. ೧೩.೩೬, ಸಾತನೂರು ಶೇ. ೧೩.೧೫, ಕಸಬಾ ಗ್ರಾಮೀಣ ಶೇ. ೧೮.೬, ಕಸಬಾ ಪಟ್ಟಣ ಶೇ. ೧೩.೯೬ರಷ್ಟು ಜನಸಂಖ್ಯೆಯನ್ನು ಹೊಂದಿದೆ.

ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಂಖ್ಯೆಯು ೨೦೦೧ರಲ್ಲಿ ೬೯೮೬೧ರಷ್ಟಿದ್ದು, ಇದು ಕನಕಪುರ ತಾಲ್ಲೂಕಿನ ಜನಸಂಖ್ಯೆಯ ಶೇ. ೨೦.೭೨ರಷ್ಟಿದೆ. ಇದರಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆಯು ೬೪೦೮೯ ಇದ್ದು, ಇದು ಕನಕಪುರ ತಾಲ್ಲೂಕಿನ ಜನಸಂಖ್ಯೆಯ ಪ್ರತಿಶತ ೧೯ರಷ್ಟಿದೆ.

## ಲಿಂಗಾನುಪಾತ :

ಕನಕಪುರ ತಾಲ್ಲೂಕಿನ ಜನಸಂಖ್ಯೆಯಲ್ಲಿ ಗಂಡಸರು ಶೇ. ೫೧.೨ ಇದ್ದು, ಮಹಿಳೆಯರು ಶೇ. ೪೮.೪೮ ಇದ್ದಾರೆ.

ಈ ತಾಲ್ಲೂಕಿನ ಲಿಂಗಾನುಪಾತವು ೯೪೧ ಇದ್ದು, ಇದು ೧೯೯೧ರ ಅನುಪಾತಕ್ಕಿಂತ (೯೨೧) ಉತ್ತಮವಾಗಿದ್ದರೂ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಲಿಂಗಾನುಪಾತ ೯೫೩ ಮತ್ತು ಕರ್ನಾಟಕ ರಾಜ್ಯದ ಲಿಂಗಾನುಪಾತದ ಸರಾಸರಿ ೯೬೪ಕ್ಕಿಂತ ಕಡಿಮೆಯಾಗಿದೆ. ಬಹುಶಃ ಬೆಂಗಳೂರಿನ ಜನರ ಬುದ್ಧಿವಂತ ಗಾಳಿ ಹಾಗೂ ಬೆಂಗಳೂರಿನ ಹೆಸರುವಾಸಿ, ಹೈಟೆಕ್ ನರ್ಸಿಂಗ್ ಹೋಂಗಳು ಕಾರಣವಿರಬಹುದು.

## ಸಾಕ್ಷರತೆ :

ತಾಲ್ಲೂಕಿನ ಇತಿಹಾಸದಲ್ಲಿ ಪ್ರಾಥಮಿಕ ಶಿಕ್ಷಣದ ಮಹತ್ವದ ಕುರುಹುಗಳನ್ನು ೧೮೮೦ರಲ್ಲಿಯೇ ಕಾಣಬಹುದಾದರೂ, ಇಂದಿಗೂ ಶಿಕ್ಷಣ ಕ್ಷೇತ್ರದಲ್ಲಿ ಫಲ ಕಂಡಿಲ್ಲ. ಕನಕಪುರ ತಾಲ್ಲೂಕಿನಲ್ಲಿ ಇಂದಿಗೂ ಪ್ರತಿ ಇಬ್ಬರಲ್ಲಿ ಒಬ್ಬರು ಅನಕ್ಷರಸ್ಥರಿದ್ದಾರೆ. ರಾಜ್ಯದ ಸಾಕ್ಷರತೆಯು ೨೦೦೧ರ ಜನಗಣತಿಯಂತೆ ಶೇ. ೬೭.೦೪ರಷ್ಟಿದ್ದು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಸಾಕ್ಷರತೆಯ ಸರಾಸರಿ ರಾಜ್ಯ ಸರಾಸರಿಗಿಂತ ಸ್ವಲ್ಪ ಕಡಿಮೆ ಅಂದರೆ ಶೇ. ೬೫ರಷ್ಟಿದೆ. ದುರದೃಷ್ಟವಶಾತ್ ಕನಕಪುರ ತಾಲ್ಲೂಕಿನ ಸಾಕ್ಷರತಾ ಪ್ರಮಾಣ ಕೇವಲ ಶೇ. ೫೦.೩೬ ಇದೆ. ಇದರಲ್ಲಿ ಪುರುಷರ ಸಾಕ್ಷರತಾ ಪ್ರಮಾಣ ಶೇ. ೬೦. ಮಹಿಳೆಯರ ಸಾಕ್ಷರತಾ ಪ್ರಮಾಣ ಶೇ. ೪೦. ಹೋಬಳಿವಾರು ಸಾಕ್ಷರತಾ ಪ್ರಮಾಣ ಗಮನಿಸಿದರೆ, ಹಾರೋಹಳ್ಳಿ-ಪುರುಷರು ಶೇ. ೮.೦೧, ಮಹಿಳೆಯರು ಶೇ. ೫.೪೨. ಮರಳವಾಡಿ- ಪುರುಷರು ಶೇ. ೮.೦೪, ಮಹಿಳೆಯರು ಶೇ. ೫.೨೭. ಕೋಡಿಹಳ್ಳಿ-ಪುರುಷರು ಶೇ. ೮.೮೨, ಮಹಿಳೆಯರು ಶೇ. ೫.೮೭. ಉಯ್ಯಂಬಳ್ಳಿ-ಪುರುಷರು ಶೇ. ೭.೮, ಮಹಿಳೆಯರು ಶೇ. ೫.೩೧. ಕಸಬಾ-ಪುರುಷರು ಶೇ. ೧೯.೨೩, ಮಹಿಳೆಯರು ಶೇ. ೧೨.೭೭. ತಾಲ್ಲೂಕಿನ ಎಲ್ಲಾ ಹೋಬಳಿಗಳು ಸಾಕ್ಷರತೆಯ ಪ್ರಮಾಣದಲ್ಲಿ ಬಹುತೇಕ ಸಾಮ್ಯತೆಯನ್ನು ಸಾಧಿಸಿವೆ. ತಾಲ್ಲೂಕಿನ ಹಿಂದುಳಿದಿರುವಿಕೆಗೆ ಇದು ಅತ್ಯಂತ ಪ್ರಮುಖ ಕಾರಣ ಎಂದು ಹೇಳಿದರೆ ಉತ್ಪ್ರೇಕ್ಷೆಯಾಗುವುದಿಲ್ಲ.




## ಶಿಕ್ಷಣ :

ಸ್ವಾತಂತ್ರ್ಯ ಪೂರ್ವದಲ್ಲೇ ೧೨ ಪ್ರಾಥಮಿಕ ಶಾಲೆಗಳು ಹಾಗೂ ಒಂದು ಪ್ರೌಢಶಾಲೆಯಿದ್ದ ಹೆಗ್ಗಳಿಕೆಗೆ ಪಾತ್ರವಾಗಿದ್ದ ಕನಕಪುರ ತಾಲ್ಲೂಕಿನಲ್ಲಿ ಈ ಶೈಕ್ಷಣಿಕ ವರ್ಷದಲ್ಲಿ ೪೭೮ ಪ್ರಾಥಮಿಕ ಶಾಲೆಗಳು, ೪೪ ಪ್ರೌಢಶಾಲೆಗಳು, ೪ ಕಾಲೇಜುಗಳು ಹಾಗೂ ೬ ವೃತ್ತಿಪರ ಕಾಲೇಜುಗಳಿರುವುದು ಆಶ್ಚರ್ಯವನ್ನೇನೂ ಉಂಟುಮಾಡುವುದಿಲ್ಲ. ಆದರೆ ಶೈಕ್ಷಣಿಕ ಗುಣಮಟ್ಟ, ದಾಖಲಾತಿ, ಮೂಲಭೂತ ಸೌಕರ್ಯ ಹಾಗೂ ಫಲಿತಾಂಶವನ್ನು ಅವಲೋಕಿಸಿದರೆ ಮಾತ್ರ ಬೇಸರವಾಗುತ್ತದೆ.

ಪಟ್ಟಿ ೨

| ಕನಕಪುರ ತಾಲ್ಲೂಕಿನ ಶಾಲೆಗಳು | ಪ್ರಾಥಮಿಕ ಶಾಲೆ | ಹೈಸ್ಕೂಲು | ಕಾಲೇಜುಗಳು | ವೃತ್ತಿಶಿಕ್ಷಣ |
|---|---|---|---|---|
| ಹೋಬಳಿವಾರು ಶಾಲೆಗಳು | 2003-04 | | | |
| ಹಾರೋಹಳ್ಳಿ | 72 | 5 | 1 | 1 |
| ಮರಳವಾಡಿ | 79 | 6 | 0 | 0 |
| ಕೋಡಿಹಳ್ಳಿ | 72 | 5 | 0 | 0 |
| ಉಯ್ಯಂಬಳ್ಳಿ | 60 | 7 | 0 | 1 |
| ಸಾತನೂರು | 63 | 6 | 1 | 1 |
| ಕಸಬಾ ಗ್ರಾಮಾಂತರ | 97 | 5 | 0 | 0 |
| ಕಸಬಾ ಪಟ್ಟಣ | 35 | 10 | 2 | 3 |
| ಒಟ್ಟು | 478 | 44 | 4 | 6 |

೨೦೦೪-೦೫ರ ಶೈಕ್ಷಣಿಕ ವರ್ಷದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ೪೩೧೭೭ ವಿದ್ಯಾರ್ಥಿಗಳು ದಾಖಲಾಗಿದ್ದು, ಇದು ೨೦೦೩-೦೪ರ ಶೈಕ್ಷಣಿಕ ವರ್ಷಕ್ಕೆ ಹೋಲಿಸಿದರೆ ಶೇ. ೨.೩ರಷ್ಟು ಕಡಿಮೆಯಾಗಿದೆ. ಅದರಂತೆಯೇ, ಕಾಲೇಜು ಶಿಕ್ಷಣದಲ್ಲಿ ಶೇ. ೪.೫ರಷ್ಟು ವೃತ್ತಿ ತರಬೇತಿ ಕಾಲೇಜುಗಳಲ್ಲಿ ಶೇ. ೨.೫ರಷ್ಟು ದಾಖಲಾತಿ ಕಡಿಮೆಯಾಗಿದೆ. ಸ್ಥಳೀಯ ಶಿಕ್ಷಣಾಧಿಕಾರಿಗಳ ಕಛೇರಿಯ ಅಂಕಿ ಅಂಶಗಳನ್ನು ನಂಬುವುದಾದರೆ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಲ್ಲಿ ದಾಖಲಾತಿ ಹೊಂದಿ ಬಿಟ್ಟ ವಿದ್ಯಾರ್ಥಿಗಳ ಸಂಖ್ಯೆಯು ೧೭೬ರಿಂದ ೭೮ಕ್ಕೆ ಹಾಗೂ ೭೬ ರಿಂದ ೫೨ಕ್ಕೆ ಇಳಿದಿರುವುದೇ ಒಂದು ಸಮಾಧಾನದ ಸಂಗತಿಯಾಗಿದೆ.

ಕರ್ನಾಟಕದಲ್ಲಿ ಒಟ್ಟು ೫೦೬೯೨ ಪ್ರಾಥಮಿಕ ಶಾಲೆಗಳಿದ್ದು, ಅವುಗಳಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಶೇ. ೫.೩೬ ರಷ್ಟು ಶಾಲೆಗಳಿವೆ (೨೭೧೯). ಅದರಲ್ಲಿ ಶೇ. ೧೮ರಷ್ಟು ಪ್ರಾಥಮಿಕ ಶಾಲೆಗಳು ಕನಕಪುರದಲ್ಲಿವೆ. ಹಾಗೆಯೇ ಕರ್ನಾಟಕದಲ್ಲಿ ೮೫೭೫ ಪ್ರೌಢಶಾಲೆಗಳಿದ್ದು, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಭಾಗದಲ್ಲಿ ಶೇ. ೪ರಷ್ಟು ಅಂದರೆ ೩೩೫ ಶಾಲೆಗಳಿವೆ. ಕನಕಪುರದಲ್ಲಿ ೪೪ ಪ್ರೌಢಶಾಲೆಗಳಿದ್ದು, ಇದು ಜಿಲ್ಲೆಯ ಪ್ರೌಢಶಾಲೆಯಲ್ಲಿನ ಶೇ. ೧೩ ರಷ್ಟಿದೆ.

೨೦೦೩-೦೪ರ ಶೈಕ್ಷಣಿಕ ವರ್ಷದ ೧೦ನೇ ತರಗತಿಯ ಪರೀಕ್ಷೆಗೆ ೩೩೪೩ ವಿದ್ಯಾರ್ಥಿಗಳು ಹಾಜರಾಗಿದ್ದು, ಅದರಲ್ಲಿ ಬಾಲಕಿಯರು (೧೬೯೪) ಬಾಲಕರಿಗಿಂತ (೧೬೪೯) ಹೆಚ್ಚಿನ ಸಂಖ್ಯೆಯಲ್ಲಿ ಇದ್ದಿದ್ದರ ಜೊತೆಗೆ ಫಲಿತಾಂಶದಲ್ಲಿಯೂ ಮೇಲುಗೈ ಸಾಧಿಸಿದ್ದಾರೆ. ಬಾಲಕರಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಲ್ಲಿ ಶೇಕಡವಾರು ಉತ್ತೀರ್ಣತೆ ಹೆಚ್ಚಾಗಿದ್ದು, ಶೇ. ೭೧ರಷ್ಟಿದೆ. ಸಾಮಾನ್ಯ ವರ್ಗದ ವಿದ್ಯಾರ್ಥಿಗಳು ಶೇ. ೬೬. ಪರಿಶಿಷ್ಟ ಜಾತಿ ವಿದ್ಯಾರ್ಥಿಗಳು ಶೇ. ೫೬ರಷ್ಟಿದ್ದಾರೆ. ವಿದ್ಯಾರ್ಥಿನಿಯರಲ್ಲಿ ಸಾಮಾನ್ಯ ವರ್ಗಕ್ಕೆ ಸೇರಿದ ವಿದ್ಯಾರ್ಥಿನಿಯರ ಉತ್ತೀರ್ಣತೆ ಪ್ರಮಾಣ ಶೇ. ೬೫, ಪರಿಶಿಷ್ಟ ಪಂಗಡದ ವಿದ್ಯಾರ್ಥಿನಿಯರು ಶೇ. ೬೨.೫, ಪರಿಶಿಷ್ಟ ಜಾತಿ ವಿದ್ಯಾರ್ಥಿನಿಯರು ಶೇ. ೬೧.೫ರಷ್ಟಿದೆ.

೨೦೦೪ರ ಪಿ.ಯು.ಸಿ. ಪರೀಕ್ಷೆಯಲ್ಲಿ ೧೧೩೪ ವಿದ್ಯಾರ್ಥಿಗಳು ಪರೀಕ್ಷೆಗೆ ಹಾಜರಾಗಿದ್ದು, ಅದರಲ್ಲಿ ಶೇ. ೫೧.೪೯ರಷ್ಟು ವಿದ್ಯಾರ್ಥಿಗಳು ಉತ್ತೀರ್ಣರಾಗಿದ್ದರೆ, ಪ್ರತಿಷ್ಠಿತ ರೂರಲ್ ಕಾಲೇಜಿನ ಫಲಿತಾಂಶ ಶೇ. ೪೭.೪೬ಕ್ಕೆ ಇಳಿದಿದೆ.

**ಪ್ರಾಥಮಿಕ ಶಾಲಾ ಸಮಸ್ಯೆಗಳು :**

ಕನಕಪುರದಲ್ಲಿರುವ ೪೭೮ ಪ್ರಾಥಮಿಕ ಶಾಲೆಗಳಲ್ಲಿ ೩೨೮ ಶಾಲೆಗಳಲ್ಲಿ ೪ಕ್ಕಿಂತ ಕಡಿಮೆ ಕೊಠಡಿಗಳಿರುವಂತಹ ಶೋಚನೀಯ ಪರಿಸ್ಥಿತಿಯಿದೆ. ಮಾಧ್ಯಮಿಕ ಶಾಲೆಗಳಲ್ಲಿಯೂ ಸಹ ಈ ಪರಿಸ್ಥಿತಿ ಭಿನ್ನವಾಗಿಲ್ಲ. ೧೧೦ ಶಾಲೆಗಳನ್ನು ೭ ಕೊಠಡಿಗಳಿಗಿಂತ ಕಡಿಮೆ ಇರುವ ಶಾಲೆಗಳು ಎಂದು ಗುರುತಿಸಲಾಗಿದೆ. ೪೧೯ ಪ್ರಾಥಮಿಕ ಶಾಲೆಗಳು ಖಾಸಗಿ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿವೆ. ೨೨ ಪ್ರೌಢಶಾಲೆಗಳು ಖಾಸಗಿ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿವೆ.

ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರು ೧೪೩ ಶಾಲೆಗಳಲ್ಲಿ ಇಲ್ಲ. ೧೯೨ ಶಾಲೆಗಳಲ್ಲಿ ಶೌಚಾಲಯಗಳಿಲ್ಲ. ೧೪೨ ಶಾಲೆಗಳಲ್ಲಿ ವಿದ್ಯುಚ್ಛಕ್ತಿಯ ಸೌಲಭ್ಯವಿಲ್ಲ. ಇವೆಲ್ಲವೂ ಸಾಲದಂತೆ ಪ್ರಾಥಮಿಕ ಶಾಲೆಯಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಯ ಸಂಖ್ಯೆ ೧೨೭, ಹಾಗೆಯೇ ಪ್ರೌಢಶಾಲೆಯಲ್ಲಿಯೂ ಸಹ ೪೨ ಹುದ್ದೆಗಳು ಖಾಲಿ ಇವೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸುಮಾರು ೨೫೦೦ಕ್ಕಿಂತ ಹೆಚ್ಚು ವಿದ್ಯಾರ್ಥಿಗಳು ಕನಕಪುರದಲ್ಲಿ ವ್ಯಾಸಂಗ ಮಾಡುತ್ತಿದ್ದರೂ, ಕೇವಲ ೧೫ ಪರಿಶಿಷ್ಟ ಜಾತಿ ಮತ್ತು ಪಂಗಡದ ಹಾಸ್ಟಲ್‌ಗಳಿವೆ. ಇದರಲ್ಲಿ ಎರಡು ಹಾಸ್ಟಲ್‌ಗಳು ಮಾತ್ರ ವಿದ್ಯಾರ್ಥಿನಿಯರುಗಳದ್ದಾಗಿದೆ. ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೂ ಸಹ ಕೇವಲ ಎರಡು ಹಾಸ್ಟಲ್‌ಗಳಿವೆ.

**ಬಡತನ :**

ಕನಕಪುರ ತಾಲ್ಲೂಕಿನಲ್ಲಿ ಶೇ. ೨೧.೪ ರಷ್ಟು ಕುಟುಂಬಗಳು ಬಡತನದ ರೇಖೆಗಿಂತ ಕೆಳಗಿವೆ. ಹೋಬಳಿವಾರು ಬಡತನ ರೇಖೆಗಿಂತ ಕಡಿಮೆ ಇರುವ ಕುಟುಂಬಗಳನ್ನು ಗಮನಿಸಿದರೆ-ಕಸಬಾ ಗ್ರಾಮಾಂತರದಲ್ಲಿ ಶೇ. ೧೯ರಷ್ಟು, ಕೋಡಿಹಳ್ಳಿಯಲ್ಲಿ

ಶೇ. ೧೫.೨೮, ಕಸಬಾ ಪಟ್ಟಣ ಶೇ. ೧೩.೬೭, ಸಾತನೂರು ಶೇ. ೧೩.೧೭, ಹಾರೋಹಳ್ಳಿ ಶೇ. ೧೩.೧೦, ಉಯ್ಯಂಬಳ್ಳಿ ಶೇ. ೧೩.೦೨, ಮರಳವಾಡಿ ಶೇ. ೧೨.೭೮ರಷ್ಟಿದೆ.

ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿಗೆ ೬೬೦೪೮ ಹಳದಿ ಪಡಿತರ ಚೀಟಿಯನ್ನು ವಿತರಿಸಲಾಗಿದೆ. ತಾಲ್ಲೂಕು ಪಂಚಾಯಿತಿಯವರ ಆಹಾರ ವಿಭಾಗದ ಅಂಕಿ ಅಂಶಗಳ ಪ್ರಕಾರ ಕೋಡಿಹಳ್ಳಿಯಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಸಂಖ್ಯೆಗಿಂತ (೧೧೦೩೮). ಬಿ.ಪಿ.ಎಲ್. ಪಡಿತರ ಚೀಟಿಗಳನ್ನು (೧೧೭೫೯) ಹೆಚ್ಚಾಗಿ ಹಂಚಿರುವುದು ಕಂಡುಬಂದಿದೆ. ಹಾಗೆಯೇ ಉಯ್ಯಂಬಳ್ಳಿಯಲ್ಲಿ ೫೬೫ ಹಾಗೂ ಸಾತನೂರಿನಲ್ಲಿ ೩೯ ಅಧಿಕ ಬಡತನರೇಖೆ ಕೆಳಗಿನ ಪಡಿತರ ಚೀಟಿಗಳನ್ನು ಹಂಚಿರುವುದು ಕಂಡುಬಂದಿದೆ. ಇದು ಆಡಳಿತ ಕಾರ್ಯವೈಖರಿಗೆ ಕನ್ನಡಿ ಹಿಡಿದಂತಿದೆ.

### ವಸತಿ :

ಸರ್ಕಾರದ ವಿವಿಧ ಯೋಜನೆಗಳ ಅಡಿಯಲ್ಲಿ ೧೯೯೯-೨೦೦೩ರಲ್ಲಿ ಆಶ್ರಯ (೨೦೦೧-೦೩), ಇಂದಿರಾ ಅವಾಜ್ ಯೋಜನೆ, ಅಂಬೇಡ್ಕರ್ ಯೋಜನೆ, ರಾಜೀವ್‌ಗಾಂಧಿ ವಸತಿ ಯೋಜನೆ, ಆಶ್ರಯ ನವಗ್ರಾಮ ಯೋಜನೆ, (೨೦೦೧-೦೩) ಅಡಿಯಲ್ಲಿ ೭೩೦೬ ಮನೆಗಳನ್ನು ನಿರ್ಮಿಸಿದ್ದಾರೆ. ಇದರಿಂದ ಬಡತನದ ಕೆಳಗಿರುವ ಶೇ. ೧೦ ರಷ್ಟು ಜನರಿಗೆ ಸೂರು ಒದಗಿಸಿದಂತಾಗಿದೆ.

ಪಟ್ಟಿ ೩

| ಬಡತನ ರೇಖೆಗಿಂತ ಕೆಳಗಿರುವ ಜನರ (೨೦೦೪) | ಕುಟುಂಬಗಳು | ಬಿಪಿಎಲ್ ಕಾರ್ಡುಗಳು |
|---|---|---|
| ಹಾರೋಹಳ್ಳಿ | 9465 | 7888 |
| ಮರಳವಾಡಿ | 9234 | 8340 |
| ಕೋಡಿಹಳ್ಳಿ | 11038 | 11759 |
| ಉಯ್ಯಂಬಳ್ಳಿ | 9407 | 9972 |
| ಸಾತನೂರು | 9516 | 9555 |
| ಕಸಬಾ ಗ್ರಾಮಾಂತರ | 13721 | 13107 |
| ಕಸಬಾ ಪಟ್ಟಣ | 9878 | 5427 |
| ಒಟ್ಟು | 72259 | 66048 |



## ಕುಡಿಯುವ ನೀರು :

೨೦೦೩-೦೪ ಹಣಕಾಸು ವರ್ಷದಲ್ಲಿ ೬೬ ಕೊಳವೆಬಾವಿಗಳನ್ನು ಕೊರೆಯಲಾಗಿದೆ. ನಲ್ಲಿ (ಪೈಪು) ನೀರು ಸರಬರಾಜು ಯೋಜನೆಯಲ್ಲಿ ೮ ಹಳ್ಳಿಗೆ ನೀರನ್ನು ಒದಗಿಸಲಾಗಿದೆ. ಸಣ್ಣ ನೀರಾವರಿ ಸರಬರಾಜು ಯೋಜನೆಯಡಿಯಲ್ಲಿ ೩೬ ಹಳ್ಳಿಗಳಿಗೆ ನೀರನ್ನು ಒದಗಿಸಲಾಗಿದೆ. ಆದರೂ ೨೦೦೩-೦೪ರ ಬೇಸಿಗೆಯಲ್ಲಿ ೫೫ ಹಳ್ಳಿಗಳು ಕುಡಿಯುವ ನೀರಿನ ತೀವ್ರ ಬವಣೆಯನ್ನು ಅನುಭವಿಸಿವೆ. ೪೦ ಎಲ್.ಪಿ.ಸಿ.ಡಿ.ಗಿಂತ ಕಡಿಮೆ ಕುಡಿಯುವ ನೀರಿನ ಸರಬರಾಜು ಆಗುತ್ತಿರುವ ಹಳ್ಳಿಗಳ ಸಂಖ್ಯೆ ೨೬. ಸರ್ಕಾರದ ನಿಯಮದಂತೆ ಪ್ರತಿಯೊಬ್ಬರಿಗೂ ೫೫ ಎಲ್‌ಪಿಸಿಡಿ ನೀರನ್ನು ಒದಗಿಸಬೇಕಾಗುತ್ತದೆ.

## ಉದ್ಯೋಗ :

ಕನಕಪುರ ತಾಲ್ಲೂಕಿನಲ್ಲಿ ೪೯೬೮೨ ಕೃಷಿ ಕಾರ್ಮಿಕರಿದ್ದಾರೆ. ಜಿಲ್ಲಾ ಪಂಚಾಯಿತಿಯ ವಿವಿಧ ಕಾಮಗಾರಿ ಯೋಜನೆಯಡಿಯಲ್ಲಿ ೨೫೩೫೫ ಜನಕ್ಕೆ ಉದ್ಯೋಗವನ್ನು ಒದಗಿಸಲಾಗಿದೆ. ರೇಷ್ಮೆ ಕೃಷಿಯಿಂದ ೨೬೪೭೪ ಜನಕ್ಕೆ ಉದ್ಯೋಗ ದೊರಕಿದೆ. ಸರ್ಕಾರದ ವಿವಿಧ ಕಾಮಗಾರಿಗಳಾದ ಇಎಎಸ್, ಎಸ್‌ಜಿಆರ್‌ವೈ, ಡಿಪಿಎಪಿ, ಐಡಬ್ಲ್ಯುಡಿಪಿ, ಎಸ್‌ಇಪಿ, ಪಿಎಸ್‌ಪಿ, ಎನ್‌ಡಬ್ಲು ಡಿಪಿಆರ್‌ಎ ಮೂಲಕ ೩೦೨೯೭೦ ಮಾನವ ದಿನಗಳ ಉದ್ಯೋಗವನ್ನು ಸೃಷ್ಟಿಸಲಾಗಿದೆ.

ಪಟ್ಟಿ ೪

ವಿವಿಧ ಸರಕಾರಿ ಯೋಜನೆಗಳ ಆಡಿಯಲ್ಲಿ (ಜಲಾನಯನ ಇಲಾಖೆ, ಕನಕಪುರ ಬೆಂಗಳೂರು) ಸೃಷ್ಟಿಸಲಾದ ಉದ್ಯೋಗ (ಮಾನವ ದಿನಗಳು)

| ಹೋಬಳಿ | ಇಎಎಸ್ / ಎಸ್‌ಜಿಆರ್ | ಡಿಪಿಎಪಿ | ಐಡಬ್ಲ್ಯುಪಿಆರ್ | ಎಸ್‌ಸಿಪಿ | ಟಿಎನ್‌ಪಿ | ಎನ್‌ಡಬ್ಲ್ಯುಡಿಪಿಎಫ್ | ಒಟ್ಟು |
|---|---|---|---|---|---|---|---|
| ಕಸಬಾ | 25668 | 31654 | 0 | 3300 | 200 | 0 | 60822 |
| ಕೋಡಿಹಳ್ಳಿ | 27879 | 27896 | 26041 | 1946 | 65 | 0 | 83827 |
| ಸಾತನೂರು | 16614 | 16246 | 0 | 0 | 0 | 0 | 32860 |
| ಮರಳವಾಡಿ | 13206 | 26404 | 0 | 0 | 143 | 30720 | 70473 |
| ಹಾರೋಹಳ್ಳಿ | 15075 | 7650 | 0 | 0 | 0 | 0 | 22725 |
| ಉಯ್ಯಂಬಳ್ಳಿ | 8653 | 23610 | 0 | 0 | 0 | 0 | 32263 |
| ಒಟ್ಟು | 107095 | 133460 | 26041 | 5246 | 408 | 30720 | 302970 |

## ಆರೋಗ್ಯ :

ಕನಕಪುರ ತಾಲ್ಲೂಕಿನಲ್ಲಿ ೪೯ ಎಎನ್‌ಎಂ ಕೇಂದ್ರಗಳು, ೧೩ ಪಿಎಚ್‌ಸಿಗಳಿದ್ದು, ೧೬ ಜನ ಸರ್ಕಾರಿ ವೈದ್ಯರು, ೧೬ ಜನ ಖಾಸಗಿ ವೈದ್ಯರು, ೧೩ ಜನ ಆರ್‌ಎಂಪಿಗಳು ಕಾರ್ಯನಿರ್ವಹಿಸುತ್ತಿದ್ದಾರೆ. ಹಾರೋಹಳ್ಳಿಯಲ್ಲಿ ೬೪೮೮೪ ಜನಕ್ಕೆ ಒಂದು ಎಎನ್‌ಎಂ, ೨೨೬೯೨ ಜನಕ್ಕೆ ಒಂದು ಪಿಎಚ್‌ಸಿ, ಮರಳವಾಡಿಯಲ್ಲಿ ೪೪೮೬ ಜನಕ್ಕೆ ಒಂದು ಎಎನ್‌ಎಂ, ೨೨೪೩೦ ಜನಕ್ಕೆ ಒಂದು ಪಿಎಚ್‌ಸಿ. ಕೋಡಿಹಳ್ಳಿಯಲ್ಲಿ ೪೯೬೦ ಜನಕ್ಕೆ ಒಂದು ಎಎನ್‌ಎಂ, ೧೪೫೩೪ ಜನಕ್ಕೆ ಒಂದು ಪಿಎಚ್‌ಸಿ. ಉಯ್ಯಂಬಳ್ಳಿಯಲ್ಲಿ ೪೫೦೬ ಜನಕ್ಕೆ ಒಂದು ಎಎನ್‌ಎಂ, ೧೧೨೬೫ ಒಂದು ಪಿಎಚ್‌ಸಿ. ಸಾತನೂರಿನಲ್ಲಿ ೩೯೯೬ ಜನಕ್ಕೆ ಒಂದು ಎಎನ್‌ಎಂ ಹಾಗೂ ೨೨೧೭೫ ಜನಕ್ಕೆ ಒಂದು ಪಿಎಚ್‌ಸಿ ಸೌಲಭ್ಯ ಒದಗಿಸಲಾಗಿದೆ. ರಾಜ್ಯದ ಸರಾಸರಿಯು ೫೦೦೦ಜನಕ್ಕೆ ೧.೩೮ ವೈದ್ಯರಾದರೆ, ಹಾರೋಹಳ್ಳಿಯಲ್ಲಿ ೭೫೬೪ ಜನಕ್ಕೆ ಒಬ್ಬ ವೈದ್ಯರಿದ್ದು, ಮರಳವಾಡಿಯಲ್ಲಿ ೯೭೨, ಕೋಡಿಹಳ್ಳಿಯಲ್ಲಿ ೪೯೬, ಉಯ್ಯಂಬಳ್ಳಿಯಲ್ಲಿ ೭೫೧೦, ಸಾತನೂರಿನಲ್ಲಿ ೮೮೭೦ ಜನಕ್ಕೆ ಒಬ್ಬ ವೈದ್ಯರಿದ್ದಾರೆ. ಇಂತಹ ದುಸ್ಥಿತಿಯಲ್ಲಿಯೂ ಮರಳವಾಡಿ, ಉಯ್ಯಂಬಳ್ಳಿ ಮತ್ತು ಸಾತನೂರಿನಲ್ಲಿ ಒಂದೊಂದು ವೈದ್ಯರ ಹುದ್ದೆ ಖಾಲಿ ಇದೆ. ಪ್ರಯೋಗ ಶಾಲಾ ತಜ್ಞರು ಮರಳವಾಡಿಯಲ್ಲಿ ೩, ಕೋಡಿಹಳ್ಳಿ ೧, ಸಾತನೂರು ೧, ಹಾರೋಹಳ್ಳಿಯಲ್ಲಿ ೧ ಹುದ್ದೆಗಳು ಖಾಲಿ ಇವೆ. ಪ್ಯಾರಾ ಮೆಡಿಕಲ್ ಸಿಬ್ಬಂದಿಯ ಹುದ್ದೆಗಳಲ್ಲಿಯೂ ಕೋಡಿಹಳ್ಳಿ ೭, ಸಾತನೂರು ೪, ಉಯ್ಯಂಬಳ್ಳಿ ೩, ಮರಳವಾಡಿ ೫ ಹುದ್ದೆಗಳು ಖಾಲಿ ಇವೆ.

ಪಟ್ಟಿ ೫

ಆರೋಗ್ಯ ಮೂಲ ಸೌಲಭ್ಯಗಳು

ಡಾಕ್ಟರುಗಳ ಸಂಖ್ಯೆ (೨೦೦೩-೨೦೦೪)

| | ಖಾಸಗಿ | ಸರಕಾರಿ | ಆರ್‌ಎಂಪಿಗಳು |
|---|---|---|---|
| ಹಾರೋಹಳ್ಳಿ | 3 | 3 | 1 |
| ಮರಳವಾಡಿ | 0 | 5 | 3 |
| ಕೋಡಿಹಳ್ಳಿ | 6 | 4 | 3 |
| ಉಯ್ಯಂಬಳ್ಳಿ | 4 | 2 | 4 |
| ಸಾತನೂರು | 3 | 2 | 2 |
| ಒಟ್ಟು | 16 | 16 | 13 |

ಪಟ್ಟಿ ೬

ಆಸ್ಪತ್ರೆಗಳ ಸಂಖ್ಯೆ

| ಹೋಬಳಿವಾರು | ಎಎನ್‌ಎಂಗಳು | ಪಿಹೆಚ್‌ಸಿಗಳು | ಆಸ್ಪತ್ರೆಗಳು |
|---|---|---|---|
| ಹಾರೋಹಳ್ಳಿ | 7 | 2 | |
| ಮರಳವಾಡಿ | 10 | 2 | |
| ಕೋಡಿಹಳ್ಳಿ | 10 | 3 | |
| ಉಯ್ಯಂಬಳ್ಳಿ | 10 | 4 | |
| ಸಾತನೂರು | 12 | 2 | |
| ಒಟ್ಟು | 49 | 13 | |



ಆಡಳಿತಾತ್ಮಕ ಸಿಬ್ಬಂದಿಯಲ್ಲಿಯೂ ಮರಳವಾಡಿ ೨ ಹಾಗೂ ಎಲ್ಲಾ ಹೋಬಳಿಗಳಲ್ಲಿಯೂ ಒಂದೊಂದು ಹುದ್ದೆ ಖಾಲಿ ಇವೆ. ಮಿಡ್‌ವೈಫ್‌ಗಳ ಹುದ್ದೆಗಳು ಸಹ ಕೋಡಿಹಳ್ಳಿ ೭, ಮರಳವಾಡಿ ೫, ಉಯ್ಯಂಬಳ್ಳಿ ೨, ಸಾತನೂರು ೨, ಹಾರೋಹಳ್ಳಿ ೧ ಹುದ್ದೆ ಖಾಲಿ ಇವೆ. ಇಷ್ಟೇ ಸಾಲದು ಎಂಬಂತೆ ಸದರಿ ನಡೆಯುತ್ತಿರುವ ಪಿಎಚ್‌ಸಿ ಕೇಂದ್ರಗಳು ಸಹ ಕಟ್ಟಡದ ಕೊರತೆಯನ್ನು ಅನುಭವಿಸುತ್ತಿವೆ. ಕೋಡಿಹಳ್ಳಿಯಲ್ಲಿ ೩, ಮರಳವಾಡಿಯಲ್ಲಿ ೨, ಹಾರೋಹಳ್ಳಿ, ಉಯ್ಯಂಬಳ್ಳಿ, ಸಾತನೂರುಗಳಲ್ಲಿ ತಲಾ ಒಂದು ಪಿಎಚ್‌ಸಿಗಳು ಸೂಕ್ತವಾದ ಕಟ್ಟಡಗಳಿಲ್ಲದೆ ನಡೆಯುತ್ತಿವೆ. ಎಲ್ಲಾ ಹೋಬಳಿಗಳ ಒಂದೊಂದು ಪಿಎಚ್‌ಸಿಗಳಲ್ಲಿ ನೀರಿನ, ವಿದ್ಯುಚ್ಛಕ್ತಿಯ ಕೊರತೆ ಎದ್ದು ಕಾಣುತ್ತಿದೆ.

ಪಟ್ಟಿ ೭

**ಮಾನವ ಶಕ್ತಿ ಇಲ್ಲದ ಪಿಹೆಚ್‌ಸಿಗಳು ಮತ್ತು ಸರಕಾರಿ ಆಸ್ಪತ್ರೆಗಳ ಸಂಖ್ಯೆ**

| | ಹಾರೋಹಳ್ಳಿ | ಮರಳವಾಡಿ | ಕೋಡಿಹಳ್ಳಿ | ಉಯ್ಯಂಬಳ್ಳಿ | ಸಾತನೂರು | | ಒಟ್ಟು |
|---|---|---|---|---|---|---|---|
| ವೈದ್ಯರು | 0 | 1 | 0 | 1 | 1 | | 3 |
| ಲ್ಯಾಬೋರೇಟರಿ ತಂತ್ರಜ್ಞ | 1 | 3 | 1 | 0 | 1 | | 6 |
| ಫಾರ್ಮಸಿಸ್ಟ್ | 0 | 0 | 0 | 0 | 0 | | 0 |
| ಪ್ಯಾರಾಮೆಡಿಕಲ್ ಸಿಬ್ಬಂದಿ | 0 | 5 | 7 | 3 | 4 | | 19 |
| ಆಡಳಿತ ಸಿಬ್ಬಂದಿ | 1 | 2 | 1 | 1 | 1 | | 6 |
| ದಾದಿಯರು | 0 | 0 | 0 | 0 | 0 | | |
| ಸೂಲಗಿತ್ತಿಯರು | 1 | 5 | 7 | 2 | 2 | | 17 |

ಪಟ್ಟಿ ೮

**ಸಾಕಷ್ಟು ಸೌಕರ್ಯವಿಲ್ಲದ ಪಿಹೆಚ್‌ಸಿಗಳ ಶೇಕಡ**

| | ಹಾರೋಹಳ್ಳಿ | ಮರಳವಾಡಿ | ಕೋಡಿಹಳ್ಳಿ | ಉಯ್ಯಂಬಳ್ಳಿ | ಸಾತನೂರು | ಒಟ್ಟು |
|---|---|---|---|---|---|---|
| ಸ್ಥಳಾವಕಾಶ | 1 | 2 | 3 | 1 | 1 | 8 |
| ಔಷಧಿಗಳ ಸರಬರಾಜು | 0 | 0 | 0 | 0 | 0 | 0 |
| ವೈದ್ಯಕೀಯ ಉಪಕರಣ | 0 | 0 | 0 | 0 | 0 | 0 |
| ನೀರು ಸರಬರಾಜು | 1 | 1 | 1 | 1 | 1 | 5 |
| ವಿದ್ಯುಚ್ಛಕ್ತಿ | 1 | 1 | 1 | 1 | 1 | 5 |
| ಶೀತಲ ದಾಸ್ತಾನು | 0 | 0 | 0 | 0 | 0 | 0 |

ಪಟ್ಟಿ ೯

| ಹಾರೋಹಳ್ಳಿ | ಮರಳವಾಡಿ | ಕೋಡಿಹಳ್ಳಿ | ಉಯ್ಯಂಬಳ್ಳಿ | ಸಾತನೂರು | ಕಸಬಾ ಪಟ್ಟಣ |
|---|---|---|---|---|---|
| 1 | 3 | 1 | 2 | 1 | |
| 0 | 0 | 0 | 0 | 0 | |
| 1 | 0 | 4 | 2 | 3 | 3 |
| 1 | 0 | 4 | 2 | 3 | 3 |

ಕೇಂದ್ರ ಸ್ಥಳದಲ್ಲಿ ಡಾಕ್ಟರು ವಾಸವಾಗದಿರುವ ಪಿಹೆಚ್‌ಸಿಗಳು, ತರಬೇತಿ ಪಡೆದ ಆರೋಗ್ಯ ಸಿಬ್ಬಂದಿಯಿಂದ ಮಾಡಲಾಗದಿರುವ ಹೆರಿಗೆಗಳ ಸಂಖ್ಯೆ, ಐದು ವರ್ಷಗಳ ಕೆಳಗಿರುವ ತಲಾ ಕಡಿಮೆ ಇರುವ ಮಕ್ಕಳ ಸಂಖ್ಯೆ, ಆಹಾರದ ಕೊರತೆಯುಳ್ಳ ಮಕ್ಕಳು (೨೦೦೩-೦೪)

ಸರ್ಕಾರಿ ವೈದ್ಯರು ಕೇಂದ್ರ ಸ್ಥಳಗಳಲ್ಲಿಯೇ ವಾಸ ಮಾಡಬೇಕೆಂಬ ನಿಯಮವಿದ್ದರೂ, ಮರಳವಾಡಿಯಲ್ಲಿರುವ ೪ ವೈದ್ಯರಲ್ಲಿ ೩ ಜನ ವೈದ್ಯರು ಕೇಂದ್ರ ಸ್ಥಾನದಲ್ಲಿ ವಾಸವಾಗಿಲ್ಲ. ಉಯ್ಯಂಬಳ್ಳಿಯಲ್ಲಿ ೨, ಸಾತನೂರು ಹಾಗೂ ಹಾರೋಹಳ್ಳಿಯಲ್ಲಿ ತಲಾ ಒಬ್ಬ ವೈದ್ಯರು ಕೇಂದ್ರ ಸ್ಥಾನದಲ್ಲಿ ವಾಸವಾಗಿಲ್ಲ.

## ಸಾರಿಗೆ ಸಂಪರ್ಕ

**ರಸ್ತೆ :**

ಕನಕಪುರ ತಾಲ್ಲೂಕಿನಲ್ಲಿ ೧೯೯೯-೨೦೦೩ರಲ್ಲಿ ಪಿ.ಡಬ್ಲ್ಯು.ಡಿ.ಯಿಂದ ೮ ಕಿಲೋಮೀಟರ್, ಟಿ.ಎಂ.ಸಿ.ಯಿಂದ ೨೦ ಕಿ.ಮೀ. ಜಿಲ್ಲಾ ಪಂಚಾಯಿತಿಯಿಂದ ೩.೭೦೪ ಕಿ.ಮೀ. ಕಚ್ಚಾರಸ್ತೆ ನಿರ್ಮಾಣವಾಗಿದೆ. ಪಿ.ಡಬ್ಲ್ಯು.ಡಿ. ವತಿಯಿಂದ ೩೯೧.೯, ಟಿ.ಎಂ.ಸಿ. ವತಿಯಿಂದ ೯೪, ಜಿಲ್ಲಾ ಪಂಚಾಯಿತಿಯಿಂದ ೭೧೦ ಕಿ.ಮೀ. ಗಳ ಪಕ್ಕಾ ರಸ್ತೆ ಕಾಮಗಾರಿಯಾಗಿದೆ.

**ಸಾರಿಗೆ :**

ಕನಕಪುರದಲ್ಲಿ ೧೪೬ ಬಸ್ಸುಗಳು, ೭೧ ವ್ಯಾನುಗಳು, ೧೭೬೯ ಕಾರುಗಳು, ೪೮೨೮ ದ್ವಿಚಕ್ರವಾಹನಗಳು ಹಾಗೂ ೧೭೫೬ ಇತರೆ ವಾಹನಗಳು ಚಲಿಸುತ್ತಿವೆ. ಉಯ್ಯಂಬಳ್ಳಿಯನ್ನು ಹೊರತುಪಡಿಸಿ ಎಲ್ಲಾ ಹೋಬಳಿಗಳ ಕೇಂದ್ರಸ್ಥಾನದಲ್ಲಿಯೂ ಬಸ್ ನಿಲ್ದಾಣಗಳಿವೆ. ಆಶ್ಚರ್ಯದ ಸಂಗತಿ ಎಂದರೆ ಹಾರೋಹಳ್ಳಿಯ ಅರವತ್ತಿಪಾಳ್ಯ, ಕನಕಪುರ ಕಸಬಾದ ವಡ್ಡೆದೊಡ್ಡಿ ಮರಳವಾಡಿಯ ಬಚ್ಚೆಹಳ್ಳಿ, ಬೆಳಗ್ಗನಕುಪ್ಪೆ, ರಾಮಪುರ, ಗಟ್ಟಿಕೆರೆ ಕಾವಲು, ಕೋಡಿಹಳ್ಳಿಯ ಬಾಸಗೊಂಡನಹಳ್ಳಿ, ಉಯ್ಯಂಬಳ್ಳಿಯ ಮಹಾಹಳ್ಳಿ, ವೀರಸನ್ನಾರಾ, ವಾಡಿಕೆಕಟ್ಟೆ, ಸಾತನೂರು ಹೋಬಳಿಯ ಹಲಸಿನಮರದಹಳ್ಳಿ, ಸಂಬಾಪುರ, ಸುಳೀಗೆರೆ, ತೈಲೂರು ಫಾರೆಸ್ಟ್, (ಬಾಪೂಜಿ ಕಾಲೋನಿ) ಈ ೧೩ ಹಳ್ಳಿಗಳಿಗೆ ಈಗಲೂ ಬಸ್ ಸಂಪರ್ಕವಿಲ್ಲ. ಇಷ್ಟಾದರೂ ಕೆ.ಎಸ್.ಆರ್.ಟಿ.ಸಿ.ಯವರು ೨೦೦೩-೦೪ರಲ್ಲಿ ಪ್ರತಿದಿನ ೮೦೦ ಪ್ರಯಾಣಿಕರ ಟ್ರಿಪ್‌ಗಳನ್ನು ಓಡಿಸುವುದಾಗಿ ಹೇಳುತ್ತಾರೆ.

**ವಿದ್ಯುಚ್ಛಕ್ತಿ :**

ಹಾರೋಹಳ್ಳಿಯ ೯೩ ಹಳ್ಳಿಗಳಿಗೆ, ಮರಳವಾಡಿಯ ೨೯ ಹಳ್ಳಿಗಳಿಗೆ, ಕೋಡಿಹಳ್ಳಿಯ ೮೨ ಹಳ್ಳಿಗಳಿಗೆ, ಉಯ್ಯಂಬಳ್ಳಿಯ ೩೯ ಹಳ್ಳಿಗಳಿಗೆ, ಸಾತನೂರಿನ ೭೯ ಹಳ್ಳಿಗಳಿಗೆ, ಕಸಬಾ ಗ್ರಾಮಾಂತರ ೧೫೬ ಹಳ್ಳಿಗಳಿಗೆ ವಿದ್ಯುಚ್ಛಕ್ತಿ ಕಲ್ಪಿಸಲಾಗಿದೆ. ಇಷ್ಟಾಗಿಯೂ ೧೧೩ ಕಂದಾಯ ಗ್ರಾಮಗಳು, ನೂರಾರು ಉಪಗ್ರಾಮಗಳು ವಿದ್ಯುತ್ ಕಾಣುವ ಕನಸು ಕನಸಾಗಿಯೇ ಉಳಿದಿದೆ.

**ಅಂಚೆ ಕಛೇರಿ :**

ಕನಕಪುರ ತಾಲ್ಲೂಕಿನಲ್ಲಿ ೫೬ ಅಂಚೆ ಕಛೇರಿಗಳಿವೆ. ಹಾರೋಹಳ್ಳಿಯಲ್ಲಿ ೬೪೮೪ ಜನಕ್ಕೆ ಒಂದು ಅಂಚೆ ಕಛೇರಿ, ಮರಳವಾಡಿಯಲ್ಲಿ ೩೭೩೮ ಜನಕ್ಕೆ ಒಂದು ಅಂಚೆ ಕಛೇರಿಯಿದೆ. ಕೋಡಿಹಳ್ಳಿಯಲ್ಲಿ ೪೯೬೦ ಜನಕ್ಕೆ ಒಂದು ಅಂಚೆ ಕಛೇರಿಯಿದೆ. ಉಯ್ಯಂಬಳ್ಳಿಯಲ್ಲಿ ೪೫೦೬ ಜನಕ್ಕೆ ಒಂದು ಅಂಚೆ ಕಛೇರಿಯಿದೆ. ಸಾತನೂರಿನಲ್ಲಿ ೫೫೪೫ ಜನಕ್ಕೆ ಒಂದು ಅಂಚೆ ಕಛೇರಿಯಿದೆ. ಕಸಬಾ ಗ್ರಾಮೀಣದಲ್ಲಿ ೬೭೬೫ ಜನಕ್ಕೆ ಒಂದು ಅಂಚೆ ಕಛೇರಿಯಿದೆ. ಕಸಬಾ ಪಟ್ಟಣದಲ್ಲಿ ೧೫೬೮೭ ಜನಕ್ಕೆ ಒಂದು ಅಂಚೆ ಕಛೇರಿಯಿದೆ. ಸರಾಸರಿ ತಾಲ್ಲೂಕಿನಲ್ಲಿ ೫೭೧೫ ಜನಕ್ಕೆ ಒಂದು ಅಂಚೆ ಕಛೇರಿಯಿದೆ.

ಸ್ಥಿರ ದೂರವಾಣಿ ಮತ್ತು ಮೊಬೈಲ್ ಫೋನ್‌ಗಳ ಕ್ರಾಂತಿಯಿಂದ ಹತ್ತಿರದಲ್ಲಿಯೇ ಇದ್ದು, ದೂರದಲ್ಲಿರುವ ಕನಕಪುರ ತಾಲ್ಲೂಕಿನ ಜನತೆಗೆ ಇನ್ನೂ ಅಂಚೆ ಕಛೇರಿಯ ಅವಶ್ಯಕತೆಯಿದೆ.

**ಬ್ಯಾಂಕುಗಳು :**

ಕನಕಪುರ ತಾಲ್ಲೂಕಿನಲ್ಲಿ ೧೨ ಸಾರ್ವಜನಿಕ ವಲಯದ ಬ್ಯಾಂಕುಗಳಿದ್ದು, ೫ ಪ್ರಾದೇಶಿಕ ಗ್ರಾಮೀಣಾ ಬ್ಯಾಂಕುಗಳು,[RRB] ಒಂದು ಸಹಕಾರಿ ಬ್ಯಾಂಕು, ಒಂದು ಇತರೆ ಬ್ಯಾಂಕಿದೆ. ಮರಳವಾಡಿ ಹೋಬಳಿಯಲ್ಲಿ ಯಾವುದೇ ಬ್ಯಾಂಕಿಲ್ಲದೆ ಇರುವುದರಿಂದ ಸ್ಥಳೀಯ ಜನರಿಗೆ ಬಹಳಷ್ಟು ತೊಂದರೆಯಾಗಿದೆ.

ಪಟ್ಟಿ ೧೦

| ಬ್ಯಾಂಕ್ ಸೌಲಭ್ಯ | ಸಾರ್ವಜನಿಕ ಕ್ಷೇತ್ರ | ಆರ್‌ಆರ್‌ಬಿಗಳು | ಸಹಕಾರಿಗಳು | ಇತರೆ |
|---|---|---|---|---|
| ಬ್ಯಾಂಕ್ ಶಾಖೆಗಳು | 12 | 5 | 1 | 1 |
| ಹಾರೋಹಳ್ಳಿ | 1 | 3 | 0 | 0 |
| ಮರಳವಾಡಿ | 0 | 0 | 0 | 0 |
| ಕೋಡಿಹಳ್ಳಿ | 2 | 1 | 0 | 0 |
| ಉಯ್ಯಂಬಳ್ಳಿ | 1 | 0 | 0 | 0 |
| ಸಾತನೂರು | 1 | 0 | 0 | 1 |
| ಕಸಬಾ ಗ್ರಾಮಾಂತರ | 2 | 0 | 0 | 0 |
| ಕಸಬಾ ಪಟ್ಟಣ | 5 | 1 | 1 | 0 |
| | ಸಾರ್ವಜನಿಕ ವಲಯ ಬ್ಯಾಂಕ್ | ಕನಕಪುರ ಬ್ಯಾಂಕುಗಳು | ಇತರೆ | ಒಟ್ಟು |
| ಬ್ಯಾಂಕ್‌ನಿಂದ ನೀಡಲಾದ ಕೃಷಿ ಸಾಲ | 81589 | 31723 | 12998 | 126310 |




ಹಾರೋಹಳ್ಳಿಯಲ್ಲಿ ೧೧೩೪೬ ಜನಕ್ಕೆ ಒಂದು ಬ್ಯಾಂಕಿದೆ. ಹಾಗೆಯೇ ಕೋಡಿಹಳ್ಳಿಯಲ್ಲಿ ೧೬೫೩೪, ಉಯ್ಯಂಬಳ್ಳಿ ೪೫೦೬೨, ಸಾತನೂರು ೨೨೧೭೫, ಕಸಬಾ ಗ್ರಾಮೀಣ ೩೦೪೪೪, ಕಸಬಾ ಪಟ್ಟಣದಲ್ಲಿ ೬೭೨೩ ಜನರಿಗೆ ಒಂದೊಂದು ಬ್ಯಾಂಕಿದೆ. ಸರಾಸರಿಯಾಗಿ ೧೭೭೪೯.೭೯ ಜನಸಂಖ್ಯೆಗೆ ಒಂದು ಬ್ಯಾಂಕಿದೆ. ೨೦೦೩-೦೪ರಲ್ಲಿ ವ್ಯವಸಾಯಕ್ಕಾಗಿ ಸಾರ್ವಜನಿಕ ವಲಯದ ಬ್ಯಾಂಕಿನಿಂದ ೮೧೫೮೯ ರೂಪಾಯಿಗಳು, ಕಲ್ಪತರು ೩೧೭೨೩ ರೂಪಾಯಿಗಳು, ಇತರೆ ಬ್ಯಾಂಕುಗಳಿಂದ ೧೨೯೯೮ ಸಾಲ ನೀಡಿಕೆಯಾಗಿದೆ. ಈ ಬ್ಯಾಂಕುಗಳು ೩೫೭೮೦ ರೂ.ಗಳ ಅಭಿವೃದ್ಧಿ ಸಾಲ ನೀಡಿವೆ.

**ಕೃಷಿ :**

ಕನಕಪುರ ತಾಲ್ಲೂಕಿನಲ್ಲಿ ೬೪೫೯೭ ಹೆಕ್ಟೇರ್‌ಗಳಷ್ಟು ಒಣಭೂಮಿ, ೧೩೪೪೨ ಹೆಕ್ಟೇರ್ ನೀರಾವರಿ ಭೂಮಿ ಮತ್ತು ೮೪೫೧.೪೭ ಹೆಕ್ಟೇರ್ ಅರೆ ನೀರಾವರಿ ಪ್ರದೇಶಗಳನ್ನು ಒಳಗೊಂಡಿದೆ. ಶೇ. ೭೫ ರಷ್ಟು ಒಣಭೂಮಿ ಇರುವುದರಿಂದ ಒಣಭೂಮಿಯ ವ್ಯವಸಾಯವನ್ನು ಬಹುತೇಕ ರೈತರು ಅವಲಂಬಿಸಿದ್ದಾರೆ. ಆಹಾರ ಧಾನ್ಯವನ್ನು ४೧೭४೨ ಹೆಕ್ಟೇರ್‌ಗಳಲ್ಲಿ ಬೆಳೆಯುತ್ತಾರೆ. ತೋಟಗಾರಿಕೆ ವಾಣಿಜ್ಯ ಬೆಳೆಗಳನ್ನು ೧೬೮೫೯ ಹೆಕ್ಟೇರ್‌ಗಳಲ್ಲಿ ಬೆಳೆಯುತ್ತಾರೆ. ಪ್ರತಿ ಹೆಕ್ಟೇರ್‌ಗೆ ೬೦.೬೩ ಕೆ.ಜಿ.ಯಷ್ಟು ರಾಸಾಯನಿಕ ಗೊಬ್ಬರವನ್ನು ಬಳಸುತ್ತಾರೆ. ತಾಲ್ಲೂಕಿನಲ್ಲಿ ೧೭೨ ಟ್ರ್ಯಾಕ್ಟರ್‌ಗಳಿದ್ದು, ಅದನ್ನು ಕೃಷಿ ಚಟುವಟಿಕೆಗಳಿಗೆ ಬಳಸುತ್ತಾರೆ.

ಪಟ್ಟಿ ೧೧

| ಹಾರೋಹಳ್ಳಿ | ಮರಳವಾಡಿ | ಕೋಡಿಹಳ್ಳಿ | ಉಯ್ಯಂಬಳಿ | ಸಾತನೂರು | ಕಸಬಾಗ್ರಾಮೀಣ | ಕಸಬಾ ಪಟ್ಟಣ | ಒಟ್ಟು |
|---|---|---|---|---|---|---|---|
| 104.73 | 103.65 | 106.42 | 105.01 | 105.2 | 106.32 | 0 | 631.33 |
| 117.37 | | | | 0 | | | 117.37 |
| 0.27 | 0.17 | 0.11 | 0.16 | 0.19 | 0.31 | 0 | 1.21 |
| 42130 | 43511 | 57431 | 58834 | 54127 | 60022 | 9910 | 325965 |
| | | | | | | 0 | 0 |
| 4981 | 8511 | 7801 | 7038 | 6085 | 7326 | 0 | 41742 |
| 349 | 32 | 6 | 2 | 33 | 45 | 0 | 467 |
| 1243 | 1360 | 1298 | 940 | 945 | 2410 | 0 | 8196 |
| 1257 | 1215 | 1131 | 979 | 1578 | 1497 | 0 | 7657 |
| 536.61 | 814.04 | 1054.88 | 480.44 | 533.56 | | 960.39 | 4379.92 |
| 60.63 | 60.63 | 60.63 | 60.63 | 60.63 | 60.63 | | |

೧. ಬೆಳೆ ಬೆಳೆಯುವ ತೀವ್ರತೆ (೨೦೦೩-೦೪). ೨) ಬೆಳೆ ಬೆಳೆಯುವ ತೀವ್ರತೆ ಕರ್ನಾಟಕ (೨೦೦೩-೦೪). ೩. ನಿವ್ವಳ ಬಿತ್ತಿದ ಪ್ರದೇಶಕ್ಕೆ ನಿವ್ವಳ ನೀರಾವರಿ ಪ್ರದೇಶ (೨೦೦೩-೦೪). ೪. ಜಾನುವಾರು (೨೦೦೩). ೫. ಆಹಾರ ಧಾನ್ಯಗಳಡಿಯಲ್ಲಿ ವಿಸ್ತೀರ್ಣ (೨೦೦೩-೦೪) ೬. ವಾಣಿಜ್ಯ ಬೆಳೆಗಳ ವಿಸ್ತೀರ್ಣ (೨೦೦೩-೦೪). ೭. ತೋಟಗಾರಿಕೆಯಡಿಯಲ್ಲಿ ವಿಸ್ತೀರ್ಣ (೨೦೦೩-೦೪). ೮. ತೋಟಗಾರಿಕೆ ಬೆಳೆಯಡಿಯಲ್ಲಿ ವಿಸ್ತೀರ್ಣ (೨೦೦೩-೦೪). ೯. ರೇಷ್ಮೆಯಡಿಯಲ್ಲಿ ವಿಸ್ತೀರ್ಣ (ಉಪ್ಪು ನೇರಳೆ ೨೦೦೩-೦೪). ೧೦. ಪ್ರತಿ ಹೆಕ್ಟೇರಿಗೆ ರಸಗೊಬ್ಬರ (ಎನ್‌ಪಿಕೆ) ಅನುಭೋಗ (೨೦೦೩-೦೪) ಕೃಷಿ

**ಮಹಿಳೆ :**

ಹೆಣ್ಣು ಶಿಶು ಮರಣ ದರವು ಮರಳವಾಡಿಯಲ್ಲಿ ಅತೀ ಕಡಿಮೆ ಎಂದರೆ ೧೧ ಹೆಣ್ಣು ಮಕ್ಕಳು, ಹಾರೋಹಳ್ಳಿಯಲ್ಲಿ ೧೨, ಕೋಡಿಹಳ್ಳಿಯಲ್ಲಿ ೧೩, ಉಯ್ಯಂಬಳ್ಳಿ, ಸಾತನೂರು ಹೋಬಳಿಗಳಲ್ಲಿ ಅತೀ ಹೆಚ್ಚು ಅಂದರೆ ೧೪ ಹೆಣ್ಣು ಶಿಶುಗಳು ಮರಣ ಹೊಂದುತ್ತಿವೆ.

೨೦೦೩ರಲ್ಲಿ ಕನಕಪುರ, ಕಸಬಾ ಗ್ರಾಮೀಣ, ಕೋಡಿಹಳ್ಳಿ ಮತ್ತು ಸಾತನೂರಿನ ಆರಕ್ಷಕ ಠಾಣೆಯಲ್ಲಿ ವರದಿಯಾದಂತೆ ಒಂದು ವರದಕ್ಷಿಣೆಯ ಸಾವು, ೧೨ ಮಾನಭಂಗ ಪ್ರಕರಣ ಹಾಗೂ ೭ ಮಹಿಳೆಯರ ಆತ್ಮಹತ್ಯೆ ಪ್ರಕರಣಗಳು ಸಂಭವಿಸಿವೆ.

**ಮಹಿಳಾ ಕಾರ್ಮಿಕರು :**

ಹಾರೋಹಳ್ಳಿಯಲ್ಲಿ ೧೨೧೨, ಮರಳವಾಡಿಯಲ್ಲಿ ೧೮೨೦, ಕೋಡಿಹಳ್ಳಿಯಲ್ಲಿ ೧೫೪೭, ಉಯ್ಯಂಬಳ್ಳಿಯಲ್ಲಿ ೧೪೨೮, ಸಾತನೂರಿನಲ್ಲಿ ೧೩೫೩, ಕಸಬಾ ಗ್ರಾಮೀಣದಲ್ಲಿ ೧೮೦೭ ಮಹಿಳಾ ಕಾರ್ಮಿಕರಿದ್ದಾರೆ. ಮಹಿಳಾ ಕೈಗಾರಿಕಾ ಕಾರ್ಮಿಕರ ಸಂಖ್ಯೆ ೩೨೩೪. ಸಂಘಟಿತ ವಲಯಗಳಲ್ಲಿ ಕೇವಲ ೨೦ ಮಂದಿ ಮಹಿಳಾ ಕಾರ್ಮಿಕರಿದ್ದಾರೆ.

## ಮಹಿಳಾ ರಾಜಕೀಯ ಶಕ್ತಿ :

ಕನಕಪುರ ತಾಲ್ಲೂಕಿನಲ್ಲಿ ಶೇ. ೪೭ರಷ್ಟು (೩೩೨) ಮಹಿಳೆಯರು ಗ್ರಾಮ ಪಂಚಾಯಿತಿಯ ಸದಸ್ಯರಾಗಿದ್ದಾರೆ. ೧೧ ಜನ ತಾಲ್ಲೂಕು ಪಂಚಾಯಿತಿಯ, ೯ ಜನ ಪುರಸಭೆಯ, ಒಬ್ಬರು ಜಿಲ್ಲಾ ಪಂಚಾಯ್ತಿಯ ಸದಸ್ಯರಾಗಿದ್ದಾರೆ.

## ಸ್ತ್ರೀಶಕ್ತಿ ಸಂಘಗಳು :

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ೩೮೮೩ ಸ್ತ್ರೀಶಕ್ತಿ ಸಂಘಗಳಿದ್ದು ಅದರಲ್ಲಿ ಶೇ. ೧೯ರಷ್ಟು ಅಂದರೆ ೭೪೩ ಸ್ತ್ರೀಶಕ್ತಿ ಸಂಘಗಳು ಕನಕಪುರದಲ್ಲಿವೆ. ಈ ಸಂಘಗಳಲ್ಲಿ ೧೫೧೮೧ ಸದಸ್ಯರಿದ್ದಾರೆ. ಈ ಸಂಘಗಳು ೪೬೬೦೧೦೪ ರೂಪಾಯಿಗಳನ್ನು ಉಳಿತಾಯ ಮಾಡಿವೆ. ೪೨ ಸ್ತ್ರೀಶಕ್ತಿ ಸಂಘಗಳು ಸಾರ್ವಜನಿಕ ವಲಯದ ಬ್ಯಾಂಕುಗಳಿಂದ ಸಾಲವನ್ನು ಪಡೆದಿವೆ.

## ಸಲಹೆ ಮತ್ತು ಶಿಫಾರಸ್ಸುಗಳು :

ಬೆಂಗಳೂರು ಇಂದು ಗರಿಷ್ಠ ವ್ಯಾಪ್ತಿಯ ಸ್ಥಿತಿಯನ್ನು ತಲುಪಿದ್ದು (Optimum City Size) ಇನ್ನು ಸಮತಲ ಬೆಳವಣಿಗೆ (Horizontal Growth) ಸಾಧ್ಯವಿಲ್ಲದಿರುವುದರಿಂದ ಹಾಗೂ ಬೆಂಗಳೂರಿನ ಸುತ್ತ ಹಸಿರು ಪದರವನ್ನು (Green Cover) ಉಳಿಸಿಕೊಳ್ಳಲು ಬೆಂಗಳೂರಿನ ಸಮೀಪದಲ್ಲೇ ಇರುವ ಪಟ್ಟಣಗಳನ್ನು ಗುರುತಿಸಿ ಅಭಿವೃದ್ಧಿಪಡಿಸಬಹುದು. ಅದಕ್ಕೆ ಅತ್ಯಂತ ಸೂಕ್ತವಾದ, ಬೆಂಗಳೂರಿನ ಹವಾಮಾನವನ್ನೆ ಹೋಲುವ ಪಟ್ಟಣ ಕನಕಪುರ.

ಕನಕಪುರದಲ್ಲಿ ೨೦೦೦ ಎಕರೆಯನ್ನು ಪಡೆದುಕೊಂಡು, ಅದಕ್ಕೆ ಮೂಲಭೂತ ಸೌಕರ್ಯವನ್ನು ಒದಗಿಸಿ 'ರಫ್ತು ಉತ್ತೇಜಕ ಪಾರ್ಕ್'ಗಳನ್ನು-I.T. & B.T. ಪಾರ್ಕ್‌ಗಳನ್ನು-ಸ್ಥಾಪಿಸಿ, ವಿದೇಶಿ ನೇರ ಬಂಡವಾಳವನ್ನು (FDI) ಆಮಂತ್ರಿಸಬಹುದು. ಬೆಂಗಳೂರಿನ ಹವಾಮಾನವನ್ನೇ ಹೋಲುವುದರಿಂದ ಸಾಕಷ್ಟು ವಿದೇಶಿ ಕಂಪನಿಗಳು ಅಲ್ಲಿ ಬಂಡವಾಳ ಹೂಡಲು ಮುಂದಾಗಬಹುದು. ಕ್ರಮೇಣ ಬೆಂಗಳೂರಿನ ಮೇಲಿನ ಒತ್ತಡವು ತಗ್ಗಿ ಕನಕಪುರವು ಹಂತ ಹಂತವಾಗಿ ಬೆಳವಣಿಗೆ ಹೊಂದುತ್ತದೆ.

ಈ ಕಾರಣದಿಂದ ಕನಕಪುರದ ಅಭಿವೃದ್ಧಿಗಾಗಿ ಸರ್ಕಾರ ೩೦೦ ಕೋಟಿ ರೂ. ವಿಶೇಷ ಪ್ಯಾಕೇಜ್ ಒಂದನ್ನು ಪ್ರಾರಂಭಿಸಬಹುದು.

## ಶಿಫಾರಸ್ಸುಗಳು :

೧) **ಶಿಕ್ಷಣ**

ಎ) ಶಿಕ್ಷಣವು ಎಲ್ಲರಿಗೆ ತಿಳಿದಂತೆ ಅಜ್ಞಾನವನ್ನು ಹೋಗಲಾಡಿಸಲು, ಅಭಿವೃದ್ಧಿಯತ್ತ ದಾಪುಗಾಲು ಹಾಕಲು ಪ್ರಮುಖ ಅಸ್ತ್ರವಾಗಿದೆ. ಕನಕಪುರದಲ್ಲಿ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿ ವರದಿಯಲ್ಲಿ ಚರ್ಚಿಸಿದಂತೆ ಶಿಕ್ಷಣಕ್ಕಿರುವ ಪ್ರತ್ಯಕ್ಷ ಮತ್ತು ಪರೋಕ್ಷ ತೊಡಕುಗಳನ್ನು ನಿವಾರಿಸಬೇಕು.

ಬಿ) ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಬೇಕು, ಮಹಿಳೆಯರಿಗಾಗಿಯೇ ಪ್ರತ್ಯೇಕ ಶಾಲಾ ಕಾಲೇಜು ಮತ್ತು ವಿದ್ಯಾರ್ಥಿನಿ ನಿಲಯಗಳನ್ನು ಆರಂಭಿಸಬೇಕು.

ಸಿ) ಕನಕಪುರದಲ್ಲಿ ಯಾವುದೇ ವೃತ್ತಿಪರ ಕಾಲೇಜುಗಳಿಲ್ಲದೆ ಇರುವುದರಿಂದ ಮೆಡಿಕಲ್, ಇಂಜಿನಿಯರಿಂಗ್ ಮತ್ತು ಡಿಪ್ಲೊಮಾ ಕಾಲೇಜುಗಳನ್ನು ಪ್ರಾರಂಭಿಸಬೇಕು. ಮೆಡಿಕಲ್ ಕಾಲೇಜ್ ಆರಂಭಿಸಿದಲ್ಲಿ ಸುಸಜ್ಜಿತವಾದ ಆಸ್ಪತ್ರೆಯು ನಿರ್ಮಾಣವಾಗುತ್ತದೆ, ಅಲ್ಲದೆ ಸ್ಥಳೀಯ ವಿದ್ಯಾರ್ಥಿಗಳಲ್ಲಿ ತಾವೂ ಉನ್ನತ ವ್ಯಾಸಂಗ ಮಾಡಬೇಕೆಂಬ ಪ್ರೇರಣೆಯಾಗುತ್ತದೆ.

೨) **ಪ್ರವಾಸಿ ತಾಣದ ಅಭಿವೃದ್ಧಿ**

ಮೇಕೆದಾಟು, ಸಂಗಮ ಮತ್ತು ಬಸವನ ಬೆಟ್ಟಗಳನ್ನು ರಾಷ್ಟ್ರೀಯ ಮಟ್ಟದ ಪ್ರವಾಸಿ ತಾಣವಾಗಿ ರೂಪಿಸಬೇಕು. ಈ ಸ್ಥಳದಲ್ಲಿ ಪ್ರವಾಸಿಗರಿಗೆ ತಂಗುದಾಣ, ಉತ್ತಮ ದರ್ಜೆಯ ಹೋಟಲ್‌ಗಳು, ಪ್ರವಾಸ ಸ್ನೇಹಿ ಪೋಲೀಸರನ್ನು ಮತ್ತು ಜೀವರಕ್ಷಕ

ದಳದವರನ್ನು ನೇಮಿಸಬೇಕು. ಸ್ಥಳದ ಮಹತ್ವ, ಸುಂದರತೆ ಮತ್ತು ವೈಶಿಷ್ಟ್ಯಗಳನ್ನು ತಿಳಿಸುವ ಜಾಹಿರಾತನ್ನು ರಾಷ್ಟ್ರಾದ್ಯಂತ ಪ್ರಚಾರಪಡಿಸಬೇಕು.

೩) **ಗ್ರಾನೈಟ್** : ಪ್ರಾಕೃತಿಕ ಅಸಮತೋಲನವಾಗದಂತೆ ಗ್ರಾನೈಟನ್ನು ವೈಜ್ಞಾನಿಕ ರೀತಿಯಲ್ಲಿ, ಯೋಜನಾಬದ್ಧವಾಗಿ ಹೊರತೆಗೆದು ಅದರ ರಫ್ತಿಗೆ ಕ್ರಮ ಕೈಗೊಳ್ಳಬೇಕು. ಇದಕ್ಕೆ ಪೂರಕವಾಗಿ 'ಕನಕಪುರ ಗ್ರಾನೈಟ್ ಕಾರ್ಪೊರೇಷನ್' ಸ್ಥಾಪಿಸಬಹುದು.

೪) **ಹೂಳು** : ಕನಕಪುರದಲ್ಲಿ ೨೦೦೦ಕ್ಕಿಂತ ಹೆಚ್ಚು ಕೆರೆಗಳಿದ್ದು, ಅವುಗಳಲ್ಲಿ ಹೂಳೆತ್ತುವ ಕೆಲಸ ಜರೂರಾಗಿ ಆಗಬೇಕು.

೫) **ಮಳೆ ಕೊಯ್ಲು** : ಮಳೆಯು ಸರಾಸರಿ ೮೦೫.೨ ಮಿಲಿಮೀಟರ್ ಇದ್ದು, ಮಳೆಯ ನೀರನ್ನು ಉಪಯೋಗಿಸಿಕೊಳ್ಳಲು ಅಂತರ ಜಲವನ್ನು ಹೆಚ್ಚಿಸಲು ಮಳೆ ಕೊಯಿಲು (Rain Harvesting) ವಡ್ಡುಗಳನ್ನು, ಬದುಗಳನ್ನು ನಿರ್ಮಿಸಬೇಕು.

೬) **ಮಾರುಕಟ್ಟೆ** : ರೇಷ್ಮೆ ಬೆಳೆಗೆ ಉತ್ತಮ ಮಾರುಕಟ್ಟೆಯ ಅವಶ್ಯಕತೆಯಿದ್ದು, ರೇಷ್ಮೆ ಮಾರುಕಟ್ಟೆಯನ್ನು ಸಕಲ ಮೂಲಭೂತ ಸೌಕರ್ಯಗಳೊಂದಿಗೆ ಒದಗಿಸುವುದು. ತಾಲ್ಲೂಕಿನಲ್ಲಿ ಒಂದು 'ನಿಯಂತ್ರಿತ ಮಾರುಕಟ್ಟೆ'ಯನ್ನು ಸ್ಥಾಪಿಸಿದರೆ ಅಂತರ ರಾಜ್ಯ ವ್ಯಾಪಾರ ವೃದ್ಧಿಸುತ್ತದೆ.

೭) **ಕಾರ್ಖಾನೆ** : ಮುಳ್ಳಹಳ್ಳಿ-ಸಂಗಮದ ಮಧ್ಯೆ ಹೇರಳವಾಗಿ ಸುಣ್ಣದ ಕಲ್ಲು ಮತ್ತು ಜಿಪ್ಸಂ ದೊರೆಯುವುದರಿಂದ ಒಂದು ಸಿಮೆಂಟ್ ಕಾರ್ಖಾನೆಯನ್ನು ಸ್ಥಾಪಿಸಬಹುದು.

೮) **ಡೈರಿ** : ಆಹಾರ ಸಂಸ್ಕರಣಾ ಕೇಂದ್ರ ಮತ್ತು ಡೈರಿಗಳನ್ನು ಸ್ಥಾಪಿಸಿ ಅಭಿವೃದ್ಧಿಪಡಿಸುವುದು. ಇದರಿಂದ ರೈತರ ಜೀವನಮಟ್ಟ ವೃದ್ಧಿಸಲು ಸಹಾಯವಾಗುತ್ತದೆ.

೯) **ರಸ್ತೆ** : ಕನಕಪುರದಲ್ಲಿ ವಾಣಿಜ್ಯ ವ್ಯವಹಾರಗಳು ಹೆಚ್ಚಾಗಬೇಕಾದರೆ ಕನಕಪುರದಿಂದ ಧರ್ಮಾವರಂ ಹಾಗೂ ಕನಕಪುರದಿಂದ ಕೊಯಮತ್ತೂರಿಗೆ ಅಂತರ ರಾಜ್ಯ ಸಂಪರ್ಕ ರಸ್ತೆಗಳನ್ನು ಅಭಿವೃದ್ಧಿಪಡಿಸಬೇಕು.

೧೦) **ಆರೋಗ್ಯ** : ಕನಕಪುರದಲ್ಲಿ ಒಂದು ಸುಸಜ್ಜಿತವಾದ ಆಸ್ಪತ್ರೆಯನ್ನು ಸ್ಥಾಪಿಸುವುದು. ವರದಿಯಲ್ಲಿ ಚರ್ಚಿಸಿದಂತೆ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು.

೧೧) **ಸಕ್ಕರೆ ಕಾರ್ಖಾನೆ** : ಅರ್ಕಾವತಿ ದಂಡೆಯಲ್ಲಿ ಹೇರಳವಾಗಿ ಕಬ್ಬು ಬೆಳೆಯುವುದರಿಂದ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸುವುದು.

೧೨) **ಕಾಗದ ಕಾರ್ಖಾನೆ** : ಕನಕಪುರದಲ್ಲಿ ಹೇರಳವಾಗಿ ಕಾಡಿನಲ್ಲಿ ಬಿದಿರು ದೊರೆಯುವುದರಿಂದ ಕಾಗದದ ಕಾರ್ಖಾನೆಯನ್ನು ಸ್ಥಾಪಿಸುವುದು.

೧೩) **ವಿದ್ಯುತ್ ಸೌಲಭ್ಯ** : ವಿದ್ಯುತ್ ಸಂಪರ್ಕವಿಲ್ಲದಿರುವ ೨೦೦ಕ್ಕೂ ಹೆಚ್ಚು ಗ್ರಾಮಗಳಿಗೆ ವಿದ್ಯುತ್ ಸೌಲಭ್ಯವನ್ನು ಒದಗಿಸುವುದು.

೧೪) **ಸಂಶೋಧನ ಕೇಂದ್ರ** : ಕನಕಪುರದಲ್ಲಿ ಹಿಪ್ಪನೇರಳೆಯನ್ನು ಹೇರಳವಾಗಿ ಬೆಳೆಯುವುದರಿಂದ 'ರೇಷ್ಮೆ ಸಂಶೋಧನೆ ಕೇಂದ್ರ'ವನ್ನು ಸ್ಥಾಪಿಸುವುದು.

**ಉಪಸಂಹಾರ :**

ಕನಕಪುರದಲ್ಲಿ ಬೆಳವಣಿಗೆ ಹೊಂದಲು ಬೇಕಾದ ಸಕಲ ಐಶ್ವರ್ಯವಿದ್ದರೂ, ಏನೂ ಇಲ್ಲದಂತೆ ಬಡವಾಗಿದೆ. ಬಹುಶಃ "Kanakapura is a rich taluk inhabitated by poor people" ಎಂದು ಹೇಳಿದರೆ ತಪ್ಪಾಗಲಾರದು. ರಾಜಶೇಖರನ್‌ರವರು ಈ ತಾಲ್ಲೂಕಿನ ಅಭಿವೃದ್ಧಿಗೆ ೧೯೭೧ರವರೆಗೆ ಲೋಕಸಭಾ ಸದಸ್ಯರಾಗಿದ್ದ ಅವಧಿಯಲ್ಲಿ ಸಕ್ರಿಯವಾಗಿ ಶ್ರಮಿಸುತ್ತಿದ್ದರು. ಈಗಲೂ ತಮ್ಮ ತಾಲ್ಲೂಕಿನ ಅಭಿವೃದ್ಧಿಗೆ ಶ್ರಮಿಸುತ್ತಿದ್ದಾರೆ.

ರಾಜಶೇಖರನ್ ಅವರು ಲೋಕಸಭಾ ಸದಸ್ಯರಾದ ನಂತರ ಕನಕಪುರ ಕ್ಷೇತ್ರದಿಂದ ಅನೇಕ ಜನರು ಲೋಕಸಭೆ ಹಾಗೂ ವಿಧಾನಸಭೆಗೆ ಆಯ್ಕೆಯಾಗಿ ಹೋಗಿದ್ದಾರೆ. ಅವರಲ್ಲಿ ಒಂದಿಬ್ಬರು ಕೇಂದ್ರದಲ್ಲಿ ಮಂತ್ರಿಗಳು ಕೂಡ ಆಗಿದ್ದಾರೆ. ಅದೇ ರೀತಿ ಕನಕಪುರ

ವಿಧಾನಸಭೆ ಕ್ಷೇತ್ರವು ರಾಜ್ಯದ ಪ್ರತಿಷ್ಠಿತ ಕ್ಷೇತ್ರಗಳಲ್ಲಿ ಒಂದಾಗಿದೆ. ಸ್ವಲ್ಪ ಕಾಲ ರಾಜ್ಯದ ಮುಖ್ಯಮಂತ್ರಿ ಪ್ರತಿನಿಧಿಸಿದ್ದ ಕ್ಷೇತ್ರ ಕೂಡ ಇದಾಗಿತ್ತು. ಇಲ್ಲಿನ ಎಲ್ಲ ಜನನಾಯಕರು ಜನರ ಭಾವನೆಗಳಿಗೆ ಉತ್ತಮವಾಗಿ ಸ್ಪಂದಿಸುತ್ತಾರೆ. ಅವರ ಕಷ್ಟ ಸುಖಗಳಿಗೆ ಸದಾಕಾಲ ಹಣಕಾಸಿನ ಸಹಾಯ ಮಾಡುತ್ತಾರೆ. ಜನರ ಒಡನಾಟದಿಂದ ಇವರುಗಳು ಜನಪ್ರಿಯರಾಗಿರುವುದೂ ಉಂಟು. ಆದರೆ ಪ್ರಗತಿಯ ವಿಚಾರದಲ್ಲಿ ನಿರ್ದಿಷ್ಟವಾದ ಪ್ರಯತ್ನವಿಲ್ಲದಿರುವುದು ತಾಲ್ಲೂಕು ಹಿಂದುಳಿದಿರುವುದಕ್ಕೆ ಕಾರಣವೆಂದು ಹೇಳಬೇಕು. ಕನಕಪುರ ತಾಲ್ಲೂಕು ಸಾತನೂರು ಮತ್ತು ಕನಕಪುರ ಎಂಬ ಎರಡು ವಿಧಾನಸಭಾ ಕ್ಷೇತ್ರಗಳನ್ನು ಒಳಗೊಂಡಿದೆ. ರಾಜ್ಯದ ರಾಜಕಾರಣದಲ್ಲಿ ತುಂಬಾ ಪ್ರಭಾವವುಳ್ಳ ನಾಯಕರು ಇಲ್ಲಿದ್ದಾರೆ. ಅಧಿಕಾರಿ ವರ್ಗವನ್ನು ವಿಶ್ವಾಸಕ್ಕೆ ತೆಗೆದುಕೊಂಡು ದೀರ್ಘಕಾಲ ಪ್ರಯೋಜನವಾಗುವ ಯೋಜನೆಗಳನ್ನು ಅನುಷ್ಠಾನಕ್ಕೆ ತರುವ ಜವಾಬ್ದಾರಿ ಇಲ್ಲಿನ ಎಲ್ಲಾ ಜನಪ್ರತಿನಿಧಿಗಳ ಮೇಲಿದೆ. ಬೆಂಗಳೂರಿಗೆ ಅತಿ ಸಮೀಪವಿರುವ ಕನಕಪುರವನ್ನು ಅಭಿವೃದ್ಧಿಪಡಿಸಲು ಎಲ್ಲ ಅವಕಾಶಗಳು ಯಥೇಚ್ಛವಾಗಿದೆ. ಇಲ್ಲಿನ ಜನರು ಸ್ವಭಾವತಃ ಉತ್ಸಾಹಶಾಲಿಗಳಾಗಿದ್ದಾರೆ. ಹೇರಳವಾದ ಖನಿಜ ಸಂಪತ್ತು ದೊರಕುತ್ತದೆ. ಇವುಗಳನ್ನು ಉಪಯೋಗಿಸಿಕೊಂಡು ಕನಕಪುರವನ್ನು ಒಂದು ಮಾದರಿ ತಾಲ್ಲೂಕನ್ನಾಗಿ ಮಾಡುವ ಇಚ್ಛಾಶಕ್ತಿಯನ್ನು ಇಲ್ಲಿನ ರಾಜಕಾರಣಿಗಳು ಪ್ರದರ್ಶಿಸಬೇಕು.

## ಪೂರಕ ಮಾತುಗಳು :

*ಪ್ರಸ್ತುತ ಧರ್ಮಸಿಂಗ್ ಸರ್ಕಾರದಲ್ಲಿ ಕೈಗಾರಿಕಾ ಸಚಿವರಾದ ಪಿ.ಜಿ.ಆರ್. ಸಿಂಧ್ಯಾರವರು ಕನಕಪುರ ವಿಧಾನಸಭಾ ಕ್ಷೇತ್ರದ ಪ್ರತಿನಿಧಿಯೂ ಹೌದು. ಈ ಅಧ್ಯಯನದ ಬಗ್ಗೆ ಅವರ ಪ್ರತಿಕ್ರಿಯೆ ಹೀಗಿದೆ: "ಪ್ರೊ. ಆರ್. ವೀರಚಾಮಿ ಹಾಗೂ ಡಾ. ಎಸ್.ಆರ್. ಕೇಶವ್‌ರವರು ಕನಕಪುರ ತಾಲ್ಲೂಕಿನ ಹಿಂದುಳಿದಿರುವಿಕೆ ಬಗ್ಗೆ ವೈಜ್ಞಾನಿಕವಾಗಿ ಕೈಗೊಂಡಿರುವ ಅಧ್ಯಯನ, "Excellent Academy Work". ಅವರ ಎಲ್ಲಾ ಶಿಫಾರಸ್ಸುಗಳು ಅನುಷ್ಠಾನ ಮಾಡಲು ಯೋಗ್ಯವಾಗಿವೆ. ಕನಕಪುರ ತಾಲ್ಲೂಕಿನಲ್ಲಿ ಮೆಡಿಕಲ್ ಕಾಲೇಜು ಹಾಗೂ ಇತರೆ ತಾಂತ್ರಿಕ ಕಾಲೇಜುಗಳನ್ನು ಸ್ಥಾಪಿಸಲು ಪ್ರಯತ್ನ ಮಾಡಲಾಗುವುದು. ಮೇಕೆದಾಟು, ಸಂಗಮ ಹಾಗೂ ಬಸವನ ಬೆಟ್ಟ ಪ್ರವಾಸಿ ತಾಣಗಳನ್ನು ಅಭಿವೃದ್ಧಿಪಡಿಸಲಾಗುವುದು. 'ಗ್ರಾನೈಟ್', 'ಕೆರೆಗಳ ಹೂಳು ಎತ್ತುವುದು', 'ಮಳೆ ಕೊಯಿಲು', 'ಸಿಮೆಂಟ್ ಕಾರ್ಖಾನೆ', ಹಾಗೂ 'ರೇಷ್ಮೆಗೆ ಉತ್ತಮ ಮಾರುಕಟ್ಟೆ' ಮೊದಲಾದ ಶಿಫಾರಸ್ಸುಗಳು ಅನುಷ್ಠಾನಕ್ಕೆ ಯೋಗ್ಯವಾಗಿವೆ.*

*ಎಸ್.ಎಂ. ಕೃಷ್ಣ ಸರ್ಕಾರದಲ್ಲಿ ಸಚಿವರಾಗಿದ್ದ ಡಿ.ಕೆ. ಶಿವಕುಮಾರ್‌ರವರ ಪ್ರಯತ್ನದಿಂದಾಗಿ ಈಗಾಗಲೇ ಈ ತಾಲ್ಲೂಕಿನಲ್ಲಿ ಪಶು ಆಹಾರ ಸಂರಕ್ಷಣಾ ಕೇಂದ್ರ ಪ್ರಾರಂಭವಾಗಿದೆ. ಕನಕಪುರದಲ್ಲಿ ರೂ. ಐದು ಕೋಟಿ ವೆಚ್ಚದಲ್ಲಿ ಸುಸಜ್ಜಿತವಾದ ಆಸ್ಪತ್ರೆಯ ಕಟ್ಟಡ ನಿರ್ಮಾಣವಾಗಿದೆ, ಅದಕ್ಕೆ ಬೇಕಾದ ಯಂತ್ರೋಪಕರಣಗಳು ಬರಬೇಕಷ್ಟೆ.*

*ಸಕ್ಕರೆ ಕಾರ್ಖಾನೆ ಪ್ರಾರಂಭಿಸುವ ಬಗ್ಗೆ ಈ ಭಾಗದಲ್ಲಿ ತೀವ್ರ ಬೇಡಿಕೆಯಾಗಿದ್ದು, ಎಚ್.ಡಿ. ದೇವೇಗೌಡರು ಪ್ರಧಾನ ಮಂತ್ರಿಗಳಾಗಿದ್ದ ಕಾಲದಲ್ಲಿ ಎಸ್.ಕೆ.ಆರ್. ಗ್ರೂಪ್‌ನಿಂದ ಖಾಸಗಿ ವಲಯದಲ್ಲಿ ಸಕ್ಕರೆ ಕಾರ್ಖಾನೆ ಪ್ರಾರಂಭಿಸುವ ಒಡಂಬಡಿಕೆಗೆ ಸಹಿ ಮಾಡಲಾಗಿದೆ.*

*ಕನಕಪುರ ತಾಲ್ಲೂಕಿನ ಎಲ್ಲಾ ಗ್ರಾಮಗಳಲ್ಲಿ ವಿದ್ಯುತ್ ಸರಬರಾಜು ಮಾಡಲಾಗಿದೆ. ಅಲ್ಲಿನ ಕೆಲವು ಗ್ರಾಮಗಳಿಗೆ ಹೆಚ್ಚುವರಿ ಕಂಬಗಳ ಬೇಡಿಕೆ ಇದ್ದು ಅದನ್ನು ಪೂರೈಸಲಾಗುವುದು.*

*ಹಾರೋಹಳ್ಳಿಯಲ್ಲಿ ಹಿಪ್ಪನೇರಳೆ ಸಂಶೋಧನಾ ಕೇಂದ್ರ ಪ್ರಾರಂಭಿಸಲು ಕೇಂದ್ರ ಕೃಷಿ ಸಚಿವರು ಅನುಮೋದನೆ ಕೊಟ್ಟಿರುತ್ತಾರೆ. ನಿರ್ದಿಷ್ಟ ಕಾಲಾವಧಿಯಲ್ಲಿ ಎಲ್ಲಾ ಅಭಿವೃದ್ಧಿ ಕಾರ್ಯಗಳನ್ನು ಅನುಷ್ಠಾನ ಮಾಡಲಾಗುವುದು."*

*ಸಂದರ್ಶನ:ಸಂಪಾದಕರು.*

●




# ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆ

ಸಂಧ್ಯಾ ಪ್ರದೀಪ್‌ಕುಮಾರ್

ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯ ಜನಕರಾದ ಎಂ. ವಿ. ರಾಜಶೇಖರನ್ ಅವರಿಗೆ ಎಪ್ಪತ್ತೈದನೇ ಹುಟ್ಟುಹಬ್ಬ ಸಮಾರಂಭ ನಡೆಯುತ್ತಿದೆ. ಅಂತಹ ಶುಭ ಸಂದರ್ಭದಲ್ಲಿ ಅದನ್ನು ಕಟ್ಟಿ ಬೆಳೆಸಲು ಅವರು ಪಟ್ಟ ಶ್ರಮವನ್ನು ನೆನಪಿಸಿಕೊಳ್ಳಬೇಕಾದುದು ನಮ್ಮೆಲ್ಲರ ಕರ್ತವ್ಯ. ಇದನ್ನು ಸ್ಥಾಪಿಸುವುದಕ್ಕೆ ಮುಂಚೆಯೂ ಅವರಿಗೆ ಗ್ರಾಮೀಣ ಅಭಿವೃದ್ಧಿಯಲ್ಲಿ ತೀವ್ರವಾದ ಆಸಕ್ತಿಯಿದ್ದು ಅದಕ್ಕಾಗಿ ಹಗಲಿರುಳೂ ದುಡಿಯುತ್ತಿದ್ದರು. ಅನೇಕ ಸ್ನೇಹಿತರು ಈ ಹಿಂದೆ ಹೇಳಿರುವಂತೆ ರಾಜಶೇಖರನ್‌ರವರು ತಮ್ಮ ಕಾನೂನು ವಿದ್ಯಾಭ್ಯಾಸ ಕುಂಠಿತಗೊಂಡ ಮೇಲೆ ತಮ್ಮ ಹುಟ್ಟೂರಿಗೆ ಮರಳಿ ಕೃಷಿ ವೃತ್ತಿಯಲ್ಲಿ ತೊಡಗಿದರು. ಹಾಗೆಯೇ ಜನರ ಸಂಪರ್ಕ ಬೆಳೆಸಿಕೊಂಡು ಗ್ರಾಮೀಣ ಅಭಿವೃದ್ಧಿ ಬಗ್ಗೆ ಕೆಲಸ ಮಾಡುವುದಕ್ಕೆ ಅನೇಕ ರಾಷ್ಟ್ರೀಯ ಮತ್ತು ಅಂತರ ರಾಷ್ಟ್ರೀಯ ಸಮ್ಮೇಳನಗಳು, ವಿಚಾರಗೋಷ್ಠಿಗಳು, ದುಂಡುಮೇಜು ಪರಿಷತ್ತುಗಳು ಮತ್ತು ತರಬೇತಿ ಕಾರ್ಯಕ್ರಮಗಳಲ್ಲಿ ಭಾರತವನ್ನು ಪ್ರತಿನಿಧಿಸಿದರು. ಇವುಗಳನ್ನು ವಿಶ್ವ ಆಹಾರ ಮತ್ತು ಕೃಷಿ ಸಂಸ್ಥೆ, ಕೃಷಿ ಉತ್ಪನ್ನಗಳ ಅಂತರರಾಷ್ಟ್ರೀಯ ಫೆಡರೇಷನ್ ಮುಂತಾದ ಸಂಸ್ಥೆಗಳು ವ್ಯವಸ್ಥೆಗೊಳಿಸುತ್ತಿದ್ದವು. ಇವು ವಿಶ್ವದ ಅನೇಕ ದೇಶಗಳಲ್ಲಿ ನಡೆಯುತ್ತಿದ್ದುದರಿಂದ ಇವರು ಆ ದೇಶಗಳಿಗೆ ಭೇಟಿ ಕೊಡುವ ಅವಕಾಶ ದೊರೆಯಿತು. ಅವರು ಈ ಭೇಟಿಗಳಿಂದ ಭಾರತದಲ್ಲಿ ಮಾತ್ರವಲ್ಲದೆ ಏಷ್ಯಾದಲ್ಲಿ ಸಮಗ್ರ ಗ್ರಾಮೀಣ ಅಭಿವೃದ್ಧಿ ಕ್ಷೇತ್ರದಲ್ಲಿ ಸಂಶೋಧನೆ, ತರಬೇತಿ, ಕ್ರಿಯಾತ್ಮಕ ಗುರಿಯಿರುವ ಯೋಜನೆಗಳ ಬಗ್ಗೆ ಒಂದು ಪ್ರಾದೇಶಿಕ ಸಂಸ್ಥೆಯನ್ನು ಸ್ಥಾಪಿಸುವ ಅಗತ್ಯವನ್ನು ಕಂಡುಕೊಂಡರು. ಈ ಯೋಜನೆಯನ್ನು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಗಣ್ಯವ್ಯಕ್ತಿಗಳ ಜೊತೆ ಹಂಚಿಕೊಂಡರು. ಈ ಯೋಜನೆಗೆ ಇಂಗ್ಲೆಂಡ್, ನೆದರ್‌ಲ್ಯಾಂಡ್ಸ್, ಫಿಲಿಪ್ಪೈನ್ಸ್, ಕೆನಡಾ, ಚೀನಾ, ಪಶ್ಚಿಮ ಜರ್ಮನಿ, ಅಮೆರಿಕಾ ಮುಂತಾದ ಅನೇಕ ದೇಶಗಳಿಂದ ಪ್ರೋತ್ಸಾಹಕರವಾದ ಪತ್ರಗಳು ಬಂದವು. ಹಾಗಾಗಿ ಏಷ್ಯಾದ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯನ್ನು (ಎಐಆರ್‌ಡಿ) ೧೯೭೭ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿಸಲಾಯಿತು. ಅದರ ಸ್ಥಾಪಕ ಟ್ರಸ್ಟಿಗಳು ಯಾರೆಂದರೆ :

> ***ಎಂ.ವಿ. ರಾಜಶೇಖರನ್ ಬೆಂಗಳೂರಿನಲ್ಲಿ ಕಟ್ಟಿ ವಿಶ್ವಮಾನ್ಯವಾಗಿಸಿರುವ ಸಂಸ್ಥೆಯು ವಿಶ್ವಮಟ್ಟದ ವಿಚಾರಗೋಷ್ಠಿ, ಸಮಾವೇಶ ಹಾಗೂ ಸಂವಾದಗಳನ್ನು ಆಗಿಂದಾಗ್ಗೆ ಏರ್ಪಡಿಸುತ್ತ ಕರ್ನಾಟಕದ ಗ್ರಾಮೀಣಾಭಿವೃದ್ಧಿಯ ಬಗ್ಗೆ ತನ್ನ ನೈಜ ಕಾಳಜಿಯನ್ನು ವ್ಯಕ್ತಪಡಿಸುತ್ತಿದೆ.***

೧) ಡಾ। ಎ. ಟಿ. ಅರಿಯಾರತ್ನೆ, ಅಧ್ಯಕ್ಷ, ಸರ್ವೋದಯ ಶ್ರಮದಾನ ಸಂಗಮ್ಮ, ಇವರು ಎಐಆರ್‌ಡಿಯ ಮೊದಲ ಚೇರ್ಮನ್. ೨) ದಿವಂಗತ ಡಾ। ಕೆ. ಸಿ. ನಾಯಕ್, ಬೆಂಗಳೂರಿನ ಕೃಷಿ ವಿಶ್ವವಿದ್ಯಾನಿಲಯದ

ಮುಂಚಿನ ಉಪಕುಲಪತಿ. ೩) ದಿವಂಗತ ಎಂ. ಎಸ್. ರಾಮಯ್ಯ, ಶಿಕ್ಷಣ ತಜ್ಞ ಮತ್ತು ಲೋಕೋಪಕಾರಿ, ಬೆಂಗಳೂರು, ೪) ಎಂ. ವಿ. ರಾಜಶೇಖರನ್, ಎ.ಐ.ಆರ್.ಡಿ. ಯ ಮೊದಲ ಕಾರ್ಯನಿರ್ವಾಹಕ ಟ್ರಸ್ಟಿ ಮತ್ತು ಸಮನ್ವಯಕಾರ. ಇದು ಸರಕಾರೇತರ, ಸ್ವಾಯತ್ತ, ರಾಜಕೀಯೇತರ, ಮತಭೇದವಿಲ್ಲದ, ವಾಣಿಜ್ಯೇತರ ಸಂಸ್ಥೆ. ಇದು ಸಂಪೂರ್ಣವಾಗಿ ಜಾತ್ಯತೀತ ಮತ್ತು ಸೇವಾ ಗುರಿಯುಳ್ಳ ಸಂಸ್ಥೆ. ಈಗ ಇದರಲ್ಲಿ ಬಾಂಗ್ಲಾದೇಶ, ಭಾರತ, ನೇಪಾಳ, ಫಿಲಿಪ್ಪೈನ್ಸ್, ಶ್ರೀಲಂಕಾ ಮತ್ತು ಕೆನಡಾದ ಪ್ರತಿನಿಧಿಗಳನ್ನೊಳಗೊಂಡ ಟ್ರಸ್ಟಿಗಳ ಮಂಡಳಿಯಿದೆ.

### ಎ.ಐ.ಆರ್.ಡಿ.ಯ ಉದ್ದೇಶಗಳು ಮತ್ತು ಗುರಿಗಳು :

೧. ಆ ಪ್ರದೇಶದ ಇತರ ಸರಕಾರೇತರ ಸಂಸ್ಥೆಗಳ ಸಮನ್ವಯದಿಂದ ಸರಕಾರೇತರ ಕ್ರಮದ ಮೂಲಕ ಅಭಿವೃದ್ಧಿಶೀಲ ದೇಶಗಳ ನಡುವೆ ತಾಂತ್ರಿಕ ಮತ್ತು ಆರ್ಥಿಕ ಸಹಕಾರಕ್ಕೆ ಚಟುವಟಿಕೆಗಳನ್ನು ಬಲಗೊಳಿಸುವುದು.

೨. ಸೂಕ್ತವಾದ ಅಭಿವೃದ್ಧಿ ಕೌಶಲ್ಯಗಳನ್ನು ರೂಪಿಸುವುದಕ್ಕೆ ಗ್ರಾಮೀಣ ಅಭಿವೃದ್ಧಿಯ ಸಾಮಾಜಿಕ, ಆರ್ಥಿಕ ಅಂಶಗಳಿಗೆ ಗಮನ ನೀಡುವುದು.

೩. ಸಮಗ್ರ ಗ್ರಾಮೀಣ ಅಭಿವೃದ್ಧಿ ಕ್ಷೇತ್ರದಲ್ಲಿ ಸಮಸ್ಯೆಯ ಗುರಿಯಿರುವ ವೈಜ್ಞಾನಿಕ ಸಂಶೋಧನೆಯನ್ನು ಕೈಗೊಳ್ಳುವುದು ಮತ್ತು ಫಲಿತಾಂಶದ ಗುರಿಯಿಟ್ಟುಕೊಂಡ ಕಾರ್ಯಯೋಜನೆಗಳನ್ನು ಅನುಷ್ಠಾನಗೊಳಿಸುವುದು.

೪. ಗ್ರಾಮೀಣ ಪ್ರದೇಶದಲ್ಲಿ ಸರಳವಾದ ಮತ್ತು ಸೂಕ್ತವಾದ ತಂತ್ರಜ್ಞಾನವನ್ನು ರೈತರಿಗೆ ಮತ್ತು ಕುಶಲ ಕರ್ಮಿಗಳಿಗೆ ತಿಳಿಸುವುದು.

೫. ಕೆಳಮಟ್ಟದಲ್ಲಿರುವ ಸಂಸ್ಥೆಗಳ ಅಭಿವೃದ್ಧಿಯನ್ನು ಉತ್ತೇಜಿಸುವುದು.

೬. ವಿಶೇಷವಾಗಿ ಏಷ್ಯಾ ಮತ್ತು ಆಫ್ರಿಕಾದಂತಹ ಅಭಿವೃದ್ಧಿಶೀಲ ದೇಶಗಳ ನಡುವೆ ಸರಕಾರೇತರ ಸಂಸ್ಥೆಗಳ ಸಹಾಯ ಮತ್ತು ಸಹಕಾರದಿಂದ ಕೆಲಸ ಮಾಡುವಂತೆ ಮಾಡುವುದು.

೭. ಪಂಚಾಯತಿ ರಾಜ್ಯ ವ್ಯವಸ್ಥೆಯಲ್ಲಿ ಮಹಿಳೆಯರಿಗೆ ಅಧಿಕಾರ ನೀಡುವುದರ ಮೂಲಕ ಮಹಿಳಾ ಅಭಿವೃದ್ಧಿಗೆ ಪ್ರೋತ್ಸಾಹ ನೀಡುವುದು.

೮. ಉದ್ಯಮ ಅಭಿವೃದ್ಧಿ ಕಾರ್ಯಕ್ರಮ, ಸ್ವ-ಉದ್ಯೋಗ ತರಬೇತಿ ಕಾರ್ಯಕ್ರಮದ ಮೂಲಕ ಮಹಿಳೆಯರು, ನಿರುದ್ಯೋಗಿ ಯುವಕರು, ಸಂಭವನೀಯ ಉದ್ಯಮಿಗಳ ಉದ್ಯಮಶೀಲತ್ವವನ್ನು ಪ್ರೋತ್ಸಾಹಿಸುವುದು.

### ಎ.ಪಿ.ಆರ್.ಡಿ.ಯ ದೂರದೃಷ್ಟಿ :

೧. ಪರಿಣಾಮಕಾರಿ ಸ್ವ ಆಡಳಿತಕ್ಕೆ ಸ್ಥಳೀಯ ಮಟ್ಟದಲ್ಲಿ ಸ್ಥಳೀಯ ಮುಂದಾಳತ್ವವನ್ನು ಪ್ರೋತ್ಸಾಹಿಸುವುದರ ಮೂಲಕ ಮಾನವ ಸಂಪನ್ಮೂಲ ಅಭಿವೃದ್ಧಿಯನ್ನು ಪೋಷಿಸುವುದು.

೨. ಎಲ್ಲಾ ಜೀವನಾಧಾರ ಚಟುವಟಿಕೆಗಳಲ್ಲಿ ಮಹಿಳೆಯರ ಭಾಗಿತ್ವವನ್ನು ಪ್ರೋತ್ಸಾಹಿಸುವುದು ಹಾಗೂ ಹೊಸ ಶೋಧ ಮತ್ತು ಭಾಗಿತ್ವದ ಕೌಶಲ್ಯಗಳ ಮೂಲಕ ಆಲ್ವಿಕೆಯ ಅರಿವು ಮೂಡಿಸುವುದು.

೩. ಅಭಿವೃದ್ಧಿ ಕ್ಷೇತ್ರದಲ್ಲಿ ಕೆಲಸ ಮಾಡುತ್ತಿರುವ ಅನೇಕ ರಾಷ್ಟ್ರೀಯ, ಪ್ರಾದೇಶಿಕ ಮತ್ತು ಅಂತರರಾಷ್ಟ್ರೀಯ ಸಹಯೋಗಗಳಿಂದ ತಜ್ಞರ ಒಂದು ಜಾಲವನ್ನು ರಚಿಸುವುದು ಮತ್ತು ಸಂಬಂಧಪಟ್ಟವರಲ್ಲಿ ಕೆಲಸದ ಸಂಸ್ಕೃತಿಯನ್ನು ಮನನ ಮಾಡಿಸುವುದು.

೪. ಗ್ರಾಮೀಣ ಸಮುದಾಯದ ಉತ್ತಮತೆಗೆ ಕೆಲಸ ಮಾಡುತ್ತಿರುವ ವ್ಯಕ್ತಿಗಳು, ಸಂಸ್ಥೆಗಳು ಮತ್ತು ಏಜನ್ಸಿಗಳಲ್ಲಿ ಗಮನಾರ್ಹವಾದ ಪ್ರವೃತ್ತಿಯಲ್ಲಿ ಬದಲಾವಣೆಗಳನ್ನುಂಟುಮಾಡುವುದು.

೫. ಅನೇಕ ಭೂ ಆಧಾರಿತ ಮತ್ತು ಭೂ ಆಧಾರಿತೇತರ ಚಟುವಟಿಕೆಗಳ ಮೂಲಕ ಉದ್ಯೋಗವನ್ನು ಸೃಷ್ಟಿಸುವ ಕೌಶಲ್ಯಗಳನ್ನು ಉತ್ತೇಜಿಸುವುದು ಮತ್ತು ಜನರ ಜೀವನಾಧಾರಕ್ಕೆ ವರಮಾನ ಬರುವಂತೆ ಮಾಡುವುದು.

೬. ವಿವಿಧ ಮಟ್ಟಗಳಲ್ಲಿ ವೈಯಕ್ತಿಕ ಮತ್ತು ಸಾಂಸ್ಥಿಕ ಸಾಮರ್ಥ್ಯವನ್ನು ಹೆಚ್ಚಿಸುವುದು ಮತ್ತು ದಕ್ಷ, ಜವಾಬ್ದಾರಿಯುತ, ಸೂಕ್ತ ಆಡಳಿತವನ್ನು ಪ್ರೋತ್ಸಾಹಿಸುವುದು.

೭. ಗ್ರಾಮೀಣ ಸಮುದಾಯದಲ್ಲಿ ಬಡತನ, ಹಸಿವು ಮತ್ತು ನಿರುದ್ಯೋಗದ ಸಮಸ್ಯೆಗಳನ್ನು ಪರಿಹರಿಸಲು ಖಾಸಗಿ ಮತ್ತು ಸರಕಾರದ ಏಜೆನ್ಸಿಗಳ ನಡುವೆ ಸಹಭಾಗಿತ್ವವನ್ನು ಪ್ರಚೋದಿಸುವುದು.

೮. ಕಾಲದಿಂದ ಕಾಲಕ್ಕೆ ನೀತಿ ಬದಲಾವಣೆಗಳಿಗೆ ಅವಕಾಶ ನೀಡುವಂತೆ ಜಾಗೃತಿಯನ್ನುಂಟುಮಾಡುವುದು ಮತ್ತು ಸಮುದಾಯದ ವಿವಿಧ ಭಾಗಗಳ ಜೊತೆಯಲ್ಲಿ ಸಮಾನತೆ ಮತ್ತು ನ್ಯಾಯವನ್ನು ಪ್ರೋತ್ಸಾಹಿಸುವುದು.

೯. ಮಹಿಳೆಯರು, ಯುವಜನ ಮತ್ತು ಶಾಲಾ ಮಕ್ಕಳನ್ನೊಳಗೊಂಡ ಹೊಸ ಸಂಶೋಧನಾ ಕಾರ್ಯಕ್ರಮಗಳ ಮೂಲಕ ಗ್ರಾಮ ಸಮುದಾಯದ ಜೀವನಾಧಾರದ ಮೇಲೆ ಪರಿಣಾಮ ಬೀರುವ ಪರಿಸರದ ರಕ್ಷಣೆಗೆ ಪ್ರಾಮುಖ್ಯತೆ ಕೊಡುವುದು.

೧೦. ದೇಶದೊಳಗೆ ಹಾಗೂ ಪ್ರದೇಶದೊಳಗೆ ಶಾಂತಿಯನ್ನು ಸ್ಥಾಪಿಸಲು ಮತ್ತು ವಿವಿಧ ಮತಗಳ ಮತ್ತು ಜನಾಂಗ ಗುಂಪುಗಳ ಸಾಮರಸ್ಯವನ್ನು ಅರ್ಥ ಮಾಡಿಕೊಳ್ಳಲು ಅಭಿವೃದ್ಧಿ ನಾಯಕರ ವಿನಿಮಯವನ್ನು ಪ್ರೋತ್ಸಾಹಿಸುವುದು.

## ಎ.ಐ.ಆರ್.ಡಿ.ಯ ಪ್ರಮುಖ ಹಿತಾಸಕ್ತಿ ಗುಂಪುಗಳು :

೧. ಮಹಿಳೆಯರು, ಯುವಕರು, ಶಾಲಾ ಮಕ್ಕಳು, ರೈತ ಗುಂಪುಗಳು ಮತ್ತು ನೀತಿ ರೂಪಕರು (ಪಾರ್ಲಿಮೆಂಟ್ ಸದಸ್ಯರು, ರಾಜ್ಯ ಶಾಸಕರು, ಆಡಳಿತಗಾರರು ಮತ್ತು ಅಭಿವೃದ್ಧಿ ನಾಯಕರು)

೨. ಸಹಕಾರ ಸಂಘಗಳು, ರೈತ ಸಂಸ್ಥೆಗಳು, ಗ್ರಾಮೀಣ ಯುವ ಗುಂಪು ಸದಸ್ಯರು ಮತ್ತು ಪಂಚಾಯತಿಗಳನ್ನು ಒಳಗೊಂಡಿರುವ ನಾಯಕರುಗಳು.

೩. ಸ್ವಯಂಸೇವಾ ಸಂಸ್ಥೆಗಳ, ಸಾರ್ವಜನಿಕ ಸಮಾಜ ಗುಂಪುಗಳಂತಹ ಸರಕಾರಿ ಮತ್ತು ಸರಕಾರೇತರ ಸಂಸ್ಥೆಗಳ ವಿವಿಧ ಗುಂಪುಗಳ ನಡುವೆ ಜಾಲ ಮತ್ತು ಭಾಗಿತ್ವವನ್ನು ಪ್ರೇರೇಪಿಸುವುದು.

೪. ಅನುದಾನಗಳು ಮತ್ತು ಸಾಲಗಳ ಮೂಲಕ ಹಣಕಾಸು ಬೆಂಬಲವನ್ನು ಒದಗಿಸುವ ಹಣಕಾಸು ಸಂಸ್ಥೆಗಳು ಸಮುದಾಯ ಮಟ್ಟದಲ್ಲಿ ಜೀವನಾಧಾರ ಚಟುವಟಿಕೆಗಳನ್ನು ಬೆಂಬಲಿಸುವುದು.

೫. ವಿಶ್ವವಿದ್ಯಾನಿಲಯಗಳು ಮತ್ತು ನಿರ್ವಹಣಾ ಸಂಸ್ಥೆಗಳಂತಹ ಸಂಶೋಧನಾ ಸಂಸ್ಥೆಗಳು.

೬. ರಾಜಕೀಯ ನಾಯಕರು, ಆಡಳಿತಗಾರರು ಮತ್ತು ನಿರ್ವಹಣಾ ತಜ್ಞರೂ ಸೇರಿದಂತೆ ನೀತಿ ರೂಪಿಸುವ ಮಟ್ಟದಲ್ಲಿರುವವರು.

## ಆಂತರಿಕ ಬಲ :

ಅನೇಕ ಸರಕಾರ ಮತ್ತು ಸರಕಾರೇತರ ಸಂಸ್ಥೆಗಳು, ಕೃಷಿ ವಿಶ್ವವಿದ್ಯಾನಿಲಯ ಮತ್ತು ನಿರ್ವಹಣಾ ಸಂಸ್ಥೆಗಳು, ವಿಜ್ಞಾನ, ತಂತ್ರಜ್ಞಾನ ಮತ್ತು ಗ್ರಾಮೀಣ ಅಭಿವೃದ್ಧಿ ಕ್ಷೇತ್ರಕ್ಕೆ ಸಂಬಂಧಿಸಿರುವ ಇಲಾಖೆಗಳ ಜೊತೆಯಲ್ಲಿ ಸಂಪರ್ಕ.

ಪಾರ್ಲಿಮೆಂಟು ಸದಸ್ಯರು, ರಾಜ್ಯ ಶಾಸಕರು ಮತ್ತು ಆಡಳಿತಗಾರರಂತಹ ನೀತಿರೂಪಕದ ಜೊತೆಯಲ್ಲಿ ಸಂಪರ್ಕ.

## ದುರ್ಬಲತೆಗಳು :

ಜೀವನಾಧಾರದಲ್ಲಿ ಅವಶ್ಯ ಸಿಬ್ಬಂದಿಯನ್ನು ಕಾಪಾಡಿಕೊಳ್ಳಲು ಸಾಕಷ್ಟು ಸಂಪನ್ಮೂಲಗಳನ್ನು ಕಂಡುಹಿಡಿಯುವುದು ಮತ್ತು ಗ್ರಾಮೀಣ ಸಮುದಾಯದ ಜೊತೆಯಲ್ಲಿ ಕೆಲಸ ಮಾಡುವುದಕ್ಕೆ ನೇಮಿಸಿದ ಮತ್ತು ತರಬೇತಿಗೊಳಿಸಿದ ಸಿಬ್ಬಂದಿಗಳನ್ನು ಉಳಿಸಿಕೊಳ್ಳುವುದು.

## ಬದ್ಧತೆಯುಳ್ಳ ಜನರನ್ನು ತಡೆಯುವ ಕಷ್ಟ :

ಏಷ್ಯಾ ಗ್ರಾಮೀಣ ಅಭಿವೃದ್ಧಿ ಸಂಸ್ಥೆಯು ರೇಷ್ಮೆ ಕೈಗಾರಿಕೆಯ ಉಜ್ವಲ ಭವಿಷ್ಯವನ್ನು ಅರಿತು ಅದಕ್ಕೆ ಎಲ್ಲ ರೀತಿಯ ಸಹಕಾರ, ತರಬೇತಿ ಮುಂತಾದ ಕಾರ್ಯಗಳನ್ನು ಕೈಗೊಂಡಿದೆ. ಕಾಲಾನಂತರ ಈ ಕ್ಷೇತ್ರದಲ್ಲಿ ಸಂಸ್ಥೆಯು ತಜ್ಞತೆಯನ್ನು ಬೆಳೆಸಿಕೊಂಡು ಅದರ ಪ್ರಯೋಜನವನ್ನು ರೇಷ್ಮೆ ಕೈಗಾರಿಕೆಯವರಿಗೆ ನೀಡುತ್ತಿದೆ. ಈ ತಂತ್ರಜ್ಞಾನವನ್ನು ಭಾರತದಲ್ಲಿ ಮಾತ್ರವಲ್ಲದೆ ಏಷ್ಯಾ ಮತ್ತು ಆಫ್ರಿಕಾ ದೇಶಗಳಿಗೂ ಹರಡಿದೆ.

## ತರಬೇತಿ ಕಾರ್ಯಕ್ರಮಗಳು :

ಎ.ಐ.ಆರ್.ಡಿ.ಯು ಅನೇಕ ರೀತಿಯ ತರಬೇತಿ ಕಾರ್ಯಕ್ರಮಗಳನ್ನು ನಡೆಸುತ್ತಿದೆ. ಇದು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮಟ್ಟಗಳಲ್ಲಿ ರೇಷ್ಮೆ ಕೈಗಾರಿಕೆ, ಭೂ ಸುಧಾರಣೆ, ಗ್ರಾಮೀಣ ಅಭಿವೃದ್ಧಿ, ಮಾನವನ ಸಂಪನ್ಮೂಲ ಅಭಿವೃದ್ಧಿ ಮತ್ತು ಅನೇಕ ಕುಶಲ ಕೆಲಸಗಳಲ್ಲಿ ತರಬೇತಿ - ಹೀಗೆ ವೈವಿಧ್ಯಮಯವಾದ ತರಬೇತಿ ಕಾರ್ಯಕ್ರಮಗಳನ್ನು ಕೈಗೊಂಡಿದೆ.

ಇವುಗಳಲ್ಲದೆ ಇನ್ನೂ ಇತರ ಸಾಮಾನ್ಯ ಕಾರ್ಯಕ್ರಮಗಳನ್ನು ಎ.ಐ.ಆರ್.ಡಿ. ನಡೆಸುತ್ತಿದೆ.

೧. ಸ್ವಸಹಾಯ ಗ್ರಾಮೀಣ ಸಮಗ್ರ ಅಭಿವೃದ್ಧಿ ಕಾರ್ಯಕ್ರಮಗಳು.

೨. ಮಹಿಳೆಯರ ಹೊಡಬಾಳು ಮತ್ತು ಬೇಸರ ತರುವ ಕೆಲಸವನ್ನು ಕಡಿಮೆ ಮಾಡುವುದು.

೩. ಕುರಿ ಸಾಕಣೆ ಮತ್ತು ಹೈನು ಅಭಿವೃದ್ಧಿ ಕಾರ್ಯಕ್ರಮ.

೪. ಉದ್ಯಮಿಗಳಿಗೆ ತರಬೇತಿ ಕಾರ್ಯಕ್ರಮ.

೫. ಸರಕಾರೇತರ ಸಂಸ್ಥೆಗಳ ನಿರ್ವಹಣಾ ತರಬೇತಿ.

೬. ಗ್ರಾಮ ಪಂಚಾಯತಿಗಳಿಗೆ ಚುನಾಯಿತರಾದ ಮಹಿಳಾ ಪಂಚಾಯತಿ ಸದಸ್ಯರಿಗೆ ಅಧಿಕಾರ ನೀಡುವ ಕಾರ್ಯಕ್ರಮ.

೭. ನಗರ ಮಕ್ಕಳಿಗೆ ಮೌಲ್ಯಾಧಾರಿತ ಬೇಸಿಗೆ ಶಿಬಿರ.

ಏಷ್ಯಾ ಪ್ರದೇಶದಲ್ಲಿ ಅಭಿವೃದ್ಧಿ ನಾಯಕರ ವಿನಿಮಯ ಕಾರ್ಯಕ್ರಮವನ್ನು ಪ್ರಚೋದಿಸುತ್ತದೆ. ಇಂತಹ ಇನ್ನೂ ಅನೇಕ ಕಾರ್ಯಕ್ರಮಗಳನ್ನು ಎ.ಐ.ಆರ್.ಡಿ. ಕೈಗೊಂಡಿದ್ದು ಅದೆಲ್ಲಾ ರಾಜಶೇಖರನ್‌ರವರು ಭಾರತದ ವಿವಿಧ ಸ್ಥಳ ಮತ್ತು ಹೊರದೇಶಗಳಿಗೆ ಭೇಟಿ ನೀಡಿದುದರ ಪ್ರತಿಫಲವಾಗಿದೆ. ಇವೆಲ್ಲದರಿಂದಾಗಿ ಎ.ಐ.ಆರ್.ಡಿ.ಯು ಉನ್ನತ ಮಟ್ಟಕ್ಕೇರಿದೆ.

●



# For Sustainable Development and New World Order

**Mohan Dharia**

The international Conference held at Stockholm and Rio de Janerio has attracted the attention of the world to the serious issues of fast degrading forests, wild life, nature, life supporting systems and ever increasing pollution. The worsening situation has threatened the very existence of mankind and the Universe. Explosion of population, poverty, haphazard industrialisation, unplanned urbanisation and indiscriminate exploitation of natural resources are mainly responsible for the existing situation. Leaders of various countries who met at Rio have proposed and agreed about the agenda to meet this challenge. Consequent upon the various conferences held during the past ten years they have tried to pursue the agreed about action programme. However, the results so far have been discouraging and call for urgent action by all the countries in the world. It has also been observed that most of the developed rich countries are creating most of the poisonous gases and consuming most of the natural resources are primarily responsible for the threat to our ecosystems and environment. Poor countries unwilling to control their population are also responsible for this sitnation.

*Mr. Mohan Dharia is actively working for rural and wastelands development, affore station and environment through his organisation ' Vanaraj' in India. It is because of his efforts that the Govt. of india has agreed to develop all 175 M.Ha. of degraded and waste lands and bring 33 p.c. area under green cover in India within the next 15 years. Mr. Dharia was a Member of the Indian Parliament, Cabinet Minister in Central Govt. and also the Chief of the Planning Commission, Govt. of India.*

The Johannesburg Earth Summit has a wide ranging agenda aimed at improving people's lives, conserving natural resources and balancing the needs and responsibilities of the developed and developing world. From the agonising experience of the past, many developing countries like India are circumspect about the outcome of the Johannesburg Summit. The disenchantment comes from the stonewalling by the U.S. led group on the issues dear to the heart of developing

